# ಸಮಗ್ರ
# ನಾಟಕಗಳು
# ರೂಪಕಗಳು
# ಬಾನುಲಿ ರೂಪಾಂತರಗಳು

ಡಾ॥ ಬಿ.ಎಸ್. ಸ್ವಾಮಿ



ನಾಟಕ ಸಾಹಿತ್ಯ




# ಸಮಗ್ರ ನಾಟಕಗಳು
# ರೂಪಕಗಳು
# ಬಾನುಲಿ ರೂಪಾಂತರಗಳು

ಡಾ. ಬಿ. ಎಸ್. ಸ್ವಾಮಿ

ನವೀನ ಪ್ರಕಾಶನ
ಬೆಂಗಳೂರು

ಸಮಗ್ರ ನಾಟಕಗಳು ರೂಪಕಗಳು
ಬಾನುಲಿ ರೂಪಾಂತರಗಳು

ಕರ್ತೃ : ಡಾ. ಬಿ. ಎಸ್. ಸ್ವಾಮಿ

ಪ್ರಕಾಶಕರು ;
ನವೀನ ಪ್ರಕಾಶನ
೨೦೧, ೭ನೇ 'ಎ' ಮುಖ್ಯರಸ್ತೆ
ಆರ್.ಪಿ.ಸಿ. ಲೇಔಟ್, ವಿಜಯನಗರ ಪೂರ್ವ
ಬೆಂಗಳೂರು–೫೬೦೦೪೦
ಫೋನ್ : 3380442

ಪುಟಗಳು ; xxvi + ೧೪೫೩

ಕಲೆ : ಮಾಯಾ

ಪ್ರಥಮ ಮುದ್ರಣ : ೧೯೯೭

ಬೆಲೆ : ಐದುನೂರು/500–00 ರೂಪಾಯಿಗಳು
ಛಾಯಾಕ್ಷರ ಜೋಡಣೆ
ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು - ೪೦
ಫೋನ್ : 3402575

ಮುದ್ರಣ :
ಸ್ನೇಹಾ ಪ್ರಿಂಟರ್ಸ್
22, 2ನೇ ಮೈನ್, ಅತ್ತಿಗುಪ್ಪೆ
ವಿಜಯನಗರ 2ನೇ ಹಂತ
ಬೆಂಗಳೂರು–40
ಫೋನ್ : 3302417




## ಲೇಖಕರ ಮಾತು

"ಸಮಗ್ರ ನಾಟಕಗಳು, ರೂಪಕಗಳು, ಬಾನುಲಿಯ ರೂಪಾಂತರಗಳು" ನಾನು ಮೂವತ್ತು ವರ್ಷಗಳಲ್ಲಿ ಆಗಾಗ ಬರೆದು, ಪ್ರಸಾರಮಾಡಿ, ರಂಗದಲ್ಲಿ ತಂದು, ಪ್ರಕಟಿಸಿದ ಕೃತಿ. ಇವೆಲ್ಲವೂ ಒಂದೆಡೆ ಸಿಗಬೇಕೆಂದು ಈ ಸಮಗ್ರ ಕೃತಿಯನ್ನು ಪ್ರಕಟಿಸುತ್ತಿರುವೆ. ಈ ಹೆಬ್ಬೊತ್ತಿಗೆಯು ರಂಗನಾಟಕಗಳು, ಬಾನುಲಿ ನಾಟಕಗಳು, ರೂಪಕಗಳು, ರೇಡಿಯೋ ರೂಪಂತರಗಳನ್ನು ಒಳಗೊಂಡಿವೆ. ರಂಗನಾಟಕದಲ್ಲಿ ಪೌರಾಣಿಕ, ಮಕ್ಕಳ, ಸಾಮಾಜಿಕ, ದುಶ್ಚಟದ ಅಂದರೆ ಮಾದಕ ದ್ರವ್ಯಗಳ, ಔಷಧ ದುಶ್ಚಟಗಳ ಬಗೆಗೆ, ಗ್ರಾಮ ನೈರ್ಮಲ್ಯದ ಬಗೆಗೆ ಇವೆ. ಸಿದ್ಧಗಂಗಾ ಮಹಾತ್ಮ್ಯ, ರೇವಣಸಿದ್ಧೇಶ್ವರ ಮಹಾತ್ಮ್ಯ, ಹಳ್ಳಿಯಾದರೇನು ಶಿವಾ, ಬಿಟ್ಟೆನೆಂದರೆ ಬಿಡದೀ ಮಾಯೆ, ನಂದನವನ ನಾಟಕಗಳು ಮೊದಲ ಭಾಗದಲ್ಲಿವೆ. ಹಳ್ಳಿಯಾದರೇನು ಶಿವಾ ಮೊದಲು ಶ್ರವ್ಯನಾಟಕವಾಗಿ ಪ್ರಸಾರವಾಯಿತು. ಆಗ ಶಾಲಾಪ್ರಸಾರದ ನಿರ್ಮಾಪಕರಾದ ಶ್ರೀ ಜಿ.ಬಿ. ಆಲದಕಟ್ಟಿಯವರು ಈ ಕಾರ್ಯಕ್ರಮ ಪ್ರಸಾರ ಮಾಡಿದರು. ಎಚ್.ಎಸ್. ವೇಣುಗೋಪಾಲ್ ಹಾಗೂ ಸವಿರಾಜು ಅವರು ಇದನ್ನು ರೇಡಿಯೋಕ್ಕೆ ಅಳವಡಿಸಿದರು. ಇದನ್ನೇ ರಂಗನಾಟಕವಾಗಿ ಶ್ರೀ ಸವಿರಾಜು ಅವರು ತಂದರು. ಈ ನಾಟಕದ ಬಗ್ಗೆ ಕನ್ನಡ ಪ್ರಭದಲ್ಲಿ ಬಂದ ವಿಮರ್ಶೆಯ ಮಾತುಗಳಿವು: "ಹಳ್ಳಿ ಪಟ್ಟಣಗಳ ಮಕ್ಕಳ ರೀತಿ, ನೀತಿ, ಆಟಗಳು, ಸಂಭಾಷಣೆಗಳು ಮತ್ತು ಅಲ್ಲಲ್ಲಿ ಪಟ್ಟಣದ ಬುದ್ಧಿಜೀವಿ ಹುಡುಗನ ಉಪದೇಶಗಳ ಜೊತೆಗೆ ಉತ್ತಮ ಹಿನ್ನೆಲೆಯ ಸಂಗೀತವೂ ಸೇರಿ ಸವಿ ಕಲಾನಿಕೇತನದವರು 'ಹಳ್ಳಿಯಾದರೇನು ಶಿವಾ' ನಾಟಕವನ್ನು ಪ್ರದರ್ಶಿಸಿದರು. ಪ್ರಶಾಂಸಾರ್ಹ ರಂಗಸಜ್ಜಿಕೆಯಲ್ಲಿ ಹಲವಾರು ಮಕ್ಕಳ ವೈಯಕ್ತಿಕ ಪ್ರತಿಭೆಗೆ ಕೊರತೆ ಇಲ್ಲದಂತೆ ನಾಟಕ ಅನಾಯಾಸವಾಗಿ ಮೂಡಿ ಬಂತು. ಗಾಡಿಸಿದ್ಧಿ(ಸಿ.ಎಂ. ಗೀತಾ) ತಿಮ್ಮಿ(ಬಿ.ಎನ್. ನಿರ್ಮಲಾ) ಅವರ ನಟನೆ ನೈಜವಾಗಿತ್ತು. ಅನಿತಾ, ಸಿ.ಆರ್.ಆಶಾ, ಸುನೀತಾ, ಡಿ. ಶೋಭಾ, ಸತ್ಯ ಮತ್ತು ಬಾಲಸುಬ್ರಹ್ಮಣ್ಯ ಇವರ ಅಭಿನಯ ಮತ್ತು ಹಿನ್ನೆಲೆ ಸಂಗೀತದೊಡನೆ ವೃಂದ ನೃತ್ಯಗಳಲ್ಲಿ ಸಿನಿಮೀಯತೆಯ ಪ್ರಭಾವ ಮೂಡಿಬಂದದ್ದು ಹಿತವಾಗಲಿಲ್ಲ. ಒಟ್ಟಿನಲ್ಲಿ ಕುಂಟೆಬಿಲ್ಲೆ, ಅಣ್ಣೆಕಲ್ಲು, ಚಿನ್ನಿದಾಂಡು, ಗೋಲಿಗಳನ್ನು ನಾಟಕದಲ್ಲಿ ಅಳವಡಿಸಿದುದು ಮಕ್ಕಳಿಗೆ ತಮಾಷೆಯಾಗಿತ್ತು. ಕತ್ತಲೆ ಬೆಳಕಿನ ಕಾರ್ಯವೂ ತೃಪ್ತಿಕರವಾಗಿತ್ತು."

ಬಾನುಲಿಯಲ್ಲಿ ಪ್ರಸಾರವಾದ ನಾಟಕಗಳಲ್ಲಿ ಪ್ರಮುಖವಾಗಿ ಮೂರು ಜನಪದ ಮಹಾಕಾವ್ಯಗಳನ್ನು ಆಧರಿಸಿ ರೂಪಿಸಿದ "ನಾಟಕತ್ರಯಗಳು".

ಕ್ರಿ.ಪೂ. ೩೦೦೦ ವರ್ಷಗಳ ಹಿಂದೆ ಯುಫ್ರಟಿಸ್ ಮತ್ತು ಟೈಗ್ರಿಸ್ ನದಿಗಳ ಪ್ರದೇಶ ಅತ್ಯಂತ ಪ್ರಾಚೀನ ಸಂಸ್ಕೃತಿಗಳನ್ನೊಳಗೊಂಡದ್ದಾಗಿತ್ತು. ಸುಮೇರಿಯನ್ನರು, ಅಕ್ಕಡಿಯನ್ನರು, ಚಾಲ್ಡಿಯನ್ನರು, ಕೊಸಿಯೆನ್ನರು, ಎಲಿಮಿಟಿಗಳು ಇದ್ದು ನಾಗರೀಕತೆ ಸಂಸ್ಕೃತಿಯನ್ನು ಬೆಳಗಿಸುತ್ತಿದ್ದರು. ಅದರಲ್ಲಿ ಅಸ್ಸೀನಿಯರ ಆಳ್ವಿಕೆ ಕ್ರಿ.ಪೂ. ೬೦೮ರವರೆಗೆ. ಕ್ರಿ.ಪೂ. ೭ನೇ ಶತಮಾನದ ಮಧ್ಯಭಾಗವನ್ನು ಅಸ್ಸಿರೋ ಬ್ಯಾಬಿಲೋನಿಯನ್ ಸಾಹಿತ್ಯದ ಸುವರ್ಣ ಯುಗವೆಂದು ಕರೆಯುವರು. ಇದಕ್ಕೆ ಕಾರಣನಾದವನು ಅಸ್ಸೂರ್ ಲುನಿಪಾಲ್ ರಾಜ. ನೈನೇನ್‌ನಲ್ಲಿದ್ದ ಈತ ಕವಿಜನಾಶ್ರಿತನೂ, ಸಾಹಿತ್ಯ ಪ್ರೇಮಿಯೂ ಆಗಿದ್ದ. ಸುಮಾರು ಕ್ರಿ.ಪೂ. ೨೦೦೦ದಿಂದ ತನ್ನ ಜೀವಿತದ ಅವಧಿಯವರೆಗೆ ಸಿಕ್ಕಿದ ಜೇಡಿ ಮಣ್ಣಿನ ಫಲಕಗಳ ಮೇಲೆ ಬೆಣೆಯಾಕಾರದ ವಸ್ತುವಿನಿಂದ ಕೊರೆದ ಲಿಪಿಯಲ್ಲಿದ್ದ ಒಂದು ದೊಡ್ಡ ಗ್ರಂಥರಾಶಿಯನ್ನು ಸಂಗ್ರಹಿಸಿದ್ದ. ಅವನ ಗ್ರಂಥಾಲಯ ಭೂಗತವಾಗಿತ್ತು. ೧೮೫೩ರಲ್ಲಿ ರಾಸಮ್ ಎಂಬ ಆಂಗ್ಲ, ಅಸ್ಸೀರಿಯನ್ ಭಾಷೆಯಲ್ಲಿದ್ದ 'ಗಿಲ್ಗಮಿಷ್' ಎಂಬ ಶ್ರೇಷ್ಠ ಜಾನಪದ ಮಹಾಕಾವ್ಯದ ಫಲಕಗಳನ್ನು ಹೊರತೆಗೆದನು. ಇದೇ ವಿಶ್ವದ ಮೊದಲಕಾವ್ಯ. ಗಾತ್ರದಲ್ಲಿ ಚಿಕ್ಕದಾದರೂ ಚೊಕ್ಕ ಅದ್ಭುತ ಕೃತಿ.

'ಗಿಲ್ಗಮಿಷ್' ಸಾಂಪ್ರದಾಯಕ ವೀರನೊಬ್ಬನ ಕುರಿತ ತತ್ವ ಭೂಯಿಷ್ಠವಾದ, ಅಧ್ಯಾತ್ಮಪರವಾದ ಚಿಂತನಶೀಲ ಕೃತಿ. ಮನುಷ್ಯನ ಶೋಧನೆ ಹಾಗೂ ಮೃತ್ಯುವನ್ನು ತಪ್ಪಿಸಲು ನಡೆಸುವ ವ್ಯರ್ಥ ಹೋರಾಟ ಇದರಲ್ಲಿದೆ. ಕಥೆ ಪೌರಾಣಿಕವಾದರೂ ಕಥಾ ನಾಯಕನು ಐತಿಹಾಸಿಕ ವ್ಯಕ್ತಿ. ಈತ ಯೂರುಕ್ ರಾಜ್ಯವಾಳಿದ ಮೊದಲ ರಾಜ ವಂಶಕ್ಕೆ ಸೇರಿದ ೧೮ನೇ ಶತಮಾನದ ರಾಜ "ಗಿಲ್ಗಮಿಷ್" ಎಂದು ಗುರುತಿಸುವ ಪ್ರಯತ್ನವೂ ಸಾಗಿದೆ. ಆದ್ದರಿಂದ ಇದು ಯೂರುಕ್ ದೇಶದ ರಾಜನ ಮೇಲೆ ರಚಿತವಾದ ಕೃತಿ ಎಂದು ಹೇಳುವವರೂ ಉಂಟು. ವೀರನ ಬಗೆಗೆ ಹತ್ತಾರು ಪುರಾಣ ಐತಿಹ್ಯಗಳು ರಚನೆಯಾಗಿಯೇ ಹೋಮರ್, ಇಲಿಯಡ್, ಒಡಸ್ಸಿಗಳಿಗೆ ಮಾದರಿಯಾದುವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಗಿಲ್ಗಮಿಷ್ ಕಾವ್ಯದ ಕರ್ತೃ ಇನ್ನೂ ಅಜ್ಞಾತವಾಗಿಯೇ ಇದ್ದಾನೆ. ಇದು ಐತಿಹಾಸಿಕ ಹಿನ್ನೆಲೆಯುಳ್ಳ ಚಾರಣ ಕಾವ್ಯ. ಈ 'ಗಿಲ್ಗಮಿಷ್' ನಾಟಕವನ್ನು ಡಾ. ಸಾ.ಶಿ. ಮರುಳಯ್ಯನವರು ಬರೆದ ಒಂದು ಲೇಖನದ ಸ್ಫೂರ್ತಿಯಿಂದ ರಚಿಸಿರುವೆ.

ಯೂರೋಪಿನ ಬಡಗಣದಲ್ಲಿರುವ ಫಿನ್‌ಲ್ಯಾಂಡನ್ನು ಸುವೊಮಿ ಎನ್ನುವವರು ಆಳುತ್ತಿದ್ದರು. ಇದು ಸ್ವೀಡನ್ ರಷ್ಯ ಕೈನಲ್ಲಿ ಸಿಕ್ಕಿ ೧೯೧೭ರಲ್ಲಿ ಸ್ವತಂತ್ರವಾಯಿತು. ರಾಷ್ಟ್ರದ ಅಭಿಮಾನ ತಾಳಲು ಮೂಲ ಪ್ರೇರಣೆ ಇತ್ತದ್ದು ಅಲ್ಲಿಯ ಜಾನಪದ ಮಹಾಕಾವ್ಯ "ಕಲೇವಾಲ". ಇದನ್ನು ಸಂಗ್ರಹಿಸಿ, ಪರಿಷ್ಕರಿಸಿ ಪ್ರಕಟಿಸಿದವ ಡಾ. ಎಲಿಯಾಸ್ ಲೂನ್ರಾಟ್. ಈತ ವೃತ್ತಿಯಲ್ಲಿ ವೈದ್ಯನಾದರೂ ಜಾನಪದ ಸಂಶೋಧಕ. ಇದು

೧೮೩೫ರಲ್ಲಿ ಪ್ರಕಟವಾಯಿತು. ಫಿನ್‌ಲ್ಯಾಂಡಿನ ರಾಷ್ಟ್ರೀಯ ಮಹಾಕಾವ್ಯವಾಯಿತು. ಈತ ಊರೂರು ಸುತ್ತಿ ಹಾಡುಗಾರರಿಂದ ಹಾಡುಗಳನ್ನು ಸಂಗ್ರಹಿಸಿದ. ಕಥನಗೀತೆ, ಶೋಕಗೀತೆ, ಸಾಮಾಜಿಕ, ಸಾಂದರ್ಭಿಕ ಗೀತೆಯನ್ನು ಸಂಯೋಜಿಸಿ ಈ ಮಹಾಕಾವ್ಯವನ್ನು ಆಧರಿಸಿ ಮುಕ್ತ ಛಂದಸ್ಸಿನಲ್ಲಿ ಕಲೇವಾಲ ನಾಟಕ ರಚಿಸಿದ್ದಾನೆ. ಇದೊಂದು ಸುಖಾಂತ್ಯದ ವೀರರಸ ಪ್ರಧಾನ ಸಾಹಸಮಯ ಕಲಾಕೃತಿ. ಇದು ಬಾನುಲಿ ನಾಟಕವಾಗಿ ಪ್ರಸಾರವಾಗಿದೆ. ಪ್ರೊ. ಕು.ಶಿ. ಹರಿದಾಸ ಭಟ್ಟರ ಲೇಖನ ಸ್ಫೂರ್ತಿಯಿಂದ ಈ ನಾಟಕವನ್ನು ರಚಿಸಿರುವೆ.

ಕರ್ನಾಟಕ ಜಾನಪದ ಮಹಾಕಾವ್ಯವಾದ "ಮಲೆ ಮಾದೇಶ್ವರ" ಆಧರಿಸಿ ರೂಪಿಸಿದ ಜಾನಪದ ಸಂಗೀತ ರೂಪಕ 'ಮಲೆಯ ಮಾದೇಶ್ವರ'. ಮಾದೇಶ್ವರನ ಜೀವನವನ್ನು ಚಿತ್ರಿಸುವ ಏಳು ಸಾಲುಗಳು, ಏಳು ಖಂಡಕಾವ್ಯಗಳಂತಿವೆ. ಇವನ್ನು ಗುಡ್ಡರು (ಕಂಸಾಳೆ ಕಲಾವಿದರು) ಏಳು ರಾತ್ರಿ ಈ ಏಳು ಸಾಲುಗಳನ್ನು ಸುದೀರ್ಘವಾಗಿ ಹಾಡುತ್ತಾರೆ. ಇದನ್ನು ನಾಟಕ ರೂಪದಲ್ಲಿ ಬರೆಯುವ ಪ್ರಯತ್ನ ಸಾಗಿದೆ.

ಒಂದು ದೈವದ ಬಗ್ಗೆ ಮಹಾಕಾವ್ಯವನ್ನು ನಮ್ಮ ಜನಪದ ಕವಿಗಳು ಸೃಷ್ಟಿಸಿದ್ದಾರೆ. ೧೫ನೇ ಶತಮಾನದಲ್ಲಿದ್ದ ಈ ಶರಣನ ಜೀವನ ಪವಾಡಮಯ. ಮಾದೇಶ್ವರ ಕಾವ್ಯದ ಕೇಂದ್ರ ಬಿಂದು ಮಾದೇಶ್ವರ. ಇವನ ಸುತ್ತ ಶ್ರವಣ, ಬೇವಿನಕಾಳಿ, ಸಂಕಮ್ಮ ಜುಂಜೇಗೌಡ, ಇಕ್ಕೇರಿ ದೇವಮ್ಮ , ಮೂಗಯ್ಯ ಮುಂತಾದ ಗಮನಾರ್ಹ ಪಾತ್ರಗಳು ಬರುತ್ತವೆ. ಮಾದೇಶ್ವರರು ಸತ್ಯ, ಧರ್ಮ, ನ್ಯಾಯ ನಿಷ್ಠೆ, ಭಕ್ತಿ ಮುಂತಾದುವುಗಳನ್ನು ಸ್ಥಾಪಿಸಲು ಶ್ರಮಿಸುತ್ತಾರೆ. ದುಷ್ಟರನ್ನು ಸಂಹರಿಸಿ, ಶಿಷ್ಟರನ್ನು ಕಾಪಾಡುವ ಉದ್ದೇಶ ಕಾವ್ಯದಲ್ಲಿ ಸ್ಫುಟವಾಗಿ ಬಂದಿದೆ. ಇವರು ಸೋಲಿಗರು, ಜೇನು ಕುರುಬರು, ಕಾಡು ಕುರುಬರುಗಳನ್ನು ಪರಿವರ್ತಿಸಿದರು.

ಮಲುಹಣೆ, ಕುಂತಿಯ ನಿರ್ಧಾರ ಪೌರಾಣಿಕ ನಾಟಕಗಳು. ಮಲುಹಣ ವೇಶ್ಯೆ ಮಲುಹಣೆಗಾಗಿ ಆಸೆಪಟ್ಟ. ಆಸೆ ಫಲಿಸಿತು. ಆದರೆ ಆಕೆಯ ತಾಯಿ ಹಣಕ್ಕಾಗಿ ಮತ್ತೊಂದು ಬೇಟೆಗೆ ಸಿದ್ಧವಾಗಿ ಮಗಳಿಗೆ ಹೇಳಿ ಮಲುಹಣನನ್ನು ಮನೆಯಿಂದ ಹೊರಡುವಂತೆ ಮಾಡಿಸುತ್ತಾಳೆ. ಸರ್ವಸ್ವವನ್ನೂ ಆಕೆಗೆ ಅರ್ಪಿಸಿದ ಮಲುಹಣ ಅನಾಥನಾಗಿ ಅವಳ ಹುಚ್ಚಿನಲ್ಲೇ ಅಲೆದಾಡುತ್ತಾ, ಮಂಜಿನಲ್ಲಿ ಮುದುಡಿಕೊಂಡು ಕೊರಗುತ್ತಾನೆ. ಮಲುಹಣನ ಸೇವಕಿ ಮಲುಹಣೆ ಊಟ ಮಾಡಿದ ಎಂಜಲನ್ನು ಮಲುಹಣನ ಮೇಲೆ ಸುರಿಯುತ್ತಾಳೆ. ಅದನ್ನೂ ಸೈರಿಸಿಕೊಂಡು "ಮಲುಹಣೆ.... ಮಲುಹಣೇ......." ಎಂಬ ಅವಳ ಧ್ಯಾನದಲ್ಲೇ ಇರಲು ಅಲ್ಲಿಗೆ ಮಲುಹಣೆ ಬರುತ್ತಾಳೆ. ಸ್ಥಿತಿಯನ್ನು ಗಮನಿಸಿದ ಮಲುಹಣನನ್ನುದ್ದೇಶಿಸಿ- "ಮಲುಹಣಾ ನಾನು ವೇಶ್ಯೆಯ ಹೊಟ್ಟೆಯಲ್ಲಿ ಹುಟ್ಟಿದರೂ ವೇಶ್ಯೆಯಲ್ಲ. ನಿನ್ನೊಬ್ಬನನ್ನೇ ಪ್ರೀತಿಸಿದೆ. ತಾಯಿಯ ಮಾತಿಗೆ ಓಗೊಡದೆ ಯಾರನ್ನೂ ಕಾಮಿಸಲಿಲ್ಲ, ಕಾಮಿಸುವುದಿಲ್ಲ. ಆದರೆ ನಿನ್ನನ್ನು ನೋಡಿದರೆ ನನಗೊಂದು ಚಿಂತೆಯಾಗುತ್ತದೆ. ನೀನು ನನ್ನ ಬಗ್ಗೆ ಚಿಂತೆ ಮಾಡುವ ಬದಲು

ವಿಜಯೇಶ್ವರನನ್ನು ಧ್ಯಾನಿಸಿದರೆ ಖಂಡಿತ ಮುಕ್ತಿ ದೊರೆಯುವುದು" ಎಂದು ಹೇಳಲು ಆತನು ಅದರಂತೆಯೇ ಮಾಡಿ ಪರಿವರ್ತನೆ ಹೊಂದಿ ಮುಕ್ತಿಗೆ ಹಂಬಲಿಸುವನು. ಇಷ್ಟು ಮಲುಹಣದೇವಚರಿತ್ರೆಯ ಕಥೆ. ಕೆಲವು ಮಾರ್ಪಾಟುಗಳೊಡನೆ ನಾನು ನನ್ನದೇ ಆದ ಶೈಲಿಯಲ್ಲಿ ಈ ನಾಟಕವನ್ನು ಸಿದ್ಧಪಡಿಸಿರುವೆ. ಮಲುಹಣ ವೇಶ್ಯೆಯನ್ನು ಆಶಿಸಿ ಕೂಡಿದರೂ ಆಕೆಯಿಂದಲೇ ಮುಕ್ತಿಯನ್ನು ಪಡೆಯುತ್ತಾನೆ. "ಹೆಣ್ಣಿನಿಂದಲೇ ಇಹ-ಪರ" ಎಂಬುದನ್ನು ಈ ನಾಟಕ ಸಾರುತ್ತದೆ. ಹೆಣ್ಣು ಯಾವ ರೀತಿಯಲ್ಲಾದರೂ ತೋರುವಳು. 'ನಾರಿ ಮುನಿದರೆ ಮಾರಿ' ಎಂಬುದೂ ಉಂಟು. "ಒಲಿದರೆ ನಾರಿ" ಎಂಬುದೂ ಹೌದು. ಆದರೆ ಮಲುಹಣನ ಭಾಗಕ್ಕೆ ವೇಶ್ಯೆ ಪತಿವ್ರತೆಯಾಗುತ್ತಾಳೆ.

ಮಹಾಕವಿ ಹರಿಹರನು ದೇಶ ಪರ್ಯಟನೆ ಮಾಡಿದಾಗ ಕಾಶ್ಮೀರಕ್ಕೂ ಹೋಗಿರಬೇಕು. ಆಗ ಆತ ಕೇಳಿದ ಜನಪದ ಕಥೆಯ ಆಧಾರದ ಮೇಲೆ ಈ "ಮಲುಹಣದೇವ ಚರಿತೆ" ಎಂಬ ಕೃತಿಯನ್ನು ರಚಿಸಿರಬೇಕು. ಎಂಬುದು ನನ್ನ ಊಹೆ. ಹರಿಹರನ ದೃಷ್ಟಿಯಲ್ಲಿ ಮಲುಹಣ -ಮಲುಹಣೆಯರು ಶಿವಶರಣ ಶರಣೆಯರು. ನನ್ನ ದೃಷ್ಟಿಯಲ್ಲಿ ಸಾಮಾನ್ಯ ಹೆಣ್ಣು ಗಂಡನ್ನು ಪರಿವರ್ತಿಸಲು ಹೇಗೆ ಕಾರಣಕರ್ತೆ ಎಂಬುದನ್ನು ಇಲ್ಲಿ ಚಿತ್ರಿಸಿರುವೆ. ಕಾಲಕ್ಕೆ ತಕ್ಕಂತೆ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು ಆಡು ನಾಟಕ, ಓದು ನಾಟಕಗಳೆರಡರ ಶೈಲಿಯಲ್ಲಿ ಈ ನಾಟಕವನ್ನು ರಚಿಸಿರುವೆ.

ಈ ಐತಿಹಾಸಿಕ ನಾಟಕದಲ್ಲಿ ಇಂದಿನ ಸಮಾಜದ ವೇಶ್ಯೆಯರೂ ಬದಲಾಗಿ ನಿಜವಾದ ಪತಿವ್ರತೆಯರಾಗಿ ಬಾಳಬಹುದು. ಎಂಬುದನ್ನು ಸಾರುವುದಲ್ಲದೆ ಪರಿವರ್ತನೆಯಾಗಲೂ ಸಹಕಾರಿಯಾಗುವುದು.

ಅಲಮೇಲಮ್ಮ ಹೊನ್ನಿನಿಂದಾದ ಅನಾಹುತದ ಬಗ್ಗೆ ಚಿತ್ರಿಸುವ ಐತಿಹಾಸಿಕ ನಾಟಕ. "ತಲಕಾಡು ಮರಳಾಗಿ, ಮಾಲಂಗಿ ಮಡುವಾಗಿ, ಮೈಸೂರು ಅರಸರಿಗೆ ಮಕ್ಕಳ ಫಲವಿಲ್ಲದಾಗಲಿ" ಎಂಬ ನಾಣ್ಣುಡಿ "ಮೈಸೂರು ಗೆಜಿಟಿಯರ್"ನಲ್ಲೂ ಬಂದಿದೆ. ಇದೊಂದು ಐತಿಹಾಸಿಕ ಘಟನೆಯನ್ನಾಧರಿಸಿದ ನಾಟಕ. ಶ್ರೀರಂಗರಾಯರು ಬೆನ್ನು ಫಣಿ ರೋಗವನ್ನು ತಡೆಯಲಾರದೆ ತಲಕಾಡಿನ ವೈದ್ಯೇಶ್ವರನ ಸೇವೆಯಲ್ಲಿ ನಿರತರಾಗಿದ್ದರು. ಅವರ ಪತ್ನಿ ಅಲಮೇಲಮ್ಮನವರೂ ಸಹ ಅವರೊಡನೆ ಹೋಗಿ ಪತಿ ಹಾಗೂ ದೈವ ಸೇವೆಯಲ್ಲಿ  ನಿರತರಾಗಿದ್ದರು. ಶ್ರೀರಂಗರಾಜರು ರಾಜ್ಯವನ್ನೆಲ್ಲಾ ರಾಜಒಡೆಯರಿಗೆ ಧಾರೆ ಎರೆದು ಬಂದಿದ್ದರು. ಅಲಮೇಲಮ್ಮನವರು ಶ್ರೀರಂಗಪಟ್ಟಣದಲ್ಲಿನ ಶ್ರೀರಂಗನಾಯಕಮ್ಮನ ಸೇವೆಗೆ ಪ್ರತಿ ಮಂಗಳವಾರ ಶುಕ್ರವಾರ ಮುತ್ತಿನ ಮಾಗುತಿಯನ್ನು ಸಿಂಗಾರಕ್ಕೆ ಕೊಡುತ್ತಿದ್ದುದು ವಾಡಿಕೆಯಾಗಿತ್ತು. ಅಲಮೇಲಮ್ಮನವರು ತಲಕಾಡಿಗೆ ಬಂದ ಮೇಲೆ ಪೂಜೆಗೆ ಆ ಮೂಗುತಿಯ ಸಿಂಗಾರ ಇಲ್ಲದ ಹಾಗಾಯಿತು. ಇದು ನಿರಂತರವಾಗಿ ನಡೆದುಕೊಂಡು ಬಂದಿದೆ, ಬರಬೇಕು ಎಂಬುದು ದೇವಾಲಯದ ಅಧಿಕಾರಿ ಛಲ. ಅಂದಿನ ಶ್ರೀರಂಗ ಪಟ್ಟಣದ ಮಹಾರಾಜನಾದ ರಾಜ ಒಡೆಯರಿಗೆ ತಿಳಿಸುತ್ತಾನೆ.

ರಾಜ ಒಡೆಯರು ಅದನ್ನು ಅಲಮೇಲಮ್ಮನವರಿಂದ ತೆಗೆದುಕೊಂಡು ಬರುವಂತೆ ಆಜ್ಞೆ ಮಾಡುತ್ತಾರೆ. ಆದರೆ ಆಕೆ ಮೂಗುತಿಯನ್ನು ಕೊಡಲು ನಿರಾಕರಿಸುತ್ತಾಳೆ. ಭಟರು ಆ ವಿಷಯ ರಾಜರಲ್ಲಿ ಹೇಳಲು, ಬಲವಂತವಾಗಿಯಾದರೂ ತರಬೇಕೆಂದು ರಾಜ ಒಡೆಯರು ಹೇಳಿಕಳುಹಿಸುತ್ತಾರೆ. ಅಲಮೇಲಮ್ಮನವರಿಗೆ ತೀರಿಹೋದ ಗಂಡನ ಚಿಂತೆ ಒಂದೆಡೆಯಾದರೆ ಇದು ಮತ್ತಷ್ಟು ಚಿಂತೆಗೆ ಈಡು ಮಾಡಿತು. ಕೊನೆಗೆ ಅಲಮೇಲಮ್ಮನವರು ಮುತ್ತಿನ ಮೂಗುತಿಯೊಂದನ್ನು ಭಟರಿಗೆ ಕೊಟ್ಟು "ತಲಕಾಡು ಮರಳಾಗಿ ಮಾಲಂಗಿ ಮಡುವಾಗಿ ಮೈಸೂರು ಅರಸರಿಗೆ ಮಕ್ಕಳಾ ಫಲವಿಲ್ಲದಾಗಲಿ" ಎಂದು ಶಾಪವಿತ್ತು ಮಿಕ್ಕ ಆಭರಣಗಳನ್ನೆಲ್ಲಾ ಸೀರೆಯ ಸೆರಗಿನಲ್ಲಿ ಕಟ್ಟಿಕೊಂಡು, ಮಾಲಂಗಿ ಮಡುವಿನಲ್ಲಿ ಮುಳುಗುವರು. ಕೆಲವೇ ದಿನಗಳಲ್ಲಿ ರಾಜ ಒಡೆಯರ ಕನಸಿನಲ್ಲಿ ಅಲಮೇಲಮ್ಮನವರು ಕಾಣಿಸಿಕೊಳ್ಳುವರು. ಆಗ ರಾಜ ಒಡೆಯರು ಶಾಪವಿಮೋಚನೆ ನೀಡಬೇಕೆಂದು ಕೇಳಲು "ಒಂದು ತಲೆಗೆ ಮಕ್ಕಳಾಗದಿರಲಿ, ಇನ್ನೊಂದು ತಲೆಗೆ ಮಕ್ಕಳಾಗಲಿ" ಎಂಬ ವರವನ್ನು ಕರುಣಿಸುತ್ತಾಳೆ. ಏಷ್ಟೇ ಆಗಲಿ ಹೆಣ್ಣು ಕರುಣಾಮಯಿ, ಹೆಣ್ಣು ಹೃದಯ ಹೊನ್ನಿನ ಬಗ್ಗೆ ಆಸೆ ಪಡುವುದು ಸಹಜ. ಆದರೆ ರಾಜ ಒಡೆಯರು ದೇವಾಲಯದ ಅಧಿಕಾರಿಗಳ ಮಾತನ್ನು ಕೇಳಿ, ದೇವಿಗೊಂದು ಮೂಗುತಿಯನ್ನು ಬಲವಂತದಿಂದ ತರಿಸಿದುದರಿಂದ ಅಲಮೇಲಮ್ಮನವರು ನೀರಿನ ಪಾಲಾಗಬೇಕಾಯಿತು. ರಾಜ ಶಾಪಕ್ಕೆ ತುತ್ತಾಗಬೇಕಾಯಿತು. ರಾಜನಾದ ಆತ ಅಂಥ ಸಾವಿರಾರು ಮೂಗುತಿ ಮಾಡಿಸಬಹುದಾಗಿತ್ತು. ಆದರೆ ಅದೇ ಮೂಗುತಿಯನ್ನು ದೇವಿಗೆ ಹಾಕಬೇಕೋ ಏನೋ ಎಂಬ ಸಂಪ್ರದಾಯಕ್ಕೆ ಕಟ್ಟು ಬಿದ್ದು ಬಲವಂತ ಮಾಡಿ ತರಿಸಬೇಕಾಯಿತು. ಆತ ಈ ಸಣ್ಣ ಒಂದು ಹೊನ್ನಿನಿಂದ ಈ ರೀತಿ ಹಗರಣವಾಗುತ್ತದೆಂದು ನೆನೆಸಿರಲಿಲ್ಲ. ಹೊನ್ನಿನ ಆಸೆ ಮನುಷ್ಯನಿಗೆ ಏನಾದರೂ ಕೆಡಕನ್ನು ತಾರುವುದೆಂಬುದನ್ನು ಈ 'ಹೊನ್ನು' ಶ್ರವ್ಯ ನಾಟಕ ಉದಾಹರಣೆಯಾಗಿ ರೂಪುಗೊಂಡಿದೆ.

'ಮಣ್ಣು' ನಾಟಕ: ರಾಜ್ಯಕ್ಕಾಗಿ ಹೋರಾಡಿದವರು ಅನೇಕ ರಾಜರುಗಳು. ಪಾಳೆಯಗಾರರು ರಾಜ್ಯವನ್ನು ಕಟ್ಟಲು ಶ್ರಮಿಸಿದವರಲ್ಲಿ ಪಾಳೆಗಾರ ಕೆಂಪೇಗೌಡ ಒಬ್ಬ. ಈತ ಕೊನೆಗಾಲದಲ್ಲಿ ಅತ್ಯಂತ ಕಷ್ಟದಲ್ಲಿ ಕಾಲ ನೂಕಬೇಕಾಗಿ ಬಂತು. ರಾಜ್ಯದಾಹಕ್ಕೆ (ಮಣ್ಣು) ಅನೇಕ ರಾಜರು, ಪಾಳೆಯಗಾರರು ಮೋಸಮಾಡುತ್ತಾರೆ. ದಾಯಾದಿಗಳು ಪತನಕ್ಕೆ ಕಾರಣರಾಗುತ್ತಾರೆ. ಮಣ್ಣು ಎಷ್ಟೊಂದು ಕೆಟ್ಟದು ಎಂಬುದನ್ನು ಈ ನಾಟಕ ಸಾರುವುದು. ರಾಜ್ಯ ಕಟ್ಟಲು ಮಗನ ಹೆಂಡತಿ ಲಕ್ಷ್ಮಿ ತನ್ನ ಜೀವವನ್ನು ಲೆಕ್ಕಿಸದೆ ಆತ್ಮಾರ್ಪಣೆ ಮಾಡುತ್ತಾಳೆ, ಕೋಟೆ ಕಟ್ಟಿಸಲು. ಕೊನೆಗೆ ಕೆಂಪೇಗೌಡ ಶಿವನಗಂಗೆಯಲ್ಲಿ ಶಿವಾಧೀನನಾಗುತ್ತಾನೆ. ದುರಂತದಿಂದ ಈ ನಾಟಕ ಮುಕ್ತಾಯವಾಗುತ್ತದೆ.

ಪರಮಾತ್ಮ ಆಡಿಸಿದಂತೆ ಕುಡಿತದ ದುಷ್ಪರಿಣಾಮವನ್ನು ಚಿತ್ರಿಸುವ ನಾಟಕವಾದರೆ, ಮಹಾದಾನಿ "ಕಣ್ಣಿನ ದಾನ ದಾನಕ್ಕೆಲ್ಲಾ ಶ್ರೇಷ್ಠ" ಎಂಬುದನ್ನು ಚಿತ್ರಿಸುತ್ತದೆ.

ಸ್ವರ್ಗವಾಯಿತು ಇಳೆ ಭಾವೈಕ್ಯವನ್ನು ಸಾಧಿಸುವ ನಾಟಕವಾಗಿದೆ ಬಾಲಲೀಲೆ, ಯಥಾರಾಜ, ದತ್ತು ಪುತ್ರ, ವಾತ್ಸಲ್ಯ, ಅನಾಥ, ಕೆಲವು ಸಾಮಾಜಿಕ ನಾಟಕಗಳು ಮಕ್ಕಳಿಗೆ ಸಂಬಂಧಿಸಿದುವು.

ಬಾಲಲೀಲೆ ಮಕ್ಕಳ ಬಾಲಲೀಲೆಗಳ ಬಗೆಗೆ ಬರೆದ ನಾಟಕ. ಕೆಲವು ಕುಟುಂಬ ಕಲ್ಯಾಣ ಯೋಜನೆಯ ಬಗೆಗೆ ಬರೆದ ನಾಟಕಗಳು. ಇವು ಕಾಲಕ್ಕನುಗುಣವಾಗಿ ಮೂರರಿಂದ ಆರಂಭವಾಗಿ ಒಂದೇ ಮಗು ಸಾಕು ಎಂಬ ಸಂದೇಶವನ್ನು ಸಾರುವ ನಾಟಕಗಳಾಗಿವೆ.

ತರಂಗಗಳು ಜೀವನದ ಕಷ್ಟಸುಖಗಳ ತರಂಗಗಳು ದೊಡ್ಡಕುಟುಂಬದ ಅನಾಹುತಗಳು ಚಿತ್ರಿತವಾಗಿವೆ.

"ನಾನ್ಯಾರು?" ದೊಡ್ಡ ಸಂಸಾರದ ತಾಪತ್ರಯದಿಂದ ತನ್ನನ್ನೇ ತಾನು ಮರೆತವನ ಕತೆ. ಕಲಾವಿದೆ ವಯಸ್ಸಾದಮೇಲೆ ಸಂಸಾರದಲ್ಲಿ ಬಳಲಿದ ಮೇಲೆ ಎಂಥ ದೊಡ್ಡ ಕಲಾವಿದೆಯೂ ತನ್ನ ಕಲೆಯನ್ನೆಲ್ಲಾ ಮರೆಯುತ್ತಾಳೆ. ಒಂದು ಮಾತಾಡಲೂ ಶಕ್ತಳಾಗದೆ ಹೋಗುತ್ತಾಳೆ. ಮುಗಿಯದ ಕಾದಂಬರಿ ಹೆಚ್ಚು ಮಕ್ಕಳಿಂದ ಒಂದು ಕಾದಂಬರಿ ಮುಗಿಸಲೂ ಕಷ್ಟವಾಗುತ್ತದೆ ಕಾದಂಬರಿಕಾರನಿಗೆ.

ತಬ್ಬಲಿ ೧೯೬೮ರಲ್ಲಿ ಮಹಿಳಾ ಕಾರ್ಯಕ್ರಮದಲ್ಲಿ ಪ್ರಸಾರವಾದ ತಬ್ಬಲಿ ಮಕ್ಕಳ ಕಥೆ. 'ನಾಲ್ಕನೆಯ ಮಗಳು' ಗಂಡು ಬೇಕೆಂದು ಸಾಲಾಗಿ ನಾಲ್ಕು ಮಕ್ಕಳು ಹೆಣ್ಣೇ ಆದ ಮೇಲೆ ಪಡುವ ಕಷ್ಟವನ್ನು ಚಿತ್ರಿಸುತ್ತದೆ.

ಆರಿಗಾರೂ ಇಲ್ಲ, ಸಂಗಮ, ಭ್ರಾಂತಿ -ಈ ಮೂರು ನಾಟಕಗಳು ಕುಟುಂಬಯೋಜನೆಯ ಬಗೆಗೆ ಬರೆದವು. ಜ್ಯೋತಿ ಬೆಳಗಿತು ಹೆಣ್ಣಾದರೂ ಒಂದೇ ಗಂಡಾದರೂ ಒಂದೇ ಎಂಬ ಸಂದೇಶವನ್ನು ಹೊತ್ತ ನಾಟಕ. "ಎಚ್ಚರ" ನಾಟಕ ಜೀವನದಲ್ಲಿ ಕಡಿಮೆ ಮಕ್ಕಳಿರಬೇಕೆಂಬ ಎಚ್ಚರವನ್ನು ಸಾರುತ್ತದೆ. ಒಂದೇ ಸಾಕಿತ್ತು ಇದು ಇತ್ತೀಚಿನ, ಸರ್ವಕಾಲೀಕವಾದ ಒಂದೇ ಮಗು ಸಾಕು ಎಂಬ ಸಂದೇಶವನ್ನು ನೀಡುತ್ತದೆ. ಹೆಚ್ಚು ಮಕ್ಕಳನ್ನು ಪಡೆದು ಕಷ್ಟ ಅನುಭವಿಸಿದವರು 'ಒಂದೇ ಸಾಕಿತ್ತು' ಎಂದು ಯೋಚಿಸುತ್ತಾರೆ.

ಕನಸುಗಳು, ಹೆತ್ತೊಡಲು ದೊಡ್ಡ ಸಂಸಾರದ ಕಷ್ಟ ಕಾರ್ಪಣ್ಯಗಳು ಎಷ್ಟು? ಅದಕ್ಕೆ ಮದ್ದೇನು? ಎಂಬುದನ್ನು ಚಿತ್ರಿಸುತ್ತದೆ. ಅಣ್ಣ-ತಮ್ಮ ಮತ್ತೊಂದು ಕುಟುಂಬ ಕಲ್ಯಾಣದ ಕುರಿತಾದ ನಾಟಕ ಇದನ್ನು ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯವರು ಪ್ರಕಟಿಸಿದ ಕೃತಿ.

ಜೀತ, ಗಂಡನಪೂಜೆ, ಯಜಮಾನ್ರ ನ್ಯಾಯ, ದೇವರ ಕಾಣಿಕೆ, ಹರಿಕಥಾ ವಿಹಂಗಮ, ಸೂಜಿ ಕಥೆ ಇವು ಕೆಲವು ಕಿರು ನಾಟಕಗಳು.

ಒಟ್ಟಿನಲ್ಲಿ ಇಲ್ಲಿ ಪ್ರಕಟಿಸಿರುವ ನಾಟಕಗಳು ಪೌರಾಣಿಕ, ಐತಿಹಾಸಿಕ, ಜಾನಪದ, ಮಕ್ಕಳ ನಾಟಕಗಳು, ಕುಟುಂಬ ಕಲ್ಯಾಣ ಯೋಜನೆಯ ಪ್ರಚಾರ ನಾಟಕಗಳು ಸಮಾವೇಶಗೊಂಡಿವೆ. ರಂಗನಾಟಕಗಳಲ್ಲಿ ಪೌರಾಣಿಕ ಹಾಗೂ ಸಾಮಾಜಿಕ ನಾಟಕಗಳಿವೆ.

**ರೂಪಕ:**

'feature is a personal affair'. ರೂಪಕಗಳು ತಾವಾಗಿ ತಾವು ರೂಪುಗೊಂಡ ಅನುಭವದಿಂದ ರೂಪವಿಲ್ಲದ ತನ್ನದೇ ಪ್ರಭಾವಶಾಲಿಯಾದ ಕಾರ್ಯಕ್ರಮ.

Documentary feature ರುಜುವಾತು ರೂಪಕ, ಸಾಕ್ಷ್ಯಚಿತ್ರಗಳಿಗೆ ಏನು ಹೇಳಬೇಕು, ಎಷ್ಟು ಹೇಳಬೇಕು, ಹೇಗೆ ಹೇಳಬೇಕು ಎಂಬ ಸ್ಪಷ್ಟ ಕಲ್ಪನೆ ಬೇಕು. Feature ಅಂದ್ರೆ -F- Facts collection, ಆಯ್ಕೆ ರುಜುವಾತು, ಸಂಗ್ರಹ, ಹೆಚ್ಚು ಸಂಗ್ರಹ ಮಾಡಬೇಕು. E-Elimination ಏನು ತೆಗೆಯಬೇಕು? A-, Authentic ಹೇಳುವುದು ಸರಿ ಇರಬೇಕು T- Tailoring ಚೊಕ್ಕವಾಗಿರಬೇಕು. U- Up to date information ಇತ್ತೀಚಿನ ಮಾಹಿತಿ ಇರಬೇಕು. R- Recording (ಧ್ವನಿಮುದ್ರಣ) E - Editing (ಸಂಕಲನ)

ಆಡುಭಾಷೆ ಪ್ರಭಾವಶಾಲಿಯಾಗಬೇಕು. ರೂಪಕ ಮಾಡಲು ಹೆಚ್ಚು ಶ್ರಮಬೇಕು. ಅಮೂರ್ತ ವಸ್ತುವನ್ನು ಮೂರ್ತ ಸ್ವರೂಪ ಮಾಡಬೇಕು. ಬರಹಗಾರ ಅದರಲ್ಲಿ ಅದ್ದಿ ಮುಳುಗಬೇಕು. ಬೇರೆಯವರಿಗೆ ಕೇಳಿಸಿ, ಓರೆ ಕೋರೆ ತಿದ್ದಿ ಪ್ರಸಾರ ಮಾಡಬೇಕು. ವಿಶ್ಲೇಷಣೆಯನ್ನು ತಿರುಗಿಸಿ ಮುರುಗಿಸಬಾರದು. ಅತಿಯಾದ ಶ್ಯಾಣೆತನದಿಂದ, Limitation ನೋಡಿಕೊಂಡು ಬರೆಯಬೇಕು. ಮಗುವಂತೆ ತಿಳಿದು ದೊಡ್ಡವರಾಗಿ ಹೇಳಬೇಕು. ಇದು ಶ್ರಾವ್ಯವಾದರೂ ಮಾನಸಿಕವಾಗಿ ದೃಶ್ಯ ರೂಪಕ. ನಿರ್ಮಾಪಕ ಹಗಲು ಕನಸುಗಾರನಾಗಿರಬೇಕು. ಕಿರು ರೂಪಕಗಳು, ರಾತ್ರಿ ಕನಸುಗಾರನಂತೆ. ದೊಡ್ಡ ರೂಪಕಗಳು ಧ್ವನಿಪರಿಣಾಮಗಳಿಂದ (Sound Effects) ಉತ್ತಮ ಕಾರ್ಯಕ್ರಮವಾಗುತ್ತೆ.

ರೂಪಕ ಪೂರ್ಣ ಸತ್ಯವಿದ್ದು ಸ್ವಲ್ಪ ಮಿಥ್ಯ ಸೇರಿಸಿ ಸ್ವಾರಸ್ಯ ಮಾಡಿ ಪಾತ್ರ ತರಬಹುದು. ಜನರಿಗೆ ಹತ್ತಿರವಾದ ವಿಷಯವನ್ನು ಆಯ್ಕೆ ಮಾಡಿಕೊಳ್ಳಬೇಕು. ಕೇಳುವವರನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಷಯ ತೆಗೆದುಕೊಳ್ಳಬೇಕು. ಬರೆಯುವವರು ರೂಪಕ ಸಿದ್ಧಪಡಿಸುವಾಗ ಸಂಪೂರ್ಣ Involve ಆಗಬೇಕು. ಪ್ರಶ್ನೆಗಳನ್ನು ಹಾಕಿ ಉತ್ತರ ಪಡೆಯಬೇಕು. ನಿರೂಪಕ Frame workಗೆ ಅವಶ್ಯ. ಬರೆಯುವವರೇ ಮಾರ್ಗದರ್ಶಕರಾದಾಗ ಉತ್ತಮ ಕೊಡುಗೆ ಕೊಡಬಹುದು. ಮಾನವರಿಗೆ ಸ್ವಾರಸ್ಯಕರವಾದ ವಿಷಯ ತೆಗೆದುಕೊಳ್ಳಬೇಕು.

ಸತ್ಯಾಂಶ ತಿಳಿಸುವಾಗ ನಾಟಕೀಯತೆಯನ್ನು ಬೆರಸಬೇಕು. ಸಾಕಷ್ಟು ವಿಷಯ ಇರಬೇಕು. ಹೆಚ್ಚಾದರೂ ಬೇಸರ ತರುತ್ತದೆ.

ರೂಪಕಕ್ಕೆ ಒಂದು ಕೇಂದ್ರ ಬಿಂದು ಇರಬೇಕು. ಸಂಗೀತ ರೂಪಕಕ್ಕೆ ಕಥಾವಸ್ತು ಬೇಕಿಲ್ಲ. ಪಾತ್ರಾಭಿನಯ ಎಲ್ಲ ಸಂಗೀತದ ಮೂಲಕವೇ ಪ್ರಸ್ತುತಪಡಿಸಬಹುದು. ನದಿ ದರ್ಶನವನ್ನು ಉಗಮಸ್ಥಾನದಿಂದ ಐಕ್ಯದವರೆಗೆ ರೂಪರೇಶೆಗಳನ್ನು ಸಂಗೀತದಲ್ಲಿ ರಚಿಸಲು ಸಾಧ್ಯ. ಉದ್ದೇಶವನ್ನು ನಾಲ್ಕು ಮಾತುಗಳಲ್ಲಿ ಹೇಳಬೇಕು. ಆಗ ಆ ರೂಪ ಕಲ್ಪಿಸಿಕೊಳ್ಳಲು ಶ್ರೋತೃಗಳಿಗೆ ಸಹಾಯವಾಗುತ್ತೆ. ಕಥೆ ಬೆಳವಣಿಗೆಗೆ ಸಂಗೀತದ ಮೂಲಕವೇ ಸಾಹಿತ್ಯ-ಸಂಗೀತ ಸಮನ್ವಯವಾಗಬೇಕು. Pause ಕೂಡ ಒಂದು Effect ಆಗುತ್ತೆ ರೂಪಕದಲ್ಲಿ. ಧನಂಜಯನು ಹೇಳಿದಂತೆ ರೂಪಕಗಳೆಂದರೆ ನಾಟಕ, ಪ್ರಕರಣ, ಬಾಣ, ಪ್ರಹಸನ, ಡಿಮ, ವ್ಯಾಯೋಗ, ಸುಮನಕಾರ, ವೀಥಿ, ಉತ್ಸೃಷ್ಟಿಕಾಂಕ (ಅಂಕ) ಮತ್ತು ಈಹಾಮೃಗ. ನಾಟಕದಲ್ಲಿ ರೂಪಕದ ಲಕ್ಷಣಗಳೆಲ್ಲಾ ತುಂಬಿರುತ್ತವೆ. ನಾಟಕಕ್ಕೆ ಪ್ರಕೃತಿ ಎಂತಲೂ ಮಿಕ್ಕ ಒಂಭತ್ತು ರೂಪಕಗಳಿಗೆ 'ವಿಕೃತಿ' ಎಂದೂ ಹೆಸರು. ನಾಟ್ಯ, ರೂಪ-ರೂಪಕಗಳೆಲ್ಲಾ ಒಂದೇ ಅರ್ಥ ವ್ಯಾಪ್ತಿಯುಳ್ಳದ್ದು. ಧನಂಜಯ ರೂಪಕದ ಬಗೆಗೆ ಹೀಗೆ ಹೇಳುತ್ತಾನೆ- 'ರೂಪಕದಲ್ಲಿ ವಸ್ತುವಿನ ಸ್ಥಾನ ಸ್ವತಂತ್ರವಲ್ಲ. ಉಚಿತವೂ, ಸುಂದರವೂ ಆದ ವಚನ ಪ್ರಪಂಚದಿಂದ ಪೂರ್ವ ಕಾವ್ಯಗಳ ಪರಿಶೀಲನದಿಂದ ಕವಿ ಚಮತ್ಕಾರವುಳ್ಳ ರೂಪಕವನ್ನು ರಚಿಸತಕ್ಕದ್ದು.'

"A feature programme is a method of employing all available methods & tricks of broadcasting to convey information or entertainment in a palatable form" ಇದು ಫೀಲ್ಡನ್ ಬಾನುಲಿ ಶಬ್ದಚಿತ್ರಕ್ಕೆ ಕೊಟ್ಟಿರುವ ವ್ಯಾಖ್ಯಾನ.

'ಶಬ್ದ ಚಿತ್ರ' ಒಂದು ವೈವಿಧ್ಯಪೂರ್ಣ ರೂಪಕ. ಬರೇ ಭಾಷಣ ಶ್ರೋತೃಗಳಿಗೆ ಬೇಸರವಾಗುತ್ತದೆಂದು ರೂಪಕ ವಿಧಾನವನ್ನು ಅನುಸರಿಸಿ ಶ್ರೋತೃಗಳಿಗೆ ಬೋಧನೆ ಮನರಂಜನೆ ಒದಗಿಸುವ ಉದ್ದೇಶದಿಂದ 'ಶಬ್ದ ಚಿತ್ರ' ಕಾರ್ಯಕ್ರಮ ನಿಯೋಜಿಸಲ್ಪಟ್ಟಿತು. ಶಬ್ದ ಚಿತ್ರ ಎಂದರೆ ನಿರೂಪಣೆ, ಸಂಭಾಷಣೆ, ಸಂಗೀತ, Effects ಪರಿಣಾಮಕಾರಿ ಸಂಗೀತ, ಸಂದರ್ಶನಗಳನ್ನೊಳಗೊಂಡ ಒಂದು ಕಲಾತ್ಮಕ ಕಾರ್ಯಕ್ರಮ. ಮತ್ತೊಂದೆಡೆ ಫೀಲ್ಡನ್ ಹೇಳುವಂತೆ Feature programmes may range from a discription of some process of manufacture interspersed with sound Effects, Conversation with workers & soforth to an arrangement of poetry and music compiled so as to present and develop an idea."

ರೂಪಕದ ಯಶಸ್ಸು ನಿರ್ದೇಶಕನ ಕೈಯಲ್ಲಿದೆ. ಆಳವಾದ ಸಂಶೋಧನೆ, ಪೌರಾಣಿಕ, ಚಾರಿತ್ರಿಕ, ಇಲ್ಲವೇ ಸಾಮಾಜಿಕವಾಗಿದ್ದು ಕುಟುಂಬ ಜೀವನ ಅಥವಾ

ವ್ಯಕ್ತಿ ಜೀವನದ ಒಂದೇ ಎಳೆಯನ್ನು ಆಧರಿಸಿ ಈ ಮಾಧ್ಯಮದ ತಂತ್ರವನ್ನು ದುಡಿಸಿಕೊಂಡು ಪ್ರಸಾರ ರೂಪವನ್ನು ಸೃಷ್ಟಿಸಲು ಸಾಧ್ಯ. ಈ ತಂತ್ರ ಅರಿತು ಯಶಸ್ವಿಯಾಗಿ ಬಳಸುವುದರಿಂದಲೇ ತೆರೆಯ ರಂಗದ ಮೇಲೆ ತರಲು ಅಸಾಧ್ಯವಾದಂಥ ಅನುಭವವನ್ನು ಬಾನುಲಿಯ ಮೂಲಕ ಕೊಡಬಹುದಾಗಿದೆ. ಘಟನೆಯನ್ನು ಪ್ರಕೃತವಾಗಿಟ್ಟುಕೊಂಡು ಅದರ ಹಿನ್ನೆಲೆಯನ್ನು ಹಂತಹಂತವಾಗಿ ಜೋಡಿಸುವುದು ಈ ತಂತ್ರದ ವಿಧಾನ.

ನಿಸರ್ಗ, ಜ್ವಾಲಾಮುಖಿ, ಸಿಡಿಲು, ಗುಡುಗು, ಮಳೆ, ಮಹಾಪೂರ, ಸಮರ, ಪ್ರಣಯ ಮುಂತಾದವನ್ನು ರೂಪಕದಲ್ಲಿ ತರಬಹುದು. ಸಣ್ಣ ಕಥೆ ಕಾದಂಬರಿಗಳು ರೂಪಕವಾಗಿ ಪ್ರಸಾರಗೊಂಡಿವೆ. ಕೇಳ್ಮೆಯಲ್ಲಿ ಸಿದ್ಧಿಸುವಂಥ ಕಥಾದ್ರವ್ಯ ಹಾಗೂ ಪ್ರಯೋಗ ತಂತ್ರಗಳನ್ನೊಳಗೊಂಡ ಕಾರಣ ರೇಡಿಯೋ ರೂಪಕ ಇಂದಿಗೂ ನಿಶ್ಚಿತ ಸ್ಥಾನವನ್ನು ಕಾಯ್ದಿರಿಸಿಕೊಂಡಿದೆ.

ರೂಪಕಗಳ ಬಗೆಗೆ ಹೊತ್ತಗೆಗಳು ಬರುವುದು, ಬಂದಿರುವುದು ತುಂಬಾ ಅಪರೂಪ. ರೂಪಕಗಳನ್ನು ಹೇಗೆ ಹೇಗೆ ಸಿದ್ಧಪಡಿಸಬಹುದು ಎಂಬುದಕ್ಕೆ ಈ ರೂಪಕಗಳು ಮಾದರಿಯಾಗಿ ನಿಲ್ಲುತ್ತವೆ. ಕುಟುಂಬಯೋಜನೆ, ಸಾಮಾಜಿಕ ಸಮಸ್ಯೆಗಳು, ಕಲೆ, ಜನಾಂಗಗಳ ಜೀವನ, ಹಬ್ಬ ಹರಿದಿನಗಳು ಮುಂತಾದ ವಿಷಯಗಳ ಬಗೆಗೆ ಬಾನುಲಿಯಲ್ಲಿ ಹೇಗೆ ಪ್ರಸಾರ ಮಾಡಬಹುದು ಎಂಬುದನ್ನು ನಾನು ಹಲವಾರು ಪ್ರಯೋಗಗಳನ್ನು ಮಾಡಿದ್ದೇನೆ. "ಹಲವಾರು ಜನರು ರೂಪಕ ಬರೆದಿದ್ದರೂ ಪ್ರಕಟಮಾಡಿಲ್ಲ. ಬಿ.ಎಸ್. ಸ್ವಾಮಿಯವರು ಅಂಥ ಪ್ರಯತ್ನ ಮಾಡಿದ್ದಾರೆ.ಪುಸ್ತಕ ರೂಪಕದಲ್ಲಿ ಪ್ರಕಟ ಮಾಡಿದ್ದಾರೆ" ಎಂದು ಡಾ. ಚಂದ್ರಶೇಖರ ಕಂಬಾರರು ಅಖಿಲಭಾರತ ಸಾಹಿತ್ಯ ಸಮ್ಮೇಳನದಲ್ಲಿ ಹೇಳಿರುವುದು ನಿಜವೇ. ಈಗ ನಾನು ೩೦ ವರ್ಷಗಳಲ್ಲಿ ಬರೆದ ರೂಪಕಗಳನ್ನು ಒಂದೆಡೆ ಇಲ್ಲಿ ಪ್ರಕಟಮಾಡುತ್ತಿರುವೆ.

**ಕಿರು ರೂಪಕಗಳು:**

ಯಾವುದೇ ವಿಷಯವನ್ನಾದರೂ ಪ್ರತಿಪಾದಿಸಲು ಕಿರುರೂಪಕ ಸಹಾಯವಾಗುತ್ತದೆ. ವಿಜ್ಞಾನ ಆಗಬಹುದು, ಜಾನಪದ ಆಗಬಹುದು, ಮತ್ತಾವುದೇ ವಿಷಯ ಆಗಬಹುದು. ಚಿಕ್ಕದು ಯಾವಾಗಲೂ ಫಲಪ್ರದ. ಸಣ್ಣದು ಗುಣ ಮಟ್ಟದಲ್ಲಿ ಹಿರಿದಾಗಿರುತ್ತದೆ "ಕರಿಯನ್ನು ಕನ್ನಡಿಯಲ್ಲಿ ಹಿಡಿದಿಟ್ಟಂತೆ." ಯಾವ ವಿಷಯದ ಬಗ್ಗೆ ಮಾಡಬೇಕು, ಎಷ್ಟು ಚಿಕ್ಕದು ಮಾಡಬೇಕು ಅಂತ ಮೊದಲು ಮನಸ್ಸು ಮಾಡಬೇಕು ಲೇಖಕ ನಿರ್ದೇಶಕ ವಿಷಯವನ್ನು ಸ್ಪಷ್ಟವಾಗಿ ಹೇಳಬೇಕು ವಿಷಯ ಹೇಳುವುದು ಚಿಕ್ಕದಾಗಿ ಚೊಕ್ಕದಾಗಿರಬೇಕು. ನೇರವಾದ ನಿರೂಪಣೆ ಇರಬೇಕು. ಅಂಥ ವಿಚಾರವನ್ನು ತೆಗೆದುಕೊಳ್ಳಬೇಕು. ಅವಧಿ ಪರಿಮಿತಿ, Treatment ದೃಷ್ಟಿಯಿಂದ ಇದು ಪ್ರೌಢ

ಕಾರ್ಯಕ್ರಮವೆ. ನೇರವಾಗಿ ಹೇಳಲು ಸಾಧ್ಯವಾದ ವಿಷಯವನ್ನು ತೆಗೆದುಕೊಳ್ಳಬೇಕು. ಹಾಡು, ಸಂಗೀತ, ಜನರ Involvement ಸಂಕ್ಷಿಪ್ತತೆಯಿಂದದ್ದೂ, ದೊಡ್ಡ ವಿಷಯವನ್ನು ಚಿಕ್ಕದಾಗಿ ಮಾಡಿ ಕೇಂದ್ರವನ್ನು ಆರಂಭಿಸಬೇಕು. ಆಕರ್ಷಕದ ಶೀರ್ಷಿಕೆ ಕೊಡಬೇಕು. ದೊಡ್ಡ ರೂಪಕದಲ್ಲಿ Title ಕೊಟ್ಟು ವಿಷಯ ಹೇಳಬೇಕು. ಕಿರು ರೂಪಕದಲ್ಲಿ ಮೊದಲು ವಿಷಯ ಹೇಳಿ ಆಮೇಲೆ ಆಕರ್ಷಕ Title ಕೊಡಬೇಕು. ಜನಪದ ಕಲೆಗಳನ್ನು ಪರಿಚಯ ಮಾಡುವಾಗಲೂ ಐದು ನಿಮಿಷದ ಅವಧಿಯಲ್ಲಿ ರೂಪಕವನ್ನು ಮುಗಿಸಬಹುದು.

**ವಿಜ್ಞಾನದ ರೂಪಕಗಳು:**

ಸಂಗೀತ ಜೀವನಕ್ಕೆ ಎಷ್ಟು ಮುಖ್ಯವೋ ಹಾಗೆಯೇ ವಿಜ್ಞಾನವೂ ಅಷ್ಟೇ ಅವಶ್ಯ. 'Creative interpritation of reality' ತನ್ನದೇ ರೀತಿಯಲ್ಲಿ ಕಲಾತ್ಮಕವಾಗಿ, ಸೃಜನಾತ್ಮಕವಾಗಿ ಹೇಳಿ ಜನರಿಗೆ ವಿಷಯವನ್ನು ಮುಟ್ಟಿಸುವುದು ವಿಜ್ಞಾನ. ೧೯೬ಳರಲ್ಲಿ ಪ್ರಸ್ತುತ ಪಡಿಸಿದ ಒಂದು ರೂಪಕಕ್ಕೆ ರಾಷ್ಟ್ರೀಯ ಬಹುಮಾನ ದೊರೆಯಿತು. 'Lali & Melovil Demello Lion of the Gheer' (ಸಿಂಹಗಳ ಸಂರಕ್ಷಣೆ)

ವಿಜ್ಞಾನದಲ್ಲಿ ೧೦೦-೧೫೦ ಪ್ರಕಾರಗಳಿದ್ದು ರೂಪಕ ಸಿದ್ಧಪಡಿಸಲು ಯಾವ ವಸ್ತು ಆಯ್ಕೆ ಮಾಡಿಕೊಳ್ಳಬೇಕೆಂಬ ಸಮಸ್ಯೆ ಬರುತ್ತೆ. ಸ್ಥೂಲವಾಗಿ ಇದನ್ನು ೩-೪ ಭಾಗಗಳಾಗಿ ಮಾಡಬಹುದು. ವಿಜ್ಞಾನ ಚಟುವಟಿಕೆಗಳು, ಸಂಶೋಧನೆಗಳು ಜೀವನದ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂಬ ವಿಷಯ ಪರಿಣಾಮಕಾರಿಯಾಗುತ್ತದೆ. ಕೃತಕ ಉಪಗ್ರಹ, ನೀರಿನ ಶುದ್ಧೀಕರಣ ಇವು ಜನರಿಗೆ ಪರಿಣಾಮ ಬೀರುತ್ತವೆ.

ಜೀವನದ ಹಲವಾರು ಸಂಶೋಧನೆಗಳು ಉಪಯುಕ್ತ ಹಾಗೂ ಪರಿಣಾಮಕಾರಿ.

ಮಕ್ಕಳ ಕುತೂಹಲಕಾರಿ ಪ್ರಶ್ನೆಗಳನ್ನು ೩-೪ ನಿಮಿಷಗಳ ರೂಪಕ ಮಾಡಬಹುದು. ಚಂದ್ರನಿಂದ ಬೆಳದಿಂಗಳು ಬರುತ್ತೆ, ಸೂರ್ಯನ ಕಿರಣ ಚಂದ್ರನ ಮೇಲೆ ಬಿದ್ದು ಹೇಗೆ ಬೆಳಕು ಬರುತ್ತೆ ಮುಂತಾದುವು. ಮಿಂಚು ಹುಳದಲ್ಲಿ ಬೆಳಕು ಬರುತ್ತೆ ಹೇಗೆ? ಕೋಗಿಲೆ ಯಾಕೆ ಕಾಗೆಯ ಗೂಡಲ್ಲಿ ಮೊಟ್ಟೆ ಇಡುತ್ತದೆ ಮುಂತಾದುವು. ವಸ್ತು, ವಿಷಯದ ಆಯ್ಕೆ, ವಿಷಯದ ವ್ಯಾಪ್ತಿ ಇವೆಲ್ಲವನ್ನೂ ರೂಪಕ ಅವಲಂಬಿಸಿರುತ್ತದೆ. ಸಾಗರದ ನೀರಿಂದ, ಮೋಡ-ಮಳೆ, ನಾಟಕ, ಕಥೆ, ಸಂಗೀತ, ಧ್ವನಿ, ಸೃಜನಾತ್ಮಕವಾಗಿ ಸರಿಹೊಂದುವಂತೆ ಕಾರ್ಯಕ್ರಮ ರೂಪಿಸಬೇಕು. ಇವುಗಳಿಗೆ ಇಂಥ ನಿಯಮ ಎಂಬುದಿಲ್ಲ. ಸಂದರ್ಶನ, ಹಾಡು, ಮಾತುಗಳಲ್ಲಿ ಹೇಳಲಾಗದುದನ್ನು ಚಟುವಟಿಕೆಗಳ ಮೂಲಕ ಮನಗಾಣಿಸಬೇಕು. ಅನೇಕ ಸಮಸ್ಯೆಗಳು ಬೀರುತ್ತವೆ. ಇದಕ್ಕೆ ಸ್ವಂತ ಪ್ರಯತ್ನ ಮುಖ್ಯ. ಇಂಥದ್ದೇ ಚೌಕಟ್ಟಿನಲ್ಲಿ ಕಠಿಣವಾದುದನ್ನು ಒಂದು ಘಟನೆಯಿಂದ ಪ್ರಾರಂಭಿಸಿ ಹೊಸ ವಿಷಯದ ಕಡೆ ಕರೆದುಕೊಂಡು ಹೋಗಬೇಕು.

ಬಾನುಲಿಯಲ್ಲಿ ಪ್ರಸಾರವಾದ ಕೆಲವು ರೂಪಕಗಳನ್ನು ಇಲ್ಲಿ ಪ್ರಸ್ತಾಪಿಸಲಿದ್ದೇನೆ. ಇವೆಲ್ಲಾ ನಾನೇ ಬರೆದು ಪ್ರಸ್ತುತಪಡಿಸಿದುವು. ಕ್ಷೇತ್ರಕಾರ್ಯವೂ ಇವುಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದಿವೆ. ಇವುಗಳಲ್ಲಿ ಕುಟುಂಬ ಕಲ್ಯಾಣ ರೂಪಕಗಳು, ಸಂಗೀತ ರೂಪಕಗಳು, ಪೌರಾಣಿಕ, ಭಾವೈಕ್ಯ, ದುಶ್ಚಟಗಳು, ಜಾನಪದ, ಹಾಸ್ಯ, ವೈಜ್ಞಾನಿಕ, ವ್ಯಕ್ತಿಚಿತ್ರ, ಅಭಿವೃದ್ಧಿ, ಪ್ರಚಲಿತ ಸಮಸ್ಯೆಗಳು, ಐತಿಹಾಸಿಕ ಮುಂತಾದ ವಿಷಯಗಳನ್ನೊಳಗೊಂಡಿವೆ.

ಕುಟುಂಬ ಕಲ್ಯಾಣ ಯೋಜನೆಯ ರೂಪಕಗಳಲ್ಲಿ ಸರ್ವೇ ಜನಾಃ ಸುಖಿನೋ ಭವಂತು, ತಾಯಿ ಮಗು, ಇದೇ ಎಲ್ಲರಾ ಬಯಕೆ, ಇವು ಜನಸಂಖ್ಯಾ ನಿಯಂತ್ರಣದ ಬಗ್ಗೆ, ಕುಟುಂಬ ಕಲ್ಯಾಣ ಯೋಜನೆ, ತಾಯಿ, ಮಗುವಿನ ಆರೋಗ್ಯದ ಬಗ್ಗೆ ಬರೆದ ರೂಪಕಗಳು. ಕನಸು-ನನಸು ಸಂಗೀತ ರೂಪಕ, ಕುಟುಂಬ ಯೋಜನೆಯ ಬಗ್ಗೆ ಬರೆದುದು. ಅದೇನೋ ಗಾದೆ ಹೇಳ್ತಾರಲ್ಲಾ ಗಾದೆಯ ಬಗೆಗೆ ರಚಿಸಿದ ರೂಪಕ. ದಿನನಿತ್ಯದಲ್ಲಿ ನಡೆವ ಸಂಭಾಷಣೆಯಲ್ಲಿ ಗಾದೆ ಸೃಷ್ಟಿ ಹೇಗಾಗುತ್ತದೆ ಎಂಬುದರ ಚಿತ್ರಣವಿದೆ. ಜನಪದ ಸಂಗೀತ ರೂಪಕಗಳಲ್ಲಿ ಇದೇ ಎಲ್ಲರಾ ಬಯಕೆ, ನಾಗರಪಂಚಮಿ, ಎಳ್ಳು-ಬೆಲ್ಲ, ವಿಜಯೋತ್ಸವ, ಮಮತೆ, ಏಳು ಮಂದಿ ರಾಮರು, ಬಿಲ್ಲಾಳರಾಯ, ಈರದಿಮ್ಮಿ ಕಾಮಕ್ಕ, ಪಾಂಡವರ ಕಥೆ, ಜೀವನ ಸಂಗೀತ, ಜೋಡೆರಡು ದೀವಿಗೆ, ತವರಿನ ಕರೆ, ತಾಳತರಂಗ ಪ್ರಮುಖವಾದುವು.

"ನಾಗರ ಪಂಚಮಿ" ನಾಗರ ಪಂಚಮಿಯ ಹಬ್ಬದ ವಿಶೇಷತೆಯನ್ನು ಎತ್ತಿಹಿಡಿಯುವುದಲ್ಲದೆ ಹೆಣ್ಣು ಗಂಡನ ಮನೆಗೆ ಹೋಗಿದ್ದರೂ ನಾಗರ ಪಂಚಮಿಗೆ ತವರಿಗೆ ಬರಲು ತವಕ ಪಡುತ್ತಾಳೆ. ಅಣ್ಣ ಇನ್ನೂ ಹಬ್ಬಕ್ಕೆ ಕರೆಯಲು ಬರಲಿಲ್ಲವೆಂದು ಕಾತರಿಸುತ್ತಾಳೆ. ತವರಿನ ಅಕ್ಕ, ತಂಗಿ, ಅಣ್ಣ, ತಮ್ಮ ತಾಯಿ, ತಂದೆ ಎಲ್ಲರನ್ನೂ ಜ್ಞಾಪಿಸಿಕೊಳ್ಳುತ್ತಾಳೆ. ಇವನ್ನೆಲ್ಲಾ ಜಾನಪದ ಕವಿಗಳು ಸುಂದರವಾಗಿ ಚಿತ್ರಿಸಿದ್ದಾರೆ.

'ಎಳ್ಳು-ಬೆಲ್ಲ' ಸಂಕ್ರಾಂತಿಯ ಬಗೆಗೆ ರಚಿಸಿದ ರೂಪಕ. ಸಂಕ್ರಾಂತಿ ಹಬ್ಬವು ರೈತರು ಫಲಿಸಲು ಬೆಳೆದು ಹಿಗ್ಗಿನಿಂದ ಆಚರಿಸುವುದು. ಇಚ್ಛಾಮರಣಿ ಭೀಷ್ಮಾಚಾರ್ಯರೂ ಶರಶಯ್ಯೆಯಲ್ಲಿ ಮರಣ ಹೊಂದಿದ್ದೂ ಇಂದೇ. ಈ ಹಬ್ಬ ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯಲ್ಲಿ ವೈವಿಧ್ಯಮಯವಾಗಿ ಆಚರಿಸಲ್ಪಡುವುದು. ಅವುಗಳ ಬಣ್ಣನೆ ಇದರಲ್ಲಿದೆ.

'ವಿಜಯೋತ್ಸವ' ನವರಾತ್ರಿ ಹಬ್ಬವನ್ನು ಕುರಿತಾದ ಗೊಂಬೆಗಳ ಹಬ್ಬ. ಮಣ್ಣೆತ್ತಿನ ಅಮಾವಾಸ್ಯೆ. ಸರಸ್ವತಿ ಪೂಜೆ, ದುರ್ಗಾಪೂಜೆ, ಮೈಸೂರು ದಸರಾದ ವೈಭವವನ್ನು ಚಿತ್ರಿಸುವುದು. ರಾಮ-ರಾವಣನ ಮರ್ಧಿಸಿದುದು ಈ ವಿಜಯ ದಶಮಿಯಂದೇ.

ಇದು ಶ್ರೀರಾಮನ ವಿಜಯೋತ್ಸವದ ಆಚರಣೆ. ಮಹಿಷಾಸುರನನ್ನು ಚಾಮುಂಡಿ ಕೊಂದುದು ಇಂದೇ. ಇದು ಚಾಮುಂಡಿಯ ವಿಜಯೋತ್ಸವ. ನಾಡ ಜನರ ಭಾವೈಕ್ಯದ ಸಂಕೇತವಾಗಿ ಈ ಹಬ್ಬವನ್ನು ಆಚರಿಸಲಾಗುವುದು.

'ಮಮತೆ' ತಾಯಿ ಮಗಳ ಬಗೆಗೆ, ಮಕ್ಕಳು ತಾಯಿಯ ಬಗೆಗೆ, ಅಕ್ಕತಂಗಿಯ ಬಗೆಗೆ, ತಂಗಿ ಅಕ್ಕನ ಬಗೆಗೆ, ಅಣ್ಣ ತಂಗಿಯ ಬಗೆಗೆ ಮಮತೆ ಇಟ್ಟಿರುವುದನ್ನು ಹಿಂದಿನಿಂದಲೂ ನಾವು ಕಾಣುತ್ತಲೇ ಬಂದಿದ್ದೇವೆ. ಜನಪದ ಸಾಹಿತ್ಯದಲ್ಲಿ ಇದರ ಬಗೆಗೆ ಹೇರಳವಾಗಿ ಪದ್ಯಗಳನ್ನು ಕಾಣಬಹುದು. ಈ ಮಮತೆ ಯಾರಿಗೆ ಬೇಡ ಎಂಬುದನ್ನು ಹೇಳಲು ಹೊರಟಿರುವ ರೂಪಕ.

'ಏಳು ಮಂದಿ ರಾಯರು' ಈ ರೂಪಕ ಏಳು ಮಂದಿ ರಾಮರ ಕಥೆಯನ್ನು ಸಾಹಸಮಯವಾಗಿ, ಕುತೂಹಲಕಾರಿಯಾಗಿ, ಅದ್ಭುತವಾಗಿ, ರಂಜನೀಯವಾಗಿ ಕಟ್ಟಿದೆ. ರಾಮನ ಸಾಹಸವನ್ನು ಇಲ್ಲಿ ಮೆಚ್ಚುವಂಥಹದ್ದು. ಕಪಟ ಜೋಗಿಯ ಮೋಸಕ್ಕೆ ಬಲಿಯಾದ ನಾಗರ ಕನ್ನೆಯನ್ನು ರಾಮ ಸೆರೆಯಿಂದ ಬಿಡಿಸಿ ತರುತ್ತಾನೆ. ದುಷ್ಟಶಕ್ತಿಯನ್ನು ಅಡಗಿಸುತ್ತಾನೆ. ಹೆತ್ತರೆ ತಾಯಿ ಇಂಥ ಮಗನನ್ನು ಹೆರಬೇಕು. ರಾಮ ಜಾಣ, ತಾಯಿಯ ಮೇಲೆ ಈತ ಇಟ್ಟ ಭಕ್ತಿ, ಅಪಾರ. ಆಕೆಗಾಗಿ ತನ್ನ ಪ್ರಾಣವನ್ನೇ ಮುಡುಪಾಗಿಟ್ಟ. ಹೋರಾಟದಿಂದ ತಂದೆ, ತಾಯಿ, ದೊಡ್ಡವರನ್ನೆಲ್ಲಾ ಕರೆತರುತ್ತಾನೆ. ಆತನ ಛಲ ದುರ್ಯೋಧನನಂತೆ. ಬರೇ ಮಾತಿನಮಲ್ಲನಾಗದೆ ಶೂರ, ಧೀರ, ವೀರನಂತೆ, ನುಡಿದಂತೆ ನಡೆದವ. ಇದೊಂದು ಹೃದಯಂಗಮ ಅದ್ಭುತ ರಮ್ಯ ಕಥಾನಕವಾಗಿದೆ.

"ಬಿಲ್ಲಾಳರಾಯ" ಕಥನ ಕವನ ದಾಯಾದಿ ಮಾತ್ಸರ್ಯ ಎಷ್ಟೊಂದು ಕೆಡಕು ಎಂಬುದನ್ನು ಪ್ರತಿಬಿಂಬಿಸುತ್ತದೆ. ಬಿಲ್ಲಾಳರಾಯ ಆರು ಮಂದಿ ಅಣ್ಣಂದಿರೊಡನೆ ತಮ್ಮನಾಗಿ ಹುಟ್ಟಿ ಎಷ್ಟೊಂದು ಕಷ್ಟಪಡಬೇಕಾಯಿತು. ಆದರೂ ಕೊನೆಗೆ ರಾಜನಾದ ಬಿಲ್ಲಾಳರಾಯ ಅಣ್ಣಂದಿರನ್ನು ಸನ್ಮಾನಿಸುತ್ತಾನೆ ಎಂಬುದು ಆತನ ದೊಡ್ಡತನವನ್ನು ವ್ಯಕ್ತಪಡಿಸುತ್ತದೆ. ಬಿಲ್ಲಾಳರಾಯನ ಅಣ್ಣಂದಿರು ಕೆಟ್ಟವರಾದರೂ, ಆತನ ಅತ್ತಿಗೆಯರಾದ ಮಲ್ಲುಗದೇವಿ ಕುಪ್ಪಾಜಮ್ಮ ಇಬ್ಬರೂ ಬಲ್ಲಾಳರಾಯನ ಬಗ್ಗೆ ಅನುಕಂಪ ತೋರುವ ಗುಣಶೀಲಸಂಪನ್ನರು. ಗಂಡಂದಿರು ಬಿಲ್ಲಾಳರಾಯನ ಪ್ರಾಣವನ್ನೇ ತೆಗೆಯಬೇಕೆಂಬ ವಿಷಯವನ್ನು ತಿಳಿದ ಕುಪ್ಪಾಜಮ್ಮ ಮೈದುನ ಬಿಲ್ಲಾಳರಾಯನನ್ನು ಸೌದೆಗೆ ಹೋಗಬೇಡ ಎಂದು ಹೇಳುತ್ತಾಳೆ. ಬಿಲ್ಲಾಳರಾಯನ ಮುದಿ ಎತ್ತುಗಳು ಎಷ್ಟೊಂದು ಸ್ವಾಮಿಭಕ್ತಿ ಇಟ್ಟಿದ್ದುವು ಎಂದರೆ ನೀರಿನಲ್ಲಿ ಬಿದ್ದುಹೋಗಿದ್ದ ಬಿಲ್ಲಾಳರಾಯನ ಹೆಣವನ್ನು ಹೊತ್ತುತಂದು ಮೇಲಿರಿಸಿ, ಈಶ್ವರ ಪಾರ್ವತಿಯರನ್ನು ಬೇಡಿ, ಬಿಲ್ಲಾಳರಾಯನನ್ನು ಬದುಕಿಸಿಕೊಳ್ಳುತ್ತವೆ. ಪ್ರಾಣಿಗಳಲ್ಲಿದ್ದ ಸ್ವಾಮಿನಿಷ್ಠೆ, ಅನುಕಂಪ, ಆತನ ಅಣ್ಣಂದಿರಲ್ಲಿರಲಿಲ್ಲ.

ಸುಖವಾಗಿದ್ದ ಬಿಲ್ಲಾಳರಾಯನನ್ನು ಕಂಡು ಕರುಬಿ ಕಲ್ಲು ಹಿಡಿಯುತ್ತಿದ್ದರು. ಆದರೆ ಬಿಲ್ಲಾಳರಾಯ ಅಷ್ಟೇ ಕರುಣಾಮೂರ್ತಿ. ಅಣ್ಣಂದಿರು ಬಾವಿಗೆ ತಳ್ಳಿ ಸಾಯಿಸಲು ಆಶಿಸಿದ್ದರೂ, ಅವರಿಗೆ ಸತ್ಕರಿಸಿ, ಉಪಚರಿಸಿ, ತನ್ನಲ್ಲೇ ಇರಿಸಿಕೊಳ್ಳುತ್ತಾನೆ. ನಿಜಕ್ಕೂ ಈತನ ತ್ಯಾಗ ದೊಡ್ಡದು. ಉತ್ತಮ ಗಿಣಿಗಳ ಗಣಿ ಬಿಲ್ಲಾಳರಾಯ. ಅದೇ ಅಣ್ಣಂದಿರು ಕಟುಕರು, ಮೋಸಗಾರರು ಇಂಥ ಅಪಕಾರ ಮಾಡಿದವರಿಗೂ ಉಪಕಾರ ಮಾಡುತ್ತಾನೆ ಬಿಲ್ಲಾಳರಾಯ.

'ಈರದಿಮ್ಮಿ' ಒಂದು ಮುಗ್ಧ ಹೆಣ್ಣಿನ ದುಃಖಾಂತ್ಯದ ಕಥೆ. ಬ್ಯಾಡರ ಬೊಮ್ಮ ರೊಡ್ಡಿ ಗೌಡನ ಹೆಂಡತಿ ಈರದಿಮ್ಮಿಗಾಗಿ ಆಸೆ ಪಡುತ್ತಾನೆ. ಆಕೆ ಆತನ ಬಲೆಗೆ ಬೀಳದಿರಲು, ನಿಶೇಕ ತೀರಿಸಿಕೊಂಡು ಬರುತ್ತಿದ್ದ ಮುಗ್ಧ ರೊಡ್ಡಿ ಗೌಡನ ತಲೆಯನ್ನು ಬ್ಯಾಡರಬೊಮ್ಮ ಕತ್ತರಿಸಿದ. ಏನೂ ಅರಿಯದ ನಿರಪರಾಧಿಗೆ ಸಾವು ತಂದೊಡ್ಡಿದ. ಕುಪಿತಳಾದ ಈರದಿಮ್ಮಿ ಬ್ಯಾಡರ ಬೊಮ್ಮನನ್ನು ಬಿಡದೆ ರೊಚ್ಚಿಗೆದ್ದು ಸೇಡಿಗೆ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಕೊನೆಗೆ ಗಂಡನೊಡನೆ ಚಿತೆಗೆ ಹಾರುತ್ತಾಳೆ.

ಪತಿವ್ರತೆಯಾದ ಹೆಣ್ಣಿನ ಆದರ್ಶ ನಿಜಕ್ಕೂ ಶ್ಲಾಘನೀಯ. ಇದು 'ಆತ್ಮಾರ್ಪಣೆ' ಕಾವ್ಯದ ಸಾಲಿಗೆ ಸೇರುತ್ತದೆ. ಈರದಿಮ್ಮಿ 'ನಾರಿ ಮುನಿದರೆ ಮಾರಿ'ಯಾಗುತ್ತಾಳೆ. ಈ ಕಥೆ ಎಂಥವರ ಕರುಳನ್ನೂ ಮಿಡಿಸುವಂಥದ್ದು.

'ಕಾಮಕ್ಕ' ಕರುಣಾಜನಕವಾದ ಮತ್ತೊಂದು ಕಥಾನಕ ಕವನ. ದಂಡಿಗೆ ಹೋಗಿ ಒಂದು ಊರಿಗೆ ಬಂದ ರವಿಕಣ್ಣ ತೋಟಿಯನ್ನು ಸೂಳೆಯ ಮನೆಗೆ ದಾರಿ ಯಾವುದೆಂದು ಕೇಳುತ್ತಾನೆ. ಆತ ಕಾಮಕ್ಕನ ಮನೆ ತೋರಿಸುತ್ತಾನೆ. ಆಕೆಯ ತಂದೆ-ತಾಯಿ ಹೆಸರು ಕೇಳಿದಾಗ ತಂಗಿ ಎಂಬುದು ತಿಳಿದು ತಲೆಚಚ್ಚಿಕೊಳ್ಳುತ್ತಾನೆ. ತನ್ನನ್ನೇ ಇರಿದುಕೊಳ್ಳಲು ಪ್ರಯತ್ನಿಸಿದಾಗ ತಂಗಿ ಅಣ್ಣನ ತಪ್ಪಿಗೆ ಸಾಲು ಮರ ನೆಡಿಸು, ಸಾಲು ಕಟ್ಟೆ ಕಟ್ಟಿಸು, ಇದರಿಂದ ಪಾಪ ಪರಿಹಾರವಾಗುತ್ತದೆ ಎಂದು ಹೇಳುತ್ತಾಳೆ. ಹೆಸರು ಕಾಮಕ್ಕನಾದರೂ ಕಾಮಕ್ಕೆ ಬಲಿಯಾಗದೆ ಪತಿವ್ರತೆಯಾಗಿ ಮೆರೆಯುತ್ತಾಳೆ.

'ಜೀವನ ಸಂಗೀತ' ಜೀವನದಲ್ಲಿ ಪ್ರತಿಯೊಬ್ಬರೂ ಸುಖ-ಸಂತೋಷದಿಂದ ಇರಬೇಕು ಎಂಬುದನ್ನು ನಮ್ಮ ಹಿಂದಿನವರು ಬಯಸುತ್ತಿದ್ದರು. ಮದುವೆ ಆದಂದಿನಿಂದ ಹಿಡಿದು ಮಕ್ಕಳಾಗುವವರೆಗೆ ಹೇಗೆ ತವಕಿಸುವರು? ಹೆಚ್ಚು ಮಕ್ಕಳಿಂದ ತೊಂದರೆ ಅನುಭವಿಸಿ ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವುದು ಉಚಿತ ಎಂಬುದರ ಬಗಗೆ ಮನಸು ಮಾಡಿ ಜೀವನವನ್ನು ಸಂಗೀತದಂತೆ ಹಾಯಾಗಿ ಮಾಡಿಕೊಳ್ಳುವ ಆಸೆಯನ್ನು ಹೊತ್ತಿದ್ದಾರೆ, ನಮ್ಮ ಹಳ್ಳಿಗರು ಎಂಬುದನ್ನು ಚಿತ್ರಿಸುತ್ತದೆ.

'ಜೋಡೆರಡು ದೀವಿಗೆ' ದೇವರ ಮುಂದಿಟ್ಟಿರುವ ಎರಡೇ ಮಕ್ಕಳು ಜೀವನಕ್ಕೆ ಸಾಕೆಂದು ಸಾರುವ ರೂಪಕ.

'ತವರಿನ ಕರೆ' ಹೆಣ್ಣು ತವರಿಗೆ ಹಂಬಲಿಸುವುದು. ಸುಮಾರು ನಾಗರ ಪಂಚಮಿಯಂದು ಹೆಣ್ಣು ಅಣ್ಣನು ಕರೆಯಲು ಬರುತ್ತಾನೆಂದು ಕಾತರಿಸುತ್ತಾಳೆ. ಆಕೆ ನಾನಾ ವಿಧವಾಗಿ ಪರಿತಪಿಸುವ ಚಿತ್ರಣ ಇಲ್ಲಿದೆ. ತಾಳ ತರಂಗ ವಿವಿಧ ಜಾನಪದ ಹಾಡುಗಳಲ್ಲಿರುವ ಶಾಸ್ತ್ರೀಯ ತಾಳಗಳನ್ನು ಗುರುತಿಸುವ ಒಂದು ಸಂಶೋಧನಾತ್ಮಕ ರೂಪಕ.

ಈ ಎಲ್ಲಾ ರೂಪಕಗಳು ಚಂಪೂ ಶೈಲಿಯಲ್ಲಿದ್ದು ಹಾಡು, ಸಂಗೀತ, ಮಾತುಗಳನ್ನೊಳಗೊಂಡು ಶ್ರವ್ಯ ಮಾಧ್ಯಮಕ್ಕೆ ಸರಿಹೊಂದುವಂತಿದ್ದು ಬಹಳ ಪರಿಣಾಮಕಾರಿಯಾಗಿವೆ.

ಗೊರವರು, ಕಿನ್ನರಿಜೋಗಿಗಳು, ಕರಪಾಲಮೇಳ ಇವು ಮತ್ತಿತರ ಜಾನಪದ ರೂಪಕಗಳು. ಆ ಜನಾಂಗಗಳ, ಕಲೆಯ ಬಗೆಗೆ ಪರಿಚಯಿಸುವ ರೂಪಕಗಳು.

ತಾಪತ್ರಯ ಅಂಡ್ ಕೋ, ಡಾ. ಪಿಂಟು, ಮಂಗಣ್ಣ, ಮಾತುಕತೆ, ಹಾಸ್ಯರೂಪಕಗಳು. ಪರೋಕ್ಷ ದರ್ಶನ, ವೈಜ್ಞಾನಿಕ ರೂಪಕ. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಮಾಲಿನ್ಯದ ಬಗೆಗೆ ಬರೆದ ರೂಪಕ. ಕಾರ್ಮಿಕ ಬಂಧು, ಪಂಡಿತ ತಾರಾನಾಥ್, ಅಲ್ಲ-ಅಲ್ಲಮ, ಕಪಿಸರ್ಪಭೂಷಣ ಶಿವಯೋಗಿಗಳು, ನುಡಿಯೋಜ ಮುಳಿಯ ತಿಮ್ಮಪ್ಪಯ್ಯ ವ್ಯಕ್ತಿ ಚಿತ್ರಗಳ ರೂಪಕಗಳು. ಕವಿ ಸರ್ಪಭೂಷಣರು ಬರೀ ಶಿವಯೋಗಿಗಳೇ ಮಾತ್ರವಲ್ಲ ಸಂಗೀತ ಲೋಕಕ್ಕೆ, ವಾಗ್ಗೇಯಕಾರರು; ಸಂಸ್ಕೃತ, ಕನ್ನಡದಲ್ಲಿ ಕಾವ್ಯ ರಚಿಸಿದ ಕವಿ. ಆಧ್ಯಾತ್ಮಲೋಕಕ್ಕೊಬ್ಬ ಮಹಾ ತತ್ವಜ್ಞಾನಿ. ಇವರ ಜೀವನವನ್ನು ಪ್ರತಿಬಿಂಬಿಸುವ ರೂಪಕ:

ಅಭಿವೃದ್ಧಿ ಹಾಗೂ ಪ್ರಚಲಿತ ಸಮಸ್ಯೆಗಳನ್ನು ಕುರಿತು ಕೆಲವು ರೂಪಕಗಳನ್ನು ಬರೆದು ಆಕಾಶವಾಣಿಯ ಮೂಲಕ ಬಿತ್ತರಿಸಿದ್ದೇನೆ. ಅವುಗಳೆಂದರೆ ಗಿರಿಯ ಕೂಗು, ಕೊಡ ನೀರಿಗಾಗಿ, ಜ್ಞಾನದೆಡೆಗೆ, ನೆಲೆ, ಗಿರಿಯ ನಿನಾದ, ಪರಿವರ್ತನೆ, ನಾವೇನು ಕಡಿಮೆ?, ಮುನ್ನಡೆಯತ್ತ, ಕೈಗೂಡಿದ ಕನಸುಗಳು, ಹಸಿರು ನಕ್ಕಾಗ, ಸಿದ್ಧಿಗಳು.

ಗಿರಿಯ ಕೂಗು ಸೋಲಿಗರ ಬಗೆಗೆ ಸಿದ್ಧಪಡಿಸಿದ ರೂಪಕ. ಅವರ ಅಂದಿನ ಹಾಗೂ ಇಂದಿನ ಜೀವನವನ್ನು ಈ ರೂಪಕ ಚಿತ್ರಿಸಲು ಪ್ರಯತ್ನಿಸಿದೆ. ಕೊಡ ನೀರಿಗಾಗಿ ನೀರಿನ ಸಮಸ್ಯೆ ಕುರಿತು ಬರೆದುದು. ಜ್ಞಾನದೆಡೆಗೆ ಅಕ್ಷರ ಜ್ಞಾನದ ಬಗ್ಗೆ. ನೆಲೆ ಪಟ್ಟಣದ ಜೀವನ ಜನರನ್ನು ಆಕರ್ಷಿಸುವ ಬಗ್ಗೆ ಬರೆದುದು. ಗಿರಿಯ ನಿನಾದ, ಪರಿವರ್ತನೆ, ಇವೆಲ್ಲಾ ಕಾಡು ಜನರನ್ನು ಕುರಿತು ಬರೆದ ರೂಪಕಗಳು. ಮುನ್ನಡೆಯತ್ತ ಸೋಲಿಗರ ಜೀವನ ಚಿತ್ರಿಸಿದರೆ, ಕೈಗೂಡಿದ ಕನಸುಗಳು ಸಣ್ಣಕೈಗಾರಿಕೆಗಳ ಆವಶ್ಯಕತೆಯತ್ತ ಬೆಳಕು ಹರಿಸುತ್ತದೆ. ಹಸಿರು ನಕ್ಕಾಗ ವನಮಹೋತ್ಸವದ ಬಗೆಗೆ ಸಿದ್ಧಪಡಿಸಿದ ರೂಪಕ.

ನಾವೇನು ಕಡಿಮೆ? ಅಂಗ ವಿಕಲರ ಬಗೆಗೆ ಪ್ರಸ್ತುತಪಡಿಸಿದ ರೂಪಕ. ಸಿದ್ಧಿ ಜನಾಂಗದ ಬಗೆಗೆ ರೂಪಿಸಿದ ರೂಪಕ 'ಸಿದ್ಧಿಗಳು' ಇದು ಅವರ ಜೀವನ-ಸಾಧನೆಗಳ ಬಗೆಗೆ ರೂಪಿಸಿದುದು.

ಐತಿಹಾಸಿಕ ಬೀದರ್ ಬೀದರ್ ಬಗೆಗೆ ಚಿತ್ರಿಸಿದರೆ ಧೂಮಲೀಲೆ ಧೂಮಪಾನದ ದುಷ್ಪರಿಣಾಮಗಳ ಬಗೆಗೆ ಬರೆದುದು.

ಸ್ವಾತಂತ್ರ ಹೋರಾಟಗಾರರ ಬಗೆಗೆ ಹದಿನೆಂಟು ರೂಪಕಗಳನ್ನು ಆಕಾಶವಾಣಿ ಗುಲ್ಬರ್ಗ ನಿಲಯದಿಂದ ಬರೆದು ಪ್ರಸ್ತುತ ಪಡಿಸಿದೆ. ಅವುಗಳೆಂದರೆ ಡಾ. ಬಾಬು ರಾಜೇಂದ್ರ ಪ್ರಸಾದ, ಮೋತಿಲಾಲ್ ನೆಹರು, ಖುದಿರಾಮ್ ಬೋಸ್, ಬಂಕಿಮ ಚಂದ್ರ ಚಟರ್ಜಿ, ಸಾನೆ ಗುರೂಜಿ, ನರೇಂದ್ರ ದೇವ, ಚಾಪೇಕರ್, ಅಶ್ಫಾತುಲ್ಲಾ, ಗೋಂದಾಲಾಲ್ ದೀಕ್ಷಿತ್, ಜಿತೇಂದ್ರ ಮೋಹನ್ ಸೇನ್ ಗುಪ್ತಾ, ಸುಬ್ರಹ್ಮಣ್ಯ ಭಾರತಿ, ರಾಸ್ ಬಿಹಾರಿ ಬೋಸ್, ೧೮೫೭ರ ಕ್ರಾಂತಿ ಕಿಡಿ, ಮದನ ಮೋಹನ ಮಾಳವೀಯ, ಜಿತೇಂದ್ರನಾಥ ಮುಖರ್ಜಿ, ಎಂ.ಎನ್. ರಾಯ್, ಕೌಜಲಗಿ ಹಣುಮಂತರಾಯ, ಜನಾರ್ಧನ್‌ರಾವ್ ದೇಸಾಯಿ -ಈ ಭಾರತ ಮಾತೆಯ ವೀರಪುತ್ರರ ರೋಮಾಂಚನಕಾರಕ ಕಥೆಗಳು ಇಲ್ಲಿವೆ. "ಕಥೆ ಹೇಳುವೆ ನನ್ನ ಕಥೆ ಹೇಳುವೆ" ಎಂಬ ಶೀರ್ಷಿಕೆಯಲ್ಲಿ ಪ್ರಸಾರವಾದ ರೂಪಕಗಳು.

ಮಿನು ಹೆಜ್ಜೆ, ಕತ್ತಲು-ಬೆಳಕು, ಆಶಾಜೀವನ ಧಾರಾವಾಹಿ ಕೌಟುಂಬಿಕ ಚಿತ್ರಗಳು. ಮಿನುಹೆಜ್ಜೆ ಪತ್ತೇದಾರಿ ಧಾರಾವಾಹಿ. ಒಂಭತ್ತು ಭಾಗಗಳಲ್ಲಿ ಪ್ರಕಟಗೊಂಡಿವೆ. ಆಶಾಜೀವನ ಹನ್ನೊಂದು ಭಾಗಗಳಲ್ಲಿ ಪ್ರಸಾರಗೊಂಡ ಧಾರಾವಾಹಿ ಕೌಟುಂಬಿಕ ಚಿತ್ರ. ಮದುವೆ ವಯಸ್ಸು, ಒಂದು ಮಗುವಿಗೂ ಮತ್ತೊಂದು ಮಗುವಿಗೂ ಇರಬೇಕಾದ ಅಂತರ, ಮಕ್ಕಳಿಗೆ ಚುಚ್ಚುಮದ್ದುಗಳು, ಶಿಶುಮರಣಕ್ಕೆ ಕಾರಣಗಳು, ಎದೆಹಾಲಿನ ಅವಶ್ಯಕತೆ, ಪೌಷ್ಟಿಕ ಆಹಾರ, ಹೆಣ್ಣು-ಗಂಡು ಒಂದೇ, ಯಾವುದಾದರೂ ಎರಡೇ ಸಾಕು. ಆಮೇಲೆ ಆಪರೇಷನ್ ಮಾಡಿಸಿಕೊಳ್ಳುವುದು ಉತ್ತಮ -ಹೀಗೆ ಹಲವಾರು ವಿಷಯಗಳು ಇವುಗಳಲ್ಲಿ ಸಮಾವೇಶಗೊಂಡಿವೆ.

'ಕತ್ತಲು-ಬೆಳಕು' ನಾಟಕ ರೂಪದ ಧಾರವಾಹಿಯಾಗಿ, ಕೌಟುಂಬಿಕ ಚಿತ್ರವಾಗಿ, ರೈತರ ಕಾರ್ಯಕ್ರಮದಲ್ಲಿ ಬಿತ್ತರಗೊಂಡಿದೆ.

ರೇಡಿಯೋ ರೂಪಾಂತರ ಅದು ಕಥೆ ಇರಬಹುದು, ಕಾದಂಬರಿ ಇರಬಹುದು. ಬಿಡುಗಡೆ, ಆಚಾರ್ಯರ ಪತ್ನಿ, ದಕ್ಷಿಣ ಭಾರತದರ್ಶನ, ಗೋಗ್ರಹಣ ಇವು ಕೆಲವು ರೇಡಿಯೋಕ್ಕೆ ಅಳವಡಿಸಿದ ಕಾರ್ಯಕ್ರಮಗಳು. ದಕ್ಷಿಣ ಭಾರತ ದರ್ಶನ ಮಕ್ಕಳ ಪ್ರವಾಸ ಸಾಹಿತ್ಯ ಕುರಿತಾದ ರೇಡಿಯೋ ರೂಪಾಂತರವಾದರೆ ಗೋಗ್ರಹಣ

ಬಿ.ಎಸ್. ಚಂದ್ರಶೇಖರ ಅವರ ಗೋಗ್ರಹಣ ಕಾದಂಬರಿಯನ್ನು ಆಧರಿಸಿ ರೂಪತಾಳಿದ ಮಕ್ಕಳ ಸಾಹಸಮಯ ಬಾನುಲಿ ರೂಪಾಂತರಗಳು. ಇದು ಮಕ್ಕಳ ಕಾರ್ಯಕ್ರಮದಲ್ಲಿ ಪ್ರಸಾರವಾದುದು. ಶ್ರೀಯುತ ಜಿ.ಬಿ. ಪೂರ್ಣಿಮಾ ಅವರು ಈ ಕಾರ್ಯಕ್ರಮ ಪ್ರಸಾರವಾಗಲು ನೆರವಾದರು. ಆಚಾರ್ಯರ ಪತ್ನಿ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಬರೆದ ಸಣ್ಣ ಕಥೆಯನ್ನು ರೂಪಾಂತರಿಸಿ ಪ್ರಸಾರ ಮಾಡಲಾಯಿತು.

ಬಿಡುಗಡೆ ಕಥಾ ನಾಟಕೋತ್ಸವದ ಅಂಗವಾಗಿ ಕರ್ನಾಟಕದ ಎಲ್ಲ ಬಾನುಲಿ ಕೇಂದ್ರಗಳಿಂದಲೂ ಬಿತ್ತರವಾದುದು.

–ಡಾ.ಬಿ.ಎಸ್. ಸ್ವಾಮಿ

# ಮುನ್ನುಡಿ

ಕಳೆದ ೩೦-೪೦ ವರ್ಷಗಳಿಂದ ಕರ್ನಾಟಕದ ಬಾನುಲಿ ಕೇಂದ್ರಗಳಿಂದ ಕನ್ನಡ ನಾಟಕ, ಕಥೆ, ಕಾವ್ಯ, ಹರಟೆ, ಪ್ರಬಂಧ -ಮುಂತಾದ ಪ್ರಕಾರಗಳು ಪ್ರಸಾರವಾಗಿವೆ. ಈಗಲೂ ಪ್ರಸಾರವಾಗುತ್ತಿವೆ. ಇವುಗಳ ಪ್ರಸಾರಕರು ಬಹಳಷ್ಟು ಜನ ನಮ್ಮ ಸಾಹಿತಿಗಳೇ. ಓದುವ, ಬರೆಯುವ, ಸಾಹಿತ್ಯವನ್ನು ಶ್ರವಣ ಸಾಹಿತ್ಯವನ್ನಾಗಿ ಮಾಡಿದ ನಾಡಿನ ಬಾನುಲಿ ಕೇಂದ್ರಗಳ ಸಾಧನೆ ಅಷ್ಟಿಷ್ಟಲ್ಲ. ಆದರೆ, ದುರ್ದೈವದಿಂದ ಇದನ್ನು ಬಾನುಲಿ ಸಾಹಿತ್ಯವೆಂದು ಪರಿಗಣಿಸಲು ಮುಜುಗರ. ಬಾನುಲಿ ಸಾಹಿತ್ಯ, ಸಾಹಿತ್ಯವೇ ಅಲ್ಲ ಎಂದು ಹೇಳುವವರೂ ಇದ್ದಾರೆ. ನೂರಕ್ಕೆ ೭೦ರಷ್ಟು ಬಾನುಲಿ ಸಾಹಿತ್ಯದ ನಿರ್ಮಾಪಕರು ನಮ್ಮ ಸಾಹಿತಿಗಳೇ. ಆದರೆ, ಅವರೇ ತಾವು ಬಾನುಲಿ ಸಾಹಿತಿಗಳು ಎಂದು ಕರೆಯಿಸಿಕೊಳ್ಳುವಲ್ಲಿ ಮೀನಾಮೇಷಾ ಮಾಡುತ್ತಿರುವುದು ತೀರಾ ಖೇದದ ಸಂಗತಿ. ಇಂತಹ ನಿರಾಶಾದಾಯಕ ಸ್ಥಿತಿಯಲ್ಲಿ ಡಾ.ಬಿ.ಎಸ್. ಸ್ವಾಮಿ ಅವರು ಬಾನುಲಿ ನಾಟಕ, ರೂಪಕಗಳ ಸಂಗ್ರಹವನ್ನು ಹೊರತಂದಿದ್ದಾರೆ. ಅವರ ಈ ಸಾಹಸವನ್ನು ಮೆಚ್ಚತಕ್ಕದ್ದೆ. ಅವರ ಈ ಕೆಲಸ ಅನುಕರಣೀಯವಾದುದು ವಿಶೇಷವಾಗಿ ಬಾನುಲಿ ವ್ಯವಸಾಯದಲ್ಲಿ ತೊಡಗಿರುವವರಿಗೆ.

ಬಾನುಲಿ ಸಾಹಿತ್ಯದಲ್ಲಿ ಡಾ. ಸ್ವಾಮಿ ಅವರು ಮುಟ್ಟದ ಪ್ರಕಾರಗಳಿಲ್ಲ. ರೂಪಕವೇ ಆಗಲಿ, ಸಂಗೀತ ರೂಪಕವೇ ಆಗಲಿ, ನಾಟಕವೇ ಆಗಲಿ, ಶಬ್ದ ಚಿತ್ರವೇ ಆಗಲಿ, ಅವೆಲ್ಲ ಅವರಿಗೆ ಕರಗತವಾಗಿವೆ. ಅವುಗಳನ್ನು ಬರೆಯುವ ಶೈಲಿ, ಬಳಸುವ ಭಾಷೆ ಬಾನುಲಿಗೆ ಪೂರಕವಾದವುಗಳು. ಜಾನಪದ ಅಧ್ಯಯನದ ಹಿನ್ನೆಲೆ ಇರುವ ಡಾ.ಸ್ವಾಮಿ ಅವರಿಗೆ ಅವರು ರಚಿಸಿರುವ ಹಲವಾರು ಜಾನಪದ ರೂಪಕಗಳು ಶ್ರವಣ ಯೋಗ್ಯವಾಗಿವೆ. ಅವು ಅವರ ವಿಶೇಷ ಕಾಣಿಕೆಗಳು.

ಬಾನುಲಿ ಬರವಣಿಗೆಗೆ ಬೇಕಾಗುವ ಮುಖ್ಯ ಸರಕು ಅಂದರೆ ಶ್ರವಣ ಸಾಧ್ಯವಾದ ಭಾಷೆ. ಮೇಲಾಗಿ ಹೇಳುವವನ, ಕೇಳುವವನ ನಡುವೆ ತೊಟ್ಟಿಲಾಗುವ ಶೈಲಿ. ಡಾ. ಸ್ವಾಮಿ ಅವರ ಬಾನುಲಿ ಬರವಣಿಗೆಯಲ್ಲಿ ಈ ಅಂಶವನ್ನು ಕಾಣಬಹುದು.

ಬಾನುಲಿಗೆ ಇತಿಹಾಸವಿದೆ. ಆದರೆ, ಬಾನುಲಿ ಕಾರ್ಯಕ್ರಮಗಳಿಗಿಲ್ಲ. ಬಾನುಲಿ ಕಾರ್ಯಕ್ರಮಗಳಿಗೆ ಭವಿಷ್ಯ ಇರಕೂಡದು. ಅಂತೆಯೆ ಅವುಗಳಿಗೆ ಇತಿಹಾಸವೂ

ಇರಕೂಡದು. ಅವುಗಳಿಗೆ ಸಮಕಾಲೀನ ಕಾಳಜಿ ಸಾಕು. ಡಾ. ಸ್ವಾಮಿ ಅವರ ಈ ಎಲ್ಲ ಕಾರ್ಯಕ್ರಮಗಳು ಸಮಕಾಲೀನ ಸ್ಥಿತಿಯ ಹಲವಾರು ಚಿತ್ರಗಳು. ಬಾನುಲಿ ಬರಹಗಾರರಿಗೆ ಇದೊಂದು ಮಾರ್ಗದರ್ಶಿ ಪುಸ್ತಕವಾಗಬಲ್ಲದು. ಬಾನುಲಿ ಸಾಹಿತ್ಯವನ್ನು ಓದುಗರಿಗೆ ನೀಡುವ ಸಾಹಸ ಡಾ. ಬಿ.ಎಸ್. ಸ್ವಾಮಿ ಅವರಂತಹ ಕೆಲವೇ ಲೇಖಕರಿಗೆ ಸಾಧ್ಯ. ಈ ಕಾಳಜಿ ಇರುವವರು ಡಾ. ಸ್ವಾಮಿ ಅವರನ್ನು ಬಿಟ್ಟರೆ ಮತ್ತೆ ಯಾರೂ ಸದ್ಯ ನನ್ನ ಗಮನಕ್ಕೆ ಬರುತ್ತಿಲ್ಲ.

**–ಜಿ.ಎಂ. ಶಿರಹಟ್ಟಿ**
ನಿಲಯದ ನಿರ್ದೇಶಕರು
ವಾಣಿಜ್ಯ ಪ್ರಸಾರ ಕೇಂದ್ರ

# ಪರಿವಿಡಿ

## ಕುಟುಂಬ ಕಲ್ಯಾಣ ಯೋಜನಾ ನಾಟಕಗಳು

## ರೂಪಕಗಳು

### ಕುಟುಂಬ ಕಲ್ಯಾಣ ಯೋಜನೆಯ ರೂಪಕಗಳು



### ಜನಪದ ಸಂಗೀತ ರೂಪಕ



### ಇನ್ನಿತರ ಜನಪದ ರೂಪಕಗಳು



### ಹಾಸ್ಯ ರೂಪಕಗಳು

# ಸಿದ್ಧಗಂಗಾ ಮಹಾತ್ಮ್ಯ

**ಪಾತ್ರವರ್ಗ**

೧. ಸಿದ್ಧಗಂಗಾ ಮಾತೆ- ಗಂಗೆ ೨. ತೋಂಟದ ಸಿದ್ಧಲಿಂಗೇಶ್ವರ ೩. ಉದ್ದಾನ ಶಿವಯೋಗಿಗಳು-(ರುದ್ರಪ್ಪ-೧ನೇ ತಪಸ್ವಿ) ೪. ಅಟವೀ ಸ್ವಾಮಿಗಳು ೫. ದೇವಪ್ಪಗೌಡ-೨ನೇ ತಪಸ್ವಿ ೬. ಸುಬ್ಬಮ್ಮ ೭. ಸುಬ್ಬಣ್ಣ ೮. ಕೆಂಚಣ್ಣ ೯. ಬಸವಣ್ಣ ೧೦. ಮರುಳಾರಾಧ್ಯರು

(ಹಿನ್ನೆಲೆಯ ಧ್ವನಿ)

ಪ್ರಕೃತಿ ಸೌಂದರ್ಯದ ನೆಲೆವೀಡಾದ ಶ್ರೀ ಸಿದ್ಧಗಂಗೆ ಐಸಿರಿಯ ತಿರುಳ್ಗನ್ನಡದ ಕರ್ನಾಟಕದ ಮಧ್ಯೆ ರಾರಾಜಿಸುತ್ತಿದೆ. ಜಕ್ಕಣನುದಿಸಿದ ಕೈದಾಳ, ಬಿಜ್ಜಳ ಮಹಾದೇವಿಯರುದಿಸಿದ, ಭೃಗು ಮಹರ್ಷಿಗಳೇ ಮುಂತಾದವರು ತಪಗೈದ, ಗುಬ್ಬಿಯ ಮಲ್ಲಣಾರ್ಯ, ಶಾಂತೇಶ, ಸಿದ್ಧವೀರಣಾಚಾರ್ಯ, ಗುರುಲಿಂಗ ದೇವ, ಚೆನ್ನಂಜದೇವ, ಚೇರಮಾಂಕ, ಚಿಕ್ಕಭೂಪಾಲ, ಮಲ್ಲಿಕಾರ್ಜುನ, ಗುರುರಾಜ, ಗೌರಾಂಕರೇ ಮೊದಲಾದ ಕವಿ ಸಾರ್ವಭೌಮರು ಕಾವ್ಯಗಂಗೆ ಹರಿಸಿದ, ಕೆಂಪೇಗೌಡ, ಶಿವಮಾರರೇ ಮೊದಲಾದ ಪಾಳೆಯಗಾರರು, ವೀರ ಗಂಗರು, ಹೊಯ್ಸಳರು, ವಿಜಯನಗರದ ಅರಸರು ಆಳಿ ಬಾಳಿ ಸುಖವುಂಡು ಕಂಡು ಮೆರೆದ ಕಣ್ಮಣಿಗಳ, ದೇವರಾಯನ ದುರ್ಗ, ಶಿವಗಂಗಾ, ಸಿದ್ಧರ ಬೆಟ್ಟ, ಮಂದಗಿರಿ ಪಾವನ ಕ್ಷೇತ್ರಗಳ ಸುತ್ತಿರುವ ಹೆಮ್ಮೆಯ ಕನ್ನಡನಾಡಿನ ಮಂಗಳ ತಾಣವೇ ಈ ಸಿದ್ಧಗಂಗಾ ಕ್ಷೇತ್ರ!

ಶ್ರೀ ಸಿದ್ಧಗಂಗಾ ಮಹಿಮೆ ಎಷ್ಟೊಂದು ಹಿರಿದು ಎಂಬುದನ್ನು ಈಗ ನೋಡಿ...!

(ಪರದೆಯು ಮೆಲ್ಲನೆ ಸರಿಯುವುದು)

## ದೃಶ್ಯ-೧

(ಕೈಲಾಸದಲ್ಲಿ ಈಶ್ವರನು ಕುಳಿತಿರಲು, ಗಂಗೆ ಗಾನ ನೃತ್ಯದಲ್ಲಿ ಮಗ್ನಳಾಗಿರಲು)

(ಹಾಡು)

ಗಂಗೆ : ಹರ ಹರಾ, ಶಿವಶಿವಾ, ಜಯ ಜಯತು ಮಾದೇವನೇ, ಪಾಹಿಮಾಂ।
ಶರಣು, ಜಯ ಜಯತು, ಕರುಣಾಕರಾ ತ್ರಾಹಿಮಾಂ ತ್ರಾಹಿಮಾಂ॥

ನಿತ್ಯನಿಶ್ಚಿಂತ ನಿರ್ಮಲ ನಿರ್ಮಾಯನೆ ನಿರಾಳಕಂ ಪಾಹಿಮಾಂ।
ಭಕ್ತವತ್ಸಲ ಮತ್ಪ್ರಾಣನಾಥನೆ ತ್ರಾಹಿಮಾಂ ತ್ರಾಹಿಮಾಂ॥ ॥ ಪಲ್ಲವಿ ॥
ದನುಜ ಮನುಜಾ ದಿವಿಜ ಲೋಕ ಭರಿತ ದೂರ ಧರ್ಮ ಚರಿತಾ।
ಕಾಮಕಾಲ ನಾಶ ಕಮಲ ವ್ಯಾಲಿಭೂಷ ವೇಷ ಪಂಪಾ ವಿರೂಪಾಕ್ಷಾ,
ಕುಕ್ಷಿಯೋಳ್ ಈರೇಳು ಭುವನಮಂ ನೆರೆತಾಳ್ದ ರಕ್ಷಕ।
ಕನಕಗಿರಿ ನಿವಾಸಾ ಕೆಂಜೆಡೆಯ ಫಾಳನೇತ್ರಾ ಭಯಂಕರೇಶ್ವರಾ॥ ೧ ॥
ಜಗದ ಯಂತ್ರವಾಡಿಸುವ ಮಾಯೆ ನಾ ಜಗಜ್ಜನನಿ।
ನಿಷ್ಕಲ ನಿಜಜ್ಞಾನ ಸರ್ವಜ್ಞ ನಿರಾಧಾರ ದೇವನೇ।
ಭವರೋಗ ವೈದ್ಯೇಶ ಭವಹರಾ ಪಾಹಿಮಾಂ ಪಾಹಿಮಾಂ ।
ಜಯ ಜಯತು ಕರುಣಾಕರ ಶ್ರೀ ತ್ರಾಹಿಮಾಂ ತ್ರಾಹಿಮಾಂ ॥೨॥
"ಅ" ಕಾರವೇ ನಾದ "ಉ" ಕಾರವೇ ಬಿಂದು "ಮ" ಕಾರವೇ ಕಳೆ ಇವರ್ತ್ರಾಯಿ ಚಿತ್ತಾ।
"ಓಂ" ಕಾರ ಪ್ರಣವನೆ ಅಖಂಡ ಪರಿಪೂರ್ಣ ಗೋಳಾಕಾರ ಲಿಂಗನೇ।
ಚಿಛ್ಛಕ್ತಿ ಪರಾಶಕ್ತೀ ಆದಿಶಕ್ತೀ ಇಚ್ಛಾಶಕ್ತಿ ಸುಜ್ಞಾನ ಶಕ್ತಿನಾಂ।
ಜಯ ಜಯತು ಕರುಣಾಕರ ಶ್ರೀ ತ್ರಾಹಿಮಾಂ ಶ್ರೀ ತ್ರಾಹಿಮಾಂ ತ್ರಾಹಿಮಾಂ ॥

(ಕೈಲಾಸವು ನಡುಗಲಾರಂಭಿಸಲು ಕೂಡಲೇ ಗಂಗೆ, ಸ್ವಾಮಿ... ಎಂದು ಕೂಗುತ್ತಾ ಲಿಂಗವನ್ನು ಹಿಡಿದುಕೊಳ್ಳಲು)

ಗಂಗೆ : ಸ್ವಾಮಿ ಇದೇನು ಈ ಪರಿ? ಕೈಲಾಸವೇ ಕಂಪಿಸುತ್ತಿದೆಯಲ್ಲಾ?

ಈಶ್ವರನ ಧ್ವನಿ : ಈ ಪರಿಗೆ ಕಾರಣವಿರಲೇಬೇಕು.

ಗಂಗೆ : ಅದು ನಮಗೂ ಗೊತ್ತಿದೆ. ಅದು ಪರಿಪಕ್ವವಾಗುವ ಬಗೆ ತಾನೆ ಹೇಗೆ? ಅದಾವ ವಿಪರೀತವೋ ನಾ ಕಾಣೆ... ನನಗಂತೂ ಬಲಗಣ್ಣು ಬಲಭುಜಗಳದುರುತ್ತಿವೆ.

ಈಶ್ವರನ ಧ್ವನಿ : ಕೂಡಲೇ ಪಯಣವಾಗಬಹುದೆಂಬ ಕುರುಹು ಇರಬಹುದು.

ಗಂಗೆ : ಪತಿದೇವಾ, ತಾವು ಹೇಳುತ್ತಿರುವುದು ನನಗೆ ಭಯ ಭೀತಿಗಳನ್ನೇ ತಂದಿವೆ.

ಈಶ್ವರನ ಧ್ವನಿ : ಇದಕ್ಕೆ ಭಯ ಭೀತಿಗಳೇಕೆ? ಭೂಲೋಕವನ್ನು ಸುತ್ತಿ ಬೇಸರವನ್ನು ಕಳೆದು ಬರುವುದೂ ಕಷ್ಟವೇ?

ಗಂಗ : ಹಿಂದೊಮ್ಮೆ ಭಗೀರಥನಿಗಾಗಿ ಭೂಲೋಕವನ್ನು ಬಳಸಿ ಬರಲಿಲ್ಲವೇ?

ಈಶ್ವರನ ಧ್ವನಿ : ಆಗಾಗ ಭೂಲೋಕದ ಯಾತ್ರೆ ಗೈಮ ಜನರ ಕಷ್ಟಗಳನ್ನು ಪರಿಹರಿಸಿ ಬರಲೇಬೇಕು ಗಂಗಾ.

ಗಂಗೆ : ಅಂದರೆ ಈಗ ಯಾರಿಗೆ?

ಈಶ್ವರನ ಧ್ವನಿ : ಅದು ಸದ್ಯದಲ್ಲೇ ಗೊತ್ತಾಗಲಿದೆ.

ಗಂಗೆ : (ಕಣ್ಣೀರಿನಿಂದ) ದೇವಾ...

ಈಶ್ವರನ ಧ್ವನಿ : ಇದಕ್ಕೆ ಹೆದರಬೇಕಾದ ಪ್ರಸಂಗವೇನಿಲ್ಲ, ಆನಂದದಿಂದುದಿಸಿ, ಜನರ ಮನದ ಹಂಬಲಿಕೆಯನ್ನೀಡೇರಿಸಿ ಬಾ... ಗಂಗಾ...

ಗಂಗೆ : ಎಲ್ಲವೂ ತಮ್ಮ ಚಿತ್ತ ಪ್ರಭು.

ಈಶ್ವರನ ಧ್ವನಿ : ನಿನಗೆ ಮಂಗಳವಾಗಲಿ.

* * *

## ದೃಶ್ಯ-೨

(ಹಣ್ಣು ಹಣ್ಣಾದ ವಯೋವೃದ್ಧ ತಪಸ್ವಿಗಳು ಶ್ರೀಕ್ಷೇತ್ರವನ್ನು ಸುತ್ತಿ ಬಳಲಿ ತಾಪಕ್ಕೆ ಜೆವತು ಬೆವರನ್ನೊರಸಿಕೊಳ್ಳುತ್ತಾ, ರಸ್ತೆಯಲ್ಲಿ ಕೋಲೂರಿಕೊಂಡು ಬರುತ್ತಾ)

೧ನೇ ತಪಸ್ವಿ : ಇದೇನು ವಿಚಿತ್ರ?

೨ನೇ ತಪಸ್ವಿ : ಇದು ಚೈತ್ರ...

೧ನೇ ತಪಸ್ವಿ : ಅಲ್ಲಾ ಈ ಶುದ್ಧ ಶಿವರಾತ್ರೀ ದಿನವೂ ಹೀಗಾಗ್ಬೇಕೆ?

೨ನೇ ತಪಸ್ವಿ : ಯಾವ ರಾತ್ರಿ ಆದ್ರೂ ಅಷ್ಟೇ...

೧ನೇ ತಪಸ್ವಿ : ಬಾಯಿಗೆ ಬಿಡಬೇಕಾದ್ರೂ ಒಂದು ತೊಟ್ಟು ನೀರು ಬೇಡ್ವೇ ಈ ಬೆಟ್ಟದಲ್ಲಿ.

೨ನೇ ತಪಸ್ವಿ : ಸದ್ಯ ಬಾಯಿಗೆ ಬಿಡ್ಲಿಕ್ಕೆ ಹೋದೆ. ಇಷ್ಟಲಿಂಗದ ಮಜ್ಜನಕ್ಕೆ ಹ್ಯಾಗಪ್ಪಾ ಅಂತಾ ನಾನು ಜಪಿಸ್ತಾ ಇದ್ದೀನಿ.

೧ನೇ ತಪಸ್ವಿ : ಭೂಮಿ ನೀರ್ನೆಲ್ಲಾ ಆ ಸೂರ್ಯನೇ ಹೀರಿಕೊಳ್ಳಬೇಕೇ?

೨ನೇ ತಪಸ್ವಿ : ನಾನು ನೀರಿಗಾಗಿ ಸುತ್ತ ಮುತ್ತಣ ದೊಣೆಗಳನ್ನೆಲ್ಲಾ ಸುತ್ತಿ ಸುತ್ತಿ ಸುಲಿದ ದೇಹದವನಾದೆ ಹೋಗ್ಯಪ್ಪಾ.

೧ನೇ ತಪಸ್ವಿ : ಇಂಥ ತರಿ ಬೇಸಿಗೇನಾ ನಾನು ಇದುವರೆಗೂ ಕಂಡಿರಲಿಲ್ಲಪ್ಪ.

೨ನೇ ತಪಸ್ವಿ : ನೀವು ಕಾಣ್ಲೇ ಅಂತ್ಲೇ ಹೀಗಾಯ್ತೋ ಏನೋ.

೧ನೇ ತಪಸ್ವಿ : ಅಲ್ಲಾ ಆ ದೇವ್ರು ಕಣ್ಬಿಟ್ರಾಗೋಲ್ವೇ?

೨ನೇ ತಪಸ್ವಿ : ಅದಕ್ಕೆ ತಪಸ್ಸು ಮಾಡಬೇಕಲ್ಲಾ.

೧ನೇ ತಪಸ್ವಿ : ದಿನಾ ತಪಸ್ಸು ಮಾಡುತ್ಲೇ ಇದ್ದೀವಲ್ಲಾ.

೨ನೇ ತಪಸ್ವಿ : ಮುಕ್ತಿಗಾಗಿ ತಪಸ್ಸು ಮಾಡ್ತಿದ್ವಿ. ಈಗ ಗಂಗೆ ಬರಲಿಕ್ಕೆ ಮಾಡಿ.

೧ನೇ ತಪಸ್ವಿ : ಏನೋ, ಏನು ಮಾಡೋದೋ, ಎತ್ತ ಮಾಡೋದೋ ನನಗೊಂದೂ ಗೊತ್ತಾಗ್ತಾ ಇಲ್ಲ.

೨ನೇ ತಪಸ್ವಿ : ಇನ್ನೂ ಒಂದು ಸ್ವಲ್ಪ ಮುಂದೆ ಹೋಗೋಣ, ನೋಡೋಣ. ಅಲ್ಲೇನಾದ್ರೂ ಸಿಕ್ಕಿದ್ರೂ ಸಿಕ್ಕಬಹುದು.

೧ನೇ ತಪಸ್ವಿ : ನಾನು ಮುಂದೆ ಒಂದು ಹೆಜ್ಜೇನೂ ಕೀಳಲಾರೆನಪ್ಪಾ. ಈ ಗೇಣುದ್ದ ದೇಹಕ್ಕೆ ಬಾಯಾರಿಕೆ ವಿಪರೀತವಾಗಿದೆ. ಕರುಣಾಮಯಾ, ನೀನಿಂದು ಕರುಣೆ ಮಾಡದೇ ಇದ್ರೆ ನನ್ನ ಜೀವನ ಸಾರ್ಥಕವಾಗೋದಿಲ್ಲ. ಶಿವ ಶಿವಾ...!

ಅಶರೀರವಾಣಿ : ಹೌದು, ಬೇಡರ ಕಣ್ಣಪ್ಪನೇ ಮೊದಲಾದ ಭಕ್ತರು ಕೈವಲ್ಯವನ್ನು ಹೊಂದಿದುದು ಇಂದೇ. ಎಲೈ ತಪಸ್ವಿಯೇ ಇದಕ್ಕೆ ಕಿಂಚಿತ್ತೂ ಯೋಚಿಸಬೇಕಾಗಿಲ್ಲ. ಇದೇ ಬೆಟ್ಟದ ತಪ್ಪಲಿನ ಇನಿತು ದೂರದಲ್ಲಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ತಪವನ್ನಾಚರಿಸುತ್ತಿರುವರು. ಅವರಿಂದ ನಿಮ್ಮ ಅಭೀಷ್ಟಗಳು ನೆರವೇರುವವು.

೧ನೇ ತಪಸ್ವಿ : ಹ್ಞಾಂ ... ಇದೇನು ಈ ಅಶರೀರವಾಣಿ...?

೨ನೇ ತಪಸ್ವಿ : ಇದು ನಿಜವೇ? ಸಿದ್ಧಲಿಂಗೇಶ್ವರರಲ್ಲಿ ಮೊರೆಯಿಟ್ಟರೆ ಆಗುವುದೇ? ಎಲ್ಲಾ ನಿನ್ನ ಇಚ್ಛೆಯಿದ್ದಂತಾಗಲಿ...

೧ನೇ ತಪಸ್ವಿ : ಓ ಅದೋ... ದೂರದಿಂದ ಘಂಟಾನಾದವಾಗುತ್ತಿದೆ... ಮಂತ್ರೋಚ್ಚಾರಣೆ ದನಿಗೊಡುತ್ತಿದೆ. ಶಿವ ಶಿವಾ... ಸಿದ್ಧಲಿಂಗಾ... ಕರುಣೆದೋರು ನನ್ನೊಡೆಯಾ.

(ಸಿದ್ಧಲಿಂಗೇಶ್ವರರು ತಾಳೆಯೋಲೆಯ ಮೇಲೆ ವಚನ ಬರೆಯುತ್ತಿದ್ದಾರೆ ಹಾಡುತ್ತಾ)

"ಕತ್ತಲೆಯನೊಳಕೊಂಡ ಬೆಳಗಿನಂತೆ
ಪಕ್ಷಿಯನೊಳಕೊಂಡ ತತ್ತಿಯಂತೆ
ಮುತ್ತನೊಳಕೊಂಡ ಚಿಪ್ಪಿನಂತೆ
ಸಾಗರವನೊಳಕೊಂಡ ಆಕಾಶದಂತೆ
ಎನ್ನ ನೀವು ಒಳಕೊಂಡಿರಾಗಿ
ನಾನೋ ನೀನೋ ಏನೊಂದರಿಯೆನಯ್ಯಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ॥

(ಅವರ ಪಾದಗಳ ಮೇಲೆ ಇಬ್ಬರೂ ಬಂದು ಬೀಳುವರು)

ಸಿದ್ಧಲಿಂಗೇಶ್ವರ : (ಸ್ವಗತ) ಪಾಪ... ಯಾರೋ ಯತಿವರ್ಯರು ಬಳಲಿ ಬಾಯಾರಿ ಬಿದ್ದುಬಿಟ್ಟಿದ್ದಾರೆ. ದೇಹದಲ್ಲಿ ರಕ್ತ ಮಾಂಸ ಹೀನವಾಗಿ ಬತ್ತಿ

ಬಾಡಿದ್ದಾರೆ. ಮೈ ಕೈಗಳು ಮೂಳೆಗಳ ಮೇಲಂಟಿಸಿದ ಚರ್ಮವಾಗಿದೆ. ಜೊತೆಗೆ ಮುದಿತನವು ಅಶಕ್ತತೆಯನ್ನು ತಂದು ಕೊರಗಿಸಿದೆಯಲ್ಲಾ.

ತಪಸ್ವಿ : ಶಿವ ಶಿವಾ... ಸಿದ್ಧಲಿಂಗೇಶ್ವರಾ... ಶಿವ ಶಿವಾ... ಸಿದ್ಧೇಶ್ವರಾ...

(ಸಿದ್ಧಲಿಂಗೇಶ್ವರರ ಹತ್ತಿರಕ್ಕೆ ತವೆದು ಬರಲು)

ಸಿದ್ಧಲಿಂಗೇಶ್ವರ : ತಪಸ್ವಿಗಳೇ... ತಾವು ಬಳಲಿರುವಂತಿದೆ.

ತಪಸ್ವಿ : ಸದಾಶಿವಾ...ತೋಂಟದ ಸಿದ್ಧಲಿಂಗೇಶಾ... ಇಂದು ಮಹಾ ಶಿವರಾತ್ರಿ, ಶಿವನ ಮಜ್ಜನಕ್ಕಾಗಿ ಈ ಕ್ಷೇತ್ರದ ಬುಡದಿಂದ ಶಿಖರದ ವರೆವಿಗೂ ಸುತ್ತಿಬಳಲಿ ಬೇಸತ್ತು ಬೆಂಡಾದೆವು... ಆದರೆ ಎಲ್ಲೂ ಒಂದು ತೊಟ್ಟು ನೀರು ಸಿಗಲಿಲ್ಲ... ನೀನು ಕರುಣಿಸದಿದ್ದಲ್ಲಿ... ನಮಗೆ ಮುಕ್ತಿ ಸಿಗದು, ಗುರೂ ಮುಕ್ತಿ ಸಿಗದು.

ಸಿದ್ಧಲಿಂಗೇಶ್ವರ : ಏನು ಗಿರಿಯಲ್ಲಿ ನೀರಿಲ್ಲವೇ? ಗೋಸಲ ಸಿದ್ಧೇಶ್ವರರ ಈ ತಪೋ ತಾಣದಲ್ಲಿ ನೀರಿಲ್ಲವೇ? ಏನಾಶ್ಚರ್ಯ?

ತಪಸ್ವಿ : ಹೌದು ದೇವಾ, ಈ ವರ್ಷದ ಉರಿ ಬೇಸಿಗೆಗೆ ಗಂಗೆಯೇ ಕಾಣೆಯಾಗಿದ್ದಾಳೆ.

(ತೋಂಟದ ಸಿದ್ಧಲಿಂಗರು ಹತ್ತಿರದ ಕಮಂಡಲದಲ್ಲಿ ನೋಡಲು ಅಲ್ಲೂ ಇಲ್ಲದಿರಲು ದೀಪವು ನಂದಿಹೋಗುತ್ತಿರುವುದು)

ಸಿದ್ಧಲಿಂಗೇಶ್ವರ : (ಬೆಚ್ಚಿ) ತಪಸ್ವಿಗಳೇ ನೀವು ಯೋಚಿಸಬೇಡಿ, ಎಲ್ಲವೂ ಆ ಗೋಸಲ ಸಿದ್ಧೇಶನ ಕೃಪೆಯೊಂದಿದ್ದರೆ ಸಿದ್ಧಿಸುವುದು.

ತಪಸ್ವಿ : ಶಿವ ಶಿವಾ... ಸಿದ್ಧಲಿಂಗಾ... ಕರುಣಾಕರಾ... ಎಲ್ಲವೂ ನಿನ್ನ ಲೀಲೆ...

(ತೋಂಟದ ಸಿದ್ಧಲಿಂಗೇಶ್ವರರು ಮಂಡಿಯೂರಿ ಗುರು ಸ್ತೋತ್ರ ಮಾಡುವರು)

ಹಾಡು

ಧರೆಗಿಳಿಸೋ ಧರ್ಮೇಶಾ, ಗೋಸಲಾ ಸಿದ್ಧೇಶಾ।
ದಯೆ ನೀಡೋ ಧವಳೇಶ ಸಿದ್ಧಿಸೋ ಸಿದ್ಧೇಶ।
ಮುಡಿಯ ಸಡಿಲಿಸೋ, ಗಂಗೆಯಿಳಿಸೋ ಗಂಗಾಧರೇಶಾ ॥ ಪಲ್ಲವಿ ॥

ಉರಿಯೆದ್ದು ಜಲಹೀರೆ ಬರಡಾಗಿದೆ ಭೂಮಿ ।
ನಾಡಿನಲಿ ಜೀವಿಗಳು ನಶಿಸುತ್ತಿವೇ ಸ್ವಾಮಿ ।
ನಿನ್ನಂಗ ಸಂಭವಾ ಕಳೆಸಿ ಕಳುಹಿಸೋ ಸ್ವಾಮಿ । ॥ ೧ ॥

ಉರಿಯಾಗು ಸಿರಿಯಾಗು, ದಾಹವನು ನೀನಿಂಗಿಸೊ ।
ಭುವಿಯಲ್ಲಿ ಜನರಲ್ಲಿ, ಅಜ್ಞಾನ ನೀ ಕಳೆಯಿಸೊ ।
ಪಾಪದಾ ಕೊಳೆಯನ್ನು ನೀ ಬೇಗ ತೊಳೆಯಿಸೋ ।
ಸಿರಿಗನ್ನಡ ನಾಡ ಕನ್ನಡಿಯಾಗಿ ಹೊಳೆಯಿಸೋ । ॥ ೨ ॥

(ಸಿದ್ಧಲಿಂಗೇಶ್ವರನ ಮುಂದೆ ಗಂಗೆ ಉದ್ಭವಿಸಿ ನಿಲ್ಲುವಳು. ಸಿದ್ಧಲಿಂಗೇಶ್ವರರು ಕೈ ಮುಗಿದು ನಿಲ್ಲಲು ಗಂಗೆಯೂ ನಮಿಸುವಳು)

ಸಿದ್ಧಲಿಂಗೇಶ್ವರ: ಬಾ ತಾಯೆ ಬಾ.... ಭೂಲೋಕದಲ್ಲಿ ನೀ ನಲಿದು ನಾಟ್ಯವಾಡು ಬಾ... ಈ ಭುವಿಯ ಜನರ ಪಾಪವನ್ನು ನೀಗಿಸಿ, ಬಾಯಾರಿಕೆಯನ್ನು ಇಂಗಿಸಿ ಆನಂದವನ್ನುಂಟುಮಾಡು ಬಾ ತಾಯೆ... ಯತಿವರ್ಯರೇ ಇದೋ ಗಂಗೆ... (ಆನಂದದ ಭರದಲ್ಲಿ) ಇದೋ ... ಗಂಗೆ... ನಿಮ್ಮಿಷ್ಟಲಿಂಗದ ಮಜ್ಜನಕ್ಕೆ... ಬಾಯಾರಿಕೆಗೆ ಮಹಾಪೂರಾ...।

ತಪಸ್ವಿ : ಶಿವ ಶಿವಾ ಧನ್ಯನಾದೆ... ಪಾವನಮಯನಾದೆ ಸಿದ್ಧಲಿಂಗಾ...।

(ನೀರನ್ನು ಕೈಮೈಗೆ ಹಾಕಿಕೊಂಡು ಮಜ್ಜನ ಮಾಡುವರು. ಘಂಟಾನಾದವಾಗುವುದು)

ಸಿದ್ಧಲಿಂಗೇಶ್ವರ : "ನೀನೊಲಿದರೆ ಕೊರಡು ಕೊನರುವುದಯ್ಯಾ.
ನೀನೊಲಿದರೆ ವಿಷವು ಅಮೃತವಹುದಯ್ಯಾ
ನೀನೊಲಿದರೆ ಸಕಲ ಪಡಿಪದಾರ್ಥಗಳು ಇದಿರಲ್ಲಪ್ಪುವವು"

ಎಂಬ ಬಸವಣ್ಣನವರ ವಾಕ್ಯವೇಕೆ ಸತ್ಯವಾಗಬಾರದು? ಶ್ರೀ ಗೋಸಲ ಸಿದ್ಧರ ಕರುಣೆಯಿಂದಲೂ ಆ ಪರಶಿವನ ಕೃಪೆಯಿಂದಲೂ ಈ ಗಂಗೆಯೇ ಎಣ್ಣೆಯಾಗಿ ದೀಪ ಉರಿದು ಪ್ರಜ್ವಲಿಸಲಿ.

(ಎಂದು ಬೊಗಸೆಯಲ್ಲಿ ತುಂಬಿ ಹಾಕುವರು. ಆಗ ದೀಪ ಪ್ರಜ್ವಲಿಸುವುದು. ಸಂತೋಷದಿಂದ)

ಶಿವ ಶಿವಾ... ಸಿದ್ಧೇಶ್ವರಾ... ಸಿದ್ದೇಶ್ವರಾ...

(ಅಷ್ಟು ಹೊತ್ತಿಗೆ)

ಗಂಗೆ : ಅಷ್ಟು ಹೊತ್ತಿನಿಂದಲೂ ಪವಾಡದ ಸುರಿಮಳೆಯನ್ನೇ ಸುರಿಸಿದಂತೆ ತೋರುತ್ತಿದೆಯಲ್ಲಾ ಗುರುವೇ?

ಸಿದ್ಧಲಿಂಗೇಶ್ವರ: ಅಂತಹದ್ದನ್ನು ನಾನೇನು ಸಾಧಿಸಿಲ್ಲವಲ್ಲ ತಾಯೆ... ಸಾಧನೆಯು ನನ್ನದು, ಆದರೆ ಸಾಕ್ಷಾತ್ಕಾರ ಈಶ್ವರನದು. ಇವರಲ್ಲಿ ನನ್ನದೇನಿದೆ. ಗಂಗೆಯುಟಿಸಿದ ಈ ಕ್ಷೇತ್ರವು ಇಂದು ಮತ್ತಷ್ಟು ಪಾವನವಾಯಿತು. ಬಾಯಾರಿದ ತಪಸ್ವಿಗೆ ನೀರಡಿಕೆ ನೀಗಿತು. ಪೂಜಾದೀಪವನ್ನುರಿಸಿದ ಮಹಾಮಾತೆಗೆ ಇಲ್ಲಿ 'ಶ್ರೀ ಸಿದ್ಧಗಂಗಾ' ಎಂಬ ನಾಮ ಉಂಟಾಗಲಿ. ಈ ಕ್ಷೇತ್ರಕ್ಕೆ ಇಂದಿನಿಂದ 'ಸಿದ್ಧಗಂಗಾ ಕ್ಷೇತ್ರ'ವೆಂಬ ಹೆಸರಾಗಲಿ. ಶ್ರೀ ಸಿದ್ಧಗಂಗಾ ಮಾತೆಗೆ... ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಜಯವಾಗಲಿ... ಜಯವಾಗಲಿ...

## ದೃಶ್ಯ-೩

(ಶ್ರೀ ಕ್ಷೇತ್ರದಲ್ಲಿ ಸಿದ್ಧಗಂಗೆಯು ನೃತ್ಯದಲ್ಲಿ ಮೈಮರೆತಿರಲು)

(ತಪಸ್ವಿಗಳಿಬ್ಬರೂ ಆ ಸಮಯಕ್ಕೆ ಪ್ರವೇಶಿಸಿ ಆನಂದಿಸುತ್ತಾ)

೧ನೇ ತಪಸ್ವಿ : ಆಹಾ... ಆಹಹಾ... ಏನೀ ಕಣ್ಣೊರೆಯುವ ಆನಂದಮಯ ನಾಟ್ಯ! ಯಾವ ಉರ್ವಶಿ ಮೇನಕೆ ರಂಭೆಯರೂ ಈಕೆಗೆ ಸರಿಹೋಲರು. ಸದಾಶಿವನು ಸಾಕ್ಷಾತ್ ಸಿದ್ಧಲಿಂಗೇಶ್ವರನ ಸ್ವರೂಪದಲ್ಲಿ ಕುಳಿತು ಈಕ್ಷಿಸುತ್ತಿರುವನು. ಇದನ್ನು ನೋಡಿದ ನಾವೇ ಧನ್ಯರು.

೨ನೇ ತಪಸ್ವಿ : ಸಿದ್ಧಗಂಗೆಯು ಪ್ರಕೃತಿ ಮಾತೆಯ ಸುಂದರ ವರಪುತ್ರಿ... ಆಹಾ ಆಹಾ... ಏನೀ ಹಾವ, ಭಾವ, ವಿಲಾಸ, ವೈಖರಿಗಳು ಹೆಜ್ಜೆ ಹೆಜ್ಜೆಯಲ್ಲೂ ಲಜ್ಜೆಯ ಗೆಜ್ಜೆಗಳುಜ್ಜುಜ್ಜಿ ಫಲಿತದಿಂದ ಸಜ್ಜಾಗಿ, ಕುಣಿಯುತ್ತ ಮಜ್ಜನಗೈಯುವಂತಿದೆ. ಯಾವ ಸಿದ್ಧಲಿಂಗನೇ ಮೈ ಮರೆತು ಕುಳಿತಿರುವಾಗ ಸಾಮಾನ್ಯರಾದ ನಮ್ಮ ನಿಮ್ಮ ಪಾಡೇನು?

ಸಿದ್ಧಗಂಗಾ : ತಪಸ್ವೀ...

೨ನೇ : ಏನು ಗಂಗಾ?

ಸಿದ್ಧಗಂಗೆ : ನೀನೆಲ್ಲಿರುವುದೆಂಬುದನ್ನು ಮೊದಲು ಅರಿತುಕೋ. ಈ ಪುಣ್ಯ ಕ್ಷೇತ್ರದಲ್ಲಿ ನಾನಿರುವ ಗುಪ್ತ ಸ್ಥಳಕ್ಕೆ ಬಂದು ನನ್ನನ್ನು ವರ್ಣಿಸುವ ಧೈರ್ಯವೆಷ್ಟು ಬಂತು? ಕೆಚ್ಚೆಷ್ಟು ಬಂತು?

೨ನೇ : ಅಂದರೆ... ನಾನು ಶ್ರೀಕ್ಷೇತ್ರದಲ್ಲಿರುವುದು ಇನ್ನೂ ತಿಳಿಯಲಿಲ್ಲವೇನು?

ಸಿದ್ಧಗಂಗೆ : (ಕೋಪದಿಂದ) ತಪಸ್ವೀ... ಅದನ್ನು ತಿಳಿದಿದ್ದರೆ ನೀನು ಈ ರೀತಿ ವರ್ಣಿಸುತ್ತಿರಲಿಲ್ಲ.

೨ನೇ : ಅಂತಹ ದ್ರೋಹವನ್ನು ನಾನೆಸಗಲಿಲ್ಲವಲ್ಲ ಗಂಗಾ...

ಸಿದ್ಧಗಂಗೆ : ನನ್ನಂಗಾಂಗವನ್ನು ವರ್ಣಿಸಲು ಸಾಮಾನ್ಯನಾದ ನಿನಗೆ ಹಕ್ಕಿಲ್ಲ ವೆಂಬುದನ್ನು ತಿಳಿ. ನೀನು ನನ್ನ ರೂಪು ಲಾವಣ್ಯವನ್ನು ವರ್ಣಿಸಿದುದರ ಫಲವಾಗಿ...!

೧ನೇ : ತಾಯೇ...!

೨ನೇ : ಮಹಾತಾಯೇ...

ಸಿದ್ಧಗಂಗಾ : (ತುಚ್ಛತೆಯಲ್ಲಿ) ಮಹಾ... ತಾಯೆ... ಇಲ್ಲ ಇದಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲೇಬೇಕು.

೨ನೇ ತಪಸ್ವೀ: ಅರಿಯದ ಹಸುಳೆಯ ತಪ್ಪನ್ನು ಕ್ಷಮಿಸು ಮಹಾಮಾತೆ.

ಸಿದ್ಧಗಂಗಾ : ನೀವು ಪಿಶಾಚತ್ವವನ್ನು ಹೊಂದಿರಿ.

* * *

## ದೃಶ್ಯ-೪

### ಹಾಡು

ಶ್ರೀ ಸಿದ್ಧಗಂಗಾ ನಿಸ್ನಾತ್ಮ ತುಂಗಾ।
ತರದಿರೆನ್ನ ಭಾವಕ್ಕೆ ಭಂಗಾ ।
ನಿಜರೂಪವ ನೀನೀಡೂ ಶ್ರೀ ಸಿದ್ಧಗಂಗಾ । ॥ ಪಲ್ಲವಿ ॥

ಪಾವನೆಯ ಕೋಪಕ್ಕೆ ಸಿಲುಕಿ ನಾ ಪಾಪಿಯಾದೆ।
ಅಂಗಾಂಗ ಬಣ್ಣಿಸಿದ ತಿಳಿಗೇಡಿ ನಾನಾದೆ ।
ಸುಂದರಿಯ ಭ್ರಮಿಸಿದ ಭ್ರಷ್ಟನೂ ನಾನಾದೆ ।
ಶ್ರೀ ಸಿದ್ಧಗಂಗಾ ಶಾಪಕ್ಕೆ ತುತ್ತಾದೆ । ॥ ೧ ॥

ಪಾಪದ ಭಾರಕೆ ಬಾಗಿದೆ, ಸೊರಗಿದೆ, ಮರುಗಿದೆ, ಮರುಗಿದೆ, ಕೊರಗಿಹೆ ತಾಯೇ।
ಕರುಣಿಸೂ, ಈಕ್ಷಿಸೂ, ರಕ್ಷಿಸೂ, ಶಿಕ್ಷಿಸದಿರು ತಾಯೇ।
ಭಾಗ್ಯವು ಬೇಡ, ಭೋಗವೂ ಬೇಡ, ಬೇಗೆಯಾ ತಾಳೆನೂ ಮಾತಾಯೇ ।
ದಾನಿಗಳರಸಿ, ಮಾನಿಗಳರಸಿ, ಬೋಳಿಯರರಸೀ ಕರುಣಾಳು ತಾಯೇ। ॥ ೨॥

ಓಹೋಹೋ ಹೋ ಹೋ ಬೇಗುದೀ ಬೇಗದೀ ಬಲ್ಲೆಯೇನೋ?
ಎಂತೋ ದಂದುಗಾ? ಈ ದಂದುಗಾವೆಂತೋ? ನಾ ಕಾಣೆನೋ?
ಜವದಿಂ ಉಗುವಾ ಘುಮ್ಮಡಿಸಿ ಬರುವ ಪಾಪದ್ಗೊನಲನು ತಡೆನೀ।
ಬಾಳಲ್ಲಿ ಬೆಂದಿಹೆ ಬದುಕಲ್ಲಿ ಬಳಲಿಹೆನೋ ಕಾಣೆನೀ ॥ ೩ ॥

ಸಿದ್ಧಗಂಗಾ : ದಿವ್ಯಾಜ್ಞಾನಿಗಳೂ, ತಪೋನಿಷ್ಠರೂ, ವಯೋವೃದ್ಧರೂ, ಧರ್ಮಪಾಲರೂ, ನಿರಾಡಂಬರಿಗಳೂ ಆದ ನೀವು ಹಸುಳೆಗಳೇ? ಇಲ್ಲ ಇದಕ್ಕೆ ತಕ್ಕ ಪ್ರಾಯಶ್ಚಿತ್ತವಾಗಲೇಬೇಕು.

೨ನೇ ತಪಸ್ವಿ : ತಾಯೇ, ತಪ್ಪು ಮಾಡುವುದು ಮಕ್ಕಳ ಸ್ವಭಾವ. ಅದನ್ನು ಕ್ಷಮಿಸುವುದು ತಾಯಿಯ ಧರ್ಮವಲ್ಲವೇ? ಗಂಗಾದೇವಿ.

ಸಿದ್ಧಗಂಗಾ : ಗಂಗಾದೇವಿ, ಅರಿವಿಲ್ಲದ ಮಕ್ಕಳಿಗೆ ತಾಯಿ ಶಿಕ್ಷಿಸಿಯೇ ಬುದ್ಧಿ ಕಲಿಸುವುದು. ನೀನು ಮಾಡಿದ ತಪ್ಪಿಗಾಗಿ ಭೂಲೋಕದಲ್ಲಿ ಪಿಶಾಚತ್ವವನ್ನು ತಾಳಬೇಕು.

೨ನೇ : ತಾಯೇ...ಸಿದ್ಧಗಂಗಾ.... ಅಂಗಲಾಚಿ ಬೇಡುತ್ತೇನೆ... ನನ್ನ ತಪ್ಪನ್ನು ಕ್ಷಮಿಸು ತಾಯೆ.

(ಕಣ್ಣೀರಿಡುತ್ತಾ 'ಸಿದ್ಧಗಂಗಾ' 'ತಾಯೇ' ಎಂದು ಕೂಗುವನು.)

೧ನೇ : ತಾಯೆ ಇಷ್ಟೊಂದು ನಿಷ್ಕರುಣೆಗಳಾಗಬಾರದು. ಏನೋ ಅರಿಯದೆ ಮಾತಾಡಿದ ತಪಸ್ವಿಗಳ ಶಾಪವಿಮೋಚನೆಗೆ ದಾರಿ ತೋರು ತಾಯೆ...

ಸಿದ್ಧಗಂಗಾ : ತಪಸ್ವಿಯೆನ್ನಿಸಿಕೊಳ್ಳುವನು ಇಂದ್ರಿಯಾಸೆ, ಭೋಗಗಳನ್ನು ತೊರೆದು ಏಕಚಿತ್ತದಾರ ಸದಾಶಿವನಲ್ಲಿ ಧ್ಯಾನವುಳ್ಳವನಾಗಬೇಕು. ಕಣ್ಣೆತ್ತಿ

ನೋಡಿದರೂ ಹೆಣ್ಣಿನ ಮೇಲೆ ವ್ಯಾಮೋಹ ಬೀಳದವನೇ ನಿಜ ಸನ್ಯಾಸಿ. ಆಗಲೇ ಬ್ರಹ್ಮಚರ್ಯವು ಪ್ರಜ್ವಲಿಸಿ, ಕೀರ್ತಿ ಶಿಖರವೇರಿದಾಗಲೇ ಮುಕ್ತಿ ದೊರೆಯುವುದು.

೧ನೇ ತಪಸ್ವಿ : ತಾಯೇ... ತಿಳಿಯದೆ ಅಜ್ಞಾನದಿಂದ ವರ್ತಿಸಿದ ನನ್ನ ತಪ್ಪನ್ನು ಕ್ಷಮಿಸು ತಾಯಿ.

ಸಿದ್ಧಗಂಗಾ : ಭೂಲೋಕದಲ್ಲಿ ತಪಸ್ವಿಗಳು ಏಕೆ ಇಷ್ಟೊಂದು ಕೆಳಮಟ್ಟಕ್ಕಿಳಿದರೋ ನನಗೆ ತಿಳಿಯದು. ಈ ದುರ್ನೀತಿಗೆ ಶಿಕ್ಷೆಯಾಗಲೇಬೇಕು. ಶಿಕ್ಷೆಯಿಂದಲೇ ಸುಶಿಕ್ಷಿತತೆ ದಕ್ಷತೆ ತಾಳಬೇಕು.

೨ನೇ ತಪಸ್ವಿ : ಮಾತೇ...!

ಸಿದ್ಧಗಂಗಾ : ಕೊಟ್ಟ ಶಾಪವನ್ನು ಅನುಭವಿಸಲೇಬೇಕು. ಅದನ್ನು ಹಿಂದಕ್ಕೆ ಪಡೆಯುವುದೆಂದರೆ 'ಗದ್ದೆಗೆ ಕಟ್ಟಿದ ನೀರನ್ನು ಹಿಂದಕ್ಕೆ ಪಡೆದಂತೆ'.

೧ನೇ ತಪಸ್ವಿ : ತಪ್ಪನ್ನು ಮಾಡುವುದು ನಮ್ಮಂತಹ ಸಾಮಾನ್ಯರ ಸ್ವಭಾವ. ಶರಣಾಗತರಾದ ನಮ್ಮಂತಹವರನ್ನು ಕ್ಷಮಿಸುವುದು ಮಹಾಮಾತೆಯ ಧರ್ಮವಲ್ಲವೇ?

ಸಿದ್ಧಗಂಗೆ : ಹೌದು ತಪ್ಪು ಮಾಡುವಾಗ 'ಸ್ವರ್ಗ ಮೂರೇ ಗೇಣು'! ಅದರ ಪರಿಣಾಮದ ಪ್ರಾಯಶ್ಚಿತ್ತವನ್ನು ಅನುಭವಿಸಬೇಕಾದರೆ 'ನರಕಕ್ಕೆ ಮೂರೇ ಗೇಣು' ಅಂದ ಹಾಗಾಗುತ್ತದೆಯಲ್ಲವೇ ತಪಸ್ವಿಗಳೇ?

೧ನೇ ತಪಸ್ವಿ : ಹೌದು ತಾಯೆ ಆದರೆ...!

ಸಿದ್ಧಗಂಗೆ : ತಪ್ಪನ್ನು ಮಾಡುವುದು ನೀರು ಕುಡಿದಂತೆ ಬಹಳ ಸುಲಭ, ಆದರೆ ಅದರ ಶಿಕ್ಷೆಯನ್ನನುಭವಿಸುವುದು ಉಕ್ಕಿನ ಕಡಲೆ ಕಡಿದಂತೆ ಬಹಳ ಕಷ್ಟ ಅಲ್ಲವೇ ತಪಸ್ವಿಗಳೇ?

೧ನೇ ತಪಸ್ವಿ : ಪರಸ್ತ್ರೀಯರನ್ನು ಕಿರುಗಣ್ಣಿನಲ್ಲಿ ನೋಡಿದರೂ ಪಾಪವೆಂದು ತಿಳಿದೂ ಭ್ರಮಿಸಿದುದಕ್ಕೆ ಕ್ಷಮಿಸಿ ತಾಯೇ...

ಸಿದ್ಧಗಂಗೆ : ಬೇರೆಯವರಿಗೆ ಉಪದೇಶ ನೀಡುವುದು ಸುಲಭ. ಅದರಂತೆ ನಡೆಯುವುದು ಬಹಳ ಕಷ್ಟ ತಪಸ್ವಿಗಳೇ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಕಾದಿದೆ. ಅದನ್ನು ಅನುಭೋಗಿಸಲೇಬೇಕು. ಆದರೆ ತಿಳಿದು ಮಾಡುವ ತಿಳಿಗೇಡಿಗಳನ್ನೇನೆನ್ನಬೇಕೋ ನನಗೆ ಅರ್ಥವಾಗುತ್ತಿಲ್ಲ... ಆದರೆ...

೨ನೇ ತಪಸ್ವಿ : ಆದರೆ (ಉಬ್ಬಿ) ಏನು ತಾಯೇ?

ಸಿದ್ಧಗಂಗೆ : ನೀವು ಭೂಲೋಕದಲ್ಲಿ ಮಾನವರಂತಿದ್ದು ಅಲ್ಲಿನ ಕಷ್ಟ ಸುಖಗಳನ್ನು ಕಂಡುಂಡನುಭವಿಸಿ ಈ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಈತನು ಅನ್ನ

ವಿದ್ಯಾದಾನಗಳನ್ನೀಯುತ್ತಾ ಮಹಾಪುಣ್ಯ ಪಡೆಯುತ್ತಿರುವ ಸಮಯದಲ್ಲಿ ನಿಮಗೆ (ಮತ್ತೊಬ್ಬನನ್ನು ತೋರಿಸಿ) ಈ ಮಹಾತ್ಮನು ದರ್ಶನ ಕೊಡುವನು. ಆಗ ಪಿಶಾಚತ್ವವು ತೊಲಗಿ ನಿಜರೂಪ ಬಂದೊದಗುವುದು.

೨ನೇ ತಪಸ್ವಿ : ಹ್ಞಾಂ... ಕರುಣಾಮಯೀ... ಸಿದ್ಧಗಂಗೇ...

೧ನೇ ತಪಸ್ವಿ : ಸಿದ್ಧಗಂಗಾ....

(ಇಬ್ಬರೂ ಎರಡು ಕಡೆಯೂ ಪಾದ ಮುಟ್ಟಿ ನಮಸ್ಕರಿಸುತ್ತಾ ನಿಂತಿರಲು)

೧ನೇ ತಪಸ್ವಿ : ಶ್ರೀ ಸಿದ್ಧಗಂಗಾ ಮಾತೆಗೇ...

೨ನೇ ತಪಸ್ವಿ : ಉಘೇ... ಉಘೇ...

## ದೃಶ್ಯ-೫

(ನಿಜಗಲ್ಲಿನ ಸಿದ್ಧರ ಬೆಟ್ಟ, ಅಲ್ಲಿ ಸಿದ್ಧರೊಬ್ಬರು ತಪವನ್ನು ಮಾಡುತ್ತಿರಲು ಅಲ್ಲಿಗೆ ರುದ್ರಪ್ಪನೆಂಬ ಕುರಿಕಾಯುವವನು ಬಂದು ನಮಸ್ಕರಿಸಿ ಕುಳಿತುಕೊಳ್ಳುವನು)

ಸಿದ್ಧಪುರುಷ : ಯಾರಪ್ಪಾ ನೀನು?

ರುದ್ರಪ್ಪ : ನಾನಾ... (ಲೊಚ್ಚೆ ಹಾಕಿ) ಯಾರಾದರೇನು ಬಿಡಿ ಸ್ವಾಮಿ, ಈ ನಿಜಗಲ್ ಸಿದ್ಧರ ಬೆಟ್ಟಕ್ಕೆ ಇನ್ಯಾರು ಬರೋವು? ನಾನು ಇಲ್ಲಿಯವ್ನೇ... ನಾನೊಬ್ಬ ಮನ್ಸ... ಲಕ್ಕೂರಿನ ಬಡ ಲಿಂಗಾಯತರ ಮಗ. ನನ್ನೆಸ್ರು ರುದ್ರಪ್ಪ ಅಂತ. ಆಡ್ಕಾಯೋಕ್ಬಂದ್ದೀನಿ ಸ್ವಾಮಿ ಅಷ್ಟೆ...

ಸಿದ್ಧಪುರುಷ : ಯಾಕೆ ಸುಮ್ನೆ ಕುಳ್ತೇ?

ರುದ್ರಪ್ಪ : ನಿಮ್ಮ ಮಾಯ- ಮಂತ್ರ, ತಂತ್ರ-ಕುತಂತ್ರಗಳನ್ನು ನೋಡ್ತಾ ಅಂಗೇ ಕುಳ್ತೇ ಸ್ವಾಮಿ.

ಸಿದ್ಧಪುರುಷ : ನೀನು ಕಲೀತೀಯೇನು?

ರುದ್ರಪ್ಪ : ಕುರಿಕಾಯೋ ತರಕುರಿಗೇನ್ಬರುತ್ತೆ ತಗೀರಿ ಸ್ವಾಮಿ.

ಸಿದ್ಧಪುರುಷ : ಸಚ್ಚಿದಾನಂದಾ... ಕಲಿತ ವಿದ್ಯೆಯನ್ನು ಯಾರಿಗಾದ್ರೂ ನೀಡಲೇಬೇಕು ರುದ್ರಪ್ಪಾ... ಕೆಚ್ಚಲು ತುಂಬಿದ ಮೇಲೆ ಹಸುವು ಹೇಗೆ ಹಾಲನ್ನು ಹಿಂಡುವಂತೆ, ಕವಿಗೆ ಭಾವನೆಗಳು ಮನದಲ್ಲುಕ್ಕಿದಾಗ ಕವಿತೆಯನ್ನು ಹೊರಸೂಸುವಂತೆ, ಕೆರೆಯ ನೀರು ಅಂಚು ಮೀರಿದಾಗ ಕೋಡಿ ಬೀಳುವಂತೆ, ಕಲಾವಿದನಿಗೆ ಕಲೆ ಮೈಮರೆವಂತೆ, ವಿದ್ಯೆಯೂ ಸಹಾ ಅಷ್ಟೇ.

ರುದ್ರಪ್ಪ : ನನ್ನೊಡ್ಯಾ... ಒಂದು ವಿಷಯ... ಈ ಮಾಯಾ ಮಂತ್ರದಿಂದ ಜನರಿಗೆ ತೊಂದರೆ ಕೊಟ್ಟು ನಾವು ಪಡೆಯೋ ಭಾಗ ಆದ್ರೂ ಏನು?

ಸಿದ್ಧಪುರುಷ : ರುದ್ರಪ್ಪಾ... ಯಾವ ವಿದ್ಯೇನೂ ಕಲಿಯೋದು ಕೆಟ್ಟದು ಅಂತ ತಿಳೀಬಾರದು. ಎಲ್ಲವನ್ನೂ ಕಲೀಲೇಬೇಕು. ನಿನ್ನ ಮುಖದ ಕಾಂತಿ ನೋಡಿದರೆ ನೀನು ಸಿದ್ಧಪುರುಷನಾಗುವ ಲಕ್ಷಣ ಕಾಣಬಂತು. ಅದ್ಕೇ ನಿನಗೆ ಹೇಳಿಕೊಡುವ ಮನಸ್ಸು ಬಂತು. ಇದರಿಂದ ಜನರಿಗೆ ಕಷ್ಟ ಕೊಡಬೇಕೆಂಬ ಉದ್ದೇಶವಲ್ಲ. ನಿನಗೆ ಮುಂದೆ ಅಂತಹ ಸಂದರ್ಭ ಸನ್ನಿವೇಶಗಳು ದೊರೆತಾಗ ಈ ವಿದ್ಯೆ ತಿಳಿದಿದ್ರೆ ನಿನ್ನನ್ನು ಯಾರೂ ಅಲ್ಲಾಡಿಸಲಾರರು. ಅಲ್ಲದೆ ಕಷ್ಟದಲ್ಲಿರುವವರನ್ನು ಉಪಾಯದಿಂದ ಪಾರುಮಾಡಬಹುದು.

ರುದ್ರಪ್ಪ : ಕೆಟ್ಟ ವಿದ್ಯೆಯನ್ನಾದರೂ ಕಲಿತಿರಬೇಕೇ ಸ್ವಾಮಿ?

ಸಿದ್ಧಪುರುಷ : ಹೌದು. 'ಮುಳ್ಳನ್ನು ಮುಳ್ಳಿನಿಂದಲೇ ಕೀಳುವಂತೆ, ವಜ್ರವನ್ನು ವಜ್ರದಿಂದಲೇ ಕತ್ತರಿಸುವಂತೆ'. ಆದರೆ ಸಮಯ ಸಂದರ್ಭ ನೋಡಿ ಪ್ರಯೋಗಿಸಬೇಕು. ದುಷ್ಟ ಜನರು ಕೊಡುವ ದುಷ್ಟ ವಿದ್ಯೆಗಳಿಗೆ ದುಷ್ಟ ವಿದ್ಯೆಯ ಕಲಿತಿದ್ದಾಗಲೇ ಬೆಲೆ, ಆಗಲೇ ಅವರ ಹಮ್ಮನ್ನು ಮುರಿಯಬಹುದು.

ರುದ್ರಪ್ಪ : ಆಲೋಚಿಸಿ ನೋಡಿದ್ರೆ ನಿಮ್ಮ ಮಾತಿನಲ್ಲಿ ಸತ್ಯ ಇದೆ. ಅಪಾರ ಸತ್ವವೂ ಇದೆ. ಆ ಸೊತ್ತಿನಲ್ಲಿ ಕಂಚಿತ್ ದಾನ ಮಾಡಿ... ಎಲ್ಲವೂ ತಮ್ಮ ಚಿತ್ತದಂತೆ ಒಳ್ಳೆಯದಾಗಲಿ.

ಸಿದ್ಧಪುರುಷ : ನಾನು ಹೇಳಿಕೊಡುವ ವಿದ್ಯೆಗಳು ನಿನಗೆ ಸಫಲವಾಗಲಿ ರುದ್ರಪ್ಪಾ... ಸಫಲವಾಗಲಿ.

(ಕಿವಿಗೇನೋ ಉಸುರುವನು....)

ರುದ್ರಪ್ಪಾ ಇಲ್ಲಿಗೆ ಅನತಿ ದೂರದಲ್ಲಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿನ ಮಠದ ಪೀಠವನ್ನಲಂಕರಿಸುವೆ. ಅದರಲ್ಲಿ ಅನುಮಾನವಿಲ್ಲ. ನೀನು ಮಹಾಯೋಗಿಯಾಗುತ್ತೀಯ.

ರುದ್ರಪ್ಪ : ಕೇವಲ ಕುರಿಕಾಯೋ ರುದ್ರಪ್ಪ ಮಹಾ ಶಿವಯೋಗಿಯೇ.....? ಮಹಾಯೋಗಿಯೇ...? (ನಗುತ್ತ) ಅಯ್ಯೋ ಹುಚ್ಚು ಹುಚ್ಚು.

ಸಿದ್ಧಪುರುಷ : ಮಹಾ ಶಿವಯೋಗಿಗಳ ಮಹಿಮೆಯೆಂದರೆ ಕ್ಷೀರದಲ್ಲಿ ಮರೆಯಾಗಿರುವ ಬೆಣ್ಣೆಯಂತೆ ಅದು ಆಮೇಲೆ ತೋರುವುದು. ನೀನು ಸಂಸಾರ ವ್ಯಾಮೋಹ ಬಲೆಯಿಂದ ತಪ್ಪಿಸಿಕೊಂಡು ಹೋಗಿ ಶರಣನಾಗು. 'ಅರಿತಡೆ ಶರಣ ಮರೆತಡೆ ಮಾನವ' .

ರುದ್ರಪ್ಪ : ಅದು ನನ್ನಿಂದ ಸಾಧ್ಯವೇ ಸಿದ್ಧರೇ?

ಸಿದ್ಧಪುರುಷ : ಖಂಡಿತ ಸಾಧ್ಯವಾಗುತ್ತದೆ. ಪ್ರಪಂಚದಲ್ಲಿ ಅಸಾಧ್ಯವಾದುದು ಯಾವುದು ರುದ್ರಪ್ಪಾ? ಮನುಷ್ಯನಿಗೆ ಪ್ರಯತ್ನ ದೊಡ್ಡದು. ಜೊತೆಗೆ ದೈವ ಕೃಪೆ ಬೆರೆತರೆ ಇನ್ನೂ ಒಳ್ಳೆಯದು. ನೀನು ಸ್ವಲ್ಪವೂ ಯೋಚಿಸಬೇಡ.

ರುದ್ರಪ್ಪ : ಚಿತ್ತ ಸಿದ್ಧರೇ...

(ಕೈಮುಗಿದು ತೆರಳುವನು)

* * *

## ದೃಶ್ಯ-೬

(ಸಿದ್ಧಗಂಗಾ ಕ್ಷೇತ್ರವನ್ನು ನೋಡಲು ಬಂದ ಅಟವಿ ಸ್ವಾಮಿಗಳು ಅಮಿತಾನಂದ ಹೊಂದುವರು)

ಅಟವಿ ಸ್ವಾಮಿಗಳು: ಆಹಾ... ಏನೀ ಸಿದ್ಧಗಂಗಾಕ್ಷೇತ್ರ... ಎಂತಹ ಗುಪ್ತ ಸ್ಥಳದಲ್ಲಿ ಗಂಗೆಯುದಿಸಿರುವಳು... ಆಹಾ... ಆ ಗವಿಯು ನಿಜಕ್ಕೂ ತಪೋ ಯೋಗ್ಯವಾಗಿದೆ.... ಇದನ್ನು ನೋಡುತ್ತಿದ್ದರೆ ಮನಸ್ಸಿಗೆ ಎಷ್ಟು ಸಂತೋಷವಾಗುತ್ತಿದೆ... ಇಲ್ಲೇ ತಪ ಮಾಡುವ ಮನಸ್ಸಾಗುತ್ತಿದೆ.... ಇಲ್ಲೇ ಸ್ವಲ್ಪ ಮಿಶ್ರಸಿಕೊಳ್ಳುತ್ತೇನೆ.

(ಎಂದು ಮಲಗುವರು. ಆಗ ಗಂಗೆಯು ಪ್ರತ್ಯಕ್ಷಳಾಗಿ ಕನಸಿನಲ್ಲಿ)

ಸಿದ್ಧಗಂಗೆ : ಯಾರು... ತಪೋ ಯೋಗಿಗಳೇ?

ಅಟವಿ : ಯಾರೀ ನಾರಿ? ಏನೀ ವಯ್ಯಾರ?

ಸಿದ್ಧಗಂಗೆ : ಅಯ್ಯೋ ಪೆಚ್ಚರೇ ಇನ್ನೂ ಅರ್ಥವಾಗಲಿಲ್ಲವೇ?

ಅಟವಿ : ಹೆಣ್ಣೊಂದು ಬಂದಿದೆಯೆಂದು ಗೊತ್ತಾಯ್ತು...

ಸಿದ್ಧಗಂಗೆ : ಅಷ್ಟೇಯೇನೂ?

ಅಟವಿ : ಮೊದಲೇ ಹೇಳಲಿಲ್ಲವೇ? ನಾನೊಬ್ಬ ಕೇವಲ ಸನ್ಯಾಸಿ. ನಾನು ಸಂಸಾರ ವ್ಯಾಮೋಹಿಯಲ್ಲವೆಂದು.

ಸಿದ್ಧಗಂಗೆ : ಆದುದರಿಂದಲೇ ನಿನ್ನರಸಿ ಬಂದುದು.

ಅಟವಿ : ಮಹಾತಾಯೆ ತಾವಾರು? ತಾವೇಕೆ ಬಂದುದೆಂದು ತಿಳಿಸಬೇಕು.

ಸಿದ್ಧಗಂಗೆ : ನಾನು ಸಿದ್ಧಗಂಗಾ... ನಿನ್ನ ಯೋಗದ ಅಡಿಗಲ್ಲಾಗಿ ನಾನು ಬಂದಿರುವುದು. ನಿನ್ನ ಯೋಗದ ಶ್ರೇಯಸ್ಸನ್ನು ಬಯಸಲು. ಶ್ರೀ ಗೋಸಲಸಿದ್ಧರು, ಶಂಕರಾಚಾರ್ಯರು, ಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು, ರುದ್ರಸ್ವಾಮಿಗಳು, ಸಿದ್ಧಲಿಂಗ ಸ್ವಾಮಿಗಳೇ ಅನೇಕರು ಮಠವನ್ನು ನಡೆಸಿಕೊಂಡು ಬಂದಿದ್ದರು. ಆದರೆ ಅದು ಇಂದು ಶಿಥಿಲವಾಗಿದೆ. ಜನರಲ್ಲಿ ಅಜ್ಞಾನ ತುಂಬಿ ತುಳುಕಾಡುತ್ತಿದೆ. ನೀನು ಇಲ್ಲೇ ನೆಲೆಸಿ ಮಠವನ್ನು ಪುನರ್ನಿರ್ಮಾಣ ಮಾಡಿ ಶ್ರೀ ಕ್ಷೇತ್ರದ ಮಹಿಮೆಯನ್ನು ಸಾರು.

ಅಟವಿ : ಮಹಾ ಪ್ರಸಾದ ತಾಯೇ...

(ಕಣ್ಬಿಟ್ಟು ದಿಡೀರನೆ ಎದ್ದು)

ಶ್ರೀ ಸಿದ್ಧಗಂಗಾ... ಸಿದ್ಧಗಂಗಾ...

(ಎಂದು ನೋಡಲು ಗಂಗೆ ಅದೃಶ್ಯವಾಗಿದ್ದಳು)

## ದೃಶ್ಯ-೭

(ಶ್ರೀ ಸಿದ್ಧಗಂಗಾ ಮಠದಲ್ಲಿ ಅಟವೀ ಸ್ವಾಮಿಗಳು ಗದ್ದುಗೆಯನ್ನೇರಿ ಕುಳಿತಿರಲು ಇಬ್ಬರು ದೇವಪ್ಪನನ್ನು ಬಿಗಿದ ಕಟ್ಟುಗಳಿಂದ ಎಳೆದು ತರುತ್ತಿರಲು ಆತನು ಆರ್ಭಟಿಸುತ್ತಾ ಬರುವನು.)

ದೇವಪ್ಪಗೌಡ : ಗುರೂ... ಗುರೂ... ನನ್ನ ಗುರು ಎಲ್ಲಿ? (ನೊರನೊರನೆ ಹಲ್ಮುಡಿ ಕಚ್ಚಿ) ಎಲ್ಲಿ... ತೋರಿಸಿ...

೧ನೆಯವ : ಲೇ ದೆವ್ವ ನಡಿ.

೨ನೆಯವ : ಅಲ್ಲಿ ಕಾಣವ್ರೇ ಕಣೋ ಭೂತ.

೧ನೆಯವ : ಯಾಕೆ ಕಣ್ಣು ಇಂಗಿ ಹೋಗಿದ್ಯಾ ಪಿಶಾಚಿ.

ದೇವಪ್ಪ : (ಮುಂದೆ ಹೋಗುತ್ತಾ ಜೋರಾಗಿ) ಎಲ್ಲಿ ಗುರು? ಎಲ್ಲಿ? ತೋರಿಸಿ ಮತ್ತೆ ತೋರಿಸಿ.

(ಆಶ್ಚರ್ಯದಿಂದಲೂ ಸಾವಧಾನದಿಂದಲೂ ಅಟವೀಶ್ವರರು ನೋಡುತ್ತಾ ಕುಳಿತಿದ್ದು)

ಅಟವಿ : ಏನಪ್ಪಾ...?

೧ನೇ : ಏನೂ ಅಂತಾ ಹೇಳೋಣ ಗುರುವೇ? (ದುಗುಡದಲ್ಲಿ)

೨ನೇ : (ಉಸಿರು ಬಿಡುತ್ತಾ) "ಹಣೆಯಲ್ಬರ್ದದ್ಕೆ ಹೊಣ್ಯಾರು?" ಅಂತಾ ಬುದ್ಧಿ. ಎಲ್ಲಾ ಪರಮೇಶನ ಅಂಗೈ ಮೇಲಿನ ರಂಗದಾಟ!

ಅಟವಿ : ಯಾರಪ್ಪಾ ನೀವು?

೧ನೇ : ಸ್ವಾಮಿ ನಾವು ಹಾಸನ ತಾಲ್ಲೋಕಿನ ತೋಟದ ಗದ್ದೆಯವರು. ಇವರು ಕಾಫೀ ತೋಟದ ಸಾಹುಕಾರ ದೇವಪ್ಪಗೌಡರು. ಅಲ್ಲಿಗೆ ಅಗ್ರಗಣ್ಯರೂ, ಪೂಜ್ಯರೂ, ನಿಪುಣರೂ ಆದ ರಾಜರಂಥವರಿಗೆ ಈ ದುಸ್ಥಿತಿ ಬಂದೊದಗಿದೆ ಗುರು. ದುಸ್ಥಿತಿ ಬಂದೊದಗಿದೆ. ಮಾಟದ ಕೆಲಸವೇ ಅಂತ ಪರೀಕ್ಷೆ ಮಾಡಿಸಿಯೂ ಆಯ್ತು. ಇದು ಭೂತ ಚೇಷ್ಟೆಯೇ ಇರಬೇಕು. ನಿಮ್ಮಿಂದಲೇ ಇದು ಪರಿಹಾರವಾಗುತ್ತೆ ಅಂತ ಕೆಲವರು ಹೇಳಿದ್ರು. ಅದಕ್ಕೆ ಸಿದ್ಧಾಚರಣರ ಚರಣಾರವಿಂದಕ್ಕೆ ಬಂದಿದ್ದೇವೆ ಗುರು.

ಅಟವಿ : ಎಲ್ಲವೂ... ಸಿದ್ಧೇಶನ ಲೀಲೆ... ಹೆದರಬೇಡಿರಿ (ಎನ್ನುತ್ತಿರುವಲ್ಲಿ ರುದ್ರಪ್ಪನವರು ಅತ್ತ ಕಡೆಯಿಂದ ಬರುತ್ತಿರಲು ದೇವಪ್ಪಗೌಡರು ಓಡುತ್ತಾ)

ದೇವಪ್ಪ : ಓ... ಅದೋ ನಮ್ಮ ಗುರು ಬರುತ್ತಿದ್ದಾರೆ. (ಆವೇಶದಿಂದ ತಬ್ಬಿಕೊಂಡು) ಗುರುವೇ ನನ್ನನ್ನು ಕಾಪಾಡಿ ಕಾಪಾಡಿ...

(ರುದ್ರಪ್ಪನವರಿಗೆ ಮೈರೋಮಾಂಚನವಾಯಿತು. ಹಾಗೆಯೇ ಸ್ವಲ್ಪ ಹೊತ್ತು ಸ್ತಂಭೀಭೂತರಾಗಿ ನೋಡಲಾರಂಭಿಸಿದರು. ಕೂಡಲೇ ಗೌಡರ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯಲಾರಂಭಿಸಿತು.)

ದೇವಪ್ಪ : ಗುರೂ... ಗುರೂ...!

ರುದ್ರಪ್ಪ : (ಆಶ್ಚರ್ಯದಿಂದ ಕತ್ತು ಹೊರಳಿಸಿ) ಗುರೂ... ಗುರು... ನಾನು (ಕತ್ತಲ್ಲಾಡಿಸುತ್ತಾ) ಇಲ್ಲಾ... ನಾನು... ರುದ್ರಪ್ಪಾ... ರುದ್ರಪ್ಪಾ...!

ದೇವಪ್ಪ : ಹೌದು ನೀವು...ನೀವು... ನಮ್ಮ ಮಿತ್ರ...

ರುದ್ರಪ್ಪ : ನಾನೇ... ನಾನು... ನಿಮ್ಮಿತ್ರಾ...!

ದೇವಪ್ಪ : ಏಕೆ...? ಇನ್ನೂ ತಿಳಿಯಲಿಲ್ಲವೇ? (ನಗುವರು)

ರುದ್ರಪ್ಪ : (ಆಶ್ಚರ್ಯದಿಂದ) ಇಲ್ಲ... ಇಲ್ಲ... ಏನಿದು ವಿಚಿತ್ರ ನಗು? ಏನಿದು ಆಶ್ಚರ್ಯ? "ನೀವು ಹೇಳುವುದು ಕತ್ತೆಗೂ ಕುದುರೆಗೂ ಹತ್ತಪ್ಪ ಸೋದರಮಾವ" ಅಂದ ಹಾಗೆ ಇದೆಯಲ್ಲಾ...

ದೇವಪ್ಪ : (ಮಿಡಿದ ಕಣ್ಣೀರಿಂದ) ಮಿತ್ರಾ... ಮಿತ್ರಾ... ವಿಚಿತ್ರ ನಗುವಲ್ಲ ಸತ್ಯ ಸತ್ವ ನಗು...! ಅದೊಂದು ದಿನ!

ರುದ್ರಪ್ಪ : ಅದೊಂದು ದಿನ... ಏನು?

ದೇವಪ್ಪ : ಅದೋ ಅಲ್ಲಿ ಕಾಣುವ ರಾಮಲಿಂಗನ ಬೆಟ್ಟದಲ್ಲಿರುವ ದೊಡ್ಡ ಸಿದ್ಧಪ್ಪ ಚಿಕ್ಕಸಿದ್ಧಪ್ಪನವರ ಗವಿಗಳಲ್ಲಿ ತಪಸ್ವಿಗಳಾಗಿದ್ದು...! ಗಂಗಾಮಾತೆಯನ್ನು ವರ್ಣಿಸಿದಾಗ...!

ರುದ್ರಪ್ಪ : ಏನಾಯ್ತು?

ದೇವಪ್ಪ : ಆಗಲೇ ಮರೆತುಬಿಟ್ಯಾ... ಮಿತ್ರಾ... ನನ್ನನ್ನು (ತೊಡರಿಸುತ್ತಾ) ದೈತ್ಯನಾಗುವಂತೆ ಗಂಗೆ ಶಪಿಸಲಿಲ್ಲವೇ? ಅದರ ಪರಿಹಾರವನ್ನು ಬೇಡಿದಾಗ...!

ರುದ್ರಪ್ಪ : ಏನಾಯ್ತು?

ದೇವಪ್ಪ : ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಿನ್ನನ್ನು ಸಂಧಿಸಿದಾಗ ಶಾಪ ವಿಮೋಚನೆಯಾಗುತ್ತದೆಂದು ಹೇಳಲಿಲ್ಲವೇ? ಜ್ಞಾಪಕ ಬಂತೇ? ಪೂರ್ವ ಜನ್ಮದ ಋಷಿಸ್ಥಾನ; ಮರೆತುಹೋಯ್ತೇ? ಬನ್ನಿ... ಬನ್ನಿ... ನನ್ನಾತ್ಮ ಜ್ಯೋತಿಯನ್ನು ನಂದಾದೀವಿಗೆಯಂತೆ ಮಾಡಿ.

(ಹಾಗೆಯೇ ರುದ್ರಪ್ಪ ಸ್ವಲ್ಪಹೊತ್ತು ನೆಟ್ಟ ದೃಷ್ಟಿಯಲ್ಲಿ ಕಣ್ಣೀರು ಸುರಿ ಸುತ್ತಾ ಕಣ್ಮುಚ್ಚಿ)

ರುದ್ರಪ್ಪ : (ಸ್ವಗತ) "ಅರಿತಡೆ ಶರಣ ಮರೆತಡೆ ಮಾನವ" ಇದು ಸಿದ್ಧ ಪುರುಷನು ಹೇಳಿದ ಮಾತು, ಮಿತ್ರಾ... ಮಿತ್ರಾ...

(ಇಬ್ಬರೂ ಆನಂದ ಭಾಷ್ಪದಿಂದ ಆಲಂಗಿಸಿಕೊಂಡು ಶಿರಬಾಗಿ ಶರಣೆಂದರು)

ದೇವರು ಇದನ್ನೆಲ್ಲಾ ಹಿಂದೆಯೇ ನಿರ್ಮಿಸಿದ್ದು, ನೀನು ಇಂದು ನನ್ನನ್ನು ಈ ಸಾಮಾನ್ಯ ಮಾನವ ಜನ್ಮದಿಂದ ಹಿಂದಿನ ಋಷಿ ಜನ್ಮಕ್ಕೆ ತಂದಿಳಿಸಿದೆ.

ದೇವಪ್ಪ : ನನ್ನ ಈ ಪಿಶಾಚತ್ವವನ್ನು ಕಳೆಯಬೇಕಾದರೂ ನೀವೇ ಕಾರಣರಲ್ಲವೇ ರುದ್ರಪ್ಪನವರೇ?

ರುದ್ರಪ್ಪ : ಹೌದು ದೇವಪ್ಪಗೌಡರೆ ನೀವಿನ್ನು ಸುಖ-ಸಂತೋಷದಿಂದ ತೆರಳಬಹುದು.

ದೇವಪ್ಪ : ಚಿತ್ತ.

(ಹೊರಡುವಾಗ)

ತಪಸ್ವಿ : ಇದಕ್ಕೆಲ್ಲಾ ದೇವರ ದಯೆ ಇದ್ದೇ ಇರುತ್ತದೆ.

(ಮೂವರೂ ಹೋಗಿ ಅಟವೀ ಸ್ವಾಮಿಗಳ ಪಾದಕ್ಕೆ ಬೀಳುವರು. ಎಲ್ಲರನ್ನೂ ಈಕ್ಷಿಸುತ್ತಿದ್ದು ಮೈದಡವಿ ಮೇಲೆತ್ತಿ)

ಅಟವಿ : ಏಳಿ... ಏಳಿ ಮೇಲೇಳಿ ಶರಣರೇ ನೀವಿಬ್ಬರೂ ಸಾಮಾನ್ಯರಲ್ಲ ವಿಭೂತಿ ಪುರುಷರುಗಳು.

(ಆನಂದಬಾಷ್ಪ ಉಕ್ಕುವುದು)

ರುದ್ರಪ್ಪ : ಏಕೆ ಗುರುಗಳೇ ಈ ಕಣ್ಣೀರು?

ಅಟವಿ : ರುದ್ರಪ್ಪಾ ಇದು ಕಣ್ಣೀರಲ್ಲಾ ಆನಂದಬಾಷ್ಪ. (ಗಂಭೀರ ಧ್ವನಿಯಲ್ಲಿ) ರುದ್ರಪ್ಪಾ... ನಿನ್ನಲ್ಲಿ ಒಳ್ಳೆಯ ನಿಷ್ಠೆ, ಆತ್ಮ ತೇಜಸ್ಸು, ಪಟುತರಹದ ಕಾರ್ಯತತ್ಪರತೆ, ಸಾಧನಾಶಕ್ತಿ, ಸರಳ ಆದರ್ಶ ಜೀವನ, ಸರ್ವ ಸಮತಾಭಾವ, ಕ್ರಿಯಾಸಿದ್ಧಿ, ಸ್ವಾರ್ಥ ತ್ಯಾಗಗಳಿದ್ದುದನ್ನು ನೋಡಿ... ನೀನು ಅಸಾಮಾನ್ಯ ಪುರುಷನೆಂದು ಮುಖ ಮುದ್ರೆಯಿಂದಲೇ ಅಂದೇ ಅರಿತಿದ್ದೆ, ಆದರೆ ಇಂದು ಸತ್ಯಾಸತ್ಯಗಳನ್ನು ಕಣ್ಣಾರೆ ನೋಡಿ ಕಿವಿಯಾರೆ ಕೇಳಿ ನನ್ನ ಆನಂದಕ್ಕೆ ಪಾರವೇ ಇಲ್ಲವಾಗಿದೆ. ಇಂದಿನಿಂದ ನೀನು ರುದ್ರಪ್ಪನಲ್ಲಾ ರುದ್ರಪ್ಪಾ... ಉದ್ದಾನ ಶಿವಯೋಗಿ... ಉದ್ದಾನ ಶಿವಯೋಗಿ...

ರುದ್ರಪ್ಪ : ಗುರುವೇ ನನ್ನ ಕೊರಳನ್ನು ವಜ್ರದಿಂದ ಕೊಯ್ಯಲು ಪ್ರಯತ್ನಿಸುತ್ತಿರುವಿರಿ.

ಅಟವಿ : ಕೊರಳಿಗೆ ಹೂಮಾಲೆ ಹಾಕಲು ಪ್ರಯತ್ನಿಸುತ್ತಿರುವೆ ಅಷ್ಟೆ ಉದ್ದಾನಪ್ಪಾ...

ರುದ್ರಪ್ಪ : ಗುರುವೇ ಸರ್ವೇ ಸಾಮಾನ್ಯ ಕುರಿಕಾಯುತ್ತಿದ್ದ ಕುಳ್ಳನಿಗೆ ಉದ್ದಾನನೆಂಬ ಹೆಸರು ಸಲ್ಲದು. ಇದು ತುಟಿ ಅಂಚು ಮೀರಿದ ಮಾತು.

ಅಟವಿ : ಉದ್ದಾನನೆಂದರೆ ನಿನ್ನ ಉದ್ದದ ಅಳತೆಯಲ್ಲ. ನಿನ್ನ ದಿವ್ಯಶಕ್ತಿಯ ಭವ್ಯ ಭಕ್ತಿಯ ಅಳತೆ. ಸಾಧನೆಯಿಂದ ಮೂಢನೂ ಹಿರಿಯನಾಗ ಬಹುದು.

ರುದ್ರಪ್ಪ : (ಕಣ್ಣೀರಿಂದ) ಗುರುವೆ ನನ್ನನ್ನು ಕ್ಷಮಿಸಿಬಿಡಿ ನನ್ನನ್ನು ಕ್ಷಮಿಸಿಬಿಡಿ.

(ಕಾಲ್ಮೇಲೆ ಬೀಳುವರು)

ಅಟವಿ : ಕ್ಷಮಿಸಲು ನೀನೇನೂ ತಪ್ಪು ಮಾಡಿಲ್ಲವಲ್ಲಾ ಉದ್ದಾನಪ್ಪಾ. ನಾನು ನಿರಂಜನ ಗಣೇಶ್ವರರಾದ ಗೋಸಲ ಸಿದ್ಧೇಶ್ವರ, ಚೆನ್ನಬಸವೇಶ್ವರ, ತೋಂಟದ ಸಿದ್ಧಲಿಂಗೇಶ್ವರ, ರುದ್ರಸ್ವಾಮಿಗಳು, ಸಿದ್ಧಲಿಂಗಸ್ವಾಮಿಗಳ ಪರಂಪರೆಯಿಂದ ಬಂದ ಪೀಠವನ್ನು ನಿನಗೊಪ್ಪಿಸಲು ಸ್ವಾಗತಿಸುತ್ತಿ ರುವೆ. ಉತ್ತರದೇಶದಿಂದ ಬಂದ ನಾನು ಧರ್ಮ ಮತ್ತು ವರದಾ ನದಿಗಳ ಸಂಗಮದಲ್ಲಿ ಶ್ರೀ ಗುರುನಂಜೇಶ್ವರರ ಗದ್ದುಗೆಯಲ್ಲಿ ಅನುಷ್ಠಾನವನ್ನು ಅವಿಚ್ಛಿನ್ನವಾಗಿ ನಡೆಸುತ್ತಿದ್ದು, ಅಲ್ಲಿಂದ ಗುಬ್ಬಿಗೆ ಬಂದು, ಈಗ ಇಲ್ಲಿ ಸೇವೆ ಸಲ್ಲಿಸುತ್ತಿರುವೆ. ನನಗೂ ಮುದಿತನವು ಮುಚ್ಚಿದೆ. ನನಗೆ ಶಿವೈಕ್ಯವಾಗುವ ಕಾಲವೂ ಸನ್ನಿಹಿತವಾಗಿದೆ, ನಮ್ಮ ಪೀಠಕ್ಕೆ ಯೋಗ್ಯವಾದವರಿಗಾಗಿ ಕಾಯುತ್ತಿದ್ದೆ, ಅದು ಇಂದು ಫಲಿಸಿತು... ಇದಕ್ಕೆ ನೀನು ಒಪ್ಪಿಕೊಳ್ಳಲೇಬೇಕು.

ರುದ್ರಪ್ಪ : ಗುರುವೇ ತಾವು ಹೊರಿಸುತ್ತಿರುವುದು ಸಿದ್ಧಗಂಗೆ ಬೆಟ್ಟವೋ ಏನೋ?

ಅಟವಿ : ತೊಟ್ಟಿಗೆ ಕಾಯಿ ಭಾರವೇ ರುದ್ರಪ್ಪಾ?

ರುದ್ರಪ್ಪ : ತಿಳಿದಂತಹ ಮಹಾ ಯೋಗಿಗಳಲ್ಲಿ ಏನು ಹೇಳಬೇಕೆಂಬುದೇ ತೋಚುತ್ತಿಲ್ಲ. ಚಿತ್ತವೇ ಶೂನ್ಯವಾಗಿದೆ ಗುರು.

ಅಟವಿ : ಹೇಳಿದಂತೆ ಕೇಳಿದರೆ ಸರಿಹೋಗುತ್ತದೆ.

ರುದ್ರಪ್ಪ : ನನಗೂ ಸಂಸಾರದಲ್ಲಿ ತೇಲಿ ಮುಳುಗುವ ವ್ಯಾಮೋಹವಿಲ್ಲ. ವಯೋವೃದ್ಧರೂ, ಆಶ್ರಮವಾಸಿಗಳೂ, ಪೂಜ್ಯರೂ ಆದ ತಾವು ಹೇಳಿದುದಕ್ಕೆ ಸಾಮಾನ್ಯನುತ್ತರ ಒಪ್ಪಿಗೆಯೇ...

ಅಟವಿ : ಹಾಗೆ ಬಾರಪ್ಪಾ ದಾರಿಗೆ...

ರುದ್ರಪ್ಪ : ಅಂದ ಹಾಗೆ ಎಲ್ಲವೂ ಸಿದ್ಧಲಿಂಗನಿಚ್ಛೆ, ಅದನ್ನು ನಾನು ತಪ್ಪಿಸಿಕೊಳ್ಳುವುದೆಂದರೆ ಸಾಧ್ಯವೇ ಗುರು?

ಅಟವಿ : (ಸಂತೋಷದ ಭರದಲ್ಲಿ) ನಾಳೆಯೇ ನಿನಗೆ ಪಟ್ಟ. ದಿವ್ಯ ಗುರುಗಳ ಪರಂಪರೆಯಿಂದ ಪರಂಜ್ಯೋತಿಯಂತೆ, ಬೆಳಗಿಬಂದ ಈ ಪೀಠಾಲಂಕಾರ ಮಾಡಿಸುತ್ತೇನೆ. ಅದಕ್ಕೆ ಸರ್ವರೂ ಒಪ್ಪಿಯೇ ಒಪ್ಪುವರು.

ರುದ್ರಪ್ಪ : ಚಿತ್ತ ಗುರು.

(ಶಿರಬಾಗಿ ನಮಸ್ಕರಿಸುವರು)

* * *

## ದೃಶ್ಯ-೮

(ರಸ್ತೆಯಲ್ಲಿ ಕುತಂತ್ರಿಗಳಾದ ಕೆಂಚಣ್ಣ, ಬಸವಣ್ಣರು ಕುಳಿತು ಮಾತಾಡುತ್ತಿದ್ದಾರೆ)

ಕೆಂಚಣ್ಣ : ಇದೇ ಸರಿಯಾದ ಸಮಯ.

ಬಸವಣ್ಣ : ಕತ್ತಲೆಯಾಗಿದೆ ಕಳೋಣಾ ಅಂತ್ಲೋ? ಅರಮನೆ ಸೊತ್ತು ಗುರುಮನೆ ಸೊತ್ತು ತಿಂದವ್ರು ಇದುವರ್ಗ್ಯೂ ಯಾರುತಾನೇ ಉದ್ಧಾರವಾಗಿದ್ದಾರೆ. ಬೆರಳು ಮಡಿಸು ನೋಡೋಣ, ಅದಕ್ಕೆ ಆಸೆಪಟ್ರೆ ಸರ್ವಸ್ವವೂ ನಾಶಕಣ್ಲಾ ಕೆಂಚ.

ಕೆಂಚಣ್ಣ : ನೀನು ಹಿಂದಿನ ಕಾಲದಂತೆ ಮಾತಾಡ್ತಾ ಇದ್ದೀಯೆ ಅಂತಾ ತೋರುತ್ತೆ. ಅಟವೀ ಸ್ವಾಮಿಗಳು ಖಾಯಿಲೆಯಲ್ಲಿದ್ದಾರೆ. ಆ ಉದ್ದಾನನು ಮೆರೆಯುತ್ತಿದ್ದಾನೆ...

ಬಸವಣ್ಣ : ಅದ್ಕೆ ಹಾಲು ತೆಗೆದುಕೊಂಡು ಹೋಗೋಣ್ವೇ?

ಕೆಂಚಣ್ಣ : ಈಗ ಮೊದ್ಲು ನಾನು ತಿಂದು ಕುಡಿದು ತಂಪು ಮಾಡಿಕೊಂಡು ಹೊಟ್ಟೆಯುರೀನ ಆರಿಸಿಕೊಳ್ಬೇಕು. ಆ ಕುರಿಕಾಯೋ ಉದ್ದಾನನನ್ನು ನೋಡಿದರೆ... ಕಣ್ಣುಗಳಲ್ಲಿ ರಕ್ತ ಕಾರುತ್ತದೆ. ಬೇಕಾದ್ರೆ ಅವರಿಗೂ ಹಾಲು ಹಣ್ಣು ತೆಗೆದುಕೊಂಡು ಹೋದರಾಯಿತು.

ಬಸವಣ್ಣ : ಆಮೇಲೇನ್ಮಾಡ್ಬೇಕು ಅಂತಿದ್ದೀಯೆ?

ಕೆಂಚಣ್ಣ : ಈಗ ನಾನೊಂದು ತಂತ್ರ ಹೂಡಿದ್ದೀನಿ.

ಬಸವಣ್ಣ : ಆ ಕೆಲ್ಸ ಎಂದ್ಗೂ ಶ್ರೇಯಸ್ಸಲ್ಲ. ಕೆಂಚಣ್ಣ (ಜೋರಾಗಿ) ಎಂದಿಗೂ ಶ್ರೇಯಸ್ಸೆಂದು ತಿಳಿದುಕೊಳ್ಳಬೇಡ...

ಕೆಂಚಣ್ಣ : (ಉರಿತದಲ್ಲಿ) ಬಸವಣ್ಣ ನಿನಗರ್ಥವಾಗೋದಿಲ್ಲ...

ಬಸವಣ್ಣ : ಅದೇನು ಹೇಳು ಕೆಂಚಣ್ಣಾ ಕೊಂಚ?

ಕೆಂಚಣ್ಣ : ಹಾಗ್ಬಾ ಮತ್ತೆ... ನೀನು ಬಾ... ನಾನೆಲ್ಲ ಮಾಡ್ತೇನೆ.

ಬಸವಣ್ಣ : ಅಯ್ಯೋ ನಾಶವಾಗ್ಬಿಡ್ತೀಯಲ್ಲಾ...

ಕೆಂಚಣ್ಣ : ಅಯ್ಯೋ ಪಿಷ್ಟವೇ ಹೋಗು.

ಬಸವಣ್ಣ : ಏ ಕೋಪಿಷ್ಟಾ... ಸುಮ್ನಿರು ಕೇವಲ ನಿಮಿಷ ಮಾತ್ರದ ಇಹಲೋಕದ ಸುಖಕ್ಕೋಸ್ಕರ ಈವತ್ತು ಮೋಸ ಮಾಡಬೋದು. ಆದರೆ ಅದು ಮುಂದೆ ಶ್ರೇಯಸ್ಸಾಗೋಲ್ಲ ಕಣೋ, ಇದುವರೆವಿಗೆ ಅರಮನೆಯ ಗುರುಮನೆಯ ಸೊತ್ತ ತಿಂದು ದಕ್ಕಿಸಿಕೊಂಡವ್ರು ಯಾರೂ ಇಲ್ಲ.

ಕೆಂಚಣ್ಣ : ಹಲ್ಲುಗಳು ಸವೆಯುವ ತನಕ ಅಗಿದು ಜಗಿದು, ಗಂಟಲು ಮುಚ್ಚುವವರೆಗೂ ತಿಂದು ತೇಗೋ ಕೆಂಚಣ್ಣನೇ ಇಲ್ಲಿರುವಾಗ ಇನ್ನ್ಯಾರುಬೇಕು ಹೇಳು? ನಿನಗೇಕೆ

ಭಯ ಬಸವಣ್ಣ? ಬಾ ನನ್ನ ಜೊತೆಯಲ್ಲಿ ಆ ಲೀಲಾಮಯ ಆಟಗಳನ್ನು ಕುಡಿಗಣ್ಣಿನಲ್ಲಿ ನೋಡುವೆಯಂತೆ.

ಬಸವಣ್ಣ : ನನ್ಗೇಕೆ ಆ ಪಾಪ?

ಕೆಂಚಣ್ಣ : ಅಯ್ಯೋ ಪಾಪಿ ನಡೆ ನಡೆ... ನೀನೂ ಒಬ್ಬ ಗಂಡ್ಸಯ್ಯಾ?

ಬಸವಣ್ಣ : ನಿನ್ಜೊತೆ ಬಂದ್ರೆ ಮೀಸೆಹೊತ್ತ ಗಂಡಸು ಅನ್ತೀಯಾ ಅಲ್ವಾ?

ಕೆಂಚಣ್ಣ : ಧೈರ್ಯಲಕ್ಷ್ಮಿ ಇರ್ಬೇಕಯ್ಯಾ.

ಬಸವಣ್ಣ : ಮೋಸ ಮಾಡುವ ಮನಸ್ಸಿದ್ದರೆ ಒಂದಲ್ಲಾ ಒಂದು ದಿನ ಬಯಲಿಗೆ ಬಂದೇ ಬರುತ್ತೆ.

ಕೆಂಚಣ್ಣ : ಆಗ ಬಯ್ಲಾಟ ಆಡಿದ್ರಾಯ್ತು.

ಬಸವಣ್ಣ : ಮಾನ ಬಿಟ್ರೆ, ಯಾತಕ್ಕೋ, ಬಯಲಲ್ಲಿ ಕುಣಿದೇ ಏನು ಮಾಡ್ತೀಯಾ ಹೇಳು

ಕೆಂಚಣ್ಣ : ಈ ಕೆಂಚಣ್ಣ ಇರೋತನಕ ನಿನಗೇಕೆ ಭಯ? ಬಸವಾ... ಬಾ...

ಬಸವಣ್ಣ : ಅದ್ಕೇ ನೋಡು ಹೇಳೋದು "ಸಹವಾಸ್ದಂತೆ ಬುದ್ಧಿ" ಅಂತಾ...

ಕೆಂಚಣ್ಣ : ನೀನು ಸಾಚಾ ಅನ್ನಪ್ಪಾ.

ಬಸವಣ್ಣ : ಅದನ್ನು ಬಾಯ್ತೊಳ್ಕೊಂಡು ಮಾತಾಡ್ಬೇಕು ಕಣಯ್ಯಾ.

ಕೆಂಚಣ್ಣ : ಬಾಯೆಂದರೆ ಒಂದು ನರಕ. ರಕ್ತ ಮಾಂಸ ಕೀವು ಜೊಲ್ಲುತುಂಬಿದ ಒಂದು ಚೀಲ ಅದನ್ನು ಶುದ್ಧಿಮಾಡಿಯೇನು.

ಬಸವಣ್ಣ : ಏನೋ ಅಪ್ಪಾ ನನ್ಗೊಂದೂ ತೋಚಲ್ಲ.

ಕೆಂಚಣ್ಣ : ಬಾ... ಬಾ... ಸಿದ್ಧಗಂಗೆಗೆ ಮೊದ್ಲು ಹೋಗೋಣ. ಅಲ್ಲಿ ನಾವೇನ್ಮಾಡ್ಬೇಕು ಅದನ್ಮಾಡ್ತೇನೇ... ನೀನು ನನ್ನ ಹಿಂದೆ ಇರು...

ಬಸವಣ್ಣ : ಆಗಬಹುದು ನಡೆಯಪ್ಪಾ....

(ಇಬ್ಬರೂ ಹೊರಡುವರು)

## ದೃಶ್ಯ-೯

(ಅಟವಿ ಸ್ವಾಮಿಗಳು ಖಾಯಿಲೆಯಿಂದ ಹಾಸಿಗೆ ಹಿಡಿದಿರಲು ಉದ್ದಾನ ಶಿವಯೋಗಿಗಳು ಉಪಚರಿಸುತ್ತಿದ್ದಾರೆ)

ಅಟವಿ : ಬೇಡ ಉದ್ದಾನಪ್ಪ, ಏಕೆ ಕಹಿ ಕಷಾಯವನ್ನು, ಹಾಲನ್ನು ಹುತ್ತಕ್ಕೆ ಹೊಯ್ದಂತೆ ಹೊಯ್ಯುತ್ತಿರುವೆ?

ಉದ್ದಾನ : ಹಾಗೆಲ್ಲಾ ಅನ್ಬೇಡಿ ಗುರು, "ಕುಡಿದೌಷಧವು ಬಾಯಿಗೆ ಕಹಿಯಾದರೂ ಒಡಲಿಗೆ ಸುಖವನ್ನೀಯವುದು".

ಅಟವಿ : ಸ್ವಲ್ಪ ನೀರು ತಾ ಉದ್ದಾನಪ್ಪಾ...

ಉದ್ದಾನ : ಆಗ್ಲಿ ಗುರುಗಳೇ...

(ಹೊರಡುವರು ಅಷ್ಟು ಹೊತ್ತಿಗೆ ಕೆಂಚಣ್ಣ ಬಸವಣ್ಣರು ಬಂದು)

ಕೆಂಚಣ್ಣ : ಸ್ವಾಮೀ...

(ಇಬ್ಬರೂ ನಮಸ್ಕರಿಸುವರು)

ಅಟವಿ : (ತೊದಲಿಸುತ್ತಾ) ಯಾರಪ್ಪಾ... ನೀವು?

ಕೆಂಚಣ್ಣ : ನಾವು ತೊಟ್ಟಲಕೆರೆಯ ಸಿದ್ಧಗಂಗಾ ಮಠದವರು. ನಾನು ಕೆಂಚಣ್ಣ ಇವ್ನು ಬಸವಣ್ಣ.

ಅಟವಿ : ಬಂದ ಉದ್ದೇಶ...?

ಕೆಂಚಣ್ಣ : ಒಂದು ಮುಖ್ಯವಾದ ವಿಷಯ ತಮ್ಮ ಹತ್ತಿರ ಮಾತಾಡಬೇಕಿತ್ತು (ಅತ್ತಿತ್ತ ನೋಡಿ) ಅದ್ಕೆ ಬಂದೆವು... ಅಯ್ಯೋ ಗುರುಗಳಿಗೆ ಇಂಥ ದುಸ್ಥಿತಿ ಬರಬಾರ್ದಾಗಿತ್ತು.

(ಅಳುವಂತೆ ನಟಿಸುವರು)

ಅಟವಿ : ಏಕಪ್ಪಾ ಯೋಚಿಸುತ್ತೀ? "ಹುಟ್ಟಿದವನು ಸಾಯಲೇಬೇಕು. ಸತ್ತವನು ಹುಟ್ಟಲೇಬೇಕು" ಇದು ಜೀವಿಯ ಚಕ್ರ ಬದಲಾವಣೆ...

ಕೆಂಚಣ್ಣ : ಗುರು ಇದರಲ್ಲಿ ಮೋಸವಿದೆ.

ಅಟವಿ : ಏನು ಮೋಸವಪ್ಪಾ...?

ಕೆಂಚಣ್ಣ : ಗುರುವೇ... (ಹಲ್ಮುಡಿ ಕಚ್ಚಿ) ಆ ಉದ್ದಾನಪ್ಪನನ್ನೇಕೆ ನಿಮ್ಮ ಮಠದ ಹೊಸಲನ್ನು ಹತ್ತಿಸಿದಿರಿ....? ನಿಮ್ಮ ಪ್ರಾಣಾಪಾಯಕ್ಕೆ ಆತನೇ ಕಾರಣ. ಆತ ಸಾಮಾನ್ಯನಲ್ಲ. ಭೋಗದ ಆಸೆಗೋಸ್ಕರ ತಾನು ಕಲಿತ ಮಾಟವನ್ನು ಪ್ರಯೋಗಿಸಿದ್ದಾನೆ... ತಾವು ಬೇಗನೆ ಶಿವಾ... ಧೀ...ನ ರಾದರೆ ತಾನೇ ಮಠಾಧಿಪತಿಯಾಗಿ ಸುಖವನ್ನು ಅನುಭೋಗಿಸ ಬಹುದೆಂದು ಮಾಡಿದ್ದಾನೆ.

ಪ್ರತಿಧ್ವನಿ : ಆ ಉದ್ದಾನಪ್ಪನನ್ನೇಕೆ ನಿಮ್ಮ ಮಠದ ಹೊಸಲು ಹತ್ತಿಸಿದಿರಿ? ನಿಮ್ಮ ಪ್ರಾಣಾಪಾಯಕ್ಕೆ ಆತನೇ ಕಾರಣ. ಆತ ಸಾಮಾನ್ಯನಲ್ಲ... ಭೋಗದ ಆಸೆಗೋಸ್ಕರ ತಾನು ಕಲಿತ ಮಾಟವನ್ನು ಪ್ರಯೋಗಿಸಿದ್ದಾನೆ. ತಾವು ಬೇಗನೆ ಶಿವಾಧೀನರಾದರೆ ತಾನೇ ಮಠಾಧಿಪತಿಯಾಗಿ ಸುಖವನ್ನು ಅನುಭೋಗಿಸಬಹುದೆಂದು ಮಾಡಿದ್ದಾನೆ.

ಅಟವೀ : ಇಲ್ಲಾ... ಇಲ್ಲಾ... ನೀವು ನಡೆಯಿರಿ ಇಲ್ಲಿಂದ.

(ಅಟವೀ ಸ್ವಾಮಿಗಳು ಮೇಲೆದ್ದು ಬೀಳುತ್ತಿರಲು ಉದ್ದಾನಪ್ಪನವರು ಬಂದು ಹಿಡಿದು)

ಉದ್ದಾನ : ಗುರುವೇ... ಗುರುವೇ...

ಅಟವೀ : ಉದ್ದಾನಪ್ಪಾ... ಉದ್ದಾನಪ್ಪಾ!

(ಉದ್ದಾನಪ್ಪನವರು ಒಂದು ದೃಷ್ಟಿಯನ್ನು ಬೀರಿ)

ಉದ್ದಾನ : ಪಿಸುಣರೇ... ಅವಿವೇಕಿಗಳೇ ನಿಲ್ಲಿ... ನಾನೇನು ನಿಮ್ಮ ಕರೆವ ಎಮ್ಮೆ ಕಣ್ಣು ಚುಚ್ಚಿರುವೆ? ನೀವೇ ನಮ್ಮ ಗುರುವಿಗೆ ಮಾಟವನ್ನು ಮಾಡಿಸಿ ನನ್ನ ಮೇಲೆಳೆದು ಗುರುಶಿಷ್ಯರ ಮಾತಾ ಸಂಬಂಧವನ್ನು ತಪ್ಪಿಸಲು ಬಂದಿದ್ದೀರಾ? (ಅತ್ತ ತಿರುಗಿ) ಗುರುವೇ... ಗುರುವೇ...

ಅಟವೀ : ನೀನು ಯೋಚಿಸಬೇಡ... ಉದ್ದಾನಪ್ಪ...

ಉದ್ದಾನ : ಇಲ್ಲಾ ಗುರು ಇದನ್ನು ಪ್ರಯೋಗದ ರೂಪದಲ್ಲಿ ಸಾಧಿಸಬೇಕು...

ಅಟವೀ : ಕ್ರೂರಿಗಳೇ... ಹೊರಡಿ ಇಲ್ಲಿಂದ... ಈ ಕೃತ್ಯಕ್ಕೆ ಎಷ್ಟು ದಿನದಿಂದ ಹೊಂಚು ಹಾಕುತ್ತಾ ಕುಳಿತಿದ್ದಿರಿ...

ಕೆಂಚಣ್ಣ : ಲೇ ರುದ್ರಪ್ಪಾ... ನಿನ್ನ ಬೇಳೆಕಾಳು ನನ್ನಲ್ಲಿ ಬೇಯುವುದಿಲ್ಲ ಅಂತ ತಿಳಿ. ನಿಜಗಲ್ಲಿನ ಬೆಟ್ಟದಲ್ಲಿ ಕುರಿ ಕಾಯುತ್ತಿದ್ದ ನಿನಗೆಷ್ಟು ಕೊಬ್ಬು ಬಂತು ಈಗ.

ಉದ್ದಾನ : ಅವಿವೇಕಿ...

ಕೆಂಚಣ್ಣ : ಏನೂ ಅರಿಯದ ಮುದಿಯರೆದುರು ಈ ಪ್ರಯತ್ನ ಹಚ್ಚಿ ನಿನ್ನ ಕೀಳು ವಿದ್ಯೆಯನ್ನು ತೋರಲು ಬಂದೆಯಾ? ನೀನೇ ಮಾಡಿ ನಮ್ಮ ಮೇಲೆಳೆಯಬೇಕೆಂದಿರುವೆಯಾ? ಇದಕ್ಕೆ ಉದ್ದಾನಪ್ಪನೆಂಬ ಹೆಸರು ಬೇರೆ ಕೇಡು ನಿನಗೆ...

ಅಟವಿ : ನೀವೂ ತೊಲಗಿರಿ ಆಚೆ...!

ಕೆಂಚಣ್ಣ : ಹಾರಿಹೋಗಲು ನಾನೇನು ತರಗೆಲೆಯಲ್ಲಾ... ಸಾಧನೆ ನಡೆಸಲು ಬಂದಿರುವೆ.

ಉದ್ದಾನ : ಸಾಧನೆ ನೋಡುತ್ತಿರು...

ಕೆಂಚಣ್ಣ : ನೋಡಲಿಕ್ಕಲ್ಲವೇ ಬಂದಿರುವುದು.

ಉದ್ದಾನ : ಅನುಭೋಗಿಸುವವನು ಯಾರೆಂಬುದನ್ನು ನೋಡುತ್ತಿರು. 'ವಿನಾಶಕ್ಕೆ ವಿಕಾರ ಬುದ್ಧಿ' ಯಾವ ವಿಪರೀತಕ್ಕೋ ನಾಕಾಣೆ.

ಕೆಂಚಣ್ಣ : ಮಾಟವನ್ನು ತೋರುತ್ತೀಯೋ?

ಉದ್ದಾನ : ಮಾಡಿಸಿದ ಮಾಟವನ್ನು ಹಿಂದಕ್ಕೊಪ್ಪಿಸುವೆ.

([illegible] ಕೀಳಲು, ಆತನ ಕಾಲುಗಳು ಹಿಡಿದು ಕುಸಿಯುವುವು)

ಕೆಂಚಣ್ಣ : ಸ್ವಾಮಿೂ... ಉದ್ದಾನಪ್ಪಾ... ನನ್ನನ್ನು ಕ್ಷಮಿಸಿಬಿಡು... ಸ್ವಾಮಿ... ಉದ್ದಾನಪ್ಪಾ...

ಅಟವಿ : ಏನೇನೋ ಹರಟುತ್ತಿದ್ದೆ... ಮಾಡಿದ ತಪ್ಪಿಗೆ ಅನುಭೋಗಿಸು...

ಕೆಂಚಣ್ಣ : ಗುರುವೇ...

ಅಟವಿ : ಅವರನ್ನೇ ಪ್ರಾರ್ಥಿಸು.

ಕೆಂಚಣ್ಣ : ಗುರುವೇ... ಉದ್ದಾನಪ್ಪನವರೇ ಕ್ಷಮಿಸಿ.

ಉದ್ದಾನ : ಇನ್ನಾದರೂ ಈ ಅಲ್ಪ ಕಾರ್ಯಕ್ಕೆ ಕೈ ಹಾಕಬೇಡಿ ತೊಲಗಿ ಆಚೆ.

(ನಮಸ್ಕರಿಸಿ ಇಬ್ಬರೂ ಓಡುವರು)

ಅಟವಿ : ನೋಡಿದೆಯಾ ಉದ್ದಾನಪ್ಪಾ... ನಾನಿನ್ನು ಬರುವೆ. ನಾನು ಹೇಳಿದು ದನ್ನೆಲ್ಲಾ ಜ್ಞಾಪಕದಲ್ಲಿಟ್ಟುಕೋ...

ಉದ್ದಾನ : ಗುರುವೇ... ಗುರುವೇ... (ಚೀರುವರು)

(ಮತ್ತೆ ಹತ್ತಿರಕ್ಕೆ ಬಂದ ಕೆಂಚಣ್ಣ)

ಕೆಂಚಣ್ಣ : ಗುರುವೇ ನಿಮ್ಮ ಅಂತ್ಯಕ್ರಿಯೆಯನ್ನು ನಮ್ಮ ತೊಟ್ಟಿಲ ಕೆರೆಯಲ್ಲೇ ಮಾಡಬೇಕೆಂದಿರುವೆ.

ಉದ್ದಾನ : ಅದು ಸಾಧ್ಯವಿಲ್ಲ... ಶ್ರೀ ಸಿದ್ಧಗಂಗಾ ಸಾನಿಧ್ಯದಲ್ಲೇ ನಡೆಯಬೇಕು.

ಕೆಂಚಣ್ಣ : ಇಲ್ಲ... ನನ್ನ ಛಲವೇ ಸಾಧಿಸಬೇಕು.

ಅಟವಿ : ಮಣ್ಣಾಗುವೀ ದೇಹವನ್ನು ಅಲ್ಲಿ ಹಾಕಿದರೇನು? ಇಲ್ಲಿ ಹಾಕಿದರೇನು? ಇಲ್ಲೇ ಗಂಗೆಯ ಸಾನಿಧ್ಯದಲ್ಲಿಯೇ ನಡೆಯಲಿ.

ಕೆಂಚಣ್ಣ : ಖಂಡಿತ ಸಾಧ್ಯವಿಲ್ಲ. ನೀವು ಮೊದಲು ಸ್ಥಾಪಿಸಿದ ಜಾಗದಲ್ಲೇ ನಡೆಸುವೆ. ಇದು ನಿಮ್ಮ ಮೇಲಾಣೆ. ಇದೇ ನನ್ನ ಕೊನೆಯ ಸಂಕಲ್ಪ!

ಅಟವಿ : ಅಯ್ಯೋ... ಯೋಚಿಸಬೇಡ ಉದ್ದಾನಪ್ಪ... ಬಾ ಇತ್ತ

(ಎಂದು ಅವನ ಮೈದಡವಿ)

"ನೆನೆದವರ ಮನೆಯಲ್ಲಿ ಸದಾ ನಾನಿರುವೆ" ನನ್ನೀ ಗೆದ್ದಲು ತಿನ್ನುವ ಮುದಿ ದೇಹಕ್ಕೇಕೆ ಕಚ್ಚಾಡಬೇಕು, ದೈವೇಚ್ಛೆಯಿದ್ದಂತಾಗಲಿ.

ಉದ್ದಾನ : ಆಗದು ಗುರು...

ಕೆಂಚಣ್ಣ : ಉದ್ದಾನಪ್ಪಾ... ನೀನು ಹೇಳಿದಂತೆ ನಾವು ಕೇಳಲು ಬಂದಿಲ್ಲ... ನಮ್ಮ ಮಠದ ಗುರುಗಳನ್ನು ನಮ್ಮ ಊರಿಗೆ ಕರೆದೊಯ್ಯಲು ಬಂದಿರುವುದು.

ಅಟವಿ : ಈ ಪ್ರಚಂಡತನ ಸಲ್ಲದು.

ಕೆಂಚಣ್ಣ : ಇದು ದೈವೇಚ್ಛೆ. ನಮ್ಮ ಸೊತ್ತನ್ನು ನಾವು ತೆಗೆದುಕೊಂಡು ಹೋಗುವುದರಲ್ಲಿ ಭೇದವಿಲ್ಲ.

ಅಟವಿ : ಇದು ಅವಿವೇಕತನ.

ಕೆಂಚಣ್ಣ : ಇದು ಉದ್ದಾನಪ್ಪನ ಉದ್ಧಟತನ.

ಅಟವಿ : ಹಾಗೆಲ್ಲ ಅನ್ಬಾರ್ದು... ಕೆಂಚಣ್ಣ... ಉದ್ದಾನಪ್ಪನ ಮಾತು ಸ್ವಲ್ಪ ಕೇಳು.

ಕೆಂಚಣ್ಣ : ನೀವು ಬೇಕಾದ್ರೆ ಕೇಳಿ, ನಾನು ಕೇಳುವವನಲ್ಲ.

ಅಟವಿ : ಇದು ರಕ್ತದ ಕಾವಿನ ಚೆಲ್ಲಾಟ ಅಷ್ಟೆ.

ಉದ್ದಾನ : ಗುರುವೇ ನೀವು ಸುಮ್ಮನಿರಿ. ಆತನ ಚೆಲ್ಲಾಟವನ್ನು ನಾನು ನಿಲ್ಲಿಸುವೆ.

ಕೆಂಚಣ್ಣ : ಯಾರು ನಿಲ್ಲಿಸುವರೆಂದು ನೋಡುತ್ತಿರು.

(ಹೊರಡುವನು)

## ದೃಶ್ಯ-೧೦

ಅಟವಿ : ಉದ್ದಾನಪ್ಪಾ... ಬಾ... ನನ್ನ ಕೊನೆಯುಸಿರು ಬಿಡುವ ಸಮಯದಲ್ಲಾದರೂ ಆ ಸಾಕ್ಷಾತ್ 'ಶ್ರೀ ತೋಂಟದ ಸಿದ್ಧಲಿಂಗೇಶ್ವರ ಪುರಾಣ'ದ ಪ್ರವಚನವನ್ನು ಶುರು ಮಾಡು.

ಉದ್ದಾನ : ಚಿತ್ತ ಗುರು...

(ಭಾಮಿನಿ ಷಟ್ಪದಿ)

ಕೃತಿಯ ಪೆಸರಮಳ ಸಿದ್ಧೇಶ್ವರ ಪುರಾಣವೀ
ಕೃತಿಗಧೀಶ್ವರ ಸಿದ್ಧಲಿಂಗಯತಿ ರಾಜನೀ
ಕೃತಿಯ ಪಾಲಿಪದು ವಸುಮತಿಯ ಶಿವಶರಣರೀ ಕೃತಿ ಪೇಳ್ದನಾರೆಂದನ
ನಂತ ಮಹಾ ಶಾಸ್ತ್ರಾರ್ಥ ಚತುರನೆಂದೆನಿಸುವ
ಪ್ರತಿಮ ಗುಣ ಗಂಭೀರಮತ ಭಕ್ತಿವಿತತಿಪೂ
ಜಿತವಿರತ ತೋಂಟದಾರ್ಯಂ ಲೋಕಕತಿ ಚಮತ್ಕೃತಿಯಿಂದ ಪೇಳ್ದನಿದನು॥

(ಕೆಂಚಣ್ಣನು ಅಷ್ಟು ಹೊತ್ತಿಗೆ ಪ್ರವೇಶಿಸುವನು. ಉದ್ದಾನಪ್ಪನವರು ಓದುವುದನ್ನು ನಿಲ್ಲಿಸುವರು)

ಅಟವಿ : ನಾನಿನ್ನು ಬರುವೆ ಉದ್ದಾನಪ್ಪ.

ಉದ್ದಾನ : ಗುರುವೇ...

ಕೆಂಚಣ್ಣ : ನಾನಿನ್ನು ಗುರುಗಳನ್ನು ಕರೆದುಕೊಂಡು ಹೋಗುವೆ.

(ಎಂದು ಅವರನ್ನು ಮುಟ್ಟಲು)

ಉದ್ದಾನ : ಮುಟ್ಟಿದರೆ ಮೊದಲು ಮಾಡಿದುದನ್ನು ನೆನೆಸಿಕೋ ಕೆಂಚಣ್ಣ.

ಅಟವಿ : ಉದ್ದಾನಪ್ಪಾ... ಇನ್ನೂ ನಿನಗೆ ಮನಸ್ಸಿಡಿಯಲಿಲ್ಲ. ಪುನಃ ಮಾಟದ ಪ್ರಯೋಗ ಮಾಡುವುದಿಲ್ಲವೆಂದು ಮಾಡುತ್ತೇನೆನ್ನುತ್ತೀಯೆ. ಇವುಗಳನ್ನು

ಸ್ವಾರ್ಥದ ಉಪಯೋಗಕ್ಕೆ ಉಪಯೋಗಿಸಬಾರದು... ಬಾ... ಇತ್ತ... ನಿನ್ನ ಆ ತಾಳೆಯೋಲೆಯ ಕಟ್ಟುಗಳನ್ನು ತಾ...

ಉದ್ದಾನ : ಚಿತ್ತ ಗುರು.

(ತಂದುಕೊಡಲು ದೀಪದಿಂದ ಹತ್ತಿಸಿ ಉರಿಸುವರು) ಸಂತೋಷವಾಯಿತೇ ಗುರು?

ಅಟವಿ : ಆಯಿತು... ನೀನು ಏಕಚಿತ್ತನಾಗು. ಇನ್ನು ದೈವ ನೇಮಕದಂತೆ ನನ್ನಂತ್ಯಕ್ರಿಯೆ ಸಾಗಲಿ... ಜಗಳಕ್ಕೆ ಹೋಗಬೇಡ. ಇದು ನಿನ್ನ ಗುರುವಿನಾಣೆ...!

ಉದ್ದಾನ : ಗುರುವೇ... ಇದು ಮಹಾಪಾಪದ ಕೆಲಸವಾಯಿತು. ಅಯ್ಯೋ ಗುರುವಿನ ಕೊನೆಯ ಅಂತ್ಯಕ್ರಿಯೆ ಮಾಡುವ ಭಾಗ್ಯವನ್ನು ಕಿತ್ತೊಗೆದಿರಾ?

ಅಟವಿ : ನಾನೇಳಿರುವುದನ್ನೆಲ್ಲಾ ಜ್ಞಾಪಕದಲ್ಲಿಟ್ಟಿರುವೆಯಾ ಉದ್ದಾನಪ್ಪಾ...

ಕೆಂಚಣ್ಣ : ನೋಡಿದೆಯಾ ಉದ್ದಾನಪ್ಪಾ...?

ಉದ್ದಾನ : ಹೂಂ... ನೀನೇ ದೊಡ್ಡವನಾಗು.

ಅಟವಿ : ಉದ್ದಾನಪ್ಪಾ... ಪ್ರವಚನವು ಮುಂದುವರಿಯಲಿ.

ಭಾಮಿನಿ ಷಟ್ಪದಿ

ಇಷ್ಟಲಿಂಗದೊಳು ಕಾರಣ ಸಂಚಯಗಳಡಗಿ
ದೃಷ್ಟದಿಂ ತಾನಿದಿರೆನಿಪ್ಪುದಿಲ್ಲದೆ ನೀಚೋ
ತೃಷ್ಟ ಪರಿಪೂರ್ಣ ಚಿದ್ಘನಲಿಂಗದಲ್ಲಿ...।
ನಿಷ್ಠೆಯಿಂದಿಷ್ಟಲಿಂಗವ ಬೇರೆ ಮಾಡದೆ ವಿ।
ಶಿಷ್ಟ ತರ ಪರಿಪೂರ್ಣ ಲಿಂಗವಾನೆಂಬುದ।
ಸ್ಪಷ್ಟತೆಯನೈದಿ ಲಿಂಗ ಕ್ರಿಯೆಗಳೆಲ್ಲ ನಿಷ್ಕ್ರಿಯೆಯಾಗಲದು ಸಮಾಧಿ॥ ॥ ೧ ॥

ಚಿತ್ತಮದು ಬುದ್ಧಿಯೊಳು ಬುದ್ಧಿಯದು ಹರಕೃತಿಯಾ।
ಕೊತ್ತಾಯದಿಂದ ಹರಕೃತಿ ಮನದೊಳು ಮನಮ।
ದುತ್ತಮ ಜ್ಞಾನದೊಳು ಜ್ಞಾನಮಾ ಭಾವದೊಳು ಭಾವಮಾ ಚಿತ್ಕಲೆಯೊಳು।
ಉತ್ತರ ವಿನಿಪ ಚಿತ್ಕಲೆಯು ವಸ್ತುವಿನೊಳು ನಿಂ।
ದತ್ತಿತ್ತ ಚಲಿಸಿದಚಲಿತ ವಸ್ತು ನಾನಾಗಿ।
ರುತ್ತಿರ್ಪುದೇ ಸಮಾಧಿಯದೆಂದು ಸಿದ್ಧಲಿಂಗೇಶನೊಪ್ಪುತಿರ್ದನು॥ ॥ ೨ ॥

(ಅಟವಿ ಸ್ವಾಮಿಗಳು ಲಿಂಗೈಕ್ಯರಾಗುವರು. ಉದ್ದಾನಪ್ಪನವರು ಗದ್ಗದ ಕಂಠದಿಂದ)

ಉದ್ದಾನ : ಗುರುವೇ... ಗುರುವೇ... (ನಿಟ್ಟುಸಿರು ಬಿಟ್ಟು) ಗುರುವೇ ನಿಮ್ಮಾಶ್ರಾ ಗೋಪುರದ ರನ್ನಗಳಸವನ್ನು ತುಟ್ಟ ತುದಿಯಲ್ಲಿ ಮೊಟ್ಟ ಮೊದಲು ನಾನಿಟ್ಟ ಜ್ಯೋತಿಯನ್ನು ಜಾಜ್ವಲ್ಯಮಾನವಾಗಿ ಉರಿಸಿ ಮೆರೆಸುವೆನು. ಅಜ್ಞಾನವೆಂಬ ಮೋಡವನ್ನು ಚದುರಿಸಿ ಭಕ್ತಿಯೆಂಬ ಹೊಂಬೆಳಕನ್ನು ಹರಿಸುವೆ. ಘಂಟಾನಾದವನ್ನು ಮೊಳಗಿಸುವೆ, ವೇದಘೋಷವನ್ನು ಪಸರಿಸುವಂತೆ

ಮಾಡುವೆ, ಆಗಮ, ಜ್ಯೋತಿಷ್ಯ, ಅಲಂಕಾರ, ತರ್ಕಶಾಸ್ತ್ರಗಳ ವಿದ್ಯಾಮೆಟ್ಟಲುಗಳನ್ನು ಕಟ್ಟುವೆ, ದಾಸೋಹದ ದವಳೂರನ್ನು ನಿರ್ಮಿಸುವೆ. ಸಾಹಿತ್ಯ-ಸಂಸ್ಕೃತಿ ಕಲೆಗಳ ನೆಲೆವೀಡಾಗಿ ಮಾಡುವೆ. ಭಕ್ತಿಯ ಮನೆ ಮಾಡುವೆ. ಇದರಲ್ಲಿ ಅನುಮಾನವಿಲ್ಲ ಗುರು... ಇದಕ್ಕೆ ತಮ್ಮ ಆಶೀರ್ವಾದವಿರಲಿ, ಸಿದ್ಧಲಿಂಗನ ಕೃಪೆಯಿರಲಿ...

ಕೆಂಚಣ್ಣ : ಮಾಡಿಕೋ.

ಉದ್ದಾನ : ನಿನ್ನುದ್ದ ಹಣವನ್ನು ಸರಿಯುವೆ. ನನ್ನ ಗುರುವನ್ನು ನನಗೊಪ್ಪಿಸಿಬಿಡು.

ಕೆಂಚಣ್ಣ : ಏನು ಕೊಟ್ಟರೂ ಬೇಡ...

(ತೆಗೆದುಕೊಂಡು ಹೋಗುತ್ತಿರಲು)

ಉದ್ದಾನ : ಗುರುವೇ... ಗುರುವೇ...

(ಎಂದು ದುಗುಡದಿಂದ ನೋಡುವನು)

* * *

## ದೃಶ್ಯ-೧೧

(ಹಣ್ಣು ಹಣ್ಣಾದ ಮುದುಕನು ಕಣ್ಣೀರಿಡುತ್ತಾ ದಾರಿಯಲ್ಲಿ ಬರುತ್ತಿರಲು)

ಸುಬ್ಬಮ್ಮ : (ಅರಿತು ನೋಡಿ) ಯಾರು?

ಸುಬ್ಬಣ್ಣ : ಏನು ಸುಬ್ಬಿ... ಸುಬ್ಬಣ್ಣ ಅನ್ನೋದು ತಿಳಿಲಿಲ್ವೇ?

ಸುಬ್ಬಿ : ಏನು ನೀವಾ... ದಿನದಿನಕ್ಕೆ ನೋಡ್ಲಿಕ್ಕೇ ಆಗೋಲ್ವಲ್ಲಾ. ನನ್ಗಿಂತ್ಲೂ ಬಡ್ವಾಗ್ಬಿಟ್ರ್ಯಲ್ಲಾ?

ಸುಬ್ಬಣ್ಣ : ಆಕಾಶದ ಮಳೇನಾ ಆಕಾಶವೇ ಹೀರ್ಕೊಂಡ್ರೆ, ಭೂಮಿಯ ಬೆಳೆಯನ್ನು ಭೂಮಿಯೇ ನುಂಗಿಕೊಂಡರೆ, ನಮ್ಮಂಥವ್ರು, ಪುಟ್ವಾಗು, ಪುಟ್ವಾಗು ಅಂದ್ರೇನು ಪುಟ್ವಾಗೋದು? ಇನ್ನೆಲ್ಲಾ ನರ್ರೇತ್ಲ ನಾರಾಯಣ್ರೇ ಕಣ್ಬಿಡು.

ಸುಬ್ಬಿ : ಏನೋ ಈ ಸಾರಿ ಮಳೆಯಾಗೋದು ಕಾಣೆ ಅಂತ ತೋರುತ್ತದೆ.

ಸುಬ್ಬಣ್ಣ : ಏನೋ... ನೋಡೋಕ್ಕೋದ್ರೆ ಆಗೋಲ್ಲಾ ಅನ್ನಾಗೆ ಕಾಣುತ್ತೆ.

ಸುಬ್ಬಿ : ಹುಯ್ಯಲ್ಲಾ ಅಂತೀರಾ?

ಸುಬ್ಬಣ್ಣ : ಉಯ್ಯೋ ಚಿನ್ಹೆ ಕಾಣ್ತೇ ಇಲ್ಲಾ... ಇನ್ನು ಹುಯ್ದ್ರೂ ಒಂದೇ, ಹೋದ್ರೂ ಒಂದೇ.

ಸುಬ್ಬಿ : ಇನ್ನು ಹುಯ್ದು ತಾನೇ ಏನು ಪ್ರಯೋಜನ ಅಂತೀರಾ?

ಸುಬ್ಬಣ್ಣ : ಹೊಯ್ದು ಕಡೆ ಆಗಿದೆಯಲ್ಲಾ ಹಾಗೆ, ಎಲ್ಲಾ ರೋಗ... ಏನೂ ಪ್ರಯೋಜನವಿಲ್ಲ ಬಿಡು ಸುಬ್ಬಿ...

ಸುಬ್ಬಿ : ಏನೋ ಮನಸ್ರೋಗ್ಲಿ, ದನ ಕರ್ಗಳಾದ್ರೂ ನೀರ್ಕುಡ್ದು ಪ್ರಾಣ ಬಿಡುವಾಗೋಕ್ಕಿಲ್ವಲ್ಲಾ ಹೇಳಿ.

ಸುಬ್ಬಣ್ಣ : ಅದ್ಸರಿ ಅನ್ನೂ...!

ಸುಬ್ಬಿ : ಕಲ್ಲಾಗಲ್ದಾಗೆ ಕಲಿಯೇ ಮಳೆ ಹೀರ್ತಾನಂತೆ.

ಸುಬ್ಬಣ್ಣ : ಅಧರ್ಮ, ಅಸತ್ಯ, ಅನ್ಯಾಯ, ಹೆಚ್ಚುತ್ತಿದ್ದರೆ ಪ್ರಭಾವ ತೋರ್ಲೇ ಬೇಕು.

ಸುಬ್ಬಿ : ಅದ್ಸರೀ ಅನ್ನಿ... ತೋರೋಕ್ಕೇನೂ ಅವ್ನೆ... ಅದನ್ನು ಎಡದ ಕಣ್ಣಿಂದಲೂ ನೋಡೋಕ್ಕಾಗೋಲ್ವಲ್ಲಾ.

ಸುಬ್ಬಣ್ಣ : ಕಣ್ಮುಚ್ಕೋ...

ಸುಬ್ಬಿ : ಅದ್ಸರಿ ಅನ್ನೀ... ಕಣ್ಣುಚ್ಚಿದ್ರೆ ಹೊಟ್ಟೆ ಮುಚ್ಬೇಕಲ್ಲಪ್ಪಾ.

ಸುಬ್ಬಣ್ಣ : ಹೊಟ್ಟೆ ಮೇಲೆ ಬಟ್ಟೆ ಕಟ್ಕೋ...

ಸುಬ್ಬಮ್ಮ : ಅದ್ಸರಿ ಅನ್ನೀ... ಮೇಲೇನೋ ಅದೇ ಸಾಕು. ಒಳ್ಗೇನ್ಮಾಡಾದು, ತಣ್ಣೀರ್ ತುಂಬ್ಬಬೇಕು.

ಸುಬ್ಬಣ್ಣ : ಇದೆಲ್ಲದ್ಕಿಂತ ಬೇಗ್ನೆ ಗೊಟಕ್ ಅನ್ನೋದೇ ಉತ್ಮಾ ಅಂತ ತೋರುತ್ತೆ. ಆ ದೇವ್ರ್ಯಾಕೆ ಹೊಟ್ಟೆ ಉರಿಸ್ತಾನೋ ನಾ ಕಾಣೆ.

ಸುಬ್ಬಿ : ಅದ್ಸರೀ ಅನ್ನಿ. ದೇವ್ರನ್ನೇಕೆ ಬಯ್ತೀರಿ ತಕ್ಕಳಿ. ಇವೆಲ್ಲ ನಮ್ಮ ಹಿಂದಿನ ಜನ್ಮದ ಪಾಪದ ಫಲ. ಅದನ್ನ ಅನುಭವಿಸಲೇಬೇಕು.

ಸುಬ್ಬಣ್ಣ : ಅಯ್ಯೋ ಬೆಪ್ಪಮ್ಮ ಹಿಂದಿನ ಜನ್ಮಕ್ಕ್ಯೋದೆ. ಈ ಕಲಿಕಾಲ್ದಲ್ಲೇಕೆ ಅಂತೀಯಾ? ಜನಗಳು ಪಿತಿಪಿತ ಅಂತಾ ಹುಳುತ್ಕೊಂಡಾಗೆ ಶುರುವಾದ್ರು. ದೇವಗ್ರೂ ಜವಾಬ್ದಾರಿಕೆ ಹೆಚ್ಚಾಯಿತು. ಅದ್ಕೆ ಈಗಿನ ಪಾಪ ಈಗ್ಲೇ ತಿನ್ನು ಅಂದ. ಅದರಿಂದ ಕೆಲ್ಸ ಕಡಿಮೆಯಾಯ್ತು, ಕೂಲಿ ಸಂಬಳವೇ ಗಿಟ್ತಿಲ್ಲವಲ್ಲಾ, ಹಾಗಿರುವಾಗ ರಟ್ಟೆ ಮುರ್ಕೋ ಬೇಕಂತೆ, ಆಗ ರೊಟ್ಟಿ ಕೊಡ್ತಾನಂತೆ ಆಮೇಲೆ ತಿನ್ಬೇಕಂತೆ... ನಮ್ಗೂ ಅರವತ್ತರ ಅರುಳೋ ಮರುಳೋ ಅನ್ನೊಹಾಗಿದೆ. ಅದ್ಸರಿ ಹೋಗ್ಲೀ ಎತ್ತಾರೋ ಹೋಗಿ ಏನಾದ್ರೂ ಮಾಡಿ ಈ ಗೇಣುದ್ಧ ಹೊಟ್ಟೆ ತುಂಬಿಸೋಣ ಬಾ ಮತ್ತೆ. ಇಲ್ದೇ ಹೋದ್ರ ನೋಡ್ ನಾ ಈಗ್ಲೇ ಸತ್ತೆ.

ಸುಬ್ಬಿ : 'ಹೂಂ... ಅನ್ನೋಕೆ ಉಸ್ರಿಲ್ಲಾ ಕತ್ಯಾಗರ್ಬು ಬಡ್ಡಿ ಅಂದ್ಹಾಗೆ ಕಾಲು ಬರೋದೇ ಇಲ್ವಲ್ಲಾ.

(ಇಬ್ಬರೂ ದಾರಿಯಲ್ಲಿ ಹಾಡುತ್ತಾ ಹೊರಡುವರು)

ಹಾಡು

ಸುಸ್ತೂ ಬಂತೂ।
ನಿಸ್ತ್ರಾಣ ತಂತೂ।
ಮಸೆದಟ್ವಾಯ್ತು ಘಟಕ್ವೊಯ್ಲಿಕ್ವೊಯ್ತು ॥ ಪಲ್ಲವಿ ॥

ಈ ಪ್ರಾರಬ್ಧಾವೇಕೇ ಬಂದಿತು?
ಈ ಪ್ರಾರಬ್ಧಾವೇನಾ ತಂದಿತು?
ಮನದ ತುಂಬಾ ತುಂಬೀ ತಂದಿತು॥ ॥ ೧ ॥

ಕೂತ್ರೆ ಕುಂಡ್ರೆಗ್ಳುಸ್ತೂ।
ನಿಂತ್ರೇ ನಡುಗ್ಳುಸ್ತೂ।
ನಡೆದ್ರೆ ಕಾಲಿಗ್ಳುಸ್ತು।
ಬೈತಿದ್ರೆ ಬಾಯ್ಗೇ ಸುಸ್ತು॥ ॥ ೨ ॥

ನೋಡಿದ್ರೆ ಕಣ್ಣಗ್ಳುಸ್ತು।
ಆಗೀದ್ರೆ ಹಲ್ಲಿಗ್ಳುಸ್ತ।
ಬೀಸಿದ್ರೆ ಕೈಗಳ್ಗೆ ಸುಸ್ತೂ।
ಮೂಸಿದರೆ ಮೂಗಿಗ್ಳುಸ್ತೂ॥ ॥ ೩ ॥

ಸುಬ್ಬಮ್ಮ : ಸುಮ್ನೇ ಎಲ್ಲಿಗೆ ಹೋಗ್ತಾ ಇರೋದು?

ಸುಬ್ಬಣ್ಣ : ಇನ್ನೂ ಗೊತ್ತೇ ಆಗ್ಲಿಲ್ಲಾ ಅನ್ನು.

ಸುಬ್ಬಮ್ಮ : ನೀವೋಗೋದು ನನಗೇನ್ಗೊತ್ತು?

ಸುಬ್ಬಣ್ಣ : ಅಯ್ಯೋ ಬೆಪ್ಪೆ ಹೋಗು... ಸಿದ್ಧಗಂಗೆಗೆ ಕಣೇ... ಸಿದ್ಧಗಂಗೆಗೆ...!

ಸುಬ್ಬಮ್ಮ : ಏಕೆ ಸಿದ್ಧಗಂಗೆಗೋಗಿ ಶಿವ ಶಿವಾ ಅನ್ನೋಕ್ಕಾ?

ಸುಬ್ಬಣ್ಣ : ಅಲ್ಲಾ ಗೊಟಕ್ ಅನ್ನೋಕೇ... ಪಿಟ ಪಿಟ ಅನ್ದೇ ಪಟ ಪಟ್ನ ನಡಿ. ಎಲ್ಲಿ ಭಿಕ್ಷೆ ದೊರೆಯದಿದ್ರೂ ಅಲ್ಲಿ...!

ಸುಬ್ಬಮ್ಮ : ಸಿದ್ಧಗಂಗೆಗೋದ್ರೆ ಶಿವ ಶಿವಾ ಅಂತ ಗಂಗೆಯಾದ್ರೂ ದೊರೆಯುತ್ತೆ...

ಸುಬ್ಬಣ್ಣ : ನಿನ್ಗೆ ಇನ್ನೂ ಅರ್ಥವಾಗ್ದು ನಡೆ... ಶರಣರನ್ನೂ ಶ್ರೀಕ್ಷೇತ್ರಗಳನ್ನು ತುಚ್ಛೀಕರಿಸಿದರೆ ಮಹಾಪಾಪ ಅನ್ನೋದು ಜ್ಞಾಪಕವಿರಲಿ.

ಸುಬ್ಬಮ್ಮ : ರಕ್ತವೆಲ್ಲಾ ತಣ್ಣಾಗ್ಹೋಗಿದೆ...

ಸುಬ್ಬಣ್ಣ : ತಣ್ಗಿರೋವಾಗ್ಲೇ ಹೀಗಾಡ್ತೀಯಲ್ಲಾ ಇನ್ನು ರಕ್ತದ ಕಾವಿನಲ್ಲಿ ಹೇಗಾಡ್ತಿದ್ದೆ ಅನ್ನೋದೆ ನನ್ಗರ್ಥವಾಗ್ತಿಲ್ಲ.

ಸುಬ್ಬಮ್ಮ : ಅದ್ಕೆ ಅಲ್ವಾ ಈ ಗತಿ ಬಂತು.

ಸುಬ್ಬಣ್ಣ : ಸಿದ್ಧಗಂಗಾ ಕ್ಷೇತ್ರದಲ್ಲಿ ಅನ್ನವಿದ್ಯಾದಾನಗಳು ಸತತವಾಗಿ ನಡೆಯುತ್ತಲೇ ಇವೆ. ಮುಂದೆಯೂ ನಡೆಯುತ್ತದೆ. ಆ ದಾಸೋಹದ ದವಳೂರಿಗೆ ಹೋಗಿ

ಅಲ್ಲಿ ಹಸಿವು ನೀರಡಿಕೆ ಪರಿಹರಿಸಿಕೊಂಡು ನಮ್ಮ ಜೀವನವನ್ನು ಪುಣ್ಯಮಯ ಮಾಡಿಕೊಳ್ಳೋಣ. ಈ ಕ್ಷೇತ್ರದಲ್ಲಿ ನಮ್ಮ ಹೊಟ್ಟೆ, ಬುದ್ಧಿ ಆತ್ಮಗಳು ತೃಪ್ತಿ ಹೊಂದುವುದರಲ್ಲಿ ಅನುಮಾನವೇ ಇಲ್ಲ. ಅಲ್ಲಿನ ಉದ್ದಾನ ಶಿವಯೋಗಿಗಳ ಕಾಲುರಿಯು ಸದಾ ಉರಿಯುತ್ತಾ 'ಹತ್ತಿದ ಒಲೆ ಆರುತ್ತಿಲ್ಲಾ' ಅಂತಾರೇ ನೋಡ್ದವ್ರು.

ಸುಬ್ಬಮ್ಮ : ಅದೇನು ವಿಷಯ ಸರಿಯಾಗಿ ಹೇಳಿ.

ಸುಬ್ಬಣ್ಣ : ಅಟವೀ ಸ್ವಾಮಿಗಳು ಸಿದ್ಧಲಿಂಗನಲ್ಲಿ ಕೈಮುಗಿದು, 'ಹತ್ತಿಸಿದ ಈ ಒಲೆಯು ಸದಾ ಉರಿಯಲಿ, ಅನ್ನ ದಾಸೋಹ ಕಾರ್ಯ ಸತತವಾಗಿ ನಡೆಯುವಂತೆ ಮಾಡು' ಎಂಬ ಬಯಕೆಯನ್ನು ನೆರವೇರಿಸಿದ್ದಾರೆ.

ಸುಬ್ಬಮ್ಮ : ನನ್ಗಂತೂ ಇನ್ನೊಂದು ಹೆಜ್ಜೆಯನ್ನೂ ಮುಂದೆ ಕೀಳಲಿಕ್ಕಾಗೋಲ್ಲ ಏನು ಮಾಡಬೇಕೆಂಬುದೇ ತೋಚುತ್ತಿಲ್ಲ.

ಸುಬ್ಬಣ್ಣ : ಬಾ ನನ್ನ ಹೆಗಲ ಮೇಲೆ ಕೈ ಹಾಕ್ಕೊಂಡು ನಡೆಯುವಂತೆ.

ಸುಬ್ಬಮ್ಮ : ಎಲ್ಲಾ ನಿಮ್ಮಿಷ್ಟದಂತೆಯೇ ಆಗಲಿ ನಡ್ಯಪ್ಪಾ.

ಸುಬ್ಬಣ್ಣ : ಅದೋ... ಇನ್ನು ಸ್ವಲ್ಪ ದೂರದಲ್ಲಿ ಕಾಣುತ್ತಿದೆಯಲ್ಲಾ ಅದೇ ಸಿದ್ಧಗಂಗಾ...

ಸುಬ್ಬಮ್ಮ : ಏನಿದು ಈ ಪಾಟಿ ಜನ ಹೋಗ್ತಿದಾರಲ್ಲ ಈ ರಸ್ತೇಲಿ.

ಸುಬ್ಬಣ್ಣ : ಆ ಪಾಟಿ ದಾನ ಮಾಡ್ತಾರೆ, ಅದ್ಕೇ ಈ ಪಾಟಿ ಜನ ಹೋಗಿ ಸರ್ಪಾಟ್ಮಾಡ್ತಾರೆ.

ಸುಬ್ಬಮ್ಮ : ಏನೇ ಆಗ್ಲಿ ಬಿಡಿ. ಇದೇನು ಈ ಕ್ಷಾಮದ ಬಿಡು ದಿನದಲ್ಲಿ ಜಾತ್ರೆಗೆ ಹೋದ್ಹಂಗೆ ಹಿಂಡು ಹಿಂಡೇ ಹೋಗ್ತಾರಲ್ಲಾ. ಅವ್ರು ಪರಮಾತ್ಮ ತುಂಬಿಸಿ ಸಂತೋಷ ಪಡಿಸೋ ಆತ ಸಾಕ್ಷಾತ್ ಪರಮಾತ್ಮನೇ ಇರಬೇಕು. ಹೊಟ್ಗಿಲ್ದೇ ಹೋದ್ರೂ ಚಿಂತಿಲ್ಲ, ಸತ್ರೂ ಚಿಂತಿಲ್ಲಾ. ನನ್ನೊಡೆಯನ ಪಾದದ ದರ್ಶನ ಮಾಡಿ ಶಿವ ಶಿವಾ ಅಂತ ಶಿವಾಧೀನವಾದ್ರೆ ಅದೇ ನನ್ಗೊಂದು ದೊಡ್ಡ ಪುಣ್ಯ.

ಸುಬ್ಬಣ್ಣ : ಎಲ್ಲಾ ಸಿದ್ಧಲಿಂಗನಿಚ್ಛೆ... ನಡೆ ನಡೆ...

(ಇಬ್ಬರೂ ಕೈ ಮುಗಿದು ನಡೆವರು)

ಹಾಡು

ಬಾ ಗೆಳೆಯ ಬಾ ಸಿದ್ಧಗಂಗೆಗೇ॥
ಓ ಬಾ ಗೆಳೆಯ ಬಾ ಶ್ರೀಕ್ಷೇತ್ರಕೇ॥
ಒಲುವಿಂದ ನೀ ಸಾಗಿ ಬಾ ಕ್ಷೇತ್ರಕೇ।
ನೀನೊಮ್ಮೆ ಬಾ ಕ್ಷೇತ್ರಕೇ, ಇನ್ನೊಮ್ಮೆ ಈ ಕ್ಷೇತ್ರಕೇ ॥ ಪಲ್ಲವಿ ॥

ಗೋಸಲಾ ಸಿದ್ಧರೂ ತೋಂಟದ ಯತಿವರ್ಯರು ತಪವನುಗೈದಿಹ ಈಕ್ಷೇತ್ರಕೇ।
ಶ್ರೀ ರುದ್ರಸ್ವಾಮಿ ಶ್ರೀ ಸಿದ್ಧಲಿಂಗ ಸ್ವಾಮಿಯವತರಿಸಿದ ಶ್ರೀ ಸಿದ್ಧಗಂಗೆಗೆ।
ಶ್ರೀ ಸಿದ್ಧರಾಮ ಬಸವಣ್ಣರ ತೆರೆದ ಅಟವಿ ಸ್ವಾಮಿಗಳ ಸಿದ್ಧಗಂಗೆಗೆ।
ಉದ್ದಾನ ಶಿವಯೋಗಿ ಮರುಳಾರಾಧ್ಯ ಮುಪ್ಪಿನ ಸ್ವಾಮಿಗಳ ಶ್ರೀಕ್ಷೇತ್ರಕೇ॥ ೧ ॥

ತವನಿಧಿಯ ತೌರೂರು, ದಾಸೋಹದೌಳೂರೂರು।
ಕಲಿಯುಗದ ಕಲ್ಯಾಣ ಭಕ್ತೀಯ ಬಳ್ಳೂರು।
ಕಾಯಕವೇ ಕೈಲಾಸದ ಶಿವಕುಮಾರರೂರು।
ಸಿದ್ಧಗಂಗೆಯುದಿಸಿದ ಪ್ರಕೃತಿಯ ಸಿರಿಯೂರಿಗೆ ॥ ೨ ॥

ಜಾತ್ರೆಯಾ ಕಾಲಕೇ ಯಾತ್ರಿಕನು ನೀನಾಗು।
ಜ್ಞಾನದಾ ದಾಹಕೇ ವಿದ್ಯಾರ್ಥಿ ನೀನಾಗು।
ಅನ್ನದಾ ದಾಹಕೆ ದಾಸೋಹಕ ನೀನಾಗು।
ಭಕ್ತಿಯಾ ಐಸಿರಿಗೆ ಭಗವಂತ ನೀನಾಗುವೆ ॥ ೩ ॥

ಸುಬ್ಬಮ್ಮ : ನಿಮ್ಮಿಂದ ಈ ಕ್ಷೇತ್ರದ ದರ್ಶನವಾಯ್ತು, ದೇಹ ಪುಣ್ಯ ಹೊಂದಿತು ನನ್ನ ತನು ತಂಪಾಯಿತು, ಆತ್ಮ ಶಾಂತಿ ಹೊಂದಿತು. ಮನವೇ ದೇವ ಮಂದಿರವಾಯಿತು. ನನ್ನ ಸಕಲ ಇಷ್ಟಾರ್ಥಗಳು ಕೈಗೂಡಿದುವು. ಊಂ... ಮುಂದುವರಿಸಿ ಸಿದ್ಧಗಂಗಾ ಮಹಾತ್ಮ ಕೇಳ್ತಿದ್ರೆ ಇನ್ನೂ ಕೇಳ್ಲಾ ಅನ್ನಿಸ್ತದೆ ಮನ್ಸಿಗೆ.

ಸುಬ್ಬಣ್ಣ : ಕೇಳು, ಒಂದೊಮ್ಮೆ ಉದ್ದಾನಪ್ಪನವರ ಶಿಷ್ಯರು ಸೌದೆ ತರುತ್ತಿರಲು ಕತ್ತಲೆಯಾಗಿ ದಾರಿಯೇ ಕಾಣದಿರಲು ಕೊಳ್ಳಿ ದೆವ್ವಗಳನ್ನು ನಿಲ್ಲಿಸಿ ಬೆಳಕು ಮಾಡಿ ಶ್ರೀಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದ್ರು.

ಸುಬ್ಬಮ್ಮ : ಬಲೇ ಕೆಲ್ಸ ಮಾಡಿದ್ರು ಆಮೇಲೆ...

ಸುಬ್ಬಣ್ಣ : ಬ್ರಹ್ಮರಾಕ್ಷಸ ರೂಪವನ್ನು ಹೊಂದಿದ್ದ ತಪಸ್ವಿಯು ರಾಮೇಲಿಂಗನ ಬೆಟ್ಟದಲ್ಲಿರಲು, ಅಲ್ಲಿಗೆ ಪ್ರತಿ ಅಮಾವಾಸ್ಯೆ,ಪೂರ್ಣಿಮೆಗೊಂದೊಮ್ಮೆದೊಡ್ಡ ಸಿದ್ದಪ್ಪನವರ ಗವಿಗೆ ಶಿಷ್ಯ ಮರಿ ವೀರಪ್ಪನೆಂಬುವನೊಡಗೂಡಿ ಹೋಗಲು ತಪಸ್ವಿಗಳು ಮನುಷ್ಯರ ಸಂಗದೊಂದಿಗೇಕೆ ಬರುತ್ತಿರುವೆ ಎಂದು ಹೇಳಿ ವೀರಪ್ಪನಿಗೆ ಒಂದು ಬಾಳೆ ಹಣ್ಣನ್ನು ಕೊಟ್ಟು ಹಿಂದಕ್ಕೆ ಕಳುಹಿಸಿದರಂತೆ. ಅಂದಿನಿಂದ ಒಬ್ಬರೇ ಹೋಗಿ ಮಾತಾಡಿ ಬರುತ್ತಿದ್ದರಂತೆ.

ಸುಬ್ಬಮ್ಮ : ಇನ್ನೇನಾದ್ರೂ... ಇದ್ರೆ...

ಸುಬ್ಬಣ್ಣ : ಅವರಿಗೇನಾದ್ರೂ ಮನಸ್ಸು ಬಂತೂ ಅಂದ್ರೆ ಪ್ರೀತಿಯಿಂದ ಮಕ್ಕಳಿಗೆ ಕೈಯನ್ನು ನೀಡಿದ್ರೆ ಸಾಕು.... ಕಲ್ಲು ಸಕ್ಕರೆ ಬರುತ್ತಿದ್ದಿತಂತೆ. ಅದನ್ನು ಕೊಡತ್ತಿದ್ದರಂತೆ. ಅಂತೂ ಹೇಳ್ತಾ ಹೋದ್ರೆ ಅನೇಕ ಇವೆ. ಶರಣನ ಲೀಲೆಗೆ ಆದಿ ಏನು? ಅಂತ್ಯವೇನು?

ನೆಲದ ಮರೆಯ ನಿಧಾನದಂತೆ,
ಫಲದ ಮರದ ರುಚಿಯಂತೆ,
ಶಿಲೆಯ ಮರೆಯ ಹೇಮದಂತೆ,
ತಿಲದ ಮರೆಯ ತೈಲದಂತೆ,
ಭಾವದ ಮರೆಯ ಬ್ರಹ್ಮವಾಗಿಪ್ಪ,
ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಲಾರರು

ಸುಬ್ಬಮ್ಮ : ಆಮೇಲೆ...।

ಸುಬ್ಬಮ್ಮ : ಸುಬ್ಬಿ.... ನಾನು ಕಂಡದ್ದು ಕೇಳಿದ್ದು ಅಂದ್ರೆ ಇಷ್ಟೆ... ಅವರ ಮಹಿಮೆಯ ತಾಳು ಬೇರು ಸಿಗುವುದು ಕಷ್ಟ. ಸಿದ್ಧಪುರುಷನ ಹಸ್ತ ಗುಣವನ್ನು ನಾನೇನೆಂದು ಬಣ್ಣಿಸಲಿ. ಮಹಾತ್ಮನ ಗುಣವನ್ನರಸುವುದು ಬೆಟ್ಟದ ಕಲ್ಲುಗಳ ಮಧ್ಯೆ ಮಾದಳದ ಫಲವನ್ನು ಅರಸಿದಂತೆ ಸಮುದ್ರದ ನೀರಿನ್ನಳೆದಂತೆಯೇ ಸರಿ....

ಸುಬ್ಬಮ್ಮ : ಇದೇನು ಸಿದ್ಧಗಂಗೆಯೇ? ಅಲ್ಲಾ... ಅಲ್ಲಾ...

ಸುಬ್ಬಣ್ಣ : (ಕೋಪದಿಂದ) ಸಿದ್ಧಗಂಗೆಯಲ್ಲದೆ ಮತ್ತೇನು?

ಸುಬ್ಬಮ್ಮ : ಸ್ವರ್ಗ... ಸ್ವರ್ಗ... ಎರಡನೇ ಕೈಲಾಸ... ಕಲ್ಯಾಣ ಪಟ್ಟಣ ಲಕ್ಷದ ಮೇಲೆ ತೊಬತ್ತಾರು ಸಾವಿರದ ಗಣಂಗಳಿಗೆ ಒಕ್ಕಳಕ್ಕಿ ಹಾಕಿ ಒಂದು ಬದನೇಕಾಯಿ ಹಾಕಿ ತೃಪ್ತಿಪಡಿಸಿದಂಥ ಕಲ್ಯಾಣ ಏನೀ ಭಿಕ್ಷು ಕರುಗಳು? ಎರಡು ಹೊತ್ತು ಅನ್ನವೀಯುತ್ತಿರುವ ಆ ಮಹಾತ್ಮನ ಪಾದವೇ ಗತಿ.

ಸುಬ್ಬಣ್ಣ : ಅದೋ.... ಅಲ್ಲಿ ಕೆಂಗಾವಿ ನಿಲುವಂಗಿಯನ್ನುಟ್ಟು ಸೂರ್ಯನಂತೆ ಪ್ರಕಾಶಿಸುತ್ತಿರುವವರೇ... ಉದ್ದಾನ ಶಿವಯೋಗಿಗಳು. (ದೂರದಿಂದಲೇ ನಮಸ್ಕರಿಸುವರು)

ಸುಬ್ಬಮ್ಮ : ಶ್ರೀ ಸಿದ್ಧಗಂಗಾ ಮಹಾತ್ಮ್ಯ ಮುಂದುವರಿಸಿ.

ಸುಬ್ಬಣ್ಣ : ನಾನು ಕಣ್ಣಾರೆ ಕಂಡಂತೆ ಮೂಗರು ಮಾತನಾಡಿದ್ದಾರೆ, ಅನೇಕ ರೋಗಗಳಿಂದ ನರಳುವ ರೋಗಿಗಳು ಆರೋಗ್ಯ ಹೊಂದಿದ್ದಾರೆ. ಸಿದ್ಧಗಂಗಾ ಮಹಾತ್ಮೆಯನ್ನು ಹೇಳುತ್ತಾ ಹೋದರೆ ಮುಗಿಯದ ಅಂಕ ಸುಬ್ಬಿ. ಆ ಸಿದ್ಧಲಿಂಗನು ಇದನ್ನು ಭಕ್ತಿಯ ಕ್ಷೇತ್ರವನ್ನಾಗಿ ಮಾಡಿದ್ದಾನೆ. ಅದಕ್ಕಿಂತ ಇನ್ನೇನು ಬೇಕು?

ಸುಬ್ಬಮ್ಮ : ಅಲ್ಲಾ ಅಂದ್ರೆ ಸಿದ್ಧಗಂಗೆಗೆ ಕುಂಕುಮ ಅರ್ಚನೆ ಮಾಡಿಸಿ ಬಾಗಿನ ಕೊಡಿಸಿದ್ರೆ ಬಂಜೇಗೂ ಮಕ್ಕಳು ಆಗುತ್ತಂತೆ.

ಸುಬ್ಬಣ್ಣ : ಹೌದು... ಬೇಕಾದಷ್ಟು ಜನಕ್ಕೆ ಆಗಿವೆ. ಅಷ್ಟೇ ಅಲ್ಲ ದೆವ್ವ, ಭೂತ ಹಿಡ್ದಿರೋವರಿಗೆ ಗಂಗೆ ತೀರ್ಥವನ್ನು ಪ್ರೋಕ್ಷಿಸಿದರೆ ಅಥವಾ ತಲೆಯಿಂದ

ಸ್ನಾನ ಮಾಡಿಸಿದ್ರೂ ಆಯ್ತು, ಗಾಳಿಗರೆ ದೆವ್ವ ಭೂತ ಚೇಷ್ಟೆಗಳು ಹೋಗುತ್ತವೆ. ಅದಕ್ಕೆ ಕಲ್ಲನ್ನು ಹೊಯ್ಯುತ್ತಾರೆ.

ಸುಬ್ಬಮ್ಮ : ಅಲ್ದೇ ಉದ್ದಾನ ಸ್ವಾಮಿಗಳೂ ಸ್ವತಃ ಯಂತ್ರ ಕಟ್ತಾರಂತೆ, ಅಂಜಿ ಕೊಂಡಿದ್ರೆ, ದೆವ್ವ ಭೂತಗಳಿಗೆ ಕಟ್ಟಾಟ ಮಾಡಿ ಒಳ್ಳೆಯದನ್ನು ಮಾಡ್ತಾರಂತೆ. ವಿಭೂತಿ ಮಂತ್ರಿಸಿ ಕೊಡ್ತಾರಂತೆ ಕಾಲ್ದೂಳಾಗಿದ್ರೆ, ಅನಾರೋಗ್ಯ ಆಗಿದ್ದರೆ.

ಸುಬ್ಬಣ್ಣ : ಒಂದು ಸಾರಿ ಜಾತ್ರೆ ಸಮಯದಲ್ಲಿ ರೈಲು ಹೋಗ್ತಿದ್ದಾಗ ಉದ್ದಾನ ಸ್ವಾಮಿಗಳು ಹಾಗೇ ನಿಲ್ಲಿಸಿಬಿಟ್ರಂತೆ. ಅಂಥ ಪವಾಡ ಪುರುಷರು.

ಸುಬ್ಬಮ್ಮ : ಈ ಸಿದ್ಧಗಂಗಾ ಕ್ಷೇತ್ರ ನೋಡಿದ್ರೆ ಗೊತ್ತಾಗೋಲ್ವೇ? ಅವರು ಎಂತೆಂಥ ಕೆಲಸ ಮಾಡಿದ್ದಾರೆ. ಮಹಾನುಭಾವರು ಅವರನ್ನು ಎಷ್ಟು ಪೂಜಿಸಿದ್ರೂ ಸಾಲದು.

ಸುಬ್ಬಣ್ಣ : ಸದಾ ಭಕ್ತರಿಗೆ ವರವನ್ನು ಕರುಣಿಸುತ್ತಾ ಸಿದ್ಧಗಂಗಾ ಮಾತೆ ಎಲ್ಲರ ತನುಮನಗಳನ್ನು ತಂಪಾಗಿರ್ಸುತ್ತಾಳೆ. ಜೊತೆಗೆ ಗೋಸಲಸಿದ್ಧರ, ತೋಂಟದ ಸಿದ್ಧಲಿಂಗೇಶ್ವರರ ಕೃಪೆಯಿಂದ ಇದು ಮತ್ತಷ್ಟು ಪಾವನ ವಾಗಿದೆ.

ಸುಬ್ಬಮ್ಮ : ಶ್ರೀ ಸಿದ್ಧಲಿಂಗೇಶ್ವರನ ಪಾದಕ್ಕೇ... ಶ್ರೀ ತೋಂಟದ ಸಿದ್ಧಲಿಂಗೇ ಶ್ವರರ ಪಾದಕ್ಕೇ... ಶ್ರೀ ಉದ್ದಾನಶಿವಯೋಗಿಗಳ ಪಾದಕ್ಕೇ... ಶ್ರೀ ಸಿದ್ಧಗಂಗಾ ಮಾತೆಗೇ... ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೇ..... ಉಘೇ..... ಉಘೇ.....

ಹಾಡು

ಸುಬ್ಬಣ್ಣ : ಎಂದಿಗೇ ತೀರುವುದೋ? ಇನ್ನೆಂದಿಗೆ ತೀರುವುದೊ?
ನಾನೆಂದಿಗೆ ತೀರುವುದೋ? ಈ ಮಠದ ಋಣವಾ?
ಶ್ರೀ ಮಠದ ಋಣವ ॥ ಪಲ್ಲವಿ ॥

ಋಣ ಬೇಕು ತುತ್ತು ಅನ್ನವುಣ್ಣಲು
ಗುಟುಕೊಂದು ನೀರನ್ನು ಕುಡಿಯಲೂ
ಗುರುಕರಸಂಜಾತರಾಗಲೂ ಬೇಕೇ ಬೇಕು
ನಿಜ ಸತಿ ಕೈಯ ಪಿಡಿಯಲೂ ಋಣವು ಬೇಕೇ ಬೇಕು ॥ ೧ ॥

ಸಾತ ಅನ್ನ ನೀರೂ ಎಣ್ಣೆಗಳ ಋಣವ
ತೀರಲ್ಹೇಗೆ? ಮುಪ್ಪಲ್ಲಿ ತಿಂದುಪ್ಪಿನ ಋಣವ
ಜೀವ ತೇದರೂ ತೀರದೀ ಮಠದ ಋಣವಾ
ಕನ್ನಡನಾಡ ಶ್ರೀ ಸಿದ್ಧಗಂಗಾ ಋಣವಾ ॥ ೨ ॥

(ಅನ್ನವನ್ನು ತೆಗೆದುಕೊಂಡು ಬಂದು ರಸ್ತೆಯಲ್ಲಿ ಕುಳಿತು ತುತ್ತು ಎತ್ತುತ್ತಾ-)

ಸುಬ್ಬಮ್ಮ : ಏನೀ ಶಿವಪ್ರಸಾದ...? ಇಷ್ಟು ಜನಕ್ಕೂ.... ಎಷ್ಟೆಷ್ಟೋ ಧಾರಾಳವಾಗಿ ಕೊಟ್ಟಿದ್ದಾರೆ. ಆ ಅಕ್ಷಯ ಪಾತ್ರೆಯಿಂದ ನನ್ನಂಥ ಇನ್ನೆಷ್ಟು ಜನಕ್ಕೆ ಸಿಗುವುದೋ... (ಕಣ್ಮುಚ್ಚಿ)... ಶಿವ ಶಿವಾ... ಸಿದ್ಧಲಿಂಗೇಶ್ವರಾ...

(ಅತ್ತಿಂದ ಸಣ್ಣ ಹುಡುಗನು ಕಿತ್ತು ತಿನ್ನುತ್ತಾ ದೂರ ಸರಿದು ನಿಲ್ಲುವುದು)

(ಶಾಂತವಾಗಿ) ಪಾಪಿಯು ಸಮುದ್ರಕ್ಕೋದರೂ ಮೊಣಕಾಲುದ್ದ ನೀರು ಇದು ಸತ್ಯ...!

(ಆ ಕಡೆಯಿಂದ ಸುಬ್ಬಣ್ಣನು ಬರುವನು)

ಸುಬ್ಬಮ್ಮ : ಎಲ್ಲೆಲ್ಲೂ ಜನರು ಅನ್ನಕ್ಕಾಗಿ ಬೆಂದು ಬಳಲಿ ತೊಳಲಿ ಬೇಯುತ್ತಿರುವರು ಈ ಕಲಿಯುಗದ ಕೊನೆ ಹಂತಕ್ಕೆ ಮನುಷ್ಯನಿಗೆ ಎಂಥ ಸ್ಥಿತಿ ಬರುತ್ತೋ ಏನೋ...

ಸುಬ್ಬಣ್ಣ : ಏನು?

ಸುಬ್ಬಮ್ಮ : ತುತ್ತು ಅನ್ನವನ್ನು ಆ ಹುಡುಗ ಕಿತ್ತೊಗೆದ ಅಷ್ಟೇ...

ಸುಬ್ಬಣ್ಣ : (ಅತ್ತ ಸರಿದು) ಲೇ... ಅಯೋಗ್ಯ... ಉಣ್ಣುವ ಅನ್ನ ಕೀಳುವ ಬೆಳಗಿನ ದರೋಡೆ ಮಾಡುವ ಕಾಲ ಬಂತೇ? ಇದಕ್ಕೊಂದು ಶಿಸ್ತು ಸಂಯಮ, ನೀತಿ, ನಿಯಮ, ನ್ಯಾಯ, ಧರ್ಮಗಳೂ ಬೇಡವೇ? ಹುಟ್ಟಿರುವುದು, ಅನ್ನಕ್ಕಾಗಿಯೋ...

ಸುಬ್ಬಮ್ಮ : ಅರಿಯದ ಹಸುಳೆ ಹಸಿವಿನಿಂದ ಅಸುನೀಗುತ್ತಿರುವ ಸಮಯದಲ್ಲಿ ಅನ್ನ ಸಿಗದಿರಲು ನನ್ನಿಂದಲೇ ಕಸಿದುಕೊಂಡಿತು. ಅದು ತಾನೇ ಏನು ಮಾಡೀತು? ಶಕ್ತಿಯಿಲ್ಲದ ನನ್ನಂತಹ ಮುದುಕಿಯನ್ನೇ ಆರಿಸಿ ಬಂದಿದೆ.

(ನೀರನ್ನು ಕುಡಿಯಲು, ಎತ್ತಲು ಮತ್ತೆ ಹುಡುಗ ಬಂದು ಕಿತ್ತು ಕುಡಿಯುವ)

ಹಿಂದಿನ ಜನ್ಮದಲ್ಲಿ ಯಾರ ಕುಡಿಯುವ ನೀರನ್ನು ಕಸಿದಿದ್ದೆನ್ನೋ, ಅದು ಇಂದು ತೋರಿತು. ಇದರಲ್ಲಿ ನಿಮ್ಮ ನನ್ನ ಆ ಹಸುಗೂಸಿನ ತಪ್ಪೇನೂ ಇಲ್ಲ...

ಸುಬ್ಬಣ್ಣ : ಇಂದಿನ ಸ್ಥಿತಿಯನ್ನು ನೋಡಿದರೆ ಕಣ್ಣಲ್ಲಿ ರಕ್ತ ಕಾರಂಜಿಯಾಗಿ ಕಾರುವುದು. ಜನರು ಹೆಚ್ಚಿ ಹೆಚ್ಚಿ ಜೊತೆಗೆ ಆಲಸ್ಯ ಮೈ ದೋರುತ್ತಿದೆ. ಅತಿವೃಷ್ಟಿ ಅನಾವೃಷ್ಟಿಗಳಿಂದ ಕ್ಷಾಮ ಕಾಲ ಹಾಕಿಕೊಂಡು ಪ್ರಾಣವಿರುವ ಪ್ರಾಣಿಗಳಲ್ಲಿ ಹಸಿವು ಹೆಚ್ಚಾಗುತ್ತಿದೆ. ಈ ವರ್ಷ ಮುಗಿಯದಿರುವುದನ್ನು ನೋಡಿದರೆ 'ಕ್ಷಾಮಗಾಲಕ್ಕೆ ಅಧಿಕ ಮಾಸ ಬೇರೆ' ಅಂದ ಹಾಗೆ ಆಗಿದೆ.

ಸುಬ್ಬಮ್ಮ : ಹೋಗಲಿ ನೀವು ಇದನ್ನು ಉಣ್ಣಿ...

ಸುಬ್ಬಣ್ಣ : (ದುಗುಡ ಕಂಬನಿ ಬೆರೆಸಿ) ಶಿವ ಶಿವ... ಏನಿದು ನಿನ್ನ ಹೊಟ್ಟೆ ಬಡಿದು ನಾನು ಉಣ್ಣಲೇ? ನೀನು ಬಳಲಿದ್ದೀಯೆ. ನನಗೆ ಸಿದ್ಧಗಂಗೋದಕವಿದೆ. ಆ ಮಹಿಮೆಯನ್ನು ತುಚ್ಛೀಕರಿಸಿದುದರ ಫಲವೋ ಏನೋ! ಅದನ್ನು ಈಗಲೇ ತೋರಿಸಿಬಿಟ್ಟಾ...

ಸುಬ್ಬಮ್ಮ : ಹಂಚಿಕೊಂಡು. ಉಂಡರೆ ಹಸಿವು ಬನ್ನಿ ಇಬ್ಬರೂ ಮಾಡೋಣ. ಪಾಲಿಗೆ ಬಂದುದೇ ಪಂಚಾಮೃತ. ನಿಮ್ಮ ಕೈ ಹಿಡಿದ ನನ್ನ ಕೊನೆ ಆಸೆಯನ್ನು ತೀರಿಸಬೇಡಿ. ಬನ್ನಿ ಇಬ್ಬರೂ ಇರುವುದರಲ್ಲೇ ತೃಪ್ತಿಪಟ್ಟು 'ಹಾಸಿಗೆ ಇದ್ದಷ್ಟಕ್ಕೇ ಕಾಲು ಚಾಚೋಣ'.

ಸುಬ್ಬಣ್ಣ : ಬಂದೆ... ಬಂದೆ...

(ಕುಳಿತು ಊಟ ಮಾಡುವರು)

ಸುಬ್ಬಮ್ಮ : ಆಹಾ... ಏನು ರುಚಿ...? ಏನು ರುಚಿ? ಏನು ಬಿಸಿ...? (ತಲೆದೂಗುತ್ತಾ) ಗಂಗೋದಕವೋ... ಅಥವಾ ಅಮೃತವೋ... ಹೊಟ್ಟೆ ತುಂಬಿಹೋಯ್ತು... ತುಂಬಿಹೋಯ್ತು...

ಸುಬ್ಬಣ್ಣ : ಸರಿ ಗುರುಗಳ ಪಾದ ದರ್ಶನ ಮಾಡೋಣ ನಡೆ.

(ಹೊರಡುವರು)

## ದೃಶ್ಯ-೧೨

(ಮರುಳಾರಾಧ್ಯರು ಗುರು ಉದ್ದಾನರ ಹತ್ತಿರ ಬರಲು)

ಉದ್ದಾನ : ಯಾರು ಮರುಳಾರಾಧ್ಯನೇ?

ಮರುಳಾ : ಹೌದು ಬುದ್ಧಿ... ನಾನು...

ಉದ್ದಾನ : ಏನಪ್ಪಾ ಪರೀಕ್ಷೆಯೆಲ್ಲಾ ಆಯ್ತಾ?

ಮರುಳಾ : ಆಯ್ತು ಬುದ್ಧಿ. ನಾಳೆಗೆ ಶಿವಗಂಗೆಯವರೆಗೆ ನಮ್ಮನ್ನು ಬಿಡ್ತೀನಿ ಅಂದ್ರು ಶಿವಗಂಗೆಯವ್ರು. ಅಲ್ಲಿಂದ ಹಾಲೇನಹಳ್ಳಿಗೆ ನಡೆದು ಹೋಗ್ತೀವಿ.

ಉದ್ದಾನ : ಯಾಕೆ ಕುದುರೆ ಮೇಲೆ ಹೋಗಬಹುದಲ್ಲಾ.

ಮರುಳಾ : ಯಾವುದೂ ಇಲ್ಲದೇ ಇದ್ರೆ ಹಾಗೇ ಮಾಡ್ತಿದ್ದೆ. ಈಗೇನು ಪರವಾಗಿಲ್ಲ ಬಿಡಿ ಬುದ್ಧಿ...

ಉದ್ದಾನ : ಮತ್ತೆ ಬರೋ ಬಗೆ ಹೇಗೆ?

ಮರುಳಾ : ಆಗ್ಲೂ ಹೀಗೆ ಯಾರಾದ್ರೂ ಸಹಾಯ ಸಿಕ್ಕಬಹುದು, ತಮ್ಮ ಅಪ್ಪಣೆಗೆ ಬಂದಿದ್ದೇನೆ.

ಉದ್ದಾನ : ಹೋಗಿ ಬಾರಪ್ಪ. ಊರಿಗೋಗೋದನ್ನ ಬೇಡ ಅನ್ನಿಕ್ಕಾಗುತ್ಯೇ? ಅಂದ ಹಾಗೆ ನಿನ್ನಲ್ಲಿ ಒಂದು ಮುಖ್ಯವಾದ ವಿಷಯ ಮಾತಾಡ್ಬೇಕಾಗಿತ್ತು.

ಮರುಳಾ : ಅದೇನು ಬುದ್ಧಿ?

ಉದ್ದಾನ : ನನಗೂ ದಿನದಿನಕ್ಕೆ ಶಕ್ತಿ ಕುಂದುತ್ತಾ ಬಂದಿದೆ. ಇನ್ನು ಮಠದ ಕಾರುಬಾರನ್ನು...

ಮರುಳಾ : ಯಾರ ಮೇಲೆ ಹೊರಿಸಬೇಕು ಅಂತ ಮನಸ್ಸು ಮಾಡಿದ್ದೀರಿ?

ಉದ್ದಾನ : ಮಾಡಿದ್ದೇನೆ.

ಮರುಳಾ : ಅದ್ಯಾರು? .

ಉದ್ದಾನ : ನೀನೇ, ನಿನ್ನನು ನೋಡಿದಾಗಿನಿಂದಲೂ ನನಗೇನೋ ಒಂದು ರೀತಿ ಆಕರ್ಷಣೆ. ನಿನ್ನ ಮುಖದ ಭಾವ ನೋಡಿದರೆ ನೀನೇ ಯೋಗ್ಯನೆಂದು ನಿಶ್ಚಯಿಸಿರುವೆ. ಇದನ್ನು ನಡೆಸಿಕೊಡುತ್ತೀಯಾ?

ಮರುಳಾ : ಬುದ್ಧಿ... ಇದೇನು ನೀವು ಹೇಳ್ತಿರುವುದು?

ಉದ್ದಾನ : ಚೆನ್ನಾಗಿ ಆಲೋಚಿಸಿ ನೋಡು!

ಮರುಳಾ : ಆಗಲಿ ಬುದ್ಧಿ... ಯೋಚನೆ ಮಾಡುತ್ತೇನೆ.

ಉದ್ದಾನ : ಸರಿ ನೀನು ಊರಿಗೆ ಹೋಗಿ ಬಾ ಮರುಳಾರಾಧ್ಯ.

ಮರುಳಾ : ಆಗಲಿ ಬುದ್ಧಿ (ಹೊರಡುತ್ತಾ). ಪ್ರಪಂಚದಲ್ಲಿ ಹುಟ್ಟಿದ ಜೀವ ಸಾರ್ಥಕವಾಗಬೇಕಾದರೆ ಮದುವೆ ಆಗಲೇಬೇಕೇ? ಅದೆಷ್ಟು ಜನ ಸನ್ಯಾಸಿಗಳಾಗಿಲ್ಲ. ನಾನೂ ಏಕೆ ಸನ್ಯಾಸಿಯಾಗಬಾರದು? ನಾನು ಸನ್ಯಾಸಿಯಾಗುತ್ತೇನೆ. ಮದುವೆ ಬೇಡ... ಸನ್ಯಾಸತ್ವವೇ ನನಗೆ ದಾರಿ.

## ದೃಶ್ಯ-೧೩

(ಉದ್ದಾನ ಶಿವಯೋಗಿಗಳು ಆ ಮಠದ ಆವರಣದಲ್ಲಿ ನಿಂತಿರಲು ಇಬ್ಬರೂ ಸಾಷ್ಟಾಂಗವೆರಗುವರು)

ಉದ್ದಾನ : ಏನು... ಶಿವಪ್ರಸಾದವನ್ನು ಸ್ವೀಕರಿಸಿದ್ರಾ...?

ಸುಬ್ಬಣ್ಣ : (ಆನಂದದ ಭರದಲ್ಲಿ) ಸ್ವೀಕರ್ಸಿ ಸಂತೃಪ್ತಿ ಹೊಂದಿದ್ದಾಯಿತು. ಗುರುಗಳೇ, ನಿಮ್ಮಂತಹ ತಂದೆಯನ್ನು ನೋಡಿದ ನಾವೇ ಧನ್ಯರು... ನಾವೇ ಧನ್ಯರು.

ಉದ್ದಾನ : ಅದರಲ್ಲಿ ನನ್ನದೇನಪ್ಪಾ? ಎಲ್ಲಾ ಆ ಸಿದ್ಧಲಿಂಗನ ಕೃಪೆ.

ಸುಬ್ಬಣ್ಣ : ಗುರುವೇ... ನಿಮ್ಮ ಪಾದ ಸ್ಪರ್ಶ ಮಾಡಿದ ನಾವೇ ಧನ್ಯರು!

ಸುಬ್ಬಮ್ಮ : ಗುರುವೇ... ಗುರುವೇ-

(ಎಂದು ಹೇಳಿ ಪಾದದಲ್ಲೇ ಐಕ್ಯವಾಗಲು)

ಸುಬ್ಬಣ್ಣ : (ಕೈನಾಡಿ ನೋಡಿ) ಸುಬ್ಬೀ... ಸುಬ್ಬೀ... (ಚೀರುವನು)

ಉದ್ದಾನ : ಸುಬ್ಬಮ್ಮ ಈ ಲೋಕವನ್ನು ತ್ಯಜಿಸಿ ಪರಲೋಕ ಸೇರಿದ್ದಾಳೆ.

ಸುಬ್ಬಣ್ಣ : ಗುರುವೇ... ಗುರುವೇ...

ಉದ್ದಾನ : ಸಿದ್ಧಗಂಗಾ ತೀರ್ಥವನ್ನು ತೆಗೆದುಕೊಂಡು ಬನ್ನಿ.

(ಹೋಗಿ ತರುವನು. ಅದನ್ನು ಬಾಯಿಗೆ ಹಾಕಲು)

ಸುಬ್ಬಮ್ಮ : ಸ್ವಾಮಿ... ಬುದ್ಧಿ....

ಉದ್ದಾನ : ಕಣ್ಬಿಡಮ್ಮ... ಮೇಲೇಳು.

ಸುಬ್ಬಣ್ಣ : ಎಲ್ಲಾ ನಿಮ್ಮ ದಯೆ ಗುರು.

ಉದ್ದಾನ : ಅಲ್ಲ, ಸಿದ್ಧಗಂಗಾ ಮಹಾತ್ಮೆ.

(ದುಃಖದಲ್ಲಿ ಕುಳಿತ ಸುಬ್ಬಿ ಮತ್ತು ಸುಬ್ಬಣ್ಣನನ್ನು ಕುರಿತು)

ಉದ್ದಾನ : ಸುಬ್ಬಣ್ಣ ಏನು ಚಿಂತೆ ಮಾಡ್ತಾ ಕುಳಿತೆ?

ಸುಬ್ಬಣ್ಣ : ನಾನೇನು ಮಾಡಬೇಕು ಅಂತ್ಲೇ ತೋಚ್ತಾ ಇಲ್ಲ ಉದ್ದಾನಪ್ಪ ನವ್ರೇ.

ಉದ್ದಾನ : ಅಯ್ಯೋ ಪೆಚ್ಚ ಹೋಗು. ಈ ದುಃಖವನ್ನು ಕಳೆಯಲು ಬೇಕಾದಷ್ಟು ಮಾರ್ಗಗಳಿವೆ.

ಸುಬ್ಬಣ್ಣ : ನನಗೇನೂ ತಿಳಿಯದು ಗುರುವೇ

ಉದ್ದಾನ : ಕಾಯಕವೇ ಕೈಲಾಸ ಅಂತ ಕೆಲಸದಿಂದ, ಈ ಮಠದ ಕೆಲಸದಿಂದ ದಾಸೋಹ ಕೆಲಸಗಳನ್ನು ನಿರ್ವಹಿಸುವುದರಿಂದ ನಿನ್ನ ದುಃಖ ಹೋಗುವುದಲ್ಲದೆ ಮುಕ್ತಿ ಮಾರ್ಗ ದೊರೆಯುವುದು.

ಸುಬ್ಬಣ್ಣ : ನನಗಾರೂ ದಿಕ್ಕಿಲ್ಲ, ನನ್ನಿಂದ ಏನೂ ಪ್ರಯೋಜನವಿಲ್ಲ ಅಂತಿದ್ದೆ. ಈಗ ತಾವು ಹೇಳಿದ ಮೇಲೆ ಸ್ವಲ್ಪ ಧೈರ್ಯ ಬಂತು.

ಉದ್ದಾನ : ಸರಿ ನಡೆಯಿರಿ. ನೀವು ಈಗಲೇ ಮಠದ ಅಡಿಗೆ ಕೆಲಸದ ಮೇಲ್ವಿಚಾರಣೆ, ಸಿದ್ಧಲಿಂಗನ ಪೂಜೆ ನಡೆಸಿಕೊಂಡು ಮಠದಲ್ಲಿ ಇದ್ದುಬಿಡಿ.

ಸುಬ್ಬಣ್ಣ : ಆಗಲೀ ಬುದ್ದಿ... ಬರ್ತೇವೆ... ತಾವು ಏನು ಹೇಳಿದರೂ ನಾನು ಮಾಡಲು ಸಿದ್ಧ.

ಉದ್ದಾನ : ಯಾವಾಗಲೂ ದುಃಖ-ಸಂತೋಷ ಋತುಗಳು ಬದಲಾದಂತೆ, ಬಿಸಿಲು, ಚಳಿ, ಮಳೆ, ಗಾಳಿ ಅಂತ ಹೆದರಬಾರದು. ಎಲ್ಲವನ್ನೂ ಸ್ಥೈರಣೆ ತಂದುಕೊಂಡು ಹೋಗಬೇಕು. ಜೀವನದಲ್ಲಿ ಎಲ್ಲವನ್ನೂ ಸ್ವಾಗತಿಸಿ ನಿಭಾಯಿಸಬೇಕು.

ಸುಬ್ಬಣ್ಣ : ಆಗಲೀ ಬುದ್ಧಿ... ತಮ್ಮಂಥವರ ಸೇವೆ, ಸಿದ್ಧಲಿಂಗನ ದರ್ಶನ ಸದಾ ಆಗುತ್ತಿದ್ದರೆ ಅದಕ್ಕಿಂತ ಹಿರಿದೊಂದು ನನಗಿಲ್ಲ. ಬರುತ್ತೇನೆ.

ಉದ್ದಾನ : ಸರಿ ನಡೆ...

ಸುಬ್ಬಣ್ಣ : ಆಗಲೀ ಬುದ್ಧಿ...

## ದೃಶ್ಯ-೧೪

(ಸಿಡುಬು ತಗಲಿ ಹಾಸಿಗೆ ಹಿಡಿದಿದ್ದ ಮರುಳಾರಾಧ್ಯರ ಹತ್ತಿರಕ್ಕೆ ಬಂದರು ತಿಳಿಯದ ಉದ್ದಾನಪ್ಪನವರು)

ಉದ್ದಾನಪ್ಪ : ಏನು ಕುದುರೆ ಸವಾರಿ ಮುಗೀತೇ? ಸವಾರಿ ಚೆನ್ನಾಗಿಯೇ ಆಗಿರಬೇಕು ಅಲ್ಲವೇ ಮರುಳಾರಾಧ್ಯರೇ?

ಮರುಳಾ : ಕುದುರೆಯ ಮೇಲೆ ಕುಳಿತು ಲಗಾಮು ಹಿಡಿದು ಠೀವಿಯಿಂದ ಹೋಗ್ತಾ ಇದ್ದ ಮರುಳಾರಾಧ್ಯನಿಗೆ ಅವಸಾನ ಕಾಲ ಬಂತು.

ಉದ್ದಾನಪ್ಪ : ಗುರುಗಳಿಗೂ ಹೀಗಾಗಬೇಕೇ?

ಮರುಳಾ : (ದುಗುಡದಿಂದ) ಗುರುವೇ ನನ್ನ ಹತ್ತಿರ ಬರಬೇಡಿ...

ಉದ್ದಾನ : ಏಕೆ? ನಿನ್ನ ಮುಖದಲ್ಲಿ ಹುಮ್ಮಸ್ಸು, ತೇಜಸ್ಸು, ಠೀವಿಗಳು ಕಳೆಯಿತು, ಮರುಳಾರಾಧ್ಯ... ನಾನು ಹೇಳಿದ ಮಾತನ್ನು ಕೇಳಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು?

(ಮತ್ತೆ ಹತ್ತಿರ ಹೋಗಿ)

ಎಲ್ಲಿ? ಏನಾಗಿದೆ? ನೋಡೋಣ...

ಮರುಳಾ : ಗುರುವೇ ನನ್ನ ಹತ್ತಿರ ಬರಬೇಡಿ...

ಉದ್ದಾನ : ಏನಾಗಿದೇ...? ಎಲ್ಲಿ ನೋಡೋಣ.

ಮರುಳಾ : ಗುರುವೇ... ಮುಟ್ಟಬೇಡಿ... ನನಗೆ ಸಿಡುಬು...

ಉದ್ದಾನ : (ಬೆಪ್ಪಾಗಿ) ಹ್ಞಾಂ...! ಅಮ್ಮ... ಸಿಡುಬು... ನನ್ನ ಶಿಷ್ಯನಾದ ನಿನಗೆ...

ಮರುಳಾ : ಹೌದು ಗುರು... ಇದು ದೈವ ಸಂಕಲ್ಪ. ಅದರಲ್ಲಿ ಯಾರ ತಪ್ಪಿದೆ? ಆಗಲೇ ಅನೇಕರು ಸಿಡುಬಿನ ಭಯದಿಂದ ದೇವಿ ಹಾಕಿಸಿಕೊಳ್ಳಿ ಎಂದು ಹೇಳಿದರು. ಆದರೆ ನಾನು ಅದಕ್ಕೆ ಕಿವಿಗೊಡಲಿಲ್ಲ.

ಉದ್ದಾನ : ಯಾವಾಗಲೂ ನಿನ್ನದು ಪ್ರಚಂಡತನವಪ್ಪಾ...

ಮರುಳಾ : ಇದು ವಿಪರೀತವಾಗಿದೆ ಗುರು...! ನೀವು ದೂರ ಸರಿಯಿರಿ.

ಉದ್ದಾನ : ಪೆಚ್ಚಾ... ಸನ್ಯಾಸಿಯನ್ನೇನು ಮಾಡುವುದು? ಸುಮ್ಮನಿರು.

ಮರುಳಾ : ಗುರುವೇ ನನ್ನ ಸ್ಥಿತಿಯನ್ನು ನೋಡಲು ಅಸಾಧ್ಯವಾಗಿದೆ... ನನಗೆ ಮುಕ್ತಿ ದೊರೆಯುವಂತೆ ನಿಮ್ಮ ಕೊನೆಯ ಆಶೀರ್ವಾದವನ್ನು ನೀಡಿ...ನಾನು ನನ್ನೂರಿಗೆ ಪ್ರಯಾಣ ಬೆಳೆಸುವೆನು.

ಉದ್ದಾನ : ಸುಮ್ಮನಿರು ನಾನು ಔಷಧಿ ಮಾಡುತ್ತೇನೆ.

ಮರುಳಾ : ಗುರುವೇ... ಗುರುವೇ... ಶರಣು... ಶರಣು...

(ಗುರುಗಳು ಉದ್ಧರಣೆಯಿಂದ ನೀರನ್ನು ಹಾಕಲು ಬಾಯಿಯಿಂದ ಹೊರಹೊಡಿತು)

ಉದ್ದಾನ : ಅಯ್ಯೋ ಮರುಳಾರಾಧ್ಯಾ... ಶಿಷ್ಯನ ಸಾವನ್ನು ಗುರುವೇ ನೋಡು-ವಂತಾಯಿತೇ? ವಿಚಿತ್ರ ವಿಧಿಯೇ? ಪಟ್ಟಾಧಿಕಾರವನ್ನು ವಹಿಸಿಕೊಂಡು ಅಲ್ಪಕಾಲದಲ್ಲಿಯೇ ಹೀಗಾಗಬೇಕೇ? ಗುರುವಿನ ಬಾಯಿಗೆ ನೀರು ಬಿಡುವ ನೀನೇ ನನ್ನಿಂದ ನೀರನ್ನು ಸ್ವೀಕರಿಸಿದೆಯಾ? ಮರುಳಾರಾಧ್ಯ... ನಿನ್ನ ಹಿಂದಿನ ರೀತಿ, ತೇಜಸ್ಸು, ದೃಢ ಸಂಕಲ್ಪಗಳು ಇನ್ನೂ ನನ್ನ ಹೃದಯದಲ್ಲಿ ಬೇರೂರಿ ನಿಂತಿದೆ. ಅಯ್ಯೋ, ನಿನ್ನಂಥ ಶಿಷ್ಯನನ್ನು ಮರೆಯುವ ವಿಧಾನವಾದರೂ ಹೇಗೆ?

(ಕಣ್ಣುಗಳಲ್ಲಿ ನೀರು ಹರಿಯುವುದು)

* * *

## ದೃಶ್ಯ-೧೫

(ಉದ್ದಾನಪ್ಪನವರು ಖಾಯಿಲೆಯಲ್ಲಿ ಮಲಗಿರಲು ಅಲ್ಲಿಗೆ ದೇವಪ್ಪಗೌಡರು ಪ್ರವೇಶಿಸುವರು)

ಉದ್ದಾನ : ದೇವಪ್ಪಗೌಡರೇ... ಯಾವಾಗ ಬಂದಿರಿ? ಬನ್ನಿ...

ದೇವಪ್ಪ : ಇದೇ ತಾನೇ ಬಂದೇ ಗುರು.

ಉದ್ದಾನ : ನಮ್ಮಿಬ್ಬರಿಗೂ ಗುರು ಶಿಷ್ಯರ ನಿಕಟ ಸಂಬಂಧವು ಇದ್ದುದರಿಂದಲೇ ನೀವು ನಾನು ಇಹಲೋಕವನ್ನು ತ್ಯಜಿಸುವ ಮೊದಲೇ ಬಂದಿರುವುದು.

ದೇವಪ್ಪ : ಹಾಗೆಲ್ಲಾ ಅನ್ಬೇಡಿ ಗುರು. ನಮ್ಗೆಲ್ಲಾ ಧೈರ್ಯ ಕೊಡುವ ನೀವೇ ಹೀಗೆ ಅಂದರೆ ಹೇಗೆ?

ಉದ್ದಾನ : ಊರಲ್ಲಿ ಎಲ್ಲರೂ ಕ್ಷೇಮವೇ?

ದೇವಪ್ಪ : ಎಲ್ಲರೂ ಕ್ಷೇಮವಾಗಿಯೇ ಇದ್ದಾರೆ ಗುರು. ಇದು ತಮ್ಮ ಆಶೀರ್ವಾದವ ಬಲ, ಸಿದ್ಧಲಿಂಗನ ಕೃಪೆ.

ಉದ್ದಾನ : ಇಂದು ಧನುರ್ಮಾಸದ ಶುದ್ಧ ಶನಿವಾರ... ಇಂದೇ ನನ್ನ ಪ್ರಯಾಣಕ್ಕೆ ಯೋಗ್ಯವಾದ ದಿನ. ಇನ್ನು ಕೆಲವು ಘಳಿಗೆಯಲ್ಲೇ ನಿಮ್ಮನ್ನಗಲಿ ಇಹಲೋಕವನ್ನು ತ್ಯಜಿಸುವೆ ದೇವಪ್ಪಾ...

ದೇವಪ್ಪ : (ಕಣ್ಣೀರಿಂದ) ಗುರುವೇ... ನಿಮ್ಮ ದರ್ಶನವಿಲ್ಲದೆ ಇರುವುದಾದರೂ ಹೇಗೆ? ನಿಮ್ಮನ್ನಗಲಿರುವುದು ಬಹಳ ಕಷ್ಟ ಗುರು...

ಉದ್ದಾನ : ಮಣ್ಣಿನ ಕಾಯ ಮಣ್ಣಿಗೆ... ಇದಕ್ಕೇಕೆ ಕಣ್ಣೀರಿಡುತ್ತೀಯೆ ದೇವಪ್ಪಾ...?

ದೇವಪ್ಪ : ಸಂಕಟವು ಉಕ್ಕಿ ಬಂದಾಗ ಕಣ್ಣೀರು ತಾನಾಗಿಯೇ ಹರಿಯುತ್ತದೆ ಏನು ಮಾಡಲಿ ಗುರು?

ಉದ್ಯಾನ : ಗುರುಶಿಷ್ಯರ ನಿಕಟ ಸಂಬಂಧ.

ದೇವಪ್ಪ : ಹೌದು ಗುರು... ನಿಮ್ಮಲ್ಲಿ ನನಗೆ ಅಪಾರ ಗೌರವವಿದೆ, ಭಕ್ತಿಯಿದೆ, ಪ್ರೀತಿಯಿದೆ. ಆದುದರಿಂದಲೇ ನಿಮ್ಮ ಈ ಖಾಯಿಲೆಯ ಸಮಯದಲ್ಲಿ ಸಿದ್ಧಲಿಂಗನು ನನ್ನನ್ನು ಇಲ್ಲಿಗೆ ಬರಮಾಡಿದ್ದಾನೆ.

ಉದ್ಯಾನ : ನಾನು ತೆರಳಬೇಕು... ನನ್ನನ್ನು ಆ ಸಿದ್ಧಲಿಂಗನಲ್ಲಿಗೆ ಕರೆದುಕೊಂಡು ನಡೆ.

ದೇವಪ್ಪ : ಇದೇನು ಗುರುದೇವಾ ತಾವು ಹೇಳುತ್ತಿರುವುದು... ದೇಹವು ಖಾಯಿಲೆಯಿಂದ ಕೃಶವಾಗಿದೆ... ನೀವು ಹತ್ತಲಾರಿರಿ... ಬೆಟ್ಟಕ್ಕೆ ಹೋಗಲು ಸಾಧ್ಯವಿದೆಯೇ...?

ಉದ್ಯಾನ : ಅಯ್ಯೋ ಹುಚ್ಚಾ ಸಿದ್ಧಲಿಂಗನೇ ಬಿನ್ನವತ್ತಳೆಯಿತ್ತು ಕರೆಯುವಾಗ ಅದು ಸಾಧ್ಯವಾಗದೇ? ಆ ಸಿದ್ಧಲಿಂಗಾಮೃತವನ್ನು ಕುಡಿದು ಸಿದ್ಧಲಿಂಗನೊಂದಿಗೆ ತೆರಳುವೆ.

(ಹೆಗಲ ಮೇಲೆ ಕೈ ಹಾಕಿಸಿಕೊಂಡು ದೇವಪ್ಪಗೌಡರು ದೇವಾಲಯಕ್ಕೆ ಹೊರಡುವರು. ದಾರಿಯಲ್ಲಿ)

ಧ್ವನಿ : ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಮಂಗಳ ವಾದ್ಯಗಳು ಮೊಳಗಲಿ.
"ಓಂ ನಮಃ ಶಿವಾಯ"ವೆಂಬ ಮಂತ್ರ ಘೋಷಣೆಯು





# ಶ್ರೀ ರೇವಣ ಸಿದ್ಧೇಶ್ವರ ಮಹಾತ್ಮ್ಯ

**ಪಾತ್ರವರ್ಗ**

೧. ರೇವಣಸಿದ್ಧ ೨. ದಧೀಚಿ-ಋಷಿ ೩. ಕೌಶಿಕ-ಋಷಿ ೪. ಅತ್ರಿ-ಋಷಿ ೫. ಪೂಜಾರಿ ೬. ಪಿಚ್ಚಯ್ಯ-ಹಾಸ್ಯ ಪಾತ್ರ ೭. ನೆಚ್ಚಯ್ಯ-ಹಾಸ್ಯ ಪಾತ್ರ ೮. ಬಿಜ್ಜಳ-ರಾಜ ೯. ಕೆಂಪರಾಜ-ಹಾಸ್ಯ ಪಾತ್ರ ೧೦. ಸೋಮರಾಜ-ಹಾಸ್ಯ ಪಾತ್ರ ೧೧. ಚೋಳರಾಜ ೧೨. ಗೋರಕ್ಷ ೧೩. ರಾಜೇಂದ್ರ ಚೋಳ ೧೪. ರುದ್ರಮುನಿ ೧೫. ಪಂಡಿತಾರಾಧ್ಯ ೧೬. ವಿಶ್ವಾರಾಧ್ಯ ೧೭. ಮರುಳಾರಾಧ್ಯ ೧೮. ಏಕೋರಾಮರಾಧ್ಯ

**ಭಕ್ತ ವೃಂದ**

೧. ಮಾಯಾದೇವಿ ೨. ರೇವಣಾಂಬೆ ೩. ಚಿಕ್ಕಲಕ್ಕಾದೇವಿ ೪. ಹಿರೇಲಕ್ಕಾದೇವಿ ೫. ಕುಲಶೇಖರಿ ೬. ಸೌಂದರದೇವಿ

## ಘಟ್ಟ ೧

(ಶ್ರೀ ಶೈಲದ ಉತ್ತರ ಭಾಗದ ಕೊಲ್ಲಿಪಾಕಿಯ ಸೋಮನಾಥ ದೇವಾಲಯದಲ್ಲಿ ಪೂಜೆ ನಡೆಯುತ್ತಿದೆ. ಜನರು ಸ್ತೋತ್ರ ಮಾಡುತ್ತಿದ್ದಾರೆ. ಘಂಟೆ-ತಮ್ಮಟೆಗಳು ಇದ್ದಕ್ಕಿದ್ದಂತೆ ಹೊಡೆಯಲಾರಂಭಿಸುವುವು. ಲಿಂಗವು ಬಿರಿಯುವ ಶಬ್ದಕ್ಕೆ ಜನಸ್ತೋಮವು ಬೆಚ್ಚಿಬೀಳಲು ರೇವಣರು ಉದಿಸಿ ಬರುವರು.)

ಅಶರೀರವಾಣಿ : "ಎಲೈ ಭಕ್ತವೃಂದವೇ ಈ ಶುಭ ದಿವಸದಲ್ಲಿ ನೀವು ಮಾಡಿದ ಸೋಮೇಶ್ವರ ಲಿಂಗದ ಪೂಜೆಗೆ ಮೆಚ್ಚಿ ಪರಶಿವನು ತನ್ನ ಸದ್ಯೋಜಾತ ಮುಖದಿಂದ ಉದ್ಭವಿಸಿದ ರೇಣುಕ ಗಣಾಧೀಶ್ವರನನ್ನು ಇಂದು ಭೂಲೋಕಕ್ಕೆ ಶಿವಧರ್ಮ ಉದ್ಧಾರ ಮಾಡಲೆಂದು ಕಳುಹಿಸುತ್ತಿರುವನು. ಈ ಮಹಾತ್ಮನ ಅವತಾರವು ಈ ಶ್ರೀಶೈಲದ ಉತ್ತರ ಭಾಗದ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಿಂದ ನೆರವೇರುತ್ತಿದೆ. ನೀವೆಲ್ಲರೂ ಈತನ ದರ್ಶನವನ್ನು ಮಾಡಿ ಪುಣ್ಯ ಪಡೆಯಿರಿ.

(ರೇವಣಸಿದ್ಧರು ಬರುತ್ತಿರಲು)

ಜನಸ್ತೋಮ : ಗುರುವೇ ತಮ್ಮ ಪರಿಚಯವನ್ನು ಮಾಡಿ ಈ ಸೃಷ್ಟಿಯ ಔಚಿತ್ಯವನ್ನು ತಿಳಿಸಿ ದೇವ.

ರೇವಣಸಿದ್ಧ : ಪರಶಿವನ ಪಂಚಮುಖಗಳಿಂದ ಕೃತಯುಗದಲ್ಲಿ ಏಕಕ್ಷರ, ದ್ವಕ್ಷರ, ತ್ರ್ಯಕ್ಷರ, ಚತುರಕ್ಷರ, ಪಂಚಾಕ್ಷರ, ಶಿವಾಚಾರ್ಯರಾಗಿಯೂ, ತ್ರೇತಾಯುಗದಲ್ಲಿ ಏಕವಕ್ತ್ರ, ದ್ವಿವಕ್ತ್ರ, ತ್ರಿವಕ್ತ್ರ, ಚತುರ್ವಕ್ತ್ರ, ಪಂಚವಕ್ತ್ರ ಶಿವಾಚಾರ್ಯರಾಗಿಯೂ, ದ್ವಾಪರ ಯುಗದಲ್ಲಿ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ, ವಿಶ್ವಕರ್ಣ ಶಿವಾಚಾರ್ಯರಾಗಿಯೂ, ಕಲಿಯುಗದಲ್ಲಿ ರೇವಣ, ಮರುಳ, ಏಕೋರಾಮ, ಪಂಡಿತ, ವಿಶ್ವಾರಾಧ್ಯರಾಗಿಯೂ ಉದಿಸಿದೆವು. ನಾನು ಈಗ ಈಶನಾಣತಿಯ ಮೇರೆಗೆ ನನ್ನ ಈ ಕೊನೆಯ ಅವತಾರವನ್ನು ತಾಳಿದ್ದೇನೆ. ನಾನೇ ರೇವಣಸಿದ್ಧ!

ಭಕ್ತರು : ತಮ್ಮಂಥ ಮಹಾನುಭಾವರ ದರ್ಶನದಿಂದ ನಾವು ಪುಣ್ಯ ಪುನೀತರಾದೆವು. ರೇವಣಸಿದ್ಧೇಶ್ವರರಿಗೇ ರೇವಣಸಿದ್ಧೇಶ್ವರರಿಗೇ ಉಘೇ... ಉಘೇ...

## ಘಟ್ಟ ೨

ದಧೀಚಿ : ಶರಣು ಶರಣು ಏನು ಕೌಶಿಕರೇ, ಸ್ನಾನ, ಸಂಧ್ಯಾವಂದನೆ ಎಲ್ಲಾ ಮುಗಿದುವೇ?

ಕೌಶಿಕ : ಎಲ್ಲವೂ ಮುಗಿದುವು. ದಧೀಚಿ ಮಹರ್ಷಿಗಳೇ.

ದಧೀಚಿ : ಕೌಶಿಕರೇ ರಾತ್ರಿ ನನಗೊಂದು ಕನಸು ಆಯಿತು.

ಕೌಶಿಕ : ಅದೇನು ಅಂತಹ ಆಶ್ಚರ್ಯವಾದುದು?

ದಧೀಚಿ : ರಾತ್ರಿ ಕನಸಿನಲ್ಲಿ ಈಶನು ರೇವಣಸಿದ್ಧರೆಂಬ ಪ್ರಮಥ ಗಣಾಧೀಶರು ಇಲ್ಲಿಗೆ ಬರುವರೆಂಬ ಆಮಂತ್ರಣವಿತ್ತು ಹೋದಂತಾಯ್ತು. ಅದಕ್ಕಾಗಿ ನಾವು ಆಶ್ರಮದಲ್ಲಿ ಸಕಲ ಸಿದ್ಧತೆಗಳನ್ನು ಮಾಡಿ ಅವರಿಗಾಗಿ ಸುಸ್ವಾಗತವನ್ನು ಬಯಸಬೇಕು.

ಕೌಶಿಕ : ಆಗಬಹುದು ಮಾಡಿಸೋಣ. ಮಹಾ ಶರಣರು ಆಗಮಿಸುವುದು ಹೆಚ್ಚೋ, ನಾವು ಅತಿಥಿ ಸತ್ಕರಿಸುವುದು ಹೆಚ್ಚೋ? ನಮ್ಮ ಜೀವನವೇ ಇದಕ್ಕೆ ಮುಡಿಪಲ್ಲವೇ?

ದಧೀಚಿ : ನಂದಗಿರಿಯ ಆಶ್ರಮದಲ್ಲಿ ನಾಳೆ ಮಹರ್ಷಿಗಳಿಗೆಲ್ಲಾ ಸುದಿನ.

ಕೌಶಿಕ : ಹೌದು..........

ದಧೀಚಿ : ಸರಿ ನಡೆಯಿರಿ ಬೇಗ ಬೇಗ ಹೋಗಿ ಸಿದ್ಧತೆಗಳನ್ನು ಮಾಡಿಸೋಣ.

ಕೌಶಿಕ : ಆಗಲಿ.

## ಘಟ್ಟ ೩

(ನಂದಗಿರಿಯಲ್ಲಿ ದಧೀಚಿ, ಅತ್ರಿ, ಕೌಶಿಕ ಮಹರ್ಷಿಗಳೆಲ್ಲಾ ಆಶ್ರಮದಲ್ಲಿ ಕುಳಿತು ಚರ್ಚಿಸುತ್ತಿದ್ದಾರೆ.)

ಕೌಶಿಕ : ಅತ್ರಿ ಮುನಿಗಳೇ ರೇವಣಸಿದ್ಧರ ಉದಯ ಮಹಾ ವಿಶೇಷವೆಂದಿರಲ್ಲ ಅದು ಹೇಗಾಯಿತು? ಸ್ವಲ್ಪ ತಿಳಿಸಿ.

ದಧೀಚಿ : ನನಗೆ ತಿಳಿದಿರುವುದನ್ನು ಹೇಳುವೆ ಕೇಳಿ. ಒಂದೊಮ್ಮೆ ಕೈಲಾಸದಲ್ಲಿ ಶಿವನು ಒಡ್ಡೋಲಗಗೊಟ್ಟಿರಲು ನಂದೀಶ, ಭೃಂಗೀಶ, ವೀರಭದ್ರ, ದಾರುಕ, ರೇಣುಕ ದೇವ ಗಂಧರ್ವ ಕಿನ್ನರ ಕಿಂಪುರುಷರಾದಿಯಾಗಿ ನೆರೆದಿದ್ದರು. ಆ ಸಮಯದಲ್ಲಿ ಶಂಕರನು ರೇಣುಕನಿಗೆ ಪ್ರಸಾದ ಅನುಗ್ರಹಿಸಲು ಆತನನ್ನು ಕರೆದನು. ಸಂತೋಷದಿಂದ ಉಬ್ಬಿ ಎದ್ದು ಹೋಗುವ ಸಡಗರದಲ್ಲಿ ರೇಣುಕನು ದಾರುಕನನ್ನ ದಾಟಿದನು. ದಾರುಕನು ತನಗಾದ ಅಪಮಾನವನ್ನು ನೋಡಿ ತಲೆ ತಗ್ಗಿಸಿದನು. ಆಗ ಪರಮೇಶ್ವರನು ಆತನ ವರ್ತನೆ ನೋಡಿ ಕೋಪದಿಂದ ರೇಣುಕನನ್ನು ಭೂಲೋಕದಲ್ಲಿ ಅವತರಿಸೆಂದು ಶಾಪವಿತ್ತ. ಆಗ ರೇಣುಕನು ಬೆಚ್ಚಿ ದೇವಾ ಕ್ಷಮಿಸಿ ನಾನು ಭೂಲೋಕದಲ್ಲಿ ಜನಿಸಲಾರೆ ಎಂದು ಕೇಳಿಕೊಂಡ. ಆಗ ಕೊಲ್ಲಿಪಾಕಿಯ ಸೋಮನಾಥ ಲಿಂಗದಿಂದಲೇ ಅಯೋನಿಜನಾಗಿ ಜನಿಸೆಂದು ಹೇಳಲು ರೇಣುಕರು ಪರಶಿವನಾಜ್ಞೆಯ ಮೇರೆಗೆ ಭೂಲೋಕದಲ್ಲಿ ಉದಿಸಿದರು.

ಅತ್ರಿ : ದಧೀಚಿ ಮಹರ್ಷಿಗಳೇ ನನಗೆ ತಿಳಿದಂತೆ ಅವರು ಶಿವಯೋಗಿ ನಿರ್ಲಜ್ಜಶಾಂತಿಮಯ್ಯನವರ ಕರಸಂಜಾತರೆಂದು ಕೇಳಿದ್ದೇನೆ.

ದಧೀಚಿ : ಅದು ನನ್ನ ದೃಷ್ಟಿಯಲ್ಲಿ ಸುಳ್ಳು.

ಅತ್ರಿ : ಕೌಶಿಕರೇ ನನಗೆ ತಿಳಿಯದು. ಹೀಗೆ, ಸೃಷ್ಟಿ ಮಾಡುವುದಕ್ಕೆ ಮೊದಲು ಚೇತನ, ಅಚೇತನ ಜಗತ್ತು ಪರಬ್ರಹ್ಮನಲ್ಲಿ ಲೀನವಾಗಿತ್ತು. ಅವನಿಂದ ಬ್ರಹ್ಮ ಹುಟ್ಟಿದ. ಆತನು ಸೃಷ್ಟಿ ವಿಚಾರ ತಿಳಿಯದೆ ಶಂಕರನಲ್ಲಿ ಮೊರೆಹೋಗಲು, ಆತನು ಸರ್ವಶಕ್ತಿಯುಳ್ಳ ಅಣಿಮಾದಷ್ಟೈಶ್ವರ್ಯವುಳ್ಳ ನಿತ್ಯ ಸಿದ್ಧರಿಂದ ಪ್ರಮಥರನ್ನು ಸೃಷ್ಟಿಸಿದ. ಆ ಮಲತ್ರಯ ಅಲಿಪ್ತರಾದವರಲ್ಲಿ ಒಬ್ಬರಾದ ನಿತ್ಯ ಮುಕ್ತ ಚೇತನರಾದವರೇ ರೇವಣಸಿದ್ಧರು.

ದಧೀಚಿ : ಈಗ ಅದು ಮುಖ್ಯವಲ್ಲ, ಅವರ ಕಾರ್ಯ ಮುಖ್ಯ.

ಕೌಶಿಕ : ಅದು ನಿಜ.

ಅತ್ರಿ : ಶಿವಧರ್ಮವನ್ನು ಸಾರಲು ಜನಿಸಿದ ದೇವ ಪುರುಷ ಎನ್ನಬಹುದು.

ದಧೀಚಿ : ಒಟ್ಟಿನಲ್ಲಿ ಹೇಳುವುದಾದರೆ ಅವರು ಆಂಧ್ರ, ಕರ್ನಾಟಕ, ತಮಿಳು ನಾಡಿನಲ್ಲೆಲ್ಲಾ ಪ್ರಸಿದ್ಧರಾದ ವಿಭೂತಿ ಪುರುಷರು. ಅವರು ವೀರಶೈವ

ಪಂಚಾಚಾರ್ಯರುಗಳಲ್ಲಿ ಒಬ್ಬರು. ಅತ್ರಿ ಮುನಿವರ್ಯರೇ ನನಗೆ ತಿಳಿದುದನ್ನು ಸ್ವಲ್ಪ ಹೇಳುತ್ತೇನೆ ಕೇಳಿ. ಐದು ಜನ ಆಚಾರ್ಯರಲ್ಲಿ ರೇಣುಕಾಚಾರ್ಯರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಿಂದ ಉದ್ಭವಿಸಿ ರಂಭಾಪುರಿಯಲ್ಲಿ ವೀರಸಿಂಹಾಸನವನ್ನೂ, ಮರುಳ ಸಿದ್ಧಶಿವಾಚಾರ್ಯರು ವಟಕ್ಷೇತ್ರದಲ್ಲಿ ಸಿದ್ಧೇಶ್ವರ ಲಿಂಗದಿಂದುದಿಸಿ ಉಜ್ಜಯಿನೀ ಪುರದಲ್ಲಿ ಸದ್ಧರ್ಮ ಸಿಂಹಾಸನವನ್ನೂ, ಏಕೋರಾಮಾರಾಧ್ಯರು ದ್ರಾಕ್ಷಾರಾಮನಾಥ-ಲಿಂಗದಿಂದುದಿಸಿ ಹಿಮತ್ಕೇದಾರದಲ್ಲಿ ವೈರಾಗ್ಯಸಿಂಹಾಸನವನ್ನೂ, ಪಂಡಿತಾರಾಧ್ಯರು ಸುಧಾಕುಂಡ ಕ್ಷೇತ್ರದಲ್ಲಿ ಮಲ್ಲಿಕಾರ್ಜುನ ಲಿಂಗದಿಂದುದಿಸಿ ಶ್ರೀಶೈಲಸ್ಥಳದಲ್ಲಿ ಸೂರ್ಯ ಸಿಂಹಾಸನವನ್ನೂ, ವಿಶ್ವಾರಾಧ್ಯರು ಕಾಶಿಯ ವಿಶ್ವೇಶ್ವರ ಲಿಂಗದಿಂದುದಿಸಿ ಜ್ಞಾನ ಸಿಂಹಾಸನವನ್ನೂ ಸ್ಥಾಪಿಸಿರುವರು.

ಕೌಶಿಕ : ಇವರ ಗೋತ್ರ ಪುರುಷರು ಯಾರು ಯಾರು ಸ್ವಾಮಿ?

ದಧೀಚಿ : (ನಗುತ್ತಾ) ವೀರ, ನಂದಿ, ಭೃಂಗಿ, ವೃಷಭ, ಸ್ಕಂದರುಗಳು. ಇವರ ಸೂತ್ರ ಶಾಖೆ, ಕಲಶ, ಬೀಜ, ವರ್ಣ ಮತಗಳನ್ನೆಲ್ಲಾ ತಿಳಿಸುವ ಪಟ್ಟಿಯೊಂದನ್ನೇ ತಯಾರಿಸಿರುವೆ ನೋಡಿ.

(ಅಷ್ಟರಲ್ಲಿ ರೇವಣಸಿದ್ಧರು ಬರುವರು)

ಓ ಅದೋ ರೇವಣಸಿದ್ಧರು ಬಂದರೆಂದು ತೋರುತ್ತಿದೆ ಏಳಿ ಏಳಿ ಹೋಗೋಣ ಸ್ವಾಗತಿಸಿ ಕರೆತರೋಣ.

(ಆಗಲಿ ಎಂದು ಮೇಲೆದ್ದು ಎಲ್ಲರೂ ನಮಸ್ಕರಿಸುವರು.)

ದಧೀಚಿ : ಅಷ್ಟು ಹೊತ್ತಿನಿಂದಲೂ ತಮ್ಮ ಸ್ತುತಿಯಿಂದಲೇ ಕಾಲಕಳೆಯುತ್ತಿದ್ದೆವು, ಮಹಾಗುರುವೇ ಆದರೆ ಅದೀಗ ಫಲಿಸಿತು.

ರೇವಣ : "ಮನಸ್ಸಿದ್ದಲ್ಲಿ ಮಹಾದೇವಾ".

ದಧೀಚಿ : ತಮ್ಮ ಪ್ರಯಾಣ ಈಗೆಲ್ಲಿಂದ ಸಾಗಿತು ದೇವಾ?

ರೇವಣ : ಲಂಕೆಯಿಂದ ಬಂದೆ ಮಹರ್ಷಿಗಳೇ, ಕಂಚಿ, ಚಿದಂಬರ, ಕುಂಭಕೋಣ, ಮಧುರೆಯ ಶಿವಕ್ಷೇತ್ರಗಳನ್ನು ಸುತ್ತಿ ಜನರಿಗೆ ಶಿವ ಸಿದ್ಧಾಂತಗಳನ್ನು ಬೋಧಿಸಿದೆ. ಶ್ರೀಶೈಲಕ್ಕೆ ಹೋದಾಗ ಅಲ್ಲಿ ಮಲ್ಲಿಕಾರ್ಜುನನು ಪ್ರತ್ಯಕ್ಷನಾಗಿ ಕಲಿಯುಗದ ಅಧಮರನ್ನು ಸರಿಪಡಿಸಿ ಶಿವಸಿದ್ಧಾಂತವನ್ನು ಬೋಧಿಸುವಂತೆ ಹೇಳಿದ. ಅಲ್ಲಿಂದ ಜಗದ್ಗುರು ಪಂಡಿತಾರಾಧ್ಯರನ್ನು ಸಂಧಿಸಿ ಇಲ್ಲಿಗೆ ಬಂದಿರುವೆನು.

ಅತ್ರಿ : ಅಂದಹಾಗೆ ಲಂಕೆಯಿಂದ ಬಂದೆ ಎಂದು ಹೇಳಿದಿರಿ. ಅಲ್ಲಿನ ವಿಶೇಷವಾದರೂ ಏನು ಗುರುದೇವಾ?

ರೇವಣ : ರಾವಣನು ಸಾಯುವಾಗ ಒಂಬತ್ತು ಕೋಟಿ ಲಿಂಗಗಳನ್ನು ಸ್ಥಾಪಿಸಲು ವಿಭೀಷಣನಲ್ಲಿ ಒಂದು ಅರಿಕೆ ಮಾಡಿಕೊಂಡಿದ್ದನು.

ಅತ್ರಿ : ಸರಿ.

ರೇವಣ : ಬಹಳ ಪ್ರಯತ್ನದಿಂದ ಆರು ಕೋಟಿ ಲಿಂಗಗಳನ್ನು ಸ್ಥಾಪಿಸಿ ಮಿಕ್ಕ ಮೂರು ಕೋಟಿ ಲಿಂಗಗಳ ಸ್ಥಾಪನೆಗೆ ಗುರುಗಳನ್ನು ತರುವುದು ಅಸಾಧ್ಯವಾಗಿರಲು ಆತನ ತಂದೆ ಮಿಶ್ರವಯಸ್ಸನನ್ನು ಕೇಳಿದನು. ಅವರು ನನ್ನನ್ನು ಸ್ಮರಿಸೆಂದು ಹೇಳಲಾಗಿ ಮತ್ಸ್ಯೇಶನ ಪೂಜಿಸಲು ಆಜ್ಞೆ ಇತ್ತರು. ಆದರೆ ಅದು ಆತನ ಕಾಲದಲ್ಲಿ ಆಗಲಿಲ್ಲ. ಅದನ್ನು ವಿರೂಪಾಕ್ಷಸಿದ್ಧ ಎಂಬುವನು ನನ್ನಲ್ಲಿ ಬೇಡಲು ಲಿಂಗ ಜಂಗಮರನ್ನು ಸೃಷ್ಟಿಸಿ ಆತನ ಸಂಕಲ್ಪವನ್ನು ನೆರವೇರಿಸಿ ಬಂದೆ ಋಷಿವರ್ಯರೇ.

ಅತ್ರಿ : ಈ ಕೂಷ್ಮಾಂಡ ಪರ್ವತದ ಮಹಿಮೆಯನ್ನು ಸೂಕ್ಷ್ಮವಾಗಿ ತಿಳಿಸುವಿರಾ ಗುರುವೇ?

ರೇವಣ : ಋಷಿವರ್ಯರೇ ಕೇಳಿ, ಹಿಂದೆ ಪಾರ್ವತಿಯು ಪತಿಯ ಚಿಂತೆಯಲ್ಲಿ ಕುಳಿತಿರಲು ನಂದೀಶ್ವರನು ಶಿವನ ರೀತಿಯಲ್ಲಿ ಆಕೆಗೆ ಕಂಡನು. ಆತನೇ ಪತಿಯೆಂದು ಆಕೆ ಭ್ರಾಂತಿಪಟ್ಟಳು. ಪಾಪವಾಯಿತೆಂದು ಅದನ್ನು ಕಳೆಯಲು ನಂದೀಶನು ಭಯಪಟ್ಟು, ಈ ಪರ್ವತದಲ್ಲಿ ತಪವನ್ನೆಸಗಿ ನಂದಗಿರಿಗೆ ಕೂಷ್ಮಾಂಡ ಪರ್ವತವೆಂದು ಹೆಸರಿಟ್ಟ.

ಅತ್ರಿ : ಇಷ್ಟನ್ನೆಲ್ಲ ಕೇಳಿದ ನಾವೇ ಧನ್ಯರು ಗುರುವೇ.

ರೇವಣ : ಇನ್ನೇನಾದರೂ ಕೇಳುವುದಿದೆಯೇ?

ದಧೀಚಿ : ನಾವು ನಾಲ್ವರೂ ಬ್ರಾಹ್ಮಣ ಋಷಿಗಳು. ನಾಲ್ವರು ಪಂಚಾಚಾರ್ಯರಿಗೆ ಶಿಷ್ಯರಾದೆವು. ಘಂಟಾಕರ್ಣ ಶಿವಾಚಾರ್ಯರಿಗೆ ಬ್ರಾಹ್ಮಣ ಮಹರ್ಷಿಗಳಾದ ವ್ಯಾಸರೂ, ವಿಶ್ವಾರಾಧ್ಯರಿಗೆ ದೂರ್ವಾಸರೂ, ಪಂಡಿತಾರಾಧ್ಯರಿಗೆ ಸಾನಂದರೂ, ಮರುಳಾರಾಧ್ಯರಿಗೆ ದಧೀಚಿಯೂ ಗುರು ಶಿಷ್ಯ ಸಂಬಂಧ ಬೆಳಸಿದರು. ಆದರೆ ನಿಮಗೆ ಯಾರೂ ಶಿಷ್ಯರಾಗಲಿಲ್ಲವಲ್ಲ ರೇವಣ ಸಿದ್ಧೇಶ್ವರಾ...

ರೇವಣ : ನೀವು ಕಂಡ ಹಾಗೇ ನನ್ನಿಂದ ಅಗಸ್ತ್ಯರೇ ಶಿಷ್ಯತ್ವವನ್ನು ಸ್ವೀಕರಿಸಿದರಲ್ಲಾ.

ಅತ್ರಿ : ನಿಮ್ಮ ದರ್ಶನ ದಯೆ ನಮಗೆಲ್ಲಾ ಸದಾ ಇರಲಿ ದೇವಾ.

ರೇವಣ : ತಥಾಸ್ತು!

(ಎಲ್ಲರೂ ನಮಸ್ಕರಿಸುತ್ತಿರುವಲ್ಲಿ ರೇವಣರು ಹೊರಡುವರು)

* * *

## ಘಟ್ಟ ೪

### ದೇವಾಲಯ

(ಮಾಸೂರು ದೇವಸ್ಥಾನಕ್ಕೆ ರೇವಣಸಿದ್ಧರು ಬರುವರು. ದಾರಿಯಲ್ಲಿ ಪೂಜಾರಿಯು ಹೋಗುತ್ತಿರಲು)

ರೇವಣ : ಏನು ಪೂಜಾರಿಗಳೇ ಮುಗಿಯಿತೇ ಪೂಜೆ?

ಪೂಜಾರಿ : ಆಯ್ತಪ್ಪಾ... ಇದೇನು ಕತ್ತಲಾಗುತ್ತಾ ಬಂದಿತು. ನೀನು ಅತ್ತ ಹೋಗುತ್ತಾ ಇದ್ದೀಯೇ?

ರೇವಣ : ಏಕೆ ಹೋಗಬಾರದು?

ಪೂಜಾರಿ : ಭಿಕ್ಷೆ ಗಿಕ್ಷೆ ಮಾಡ್ಕೊಂಡು ಜೀವಿಸ್ಬೇಕು ಅನ್ನೋ ಆಸೆ ಇದ್ಯೋ ಇಲ್ವೋ?

ರೇವಣ : ಏಕೆ ತಂಬಡಿಗಳೇ?

ಪೂಜಾರಿ : ಅದೋ ನೋಡಿ ಅಲ್ಲಿ ಕಾಣುತ್ತಾ ಇದೆಯಲ್ಲಾ ಅವು ಆಲದ ಮರಗಳು. ಅಲ್ಲಿ ಇಬ್ಬರು ರಾಕ್ಷಸ ದಂಪತಿಗಳು ಬೆಳಗಿನ ಹೊತ್ತು ತಿಗಣೆಯ ರೂಪಿನಲ್ಲಿದ್ದು ಮಧ್ಯರಾತ್ರಿ ರಾಕ್ಷಸರಾಗಿ ಹೊರಬಂದು ಗುಳುಂ ಗುಳುಂ ಎಂದು ನುಂಗಿ ಬಿಡ್ತಾರೆ.

ರೇವಣ : ಇದಕ್ಕೆ ಏನು ಕಾರಣ?

ಪೂಜಾರಿ : ಹಿಂದೆ ಒಂದೊಮ್ಮೆ ಪುಣ್ಯಾರಣ್ಯದಲ್ಲಿ ಯಕ್ಷ-ಯಕ್ಷಿಯರು ಋಷಿಗಳ ಮುಂದೆ ರತಿಕ್ರೀಡೆ ಮಾಡಿ ತಪೋಭಂಗ ಮಾಡಿದುದಕ್ಕೆ ಅವರು ತಿಗಣೆಗಳಾಗುವ ಶಾಪ ಕೊಟ್ಟರಂತೆ.

ರೇವಣ : ಆಮೇಲೆ?

ಪೂಜಾರಿ : ಇದುವರೆವಿಗೂ ಇಲ್ಲಿ ಮಲಗಿರುವವರನ್ನಾರನ್ನೂ ಬಿಟ್ಟಿಲ್ಲವಂತೆ ಆ ರಾಕ್ಷಸರುಗಳು. ಇಲ್ಲಿ ಧೈರ್ಯವಾಗಿ ಮಲಗುವ ಗಂಡಸ್ರೇ ಇಲ್ಲ. ಆದ್ರೆ ನೀವು ಇಲ್ಲಿ ಇದ್ದೀರಿ ಪಾಪ ಗೊತ್ತಿಲ್ಲವೇನೋ...

ರೇವಣ : ಗೊತ್ತಿದ್ದರೆ ತಾನೆ ಏನಾಗುತ್ತೆ?

ಪೂಜಾರಿ : ಇದರ ಮೇಲೆ ನಿನ್ನಿಷ್ಟ. ಬೇಗನೆ ಪರಲೋಕಕ್ಕೆ ಹೋಗುವ ಆಸೆ ಇದ್ದರೆ ಮಲಗು.

(ಎಂದು ಪೂಜಾರಿ ಹೊರಡುವನು. ರೇವಣಸಿದ್ಧರು ಅಲ್ಲೇ ಮಲಗುವರು. ನಡುರಾತ್ರಿಗೆ ಆರ್ಭಟಿಸುತ್ತಾ ಭೂತಗಳು ಬರಲು ರೇಣುಕರ ಕೋಪಾಗ್ನಿಗೆ ಸಿಕ್ಕಿ ಕಬ್ಬಿಣದ ಗುಂಡಾದವರು. ರೇವಣಸಿದ್ಧರು ಅದನ್ನೆತ್ತಿಕೊಂಡು ಹೋಗುವರು.)

* * *

## ಘಟ್ಟ ೫

(ರೇವಣಸಿದ್ಧರು ದಾರಿಯಲ್ಲಿ ಬರುತ್ತಾ ಗುಂಡುಗಳನ್ನು ಎಸೆದಾಡುತ್ತಾ)

ರೇವಣ : ಯಕ್ಷ, ಯಕ್ಷಿಯರು ಕಬ್ಬಿಣದ ಗುಂಡು... ಪಾಪ... ರತಿಕ್ರೀಡೆಯ ಫಲದಿಂದ, ನನ್ನ ನೇತ್ರಾಗ್ನಿಗಾಹುತಿಗೆ ಸಿಲುಕಿ ಹೀಗಾದಿರಿ. ನಿಮ್ಮನ್ನಿಷ್ಟಕ್ಕೇ ಬಿಡುವುದಿಲ್ಲ. ಕಮ್ಮಾರನಿಂದ ಕೆಂಪಾಗಿ ಕಾಯಿಸಿ ಕೂರಲಗನ್ನು ನಿರ್ಮಿಸಿ ಉಜ್ಜಯಿನಿಯ ವಿಕ್ರಮನಿಗೊಪ್ಪಿಸುತ್ತೇನೆ. ಆತನ ಜೊತೆಯಲ್ಲಿ ಕೈಲಾಸವನ್ನು ಸೇರಿ ನಿಮ್ಮ ಹಿಂದಿನ ಸ್ಥಾನವನ್ನು ಪಡೆಯುವಂತೆ ಮಾಡುತ್ತೇನೆ. ಅಷ್ಟರತನಕ ಅಸಾಮಾನ್ಯ ಖಡ್ಗವೆಂದು ಖ್ಯಾತಿ ಹೊಂದಿ, ಅರಿಗಳ ಮುಂಡಗಳನ್ನು ಚೆಂಡಾಡಿಸಿ ಜಯಭೇರಿ ಹೊಡೆಸಿ ಸ್ವರ್ಗಕ್ಕೆ ಹೋಗುವಾಗ ಮತ್ತೆ ನೀವು ಯಕ್ಷರೂಪ ಹೊಂದುವಿರಿ.

(ನಗುತ್ತಾ ಹೊರಡುವನು)

## ಘಟ್ಟ ೬

(ಮಾಯಾದೇವಿ ಅಡ್ಡೇ ನೀರನ್ನು ಹೊತ್ತು ಬೆವರುತ್ತಾ ರಸ್ತೆಯಲ್ಲಿ ಬರುತ್ತಿರಲು)

ರೇವಣ : ಏನು ತಾಯೇ ಅಡ್ಡೇ ನೀರು ಹೊತ್ತುಕೊಂಡು ಹೋಗ್ತೀರಿ. ಪಾಪ ಸುಸ್ತಾಗಿದ್ದೀರಿ ಅಂತ ಕಾಣುತ್ತೆ. ನಾನು ಹೊತ್ಕೊಂಡು ಬರುತ್ತೇನೆ ಕೊಡಿ ತಾಯಿ.

ಮಾಯಾದೇವಿ : ಯಾರಪ್ಪಾ ನೀನು?

ರೇವಣ : ಯಾರಾದ್ರೇನಮ್ಮಾ ನಾನೊಬ್ಬ ಮನುಷ್ಯ.

ಮಾಯಾ : ಏನು ಕೆಲ್ಸ ಮಾಡೋದು?

ರೇವಣ : ಭಿಕ್ಷೆ ಮಾಡಿ ಜೀವನ ಮಾಡುವುದೇ ನನ್ನ ಕೆಲಸ.

ಮಾಯಾ : ಏನ್ರಪ್ಪಾ ಇಷ್ಟೊಂದು ಗಟ್ಟಿ ಮುಟ್ಟಾಗಿ ಕಾಣುತ್ತೀರಿ. ಭಿಕ್ಷೆ ಬೇಡೋದೆ? ಇದು ಸರಿಯಲ್ಲಪ್ಪಾ. ಅಂದ ಹಾಗೆ ನಿನ್ನ ಹೆಸರು?

ರೇವಣ : ನನ್ನ ಹೆಸರು ರೇವಣಸಿದ್ಧ ಅಂತ. ತಮ್ಮ ಹೆಸರು ಗೊತ್ತಾಗಿಲ್ಲ ತಾಯಿ.

ಮಾಯಾ : ಮಾಯಾದೇವಿ ಅಂತಾ.

ರೇವಣ : ಈಗ ಏನ್ಮಾಡು ಅಂತೀರಿ ಮಾಯವ್ವ ಅದ್ಕೇ?

ಮಾಯಾ : ಪ್ರತಿಯೊಬ್ಬರೂ ಕಾಯಕ ಮಾಡೇ ಜೀವನ ಮಾಡಬೇಕು. ನೀನೇನೂ ತಿಳ್ಕೊಳ್ಳೇ ಇದ್ರೆ ನಮ್ಮ ಮನೇಲಿ ಕೆಲ್ಸ ಮಾಡಿಕೊಂಡಿರ್ಬೋದಲ್ಲ.

ರೇವಣ : ಏನ್ಕೆಲ್ಸ ತಾಯಿ?

ಮಾಯಾ : ಹರುವೆಗಳನ್ನು ತೆಗೆದುಕೊಂಡು ಅಡ್ಡೆಯಿಂದ ನೀರು ತರಬಹುದಲ್ಲಾ? ಕೆಲಸ ಮಾಡಿದ ಹಾಗೂ ಆಯ್ತು. ಬಂದ ಹಣದಲ್ಲಿ ಜೀವನ ಮಾಡಿದ ಹಾಗೂ ಆಯ್ತು.

ರೇವಣ : ಆಗ್ಲಿತಾಯಿ... ಮಾಡ್ತೇನೆ. ನಡೆಯಿರಿ ಬರ್ತೇನೆ.

ಮಾಯಾ : ಬಹಳ ಸಂತೋಷ ಬಾರಪ್ಪಾ.

(ಆಕೆಯ ಜೊತೆಯಲ್ಲಿ ಹೊರಡುವನು)

(ಅಷ್ಟೆ ಸೀರನ್ನು ತರುತ್ತಿರಲು)

ರೇವಣ : ಏನು ತಾಯೀ ನಿಮ್ಮನ್ನು ನೋಡಿದರೆ ನನ್ನ ಮನಸ್ಸಿಗೆ ಏಕೋ ನೋವಾಗುತ್ತಿದೆ.

ಮಾಯಾ : ಯಾಕಪ್ಪಾ... ನನ್ನ ಕಂಡ್ರೆ ನಿನಗೆ ಹಾಗಾಗುತ್ತೆ? ಏನಾದರೇನು ಬಿಡಪ್ಪಾ... ನನ್ನ ಬಾಳು ಶೂನ್ಯ.

ರೇವಣ : ಏಕೆ ತಾಯಿ ಇಷ್ಟೊಂದು ಬೇಸರದಿಂದ ಬಾಳು ಶೂನ್ಯ ಅಂತಾ ಇದ್ದೀರಿ.

ಮಾಯಾ : ಇನ್ನೇನಿದೆ ಈ ಪ್ರಪಂಚದಲ್ಲಿ ನನಗೆ... ಆಸೆಗಳೆಲ್ಲಾ ಬರೀ ಹುಚ್ಚು ಅಷ್ಟೇ.

ರೇವಣ : ಪ್ರತಿಯೊಂದು ಜೀವಿತ ವಸ್ತುವಿಗೂ ಹುಚ್ಚು ಇದ್ದೇ ಇರುತ್ತದೆ. ಅದೋ ನೋಡಿ ಹುಚ್ಚಿನ ಪ್ರಪಂಚದಲ್ಲಿ ನಿರ್ಮಿಸಿರುವ ಆ ಹಕ್ಕಿ ಗೂಡನ್ನು ಕಟ್ಟಿ ಮರಿಗಳನ್ನು ಸಾಕುತ್ತಿದೆ. ಆ ಜೇನುಗಳನ್ನು ನೋಡಿ ಮುಂದಿನ ಆಹಾರಕ್ಕೆ ಜೇನನ್ನು ಶೇಖರಿಸುತ್ತಿವೆ. ಆ ಹಸುವನ್ನು ನೋಡಿ ತನ್ನ ಕರುವನ್ನು ನೆಕ್ಕುತ್ತಾ ಮೊಲೆಯುಣಿಸುತ್ತಿದೆ. ಹೀಗೆ ಪ್ರತಿಯೊಂದು ಪ್ರಾಣಿಗೂ ಹುಚ್ಚಿದೆ. ಸನ್ಯಾಸಿಗೆ ಶಿವನ ಕಾಣುವ ಹುಚ್ಚು, ಹೆಣ್ಣಿಗೆ ಗಂಡಿನ ಹುಚ್ಚು, ಗಂಡಿಗೆ ಹೆಣ್ಣಿನ ಹುಚ್ಚು.

ಮಾಯಾ : ಆ ಹುಚ್ಚು ಮುಗಿದ ಮೇಲೆ ಯಾವ ಹುಚ್ಚು ಇರಬೇಕೋ ಅದು ಸಹಜವಾಗಿಯೇ ನನ್ನಲ್ಲೂ ಉಂಟಾಗಿದೆ. ಆದರೆ ಆ ದೇವರು ಇನ್ನೂ ನನ್ನ ಮೇಲೆ ಕರುಣೆ ತೋರಿಲ್ಲ. ಅದಕ್ಕಾಗಿ ಹಗಲಿರುಳು ಹಂಬಲಿಸುತ್ತಿದ್ದೇನೆ.

ರೇವಣ : ತಾಯೀ ಇದಕ್ಕೆ ಲಿಂಗ ಜಂಗಮರಲ್ಲಿ ಭಕ್ತಿ ಇಟ್ಟು ಪೂಜಿಸಿದರೆ ಸಾಧ್ಯ.

ಮಾಯಾ : ಮಾಡುತ್ತಿದ್ದೇನೆಯಲ್ಲಾ.

ರೇವಣ : ಒಳ್ಳೆಯದಾಗುತ್ತದೆ ತಾಯಿ.

ಮಾಯಾ : ನಿನ್ನ ಬಾಯ ಹರಕೆಯಿಂದ ನನಗೊಂದು ಸಂತಾನವಾದರೆ ನನ್ನಂಥ ಪುಣ್ಯವಂತೆಯೇ ಇಲ್ಲ.

## ಘಟ್ಟ ೨

(ರಸ್ತೆಯತ್ತ ಬಿಚ್ಚಯ್ಯನು ಹೋಗುತ್ತಿರಲು ನೆಚ್ಚಯ್ಯನು ಸಿಗುವನು.)

ಬಿಚ್ಚಯ್ಯ : ಏನ್ ನೆಚ್ಚಯ್ಯಾ?

ನೆಚ್ಚಯ್ಯ : ಏನ್ ಬಿಚ್ಚಯ್ಯಾ?

ಪಿಚ್ಚಯ್ಯ : ಏನ್ ನಿನ್ಗೆ ನೊಚ್ಚಗ್ಮಾಡ್ಬೇಕು ಅಂತ ತೋರುತ್ತೆ.

ನೆಚ್ಚಯ್ಯ : ಏನ್ ಪಿಚ್ಚಯ್ಯಾ ಒಳ್ಳೇ ಪೆಚ್ಮಾಡ್ತೀ.

ಪಿಚ್ಚಯ್ಯ : ಪೆಚ್ಚಯ್ಯನಲ್ಲ, ನೆಚ್ಚಯ್ಯಾ. ಬಚ್ಚಿಟ್ಕೊಂಡು ಮಾತ್ನಾಡಬೇಡ.

ನೆಚ್ಚಯ್ಯ : ಅಲ್ಲಾಕಣೋ ಆ ಬಿಜ್ಜಳ ರಾಜನ್ಗೇಸ್ಬಂತೋ ಅಂತೀನಿ?

ಪಿಚ್ಚಯ್ಯ : ಹೊತ್ತು.

ನೆಚ್ಚಯ್ಯ : ನನಗೆ ಕೋಪ ಬರ್ಸ್ ಬೇಡಪ್ಪಾ, ನನಗೆ ಅಷ್ಟಾಗಿ ಕೋಪ ಬರೋಲ್ಲ ಬಂದ್ರೆ ನಾನು...

ಪಿಚ್ಚಯ್ಯ : ಮುಚ್ಚಲೆ ಮಗನೆ ಬಾಯ್ನ.

ನೆಚ್ಚಯ್ಯ : ಇಲ್ಲಾ ಕಣಪ್ಪ ತೆರೀತೀನಿ.

(ರೇವಣಸಿದ್ಧರು ಪ್ರವೇಶಿಸುವರು.)

ನೆಚ್ಚಯ್ಯ : ಸ್ವಾಮಿ ಗುರುವೆ ನನ್ನೊಡೆಯಾ, ನನ್ನ ಎಂಟೊಂಬತ್ತು ದೇವ್ರೇ ನಮ್ಮನ್ನ ಕಾಪಾಡಪ್ಪಾ, ಸಾಧ್ಯವಿಲ್ದೇ ಹೋದ್ರೆ ನನ್ನೊಬ್ಬನ ಘಟನಾದ್ರೂ ಕಾಪಾಡು ನನ್ನೊಡೆಯಾ.

ರೇವಣಸಿದ್ಧ : ಏನಯ್ಯಾ?

ಪಿಚ್ಚಯ್ಯ : ನೋಡಿ ಇವ್ನ ನೆಚ್ಚಯ್ಯಾ.

ನೆಚ್ಚಯ್ಯಾ : ಹೌದು ಸ್ವಾಮಿ ನೋಡಿ ಅವ್ನೇ ಪಿಚ್ಚಯ್ಯ.

ರೇವಣ : ಏನು ಪಿಚ್ಚಯ್ಯಗಳೇ?

ಪಿಚ್ಚಯ್ಯಾ : ಸ್ವಾಮಿ...

ನೆಚ್ಚಯ್ಯ : ಗುರುವೆ (ಕೈಮುಗಿಯುತ್ತಿರಲು)

ರೇವಣ : ಏನು ಸಮಾಚಾರ?

ಪಿಚ್ಚಯ್ಯ : ಸ್ವಾಮಿ...

ರೇವಣ : ಏನು ಹೇಳಪ್ಪಾ ಭಯಪಡಬೇಡಿ.

ನೆಚ್ಚಯ್ಯ : ಈ ಊರಿನ ದೊರೆ, ಬಿಜ್ಜಳನು ಬಹಳ ಕ್ರೂರಿ ಸ್ವಾಮಿ.

ಪಿಚ್ಚಯ್ಯ : ಕಠೋರಿ, ಕಟ್ಟಿರುವೆ ಪ್ರಭು.

ನೆಚ್ಚಯ್ಯ : ಒಂದು ತುತ್ತು ಅನ್ನವನ್ನೂ ದಾನ ಮಾಡದೆ ಬಹಳ ದರ್ಪದಿಂದ ಹೂವಿನ ಸುಪ್ಪತ್ತಿಗೆ...!

ಪಿಚ್ಚಯ್ಯ : ಇಲ್ಲಾ ಸ್ವಾಮಿ ಏಳು ಸುತ್ತಿನ ಮಲ್ಲಿಗೆಯ ಹೂವಿನ ಸುಪ್ಪತ್ತಿಗೆ ಮೇಲೆ ಕೆಂಡ ಸಂಪಿಗೆಯ ಮೇಲುಪ್ಪರಿಕೆ ಹಾಕಿ ಮದಾಂಧನಾಗಿ ಮಲಗಿರುವನು ದೇವಾ.

ರೇವಣ : ನೀವಾರು?

ನೆಜ್ಜಯ್ಯ : ನಾವು ಅರಮನೆಯ ಸಿಪಾಯಿಗಳು ಪ್ರಭು.

ರೇವಣ : ಹಾಗೆಲ್ಲಾ ಅನ್ನಬಾರದಪ್ಪ ರಾಜನನ್ನ.

ಪಿಚ್ಚಯ್ಯ : (ನೆಜ್ಜಯ್ಯನತ್ತ ತಿರುಗಿ) ಲೋ ಅಣ್ಣಾ ನೋಡ್ತ್ಯಾ ಬ್ರಹ್ಮನ್ನಾ?

(ರೇವಣರು ಹೊರಡುವರು)

ನೆಜ್ಜಯ್ಯ : ಇವೇನಯ್ಯಾ ಇವರು ಮಂಗರ ಮಾಯವಾಗಿ ಬಿಟ್ಟರು.

ಪಿಚ್ಚಯ್ಯ : ಅವರ್ಕಥೆ ಆಯ್ತಲ್ಲಪ್ಪಾ. ನಿನ್ಕಥೆ ನೋಡ್ಕೊಂಡು ಡಂಗೂರ ಸಾರು.

(ಡಂಗೂರು ಹೊಡೆಯುತ್ತಾ ತನ್ನಲ್ಲಿಯೇ ಪಿಚ್ಚಯ್ಯನು)

ಪಿಚ್ಚಯ್ಯ : ಆ ಹುಚ್ಚ ನನ್ಮಗ ಕೊಂಕಣೀ ಸೀಮೆ ಕೊಂಕಣಿ ಬಡ್ಡಿ ಗಂಡನ್ನೇನ್ಮಾಡ್ತಮು? ಅಲ್ಲಾ ಅವನ್ಗೆ ತಲೆ ಸರಿಯಾಗಿದೆಯೋ ಏನೋ? ಅಲ್ಲಾ ಹನ್ನೆರಡು ಸಾವಿರ ಹೆಣ್ಣು ಮಕ್ಕಳ ಬಲಿ ಕೊಡಬೇಕು ಅಂತಾ ಬಾಯಿ ಬಿಟ್ನಲ್ಲಾ? ಅಲ್ಲಾ ಅವ್ನೇನು ಕಡ್ಲೇಪುರಿ ಅಂತಾ ತಿಳ್ಕೊಂಡನಾ? ಅಲ್ಲಾ ಆ ಹುಚ್ಚ, ರಾಜನ ಹುಚ್ಚ ಬಿಡ್ಸೋಕ್ಕಾಗೋಲ್ಲ. ಹನ್ನೆರಡು ಸಾವಿರ ಹೆಣ್ಣು ಮಕ್ಕಳ ನಾವು ಸೇರಿಸಕ್ಕಾಗೋಲ್ಲ. ಇಬ್ಬರೂ ಏನ್ಮಂತೋ, ಪರಮಾತ್ಮ ನೀನೇ ಕಾಪಾಡಬೇಕು.

ರಾಜಾಜ್ಞೆ: (ಡಂಗೂರ ಹೊಡೆಯುತ್ತಾ) ಮಹಾಜನಗಳೇ ರಾಜಾಜ್ಞೆ ಪ್ರಕಾರ ನೀವು ಮನೆ ಮನೆಗೂ ಒಂದು ಹೆಣ್ಣನ್ನು ಅರಮನೆಗೆ ಕಳಿಸಿಕೊಡಲು ಸಿದ್ಧರಾಗಿರಿ ಸ್ವಾಮಿ...!

(ಹೆಂಗಸರು ಬೀದಿಯಲ್ಲಿ ನಿಂತು ಪೆಚ್ಚಾಗಿ ಒಬ್ಬೊಬ್ಬರೂ ಮಾತನಾಡಿಕೊಳ್ಳುವರು)

ಮಾಯಾದೇವಿ : ಏಕೆ ಬಲಿ?

ನೆಜ್ಜಯ್ಯ : ನೀವು ತಬ್ಬಲಿ ಆಗೋಕೆ.

ಮಾಯಾದೇವಿ : ನರಬಲಿ ಏಕೆ?

ಪಿಚ್ಚಯ್ಯ : ಬಾಹುಬಲ ಇಳಿಸೋಕೆ.

ಮಾಯಾ : ಅವನ ಬಗ್ಗೆ ಕತ್ತರಿಸಾ.

ನೆಜ್ಜಯ್ಯ : ಇಲ್ಲಿಯವರೆಗೆ ಹನ್ನೊಂದು ಸಾವಿರ ತೊಂಭೈನೂರತೊಂಭತ್ತು ಕನ್ಯೆಯರ ಶೇಖರಣೆ ಆಗಿದೆ. ಅದನ್ನು ಹನ್ನೆರಡು ಸಾವಿರಕ್ಕೆ ಸರಿಮಾಡಲು ನಿಮ್ಮ ಮನೆಗೆ ಬಂದಿರುವುದು. ಏಕೆಂದರೆ ಅಂಥನಾದ ಖರ್ಪರನಾಸೆಗೆ ಮಕ್ಕಳ ರಕ್ತದ ಕೋಡಿಯ ಕಾಣಿಕೆಯಾಗಬೇಕಾಗಿದೆಯಂತೆ... ಅದರಿಂದೇನೋ ನಮ್ಮ ರಾಜರಿಗೆ ಬೇಕಾದುದನ್ನು ಕೊಡ್ತಾನಂತೆ.

(ಮಾಯಾದೇವಿ ಕಣ್ಣೀರು ಸುರಿಸುತ್ತಾ)

ಮಾಯಾ : ಹಲವು ದಿನಗಳ ಬಯಕೆಯ ಫಲವಾಗಿ ರೇವಣಸಿದ್ಧರಿಂದ ಈ ರೇವಣಾಂಬೆಯನ್ನು ಹೆತ್ತೆ. ಈ ಹೆಣ್ಣು ನನ್ನ ಕಣ್ಣು, ಬಾಳು, ಸರ್ವಸ್ವವಾಗಿ ಮಾಡಿಕೊಂಡೀಕೆಯನ್ನು ಬಿಟ್ಟು ಹೇಗೆ ಬಾಳಿ ಬದುಕಲೀ ರೇವಣಸಿದ್ಧಾ. ನಿನಗೂ ನನ್ನ ಕಷ್ಟ ಅರಿವಾಗಲಿಲ್ಲವೇ? ಅದಿರಲಿ ಈಗ ರಾಜ ಹೀಗ ಆಜ್ಞೆ ಮಾಡಿದುದರ ಉದ್ದೇಶವಾದರೂ ಏನು?

ನೆಚ್ಚಯ್ಯ : ಆ ಖರ್ಪರನು ಅರ್ಧರಾಜ್ಯದ ಆಸೆಗೋಸ್ಕರ ರಾಜನಿಗೆ ಹೀಗೆ ಹನ್ನೆರಡು ಸಾವಿರ ಕನ್ಯೆಯರುಗಳನ್ನು ಬಲಿ ಕೊಟ್ಟರೆ ರೇವಣಸಿದ್ಧರು ಮಾಸೂರಿನ ಮಡುವಿನಲ್ಲಿಟ್ಟಿರುವ ಖಡ್ಗವು ಸಿಗುವುದೆಂದು ಹೇಳಿದ. ಅದರ ಮೇರೆಗೆ ರಾಜರು ಆಜ್ಞೆ ಮಾಡಿರುವರು ತಾಯೆ.

ಮಾಯಾ : ಏಕೆ ಆ ಖಡ್ಗವೇ ಬೇಕೇ?

ಪಿಚ್ಚಯ್ಯ : ಮಹಾಮಹಿಮ ರೇವಣಸಿದ್ಧರು ಇಟ್ಟ ಆ ಖಡ್ಗಗಳಿಂದ ಇಡೀ ಭೂಲೋಕವನ್ನೇ ಆಳಬಹುದಂತೆ. ಅದಕ್ಕೇ ರಾಜ್ಯ ರಾಜ್ಯದಲ್ಲೆಲ್ಲಾ ಡಂಗೂರ ಹೊಡೆಸಿ ಅದನ್ನು ತಂದು ಕೊಟ್ಟವರಿಗೆ ಅರ್ಧ ರಾಜ್ಯವನ್ನು ಕೊಡುತ್ತೇನೆಂದು ಆಸೆ ಹುಟ್ಟಿಸಲು ಆ ಕೊಂಕಣಿಯ ಖರ್ಪರನು ಹುಲಿಯ ಮೇಲೆ ಬಂದು ಆಡಂಬರ ತೋರಿಸಿ, ನಮ್ಮ ರಾಜ್ಯದ ಕನ್ಯೆಯರ ಹುಟ್ಟಡಗುವಂತೆ ಮಾಡುತ್ತಿದ್ದಾನೆ.

ಮಾಯಾ : ಭಟರೇ, ನೀವು ಏನೇ ಹೇಳಿ ನಿಮ್ಮ ರಾಜನಿಗೆ ನನ್ನ ಓರ್ವಳೇ ಪುತ್ರಿಯಾದ ರೇವಣಾಂಬೆಯನ್ನು ಕೊಡಲಾರೆನೆಂದು ಹೋಗಿ ತಿಳಿಸಿ.

ಪಿಚ್ಚಯ್ಯ : ಮುಂದೆ ಇದು ಇನ್ನೂ ವಿಪರೀತಕ್ಕೆ ತಿರುಗುವುದು ತಾಯೇ.

ಮಾಯಾ : ಏನೇ ಆಗಲಿ ನಾನು ಕೊಡುವುದಿಲ್ಲವೆಂದು ರಾಜನಿಗೆ ತಿಳಿಸಿ ಬಿಡಿ.

ನೆಚ್ಚಯ್ಯ : ಲೇ ಪಿಚ್ಚ ನಡೆ ಹೋಗೋಣ ನಮಗ್ಯಾಕೆ ಈ ಪಾಪ?

(ಮಾಯಾದೇವಿ ಕಣ್ಣೀರು ಸುರಿಸುತ್ತಾ ಕಲ್ಬೊಂಬೆಯಂತೆ ಕುಳಿತು ಬಿಡಲು ನೆಚ್ಚಯ್ಯ ಪಿಚ್ಚಯ್ಯರು ಹೊರಟುಹೋಗುವರು.)

* * *

## ಘಟ್ಟ ೮

(ಮಂಗಳವಾಡವ ಬಿಜ್ಜಳನು ಸಿಂಹಾಸನವಲ್ಲಿ ಮಂಡಿಸಿರಲು, ಗಾನ, ನೃತ್ಯಗಳು ಇಂಬುಗೊಟ್ಟಿದ್ದುವು. ನೃತ್ಯವು ಮುಗಿದ ಕ್ಷಣ ನೆಚ್ಚಯ್ಯ, ಪಿಚ್ಚಯ್ಯನವರು ಪ್ರವೇಶಿಸುವರು)

ನೆಚ್ಚಯ್ಯ : (ಕೈಮುಗಿದು) ಪ್ರಭೂ.

ಬಿಜ್ಜಳ : ಹೋದ ಕಾರ್ಯ ಜಯವಾಯಿತಷ್ಟೆ?

ಪಿಚ್ಚಯ್ಯ : ಹನ್ನೊಂದು ಸಾವಿರದ ಒಂಭೈನೂರ ತೊಂಬತ್ತೊಂಬತ್ತು ಭಾಗ... ಸ್ವಾಮಿ.

ಬಿಜ್ಜಳ : ವಿಷಯವೇನು?

ಪಿಚ್ಚಯ್ಯ : ಹನ್ನೊಂದು ಸಾವಿರದೊಂಭೈನೂರ ತೊಂಬತ್ತೊಂಬತ್ತು ಕನ್ಯೆಯರ ಶೇಖರಣೆಯಾಗಿದ್ದು ಇನ್ನೊಂದು ಬಾಕಿಯಿದೆ. ಮಾಯಾದೇವಿ ಕೊಡುವುದಿಲ್ಲವೆಂದು ಹಠ ಮಾಡುತ್ತಿದ್ದಾಳೆ ಮಹಾಪ್ರಭೂ.

ಬಿಜ್ಜಳ : ಅವಳನ್ನು ಕಟ್ಟುಗಳಿಂದ ಎಳೆದು ತನ್ನಿ.

ಪಿಚ್ಚಯ್ಯಾ: ಅದು ಪ್ರಯಾಸವಾಗಿದೆ ಪ್ರಭು.

ನೆಚ್ಚಯ್ಯ : ಆಕೆಯ ಗೋಳನ್ನು ನೋಡಿದರೆ...

ಬಿಜ್ಜಳ : ಕರುಳು ಚುರುಕ್ ಎನ್ನುತ್ತದೆ ಅಲ್ಲವೇ? ಹೋಗುತ್ತೀಯೋ ಅಥವಾ...

ಪಿಚ್ಚಯ್ಯ : ಮಹದಾಜ್ಞೆ ಪ್ರಭು.

(ಇಬ್ಬರೂ ನಮಿಸುವರು)

(ರಸ್ತೆಯಲ್ಲಿ ಹೋಗುತ್ತಾ)

ನೆಚ್ಚಯ್ಯ : ನೋಡ್ದ್ಯಪ್ಪಾ?

ಪಿಚ್ಚಯ್ಯ : ಏನ್ನಾ?

ನೆಚ್ಚಯ್ಯ : ರಾಜನ್ನ.

ಪಿಚ್ಚಯ್ಯ : ನೋಡಿದ್ನಲ್ಲಾ...

ನೆಚ್ಚಯ್ಯ : ಕೇಳ್ದ್ಯಾ ಅಂತ.

ಪಿಚ್ಚಯ್ಯ : ಕೇಳಿದ್ನಲ್ಲಾ.

ನೆಚ್ಚಯ್ಯ : ಏನ್ನಾ?

ಪಿಚ್ಚಯ್ಯ : ಹೇಳಿದ್ನಾ?

ನೆಚ್ಚಯ್ಯ : ಏನಂಥ ಅಂದದ್ದು?

ಪಿಚ್ಚಯ್ಯ : ನಿನಗೆ ಕೇಳ್ಲಿಲ್ಲವಾ?

ನೆಚ್ಚಯ್ಯ : ಬೆಪ್ಪೆ... ನಾ ಕೇಳ್ದೇ ಕೇಳ್ತೀನಾ?

ಪಿಚ್ಚಯ್ಯ : ಮತ್ತ್ ನನ್ನ ಅದೇನ್ ಕೇಳ್ತೀಯಾ? ನಿನ್ಗೇ ಗೊತ್ತಲ್ಲಾ?

ನೆಚ್ಚಯ್ಯ : ಮಹಾರಾಜ್ರು ಇಷ್ಟೊಂದು ಕಠಿಣವಾಗಬಾರದಾಗಿತ್ತು.

ಪಿಚ್ಚಯ್ಯ : ಅವಳೂ ಅಷ್ಟು ಮೊಂಡಾಗಬಾರದಾಗಿತ್ತು.

ನೆಚ್ಚಯ್ಯ : ನಿನ್ನ ಮಗಳನ್ನು ಕೊಡು ಅಂದಾಗ ನಿನ್ಗೆಷ್ಟು ಕಷ್ಟ ಬರ್ತಿತ್ತು. ಹೇಳು, ಹಾಗೇ ಅವರವರ ಮಕ್ಕಳು ಅವರವರಿಗೆ ಹೆಚ್ಚು.

ಪಿಚ್ಚಯ್ಯ : ಈಗ ನಾವೇನ್ಮಾಡುದು?

ನೆಚ್ಚಯ್ಯ : 'ಗಂಡ ಹೇಳ್ದಾಗ ಕೇಳು ಹೆಡತ್ ಬಡ್ದಿ' ಅಂತ ಅಷ್ಟೆ.

ಪಿಚ್ಚಯ್ಯ : ಸರಿಯಪ್ಪಾ... ಆಕೆ ಗೋಳ್ ಕೇಳಕ್ಕಾಗಕ್ಕಿಲ್ಲ.

ನೆಚ್ಚಯ್ಯ : ಇಲ್ಲಿ ಆಜ್ಞೆ ಕೇಳಕ್ಕಾಗೋಲ್ಲ ನಡಿ ನಡಿ. ನಮ್ಮ ಕರ್ತವ್ಯ ನಾವು ಮಾಡೋಣ.

ಪಿಚ್ಚಯ್ಯ : ನಾವು ಅಲ್ಲೋಗಿ ಇಲ್ಲೋಗಿ ಎಂಥ ಕೆಲಸಕ್ಕೆ ಸೇರಿದ್ವಪ್ಪಾ? ಜೀವನದಲ್ಲಿ ಮನಸ್ಸಿಗೆ ಒಗ್ಗದ ಕೆಲಸ ಮಾಡೋ ಸ್ಥಿತಿ ಬಂತಲ್ಲಾ.

ನೆಚ್ಚಯ್ಯ : ಎಲ್ಲಾ ಹಣೆಬರಹ. ನಡೆ ನಡೆ.

(ಹೊರಡುವರು)

## ಘಟ್ಟ ೬

(ಬಿಜ್ಜಳನು ಸಭೆಗೊಟ್ಟಿರಲು ನೆಚ್ಚಯ್ಯ ಪಿಚ್ಚಯ್ಯರು ಗೋಳ್ಗರೆಯುತ್ತಿರುವ ರೇವಣಾಂಬೆ ಮತ್ತು ಮಾಯಾದೇವಿಯರನ್ನು ಎಳೆದು ತರುತ್ತಾರೆ)

ಮಾಯಾ : (ದುಗುಡದಿಂದ) ಬಿಜ್ಜಳ ಮಹಾರಾಜರೇ, ನಮ್ಮಿಬ್ಬರನ್ನೂ ಈ ಕಟ್ಟುಗಳಿಂದ ಎಳೆದು ತರಿಸಿರುವುದರಿಂದ ನಿಮಗೆ ಮಹಾ ಸಂತೋಷವಾಯಿತೇ?

ಬಿಜ್ಜಳ : ರಾಜಾಜ್ಞೆಯನ್ನ ಮೀರಿದುವಕ್ಕೆ ನಿನಗೆ ಆಗಬೇಕಾದ ಅವಮಾನ, ಭಂಗಗಳು ಆಗಿಯೇ ಹೋದವು ಅಷ್ಟೇ?

ಮಾಯಾ : ಮಹಾರಾಜರೇ, ನಿಮ್ಮ ಅಂತಸ್ತು ಗೌರವ ಅಹಂಕಾರ ನಮ್ಮಂತಹ ಬಡವರ ಮೇಲೆ ತೋರತಕ್ಕದ್ದಲ್ಲ. ರಾಜ- ಮಂತ್ರಿಗಳಿರುವುದು ಪ್ರಜೆಗಳ ತಪ್ಪನ್ನು ತಿದ್ದಿಕೊಡುವುದಕ್ಕೋಸ್ಕರ, ಹುಚ್ಚಾಬಟ್ಟೆ ವೈಭೋಗ ಮಾಡಲಿಕ್ಕಲ್ಲಾ, ದೀನರ ಮೇಲೆ ದರ್ಬಾರು ತೋರಿಸಿ ಕೈಗೊಂಬೆ ಮಾಡಲಿಕ್ಕಲ್ಲಾ, ನ್ಯಾಯ ಧರ್ಮಗಳನ್ನು ಸಮತ್ವದಿಂದ ಕಾಪಾಡಿಕೊಂಡು ಹೋಗಲು. ಕೇವಲ ನಿಮ್ಮೊಂದು ಸುಖಕ್ಕೋಸ್ಕರ ಈ ರೀತಿಯಾಗಿ ಹನ್ನೆರಡು ಸಾವಿರ ಕನ್ಯೆಯರುಗಳ ಜೊತೆ ನಮ್ಮ ಮಕ್ಕಳನ್ನ ಕೊಟ್ಟು ರಕ್ತದ ಕೋಡಿಯನ್ನು ಹರಿಸಿ ನೋಡುವುದು ಧರ್ಮವಲ್ಲ. ನರಕ ಪ್ರಾಪ್ತಿ ನರಕಪ್ರಾಪ್ತಿ ಮಹಾಪ್ರಭು.

ಬಿಜ್ಜಳ : ನಿನಗೆ ಮಹಾ ಪ್ರಭುಗಳ ಮುಂದೆ ಮಾತಾಡುತ್ತಿದ್ದೇನೆಂಬ ಪ್ರಜ್ಞೆ ಇದೆಯಲ್ಲಾ... ಇನ್ನೇನಿದೆ ಮಾತಾಡು?

ಮಾಯಾ : (ಎದೆಯುಸಿರೆಳೆದು) ಮಾತಿದೆ ಮಹಾರಾಜ, ಮಾತಿದೆ. ನಿಮ್ಮರಮನೆಯಷ್ಟಿದೆ. ಆದರೆ ನಿಮ್ಮ ಮುಂದೆ ಸಂಭಾಷಿಸಲು ನಾನು ಬಂದಿಲ್ಲ.

ಕೇವಲ ಒಂದು ಖಡ್ಗಕ್ಕೆ ಪನ್ನೆರಡು ಸಾವಿರ ಕನ್ನೆಯರನ್ನು ಬಲಿಕೊಡುವುದು ಮಹಾಪಾಪ. ಮಂಕು ಕೊಂಕಣಿ ದೇಶದ ಖರ್ಪರನು ನಡೆಯದ ಕೆಲಸವನ್ನು ಮಾಡಿ ರಾಜ್ಯವನ್ನೇ ಕಣ್ಣೀರು ರಕ್ತಕೋಡಿ ಹರಿಸುತ್ತಿರುವುದು ಹಿಂದೂ ಧರ್ಮಕ್ಕೆ ಘಾತುಕ ಪ್ರಾಯವಾಗಿದೆ. ಪ್ರಭು ಘಾತುಕ ಪ್ರಾಯವಾಗಿದೆ.

ಬಿಜ್ಜಳ : ನಿನ್ನ ಮಾತುಗಳು ಹದ್ದು ಮೀರುತ್ತಿವೆ.

ಮಾಯಾ : ನಿಮಗೆ ಈ ಚಪಲ ನಿಲ್ಲುವವರೆಗೂ ಈ ಮಾತಿನ ಸುರಿಮಳೆ. ನಮ್ಮ ಹೊಟ್ಟೆಯುರಿಸಿ ಈ ಕಾರ್ಯವನ್ನು ಮಾಡಿದರೆ ಶ್ರೇಯಸ್ಸಾಗದು, ಭಾರವಾದ ಪಾಪಕ್ಕೆ ಘೋರವಾದ ನರಕವುಂಟಾಗುವುದು ಪ್ರಭು.

ಬಿಜ್ಜಳ : ಭಟರೇ... ನಾಯಿಯಂತೆ ಹೇಳುವ ಈಕೆಯ ಬಾಯನ್ನು ಮುಚ್ಚಿ, ಕಂಭಕ್ಕೆ ಕಟ್ಟಿ ಚಿತ್ರಹಿಂಸೆ ನಡೆಯಲಿ, ರೇವಣಾಂಬೆಯನ್ನು ನದಿಗೆ ಆಹುತಿ ಕೊಡಿ ಹೋಗಿ.

ಪಿಚ್ಚಯ್ಯ : ಮಹದಾಜ್ಞೆ ಪ್ರಭು.

(ಮಾಯಾದೇವಿಯನ್ನ ಕಂಭಕ್ಕೆ ಬಿಗಿಯುವರು. ಮಾಯಾದೇವಿ "ರೇವಣಾಂಬೆ" ಎಂದು ರೋದಿಸುವಳು.)

ಮಾಯಾ : ರಾಜನಿಗೆ ಕರುಣೆ, ದಯೆ, ನೀತಿ, ನ್ಯಾಯ ಒಂದೂ ಇಲ್ಲದ ಹಾಗಾಗಿದೆ. ರೇವಣಸಿದ್ದೇಶ್ವರಾ ನೀನೆಲ್ಲಿ ಕಣ್ಮರೆಯಾದೆ. ವರವಾಗಿ ಕರುಣಿಸಿದ ಪ್ರಸಾದವನ್ನು ಮತ್ತೆ ಕಿತ್ತೊಗೆಯುತ್ತಿರುವೆಯಾ ಕಣ್ಬಿಟ್ಟು ಕಾಪಾಡು. ದೇವಾ! ರೇವಣಸಿದ್ಧ...

ಪಿಚ್ಚಯ್ಯ : ವಿಧಿಲೀಲೆ ತಾಯೆ.

ಮಾಯಾ : ಯಾವ ಕೇಡುಗಾಲಕ್ಕೆ ಈ ರಾಜನಿಗೆ ಈ ಬುದ್ಧಿ ಬಂತೋ ನಾಕಾಣೆ. ಅಯ್ಯೋ ರೇವಣಸಿದ್ಧಾ, ರೇವಣಸಿದ್ಧಾ (ಗೋಳೆಂದು ಅಳುವಳು)

(ಭಟರು ಆಕೆಯನ್ನು ಎಳೆದುಕೊಂಡು ಹೋಗುವರು.)

## ಘಟ್ಟ ೧೦

(ಮಾಯಾದೇವಿಯ ಪ್ರಾರ್ಥನೆಯ ಮೇರೆಗೆ ರೇವಣಸಿದ್ಧರು ಜಂಗಮ ರೂಪದಲ್ಲಿ ಪ್ರವೇಶಿಸುವರು.)

ರೇವಣ : ಓಂ ಭವತಿ ಭಿಕ್ಷಾಂದೇಹಿ.

ಬಿಜ್ಜಳ : ಆ ಸನ್ಯಾಸಿಗೆ ಇಲ್ಲೇನ್ ಕೆಲ್ಸ?

ರೇವಣ : ಕೆಲಸವಿಲ್ಲದೆ ಯಾರು ತಾನೆ ಬರುತ್ತಾರೆ. ಆ ರೀತಿ ಕೇಳುವುದು ನಿಮ್ಮ...

ಬಿಜ್ಜಳ : ಬಂದಿರುವುದು ತಿರುಪೆಗೆ ಮಾತು ಎಷ್ಟು?

ರೇವಣ : ಮಾತಿಗೆ ಮಾತು ಅಷ್ಟೇ ಬಿಜ್ಜಳ.

ಬಿಜ್ಜಳ : ಎಷ್ಟೊಂದು ಕೊಬ್ಬು ಇವನಿಗೆ. ನನ್ನ ಹೆಸರಿಡಿದು ಏಕವಚನದಲ್ಲೇ ಮಾತಾಡುತ್ತಿದ್ದಾನೆ (ಹಲ್ಲುಮ್ಡಿ ಕಚ್ಚಿ). ಪೋಣಿಕೆ ಮಾತಿನ ಪೂತನಕಾರನೆಂದು ತಿಳಿದಿರಲಿಲ್ಲ. ಜೊತೆಗೆ ಕಪಿತ್ವದ ಕಲಿತನವೂ ಸೇರಿದೆ ಎಂಬುದೂ ಅರ್ಥವಾಗಿರಲಿಲ್ಲ. ಮತ್ತು ಈ ವೇದ ವಾಕ್ಯಗಳು ಕಳ್ಳ ಸನ್ಯಾಸಿಗಳ ಮುಂದೆ, ನನ್ನಂಥ ಮಂಗಳವಾಡದ ಬಿಜ್ಜಳ ಮಹಾರಾಜರಲ್ಲಲ್ಲವೆಂಬುದನ್ನು ತಿಳಿದು ಹಲ್ಲಿಡಿದು ಮಾತಾಡು.

ರೇವಣ : ಹಲ್ಲಿಡಿದರೆ ಮಾತು ಬಾರವೆಂದೇ ಬಿರಿದ ದಾಳಿಂಬೆಯ ಮೂವತ್ತೆರಡರ ಹರೆಯದ ಮೂವತ್ತೆರಡು ಬಿಳಿ ಹಲ್ಲುಗಳನ್ನು ಕೆಂಪು ತುಟಿಗಳೆರಡನ್ನು ಮಿಣುಕಿಸುತ್ತಾ ಮಧ್ಯೆ ಕೆನ್ನಾಲಿಗೆಯ ನಾಗಾಲೋಟದಿಂದ ಆಡಿದೆ. ಇದರಲ್ಲಿ ತಪ್ಪಿಲ್ಲವಲ್ಲ ಮಹಾರಾಜ?

ಬಿಜ್ಜಳ : ಮಂಕನಿಗೇನು ತಿಳಿಯುವುದು ರಾಜಮರ್ಯಾದೆ ಕೊಡುವ ವಿಧಾನ?

ರೇವಣ : ನಾನೇ ನಿನ್ನಿಂದ ಮರ್ಯಾದೆ ಪಡೆಯಲು ಬಂದೆನೇ ಹೊರತು ನಾನು ಕೊಡುವ ಆಸೆ ಇಟ್ಟುಕೊಂಡು ಬರಲಿಲ್ಲ!

ಬಿಜ್ಜಳ : ಮತ್ತೆ ಏಕವಚನ... ಏ ಸನ್ಯಾಸಿ... ಕಾಯದ ಕಂತೆಯನ್ನು ತೊಟ್ಟು ಜಂಗಮನೆನಿಸಿಕೊಂಡು ಲೋಕದ ಉಪಕಾರಕ್ಕೆ ಬಂದ ರುದ್ರನೆಂದು ಜಂಭ ಕೊಚ್ಚಿಕೊಳ್ಳುವ ತಿರುಕಾ, ಹೊರಡುತ್ತೀಯೋ... ಇಲ್ಲಾ...?

(ಇಬ್ಬರು ಭಟರು ಕೈ ಎಳೆಯಲು ಆತ ಒಂದು ಕಡೆ ಈತ ಒಂದು ಕಡೆ ಬೀಳುವರು.)

ಬಿಜ್ಜಳ : ನೆಚ್ಚಯ್ಯ ಪಿಚ್ಚಯ್ಯರೇ ಅಡಿಗೆ ಮನೆಯಿಂದ ಎರಡು ಸಟ್ಟಿಗೆ ಬಿಸಿ ಬಿಸಿ ಪಾಯಸವನ್ನು ತೆಗೆದುಕೊಂಡು ಬನ್ನಿರಿ. ಇವನ ಬಾಯಿಗೆ ಸಿಹಿ ಮಾಡೋಣ.

ನೆಚ್ಚಯ್ಯ : ಅಪ್ಪಣೆ ಪ್ರಭು.

ಪಿಚ್ಚಯ್ಯ : ಮಹದಪ್ಪಣೆ ಪ್ರಭು.

(ಇಬ್ಬರೂ ಹೋಗಿ ಎರಡು ಸಟ್ಟಿಗೆ ಪಾಯಸವನ್ನು ತೆಗೆದುಕೊಂಡು ಬಂದು ನಿಂತು ಬಾಯಿ ನೀರು ಕುಡಿಯುತ್ತಾ ಮೂಗನ್ನು ಸರಿ ಮಾಡುತ್ತಾ ನಿಲ್ಲುವರು.)

ಬಿಜ್ಜಳ : (ಉರಿತದಲ್ಲಿ) ತುಗುಳಿಸಿ ಆತನ ಕೈಮೇಲೆ.

ರೇವಣ : ಸುರಿಸು ಬಿಜ್ಜಳಾ... ಸುರಿಸು...

(ಎಂದು ಎರಡು ಕೈಗಳಿಗೂ ಹಾಕಿಸಿಕೊಳ್ಳುವರು. ಕೈಗಳೆರಡನ್ನು ಎರಡು ಕಂಭಕ್ಕೆ ಒರಿಸಲು ಅದು ಹತ್ತಿಕೊಂಡು ಉರಿಯಲಾರಂಭಿಸುವುದು.)

ಬಿಜ್ಜಳ : ಅಯ್ಯೋ ಪರಮೇಶ್ವರಾ ನಾನು ಮಾಡಿದ ತಪ್ಪನ್ನು ಕ್ಷಮಿಸಿ ಗುರುದೇವಾ ಉರಿಯನ್ನು ಆರಿಸಿ ದೇವಾ... ಆರಿಸಿ!

(ಕೈಮುಗಿದು ಕಣ್ಣೀರು ಸುರಿಸುವನು.)

ರೇವಣ : ಅಪರಿಮಿತ ಪ್ರಮಥಗಣಂಗಳೇ ಉದ್ಭವಿಸಿರಿ. ಬಿಜ್ಜಳನ ಭೋಜನ ಗೃಹಕ್ಕೆ ಹೋಗಿ ಸತ್ಕಾರ ಸ್ವೀಕರಿಸಿ.

(ಬಿಜ್ಜಳನು ಹೋಗಿದ್ದು ಬಂದು)

ಬಿಜ್ಜಳ : ಗುರುವೆ ನನ್ನನ್ನು ಕ್ಷಮಿಸಿ. ಅವರನ್ನ ಸಂತೃಪ್ತಿಗೊಳಿಸುವ ಬಗೆಯನ್ನು ಕರುಣಿಸಿ ಮಹಾದೇವಾ.

ರೇವಣ : ಐದು ಪಾವು ಅಕ್ಕಿ ಒಂದು ತುಪ್ಪ ಬರಲಿ.

ಬಿಜ್ಜಳ : ಅಪ್ಪಣೆ ಗುರು ತರಿಸುತ್ತೇನೆ. ಭೋಜನಕೂಟದತ್ತ ದಯ ಮಾಡಿಸುವವರಾಗಿ.

(ಊಟದ ಗೃಹಕ್ಕೆ ತೆರಳುವರು.)

(ಬಿಜ್ಜಳ ಮತ್ತು ರೇವಣಸಿದ್ಧರು ಪ್ರವೇಶಿಸುವರು.)

ಬಿಜ್ಜಳ : ಗುರುವೇ ನನ್ನ ಅಂಧಕಾರ ಆಹಂಕಾರ, ದರ್ಪಗಳಿಂದಿಗೆ ಮುರಿಯಿತು. ಈಗ ತಮ್ಮ ಪರಿಚಯ ಮಾಡಿಕೊಡಬೇಕು ಪ್ರಭು.

ರೇವಣ : ಯಾವಾತ ಮಾಸೂರಿನಲ್ಲಿ ಖಡ್ಗವಿರಿಸಿದ್ದನೋ, ಆ ರೇವಣಸಿದ್ಧನೇ ನಾನು.

(ಬಿಜ್ಜಳನು ಕಾಲ್ಗೆರಗಿ ಕಣ್ಣೀರು ಸುರಿಸುತ್ತಾ)

ಬಿಜ್ಜಳ : ಗುರುವೇ ರೇವಣಸಿದ್ಧೇಶ್ವರ (ಸಾಷ್ಟಾಂಗ ನಮಸ್ಕಾರ ಮಾಡುವನು.)

ರೇವಣ : ರಾಜನಾದರೆ ಯಾರೂ ಕೇಳುವ ಹಾಗಿಲ್ಲವೆಂದೇ? ಮದೋನ್ಮತ್ತ ಬಿಜ್ಜಳನೇ ಈ ಖಡ್ಗಕ್ಕೆ ಆ ಪಾಪಿಯ ಮಾತನ್ನ ಕೇಳಿ ಹನ್ನೆರಡು ಸಾವಿರ ಕನ್ಯೆಯರನ್ನ ಬಲಿಕೊಟ್ಟು ನಾಡ ಮಕ್ಕಳ ಮೂಳೆ ರಾಶಿಯಿಂದ ತೆವರು ಕಟ್ಟಿ, ರಕ್ತ ಕಣ್ಣೀರ ಕೊಡಿಯ ಕಾಲುವೆ ಹರಿಸಿ ಅದರಿಂದ ಬೆಳೆಯುವ ಬೆಳೆಯನ್ನ ನೋಡಲು ಸಿದ್ಧನಾಗಿರುವೆ ಅಲ್ಲವೇ?

(ಎನ್ನಲು ಕಟ್ಟುಗಳು ಇದ್ದಕ್ಕಿದಂತೆ ಬಿಚ್ಚಿದುವು. ಮಾಯಾದೇವಿ 'ರೇವಣಸಿದ್ಧಾ' ಎಂದು ಕೂಗುತ್ತಾ ಓಡಿ ಬಂದು ಕಾಲ್ಗೆರಗಿ)

ಮಾಯಾ : ಗುರುವೇ ನಮ್ಮ ನಾಡ ಹೆಣ್ಣು ಮಕ್ಕಳ ಜೀವಗಳನ್ನ ಉಳಿಸಿ ದೇವಾ.

ರೇವಣ : ಬಾ ಮಗಳೇ ಬಾ ಮಾಯಾದೇವಿ. ಆ ನಾರಿಮಣಿಯರೆಲ್ಲಾ ಸುಖವಾಗಿ ಮನೆಗೆ ತೆರಳಿದ್ದಾರೆ. ನೀನು ಯೋಚಿಸಬೇಡ. (ಅತ್ತ ತಿರುಗಿ) ಬಿಜ್ಜಳ ಇದೋ ತೆಗೆದುಕೋ ಖಡ್ಗ.

(ಕೈಗೆ ನೀಡಲು ಐದು ಹೆಡೆಯ ಸರ್ಪದಂತೆ ಕಾಣುವುದು.)

ಬಿಜ್ಜಳ : ಸ್ವಾಮಿ ಸರ್ಪ! ಐದು ತಲೆಯ ಸರ್ಪ! ಜೇಡಿ ಜೇಡಿ ನಾನು ಮಾಡಿದ್ದು ಸರ್ವಥಾ ತಪ್ಪು.

ರೇವಣ : ಬಿಜ್ಜಳ ಇನ್ನಾದರೂ ಆಸೆ ಆಕಾಂಕ್ಷೆಗಳನ್ನ ಬಿಟ್ಟು, ದಾನ ಧರ್ಮಗಳನ್ನು ಮಾಡುತ್ತ ಜಂಗಮರುಗಳನ್ನು ತೃಪ್ತಿಪಡಿಸುತ್ತಾ ರಾಜ್ಯವನ್ನು ಸರಿಯಾಗಿ ಪರಿಪಾಲಿಸಿಕೊಂಡು ಹೋದರೆ ಪುಣ್ಯ ಬರುತ್ತದೆ.

ಬಿಜ್ಜಳ : ಅಪ್ಪಣೆ ಗುರುದೇವ.

ಜನಸ್ತೋಮ : ರೇವಣಸಿದ್ಧರಿಗೇ... ರೇವಣಸಿದ್ಧರಿಗೆ ಉಘೇ... ಉಘೇ... (ಎಲ್ಲರೂ ನಮಸ್ಕರಿಸುತ್ತಿರಲು ರೇಣುಕರು ಹೊರಡುವರು.)

## ಘಟ್ಟ ೧೧

(ಕಾಂಚಿಯ ಬೀದಿಯಲ್ಲಿ ಹರಕು ಬಟ್ಟೆಯುಟ್ಟು ರೇವಣಸಿದ್ಧರು ಬರುತ್ತಿರಲು ಕೆಂಪರಾಜ, ಸೋಮರಾಜ, ಚೋಳರಾಜನ ಸೇವಕರು ಬರುತ್ತಿರಲು)

ರೇವಣ : ಕಂಚಿಪಟ್ನಾ...! ಕಾಮಾಕ್ಷಿ ಪಟ್ನ...!

(ಹುಚ್ಚನಂತೆ ನಗುತ್ತಿರಲು)

ಕೆಂಪರಾಜ : ಇವನ್ಗೇನೋ ಹುಚ್ಚು ಗಿಚ್ಚು ಹಿಡಿದಿರುವಂತೆ ತೋರುತ್ತಿದೆ.

ಸೋಮರಾಜ : "ಊರೂರು ತಿರ್ಗ್ಗಾ ಉಟ್ಟ ಬಟ್ಟೆ ಹರಿಯಾ" ಅನ್ನೋದು ಕಾಣಲ್ವೇ? ಇನ್ನೂ ನಿನ್ಗನ್ನಾಸ್ತೇ?

ಕೆಂಪರಾಜ : ನೋಡ್ದ್ಯಾ ತಮ್ಮಾ?

ಸೋಮರಾಜ : ನೋಡಿದ್ನಲ್ಲಾ ಅಣ್ಣಾ.

ಕೆಂಪರಾಜ : ಏನ್ನಾ?

ಸೋಮರಾಜ : ನೀ ಹೇಳಿದ್ನಾ?

ಕೆಂಪರಾಜ : ಮುಚ್ಕೋ ನಿನ್ಬಾಯಿ.

ಸೋಮರಾಜ : ಮುಚ್ಚಿದೆ.

ಕೆಂಪರಾಜ : ಈತನಿಗೆ ಹೆಣ್ಣಿನ ಚಪಲವಿರಬೇಕು.

(ಸೋಮರಾಜ ಸುಮ್ಮನಿರಲು) ದವ್ವಾ ನಿನಗೆ ಮಾತಾಡೋದ್ಕೂ ಬಾಯಿಸೇದ್ಹೋಯ್ತೋ?

ಸೋಮರಾಜ : ಬಾಯ್ಮುಚ್ಚು ಅಂದ್ಯಾಲ್ಲಾ ಮಾತ್ನಾಡೋದ್ಹೇಗೆ?

ಕೆಂಪರಾಜ : ಇವನಿಗೆ ಚಪಲವಿರಬೇಕು.

ರೇವಣ : ಯಾರಿಗೆ ಎಂದು ಯೋಚಿಸಿ ನೋಡಿ.

ಸೋಮರಾಜ : ಏನು ಮಹಾಯೋಗಿಯಂತೆ ಮಾತಾಡ್ತೀ? ಏಯ್ ಜೀವಿಭಿಕಾರಿ.......

ರೇವಣ : ಸರಿಯಾಗಿ ಯೋಚಿಸಿ ನೋಡು!

ಕೆಂಪರಾಜ : ಯೋಚನೆ ಆಮೇಲೆ ನಾವ್ಯಾರು ಗೊತ್ತೇ?

ರೇವಣ : ಬುದ್ಧಿ ಇಲ್ಲದವರು.

ಸೋಮರಾಜ : ಏನಂದೆ ಬೆಪ್ಪಾ?

ರೇವಣ : ಏನಿಲ್ಲ?

ಸೋಮರಾಜ : ಕೆಂಪರಾಜ ಇವ್ನೆಳ್ಕೊಂಡು ನಡ್ಯೋ, ಆ ವರದರಾಜನ ದೇವಾಲಯಕ್ಕೆ ನೂಕಿ ಬಾಗಿಲ್ ಹಾಕೋಣ.

(ದರದರನೆ ಎಳೆದುಕೊಂಡು ಹೋಗುವರು. ಸೋಮರಾಜ, ಕೆಂಪರಾಜರು ದೇವಾಲಯಕ್ಕೆ ಪ್ರವೇಶಿಸುವರು. ಆಗ ಇದ್ದಕ್ಕಿದ್ದಂತೆ ಬಾಗಿಲು ತೆರೆಯುವುದು. ವರದರಾಜಮೂರ್ತಿಯ ಶಿರಃ ಕಂಪನವಾಗುತ್ತಿರಲು ಇಬ್ಬರೂ ನೋಡಿ)

ಕೆಂಪರಾಜ : (ನಡುಗುತ್ತಾ) ವರದರಾಜ ಮೂರ್ತಿಯ ಶಿರಃ ಕಂಪನವನ್ನು ನೋಡು.

ಸೋಮರಾಜ : ಅದ್ನೋಡಿದ್ರೆ ನನ್ಗೆ ನಡಕವಾಗುತ್ತಪ್ಪಾ ...ಬಾ....ಬಾ..... ಅವನು ಮಾಯ ಗೀಯ ಮಾಡ್ಬಿಟ್ಟಾನು.

ರೇವಣಸಿದ್ಧ : (ಅವರತ್ತ ದೃಷ್ಟಿಸಿ ನೋಡಿ) ಒಮ್ಮೆ ಬ್ರಾಹ್ಮಣನೊಬ್ಬನು ಸತ್ತ ತಂದೆಯ ಬೂದಿಯನ್ನು ನದಿಯಲ್ಲಿ ತೇಲಿಬಿಟ್ಟು ರಾತ್ರಿ ಮಲಗಲು ಆತನ ಸುತ್ತಲೂ ಹೂವಿತ್ತು. ಅದು ಆತನ ಪೂರ್ವ... ಪುಣ್ಯ...

ಕೆಂಪರಾಜ : ನಿನ್ನ ಪವಾಡ... ಬಾರೋ.....

ಸೋಮರಾಜ : ತಮ್ಮೆಸ್ರೇನು ಸ್ವಾಮಿ?

ರೇವಣ : ನನ್ನೆಸ್ರು... (ಯೋಚಿಸಿ) ಪಿಣ್ಣಾಂಕ ದೇವ.

ಕೆಂಪರಾಜ : ಪಿಣ್ಣಾಂಕ ದೇವ್ನೋ... ಪಿಣ್ಕಾರಿ ದೇವ್ನೋ.

ಸೋಮರಾಜ : ಇಲ್ಲ ಇಲ್ಲ ಪೆಣ್ಣಾಂಕ ದೇವ.

ರೇವಣ : ಅಯ್ಯೋ ಮನುಷ್ಯರೇ...

ಕೆಂಪರಾಜ : ಸಾಕು ಸುಮ್ನಿರಿ. ಮನುಷ್ಯನಿಗಿಂತ ಶ್ರೇಷ್ಠ ಪ್ರಾಣಿಯೇ ಇಲ್ಲ ಅಂತರಲ್ಲಾ ಸ್ವಾಮಿ.

ರೇವಣ : ಮಾನವನಿಂದೇನಯ್ಯಾ ಉಪಯೋಗ? ಆನೆಗೆ ಇದ್ರೂ ಅಷ್ಟೇ ಬೆಲೆ, ಸತ್ರೂ ಅಷ್ಟೇ ಬೆಲೆ. ಕಸ್ತೂರಿ ಮೃಗದ ಕಂಪು ಬರ್ತದ್ಯಾ? ಈಶ್ವರನಿಗೆ ಪ್ರಿಯವಾಗುವ ಹುಲಿ ಚರ್ಮಕ್ಕೆ ಸಮನಾಗ್ತದಾ? ಸತ್ತ ಮೇಲೆ

ಗೆದ್ದಲೊಂದು ತಿನ್ನಬೇಕು, ಇಲ್ಲ ಬೂದಿಯಾಗಬೇಕೇ ಹೊರ್‍ತು ಇನ್ನೇನಾದ್ರೂ ಪ್ರಯೋಜನಕ್ಕೆ ಬರ್‍ತ್ಯೋ? ಈ ಮನುಷ್ಯನು ರಕ್ತ, ಮಾಂಸ, ಮೂಳೆ, ನರಗಳ ಪೊಟ್ಟಣ ಅಷ್ಟೇ.

ಕೆಂಪರಾಜ : ಅಷ್ಟಾದ್ರೂ ಸಾರ್ಥಕವಾಯ್ತಲಾ ನನ್ನೊಡೆಯ.

ಸೋಮರಾಜ : ಸಾಕು ನಡ್ಯೋ.

ರೇವಣ : ಸಾಕು ನಡ್ರೀ ನಿಮ್ಮಪ್ಪಾತಾರಾ...!

ಕೆಂಪರಾಜ : ಆಗ್ಲೀ ಶನೇಶ್ವರಾ...

ಸೋಮರಾಜ : ಅಯ್ಯೋ ಬೆಪ್ಪ ಪೆಣ್ಣಾಂಕೇಶ್ವರ!

ರೇವಣ : ತೊಲ್ಗಿ ಇಲ್ಲಿಂದಾಚೆ ಶನೇಶ್ವರರಾ...

(ಓಡುವರು)

## ಘಟ್ಟ ೧೨

(ರಸ್ತೆಯ ಕಡೆ ಕೆಂಪರಾಜ, ಸೋಮರಾಜ ಬರುತ್ತಾ)

ಸೋಮರಾಜ : ಅಲ್ಲಾ... ವರದರಾಜಮೂರ್ತಿಯ ಶಿರಃ ಕಂಪನವಾಗುತ್ತಿದೆಯಲ್ಲಾ ನಮ್ಮ ರಾಜ್ಯಕ್ಕೇನು ವಿಪತ್ತು ಕಾದಿದ್ಯೋ ಏನೋ ನನ್ಗೇ ತಿಳೀದು.

ಕೆಂಪರಾಜ : ಈಗ್ಹೋಗಿ ಚೋಳ ಮಹಾರಾಜರಲ್ಲಿಗೆ ತಿಳಿಸಿಬಿಡೋಣ.

ಸೋಮರಾಜ : ಏನೂ ಅಂತಾ?

ಕೆಂಪರಾಜ : ಹೀಗೇ ಅಂತಾ.

ಸೋಮರಾಜ : (ಕೈ ಅಲ್ಲಾಡಿಸುತ್ತಾ) ಹೌದು ಹಾಗೇ ಅಂತಾ.

ಕೆಂಪರಾಜ : ಆ ಕಂಪನ ನೋಡಿದ್ರೇ ನನ್ಗೆ...

ಸೋಮರಾಜ : ನನ್ಗೂ...

ಕೆಂಪರಾಜ : ಏನೂ?

ಸೋಮರಾಜ : ನಿನ್ಗೇನು ಅದೇ ನನ್ಗೂ.

ಕೆಂಪರಾಜ : ಹೋಗ್ಲಿ ನಿನ್ನ ತಲೆ ಹರಟೆ ನಿಲ್ಸು, ಮಹಾಪ್ರಭುಗಳಲ್ಲಿ ನಡೆದ ವಿಚಾರವನ್ನು ತಿಳಿಸೋಣ.

ಸೋಮರಾಜ : ನಾನೇನು ಬೇಡ ಅಂದ್ನೇನು?

ಕೆಂಪರಾಜ : ನಾನೇನು ಬೇಕು ಅಂದ್ನೇನೋ?

ಸೋಮರಾಜ : ಲೋ ಕೆಂಪಾ ನಿನ್ಯಾವ ಕೊಂಪೇಲ್ಹಿಡಿದ್ರೋ?

ಕೆಂಪರಾಜ : ಈ ಕಾಂಚಿಯಲ್ಲಿ ಅನ್ನೋದು ಇನ್ನೂ ಗೊತ್ತಾಗ್ಲಿಲ್ಲಾ ಅನ್ನು.

ಸೋಮರಾಜ : ಆಹಾ... ಇನ್ನೊಂದು ಸ್ವಲ್ಪ ದಿವ್ಸ ನೀನು ಮರದ ಮೇಲೆ ಇರ್ಬೇಕಾಗಿತ್ತು.

ಕೆಂಪರಾಜ : ಈಗಿಳಿದ್ಬಿಟ್ನಲ್ಲಾ ನಡೆ ಹೋಗ್ಲಿ...

(ಹೊರಡುವರು)

## ಘಟ್ಟ ೧೩

(ಚೋಳರಾಜನು ಅರಮನೆಯ ಅಂತಃಪುರದಲ್ಲಿ ಯೋಚಿಸುತ್ತಾ ಸುತ್ತುತ್ತಿರಲು ಸೇವಕರಾದ ಕೆಂಪರಾಜ ಸೋಮರಾಜರು ಪ್ರವೇಶಿಸುವರು)

ಕೆಂಪರಾಜ : ಪ್ರಭೂ...

ಚೋಳರಾಜ : ಏನು ಭಟರೇ ಸಮಾಚಾರ?

ಸೋಮರಾಜ : ತಾವು ಏಕೋ ಸೊರಗಿರುವಂತೆ ತೋರುತ್ತಿದ್ದೀರಲ್ಲಾ ಪ್ರಭು.

ಚೋಳರಾಜ : ಏನಿಲ್ಲ... ನೀವು ಬಂದುದೇಕೆ ತಿಳಿಸಿ.

ಸೋಮರಾಜ : ಆ ಕಂಪನದ ವಿಚಾರ ಕೇಳಿದ್ರೆ ನನ್ಗೇ ನೋಡಿ ಕಂಪಣಾ.

(ನಡುಗುವರು)

ಚೋಳರಾಜ : ಅದೇಕೆ ಭಟರೇ?

ಕೆಂಪರಾಜ : ಬಾಯಿ ಬರೋಲ್ಲ ಪ್ರಭು.

ಸೋಮರಾಜ : ಪ್ರಭೂ... ನಮ್ಮ ವರದರಾಜಸ್ವಾಮಿ ದೇವಾಲಯದಲ್ಲಿ ಯಾವನೋ ಒಬ್ಬ ಹುಚ್ಚ ಬಂದಿದ್ದಾನೆ. ಅವ್ನೆಸ್ರು ಪಿಣ್ಣಾಂಕ ಅಂತೆ...

ಚೋಳರಾಜ : ಪಿಣ್ಣಾಂಕ ದೇವನೇ... (ಸಂತಸ ಹೊಂದಲು)

ಸೋಮರಾಜ : ಏಕೆ ಪ್ರಭೂ?

ಚೋಳರಾಜ : ಆಮೇಲೆ ... ಏನು ಹೇಳಿದ?

ಕೆಂಪರಾಜ : ಹೇಳೋದೇನು ಆತನು ದೇವಸ್ಥಾನಕ್ಕೋದ ತಕ್ಷಣ ವರದರಾಜ ಮೂರ್ತಿಯ ಶಿರಃ ಕಂಪನವಾಗತೊಡಗಿತು. ಇನ್ನೂ ನಿಂತಿಲ್ಲ ಪ್ರಭೂ. ಅದಕ್ಕೋಸ್ಕರ ಗಾಬರಿಯಿಂದ ಓಡಿಬಂದೆವು.

ಚೋಳರಾಜ : (ಚಿಂತೆಯಿಂದ) ಆತನನ್ನೇನಾದರೂ ಹಿಂಸಿಸಿದಿರೋ...

ಕೆಂಪರಾಜ : ಏಕೆ ಪ್ರಭು ಅವನನ್ನ ಕಂಡರೆ ನಿಮಗಿಷ್ಟೊಂದು ಕನಿಕರ?

ಚೋಳರಾಜ : ಪಿಣ್ಣಾಂಕ ದೇವನು ಮಹಾದೇವನಿಗೆ ಸಮಾನನು. ಪ್ರಮಥ ಗಣೇಶ, ರೇವಣಸಿದ್ಧನು. ರಾತ್ರಿ ಕನಸಿನಲ್ಲಿ ಏಕಾಮ್ರನಾಥನು ಆತನನ್ನ ಆಶ್ರಯಿಸೆಂದು ಹೇಳಿರುವನು.

ಸೋಮರಾಜ : ಈ ಕಂಪನದಿಂದ ರಾಜ್ಯಕ್ಕೆ ವಿಪತ್ತೋ ಏನೋ?

ಕೆಂಪರಾಜ : ಅಶುಭ ಪ್ರಭು.

ಚೋಳರಾಜ : ಆತನನ್ನ ನೀವು ಬೇಗ ಕರೆದು ತನ್ನಿ, ನಡೆಯಿರಿ.

ಸೋಮರಾಜ : ಅಪ್ಪಣೆ ಪ್ರಭು.

(ಹೊರಡುವರು)

## ಘಟ್ಟ ೧೪

(ರಸ್ತೆಯಲ್ಲಿ ಕೆಂಪರಾಜ ಸೋಮರಾಜರು ಹೋಗುತ್ತಾ)

ಸೋಮರಾಜ : ಏನಯ್ಯಾ ದೇವಸ್ಥಾನದಲ್ಲೂ ಇಲ್ವಲ್ಲಾ... ಆತನ ಕರೆತರಬ್ಯಾಗುತ್ತೇನು?

ಕೆಂಪರಾಜ : ನನ್ಗೇನೋ ಸುತ್ತಿ ಸುತ್ತಿ ಸಂಕಟವಾಗುತ್ತೆ.

ಸೋಮರಾಜ : ನಡೆಯಪ್ಪಾ ಏನಾದ್ರೂ ಆಗ್ಲಿ ಎಲ್ಲಾದ್ರೂ ಹೋಗಿ ಯಕ್ಕುಟ್ಕೋಗೋಣ.

ಕೆಂಪರಾಜ : ಬೆಪ್ಪ ಅಯ್ಯೋ ಅಲ್ಲಿ ಬರ್‍ತಾ ಅವ್ನೇ ಕಣೋ.

ಸೋಮರಾಜ : ಆಹಾ ವರದರಾಜಾ!

ಕೆಂಪರಾಜ : ರಮಾರಮಣ ಗೋವಿಂದಾ!

ಸೋಮರಾಜ : ಗೋವಿಂದ!!

ರೇವಣ : ಇಲ್ಲಿರೋವ್ನು ಅವ್ನಲ್ವಲ್ಲ.

ಕೆಂಪರಾಜ : ಹುಚ್ಚ ಅನ್ನೋದು ನಮಗೂ ಗೊತ್ತಲ್ಲ.

ರೇವಣ : ಹುಚ್ಚಿಂದೇನಾಗ್ಬೇಕಿತ್ತು?

ಸೋಮರಾಜ : ನಿನ್ನ ಪುಣ್ಯವೇ ಪುಣ್ಯ ಕಣಯ್ಯ ಮಹಾರಾಜ್ರು ಕರೀತಾವ್ರೆ.

ರೇವಣ : ಅವ್ನಿಗೇನಾದ್ರೂ ಕೆಲ್ಸ ಇದ್ರಲ್ವೇ?

ಕೆಂಪರಾಜ : ಅಯ್ಯೋ ಕರ್ಮವೇ?

ಸೋಮರಾಜ : ಕರೆದ್ಹಣ್ಕೊಟ್ರೆ ಮೊಲ್ಲಾಗ್ರ ಅಂತ ರಾಜನ್ನ ನೋಡಕ್ಕೇ ಜನಗಳು ಸಾಯ್ತಾರೆ. ನಾಯಿೂನ ಪಲ್ಲಕ್ಕಿ ಮೇಲೆ ಕುಂಡುಸ್ತೀನಿ ಅಂದ್ರೂ ಅದು ತಿಪ್ಪೇ ಮೇಲೆ ಕೂತ್ಕೋತೀನಿ ಅಂದ್ರೆ ಏನ್ಮಾಡೋದು?

ರೇವಣ : ನಾನು ಬರೋಲ್ಲ ಹೋಗ್ರಪ್ಪಾ.

ಸೋಮರಾಜ : ಬೇಡ ಅಂದ್ರೂ ಬಿಡಲ್ಲ, ಗೀಡ ಅಂದ್ರೂ ಬಿಡಲ್ಲ.

ರೇವಣ : ನೀವೆಲ್ಲಿಕ್ಕಿದ್ರೋ ಪೀಡೆಗಳು.

ಸೋಮರಾಜ : ಕಟ್ಟಯ್ಯ ಕೆಂಪ... ಕೈಕಾಲ್ನಾ... ಹೊತ್ಕೊಂಡು ಹೋಗೋಣ. (ಕಟ್ಟಲು ಹೋಗಲು ಇಬ್ಬರಿಗೂ ಕಣ್ಣು ಕಾಣದಂತಾಗಿ ಕೈಸೇದಿ ಬಾರದಂತಾಗಿ "ಅಯ್ಯೋ ಪಿಣ್ಣಾಂಕ" ಕಣ್ ಕಾಣ್ತಾ ಇಲ್ಲ... ಕಣ್ ಕಾಣ್ತಾ ಇಲ್ಲಾ ಎಂದು ಕೂಗುವರು.)

## ಘಟ್ಟ ೧೫

(ರೇವಣಸಿದ್ಧನು ವರದರಾಜಮೂರ್ತಿಯತ್ತ ಕಾಲುಚಾಚಿ ಮಲಗಿರಲು ಅಲ್ಲಿಗೆ ಚೋಳರಾಜನು ಪ್ರವೇಶಿಸಿ ಸಾಷ್ಟಾಂಗ ಮಾಡಿ ನಿಂತು)

ಚೋಳರಾಜ : ಪಿಣ್ಣಾಂಕ ಮಹಾದೇವ... ನನ್ನ ಸೇವಕರು, ನಾನೂ ಮಾಡಿದ ಮಹಾಪರಾಧವನ್ನು ಕ್ಷಮಿಸಿ. ಇವರಿಗೆ ಸೇದು ಹೋಗಿರುವ ಕೈಗಳನ್ನ, ಇಂಗಿ ಹೋಗಿರುವ ಕಣ್ಣುಗಳನ್ನು ಕರುಣಿಸಿ ಮಹಾದೇವಾ.

ರೇವಣ : ಮಹಾರಾಜರು ಇಲ್ಲಿಯವರೆಗೂ ಪಾದ ಬೆಳಸಿರುವಿರಾ?

ಚೋಳರಾಜ : ಸಾಕ್ಷಾತ್ ಪರಮಾತ್ಮನಲ್ಲಿಗೆ ನಾವು ಬರಬೇಕಾದುದು ಧರ್ಮವಲ್ಲವೇ ಗುರು?

ರೇವಣ : ಮತ್ತೆ ಕಟ್ಟುಗಳಿಂದಲೇ ಎಳೆದು ತರುವಂತೆ ಆಜ್ಞೆಮಾಡಿ ಸೇವಕರನ್ನು ಏಕೆ ಕಳುಹಿಸಿದ್ದೆ?

ಚೋಳರಾಜ : ಇಲ್ಲ ಪ್ರಭು ತಮ್ಮನ್ನು ಕರೆತರುವಂತೆ ಹೇಳಿದ್ದೇ ಹೊರತು ಹಿಂಸೆ ಮಾಡಲು ಹೇಳಿರಲಿಲ್ಲ.

ರೇವಣ : ರಾಜಾಜ್ಞೆ ಮಾಡಿದೆ. ಈಗೇನು ಬೇಕು?

ಚೋಳರಾಜ : ಮಹಾಪುರುಷಾ... ನಮ್ಮನ್ನು ಕ್ಷಮಿಸಿ. ಆ ದೇವರ ಕಂಪನಕ್ಕೆ ಕಾರಣವೇನು ತಿಳಿಸಿ ಗುರುದೇವಾ... ಇಷ್ಟೊಂದು ಪರೀಕ್ಷೆ ಬೇಡಿ ಇದಕ್ಕೆ ಪರಿಹಾರ ನೀಡಿ ದೇವಾ.

ರೇವಣ : ವರದರಾಜ ನಿನ್ನ ಭಕ್ತನಿಗೆ ಏನು ಹೇಳಬೇಕೆಂದಿರುವೆ ನೀನೇ ಹೇಳಲನುವಾಗು.

ವಾಣಿ : ಚೋಳರಾಜನೇ ಇವರು ಸಾಕ್ಷಾತ್ ಪರಮೇಶ್ವರ ರೂಪಿನ ರೇವಣ ಸಿದ್ಧೇಶ್ವರರು. ಇವರ ಸೇವೆ ಪೂಜೆಯಿಂದ ನಿನ್ನ ಪಾಪಗಳು ಪರಿಹಾರವಾಗುತ್ತವೆ. ಮೊದಲು ಮಾಡು.

ಚೋಳರಾಜ : ಎಲ್ಲಾ ನಿಮ್ಮ ಮಹಾಪ್ರಸಾದದ ಅನುಗ್ರಹವೆಂದೇ ನಂಬಿದೆ. ರೇವಣಸಿದ್ಧೇಶ್ವರಾ ಈ ಕಂಪನವನ್ನು ನಾನು ನೋಡಲಾರೆ. ನನ್ನ ಎದೆ ಹೊಡೆದುಕೊಳ್ಳುತ್ತಿದೆ. ನಿಲ್ಲಿಸಿ ದೇವಾ.

ರೇವಣ : ಆಗಲೀ....

(ಹಸ್ತದಿಂದ ಮುಟ್ಟಲು ತಕ್ಷಣ ನಿಂತು ಹೋಯಿತು.)

ರೇವಣ : ತೃಪ್ತಿಯಾಯಿತೇ?

ಚೋಳ : ಈಗ ಮನಸ್ಸಿಗೆ ಸಮಾಧಾನವಾಯಿತು. ಎಲ್ಲಾ ತಮ್ಮ ಅನುಗ್ರಹ ಗುರುದೇವಾ.

ರೇವಣ : ನನ್ನಿಂದೇನನ್ನರಸುವೆ ಚೋಳರಾಜ, ಯೋಚಿಸಬೇಡ ಕೇಳು.

ಚೋಳರಾಜ : ತಮ್ಮ ಬಾಯಿಂದಲೇ ಈ ಕಂಚಿಯ ಮಹಾತ್ಮೆ ಕೇಳಲು ನನ್ನ ಮನಸ್ಸು ತುಟಿದುಕೊಳ್ಳುತ್ತಿದೆ. ರೇವಣಸಿದ್ಧೇಶ್ವರಾ!

ರೇವಣ : ಒಂದೊಮ್ಮೆ ಪಾರ್ವತಿಯು ಈಶ್ವರನ ಕಣ್ಮುಚ್ಚಲು ಪ್ರಪಂಚವೇ ಅಂಧಕಾರದಿಂದ ತುಂಬಿತು. ಆಗ ಈಶ್ವರನು ಪಾರ್ವತಿಯನ್ನು ಕಾಳಿಯಾಗುವಂತೆ ಶಾಪಕೊಟ್ಟ. ಪಾರ್ವತಿ ಪರಿಹಾರವೇನೆಂದು ಕೇಳಲು ಕಾಂಚಿಯಲ್ಲಿ ತಪವಾಚರಿಸುವಂತೆ ಹೇಳುವನು. ಆ ಮೇರೆಗೆ ಆಕೆ ಅಲ್ಲಿ ಮರಳುಲಿಂಗ ಮಾಡುತ್ತಿರಲು ಶಿವನು ಆಕೆಯ ಭಕ್ತಿಯನ್ನು ಪರೀಕ್ಷಿಸಲು ನದಿಯನ್ನು ಹರಿಸಲು ಆಕೆ ದೇಹವನ್ನೇ ಮುಚ್ಚಿ ಲಿಂಗವನ್ನು ರಕ್ಷಿಸಲು, ಈಶ್ವರನು ಪ್ರತ್ಯಕ್ಷನಾಗಲು ಅರ್ಧ ಶರೀರದಲ್ಲಿ ವಾಸವಾಗಬೇಕೆಂದಳು. ಆಗ ಈಶ್ವರನು ಏಕಾಮ್ರೇಶ್ವರ ಲಿಂಗದ ರೂಪದಲ್ಲಿ ನೆಲೆಯಾದನು. ಇದೇ ಕಂಚಿಯ ಮಹಾತ್ಮೆ.

ಕೆಂಪರಾಜ : ರೇವಣ... ನನ್ನ ಕಣ್ಕೊಡಪ್ಪಾ.

ಸೋಮರಾಜ : ರೇವಣಸಿದ್ಧಪ್ಪಾ... ನನ್ನ ಕೈಕೊಡಪ್ಪಾ.

ರೇವಣ : ಇನ್ನೇನು ಕೈ ಕೊಟ್ಟಿದ್ದೇನಲ್ಲಪ್ಪಾ.

ಚೋಳ : ಗುರುವೇ ತಪ್ಪು ಮಾಡುವುದು ಸಾಮಾನ್ಯ ಮನುಷ್ಯರ ಗುಣ. ಶರಣಾಗತರಾದವರನ್ನು ರಕ್ಷಿಸುವುದು ನಿಮ್ಮಂತಹ ಮಹಾನುಭಾವರ ಕರ್ತವ್ಯವಲ್ಲವೇ?

ರೇವಣ : ಮಹಾರಾಜ ಯಾವಾಗಲೂ ಅಷ್ಟೇ... "ಕೆಟ್ಟ ಮೇಲೆ ಬುದ್ಧಿ ಬಂತು" ಅಂದ ಹಾಗಿದೆ ಅಲ್ವೇ?

ಕೆಂಪರಾಜ : ಗುರುವೇ ನಾನು ಮಾಡಿದ್ದು ತಪ್ಪು ದೇವಾ.

ಸೋಮರಾಜ : ಹೌದು ಮಹಾ ತಪ್ಪು ನನ್ನೊಡೆಯಾ. ನಮ್ಮನ್ನ ಕ್ಷಮಿಸಿ.

(ಇಬ್ಬರೂ ಕಾಲಿಗೆ ಬೀಳಲು, ಹರಿಸಿ ಮೇಲೆತ್ತಲು, ಇಬ್ಬರ ಕೈಗಳು ಮತ್ತು ಕಣ್ಣುಗಳು ಬರುವವು. ಎಲ್ಲರೂ ಸಂತೋಷದಿಂದ)

ಕೆಂಪರಾಜ : ರೇವಣಸಿದ್ಧೇಶ್ವರರ ಪಾದಕ್ಕೆ... ಉಘೇ...ಅನ್ನಿ

ಎಲ್ಲರೂ : ಉಘೇ... ಉಘೇ... ಉಘೇ...

(ರೇವಣಸಿದ್ಧರು ಹೊರಡುವರು)

## ಘಟ್ಟ ೧೬

(ಗೋರಕ್ಷನು ಹಂಸ ತೂಲಿಕಾತಲ್ಪದಲ್ಲಿ ಮಲಗಿರಲು ಅಲ್ಲಿಗೆ)

ರೇವಣ : ಓಂ ಭವತಿ ಭಿಕ್ಷಾಂದೇಹಿ.

(ಶಬ್ದ ಕೇಳಿದ ಕ್ಷಣ ಎದ್ದು ಕತ್ತಿಯನ್ನು ತೆಗೆದು ಬರುತ್ತಿರಲು ಆ ಕಡೆ ಈ ಕಡೆಯಿಂದ ಚಿಕ್ಕಲಕ್ಕಾದೇವಿಯರು ಹಿರೇಲಕ್ಕಾದೇವಿಯರು ಬರುತ್ತಿರಲು ಆರ್ಭಟದಿಂದ)

ಗೋರಕ್ಷ : ಚಿಕ್ಕಲಕ್ಕ, ಹಿರೇಲಕ್ಕಾದೇವಿಯರೇ ಸಿದ್ಧ, ಗೋರಕ್ಷನೆಂದ ಕ್ಷಣ ನಾಲ್ಕು ಗಾವುದ ದೂರವಿರುತ್ತಿದ್ದ ಸನ್ಯಾಸಿಗಳು ಈಗ ನನ್ನರಮನೆಯ ಬಾಗಿಲಿಗೇ ಬಂದು ಭಿಕ್ಷೆ ಕೇಳುವಂತಾಯಿತೇ? ಏನಿದು ವಿಪರ್ಯಾಸ?

ಚಿಕ್ಕಲಕ್ಕಾದೇವಿ : ಏನು ಸ್ವಾಮಿ?

ಗೋರಕ್ಷ : ಇದೋ ಈ ಖಡ್ಗವನ್ನ ತೆಗೆದುಕೊಳ್ಳಿ.

ಹಿರೇಲಕ್ಕಾದೇವಿ : ಏಕೆ ಪ್ರಭು?

ಗೋರಕ್ಷ : ಆತನ ಕೈಗಳನ್ನ ಚೂರು ಚೂರಾಗಿ ಕತ್ತರಿಸಿ.

ಚಿಕ್ಕಲಕ್ಕಾದೇವಿ : ಅವರೇನು ಅಂತಹ ತಪ್ಪು ಮಾಡಿದ್ದು ಪ್ರಭು?

ಹಿರೇಲಕ್ಕ : ಸ್ವಾಮಿ ಯಾವ ಮಹಾಮಹಿಮ ಪುರುಷನೋ ಏನೋ ಆತನನ್ನ ನೋಡದೆ ಮಾಡದೆ ಈ ಶಿಕ್ಷೆಗೆ ಗುರಿ ಮಾಡುವುದು ಸರಿಯಲ್ಲ ಚನ್ನಾಗಿ ವಿಚಾರಿಸೋಣ.

ಗೋರಕ್ಷ : ಸಾಕು ನಿನ್ನ ಹರಟೆ... ನಿಲ್ಲಿಸು.

ಚಿಕ್ಕಲಕ್ಕ : ಪತಿಯೇ, ಪರಮಾತ್ಮನ ಅಂಶದ ಮಹಾಮಹಿಮನು ಬಂದಿರುವಾಗ ಆತನಿಗೆ ನಿಮ್ಮ ಕಟ್ಟಪ್ಪಣೆ ಹೇಳಿ ಹಿಂದಕ್ಕೆ ಕಳುಹಿಸೋಣ. ಆದರೆ ಸುಮ್ಮನೆ ಕತ್ತರಿಸಿ ಕಳುಹಿಸುವುದರಿಂದ ನಮಗೆ ಬರುವ ಲಾಭವೇನು ಸ್ವಾಮಿ?

ಗೋರಕ್ಷ : ನೀಚಳೇ ಹೇಳಿದಷ್ಟು ಕೇಳು.

ಹಿರೇಲಕ್ಕ : ಸ್ವಾಮಿ ನನಗೆ ಆ ಗುರುವಿನ ವಿನಯಸ್ವರ ಕರುಳನ್ನು ಹಿಸುಕಿದಂತಾಗುವುದಲ್ಲದೆ ಒಂದು ರೀತಿಯ ಭಕ್ತಿಯೂ ಮೂಡುತ್ತಿದೆ ಸ್ವಾಮಿ.

ಚಿಕ್ಕಲಕ್ಕ : ನೀವಾದರೂ ಹೇಳಿ. ನಾವು ಆತನ ಕೈ ಕತ್ತರಿಸಲು ಕೈ ಬಾರದೆ ಭಯವಾಗುತ್ತಿದೆ ಸ್ವಾಮಿ.

ಗೋರಕ್ಷ : ನನ್ನ ಸಕಲ ಮಾಯ ಮಂತ್ರದ ಶಕ್ತಿ ಕೊಟ್ಟಿದ್ದೀನಿ. ಹೋಗಿ ನಾ ಹೇಳಿದ ಕಾರ್ಯವನ್ನು ಮಾಡಿ ಬರದಿದ್ದರೆ ಸುಮ್ಮನೆ ಬಿಡುತ್ತೇನೆಂದು ಕನಸಿನಲ್ಲಿಯೂ ನೆನಸಬೇಡಿ.

ಚಿಕ್ಕಲಕ್ಕ : (ಕಣ್ಣೀರಿಂದ) ಸ್ವಾಮಿ ಇದುವರೆವಿಗೂ ಯಾವ ಪತಿಯೂ ಸಹ ಸತಿಯನ್ನು ಈ ರೀತಿ ಕಾರ್ಯ ಮಾಡು ಎಂದು ಹೇಳಿರಲಿಲ್ಲ. ಆದರೆ ನೀವು ಇದನ್ನು ಆಜ್ಞಾಪಿಸಿ ಲೋಕಾದರ್ಶರಾಗುವಿರಿ. ನಮ್ಮನ್ನು ಪಾಪಕ್ಕೆ ಗುರಿ ಮಾಡುತ್ತೀರಿ.

ಹಿರೇಲಕ್ಕ : (ದುಃಖದಿಂದ) ಸ್ವಾಮಿ ಪಾಪ ಪುಣ್ಯಗಳೆಲ್ಲಾ ನಿಮ್ಮ ಭಾಗಕ್ಕೆ ಸೇರಿದುದೆಂದು ಹೇಳಿ ಈ ಕಾರ್ಯವನ್ನ ಮಾಡುವುದೇ?

ಗೋರಕ್ಷ : ಸರಿ ಅಷ್ಟನ್ನು ಹೇಳಿ ನಿಮ್ಮ ಕೆಲಸವನ್ನು ಮುಗಿಸಿ.

ಹಿರೇಲಕ್ಕ : ಆಗಲಿ ಪ್ರಭು.

ಗೋರಕ್ಷ : ಊರೆಲ್ಲ ತಿರ್ದುಂಡು ನನ್ನಲ್ಲೊ ಬಂದ ಪಪಾ ಹೇಳಲಿಕ್ಕೆ.

ಚಿಕ್ಕಲಕ್ಕ : ಸ್ವಾಮಿ ನನಗೇನೋ ಒಂದು ರೀತಿಯ ಭಯವಾಗುತ್ತಿದೆ. ಯಾವ ವಿಪತ್ತಿಗೋ ನಾಕಾಣೆ.

ಗೋರಕ್ಷ : ಅಯ್ಯೋ ಪೆಚ್ಚಳೀ ಅಷ್ಟ ಸಿದ್ಧಿಗಳನ್ನು ಜಯಸಿದ ಗೋರಕ್ಷನಿಗ, ಆತನ ಕೈ ಹಿಡಿದ ಸತಿಯರಿಗೆ ವಿಪತ್ತೆಂದು ನಿನಗೆ ಹೇಳಿದವರಾರು? ಹೋಗು (ನಗುವನು).

ಹಿರೇಲಕ್ಕ : ಎಲ್ಲಾ ನಿಮ್ಮ ಭಾರವೇ ಸ್ವಾಮಿ.

ಗೋರಕ್ಷ : ಸರಿ ಅಷ್ಟನ್ನು ಹೇಳಿ ಹೊರಡುವ ಕೆಲಸ ಮೊದಲು ಮಾಡಿ.

ಚಿಕ್ಕಲಕ್ಕ : ಚಿತ್ತ ಪ್ರಭೂ...!

ಹಿರೇಲಕ್ಕ : ಬಾ ಚಿಕ್ಕಲಕ್ಕ ಹೋಗೋಣ.

(ಇಬ್ಬರೂ ಹೋಗುವರು. ಎಲ್ಲವನ್ನೂ ನೋಡುತ್ತಾ ಗೋರಕ್ಷ ಮಂಚದ ಮೇಲೆ ಮಲಗಿರಲು)

ಹಿರೇಲಕ್ಕ : (ಕಣ್ಣೀರನ್ನ ಸುರಿಸುತ್ತಾ) ಸ್ವಾಮಿ ಗುರುವೆ ತಮ್ಮಂಥ ಮಹನೀಯರು ಇಲ್ಲಿಗೆ ಬರಲೇಬಾರದಾಗಿತ್ತು. ಆದರೆ ಬಂದದ್ದಾಯಿತು. ಈಗ ತಾವು ಬಂದು ಭಿಕ್ಷೆಯನ್ನು ಕೇಳಿದುದಕ್ಕ ನಮ್ಮ ಪತಿಯು ಕೊಟ್ಟಿರುವ ಭಿಕ್ಷೆ-ಭಿಕ್ಷೆ ಸ್ವಾಮಿ (ಎಂದು ಕೈಯನ್ನು ಹಿಂದಕ್ಕೆ ಕಟ್ಟಿ ನಿಂತು ಕಣ್ಣೀರು ಸುರಿಸುತ್ತಾ).

ಚಿಕ್ಕಲಕ್ಕ : ಸ್ವಾಮಿ ನನ್ನ ಪತಿಯನ್ನು ಎಷ್ಟು ಸಮಾಧಾನಿಸಿದರೂ ಸಾಧ್ಯವಾಗದೆ "ವಿನಾಶಕ್ಕೆ ವಿಕಾರ ಬುದ್ಧಿ" ಎಂಬಂತ ನಮ್ಮ ಪತಿಯ ಮಾಯ ಮಂತ್ರ,

ಮಾಟ ಕುಸಲ ಪ್ರವೀಣರೆಂದು ಅಂಧಕಾರದಲ್ಲಿ ಮುಳುಗಿ ನಿಮಗೆ ಕೊಡಲಾಜ್ಞಾಪಿಸಿರುವ ಭಿಕ್ಷೆ!... ನಮ್ಮ ಕೈಯಿಂದ ಹೇಗೆ ಕೊಡುವುದು ಗುರುವೇ?

ಹಿರೇಲಕ್ಕ : ಗುರುದೇವಾ ಇಂತಹ ಪಾಪಕೃತ್ಯವನ್ನು ಮಾಡಿ ನಾನು ಈ ಭೂಲೋಕದಲ್ಲೂ ಬದುಕುವಂತಿಲ್ಲ ಸ್ವಾಮಿ. ನರಕ ಪ್ರಾಪ್ತಿಯ ಕೆಲಸವನ್ನು ನನ್ನ ಪತಿಯು ನೇಮಿಸಿರುವುದು.

ರೇವಣ : ಪಾಪ, ದಾರಿ ತೋರಿದ ಆತನಿಗೇ ಹೊರತು ನಿಮಗಲ್ಲವೆಂದು ತಿಳಿದು, ಧೈರ್ಯವಾಗಿ ಆಜ್ಞಾಪಿಸಿರುವ ಭಿಕ್ಷೆಯನ್ನೇ ನೀಡಮ್ಮಾ.

ಚಿಕ್ಕಲಕ್ಕ : ಅಯ್ಯೋ ಅದನ್ನು ಹೇಗೆ ಕೊಡಲಿ ಗುರುವೆ...? (ಪಾದದ ಮೇಲುರುಳಿ ಕಣ್ಣೀರಿಕ್ಕುವಳು)

ರೇವಣ : ಏಳು ತಾಯೇ ಭಯಪಡಬೇಡ ಏಳು. ಕೊಡು ಪತಿಯಿತ್ತ ಭಿಕ್ಷೆಯನ್ನು ಏಕಚಿತ್ತದಿಂದ ನೀಡಿರಿ.

ಚಿಕ್ಕಲಕ್ಕ : ಸ್ವಾಮಿ ಇದೋ ನೋಡಿ ಈ ಹೊಳೆವ ಖಡ್ಗ ಇದರಿಂದ ನಿಮ್ಮ ಕೈಯನ್ನು ಕತ್ತರಿಸಲು ನಮ್ಮ ಪತಿಯು ಆಜ್ಞೆ ಇತ್ತಿರುವನು. (ಅಳುವಳು)

ರೇವಣ : ಅಳಬೇಡ ತಾಯೇ ಜೀವಕ್ಕೆ ಹಾನಿಯೇನಿಲ್ಲ. ಕೈ ಮಾತ್ರ ತಾನೇ ಭಿನ್ನವಾಗುವುದು. ಅದಕ್ಕೇಕೆ ಅಷ್ಟು ಹೊತ್ತಿನಿಂದ ಯೋಚನೆ ಮಾಡುತ್ತಿದ್ದೀರಾ? ಕೊಡಿ ತಾಯೇ (ನಗುವರು).

ಹಿರೇಲಕ್ಕ : ಸ್ವಾಮಿ, ಗುರುಗಳಿಗೆ ಈ ರೀತಿಯಾಗಿ ಪಾಪಕೃತ್ಯವನ್ನೆಸಗುವ ನಮಗೆ ಬೇಗ ಸಾವನ್ನಾದರೂ ಕೊಡು ದೇವಾ.

ರೇವಣ : ಅಮ್ಮಾ ನೀವು ಕತ್ತರಿಸಿ ಭಯಪಡಬೇಡಿ.

(ಕಣ್ಣೀರಿನಿಂದ ಹೊಡೆಯಲು ಕೈ ಎತ್ತಿ ಮತ್ತೆ ಬಿಟ್ಟು)

ಚಿಕ್ಕಲಕ್ಕ : ಹಿರೇಲಕ್ಕದೇವಿ ಇಕೋ ನೀನೇ ತಗೆದುಕೋ... ನನ್ನ ಕೈ ಹಿಂದೆ ಸರಿಯುತ್ತಿದೆ.

ಹಿರೇಲಕ್ಕ : ಎಲ್ಲಾ ಆ ಪರಮಾತ್ಮನಿಗೆ ಪ್ರೀತಿಯಾಗಲಿ. ಅದರಲ್ಲೂ ನಾವು ಒಂದನ್ನೂ ಅರಿಯದವರು. "ಜೈ ಪರಮೇಶ್ವರಾ"

(ಕೈಗೆ ಏಟು ಹೊಡೆಯಲು ಚೂರಿ ಕರಗಿ ನೀರಾಗಿ ಕೈಗೆ ತುಂಬಿತು. ಅದನ್ನು ಆಶ್ಚರ್ಯದಿಂದ ಗೋರಕ್ಷ ಆತನ ಹೆಂಡತಿಯರು ನೋಡುತ್ತಿರಲು ಕುಡಿದರು. ಎಲ್ಲರೂ ಗಾಬರಿಗೊಂಡರು. ಗೋರಕ್ಷನ ಹೆಂಡತಿಯರು ಮೂರ್ಛೆ ಹೊಂದಿದರು. ಆ ರಸವು ಘುಡು ಘುಡಿಸುತ್ತಾ ಗೋರಕ್ಷನ ಹೊಟ್ಟೆಗೆ ಪ್ರವೇಶಿಸಿ ಮಂಚದಿಂದುರುಳಲು ಹೆಂಡತಿಯರು ಓಡಿವರು.)

ಗೋರಕ್ಷ : ಚಿಕ್ಕಲಕ್ಕಾ ಹಿರೇಲಕ್ಕಾದೇವಿಯರೇ ಬನ್ನಿ... ಓಡಿ ಬನ್ನಿ... ಮೊದಲು ಓಡಿ... ಮನೆಯ ಲಕ್ಷ್ಮಿಯನ್ನು ಪೂಜಿಸಿ. ನಾನು ಈ ಬಾಧೆಯನ್ನು ತಡೆಯಲಾರೆ.

ಪೂಜಿಸಿರಿ... ಬೇಗ ಹೋಗಿ ಅಯ್ಯೋ... ಲಕ್ಷ್ಮೀ ಲಕ್ಷ್ಮೀ... ಉರಿ! ... ಉರಿ!!

(ಇಬ್ಬರೂ ರೇವಣರನ್ನು ನೋಡಲು ಹೋಗಲು ಮಾಯವಾಗಿದ್ದರು. ಲಕ್ಷ್ಮಿಯನ್ನು ಪೂಜಿಸುತ್ತಾ ಇಬ್ಬರೂ ಹಾಡುವರು. ಅತ್ತ ಗೋರಕ್ಷನು ಅಯ್ಯೋ ಎಂದು ಕೂಗುವನು.)

ಚಿಕ್ಕಲಕ್ಕ : ಮಹಾಲಕ್ಷ್ಮಿನಮ್ಮ ಪತಿಯನ್ನು ನಾವು ಎಷ್ಟು ಕೇಳಿದರೂ ಆ ಮಹಾತ್ಮನನ್ನು ಹೀನೈಸಿ ನುಡಿದು, ಕೈಕತ್ತರಿಸುವ ಕೆಲಸವನ್ನು ಕೊಟ್ಟು ನಮ್ಮ ಮಾಂಗಲ್ಯ ಬಲವನ್ನು ಸೆಳೆದುಕೊಳ್ಳುವಂತಾಗಿದೆ. ತಾಯೇ... ತಾಯೇ... ಕಾಪಾಡು ಮಹಾಲಕ್ಷ್ಮೀ... ನನ್ನ ಮನೆಯೊಡತೀ...!

ಹಿರೇಲಕ್ಕ : ನಮ್ಮ ಪತಿಯು ಸಾಮಾನ್ಯ ಪುರುಷನೆಂದು ತಿಳಿದು ಈ ಅಕೃತ್ಯ ವನ್ನು ಮಾಡಿದುದು ನಿಜ ತಾಯೇ. ಆದರೆ ಹೀಗೆ ಆಗುತ್ತದೆಂದು ತಿಳಿದಿದ್ದರೆ ಮಾಡುತ್ತಿರಲಿಲ್ಲ, ಏನೋ ಹೇಗಾದರೂ ಆಗಲೀ ಮಹಾಲಕ್ಷ್ಮಿನಮ್ಮ ಪತಿಯ ನೋವನ್ನು ನಿಲ್ಲಿಸಿ ನಮಗೆ ಮಾಂಗಲ್ಯ ಭಾಗ್ಯವನ್ನು ನೀಡು ತಾಯೇ ಮಹಾಲಕ್ಷ್ಮಿ......

ವಾಣಿ : ಹಿರೇಲಕ್ಕ ಚಿಕ್ಕಲಕ್ಕದೇವಿಯರೇ, ನಿಮ್ಮ ಭಕ್ತಿಗೋಸ್ಕರ ಮಾಂಗಲ್ಯಕ್ಕೋಸ್ಕರ ಈ ರೀತಿ ಉಪಕರಿಸಬೇಕಾಗಿದೆ. ಆದರೆ ನಿಮ್ಮ ಪತಿಯು ಬಹಳ ದರ್ಪ, ದುರಹಂಕಾರ, ಅರಿಷಡ್ವರ್ಗಗಳಿಂದ ತುಂಬಿ ತುಳುಕಿ ಅನೇಕರ ಹೊಟ್ಟೆಯುರಿಸುತ್ತಿದ್ದುದನ್ನು ನೋಡಿ ಸಂಹರಿಸಲೇಬೇಕೆನಿಸಿದರೂ ನಿಮಗೋಸ್ಕರ ಬಿಡಬೇಕಾಗುವುದು. ಅಲ್ಲದೆ ಇದು ಪರಶಿವ ಮುಖೋತ್ಪನ್ನವಾದ ಮಹಾಮಹಿಮ ರೇವಣಸಿದ್ಧರು ಕೊಟ್ಟಿರುವ ಶಿಕ್ಷೆಗೆ ಆತನು ಈ ರೀತಿಯಾಗಿ ಹೊರಳಾಡುವುದು ಬಂದೊದಗಿದೆ. ಆದುದರಿಂದ ಈ ನೋವನ್ನು ನಿಲ್ಲಿಸುವಂತೆ ಬೇಡಿಕೊಂಡರೆ ಒಳ್ಳೆಯದಾಗುತ್ತದೆ.

ಗೋರಕ್ಷ : ಉರಿ...! ಉರಿ!!...! ಉರಿ...!!

ಚಿಕ್ಕಲಕ್ಕ : ಸ್ವಾಮಿ ಸ್ವಲ್ಪ ತಡೆದುಕೊಂಡು ಆ ಮಹಿಮ ಪುರುಷನ ಧ್ಯಾನಮಾಡಿ ಒಳ್ಳೆಯದಾಗುವುದು.

(ಹೀಗೆ ಮಾತನ್ನಾಡುತ್ತಿರಲು ಅಲ್ಲಿಗೆ ರೇಣುಕರು ಓಂ ಭವತಿ ಭಿಕ್ಷಾಂದೇಹಿ ಎನ್ನಲು ಚಿಕ್ಕಲಕ್ಕ ಹಿರೇಲಕ್ಕಾದೇವಿಯರು ಓಡಿದರು. ಹೊಟ್ಟೆಗೆ ಕೈಯಿಟ್ಟುಕೊಂಡು ಬೆವತ ಗೋರಕ್ಷ ಹಿಂದೆ ಬಂದು ನಿಂತನು. ಚಿಕ್ಕಲಕ್ಕ-ಹಿರೇಲಕ್ಕಾದೇವಿಯರು ಕಾಲಿಗೆ ಬಿದ್ದರು. ಮಧ್ಯೆ ಗೋರಕ್ಷ ಉರುಳಿ ನಮಸ್ಕರಿಸಿ ಮೂವರೂ ಕಣ್ಣೀರು ಸುರಿಸಿ)

ಗೋರಕ್ಷ : ಸ್ವಾಮಿ... ಉರಿಯನ್ನು ನಿಲ್ಲಿಸಿ. ನಾನು ಅಹಂಕಾರದಿಂದ ಮೆರೆದುದಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು. ಇನ್ನಾದರೂ ಬುದ್ಧಿ ಕಲಿತು ವಿನಯದಿಂದಿರುವೆನು,

ಕರುಣಿಸಿ ದೇವಾ ರೇಣುಕೇಶ್ವರನೆಂದು ತಿಳಿಯದ ಹುಚ್ಚ ಈ ರೀತಿ ವರ್ತಿಸಿದೆ.

ಚಿಕ್ಕಲಕ್ಕ : ಗುರುವೇ ಅರಿಯದೇ ತಪ್ಪು ಮಾಡಿದ ನನ್ನ ಪತಿಯನ್ನು ಕ್ಷಮಿಸಿ ನಮ್ಮ ಮಾಂಗಲ್ಯದ ಭಿಕ್ಷೆಯನ್ನು ನೀಡಿ ದೇವಾ.

ಹಿರೇಲಕ್ಕ : ನಮ್ಮ ಪತಿಯನ್ನು ಕ್ಷಮಿಸಿ ಗುರುದೇವಾ.

ರೇವಣ : ನಿಮ್ಮಿಬ್ಬರಿಗೋಸ್ಕರ ನಾನು ಕರುಣಿಸಬೇಕಾಗಿದೆ. ಆದರೆ ನಿನ್ನ ಅಹಂಕಾರ ಹೆಮ್ಮೆಗಳನ್ನು ನೋಡಿದರೆ ನಿಜವಾಗಿಯೂ ಕ್ಷಮಿಸುವಂತಿರಲಿಲ್ಲ.

ಹಿರೇಲಕ್ಕ : ಹಾಗನ್ನದಿರಿ ಗುರು.

ರೇವಣ : "ಹಮ್ಮಿನಿಂದ ಬ್ರಹ್ಮ ಕೆಟ್ಟ" ಎಂಬುದನ್ನು ಕೇಳಿಲ್ಲವೆ? ಅನೇಕ ರಾಕ್ಷಸರು ಮೆರೆದು ಮಣ್ಣು ಪಾಲಾದರು! ಆದುದರಿಂದ ಇನ್ನಾದರೂ ಜಂಗಮರಿಗೆ ದಾಸೋಹ ಮಾಡುತ್ತಾ ಹಿರಿಯರಲ್ಲಿ ಭಕ್ತಿ ಇಟ್ಟು ದೇವರನ್ನು ಮರೆಯದೆ ನ್ಯಾಯದಿಂದ ನಡೆದರೆ ಇಂದಲ್ಲ ಮುಂದು, ಈ ಲೋಕದಲ್ಲಲ್ಲ ಪರಲೋಕದಲ್ಲಿ ಸದ್ಗತಿ ಇಲ್ಲದಿದ್ದರೆ ನರಕ ಪ್ರಾಪ್ತಿಯಾಗುತ್ತದೆ.

(ಉರಿ ನಿಂತಿತು, ನಗುತ್ತ ಮೂವರೂ)

ಗೋರಕ್ಷ : ಸ್ವಾಮಿ ಉರಿ ನಿಂತಿತು. ಮನಕಾನಂದವಾಯ್ತು ಮಹಾದೇವ.

(ಮೂವರೂ ನಮಸ್ಕರಿಸಲು ಅಲ್ಲಿಂದ ರೇವಣರು ಮುಂದೆ ಹೊರಡುವರು)

ರೇವಣ : ಪಾಪ...

ಗೋರಕ್ಷ : ನನ್ನನ್ನು ಪಾಪಿ ಎಂದು ಬಿಡಿ ದೇವಾ.

ಹಿರೇಲಕ್ಕ : ನಿಮ್ಮ ಕೃಪೆಯಿಂದ ತೆಲ್ಲಿಸೆಟ್ಟಿಯ ಮನೆಯಲ್ಲಿರಲು ಆತನ ದರಿದ್ರ ಮಾಯವಾಯಿತು. ಎತ್ತಿನ ಕಣ್ಣುಗಳು ಬಂದುವಂತೆ. ಆತ ತಮ್ಮ ಕಾಲ್ಗೆರಗಿ ಮೋಕ್ಷ ಮಾರ್ಗವನ್ನು ಹೊಂದಿದನು ಎಂದು ಕೇಳಿದ್ದೇನೆ ದೇವಾ.

ಗೋರಕ್ಷಾ: ಎಲ್ಲವೂ ತಮ್ಮ ಮಹಾಲೀಲೆ ದೇವಾ. ತಮ್ಮ ಕೃಪಾಕಟಾಕ್ಷವು ಸದಾ ನಮ್ಮ ಮೇಲಿರಲಿ ಗುರುದೇವಾ.

ರೇವಣ : ತಥಾಸ್ತು.

## ಘಟ್ಟ ೧೭

(ರಾಜೇಂದ್ರಚೋಳ, ಕುಲಶೇಖರಿ ಕುಳಿತಿದ್ದಾರೆ. ಸೌಂದರದೇವಿ ಅರಮನೆಯಲ್ಲಿ ವೀಣಾನಾದದೊಡನೆ ಹಾಡುತ್ತಿರಲು ಅಲ್ಲಿಗೆ ರೇವಣಸಿದ್ಧರ ಪ್ರವೇಶ)

ರೇವಣ : "ಶಂಭೋ ಶಂಕರ"

(ಕೆಳಗಿಳಿದು ಇಬ್ಬರೂ ನಮಸ್ಕರಿಸುವರು.)

"ಶಂಭೋ ಶಂಕರ".... ಮಹಾರಾಜ ನಿಮ್ಮ ಭಕ್ತಿಗೆ ಮೆಚ್ಚಿ ಈ ಮಗಳನ್ನು ವರವಾಗಿ ಕರುಣಿಸಿದ್ದೆ. ಆದರೆ ನಿಮ್ಮ ಅಸಾಧ್ಯ ಭಕ್ತಿಯನ್ನು ಬೃಹಸ್ಪತಿಗಳಿಂದ ತಿಳಿದು ನಿಮ್ಮನ್ನೂ ನೋಡಲು ಬಂದೆ.

ರಾಜೇಂದ್ರ : ಪೂಜ್ಯರೇ... ಎಲ್ಲಾ ತಮ್ಮ ಅನುಗ್ರಹದ ಬಲ.

ಕುಲಶೇಖರಿ : ಈ ನಮ್ಮ ಸೌಂದರದೇವಿಯೂ ಸಹ ಸದಾ ನಿಮ್ಮ ಧ್ಯಾನ ಪೂಜೆಗಳಿಂದಲೇ ಕಾಲ ಕಳೆಯುತ್ತಿದ್ದಾಳೆ.

ರೇವಣ : ಹಾಗಾದರೆ ನನ್ನನ್ನು ಕಂಡರೆ ಅಷ್ಟೊಂದು ಭಕ್ತಿಯೇ?

ಕುಲಶೇಖರಿ : ಹೌದು ಗುರುವರ್ಯ.

ರಾಜೇಂದ್ರ : ತಾವು ಮನಸ್ಸು ಮಾಡಿದರೆ ತಮಗೆ ಸಂಸಾರದಲ್ಲಿ ಆಸಕ್ತಿ ಇದ್ದರೆ...

ರೇವಣ : ಇದ್ದರೇ...

ಕುಲಶೇಖರಿ : ನಮ್ಮ ಮಗಳನ್ನು ನಿಮಗೆ ಧಾರೆ ಎರೆದು ಕೊಡುತ್ತೇವೆ.

ರೇವಣ : ನಾನು ಆ ಧ್ಯೇಯದಿಂದ ಬಂದವನಲ್ಲ ಮಹಾರಾಜ.

ರಾಜೇಂದ್ರ : ಕೊಟ್ಟ ಫಲವನ್ನ, ಹೆಣ್ಣನ್ನ ಯಾವಾಗಲೂ ತಿರಸ್ಕರಿಸಬಾರದು.

ರೇವಣ : ಅದು ಸಹಜ. ಆದರೆ ನನ್ನ ಗುರಿಯೇ ಬೇರೆ. ನಾನು ಸನ್ಯಾಸಿ. ಊರೂರು ಸುತ್ತುವವನು. ನಿಮ್ಮ ಮಗಳು ರಾಜ ಸುಪ್ಪತ್ತಿಗೆಯಲ್ಲಿ ಬೆಳೆದವಳು.

ಕುಲಶೇಖರಿ : ಆಕೆ ಅದಕ್ಕೆ ಸಂತೋಷವಾಗಿ ಒಪ್ಪುತ್ತಾಳೆ. ಆಚಾರ್ಯರೇ.

ರೇವಣ : ಇಷ್ಟರ ಮೇಲೆ ತಮ್ಮಿಷ್ಟ!

ರಾಜೇಂದ್ರ : ತಮ್ಮಂತಹವರನ್ನು ಅಳಿಯನನ್ನಾಗಿ ಪಡೆಯುವುದು ಹಿಂದಿನ ಜನ್ಮದ ಪುಣ್ಯ ವಿಶೇಷವೇ ಸರಿ.

ರೇವಣ : ಅದರಲ್ಲೇನು ಬಂತು? ಎಲ್ಲಾ ಆ ದೈವ ನೇಮಕ, ಆದರೆ ಇದಕ್ಕೆ ನಿಮ್ಮ ಮಗಳ ಸಮ್ಮತಿ ಅವಶ್ಯಕ.

ಕುಲಶೇಖರಿ : ಆಕೆಯು ಖಂಡಿತ ಒಪ್ಪುತ್ತಾಳೆ ಗುರು.

(ಎನ್ನಲು ನಾಚಿ ಓಡುವಳು.)

ರಾಜೇಂದ್ರ : ಆ ಮೌನವೇ ಒಪ್ಪಿಗೆಯ ಸೂಚನೆ.

ರೇವಣ : ನಿಮ್ಮ ಸಂತೋಷ ಹೇಗೆ ಬರುತ್ತದೆಯೋ ಹಾಗೆ ಮಾಡಿ.

(ಹಿಂದಿನಿಂದ ಮದುವೆ ಓಲಗದ ಶಬ್ದ)

## ಘಟ್ಟ ೧೮

(ಸೌಂದರದೇವಿಯು ಅರಮನೆಯಲ್ಲಿ ಕುಳಿತು ಪತಿ ಪೂಜಿಸಿದ ಮೇಲೆ)

ರೇವಣ : ಸೌಂದರದೇವಿ.

ಸೌಂದರದೇವಿ : ಸ್ವಾಮಿ... ಏನು?

ರೇವಣ : ದೇವಿ ನಾನೀಗ ಒಂದು ಸಂಕಲ್ಪ ಮಾಡಿರುವೆ.

ಸೌಂದರದೇವಿ : ಅಂತಹ ಸಂಕಲ್ಪವೇನು ಸ್ವಾಮಿ?

ರೇವಣ : ಈ ಮಂಗಳವಾಡದ ಹೊರ ವಲಯದಲ್ಲಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಬೇಕೆಂಬುದು ಮನದ ಬಯಕೆಯಾಗಿದೆ.

ಸೌಂದರದೇವಿ : ಅದಕ್ಕೇನಂತೆ...?

ರೇವಣ : ಅದನ್ನ ಮಾಡಿಸುವುದೆಂದರೆ ಸಾಮಾನ್ಯವಲ್ಲ.

ಸೌಂದರದೇವಿ : ನಾನೂ ಸಹ ನಡುಕಟ್ಟಿ ಕೆಲಸ ಮಾಡುತ್ತೇನೆ.

ರೇವಣ : ನಾನೇನೋ ಮಾಡುತ್ತೇನೆಂದರೂ ಸರಿ ಆದರೆ ನೀನು ಏನು ಮಾಡುತ್ತೀಯೋ? ಹೊಟ್ಟೆ ಒಳಗೆ ಶಿಶು ಬೇರೆ ಇದೆ... ಈಗ ಗರ್ಭಿಣಿಯಾದಾಗ ಕಷ್ಟವಾದ ಕೆಲಸ ಮಾಡಬಾರದು.

ಸೌಂದರದೇವಿ : ಸಾಕು ಸುಮ್ಮನಿರಿ. ಈ ಕಾಲದಲ್ಲಿ ಕೆಲಸ ಮಾಡಿ ಬೆವರು ಸುರಿಯಲೇಬೇಕು.

ರೇವಣ : ಎಷ್ಟೇ ಆದರೂ ನೀನು ರಾಜೇಂದ್ರ ಚೋಳನ ಮಗಳಲ್ಲವೇ? ಆ ವೀರರತ್ನ ನಿನ್ನಲ್ಲಿದೆ ಎಂಬುದು ಇದರಿಂದ ವ್ಯಕ್ತವಾಗುತ್ತಿದೆ.

ಸೌಂದರದೇವಿ : ಅದಿರಲಿ ಈ ಕೆರೆಗೆ ಏನೆಂದು ಹೆಸರಿಡುತ್ತೀರಿ?

ರೇವಣ : ಸಿದ್ಧನ ಕೆರೆ ಎಂದು.

ಸೌಂದರದೇವಿ : ಗುದ್ದಲೀಪೂಜೆ ಯಾವಾಗ?

ರೇವಣ : ಶ್ರಾವಣಮಾಸದಲ್ಲಿ ಆರಂಭಿಸೋಣ ಅಂತಾ ಇದ್ದೀನಿ.

ಸೌಂದರದೇವಿ : ಆಗಲೀ ಪ್ರಭು.

## ಘಟ್ಟ ೧೯

(ಕೆರೆ ಕಟ್ಟುವ ಕಾರ್ಯದಲ್ಲಿ ರೇವಣಸಿದ್ಧ, ಸೌಂದರದೇವಿ ನಿರತರಾಗಿದ್ದಾರೆ. ದೂರದಿಂದ ಕೋಲಾಹಲ ಶಬ್ದ ಕೇಳಿ ಬರುತ್ತಿದೆ. ಆಗ ಸೌಂದರದೇವಿ ಮಣ್ಣು ಹೊತ್ತು ಹೋಗುತ್ತಿರಲು)

ರೇವಣ : ಸೌಂದರಾ... ಬೇಡ ನಿನ್ನ ಕೈಯಲ್ಲಿ ಆಗುವುದಿಲ್ಲ.

ಸೌಂದರದೇವಿ : ನಾನು ನನ್ನ ಕೈಲಾದ ಸೇವೆ ಮಾಡಲೇಬೇಕು.

ರೇವಣ... : ಹೊಟ್ಟೆಯಲ್ಲಿ ಒಂದನ್ನ ಹೊತ್ತುಕೊಂಡು ನಿನಗೆ ಸಾಧ್ಯವಿಲ್ಲ... ಬಿಡು... ನಾನು ತೆಗೆದುಕೊಂಡು ಹೋಗುತ್ತೇನೆ.

ಸೌಂದರದೇವಿ : ಇಲ್ಲ ದೇವಾ... ನಾನು ನನ್ನ ಇಷ್ಟಾರ್ಥ ನೆರವೇರಿಸಲೇಬೇಕು.

ರೇವಣ : ನಿನ್ನ ಸಂತೋಷಕ್ಕೆ ನಾನು ಅಡ್ಡಿ ಬರುವುದಿಲ್ಲ ನಿನ್ನಿಷ್ಟ ಬಂದಂತೆಯೇ ಮಾಡು.

(ಒಂದೆರಡು ಸಾರಿ ಹೋದ ಮೇಲೆ ಸುಸ್ತಾಗಿ ಬೆವತು ಮಂಕರಿ ಕೆಳಗಿಟ್ಟು "ಉಷ್ ಅಮ್ಮಾ" ...ಎಂದಳು ಕೂಡಲೇ ಧಾವಿಸಿ ಉಪಚರಿಸಿ)

ರೇವಣ : ನಾನು ಆಗಲೇ ಹೇಳಿದೆ ಅದನ್ನು ನೀನು ಕೇಳಿದ್ಯೇನು?

ಸೌಂದರದೇವಿ : ಆಸೆ ಎಂಬುದು ಇದೆಯಲ್ಲಾ ಅದು ನನ್ನನ್ನು ಕಾಡಿಸಿ ಮಾಡಿಸಿತು.

ರೇವಣ : ಏನಾಗುತ್ತಿದೆ?

ಸೌಂದರದೇವಿ : ಸ್ವಾಮಿ ಹೊಟ್ಟೆ ನೋವಾಗುತ್ತಿದೆ.

ರೇವಣ : ನಡೆ ಹಾಗಾದರೆ ಅರಮನೆಗೆ ಹೋಗುವೆಯಂತೆ.

ಸೌಂದರದೇವಿ : ಆಗಲೀ... ಸ್ವಾಮಿ.

(ಎಂದು ಮೆಲ್ಲನೆ ಹೊರಡುವರು)

## ಘಟ್ಟ ೨೦

ರೇವಣ : ಸೌಂದರದೇವಿ.

ಸೌಂದರದೇವಿ : ಏನು ಸ್ವಾಮಿ... ಇಷ್ಟು ದಿನಗಳಾದ ಮೇಲೆ ನನ್ನ ಜ್ಞಾಪಕವಾಯಿತೇ?

ರೇವಣ : ಇಲ್ಲ ದೇವಿ. ನಾನು ಆ ಕೆಲಸವನ್ನು ಸಂಪೂರ್ಣವಾಗಿ ಮುಗಿಸುವ ತನಕ ಅಲ್ಲೇ ಇರಬೇಕೆಂಬ ಸಂಕಲ್ಪ ಮಾಡಿದ್ದೆ. ಆದುದರಿಂದ ಬರಲಾಗಲಿಲ್ಲ.

ಸೌಂದರದೇವಿ : ನಿಮಗೆ ಪುತ್ರರತ್ನವೊಂದು ಜನಿಸಿತೆಂದು ತಿಳಿಯಿತಲ್ಲಾ.

ರೇವಣ : ಓಹೋ ಆಗಲೇ ತಿಳಿಯಿತು.

ಸೌಂದರದೇವಿ : ಆತನನ್ನು ನೋಡಲಾದರೂ ಮನಸ್ಸಾಗಬಾರದೇ?

ರೇವಣ : ಈಗ ಆಯ್ತಲ್ಲ.

ಸೌಂದರದೇವಿ : ಇನ್ನೂ ಆತನಿಗೆ ನಿಮಗೋಸ್ಕರ ಕಾದು ನಾಮಕರಣವನ್ನೂ ಮಾಡಿಲ್ಲ. ಮಗನು ಹೇಗೆ ಬೆಳೆದಿದ್ದಾನೆ ಗೊತ್ತೇ?

ರೇವಣ : ಮಗನು ಚೆನ್ನಾಗಿಯೇ ಬೆಳದಿರಬೇಕು.

ಸೌಂದರದೇವಿ : ಮಗೂ... ಬಾರಪ್ಪಾ... ನಿಮ್ಮ ತಂದೆ ಬಂದಿದ್ದಾರೆ.

ರುದ್ರ : ಬಂದೆ ಅಮ್ಮಾ.

ರೇವಣ : ಹೆಸರಿಲ್ಲದೆ ಹೇಗೆ ಕರೆಯುತ್ತಿದ್ದೀಯೆ? ಆತನನ್ನು ರುದ್ರಮುನಿ ಎಂದು ಕರೆ.

ಸೌಂದರದೇವಿ : ರುದ್ರಮುನೀ... ರುದ್ರಮುನೀ ಬಾರಪ್ಪಾ... ತಂದೆಗೆ ನಮಸ್ಕರಿಸು ಬಾ.

(ಆತ ಬಂದು ನಮಸ್ಕರಿಸಲು)

ರೇವಣ : ಏಳಪ್ಪಾ ರುದ್ರಮುನಿ ಏಳು ಒಳ್ಳೆಯದಾಗಲಿ.

## ಘಟ್ಟ ೨೧

(ಏಕಾಮ್ರೇಶ್ವರ ದೇವಾಲಯಕ್ಕೆ ಹೋಗುತ್ತಾ ರಸ್ತೆಯಲ್ಲಿ ರೇಣುಕರು)

ರೇವಣ : ನಾನು ಈ ಭೂಲೋಕಕ್ಕೆ ಬಂದು ಒಂದು ಸಾವಿರದ ನಾಲ್ಕು ನೂರುವರ್ಷಗಳಾಗಿ, ಶಿವ ಸಿದ್ಧಾಂತವನ್ನು ನೆಲೆಗೊಳಿಸಿ, ಕಣ್ಣಿಲ್ಲದ ಕುರುಡರು, ಕಾಲಿಲ್ಲದ ಹೆಳವರನ್ನಾಶೀರ್ವದಿಸಿ ಅಂಗಾಂಗಗಳನ್ನ ಕೊಟ್ಟು, ದುಷ್ಟರ ಮರ್ಧನ ಮಾಡಿ ಶಿಷ್ಟರ ಪಾಲನೆ ಮಾಡಿದೆ. ಇನ್ನು ನನ್ನ ಪೀಠವನ್ನು ನನ್ನ ಮುಂದಿನ ಅನುಯಾಯಿಯಾದ ರುದ್ರಮುನಿಯನ್ನು ನನ್ನೂರಿಗೆ ಕಳುಹಿಸಿ ಕೊಡುವಂತೆ ಅನುಗ್ರಹಿಸು ಏಕಾಮ್ರೇಶ್ವರಾ!

ವಾಣಿ : ತಥಾಸ್ತು.

ರೇವಣ : ಮಹದಾಜ್ಞೆ ದೇವಾ.

## ಘಟ್ಟ ೨೨

ರೇವಣ : ಬಾ ಮಗು ಬಾ.

ರುದ್ರಮುನಿ : ಗುರುವೇ ಈಗ ತಮ್ಮ ಪ್ರಯಾಣ ಎತ್ತ?

ರೇವಣ : ಮಲಯಾಚಲದತ್ತ ಹೋಗುವ ಮನ ಮಾಡಿರುವೆ ರುದ್ರಮುನಿ.

ರುದ್ರಮುನಿ : ಅಲ್ಲಿಗೆ ಹೋಗುವ ಮುಖ್ಯ ಉದ್ದೇಶವೇನು ಗುರು?

ರೇವಣ : ಅಲ್ಲಿ ಆಗಬೇಕಾದ ಕಾರ್ಯಗಳನೇಕ ಇವೆ. ಆದುದರಿಂದಲೇ ಹೋಗಬೇಕು ಮಗೂ.

ರುದ್ರಮುನಿ : ಅವಾವುವು ಗುರು?

ರೇವಣ : ಶಾಸ್ತ್ರಾಭ್ಯಾಸ, ಷಟ್‌ಸ್ಥಲ, ಅಷ್ಟಾವರಣಗಳೇ ಮೊದಲಾದ ವೀರಶೈವ ತತ್ವಗಳ ಬೋಧನೆ ಮಾಡಿ ನಿನ್ನನ್ನು ಸರ್ವಪಾರಂಗತನಾಗಿ ಮಾಡುವ ಆಸೆ. ಅದಕ್ಕಾಗಿ ನಿನ್ನನ್ನು ನನ್ನ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದೇನೆ.

ರುದ್ರಮುನಿ : ಅಲ್ಲಿನ ಮುಖ್ಯ ವಿಶೇಷವೇನು ಗುರುದೇವಾ?

ರೇವಣ : ಅಲ್ಲಿ ಏಕೋರಾಮಾರಾಧ್ಯರು, ಪಂಡಿತಾರಾಧ್ಯರು, ವಿಶ್ವಾರಾಧ್ಯ, ಮರುಳರಾಧ್ಯರೇ ಮೊದಲಾದವರು ತಪವನ್ನಾಚರಿಸುತ್ತಿದ್ದಾರೆ. ಅಲ್ಲಿಗೆ ಹೋಗೋಣ. ಅಲ್ಲಿ ನಿನಗೆ ವಿದ್ಯಾಭ್ಯಾಸ ಕೊಡಿಸುವ ಯೋಚನೆ ನನ್ನದು.

ರುದ್ರಮುನಿ : ಮಹದಪ್ಪಣೆ ಗುರುದೇವ ಹೋಗೋಣ.

(ಹೊರಡುವರು.)

## ಘಟ್ಟ ೨೩

(ಆಶ್ರಮದಲ್ಲಿ ಏಕೋರಾಮಾರಾಧ್ಯ, ಪಂಡಿತ, ವಿಶ್ವ, ಮರುಳಾರಾಧ್ಯರು ಚರ್ಚಿಸುತ್ತಿರುವಲ್ಲಿಗೆ ರೇವಣಸಿದ್ಧರು ಪ್ರವೇಶಿಸುವರು.)

ಏಕೋರಾಮಾರಾಧ್ಯ : ಗುರುಗಳಿಗೆ ಶರಣು ಶರಣಾರ್ಥಿಗಳು, ಇತ್ತ ದಯಮಾಡಿಸಬೇಕು.

ರೇವಣ : ನಾನೇ ನಿಮ್ಮನ್ನು ಕರೆಸಬೇಕೆಂದಿದ್ದೆ. ಅನರೆ ನೀವೇ ಸಭೆಗೊಟ್ಟಿರುವಿರಿ.

ಪಂಡಿತಾರಾಧ್ಯ : ಏಕೆ ಗುರು?

ರೇವಣ : ಇನ್ನೇನು "ಮುದಿ ಎಲೆ ಬೀಳಲು ಚಿಗುರೆಲೆ ನಗಲು".

ಮರುಳಾರಾಧ್ಯ : ಗುರುಗಳೇ ಹಾಗಾದರೆ ಇದೇ ತಮ್ಮ ಕೊನೆಯ ದರ್ಶನವೇ?

ರೇವಣ : ಹೌದು ನನ್ನ ಭೌತ ದೇಹದ ದರ್ಶನದ ಕೊನೆ.

ವಿಶ್ವಾರಾಧ್ಯ : ಗುರುವೇ ತಮ್ಮ ದರ್ಶನದಿಂದ ನಾವು ಪುಣ್ಯ ಪುನೀತರಾದೆವು. ಕೆಲಕಾಲ ನೀವು ಇಲ್ಲೇ ಇದ್ದು ಪೂಜಾನಂವದಲ್ಲಿ ವಿಶ್ರಮಿಸಿ ಕೊಳ್ಳಿರಿ.

ರೇವಣ : ತಮ್ಮ ಆಸೆಯಂತೆಯೇ ನೆರವೇರಲಿ.

ವಿಶ್ವಾರಾಧ್ಯ : ಅಷ್ಟು ದಿನಗಳಿಂದ ಕಾಶಿಯಲ್ಲಿದ್ದರೂ "ಗಂಗಾವತರಣ" ವಿಷಯವನ್ನು ತಮ್ಮ ಬಾಯಿಂದಲೇ ಕೇಳಬೇಕೆಂಬ ಆಸೆ ಗುರು.

ರೇವಣ : ಕೇಳಿ, ಹಿಂದೆ ಸಗರನು ಇಂದ್ರನ ಪದವಿಯನ್ನು ಪಡೆಯುವ ಆಸೆಯಿಂದ ಯಜ್ಞ ಮಾಡುತ್ತಿದ್ದನು. ಇದನ್ನು ತಿಳಿದ ಇಂದ್ರನು ದಿಗ್ವಿಜಯದ ಕುದುರೆಯನ್ನು ಪಾತಾಳದಲ್ಲಿ ಕಟ್ಟಿದನು. ಆಗ ಸಗರನು ತನ್ನ ಆರು ಸಾವಿರ ಮಕ್ಕಳನ್ನು ಕಳುಹಿಸಿದನು. ಪಾತಾಳದಲ್ಲಿ ಋಷಿಯ ಹಿಂದಿದ್ದ ಕುದುರೆ ನೋಡಿ ಅವನ ಮೇಲೆ ಕಲ್ಲು ಮಳೆ ಕರೆಯಲು ಋಷಿ ಕೋಪದಿಂದ ಕಣ್ಣೆಡಲು ಎಲ್ಲರೂ ಬೂದಿಯಾದರು.

ವಿಶ್ವಾರಾಧ್ಯ : ಆಮೇಲೆ?

ರೇವಣ : ಭಗೀರಥನು ಹಿರಿಯರ ಪಿಶಾಚತ್ವವನ್ನು ತಿಳಿದು ಘೋರ ತಪವಾಚರಿಸಿ ಗಂಗೆ ಬರುವಂತೆ ಪ್ರಾರ್ಥಿಸಿದ. ಶಿವನು ಗಂಗೆಯನ್ನು

ಕಳುಹಿಸಿದನು. ಆಕೆ ಬರುವ ರಭಸಕ್ಕೆ ಭೂಲೋಕವೇ ಪ್ರಳಯವಾಗುತ್ತಿರಲು ಶಿವನು ಆಕೆಯನ್ನು ಮುಡಿಯಲ್ಲಿ ಭದ್ರಿಸಿದನು. ಆಮೇಲೆ ಪಾತಾಳದಲ್ಲಿ ಜಹ್ನುಮುನಿ ಆಶ್ರಮ ತೇಲುತ್ತಿರಲು ಆತನು ಜಲವನ್ನೆಲ್ಲಾ ಆಪೋಷಣೆ ಮಾಡಿದ. ಮತ್ತೆ ಭಗೀರಥನು ಪ್ರಾರ್ಥಿಸಲು ಆ ಋಷಿ ಕಿವಿಯಿಂದಲೇ ಗಂಗೆಯನ್ನು ಬಿಟ್ಟನು. ಕೊನೆಗೆ ಭಗೀರಥನು ತನ್ನ ಪ್ರಯತ್ನವನ್ನು ಸಾಧಿಸಿದ.

ಏಕೋರಾಮಾ : ನನಗೆ ಸ್ವಲ್ಪ ಕುಕುದ್ಗಿರಿಯ ಮಹಿಮೆಯನ್ನು ತಿಳಿಸಿ ಗುರು.

ರೇವಣ : ತಾಣಾದ ಮುನಿಯು ಹುಲ್ಲು ಕಡ್ಡಿಯಲ್ಲಿ ಬೀಳುವ ನೀರ್ಕುಡಿದು ತಪವಾಚರಿಸುತ್ತಿದ್ದ ಈ ಕುಕುದ್ಗಿರಿಯಲ್ಲಿ. ಈಶ್ವರನಿಗೆ ಆತನ ತಪೋಜ್ವಾಲೆಯು ಮುಟ್ಟಲು ಈಶ್ವರನು ಪ್ರತ್ಯಕ್ಷನಾಗಿ "ಕುಕುದ್ಗಿರಿ" ಎಂದು ಹೆಸರು ಇಟ್ಟು ಹೋದ. ಹೀಗೆ ಈಶ್ವರನು ಪಂಚವಿಂಶತಿ ಲೀಲೆಗಳನ್ನು ತೋರಿ ಜಗತ್ ಕಲ್ಯಾಣವನ್ನು ಸಾಧಿಸಿದ.

ಮರುಳಾರಾಧ್ಯ : ಇವನ್ನೆಲ್ಲಾ ಕೇಳಿದ ನಾವೇ ಧನ್ಯರು ಗುರುದೇವಾ.

ರೇವಣ : ಈಗ ನೀವೆಲ್ಲರೂ ನನ್ನದೊಂದು ಆಸೆಯನ್ನು ಪೂರೈಸಬೇಕಲ್ಲ.

ಮರುಳಾರಾಧ್ಯ : ಹೇಳಿ ಅಗತ್ಯವಾಗಿ ಆಗಲೀ. ಅದಾವುದು ಗುರುದೇವಾ?

ರೇವಣ : ರುದ್ರಮುನಿಗೆ ಪಟ್ಟಕಟ್ಟಬೇಕಾದುದರಿಂದ ನೀವುಗಳು ಸಕಲ ಸಿದ್ಧತೆಗಳನ್ನು ನಡೆಸಬೇಕು.

ರುದ್ರಮುನಿ : ಏನು ಗುರುದೇವಾ?

(ಒತ್ತರಿಸುವ ಕಣ್ಣೀರಿಂದ)

ರೇವಣ : ನಿನಗೆ ಅಷ್ಟು ದಿನಗಳಿಂದ ವಿದ್ಯಾಭ್ಯಾಸವನ್ನು ಮಾಡಿಸಿಯಾಯಿತು.

ರುದ್ರಮುನಿ : ಏಕೆ ಗುರು ಕಣ್ಣೀರು?

ರೇವಣ : (ಕಣ್ಣೀರು ತೊಡೆದು) ಇದು ಆನಂದದ ಕಣ್ಣೀರು. ಕೆನ್ನೆಗೆ ಚುಂಬನ ಕಂದ.

ರುದ್ರಮುನಿ : ಏಕೆ ಗುರು?

ರೇವಣ : ಅದೋ ಅಲ್ಲಿ ಸಿದ್ಧಪಡಿಸುತ್ತಿರುವ ಪೀಠವನ್ನೊಪ್ಪಿಸಲು.

ರುದ್ರಮುನಿ : ಗುರುಗಳ ಪೀಠದಲ್ಲಿ ಶಿಷ್ಯನು ಕುಳಿತುಕೊಳ್ಳುವುದೆಂದರೇನು ಗುರುವೆ?

ರೇವಣ : ರುದ್ರಮುನೀ ಇದರ ಫಲವನ್ನು ನಾನು ಅನುಭವಿಸಿಯಾಯಿತು ಅದನ್ನೀಗ ನಿನಗೊಪ್ಪಿಸುತ್ತಿರುವೆ.

ರುದ್ರಮುನಿ : ಈ ಪೀಠದಲ್ಲಿ ಕುಳಿತು ನಾನು ಮಾಡುವುದಾದರೂ ಏನು ಗುರುದೇವಾ?

ರೇವಣ : ಮಾಡುವುದು ಅಗಾಧವಾಗಿದೆ. ಅವನ್ನೆಲ್ಲಾ ಒಂದೊಂದಾಗಿ ತಿಳಿಸುವೆ.

ರುದ್ರಮುನಿ : ಅರಿಯದ ಪಸುಳೆಗೆ ಒಂದೂ ತೋರದೆ ಕಣ್ಣುಕಟ್ಟುವಂತಾಗಿದೆ ಗುರುದೇವಾ.

ರೇವಣ : ಜನರಲ್ಲಿ ಶಿವಭಕ್ತಿ ಮೂಡಿಸಲು, ಊರುಗಳಲ್ಲಿ ಮಠ ಮಾನ್ಯಗಳನ್ನು ಸ್ಥಾಪಿಸುವುದೇ ಗುರಿ.

ರುದ್ರಮುನಿ : ಆಚಾರ್ಯರೇ ನನಗೆ ಸಂಪೂರ್ಣ ವಿಚಾರವನ್ನು ತಿಳಿಸಿ.

ರೇವಣ : ವೀರಶೈವ ಧರ್ಮವು ಅನಂತ ಕೋಟಿ ವೇದಾಗಮ ಪುರಾಣ ಮಂತ್ರಾರ್ಥಸಾರವೂ ಅಲ್ಲದೆ ಪರಶಿವ ಪರಂಪರ ವಸ್ತುವಾದ ಪರಮೇಶ್ವರನು ಈ ವೇದಾಂತ ಸಾರವನ್ನು ಸೂಕ್ಷ್ಮವಾಗಿ ಸಂಗ್ರಹಿಸಿ ಹನ್ನೆರಡು ಕೋಟಿ, ಹನ್ನೆರಡು ಲಕ್ಷ, ಹನ್ನೆರಡು ಸಾವಿರ ಪರಮ ರಹಸ್ಯ ಮಾಡಿ, ಶಂಭುಮೂರ್ತಿ ಶಂಭುವಿಗೆ ಉಪದೇಶವಿತ್ತ ಠಾವು, ಮಾಣಿಕ್ಯ ಸಿಂಹಾಸನ! ವೀರಶೈವ ಧರ್ಮದ ಮುಖ್ಯ ಧ್ಯೇಯಗಳಾದ ಭಕ್ತಿ, ಶಿವಪೂಜೆ, ಅಹಿಂಸೆ, ಸತ್ಯದ ದಾರಿಯನ್ನು ಹಿಡಿದು ಆಚಾರ, ವಿಚಾರ, ಷಟ್ಸ್ಥಲ, ಅಷ್ಟಾವರಣಗಳನ್ನನುಸರಿಸುವುದು. ನಾನಿನ್ನು ಷಟ್ಸ್ಥಲದ ಕೊನೆಯ ಸ್ಥಲಕ್ಕೆ ಕಾದಿರುವೆ.

ರುದ್ರಮುನಿ : ಅದು ಎಲ್ಲಿ ನೆರವಾಗುವುದು ಗುರು?

ರೇವಣ : ಯಾವ ಸೋಮೇಶ್ವರ ಲಿಂಗದಲ್ಲಿ ಉದ್ಭವವಾದೆನೋ ಅಲ್ಲಿಯೇ ನೆರವೇರಬೇಕೆಂಬ ಸಂಕಲ್ಪ ಮಾಡಿರುವೆ ಮಗೂ.

(ಹೊರಡುವರು)

## ಘಟ್ಟ ೨೪

(ಗುರು-ಶಿಷ್ಯರು ದಾರಿಯಲ್ಲಿ ಹೋಗುತ್ತಾ ಕಾಣಿಕೆಗಳನ್ನು ಹೊತ್ತುಕೊಂಡು ಬರುತ್ತಿದ್ದು ದಾರಿಯಲ್ಲಿ ಕೆಳಗಿಳಿಸಿ)

ರುದ್ರಮುನಿ : ಗುರುವೇ ರಾಜರುಗಳು ಒಪ್ಪಿಸಿರುವ ಈ ಕಾಣಿಕೆಗಳನ್ನು ಬಡಬಗ್ಗರಿಗೇಕೆ ಹಂಚಬಾರದು?

ರೇವಣ : ಹಾಗೆಯೇ ಮಾಡು ರುದ್ರಮುನಿ.

ರುದ್ರಮುನಿ : ಆ ದೂರದಲ್ಲಿ ಕಾಣುವ ದೇವಾಲಯವಾವುದು ಗುರು?

ರೇವಣ : ಅಲ್ಲಿ ಕಲ್ಲಿನಾಥನೆಂಬ ಶಿವಭಕ್ತನಿದ್ದನು. ಈ ಭುಜಗಾರಣ್ಯದಲ್ಲಿ ಮಹಾ ಸರ್ಪವೊಂದು ಹೆಡೆ ಹರಡಿ ವಿನೋದದಿಂದ ವಿಹರಿಸುತ್ತಿದ್ದು ಮರಣ ಹೊಂದಿತು. ಅದನ್ನು ನೋಡಿ ಕಲ್ಲಿನಾಥನು ಪರಶಿವನಲ್ಲಿ ಮೊರೆಯಿಡಲು ಅದಕ್ಕೆ ಪ್ರಾಣ ಬಂತು. ಆತನಿಗೆ ನಾನು ಲಿಂಗಧಾರಣೆ ಮುಕ್ತಿಯನ್ನು ಕರುಣಿಸಿದೆನು.

(ಸ್ವಲ್ಪ ದೂರ ತಿರುಗಿ ಶ್ರೀಶೈಲದ ಅರಣ್ಯವನ್ನು ತೋರಿ)

ರುದ್ರಮುನಿ : ಅದಾವ ಗಿರಿ ಗುರು?

ರೇವಣ : ಮಲ್ಲಿಕಾರ್ಜುನ ಭ್ರಮರಾಂಬೆಯರ ಬೀಡಾದ ಶ್ರೀಶೈಲ, ಅಲ್ಲಿಗೆ ಹೋಗಿ ಪಾತಾಳಗಂಗೆಯಲ್ಲಿ ಮಿಂದು ಮಲ್ಲಿಕಾರ್ಜುನ ಭ್ರಮರಾಂಬೆಯರ ದರ್ಶನ ಮಾಡಿ ಪಾವನವಾಗುವ ನಡೆ.

ರುದ್ರ : ಮಹಾಪ್ರಸಾದ ಗುರು.

(ಹೊರಡುವರು)

## ಘಟ್ಟ ೨೫

## ದೇವಾಲಯ

(ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯಕ್ಕೆ ಹೋಗಿ)

ರೇವಣ : ನನಗಿಂದು ಈ ಲೋಕದ ವ್ಯಾಪಾರವು ಮುಗಿದು ನಮ್ಮೂರಿಗೆ ತೆರಳುವ ಕಾಲ ಬಂತು ರುದ್ರಮುನಿ.

ರುದ್ರಮುನಿ : ಗುರುವೇ... ಗುರುವೇ...

(ಆನಂದಭಾಷ್ಪದಿಂದ ತಬ್ಬಿಕೊಳ್ಳುವರು. ಪುಷ್ಪವೃಷ್ಟಿಯಾಗಲು ಕೈ ಸಡಿಲಿಸಿ)

ರೇವಣ : ನಾನು ಹೇಳಿದ ವಿಷಯಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಜಗಜ್ಯೋತಿಯಂತೆ ಜಾಜ್ವಲ್ಯಮಾನವಾಗಿ ಪ್ರಕಾಶಿಸು ರುದ್ರಮುನಿ. ಯಾವ ಕೊಲ್ಲಿಪಾಕಿಯ ಸೋಮನಾಥ ಲಿಂಗದಿಂದುದಿಸಿದೆನೋ ಅಲ್ಲೇ ನಾನು ಐಕ್ಯವಾಗುವೆನು. ನಿನಗೆ ಸರ್ವಮಂಗಳ ಉಂಟಾಗಲಿ.

(ರುದ್ರಮುನಿಯು ಕಣ್ಣೀರಿಡುತ್ತಿರಲು ಜನಸ್ತೋಮವು ಇಕ್ಕೆಡೆಗಳಲ್ಲೂ ನಿಂತು ಕೈಮುಗಿಯುತ್ತಿರಲು, ಘಂಟಾನಾದ ಮೊಳಗುತ್ತಿರಲು, ಲಿಂಗವು ಹಾಗೆಯೇ ಬಾಯಿ ಬಿಡುವುದು. ರೇವಣರು ಒಳಗೆ ಪ್ರವೇಶಿಸುವರು. ಲಿಂಗವು ಹಾಗೆಯೇ ಮುಚ್ಚುವುದು. ಭಕ್ತರು ಪುಷ್ಪವೃಷ್ಟಿಗೈಯ್ಯುವರು. ರುದ್ರಮುನಿಯು "ಗುರುವೇ" ಎಂದು ತಬ್ಬಿಕೊಂಡು ಕಣ್ಣೀರಿಡುವನು.)

*

# ಮಾದೇಶ್ವರ ಮಹಾತ್ಮ

**ಪಾತ್ರ ವರ್ಗ**

೧. ಮಾದೇಶ್ವರ ೨. ಶ್ರವಣ ೩. ಗಂಗಾಧರ ೪. ಆದಿಗಣೇಶ್ವರ ೫. ಶಿವನಂಜದೇಶಿಕರು ೬. ಶಾಂತಮಲ್ಲಿಕಾರ್ಜುನರು ೭. ಜಿಲ್ಲಯ್ಯ ೮. ಕಾರಯ್ಯ ೯. ಈಶ್ವರ ೧೦. ಮೂಗಯ್ಯ ೧೧. ರಂಗನಾಥ ೧೨. ನಂಜುಂಡರಾಜ ಒಡೆಯರು ೧೩. ಜೇಪಿನ ಕಾಳಿ ೧೪. ದೇವಕಿ ೧೫. ಅನ್ನಸಾಲಮ್ಮ ೧೬. ಮಾಯೆ ೧೭. ಪಾರ್ವತಿ (ಬಸವ, ಘಟಸರ್ಪ, ಹುಲಿ, ಆನೆ, ಸೈನಿಕರು, ಶಿಷ್ಯವರ್ಗ ಇತ್ಯಾದಿ)

(ಕೈಲಾಸ, ಶಿವನು ಒಡ್ಡೋಲಗಕ್ಕೆ ಬರುವ ಮೊದಲು ನಿರ್ಮಾಯ ಗಣೇಶ್ವರನೊಬ್ಬನೇ ಬಂದು ಕುಳಿತಿದ್ದಾನೆ. ನಂತರ ಈಶ್ವರ-ಪಾರ್ವತಿಯರು ಬರುವರು. ನಿರ್ಮಾಯ ಗಣೇಶ್ವರನು ಆತನ ಧ್ಯಾನವಲ್ಲೇ ಮಗ್ನನಾಗಿ ಭಾವಪರವಶನಾಗಿ ಕುಳಿತಿರಲು ಮಿಕ್ಕ ಪ್ರಮಥ ಗಣಾಧೀಶ್ವರರು ನಮಸ್ಕರಿಸಿ ಕುಳಿತುಕೊಳ್ಳುವರು. ನಂತರ ಈಶ್ವರನು ನಿರ್ಮಾಯ ಗಣೇಶ್ವರನನ್ನು ನೋಡಿ)

ಈಶ್ವರ : ಪಾರ್ವತಿ ನೋಡಿದೆಯಾ?

ಪಾರ್ವತಿ : ಏನನ್ನು ಪ್ರಭು?

ಈಶ್ವರ : ಹಾಗಾದರೆ ನೀನು ಸಭೆಯ ಕಡೆ ಗಮನವಿಟ್ಟಂತೆ ಕಾಣಲಿಲ್ಲ.

ಪಾರ್ವತಿ : ಇಲ್ಲ, ಅದೇನೋ ನನಗೆ ಅರ್ಥವಾಗುತ್ತಿಲ್ಲ.

ಈಶ್ವರ : ನಿರ್ಮಾಯ ಗಣೇಶ್ವರನನ್ನು ನೋಡಿದೆಯಾ?

ಪಾರ್ವತಿ : ಇಲ್ಲ... ಈಗ ನೋಡುತ್ತಿದ್ದೇನೆ... ಧ್ಯಾನ ಮಗ್ನನಾಗಿ ಕುಳಿತಿದ್ದಾನೆ ಅಷ್ಟೆ.

ಈಶ್ವರ : ಅದನ್ನೇ ನಾನು ಹೇಳಿದ್ದು. ಮಿಕ್ಕ ಪ್ರಮಥ ಗಣಾಧೀಶ್ವರರೆಲ್ಲಾ ನಾವು ಬಂದಾಗ ಎದ್ದು ನಿಂತು ವಂದಿಸಿದರು. ಆತ ಹಾಗೆಯೇ ಕಣ್ಮುಚ್ಚಿ ಕುಳಿತಿರುವನು ನಮ್ಮ ಧ್ಯಾನದಲ್ಲಿ.

ಪಾರ್ವತಿ : ಅಪಚಾರವಾಯಿತು ಎಂತಲೇ?

ಈಶ್ವರ : ಅಪಚಾರವೇನು ಬಂತು? ಎದ್ದು ನಿಂತು ಮರ್ಯಾದೆ ಕೊಟ್ಟರೆ ಸರಿಯೆಂದೇ? ಭಕ್ತಿಯು ತಪದಲ್ಲೂ ತುಂಬಿರಬಹುದು. ಆತ ನಮ್ಮನ್ನು ಮನದಲ್ಲಿ ನೆನೆದು ಪೂಜಿಸಿ ಮರ್ಯಾದೆ ಕೊಡುತ್ತಿದ್ದಾನೆ ಅಷ್ಟೇ ಎಂದ ಮೇಲೆ ಅಪಚಾರವೇ?

(ಸಭೆಯಲ್ಲಿ ಒಬ್ಬೊಬ್ಬರೂ ಮಾತನಾಡಿಕೊಳ್ಳುತ್ತಿದ್ದಾರೆ. ಈ ನಿರ್ಮಾಯ ಗಣೇಶ್ವರನು ಕಣ್ಮುಚ್ಚಿ ಕುಳಿತಿರಲು ನಗುವರು.)

ಈಶ್ವರ : ಏಕೆ ನಗುತ್ತಿರುವಿರಿ?

ಗಣಾಧೀಶಾ : ಮಹಾದೇವಾ! ಮಹಾಪರಾಧವಾಯಿತು. ನಾವು ಈ ನಿರ್ಮಾಯ ಗಣೇಶ್ವರನು ಕಣ್ಮುಚ್ಚಿ ಕುಳಿತಿರುವುದನ್ನು ನೋಡಿ ಸುಮ್ಮನೆ ನಕ್ಕೆವು. ಕ್ಷಮಿಸಿ ಪರಮೇಶ್ವರಾ.

ಈಶ್ವರ : ಮಾಡುವುದನ್ನು ಮಾಡುವುದು. ಆಮೇಲೆ ಕ್ಷಮೆ.

(ಎನ್ನಲು ಎಲ್ಲರೂ ಕೈಮುಗಿದು ಕುಳಿತುಕೊಳ್ಳುವರು. ಎಲ್ಲರೂ ಅಚ್ಚರಿಯಿಂದ ನಿರ್ಮಾಯ ಗಣೇಶ್ವರನನ್ನು ನೋಡಲಾರಂಭಿಸುವರು.)

ಈಶ್ವರ : ನಿಜವಾಗಿಯೂ ಮಾಯಾಪ್ರಪಂಚವನ್ನೇ ಗೆದ್ದವನೆಂದರೆ ನಿರ್ಮಾಯ ಗಣೇಶ್ವರ. ಆದುದರಿಂದಲೇ ಆತನನ್ನು ನಾನು ನಿರ್ಮಾಯ ಗಣೇಶ್ವರನೆಂದು ಕರೆದಿರುವುದು. ಯಾವ ರೀತಿಯ ಮಾಯೆಗೂ ಆತ ಒಳಗಾಗದೆ ಭಕ್ತಿ ನದಿಯಲ್ಲಿ ತೇಲುತ್ತಾ ಮುಕ್ತಿ ಸಾಗರವನ್ನು ಸೇರುವ ಹಂಬಲದಲ್ಲಿ ಇದ್ದಾನೆ. ಆತನನ್ನು ನೀವು ಅಪಹಾಸ್ಯ ಮಾಡಿ ನಗುವುದೇ?

ಪಾರ್ವತಿ : ಹಾಗಾದರೇ ಮಿಕ್ಕವರು ಇಲ್ಲವೆಂತಲೇ?

(ಕೈತೋರಿ ಹೇಳುತ್ತಿರಲು ಮಿಕ್ಕವರು ಹೌದೆಂಬ ರೀತಿಯಲ್ಲಿ ತಲೆ ಕುಣಿಸುವರು)

ಈಶ್ವರ : ಹಾಗಿದ್ದರೆ ಮಿಕ್ಕವರೆಲ್ಲಾ ಹಾಗ ಏಕೆ ಇರಲಿಲ್ಲ?

ಪಾರ್ವತಿ : ಕೈಕಾಲಿನ ಬೆರಳುಗಳು ಒಂದೇ ಸಮನಾಗಿರುತ್ತವೆಯೇ? ಹಾಗೆಯೇ ಒಂದೇ ರೀತಿ ಇರಲಿಕ್ಕಾಗುತ್ತದೆಯೇ? ಅದನ್ನೇ ಏಕೆ ಎತ್ತಿ ದೊಡ್ಡದನ್ನು ಮಾಡುತ್ತಿರುವಿರಿ? ಆತನೊಬ್ಬನನ್ನೇ ಏಕೆ ಹೊಗಳುವಿರಿ?

ಈಶ್ವರ : ಅವರು ಮಾಯಾ ಪ್ರಪಂಚದೆಡೆಗೆ ಒಲಿದಿರುವುದೇ ಇದಕ್ಕೆ ಕಾರಣವಿರಬಹುದು ಅನ್ನಿಸುತ್ತದೆ ನನಗೆ.

ಪಾರ್ವತಿ : ಹಾಗಾದರೆ ನಿರ್ಮಾಯ ಗಣೇಶ್ವರ ಮಾತ್ರ ಇಲ್ಲ ಎಂಬುದು ನಿಮ್ಮ ವಾದ ಅಲ್ಲವೇ?

ಈಶ್ವರ : ಖಂಡಿತ ಇಲ್ಲ.

ಪಾರ್ವತಿ : ಆತನನ್ನು ಮಾಯೆಗೆ ಒಳಗಾಗಿಸಿದರೆ?

ಈಶ್ವರ : ಸಾಧ್ಯವಿಲ್ಲ.

ಪಾರ್ವತಿ : ನಾನು ಸಾಧ್ಯ ಮಾಡಿದರೆ

ಈಶ್ವರ : ಮಾಡಬಹುದು, ಆದರೆ ಸೋಲು ಖಂಡಿತ.

ಪಾರ್ವತಿ : ಇಲ್ಲ, ಗೆಲುವು ಖಚಿತ.

ಈಶ್ವರ : ನೋಡೋಣ...

(ಎನ್ನುತ್ತಿದ್ದಂತೆಯೇ, ಪಾರ್ವತಿ ಬಿಂಕದಲ್ಲಿ ಇಳಿದು ನಡೆಯುತ್ತಿರುವಂತೆ, ಕತ್ತಲಾಗುವುದು. ಎಲ್ಲರೂ ಎದ್ದು ಹೊರಡುವರು. ಮತ್ತೆ ಬೆಳಕು ಬರುವುದು.)

(ಪಾರ್ವತಿ ಕೈ ನೀಡಿ ಮಾಯೆಯನ್ನು ಸೃಷ್ಟಿಸಿದಳು. ಕೈಲಾಸದೆಡೆಗೆ ನಿರ್ಮಾಯ ಗಣೇಶನು ಬರುತ್ತಿರಲು ಮಾಯೆ ಗಾನ ನೃತ್ಯದಲ್ಲಿ ನಿರತಳಾಗಿರಲು ಆಕೆಯನ್ನೇ ದಿಟ್ಟಿಸುತ್ತಿದ್ದಾನೆ ನಿರ್ಮಾಯನು)

ಇನ್ನೂ ತಡವೇತಕೆ?
ಒಡನಾಡಿ ಓಲೈಸಲಿನ್ನೂ ತಡವೇತಕೆ?
ಇಡು ಹೆಜ್ಜೆ, ಬಿಡು ಲಜ್ಜೆ, ಸಜ್ಜಾಗು ಎನ್ನುಜ್ಜುಗಕೆ ॥ ಪ ॥

ಚೆಲುವು ತುಂಬಿದೆ ಮೊಗದುಂಬ।
ಒಲವು ಮೂಡಿದೆ ಮನದುಂಬ।
ನಾಟ್ಯ ಸಾಗಿದೆ ನಲಿವಿಂದ।
ಲಾಸ್ಯ ತಂದಿದೆ ರಸದಿಂದ ॥ ೧ ॥

ಕುಣಿಯವೆ ನಿನ್ನ ಒಡಗೂಡಿ।
ಆಗುವೆ ನಿನ್ನ ಒಡನಾಡಿ।
ಕೋಪವ ನೀನು ಸರಿಮಾಡಿ।
ಕಾಣಿಕೆ ಕೊಡುನೀ ಮರೆ ಮಾಡಿ ॥ ೨ ॥

ಬಯಕೆಯ ತುಂಬಿ ನಾ ಬಂದಿಹೆನು।
ಬಳಸಿ ನಿಂದು ನಾ ನೊಂದಿಹೆನು।
ಯೌವನ ತಂದು ನಾ ಕಾಡಿಹೆನು।
ನಿನ್ನಯ ಕಂಡು ನಾ ಸೋತಿಹೆನು ॥ ೩ ॥

(ನಿರ್ಮಾಯನು ಆಕೆಯನ್ನೇ ಹಿಂಬಾಲಿಸುತ್ತಿರಲು)

ಮಾಯೆ : ಅಯ್ಯೋ ನನ್ನ ಹಿಂದೇಕೆ ಬರುತ್ತಿರುವಿರಿ?

ನಿರ್ಮಾಯ : ನಿ... ನ್ನೊಡ...ನೆ... ಸಂತೋಷವಾಗಿ ಕಾಲ ಕಳೆಯಲು

ಮಾಯೆ : ನಿರ್ಮಾಯ ಗಣೇಶ್ವರ... ನೀವು... ನನ್ನೊಡನೆ... ನಾನು... ನಾನು...ಮಾಯೆ.

ನಿರ್ಮಾಯ : ಇರಬಹುದು... ಏಕೆ ನಿನ್ನೊಡನೆ ಬರಬಾರದು, ಜೊತೆಯಲ್ಲಿ ಇರಬಾರದು? ನಿನ್ನ ರೂಪ ರೇಖೆಗಳು... ನನ್ನ ಮನವನ್ನು ಸೂರೆಗೊಂಡಿವೆ.... ಈ ಸಂದರ್ಭದಲ್ಲಿ ಏನು ವರ್ಣಿಸಲೂ ನನಗೆ ಸಾಧ್ಯವಾಗುತ್ತಿಲ್ಲ. ಯಾರಾದರೂ ಇರಲಿ... ನಾನು ನಿನ್ನನ್ನು ಸಂಪೂರ್ಣವಾಗಿ ಒಪ್ಪಿದೇನೆ... ಅಪ್ಪಲಿಚ್ಛಿಸಿದ್ದೇನೆ.

(ಎಂದು ಮುಂದಾಗುತ್ತಿರಲು)

ಮಾಯೆ : ನಿರ್ಮಾಯ ಗಣೇಶ್ವರ, ಕಟ್ಟುನಿಟ್ಟಾದ ಬ್ರಹ್ಮಚಾರಿ, ನನ್ನನ್ನು ಬಿಟ್ಟರೆ ಬೇರೆ ಇಲ್ಲ. ಯಾವ ಮಾಯೆಗೂ ನಾನು ಸಿಲುಕಿದವನಲ್ಲ, ಎಂದು ಹೇಳಿದುದೇ ಹೇಳಿದುದು... ಈಗ... ಮಾಯೆಯ ಹುಚ್ಚು ಹಿಡಿಯಿತೇ... ಅಯ್ಯೋ... ಕರ್ಮ....

(ಎಂದು ನಗಲಾರಂಭಿಸುವಳು)

ನಿರ್ಮಾಯ : (ಥಟ್ಟನೆ ಯೋಚನಾ ಮಗ್ನನಾಗಿ) ಕರ್ಮ... ನಿಜ ಇದೊಂದು ಕರ್ಮವೇ... ಹೌದು.. ನಾನು ನಿರ್ಮಾಯ ಗಣೇಶ್ವರ ಮಾಯೆಯ ಗಾನ ನೃತ್ಯಗಳಿಗೆ ಮರುಳಾಗಿ ಆಕೆಯನ್ನೂ ಹಿಂಬಾಲಿಸಿದೆ, ಹೌದು ನಿಜ... ನಾನು ಕಂಡದ್ದು ಕನಸಲ್ಲ ಸತ್ಯ... ಅಯ್ಯೋ ಕೆಟ್ಟೆ... ನಾನು ಕೆಟ್ಟೆ... ಮಾಯೆ ನನ್ನ ಛಲಕ್ಕೆ ಭಂಗವನ್ನೇಕೆ ತಂದೆ?

ಮಾಯೆ : ನಿರ್ಮಾಯ ಗಣೇಶ್ವರ ಮನಸ್ಸನ್ನು ಬಿಗಿ ಹಿಡಿಯಬೇಕಾಗಿದ್ದ ನೀನು ನನ್ನ ಗಾನ ನೃತ್ಯಗಳಿಗೆ ಮಾರುಹೋಗಿ ಕ್ಷಣಿಕ ಸುಖಕ್ಕೆ ಆಸೆಪಟ್ಟು ನನ್ನ ಹಿಂದೆಯೇ ಓಡಿ ಬಂದೆ. ಅದು ನಿನ್ನ ತಪ್ಪೋ, ನನ್ನ ತಪ್ಪೋ.... ಮಾಯೆಯನ್ನು ನೋಡಿಯೂ ಮರುಳಾಗದವನೇ ನಿಜ ಬ್ರಹ್ಮಚಾರಿ... ಅಂದ ಮೇಲೆ ನಾನೆಲ್ಲಿ ನಿನ್ನ ಛಲಕ್ಕೆ ಭಂಗ ತಂದೆ. ನಿನ್ನಿಂದ ನೀನು ಕೆಟ್ಟೆಯಲ್ಲಾ...

ನಿರ್ಮಾಯ : ಅಯ್ಯೋ... ಎಂಥ ಅಪಚಾರವಾಯಿತು. ನನ್ನ ಮೇಲೆ ಅಷ್ಟೊಂದು ನಂಬಿಕೆ ಇಟ್ಟಿದ್ದ ಈಶ್ವರನಿಗೆ ದ್ರೋಹ ಮಾಡಿಬಿಟ್ಟೆನಲ್ಲಾ... ಒಟ್ಟಿನಲ್ಲಿ ನಾನು ಮಾಯೆಗೆ ಸಿಕ್ಕಿಬಿದ್ದೆನಲ್ಲಾ.. ಈಶ್ವರಾ... ಈಶ್ವರಾ...

ಮಾಯೆ : ಹೌದು ನೀವು ಮಾಯೆಗೆ ಸಿಲುಕಿದಿರಿ ಬಿಡಿ, ಅಷ್ಟೆ (ಕಿಲ ಕಿಲನೆ ನಗುತ್ತಿದ್ದಂತೆಯೇ ರಂಗಭೂಮಿ ಕತ್ತಲಾಗುವುದು)

(ರಂಗ ಭೂಮಿ ಬೆಳಕಾಗುವುದು)

(ಈಶ್ವರ ಪಾರ್ವತಿಯರು ಕೈಲಾಸದಲ್ಲಿ ಕುಳಿತಿರಲು ಅಲ್ಲಿಗೆ ನಿರ್ಮಾಯನು ಓಡಿ ಬರುತ್ತಾ)

ನಿರ್ಮಾಯ : (ದುಗುಡದಲ್ಲಿ) ಮಹಾದೇವಾ..., ಕೈಲಾಸೇಶಾ... ನನ್ನ ಅಪರಾಧವನ್ನು ಕ್ಷಮಿಸಿ. ನಾನು ಅಪರಾಧವೆಸಗಿದೆ. ನಿಮ್ಮ ಮಾತುಗಳನ್ನು ಉಳಿಸಿಕೊಳ್ಳಲಾಗಲಿಲ್ಲ. ಈ ಪಾಪವನ್ನು ಕಳೆಯಲು ಮುಂದಿನ ಮಾರ್ಗವಾದರೂ ಏನು ಕೈಲಾಸೇಶಾ? ನನ್ನ ತಪ್ಪನ್ನು ಕ್ಷಮಿಸಿ ಮುಕ್ತಿ ಮಾರ್ಗಕ್ಕೆ ಅನುವಾಗುವಂತೆ ಮಾಡು ದೇವಾ.

ಪಾರ್ವತಿ : (ನಗುತ್ತಾ) ಸ್ವಾಮಿ ನೋಡಿದಿರಾ ನಿಮ್ಮ ನಿರ್ಮಾಯ ಗಣೇಶ್ವರನ ನಿಷ್ಠೆಯನ್ನು ಮಾಯೆಯನ್ನು ಕಂಡೊಡನೆ ಆಕೆಯನ್ನೇ ಓಂಜಾಲಿಸಿಬಿಟ್ಟ.

(ಪಾರ್ವತಿ ನಗಲಾರಂಭಿಸುವಳು.)

ನಿರ್ಮಾಯ : ಮಹಾದೇವಾ... ಮಹಾಪರಾಧವಾಯಿತು... ಮಹಾಪರಾಧವಾಯಿತು...

ಈಶ್ವರ : ನಿರ್ಮಾಯ ಗಣೇಶ್ವರಾ, ಮಾಯೆಗೆ ಸಿಲುಕದವರಾರು? ನನ್ನರ್ಧಾಂಗವನ್ನೇ ಪಾರ್ವತಿ ಪ್ರವೇಶಿಸಿದಳು, ಬ್ರಹ್ಮನ ಬಾಯಿಯನ್ನು ಹೊಕ್ಕಳು, ವಿಷ್ಣುವಿನ ಎದೆಯನ್ನು ಅಪ್ಪಿದಳು. ಅದರಂತೆ ನೀನು ಮಾಯೆಗೆ ಸಿಲುಕಿದುದರಲ್ಲಿ ಅಚ್ಚರಿ ಏನು?

ನಿರ್ಮಾಯ : ಕ್ಷಮಿಸಿ ಪ್ರಭು... ಕ್ಷಮಿಸಿ ಮಹಾ ತಾಯಿ... ಈಶಾ, ಇದಕ್ಕೆ ಪರಿಹಾರವಾದರೂ ಏನು ದೇವಾ?

ಈಶ್ವರ : ಈಗ ನಡೆದುದು ಒಳ್ಳೆಯದೇ ಆಯಿತು ಬಿಡು.

ನಿರ್ಮಾಯ : ಏಕೆ ದೇವಾ?

ಈಶ್ವರ : ಭೂಲೋಕದಲ್ಲಿ ದುಷ್ಟರ ಮರ್ಧನ, ಶಿಷ್ಟರ ಪರಿಪಾಲನೆ ಆಗಬೇಕಾಗಿದೆ. ಶಿವಧರ್ಮ ಪ್ರಕಾಶನ ಆಗಬೇಕಾಗಿದೆ. ಅದನ್ನು ಮಾಡಿ ಹಿಂತಿರುಗಿದರಾಯಿತು.

ಪರ್ವತಿ : ಯಾವಾಗಲೂ ಏನಾದರೂ ಒಂದು ಕೆಲಸವಿಲ್ಲದೆ ನೀವು ಹೀಗೆ ಮಾಡುವವರಲ್ಲ. ಅಂದ ಹಾಗೆ ಈಗ ಅಂಥ ದುಷ್ಟರು ಯಾರು ಭೂಲೋಕದಲ್ಲಿ ಮೆರೆಯುತ್ತಿದ್ದಾರೆ?

ಈಶ್ವರ : ಅವೆಲ್ಲಾ ಮುಂದೆ ನಿನಗೇ ತಿಳಿಯುತ್ತದೆ ಪಾರ್ವತಿ. ನಿರ್ಮಾಯ ಗಣೇಶ್ವರಾ, ನೀನು ಭೂಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮಚರ್ಯವನ್ನು ಕಟ್ಟುನಿಟ್ಟಾಗಿಟ್ಟುಕೊಂಡು ದುಷ್ಟರನ್ನು ಸಂಹರಿಸಿ ಶಿವಧರ್ಮ ಉದ್ಧಾರಮಾಡಿ, ಶಿಷ್ಟರನ್ನು ಪರಿಪಾಲಿಸಿ ಬಾ. ನಾನು ಸದಾ ನಿನಗೆ ನೆರವಾಗುತ್ತೇನೆ.

ನಿರ್ಮಾಯ : ಹಾಗಾದರೆ ಮುಂದೆ

ಈಶ್ವರ : ಶ್ರೀಶೈಲದಲ್ಲಿ ಕಲ್ಯಾಣಪುರದ ಹತ್ತಿರದ ಉತ್ತಮಾಪುರದ ಉತ್ತರಾಜಮ್ಮ ಕಲ್ಯಾಣದೇವರು ಎಂಬ ದಂಪತಿಗಳು ಮಕ್ಕಳಿಲ್ಲದೆ ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ಗಂಡು ಸಂತಾನವೊಂದಕ್ಕೆ ಬೇಡುತ್ತಿದ್ದಾರೆ. ಹನ್ನೆರಡು ವರುಷಗಳಿಂದ ತಪಸ್ಸು ಮಾಡುತ್ತಿದ್ದಾರೆ.

ಮಾದಪ್ಪ : ಮಹಾದೇವ, ಭೂಲೋಕದಲ್ಲಿ ಯೋನಿಜನಾಗಿ ಹುಟ್ಟಲು ನನಗೆ ಮನಸ್ಸಿಲ್ಲ.

ಈಶ್ವರ : ಆದುದರಿಂದಲೇ ನಾನು ಅಯೋನಿಜನಾಗಿ ಹುಟ್ಟುವಂತ ವರ ಕರುಣಿಸಿರುವೆ. ಶ್ರೀಶೈಲ ಮಲ್ಲಿಕಾರ್ಜುನನ ಶಿವಾಲಯದ ಹಿಂಭಾಗದಲ್ಲಿ ಬಾಲಕನಾಗಿ ಕಾಣಿಸಿಕೋ, ಅಲ್ಲಿಂದ ಮುಂದೆ ನೀನು ದೇಶ ಸಂಚಾರ ಕೈಕೊಂಡು ಲೋಕ ಕಲ್ಯಾಣಕ್ಕೆ ನೆರವಾಗು. ನಂದೀ ಈತನ ಸೇವೆಗೆ ನೀನೂ ಹೋಗಿ ಬಾ.

(ನಂದಿ ತಲೆದೂಗುವುದು.)

(ಗುರು ಸಿದ್ಧನಂಜದೇಶಿಕರು ಹೂವನ್ನು ಕೀಳುತ್ತಾ ಬರುತ್ತಿದ್ದಾರೆ. ಅಷ್ಟರಲ್ಲಿ ಮಾದೇಶ್ವರರು ಬಂದು ನಮಸ್ಕಾರ ಮಾಡುವರು. ಗುರುಗಳು ಆಶೀರ್ವದಿಸುತ್ತಾ)

ಸಿದ್ಧನಂಜದೇಶಿಕರು : ಯಾರಪ್ಪ ಮಗು? ಯಾವ ಊರು ನಿನ್ನದು?

ಮಾದೇಶ್ವರ : ಗುರುದೇವಾ ನಾನು ಯಾವ ಊರು? ಯಾವ ಕುಲ ಹೇಳಲಿ, ತಮ್ಮ ಸೇವೆ, ವಿದ್ಯಾ ಭಿಕ್ಷೆಗೆ ಬಂದಿರುವ ಶಿವಕುಲದವನು. ನನ್ನ ಹೆಸರು ಮಾದಪ್ಪ ಅಂತ. ನಾನೀಗ ಶ್ರೀಶೈಲ ಮಹಾ ಕ್ಷೇತ್ರದಿಂದ ಬಂದಿರುವೆ.

ಸಿದ್ಧನಂಜ : ಬಹಳ ಒಳ್ಳೆಯದು. ನಮ್ಮ ಮಠಕ್ಕೆ ಹೋಗೋಣ ಬಾ ಮಗು. ಈ ಕಪಿಲಾನದೀ ತೀರದಲ್ಲಿನ ಸುತ್ತೂರೆಂಬ ಪುಣ್ಯಕ್ಷೇತ್ರವೇ ನಮ್ಮ ನಿವಾಸ.

ಮಾದೇಶ್ವರ : ಅಲ್ಲಿದ್ದು ನಿಮ್ಮ ಸೇವೆಯನ್ನು ಮಾಡುವ ಪುಣ್ಯ ಬಂದೊದಗಿತಲ್ಲಾ ಎಂದು ನನಗೆ ಮಹದಾನಂದವಾಗಿದೆ ಗುರುದೇವಾ.

ಸಿದ್ಧನಂಜ : ಅದಿರಲಿ, ಈ ಬಸವ ಎಲ್ಲಿಂದ ಬಂದಿದೆ?

ಮಾದೇಶ್ವರ : ಇದು ಶ್ರೀಶೈಲದಿಂದ ನನ್ನೊಡನೆ ಬಂದಿದೆ. ತಮ್ಮ ಮಠದ ಸೇವೆಗೆ ಅದಕ್ಕೂ ಆಸೆಯಾಗಿದೆ ಗುರುದೇವಾ. ಏನು ನಂದಿ ನಾನು ಹೇಳಿದುದು ಸರಿ ತಾನೇ...

ಸಿದ್ಧನಂಜ : (ನಗುತ್ತಾ) ಒಳ್ಳೆಯದು ನಡೆಯಿರಿ, ಹೊತ್ತು ಮೀರುತ್ತ ಬಂತು. ಮೊದಲು ಮಠಕ್ಕೆ ಹೋಗೋಣ. ಅದೋ ನನ್ನನ್ನು ಹುಡುಕಿಕೊಂಡು ಶಿಷ್ಯರು ಬರುತ್ತಿದ್ದಾರೆ.

ಮಾದೇಶ್ವರ : ಆಗಲೀ ಗುರುದೇವಾ.

ಶಿಷ್ಯ : ಏಕೆ ಗುರುದೇವಾ ಇಷ್ಟು ಹೊತ್ತು?

ಸಿದ್ಧನಂಜ : ಇದೋ ನೋಡಿ ಈಗ ಹೊಸ ಶಿಷ್ಯನೊಬ್ಬ ಸಿಕ್ಕಿದ. ಆತನನ್ನು ವಿಚಾರ ಮಾಡುತ್ತಿದ್ದೆ. ಅಷ್ಟರಲ್ಲೇ ನೀವು ಹುಡುಕಿಕೊಂಡು ಬಂದಿರಿ, ಈತನ ಹೆಸರು ಮಾದಪ್ಪ ಎಂದು. ಇವರೆಲ್ಲಾ ನಮ್ಮ ಶ್ರೀ ಮಠದಲ್ಲಿರುವ ವಿದ್ಯಾರ್ಥಿಗಳು. ಅದೇ ನಿನ್ನ ಮುಂದಿನ ವಿದ್ಯಾಭ್ಯಾಸದ ಮಿತ್ರರು.

ಮಾದಪ್ಪ : ಅಲ್ಲಿ ನನ್ನ ದಿನಚರಿ ಏನು ಗುರುದೇವಾ?

ಸಿದ್ಧ : ಇದೋ ನೋಡು, ಈ ನನ್ನ ಶಿಷ್ಯರೊಡನೆ, ಅಂದರೆ ನಿನ್ನ ಈ ಸಹಪಾಠಿಗಳೊಡನೆ ವಿದ್ಯಾಭ್ಯಾಸ ಮಾಡುವುದರ ಜೊತೆಗೆ ಮಠದ ದಾಸೋಹದ ಕಾರ್ಯಕ್ಕೆ ನೆರವಾಗಬೇಕು. ಅಂದರೆ ಮುಖ್ಯವಾಗಿ ರಾಗಿ ಬೀಸುವ ಕರ್ತವ್ಯವನ್ನು ನಿರ್ವಹಿಸಬೇಕಾಗುತ್ತದೆ.

(ಹೌದು ಹೌದೆಂಬಂತೆ ಮೂರು ನಾಲ್ಕು ಹುಡುಗುರು ತಲೆ ಕುಣಿಸುವರು.)

ಮಾದಪ್ಪ : ಆಗಲೀ ಗುರುವೇ ತಾವು ಹೇಳಿದುದನ್ನು ಶಿರಸಾವಹಿಸಿ ಮಾಡಲಣಿಯಾಗುವೆ.

ಸಿದ್ಧನಂಜ : ನಿನಗೆ ಸಕಲ ವಿದ್ಯೆಗಳನ್ನು ಕಲಿಸುವುದರ ಜೊತೆಗೆ ದೀಕ್ಷೆಯನ್ನೂ ನೀಡುತ್ತೇನೆ.

ಮಾದೇಶ್ವರ : ಅದರ ಆವಶ್ಯಕತೆಯನ್ನು ತಿಳಿಸಿ ಗುರುದೇವಾ.

ಸಿದ್ಧನಂಜ : ಹೀಗೆ ಜನನ... ಮರಣವೆಂಬ ಸಂಸಾರಬದ್ಧ ಜೀವನವನ್ನು ಸರಳ ಮಾರ್ಗಕ್ಕೊಯ್ಯುವ ದಾರಿ. ಇದರಿಂದ ಮಾಂಸಮಯ ದೇಹವು ಮಂತ್ರಮಯವಾಗಿ ಶತಕೋಟಿ ಸೂರ್ಯಪ್ರಭೆಯಂತೆ ಹೊಳೆಯುವುದು.

ಮಾದೇಶ್ವರ : ತಮ್ಮ ಇಚ್ಛೆ ಇದ್ದಂತೆ ನೆರವೇರಲಿ ಬುದ್ಧಿ.

ಸಿದ್ಧ : ಏನ್ ನೋಡ್ತಾ ಇದ್ದೀರಿ, ಬೇಗ ಬೇಗ ನಡೆಯಿರಿ. ಸ್ನಾನ ಪೂಜೆಮಾಡಿ ಊಟಮಾಡುವಿರಂತೆ. ನಿಮ್ಮ ಮಿತ್ರನನ್ನು ಬೇಗ ಕರೆದು ಕೊಂಡು ಹೋಗಿ... ಸ್ನಾನ... ಪೂಜೆ ಮಾಡಿಸಿ ಪ್ರಸಾದ ಕೊಡಿಸಿ.

ಶಿಷ್ಯ : ಆಗಲೀ ಬುದ್ಧಿ... ಬಾ ಮಾದಪ್ಪಾ...

(ಎಲ್ಲರೂ ಮಾದಪ್ಪನನ್ನು ಕರೆದುಕೊಂಡು ಹೊರಡುವರು.)

(ಮಠದ ಹಜಾರ, ಗುರುಗಳ ಪೀಠ ಒಂದೆಡೆ ನಾಲ್ಕು ಹುಡುಗರ ಪ್ರವೇಶ, ಆಶ್ಚರ್ಯದೊಡನೆ)

೧. : ಅಲ್ಲಾ ಹೀಗೂ ಉಂಟೇ ಅಂತ?

೨. : ಕಣೆ ಕೇಳು.

೩. : ಕಣ್ಣಾರೆ ಕಂಡದ್ದಕ್ಕೆನೇಳ್ತೀಯಾ?

೪. : ಏನು?

೧. : ಕೇಳಪ್ಪಾ ... ಈಗ ಏನು ಅಂತ ಕೇಳ್ತವ್ನೆ?

೨. : ಪಾಪ ಆತ ಕಂಡಿರಲಿಲ್ಲ.

೩. : ಹೇಳ್ರಪ್ಪಾ ಅದಕ್ಯಾಕೆ ಆತನ ಪೆಚ್ಚು ಮಾಡ್ತೀರಾ?

೧. : ಅದೇ ಮಾದಪ್ಪ, ಅವನೊಂದು ಬಸವ ಕರೆದುಕೊಂಡು ಬಂದವ್ನಲ್ಲಾ ಅದಕ್ಕೆ ಉಕ್ಕಿನ ಕಡ್ಲೆ ತಿನ್ನಿಸ್ತಾ ಅವ್ನೆ

೪. : ಛ್ಞಂ... ಹೀಗೂ ಉಂಟಾ?

೧. : ಅದ್ಕೇ ಅಪ್ಪಾ ನೋಡಿ ಬರಬೇಕು ಅನ್ನೋದು

೩. : ಅಲ್ಲಾ ಎಲ್ಲರೂ ದನಗಳಿಗೆ ಹುಲ್ಲು ತೌಡು, ಹಿಂಡಿ ಅಂತ ಕೊಡ್ತಾರೆ. ಆದ್ರೆ ಇವ್ನ ಹಾಗೆ ಉಕ್ಕಿನ ಕಡಲೆ ಕೊಟ್ಟವನ್ನ ನಾನು ಕಂಡಿರ್ಲಿಲ್ಲ.

೨. : ಅವನ್ನ ಕೇಳಿದ್ರೆ, ನಮ್ಮ ಬಸವನಿಗೆ ಇದನ್ನ ತಿಂದ್ರೇ ಗಟ್ಟಿ ಅನ್ತಾನೆ.

೧. : ಅದೂ ಅಲ್ದೇ ಅದು, ಬೇರೇನೂ ತಿನ್ನಕ್ಕೇ ಇಲ್ವಂತೆ

೩. : ಅದೇನು ಮಾ ಮಂತ್ರ ಕಲ್ತವ್ನೋ ಹ್ಯಾಗೋ ಅಪ್ಪಾ

೪. : ನಾವು ಕೊಟ್ಟು ನೋಡೋಣವಾ...?

೨. : ಇಲ್ಲಪ್ಪ ನಾವೆಲ್ಲಾ ನೋಡಾಯ್ತು. ಯಾವಾಗ್ಲೂ ಅದು ಅವನನ್ನೇ ಹುಡುಕ್ತಿರ್ತದೆ.

೧. : ಒಳ್ಳೇ ಸ್ವಾಮಿನಿಷ್ಠೆ ಅದಕ್ಕೂ...

೧. : ನಿಜವಾಗ್ಲೂ ಅವನು ಮಾಯ ಮಂತ್ರ ಕಲ್ತವ್ನೇ ಕಣಯ್ಯಾ

೨. : ಏನೋ ಪವಾಡ ಪುರುಷನೋ ಏನೋ ಅನ್ನಿಸುತ್ತಪ್ಪ

೩. : ಏನೋ ಹಸಿರು ಸೊಪ್ಪಿನಿಂದ ಆ ಹಸು ಹೊಟ್ಟೆ ಊದುಕೊಂಡಿದ್ದನ್ನೂ ಸರಿಮಾಡಿಬಿಟ್ಟ.

೪. : ಏನೂ ಇಲ್ಲಪ್ಪ "ಓಂ ಶರಣಂ ಶಿವನೇ ಸಿದ್ಧನಂಜ ದೇಶಿಕೇಂದ್ರ ಅಂತ ಕೈ ಮುಗಿದು, ವಿಭೂತಿ ಧರಿಸಿ, ಬಾಯಿನ ಹತ್ತಿರಕ್ಕೆ ಸ್ವಲ್ಪ ಸೊಪ್ಪು ಹಾಕಿದ ಹಾಗೇ ಹುಷಾರಾಗೋಯ್ತು.

೧. : ನೀವೇನೇ ಅನ್ನಿ ಅವನು ಸಾಮಾನ್ಯನಲ್ಲ.

೨. : ಎಲ್ಲಾ ಆ ದೇವರ ಕೃಪೆ ಅನ್ತಾನೆ.

೩. : ಏನೇ ಆಗ್ಲಿ ಈ ವಿಷಯಗಳನ್ನ ಗುರುಗಳಿಗೆ ಹೇಳಬೇಕು.

೪. : ಅಷ್ಟೇ ಅಲ್ಲ ಯಾರಾದ್ರೂ ರೋಗಿಗಳಿದ್ರೂ ಆಶೀರ್ವಾದ ಮಾಡಿಬಿಟ್ರೆ ಸಾಕು ಅವರು ಆರೋಗ್ಯವಂತರಾಗ್ಬಿಡ್ತಾರೆ.

೧. : ಹೌದಪ್ಪ ಬರೇ ಪವಾಡಗಳನ್ನೇ ಮಾಡ್ತಾ ಅವ್ನೆ, ನಾವು ಸಾಮಾನ್ಯ ಅಂತಿದ್ವೋ, ಆತ ಮಹಾ ಪವಾಡ ಪುರುಷನೇ.

೨. : ಗುರುಗಳನ್ನ ಕೇಳೋಣ ಇನ್ನೇನಾದ್ರೂ ಮಾಯ ಮಂತ್ರ ಕಲಿತವ್ನೋ ಹ್ಯಾಗೋ ಅಂತ?

೩. : ಓಹೋ ರಾಗಿ ಬೀಸಕ್ಕೆ ಬಂದಿದ್ದಾನೆ, ನಾವು ಇಲ್ಲೇ ನಿಂತು ನೋಡೋಣ.

(ಮಠದ ಪಜಾರದಲ್ಲಿ ಮಾದೇವರು ರಾಗಿ ಕಲ್ಲಿನ ಹತ್ತಿರ ಬಂದು ರಾಗಿಯನ್ನು ಬೀಸುವ ಕಲ್ಲಿಗೆ ಹಾಕಿ " ಓಂ ಶರಣಂ ಶಿವನೇ ಸಿದ್ಧನಂಜ ದೇಶಿಕೇಂದ್ರ" ಎಂದು ಹೇಳಿ ರಾಗಿ ಕಲ್ಲಿಗೆ ನಮಿಸಿ

ಗೂಟವನ್ನು ಒಡಿಯಲು ಅದು ಮಂತ್ರವಂತೆ ತಿರುಗಿ ರಾಗಿ ಓಟ್ಟು ಬೀಳಲಾರಂಭಿಸುವುದು. ಗುರುಗಳು ಬಂದು ಅಚ್ಚರಿಯಲ್ಲಿ ನೋಡುತ್ತಿರಲು ಅಲ್ಲಿಗೆ ಶಿಷ್ಯರು ಬರುವರು. ಅವರೂ ಸಹಾ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು ನಿಂತುಕೊಳ್ಳುವರು. ರಾಗಿ ಬೀಸಿದ ನಂತರ ಗುರುಗಳು ಮತ್ತು ಸಂಗಡಿಗರನ್ನು ನೋಡಿ ಪೆಚ್ಚಾಗಿ)

ಮಾವಪ್ಪ : ಗುರುವೇ ಸಿದ್ಧನಂಜ ದೇಶಿಕೇಂದ್ರ ನಾನು ಮಾಡಿದುದು ತಪ್ಪಾಯ್ತು ಕ್ಷಮಿಸಿ.

ಸಿದ್ಧನಂಜ: ಏನು ತಪ್ಪು?

ಮಾದಪ್ಪ : ಕರ್ತವ್ಯ ನಿಷ್ಠೆಯಲ್ಲಿ ಸ್ವಲ್ಪ ಚ್ಯುತಿಯಾಯ್ತು. ಯಾವುದೋ ಕೆಲಸದಲ್ಲಿದ್ದು ಈಗ ಬಂದು ಆತುರವಾಗಿ ಇಂದಿನ ದಾಸೋಹಕ್ಕೆ ಬೇಕಾದ ರಾಗಿಯನ್ನು ಬೀಸಿದೆ.

ಸಿದ್ದನಂಜ: ಅದನ್ನೇ ನಾನು ಅಷ್ಟು ಹೊತ್ತಿನಿಂದ ನೋಡಿದೆ.

ಶಿಷ್ಯ ೧ : ಇದೇನ್ ಮೊದಲನೆಯ ಆಶ್ಚರ್ಯವಲ್ಲ ಗುರುಗಳೇ.

ಸಿದ್ಧ : ಅಂದರೆ?

೨. : ಈಗಾಗಲೇ ದನಗಳ ಆರೋಗ್ಯ, ಮನುಷ್ಯರು ಆರೋಗ್ಯ ಸರಿಮಾಡಿ ಕಾಪಾಡಿದ್ದಾನೆ.

೩. : ನಿನ್ನೆ ನಮ್ಮ ಮಠದ ಹಸು ಹೊಟ್ಟೆ ಊದಿಕೊಂಡು ಸಾಯುವಂತಿತ್ತು, ಅದನ್ನು ಆಶೀರ್ವದಿಸಿ ಬದುಕಿಸಿದ್ದಾನೆ.

೧. : ಉಕ್ಕಿನ ಕಡಲೆ ತಿನ್ನಿಸುತ್ತಾನೆ ಈತನು ತಂದಿರುವ ಬಸವನಿಗೆ

ಸಿದ್ಧ : ಹೌದಾ... ಮಾದಪ್ಪಾ?

ಮಾವಪ್ಪ : ಹೌದಾ... ಎಂದರೆ ಅದು ನನ್ನದೇನಿಲ್ಲ ಬುದ್ಧಿ, ಎಲ್ಲ ನಿಮ್ಮ ಆಶೀರ್ವಾದ.

ಸಿದ್ಧ : ಅಂತೂ ನೀನು ಸಾಮಾನ್ಯ ಮಾದಪ್ಪನಲ್ಲ ನಿಜಕ್ಕೂ ಮಹಾದೀಶ್ವರ. ಇಂದಿನಿಂದ ಮಾದೇಶ್ವರ.

ಮಾದಪ್ಪ : ಅಷ್ಟೆಲ್ಲಾ ದೊಡ್ಡ ಹೊಗಳಿಕೆ ನನಗೆ ಸಲ್ಲದು ಬುದ್ಧಿ.

೧. : ನಿಜಕ್ಕೂ ಸಲ್ಲಲೇಬೇಕು ಬುದ್ಧಿ, ಮಾದೇಶ್ವರ... ಖಂಡಿತ ಒಪ್ಪುವ ಹೆಸರು.

ಸಿದ್ಧ : ಇದು ನಿಜಕ್ಕೂ ಮಹಿಮೆಯೇ ಸರಿ. ನೀನು ಸಾಮಾನ್ಯನಲ್ಲ. ಶ್ರೀಶೈಲ ಚನ್ನಮಲ್ಲಿಕಾರ್ಜುನನ ಭಾವವೇ ಇಳಿದು ಬಂದಿರುವುದೇ ಏನೋ ಎಂಬಂತಾಗಿದೆ ನನಗೆ. ನೀನು ಕಾರಣ ಪುರುಷನೆಂದು ನಿನ್ನ ಮುಖ ಮುದ್ರೆಯಿಂದಲೇ ನಾನು ಅರಿತಿದ್ದೆ. ಆದರೆ ಇಂದು ನಿನ್ನ ನಿಜ ಮಹಿಮೆಯನ್ನು ಕಂಡಂತಾಯಿತು. ಅನೇಕ ವಿಷಯಗಳನ್ನು ಶಿಷ್ಯರಿಂದ

ಕೇಳಿ ಸಂತೋಷವಾಯಿತು. ನಿಜವಾಗಿಯೂ ಇಂದು ಅಪೂರ್ವವಾದ ಒಂದು ರತ್ನವನ್ನು ಈ ಮಠದಲ್ಲಿ ಇಟ್ಟುಕೊಂಡಂತಾಯಿತು. ನೀನು ಬರೀ ಮಾದಪ್ಪನಲ್ಲ ಇಂದಿನಿಂದ ಮಾದೇಶ್ವರ...

ಮಾದೇಶ್ವರ : ಗುರುವೇ, ತಿಳಿದ ನೀವೇ ಬಾಲಕನನ್ನು ಹೀಗೆ ಬಣ್ಣಿಸಿದರೆ ಹೇಗೋ? ಇವೆಲ್ಲಾ ನಿಮ್ಮ ಅನುಗ್ರಹದ ಬಲವೆಂದೇ ನಂಬಿರುವೆ. ಆದರೆ ಈ ವರ್ಣನೆಗಳು ತುಂಬಾ ಅತಿಯಾದುವು.

ಸಿದ್ಧ : ಮಾದೇಶ್ವರಾ. ನಿನ್ನ ಗುಣಗಳು ಶ್ಲಾಘನೀಯವಾದುದೇ ಸರಿ. ಪೂಜ್ಯರಾದ ಶಿವಶರಣರುಗಳ ಸಾಲಿಗೆ ಸೇರಿದವನು, ನೀನಾಗಿರುವಾಗ ಏಕೆ ಅತಿಯಾಗಿ ಬಣ್ಣಿಸಬಾರದು?

ಮಾದೇಶ್ವರ : ಗುರೇಶಾ, ಶ್ರೀಶೈಲಮಲ್ಲಿಕಾರ್ಜುನನ ಆದೇಶದಿಂದ ನಾನಿಲ್ಲಿಗೆ ಬಂದೆ. ಇಂದು ವೀರಶೈವ ಧರ್ಮದ ತತ್ತ್ವಗಳನ್ನು ಸಂಪೂರ್ಣವಾಗಿ ಅರಿತೆ. ಶ್ರೀ ಮಠದ ಧರ್ಮ ಸಂಸ್ಕಾರಗಳು ನನ್ನ ಹೃದಯವನ್ನು ಕೆರಳಿಸಿದುವು. ಶರಣರ ಅನುಭವದ ವಾಣಿಯ ಅಮೃತಪಾನ ಮಾಡಿ ಅಮರನಾದೆ. ತಮ್ಮ ದರ್ಶನದಿಂದ ಧನ್ಯನಾದೆ ಗುರುದೇವಾ.

ಸಿದ್ಧ : ಮಹಾತ್ಮ ಮಾದೇಶ್ವರಾ, ನಿನ್ನ ಅವತಾರದಲ್ಲಿ ಆಗಬೇಕಾದ ಕಾರ್ಯಗಳು ಅನೇಕ ಇವೆ. ಅವು ನೆರವೇರಬೇಕಾಗಿವೆ. ನೀನು ನಮ್ಮ ಮಠದಲ್ಲಿ ಮೊದಲು ಬಂದು ನೆಲೆಸಿ ನಮ್ಮ ಶ್ರೀಮಠದ ಕೀರ್ತಿಯ ಶಿಖರವನ್ನು ಮುಟ್ಟಿಸಲು ಅಣಿಯಾಗಬೇಕು.

ಮಾದಪ್ಪ : ಆಗಲಿ ಗುರುದೇವಾ, ದೈವಾನುಗ್ರಹ, ಜೊತೆಗೆ ನಿಮ್ಮ ಆಶೀರ್ವಾದ ಇವೆರಡೂ ಇದ್ದರೆ ಅವಾವುವೂ ಅಷ್ಟೊಂದು ಕಷ್ಟವಾಗಲಾರದು.

ಸಿದ್ಧ : ಸರಿ... ಮುಂದಿನ ಕಾರ್ಯ ಸಾಗಲಿ. ದಾಸೋಹದ ಸಿದ್ಧತೆಗಳನ್ನು ಮಾಡಿ ನಡೆಯಿರಿ.

ಶಿಷ್ಯರು : ಆಗಲೀ ಬುದ್ಧಿ

(ಎಂದು ಎಲ್ಲರೂ ಹೊರಡುತ್ತಿರಲು ಸಿದ್ಧನಂಜ ದೇಶಿಕರು ಮಾದಪ್ಪನನ್ನೇ ದಿಟ್ಟಿಸುತ್ತಾ ಕುಳಿತುಕೊಳ್ಳುವರು.)

(ಕತ್ತಲಾಗಿದೆ. ಹರಳೆಣ್ಣೆಯ ದೀಪ ಪ್ರಜ್ವಲಿಸುತ್ತಿದೆ. ಮಠದ ಆಸನದಲ್ಲಿ ಸಿದ್ಧನಂಜ ದೇಶಿಕರು ಕುಳಿತಿದ್ದಾರೆ. ಅಲ್ಲಿಗೆ ಕುಂತೂರು ಬೆಟ್ಟದ ಆದಿಗಣೇಶ್ವರರು ಬರುತ್ತಾರೆ)

ಆದಿಗಣೇಶ್ವರ : ಶರಣು ಸಿದ್ಧನಂಜದೇಶಿಕರೇ...

ಸಿದ್ಧನಂಜ : ಶರಣು ಶರಣಾರ್ತಿ ಆದಿಗಣೇಶ್ವರರೇ

(ಇಬ್ಬರೂ ಸಮವಾಗಿ ನಮಸ್ಕರಿಸಿದ ಮೇಲೆ)

ಸಿದ್ಧನಂಜ : ಯಾವಾಗ ಬಂದಿರಿ?

ಆದಿ : ಇದೀಗ ತಾನೇ.

ಸಿದ್ಧನಂಜ : ತಾವು ಇಂಥ ದಿನ ಬರುತ್ತೇನೆಂದು ಹೇಳಿ ಕಳುಹಿಸಿ ಬರಬಾರದಾಗಿತ್ತೆ ಸ್ವಾಗತಕ್ಕೆ ಅಣಿ ಮಾಡುತ್ತಿದ್ದೆ.

ಆದಿ : (ನಗುತ್ತಾ) ಅದಕ್ಕೆಲ್ಲ ಸಮಯವಿಲ್ಲವೆಂದಲ್ಲವೇ ಬಂದಿರುವುದು. ಅದೋ ನೋಡಿ ನಮ್ಮ ಮಠದ ದೀವಿಗೆ ಹೇಗೆ ಮಂಕಾಗುತ್ತಿದೆ.

(ಮಾದಪ್ಪ ಬಂದು ಎತ್ತುತ್ತಿರಲು)

ಸಿದ್ಧನಂಜ : ಅದೋ ನೋಡಿ ಅದನ್ನು ಎತ್ತಿ ಪ್ರಜ್ವಲಿಸುತ್ತಿದ್ದಾನೆ, ಆ ಬಾಲಕ

ಆದಿ : ನಾನು ಹೇಳಿದದು ನಿಮಗೆ...

ಸಿದ್ಧನಂಜ : ಅರ್ಥವಾಗಲಿಲ್ಲವೆಂದು ಹೇಳುತ್ತೀರಲ್ಲವೇ?

ಆದಿ : ಸಿದ್ಧನಂಜ ದೇಶಿಕೇಂದ್ರರೇ, ನನ್ನ ಶಿವೈಕ್ಯಕ್ಕೆ ಇನ್ನು ಕೆಲವೇ ದಿನಗಳು ಉಳಿದಿವೆ. ನನ್ನ ದೇಗುಲದ ದೀಪ ಕೆಡುವಂತಿದೆ. ಅದನ್ನು ಉರಿಸುವಂತೆ ಮಾಡಬೇಕು. ನಮ್ಮ ಮಠದ ಜ್ಯೋತಿಯನ್ನು ಮುಟ್ಟಿಸಿ, ನಮ್ಮ ಜ್ಯೋತಿಯನ್ನು ಬೆಳಗುವಂತೆ ಮಾಡಿ. ಆ ಬಾಲಕನನ್ನು ಕಳುಹಿಸಿಕೊಡಿ.

(ಬಾಲಕನು ಹೊರಡುವನು)

ಸಿದ್ಧನಂಜ : ಆದರೆ ಆ ಬಾಲಕನನ್ನು ಬಿಟ್ಟಕೊಡಬೇಕೆಂದರೆ ನನಗೆ ಬಹಳ ದುಃಖವಾಗುತ್ತದೆ ಆದಿಗಣೇಶ್ವರರೇ.

ಆದಿ : ಆದರೆ ಇದು ದೈವ ಸಂಕಲ್ಪ.

ಸಿದ್ಧನಂಜ : ಏನು?

ಆದಿ : ನಾನು ಒಂದು ದಿನ ಯೋಚನೆ ಮಾಡುತ್ತಾ ಮಲಗಿದ್ದೆ.

ಸಿದ್ಧ : ಏಕೆ?

ಆದಿ : ನನ್ನ ಶಿವೈಕ್ಯದ ದಿನಗಳು ಸಮೀಪಿಸಿದವು. ಮುಂದೆ ಈ ಆಶ್ರಮ ವಹಿಸಿಕೊಳ್ಳುವವರು ಯಾರು? ಯಾವ ಮಹಾನುಭಾವನೂ ದೊರೆಯಲಿಲ್ಲವಲ್ಲ. ಏನು ಮಾಡಲೆಂದು ಯೋಚಿಸುತ್ತಾ ಮಲಗಲು ಅಂದು ರಾತ್ರಿ ಕನಸಾಯಿತು. ಕನಸಿನಲ್ಲಿ ಈಶ್ವರನು ಬಂದು "ಆದಿಗಣೇಶ್ವರಾ, ಇದಕ್ಕಾಗಿ ಯೋಚಿಸಬೇಡ ಈ ಆಶ್ರಮವನ್ನು ವಹಿಸಿಕೊಳ್ಳಲು ಸರಿಯಾದ ಮಹಾತ್ಮನು ಈಗಾಗಲೇ ರೂಪತಾಳಿ ಸುತ್ತೂರು ವೀರಸಿಂಹಾಸನ ಮಠದಲ್ಲಿದ್ದಾನೆ. ಆತನೇ ನಿನ್ನ ಯೋಗ್ಯ

ಶಿಷ್ಯನಾಗುವನು." ಎಂದು ಹೇಳಿ ಹೋದ ಹಾಗಾಯಿತು. ಅದಕ್ಕೋಸ್ಕರ ತಮ್ಮಲ್ಲಿಗೆ ಬಂದು ಬೇಗ ಆತನನ್ನು ಕಳುಹಿಸಿ ಎಂದು ಕೇಳಿಕೊಳ್ಳುತ್ತಿದ್ದೇನೆ. ಈಶ್ವರನ ಸಂಕಲ್ಪದಿಂದ ನಿಮ್ಮನ್ನು ಆಶ್ರಯಿಸಿ ನಿಮ್ಮ ಹತ್ತಿರವಿರುವ ಜ್ಯೋತಿಯನ್ನು ನಮಗೂ ಇತ್ತು ನಮ್ಮ ದೇಗುಲವನ್ನು ಬೆಳಗಿಸಬೇಕೆಂದು ಆಶಿಸುತ್ತೇನೆ ಸಿದ್ಧನಂಜ ದೇಶಿಕರೇ

ಸಿದ್ಧನಂಜ : ಆಗಲೀ ಆದಿಗಣೇಶ್ವರರೇ, ಹಿರಿಯರಾದ ನೀವು ಕೇಳುವುದು ಹೆಚ್ಚೋ, ನಾನು ಕಳುಹಿಸುವುದು ಹೆಚ್ಚೋ. ಮಹಾನುಭಾವ ಎಲ್ಲಿದ್ದರೂ ಒಂದೇ. ಎಲ್ಲಿ ಸೇವೆ ಮಾಡಿದರೂ ಒಂದೇ. ನಿಮ್ಮಿಷ್ಟದಂತೆ ನಾಳೆಯೇ ಕಳುಹಿಸುತ್ತೇನೆ. ನಿಮ್ಮ ದೇಗುಲವನ್ನು ತುಂಬಿಸಿಕೊಳ್ಳಿ, ಆತನಿಂದ ನಿಮ್ಮ ಮಠದ ಶ್ರೇಯಸ್ಸಾಗಲಿ, ದೀಪ ಪ್ರಜ್ವಲಿಸಲಿ!

ಆದಿ : ಸಿದ್ಧನಂಜದೇಶಿಕರೇ, ನಿಮ್ಮಂಥ ಉದಾರಿಗಳನ್ನು ಕಂಡು ನನಗೆ ಹೃದಯ ತುಂಬಿ ಬಂದಿದೆ. ನಿಜಕ್ಕೂ ನೀವು ದಯಾಮಯಿಗಳು.

ಸಿದ್ಧನಂಜ : ಅವೆಲ್ಲಾ ದೊಡ್ಡ ಮಾತು ಬಿಡಿ

(ಆಲಂಗಿಸಿಕೊಳ್ಳುವರು, ನಂತರ ಬಿಟ್ಟು)

ಆದಿ : ನಾನಿನ್ನು ಬರಲೇ

ಸಿದ್ಧನಂಜ : ನಮ್ಮ ಆತಿಥ್ಯವನ್ನು ಇಂದು ಸ್ವೀಕರಿಸಿ ಕೆಲವು ದಿನಗಳು ನಮ್ಮ ಜೊತೆಯಲ್ಲಿಯೇ ಇದ್ದು ಹೋಗಬಹುದಲ್ಲಾ.

ಆದಿ : ನಾನು ಅಲ್ಲಿ ಆತನ ಸ್ವಾಗತಕ್ಕೆ ಸಿದ್ಧತೆ ಮಾಡಿಕೊಳ್ಳಬೇಕಾಗಿದೆ. ಆದುದರಿಂದ ಆದಷ್ಟು ಬೇಗ ನಾನು ಕುಂತೂರು ಬೆಟ್ಟದೆಡೆಗೆ ಹೊರಡ ಬೇಕಾಗಿದೆ.

ಸಿದ್ಧನಂಜ : ಹೋಗಲಿ ಇಂದು ನಮ್ಮೊಡನೆ ಇದ್ದು ಆತಿಥ್ಯ ಸ್ವೀಕರಿಸಿ ನಂತರ ಹೊರಡುವಿರಂತೆ.

ಆದಿ : ಆಗಬಹುದು... ತಮ್ಮ ಮನಸ್ಸನ್ನು ಬೇಜಾರು ಮಾಡಿ ಹೊರಡಲಿಕ್ಕೆ ಇಷ್ಟಪಡುವುದಿಲ್ಲ.

ಸಿದ್ಧನಂಜ : ಬನ್ನಿ ನಮ್ಮ ಮಠವನ್ನು ನೋಡುವಿರಂತೆ.

ಆದಿ : ಅಗತ್ಯವಾಗಿ ಆಗಲೀ ನಡೆಯಿರಿ ನೋಡೋಣ.

(ಇಬ್ಬರೂ ಹೊರಡುವರು.)

(ಪೀಠದಲ್ಲಿ ಗುರು ಸಿದ್ಧನಂಜದೇಶಿಕೇಂದ್ರರು ಕುಳಿತಿದ್ದಾರೆ. ಮತ್ತೊಂದೆಡೆ ಆದಿಗಣೇಶ್ವರರು ಕುಳಿತಿದ್ದಾರೆ. ಅಲ್ಲಿಗೆ ಮಾದಪ್ಪ ಬಂದು ನಮಸ್ಕರಿಸುವನು. ಕೂಡಲೇ ಆತನನ್ನು ಆದಿಗಣೇಶ್ವರು ದೃಷ್ಟಿಸಿ ನೋಡುವರು.)

ಸಿದ್ಧನಂಜ : ಮಾದಪ್ಪಾ...

ಮಾದಪ್ಪ : ಏನು ಬುದ್ಧಿ?

ಸಿದ್ಧನಂಜ : ನಿನ್ನಲ್ಲಿ ಒಂದು ಮುಖ್ಯವಾದ ವಿಷಯವನ್ನು ಹೇಳಬೇಕೆಂದಿರುವೆ. ಸ್ವಲ್ಪ ಕುಳಿತುಕೋ.

ಮಾದಪ್ಪ : ಅಪ್ಪಣೆ ಗುರುದೇವಾ.

ಸಿದ್ಧನಂಜ : ನಿನ್ನನ್ನು ನಾಳೆ ಪ್ರಭುದೇವರ ಬೆಟ್ಟಕ್ಕೆ ಬೀಳ್ಕೊಡಬೇಕೆಂದಿರುವೆ.

ಮಾದಪ್ಪ : ಏಕೆ ಗುರುದೇವಾ?

ಸಿದ್ಧನಂಜ : ಅದಿ ಗಣೇಶ್ವರರು ನಿನ್ನನ್ನು ಆಹ್ವಾನಿಸುತ್ತಿದ್ದಾರೆ. ಇನ್ನು ನಿನ್ನ ಸೇವೆ ಅವರಿಗಾಗಬೇಕಾಗಿದೆ.

ಮಾದಪ್ಪ : ಅಷ್ಟು ದಿನಗಳಿಂದ ನಿಮ್ಮ ಪಾದ ಸೇವೆಯನ್ನೂ ಮಾಡುತ್ತಿದ್ದು ಇಂದು ಹೋಗುವುದೆಂದರೆ ಹೇಗೆ ಬುದ್ಧಿ?

ಸಿದ್ಧನಂಜ : ಅದು ಈಶ್ವರ ಸಂಕಲ್ಪ ನಿನ್ನನ್ನು ಬಿಟ್ಟುಕೊಡಲು ನನಗೆ ಬಹಳ ದುಃಖವಾಗುತ್ತಿದೆ.

ಮಾದಪ್ಪ : ನನಗೂ ಅಷ್ಟೇ ದುಃಖವಾಗುತ್ತದೆ ಬುದ್ಧಿ, ನಿಮ್ಮನ್ನಗಲುವುದು ಅಸಾಧ್ಯ ಕಷ್ಟವಾಗಿದೆ.

ಸಿದ್ಧನಂಜ : ಆದರೆ ಈ ಕರ್ತವ್ಯ ಮಾತ್ರ ಆಗಲೇಬೇಕಾಗಿದೆ ನೀನು ಇದನ್ನು ಒಪ್ಪಿಕೊಳ್ಳಲೇಬೇಕು.

೧. : ಏನು ಬುದ್ಧಿ?

ಸಿದ್ಧನಂಜ : ಕುಂತೂರಿನ ಬೆಟ್ಟದ ಆದಿಗಣೇಶ್ವರರು ತಮ್ಮ ಮಠಕ್ಕೆ ಒಬ್ಬ ಮರಿಯನ್ನು ಕೊಡಬೇಕೆಂದು ಕೇಳುತ್ತಿದ್ದಾರೆ. ಅದಕ್ಕೋಸ್ಕರ ನಾನು ಮಾದಪ್ಪನು ಸರಿಯಾದವನೆಂದು ಒಪ್ಪಿಸಲು ಮನ ಮಾಡಿದ್ದೀನೆ.

೩. ನಮಗೆ ಮಾದೇಶ್ವರ ಇಲ್ಲದಿದ್ದರೆ ತುಂಬಾ ಬೇಜಾರು ಬುದ್ಧಿ. ಆತನನ್ನು ಕಳುಹಿಸಬೇಡಿ.

ಸಿದ್ಧನಂಜ : ಹಾಗನ್ನಬಾರದು.

ಮಾದಪ್ಪ : ನನಗೂ ಅಷ್ಟೇ ನಿಮ್ಮನ್ನೆಲ್ಲಾ ಬಿಟ್ಟು ಹೋಗಲು ಮನಸ್ಸಿಲ್ಲ ಎಂದು ಹೇಳುತ್ತಿದ್ದೇನೆ.

ಸಿದ್ಧನಂಜ : ಎಲ್ಲರಿಗೂ ಅದನ್ನೇ ನಾನು ಬೇಡ ಎನ್ನುವುದು.

ಮಾದಪ್ಪ : ಇಷ್ಟು ಹೇಳಿದ ಮೇಲೆ ತಾವು ಹೇಳಿದ ಕಾರ್ಯವನ್ನು ಶಿರಸಾವಹಿಸಿ ಮಾಡುವೆ ಬುದ್ಧಿ.

ಆದಿ : ಬಹಳ ಸಂತೋಷ ಮಗು. ಬಹಳ ಸಂತೋಷ.

ಸಿದ್ಧನಂಜ : ಅದು ದೃಢ ನಿಶ್ಚಯ. ಈಗ ನಿನ್ನನ್ನು ಒಪ್ಪಿದೆ ಮಾದೇಶ್ವರ. ಆದ್ದರಿಂದ ನಾಳೆ ಮಾದೇಶ್ವರನನ್ನು ಬೀಳ್ಕೊಡಲು ನೀವೆಲ್ಲಾ ಸಿದ್ಧತೆ ಮಾಡಬೇಕು.

(ಮನಸಿಲ್ಲದೆ)

ಶಿಷ್ಯರು : ಆಗಲೀ ಗುರುದೇವಾ.

(ಎಲ್ಲರೂ ಹೊರಡುವರು)

(ಸುತ್ತೂರು ಮಠದಿಂದ ರಸ್ತೆಯಲ್ಲಿ ಬರುತ್ತಾ ಗುರುಗಳು ಶಿಷ್ಯರು, ಮಾದಪ್ಪ, ಬಸವ ಹೊರಡುವರು...)

ಸಿದ್ಧನಂಜ : ಮಾದಪ್ಪಾ, ಮಾದೇಶ್ವರಾ, ನೀನಿನ್ನು ಹೋಗಿ ಬಾ. ನಿನ್ನ ಅಭಿಮಾನ ನಮ್ಮಗಳ ಮೇಲೆ, ಮಠದ ಮೇಲೆ ಸದಾ ಇರಲಿ. ಬಸವಾ ನೀನೂ ಹೋಗಿ ಬಾ... ನಿಮಗೆ ಸನ್ಮಂಗಳಗಳುಂಟಾಗಲಿ.

(ಮಾದೇಶ್ವರರು ಕಾಲಿಗೆ ಬಿದ್ದು ನಂತರ ಮೇಲೆದ್ದು)

ಮಾದೇಶ್ವರ : ಹಾಗಲ್ಲ ಗುರುಗಳೇ ನಿಮ್ಮ ಅನುಗ್ರಹ, ಆಶೀರ್ವಾದ ಸದಾ ನನ್ನ ಮೇಲಿರಲಿ. ನಿಮ್ಮ ಪಾದವೇ ನನಗೆ ಗತಿ.

ಶಿಷ್ಯರು : ಮಾದಪ್ಪನಿಗೆ... ಮಾದೇಶ್ವರರಿಗೇ... ಉಘೇ... ಉಘೇ...

೧. : ಮಾದಪ್ಪಾ ಮತ್ತೆ ಯಾವಾಗ ಬರುತ್ತೀಯೆ?

ಮಾದಪ್ಪ : ಗುರುಗಳ ಅನುಗ್ರಹ ಆದಾಗ.

೩. : ನಿನ್ನನ್ನು ಬಿಟ್ಟಿರಲಿಕ್ಕೆ ನಮಗೆ ಬಹಳ ದುಃಖ ಆಗ್ತಾ ಇದೆ.

ಮಾದಪ್ಪ : ನನಗೂ ಅಷ್ಟೇ. ಆದರೆ ಗುರುಗಳ ಆಜ್ಞಾಪಾಲನೆ ಆಗ ಬೇಕಲ್ಲ.

೨. : ಬರುತ್ತೀಯಾ ಮಾದಪ್ಪ.

ಮಾದಪ್ಪ : ಬರುತ್ತೇನೆ...

(ಎಲ್ಲರೂ ಮಾದಪ್ಪನಿಗೆ ಉಘೇ... ಉಘೇ...ಎಂದು ಜಯ ಘೋಷಿಸುತ್ತಾ ಹೊರಡುವರು)

(ಮಿತ್ರರು ಕಣ್ಣೀರನ್ನು ಒರಸಿಕೊಳ್ಳುತ್ತಿರಲು)

ಮಾದೇಶ್ವರ : ಯಾಕೆ ಅಳ್ತಾ ಇದ್ದೀರಿ? ಬರ್ತೇನೆ... ಸಂತೋಷವಾಗಿ ಕಳುಹಿಸಿ. ನಿಮಗೆ ಬೇಜಾರಾದಾಗ ಬನ್ನಿ ಅಲ್ಲಿಗೆ, ಅದಕ್ಕೆಲ್ಲಾ ದುಃಖ ಪಡಬೇಕೇ?

ಸಿದ್ಧನಂಜ : ಸಂತೋಷವಾಗಿ ಕಳುಹಿಸಿಕೊಡಿ, ಬೇಕಾದರೆ ನೀವೂ ಅವನೊಡನೆ ಹೊರಟು ಆತನೊಡನೆ ಇರಿ.

(ಎಂದು ತಾವೂ ಕಣ್ಣೀರು ಒರಸಿಕೊಂಡು ನಗುವರು. ಇಬ್ಬರು ಮೂವರು ಆತನ ಜೊತೆಯಲ್ಲಿ ಹೊರಡುವರು)

ಇದೋ ಗುರುವೇ ಬಂದೆ।
ನನ್ನ ಆತ್ಮ ಬಂಧುವೆಂದೆ।
ಕರುಣದೋರು ಕಂದನೆಂದೆ, ತಾಯಿ ತಂದೆ ನೀನೆ ಮುಂದೆ ॥ ಪ ॥

ಸ್ವಂತ ಸೊಮ್ಮು ಒಲ್ಲೆನೆಂದೆ।
ಸೊತ್ತು ಸೊಗವ ತೊರೆದೆನಿಂದೆ।
ಲೋಕ ಸೊಗವೆ ಶೂನ್ಯವೆಂದೆ।
ಅಭಯ ನೀಡು ಎನಗೆ ಇಂದೆ ॥ ೧ ॥

ಕನಸಿನಲ್ಲಿ ಬಂದು ನಿಂದೆ।
ಮನಸಿನಲ್ಲಿ ನಾಟಿ ನಿಂದೆ।
ನಿನ್ನನರಸಿ ನಾನು ಸಿಂದೆ।
ನಿನ್ನನರಸಿ ನಾನು ಬಂದೆ ॥ ೨ ॥

(ಮಾದೇಶ್ವರರು ಪ್ರಭುಲಿಂಗನ ಬೆಟ್ಟಕ್ಕೆ ಬರುತ್ತಿದ್ದಂತೆಯೇ ಸುತ್ತ ಮುತ್ತಣ ಪ್ರಕೃತಿಯನ್ನು ವೀಕ್ಷಿಸುತ್ತಾ)

ಮಾದೇಶ್ವರ : ಎಂತಹ ನಿಶ್ಶಬ್ದವಾದ ಸ್ಥಳ ಸೊಗಸಾದ ಮಾಟಗುಡ್ಡಗಳುಳ್ಳ ಬೆಟ್ಟ. ಪ್ರಭುಲಿಂಗನ ಬೆಟ್ಟವು ನಿಜವಾಗಿಯೂ ಪುಣ್ಯಕ್ಷೇತ್ರವೇ ಹೌದು. ಕಾವೇರಿ ತೀರದ ಗಜಾರಣ್ಯ ಕ್ಷೇತ್ರದ ಹತ್ತಿರವಿರುವ ಈ ಕ್ಷೇತ್ರ ಅಷ್ಟದಳ ಪರ್ವತಗಳಲ್ಲೊಂದಾದ ಶಂಭುಲಿಂಗನ ಬೆಟ್ಟವು ನಿಜಕ್ಕೂ ಪೂರ್ವ ಪುಣ್ಯವಿಶೇಷದಿಂದಲೇ ಲಭಿಸಿದೆ. ಗುರು ಸಿದ್ಧನಂಜ ದೇಶಿಕರು ಹೇಳಿದಂತೆ ಈ ಕ್ಷೇತ್ರದಲ್ಲಿರುವುದು ನನ್ನ ಪುಣ್ಯ. ಓ ಅತ್ತಿಂದ ಗುರುಗಳು ಬರುತ್ತಿದ್ದಾರೆ.

(ಇತ್ತಿಂದ ಮಾದೇಶ್ವರರು ಅತ್ತಿಂದ ಗುರು ಆದಿಗಣೇಶ್ವರರು ಬರುತ್ತಿದ್ದಂತೆಯೇ ನಮಸ್ಕರಿಸಿ ಮೇಲೇಳುತ್ತಿದ್ದಂತೆಯೇ)

ಆದಿ : ಬಾಲಕ... ನೀನು...

ಮಾದಪ್ಪ : ಹೌದು ಮಾದಪ್ಪ... ನಾನು ಮಾದಪ್ಪ.

ಆದಿ : ವತ್ಸಾ, ನಿನ್ನ ಬರುವಿಕೆಗೆ ನಾನು ಕಾಯುತ್ತಿದ್ದೆ. ಬಾ ಮಗೂ ಬಾ..... ನಿನ್ನನ್ನು ನೋಡಿ ಬಹಳ ಸಂತೋಷವಾಯಿತು.

ಮಾದೇಶ್ವರ : ನಿಮ್ಮ ದರುಶನ ಮಾಡಬೇಕೆಂಬ ಆಸೆ ನನ್ನ ಮನದಲ್ಲಿ ತುಂಬಿತ್ತು. ಅದು ಇಂದು ಫಲಿಸಿತು.

ಆದಿ : ಕುಳಿತುಕೋ ಮಾದಪ್ಪಾ... ಕುಳಿತುಕೋ.

ಮಾದಪ್ಪ : ಗುರುವೇ ತಮ್ಮ ಕಣ್ಣಲ್ಲಿ ನೀರು.

ಆದಿ : ಇದು ಕಣ್ಣೀರಲ್ಲಾ ಮಾದಪ್ಪಾ, ಆನಂದ ಭಾಷ್ಪ ನಿನ್ನನ್ನು ಕಂಡು ನನ್ನ ಕರುಳು ಸುತ್ತಿತು. ಹಿಂದಿನ ಜನ್ಮದ ಮಾತೆ ಮಗುವಿನ ಸಂಬಂಧ ನನಗೆ

ಜ್ಞಾಪಕವಾಗುತ್ತಿದೆ. ಇಂದು ಗುರು ಶಿಷ್ಯರ ಸಂಬಂಧವನ್ನು ತಂದಿವೆ. ಶಿಷ್ಯನನ್ನು ನೋಡಿದ ಗುರುವಿಗೆ ಈ ಆನಂದಭಾಷ್ಪ ಸುರಿದುದರಲ್ಲಿ ಅಚ್ಚರಿ ಏನಿಲ್ಲ.

ಮಾದಪ್ಪ : ತಮ್ಮಂಥ ಗುರುವನ್ನು ಕಂಡು, ನಿಮ್ಮ ಸೇವೆಯನ್ನು ಮಾಡಲು ಅವಕಾಶ ದೊರೆತುದ್ದು ನನಗೆ ಪೂರ್ವ ಜನ್ಮದ ಪುಣ್ಯ ವಿಶೇಷವಲ್ಲದೆ ಮತ್ತೇನಲ್ಲ. ನಾನು ನಿಮ್ಮ ಮಠದಲ್ಲಿದ್ದು ತಮ್ಮ ಪಾದಸೇವೆಗೆ ಹೂವುಗಳನ್ನು ತಂದು ಅರ್ಪಿಸಿ ಪುಣ್ಯವನ್ನು ಪಡೆಯುತ್ತೇನೆ.

ಆದಿ : ಬಹಳ ಸಂತೋಷ ಮಾದಪ್ಪ. ನಿನ್ನ ಮಿತ್ರರು ಬರುತ್ತಿದ್ದಾರೆ. ಅವರೊಡನೆ ನೀನು ಇಲ್ಲೆ ಇದ್ದು ವಿದ್ಯೆ ಬುದ್ಧಿಯನ್ನು ಕಲಿತು ಗುರು ಸೇವೆಯನ್ನು ಮಾಡು.

ಆದಿ : ಬನ್ನಿ ಶಿಷ್ಯರೇ, ನಾನು ಹೇಳುತ್ತಿದ್ದೆನಲ್ಲಾ ಮಾದಪ್ಪನೆಂಬ ಶಿಷ್ಯನು ಇಂದು ಇಲ್ಲಿಗೆ ಬರ್‍ತಾನೆ ಅಂತ ಆತನೇ ಇವನು. ಇನ್ನು ಮೇಲೆ ಈತನನ್ನು ನನ್ನ ಶಿಷ್ಯನಾಗಿ ಸ್ವೀಕರಿಸಿರುವೆ.

೧ಶಿಷ್ಯ : ಆಗಲಿ ಬುದ್ಧಿ... ಬಹಳ ಸಂತೋಷ

ಆದಿ : ಸುಮ್ಮನೇ ನೋಡುತ್ತಾ ಕುಳಿತಿರಲ್ಲಾ ಈತನನ್ನು ಕರೆದುಕೊಂಡು ಹೋಗಿ ಸ್ನಾನ ಪೂಜೆಗೆ ಅಣಿ ಮಾಡಿ.

೨. : ಆಗಲೀ ಬುದ್ಧಿ...

(ಆದಿಗಣೇಶ್ವರರು ಶಿವಪೂಜಾ ನಿರತರಾಗಿರಲು ಶಿಷ್ಯವರ್ಗವು ಶಿವಪೂಜೆಗೆ ಅಣಿ ಮಾಡುತ್ತಿದ್ದಾರೆ. ದೀಪ ಪ್ರಜ್ವಲಿಸುತ್ತಿದೆ. ಘಂಟಾನಾದವಾದ ಕೂಡಲೇ ಗುರುಗಳು)

ಆದಿ : ಶಿಷ್ಯರುಗಳೇ, ಇದೇನು ಇಂದು ನೀವು ಬರೇ ಪತ್ರೆಗಳನ್ನು ತಂದಿರುವಿರಿ.

೧. : ಗುರುದೇವಾ ಈ ತರಿ ಬೇಸಿಗೆಯಲ್ಲಿ ನೆಲದ ನೀರನ್ನೆಲ್ಲಾ ಸೂರ್ಯನೇ ಹೀರಿ ಭೂಮಿ ಬಿರಿದು ಬಾಯ್ಬಿಟ್ಟು ಗಿಡಗಳಿಗೆ ಆಹಾರವಿಲ್ಲದೆ ಅವು ತಾನೇ ಹೇಗೆ ಫಲ ಬಿಟ್ಟಾವು? ಘಮ ಘಮಿಸುವ ಹೂಗಳು ತಾನೇ ಹೇಗೆ ದೊರೆತಾವು ಗುರುದೇವಾ?

೨. : ಹೌದು...

೩. : ಗುರುದೇವಾ ಗಿಡಗಳೆಲ್ಲಾ ಬೋಳಾಗಿ ವಸಂತಮಾಸಕ್ಕೆ ಹೊಸ ಜೀವವನ್ನು ಹೊಂದಲು ಪತ್ರಗಳೇ ಸಿಗುವುದು ಕಷ್ಟವಾಗಿರುವಾಗ ಹೂಗಳು ತಾನೇ ಎಲ್ಲಿಂದ ಸಿಗಬೇಕು? ನೀವೇ ಹೇಳಿ ಬುದ್ಧಿ.

೪. : ನಾವೇನೋ ಅಷ್ಟನ್ನಾದರೂ ತಂದೆವು. ಆದರೆ ಈಗ ಬಂದಿರುವ ಮಾದಪ್ಪ.

೧. : ಕೇಳುವ ಹಾಗೆಯೇ ಇಲ್ಲ.

ಆದಿ : ಹೌದು. ಮಾದಪ್ಪ ಇಷ್ಟು ಹೊತ್ತಾದರೂ ಬರಲೇ ಇಲ್ಲವಲ್ಲ. ಏನು ಕಾರಣ ಇರಬಹುದು?

೨. : ಇದ್ದೇ ಇದೆಯಲ್ಲಾ ಗೆಜ್ಜುಗೆ, ಲಗ್ಗೆ, ಚಂಡಾಟಗಳು, ಕುಣಿತ, ನೆಗೆತ... ಇನ್ನೂ ಏನೇನೋ

೩. : ಸಾಲದೇ?

೪. : ಬೇಕೆಂದಲ್ಲವೆ?

ಆದಿ : ಅವನು ಏನ್ಮಾಡ್ತಾ ಇದ್ದಾನೆ? ಎಲ್ಲಿದ್ದಾನೆ ಹೋಗಿ ಹುಡುಕಿಕೊಂಡು ಬನ್ನಿ ಹೋಗಿ.

೧. : ಆಗಲೀ ಬುದ್ಧಿ.

(ಎಂದು ಹೊರಡುವರು. ರಸ್ತೆಯಲ್ಲಿ ಮಾತಾಡಿಕೊಳ್ಳುತ್ತಿದ್ದು ಮುಂದುವರಿಯುತ್ತಿದ್ದಾರೆ)

೧. : ಈ ಹೊತ್ತು ಆತನಿಗೆ ಗುರುಗಳು ಸರಿಯಾಗಿ ಮಾಡ್ತಾರೆ.

೨. : ಸರಿ, ಒಂದು ದಿನವಾದ್ರೆ ಸರಿ, ದಿನಾ ಓಗೇ ಮಾಡ್ತಾ ಅವ್ನೆ

೩. : ಎಳಸು...

೪ : ಎಳೇ ನಿಂಬೇಕಾಯಾದ್ರೆ-ಗುರುಗಳ ಪೂಜೆಹೊತ್ತಿಗೆ ಹೂವುತರಕ್ಕಾ ಗೋಲ್ಲ ಇನ್ನೂ ಬೆರಳು ಚೀಪ್ತಾನ್ಯೇ?

೧. : ಈಗ ಎಲ್ಲಿ ಅವನನ್ನು ಹುಡುಕೋದು.?

೨. : ಆಟ ಎಲ್ಲಾ ಮುಗಿದಿದೆ, ಅಲ್ಲೇ ಬೆಟ್ಟದ ಮೇಲೆ ನಿಂತಿರಬಹುದು ಹೂವು ಆರಿಸಲಿಕ್ಕೆ ನಡೀರಿ ನೋಡೋಣ.

೩. : ಇವನು ಬರದೇ ಹೋದ ತಪ್ಪಿಗೆ ನಾವು ಬೆಟ್ಟದ ತಿಟ್ಟು ಹತ್ತಬೇಕಲ್ಲಾ ಅದು ಹೇಳು ನಮ್ಮ ಕರ್ಮ. ನಡೀರಪ್ಪಾ ಮಗುನ ಬೇಗನೆ ಕರ್ಕೊಂಡೋಗೋಣ.

೪. : ಎಲ್ಲರೂ ಸುಮ್ಮನೆ ಗಲಾಟೆ ಮಾಡಬೇಡಿ. ಮೆಲ್ಲನೆ ಒಂದುಗಡೇನೆ ನಿಂತು ನೋಡೋಣ, ಆತ ಏನು ಮಾಡ್ತಾನೆ ಅಂತ?

೧. : ಹೌದು ಹೌದು... ನಡೀರಿ ಗಲಾಟೆ ಮಾಡಬೇಡಿ, ಬಾಯಿ ಮುಚ್ಕೊಂಡು ನಡೀರಿ.

ಎಲ್ಲರೂ : ಆಗಲೀ.

(ಎಲ್ಲರೂ ಮೆಲ್ಲನೆ ಹೆಜ್ಜೆ ಇಡುತ್ತಾ ನಡೆಯುವರು ದೂರದಿಂದ ಹಾಡಿದ ಮೊರೆತ ಕೇಳಿ)

೧. : (ಮೆಲ್ಲನೆ) ಆತನೇ ಅಂತ ಕಾಣುತ್ತೆ ಹಾಡ್ತಾ ಅವ್ನೇ.

೨. : ಇಷ್ಟು ಚೆನ್ನಾಗಿ ಹಾಡ್ತಾನ್ಯೇ...?

೩. : ಅವನೋ, ಯಾರೋ...?

೪. : ಇಲ್ಲ ಇಲ್ಲ ಅವನದೇ...

೧. : ಸರಿ ನೀವು ಮಾತಾಡುವ್ರಿ ನಡೀರಿ ನೋಡೋ

೨. : ಹೌದು ಹೌದು ಅವನೇ... ನೋಡು ಅಲ್ಲಿ ಹೋಗ್ತಾ ಇದ್ದಾನೆ

ಆದಿಗಣನಾಥನೆ ನೀ ಕೃಪೆ ತೋರೋ।
ದೃಢ ಬಕುತಿಯ ಎನಗೆ ನೀಡು ದೇವ, ಪ್ರಭುದೇವ ॥ ಪ ॥

ಪಾವನದ ಹೂವಾಗಿರೋ ಗೋಸುಂಬೆಗಳಿರಾ।
ಹಿಂದಿನ ಪಾಪದ ರೂಪೇ ಇಂದಿನ ಕೀಟವು।
ಇಂದೇ ತಾಳಿರಿ, ಹೂವಾಗಿ ಬೀಳಿರಿ ನೀವು ॥ ೧ ॥

ಹಿಂದಿನ ಪಾಪವ ಕಳೆಯಿರಿ ನೀವಿಂದೆ।
ಮುಂದೆ ದೇವನಲಿ ಸದ್ಗತಿ ಹೊಂದಿರಿ।
ಪಾಪವ ತೊರೆದು ಪುಣ್ಯವ ಪಡೆಯಿರಿ।
ಇದಕೇಕೆ, ಇದಕೇಕೆ ಕೋಪ ತಾಪವು ॥ ೨ ॥

ಕಣ್ಣಿಂದ ನೋಡಿ ಕಾಲಲ್ಲಿ ಒದೆಯಬೇಡ ಸ್ವಾಮಿ।
ಪಾಪಿಯ ಜೀವನಕ್ಕೆ ಪುಣ್ಯದಾನ ನೀಡು ಸ್ವಾಮಿ।
ಕಣ್ಣಿಟ್ಟು ನೋಡು ಕಾಪಾಡು ವಿಶ್ವೇಶ್ವರ।
ನಂಬಿದವರ ಪೊರೆಯೋ ನೀ ಪರಮೇಶ್ವರ ॥ ೩ ॥

೧. : ನೋಡು ಕೆರೆಯ ಹತ್ತಿರ ಕುಳಿತ.

ಮಾದೇಶ್ವರ : ಎಲೈ ಪ್ರಾಣಿಗಳೇ, ನೀವು ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವು ನಿಮಗಿಂದು ಲಭಿಸಿದೆ. ಈಗಲಾದರೂ ಪರಶಿವನ ತಲೆಯ ಮೇಲೆ ಹೂವಾಗಿ ಬಿದ್ದು ಪಾಪವನ್ನು ಕಳೆದು ಕೊಂಡು ಶಿವನಲ್ಲಿ ಕೂಡಿ ಪುಣ್ಯವನ್ನು ತಾಳಿರಿ.

(ಕಣ್ಮುಚ್ಚಿ ನೀರಿಗೆ ಅದ್ದುತ್ತಿರಲು)

೨. : ನೋಡಿದಿರಾ ಗೊದ್ದೆ ಗೋಸುಂಬೆಗಳು ಹೇಗೆ ಬುಟ್ಟಿಗೆ ಬಿದ್ದುವು. ನೋಡ್ದಾ ಗುರುಗಳಿಗೆ ಎಂಥ ಹೂವು ತೆಗೆದುಕೊಂಡು ಹೋಗ್ತಾ ಇದ್ದಾನೆ? ಈಹೊತ್ತು ಸರಿಯಾದ ಪೂಜೆ.

(ನೀರಿಂದ ಮೇಲೆತ್ತಲು ಹೂವಾಗುವುವು)

ಮಾದೇಶ್ವರ : (ಸ್ವಗತ) ಅಯ್ಯೋ ಹೊತ್ತಾಯಿತು. ಗುರುದೇವರ ಪೂಜೆಗೆ ಹೊತ್ತಾಯಿತು. ಗುರುಗಳು ನನಗಾಗಿ ಕಾದಿರಬಹುದು.

ಶಿಷ್ಯ ೧ : ನಡ್ಯಪ್ಪಾ ನಡೆ... ಸರಿಯಾಗಿ ಪೂಜೆ ಆಗುತ್ತೆ ಗುರುಗಳಿಗೆ ನಿನ್ನ ಹೂಗಳಿಂದ.

(ಮಾದೇಶ್ವರ ಓಡುವನು)

ಶಿಷ್ಯ ೧ : ಕರ್ಮ ಯಾರಾದ್ರೂ ಗೊದ್ದೆ ಗೋಸಂಬೆಗಳನ್ನು ಗುರುಗಳಿಗೆ ತರೋದುಂಟೇ?

ಶಿಷ್ಯ ೨ : ನಡೀರಿ ನಾವು ಹಿಂದೆ ಹೋಗಿ ತಮಾಷೆ ನೋಡೋಣ.

(ಅಷ್ಟರಲ್ಲಿ ಹೂವನ್ನು ತೆಗೆದುಕೊಂಡು ಮಾದೇಶ್ವರರು ಪ್ರವೇಶಿಸುವರು)

ಆದಿ : ಇಷ್ಟು ಹೊತ್ತಿನ ತನಕ ಏನು ಮಾಡುತ್ತಿದ್ದೆ ಮಾದಪ್ಪ?

ಮಾದೇಶ್ವರ : (ನಡುಗುತ್ತಾ) ಕ್ಷಮಿಸಿ ಗುರುದೇವ.

ಆದಿ : ಕ್ಷಮಿಸುವುದೆಲ್ಲಿ ಬಂತು? ಕ್ಷಮಿಸುವುದು ತಾನೇ ಹೇಗೆ? ನನಗೆ ಒಂದೂ ಅರ್ಥವಾಗುತ್ತಿಲ್ಲ ಮಾದಪ್ಪ.

ಮಾದೇಶ್ವರ : ಆ...ಆಟ...ಆಡುತ್ತಾ...ಹೂ ತರೋದು ಸ್ವಲ್ಪ ಹೊತ್ತಾಯ್ತು ಗುರವೇ.

ಆದಿ : ನೀನು ಹೂವನ್ನು ಎಲ್ಲಿ ತರುತ್ತೀಯಾ ಮಾದಪ್ಪಾ?

ಮಾದೇಶ್ವರ : ಬೆಟ್ಟದಲ್ಲಿ.

ಆದಿ : ಬೆಟ್ಟ ಹೂ ಬಿಡುತ್ತದೆಯೇ? ಈ ಶಿಷ್ಯರುಗಳೆಲ್ಲಾ ನೀನು ತರಲು ಹೂಗಳೇ ಇಲ್ಲ ಎನ್ನುವರು. ನಿನಗೆ ಹೇಗೆ ದೊರಕಿದವು?

ಮಾದೇಶ್ವರ : ಏಕೆ...ಏ...ಕೆ...ಅಂದ್ರೆ... ನನಗೊಂದೂ ತೋಚ್ತಾ ಇಲ್ಲ ಗುರುಗಳೇ.

ಆದಿ : ನನಗೆ ಗೊತ್ತು, ಭಯಪಡಬೇಡ ಹೇಳು ಮಾದಪ್ಪ.

ಶಿಷ್ಯರು : ಗೊದ್ದೆ ಗೋಸುಂಬೆಗಳೇ ಮುಂತಾದ ಕ್ರಿಮಿ ಕೀಟಗಳನ್ನ ತಂದದ್ದು ನೋಡಿದ್ವು ಗುರು.

ಗುರು : ಏನು ಗೊದ್ದೆ ಗೋಸುಂಬೆಗಳೇ ಎಲ್ಲಿ ಮಾದಪ್ಪ ನೋಡೋಣ.

ಶಿಷ್ಯ : ನೋಡೋದೇನು ತಂದಿರೋದನ್ನ ನಾವೇ ಕಣ್ಣಾರೆ ಕಂಡ್ವು.

ಶಿಷ್ಯ : ಸತ್ಯವಾಗಿ ಬುದ್ಧಿ.

ಗುರು : ಸಾಕು ನಿಲ್ಸಿ... ಎಲ್ಲಿ ಹೂವನ್ನು ಸುರಿ ಮಾದಪ್ಪ ಈ ಕಡೆ.

ಮಾದೇಶ್ವರ : ಅಪ್ಪಣೆ ಬುದ್ಧಿ.

(ಸುರಿಯುವನು. ಎಲ್ಲರೂ ಅಚ್ಚರಿಯಿಂದ ನೋಡಿ)

ಶಿಷ್ಯರು : ಹ್ಞಾಂ... ಹೂವು...

ಶಿಷ್ಯ ೨ : ಇದೇನಪ್ಪಾ ಮಾಯ ಮಂತ್ರ?

ಶಿಷ್ಯ ೧ : ಆಗ ನೋಡಿದ ಕಣ್ಣುಗಳ್ಗೇ ಈಗ ಮೋಸ್ವೇ?

ಶಿಷ್ಯ ೩ : ಗುರುಗಳ ಪ್ರಭಾವವೋ.

ಗುರು : ಅಲ್ಲ ನಿಮ್ಮ ಪ್ರತಿಷ್ಠೆ.

(ಎಲ್ಲರೂ ಮೂಕರಂತೆ ಒಬ್ಬರನ್ನೊಬ್ಬರು ನೋಡುವರು)

ಶಿಷ್ಯ ೧ : ಮಾದೇಶ್ವರ, ನಾವು ನಿನ್ನನ್ನು ಸಾಮಾನ್ಯನೆಂದು ತಿಳಿದುಕೊಂಡಿದ್ದೆವು.

ಮಾದಪ್ಪ : (ಗಾಬರಿಗೊಂಡು) ಏನು? ಏನು? ನಿಮಗೆಲ್ಲಾ ಏನಾಯಿತು? ಏಕೆ ಹೀಗೆ ನನ್ನ ಕಾಲಿಗೆ ಬೀಳುತ್ತಿದ್ದೀರಿ?

ಶಿಷ್ಯ ೨ : ನಾವು ನಿಮ್ಮ ಕಾಲಿಗೆ ಬಿದ್ದು ಪುಣ್ಯ ಪುನೀತರಾಗಬೇಕಾಗಿದೆ.

೩. : ಪಾವನರಾದೆವು.

೪. : ಅಷ್ಟು ದಿನಗಳಿಂದ ನಿಮ್ಮ ಮೇಲೆ ಚಾಡಿ ಹೇಳುತ್ತಿದ್ದೆವು ಗುರುಗಳೇ. ಆದರೆ ನಿಮ್ಮ ಮಹಿಮೆ ಇಂದು ಅರ್ಥವಾಯಿತು. ನಮ್ಮನ್ನು ಕ್ಷಮಿಸಿ ಗುರು.

ಮಾದಪ್ಪ : ಅಷ್ಟೆಲ್ಲಾ ದೊಡ್ಡ ಮಾತೇಕೆ? ನಾನೂ ನಿಮ್ಮಂತೆ ಆದಿಗಣೇಶ್ವರರ ಶಿಷ್ಯ. ನನಗೆ ನಮಸ್ಕರಿಸುವುದರ ಬದಲು ಗುರುಗಳಿಗೆ ನಮಸ್ಕರಿಸಿ ಪುಣ್ಯಕಟ್ಟಿಕೊಳ್ಳಿ.

೧. : ಸಾಮಾನ್ಯ ಶಿಷ್ಯನಲ್ಲ ಮಹಾಮಹಿಮಶಾಲಿ

(ಆದಿಗಣೇಶ್ವರರ ಮುಂದೆ ಬಂದು ನಾಲ್ವರೂ ಬಿದ್ದು)

ನಾಲ್ವರು : ಕ್ಷಮಿಸಿ ಸ್ವಾಮಿ...ಕ್ಷಮಿಸಿ... ಬುದ್ಧಿ... ಗುರುದೇವಾ...

ಆದಿ : ಈಗಲಾದರೂ ತಿಳಿಯಿತೇ, ದಿನವೂ ಘಮ ಘಮಿಸುವ ಹೂವುಗಳನ್ನು ತರುವವನು ಆತ. ಈಗಲಾದರೂ ನೋಡಿದಿರಾ?

೧. : ಈಗ ಬಂದಿರುವ ಶಿಷ್ಯ ಸಾಮಾನ್ಯನಲ್ಲ. ಮಹಾ ಮಹಿಮ ಶಾಲಿ ಗುರುದೇವಾ, ಮಹಾ ಮಹಿಮಶಾಲಿ.

ಆದಿ : (ಗಂಭೀರ ಧ್ವನಿಯಲ್ಲಿ) ಮಾದೇಶ್ವರಾ ನೀನು ನಿಜವಾಗಿಯೂ ಸಾಮಾನ್ಯನಲ್ಲ, ಇತ್ತ ಬಾ... ಶೂನ್ಯ ಸಿಂಹಾಸನಕ್ಕೆ ಐದನೆಯ ಜಗದ್ಗುರುವಾದ ಆದಿಗಣನಾಥನೇ ನಾನು. ಇದಕ್ಕೆ ಉತ್ತರಾಧಿಕಾರಿಯನ್ನು ಮಾಡಲು ನೀನೇ ಸಮರ್ಥನು. ನನ್ನ ಶಿವೈಕ್ಯದ ದಿನಗಳು ಇನ್ನೇನು ಹತ್ತಿರ ಬಂದಿವೆ. ನಿನ್ನ ಮೇಲಿನ ಕೆಲವು ಹೊಣೆಗಳನ್ನು ಹೇಳಬೇಕಾಗಿದೆ ಬಾ.

ಮಾದೇಶ್ವರ : (ಅಚ್ಚರಿಯಿಂದ) ಇದೇನು ಹೇಳುತ್ತಿರುವಿರಿ ಗುರುದೇವಾ

(ಎಲ್ಲಾ ಹುಡುಗರು ಪೆಚ್ಚರಂತೆ ನಿಲ್ಲುವರು)

ಆದಿ : ವತ್ಸಾ, ನಾನು ಇನ್ನು ಕೆಲವು ಕ್ಷಣಗಳಲ್ಲಿಯೇ ಪರಲೋಕ ಯಾತ್ರೆಯನ್ನು ಬೆಳಸಬೇಕಾಗಿದೆ. ನಾನು ನಿನಗಾಗಿ ಅಷ್ಟು ದಿನಗಳಿಂದಲೂ

ನಿರೀಕ್ಷಿಸುತ್ತಿದ್ದೆನು. ಶಿವನ ಕೃಪೆಯಿಂದ ನೀನು ಬಂದು ನನಗೆ ಮಹದಾನಂದವನ್ನುಂಟುಮಾಡಿದೆ. ನಾನು ಲಿಂಗದಲ್ಲಿ ಬಯಲಾಗುವ ಮುನ್ನ ಕೆಲವು ಅನುಭವದ ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

ಮಾದೇಶ್ವರ : (ಕಣ್ಣೀರನ್ನು ಒರೆಸಿಕೊಂಡು) ಪರಲೋಕ... ಪರಲೋಕ ಏನಿದು ಗುರುದೇವಾ?

ಆದಿ : ಆಜ್ಞೆಯನ್ನು ಮೊದಲು ಒಪ್ಪು ಮಾದಪ್ಪ, ನಂತರ ನಾನು ಮಾತಾಡುತ್ತೇನೆ.

ಮಾದೇಶ್ವರ : ಗುರುದೇವಾ, ಈಗ ತಾವು ಮಾಡಿದ ಆಜ್ಞೆಯು ಅಲೆದಲೆದು ಬಾಯಾರಿ ಕಟ್ಟೆ ನೀರಿಗೆ ಬಂದ ಹಸುವಿಗೆ ಆ ಕೆರೆಯಲ್ಲಿ ನೀರು ಬತ್ತಿದ್ದರೆ ಎಷ್ಟು ದುಃಖಕ್ಕೀಡಾಗುವುದೋ, ಶರತ್ ಪೌರ್ಣಿಮೆಯ ಚಂದಿರನ ಬೆಳುದಿಂಗಳಲ್ಲಿ ಚಕೋರ ಪಕ್ಷಿಗಳು ಸೂಕ್ಷ್ಮಾಮೃತ ಪಾನ ಮಾಡಲಿಕೋಸ್ಕರ ಬಂದಾಗ ಸದಾ ಬೆಳುದಿಂಗಳಾದರೆ ಎಷ್ಟು ದುಃಖಕ್ಕೀಡಾಗುವುದೋ ಅಷ್ಟಾಯಿತು. ಗುರುವಿನ ಕಟಾಕ್ಷವಿಲ್ಲದೆ ನಾನು ಈ ಭೂಲೋಕದಲ್ಲಿ ಬದುಕುವುದು ಹೇಗೆ? ನೆಟ್ಟಗಿಲ್ಲದ ಮನೆ ನಿಲ್ಲುವುದೆಂತು? ರಾಗವಿಲ್ಲದ ಹಾಡನ್ನು ಹಾಡಿದರೆಂತು?

ಆದಿ : ಬಾಲಕ, ಏಕಿಷ್ಟು ಕಳವಳ ಪಡುತ್ತಿರುವೆ? ನೀನು ಹೀಗೆ ಸಂಕೋಚ ಪಡುತ್ತೀಯ ಅಂತ ತಿಳಿದಿರಲಿಲ್ಲ. ಆದರೆ ಇದು ಗುರು ಶಿಷ್ಯರ ನಿಕಟ ಸಂಬಂಥವು ಮಾತಾ-ಪುತ್ರರ ಸಂಬಂಧದಂತೆ. ಕದಳೀ ವೃಕ್ಷವು ತಾನು ಫಲವನ್ನು ಕೊಟ್ಟು ಮೃತವಾದಾಗ ತನ್ನ ಬುಡದಲ್ಲಿ ಮತ್ತೊಂದಕ್ಕೆ ಜನ್ಮವಿತ್ತು ಹೋಗುವುದಿಲ್ಲವೇ? ಹಾಗೆಯೇ ಗುರುಗಳು ಪ್ರಿಯ ಶಿಷ್ಯನನ್ನು ಸಂಪೂರ್ಣವಾಗಿ ಆಶೀರ್ವದಿಸಿ ಮರೆಯಾಗುತ್ತಾರೆ. ಅದಕ್ಕೇಕೆ ಸಂಕೋಚ?

ಮಾದೇಶ್ವರ : ಗುರುದೇವಾ ದೊಡ್ಡವರಾದ ನೀವು ಹೀಗೆ ಹೇಳಿದರೆ ಅತ್ಯಲ್ಪನಾದ ನನ್ನ ಮುಂದಿನ ಗತಿ ಏನು? ಶಿವಾನುಭವವು ಸಂಪೂರ್ಣ ದೊರೆಯುವವರೆಗೆ ನಿಮ್ಮನ್ನು ಆಶ್ರಯಿಸಿರುವೆ ಆದಿಗಣೇಶ್ವರಾ.

ಆದಿ : ಮಗು ನೀನು ಸುತ್ತೂರುಮಠದಲ್ಲಿ ಸಾಕಷ್ಟು ಶಿವಾನುಭವವನ್ನು ಅರಿತು ಬಂದಿದ್ದೀಯೆ. ನನ್ನ ಸಾನಿಧ್ಯದಲ್ಲೂ ಸ್ವಲ್ಪ ಕಲಿತಿರುವೆ. ನಿನ್ನ ನಿರ್ಮಲವಾದ ಬ್ರಹ್ಮಚರ್ಯವು ನಿನ್ನ ತೀವ್ರ ವೈರಾಗ್ಯಕ್ಕೆ ಸಹಾಯವಾಗಿ ನಿಂತು ಬಂಗಾರಕ್ಕೆ ಮೆರಗು ಕೊಟ್ಟಂತಾಯಿತು. ಈಗ ನಿನ್ನ ಜೀವನವನ್ನು ಸಂಪೂರ್ಣಗೊಳಿಸಿರುವೆ ಮಾದಪ್ಪಾ.

ಮಾದೇಶ್ವರ : ಹೊಗಳಿ ಹೊಗಳಿ ನಿಮ್ಮ ಕರುಣೆಯ ಕಂದನನ್ನು ವರ್ಣಿಸಿದರೆ ಮುಂದಿನ ಗತಿ ಏನು? ಪ್ರೀತಿಯ ಪುತ್ರನಾದ ನನ್ನನ್ನು ಕೈ ಬಿಡದೆ ಕಾಪಾಡಿ ಗುರುದೇವಾ ಕಾಪಾಡಿ.

ಆದಿ : ವತ್ಸಾ, ಕೆರೆಯ ಮರೆಯ ಗಾಳಿಯಂತೆ, ಗವಿಯ ಮರೆಯ ಶಾಖದಂತೆ, ನಿನ್ನಲ್ಲಿ ಆ ಗುಣಗಳೆಲ್ಲಾ ಅಡಕವಾಗಿವೆ. ಅಟ್ಟವೇರುವವನಿಗೆ ನಿಚ್ಚಣಿಕೆಯು ಸಹಾಯವಾಗುವಂತೆ ಸಿದ್ಧಸಂಜದೇಶಿಕರೂ ನಾವು ಆಗಿದ್ದೆವು ಅಷ್ಟೇ. ನಿನ್ನ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಹುಟ್ಟಿದವನು ಸಾಯಲೇಬೇಕು, ಸತ್ತವನು ಹುಟ್ಟಲೇಬೇಕು. ಇದು ಶತಸ್ಸಿದ್ಧ. ಇದಕ್ಕೇಕೆ ಸಂಕೋಚ?

ಮಾದೇಶ್ವರ : ದಯಾಸಾಗರ, ಹಾಗೆಂದರೆ ಅರ್ಥವೇನು?

ಆದಿ : ದೇಹಾತ್ಮಕ ಚೈತನ್ಯ ಅಂದರೆ ಆತ್ಮನು ಕರ್ಮದಿಂದ ಜೀರ್ಣವಾದ ಶರೀರವನ್ನು ತ್ಯಾಗ ಮಾಡಿಬಿಡುವನು. ಅದೇ ಮರಣ. ಮಹಾ ಪುರುಷರು ಇದಕ್ಕೆ ಅಂಜುವವರಲ್ಲಾ, ಅಳುಕುವವರಲ್ಲಾ (ನಗುತ್ತಾ) ಸುಸ್ವಾಗತವನ್ನು ಬಯಯಸುವವರು.

ಮಾದೇಶ್ವರ : ಅಂದರೆ... ಅಂದರೆ... ಕರುಣಾಮಯ ನನ್ನ ಗತಿ.

ಆದಿ : ಜನ್ಮ ಜನ್ಮಾಂತರದ ಪುಣ್ಯ ವಿಶೇಷದಿಂದ, ಮಹಾತ್ಮ ಮಾಯಕ್ಕಾರನಾಗಿಯೇ ಜನಿಸಿದೆ. ದನಕರುಗಳು ಮಾನವರುಗಳನ್ನು ಆಶೀರ್ವದಿಸಿ ಆರೋಗ್ಯವಂತರನ್ನಾಗಿ ಮಾಡಿದೆ. ರಾಗೀಕಲ್ಲಿನಿಂದ ಪವಾಡ ಬೀರಿದೆ, ಕ್ರಿಮಿಕೀಟಗಳನ್ನು ಹೂವಾಗಿ ಮಾಡಿದೆ. ಇದಕ್ಕಿಂತ ಇನ್ನೇನು ಬೇಕು?

ಮಾದೇಶ್ವರ : ಈ ಜಡ ಶರೀರವನ್ನೇಕೆ ಹೊಗಳುವಿರಿ ಗುರುವೇ?

ಆದಿ : ಪರಧನವಿಡಿಯದ, ಪರಸ್ತ್ರೀ ಮುಟ್ಟದ, ಪರಹಿಂಸೆ ಮಾಡದ ಪರನಿಂದೆ ಕೇಳದ, ಗರ್ವಾಹಂಕಾರದಲ್ಲಿ ಬೆಳೆಯದ, ಗುರುಲಿಂಗ ಜಂಗಮ ದಾಸೋಹಗಳನ್ನು ಮರೆಯದ, ಸತ್ಯಸದಾಚಾರ ತೊರೆಯದ, ಮಹಾತ್ಮನೇ ಅನಾದಿ ಗುರುಪಟ್ಟಕ್ಕೆ ಯೋಗ್ಯ. ಇದು ತತ್ತ್ವ ಜ್ಞಾನಿಗಳಿಗೆ ತಿಳಿಯುತ್ತದೆ. ಜ್ಯೋತಿ ಇದ್ದ ಮನೆಯಲ್ಲಿ ಕತ್ತಲೆಯುಂಟೇ? ಲಿಂಗವಿದ್ದ ಅಂಗದಲ್ಲಿ ಅಜ್ಞಾನ ಉಂಟೇ ಮಾದಪ್ಪ? ಹಾಗೆಯೇ ನಿನ್ನನ್ನು ಬಿಟ್ಟು ನಾನು ಮಹಾಲಿಂಗದಲ್ಲಿ ಐಕ್ಯನಾಗುತ್ತೇನೆ.

ಮಾದೇಶ್ವರ : (ಕಣ್ಮುಚ್ಚಿ) ಶಿವ ಶಿವಾ, ಏನು ಗುರುದೇವಾ? ಈ ಮಾತುಗಳು.

ಆದಿ : (ಗಂಭೀರ ಧ್ವನಿಯಲ್ಲಿ) ಮಾದೇಶ್ವರಾ, ಈ ಲೋಕದಲ್ಲಿ ಇದ್ದೂ ಇಲ್ಲದ ಹಾಗಿರಬೇಕು. ಹಾಗಾದರೆ ಮಾತ್ರ ಶಿವಯೋಗಿಗಳ ಮಹಾತ್ಮ ಬೀರುವುದು. ಯಾವ ನಿಶ್ಶಬ್ದ ನಿಯಮ ಸಾಗರದಲ್ಲಿ ಜನಿಸಿದ ಅಲೆಯು ಆ ಸಾಗರದಲ್ಲೇ ವಿಲೀನವಾಗುವುದೇ? ಗಗನದಲ್ಲಿ ಹುಟ್ಟಿದ ಮಿಂಚು ಗಗನದಲ್ಲೇ ವಿಲೀನವಾಗುವುದೋ, ಹಾಗೆಯೇ, ಇವೆಲ್ಲಾ

ಜಗನ್ನಿಯಾಮಕನ ಆಟಗಳು. ಈ ದೇಹವು ಇಂದೋ ನಾಳೆಯೋ. "ಮಣ್ಣಿನ ಕಾಯ ಮಣ್ಣಿಗೆ" ಈ ನನ್ನ ಶಿವಯೋಗದ ನಿಸರ್ಗದತ್ತ ಸಮಾಧಿಯು ಈ ಪುಣ್ಯ ಕ್ಷೇತ್ರದಲ್ಲಿಯೇ ನೆರವಾಗಬೇಕೆಂದು ಸಂಕಲ್ಪ. ಇದನ್ನು ಸಜ್ಜುಗೊಳಿಸಬೇಕು ಮಾದಪ್ಪ.

ಮಾದೇಶ್ವರ : ಗುರುವೇ ತಮ್ಮ ಶಿವಲೋಕದ ಯಾತ್ರೆ ನಿರ್ಧಾರವಾದ ಮೇಲೆ ಮುಂದಿನ ಗತಿ? ನನಗೆ ನಿಮ್ಮ ಕೊನೆಯ ಸಂದೇಶ?

ಆದಿ : ನಾಳೆಯೇ ನಿನಗೆ ಶೂನ್ಯಸಿಂಹಾಸನ ಪೀಠದ ಅಧಿಕಾರ. ಸರ್ವ ಜಂಗಮರುಗಳ, ಭಕ್ತರ ಒಪ್ಪಿಗೆ ಇದೆ. ನೀನು ಹೃತ್ಪೂರ್ವಕವಾಗಿ ಒಪ್ಪಿಕೊಳ್ಳಬೇಕು. ಅಲ್ಲಮಪ್ರಭು, ಚೆನ್ನಬಸವೇಶ್ವರ, ಸಿದ್ಧರಾಮ, ಅನಾದಿ ಗಣೇಶ್ವರರ ಗುರು ಪರಂಪರೆಯಿಂದ ಬಂದ ಪೀಠವನ್ನು ನಿನಗೊಪ್ಪಿಸುವೆ.

ಮಾದೇಶ್ವರ : ಮಹಾಶಿವಯೋಗಿಗಳ ಪರಂಪರೆಯಿಂದ ಬಂದ ಪಟ್ಟವನ್ನು ಹೊರಿಸುವುದು ಎಂದರೇನು? ಇದು ಭೂಬಾರವನ್ನು ಹೊತ್ತ ಭೂದೇವಿಯಂತೆ ನನಗೆ ಕಷ್ಟವಾಗುವುದು ಗುರುವೇ.

ಆದಿ : ಕುವರಾ, ಈ ಪೀಠವನ್ನು ನೀನು ಅಲಂಕರಿಸಿದ ಮೇಲೆ ಇದರ ಮಹಿಮೆಯನ್ನು ಗುರು ಸಂಪ್ರದಾಯವನ್ನು ಉನ್ನತವಾಗಿ ಅಚ್ಚಳಿಯದಂತೆ ನಿಚ್ಚಳವಾಗಿ ಉಳಿಸಿ ಬೆಳೆಸಿಕೊಂಡು ಬರಬೇಕು.

ಮಾದೇಶ್ವರ : ಇದು ನಿಜವಾಗಿಯೂ ಆನೆಯ ಭಾರವನ್ನು ಹೊತ್ತ ಆಮೆಯಂತೆಯೇ ಸರಿ ಗುರುದೇವಾ

ಆದಿ : ಇದಕ್ಕೆ ತಕ್ಕ ವೈರಾಗ್ಯ, ಸಾಧನೆ, ವಿವೇಕ, ಷಟ್ಸಂಪತ್ತು, ವಿದ್ವತ್ತು, ಅನುಭವ, ಅನುಸಂಧಾನ, ಸರ್ವಪ್ರೇಮ, ಮಹಾ ಮುನಿತ್ವ ಇರುವುದು. ಈ ದೊಡ್ಡ ಕಾರ್ಯಕ್ಕೆ ದೊಡ್ಡ ಗುಣವಿರುವುದರಿಂದ, ಜಗದ್ಗುರುವಾಗಿ, ಜನನ ಮರಣಾತ್ಮಕ ಸಂಸಾರ ಚಕ್ರದಲ್ಲಿ ಉರುಳುತ್ತಿರುವ ಮಾನವನನ್ನು ಮಹೋನ್ನತವಾದ ಶಾಂತಿ ಪ್ರದವಾದ ಮೋಕ್ಷಸ್ಥಾನಕ್ಕೊಯ್ಯಲು ಮುಖ್ಯ ಪುರಷನನ್ನಾಗಿ ಸ್ವೀಕರಿಸುತ್ತಿರುವೆ.

ಮಾದೇಶ್ವರ : ಕಲಿಯುಗದ ಕಲಿಪುರುಷರ ಕೆಚ್ಚೆದೆಯನ್ನು ಮಹೋನ್ನತ ಶಾಂತಿ ಪ್ರದವಾದ ಮೋಕ್ಷ ಸ್ಥಾನಕ್ಕೊಯ್ಯುವ ಶಕ್ತಿ ನನಗಿದೆಯೇ ಗುರು... ಮುಂದೆ ನನ್ನ ಶಿವಯೋಗಕ್ಕೆ ಯೋಗ್ಯವಾದ ಸ್ಥಳ ಯಾವುದು ಗುರುವೇ?

ಆದಿ : ಶಿಷ್ಯಾ, ಕಾವೇರಿ ತೀರದಲ್ಲಿರುವ ಪೊನ್ನಾಚಿ ಬೆಟ್ಟದ ತಪ್ಪಲಿನ ಪೂರ್ವ ಘಟ್ಟಗಳ ಮಧ್ಯೆ ಆನೆಮಲೆ, ಕಾನಮಲೆ, ಗುತ್ತಿಮಲೆ, ಗುಲಗಂಜಿಮಲೆ, ಗೌಳಮಲೆ, ಪದುವಮಲೆ, ತುಳುವಮಲೆ, ಗಾಳಿಮಲೆ, ಮಂಜುಮಲೆ,

ಏಳುಮಲೆ ಎಪ್ಪತ್ತೇಳು ಮಲೆಗಳ ಮಧ್ಯದಲ್ಲಿನ ವಜ್ರಮಲೆಯಲ್ಲಿ ನಿನ್ನ ತಪಃಸಿದ್ಧಿಯಾಗುವುದು. ಅಲ್ಲದೆ ಅದು ಮುಂದೆ ಮಹಾ ಪುಣ್ಯಕ್ಷೇತ್ರನಾಗುವುದು.

ಮಾದೇಶ್ವರ : ಗುರೇಶಾ ಧನ್ಯನಾದೆನು... ಸಾದಾ ನಿಮ್ಮ ಪಾದಗಳನ್ನು ನೆನೆದುಗುರು ಸೇವೆಯನ್ನು ನಿರ್ವಹಿಸುವೆನು.

ಆದಿ : ಒಳ್ಳೆಯದು ಮಾದೇಶ್ವರ, ನಿನಗೆ ಆ ಪರಶಿವನು ಸರ್ವಮಂಗಳವನ್ನುಂಟು ಮಾಡಲಿ.

(ನಮಸ್ಕರಿಸುತ್ತಿರಲು ಗುರುಗಳು ತಲೆ ಮುಟ್ಟಿ ಆಶೀರ್ವದಿಸುತ್ತಾರೆ.)

(ಯೋಗಿಶ್ರೇಷ್ಠರೆಲ್ಲಾ ಆಗಮಿಸುವರು. ಪೀಠಕ್ಕೆ ಪೂಜೆ ಮಾಡಿ ಅಲಂಕರಿಸುವರು. ಮಂಗಳ ವಾದ್ಯಗಳು ಮೊಳಗಿದುವು. ಕಿರೀಟವಿಟ್ಟು ಉಂಗುರ ತೊಡಿಸಿ ಹಾರವನ್ನು ಹಾಕಿ ಮಾದೇಶ್ವರರಿಗೆ ಆಶ್ರಮವನ್ನು ವಹಿಸಿಕೊಟ್ಟರು.)

ಆದಿ : ಇನ್ನು ಈ ಪೀಠದ ಕೀರ್ತಿಯನ್ನು ಹೆಚ್ಚಿಸುವುದು ನಿನ್ನ ಭಾರ ಮಾದಪ್ಪ.

ಮಾದೇಶ್ವರ : ತಮ್ಮ ಕೃಪಾಕಟಾಕ್ಷದಿಂದಲೇ ಆಗಬೇಕೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇನೆ.

ಆದಿ : ಇನ್ನು ನಾನು ಲಿಂಗದಲ್ಲಿ ಬಯಲಾಗುತ್ತೇನೆ.

ಮಾದೇಶ್ವರ : ಗುರುವೇ...

(ಆದಿಗಣೇಶ್ವರರು ಲಿಂಗಪಡೆ ಹೋಗುತ್ತಿರಲು ಮಾದೇಶ್ವರರು ಕಣ್ಣೀರು ಒರಸಿಕೊಳ್ಳುವರು. ಯೋಗಿಶ್ರೇಷ್ಠರೆಲ್ಲಾ ಗುರು ಆದಿಗಣೇಶ್ವರರು ಲಿಂಗದಲ್ಲಿ ಬಯಲಾಗುತ್ತಿದ್ದಂತೆಯೇ ಪುಷ್ಪಗಳ ಮಳೆಗರೆಯುವರು. ಮಾದೇಶ್ವರರು "ಗುರುವೇ- ಆದಿಗಣೇಶ್ವರಾ" ಎಂದು ಲಿಂಗಕ್ಕೆ ನಮಸ್ಕರಿಸುತ್ತಿದ್ದಂತೆಯೇ ಲಿಂಗದಲ್ಲಿ ಬಯಲಾಗುವರು. ಎಲ್ಲರೂ ನಮಿಸುತ್ತಾ ನಿಲ್ಲುವರು.)

(ದಾರಿಯಲ್ಲಿ ಮಾದೇಶ್ವರರು ಬರುತ್ತಿರಲು ಅತ್ತಿಂದ ಶಾಂತ ಮಲ್ಲಿಕಾರ್ಜುನರು ಬರುತ್ತಾ ನಮಸ್ಕರಿಸಲು)

ಮಾದೇಶ್ವರ : ಶಾಂತಮಲ್ಲಿಕಾರ್ಜುನದೇವಾ ನೀವು ಹಿರಿಯ ಗುರುಗಳು. ತಾವು ನಮ್ಮಂಥವರಿಗೆ ಆಶೀರ್ವದಿಸದೆ ಪ್ರತಿ ಶರಣಾರ್ತಿಯನ್ನು ಮಾಡುವುದು ಸರಿಯೇ?

ಶಾಂತ : ಬೆಂಕಿಯಲ್ಲೂ ಚಳಿ ಎಂದರೇನು? ಮಾದೇಶ್ವರಾ?

ಮಾದೇಶ್ವರ : ಅಂದರೆ...?

ಶಾಂತ : ಜಂಗಮ ರೂಪಿನಲ್ಲಿ ಎಲ್ಲರೂ ಒಂದೇ.

ಮಾದೇಶ್ವರ : ದಯವಿಟ್ಟು ಹಾಗೆಲ್ಲಾ ಅನ್ನಬೇಡಿ ಬುದ್ಧಿ.

ಶಾಂತ : ನಿಮ್ಮ ಮುಖವನ್ನು ನೋಡಿದಾಗ, ಹೆಸರನ್ನು ಕೇಳಿದಾಗ ನನಗೆ ಏನೋ ಆಲೋಚನೆ ತರುತ್ತದೆ. ಹಿಂದಿನ ಜನ್ಮದ ಸವಿ ನೆನಪಾಗುತ್ತದೆ. ನಿಮ್ಮ

ಪವಾಡಗಳು ಪ್ರತ್ಯಕ್ಷ ಸಾಕ್ಷಿಗಳಾಗಿರುವಾಗ "ಅಂಗೈ ಮೇಲಿನ ಬುಕ್ಕೆಯನ್ನು ನೋಡಿಕೊಳ್ಳಲು ಕನ್ನಡಿ ಬೇಕೇ?" ಮಾದೇಶ್ವರ ನಿಮ್ಮ ಯೋಗಬಲ ಬಹಳ ಚೆನ್ನಾಗಿದೆ. ಅಲ್ಲದೆ ಈ ಶೂನ್ಯಸಿಂಹಾಸನ ಪೀಠದ ಆಶ್ರಮ ವಹಿಸಿಕೊಳ್ಳುವುದು ಮಹತ್ತರವಾದ ವಿಷಯವಲ್ಲವೇ?

ಮಾದೇಶ್ವರ : ಸಾಕು ನಿಮ್ಮ ವರ್ಣನೆ. ಈಗ ತಾವು ಯಾವ ಕಡೆಗೆ ಹೋಗುತ್ತಿದ್ದೀರಿ?

ಶಾಂತ : ಹೀಗೆ ಮೂಗೂರು ಕಡೆಗೆ ತಿರುಗಾಡಲಿಕ್ಕೆ ಹೊರಟಿದ್ದೆ. ಜೊತೆಗೆ ನೀವೊಬ್ಬರು ಸಿಕ್ಕಿದ ಹಾಗಾಯಿತು, ನೀವೂ ಬರುತ್ತೀರಾ?

ಮಾದೇಶ್ವರ : ಆಗತ್ಯವಾಗಿ ಆಗಬಹುದು. ನಡೆಯಿರಿ.

(ಹೊರಡುವರು)

(ದಾರಿಯಲ್ಲಿ ಬರುತ್ತಿರಲು ಮೂಗೂರು ಹತ್ತಿರ ಚತುರಂಗ ಬಲವು ನೀರಿಗೆ "ಹ್ಹಾಂ..." ಹ್ಹಾಂ... ನೀರು ನೀರು...ಎಂದು ಬಾಯ್ಬಿಡುತ್ತಿರಲು, ನೀರಿಗಾಗಿ ಸುತ್ತಾಡಿ ಬೇಸರ ಹೊಂದಿ ದಿಕ್ಕು ತೋಚದ ಹದಿನಾಡುಗ್ರಾಮದ ನಂಜುಂಡರಾಜ ಒಡೆಯರು ಬರುತ್ತಿರಲು, ಅಲ್ಲಿಗೆ ಶಾಂತಮಲ್ಲಿಕಾರ್ಜುನಸ್ವಾಮಿಗಳು ಹಾಗೂ ಮಾದೇಶ್ವರರು ಬರುತ್ತಿರಲು, ರಾಜರು ಬಂದು ಇಬ್ಬರಿಗೂ ದೀರ್ಘದಂಡ ನಮಸ್ಕಾರವೆಸಗಿ)

ಶಾಂತ : ಮೇಲೇಳಿ... ಮೇಲೇಳಿ ಮಹಾರಾಜ.

ನಂಜುಂಡ : (ದುಗುಡದ ಧ್ವನಿಯಲ್ಲಿ) ಮಹಾಸ್ವಾಮಿ ನಾನು ಹದಿನಾಡ ಮಹಾರಾಜ ನಂಜುಂಡರಾಜ ಒಡೆಯ. ಅದೋ ನನ್ನ ಚತುರಂಗ ಬಲ ನೀರಿಗಾಗಿ ಸಾತೊರೆಯುತ್ತಿದೆ. ಎಲ್ಲೆಲ್ಲೂ ಹುಡುಕಿ ನಿರಾಶರಾಗಿದ್ದೇವೆ. ಸೈನಿಕರು ಪ್ರಾಣವನ್ನು ಬಿಡುತ್ತಿದ್ದಾರೆ. ನೀವು ದೇವರರೂಪಿನಲ್ಲೇ ಇಲ್ಲಿಗೆ ಬಂದು ಇಳಿದಿರಿ ಅಂತ ಕಾಣಿಸುತ್ತೆ.

ಶಾಂತ : ಅದು ದೊಡ್ಡ ಮಾತು.

ನಂಜುಂಡ : (ಕಾಲ್ಗೆರಗಿ) ಸ್ವಾಮಿ ನಿಮ್ಮ ಮುಖಕಳೆಯನ್ನು ನೋಡಿದರೆ ಅಸಾಮಾನ್ಯ ಪುರುಷರಾಗಿ ಕಾಣುತ್ತಿರುವಿರಿ. ಆದುದರಿಂದ ಮಾನವರಾದ ನಮ್ಮ ಬಯಕೆಯನ್ನು ಈಡೇರಿಸುವುದು ನಿಮ್ಮ ಧರ್ಮ.

ಶಾಂತ : (ಮಾದೇಶ್ವರರತ್ತ ತಿರುಗಿ) ಇವರನ್ನು ಕೇಳಿ.

ನಂಜುಂಡ : (ಆ ಕಡೆ ನಿಂತು ಮುಖ ಮಾಡಿ) ಸ್ವಾಮಿ, ದಯೆ ತೋರಿ. ನಾನು ಹರದನಹಳ್ಳಿ ಸಿದ್ಧಾಶ್ರಮದ ಬಳಿ ಇರುವ ಸಿದ್ಧಗಿರಿಗೆ ಹೋಗುವ ಮನ ಮಾಡಿದ್ದೆ. ಆದರೆ ತಾವು ಇಲ್ಲೇ ದೊರೆತದ್ದು "ಅಗೆಯುವವನಿಗೆ ನಿಧಿ ದೊರೆತಂತಾಯಿತು" ಗುರುದೇವಾ.

ಮಾದೇಶ್ವರ : ಮಹಾರಾಜ ನಮ್ಮಿಂದ ಈಗೇನಾಗಬೇಕಾಗಿದೆ.

ನಂಜುಂಡ : ನನ್ನ ಈ ಚತುರಂಗ ಮಾರ್ಬಲವು ಯುದ್ಧ ಮಾಡಿ ಬಳಲಿ ನೀರಿಲ್ಲದೆ ಬಾಯ್ಬಿಡುತ್ತಿದೆ ಸ್ವಾಮಿ. ಬೇಗ ಬಂದು ಅವರ ದಾಹವನ್ನು ನೀಗಬೇಕು ಮಹಾಗುರು.

ಮಾದೇಶ್ವರರು : ಆಗಲಿ... ನೋಡೋಣ ನಡೆಯಿರಿ.

(ದಾರಿಯಲ್ಲಿ ಹೋಗುತ್ತಿರಲು, ಅಲ್ಲಿ ಒಂದು ಸೋರೆ ಬುರುಡೆ ಬಿದ್ದಿತ್ತು, ಅದರಲ್ಲಿ ಸ್ವಲ್ಪ ನೀರಿತ್ತು. ಅದನ್ನು ಮಾದೇಶ್ವರರು ತೆಗೆದುಕೊಂಡು ಬಿಡಲಾರಂಭಿಸಿದರು. ನೀರು ಅಕ್ಷಯ ಪಾತ್ರೆಯಂತೆ ನೀಡಲಾರಂಭಿಸಿತು. ಶಾಂತಮಲ್ಲಿಕಾರ್ಜುನರು ನೋಡುತ್ತಿದ್ದಾರೆ. ಮಹಾರಾಜರ ಮೊಗದಲ್ಲಿ ಸಂತೋಷ ಚಿಮ್ಮುತ್ತಿದೆ. ಕೂಡಲೇ ಓಡಿ ಬಂದು ರಾಜರು)

ನಂಜುಂಡ : ಸ್ವಾಮಿ ನಿಮ್ಮ ಮಹಿಮೆ ಘನ, ನನ್ನ ಚತುರಂಗ ಬಲವು ನೀವು ನೀಡಿದ ಸೋರೆ ಬುರುಡೆಯ ನೀರಿನಿಂದ ತೃಪ್ತಿ ಹೊಂದಿತು. ಪ್ರಾಣದಾತರೆ ತಮ್ಮ ಪರಿಚಯವಾಗಬೇಕು ಪ್ರಭು.

ಶಾಂತ : ನಾವು ಸಿದ್ಧಗಿರಿ ಸಿದ್ಧಾಶ್ರಮದ ಶಾಂತಮಲ್ಲಿಕಾರ್ಜುನ ಸ್ವಾಮಿಗಳು. ಇವರು ಆದಿಗಣೇಶ್ವರರ ಶಿಷ್ಯರಾದ ಜಗದ್ಗುರು ಮಾದೇಶ್ವರರು. ಮಹಾನುಭಾವರು. ಇವರು ಶ್ರೀಶೈಲ ಮಲ್ಲಿಕಾರ್ಜುನನ ಸಾಕ್ಷಾತ್ ಅವತಾರ.

ಮಾದೇಶ್ವರ : ಗುರುಗಳೇ ಇದೇನು ನೀವು ಹೇಳುತ್ತಿರುವುದು?

ನಂಜುಂಡ : ಮಹಾತ್ಮಾ ಮಹಾದೇವಾ, ನಿಮ್ಮ ದರ್ಶನವಾದುದು ನನ್ನ ಪೂರ್ವಜನ್ಮದ ಪುಣ್ಯ ವಿಶೇಷವೇ ಹೌದು. ತಾವು ನೀಡಿದ ಈ ಪವಾಡ ನಿಜವಾಗಿಯೂ ಮಹಾ ಹಿರಿದು. ಈ ಉಪಕಾರಕ್ಕೆ ನನ್ನದೊಂದು ಕಾಣಿಕೆ ಕೊಡಬೇಕೆಂದಿರುವೆ. ತಾವು ಒಪ್ಪಿದರೆ ಅದನ್ನು ಬಿನ್ನವಿಸಿಕೊಳ್ಳುವೆ.

ಶಾಂತ : ಅದೇನು ಮಹಾರಾಜ?

ನಂಜುಂಡ : ನಮ್ಮ ಸಿಂಹಾಸನಕ್ಕೆ ಅಧಿಕಾರವಹಿಸಿಕೊಡಲು ನನ್ನ ಮನಸ್ಸು ಹಾತೊರೆಯುತ್ತದೆ.

ಶಾಂತ : ಈ ವೈಭೋಗಗಳು ನನಗೆ ಸಲ್ಲದು. ನಮ್ಮ ಮಾದೇಶ್ವರರಿಗೇ ಸಲ್ಲತಕ್ಕದ್ದು. ಆ ಫಲ ಅವರಿಗೇ ಸಲ್ಲತಕ್ಕದ್ದು.

ಮಾದೇಶ್ವರ : ತನು, ಮನ ಧನಗಳನ್ನೇ ತೊರೆದು ಈ ಜನ್ಮ ಸಾರ್ಥಕಗೊಳಿಸಿ ಕೊಳ್ಳುವ ನನಗೇಕೆ ಈ ಪಟ್ಟ? ಈ ರಾಜಭೋಗ ವೈಭೋಗಗಳು, ಮಹಾರಾಜರಿಗೆ ಅಷ್ಟೊಂದು ಆಸೆಯಿದ್ದರೆ ನಮ್ಮ ಗುರುಗಳಾದ ಶಾಂತಮಲ್ಲಿಕಾರ್ಜುನ ಮಹಾಸ್ವಾಮಿಗಳಿಗೆ ಒಂದು ಮಠವನ್ನು ನಿರ್ಮಿಸಬಹುದಲ್ಲ.

ಶಾಂತ : ಇಲ್ಲ, ಅದು ನಿಮಗೆ ಸಲ್ಲತಕ್ಕದ್ದು.

ಮಾದೇಶ್ವರ : ಇದೇನು ಗುರುದೇವಾ ನೀವು ಹೀಗಾಡುತ್ತಿದ್ದೀರಿ?

ಶಾಂತ : (ನಮಸ್ಕರಿಸಿ) ನೀವು ನನಗೂ ಮತ್ತೊಬ್ಬರಿಗೂ ಗುರು. ನೀವೇ ನನ್ನಗುರು. ನಾನಿನ್ನು ನಿಮ್ಮ ಸೇವೆ ಮಾಡುತ್ತೇನೆ.

ಮಾದೇಶ್ವರ : ಗುರು... ಇದು ಸಲ್ಲದು... (ಕಣ್ಣೀರು ಸುರಿಸುವರು) ಸೈನಿಕರೆಲ್ಲಾ ಮೇಲೆದ್ದು "ಸೋರೆ ಬುರುಡೆ ನೀರ ಚತುರಂಗ ಬಲಕ್ಕೆ ನೀಡಿದ ಮಾದೇಶ್ವರರಿಗೆ ಉಘೇ ಉಘೇ..." ಎಂದು ಜಯ ಘೋಷ ಮಾಡುವರು. ಮಾದೇಶ್ವರರು ಶಾಂತಮಲ್ಲಿಕಾರ್ಜುನರು ಹೊರಡಲನುವಾಗಲು ಎಲ್ಲರೂ ನಮಸ್ಕರಿಸಿ ಬೀಳ್ಕೊಡುವರು.

(ಮಾದೇಶ್ವರರು ರಸ್ತೆಯಲ್ಲಿ ಬರುತ್ತಾ ಚಿಂತಿಸುತ್ತಾರೆ.)

ಮಾದೇಶ್ವರ : ಎಂಥ ಕೆಲಸವಾಯ್ತು. ನನ್ನಿಂದ ಗುರು ಶಾಂತಮಲ್ಲಿಕಾರ್ಜುನರ ಹಿರಿಮೆ ಕಡಿಮೆ ಆಯ್ತಲ್ಲಾ, ಮುಂದೆಯೂ ಆಗುತ್ತಲ್ಲಾ, ಇದಕ್ಕೇನು ಮಾಡ್ಲಿ? ಇದಕ್ಕೆ ಒಂದೇ ಒಂದು ಉಪಾಯ, ಇಂದೇ ಪ್ರಭುಲಿಂಗನ ಬೆಟ್ಟವನ್ನು ಬಿಟ್ಟು ಹೊರಡುವುದೆಂದೇ ಮಾರ್ಗ. ಹೌದು ಹೊರಡುವುದೇ ಸರಿ.

(ಕುಂತೂರು ಬೆಟ್ಟದ ಬಂಡೆಯ ಮೇಲೆ ಮಂಡಿಯೂರಿ ಕುಳಿತು ನಮಸ್ಕರಿಸುತ್ತಾ)

ಮಾದೇಶ್ವರ : ಸಿದ್ಧನಂಜ ದೇಶಿಕೇಂದ್ರ, ಆದಿಗಣೇಶ್ವರಾ, ಶಾಂತ ಮಲ್ಲಿಕಾರ್ಜುನ ಮಹಾಸ್ವಾಮಿಗಳೇ ನಿಮ್ಮ ಅನುಗ್ರಹ ಸದಾ ನನ್ನ ಮೇಲಿರಲಿ. ನಾನಿನ್ನು ಹೋಗಿ ಬರುತ್ತೇನೆ. ನನ್ನ ಮುಂದಿನ ಶಿವಯೋಗ ಸ್ಥಳಕ್ಕೆ ಹೊರಡುತ್ತೇನೆ.

(ಮತ್ತೆ ನಮಸ್ಕರಿಸಿ ಹೊರಡುತ್ತಾರೆ)

(ಶಾಂತಾಮಲ್ಲಿಕಾರ್ಜುನರು ಮಾದಪ್ಪಾ, ಮಾದಪ್ಪಾ ಮಾದೇಶ್ವರ ಎಂದು ಕೂಗಿ ಕೊನೆಗೆ ಬಂಡೆಯ ಹತ್ತಿರ ಬರುತ್ತಾರೆ)

ಶಾಂತ : ಮಾದಪ್ಪ ಎಲ್ಲೆಲ್ಲೂ ಇಲ್ಲ, ಎಂಥ ಕೆಲಸ ಮಾಡಿದ ನಾನೇನು ಅಪರಾಧ ಮಾಡಿದೆ ಅಂತ ಪ್ರಭುಲಿಂಗನ ಬೆಟ್ಟವನ್ನು ಬಿಟ್ಟು ಹೋಗಿದ್ದಾರೆ. ಮಹಾನುಭಾವರೇ ನಿಮ್ಮ ಕೀರ್ತಿ ಸರ್ವ ಲೋಕಗಳಲ್ಲೂ ಬೀರಲಿ.

(ಚಿಂತಿಸುತ್ತಾ ಹೊರಡುತ್ತಾರೆ)

(ಮಾದೇಶ್ವರರು ಸರಗೂರಿಗೆ ಬರುತ್ತಾರೆ. ಅಲ್ಲಿ ಮೂಗಯ್ಯ ನೆಂಬ ಭಕ್ತ ಹಣ್ಣನ್ನು ತೆಗೆದುಕೊಂಡು ಬರುತ್ತಿರಲು, ಬಂದು ನಮಸ್ಕರಿಸಿ)

ಮೂಗಯ್ಯ : ನಾನು ರಾಮವ್ವೆಯ ಮಗ ಬುದ್ಧಿ. ನನ್ಹೆಸ್ರು ಮೂಗಯ್ಯಾ ಅಂತ. ಈ ಸರಗೂರೇ ನನ್ನ ಹುಟ್ಟೂರು. ತಾವಾರು ಗುರುಗಳೇ? ಎತ್ತ ಪ್ರಯಾಣ ಬೆಳೆಸುತ್ತಿದ್ದೀರಿ?

ಮಾದಪ್ಪ : ನನ್ನ ಹೆಸರು ಮಾದಪ್ಪ ಅಂತ. ಹೀಗೇ ಹೋಗ್ತಾ ಇದ್ದೀನಿ.

ಮೂಗಯ್ಯ : ತಾವು ಈ ಹಣ್ಣು ಸ್ವೀಕರಿಸಬೇಕು ಬುದ್ಧಿ.

ಮಾದಪ್ಪ : ಶಿಷ್ಯನ ಬಯಕೆಯನ್ನು ಈಡೇರಿಸುವುದು ನಮ್ಮ ಧರ್ಮ ತಾನೇ ಕೊಡಪ್ಪಾ.

ಮೂಗಯ್ಯ : ಈಗ ತಾವೆಲ್ಲಿಂದ ಬರುತ್ತಿದ್ದೀರಿ ಗುರುದೇವಾ?

ಮಾದಪ್ಪ : ಕುಂತೂರಿನಿಂದ ಬರ್ತಾ ಇದ್ದೀನಿ. ತಲಕಾಡಿನಲ್ಲಿ ಪಂಚಲಿಂಗದರ್ಶನ ಮಾಡಿಕೊಂಡು ಪಯಣ ಬೆಳೆಸುತ್ತಿರಲು ಮಾಯೆಯೊಬ್ಬಳನ್ನು ಜಯಿಸಿ ಬರಬೇಕಾಯ್ತು.

ಮೂಗಯ್ಯ : ಸ್ವಾಮಿ ನಿಮ್ಮ ಹೆಸರನ್ನು ಕೇಳಿದರೆ ನನಗೆ ಎಲ್ಲಿಲ್ಲದ ಆನಂದ, ಪುಳಕವಾಗುತ್ತಿದೆ. ತಮ್ಮ ದರ್ಶನವಾದುದು ನನ್ನ ಪುಣ್ಯ ವಿಶೇಷವೇ ಸರಿ.

ಮಾದೇಶ್ವರ : ಮೂಗಯ್ಯಾ "ಕಾಯಕವೇ ಕೈಲಾಸ" ಎಂಬುದನ್ನು ನೀನು ಚೆನ್ನಾಗಿ ಅರಿತಿದ್ದೀಯೆ. ಅದಕ್ಕಾಗಿ ಜೀವವನ್ನು ಗಂಧದ ಕೊರಡಂತೆ ತೆಯ್ದಿದ್ದೀಯೆ. ನೀನು ಕಾಯಕದಲ್ಲಿ ನಿರತನಾಗಿ ಇನ್ನೂ ಚೆನ್ನಾಗಿ ಜನಸೇವೆಯನ್ನು ಸಲ್ಲಿಸು.

ಮೂಗಯ್ಯ : ಆಗಲೀ ಗುರುದೇವಾ.

ಮಾದೇಶ್ವರ : ನಿನಗಿನ್ನು ಸರ್ವಮಂಗಳ ಉಂಟಾಗಲಿ ನಾನಿನ್ನು ಬರುತ್ತೇನೆ.

ಮೂಗಯ್ಯ : ತಾವು ನಮ್ಮೂರಿಗೆ ಪಾದ ಬೆಳೆಸಿ ನಮ್ಮೂರನ್ನೇ ಪುಣ್ಯಕ್ಷೇತ್ರ ಮಾಡಿದಿರಿ.

ಮಾದೇಶ್ವರ : ಆಗಲಿ.

(ಎಂದು ಮಹದೇಶ್ವರನಿಗೆ ನಮಸ್ಕರಿಸಿ ಕರೆದುಕೊಂಡು ಹೋಗುವನು.)

(ಕಾಮಗೆರೆ (ಕರ್ಮಾಟಕಪುರಿ) ದಾರಿಯಲ್ಲಿ ಗಾಡಿಯಲ್ಲಿ ಬರುತ್ತಿರಲು ಮಾದೇಶ್ವರರನ್ನು ನೋಡಿದ ಗಂಗಾಧರನು ಸಂಗಪ್ಪ ಬಿಸಿಲಿನ ತಾಪದಿಂದ ಬೀಳಲು ಆತನನ್ನೂ ಕುಳ್ಳಿರಿಸಿಕೊಂಡು ಬರುವರು.)

ಗಂಗಾಧರ : ಯಾರದು?

ಮಾದೇಶ್ವರ : ಯಾರು ಬೇಕಾಗಿತ್ತು?

ಗಂಗಾಧರ : ನೀನೇ ಬೇಕಾಗಿರುವುದು ಈಗ ಸದ್ಯಕ್ಕೆ.

ಮಾದೇಶ್ವರ : ಬಂದಿದ್ದೀನಲ್ಲಾ ಹೇಳು.

ಗಂಗಾಧರ : ನನ್ನ ಊರಿನಲ್ಲಿ ವಾಹನಾರೂಢರಾಗಿ ಹೋಗಬಾರದೆಂದು ಗೊತ್ತಿರಲಿಲ್ಲವೇ?

ಮಾದೇಶ್ವರ : ಇಲ್ಲ.

ಗಂಗಾಧರ : ಈಗಲಾದರೂ ಗೊತ್ತಾಗಲಿಲ್ಲವೆ?

ಮಾದೇಶ್ವರ : ನಡೆಯಲಿಕ್ಕಾಗದಿದ್ದರೆ ಏನು ಮಾಡುವುದು?

ಗಂಗಾಧರ : ಅಯ್ಯಾ ಮಾನಗೆಟ್ಟ ಮುನಿಯೇ ನೀನಾರು?

ಮಾದೇಶ್ವರ : ಯಾರಾವರೇನು? ಅದನ್ನೆಲ್ಲಾ ಕಟ್ಟಿಕೊಂಡು ನಿನಗೇನಾಗಬೇಕಿತ್ತು?

ಗಂಗಾಧರ : ಎಲೈ ಗರ್ವಿಷ್ಠ. ಅಹಂಕಾರದ ಮಾತುಗಳನ್ನು ಯಾರ ಮುಂದೆ ಆಡುತ್ತಿರುವೆ.?

ಮಾದೇಶ್ವರ : ಮಾತಿಗೆ ಪ್ರತ್ಯುತ್ತರಕೊಟ್ಟೆ ಅಷ್ಟೆ.

ಗಂಗಾಧರ : ನಾನಾರೆಂದು ಬಲ್ಲೆಯೋ?

ಮಾದೇಶ್ವರ : ನೀನಾರೆಂದು ಬಲ್ಲೆ.

ಗಂಗಾಧರ : ಏನಯ್ಯಾ ನೀನು ಬಲ್ಲದ್ದು?

ಮಾದೇಶ್ವರ : ಜನ್ಮಾಂತರ ರಕ್ತಗತವಾಗಿ ಬಂದಂಥ ನಿನ್ನ ಗರ್ವ ತೆಗೆಯುವುದನ್ನು.

ಗಂಗಾಧರ : ನೀನು ಹೇಳುತ್ತಿರುವುದನ್ನು ನಾನು ಚೆನ್ನಾಗಿ ಬಲ್ಲೆ.

ಮಾದೇಶ್ವರ : ಈಗ ನನ್ನ ತಪ್ಪೇನು? ನಾನು ಕಣ್ಣಿಗೆ ಮಣ್ಣೆರಚಿದ ಪ್ರಸಂಗವಾದರೂ ಏನು?

ಗಂಗಾಧರ : ಈಗ ನೀನು ಕೆಳಗಿಳಿದು ಶರಣಾಗತನಾಗಿ ಬೇಡಿಕೋ.

ಮಾದೇಶ್ವರ : ಇಳಿಯುವ ಅವಶ್ಯಕತೆಯಿಲ್ಲ.

ಗಂಗಾಧರ : ನಮ್ಮೂರಿನಲ್ಲಿ ವಾಹನಾರೂಢನಾಗಿ ಬರಬಾರದು. ಇಳಿ, ಕಾಲ್ನಡಿಗೆಯಲ್ಲೇ ಬಂದು ನನಗ ಮರ್ಯಾದೆ ಕೊಟ್ಟು ತೆರಳಬೇಕು.

ಮಾದೇಶ್ವರ : ಇನ್ನೇನು?

ಗಂಗಾಧರ : ಈ ನನ್ನ ಕರ್ನಾಟಕಪುರಿಯಲ್ಲಿ ಯಾರೂ ಎತ್ತು, ಕುದುರೆ, ಆನೆ, ಯಾವ ವಾಹನಗಳ ಮೇಲೂ ಹೋಗಬಾರದು.

ಮಾದೇಶ್ವರ : ನೋಡು ಕಾಲು ನೋವಾಗಿದೆ. ಅದಕ್ಕೆ ವಾಹನಾರೂಢರಾಗಿ ಬರಬೇಕಾಯಿತು.

ಗಂಗಾಧರ : ಅದನ್ನೆಲ್ಲಾ ಕಟ್ಟಿಕೊಂಡು ನಿನಗೇನು? ಮಾತು ಮೀರಿದರೆ ಬಡಸನ್ಯಾಸಿ ಮೃತ್ಯು ದೇವತೆಯು ಯಾವಾಗಲೂ ನಿನ್ನನ್ನೇ ನಿರೀಕ್ಷಿಸುತ್ತಾ ಸಮೀಪಿಸುತ್ತಿರುವುದೆಂದು ತಿಳಿ.

ಮಾದೇಶ್ವರ : (ನಗುತ್ತಾ) ಹ್ಹೂಂ... ಏನು? ನನಗೆ ಮೃತ್ಯುದೇವತೆ ಕಾದಿರುವುದೇ? ಎಲ್ಲವನ್ನೂ ಕಣ್ಣಾರೆಯೆ ನೋಡುತ್ತಿರುವೆ. ಕಾಲನ ಪಾಶವನ್ನೇ ಹರಿಹರಿಸಿ ಪರಂಜ್ಯೋತಿ ಸ್ವರೂಪವಾಗಿ ಬೆಳಗುವ ಪರಾತ್ಪರ ವಸ್ತುವಿಗೆ ಮೃತ್ಯು ಇನ್ನೆಲ್ಲಿ ಉಂಟು? ಮೂರ್ಖ, ಇದು ಮುಂದಲೆಯ ಮುನ್ನೋಟದ ನಶ್ವರದ ಮಾತು.

ಗಂಗಾಧರ : ನನ್ನ ಮುಂದೆ ವೇಷ ಮರೆಸಿಕೊಂಡು ಬಂದು ಪರಂಜ್ಯೋತಿ ಸ್ವರೂಪನೆಂದು ಹೇಳಿಕೊಳ್ಳುವೆಯಾ, ಮಜ್ಜಾ

ಮಾದೇಶ್ವರ : ಅಯ್ಯಾ ನಿನ್ನಂಥ ಮೂರ್ಖ ಮಾನವರು ವಿಷಲೋಪ ಭೋಗಗಳೆಂಬ ಕಾಡ್ಗಿಚ್ಚಿನಲ್ಲಿ ಬೆಂದು ಅಹಂಕಾರ, ದರ್ಪ, ಅಭಿಮಾನ ಗಳಿಂದ ನಾನೇ ಸಾರ್ವಭೌಮನೆಂದು ಮೆರೆಯುತ್ತಿರುವ ಗರ್ವವನ್ನೂ ಮುರಿಯಲಿಕ್ಕೋಸ್ಕರ ನಾನು ಬಂದಿರುವುದು.

ಗಂಗಾಧರ : (ವಿಚಿತ್ರವಾಗಿ ನಗುತ್ತಾ) ನನ್ನನ್ನೇ ಮರ್ಧಿಸುವ ಸಾಮರ್ಥ್ಯ ನಿನಗೆ ಇದೆ ಎಂದು ಹೇಳುತ್ತಿರುವುದು ಬರೇ ಹುಚ್ಚು. ಅಣಿಮಾ,ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶತ್ವಗಳೆಂಬ ಅಷ್ಟ ಸಿದ್ಧಿಗಳನ್ನು ಪಡೆದಿರುವೆ ಎಂಬುದು ಜ್ಞಾಪಕವಿರಲಿ. ಏ... ಬಡ

ಮಾದೇಶ್ವರ : ಹುಚ್ಚು... ಹುಚ್ಚೆಂದು ನುಡಿಯುವ ಮೂರ್ಖನಿಗೆ ಹುಚ್ಚು. ದೇಹದ ಸುಖಕ್ಕೋಸ್ಕರ ದೀರ್ಘಕಾಲದ ಸುಖವನ್ನು ಕಳೆದುಕೊಳ್ಳುವ ಹುಚ್ಚರಿಗೆ ಕಳ್ಳರಿಗೆ ಹುಚ್ಚು. ಯಥಾ ಯತಿಯ ರೂಪದಲ್ಲಿರೂ ನಿನ್ನ ಮನದ ಹಂಬಲವನ್ನು ಬಿಟ್ಟಿಲ್ಲ. ನನಗೆ ಹುಚ್ಚೋ ನಿನಗೇ ಹುಚ್ಚೋ ಯೋಚನೆ ಮಾಡಿ ನೋಡು ಗಂಗಾಧರ.

ಗಂಗಾಧರ : ಅಯ್ಯಾ ಶರಣಾಗತರನ್ನೂ ಬೇಡುವೆಯೋ ಸುಮ್ಮನೆ ತರ್ಕದಲ್ಲಿ ಕಾಲ ಕಳೆಯುವೆಯೋ, ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಹೊಂದಲು ಯತ್ನಿಸಿ ನನ್ನಲ್ಲಿ ಸಂಪೂರ್ಣ ಕ್ಷಮಾಪಣೆ ಬೇಡು.

ಮಾದೇಶ್ವರ : ಕ್ಷಣಿಕವಾದ ದೇಹಕ್ಕೆ ಶರಣಾಗತಿ, ಈ ದೇಹಕ್ಕೆ ಸಂಪತ್ತು ಗಾಳಿಗೊಡ್ಡಿದ ಶಿಖಿಯಂತೆ ನಶ್ವರವಾದುದು. ಇದಕ್ಕೇಕೆ ಶರಣಾಗತಿ?

ಗಂಗಾಧರ : ನಿನ್ನ ಹೆಸರು?

ಮಾದೇಶ್ವರ : ಮಾದಪ್ಪ ಅಂತ ಕರೀತಾರೆ.

ಗಂಗಾಧರ : ಕೈಲಾಸದಿಂದ ಇಳಿದು ಬಂದ ಪರಶಿವನೋ.

ಮಾದೇಶ್ವರ : ನೀನು?

ಗಂಗಾಧರ : ಮಹಾ ಶಕ್ತಿಗಾರ ಗಂಗಾಧರ.

ಮಾದೇಶ್ವರ : ನೀನು ಭೂಲೋಕದಿಂದ ಉದ್ಭವಿಸಿದ ಪರಶಿವನೋ, ನಿನ್ನ ಪೌರುಷ ಕೀರನ ಮುಂದೆ ಹಾವಿನಂತೆ, ಹುಲಿಯಯ ಮುಂದಿನ ನರಿಯಂತೆ, ಮಾನವರ ಮುಂದಿನ ಕೀಟದಂತೆ, ಬೆಕ್ಕಿನ ಮುಂದಿನ ಇಲಿಯಂತೆ, ಸಿಂಗದ ಮುಂದಿನ ಸೀಳ್ನಾಯಿಯ ಚೆನ್ನಾಟದಂತೆ ನಿನ್ನ ಅಹಂಕಾರದ ಮಾತುಗಳು ಅಷ್ಟೇ.

ಗಂಗಾಧರ : ಮುಚ್ಚುಬಾಯಿ ಬಡ ಜಂಗಮಯ್ಯಾ. ಈಗ ನನಗೆ ಬೇಕಾದದ್ದು ಶರಣಾಗತಿ.

ಮಾದೇಶ್ವರ : ನೀನು ಹೇಳುವುದು ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ. ನಾನು ಇದನ್ನು ಒಪ್ಪುವ ಸನ್ಯಾಸಿ ಅಂತ ಯಾವ ಕಾಲಕ್ಕೂ ತಿಳೀಬೇಡ.

ಗಂಗಾಧರ : ನಿನಗೆ ಸರಿಯಾಗಿ ಮಾಡುತ್ತೇನೆ ನೋಡು.

ಮಾದೇಶ್ವರ : ನಿನ್ನ ಅಹಂಕಾರಕ್ಕೆ ಇಕೋ ಶಾಪ, ಇಂದಿನಿಂದ ನೀನು ಘಟ ಸರ್ಪನಾಗು...

(ಘಟಸರ್ಪವಾಗುತ್ತಿರಲು ಗಂಗಾಧರನ ಧ್ವನಿ ದೀನ ದಯಾಳು ರಕ್ಷಿಸು, ರಕ್ಷಿಸು... ಎನ್ನುವುದು.)

ಗಂಗಾಧರ : ಅಷ್ಟವಿಭೂತಿ ಸಂಪನ್ನನಾದ ಹರನೇ, ಕರುಣೆ ತೋರಿ ನನ್ನ ಹಿಂದಿನ ರೂಪು ಕರುಣಿಸು ದೇವಾ.

ಮಾದೇಶ್ವರ : ಗಂಗಾಧರಾ, ಇಂದಿನಿಂದಲಾದರೂ ಸುಮಾರ್ಗವನ್ನು ಹಿಡಿ. ಇದು ನಿನಗೆ ಅನುಭವಾಮೃತ. ಸದ್ಭಕ್ತನಾಗಿ ಬಾಳಿ ಬದುಕು. ಹೀಗೆ ಹಲವು ಮಹಾತ್ಮರು ದುಃಖಕ್ಕೀಡಾಗಿದ್ದಾರೆ. ಹಿಂದೆ ರೇಣುಕಾಚಾರ್ಯರು ಗೋರಕ್ಷನು ಮನೆಗೆ ಬಂದಾಗ ಕೈ ಕತ್ತರಿಸುವ ಪ್ರಾಯಶ್ಚಿತ್ತ ಕೊಟ್ಟರು. ಶಿವಯೋಗಿಗಳ ಸರಸ ಕಾಳಿಂಗ ಸರ್ಪನಲ್ಲಿನ ಸರಸ, ಬೂದಿ ಮುಚ್ಚಿದ ಕೆಂಡದೊಡನೆ ಆಟ. ಕೊಟ್ಟ ಶಾಪ ಹಿಂದಕ್ಕೆ ತೆಗೆದುಕೊಳ್ಳುವುದಿಲ್ಲ. ಇನ್ನಾದರೂ ಸರಿಯಾಗಿ ನಡೆದುಕೋ...

ಗಂಗಾಧರ : ಮಾದಪ್ಪಾ, ಮಾದೇಶ್ವರಾ

(ಕೂಗುತ್ತಿರಲು ಹೊರಡುವರು. ಸರ್ಪವಾಗಿ ಹರಿದು ಗಂಗಾಧರ ಮಾದೇಶ್ವರರೆಡೆಗೆ ಹೊರಡುವುದು)

(ಹತ್ತಿರದಲ್ಲಿ ನಿಂತು ನೋಡುತ್ತಿದ್ದ ಸಂಗಪ್ಪ ತನ್ನಲ್ಲೇ)

ಸಂಗಪ್ಪ : ಆಹಾ... ಎಂಥ ಕೆಲಸ ಆಯ್ತು. ಈ ರೀತಿ ಹಾವಾಗುವ ಹಾಗೆ ಮಾಡಬೇಕಾದ್ರೆ ಇವರು ಸಾಮಾನ್ಯ ಪುರುಷರೇನಲ್ಲ. ಸಾಕ್ಷಾತ್ ಪರ ಮೇಶ್ವರನ ಅವತಾರವೇ ಇರಬೇಕು. ಆಬ್ಬಾ ಅಬ್ಬಾ... ಎಂಥ ಘಾಟಿ ಹಾವಾಗಿ ಹೋದ ಆತ. ಇವರ ಜೊತೆ ಸೇರಿ ಶಿಷ್ಯ ವೃತ್ತಿಯನ್ನು ಅವಲಂಬಿಸುವುದೇ ಒಂದು ಮಾರ್ಗ. ಅದರಿಂದಲೇ ನನ್ನ ಜೀವನ ಸಾರ್ಥಕ. ಹೋಗಿ ಅವರಲ್ಲಿ ಶರಣಾಗತನಾಗುತ್ತೇನೆ.

(ಎನ್ನುತ್ತಾ ಮಾದೇಶ್ವರರ ಬಳಿಗೆ ಹೊರಡುತ್ತಾನೆ)

ಸಂಗಪ್ಪ : ಗುರುವೇ ಅಡ್ಡ ಬಿದ್ದೆ.

ಮಾದೇಶ್ವರ : ಯಾರು?

ಸಂಗಪ್ಪ : ನನ್ನ ಹೆಸರು ಸಂಗಪ್ಪ ಅಂತ ಬುದ್ಧಿ. ನಾನು ಸಂಸಾರ ತ್ಯಜಿಸಿ ಈಗ ಸನ್ಯಾಸಾಶ್ರಮ ವಹಿಸಿ ಎಲ್ಲಾದ್ರೂ ತಪಸ್ಸು ಮಾಡಿ ಮೋಕ್ಷಪಡೆಯಬೇಕು

ಅನ್ನೋ ಆಸೆಯಿಂದ ಬರ್ತಾ ಇದ್ದೆ. ಅಷ್ಟಕ್ಕೆ ನೀವೆ ಸಿಕ್ಕಿದ್ರಿ, ತಮ್ಮ ಶಿಷ್ಯತ್ವ ಸ್ವೀಕರಿಸಬೇಕು ಅಂತ ಆಸೆ ಆಗ್ತಾ ಇದೆ ಅಂದಹಾಗೆ ತಮ್ಮ ಹೆಸರೇನು ಬುದ್ಧಿ?

ಮಾದೇಶ್ವರ : ಮಾದಪ್ಪಾ ಎಂದು.

ಸಂಗಪ್ಪ : ಗುರು ಮಲ್ಲಿಕಾರ್ಜುನಾ... ಶರಣು ಶರಣಾರ್ತಿ... ಮಹಾದೇವಾ....

ಮಾದೇಶ್ವರ : ಮಂಗಳವಾಗಲಿ.

ಸಂಗಪ್ಪ : ತಮ್ಮ ಶಿಷ್ಯನಾಗಲು ಬಯಸಿ ಬಂದಿರುವ ನನ್ನನ್ನು ಕೊನೆಗಣ್ಣಿನಿಂದ ನೋಡಬೇಡಿ.

ಮಾದೇಶ್ವರ : ಶತಕೋಟಿ ಲಿಂಗಪೂಜೆಯ ಸುಕೃತ ಫಲದಿಂದ ನನಗೀ ಪುಣ್ಯ ಲಭಿಸಿದೆ ಸಂಗಪ್ಪಾ.

ಸಂಗಪ್ಪ : ನಾನು ಸಂಪೂರ್ಣವಾಗಿ ನಿಮ್ಮನ್ನೇ ನಂಬಿ ಬರುವೆ. ತಾವು ಹಾಲಿನಲ್ಲಾದರೂ ಅದ್ದಿ ನೀರಿನಲ್ಲಾದರೂ ಅದ್ದಿ.

ಮಾದೇಶ್ವರ : ಇದು ಸಂಪೂರ್ಣ ಶರಣಾಗತನಾಗುವ ಲಕ್ಷಣ ಸಂಗಪ್ಪಾ.

ಸಂಗಪ್ಪ : ಕಮಲಕ್ಕೆ ಬಿದ್ದ ಭ್ರಮರದಂತೆ, ನಾನು ಮಧುರ ವಚನಗಳ ಮಕರಂದಕ್ಕೆ ಬಿದ್ದಿರುವೆ ಗುರುದೇವಾ.

ಮಾದೇಶ್ವರ : ಒಳ್ಳೆಯದು ಬಾ ಸಂಗಪ್ಪ ನನ್ನೊಡನೆ.

ಸಂಗಪ್ಪ : ಪರಮಾನಂದವಾಯಿತು ಬುದ್ಧಿ...

(ಮತ್ತೆ ನಮಸ್ಕರಿಸಿ ನಡೆಯುವನು ಅವರ ಹಿಂದೆ)

ಮಾದೇಶ್ವರ : ಇದೇ ನನ್ನ ಮುಂದಿನ ನೆಲೆಯಾಗುವ ಶ್ರೀಕ್ಷೇತ್ರ ಪ್ರಕೃತಿ ದೇವಿಯು ನನ್ನನ್ನು ಆನಂದಮಯನನ್ನಾಗಿ ಮಾಡಿರುವಳು. ನನ್ನ ಶಾಂತ ಚಿತ್ತವು ಶಿವಲಿಂಗದಲ್ಲಿ ನೆಲೆಯಾಗಿ ತಪವೆಸಗಲು ಸಹಾಯಕವಾಗಿರುವುದು.

(ದಾರಿಯಲ್ಲಿ ಸಾಗುತ್ತಿರಲು ದೂರದಲ್ಲಿ ಹುಲಿಯನ್ನು ಕಂಡ ಸಂಗಪ್ಪ)

ಸಂಗಪ್ಪ : ಹ್ಞಾಂ... ಗುರು... (ನೆಗೆಯಲು)

ಮಾದೇಶ್ವರ : ಏನು ಸಂಗಪ್ಪಾ?

ಸಂಗಪ್ಪ : ಹುಲಿ... ಹುಲಿ... ಅದನ್ನು ನೋಡ್ತಿದ್ರೆ ಜೀವ ಗಡ ಗಡನೆ ನಡಗ್ತಾ ಇದೆ. ಅದೋ ನೋಡಿ ಭರ‍್ರಂತಾ ಬರ್ತಾ ಇದೆ. (ನಡುಗುತ್ತಾನೆ)

ಮಾದೇಶ್ವರ : (ನಗುತ್ತಾ) ಏನು ಅಷ್ಟು ದೂರದಲ್ಲಿ ನೋಡಿದ್ದಕ್ಕೇ ಹೀಗೆ ಕಟ ಕಟನೆ ನಡುಗ್ತಾ ಇದ್ದೀಯಲ್ಲಾ ಇನ್ನೂ ಹತ್ತಿರ ಬಂದರೆ ಗತಿಯೇನು (ಕೆಳಕ್ಕೆ ಬೀಳುವನು) ಏಳು ಸಂಗಪ್ಪಾ. ಅಂತೂ ನೀನು ಆಶಾವಾದಿ. ನಿನ್ನನ್ನು ಈ ಭವಬಂಧನ ಬಿಟ್ಟಿಲ್ಲ. ನಿಜಕ್ಕೂ ಸಂಸಾರಿ. ಏಳು ಮೇಲೇಳು.

ಸಂಗಪ್ಪ : ಹೌದು ಬುದ್ಧಿ ನಾನು ಪುಕ್ಕಲ ಸಂಸಾರಿ. ಆಶಾಗ್ರಸ್ತ. ನೀವು ಮಹಾನುಭಾವರು. ಅದಕ್ಕೆ ಅವನ್ನು ಧೈರ್ಯದಿಂದ ಕರೀತಿದ್ದೀರಿ.

ಮಾದೇಶ್ವರ : ಶಿವನ ಕೊರಳಿನ ಹಾವಿಗೆ ಗರುಡನ ಭಯವೇ?

ಸಂಗಪ್ಪ : ನಿಮ್ಮ ಉಪದೇಶ ಕಿವಿಗಿಂಪು, ಮನಕ್ಕೆ ತಂಪು ತಂದಿತು ಗುರುದೇವಾ.

ಮಾದೇಶ್ವರ : ಸರಿ ಸರಿ ನಡೆಯಿರಿ ಇನ್ನೂ ನಮ್ಮ ಪಯಣ ಮುಂದಕ್ಕೆ ಸಾಗಲಿ.

(ಬಿಸಿಲ ತಾಪವನ್ನು ಪರಿಹರಿಸಿಕೊಳ್ಳಲು ಸಿಂಗಾನಲ್ಲೂರಿನ ತೋಪಿಗೆ ಬಂದು ಕುಳಿತು ಶಿವಾಧ್ಯಾನದಲ್ಲಿರಲು ಅಲ್ಲಿಗೆ ನಂದಿ ಬರುವುದು)

ಮಾದೇಶ್ವರ : ನಂದೀಶ್ವರಾ ಏಕೆ ಬಂದೆ?

ನಂದಿ : ಗುರುವೇ ನಿಮ್ಮನ್ನು ಬಿಟ್ಟು ನಾನೊಂದು ಕ್ಷಣವೂ ಇರಲಾರೆ ಅಷ್ಟು ದಿನಗಳಿಂದ ನಿಮ್ಮ ದರ್ಶನವಿಲ್ಲದೆ ನೀರು ಆಹಾರಾದಿಗಳನ್ನು ತೊರೆದು ನಿಮ್ಮನ್ನು ಹುಡುಕುತ್ತಾ ಬಂದೆ. ನೀವು ನನ್ನನ್ನು ಬಿಟ್ಟು ಬರಬಾರದಿತ್ತು.

ಮಾದೇಶ್ವರ : ಬಸವಣ್ಣಾ, ನಿನ್ನ ಭಕ್ತಿ ದೊಡ್ಡದು. ಅದಕ್ಕಾಗಿ ನಿನಗೆ ಇಲ್ಲಿ ಮೊದಲ ಪೂಜೆ ಸಲ್ಲಲಿ. ನೀನು ನನ್ನನ್ನು ಇಲ್ಲಿಗೆ ಬಂದು ತಡೆದುದಕ್ಕೆ "ಕಟ್ಟೆ ಬಸಪ್ಪ" ಎಂಬ ಹೆಸರಾಗಲಿ. ನೀನು ಇಲ್ಲೇ ನೆಲೆಯಾಗು. ನಾನಿನ್ನು ಮುಂದೆ ತಪಸ್ಸಿಗೆ ಹೊರಡುತ್ತೇನೆ.

ನಂದಿ : ನಾನು ನಿಮ್ಮ ಜೊತೆ ಬರುತ್ತೇನೆ ಬುದ್ಧಿ. ನಿಮ್ಮನ್ನಗಲಿ ಒಂದು ಕ್ಷಣವೂ ನಾನಿರಲಾರೆ.

ಮಾದೇಶ್ವರ : ಇಲ್ಲ ನೀನು ಇಲ್ಲೇ ಇರಬೇಕು. ಇದು ನನ್ನ ಆಜ್ಞೆ.

ನಂದಿ : ಮಹಾ ಪ್ರಸಾದ ಗುರುವೆ.

(ನಮಸ್ಕರಿಸಿ ಕುಳಿತುಕೊಳ್ಳುವುದು. ಸಂಗಪ್ಪ ಅಚ್ಚರಿಯಿಂದ ಅವರ ಜೊತೆ ನಡೆಯುವನು)

ಮಾದೇಶ್ವರ : ಹ್ಞಾಂ... ಇಲ್ಲಿಗೂ ಗುರುವಿನ ಬೆಟ್ಟದ ಶಿಖರ ಕಾಣುತ್ತಿದೆ. ನನ್ನದು ಇನ್ನೂ ಕೆಳಗಿರಬೇಕು.

(ಕಾಲಲ್ಲಿ ತುಳಿಯಲು ಹಳ್ಳವಾಗುವುದು)

ಇದು ಇಂದಿನಿಂದ "ವಜ್ರಮಲೆ" ಯಾಗಿ ನನ್ನ ತಪಃಸಿದ್ಧಿಯ ಸ್ಥಳವಾಗಲಿ.

ಸಂಗಪ್ಪ : ಆ್ಞ... ಇದೇನು ಅಚ್ಚರಿಯ ಮೇಲೆ ಅಚ್ಚರಿ ನಡೀತಾ ಇದೆ. ಇವರು ಸಾಮಾನ್ಯ ಜಂಗಮರಲ್ಲ, ಸಾಕ್ಷಾತ್ ಈಶ್ವರನ ಅವತಾರವೇ.

ಮಾದೇಶ್ವರ : ಏನು ಸಂಗಪ್ಪಾ... ನಿನ್ನಲ್ಲೇ ಏನೇನೋ ಹೇಳಿಕೊಳ್ಳುತ್ತಿದ್ದೀಯಾ?

ಸಂಗಪ್ಪ : ಯಾರಾದರೂ ನಿಮ್ಮೊಡನೆ ಇದ್ದರೆ ಆಗುವ ಒಂದೊಂದು ಪವಾಡವನ್ನೂ ನೋಡಿ ಅಚ್ಚರಿ ಪಡಬೇಕು. ಮನದ ಒಳಗೂ ಹೊರಗೂ ಹೊಗಳಲೇ

ಬೇಕು.. ಆ ಕೆಲಸವನ್ನೇ ನಾನು ಮಾಡ್ತಾ ಇದ್ದೇನೆ ಅಷ್ಟೇ ಬುದ್ಧಿ. ನಿಮ್ಮ ನಿಮಿಷ ನಿಮಿಷದ ಚರ್ಚೆಗಳನ್ನು ಗಮನಿಸುತ್ತಲೇ ಬರುತ್ತಿದ್ದೇನೆ. ನಿಮ್ಮ ಮಾತುಗಳು ಮಹಿಮೆಗಳು ಅರ್ಥವೇ ಆಗ್ತಾ ಇಲ್ಲ.

ಮಾದೇಶ್ವರ : ನಾನು ಕುಂತೂರು ಬೆಟ್ಟದಿಂದ ಬರ್ತಾ ಇದ್ದೇನೆ. ಅಲ್ಲಿನ ಶಾಂತಮಲ್ಲಿಕಾರ್ಜುನರು ನನಗೆ ನಮಸ್ಕರಿಸಿದರು. ಅದಕ್ಕೆ ಅವರಿಗೆ ನನ್ನ ಮುಖ ಕಾಣಬಾರದೆಂದು ಬರುತ್ತಿದ್ದೇನೆ. ಆ ಪಾಪ ಪರಿಹಾರಕ್ಕೆ ತಲಕಾಡಿನ ಪಂಚಲಿಂಗ ದರ್ಶನ ಮಾಡಿ ಕೊಳ್ಳೇಗಾಲದಲ್ಲಿನ ಮರಡೀಗುಡ್ಡದಲ್ಲಿ ನಿಂತು ನೋಡಿದೆ. ಅಲ್ಲೂ ಅವರ ಬೆಟ್ಟವು ಕಾಣುತ್ತಿರಲು ಸಿಂಗಾನಲ್ಲೂರಿಗೆ ಬಂದೆ. ಅಲ್ಲೂ ಕಾಣಲು ಇಲ್ಲಿಗೆ ಬಂದೆ. ಇಲ್ಲಿಗೂ ಕಾಣುತ್ತಿತ್ತು. ನನ್ನ ಗುರು ಆದಿಗಣೇಶ್ವರರು ಈ ಬೆಟ್ಟದಲ್ಲೇ ತಪಃಸಿದ್ಧಿ ಎಂದುದರಿಂದ ವಜ್ರಮಲೆ ಮಾಡಿದೆ. ಇಲ್ಲಿ ಇನ್ನು ನೆಮ್ಮದಿಯಿಂದ ತಪಗೈಯುವೆನು. ನೀವು ನನ್ನೊಡನೆ ಸಹಕರಿಸಬೇಕು.

ಸಂಗಪ್ಪ : ಮಹಾ ಪ್ರಸಾದ ಗುರು.

ಮಾದೇಶ್ವರ : ಹೋಗೋಣ... ನಡೆಯಿರಿ. ಬಿಸಿಲು ಹೆಚ್ಚೆನ್ನಿಸುತ್ತದೆ ಅಲ್ಲವೇ?

ಸಂಗಪ್ಪ : ಅದಕ್ಕೇನಂತೆ ಅಗತ್ಯವಾಗಿ, ಇಲ್ಲಿ ಸ್ವಲ್ಪ ಸುಧಾರಿಸಿಕೊಳ್ಳ ಬಹುದಲ್ಲಾ

ಮಾದೇಶ್ವರ : ಆಗಲಿ.

(ಇಬ್ಬರು ಕುಳಿತುಕೊಳ್ಳುವರು. ಸಂಗಪ್ಪ ಸ್ವಲ್ಪ ಹೊತ್ತಾದ ಮೇಲೆ ಅದ್ಭುತ ಬೆಟ್ಟಗಳನ್ನೆಲ್ಲಾ ನೋಡುತ್ತಿರಲು, ಮಾದೇಶ್ವರರು ಕುಳಿತಿದ್ದ ಸ್ಥಳಕ್ಕೆ ಆನೆಗಳು ಸೊಂಡಲಿನಿಂದ ನೆರಳು ಮಾಡುತ್ತಿದ್ದುದನ್ನು ನೋಡಿ ಅಚ್ಚರಿಯಿಂದ)

ಸಂಗಪ್ಪ : ಹುಲಿ ಮೈಮೆ ಆಯ್ತಿದ್ದಾಗೆ ಆನೆಗಳು ಅಬ್ಬಾ... ಪಾಪ ಸ್ವಾಮಿಗೆ ಬಿಸಿಲು ಅಂತಾ ಸೊಂಡಲಿನಿಂದಲೇ ನೆರಳು ಮಾಡ್ತಾ ಅವೆಯಲ್ಲಾ.

ಮಾದೇಶ್ವರ : ಹೆದರಕೊಳ್ಳಬೇಡ ಬಾ ಸಂಗಪ್ಪಾ. ಬಾ...

(ಎನ್ನಲು ಮೆಲ್ಲ ಮೆಲ್ಲನೆ ಅಡಿ ಇಡುತ್ತಾ ಬರುವನು. ಮಾದೇಶ್ವರರು ಎದ್ದು ಮೈದಡವಿ ಆನೆಗಳನ್ನು ಆಶೀರ್ವದಿಸುತ್ತಾರೆ)

ಮಾದೇಶ್ವರ : ಎಲೈ ಗಜಗಳೇ, ನೀವು ಈ ಸ್ಥಳದಲ್ಲಿ ನನಗಾಗಿ ಬಂದು ನೆರಳಿತ್ತುದಕ್ಕಾಗಿ ಈ ಸ್ಥಳವು ಇನ್ನು ಮೇಲೆ "ಆನೆಯ ತಲೆ ದಿಂಬು" ಎಂದು ಖ್ಯಾತಿ ಪಡೆಯಲಿ.

(ಆನೆಗಳು ಸೊಂಡಲಿನಿಂದ ಹೂವನ್ನು ಎರಚುವುವು. ಕೆಳಗೆ ಕುಳಿತುಕೊಳ್ಳಲು ಮಾದೇಶ್ವರರು ಅದರ ಮೇಲೆ ಕುಳಿತು ಹೊರಡುವರು.)

ಮಾದಪ್ಪ : ಬಾ ಸಂಗಪ್ಪಾ... ನೀನೂ...

ಸಂಗಪ್ಪಾ : ಇಲ್ಲ ಬುದ್ಧಿ. ನಾನು ನಡೆದೇ ಬರುತ್ತೇನೆ.

(ಮುಂದುವರೆಯುವರು)

(ಬಿಲ್ಲಯ್ಯ ಕಾರಯ್ಯ ಇಬ್ಬರೂ ದೂರದಲ್ಲಿ ಕುಳಿತು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಲ್ಲಿ ಬಂದು ನಮಸ್ಕರಿಸಿ ಕೈಕಟ್ಟಿ ನಿಂತರು)

ಮಾದೇಶ್ವರ : ಯಾರು ನೀವು?

ಕಾರಯ್ಯ : ನಾನು ಈ ಕಾಡಿನ ಯಜಮಾನ ಬುದ್ಧಿ. ನನ್ನ ಎಸ್ರು ಕಾರಯ್ಯಾ ಅಂತ. ಇವನು ಬಿಲ್ಲಯ್ಯಾ ಅಂತ ನನ್ನ ತಮ್ಮ. ನಾವು ಸೋಲಿಗರ ಜಾತಿಗೆ ಸೇರಿದವರು. ತಮ್ಮದು... ನನ್ನೊಡ್ಯಾ.

ಸಂಗಪ್ಪ : ಉತ್ತರದೇಶದಿಂದ ಬಂದ ಮಾದಪ್ಪ ಇವರು. ನಾನು ಸಂಗಪ್ಪ ಅಂತ. ಇವರ ಮಹಿಮೆ ನೋಡಿ ಇವರ ಶಿಷ್ಯನಾಗಿ ಬಂದಿದ್ದೀನಿ ಇವ್ರು ಇಲ್ಲೇ ಇದ್ದು ತಪಸ್ಸು ಮಾಡಬೇಕು ಅಂತ ಇದ್ದಾರೆ.

ಕಾರಯ್ಯ : ಅಗತ್ಯವಾಗಿ ಆಗ್ಬೋದು ಬುದ್ಧಿ.

ಬಿಲ್ಲಯ್ಯ : ನಿಮ್ಮ ಘನ ಸ್ವಾವೆ ಮಾಡ್ಕಂಡು ಹೋಗ್ತೀವಿ.

ಕಾರಯ್ಯಾ : ಹಾಲು, ಹಣ್ಣು, ಜೇನು, ಸೊಪ್ಪು, ತರಕಾರಿ ತಂದೊಪ್ಪಿಸ್ತೀವಿ.

ಮಾದಪ್ಪ : ಅದಕ್ಕೇನಂತೆ ಆಗಲಿ. ನೀವು ಇಲ್ಲಿ ಏನು ಮಾಡ್ತಿದ್ದೀರಿ?

ಕಾರಯ್ಯ : ಗೆಡ್ಡೆ ಗೆಣಸು ತಿನ್ಕಂಡು ಕಾಡೆಮ್ಮೆ ಆಲ್ಕುಡ್ಕಂಡು ಬೇಟೆ ಆಡ್ಕಂಡು ಜೀವನ ಮಾಡ್ತೀವಿ ಬುದ್ಧಿ. ಜೇನು ಕೀಳೋದು. ಕಸುಬು.

ಮಾದಪ್ಪ : ಸ್ವಲ್ಪ ಆರಂಭ ಮಾಡಿ ಭತ್ತ, ರಾಗಿ, ದ್ವಿದಳ ಧಾನ್ಯಗಳನ್ನು ಬೆಳೀರಿ. ನೀವೂ ಎಲ್ಲರಂತೆ ಮನುಷ್ಯರಾಗಿ. ಪ್ರಾಣಿಹಿಂಸೆ ಮಾಡ್ದೆ, ಮಾಂಸ ಮದ್ಯ ಸೇವಿಸದೆ ಹೋದ್ರೆ ನಾವು ನಿಮ್ಮಿಂದ ಸೇವೆ ತೆಗೆದು ಕೊಳ್ತೀವೆ. ಇಲ್ದೇಹೋದ್ರೆ ಇಲ್ಲ.

ಬಿಲ್ಲಯ್ಯ : ಅದ್ಕೇನಂತೆ ಆಗ್ಲಿ ಬುದ್ಧಿ. ತಾವು ಹೇಳ್ದಾಗೆ ಕೇಳ್ತೀವಿ ಮಾಡ್ತೀವಿ.

ಮಾದೇಶ್ವರ : ಒಳ್ಳೆಯದು ನಡೆಯಿರಿ.

ಬಿಲ್ಲಯ್ಯ : ತಮಗೆ ಬೇಕಾದ ಒಂದು ಗುಡಿಸಲು ಕಟ್ಟಸ್ಕೊಡ್ತೀವಿ ಬನ್ನಿ. ನಿಮ್ಮನ್ನ ಕಂಡು ನಮಗೆ ಬಹಳ ಸಂತೋಷವಾಯ್ತು. ನಿಮಗಾಗಿ ನಾವು ಪ್ರಾಣಕೊಡಲಿಕ್ಕೂ ಸಿದ್ಧ.

ಸಂಗಪ್ಪ : ಅಗತ್ಯವಾಗಿ... ನಡೆಯಿರಿ. ನಿಮಗೆ ನಿಮ್ಮ ಗುರುಗಳ ಕಂಡ್ರೆ ತುಂಬಾ ಪ್ರೀತೀನಾ?

ಬಿಲ್ಲಯ್ಯ : ಹೌದು

ಕಾರಯ್ಯ : ನಿಮ್ಮೊಡನೇ ಇರಬೇಕು ಅನ್ನಿಸ್ತದೆ.

ಮಾದಪ್ಪ : ನಮ್ಮೊಡನೆ ಇರಬೇಕು ಅಂದರೆ ನೀವು ಪರಿಶುದ್ಧರಾಗಬೇಕು. ದೀಕ್ಷೆಯನ್ನು ಪಡೆಯಬೇಕು.

ಕಾರಯ್ಯ : ಆಗ್ಲೀ ಬುದ್ಧಿ.

ಬಿಲ್ಲಯ್ಯ : ದೀಕ್ಷೆ ಅಂದ್ರೇನು ನನ್ನೊಡ್ಯಾ.

ಮಾದಪ್ಪ : ಎಲ್ಲವನ್ನು ತಿಳಿಸುತ್ತೇವೆ ಬನ್ನಿ. ದೀಕ್ಷೆಯಿಂದ ಮೋಕ್ಷ. ಇಷ್ಟಲಿಂಗವನ್ನು ಕೊರಳಲ್ಲಿ ಕಟ್ಟಿಕೊಂಡು ನಿಷ್ಠೆಯಿಂದ ಪೂಜಿಸುವುದರಿಂದ ಒಳ್ಳೆಯದಾಗುತ್ತದೆ. ಆ ಪೂಜೆಗೂ ಗುರುಗಳಿಂದ ದೀಕ್ಷೆ ಪಡೆಯಬೇಕಾಗುತ್ತದೆ. ಅದನ್ನು ಸದ್ಯದಲ್ಲೇ ನೆರವೇರಿಸಿಕೊಡುತ್ತೇವೆ. ನೀವು ಮನಃಪೂರ್ವಕವಾಗಿ ಒಪ್ಪಿದರೆ.

ಕಾರಯ್ಯ : ಆಗ್ಲಿ ಮಾದಪ್ಪ. ನೀವು ಹೇಳಿದ ಹಾಗೇ ನಾವು ಕೇಳ್ತೇವೆ ಅಂತ ಮನಃಪೂರ್ವಕವಾಗಿ ಒಪ್ಪಿದ್ದೇವೆ. ಈವತ್ತಿಂದ ಪ್ರಾಣವಧೆ ಮಾಡಕ್ಕಿಲ್ಲ, ಮಾಂಸ ತಿನ್ನಕ್ಕಿಲ್ಲ, ಮದ್ಯ ಕುಡ್ಯಕ್ಕಿಲ್ಲ, ನೀವೇಳ್ದಾಗೆ ದೀಕ್ಷೇನೋ ಏನೋ ಮಾಡಿಸ್ಕೋಳ್ತೀಮಿ. ದೇವರ ಪೂಜೆ ಜಿನಾ ಮಾಡ್ತೀವಿ ನನ್ನೊಡ್ಯಾ. ನೀವು ದೇವರು ಬಂದ ಹಾಗೆ ನಮ್ಮ ಕಾಡಿಗೆ ಬಂದ್ರಿ. ನಿಮ್ಮಗಳನ್ನು ನೋಡಿ ನಮಗೆ ಬಹಳ ಸಂತೋಷವಾಯ್ತು. ನಾವು ನಿಮ್ಮ ಸೇವೆ ಮಾಡಕ್ಕೆ ಸದಾ ಸಿದ್ಧವಾಗಿದ್ದೇವೆ. ನೀವು ಬನ್ನಿ ನಮ್ಮ ಗುಡಸಲಿಗೆ, ವಸಿ ಹಾಲು ಕೊಡ್ತೀವಿ.

ಮಾದಪ್ಪ : ಆಗ್ಲಿ...

ಕಾರಯ್ಯ : ತಾವು ಇಲ್ಲೇ ಇದ್ದುಬಿಡ್ತೀರಾ ಬುದ್ಧಿ.

ಮಾದಪ್ಪ : ಹೌದು ಈ ವಜ್ರಮಲೆಯಲ್ಲೇ ನಾನು ತಪಸ್ಸು ಮಾಡಬೇಕೆಂದಿದ್ದೇನೆ. ನೀವುಗಳು ಸಹಾಯ ಮಾಡಬೇಕು. ಅಂತ ಅದೇ ಹೇಳಿದ್ದು.

ಬಿಲ್ಲಯ್ಯ : ತಮ್ಮಂಥ ದೊಡ್ಡ ಬುದ್ಧಿಯವರ ಸೇವೆ ಮಾಡಕ್ಕೂ ಪುಣ್ಯ ಬೇಕಲ್ಲಾ. ಅಗತ್ಯವಾಗಿ ಆಗ್ಲಿ ಬುದ್ಧಿ ದಯಮಾಡಿಸಿ.

ಸಂಗಪ್ಪ : ನಡೆಯಿರಿ ಹೋಗೋಣ.

(ಎಲ್ಲರೂ ಹೊರಡುವರು)

(ಕಾಡಿನಲ್ಲಿ ಮಾದೇಶ್ವರರು ಬರುತ್ತಿರಲು ಸಂಗಪ್ಪನವರು ದಾರಿಯಲ್ಲಿ ಸಿಗುತ್ತಾರೆ. ಸಂಗಪ್ಪನವರು ನಮಸ್ಕರಿಸಿ)

ಮಾದೇಶ್ವರ : ಏನು ಸಂಗಪ್ಪ ಸಮಾಚಾರ?

ಸಂಗಪ್ಪ : ಸಮಾಚಾರವಿಲ್ಲದೆ ಇರುತ್ಯೇ ಬುದ್ಧಿ... ಇದೆ

ಮಾದೇಶ್ವರ : ಏನು ಹೇಳಬಾರದೆ?

ಸಂಗಪ್ಪ : ಈ ಗುಯಲ್ಲೇ ಚೋಳಪರ್ವತದ ಭಾಗದಲ್ಲಿ ಒಬ್ಬ ಶ್ರವಣ ಅನ್ನೋ ಕ್ರೂರಿ ಇದ್ದಾನಂತೆ. ಜನರಿಗೂ, ದೇವಾದಿದೇವತೆಗಳಿಗೂ ಹಿಂಸೆಯನ್ನು ಕೊಡುತ್ತಿದ್ದಾನೆ. ಅನೇಕರು ಆತನ ದೆಸೆಯಿಂದ ನರಳುತ್ತಿದ್ದಾರೆ. ಅದನ್ನು ಸ್ವಲ್ಪ ತಾವು ನೋಡಲೇಬೇಕು.

ಮಾದೇಶ್ವರ : ದೇವಾದಿದೇವತೆಗಳನ್ನು ಸೆರೆ ಹಿಡಿದು ಮೆರೆಯುತ್ತಿದ್ದಾನೆ ಎಂದ ಮೇಲೆ ಆತನ ಶಕ್ತಿ ಎಷ್ಟಿರಬಹುದು?

ಸಂಗಪ್ಪ : ಅಷ್ಟಿರುವುದರಿಂದಲೇ ಆತ ಹಾಗೆ ಮೆರೆಯುತ್ತಿದ್ದಾನೆ ಬುದ್ಧಿ.

ಮಾದೇಶ್ವರ : ತಿಳಿದ ವಿಷಯವನ್ನೇಕೆ ವಿಸ್ತರಿಸಬಾರದು?

ಸಂಗಪ್ಪ : ಶ್ರವಣನೆಂಬ ಈ ರಾಕ್ಷಸನು ಈಶ್ವರನನ್ನು ಕುರಿತು ಘೋರ ತಪವನ್ನು ಮಾಡಿದನಂತೆ. ಈಶ್ವರನು ಅವನ ತಪಸ್ಸಿಗೆ ಮೆಚ್ಚಿ, ಏನು ಬೇಕು ಬೇಡಿಕೋ ಎಂದು ಕೇಳಲು, ಆತ ತಾನು ಅಮರನಾಗಬೇಕೆಂದು ಕೇಳಿದನಂತೆ, ಅದಕ್ಕೆ ಈಶ್ವರ ಅದೊಂದು ಬಿಟ್ಟು ಬೇರೆ ಏನಾದ್ರೂ ಕೇಳು ಎನ್ನಲು, ಆತ ಅದೇ ಬೇಕು ಎಂದು ಹಠ ಹಿಡಿದನಂತೆ. ಅದಕ್ಕೆ ಈಶ್ವರ "ಇದು ದೇವತೆಗಳನ್ನು ಬಿಟ್ಟು ಮತ್ಯಾರಿಗೂ ಆಗದು" ಎನ್ನಲು "ಹೋಗಲಿ ಮರಣವಾಗಬೇಕಾದರೂ ನಿಮ್ಮಿಂದಲೇ ಆಗಬೇಕು" ಎಂದು ಕೇಳಿಕೊಂಡ. ಅದಕ್ಕೆ ಒಪ್ಪಿ ಈಶ್ವರ ವರ ಕೊಟ್ಟ. ಅದರ ಜೊತೆಗೆ ಅದ್ಭುತ ಶಕ್ತಿಯನ್ನು ಕರುಣಿಸಿದ. ಅದನ್ನು ಉಪಯೋಗಿಸಿಕೊಂಡು ಈಗ ಮೆರೆಯುತ್ತಿದ್ದಾನೆ. ಆತನ ಸಂಹಾರವಾಗಬೇಕಾದರೆ ನಿಮ್ಮಿಂದಲೇ ಸಾಧ್ಯ. ನಾಳೆಯೇ ಆತನನ್ನು ತೋರಿಸುತ್ತೇನೆ. ಹೋಗೋಣವೇ ಬುದ್ಧಿ.

ಮಾದೇಶ್ವರ : ಅದಕ್ಕೇನಂತೆ ಅಗತ್ಯವಾಗಿ ಹೋಗೋಣ. ಈಶ್ವರ ಕೃಪೆ ಹೇಗಿದೆಯೋ ನೋಡೋಣ.

ಸಂಗಪ್ಪ : ಆಗಲೀ ಬುದ್ಧಿ.

(ಶ್ರವಣನ ಅರಮನೆಗೆ ಮಾದೇಶ್ವರ, ಸಂಗಪ್ಪ ಇಬ್ಬರೂ ಬರುತ್ತಾರೆ. ಅಲ್ಲಿ ನೃತ್ಯ ಸಾಗುತ್ತಿದೆ. ಮೊದಲು ರಂಗನಾಥನನ್ನು ನೋಡಿದಾಗ ಆತ)

ರಂಗನಾಥ : ಮಹಾ ಗುರು.

ಮಾದೇಶ್ವರ : ಯಾರು?

ರಂಗನಾಥ : ನಾನು ರಂಗನಾಥ ಜೋಯಿಸ. ಬಿಳಗಿರಿ ರಂಗನಬೆಟ್ಟದ ಕಡೆಯಿಂದ ಬಂದ ಜೋಯಿಸ. ನಿಮ್ಮನ್ನು ನೋಡಿದ ಕಂಗಳು ಪಾವನವಾಯ್ತು.

ಶ್ರವಣನೇ ನಮ್ಮ ಬಳಲಿಕೆಗೆ ಕಾರಣ. ನೀವು ನಮಗೆ ಸಿಕ್ಕಿದುದು ಒಳ್ಳೆಯದಾಯ್ತು. ತಾವಾರು ಗುರು. ತಮ್ಮ ಪರಿಚಯ ಮಾಡಿಕೊಡಿ.

ಮಾದೇಶ್ವರ : ನನ್ನ ಹೆಸರು ಮಾದಪ್ಪ ಅಂತ. ಇವರು ಸಂಗಪ್ಪ ಅಂತ. ಇವರು ಇಲ್ಲಿನ ವಿಷಯಗಳನ್ನೆಲ್ಲಾ ತಿಳಿಸಿದರು. ನೋಡೋಣವೆಂದೇ ಇಲ್ಲಿಗೆ ಬಂದೆವು.

ರಂಗನಾಥ : ನೀವು ಬಂದುದು ಬಹಳ ಒಳ್ಳೆಯದಕ್ಕೇ ಮಾದಪ್ಪಾ, ನೀವೇ ನಮ್ಮನ್ನು ಕಾಪಾಡಬೇಕು. ನಿಮ್ಮನ್ನು ಕಂಡು ನಮಗೆಲ್ಲಾ ಯಾತ್ರಿಕನಿಗೆ ಹಳ್ಳದ ನೀರು ದೊರೆತಂತಾಯಿತು.

ಮಾದೇಶ್ವರ : ಶಿವನು ಕಷ್ಟ ಸುಖಗಳನ್ನು ಜೊತೆಯಲ್ಲಿ ನಿರ್ಮಿಸಿರುವನು. ಅಂಜಿ ಅಳುಕದೆ ನೀವೆಲ್ಲಾ ಅದಕ್ಕೆ ಸುಸ್ವಾಗತವನ್ನು ಬಯಸಬೇಕು.

ರಂಗನಾಥ : (ಶಾಸ್ತ್ರದ ತಾಳೆಯೋಲೆ ಕಟ್ಟನ್ನು ಬಿಚ್ಚಿ) ಜ್ಯೋತಿಷ್ಯದಿಂದ ಪರಿಶೀಲಿಸಿ ಹೇಳುವುದಾದರೆ ನಿಮ್ಮಿಂದಲೇ ಆತನಿಗೆ ಮರಣ ಸಿದ್ಧವೆಂದು ತೋರುತ್ತದೆ ಗುರು.

ಮಾದೇಶ್ವರ : ಅಷ್ಟೆಲ್ಲಾ ದೊಡ್ಡ ಮಾತಾಗಬಹುದು. ನೋಡೋಣ. ಮುಕ್ತಿ ಮಾರ್ಗಕ್ಕೆ ಎಳೆಯುತ್ತೇನೆ. ಅದಕ್ಕೆ ಜಗ್ಗದಿದ್ದರೆ ಮುಂದೆ ನೋಡೋಣ.

(ಮಾತಾಡುತ್ತಾ ಹೋಗುತ್ತಿರಲು ಆ ಕಡೆಯಿಂದ ಶ್ರವಣನನ್ನು ಜಯ ಘೋಷದೊಂದಿಗೆ ಕರೆತರುತ್ತಾರೆ.)

ಎಲ್ಲರೂ : ರಾಜಾಧಿರಾಜ, ರಾಜ ಪರಮೇಶ್ವರ, ಕವಿರಾಜ ಕುಲತಿಲಕ, ಮಹಾರಾಜ, ಶ್ರವಣ ಮಹಾರಾಜರಿಗೆ ಜೈಪರಾಕ್ ಜೈಪರಾಕ್...

(ಶ್ರವಣನು ಸಿಂಹಾಸನಾರೂಢನಾದಮೇಲೆ ಮಾದೇಶ್ವರ, ಸಂಗಪ್ಪ ಇಬ್ಬರೂ ಬರುತ್ತಿರಲು ಶ್ರವಣ ಅವರನ್ನು ದೂರದಿಂದ ನೋಡಿ)

ಶ್ರವಣ : ಯಾರದು?

ಮಾದೇಶ್ವರ : ನಾನು.

ಶ್ರವಣ : ನೀನು ಎಂಬುದು ನನಗೂ ಗೊತ್ತು. ಆದರೆ ನನಗೆ ಬೇಕಾಗಿರುವುದು ನಿನ್ನ ಹೆಸರ ಪರಿಚಯ, ತಿಳಿಯಿತೇ?

ಸಂಗಪ್ಪ : ಜಿಂಕೆಯಂತೆ ಕಿವಿಗಳು ಚುರುಕಾಗಿವೆ. ಆದ್ರೆ ನಿಮ್ಮ ಗಡಬಿಡಿಯ ಮಾತುಗಳು ಕಿವಿಗಳಿಗೆ ಗುಡುಗುಡು ಅಂದ್ಹೋಯ್ತು.

ಶ್ರವಣ : ಸಾಕು ನಿಲ್ಲಿಸು ನಿನ್ನ ತಲಹರಟೆ?

ಮಾದೇಶ್ವರ : ನಿಮಗೇನು ಬೇಕು ಎಂಬುದೇ ತಿಳಿಯುತ್ತಿಲ್ಲವಲ್ಲ.

ಶ್ರವಣ : ನೀನಾರು?

ಸಂಗಪ್ಪ : ನಾನು ಹುಣಸೇ ನಾರಲ್ಲ, ನನ್ನ ಹೆಸರು ಸಂಗಪ್ಪ. ಇವರ ಹೆಸರು ಮಾದಪ್ಪ.

ಶ್ರವಣ : ಮಾದಾರಿ... ಇತ್ತಬಾ... ಅಲ್ಲೇ ನಿಂತು ಗೊಣಗೊಣ ಅಂತ ಮಾತಾಡಬೇಡ.

ಸಂಗಪ್ಪ : ಈ ಅಹಂಕಾರದ ಮಾತುಗಳು ಸ್ವಲ್ಪ ನಿಲ್ಲಲಿ.

ಶ್ರವಣ : ಅಹಂಕಾರ ನನಗ ಬೇಡವೇ? ನನಗೇನು ಕಮ್ಮಿ?

ಮಾದೇಶ್ವರ : ಬುದ್ಧಿ.

ಶ್ರವಣ : ದೇವಾದಿದೇವತೆಗಳೇ ನನ್ನ ಕೈನಲ್ಲಿರುವಾಗ ನನಗೆ ಬುದ್ಧಿ ಎಷ್ಟಿದೆ ಎಂಬುದನ್ನು ಲೆಕ್ಕ ಹಾಕು.

ಮಾದೇಶ್ವರ : ವಿಪರೀತ ಬುದ್ಧಿ ವಿನಾಶಕ್ಕೆ ಕಾರಣ ಎಂಬುದು ಅರಿವಿರಲಿ.

ಶ್ರವಣ : ಮಾದಾರಿ ನಿನ್ನ ಮಾತು ಸಾಕು, ನನಗೆ ಬೇಕಾದುದನ್ನು ಸ್ವಲ್ಪ ಗಮನವಿಟ್ಟು ಕೇಳು. ನನ್ನ ಕಾಲಿಗೆ ಸರಿಹೊಂದುವ ಒಂದು ಜೊತೆ ಪಾದರಕ್ಷೆಯನ್ನು ಮಾಡಿ ತಾ. ಸರಿಯಾಗಿದ್ದರೆ ಮುಪ್ಪಿಲ್ಲದ ವರವನ್ನು ಕರುಣಿಸುತ್ತೇನೆ. ಇಲ್ಲದಿದ್ದಲ್ಲಿ ಇಲ್ಲಿನ ಕಾರಾಗೃಹದಲ್ಲಿ, ನಿಮ್ಮ ಅಣ್ಣಂದಿರ ಜೊತೆಯಲ್ಲಿ ಸಂತೋಷವಾಗಿರಬಹುದು.

(ವಿಚಿತ್ರವಾಗಿ ನಗುವನು)

ಮಾದೇಶ್ವರ : ಆಗಲಿ...... ಆಗಲಿ...... ಆದರೆ...

ಶ್ರವಣ : ಆದರೇನು?

ಮಾದೇಶ್ವರ : ಇವರನ್ನೆಲ್ಲಾ ಬಿಡಬೇಕು.

ಶ್ರವಣ : (ತುಚ್ಛತೆಯಲ್ಲಿ, ಓಹೋ... ಬಿಚ್ಚಾ...... ಹೇಳ್ದಷ್ಟು ಮಾಡುಹೋಗು.

ಸಂಗಪ್ಪ : ಸ್ವಗತ ನಿನ್ನ ವಿನಾಶ ಹತ್ತಿರ ಬಂದಿರುವಂತೆ ಕಾಣುತ್ತೆ... ಬರ್ತೇನೆ

(ಶ್ರವಣನು ಸಭೆಯಿಂದ ಹೋಗುತ್ತಿರಲು ಘೋಷಣೆ)

(ಕರೀಂದ್ರ ಕಂಠೀರವ, ಮಲ್ಲರವೈರಿ ಮಣೀಂದ್ರ ಕರಿರಾಜ ,ಗಜಕೇಸರಿ, ರಣಕುಂಭ ಕಂಠೀರವಾ ಶ್ರವಣ ಮಹಾರಾಜರಿಗೆ ಬಹುಪರಾಕ್, ಬಹುಪರಾಕ್)

(ದಾರಿಯಲ್ಲಿ ಮಾದೇಶ್ವರರು ಬರುತ್ತಿರಲು)

ರಂಗನಾಥ : ಮಹಾದೇವಾ ಪಾದರಕ್ಷೆಯೇ ಆತನ ವಿನಾಶಕ್ಕೆ ಸಾಧನವೆಂದು ಕಾಣುತ್ತೆ.

ಮಾದೇಶ್ವರ : ಎಲ್ಲರೂ ಪಾದರಕ್ಷೆಗ ಸರಿಯಾದ ಮೂಲಿಕೆಗಳು, ಲೋಹಗಳು ಅರಕನ ಬಯಲಿನಿಂದ ಅರಗು ಇವನ್ನು ತಂದು ಎರಕ ಹೊಯ್ದು ಪಾದರಕ್ಷೆ ತಯಾರಿಸುತ್ತಿರಿ, ನಾನು ಬರುತ್ತೇನೆ.

ರಂಗನಾಥ : ಅಪ್ಪಣೆ ಮಹಾದೇವಾ.

(ಕನಸಿನಿಂದ ಎದ್ದ ಶ್ರವಣನು ಕಣ್ಣು ತೀಡುತ್ತಾ ಕುಳಿತು ಚಿಂತಿಸುತ್ತಾನೆ)

ಶ್ರವಣ : ಎಂಥ ವಿಚಿತ್ರ ಕನಸು? ತಾರೆಗಳುದುರಿದುವು, ಬೆಟ್ಟದ ಕಲ್ಲುಗಳುರುಳಿದುವು, ಎಲೆಗಳುದುರಿದುವು, ಹೂಗಳು ಬಾಡಿ ಉರುಳಿದವು, ಸಮುದ್ರದಿಂದ ನೀರು ನದಿಗೆ ಹೋಗುತ್ತಿತ್ತು. ಮುಂಡೆಯರ ದಂಡು, ಅಬ್ಬ! ಬಲಭುಜ ಕಣ್ಣುಗಳದೆಷ್ಟು ಅದುರುತ್ತಿದ್ದುವು? ಗೂಬೆಗಳ ಕೂಗು, ದೇವರಪೂಜೆ, ಹಾವು ಮುಂಗಸಿಯನ್ನೇ ಕೊಲ್ಲುವುದು. ಎಷ್ಟೊಂದರ ಸಮ್ಮಿಳನ. ಏನು ಅನಿಷ್ಟ... ಕಾದಿದೆಯೋ ಏನೋ ಥೂ...

(ಎಂದು ಎದ್ದು ಆಸ್ಥಾನಕ್ಕೆ ಶ್ರವಣನು ಬರುತ್ತಿರಲು, ಕೋಲಾಹಲ ಯಾವುದೋ ಕಾರ್ಯದಲ್ಲಿ ಸಿದ್ಧರಾಗಿ ಔಷಧ ತಯಾರಿಕೆ ನಡೆಯುತ್ತಿದೆ. ಅದನ್ನುಗಮನಿಸಿ)

ಶ್ರವಣ : ಏನು ನೀವು ಮಾಡುತ್ತಿರುವುದು?

ರಂಗನಾಥ : ಸಿದ್ಧೌಷಧ.

ಶ್ರವಣ : ನಿಮ್ಮೆಲ್ಲರಿಗೂ ಏನು ಬಂದಿದೆ ಸಾವು?

ರಂಗನಾಥ : (ತನ್ನಲ್ಲೇ ಮೆಲ್ಲನೆ) ಏನು ಕೇಡುಗಾಲವೋ, ನಿನ್ನ ಕೊನೆಗಾಲವೋ

(ಶ್ರವಣ ಸಿಂಹಾಸನ ಹತ್ತುತ್ತಿರಲು ಮಾದೇಶ್ವರರು ಬಂದು ಜೋರಾಗಿ "ಶ್ರವಣಾ" ಎಂದು ಕೂಗಲು ಹಿಂತಿರುಗುತ್ತಾ)

ಶ್ರವಣ : ಯಾರದು? ನನ್ನ ರಾಜ್ಯವನ್ನು ಕೆಡಸಲಿಕ್ಕೆ ಬಂದಿರುವವರು. ಹಾಲು ಹರವೆಯ ಮೇಲೆ ಮಜ್ಜಿಗೆ ಇಟ್ಟರೆ ಹೆಪ್ಪಾಗಬಲ್ಲುದೇ? ಪೆಚ್ಚ. "ಒಳ್ಗೇ ಬಿಟ್ಟ ಗುಳ್ಗೇ ಸಿದ್ಧ" ಅಂತಾ ಮಾಡ್ತಿಯಾ, ಏನೇನೋ ಕೆಲಸ ಮಾಡ್ತಾ ಇದ್ದೀಯಾ?

ಮಾದೇಶ್ವರ : ಜನೋಪಕಾರ ಮಾಡಲಿಕ್ಕಲ್ಲವೇ ಈ ದೇಹ ಹುಟ್ಟಿರುವುದು?

ಶ್ರವಣ : ಜನಗಳಿಗೆ ನೀನೇನು ಉಪ್ಪು ಖಾರ ಮಾಡುತ್ತೀಯಾ? ನಿನ್ನನ್ನು ನೀನು ಸರಿಯಾಗಿ ನೋಡ್ಕೋ ಸಾಕು. ಹೆಚ್ಚಿಗೆ ಮಾತಾಡಬೇಡ, ಇಲ್ಲದಿದ್ದರೆ ನಿನ್ನನ್ನು ಜಗಿಯುವೆ. ಎಲ್ಲಿ ನಾನು ಹೇಳಿದ ಪಾವರಕ್ಷೆ.

ಮಾದೇಶ್ವರ : ಅದನ್ನು ಕೊಡುವ ಮೊದಲು ನನ್ನದೊಂದು ಪ್ರಶ್ನೆ.

ಶ್ರವಣ : ನನ್ನನ್ನು ನೀನೇನೂ ಪ್ರಶ್ನೆ ಮಾಡಬೇಕಿಲ್ಲ.

ಮಾದೇಶ್ವರ : ಮಾಡಲೆಂದೇ ಈಗ ನಾನು ಇಲ್ಲಿಗೆ ಮತ್ತೆ ಬಂದಿರುವುದು.

ಶ್ರವಣ : ಅದೇನು ಕೇಳಿಕೋ.

ಮಾದೇಶ್ವರ : ಕೇಳಿಕೊಳ್ಳುವಂಥದ್ದೇನಿಲ್ಲ, ಪ್ರಶ್ನಿಸುತ್ತಿದ್ದೇನೆ.

(ಎಲ್ಲರೂ ಮಾದೇಶ್ವರರ ಮಾತನ್ನು ಕೇಳುತ್ತಾ ಸಂತೋಷದಿಂದ ನಗುತ್ತಾ ತಲೆ ಕುಣಿಸುತ್ತಿರಲು, ಶ್ರವಣ ನೋಡಿ)

ಶ್ರವಣ : ಸಾಕು ನಿಲ್ಲಿಸಿ ನಿಮ್ಮ ಅರೆಯುವುದನ್ನು, ನಗುವುದನ್ನು. ನಿಮಗೆ ಸಾಸಿರುವ ಪರಿಜ್ಞಾನ ಇಲ್ಲವೇನು? ನಿಮ್ಮನ್ನು ಅರೆದು ನುಂಗಿ ಬಿಡುತ್ತೇನೆ. ನಿಲ್ಲಿಸ್ತೀರೋ ಏನು?

(ಎಲ್ಲರೂ ಪೆಚ್ಚರಂತೆ ಮತ್ತೆ ಅರೆಯಲು ಶ್ರವಣ ಕಿಡಿಗಣ್ಣಾಗುತ್ತಾನೆ)

ಮಾದೇಶ್ವರ : ನೀನು ಅರೆದು ಜಗಿದು ನುಂಗುವಾಗ ನಮ್ಮ ಕೈ ಬಾಳೆಹಣ್ಣನ್ನು ತಿನ್ನುತ್ತಿರುತ್ತದೆಂದು ತಿಳ್ಕೊಂಡಿದ್ದೀಯೇನು? ಇವರಿಗೇಕೆ ಕಾರಾಗೃಹವಾಸ ಕೊಟ್ಟಿದ್ದೀಯೆ ಮೊದಲು ಹೇಳು.

ಶ್ರವಣ : ನಿನಗೆ ಇದನ್ನೆಲ್ಲಾ ಕೇಳಲು ಏನು ಹಕ್ಕು?

ಮಾದೇಶ್ವರ : ಇವರನ್ನೆಲ್ಲಾ ಕಾರಾಗೃಹದಲ್ಲಿಡುವ ಹಕ್ಕು ನಿನಗೇನು? ನಮಗೆ ಹಕ್ಕಿರುವುದರಿಂದಲೇ ಕೇಳುವುದು. ಒಳ್ಳೇ ಮಾತಿನಲ್ಲಿ ಹೇಳು. ಇಲ್ಲದಿದ್ದರೇ... (ಹಲ್ಲು ಕಚ್ಚುವರು)

ಶ್ರವಣ : (ನಗುತ್ತಾ) ನೋಡುತ್ತಿರು ಈಗ... ಇಲ್ಲದಿದ್ದರೆ ಏನಾಗುತ್ತದೆ ಎಂಬುದನ್ನು... ಇವನನ್ನು ಶಿಕ್ಷೆಗೆ ಗುರಿಪಡಿಸಿ.

(ಎಲ್ಲರೂ ಕಣ್ಣೀರು ಸುರಿಸುತ್ತಾ ನಿಲ್ಲಲು, ಪಾಪಿಗಳೇ ಎಂದು ಚಾಟಿಯಿಂದ ಹೊಡೆಯುವನು. ನೋವಾಗದಂತೆ ನಿಲ್ಲುವರು. ಓಂಕಾರ... ಜೈಕಾರ... ಮಾಡಿದ... ಅವು ನಿಷ್ಫಲವಾಗಲು ಶ್ರವಣನು ನೋಡುತ್ತಿರಲು)

ಮಾದೇಶ್ವರ : ನರಕಪ್ರಾಪ್ತಿಯಾಗುವುದು ನಿನಗೆ ಖಂಡಿತ.

ಶ್ರವಣ : ಅರಸನ ಅಂಕೆಯೂ ಇಲ್ಲ ದೆವ್ವದ ಕಾಟವೂ ಇಲ್ಲ ನರಕಾ... ನನಗೆ ನರಕ (ನಗುವನು) ಅಯ್ಯೋ ಮಂಕುದಿಣ್ಣೆಯೇ ಹೋಗು... ಹೋಗು ಸಾವೇ ಇಲ್ಲದ ನನಗೆಂಥ ನರಕ, ಈಗ ನಾನು ಇರುವ ಈ ಲೋಕವೇ ಸ್ವರ್ಗ.

ಸಂಗಪ್ಪ : ಗೊತ್ತಾಗುತ್ತೆ ಯಾರು ಮಂಕುದಿಣ್ಣೆ ಅಂತ?

ಶ್ರವಣ : ಎಲಾ ಇವ್ನ...

ಮಾದೇಶ್ವರ : ಶ್ರವಣಾ ಈಗಲಾದರೂ ಬಿಡು ಇವರನ್ನೆಲ್ಲಾ.

(ಎಲ್ಲರೂ ತಲೆ ಕುಣಿಸುವರು)

ಶ್ರವಣ : ಛಲವನ್ನು ಬಿಡದ ಗಂಡು, ಕಬ್ಬಿಣದ ಗುಂಡೆಂದು ತಿಳಿ.

ಮಾದೇಶ್ವರ : ಬೇಡ.

ಸಂಗಪ್ಪ : ಉಂಡೆಯ ಬಾಯ್ನಾದ್ರೂ ಮುಚ್ಚಬಹುದು ಆದ್ರೆ, ಈ ಮುಂಡೇ ಗಂಡನ ಬಾಯಿ ಮುಚ್ಚಲಿಕ್ಕಾಗೋಲ್ಲವಲ್ಲಾ.

ಶ್ರವಣ : ಲೇ ಅವಿವೇಕಿ ಪಾದರಕ್ಷೆಯನ್ನು ಮಾಡಿ ತಂದಿದ್ದೀಯಾ ಏನು? ಪೆಚ್ಚಿಗೆ ಮಾತು ಬೆಳಸಬೇಡ. ಹೇಳ್ದಷ್ಟಕ್ಕೆ ಉತ್ತರ ಕೊಡು.

ಮಾದೇಶ್ವರ : ತಂದಿದ್ದೇನೆ.

ಶ್ರವಣ : ತಾ ಇತ್ತ.

ಮಾದೇಶ್ವರ : ಕಾಲಿದ್ದಂತೆ ತಲೆ ನಡೆಯುವುದು ಹೇಗೆ? ಕಣ್ಣಿದ್ದ ಹಾಗೇ ಕರ್ಣ ನೋಡುವುದು ಹೇಗೆ? ಬಾಯಿದ್ದಂತೆ ನಾಸಿಕ ತಿನ್ನುವುದು ಹೇಗೆ? ನಿನ್ನಲ್ಲೇ ನಿನ್ನ ಪಾದರಕ್ಷೆಯೋ ನಿನ್ನಲ್ಲಿ ಇರುವಾಗ ಬೇರೆ ಬೇಕೆ? ಪಾಪಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಕಾದಿದೆ ನಿನಗೆ. ಪಾದರಕ್ಷೆ ಬೇಡ-ಬೇಡ ನನ್ನ ಮಾತನ್ನು ಕೇಳು.

ಶ್ರವಣ : ಬೇಕೇ ಬೇಕು... ಕೊಡು... ಕೊಡು.

ಮಾದೇಶ್ವರ : ಕೊಡುವುದಿಲ್ಲ. ನಿನ್ನಿಂದ ನೀನೇ ಕೆಡಬೇಡ.

ಶ್ರವಣ : ಕೊಡಲೇಬೇಕು. ಕೆಡುವ ಮಾತಂತೂ ಇಲ್ಲ.

ಮಾದೇಶ್ವರ : ಬಾ... ಅಲ್ಲಿಡುತ್ತೇನೆ, ಶಕ್ತಿ ಇದ್ದರೆ ಮೆಟ್ಟಿ ಬದುಕು.

(ಮಾದೇಶ್ವರರು ಘಟ್ಟನೆ ಆತನ ಮುಂದೆ ಅದೃಶ್ಯರಾಗಿ ದೂರ ನಿಲ್ಲುವರು. ಶ್ರವಣ ಓಡುವನು ಎಲ್ಲರೂ ಹಿಂದೆ ಓಡುವರು. ಮಾದೇಶ್ವರರು ತವಸರೆಯ ಮೇಲೆ ಪಾದರಕ್ಷೆ ಇಟ್ಟು ಅದಕ್ಕೆ ತಮ್ಮ ಯೋಗದ ಕಿಡಿಯನ್ನು ಪ್ರೋಕ್ಷಿಸಿದರು)

ಶ್ರವಣ : ಓಂ... ಭೂಂ... ನೀವೆಲ್ಲಾ ನಾಯಿಗಳಾಗಿ...

(ಏನೂ ಆಗಲಿಲ್ಲ ಅದನ್ನು ನೋಡಿ)

ಸಂಗಪ್ಪ : ಈ ಠಕ್ಕನ್ ಆಟ ನಡೆಯೋಲ್ಲಪ್ಪ. ಇನ್ನು ನೀನು ಅಟ್ಟಲಗಾಕೋಕ್ಕೆ ಅಕ್ಕಿಯಲ್ಲ ತಿಪ್ಪೆಗೆ ಸುರಿಯೋಕ್ಕೆ ಹೊಟ್ಟಲ್ಲ ಶ್ರವಣಪ್ಪಾ...

ಶ್ರವಣ : ಸಾಕು ನಿನ್ನ ತಲೆಹರಟೆ...

ಸಂಗಪ್ಪ : ನಿನ್ನ ಬಾಯಿ ಹರಟೆಯೂ ಅಷ್ಟೇ.

ಶ್ರವಣ : (ರಂಗನಾಥನತ್ತ ತಿರುಗಿ) ರಂಗನಾಥ ಜೋಯಿಸಾ ಮೆಟ್ಟು ಸಿಕ್ಕಿತು. ಸರಿಯಾಗಿದೆಯಾ ಸಮಯ ಪಂಚಾಂಗದಿಂದ ನೋಡಿ ಹೇಳು.

ರಂಗನಾಥ : (ನೋಡಿ) ಶ್ರವಣಾ, ಮಂಗಳವಾರ ಮಧ್ಯಾಹ್ನ ವ್ಯತಿಪಾತಕ ನಕ್ಷತ್ರಯೋಗ ಅಂದ್ರೆ ಸಾಮಾನ್ಯವೇ, ಎಲ್ಲಾ ಶುಭವಾಗಿದೆ, ಮೆಟ್ಟಿ... ಮೆಟ್ಟಿ... ಈಗ ಯಾವ ಲೋಕವನ್ನಾದರೂ ಆಳುವ ಶಕ್ತಿ ಬರುವುದು. ಏಪ್ಪತ್ತೇಳು ಜಂಗಮರುಗಳೂ ಮಾರಿ ಮಸಣಿಯರೂ, ದುರ್ಗಿಯರೂ, ಸಿಲ್ಲಿರಿ... ಬನ್ನಿ... ಆಶೀರ್ವದಿಸಿರಿ. ಲೋಕ ಕಲ್ಯಾಣವಾಗಲಿ. ನಾನು ಪಂಚಾಂಗ ಶ್ರವಣವನ್ನು ಮಾಡುತ್ತೇನೆ...

ಶ್ರವಣ : ಬಹಳ ಒಳ್ಳೆಯದು. ನಡೆಯಿರಿ ತವಸೆರೆಗೆ

ಎಲ್ಲರೂ : ಮಾಯಕ್ಕಾರ ಮಲೆಯ ಮಾದೇಶ್ವರ ಸ್ವಾಮಿಗೇ ಉಘೇ... ಉಘೇ...

ಶ್ರವಣ : (ಕಿಡಿಕಾರುತ್ತಾ) ಶ್ರವಣನಿಗೇ ಅಂತ ಅನ್ನಿ...

ರಂಗನಾಥ : "ಶುಭ ಶೋಭನ ಮುಹೂರ್ತ ಶ್ರವಣಂ ಧ್ವಂಸಾಯ..."

ಶ್ರವಣ : (ಅವಿಯಿಂದ ಕಾಲನ್ನು ಹಾಕಲು) ಉರಿ... ಉರಿ... ಅಯ್ಯೋ... ಕಾಪಾಡಿ ಬನ್ನಿ... ಕಾಪಾಡಿ... ಬನ್ನಿ.

(ವಾದ್ಯಗಳನ್ನು ಮೊಳಗಿಸುತ್ತಾ ಎಲ್ಲರೂ "ಮಾದಯ್ಯನಿಗೇ" ಉಘೇ... ಉಘೇ... ಎಂಬ ಜಯಘೋಷವನ್ನು ಮಾಡಲಾರಂಭಿಸಿದರು.)

ಮಾದೇಶ್ವರ : "ಎಕ್ಕಡ ಕಚ್ಚುತ್ತದೆಂದು ಅದನ್ನೇ ಕಚ್ಚಲಾಗುವುದೆ...?"

(ನಗುವರು)

ರಂಗನಾಥ : ಅಯ್ಯೋ... ನಾನು ನೋಡಲಾರೆ. ನಾನು ಈ ಉರಿದು ಬೂದಿ ಯಾಗುತ್ತಿರುವುದನ್ನು.

(ರಂಗನಾಥ ಓಡಲು, ಎಲ್ಲರೂ ಶ್ರವಣನಿಗೆ ಕಲ್ಲು ಎಸೆದರು. ಶ್ರವಣ ಸುಟ್ಟು ಭಸ್ಮವಾದ)

ಮಾದೇಶ್ವರ : ಅತ್ತ ಹೋಗಿ ಆತನಿಗೆ ಹೆದರುತ್ತಾ ಓಡುತ್ತಿರುವೆಯಾ ರಂಗನಾಥ, ನಿಲ್ಲು, ನಾನು ನಿನ್ನನ್ನು ಇಲ್ಲಿ ತಡೆದುದರಿಂದ ಈ ಸ್ಥಳಕ್ಕೆ 'ರಂಗನಾಥನ ಒಡ್ಡು' ಎಂದು ಹೆಸರಾಗಲಿ. ನೀನು ಕಾಲ ಬರುವ ತನಕ ಇಲ್ಲೇ ವಾಸವಾಗಿದ್ದು ಶಿವ ಸಾಯುಜ್ಯವನ್ನು ಪಡೆ. ನಿನಗೂ ಇಲ್ಲಿ ಪೂಜೆ ಸಲ್ಲಲಿ.

(ಎಲ್ಲರೂ "ರಂಗನಾಥನಿಗೇ"... 'ಉಘೇ... ಉಘೇ' ಎಂದು ಘೋಷ ಮಾಡುವರು)

(ಅನ್ನಸಾಲಮ್ಮ ಸೌದೆಯ ಹೊರೆಯನ್ನು ಎತ್ತಲಾರದೆ ಯಾರಾದರೊಬ್ಬರ ಆಶ್ರಯ ಬೇಕೆಂದು ನೋಡುತ್ತಿರಲು, ಆ ಕಡೆಯಿಂದ ಬಿಲ್ಲಯ್ಯ ಬರುತ್ತಿರಲು, ಆತನನ್ನು ಹೇಗೆ ಕೇಳುವುದೆಂಬ ಶಂಕೆಯಿಂದ ಕೆಮ್ಮುತ್ತಾ 'ಅಯ್ಯಾ.... ಅಯ್ಯಾ' ಎಂದು ಮೆಲ್ಲನೆ ಕೂಗಲು)

ಬಿಲ್ಲಯ್ಯ : ಅಯ್ಯ ಅಮ್ಮ ಅಂದ್ರ್ಯಾನು... ಬಿಲ್ಲಯ್ಯ ಅನ್ನು

ಅನ್ನಸಾಲಮ್ಮ : ನಿಮ್ಮೆಸ್ರು ಗೊತ್ತಿಲ್ವಲ್ಲಾ.

ಬಿಲ್ಲಯ್ಯ : ಈಗ್ ಗೊತ್ ಮಾಡದ್‌ನಲ್ಲಾ... ನಿನ್ನೆಸ್ರ್ಯಾನು?

ಅನ್ನಸಾಲಮ್ಮ : ಅದನ್ಕಟ್ಕಂಡ್ ನಿಂಗ್ಯಾನು, ಹೆಂಗ್ಸು ನಾನು ಈ ಸೌದಪೊರ್ಯಾ ಸ್ವಲ್ಪ ಮ್ಯಾಕ್ಕೆತ್ತು ಬಾ ಅಂತ ಕರಿತೀವ್ನಿ. ಅದ್ಕೀಪಾಟಿ ಮಾತಾಡ್ತೀಯಲ್ಲಾ.

ಬಿಲ್ಲಯ್ಯ : ಆಪಾಟ್ಯೋ, ಈಪಾಟ್ಯೊ, ಯಾಪಾಟ್ಯೋ ವಂಗೊತ್ತಿಲ್ಲ.

ಅನ್ನಸಾಲಮ್ಮ : ಎತ್ತಯ್ಯ.

ಬಿಲ್ಲಯ್ಯ : ನಿನ್ನೆಸ್ರೇಳಾಕ್ಯಾಗ್ಬೋ?

ಅನ್ನಸಾಲಮ್ಮ : ಎಸ್ರಿಂದ್ಯಾನಾಗ್ಬೇಕು ಯಾಳು?

ಬಿಲ್ಲಯ್ಯ : ನಿಸ್ಕಟ್ಕ ಬ್ಯಾಕಿತ್ತು.

ಅನ್ನಸಾಲಮ್ಮ : ಅಪ್ಪೀ... ಎಂತ ಮಾತಾಡ್ತನೇ... ವಾಗಯ್ಯಾ ನಿಂತಿರ್ಬ್ಯಾಡ.

ಬಿಲ್ಲಯ್ಯ : ಬಯ್ತುವ್ಳೇ ಅಂತ ಕಾಡಿನ ಯಜಮಾನನಿಗೆ ಯೋಳ್ತಿವ್ನಿ ಬಾ.

ಅನ್ನಸಾಲಮ್ಮ : ನೀ ಯಾಳಾದೂ ಬ್ಯಾಡ, ನಾಕ್ಯಾಳಾದೂ ಬ್ಯಾಡ, ವೋಗಾ ಮುಂತ್ರ...

ಬಿಲ್ಲಯ್ಯ : ಕರದದ್ದು ಯಾಕಾ ಅಂತಿಪ್ನಿ...? ವುಡ್ಗಾಟಾ ಆದ್ತೀಯಾ?

ಅನ್ನಸಾಲಮ್ಮ : ಮಾತಿರ್ಲಿ ಎತ್ತು ಈ ಸೌದೆ ಹೊರ್ರ್ಯಾ.

ಬಿಲ್ಲಯ್ಯ : ನಿನ್ನೆಸ್ರ್ಯಾಳು ಮತ್ತೆ ಮೊದಲು

ಅನ್ನಸಾಲಮ್ಮ : ಅನ್ನಸಾಲಮ್ಮ ಅಂತ, ಈಗ ಸಮಾಧಾನವಾಯ್ತಾ.

ಬಿಲ್ಲಯ್ಯ : ಊಂ ಹಾಗಸ್ನು ಮತ್ತೆ.... ಅರಗಿಣಿ ಬಾಯ್ಬಿಡಾಕ್ಕೇ, ಈಟೋತ್ತಾಯ್ತಲ್ಲಾ.

(ಎಂದು ತಲೆ ಮೇಲೆ ಸೌದೆ ಹೊರೆಯನ್ನ ಹೊರಿಸಿ ತನ್ನ ಕಡೆಗೆ ತಳ್ಳಿಕೊಳ್ಳಲು ಆಕೆ ರೊಪ್ಪನೆ ಆತನ ಮೇಲೆ ಬೀಳುವಳು. ಆಗ ಕೋಪದಿಂದ ಆಕೆ ಮುರುಗುಟ್ಟಿ ನೋಡುತ್ತಾ)

ಅನ್ನಸಾಲಮ್ಮ : ಗಂಡ್ಸು ಈಟೊಂದು ಸುಮಾನ ಆಡ್ಬ್ಯಾರ್ದು. ನನ್ಗೆ ಪ್ರಾಣ ಸಂಗಟ ಅನ್ನದು ನಿಂಗೊತ್ತಿಲ್ಲ, ನೀನ್ಯಾರಯ್ಯಾ?

ಬಿಲ್ಲಯ್ಯ : ಬಿಲ್ಲಯ್ಯ ಅಂತ ಆಗ್ಲೇ ಯೇಳಿದ್ನಲ್ಲ.

ಅನ್ನಸಾಲಮ್ಮ : ಬಿಲ್ ಕಂಡಾಗೆ ಬಗ್ಗಿಸ್ಬಿಟ್ಯಲ್ಲಾ.

ಬಿಲ್ಲಯ್ಯ : ಬಿಲ್ ಕಂಡಾಗೆ ಬಗ್ಗಿಸ್ದೇನು ಪ್ರಯೋಜನ? ಬಾಣ ಹೂಡಿ ಪ್ರಯೋಗಿಸ್ಬೇಕು. ಆಗ ನಾನು ಗಂಡ್ಸಾದುದಕ್ಕೆ ಸಾರ್ಥಕ.

ಅನ್ನಸಾಲಮ್ಮ : ಸಾಕು ಮುಚ್ಚಯ್ಯ ಬಾಯಿ.

ಬಿಲ್ಲಯ : ಬಾಯ್ಮುಚ್ಚಿದ್ರೆ ಮಾತಾಡದ್ಯಾಗ?

ಅನ್ನಸಾಲಮ್ಮ : ನೀನ್‌ಹೋಗಯ್ಯಾ ಎಚ್ಗೆ ಮಾತಾಡ್ಬ್ಯಾಡಾ

(ಮೂಗು ತಿರುಗಿಸುತ್ತಾ ಮನೆಯತ್ತ ಹೊರಡುವಳು)

(ಹಿಂಬಾಲಿಸಿಕೊಂಡು ಬಿಲ್ಲಯ್ಯ ಬರುತ್ತಾ)

ಬಿಲ್ಲಯ್ಯ : ಅಟ್ಯಾಗೆ ಯಾರೂ ಇದ್ದಂಗಿಲ್ಲ.

ಅನ್ನಸಾಲಮ್ಮ : ಯಾರಿರ್ಬೇಕು ನಾನಿರೋವಾಗ?

ಬಿಲ್ಲಯ್ಯ : ಹಾಗಾದ್ರೆ ನೀನೊಬ್ಳೇ... ನಾನೂ ಒಬ್ನೆ...

ಅನ್ನಸಾಲಮ್ಮ : ಸರಿ ಅದ್ಯಾನ್ಮಾಡ್ದಾಯಿ ಈಗ ಅಂದೆ.

ಬಿಲ್ಲಯ್ಯ : ಬಾಯ್ಬುಡ್ಕ್ಯೋ...

ಅನ್ನಸಾಲಮ್ಮ : ಈಗ ನಿನ್ನನ್ನೇ ಬಾಯ್ಬಿಡಿಯೋ ಹಾಗೆ ಮಾಡ್ತೀನಿ.

(ಆಕೆ ಕಾಲನ್ನು ಎಳೆಯಲು ಬೀಳುವಳು. ಅತ್ತಿಂದ ಹಾವು ಬರುತ್ತಿರಲು ಮತ್ತೆ ಹೌಹಾರಿ "ಹಾವು" ಎನ್ನುತ್ತಾ ಬಂದು ಆತನನ್ನು ಅಪ್ಪಿಕೊಳ್ಳುವಳು. ಅಲ್ಲೇ ಇದ್ದ ಮಚ್ಚಿನಿಂದ ಹಾವನ್ನು ತರಿಯುವನು)

ಅನ್ನಸಾಲಮ್ಮ : ಹೆಣ್ಣಿನ ಮಾನ ಕಳ್ಯೋಕ್ಕೆ ಬಂದಿದ್ದೀಯಾ ನೀನು?

ಬಿಲ್ಲಯ್ಯ : ಹುಷ್... ಸದ್ದು... ಅಲ್ನೋಡ್ತಾ ಈಗ.

ಅನ್ನಸಾಲಮ್ಮ : ಕ್ಷಮಿಸ್ಬಿಡಿ...

(ಬಿಗಿಯಾಗಿ ಅಪ್ಪಲು)

ಬಿಲ್ಲಯ್ಯ : ಈಗ ನನ್ನನ್ನು...

ಅನ್ನಸಾಲಮ್ಮ : ಪ್ರೀತಿಸಿವ್ನಿ.

ಬಿಲ್ಲಯ್ಯ : ಈಗ ಕಾಪಾಡ್ದಾ ಅಂತ್ಲಾ?

ಅನ್ನಸಾಲಮ್ಮ : ಊಂ... ಮನಸ್ಸು ಪೂರ್ತಿ... ಬಿಲ್ಲಾ...

ಬಿಲ್ಲಯ್ಯ : ಅದ್ಯಾನೇ ಅನ್ನಾಲಿ... ಅನ್ನಾಲೀ...

ಅನ್ನಸಾಲಮ್ಮ : ಇಲ್ಲಿ ಬಾ...

ಬಿಲ್ಲಯ್ಯ : ಯಾನೇ? ವಸಿಯಾಳು ಬ್ಯಾಗ್ನ

ಅನ್ನಸಾಲಮ್ಮ : ಈ ಕಾಡ್ನಾಗೆ ಹಸ್ರು ಕಣ್ಣಿಗೆ ಎಟೊಂದು ಚೆನ್ನಾಗೈತಿ ಅಲ್ವಾ?

ಬಿಲ್ಲಯ್ಯ : ಅದ್ಕಿಂತ ನಿನ್ನ ರೂಪು ಒಂದು ಕೈ ಮ್ಯಾಲೇ.

ಅನ್ನಸಾಲಮ್ಮ : ನಿಂಗ್ಯಾವಾಗ್ಲೂ ಉಡ್ಗಾಟ...

ಬಿಲ್ಲಯ್ಯ : ಬಾ... ಇನ್ನೂ ಅತ್ರ ಬಾ... ಬಾ ಅಂದ್ರ ಬರ್ಬ್ಯಾಕು

(ಇಬ್ಬರೂ ನಗುತ್ತಾ ಮತ್ತೆ ಆಲಂಗಿಸಿಕೊಳ್ಳುವರು)

(ಅನ್ನ ಸಾಲಮ್ಮನ ಮನೆಗೆ ಬಂದ ಬಿಲ್ಲಯ್ಯ)

ಬಿಲ್ಲಯ್ಯ : ಅನ್ನಾಲಿ... ಯಾನಾಯ್ತು?

ಅನ್ನಾಲಮ್ಮ : ಆಯ್ತು ಬಂದದ್ದು. ಬಾಯ್ಬುಟ್ಕಂಡ್ಬಾ ಚಪ್ಪರ್ಲುವ್ಯಂತೆ ಬಾ ಎಣ್‌ಕಟ್ಕಂಡು ಇಂಗ ಮಾಡಿದ್ರೆ ಗಂಡಸಿಗೆ ನ್ಯಾಯವಲ್ಲ

ಬಿಲ್ಲಯ್ಯ : ಈ ಸಂಸಾರ ಸಾಕಪ್ಪಾ. ಈ ಮನಸ್ನಾಗಕ್ಕಿಂತ ಒಂದು ಮರವಾಗಿದ್ರೆ ಅನೇಕ ಪ್ರಾಣಿಗಳಿಗ ಅನ್ನ ಉಸಿರು ಕೊಡ್ತೋದಾಗಿತ್ತು. ನಿನ್ನ ಕಟ್ಕಂಡದ್ದು ನನ್ನ ತಪ್ಪು.

ಅನ್ನಸಾಲಮ್ಮ : ಯಾಕೀಗ್ಬುಟ್ರಿ?

ಬಿಲ್ಲಯ್ಯ : ಯಾಕೆ ಅಂತ?

ಅನ್ನಸಾಲಮ್ಮ : ಸೌದಿಲ್ಲ ಯಂಗ್ ಬೇಯಿಸ್ಲಿ ಹೇಳು ವಾಗು ತಕ್ಕಂಬಾ...

(ಕೊಡಲಿ ತೆಗೆದುಕೊಂಡು)

ಬಿಲ್ಲಯ್ಯ : ಈ ಎಣ್ಣಾಯ್ಕಳಿಗೇ ಬೆಟ್ಟದ ಮ್ಯಾಗೆ ಸೌದೆ ತಂದು ಯಾನಾರೂ ಬೇಯ್ಸಿ ಆಕಮು ಗೀಕಮು ಅಸ್ನ ಗ್ಯಾನಿದ್ರೆ ತಾನೇ... ಥೂ...

(ಲಿಂಬಿನಮಲೆಯಲ್ಲಿ ಬಿದರ ಮೆಳೆಯನ್ನು ತರಿಯುತ್ತಿರಲು ಒಂದು ಕಲ್ಲಿಗೆ ಏಟು ಬೀಳಲು ರಕ್ತ ಹರಿಯಲಾರಂಭಿಸಿತು. ನೋಡಿ... 'ಅಪ್ಪಾ' ಎಂದು ಬಿದ್ದ ಕೂಡಲೇ)

ಧ್ವನಿ : ಬಿಲ್ಲಯ್ಯ ಇದಕ್ಕೆ ನೀನು ಹೆದರಬೇಕಾಗಿಲ್ಲ, ನಿನಗೆ ಮಾದೇಶ್ವರರು ಒಲಿದಿದ್ದಾರೆ. ಈ ಶಿವರಾತ್ರಿಯಂದು ಮಲೆಯು ಮಹಾಕ್ಷೇತ್ರವಾಗಲಿದೆ. ಇಲ್ಲಿ ಮದ್ಯಪಾನ, ಸ್ತ್ರೀ ಸಂಸರ್ಗ, ಪಾಪ ಕರ್ಮಗಳು ನಡೆಯಬಾರದು. ಹಾಗೆ ಮಾಡಿದಲ್ಲಿ ಅವರು ಅನೇಕ ಕಷ್ಟ ನಷ್ಟಕ್ಕೊಳಗಾಗಬೇಕಾಗುತ್ತದೆ. ಬಿಲ್ಲಯ್ಯ ನಿನ್ನ ವಂಶಸ್ಥರೇ ತಂಬಡಿಗಳಾಗಿ ಈ ಮಾದೇಶ್ವರನ ಲಿಂಗಪೂಜೆಯನ್ನು ಮಾಡಿಕೊಂಡು ಬರಬೇಕಾಗುತ್ತದೆ. ಇದು ನೀನು ಮಾಡಬೇಕಾಗಿರುವ ಕೆಲಸ. ಮೇಲೇಳು.

(ಮೆಲ್ಲನೆ ಎದ್ದು ನೋಡುವನು. ಸುತ್ತಾ ಶಿವಲಿಂಗಕ್ಕೆ ಪೆಟ್ಟು ಬಿದ್ದಿದೆ. ಕೈ ಮುಗಿದು ಹಾಗೆಯೇ ಕುಳಿತಿರಲು)

ಅನ್ನಸಾಲಮ್ಮ : ಅಯ್ಯೋ ಪ್ರಾರಾಬ್ಧವೇ ಇಷ್ಟೊತ್ತಾದ್ರೂ ಬರ್ಲ್ವೇ ಇಲ್ವಲ್ಲಾ ಇವ್ನೆಲ್ಲೋದಾ? ಯಾಕೋ ಕಾಲೇ ಬರಾಕಿಲ್ವಲ್ಲಾ... ಈ ಸಂಕಟ... ಈ ಸುಸ್ತು, ಅಯ್ಯೋ ದ್ಯಾವ್ರೇ?

ಕಾರಯ್ಯ : ಯಾಕನ್ನಾಲವ್ವಾ?

ಅನ್ನಸಾಲಮ್ಮ : ನನ್ನ ಗಂಡ ಸೌದ್ಗೋವನ್ನು ಇನ್ನೂ ಬರ್ಲ್ವೇ ಇಲ್ಲ ಸೀಗೆ ಪೊದ್ರೆತಾವ ಬಿದ್ದೋಗವ್ನಂತೆ.

ಕಾರಯ್ಯ : ಅವ್ನಾ... ಯಾಕಂತೆ?

ಅನ್ನಸಾಲಮ್ಮ : ಯಾನೋ ಕಲ್ಗೆ ಕೊಡ್ಲಿ ಬಿದ್ದುಬಿಟ್ಟಂತೆ ರಕ್ತ ಸುರಿದ್ಬಿಟ್ಟಂತೆ ಅವ ಅಲ್ಲಿಗೇ ಗ್ಯಾನಿಲ್ದೇ ಮಲ್ಗವ್ನಂತೆ.

(ಗುಡುಗು ಮಿಂಚು, ಸಿಡಿಲು, ಬಿರುಗಾಳಿ, ಗರ್ಭಿಣಿ ಅನ್ನಸಾಲಮ್ಮ ಹೆರಿಗೆ ನೋವನ್ನು ಸೈರಿಸಿಕೊಂಡು ಬರುತ್ತಿರಲು ದಾರಿಯಲ್ಲಿ ಹೊಟ್ಟೆ ನೋವು ಹೆಚ್ಚಾಗುತ್ತದೆ. ಕಾರಯ್ಯ ಮುಂದೆ ಹೋಗುತ್ತಾನೆ, ಬಿಲ್ಲಯ್ಯನನ್ನು ನೋಡಲು. ಮರದ ಕೆಳಗೆ ಹೆರಿಗೆಯಾಗುತ್ತದೆ. ಇದಕ್ಕಿದ್ದ ಹಾಗೆಯೇ ದೃಶ್ಯ...)

ಧ್ವನಿ : ಅನ್ನಸಾಲಮ್ಮ... ಭಯಪಡಬೇಡ, ನಿನ್ನ ಜೀವನದ ಹೊಸದಿನಗಳನ್ನು ಕಾಣುವೆ. ನಿನ್ನ ಗಂಡನಿಗೆ ಏನೂ ಆಗಿಲ್ಲ. ಮಾದೇಶ್ವರರು ಒಲಿದಿದ್ದಾರೆ. ಭಕ್ತಿಯಿಂದ ನೀವೆಲ್ಲಾ ಆ ಲಿಂಗವನ್ನು ಪೂಜಿಸಿ ಮುಕ್ತಿಯನ್ನು ಪಡೆಯಿರಿ. ನಿಮ್ಮ ಈ ಮಗುವಿಗೆ 'ಶೇಷಣ್ಣೊಡೆಯ' ಎಂದು ಹೆಸರಿಡಿ. ಮುಂದೆ ಎಲ್ಲವೂ ಒಳ್ಳೆಯದಾಗುತ್ತದೆ, ಇದು ಮಹಾಕ್ಷೇತ್ರವಾಗುತ್ತದೆ.

ಅನ್ನಸಾಲಮ್ಮ : ಇದ್ಯಾನಿಚಿತ್ರವೋ... ನಾಕಾಣ್ನಪ್ಪಾ... ಮಾದಪ್ಪಾ.. ಎಲ್ಲಾ ನಿನ್ನಾಟ ಕಣಪ್ಪಾ.

ಕಾರಯ್ಯ : ಅನ್ನಾಲಪ್ವಾ... ಅನ್ನಾಲವ್ವಾ... ಭಯ ಬೀಳಬೇಡ ಬಾ...

(ಎಂದು ಮೆಲ್ಲನೆ ಕರೆದುಕೊಂಡು ಬಿಲ್ಲಯ್ಯನಿರುವ ಸ್ಥಳಕ್ಕೆ ಬರುತ್ತಾನೆ)

ಅನ್ನಸಾಲಮ್ಮ : ಬಿಲ್ಲಯ್ಯ... ಬಿಲ್ಲಯ್ಯ...

ಕಾರಯ್ಯ : (ತನ್ನಲ್ಲೇ)ಮಾದಪ್ಪಾ ನನ್ನೊಡ್ಯಾ... ಕಾಪಾಡಪ್ಪಾ...

ಅನ್ನಸಾಲಮ್ಮ : ಬಿಲ್ಲಯ್ಯ... ಬಿಲ್ಲಯ್ಯ...

ಬಿಲ್ಲಯ್ಯ : (ನೋಡಿ ಆನಂದದಿಂದ) ಅನ್ನಾಲೀ ಅನ್ನಾಲೀ... ಅನ್ನಾಲಿ...

ಕಾರಣ್ಣ : ಅದೇ, ಈಗೇ ದಾರ್‍ಯಂಗೆ ಬತ್ತಿದ್ದೆ... ವಿಚಾರ ತಿಳೀತು. ನೋಡ್ಕಂಡೋಗಮು ಅಂತ ಬಂದಿವ್ನಿ.

ಬಿಲ್ಲಯ್ಯ : ಒಳ್ಳೇದೇ ಆತು... ಬಾ...

ಕಾರಯ್ಯ : ಸಮಾಸಾರ ಯಾನು ಬಿಲ್ಲಯ್ಯ?

ಬಿಲ್ಲಯ್ಯ : ಸೌದ್ಯ ತರಿತಿದ್ದಂಗೇ ಕಲ್ಗೇಟು ಬಿತ್ತು. ಅಂಗೇ ಗ್ಯಾನ ತಪ್ಪೋಯ್ತು. ಪುನ ನಂಗೆ ಗ್ಯಾನವೇ ಇಲ್ಲ. ಮಿಂಚು ಗುಡುಗು ಸಿಡ್ಲಾಯ್ತು "ಈ ಶಿವರಾತ್ರಿಲೀ ಮಲೆ ಕೈಲಾಸವಾಗಿದೆ" ಇವಕ್ಕೇನು ಹೆದರ್‍ಬೇಕಾಗಿಲ್ಲ ಮಾದೇಶ್ವರರು ನಿಂಗೊಲ್ದವ್ರೇ ನಿನ್ನ ವಂಶಸ್ಥರೇ ತಂಬಡಿಗಳಾಗಬೇಕು. ಇಸ್ಟೂ ಯಾಸ್ಯಾನೋ ಅಂದಾಗಾಯ್ತು. ಅಷ್ಟೇ ನಂಗೊತ್ತಾದದ್ದು. ಎಲ್ಲಾ ಆ ಮಾದಪ್ಪನ ದಯೆ ಕಾರಣ್ಣ.

ಅನ್ನಸಾಲಮ್ಮ : ಏನೋ ಎಲ್ಲಾ ಆ ಮಲೆ ಮಾದಪ್ಪನ ದಯೆ. ನಮಗೂ ಈ ಮಗನ್ನ ಕರುಣಿಸವ್ನೆ. ಇವನಿಗೇ ಶೇಷಣ್ಣೊಡೆಯ ಅಂತ ಕರಿಬೇಕಂತೆ. ಅಂತ ನಂಗ್ಯೋಳವ್ನೆ ಮಾದಪ್ಪ

ಬಿಲ್ಲಯ್ಯ : ಎಲ್ಲಾ ಒಳ್ಳೇದಕ್ಕೇ ಬುಡು. ಶೇಷಣ್ಣೊಡೆಯಾ ಏನು ಚಂದಾಗವ್ನೇ... ಎಲ್ಲಾ ಬಲು ಇಚಿತ್ರವಾಗೇ ಅದೇ ಅಲ್ವಾ ಕಾರಣ್ಣ.

ಕಾರಯ್ಯಾ : ಎಲ್ಲಾ ಆ ಮಾದಪ್ಪನ ದಯ ಕಣ್ ಬಿಲ್ಲಯ್ಯ.

ಬಿಲ್ಲಯ್ಯ : ಮಾದಪ್ಪನವರು ದ್ಯಾವ್ರಾದ್ರು. ನಮ್ಮ ಬೆಟ್ಟದಾಗೆ ನೆಲಸ್ಬುಟ್ರು. ಇನ್ನೂ ನಾವು ಪೂಜೆ ಮಾಡುವ ಮಾದೇಶ್ವರರನ್ನು.

ಕಾರಯ್ಯ : ಬಿಲ್ಲಯ್ಯ ಸ್ವಾಮಿಗಳನ್ನ ನೋಡ್ಕಂಡ್ಬರಾವ ಬಾ.

ಬಲ್ಲಯ್ಯ : ಸಾಲೂರು ಮಠದ ಸ್ವಾಮಿಗಳನ್ನಾ...

ಕಾರಯ್ಯ : ಊಂ...

(ಮೂವರೂ ಹೊರಡುವರು)

(ರಸ್ತೆಯಲ್ಲಿ)

ಸಂಗಪ್ಪ : ಏನು ಕಾರಯ್ಯ ಎತ್ತಕಡೆ?

ಕಾರಯ್ಯ : ಇದ್ಯಾನ್ಬುದ್ಧಿ ನಾವು ನಿಮ್ಮ ಮಠದ್ ತಪಕ್ಕೇ ಬತ್ತಿದ್ದೋ ಅಷ್ಟರಲ್ಲಿ ನೀವೇ ಸಿಕ್ಕು ಬುಟ್ರಿ.

ಸಂಗಪ್ಪ : ಏನು ಸಮಾಚಾರ?

ಕಾರಯ್ಯ : ಬಿಲ್ಲಯ್ಯ ಸೌದೆ ತರಿದಾಗ ಕಲ್ಗೇಟು ಬಿತ್ತಂತೆ. ಅವ್ರು ಮಾದೇಶ್ವರರಂತೇ ಅಂತ ಆಕಾಶವಾಣಿ ಆಯ್ತಂತೆ ಬುದ್ಧಿ.

ಸಂಗಪ್ಪ : ಹೌದು ದೇವರು ಸರ್ವ ಜಗ ವ್ಯಾಪ್ತನಂತೆ, ನಿರಾಮಯನು. ನಮ್ಮ ಮಾದೇಶ್ವರರೂ ಹಾಗೇ ಲಿಂಗ ರೂಪವಾಗಿದ್ದಾರೆ.

ಅನ್ನಸಾಲಮ್ಮ : ಅಂಗಂದ್ರೇನು ಸ್ವಲ್ಪ ತಿಳಿಯೋ ಅಂಗೆ ಹೇಳಿ ನನ್ನೊಡ್ಯಾ.

ಸಂಗಪ್ಪ : ದೇವರಿಲ್ಲ ಅನ್ನುವವರಿಗೆ ಆ ಶಿವಲಿಂಗವೇ ಪ್ರತ್ಯಕ್ಷ ಸಾಕ್ಷಿ ಬಿಲ್ಲಯ್ಯ. ಆತನ ಪೂಜೆಯಿಂದ ನಿನಗೆ ಮುಕ್ತಿ.

ಅನ್ನಸಾಲಮ್ಮ : ನಾವು ಕಾಡು ಸೋಲಿಗರು ಬುದ್ಧಿ. ನಮಗೇನೂ ಗೊತ್ತಿಲ್ಲ.

ಸಂಗಪ್ಪ : ಅನ್ನಸಾಲಮ್ಮ ನಿಮ್ಮಲ್ಲಿ ಶಿವಧರ್ಮ ಹಾಳಾಗಿತ್ತು. ಈಗಲಾದರೂ ದೇವರನ್ನು ನಂಬಿ, ಪೂಜೆ ಮಾಡಿ. ಆತನ ಧ್ಯಾನದಿಂದ ಪುಣ್ಯ ದೊರೆಯುತ್ತೆ. ದೇವರನ್ನು ನಂಬಿ, ಪೂಜೆ ಮಾಡಿ. ಆತನ ಧ್ಯಾನದಿಂದ ಪುಣ್ಯ ದೊರೆಯುತ್ತ. ಅದ್ಕೇ ಮಾದಪ್ಪ ಇಲ್ಲಿ ದೇವರ ಅವ್ತಾರ ತಾಳಪ್ರ.

ಬಿಲ್ಲಯ್ಯ : ಮಾಡ್ತೀವಿ ಬುದ್ಧಿ.

ಸಂಗಪ್ಪ : ಅದಕ್ಕೆ ಅಂಗಮಯ ಶರೀರವು ಲಿಂಗಮಯ ಶರೀರವಾಗಬೇಕು.

ಬಿಲ್ಲಯ್ಯ : ಇವನ್ನ ಆಗ್ಲೇ ಮಾದೇಶ್ವರರೂ ಹೇಳಿದ್ರು. ನೀವು ಗುರುಗಳು. ನಿಮ್ಮಿಂದಲೇ ಆಗಬೇಕು. ಈಗ ಅದ್ಕೇನಾಗ್ಬೇಕು ಗುರು?

ಸಂಗಪ್ಪ : ದೀಕ್ಷೆಯಾಗಬೇಕು. 'ದೀಕ್ಷೆ ಇಲ್ಲದವನಿಗೆ ಮೋಕ್ಷವಿಲ್ಲ'

ಬಿಲ್ಲಯ್ಯ : ಗುರುವೇ, ನಿಮ್ಮ ಮಾತ್ಕೇಳಿದ್ರೆ ನಾನು ಲಿಂಗ ಕಟ್ಕೋಬೇಕು. ದೀಕ್ಷೆ ಆಗಬೇಕು ಅನ್ನಿಸುತ್ತೆ ಬುದ್ಧಿ.

ಸಂಗಪ್ಪ : ನಿಮಗೆ ದೀಕ್ಷೆ, ಉಪದೇಶ, ಪವಿತ್ರ ಮಾರ್ಗವನ್ನು ತೋರಿಸಲಿಕ್ಕೇ ನಾವಿರುವುದು. ಅಗತ್ಯವಾಗಿ ಯಾರಾದರೂ ಸಹಾ ಲಿಂಗಧಾರಣೆ ಮಾಡಿಕೊಂಡು ನಿಷ್ಠೆಯಿಂದ ಸ್ನಾನ, ಜಪ, ತಪಗಳನ್ನು ಮಾಡಬಹುದು.

ಬಿಲ್ಲಯ್ಯ : ಎಲ್ಲಾ ನಿಮ್ಮಗಳ ಆಶೀರ್ವಾದ ದೇವರು.

ಸಂಗಪ್ಪ : ಎಲ್ಲಾ ಆ ಮಾದೇಶ್ವರರ ಆಶೀರ್ವಾದ. ನೀವು ಮಠಕ್ಕೆ ಬನ್ನಿ ದೀಕ್ಷಾ ಸಂಸ್ಕಾರ ನೆರವೇರಿಸೋಣ. ಈಗ ಮಾದೇಶ್ವರರು ಲಿಂಗವಾದ ಸ್ಥಳಕ್ಕೆ ಹೋಗಿ ಕೈ ಮುಗಿದು ಬರೋಣ.

(ಮೂವರೂ ಹೊರಡುವರು)

(ರಾಯಣ್ಣನ ಅರಮನೆಗೆ ಕಾರಯ್ಯನ ಪ್ರವೇಶ)

ಸೇವಕ : ಮಹಾಪ್ರಭು, ಸೋಲಿಗರ ಯಜಮಾನ ಕಾರಯ್ಯನವರು ತಮ್ಮನ್ನು ನೋಡಲು ಬಂದಿದ್ದಾರೆ ಪ್ರಭು.

ರಾಯಣ್ಣ : ಬರ ಹೇಳು.

ಕಾರಯ್ಯ : ಅಡ್ಡಬಿದ್ದೆ ಬುದ್ಧಿ. ನಾನು ಕಾರಯ್ಯ ಅಂತ ಪ್ರಭೂ...

ರಾಯಣ್ಣ : ಈಗೇನಾಗಬೇಕಿತ್ತು?

ಕಾರಯ್ಯ : ನಮ್ಮ ಗುರುವಾದ...

ರಾಯಣ್ಣ : ಅಂದರೆ?

(ಅಷ್ಟರಲ್ಲಿ ಮಗಳು ದೇವಕಿ ದೂರ ನಿಂತು ಕೇಳುವಳು)

ಕಾರಯ್ಯ : ಕೆಲವು ವರ್ಷಗಳಿಂದಲೂ ನಮ್ಮ ಕಾಡಿನಲ್ಲಿ ಮಾದೇಶ್ವರ ಸ್ವಾಮಿಯವರು ಉತ್ತರ ದೇಶದಿಂದ ಬಂದು ನೆಲ್ಸಾಗಿ ಈಗ ಲಿಂಗವಾಗವ್ರೆ. ಅವರಿಗೆ ಪೂಜೆ ಆಗಬೇಕು. ತಮ್ಮಿಂದಲೂ ಆಗಬೇಕು.

ದೇವಕಿ : (ಸ್ವಗತ) ಮಾದೇಶ್ವರ... ನಿನ್ನ ಪಾದವೇ ಗತಿ.

(ಕಣ್ಮುಚ್ಚಿ ಕೈ ಮುಗಿಯುವಳು)

ರಾಯಣ್ಣ : ಪೂಜೆಗೆ ಏನೇನು ಬೇಕು ಅದನ್ನು ತೆಗೆದುಕೊಂಡು ಹೋಗ ಬಹುದು. ಪೂಜೆ ಸಾಗಲಿ.

ಸೇವಕ : ಆಗಲಿ ಮಹಾಪ್ರಭು.

ರಾಯಣ್ಣ : ಇವರಿಗೇನೇನು ಬೇಕು ಕೊಡಿಸು.

ಸೇವಕ : ಆಗಲೀ ಪ್ರಭು.

(ನಮಸ್ಕರಿಸಿ ಕಾರಯ್ಯ ಹೊರಡುವನು)

ದೇವಕಿ : ಆ ಮಾದೇಶ್ವರರೂಪಿ ಲಿಂಗವನ್ನು ಪೂಜಿಸಿಕೊಂಡು ಬರಬೇಕು.

(ದಾರಿಯಲ್ಲಿ ಬರುತ್ತಿರಲು ಕೇಡಿಯೊಬ್ಬ ತಡೆವ)

ಕೇಡಿ : ನಿಲ್ಲು.

ದೇವಕಿ : ನಾನಾರೆಂದು ಬಲ್ಲೆಯಾ?

ಕೇಡಿ : ರಾಯಣ್ಣನವರ ಮಗಳೆಂದು ಬಲ್ಲೆ. ಅದನ್ನು ತಿಳಿದೇ ನಿಲ್ಲೆಂದುದು.

ದೇವಕಿ : ಬೇಡ ಹತ್ತಿರ ಬರಬೇಡ ಮುಟ್ಟಬೇಡಾ.

ಕೇಡಿ : ಏನು ಮಾಡುತ್ತೀಯೇ?

ದೇವಕಿ : ಪರಸ್ತ್ರೀಯನ್ನು ಮುಟ್ಟಿದರೆ ಮಹಾಪಾಪ... ಶಿವನೇ, ಮಹಾದೇವ ಏಕಿಂಥ ಕೀಳು ಭಾವನೆ, ಈತನಿಗೆ... ನೀನೇ ನನ್ನ ಮಾನ ರಕ್ಷಿಸು ಮಹಾದೇವಾ.

ಕೇಡಿ : ಯಾವ ಮಹಾದೇವಾ... ನಿಲ್ಸು ಸಾಕು... ನಿನ್ನ ಬೇಡಿಕೇನಾ... ಬಾ... ನನ್ನ ಹತ್ತಿರ ಬಾ...

(ಎಂದು ಕೈ ಹಿಡಿದುಕೊಳ್ಳಲು ಹೋಗಲು ಕೈ ಹಾಗಯೇ ಸೇದು ಹೋಗುವುದು. ದೇವಕಿ ಪೂಜಿಸಲು ಹೊರಡುವಳು "ಅಯ್ಯೋ...ದೇವ್ರೆ... ನನ್ನದು ತಪ್ಪಾಯ್ತು... ದೇವಕಿ ತಾಯಿ ಕ್ಷಮಿಸಿ" ಎಂದು ಆಕೆಯ ಹಿಂದೆಯೇ ಹೊರಡುವನು)

ದೇವಕಿ : ಅಪ್ಪಾಜಿ... ತೆಗೆದುಕೊಳ್ಳಿ ಪ್ರಸಾದ...

ರಾಯಣ್ಣ : ಎಲ್ಲಿಯದಮ್ಮ?

ದೇವಕಿ : ಮಾದೇಶ್ವರರ ಪೂಜೆ ಮಾಡಿದುದು.

ರಾಯಣ್ಣ : ಆಗಲೇ ಅಲ್ಲಿಗೆ ಹೋಗಿದ್ದೆಯಾ? ಏನು ಭಕ್ತಿಯಮ್ಮ ನಿನ್ನದು? ದೇವಕಿ ಈ ಹೊತ್ತು ಏನಾಯ್ತು ಗೊತ್ತೇ ಅಪ್ಪಾಜಿ?

ರಾಯಣ್ಣ : ಏನಮ್ಮ?

ದೇವಕಿ : ಪೂಜೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಒಬ್ಬ ಕೇಡಿ ಕೆಣಕಲು ಬಂದ. ನನ್ನನ್ನು ಹಿಡಿಯಲು ಬಂದಾಗ ನಾನು ಆ ಮಹಾದೇವನನ್ನು ಜ್ಞಾಪಿಸಿಕೊಂಡು ಕಾಪಾಡಲು ಬೇಡಿದೆ. ಆತನ ಕೈ ಹಾಗೆಯೇ ಸೇದುಹೋಯಿತು.

ರಾಯಣ್ಣ : ಅವರು ಸಾಮಾನ್ಯರಲ್ಲಾ ಮಹಾದೇವ. ಅವರ ದರುಶನವನ್ನು ಮಾಡಬೇಕು ಅಂತ ನನಗೂ ಆಸೆಯಿದೆ.

ದೇವಕಿ : ಸಾಲೂರು ಮಠಕ್ಕೂ ಹೋಗಬೇಕು ಅಂತ ನನಗೆ ಆಸೆ ಅಪ್ಪಾಜಿ. ಅಲ್ಲಿ ಸಂಗಪ್ಪಸ್ವಾಮಿಗಳು ಇದ್ದಾರೆ. ಮಾದೇಶ್ವರರ ಶಿಷ್ಯರು ಅವರು ಮಠವನ್ನು ನಡೆಸುತ್ತಿದ್ದಾರೆ. ನಾವು ಮಠಕ್ಕೂ ಸ್ವಲ್ಪ ಜಮೀನು ದತ್ತಿ ಕೊಡಬೇಕು ಅನ್ನಿಸ್ತಾ ಇದೆ ಅಪ್ಪಾಜಿ. ಸಾಲ್ಕಾರು ಜನರಿಗೆ ದಾಸೋಹಕ್ಕೆ ಸಹಾಯ ಮಾಡಿದ ಹಾಗೆ ಆಗುತ್ತೆ.

ರಾಯಣ್ಣ : ಅದಕ್ಕೇನಂತೆ ಒಂದು ದಿನ ಅಲ್ಲಿಗೂ ಹೋಗೋಣ. ನಿನ್ನ ಆಸೆ ಏನೇನಿದೆಯೋ ಅದನ್ನು ಪೂರೈಸೋಣ.

ದೇವಕಿ : ಬಹಳ ಸಂತೋಷ ಅಪ್ಪಾಜಿ.

(ರಾಯಣ್ಣನ ಅರಮನೆ. ಸಭೆ ಸೇರಿಸಲು ಅಲ್ಲಿಗೆ ಸೇವಕ ಬಂದು)

ಸೇವಕ : ಮಹಾಪ್ರಭು. ಕೊಂಗ ಮಹಾಪ್ರಭುಗಳು ಕೊಂಗನಾಡಿನಿಂದ ದಯ ಮಾಡಿಸಿದ್ದಾರೆ.

ರಾಯಣ್ಣ : ಮರ್ಯಾದೆಯೊಡನೆ ಕರೆತನ್ನಿ.

ಸೇವಕ : ಆಗಲೀ ಪ್ರಭು.

(ರಾಜಾಧಿರಾಜ ಕೊಂಗರಾಜ ಮಹಾ ಪ್ರಭುಗಳಿಗೆ, ಜೈಪರಾಕ್... ಜೈಪರಾಕ್)

ರಾಯಣ್ಣ : ಮಹಾರಾಜರು ಪೀಠವನ್ನುಅಲಂಕರಿಸಬೇಕು.

ಕೊಂಗರಾಜ : ನಲ್ಲದು... ನಲ್ಲದು.

ರಾಯಣ್ಣ : ತಾವು ಬಂದ ಸಮಾಚಾರ?

ಕೊಂಗರಾಜ : ಉಂಗಳೊಡ ಒರು ಮುಖ್ಯ ವಿಷಯಮಾಗ ಪೇಸ ವಂದಿರ್ಕಿರೇನ್?

ರಾಯಣ್ಣ : ಅದೇನು ಹೇಳಿ ಅಂತ ಕೇಳಿ.

ಸೇವಕ : ಎನ್ನ ವಿಷಯಮೆನ್ರಿ ಕೇಳ್ಕಿರಾರ್.

ಕೊಂಗರಾಜ : ಉಂಗಳ್ ಮಗಳ್ ದೇವಿಗಿ ಒರು ಅಳಗಾನ ಪೊಣ್ ಎನ್ರು ಕೇಟ್ಟು ವಂದೆ.

ರಾಯಣ್ಣ : ಅದಕ್ಕೆ ಈಗೇನು ಮಾಡಬೇಕಂತೆ?

ಸೇವಕ : ಅದನಾಲನ್ನಾ?

ಕೊಂಗರಾಜ : ನಾನ್ ಅವಳೈ ಮಣಕ್ಕ ವಿರುಂಬಗಿರೇನ್.

ಸೇವಕ : ತಮ್ಮ ಮಗಳಾದ ದೇವಕಿಯನ್ನು ಮದುವೆಯಾಗಲಿಕ್ಕೆ ಇಷ್ಟಪಟ್ಟಿದ್ದೇನೆ ಎಂದು ಹೇಳುತ್ತಾರೆ.

ಕೊಂಗರಾಜ : ಆಮ... ಆಮ

ರಾಯಣ್ಣ : ಅದು ಸಾಧ್ಯವಿಲ್ಲ ಅಂತ ಹೇಳು.

ದಳಪತಿ : ಅದು ಮುಡಿಯಾದ ಕಾರ್ಯಂ.

ಕೊಂಗರಾಜ : ನಾನ್ ಕೂಡ ಒರು ನಾಟ್ಟಿನ್ ಅರಸನ್ ಏನ್ ಸಮ್ಮದಮಿಲ್ಲೈ?

ದಳಪತಿ : ಇಂದ ತಿರುಮನತ್ತಿಕ್ಕು ಅರಸರ್ ಸಮ್ಮದಿಕವಿಲ್ಲೈ ಎನ್ರಾಲ್ ನಾನೆನ್ನ ಸೈವದು.

ಕೊಂಗರಾಜ : ಇದ್ದೈ ಮಟ್ರೊ ಮುರೈ ಯೋಸುತ್ತು ಶೈದಿ ಸೊಲ್ಲವೇಂಡುಂ ಎಂದ್ರು ಸೊಲ್.

ದಳಪತಿ : ಸ್ವಲ್ಪ ಯೋಚನೆ ಮಾಡಿ ಹೇಳಿ.

ಕೊಂಗರಾಜ : ಆಮ... ಆಮ.

ರಾಯಣ್ಣ : ಅದು ಆಗದ ಮಾತು ಎಂದು ಹೇಳಿ.

ದಳಪತಿ : ಅದು ಮುಡಿಯಾದ ಕಾರ್ಯಂ ಎನ್ಗಿರಾರ್.

ಕೊಂಗರಾಜ : ಅಪ್ಪಡಿಯಾನಲ್ ನಾಟ್ಟುಕು ಪುರಪ್ಪಡಲಾಮಾ.

(ಮೇಲೇಳುತ್ತಿರಲು)

ರಾಯಣ್ಣ : ನಮ್ಮ ಆತಿಥ್ಯವನ್ನು ಸ್ವೀಕರಿಸಿ ಹೋಗುವಂತೆ ಹೇಳಿ.

ದಳಪತಿ : ಇರಂಡುನಾಳ್ ಎಂಗಳ್ ವಿರುದಾಳಿಯಾಗ ಇರಂದು ಪೋಗು ಚೊಲ್.

ಕೊಂಗರಾಜ : ಮುಡಿಯಾದು ಇದು ಎನ್ನ ಆಗುಮೆನ್ನು ನಾನ್ ಪಾರ್ತುಕೊಳ್ಳುಗುರೇನ್.

(ಎಂದು ಹೊರಡುವನು)

ರಾಯಣ್ಣ : ದಳಪತಿಯೇ, ಕೇಳಿದೆಯಾ? ಆತನಿಗೆ ನಮ್ಮ ಮೇಲೆ ಬಹಳ ಸಿಟ್ಟಾಗಿರಬಹುದು.

ದಳಪತಿ : ಆದರೇನು ಬಿಡಿ. ತೊಲಗಿದನಲ್ಲಾ. ಆದರೂ ಒಂದು ಕೈ ನೋಡಿಕೊಳ್ಳುತ್ತೇನೆಂದು ಹೋದ.

ರಾಯಣ್ಣ : ಆತ ಏನು ಮಾಡುತ್ತಾನೆ ನಮ್ಮನ್ನು?

ದಳಪತಿ : ಅವನು ಮಾಡುವಾಗ ನಮ್ಮ ಕೈಗಳೇನು ಸುಮ್ಮನೇ ಇರುತ್ತವೆಯೇ? ನಮ್ಮನ್ನು ಕಾಯುವ ಮಾದೇಶ್ವರನಿಲ್ಲವೇ ಬಿಡಿ.

ರಾಯಣ್ಣ : ಸರಿ... ನಡೆಯಿರಿ...

(ಎಲ್ಲರೂ ಹೊರಡುವರು)

ದೇವಕಿ : ಅಯ್ಯೋ ಪಾಪಿ ನನ್ನನ್ನು ಬಿಡು, ಬಿಡು...

(ಕೈ ಕೊಸರಿಕೊಳ್ಳುತ್ತಿರಲು)

ಕೊಂಗರಾಜ: ವಿಡಮಾಟ್ಟೆ... ವಿಡಮಾಟ್ಟೆ.

ದೇವಕಿ : ಒಂದು ಹೆಣ್ಣನ್ನು ಕದ್ದೊಯ್ಯುವುದು ನಿನಗೆ ನಾಚಿಕೆಯಾಗುವುದಿಲ್ಲವೇ? ನಿನ್ನ ಕೊಂಗನಾಡಿಗ ಅವಮಾನವಾಗುವುದಿಲ್ಲವೇ? ದ್ರೋಹಿ...

ಕೊಂಗರಾಜ: (ನಗುತ್ತಾ) ಅಳಗೇ, ಏನ್ ಶೆಲ್ವಮೇ,... ಎನ್ನೊಡನ್ಯೆ ವಾ...

ದೇವಕಿ : ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ನನ್ನನ್ನು ಬಿಟ್ಟುಕೊಡು. ನಾನು ನಿನ್ನೊಡನೆ ಮದುವೆ ಆಗಲಿಕ್ಕೆ ಇಷ್ಟಪಡುವುದಿಲ್ಲ.

ಕೊಂಗರಾಜ: ವಿಡಮಾಟ್ಟೇನ್. ಉನ್ ಅಳಗ್ಯ ಕೇಟ್ಟು ಉನ್ನ ತೇಡಿ ವಂದೆ.

(ಕೈಕೊಸರಿಕೊಂಡು ಓಡಲೆತ್ನಿಸಲು)

ಕೊಂಗರಾಜ: ಅದೋ ಪಾರ್ ಅಂದ ಆರ್ಯ... ನೀ ಎಪ್ಪಡಿ ತಾಂಡಮುಡಿಯಂ.

ದೇವಕಿ : ನಾನು ಈ ಕಾವೇರಿ ನದಿಯಲ್ಲಿ ಮುಳುಗಿದರೂ ಸರಿ ನಿನ್ನೊಡನೆ ಸೇರಲಾರೆ, ಬಾಳಲಾರೆ, ಬದುಕಲಾರೆ.

ಕೊಂಗರಾಜ: ಅಂದ ಆರ್ಯ ನೀ ಎಪ್ಪಡಿ ತಾಂಡಮುಡಿಯು ಪೋ... ಪೋ...

(ಎಂದು ನಗುತ್ತಾ ನಿಂತಿರಲು, ದೇವಕಿ ಓಡುವಳು)

ದೇವಕಿ : (ಅಳುತ್ತಾ) ಮಾದೇಶ್ವರ... ನಿನ್ನನ್ನು ನಂಬಿದ ಭಕ್ತೆ ನಾನು. ನನ್ನ ಮೇಲೆ ಕರುಣೆ ತೋರಿಸಿ ಈ ಕಾವೇರಿಯನ್ನು ದಾರಿಯನ್ನು ಬಿಡುವಂತೆ ಮಾಡು ಮಾದಪ್ಪಾ. ಒಂದು ಹೆಣ್ಣಿನ ಪಾತಿವ್ರತ್ಯವನ್ನು ಕೆಡಿಸಲು ಈ ಕೊಂಗರಾಜ ನನ್ನನ್ನು ಕುದುರೆ ಮೇಲೆ ಕದ್ದೊಯ್ದು ಇಲ್ಲಿಗೆ ತಂದಿದ್ದಾನೆ. ನಿನ್ನ ಸನ್ನಿಧಿಗೆ ನನ್ನನ್ನು ಮತ್ತೆ ಕರೆಸಿಕೋ ಮಹಾದೇವಾ.

(ನದಿಯು ದಾರಿ ಬಿಡಲು ದೇವಕಿ ಸಂತೋಷದಿಂದ ಹಾಡುತ್ತಾ ಹೊರಡುವಳು.)

ಕೊಂಗರಾಜ : ಓ... ಎನ್ನ ಆಚ್ಚರ್ಯಂ, ಇವಳ್ ಆರೈ ಎಪ್ಪಡಿ ತಾಂಡಿ ವಿಟ್ಟಾಳ್, ಪಡೈವೀರರೇ, ಅವಳ್ ಓಡಿವಿಟ್ಟಾಳ್, ಅವಳೈ ಪುಡಿಯಿಂಗಳ್, ಪುಡಿಯಿಂಗಳ್.

(ಎಂದು ಓಡಲು ನದಿ ಇಬ್ಬಾಗವಾಯಿತು. ದೇವಕಿ ಹಾಡುತ್ತಾ ಸಂತೋಷದಿಂದ ಬಂದಳು)

ದೇವಕಿ : ಮಹಾದೇವ ನನ್ನನ್ನು ಕಾಪಾಡಿದ. ಕೊಂಗರಾಜ, ನಾನು ಬರುತ್ತೇನೆ. ಮತ್ತೆ ಬಂದರೆ ನಿನ್ನ ರುಂಡ ಚೆಂಡಾಡುವುದು ತಿಳಿದುಕೋ.

(ಎಂದು ಓಡುವಳು)

* * *

(ದೇವಕಿ, ರಾಯಣ್ಣ ಸಾಲೂರು ಮಠಕ್ಕೆ ಬರುವರು. ಕಾರಯ್ಯ ನಮಸ್ಕರಿಸುತ್ತಾ)

ಕಾರಯ್ಯ : ಬನ್ನಿ ಮಹಾಪ್ರಭುಗಳೇ.

ರಾಯಣ್ಣ : ಆಗಲೀ ಕಾರಯ್ಯ.

ಕಾರಯ್ಯ : (ಕರೆದುಕೊಂಡು ಹೋಗುತ್ತಾ) ಬೇಡರ ಗಂಪಣ ರಾಜ್ಯದಿಂದ ರಾಯಣ್ಣ ದೊರೆಗಳು ದಯಮಾಡಿಸುತ್ತಿದ್ದಾರೆ ಬುದ್ಧಿ.

ಸಂಗಪ್ಪ : ಬನ್ನಿ... ಬನ್ನಿ... ಈ ಪೀಠವನ್ನು ಅಲಂಕರಿಸಿ.

ರಾಯಣ್ಣ : (ಕಾಲಿಗೆ ಬಿದ್ದು ಕುಳಿತುಕೊಳ್ಳುವರು)

ಸಂಗಪ್ಪ : ಏನು ವಿಚಾರ?

ರಾಯಣ್ಣ : ಮಾದೇಶ್ವರರ ವಿಚಾರ ತಿಳಿದು ಬಂದೆ.

ಸಂಗಪ್ಪ : ಸಂತೋಷ, ಇಂದು ಇಲ್ಲಿ ನಮ್ಮ ಮಠದ ಪ್ರಸಾದ ಸ್ವೀಕರಿಸಿ ತೆರಳಬಹುದಲ್ಲ.

ರಾಯಣ್ಣ : ಹಾಗಂದಮೇಲೆ ನನಗೊಂದು ಜ್ಞಾಪಕ ಬರ್ತಾ ಇದೆ. ಬುದ್ಧಿ. ತಾವೇನು ತಿಳಿದುಕೊಳ್ಳದಿದ್ದರೆ ಹೇಳುತ್ತೇನೆ.

ಸಂಗಪ್ಪ : ಅದಕ್ಕೇನು ಹೇಳಿ. ಅದಕ್ಕೆ ನಾವಾವರೂ ತಿಳಿದುಕೊಳ್ಳುವುದೇನು? ನೀವಾದರೂ ಅನುಮಾನ ಪಡುವುದೇಕೆ?

ರಾಯಣ್ಣ : ನಿಮ್ಮ ಮಠಕ್ಕೆ ಸ್ವಲ್ಪ ಭೂಮಿಯನ್ನು ದತ್ತಿ ಕೊಡಬೇಕು. ಅದರಿಂದ ಬಂದ ದವಸ ಧಾನ್ಯದಿಂದ ಇಲ್ಲಿಗೆ ಬರುವ ಭಕ್ತಾದಿಗಳಿಗೆ ಸೇವೆ ನಡೆಯಬೇಕು. ಅದಕ್ಕಾಗಿ ನೀವು ಒಪ್ಪಿ ನಾವು ಕೊಟ್ಟಿರುವ ದಾನವನ್ನು ತೆಗೆದುಕೊಳ್ಳಬೇಕು.

ಸಂಗಪ್ಪ : ಅದಕ್ಕೇನಂತೆ ನಿಮ್ಮಿಚ್ಛೆಯನ್ನು ನೆರವೇರಿಸುತ್ತೇವೆ.

ರಾಯಣ್ಣ : ನಾವು ದೇವಾಲಯಕ್ಕೆ ಹೋಗಬೇಕು ಇನ್ನು.

ಸಂಗಪ್ಪ : ಅಯ್ಯೋ...

ರಾಯಣ್ಣ : ಗುರುವೇ ಏನಾಯ್ತು?

ಸಂಗಪ್ಪ : ಮಹಾರಾಜಾ ನನ್ನ ಇಹಲೋಕದ ವ್ಯಾಪಾರ ಮುಗಿಯಿತು.

ರಾಯಣ್ಣ : ಗುರುವೇ ಹಾಗೆಲ್ಲಾ ಅನ್ನಬೇಡಿ.

ಸಂಗಪ್ಪ : ಇದು ಶತಸ್ಸಿದ್ಧ ರಾಯಣ್ಣ. ಇನ್ನು ಈ ದೇಹವು ಈ ಪುಣ್ಯಕ್ಷೇತ್ರದಲ್ಲಿ, ಅದರಲ್ಲೂ ಈ ಮಠದಲ್ಲೇ ನನ್ನ ಕ್ರಿಯಾಸಮಾಧಿಯಾಗಬೇಕು.

ರಾಯಣ್ಣ : ಶಿವ ಶಿವಾ (ಕೈಮುಗಿಯುವರು)

(ಕಾರಯ್ಯ, ಬಿಲ್ಲಯ್ಯರಿಗೆ ಇಬ್ಬರು ಮಾದೇಶ್ವರರ ಮಜ್ಜನಕ್ಕೆ ಹಾಲನ್ನು ತುಂಬಿಕೊಂಡು ಹೋಗುತ್ತಿರಲು, ಮಾದೇಶ್ವರರು ಪರೀಕ್ಷಿಸಲು, ಇದ್ದಕ್ಕಿದ್ದಂತೆ ಕಾಲೆಡವಿಸಿ ಹಾಲಿನ ಕೊಡ ಕೆಳಗೆ ಬೀಳುವಂತೆ ಮಾಡುವರು. ಹಾಲು ಹರಿಯಿತು. ಇದನ್ನು ನೋಡಿದ ಕಾರಯ್ಯ-ಬಿಲ್ಲಯ್ಯ ದೇವರಿಗೆ ಈ ಹೊತ್ತು ಏನು ಮಾಡುವುದೆಂಬ ಚಿಂತೆಯಾಗಿ-)

ಕಾರಯ್ಯ : ಈವೊತ್ತು ಮಾದೇಶ್ವರರು ಮಜ್ಜನಕ್ಕೆ ಸೊಗಸಾದ ಕಾಡೆಮ್ಮೆ ಹಾಲುಕಣ್ಲಾ. ಬಿಲ್ಲಯ್ಯ ನಾವು ತಂದಿದ್ದದು.

ಬಿಲ್ಲಯ್ಯ : ಊಂ ಕಣ್ಲಾ... ಬಲು ಸಂತೋಸವಾಗ್ತದೈ ಮಾದಪ್ಪನ್ಗೆ, ಈ ಹಾಲ್ ನೋಡ್ಬುಡ್ತಿದ್ರೆ ಅಂತಿದ್ದೋ

ಕಾರಯ್ಯ : ಎಲ್ಲಾ ನನ್ನಪ್ಪನ ಮೈಮೆನೇ ಇರಬೇಕಪ್ಪಾ... ಇಂಗಾಗೋಯ್ತು.

ಕಾರಯ್ಯ : ಬಿಲ್ಲಯ್ಯ ಸ್ವಲ್ಪ ಸರಿಯಾಗಿ ನೋಡ್ಕಂಡಲ್ವಾವಾಗದು. ಮಾದಪ್ಪನ ಮಜ್ಜನಕ್ಕೆ ಹಾಲಿಲ್ದೇ ವಾಗಿದ್ರೇನಾ ಗತಿ?

(ಎನ್ನುತ್ತಿದ್ದಂತೆಯೇ ಅವನೂ ಎಡವಿ ಬೀಳುವನು)

ಬಿಲ್ಲಯ್ಯ : ಇದೇನು ಪರೀಕ್ಸೆನಪ್ಪಾ, ನನ್ನ ತಲೆ ಮೇಲಿನದ್ದೂ ಬಿದ್ದೋಯ್ತಲ್ಲಾ ಎಮ್ಮೆ ಹಾಲು ಎಲ್ಲಾ. ಮುಗ್ಹೋಗಯ್ತಲ್ಲಾ, ಇನ್ನೇನಪ್ಪಾ ಗತಿ.

ಬಿಲ್ಲಯ್ಯ : ಕಾಡ್ನಾಗೆಲ್ಲಾರಾ ಹುಡುಕಾಮು.

ಕಾರಯ್ಯ : ಆಗಾಕಿಲ್ಲ ಬುಡಪ್ಪಾ, ಎಲ್ಲೂ ಸಿಕ್ಕಕಿಲ್ಲ. ನಾನು ಈವೊತ್ತು ಆಲ್ತರಕ್ಕೆ ಎಷ್ಟು ಕಷ್ಟ ಪಟ್ಟವ್ನಿ ಗೊತ್ತಾ? ಏನಾ ಇದು ಮಾದಪ್ಪನ ಲೀಲೆಯೇ ಇರಬೇಕು. ನಾನಂತೂ ಹಾಲ ತಕ್ಕೊಂಡೋಗ್ದೇ ಅವನಿಗೆ ಮುಖ ತೋರಿಸ್ತಿಲ್ಲ.

ಬಿಲ್ಲಯ್ಯ : ನಾಮಾತ್ರಾ ಯಾನಾ ಈ ವೊಂಡಕ್ಕೇ ಬಿದ್ಗತೀವ್ನಿ.

ಕಾರಯ್ಯ : ದ್ಯಾವರ ಕೆಲ್ಸಕ್ಕೆ ನಮ್ಮ ಜೀವನ ಇರಾದು. ಅದೇ ಆಗ್ದೀದ್ ಮ್ಯಾಗೆ ನಾ ತಾನೇ ಯಾಕಿರದು? ನಾನೂ ನಿನ್ನ ಜೊತೆನಾಗೇ ಬೀಳ್ತೀವ್ನಿ ನಡಿ...

(ಎಂದು ಮುಂದಾಗುತ್ತಿರಲು ಧ್ವನಿಯಾಗುತ್ತದೆ)

ಮಾದೇಶ್ವರ : ಕಾರಯ್ಯ ಬಿಲ್ಲಯ್ಯರೇ, ಯಾಕೆ ಇಷ್ಟೊಂದು ದುಡುಕಿ ನೀರಿಗೆ ಬೀಳುತ್ತಿರುವಿರಿ? ನಿಮ್ಮ ಭಕ್ತಿಗೆ ನಾನು ಮೆಚ್ಚಿದ್ದೇನೆ. ಇದು ನಾನೇ ಮಾಡಿದ ಕೆಲಸ. ನಿಮಗೆ ನಿಜವಾಗಿಯೂ ನನ್ನ ಮೇಲೆ ಭಕ್ತಿ ಇದೆಯೋ, ಇಲ್ಲವೋ ಎಂಬುದನ್ನು ತಿಳಿಯಲು ಹೀಗೆ ಮಾಡಿದೆ. ಈಗ ನಿಮ್ಮ ಭಕ್ತಿಯ ಬಗ್ಗೆ ದೃಢೀಕರಿಸಿದೆ. ಈ ಕಾಡೆಮ್ಮೆ ಹಾಲು ಹರಿದುದೇ 'ಹಾಲುಹಳ್ಳ' ವಾಗಲಿ. ಇದರಿಂದ ನನಗೆ ಈ ಹೊತ್ತೇ ಅಲ್ಲಿ ಪ್ರತಿವರ್ಷಇಂಥ ಶುಭದಿನದಲ್ಲಿ ಈ ಹಾಲುಹಳ್ಳದಿಂದ ಬರುವ ಮಜ್ಜನಕ್ಷೀರದಿಂದ ಮಜ್ಜನವಾಗಲಿ. ಈಗ ಈ ಹಾಲು ಹಳ್ಳದಿಂದಲೇ ಹಾಲನ್ನು ತೆಗೆದುಕೊಂಡು ಬಂದು ಮಜ್ಜನ ಮಾಡಲು ಅಣಿಯಾಗಿ.

ಬಿಲ್ಲಯ್ಯ, ಕಾರಯ್ಯ : ಆಂ... ಮಾದೇಶ್ವರರ ಧ್ವನಿ ಅಬ್ಬಾ... ನಾವೇ ಧನ್ಯರು ಮಹಾದೇವಾ...

(ಎಂದು ಸಾಷ್ಟಾಂಗವೆರಗಿ ಆ ಹಾಲನ್ನೆ ತುಂಬಿಕೊಂಡು ಮಾದೇಶ್ವರನೆಡೆಗೆ ಹೊರಡುವರು)

(ಮಾದೇಶ್ವರರು ತಪಸ್ಸನ್ನು ಮಾಡುತ್ತಿರಲು ದಿವ್ಯ ದೃಷ್ಟಿಯಿಂದ ನೋಡಿ ನಗುತ್ತಾ-)

ಮಾದೇಶ್ವರ : ಓ... ಆ ಕಾಳಿ ಬೇವಿನಕಾಳಿ ಎಷ್ಟೊಂದು ಜಿಪುಣೆ. ಆಕೆಯನ್ನು ನಾನು ಪರೀಕ್ಷೆ ಮಾಡಲೇಬೇಕು. ಆಕೆಯು ನನಗಾದರೂ ಜಗ್ಗುತ್ತಾಳೆಯೋ ಇಲ್ಲವೋ.

(ಎದ್ದು ಹೊರಡುವರು)

ಆಹಾ : ಎಂಥ ಸ್ಥಳದಲ್ಲಿ ಮನೆಯನ್ನು ಮಾಡಿಕೊಂಡಿದ್ದಾಳೆ. ಯಾರಿಗೂ ಕಾಣಬಾರದೆಂದು ಈ ರೀತಿಯ ಮನೆಯನ್ನು ಮಾಡಿಕೊಂಡಿದ್ದಾಳೂ ಏನೋ, ಪಾಪ ಆಶಾವಾದಿ...

ಭವತಿ ಭಿಕ್ಷಾಂದೇಹಿ।
ಬಲ್ಲೆನು ಭಿಕ್ಷಾಂದೇಹಿಯ
ಬಲ್ಲೆನು ನೀ ಸಂದೇಹಿ।
ಆದರೂ ಬಿಡೆನು ನಾನತಿ ಮೋಹಿ ॥ ಪ ॥

ಭವಹರನು ಸಿರಿ ಕೊಟ್ಟೇ ಇಹನಿಂದು।
ಶಿವಲಿಂಗ ಜಂಗಮರ ದಾನಕೆಂದು।

ತಾಯೆ ತುತ್ತ, ನೀಡಿರಿ, ಭಿಕ್ಷ ನೀಡಿರಿ।
ಈ ಕ್ಷಿತಿಯೊಳ್ಮೋಕ್ಷ ಪಡೆಯಿರಿ ॥ ೧ ॥

ಇಹ ಲೋಕದಾಸೆ ತೊರೆದು।
ಪರಲೋಕ ಧ್ಯಾನ ಮಾಡಿರಿ।
ಮಾಡಿದ ಮಹಾಕರ್ಮ ಕಳೆಯಿರಿ
ದಾನ ಧರ್ಮ ಶೀಲರೆನಿಸಿಕೊಳ್ಳಿರಿ ॥ ೨ ॥

ಒಡಲ ಪೊರೆಯಲೇಕೆ ತಡ ಮಾಡುವಿರಿ?
ಜಗದೊಡೆಯ ಬಂದಿಹನೀ ಅಡವಿಗೆ।
ಬಿಡು ಮನವೆ ಪರಿ ಪರಿ ಬರಿ ಭ್ರಮೆಯಾ।
ಒಡನೆ ಕೂಡಿವನ ಅಡಿಗಳ ಪಿಡಿಯೋ ॥ ೩ ॥

ಮಾದೇಶ್ವರ : ಆಹಾ... ಓಹೋ ಇದೆಂಥ ಮನೆ ಎಂಥ ಬಂದೀಖಾನೆ? ಮನೆಸುತ್ತ ಮುಳ್ಳು ಬಿಗಿದ ಬಾಗಿಲು, ಈ ಕಾಡಿನಲ್ಲಿ ಕಳ್ಳರ ಭಯ.

(ನಗುವರು) ಹುಚ್ಚು ಹುಚ್ಚು... ಏಳು ಜನ ಗಂಡು ಮಕ್ಕಳು, ಸೊಸೆಯರುಗಳು, ಏಳು ಕಾಲ್ನಡಿಗೆಯ ದನಗಳು, ಕುರಿಗಳು, ಎಳ್ಳು ರಾಶಿಗಳು. ಭತ್ತದ ತೊಂಬೆಗಳು, ಇರುವೆ ನುಗ್ಗದಂತೆ ಸುತ್ತಲೂ ಬೆಜ್ಜಲುಕೊಂಡ, ಇರಲಿ. ಈಕೆಯ ಭಕ್ತಿಯನ್ನು ಪರೀಕ್ಷಿಸುವೆ ಓಂ... ಭವತಿ ಭಿಕ್ಷಾಂದೇಹಿ.

ಬೇವಿನಕಾಳಿ : (ಕೈ ಬೀಸುತ್ತಾ ಬರುತ್ತಾ) ಯಾರಯ್ಯಾ ನೀನು? ನಿನ್ಗೆ ದಾರಿ ತೋರ್ದವರ್ಯಾರು? ಒಳಗೆ ಪ್ರವೇಶ ಮಾಡಿದ ಬಗೆ ಹೇಗೆ? ಹೇಳಯ್ಯ ಮಾತಾಡ್ದೇ ನಿಂತಿದ್ದೀಯಲ್ಲಾ ಏನು ಸಮಾಚಾರ?

ಮಾದೇಶ್ವರ : ಯಾರಾದರೇನು? ಕಾಳವ್ವ ನಾನು ಜಂಗಮ. ಭಿಕ್ಷೆ ಕೊಡಿ ಅಂತ ಕೇಳಿದ್ನಲ್ಲಾ.

ಬೇವಿನಕಾಳಿ : ಈ ಭಯಂಕರ ಕಾಡಿಗೆ ಹೇಗೆ ಭಿಕ್ಷೆಗೆ ಬಂದೆ? ನಾನಾರು ಎಂದು ಬಲ್ಲೆಯೋ... ನಾನೇ... ನಾನು... ಆ ಕಾಳಿ ಈ ಕಾಳಿ... ಮಹಾಕಾಳಿ ಬೇವಿನಕಾಳಿ...

ಮಾದೇಶ್ವರ : ಅದ್ಗೊತ್ತು ಬಿಡಿ.

ಬೇವಿನಕಾಳಿ : ಗೊತ್ತಿದ್ದೂ ಬಂದದ್ದು...

ಮಾದೇಶ್ವರ : ಹೇಳಿದ್ನಲ್ಲಾ ಮೊದ್ಲೇ...

ಬೇವಿನಕಾಳಿ : 'ನಮ್ಮ ಮನೆ ಹಸೆಕಲ್ಲಾಡಿದ್ರೆ ನಾಡೆಲ್ಲಾ ನಂಟ್ರು' ಅಂತ ನಿನ್ಗೆಲ್ಲಾ ಗೊತ್ತು, ಎತ್ತಿನ ಗೊತ್ತು, ಸಾಕು ನಿನ್ನ ಗತ್ತು ಹೋಗಯ್ಯ.

ಮಾದೇಶ್ವರ : ಅವ್ವರಿ ಬಿಡಿತಾಯೇ ತಮ್ಮನ್ನು ಪುಣ್ಯವಂತೆ, ಧರ್ಮಿಷ್ಠೆ ಎಂದು ಹೊಗಳುತ್ತಿದ್ದರು. ಅದನ್ನು ತಿಳಿದು ಹಸಿವು ನೀರರಡಿಕೆಗಳನ್ನು ತಡೆಯಲಾರದೆ ನಿಮ್ಮನ್ನಾಶ್ರಯಿಸಲು ಬಂದೆ. ಒಂದು ತುತ್ತನ್ನಾದರೂ ನೀಡಿ. 'ಅನ್ನದಾನಕ್ಕಿಂತ ಮಿಗಿಲಾದ ದಾನವಿಲ್ಲ' ಕಾಳವ್ವಾ. ನೀಡಿ ಪುಣ್ಯ ಕಟ್ಟಿಕೊಳ್ಳಿ.

ಬೇವಿನಕಾಳಿ : ಅಯ್ಯೋ... ನಾನು ಹೇಳುತ್ತಿರುವುದು ನಿನಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲ. ಒಂದು ಅಗುಳನ್ನೂ ಗುಬ್ಬಚ್ಚಿ ಹಾಗೆ ಕುಟುಕಿಕೊಳ್ತೀನಿ ಅಂದ್ರೂ ನಾನು ಕೊಡ್ಲಾರೆ, ನೀನು ಪಡೆಯಲಾರೆ. ನಿನ್ನ ಮುಂದಿನದಾರಿ ನೋಡ್ಕಂಡು ಹೊರಟು ಬಿಡು. ಬಡ ಜಂಗಮಯ್ಯನಿಗೆ, ನನಗೆ ಪುಣ್ಯವೂ ಬೇಡ ಸ್ವರ್ಗವೂ ಬೇಡ, ನರಕವೇ ನನಗಿರಲಿ ಹೋಗು... ಹೋಗು.

(ಎಂದು ಹೋಗುತ್ತಿರಲು ಮತ್ತೆ)

ಮಾದೇಶ್ವರ : ಪೂರ್ವಜನ್ಮದ ಪುಣ್ಯ ವಿಶೇಷದಿಂದ ಈ ಜನ್ಮದಲ್ಲಿ ಐಶ್ವರ್ಯವಂತರಾಗುವರು. ಈ ಜನ್ಮದಲ್ಲಿ ದಾನ ಮಾಡದಿದ್ದರೆ ಮುಂದಿನ ಜನ್ಮದಲ್ಲಿ ಬಡವರಾಗುವರು. ಹಸಿದು ಬಂದವರಿಗೆ ಅನ್ನದಾನ ನೀಡದಿದ್ದಲ್ಲಿ ಹಂದಿ ಜನ್ಮವೂ, ಜಂಗಮರಿಗೆ ಬಟ್ಟೆ ಕೊಡದಿದ್ದಲ್ಲಿ ನಾಯಿ ಜನ್ಮವೂ, ಎದುರು ಮಾತಾಡಿದವರು ಭವ ರೋಗದಿಂದಲೂ ನರಳುವರು. ಜಪತಪಗಳನ್ನು ಮಾಡುವವರನ್ನು ಜರಿದು ನುಡಿದರೆ ಕಾಡುವ ರೋಗವು ಬರುವುದು. ಜಂಗಮರಿಗೆ ದಾನ ಮಾಡಿ ಪುಣ್ಯ ಪಡೆಯಿರಿ ಕಾಳವ್ವಾ.

ಬೇವಿನಕಾಳಿ : (ಮುಂದೆ ಭರ್‍ರನೆ ಬರುತ್ತಾ) ಅಯ್ಯಾ... ಸಾಕು ನಿನ್ನ ಉಪಾಯ ನರಿಯಂತೆ ಅಂತ ಗೊತ್ತು. ನೀನು ಬೇಗನೆ ಹೋಗ್ದೇ ಹೋದ್ರೆ ಕಂಭಕ್ಕೆ ಕಟ್ಟಾಕಿ ಹೊಡೆಯುವೆ ಜೋಪಾನ. ಆಚೆಗೆ ನಡೆ. ನಿಮ್ಮಪ್ಪನ ಮನೆ ಚಪ್ಪೋಡು ಅಂತ ಕುಳಿತುಬಿಟ್ಯಾ... ಮೊದ್ಲು ಹೊರಡು ಆಚೆ, ಹ್ಯಾಗ್ಬಂದೆ ಒಳಗೆ ಮೊದಲು ಬೊಗಳು.

ಮಾದೇಶ್ವರ : ಕಾಲಿನಲ್ಲಿ.

ಬೇವಿನಕಾಳಿ : "ರಟ್ಟೆ ಮುರಿಬೇಕು ರೊಟ್ಟಿ ತಿನ್ಬೇಕು."

ಮಾದೇಶ್ವರ : ಕೋಪ ಬಿಟ್ಟು ಶಾಂತಿಯಿಂದ ವರ್ತಿಸಿ. ತಾಯೆ ಆಗ ಶ್ರೇಯಸ್ಸು ಉಂಟಾಗುತ್ತದೆ.

ಬೇವಿನಕಾಳಿ : ನೀನಾರಯ್ಯಾ ಮಾತಿಗೆ ಮಾತು ಪೋಣಿಸೋ ಗಂಡಾಗುಂಡಿ.

ಮಾದೇಶ್ವರ : ಹ್ಞಾಂ... ನಾನೇ... ಗುರುವಿಗೆ ಲಿಂಗವೇ ಸಾಕ್ಷಿ, ಲಿಂಗಕ್ಕೆ ಜಂಗಮವೇ ಸಾಕ್ಷಿ, ಅರಿವಿಲ್ಲದ ಮಾನವಗೆ ಇಲ್ಲಿ ಬುದ್ಧಿ ನೀಡಲಿಕ್ಕೆ ಬಂದೆ.

ಬೇವಿನಕಾಳಿ : ನೀನೇನು ಕಲ್ಲೋ ಕಬ್ಬಿಣದ ಗುಂಡೋ ಪ್ರಚಂಡಿ... ಚಡಿ ಏಟು ಬೇಕೋ ನ್ಯಾಯವಾಗಿ ಹೋಗ್ತೀಯೋ ಹೇಳು. ನನಗೆ ಕೆಲಸ ಬೇಕಾದಷ್ಟಿದೆ. ನಿನ್ನೊಂದಿಗೆ ಹರಟಲಿಕ್ಕೆ ನನಗೆ ಸಮಯ ಇಲ್ಲಾ.

ಮಾದೇಶ್ವರ : ಬಚ್ಚಲ ನೀರು ತಿಳಿಯಿದ್ರೇನು? ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು? ಆಕಾಶದ ಫಲ ಕೊಯ್ಯುಲಿಲ್ಲ, ಮೆಯ್ಯಲಿಲ್ಲ. ಇಕ್ಕಿದಾತ ಸ್ವರ್ಗಕ್ಕೆ ಹೋದ ಇಕ್ಕದವ ನರಕಕ್ಕೆ ಹೋದ ಅಂತ. ಬೇವಿಗಿಂತ ಕಹಿ ಬೇವಿನಕಾಳಿ ನೀನು ಅಂತ ಕಾಣುತ್ತೆ?

ಬೇವಿನಕಾಳಿ : ನಿನ್ನನ್ನೂ ರಾಜನಾಗಿ ಹೊಗಳು ನಾಯಿಯಾಗಿ ಬೊಗಳು ಅಂತ ಕರೀಲಿಲ್ಲ ಹೋಗು.

ಮಾದೇಶ್ವರ : ತಾಯೆ-

ಬೇವಿನಕಾಳಿ : ನನ್ನ ಧ್ಯೇಯವನ್ನು ಮರಿಯಬೇಡ. ಹೊರಡು ನೂಕಿಸಿಕೊಂಡು ಹೋಗಬೇಕಾಗುತ್ತದೆ. ಹಕ್ಕಿಗಳು, ಇರುವೆಗಳು, ನನಗೆ ಮೋಸಮಾಡುತ್ತಿವೆ ಬೇಗ ಹೊರಡು.

ಮಾದೇಶ್ವರ : ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ. ಕಾಳಿಗೆ ತಕ್ಕ ಬೇವಿನಕಾಳಿ... ಚಂಡಿ ಪ್ರಚಂಡಿ, ರಾಕ್ಷಸಿ, ನಿನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಕಾದಿದೆ, ಮುಂದೆ.

ಬೇವಿನಕಾಳಿ : ಅಬ್ಬಬ್ಬಾ... ಶಿವಶಿವಾ... ಅಷ್ಟೊತ್ತಿಂದ ಹೇಳಿದ್ನೆಲ್ಲಾ ಈ ಹಾಳು ಕಿವಿ ಕೇಳಿ ಕೇಳಿ ಕಿವುಡಾಗೋಯ್ತು... ಹೊರಡು ಹೊರಡು ಮಹಾರಾಯ.

(ಮಾದೇಶ್ವರರನ್ನು ತಳ್ಳಲು ಬಿದ್ದು ರಕ್ತ ಹರಿಯುವುದು ಆಗ ಚಾಕರಿಯವಳು ಬಂದು)

ಸೊಸೆ : ಕಾಳವ್ವಾ... ಕಾಳವ್ವಾ...

ಬೇವಿನಕಾಳಿ : ಏನೇ? ಏನೇ ಏನಾಯ್ತೋ?

ಸೊಸೆ : ಯಾರೋ ಮಹಾ ಸನ್ಯಾಸಿಗಳು, ಜಂಗಮರು ಬರುವುದೇ ಪುಣ್ಯ. ನಾವೇ ಕರೆದು ಅವರ ಪಾದಪೂಜೆ ಮಾಡಬೇಕು. ಅಂಥದ್ದರಲ್ಲಿ ಅವರಾಗಿಯೇ ಇಲ್ಲಿಗೆ ಬಂದಿದ್ದಾರೆ, ಅವರಿಗೆ ದಾನ ನೀಡುವುದು ಮಹಾಪುಣ್ಯ. ಭಿಕ್ಷೆ ಕೊಡದಿದ್ದರೆ ಹೋಗಲಿ, ತಳ್ಳಿ ರಕ್ತ ಹರಿವಂತೆ ಮಾಡಿರುವುದು ನಿಮಗೆ ಧರ್ಮವೇ? ಈ ರಕ್ತ, ಅಯ್ಯೋ ನೋಡಲಾರೆ...

ಬೇವಿನಕಾಳಿ : ನೋಡಲಾರದೆ ಹೋದ್ರೆ ಕಣ್ಣು ಮುಚ್ಕೋ ನನ್ನನ್ನು ಪ್ರಶ್ನಿಸಲು ನಿನಗೆ ಈಗ ಪೌರುಷ ಬಂತೇನು?

ಸೊಸೆ : ಈ ಸನ್ಯಾಸಿಯ ಕಷ್ಟ ನೋಡಲಾರೆ, ನನಗೆ ನಿಮ್ಮ ವರ್ತನೆ ಹಿಡಿಸೊಲ್ಲಾ.

ಮಾದೇಶ್ವರ : ನೀನಾರವ್ವಾ?

ಸೊಸೆ : ನಾನು ಈ ಮನೆಯ ಸೊಸೆ ಮಹಾದೇವ.

(ಎಂದು ಅಡ್ಡ ಬೀಳುವಳು)

ಮಾದೇಶ್ವರ : ನಿನಗೆ ಒಳ್ಳೆಯದಾಗಲವ್ವಾ. ನಿನ್ನಷ್ಟು ಕರುಣೆ ಮನೆಯ ಒಡತಿಗಿಲ್ಲ, ಅದೇ ನಿಮ್ಮಿಬ್ಬರಿಗಿರುವ ವ್ಯತ್ಯಾಸ.

ಬೇವಿನಕಾಳಿ : ಏನೇ... ಆ ಅಯ್ಯನೊಂದಿಗೆ ಮಾತಾಡ್ತಾ ನಿಂತ್ಬುಟ್ಟೆ ನೀರು ಕಾದಿದೆಯೇ ಏನು?

ಸೊಸೆ : ಬನ್ನಿ ಅತ್ತೆ ಎಲ್ಲಾನೂ ಮಾಡಿವ್ನಿ.

ಬೇವಿನಕಾಳಿ : ಹಾಗಿರಬೇಕು ಹೆಣ್ಣು ಮಕ್ಕಳು.

(ಎಂದು ಇಬ್ಬರೂ ಹೊರಡುವರು. ಸ್ನಾನಮಾಡಿ ಬರುತ್ತಾಳೆ. ಸೊಸೆ ಊಟ ತಂದಿವಲು ಉರಿಗಣ್ಣು ಬಿಡುತ್ತಾ)

ಬೇವಿನಕಾಳಿ : ಏನು ಈ ರಾಜವೈಭೋಗ. ಬಡತನದಿಂದ ಕೆಟ್ರೂ ಬುದ್ಧಿ ನಿನಗೆ ಬರಲಿಲ್ವೇ?

(ಕೂದಲನ್ನು ಹಿಡಿದು ಹೊಡೆಯಲಾರಂಭಿಸಿ ನಂತರ)

ತೆಳ್ಳಗೆ ಸ್ವಲ್ಪ ಅಂಬಲಿ ಮಾಡಿದ್ರಾಗ್ತಿರಲಿಲ್ಲೇ?

ಮಾದೇಶ್ವರ : ತಾಯೇ... ಭಿಕ್ಷೆ ನೀಡವ್ವಾ.

ಬೇವಿನಕಾಳಿ : ಇವನು ಇನ್ನೂ...

(ಎಂದು ಎದ್ದು ಬರುತ್ತಿರಲು)

ಮಾದೇಶ್ವರ : ದಾನ ಮಾಡದಿದ್ದರೆ ಸರ್ವಸ್ವವೂ ನಾಶವಾಗುವುದು.

ಬೇವಿನಕಾಳಿ : "ಅಟ್ಟ ಸ್ವರ್ಗವಲ್ಲ, ಘಟ್ಟ ಮೇರಲ್ಲ" ಹೋಗು ಹೋಗು-ನನಗೆ ಸರ್ವಸ್ವವೂ ನಾಶವಾಗಲಿ ನೋಡೋಣ.

(ಮಾದೇಶ್ವರರು ಹೊರಡುವರು)

ಸೊಸೆ : ಮೊದಲೊಂದು ಸಾರಿ ನಾಶವಾಗಿತ್ತು. ಇನ್ನು ಸರಿಯಾಗಿರ್ತೀವಿ ಅಂತ ಹೇಳಿದ್ಮೇಲೆ ಐಶ್ವರ್ಯ ಕೂಡಿ ಬಂತು. ಈಗ ಮತ್ತೆ ಹಾಗೇ ಆದ್ರೆ.

ಬೇವಿನಕಾಳಿ : ಆಗುತ್ತೆ ನಿನ್ನ ತಿಥಿ ನಡೆ... ಅದಕ್ಕೇ ಬುದ್ಧಿ ಇರಬೇಕು ಅಂತ ಹೇಳಿದ್ದು.

ಸೊಸೆ : ದೇವರು ಕಣ್ಣಿಡ್ದೇ ಹೋದ್ರೆ ಸರ್ವವೂ ನಾಶವಾದ್ರೂ ಆಗಬಹುದು.

ಬೇವಿನಕಾಳಿ : ನಡ್ಯೇ... ಒಳ್ಗೆ... ಊಟ ಮಾಡಬೇಕು.

(ಇಬ್ಬರೂ ನಡೆಯುವರು)

(ಮಾದೇಶ್ವರರು ಘೋರ ತಪವನ್ನಾಚರಿಸುತ್ತಿರಲು ಅಲ್ಲಿಗೆ ಗಂಗಾಧರ ಸರ್ಪ ಬಂತು, ಮಾದೇಶ್ವರ ಲಿಂಗಕ್ಕೆ ಹೆಡೆಬಿಚ್ಚಿ ನೆರಳು ಮಾಡಿತು. ಬಸವ ಬಂದು ಮುಂದೆ ಮಂಡಿಯೂರಿತ್ತು. ಬಿಲ್ಲಯ್ಯ ಕಾರಯ್ಯ ಶಿರಬಾಗಿ ನಿಂತರು.)

ಧ್ವನಿ : ಗಂಗಾಧರ ನಿನ್ನ ಗರ್ವ ಸಂಪೂರ್ಣ ಅಡಗಿತೇ?

ಗಂಗಾಧರ : ನನ್ನ ಸ್ಥಿತಿಯನ್ನು ನೋಡಿದ ಮೇಲೆ ನಿಜ ಎಂದು ಹೇಳಬೇಕೇ ಪ್ರಭು?

ಮಾದೇಶ್ವರ : ಬಸವಣ್ಣಾ ನೀನು ಬಂದುಬಿಟ್ಟಿದ್ದೀಯಾ?

ಬಸವ : ತಮ್ಮನ್ನು ಬಿಟ್ಟು ನಾನಿರಲಾರೆ ಪ್ರಭು.

ಧ್ವನಿ : ಸರಿ... ಇಬ್ಬರೂ ನನ್ನೆಡೆಯಲ್ಲೇ ಇದ್ದು ಶಿವಸಾಯುಜ್ಯ ಪಡೆಯಿರಿ. ಬಿಲ್ಲಯ್ಯ ಕಾರಯ್ಯ ನೀವು ಅಷ್ಟು ದಿನಗಳಿಂದ ನಮ್ಮ ಸೇವೆಯಲ್ಲಿ ನಿರತರಾಗಿದ್ದುದಕ್ಕಾಗಿ ನಿಮಗೂ ಕೈಲಾಸ ದೊರೆಯಲಿ.

ಕಾರಯ್ಯ,ಬಿಲ್ಲಯ್ಯ: ಮಹಾಪ್ರಸಾದ ಪ್ರಭು.

(ಇಬ್ಬರೂ ಕಲ್ಲಿನಂತಾಗುವರು. ಬಸವ ಕಲ್ಲಾಗುವುದು. ಗಂಗಾಧರ ಹಾವಾಗಿ ಸುತ್ತಿ ಕೊಳ್ಳುವನು.)

ಮಂಗಳಂ ಜಯ ಜಯ ಮಂಗಳಂ ಮಹಾನುಭಾವಗೇ।
ಮಂಗಳಂ ಜಯ ಜಯ ಮಂಗಳಂ ಮಹಾದೇವಗೇ ॥ ಪ ॥

ಶ್ರೀಶೈಲ ನಿರ್ಮಾಯಗೇ, ಪರಶು ಪಾಶ ಧರಗೇ।
ಶಿಷ್ಟ ಪರಿಪಾಲಿತ, ದುಷ್ಟ ಮರ್ಧಿತೇಶಗೇ।
ಅಕ್ಷಿಮಾಲಧರಗೇ, ಶಶಾಂಖ ಶೇಖರಗೆ।
ನಿರ್ಮಾಯ ಗಣೇಶಗೆ, ವ್ಯಾಘ್ರಾರೂಢಗೇ ॥ ೧ ॥

ಜಿನ ಶ್ರವಣರಾದಿ ಅಮರ, ಬೇವಿನ ಕಾಳಿಯರ ನಾಶಕ್ಕೆ।
ಸೋರೆ ಬುರುಡೇ ನೀರ ಚತುರಂಗ ಬಲಕ್ಕೇ ನೀಡಿಮುದಕ್ಕೇ।
ಗೋಸುಂಬೆಯ ಪೂಮಾಡುವ ಸುತ್ತೂರ್ಮಠ ಸುಖ ಅಂದ್ರೆ।
ಕುಕ್ಕೇಲ್ತುಂಬಿತ್ತು ರಾಗಿ ಎಂಬ ಗಾದೆಯವ ನೀಡಿಮುದಕ್ಕೇ ॥ ೨ ॥

ನಡುಮಲೆ ಕ್ಷೇತ್ರದಿ ಕಡು ಶಿವಯೋಗದಿ ಧ್ಯಾನದೊಳಿರುತ।
ಪೊಡವಿಲಿ ಕಷುದಯೆಯಿಂದಲಿ ಭಕ್ತರ ಕರುಣಿಸುತಿರುವಗೇ।
ವಿಜಯದಶಮಿ ಶಿವರಾತ್ರಿ ಯುಗಾದಿ ದೀವಳಿಗೆಯಲಿ ಭಜಿಸುತ।
ಭಕ್ತ ಜನಗಳನು ಮಮತೇಲಿ ರಕ್ಷಿಸುತಿರುವ ಮಾದೇವಗೆ ॥ ೩ ॥

(ಕೈಲಾಸದಲ್ಲಿ ಈಶ್ವರ ಪಾರ್ವತಿ ಒಲಗಗೊಟ್ಟಿದ್ದಾರೆ)

ಈಶ್ವರ : ಅಂತೂ ಕೊನೆಗೂ ಒಪ್ಪಿಕೊಂಡೆಯಲ್ಲ.

(ಇಬ್ಬರಿಗೂ ನಿರ್ಮಾಯ ನಮಸ್ಕರಿಸಿ ಪಾರ್ವತಿ ಒಂದು ರೀತಿ ಮುಖ ಮಾಡಿ ಕುಳಿತುಕೊಳ್ಳಲು)

ನಿರ್ಮಾಯ : ಮಾಹಾತಾಯೇ ಆದದ್ದಾಯ್ತು, ಇನ್ನು ಆ ವಿಷಯವನ್ನು ಮರೆತು ಬಿಡಿ. ತಮ್ಮೀರ್ವರ ಆಶೀರ್ವಾದ ಸದಾ ನನ್ನ ಮೇಲಿರಲಿ. ಇವೆಲ್ಲಾ ಈಶ್ವರನ ಲೀಲಾಮಯ ಆಟಗಳು. ನಾವು ಅದಕ್ಕೆ ತಕ್ಕಂತೆ ಆಟವಾಡಿದೆವು ಅಷ್ಟೆ. ಇದರಲ್ಲಿ ಯಾರೂ ಗೆದ್ದಂತಲ್ಲ, ಯಾರೂ ಸೋತಂತಲ್ಲ.

ಈಶ್ವರ : ನೋಡಿದೆಯಾ ಪಾರ್ವತಿ, ನಿರ್ಮಾಯನ ದೊಡ್ಡತನವನ್ನು. ಈಗ ನಿನ್ನ ಲೀಲೆಗಳು ಭೂಲೋಕದಲ್ಲಿ ಆಯಿತಲ್ಲಾ. ನಿರ್ಮಾಯ ಗಣೇಶ್ವರ, ಮಹಾದೇವಾ ನಿನ್ನ ಕಟ್ಟುನಿಟ್ಟಿನ ಬ್ರಹ್ಮಚರ್ಯ ನಿನ್ನ ಶಿವಧರ್ಮ ಪ್ರಕಾಶನ, ದುಷ್ಟರ ಮರ್ಧನ, ಶಿಷ್ಟರ ಪರಿಪಾಲನೆ ನಡೆಸಿದ ನಿನ್ನ ಲೀಲೆಗಳನ್ನು ನೋಡಿ ಬಹಳ ಸಂತೋಷವಾಯಿತು. ಪಾರ್ವತಿಯ ಮಾತಿಗೆ ಸವಾಲನ್ನು ಹಾಕಿ ಆದರ್ಶನಾದೆ. ನೀನು ನೆಲೆಸಿದ್ದ ಕ್ಷೇತ್ರವು ಎಂದೆಂದಿಗೂ ಮಹಾಕ್ಷೇತ್ರವಾಗಿ ಮೆರೆಯಲಿ, ನಿನ್ನ ಹೆಸರು ಅಮರವಾಗಲಿ.

ಪಾರ್ವತಿ : ಮಹಾದೇವಾ, ನೀನು ಮಾಯೆಗೆ ಸಿಲುಕದ ಮಾದೇಶ್ವರನಾಗಿ ಭೂಲೋಕದಲ್ಲಿ ಮೆರೆದೆ. ಪ್ರತಿಯೊಬ್ಬರ ಬಾಯಲ್ಲೂ ಮಾದೇಶ್ವರ ಮಾದಪ್ಪ ಎಂದು ಮೊದಲಾಗಿ ಹೊಗಳಿಸಿಕೊಳ್ಳುತ್ತಿರುವ ನಿನಗೆ ಸನ್ಮಂಗಳ ಉಂಟಾಗಲಿ.

(ಮಂಗಳ ವಾದ್ಯಗಳು ಮೊಳಗಿದುವು. ಪುಷ್ಪ ವೃಷ್ಟಿಯಾಗುತ್ತಿದ್ದಂತೆಯೇ ಸರ್ವಗಣಗಳೂ "ಮಾದೇಶ್ವರರಿಗೆ ಉಘೇ... ಉಘೇ... " ಎಂದು ಘೋಷಿಸುವರು. ಈಶ್ವರ ಪಾರ್ವತಿಯರು ಅದೃಶ್ಯರಾಗುವರು. ನಿರ್ಮಾಯ ಗಣೇಶ್ವರನು ನಮಿಸುತ್ತಿದ್ದಂತೆಯೇ ಪರದೆ ಮೆಲ್ಲ ಮೆಲ್ಲನೆ ಬೀಳುವುವು.)



# ಹಳ್ಳಿಯಾದರೇನು ಶಿವ....?

## ಪ್ರಥಮ ಪ್ರದರ್ಶನ

*೨೫-೬-೭೫ರಂದು ಬೆಂಗಳೂರು ನಗರದ ಬಾಲ ಭವನದಲ್ಲಿ ಏರ್ಪಡಿಸಿದ್ದ ಮಕ್ಕಳ ನಾಟಕೋತ್ಸವದಲ್ಲಿ ಹದಿನಾಲ್ಕು ವರ್ಷಗಳೊಳಗಿನ ಬಾಲಕ ಬಾಲಕಿಯರಿಂದ ಅಭಿನಯಿಸಿದ ಯಶಸ್ವಿ ನಾಟಕ ಬಿ.ಎಸ್. ಸ್ವಾಮಿ ಅವರ "ಹಳ್ಳಿಯಾದರೇನು ಶಿವಾ....?"*

*ಗ್ರಾಮೀಣ ಹಿನ್ನೆಲೆಯಲ್ಲಿ ನಡೆದ ನಾಟಕದಲ್ಲಿ ಹಳ್ಳಿ ಹಾಗೂ ಪಟ್ಟಣದ ಮಕ್ಕಳು ತಮ್ಮ ತಮ್ಮ ಅನುಭವಗಳನ್ನು ವ್ಯಕ್ತಪಡಿಸಲು ಪ್ರಯತ್ನಿಸಿದುದೇ ನಾಟಕದ ವಸ್ತು. ನಾಟಕದ ಯಶಸ್ಸಿಗೆ ನಿರ್ದೇಶಕ ಶ್ರೀ ಸವಿರಾಜು, ಸವಿಕಲಾ ನಿಕೇತನದ ಅಧ್ಯಕ್ಷೆ ಶ್ರೀಮತಿ ಶಿರೂರಮಠ ಹಾಗೂ ಬಾಲ ಕಲಾವಿದರುಗಳು ಕಾರಣರಾದರು.*

**ಪಾತ್ರವರ್ಗ:**

| | | | |
|---|---|---|---|
| ೧. ಸಿ.ಆರ್. ಆಶಾ | - ಅನಿತಾ | ೭. ಲಲಿತಾ ಸಿಂತ್ರೆ | - ಬೈರಿ |
| ೨. ಡಿ. ಶೋಭಾ | - ಸುನಿತಾ | ೮. ಬಾಲಸುಬ್ರಹ್ಮಣ್ಯ | - ಸತ್ಯ |
| ೩. ಭಾಗ್ಯಲಕ್ಷ್ಮಿ | - ಅಂಜು | ೯. ಎಸ್.ಹೆಚ್. ಮಹೇಶ್ವರ | - ಮಂಟ್ಯ |
| ೪. ಎಸ್. ಪುಷ್ಪ | - ಉಳ್ಳಿಕೆಂಪಿ | ೧೦. ಆರ್. ನಿತೀನ್ | - ಬೋರ |
| ೫. ಸಿ.ಆರ್. ಗೀತಾ | - ಗಾಡಿಸಿದ್ದಿ | ೧೧. ಸಂಜೀವ ಟೊಣಪಿ | - ಚಿಂಕ್ರ |
| ೬. ಬಿ.ಎಸ್. ನಿರ್ಮಲಾ | - ತಿಮ್ಮಿ | ೧೨. ಕೃಷ್ಣಶೆಟ್ಟಿ | - ಆಪಾಟೀಪಾಟಯ್ಯ |

***ಸಂಗೀತ ಸಂಯೋಜನೆ** : ಶ್ರೀ ಶಿವಸ್ವಾಮಿ, ಶ್ರೀ ಡಿ.ಆರ್. ರಾಜಗೋಪಾಲ್*

***ರಂಗ ಸಜ್ಜಿಕೆ, ಧ್ವನಿ, ಬೆಳಕಿನ ವ್ಯವಸ್ಥೆ** : ಬಾಲ ಭವನ ವಿಭಾಗ*

***ನಿರ್ದೇಶನ** : ಸವಿರಾಜು*

## ಬಾನುಲಿಯಲ್ಲಿ

*೧೩-೫-೭೭ರಂದು ಬೆಂಗಳೂರು, ಭದ್ರಾವತಿ ಹಾಗೂ ಧಾರವಾಡ ಕೇಂದ್ರಗಳಿಂದ "ಹಳ್ಳಿಯಾದರೇನು ಶಿವಾ?" ರಂಗ ನಾಟಕ, ಶ್ರವ್ಯ ನಾಟಕವಾಗಿ ಪರಿವರ್ತನೆಗೊಂಡು ಪ್ರಸಾರವಾಯಿತು. ಪ್ರಸಾರಕ್ಕೆ ನೆರವಾದ ಶಾಲಾ ಪ್ರಸಾರ ವಿಭಾಗದ ನಿರ್ದೇಶಕರಾದ*

*ಶ್ರೀ ಜಿ.ಬಿ. ಆಲದಕಟ್ಟೆಯವರಿಗೆ, ಕಾರ್ಯಕ್ರಮ ಸಿದ್ಧಪಡಿಸುವಲ್ಲಿ ನೆರವಾದ ಶ್ರೀ ಹೆಚ್.ಎಸ್. ವೇಣುಗೋಪಾಲ್ ಹಾಗೂ ಶ್ರೀ ಗಂಗಪ್ಪನವರಿಗೆ ನಿರ್ದೇಶನದ ಹೊಣೆ ಹೊತ್ತ ಶ್ರೀ ಸವಿರಾಜು ಹಾಗೂ ಸವಿಕಲಾ ನಿಕೇತನದ ಕಲಾವಿದರಿಗೆ ಅನಂತ ವಂದನೆಗಳು.*

**ಪಾತ್ರವರ್ಗ:**

ಕೆ. ವೆಂಕಟಕೃಷ್ಣ, ಆರ್. ನಿತೀನ್, ಜಿ. ಶ್ರೀನಿವಾಸಮೂರ್ತಿ, ಎಂ.ಎಸ್. ಜಗದೀಶ, ಎನ್.ಹೆಚ್. ಮಹೇಶ್, ಎಂ.ಎನ್. ಹೇಮಾ, ಸಿ.ಪಿ. ವಿಜಯಕುಮಾರಿ, ಎಸ್. ನಿರ್ಮಲಾ, ಡಿ. ವಸಂತಕುಮಾರಿ, ಎ. ರಾಜೇಶ್ವರಿ, ಆರ್.ಡಿ. ಭಾಗ್ಯ, ಎಂ. ಲಕ್ಷ್ಮೀದೇವಿ

## ಹಳ್ಳಿಯಾದರೇನು ಶಿವಾ....?

*ಹಳ್ಳಿ ಪಟ್ಟಣಗಳ ಮಕ್ಕಳ ರೀತಿ-ನೀತಿ, ಆಟಗಳು, ಸಂಭಾಷಣೆಗಳು ಮತ್ತು ಅಲ್ಲಲ್ಲಿ ಪಟ್ಟಣದ ಬುದ್ಧಿಜೀವಿ ಹುಡುಗನ ಉಪದೇಶಗಳ ಜೊತೆಗೆ ಉತ್ತಮ ಹಿನ್ನೆಲೆಯ ಸಂಗೀತವೂ ಸೇರಿ ಸವಿಕಲಾ ನಿಕೇತನದ 'ಹಳ್ಳಿಯಾದರೇನು ಶಿವಾ....?' ನಾಟಕವನ್ನು ಪ್ರದರ್ಶಿಸಿತು. ಪ್ರಶಂಸಾರ್ಹ ರಂಗಸಜ್ಜಿಕೆಯಲ್ಲಿ ಹಲವಾರು ಮಕ್ಕಳು ವೈಯಕ್ತಿಕ ಪ್ರತಿಭೆಗೆ ಕೊರತೆ ಇಲ್ಲದಂತೆ ನಾಟಕ ಅನಾಯಾಸವಾಗಿ ಮೂಡಿ ಬಂತು. ಗಾಡಿಸಿದ್ದಿ (ಸಿ.ಎಂ. ಗೀತಾ) ತಿಮ್ಮಿ (ಬಿ.ಎಸ್. ನಿರ್ಮಲಾ) ಅವರ ನಟನ ನೈಜವಾಗಿತ್ತು. ಇನ್ನು ಅನಿತಾ, ಸಿ.ಆರ್. ಆಶಾ, ಸುನೀತಾ, ಡಿ. ಶೋಭಾ ಸತ್ಯ ಮತ್ತು ಬಾಲಸುಬ್ರಹ್ಮಣ್ಯಂ ಇವರ ಅಭಿನಯ ಮತ್ತು ಹಿನ್ನೆಲೆಯ ಸಂಗೀತದೊಡನೆ ವೃಂದ ನೃತ್ಯಗಳಲ್ಲಿ ಸಿನಿಮೀಯತೆಯ ಪ್ರಭಾವ ಮೂಡಿ ಬಂದಿದ್ದು ಹಿತವಾಗಲಿಲ್ಲ. ಒಟ್ಟಿನಲ್ಲಿ ಕುಂಟೆಬಿಲ್ಲೆ, ಅಣ್ಣೆಕಲ್ಲು, ಚಿನ್ನಿದಾಂಡು, ಗೋಲಿಗಳನ್ನು ನಾಟಕದಲ್ಲಿ ಅಳವಡಿಸಿದುದು ಮಕ್ಕಳಿಗೆ ತಮಾಷೆಯಾಗಿತ್ತು. ಕತ್ತಲೆ ಬೆಳಕಿನ ಕಾರ್ಯವೂ ತೃಪ್ತಿಕರವಾಗಿತ್ತು.*

**– ಕನ್ನಡ ಪ್ರಭ ೧೨-೧೨-೭೫**

**ಧ್ವನಿ :**

"Where there is a will there is a Way" ಎಂಬ ನಾಣ್ಣುಡಿಯನ್ನನುಸರಿಸಿ ರೂಪಿತವಾದ ನಾಟಕ "ಹಳ್ಳಿಯಾದರೇನು ಶಿವಾ....?"

ಸತ್ಯ ನುಡಿ, ಮೋಸ ಮಾಡಬೇಡ, ಸುಳ್ಳು ಹೇಳಬೇಡ, ಎಲ್ಲರನ್ನೂ ಒಂದಾಗಿ ಕಾಣು, ಜಗಳವಾಡಬೇಡ, ಆಡುವಾಗ ಆಡು, ಓದುವಾಗ ಓದು, ನೀನು ಚೊಕ್ಕಟವಾಗಿರು, ನಿನ್ನ ಸುತ್ತಮುತ್ತಣ ಸ್ಥಳಗಳನ್ನು ಚೊಕ್ಕಟವಾಗಿಡು, ಹಳ್ಳಿಯವರಾದರೇನು, ಪಟ್ಟಣದವರಾದರೇನು? ಮನುಷ್ಯರೆಲ್ಲಾ ಒಂದೇ ಎಂಬ ಧ್ಯೇಯವನ್ನು ಸಾರುವ ಮಕ್ಕಳ ಕಿರು ನಾಟಕ "ಹಳ್ಳಿಯಾದರೇನು ಶಿವಾ....?"

# ಹಳ್ಳಿಯಾದರೇನು ಶಿವಾ...?

**ಪಾತ್ರ ವರ್ಗ :**

೧. ಅನಿತಾ ೨. ಸುನಿತಾ ೩. ಅಂಜು ೪. ಸತ್ಯ ೫. ಬೋರ ೬. ಚಿಂಕ್ರ ೭. ಮಂಟ್ಯ ೮. ಆಪಾಟೀಪಾಟಯ್ಯ ೯. ಗಾಡಿಸಿದ್ದಿ ೧೦. ಉಳ್ಳಿಕೆಂಪಿ

(ಹಳ್ಳಿಯ ಮತ್ತು ಪಟ್ಟಣದ ಹದಿನಾಲ್ಕು ವರ್ಷದೊಳಗಿನ ಹುಡುಗ ಹುಡುಗಿಯರು)

(ಹುಲ್ಲಹಳ್ಳಿ ಗ್ರಾಮ. ಗುಡಿಸಲುಗಳು, ನಾಯಿ ಕೋಳಿಗಳ ಕೂಗು. ಹುಡುಗರು ಆಟವಾಡುತ್ತಾ ನಿಂತಿದ್ದಾರೆ. ಸೆಗಣಿಯನ್ನು ತೆಗೆದುಕೊಂಡು ಅಲ್ಲಿಗೆ ಅನಿತಾ, ಸುನಿತಾ, ಅಂಜೂ ಮೂವರೂ ಬರುತ್ತಾರೆ.)

ಚಿಂಕ್ರ : ಅಂಡ್ಯೋ... ಬುಂಡ್ಯೋ...

ಮಂಟ್ಯ : ಬುಂಡ ಕಣ್ಲಾ...

ಚಿಂಕ್ರ : ಅಂಡ ಕಣ್ಲಾ...

ಮಂಟ್ಯ : ಬುಂಡ... (ಆತ ಸೆಗಣಿ ಇಡುವನು)

ಚಿಂಕ್ರ : ನೋಡ್ಲಾ ಬುಂಡ... ಕೊಡು.... ಕೊಡು ಅತ್ತು ಪೈಸವಾ...

(ನಾಲ್ಕಾರು ಹುಡುಗರು ಉದ್ಗಾರ ತೆಗೆಯುವರು. ಸೋತವರು ಹತ್ತು ಹತ್ತು ಪೈಸೆ ಕೊಡುವರು)

ಅನಿತಾ : ಇದೇನಾಟ್ವಪ್ಪಾ...?

ಅಂಜು : ಕಾಸಿನಾಟ...

ಸುನಿತಾ : ಜೂಜು...

ಸತ್ಯ : ತೊಪ್ಪೆ ಆಟದಲ್ಲಿ ಜೂಜು.

ಚಿಂಕ್ರ : ಇದ್ಯಾರಪ್ಪಾ... ಬಂದು ಈ ಆಟಾನೂ ಆಚರ್‍ಯವಾಗಿ ನೋಡ್ತವ್ರೆ...

ಅನಿತಾ : ನಾವೂ ನಿಮ್ಮಂಗೇ ಮನುಷ್ಯರು.

ಉಳ್ಳಿ : ಇಲ್ಲ ಅಂದವ್ರ್ಯಾರವ್ವಾ...?

ಮಂಟ್ಯ : ಅಲ್ಲ ಇದೂ ಒಂದು ಆಟ ಅಂತ ನೋಡ್ಕಂಡು ನಿಂತ್ರ್ಯಾ ಅಂತ ವಸಿ ನಗ ಬಂತು.

ಚಿಂಕ್ರ : ಚನ್ನಗಾಯ್ತಾ ಆಟ?

ಸುನಿತಾ : ಹೊಸತರವಾಗಿದೆ.

ಅನಿತಾ : ನೀವೆಲ್ಲಾ ಏನ್ ಕೆಲಸ ಮಾಡ್ತೀರಿ?

ಚಿಂಕ್ರ : ಎಮ್ಮೆ ಕಾಯ್ತೀವಿ.

ಬೋರ : ಕುರಿ ಮೇಯಿಸ್ತೀವಿ.

ಮಂಟ್ಯ : ಹಸುಗಳ ಕಾಲಾಡಿಸ್ತೀಮಿ...

ಚಿಂಕ್ರ : ನೀವು...

ಅನಿತಾ : ನಾವು ಸ್ಕೂಲಿನಲ್ಲಿ ಓದ್‌ತೀವಿ...

ಚಿಂಕ್ರ : ನೋಡು ನೋಡು ಅಪ್ಪಯ್ಯಪ್ಪನ ಗದ್ದಗ್ ನುಗ್ತಾ ಅವ ಕಣ್ಲಾ ಪಸುಗಳು ಓಡು... ಓಡು...

(ಎನ್ನಲು ದೊಣ್ಣೆ ತೆಗೆದುಕೊಂಡು ಪೇಟ ಕಟ್ಕೊಂಡು ಓಡುತ್ತಾ... ಏಯ್.... ಥೂ... ಥೂ... ಎಂದು ಅಟ್ಟುವ ಶಬ್ದು ದೂರದಿಂದ ಬರುವುದು)

ಸತ್ಯ : ನೀವು ಸ್ಕೂಲ್ಗೋಗಲ್ವಾ?

ಚಿಂಕ್ರ : ಇಲ್ಲ ಕನವ್ವಾ... ನಮಗ್ಯಾಕ್ ಇಸ್ಕೂಲು.

ಸುನಿತಾ : ಓದೋದ್ಕೆ...

ಮಂಟ್ಯ : ತಲೆಗತ್ತಿದ್ರಲ್ವೇ ಬುದ್ಧಿ... ಅಂದಾಗೆ ನೀವು ಯಾವೂರವ್ರಪ್ಪಾ...?

ಸತ್ಯ : ನಾವು ಮೈಸೂರಿನೋರು....

ಚಿಂಕ್ರ : ಯಾರ ಮನೆಗೆ ಬಂದಿದ್ದಿರ‍್ಯಪ್ಪಾ?

ಅನಿತಾ : ನಮ್ಮ ಚಿಕ್ಕಪ್ಪನವರ ಮನೆ, ಮಾಡಿ ಮನೆ ಶಂಕ್ರಪ್ಪ

ಮಂಟ್ಯ : ಮಾಡಿ ಅಟ್ಟಿ ಸಾವ್ಕಾರ ಮನೆಗೆ ಬಂದಿದ್ದರ‍್ಯಳಿ...

ಸತ್ಯ : ಹ್ಞೂಂ...

ಮಂಟ್ಯ : ನಿಮ್ಮೆಸ್ರೇನವ್ವಾ?

ಸತ್ಯ : ಸತ್ಯ ಅಂತ.

ಚಿಂಕ್ರ : ನಿಮ್ಮೆಸ್ರು...?

ಸುನಿತಾ : ಆಕೆ ಹೆಸರು ಅನಿತಾ, ನನ್ನ ಹೆಸರು ಸುನಿತಾ.

ಮಂಟ್ಯ : ಚೆನ್ನಕವಾ ಕನ್ಲಾ ಎಸ್ರುಗಳು.

ಬೋರ : ಅವ್ರುಟ್ಟಿರೋ ಬಟ್ಟಗ್ಳ್ನೋಡು ಎಂಗ್ ಮಿರಮಿರ‍್ನ ಮಿಂಚ್ತವಾ.. ಸಿಲಮ್‌ದವ್ರು ನಾಟಕದವ್ರು ಆಕ್ಕಳಾ ಅಂಗದ ಅಲ್ವಾ... ನಾಮೂ ಇದೀವಿ ಯಾಕಾ... ಕೊಳ ಮೊಟ್ಟ ಕನ್ ತಕ್ಕೋ...

ಸುನಿತಾ : ಯಾಕ್ ನಿನ್ನ ಬಟ್ಟೆಗಳು ಚೆನ್ನಾಗಿಲ್ಲಾ...?

ಬೋರ : ನೀವೇ ನೋಡೀ... ಕೊಳಬೊಂತಗಳ್ನ...

ಸುನಿತಾ : ಕೊಳೆ ಇವ್ರೆ ಒಗಿಬೇಕಾಗಿತ್ತಪ್ಪಾ. ನಿಸ್ವಾರ್ ಬ್ಯಾಡ ಅಂದ್ರು. ಕೊಳೆ ಬಟ್ಟೆ ಹಾಕ್ಕೋ ಅಂತ ಯಾರು ಹೇಳಿದ್ರು?

ಬೋರ : ಸಾಬೂನ್ ಬೇಕಲ್ಲವ್ವೋ...

ಮಂಟ್ಯ : ಅದ್ಯೋಳೀ...

ಸತ್ಯ : ನಿಮ್ಮ ಅಪ್ಪ ತಕ್ಕೊಡೋದಿಲ್ವೇ?

ಮಂಟ್ಯ : ಅದ್ಕಲ್ಲಾ ಬೇಕಲ್ಲಪ್ಪೋ ದುಡ್ಡು. ದಿನ ಕೂಲಿ ಮಾಡ್ತವ್ನೆ ನಮ್ಮಪ್ಪ ಹೊಟ್ಗೇ ಸಾಲಕಿಲ್ಲ ಬರ ದುಡ್ಡು ಇನ್ನು ಸಾಬೂನ್ ತಕ್ಕೊಟ್ಟಾನಾ...

ಅನಿತಾ : ಅಂಗಾ...

ಬೋರ : ಅಂಗಲ್ದೇ ಇನ್ನ್ಯಂಗೇ ಅಂತಿದ್ರವ್ವಾ

ಅನಿತಾ : ನಿನ್ನೆಸ್ರೇನು?

ಚಿಂಕ್ರ : ಚಿಂಕ್ರ

ಸುನಿತಾ : (ನಗುತ್ತಾ) ಚಿಂಕ್ರ ಅಂದ್ರೇನು?

ಬೋರ : ಇವವ್ನಲ್ಲವ್ವಾ... ಚಿಕ್ಕದ್ನಿಂದ ನಂಗೆ ಇನ್ನೊಂದು ಚಿಂಕ್ರ ಇಟ್ಕೊಡಿ ಇನ್ನೊಂದು ಚಿಂಕ್ರ ಇಟ್ಕೊಡಿ ಅಂತಿದ್ನಂತ. ಅದ್ಕೇ ಅವ್ರಪ್ಪ ಅವ್ವ ಚಿಂಕ್ರ ಅಂತ ಎಸ್ರು ಮಡಗವ್ರೇ...

(ಎಲ್ಲರೂ ಗೊಳ್ ಎಂದು ಮತ್ತೆ ನಗುವರು)

ಚಿಂಕ್ರ : ವೊತ್ತಾಯ್ತು ಕನ್ ಬನ್ರಲ್ಲಾ... ದನಗಳಟ್ಕಂಡೋಗಮು ಮಳೆಬರ ಹಂಗಾಯ್ತೆ...

ಎಲ್ಲರೂ : ಊಂ... ಕನ್ ನಡೀರಿ.

ಅನಿತಾ : ಹೇಗೆ ಆಟ ಆಡ್ತ ನೋಡ್ರಾ? ನಡೀರಿ ನಾವು ಹೋಗೋಣ.

ಸತ್ಯ : ನಡೀರಿ... ಹ್ಯಾಗಿದೇ ನೋಡಿದ್ರಾ ಹಳ್ಳಿ, ಹುಡುಗರು.

ಚಿಂಕ್ರ : ಐಕ್ಳು ಯಾತ್ರ ಮೇಲೊಯ್ತರ ಅಂದ್ರ ಅವುಗಳ ಪೈಕೆ ಮೇಲೋಯ್ತಾವಾ...

ಅನಿತಾ : ಹ್ಯಾಗ್ ಮಾತಾಡ್ತಾನ ಅವ...

ಚಿಂಕ್ರ : ಬನ್ನಿ ಬನ್ನಿ ದನ್ಗಳಟ್ಕಂಡೋಗಮು.

(ಎಂದು ಮತ್ತೆ ಎಲ್ಲರೂ ನಗುತ್ತಾ ಹೊರಡುವರು)

## ದೃಶ್ಯ-೨

(ಗಾಡಿ ಸಿದ್ದಿ ಉಳ್ಳಿಕೆಂಪಿ ಇಬ್ಬರೂ ಅಣ್ಣೆ ಕಲ್ಲು ಆಟವನ್ನು ಆಡುತ್ತಾ ಹಾಡನ್ನು ಹಾಡುತ್ತಿದ್ದಾರೆ. ಅಲ್ಲಿಗೆ ಅನಿತಾ, ಸುನಿತಾ ಇಬ್ಬರೂ ಬಂದು ಆಟವನ್ನು ಗಮನಿಸುತ್ತಾ ತಮ್ಮ ತಮ್ಮಲ್ಲೇ ನಗಲಾರಂಭಿಸುತ್ತಾರೆ. ಇಬ್ಬರೂ ಲಂಗ ಫ್ರಾಕು ಹಾಕಿದ್ದಾರೆ. ಅನಿತಾ ಸುನಿತಾ ಇಬ್ಬರೂ ಪಟ್ಟಣದ ಉಡುಗೆಯಲ್ಲಿದ್ದಾರೆ)

ಜನಪದ ಗೀತೆ

ಓ ನಂದಿ, ಬಾ ನಂದಿ।
ಬಿಸುರಾಜಿ, ಕೆಸುರಾಜಿ।
ಕಾದಳ್ಳು ಕಪ್ಪೆತ್ತಿ॥
ಎರಡವರೆ॥
ಎರಡು ಕಲ್ಲಿಗೆ ಜೋಡಿ।
ಕಪ್ಪು ಭರಣಿಗೆ ಜೋಡಿ।
ಹೊನ್ನದುಂಬಿಗೆ ಜೋಡಿ॥
ಮೂರವರೆ॥
ಮುತ್ತು ಮತ್ತು ಕೋಡಂಗಿ।
ಕಲ್ಲು ಕಟ್ಟೆ ಕೋಡಂಗಿ॥
ನಾಗಪ್ಪ॥
ನಾಗಪ್ಪ ಸ್ವಾಮಿ।
ಹೋಗಪ್ಪಾ ಹುತ್ತಕ್ಕೆ॥
ಅಯ್ಯಯ್ಯೋ॥
ಅಯ್ಯಯ್ಯೋ ಕಂದ।
ಅಲಬಲ ಚೆಂದ॥
ಆರವರೆ॥

ಆರಿಟ್ಟು ನೀರಿಟ್ಟು।
ಬಾಳೆಯ ಪಟ್ಟೆ ಇಟ್ಟು॥
ಏಕ್ರುಸಾರಾಜ॥

ಎಕ್ಕ ಸ್ರಳ್ಳಿ ಮಾರ।
ಚಿನ್ನದ ಗೊಬ್ಬಿ ಮಾರ।
ಸೀರ್ ಗೊಬ್ಬಿ ಮಾರ॥
ನಂಟಿಕ್ಕ॥

ನಂಟೆಂಟು ಹೊಣಗಂಟು।
ನಾಗರ ಸೆಡೆಗಂಟು॥
ತೊಂಬಿಂಬಿ॥

ತೊಂಬಿಂಬಿ ತೋಳ್ಸಿಂಬಿ।
ಎಣ್ಣೇಲಿ ಗಾಜಿಂಬಿ॥
ಪತ್ ರಾಜ॥

ಪತ್ತಸ್ಕೋ ಮೆಚ್ಚಿಸ್ಕೋ।
ಇದೊಂದಾಟ ಗಿಚ್ಚಿ ಸ್ಕೋ॥
ಗಿಚ್ಚಿ ಒಂದು॥
ಗಿಚ್ಚಿ ಗುರುಮಲ್ಲಚ್ಚು।
ಎರಡು ದಾಳಿಂಬಿ।
ಮೂರು ಮುತ್ತಪ್ಪ।
ನಾಲ್ಕು ನಾಗಪ್ಪ।
ಐದು ಬೆಲ್ಲದಚ್ಚು।
ಆರು ಬಸಪ್ಪ।
ಏಳುಕ್ಕೆಲ್ಲೆಲ್ ಬಿದ್ರೂ ಕೊಡೋಲ್ಲ

ತಟ್ಟೆ ಕುಟ್ಟಿ
ತಾಳೆ ಕುಟ್ಟಿ
ತಪಸ್ಸು ಮಾಡಿ
ಹಿಡಿಯಕ್ಕೋಗಿ।
ಕಡಿಯಕ್ ಬಂದು।
ಪಾರ್ವತಿ ಪಟ್ಟೇಶ್ವರಿ।
ಎಲ್ಲೆಲ್ಲೂ ಬಿದ್ರೂ ಕೊಡೋಲ್ಲ।
ಹಾದಿ ಬಸಪ್ಪನಿಗೆ ಅಡ್ಡಬಿದ್ರೂ ಕೊಡೋಲ್ಲ।
ಬೀದಿ ಬಸಪ್ಪನಿಗೆ ಬಿದ್ರೂ ಕೊಡೋಲ್ಲ।
ಚಿಕ್ ಹೂವೆತ್ತು ತಂಬಡಪ್ಪ।
ದೊಡ್ಡ ಹೂವೆತ್ತು ತಂಬಡಪ್ಪ।

ಉಳ್ಳಿ : ಗಾಡಿಸಿದ್ದಿ... ನಾಗೆದ್ದಿವ್ನಿ॥

ಗಾಡಿ : ಊಂಕನುಳ್ಳಿಕೆಂಪಿ.

(ಇಬ್ಬರೂ ಕಿಸಕಿಸನೆ ನಗುವರು)

ಉಳ್ಳಿ : ಯಾಕ್ರವ್ವಾ... ನಕ್ಕಾರಿ... ಪಕಪಕ...

ಅನಿತಾ : ಪಟ್ಟಣದವರು ನೀವು... ನಿಮ್ಮೆಸ್ರೇನು?

ಅನಿತಾ : ಅನಿತಾ... ಸುನೀತಾ...

(ಉಳ್ಳಿಕೆಂಪಿ, ಗಾಡಿಸಿದ್ದಿ ನಗುತ್ತಾ)

ಉಳ್ಳಿ : ಅಂಗಂದ್ರ್ಯಾನವ್ವಾ...?

ಅನಿತಾ : ಹೆಸರು, ನಮ್ಮೆಸ್ರು ಕೇಳಿದ್ರೆ ನಗು ಬರುವಂಗಿದ್ದದಾ? ಗಾಡಿಸಿದ್ದಿ ಉಳ್ಳಿಕೆಂಪಿ ಅಂದ್ರೇನು?

ಗಾಡಿ : ಉಳ್ಳಿಕಂಡಂಗೆ ಕೆಂಪ್ಗವ್ಳೆ ಅದ್ಕೇ ಇವಳ್ನ ಉಳ್ಳಿಕೆಂಪಿ ಅಂತ ಕರೀತಾರೆ ಅವ್ರಪ್ಪ ಅವ್ವ.

ಉಳ್ಳಿ : ಇವರಪ್ಪ ಗಾಡಿ ಇಟ್ಟವ್ನೆ. ಅದ್ಕೇ ಗಾಡಿಸಿದ್ದಿ ಅಂತ ಕರ್ತಾವ್ರೆ.

ಸುನಿತಾ : ನಮ್ದೂ ಹೊಸ ಫ್ಯಾಷನ್ ಹೆಸರು.

ಉಳ್ಳಿ : ಹಳ್ಳಿಯಾಗೆ ಇಂಗೆ, ಪಟ್ಟಣದಾಗಂಗೆ ಅದ್ಯಾಕ್ ನಕ್ಕರೀ ಬುಡಿ.

ಅನಿತಾ : ನೀವೂ, ನಿಮ್ಮೆಸ್ರು, ನಿಮ್ಮ ಆಟ ಬಲು ಪಸಂಗದಾಗದ ಕಣ್ ಬುಡು. ಅದಿರ್ಲಿ ಈಗಾಡಿದ್ರಲ್ಲಾ ಅದ್ಯೇನು ಕಲ್ಲಾಟ?

ಉಳ್ಳಿ : ನಮ್ಮ ಹಳ್ಳಿಯಾಗಿರೋ ಆಟ ಅಣ್ಣೆ ಕಲ್ಲಾಟ

ಗಾಡಿ : ಪಟ್ಟಣದಾಗೆ ನೀವು ಆಡಕಿಲ್ವಾ ಚೆಂಡಾಟ, ಬ್ಯಾಟಾಟ, ಆ ಆಟ, ಈ ಆಟ ಅಂತ ಅಂಗೆ. ಪಟ್ಟಣದ್ದು ಅಂಗಾದ್ರೇ, ನಮ್ಮದು ಇಂಗೇ, ಅದಕ್ಕೆ ನಗದ್ಯಾಕೆ ಅಂತ?

ಸುನಿತಾ : ನಂಗೂ ವಸಿ ಕಲಿಸ್ಕೊಟ್ಟಿಯಾ ಹ್ಯಾಗೆ?

ಅನಿತಾ : ಕೂತ್ಕಳೀ...

(ಇಬ್ಬರೂ ಸೇರಿ ಆಡುವ ಪ್ರಯತ್ನ ಮಾಡುವರು)

ಅನಿತಾ : ನೀವು ಈ ಹಳ್ಳಿಯಾಗೆ ಇನ್ಯಾವಾಟ ಆಡ್ತೀರಿ?

ಗಾಡಿ : ಮಸ್ತಾಗಾಡ್ತೀವಿ, ಕಣ್ಮುಚ್ಚಾಲೆ ಆಟ

ಉಳ್ಳಿ : ಅಳಿಗುಳಿ ಮನೆ ಆಟ ಆಡ್ತೀವಿ.

ಗಾಡಿ : ಕುಂಟೆ ಬಿಲ್ಲೆ ಆಡ್ತೀವಿ.

ಉಳ್ಳಿ : ಅವ್ರೇಕಾಳ್ನಾಟ.

ಗಾಡಿ : ಅಟಗುಳಿ ಆಡ್ತೀವಿ. ಗೊಂಬೆ ಆಟ... ಇಂಗೇ...

ಅನಿತಾ : ಕುಂಟ ಪಟ್ಟೆ ಆಡೋವಾ...

ಗಾಡಿ : ಆಗ್ಲಿ...

(ಗಾಡಿಸಿದ್ದಿ ಬರೆವಳು. ಎರಡು ಹೆಂಚಿನ ಚೂರು ತಂದು ಆಟವನ್ನು ಆರಂಭಿಸ್ತಾರೆ.)

ಗಾಡಿ : ನೀವು ಗಂಡಸ್ರಾಗೆ ಚೆಡ್ಡಿ ಆಕ್ಕಂಡು ಆಡ್ತೀರಲ್ಲಾ ಅದ್ಕಿಂತ ಕಳ್ಳಾ ಸುಮ್ಕಿರವ್ವ ನಗಬ್ಯಾಡಿ ಸುಮ್ಕೆ.

ಅನಿತಾ : ಏನು ನಾತವಲ್ವೇ?

ಗಾಡಿ : ಊಂ ಬಚ್ಚಲದು.

ಸುನಿತಾ : ನಿಮ್ಮೂರ್ನಿ ಇದ್ನೆಲ್ಲಾ ಸರಿಯಾಗಿ ಮುಚ್ಚಿ ಮೂಗಿಗೆ ಬರ್ದೇ ಇರುವಾಗ ಏಕೆ ಮಾಡಬಾರದು?

ಉಳ್ಳಿ : ನಮಗ್ಯೇನು ಗೊತ್ತವ್ವಾ?

ಅನಿತಾ : ನೀವು ಓವದಿಲ್ವಾ?

ಉಳ್ಳಿ : ಓದ್ನಿಲ್ಲಾ ಬುಟ್ಬುಬುಟ್ವೆ.

ಸುನಿತಾ : ಅದ್ಯಾಕೇ?

ಗಾಡಿ : ಯಾಕೆ ಅಂದ್ರೆ ಹೊಲ, ಮನೆ ಕೆಲಸ ನೋಡ್ಕಬ್ಯಾಡ್ವಾ? ಕೂಸ್ಕರ್ಕಬಾರ್ದಾ?

ಸುನಿತಾ : ಅದಕ್ಕೆ ನಿಮ್ಮಪ್ಪ ಅವ್ವಾ ಇಲ್ವಾ?

ಗಾಡಿ : ಅವರು ಕೂಲಿ ಕಂಬಳ ಮಾಡಕೋಗಬ್ಯಾಡ್ವಾ? ಅದ್ಕೇ ನಾವು ಈ ಕೆಲ್ಸ ಮಾಡಬೇಕು.

ಉಳ್ಳಿ : ಹೊಲದಲ್ಲಿ ಕಳ ಕೀಳ್ತೀಮಿ, ನಾಟಿ ಆಕ್ತೀವಿ, ಕಾಯಿ ಕೊಯ್ಯತೀವಿ.

ತೀವಿ : ಎಲ್ಲಾ ಕೆಲ್ಸಾನೂ ಮಾಡ್ತೀವಿ, ಇಸ್ಕುಲ್ಗಾಗೋಗದು.

ಅನಿತಾ : ನಿಂಗ ಓದಕ್ಕೆ ಇಷ್ಟ ಇಲ್ವಾ?

ಗಾಡಿ : ನಾವು ಓದಿ ಕಲಸಕ್ಕೋಯ್ತಿದ್ವಾ ತಕ್ಕಳಿ. ಎಂಗ್ಸು ಮಡ್ಕೆ ಅಂಡು ಕಾಯ್ಲದ್ ತಾನೇ ಅಂತಾಳೇ ಕವ್ವಾ ನಮ್ಮವ್ವಾ. ಅಂಗೇ ಆಗ್ಲಿ ಅಂತ ನಾಮುವೆ ಮಾಡ್ತೀಮಿ...

ಉಳ್ಳಿ : ನೀವಾರ ಒಳ್ಳೆ ಬಟ್ಟೆ ಇಕ್ಕಂಡಿದ್ದೀರಿ. ನಿಮ್ಮ ಅಪ್ಪ-ಅವ್ವದಿರು ಸಂಬಳ ತಗಿತಾರೆ, ಓದುಸ್ತವ್ರೇ... ನಮಗೆಲ್ಲಾ ಎಲ್ಲ ಸದೀತಾದೆ ಏಳಿಮತ್ತ್ರ.

ಗಾಡಿ : ಅದೇ ತಾನ... ನೀವ್ಯಾನೋದ್ದರ್ಯವ್ವಾ.

ಅನಿತಾ : ಹೈಸ್ಕೂಲ್ ಎಯ್ತ್ ಸ್ಟ್ಯಾಂಡರ್ಡ್ ಓದ್‌ತಿವ್ನಿ...

ಉಳ್ಳಿ : ಅದ್ಯಾನು ನಂಗ್ಯಾನ್ ಗೊತ್ತಾದ್ದು ಬುಡಿ... ಅವ್ವೋ...ನೀವು ನಮ್ಮ ಹಾಡ್ನ ಆಡ್ಕಂಡ್ರ್ಯಲ್ಲ ನೀವೊಂದಾಡು ಯೋಳಿ ಮತ್ತೆ.

ಸುನಿತಾ : ಸಿನಿಮಾ ಹಾಡು ಹಾಡ್ಲಾ?

ಅನಿತಾ : ಊಂ... ಹಾಡೇ ಅದೇ ಚೆನ್ನಾಗಿರ್ತೈತೆ.

(ಸುನಿತಾ ಒಂದು ಸಿನಿಮಾ ಧಾಟಿಯ ಹಾಡನ್ನು ಹಾಡುತ್ತಾಳೆ.)

ಗಾಡಿ : ಬಲು ಚೆಂದಾಗಿತ್ತು ಕನ್ರವ್ವಾ. ಒಳ್ಳೆ ಸಿನಿಮ್ದಾಗೆ ಹಾಡ್ದಂಗೆ ಇತ್ತು.

ಸುನಿತಾ : ಹೊತ್ತಾಯ್ತು ಬಾರೆ ಹೋಗೋಣಾ.

ಅನಿತಾ : ಆ ಅಣ್ಣೇಕಲ್ ಕೊಡೇ... ನಾವು ಮನೇಲಿ ಆಪ್ಕೊಂತೀವಿ.

ಉಳ್ಳಿ : ತಕ್ಕಳ್ಳವ್ವಾ...

ಸುನಿತಾ : ಬೆಣಚು ಕಲ್ಲು ಎಷ್ಟೊಂದು ಚೆನ್ನಾಗೈತೆ ನೋಡ್ತಾ' ಬರ್ತೀವಿ ಕಣೇ ಉಳ್ಳಿಕೆಂಪೀ...

ಅನಿತಾ : ಗಾಡಿಸಿದ್ದಿ

(ಇಬ್ಬರೂ ನಗುತ್ತಾ ಹೋಗುವರು. ಇವರೂ ನಗುತ್ತಾ ನೋಡುವರು.)

## ದೃಶ್ಯ-೩

(ಆಪಾಟೀಪಾಟಯ್ಯ, ಬೋರ ಗೋಲಿ ಆಡುತ್ತಿರಲು ಅಲ್ಲಿಗೆ ಅನಿತಾ ಸುನಿತಾ ಬರುತ್ತಾರೆ)

ಸತ್ಯ : ಅಂತೂ ಪಳ್ಳಿಗೆ ಬಂದ್ರೆ ಆಟ... ಆಟ... ಎಷ್ಟು ಹೊತ್ತನಲ್ ನೋಡು ಆಟ...

ಅನಿತಾ : ಅದ್ಕೇ ಅಲ್ವಾ ನೀನು ರಜ ಬಿಟ್ರೆ ಸಾಕು ಹಳ್ಳೀಗೆ ಬರೋದು.

ಸುನಿತಾ : ಹೌದು.

ಅಂಜು : ಬನ್ನಿ ತಿಂಡಿ ಆಯ್ತಲ್ಲಾ ಯಾವುದಾದ್ರೂ ಆಟ ನೋಡವು.

ಸತ್ಯ : ಗೋಲಿ ಆಟ ಆಡ್ತಾ ಅವ್ರ ನಡೀರಿ ಹೋಗೋಣ.

(ಒಬ್ಬೊಬ್ಬರೂ ಒಂದೊಂದು ಡಬ್ಬ ಗೋಲಿ ತುಂಬಿಕೊಂಡು ಆಡುತ್ತಿರಲು ಅಲ್ಲಿ ಆಟವಾಡುತ್ತಾ ಸ್ವಲ್ಪ ಹೊತ್ತಿನಲ್ಲೇ ಜಗಳ ಆರಂಭವಾಗುತ್ತೆ.)

ಆಪಾಟೀ: ಲೇ... ಮಗನೇ... ಮಡಗ್ತಯಾ ಹ್ಯಾಗೆ ಗೋಲಿನಾ...

ಬೋರ : ಆಪಾಟೀಪಾಟಯ್ಯ ಮುಚ್ಚಲೇ ಕಂಡಿವ್ನಿ...

ಅಂಜು : ಇದೇನು ಆಪಾಟಿಪಾಟಯ್ಯ...ಹೆಸರಿಗೆ ತಕ್ಕ ಆಗವ್ನೇ... ಒಳ್ಳೆ ಡುಮ್ಮ...

ಬೋರ : ಇವರಪ್ಪನು ಆಪಾಟಿ ಇವನು ಈಪಾಟಿ ಇದ್ದ. ಅದ್ಕೇ ಹುಡುಗರು ಇವನ್ಗೆ ಆಪಾಟೀಪಾಟಯ್ಯ ಅಂದುಬಿಟ್ರು... ಇದು ಅವನ ಅಡ್ಡ ಹೆಸರು. ಪಾಪ ನಿಜವಾದೆಸ್ರು ರಂಗಣ್ಣ.

ಅಪಾಟೀ: ಏ ಬೋಳೀಮಗನೇ... ಯಾವನೋ ನೀನು ನನ್ನ ಅಡ್ಡೆಸ್ರು ಕರಿಯಾಕೆ? ಹೆಕ್ಕತ್ತನ ಪಟ್ಟ ಹಿಡಿದು ಹೀಳ್ಬಿಡ್ತೀನಿ ನೋಡು ಬೋರದ್ಯಾವ್ರ ಕಾಣೆಸ್ಬುಡ್ತೀನಿ ಬೋರ... ಜ್ವಾಪಾನ.

ಬೋರ : ಕಂಡಿವ್ನಿ ಕುಕ್ಕರಿಸ್ಕಲ್ಲಾ... ಗೋಲಿನೆಲ್ಲಾ ಸೋತ್ಬುಟ್ಟ ಅಂತ ಕ್ಯಾಣವೇನೋ... ದರವೇಸಿ ಬಡ್ಡಿಗಂಡನೇ...

(ಇಬ್ಬರೂ ಕಿತ್ತಾಡುತ್ತಿರಲು ಸತ್ಯ ಬಂದು)

ಸತ್ಯ : ಯೇಯ್ ನಿಲ್ಲಿಸ್ರಯ್ಯಾ ಸಾಕು ನಿಮ್ಮ ಫೈಟಿಂಗ್ ಚಿನ್ನಾಗಿ ಮಾಡ್ತೀರಿ.

ಬೋರ : ಮತ್ತೆ ಸೋತುಬುಟ್ಟಾಕೆ ಬಯ್ಯಾಕ್ಕ ಬರಬೇಕೋ ಈ ಹೇಡಿ ಬಡ್ಡಿಗಂಡ...

ಸತ್ಯ : ನೋಡಿ ಆಟ ಆಡಿ ಯಾರೂ ಬ್ಯಾಡ ಅನ್ನಕ್ಕಿಲ್ಲ. ಆದ್ರೆ ಪಂದ್ಯ ಕಟ್ಟಿ ಕೊಂಡು ಆಡಬೇಡಿ, ಜಿದ್ದು ಬರ್ತದೆ, ಆಗ ನಮ್ಮ ನಮ್ಮಲ್ಲೇ ಕಲಹ ಉಂಟಾಗುತ್ತೆ. ಈಗ ಇಷ್ಟು ಗೋಲಿ ಗೆದ್ದೆಯಪ್ಪಾ... ಏನು ಪ್ರಯೋಜನ?

ಅಂಜು : ಈವತ್ತು ಗೋಲಿ, ನಾಳೆ ಕಾಸು... ಅದ್ರಿಂದ ಕಳ್ತನ, ಸುಳ್ತನ ಆಗ ನಾನಾ ತೊಂದ್ರೆಗಳು ಬರುತ್ವೆ.

ಸತ್ಯ : ಅದ್ಕೇ... ಬೇಜಾರಾದಾಗ ಆಡಬೇಕು, ಇಲ್ಲದಾಗ ಓದಬೇಕು ಅಲ್ಲದೇ ಹೋದ್ರೆ ಯಾವುದಾದ್ರೂ ಕೆಲಸ ಮಾಡಬೇಕಾಪ್ಪಾ.

ಅಪಾಟೀ: ಓಹೋ ದೊಡ್ಡ ಮನಸ ಯಾಳಾಕ್ ಬನ್ಬುಟ್ಟ ಕಣ್ ತಕ್ಕಳಪ್ಪಾ...

ಸತ್ಯ : ದೊಡ್ಡವ್ರು ಹೇಳಿದ್ನೇ ನಾ ಯೇಳ್ದೆ. ನಮಗೆ ನಮ್ಮ ತಂದೆ ತಾಯಿ ಬುದ್ಧಿವಾದ ಹೇಳೋದ್ನ ನಾನು ನಿಮಗೆ ಹೇಳ್ದೆ ಅಷ್ಟೆ. ನಾನು ದೊಡ್ಡ ಮನುಷ್ಯ ಅಂತ ಹೇಳ್ಲಿಕ್ಕೆ ಬರ್ನಿಲ್ಲ.

ಅಂಜು : ಒಳ್ಳೇ ಮಾತ್ನ ದೊಡ್ಡವ್ರು ಹೇಳಿದ್ರೇನು? ಚಿಕ್ಕವ್ರು ಹೇಳಿದ್ರೇನು? ನಿಮ್ಮ ಒಳ್ಳೇದ್ಕೇ ಅಲ್ವಾ? ಕಜ್ಜಾಡಿ ಮೈ ಕೈ ನೋವು ಮಾಡ್ಕೊಳ್ಳಿ ನಮಗೇನು? ಏನಾದ್ರೂ ಪ್ರಯೋಜನ ಇದ್ರಲ್ವಾ. ನೀವೇ ಯೋಚ್ನೆಮಾಡಿ ನೋಡಿ.

ಸತ್ಯ : ನಾವೆಲ್ಲಾ ಅಣ್ಣ-ತಮ್ಮಂದಿರು ಅಂತ ಇರಬೇಕು. ಜಿದ್ದಾಕೆ ಇಡಬೇಕು ಅಂತ ಹೇಳಿದ್ನಪ್ಪಾ. ಕೇಳಿದ್ರೆ ಕೇಳಿ, ಬಿಟ್ರೆ ಬಿಡಿ, ನನಗೇನು? ನನಗೆ ಆಪಾಟೀಪಾಟಯ್ಯನೂ ಒಂದೇ. ಬೋರನೂ ಒಂದೇ.

ಆಪಾಟೀ: ಅಂಗಾರೆ ನೀವು ಜಗಳ ಕಾಯಕಿಲ್ವಾ?

ಸತ್ಯ : ಕಾಯ್ತೀವಿ. ಆದ್ರೆ... ಇಷ್ಟೊಂದು ಮಾಡಕ್ಕೋಗೋಲ್ಲ, ನಾವು ಸೋಲಬೇಕು, ಇಲ್ಲ ಅವರು ಸೋಲಬೇಕು. ಬೇಜಾರು ಕಳ್ಯೋಕೆ ಹಾಗೇ ಆಡಿದ್ರಾಯ್ತು.

ಬೋರ : ಆಯ್ತು ಈಗ ಎಲ್ಲರೂ ಆಡಮು... ಬನ್ನಿ... ನೀವು ಪಟ್ಟಣದಾಗಾಡಲ್ಲ ಇಲ್ಲಾದ್ರೂ ಆಡೂರಿ ಬನ್ನಿ.

ಸತ್ಯ : ಅದಕ್ಕೇನಂತೆ.

(ಎಲ್ಲರೂ ಮತ್ತೆ ಹಾಗೆಯೇ ಆಡುವರು. ಸೋತ ಸತ್ಯ ಮೊಳಸಂದಿನಲ್ಲಿ ತೀಕಲಾರಂಭಿಸುವನು. ಎಲ್ಲರೂ ನಗುವರು.)

ಆಪಾಟೀ: ಪಂದ್ಯ ಕಟ್ಬೋದು ಬ್ಯಾಡ ಅಂದ್ರೆಲ್ಲಾ ಈಗ ಹ್ಯಾಗಿದೆ ಮೊಳಸಂದಿನಲ್ಲಿ ತೀಕೋದು?

ಸತ್ಯ : ಹ್ಯಾಗಿರುತ್ತೆ ನೀನೊಂದು ಸಾರಿ ಸೋತ್ರೆ ಗೊತ್ತಾಗುತ್ತೆ ತಾಳು.

(ಎಂದು ತೀಕುವನು)

ಅಂಜು : ಸುಮ್ನೆ ಕೈಲಿ ಯಾಕೆ ರಕ್ತ ಕೀಳಿಸ್ಕೋತೀಯಾ ಬಾ ಮನೆಗೋಗೋಣ... ಊಟದ ಹೊತ್ತಾಯ್ತು...

(ಹೊರಡುವರು)

## ದೃಶ್ಯ-೪

(ಚಿಂಕ್ರ, ಮಂಟ್ಯ ಇಬ್ಬರ ಜೊತೆಯಲ್ಲಿ ಚಿನ್ನಿಕೋಲಿನ ಆಟವನ್ನು ಆಡುತ್ತಿರಲು ಅಲ್ಲಿಗೆ ಆಪಾಟೀಪಾಟಯ್ಯ ಮತ್ತು ಬೋರ ಬರುತ್ತಾ ಇರಲು ಚಿಂಕ್ರ ಮಂಟ್ಯ ಸ್ವಲ್ಪ ದೂರಾಗಿ ನಿಲ್ಲುವರು.)

ಆಪಾಟೀ: ಸತ್ಯಪ್ಪೋ... ಸತ್ಯಪ್ಪೋ... ಹೋಯ್ತು ಹೋಯ್ತ ಕೆಟ್ಟೋಯ್ತು ಕೆಲಸ.

ಸತ್ಯ : ಏನು ಆಪಾಟೀಪಾಟಯ್ಯ?

ಬೋರ : ಇದೇನು ನೀವು ಆಟಾ ಆಡ್ತಾ ಇರೋದು?

ಸತ್ಯ : ಚಿನ್ನಿದಾಂಡು.

ಬೋರ : ಯಾರ ಜೊತೇಲಿ ಆಡ್ತಾ ಇದ್ದೀರಿ?

ಸತ್ಯ : ಚಿಂಕ್ರ, ಮಂಟ್ಯನ ಜೊತೆಯಲ್ಲಿ.

ಬೋರ : ನಿಮ್ಮ ಚಿಕ್ಕಪ್ಪನವರು ಕಂಡ್ರೆ ಸುಮ್ನೆ ಬಿಡಾಕಿಲ್ಲ.

ಸತ್ಯ : ಏನು ಮಾಡ್ತಾರೆ? ಆಟ ಆಡೋದು ಬ್ಯಾಡ ಅಂತಾರ್‍ಯೇ?

ಬೋರ : ಆಟ ಆಡೋದು ಬ್ಯಾಡ ಅನ್ನೋಲ್ಲ. ಈ ಹೊಲೆಯ ಮಾದಿಗರ ಹತ್ತಿರ ಆಡೋದು ಬ್ಯಾಡ ಅಂತಾರೆ.

ಸತ್ಯ : ಆಡಿದ್ರೇನಾಯ್ತು?

ಆಪಾಟಿ : ಮೈಲಿಗೆ

ಸತ್ಯ : ಅವರು ಮುಟ್ಟಿದ ಚಿನ್ನಿಕೋಲು ಮುಟ್ಟಿಬಿಟ್ರೆ ಮೈಲಿಗೆ.

ಬೋರ : ಅವರ ಜೊತೇಲಾಡೋದೇ ಮೈಲಿಗೆ. ಅವರು ಕೀಳು ಜಾತಿಯವರು.

ಸತ್ಯ : ನೀವು ಮೇಲಾ...

ಆಪಾಟಿ : ಹ್ಞಾಂ... ನಾವೆಲ್ಲಾ ಮೇಲು

ಬೋರ : ಅವನೊಂದಿಗಾಡದಿರ್‍ಲಿ ಅವನೇ ಮುಡಿಸ್ಕೋತಾನ.

ಆಪಾಟಿ : ತಬ್ಗೋತಾನಾ. ಇನ್ನೇನಾ ಹೇಳಪ್ಪಾ.

ಸತ್ಯ : ಮನುಷ್ಯ ಅಂದ್ರೆ ಎಲ್ಲಾ ಒಂದೇ. ನಾವಂತೂ ಪಟ್ಟಣವಾಗೆ ಆಡ್ತೀವಿ.ಹೋಟ್ಲನಾಗ ತಿಂತೀವಿ...ಇದೇನು ಬಂತಪ್ಪಾ ಈ ಹಳ್ಳೀಲಿ ಅವನೊಂದಿಗೆ ಆಡಿದ್ರೆ ಮೈಲಿಗೆಯಂತೆ.

ಆಪಾಟಿ : ಸ್ಕೂಲಿನಲ್ಲೂ ಅಷ್ಟೇ ಯಾರೂ ಸೋಕಿಸ್ಕೋಬೇಡಿ, ದೂರ ಕೂತಿಪ್ಪನ್ನಿ ಅಂತಾರೆ ನಿಮ್ಮ ಅಪ್ಪ ಅವ್ವದಿರು.

ಸತ್ಯ : ಹಾಗೆಲ್ಲಾ ಮಾಡುವಾಗಿಲ್ಲಪ್ಪಾ...

ಚಿಂಕ್ರ : ನೀವು ಹೋಗಿ ಬುದ್ಧಿ, ಆಷ್ಟವ್ಪೋಗಿ ನಮ್ಮ ಜೊತೆಗೆ ಬರಬ್ಯಾಡಿ.

ಸತ್ಯ : ಬಿಸ್ರಲಾ...ಏನೂ ಆಗಾಕಿಲ್ಲಾ... ನಾವೆಲ್ಲಾ ಒಂದೇ. ಆಡೋಣ ಬನ್ನಿ. ನೀನು ಕೆಲಸ ಮಾಡಿ ತಂದು ಕೊಡೋದ್ ತಿನ್ನಬೋದು, ನೀನು ನಮ್ಮ ಜೊತೇಲಿ ಆಡಬಾರದು, ಮುಡಸ್ಕಬಾರ್ದು ಅಲ್ವಾ?

ಅಪಾಟಿ : ಅವ ಸ್ನಾನ ಮಾಡೆಷ್ಟು ದಿನ ಕೇಳು.

ಸತ್ಯ : ಎಷ್ಟು ದಿನ ಆಯ್ತು ಸ್ನಾನ ಮಾಡಿ?

ಅಪಾಟಿ : ತಿಂಗಳಾಯ್ತೋ...

ಜೋರ : ಇಲ್ಲ ಹಬ್ಬಗಳ್ಗ ಮಾತ್ರ ಅವ ತಲ ತೊಳ್ಕತನಾ ಬಟ್ಟೆಸೋಪ್ಲಿ. ಕಲ್‌ಕ್ಕಂಡು ಮೈ ತಿಕ್ಕತಾನ. ಆಗ ಏಟೊಂದು ಕೊಳೆ ಬರುತ್ತೋ ಆ ದ್ಯಾವರಿಗೇ ಪ್ರೀತಿ.

ಸತ್ಯ : ದಿನಾ ಮೈ ತೊಳ್ಯಾಕಿಲ್ವಾ?

ಚಿಂಕ್ರ : ಜಿನಾ ಅದ್ಯಂಗ್ ಸರಬಂದುದು ಬುಡಿ.

ಸತ್ಯ : ಅಲ್ಲಾ ಕಣ್ಲಾ ಬಿಸಿನೀರು ಕಾಯಿಸಕ್ಕಾಗಕ್ಕಿಲ್ಲ. ದನಗಳ ಮೇಯ್ಸಕ್ಕೋದಾಗ ಕೆರೇಲಿ ಸ್ನಾನ ಮಾಡಬೋದಲ್ಲ.

ಮುಂಟ್ಯ : ಅದೇ ಎಮ್ಮೆ ಮೈ ತೊಳೀತೀವಿ. ನಾವು ಈಜು ಬೀಳ್ತೀವಿ.

ಸತ್ಯ : ಈಜು ಬಿದ್ರಾಯ್ತಾ? ಮೈಮೇನ ಕೊಳೆ ಹೋಗಬ್ಯಾಡ್ವಾ?

ಮುಂಟ್ಯ : ಅದ್ಕೆಲ್ಲಾ ಸಾಬೂನು ಗೀಬೂನೂ ಅಂತ ಬೇಕಲ್ಲ ಬುದ್ಧಿ.

ಅಪಾಟಿ : ಅವನ ಹಲ್ಲು ನೋಡು. ತಿಕ್ಕಿ ಯಾವ ಕಾಲವಾಯ್ತು ಕ್ಯಾಳು.

ಮುಂಟ್ಯ : ರಂಗೋಲಿಪುಡೀಲಿ ತಿಕ್ತೀಮಿ ಕಣ್ ಬುದ್ಧಿ.

ಸತ್ಯ : ದಿನಾ ಬೇವಿನ ಕಡ್ಡೀಲಿ ತಿಕ್ಕಿದ್ರೂ ಆಯ್ತಪ್ಪಾ, ಹಲ್ಲು ಸವೆದೋಗುತ್ತೆ. ರಂಗೋಲೆ ಪುಡೀಲಿ ಉಜ್ಜಿದ್ರೆ. ಮುಂಟ್ಯನಂತೂ ತೀಡವೇ ಇಲ್ಲ ಅಂತ ಕಾಣುತ್ತೆ.

ಜೋರ : ಆ ಉಗುರ್ ನೋಡು ಎಮ್ಮೆ ಸಗಣಿ, ಗಂಜಲ ಇನ್ನೂ ಏನೇನ್ ಇದ್ಯೋ?

ಸತ್ಯ : ಹೋಗ್ಲಪ್ಪಾ... ಮುಖಕ್ಷೌರದ ಬ್ಲೇಡು ಎಷ್ಟು ಸಿಕ್ಕುತ್ತೆ, ಅವರಲ್ಲಿ ಉಗುರು ಕತ್ತರಿಸೋಕ್ಕಾಗ್ತಾ? ಹಾಗೆ ಬಿಟ್ರೆ ಅಲ್ಲಿ ವಿಷಕ್ರಿಮಿ ಬೆಳೆದು ಉಗುರು ಸುತ್ತಾಗುತ್ತೆ. ಊಟ ಮಾಡುವಾಗ ಆ ರೋಗಾಣು ಸೇರಿ ಅನೇಕಾನೇಕ ರೋಗಗಳು ಬರುತ್ವೆ.

ಅಪಾಟಿ : ಅವನ ತಲೆ ನೋಡಿ ಎಂಗವ. ಹೇನು, ಕೂರುಗಳು ಎಷ್ಟಿದ್ದವೋ?

ಸತ್ಯ : ಚೆನ್ನಾಗಿ ಕೊಳೆ ತೊಳ್ಕೊಂಡ್ರೆ ಹೇನೆಲ್ಲಿ ಬರುತ್ತೆ. ಇದ್ಕೆಲ್ಲಾ ಕಾಸು ಖರ್ಚು ಮಾಡಬೇಕಿಲ್ಲ. ಬರೇ ಸೋಂಬೇರಿತನವೇ ಇದಕ್ಕೆ ಕಾರಣ.

ಬೋರ : ಅನಿಷ್ಟದವು, ಇಂಥವರ ಜೊತೆ ನೀನು ಆಡ್ತೀಯಾ?

ಚಿಂಕ್ರ : ಇನ್ನು ಮ್ಯಾಕೆ ಚೆನ್ನಾಗಿರ್ತೀವಿ ಬುದ್ದಿ...

ಬೋರ : ಆಯ್ತಪ್ಪಾ... ಗಬ್‌ಬಡ್ಡಿಗಂಡ್ವೀರು. ನಡ್ಯಯ್ಯ ಹೋಗವು, ಅವರ ಚಿಕ್ಕಪ್ಪನೊಂದಿಗೆ ಹೇಳಮು.

ಮಂಟ್ಯ : ನೀವು ವೋಗಿ ಸತ್ಯಪ್ನೋ...

ಸತ್ಯ : ನಿಮ್ಗ್ಯಾಕೆ ಎದುರ್ಕೆ ಸುಮ್ನಿರಿ, ನಾ ಆಡ್ತೀನಿ ಇನ್ನೂ ಅವರೆಲ್ಲಾ ಹಳೇ-ಕಾಲದಲ್ಲೇ ಅವ್ರೇ...

(ಇಬ್ಬರೂ ಹೊರಡುವರು. ಸತ್ಯ ಮತ್ತ ಚಿನ್ನಿಕೋಲು ಆಡುತ್ತಿದ್ದಂತೆಯೇ ಕತ್ತಲು ಕವಿಯುವುದು)

## ದೃಶ್ಯ-೫

(ಚೌಕಾಭಾರ ಆಟವನ್ನು ಆಡುತ್ತಿದ್ದಾರೆ ಗಾಡಿಸಿದ್ದಿ, ಉಳ್ಳಿ, ಕೆಂಪಿ. ಅಲ್ಲಿಗೆ ಅಂಜೂ ಅನಿತಾ ಇಬ್ಬರೂ ಬರುತ್ತಾರೆ.)

ಅಂಜು : ಏನ್ರೇ... ಶುರು ಹಚ್ಕೊಂಡಿದ್ದೀರಿ?

ಗಾಡಿಸಿದ್ದಿ : ಚೌಕಾಬಾರ ಆಡ್ತೀವಿ ಬಂದರ್ರವ್ವಾ?

ಅಂಜು : ಊಂ... ಬರ್ತೀವಿ.

(ಎಂದು ಕುಳಿತುಕೊಂಡು ಆಡುವರು)

ಸತ್ಯ : ಏನು ಅಂಜೂ, ಅನಿತಾ, ಸುನಿತಾ... ಒಳ್ಳೇ ಮಜಾ ಆಯ್ತು ನಿಮಗ ಅಲ್ವಾ, ದಿನಾ ಆಟ.

ಗಾಡಿ : ಏನೋ ರಜ ಸಿಕ್ಕದಲ್ಲಾ ಬುಡಿ ಆಡ್ಕಳ್ಳಿ. ನಾವಾರಾ ವರ್ಸಂಪೂರಾ ಈ ಆಟ ಕೆಲಸಗಳಲ್ಲೇ ಇರ್ತೀವಿ, ಇನ್ಯಾಸ ರಜ ಮುಗೀತಾ ಬಂತು. ಆಡ್ಕಂಡು ಪ್ಯಾಟೆಗ್ ವೋಗ್ಲಿ.

ಸತ್ಯ : ನೀವು ವರ್ಸಂಪೂರ್ತಿ ಆಡ್ತೀರಾ? ಸ್ಕೂಲಿಗೋಗಲ್ವೇ?

ಗಾಡಿ : ನಾವ್ಯಾವ ಇಸ್ಕೋಲ್ಗೋಗದು ತಕ್ಕಳಿ.

ಉಳ್ಳಿ : ಇಸ್ಕೂಲ್ಗೋದ್ರ ಅದೆಲ್ಲಾದ್ದೂ ಬುಡಿ... ನಮ್ಮ ಅಪ್ಪ ಅವ್ವ ಬ್ಯಾಡ ಅಂತಾರೆ.

ಗಾಡಿ : ಓದಿ ನಾವು ಬಿ.ಎ ಪ್ಯಾಸ್ ಮಾಡಾದೂ, ಅಷ್ಟರಲ್ಲೇ ತಕ್ಕಳಿ ತಲಗೇ ಅತ್ತಕಿಲ್ಲ...

ಅನಿತಾ : ನೋಡಿ ಓದಬೇಕು ಅಂತ ಮನಸಿದ್ರೆ ಆಯ್ತದೆ. ಇಲ್ಲದೆ ಹೋದ್ರೆ ಹ್ಯಾಗ?

ಗಾಡಿ : ಅಯ್ಯೋ ಬುಡಿ ಆ ಮಾತ್ಯಾಕೆ?

ಸುನಿತಾ : ನೀನು ಓದಿ ಕೆಲಸ ಮಾಡಬೇಕಿಲ್ಲಾ, ಏನೋ ಓದಕ್ಕೆ ಬರ್ಯಕ್ಕೆ ಕಲಿತ್ಕಂಡ್ರೆ ಸಾಕು.

ಉಳ್ಳಿ : ಅದ್ಕೆಲ್ಲಾ ಸೌಕರ್ಯ ಬೇಕಲ್ಲ.

ಸುನಿತಾ : ಏನೂ ಖರ್ಚಾಗೋಲ್ಲ, ಸ್ಲೇಟು, ಪುಸ್ತಕ ತಕ್ಕಂಡು ಓಗಿ, ಫೀಜಿಲ್ಲ ಏನಿಲ್ಲ ಸುಖವಾಗಿ ಓದಬಹುದು.

ಉಳ್ಳಿ : ಅಂಗಂದರ್ಯ?

ಸುನಿತಾ : ಎಲ್ಲರೂ ಓದಲೇಬೇಕು. ಅಂಗಾರೇ ಒಳ್ಳೇದು.

ಗಾಡಿ : ಇನ್ನು ಯಾನೋದೋ ಬುಡಿ.

ಸುನಿತಾ : ಈ ನಿನಗೆ ಏನು ವಯಸ್ಸಾಗಿದೆ? ಓದು...

ಗಾಡಿ : ನಾಚ್ಕೆ ಆಯ್ತೈತೆ ಕಣವ್ವಾ.

ಉಳ್ಳಿ : ಈಟೊಂದು ಬೆಳ್ಕಂಡು ಇನ್ನು ಸ್ಲೇಟು ಪುಸ್ತಕ ಇಟ್ಕಂಡು ವೋದಗಾ?

ಸುನಿತಾ : ಅದ್ಕೆ ಯಾಕೆ ನಾಚಿಕೆ?

ಉಳ್ಳಿ : ಆಗ್ಲಿ ಕಣವ್ವಾ. ನಮ್ಮ ಅಪ್ಪ-ಅವ್ವದಿರ ಕೇಳ್ತೀವಿ. ಮುಂದಿನ ವರ್ಸಕ್ಕಾದ್ರೂ ಇಸ್ಕೂಲಿಗೆ ಸೇರಿಸು ಅಂತ.

(ಎಲ್ಲರೂ ನಗುವರು)

ಸತ್ಯ : ಪಾಪ ಓದಕ್ಕೆ ಆಸೆ ಐತೆ, ಆದ್ರೆ ಅಪ್ರಪ್ಪ ಅವ್ವ ಕೆಲಸ ಮಾಡಕ್ಕೋಸ್ಕರ ಬುಡಿಸ್ಬಿಟ್ಟವ್ರೆ ಅನ್ನು. ಅವರಿಗೆ ತಾಸೀ ಎಲ್ಲಿ ಕಲಿಸಬೇಕು ಅಂತ ಆಸೆ ಇರ್ತೈತೆ. ನೀವು ಏನೂ ಭಯಪಡಬೇಡಿ. ಸ್ಕೂಲಿಗೆ ಸೇರಿ ವಿದ್ಯಾವಂತರಾಗಿ.

ಉಳ್ಳಿ : ಆಗ್ಲಿ ಸತ್ಯಪ್ಪ.

## ದೃಶ್ಯ-೬

(ಚಿಂಕ್ರ, ಮಂಟ್ಯ ಇಬ್ಬರೂ ಓಡೋಡಿ ಬರುತ್ತಾರೆ. ಆಗ ಬೋರ, ಆಪಾಟೀಪಾಟಯ್ಯ, ಸತ್ಯ ಸಿಗುತ್ತಾರೆ)

ಸತ್ಯ : ಏನ್ರಲಾ... ಇಷ್ಟೊಂದು ಜೋರಾಗಿ ಓಡಿ ಬರ್ತಾ ಇದ್ದೀರಿ. ರನ್ನಿಂಗ್ ರೇಸ್ ಮಾಡ್ತಾ ಇದ್ದೀರಾ ಎಂಗೆ?

ಚಿಂಕ್ರ : ಸದ್ಯ ಬದುಕುದ್ವು ಕಸಪ್ಪಾ... ಅದ್ಯಾವುದೂ ಅಲ್ಲ ಕಣಪ್ಪಾ.

ಬೋರ : ಅದೇನ್ಲಾ ಅಂಗಂದ್ರೆ?

ಮಂಟ್ಯ : ಇನ್ನೊಂದು ಸಟೀಗೊತ್ತಾಗಿದ್ರೆ ಸಿಕ್ಕಾಕಂಬುಡಮು.

ಬೋರ : ಯಾಕ್ಲಾ...?

ಚಿಂಕ್ರ : ಮಾದೇವಪ್ಪನವರು ಓಡಿಸ್ಕಂಬಂದ್ಬುಟ್ರು.

ಬೋರ : ಯಾಕೆ ಅಂತ?

ಮಂಟ್ಯ : ಅದು... ಅದು...

ಚಿಂಕ್ರ : ಅದ್ಯಂಗೇಳಾನಾ?

ಆಪಾಟಿ : ಅದೇನು ಹೇಳು?

ಚಿಂಕ್ರ : ಬನ್ನಿ ಎಲ್ಲಾ ಕೂತ್ಕಂಡು ತಿನ್ನವ.

ಸತ್ಯ : ಏನ್ನಾ...?

ಚಿಂಕ್ರ : ಹುಣಸೇಕಾಯ್ನ.

ಆಪಾಟಿ : ಹುಣಸೇಕಾಯಿಗೆ ಕಲ್ಲೆಸೆದು ಕಿತ್ತಾ?

ಮಂಟ್ಯ : ಅದ್ಕೇ ಬುದ್ಧಿ ಈ ಪಾಟಿ ಓಡ್ ಬಂದದ್ದು ಕಂಡ್ಬುಟ್ರು ಕಲ್ಲೊಡೆದಿವ್ ಕಿತ್ತಿದ್ದ.

ಸತ್ಯ : ಮಂಟ್ಯ ಕೀಳೋದ್ ಸರ್‍ಯಾ?

ಚಿಂಕ್ರ : ಏನೋ ಚಿಂಕ್ರ ಬಾಯ್ನೀರು ಬಂತು ಅದ್ಕೇ ವೋಗಿದ್ವೋ.

ಆಪಾಟಿ : ಸಿಕ್ಕಿಕೊಂಡಿದ್ರೆ ಸೊಂಟ ಮುರಿಸ್ಕತಿದ್ರಿ.

ಮಂಟ್ಯ : ಅದು ದಿಟವೇ ಕಣ್ಬುದ್ಧಿ.

ಸತ್ಯ : ನೋಡಯ್ಯಾ ಯಾವ ಹೊತ್ತಿಗೂ ಕಳಬಾರದು.

ಮಂಟ್ಯ : ಕೇಳಿದ್ರೆ ಕೊಟ್ಟರಾ ಬುದ್ಧಿ?

ಸತ್ಯ : ಕಾಸ್ ಕೊಟ್ಟು ತಿನ್ನಬೇಕು. ಇಲ್ಲದೇ ಹೋದ್ರ ಕೇಳಿ ಈಸ್ಕೋಳ್ಬೇಕು. ಇಲ್ದೇ ಹೋದ್ರೆ ಅಂಗೇ ಸುಮ್ಕಿರಬೇಕು.

ಮಂಟ್ಯ : ಯಾನೋ ಈವತ್ತಾದದ ನೋಡ್ಕಂಡ್ರ ಅಂಗೇ ಇರಬೇಕು ಅನ್ನಿಸುತ್ತ.

ಆಪಾಟಿ : ಹ್ಞೂಂ... ಯಾಗಾರೂ ತಂದ್ರಿ... ಕೊಡಿಯಲ್ಲಿ... ಎಲ್ಲರಿಗೂ ಕೊಡು ತಿನ್ನಲಿ.

ಚಿಂಕ್ರ : ತಕ್ಕಳಿ ಬುದ್ಧಿ...

ಸತ್ಯ : ಆ ಹೊತ್ತು ಹೇಳ್ತಿದ್ರಿ ಆತನ್ನು ಮುಟ್ಟಬಾರ್ದು ಅಂತ. ಆತ ಮುಟ್ಟಿದ್ದ ಮುಟ್ಟಬಾರ್ದು ಅಂತ.

ಆಪಾಟೀ: ಅದೂ... ಅದೂ... ಬೇರೆ, ಇದು ಕಾಯಿ... ಇದಕ್ಕೇನೂ ಕಟ್ಟಿಲ್ಲ... ಈಗ... ಈಗ... ನಾವು ಹಾಗೇ ತಿನ್ಸಕ್ಕಿಲ್ಲ... ಮನೇಲೋಗಿ ತೊಳಕೊಂಡು ತಿಂತೀವಿ...

ಸತ್ಯ : ತೊಳೆದುಬಿಟ್ರೆ ಮೈಲಿಗೆ ಹೊರಟೋಗುತ್ತಾ? ಏನು ಬುದ್ಧೀನಪ್ಪಾ... ನಿಮ್ಮದು

ಚಿಂಕ್ರ : ಊಂ... ಕನಪ್ಪಾ...

ಸತ್ಯ : ಸಾಕು ನಡೀರಯ್ಯ ಒಂದಕ್ಕೆ ಮೈಲಿಗೆ ಒಂದಕ್ಕೆ ಮಡಿ, ತಿನ್ನಬೋದುನೋಡು ಇದನ್ನ ಅಷ್ಟೇ...

ಮಂಟ್ಯ : ಪೋಗ್ಲಿ ಆಪಾಟೀಪಾಟಪ್ಪ, ಇಸಯನ ಮಾದೇವಪ್ಪನವರಿಗೆ ಯೇಳಬೇಡಿ.

ಆಪಾಟ : ಏನಂತ?

ಚಿಂಕ್ರ : ಅವೇ ಹುಣಸೇಕಾಯಿನ ನಿಮ್ಮ ಮರದಿಂದ ಕಿತ್ತ ಚಿಂಕ್ರ, ಮಂಟ್ಯ ಅಂತ.

ಆಪಾಟಿ : ಎಲ್ಲಾರ ಉಂಟಾ... ದ್ಯಾವರು ನಮಗೂ ವಸಿ ಗ್ಯಾನ ಕೊಟ್ಟವನೇ.

ಸತ್ಯ : ಅಂದ್ರೆ ಸುಳ್ಳು ಹೇಳಬೇಕೇ? ನಿಮ್ಮ ಮರದಲ್ಲಿ ಹುಣಸೆಕಾಯಿ ಕಿತ್ತಿಲ್ಲ ಅಂತ.

ಅಪಾ : ಊಂ

ಸತ್ಯ : ನನ್ನನ್ನೇನಾದ್ರೂ ಕೇಳಿದ್ರೆ, ನಾನು ಕಿತ್ರು ಅಂತ ಹೇಳ್ತೀನೆ.

ಆಪಾಟಿ : ಕಿತ್ತಲೇಳಬೇಡಪ್ಪಾ... ಎಲ್ಲರಿಗೂ ಬುದ್ಧಿ ಹೇಳ್ತೀರಿ ನೀವು.

ಸತ್ಯ : ಕಿತ್ಲಲ್ಲ ಅದು ಸತ್ಯ.

ಬೋರ : ಮಹಾ ಸತ್ಯ ಅರಿಚ್ಚಂದ್ರನ ಮೊಮ್ಮಗ...

ಸತ್ಯ : ಇದ್ದದನ್ನು ಇದ್ದ ಹಾಗೇ ಹೇಳಬೇಕು. ಸುಳ್ಳುಯಾಕೆ ಹೇಳಬೇಕು? ಹೊಡದ್ರೆ ನಾಲ್ಕು ಏಟು ಹೊಡೀತಾರೆ... ನಾಳೆಗೆ ಬುದ್ಧಿ ಕಲ್ತುಕೊಳ್ಳಬಹುದು.

ಚಿಂಕ್ರ : ನಿಮ್ಮ ದಮ್ಮಯ್ಯಾ ಯಾಳ್‌ಬೇಡಿ ಸತ್ಯಪ್ನೋ...

ಸತ್ಯ : ಯಾಕಪ್ಪಾ ಕದ್ದು, ಮೋಸ ಮಾಡಿ ತಂಬೇಕು. ಅದಕ್ಕೆ ನಾವು ಸುಳ್ಳುಹೇಳಿ ಪಾಪ ಕಟ್ಕೋ ಅಂತ ಹೇಳ್ತೀಯಾ?

ಚಿಂಕ್ರ : ಇನ್ನು ಮಾಡಿಕಿಲ್ಲ ಈ ಹೊತ್ತು ಯೇಳ್‌ಬ್ಯಾಡಿ ಸತ್ಯಪ್ನೋ. ಇನ್ನು ಮೇಲೆ ವಾಡಿಕಿಲ್ಲ.

ಸತ್ಯ : ಸರಿ... ನಡೀರಿ...

ಮಂಟ್ಯ : (ಉಗುಳು ನುಂಗುತ್ತಾ) ಸದ್ಯ ಬದುಕಿದೆವಪ್ಪಾ.

## ದೃಶ್ಯ-೨

(ಆಪಾಟೀಪಾಟಯ್ಯ ತಲೆಯನ್ನು ಮಂಡಿಗೆ ಸಿಕ್ಕಿಸಿ ಕುಳಿತಿರಲು ಬೋರ ಬರುವನು)

ಬೋರ : ಏನು ಆಪಾಟೀಪಾಟಯ್ಯ ಈ ಪಾಟಿ ಊದುಕಂದು ಕೂತಿದ್ದೀಯಾ? (ಮಾತಿಲ್ಲ ಮತ್ತ) ನಾನು ಬೋರ ಮಾತಾಡು...

(ಅಷ್ಟರಲ್ಲಿ ಸತ್ಯ ಬರುವನು)

ಸತ್ಯ : ಏಕೆ ಆಪಾಟೀಪಾಟಯ್ಯನವರು ಚಿಂತೆ ಮಾಡ್ತಾ ಕುಳಿತವರೆ?

ಬೋರ : ಏನೋ ಮನೇಲಿ ನಡೆದಿರಬೇಕು.

ಸತ್ಯ : ಏನಂತೆ?

ಬೋರ : ಏನು ಅಂತ ಹೇಳಿದ್ರಲ್ವೇ? ಸುಮ್ನೆ ಮುನಿಸು.

ಸತ್ಯ : ಮನೇಲೇನೋ ಮುನಿಸು. ಇಲ್ಲಿ ನಮ್ಮ ಮುಂದೆ ಏಕೆ ಮುನಿಸು, ಮನಸ್ಸಿನಲ್ಲಿರೋವನ್ನ ಹೇಳಿದ್ರಲ್ವೇ ಏನಾದ್ರೂ ದಾರಿ ಹೇಳಬಹುದು.

ಆಪಾಟೀ: ಎಲ್ಲಾದ್ರೂ ನೀನು ಮಾಡ್ತುಡ್ತೀಯೆ ಬುಡು..

ಸತ್ಯ : ಮಾತಾಡ್ತಾ ಅವ್ರೇ.

ಬೋರ : ಅಂಗಾರೆ ಸತ್ತೋಗಿದ್ದ ಅಂತೀರಾ?

ಸತ್ಯ : ಛೆ... ಹಾಗಲ್ಲ... ಬಿಡ್ತು ಅನ್ನಿ.

ಬೋರ : ಬಿಡ್ತು.

ಆಪಾಟಿ : ಅಯ್ಯೋ ಹಾಗಾದರೆ ಸಾಯೋದೇ ಉತ್ಮ ಕಣ್ ಬುಡಿ. ಅದಕ್ಯಾಕೆ ಬುಡ್ತು ಅಂದರಿ?

ಸತ್ಯ : ಆಪಾಟೀಪಾಟಯ್ಯ ಅದೇನಾಯ್ತು ನಮ್ಮೊಂದಿಗೆ, ಸ್ನೇಹಿತರೊಂದಿಗೆ ಹೇಳು. ಆಗ್ಲಾದ್ರೂ ನಿಂಗೆ ಸ್ವಲ್ಪ ಸಮಾಧಾನವಾಗುತ್ತೆ.

ಬೋರ : ನಮ್ಮ ಆಪಾಟೀಪಾಟಯ್ಯ ಯಾವಾಗಲೂ ಅಷ್ಟೇ ಸ್ವಲ್ಪ ಸಿಡುಕುಮೊಟ್ಟೆ. ಅದೇನು ಹೇಳಯ್ಯ.

ಆಪಾಟಿ : ಬೈದುಬುಟ್ರು ಕಣಯ್ಯಾ.

ಬೋರ : ಯಾರು?

ಆಪಾಟ : ಇನ್ಯಾರು ಅಪ್ಪಾ... ಅವ್ವಾ ಅನ್ನಸ್ಕಳ್ಳವ್ರು?

ಸತ್ಯ : ಯಾಕೆ?

ಆಪಾಟಿ : ಈವತ್ತು ನಮ್ಮೂರ್‍ನಾಗೆ ಟೂರಿಂಗ್ ಟೆಂಟು ಸಿನಿಮಾ ಬಂದಿಲ್ವಾ ದುಡ್ಡು ಕೊಡಿ ಅಂದೆ. ನಿನಗೆ ಅದು ಬೇರೆ ಕೇಡು ಹೋಗು ಅಂದ್ರು.

ಸತ್ಯ : ದುಡ್ಡಿರ್‍ಲಿಲ್ಲವೇನೋ? ಪಾಪ ಅದ್ಕೇ ಇಲ್ಲ ಅಂದಿರಬೇಕು.

ಆಪಾಟ : ದುಡ್ಡು ಇಲ್ಲದೇ ಹೋದ್ರೆ ಯಾರತ್ರವಾದ್ರೂ ಈಸಿ ಕೊಡಬೇಕಾಗಿತ್ತು.

ಬೋರ : ಊಟಕ್ಕೆ ತೊಂದ್ರೆ ಅಂತಿರುವಾಗ ಸಿಂಗ್ ಸಿನಿಮಾ ನೋಡು ಅಂತ ಸಾಲ ಮಾಡ್ ಕೊಟ್ಟಾರಾ? ಅದ್ಕ ಯಾಕೆ ನೀನು ಚಿಂತೆ ಮಾಡ್ತೀಯಾ? ಕೊಡಲಿಲ್ಲ ಅಂತ ಯಾಕ ಹೇಳ್ತೀಯಾ? ಕಾಸಿಲ್ಲದಾಗ ಒಂದು ಮಾತ್ ಬೈದ್ರೂ ಬೈದಿರಬಹುದು. ಅಷ್ಟಕ್ಕೆಲ್ಲಾ ಯಾಕೆ ಯೋಚನೆ ಮಾಡ್ತಾ ಕುಳಿತಿದ್ದೀಯ?

ಆಪಾಟಿ : ಆ ಮನೇಗೇ ಹೋದ್ರೆ ತಾನೇ.

ಬೋರ : ಮತ್ತೇನು ಮಾಡಬೇಕು ಅಂತಿದ್ದಯಿ?

ಆಪಾಟಿ : ಯಾವ ವೂರ್ಗಾಗ್ರೂ ಎದ್ದು ಬಿಡ್ತೀನಿ?

ಬೋರ : ಯೇನು ಮಾಡ್ತೀಯಾ?

ಆಪಾಟಿ : ದೇಹ ಗಟ್ಟಿಯಾಗೈತೆ ಕೂಲಿ ಮಾಡ್ತೀನಿ.

ಸತ್ಯ : ನೋಡು ಒಂದು ಮಾತಂತಾರೆ. ನಾಳೆ ಪ್ರೀತಿಸ್ತಾರ ತಂದೆ-ತಾಯಿ

ಆಪಾಟಿ : ಏನಾದ್ರೂ ನಾನು ಇರಲಿಕ್ಕಿಲ್ಲ.

ಸತ್ಯ : ಇದೊಂದು ಮಾತಿಗೆ... ನಡೇ ನಾನು ನಿಂಗೆ ಒಂದು ರೂಪಾಯಿ ಕೊಡ್ತೇನೆ ನೋಡುವೆಯಂತೆ.

ಆಪಾಟಿ : ಈವತ್ತು ನೀನು ಕೊಡ್ತೀಯಪ್ಪಾ ನಾಳಕೂ ಅಂಗೆ ತಾನೆ ನಮ್ಮ ಅಪ್ಪ ಅವ್ವ ಮಾಡದು.

ಸತ್ಯ : ಇದ್ರೆ ಕೊಡವ್ರೇ ಕಣ್ ಬಿಡು ಆಪಾಟೀಪಾಟಯ್ಯ. ಎದ್ದೇಳು ಹೋಗೋಣ ನಾನೂ ಬರ್ತೀನಿ.

ಬೋರ : ದುಡ್ಡು ಕೊಟ್ರೆ ನಾನೂ ಬರ್ತೀನಿ.

ಸತ್ಯ : ನಡೀರಿ ಹೋಗೋಣ. ಇನ್ನು ಮೇಲೆ ಹಾಗೆ ಹಠ ಮಾಡಾ ಬುದ್ಧಿ ಬಿಟ್ಟು ಸೈರಣೆ ತಂದುಕೊಂಡು ಹೋಗಬೇಕಪ್ಪಾ.

ಬೋರ : ಎದ್ದು ನಡಿ...

ಆಪಾಟಿ : ಈವತ್ತು ಇವ ನಡಿಸ್ಬುಟ್ಟಾ... ನಾಳೆಗೇಳು.

ಸತ್ಯ : ನೋಡಪ್ಪಾ ನಾವು ನಮ್ಮ ಸ್ಥಿತಿ ಅರಿತುಕೊಂಡು ಹೋಗಬೇಕು. ತಂದೆ-ತಾಯಿಗಳು ಈ ಹೊತ್ತು ಹೊಡೀತಾರೆ. ನಾಳೆ ಪ್ರೀತಿಸ್ತಾರೆ. ತಂದೆ-ತಾಯಿಯೇ ದೇವರು ಅಂತ ನಾವು ತಿಳ್ಕಳ್‌ಬೇಕು ಆಗ ಒಳ್ಳೇದಾಗುತ್ತೆ ಅಂತ ನಮ್ಮ ಮೇಷ್ಟ್ರು ಹೇಳಿದ್ದಾರೆ.

ಆಪಾಟಿ : ಸರಿ ನಡೀರಿ ಹೋಗಾಮು.

(ಎಲ್ಲರೂ ಹೊರಡುವರು)

## ದೃಶ್ಯ-೮

(ಗಾಡಿಸಿದ್ಧ, ಉಳ್ಳಿಕೆಂಪಿ ಇಬ್ಬರೂ ಅಳಿಗುಳಿ ಮಣೆ ಆಟ ಆಡುತ್ತಾ ಇದ್ದಾರೆ ಆಗ)

ಗಾಡಿ : ಸಾಕ್‌ಕಣ್ ಉಳ್ಳಿಕೆಂಪಿ, ನಾನು ಹೊಲಕ್ಕೋಗಿ ವಸಿ ಅಣ್ಣೇ ಸೊಪ್ಪು ತರಬೇಕು. ಈವತ್ತು ನಮ್ಮಟ್ಟೀಲಿ ಹಿಟ್ಟು ಸೊಪ್ಪಿನ ಎಸರು ಮಾಡಬೇಕು ಅಂದವ್ರೇ.

[illegible] [illegible]ೊಂದು ಆಟ ಆಡಬಿಟ್ಟು ವೋಗುವೆ ಕೂತ್ಕೋ ನಾನು ಬತ್ತೀನಿ ವಸಿ ಬುಡಸ್ ಕೊಟ್ಟೇನು.

ಗಾಡಿ : ಸರಿ ಆಡು ಅಂಗಾರೆ... ಬ್ಯಾಗ್ ಬ್ಯಾಗ...

ಉಳ್ಳಿ : ಈವತ್ತು ಸೊಪ್ಪು ತಂದ್ರೆ ನಾಳಕ ಜಾತ್ರೆಗೆ ಕರ್ಕಂಡೋಯ್ತೀನಿ ಅಂದ್ರೆ ನಮ್ಮ ಅಪ್ಪ.

ಗಾಡಿ : ನಂಜುಂಡೇಶ್ವರನ ತೇರಾ!

ಉಳ್ಳಿ : ಊಂ... ವರ್ಸೊರ್ಸ ನಾವು ವೋಯ್ತೀವ್ವಲ್ಲಾ... ನೀನು ಬಂದಯಾ ಕರ್ಕೊಂಡೋಯ್ತೀವಿ.

ಗಾಡಿ : ಆಗ್ಲಿ ಬರವು ಆಕು... ದ್ಯಾವರ ಸ್ಯಾವೆ ತಾನೇ...

(ಆಟ ಮುಗಿಯುತ್ತಿದ್ದಂತೆ ಅಂಜೂ, ಅನಿತಾ ಸುನಿತಾ ಬರುತ್ತಾರೆ)

ಅಂಜು : ಇದ್ಯಾಕೆ ನಾವು ಬಂದ ತಕ್ಷಣ ಎದ್ದು ಬಿಟ್ರಿ.

ಗಾಡಿ : ಒಂದೆರಡು ಆಟ ಆಡವು ಬನ್ನಿ.

ಉಳ್ಳಿ : ಆಟ ನೀವೇ ಆಡ್ಕಳಿ ಬೇಕಾರೆ, ಅಳಿಗುಳಿ ಮಣೆ ಇಲ್ಲೇ ಇಟ್ಟಿದ್ದೀವಿ.

ಅನಿತ : ಬನ್ರೇಲೇ... ನಾವೇ ಆಡೋಣ.

ಅಂಜು : ಆಗಲೀ

(ಎಂದು ಆಡಲು ಆರಂಭಿಸುವರು. ಅವರು ಹೊಲದ ಕಡೆ ಹೊರಡುವರು.)

(ಆಟ ಆಡುತ್ತಿರಲು ಅಂಜು ಸ್ವಲ್ಪ ಮೋಸ ಮಾಡಿ ಗೆಲ್ಲುವುದರಲ್ಲಿರಲು ಅನಿತಾಗೂ ಅಂಜುಗೂ ಜಗಳ ಆರಂಭವಾಗುತ್ತದೆ.)

ಅನಿತಾ : ನಿಂದು ಮೋಸ ಕಣೆ...

ಸುನಿತಾ : ಹೌದೇ...

ಅಂಜು : ಸುಮ್ನಿರೇ ನೀನೂ ಸಪೋರ್ಟ್‌ಗೆ ಬರಬೇಡ.

ಅನಿತಾ : ಒದ್ದು ಬಿಡ್ತೀನಿ ನೋಡು.

ಅಂಜು : ಒದಿ... ನೋಡವು...

(ಅಷ್ಟರಲ್ಲಿ ಸತ್ಯ ಬರುವನು. ಕೈ ಕೈ ಮಿಲಾಯಿಸುವ ಜಗಳವೇ ಆರಂಭ ಆಯ್ತು)

ಸತ್ಯ : ಏನು ನಿಮ್ಮ ಜಗಳ, ಆ ಹುಡುಗರನ್ನ ನೀವು ಹಳ್ಳಿಯವರು ನಾವು ಪಟ್ಟಣದವರು ಆದರ್ಶ ಅಂದ್ರಿ! ನೀವೇ ಜಗಳ ಆಡ್ತೀರಿ ಮೋಸಮಾಡ್ತೀರಿ! ಇನ್ನು ನೀವೇನು ಆದರ್ಶ ಬಿಡಿ.

ಅಂಜು : ಸರಿಯಾಗಿ ಆಡಿದ್ರೂ ಮೋಸ ಅಂತಾರೆ, ನಾನು ಗೆದ್ದದಕ್ಕೆ. ಇವ್ರು ಸೋತವ್ಕೆ... ಹೀಗೆಲ್ಲಾ ಕಿತ್ತು ಜಗಳಕ್ಕೆ ನಾಟಿ ಹಾಕಿಕೊಂಡು ಬರ್ತಾರೆ.

ಸತ್ಯ : ಸಾಕು ನಿಲ್ಲಿಸಿ ನಿಮ್ಮ ಆಟವ. ನಡೀರಿ ಮನೆಗೆ ಓದುಕೊಳ್ಳಿ ಹೋಗಿ... ಸುಮ್ನೆ ಕಾಡುಹರಟೆ, ಆಟ ಜಗಳದಲ್ಲೇ ಕಾಲವಾಗ್ ಹೋಯ್ತು. ಪುಸ್ತಕ ತಂದಿದ್ದಾರಲ್ಲಾ ನಡೀರಿ ಓದ್ಕೊಳ್ಳೀ ಹೋಗಿ.

ಅಂಜು : ನಾನೇನು ಆಡಬೇಕೂ ಅಂತಿರಲಿಲ್ಲ. ಅವಳೇ ಕರೆದ್ಲು ಬಂದೆ ಅಷ್ಟೇ

ಸತ್ಯ : ಸರಿ ಈಗ ಆಟ ಆಯ್ತು, ಜಗಳ ಆಡಿಯೂ ಆಯ್ತಲ್ಲಾ ಸುಮ್ನೆ ಮನೆಗೆ ನಡೀರಿ.

ಅಂಜು : ಆಗ್ಲಿ ನಡೀರಿ.

(ಅಷ್ಟುವಷ್ಟರಲ್ಲಿ ಗಾಡಿಸಿದ್ದಿ ಉಳ್ಳಿಕೆಂಪಿ ಬರುವರು)

ಉಳ್ಳಿ : ಆಯ್ತಪ್ಪಾ ಆಟ.

ಸತ್ಯ : ಆಟವೂ ಆಯ್ತು, ಕಿತ್ತಾಟವೂ ಆಯ್ತು, ತೆಕ್ಕೊಂಡೋಗಿ ನಿಮ್ಮ ಮಕ್ಳೇನಾ.

ಉಳ್ಳಿ : ಇದ್ಯಾಸಪ್ಪಾ ನೀವು ಜಗಳ, ಕಿತ್ಲು, ಮೋಸ, ತಟವಟ ಆಡ್ತಿರ್ರ್ಯಾ? ಪಟ್ಟಣದಲ್ಲಿ ಹಾಗೆ ಹೀಗೆ ಅಂತಿದ್ರಿ, ಈಗ ನೀವೇ...

ಅಂಜು : ಸಾಕು ನಡ್ಯೇ... ಕಂಡಿವ್ನಿ.

ಸತ್ಯ : ಆಕೆ ಹೇಳಿದ್ಲಲ್ಲಾ ನ್ಯಾಯವೇ ಈಗ ನಿಮಗೆ ನಾಚಿಕೆ ಆಗೋಲ್ವೇ?

ಅನಿತಾ : ಸರಿ ಜಗಳ ಆಡ್ದೇ ಇರೋವ್ರ್ಯಾರು? ದೊಡ್ಡವ್ರೇ ಜಗಳ ಆಡ್ತಾರೆ. ತಿಳಿದವ್ರೇ ಅಂಗಾಡ್ತಾರೆ. ನಮ್ಮಂಥ ಹುಡ್ಗೀರು ಆಡಿದ್ರೇನು ಮಹಾತಪ್ಪು.

ಸತ್ಯ : ಅದ್ಕೇ ಆಡಿದ್ರಿ ಈಗ ಸರಿಯಾಗಿ ತಿದ್ದುಕೊಳ್ಳಿ ಇನ್ನು ಮೇಲಾದ್ರೂ ಸರಿಯಾಗಿ ನಡ್ಕೊಳ್ಳಿ ಅಂತ ಬೇರೆಯವರಿಗೆ ಉಪದೇಶ ಕೊಟ್ಟು ಬಿಡಬಹುದು. ಆದ್ರೆ ಅದರಂತೆ ನಡಿಬೇಕಾದ್ರೆ ಬಲು ಕಷ್ಟ.

ಅನಿತಾ : ಸರಿ ನಡ್ಯಪ್ಪಾ... ಪುರಾಣ ಬಿಚ್ಚಬೇಡ.

(ಎಲ್ಲರೂ ಹೊರಡುವರು)

## ದೃಶ್ಯ-೯

(ಅಂಜು, ಅನಿತಾ, ಸುನಿತಾ, ಸತ್ಯ ಎಲ್ಲರೂ ಕಸ ಎತ್ತುವುದು, ಗಿಡ ಕಿತ್ತು ಹಾಕುವುದು, ಕಸ ಗುಡಿಸುವ ಕಾರ್ಯದಲ್ಲಿ ನಿರತರಾಗಿರಲು ಅಲ್ಲಿಗೆ ಚಿಂಕ್ರ, ಗಾಡಿಸಿದ್ದಿ, ಉಳ್ಳಿಕೆಂಪಿ, ಬೋರ, ಆಪಾಟೀಪಾಟಯ್ಯ ಎಲ್ಲರೂ ಬರುವರು.)

ಆಪಾಟಿ : ಬೋರ... ಬಾ... ಇಲ್ಲಿ...

ಬೋರ : ಏನಾ...?

ಆಪಾಟಿ : (ನಗುತ್ತಾ) ಅವ್ರು ಮಾಡಿ ಕೆಲ್ಸ ನೋಡು ಜಾಡಮಾಲಿಗಳು ಕಸಗುಡಿಸುವ ಹಾಗೇ ಗುಡಿಸ್ತಾ ಅವ್ರೆ, ಕಸ ಎತ್ತು ಹಾಕ್ತಾ ಅವ್ರೆ.

ಬೋರ : ಇವರ್ಗೇನು ಬಂತು ಹೊತ್ತು?

ಆಪಾಟಿ : ಜಲಗಾರರಾಗವೊತ್ತು.

ಬೋರ : ಲೇ ಸತ್ಯ, ಅದೇನ್ ಮಾಡ್ತಾ ಇರೋದು?

ಸತ್ಯ : ನೀವು ಹೇಳಿದ್ರಲ್ಲಾ ಅದೇ.

ಬೋರ : ಅದ್ಕೆ ಬೇರ್ಯವ್ರು ಅವ್ರಲ್ಲಪ್ಪಾ ನಮ್ಮೂರ್ ಪಂಚಾಯಿತಿ ನೇಮಿಸಿರುವ್ರು.

ಸತ್ಯ : ಅದ್ಕೆ ಇಷ್ಟೊಂದು ಪಸಂದಾಗಿಟ್ಟಿದ್ದಾರೆ ನಿಮ್ಮೂರ್ನ.

ಬೋರ : ನೀನು ಪಸಂದ ಮಾಡಕ್ಕೆ ಈ ಅವತಾರ ತಾಳ್ಕೊಂಡಿದ್ದೀಯಾ?

ಸತ್ಯ : ನಾವೇನು ಅವತಾರ ತಾಳ್ಕೊಂಡಿರೋದು?

ಉಳ್ಳಿ : ಯಪ್ಪಿ... ಯಪ್ಪಿ... ಈ ಕೆಲಸ ಮಾಡಿ ಅಂತ ಏಳ್ದೋರ್ಯಾರಪ್ಪಾ?

ಅನಿತಾ : ನಾವೇ

ಗಾಡಿ : ನಿಮಗೆ ಅಸಯ್ಯ ಆಗಕಿಲ್ವಾ?

ಸುನಿತಾ : ಇದರ ಗಬ್ ವಾಸನೆ ಕೇಳೋಕೆ ನಿಮಗೆ ಅಸಯ್ಯ ಅಗಕಿಲ್ವಾ?

ಚಿಂಕ್ರ : ಅಪ್ಪ ನೀವು ಈ ಕೆಲಸ ಮಾಡಿ ಅಂತ ಯಾರ್ ಹೇಳಿದ್ರೂ.

ಸತ್ಯ : ನಾವೇ ನಿಮ್ಮೂರ್ ಕೊಳಕು ನೋಡಲಾರದ ಹೀಗೆ ಮಾಡ್ತಾ ಇದೀವಿ.

ಆಪಾಟಿ : ನಿಮಗ ನಾಚಿಕೆ ಆಗೋಲ್ವ? ಇಷ್ಟು ಸಾಹುಕಾರ್ರು, ಮೇಲ್ ಜಾತಿಯುವ್ರು, ಈ ಕೀಳು ಕೆಲಸ ಮಾಡಕ್ಕೆ ಸುರು ಅಚ್ಕಂಡಿರ್ರಲ್ಲಾ.

ಸತ್ಯ : ಕೀಳು ಯಾರು ಮೇಲು ಯಾರು? ಕೀಳು ಕೆಲಸ ಏನು ಬಂತು? ಮೇಲು ಕೆಲಸ ಏನ್ಬಂತು? ಹಿಂದೆ ಗಾಂಧಿಯವರು ಕೊಳಕು ನೋಡಿ ಅವ್ರೇ ಕಸ ಹೊಡಪ್ರಂತೆ, ನಮ್ಮ ಪಾಠದಲ್ಲಿ ಬಂದಿದೆ. ನಾವು ಈ ಕೊಳಕು ನೋಡಲಾರದ ಮಾಡ್ತೋ ಅಷ್ಟೇ.

ಆಪಾಟಿ : ಗಾಂಧಿ ಕಣಯ್ಯಾ.

ಸತ್ಯ : ಗಾಂಧಿಯಲ್ಲ, ಗಾಂಧಿ ತತ್ವ ಅನುಸರಿಸುವವರು ಅಷ್ಟೇ.

ಗಾಡಿ : ನೋಡ್ರಾ ಈಗ ಏನು ಅಚ್ಚುಕಟ್ಟಾಗಿ ಕಾಣುತ್ತೆ ಬೀದಿ.

ಸತ್ಯ : ಹಳ್ಳಿಯವರೆಲ್ಲಾ ದುಡಿದರೆ ಹಳ್ಳಿ ಚೊಕ್ಕಟವಾಗಿಟ್ಕೋಬೋದು. ಹಳ್ಳಿ ಚೊಕ್ಕಟವೇ ನಮ್ಮ ಚೊಕ್ಕಟ.

ಉಳ್ಳಿ : ಹೌದು ಕಣ್ ಸತ್ಯಪ್ಪಾ. ನೀನೇಳೋ ಮಾತು ನಿಜ. ಅಷ್ಟು ದಿನಗಳಿಂದ ಎಂಗಿತ್ತು? ನಮ್ಮ ಊರು ಈಗ ಎಂಗಾಯ್ತು?

ಚಿಂಕ್ರ : ನಿಮ್ಮಿಂದ ಇದ್ನೆ ಕಲ್ತೋ.

ಮಂಟ್ಯ : ಬುದ್ಧಿ ಕಲ್ತೋ.

ಆಪಾಟಿ : ಆರೋಗ್ಯ ಕಲ್ತೋ

ಗಾಡಿ : ಚೊಕ್ಕಟ ಕಲ್ತೋ

ಜೋರ : ನಡವಳಿಕೆ ಕಲ್ತೋ

ಚಿಂಕ್ರ : ಸುಳ್ಳೇಳ್‌ಬಾರ್ದು, ಜಗಳ ಆಡಬಾರ್ದು.

ಜೋರ : ಮೋಸ ಮಾಡಬಾರ್ದು

ಚಿಂಕ್ರ : ಆಡುವಾಗ ಆಡಬೇಕು, ಓದುವಾಗ ಓದಬೇಕು.

ಆಪಾಟಿ : ಅಣ್ಣ ತಮ್ಮಂದಿರಾಗಿ ಬಾಳಬೇಕು.

ಗಾಡಿ : ಅನ್ನೋದ್ನೆಲ್ಲಾ ಕಲ್ತೋ...

ಸತ್ಯ : ನಮ್ಮಿಂದ ಏನು?

ಅನಿತಾ : ತಮ್ಮಿಂದ ಕಲ್ತೋ ಜನಪದ ಗೀತೆ.

ಸುತ : ಜನಪದ ಆಟ.

ಅಂಜು : ಪಳ್ಳಿಜೀವನ ನೋಡಿ ಕಲ್ತೋ.

ಸತ್ಯ : ನಮ್ಮ ಅನ್ನ, ಹಾಲು, ಮೊಸರು, ತುಪ್ಪ, ತರಕಾರಿ ಎಲ್ಲವೂ ನಿಮ್ಮ ಶ್ರಮದಿಂದಲೇ ಬರುತ್ತ ಅನ್ನೋದನ್ನ ಈ ಹಳ್ಳಿಗೆ ಬಂದ ಮೇಲೆ ಚೆನ್ನಾಗಿ ಕಲ್ತೋ...

ಅಂಜು : ಹೊಸ ಹೊಸ ಆಟ, ಹೊಸ ಹೊಸ ಹಾಡು, ಹೊಸ ಹೊಸ ಜನ ಜೀವನ ನೋಡಿ ಕಲ್ತೋ...

ಆಪಾಟಿ : ಹಳ್ಳಿಯಾವರೇನು ಪಟ್ಟಣ ಆದ್ರೇನು, ಎಲ್ಲಿದ್ರೂ ನಾವು ಎಲ್ಲಾ ಒಂದೇ ಎಂಬ ಭಾವನೆ ತಂದುಕೊಟ್ಟರಿ.

ಬೋರ : ನಮ್ಮ ತಪ್ಪನ್ನ ನೀವು ತಿದ್ದಿದ್ರಿ.

ಸತ್ಯ : ನಮ್ಮ ತಪ್ಪನ್ನ ನೀವು ತಿದ್ದಿದ್ರಿ.

ಆಪಾಟಿ : ಇಬ್ರೂ ನಮ್ಮನಮ್ಮ ತಪ್ಪ ಅರಿತು ಸರಿಯಾ ನಡ್ಯೋ ಮನಸ್ಸು ಮಾಡಿದ್ವೋ.

ಸತ್ಯ : ಹೀಗೇ ಪ್ರತಿ ಹಳ್ಳಿಯವರೂ, ಪ್ರತಿ ಪಟ್ಟಣದವರೂ ಒಂದಾಗಿ ನಡೆದರೆ, ಒಳ್ಳೆಯ ನಡತೆಯಿಂದ ಹೋದ್ರೆ ಸುಖವಾಗಿರಬಹುದು.

ಆಪಾಟಿ : ನೆಮ್ಮದಿಯಾಗಿ ಬಾಳಬಹುದು.

ಸತ್ಯ-

ಹಳ್ಳಿಯಾದರೇನು ಸಿವಾ।
ಹುಲ್ಲಳ್ಳಿಯಾದರೇನು ಸಿವಾ।
ಎಲ್ಲಾ ಒಂದೇ ಸಿವಾ।
ನಾವೆಲ್ಲಾ ಒಂದೇ ಸಿವಾ।

ಜನಪದಗೀತೆ (ಗಾಡಿಸಿದ್ದಿ ಉಳ್ಳಿಕೆಂಪಿ ಎಲ್ಲರೂ ವೃಂದಗಾನ ಹಾಡುವರು)

ಹೇಳುವೆ ಕೇಳಮ್ಮಾ ಮುತ್ತಿನಂಥ ಮಾತ।
ಸತ್ಯುಳ್ಳ ಶರಣರು ಹೇಳಿದ ಮಾತು।
ಸತ್ಯುಳ್ಳ ಶರಣರು ಹೇಳಿದ ಮಾತ ನೀ।
ಚಿತ್ತರದಲ್ಲಿರಿಸಿ ಕೇಳಬೇಕು।
ಸುಳ್ಳು ಹೇಳಲಿಬೇಡ ಕಳವು ಮಾಡಲಿ ಬೇಡ।
ಒಳ್ಳೇ ಹಾದಿ ಬಿಡಬೇಡ
ಒಳ್ಳೇ ಹಾದಿ ಬಿಡಬೇಡ। ನನತಮ್ಮ!
ಒಳ್ಳೇ ಹಾದಿ ಬಿಡಬೇಡ॥

ಒಳ್ಳೆಯವರ ಗೆಳೆತನ ಕಲ್ಲ ಸಕ್ಕರಿಯಂಗ।
ಕ್ಷುಲ್ಲರ ಗೆಳೆತನ ಮಾಡಿದರೆ,
ಕ್ಷುಲ್ಲರ ಗೆಳೆತನ ಮಾಡಿದರ-ನನ ತಮ್ಮ!
ಸಲ್ಲದ ಮಾತು ಬರತಾವ॥

ಕೊಟ್ಟ ವಚನ ತಪ್ಪಲ ಬಾರದು
ನೆಟ್ಟನೆ ಪ್ರಾಣ ಹೋದರು।
ನೆಟ್ಟನೆ ಪ್ರಾಣ ಹೋದರು-ಕಲಿಕರ್ಣ
ತಾ ಕೊಟ್ಟ ಮಾತ ಬಿಡಲಿಲ್ಲ॥

ಡೊಳ್ಳು ಬಡಿಯುವ ಬಾರೋ ದ್ಯಾಮವ್ವನ ಗುಡಿಮುಂದ।
ಹೊಳ್ಳೊಳ್ಳಿ ಹಾರಾಡಿ ನಲಿದಾಡಿ
ಶಿವ ಶಿವ ನಮ್ಮ ದೇವಾರು ಬಂದಾವು ಬನ್ನಿರೋ।
ಹರ ಹರ ನಮ್ಮ ದೇವಾರು ಬಂದಾವು ಬನ್ನಿರೋ॥

(ಎಂದು ಎಲ್ಲರೂ ಹಾಡನ್ನು ಹಾಡಿ ಮುಗಿಸುತ್ತಿದ್ದಂತೆಯೇ)

ಬೋರ : ಈವತ್ತಿಗೆ ರಜೆ ಮುಗೀತಂತೆ.

ಆಪಾಟಿ : ನಾಳಾಕೊಯ್ತಾರಂತೆ ನಮ್ಮ ಅನಿತಾ, ಸುನಿತಾ, ಅಂಜು, ಸತ್ಯ.

ಚಿಂಕ್ರ : ಮತ್ಯಾವಾಗ ಬರ್ತಿರವ್ವಾ?

ಮಂಟ್ಯ : ಇನ್ನೊಂದು ರಜ ಬುಟ್ಟಾಗ ಬರ್ತಾರ.

ಅನಿತಾ : ಅಷ್ಟರತನಕ ನೀವು ಓದು-ಬರ್ಯದ ಕಲಿತ್ಕಂಡು ಒಂದು ಕಾಗದ ಹಾಕಿದ್ರೆ ನಾವು ಬರ್ತೀವಿ.

ಸತ್ಯ : ಮತ್ತೊಂದು ಸಾರಿ ಬಂದಾಗ ಊರೆಲ್ಲಾ ಕ್ಲೀನಾಗಿರಬೇಕು. ಹಾಗಂತ ಬರದ್ರೇ ನಾನು ಬರೋದು.

ಬೋಗ : ಅದ್ಯಾಕ್ ಮಾಡಿಸ್ಬುಡ್ತೀವಿ ಬುಡಿ. ಮೂರ ಮನೆ ಹಳ್ಳಿ ಬೀದಿ, ಸುದ್ದ ಮುಡದ್ ಅದೇಟೋತ್ತು.

ಅಂಜು : ಎಲ್ಲರೂ ತುಂಬಾ ಕ್ಲೀನಾಗಿರ್ಬೇಕು, ನಾವು ಬರೋತನ್ಕ.

ಗಾಡಿ : ಅದ್ಯಾಕ್ ಬುಡಿ, ಬಟ್ಟೆ ಕುಕ್ಕಂಡ್, ಮೈ ತೊಳ್ಕಂಡ್ ಸುದ್ದವಾಗಿ ರದ್ ತಾನೆ.

ಉಳ್ಳಿ : ಅಂಗೇ ಆಗ್ಬುಡ್ಲಿ...

ಗಾಡಿ : ನೀವು ಬರವರ್ಗೆ ಇನ್ನು ನಾವು ಏಳ್ಕೊಟ್ಟಾವ್ಗಳ್ನೆಲ್ಲಾ ಏಳಬೇಕು.

ಸುನಿತಾ : ಆಗ್ಲಿ...

ಸತ್ಯ : ನಾವು ಬರೋಣ್ವಾ...?

(ಎಲ್ಲರೂ ಅಳುತ್ತಾ ಇರಲು)

ಅನಿತಾ : ಸಂತೋಷವಾಗಿ ಕಳಿಸಿ ಮತ್ತೆ ಬರ್ತೀವಿ.

ಗಾಡಿ : ಆಟು ದಿನದಿಂದ ಆಡ್ಕಂಡು ಈಗ ಒಂಟೋಯ್ತೀವಿ ಅಂದ್ರೆ ದುಃಖ ವಾಯ್ತಾದ ಕಣವ್ವಾ. ಅಷ್ಟೇ ಸಂತೋಸವಾಗೇ ಕಳಿಸ್ಕೊಡ್ತೀವಿ.

(ಎಲ್ಲರೂ ಹಾಡುತ್ತಾ ಕುಣಿಯುತ್ತಿರಲು ದೃಶ್ಯ ಮುಗಿಯುವುದು)

✳

# ಬಿಟ್ಟೆನೆಂದರೆ ಬಿಡದೀ ಮಾಯೆ

**ಪಾತ್ರ ವರ್ಗ**

ಬನಶಂಕರಮ್ಮ ೪೦ ವಯಸ್ಸು, ಸಂಗೀತ ೧೮ ವಯಸ್ಸು, ಪ್ರಸನ್ನ ೫೦ ವಯಸ್ಸು, ಷಾ ೨೦ ವಯಸ್ಸು, ವೈದ್ಯನಾಥ ೪೦ವಯಸ್ಸು, ಶಿಖಾಮಣಿ ೪೫ ವಯಸ್ಸು, ಜಂಬು ೪೦ವಯಸ್ಸು, ದಿಲೀಪ್ ೨೦ ವಯಸ್ಸು, ದಿಲೀಪನ ತಾಯಿ, ಕಾಲೇಜು ವಿದ್ಯಾರ್ಥಿನಿ, ದಿಲೀಪನ ತಂದೆ, ದೀಲೀಪನ ಮಿತ್ರ, ವೈದ್ಯರು, ಮತ್ತೊಬ್ಬ ವೈದ್ಯರು, ಮಂತ್ರಗಾರ, ಪ್ರಸನ್ನ, ಬನಶಂಕರಮ್ಮನವರ ಪುತ್ರ.

## ದೃಶ್ಯ–೧

(ಸಂಗೀತ ಕಾಲೇಜಿಗೆ ಹೋಗುತ್ತಿರಲು ದಾರಿಯಲ್ಲಿ ಷಾ ಮತ್ತು ದಿಲೀಪ್ ಇಬ್ಬರೂ ಹಿಂಬಾಲಿಸಿಕೊಂಡು ಹೋಗುತ್ತಾರೆ. ಆಕೆ ತಿರುಗಿ ನೋಡಿ ಮುಖವನ್ನು ಒಂದು ತರಹ ಮಾಡಿಕೊಂಡು ಹೋಗುತ್ತಿರಲು ಮತ್ತೆ ಹಿಂತಿರುಗಿ ನೋಡಿ)

ಸಂಗೀತ : ನೀವು...

ಷಾ : ನಾನು ಷಾ.

ದಿಲೀಪ್: ನಾನು ದಿಲೀಪ್.

ಸಂಗೀತ : ಇರಬಹುದು.

ಷಾ : ಇದ್ದೇ ಇದ್ದಿನಲ್ಲಾ,

ಸಂಗೀತ : ಎಲ್ಲಿಗೆ ನೀನು?

ಷಾ : ಹೀಗೆ... ರೂಮ್‌ಗೆ,

ಸಂಗೀತ : ಆದ್ರೆ ನೀನು ರೂಮ್‌ಗೋಗೋ ಮೂಡ್‌ನಲ್ಲಿಲ್ಲ.

ದಿಲೀಪ್: ಮತ್ತೆ ಯಾವುದು ಅಂತ ಗೆಸ್ ಮಾಡ್ತೀರಿ?

ಸಂಗೀತ : ನನ್ನನ್ನ ಹಿಂಬಾಲಿಸ್ತಿದ್ದೀರಿ... ನೀವೇನಾದ್ರೂ...

ದಿಲೀಪ್: ಕಳ್ಳರಲ್ಲ ಮೇಡಂ...

ಷಾ : ಸುಳ್ಳರಲ್ಲ ಮೇಡಂ...

ಸಂಗೀತ : ಶುದ್ಧ ಕಳ್ರು... ಸುಳ್ರು... ಅದಿರಲಿ... ಏನು ಸಮಾಚಾರ ಹೇಳಿ...

ಷಾ : ಹೇಳೋದೇನು ಬಂತು?

ದಿಲೀಪ್ : ನೀವು ಕೇಳ್ತೀನಿ ಅಂದ್ರೆ ಹೇಳ್ತೀವಿ.

ಸಂಗೀತ್ : ಅದೇನು ಹೇಳಬೇಕು. ಬೇಗ ಹೇಳಿಬಿಡಿ.

ಷಾ : ಏನು ಹೇಳಬೇಕು?

ದಿಲೀಪ್ : ಏನಾದ್ರೂ ಹೇಳು?

ಷಾ : ನೀನೇ ಹೇಳು.

ದಿಲೀಪ್ : ನೀನೇ ಹೇಳು.

ಷಾ : ನೀವು... ನಮ್ಮ ಹಾಗೇ...

ಸಂಗೀತ : ಹ್ಯಾಗಾಗುತ್ತೀ... ನಾನು ಹೆಂಗಸಲ್ಲವೇ?

ದಿಲೀಪ್ : ಇಲ್ಲ ಅಂದ್ವೇ ಮೇಡಂ.

ಷಾ : ಖಂಡಿತ ನೀವು ಹೆಂಗಸ್ರೇ...

ದಿಲೀಪ್ : ಇಲ್ಲದೆ ಹೋಗಿದ್ರೇ...

ಸಂಗೀತ : ಹಿಂಬಾಲಿಸ್ತಿರಲಿಲ್ಲ ಅನ್ನಿ...

ದಿಲೀಪ್ : ನಿಮಗೇ ಗೊತ್ತು?

ಸಂಗೀತ : ನೀವು ಮಾಡೋದು ನನಗೆ ಗೊತ್ತಿಲ್ವೇ?

ಷಾ : ನೀವು ಹಾಗೇ ಮಾಡ್ತೀರಿ. ನಾವು ಅದ್ಕೇ ಹಾಗೇ ಮಾಡ್ತೀವಿ.

ದಿಲೀಪ್ : ತಪ್ಪೇನು?

ಸಂಗೀತ : ಎಲ್ಲಾ ಸರಿಯೇ.

ಷಾ : ನೋಡ್ದಾ ಒಪ್ಕಂಡ್ರು, ಹಾಗಿರಬೇಕು. ಈಗಿನ ಕಾಲದಲ್ಲಿ ಕಾಲೇಜಿಗೆ ಸೇರಿದ ಮೇಲೆ ಬಿಚ್ಕೋಲೆ ಗೌರಮ್ಮನಾಗಿರೋದು ಬಿಟ್ಟು ಹೆಂಗಸು ಎಲ್ಲಾ ಕ್ಷೇತ್ರದಲ್ಲೂ ಯಾರಿಗೇನು ಕಡಿಮೆ ಇಲ್ಲ ಅಂತ ತೋರಿಸ್ಕಳ್ಬೇಕು.

ದಿಲೀಪ್ : ನಡ್ಕೋಳ್ಬೇಕು...

ಷಾ : ಹೇಗಾದ್ರೂ ಸರಿ...

ಸಂಗೀತ : ಈಗ ನಾನೇನು ಮಾಡಬೇಕು ಅಂತೀರಿ?

ಷಾ : ಏನಿಲ್ಲ ನಮಗೆ girl friend ಆದ್ರೆ ಸಾಕು...

ಸಂಗೀತ : ಆಯ್ತು ಅದರಲ್ಲಿ ತಪ್ಪೇನು? ಈಗಿನ ಕಾಲದಲ್ಲಿ ಇವೆಲ್ಲಾ ಒಂದು ದೊಡ್ಡ ವಿಷಯವೇ?

ದಿಲೀಪ್: ಥ್ಯಾಂಕ್ಯೂ ಮೇಡಂ. ಇಷ್ಟು ಬೇಗನೆ ಮನಸ್ಸು ಮಾಡಿದವ್ರು ಅಂದ್ರೆ ನೀವೇ...

ಷಾ : ಮನಸು ಮನಸು ಬೆರತ ಮೇಲೆ ಎಷ್ಟು ಹೊತ್ತು?

ದಿಲೀಪ್: ಆಯ್ತು ಬರೀ ಮಾತ್ಲೇ ಸ್ವರ್ಗ ತೋರ್ತ್ತೀಯೋ?

ಷಾ : ನಿಜವಾದ ಸ್ವರ್ಗ ಸುಖ ಅನುಭವಿಸ್ತೀನಿ ಅಂದ್ರೆ ಅವರಿಗೆ ಕಲ್ಪಿಸಿ ಕೊಡೋಣ.

ದಿಲೀಪ್: ಈಗ ಸದ್ಯಕ್ಕೆ ಕಾಫಿ...

ಷಾ : ಆಯ್ತು ಅದಾವ ಮಹಾ...

ಸಂಗೀತ : ಪರ್ವಾಗಿಲ್ಲ ಸಂತೋಷ ಇನ್ನೊಂದು ದಿನ ಸಿಗೋಣ.

ಷಾ : ಅಂದ ಹಾಗೆ ತಮ್ಮ ಪರಿಚಯವೇ ಮಾಡ್ಕೊಳ್ಳಲಿಲ್ಲ.

ದಿಲೀಪ್: ಹೆಸರು ಕೇಳಲಿಲ್ಲ.

ಸಂಗೀತ : ನನ್ನ ಹೆಸರು ಸಂಗೀತ I Year B.A.Section ಸಾಕೇ ನನ್ನ ಬಗ್ಗೆ details.

ಷಾ : ಮಿಕ್ಕವೆಲ್ಲಾ ಗೊತ್ತೇ ಇದೆಯಲ್ಲಾ, ದಿವ್ಸಾ ನೋಡ್ತಾನೇ ಇರ್ತೀವಲ್ಲ. very kind of you madam.

ದಿಲೀಪ್: ಈಗ ನಮ್ಮ ಹೊಸ friends ship ನಲ್ಲಿ Sweet ತಿನ್ಲೇಬೇಕು.

ಸಂಗೀತ : ನಿಮ್ಮ ಮಾತುಗಳೇ ಬಹಳ ಸ್ವೀಟಾಗಿವೆ.

ದಿಲೀಪ್: ಅದರ ಜೊತೆಗೆ ಸ್ವೀಟ್ ಅನ್ನೂ ತಿಂದು, ನಿಮ್ಮ ಕೆಂಪು ನಾಲಿಗೆ ತಿರುಗಿಸುತ್ತಾ, ಬಿಳಿ ಹಲ್ಲು ತೋರ್ತಾ, ನಗು ಬೀರ್ತಾ, ನಮ್ಮ ಮುಂದೆ ಕುಳಿತರೆ.. ನಾವೂ ನಿಮ್ಮ ಆನಂದವನ್ನು ಕಣ್ತುಂಬ ನೋಡಿ ಆನಂದಿಸ್ತೀವಿ.

ಸಂಗೀತ : ದೇವರು ಕಣ್ಣು ಕೊಟ್ಟಿರೋ... ಉದ್ದೇಶ ಗೊತ್ತು.

ಷಾ : ಅದರ ಸದುಪಯೋಗ ಆಗಬೇಕಲ್ಲಾ...

ಸಂಗೀತ : ದುರುಪಯೋಗ ಆಗಬಾರದು.

ಷಾ : ...ಛೇ...ಛೇ... ಎಲ್ಲಾದ್ರೂ ಉಂಟೇ?

ಸಂಗೀತ : ನೀವು ಅಷ್ಟೊಂದು ಆಸೆ ಇಟ್ಟುಕೊಂಡಿರೋವಾಗ ನಾನು ಮೊಟಕು ಮಾಡಲಿಕ್ಕೆ ಇಷ್ಟ ಪಡೋಲ್ಲ.

ಷಾ : ಅದು ನಮಗೆ ಗೊತ್ತಿತ್ತು.

ಸಂಗೀತ : ಹ್ಯಾಗೆ?

ದಿಲೀಪ್: ನಿಮ್ಮ ಮಾತಿನ ದಾಟೀಲೇ ಗೊತ್ತಾಗಿ ಬಿಡ್ತು.

ಸಂಗೀತ : Okay ನಡೀರಿ ಹೋಗೋಣ.

ದಿಲೀಪ್: ತುಂಬಾ ಸಂತೋಷ ಮೇಡಂ ನಡೀರಿ ಹೋಗೋಣ.

(ಎಲ್ಲರೂ ಹೊರಡುವರು ರಂಗ ಮಂಟಪ ಕತ್ತಲಾಗುವುದು)

## ದೃಶ್ಯ-೨

(ಪಾರ್ಕಿನಲ್ಲಿ ಒಂದು ಕರ್ಚೀಫ್ ಹಾಸಿ ದಿಲೀಪ್ ಕುಳಿತು ಕೊಂಡು ಬರೆಯುತ್ತಿರುತ್ತಾನೆ)

ದಿಲೀಪ್ : ನಾನು ದಿಲೀಪ್...

ದಿಲೀಪ್ : ನಾನು ದಿಲೀಪ್... ಅಷ್ಟು ಹೊತ್ತಿನಿಂದ ಯಾಕ್ ಸುಮ್ನೆ ಕೂತಾ ಅಂತ ಆಶ್ಚರ್ಯ ಅಲ್ಲಾ? ನಾನು ನನ್ನ ಲೋಕದಲ್ಲಿ ವಿಹರಿಸ್ತಿದ್ದೆ... ನನ್ನ ಲೋಕ ಅಂದ್ರೆ ನಿಮ್ಗೆ ಅರ್ಥವಾಗ್ದೇ ಇರಬಹುದು. ಅದು 'ಕಲಾ-ಲೋಕ' ನನ್ನನ್ನು ನೋಡಿದ್ರೆ ಕಲಾವಿದನಾಗೆ ಕಾಣ್ತಾ ಇಲ್ವೆ? ಪಾಪ ಮುಖ ನೋಡಿ ಏನು ಗೊತ್ತಾಗಬೇಕು? ನೋಡಿ ಇಲ್ಲಿ ನಾನು ಬರೆದಿರೋದೆ ಈ ಚಿತ್ರಗಳು. ಅಷ್ಟು ಹೊತ್ತಿನಿಂದ ಯಾವುದೋ ಚಿತ್ರ ಬರ್ಯೋಕೆ ಯೋಚನೆ ಮಾಡ್ತಿದ್ದೆ.

ಷಾ : ಏನಯ್ಯಾ ನಿನ್ನಷ್ಟಕ್ಕೆ ನೀನೇ ಪೇಚಾಡ್ಕಳ್ತೀಯಾ? ದಿಲೀಪ್ ಏನು ಸಮಾಚಾರ?

ದಿಲೀಪ್ : ಏನೋ ಇನ್ನೂ ನೀನು ಬರ್ಲಿಲ್ವಲ್ಲಾ ಅಂತ ಪೇಚಾಡ್ಕೋತಿದ್ದೆ.

ಷಾ : ಅದಲ್ಲಾ ಬಿಡು. ಅದು ಆ ಹೊತ್ತು ನೋಡಿದ ಸಂಗೀತಾ ವಿಷಯ ಇರಬೇಕು.

ದಿಲೀಪ್ : Mr. ಷಾ ಅದನ್ನೇ ನಾನೂ ಗೊಣಗ್ತಾ ಇದ್ದೆ ಅಷ್ಟೆ.

ಷಾ : ಅಂದ್ರೆ ಈ ಹೊತ್ತು ಒಳ್ಳೇ ಮೂಡ್‌ನಲ್ಲಿ ಇದ್ದೆ ಅಂತ ಕಾಣುತ್ತೆ.

ದಿಲೀಪ್ : ಅದೂ ಆದ್ರೂ ಆಗಬಹುದು ಅದರಲ್ಲೇನು ತಪ್ಪು? ಮೂಡ್ ಬರಕ್ಕೇ... ನಿನ್ನನ್ನೇ ಕಾಯ್ತಿದ್ದೆನಪ್ಪಾ.

ಷಾ : ಹೋಗ್ಲಿ ಬಾರಪ್ಪ ತಂದಿದ್ದೀನಿ ಸರಕು.

ದಿಲೀಪ್ : very good friend ಅಂದ್ರೆ ನೀನು ಕಣಯ್ಯಾ.

(ಇಬ್ಬರೂ ಕುಳಿತುಕೊಳ್ಳುವರು, ಜೇಬಿನಿಂದ ತೆಗೆದು ಅಂಗೈಗೆ ಹಾಕಿಕೊಂಡು ತಿಕ್ಕಿ ಅದಕ್ಕೇನೇನೋ ಹಾಕಿ ಎರಡು ಪೈಪಿಗೆ ತುಂಬಿಸಿದ ಬೆಂಕಿ ಹಚ್ಚಿವ. ಒಂದು ತೆಳಗಿನ ಬಟ್ಟೆಯನ್ನು ತುಟಿಯ ಕಡೆಯ ಪೈಪಿಗೆ ಹಾಕಿ ದಮ್ಮು ಎಳೆದರು. ಕಣ್ಣುಗಳು ಕೆಂಪಗಾದುವು. ಮತ್ತೆ ಎಳೆದರು ಎರಡು ಮೂರು ದಮ್ಮು ಎಳೆದರು. ಸೆಕ್ಸಿ ಮುಖ ಚಿತ್ರವುಳ್ಳ ಕಾದಂಬರಿಯನ್ನು ಓದುತ್ತಾ ಹಾಗೇ ಒಬ್ಬನ ತೊಡೆಯ ಮೇಲೆ ಒಬ್ಬ ಮಲಗಿಕೊಂಡರು. ಕಾದಂಬರಿಯನ್ನು ಓದಲಾರಂಭಿಸಿದರು. ಸ್ವಲ್ಪ ಹೊತ್ತಾಗುತ್ತಿದ್ದಂತೆಯೇ ಇಬ್ಬರೂ ಕಣ್ಮುಚ್ಚಿದರು. ಸ್ವಲ್ಪ ಹೊತ್ತಿನ ತನಕ ಮಲಗುವರು. ಅಷ್ಟರಲ್ಲಿ ಷಾ ಎದ್ದು ನಿಂತು ಅವನ ಮುಂದೆ ನಿಂತಿದ್ದ ಸಂಗೀತಳು ಮುಗುಳ್ನಗೆ ಬೀರಿ ನಿಂತಿದ್ದಾಳೆ. ಷಾ ಮಾತನಾಡುವ ಪ್ರಯತ್ನ ಮಾಡುತ್ತಾನೆ)

ಷಾ : ಸಂಗೀತಾ... ಹಾಡು ನೀನೊಂದು ಗೀತೆ.

ಸಂಗೀತ : ಹೆಸರು ಸಂಗೀತ ಇರಬಹುದು, ಆದ್ರೆ ನನ್ನ ಸಂಗೀತ ಕೇಳಿಬಿಟ್ರೆ ಇಲ್ಲಿಂದ ದೂರ ಕಿವಿ ಮುಚ್ಚಿಕೊಂಡು ಹೊರಟು ಹೋಗ್ಬಿಡ್ತೀರಿ ಆಮೇಲೆ ಅಷ್ಟೇ.

ಷಾ : ಅದೇ ಕೋಗಿಲೆ ಗಾನ ಅಂತ ತಿಳ್ಕೋತೀನಿ.

ಸಂಗೀತ : ತಿಳ್ಕೊಳ್ಳೋದ್ಕೆ ಹಾಡಬಾರದು.

ಷಾ : ಕೇಳೋದ್ಕೇ ಹಾಡಿ.

ಸಂಗೀತ : ಮತ್ತೆ ಕೇಳ್ದೇ ಇರೋಕ್ಕೆ ಹಾಡ್ತಾರಾ?

ಷಾ : ನೀನು ಹಾಡು ಚಿನ್ನಾ ಕೇಳ್ತೀನಿ. ನೀನು ಹಾಗೆ ಬಾಯಿ ಬಿಡುಬೇಕಾದ್ರೆ ನೋಡ್ತಾ ಹಾಗೇ ನಿಂತ್ಬುಡ್ತೀನಿ. ಕಲ್ಗೊಂಬೆ ಕಂಡ ಹಾಗೇ.

ಸಂಗೀತ : ಬರೇ ನಿಂತ್ರೇನು?

ಷಾ : ನೋಡ್ತಾ ನಿಲ್ಲಿಕ್ಕಾಗುತ್ಯೇ ಹಾಗೆ ಸ್ವಲ್ಪ ಸ್ವಲ್ಪ ನಿನ್ನ ಹತ್ತಿರ ಬರ್ತೀನಿ.

ಸಂಗೀತ : ಆಮೇಲೆ.......

ಷಾ : ನಾಲ್ಕು ತುಟಿಗಳನ್ನು ಒಂದಾಗಿ ಮಾಡ್ತೀನಿ.

ಸಂಗೀತ : ಪೋಲಿ...

ಷಾ : ಅಲ್ಲಾ...

ಸಂಗೀತ : ಅಂಗೆಲ್ಲಾ ಮಾಡಿದ್ರೆ ಏನಂತಾರೆ?

ಷಾ : ರಸಿಕ ಅನ್ನಬೇಕು.... ಆಮೇಲೆ...

ಸಂಗೀತ : ಹೇಳಿ...

ಷಾ : ನಿನ್ನನ್ನು ಭದ್ರವಾಗಿ ಅಪ್ಪಿಕೊಂಡು ಬಿಡ್ತೀನಿ... ನಿನ್ನ ಏರು ತಗ್ಗು ದೇಹವನ್ನು...

ಸಂಗೀತ : Silly,

ಷಾ : ಇವೆಲ್ಲಾ ಪ್ರಣಯ ಚೇಷ್ಟೆಗಳಲ್ವೆ? ಸಿಲ್ಲಿ ಹ್ಯಾಗಾಗುತ್ತೆ?

ಸಂಗೀತ : ಹ್ಞೂಂ... ಸಾಕು ಮುಂದಕ್ಕೆ ಬರಬ್ಯಾಡಿ ಹಾಗೇ ನಿಲ್ಲಿ statue ಹಾಗೆ...

ಷಾ : ಇದು ಸ್ಟ್ಯಾಚ್ಯೂ ಆಟವೇನು?

ಸಂಗೀತ : ತಲೆಕೆಟ್ಟ ಆಟ...

ಷಾ : ಒಟ್ನೊಲ್ಲೊಂದಾಟ...

ಸಂಗೀತ : ಸಾಕು ನಿಮ್ಮ ಆಟ ನಡೀರ್‍ರ್ರೀ...

ಷಾ : ಆಯ್ತು ನೀ ಹೇಳಿದ್ಮೇಲೆ...

ಸಂಗೀತ : ಹೋಗಿ ನಿದ್ದೆ ಮಾಡು ಹೋಗು ಹಾಯಾಗಿ

(ದಿಲೀಪ್ ಮೇಲೆದ್ದು ಬರುತ್ತಾ)

ದಿಲೀಪ್: ಅಂದ ಹಾಗೇ ನಾನು ಬರಬೇಕೇನು?

ಸಂಗೀತ : ಬೇಡ ಅಂದರೇನು?

ದಿಲೀಪ್: ಬರ್ತಾ ಇದ್ದೇನೆ...ಬೇಗ ಬರ್ತಾ ಇದ್ದೇನೆ...

ಸಂಗೀತ : ಆತುರ ಏನು ಇಲ್ಲ ನಿಧಾನವಾಗ್ಯೇ ಬನ್ರೀ...

ದಿಲೀಪ್: ಆಮೇಲೆ ಹೊರಟುಬಿಟ್ರೇ......?

ಸಂಗೀತ : ಓಡಿ ಬರಬಹುದು.

ದಿಲೀಪ್: ಅದ್ಕೇ ಮೊದ್ಲೇ ಜಾಣ್ತನ ಮಾಡಿ ಓಡಿ ಬರ್ಲಾ ಅಂದೆ.

ಸಂಗೀತ : ನಷ್ಟವೇನಿಲ್ಲ.

ದಿಲೀಪ್: ನನಗೆ ಲಾಭ.

ಸಂಗೀತ : ಹ್ಯಾಗೆ?

ದಿಲೀಪ್: ನಿನ್ನನ್ನು ನೋಡಬಹುದು.

ಸಂಗೀತ : ನೋಡಿದ್ರ್ಯೇನು ಬಂತ್ರು ಭಾಗ್ಯ?

ದಿಲೀಪ್: ಕಣ್ಗಳಿಗೆ ಆನಂದ ತಂಪು...

ಸಂಗೀತ : ಬರೇ ಕಣ್ಗಳಿಗೇ ಸಾಕೇ...

ದಿಲೀಪ್: ಇನ್ನ್ಯಾವುದಕ್ಕೆ ಬೇಕು ಅಂತೀರಿ?

ಸಂಗೀತ : ಸ್ಟುಪಿಡ್.

ದಿಲೀಪ್: ನೀವು ಬೈದರೂ ನಮಗೆ ಚಂದ

ಸಂಗೀತ : ಹೊಡೆದ್ರೆ...

ದಿಲೀಪ್: ಪ್ರೀತಿ ಏಟು ಅಂತ ತಿಳ್ಕೋತೀನಿ.

ಸಂಗೀತ : ಹೆದರಿಕೊಳ್ಳಬೇಡಿ.

ದಿಲೀಪ್: ಏಕೆ?

ಸಂಗೀತ : ನಾನ್ಯಾಕಪ್ಪಾ ನಿಮ್ಗೆ ಹೊಡೀಲಿ...?

ದಿಲೀಪ್: ಹಾಗಾದ್ರೆ ನನ್ನನ್ನೇ ಹೊಡೀ ಅಂತೀರಾ?

ಸಂಗೀತ : ನಾನು ತಡ್ಕಳ್ತೀನಾ?

ದಿಲೀಪ್: ಹೊಡಿಸ್ಕಂಡು ನೋಡಿ ಎಕ್ಸ್‌ಪೆರಿಮೆಂಟ್ ಮಾಡಿ ನೋಡೋಣ

ಸಂಗೀತ : ಕಾಲೇಜಿನಲ್ಲಿ ಮಾಡೋದು ಸಾಲದೇ?

ದಿಲೀಪ್: ಅದೊಂದು ಥರ... ಇದೊಂದು ತರ. ಆದರೆ ನಿನ್ನನ್ನು ನೋಡಿದ್ರೆ ನನಗೆ ತರತರ...

ಸಂಗೀತ : ಸದ್ಯ ನನ್ನ ಕಂಡ್ರೆ, ಥರಥರ ನಡ್ಗೊಲ್ವಲ್ಲಾ.

ದಿಲೀಪ್: ಇಲ್ಲ. ಈಗ ಹುಟ್ಟಿ ಬಿಡ್ತು ನಡುಕ.

ಸಂಗಿತ : ಯಾಕೋ?

ದಿಲೀಪ್: ನಿಮ್ಮ ಹತ್ತಿರ ಬರೋಕ್ಕೆ.

ಸಂಗೀತ : ಅದ್ಕೂ ನಡಕೊ ಸಂಬಂಧ ಏನು?

ದಿಲೀಪ್: ಇಲ್ದೇ ಬರುತ್ತೇ...? ನಿಮ್ಮ ಕಂಡ್ರೆ ನನಗೆ ಪ್ರಾಣ...

ಸಂಗೀತ : ಇರುತ್ತೋ ಹೊರ್ಟ್ಹೋಗುತ್ತೋ.

ದಿಲೀಪ್: ಹೊರಟೋದ್ರೇನು ಪ್ರಯೋಜನ?

ಸಂಗೀತ : ಓಹೋ ಇದ್ದೇ ಪ್ರಯೋಜನ ಪಡ್ಕೋಬೇಕೇ?

ದಿಲೀಪ್: ಕರೆಕ್ಟ್ ಬಂದೆ... ನಿಮ್ಮ ಹತ್ತಿರ ಬಂದೆ ನಿಮ್ಮ ಸೆರಗುಹಿಡ್ಕೊಂಡೇ ಆಮೇಲೆ...

ಸಂಗೀತ : ಸಾಕು...

ದಿಲೀಪ್: ಒಂದೊಂದಾಗಿ ಜಾರಿಸಬೇಕು... ನಿಮ್ಮ ಅಂದ ನೋಡಬೇಕು. ಅಂತ ಮನಸ್ಸು... ಅವಕ್ಕೇ ಅಳುಕು... ಆದ್ರೂ ನಿಮ್ಮ ಬಿಳೀ ದೇಹ ನೋಡಿದ್ರೆ... ಮತ್ತೆ ದೈರ್ಯ ತಾಳ್ಕೊಂಡು ಬರ್‍ತಿದ್ದೀನಿ.

ಸಂಗೀತ : ಸೇವಾರ್ಥ ಏನಾದ್ರೂ ಬೇಕು?

ದಿಲೀಪ್: ಏನು ಕೊಡ್ತೀರಿ?

ಸಂಗೀತ : ಏನು ಬೇಕು?

ದಿಲೀಪ್: ನಿಮ್ಮನ್ನೇ... ಕೊಟ್ಬುಡಿ...

ಸಂಗೀತ : ತೆಗೊಳ್ಳಿ...

(ಹಿಡಿಮಕೊಳ್ಳಲು ಹೋಗಲು ತಳ್ಳುವಳು, ಆತನೂ ಹೋಗಿ ಮಿತ್ರನ ಜೊತೆ ಮಲಗುವನು. ಸಂಗೀತ ಹೊರಡುವಳು. ಕತ್ತಲಾಗಿ ಮತ್ತೆ ರಂಗ ಬೆಳಗುವುದು.)

ಷಾ : ಎದ್ದಾ...?

ದಿಲೀಪ್: ಇಲ್ಲಾ ಇನ್ನೂ ಬಿದ್ದಿವ್ನಿ ಅಂತ ತಿಳ್ಕೊಂಡಿದ್ದೀಯಾ? ನಿನ್ನ ಹಾಗೆ.

ಷಾ : ಸಂಗೀತನ ಜೊತೆ.

ದಿಲೀಪ್: ಅಬ್ಬಾ... ಮರೆಯಲಾಗದು.

ಷಾ : ನಿನ್ನ ತಲೆ ನಾನು ನೋಡಿದ್ದೀನಿ ಅಂದ್ರೆ ತಾನು ಮರೆಯಲಾರದು ಅಂತಾನೆ.

ದಿಲೀಪ್: ನಿನ್ನ ಕೂಡ ಏನು? ನನ್ನ ಕೂಡಾನೂ ಬಂದಿದ್ಲು.

ಷಾ : ಬಂದು,

ದಿಲೀಪ್: ಮಾತಾಡಿದ್ಲು

ಷಾ : ನನ್ನನ್ನು ಅಪ್ಪಿಕೊಂಡಳು.

ದಿಲೀಪ್: ಮುದ್ದಾಡಿದ್ಲು.

ಷಾ : ಸುಳ್ಳು.

ದಿಲೀಪ್: ನಿನ್ನದು ಶುದ್ಧ ಸುಳ್ಳು.

ಷಾ : ನೀನು ಮಹಾ ಸ್ಫುರದ್ರೂಪಿ ಮುದ್ದಾಡಿದ್ಲು.

ದಿಲೀಪ್: ನೀನು ಮಹಾ ಹ್ಯಾಂಡ್‌ಸಂ ಅಂತಾ ಅಪ್ಪಿಕೊಂಡಳು. ನನ್ನ ಮುಂದೇ ಬುಡ್ಬ್ಯಾಡ ರೈಲಾ...

ಷಾ : ನೀ ಬುಡ್‌ಬ್ಯಾಡ ಗಾಡೀನಾ... ಹ್ಯಾಗಿತ್ತು?

ದಿಲೀಪ್: ಇಬ್ರೂ ಒಂದೇ ಥರದ್ದು ತಾನೇ ಸೇವಿಸಿದ್ದು, ಅದ್ಕೇ ಒಂದೇ ಥರ ಅನುಭವವಾಯ್ತು... ಏನಂತೀಯಾ?

ಷಾ : ನೀನಂದ ಮೇಲೆ ನಾನು ಕೇಳಬೇಕಲ್ಲಾ... ಅನ್ನು ಅನ್ನು... ಇನ್ನೂ ಏನೇನಿದ್ಯೋ ಅನ್ನು...

ದಿಲೀಪ್: ಬರೀ ಬೊಗಳೆ ಅಂತೀಯಾ ಅಂದೇನು ಪ್ರಯೋಜ್ನ?

ಷಾ : ಏನು ಮರಿ ಕಾಲೇಜಿಗೆ ಬರ್ತೀಯಾ? ಇಂಗೆ ಇಲ್ಲೇ ಹೀಗೆ ಬಿದ್ದಿರ್ತೀಯೋ.

ದಿಲೀಪ್: ಬಂದ್ರಾಯ್ತು.

ಷಾ : ಬಿಟ್ರೂ ಆಯ್ತು.

ದಿಲೀಪ್: ಅಲ್ಲೋಗ್ ಗೆಣಸು ಕೆತ್ತೋದು ಅಷ್ಟರಲ್ಲೇ ಇದೆ.

ಷಾ : ಹಾಗಬಾ ದಾರೀಗೆ.

ದಿಲೀಪ್: ಹಾಗಾದ್ರೆ ದಾರಿಗೆ ಹೋಗೋಣ್ವಾ.

ಷಾ : ಇಲ್ಲಾ ಇಲ್ಲೇ ಬಿದ್ದಿರು... ನಗ್ಲಿ ಎಲ್ರೂ.

ದಿಲೀಪ್: ಸರಿ. ನಡಿ...

(ಇಬ್ಬರೂ ಉರುಳಾಡಿಕೊಂಡು ಮೇಲೇಳುವರು)

(ಷಾ, ಸಂಗೀತ, ದಿಲೀಪ್ ಮೂವರೂ ದಾರಿಯಲ್ಲಿ ಬರುತ್ತಾ)

ಷಾ : ಏನಯ್ಯಾ ದಿಲೀಪ್ ರಜೆಗೆ ಊರಿಗೆ ಹೋಗ್ತೀಯಾ ಏನು?

ದಿಲೀಪ್: ಹೋಗಬೇಕಪ್ಪಾ ಊಟ-ತಿಂಡಿ ಹಾಸ್ಟೆಲ್‌ದು ಸಾಕಾಗೋಗಿದೆ.

ಷಾ : ನಾನೇನೋ ಇಲ್ಲೇ ಇರ್ತೀನಿ ಕಣೋ ನಾನು ಬೇಕ್ ಬೇಕಾದಾಗೆ. ಊರಿಗೋಗೋಕ್ಕೆ ಆಗುತ್ತಾ? ನೀವು ಸಂಗೀತಾ?

ಸಂಗೀತ : ನಿಮ್ಮ ಜೊತೆ ಸಂಗೀತ ಹಾಡಲಿಕ್ಕೆ ಇಲ್ಲೇ ಇರ್ತೇನೆ.

ಷಾ : ಓ.ಕೆ.

ಸಂಗೀತ : ಬರುವಾಗ ಚಕ್ಕುಲಿ, ಕೋಡುಬಳೆ, ಉಪ್ಪಿಟ್ಟು, ರವೆಉಂಟೆ ಎಲ್ಲಾ ತರ್ತೀರಾ ಮಿ. ದಿಲೀಪ್

ದಿಲೀಪ್: ತರ್ದೇ ಉಂಟೇ? ಈಗ ನಾನು ಹೋಗ್ತಿರುವಾಗ ನನಗೇನು ಕೊಟ್ಟು ಕಳಿಸ್ತೀರಿ?

ಷಾ : ಎಲ್ಲಾನೂ ಪೊಟ್ಟಣ ಕಟ್ಟಿ ಇಟ್ಟಿರ್ತೀನಿ ಸಾಯಂಕಾಲ ರೂಮಿಗೆ ಬಂದು ತೆಗೆದುಕೊಂಡು ಹೋಗಪ್ಪಾ.

ದಿಲೀಪ್: ಹೌದಪ್ಪ ನಮ್ಮೂರ್ರಿಗ್ಹೋಗಿ ಕೂತ್ಕೊಂಡ್ರೆ ಇವೆಲ್ಲಾ ಎಲ್ಲಿ ಸಿಕ್ಕೋದು?

ಷಾ : ದಟ್ ಈಸ್ ಟ್ರೂ, ಅದ್ಕೇ ಇಲ್ಲೇ ಇದ್ದು ಬಿಡು ಅಂದೆ. ಆದ್ರೆ ಏನೋ ಗೊಣ ಗೊಣ ಅಂತೀಯಾ.

ಸಂಗೀತ : ಹೋಗಿ ಬರ್ಲಿ ಬಿಡಿ.

ಷಾ : ಗ್ರ್ಯಾಂಟೆಡ್

ದಿಲೀಪ್: ಥ್ಯಾಂಕ್ಯೂ ಸರ್.

* * *

(ಬನಶಂಕರಮ್ಮನವರ ಮನೆ ಮಗ ಕೋಣೆಯತ್ತ ಹೋಗುತ್ತಿರಲು)

ಬನಶಂಕರಮ್ಮ : ಏನು ದಿಲೀಪ್ ರಜ ಬಂದು ಒಂದು ವಾರ ಆಯ್ತು. ಏನು ಆಚಕಡೇನೇ ಬರ್ಲಿಲ್ವಲ್ಲಾ ಒಳ್ಳೇ ಬಾಣಂತನ ಮಾಡ್ಕೋತೀಯೋ ಏನು?

ದಿಲೀಪ್ : ಯಾಕಮ್ಮ ನಿನ್ನ ಮಗಳಿಗೆ ಮಾಡಿದ ಬಾಣಂತನ ಸಾಲ್ಲಿಲ್ಲ ಅಂತ ಈಗ ನನಗೂ ಮಾಡಬೇಕು ಅಂತ ಆಸೇನಾ?

ಬನ : ನನಗೆ ಕಷ್ಟ ಕೊಡದೆ ಮಾಡ್ಕೊಳ್ತೀಯಲ್ಲಾ ಅಂತಾ ಕಾಲೇಜಿಗೆ ಹೋಗಿ ಬಂದ ಮೇಲೆ ಊರವರಿಗೆ ಮುಖ ತೋರಿಸಲಿಕ್ಕೆ ನಾಚಿಕೇನಾ?

ದಿಲೀಪಾ : ಏನು ಹೊರಗೋಗೋದೋ ನನ್ನ ಲೋಕದಲ್ಲಿ ನಾನಿರುವಾಗ ಇನ್ನೂ ಯಾವ ಲೋಕ ಬೇಕು ಅನ್ನಿಸ್ತದೆ ಬಿಡಮ್ಮ.

ಬನಶಂಕರಮ್ಮ : ಸುಮ್ನೆ ಎಷ್ಟ್ ಹೊತ್ತೂ ಬರ್ಯೋದು, ಓದೋದು ಮಾಡ್ತಾ ಕುಳಿತಿದ್ದೀಯಲ್ಲಾ ನಿನಗೆ ಬೇಜಾರೇ ಆಗಲ್ವೇ?

ದಿಲೀಪ್: ಮನುಷ್ಯ ಯಾವುದಾದರೂ ಕೆಲಸದಲ್ಲಿದ್ದಾಗ ಏನಕ್ಕೆ ಬೇಜಾರಾಗುತ್ತೆ ನೀನೇ ಹೇಳಮ್ಮ

ಬನ : ಕಾಲೇಜಿನಲ್ಲಿ ಹೀಗೇ ಓದಿದರೆ ರ್‍ಯಾಂಕ್ ಬರಬಹುದು.

ದಿಲೀಪ್: ಅದ್ಕೇ ಈಗ್ಲಿಂದೇ ಪ್ರಯತ್ನ.

ಬನ : ಯೇನೋ ಅಪ್ಪಾ ಒಂದು ಮಾತಾಡ್ಲಿಲ್ಲ ಕಥೆ ಆಡ್ಲಿಲ್ಲ ನೀನಾಯ್ತು ನಿನ್ನ ಓದು ಬರಹ ಆಯ್ತು. ನಿಂಗೇನೂ ಬೇಜಾರೇ ಆಗಲ್ವಾ?

ದಿಲೀಪ್: ಬೇಜಾರಾಗಿದ್ರೆ ನಾನು ಹೇಳ್ತಿರ್ಲಿಲ್ವಮ್ಮ

* * *

(ಎಂದು ಮತ್ತೆ ಕೋಣೆಯತ್ತ ಹೋಗುತ್ತಿರಲು)

## ದೃಶ್ಯ-೩

(ಮನೆಯ ಒಂದು ಕೋಣೆಯ ಒಳಗೆ ಚಿತ್ರ ಬಿಡಿಸುತ್ತಾ ದಿಲೀಪ್ ಕುಳಿತಿದ್ದಾನೆ. ಈತನ ತಾಯಿ ಈಚೆ ಕಡೆ ಕಿಟಕಿಯಲ್ಲಿ ನೋಡಿ ಗಂಡ ಪ್ರಸನ್ನನೊಂದಿಗೆ)

ಬನ : ನೋಡಿದ್ರಾ?

ಪ್ರಸನ್ನ : ಅಲ್ಲಾ ನೀನು ನೋಡ್ತಾ ನನ್ನನ್ನು ನೋಡ್ತಾ ಅಂಥ್ಯಾಗೆ?

ಬನ : ಈಗೇನು ನೋಡ್ದೇ ಕಣ್ಮುಚ್ಚಿಕೊಂಡಿದ್ದೀರಾ ಹ್ಯಾಗೆ?

ಪ್ರಸನ್ನ : ದೇವರು ಕಣ್ಣು ಕಟ್ಟಿರೋದು ಯಾತಕ್ಕೆ?

ಬನ : ಯಾತಕ್ಕೆ?

ಪ್ರಸನ್ನ : ನಿನ್ನಂಥ ಸುಂದರಿಯರನ್ನು...

ಬನ : ಸಾಕು... ಸಾಕು...

ಪ್ರಸನ್ನ : ಸಾರಿ ಡಿಯರ್ ನಿನ್ನಂಥ ಸುಂದರಿಯನ್ನು ನೋಡಲು.

ಬನ : ಈಗ ನನ್ನ ಸೌಂದರ್ಯ ನೋಡೋ ಕಾಲ ಮುಗಿದುಹೋಯ್ತು.

ಪ್ರಸನ್ನ : ಅದ್ಕೇ ಸುಂದರಿಯರನ್ನ ಅಂದೆ.

ಬನ : ನಿಮ್ಗೆ ಹುಡುಗಾಟ, ನಿಮ್ಮ ಹುಡುಗಾಟ ನನಗೆ ಪ್ರಾಣ ಸಂಕಟ.

ಪ್ರಸನ್ನ : ಎಳನೀರು ತರಿಸಿಕೊಡ್ಲಾ?

ಬನ : ಸ್ವಲ್ಪ ನಿಮ್ಮ ಮಗನ್ನ ನೋಡ್ತೀರಾ?

ಪ್ರಸನ್ನ : ಏಕೆ ನೋಡಿಲ್ವೇ ಅವನ್ನಾ?

ಬನ : ನೋಡಿಲ್ಲ ಅಂತ ಹೇಳಿದ್ನಾ? ಈಗ ನೋಡಿ ಬನ್ನಿ.

ಪ್ರಸನ್ನ : ಏನಾದ್ರೂ ಬದಲಾವಣೆ ಆಗೋಗಿದ್ಯೇನೇ?

ಬನ : ಹೌದು.

ಪ್ರಸನ್ನ : ಏನಾದ್ರೂ ಉಡುದಾರ ಕಿತ್ತು ಹೋಗಿದ್ಯೇನೇ?

ಬನ : ಸಾಕ್ರೀ...

ಪ್ರಸನ್ನ : ಅಲ್ವೇ ಎಲ್ಲೋ ಉಡುದಾರ ಕಿತ್ಕಂಡನೇನೋ, ಕತ್ತೆ ಕಿರಿಚಿರಬೇಕು ಹೆಣ್ಣಾಗೋದ್ನೇನೋ?

ಬನ : ಬಡ್ಕೊಳ್ಬೇಕು.

ಪ್ರಸನ್ನ : ಬಡ್ಕಳ್ಳೋ ಅಂಥಾದ್ದೇನು?

ಬನ : ನಿಮ್ಮ ಬುದ್ಧಿಗೆ.

ಪ್ರಸನ್ನ : ಹಾಗಾದ್ರೆ ಡಾಕ್ಟರ್‌ಗೆ ತೋರಿಸ್ಬೇಕು ಅನ್ತೀಯಾ?

ಬನ್ನ : ಇನ್ನು ಅದು ಬೇರೆ ಬಾವಸ್ಕಳ್ಳಿ.

ಪ್ರಸನ್ನ : ಆದ್ರೆ ತಪ್ಪಿಸಿಕೊಳ್ಳಲಿಕ್ಕಾಗುತ್ಯೇ?

ಬನ : ಆಗದೇ ಹೋದ್ರೂ ಆಗಿದೆ ಅಂತ್ಯಾಕೆ ಮಾಡಿಕೊಳ್ಳಬೇಕು?

ಪ್ರಸನ್ನ : ಈಗ ಆಗಿಲ್ಲ ಸಂತೋಷವೇ?

ಬನ : ಅಪ್ಪ-ಮಗನ್ನ ನೋಡಿ ತಲೆ ಕೆಟ್ಟೋಗುತ್ತೆ.

ಪ್ರಸನ್ನ : ಬಾಚಣಿಗೆ ತೆಗೊಂಡು ಕನ್ನಡಿ ಮುಂದೆ ನಿಂತುಕೊಂಡು ತಲೆ ಬಾಚ್ಕೊಳ್ಳೇ.

ಬನ : ಬಾಚಿರೋದು ಕಣ್ಣು ಕಾಣ್ತಾ ಇಲ್ವೇ?

ಪ್ರಸನ್ನ : ಇನ್ನು ಕುರುಡು ಬೇರೆ ಆಗಬೇಕೇ?

ಬನ : ಮಾತಿಗೆ ಮಾತು ಆಡಬೇಡ್ರಿ. ಏನೂ ಅಂದ್ರೆ... ನಿಮ್ಗನ್ನ.

ಪ್ರಸನ್ನ : ಇದೇನೆ ಮಾತು ಆಡಬೇಡ ಅಂತಿಯಾ ಮಾತಾಡಿಸ್ತೀಯಾ ಅದ್ಕೇ ಮೌನವಾಗಿದ್ದೆ.

ಬನ : ಮಾತಾಡ್ದೆ ಮೌನ ತಾಳಲಿಕ್ಕೆ ಸನ್ಯಾಸಿ ಆಗಿ.

ಪ್ರಸನ್ನ : ಯಾವಾಗ ಆಗ್ಲೀ?

ಬನ : ನಾನು ಸತ್ತ ಮೇಲೆ.

ಪ್ರಸನ್ನ : ಮತ್ತೆ ಅದನ್ನೀಗ್ಯಾಕೆ ಹೇಳ್ದೆ?

ಬನ : ಸತ್ತ ಮೇಲೆ ಹೇಳಲಿಕ್ಕಾಗೋಲ್ಲ ಅಂತ ಈಗ್ಲೆ ಹೇಳ್ದೆ.

ಪ್ರಸನ್ನ : ಸರಿ ನೀ ಇರೋವರ್ಗೆ ಸಂಸಾರಿ ಆಮೇಲೆ ಸನ್ಯಾಸಿ ಸಂತೋಷವಾ?

ಬನ : ಈಗ ನಿಮ್ಮ ಹಾಗೂ ನಿಮ್ಮ ಮಗನ ವರ್ತನೆ ನೋಡ್ತಿದ್ರೆ ನನಗೆ ಸಂತೋಷವಲ್ಲಾ ಆಗೋದು ದುಃಖ.

ಪ್ರಸನ್ನ : ಪಡು ಬೇಡ ಅಂದ್ಲೆ.

ಬಸ್ನ : ಪಡ್ತಾನೇ ಇದ್ದೀನಲ್ಲಾ, ಈಗ ನೋಡಿ... ಸುಮ್ನೆ... ಕೂತ...
ಬರ್‍ಯೋದ್ ನಿಲ್ಲಿಸಿದ.

ಪ್ರಸನ್ನ : ಏನ್ ಬರೀತಿದ್ದ?

ಬಸ : ಚಿತ್ರ.

ಪ್ರಸನ್ನ : ಏನು ವಿಚಿತ್ರಾನೋ?

ಬಸ : ಏನೋ ಯಾವ್ದೋ ಸಚಿತ್ರವೇ?

ಪ್ರಸನ್ನ : ಈಗ ಅದ್ಕೆ ನನ್ನನ್ನು ಏನ್ಮಾಡು ಅಂತೀಯಾ?

ಬಸ : ಸ್ವಲ್ಪ ಹತ್ತಿರ ಪ್ರಸನ್ನರು ಪ್ರಸನ್ನವಾಗಿ ಅವನಿಗೆ ತಮ್ಮ ಸಾಕ್ಷಾತ್ಕಾರ ನೀಡಿ ಅಂತಿದ್ದೀನಿ.

ಪ್ರಸನ್ನ : ಇದ್ಯಾವ ನಾಟಕ?

ಬಸ : ಜೀವನ ನಾಟಕ.

ಪ್ರಸನ್ನ : ಅಲ್ಲಾ... ನಮ್ಮ ಸಂಸಾರದ ನಾಟಕ.

ಬಸ : ಬೇಗ ಬನ್ರೀ.

ಪ್ರಸನ್ನ : ಏನೇ ಅಂತ ಆತುರ?

ಬಸ : ನಿಮ್ಮ ಮಗನ್ನ ನೋಡಿ ಬನ್ನಿ. ತನ್ನಷ್ಟಕ್ಕೆ ತಾನೇ ನಗ್ತಾ ಇದ್ವಾನೆ.

ಪ್ರಸನ್ನ : ನಕ್ರೇನಾಯ್ತು ಬಿಡೇ. ಜೀವನದಲ್ಲಿ ನಗುನಗ್ತಾ ಇರ್ಬೇಕು ಅಂತಿದ್ಯಾಲ್ಲಾ ಅದ್ಕೇ ಹಾಗ್ ನಗ್ತಾ ಇದ್ದಾನೆ.

ಬಸ : ಇದು ವಿಚಿತ್ರರೀ.

ಪ್ರಸನ್ನ : ದಿವಸಾ ಒಂದೇ ಥರಾ ನಗಲಿಕ್ಕಾಗುತ್ಯೇನೆ? ಅದಕ್ಕೇ ಅವನು ವಿಚಿತ್ರವಾಗಿ ನಗ್ತಾ ದಾಖಲೆ ಸ್ಥಾಪಿಸ್ತಾ ಇದ್ದಾನೆ ಅಂತ ಕಾಣುತ್ತೆ.

ಬಸ : ಉಸ್ ಸಾಕಾಗೋಯ್ತಪ್ಪಾ...

ಪ್ರಸನ್ನ : ಸ್ವಲ್ಪ ರೆಸ್ಟ್ ತೆಗೊಳ್ಳಿ...

ಬಸ : ರೆಸ್ಟ್ ಅಲ್ಲ ನನ್ನ ದೇಹ ಬರ್‍ಸ್ಟ್ ಆಗೋ ಸ್ಥಿತಿ ಆಗಿದೆ.

ಪ್ರಸನ್ನ : ನೀನ್ಯಾಕೆ ಅಷ್ಟೊಂದು ಊದುಕೊಂಡೆ ಅದು ನನ್ನ ತಪ್ಪೇ?

ಬಸ : ಇಲ್ಲ ನನ್ನದೇ ತಪ್ಪು. ನಿಮ್ಮೊಂದಿಗೆ ಮಾತಾಡೋದೇ ತಪ್ಪು ಅಂತ ಕಾಣುತ್ತೆ.

ಪ್ರಸನ್ನ : ನಿನಗೆ ಸರಿಯಾದವ್ರ ಹತ್ರವೇ ಮಾತಾಡು ಹೋಗು.

ಬಸ : ಈಗ ಸುತ್ತಿ ಬಳ್ಸೀ ಮಾತಾಡೋದು ಸಾಕು ಸ್ವಲ್ಪ ಹತ್ತಿರ ಬರ್‍ತೀರಾ?

ಪ್ರಸನ್ನ : ನಿನ್ನ ಹತ್ತಿರಾನಾ?

ಬನ : ಇಲ್ಲ ಕಿಟಕಿ ಹತ್ತಿರಾ.

ಪ್ರಸನ್ನ : ಕಿಟಕಿ ಹತ್ರ ಬಂದ್ರೇನು ಪ್ರಯೋಜ್ನಾ?

ಬನ : ನೋಟ ಇದೆ... ನಿಮ್ಮ ಮಗನ ಮಾನೋ ಆಕ್ಟಿಂಗ್ ನೋಡಬಹುದು.

ಪ್ರಸನ್ನ : ಓಹೋ, ಯಾವತ್ನಿಂದ ನಿನ್ನ ಮಗನಿಂದ ಮಾನೋ ಆಕ್ಟಿಂಗ್ ಮಾಡಿಸಿ ದುಡ್ಡು ಸಂಪಾದ್ನೆ ಮಾಡೋದ್ ಕಲ್ತಿ.

ಬನ : ನಿಮಗೆ ಸಂಬಳ ಬರೋದು ಕಮ್ಮಿ ಆದಾಗಿಂದ.

ಪ್ರಸನ್ನ : ಒಳ್ಳೇ ಉಪಾಯವೇ?

ಬನ : ಅದು ಈಗ ನಿಮ್ಮ ಜೀವನಕ್ಕೇ ಅಪಾಯ.

ಪ್ರಸನ್ನ : ಹಣ ಬಂದ್ರೆ ಅಪಾಯವೇ?

ಬನ : ಹೌದು ತಲೆಬೇನೆ... ಈ ಹೊತ್ತೆಲ್ಲಾ ಹೀಗೇ ಮಾತಿಗ್ ಮಾತ್ ಕೊಡ್ತಾನೆ ನಿಂತ್ಕೋತೀರೋ ಅಥವಾ ಸ್ವಲ್ಪ ಜಾಗ ಖಾಲಿ ಮಾಡ್ತೀರೋ.

ಪ್ರಸನ್ನ : ಖಾಲಿ ಮಾಡ್ಲಾ...

ಬನ : ಹೌದು ಈಗ ನಿಂತಿರೋ ಸ್ಥಳದಿಂದ ಸ್ಥಾನ ಪಲ್ಲಟವಾಗ್ಲಿ ಈ ಕಡೆಗೆ.

ಪ್ರಸನ್ನ : ನೀ ಹೇಳಿದ ಹಾಗೇ ನಾನ್ ಕೇಳ್ಬೇಕೇ?

ಬನ : ಇಲ್ಲ ನೀವು ಹೇಳಿದ ಹಾಗೇ ನಾನು ಕೇಳ್ತೀನಿ ಹೇಳಿ...

ಪ್ರಸನ್ನ : ನೀನೇ ಬಾ ನನ್ನ ಹತ್ತಿರ.

ಬನ : ನೋಡಿ ನಾವು ಸರಸ ಆಡೋ ಸಮಯದಲ್ಲಿ.

ಪ್ರನ್ನ : ಯಾಕೇ?

ಬನ : ಮಧ್ಯ ಮಗ ಇದ್ದಾನೆ.

ಪ್ರಸನ್ನ : ಅವನದು ಏಕಪಾತ್ರಾಭಿನಯ, ನಮ್ಮದು ದ್ವಿಪಾತ್ರಾಭಿನಯ ಅಷ್ಟೇ ತಾನೇ ವ್ಯತ್ಯಾಸ.

ಬನ : ವಯಸ್ಸಾಗ್ತಾ ಆಗ್ತಾ ಬುದ್ಧಿ ಬಿಡಬೇಡ್ರಿ.

ಪ್ರಸನ್ನ : ಬಂದಿಲ್ಲಾ ಅನ್ತೀಯಾ.

ಬನ : ಇಲ್ಲ ಅರಳೋ ಮರಳೋ ಅನ್ನೋ ಹಾಗಿದೆ.

ಪ್ರಸನ್ನ : ನನಗೆ ಅರವತ್ತೇ ತುಂಬಿಲ್ಲ.

ಬನ : ಅದರೊಳಗೆ ಬಂದಿದೆ... ನಿಮ್ಮ ಮಗನಿಗೆ ಇಪ್ಪತ್ತಕ್ಕೇ ಬಂದಿದೆ. ಇನ್ನು ನಿಮಗೆ ಬರೋದೇನು ಮಹಾ?

ಪ್ರಸನ್ನ : ಅಂತೂ ಅಪ್ಪ-ಮಕ್ಕಳು ಇಬ್ಬರಿಗೂ ಅರಳು ಮರಳು ಅನ್ತೀಯಾ?

ಬನ : ನಾನಲ್ಲ ಅಂದಿದ್ದು. ನೀವು ಆಡೋದನ್ನ ನಾನು ಹೇಳಿದೆ.

ಪ್ರಸನ್ನ : ನಾವು ಕಿವಿ ಇರೋದ್ಕೇ ಕೇಳ್ತಾನೇ ಇದ್ದೀನಲ್ಲಾ.

ಬನ : ನನಗೆ ಮಾತುಗಳ್ ಕೇಳ್ದೆ ಇರೋವಂಗೆ ಬೇಗನೆ ಕಿವುಡು ಮಾಡಪ್ಪಾ ಶಿವನೇ ಅಂತಿವ್ನಿ...

ಪ್ರಸನ್ನ : ಹೌದು ಮಾಡ್ಕೋ...

ಬನ : ಆಮೇಲೆ ಕೇಳಬೇಕು ಅಂದಾಗ,

ಪ್ರಸನ್ನ : ಒಂದು ಮಿಷನ್ ಇಟ್ಕೋ ಬೇಡವಾದಾಗ ತೆಗೆದುಬಿಡು ಅದು ಒಳ್ಳೇ ಉಪಾಯ.

ಬನ : ಅದು ನಿಮಗೇ ಅಪಾಯ ಹಣಕ್ಕೆ ಸಂಚಕಾರ,

ಪ್ರಸನ್ನ : ಹೆಂಡ್ತಿ ಒಳ್ಳೇದಕ್ಕಿಂತ ಹಣ ಹೆಚ್ಚೇ?

ಬನ : ಈಗ ನನಗೆ ಕಿವುಡು ಮಾಡೋದು ಬೇಡಿ, ನೀವು ಹಣ ಖರ್ಚು ಮಾಡೋದು ಬೇಡ. ನಿಮ್ಮ ಮಗನ ವರ್ತನೆ ಸರಿಯಾಗುವಂತೆ ಮಾಡಿದ್ರೆ ಅದ್ಕಿಂತ ಒಂದು ಪುಣ್ಯದ ಕೆಲಸವಿಲ್ಲ.

ಪ್ರಸನ್ನ : ನಾನು ಪಾಪದ ಕೆಲಸ ಯಾವತ್ತೂ ಮಾಡಿಲ್ಲ. ಯಾವತ್ತೂ ಮಾಡೋಲ್ಲ.

ಬನ : ಈಗ ಮಾಡಿ ಅಂತ ನಾನು ಹೇಳಿದ್ನೇ.

ಪ್ರಸನ್ನ : ಈವಾಗೇನೇಳ್ದೆ...

ಬನ : ಆವಾಗ್ನಿಂದ ಹೇಳ್ತಾ ಇದ್ದೀನಿ ಈವಾಗ್ಲೇ ಅಲ್ಲ.

ಪ್ರಸನ್ನ : ಅದೇ ಆವಾಗ್ಲೇ ಏನು ಹೇಳ್ತಿದ್ದೆ?

ಬನ : ಈ ಕಡೆ ಕಿಟಕಿ ಕಡೆ ಬನ್ನಿ ಅಂತ.

ಪ್ರಸನ್ನ : ಅಷ್ಟೇ ತಾನೇ.

ಬನ : ಅಷ್ಟಕ್ಕೇ ಅಷ್ಟೊತ್ತಿಂದ ಒಳ್ಳೇ ಚೌಕಾಶಿ ವ್ಯಾಪಾರ ಮಾಡ್ತಿದ್ದೀರಿ?

ಪ್ರಸನ್ನ : ನಮ್ಮ ಅಪ್ಪ ನಮ್ಮಪ್ಪನಪ್ಪ ಎಲ್ರೂ ವ್ಯಾಪಾರಗಾರ್ರೇ... ಚೌಕಾಶಿ ಮಾಡೋದು ರಕ್ತಗತವಾಗಿ ಬಂದು ಬಿಟ್ಟಿದೆ ಏನು ಮಾಡಲಿ?

ಬನ : ಅದನ್ನ ನೀವಾದ್ರೂ ಬಿಡಿ ಅಂದೆ.

ಪ್ರಸನ್ನ : ಬಿಟ್ಟನೆಂದರೆ ಬಿಡದೀ ಮಾಯೆ...

ಬನ : ಬಿಟ್ಟೆತೆಂದಡೆ ಬೆಂಬತ್ತಿತು ಮಾಯೆ.

ಪ್ರಸನ್ನ : ಅಕ್ಕಮಹಾದೇವಿ ವಚನ ಚೆನ್ನಾಗಿ ಗೊತ್ತಿರುವಂತೆ ಕಾಣುತ್ತೆ.

ಬನ : ನಿಮ್ಮಷ್ಟೇ...

ಪ್ರಸನ್ನ : ನಾನು ನೀನು ಗಂಡ-ಹೆಂಡತಿ ಅಲ್ವೇ?

ಬನ : ಇಲ್ಲ ಅಂತ್ಯಾರೇಳಿದ್ರು?

ಪ್ರಸನ್ನ : ಲಗ್ನ ಪತ್ರಿಕೆ ಪ್ರಿಂಟಾಗಿರ್ಲಿಲ್ವಾ? ನಾಲ್ಕಾರು ಜನ ನಾನು ತಾಳಿ ಕಟ್ಟುವಾಗ ನೀನು ಕಟ್ಟಿಸ್ಕೊಳ್ಳುವಾಗ ನೋಡಿರಲಿಲ್ವೇ?

ಬನ : ಇದೇನು ಫ್ಲ್ಯಾಷ್ ಬ್ಯಾಕ್ ತರ್‍ತಾ ಇದ್ವೀರಾ?

ಪ್ರಸನ್ನ : ಇಲ್ಲ ಪ್ಲ್ಯಾಷ್ ಫ್ರಿಂಟ್ ಆರಂಭಿಸ್ಲಾ...?

ಬನ : ನೋಡ್ರಿ ನೀವು ಹೀಗೆ ಪುರಾಣ ಹಾಡ್ತೀರೋ, ನನ್ನ ಮಾತಿಗೇನಾದ್ರೂ ಒಂದು ಚೂರು ಬೆಲೆ ಕೊಡ್ತೀರೋ?

ಪ್ರಸನ್ನ : ಬೆಲೆ ಕಟ್ಟಲಿಕ್ಕೆ ನನಗಾಗುತ್ಯೇನೇ?

ಬನ : ಶಿವ ಶಿವಾ ನಿಮ್ಮೊಂದಿಗೆ ಮಾತಾಡಿದ್ದು ಮೊದ್ಲು ನನ್ನ ತಪ್ಪು.

ಪ್ರಸನ್ನ : ಅದನ್ನು ತಿಳಿದೂ ಯಾಕೆ ಮಾತಾಡಿಸ್ತೀಯಾ?

ಬನ : ನೀವು ಮಾತಾಡ್ಲಿ ಅಂತ.

ಪ್ರಸನ್ನ : ಮಾತಾಡ್ತಿದ್ದೀನಲ್ಲಾ ಅದ್ಕೇ.

ಬನ : ಆ ಕಡೆ ಬಗ್ಗಿ ನೋಡಿ ಈಗ ಸುಮ್ಮನೆ ಮಂಕು ಬಡಿದವ್ನಾಗೆ ಕೂತಿವ್ವಾನೆ.

ಪ್ರಸನ್ನ : ಸಾಕಾಯ್ತೋನೋ ನಕ್ಕು...

ಬನ : ಕೇಳಿ ಬನ್ನಿ.

ಪ್ರಸನ್ನ : ಹತ್ತಿರದಲ್ಲಿದ್ದೀಯೇ ನೀನೇ ಕೇಳೇ?

ಬನ : ನನಗೆ ಧೈರ್ಯ ಬರ್‍ತಾ ಇಲ್ಲ.

ಪ್ರಸನ್ನ : ಸ್ವಲ್ಪ ತಾಳ್ಕೋ,

ಬನ : ಯಾಕೆ ನಿಮ್ಗೂ ಹೆದರ್ಕೇನಾ?

ಪ್ರಸನ್ನ : ನಾನು ಗಂಡಸಲ್ವೇ?

ಬನ : ಅದ್ಕೇ ಅಲ್ವೇ ನಮ್ಮಪ್ಪ ನಿಮಗೆ ಕೊಟ್ಟು ಮದ್ವೆ ಮಾಡಿದ್ದು.

ಪ್ರಸನ್ನ : ಮತ್ತೆ ಅನುಮಾನವಾಗಿ ಮಾತಾಡ್ತಿಯಲ್ಲಾ. ಮಗನೊಂದಿಗೆ ಮಾತಾಡೋಕ್ಕೆ ಹೆದರಿಕೇನಾ? ಸ್ವಲ್ಪ ಮರ್ಯಾದೆ ಕೊಡಬೇಕೇ? ಚಿಕ್ಕವನಾಗಿದ್ದಾಗ ಬೈದು ಬುದ್ಧಿಹೇಳಬಹುದು, ಈಗ ವಯಸ್ಸಿಗೆ ಬಂದ ಮೇಲೆ ಗಂಭೀರವಾಗಿರಬೇಕು.

ಬನ : ಏನಿಲ್ಲಾ ಆಮೇಲೆ ಫ್ರೆಂಡ್ ಆಗಿ ಮಾತಾಡಿಸಬಹುದು ಬನ್ನೀ...

ಪ್ರಸನ್ನ : ಅಂತೂ ಇಷ್ಟು ಕೇಳ್ತೀಯಾ ಬರ್‍ತೀನಿ, ನಿನ್ಗೂ ದಣಿವು ಮಾಡೋದಕ್ಕೆ ನನಗೆ ಇಷ್ಟವಿಲ್ಲ.

ಬನ : ಸಧ್ಯ ದೇವರು ನಿಮಗೆ ಒಳ್ಳೆ ಬುದ್ಧಿ ಕೊಟ್ನಲ್ಲ. ಹಾಗೇ ನನ್ನ ಮಗನ್ಗೂ ಕೊಟ್ರೆ ಸಾಕು.

ಪ್ರಸನ್ನ : ಅವನೇನು ಕೊಡದೆ ಹಿಡ್ಕಂಡಿದ್ದಾನ್ಯೇನೇ? ಬರದೆ ಏನು?

ಬನ : ಅಲ್ಲಿ ನೋಡಿ ನಿಮ್ಮ ಮಗನ ವರ್ತನೇನಾ? ಹ್ಯಾಗೆ ಬದಲಾಗ್ತಾನೇ ಗೊತ್ತಾ?

ಪ್ರಸನ್ನ : ವಯೋಮಿತಿ ಬಣ್ಣ ಬದಲಾಯಿಸಿದಾಗೆ.

ಬನ : ಈಗ ವರ್ತನೆಯಲ್ಲಿ ಬದಲಾವಣೆ ಕಾಣಬಹುದು.

ಪ್ರಸನ್ನ : ಆಗ್ಲಿ ನೋಡಿ ಆನಂದಪಡ್ತೀನಿ. ಕಾಸು ಬಂಗ್ಲೇಲಿ ಪ್ರಾಣಿಗಳನ್ನು ನೋಡಿದಾಗ ಕಟಕೀಲಿ ನಿನ್ನ ಮಗ ಒಂದು ವಿಚಿತ್ರ ಪ್ರಾಣಿಯಾಗಿ ನಿನಗೆ ಕಾಣ್ತಾನೆ...ಅದನ್ನು ನೀನೂ ನೋಡಿ ನನ್ಗೂ ತೋರಿಸ್ತಾ ನೋಡ್ತೀನಿ ನೋಡಿ ನನ್ನ ವಿಮರ್ಶೆ ಹೇಳ್ತೀನಿ.

ಬನ : ನಿಮ್ಗೆಲ್ಲಾ ತಮಾಷೇ.

ಪ್ರಸನ್ನ : ತಮಾಷೆ ಬಂಗ್ಲೆ ನೋಡೋವಾಗ ಜನಗಳಿಗೆಲ್ಲಾ ತಮಾಷೇನೇ.

ಬನ : ನಾನು ಇನ್ನು ಏನೂ ಹೇಳೋಲ್ಲ ಬರ್ತೀನಿ.

ಪ್ರಸನ್ನ : ನೀನು ಹೋದ ಮೇಲೆ ನನಗೇನು ಕೆಲಸ ನಾನೂ ಬರ್ತೀನಿ ನಡೆ ನಡೆ ನೀನು ಮುಂದು ಮುಂದಾದ್ರೆ ನಾನು ಹಿಂದ್ ಹಿಂದೆ.

* * *

## ದೃಶ್ಯ-೪

(ರೂಮಿನ ಕೋಣೆಯಲ್ಲಿ ದಿಲೀಪ್ ಕುಳಿತಿದ್ದಾನೆ ಅಲ್ಲಿಗೆ ತಾಯಿ ಬನಶಂಕರಮ್ಮನವರು ಬರುತ್ತಾರೆ. ಕಿಟಕಿಯ ಕಡೆ ನೋಡುತ್ತಾ)

ಬನ : ದಿಲೀಪ್ ಇದ್ಯಾಕೋ ಸ್ನಾನ ಮಾಡ್ಕೋ ಬಾರೋ.......

ದಿಲೀಪ್ : ಬರ್ತೇನೆ ಹೋಗಮ್ಮ.

ಬನ : ಅದೇನು ಮಾಡ್ತೀದ್ದೀಯೋ?

ದಿಲೀಪ್ : ಏನೋ ಬರೀತಿದ್ದೀನಿ.

ಬನ : ಏನೋ ಮೊದಲನೇ ಪರೀಕ್ಷೆ ಮುಗಿದು ಹೋಯ್ತು ಹಾಗಾದ್ರೂ ಏನು ಬರೀತಿದ್ದೀಯೋ?

ದಿಲೀಪ್ : ಪರೀಕ್ಷೆ ಮುಗಿದ್ರೆ ಓದಬೇಡ ಅಂತಾ?

ಬನ : ಅಷ್ಟು ಓದೋದು ಏನಿದ್ಯೋ?

ದಿಲೀಪ್ : ಬರ್ಯೋದು,

ಬನ : ಬರ್‍ದೋದೇನಿದ್ಯೋ?

ದಿಲೀಪ್ : ಬೇಕಾದಷ್ಟಿದೆ.

ಬನ : ಏನೋ ಅಪ್ಪಾ ನಂಗೂ ಒಂದೂ ಗೊತ್ತಾಗಕ್ಕಿಲ್ಲ. ಒಂದು ವಾರ ಆಯ್ತು, ನೀನಾಯ್ತು ಆ ರೂಮಾಯ್ತಾ. ಅದೇನು ಬರವಣಿಗೆ ಓದುಗಾರಿಕೆ ಮಾಡ್ತೀಯೋ ಏನೋ? ನಿನ್ನ ಹಾಗೆ ಎಲ್ಲರೂ ಓದಿ ಬಿಟ್ರೆ ಬೇಕಾದಷ್ಟು ಎಷ್ಟೋ ಜನರನ್ನು ಓದಿ ಓದಿ ಅಂದ್ರೂ ಓದೋಲ್ಲ ನೀನು ಅದೇನೋತ್ತೀಯೋ ಬರೀತಿಯೋ ಹೋಗಪ್ಪ ನಿದ್ದೇನೂ ಮಾಡ್ತೀಯೋ ಹ್ಯಾಗೋ... ನಿದ್ದೇನೂ ಬರಲ್ವಾ.

ದಿಲೀಪ್ : ನಿದ್ದೆ ಬರ್‍ದೆ ಹೋದ್ರೆ ಮನುಷ್ಯನಮ್ಮ? ಅದನ್ನೆಲ್ಲಾ ತಡಮು ಮಾಡ್ತೀನಿ.

ಬನ : ಧೀರ ಕಣ್ ಬಿಡ್ರೋ, ಬಾ ಸ್ನಾನ ಮಾಡಿಕೊಂಡು ತಿಂಡಿ-ಊಟ ಮಾಡ್ಕೊಂಡು ಓದುವೆ.

ದಿಲೀಪ್ : ನನ್ನನ್ನು ಡಿಸ್ಟರ್ಬ್ ಮಾಡಬೇಡ ಕಣಮ್ಮ ಹೋಗಮ್ಮ.

ಬನ : ಸರ್‍ಯಪ್ಪಾ......

(ಎಂದು ಹೊರಡುವಳು ಆಗ ಗಂಡ ಸಿಗುತ್ತಾನೆ)

ಬನ : ಏನೂ ಅಂದ್ರೆ

ಪ್ರಸನ್ನ : ಏನೂ ಅಂದೆ?

ಬನ : ನೀವೇನಾದ್ರೂ ಹೇಳಿ.

ಪ್ರಸನ್ನ : ಏನಾದ್ರೂ ಏನು ಹೇಳ್ಲೀ?

ಬನ : ಅಲ್ರೀ ನಮ್ಮ ದಿಲೀಪನ ವಿಷಯ.

ಪ್ರಸನ್ನ : ಹಾಗೇಳು ಮತ್ತೆ.

ಬನ : ಏನಾದ್ರೂ ದೆವ್ವ ಹಿಡಿದೆಯೋ ಏನೋ ಅಂತ ಅನುಮಾನ.

ಪ್ರಸನ್ನ : ನಿನಗೆ ಹುಚ್ಚುಗಿಚ್ಚು ಹಿಡ್ಡಿ ದ್ಯೋ ಹ್ಯಾಗೆ?

ಬನ : ಹ್ಯಾಗ್ ಕಾಣ್ತೇನಿ?

ಪ್ರಸನ್ನ : ಹಾಗೇನೂ ಕಾಣ್ತಿಲ್ಲ ವರ್ತನೆ ಮಾತು ನೋಡಿದ್ರೆ ಹಿಡಿದಿದ್ರೂ ಹಿಡಿದಿರಬಹುದು ಅನ್ನಿಸುತ್ತೆ.

ಬನ : ನಿಮಗೆ ಸುಮಾನ, ನನಗೆ ಪ್ರಾಣ ಸಂಕಟ.

ಪ್ರಸನ್ನ : ನೀರು ಕುಡಿ.

ಬನ : ನಿನ್ನೆ ದಿನಾ ಕನವರಿಸ್ಕಂಡು ತೂಗಿಕೊಂಡು ಒಡಿದ "ಸಂಗೀತಾ ಸಂಗೀತಾ" ಅಂತ.

ಪ್ರಸನ್ನ : ಅಯ್ಯೋ ಮಂಕು ಸಾಂಬ್ರಾಣಿ ಸಂಗೀತ ಹಾಡೋದ್ಕಿರಬೇಕು ಕಣೆ.

ಬನ : ಬಡ್ಕೊಂದ್ರು ಸಂಗೀತಾ ಹುಡುಗಿ ಹೆಸ್ರು ಕಣ್ರೀ... ಅದೂ ಗೊತ್ತಾಗಲ್ಲ ನಿಮ್ಗೆ.

ಪ್ರಸನ್ನ : ಗರ್ಲ್ ಫ್ರೆಂಡ್ ಅನ್ನು...

ಬನ : ನಮ್ಮ ಹುಡುಗ ಅಂಥವ್ನಲ್ಲ ಗರ್ಲ್ ಫ್ರೆಂಡ್ ಮಾಡ್ಕೊಳುವಷ್ಟು ಮುಂದುವರಿದಿಲ್ಲ ಅಲ್ರೀ... 'ಸಂಗೀತ' ಅನ್ನೋ ಮೋಹಿನಿ ಇರಬೇಕು.

ಪ್ರಸನ್ನ : ಈಗಿನ ಕಾಲದಲ್ಲಿ ನಂಬ್ತೀಯೇನೆ?

ಬನ : ಏನು ದೆವ್ವ, ಪೀಡೆ, ಪಿಶಾಚಿ, ಮೋಹಿನಿ ಇರೋಲ್ಲ ಅಂತ್ಲಾ ನಿಮ್ಮಲೆಕ್ಕ?

ಪ್ರಸನ್ನ : ಅದಕ್ಕೇ ತಾನೇ 'ಜಂಬೂ' ಅಂತ ಮಂತ್ರಗಾರರು ಇರೋದು.

ಬನ್ನ : ಎಲ್ರೀ ಆತ ಇರೋದು?

ಪ್ರಸನ್ನ : ಅವನಂತವನೆಷ್ಟು ಜನ ಬೇಕು?

ಬನ : ಜಂಬೂ ಕರ್ಕೊಂಡು ಬರೋಕ್ಕಾಗಲ್ವೇನ್ರೀ ನಮ್ಮ ಮನೆಗೆ.

ಪ್ರಸನ್ನ : ಯಾಕೆ?

ಬನ : ಕುಮಾರ ಕಂಠೀರವನ ಮೇಲೆ ಹಿಡ್ಕೊಂಡಿರೋ ಮೋಹಿನಿ ಬಿಡ್ಸಕ್ಕೆ.

ಪ್ರಸನ್ನ : ನಿನ್ಗೆ ದುಡ್ಡು ಹೆಚ್ಚಾಗಿರಬಹುದು.

ಬನ : ನೀವು ಕೊಟ್ಟಿದ್ದೀರಲ್ಲಾ...

ಪ್ರಸನ್ನ : ಅದ್ಕೇ ಹೇಳೋದು ಅದನ್ನ ಇಂಥ ಅಪಾತ್ರ ಕೆಲಸಗಳಿಗೆ ಉಪಯೋಗಿಸಬೇಡ ಅಂತ.

ಬನ : ಅಲ್ಲಾರೀ ಮಗನ ಮೇಲಿರೋ 'ಮೋಹಿನಿ' ಕಳೆದು ಸಂತೋಷವಾಗಿದ್ರೆ ಅದಕ್ಕಿಂತ ಒಂದು ಬೇಕೇ? ಮಕ್ಕಳ ಸುಖಕ್ಕಲ್ದೇ ಮತ್ತ್ಯಾವುದಕ್ಕೆ ನಾವು ಸಂಪಾದನೆ ಮಾಡೋದು ಹೇಳಿ?

ಪ್ರಸನ್ನ : ನಿನ್ಗೆ ಬುದ್ಧಿ ಗಿದ್ಧಿ ಇಲ್ಲ ಅಂತ ಕಾಣ್ಸುತ್ತೆ.

ಬನ : (ಅಳುತ್ತಾ) ಎಲ್ಲಾ ನನ್ನ ಹಣೇ ಬರಹ ಏನ್ಮಾಡ್ಕಂಡು ಸಾಯಲಿ?

ಪ್ರಸನ್ನ : ಏನು ಮಾಡ್ಕಂಡು ಸಾಯಬೇಡ ಕಣೆ. ಆಮೇಲೆ ನಾನು ಜೈಲಿಗೆ ಹೋಗಬೇಕಾಗುತ್ತೆ.

ಬನ : ಅದ್ಕೇ ನಾ ಹೇಳಿದ ಹಾಗೆ ಕೇಳಿ 'ಜಂಬೂ' ಕರ್ಕೊಂಡು ಬನ್ನಿ ಇವನ ವರ್ತನೆ ನೋಡಲಿ ಅವನಿಗೆ ಗೊತ್ತಾಗುತ್ತೆ.

ಪ್ರಸನ್ನ : ಅಲ್ಲಾ ಕಣೆ ಅವನು ಬಂದ ಮೇಲೆ ಇಲ್ಲ ಅಂತಾನ್ಯೇನೇ? ಮೋಹಿನಿ ಹಿಡ್ದಿದೆ ಬಿಡಿಸ್ತೀನಿ, ಅಷ್ಟು ಕೊಡಬೇಕು, ಇಷ್ಟು ಕೊಡಬೇಕು ಅಂತ ಕೂತ್ಕೋತಾನೆ ಕಣೆ.

ಬನ : ದುಡ್ಡಿನ ಮುಖ ನೋಡೋಕ್ಕೋಗಿ ಮಗನ ಪ್ರಾಣ ಕಳ್ಕೋಬೇಕೇ? ಏನು ಹೇಳಿ ಮತ್ತೆ. (ಅಳುವಳು)

ಪ್ರಸನ್ನ : ಎಲ್ಲಾದ್ರೂ ವಾದ್ಯ ಶುರು ಮಾಡ್ಬುಡ್ತೀಯಾ, ನಿನಗೂ ಚಪಲಾ ತೀರೋಗ್ಲಿ ಸುಮ್ನಿರೆ ಕರ್ಕಂಡು ಬಂದು ಬಿಡ್ತೀನಿ.

ಬನ : ಸಧ್ಯ ಅಷ್ಟು ಮಾಡಿ, ದೇವರು ಈಗ್ಲಾದ್ರೂ ಒಳ್ಳೇ ಬುದ್ಧಿ ಕೊಟ್ನಲ್ಲಾ.

ಪ್ರಸನ್ನ : ನೀನೇ ಕೊಡಿಸ್ದಲ್ಲಾ...

ಬನ : ಮತ್ತಿನ್ನೂ ಇಲ್ಲೇ ಇದ್ದೀಲ್ಲಾ.

ಪ್ರಸನ್ನ : ಒಳ್ಳೇ ಕುದ್ರೋ ಅವ್ರೆ ಬಾಯ್ಗೆ ಹಾಕ್ಕೋಳ್ಳೊ ಹಾಗೆ ಆಡ್ತಿದ್ದೀಯಲ್ಲಾ... ಯಾಕ್ ಆತ್ರಪಡ್ತಿದ್ದೀಯಾ? ನೋಡು ಈಗಾಡೋ ಮಾತನೇನಾದ್ರೂ ಅವನು ಕೇಳಿಕೊಂಡಿದ್ರೆ ಸುಮ್ನೆ ಬಿಡ್ತಾನ್ಯೇನೇ?

ಬನ : ಅವನಿಗೆ ಗೊತ್ತಿಲ್ಲದಾಗೆ ಕರ್ಕಂಡು ಬನ್ನಿ........

ಪ್ರಸನ್ನ : ಆಮೇಲಾದ್ರೂ ಗೊತ್ತಾಗಲ್ವೇ?

ಬನ : ಆತ ಬಂದ ಮೇಲೆ ನೋಡ್ಕೊಳ್ತಾನೆ.

ಪ್ರಸನ್ನ : ಯಾರನ್ಯಾರು ನೋಡ್ಕೋಳ್ತಾರೋ ನೋಡ್ತಾ ಇರು.

ಬನ : ಜೋರಾಗಿ ಮಾತಾಡ್ ಬೇಡ್ರಿ ನಮ್ಮ ಮಾತು ಕೇಳ್ಕಂಡು ಮನೆ ಬಿಟ್ಟೇ ಹೊರಟು ಬಿಟ್ಟಾನು.

ಪ್ರಸನ್ನ : ಅಷ್ಟು ಮಾಡಿದ್ರೆ ನನಗೆ ಉಳಿತಾಯ.

ಬನ : ಆಡಿದ್ದೇ ಆಡು ಕಿಸಬಾಯಿ ದಾಸಯ್ಯ ಅಂತ ಆಡ್ಬೇಡಿ ನಡೀರ್ರಿ...

ಪ್ರಸನ್ನ : ನಡೀತೀನಿ.

ಬನ : ಸದ್ಯ ಅಷ್ಟು ಮಾಡಿ...

(ಪ್ರಸನ್ನ ಹೊರಡುವರು.)

(ಕೋಣೆಯಿಂದ ಸಿಗರೇಟ್ ಸೇದುತ್ತಾ ದಿಲೀಪ್ ಬರುತ್ತಿದ್ದಾನೆ, ತಾಯಿ ಮಗನನ್ನು ನೋಡಿ)

ಬನ : ಏನೋ ದಿಲೀಪ್ ಗಡ್ಡ ಗಿಡ್ಡ ಬಿಟ್ಟಿದ್ದೀಯಲ್ಲಾ ಏನು ಸಮಾಚಾರ?

ದಿಲೀಪ್ : ಬ್ಲೇಡಿನ ಉಳಿತಾಯ.

ಬನ : ನಮಗೆ ತಿಳಿದಾಗೆ ಸನ್ಯಾಸಿಗಳು ಗಡ್ಡ ಮೀಸೆ ಬಿಡ್ತಾರೆ.

ದಿಲೀಪ್ : ಹಾಗೆ ತಿಳ್ಕೋ...

ಬನ : ಹಾಗಾದ್ರೆ ಸನ್ಯಾಸತ್ವ ಸ್ವೀಕರಿಸಿದ್ದೀಯಾ? ಹ್ಯಾಗೆ?

ದಿಲೀಪ್ : ಮದುವೆ ಆಗುವವರೆಗೆ ಬ್ರಹ್ಮಚಾರಿಯಲ್ಲವೇನಮ್ಮ?

ಬಸ : ಹೌದು ಕರೆಕ್ಟ್. ಸಧ್ಯ ಜೀವನ ಪೂರ್ತಿ ಇಲ್ವಲ್ಲಾ...

ದಿಲೀಪ್ : ಜೀವನದಲ್ಲಿ ಅರ್ಧ ಹಾಗೆ ಅರ್ಧ ಹೀಗೆ...

ಬಸ : ನಾಲ್ಕು ದಿನವೆಲ್ಲಾ ಗಡ್ಡ ಬಿಡ್ತೀಯಾ? ಹಾಗೇ ಬೋಳಿಸ್ತೀಯಾ?

ದಿಲೀಪ್ : ಏನೂ ಕೆಲಸ ಇಲ್ಲದಾಗ ಮಾಡ್ತೀನಿ ಇಲ್ಲದ್ದಾಗ ಬಿಡ್ತೀನಿ,

ಬಸ : ಹೆಂಡತಿ ಗರ್ಭಿಣಿ ಆದಾಗ ಬಿಡ್ತಾರೆ. ಸನ್ಯಾಸಿ ಆಗವ್ರು ಬಿಡ್ತಾರೆ ಆದ್ರೆ ನೀನು ಏನಿಲ್ಲ ಎತ್ತಿಲ್ಲ ಬಿಡ್ತಿಯಲ್ಲಾ ಏನು ಸಮಾಚಾರ?

ದಿಲೀಪ್ : ಅದೊಂದು ಪ್ಯಾಷನ್ನು ಕಣಮ್ಮ.

ಬಸ : ನೀನು ಹೀಗೆಲ್ಲಾ ಬಿಟ್ಕೊಂಡು ಮಂಕು ಮಂಕಾಗಿ ಸಿಗರೇಟ್ ಸೇದೋದು ನನ್ಗೆ ಹಿಡಿಸಲ್ಲಪ್ಪಾ.

ದಿಲೀಪ್ : ಏನ್ಮಾಡದಮ್ಮ ಎಲ್ಲಾ ಕಲ್ತಿದ್ದು... ಕಲ್ತಿದ್ ಬಿಡು ಕಲಕೇತಿ ಅಂದ್ರೆ ಊರು ಬಿಟ್ರೂ ಬಿಡೋಲ್ಲ ಅಂದ್ಲಂತೆ ಹಾಗೆ.

. . : ಎಲ್ಲಾ ಸಹವಾಸ ದೋಷ. ಅದ್ಕೆ ಕಣೋ ಯಾವಾಗ್ಲೂ ಒಳ್ಳೆಯವರ ಸಹವಾಸ ಮಾಡ್ಬೇಕು ಅಂತ ನಮ್ಮ ಹಿರೀಕ್ರು ಹೇಳೋದು.

ದಿಲೀಪ್ : ಇದೇನು ಕೆಟ್ಟ ಅಭ್ಯಾಸನಮ್ಮಾ...

ಬಸ : ಅಲ್ದೇ ಏನೋ ಶ್ವಾಸಕೋಶ ರೋಗಕ್ಕೆ ತುತ್ತಾಗಬೇಕಾಗುತ್ತೆ. ಅಂತ ಓದಿದವರಿಗೆ ನಾವೇ ಹೇಳಬೇಕೇನೋ.

ದಿಲೀಪ್ : ಜೀವನದಲ್ಲಿ ಒಂದು ಮೋಜು ಸುಖ ಕೊಡೋದನ್ನ ತೆಗೆದು ಕೊಂಡ್ರೇನಾಯ್ತಮ್ಮ

ಬಸ : ಇವೆಲ್ಲಾ ಕ್ಷಣಿಕ ಸುಖ ಕಣೋ, ಆಮೇಲೆ ಕಷ್ಟವಾಗುತ್ತೆ ಕಣೋ.

ದಿಲೀಪ್ : ನಾನು ಒಪ್ತೇನಮ್ಮ ಆದ್ರೆ ಕಲಿತು ಬಿಟ್ಟಿದ್ದೇನೆ ಬಿಡಬೇಕು ಅಂದ್ರೆ ಆಗೋದೇ ಇಲ್ಲ ಏನ್ಮಾಡ್ಲಿ?

ಬಸ : ನಾಲ್ಕು ಘಳಿಗೆಯಲ್ಲಾ ಚೆನ್ನಾಗಿರ್ತೀಯೇ ಮಾತು ಕತೆ ಆಡ್ತೀಯಾ? ಕೆಲವು ವೇಳೆ ಮಂಕಾಗಿರ್ತಿಯಲ್ಲಾ ಏನೋ ಸಮಾಚಾರ?

ದಿಲೀಪ್ : ಚಿತ್ತದ ಏಕಾಗ್ರತೆ.

ಬಸ : ಅದೇನೋ ಅಪ್ಪಾ ಕೆಟ್ಟದು'ಅದೆಷ್ಟು ಬೇಗ ಅಂಟಕೊಂಡು ಬಿಡುತ್ತೆ ಅದೇ ಒಳ್ಳೇತನ ಕಲೀರಿ ಅಂದ್ರೆ ಕಲಿಯಕ್ಕಾಗೋಲ್ಲ.

ದಿಲೀಪ್ : ಪರಮಾತ್ಮ ಆಡಿಸಿದಾಗೆ ಆಡ್ತೀನಮ್ಮ.

ಬಸ : ಇಲ್ಲ ಆಡಿಸೋವ್ರು ಬೇರೆ.

ದಿಲೀಪ್ : ಹಾಗಂದ್ರೆ.

ಬನ : ನಿನಗೆ ಗೊತ್ತು ಹೇಳು.

ದಿಲೀಪ್ : ನನಗೆ ಗೊತ್ತಿದ್ದರೆ ಹೇಳ್ತಿರಲಿಲ್ಲವೇ?

(ಅಷ್ಟರಲ್ಲಿ ಮಂತ್ರಗಾರ ಜಂಬೂ, ಪ್ರಸನ್ನ ಪ್ರವೇಶಿಸುವರು)

ಜಂಬೂ : ನಾನು ಹೇಳಿಸ್ತೀನಿ.

ದಿಲೀಪ್ : ಏನ್ ನಿನ್ನ ತಲೆಕಾಯಿ ಹೇಳಿಸ್ತೀಯಾ?

ಜಂಬೂ : ನೀನೇ ಹೇಳ್ತೀಯೋ, ಹೇಳಿಸ್ಬೇಕೋ?

ದಿಲೀಪ್ : ಏನು ಹೇಳಬೇಕು?

ಜಂಬೂ : ನೀನ್ಯಾರು ಅಂತ?

ದಿಲೀಪ್ : ನಮ್ಮ ಮನೆಗೆ ಬಂದು ನಮ್ಮ ತಂದೆ ತಾಯಿಗಳ ಹತ್ತಿರ ನಿಂತು ನೀನ್ಯಾರು ಅಂತ ಪೊಗರಾಡ್ತೀಯಲ್ಲಾ ನೀನ್ಯಾರು ಮೊದಲು ಹೇಳು.

ಜಂಬೂ : ನನ್ನನ್ನು ನೋಡಿದ್ರೆ ಯಾರು ಅಂತ ಗೊತ್ತಾಗಲ್ವೇ?

ದಿಲೀಪ್ : ಗೊತ್ತಾಗ್ದೇ ಏನು? ಕಪಟ ಜೀವನೋಪಾಯಕ್ಕೆ ಕುಟಿಲ ವಿದ್ಯೆ ಕಲಿತಿರುವ ಮಂತ್ರಗಾರ.

ಜಂಬೂ : ಅದ್ಕೇ ಬೆಲೆ ಕೊಟ್ಟು ನನ್ನನ್ನು ಇಲ್ಲಿಗೆ ಕರೆದು ತಂದಿರೋದು ಏನು ಹೇಳು ನೀನ್ಯಾರು ಅಂತ?

ದಿಲೀಪ್ : ನಾನು ನಮ್ಮಪ್ಪನ ಮಗ.

ಜಂಬೂ : ಯಾರು ನಿಮ್ಮಪ್ಪ?

ದಿಲೀಪ್ : ನಿನ್ನ ಕಣ್ಣಿಗೆ ಮೂರು ದೊಣ್ಣೆಯಾಗಿ ನಿಂತಿರೋ ಇವ್ನೇ ನಮ್ಮಪ್ಪ ಕಾಣ್ತಾ ಇಲ್ವಾ?

ಜಂಬೂ : ಸುಳ್ಳು ಬೊಗಳಬೇಡ.

ದಿಲೀಪ್ : ನನ್ನ ಮನೆಗೆ ಬಂದು ನೀನು ಬಾಯಿಗೆ ಬಂದಾಗೆ ಪೇಚಾಡ್ಬೇಡಾ? ಹುಷಾರ್, ಇಲ್ಲದೇ ಹೋದ್ರೆ ನಿಂಗೆ ಸರಿಯಾಗಿ ಮಾಡ್ಬುಡ್ತೀನಿ.

ಜಂಬೂ : ನಾನು ತಂದಿರೋ ಸರ್ಕ ನೋಡಿಲ್ಲಾ ಮರಿ.

ದಿಲೀಪ್ : ಬೇವಿನ ಸೊಪ್ಪು ತಾನೇ?

ಜಂಬೂ : ಅದೆಷ್ಟು ಶಕ್ತಿ ಇದೆ ಗೊತ್ತಾ?

ದಿಲೀಪ್ : ನೀನು ಹೊರಡ್ತೀಯೋ ಏನಾದ್ರೂ ಬೆನ್ನು ನಿನಗೆ ಗುರು ಗುರು ಅಂತಿಮ್ಯೋ ಸ್ಯಾಗೋ?

ಜಂಬೂ : ಆಗ್ ನೋಡ್ತಿರು ತೋರಿಸ್ತೀನಿ...

ದಿಲೀಪ್ : ಏನ್ನ?

ಜಂಬೂ : ನನ್ನ ಮೋಡೀನಾ?

ದಿಲೀಪ್ : ಅಪ್ಪಾಜಿ ಯಾಕ್ ಇವನ್ನ್ ಕರ್ಕಂಡು ಬಂದಿದ್ದೀರಿ?

ಜಂಬು : ನಿಮ್ಮಮ್ಮ ಕರ್ಕಂಡು ಬಾ ಅಂದದ್ಕೇ........

ದಿಲೀಪ್ : ಏನಮ್ಮಾ...?

ಬನ : ನಿನ್ನೊಳ್ಳೇದ್ಕೇ...

ದಿಲೀಪ್ : ಏನು ಒಳ್ಳೇದು?

ಬನ : ಹಿಡಿದಿರೋದ ಬಿಡಿಸಿದ್ರೆ ಒಳ್ಳೇದಾಗೋಲ್ವೇ?

ದಿಲೀಪ್ : ಏನಮ್ಮಾ ನೀನು ಮಾತಾಡ್ತಾ ಇರೋದು?

ಬನ : ನಿಜವಾಗಿ ಹೇಳ್ಬಿಡು ನೀನ್ಯಾರು ಅಂತಾ?

ದಿಲೀಪ್ : ಅಂದ್ರೆ ನಿನ್ಗೂ ಅನುಮಾನವಾಗಿಹೋಯ್ತೋ? ಹೆತ್ತ ತಾಯಿಗೆ ನಾನ್ಯಾರು ಅಂತ ಹೇಳಬೇಕೇ?

ಜಂಬು : ನಿನ್ಗೆ ಎಲ್ರೂ ತಾಯಿ... ಮುಚ್ಕೋಬಾಯಿ.

ದಿಲೀಪ್ : ಮುಚ್ಚಿಲ್ದೇ ತೆರ್ಕೊಂಡಿದ್ದೀರಾ?

ಜಂಬು : ತಲಹರಟೆ ಸರಿಯಾಗಿ ಹೇಳ್ತೀನೋ, ತರಾಟೆಗೆ ತೆಗೆದುಕೊಳ್ಳಬೇಕೋ?

ದಿಲೀಪ್ : ಯಾವನಯ್ಯ ನೀನು ನನ್ನ ಮನೆಗ ಬಂದು ನನ್ನನ್ನೇ ತರಾಟೆಗೆ ತೆಗೆದುಕೊಳ್ತೀಯಾ?

(ಆತನ ಮೇಲೆ ಕೈ ಮಾಡಲು ಹೊರಡುವನು. ಆಗ ಬನಶಂಕರಮ್ಮನರು ಬಂದು)

ಬನ : ಏನು ಪೊಗರು ತೆಗೀತೀಯಾ ಹ್ಯಾಗೆ? ಗುರುಗಳು ಹೇಳಿದಹಾಗೆ ಕೇಳ್ತೀಯೋ ಏನು?

ಜಂಬೂ : ಬಿಡ್ರಮ್ಮ ನಾನು ತೆಗೋತೀನಿ, ಓಂಕಾಳಿ, ಚೂಂಕಾಳಿ, ಬೇವಿನ ಕಾಳಿ... ರಾಂ... ರೀಂ.. ರೂಂ... ಓಂ... ಚೂಂ... ಹ್ರಾಂ... ಹ್ರೀಂ... ಹ್ರೂಂ...

(ಬೇವಿನ ಸೊಪ್ಪನ್ನು ಅವನ ತಲೆಯ ಮೇಲೆ ಹೊಡೆಯುವನು. ಕೋಪಗೊಂಡ ದಿಲೀಪ್ ಜಂಬೂಗೆ ಚನ್ನಾಗಿ ಹೊಡೆಯುವನು. ತಂದೆ ತಾಯಿ ಆತನನ್ನ ತಡೆಯುವರು. ಜಂಬೂ ನರಳುವನು.)

ದಿಲೀಪ್ : ನನಗೆ ದೆವ್ವ ಹಿಡಿದಿಲ್ಲ. ಮೊದಲು ನಿನಗೆ ಹಿಡಿದಿದೆ ಕಣಮ್ಮ ಆಮೇಲೆ ಅಪ್ಪನಿಗೆ ಆಮೇಲೆ ಈ ಜಂಬುಗೆ. ಭೂತ ಬಿಡಿಸ್ತಾನಂತೆ. ಈಗ ನಿನ್ಗೆ ಭೂತ ಬಿಡಿಸಿದ್ನೋ... ಹಣ ಕಸ್ಕೋಳ್ಳೋಕೆ ಮೋಹಿನಿ ಬಿಡಿಸ್ತೀನಿ ಅಂತ

ಬಂದ್ಯಾ? ನಿನಗೆ ಬುದ್ಧಿ ಸೆಟ್ಟಗಿದ್ಯೋ ಇಲ್ವೋ... ನಡೆ ಮನೆಯಿಂದಾಚೆ ಒಂದಷ್ಟು ಭಿಕ್ಷೆ ಕೊಟ್ಟು ಕಳುಹಿಸಿ ಅಪ್ಪಾ ಕರ್ಕಂಡು ಬಂದ ತಪ್ಪಿಗೆ.

ಬನ : ಸಂಗೀತ ಅಂತ ಕನವರಿಸ್ತಿದ್ದೆ, ನಿನ್ನ ಮೇಲೆ ನಿನಗೆ ಜ್ಞಾನವಿಲ್ಲ ಅದಕ್ಕೇ ಮೋಹಿನಿ ಹಿಡಿದಿದ್ಯೋ ಏನೋ ಅಂತ ಕರಿಸ್ದೆ. ಪಾಪ ಆತನದೇನು ತಪ್ಪು?

ದಿಲೀಪ್ : ಅದ್ಕೇ ಹೇಳಿದ್ನಲ್ಲ, ಮೊದಲು ನಿಮ್ಮಿಬ್ಬರದೂ ತಪ್ಪು ಅಂತ.

ಬನ : ನಿನ್ನ ಸುಖಕ್ಕೋಸ್ಕರ ಮಾಡಿದ್ದೇ ತಪ್ಪೇ?

ದಿಲೀಪ್ : ಯಾವ ಕಾಲದಲ್ಲಿದ್ದೀರಿ ಅಂತ? ಇನ್ನೂ ಮೂಢನಂಬಿಕೇಲಿ ಇದ್ದೀರಿ. ಇಂಥವರನ್ನೆಲ್ಲಾ ಪ್ರೋತ್ಸಾಹಿಸ್ತಾ ಇದ್ದೀರಿ. ಪಾಪ ಈ ಮುಂಡೇವ್ಕ ಸಂಪಾದ್ನೆ ಆಗೋದು ಹ್ಯಾಗೆ?

(ಜಂಬೂ ನರಳುತ್ತಾ ಮೇಲೇಳುತ್ತಾ)

ಜಂಬೂ : ಇವನ್ನ ಹೀಗೇ ಇಡಬೇಡಿ. ಕೈಕಾಲು ಕಟ್ಟಿ ಮಲಗಿಸಿ. ಚಡಿಏಟು ಕೊಡ್ತೀನಿ. ಆವಾಗ ಬಾಯಿ ಬಿಡುತ್ತೆ, ಯಾರು ಅಂತ?

ದಿಲೀಪ್ : ನನ್ನನ್ನ ಮುಟ್ಟಿ ನೋಡುವಿರಿ ಒಬ್ಬೊಬ್ಬರ್ನೂ ಸಿಗದ್ ಹಾಕಿ ಬಿಡ್ತೇನೆ. ಮೋಹಿನಿ ಹಿಡ್ದಿದೆಯಂತೆ. ನಿಮ್ಗ್ಯಾರ್ಗಾದ್ರೂ ಹಿಡ್ದಿದ್ರೆ ಅವನ ಹತ್ತಿರ ಬಿಡಿಸ್ಕೊಳ್ಳಿ.

ಜಂಬು : ನೋಡೋದೇನು ಹಗ್ಗ ತನ್ನಿ ಕಟ್ಟಿಹಾಕಿ.

(ತಾಯಿ ಹಗ್ಗ ತಂದುಕೊಡುವಳು. ಅಪ್ಪ ಇಬ್ಬರನ್ನು ಕರೆತಂದು ಕೈ ಕಾಲನ್ನು ಕಟ್ಟಿ ಹಾಕಿಸುವನು. ಒದ್ದಾಡಿ ಅರಚಿದರೂ ಬಿಡದೆ ಚಡಿಯಿಂದ ಹೊಡೆಯುವನು. ಅಯ್ಯೋ ನನಗೆ ದೆವ್ವ ಹಿಡ್ದಿಲ್ಲ, ಮೋಹಿನಿ ಹಿಡ್ದಿಲ್ಲ, ಅಂತ ಅಳುವನು. ಬಾಸುಂಡೆಗಳು ಏಳುವುವು. ಅಯ್ಯೋ ಪಾಪಿಗಳೇ ಮೊದಲು ಬಿಡ್ಸಿ ಬಂಧನವನ್ನು ಅನ್ನುವನು. ತಾಯಿ ಆತನ ಸ್ಥಿತಿಯನ್ನು ನೋಡಲಾರದೆ)

ಬನ : ಅಯ್ಯೋ ಸಾಕು ಬಿಡಪ್ಪಾ. ಸುಮ್ಮನೇ ಬಾಸುಂಡೆಗಳಾಯ್ತು, ಕಟ್ಟುಬಿಚ್ಚಿ.

ಪ್ರಸನ್ನ : ನಾನು ಹೇಳಿದ್ರೆ ಕೇಳಿದ್ರಲ್ವಾ... ಈಗ ಅನುಭೋಗಿಸು.

ದಿಲೀಪ್ : ಈಗ ಅನುಭವಿಸುವವನು ನಾನು ನೀವಲ್ಲ.

(ಎಲ್ಲರೂ ಕಟ್ಟುಗಳನ್ನು ಬಿಚ್ಚುವರು. ಅದೇ ಚಡಿಯನ್ನು ಕಿತ್ತುಕೊಂಡು ದಿಲೀಪ್ ಹೊಡೆಯುವನು. ಎಲ್ಲರನ್ನು ಅಟ್ಟಿಸಿಕೊಂಡು ಹೊಡೆಯಲು ಆತ ಅಲ್ಲಿಂದ ಓಡಿಹೋಗುವನು. ತಾಯಿ ನಿಟ್ಟುಸಿರುಬಿಡುತ್ತಾ ಕುಳಿತುಕೊಳ್ಳುವಳು. ತಂದೆಯವರು ಒಂದು ಕಡೆ ತಲೆಯಮೇಲೆ ಕೈಮೊತ್ತು ಕುಳಿತುಕೊಳ್ಳುವರು.)

ದಿಲೀಪ್ : ಇದು ಈಗ್ಲಲ್ಲಾ ಮಾಡಬೇಕಾದ್ದು. ಆತನ್ನ ಕರಕಂಡು ಬರದ್ಕೂ ಮೊದ್ಲು ಮಾಡಬೇಕಾಗಿತ್ತು. ಶುದ್ಧ ಅವಿವೇಕಿಗಳು. ಕೊಡಿ ದುಡ್ಡು ಆಸ್ಪತ್ರೆಗೆ. ರಾತ್ರಿ

ಉಪ್ಪಿನ ನೀರಿನ ಶಾಖಕ್ಕೆ ರೆಡಿ ಮಾಡಮ್ಮ... ನಿಮ್ಗೂ ನಿಮ್ಮ ಬುದ್ಧಿಗೂ ಒಂದಷ್ಟು ಮುಗ್ಗಲು ಧೂಪಹಾಕಿದ್ರು.

(ಎಂದು ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಳ್ಳುವನು.)

* * *

## ದೃಶ್ಯ-೫

(ಪ್ರಸನ್ನನ ಮನೆ. ಗಂಡ-ಹೆಂಡತಿ ಮಾತಾಡುತ್ತಾ)

ಬನ : ದಿಲೀಪ್ ಕಾಲೇಜು ಮೆಟ್ಟಲು ಹತ್ತಿದ್ದೇ ಹತ್ತಿದ್ದು.

ಪ್ರಸನ್ನ : ದೊಡ್ಡವನಾಗಿಬಿಟ್ಟ.

ಬನ : ಇಲ್ಲ ಚಿಕ್ಕವನಾಗ್ಬುಟ್ಟ.

ಪ್ರಸನ್ನ : ಏನೋ ಒಂದಾದ.

ಬನ : ಏನಾದ್ರೂ ಅವನ ಬಗ್ಗೆ ಕಾಳಜಿ ಬೇಡ್ವಾ?

ಪ್ರಸನ್ನ : ಏನಾಗಿದೆ ಅಂತ ಹೇಳಿದ್ರಲ್ವೇ?

ಬನ : ಅವನ ವರ್ತನೆಯ ನರ್ತನವೇ ಬದಲಾಗಿದೆ.

ಪ್ರಸನ್ನ : ಸರಿಮಾಡಿದ್ರಾಯ್ತು.

ಬನ : ಅದು ಸಾಮಾನ್ಯವಲ್ಲಾರೀ.

ಪ್ರಸನ್ನ : ಯಾರಾದ್ರೂ ಮಾಡ-ಗೀಟ ಮಾಡಿಸ್ಬಿಟ್ಟಿದ್ದಾರೋ ಏನೋ?

ಬನ : ಮಲೆಯಾಳದ ಮಾಟಗಾರರ ಕರೀಬೇಕಾ?

ಪ್ರಸನ್ನ : ಏನಾದ್ರೂ ಮಾಡಿ ಅದನ್ನು ಕಳೀಬೇಕು

ಬನ : ಅಲ್ಲಾರೀ, ಅವನ ಮುಖಚರ್ಯೆ ನೋಡಿದ್ರೆ ಒಂದು ಥರ ಇದೆ. ಯಾರಾದ್ರೂ ಮುಖದಿಂದ ಇಳೀತೆಗೆದ ನೀರು ದಾಟಿದ್ನೋ, ಅದಕ್ಕೇನಾದ್ರೂ ಹೀಗಾಗಿರಬೇಕು?

ಪ್ರಸನ್ನ : ಅದ್ಕೇನಾ್ಮಡ್ಬೇಕೋ ಮಾಡಿದ್ರಾಯ್ತು.

ಬನ : ಏನಾದ್ರೂ ಯಾವುದಾದ್ರೂ ಹುಡುಗಿ ಪ್ರೀತಿಸಿ ಹೀಗಾಗ್ಬುಟ್ಟಿದ್ದಾನೋ ಏನೋ.

ಪ್ರಸನ್ನ : ಇನ್ನೇನೇನು ಮನಸ್ಸಿಗೆ ಹೊಳಿತಾ ಇದೆ ಹೇಳು.

ಬನ : ಎಂಥ ಚಿನ್ನದಂಥ ಹುಡುಗ ಈಗ ಮಾತಾಡಿಸಿದ್ರೂ ಸರಿಯಾಗಿ ಮಾತಾಡ್ಲೊಲ್ಲ, ಕಥೆ ಆಡಿಸೋಲ್ಲ ಯೋಚನೆ ಆಗದೆ ಹೆತ್ತ ತಾಯಿಗೆ.

ಪ್ರಸನ್ನ : ಮಾಡು ಬೇಡ ಅಂತ ಹೇಳಿದ್ನಾ.

ಬನ : ಹಾಗಾದ್ರೆ ನೀವು ಯೋಚನೆ ಮಾಡುವ ಹಾಗಿಲ್ವೇ?

ಪ್ರಸನ್ನ : ಮಾಡು ಅಂದ್ರೆ ಮಾಡ್ತೀನಿ.

ಬನ : ಇದೇನು ತಮಾಷೆ ಮಾಡ್ತಾ ಇದ್ದೀರಿ.

ಪ್ರಸನ್ನ : ನಿನಗೆ ತಮಾಷೆಯಾಗಿ ಕಾಣ್ತಾ ಇದ್ಯಾ?

ಬನ : ನಾನು ಹೇಳ್ತಾ ಇರೋದನ್ನ ಕೇಳ್ತಾ ಇದ್ದೀರಾ?

ಪ್ರಶನ್ನ : ಕಿವಿ ಕಿವುಡಾಗಿದೆ ಅಂತ ತಿಳ್ಕೊಂಡಿದ್ದೀಯಾ?

ಬನ : ಏನ್ರೀ ಎಲ್ಲೋ ಕಾಲೇಜಿಗೆ ಸೇರಿದೆ ಅಂತ ಗಂಭೀರ ಬಂತು ಅಂತ ಕಾಣಿಸುತ್ತೆ.

ಪ್ರಸನ್ಬ : ಅದ್ಕೇ ಗಡಾಮ ತೋರಿಸ್ತಾ ಇದ್ವಾನೆ ಅಂತ ಕಾಣುತ್ತೆ.

ಬನ : ಅವನು ಅಂಥ ಹುಡುಗನೇನೂ ಅಲ್ಲ ಕಣ್ ಸುಮ್ಗಿರಿ. ಅಹಂಕಾರವೇನೂ ಇಲ್ಲ ಅವನಿಗೆ.

ಪ್ರಸನ್ನ : ಮತ್ತೆ ಯಾವುದಾದ್ರೂ ಒಂದು ಕಾರಣ ಹೇಳು. ಇಲ್ಲ ಅವನ್ನೇ ಕೇಳು.

ಬನ : ಅವನನ್ನು ಕೇಳಿದ್ರೂ ಮಾತಾಡೋಲ್ಲ ಏನ್ಮಾಡ್ಲಿ?

ಪ್ರಸನ್ನ : ಮಾತು ಹೊರಟ್ಹೋಯ್ತೇ ಹಾಗಾದ್ರೆ?

ಬನ : ಥೂ... ಏನು ಅನಿಷ್ಟ ನುಡೀತೀರಿ.

ಪ್ರಸನ್ನ : ಮತ್ ನೀನೇ ಹೇಳ್ದೇ.

ಬನ : ಆದ್ರೆ ಹಣವೊಂದು ಮಾತ್ರ ಕೇಳ್ತಾನೆ.

ಪ್ರಸನ್ನ : ಆಗ ಕೇಳು... ಮಾತಾಡಿದ್ರೆ ದುಡ್ಡು ಕೊಡೋದು ಅಂತ.

ಬನ : ಆಗ ಕೇಳಿದ್ರೆ ಏನಿಲ್ಲಮ್ಮ ಅನ್ತಾನೆ ಅಷ್ಟೆ...

ಪ್ರಸನ್ನ : ಹಾಗಾದ್ರೆ ಕುಡಿಯೋದ್ ಕಲ್ತಿದ್ದಾನೋ ಏನೋ?

ಬನ : ಕುಡಿದವರು ಹಾಗಿರ್ತಾರಾ?

ಪ್ರಸನ್ನ : ಹೌದು...

ಬನ : ನೀನು ಕುಡಿತೀಯಾ ಅಂತಾ ಹ್ಯಾಗೆ ಕೇಳೋದು?

ಪ್ರಸನ್ನ : ಬಾಯ್ನಲ್ಲಿ.

ಬನ : ಬಾಯ್ನಲ್ಲಲ್ದೇ ಕೈನಲ್ಲಿ ಕೇಳ್ತಾರ್ಯೇ ಸುಮ್ನಿರ್ರೀ.

ಪ್ರಸನ್ನ : ಕೇಳಿದ್ರೆ ತಪ್ಪೇನು?

ಬನ : ಅದೇನೋ ನಿಜ. ಸಿಗರೇಟ್ ಸೇದೋದು, ಕುಡಿಯೋದು, ಹುಡುಗಿ ಪ್ರೀತಿಸೋದ್ನ ನಾನು ಕೇಳಕ್ಕೆ ಆಗುತ್ತೇನ್ರೀ?

ಪ್ರಸನ್ನ : ಕೇಳದೇಹೋದ್ರ ಬಿಡು. ಅದಕ್ಕೆ ನಾನೇನು ಮಾಡ್ಲಿ?

ಬನ : ನೀವು ಅಪ್ಪ... ಮಗನ್ನ ಕೇಳಿ.

ಪ್ರಸನ್ನ : ಕೇಳ್ತೀನಿ... ನನಗೇನು ಹೆದರಿಕೇನಾ?

ಬಸ : ಮೊದಲು ಆ ಕೆಲಸ ಮಾಡಿ. ದಿನದಿನಕ್ಕೆ ಅವನ ವರ್ತನೆ ನೋಡಲಿಕ್ಕಾಗೋಲ್ಲ. (ಅಳುವಳು.)

ಪ್ರಸನ್ನ : ಹಾಗಾದ್ರೆ ಬ್ರೈನ್ ಏನಾದ್ರೂ ಸ್ವಲ್ಪ...

ಬಸ : ಲೂಸಾ ಅಂತ ವಾಕ್ಯ ಪೂರ್ತಿ ಮಾಡಿ.

ಪ್ರಸನ್ನ : ಯಾಕಾಗಿರ್‍ಬಾರ್ದು?

ಬಸ : ಇದೇನ್ ಹೇಳ್ತೀರಿ ಇಸ್ ಅದೊಂದು ಕರೀರಿ ಅವನಿಗೆ.

ಪ್ರಸನ್ನ : ಇಲ್ಲ ಕಣೆ, ಮಾನಸಿಕ ಆಸ್ಪತ್ರೆಗೆ ಕರ್‍ಕಂಡೋಗಿ ಅಲ್ಲಿ ಡಾಕ್ಟರ್‌ಗೆ ತೋರಿಸ್ಲಾ, ಆಗ ಅವರು ಏನಾದ್ರೂ ಚಿಕಿತ್ಸೆ ಕೊಟ್ರೂ ಕೊಡಬಹುದು. ಆಮೇಲೆ ಸರಿಹೋದ್ರೂ ಹೋಗಬಹುದು.

ಬಸ : ಸಾಕು ಸುಮ್ನಿರಿ (ಅಳುವಳು.).

ಪ್ರಸನ್ನ : ದೆವ್ವ ಹಿಡ್ದಿದೆ ಮೋಹಿನಿ ಹಿಡ್ದಿದೆ ಅಂತ ಈಗಾಗ್ಲೇ ಪರೀಕ್ಷೆ ಆಯ್ತಲ್ಲಾ, ಇಲ್ಲ ದೇವರು ಹಿಡಿದಿದ್ಯೋ ಏನು ಕೇಳಿ ನೋಡು ಶಾಸ್ತ್ರಗಾರರನ್ನು.

ಬಸ : ಸರಿಹೋಯ್ತು. ನೀವು ಹೇಳ್ತಾ ಇರೋದು.

ಪ್ರಸನ್ನ : ಅಲ್ಲಾ ಕಣೆ ಈ ಕಾಲದಲ್ಲಿ ಏನೆಲ್ಲಾ ಹೇಳ್ತಿಯಲ್ಲಾ. ವಿಜ್ಞಾನ ಸಾಕಷ್ಟು ಮುಂದುವರಿದಿರುವಾಗ, ಏನೋ ಆರೋಗ್ಯ ಸಮಸ್ಯೆಯಿಂದ ಅವನಿಗೆ ಹಾಗಾಗಿದೆ ಅಂತ ತಿಳ್ಕೊಳ್ಳಲಿಕ್ಕಾಗೋಲ್ವೇ? ಅವನು ಮಂಕಾಗಿ ಯೋಚನೆ ಮಾಡ್ತಾ ಕುಳಿತಿರುವುದನ್ನು ನೋಡಿದ್ರೆ ಏನೋ ಮಾನಸಿಕವೇದನೆಯಿಂದ ಹಾಗಾಗಿರಬೇಕು ಅನ್ನಿಸುತ್ತೆ ನನಗೆ. ಆದ್ದರಿಂದ ಸರಿಯಾದ ಮನೋರೋಗ ವೈದ್ಯರಿಗೆ ತೋರಿಸುವುದು ಉತ್ತಮವೇನೋ ಅನ್ನಿಸುತ್ತೆ.

ಬಸ : ಹುಚ್ಚಾಸ್ಪತ್ರೆಗೆ ಮಾತ್ರ ನನ್ನ ಮಗನನ್ನು ಸೇರಿಸ್ಬೇಡಿ. ಆಮೇಲೆ ಅವಮಾನವಾದದ್ದು.

ಪ್ರಸನ್ನ : ನಮ್ಮ ಫ್ಯಾಮಿಲಿ ಡಾಕ್ಟರ್‌ಗೆ ತೋರಿಸೋಣ. ಆಮೇಲೆ ನೋಡೋಣ. ಅವರು ಏನು ಹೇಳ್ತಾರೆ ಎಂಬುದನ್ನು.

ಬಸ : ಹೇಗಾದ್ರೂ ಮಾಡಿ ನನ್ನ ಮಗ ದಿಲೀಪ್ ಚೆನ್ನಾಗಿ ನಗ್‌ನಗ್ತಾ ನಮ್ಮೊಂದಿಗೆಲ್ಲಾ ಮಾತು ಕಥೆ ಆಡಿಕೊಂಡು ಕಾಲೇಜು ಓದಿಕೊಂಡು ದೊಡ್ಡ ಮನುಷ್ಯ ಅಂತ ಅನ್ನಿಸ್ಕಂಡ್ರೆ ಸಾಕು.

ಪ್ರಸನ್ನ : ನನಗೂ ಅದೇ ಬೇಕು.

ಬಸ : ಊಟಕ್ಕೆ ಕರಿದ್ರೆ ನನಗೆ ಈಗ ಹೊಟ್ಟೆ ಹಸಿವಿಲ್ಲಮ್ಮ ಅಸ್ತಾನೆ. ಸರಿಯಾಗಿ ಊಟ ತಿಂಡೀನೂ ಮಾಡೋಲ್ಲ, ಬೆಳ್ಯೋ ಹುಡುಗ ಹೀಗಾದ್ರೆ ಹ್ಯಾಗೆ?

ಪ್ರಸನ್ನ : ಮತ್ತೆ ಊಟವನ್ನೇ ಮಾಡದವನನ್ನು ದೆವ್ವ ಹಿಡಿದಿದೆ ಅಂತ ದಂಡಿಸಿದ್ಯಲ್ಲಾ ಜಂಬೂ ಮಂತ್ರಗಾರನಿಂದ.

ಬನ : ಕೆಲವು ದೆವ್ವಗಳು ಊಟ ಮಾಡಲ್ವೇನೋ ಯಾರಿಗೆ ಗೊತ್ತು?

ಪ್ರಸನ್ನ : ನಾನು ಕೇಳಿದಾಗೆ ದೆವ್ವ ಮೆಟ್ಟಿಕೊಂಡವರು ಹೆಚ್ಚಾಗಿ ತಿಂತಾರಂತೆ. ಚಿತ್ರಾನ್ನ ಬೇಕು, ಒಬ್ಬಟ್ಟು ಬೇಕು, ಅದು ಬೇಕು, ಇದು ಬೇಕು ಅಂತ ಬಸ್ರೀರು ಬವಕೆಯ ತಿಂಡಿ ಊಟ ಕೇಳುವ ಹಾಗೆ ಕೇಳ್ತಾರಂತೆ. ಆದ್ರೆ ಇವ್ನು ಕೇಳ್ತಾನೇ ಇಲ್ಲ. ಸರಿಯಾಗಿ ಊಟಾನೇ ಮಾಡೋಲ್ಲ ಅಂತಿದ್ರು ದೆವ್ವ ಹಿಡಿದಿದೆ ಅಂತ ಮಗನಿಗೂ ಹೊಡಿಸ್ದೇ.

ಬನ : ಆ ಮಂತ್ರವಾದಿಗೂ ಹೊಡಿಸ್ದೇ ಅಂತ ಕುಕ್ಕೋ ಮಾತಾಡಿ.

ಪ್ರಸನ್ನ : ಸರಿ ಯೋಚನೆ ಮಾಡಿನೋಡು. ಈಗ ಏನುಮಾಡಬೇಕು ಅಂತ?

ಬನ : ನೀವೇ ಯೋಚನೆ ಮಾಡಿ ಹೇಳಿ ಹಾಗೇ ಮಾಡಿದ್ರಾಯ್ತು.

ಪ್ರಸನ್ನ : ಡಾಕ್ಟರ್ ಚಾರ್ಲ್ಸ್ ನಮ್ಮ ಫ್ಯಾಮಿಲಿ ಡಾಕ್ಟರ್ ಹತ್ತಿರ ಈಗ ಹೋಗ್ತೀನಿ. ನಡೆದ ವಿಚಾರ ಆತನ ಪರಿಸ್ಥಿತಿ ವಿವರಿಸ್ತೀನಿ. ಅವರು ಕರ್‍ಕೊಂಡು ಬಾ ಅಂದ್ರೆ ಕರ್‍ಕೊಂಡು ಹೋಗೋಣ.

ಬನ : ಅಷ್ಟು ಮಾಡಿ.

(ಚಾರ್ಲ್ಸ್ ನೋಡಲು ಪ್ರಸನ್ನ ಹೊರಡುವನು. ಸ್ವಲ್ಪ ಹೊತ್ತು ತಲೆಯ ಮೇಲೆ ಕೈಹೊತ್ತು ಕುಳಿತುಕೊಳ್ಳುವಳು. ನಂತರ ಎದ್ದು ಮಗನ ಕೋಣೆಯ ಕಡೆ ಹೋಗಿ)

ಬನ : ದಿಲೀಪ್ ನಿನ್ನನ್ನು ಕರೀತಾ ಇರೋದು. ದಿಲೀಪ್ ಏನೂ ಮಾತ್ನೇ ಆಡ್ತಾ ಇಲ್ವಲ್ಲಾ.

(ನೇರವಾಗಿ ತಾಯಿ ಒಂದು ಕಸಬರಿಕೆಯನ್ನು ತೆಗೆದುಕೊಂಡು ಆತನ ಕೋಣೆಗೆ ಹೋಗಿ ಮೂರು ಸಾರಿ ಇಳಿ ತೆಗೆದು ನೆಟ್ಟಿ ನಟುಕಿ ಮೂಲೆಗೆ ಹತ್ತಿಸಿ ಅದರ ಮಸಿಯನ್ನು ಹಣೆಗಿಡಲು ಬಂದಾಗ ಎಚ್ಚೆತ್ತು ನೋಡುವನು. ತಾಯಿ ಅಳುತ್ತಾ)

ದಿಲೀಪ್ : ಏನ್ ಕಸಬರಳ ಸೇವೆ ಮಾಡ್ತೀಯಾ?

ಬನ : ನಿಲ್ಲೋ, ನಿಲ್ಲೋ... ಕಸಬರಳ ಸೇವೆಯಲ್ಲಾ ಮುಖದಿಂದ ಇಳಿತೆಗೀತೀನಿ.

ದಿಲೀಪ್ : ನಿನಗೊಂದು ಹುಚ್ಚು ಕಣಮ್ಮ.

ಬನ : ದಿಲೀಪ್ ಊಟ ಮಾಡು ಏಳು.

ದಿಲೀಪ್ : ಹೊಟ್ಟೆಹಸಿವಿಲ್ಲಮ್ಮಾ.

ಬನ : ಯಾವಾಗ ಮಾಡ್ತೀಯಾ?

ದಿಲೀಪ್ : ಹೊಟ್ಟೆ ಹಸಿದಾಗ.

ಬಸ : ಯಾವಾಗ ಹಸಿಯೋದು?

ದಿಲೀಪ್ : ಹಸಿದಾಗ..

ಬಸ : ಅದನ್ನೇ ಯಾವಾಗ ಅಂತ ಕೇಳ್ತಾ ಇರೋದು.

ದಿಲೀಪ್ : ಹಸಿದಾಗ ಹೇಳ್ತೀನಿ.

ಬಸ : ಹೀಗೆ ಸರಿಯಾದ ಹೊತ್ತಿಗೆ ಊಟ ಮಾಡದೆ ಕೊರಗಿಹೋದ್ಯಲ್ಲೋ.

ದಿಲೀಪ್ : ಸಣ್ಣವಾಗಿದ್ದಷ್ಟು ಒಳ್ಳೇದಮ್ಮ. ಬ್ಲಡ್ ಪ್ರೆಷರ್ ಬರೋಲ್ಲ. ಪಕ್ಕಿಯಾಗೆ ಹಾರಾಡ್ಕಂಡಿರಬಹುದು. ಡೊಳ್ಳು ಹೊಟ್ಟೆ ಬೆಳಸ್ಬುಟ್ರೇ ಆರೋಗ್ಯ ಚಂದಾ ಅಂತ ತಿಳ್ಕೊಂಡ್ಯಾ?

ಬಸ : ತಲೆ ಯಾಕೋ ಈ ಪಾಟಿ ಬೆಳಿಸಿದ್ದೀಯಾ? ಗಡ್ಡ ಬಿಟ್ಕೊಂಡಿದ್ದೀಯಾ, ಅವನ್ನೆಲ್ಲಾ ಸರಿಯಾಗಿ ಕತ್ತರಿಸಿ ಎಣ್ಣೆ ನೀರು ಸ್ನಾನಮಾಡಿ ಅಚ್ಚುಕಟ್ಟಾಗಿ ತಲೆ ಬಾಚಿಕೊಂಡು ಗೆಲುಗೆಲುವಾಗಿ ತಿರುಗಾಡ್ತಾ ಇದ್ರೆ ನಮಗೆಲ್ಲಾ ಸಂತೋಷವಾಗಲ್ವೇನೋ ದಿಲೀಪ.

ದಿಲೀಪ್ : ನಿಮ್ಗೇ ಲಾಭವಲ್ವೇನಮ್ಮಾ ಹಣದ ಉಳಿತಾಯವಲ್ವೇ?

ಬಸ : ನನಗೆ ಹಣದ ಉಳಿತಾಯ ಬೇಡ. ನಿನ್ನ ಆರೋಗ್ಯ ಮುಖ್ಯ.

ದಿಲೀಪ್ : ಈಗ ನಾನು ಅನಾರೋಗ್ಯವಾಗೆ ಕಾಣ್ತಿದ್ದೇನ್ಯೆ?

ಬಸ : ಅದು ಬೇಡ ಅಂತ್ಲೇ ನಾನು ಹೇಳೋದು.

ದಿಲೀಪ್ : ಮತ್ತೆ ಅದಕ್ಯಾಕೆ ಯೋಚನೆ ಮಾಡ್ತೀಯಾ ಗಳಗಳಾ ಅಂತ ಅಳ್ತೀಯಾ?

ಬಸ : ಹೆತ್ತ ಒಡಲಿಗೆ ಗೊತ್ತೋ ಆ ಕಷ್ಟ. ನಿನ್ನ ಹೊತ್ತು ಹೆತ್ತು ಸಾಕಿ ಸಲುಹಿ ಇಷ್ಟು ದೊಡ್ಡವನಾಗಿ ಮಾಡಿ ನಿನ್ನನ್ನು ದೊಡ್ಡ ಕೆಲಸಕ್ಕೆ ಸೇರಿಸಿ ದೊಡ್ಡ ಮನುಷ್ಯನನ್ನಾಗಿ ಮಾಡಬೇಕು ಅಂತ ಪರಿತಪಿಸ್ತಾ ಇದ್ದೀವಿ ಕಣೋ.

ದಿಲೀಪ್ : ನಾನು ಅದ್ಕೇ ಪ್ರಯತ್ನ ಮಾಡ್ತಾ ಇದ್ದೀನಿ ಕಣಮ್ಮ.

ಬಸ : ಅಂದ್ರೆ ದೊಡ್ಡ ಮನುಷ್ಯನಾಗಿಲಿಕ್ಕೆ ಈ ರೀತಿ ಗಂಭೀರ ಚಿಂತನೆ ಮಾಡ್ತಾ ಇದ್ದೀಯಾ?

ದಿಲೀಪ್ : ಹೌದು. ಗುರಿ ಸಾಧಿಸಿದ ಮೇಲೆ ಸಂತೋಷವಾಗಿರ್ತೀನಿ ಕಣಮ್ಮ.

ಬಸ : ಸಾಧಿಸ್ತೀನಿ ಅಂತ ಸದಾ ಸಂತೋಷವಾಗಿರು ಅಂತ್ಲೇ ನಾನು ಕೇಳ್ತಾ ಇರೋದು.

ದಿಲೀಪ್ : ಆಗ್ಲಮ್ಮ ಪ್ರಯತ್ನ ಮಾಡ್ತೀನಿ.

ಬಸ : ಹಾಗಲ್ಲ. ಪ್ರಯತ್ನ ಮಾಡುವುದಲ್ಲ, ಸಂತೋಷವಾಗಿ ಇಂದಿನಿಂದಲೇ ಇರುತ್ತೀನಿ ಅಂತ ಹೇಳಬೇಕು.

ದಿಲೀಪ್ : ಆಗ್ಲಮ್ಮ

ಬನ : ಸದ್ಯ ಅಷ್ಟಂದ್ಯಲ್ಲಾ...' ಬಾ ಮತ್ತೆ ಈಗ ಊಟಕ್ಕೆ.

ದಿಲೀಪ್ : ಯಾವುದೋ ಒಂದು ತೈಲ ಚಿತ್ರ ಬರೀತಾ ಇದ್ದೇನೆ, ದಯವಿಟ್ಟು ನನ್ನನ್ನು ಡಿಸ್ಟರ್ಬ್ ಮಾಡಬೇಡಮ್ಮ, ಅದಾದ ಮೇಲೆ ಬರ್ತೀನಿ. ನಾನೇ ಕೇಳಿ ಬೇಕಾದಷ್ಟು ಹೊಟ್ಟೆ ತುಂಬಾ ಮಾಡ್ತೇನ.

ಬನ : ಕಾಫಿ ಮಾಡಿ ತರ್ಲಾ.

ದಿಲೀಪ್ : ಏನೂ ಬೇಡವಮ್ಮ.

ಬನ : ಬರೆಯಲಿಕ್ಕೆ ಸ್ಫೂರ್ತಿ ಬರುತ್ತೆ ಕಣೋ.

ದಿಲೀಪ್ : ಅಷ್ಟು ಬಲವಂತ ಮಾಡುವುದಾದರೆ ತೆಗೆದುಕೊಂಡು ಬಾರಮ್ಮ.

ಬನ : ಸದ್ಯ ದೇವರು ಒಳ್ಳೇ ಬುದ್ಧಿ ಈಗ್ಲಾದ್ರೂ ಕರುಣಿಸಿದ್ನಲ್ಲಾ, ಬಂದೇ ಬಂದೇ ಇನ್ನೊಂದು ಐದು ನಿಮಿಷದಲ್ಲೇ ಕಾಫಿಯನ್ನು ಬಿಸಿಬಿಸಿಯಾಗಿ ಮಾಡಿ ತರ್ತೀನಿ.

(ಎಂದು ಹೊರಡುವಳು)

## ದೃಶ್ಯ-೬

(ಡಾಕ್ಟರ್ ಚಾರ್ಲ್ಸ್ ಮತ್ತು ಪ್ರಸನ್ನ ಇಬ್ಬರೂ ಬರುತ್ತಾರೆ)

ಬನ : ಬನ್ನಿ ಡಾಕ್ಟ್ರೇ...

ಡಾ. : ಹ್ಯಾಗಿದ್ದೀರಮ್ಮಾ?

ಬನ : ನಾನೇನೋ ಚೆಂದಾಗಿದ್ದೀನಿ... ಆದ್ರೆ?

ಡಾ. : ಗೊತ್ತಾಯ್ತಮ್ಮ ಅದ್ಕೇ ನೋಡೋಣ ಅಂತ ಬಂದಿದ್ದೀನಿ.

ಬನ : ಕೂತ್ಕೊಳ್ಳಿ ಡಾಕ್ಟ್ರೇ ಕಾಫಿ ತರ್ತೀನಿ.

ಪ್ರಸನ್ನ : ಪಾಪ ತುಂಬಾ ಕೊರಗ್ತಾ ಅವಳೇ.

ಡಾ. : ಗೊತ್ತಾಯ್ತು... ನೋಡೋಣ ಅಂದ ಹಾಗೆ ದಿಲೀಪ್ ಎಲ್ಲಿ?

ಪ್ರಸನ್ನ : ಅದೇ ಮನೆಯೊಳಗೆ ಕೂತಿದ್ದಾನೆ.

ಡಾ. : ದಿಲೀಪ್... ದಿಲೀಪ್...

ದಿಲೀಪ್: ಬಂದೆ ಡಾಕ್ಟ್ರೇ... (ಬರುವನು)

ಡಾ. : ಏನು ರಜೇನಾ?

ದಿಲೀಪ್: ಹೌದು ಡಾಕ್ಟ್ರೇ.

ಡಾ. : ಅದ್ಕೇ ತಂಪಾಗಿ ರೂಮಿನಲ್ಲಿ ಕುಂತಿದ್ರಿ ಅಂತ ಕಾಣುತ್ತೆ ಕೂತ್ಕೊಳ್ಳಪ್ಪ ಹ್ಯಾಗಿದೆ ಸ್ಪಡಿ?

ದಿಲೀಪ್: ಪರ್ವಾಗಿಲ್ಲ ಡಾಕ್ಟ್ರೇ.

ಪ್ರಸನ್ನ : ತಾವು ಮಾತಾಡ್ತೀರಿ, ನಾನು ಬರ್ತೇನೆ.

(ನಿರ್ಗಮಿಸುವನು. ಅಷ್ಟರಲ್ಲಿ ಎರಡು ಕಪ್ಪು ಕಾಫಿ ತಂದಿರುವಳು ಬನಶಂಕರಮ್ಮ, ಕಾಫಿ ಕುಡುಯುತ್ತಾ ಮಾತು ಆರಂಭವಾಗುತ್ತೆ)

ಡಾ. : ಈ ಕಾಫಿ ಹೆಚ್ಚಿಗೆ ಕುಡ್ಯೋದು ಒಳ್ಳೇದಲ್ಲ. ಏನ್ಮಾಡದು? ಬೇರೆಯವರ ಮನೆಗೆ ಹೋದ್ರೆ ಮಾಡಿ ತಂದಿಟ್ಟು ಬಿಡ್ತಾರೆ. ಕುಡಿಯುವಹಾಗಿಲ್ಲ, ಬಿಡುವ ಹಾಗಿಲ್ಲ.

ದಿಲೀಪ್: ಕಾಫಿ ಅಷ್ಟು ಕೆಟ್ಟದೇ ಡಾಕ್ಟ್ರೇ?

ಡಾ. : ಯಾವುದೂ ಅತೀಯಾದ್ರೆ ಕೆಟ್ಟದೇ.

ದಿಲೀಪ್: 'ಎಲ್ಲೋ ಬಿಟ್ಟೇ ಬಿಡು ಅಂತೀರೇನೋ ಅಂತಿದ್ದೆ.

ಡಾ. : ಕೆಟ್ಟದ್ದು ಅನ್ನೊದನ್ನು ಯಾವುದೇ ಆದ್ರೂ ಬಿಟ್ಟು ಬಿಡುವುದು ಒಳ್ಳೆಯದು.

ದಿಲೀಪ್: ಕೆಲವರಿಗೆ ಕೆಲವು ಮಾಡಲಿಕ್ಕೆ ಸ್ಫೂರ್ತಿ ಅಂತಾರೆ.

ಡಾ. : ನೋಡು ಮಿ॥ದಿಲೀಪ್ ಯಾವುದೇ ಮಾದಕ ಪದಾರ್ಥ ಕೆಟ್ಟದೆ ಅಂತ ನನ್ನ ಅಭಿಪ್ರಾಯ. ಅದಿರಲಿ ನಿನ್ನ ಆರೋಗ್ಯ ಹೇಗಿದೆ?

ದಿಲೀಪ್: ಕೆಟ್ಟಿದ್ರೆ ಖಂಡಿತ ಬಂದೇ ಬರ್ತಿದ್ದೆ.

ಡಾ. : ಹೌದು.

ದಿಲೀಪ್: ಏನು ಬಂದ್ರಿ ಡಾಕ್ಟ್ರೇ?

ಡಾ. : ಯಾರ್ಗೂ ಏನೂ ರೋಗವಿಲ್ಲ ಡಾಕ್ಟರ್ ಏಕೆ ಬಂದ್ರು ಅಂತ ಅನುಮಾನವೇ.

ದಿಲೀಪ್: ಹೌದು.

ಡಾ. : ಏನೋ ಅಪ್ಪಾ ಫ್ಯಾಮಿಲಿ ಡಾಕ್ಟರ್ ಆದದ್ಕೇ ನಿಮ್ಮ ತಂದೆಯವರು ದಾರೀಲಿ ಸಿಕ್ಕಿ ಕರ್‍ಕೊಂಡು ಬಂದದ್ಕೆ ಬಂದೆ.

ದಿಲೀಪ್: ಏನೂ ಅಭ್ಯಂತರವಿಲ್ಲ ಬಿಡಿ.

ಬನ : ಈಗ ಈತನ್ಗೂ ಸ್ವಲ್ಪ...

ದಿಲೀಪ್: ಏನು?

ಬನ : ಮೈ ಕೈನ ಬಾಸುಂಡೆಗಳು.

ದಿಲೀಪ್: ಬಾಸುಂಡೆ ಬರ್ಸಿ ಈಗ ಡಾಕ್ಟರ್ ಕರೆತಂದು ವಾಸಿ ಮಾಡುವುದು ಅಲ್ಲವೇ?

ಡಾ. : ಹಾಗಂದ್ರೆ? ಆತನಿಗೆ ಬಾಸುಂಡೆ ಬರುವವರೆಗೆ ನೀವು ಹೊಡೆದ್ರಾ? ಕಾಲೇಜು ಓದೋ ದಿಲೀಪನಿಗೆ.

ದಿಲೀಪ್: ಹಾಗಲ್ಲ ಡಾಕ್ಟ್ರೇ ದೆವ್ವ ಹಿಡಿದಿದೆ ಅಂತ ಮಂತ್ರಗಾರನನ್ನು ಕರಿಸಿದ್ರು, ಮೈ ಚರ್ಮ ನನಗೂ ಸುಲಿಸಿದ್ರು, ಆವನಿಗೂ ಸುಲಿಸಿದ್ರು.

ಡಾ. : ಏನ್ರೀ ರಾದ್ಧಾಂತಗಳು?

ದಿಲೀಪ್: ನನ್ಗೆ ದೆವ್ವ ಹಿಡಿದಿದೆ ಬಿಡಿಸ್ತೀನಿ ಅಂತ ಬಿಗಿದ. ನಾನು ಬಿದ್ತೀನಾ ಅದನ್ನೇ ಕಿತ್ತುಕೊಂಡು ಚಾರಮಾರ್ನೆ ಬಾರಿಸ್ದೆ.

ಡಾ. : ಏಕೆ ದಿಲೀಪ್ ಹಾಗ್ಮಾಡಿದ್ರು ಮತ್ತೆ?

ದಿಲೀಪ್: ಬುದ್ಧಿ ಇದ್ರಲ್ವೇ ಸಾರ್, ಈಗ ನಿಮ್ಮನ್ನ ಕರ್‍ಕೊಂಬಂದಿರದು ಇದಕ್ಕೋ ಅಥವಾ...

ಡಾ. : ಹಾಗೇನಿಲ್ಲ ಮುಖ್ಯವಾಗಿ ಬಾಸುಂಡೆಗೆ ಔಷದ ಹಾಕುವುದು.

ದಿಲೀಪ್: ಸರಿ ಡಾಕ್ಟ್ರೇ ನಾನು ಸ್ವಲ್ಪ ಏನೋ ಚಿತ್ರಕಲೆಯನ್ನು ಬರೀತಾ ಇದ್ದ್ ಬರ್ತೇನೆ.

ಡಾ. : ಓ ಕೇ.

(ಅಲ್ಲಿಂದ ಮತ್ತೆ ಕೋಣೆಗೆ ಹೋಗಿ ಕುಳಿತುಕೊಳ್ಳುವನು ತಂದೆತಾಯಿಯರು ಕುಳಿತು ಡಾಕ್ಟರೊಂದಿಗೆ ಮಾತನಾಡುತ್ತಾರೆ.)

ಬನ : ನೋಡಿದ್ರಾ ಡಾಕ್ಟ್ರೇ... ನೀವು ಬಂದದ್ದಕ್ಕೆ ಏನೋ ಇಷ್ಟು ಮಾತಾಡಿದ ಮತ್ತೆ ಹೋಗಿ ಕುಳಿತ. ಏಷ್ಟೊಂದು ಸೊರಗಿ ಹೋಗಿದ್ದಾನೆ ನೋಡಿದ್ರಾ? ಸರಿಯಾಗಿ ಊಟ-ತಿಂಡಿನೇ ತಗೊಳಲ್ಲಾ ಅಂದ್ರೆ ಇನ್ಹ್ಯಾಗೆ ದಪ್ಪವಾಗಿ ದಿಡವಾಗಿ ಬೆಳೀತಾನೆ?

ಡಾ. : ಏನೋ ಚಿತ್ರಕಲೆ ಹುಚ್ಚು... ಅದಕ್ಕೇ ತಲ್ಲೀನನಾಗಿ ಮೈ ಮರೆತು ಬಿಟ್ಟಿದ್ದಾನೆ ಅಷ್ಟೆ ಅಂತ ಕಾಣುತ್ತೆ.

ಬನ : ಎಷ್ಟು ಹೊತ್ತಿನಲ್ಲೂ ಹಾಗೇ ಇರುತ್ತಾರ್‍ಯೋ? ಒಂದೊಂದು ಸಾರಿ ನೋಡಬೇಕು. ಕೆಂಪು ಕಣ್ಣು ಮಾಡಿಕೊಂಡು ಸಿಗರೇಟು ಸೇದುಕೊಂಡು ಸುಮ್ಮನೆ ಮಂಕು ಬಡಿದವನಂತೆ ಕುಳಿತುಕೊಳ್ಳುತ್ತಾನೆ.

ಪ್ರಸನ್ನ : ಇನ್ನೊಂದು ಸ್ವಲ್ಪ ಹೊತ್ತಿಗೆ ನೋಡಿ.

(ಆ ಕಡೆ ಹೋಗಿದ್ದು ಕಿಟಕಿಯಲ್ಲಿ ಮಗನನ್ನು ನೋಡಿಕೊಂಡು ಬಂದು ಬನಶಂಕರಮ್ಮ)

ಬನ : ಬನ್ನಿ ಡಾಕ್ಟ್ರೇ ಸ್ವಲ್ಪ ಹಾಗೇ ನೋಡಿ ಬನ್ನಿ.

(ಡಾಕ್ಟರ್ ಇಣುಕಿ ನೋಡುವರು. ಆತನು ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುವುದು ನಗುವುದು ಸ್ವಲ್ಪ ವಿಚಿತ್ರವೆನಿಸಿತು ಸುಮ್ಮನೆ ಬಂದು ಸ್ವಲ್ಪ ಹೊತ್ತು ಕುಳಿತಿರಲು)

ಬನ : ನೋಡಿದ್ರಾ ಡಾಕ್ಟ್ರೇ...

ಪ್ರಸನ್ನ : ಇಲ್ಲ ನೋಡಲಿಲ್ಲ.

ಬನ : ನೀವು ಕುತ್ಕೊಳ್ರೀ ಸುಮ್ನೆ.

ಪ್ರಸನ್ನ : ಕೂತಿಲ್ದೇ ಈಗ ನಿಂತಿದ್ದೀನಾ?

ಬನ : ಡಾಕ್ಟರನ್ನ ಮಾತಾನಾಡಿಸಿದ್ದು.

ಪ್ರಸನ್ನ : ಇಲ್ಲ ಅಂದ್ನಾ.

ಬನ : ಮತ್ಯಾಕೆ ತಲೆ ಹಾಕ್ತೀರಾ? ನಾನು ಮಾತುನಾಡುವಾಗ.

(ಡಾಕ್ಟರ್ ನಕ್ಕು)

ಡಾ. : ನೋಡ್ತೇನೆ ಬನಶಂಕರಮ್ಮನವರೇ... ಯಾವುಪಾದರೂ ನರ್ವ್ ಸ್ವಲ್ಪ ವೀಕಾದ್ರೂ ಹಾಗಾಡೋದುಂಟು; ಏನಿದೆ? ನಿಜ ಏನು ಎಂಬುದನ್ನು ಪರೀಕ್ಷೆ ಮಾಡೋಣ.

ಬನ : ಸಧ್ಯ ನೀವಷ್ಟು ಮಾಡಿ ಅವನನ್ನು ಸರಿಯಾಗಿ ಮಾಡಿದ್ರೆ ಸಾಕು ಡಾಕ್ಟ್ರೇ.

ಡಾ. : ನನ್ನ ಕೈಲಾದಷ್ಟು ಪ್ರಯತ್ನ ಮಾಡ್ತೀನಿ. ಸುಮಾರು ಎಷ್ಟು ದಿನಗಳಿಂದ ಹೀಗೆ?

ಬನ : ಕಾಲೇಜಿಗೆ ಸೇರಿದ ಕೆಲವು ದಿನಗಳ ಮೇಲೆ.

ಡಾ. : ನೋಡೋಣ... ಇನ್ನೊಂದು ದಿನ ಬರ್ತೇನೆ.

(ಹೊರಡುವರು)

## ದೃಶ್ಯ-೭

(ಪ್ರಸನ್ನ ಅವರ ಮನೆ, ಮಗನನ್ನುದ್ದೇಶಿಸಿ ತಂದೆಯವರು)

ಪ್ರಸನ್ನ : ದಿಲೀಪ್ ಈ ಹೊತ್ತು ಸ್ವಲ್ಪ ಬೆಂಗಳೂರಿಗೆ ಹೋಗಬೇಕಲ್ಲಾ.

ದಿಲೀಪ್ : ಅಲ್ಲೆಲ್ಲಿಗೆ?

ಪ್ರಸನ್ನ : ಸ್ವಲ್ಪ ಹೊಸೂರು ರಸ್ತೆ ಕಡೆ ಹೋಗಬೇಕು.

ದಿಲೀಪ್ : ಯಾಕೆ ತಲೆಗಿಲೆ ಕೆಟ್ಟಿದ್ಯಪ್ಪ.

ಪ್ರಸನ್ನ : ಅಂತ ಹೇಳ್ತಾರೆ.

ದಿಲೀಪ್ : ಯಾವಾಗ್ಲಿಂದ...?

ಪ್ರಸನ್ನ : ಈಗ್ಲಿಂದೇ ಅಂತಿಟ್ಕೋ-

ದಿಲೀಪ್ : ಅಂದ್ರೆ ಈಗ ಹುಚ್ಚಾಸ್ಪತ್ರೆಗೆ ಹೋಗಬೇಕಾ?

ಪ್ರಸನ್ನ : ಹೋಗಬೇಕೂ ಅಂತ ಅವರು ಹೇಳಿದ್ದಾರೆ.

ದಿಲೀಪ್ : ಯಾರು?

ಪ್ರಸನ್ನ : ನಿಮ್ಮಮ್ಮ ಕಣೋ.

ದಿಲೀಪ್ : ಮೊದ್ಲು ಅಮ್ಮನ್ಗೇನಾದ್ರೂ ಲೂಸೇ ಅಂತ ತೋರ್ಸಪ್ಪಾ, ಆಮೇಲೆ ನೀವು ತೋರಿಸ್ಕೊಳ್ಳುವ್ರಿ.

ಪ್ರಸನ್ನ : ಯಾಕೆ ಎಲ್ರೂ ಒಂದು ಸಾರಿ ಚೆಕ್‌ಅಪ್ ಮಾಡಿಸ್ಕಳ್ಬಾರ್ದು?

ದಿಲೀಪ್ : ಅಂದ್ರೆ ನನ್ನನ್ನೂ ಈ ಸಾಲಿಗೆ ಸೇರಿಸ್ಕಂಡ್ರ್ಯಾ?

ಪ್ರಸನ್ನ : ತಪ್ಪೇನು?

ದಿಲೀಪ್ : ಅಂತೂ ನನ್ಗೂ ಹುಚ್ಚು ಬರಿಸ್ಬಿಟ್ರೀ?

ಪ್ರಸನ್ನ : ನೀನಾಡೋ ಆಟ ನೋಡಿ ನಿಮ್ಮಮ್ಮನೇ ಹೇಳಿದ್ದಾಳೆ.

ದಿಲೀಪ್ : ನಿಮ್ಗೆ ಕಾಸು ಕುಣೀತದೆ ಅಂತ ಕಾಣುತ್ತೆ.

ಪ್ರಸನ್ನ : ನಿನ್ನ ಆರೋಗ್ಯ ಮುಖ್ಯವಲ್ಲವೇನೋ?

ದಿಲೀಪ್ : ಈಗ ನಾನು ರೋಗೀನಾ?

ಪ್ರಸನ್ನ : ಮನೋರೋಗಿ ಅಂತಾರೆ!

ದಿಲೀಪ್ : ಯಾರು?

ಪ್ರಸನ್ನ : ಆಗ್ಲೇ ಹೇಳಿದ್ನಲ್ಲಾ!

ದಿಲೀಪ್ : ತಾಳಪ್ಪಾ ಅಮ್ಮನಿಗೆ ಸರಿಯಾಗಿ ಶಾಸ್ತಿ ಮಾಡ್ತೀನಿ.

ಪ್ರಸನ್ನ : ಏನೂ ಮಾಡಬೇಡ ಸುಮ್ನಿರೋ.

ದಿಲೀಪ್ : ಮತ್ತೆ ಇಲ್ಲದನ್ನೆಲ್ಲಾ ಹೇಳಿದ್ರೆ ಇನ್ನೇನು ಮಾಡಬೇಕು ಹೇಳಿ.

ಪ್ರಸನ್ನ : ಈಗೇನು ನೀನು ಚೆನ್ನಾಗಿದ್ದೀಯೆ ತಾನೇ?

ದಿಲೀಪ್ : ಹೇಗ್ ಕಾಣಿಸ್ತೀನಪ್ಪಾ ನಿಮ್ಮ ಕಣ್ಣಿಗೆ.

ಪ್ರಸನ್ನ : ಈಗ ಸರಿಯಾಗ್ ಕಾಣ್ತಿದ್ದೀಯಾ?

ದಿಲೀಪ್ : ಇನ್ಯಾವಾಗ ಸರಿಯಾಗಿ ಕಾಣಲ್ಲ.

ಪ್ರಸನ್ನ : ಕೆಲವು ವೇಳೆ.

ದಿಲೀಪ್ : ಹಾಗಾದ್ರೆ ನಿಮ್ಗೆ ಒಂದು ಸ್ಕ್ರೂ ಕಳೆದಿರಬೇಕು.

ಪ್ರಸನ್ನ : ಕಳೆದೇನಿಲ್ಲ ನೀನು ನಿಮ್ಮಮ್ಮ ಇಬ್ಬರೂ ಸೇರ್ಕಂಡು ಕಳೀಲಿಕ್ಕೆ ಪ್ರಯತ್ನ ಮಾಡ್ತಾ ಇದ್ದೀರಿ.

ದಿಲೀಪ್ : ಅದ್ಕೇ ನಾನು ಹೇಳೋದು, ಅದ್ಕೂ ಮೊದ್ಲೇ ನೀವು ಭದ್ರ ಮಾಡಿಕೊಂಡು ಸುಮ್ಮನಿದ್ದು ಬಿಡಿ.

ಪ್ರಸನ್ನ : ಹಾಗಂದ್ರೆ ಬರೋಲ್ಲ.

ದಿಲೀಪ್ : ನೋಡಪ್ಪಾ ನನಗೆ ನೀವು ರೇಗಿಸಬೇಡಿ ಅಮೇಲೆ, ನಾನೇನು ಮಾಡ್ತೀನಿ ಅನ್ನೋದೇ ನನಗೆ ಗೊತ್ತಾಗೋಲ್ಲ.

ಪ್ರಸನ್ನ : ನನ್ನ ಕೊಂದು ಬಿಡ್ತೀಯೇನೋ.

ದಿಲೀಪ್ : ಏನು ಮಾಡ್ತೀನಿ ಅನ್ನೋದು ನನಗೇ ಗೊತ್ತಿಲ್ಲ ಅಂತ ಅಂದ್ನಲ್ಲಾ.

ಪ್ರಸನ್ನ : ಗೊತ್ತಿಲ್ಲದೆ ಏನು ಮಾಡಲಿಕ್ಕಾಗುತ್ತೆ?

ದಿಲೀಪ್ : ನಿಮ್ಮೊಂದಿಗೆ ಮಾತಾಡುವವರಿಗೆ ಬುದ್ಧಿ ಇಲ್ಲ.

(ಎಂದು ತನ್ನ ಕೋಣೆಗೆ ಹೊರಡುವನು, ಅಷ್ಟರಲ್ಲಿ ಬನಶಂಕರಮ್ಮ ಪ್ರವೇಶಿಸುತ್ತಾರೆ.)

ಪ್ರಸನ್ನ : ಬಾರೇ ಬನೂ.

ಬನ : ಏನಂದ್ರೆ?

ಪ್ರಸನ್ನ : ಎಲ್ಲಾನೂ ಅಂದೇ... ಅದಕ್ಕೆ ನಿನಗೇ ತಲೆಕೆಟ್ಟಿವೆ, ನಿನ್ನ ಹೆಂಡತಿಗೆ ತಲೆಕೆಟ್ಟಿದೆ ಇಬ್ಬರಿಗೂ ಏನು ಮಾಡ್ತೀನಿ ಅನ್ನೋದು ನನಗೆ ಗೊತ್ತಿಲ್ಲ ಅಂದ.,

ಬನ : ಅವನೇನೂ ಮಾಡಕ್ಕೂ ಮೊದ್ಲೇ ಡಾಕ್ಟರಿಗೆ ತೋರಿಸ್ಬಿಡ್ರೀ.

ಪ್ರಸನ್ನ : ಆದ್ರೆ ಬರೋಲ್ಲ ಅಂದ.

ಬನ : ನೀವು ಸುಮ್ನೇ ಕರಕೊಂಡು ಹೋಗೋದ್ರ ಬದ್ಲು ಅವನಿಗೇ ಯಾಕೆ ಹೇಳಿ ಬಿಟ್ರಿ?

ಪ್ರಸನ್ನ : ಸರಿಯಾಗಿ ತಿಳಿಸಿಬಿಟ್ಟು ಕರ್ಕೊಂಡೋಗೋಣ ಅಂತ ಹೇಳಿದೆ.

ಬನ : ಅದ್ಕೇ ಈಗ ಅನುಭೋಗಿಸಿ.

ಪ್ರಸನ್ನ : ಏನ್ನಾ?

ಬನ : ಅವ ಏನೇನ್ ಮಾಡ್ತಾನೋ ಇಬ್ಬರಿಗೂ ಅದನ್ನ.........

ಪ್ರಸನ್ನ : ಅದ್ಕೆ ಈಗ ಏನು ಮಾಡಬೇಕು ಅಂತಿದ್ದೀಯಾ?

ಬನ : ಅದ್ಕೆ ಈಗ ಯಾರಾದ್ರೂ ಮನೋರೋಗ ತಜ್ಞ ವೈದ್ಯರೊಬ್ಬರನ್ನು ನಮ್ಮ ಮನೆಗೆ ಕರೆತನ್ನಿ ತೋರಿಸಿ. ಆಮೇಲೆ ಏನು ಹೇಳ್ತಾರೋ ಅವರು ಅದನ್ನು ನೋಡೋಣ.

ಪ್ರಸನ್ನ : ಆಗ್಩ಿ... ನೀನು ಹೇಳಿದಾಗೆ ನಾಳೆ ಕರ್ತರ್ತೀನಿ ನಿನಗೂ ಚಪಲ ತೀರೋಗುತ್ತೆ. ಆಮೇಲೆ ಆ ಡಾಕ್ಟರ್‌ಗೂ ಏನು ವಕ್ರಗತಿ ಕಾದಿದ್ಯೋ, ಈ ಹೊತ್ತು ಮಾಟಗಾರ ಜಂಬೂಗೆ ಆದ ಸ್ಥಿತಿ ಆಗುತ್ತೋ ಏನೋ? ಆ ಡಾಕ್ಟ್ರು ಅವನ ಹತ್ತಿರ ಮೋಕ್ಷ ಹೊಂದಲಿಕ್ಕೆ ಬರ್ತಾರೋ ಏನೊ ನೋಡೋಣ.

ಬನ : ಇವನಂಥ ಎಷ್ಟು ಜನ ನೋಡಿಲ್ಲ ಡಾಕ್ಟ್ರು ಹೋಗ್ರೀ,

ಪ್ರಸನ್ನ : ಸರಿ ಅಪ್ಪಣೆ.

(ಎಂದು ಹೊರಡುವರು)

* * *

(ವೈದ್ಯ ಶಿಖಾಮಣಿ ಹಾಗೂ ಪ್ರಸನ್ನ ಪ್ರವೇಶಿಸುವರು. ಅಚ್ಚರಿಯಲ್ಲಿ ನಿಂತು ಬನಶಂಕರಮ್ಮ ನೋಡುತ್ತಿರಲು)

ಪ್ರಸನ್ನ : ಬನೂ... ಕರ್‍ಕೊಂಡು ಬಂದುಬಿಟ್ಟೆ.

ಬನ : ಯಾರು ಗೊತ್ತಾಗಲಿಲ್ಲಾ...

ಪ್ರಸನ್ನ : ನೀನು ಹೇಳಿದ್ದು ನಿನಗೇ ಗೊತ್ತಾಗ್ಲಿಲ್ವೇ?

ಬನ : ನಿಮ್ಮ ಒಗಟು ಅರ್ಥವಾಗಲಿಲ್ಲ.

ಪ್ರಸನ್ನ : ಇವರು, ಅಂವಹಾಗೆ ಇಂಟ್ರಡ್ಯೂಸ್ ಮಾಡ್ಲೇ ಇಲ್ಲ ನಿಂಗ್ ತಾನೇ ಹೇಗೆ ಅರ್ಥವಾಗಬೇಕು. ಇವರು ಹುಚ್ಚು ಆಸ್ಪತ್ರೆಯಿಂದ ಬಂದಿದ್ದಾರೆ.

ಬನ : ಎಷ್ಟು ದಿವಸ ಇದ್ದರು ಪಾಪ?

ಪ್ರಸನ್ನ : ಎಷ್ಟೋ ದಿವಸದಿಂದ ಇದ್ದಾರೆ.

ಬನ : ಈಗಲೂ ಇದ್ದಾರಾ? ಮತ್ ಈಗ್ಯಾಕ್ ಬಂದ್ರು?

ಪ್ರಸನ್ನ : ನಿನ್ನ ಮಗನನ್ನು ನೋಡಬೇಕು ಅಂದ್ಯಲ್ಲಾ ಅದ್ಕೇ ಬಂದಿದ್ದಾರೆ.

ಬನ : ಡಾಕ್ಟ್ರು ಅಂತ ಹೇಳ್ರೀ.

ಪ್ರಸನ್ನ : ಮತ್ತೆ ಪೇಷೆಂಟ್ ಅಂತ ತಿಳಿದುಕೊಂಡಿದ್ದೀಯಾ?

ಬನ : ಕಾಫಿ ತಂದೆ.

ಡಾ. : (ನಗುತ್ತಾ) ಹುಡುಗ ಎಲ್ಲಿದ್ದಾನೆ?

ಪ್ರಸನ್ನ : ಆ ಕೋಣೆಯಲ್ಲಿ ಕುಳಿತಿದ್ದಾನೆ ಡಾಕ್ಟ್ರೇ.

ಡಾ. : ನೋಡೋಣ ನಡೀರಿ.

ಪ್ರಸನ್ನ : ನೀವೇ ಒಳಗೆ ಹೋಗಿ

(ಹೊರಡುವರು... ಡಾಕ್ಟರ್ ಮೆಲ್ಲನೆ ಬಾಗಿಲು ತೆಗೆದು ಹೋಗುವರು, ಬರೆಯುತ್ತಾ ಕುಳಿತಿದ್ದ ದಿಲೀಪ್‌ಅಂತು ನೋಡುವನು)

ದಿಲೀಪ್ : ಯಸ್.

ಡಾ. : ಥ್ಯಾಂಕ್‌ಯು.

(ಕುರ್ಚಿಯ ಮೇಲೆ ಕುಳಿತುಕೊಳ್ಳುವರು ದಿಲೀಪ್ ಅವರನ್ನೇ ದೃಷ್ಟಿಸಿ ಕುಳಿತು ಕೊಳ್ಳುವನು.)

ಡಾ. : ನಾನ್ಯಾರು ಅಂತ ಆಶ್ಚರ್ಯವಾಗಿರಬಹುದಲ್ಲವೇ?

ದಿಲೀಪ್ : ಸರ್ಟೆನ್ಲಿ.

ಡಾ. : ನಾನು ಡಾ॥ ಶಿಖಾಮಣಿ ಅಂತ.

ದಿಲೀಪ್ : ನನ್ನ ಹೆಸ್ರು ದಿಲೀಪ್ ಅಂತ.

ಡಾ. : ನಾನು ವೈದ್ಯ.

ದಿಲೀಪ್ : ನಾನು ಕಾಲೇಜ್ ಸ್ಟೂಡೆಂಟ್.

ಡಾ. : ನಾನು ಬಂದ ಉದ್ದೇಶ ನಿಮ್ಮನ್ನು ನೋಡಲು.

ದಿಲೀಪ್ : ನೋಡಿ ಬೇಡ ಅಂದ್ನೇ.

ಡಾ. : ನಿಮ್ಮಲ್ಲಿ ಸ್ವಲ್ಪ ಮಾತಾಡಬೇಕು.

ದಿಲೀಪ್ : ಮಾತಾಡಿ ಬೇಡ ಅಂದ್ನೇ.

ಡಾ. : ಅಭ್ಯಂತರವಿಲ್ಲವಲ್ಲ...

ದಿಲೀಪ್ : ಇಲ್ಲ ಅಂತ ಆಗ್ಲೇ ಹೇಳಿದ್ನಲ್ಲ.

ಡಾ. : ಯಾವ ಕ್ಲಾಸು?

ದಿಲೀಪ್ : ಫಸ್ಟ್ ಬಿ.ಎ. ಓದ್ತಾ ಇದ್ದೇನೆ.

ಡಾ. : ಆರೋಗ್ಯ ಹ್ಯಾಗಿದೆ?

ದಿಲೀಪ್ : ಏನೂ ಕೆಟ್ಟಿಲ್ವಲ್ಲಾ? ಅಂದಹಾಗೆ ತಾವು ಯಾವುದರಲ್ಲಿ ತಜ್ಞರು.

ಡಾ. : ಮನೋರೋಗದ ತಜ್ಞ.

ದಿಲೀಪ್ : ತಾವು ನನ್ನ ಹತ್ತಿರ ಬಂದ ಉದ್ದೇಶ?

ಡಾ. : ನಾನು ನಿಮ್ಮ ತಂದೆಯವರಿಗೆ ಆಪ್ತ.

ದಿಲೀಪ್ : ಮಗನ ಆರೋಗ್ಯ ವಿಚಾರ್ಸ್ಲೋಣ ಅಂತ ಬಂದ್ರಾ?

ಡಾ. : ತಪ್ಪೇ?

ದಿಲೀಪ್ : ನೀವು ತಿಳಿದಿರೋವಷ್ಟು ತಲೆಕೆಟ್ಟಿಲ್ಲ.

ಡಾ. : ನಾನು ಹಾಗಂದ್ನೇ...

ದಿಲೀಪ್ : ಮನೋರೋಗ ತಜ್ಞ ವೈದ್ಯರು ಬಂದು ಒಂದು ವ್ಯಕ್ತಿಯ ಆರೋಗ್ಯ ವಿಚಾರಿಸಿದಾಗ ಹಾಗನ್ನಿಸಲ್ವೇ?

ಡಾ. : ದೇವರು ಹಾಗೆ ಮಾಡ್ದೇ ಇರಲಿ, ನಮ್ಮ ಮಿತ್ರನ ಮಗನಿಗೆ ಎಂಬುದೇ ನನ್ನ ಆಸೆ.

ದಿಲೀಪ್ : ಅಂದ್ರೆ ನನಗೆ ಹುಚ್ಚು ಹಿಡ್ದಿದೆ ಬಂದು ನೋಡಿ ಅಂತ ಹೇಳಿದ್ರಾ ನಮ್ಮ ತಂದೆ?

ಡಾ. : ಹಾಗೇನಿಲ್ಲ.

ದಿಲೀಪ್ : ನಿಮ್ಮ ಮಿತ್ರರಿಗೆ ಅವಮಾನವಾಗುತ್ತೆ ಅಂತ ಅವರು ಹೇಳಲಿಲ್ಲ ಅನ್ನಿ ಬಿಡಿ. ನಮ್ಮಪ್ಪ ದಡ್ಡ ಶಿಖಾಮಣಿ. ನಮ್ಮಮ್ಮ ಮತ್ತಷ್ಟು ದಡ್ಡ ಶಿಖಾಮಣಿ.

ದಿನಕ್ಕೊಂದೊಂದು ರೋಗ ಅಂತ ನನ್ನನ್ನ ಯಾರ್‍ಯಾರ್‍ಗೋ ತೋರ್‍ಸೋದೇ ಕೆಲಸವಾಗಿದೆ. ಈ ಪಂಜರದಲ್ಲಿ ಕೂತು ನಾನು ಎಲ್ಲವನ್ನೂ ಅನುಭವಿಸ್ತಾ ಇದ್ದೀನಿ.

ಡಾ. : ನೀವು ಈ ಪಂಜರದಲ್ಲಿರಲಿಕ್ಕೆ ಕಾರಣ?

ದಿಲೀಪ್ : ಏನೋ ಸ್ವಲ್ಪ ಓದೋಣ ಏಕಾಂತದಲ್ಲಿ ಕಲೆಯನ್ನು ಮುಂದುವರಿಸಿಕೊಂಡು ಹೋಗೋಣ ಅಂತ

ಡಾ. : ಅಷ್ಟೇನಾ? ನಿಮಗೆ ಸ್ಫೂರ್ತಿ ಹ್ಯಾಗೆ ಬರುತ್ತೆ?

ದಿಲೀಪ್ : ಏಕಾಂತದಲ್ಲಿ.

ಡಾ. : ಮತ್ತೆ?

ದಿಲೀಪ್ : ಅದನ್ನು ಪ್ರಚೋದಿಸುವ ಕೆಲವು ಸಾಧನಗಳಿಂದ ಅವು ತಮಗೆ ಗೊತ್ತಿಲ್ವೇ ಡಾಕ್ಟರ್?

ಡಾ. : ದಟ್‌ಈಸ್ ಆಲ್‌ರೈಟ್ ಥ್ಯಾಂಕ್‌ಯು.

(ಅಲ್ಲಿಂದ ಡಾಕ್ಟರ್ ಹೊರಬರುವರು)

(ಕಾಫಿಯನ್ನು ಬನಶಂಕರಮ್ಮನವರು ತಂದಿಟ್ಟರು. ಪ್ರಸನ್ನ ಡಾಕ್ಟರ್ ಕುಡಿಯುತ್ತಾ)

ಬನ : ಏನು ಡಾಕ್ಟ್ರೇ ನೋಡಿದ್ರಾ?

ಡಾ. : ನೋಡೋದೇನು ಚೆನ್ನಾಗಿ ಮಾತಾಡಿಸಿದೆ ಮಾತಾಡಿದ.

ಬನ : ಚೆನ್ನಾಗಿ ಮಾತಾಡಿದ್ನಾ?

ಪ್ರಸನ್ನ : ಅವನಿಗೇನು ಬೆಕ್ಕಲೇನೇ?

ಬನ : ನೀವು ಸುಮ್ನಿರಿ... ನಾನು ಕೇಳಿದ್ದು ಡಾಕ್ಟರ್ ಅನ್ನು.......

ಪ್ರಸನ್ನ : ಹೇಳಿ ಡಾಕ್ಟ್ರೇ.

ಡಾ. : ನಾನು ಮಾತ್ತಾಡಿಸಿದಾಗ ಚೆನ್ನಾಗಿ ಮಾತಾಡಿದ... ಏನಾದರೂ ಆರೋಗ್ಯ ಸಮಸ್ಯೆ ಇದ್ಯಾ ಎಂದು ಕೇಳಿದಾಗ ಏನೂ ಇಲ್ಲ ಅಂದ.

ಬನ : ಅವನೇ ನಾನು ಸರಿಯಿಲ್ಲ ಅಂತ ಹೇಳ್ತಾನ್ಯೇ ಡಾಕ್ಟ್ರೇ?

ಪ್ರಸನ್ನ : ಡಾಕ್ಟರ್‌ಗೆ ಗೊತ್ತಿಲ್ಲ, ನಿನಗೆ ಗೊತ್ತು. ಅವರು ಅವನ ಮನಸ್ಸನ್ನು ಅಷ್ಟು ಹೊತ್ತಿನಿಂದ ಸ್ಟಡೀ ಮಾಡಿ ಬಂದಿದ್ದಾರೆ ಕಣೆ.

ಡಾ. : ಹೌದಮ್ಮ

ಬನ : ಸದ್ಯ ಅವನು ಚೆನ್ನಾಗಿದ್ರೆ ಅಷ್ಟೇ ಸಾಕು.

ಡಾ. : ಚೆನ್ನಾಗಿಯೇ ಇದ್ದಾನಮ್ಮ

ಬನ : ಆದ್ರೆ ಕೆಲವು ವೇಳೆ ವಿಪರೀತ ನಿದ್ದೆ ಮಾಡುವುದು. ಎಚ್ಚರವಾಗುದ್ರೂ ಮಾತಾಡೋಲ್ಲ. ತನ್ನ ಲೋಕದಲ್ಲಿ ವಿಹರಿಸುತ್ತಾನೆ.

ಡಾ. : ನಾನು ಹೇಳೋದು ಒಂದಮ್ಮ ಪ್ರತಿಯೊಬ್ಬ ಮನುಷ್ಯನಿಗೂ ಒಂದೊಂದು ರೀತಿಯ ಹುಚ್ಚು ಇರುತ್ತೆ. ಹಾಗೇ ಇವನಿಗೆ ಕಲೆಯ ಹುಚ್ಚು.

ಬನ : ನಿಜ ಡಾಕ್ಟ್ರೇ.

ಡಾ. : ಅದಕ್ಕೆ ತನ್ನ ಮನಸ್ಸನ್ನ ಕಾನ್ಸನ್‌ಟ್ರೇಟ್ ಮಾಡ್ತಾನೆ, ಆಗ ಆ ರೀತಿ ಮಂಕಾಗಿ ಕಾಣ್ತಾನೆ.

ಪ್ರಸನ್ನ : ಊಟ ತಿಂಡಿ ಸೇರೋಲ್ಲ ಅದ್ಕೇ ಬೇಡ ಅಂತಾನೆ.

ಡಾ. : ಹೌದು ಇವೆಲ್ಲಾ ಕ್ಷಣಿಕ ಸರಿಯಾಗ್ತಾನೆ ಕೆಲವು ದಿನಗಳಾದ ಮೇಲೆ.

ಬನ : ಹಾಗಾದ್ರೆ ಇವೆಲ್ಲಾ ಕ್ಷಣಿಕವೇ ಡಾಕ್ಟ್ರೇ.

ಡಾ. : ಹೌದಮ್ಮ

ಬನ : ಅಷ್ಟಾದರೆ ಸಾಕು ಡಾಕ್ಟ್ರೇ.

ಡಾ. : ನಾನು ಬರ್ತೀನಿ ಮಿಸ್ಟರ್ ಪ್ರಸನ್ನ. ಬನಶಂಕರಮ್ಮನವರೇ.

ಬನ : ಆಗ್ಲೀ ಡಾಕ್ಟ್ರೇ ನಿಮಗೆ ತೊಂದರೆ ಕೊಟ್ವು,

ಡಾ. : ನಾನಿರೋದೆ ಆ ತೊಂದ್ರೆ ತೆಗೆದುಕೊಂಡು ನಿಮ್ಮಗಳನ್ನು ಆರೋಗ್ಯವಂತರನ್ನಾಗಿ ಮಾಡಲಿಕ್ಕಲ್ವೇ?

ಪ್ರಸನ್ನ : ಒಳ್ಳೇದು ಡಾಕ್ಟ್ರೇ.

(ಡಾಕ್ಟರ್ ಹೊರಡುವರು. ಅಷ್ಟರಲ್ಲಿ ಹೊರಗಡೆ ಮಗ ದಿಲೀಪ್ ಬರುವನು)

ದಿಲೀಪ್: ಎಷ್ಟು ಕೊಟ್ರಿ ಡಾಕ್ಟರ್‌ಗೆ?

ಪ್ರಸನ್ನ : ಏನಿಲ್ಲ.

ದಿಲೀಪ್: ಮತ್ತೆ ಸುಮ್ನೆ ಬರ್ತಾರ್ಯೇ ಹುಚ್ಚು ಆಸ್ಪತ್ರೆ ಡಾಕ್ಟ್ರು.

ಬನ : ಈಗ್ಯಾರು ನಿನಗೆ ಹುಚ್ಚು ಅಂದವ್ರು?

ದಿಲೀಪ್: ನೀನು.

ಪ್ರಸನ್ನ : ಅದ್ಕೆ ತಾನೇ ನಾನು ಕರೆತಂದದ್ದು.

ಬನ : ನೀನು ಸರಿಯಾಗಿದ್ದ್ಯಾಕೆ ನಾವು ನೂರಾರು ಯೋಚನೆ ಮಾಡಬೇಕು. ಅವರಿವರನ್ನು ಕರೆದುಕೊಂಡು ಬಂದು ತೋರಿಸಬೇಕು.

ದಿಲೀಪ್ : ಅದ್ಕೇ ಹೇಳೋದು ನೀವು ದಡ್ಡ ಶಿಖಾಮಣಿಗಳು ಅಂತ.

ಬನ : ಆ ಡಾಕ್ಟರ್ ಇರಬೇಕು. ಹೆಸರಿಗೆ ತಕ್ಕಹಾಗೆ ದಡ್ಡ ಶಿಖಾಮಣಿ.

ದಿಲೀಪ್ : ಅವರಲ್ಲಮ್ಮ ನೀವು.

(ಎಂದು ಹೊರಡುವನು. ತಂದೆ ಒಂದು ಕಡೆ ಹೊರಡುವರು)

ಬನ : ಎಲ್ಲಾ ನನ್ನ ಹಣೇ ಬರಹ. ಏನೋ ಎಲ್ಲಾ ಒಳ್ಳೇದಾಗ್ಲಿ ಅಂದರೆ ಎಲ್ಲಾ ನನ್ನ ಮೇಲೆ ತಪ್ಪು ಹೊರಿಸ್ತಾರೆ. ಏನು ಮಾಡ್ಲಿ?

(ಎಂದು ಆಕೆಯೂ ಹೋಗುತ್ತಿದ್ದಂತೆಯೇ ರಂಗ ಕತ್ತಲಾಗುವುದು)

* * *

(ದಿಲೀಪ್ ತನ್ನ ಕೋಣೆಯಿಂದ ಹೊರಬರುತ್ತಾನೆ. ತಾಯಿಯನ್ನು ಉದ್ದೇಶಿಸಿ)

ದಿಲೀಪ್ : ಅಮ್ಮಾ

ಬನ : ಏನು ದಿಲೀಪ್... ಊಟ ಮಾಡಬೇಕಾ?

ದಿಲೀಪ್ : ಇಲ್ಲಮ್ಮ

ಬನ : ಕಾಫಿ ಬೇಕೇನೋ?

ದಿಲೀಪ್ : ಉಹೂಂ...

ಬನ : ನೀರುಬೇಕೇ?

ದಿಲೀಪ್ : ಬೇಕಾದ್ದನ್ನ ಬಿಟ್ಟು ಏನೇನೋ ಕೇಳ್ತೀಯಾ? ಏನು ಹೇಳ್ಲಿ?

ಬನ : ನಿನಗೆ ಬೇಕಾಗಿರೋದನ್ನ ನಾನು ಹ್ಯಾಗೆ ಸರಿಯಾಗಿ ಖಚಿತವಾಗಿ ಹೇಳ್ಲಿ

ದಿಲೀಪ್ : ಬೇಕಾದ್ದ ಕೊಟ್ರೆ ಸಾಕು.

ಬನ : ಹಣವೇನೋ?

ದಿಲೀಪ್ : ಮತ್ತೆ ಗೊತ್ತಿಲ್ಲ ಅಂದೆ. ಈಗ ಹೇಳಿಬಿಟ್ಟೆ ನಿನ್ನ ಬಾಯಿಂದ್ಲೇ ಏನಮ್ಮಾ ನಿನ್ನ ಮಗನಿಗೆ ಏನು ಬೇಕು ಅಂತ ನಿನಗೆ ಗೊತ್ತಾಗಲ್ವೇ?

ಬನ : ಈಗ ಹಣ ಯಾಕೆ?

ದಿಲೀಪ್ : ಇದೇನಮ್ಮ ನಿನ್ನ ಪ್ರಶ್ನೆ? ಹಣ ಯಾತಕ್ಕೆ ಅಂದ್ರೆ ಖರ್ಚಿಗೆ.

ಬನ : ಊಟ-ತಿಂಡಿ ಎಲ್ಲಾ ಮನೆಯಲ್ಲೇ ಆಗುತ್ತೆ. ಈಗೇನು ಕಾಲೇಜೂ ಇಲ್ಲ ಬೇರೆ ಊರ್‍ಲ್ಲಿ ಖರ್ಚು ಅನ್ನೋದಕ್ಕೆ.

ದಿಲೀಪ್ : ನೀನೊಳ್ಳೆ ಸರಿಕಣಮ್ಮ ಖರ್ಚು ಇಲ್ವೇ ಇಲ್ವಾ? ನನಗೆ ಸ್ನೇಹಿತ್ರಿಲ್ವಾ? ಹೊರಗಡೆ ಹೋಗಬೇಡ್ವೇ? ಖರ್ಚು ಏನು ಅಂತ ಹೇಳಲಿ?

ಬನ : ಹಣ ಏತಕ್ಕೆ ಅಂತ ಖಚಿತವಾಗಿ ಹೇಳಿದ್ರೆ ಕೊಡ್ತೇನೆ ಇಲ್ಲದೇ ಹೋದ್ರೆ...

ದಿಲೀಪ್ : ಕೊಡೋಲ್ಲ ಅನ್ನು...

ಬನ : ಹಾಗಂತ ಹೇಳು ಅಂತ ಹೇಳಿದ್ದಾರೆ ನಿಮ್ಮಪ್ಪ ಅವರು.

ದಿಲೀಪ್ : ಅವರನ್ನೇ ಕೇಳಿದ್ರೆ?

ಬನ : ಧಾರಾಳವಾಗಿ ಕೇಳು ಬೇಡ ಅಂದ್ನೇ.

ದಿಲೀಪ್ : ಏನು ಹೆದರಿಕೇನಮ್ಮ ಕೇಳೋಕ್ಕೇ? ನಾನು ನಾಳೇನೇ ಮೈಸೂರಿಗೆ ಹೋಗ್ತೀನಿ. ಇಲ್ಲಿ ಕುಳಿತುಕೊಂಡು ಏನು ಮಾಡ್ಲಿ?

ಬನ : ರಜೆ ಬಿಟ್ಟೀರೋದು ಅದ್ಕೇ ಅಲ್ವೇ...

ದಿಲೀಪ್ : ಮಂಕಾಗಿ ಈ ರೂಮ್ನಲ್ಲಿ ಕೊಳೆಯೋಕ್ಕೇನಿಲ್ಲಾ... ಏನೋ ನಾಲ್ಕು ದಿಸ ಆರಾಮವಾಗಿದ್ದು ಹೋಗೋಣ ಅಂದ್ರೆ ಹಣ ಕೊಡೋಲ್ಲ. ನಿನಗೇನು ಖರ್ಚು ನಿಮ್ಮಪ್ಪ ಹೇಳಿದ್ರು ಅದೂ ಇದೂ ಅಂತ ಸಬೂಬು ಹೇಳ್ತೀಯಾ. ಆಮೇಲೆ ನಾವು ಏನು ಮಾಡಬೇಕೋ ಅದನ್ನ ಮಾಡಬೇಕಾಗುತ್ತೆ.

ಬನ : ಏನು ನನ್ನ ಕೊಲೆ ಮಾಡ್ತೀಯೇನೋ?

ದಿಲೀಪ್ : ಹಾಗಂತ ಹೇಳಿದ್ನಾ?

ಬನ : ಮತ್ತೆ ನಿನ್ನ ಮಾತಿನ ಅರ್ಥ.

ದಿಲೀಪ್ : ನಮಗೆ ಬೇಕಾದದ್ದು ಬರದೇ ಹೋದಾಗ ಅದು ಹ್ಯಾಗ್ ಬರಬೇಕು ಹಾಗೆ ಮಾಡ್ತೀನಿ ಅಂದೆ ಅಷ್ಟೆ.

ಬನ : ಕಳ್ತನ ಮಾಡ್ತೀಯಾ?

ದಿಲೀಪ್ : ಕನ್ನ ಹಾಕ್ತೀಯಾ ಅನ್ನು.

ಬನ : ಅದು ಆಗಬಹುದು.

ದಿಲೀಪ್ : ನೀನು ಹೇಳಿದ್ಮೇಲಾಯ್ತು ಹಾಗೇ ಮಾಡೋಣ.

ಬನ : ಕಾಲೇಜಿನಲ್ಲಿ ಓದೋ ಹುಡುಗ ಇದೆಯೇನೋ ಕಲಿಯೋದು?

ದಿಲೀಪ್ : ಮಕ್ಕಳ ಆಸೆಯನ್ನು ಪೂರೈಸದಾಗ ಇನ್ನೇನು ಮಾಡಲಿಕ್ಕಾಗುತ್ತೇ?

ಬನ : ಸಾಕು ಸುಮ್ಮಿರೋ ನಾನು ನಿನಗೆ ಹಣ ಕೊಟ್ಟು ಕೊಟ್ಟು ನೀನು ಹೀಗಾಗಲಿಕ್ಕೆ ಕಾರಣವಾಯ್ತು ಅಂತ ನಿಮ್ಮಪ್ಪನವ್ರು ಲೊಟಲೊಟ ಅಂತಾರೆ.

ದಿಲೀಪ್ : ಏನಾಗಿದ್ದೀನಿ?

ಬಸ : ನಮಗೆ ಸಮಸ್ಯೆಯಾಗಿದ್ದೀಯಾ?

ದಿಲೀಪ್ : ಸಮಸ್ಯೆಯಾಗಿದ್ರೆ ಬಿಡಮ್ಮ ದೇಶಾಂತ್ರ ಹೊರಟು ಬಿಡ್ತೀನಿ...

ಬನ : ದೇಶಾಂತ್ರ ಹೊರಟವ್ರೆಲ್ಲಾ ಎಷ್ಟೋ ಜನ ಹಿಂವಕ್ಕ ಬಂದವ್ರೆ, ಕಣೋ.

ದಿಲೀಪ್ : ನಾನು ಬರೋವ್ನಲ್ಲ ತಿಳ್ಕೋ.

ಬನ : ಹೊಟ್ಟೆಗೇನೂ ಸಿಕ್ಕದೇ ಹೋದ್ರೆ ನೀನೇ ಬರ್ತೀಯಾ.

ದಿಲೀಪ್ : ನೋಡಮ್ಮ ಆಮೇಲೆ ದಿಲೀಪ್ ಹೀಗ್ಮಾಡ್ದ ಅಂತ ಅನ್ಕೋಬೇಡ.

ಬನ : ನೋಡೋ ನಿನಗೆ ಬುದ್ಧಿವಾದ ಹೇಳೋ ವಯಸ್ಸು ಮೀರೋಗಿದೆ ಅಂತ ಕಾಣುತ್ತೆ.

ದಿಲೀಪ್ : ವಯಸ್ಸು ಮೀರಿ ಹೋಗದೆ ದಿನದಿನಕ್ಕೆ ಕಡಿಮೆ ಆಗುತ್ತೇನಮ್ಮ.

(ತಂದೆ ಪ್ರಸನ್ನ ಪ್ರವೇಶಿಸುವನು)

ಪ್ರಸನ್ನ : ಎಲ್ಲಾಗುತ್ತೆ? ವಯಸ್ಸು ಮೀರ್ತಾ ಮೀರ್ತಾ ಮನುಷ್ಯನ ಗುಣಮಟ್ಟ ಹೆಚ್ತಾ ಹೋಗಬೇಕು.

ದಿಲೀಪ್ : ಈಗೇನು ಕಡಿಮೆ ಆಗ್ತಾ ಇದ್ಯಾ?

ಪ್ರಸನ್ನ : ಅಂತತೋರುತ್ತೆ.

ದಿಲೀಪ್ : ಈಗೇನು ಅಂತಾ ಹೇಳ್ತಾ ಇದ್ದೀನಿ, ನನಗೆ ನೂರು ರೂಪಾಯಿ ಬೇಕು.

ಪ್ರಸನ್ನ : ಯಾಕೆ?

ದಿಲೀಪ್ : ನಾನು ಮೈಸೂರಿಗೆ ಹೋಗಬೇಕು.

ಪ್ರಸನ್ನ : ಈಗ ರಜವಲ್ವೇ?

ದಿಲೀಪ್ : ಸ್ವಲ್ಪ ಕೆಲಸವಿದೆ.

ಪ್ರಸನ್ನ : ಅಂಥ ಕೆಲಸವೇನು?

ದಿಲೀಪ್ : ಓದ್ಕೋಬೇಕು

ಪ್ರಸನ್ನ : ಇಲ್ಲಿ ಆಗೋಲ್ವೇ?

ದಿಲೀಪ್ : ಲೈಬ್ರರಿಯಲ್ಲಿ ರೆಫರ್ ಮಾಡಬೇಕು.

ಬನ : ಈಗ ರಜೆ ಕೊಟ್ಟಿರೋದು ಸ್ವಲ್ಪ ರೆಸ್ಟ್ ತೆಗೆದುಕೊಳ್ಳಲಿ ಅಂತ. ಆತುರ ಏಕೆ? ಸ್ವಲ್ಪ ಸುಧಾರಿಸಿಕೊಂಡು ಹೋದ್ರಾಯ್ತು ಬಿಡು.

ಪ್ರಸನ್ನ : ಅದೇ ನಾನು ಹೇಳೋದು.

ದಿಲೀಪ್ : ನಿಮಗೇನು ಹೇಳಿದ್ರೂ ಅರ್ಥವಾಗಲ್ಲ ಅಂತ ಕಾಣುತ್ತೆ

ಬನ : ಹೌದೌದು ನಾವೇನು ಹೇಳಿದ್ರೂ ನಿನಗರ್ಥವಾಗಲ್ಲ ಅಂತ ಕಾಣುತ್ತೆ

ಪ್ರಸನ್ನ : ಕಾಣುತ್ತೆ... ಕಾಣುತ್ತೆ. ...

(ಎನ್ನಲು ಅಲ್ಲಿಂದ ದಿಲೀಪ್ ಅಡಿ ಇಡುವನು)

## ದೃಶ್ಯ-೮

(ಬನಶಂಕರಮ್ಮ ಮಗನ ಕೋಣೆಯ ಕಡೆಗೆ ಬಂದು ಮಗನನ್ನು ಕೂಗುತ್ತಾಳೆ)

ಬನ : ದಿಲೀಪ್ ದಿಲೀಪ್... ಏನು ಎಲ್ಲೂ ಕಾಣ್ತಾ ಇಲ್ಲ ಎಲ್ಲಿಗೆ ಹೋಗಿರಬಹುದು? ಎಷ್ಟು ಹೊತ್ತಾಯ್ತು ಎಲ್ಲಿಗಾದ್ರೂ ಹೋಗಿದ್ರೂ ಬಂದು ಬಿಡಬೇಕು. ಈಗ ಏನಾದ್ರೂ ಮೈಸೂರಿಗೆ ಹೊರಟು ಹೋಗಿದ್ದಾನೋ ಹ್ಯಾಗೆ ಏನು ಯೋಚನೆ ತಂದಿಟ್ಟು ಬಿಟ್ಟು ಹೊರಟ.

(ಮತ್ತೆ ಕೋಣೆಯ ಕಡೆ ಹೋಗಿ ಬಂದು)

ಅಂ್ಹ... ಪೆಟ್ಟಿ ಬೀಗ ಮುರ್ದಿದ್ದಾನೆ. ಹಣ ಐದು ನೂರು ರೂಪಾಯ್ನ ತೆಗೆದುಕೊಂಡು ಹೋಗಿದ್ದಾನೆ. ಎಂಥ ಕೆಲ್ಸ ಮಾಡ್ದ? ನಿನ್ನೆ ಹೇಳ್ದಹಾಗೆ ಮಾಡಿಬಿಟ್ನಲ್ಲಾ, ಎಂಥ ಚಿನ್ನದಂಥ ಹುಡಗ ಹ್ಯಾಗಾಗ್ಬುಟ್ಟ? ಪುನಃ ಬರ್ತ್ತಾನೋ ಏನೋ... (ಅಳುವಳು.)

(ಅಷ್ಟರಲ್ಲಿ ಪ್ರಸನ್ನ ಪ್ರವೇಶಿಸುತ್ತಾ)

ಪ್ರಸನ್ನ : ಯಾಕೇ ಆಳ್ತಾ ಕೂತಿದ್ದೀಯೇ?

ಬನ : ಆಗಬಾರದ್ದು ಆದ್ರೆ ಅಳದೆ ಇನ್ನೇನು ಮಾಡ್ಲೀ ಹೇಳಿ?

ಪ್ರಸನ್ನ : ಏನಾಗಿದ್ಯೇ?

ಬನ : ಆಗ್ಲೇ ಹೇಳಿದ್ನಲ್ಲಾ.

ಪ್ರಸನ್ನ : ಏನಾಗ್ ಬಾರದ್ದೇ?

ಬನ : ನಮ್ಮ ದಿಲೀಪ್ ಹೊರಟು ಹೋಗಿದ್ದಾನೆ ಕಣ್ರೀ.

ಪ್ರಸನ್ನ : ಏನು ಸಣ್ಣ ಮಗು ತಪ್ಪಿಸ್ಕಂಡವ್ನೇ... ಹಾಲ್ಕುಡ್ಯೋ ಪಾಪ.

ಬನ : ಅಲ್ರೀ ನಿನ್ನೆ ನಮ್ಮ ಮಾತು ಕೇಳಿ ಕೋಪ ಮಾಡಿಕೊಂಡು ಹೊರಟು ಬಿಟ್ಟಿದ್ದಾನೆ ಅಂತ ಕಾಣುತ್ತೆ.

ಪ್ರಸನ್ನ : ಹೋದ್ರೇನು ಬರ್ತ್ತಾನೆ.

ಬನ : ಬರುವಾಗೇ ಕಾಣೋಲ್ಲಾರೀ

ಪ್ರಸನ್ನ : ಏಕೆ?

ಬನ : ಅಂಥೆ ಕೆಲ್ಸ ಮಾಡ್ಬಿಟ್ಟಿದ್ದಾನೆ.

ಪ್ರಸನ್ನ : ಏನು ಕೆಲ್ಸ?

ಬನ : ನನ್ನ ಪೆಟ್ಟಿ ಮುರಿದು ಐದು ನೂರು ರೂಪಾಯಿ ತೆಗೆದುಕೊಂಡು ಹೊರಟು ಹೋಗಿದ್ದಾನೆ.

ಪ್ರಸನ್ನ : ಪೋಲೀಸ್ ಕುಪ್ಲೆಂಟ್ ಕೊಟ್ರಾಯ್ತು.

ಬನ : ಇದೇನ್ರೀ ನೀವು ಹೇಳೋದು?

ಪ್ರಸನ್ನ : ತಪ್ಪು ಮಾಡಿದವನು ಅನುಭೋಗಿಸಬೇಕಾದ್ದು ಅದೇ, ಯಾರಾದ್ರೇನು?

ಬನ : ನೀವೇ ಮೈಸೂರಿಗೆ ಹೋಗಿ ಬನ್ನಿ.

ಪ್ರಸನ್ನ : ಇನ್ನು ಅದು ಬೇರೆ ಖರ್ಚು.

ಬನ : ಬುದ್ಧಿವಾದ ಹೇಳಿ ಬನ್ನಿ ಅಷ್ಟೆ.

ಪ್ರಸನ್ನ : ನಿನಗೆ ಬುದ್ಧಿ ಇಲ್ಲಕಣೆ. ಮೊದ್ಲೆಲ್ಲಾ ಹಣ ಕೊಟ್ಟು ಕೊಟ್ಟು ಚಾಲು ಅಂಟಿಸ್ಬಿಟ್ಟೆ, ಆ ಚಾಳಿ ಎಲ್ಲಿ ಬಿಡ್ತಾನೆ. ಅವಕ್ಕೆ ಹಣಬೇಕು. ಈ ಹೊತ್ತು ಕಳ್ತನಾ ನಾಳೆ ಕೊಲೆ ಮಾಡ್ತಾನೆ.

ಪ್ರಸನ್ನ : ಹಣಕ್ಕೋಸ್ಕರ ಏನ್ ಮಾಡ್ಲಿಕ್ಕೂ ಹೇಸೋಲ್ಲ ಕಣೆ.

ಬನ : ತಪ್ಪು ನನ್ನದೇ ಈಗೇನು ಮಾಡೋದು?

ಪ್ರಸನ್ನ : ಬಾಯಿ ಮುಚ್ಚಿಕೊಂಡು ಇರೋದು.

ಬನ : ಹುಡುಗ ಕೆಟ್ಹೋಗಾನಲ್ರೀ.

ಪ್ರಸನ್ನ : ನೋಡೋಣ ಈಗ ಸ್ವಲ್ಪ ರೆಸ್ಟ್ ತೆಗೋ ಅಷ್ಟೋತ್ತಿಂದ ನಿನ್ನ ಸಂಸಾರದ ಕಥೆ ಕೇಳಿ ಕೇಳಿ ಸಾಕಾಗಿದೆ.

(ಎಂದು ಹೊರಡುವರು ಬನಶಂಕರಮ್ಮ ಅಳುತ್ತಾ ಕುಳಿತಿದ್ದಂತೆಯೇ ರಂಗ ಕತ್ತಲಾಗುವುದು.)

## (ಮಧ್ಯಂತರ)

* * *

## ದೃಶ್ಯ-೯

ಪ್ರಸನ್ನ : ಏನೇ ಇನ್ನೂ ನಿನ್ನ ಪುರಾಣ ಮುಗೀಲಿಲ್ವಾ?

ಬನ : ನಿಮಗೇನು ಗೊತ್ತಾಗಬೇಕು ಹೆತ್ತ ಕರುಳಿನ ದುಗುಡ?

ಪ್ರಸನ್ನ : ಅವನೆಲ್ಲಿ ಹೋಗ್ತಾನೆ ಬಿಡೆ ಬಂದೇ ಬರ್ತಾನೆ.

ಬನ : ಬರೋಲ್ಲ ಕಣ್ರೀ.

ಪ್ರಸನ್ನ : ನೋಡ್ತಾ ಇರು ಕದ್ದುಕೊಂಡು ಹೋದ ಹಣ ಎಷ್ಟು ದಿನ ಬರುತ್ತೆ? ಅದು ಮುಗಿದ ಕೂಡಲೇ ಬರ್ತಾನೆ.

ಬನ : ನನಗೇನೋ ಅನುಮಾನ.

ಪ್ರಸನ್ನ : ನಿನಗ್ಯಾವಾಗ್ಲೂ ಏನಾದ್ರೂ ಒಂದು ಅನುಮಾನವೇ. ನೆಮ್ಮದಿಯಾಗಿ ಇರು ಮತ್ತೆ.

ಬನ : ನಿಮ್ಮ ಮಾತು ಕೇಳಿಕೊಂಡು ಹಣ ಕೊಡೋಲ್ಲ ಅಂದೆ. ಅದ್ಕೇ ಅವ್ನು ಹಣ ಕದ್ದು ಕೊಂಡು ಹೋದ, ಇನ್ನು ಬಂದ್ರೆ ನೀವೇನಾದ್ರೂ ಮಾಡಿದ್ರೆ ಅಂತ ಹೆದರ್ಕೊಳ್ತಾನೆ ಹುಡುಗ.

ಪ್ರಸನ್ನ : ಏನೂ ಹೆದ್ರಕೊಳ್ಳಲ್ಲ ಬರ್‍ತಾನೆ ಸುಮ್ನಿರ. ಅದೋ ನೋಡು ಬಂದು ನಿಂತ ನಿನ್ನ ಕಳ್ಳಮಗ.

ಬನ : ಸಾಕು ಸುಮ್ನಿರ್‍ರೀ...

ಪ್ರಸನ್ನ : ಕದ್ದವನ್ನ ಕಳ್ಳ ಅನ್ದೇ ಇನ್ನೇನಂತಾರೆ?

ದಿಲೀಪ್ : ನಾನು ಕಳಲಿಲ್ಲ... ಕೊಡೋಲ್ಲ ಅಂದ್ರು ತಕ್ಕಂಡೋದೆ. ನಾನೇನು ಬೇರೆಯವರ ಮನೆಯಲ್ಲಿ ಕಳಲಿಲ್ಲ.

ಪ್ರಸನ್ನ : ಈ ಹೊತ್ತು ನಮ್ಮ ಮನೆಯಲ್ಲಿ ಕದ್ದವನು ನಾಳೆ ಬೇರ ಕಡೇನೂ ಕಳ್ತೀಯೆ. ಅವಶ್ಯ ಬಂದಾಗ ಏನು ಮಾಡ್ತೀಯೋ ಏನೋ ಯಾರಿಗೆ ಗೊತ್ತು?

ದಿಲೀಪ್ : ನಾನು ಹಾಗ್ ಮಾಡಲ್ಲ ತಿಳ್ಕೊಳ್ಳಿ.

ಪ್ರಸನ್ನ : ಅದೇ ನಾನು ಹೇಳೋದು ಹಾಗೆಲ್ಲಾ ಮಾಡಬಾರ್‍ದಪ್ಪ ಒಳ್ಳೇದಲ್ಲಾ ಅಂತ.

ದಿಲೀಪ್ : ಏನೋ ತಪ್ಪಾಯ್ತಪ್ಪ, ಇದೊಂದು ಸಾರಿ ನನ್ನನ್ನು ಕ್ಷಮಿಸಿಬಿಡಿ.

ಪ್ರಸನ್ನ : ಹಣನೆಲ್ಲಾ ಏನು ಮಾಡ್ದೆ?

ದಿಲೀಪ್ : ಖರ್ಚು ಮಾಡ್ದೆ.

ಪ್ರಸನ್ನ : ಯಾವ ಖರ್ಚು ಯಾವ್ ಯಾವ್ದಕ್ಕೆ ಎಷ್ಟು ಮಾಡ್ದೆ?

ದಿಲೀಪ್ : ಕಾಸು ಕೊಟ್ಬಾಯ್ತು ಹೊಗೆಸೊಪ್ಪು ಸುಟ್ಟು ಹೋಯ್ತು ಇನ್ನು ಅದನ್ನು ಹೇಳಿ ಏನು ಪ್ರಯೋಜನ ಬಿಡಿ ಅಪ್ಪಾಜಿ.

ಪ್ರಸನ್ನ : ದುಡ್ಡಿನ ಬೆಲೆ ನಿನಗೆ ಇನ್ನೂ ಗೊತ್ತಿಲ್ಲ ಅದ್ಕೇ ಹೀಗಾಡ್ತಿ.

ದಿಲೀಪ್ : ನೀವು ಕೊಡ್ದೇ ಹೋದ ಮೇಲೆ ಬೆಲೆ ಗೊತ್ತಾಯ್ತು ಅದ್ಕೇ ತಾನೇ ಕದ್ದೆ.

ಬನ : ಸದ್ಯ ಈಗ್ಲಾದ್ರೂ ಜ್ಞಾಪಕ ಬಂತಲ್ಲಾ ನಮ್ಮ ಮನ.

ಪ್ರಸನ್ನ : ಏಗ್ದೇ ಏನಾಗುತ್ತೆ ನಾನು ಹೇಳಲಿಲ್ವೇ? ಬಂದೇ ಬರ್‍ತಾನೆ ಅಂತ.

ಬನ : ಸರಿ ನಡ್ಯೋ ಊಟಕ್ಕೆ...

ದಿಲೀಪ್ : ಆಗ್ಲಮ್ಮ

(ಎಲ್ಲರೂ ಹೊರಡುವರು ರಂಗ ಕತ್ತಲಾಗುವುದು)

* * *

## ದೃಶ್ಯ-೧೦

(ಡಾಕ್ಟರ್ ವೈದ್ಯಾನಾಥ ಪ್ರಸನ್ನ ಅವರ ಮನೆಗೆ ಬರುವನು)

ಬನ : ಬನ್ನಿ ಡಾಕ್ಟ್ರೇ...

ಡಾ. : ಹೀಗೆ ನಿಮ್ಮ ಮಗನ್ನ ಮಾತನಾಡಿಸಿಕೊಂಡು ಹೋಗೋಣ ಅಂತ ಬಂದೆ ಅಮ್ಮ

ಬನ : ತುಂಬಾ ಸಂತೋಷ ಡಾಕ್ಟ್ರೇ.

ಡಾ. : ಈಗ ಹ್ಯಾಗೆ?

ಬನ : ನೋಡಿ ಡಾಕ್ಟ್ರೇ... ಏನೂ ಬದಲಾವಣೆಯಿಲ್ಲ. ಈಗ ಸ್ವಲ್ಪ ಮಾತನಾಡಿಸಿ ಡಾಕ್ಟ್ರೇ ನನ್ನ ಮನಸ್ಸಿಗೆ ಸಮಾಧಾನವಿಲ್ಲ.

ಡಾ. : ಆಗ಼್ ಬನಶಂಕರಮ್ಮನವರೇ. ಈಗ ಒಳಗೆ ಹೋಗಿ ನೋಡ್ತೀನಿ.

ಬನ : ಆಗ್ಲಿ ಡಾಕ್ಟ್ರೇ.

ಡಾ. : ಮೇ ಐ ಕಮ್ ಇನ್ ಮಿ॥ ದಿಲೀಪ್.

(ಬಾಗಿಲು ತೆಗೆದು ಹೋಗುವರು)

ದಿಲೀಪ್ : (ಕೆಟ್ಟ ದೃಷ್ಟಿಯಲ್ಲಿ ನೋಡಿ) ಪ್ಲೀಸ್ ಡೋಂಟ್ ಡಿಸ್ಟರ್ಬ್‌ಮೀ ಡಾಕ್ಟರ್ ಐಯಾಮ್ ಸ್ಸೋರಿ ಡಾಕ್ಟರ್.

ಡಾ. : ದಟ್ ಈಸ್ ಆಲ್‌ರೈಟ್.

ದಿಲೀಪ್ : ಪರ್ವಾಗಿಲ್ಲ ಬನ್ನಿ ಕುಳಿತ್ಕೊಳ್ಳಿ. ಈಗ ನಾನು ಯಾವುದೋ ಚಿಂತನೆಯಲ್ಲಿ ಇದ್ದೇನೆ.

ಡಾ. : ಯಾವ ಚಿಂತೆ ನಿಮಗೆ?

ದಿಲೀಪ್ : ಎಲ್ಲರಿಗೂ ಒಂದೊಂದು ತರಹದ ಚಿಂತೆ ಇರುತ್ತೆ. ಹಾಗೆ ಯುವಕರಿಗೂ ಚಿಂತೆ ಇರೋಲ್ವೆ? ಆಸೆ ಆಕಾಂಕ್ಷೆಗಳು ಇರೋಲ್ವೆ?

ಡಾ. : ಬೇಕಾದಷ್ಟಿರುತ್ತವೆ. ಅದರಲ್ಲಿ ತಮ್ಮದು ಯಾವುದು ದಿಲೀಪ್.

ದಿಲೀಪ್ : ಚಿತ್ರಕಲೆಯಲ್ಲಿ ತುಂಬಾ ಖ್ಯಾತಿ ಪಡಿಬೇಕು ಅಂತ ಆಸೆ ಸಾರ್. ಅದಕ್ಕಾಗಿ ಏಕಾಗ್ರಚಿತ್ತನಾಗುವ ಬಯಕೆ.

ಡಾ. : ಅದು ಸಾಧ್ಯವೇ?

ದಿಲೀಪ್ : ಸಾಧ್ಯ ಮಾಡಿಕೊಳ್ತೇನೆ. ಆದ್ರೆ ಮಧ್ಯೆ ಮಧ್ಯೆ ಹೀಗೆ ಡಿಸ್ಟರ್ಬ್ ಆಗುತ್ತೆ.

ಡಾ. : ಎಂತೆಂಥ ಸನ್ಯಾಸಿಗಳೇ ಇದಕ್ಕಾಗಿ ಶ್ರಮಪಟ್ಟರು. ಕಾಡಿಗೆ ಹೋದ್ರು ಏಕಾಂತದಲ್ಲಿ ಕೆಲವರು ಪಡೆದರು. ಕೆಲವರಿಗೆ ಅಲ್ಲೂ ಬಿಡಲಿಲ್ಲ. ವಿಶ್ವಾಮಿತ್ರನಿಗೆ ಮೇನಕೆ ಅಡ್ಡ ಬರಲಿಲ್ವೇ? ಹಾಗೇ.

ದಿಲೀಪ್ : ನನಗೆ ಈಗ ಅಡ್ಡ ಬರ್ತಿರವ್ರು ಅಂಥವ್ರಲ್ಲಾ, ನಿಮ್ಮಂಥವ್ರು ಡಾಕ್ಟ್ರೇ... (ನಗುವನು)

ಡಾ. : ಹಾಗಾದ್ರೆ ನಿನಗೆ ಬೇಜಾರೇ?

ದಿಲೀಪ್ : ಹಾಗೆಲ್ಲಾ ತಿಳ್ಕೋಳ್ಬೇಡಿ ಡಾಕ್ಟ್ರೇ.

ಡಾ : ಅಂದ ಹಾಗೆ ದಿಲೀಪ್ ನೀವು ನಿಮ್ಮ ಏಕಾಗ್ರತೆಗೆ ಏನು ಮಾಡ್ತೀರಿ?

ದಿಲೀಪ್ : ಏನಿಲ್ಲ ಸಾರ್ ಬಾಗಿಲು ಮುಚ್ಚಿ ಒಬ್ಬನೇ ಕುಳಿತು ನನ್ನ ಕೆಲಸವನ್ನು ಮಾಡಿಕೊಂಡು ಹೋಗುತ್ತೇನೆ.

ಡಾ : ಅದು ಹೇಗೆ ಸಾಧ್ಯವಾಗುತ್ತೆ?

ದಿಲೀಪ್ : ಹೇಗೇಗೋ ಸಾಧ್ಯ ಮಾಡಿಕೊಳ್ತೀನಿ.

ಡಾ : ಆ ಗುಟ್ಟನ್ನು ನಮಗೂ ಹೇಳಿದ್ರೆ ನಾವೂ ಕೂಡ ಹಾಗೇ ಮಾಡಬಹುದು.

ದಿಲೀಪ್ : ಒಳ್ಳೇ (ನಗುತ್ತಾ) ತಮಾಷೆ ಮಾಡ್ತೀರಿ, ಡಾಕ್ಟರ್ ಸಲಹೆಯನ್ನು ನಾವು ಕೇಳಬೇಕು, ನೀವು ನಮ್ಮನ್ನೇ ಕೇಳ್ತೀರಿ.

ಡಾ : ಡಾಕ್ಟರನ್ನು ಏನು ಕೇಳಬೇಕು ಅದನ್ನು ಕೇಳಿದ್ರೆ ಹೇಳ್ತಾರೆ, ಆದ್ರೆ ನೀವು ಕೇಳೋದೂ ಇರೋಲ್ವೇ?

ದಿಲೀಪ್ : ನಿಮಗೆ ಗೊತ್ತಿಲ್ದೇ ಇರುತ್ತೇ? ಇದಕ್ಕೆ...

ಡಾ : ಓಹ್ ಅರ್ಥವಾಯ್ತು ಬಿಡಿ.

ದಿಲೀಪ್ : ಏನರ್ಥವಾಯ್ತು ಡಾಕ್ಟ್ರೇ?

ಡಾ : ಅಫೀಮ್, ಗಾಂಜಾ... ಲೈಸಜೀಕ್... ಆಸಿಡ್... ಮತ್ತು ತರೋ ಔಷಧ.

ದಿಲೀಪ್ : ಮತ್ತೆ ತಮಗೆ ಹೇಳಿಕೊಡಬೇಕೇ ಸಾರ್.

ಡಾ : ಈ ವಿಷಯ ತಿಳಿಯಲಿಕ್ಕೇ ಬಂದೆ...

ದಿಲೀಪ್ : ಏಕೆ ಸಾರ್...?

ಡಾ : ನಿಮ್ಮ ತಂದೆಯವರು ಸ್ವಲ್ಪ ನೋಡಿ ಬನ್ನಿ ಅಂದಿದ್ರು. ಆದ್ರೆ ನೀವು ಒಳಗೆ ಬಂದ್ರೇ ಬೇಡಿ ಅಂದ್ರಿ. ಆದ್ರೆ ನಿಮ್ಮ ಬಾಯಿಂದಲೇ ವಿಷಯ ಈಗ ಹೊರಬಿತ್ತು.

ದಿಲೀಪ್ : ಏನೋ ಅಭ್ಯಾಸ ಬಂದುಬಿಡ್ತು.

ಡಾ : ನಿಮ್ಮ ಹಿತದೃಷ್ಟಿಯಿಂದ, ನಿಮ್ಮ ಆರೋಗ್ಯದ ದೃಷ್ಟಿಯಿಂದ ಇದು ಹಿತವಲ್ಲ ಅಂತ ನನ್ನ ಬುದ್ಧಿವಾದ.

ದಿಲೀಪ್ : ಆದ್ರೆ ನನ್ನದೊಂದು ವಾದ ಸಾರ್.

ಡಾ : ಏನು?

ದಿಲೀಪ್ : ಹಿತವಲ್ಲದ್ದು ಮಾಡೋದಾದ್ರೂ ಏಕೆ ಅಂತ?

ಡಾ : ಹಣ ಸಂಪಾದ್ನೆಗೆ ಅಷ್ಟೇ. ಕ್ಷಣಿಕ ಸುಖ ಕೊಡಬಹುದು. ಕ್ಷಣಿಕ ನಿದ್ದೆ ಕೊಡಬಹುದು, ಸ್ಫೂರ್ತಿ ಕೊಡಬಹುದು, ಲೈಂಗಿಕ ಆಸಕ್ತಿ ಹುಟ್ಟಿಸಬಹುದು, ಆದರೆ ಮುಂದೆ ಅನೇಕ ರೋಗಗಳಿಗೆ ತುತ್ತಾಗಬೇಕಾಗುತ್ತೆ. ಇದೆಲ್ಲಾ

ಮಾಡೋದೂ ಒಂದೇ ನಿಮ್ಮನ್ನು ನೀವು ಆತ್ಮಹತ್ಯೆ ಮಾಡಿಕೊಳ್ಳುವುದೂ ಒಂದೇ.

ದಿಲೀಪ್ : ಏನೋ ಚಿತ್ರಕಲೆ ಚೆನ್ನಾಗಿ ಕರಾತಲಮಳಕವಾಗಲಿ, ತುಂಬಾ ಪ್ರಸಿದ್ಧಿ ಪಡೆಯೋಣ ಅಂತ ನಿದ್ದೆ ಗುಳಿಗೆ ತೆಗೆದುಕೊಳ್ತೀನಿ ನಿಜ. ಈ ಮತ್ತು ಬರುವ ಔಷಧ ಸೇವನೆ ಮಾಡ್ತಾ ಇದ್ದೀನಿ.

ಡಾ : ಈ ದುಶ್ಚಟದಿಂದ, ಈ ಔಷದ ಸೇವನೆಯಿಂದ ಬುದ್ಧಿಯಮಟ್ಟ ಹೆಚ್ಚುವುದಿಲ್ಲ, ಮೆದುಳಿನ ಶಕ್ತಿ ಕುಂದುತ್ತೆ. ಆದ್ರೂ ಇವನ್ನ ಡಾಕ್ಟರ್ ಸಲಹೆ ಮೇರೆಗೇ ನಡೆದುಕೊಳ್ಳಬೇಕು. ನೀವು ಯಾರ್ನಾದ್ರೂ ಕೇಳಿ ತೆಗೆದುಕೊಂಡ್ರಾ?

ದಿಲೀಪ್ : ನನ್ನ ಫ್ರೆಂಡ್ಸ್ ಕೇಳಿ.

ಡಾ : ಅದೇ ನೀವು ತಪ್ಪು ಮಾಡಿದ್ದು. ಔಷದ ಯಾವುದೇ ತೆಗೆದುಕೊಳ್ಳಲೀ ಅದನ್ನು ಡಾಕ್ಟರ್ ಸಲಹೆ ಮೇರೇಗೇ ತೆಗೆದುಕೊಳ್ಳಬೇಕು. ಇಲ್ಲದೇ ಹೋದ್ರೆ ಇದ್ರಿಂದ ಅಪಾಯವೇ ಹೆಚ್ಚು, ಸುಖಕ್ಕಿಂತ.

ದಿಲೀಪ್ : ಅಂಥ ಅಪಾಯ ಅಂತೀರಾ ?

ಡಾ : ನೋಡಿ ಸಹವಾಸ ದೋಷದಿಂದ ಇಂದಿನ ಯುವ ಜನಾಂಗ ಹೀಗಾಗ್ತಾರೆ, ಇಂಥ ಔಷಧಗಳನ್ನು ಸೇವಿಸುವುದು ಮಹಾ ಪಾಪದ ಕೆಲಸ, ದೇಶದ್ರೋಹ, ಇನ್ನು ಮುಂದಾದ್ರೂ ಈ ದುಶ್ಚಟ ಬಿಡಿ.

ದಿಲೀಪ್ : ಆಗಲೀ ಡಾಕ್ಟ್ರೇ...

ಡಾ : ಒಳ್ಳೇದು ನಾನು ಬರ್ತೀನಿ ಡಿಸ್ಟರ್ಬ್ ಮಾಡಿಬಿಟ್ಟೆ. ಆದ್ರೂ ಒಳ್ಳೇದೇ ಆಯ್ತು, ನಿನ್ನನ್ನು ಡಿಸ್ಟರ್ಬ್ ಮಾಡಿದ್ದಕ್ಕೆ ಡಾಕ್ಟರ್ ಬಂದ ಕೆಲಸ ಸಾರ್ಥಕವಾಯ್ತು. ನಿನಗೆ ಒಳ್ಳೇ ಸಲಹೆ ಕೊಟ್ಟ ಹಾಗಾಯ್ತು ಅಂತ ತಿಳ್ಕೊತೀನಿ.

ದಿಲೀಪ್ : ಥ್ಯಾಂಕ್‌ಯೂ ವೆರಿಮಚ್ ಸರ್. ಏನೋ ನನ್ನ ಮೂಡ್‌ನಲ್ಲಿ ತಮ್ಮನ್ನ ಹಾಗೆನ್ಬಿಟ್ಟೆ.

ಡಾ : ನಾವು ಅನನ್ನೆಲ್ಲಾ ಹೆಚ್ಚು ಮಾಡ್ಕೊಳ್ಳೋಲ್ಲ, ಬೇಜಾರು ಪಟ್ಕೊಳ್ಳೋಲ್ಲ ನಾನಿನ್ನು ಬರ್ತೀನಿ.

ದಿಲೀಪ್ : ಒಳ್ಳೇದು ಸಾರ್.

ಡಾ : ಅದಿರಲಿ ಈ ಚಟ ಹ್ಯಾಗೆ ಬಂತು ನಿಮಗೆ? ಯಾವಾಗ ಬಂತು?

ದಿಲೀಪ್ : ಅದೊಂದು ಕಥೆ ಬಿಡಿ.

ಒಂದು ದಿನ ನಾನು ಕಾಲೇಜಿಂದ ಬರ್ತಾ ಇದ್ದೆ. ದಾರಿಯಲ್ಲಿ ಷಾ... ಸಂಗೀತ ಇಬ್ಬರೂ ಹೋಗ್ತಿದ್ರು... ನಾನು ಹಿಂದೆ ಹಿಂದೆ ಹೋಗ್ತಾ ಇದ್ದೆ. ಷಾ ತುಂಬಾ ಚನ್ನಾಗಿ ಓದ್ತಾ ಇದ್ದ. ಒಳ್ಳೇ ಸ್ಟೈಲಾದ ಹುಡುಗ ನೋಡಲಿಕ್ಕೂ ಒಳ್ಳೇ ಹ್ಯಾಂಡ್‌ಸಮ್ ಆಗಿದ್ದ.

ಯಾವ ಹೆಣ್ಣಿಗೆ ತಾನೆ ಆತನ ಹಿಂದೆ ಹೋಗಬೇಕು ಅನ್ನಿಸದೇ ಇರೋಲ್ಲ. ಹಾಗೇ ಆಕೆ ಆತನ್ನ ಹಿಂಬಾಲಿಸಿಕೊಂಡು ಹೋಗ್ತಾ ಇದ್ದಳು. ಅವರ ಮಾತುಗಳನ್ನೆಲ್ಲಾ ದೂರದಲ್ಲಿಯೇ ನಿಂತು ನಾನು ನೋಡಲಾರಂಭಿಸಿದೆ.

ಸಂಗೀತ : ನಾನು ಎಷ್ಟೋ ದಿನಗಳಿಂದ ನಿಮ್ಮನ್ನು ಮಾತಾಡಿಸಬೇಕು ಅಂತ ಆಸೆಯಾಗಿತ್ತು.

ಷಾ : ಯಾಕೆ?

ಸಂಗೀತ : ನೀವು ಎಷ್ಟು ಚನ್ನಾಗಿ ಓದುತ್ತೀರಿ? ಅದರ ಗುಟ್ಟೇನು ಅಂತ ಕೇಳಲಿಕ್ಕೆ ಆದ್ರೆ ನೀವೇ ಮಾತಾಡಿಸಿದ್ರಿ...

ಷಾ : ಯೂ ಲೈಕ್‌ಡ್ ಮೈ ಫ್ರೆಂಟ್‌ಷಿಪ್.

ಸಂಗೀತ : ಷೂರ್.

ಷಾ : ಅಂದ್ರೆ ನೀವು ನಮ್ಮ ಹಾಗೇ ಆಗಬೇಕು ಅಂತ್ಲೇ.

ಸಂಗೀತ : ಎಕ್ಸಾಗ್ಲಿ.

ಷಾ : ಅದ್ಕೆನಂತೆ ಗುಟ್ಟು ಹೇಳಿಕೊಡಬೇಕೇ?

ಸಂಗೀತ : ಅವಶ್ಯ

ಷಾ : ಅದ್ಕೆಲ್ಲಾ ಸುಮ್ನೆ ಆಗುತ್ತಾ.

ಸಂಗೀತ : ಏನಾದ್ರೂ ಲಂಚ ಎಕ್ಸ್‌ಪೆಕ್ಟ್ ಮಾಡ್ತೀರಾ?

ಷಾ : ಎಕ್ಸಾಗ್ಲಿ.

ಸಂಗೀತಾ : ಆಗಬಹುದು ಕೇಳಿ ಏನು ಬೇಕು ಅಂತ ಸ್ವೀಟ್ಸ್,

ಷಾ : ನೋ.

ಸಂಗೀತ : ಹಣ...

ಷಾ : ನಾಟ್ ಅಟ್ ಆಲ್.

ಸಂಗೀತ : ಮತ್ತೆ...

ಷಾ : ನಿಮ್ಮ ಪ್ರೀತಿ ಒಂದು ಕೊಟ್ರೆ ಅಷ್ಟೇ ಸಾಕು ಮಿಸ್ ಸಂಗೀತಾ.

ಸಂಗೀತ : ಇಲ್ಲ ಅಂತ ತಿಳಿದ್ರೇನು?

ಷಾ : ಯಾರಿಗೆ ಗೊತ್ತು?

ಸಂಗೀತ : ಆಗ್ಲೇ ಆ ಹೊತ್ತೇ ಹೇಳಿದ್ನಲ್ಲಾ ಫ್ರೆಂಡ್‌ಷಿಪ್‌ಗೆ ಒಪ್ಪಿದ್ದೀನಿ ಅಂತ.

ಷಾ : ಹಾಗಿದ್ದ ಮೇಲೆ ನಾನೂ ನನ್ನ ಗುಟ್ಟನ್ನು ರಟ್ಟು ಮಾಡೋದ್ರಲ್ಲಿ ಅಭ್ಯಂತರವಿಲ್ಲ.

ಸಂಗೀತ : ಅದನ್ನೇ ಬೇಗ ಮಾಡಿ ಅಂತ.

ಷಾ : ನೀವು ಆ ಥರ ಔಷಧ ಕೊಟ್ರೆ ತೆಗೆದು ಕೊಳ್ತೀರಾ?

ಸಂಗೀತ : ಒಳ್ಳೇದಾಗೋದಾದ್ರೆ ಯಾಕೆ ತೆಗೆದುಕೊಳ್ಳಬಾರದು?

ಷಾ : ಅವಶ್ಯವಾಗಿ.

ಸಂಗೀತ : ಏನು ಮಾತ್ರೆಗಳು ಅಂತೀರಿ?

ಷಾ : ಅನೇಕ ತರಹ ಇವೆ. ಮತ್ತು ತರುವ ಔಷಧ... ನಿದ್ರೆ ಬೇಡ ಅಂದಾಗ ಮಾತ್ರೆಗಳಿವೆ. ಅದನ್ನು ತೆಗೆದುಕೊಂಡಾಗ ನಿದ್ದೆ ಇಲ್ದೇ ರಾತ್ರಿ ಎಲ್ಲಾ ಓದಬಹುದು, ರ್‍ಯಾಂಕ್ ಬರಬಹುದು, ನೀವೂ ಸಹ. ಅವೆಲ್ಲಾ ನಿಧಾನವಾಗಿ ನಿಮಗೇ ಅರ್ಥವಾಗುತ್ತೆ ಅದನ್ನು ತೆಗೆದುಕೊಂಡು ಪರೀಕ್ಷೆ ಮಾಡಿ ನೋಡಿ.

ಸಂಗೀತ : ಅಗತ್ಯವಾಗಿ... ಎಲ್ಲಾ ಹೊಸ ಹೊಸ ಅನುಭವಗಳು.

ಷಾ : ಇದು ನಿಮ್ಮ ಭಾಗಕ್ಕೆ ಹೊಸದಿರಬಹುದು, ಆದ್ರೆ ಅನೇಕ ಹುಡುಗಿಯರು ಇದರ ಪ್ರಯೋಗ ನಡೆಸಿದ್ದಾರೆ ಉಪಯೋಗಿಸ್ತಾ ಇದ್ದಾರೆ. ಕಲೆಯಲ್ಲಿ ಪ್ರವೀಣರಾಗಿದ್ದಾರೆ. ಸಾಹಿತ್ಯದಲ್ಲಿ ರತ್ನರಾಗಿದ್ದಾರೆ. ಕಾಲೇಜಿನಲ್ಲಿ ರ್‍ಯಾಂಕ್ ಗಳಿಸಿದ್ದಾರೆ. ಇನ್ನೂ ಏನೇನೋ... ಅವೆಲ್ಲಾ ಮುಂದೆ ನಿಮಗೇ ಗೊತ್ತಾಗುತ್ತೆ.

ಸಂಗೀತ : ಈಸ್ ಇಟ್ ಟ್ರೂ?

ಷಾ : ಅಫ್‌ಕೋರ್ಸ್ ಈ ಹೊತ್ತೇ ಅದರ ಪ್ರಯೋಗ ನಡೆಸ್ತೀರಾ?

ಸಂಗೀತ : ಏನೂ ಆಗೋಲ್ಲಾ ತಾನೆ?

ಷಾ : ಏನೂ ಹೆದರಬೇಕಾಗಿಲ್ಲ ಈಗ ನಾವೆಲ್ಲಾ ತೆಗೆದುಕೊಂಡು ಏನಾಗಿದ್ದೇವೆ.

ಸಂಗೀತ : ಚೆನ್ನಾಗಿದ್ದೀರಿ. ಅದನ್ನು ನೋಡಿ ತಾನೇ ನಾನು ನಿಮ್ಮ ಹಾಗೇ ಆಗಬೇಕು ಅಂತ ಆಸೆ ಪಡ್ತಾ ಇರೋದು.

ಷಾ : ನಮ್ಮ ರೂಮಿಗೆ ಬರ್‍ತೀರಾ ಈ ಹೊತ್ತು?

ಸಂಗೀತ : ಇಲ್ಲ ನಾನು ನಮ್ಮ ಮನೆಯಲ್ಲೇ ಟ್ರೈ ಮಾಡ್ತೀನಿ.

ಷಾ : ಆಗಬಹುದು ಈ ಹೊತ್ತು ತೆಗೆದುಕೊಂಡು ಹೋಗಿ ನೋಡಿ, ಅದರ ಗುಟ್ಟೇನು ಅಂತ ನಾಳೆ ತಿಳಿಸಿ.

(ಜೇಬಿನಿಂದ ತೆಗೆದುಕೊಡುವನು... ತೆಗೆದು ಕೊಳ್ಳುವಳು.)

ಸಂಗೀತ : ಥ್ಯಾಂಕ್‌ಯೂ ಬೈ.

ಷಾ : ಗುಡ್‌ನೈಟ್.

(ಆಕೆ ಮನೆಯ ಕಡೆ ಹೋಗುತ್ತಾಳೆ ಈತ ತನ್ನ ಮನೆಯ ಕಡೆ ಹೊರಡುತ್ತಾನೆ.)

ದಿಲೀಪ್ : ಆ ಹೊತ್ತಿನಿಂದ ನನಗೆ ನಾನು ಷಾ ತರಹ ಆಗಬೇಕು, ಆ ಮಾತ್ರೆಗಳ ಗುಟ್ಟು ತಿಳಿದುಕೊಳ್ಳಬೇಕು ಅನ್ನಿಸಿತು. ಆ ಹೊತ್ತಿನಿಂದ ನಾನು ಷಾ

ಮಾತನಾಡಿಸುವುದು ಆತನ ಜೊತೆ ತಿರುಗಾಡುವುದು ಮಾಡಲಾರಂಭಿಸಿದೆ. ಇಬ್ಬರೂ ಒಳ್ಳೆಯ ಮಿತ್ರರೇ ಆದೆವು. ಅಂದಿನಿಂದ ಆರಂಭವಾಯ್ತು ಈ ಔಷಧಿಗಳ ಸೇವನೆ, ಮಾತ್ರೆಗಳ ಸೇವನೆ, ಧೂಮಪಾನದ ಸೇವನೆ ಡಾಕ್ಟ್ರೇ.

ಡಾ. : ಈಗ್ಲೂ ಕಾಲ ಮೀರಿಲ್ಲ ಸ್ವಲ್ಪ ಜೋಪಾನವಾಗಿರು ಮಗು ದಿಲೀಪ್.

ದಿಲೀಪ್ : ಆಗ್ಲಿ ಡಾಕ್ಟ್ರೇ.

ಡಾ. : ನಾನು ಬರ್ಲ್ಲಾ...?

ದಿಲೀಪ್ : ಆಗ್ಲೀ ಡಾಕ್ಟ್ರೇ.

(ಅಲ್ಲಿಂದ ಹೊರಡುವರು)

ಡಾ. : ಬನಶಂಕರಮ್ಮನವರೇ...

ಬನ : ಡಾಕ್ಟ್ರೇ...

ಡಾ. : ನಿಮ್ಮ ಮಗನ ಪರೀಕ್ಷೆ ಆಯ್ತು.

ಬನ : ಏನು ವ್ಯಾಧಿ ಡಾಕ್ಟ್ರೇ......?

ಡಾ. : ಏನೂ ಇಲ್ಲ.

ಬನ : ನಾನೊಪ್ಪಲ್ಲ.

ಡಾ. : ಈಗ ಒಪ್ಪಿಸ್ತೀನಿ.

ಬನ : ಏನು ಹೇಳಿ ಡಾಕ್ಟ್ರೇ...

ಡಾ. : ಪ್ರಸನ್ನ ಅವರೇ....

ಪ್ರಸನ್ನ : ಡಾಕ್ಟ್ರೇ....

ಡಾ. : ನಿಮ್ಮ ಮಗನು ಸ್ಲೀಪಿಂಗ್ ಪಿಲ್ಸ್, ಕೆಲವು ಔಷಧಗಳ ದುಶ್ಚಟಕ್ಕೆ ಬಿದ್ದಿದ್ದಾನೆ, ಅದಕ್ಕೇ ಹಾಗೆ ಆಡುವುದು. ಅದನ್ನು ಆತನ ಬಾಯಿಂದಲೇ ಕೇಳಿ ತಿಳಿದೆ.

ಬನ : ಅದರಿಂದ ಏನೂ ತೊಂದರೆ ಆಗೋಲ್ವೇ?

ಡಾ. : ತೊಂದರೆ ಆಗುತ್ತೆ ಅಂತ ಬುದ್ಧಿವಾದ ಹೇಳಿದ್ದೇನೆ, ನೀವು ಹೇಳಿ.

ಬನ : ಅದಕ್ಕೇ ಡಾಕ್ಟ್ರೇ ನನ್ನ ಹತ್ತಿರ ಆಗಾಗ ಹಣ ಕೇಳಿ ಕೇಳಿ ಈಸ್ಕಂಡು ಹೋಗ್ತಿದ್ದ.

ಡಾ. : ಪ್ರಸನ್ನ ಅವರೇ ನೀವು ಸ್ವಲ್ಪ ಬುದ್ಧಿ ಹೇಳಿ. ಈ ಕಲೆಯ ಹುಚ್ಚನ್ನೆಲ್ಲಾ ಬಿಟ್ಟು ಅಚ್ಚುಕಟ್ಟಾಗಿ ಓದು ಅಂತ ಆತನಿಗೆ ಹೇಳಿ.

ಬನ : ಆಗ್ಲೀ ಡಾಕ್ಟ್ರೇ. ನಾನು ಹಣ ಕೊಡುವುದನ್ನು ಈ ಹೊತ್ತೇ ಕಟ್‌ಮಾಡಿ ಬಿಡ್ತೀನಿ.

ಡಾ. : ನಾನು ಬರ್ತೀನಿ.

ಪ್ರಸನ್ನ : ಒಳ್ಳೇದು ಡಾಕ್ಟ್ರೇ.

(ಡಾಕ್ಟರ್ ವೈದ್ಯನಾಥ ದಾರಿಯಲ್ಲಿ ಪ್ರಸನ್ನನಿಗೆ ಸಿಕ್ಕಿದರು)

ವೈದ್ಯ : ಅಲ್ಲಾ ಪ್ರಸನ್ನ ಅವರೇ ನಾನು ನೋಡಿದ ಹುಡುಗ ಎಷ್ಟು ಬೇಗನೆ ಹೇಗಾಗಿ ಬಿಟ್ಟ ನೋಡಿದ್ರಾ?

ಪ್ರಸನ್ನ : ಇದಕ್ಕೆಲ್ಲಾ ಕಾರಣ ಡಾಕ್ಟ್ರೇ?

ವೈದ್ಯ : ಸಹವಾಸ ದೋಷ.

ಪ್ರಸನ್ನ : ನಿಜವಾಗಲೂ ನನ್ನ ಹೆಂಡ್ತಿ ಹೇಳುವ ಹಾಗೆ ಎಂಥ ಒಳ್ಳೇ ಹುಡ್ಗಾ ಅಂತೀರಿ ಕಾಲೇಜಿಗೆ ಸೇರಿದ್ದೇ ಸೇರಿದ್ದು ಈಗ ಹೀಗೆ ಬದ್ಲಾಗ್ಬುಟ್ಟ ಡಾಕ್ಟ್ರೇ.

ವೈದ್ಯ : ಅದ್ಕೇ ಪ್ರಸನ್ನ ಅವರೇ ಯಾವಾಗಲೂ ಹುಡುಗಳು ಒಳ್ಳೆಯವರ ಸಹವಾಸ ಮಾಡಬೇಕು. ಕೆಲವು ಸಾಹುಕಾರರ ಮಕ್ಕಳನ್ನು ನೋಡ್ತಾರೆ. ಅವ್ರ ಹಾಗೇ ಆಡಬೇಕು ಅಂತಾರೆ, ತಂದೆ ತಾಯಿ ಹತ್ತಿರ ದುಡ್ಡು ಸುಲಿತಾರೆ, ಅನ್ಯಾಯವಾಗಿ ಖರ್ಚು ಮಾಡ್ತಾರೆ.

ಪ್ರಸನ್ನ : ಹೌದು ಡಾಕ್ಟ್ರೇ... ಅವರಿಗೆ ದುಡ್ಡಿನ ಬೆಲೆ ಯಾವಾಗ ಗೊತ್ತಾಗೋದು ಗೊತ್ತೇ... ಅವರು ಸಂಪಾದನೆ ಮಾಡುವಾಗ.

ವೈದ್ಯ : ಹೌದು ನೀವು ಹೇಳಿದ್ದು ಸರಿ.

ಪ್ರಸನ್ನ : ನನ್ನ ಹೆಂಡ್ತಿ ಹತ್ತಿರ ಕಾಡಿ ಬೇಡಿ ಅಷ್ಟು ಈಸ್ಕೊಳ್ತಾನೆ. ನನ್ನ ಹತ್ತಿರ ಅಷ್ಟು ತೆಗೆದುಕೊಳ್ತಾನೆ. ಜೊತೆಗಾರರ ಜೊತೆ ಮೋಜು ಮಾಡಿ ನಮ್ಮನ್ನೂ ಕೆಡಿಸ್ತಾನೆ ತಾನೂ ಕೆಡ್ತಾನೆ. ಇದಕ್ಕೇನು ಮಾಡೋದು ಹೇಳಿ.

ವೈದ್ಯ : ನೋಡಿ ಪ್ರಸನ್ನ ಅವರೇ ಈ ರೀತಿ ಖರ್ಚು ಮಾಡುವವರು ಯಾರು ಅಂತೀರಿ?

ಪ್ರಸನ್ನ : ಸಾಹುಕಾರರು.

ವೈದ್ಯ : ಸಾಹುಕಾರರು ಅಂದ್ರೇನು... ಅನ್ಯಾಯವಾಗಿ ಸಂಪಾದ್ನೆ ಮಾಡಿ "ಕಳ್ಳಪಣ" ಇಟ್ಟಿರ್ತಾರೆ ನೋಡಿ, ಅವರು ಮಕ್ಕಳಿಗೆ ಬೇಕಾದಾಗ ಖರ್ಚು ಮಾಡಕ್ಕೆ ಕೊಡ್ತಾರೆ. ಅವರು ಈ ರೀತಿ ಅನೇಕ ದುಶ್ಚಟಗಳಿಗೆ ಬೀಳ್ತಾರೆ, ಜೊತೆಯವರನ್ನು ಬೀಳಿಸ್ತಾರೆ. ನಮ್ಮಂಥ ನಿಮ್ಮಂಥ ನಿಯತ್ತಾಗಿ ಸಂಪಾದಿಸೋರು ಈ ರೀತಿ ಅನ್ಯಾಯವಾಗಿ ಖರ್ಚು ಮಾಡೋಕ್ಕೆ ಕೊಡಲಿಕ್ಕಾಗುತ್ಯೇ?

ಪ್ರಸನ್ನ : ತಾವು ಹೇಳಿದ್ದು ನೂರಕ್ಕೆ ನೂರು ಪಾಲು ಸತ್ಯ ಡಾಕ್ಟ್ರೇ.

ವೈದ್ಯ : ಮೊದಲು ನೀವು ಹೆಚ್ಚಿಗೆ ಹಣ ಕೊಡೋದ್ ನಿಲ್ಸಿ, ಆವಾಗ ಸ್ವಲ್ಪ ಈ ದುಶ್ಚಟ ಬಿಡಬಹುದು. ಕಲ್ತಿದ್ದಾನೆ ಬಿಡುವುದು ಕಷ್ಟ. ಆದ್ರೆ ದುಡ್ಡು ಕಡಿಮೆ ಆದ್ರೆ ಏನ್ಮಾಡ್ತಾನೆ?

ಪ್ರಸನ್ನ : ಕಳ್ತನ ಮಾಡ್ತಾನೆ, ತಾಯಿ ಹೆದರಿಸ್ತಾನೆ, ಹಾಗ್ ಮಾಡ್ತೀನಿ ಹೀಗ್ ಮಾಡ್ತೀನಿ ಅಂತ ಕೀಳ್ತಾನೆ ಹಣನಾ.

ವೈದ್ಯ : ಏನು ಮಾಡೋದು "ಮೀಸೆ ಬಂದವ್ನು ದೇಶ ಕಾಣಾ" ಅಂತ ಗಾದೆ. ಹೇಳುವಷ್ಟೂ ಹೇಳೋದು ಆಮೇಲೆ ನೋಡೋಣ. ನಾನು ಆತನಿಗೆ ಸರಿಯಾಗಿ ಬುದ್ಧಿ ಹೇಳ್ತೀನಿ, ಆ ಚಟ ಬಿಡು ಅಂತ ಹೇಳ್ತೀನಿ.

ಪ್ರಸನ್ನ : ಅಷ್ಟು ಮಾಡಿ ಉಪಕಾರ ಮಾಡಿ ಡಾಕ್ಟ್ರೇ. ನಾವೂ ಸಾಧ್ಯವಾದಷ್ಟು ಬುದ್ಧಿ ಹೇಳ್ತೀವಿ, ಹಣಾನೂ ಹಿಡಿತವಾಗಿ ಕೊಡ್ತೇವೆ.

ವೈದ್ಯ : ಹಾಗ್ ಮಾಡಿ ನೋಡೋಣ, ನಾನು ಬರ್ಲಾ ಪ್ರಸನ್ನ.

ಪ್ರಸನ್ನ : ಆಗ್ಲಿ ಡಾಕ್ಟ್ರೇ... ನಮ್ಮ ಮಗನ ವಿಚಾರ ಮಾತ್ರ ಜ್ಞಾಪಕವಾಗಿ ಒಂದು ದಿನ ಸಿಕ್ಕಿದಾಗ ಬುದ್ಧಿ ಹೇಳಿ.

ವೈದ್ಯ : ನಾನು ನಿಮ್ಮ ಫ್ಯಾಮಿಲಿ ಡಾಕ್ಟರ್ ಅಲ್ವೇ? ಖಂಡಿತ ಹೇಳ್ತೀನಿ. ಆತನು ಸರಿಯಾಗುವಂತೆ ಮಾಡ್ತೀನಿ. ಓ.ಕೆ. ಸೀಯು.

ಪ್ರಸನ್ನ : ಥ್ಯಾಂಕ್ಯು ಸರ್.

## ದೃಶ್ಯ-೧೧

(ವೈದ್ಯನಾಥನ್ ಅವರ ಆಸ್ಪತ್ರೆ. ಅಲ್ಲಿಗೆ ಕೆಮ್ಮುತ್ತಾ ದಿಲೀಪ ಬರುತ್ತಾನೆ)

ವೈದ್ಯ : ಏನಪ್ಪಾ ದಿಲೀಪ್ ಕುಳಿತುಕೋ, ಏನು ತೊಂದರೆ?

ದಿಲೀಪ್ : ವಿಪರೀತ ಕೆಮ್ಮು ಜ್ವರ... ಏನೋ ಇಲ್ಲಿವರೆಗೆ ನಡ್ಕಂಡು ಬರೋದರೊಳಗೇ ಸುಸ್ತು ಡಾಕ್ಟ್ರೇ.

ವೈದ್ಯ : ತುಂಬಾ ವೀಕ್ ಆಗಿಬಿಟ್ಟಿದ್ದೀಯಲ್ಲಾ ದಿಲೀಪ್...

ದಿಲೀಪ್ : ಏನೋ ಈ ಸಾರಿ ರ್‍ಯಾಂಕ್ ಬರಬೇಕು ಅಂತ ವಿಪರೀತ ಓದಲಿಕ್ಕೆ ಹೋಗಿ ಹೀಗಾಯ್ತು.

ವೈದ್ಯ : ಓದೋದ್ರಿಂದ ಹೀಗಾಗೋಲ್ಲ, ಮತ್ತೇನು ಸಮಾಚಾರ? ವೈದ್ಯರಲ್ಲಿ ಮುಚ್ಚು ಮರೆ ಬೇಡ.

ದಿಲೀಪ್ : ಸ್ವಲ್ಪ ತೆಗೊಂಡೆ ಸಾರ್ ನಿದ್ರೆಗುಳಿಗೆ.

ವೈದ್ಯ : ಮತ್ತೇನಾದ್ರೂ...

ದಿಲೀಪ್ : ಅವೂ ಸ್ವಲ್ಪ ಸ್ವಲ್ಪ...

ವೈದ್ಯ : ನೋಡಿ ಈ ಧೂಮಪಾನ, ಈ ಔಷಧ ದುಶ್ಚಟಗಳಿಂದ ಒಳ್ಳೇದಾಗೋಲ್ಲ ಅಂತ ಆಗ್ಲೇ ನಿಮಗೆ ಗಿಣಿಗೆ ಹೇಳಿದ ಹಾಗೆ ಹೇಳಿದೆ. ಇದೆಲ್ಲಾ ಕ್ಷಣಿಕ ಸ್ಫೂರ್ತಿ ಅಂತ ನಾನು ನಿಮಗೆ ಮೊದಲೇ ಹೇಳಿದ್ದೆ, ಆದ್ರೂ ನೀವು ಇನ್ನೂ ಸ್ವಲ್ಪ ಸ್ವಲ್ಪ ತೆಗೆದುಕೊಳ್ತೀನಿ ಅಂತ್ಲೇ ಹೇಳ್ತಿದ್ದೀರಿ. ನೋಡಿ ನಿಮ್ಮ ಆರೋಗ್ಯ ದೃಷ್ಟಿಯಿಂದ ನಾನು ಹೇಳ್ತಿದ್ದೇನೆ, ನನ್ನ ಮಾತು ಕೇಳಿ. ಈ ಕೆಮ್ಮು ನಾಳೆ ಬೇರೆ ರೀತಿ ಶ್ವಾಸಕೋಶ ರೋಗಕ್ಕೂ ತಿರುಗಬಹುದು, ಹೃದಯರೋಗ ಬರಬಹುದು. ನಾನು ಸುಳ್ಳು ಹೇಳ್ತಾ ಇಲ್ಲ. ಈ ಹೊತ್ತಿನ ದಿನ ರಕ್ತದ ಕಾವಿನ ದಿನ ನಿಮಗೆ ಹಾಗಾಡಿಸುತ್ತೆ. ನಾಳೆ ದಿನ ಇವು ನಾನಾ ಕಾಂಪ್ಲಿಕೇಷನ್ಸ್‌ಗೆ ಕಾರಣ ಆಗುತ್ತೆ.

ದಿಲೀಪ್ : ಐ ವಿಲ್ ಟ್ರೈಟು ಅವಾಯ್ಡ್ ಇಟ್ ಡಾಕ್ಟರ್.

ವೈದ್ಯ : ಟ್ರೈ ಏನ್ಬಂತು ಹಾಗೆ ಹೇಳೋ ಕಾಲ ಮೀರಿದೆ. ಬಿಟ್ಟೇ ಬಿಡ್ತೀನಿ ಅಂತ ಈ ಹೊತ್ತೇ ನನ್ನೆದುರಿಗೆ ಹೇಳಬೇಕು. ಇಲ್ಲದೆ ಹೋದ್ರೆ ನಾನು ತಾನೇ ನಿಮಗೆ ಟ್ರೀಟ್‌ಮೆಂಟ್ ಕೊಡಬೇಕಾಗುತ್ತೆ. ಆ ದೃಷ್ಟಿಯಿಂದ ಹೇಳ್ತಾ ಇರೋದು, ಈಗ ಏನು ವಯಸ್ಸಿನ ಹುಡುಗ, ೨೦ರ ಹರೆಯದ ಹುಡುಗ ಹೇಗಿರಬೇಕು ಮಿರುಮಿರನೆ ಮಿಂಚ್ತಾ, ಮೈ ಕೈ ತುಂಬಿಕೊಂಡು ಗೆಲುವಾಗಿರಬೇಕು. ಅಂಥದ್ದರಲ್ಲಿ ಹೀಗೆ ಸೊರಗಿಕೊಂಡು ಎಪ್ಪತ್ತು ವರ್ಷದ ಮುದಕನಾಗಿ ಕಾಣ್ತಿರಾ. ಕನ್ನಡಿ ನೋಡ್ಕೊಂಡಿದ್ದೀರಾ?

ದಿಲೀಪ್ : ಹೌದು ಡಾಕ್ಟ್ರೇ ನೀವು ಹೇಳೋದನ್ನ ನಾನು ಒಪ್ತೀನಿ.

ವೈದ್ಯ : ಈಗ ನಾನು ಈ ಕೆಮ್ಮಿಗೆ, ನಿಮ್ಮ ಆರೋಗ್ಯ ಇಂಪ್ರೂವ್ ಆಗೋದ್ಕೆ ಏನು ಬೇಕೊ ಔಷಧ, ಟಾನಿಕ್ಕು ಕೊಡ್ತೀನಿ. ಅದನ್ನು ತೆಗೆದುಕೊಳ್ಳಿ. ಆಮೇಲೆ ನೀವೇ ಸರಿಹೋಗ್ತೀರಿ.

ದಿಲೀಪ್ : ಆಗ್ಲಿ ಡಾಕ್ಟ್ರೇ.

ವೈದ್ಯ : ವೆರಿಗುಡ್.

(ವೈದ್ಯರು ಓಷಧ ಕೊಟ್ಟು ಕಳುಹಿಸುವರು. ದಿಲೀಪ್ ಅಲ್ಲಿಂದ ಹೊರಡುವನು.)

* * *

(ಕೋಣೆಯಲ್ಲಿ ದಿಲೀಪ್ ಕುಳಿತಿದ್ದಾನೆ. ಆತನಿಗೆ ಹಿಂದೆ ಕಾಲೇಜು ದಿನಾಚರಣೆಯಲ್ಲಿ ಸಂಗೀತ ಹಾಡಿದ ವಚನವೊಂದು ಹಿನ್ನೆಲೆಯಲ್ಲಿ ಕೇಳಿಸಿದಂತಾಗು ತ್ತದೆ... ಅಚ್ಚರಿಯಿಂದ ಕೇಳುತ್ತಾನೆ.)

ಬಿಟ್ಟೆನೆಂದರೆ ಬಿಡದೀ ಮಾಯೆ
ಬಿಡದಿದ್ದರೆ ಬೆಂಬತ್ತಿತು ಮಾಯೆ

ಯೋಗಿಗೆ ಯೋಗಿಣಿಯಾಯಿತ್ತು ಮಾಯೆ
ಸವಣಗೆ ಸವಣಿಯಾಯಿತ್ತು ಮಾಯೆ
ಯತಿಗೆ ಪರಾಕಿಯಾಯಿತ್ತು ಮಾಯೆ
ನಿನ್ನ ಮಾಯೆಗೆ ನಾನಂಜುವಳಲ್ಲ
ಚೆನ್ನಮಲ್ಲಿಕಾರ್ಜುನ ದೇವಾ ನಿಮ್ಮಾಣೆ.

(ಅಕ್ಕಮಹಾದೇವಿ)

ದಿಲೀಪ್ : ಹೌದು ಇದು ಅಕ್ಕಮಹಾದೇವಿ ವಚನ. ಅದೊಂದು ದಿನ ಸಂಗೀತ ಕಾಲೇಜ್ ಡೇನಲ್ಲಿ ಹಾಡಿದ್ದು. ಅದಕ್ಕೂ ಇದಕ್ಕೂ ಎಷ್ಟೊಂದು ಸಂಬಂಧವಿದೆ. ನಿಜ ಡಾಕ್ಟರ್ ಹೇಳಿಬಿಟ್ರು ಬಿಟ್ಟುಬಿಡಿ ಔಷದಿ ಚಟವನ್ನು ಅಂತ. ಎಲ್ಲಿ ಆಗುತ್ತೆ ಬಿಡಲಿಕ್ಕೆ ಆಗುವುದಿಲ್ಲ. ಅಕ್ಕಮಹಾದೇವಿ ಹೇಳಿದಳು "ಬಿಟ್ಟೆನೆಂದರೆ ಬಿಡದೀ ಮಾಯೇ" ಅಂತ. ಆಕೆಯಂಥವಳಿಗೆ ಮಾಯೆ ಬಿಡಲಿಲ್ಲ ಅಂಥ ವಚನದಲ್ಲಿ ಬರೆದು ಇಟ್ಟಳು. ಆದರೆ ನಾವು ಸಾಮಾನ್ಯ ಮನುಷ್ಯರು, ಯುವಕರು, ಆಸೆ ತಂಬಿಕೊಂಡವರು ನಮಗೆ ಬಿಡುತ್ತದೆಯೇ? ಹೇಗೆ ಇದನ್ನೆಲ್ಲಾ ಮರೆಯುವುದು?

ನಿಜ ನನಗೂ ಹಾಗೇ ಅನ್ನಿಸುತ್ತೆ. ಈ ಮಾತ್ರೆಗಳು ಬಿಡ್ತೀನಿ ಅಂದ್ರೂ ಬಿಡಲಿಕ್ಕೆ ಆಗ್ತಾ ಇಲ್ಲ, ಬಿಡದಿದ್ದರೆ ಬೆಂಬತ್ತುತ್ತಿದೆ. ಯೋಗಿಗೆ ಮಾಯೆ ಯಾವ ರೀತಿಯಾಗಿ ಬೆಂಬಿಡುತ್ತೋ ಹಾಗೆ, ನನಗೆ ಈ ಮಾಯೆ ಒಂದಲ್ಲಾ ಎಲ್ಲಾ ತರಹದ ಮಾಯೆಯು ನನ್ನನ್ನೂ ಕಾಡಿಸ್ತಾ ಇದ್ಯೆಲ್ಲಾ ಏನು ಮಾಡ್ಲಿ? ಆದರೆ ಈ ಯಾವ ಮಾಯೆಗೂ ನಾನು ಅಂಜುವಳಲ್ಲ ಅಂತಾಳೆ ಅಕ್ಕಮಹಾದೇವಿ. ಚೆನ್ನಮಲ್ಲಿಕಾರ್ಜುನಾ ನಿಮ್ಮಾಣೆ ಎಂದು ಹೇಳುತ್ತಾಳೆ. ಆದರೆ ನಾನು ಅಷ್ಟು ಶರಣನೇ? ಮನುಷ್ಯ ಪ್ರಯತ್ನ ಮಾಡಿದ್ರೆ ಯಾವುದು ಸಾಧ್ಯವಿಲ್ಲ? ಪ್ರಯತ್ನ ಮಾಡಿ ಕೆಟ್ಟ ಚಟವನ್ನು ಬಿಡಬೇಕು ಅನ್ನಿಸುತ್ತೆ. ಆದ್ರೆ ಬಿಡಲಿಕ್ಕೆ ಮನಸ್ಸು ಸದ್ಯಕ್ಕೆ ಬರ್ತಾ ಇಲ್ಲಾ. ಈ ಹೊತ್ತು ಕೊನೆಯದಾಗಿ ಚನ್ನಾಗಿ ಯಾವು ಯಾವುದು ಬೇಕು ಎಲ್ಲವನ್ನೂ ತೆಗೆದುಕೊಂಡು ಬಿಟ್ರೆ ಹ್ಯಾಗೆ. (ನಗುವನು) ಅಮ್ಮನ ಹತ್ತಿರ ಹೋಗ್ತೀನಿ. ಹಣ ಕೇಳ್ತೀನಿ, ಬೇಕಾದ್ದನ್ನು ಸೇವಿಸಿ ಮುಗಿಸಿಬಿಡ್ತೀನಿ. ಆಮೇಲೆ ಸ್ನೇಹಿತರು ಬಂದು ಕೇಳಿದ್ರೆ ಹ್ಯಾಗೆ? ಬೇಡ ಅನ್ನುವುದು ಹ್ಯಾಗೆ? ಅದು ಮುಂದಿನ ಮಾತು, ಈಗ ನನ್ನ ಮನಸ್ಸಿಗೆ ತೃಪ್ತಿ ಆಗುವವರೆಗೆ ಬೇಕಾದುದನ್ನು ತೆಗೆದುಕೊಳ್ಳಲೇ ಬೇಕು.

(ಅಲ್ಲಿಂದ ಹೊರಡುವನು)

ದಿಲೀಪ್ : ಅಮ್ಮಾ ಇಂದಿಗೆ ರಜೆ ಮುಗೀತು. ನಾಳೆ ಕಾಲೇಜಿಗೆ ಹೋಗಬೇಕು ನಾನು ಬರ್ತೀನಮ್ಮ

ಜನ : ದಿಲೀಪ್ ಡಾಕ್ಟರ್ ಹೇಳಿದ್ದು ಜ್ಞಾಪಕ ಇದ್ಯಾ?

ದಿಲೀಪ್ : ನೀನು ಮಾಡಿದ ಆರೈಕೆಯೆಲ್ಲಾ ಜ್ಞಾಪಕ ಇದೆಯಮ್ಮ

ಬನ : ಏನೋ ನಿನ್ನ ಹಿತದೃಷ್ಟಿಯಿಂದ ದುಡುಕಿದೆ ಕಣೋ. ನೀನು ಆಗ್ಲೇ ಹೇಳ್ಬಿಟ್ಟಿದ್ದಿದ್ರೆ.

ದಿಲೀಪ್ : ಇಲ್ಲಾ ಹ್ಯಾಗೆ ಹೇಳೋದು ಅಂತ ಸುಮ್ಮನಿದ್ದೆ. ನೀನು ಕೊಡಿಸಿದ ಶಿಕ್ಷೆ ಅನುಭವಿಸಿದೆ. ಮತ್ತೊಂದು ರಜಕ್ಕೇನೂ ಮಾಡ್ಸೋಲ್ಲಾ ತಾನೇ?

ಬನ : ನೀನು ಈಗ್ಲಿಂದ ಅಂಥವನ್ನೆಲ್ಲಾ ಸೇವಿಸೋದ್ನ ಬಿಟ್ರೆ ಮಾಡ್ಸೋಲ್ಲ.

ದಿಲೀಪ್ : ದೊಡ್ಡವರು, ಡಾಕ್ಟ್ರು ಹೇಳಿದಮೇಲೆ ಅದರಲ್ಲೇನಿದೆಯಮ್ಮಾ ಎಲ್ಲಾನೂ ಮರೆತು ಬಿಡ್ತೀನಿ.

ಬನ : ಖಂಡಿತ.

ಪ್ರಸನ್ನ : ಇಲ್ಲಿ ಹಾಗೆ ಹೇಳ್ತಾನೆ ಆಮೇಲೆ ಅಲ್ಲಿಗೆ ಹೋದಮೇಲೆ.......

ದಿಲೀಪ್ : ಇಲ್ಲಮ್ಮ ನಿನ್ನಾಣೆಗೂ ಬಿಟ್ಟೇ ಬಿಡ್ತೀನಿ. ಮನಸ್ಸು ಬಿಗಿ ಹಿಡೀತೀನಿ ತೆಗೆದು ಕೊಳ್ಳಲಿಕ್ಕೆ ಎಷ್ಟು ಆಸೆಪಟ್ಟೋ ಮನಸ್ಸು ಮಾಡಿದ್ನೋ ಹಾಗೇ ಬಿಡೋದ್ಕೂ ಮನಸ್ಸು ಮಾಡ್ತೀನಿ.

ಪ್ರಸನ್ನ : ಸದ್ಯ ದೇವರು ಈಗ್ಲಾದ್ರೂ ಒಳ್ಳೆಬುದ್ಧಿ ಕೊಟ್ನಲ್ಲಾ. ಇನ್ನು ನಿಮ್ಮಮ್ಮನಿಗೂ ಒಳ್ಳೇ ಬುದ್ಧಿ ಕೊಡ್ತಾನೆ. ಮತ್ತೊಂದು ಸಾರಿ ಬಂದಾಗ ಯಾವ ಚಿತ್ರಹಿಂಸೆಯನ್ನೂ ಕೊಡ್ಸೋಲ್ಲಾ.

ಬನ : ಅಪ್ಪ... ಮಗ ಇಬ್ಬರೂ ತಮಾಷೆ ಮಾಡಿ.

ಪ್ರಸನ್ನ : ಈಗೆಲ್ಲಾ ತಮಾಷೇನೇ... ಮಾಡಿದ್ದೆಲ್ಲಾ ಸುಳ್ಳಾ.

ಬನ : ಆತ ಆಗ್ಲೇ ಹೀಗೆ ಅಂತ ಹೇಳಿದ್ರೆ ಯಾಕೆ ಹೀಗಾಗ್ತಿತ್ತು.

ಪ್ರಸನ್ನ : ಮಾಡ್ಡವ್ರು ಅಷ್ಟು ಬೇಗೆನೆ ತಪ್ಪು ಅಂತ ಒಪ್ಕೋಳ್ತಾರಾ? ದಂಡಂ ದಶಗುಣಂ... ಅದೇ ಸರಿ.

ಬನ : ಮಗು ಹೋಗ್ತಾನಂತೆ ಹಣ ಕೊಡಿ.

ಪ್ರಸನ್ನ : ಹೆಚ್ಚಿಗೆ ಕೊಡಬೇಕಾ...

ದಿಲೀಪ್ : ನಾನು ಹೆಚ್ಚಿಗೆ ತೆಗೆದುಕೊಂಡೂ ಹೋಗೋಲ್ಲಪ್ಪಾ.

ಪ್ರಸನ್ನ : ಒಳ್ಳೇದಪ್ಪಾ ಹೋಗಿ ಬಾ.

(ಎಂದು ಹಣ ಕೊಡುವರು. ಹೋರಡುವನು-ರಂಗ ಮಂಟಪ ಕತ್ತಲಾಗುವುದು.)

(ಅಂದು ಕಾಲೇಜಿಗೆ ಹೋಗುವಾಗ ದಿಲೀಪ್‌ಗೆ ದಾರಿಯಲ್ಲಿ ಷಾ ಸಿಗುತ್ತಾನೆ ಆಗ)

ಷಾ : ಹಲೋ... ದಿಲೀಪ್.

ದಿಲೀಪ್ : (ಸಪ್ಪೆಯಾಗಿ) ಹಲೋ...

ಷಾ : ಹ್ಯಾಗಿತ್ತಯ್ಯಾ ವೆಕೇಷನ್?

ಡಿಲೀಪ್ : ಅದೂ ಒಂದು ಪರೀಕ್ಷೆ ಇದ್ದ ಹಾಗೆ ಇತ್ತು.

ಷಾ : ಹಾಗಾದ್ರೆ ಎಂಜಾಯ್ ಮಾಡಲಿಲ್ಲ ಅನ್ನು...

ದಿಲೀಪ್ : ಅದೊಂದು ಥರ ಎಂಜಾಯ್‌ಮೆಂಟ್ ಸಿಕ್ತು ಅನ್ನು.

ಷಾ : ಏನು ಮರಿ ಸರ್ಕೇನಾದ್ರೂ ಇಟ್ಟಿದ್ದೀಯಾ...

ದಿಲೀಪ್ : ಏನು ಸರಕು ಬೇಕು?

ಷಾ : ಯಾವುದಾದ್ರೂ ದಂ ಮೇರೇ ದಂ...

ದಿಲೀಪ್ : ಸಾರೀ...

ಷಾ : ದಟ್ ಈಸ್ ಆಲ್‌ರೈಟ್ ಐ ವಿಲ್ ಬ್ರಿಂಗ್ ಇಟ್ ಡೋಂಟ್‌ವರೀ. ಎಲ್ಲಿರ್ತೀಯೇ?

ದಿಲೀಪ್ : ಇಲ್ಲೇ ಪಾರ್ಕಿನಲ್ಲೇ...

(ಪಾರ್ಕಿನಲ್ಲೇ ಕುಳಿತಿರಲು ಅಲ್ಲಿಗೆ ಸಂಗೀತ ಬರುತ್ತಾಳೆ.)

ಸಂಗೀತ : ಏನು ದಿಲೀಪ್ ಯಾವಾಗ ಬಂದ್ರಿ ಊರಿಂದ?

ದಿಲೀಪ್ : ನಿನ್ನೆ...

ಸಂಗೀತ : ಏಕೆ ಒಂದು ಥರ ಸಪ್ಪೆಯಾಗಿದ್ದೀರಿ?

ದಿಲೀಪ್ : ಏನಿಲ್ಲ.

ಸಂಗೀತ : ಬೆಳಗೆದ್ದು ಏನಾದ್ರೂ ತೆಗೆದುಕೊಂಡಿದ್ದೀರಾ ಹ್ಯಾಗೆ?

ದಿಲೀಪ್ : ಏನಿಲ್ಲ...

ಸಂಗೀತ : ಮತ್ತೆ ಮಂಕಾಗಿರಲು ಕಾರಣ?

ದಿಲೀಪ್ : ಹೀಗೆ ಮನುಷ್ಯ ಅಂದ ಮೇಲೆ ಇದ್ದೇ ಇರುತ್ತೆ.

ಸಂಗೀತ : ನೀವು ಹೀಗೆ ಕೂತಿರಿ, ನಾನು ಸ್ವಲ್ಪ ಹೊತ್ತಿನಲ್ಲೇ ಬರ್ತೀನಿ, ನಿಮಗೆ ಸಂತೋಷ ಕೊಡ್ತೀನಿ.

(ಸಂಗೀತ ಅಲ್ಲಿಂದ ಹೊರಡುವಳು.)

ಧ್ವನಿ : ಹೌದಲ್ವೇ ನಾನೆಷ್ಟು ಪರಿವರ್ತನೆ ಆಗ್ಬಿಟ್ಟೆ? ಹೈಸ್ಕೂಲಿನಲ್ಲಿ ಚಡ್ಡಿ ಹಾಕ್ಕೊಂಡು ಬಡತನದಲ್ಲಿ ಓದಿದ್ದು ನನಗೆ ಜ್ಞಾಪಕ ಇಲ್ವೇ? ಕಾಲೇಜು ಮೆಟ್ಟಲತ್ತಿದ್ದೆ ತಕ್ಷಣ ನನಗೇನು ಗ್ರಹಗತಿ ವಕ್ರಿಸ್ತು? ನಾನು ತಪ್ಪು ಮಾಡಿಬಿಟ್ಟೆ ಅಲ್ವೇ? ನಾನು ಸರಿಯಾದವರ ಸ್ನೇಹ ಮಾಡಲಿಲ್ಲ ಅಲ್ವೇ? ಮಾಡಿದ್ರೇನು ಬಂತು? ನಾನು ಕಟ್ಟುನಿಟ್ಟಾಗಿರಬಹುದಾಗಿತ್ತಲ್ಲ. "ಸಹವಾಸದಂತೆ ಬುದ್ಧಿ" ಅಂತ

ಅದ್ಕೇ ಹೇಳೋಲ್ವೇ? ಹಾಗೆ ನನ್ನ ಭಾಗಕ್ಕೆ ಅದು ಅಂಟಿಕೊಂಡು ಬಿಡ್ತು. ಬಿಟ್ಟನೆಂದರೂ ಬಿಡದು. ಇದೂ ಒಂದು ರೀತಿ ಮಾಯೆ. ಇದಕ್ಕೆ ತುಂಬಾ ಸಂಯಮ ಬೇಕು. ಡಾಕ್ಟರ್ ಹೇಳಿದ್ರು ನೀವು ಈಗ್ಲೇ ಬೇಕು. ಇನ್ನೂ ವೀಕಾದ್ರೆ ನಾನಾರೋಗಗಳಿಗೆ ಗುರಿಯಾಗಿ ನಿಮ್ಮ ಆರೋಗ್ಯವೇ ಕೆಟ್ಟು ಹೋಗುತ್ತೆ. ಇದರಿಂದ ನಿಮ್ಮನ್ನು ನೀವು ಆತ್ಮಹತ್ಯೆ ಮಾಡಿಕೊಂಡ ಹಾಗೆ ಆಗುತ್ತೆ ಅಂತ. ಪಾಪ ಅವರಿಗೇನು ಒಳ್ಳೆಯ ಉಪದೇಶವನ್ನೇ ನೀಡಿದರು. ನಮ್ಮ ತಂದೆ ತಾಯಿಯವರಿಗೆ ನನ್ನ ಶ್ರೇಯಸ್ಸು ಮುಖ್ಯವಲ್ವೇ? ಅದ್ಕೆ ತಾಯಿಯವರು ನಾನಾ ವಿಧವಾಗಿ ನನಗೆ ಚಿಕಿತ್ಸೆ ಕೊಡಿಸಿದ್ರು. ಅದೂ ಮೂಢನಂಬಿಕೇ ನಿಜವಾದ್ರೂ ನನ್ನ ಭಾಗಕ್ಕೆ ಬುದ್ಧಿ ಕಲಿತುಕೊಳ್ಳಕ್ಕೆ ಅದು ಸಹಾಯವಾಯ್ತು ಅಲ್ವೇ? ಈ ಹೊತ್ತಿನಿಂದ ಮನಸ್ಸು ಮಾಡ್ ಬಿಡ್ತೀನಿ. ಇವೆಲ್ಲಾ ಚಟಗಳನ್ನು ಬಿಡ್ದೇ ಹೋದ್ರೆ ನನಗೆ ಓದಲಿಕ್ಕಾಗೋಲ್ಲಾ, ಪಾಸು ಮಾಡಲಿಕ್ಕೇ ಆಗೋಲ್ಲ. ಆಮೇಲೆ ಅಲೆಮಾರಿಯಾಗಿ ಬೀದಿಬೀದಿ ಸುತ್ತಿಕೊಂಡು ಸಮಾಜದಲ್ಲಿ ಬೆಲೆ ಇಲ್ಲದ ವ್ಯಕ್ತಿಯಾಗ್ಬಿಡ್ತೀನಿ. ಅದ್ಕೆ ಈಗೇನು ಮಾಡಲಿ? ಇವರ ಸಹವಾಸಗಳನ್ನೇ ತೊರೆದರೆ? ಹಲ್ಲೋ ಅಂತಂದುಕೊಂಡಿದ್ದರಾಯಿತು. ಇದೇ ನನ್ನ ಕಡೆಯ ನಿರ್ಧಾರ. ಯಾರು ಬಂದರೂ ನನ್ನ ನಿರ್ಧಾರವನ್ನು ಬದಲಾಯಿಸೋಕೆ ಆಗೋಲ್ಲ.

(ಅಷ್ಟರಲ್ಲಿ ಷಾ ಒಂದು ಕಡೆಯಿಂದ ಬರುತ್ತಾ)

ಷಾ : ತಂದೆ ಮರಿ ಭಂಗಿಸೊಪ್ಪು.

(ಆ ಕಡೆಯಿಂದ ಸಂಗೀತ ಬರುತಾ)

ಸಂಗೀತ : ಓ... ಷಾ... ನೀವು ಬಂದಿದ್ದೀರಿ.

ಷಾ : ಬರೇ ಬಂದಿಲ್ಲ ತಂದಿದ್ದೀನಿ.

ಸಂಗೀತ : ನಾನೂ ತಂದಿದ್ದೀನಿ.

ಷಾ : ಬನ್ನಿ ಬನ್ನಿ ಕೊತ್ಕೊಳ್ಳಿ

(ಇಬ್ಬರೂ ಅವನ ಎರಡು ಕಡೆಯಲ್ಲೂ ಕುಳಿತುಕೊಳ್ಳುವರು)

ಷಾ : ತೆಗಿ ನಿನ್ನ ಪೈಪ್.

(ದಿಲೀಪ್ ಆತನನ್ನೇ ದುರುಗಟ್ಟಿ ನೋಡಲಾರಂಭಿಸಿದ ಮತ್ತೆ)

ಸಂಗೀತ : ಬೇಕಾದಷ್ಟು ತಂದಿದ್ದೀವಿ "ದಂ" ಎಳೆಯೋಣ ತೆಗೀರಿ ಪೈಪ್...

(ದಿಲೀಪ್ ಮತ್ತೆ ದುರುಗುಟ್ಟಿ ನೋಡುವನು)

ಷಾ : ನಿಂದ್ರಲ್ಲೇ ಹಾಕು ಅದನ್ನೇ ಎಳೆದ್ರಾಯ್ತು

(ಎಲ್ಲವನ್ನೂ ಅಣಿ ಮಾಡಿ ತಾನೊಂದು ದಮ್ಮು ಎಳೆಯುವನು. ದಿಲೀಪ್ ಹತ್ತಿರ ಓಡಿಯಲು)

ದಿಲೀಪ್ : ಥ್ಯಾಂಕ್ಯೂ.

ಸಂಗೀತ. : ಯಾವಾಗ್ನಿಂದ ಬಿಟ್ಟೆ?

ದಿಲೀಪ್ : ಅತಿಯಾದಂದಿನಿಂದ.

ಸಂಗೀತ : ಮಿತಿಯಾಗಿ ತೆಗೆದುಕೋ.

ದಿಲೀಪ್ : ಥ್ಯಾಂಕ್ಯೂ...

(ದಿಲೀಪ್ ಮೇಲೆದ್ದು)

ದಿಲೀಪ್ : ಓ ಕೇ.. ಸೀಯೂ

(ಅಲ್ಲಿಂದ ಹೆಜ್ಜೆ ಇಟ್ಟ. ಇಬ್ಬರೂ ಆತನನ್ನೇ ನೋಡುತ್ತಾ ಕುಳಿತುಕೊಳ್ಳುವರು.)

ಷಾ : ಮಿಕ್ಕಷ್ಟು ನಮಗೇ ಲಾಭ.. ನಾವಿಬ್ರೇ ಸಂತೋಷಪಡೋಣ.

('ವಂ' ಎಳೆಯುತ್ತಾ ನಗುತ್ತಾ ಹಾಗೆಯೇ ಕಾದಂಬರಿ ಹಿಡಿದು ಮಲಗುವರು. ರಂಗ ಮಂಟಪ ಕತ್ತಲಾಗುವುದು.)

*

# ನಂದನವನ

**ಪಾತ್ರ ವರ್ಗ**

೧. ಮಾರಣ್ಣ-ಜಿಲ್ಲಾಧಿಕಾರಿ ೨. ಬೋರಣ್ಣ-ಡಾಕ್ಟರ್ ೩. ಜುಂಜಪ್ಪ-ಪಂಚಾಯಿತಿ ಅಧ್ಯಕ್ಷ ೪. ಮಾದ-ಜುಂಜಪ್ಪನ ಮನೆ ಆಳು ೫. ರಾಜಣ್ಣ-ಗ್ರಾಮಸೇವಕ ೬. ಅಪ್ಪಣ್ಣ-ಊರಿನ ಕೇಡಿ ೭. ರೇವಣ್ಣ-ಮಾಸ್ತರ್

## ದೃಶ್ಯ-೧

(ಮಾರಣ್ಣ ಬೋರಣ್ಣ ಇಬ್ಬರೂ ಮೂಗು ಹಿಡಿದುಕೊಂಡು ಬಂದು ಜುಂಜಪ್ಪನ ಮನೆಯ ಮುಂದುಗಡೆ ನಿಂತು ಪಕಪಕನೆ ನಗಲಾರಂಭಿಸುವರು. ಸಂಪಿಗೆ ಹೂವನ್ನು ಮೂಸುತ್ತಾ ಬಂದು ಇಬ್ಬರನ್ನು ನೋಡಿ)

ಜುಂಜಪ್ಪ: ಯಾವಾಗ ಬಂದ್ರಿ?

(ಮಾರಣ್ಣ ಬೋರಣ್ಣ ಮತ್ತೆ ಮುಖವನ್ನು ಒಂದುಥರ ಮಾಡಿ ಅಸಹ್ಯದೊಡನೆ ನಗುತ್ತಿರಲು)

ಅಲ್ಲಾ..... ಮೂಗು ಮಚ್ಕೊಂಡು ಸಂಪಿಗೆ ಹೂವು ಮೂಸಿಕೊಂಡು ನಗುಗುವಂಥದ್ದನ್ನು ಏನು ಕಂಡ್ರೀ ಅಂತ?"

(ಕೈಬಿಟ್ಟು ಬೋರ)

ಬೋರಣ್ಣ: ಸಧ್ಯ ಮೂಗು, ಜುಂಜಪ್ಪನವರ ಸಂಪಿಗೆ ಹೂ ಘಮ ಘಮ ಅನ್ನೈತೆ.

ಜುಂಜಪ್ಪ: ಹಾಗಾದ್ರೆ ಅಷ್ಟು ಹೊತ್ತಿನಿಂದ...

ಮಾರಣ್ಣ : ಹಾಗಾದರೆ ಬಿಡು ಅನ್ತೀರಾ?

ಬೋರಣ್ಣ: ಬಿಡಿ ಬಿಡಿ.

(ಇಬ್ಬರೂ ಕೈ ಬಿಡುವರು)

ಮಾರಣ್ಣ : ಜುಂಜಪ್ಪನವರೇ ನಮಗೇನು ಅವಮಾನ ಮಾಡಬೇಕು ಅಂತಾ ನಿಮ್ಮೂರಿಗೆ ಆಹ್ವಾನ ಕೊಟ್ರೋ ಹೇಗೆ?

ಬೋರಣ್ಣ: ಸುವಾಸನೆ... ನೋಡ್ಲೀ ಅಂತ.

ಜುಂಜಪ್ಪ: ಏನು ಸುತ್ತಿ ಬಳ್ಸಿ ಮಾತಾಡ್ತಿದ್ದಿರಿ.... ಅದೇನು ಹೇಳಿ.

ಮಾರಣ್ಣ : ನಿಮ್ಮೂರ್ರ ಜನಗಳು, ಬೇರೆ ಊರಿಂದ ಜನಗಳು ಬರಬಾರ್ದು ಅಂತ್ಲೇ, ಈ ಜಾಣ್ತನ ಮಾಡ್ಕಂಡಿದ್ದಿರೋ ಹ್ಯಾಗೆ? ಜುಂಜಪ್ಪನವ್ರೇ.

ಜುಂಜಪ್ಪ : ಅದೇನು ಅಂಗಂದ್ರೆ?

ಬೋರಣ್ಣ: ಮಾರಾಯರೇ ನೀವು ಊರಿನ ಪಂಚಾಯ್ತಿ ಚೇರ್ಮನ್ನು.

ಜುಂಜಪ್ಪ : ಇಲ್ಲ ಅಂದವ್ರ್ಯಾರು?

ಬೋರಣ್ಣ: ನಿಮಗೆ ನಾಚ್ಕೆ ಆಗಾಕಿಲ್ವಾ?

ಜುಂಜಪ್ಪ : ನಾನೇನು ಅಂಥದ್ದು ಮಾಡಿರಾದು?

ಮಾರಣ್ಣ : ನೀವಲ್ಲ ನಿಮ್ಮೂರ್ರ್ನ ಜನ ಅಂತೀನಿ.

ಬೋರಣ್ಣ: ನಾನ್ಹೇಳ್ತೀನಿ ಕೇಳಿ, ಅಲ್ಲಾ ಜುಂಜಪ್ಪನವರೆ ಜನಗಳು ಊರಿಗೆ ಅತಿಥಿಗಳು ಬಂದ್ರೆ ಮಾವಿನ ಚಿಗುರಿನ ತೋರಣ ಹೂವು ಗಂಧ ಹಿಡಿದು ಸ್ವಾಗತ ಮಾಡ್ತಾರೆ. ಆದ್ರೆ ನಿಮ್ಮೂರ್ರಲ್ಲಿ...

ಜುಂಜಪ್ಪ : ಅದು ಮಾಡ್ಲಿಲ್ಲಾ ಅಂತ್ಲಾ.

ಮಾರಣ್ಣ : ಬರಗಾಲದಲ್ಲಿ ಯಾಕೆ ಊರಿಗೆ ಬರ್ತೀವಿ. ಹಿಂತಿರುಗಿ ನಿಮ್ಮೂರ್ರಿಗೇ ಹೋಗಿ ಅಂತ ಸುವಾಸನೆ ಕೊಟ್ಟಿದ್ದಾರೆ.

ಜುಂಜಪ್ಪ : ಯಾಕೆ ಸುಮ್ಮನೇ ಪ್ರಾಣ ತಿನ್ತೀರಿ, ನೀವು ಬರೋದು ಯಾವತ್ತು ಅಂತ ಒಂದು ಕಾಗದ ಹಾಕಿದ್ರೆ ಯಾಕೆ ಹೀಗಾಗ್ತಿತ್ತು? ಕೂತ್ಕೊಳ್ಳಿ.

(ಎಂದು ಕುರ್ಚಿ ತೋರಲು ಇಬ್ಬರೂ ಕುಳಿತುಕೊಳ್ಳುವರು)

ಬೋರಣ್ಣ: ಕಾಗದದ ಪ್ರಶ್ನೆ ಅಲ್ಲ ಜುಂಜಪ್ಪ. ನಿಮ್ಮನ್ನ ಈ ಊರಿನ ಛೇರ್ಮನ್ ಮಾಡವ್ರಲ್ಲಾ ಅವರಿಗೆ ಬುದ್ಧಿ ಇಲ್ಲ ಅಷ್ಟೇ.

ಮಾರಣ್ಣ : ಬುದ್ಧಿ ಇಲ್ದೇ ಹೋದದ್ಕೆ ತಾನೇ ಅವರು ಹೀಗ್ಮಾಡಿದ್ದಾರೆ.

ಜುಂಜಪ್ಪ : ಅದೇನೇನು ಮಾತಾಡ್ತೀರೋ ಮಾತಾಡಪ್ಪ.

ಬೋರಣ್ಣ: ಮಾತಾಡಕಲ್ಲ ಬಂದಿರೋದು.

ಮಾರಣ್ಣ : ನಿಮಗೆ ನಿಮ್ಮೂರ್ರ ವರ್ಣನೆ ಮಾಡ್ಲಿಕ್ಕೆ ಬಂದಿರೋದು.

ಜುಂಜಪ್ಪ : ಬರೇ ಮಾತು, ವರ್ಣನೆ ಮಾಡೋದ್ರಲ್ಲೇ ಹೊಟ್ಟೆ ತುಂಬಿಸ್ಕೊಳ್ತೀರೋ!

ಮಾರಣ್ಣ : ಸದ್ಯ ಅದೇ ಹೇಳಿದ್ನಲ್ಲ ನಿಮ್ಮೂರ್ರ ದ್ವಾರ ದಾಟ್ತಾ ಇದ್ರೆ ಸಾಕಪ್ಪ, ವಾಂತಿ ಬರುವ ಹಾಗಾಗ್ತದೆ.

ಜುಂಜಪ್ಪ : ಏನು ಹೇಳ್ತೀರಿ ಅನ್ನೋದು ನಂಗೊತ್ತಾಯ್ತು. ಏನ್ಮಾಡ್ಲಿ ಹೇಳಿ ಅದೇ, "ಈ ಜಾಗದಲ್ಲಿ ಹೇಸಿಗೆ ಮಾಡುವವರನ್ನು ಶಿಕ್ಷೆಗೆ ಗುರಿಪಡಿಸಲಾಗುವುದು"

ಅಂತ ಬರೆಸಿವ್ನಲ್ಲಪ್ಪಾ ಯಮಶಾಸನ, ಅದರ ಕೆಳಗೇನೇ ಸರಿಯಾಗಿ ಮಾಡವ್ರೆ.. ನೋಡ್ನಿಲ್ವಾ?

ಮಾರಣ್ಣ : ನೋಡ್ದೆ... ಅಲ್ಲಾ ಛೇರ್‌ಮನ್ ಜುಂಜಪ್ಪನ ಊರು ಅಂದೆ. ಶುದ್ಧವಾಗಿರಬೇಡ್ವೇ?

ಜುಂಜಪ್ಪ : ನೀವು ಹೇಳೋದು ಸರಿ. ಊರಿನ ಒಂದು ಕಡೆಯಿಂದ ದಿವ್ನಾ ನಾನು ಗುಡಿಸಲಕ್ಕೆ ಶುರುಮಾಡ್ಬೇಕು ಅನ್ನು.

ಮಾರಣ್ಣ : ನೀವು ಮಾಡೋದು ಬ್ಯಾಡ, ಮಾಡುವವವರ ಹತ್ತಿರವಾದ್ರೂ ಮಾಡಿಸೋದು ಬ್ಯಾಡ್ವೆ?

ಬೋರಣ್ಣ : ನೀವೇ ಮಾಡಿದ್ರೂ ತಪ್ಪಿಲ್ಲ, ಹಿಂದೆ ಮಹಾತ್ಮಾಗಾಂಧಿಯವರು ಹೀಗೆ ಮಾಡ್ತಿದ್ದಾಗ ಹಳ್ಳಿ ಜನಗಳು ಅವರೇ ಪೊರಕೆ ತೆಗೆದುಕೊಂಡು ಗುಡಿಸಕೆ ಶುರು ಮಾಡಿದ್ರು, ಸರಿ ಆ ಹೊತ್ತಿನಿಂದ ಆ ಊರ ಜನ ಎಚ್ಚೆತ್ತುಕೊಂಡು ಯಾವ ಸ್ಥಳದಲ್ಲಿ ಮಾಡಬೇಕು ಅನ್ನೋದನ್ನು ಅಂತು ಮಾಡ್ಲಿಕ್ಕೆ ಶುರು ಮಾಡಿದ್ರು.

ಜುಂಜಪ್ಪ : ನನ್ನನ್ನು ಏನೇನು ಜರೀತೀರೋ ಜರೀರಪ್ಪಾ.

ಮಾರಣ : ಜರ್‍ಯೋ ವಿಷಯ ಅಲ್ಲ, ಊರಿನಲ್ಲಿ ಡಂಗೂರ ಸಾರಿಸಲಿ. ಯಾರು ರಸ್ತೆ ಇಬ್ಬದೀಲಿ ಮಲಮೂತ್ರ ವಿಸರ್ಜನೆ ಮಾಡ್ತೋರಿಗೆ ಫೈನ್ ಹಾಕ್ತೀವಿ ಅಂತ. ಒಂದು ನಾಲ್ಕು ಜನಕ್ಕೆ ಮಾಡಿ. ಆಮೇಲೆ ಅದೇ ಸರಿಹೋಗ್ತದೆ.

ಜುಂಜಪ್ಪ : ಈ ಕೆಲಸ ಬೆಳಗ್ಗೆ ಏನಾದ್ರೂ ಕಂಡ್ರೆ ಫೈನ್ ಹಾಕಬಹುದು. ಆದ್ರೆ ಅವರು ಬೆಳಕು ಹರಿಯದ್ಕುಮುಂಚೆ ಮಾಡಿಬಿಟ್ಟು ಹೊರಟುಹೋಗ್ತಾರಲ್ಲ ಅದ್ಕೇನು ಮಾಡೋದು.

ಬೋರಣ್ಣ : ಪ್ರತಿಯೊಬ್ಬರೂ ಮನೆಯಲ್ಲಿ ಫ್ಲೆಷ್‌ಔಟ್ ಕಕ್ಕಸ್ ಮಾಡಿಸಿದರೆ 'ಮಲ ಹೊರುವ' ಪದ್ಧತಿಯೂ ಹೋಗುತ್ತಲ್ಲ.

ಮಾರಣ್ಣ : ಎಲ್ಲರ ಮಲವನ್ನು ಹೊರುವುದು ಅಂದ್ರೇನಯ್ಯಾ, ಛೇ ಪಾಕಿಜನ ಸಿಬ್ಬಂದಿ (ಜಲಗಾರರು) ಅಂದ್ರೆ ಮನುಷ್ಯರಲ್ವೇ?

ಜುಂಜಪ್ಪ : ಏನು ನೀನು ಮಾತಾಡ್ತಾ ಇರೋದು. ಇದು ಪಟ್ಟಣ ಕೆಟ್ಟುಹೋಯ್ತೇ ಹಾಗೆ ಮಾಡಲಿಕ್ಕೆ. ಹೋಗ್ಲಿ ಹಳ್ಳಿಲಿರೋ ಜನಗಳ ಹತ್ತಿರ ಅಂಥ ಕಕ್ಕಸ್ ಮಾಡ್ಸಲಿಕ್ಕೆ ತಾನೆ ದುಡ್ಡು ಇದೆಯ? ಬಹಳ ಕಷ್ಟವಾಗುತ್ತೆ. ಏನಿಲ್ಲ ಅಂದ್ರೂ ೬೦೦ರಿಂದ ೧೦೦೦ರೂಪಾಯಿ ಬೇಕು, ಅಲ್ಲದೇ ಈಗ ಸಿಮೆಂಟನ ಅಭಾವ ಬೇರೆ.

ಬೋರಣ್ಣ: ಹೋಗ್ಲಿ ದೊಡ್ಡದಾಗಿ ಗುಂಡಿ ತೋಡಿ ಸಿಮೆಂಟ್‌ನಲ್ಲಿ ಕಟ್ಟಿ ಪ್ರತಿಯೊಬ್ರೂ ಅವರವರ ಮನೆಯಲ್ಲಿ (ಬೋರ್‌ಹೋಲ್ ಕಕ್ಕಸ್) ಮಾಡ್ಸಿದ್ರೆ ಈ ಅವ್ಯವಸ್ಥೆ ನಿಲ್ಲಿಸಬಹುದು. ಇದಕ್ಕೇನೂ ಅಂಥ ಕಷ್ಟವಾಗೋಲ್ಲ.

ಜಂಜಪ್ಪ : ಈಗ ರೂಲ್ಸ್ ಆಗ್ತಾ ಇದೆ ಅದ್ಕೇ ಜನರು ಅವರವರ ಹಿತ್ತಲಲ್ಲೇ ಮಾಡಿಕೊಳ್ತಾನೆ ಇದ್ದಾರೆ. ಈಗ ಈ ಕಷ್ಟ ಹಿತ್ತಲಿಲ್ಲದವರಿಗೆ, ಏನು ಮಾಡೋದು? ಇನ್ನೂ ತಮ್ಮ ಕೊಟ್ಟಿಗೆ ಗೊಬ್ಬರ ಹಾಕುವ ಗುಂಡಿಯಲ್ಲೇ ಕಕ್ಕಸ್ ಮಾಡ್ಕೊತಾರೆ.

ಬೋರಣ್ಣ: ಅದು ಒಂದು ಒಳ್ಳೆ ಉಪಾಯವೇ ಒಳ್ಳೇ ಗೊಬ್ಬರ ಆದಾಗಾಗುತ್ತೆ.

ಜುಂಜಪ್ಪ: ನೀವು ಹಾಗೇಳ್ತೀರಿ, ಎಷ್ಟೋ ಜನರಿಗೆ ಮನೇಗೇ ದಿಕ್ಕಿಲ್ಲ ಗುಡಿಸಿಲಿಗೆ ಜಾಗ ಇಲ್ಲ.

ಬೋರಣ್ಣ: ಅದ್ಕೇ ಅಂಥವ್ರು ಹೊಲಕ್ಕೆ ಹೋಗ್ತಾರೆ.

ಜುಂಜಪ್ಪ: ಎಲ್ಲಾ ಹೆಂಗಸರು ಮಕ್ಕಳು ಹೋಗ್ಲಿಕ್ಕಾಗುತ್ತೇ? ಏನ್ಮಾಡೋದು?

ಬೊರಣ್ಣ : ಇರೋ ಜಾಗದಲ್ಲೇ ಈ ಸೌಕರ್ಯ ಮಾಡಿಕೊಳ್ಳಬೇಕು. ಇಲ್ಲದೆ ಹೋದ್ರೆ ಹ್ಯಾಗೆ. ಬೀದಿಲಿ ಹೆಂಗಸರು ಕೂತು ಮಾಡಿದ್ರೆ ಚೆನ್ನಾಗಿರುತ್ತಾ!

ಜುಂಜಪ್ಪ: ಇಲ್ಲ.

ಬೋರಣ್ಣ: ಅದ್ಕೇ..... ಹೇಳೋದು ತಂದೆ ತಾಯಿ ಕಲಿಸುಕೊಟ್ಟದ್ದೇ ಅಲ್ವೇ ಮಕ್ಕಳಿಗೆ ಬರೋದು. ಒಳ್ಳೆ ಪ್ರಜೆ ಮಾಡೋ ತಂದೆ ತಾಯಿಗಳೇ ಆದರ್ಶವಾಗದಿದ್ದರೆ ಅವರ ಮಕ್ಕಳು ಹೇಗಾಗಬಹುದು ಹೇಳಿ.

ಜುಂಜಪ್ಪ: ಇಲ್ಲ ಇನ್ನು ಸ್ವಲ್ಪ ದಿನಗಳಲ್ಲಿ ಸರಿಹೋಗುತ್ತೆ. ದಿಡೀರ್ನೆ ಆಗ್ಲಿ ಅಂದ್ರೆ ಆಗೊಲ್ಲ. ಅದು ಹಂತ ಹಂತವಾಗಿ ಆಗಬೇಕು. ಈಗ ಬರೇ ಮಾತಾಡಿ ಬಾಯೋಣ-ಗಿಸ್ಕೊಳ್ತೀರೋ? ಅಥವಾ...

ರಾಜಿ : ಇಲ್ಲ ಬಾಯಿ ಒಣಗಿರೋದ್ಕೆ ತಂದಿವ್ನಿ ಕಾಫಿ...

ಜುಂಜಪ್ಪ: ಬರೀ ಕಾಫಿ...

ರಾಜಿ : ಈಗ ಕಾಫಿ ಕುಡಿದು ಇನ್ನೇನಾದ್ರೂ ಮಾತಿದ್ರೆ ಆಡಿ. ಆಮೇಲೆ ಹೊಟ್ಟೇ ಪೂರ್ತಿ ಹಸಿತಿರುತ್ತೆ ಅಡಿಗೆ ಮಾಡಿದ ಮೇಲೆ ಕರೀತೀನಿ...

ಜಂಜಪ್ಪ : ಮೊದ್ಲು ಎಮ್ಮೆ ಕರಿ, ಆಮೇಲೆ ನಮ್ಮನ್ನು ಕರೆಯುವಂತೆ.

ರಾಜಿ : ಅದು ನಂಗೂ ಗೊತ್ತು.

(ಎಂದು ಹೊರಡುವಳು. ಎಲ್ಲರೂ ಕಾಫಿಯನ್ನು ಕುಡಿದು ಮತ್ತೆ ಮಾತಾಡಲು ಆರಂಭಿಸುವರು)

ಜುಂಜಪ್ಪ: ಹ್ಯಾಗಾದ್ರೂ ಇಬ್ಬರು ದೊಡ್ಡ ಕವಿಗಳು,ವಾಗ್ಮಿಗಳು ಬಂದಿದ್ದೀರಿ ಭಾಷಣ ಮಾಡಲಿಕ್ಕೆ ನಮ್ಮೂರ್ ಪಂಚಾಯ್ತಿಯ ಆಫೀಸ್ನ ಮುಂದೆ ಸಾಯಂಕಾಲ ಮಾಡುವಿರಂತೆ.

ಮಾರಣ್ಣ : ಭಾಷಣ ಮಾಡಿದ್ರಲ್ಲ; ಕಾರ್ಯತಹ ಏನಾದ್ರೂ ಮಾಡಿದ್ರೆ ಸರಿ ಜುಂಜಪ್ಪನವರೇ.

ಜುಂಜಪ್ಪ: ಕಾರ್ಯತಹ ಆಗಬೇಕಾದ್ರೆ ಜನಗಳಿಗೆ, ಅದರಲ್ಲೂ ಹಳ್ಳಿಯ ಜನಗಳಿಗೆ ತಿಳಿವಳಿಕೆ ಕೊಟ್ರೇತಾನೇ ಅವರು ಎಚ್ಚತ್ತುಕೊಂಡು ಸರಿಯಾಗಿ ನಡಕೊಳ್ತಾರೆ ಹೇಳಿ.

ಬೋರಣ್ಣ: ಊಂ... ನೋಡೋಣ ಕಾಫಿ ಕುಡೀರಿ ಆರಿಹೋಗುತ್ತೆ.

ಜುಂಜಪ್ಪ: ಹೌದಲ್ವೇ...

ಮಾರಣ್ಣ : ಹೌದೌದು ತಣ್ಣಗಾಗೇಹೋಗಿದೆ. ಪರ್ವಾಗಿಲ್ಲ ದೇಹಕ್ಕೆ ತಂಪು ಕುಡೀರೀ ಕುಡೀರಿ ಸಿಟೀನಲ್ಲಿ ಕೋಲ್ಡ್‌ಕಾಫಿ ಅಂತಾರಲ್ಲಾ ಅದು ಕುಡೀರಿ... ಕುಡೀರಿ ನಾಚ್ಕೆ ಏಕೆ... ಬೋರಣ್ಣನವರೇ ಜುಂಜಣ್ಣನವರೇ ಸಾರ್ಲಿ...

(ಮೂವರು ನಗುತ್ತ ಕುಡಿಯುವರು)

(ಅಷ್ಟರಲ್ಲಿ 'ಮಾದ' ಮನೆಯ ಆಳು ಬಂದು)

ಮಾದ : ಬುದ್ಯೋ...

ಜುಂಜಪ್ಪ: ಏನ್ಲ ಮಾದ... ಎಲ್ಲಾ ಆಯ್ತ ಕೆಲ್ಸ...

ಮಾದ : ಊಂ.

ಜುಂಜಪ್ಪ: ಏನು?

ಮಾದ : ನಾಳಾಕೆ ಮಾದಪ್ಪನ ಜಾತ್ರೆ. ವಸಿ... ಸ್ತಾನ ಗೀನ ಮಾಡ್ಕೊಂಡು ಬಟ್ಟೆ ಕುಕ್ಕೊಂಡು ಮಾದಯ್ಯನ ಗಿರಿಗೋಗ್ಬೇಕು ಬುದ್ಧೀ...

ಬೋರಣ್ಣ: ಮಾದ ಸ್ನಾನ ಅಂದ್ಯಲ್ಲಾ ನೀನು ಎಷ್ಟು ದಿವಸಕ್ಕೊಂದುಸಾರಿ ಸ್ನಾನ ಮಾಡೋದು?

ಮಾದ : (ಅಮ್... ಅಂತ ತಲೆ ಕೆರೆಯುತ್ತಾ) ಇಂಗೆ ಹಬ್ಬ ಹರಿದಿನಗಳಾಗೆ ಸ್ನಾನ ಮಾಡ್ಕಂಡು, ಬಟ್ಟೆ ಕುಕ್ಕತೀನಿ. ಮಿಕ್ಕ ದಿನ ಅಂಗೆ ಹಲ್ಲು ತಿಕ್ಕಂಡು ಮೊಕ ತೊಳ್ಕತೀನಿ ಬುದ್ದಿ.

ಬೋರಣ್ಣ: ದಿನಾ ಸ್ನಾನ ಮಾಡಕ್ಕೇನು ನಿಂಗೆ ಆಗಾಕಿಲ್ವ?

ಮಾದ : ಅದ್ಕೆ ಸಾಬೂನು, ಸೌದೆ ಎಲ್ಲಾ ಇರ್ಬೇಕಲ್ಲಾ ಬುದ್ಧಿ.

ಬೋರಣ್ಣ: ಅಲ್ಲಾ ಕಣ್ಲಾ. ದೇವರು ಬಡ್ತನ ಏನೋ ಕೊಟ್ಟವ್ನೆ ಅಂದ್ರೆ ಕೊಳಕುತನ ಕೊಟ್ಟವ್ನಾ. (ಹಾಗೆ ಅವನ ಜೇಬಿನ ಕಡೆ ದಿಟ್ಟಿಸಿ ನೋಡಿ ಅದ್ಯಾನ್ಲಾ ಜೋಬ್ನಾಗೆ?

ಮಾದ : (ತಲೆ ಕೆರೆಯುತ್ತಾ)... ಬೀ... ಬೀ... ಡಿ... ಕಡ್ಡಿಪೆಟ್ಟಿ ನನ್ನೊಡ್ಯ.

ಬೋರಣ್ಣ: ಬೀಡಿಗೆಷ್ಟು? ಕಡ್ಡಿ ಪೆಟ್ಟಿಗೆಷ್ಟು?

ಮಾದ : ಇದಕ್ಕೆ (ತೋರುತ್ತಾ) ಮೂವತ್ತು ಪೈಸೆ, ಇದಕ್ಕೆ ಹತ್ತುಪೈಸೆ.

ಬೋರಣ್ಣ: ಒಟ್ಟು ನಲವತ್ತು ಪೈಸೆ.. ಬೀಡಿ ಸೇದೊದ್ಬಿಟ್ಟು ಸೋಪು ತಕ್ಕೊಂಡು ಸ್ನಾನ ಮಾಡಿದ್ರೆ ಒಂದು ವಾರ ಮಾಡ್ಬೋದು. ಒಂದು ತಿಂಗಳು ನೀನು ಖರ್ಚು ಮಾಡೋದ್ರಲ್ಲಿ ಸ್ನಾನ, ಬಟ್ಟೆ ಶುದ್ಧಿಯನ್ನು ಒಂದು ತಿಂಗಳು ಮಾಡಬಹುದು. ಈ ಕೆಟ್ಟ ಬುದ್ದಿ ಬಿಟ್ಟು ಈ ಶುದ್ಧತೆಯ, ನೈರ್ಮಲ್ಯದ ಕಡೆಗೇಕೆ ಗಮನ ವಹಿಸಬಾರದು? ಅದ್ರಿಂದ ದೇಹಕ್ಕೂ ಒಳ್ಳೇದು ಕೆಟ್ಟ ಹವ್ಯಾಸವೂ ತೊಲಗುತ್ತೆ.

ಮಾದ : ಹ್ಲುಂಕಣ್ ಬುದ್ಧಿ ನೀವು ಏಳಾದೂ ದಿಟ ಅನ್ನಿಸ್ತೈತೆ.

ಬೋರಣ್ಣ: ನೀ ಶುದ್ಧವಾಗಿ ಶುಭ್ರವಾಗಿದ್ರೆಲ್ವಾ ನಿನ್ನ ಬುದ್ಧಿ ಮನೆ ಚೆನ್ನಾಗಿರೋದು. ಪ್ರತಿಯೊಬ್ಬನ ನೈರ್ಮಲ್ಯವೇ ಗ್ರಾಮದ ನೈರ್ಮಲ್ಯ. ಗ್ರಾಮದ ನೈರ್ಮಲ್ಯವೇ ಪ್ರತಿ ಗ್ರಾಮವಾಸಿಯ ನೈರ್ಮಲ್ಯದ ಪ್ರತೀಕ. ಹಾಗಾದ್ರೆ ತಾನೇ ಎಲ್ಲರೂ ಆರೋಗ್ಯವಾಗಿರೋದು. ಹೀಗೆಲ್ಲಾ ಇದ್ರೆ ರೋಗ ರುಜಿನಗಳಿಗೆ ತುತ್ತಾಗೋದು ಖಂಡಿತ ಕಣೋ ಜೋಪಾನ. ಆದಾರೂ ಹೋಗ್ಲಿ ಪೌಷ್ಟಿಕ ಆಹಾರನಾದ್ರೂ ಸೇವನೆ ಮಾಡ್ತೀಯ. ಅದೂ ಇಲ್ಲ ಅಂತ ಕಾಣುತ್ತೆ.

ಮಾದ : ಸಥ್ಯ ನೀವ್ಯಾಳೋದು ಸರಿಕಣ್ ಬಿಡಿ ಬುದ್ಧಿ. ಏನೋ ಗಾದಿಯೇಳ್ತಾರಲ್ಲ ಅಂಗೆ."ವೊಟ್ಟೆಗಿಟ್ಟಿಲ್ಲಾ ಜುಟ್ಟಿಗೆ ಮಲ್ಗೆಹೂವ ಅಂತ." ವೊಟ್ಟೆ ತ್ಯಾವಾಗೋವಾಗ ಏಡೊತ್ತು ಏಡು ಮುದ್ದೆ ಸಿಕ್ಕಿದ್ರೆ ಸಾಕು.

ಬೋರಣ: ನೋಡ್ವಾ. ಸರಿಯಾದ ಪೌಷ್ಟಿಕ ಆಹಾರ ತೆಗೆದುಕೊಳ್ದೇ ಆರೋಗ್ಯಕ್ಕೂ ಕುಂದು ಬರುತ್ತದೆ. ಹಾಲು, ಮೊಸರು, ಬೆಣ್ಣೆ, ತರಕಾರಿ, ಹಣ್ಣು ಹಂಪಲು ಸೇವಿಸಬೇಕು.

ಮಾದ : ಅದೂ ಸರಿ ಬುಡಿ. ಊರ್ನಾಗೆ ಮಕ್ಕಳು ಬಾಣ್ತೇರ್ಗೆ ಹಾಲು ಸಾಲೋಲ್ಲ. ಇನ್ನು ನಾವ್ಯಾನ ಕುಡ್ಯೋದ, ಎಲ್ಲಾ ವೋಟ್ಲಿಗೆವೊಂಟಾಯ್ತದೆ ಹಾಲು.

ಬೋರಣ್ಣ: ಈ ನಮ್ಮದೇಶದಾಗೆ ಈ ಸರಿಯಾದ ಆಹಾರ ತೆಗೆದುಕೊಳ್ದೇ ಹೋಗೋದ್ಕೆ, ಅಲ್ಪಾಹಾರದಿಂದ ಹುಟ್ಟಿನಿಂದ ಸಾಯುವವರೆಗೂ ತೆಗೆದುಕೊಳ್ಳುವುದರಿಂದ ಅಶಕ್ತರಾಗುವುರು, ಆರೋಗ್ಯಹೀನರಾಗಿ ರೋಗ ರುಜಿನಗಳಿಗೆ ತಾವು ತುತ್ತಾಗುವುದಲ್ಲದೆ ಇಡೀ ಗ್ರಾಮದ ಆರೋಗ್ಯವನ್ನೇ ಕೆಡಿಸಲು ಕಾರಣರಾಗುತ್ತಾರೆ. ಬಹಳ ಹಿಂದೆ ಸರ್ ಜಾನ್ ಮೆಗಾ ಎಂಬ ಪ್ರಸಿದ್ಧ ವೈದ್ಯರು ನಮ್ಮ ಹಳ್ಳಿಗಳಲ್ಲಿ ಅನೇಕ ಮಂದಿಗೆ ಪೌಷ್ಟಿಕ ಆಹಾರಂಶದ ಕೊರತೆ

ಇದೆ. ಪ್ರೋಟೀನು, ಕೊಬ್ಬು, ವಿಟಮಿನ್‌ಗಳ ಆಹಾರ ಬಹಳ ಕಡಿಮೆ. ಆದ್ದರಿಂದ ಯಾವ ವ್ಯಾಧಿಯೂ ಆರಂಭ ಆಗಿ ಕಾಡ್ಗಿಚ್ಚಿನಂತೆ ಹರಡುತ್ತೆ ಅಂತ ಅಂದಿದ್ದಾರೆ. ಪೌಷ್ಟಿಕವಾದ ಆಹಾರ ಸಾಧ್ಯವಾದಷ್ಟು ಖರ್ಚು ಕಡಿಮೆ ಇರೋದನ್ನೇ ತಗೊಳ್ಳಬೇಕು; ಸೊಪ್ಪು, ತರಕಾರಿ, ಕಾಫಿ ಟೀ ಕುಡಿಯೋದ್ರ ಬದ್ಲು ಹಾಲು ಕುಡಿದ್ರಾಯ್ತಪ್ಪ. ಒಳ್ಳೇದಾಗುತ್ತೆ.

ಮಾದ : ಅಂಗಾ ಬುದ್ಧಿ.

ಬೋರಣ್ಣ: ಹೌದಪ್ಪ. ಸುಮ್ನೆ ನಿನಗೆ ಹೇಳಲಿಲ್ಲ. ನಿನ್ನೊಬ್ಬನ ಕೊಳಕುತನದಿಂದ ಹಳ್ಳಿಯೇ ಕೊಳಾಕಾಗಿಬಿಡುತ್ತೆ.

ಜುಂಜಪ್ಪ: ಪರ್‍ವಾಗಿಲ್ಲ ಈ ಹೊತ್ತೇನೂ ಇಬ್ರೂ ಬರೇ ಉಪದೇಶ ಮಾಡ್ಲಿಕ್ಕೆ ಶುರು ಮಾಡ್ಬಿಟ್ರಲ್ಲಾ.

ಮಾರಣ್ಣ : ಅಲ್ಲಾ ಕಣ್ಣಿಂದ ನೋಡಿ ನೋಡಿಯೂ ಹೀಗೆ ಹೇಳದೇ ಇರೋದು ಅಂದ್ರೇನು? ನನಗಂತೂ ಮನಸ್ಸು ತಡ್ಯೋಕ್ಕಿಲ್ಲ.

ಜುಂಜಪ್ಪ: ಸರಿ ಸರಿ ಹೇಳಿ, ಸಧ್ಯ ಇವ್ರೆಲ್ಲಾ ಚೆನ್ನಾಗಿದ್ರೆ ತಾನೇ ನಮ್ಮ ಮನೆ, ಊರಿನ ಆರೋಗ್ಯ ಸರಿಹೋಗೋದು.

(ಅಷ್ಟರಲ್ಲಿ ರಾಜಿ ಪ್ರವೇಶಿಸುವಳು)

ರಾಜಿ : ಮಾತು, ಬೋಧನೆಗಳು ಮುಗೀತೇ ಇನ್ನೂ ಏನಾದ್ರೂ ಇದೆಯೇ?

ಜುಂಜಪ್ಪ: ಸಧ್ಯಕ್ಕೆ ಮುಗಿದಾಗೇ (ಆಳಿನ ಕಡೆ ತಿರುಗಿ), ಮಾದ ಸರಿ ನಿಂಗನ್ನ ಮಿಕ್ಕ ಕೆಲಸ ನೋಡ್ಕೋ ಅನ್ಬುಟ್ಟು ದೇವರ ಸೇವೆ ಮಾಡ್ಕೊಂಡುಬಾ.

ಮಾದ : ವಸಿ ದುಡ್ಡು ಕೊಟ್ರೇ...

ಜುಂಜಪ್ಪ: ಊಂ ತಕ್ಕೋ (ಎಂದು ತಗೆದು ಇಪ್ಪತ್ತುರೂಪಾಯನ್ನು ಕೊಡಲು).

ಮಾದ : ನನ್ನ ಸಂಬಳ್ದಾಗೇ ಇಡ್ಕಳಿ ಬುದ್ಧಿ.

ಜುಂಜಪ್ಪ: ಏನಿಲ್ಲ ಅದೇನು ಲೆಕ್ಕಕ್ಕೆ ಬ್ಯಾಡ ಹೋಗು ದೇವರ ಕೆಲ್ಸ ತಾನೇ.

ಮಾದ : ಬರ್ತೀನಿ ಬುದ್ಧಿ.

ಜುಂಜಪ್ಪ: ಹ್ಞೂ...

(ಹೊರಡುವನು)

ರಾಜಿ : ನೀವೆಲ್ಲಾ... ಏಳಿಮತ್ತೆ.

ಜುಜಪ್ಪ : ಓ... ಬನ್ಬುಟ್ಟೇ ಏನೇ ವಿಶೇಷ.

ರಾಜಿ : ಗಿಣ್ಣಾಲು... ಒಬ್ಬಟ್ಟು, ಬದ್ನೆಕಾಯಿನ, ಬಜ್ಜಿ ಬೆಂಡೆಕಾಯಿನ ಸಾರು. ಅನ್ನ ಬನ್ನಿ... ಬನ್ನಿ...ಆರೋಗುತ್ತೆ... ಬೇಗಬೇಗ ಕೈಕಾಲು ಮುಖ ತೊಳ್ಕಂಡು ಕೂತುಬಿಡಿ ಬನ್ನಿ.

ಜುಂಜಪ್ಪ: ನೀ ಮುಂದು ಮುಂದೆ ನಡೆ ನಾವು ಹಿಂದೆ ಹಿಂದೆ ಬರ್ತೇವೆ.

ಇಬ್ಬರೂ : ಓಹೋ...

(ಎಂದು ಮೂವರೂ ಹೊರಡುವರು)

## ದೃಶ್ಯ-೨

(ಊಟವಾದ ಮೇಲೆ ಮೂವರು ಪ್ರವೇಶಿಸಿ ಮತ್ತೆ ಕುರ್ಚಿಯ ಮೇಲೆ ಕುಳಿತು ಎಲೆ ಅಡಿಕೆಯನ್ನು ಹಾಕಿಕೊಳ್ಳುತ್ತಾ)

ಬೋರಣ್ಣ: ಜುಂಜಣ್ಣ ಊಟ ಸೊಗಸಾಗಿತ್ತು. ಹೀಗಿದ್ರೆ ಊಟ ಎಲ್ಲಾ ವಿಟಮಿನ್‌ಗಳೂ ಸಿಗುತ್ತೆ. ಆರೋಗ್ಯಭಾಗ್ಯವೂ ಚೆನ್ನಾಗಿರುತ್ತೆ.

ಜುಂಜಪ್ಪ: ಏನು ಚಂದ ಎಲ್ಲಾ ಆತುರ ಆತುರವಾಗಿ ಮಾಡಿದ್ದಾಯ್ತು. ಸ್ವಲ್ಪ ಮುಂಚೆ ಕಾಗದದಲ್ಲಿ ತಿಳಿಸಿಬಿಟ್ಟು ಬಂದಿದ್ರೆ ಇನ್ನೂ ಚೆನ್ನಾಗಿ ಮಾಡಿಸಬಹುದಾಗಿತ್ತು.

ಮಾರಣ್ಣ : (ನಗುತ್ತಾ) ಅಲ್ಲ ಸುಮ್ನೆ ಊಟ ಇಷ್ಟರಮಟ್ಟಿಗಿರಬೇಕಾದ್ರೆ ಹಬ್ಬದೂಟ ಇನ್ನ್ಯಾಗಿರುತ್ತೆ ಲೆಕ್ಕ ಹಾಕಿ. ಈಗೇನು ಇರು ಅಂದ್ರೆ ನಾಳೇನೂ ಇರ್ತೀವಿ ಮಾಡಿಸಿದ್ರಾಯ್ತು.

ಜುಂಜಪ್ಪ: ಅಗತ್ಯವಾಗಿ.

ಬೋರಣ್ಣ: ಏನು ನೀವು "ಅಂತು ಔತಣಕ್ಕೆ ಕರಿಸ್ಕೊಳ್ಳಿ" ಅಂದ ಹಾಗಾಯ್ತು.

ಜುಂಜಪ್ಪ: ಊಟದ ವಿಚಾರದಲ್ಲಿ ನನ್ನನ್ನು ಹಾಗೆ ತಿಳಿದುಕೊಳ್ಳಬೇಡ್ರಿ.

ಮಾರಣ್ಣ : ಸರಿ. ಈಗ ಊಟ ಆಯ್ತು, ತಾಂಬೂಲ ಆಯ್ತು. ಮುಂದೆ...

ಜುಂಜಪ್ಪ: ಬಿಸಿಲು ಸ್ವಲ್ಪ ನಿದ್ದೆ ಮಾಡಿ... ಆಮೇಲೆ ನಮ್ಮ ಪಂಚಾಯ್ತಿ ಆಫೀಸಿಗೋಗೋಣ.

ಬೋರಣ್ಣ: ನನಗಂತೂ ನಿದ್ದೆ ಮಾಡಿ ರೂಢಿ ಇಲ್ಲ. ಏನು ಸೋಂಬೇರಿತನ ಬೆಳಿಸ್ಕೊಳ್ತೀರಿ, ಹಳ್ಳಿ ಜನ ನೀವು ಮಧ್ಯಾಹ್ನದ ಹೊತ್ತು ನಿದ್ದೆ ಮಾಡ್ತೀರಿ, ಏನಾದ್ರೂ ಕೆಲಸ ಮಾಡಬೇಕು.

ಜುಂಜಪ್ಪ: ಕೆಲಸ ಏನು ಮಾಡೋದು ಹೇಳಿ.

ಬೋರಣ್ಣ: ನೀನು ಹೇಳೋದು ಸರಿ. ಗ್ರಾಮೋದ್ಯೋಗಗಳು ಎಷ್ಟಿಲ್ಲ. ಅವುಗಳಲ್ಲಿ ಯಾವುದಾದ್ರೂ ಮಾಡಿದ್ರೆ ಸಂಪಾದನೇನೂ ಆಗುತ್ತೆ ಜೊತೆಗೆ ಗಾಂಧಿ ತತ್ವಕ್ಕೆ ಬೆಲೆ ಕೊಟ್ಟ ಹಾಗಾಗುತ್ತೆ. ನೀವು ಪಂಚಾಯ್ತಿ ಛೇರ್ ಮನ್ ಆಗಿ ಜನಗಳಿಗೆ ಹೇಳಬೇಕಪ್ಪ. ಸೋಂಬೇರಿಗಳಾಗಿ ಕಾಲ ಕಳೆಯುವುದರಿಂದ ಅವರ ಮನಸ್ಸು ಬೇರೆ ಕಡೆ ತಿರುಗಿ ಗ್ರಾಮ ಅಭಿವೃದ್ಧಿಯಾಗವುದರ ಬದ್ಲು ನಶಿಸಲಿಕ್ಕೆ ಕಾರಣವಾಗುತ್ತೆ.

ಮಾರಣ್ಣ : ಹೌದು ಎಲ್ಲಾ ಹಳ್ಳಿಯ ಗುಡಿ ಕೈಗಾರಿಕೆಯತ್ತ ಗಮನವೇ ಹರಿಸ್ತಿಲ್ಲ. ಎಲ್ಲಾ ಯಂತ್ರಗಳಿಂದ ಮಾಡಿದ್ದೇ ಆಗಬೇಕು. ನಯ ನಾಜೂಕ ಶೋಕಿಗೆ ಶುರು ಮಾಡಿದ್ದಾರೆ. ಹಳ್ಳಿಯಿಂದ ಡಿಲ್ಲಿವರ್ಗ್ಗೂ ಇನ್ನೂ ಗಾಂಧಿತತ್ವಕ್ಕೆ ಎಲ್ಲಿ ಬೆಲೆ ಬರುತ್ತೆ ಹೇಳಿ ಮತ್ತೆ.

ಬೋರಣ್ಣ: ಇಂಥ ಗ್ರಾಮದ ಹಿರಿಯರು, ಮುಖಂಡರು ತಾವು ಮೊದಲು ಆದರ್ಶರಾದರೆ ತಾನೇ ಹಳ್ಳಿಜನರಾಗುತ್ತಾರೆ. ಆಗ ಹಳ್ಳಿ ಉದ್ಧಾರವಾಗುತ್ತೆ. ಭಾರತದಲ್ಲಿರುವ ೮೦ ಭಾಗ ಹಳ್ಳಿಗಳು ಉದ್ಧಾರವಾಯ್ತು ಅಂದ್ರೆ ನಮ್ಮ ದೇಶವೇ ಉದ್ಧಾರವಾದಹಾಗಾಗುತ್ತೆ.

ಜುಂಜಪ್ಪ: ಏನು ಬೋರಣ್ಣನವರೇ ನೀವು ಹೇಳಿದಷ್ಟು ಸುಲಬ ಆಯ್ತರಾ. ಹಳ್ಳೀಲಿ ಇದನ್ನೆಲ್ಲಾ ಬೋಧನೆ ಮಾಡಿ ಅವರನ್ನು ದಾರಿಗೆ ತರೋದು ಅಷ್ಟು ಸುಲಭವೇ?

ಮಾರಣ್ಣ : ಜೋರಾಗಿ ಮಾಡಬಹುದು ನಿಮ್ಮಂಥವರು ಮನಸ್ಸು ಮಾಡಿದ್ರೆ ಬೇಗನೆ ಆಗದೆ ಹೋದ್ರೂ ಹಂತ ಹಂತವಾಗಿ ಕಾರ್ಯಗತಕ್ಕೆ ಬರುತ್ತೆ.

ಜುಂಜಪ್ಪ: ಸರಿ ನೋಡೋಣ.

ಮಾರಣ್ಣ : ಸರಿ ನಡೀರಿ ಹಾಗೇ ನಿಮ್ಮ ಪಂಚಾಯಿತಿ ಆಫೀಸ್‌ನೋಡ್ಕೊಂಡು ಭಾಷಣಗಳನ್ನು ಮುಗಿಸಿಕೊಂಡು ಬರೋಣ, ಹೇಗೆ ಕೆಲಸ ನಡಿಸ್ತಾ ಇದ್ದೀರಿ ಅದನ್ನು ಸ್ವಲ್ಪ ನೋಡೋಣ. ಅಂದ ಹಾಗೆ ಜುಂಜಪ್ಪನವರೇ ನಿಮ್ಮ ಶ್ರೀಮತಿಯವರೂ ಬರಲಿ, ಸೊಗಸಾಗಿ ಹಾಡ್ತಾರೆ. ಅಲ್ಲಿ ಸಮಾರಂಭದಲ್ಲಿ ಹಾಡಲಿ.

ಜುಂಜಪ್ಪ: ಸರಿ ನಡೀರಿ ಹೋಗೋಣ. ಅವರು ಆಮೇಲೆ ಬರ್ತಾರೆ. ಅವರು ಹಾಡನ್ನೆಲ್ಲಾ ಹಾಡಿ ಸಿದ್ಧತೆ ಮಾಡಿಕೊಂಡಿದ್ದಾರೇ ರಾಜೀ... ನಾವು ಬರ್ತೀವಿ, ನೀನು ಬೇಗನೆ ಬಾ.

ರಾಜಿ : ಆಗ್ಲಿ.

(ಪರದೆ ಬೀಳುವುದು)

## ದೃಶ್ಯ–೩

(ಮೂವರೂ ಹೊರಡುವರು ದಾರಿಯಲ್ಲಿ ಬರುತ್ತಾ)

ಮಾರಣ್ಣ : (ಮೂಗು ಎತ್ತುತ್ತಾ) ಆಹಾ... ಎಂಥ ಮಂದಮಾರುತ ಬೀಸುತ್ತೆ ನಿಮ್ಮೂರ್ನಲ್ಲಿ.

ಬೋರಣ್ಣ: ಮಂದಮಾರುತ ಅನ್ನೋದ್ಕಿಂತ ಗಂಥ ಗಾಳಿ ಬೀಸ್ತಾ ಇರೋದು ಅಂತ ಹೇಳಬಹುದು.

ಜುಂಜಪ್ಪ: ಅದ್ಕೇ ನೋಡ್ರಪ್ಪಾ ನಿಮ್ಮಂಥವ್ರು ಹಳ್ಳಿಲಿರಬೇಕು ಅನ್ನೋದು.

ಮಾರಣ್ಣ : ತಲೆಯಿಲ್ದೇ ನಿಮ್ಮಂಥವ್ರ ಹಳ್ಳಿಲಿರಬೇಕು.

ಜುಂಜಪ್ಪ: ಈಗ ಏನೋ ಅಂದ್ರಿ.

ಬೋರಣ್ಣ: [illegible]ಗಳ ಮೇಲಿನ ಮಲಮೂತ್ರಗಳ ವಾಸನೆ ಬೀಸ್ತಿದ್ರೆ ಚೆನ್ನಾಗಿ ಆರೋಗ್ಯವಾಗಿರಬಹುದು. ನೋಡಿ ಈಗ ಬರ್‍ತಾ ಇದೆಯಲ್ಲಾ ಈ ಧೂಳಿನಲ್ಲೇ ಆ ರೋಗಾಣುಗಳು ಶ್ವಾಸಕೋಶಕ್ಕೇ ಸೇರಿ ಅನೇಕ ರೋಗಗಳು ಶುರವಾಗ್ತವೆ, ಕಸಕಡ್ಡಿ ಕಣ್ಣಿಗೆ ಬಿದ್ದು ಕಣ್ಣು ಹೊರಟೋಗುತ್ತೆ.

ಮಾರಣ್ಣ : ಅದೇ ನೋಡಿ, ಪಾಶ್ಚಾತ್ಯ ರಾಷ್ಟ್ರಗಳಿಗಿಂತ ನಮ್ಮ ದೇಶದಲ್ಲಿ ಈ ಸಾವಿನ ಸಂಖ್ಯೆ ಹೆಚ್ಚಿರೋದು. ಇದಕ್ಕೆ ನಾವೇ ಕಾರಣರಲ್ವೇ?

ಬೋರಣ್ಣ: ಏನೋ ಹೇಳ್ತಾರಲ್ಲಾ 'ಆನೆ ತನ್ನ ತಲೇ ಮೇಲೆ ತಾನೇ ಮಣ್ಣು ಹಾಕಿಕೊಂಡಿತು' ಅಂದ ಹಾಗೇ.

ಜುಂಜಪ್ಪ: ಈ ಜನಸಂಖ್ಯೆ ಹೆಚ್ತಾ ಇರೋ ಸಮಯದಲ್ಲಿ ಸಾವು ಬಂದ್ರೆ ನಷ್ಟವೇನು ಹೇಳಿ.

ಬೋರಣ್ಣ: ನೀವು ಹೇಳೋದು ಸರಿ. ಸಾಯುವವರನ್ನು ಕಡಿಮೆ ಮಾಡಿ, ಮಕ್ಕಳನ್ನು ಕಡಿಮೆ ಮಾಡಿಕೊಂಡ್ರೆ ಯಾಕೆ ಆಗಬಾರದು. ಬೇರೆ ಮುಂದುವರಿದ ದೇಶಗಳು ಹಾಗೇ ತಾನೇ. ಅದ್ಕೇ ಅಲ್ಲಿ ಹಾಗೆ ನಮ್ಮ ದೇಶ ಚೀನ ಬಿಟ್ರೆ ಮಿಕ್ಕೆಲ್ಲಾ ಕಡೆ ಬಹಳ ಕಡಿಮೆ ಜನಸಂಖ್ಯೆಯೇ. ಅದಕ್ಕೇ ಅವರು ಸುಖವಾಗಿರೋದು, ಅದಕ್ಕೆಲ್ಲಾ ಕಾರಣ ಅವರ ಆರೋಗ್ಯ, ನೈರ್ಮಲ್ಯ.

ಮಾರಣ್ಣ : ಹೌದು.

ಜುಂಜಪ್ಪ: ಸಾಯೋದನ್ನ ತಪ್ಪಿಸ್ಕೊಳ್ಳಲಿಕ್ಕಾಗುತ್ತಾ? ಅವರವರ ಹಣೆಬರಹ.

ಮಾರಣ್ಣ : ಇದ್ಕೇ ಹೇಳೋದು ಹಳ್ಳಿಗುಗ್ಗು ಅಂತ. ಕುರುಡು ಭಾವನೆಗಳು ಮೊದಲು ನಮ್ಮಲ್ಲಿ ಹೋಗಬೇಕು ಜುಂಜಪ್ಪನವರೇ. ಈ ಶಿಶುಗಳ ಮರಣಕ್ಕೆ ಮುಖ್ಯವಾದ ಕಾರಣ ಅಂದ್ರೆ ಬಡತನ, ಮಕ್ಕಳ ಪೋಷಣೆಯಲ್ಲಿ ಬಾಣಂತಿ ಯವರನ್ನು ಕಾಪಾಡುವುದರಲ್ಲಿ ಅಜ್ಞಾನ, ಆರೋಗ್ಯ ನಿಯಮಗಳ ಉಲ್ಲಂಘನೆ ಮಾಡೋದು, ಚಿಕ್ಕಂದಿನಲ್ಲಿ ಮಕ್ಕಳನ್ನು ಪಡೆಯೋದು, ಗಾಳಿ, ಬೆಳಕು, ನೈರ್ಮಲ್ಯ ಇವುಗಳಿಗೆ ಅವಕಾಶ ಇಲ್ಲದ ವಾಸಸ್ಥಳ, ಮಕ್ಕಳು ಬಾಣಂತಿಯರಿಗೆ ಸರಿಯಾದ ಆಹಾರ ಇಲ್ದೇ ಇರೋದೆ ಮುಖ್ಯ ಕಾರಣ.

ಬೋರಣ್ಣ: ಪ್ರತಿಯೊಬ್ಬ ವ್ಯಕ್ತಿಯ ಅಥವಾ ಸಮಾಜದ ಆರ್ಥಿಕೋನ್ನತಿಯು ಆ ವ್ಯಕ್ತಿಯು ಅಥವಾ ಸಮಾಜದ ಬಾಹುಬಲವನ್ನು ಸಂಪೂರ್ಣವಾಗಿ ಅವಲಂಬಿಸಿದೆ ಅನ್ನೋದನ್ನು ಮರೆಯಬಾರದು.

ಮಾರಣ್ಣ : ಸುಮ್ಮನೇ ಕಾಲಹರಣ ಮಾಡ್ತಿರೋ, ನಮ್ಮ ಬಡ ರೈತರು ಒಂದು ದಿನ ನರಳುವಾಗ ಹೊಟ್ಟೇಗಿಲ್ದೇ ಹಸ್ಕೊಂಡೇ ಇರಬೇಕಾಗುತ್ತೆ. ಇಂಥ ಜನಾಂಗದವರ ಆರ್ಥಿಕಾಭ್ಯುದಯವು ಅವರ ದೇಹ ದಾರ್ಢ್ಯದ ಪ್ರಮಾಣಾನೂ ಅವಲಂಬಿಸಿದೆ ಅಲ್ವೇ?

ಬೋರಣ್ಣ: ಅದ್ಕೇ ಲಿನ್‌ಲಿತ್ಗೊ ಕಮಿಷನ್ನಿನವರು ನಮ್ಮ ಆರ್ಥಿಕೋನ್ನತಿಗೂ, ನಮ್ಮ ದೇಶದ ಆರೋಗ್ಯಕ್ಕೂ ನಿಕಟವಾದ ಸಂಬಂಧ ಇದೆ ಅಂದಿದ್ದಾರೆ.

ಮಾರಣ್ಣ : ೧೯೨೪ರಲ್ಲಿ ಅಖಿಲಭಾರತ ವೈದ್ಯ ವಿದ್ಯಾ ಸಂಘದವರು ಭಾರತ ಬಡತನಕ್ಕೂ ಹಣಕಾಸಿನ ಮುಗ್ಗಟ್ಟಿಗೂ ಅತಿ ಮುಖ್ಯವಾದ ಕಾರಣವು ನಿವಾರಣೀಯವಾದ ರೋಗಗಳಿಂದ ನಮ್ಮ ಜನಾಂಗದಲ್ಲಿ ಬೆಳೆಯುತ್ತಿರುವ ದೌರ್ಬಲ್ಯವೇ ಅಂತ ಹೇಳಿದ್ದಾರೆ.

ಜುಂಜಪ್ಪ: ಅಲ್ಲ ನೀವು ಏನೇನೋ ಹೇಳ್ತಿದ್ದರಲ್ಲ ಏನೋ ಕತ್ತೆಗೂ ಕುದ್ರೆಗೂ ಹೆತ್ತಪ್ಪ, ಸೋದರಮಾವ ಅಂದ ಹಾಗೆ.

ಮಾರಣ್ಣ : ಜುಂಜಣ್ಣನವರೇ ಏನು ಬೋರಣ್ಣನವರು ಪೆದ್ದರು ಅಂತ ತಿಳ್ಕೊಬ್ಯಾಡಿ. ಹಳ್ಳೀಲಿ ಹುಟ್ಟಿದ್ದರೂ ಪಟ್ಟಣದಲ್ಲಿ ವಿದ್ಯಾಭ್ಯಸಮಾಡಿ ಬಂದಿರೋ ವಿದ್ಯಾವಂತ ಡಾಕ್ಟು. ಆತನಿಗೆ ಆರೋಗ್ಯದ ವಿಚಾರದಲ್ಲಿ ಏನೋ ಗೊತ್ತಿಲ್ಲ ಅನ್ನೋದು ಸರಿಯಲ್ಲ.

ಜುಂಜಣ್ಣ: ಅದು ನನಗೆ ಗೊತ್ತಿಲ್ವೆ? ನೀವು ಹೇಳೋ ವಿಚಾರ ಒಂದೂ ನನಗೇನೋ ಅರ್ಥವೇ ಆಗ್ತಿಲ್ಲಪ್ಪ.

ಬೋರಣ್ಣ: ರೈತರ ಬಡತನಕ್ಕೂ ಅವರಲ್ಲಿ ಹರಡುತ್ತಿರುವ ರೋಗಗಳನ್ನು ಹತ್ತಿರದ ಸಂಬಂಧ ಇರೋದ್ರಿಂದ ನಮ್ಮ ಹಳ್ಳಿಗಳ ಆರೋಗ್ಯದ ಸಮಸ್ಯೆಯನ್ನು ನಾವು ಸ್ವಲ್ಪಮಟ್ಟಿಗಾದ್ರೂ ಪರೀಕ್ಷಿಸ್ದೇ ಹೋದ್ರೆ ನಮ್ಮ ಗ್ರಾಮ ಜೀವನದ ಸಮಸ್ಯೆಯು ಬಗೆ ಹರಿಲಾರ್ದು.

ಜುಂಜಪ್ಪ: ಏನು ಗ್ರಾಮ ನೈರ್ಮಲ್ಯಕ್ಕೂ ಇದಕ್ಕೂ ಏನೇನು ಸಂಬಂಧ ಇದೆ ಎಂದು ನಿಜವಾಗಿಯೂ ತಿಳಿದಿರ್ನಿಲ್ಲ. ಈ ಹೊತ್ತು ಸಾಯಂಕಾಲ ಹೇಗಾದ್ರೂ ಭಾಷಣ ಆಗಬೇಕಲ್ಲಾ ಈ ಹೊತ್ತು ಮಾರಣ್ಣನವರ ಅಧ್ಯಕ್ಷತೆಯಲ್ಲೇ ನಿಮ್ಮದು ಒಂದು ಉಪನ್ಯಾಸವಾಗಲೀ.

ಬೋರಣ್ಣ: ಆಗ್ಲಿ ಆದ್ಕೇನಂತೆ ಮಾಡೋಣ.

ಜುಂಜಪ್ಪ: ಅಗತ್ಯವಾಗಿ.

ಬೋರಣ್ಣ: ಅಂತೂ ಊರಿನಲ್ಲಿ ಸಾಲು ಮರ ನೆಟ್ಟಿದ್ದೀರಿ, ನೋಡಿ ಮಾರಣ್ಣನವರೇ ಎಷ್ಟು ಎಲೆ ಉದುರಿದೆ.

ಜುಂಜಪ್ಪ : ನೋಡ್ವಾ ಅಶೋಕನ ಕಾಲದಲ್ಲಿ ಸಾಲುಮರ ನೆಡಿಸ್ತಿದ್ದ ಈಗ.

ಮಾರಣ್ಣ : ಈಗ ನೀವು ಅಶೋಕ. ನೆಡಿಸ್ಬಿಟ್ರೆ, ಬಹಳ ಸಂತೋಷ ಅಲ್ವೇ?

ಬೋರಣ್ಣ: ಅಲ್ಲಾ ಕಣ್ ಮಂಕಣ್ಣನವರೇ ಈ ಎಲೆಗಳನ್ನು ಗುಡಸಿ ಒಂದ್ಲ ಕಡೆ ಹಾಕಿದ್ರೆ ಗೊಬ್ಬರ ಆಗ್ತಿತ್ತು, ರಸ್ತೆ ಚೊಕ್ಕಟವಾಗ್ತಿತ್ತು. ನೋಡಪ್ಪ ಎಷ್ಟೋಂದು ಕಸ. ಎಷ್ಟೋಂದು ಕಡ್ಡಿಗಳು. ನಿಜವಾಗ಼್್ಲೂ ರಸ್ತೆ ನೋಡಲಿಕ್ಕೂ ಬಹಳ ಅಸಹ್ಯವಾಗುತ್ತೆ. ಇವರಿಂದ್ಲೇ ಹುಳುಗಳು, ಸೊಳ್ಳೆಗಳು, ನೊಣಗಳು ಹೆಚ್ಚಿ ರೋಗಾಣುಗಳು ಉತ್ಪತ್ತಿಯಾಗಿ ನಮಗೆ ಈಗ ಮೂಗಿಗೆ ಬರ್ತಾ ಇದೆಯಲ್ಲಾ ಗಾಳಿ ಇದರಿಂದ ದೇಹಕ್ಕೆ ಸೇರಿ, ನಾನಾ ರೋಗಗಳನ್ನು ತರ್ತವೆಯಪ್ಪಾ.

ಜುಂಜಪ್ಪ : ನಮ್ಮ ಜನಗಳಲ್ಲಿ ನಿಷ್ಠೆಯಿಲ್ಲ ಏನು ಮಾಡ್ಲಿ ಹೇಳಿ.

ಮಾರಣ್ಣ : ನೋಡಿ ಕೆಲ್ಸ ಸರಿಯಾಗಿ ಮಾಡ್ಲಿಲ್ಲ, ನಿರ್ದಾಕ್ಷಿಣ್ಯವಾಗಿ ತೆಗೆದುಹಾಕಿ ಬಿಡುವ ಹಾಗೆ ಕಡ್ಡಿ ಎರಡು ತುಂಡು ಮಾಡಿದಂತೆ ಬೆದ್ರಕೆ ಹಾಕಿದ್ರೆ ನಾಳೆ ದಿನ ಕೆಲಸ ಸರಿಯಾಗಿ ಆಗುತ್ತೆ. ಇಲ್ಲದೇ ಹೋದ್ರೆ ಹಾಗೇ ಬಿಟ್ರೆ ಇದು ಹೀಗೇ ಆಗಿ ಎಲ್ಲರ ನಾಶಕ್ಕೂ ಕಾರಣವಾಗುತ್ತೆ.

ಜುಂಜಪ್ಪ : ಈಗಿನ ಕಾಲ್ದಲ್ಲಿ ಏನು ಹೇಳಿದ್ರೂ ಕಷ್ಟ, ವೈರತ್ವ, ದ್ವೇಷದಿಂದ ಕಾದಾಡ್ತಾರೆ. ಅವ್ರಲ್ಲಿ ಅವ್ರೇ ತಿಳಿದು ಈ ಕೆಲಸಗಳನ್ನು ಮಾಡಿಕೊಂಡು ಹೋಗಬೇಕು. ಇಲ್ಲದೇ ಹೋದ್ರೇನು ಪ್ರಯೋಜನ. ಸಂಬಳ ತಿಂದವಕ್ಕೆ ತಕ್ಕಹಾಗೆ ಹಳ್ಳಿಗೆ ದ್ರೋಹ ಮಾಡೋದೇನು ದೇಶಕ್ಕೆ ದ್ರೋಹ ಮಾಡೋದೇನು ಎರಡೂ ಒಂದೇ. ಕುದುರೆ ತೆಕ್ಕೊಂಡೋಗಿ ನೀರಿನ ಹತ್ತಿರ ನಿಲ್ಲಿಸಬಹುದು ನೀರ್ನ ಕುಡಿಸಕ್ಕಾಗುತ್ಯೇ ಹಾಗೆ ನೀವೇಳೋ ಸಮಾಚಾರ.

ಬೋರಣ್ಣ: ಇದಕ್ಕೆ ಏನಾದ್ರೂ ಉಪಾಯ ಹುಡುಕಬೇಕು. ಹಳ್ಳಿಯಲ್ಲಿ ವರ್ಷಂಪೂರ ಚೊಕ್ಕಟವಾಗಿದ್ದರೆ ಗ್ರಾಮಪಂಚಾಯಿತಿಯವರಿಂದ ಒಂದೊಂದು ಬೀದಿಗೂ ಒಂದೊಂದು ಬಹುಮಾನ ಕೊಡುಸ್ತೇನೇ ಅಂತ ಹೇಳಿ ಜನರ ಮನ ಒಲಿಸಿ ಈ ಕಾರ್ಯ ಮಾಡಬೇಕಪ್ಪಾ. ಹಾಗಾದ್ರೆ ನಮ್ಮ ಜನಗಳು ಬಗ್ಗುತ್ತಾರೆ. ಆಸೆಯಿಂದ ಕೆಲಸ ಮಾಡ್ತಾರ್ಯೆ ಹೊರ್ತು ಆರ್ಡರ್ ಮಾಡಿದ್ರೆ, ಗದರಿದ್ರೆ, ಬೆದರಿಸಿದ್ರೆ ಮಾಡಲಿಕ್ಕಾಗೋಲ್ಲ ಅಂತ ನನಗನ್ನಿಸುತ್ತೆ.

ಜುಂಜಪ್ಪ : ಮಾತಾಡ್ತಾ ಈ ಸ್ಥಳದಲ್ಲಿ ನಿಂತುಬಿಟ್ರಲ್ಲಾ ನಡೀರಿ ಹೋಗೋಣ ಮಿಕ್ಕ ವಿಚಾರಗಳೇನಾದರೂ ಇದ್ರೆ ಆಫೀಸಿನಲ್ಲಿ ಮಾತಡೋಣ.

ಮಾರಣ್ಣ : ಸರಿ ನಡೀರಪ್ಪಾ ಮಹಾರಾಯರೇ ಅಂತೂ ನಿಮ್ಮೂರಿನ ಕತೆನೇ ದೊಡ್ಡ ಕತೆ.

ಬೋರಣ್ಣ: ಅಲ್ಲ ನಿಮ್ಮೂರ ಹೆಸರು ನೋಡಿದ್ರೆ ಬಹಳ ಚನ್ನಾಗಿದೆ "ಮಧುವನ" ಆದ್ರೆ ನಿಮ್ಮೂರು ನೋಡಿಬಿಟ್ರೆ....

ಜುಂಜಪ್ಪ : ಏನು ಕಮ್ಮಿ ಹೇಳಿ ನಮ್ಮೂರ ಪಕ್ಕದಾಗೆ ಬೆಟ್ಟ ಇದೆ ಜೇನುಗಳು ಜೇನುತುಪ್ಪ ಶೇಖರಿಸುತ್ತವೆ. ಅವಕ್ಕೇ "ಮಧುವನ" ಅಂತ ಕರೀತಾರೆ.

ಮಾರಣ್ಣ : ಹೊಡ್ಕಂಡ್ರು... ನಿಮ್ಮೂರಿಗೂ... ನಿಮ್ಮೂರಿಗೆ ಹೆಸರಿಟ್ಟ ಜನರಿಗೂ.

ಬೋರಣ್ಣ : ಏನೋ ಹೇಳ್ತಾರ್ಯಲ್ಲಾ "ಹೆಸರು ಚಂದ, ಮುಸುಡಿ ಕೋಡಂಗಿ" ಅಂತ. ನಡ್ಯಪ್ಪಾ ನಾಚ್ಕೆ ಇಲ್ದೆ ನಿಮ್ಮೂರ್ನ ಹೊಗಳಬೇಡಿ.

ಜುಂಜಪ್ಪ : ನೋಡ್ರಿ ಹಠ ಕಟ್ಟಿದ್ರೆ ನಿಮ್ಮವೆ ಹೊಗಳಿಸ್ಕೊಳ್ತಿನಿ, ಇನ್ನು ಒಂದು ವರ್ಷದಲ್ಲಿ.

ಮಾರಣ್ಣ : ನೋಡಿ ಅದಪ್ಪಾ ಗಂಡಸ್ತನ.

ಜುಂಜಪ್ಪ : ನೋಡ್ರಿ ಇನ್ನು ಈ ಜುಂಜಪ್ಪ ಯಾರೂ ಅಂತ ನಿಮಗೆ ಗೊತ್ತಿಲ್ಲ. ಈತ ಮನಸ್ಸು ಮಾಡಿದ್ರೆ.

ಬೋರಣ್ಣ : ಏನಾದ್ರೂ ಮಾಡ್ತೀಯ.

ಜುಂಜಪ್ಪ : ಮಾಡೋದೇನು ಸರಿಯಾಗಿಯೇ.

ಮಾರಣ್ಣ : ಅದನ್ನೇ ಅಪ್ಪಾ ನಾವು ಹೇಳೋದುವೇ. ಮಾಡೋದಷ್ಟೆಲ್ಲಾ ಸರಿಯಾಗಿ ಮಾಡಿ ಆಗ ಎದೆ ತಟ್ಟಿಕೊಂಡ್ರೂ ಸೈ ಅಂತ ಅನ್ನೋದು.

ಜುಂಜಪ್ಪ : ನೋಡ್ತಾ ಇರ್ರಪ್ಪ...

ಮಾರಣ್ಣ : ನಮಗೆ ಹೇಳ್ತಿರಲ್ಲ ನಿಮ್ಮನ್ನು ಎಷ್ಟು ದಿನಗಳಿಂದ ನೋಡ್ತಾ ಇಲ್ಲ. ಸವಡೇ ಹೊಡ್ಯೋದ್ರಲ್ಲಿ ಎಂಥ ಪ್ರವೀಣ ಅಂತ.

ಜುಂಜಪ್ಪ : ಮಾತಾಡಿ ಏನು ಪ್ರಯೋಜನ? ಕಾರ್ಯತಹ ಮಾಡಿ "ಮಧುವನ" ಎಂಬ ನಮ್ಮೂರ ಹೆಸರಿಗೆ ನಾನು ಹೆಸರು ತರ್ದೇ ಇದ್ರೆ ನನ್ನ ಹೆಸರು ಜುಂಜಪ್ಪನೇ ಅಲ್ಲ... ಹಾಗೇನಾದ್ರೂ ನಾನು ಇನ್ನೊಂದು ವರ್ಷದಲ್ಲಿ ಮಾಡ್ದೇಹೋದ್ರೆ ಈ ಪಂಚಾಯ್ತಿ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಟ್ಬುಡ್ತೀನಿ, ಸುಮ್ನೇ ಸವ್ಡೇ ಮಾತಲ್ಲ ಇದು ಖಂಡಿತವಾಗಿ ಹೇಳ್ತಾ ಇರೋದು.

ಬೋರಣ್ಣ : ಅಂತೂ ಈಗ್ಲಾದ್ರೂ ಅರಿವಾಗ್ತಾ ಇದೆಯಲ್ಲಾ.

ಮಾರಣ್ಣ : ಅರಿವಾಗೋದೇನು ಕೆಲ್ಸ ಮಾಡಿ ತೋರಿಸೋದ್ರಲ್ಲಿ ಇದೊಂದು ನಾನು ನೀನು ಉಪದೇಶ ಕೊಟ್ಟ ಹಾಗೆಲ್ಲಾ "ರಟ್ಟೆ ಮುರಿಬೇಕು ರೊಟ್ಟಿ ತಿನ್ಬೇಕು". ಸುಮ್ನೇ ಬರೇ ಬಾಯಿನ ಉಪದೇಶ ಕೊಡೋದು ಸುಲಭ, ಅದನ್ನು ಕಾರ್ಯತಹ ತೋರಿಸೋದ್ರಲ್ಲಿ ಇರೋದು ಕಷ್ಟ.

ಜೇರಣ್ಣ : ನೋಡೋಣ ಈಗ ಕ್ಯಾಣ ಬಂದಿದೆ ಮಾಡಿದ್ರೂ ಮಾಡಿದೇ ನಡೀರಿ ನಡೀರಿ. ರಸ್ತೇಲೆ ಮಾತಾಡ್ತಾ ಮಾತಾಡ್ತ ಒಂದು ಘಂಟೆಯಾಗ್ಬಿಟ್ಟಾವು.

* * *

## ದೃಶ್ಯ-೪

(ಮೂವರು ಪಂಚಾಯಿತಿ ಆಫೀಸಿಗೆ ಹೊರಡುವರು ದೂರದಿಂದ ಸಂಗೀತ ಕೇಳಿ ಬರುತ್ತಿದೆ. ಜನರ ಗದ್ದಲ. ಭಾಷಣಕ್ಕಾಗಿ ಸಿದ್ಧತೆಗಳನ್ನು ನಡೆಸುತ್ತಿದ್ದಾರೆ. ಅಷ್ಟರಲ್ಲಿ ಮೂವರು ಬರುತ್ತಾರೆ. ಎಲ್ಲರೂ ನಮಸ್ಕರಿಸುತ್ತಾ ನಿಲ್ಲುವರು. ನೇರವಾಗಿ ಮೂವರೂ ಆಫೀಸಿನೊಳಗೆ ಹೊರಡುತ್ತಾರೆ.)

(ಸ್ವಲ್ಪ ಹೊತ್ತಿನ ಮೇಲೆ ಗ್ರಾಮಸೇವಕ ರಾಜಣ್ಣ ಬಂದು ತೆರೆಯ ಹಿಂದೆ ಮಾತಾಡುವ ಧ್ವನಿ)

ರಾಜಣ್ಣ : ಸಾರ್ ಎಲ್ಲಾ ರೆಡಿಯಾಗಿದೆ...

ಜುಂಜಪ್ಪ : ನೋಡಿ... ಮೊದ್ಲು... ಎಲ್ಲಾ... ಬಂದಿದ್ದಾರೆಯಾ ಅಂತ.

ರಾಜಣ್ಣ : ಜನಗಳು ವಿಪರೀತವಾಗೇ ಸೇರಿದ್ದಾರೆ ಸಾರ್.

ಜುಂಜಪ್ಪ : ಸರಿ ಬರ್ತೀವಿ. (ಲೈಟ್ ಆನ್)

(ಮೂವರೂ ಎದ್ದು ಆಸನಾರೂಢರಾಗಲು ಎಲ್ಲರೂ ನಿಂತು ಚಪ್ಪಾಳೆ ಹೊಡೆಯುತ್ತಾ ಕುಳಿತರು)

ಜುಂಜಪ್ಪ : (ಎದ್ದು ನಿಂತು) ಮಹನೀಯರೇ ಮಹಿಳೆಯರೇ ಅಧ್ಯಕ್ಷರೇ ಅತಿಥಿಗಳೇ, ಈ ಆರೋಗ್ಯ ದಿನಾಚರಣೆಯ ಶುಭದಿನದ ಸಂದರ್ಭದಲ್ಲಿ ನಮ್ಮ ಆತ್ಮೀಯ ಒಬ್ಬರು ಅಧ್ಯಕ್ಷ ಸ್ಥಾನವನ್ನೂ ಮತ್ತೊಬ್ಬರು ಭಾಷಣ ಮಾಡಲು ಉಪನ್ಯಾಸಕರ ಸ್ಥಾನವನ್ನು ಸ್ವೀಕರಿಸಿರುವುದು ಸಂತೋಷದ ಸಂಗತಿ. ಬೋರಣ್ಣನವರು ನಮ್ಮ ಗ್ರಾಮಕ್ಕೆ ದೇವರ ಹಾಗೆ ಬಂದಿದ್ದಾರೆ. ನಾಳೆಯಿಂದ ನಮ್ಮ ಆಸ್ಪತ್ರೆಯ ವೈದ್ಯರು. ನಮ್ಮೆಲ್ಲರ ಆರೋಗ್ಯ ಅವರ ಕೈಲಿದೆ. ಅವರು ಹೇಳಿದ ಹಾಗೇ ನೀವೆಲ್ಲಾ ನಡೆದುಕೊಂಡ್ರೆ ಬಹಳ ಒಳ್ಳೆಯದಾಗುತ್ತೆ. ಈಗಾಗ್ಲೇ ಅವರ ಮಾತುಗಳನ್ನು ಕೇಳಿ ನನಗೆ ನಿಜವಾಗಲೂ ನಮ್ಮೂರಿಗೆ ದೇವರು ಬಂದ ಹಾಗೆ ಆಗಿದ್ದಾರೆ ಅನ್ನಿಸಿತು. ಅವರ ಯೋಚನೆಗಳು ಬಹಳ ಚೆನ್ನಾಗಿವೆ. ಅವರು ಇಂದಿನ ದಿನ ಭಾಷಣ ಮಾಡಲು ಒಪ್ಪಿರೋದ್ರಿಂದ ನಾನು ಹೃತ್ಪೂರ್ವಕವಾಗಿ ಅವರನ್ನು ನಮ್ಮ ಪಂಚಾಯ್ತಿಯ ಹಾಗೂ ನಿಮ್ಮೆಲ್ಲರ ಪರವಾಗಿ ಸ್ವಾಗತಿಸುತ್ತೇನೆ. ಇಂದಿನ ಅಧ್ಯಕ್ಷ ಪೀಠ ವಹಿಸಿರುವ ಮಾನ್ಯ ಮಿತ್ರರಾದನವರು ನಮ್ಮ ಜಿಲ್ಲೆಯ ಅಧಿಕಾರಿ. ಅವರು ಈ ಹೊತ್ತಿನ ದಿನದ ಸಮಾರಂಭದಲ್ಲಿ ಭಾಗವಹಿಸಲು ಒಪ್ಪಿರೋದ್ರಿಂದ ಅವರಿಗೂ ನನ್ನ ಹೃತ್ಪೂರ್ವಕ ಸ್ವಾಗತ ಮತ್ತು ನೆರೆದ ಎಲ್ಲರಿಗೂ ನನ್ನ ಸುಸ್ವಾಗತ. ಕಾರ್ಯಕ್ರಮದ ಆರಂಭಕ್ಕೆ ಶ್ರೀಮತಿ ರಾಜಿ ಅವರಿಂದ ಒಂದು ಭಾವಗೀತೆ.

(ಕರತಾಡನ ಶುರುವಾಗುತ್ತಿರಲು ಜುಂಜಪ್ಪನವರು ಕುಳಿತುಕೊಳ್ಳುತ್ತಾರೆ.)

ರಾಜಿ : (ಹಾಡು) ಮನೆ ಬೃಂದಾವನ ಮಾಡಬೇಕು।
ಊರ ನಂದನವನ ಮಾಡಬೇಕು॥ ॥ ಪಲ್ಲವಿ ॥

ದುಡಿಯಬೇಕು।
ನಮ್ಮ ಜನರು । ದುಡಿಯಬೇಕು।
ನಮ್ಮ ಗ್ರಾಮಕ್ಕೆ
ಗ್ರಾಮ ನೈರ್ಮಲ್ಯಕೆ। ॥೧॥
ದುಡಿಯಬೇಕು॥
ನಮ್ಮ ಆರೋಗ್ಯವೇ।
ಗ್ರಾಮದಾರೋಗ್ಯವು।
ನಮ್ಮ ನೈರ್ಮಲ್ಯವೇ।
ಗ್ರಾಮ ನೈರ್ಮಲ್ಯವು। ॥೨॥

ನಮ್ಮ ಹಳ್ಳಿಯು ಆಗಬೇಕು।
ಸಂತುಷ್ಟ ಹಳ್ಳಿ ಆಗಬೇಡು।
ತುಂಬು ಜೀವನ ಹೊನ್ನಾಗಬೇಕು।
ಹಳ್ಳಿ ಜನರು ಆನಂದ ಕಾಣಬೇಕು। ॥೩॥

ಜುಂಜಪ್ಪ: ಈಗ ವೈದ್ಯಾಧಿಕಾರಿಗಳಾದ ಶ್ರೀಮಾನ್ ಬೋರಣ್ಣನವರಿಂದ ಭಾಷಣ.

ಬೋರಣ್ಣ: ಅಧ್ಯಕ್ಷರಾದ ಮಾರಣ್ಣನವರೆ, ಪಂಚಾಯ್ತಿ ಅಧ್ಯಕ್ಷರಾದ ಜುಂಜಪ್ಪನವರೇ ಮತ್ತು ಹಳ್ಳಿಯ ಮಹಾಜನರೇ. ಈ ಹೊತ್ತಿನ ದಿನ ನಮ್ಮ ಹಳ್ಳಿಯ, ಅಂದ್ರೆ ನಾನು ನಿಮ್ಮ ಹಳ್ಳಿಗೇ ಹೊಸದಾಗಿ ಡಾಕ್ಟರ್ ಆಗಿ ಬಂದಿರೋದ್ರಿಂದ ನಮ್ಮ ಹಳ್ಳಿ ಅಂತ್ಲೇ ಹೆಮ್ಮೆ ಪಟ್ಟುಕೊಳ್ತೇನೆ. ಆದ್ರೆ ಆ ಹೆಮ್ಮೆ ನಿಮ್ಮಲ್ಲಿಲ್ವಲ್ಲಾ ಅಂತ ಸ್ವಲ್ಪ ದುಃಖವೂ ಆಯ್ತು. ನಿಮ್ಮಗಳನ್ನೆಲ್ಲಾ ನೋಡಿದಮೇಲೆ ಈಗ ಮತ್ತಷ್ಟೂ ದುಃಖವಾಗ್ತಾ ಇದೆ, ಏಕೆ ಅಂದ್ರೆ ಈಗ್ಲೇ ನೋಡಿ ಎಷ್ಟು ಜನ ಕೆಮ್ತಾ ಇದ್ದೀರಿ, ನೆಗಡಿಯಿಂದ ಮೂಗನ್ನು ಎತ್ತುತ್ತಾ ಇದ್ದೀರಿ, ಒಣಗಿ ಓಟೆಗರಿಯಾಗಿದ್ದೀರಿ. ಇದನ್ನೆಲ್ಲಾ ನೋಡಿದ್ರೆ ಸಂತೋಷಕ್ಕಿಂತ ದುಃಖವೇ ಹೆಚ್ಚಾಗುತ್ತೆ ಅಂತ ನನಗನ್ನಿಸುತ್ತೆ. ಇದಕ್ಕೆಲ್ಲಾ ಕಾರಣ ನೀವು ಆರೋಗ್ಯದ ಕಡೆ ಹೆಚ್ಚಿಗೆ ಗಮನ ವಹಿಸ್ತಾ ಇಲ್ಲ ಅನ್ನಿಸುತ್ತೆ. ಇದು ಹೀಗೆ ಒಬ್ಬರಿಂದ ಒಬ್ಬರಿಗೆ ರೋಗಗಳು ಹರಡಿ ಇಡೀ ಗ್ರಾಮದ ಗಾಳಿಯೇ ಕೆಟ್ಟು ರೋಗದಿಂದ ನರಳಿ ಹಳ್ಳಿಯ ಜನರು ಸಾಯಬೇಕಾಗುತ್ತದೆ. ಆದ್ದರಿಂದ ಪ್ರತಿಯೊಬ್ಬನೂ ಸಹ ಆರೋಗ್ಯದ ಕಡೆಗೆ ಗಮನ ವಹಿಸುವುದು ಮುಖ್ಯ. "ಆರೋಗ್ಯವೇ ಭಾಗ್ಯ" ಅದಕ್ಕಿಂತ ಹೆಚ್ಚಿಗೆ ಏನು ಬೇಕು ಹೇಳಿ.

ರೋಗುರುಜಿನಗಳಿಂದ ನಮಗೆ ಅನೇಕ ನಷ್ಟವಿದೆ. ನಾವು ಜನರಲ್ಲಿ ನಿರುತ್ಸಾಹ, ಅಸಂತೋಷ, ಯಾವ ಕೆಲಸ ಮಾಡಲು ಮನಸ್ಸು ಇಲ್ಲದಿರುವುದು, ಮೊದ್ಲೇ ರೈತರು. ಸಾಲದಲ್ಲಿರ್‍ತೀರಿ, ರೋಗ ಬಂದ್ರೆ ಸರಿಯಾಗಿ ಗಮನ ವಹಿಸಿದೆ ಹೋದ್ರೆ ಔಷಧ ತೆಗೆದುಕೊಳ್ಳಲಿಕ್ಕೂ ಆಗದೆ ತೊಂದರೆಗೆ ಈಡಾಗ್ತೀರಿ.

ಈ ರೋಗಾಣುಗಳು ಅನೇಕ ವಿಧವಾದ ಬ್ಯಾಕ್ಟೀರಿಯಗಳು ವಾಯುವಿನಲ್ಲಿ ಬೆರೆತು ನಮಗೆ ಹಾಗೆ ಮಾಡುತ್ತವೆ. ಆದ್ದರಿಂದ ನಮ್ಮ ಅನಾರೋಗ್ಯಕ್ಕೆ ವಾತಾವರಣದ ವಾಯುಗುಣ ಮುಖ್ಯ. ಅದನ್ನು ಸರಿಯಾಗಿ ಅಂದ್ರೆ ಶುದ್ಧವಾಗಿ ಇಡದೆಹೋದ್ರೆ ಅನಾರೋಗ್ಯಕ್ಕೆ ತುತ್ತಾಗುತ್ತೇವೆ. ಆದ್ದರಿಂದ ಅಶುಚಿತ್ವದಿಂದ ಆರೋಗ್ಯ ಕೆಟ್ಟು ನಾನಾ ರೋಗಗಳು ಬರುತ್ತವೆ. ಮಲೇರಿಯಾ, ಕೊಕ್ಕೆ ಹುಳುವಿನ ರೋಗ, ಕಾಲರ, ಪ್ಲೇಗು, ಇನ್‌ಫ್ಲುಯಂಜಾ, ವಾಂತಿ, ಭೇದಿ, ಶ್ವಾಶಕೋಶ ಸಂಬಂಧ ರೋಗಗಳೇ ಮೊದಲಾದುವು ಬರ್ತವೆ. ಆದ್ದರಿಂದ ನಿಮ್ಮ ಹಾಗೂ ನಿಮ್ಮ ಗ್ರಾಮದ ನೈರ್ಮಲ್ಯವಾಗಿದ್ದರೆ ಸಂತುಷ್ಟಿಯ ಗ್ರಾಮ ಆಗುತ್ತೆ ಎಂದು ಹೇಳಿ ಈ ಹೊತ್ತಿನ ದಿನ ಇಷ್ಟು ಮಾತುಗಳನ್ನಾಡಲು ಅವಕಾಶವಿತ್ತುದಕ್ಕಾಗಿ ಎಲ್ಲರಿಗೂ ವಂದನೆಗಳು.

(ಕೈ ಚಪ್ಪಾಳೆ ಹೊಡೆಯುವರು)

ಜುಂಜಪ್ಪ: ಇನ್ನು ಅಧ್ಯಕ್ಷರ ಭಾಷಣ.

ಮಾರಣ್ಣ : ಮಹಾನೀಯರೇ ಮತ್ತು ಮಹಿಳೆಯರೇ, ಈ ಹೊತ್ತಿನ ಸಮಾರಂಭದ ಅಧ್ಯಕ್ಷತೆ ವಹಿಸಿ ನಾನೂ ಸಹ ಎರಡು ಮಾತಾಡ್ತೇನೆ. ಈಗಾಗ್ಲೆ ಡಾಕ್ಟರ್ ಬೋರಣ್ಣನವರು ತಮ್ಮ ಭಾಷಣದಲ್ಲಿ ನೈರ್ಮಲ್ಯದ ಬಗ್ಗೆ ಸೊಗಸಾಗಿ ಹೇಳಿದ್ದಾರೆ. ಆದರೆ ನಾನು ಜಿಲ್ಲಾಧಿಕಾರಿಯಾಗಿ ಇದರ ಬಗ್ಗೆ ನಾಲ್ಕು ಮಾತುಗಳನ್ನಾಡ್ತಿದ್ದೀನಿ. ನೀವೆಲ್ಲಾ ತಿಳ್ಕೊಂಡಿರುವ ಹಾಗೇ ಈ ಗ್ರಾಮ ನೈರ್ಮಲ್ಯದ ಕೆಲಸ ಕೆಲವು ಜನಗಳಿಗೆ ಸೀಮಿತವಾಗಿದೆ ಅಂತ ಅನ್ನೋ ಮನೋಭಾವ ಬೆಳೆದು ಬಂದಿದೆ. ಆದರೆ ಅದು ಪ್ರತಿಯೊಬ್ಬನಿಗೂ ಸಂಬಂಧಿಸಿದ ಕೆಲಸ. ತಮ್ಮ ನೆರೆಹೊರೆಯವರು ಅಶುಚಿತ್ವವಾಗಿದ್ದರೆ ಅದು ತಮಗೂ ಮುಂದೆ ತೊಂದರೆಯಾಗುತ್ತದೆ ಎಂಬದನ್ನು ತಿಳಿದಿರಬೇಕು. ಹಾಗಾದರೆ ತಾನೇ ಈ ಕೆಲಸವನ್ನು ಪಂಚಾಯಿತಿ ಮಾಡಲು ಸಾಧ್ಯವಾಗುತ್ತದೆ ಅಂತ ನನಗನ್ನಿಸುತ್ತೆ. ಇನ್ನು ಪಂಚಾಯಿತಿಗಳು ಏನು ಮಾಡಬೇಕು ಅನ್ನೋ ವಿಚಾರ ಸ್ವಲ್ಪ ಹೇಳ್ತಿನಿ. ಗ್ರಾಮ ಪಂಚಾಯಿತಿ ಕಾನೂನಿನ ಪ್ರಕಾರ ಈ ಸಂಸ್ಥೆಗೆ ಗ್ರಾಮ ನೈರ್ಮಲ್ಯಕ್ಕೆ ಸಂಪೂರ್ಣವಾದ ಅಧಿಕಾರವಿದೆ. ಮೊದಲು ಬೀದಿಗಳಲ್ಲಿ ಕಸ ಕಡ್ಡಿ ಬಿದ್ದು ಕೊಳೆಯುವಂತೆ ಮಾಡ್ದೇ ಇರೋದು, ಊರಿನ ನೀರನ್ನೆಲ್ಲಾ ಚರಂಡಿಗಳ ಮೂಲಕ ಸಾಗಿಸುವ ಕಾರ್ಯ ನಿರ್ವಹಿಸುವುದು. ಊರ ಒಳಗೆ ಹೊರಗೆ ಪೊದೆಗಳು ಬೆಳೆಯದಂತೆ ನೋಡಿಕೊಳ್ಳುವುದು. ಕೆರೆಯ ಅಂಗಳ, ಬೀದಿಯಲ್ಲಿ ತಿಪ್ಪೆ ಆಗ್ದ ಹಾಗೆ ನೋಡಿಕೊಳ್ಳಬೇಕು. ಬೋರ್ ಹೋಲ್ ಕಕ್ಕಸ್ಸು ಮಾಡಬೇಕು, ಕುಡಿಯುವ ನೀರು ಶುದ್ಧವಾಗಿರುವಂತೆ ನೋಡ್ಕೊಳ್ಬೇಕು, ಊರಿನ ಮೋರಿಗಳಲ್ಲಿ ನೀರು ನಿಂತರೆ ಸೊಳ್ಳೆ ಹೆಚ್ಚಿ, ವಿಷಮಶೀತಜ್ವರ ಬರುವುದು, ಹೀಗೆ ಎಲ್ಲಾ ರೀತೀಲೂ ಮನೆ, ಮಂದಿ,

ಗ್ರಾಮ ಎಲ್ಲವನ್ನೂ ನಿರ್ಮಲವಾಗಿರಿಸಿದರೆ ದೇಹಕ್ಕೂ ಸುಖ, ಹೃದಯಕ್ಕು ಆನಂದ. ಉತ್ಸಾಹಶಾಲಿಯಾದ ನಾಯಕರಂಥ ಜುಂಜಪ್ಪನವರು ಇರುವುದರಿಂದ ಹೆಚ್ಚು ಶ್ರಮವಿಲ್ಲದೆ, ವೆಚ್ಚವಿಲ್ಲದೆ ಗ್ರಾಮವನ್ನು ಸ್ವರ್ಗವಾಗಿಡಬಹುದು. ಇವೆಲ್ಲಾ ನಮ್ಮ ಕೈನಲ್ಲೇ ಇದೆ. ಆ ಕೆಲಸ ಮಾಡಬೇಕಾದವ್ರು ಹಳ್ಳಿಯ ಜನರಾದ ನಾವು. ಇನ್ನಾದ್ರೂ ನಿಮ್ಮ ಗ್ರಾಮವನ್ನು ನೈರ್ಮಲ್ಯವಾಗಿಟ್ಟುಕೊಳ್ಳುತ್ತೀರೆಂದು ನಂಬಿರುವೆ. ಇಷ್ಟನ್ನು ಹೇಳಿ ನನ್ನೆರಡು ಮಾತುಗಳನ್ನು ಮುಗಿಸ್ತೇನೆ.

(ಕರತಾಡನವಾಗುವುದು)

ಜುಂಜಪ್ಪ : ಇಂದಿನ ದಿವಸ ಬೋರಣ್ಣ ಡಾಕ್ಟ್ರು, ಜಿಲ್ಲಾಧಿಕಾರಿಗಳಾದ ಮಾರಣ್ಣನವರು ನಿಮಗೆಲ್ಲಾ ಮನದಟ್ಟಾಗುವಂತೆ ಭಾಷಣ ನೀಡಿದ್ದಾರೆ. ಅವರಿಬ್ಬರಿಗೂ ನಮ್ಮ ಗ್ರಾಮಪಂಚಾಯಿತಿಯ ಪರವಾಗಿ ಅನಂತವಂದನೆಗಳು. ಅಷ್ಟು ಹೊತ್ತಿನಿಂದ ಅವರ ಹಿತನುಡಿ ಕೇಳಿದ ನಿಮ್ಮೆಲ್ಲರಿಗೂ ಮತ್ತೊಮ್ಮೆ ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಕೊನೆಯದಾಗಿ ಪಂಚಾಯಿತಿ ಅಧ್ಯಕ್ಷನಾಗಿ ಹೇಳವುದಾದ್ರೂ ಇಷ್ಟೇ. ಈ ಹೊತ್ತೇ ನಾವು ಛಲ ತೊಟ್ಟು ನಮ್ಮ ಊರನ್ನು ಮಾದರಿ ಊರಾಗಿ ಇಟ್ಟುಕೊಳ್ಳಬೇಕು. ಮತ್ತೊಮ್ಮೆ ಜಿಲ್ಲಾಧಿಕಾರಿಗಳು ಬಂದ್ರೆ ನಮ್ಮ ಹಳ್ಳಿಗೇ ಕರ್ನಾಟಕ ರಾಜ್ಯದಲ್ಲೇ 'ಆದರ್ಶ ಹಳ್ಳಿ'ಯಾಗಿ ಬಹುಮಾನ ಪಡೆಯಬೇಕು. ಅದಕ್ಕೆ ನೀವೆಲ್ಲಾ ಶ್ರಮಿಸಬೇಕು ಅಂತ ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

(ಎಲ್ಲರೂ ಹೊರಡುವರು)

ಜುಂಜಪ್ಪ : ಏನು ಬೋರಣ್ಣ, ಮಾರಣ್ಣನವರೇ ನೀವು ಬಂದು ಭಾಷಣಮಾಡಿದ ದಿವಸವೇ ಹೀಗಾಗ್ಬೇಕೇ? ಮಳೆ ಬಿದ್ದು ಈ ಹೊತ್ತೇ ನಮ್ಮ ಊರೆಲ್ಲಾ ಶುದ್ಧವಾಗ್ತಾ ಇದೆ. ಇದೇ ನಾಂದಿ ಅಂತ ಕಾಣುತ್ತೇ ನಮ್ಮೂರು ನೈರ್ಮಲ್ಯವನ್ನು ಪಡೆಯಲಿಕ್ಕೆ. ನೋಡಿ ಮಳೆ ಜೋರಾಗೇ ಬರ್ತಾ ಇದೆ.

ಬೋರಣ್ಣ : ನೋಡ್ದಾ ಹ್ಯಾಗಿದೆ ನಿಮ್ಮೂರ್ಗೆ ನಾವು ಕಾಲು ಹಾಕಿದ ಪ್ರಭಾವ.

ಮಾರಣ್ಣ : ಅಲ್ವೇ... ಸ್ವಲ್ಪ ಆಫೀಸಿನಲ್ಲಿ ಕುಳಿತು ಆಮೇಲೆ ಹೋಗೋಣ ಮನೆಯ ಕಡೆಗೆ.

ಜುಜಪ್ಪ : ಆಗ್ಲಿ... ನಡೀರಿ...

ಬೋರಣ್ಣ : ಏನು ಜುಂಜಪ್ಪನವರೇ ಮಳೆ ಸಂಪೂರ್ಣವಾಗಿ ನಿಂತಹಾಗಾಯ್ತು ಹೊರಡೋಣ್ವೇ?

ಜುಂಜಪ್ಪ : ಹೂಂ... ನಡೀರಿ.

(ಪರದೆ ಬೀಳುವುದು)

## ದೃಶ್ಯ-೫

(ಮೂವರು ದಾರಿಯಲ್ಲಿ ಹೋಗುತ್ತಿರುವಾಗ)

ಜುಂಜಪ್ಪ : ಸ್ವಲ್ಪ ಜ್ವಾಪಾನವಾಗಿ ನಡೀರಿ ಸ್ವಲ್ಪ ಜಿಗಟು ಮಣ್ಣಿನ ರಸ್ತೆ. ಸ್ವಲ್ಪ ಅತ್ತ ಇತ್ತ ನೋಡಿ ನಡೆಯಿರಿ...

ಮಾರಣ್ಣ : ಹಾಗನ್ನುವವರು ಒಂದು ಕೆಲಸ ಮಾಡಬಾರದೆ... ಹ್ಯಾಗಾದ್ರೂ ಊರಿನ ಹತ್ತಿರವೇ ಬೆಟ್ಟ ಇದೆ. ಜಲ್ಲಿಕಲ್ಲು ಒಡಿಸಿ ಪಂಚಾಯಿತಿ ಜೊತೆಗೆ ಸ್ವಲ್ಪ ಜನಗಳಿಂದ್ಲೂ ದುಡ್ಡೆತ್ತಿ ರಸ್ತೆ ಮಾಡಿಸಿದ್ರೆ ಎಷ್ಟು ಚೆನ್ನಾಗಿರುತ್ತೆ ಊರಿಗೆ. ಅದರ ಜೊತೆಗೆ ಶ್ರಮದಾನ ಶಿಬಿರದವರಿಂದ್ಲೂ, ಜಿಲ್ಲೆಯಿಂದ್ಲೂ ಸ್ವಲ್ಪ ಸಹಾಯ ಮಾಡ್ತೀವಿ ನಾವು.

ಬೋರಣ್ಣ: ನೋಡ್ತಾ ಇದ್ದೀರಾ ಮಾರಣ್ಣನವರೇ ಈ ಹಳ್ಳಕೊಳ್ಳಗಳು ಇದರಲ್ಲಿರೋ ಕೊಳಕು ನೋಡಿ. ಇದರಲ್ಲೇ ವಿಷಕ್ರಿಮಿಗಳು ಸೇರಿ ರೋಗಾಣುಗಳು ಹೆಚ್ಚಿ ರೋಗ ಹರಡುತ್ತೆ. ನೋಡಿ ಆ ಮನೆಮುಂದಿನ ಬಚ್ಚಲು, ನೊಣ ಸೊಳ್ಳೆಗಳು ನೋಡಿ ಹೇಗೆ ಹಾರಾಡ್ತಾ ಇವೆ. ಇವುಗಳಿಂದ್ಲೇ ಅಲ್ವೇ ಮಲೇರಿಯ ರೋಗ ಬರುವುದು. ಅದಕ್ಕೆ, ಕಾರಣ, ಈ ಕೊಳಕು ನೀರು ಚರಂಡಿಯಿಂದ ಹರಿದುಹೋಗಿ ಕೆರೆಕುಂಟೆಗಳಿಗೆ ತಲುಪಿ, ಬೇರೆ ರೀತಿಯ ರೋಗಾಣುಗಳು ಕುಡಿಯುವ ನೀರಿಗೆ ಸೇರಿ, ಅದರಿಂದಲೂ ಅನೇಕ ರೋಗಗಳು ಬರುವುದುಂಟು. ಆದ್ದರಿಂದಲೇ ಹೇಳೋದು ಈ ಗ್ರಾಮ ನೈರ್ಮಲ್ಯಕ್ಕೂ ಗ್ರಾಮಜನರ ಆರೋಗ್ಯಕ್ಕೂ ನಿಕಟ ಸಂಬಂಧವಿದೆಯೆಂದು. ನೋಡಿ ಆ ಕೆರೇಲೆ ಅವನು ಎಮ್ಮೆ ಮೈ ತೊಳೀತಿದ್ದಾನೆ. ಹುಡುಗರು ಸ್ನಾನ ಮಾಡ್ತಾ ಇದ್ದಾರೆ, ಬಟ್ಟೆ ಒಗೀತಿದ್ದಾರೆ, ನೀರು ಕುಡೀತಿದ್ದಾರೆ, ಪಕ್ಕದಲ್ಲೇ ಮಲ ಮೂತ್ರ ವಿಸರ್ಜನೇನೂ ಮಾಡ್ತಾ ಇದ್ದಾರೆ. ಆ ನೀರು ಕುಡಿದ್ರೆ ವಾಂತಿ ಭೇದಿ, ಕೊಕ್ಕೆ ಹುಳುವಿನ ರೋಗ ಇನ್ನಾವ ರೀತಿಯ ರೋಗವಾದ್ರೂ ಬರ್ದೆ ಇರುತ್ಯೇ? ಚಪ್ಪಲಿ ಇಲ್ದೇ ಎಷ್ಟು ಜನ ನಡೆದುಕೊಂಡು ಹೋಗ್ತಾ ಇದ್ದಾರೆ ನೋಡಿ, ಈ ಹೇಸಿಗೆ ಎಲ್ಲಾ ತುಳಿಯುವಾಗ ಕೊಕ್ಕೆಹುಳವಿನ ರೋಗ ಬಂದೇ ಬರುತ್ತೆ. ಆದ್ದರಿಂದಲೇ ಹೇಳೋದು ಶುಚಿಯಾದ ಮನೆ, ಉಡುಪು, ಆಹಾರ, ಶುಚಿಯಾದ ಹಳ್ಳಿ ಇವು ಅವಶ್ಯ.

ಜುಂಜಪ್ಪ: ಮಾತಾಡ್ತಾ ಮಾತಾಡ್ತಾ ಜಾರ್ಬಿಟ್ಟೀರಿ.

(ಜುಂಜಪ್ಪನೇ ಜಾರಿ ಬೀಳುವನು. ಮೈಯೆಲ್ಲಾ ಬದಿಯಾಗಿ 'ಹ್ಹಾಂ' ಎಂದು ಕೊರಗುತ್ತಿರಲು ಪಕ್ಕದ ಜನರು ನಗಲಾರಂಭಿಸುವರು. ಬೋರಣ್ಣ ಮಾರಣ್ಣ ಇಬ್ಬರೂ ಮೆಲ್ಲನೆ ಎತ್ತಿ ನಿಲ್ಲಿಸಿ ಜನರನ್ನು ಉದ್ದೇಶಿಸಿ)

ಮಾರಣ್ಣ : ನಿಮಗೆ ಸ್ವಲ್ಪಾನೂ ನಾಚಿಕೆ ಆಗೋಲ್ವೇ? ಬಿದ್ರು ಅಂದ್ರೆ ಅದು ನಿಮಗೆ ತಮಾಷೇನೋ. ನಿಮ್ಮ ಊರಿನ ರಸ್ತೆ ಅಷ್ಟರಮಟ್ಟಿಗಿದೆ ಅಂತ ತಿಳ್ಕೊಳ್ಳಿ.

ಅದನ್ನ ಸರಿಮಾಡ್ದೇ ಹೋದ್ರೆ ನೀವು ಇಲ್ಲಿ ತಿರುಗಾಡುವಾಗ ಜಾರಿಬಿದ್ದು ಹಲ್ಲನ್ನೇ ಮುರಿದುಕೊಳ್ಳುವುದು ಖಂಡಿತ. ನಡೆಯುವವನು ಎಂದಾದ್ರೂ ಎಡವಿಯೇ ಎಡುವುತ್ತಾನೇ.

ಬೋರಣ್ಣ: ಏನು ತುಂಬಾ ನೋವೇ? ಏನಾದ್ರೂ ಉಳಿಕಿತೇ?

ಜುಂಜಪ್ಪ: ಹೌದು ಕೈನ... ನರ... ಸ್ವಲ್ಪ ಹ್ಞಾಂ...

ಬೋರಣ್ಣ: ಪರ್ವಾಗಿಲ್ಲ ನಡೀರಿ ಮನೇಲಿ ಅದಕ್ಕೆ ಸರಿಯಾದ ಚಿಕಿತ್ಸೆ ಮಾಡೋಣ.

(ಎಂದು ಕರೆದುಕೊಂಡು ಮನೆಗೆ ಹೊರಡುವರು)

## ದೃಶ್ಯ-೬

(ರಾಜಿ ಗಂಡನ ತೋಳಿಗೆ ಉಪ್ಪಿನ ನೀರಿನ ಶಾಖ ಕೊಡ್ತಾ ಇವ್ರಾಳೆ. ಆಗ)

ರಾಜಿ : ನಿಮ್ಮ ಸ್ನೇಹಿತ್ರು ಹೇಳ್ತಿದ್ರು ಅದನ್ನೆಲ್ಲಾ ನೀವು ಗಮನ ವಹಿಸದೆ ಕುಳಿತ್ರೆ ಅದ್ಕೇ ಈ ಹೊತ್ತು ಆ ನೋವು ನೀವೇ ತಿನ್ಬೇಕಾಗಿ ಬಂತು. ಏನೋ ಕೈ ಉಳಿಕಿದುದಕ್ಕೇನೋ ಸರಿಹೋಯ್ತು ಇನ್ನೇನಾದ್ರೂ ಅಪಾಯವಾಗಿದ್ರೆ...

ಜುಂಜಪ್ಪ: ಅಷ್ಟು ದಿನದಿಂದ್ಲೂ ಸೋಂಬೇರಿಯಾಗಿ, ಅಧಿಕಾರದ ಮದದಲ್ಲಿ ಅವನ್ನು ಮರೆತು ಏನೇನೋ ಮಾಡಲಿಕ್ಕೆ ಆರಂಭ ಮಾಡ್ದೆ. ಅದ್ಕೇ ಈಗ ದೇವರು ನನಗೆ ಹೀಗೆ ಮಾಡಿದ.

ರಾಜಿ : ದೇವ್ರ್ಯಾಕೆ ನೀವೇ ಮಾಡ್ಕೊಂಡ್ಕೆಲ್ಲ. ಅಧಿಕಾರ ಸಿಕ್ಕಿದಾಗ ಕೆಲಸ ಮಾಡಿ ಸೈ ಅನ್ನಿಸ್ಕೊಳ್ಬೇಕು. ಅದು ಬಿಟ್ಟು ಲಂಚ ತಿನ್ನೋದು, ಸೋಗು ತೋರಿಬಿಟ್ಟು ಜಂಬ ಮಾಡಿದ್ರೆ ಜನಗಳು ಮುಂದಿನಸಾರಿ ತಾನೇ ನಿಮ್ಮನ್ನ ತರ್ತಾರ್ಯೇ? ಏನೋ ಮಾರಾಯ ಈತನ ಕಾಲದಲ್ಲಿ ಇಷ್ಟಾಯ್ತುಪ್ಪಾ. ಮಹಾಪುರುಷ ಅಂತ ಅನ್ನಿಸ್ಕೊಳ್ದೇ ಹೋದ್ರೆ ಏನ್ತಾನೆ ಪ್ರಯೋಜನ ಹೇಳಿ.

ಜುಂಜಪ್ಪ: ಎಲ್ಲರೂ ಬುದ್ಧಿ ಹೇಳೋವ್ರೇ ಆದ್ರಿ.

ರಾಜಿ : ಎಲ್ಲರಿಗೂ ಬುದ್ಧಿ ಹೇಳೋವ್ರು ನೀವೆ ಬುದ್ಧಿ ಹಿನರಾದ್ರೆ ಬುದ್ಧಿ ಹೀನ್ರೆ ನಿಮಗೆ ಬುದ್ಧಿ ಹೇಳ್ಬೇಕಾಗುತ್ತೆ.

(ಬೋರಣ್ಣ ಮಾರಣ್ಣ ಪ್ರವೇಶಿಸುತ್ತಾ)

ಬೋರಣ್ಣ: ಏನಪ್ಪಾ, ಜುಂಜಪ್ಪನವರೇ ಹ್ಯಾಗಿದೆ ನೋವು.

ಜುಂಜಪ್ಪ: ಪರವಾಗಿಲ್ಲ (ರಾಜಿ ಒಳ ಹೋಗುತ್ತಿರಲು) ಸ್ವಲ್ಪ ಕಾಫಿ ತೆಗೆದುಕೊಂಡು ಬಾರೆ.

ಬೋರಣ್ಣ: ಅಯ್ಯೋ ಕಾಫಿ ಬೇಡ್ವಪ್ಪ ಸಧ್ಯ....

ಜುಂಜಪ್ಪ: ಟೀ ಮಾಡಿಸೋಣ್ವೇನು.

ಬೋರಣ್ಣ: ಏನೂ ಬೇಡಪ್ಪಾ...

ಜುಂಜಪ್ಪ: ಇಲ್ಲ ಇಲ್ಲ ಹೋಗೇ... ಅನ್ನೋದು ಹಾಗೆ ಹೋಗ್ಲಿ ಬೇಲದ ಹಣ್ಣಿನ ಪಾನಕಾನೇ ಕೊಟ್ರೆ... ಕುಡ್ಡೇ ಕುಡಿತಾರೆ.

(ರಾಜಿ ಹೊರಡುವಳು)

(ಮಾವ ಪ್ರವೇಶ ಮಾಡಿ ದೂರವಲ್ಲೇ ನಿಂತುಕೊಳ್ಳುವನು)

ಜುಂಜಪ್ಪ: ಎನ್ಲಾ ಮಾದ ಜಾತ್ರೆಗೋಗಿದ್ದು ಬನ್ಬುಟ್ಯಾ.

ಮಾವ : ಹೂಂ ಬುದ್ಧಿ.

ಜುಂಜಪ್ಪ: ಎಲ್ಲಾ ಸುಖ ಮುಖ್ಯವಾಗಿ ದೇವರ ಕಾರ್ಯ ನಡೀತು ತಾನೇ.

ಮಾದ : ನಂದೇನೋ ಆಯ್ತು ಬುದ್ಧಿ ಆದ್ರೆ... ಈ ಸಾರಿ... ಮಾದಪ್ಪನ ಬೆಟ್ಟಕ್ಕೋಗಿದ್ದು ಬರವು ಸ್ವಲ್ಪ ಜನ ಕಾಲ್ರಾದಿಂದ ಸೊತ್ತೋಗ್ಬುಟ್ರು ಬುದ್ಧಿ.

ಜುಂಜಪ್ಪ: ಅದ್ಯಾಕೆ ಇನ್ನಾಕುಲೇಷನ್ ಮಾಡ್ಲಿಲ್ವಾ?

ಮಾದ : ಮೊದ್ಲೇ ಗೊತ್ತಲ್ಲ ಬುದ್ಧಿ ಅದು ಕಾಲ್ರಾದ ಜಾಗ ಅಂತಾ. ಚೂಜಿಚುಚ್ಚುದ್ರು ಅನ್ನಿ. ಅಂಗಾರೂ ಎಷ್ಟೋಜನ ಎದ್ರುಕೊಂಡು ಹೊಂಟೋದ್ರು. ನಾನು ಒಯ್ತಿದ್ದಿ ಅಂಗೇ ಈ ಚೂಚಿ ಚುಚ್ಚಸ್ಕಂಡು ನೋವ್ಯಾಕು ಮಾಡಿಸ್ಕೊಳದು ಅಂತ. ಸರಿ ಅದ್ಯಾವನೊ ಇದ್ದವ ದರದರನೆ ಎಳ್ಕಂಡೋಗಿ ಚುಚ್ಚುಸ್ಬಟ್ಟ. ಸಧ್ಯ ನಂಗೇನೂ ಆಗ್ಲಿಲ್ಲ ಬುದ್ಧಿ. ಎಲ್ಲಾ ಮಾದಪ್ಪನ ದಯ.

ಜುಂಜಪ್ಪ: ಸರಿ ಒಳ್ಳೇದ್ನೇ ಮಾಡಿದ ಬುಡು.

ಬೋರಣ್ಣ: ಮಾದಪ್ಪನ ದಯದ ಜೊತೆಗೆ ಈ ಇನ್ನಾಕುಲೇಷನ್ ಒಳ್ಳೇದು ಮಾಡ್ತು ಅನ್ನಿ.

ಜುಂಜಪ್ಪ: ಈಗೇನು ಪರ್ವಾಗಿಲ್ಲ, ಹಿಂದೆ ಎಷ್ಟು ಜನ ಕಾಲ್ರಾದಿಂದ ಸಾಯ್ತಿದ್ರು ಗೊತ್ತೇ?

ಬೋರಣ್ಣ: ಕಾರಣ ಏನು ಗೊತ್ತೇ?

ಜುಂಜಪ್ಪ: ಆ ದೇವರು ಬಹಳ ಮುಂಗೋಪಿ, ಆಚಾರ-ವಿಚಾರ ಸರಿಯಾಗಿ ಮಾಡದೆಹೋದ್ರೆ ಆಗೇ ಅಂತೆ.

ಬೋರಣ್ಣ: ಅದಕ್ಕೆ ಕಾರಣ ನಾನು ಹೇಳ್ತೀನಿ ಕೇಳಿ. ಮೊದ್ಲು ಜನಗಳು ಅಲ್ಲಿಗೋಗುವಾಗ ನಡ್ಕೊಂಡೋಗ್ತಿದ್ರು. ಆಗ ಆಚಾರ ವಿಚಾರ ಅಂದ್ರೆ ದಾರೀಲಿ ಸಿಕ್ಕಿದ ಕೆರೆ ಪಕ್ಕದಲ್ಲೇ ಮಲಮೂತ್ರ ಮಾಡ್ತಿದ್ರು. ಅದು ಮಳೆನೀರಿನ ಜೊತೆ ಕೆರೆಗೆ ಸೇರಿಕೊಂಡು ಆ ರೋಗಾಣುಗಳುಳ್ಳ ನೀರನ್ನೇ ಕುಡಿದು ಬುತ್ತಿ ಸೇವಿಸ್ತಿದ್ರುನೋಡಿ ಅದ್ಕೇ ವಾಂತಿ ಭೇದಿ-ಕಾಲರ ಅಂತ ಬರ್ತಿದ್ದುದು.

ಮಾರಣ್ಣ : ಆದ್ರೆ ಈಗ ಬಸ್ಸಿದೆ. ದಾರೀಲಿ ಆಗ್ದೇ ಹೋದುದು ಬೆಟ್ಟದಲ್ಲೇ ಆಗ್ತದೆ. ಆದ್ರೂ ಮೊದಲಷ್ಟಿಲ್ಲ, ಆಚಾರ ಅನ್ನೋದು ಅಶುಚಿತ್ವ. ಆ ಪ್ರದೇಶ ಶುದ್ಧವಾಗಿದ್ರೆ ಏನೂ ಆಗ್ತಿರ್ಲಿಲ್ಲ ಅಂತ ನಾನು ಹೇಳ್ತೀನಿ.

ಮಾದ : ಆಗ್ಯಾ ಬುದ್ಧಿ, ದ್ಯಾವರ ಮೈಮೆ ಇಲ್ಲ ಅಂದರ್ಯಾ.

ಜುಂಜಪ್ಪ: ದೇವರ ಮೈಮೇನು ಇಲ್ಲಾ ಅಂತ ಹೇಳಾಕಾಗೋದಿಲ್ಲ. ಮುಖ್ಯವಾಗಿ ರೋಗಕ್ಕೆ ಕಾರಣ ಅದೇ ಡಾಕ್ಟ್ರು, ಜಿಲ್ಲಾಧಿಕಾರಿಗಳು ಹೇಳಿದ್ದೇ ಅಂತ ನನ್ನ ನಂಬಿಕೆ. ದೇವರಿಗೆ ನಡೆಕೊಳ್ಳಬೇಕಾದ ಆಚಾರ ಅಂದ್ರೂ ಆ ಪ್ರದೇಶದ ನೈರ್ಮಲ್ಯ ಮುಖ್ಯ ಅಂತ.

ಮಾರಣ್ಣ : ಹೌದೌದು...ಈಗೀಗ ಜುಂಜಪ್ಪನವರು ದಾರಿಗೆ ಬರ್ತಾ ಇದ್ದಾರೆ.

ಜುಂಜಪ್ಪ: ಬಿದ್ದು ಅನುಭವ ಆದಮೇಲೆ ಬುದ್ಧಿ ಸ್ವಲ್ಪ ಚಿಗುರ್ತಾ ಇದೆ.

ಮಾದ : ಏನ್ಬುದ್ಧಿ... ನೀವು ಬಿದ್ರ್ಯಾ.

ಜುಂಜಪ್ಪ: ಊಂಕಣ್ಲಾ...ಜಾರಿ ಬಿದ್ದು ಬಿಟ್ಟೆ ನಿನ್ನೆ ಮಳೇಲಿ.

ಮಾದ : ಯಪ್ಪೋ...ಯಪ್ಪೋ...ಎಂಥ ಕೆಲಸವಾಯ್ತು?

ಜುಂಜಪ್ಪ: ಆಯ್ತು...ಹೋಗಿ ದನಿ ಕೊಟ್ಟಿಗೇನ ಸ್ವಲ್ಪ ಸರಿಯಾಗಿ ಗುಡಿಸಪ್ಪ ಮಾದ.

ಬೋರಣ್ಣ: ಮಾದ ಜುಂಜಪ್ಪನವರು ಹೀಗಂದಮೇಲೆ ನನಗೆ ಒಂದು ವಿಷಯ ಜ್ಞಾಪಕ ಬಂತು. ಈ ಮನೇಲಿ ಯಾಕಪ್ಪ ಅಷ್ಟು ಸೊಳ್ಳೆಗಳು ಅಂದ್ರೆ ದನೀನ ಕೊಟ್ಟಿಗೇನ ಸರಿಯಾಗಿ ಇಟ್ಟಿಲ್ಲ, ಕಸ ಹಿತ್ಲಲ್ಲಿ ಹಾಕದೆ ಮನೆ ಮುಂದಗಡೆ ಇಟ್ಟಿದ್ದೀರಿ. ಸರಿಯಾಗಿ ಚೊಕ್ಕಟವಾಗಿಡಬೇಕು.

ಮಾದ : ಅಯ್ ಬುಡಿ ಬುದ್ಧಿ ಜಿನಾಗ್ಲೂ ನಾನು ಮುಂದಗಡೆ ಗುಡುಸ್ತೀವ್ನಿ ಅಂಗೂರೂ ಅಕ್ಕಪಕ್ಕದವರ ಮನೆಯ ಮುಂದುಗಡೆಯಿಂದ ತೂರಿಕೊಂಡು ಬರ್ತೈತೆ. ನಾ ಯಾನ್ ಮಾಡ್ಲಿ ಬುದ್ಧಿ.

ಬೋರಣ್ಣ: ಅವರ್ಗೊಗ್ಗಿಸಿ ಹೇಳಬೇಕಪ್ಪಾ.

ಮಾದ : ಆ ಅಕ್ಕ ಪಕ್ಕದವರು ಬೇಕೂ ಅಂತ್ಲೇ ಅಂಗ ಮಾಡ್ತವೇ. ಗುಡಿಸಿಸೋದೆ ಇಲ್ಲ. ಪಂಚಾಯಿತಿ ಅಧ್ಯಕ್ಷರ ಮನೆಗೆ ಕಸ ಬೀಳ್ಲಿ ಅಂತ ಮಾಡ್ತವ್ರೆ. ಅವರಿಗೂ ನಮ್ಮೊಡ್ಡೇನವರಿಗೂ ಆಗಕಿಲ್ಲ ಬುದ್ಧಿ. ತುಂಬಾ ಹೊಟ್ಟೆ ಕಿಚ್ಚು ಪಡ್ತಾರೆ ಬುದ್ಧಿ. ತಾವು ಚೇರ್ಮನ್ ಆಗ್ನಿಲ್ವಲ್ಲಾ ಅಂತ.

ಜುಂಜಪ್ಪ: ಆಹಾ ಈಗ ಅಕ್ಕಪಕ್ಕದವರು ನನಗೆ ಹೀಗಾಯ್ತು ಅಂತೇನಾದ್ರೂ ಗೊತ್ತಾದ್ರೆ ಹೇಸಿಕೊಂಡು ನಗ್ತಾರೆ.

ಮಾದ : ಅಪಾಯ ತಪ್ಪಿ ಬಿದ್ರೆ ಏನು ಮಾಡಲಿಕ್ಕೆ ಸಾಧ್ಯ ಹೇಳಿ ಮತ್ತೆ.

ಬೋರಣ್ಣ: ಇನ್ನಂದು ಮಾಡಿಸಿ ಜುಂಜಪ್ಪ, ಎರಡು ಮನೆ ಮೂರು ಮನೆಗೊಂದು ತೊಟ್ಟಿ ಕಟ್ಟಿಸಿಬಿಡಿ ಅಥವಾ ಆಳವಾಗಿ ಗುಂಡಿ ತೋಡಿಸಿಬಿಡಿ. ಎಲ್ಲರೂ ಅಲ್ಲಿಗೆ ಕಸ ತುಂದು ಹಾಕಿ ಎಂದು , ಆಮೇಲೆ ದಿನ ಬೆಳಗ್ಗೆ ಅದನ್ನು ಊರ ಹೊರಗಡೆ ಹಾಕಿಸಿದರೆ ಅದು ಒಳ್ಳೆಯ ಗೊಬ್ಬರವೂ ಆಗುತ್ತೆ. ಬೆಳೆ ಬೆಳೆಯಲಿಕ್ಕೆ ರೈತರಿಗೆ ಸಹಾಯವೂ ಆಗುತ್ತೆ. ಜಮೀನುದಾರರು ಈ ಕೆಲಸ ಮಾಡಿದರೆ ಅವರಿಗೇ ಬಹಳ ಫಾಯಿದೆ ಅಲ್ವೇ?

ಜುಂಜಪ್ಪ: ಕೆಲವು ಕಡೆ ಮಾಡ್ಸಿವ್ನಿ. ಬೇಕೂ ಅಂತ್ಲೇ ಅವರು ಬೀದಿಗೆ ಎಸೆದು ನಮ್ಮ ಮೂಗು ಕಟ್ಲೀ ಅನ್ನೋ ದೃಷ್ಟಿಯಿಂದ್ಲೆ ನಮ್ಮೂರ್ರ ಹಿರಿಯರು ಮಾಡಿಸ್ತವ್ರೇ ಏನ್ಮಾಡೋದು?

ಬೋರಣ್ಣ: ಅವರಿಗೆ ನಾನು ಬುಧ್ಧಿ ಕಲಿಸ್ತೀನಿ ಸುಮ್ನಿರಿ.

ಮಾದ : ನಮ್ಮೊಡೆಯನೋರ್ಗೇ ಆಗ್ನಿಲ್ಲ ನಿಮ್ಗೆಲಾಯ್ತೈತಾ ಬುದ್ಧಿ.

ಮಾರಣ್ಣ : ನೋಡ್ತಾ ಇರು ಏನಾಗುತ್ತೆ ಅಂತ? ನಮ್ಮ ಡಾಕ್ಟ್ರು ಈ ಊರಿಗೇ ದಾರಿದೀಪ ಇದ್ದಹಾಗೆ, ಅವರು ಹೇಳಿದಾಗೆ ಕೇಳಬೇಕು.

ಜುಂಜಪ್ಪ: ನನ್ನ ಕಂಡ್ರಾದ್ರೂ ಹೊಟ್ಟೆಕಿಚ್ಚು ಡಾಕ್ಟರನ್ನೇನ್ಮಾಡ್ತಾನೆ? ಅವರು ಹೇಳಿದ ಹಾಗೆ ಕೇಳಲೇಬೇಕಾಗುತ್ತೆ.

ಮಾದ : ಊಂ ಬುದ್ಧಿ...ನಾನು ಅಂಗಾರೆ ಕೊಟ್ಗೆ ಕಸ ಗುಡಿಸ್ಬುಟ್ಟು ದನಗಳ ಮೈ ತೊಳ್ಕಂಡ್ಬನ್ಬಡ್ತೀನಿ ಬುದ್ಧಿ.

ಜುಂಜಪ್ಪ: ಸರಿ ಹೋಗಿಬಾ...ಸ್ವಲ್ಪ ಹಾಗೆ ಚರಣಿಗೆನೆಲ್ಲಾ ಗುಡಿಸಿ ಹೊಸದಾಗಿ ವಸಿ ರಾಗಿ ಹುಲ್ಲು ತುಂಬಿಬಿಡು.

ಮಾದ : ಆಗ್ಲಿ ಬುದ್ಧಿ...

(ಹೊರಡುವನು)

ಮಾರಣ್ಣ : ಜುಂಜಣ್ಣ.

ಜುಂಜಪ್ಪ: ಏನು ಸಾರ್.

ಮಾರಣ್ಣ : ನಾನು ನಿಮ್ಮೂರ್ರಿಗೆ ಬಂದು ಮೂರು ದಿವಸಗಳೇ ಆಯ್ತು ನಾನು ಬರ್ತೀನಪ್ಪಾ.

ಜುಂಜಪ್ಪ: ಇನ್ನೆರಡು ದಿನ ಇದ್ದು ನಮ್ಮ ಹಳ್ಳೀಲಿ ಆರೈಕೆ ಮಾಡಿಸಿಕೊಂಡು ಹೋಗಬೇಕು.

ಮಾರಣ್ಣ : ಇಲ್ಲಪ್ಪ ಒಳ್ಳೆ ಆರೈಕೆಯಲ್ಲಿ ನಿಮ್ಮೂರ್ರಿದ್ರೆ ಖಾಯಿಲೆ ಕೊಂಡುಕೊಂಡು ಹೋಗಬೇಕಾಗುತ್ತೆ.

ಜುಂಜಣ್ಣ: ಅದ್ಕೆ ಡಾಕ್ಟ್ರಿದ್ದಾರಲ್ಲಾ ಬೋರಣ್ಣ.

ಮಾರಣ್ಣ : ಸಧ್ಯ ನಿಮ್ಮೂರಿನ ಪರಿಸ್ಥಿತಿ ಹೀಗಾದ್ರೆ ಡಾಕ್ಟರನ್ನೂ ನಮ್ಮೂರಿನ ಆಸ್ಪತ್ರೆಗೆ ಸೇರಿಸ್ಬೇಕಾದೀತು.

ಬೋರಣ್ಣ: ಹೌದು ಜುಂಜಣ್ಣ ಮಾರಣ್ಣನವರು ಹೇಳೋದು ನಿಜವೇ.

ಜುಂಜಪ್ಪ: ನಮ್ಮೂರ್‌ನಲ್ಲಿ ನೀವು ಮತ್ತೊಂದು ಸಾರಿ ಬರೋತನ್ಕ ನಂದನವನವ್ನಾಗಿ ಮಾಡ್ದೇಹೋದ್ರೆ ನನ್ನ ಹೆಸ್ರು ಜುಂಜಣ್ಣನೇ ಅಲ್ಲ. ರಸ್ತೆ, ಚರಂಡಿ, ಕಕ್ಕಸ್ ಎಲ್ಲಾನೂ ಸರಿಮಾಡ್ಬಿಟ್ಟು ಸಾಲುಮರ ನೆಡಿಸಿ. ಹತ್ತಿರದಲ್ಲೆಲ್ಲಾ ಪಾರ್ಕುಗಳನ್ನು ಮಾಡಿ. ನಮ್ಮೂರ ಹವಾಗುಣ ಬಹಳ ಚನ್ನಾಗಿದೆ ಅಂತ ತಿಂಗಳಿಗೊಮ್ಮೆ ಏನು ವಾರಕ್ಕೊಂದು ದಿನ ನಮ್ಮೂರ ಗಾಳಿ ಕುಡಿದುಕೊಂಡು ಹೋಗಬೇಕು ಹಾಗೆ ಮಾಡ್ತೀನಿ. ಅದಕ್ಕೆ ಜೊತೆಲಿ ನಮ ಡಾಕ್ಟು ಬೋರಣ್ಣನವರು ಇದ್ದಾರೆ ಪ್ರಯತ್ನ ಪಟ್ಟು ಸಾರ್ಥಕ ಮಾಡಿಕೊಳ್ತೇನೆ.

ಮಾರಣ್ಣ : ಸಧ್ಯ ಅಷ್ಟು ಮಾಡಿದ್ರೆ ಕರ್ನಾಟಕ ರಾಜ್ಯದಲ್ಲೇ ಉತ್ತಮ ಗ್ರಾಮ ನೈರ್ಮಲ್ಯಕ್ಕೆ ಬಹುಮಾನ ಕೊಡುವಂತೆ ಶಿಫಾರಸ್ ಮಾಡಿಸೋಣ.

ಜುಂಜಪ್ಪ: ಇನ್ನೊಂದೊರ್ಷ ಟೈಂ ಕೊಡಿ. ನಾವೇನ್ಮಾಡ್ತೀವಿ ಅಂತ ನೋಡ್ರುವಂತೆ. ನಾನೇ ನಿಂತು ನಮ್ಮ ಗ್ರಾಮಕ್ಕಾಗಿ, ನಮ್ಮ ಗ್ರಾಮದ ಉದ್ಧಾರಕ್ಕೆ ದುಡೀತೀನಿ.

ಮಾರಣ್ಣ : ನೀವು ಹಾಗೆ ಮಾಡಿದ್ರೆ ಖಂಡಿತ ನಿಮ್ಮ ಹೆಸರು, ನಿಮ್ಮ ಊರ ಹೆಸರು ಚಿರಸ್ಥಾಯಿಯಾಗಿ ಉಳಿಯುತ್ತದೆ.

ಜುಂಜಪ್ಪ: ಏನೋ ನಿಮ್ಮ ಬಾಯಿ ಹರಕೆಯಿಂದ ಒಳ್ಳೆದಾಗ್ಲಪ್ಪ.

ಮಾರಣ್ಣ : ಸರಿ ಬೋರಣ್ಣಾ, ಜುಂಜಣ್ಣಾ ನಾನು ಬರ್ತೀನಿ, ನೀವು ನನ್ನನ್ನು ತಡೀಬೇಡಿ ಬೇಕಾದಷ್ಟು ಉಳಿದುಹೋಗಿವೆ. (ರಾಜಿ ಬರುವಳು) ಬರ್ತೀವಮ್ಮಾ

ರಾಜಿ : ಏನು ಇನ್ನೊಂದೆರಡು ದಿನ ಇರಬಹುದಾಗಿತ್ತು.

ಮಾರಣ್ಣ : ಇಲ್ಲಮ್ಮ ಕೆಲ್ಸ ಇದೆ.

ಜುಂಜಪ್ಪ: ಸರಿ...ಮತ್ತೆ...

ಮಾರಣ್ಣ : ನಿಮ್ಮೂರು ಚೆನ್ನಾದಮೇಲೆ.

ಬೋರಣ್ಣ: ಇನ್ನೊಂದು ವರ್ಷದೊಳಗೆ ಮಾಡ್ತೀನಿ ಅಂತ ಹೇಳಿಯೇ ಇದ್ದಾರಲ್ಲ. ಮುಂದಿನ ವರ್ಷ 'ವನಮಹೋತ್ಸವ'ಕ್ಕೆ ಇವರನ್ನೇ ಕರೆಸೋಣ ಜುಂಜಪ್ಪನವರೇ.

ಜುಂಜಪ್ಪ: ಬೇಕಾದ್ರೆ ಇಂಥ 'ಆರೋಗ್ಯ ದಿನಾಚರಣೆಗೆ' ಕಳಿಹಿಸಿದ್ರೂ ಆಯ್ತು.

ಮಾರಣ್ಣ : ಏನ್ಮಾಡ್ತೀರೋ ನೋಡೋಣ ಅಳಿಯನ ಕುರುಡು...

ಬೋರಣ್ಣ: ಬೆಳಗಾದಮೇಲೆ.

(ಮೂವರು ನಗುವರು. ಮಾರಣ್ಣನನ್ನು ಬೀಳ್ಕೊಡಲು ಇಬ್ಬರು ಹಿಂಬಾಲಿಸುತ್ತಾರೆ)

(ಪರದೆ ಬೀಳುವುದು)

## ದೃಶ್ಯ-೭

(ದಾರಿಯಲ್ಲಿ ಬೋರಣ್ಣ ಹೋಗುತ್ತಿರಲು ಅಪ್ಪಣ್ಣ ಉಗಿಯುತ್ತಾ ಹೋಗುತ್ತಿದ್ದಾನೆ)

ಜುಂಜಪ್ಪ: ....ಓ ನಮಸ್ಕಾರ ಸಾರ್.

ಬೋರಣ್ಣ: ನಮಸ್ಕಾರ.

ಜುಂಜಪ್ಪ: ಅಪ್ಪಣ್ಣಾ...

ಅಪ್ಪಣ್ಣ : ನ...ಮ..ಸ್ಕಾರ (ತಿರಸ್ಕಾರದ ನಟನೆಯಿಂದ)

ಜುಂಜಪ್ಪ: ನಿನ್ನ ನಮಸ್ಕಾರಕ್ಕೆ ಬೆಂಕಿ ಬಿತ್ತು.

ಬೋರಣ್ಣ: ಯಾಕೆ ಜುಂಜಪ್ಪನವರೇ.

ಅಪ್ಪಣ್ಣ : ಅವರಿಗೂ ನನಗೂ ಸ್ವಲ್ಪ ಹಾಗೇ-ಹಾಗೇ.

ಜುಂಜಪ್ಪ: ಹಾಡು ಹಾಡ್ತಾ ರಾಗ ಉಗೀತಾ ಉಗೀತಾ ರೋಗ ಅಂತ ಸುಮ್ನೇ ದೊಡ್ಡವ್ರೇಳ್ತಾರಾ? ಈಗ ನಾನು ದಾರೀಲಿ ಬರ್ತಾ ನೋಡಿತ್ಲೇ ಇವ್ನಿ ಸುಮಾರು ಐದು ನಿಮಿಷಕ್ಕೆ ಐವತ್ತು ಸಾರಿ ಉಗೀತಾ ಅವ್ನಲ್ಲ ಇವನಿಗೇನು ಬಂದಿರೋದು ದಾಡಿ. ಹೊತ್ತು ಹೋಗ್ಲಿ ಅಂದ್ರೆ ದೇವಸ್ಥಾನದ ಹತ್ತಿರವೇ ಮಠದ ಹತ್ತಿರವೇ ಉಗೀತಾನಲ್ಲಾ. ಇವನಿಗೆ ಏನಾಗುತ್ತೆ ನೋಡ್ತಾ ಇರಿ ಡಾಕ್ಟೈ ಈ ಪಾಪಕ್ಕೆ ಗಂಡಾಮಲೆರೋಗ ಬಂದ್ಬುಡ್ತದೆ.

ಅಪ್ಪಣ್ಣ : ಏನೋ ಅದು ನಾಕಲ್ತ ಬುದ್ಧಿ ಸಾರ್.

ಜುಂಜಪ್ಪ: ಅದೇನೋ ನಿಜ. "ನಾಕಲ್ತ ಬುಡು ಕಲ್ಕೇತಿ ಅಂದ್ರೆ ಊರ ಬಿಟ್ರು ಬರಲ್ಲಾ ಅಂದಳಂತೆ ಅವಳು" ಹಾಗೇ ಇವನು ಕಲ್ತಬುದ್ಧಿ ಎಲ್ಲಿ ಬಿಡಲಿಕ್ಕಾಗುತ್ತೆ ಹೇಳಿ.

ಬೋರಣ್ಣ: ಏನೋ ಹುಟ್ಟಿದ ಸುಳಿ ಬೋಳಿಸಿದ್ರೆ ಹೋಗುತ್ತೇ ಜುಂಜಪ್ಪ ನವ್ರೇ. ನಿವೇಳಿದ್ರಿ ದೇವಸ್ಥಾನ ಗುರುಮಠದ ಹತ್ರ ಉಗಿದ್ರೆ ಗಂಡಾಮಾಲೆ ಬರುತ್ತೆ ಅದು ಬರುತ್ತೆ ಇದುಬರುತ್ತೆ ಅಂತ. ಹಿಂದಿನವರು ಹೇಳಿರೋದು ಅದನ್ನೋಡಿಯಲ್ವೇ ರಸ್ತೆಯ ಪರಿಸರದ ಶುದ್ಧವಾಗಿರ್ಲಿ ಅಂತ.

ಜುಂಜಪ್ಪ: ಸರಿ ಈ ಪಾಟಿ ಗೊಣ್ಣೇ ತೆಗೀತಾ ತೊಂಟೆ ತೊಂಟೆ ಗೊದ್ಲೆ ಉಗೀತಾ ಇದ್ರೆ, ಬೇರೆಯುವರ ಕಾಲಿಗೆ ಅಂಟ್ಕೊಳೋಲ್ವೇ? ಅದು ಅಸಹ್ಯವಲ್ಲದೆ ಚೆನ್ನಾಗಿರುತ್ತೇ? ಅಶುದ್ಧವಲ್ಲಿ ಅಶುದ್ಧತೆ.

ಬೋರಣ್ಣ: ಈಗ ಅಪ್ಪಣ್ಣನವರಿಗೆ ಶ್ವಾಶಕೋಶ ರೋಗ ಅಂತ ಕಾಣುತ್ತೆ. ಅದ್ಕೇ ಇಷ್ಟೊಂದು ಗೊಣ್ಣೆ ತೆಗೀತಿರ್ತಾರೆ, ಗೊದ್ಲೆ ಉಗಿತಿರ್ತಾರೆ. ಇದರಲ್ಲಿರೋ ರೋಗಾಣುಗಳು

ನೀರು, ಗಾಳಿ ಮೂಲಕ ಬೇರೆಯವರ ಶ್ವಾಸಕೋಶಕ್ಕೆ ಸೇರಿದ್ರೆ ಅವರ ರೋಗ ಬರ್ದೇ ಏನಾಗುತ್ತೆ? ಅದ್ಕೇ ದೊಡ್ಡವ್ರು ಹೇಳಿದ್ರು ಮೊದಲು ಹೇಳಿದ್ನಲ್ಲಾ ಗಾದೆ ಅದು ಆದ್ಕೇ ಇಂಥ ಮುಖ್ಯವಾದ ರಸ್ತೆಯ ಮೇಲೆ ಉಗಿಬೇಡಿ ಅಂತ. ಅದು ಅವರ ಅನುಭವದ ಮಾತೇ.

ಅಪ್ಪಣ್ಣ : ಹಾಗಾಗುತ್ತಾ ಡಾಕ್ಟ್ರೇ...

ಬೋರಣ್ಣ: ಇದೇನು ಅಪ್ಪಣ್ಣನವ್ರೇ ನೀವು ಹೇಳೋದು? ಇಲ್ದೆ ಸುಮ್ನೆ ಜುಂಜಪ್ಪನವ್ರಾಗಲೀ, ನಾನಾಗ್ಲೀ ನಿಮಗೆ ಹೀಗೆ ಹೇಳ್ತಾ ಇರಲಿಲ್ಲ. ಇದಕ್ಕೆ ಒಂದು ಕೆಲಸ ಮಾಡಬಹುದು ನೋಡಿ.

ಅಪ್ಪಣ್ಣ : ಏನು ಸಾರ್?

ಬೋರಣ್ಣ: ನೀವು ಕಲಿತದ್ದನ್ನು ಬಿಡ್ಲಿಕ್ಕಾಗೋಲ್ಲ, ಇನ್ನೊಂದು ಈ ಶ್ಲೇಷ್ಮ ಹೋದ್ರೂ ಒಳ್ಳೇದೇ. ಅದ್ಕೇ ಈಗ ಏನು ಮಾಡಿ ಅಂದ್ರೆ ಆ ಉಗಳನ್ನು ಒಂದು ಡಬ್ಬಿಗಾಕಿಕೊಂಡು ಆಮೇಲೆ ಅದನ್ನು ಒಂದು ಸಾರಿ ಎಲ್ಲಾದ್ರೂ ಭೂಮಿಗೆ ಹೂಳುವುದು ಉತ್ತಮ. ಹಾಗಾದ್ರೆ ನಿಮ್ಮ ರೋಗಾಣುಗಳು ಬೇರೆಯವರಿಗೆ ಹರಡುವುದೂ ತಪ್ಪುತ್ತೆ ನಿಮಗೂ ದೇಹಕ್ಕೆ ಹರ್ಷವಾಗುತ್ತೆ.

ಅಪ್ಪಣ್ಣ : ಹೌದು ಸಾಧ್ಯ ನಾಳೆಯಿಂದ ಹಾಗೇ ಮಾಡ್ತೇನೆ. ಏನೋ ನಿಮ್ಮಂಥವ್ರು ಸಲಹೆ ನೀಡೋವ್ರಿದ್ರೆ ಆಗ್ಲಿಂದ್ಲೂ ಮಾಡ್ತಿದ್ದೆ.

ಬೋರಣ್ಣ: ಈಗ್ಲೂ ನಿಮಗೇನು ಹೆಚ್ಚಿಗೆ ಆಗಿಲ್ಲ. ನಾನು ಇದನು ಇನ್ನೊಂದು ವರ್ಷದೊಳಗೆ ಸರಿಮಾಡಿದ್ರೆ ಸರಿಯಿಲ್ವೇ, ನಾನು ಹೇಳಿದ ರೀತಿ ಮಾಡಿದ್ರೆ ಖಂಡಿತ ಈ ರೋಗ ಬೇಗ ವಾಸಿಯಾಗಿ ಹೋಗುತ್ತೆ.

ಅಪ್ಪಣ್ಣ : ಸಧ್ಯ ಅಷ್ಟು ಮಾಡಿದ್ರೆ ನೀವು ಹೇಳ್ದಾಗೇ ಕೇಳ್ತೀನಿ ಸಾರ್.

ಬೋರಣ್ಣ: ಈಗ ಅಷ್ಟು ಮಾಡಿ ನಾಳೆ ಆಸ್ಪತ್ರೆಗೆ ಬನ್ನಿ. ನಾನು ನೋಡಿ ಸರಿಯಾದ ಔಷಧ ಕೊಡ್ತೀನಿ. ಇದ್ರಿಂದ ನೀವೂ ಆರೋಗ್ಯವಾಗುವುದಲ್ಲದೆ ನಿಮ್ಮ ಊರಿನವರೊಬ್ಬರಿಗೂ ಈ ರೋಗ ಬರದ ಹಾಗೆ ತಡೆಗಟ್ಟಬಹುದು.

ಅಪ್ಪಣ್ಣ : ಆಗ್ಲೀ ಸಾರ್ ಮನೆ ಸಿಕ್ತು. ಬನ್ನಿ ಹೋಗೋಣ ಸ್ವಲ್ಪ ಕುಳಿತಿದ್ದು ಹೋಗುವಿರಂತೆ.

ಬೋರಣ್ಣ: ಇಲ್ಲ ಇನ್ನೊಂದು ದಿವಸ ಬರ್ತೇನೆ.

ಅಪ್ಪಣ್ಣ : ಒಳ್ಳೇದು ಸಾರ್ ಹೋಗಿ ಬರ್ತೇನೆ.

(ನಿರ್ಗಮಿಸುವನು)

ಮಾದ : ಕೈಮುಗ್ದೇ ಬುದ್ಧಿಯವ್ರೇ...

ಬೋರಣ್ಣ: ಏನಯ್ಯಾ ಇಲ್ವಾ ನಿನ್ನ ಮನೆ.

ಮಾದ : ಊಂ ಬುದ್ಧಿ.

ಜುಂಜಪ್ಪ: ಏನೀಕಡೆ ವೋಗ್ತಾ ಇದ್ದೀಯಾ! ಗದ್ದೆ ಕಾಯಕೆ ಹೋಗಲ್ವಾ?

ಮಾದ : ಹೋಗಬೇಕು ಬುದ್ಧಿ. ಇಂಗೆ ಅಂಗಡಿ ಸಾಮಾನ್ ತರದ್ಕೆ ಬಂದಿದ್ದೆ ವೋಗಿದ್ದು ಉಣ್ಕಂಬಸ್ಬುಡ್ತೀನಿ ಬುದ್ಧಿ.

ಜುಂಜಪ್ಪ: ಸರಿ ಬ್ಯಾಗನೆ ನಡೆ.

ಬೋರಣ್ಣ: ಅದೇನಾ ನಿನ್ನ ಮನೆ?

ಮಾದ : ಅದೋ ಅಲ್ಲೊಂದು ಹಂಚಿನ ಮನೆ ಕಾಣುತ್ತಲ್ಲಾ ಅದೇ ಕಣ್ಬುದ್ಧಿ.

ಬೋರಣ್ಣ: ಏನು ನಾವು ಬರಾವಾ ನಿನ್ನ ಮನೆಗೆ? ಏನ್ಮಾಡ್ತಿದ್ದಿಯಾ?

ಮಾದ : ಬುದ್ಯೋ... ಬುದ್ಯೋ ಇದ್ಯಾನ್ ನಿವ್ವಾಳಾವ ನಮ್ಮ ಮನೆಗ್ಯಾ? ಏನು ತಮಾಸಿ ಗಿಮಾಸಿ ಮಾಡ್ದರ್‍ಯ ಹ್ಯಾಗೆ ಬುದ್ಧಿ.

ಬೋರಣ್ಣ: ನೋಡೋಣ ಅಂತ್ಲೇ ಕಣ್ಲಾ ಮಾದ, ಸುಳ್ಳ್ಯಾಕೇಳ್ಲಿ.

ಜುಂಜಪ್ಪ: ನಿಂಗೂ ಕೆಲ್ಸಿಲ್ಲಾ ಬಾ ಮತ್ತೆ. ಹೋಗ್ಲೋ ಕೆಲ್ಸಾ ನೋಡುವೋಗ್ಲಾ.

ಬೋರಣ್ಣ: ಮನೆ ಹ್ಯಾಗಿಟ್ಟಿದ್ದಾನೆ ಸ್ವಲ್ಪ ನೋಡೋಣ ಬನ್ನಿ. ಈ ಬೀದಿಯಾಗೆ ಎಲ್ಲರಿಗೂ ಮಲೇರಿಯಾ ಶೀತಜ್ವರ.

ಜುಂಜಪ್ಪ: ನೀವು ಹೋಗಿದ್ದು ಬನ್‌ರಪ್ಪಾ. ನನಗೆ ಸಾಕಾಗಿಹೋಗಿದೆ ಇಲ್ಲೇ ಕುತ್ಕೋತೀನಿ.

(ಅವನು ಅಲ್ಲೇ ಕುಳಿತಿರಲು ಬೋರಣ್ಣ ಹೋಗಿ ಸ್ವಲ್ಪ ಹೊತ್ತಿಗೆ ಬರುವನು)

ಜುಂಜಪ್ಪ: ಏನು ಡಾಕ್ಟ್ರ ಸಾಯೇಬ್ರೇ ನೋಡಿದ್ರ್ಯಾ ಮಾದನ್ ಬೀದ್ಯಾ.

ಬೋರಣ್ಣ: ನೋಡಿದೆ ಕಣಪ್ಪಾ.

ಜುಂಜಪ್ಪ: ಹ್ಯಾಗಿತ್ತು?

ಮಾದ : ತುಂಬಾ ಹೊಲ್ಸು ಬುದ್ಧಿ.

ಜುಂಜಪ್ಪ: ನಿಮಗೆ ನೀಟಾಗಿರಕ್ಯಾಗಲ್ಲಕಣ್ಲಾ ನೀವು ತಂದಿರೋ ಕರ್ಮವೇ ಅದೇನು?

ಬೋರಣ್ಣ: ...ಏನು ಜುಂಜಣ್ಣಾ ಕಷ್ಟವ್ರಲ್ಲಾ ಅದು ಮನ್ಯಾ? ಕಿಟಕಿ ಇದ್ಯಾ ದನಗಳಿಗೇನಾದ್ರೂ ತನಿಯಾಗಿ ಕೊಟ್ಟಿಗೆಯಾ, ನಾಲ್ಕು ಜನ ಮಲೀಕೊಳ್ಳೋದ್ಕೆ, ಅನ್ನೋದ್ಕಿಂತ ಕಾಲ್ನೀಡ್ಕೊಳ್ಳೆ ಸ್ಥಳವಾ, ಕಕ್ಕಸ್‌ನ ಅನುಕೂಲ್ವೇ? ಬಚ್ಚಲ ನೀರು ಹೊರಗೂ ಹೋಗೋವಾಗಿಲ್ಲ ಅಲ್ಲೇ ನಿಂತು ಕೊಚ್ಚೆ ವಾಸ್ನೆ ಬೇರೆ. ಒಂದು ಮನೆಗೂ ಇನ್ನೊಂದು ಮನೆಗೂ ಸಂದಿ ಇದ್ಯಾ, ಇಲಿ ಹೆಗ್ಗಣಗಳು ವಾಸ ಮಾಡ್ತಾ ಇವೆ ಇವರ ಜೊತೆ. ಈ ರೀತಿ ಇದೆ ಅವರ ಮನೆ.

ಜುಂಜಪ್ಪ: ಪಂಚಾಯಿತ್ತಿಯಿಂದ ಹಣ ಕೊಡಿಸ್ಸೆ ಅಚ್ಚುಕಟ್ಟು ಮಾಡಿಸ್ಕೊಂಡ್ರೆ ತಾನೇ, ಎಲ್ಲಾ ತಿನ್ನೋದ್ಕೆ, ಕುಡ್ಯೋದ್ಕೇ ಆಯ್ತದೆ. ಹೊಟ್ಟೆಗೆ ನೋಡಪ ಹಾಗೆ ಮನೆಮಠದ ಕಡೆ, ಆರೋಗ್ಯದ ಕಡೆ, ಕೇರಿಕಡೆ ಗಮನ ಕೊಟ್ರು ತಾನೇ ಏನು ಬಡ್ಕೋಳೊದು. ಒಂದು ಇಂಜೆಕ್ಷನ್ನೇ ವ್ಯಾಕ್ಸಿನೇಷನ್ ಆಕಿಸೋದೇ ಯಾವ್ದೂ ಕೇಳಬೇಡಿ. ಡಾಕ್ಟರ್ ಹತ್ತಿರ ತುಂಬಾ ಮುಷ್ಕರ ಆದಾಗ್ಲೆ ಅವರು ಬರೋದು. ನಾನೇ ಪ್ರತಿಯೊಂದು ಮನೇನೂ ನಿಂತುಕೊಂಡು ಕಟ್ಟಿಸ್ಬೇಕಾಯ್ತದ್ಯಪ್ಪಾ.

ಮಾದ : ಇಲ್ಲ ಅನ್ನಕಾಯ್ತುದಾ ಬುದ್ಧಿ, ನೀವು ಬೇಕಾದಷ್ಟು ಮಾಡಿದ್ದೀರಿ ಆದ್ರೂ ದೊಡ್ಡ ದಣಿಯವರು ಹೇಳಿದ ಹಾಗೇ ನಮ್ಮ ಬೀದಿ ಜನ ಮಾಡ್ತಾನೂ ಅಪ್ರೇ, ಕುಂತು ಉಣ್ಣವನಿಗೆ ಕುಡ್ಕೆ ಹಣ ತಾನೇ ಸಾಲ್ತದಾ? ಹ್ವಾಳಿ ಬುದ್ಧಿ.

ಬೋರಣ್ಣ: ಜುಂಜಣ್ಣನವರೇ ಕೈಗಣ ಕೊಟ್ರಲ್ಲಾ ಆಗೋದು ಕೆಲ್ಸ ಇದನ್ನು ಮಾಡ್ಲಿಕ್ಕೆ ಪಂಚಾಯ್ತಿ ಕಡೆಯಿಂದ ಯಾರ್ನಾದ್ರೂ ನೇಮಿಸಬೇಕು.

ಜುಂಜಪ್ಪ: ಅದರಲ್ಲಿ ತಾನೇ ಕೆಲಸ ಸರಿಯಾಗಿ ನಡೆಯುತ್ಯೇ ಎಲ್ಲಾ ಸ್ವಾಪಮಾಡೋವ್ರೇ ಹೆಚ್ಚು. ಹಳ್ಳಿ ಹಿತಕ್ಕೆ ದುಡ್ಯೋ ಜನಗಳೇ ಇಲ್ಲದ ಹಾಗಾಗಿದ್ದಾರೆ.

ಬೋರಣ್ಣ: ಹೇಗಾದ್ರೂ ಮಾಡಿ. ಹಳ್ಳಿ ಜನರು ಉದ್ಧಾರವಾಗಬೇಕು, ನೈರ್ಮಲ್ಯವಾಗಿರಬೇಕಪ್ಪಾ. ಅಲ್ದೇ ಹೋದ್ರೆ ಏನು ಪ್ರಯೋಜನ?

ಜುಂಜಪ್ಪ: ಸರಿ ನೀವು ಹ್ಯಾಗೇಳ್ತೀರಿ ಹಾಗೇ ನಾನು ಮಾಡಲಿಕ್ಕೆ ಸಿದ್ಧ.

ಬೋರಣ್ಣ: ಅದ್ಕೇನಂತೆ ಆಗ್ಲಿ ಬಿಡಿ. ಹೋಗ್ಲಿ ಪಟ್ಟಾಗಿ ಕೂತ್ಕೋಬಿಟ್ರ್ಯಲ್ಲಪ್ಪಾ ಮನೆಕಡೆ ಹೋಗೋದಿಲ್ವೇ?

ಜುಂಜಣ್ಣ: ಇಲ್ಲಿ ಕೂತ್ಕೊಂಡೇನು ಮಾಡೋದು ನಡೀರಿ ಡಾಕ್ಟ್ರೇ ಬಟಾಣಿ ಉಪ್ಪಿಟ್ಟು ಸೊಗಸಾಗಿ ಮಾಡಲಿಕ್ಕೆ ಹೇಳಿ ಬಂದಿದ್ದೇನೆ. ಹೊಗೋಣ ನಡೀರಿ... ಮಾದ ಬ್ಯಾಗ್ ಬಂದ್ಬಿಡು.

ಮಾದ : ಆಗ್ಲಿ ಬುದ್ಧಿ. (ಹೊರಡುವನು)

ಬೋರಣ್ಣ: ಅಗತ್ಯವಾಗಿ ನಡೀರಿ. (ಇಬ್ಬರು ಹೊರಡುವರು)

## ದೃಶ್ಯ-೮

(ದಪ್ಪ ದೇಹದ ಅಪ್ಪಣ್ಣ ದಾರಿಯಲ್ಲಿ ಬರುತ್ತಿರಲು ಬಾಳೆಯ ಹಣ್ಣಿನಸಿಪ್ಪೆ ಜಾರಿ ಬಿದ್ದು ಕಾಲು ರಕ್ತ ಕಿತ್ತುಕೊಂಡಿತಲ್ಲದೆ ಸ್ವಲ್ಪ ಮೂಳೆಯೂ ಮುರಿಯಿತು. ಜನರು ಗುಂಪು ಸೇರಿ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿರಲು ಗ್ರಾಮಸೇವಕ ರಾಜಣ್ಣ ಅಲ್ಲಿ ನಿಂತಿದ್ದ ಮಾದನನ್ನು ಕುರಿತು)

ರಾಜಣ್ಣ : ಲೋ ಮಾದ.

ಮಾದ : ಏನ್ಬುದ್ಯೋ?

ರಾಜಣ್ಣ : ಏನು ಗುಂಪು? ಯಾರ್ನೋ ಎತ್ತುಕೊಂಡು ಹೋಗ್ತಾ ಇದ್ದಾರೆ.

ಮಾದ : ಅಪ್ಪಣ್ಣನವರು?

ರಾಜಣ್ಣ : ಏನಾಯ್ತು?

ಮಾದ : ಇನ್ನೇನು ಆಗೋದು ಬಾಳೆ ಹಣ್ಣಿನ ಮೇಲೆ ಕಾಲಾಕ್ಬು ನೋಡಿ ದೊಬಕ್ಕನೆ ಬಿದ್ದು ಕಾಲು ಮುರ್ಕಂಡ್ರು.

ರಾಜಣ್ಣ : ಅಯ್ಯೋ ಪಾಪ.

ಮಾದ : ಅಯ್ಯೋ, ಪಾಪವಂತೆ, ಅಯ್ಯೋ ಪಾಪಿ ಅನ್ನಿ.

ರಾಜಣ್ಣ : ಯಾಕಯ್ಯ?

ಮಾದ : ಅವನು ಮಾಡಿರೋ ಕೆಲ್ಸ ಒಂದೇ ಎರಡೇ. ನಮ್ಮೂರ್ನಾಗ ಕೇಡಿ ಕಣ್ಬುದ್ಯೋ ನಿಮ್ಗೆ ಗೊತ್ತಾಗಕ್ಕಿಲ್ಲ. ಎಷ್ಟು ಕಳ್ತಾನ ಮಾಡ್ಸವ್ನೆ, ಮೆದೆ ಬೇಯಿಸವನೇ, ರಾಗಿ ಭತ್ತ ಕೊಯ್ಯುಸವ್ನೆ. ಅವರು ಮನೆಯವ್ರೆ ಬಾಳಾಹಣ್ ತಿನ್ಬುಡೋದು ತೂದು ರಸ್ತೆಮ್ಯಾಕೆ ಎಸ್ಯೋದು. ಈಗ್ಲೂ ಆಗಿರೋದು ಅವರ ಮನೆಯವ್ರಿಂದ್ಲೇ. ಬೀದಿಗೆ ಬೀಸಾಕಿದ್ದ ದುರಾಂಕಾರದಲ್ಲಿ ಬತ್ತಿದ್ದ ಅಂತ ಕಾಣುತ್ತೆ. ಅದ್ಕೇ ದ್ಯಾವ್ರು ಸರಿಯಾಗಿ ಮಾಡ್ದ.

ರಾಜಣ್ಣ : ಅದೇನು ನಿಜ ನಂಗೊತ್ತಿಲ್ವೇನ್ಲಾ? ಅವೊತ್ತೊಂದಿನ ನಾನೇ ಕಂಡಿದ್ದೆ ಬುಡು, ಆಹೊತ್ತೇ ಹೇಳ್ಬೇಕು ಅಂತಿದ್ದೆ ಆದ್ರೆ ಗೊಡ್ಡವರು ಹ್ಯಾಗೆ ಹೇಳೋದು ಅಂತ ಹಾಗೇ ಸುಮ್ಮನೇ ಆಗೋದೆ. ಈಗ ಅದ್ಕೆ ನೋಡ್ದಾ ಅನುಭೋಗಿಸ್ತಾ ಇರೋದು.

ಮಾದ : ಅಂಗೇ ಆಗ್ಬೇಕು ಬುಡಿ ಬುದ್ದಿ.

ರಾಜಣ್ಣ : ಹೋಗ್ಲಿ ಆಸ್ಪತ್ರೆಗಾದ್ರು ಹೋಗಿ ನೋಡ್ಕೊಂಡ್ಬರ್‍ತೀನಿ.

* * *

## ದೃಶ್ಯ-೯

(ಆಸ್ಪತ್ರೆಯಲ್ಲಿ ಬೋರಣ್ಣನವರಿರಲು ಅಪ್ಪಣ್ಣನನ್ನು ಕರೆದು ತಂದು ಮಲಗಿಸುವರು. ಡಾಕ್ಟರ್ ಆತನಿಗೆ ಚಿಕಿತ್ಸೆ ಮಾಡುತ್ತಿದ್ದಾರೆ. ಅಷ್ಟರಲ್ಲಿ ಗ್ರಾಮಸೇವಕ ರಾಜಣ್ಣ ಮತ್ತು ಮಾದ ಬಂದು ನಿಲ್ಲುವರು. ಡಾಕ್ಟರ್ ಹೊರ ಬರಲು)

ರಾಜಣ್ಣ : ಪರ್ವಾಗಿಲ್ಲಾ ಸಾರ್.

ಬೋರಣ್ಣ: ಸಕತ್ತಾಗೇ ಬಿದ್ದಿದೆ ಏಟು ಮೂಳೆ ಮುರಿದಿದೆ. ಅಂದ ಹಾಗೆ ನೀವ್ಯಾರು?

ರಾಜಣ್ಣ : ಈ ಊರಿನ ಗ್ರಾಮ ಸೇವಕ ಸಾರ್.

ಬೋರಣ್ಣ: ಇವ್ರು... ನಿಮ್ಮ...

ರಾಜಣ್ಣ : ಇಲ್ಲ ಸಾರ್ ಇಂಥವರಿಗೆ ಹೀಗೆ ಆಗ್ಬೇಕು.

ಬೋರಣ್ಣ: ಬಿದ್ದವರ ಮೇಲೆ ದಯೇ ತೋರಿಸ್ದೆ ಹೀಗೆನ್ತೀರಲ್ಲಾ ಇದೆಲ್ಲಾ ಸರಿಯಲ್ಲ.

ರಾಜಣ್ಣ : ಈತ, ಈತನ ಮನೆಯವ್ರೇ ಅಷ್ಟು. ಹಣ್ಣು ತಿಂದು ಸಿಪ್ಪೇನಾ ಬೀದಿಗೆ ಸಿಕ್ಕಾಪಟ್ಟೆ ಬಿಸಾಕ್ತಿದ್ರು. ಅದೇ ಸಿಪ್ಪೆ ಅವರ ಕಾಲುಮುರಿದಿದೆ ತಪ್ಪೇನು?

ಬೋರಣ್ಣ: ಹೌದ...?

ರಾಜಣ್ಣ... ಅಪ್ಪಣ್ಣ ಸಾಮಾನ್ಯಾನಲ್ಲ ಸಾರ್. ಈ ಊರಿನ ಕೇಡಿ. ಜುಂಜಪ್ಪನ ಕಂಡ್ರೆ ಕೆಂಡ ಕಾರ್ತಾನೆ ಇರ್ತಾನೆ. ಊರಿಗೆ ಕೆಡುಕು ಎಣಿಸುವವನಿಗೆ ಎಂದಾದ್ರೂ ಕೆಡುಕು ಆಗ್ದೇ ಇರುತ್ಯಾ? ಹೇಳಿ ಮತ್ತೆ.

(ಡಾಕ್ಟರ್ ಹತ್ತಿರ ಹೋಗಿ)

ಬೋರಣ್ಣ: ಏನು ಅಪ್ಪಣ್ಣನವರೇ ಹೇಗಿದೆ?

ಅಪ್ಪಣ್ಣ : ತುಂಬಾ ನೋವಾಗ್ತಾ ಇದೆ ಡಾಕ್ಟ್ರೇ. ಆ ಹಾಳಾದವ್ನು ಯಾವನು ಬಿಸಾಕಿದ್ನೋ...

ಬೋರಣ್ಣ: ಆ ಹೊತ್ತೊಂದು ದಿನ ನೀವೇ ಬಾಳೆಹಣ್ಣಿನ ಸಿಪ್ಪೇನಾ ಬೀದಿಲಿ ಬಿಸಾಡ್ತಾ ಇದ್ದರಂತೆ. ನಿಮ್ಮ ಮನೆಯವ್ರೇ ಅಂತೇ ದಿನಾ ಬಾಳೆ ಹಣ್ಣು ತಿಂದು ಬೀದೀಲೇ ಬಿಸಾಡ್ತಾರ್ಯಂತೆ.

ಅಪ್ಪಣ್ಣ : ದನಗಳು ತಿನ್ಕೊಳ್ಲೀ ಅಂತ.

ರಾಜಣ್ಣ : ಅದನ್ನು ತೊಟ್ಟಿ ಕಟ್ಟಿಸವ್ರಲ್ಲಾ ಅದ್ಕಾದ್ರೂ ಹಾಕಿದ್ರೆ.

ಅಪ್ಪಣ್ಣ : ನೀವ್ಯಾರ್ರೀ ಕೇಳೋಕೆ. ಹೋಗ್ರಿ.

ಬೋರಣ್ಣ: ಅವರು ಗ್ರಾಮ ಸೇವಕ. ಅಧಿಕಾರ ಇರೋ ಹೊತ್ಗೇ ಕೇಳಿದ್ರು ನಿಮ್ಗೆ, ಮತ್ತೆ ನಿಮ್ಮ ಗ್ರಾಮದ ಆರೋಗ್ಯ ನೋಡ್ಲಿಕ್ಕೆ ಅವರು ಬಂದಿರೋದು. ಅವರನ್ನೇ ನೀವು ಯಾರು ಅಂತೀರಿ?

ಅಪ್ಪಣ್ಣ : ಏನೋ ನನ್ನ ಸಂಕಟದಲ್ಲಿ ಅಂದುಬಿಟ್ಟೆ ಕ್ಷಮಿಸಿ ಡಾಕ್ಟ್ರೇ,

ಬೊರಣ್ಣ : ಮಾಡೋದು ತಪ್ಪು ಆಮೇಲೆ ಕ್ಷಮೆ ಅಂತ ಎರಡು ಅಕ್ಷರ ಬಾಯ್ನಲ್ಲಿ ಹೇಳ್ತೀರಿ. ನೀವು ಸ್ವಲ್ಪ ಬುದ್ಧಿ ಕಲೀರಿ, ನಿಮ್ಮಿಂದ ಎಷ್ಟು ಜನಕ್ಕೆ ತೊಂದ್ರೆ. ಹೀಗೆ ಊರಿನಲ್ಲಿ ಯಾರು ಬಿಸಾಕಿದ್ರೂ ಬುದ್ಧಿ ಹೇಳಿ. ಆಗ ನಿಮ್ಮ ಹಳ್ಳಿಗೂ ಒಳ್ಳೇದಾಗುತ್ತೆ ನಿಮಗೆ ಆಗೋ ಅಪಾಯವೂ ತಪ್ಪುತ್ತೆ.

ಅಪ್ಪಣ್ಣ : ಹೌದು ಸಾರ್ ತಾವು ಹೇಳೋದು ಈಗ ನಿಜ ಅಂತ ಅನ್ನಿಸ್ತೈತೆ.

ಬೋರಣ: ಅನ್ನಿಸೋದೇನು, ಅನುಭೋಗಿಸ್ತಾ ಇದ್ದೀರಲ್ಲಾ ಮಾಡಿದ ತಪ್ಪಿಗೆ. ಹೋಗ್ಲಿ ಮುಂದೆ ಸರಿಯಾಗಿರುವಿರಂತೇ ಇದನ್ನೆಲ್ಲಾ ತಲೆಗೆ ಹಚ್ಚಿಕೊಳ್ದೇ ಮೊದ್ಲು ಹುಷಾರಾಗಿ, ಆಮೇಲೆ ಇವರ ಬಗ್ಗೆ ಯೋಚನೆ ಮಾಡುವಿರಂತೆ.

ಅಪ್ಪಣ್ಣ : ಆಗ್ಲಿ ಸಾರ್. ಗ್ರಾಮಸೇವಕರೇ ನೀವೇನೂ ತಿಳ್ಕೋಬೇಡಿ ಏನೋ ನೋಪ್ನಲ್ಲಿ ಅಂದುಬಿಟ್ಟೆ.

ಬೋರಣ್ಣ: ಅಲ್ಲಾ ನೀವು ಮೊದ್ಲೇ ಗ್ರಾಮಸೇವಕರ ಮಾತು ಕೇಳಿದ್ರೆ ಈ ರೀತಿ ಅನುಭೋಗಿಸ್ಬೇಕಾಗಿತ್ತೆ.

ಅಪ್ಪಣ್ಣ : ಎಲ್ಲಾ ದುರದೃಷ್ಟ ಬುಡಿ.

ಬೋರಣ್ಣ: ಅದೇ ಬುದ್ಧಿ ಇಲ್ಲ ಅನ್ನೋದು 'ಕೆಟ್ಟಮೇಲೆ ಬುದ್ಧಿ ಬಂತು ಅಟ್ಟಮೇಲೆ ಒಲೆ ಉರೀತು' ಅಂತ.

ಅಪ್ಪಣ್ಣ : ಹೌದು ಡಾಕ್ಟ್ರೇ ನೀವು ಹೇಳಿದ್ದು ಕರೆಕ್ಟು.

ಬೋರಣ್ಣ: ನಾ ಹೇಳಿದ್ದೇನೋ ಕರೆಕ್ಟ್ ಆದ್ರೆ, ನೀವು ಮುಂದಾದ್ರೂ ಕರೆಕ್ಟ್ ಮಾಡಿಕೊಳ್ಳಬೇಕು.

ಅಪ್ಪಣ್ಣ : ತಾವು ಹೇಳಿದ ಮೇಲೆ 'ಅಸ್ತು' ಸಾರ್.

ಬೋರಣ್ಣ: ಹೋಗ್ಲಿ ಈಗ ಇದ್ನೆಲ್ಲಾ ತಲೆಗೆ ಹಚ್ಚಿಕೊಳ್ಳಬೇಡಿ ಮೊದ್ಲು ಹುಷಾರಾಗಿ ಆಮೇಲೆ ಮಿಕ್ಕ ಮಾತು.

ಅಪ್ಪಣ್ಣ : ಆಗ್ಲಿ ಸಾರ್.

ರಾಜಣ್ಣ : ಒಳ್ಳೇದು ಸಾರ್ ತಮಗೆ ಈಗ್ಲಾದ್ರೂ ಒಳ್ಳೇ ಬುದ್ಧಿ ಬಂತಲ್ಲ ನನಗೆ ತುಂಬಾ ಸಂತೋಷವಾಯ್ತು. ಅಂತೂ ಡಾಕ್ಟ್ರು ಆ ಹೊತ್ತು ಭಾಷಣ ಮಾಡಿ ನನ್ನ ಕೈಲಾದುದನ್ನು ಈ ಗ್ರಾಮಕ್ಕೆ ಮಾಡ್ತೇನೆ ಅಂತ ಹೇಳಿದ್ದು ಈಗ ಅದು ಕಾರ್ಯತಹ ಆಗ್ತಾ ಇದೆ ಬರ್ತೀನಿ ಸಾರ್.

ಅಪ್ಪಣ್ಣ : ಆಗ್ಲಿ ಸ್ವಾಮಿ... ನಮಸ್ಕಾರ.

ಬೋರಣ್ಣ: ನಮಸ್ಕಾರ.

ಮಾದ : ಬರಾವಾ ಬುದ್ಧಿ.

ಅಪ್ಪಣ್ಣ )<br>ಬೋರಣ್ಣ) -ಆಗ್ಲಿ... ಒಳ್ಳೇದು.

(ಇಬ್ಬರೂ ಹೊರಡುವರು)

(ಸ್ವಲ್ಪ ಹೊತ್ತಿನಲ್ಲಿ ಸಣ್ಣೆ ಕಣ್ಣೀರ್ಗರೆಯುತ್ತಾ ಪ್ರವೇಶಿಸುವಳು)

ಸಣ್ಣೆ : ಬುದ್ಧೀ... ಈ ಮೊಗ ಕಾಪಾಡಿ ನನ್ನೊಡೆಯಾ.

ಬೋರಣ್ಣ: ಯಾಕಮ್ಮಾ ಅಳ್ತಾ ಇದ್ದೀಯಾ? ಏನಾಗಿದೆ ಮಗುವಿಗೆ.

ಸಣ್ಣಿ : ಎಂಗಾರ ಮಾಡಿ ಈ ಮೊಗ ಉಳಿಸ್ಕೊಡೀ ಡಾಕಪ್ರೇ.

ಬೋರಣ್ಣ: ಏನಾಗಿದೆ ಮಗುವಿಗೆ ಹೇಳ್ದೆ ಹ್ಯಾಗಮ್ಮಾ ಕಾಪಾಡೋಮು?

ಸಣ್ಣಿ : ಜರ ಬೇಯ್ತಾ ಅದೆ, ಯಾನು ಅಂತಾ ಹೇಳೋಕೆ ನನಗೆ ಗೊತ್ತಾಗಕ್ಕಿಲ್ಲ.

ಬೋರಣ್ಣ: (ನೋಡಿ) ಓ... ಇದು ವಿಷಮಶೀತ ಜ್ವರ. ಏನು ಈ ಹೊತ್ತು ಇಂಥವ್ರೆ ನಾಲ್ಕು ಜನ ಬಂದಿದ್ರಲ್ಲಾ. ಯಾವ ಬೀದಿಯವಳಮ್ಮ ನೀನು?

ಸಣ್ಣಿ : ಮೇಗ್ಲಟ್ಟಿ ಗುಡಿಸಲಿನವಳು ಬುದ್ಧಿ.

ಬೋರಣ್ಣ: ಏನು ಎಲ್ಲಾ ಆ ಬೀದಿಯವ್ರೇ ಬಂದುಬಿಟ್ಟವ್ರಲ್ಲಾ ಕಾರಣ?

ಸಣ್ಣಿ : ಯಾನು ಬಂತೋ ಬುದ್ದಿ ನಮ್ಮ ಬೀದಿನಾಗ ಆ ಗಾಳಿಸಿದ್ದನಿಗೆ ಬಂತು ನೋಡ್ಯಪ್ಪೋ ತಮಯ ಎಲ್ಲರಿಗೂ ಒಂದೇ ಸಮನಾಗಿ ಬರ್‍ತೈತಿ.

(ಅಷ್ಟರಲ್ಲಿ ಮಾದ ಪ್ರವೇಶಿಸುವನು. ಕಣ್ಣೀರು ಸುರಿಸುತ್ತಾ ನಿಂತುಕೊಳ್ಳುವನು)

ಬೋರಣ್ಣ: ಏನ್ಲಾ ಮಾದ ನಿನ್ನ ಮಗನಾ?

ಮಾದ : ಇಲ್ಲ ಬುದ್ಧಿ ನಮ್ಮಕ್ಕನದು. ಆ ಮಾದಪ್ಪ ಯಾಕಾರೋ ನಮ್ಮ ಬೀದ್ಯಾಗ ಈ ನೋವು ಕೊಟ್ನೋ, ಮಾರವ್ವನ ಜಾತ್ರೆನ್ಯಾನಾದ್ರೂ ಸರಿ ಮಾಡ್ನಿಲ್ಲ. ಅವಳು ಕ್ವೋಪ ಮಾಡ್ಕಂಡು ಒಟ್ಟುರ್‍ಯ ಎದುರಿಸ್ತಾ ಇದ್ಯಾಳೋ ಯಾನೋ?

ಬೋರಣ್ಣ: ಏನು ನಿಂಗ ಅರ್ಥವಾಗಕಿಲ್ಲ ಸುಮ್ನಿರು ಸ್ವಲ್ಪ ಹೊತ್ತು ನೋಡೋಣ (ಎಂದು ಮಗುವಿಗೆ ಇಂಜೆಕ್ಷನ್ ಕೊಟ್ಟು ಕುರ್ಚಿಯ ಮೇಲೆ ಕುಳಿತುಕೊಳ್ಳುವರು).

ಮಾದ : ಏನಾರೂ ಮಾಡಿ ಈ ಮೊಗ ಉಳಿಸ್ಕೊಡಿ ಬುದ್ಧಿ ಒಂದೇ ಮೊಗ ಇದು...

ಬೋರಣ್ಣ: ಮಾದ... ನಿನ್ದೆಲ್ಲಾ ಬರೇ ಕುರುಡು ನಂಬಿಕೆಯೇ ಹೊರತು ವೈಜ್ಞಾನಿಕವಾಗಿ ಹೀಗಾಯ್ತು ಅನ್ನೋದು ಮಾತ್ರ ತಿಳೀತಿಲ್ಲ ಅದೇ ಬಂದಿರೋದು. ನಿನ್ನದೇನು ದೇವರಿಗೆ ಸರಿಯಾಗಿ ನಡ್ಕೊಳ್ಳಿಲ್ಲ ಅಂತೀಯಾ, ಇನ್ನೂ ಮಿಕ್ಕವರು ಆ ಬೀದಿಯವರಿಗೆಲ್ಲಾ ಬರ್‍ಬೇಕಾದ್ರೆ ಕಾರಣ ಏನು ಅಂತ ನಿನ್ಗೆ ಗೊತ್ತಾಗ್ತಿಲ್ಲ. ಇದು ಅಂಟು ಜಾಡ್ಯ. ಒಬ್ಬರಿಂದ ಒಬ್ಬರಿಗೆ ಬರುತ್ತೆ, ಈ ಮಲೇರಿಯ ರೋಗಕ್ಕೆ ಸೊಳ್ಳೆಗಳೇ ಕಾರಣ. ನಿಮ್ಮ ಮನೆಯಲ್ಲಿ ಸೊಳ್ಳೆ ಇದ್ಯಾ?

ಮಾದ : ದಿನ ಬೆಳ್ಗಾಗ್ರೆ ಜಗಳ ಬುದ್ಧಿ, ಬಚ್ಚಲು ನ್ಯಾಯ, ಸರಿಯಾಗಿಟ್ಕಳ್ರೋ ಅಂತ ಬಡ್ಕಂಡ್ರೂ ಕ್ಯಾಳಕಿಲ್ಲ ಸೊಳ್ಳೆಗಳು ಅನ್ನೋದು ನೋಡ್ಲಿಕ್ಕಾಗೋಕ್ಕಿಲ್ಲ.

ಬೋರಣ್ಣ: ಹಾಗಾದಮೇಲೆ ರೋಗ ಬರ್‍ದೇ ಇರುತ್ಯಾ? ಹೇಳು ಇದು ನಿಮ್ಮ ಬೀದಿಗೇ ಅಲ್ಲಾ ನಿಮ್ಮ ಊರಿಗೇ ಹರಡುತ್ತೆ ಜೋಪಾನ.

ಸಣ್ಣಿ : ಯವ್ವೀ... ಯವ್ವೀ... ಇದು ಎಂಥ ರೋಗಾಸೋ ಕಣ್ಬುದ್ದಿ ಅದೇನು ಬೆಳಗೆಲ್ಲಾ ಚೆನ್ನಾಗ್ಯೆ ಆಡ್ತಿದ್ದ ರಾತ್ರಿ ಚಳಿ ಜ್ವರ ಸುರುವಾಗೋಯ್ತು. ಕೂಸನ ಕಷ್ಟ ನೋಡಕಾಗ್ನಿಲ್ಲ. ನೀವೇಳ್ದಾಗೆ ಇನ್ನು ಐದಾರು ಐಕಳು ಇಂಗೇ ನರಳ್ತಾ ಅವೆ.

ಮಾದ : ಸಥ್ಯ ಬ್ಯಾಗನೆ ಬಂದ್ಯಲ್ಲಾ... ಡಾಗಟ್‌ಗ್ ತೋರ್ಸ್ಲಕ್ಕೆ.

ಸಣ್ಣಿ : ಇಲ್ಲ ನಿನ್ನ ಕಟ್ಕಂಡಿದ್ರೆ... ಕೂಸುಳೀತಿತ್ತ. ಯಂಗೋ ಡಾಕ್ಟ್ರು ಕಾಪಾಡಿಕೊಟ್ರೆ ಸಾಕು.

ಬೋರಣ್ಣ: ನಾನು ಪ್ರಯತ್ನಮಾಡ್ತೇನೆ. ಆದ್ರೆ ನಿಮ್ಮ ಬೀದಿಯವರಿಗೆಲ್ಲಾ ಹೇಳಿದ್ದೀನಿ ಮನೆಗೆ ಡಿ.ಡಿ.ಟಿ ಹೊಡಿಸಿ, ಬಚ್ಚಲಿಗೆಲ್ಲಾ "ಫೆನಾಲ್" ಹಾಕಿಸಿ ಅಂತ ಹೇಳಿದ್ದೀನಿ. ಇವೆಲ್ಲಾ ಮಾಡ್ದೆ ಹೋದ್ರೆ ಈ ರೋಗ ಊರವರಿಗೆಲ್ಲಾ ಹರಡಿಬಿಡುತ್ತೆ ತಿಳ್ಕೊಳಿ.

ಸಣ್ಣಿ : ನಮ್ಮ ಮನೆ ಮುಂದ ಸರ್ ಮಾಡ್ಬುಡ್ತೀವಿ ಬುದ್ಧಿ.

ಬೋರಣ್ಣ: ಅದೇ ಹೇಳಾದು ನಿಮ್ಮ ಮನೆ ಒಂದೇ ಆದ್ರಲ್ಲಾ ಎಲ್ಲರ ಮನೆಗೂ ಹೋಗಿ ಹೇಳಬೇಕು, ಎಲ್ಲರೂ ಶುದ್ಧವಾಗಬೇಕು. ಆಗಾದ್ರೆ ನಿಮ್ಮ ಮನೆ, ಬೀದಿ, ಊರು ಈ ರೋಗದಿಂದ ಪಾರಾಗ್ತದೆ

ಮಾದ : ಎಲ್ಲರಿಗೂ ಈಹೊತ್ತೋಗಿ ದಬಾಯಿಸ್ಬುಡ್ತೀನಿ ಬುಡಿ ಬುದ್ಧಿ. ಆಮ್ಯಾಕೆ ಅವ್ರೇ ಮಾಡಬೇಕು.

ಬೋರಣ್ಣ: ಸಥ್ಯ ಅಷ್ಟು ಮಾಡಿ. ನಾಳೆ ಮತ್ತೆ ಮಗು ಕರ್‍ಕೊಂಡ್ಬನ್ನಿ ನೋಡ್ತೀನಿ.

ಮಾದ : ಆಗ್ಲಿ ಬುದ್ಧಿ.

ಬೋರಣ್ಣ: ತೆಗೊಳ್ಳಿ ಈ ಮಾತ್ರೆಗಳು ಔಷಧ ಮೂರು ಹೊತ್ತು ಕೊಡಿ, ಹಾಲು ಕೊಡಿ, ಪರ್ವಾಗಿಲ್ಲ, ಗಂಜೀನೂ ಕೊಡಬಹುದು.

ಮಾದ )<br>ಸಣ್ಣಿ ) -ಆಗ್ಲಿ ಬುದ್ದಿ ನಾವು ಬರ್ತೀವಿ ನಾಳೆ.

ಬೋರಣ್ಣ: ಆಗಬಹುದು.

(ಇಬ್ಬರೂ ಮಗುವನ್ನು ಕರೆದುಕೊಂಡು ಹೊರಡುವರು)

ಬೋರಣ್ಣ: ಅಪ್ಪಣ್ಣನವರೇ ಹೇಗಿದೆ?

ಅಪ್ಪಣ್ಣ : (ದುಃಖದಲ್ಲಿ) ಏನು ಅಂತ ಹೇಳ್ಲಿ ಸಾರ್.

ಬೋರಣ್ಣ: ಈಗ ಕಾಲಿನ ಮೂಳೆ ಕೂಡಬೇಕಾದ್ರೆ ಇನ್ನು ಎರಡು ತಿಂಗಳ ಬೇಕಾಗುತ್ತೆ.

ಅಪ್ಪಣ್ಣ : ಹಾಗಾದ್ರೆ ಮನೆಗೋಗೋದು?

ಬೋರಣ್ಣ: ಸಧ್ಯ ಕಾಲು ಸುಮಾರಾಗಿದ್ರೆ ನಿಮ್ಮ ಪುಣ್ಯ. ನೋಡಿ ಒಂದು ಬಾಳೆಹಣ್ಣಿನ ಸಿಪ್ಪೆಯಿಂದ ಎಂಥ ಅನಾಹುತ ಆಯ್ತು?

ಅಪ್ಪಣ್ಣ : ಸಾರ್...

ಬೋರಣ್ಣ: ಏನು ಮಾಡ್ಲಿ ಹೇಳಿ ನನ್ನ ಪ್ರಯತ್ನವನ್ನೆಲ್ಲಾ ಮಾಡ್ತಾ ಇದ್ದೀನಿ.

ಅಪ್ಪಣ್ಣ : ಹೇಗಾದ್ರೂ ಮಾಡಿ ಗುಣ ಮಾಡಿದ್ರೆ ಸಾಕು.

ಬೋರಣ್ಣ: ನೋಡೋಣ ಪ್ರಯತ್ನ ಪಡ್ತೇನೆ.

ಅಪ್ಪಣ್ಣ : ಅಯ್ಯೋ ಯಾಕೆ ದೇವರು ಹೀಗೆ ನನ್ನನ್ನು ಮಲಗಿಸಿ ಸಂಕ್ಟ ತುಂಬ್ತಾ ಇದ್ದಾನೋ.

ಬೋರಣ್ಣ: ಏನೂ ಯೋಚನೆ ಮಾಡಬೇಡಿ ಮಲಗಿ ಆದಾಗಾಗುತ್ತೆ. ಮಾಡಿದ ತಪ್ಪಿಗೆ ಅಟ್ಟುಣ್ಣಲೇ ಬೇಕು.

ಅಪ್ಪಣ್ಣ : ಆಗಲೀ ಸಾರ್. (ನಿಟ್ಟುಸಿರು ಬಿಡುವನು)

(ಬೋರಣ್ಣ ಹೊರಡುವರು)

## ದೃಶ್ಯ-೧೦

(ರಸ್ತೆ)

(ಡಾಕ್ಟರ್ ಬೋರಣ್ಣನವರು ಬೆಳಗ್ಗೆ ಸ್ಕೂಲಿನ ಹತ್ತಿರ ಹೋಗುತ್ತಿರಲು ಯಾರೋ ಶಾಲೆಯ ಸ್ವಲ್ಪ ದೂರದಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿರಲು, ಅವರು ಪೂರ್ತಿ ಮಾಡುವವರೆಗೆ ಅಲ್ಲೇ ನಿಂತಿದ್ದು ಬರುತ್ತಿರಲು)

ಬೋರಣ್ಣ: ಸ್ವಾಮಿ.

ರೇವಣ್ಣ : (ಗಾಬರಿಯಿಂದ) ಏನು ಸಾರ್?

ಬೋರಣ್ಣ: ಸ್ವಲ್ಪ ನಿಲ್ಲಿ ಅಂದೆ.

ರೇವಣ್ಣ : ನಿಂತಿದ್ದೇನಲ್ಲಾ ಏನು ಹೇಳಿ.

ಬೋರಣ್ಣ: ನಿಮ್ಮ ಹೆಸರು?

ರೇವಣ್ಣ : ರೇವಣ್ಣ ಅಂತ.

ಬೋರಣ್ಣ: ಎಲ್ಲಿ ಕೆಲಸ ಮಾಡ್ತಾ ಇದ್ದೀರಾ?

ರೇವಣ್ಣ : ಏನು ಬಹಳ ಇನ್ಸ್‌ಪೆಕ್ಷನ್ ಮಾಡ್ತೀರಲ್ಲಾ?

ಬೋರಣ್ಣ: ನಾನು ಇನ್‌ಸ್ಪೆಕ್ಟರೂ ಅಲ್ಲ ಗಾಬರಿ ಬೀಳಬೇಡಿ ಹೇಳಿ.

ರೇವಣ್ಣ : ಅಂದಹಾಗೆ ನಿಮ್ಮ ಹೆಸರು ಹೇಳಲಿಲ್ಲ.

ಬೋರಣ್ಣ: ಹೇಳಲೇಬೇಕೋ?

ರೇವಣ್ಣ : ನಾನು ಹೇಳಲಿಲ್ಲೇ? ಹಾಗೇ ನೀವು ಹೇಳಿದ್ರೇನು ತಪ್ಪು?

ಬೋರಣ್ಣ: ತಪ್ಪು ಅಂತಲ್ಲಾ. ರೈಟಾಗೇ ಹೇಳ್ತೀನಿ ಕೇಳಿ ಬೋರಣ್ಣ ಅಂತ.

ರೇವಣ್ಣ : ನೀವು ಏನು ಕೆಲಸ ಮಾಡ್ತಾ ಇದ್ದೀರೀ?

ಬೋರಣ್ಣ: ನೀವು ಏನೋ ನನ್ನನ್ನು ಇನ್ಸ್‌ಪೆಕ್ಷನ್‌ಗೆ ಗುರಿ ಮಾಡ್ತಾ ಇದ್ದೀರಲ್ಲಾ.

ರೇವಣ್ಣ : ಇಲ್ಲಾ ನಾನು ಇನ್‌ಸ್ಪೆಕ್ಟರ್ ಅಲ್ಲ.

ಬೋರಣ್ಣ: ಮತ್ತೆ.

ರೇವಣ್ಣ : ಸ್ಕೂಲ್ ಮಾಸ್ಟರ್.

ಬೋರಣ್ಣ: ನಾನು ಡಾಕ್ಟರ್.

ರೇವಣ್ಣ : ಹೊಸದಾಗಿ ಬಂದಿದ್ದೀರಲ್ಲಾ?

ಬೋರಣ್ಣ: ಈಗ ಈ ಹಳ್ಳಿಗೆ ಹಳಬನಾಗಿದ್ದೀನಿ.

ರೆವಣ್ಣ : ಈಗ ನಿಮಗೆ ನನ್ನಿಂದೇನಾಗ್ಬೇಕಾಗಿತ್ತು?

ಬೋರಣ್ಣ: ನೀವು ಈಗೊಂದು ಸ್ವಲ್ಪ ಹೊತ್ತಿನಿಂದೀಚೆಗೆ ಮಾಡಿದ್ರಲ್ಲಾ. ಅದನ್ನು ಮಾಡಬಾರ್ದಾಗಿತ್ತು.

ರೇವಣ್ಣ : ಇದೇನು ನೀವು ಹೇಳೋದು ಅವಸರವಾದ್ರೆ ಒಂದಕ್ಕೂ ಹೋಗಬಾರದೆ?

ಬೋರಣ್ಣ: ಹೋಗಬೇಕು. ಆದ್ರೆ ಎಲ್ಲಿ?

ರೇವಣ್ಣ : ಇಲ್ಲಿ.

ಬೋರಣ್ಣ: ಎಲ್ಲಿ ಬೇಕಾದ್ರೆ ಅಲ್ಲಿ ಹೋಗಬಹುದೇ? ಇದು ಸ್ಕೂಲಿನ ಹತ್ತಿರವೇ ಅಗೋ ನೋಡಿ ಹುಡುಗ್ರೆಲ್ಲಾ ಆಡ್ತಾ ಇದ್ದಾರೆ. ನೀವು ಮಾಡಿರೋದು ನೋಡಿ ಅವರು ಇಲ್ಲೇ ಆರಂಭಮಾಡ್ಬಿಡ್ತಾರೆ. 'ಗುರುವಿನಂತೆ ಶಿಷ್ಯ' ಅಂತ ಆಗಿಬಿಡ್ತಾರೆ. ಆಗ ವಾಸನೆ ಮೂಗಿಗೆ ಕೊಡಲಿಕ್ಕೆ ಸಾಧ್ಯವಾಗುತ್ಯೇ?

ರೇವಣ್ಣ : ಏನೋ ಅವಸರವಾಯ್ತು ಮಾಡ್ದೇ ಈಗೇನು ಮಾಡ್ಲಿ?

ಬೋಗಣ್ಣ: ಮುಂದೆಯಾದ್ರೂ ಮಾಡಬೇಡಿ ಅಂತ ಹೇಳ್ತಾ ಇರೋದು.

ರೇವಣ್ಣ : ಅಷ್ಟೇ ತಾನೇ.

ಬೋರಣ್ಣ: ನೋಡಿ ನೀವು ಉಪಾಧ್ಯಾಯರಾಗಿ ಈ ರೀತಿ ಬೇಜವಾಬ್ದಾರಿ ಮಾತು ಆಡೋದು ಅದು ನನಗೆ ಹಿಡಿಸ್ತಾ ಇಲ್ಲಾ. ನಿಮ್ಮಂಥ ತಿಳಿದವ್ರು ನಾಲ್ಕು ಹುಡುಗರಿಗ, ದೊಡ್ಡವರಿಗ ಬುದ್ಧಿ ಹೇಳೋವ್ರು ಹೀಗೆ ಮಾಡಿದ್ರೆ ಮಿಕ್ಕವರೂ ಇದೇ ಅಲ್ವೇ ಕಲ್ಯೋದು? ನೀವು ಮಕ್ಕಳಿಗೆ ಆರೋಗ್ಯದ ವಿಚಾರ ಹೇಳೋದಿಲ್ವೆ?

ರೇವಣ್ಣ : ಹೇಳ್ದೇ ಏನು ಹಲ್ಲು ಉಜ್ಜೀ, ಸ್ನಾನಮಾಡಿ, ಉಗುರು ಕತ್ತರಿಸಿ, ಶುಧ್ಧವಾಗಿ ಬನ್ನಿ ಅಂತ ಹೇಳ್ತಾ ಇರ್ತೀವಿ. ಪಾಠವನ್ನೇ ಹೇಳ್ತಾ ಇದ್ದೀವಿ.

ಬೋರಣ್ಣ: ಅಲ್ಲಾ ಸ್ವಾಮಿ ಬರೇ ಅವರು ನೈರ್ಮಲ್ಯವಾದ್ರೆ ಆಯ್ತೆ.

ರೇವಣ್ಣ : ಗ್ರಾಮ ನೈರ್ಮಲ್ಯವನ್ನು ಹೇಳ್ತೀವಿ.

ಬೋರಣ್ಣ: ಉಚ್ಚೆಯನ್ನು ನೀವೇ ಹೊಯ್ದು ಮಕ್ಕಳಿಗೆ ಊರನ್ನು ಚೊಕ್ಕಟವಾಗಿಡಿ ಅಂತ ಹೇಳ್ತೀರಿ ಅಲ್ವೇ? (ಉಪಾಧ್ಯಾಯರು ತಲೆ ಕೆರೆಯುತ್ತ, ಉಗುಳು ನುಂಗುತ್ತ ನಿಂತುಕೊಳ್ಳಲು) ಮಾತಾಡಿ ಮೇಷ್ಟ್ರೇ... ಏಕೆ ಸುಮ್ನೇ ಮೌನವಾಗಿ ಬಿಟ್ರಿ? ಉತ್ತರಹೇಳಿ ಬೇರೆ ದೇಶಗಳಲ್ಲಿ ಮಕ್ಕಳಿಗೆ ಅಕ್ಷರಾಭ್ಯಾಸಕ್ಕಿಂತಲೂ ಆರೋಗ್ಯಾಭ್ಯಾಸಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡ್ತಾರೆ ಅನ್ನೋದಾದ್ರೂ ಗೊತ್ತಿದೇ ತಾನೇ? (ಮೌನ) ಸುಮ್ನೇ ನಿಂತುಬಿಟ್ರಲ್ಲಾ.

ರೇವಣ್ಣ : ಏನೇನು ಹೇಳ್ತೀರಿ ಅಂತ ಈಗ ನಾನು ಕೇಳಿ ತಿಳಿದುಕೊಳ್ತಾ ಇದ್ದೀನಿ ಸ್ವಾಮಿ.

ಬೋರಣ್ಣ: ಕೇಳಿ ಹೇಳ್ತೀನಿ ನೀವು ಬರೇ ಮಕ್ಕಳಿಗೇ ಅಲ್ಲ ಬುದ್ಧಿ ಹೇಳೋದು, ರೈತರಿಗೆ ಹೇಳಬಹುದು, ಆರೋಗ್ಯ ಇಲಾಖೆಯವರು ಪ್ರಕಟಿಸುವ ಹಸ್ತ ಪತ್ರಗಳನ್ನು ಗ್ರಂಥಗಳನ್ನು ಪರಿಚಯ ಮಾಡಿಕೊಡಬಹುದು. ಊರಿನಲ್ಲಿ ಆರೋಗ್ಯದ ಬಗ್ಗೆ ಗ್ರಾಮ ನೈರ್ಮಲ್ಯದ ಬಗ್ಗೆ ಉಪನ್ಯಾಸ ಮಾಡಿ ಜನರ ಮನ ಒಲಿಸಬಹುದು. ಫಸ್ಟ್ ಎಯ್‌ಡ್ ( First Aid) ಕಲಿತುಕೊಂಡು ರೈತರುಗಳಿಗೆ ನೆರವಾಗಬಹುದು. ಸಂಘಗಳನ್ನು ಏರ್ಪಡಿಸಿ ಗ್ರಾಮ ನೈರ್ಮಲ್ಯದ ಕಾರ್ಯದಲ್ಲಿ ಭಾಗವಹಿಸಬಹುದು. ಉಪಾಧ್ಯಾಯರಾದವರು ಮೊದಲು ಆದರ್ಶರಾಗಬೇಕು ನಂತರ ಉಪದೇಶ ನೀಡಬೇಕು. ಮೊದಲು ಮಾಡಿ ತೋರಿಸಿ ನಂತರ ಹೇಳಿ ತೋರಿಸಬೇಕು.

ರೇವಣ್ಣ : ಹೌದು ಸಾರ್ ತಾವು ಯಾತಕ್ಕೋಸ್ಕರ ಹೇಳಿದ್ರಿ ಅನ್ನೋದು ನನಗೆ ಈಗ ಗೊತ್ತಾಯ್ತು, ನಾನು ಮಾಡಿದ್ದು ಸರ್ವಥಾ ತಪ್ಪಾಯ್ತು ಕ್ಷಮಿಸಿ ಡಾಕ್ಟರೇ.

(ಅಷ್ಟರಲ್ಲಿ ರಾಜಣ್ಣನ ಪ್ರವೇಶ)

ರಾಜಣ್ಣ : ಓಹೋ, ಏನು ಮೇಷ್ಟ್ರೇ ತಪ್ಪು ಕ್ಷಮಿಸಿ ಅಂತಾ ಹೇಳ್ತಾ ಇದ್ದೀರಲ್ಲಾ.

ರೇವಣ್ಣ : ಏನೂ...ಇಲ್ಲ.

ಬೋರಣ್ಣ: ಪರ್ವಾಗಿಲ್ಲಾ ಅದೇನು ಹೇಳಿ. ನಾಚ್ಗೆ ಪಡಬೇಡಿ. ಅವರು ಆರೋಗ್ಯದ ವಿಚಾರವನ್ನು ನೋಡಿಕೊಳ್ಳುವವರೇ ಪಾಪ ನಾನೇ ಹೇಳ್ತೀನಿ ಕೇಳಿ ಸ್ವಾಮಿ ರಾಜಣ್ಣನವರೇ,

ರೇವಣ್ಣ : ಏನು ಡಾಕ್ಟರ್?

ಬೋರಣ್ಣ: ದಾರೀಲಿ ಮೂತ್ರ ವಿಸರ್ಜನೆ ಮಾಡ್ತಾ ಇದ್ರು ಅದ್ಕೆ ಇಷ್ಟೆಲ್ಲಾ ಮಾತುಗಳು ನಡೆದುವು.

ರೇವಣ್ಣ : ರಾಜಣ್ಣನವರೇ... ಏನೋ ತಪ್ಪು ಮಾಡಿದೇನಪ್ಪಾ.

ಬೋರಣ್ಣ: ತಪ್ಪು ಮಾಡಿದ್ರೆ ರೈಟ್ ಮಾಡ್ಲಿಕ್ಕೆ ಬರೋದು ಪರ್‍ವಾಗಿಲ್ಲ ಬಿಡಿ. ಈಹೊತ್ತು ಈಹೊತ್ತಿನವರೆಗೆ ಆದದನ್ನು ಮರೆತು ಮುಂದಾದ್ರೂ ನಾನು ಹೇಳಿದ ವಿಚಾರಮಾಡಿ. ನಿಮ್ಮ ಸ್ಕೂಲಿನ ಹುಡುಗ್ರೂ ಇದೇರೀತಿ ಮಾಡ್ತಾರೆ.

ರೇವಣ್ಣ : ಹೌದು ಸಾರ್.

ರಾಜಣ್ಣ : ಸಾರ್ ಅದ್ಕೆ ಹುಡುಗರಿಗೆ ಮೂತ್ರಿಗಳನ್ನು ಕಟ್ಟಿಸಿ ಅಲ್ಲೇ ಹೋಗಬೇಕು ಅಂತ ಮಾಡಿ. ಅದರಿಂದ ಜಾಗ ಶುದ್ಧವಾಗಿ ಚೆನ್ನಾಗಿರುತ್ತದೆ. ಮುಂದಾದರೂ ಹಾಗೇ ಮಾಡಿ. ಸ್ಕೂಲೊಂದರಲ್ಲೇ ಅಲ್ಲಾ ನಮ್ಮೂರಿನ ಎಲ್ಲಾ ಕಡೆಗಳಲ್ಲೂ ಈ ಮೂತ್ರ ವಿಸರ್ಜನೆ ಮಾಡಲು ಅನುಕೂಲ ಮಾಡಿದ್ರೆ ಬಹಳ ಉತ್ತಮ.

ರೇವಣ್ಣ : ಹೌದು ರಾಜಣ್ಣನವರೇ, ಡಾಕ್ಟರೇ ಬೆಲ್ ಆಯ್ತು ಸ್ಕೂಲಿಗೆ ಹೋಗ್ತೇನೆ, ಬರ್ತೇನೆ ಡಾಕ್ಟ್ರೇ.

ರಾಜಣ್ಣ : ಹೌದು ಸಾರ್.

(ಹೊರಡುವನು)

## ದೃಶ್ಯ-೧೧

(ಆಸ್ಪತ್ರೆಯಲ್ಲಿ ಡಾಕ್ಟರ್ ಕುಳಿತಿದ್ದಾರೆ. ಅಲ್ಲಿಗೆ ಗೋಳೋ ಎಂದು ಅಳುತ್ತಾ ಮಾದ ಮತ್ತು ಸಣ್ಣ ಬರ್‍ತಾರೆ.)

ಬೋರಣ್ಣ: ಯಾಕೆ ಮಾದ ಸಣ್ಣೆ ಅಳ್ತಾ ಇದ್ದೀರಿ.

ಮಾದ : ಬುದ್ಧಿ... ನಮ್ಮ ಅಕ್ಕನ ಮೊಗ ವೋಗ್ಬುಡ್ತು ಬುದ್ಧಿ.

ಸಣ್ಣೆ : ನಿನ್ನೆ ಬೆಳಗಿನವರ್‍ಗೆ ನೀವು ಕೊಟ್ಟ ಔಸ್ತಿ ಕುಡಿಸಿ ಮಾಡಿ ನೋಡ್ಕಂತಿದ್ವು ಬುದ್ಧಿ ಮಧ್ಯಾಹ್ನ ವಸ್ತು ವೊಂಟೋಯ್ತು ಡಾಗಟ್ರೇ.

ಬೋರಣ್ಣ: ಏನು ಮಾಡಲಿ ಹೇಳು ನನ್ನ ಪ್ರಯತ್ನ ಮಾಡಿದೆ. ಅದು ಸಾಧ್ಯವಾಗ್ಲಿಲ್ಲ. ಏನೋ ಅದರ ಋಣ ಅಷ್ಟೇ ಇತ್ತೋ ಏನೋ ಅದಕ್ಕೆ ಇನ್ನೆಷ್ಟು ಅತ್ತರೆ ತಾನೇ ಬರುತ್ಯೇ ಸ್ವಲ್ಪ ಸಮಾಧಾನ ತಕ್ಕೊಳ್ಳಿ.

ಮಾದ : ಬುದ್ಧಿ ಇದು ಸಾಮಾನ್ಯದ ರೋಗ್ವಲ್ಲಾ ಈಹೊತ್ತೂ ಅದು ಬೀದಿಲೆಲ್ಲಾ ಹಬ್ತಾ ಐತೆ. ಊರ್‍ರೂರ್‍ಗೆ ಹಬ್ಬಕ್ಕೂ ಯೇಸಕಿಲ್ಲಾ ಬುದ್ಧಿ.

ಬೋರಣ್ಣ: ಏನು ಹೇಳಲಪ್ಪಾ ಎಲ್ಲರೂ ಸ್ವಲ್ಪ ಮುಂಜಾಗ್ರತೆ ವಹಿಸಬೇಕು. ಈಗ ನೋಡು ಅಪ್ಪಣ್ಣನವರ ಕಾಲು ಸ್ವಲ್ಪ ಜಾಗ್ರತೆ ವಹಿಸ್ದೇ ಹೋದದ್ಕೇ ಹೀಗಾಯ್ತು.

ಮಾದ : ಯಾನಾಯ್ತು ಬುದ್ಧಿ?

ಬೋರಣ್ಣ: ಒಂದು ಕಾಲು ಹೋದಾಗೆ ಕುಂಟೇ ಆಗೋದ್ರಲ್ಲಪ್ಪಾ ಹಾಗೇ ಊರಿನ ಜನರಿಗೂ ಈ ರೋಗ ಹರಡೀತು.

ಮಾದ : ನಮ್ಮ ಬೀದಿಯವರ ಮೇಲೆಲ್ಲಾ ಪೋಗಿ ರೇಗಾಡಿ ನಿಮ್ಮ ಪತ್ತಿರ ಕಳುಹಿಸ್ತೀನಿ ಅವರಿಗೆಲ್ಲಾ ಸಲಹೆ ಕೊಡಿ ನನ್ನೊಡ್ಯಾ.

ಸಣ್ಣ : (ಅಳುತ್ತಾ) ಬರ್ತೀವಿ ಬುದ್ಧಿ.

ಬೋರಣ್ಣ: ಸಣ್ಣಿ ಸ್ವಲ್ಪ ಸಮಾಧಾನ ತಾಳ್ಕಳ್ಳಿಮ್ಮ.

ಸಣ್ಣಿ : ಅದು ಮರೆಯೋವರ್ಗೂ ಈ ಅಳ ನಿಲ್ಲೈತ ಬುದ್ಧಿ.

ಬೋರಣ್ಣ: ಕಷ್ಟ ಏನು ಮಾಡೋದು ಹೋಗಿಬನ್ನಿ.

(ಇಬ್ಬರೂ ಹೊರಡವರು)

(ಅವರು ಹೋದಮೇಲೇ ಹಾಗೇ ಯೋಚಿಸುತ್ತಾ ಡಾಕ್ಟರ್ ಕುಳಿತಿದ್ದಾರೆ ಅಲ್ಲಿಗೆ ಜುಂಜಪ್ಪನವರು ಬರುತ್ತಾರೆ)

ಬೋರಣ್ಣ: ಏನು ಜುಂಜಣ್ಣನವರೇ ಬಂದ್ರಿ?

ಜುಂಜಪ್ಪ: ಹೀಗೇ ಪಂಚಾಯಿತಿ ಆಫೀಸಿಗೆ ಹೋಗ್ತಿದ್ದೆ ನಿಮ್ಮನ್ನೊಂದು ಸ್ವಲ್ಪ ನೋಡೋಣ ಅಂತ ಬಂದೆ.

ಬೋರಣ್ಣ: ಹೇಗೆ ನಡೀತಿದೆ ಕೆಲಸ?

ಜುಂಜಪ್ಪ: ಏನೋ ಅಪ್ಪಾ ನಿಮ್ಮಂಥ ಡಾಕ್ಟ್ರು ನಮ್ಮೂರಿಗೆ ಬಂದದ್ಕೇ ಏನೋ ಒಂದು ದಾರೀಗೆ ಬಂತು.

ಬೋರಣ್ಣ: ಹಾಗಾದ್ರೆ ಒಂದೇ ದಾರಿ ಅನ್ನಪ್ಪ.

ಜುಂಜಪ್ಪ: ಒಂದೇನೂ ಎಲ್ಲಾ ದಾರೀನೂ ಸರಿಹೋಯ್ತು. ಊರಿನ ರಸ್ತೆಗಳು ಸೊಗಸಾಗಿ ಆದೋ. ತಾರ್ ರೋಡೇ ಆಗೋಯ್ತು ಲೈಟ್ ಹಾಕ್ಸಾಯ್ತು. ಒಳ ಚರಂಡಿಗಳನ್ನು ಮಾಡಿಸಿಯಾಯಿತು. ಕಕ್ಕಸ್ಗಳನ್ನು ಒಳ್ಳೇ ರೀತೀಲಿ ಮಾಡುವ ಹಾಗೆ ಆಯ್ತು. ಮೂತ್ರಿಗಳನ್ನು ಕಟ್ಟಿಸಿಯಾಯ್ತು. ಜನಗಳಿಗೆಲ್ಲಾ ಒಳ್ಳೇ ಬುದ್ಧಿ ಬಂದಿದೆ. ಎಲ್ಲರೂ ಈಗ ತುಂಬಾ ಕ್ಲೀನಾಗಿದ್ದಾರೆ. ಊರು ಅಷ್ಟೇ ಕಸಕಡ್ಡಿ ಇಲ್ಲ, ಎಲ್ಲಾ ಚೊಕ್ಕಟವಾಗಿದೆ. ಅದ್ಕೆಲ್ಲಾ ಕಾರಣ ನೀವೇ.

ಬೋರಣ್ಣ: ನಾನೇನು, ನೀವು ತಾನೇ ಅಷ್ಟೆಲ್ಲಾ ಮಾಡಲಿಕ್ಕೆ ಕಾರಣಪುರುಷರು, ನೀವು ಪಂಚಾಯ್ತಿ ವತಿಯಿಂದ ಸಹಕಾರ ನೀಡದೇ ಇದ್ರೆ ಆಗ್ತಾ ಇತ್ತೇ?

ಜುಂಜಪ್ಪ: ನಾನೇನೋ ಗ್ರಾಮದ ಅಭಿವೃದ್ಧಿಗೆ ಏನೇನುಬೇಕೋ ಅದನ್ನು ಮಾಡಿದ ಹಾಗಾಯ್ತು. ನೀವು ಗ್ರಾಮದ ಜನರ, ಆರೋಗ್ಯ ನೈರ್ಮಲ್ಯ ನಿಮ್ಮಿಂದ ನೆರವೇರ್ತು.

ಬೋರಣ್ಣ: ನಾನೇನು, ನೀವೇನು ಊರಿನ ಜನರೆಲ್ಲಾರ ಸಹಕಾರ, ಹುಮ್ಮಸ್ಸಿನಿಂದ ಗ್ರಾಮ ಒಂದು ಸಂತುಷ್ಟಿಯ ಹಳ್ಳಿಯಾಯ್ತು. "ಮಧುವನ" ಅನ್ನೋ ಹೆಸರು ಸಾರ್ಥಕವಾಯ್ತು.

ಜುಂಜಪ್ಪ: ಹೌದು ಅದನ್ನು ಒಪ್ಪಬೇಕಾದ್ದೆ.

ಬೋರಣ್ಣ: ಅಂದ ಹಾಗೆ... ನಾನು ಈ ಊರಿಗೆ ಬಂದು ಮುಂದಿನ ವಾರಕ್ಕೆ ಒಂದು ವರ್ಷ ಆಗಿಬಿಡುತ್ತೆ ಅಲ್ಲಾ.

ಜುಂಜಪ್ಪ: ಹೌದು.

ಬೋರಣ್ಣ: ಆಡು ಆಡ್ತಾ ಒಂದು ವರ್ಷ ಹತ್ತಿರಕ್ಕೆ ಬಂತು. ನಾನು ಹ್ಯಾಗೆ ಕಾಲ ಕಳೆದೆ ನೋ ಏನೋ ಅಂತ ನನಗೆ ಆಶ್ಚರ್ಯ ಆಗ್ತಾ ಇದೆ.

ಜುಂಜಪ್ಪ: ಅದ್ಕೇ ನೋಡಿ ಬೋರಣ್ಣ ನಮ್ಮ ಹಿರಿಯವರು ಹೇಳ್ತಿದ್ರು 'ಗಂಡಸು ಕೂತು ಕೆಟ್ಟ' ಅಂತ. ನಾನು ಅಷ್ಟೇ ಮೊದ್ಲು ಎಷ್ಟು ಸೋಂಬೇರಿಯಾಗಿದ್ದೆ ಗೊತ್ತೇ? ಈಗ ಕೆಲಸ ಮಾಡಿದ ಮೇಲೆ ನೋಡಿ ನನ್ನ ಬೊಜ್ಜು ಎಲ್ಲಾ ಕರಗಿ ಒಳ್ಳೆ ಶಕ್ತಿವಂತನಾದೆ.

ಬೋರಣ್ಣ: ಹೌದಪ್ಪ ಪ್ರತಿಯೊಬ್ಬ ಮನುಷ್ಯನೂ ಏನಾದರೂ ಕೆಲಸದಲ್ಲಿ ಇರಲೇಬೇಕು. "ಕಾಯಕವೇ ಕೈಲಾಸ" ಅಂತ ಅದ್ಕೇ ತಾನೇ ಬಸವಣ್ಣನವರು ಹೇಳಿರೋದು.

ಜುಂಜಪ್ಪ: ಮಾತು ನಮ್ಮಿಬ್ಬರ ಹೊಗಳಿಕೇಲೆ ಮುಂದುವರೀತಾ ಇದೆ.

ಬೋರಣ್ಣ: ಈಗ ಮುಂದಿನ ವಾರ ಬಂತಲ್ಲ "ಆರೋಗ್ಯ ದಿನಾಚರಣೆ".

ಜುಂಜಪ್ಪ: ನೋಡಿ ನೀವು ಎಷ್ಟೇ ಆದ್ರೂ ಡಾಕ್ಟರ್ ಆದದ್ಕೇ ಈ ವಿಷಯ ಬೇಗನೆ ಜ್ಞಾಪಕ ಬಂತು.

ಬೋರಣ್ಣ: ಈ ಸಾರಿನೂ ಫಂಕ್ಷನ್ ಎಲ್ಲಿ ಮಾಡೋಣ ನಿಮ್ಮ ಪಂಚಾಯಿತಿ ಮುಂದುಗಡೆ ಮಾಡೋಣ್ವೇ ಅಥವಾ... ಇನ್ನೆಲ್ಲಾದ್ರೂ ಮಾಡೋಣ್ವೇ?

ಜುಂಜಪ್ಪ: ಈ ಆರೋಗ್ಯ ದಿನಾಚಾರಣೇನ ಈ ಸಾರಿ ಹೊಸದಾಗಿ ನಿಮ್ಮ ಆರೋಗ್ಯ ಕೇಂದ್ರದಲ್ಲೇ ಮಾಡೋಣ.

ಬೋರಣ್ಣ: ನನ್ದೇನು ಅಭ್ಯಂತರವಿಲ್ಲ. ಆದ್ರೆ ಇದಕ್ಕೆ ನಿಮ್ಮಗಳ ಸಹಕಾರ ಅವಶ್ಯ.

ಜುಂಜಪ್ಪ: ಅದು ಎಲ್ಲಿ ಮಾಡಿದ್ರೂ ಇದ್ದೇ ಇರುತ್ತೆ. ಅದು ನಿಮ್ಮ ಕಾರ್ಯವೂ ಹೌದು ನಮ್ಮ ಕಾರ್ಯವೂ ಹೌದು. ಅದು ಸರಿ ಅಧ್ಯಕ್ಷತೆ ವಹಿಸುವವರು ಯಾರು?

ಬೋರಣ್ಣ: ಇನ್ನ್ಯಾರು ನಮ್ಮ ಮಾರಣ್ಣನವರೇ. ಅವರು ನಮ್ಮೂರು ಸರಿಯಾದ ಮೇಲೇ ಬರ್ತೇನೆ ಅಂತ ಹೇಳಿದ್ರಲ್ಲಾ. ಈಗ ಎಲ್ಲಾ ಸರಿಹೋಗಿದೆ ಆದ್ದರಿಂದ ಅವರನ್ನೇ ಅಧ್ಯಕ್ಷರಾಗಿ ಮಾಡಬೇಕು. ನಾನು ಕಾಗದ ಬರೀತೀನಿ ಅದರ ಬಗ್ಗೆ.

ಜುಂಜಪ್ಪ: ಅಗತ್ಯವಾಗಿ. ರೋಗಿಗಳು ಬರ್‍ತಾ ಇದ್ದಾರೆ, ನೀವು ನೋಡಿಹೋಗಿ ನಾನು ಬರ್‍ತೇನೆ. ಏನೇನು ಅರೇಂಜ್‌ಮೆಂಟ್ ಮಾಡಿಸಬೇಕು ಅದರ ಸಿದ್ಧತೆ ನಡೆಸ್ತೇನೆ.

ಬೋರಣ್ಣ: ಆಗಲಿ.

ಜುಂಜಪ್ಪ: ಹಾಗಾದ್ರೆ ನಾನು ಬರ್‍ಲೇ ನಮಸ್ಕಾರ...

ಬೋರಣ್ಣ: ನಮಸ್ಕಾರ.

(ಜುಂಜಪ್ಪನ ನಿರ್ಗಮನ)

## ದೃಶ್ಯ-೧೨

(ಕಾಲನ್ನು ಕುಂಟುತ್ತಾ ಅಪ್ಪಣ್ಣ ದಾರಿಯಲ್ಲಿ ಹೋಗುತ್ತಿರಲು ಮಾದ ಅತ್ತಿಂದ ಬರುತ್ತಿರುತ್ತಾನೆ)

ಅಪ್ಪಣ್ಣ : ಏನ್ಲಾ ಮಾದ ಮಾವಿನ ಸೊಪ್ಪು ಗೀವಿನ ಸೊಪ್ಪು ತಕ್ಕೊಂಡೋಗ್ತಾ ಇದ್ದೀಯ?

ಮಾದ : ನಾಳೀಕೆ ನಮ್ಮೂರ್‍ರಾ ಯಾನೋ... ಅಸ್ಪತ್ರೇನಾಗ...

ಅಪ್ಪಣ್ಣ : ಆಸ್ಪತ್ರೆನಾಗ ಯಾನ್ಲಾ?

ಮಾದ : ಅದೇ ವಾದ ವರ್ಸ ಮಾಡಿದ್ರಲ್ಲಾ ಬುದ್ಧಿ, ಅದೇ ಪಂಚಾಯ್ತಿನಾಗ ಮಾಡಿದ್ರಲ್ಲಾ ಅದು.

ಅಪ್ಪಣ್ಣ : ಯಾರು ಬರ್‍ತಾರೆ?

ಮಾದ : ಡೆಪ್ಪಿ ಕಮಿಸ್ನರ್ ಅಂತ ಬರ್‍ತಾರಂತೆ ಬುದ್ಧಿ. ಅದೇ ವಾದ ವರ್ಸ್ಸ ಬಂದಿದ್ರಲ್ಲಾ ಮಾರಣ್ಣನವ್ರು ಅವ್ರೇ ಅಂತೆ.

ಅಪ್ಪಣ್ಣ : ಅಂಗಾರೆ ನಿಮ್ಮ ಯಜಮಾನನ್ದು ಬಲು ಜೋರು ಅನ್ನಪ್ಪಾ ಭಾಷಣ ಗೀಷಣ ಬಿಗೀಬೋದು.

ಮಾದ : ಬಿಗಿಯಕ್ಕೆ ಬರ್‍ತೈತೆ ಅವರಿಗೆ, ನೀವು ಯಾಕೆ ಆವೊತ್ತು ಬಿಗೀಬಾರ್‍ದು ಬೇಕಾರೆ ಹೇಳಿ ನಮ್ಮೊಡ್ಯ ಅಪ್ಪಣ್ಣನವ್ರೂ ಭಾಷಣ ಮಾಡ್ತಾರಂತೆ ಅಂತ ಹೇಳ್ತೀನಿ.

ಅಪ್ಪಣ್ಣ : ಮಾಡಬೇಕು ಅಂದಾಯ.

ಮಾದ : ಮೊದ್ಲು ಎಂಗಿದ್ರಿ ಈಗ ಎಂಗೊಳ್ಳೇವ್ರಾದ್ರಿ ಅಂತ ನೀವೇ ಹೇಳಿದ್ರೆ ಚೆನ್ನಾಗಿರಕಿಲ್ವಾ ಬುದ್ಧಿ.

ಅಪ್ಪಣ್ಣ : ಏನ್ಲಾ ನನ್ನನ್ನು ನೀನೂ ಅಂಗೆ ಅಂದಾಯ.

ಮಾದ : ಅಲ್ಲಾ ಮನಸ್ನ ನೀವೇ ಕ್ಯಾಳ್ಕಳಿ ನಾಯಾನ ಬುದ್ಧಿ ಯಾಳಾದು?

ಅಪ್ಪಣ್ಣ : ಅಂಗಾರ ಯೇಳ್ಲಾ ನಾನು ಒಂದು ಭಾಷಣ ಬುಡ್ತೀನಿ.

ಮಾದ : ಅಂಗೇ ಆಗ್ಲಿ ಬರಾವಾ ಬುದ್ಧಿ.

ಅಪ್ಪಣ್ಣ : ಸರಿ ನಡೀ ಮತ್ತೆ...

(ಅತ್ತ ಮಾದ ಹೊರಡುವನು ಇತ್ತ ಅಪ್ಪಣ್ಣ ಹೊರಡುವನು)

## ದೃಶ್ಯ-೧೩

(ಜುಂಜಣ್ಣನ ಮನೆಯಲ್ಲಿ ಬೋರಣ್ಣ ಮಾತನಾಡುತ್ತಿರುವಾಗ ಮಾರಣ್ಣನ ಆಗಮನ)

ಜುಂಜಪ್ಪ: ನಮಸ್ಕಾರ ಡೆಪ್ಟಿ ಕಮಿಷನರ್‌ಗೆ.

ಮಾರಣ್ಣ : ನಮಸ್ಕಾರ.

ಬೋರಣ್ಣ: ನಮಸ್ಕಾರ ಸಾರ್.

ಮಾರಣ್ಣ : ನಮಸ್ಕಾರ.

ಬೋರಣ್ಣ: ಅಂತೂ ಹಠ ಅಂದ್ರೆ ನಿಮ್ದೇ.

ಮಾರಣ್ಣ : ನಾನೇನಷ್ಟೇ ಅಲ್ಲಾ ನೀವು, ನಿಮ್ಮೂರ ಜನ್ರೂ ಅಷ್ಟೇ ಹಠದ ಸ್ವಭಾವದವರು ಅಂತ ನಾನು ಹೇಳ್ತೀನಿ.

ಬೋರಣ್ಣ: ಹ್ಯಾಗೆ?

ಮಾರಣ್ಣ : ನನ್ನನ್ನು ಹ್ಯಾಗಂದ್ರಿ ಹಾಗೇ.

ಜುಂಜಪ್ಪ: ಏನೋ ನಮ್ಮ ಕೆಲಸ, ಒಂದು ವರ್ಷದಲ್ಲಿ ಏನು ಮಾಡಬೇಕು ಅನ್ತಿದ್ವೋ ಅದು ಈ ಹೊತ್ತು ಮುಗೀತು ಅದ್ಕೇ ನಿಮಗೆ ಕಾಗದ ಹಾಕಿಸಿದ್ವಪ್ಪ.

ಮಾರಣ್ಣ : ಇದು ನಿಮ್ಮ ಹಠ. ನನ್ನ ಹಠ ನಿಮ್ಮೂರಿಗೆ ಬರಬೇಕಾದ್ರೆ ನಾನು ಆ ಹೊತ್ತು ಭಾಷಣವಲ್ಲಿ ಹೇಳಿದ್ನಲ್ಲಾ ಅಷ್ಟೆಲ್ಲಾ ಆಗ್ಲಿ ಅಂತ ಕಾಯ್ದುಕೊಂಡಿದ್ದೆ. ಅದು ಆಯ್ತು ಅಂತ ಪತ್ರ ಕಂಡ ಕ್ಷಣ ಬಂದೆ ಅದರಲ್ಲಿ ತಪ್ಪೇನು?

ಜುಂಜಪ್ಪ: ಅಂತೂ ಒಟ್ನಲ್ಲಿ ಇಬ್ರೂ ಛಲದಲ್ಲಿ ಕೌರವರವರೇ ಬಿಡಿ.

ಬೋರಣ್ಣ: ನೀವೂ ಅಷ್ಟೇ ಅಪ್ಪ. ನೀವು ಛಲ ಮಾಡ್ದೆ ಇದ್ದಿದ್ದರೆ ಹೀಗಾಗ್ತಿರ್ಲಿಲ್ಲ.

ಜುಂಜಪ್ಪ: ಬನ್ನಿ ಮಾರಣ್ಣನವ್ರೇ ನಿಂತ್ಕೊಂಡೇ ಮಾತಾಡ್ಲಿಕ್ಕೆ ಶುರುಮಾಡಿದ್ರಲ್ಲಾ ಕುಳಿತು ಒಂದು ಚೂರು ತಿಂಡಿ ಒಂದು ತೊಟ್ಟು ಕಾಫಿ ಕುಡುದು ಆಮೇಲೆ ಮಾತಾಡುವಿರಂತೆ ರಾಜೀ... ರಾಜೀ.

ರಾಜಿ : ಬಂದೆ... ಬಂದೇ.

ಜುಂಜಪ್ಪ : ನೋಡೇ ಒಂಬು ವರ್ಷದ ಮೇಲೆ ಡೆಪ್ಯುಟಿ ಕಮಿಷನರ್ ನಮ್ಮ ಮನೆಗೆ ಬಂದಿದ್ದಾರೆ.

ರಾಜಿ : ನಮಸ್ಕಾರ.

ಮಾರಣ್ಣ : ನಾನೇನು ಬಂದಿಲ್ಲಮ್ಮಾ ನಿಮ್ಮ ಯಜಮಾನ್ರು ಕರೆಸಿಕೊಂಡ್ರು ನಾನು ಬಂದೆ ಅಷ್ಟೇ.

ರಾಜಿ : ಈಗ ನಷ್ಟವೇನಾಯ್ತು ಬಿಡಿ.

ಮಾರಣ್ಣ : ನಾವು ಬಂದ್ರೆ ನಷ್ಟವಲ್ಲದೆ ಲಾಭ ಏನು ಹೇಳಿ ನಿಮಗೆ.

ಜುಂಜಪ್ಪ : (ನಗುತ್ತಾ) ಇಲ್ಲ ಇಲ್ಲ ಈಗ ನಿಮ್ಗೆಲ್ಲಾ ನಾಷ್ಟ.

ಬೋರಣ್ಣ : ಮಾರಣ್ಣನವ್ರೇ ಈಗ ಜುಂಜಣ್ಣ ಬುಲು ಚುರುಕು ಜೊತೆಗೆ ನಾಟಕೀಯವಾಗಿ ಮಾತಾಡೋದು ಬೇರೆ ರೂಢಿಗೆ ಬಂದೋಗಿದೆ.

ಮಾರಣ್ಣ : ಆಗ್ಲಿ... ಆಗ್ಲಿ ಮಾತಾಡ್ಲಿ.

ರಾಜಿ : ಏನು ನೀವು ಎರಡು ಸಾರಿ ಬಂದ್ರಿ ನಿಮ್ಮ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬರ್ಬಾರ್ದಾಗಿತ್ತೆ? ಮೊದಲು ಸಾರೇ ಹೇಳಿದೆ ಕರ್ರೊಂಡ್ಬನ್ನಿ ಅಂತ.

ಮಾರಣ್ಣ : ನೋಡ್ರೀ ನಿಮ್ಮ ಯಜಮಾನ್ರು ಒಂದು ಕಂಡೀಷನ್ ಹಾಕಿದ್ರು. ಆದ್ರೆ ಅದು ಆಗುತ್ತೋ ಇಲ್ವೋ ಅಂತಿದ್ದೆ ಆದ್ರೆ ಈಗ ಆಗಿದೆ. ಕರೆದುಕೊಂಡು ಬರಬಹುದಾಗಿತ್ತು ಆದ್ರೆ ಯಾವ ಗ್ಯಾರೆಂಟಿ? ಕಾಗದ ಬರೆದ್ರೆ ಸರಿಯಾಗದೆ ಅಂತ್ಲೇ? ಈಗ ಕಣ್ಣಾರೆ ನಿಮ್ಮೂರ್ನೆಲ್ಲಾ ನೋಡ್ದೆ ಇನ್ನೊಂದು ಸಾರಿ ಬರೋದೇನು ಇನ್ನು ನಿಮ್ಮೂರ್ಗೆ ಹತ್ತುಸಾರಿ ಬರ್ತೇನೆ. ಆಗ ನಿಮಗೆ ಬೇಜಾರಾಗಬೇಕು ಯಾಕಾರೋ ಬರ್ತಾರಪ್ಪಾ ಇವ್ರು ಅಂತ ಈಗ ಸಂತೋಷವಾಯ್ತು.

ರಾಜಿ : ಮಾರಣ್ಣನವ್ರೆ ದೇವ್ರು ನಮಗೆ ಅಷ್ಟೇನು ಕಡಿಮೆಮಾಡಿಲ್ಲ ನಿಮ್ಮಂಥವ್ರು ನಮ್ಮ ಮನೆಗೆ ಹೆಚ್ಚೋ ನಾವು ನಿಮ್ಮ ಸೇವೆ ಮಾಡೋದು ಹೆಚ್ಚೋ? ನಮ್ಮಲ್ಲಿ ಆ ಗುಣ ಇಲ್ಲ ಅಂತ ತಿಳ್ಕೊಳ್ಳಿ.

ಮಾರಣ್ಣ : ಏನಮ್ಮ ನೀವು ಹೇಳ್ತಾ ಇರೋದು. ದೂರದಲ್ಲೆಲ್ಲಾ ಬರಗಾಲ ಒಂದು ಕಡೆ ಅತಿವೃಷ್ಟಿ, ಮತ್ತೊಂದು ಕಡೆ ಅನಾವೃಷ್ಟಿ. ಜನರಿಗೆ ಹೊಟ್ಟೆಲ್ಲ ಬಟ್ಟೆ ಇಲ್ಲ ಅಂತ ಒದ್ದಾಡ್ತಾ ಇದ್ದಾರೆ. ಅಂಥದ್ರಲ್ಲಿ ನೀವು ಇನ್ನು ನಾಲ್ಕು ಜನ ಬನ್ನಿ ಅಂತ ಕರೀತಾ ಇದ್ದೀರಲ್ಲಾ ಸಕುಟುಂಬ ಸಪರಿವಾರ ಸಮೇತ ಬರೋ ಕಾಲವಲ್ಲಮ್ಮ ಇದು.

ಜುಂಜಪ್ಪ : ನೋಡಿ ಸ್ವಾಮಿ ಕಷ್ಟಪಟ್ಟು ವ್ಯವಸಾಯ ಮಾಡ್ತಾ ಇದ್ದೇನೆ. ದೇವ್ರು ನಮ್ಮ ಕಷ್ಟಕ್ಕೆ ಕಣ್ಣಿಟ್ಟು ಕೊಡ್ತಾ ಇದ್ದಾನೆ. ಆದ್ದರಿಂದ ನಮಗೇನು ತೊಂದ್ರೆ ಇಲ್ಲ ಹೆಚ್ಚಿಗೆ ಹೇಳಬೇಕು ಅಂದ್ರೆ...

ಮಾರಣ್ಣ : ಯಾಕೆ ಕಡಿಮೆ ಮಾತಾಡಿ ಮಾತು ಮೊಟಕು ಮಾಡ್ಬಿಟ್ರೀ?

ಜುಂಜಪ್ಪ : ನನಗೆ ಮಕ್ಕಳು ಎರಡು ಒಂದು ಗಂಡು ಹೆಣ್ಣು ಅಷ್ಟಕ್ಕೆ ನಿಲ್ಲಿಸ್ಕೊಂಡಿದ್ದೀವಿ. ದಾಸೋಹ ಮಾಡ್ಲಿಕ್ಕೆ ನಮಗೇನು ಅಡ್ಡಿಯಿಲ್ಲ. ಮಾಡ್ತೀವಿ ಎಲ್ಲಾ ಜಿ೬೬೭೭ ಹಳ್ಳಿಗರೂ ಹಾಗೇ ಮಾಡಿದ್ರೆ ಯಾಕಾದ್ರೂ ಈ ತೊಂದ್ರೆ ಬರುತ್ತೇ ಹೇಳಿ?

ಮಾರಣ್ಣ : ಹಾಗಾದ್ರೆ ಕುಟುಂಬ ಯೋಜನೇನೂ ಅನುಸರಿಸಿ ಬಿಟ್ಟಿದ್ದೀರಿ...?

ಜುಂಜಪ್ಪ : ಹೌದು ಕಾಲಕ್ಕೆ ತಕ್ಕಹಾಗೆ ನಡೆದುಕೊಳಲೇಬೇಕಲ್ಲ.

ಬೋರಣ್ಣ : ಮಾರಣ್ಣನವರೇ ಈ ಮಕ್ಕಳ ಸಂಖ್ಯೆ ಹೆಚ್ಚಾಗ್ತಾ ಆಗ್ತಾ ವಸತಿ ಸೌಕರ್ಯ, ಆಹಾರ ಸಮಸ್ಯೆ, ಆರ್ಥಿಕ ಸಮಸ್ಯೆ, ಬಂದುಬಿಡುತ್ತೆ. ನಾನು ಹೇಳೋದು ಈ ಊರಿನ ಜನರೆಲ್ಲಾ ಇದನ್ನು ಅನುಸರಿಸುವುದು ಬಹಳ ಉತ್ತಮ ಅಂತ.

ಜುಂಜಪ್ಪ : ಕುಟುಂಬ ಯೋಜನೆಗೂ ಆರೋಗ್ಯಕ್ಕೂ ಸಂಬಂಧ ಇದೆ ಅಲ್ವೇ?

ಬೋರಣ್ಣ : ಇಲ್ದೇ ಏನು? ತಾಯಿಯ ಆರೋಗ್ಯ ಕೆಡುತ್ತೆ, ಊರಿನ ನೈರ್ಮಲ್ಯಕ್ಕೂ ಅಡ್ಡಿಯಾಗುತ್ತೆ.

ರಾಜಿ : ಈಗ ಭಾಷಣ ಇಲ್ಲೇನೋ ಅಥವಾ ನಿಮ್ಮ ಆಸ್ಪತ್ರೆಯಲ್ಲೋ?

ಬೋರಣ್ಣ : ಈ ಹೊತ್ತಿರೋದು ಅಸ್ಪತ್ರೇಲೇ. ನಾನು ಮಾಡಬೇಕಾಗಿರೋದು ಆಸ್ಪತ್ರೇಲೇ. ಅದು ದಿನಾ ನಡೀತಾನೇ ಇರ್ತದೆ. ಎಷ್ಟು ಜನ ಮಕ್ಕಳನ್ನು ಕಡಿಮೆ ಮಾಡ್ಕೋಳ್ತೀವಿ ಅಂತ ಬಂದು ಸಲಹೆ ತೆಗೆದುಕೊಂಡು ಹೋಗಿದ್ದಾರೆ. ಅದನ್ನು ನಿಮ್ಮಗಳ್ಗೆಲ್ಲಾ ಹೇಳ್ತಾ ಇದ್ದೀನಿ ಅಷ್ಟೇ. ಹಾಗಾದ್ರೆ ಮಾತನ್ನು ನಿಲ್ಲಿಸೋಣ್ವೇ?

ರಾಜಿ : ಈಗ ಸಧ್ಯಕ್ಕೆ ನಿಲ್ಸಿ ಇನ್ನೊಂದು ಸ್ವಲ್ಪ ಹೊತ್ತಿಗೆ ಬಾಯಿಗೆ ಕೆಲಸ ನಾನೇ ಕೊಡ್ತೇನೆ?

(ಎಂದು ಹೊರಡವರು)

ಮಾರಣ್ಣ : ಬಾಯ್ಗೇನು ಕೆಲಸ ಇವರು ಕೊಡೋದು?

ಜುಂಜಪ್ಪ : ಅದೋ ನೋಡಿ ತರ್ತಾ ಇದ್ದಾಳಲ್ಲ ಅದು...

ರಾಜಿ : ಹೌದು ಇದೇ.

(ಎಂದು ಎಲ್ಲರಿಗೂ ತಟ್ಟೆ ಇಡುವಳು)

ಬೋರಣ್ಣ: ಓಹೋ... ವಾಂಗಿಬಾತ್, ಕೇಸರೀ ಬಾತ್...

ಜುಂಜಪ್ಪ: ಉಡಾಯ್ಸಿ ಉಡಾಯ್ಸಿ.

(ಮೂವರು ತಿನ್ನುವರು)

ಬೋರಣ್ಣ: ಇನ್ನು ಆಸ್ಪತ್ರೆಗೆ ಹೋಗೋಣ್ವೇ?

ಜುಂಜಪ್ಪ: (ನಗುತ್ತಾ) ನಮಗೇನೂ ಆಗ್ಲಿಲ್ವಲ್ಲ.

ಮಾರಣ್ಣ : ಭಾಷಣಕ್ಕೆ...

ಜುಂಜಪ್ಪ: ಸಧ್ಯ ಅಷ್ಟೇತಾನೇ... ನಡೀರಿ ಹೋಗೋಣ.

(ಮೂವರೂ ಹೊರಡುತ್ತಿರಲು. ಬೋರಣ್ಣನವರು ನಿಂತು)

ಬೋರಣ್ಣ: ಅಂದಹಾಗೆ ಹಾಡಲಿಕ್ಕೆ ರಾಜೀಯವ್ವ ಬರೋಲ್ವೇ?

ರಾಜಿ : ವರ್ಷ ವರ್ಷ ನಾನೇ ಏನು ಯಾರಾದ್ರೂ ಹಾಡಿದ್ರೂ ಆಯ್ತು.

ಮಾರಣ್ಣ : ಇಲ್ಲ ಇಲ್ಲ ಖಂಡಿತ ನೀವೇ. ಬರಬೇಕು.

ಜುಂಜಪ್ಪ: ನಿನ್ನದು ಎಲ್ಲರ ಕಿವಿಗೂ ಇಂಪುಕೊಡೋ, ಪುಣ್ಯಾ ಬಾರೇ.

ರಾಜಿ : ನೀವು ನಡೀರಿ ನಾವು ಬರ್ತೀವಿ.

ಬೋರಣ್ಣ: ಸರಿ ಹೆಂಗಸರು ಸಿಸ್ತು ಮಾಡ್ಕೊಂಡು ಬರೋದ್ರಲ್ಲಿ ನಮಗೆ ಸುಸ್ತಾಯ್ತದೆ ನಡೀರಿ.

(ಎಲ್ಲರೂ ಹೊರಡುವರು)

## ದೃಶ್ಯ-೧೪

(ಆಸ್ಪತ್ರೆಯ ಮುಂದೆ ಮಾವಿನ ತೋರಣ ಹಾಕಿದೆ. ಒಂದೆಡೆ ರಿಕಾರ್ಡ್ ಹಾಕಿದೆ. ಜನರೆಲ್ಲಾ ಸೇರಿದ್ದಾರೆ. ಅಲ್ಲಿಗೆ ಮೂವರೂ ಹೋಗಿ ಕುಳಿತುಕೊಳ್ಳುತ್ತಾರೆ. ಜನರೆಲ್ಲಾ ಕುಳಿತುಕೊಳ್ಳುತ್ತಿದ್ದಂತೆಯೇ ಚಪ್ಪಾಳೆಯನ್ನು ಹೊಡೆಯಲಾರಂಭಿಸುತ್ತಾರೆ. ಅಪ್ಪಣ್ಣನೂ ಸಹ ಕುಂಟುತ್ತಾ ಒಂದೆಡೆ ಬಂದು ಕುಳಿತುಕೊಳ್ಳುವನು. ಮಾದ, ಸಣ್ಣೀ, ರಾಜಿ ಎಲ್ಲರೂ ಸಭೆಗೆ ಬಂದಿದ್ದಾರೆ)

(ಗ್ರಾಮಸೇವಕ ರಾಜಣ್ಣನಿಂದ ಸ್ವಾಗತವಾಗುವುದು)

ರಾಜಣ್ಣ : ಅಧ್ಯಕ್ಷರಾದ ಮಾನ್ಯ ಜಿಲ್ಲಾಧಿಕಾರಿಗಳಾದ ಮಾರಣ್ಣನವರೇ, ಪಂಚಾಯ್ತಿ ಅಧ್ಯಕ್ಷರಾದ ಶ್ರೀ ಜುಂಜಣ್ಣನವರೇ, ಡಾಕ್ಟರ್ ಬೋರಣ್ಣನವರೇ ಮತ್ತು ಮಹನೀಯರೇ ಮಹಿಳೆಯರೇ. ಈ ಹೊತ್ತಿನ ದಿನ ಎಷ್ಟು ಸಂತೋಷದ ದಿನ ಅಂದ್ರೆ ಅದೇ ಹೇಳುತ್ತೆ "ಆರೋಗ್ಯದ ದಿನ" ಅಂತ. ಈ ವರ್ಷ

ಇದನ್ನು ಆಚರಿಸಲಿಕ್ಕೆ ನಿಜವಾಗಿಯೂ ನಾವು ಮತ್ತು ನಮ್ಮೊರು ಅರ್ಹವಾಗಿದೆ. ಏಕೆಂದರೆ ಗ್ರಾಮ ನಿಜವಾಗಿಯೂ ನೈರ್ಮಲ್ಯವನ್ನು ಕಂಡಿದೆ. ಜನರಲ್ಲಿ ಅರಿವು ಮೂಡಿ ಎಲ್ಲರೂ ನಮ್ಮ ಮಾತು, ಡಾಕ್ಟರ್ ಮಾತು, ಗ್ರಾಮ ಸೇವಕ ಜುಂಜಪ್ಪನವರ ಮಾತುಗಳನ್ನು ಕೇಳಿದ್ದಾರೆ. ಇದನ್ನು ಕೇಳಬೇಕಾದ್ರೂ ಇದಕ್ಕೆ ಅವರ ಪ್ರಯತ್ನ ಬಹಳ ಸಾಗಿದೆ. ಇಂಥ ಶುಭ ಸಂದರ್ಭದಲ್ಲಿ ಎಲ್ಲರನ್ನು ಸ್ವಾಗತಿಸುತ್ತೇನೆ.

(ಕರತಾಡನ)

ಮಾರಣ್ಣ : ಕಳೆದ ವರ್ಷ ಗ್ರಾಮ, ನೀವು ಆರೋಗ್ಯದಿಂದಿದ್ದರೆ ಬಹಳ ಚೆನ್ನ ಎಂಬುದಾಗಿ ಶ್ರೀಮತಿ ರಾಜಿಯವರು ಹಾಡನ್ನು ಹಾಡಿದ್ರು ಅದು ಇಂದು ಸಾರ್ಥಕವಾಗಿದೆ ಎಂಬುವರ ಬಗ್ಗೆ ಒಂದು ಹಾಡನ್ನು ಸಮಾರಂಭದ ಕೊನೆಯಲ್ಲಿ ಹಾಡ್ತಾರಂತೆ ಅದಕ್ಕೆ ನೀವೂ ನಿಮ್ಮ ಧ್ವನಿಯನ್ನು ಕೂಡಿಸುವಿರಂತೆ.

(ಕರತಾಡನ)

ರಾಜಿ : (ಹಾಡು) ನಮ್ಮ ಊರು ಮಧುವನ।
ಆಯ್ತು ಇಂದು ನಂದನವನ॥
ಎಲ್ಲ ಜನರ ನೈರ್ಮಲ್ಯ।
ಮನೆಮನೆಯ ನೈರ್ಮಲ್ಯವಾಯಿತು॥
ಮನೆಮನಯ ನೈರ್ಮಲ್ಯ।
ಊರಿನಾ ನೈರ್ಮಲ್ಯವಾಯಿತು॥ ನಮ್ಮೂರು॥

ಊರೂರ ನೈರ್ಮಲ್ಯ।
ದೇಶದ ನೈರ್ಮಲ್ಯ।
ದೇಹದ ನೈರ್ಮಲ್ಯ
ದೇಶದ ನೈರ್ಮಲ್ಯ॥
ಹಳ್ಳಿ ಹಳ್ಳಿಗಳು ಆಗಬೇಕು।
ಸಂತುಷ್ಟ ಹಳ್ಳಿಗಳು ಆಗಬೇಕು।
ಸೊಗ ಜೀವನ ಕಾಣಲೇಬೇಕು।
ಆನಂದ ಸಾಗರದಿ ತೇಲಬೇಕು॥

ಮಾರಣ್ಣ : ಡಾಕ್ಟರ್ ಬೋರಣ್ಣನವರು ಈ ಗ್ರಾಮದ ಜನರ ಆರೋಗ್ಯ ಹಾಗೂ ಗ್ರಾಮ ನೈರ್ಮಲ್ಯಕ್ಕಾಗಿ ಹೇಗೆ ಕೆಲಸ ಮಾಡಿದ್ರು ಅದರ ಬಗ್ಗೆ ನಾಲ್ಕು ಮಾತಾಡುತ್ತಾರೆ.

ಬೋರಣ್ಣ: ಅಕ್ಕ ತಂಗಿಯರೇ ಅಣ್ಣ ತಮ್ಮಂದಿರೇ ನಾನು ಗ್ರಾಮದ ಮತ್ತು ಗ್ರಾಮದ ಜನರ ನೈರ್ಲ್ಯಕ್ಕೆ ದುಡಿದಿದ್ದೀನಿ ಅಂತ ಹೇಳಲಾರೆ, ಮಾರ್ಗದರ್ಶನ ಕೊಟ್ಟಿದ್ದೇನೆ. ಅದನ್ನು ಜುಂಜಪ್ಪನವರ ಸಹಾಯದಿಂದ, ಊರ ಜನರ

ಸಹಕಾರದಿಂದ ನಡೆಸಿದೆ ಅಂತ ಹೇಳ್ತೇನೆ. ಇದು ಎಲ್ಲರ ಕಾರ್ಯ. ಸರ್ವರೂ ದುಡಿದಿದ್ದೇವೆ. ಅದರ ಫಲವೇ ನಮ್ಮ ಈ ಊರು ಇಷ್ಟರ ಮಟ್ಟಿಗಾದುದು ಮನಸ್ಸಿದ್ದರೆ ಮಾರ್ಗ ಅಂಥ ಹೇಳಿದರೆ ತಪ್ಪಾಗಲಾರದು. ಕಳೆದ ವರ್ಷ ಭಾಷಣ ಮಾಡಿ ಈ ವರ್ಷ ಕಾರ್ಯತಃ ಮಾಡಿ ತೋರಿಸಿದ್ದೇವೆ. ಅಷ್ಟೇ ಈ ಸಂದರ್ಭದಲ್ಲಿ ಕಷ್ಟ ಸುಖ ಎಲ್ಲಾ ಆಗಿದೆ. ಸಣ್ಣ ಅತ್ತಿಗೆ ಮಗು ವಿಷಮ ಶೀತಜ್ವರ ತಟ್ಟಿ ಸತ್ತಿತು. ಅಪ್ಪಣ್ಣನವರು ಕಾಲನ್ನು ಮುರಿದುಕೊಂಡರು. ಈ ಎರಡು ಮೂರು ದುಃಖ ಸನ್ನಿವೇಷ ಬಿಟ್ಟರೆ ಮತ್ತಾವುದೂ ಇಲ್ಲ ಅಂತ ಕಾಣುತ್ತೆ. ಇದೆಲ್ಲಾ ಆದುದರಿಂದಲೇ ಜನರು ಎಚ್ಚೆತ್ತುಕೊಂಡು ನಡೆದರು ಅಂತ ನನ್ನ ಭಾವನೆ.

(ಕೈ ಚಪ್ಪಾಳೆ).

ಮಾರಣ್ಣ : ಜುಂಜಪ್ಪನವರು, ಇದರ ಬಗ್ಗೆ ನಾಲ್ಕು ಮಾತಾಡಬೇಕು ಅಂತ ಕೇಳಿಕೊಳ್ತೀನಿ.

ಜುಂಜಪ್ಪ : ಸರ್ವರಿಗೂ ನಮಸ್ಕಾರ. ನಾನು ಸೋಂಬೇರಿಯಾಗಿ ಅಧಿಕಾರಲಾಲಸ್ಯ-ದಲ್ಲಿದ್ದವನಿಗೆ ಕಣ್ತೆರೆಸಿದವರು ಮಾರಣ್ಣನವ್ರು ಹಾಗೂ ಬೋರಣ್ಣನವ್ರು. ನಾನು ಹಠ ತೊಟ್ಟಿದ್ದೆ ನನ್ನ ಗ್ರಾಮವನ್ನು ಶುದ್ಧ ಮಾಡ್ತೀನಿ, ಒಂದು ವರ್ಷದಲ್ಲಿ ಅಂತ. ಅದನ್ನು ಆದಷ್ಟು ಮಟ್ಟಿಗೆ ಸಾಧಿಸಿದ್ದೇವೆ. ಎಲ್ಲರ ಸಹಕಾರದಿಂದ ಈ ಸಂದರ್ಭದಲ್ಲಿ. ಊರಿನವರು ಯಾರಾದ್ರೂ ಮಾತಾಡೋದಿದ್ರೆ ಬಂದು ಮಾತಾಡಬಹುದು.

(ಕರತಾಡನ, ಅಪ್ಪಣ್ಣ ಬರುವನು ಎಲ್ಲರೂ ಚಪ್ಪಾಳೆ, ಸಿಳ್ಳೆಹಾಕುವರು)

ಅಪ್ಪಣ್ಣ : ನನ್ನ ನೋಡಿ ನಗುಬಹುದು ನೀವೆಲ್ಲಾ. ಆದ್ರೆ, ನಾನು ನಮ್ಮ ಮನೆಯವರು ಮಾಡಿದ ತಪ್ಪಿಗೆ ಈ ಶಿಕ್ಷೆ ಆದ್ರೆ ಇದಕ್ಕೆಲ್ಲಾ ಕಾರಣ ನಾವೇ. ಡಾಕ್ಟರ್ ನನಗೆ ಅನೇಕ ರೀತಿಯಲ್ಲಿ ಗ್ರಾಮ ನೈರ್ಮಲ್ಯವಾಗಿದ್ದರೆ ನಾವು ಆರೋಗ್ಯವಾಗಿ ಬಾಳುವುದು ಅಂತ ಹೇಳಿ ಎಚ್ಚರಿಸಿದ್ರು. ಆದ್ದರಿಂದ ನಾವು ಸದಾ ಅವರಿಗೆ ಚಿರರುಣಿಯಾಗಬೇಕು.

(ಕರತಾಡನ)

ಮಾರಣ್ಣ : ಎಲ್ಲರಿಗೂ ವಂದಿಸಿ ಅಧ್ಯಕ್ಷ ಭಾಷಣವನ್ನು ಮಾಡಲಿಕ್ಕೆ ಪ್ರಾರಂಭಿಸ್ತೇನೆ. ಇಂದು ಹೋದ ವರ್ಷಕ್ಕಿಂತ ಹೆಚ್ಚಿನ ಸಂತೋಷದಿಂದ ಅಧ್ಯಕ್ಷತೆ ವಹಿಸಿದ್ದೇನೆ. ನಿಜವಾಗಲೂ ಡಾಕ್ಟ್ರು, ಜುಂಜಣ್ಣ, ನೀವು ನಿಮ್ಮೂರನ್ನು ನಿಜವಾದ "ಮಧುವನ" ಮಾಡಿದ್ದೀರಾ. ನಾನು ಈ ಹೊತ್ತಿನಿಂದ ಈ ಊರನ್ನು 'ನಂದನವನ' ಅಂತ ಕರೀತೀನಿ (ಚಪ್ಪಾಳೆ). ನನ್ನ ವೈಯಕ್ತಿಕ ಬಹುಮಾನಗಳನ್ನು ಮಿತ್ರರಾದ ಡಾ॥ ಬೋರಣ್ಣ, ಜುಂಜಪ್ಪನವರಿಗೆ ಈ

ಬೆಳ್ಳಿ ಷೀಲ್ಡ್‌ಗಳನ್ನು ಕೊಡ್ತೇನೆ. ಊರಿನ ಪಂಚಾಯಿತಿಗೆ ಜಿಲ್ಲೆಯ ವತಿಯಿಂದ ಬಹುಮಾನ ಕೊಡುವುದಕ್ಕೆ ಶಿಫಾರಸ್ಸನ್ನು ಮಾಡುತ್ತೇನೆ (ಎಂದು ಕೊಡಲು ಎಲ್ಲರೂ ಎದ್ದು ತೆಗೆದುಕೊಳ್ಳುವರು). ನಿಜವಾಗಿ ನೀವು ಊರನ್ನು ಚೆನ್ನಾಗಿ ಇಟ್ಟುಕೊಂಡಿದ್ದೀರಿ, ಆರೋಗ್ಯದ ಕಡೆ ಗಮನ ವಹಿಸಿದ್ದೀರಿ. ಹಾಗೆ ಮುಂದೆ ನೀವು ಜೀವನದಲ್ಲಿ ಎರಡು ಮೂರು ಮಕ್ಕಳನ್ನು ಪಡೆದು ಮತ್ತಷ್ಟು ಆರೋಗ್ಯ ಮತ್ತು ಭಾಗ್ಯವನ್ನು ಹೆಚ್ಚಿಸಿಕೊಂಡು ಸುಖವಾಗಿರಿ ಅಂತ ಹೇಳ್ತೇನೆ. ಪ್ರತಿಯೊಂದು ಹಳ್ಳಿಗೂ ನೀವು ಮಾದ್ರಿ ಆದ್ರೆ ನಿಮ್ಮ ಹಾಗೆ ಎಲ್ಲಾ ಹಳ್ಳಿಯವರು ಮುತುವರ್ಜಿ ವಹಿಸಿ ಕಾರ್ಯ ಮಾಡಿದ್ರೆ ಅವರ ಊರುಗಳು ನಂದನವನವಾಗೋದ್ರಲ್ಲಿ ಅನುಮಾನವಿಲ್ಲ ಅಂತ ಹೇಳಿ ನನ್ನ ಮಾತು ಮುಗಿಸುತ್ತೇನೆ.

ರಾಜಣ್ಣ : ಇಂದು ಸಮಾರಂಭದ ಅಧ್ಯಕ್ಷತೆ ವಹಿಸಿದ ಮಾರಣ್ಣನವರಿಗೆ ನಮ್ಮ ಗ್ರಾಮ ಪಂಚಾಯಿತಿ, ಆರೋಗ್ಯ ಕೇಂದ್ರದ ಪರವಾಗಿ ವಂದನೆಗಳು. ನೆರೆದ ಎಲ್ಲ ಜನರಿಗೂ ವಂದನೆಗಳು. ಕಾರ್ಯಕ್ರಮದ ಕೊನೆಯಲ್ಲಿ ಶ್ರೀಮತಿ ರಾಜಿ ಅವರು ಒಂದು ಹಾಡನ್ನು ಹಾಡ್ತಾರೆ. ಹಾಡನ್ನು ಎಲ್ಲರೂ ಒಂದೇ ಕೊರಳಿನಿಂದ ಹಾಡಬೇಕು. ಆಮೇಲೆ ಸಿಹಿ ಹಂಚುತ್ತಾರೆ ಅದನ್ನು ತಿಂದು ಸಂತೋಷವಾಗಿ ಮನೆಗೆ ತೆರಳಬೇಕು.

(ಕೈ ಚಪ್ಪಾಳೆ)

(ಪರದೆ ಬೀಳುವುದು)

## ದೃಶ್ಯ-೧೫

(ಸಣ್ಣೆ ಮನೆಯಲ್ಲಿ ಕುಳಿತಿದ್ದಾಳೆ ಅಲ್ಲಿಗೆ ಮಾದನು ಪ್ರವೇಶ ಮಾಡುತ್ತಾನೆ.)

ಮಾದ : ಯಾನ್ಲೇ ಯೋಸ್ನೆ ಮಾಡ್ತಾ ಕುಳಿತ್ಬುಟ್ಯಲ್ಲಾ?

ಸಣ್ಣೆ : ಯಾನೂ ಇಲ್ಲ. ಆಗ್ನಿಂದ ದಾಗುಟ್ರು ಹೇಳ್ದಂಗೆ ತಾಳಿದ್ರ್ಯನಾರೂ ನಮ್ಮ ಮೊಗ ಉಳೀತಿತ್ತೋ ಯಾನೋ.

ಮಾದ : ಹೌದು ಈಗ ಕೈ ಮೀರೋದ್ಮ್ಯಾಕೇನು ಮಾಡಾದು? ನಮ್ಮೂರ್ನಾಗಾದದ್ನಾರ ನೋಡಿ ನಮ್ಮ ದೇಶದಲ್ಲಿರೋ ೫೬೬೮೮೭ ಹಳ್ಳಿಗಳ ಜನರೂ ಅರಿತ್ಕೊಂಡ್ರೆ ಅವು ಅವ್ರವ್ರೂರ 'ನಂದನವನ' ಮಾಡ್ಯಾಬೋದು. ಮಕ್ಕಳು ಮನೆಗಳನ್ನು ಚೊಕ್ಕಟವಾಗಿಡಬೋದು.

ಸಣ್ಣೆ : ಊಂ ನಿಜ ಮೊದ್ಲು ನಾವ್ಗಳು, ಆಮ್ಯಾಕೆ, ನಮ್ಮ ಕೇರಿ, ಆಮೇಕೆ ನಮ್ಮೂರ್ರು ಇಂಗೇ ಎಲ್ರೂ ಮಾಡಿದ್ರೆ ದೇಸವೇ ಒಳ್ಳೇದಾಗಾಯ್ತೈತೆ ಈಗ ಪಡ್ತಿರೋ ಕಷ್ಟ ತಪ್ಪೈತೆ ಅಭಾವಗಳು.

ಮಾದ : ಊಂ ನಿಜ... ನಾವು ಮನಸ್ಸು ಮಾಡಿದ್ರ್ಯಾಕಾಗ್ಬಾರ್ದು? ಎಲ್ಲರೂ ಮಾಡಲೇಬೇಕು ಅಂತ ಪಣತೊಡಬೇಕು.

ಸಣ್ಣಿ : ಬುದ್ಯೋರ ನಿನ್ನನ್ನು ಯಾಕೋ ಬ್ಯಾಗನೆ ಬರಕ್ಕೇಳವ್ರಂತೆ ಮೊದ್ಲು ನೀನೂ ನಿನ್ನ ಸ್ವಾಮಿ ಕೆಲ್ಸ ನಿಷ್ಠೆಯಾಗಿ ಮಾಡುಹೋಗು.

ಮಾದ : ನೀನೇನು ಯಾಳಾದೇ, ಬುದ್ಯೋರ ಮನೆ ಕೆಲಸಕ್ಕೆ ಹೋಗ್ದೇ ಇರಕ್ಕಾಗತ್ತಾ? ಹೋಗ್ತೇನೆ.

ಸಣ್ಣಿ : ವಾಗುಕ್ಕು ಮುಂಚೆ ತಕ್ಕೋ...ವಸಿ ಸಿಹಿ ತಿಂಡಿ.

ಮಾದ : ಅದನ್ ಬ್ಯಾಡ ಅನ್ನಕ್ಕಾಯ್ತದಾ ಕೊಡು ಕೊಡು ನಮ್ಮೂರು 'ನಂದನವನ' ಅಂತ ನಾಮಕರಣವಾಗ್ಯೆತೆ ಅಂತ ಒಳ್ಳೆ ಸಮಯದಾಗ ಸಿಹಿ ತಿಂಡಿ ತಿನ್ನಲೇಬೇಕು. ಈವೊತ್ತು ಊರಬ್ಬ ಮಾಡಲೇಬೇಕು.

(ಇಬ್ಬರೂ ತಿನ್ನುತ್ತಿದ್ದಂತೆಯೇ ಪರದೆ ಬೀಳುವುದು)

*

# ಜನಪದ
# ಗಿಲ್ಗಮಿಷ್

**ಪಾತ್ರ ವರ್ಗ:**

೧. ಅನು-ಜಗದೀಶ್ವರ ೨. ಆದಾದ್- ವಾಯುದೇವತೆ ೩. ಶಮಾಷ್- ಸೂರ್ಯದೇವ. ಇವನ ಹೆಂಡತಿ ಅಯ ೪. ಅರೂರು- ಸೃಷ್ಟಿ ದೇವತೆ. ೫. ಬೇಟೆಗಾರ ೬. ಎಂಕಿಡು-ಗಿಲ್ಗಮಿಷ್ ಮಿತ್ರ, ನಿಸರ್ಗ ಶಕ್ತಿಯ ಸಂಕೇತ ೭. ಗಿಲ್ಗಮಿಷ್-ವೀರರಾಜ ೮. ವೇಶ್ಯ ೯. ನಿನ್ ಸುನ್-ಗಿಲ್ಗಮಿಷನ ತಾಯಿ ೧೦. ಹುಂಬಾಬ- ಸೀಡರ್ ವನದಲ್ಲಿದ್ದ ಅಮಾನುಷ ಕಾವಲುಗಾರ ೧೧. ಇಷ್ತರ್-ಪ್ರೇಮಾಧಿದೇವತೆ ೧೨. ಆನ್‌ಟುಮ್-ಜಗದೀಶ್ವರನ ಹೆಂಡತಿ, ಇಷ್ತರಳ ತಾಯಿ ೧೩. ಡ್ರೇಗನ್-ಪುರುಷ ಮೃಗ, ಅರ್ಧ ಮನುಷ್ಯ ಅರ್ಧ ಪ್ರಾಣಿ ೧೪. ಸಿದುರಿ-ಮದಿರಾ ದೇವತೆ ೧೫. ಉತನಾಪಿಷ್ಟಮ- ದೇವಮಾನವ, ಮರಣವನ್ನು ಗೆದ್ದ ಚಿರಂಜೀವಿ ೧೬. ಲೂಗುಲ್ ಬಂಡನ-ಗಿಲ್ಗಮಿಷ್ ತಂದೆ ೧೭. ಊರ್ಷ ನಾಭಿ-ಉತಾನ ಪಿಷ್ಟಮನ ಅಂಬಿಗ ೧೮. ಅನುನ್ನಾಕಿ- ಕೆಳಗಿನ ಲೋಕದ ದೇವತೆಗಳು, ಸತ್ತವರ ಬಗೆಗಿನ ತೀರ್ಪುಗಾರರು, ಅನುವಿನ ಮಕ್ಕಳು.

## ದೃಶ್ಯ-೧

(ದೇವಾಧಿ ದೇವತೆಗಳು, ಶಮಾಷ್, ಆದಾದ್ ಮುಂತಾದವರು ಅನುವನ್ನು ಕುರಿತು ತಪವೆಸಗುತ್ತಿದ್ದಾರೆ. "ಅನು...ಅನು..." ಎಂದು ಜಪಿಸುತ್ತಿದ್ದಾರೆ. ಇವರ ತಪಸ್ಸಿಗೆ ಮೆಚ್ಚಿದ ಅನು...)

ಅನು : ದೇವಾಧಿ ದೇವತೆಗಳೇ, ನನ್ನನ್ನು ಕುರಿತು ತಪ ಮಾಡುತ್ತಿರುವ ಉದ್ದೇಶವಾದರೂ ಏನು?

ಆದಾದ್ : ಅನು, ಗಿಲ್ಗಮಿಷ್ ವಿಷಯ ತಮಗೆ ಅರಿವಾಗಲಿಲ್ಲವೇ?

ಅನು : ಏನದು? ಯಾರದು ಅವನು?

ಶಮಾಷ್: ಅವನೊಬ್ಬ ಪರಾಕ್ರಮಿ, ವೀರ, ಧೀರ, ಶೂರ.

ಆದಾದ್ : ನಿನ್‌ಸುನ್ ದೇವತೆ ಅವನ ತಾಯಿ. ತಂದೆ ಮಾನವ ಲೂಗುಲ್ ಬಂಡಾ.

ಶಮಾಷ್: ಅವನ ದೇಹಕ್ಕೆ ಕಾಂತಿ ಕೊಟ್ಟವನೇ ನಾನು.

ಆದಾದ್ : ಧೈರ್ಯ ತುಂಬಿದವನೇ ನಾನು. ಆದರೆ ಆ ಪೌರುಷವನ್ನು ದೇವಾಧಿ ದೇವತೆಗಳ ಮೇಲೆ ಪ್ರಯೋಗಿಸುತ್ತಾನೆಂದು ನಾನು ಕನಸು ಮನಸ್ಸಿನಲ್ಲಿಯೂ ಎಣಿಸಿರಲಿಲ್ಲ.

ಶಮಾಷ್ : ಈಗ ಎಣಿಸುವಂತಾಯಿತು.

ಆದಾದ್ : ಇದುವರೆವಿಗೂ ಯುರೂಕ್ ನಗರದಲ್ಲಿ ಅವನಿಗೆ ಸರಿಸಾಟಿಯಾದ ವ್ಯಕ್ತಿಯೇ ಹುಟ್ಟಿಲ್ಲ ಅನು.

ಶಮಾಷ್ : ಈಗಂತೂ ಯೂರೂಕ್ ನಗರದ ಜನತೆ ತತ್ತರಿಸುತ್ತಾ ಇದೆ. ಅವನೊಬ್ಬ ಪಳಗಿದ ಗೂಳಿಯಂತಿದ್ದಾನೆ. ಅವನನ್ನು ಜಯಿಸುವ ಶಕ್ತಿ ಯಾರಿಗೂ ಇಲ್ಲವಾಗಿದೆ.

ಆದಾದ್ : ಈಗ ಯೂರೂಕ್ ನಗರದಲ್ಲಿ ಕೋಟೆಯನ್ನು ಕಟ್ಟಿಸುತ್ತಿದ್ದಾನೆ. ದೇವಸ್ಥಾನವೊಂದನ್ನು ನಿರ್ಮಿಸುತ್ತಿದ್ದಾನೆ. ಊರಿನ ಪ್ರತಿಯೊಬ್ಬರೂ ಕಟ್ಟಡ ನಿರ್ಮಾಣಕ್ಕೆ ಬರಬೇಕು. ಹಾಗೆ ಬಲವಂತ ಮಾಡುತ್ತಿದ್ದಾನ.... ಯಾರಾದರೂ ಪ್ರತಿಭಟಿಸಿದರೆ ಅವರನ್ನು ಸದೆಬಡಿಯುತ್ತಾನೆ. ಯೋಧನ ಹೆಂಡತಿಯಾಗಲಿ, ಮಗಳಾಗಲಿ, ಸಾಮಂತನ ಹೆಂಡತಿಯನ್ನಾಗಲಿ ಬಿಟ್ಟವನಲ್ಲ ಅನು.

ಅನು : ಆದಾದ್, ಶಮಾಷ್, ದೇವಾಧಿ ದೇವತೆಗಳೇ ಇದಕ್ಕಾಗಿ ತಾವು ಹೆದರಬೇಕಾಗಿಲ್ಲ. ಗಿಲ್ಗಮಿಷ್‌ನಿಗೆ ಸರಿಸಮಾನನಾದವನೊಬ್ಬ ಪರಾಕ್ರಮಿಯನ್ನು ಸೃಷ್ಟಿಸುವಂತೆ ಆರೂರುವಿಗೆ ತಿಳಿಸುತ್ತೇನೆ.... ಅರೂರು...

ಅರೂರು : ಸ್ವಾಮಿ ಚಿತ್ತೈಸಬೇಕು.

ಅನು : ಗಿಲ್ಗಮಿಷನ ಬಗ್ಗೆ ನಿನಗೆ ಅರಿವಿರಬೇಕು.

ಅರೂರು : ಅಹುದು ಅನು...

ಅನು : ಈಗ ಅವನಿಗಿಂತ ಪರಾಕ್ರಮಿಯಾದ ಒಬ್ಬನನ್ನು ಸೃಷ್ಟಿಸು. ಜೇಡಿ ಮಣ್ಣಿನಲ್ಲಿ ಬೊಂಬೆಯೊಂದನ್ನು ಮಾಡಿ ಅದಕ್ಕೆ ಎಲ್ಲಾ ರೀತಿಯ ಕ್ರೌರ್ಯ ಶೌರ್ಯಗಳನ್ನು ತುಂಬಿ ಜೀವ ಕೊಡುವವಳಾಗು.

ಅರೂರು : ಆಗಲೀ ದೇವಾ...

ಅನು : ದೇವಾಧಿ ದೇವತೆಗಳೇ, ನೀವಿನ್ನು ಹೆದರಬೇಡಿ ನಡೆಯಿರಿ. ನಿಶ್ಚಿಂತೆಯಾಗಿರಿ. ಗಿಲ್ಗಮಿಷ್‌ನನ್ನು ಸದೆಬಡಿಯುವ ಅಪ್ರತಿಮ ವೀರ ಸದ್ಯದಲ್ಲೇ ಬಂದು ನಿಮಗೆ ಹಾಗೂ ಯುರೂಕ್ ನಗರದ ಜನರಿಗೆ ಶಾಂತಿ ನೆಮ್ಮದಿಯನ್ನು ನೀಡುತ್ತಾನೆ. ಅವನ ಮುಂದೆ ಗಿಲ್ಗಮಿಷ್‌ನ ಆಟವೇನೂ ನಡೆಯುವುದಿಲ್ಲ.

ದೇವತೆಗಳು: ಮಹಾಪ್ರಸಾದ ದೇವಾ...

(ಎಲ್ಲರೂ ಕೈಮುಗಿಯುತ್ತಿದ್ದಂತೆಯೇ ಅನು ಅದೃಶ್ಯನಾದ. ಅರೂರ ದೇವತೆ ಮಣ್ಣಿನ ಬೊಂಬೆ ಮಾಡಿ ಅದಕ್ಕೆ ಶೌರ್ಯ, ಕ್ರೌರ್ಯವನ್ನು ತನ್ನ ಕೈಯಿಂದ ಬರುವ ದಿವ್ಯ ಕಿಡಿಯಿಂದ ತುಂಬುವಳು. ದೈತ್ಯಾಕಾರನಾದ ವ್ಯಕ್ತಿ ಬಂದು ನಿಂತ)

ಅರೂರು : ನಿನಗೆ ಎಂಕಿಡು ಎಂಬ ನಾಮಾಂಕಿತವನ್ನೇ ಇಡುವೆ.

(ಕೈ ಮುಗಿಯುವನು)

ನೀನು ಗಿಲ್ಗಮಿಷನನ್ನು ನಾಶ ಮಾಡಬೇಕು. ನಿನ್ನ ಅಸಾಧ್ಯ ಪರಾಕ್ರಮವನ್ನು ತೋರಿ, ಅವನ ಹಮ್ಮು ಇಳಿಬೇಕು.

(ಎನ್ನುತಿದ್ದಂತೆಯೇ ಕೈ ಮುಗಿದು ನಮಿಸಿದ. ಆತನ ದೇಹ ರೂಪ ನೋಡಿ ದೇವತೆಗಳು ಅಚ್ಚರಿಯಿಂದ ನೋಡುತ್ತಾ 'ಅರೂರು ಮಾತೆಗೆ... ಜಯವಾಗಲಿ, ಜಯವಾಗಲಿ... ಉಘೇ...ಉಘೇ....' ಎನ್ನುತ್ತಿದ್ದಂತೆಯೇ ಆಕೆ ಅದೃಶ್ಯಳಾದಳು. ದೇವತೆಗಳು ಕೈ ಮುಗಿಯುತ್ತಿದ್ದಂತೆಯೇ ರಂಗಮಂದಿರ ಕತ್ತಲಾಗುವುದು.)

## ದೃಶ್ಯ-೨

(ಕ್ರೂರಮೃಗಗಳ ಜೊತೆ ಎಂಕಿಡು ಇದ್ದ. ಹುಲ್ಲು ತಿನ್ನುತ್ತಾ, ನೀರು ಕುಡಿಯುತ್ತಾ, ಬರಿ ಮೈನಲ್ಲಿ ತಿರುಗಾಡುತ್ತಿದ್ದ. ಬೇಟೆಗಾರನೊಬ್ಬ ಎಂಕಿಡುವನ್ನು ಕಂಡು ಹೆದರಿದ. ಆತ ಗಿಲ್ಗಮಿಷನ ಅರಮನೆಗೆ ಬಂದು ನಮಸ್ಕರಿಸಿದ.)

ಬೇಟೆಗಾರ: ಮಹಾಪ್ರಭು ಗಿಲ್ಗಮಿಷರಿಗೆ ಜಯವಾಗಲಿ.

ಗಿಲ್ಗಮಿಷ್: ಯಾರು ನೀನು, ಯಾರು ಬೇಕು ನಿನಗೆ?

ಬೇಟೆಗಾರ: ನಾನೊಬ್ಬ ಬೇಟೆಗಾರ ಪ್ರಭು. ತಮ್ಮನ್ನೇ ಕಾಣಲು ಬಂದಿರುವೆ.

ಗಿಲ್ಗಮಿಷ್: ವಿಷಯವೇನು ಹೇಳು.

ಬೇಟೆಗಾರ: ಒಂದು ಮುಖ್ಯವಾದ ವಿಷಯವನ್ನೇ ತಮ್ಮಲ್ಲಿ ಪ್ರಸ್ತಾಪಿಸಲು ಬಂದೆ ಪ್ರಭು. ಇಂದು ಬೇಟೆಗೆ ಹೋಗಿದ್ದಾಗ ಒಂದು ಅಪೂರ್ವ ಪುರುಷಾಮೃಗವೊಂದನ್ನು ಕಂಡೆ. ಆತನನ್ನು ನೋಡಿ ತುಂಬಾ ಭಯವಾಯಿತು. ಆ ವಿಷಯವನ್ನು ನಮ್ಮ ತಂದೆಯಲ್ಲಿ ತಿಳಿಸಿದೆ.

ಗಿಲ್ಗಮಿಷ್: ನಿಮ್ಮ ತಂದೆ ಏನೆಂದರು?

ಬೇಟೆಗಾರ: ಗಿಲ್ಗಮಿಷ್ ದೊರೆ ಇರುವಾಗ ನಾವು ಯಾರಿಗೂ ಹೆದರಬೇಕಿಲ್ಲ. ಅವರು ಯಾರನ್ನಾದರೂ ಸೆದೆಬಡಿಯಬಲ್ಲ ಧೀರ, ಪಕಾಕ್ರಮಿ, ಅಜೇಯ ಎಂದರು.

ಗಿಲ್ಗಮಿಷ್: ಭೇಷ್ ಸರಿಯಾಗಿ ಹೇಳಿದ, ಮುಂದೆ...

ಬೇಟೆಗಾರ: ಆದರೆ ಆ ಪುರುಷಮೃಗವನ್ನು ವಶಪಡಿಸಿಕೊಳ್ಳಬೇಕಾದರೆ ಪೌರುಷವನ್ನು ಪ್ರದರ್ಶಿಸಬಾರದಂತೆ. ವೇಶ್ಯೆಯೊಬ್ಬಳನ್ನು ಬತ್ತಲೆಯಲ್ಲಿ ಕಳುಹಿಸಿ ಅವನು ಅವಳನ್ನು ರಮಿಸುವಂತೆ ಮಾಡಬೇಕಂತೆ. ಆಕೆ ಅವನ ಪುರುಷ ಶಕ್ತಿಯನ್ನು ಹೀರುತ್ತಾಳೆಯಂತೆ. ಆಗ ಅವನನ್ನು ಕಾಡಿನ ಕ್ರೂರ ಪ್ರಾಣಿಗಳು ದೂರ ಮಾಡುತ್ತವೆಯಂತೆ. ಆಗ ನೀನು ಸುಲಭವಾಗಿ ಸದೆಬಡಿಯಬಹುದಂತೆ.

ಗಿಲ್ಗಮಿಷ್: ಒಳ್ಳೆಯ ಉಪಾಯವೇ ಆಯಿತು. ಹಾಗೆಯೇ ಮಾಡೋಣ, ಯಾರಲ್ಲಿ?

(ಕೈ ಚಪ್ಪಾಳೆ ತಟ್ಟಿದ, ಭಟನೊಬ್ಬ ಕೈಮುಗಿದು ಬಂದು ನಿಂತ.)

ಭಟ : ಏನಪ್ಪಣೆ ಪ್ರಭು?

ಗಿಲ್ಗಮಿಷ್: ಈ ಬೇಟೆಗಾರನ ಜೊತೆ ಒಬ್ಬ ವೇಶ್ಯೆಯನ್ನು ಬತ್ತಲೆ ಮಾಡಿ ಕಳುಹಿಸಿ.

ಭಟ : ಚಿತ್ತ ಪ್ರಭು.

(ಭಟನ ಹಿಂದೆ ಹೊರಟ ಬೇಟೆಗಾರ)

## ದೃಶ್ಯ-೩

(ಬೇಟೆಗಾರ ವೇಶ್ಯೆಯನ್ನು ಕರೆದುಕೊಂಡು ಹೋಗಿ ಕಾಡಿನಲ್ಲಿ ಕುಳಿತ. ಅಲ್ಲಿಗೆ ಎಂಕಿಡು ಬಂದ. ವೇಶ್ಯೆಯನ್ನುದ್ದೇಶಿಸಿ ಬೇಟೆಗಾರ ನುಡಿದ)

ಬೇಟೆಗಾರ: ಹೆಣ್ಣೇ ನೋಡಲ್ಲಿ ಬರುತ್ತಿರುವವನೇ ಎಂಕಿಡು. ನಿನ್ನ ಬತ್ತಲೆಯ ದೇಹವನ್ನು ಪ್ರದರ್ಶಿಸು, ಲಜ್ಜೆ ಬೇಡ. ಬೇಗ ಹೆಜ್ಜೆ ಇಡು. ನಿನ್ನ ನೋಡಿ ಆತ ಕಾಮಾಂಧನಾಗಿ ನಿನ್ನೆಡಗೆ ಬರುತ್ತಾನೆ. ನಿನ್ನ ದೇಹವನ್ನು ಅಪ್ಪುತ್ತಾನೆ. ಹೆದರಬೇಡ, ಕಾಮಲೀಲೆಯಲ್ಲಿ ತೊಡಗು. ಅದರಲ್ಲೇ ಮೈಮರೆಯುವಂತೆ ಮಾಡು. ಆ ಪಶುವಿಗೆ ಪ್ರೇಮಕಲೆಯ ಪ್ಪಾಠವನ್ನು ಕಲಿಸು. ಆತನಿಗೆ ಅರಿವು ಮೂಡಲಿ. ಈ ಅಡವಿ ಆತನಿಗೆ ದೂರವಾಗಲಿ.

ವೇಶ್ಯೆ : ಆಗಬಹುದು ಬೇಟೆಗಾರ.

ಬೇಟೆಗಾರ: ಏಳು ರಾತ್ರಿ, ಆರು ಹಗಲು ಭೋಗಿಸು.

(ವೇಶ್ಯೆ ಬಟ್ಟೆಗಳೊಂದೊಂದನ್ನೇ ಬಿಚ್ಚಿ ಹಾಕುತ್ತಾ ಎಂಕಿಡುವಿಗೆ ಎದುರಾದಳು. ಮೆಲ್ಲನೆ ಎಲ್ಲವನ್ನೂ ಆತ ನೋಡತೊಡಗಿದ. ಹತ್ತಿರ ಹತ್ತಿರ ಬಂದ. ಮೊದಲು ಮಾತಿಲ್ಲದೆ ಮೂಕಪ್ರಾಣಿಯಂತಿದ್ದ ಎಂಕಿಡುವು 'ನಾನೇನು ತಿನ್ನುವುದಿಲ್ಲ ಬಾ' ಎಂದು ಕೈ ಸನ್ನೆ ಮಾಡಿದ. ಆಕೆ ದೂರ ಸರಿಯುತ್ತಿದ್ದರೂ ಈತ ಹತ್ತಿರವಾಗುತ್ತಾ ಬಂದ)

ವೇಶ್ಯೆ : ಏನು ಬೇಕು?

(ನೀನು ಬೇಕು ಎನ್ನುವಂತೆ ಬೆರಳು ತೋರಿಸಿದ)

(ಎಂಕಿಡು ಮುಟ್ಟಲು ಮೈ ಪುಳಕವಾಯಿತು ವೇಶ್ಯೆಗೆ. ಆತನಿಗೂ ರೋಮಾಂಚನವಾಯಿತು. ಹೆದರಿ ಚೀರಲು ಏನೂ ಮಾಡುವುದಿಲ್ಲ ಎಂದು ತಬ್ಬಿಕೊಂಡ)

ಎಂಕಿಡು : ನೀನಾರು?

ವೇಶ್ಯೆ : ನಾನೊಬ್ಬ ವೇಶ್ಯಾ ಕನ್ಯೆ.

ಎಂಕಿಡು : ನಿನ್ನನ್ನು ನೋಡಿ ನನಗೆ ಆಸೆಯಾಗುತ್ತಿದೆ. ನಿನ್ನ ರೂಪ, ಲಾವಣ್ಯ ನನಗೆ ನಿನ್ನನ್ನೇ ನೋಡಬೇಕು ಅನ್ನಿಸುತ್ತೆ, ಮತ್ತೆ ಮತ್ತೆ ನೋಡಬೇಕು ಅನ್ನಿಸುತ್ತೆ. ಏನೋ ಒಂದು ರೀತಿ ಸುಖ ಕೊಡುವಂತೆ ಭಾಸವಾಗುತ್ತಿದೆ.

ವೇಶ್ಯೆ : ನಾನಿರುವುದು ನಿನ್ನಂಥ ಪುರುಷನ ಕಾಮ ತಣಿಸಲಿಕ್ಕೆ, ಪ್ರೀತಿ ಬೆಳೆಯಲಿಕ್ಕೆ, ಭೋಗ ಸುಖ ಕೊಡಲಿಕ್ಕೆ. ಬಾ ನನ್ನನ್ನು ಬಾಚಿ ತಬ್ಬಿಕೋ, ಅಂಗಾಂಗ ಸ್ಪರ್ಶಿಸು, ಮುತ್ತನಿಡು. ಆಗ ನಿನಗೆ ಮತ್ತೇರಿದಂತಾಗುತ್ತದೆ. ಹೆಣ್ಣಿನ ಅಂಗ ಸಂಗದ ಸುಖ ಸಾರವನ್ನು ಅನುಭವಿಸು. ಆಗ ನಾನು ನಿನಗೆ ಮತ್ತೆ ಮತ್ತೆ ಬೇಕೆನಿಸುತ್ತದೆ. ಆಮೇಲೆ ನನ್ನನ್ನು ಎಂದೆಂದಿಗೂ ಬಿಡುವುದಿಲ್ಲ.

ಎಂಕಿಡು : ನೀನು ಏನೇನೋ ಹೇಳ್ತೀಯಾ. ನಂಗೆ ಒಂದೂ ಗೊತ್ತಾಗೋಲ್ಲ.

ವೇಶ್ಯೆ : ಬಾ... ಹತ್ತಿರ ಬಾ... ನನ್ನ ಕೈ ಹಿಡಿ...(ತಾನೇ ಮುಟ್ಟುವಳು) ಪುಳಕಿತಗೊಳ್ಳಲಿಲ್ಲವೇ?

ಎಂಕಿಡು : ಏನೋ ನನಗೊಂದೂ ಅರ್ಥವಾಗುತ್ತಿಲ್ಲ.

(ತಬ್ಬಿಕೊಳ್ಳುವಳು) ಆಹಾ...ಎಂತಹ ಮೆತ್ತನೆಯ ದೇಹ?

ವೇಶ್ಯೆ : ಇದೇ ಮತ್ತೇರಿಸುವ ಸುಖ...

(ಕೆನ್ನೆಗೆ ಮುತ್ತು ನೀಡುವಳು)

ಎಂಕಿಡು : ಇದೇನಿದು?

ವೇಶ್ಯೆ : ಮುತ್ತು, ಪ್ರೀತಿಯ ಮುತ್ತು.

ಎಂಕಿಡು : ತುಂಬಾ ಚೆನ್ನಾಗಿದೆ.

ವೇಶ್ಯೆ : ಹಾಗಾದರೆ ಇನ್ನೊಂದು ಬೇಕೆ?

ಎಂಕಿಡು : ಬೇಕು.

(ಮತ್ತೆ ಕೊಡುವಳು)

ಈಗ ನಾನು ನಿನಗೆ ಕೊಟ್ಟರೆ ಏನಾಗುತ್ತದೆ?

ವೇಶ್ಯೆ : ಮತ್ತೊಂದು ರೀತಿಯ ಸುಖ.

ಎಂಕಿಡು : ಇಬ್ಬರಿಗೂ ಸಿಗುವುದೇ?

ವೇಶ್ಯೆ : ಹೌದು...ಅಪ್ಪಿಕೋ...ಆನಂದ ಪಡೆ.

(ಎಂಕಿಡು ಅಪ್ಪಿಕೊಳ್ಳುವನು) ಹೇಗಿದೆ?

ಎಂಕಿಡು : ಚೆನ್ನಾಗಿದೆ.

ವೇಶ್ಯೆ : ಈಗ ಏನನಿಸುತ್ತದೆ? ಮತ್ತೆ ಮತ್ತೆ ಬೇಕೆನಿಸುತ್ತದೆ ಅಲ್ಲವೇ?

ಎಂಕಿಡು : ಹೌದು ಹಾಗೆಯೇ ಎನಿಸುತ್ತದೆ.

(ಎಂದು ತಬ್ಬಿಕೊಂಡ. ಕೆನ್ನೆಗಳಿಗೆ ಮುತ್ತನಿಟ್ಟ. ಮತ್ತೇರಿದ ತೋಳ ಸೆರೆಯಲ್ಲಿ ಆಕೆಯನ್ನು ಬಿಗಿದಪ್ಪಿಕೊಂಡ)

ಎಂಕಿಡು : ನನಗೆ ಏನೋ ಒಂದು ರೀತಿ ಆನಂದ ಉಂಟಾಯಿತು. ಇಂಥ ಸುಖವನ್ನು ಎಂದೂ ಕಂಡಿರಲಿಲ್ಲ. ನಿನ್ನನ್ನು ನಾನು ಬಿಡಲಾರೆ. ನೀನು ನನ್ನೊಡನೇ ಇದ್ದು ಬಿಡು. ನಾನು ನಿನ್ನನ್ನು ತುಂಬಾ ಪ್ರೀತಿಸುತ್ತೀನಿ. ನಿನ್ನ ಬಿಟ್ಟು ಒಂದು ನಿಮಿಷವೂ ನಾನಿರಲಾರೆ ಅನಿಸುತ್ತಾ ಇದೆ. ನನ್ನ ಕೈಬಿಡಬೇಡ ರೂಪಸಿ.

ವೇಶ್ಯೆ : ಆಗಲೀ... ನಿನ್ನಾಸೆಯನ್ನು ತಣಿಸುವೆ. ನಿನ್ನ ಪುರುಷತ್ವದ ಸಾರ್ಥಕತೆ ಪಡೆಯುವಂತೆ ಮಾಡುತ್ತೇನೆ.

ಎಂಕಿಡು : ಹೆಣ್ಣೆ ಆರು ಹಗಲು ಏಳು ರಾತ್ರಿ ನಿನ್ನೊಡನೆ ರತಿ ಸುಖ ಉಂಡೆ. ನನ್ನ ಕಾಮ ತೃಷೆ ತೀರಿತು. ಈಗ ನಿನ್ನ ತೋಳ್ಸೆರೆಯಿಂದ ಬಿಡಿಸಿಕೊಂಡು.

ವೇಶ್ಯೆ : ಎಲ್ಲಿಗೆ ಹೋಗುವಿ ಎಂಕಿಡು?

ಎಂಕಿಡು : ನಾನು ಮೃಗಗಳ ಜೊತೆಗೆ ಸುಳಿದಾಡಿ ಬರುವೆ...

ವೇಶ್ಯೆ : ನೀವು ಮನುಷ್ಯ ಪ್ರಾಣಿ... ನೀವು ಮನುಷ್ಯರಾಗುವ ಛಾಯೆಯೇ ನಿಮ್ಮಲ್ಲಿ ಹೆಚ್ಚು. ಆದರೆ ನೀವು ಪ್ರಾಣಿಗಳಿಗಿಂತ ಮನುಷ್ಯರ ಜೊತೆ ಇರುವುದೇ ಲೇಸು. ನೀವು ನನ್ನಲ್ಲಿ ಅದೆಷ್ಟು ಸುಖಪಟ್ಟಿರಿ...?

ಎಂಕಿಡು : ಹೌದು. ಆದರೂ ಮನಸ್ಸು ಆ ಕಡೆ ಎಳೆಯುತ್ತದೆ.

ವೇಶ್ಯೆ : ಹೋಗಿ ಬನ್ನಿ... ಬರುವವರೆಗೂ ನಾನಿಲ್ಲೇ ಇರುತ್ತೇನೆ. ಹಳೆಯವಾಸನೆ ನಿಮ್ಮನ್ನು ಕೈ ಬೀಸಿ ಕರೆಯುತ್ತಿದೆ ಅಲ್ಲವೇ?

(ಎಂಕಿಡು ಕಾಡು ಪ್ರಾಣಿಗಳ ಜೊತೆ ಸೇರಲು, ಅವು ಆತನ ವರ್ತನೆ ನೋಡಿ ದೂರ ಸರಿದುವು.)

ಎಂಕಿಡು : ಏನಿದು ಯಾವ ಪ್ರಾಣಿಯೂ ನನ್ನ ಮುಂದೆ ಸುಳಿಯುವುದಿಲ್ಲ. ಮನುಷ್ಯರನ್ನು ನೋಡಿ ಹೆದರುವಂತೆ ಹೆದರಿ ಓಡುತ್ತಿವೆಯಲ್ಲಾ. ಇವುಗಳೊಡನೆ ಇರುವಂತೆ ಮಾಡುವ ಸಾಹಸ ವ್ಯರ್ಥವಾಗುತ್ತಿದೆಯಲ್ಲ. ಏಕೋ ಕಾಲುಗಳಲ್ಲಿ ಶಕ್ತಿ ಉಡುಗಿದಂತಿದೆ. ಲವಲವಿಕೆಯೆಂಬುದೇ ಇಲ್ಲವಾಗಿದೆ. ನಿಶ್ಶಕ್ತನಾಗಿರುವೆ. ಆ ಹೆಣ್ಣಿನ ಬಳಿಗೇ ಹೋಗುವೆ...

ವೇಶ್ಯೆ : ಯಾಕೆ ಲವಲವಿಕೆ ಲವಶೇಷವೂ ಉಳಿದಿಲ್ಲ. ನನ್ನಲ್ಲಿಗೇ ಮತ್ತೆ ಬಂದೆ! ನಿನ್ನೊಡನಾಡಿಗಳಾದ ಪ್ರಾಣಿಗಳ ಜೊತೆ ಆಡಿ ಬಂದೆಯಾ?

ಎಂಕಿಡು : ಬರಬೇಕಾಯಿತು. ಪಶುಗಳ ಸ್ನೇಹಕ್ಕಿಂತ ಮಾನವನ ಸ್ನೇಹ ಒಳ್ಳೆಯದು ಎನಿಸಿತು. ನೀನು ಕೊಟ್ಟ ಸುಖ ಮತ್ತೆ ನಿನ್ನಲ್ಲಿಗೆ ಎಳೆದು ತಂದಿತು. ಮತ್ತೆ ನೀನೇ ಬೇಕೆನಿಸಿತು ನನ್ನ ಮನಸ್ಸು. ಅದಕ್ಕಾಗಿಯೇ ನಿನ್ನರಸಿ ಬಂದೆ.

ವೇಶ್ಯೆ : ನನಗೆ ಗೊತ್ತಿತ್ತು. ನೀನು ಖಂಡಿತ ಬರುತ್ತೀಯೆ ಎಂದು. ನಾನಾಗಲೇ ಹೇಳಿದ್ದೆ, ಮೃಗಗಳ ಜೊತೆ ಇರುವುದು ಬೇಡ ಎಂದು. ನೀನು ನಿಜವಾಗಿಯೂ

ಬುದ್ಧಿವಂತ ಮನುಷ್ಯ. ಮನುಷ್ಯರ ಜೊತೆ ಇರುವುದಕ್ಕೇ ನೀನು ಸರಿ. ಬಾ... ನನ್ನ ಜೊತೆ ಬಾ...ಯುರೂಕಿನ ದೇವಾಲಯಕ್ಕ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ಅಲ್ಲಿ ಪ್ರೇಮದೇವತೆ ಇಷ್ತರ್ ಜಗದೊಡೆಯ ಅನು ಇದ್ದಾರೆ. ಅಲ್ಲದೆ ಆತ ಅತಿ ಬಲಿಷ್ಠನೂ ಆ ನಾಡನಾಳುವ ದೊರೆ ಗಿಲ್ಗಮಿಷ್ ಸಹ ಇದ್ದಾನೆ. ಅವರನ್ನೆಲ್ಲಾ ನೀನು ನೋಡಬಹುದು.

ಎಂಕಿಡು : ಹಾಗಾ...?

ವೇಶ್ಯೆ : ಹೀಗೇ ಹೋಗುವುದು ನಿನಗೆ ತರವಲ್ಲ, ಇಕೋ: ನನ್ನ ಸೀರೆಯನ್ನೇ ಹರಿದು ನಿನಗೊಂದು ತುಂಡು ಕೊಡುವೆ. ಅದರಿಂದ ಮೈ ಮುಚ್ಚಿಕೊಂಡು ನಡ.

(ಹರಿದು ನಡುವಿಗೆ ಉಡಿಸಿದಳು. ಇಬ್ಬರೂ ಹೊರಟರು)

ನಿನಗೆ ಹೊಟ್ಟೆ ಹಸಿವಾಗುತ್ತಿಲ್ಲವೇ?

ಎಂಕಿಡು : ಆಗದೆ ಏನು? ನಾನು ಜೀವವಿರುವ ಪ್ರಾಣಿ ತಾನೆ?

ವೇಶ್ಯೆ : ಪ್ರಾಣಿ ಅನ್ನುವುದಕ್ಕಿಂತ ಮನುಷ್ಯ ಪ್ರಾಣಿ ಎಂದೇ ಹೇಳಿ.

ಎಂಕಿಡು : ಹಾಗೆಯೇ ಭಾವಿಸು. ಈಗ ನನಗೇನು ಕೊಡುತ್ತೀಯಾ?

ವೇಶ್ಯೆ : ನಿನಗೇನು ಬೇಕು ಹೇಳು.

ಎಂಕಿಡು : ನನ್ನ ವಿಷಯವನ್ನು ಹೇಳಿದರೆ ನೀನು ನಗಬಹುದು. ನಾನು ನಿನ್ನಷ್ಟು ಸುಸಂಸ್ಕೃತನಲ್ಲ. ಕಾಡಿನ ಪುರುಷಪ್ರಾಣಿ. ಹುಲ್ಲು ತಿಂದವ, ನೀರು ಕುಡಿದವ, ಕಾಡು ಮೃಗಗಳ ಮೊಲೆ ಹೀರಿದವ, ಸಿಕ್ಕಿದುದನ್ನು ತಿಂದು ಹೊಟ್ಟೆ ತುಂಬಿಸಿಕೊಂಡವ.

ವೇಶ್ಯೆ : ಆದರೆ ಈಗ ನಾನು ನಿನಗೆ ಕೊಡುವುದು ರೊಟ್ಟಿ, ಮದ್ಯ. ಅದನ್ನು ತಿಂದು, ಕುಡಿದು ನಿನ್ನ ಹಸಿವನ್ನು ಇಂಗಿಸಿಕೊಳ್ಳಬಹುದು! ಈಗ ನಿನಗೆ ಸ್ನಾನ ಮಾಡಿಸುತ್ತೇನೆ.

ಎಂಕಿಡು : ಅಂದರೆ?

ವೇಶ್ಯೆ : ಮೈ ಮೇಲೆ ನೀರು ಹಾಕಿ, ದೇಹದಲ್ಲಿ ಹೊರಸೂಸುವ ಬೆವರನ್ನು, ಕೊಳೆಯನ್ನು ತೆಗೆದಾಗ ಶುಭ್ರವಾಗುತ್ತದೆ. ಆಯಾಸ ಕಳೆಯುತ್ತದೆ. ಮನಸ್ಸಿಗೆ ಉಲ್ಲಾಸವಾಗುತ್ತದೆ. ಚಟುವಟಿಕೆಯಾಗಿರಲು ಸಹಾಯವಾಗುತ್ತದೆ. ಇದನ್ನು ದಿನ ನಿತ್ಯ ಮಾಡಬೇಕು. ಮನುಷ್ಯನಿಗೆ ಆರೋಗ್ಯಭಾಗ್ಯ ಮುಖ್ಯ. ಅದಕ್ಕೆ ಸ್ನಾನ ಅತ್ಯವಶ್ಯಕ. ಅದಕ್ಕೆ ಮಾಡಿಸುತ್ತೇನೆ.

ಎಂಕಿಡು : ಹಾಗಾ...? ನಾನು ಬಿಸಿಲಾದಾಗ ಮೈ ತಂಪಾಗಲಿ ಎಂದು ಆಗಾಗ ನೀರಿನಲ್ಲಿ ಹೊರಳಾಡಿ ಬರುತ್ತಿದ್ದನೇ ಹೊರತು, ಈ ರೀತಿ ಸೌಮ್ಯವಾಗಿ ಸ್ನಾನ ಮಾಡಿ ಮೈ ಕೊಳೆಯನ್ನು ತೆಗೆದುಕೊಳ್ಳಬೇಕೆಂಬ ಯೋಚನೆಯನ್ನು ಮಾಡಿರಲಿಲ್ಲ. ಮುಂದೆ...

ವೇಶ್ಯೆ : ಸ್ನಾನವಾದ ಮೇಲೆ ಮೈ ಒರಸಿಕೊಂಡು ಮರ್ಮಾಂಗಗಳನ್ನು ಬಟ್ಟೆಯಿಂದ ಮುಚ್ಚಿಕೊಳ್ಳಬೇಕು. ನಾವು ಪ್ರಾಣಿಗಳಂತಲ್ಲ, ಮನುಷ್ಯರು. ಬಟ್ಟೆ ಉಟ್ಟುಕೊಂಡರೆ ಮೈ ಶಾಖವಾಗಿಯೂ ಇರುತ್ತದೆ. (ಬಟ್ಟೆ ತೊಡಿಸುವಳು)

ಎಂಕಿಡು : ನನಗೆ ಏನೇನೋ ಮಾಡುತ್ತೀಯೆ... ಅದೇನು ಮಾಡುತ್ತೀಯೋ ಮಾಡು. ನಾನು ಎಲ್ಲವನ್ನೂ ಕಲಿತುಕೊಳ್ಳುವೆ.

ವೇಶ್ಯೆ : ನೀನು ಕಲಿತು ಸುಸಂಸ್ಕೃತನಾಗುವಂತೆ ಮಾಡಲು ನಾನು ಪ್ರಯತ್ನಿಸುತ್ತಿರುವೆ. ನೋಡು ನಿನ್ನ ತಲೆ ಹೇಗೆ ಬೆಳೆದು ಬತ್ತಿಕಟ್ಟಿಹೋಗಿದೆ. ಇದಕ್ಕೆ ಎಣ್ಣೆಹಾಕಿ ಬಾಚಿದರೆ ಎಷ್ಟೊಂದು ಚೆನ್ನಾಗಿ ಕುಳಿತುಕೊಳ್ಳುತ್ತದೆ ಗೊತ್ತಾ? ಈಗ ನಿನಗೆ ತಲೆಯನ್ನು ಬಾಚುತ್ತೇನೆ. ಆಗ ನಿನ್ನ ಮೊಗದ ಸೌಂದರ್ಯ ಇನ್ನೂ ಹೆಚ್ಚಾಗುತ್ತದೆ. (ತಲೆ ಬಾಚುವಳು)

ಎಂಕಿಡು : ಸೊಚ್ಚಗಾಗುತ್ತಿದೆ.... ಎಣ್ಣೆ ಹಾಕಿದ ಮೇಲೆ ಕಣ್ಣಿಗೆ ತಂಪಾದಂತಾಗುತ್ತಿದೆ.

ವೇಶ್ಯೆ : ಅದಕ್ಕಾಗಿಯೇ ಅವೆಲ್ಲವನ್ನೂ ನಾವು ಮಾಡಿಕೊಳ್ಳುವುದು. ಈಗ ನಿನ್ನನ್ನು ಒಳ್ಳೆ ನಾಡಿನವನಂತೆ ಮಾಡುತ್ತಿರುವೆ. ಆಹಾ ಈಗ ಹೇಗೆ ಕಾಣುತ್ತಿದ್ದೀಯೆ. ಈಗ ನೋಡಲಿಕ್ಕೆ ಒಳ್ಳೆಯ ಮದುವೆ ಗಂಡಿನಂತೆ ಕಾಣುತ್ತಿರುವೆ. ಈಗ ನೀನು ನಿಜವಾಗಿ ನಮ್ಮಂತೆ ಮನುಷ್ಯನ ರೀತಿಯಲ್ಲೇ ಕಾಣುತ್ತಿರುವೆ.

ಎಂಕಿಡು : ಹೌದಾ? ಇಷ್ಟೆಲ್ಲಾ ಸಿಂಗಾರವಾಯಿತು. ಈಗ ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುವೆ?

ವೇಶ್ಯೆ : ಗಿಲ್ಗಮಿಷ್ ಎಂದು ಹೇಳಿದೆನಲ್ಲಾ ಆ ರಾಜನ ಅರಮನೆಗೆ.

ಎಂಕಿಡು : ಅದು ಹೇಗಿದೆ ನೋಡೋಣ. ಕರೆದುಕೊಂಡು ನಡೆ.

(ಅರಮನೆಯತ್ತ ಕರೆದುಕೊಂಡು ಹೊರಟಳು)

ವೇಶ್ಯೆ : ಇದೇ ಅರಮನೆಯ ಮಹಾದ್ವಾರ. ಅದೋ ನೋಡಲ್ಲಿ ಬರುತ್ತಿರುವವನೇ ಗಿಲ್ಗಮಿಷ್.

(ಮಹಾದ್ವಾರದ ಮುಂದೆ ನಿಂತ ಗಿಲ್ಗಮಿಷ್)

ಎಂಕಿಡು : ಯಾರು ನೀನು ನಿಲ್ಲು!

ಗಿಲ್ಗಮಿಷ್: ಯಾರು ನೀನು? ಏಕೆ ನನ್ನನ್ನು ತಡೆಯುತ್ತಿರುವೆ. ಒಳ್ಳೆಯ ವಿಚಿತ್ರ ಕಾಡುಮನುಷ್ಯನ ಹಾಗೆ ಕಾಣುತ್ತಿರುವೆ. ನಿನ್ನ ಹೆಸರೇನು? ಇಲ್ಲಿಗೆ ಬಂದ ಉದ್ದೇಶವೇನು ತಿಳಿಸು.

ಎಂಕಿಡು : ಹೌದು ನಾನು ಕಾಡಿನಿಂದ ನಾಡಿಗೆ ಬಂದಿರುವೆ. ನನ್ನ ಹೆಸರನ್ನು ಎಂಕಿಡು ಎಂದು ಕರೆಯುವರು.

ಗಿಲ್ಗಮಿಷ್: ಈ ಊರ ದೊರೆಯನ್ನು ತಡೆಯುವಷ್ಟು ಧೈರ್ಯ ಬಂತೆ? ನಾನು ಗಿಲ್ಗಮಿಷ್ ದೊರೆ ಎಂಬುದು ತಿಳಿಯದೇನು?

(ಗಿಲ್ಗಮಿಷ್ ಕೆನ್ನೆಗೆ ಹೊಡೆಯಲು ಅವನೂ ಹೋರಾಟಕ್ಕೆ ಸಿದ್ಧನಾದ. ಇಬ್ಬರಿಗೂ ಮಾರಾಮಾರಿ ಯುದ್ಧವೇ ಆಯಿತು. ಕಬ್ಬಿಣದ ದ್ವಾರ ಮುರಿಯಿತು. ಗೋಡೆಗಳು ನಡುಗಿ ಬಿರುಕು ಬಿಟ್ಟವು. ಗಿಲ್ಗಮಿಷ್ ಎಂಕಿಡುವನ್ನು ಎತ್ತಿಬಿಸುಟ. ಅವನ ಪರಾಕ್ರಮ ನೋಡಿ ಎಂಕಿಡು ಗಿಲ್ಗಮಿಷನನ್ನು ಆಲಂಗಿಸಿಕೊಂಡ)

ಎಂಕಿಡು : ಗಿಲ್ಗಮಿಷ್! ನಿನ್ನ ವಿಷಯವನ್ನು ನಾನು ಈಗಾಗಲೇ ಕೇಳಿದ್ದೆ. ಆದರೆ ಇಂದು ನಿಜವಾಗಿ ನನ್ನ ಜೊತೆ ಹೋರಾಡಿ ನಿನ್ನ ಪೌರುಷವನ್ನು ಪ್ರಕಟಪಡಿಸಿದೆ. ಮಹದಾನಂದವಾಯಿತು. ಇಂದಿನಿಂದ ನಾನು ನಿನ್ನ ಸ್ನೇಹವನ್ನು ಬಯಸುತ್ತೇನೆ.

ಗಿಲ್ಗಮಿಷ್: ನಿನ್ನ ಪೌರುಷವೂ ಸಾಮಾನ್ಯವಲ್ಲ. ನಿನ್ನಂಥ ವೀರನನ್ನು ಸ್ನೇಹಿತನನ್ನಾಗಿ ಪಡೆಯುವುದು ನಿಜಕ್ಕೂ ನನಗೆ ಆನಂದವನ್ನು ತಂದೊದಗಿಸಿದೆ ಬಾ... ಮಿತ್ರ...ಬಾ.

(ಇಬ್ಬರೂ ಆಲಂಗಿಸಿಕೊಳ್ಳುತ್ತಿದ್ದಂತೆ ರಂಗಮಂದಿರ ಕತ್ತಲಾಗುವುದು)

## ದೃಶ್ಯ-೪

ಎಂಕಿಡು : ಬರಬಹುದೇ ಮಹಾಪ್ರಭು ಗಿಲ್ಗಮಿಷ್...!

ಗಿಲ್ಗಮಿಷ್: ಸದಾ ನಮ್ಮರಮನೆಯ ಬಾಗಿಲು ತೆರೆದಿದೆ. ಯಾವಾಗಲಾದರೂ ಸರಿ ತಾವು ಬರಬಹುದು. ಊಟ ಮಾಡುತ್ತಿರಲಿ, ತಿಂಡಿ ತಿನ್ನುತ್ತಿರಲಿ, ವಿಶ್ರಾಂತಿ ಪಡೆಯುತ್ತಿರಲಿ, ಏಕಾಂತದಲ್ಲಿರುವ ಯಾವಾಗಲಾದರೂ ಬರಬಹುದು. ಸದಾ ನಿನಗೆ ಸ್ವಾಗತ!

ಎಂಕಿಡು : ಗಿಲ್ಗಮಿಷ್ ಮೊದಲನೆಯ ನೋಟಕ್ಕೆ ನೀನು ನನ್ನ ಮಿತ್ರನಾದೆ. ನಿನ್ನ ಪೌರುಷ ನಿಜಕ್ಕೂ ಅಚ್ಚರಿಯನ್ನು ತಂದೊದಗಿಸುತ್ತದೆ. ಆದರೆ...

ಗಿಲ್ಗಮಿಷ್: ಆದರೆ ಎಂದು ಏಕೆ ಮಾತು ಮೊಟಕು ಮಾಡಿದೆ? ಮುಂದುವರಿಸು (ಮೀಸೆ ಹುರಿಮಾಡಿ ತಿರುವುತ್ತಾ) ನನ್ನ ಸರಿಸಮಾನರು ಈ ಜಗತ್ತಿನಲ್ಲಾರುಂಟು?

ಎಂಕಿಡು : ಅದನ್ನೇ ನಾನು ನಿನಗೆ ಹೇಳಲಿಕ್ಕೆ ಬಂದೆ. ದೇವೇಂದ್ರನಾದ ಏನ್‌ಲಿಲ್ ನಿನಗೆ ರಾಜ್ಯದ ಒಡೆತನವನ್ನು ಕರುಣಿಸಿದ್ದಾನೆ ಎಂದು ಕೇಳಿ ತಿಳಿದಿರುವೆ. ಇದೇ ನಿನ್ನ ಸಾಧನೆಯ ಕೊನೆಯ ಘಟ್ಟ. ಅದರಾಚೆಗಿನ ಚಿರಂಜೀವಿತ್ವ ನಿನ್ನ ಪಾಲಿಗಿಲ್ಲ...

ಗಿಲ್ಗಮಿಷ್: (ನಗುತ್ತಾ) ಎಂಕಿಡು ನೀನು ನನ್ನ ತೋಳ್ಬಲವನ್ನು ಕಾಣಲಿಲ್ಲವೇ? ಪೌರುಷ ಒಂದಿದ್ದರೆ ಮೃತ್ಯುವನ್ನು ಗೆಲ್ಲಬಹುದು. ಪ್ರಪಂಚದ ಪರಾಕ್ರಮಿಗಳ ಸ್ಪರ್ಧೆ

ಪಟ್ಟಿಯಲ್ಲಿ ನನ್ನ ಹೆಸರು ಶಾಶ್ವತ ಎಂಬುದು ನಿನಗಿನ್ನೂ ಅರಿವಿಗೆ ಬಂದಿಲ್ಲವೇನು?

ಎಂಕಿಡು : ನಿನ್ನನ್ನು ನೀನೇ ಹೊಗಳಿಕೊಳ್ಳಬೇಡ.

ಗಿಲ್ಗಮಿಷ್: ಸೀಡರ್ (ದೇವದಾರು) ವನವನ್ನು ಕಾಯುತ್ತಿರುವ ಹುಂಬಾಬನೆಂಬ ರಕ್ಕಸನನ್ನು ಕೊಲ್ಲುವುದರ ಮೂಲಕ ನನ್ನ ಪರೀಕ್ಷೆ ಆರಂಭವಾಗಬೇಕು.

ಎಂಕಿಡು : ನಾನೂ ಕೂಡ ಅದೇ ಅರಣ್ಯದಿಂದ ಬಂದವನೆಂದು ಗೊತ್ತಿಲ್ಲವೇ ನಿನಗೆ?

ಗಿಲ್ಗಮಿಷ್: ಇರಬಹುದು.

ಎಂಕಿಡು : ಹುಂಬಾಬ ಒಬ್ಬ ಮಹಾ ಯೋಧ. ಅವನು ನಿದ್ರೆಯನ್ನು ಕಂಡವನಲ್ಲ. ಹಗಲಿರುಳು ಬಿಡುಗಣ್ಣನಾಗಿ ಕಾವಲು ಕಾಯುವ ಕೋಟೆ. ಅವನ ಉಚ್ವಾಸದಲ್ಲಿ ಬಿರುಗಾಳಿಯ ಅಬ್ಬರವಿದೆ. ನಿಶ್ವಾಸದಲ್ಲಿ ಬೆಂಕಿಯ ಜ್ವಾಲೆ ಹೊರಬೀಳುವುದು. ಅವನ ದವಡೆಗಳು ಯಮನ ದಾಡೆಗಳಿಗೆ ಸಮ.

ಗಿಲ್ಗಮಿಷ್: ಅದಕ್ಕೆ ಏನು ಮಾಡಬೇಕು? ಆತನನ್ನು ಗೆಲ್ಲುವ ವಿಧ ಹೇಗೆ?

ಎಂಕಿ : ಅವನೊಡನೆ ಹೋರಾಡುವ ಮೊದಲು ಶಮಾಷನ (ಸೂರ್ಯದೇವನ) ಅನುಗ್ರಹ ಪಡೆಯುವುದು ಅತ್ಯವಶ್ಯಕ.

ಗಿಲ್ಗಮಿಷ್: ಹಾಗೆಯೇ ಆಗಲೀ, ಅದಕ್ಕೇನಂತೆ, ಸೂರ್ಯದೇವನ ಪ್ರಾರ್ಥನೆ ಮಾಡುವೆ. ಅವನ ಅನುಗ್ರಹವನ್ನು ಪಡೆಯುವೆ. ಆಮೇಲೆ ಅವನೊಡನೆ ಸೆಣಸಾಡಿ ಜಯಶೀಲನಾಗುವೆ. ಒಳ್ಳೆಯ ಉಪಾಯವನ್ನು ಸೂಚಿಸಿದೆ ಮಿತ್ರಾ... ಒಳ್ಳೆಯ ಉಪಾಯವನ್ನು ಸೂಚಿಸಿದೆ. ಇದರ ಜೊತೆಗೆ ನನ್ನ ತಾಯಿ ನಿನ್‌ಸುನ್‌ಳ ಆಶೀರ್ವಾದವನ್ನೂ ಪಡೆಯುವೆ. ಇವೆರಡರ ಫಲದಿಂದ ಅವನನ್ನು ಧ್ವಂಸ ಮಾಡುವುದು ಕಷ್ಟದ ಕೆಲಸವೇನಾಗುವುದಿಲ್ಲ.

ಎಂಕಿಡು : ಹಾಗೆಯೇ ಮಾಡು ಮಿತ್ರಾ....

* * *

## ದೃಶ್ಯ-೫

(ಶಮಾಷ್... ಶಮಾಷ್... ಎಂದು ತಪವನ್ನು ಆಚರಿಸುತ್ತಿದ್ದಾನೆ ಗಿಲ್ಗಮಿಷ್. ಆತನಿಗೆ ಪ್ರತ್ಯಕ್ಷನಾದ ಶಮಾಷ್)

ಶಮಾಷ್ : ಗಿಲ್ಗಮಿಷ್... ನನ್ನನ್ನು ಕುರಿತು ತಪಸ್ಸು ಮಾಡಿದುದರ ಉದ್ದೇಶವೇನು?

ಗಿಲ್ಗಮಿಷ್: ದೇವಾ ನನ್ನ ದೇಹಕ್ಕೆ ಕಾಂತಿ ಕೊಟ್ಟವನು ನೀನು. ನಿನ್ನಿಂದ ನನಗೆ ಮತ್ತೊಂದು ವರ ಬೇಕಾಗಿದೆ.

ಶಮಾಷ್ : ಏನದು?

ಗಿಲ್ಗಮಿಷ್: ಹುಂಬಾಬನಂಥ ಹಲವಾರು ಪರಾಕ್ರಮಿಗಳನ್ನು ಗೆಲ್ಲುವ ವರವನ್ನು ನೀಡು.

ಶಮಾಷ್ : ತಥಾಸ್ತು! ನಿನಗೆ ಏಳು ಬಿರುಗಾಳಿಗಳನ್ನು ನೆರವಿಗಾಗಿ ಕೊಟ್ಟಿರುವೆ.

(ದೇವತೆ ಅದೃಶ್ಯನಾಗುವನು)

ಗಿಲ್ಗಮಿಷ್: ಇದರ ಜೊತೆಗೆ ನನ್ನ ತಾಯಿ ನಿನ್‌ಸುನ್‌ಳ ಆಶೀರ್ವಾದವೂ ಸೇರಿದರೆ ಬಹಳ ಉತ್ತಮವಾಗುತ್ತದೆ. ತಾಯೇ... ಪ್ರಸನ್ನಳಾಗು. ವೈರಿಗಳನ್ನು ಸದೆಬಡಿಯುವ ವರವನ್ನು ನೀಡು.

(ನಿನ್‌ಸುನ್ ಪ್ರತ್ಯಕ್ಷಳಾಗುವಳು)

ನಿನ್‌ಸುನ್: ತಥಾಸ್ತು! ನಿನಗೆ ಅತಿ ಪರಾಕ್ರಮವನ್ನು ನೀಡಿರುವೆ.

(ಅಷ್ಟರಲ್ಲಿ ಎಂಕಿಡು ಬರುತ್ತಾನೆ.)

ಗಿಲ್ಗಮಿಷ್: ಬಾ ಎಂಕಿಡು... ಬಾ... ಅಮ್ಮ ಈತ ನನ್ನ ಮಿತ್ರ ಎಂಕಿಡು. ಈಕೆ ನಮ್ಮ ತಾಯಿ ದೇವತೆ ನಿನ್‌ಸುನ್‌ಳು.

ನಿನ್‌ಸುನ್: ಗೊತ್ತಿದೆ ಮಗು... ಗಿಲ್ಗಮಿಷ್. ಎಂಕಿಡು ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಲ್ಲದಿದ್ದರೂ ನನ್ನ ದತ್ತು ಪುತ್ರ. ನೀನು ಸದಾ ಗಿಲ್ಗಮಿಷನ ಅಂಗರಕ್ಷಕನಾಗಿರು. ಈಗ ನನ್ನ ಕಂದನನ್ನು ನಿನ್ನ ಕೈಗೆ ಒಪ್ಪಿಸುತ್ತಿದ್ದೇನೆ. ಆತನನ್ನು ಸುರಕ್ಷಿತವಾಗಿ ತಂದೊಪ್ಪಿಸುವ ಭಾರ ನಿನ್ನದು.

ಎಂಕಿಡು : ಆಗಲಿ ಮಹಾತಾಯೇ.

(ಇಬ್ಬರೂ ನಮಸ್ಕರಿಸುತ್ತಿರುವಲ್ಲಿ ದೇವತೆ ಅದೃಶ್ಯಳಾಗುವಳು.)

ಗಿಲ್ಗಮಿಷ್: ಮಿತ್ರಾ, ಇನ್ನು ಮುಂದೆ ನಾವು ಹೊರಡೋಣ. ಇನ್ನಾರು ವಾರಗಳಲ್ಲಿ ಏಳು ಮಲೆಗಳನ್ನು ಹತ್ತಿ ಸೀಡರ್ ವನವನ್ನು ತಲುಪಬಹುದು ಅಲ್ಲವೇ?

ಎಂಕಿಡು : ಅಹುದು.

ಗಿಲ್ಗಮಿಷ್: ಎಂಕಿಡು, ನನಗೆ ಬಾಯಾರಿಕೆ ಆಗುತ್ತಿದೆ. ಹತ್ತಿರದಲ್ಲಿ ಎಲ್ಲೂ ನೀರು ಇದ್ದಂತಿಲ್ಲ. ಏನು ಮಾಡುವುದು?

ಎಂಕಿಡು : ಹೆದರಬೇಡ ಮಿತ್ರ, ಸೂರ್ಯ ಮುಳುಗುವುದರೊಳಗೆ ನಾನು ಇಲ್ಲೇ ಒಂದು ಬಾವಿ ತೋಡಿ ನಿನಗೆ ನೀರನ್ನೊದಗಿಸುವೆ.

(ಎಂದು ಅಗೆಯತೊಡಗುವನು. ಸ್ವಲ್ಪ ಹೊತ್ತಿಗೆ ಜಲ ಬರುತ್ತದೆ)

ಎಂಕಿಡು : ಮಿತ್ರಾ ನೀರು ಬಂತು. ಬಾ ಕುಡಿ ಅದೆಷ್ಟು ಬೇಕೊ ಅಷ್ಟನ್ನು ಕುಡಿ. ನಿನ್ನ ದಾಹವನ್ನು ಇಂಗಿಸಿಕೋ.

ಗಿಲ್ಗಮಿಷ್: ಒಳ್ಳೆಯ ಕೆಲಸವನ್ನು ಮಾಡಿದೆ ಮಿತ್ರಾ. ಕುಡಿಯುವೆ... ಬಾಯಾರಿಕೆ ಇಂಗುವವರೆಗೂ ಕುಡಿಯುವೆ. ನೀನು ಜೊತೆಯಲ್ಲಿ ಕುಡಿ.

(ಇಬ್ಬರೂ ನೀರು ಕುಡಿಯುವರು)

ಎಂಕಿಡು : ಗಿಲ್ಗಮಿಷ್ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ನಾಳೆ ನಮ್ಮ ಪಯಣವನ್ನು ಬೆಳೆಸೋಣವೇ?

ಗಿಲ್ಗಮಿಷ್: ಅಗತ್ಯವಾಗಿ, ಹೇಗಾದರೂ ನೀನು ಹುಂಬಾಬನ ಕಾಡಿನಲ್ಲಿದ್ದವನು. ಅದರ ಪರಿಚಯ ನಿನಗಿದೆ. ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೀಯಷ್ಟೇ.

ಎಂಕಿಡು : ಖಂಡಿತ. ಈ ರಾತ್ರಿ ಇಲ್ಲೇ ನಿದ್ದೆ ಹೋಗೋಣ. ಬೆಳಿಗ್ಗೆ ಎದ್ದು ಹೊರಡೋಣ.

ಗಿಲ್ಗಮಿಷ್: ಅಗತ್ಯವಾಗಿ...

(ಇಬ್ಬರೂ ಮಲಗುವರು ರಂಗಮಂದಿರ ಕತ್ತಲಾಗುವುದು)

*   *   *

## ದೃಶ್ಯ-೬

(ರಂಗಮಂದಿರದಲ್ಲಿ ಬೆಳಗಾಗುವ ಚಿಹ್ನೆ. ಮುರುಳಿಯ ನಾದ, ಕೋಳಿಗಳ ಶಬ್ದ, ಹಕ್ಕಿಗಳ ಇಂಚರ, ಎಂಕಿಡು ಮೇಲೆದ್ದು ಗಿಲ್ಗಮಿಷ್‌ನನ್ನು ಏಳಿಸುತ್ತಾ)

ಎಂಕಿಡು : ಏಳು ಏಳು ಗಿಲ್ಗಮಿಷ್.

ಗಿಲ್ಗಮಿಷ್: ಏನಿದು ನಿನ್ನ ಬಡಬಡಿಕೆ?

ಎಂಕಿಡು : ಏನಿಲ್ಲಾ ರಾತ್ರಿ ಒಂದು ಕನಸು.

ಗಿಲ್ಗಮಿಷ್: ಯಾವುದರ ಬಗ್ಗೆ?

ಎಂಕಿಡು : ಹುಂಬಾಬನ ಬಗೆಗೆ.

ಗಿಲ್ಗಮಿಷ್: ಅದೇ ಮಾತಿನಲ್ಲಿ ಅದೇ ಕೆಲಸಕ್ಕೆ ಹೋಗುತ್ತಿರುವಾಗ ಆಗುವ ಸಹಜ ಕನಸು!

ಎಂಕಿಡು : ಕನಸೇನಲ್ಲ, ಇದು ಮುಂದೆ ನನಸಾಗುತ್ತದೆ. ನಿನ್ನಿಂದ ಆತನ ಹತ್ಯೆ ಖಂಡಿತ.

ಗಿಲ್ಗಮಿಷ್: ಅದಕ್ಕಾಗಿಯಲ್ಲವೆ ನಾವು ಹೋಗುತ್ತಿರುವುದು. ಆಗಲೇಬೇಕು, ಆಗಿಯೇ ತೀರುತ್ತದೆ...

ಎಂಕಿಡು : ನಮ್ಮ ಪಯಣ ಮುಂದುವರಿಸೋಣವೇ?

ಗಿಲ್ಗಮಿಷ್: ಆದಷ್ಟು ಬೇಗ.

ಎಂಕಿಡು : ಈಗ ನಾವು ಸೀಡರ್ ವನವನ್ನು ದಾಟಬೇಕಾಗುತ್ತದೆ. ಅಲ್ಲಿ ಸೀಡರ್ ವೃಕ್ಷಗಳಿವೆ. ಅಲ್ಲಿ ನೀನು ಏನು ಮಾಡಬೇಕು ಗೊತ್ತೇ?

ಗಿಲ್ಗಮಿಷ್: ಏನು ಮಾಡಬೇಕು?

ಎಂಕಿಡು : ಸೀಡರ್ ವೃಕ್ಷವನ್ನು ಒಂದೇ ಏಟಿಗೆ ಕಡಿದು ಕೆಳಗುರುಳಿಸು. ಆಗ ಆ ಶಬ್ದ ಹುಂಬಾಬನನ್ನು ಆಹ್ವಾನಿಸುತ್ತದೆ.

ಗಿಲ್ಗಮಿಷ್: ಅದಾವ ಮಹಾ ಬಿಡು.

ಎಂಕಿಡು : ಅದು ಅಷ್ಟೊಂದು ಸುಲಭ ಸಾಧ್ಯವಾದ ಕೆಲಸವಲ್ಲ ಗಿಲ್ಗಮಿಷ್, ಆತ ಬಂದರೆ..........

ಗಿಲ್ಗಮಿಷ್: ಬಂದರೆ...! ಏನಾಗುತ್ತದೆ? ಯಾಕೆ ನೀನು ಧೃತಿಗೆಡುವೆ? ಮಿತ್ರಾ, ಮೃತ್ಯು ಎಂಬುದು ಒಂದು ವಿಶೇಷ ಶಕ್ತಿ. ಅದಕ್ಕೆ ಸೋಲದ ವ್ಯಕ್ತಿ ಯಾರಿದ್ದಾರೆ ಹೇಳು? ಮೃತ್ಯು ಪ್ರತಿಯೊಬ್ಬ ಮಾನವನ ಪಾಲಿಗಿರುವುದು ದಿಟ. ಕೊನೆಯಲ್ಲಿ ಅವನು ಮಾಡಿದುದೆಲ್ಲಾ ಬೀಸುವ ಗಾಳಿಯಂತೆ ವ್ಯರ್ಥ. ಮೃತ್ಯುವಿಗೆ ಅಂಜುತ್ತಿರುವ ನೀನು ಧೃತಿಗೆಡುತ್ತಿರುವುದು ನಿಜ. ಹೆದರಬೇಡ. ಮಿತ್ರಾ, ನಿನ್ನ ರಕ್ಷಕನಾಗಿ ನಾನಿರುವೆ.

ಎಂಕಿಡು : ಹೌದು... ಹೌದು...ನಾನೇಕೆ ಹೀಗಾದೆ? ನೀನು ಹೇಳುವುದೆಲ್ಲಾ ದಿಟ. ನಿನ್ನ ಜೊತೆಗೆ ನಾನು ಸೇರಿಕೊಳ್ಳುವೆ. ಒಂದಲ್ಲ ಎರಡಲ್ಲ ಒಂದರ ಮೇಲೊಂದರಂತೆ ಏಳು ಸೀಡರ್ ವೃಕ್ಷಗಳನ್ನು ಕತ್ತರಿಸಿ ರಾಶಿ ಹಾಕೋಣ. ಆಗ ಹುಂಬಾಬ ತನ್ನ ಅಂಗಗಳನ್ನೇ ಕಳೆದು ಕೊಂಡಂತವನಾಗಿ ನಮ್ಮ ಪೌರುಷದ ಮುಂದೆ ಆತನ ಬೇಳೆ ಬೇಯದೆಂದು ತಿಳಿದು ನಮ್ಮನ್ನೇ ಬೇಡಲು ಬರುತ್ತಾನೆ. ಶರಣಾಗತನಾಗುತ್ತಾನೆ. ತೆಗೆದುಕೊ ಕೊಡಲಿ, ಸೀಡರ್ ವೃಕ್ಷಗಳನ್ನು ಕತ್ತರಿಸುತ್ತಾ ಬಾ...

ಗಿಲ್ಗಮಿಷ್: ಹಾಗಿರಬೇಕು ಮಿತ್ರಾ ಪೌರುಷ, ಪರಾಕ್ರಮಗಳೆಂದರೆ. ಮೆಚ್ಚಿದೆ ನಿನ್ನನ್ನು. ಬೆಚ್ಚದೆ, ಬೆದರದೆ ವೃಕ್ಷಗಳನ್ನು ಕಡಿಯುವ ಕಾರ್ಯದಲ್ಲಿ ಸನ್ನದ್ಧರಾಗೋಣ ಬಾ...

ಎಂಕಿಡು : ಹಾಗೆಯೇ ಆಗಲೀ ಮಿತ್ರ...

(ಇಬ್ಬರೂ ಸಾಲಾಗಿ ಏಳು ಮರಗಳನ್ನು ಕತ್ತರಿಸಿ ಹಾಕಿದರು. ಆಗ ಹುಂಬಾಬ ಬಂದ)

ಹುಂಬಾಬ: ಗಿಲ್ಗಮಿಷ್ ಶರಣಾದೆ ನಿನಗೆ, ನಿನ್ನ ಪೌರುಷಕ್ಕೆ, ಪರಾಕ್ರಮಕ್ಕೆ, ಧೈರ್ಯಕ್ಕೆ, ನಿನ್ನೆದುರು ನನ್ನ ಜಂಬದ, ಆಡಂಬರದ ಮಾತನ್ನು ಮರೆತುಬಿಡುತ್ತೇನೆ. ನಾನು ನಿನ್ನ ಸೇವಕ. ವೀರಾನುಚರ. ಈ ಕಾಡನ್ನೆಲ್ಲಾ ಕಡಿದು ನಿನಗೊಂದು ಅರಮನೆಯನ್ನು ನಿರ್ಮಿಸಿಕೊಡುತ್ತೇನೆ. ನನ್ನನ್ನು ಬಿಟ್ಟುಬಿಡು, ನನ್ನ ಜೀವವನ್ನು ಉಳಿಸಿಬಿಡು.

ಗಿಲ್ಗಮಿಷ್: ಶರಣಾಗತನಾದವನಿಗೆ ವೀರ ಕ್ಷಮಿಸಬೇಕಾದುದು ಧರ್ಮ.

ಹುಂಬಾಬ: ನಿಜವಾಗಿಯೂ ನೀನು ಕರುಣಾಳು ಹೃದಯಿ. ಬರೀ ವೀರ, ಧೀರನಷ್ಟೇ ಅಲ್ಲ, ಸೌಜನ್ಯದ ಸಾಕಾರಮೂರ್ತಿ, ಮಹಾನುಭಾವ. ನೀನು ನನ್ನ ಆತಿಥ್ಯವನ್ನು ಸ್ವೀಕರಿಸಿ ಹೋಗಬೇಕು.

ಗಿಲ್ಗಮಿಷ್: ಅದಕ್ಕೇನಂತೆ ಅಗತ್ಯವಾಗಿ ಆಗಲಿ.

ಎಂಕಿಡು : ಗಿಲ್ಗಮಿಷ್, ಸ್ವಲ್ಪ ಬರುವೆಯಾ ಮಿತ್ರಾ...

ಗಿಲ್ಗಮಿಷ್: ಏನು ಎಂಕಿಡು?

ಎಂಕಿಡು : ಎಷ್ಟೇ ಆದರೂ ಶತ್ರು. ಆತನನ್ನು ನಂಬಿ ನೀನು ಮರುಳಾಗಬೇಡ. ಆತನನ್ನು ಕತ್ತರಿಸಿ ಹಾಕು. ಗಿಲ್ಗಮಿಷ್ ನೀನು ಎಷ್ಟೇ ಬಲಶಾಲಿಯಾಗಿರು, ಶತ್ರು ಶತ್ರುವೇ. ದುರ್ವಿಧಿಯಿಂದ ಸಮ್ರಾಟ್ ನಿರ್ದಾಕ್ಷಿಣ್ಯವಾಗಿ ನುಂಗಲೂಬಹುದು. ಬಲೆಯಿಂದ ಬದುಕಿಬಂದ ಹಕ್ಕಿ, ಬೇಡಿ ಕಳಚಿ ತಾಯಿಯ ಮಡಿಲನ್ನು ಸೇರಿದ ಸೆರೆಯಾಳು ಇವರಿಬ್ಬರನ್ನು ಮರೆತುಬಿಡು. ನಿನ್ನನ್ನು ಹಡೆದ ತಾಯಿಯನ್ನು ಕಾಣುವೆ ಎಂಬ ಹಂಬಲವನ್ನು ಮರೆಯಬೇಡ.

ಹುಂಬಾಬ: ಗಿಲ್ಗಮಿಷ್, ಈ ಎಂಕಿಡುವಿನ ಮಾತಿನಲ್ಲಿ ಏನೂ ಹುರುಳಿಲ್ಲ. ಅವನ ಮಾತಿಗೆ ನೀನು ಕಿವಿಗೊಡಬೇಡ.

ಎಂಕಿಡು : ಗಿಲ್ಗಮಿಷ್ ಅವನ ಮಾತಿನ ಮೋಡಿಗೆ ಮರುಳಾಗಬೇಡ. ಇವನನ್ನು ಕೂಡಲೇ ಕಡಿದುರುಳಿಸು.

(ಗಿಲ್ಗಮಿಷ್ ಕೊಡಲಿಯನ್ನು ತೆಗೆದುಕೊಂಡು ಆತನನ್ನು ಕೊಚ್ಚಿದ. ಹುಂಬಾಬ ಸತ್ತು ಬಿದ್ದ. ಎಂಕಿಡು, ಗಿಲ್ಗಮಿಷ್ ಇಬ್ಬರೂ ನಗಲಾರಂಭಿಸಿದರು.)

ಎಂಕಿಡು : ನಡೆ ಮಿತ್ರಾ, ಈ ರಕ್ತಸಿಕ್ತವಾದ ಕೊಡಲಿಯನ್ನು ನೀರಿನಲ್ಲಿ ತೊಳೆದು ಶುದ್ಧ ಮಾಡೋಣ. ನೀನು ನೀರಿನಲ್ಲಿ ಮಿಂದು ಅರಸುಡುಗೆಯುಟ್ಟು ಹೊರಡು.

ಗಿಲ್ಗಮಿಷ್: ಹಾಗೆಯೇ ಆಗಲಿ ಮಿತ್ರಾ...

(ಗಿಲ್ಗಮಿಷ್, ಎಂಕಿಡು ಇಬ್ಬರೂ ತೊಳೆಯಲು ಹೊರಡುವರು. ಮತ್ತೆ ದಾರಿಯಲ್ಲಿ ಬರುತ್ತಿರಲು....)

ಗಿಲ್ಗಮಿಷ್: ನಾವಿನ್ನು ಹೊರಡೋಣ...

ಇಷ್ತರ್ : ಹೊರಡುವ ಮುನ್ನ ನನ್ನನ್ನು ಸ್ವಲ್ಪ ನೋಡು.

ಗಿಲ್ಗಮಿಷ್: ನೀನಾರು?

ಇಷ್ತರ್ : ನಾನು ಪ್ರೇಮಾಧಿದೇವತೆ ಇಷ್ತರ್.

ಗಿಲ್ಗಮಿಷ್: ನನ್ನಿಂದ ನಿನಗೇನಾಗಬೇಕಾಗಿದೆ?

ಇಷ್ತರ್ : ನನ್ನಲ್ಲಿ ಕಾಡು ಕಳೆಯೇರಿರುವುದು ಕಾಣುತ್ತಿಲ್ಲವೇ?

ಗಿಲ್ಗಮಿಷ್: ಅದಕ್ಕೆ...?

ಇಷ್ತರ್ : ನನ್ನನ್ನು ಆಲಂಗಿಸು, ನನ್ನ ಅಂಗಾಂಗ ಸುಖವನ್ನು ಸವಿ. ನಾನು ನಿನ್ನ ಮಡದಿಯಾಗಲು ಒಪ್ಪಿರುವೆ. ಬಾ ನನ್ನನ್ನು ಅಪ್ಪು, ಆನಂದಕೊಡು. ನಿನ್ನ

ವಂಶದ ಕುಡಿಯು ನನ್ನ ಗರ್ಭದಲ್ಲಿ ಬೆಳೆಯಲಿ. ಇಷ್ಟನ್ನು ಅನುಗ್ರಹಿಸಿದರೆ ಸಾಕೆಂದು ಸೆರಗೊಡ್ಡಿ ಬೇಡುತ್ತೇನೆ. ನಾನು ಮತ್ತೇನನ್ನೂ ನಿಮ್ಮನ್ನು ಬೇಡುತ್ತಿಲ್ಲ. ಪ್ರೇಮಭಿಕ್ಷೆಯನ್ನು ಬೇಡುತ್ತಿರುವೆ.

ಗಿಲ್ಗಮಿಷ್: ನಿನ್ನ ಬಗೆಗೆ ನಾನು ಚೆನ್ನಾಗಿ ಬಲ್ಲೆ. ನಿನ್ನ ಹಲವಾರು ಪ್ರೇಮ ಪ್ರಕರಣಗಳು, ವಂಚನೆಗಳು ನನಗೆ ಅರಿವಿಲ್ಲದೆ ಇಲ್ಲ.

ಇಷ್ತರ್ : ನಿನ್ನ ಭಾಗಕ್ಕೆ ಅದು ಇಲ್ಲವೆಂದು ತಿಳಿ... ಸಂಪೂರ್ಣವಾಗಿ ನಿನ್ನನ್ನು ನಂಬಿರುವೆ. ನಂಬಿದ ನಿನಗೆ ದ್ರೋಹವೆಸಗುವುದು ನನ್ನ ಕೆಲಸವಲ್ಲ.

ಗಿಲ್ಗಮಿಷ್: ಇಷ್ತರ್ ನನ್ನನ್ನು ಮರೆತುಬಿಡುವುದು ಉತ್ತಮ.

ಇಷ್ತರ್ : ಒಂದು ಹೆಣ್ಣು ತಾನಾಗಿ ಬಂದು ಪ್ರೇಮಭಿಕ್ಷೆಯನ್ನು ಬೇಡಿದಾಗ ತಿರಸ್ಕರಿಸುವುದು ಒಬ್ಬ ಪರಾಕ್ರಮಿಯ ಕೆಲಸವಲ್ಲ. ಹೇಡಿಯ ಕೆಲಸ!

ಗಿಲ್ಗಮಿಷ್: ನನ್ನ ಮನಸ್ಸು ಒಪ್ಪುತ್ತಿಲ್ಲ.

ಇಷ್ತರ್ : ನನಗೆ ನಿನ್ನ ಬಿಟ್ಟು ಹೋಗಲು ಮನಸ್ಸಾಗುತ್ತಿಲ್ಲವಲ್ಲಾ. ಕಾಮದಲ್ಲಿ ನೊಂದಿಹೆ, ನೊಂದು ಕುಂದಿಹೆ, ಕುಂದಿ ಕುಸಿದಿಹೆ. ಒಮ್ಮೆಯಾದರೂ ನನ್ನ ಕಾಮವನ್ನು ತಣಿಸಲಾರೆಯಾ?

ಗಿಲ್ಗಮಿಷ್: ಇಲ್ಲವೆಂದಿನ್ನೆಷ್ಟು ಸಾರಿ ಹೇಳಲಿ?

ಇಷ್ತರ್ : ಒಬ್ಬ ದೇವತೆಯ ಮನೋಭಿಲಾಷೆಯನ್ನು ಈಡೇರಿಸದೆ ಹೋಗುವುದು ಮಾನವನಾದ ನಿನ್ನ ಧರ್ಮವಲ್ಲ. ನಿನ್ನ ಮುಂದೆ ಬಂದ ಅದೃಷ್ಟವನ್ನು ಕಳೆದುಕೊಳ್ಳುವ ನತದೃಷ್ಟನಾಗಬೇಡ.

ಗಿಲ್ಗಮಿಷ್: ನನಗೆ ಒಮ್ಮೆ ಉತ್ತರ ಹೇಳುವ ಪರಿಪಾಠವಿದೆಯೇ ಹೊರತು, ಹಲವಾರು ಬಾರಿ ಹೇಳುವುದು ನನಗೆ ಪ್ರಿಯವಲ್ಲ. ಒಮ್ಮೆ ಹೇಳಿದುದೇ ನನ್ನ ಅಂತಿಮ ತೀರ್ಮಾನ.

ಇಷ್ತರ್ : ನೀನು ಹೇಳುತ್ತೀಯ, ಆದರೆ ನಾನು ಮನಸ್ಸು ಮಾಡಿಬಿಟ್ಟಿರುವೆ. ನಿನ್ನ ಬಿಟ್ಟು ಹೋಗಲು ಮನಸ್ಸು ಬರುತ್ತಿಲ್ಲ. ನಿನ್ನ ಮನದನ್ನೆಯಾಗಲು ಕಾತರಿಸುತ್ತಿರುವೆ.

ಗಿಲ್ಗಮಿಷ್: ಇದು ಬರೇ ಕನಸು ಅಷ್ಟೇ! ಬಾ ಎಂಕಿಡು ಹೋಗೋಣ. (ಎಂದು ಹೋಗುತ್ತಿರಲು)

ಇಷ್ತರ್ : ಗಿಲ್ಗಮಿಷ್ ನನ್ನನ್ನು ಕೈ ಬಿಡಬೇಡ. ಅಂಗಲಾಚಿ ಬೇಡುತ್ತಿರುವೆ.

(ಎಂದರೂ ಹೋಗುತ್ತಿರಲು)

ಎಂಥ ಅವಮಾನ ಮಾಡಿದ? ಹೊರಟೇ ಹೋದ! ನನ್ನ ಬಿಟ್ಟು ಹೊರಟೇಹೋದ. ನನ್ನಾಸೆ ಆಕಾಂಕ್ಷೆಗಳನ್ನು ನುಚ್ಚುನೂರು ಮಾಡಿ ಹೊರಟೇಹೋದ!

ಈತನ ಮೇಲೆ ಸೇಡು ತೀರಿಸಿಕೊಳ್ಳದಿದ್ದರೆ ನನ್ನ ಹೆಸರು ಇಷ್ತರ್ ಅಲ್ಲವೇ ಅಲ್ಲ! ತಂದೆ ಅನು, ತಾಯಿ ಅನ್‌ಟುಮ್ ಬಳಿ ಹೋಗಿ ಈತನಿಗೆ ಸರಿಯಾಗಿ ಬುದ್ಧಿ ಕಲಿಸುವೆ.

(ಕಣ್ಣೀರನ್ನು ಒರೆಸಿಕೊಂಡು ಹೊರಡುವಳು)

* * *

## ದೃಶ್ಯ-೭

(ತಂದೆ ಅನು, ತಾಯಿ ಅನ್‌ಟುಮ್ ಅವರಲ್ಲಿಗೆ ಇಷ್ತರ್ ಬಂದು ಅಳುತ್ತಾ ನಿಲ್ಲುವಳು)

ಅನು : ಏಕೆ ತಾಯಿ ಕಣ್ಣೀರು? ಏನಾಯಿತು? ನಿನಗೆ ಹಿಂಸೆ ಮಾಡಿದವರಾರು?

ಇಷ್ತರ್ : ಅಪ್ಪಾ ಏನೆಂದು ಹೇಳಲಿ, ಗಿಲ್ಗಮಿಷ್ ನನ್ನನ್ನು ಅವಮಾನ ಮಾಡಿದ.

ಅನು : ಏಕೆ? ಹೇಗೆ?

ಇಷ್ತರ್ : ನಾನು ಅವನ ಪರಾಕ್ರಮವನ್ನು ನೋಡಿ ವರಿಸಬೇಕೆಂದಿದ್ದೆ. ಆದರೆ ಆತ ನನ್ನನ್ನು ತಿರಸ್ಕರಿಸಿದ!

ಅನು : ಅದಕ್ಕೆ ಈಗ ಏನು ಮಾಡಬೇಕು ಹೇಳು ಮಗಳೇ.

ಇಷ್ತರ್ : ಏನಾದರೂ ಮಾಡು ತಂದೆ. ಅವನ ಅಹಂಕಾರವನ್ನು ಮುರಿಯಬೇಕು.

ಅನು : ಹಾಗೆಯೇ ಆಗಲಿ ಮಗಳೇ. ನೀನು ಹೋಗಿ ನೋಡುತ್ತಿರು. ನಾನು ಒಂದು ಗೂಳಿಯನ್ನು ಸೃಷ್ಟಿಸಿ ಕಳುಹಿಸುವೆ. ಅದು ಒಂದು ಉಸುರಿಗೆ ಮುನ್ನೂರು ಜನರನ್ನು ಬಲಿ ತೆಗೆದುಕೊಳ್ಳುವಷ್ಟು ಶಕ್ತಿ ಇರುತ್ತದೆ ಎಂದ ಮೇಲೆ ಗಿಲ್ಗಮಿಷ್‌ನನ್ನು ಅದು ಇಲ್ಲ ಎನಿಸಿಬಿಡುತ್ತದೆ.

ಇಷ್ತರ್ : ಹಾಗೆಯೇ ಮಾಡಿ ಕಳುಹಿಸು ತಂದೆ. ನಾನು ನೋಡಿ ಸಂತೋಷಪಡುತ್ತೇನೆ. ಅವನೇ ಕೊನೆಗೆ ಶರಣಾಗಿ ಬಂದು ನನ್ನ ಕಾಲು ಹಿಡಿಯಬೇಕು. ನಾನು ಹೇಳಿದಂತೆ ಕೇಳಬೇಕು.

ಅನು : ಹಾಗೆಯೇ ಆಗಲಿ ಮಗಳೆ.

(ಎಂಕಿಡು ಹಾಗೂ ಗಿಲ್ಗಮಿಷ್ ದಾರಿಯಲ್ಲಿ ಹೋಗುತ್ತಿದ್ದರು. ಅಲ್ಲಿಗೆ ಗೂಳಿಯು ಒಂದೇ ಸವನೆ ಕೆನೆಯುತ್ತಾ ಬಹಳ ರಭಸದಿಂದ ಬರುತ್ತಿತ್ತು. ಅವನ್ನು ದೂರದಿಂದಲೇ ಇಷ್ತರ್ ನೋಡಿ ನಗುತ್ತಿದ್ದಾಳೆ.)

ಎಂಕಿಡು : ನೋಡಿದೆಯಾ ಯಾವುದೋ ಗೂಳಿ ನಮ್ಮತ್ತಲೇ ಧಾವಿಸುತ್ತಿದೆ.

ಗಿಲ್ಗಮಿಷ್: ಬರಲಿ ಬಿಡು... ಅದಕ್ಕೂ ಅವಸಾನ ಕಾಲವಿರಬೇಕು. ಅದಕ್ಕೇ ಅಷ್ಟು ಕೊಬ್ಬಿನಿಂದ ಧಾವಿಸುತ್ತಿದೆ.

ಎಂಕಿಡು : ಇದು ಸಾಮಾನ್ಯವಾದುದಲ್ಲ ಎನ್ನಿಸುತ್ತದೆ. ಎಲ್ಲೋ ಇಷ್ತರ್ ಇದನ್ನು ಕಳುಹಿಸಿರಬೇಕು.

ಗಿಲ್ಗಮಿಷ್: ಬರಲಿ, ಅದರ ಕೈಕಾಲು ಕಿತ್ತು ಅವಳೆದುರೇ ಬಿಸಾಡುವೆ. ಆಗ ಅವಳಿಗೆ ಮತ್ತಷ್ಟು ಅವಮಾನವಾಗುತ್ತದೆ.

ಎಂಕಿಡು : ಜೋಪಾನ!

ಗಿಲ್ಗಮಿಷ್: ನೀನು ಇದಕ್ಕೆ ಹೆದರುತ್ತೀಯಾ ಎಂಕಿಡು. ನಾನೇ ಹೋಗಿ ಅದರೊಡನೆ ಹೋರಾಡಿ, ಕೈ ಕಾಲು ಕಿತ್ತೆಸೆದು ಬರುವೆ.

(ಗೂಳಿ ರಭಸದಿಂದ ಬಂದಿತು. ಗಿಲ್ಗಮಿಷ್‌ನ ಮೇಲೆ ಬಿದ್ದಿತು. ಗಿಲ್ಗಮಿಷ್ ಅದರೊಡನೆ ಹೋರಾಡಿ ಅದರ ಕೈ ಕಾಲು ಮುರಿದು, ನೋಡುತ್ತಿದ್ದ ಇಷ್ತರ್ ಕಡೆಗೆ ಬೀಸಿ ಒಗೆದ. ಇಷ್ತರ್ ಶಪಿಸುತ್ತಿದ್ದಳು.)

ಗಿಲ್ಗಮಿಷ್: ಏನು ನಿನಗೆ ಶಕ್ತಿ ಸಾಲದೆಂದು ಈ ಗೂಳಿಯನ್ನು ಕಳಿಸಿದೆಯಾ?ನಾಚಿಕೆ ಆಗುವುದಿಲ್ಲವೇ ನಿನಗೆ? ಆ ಗೂಳಿಯ ಕೈ ಕಾಲು ಕಿತ್ತೆಸೆದು ಬಂದಿರುವೆ ನೋಡು.

ಇಷ್ತರ್ : ಗಿಲ್ಗಮಿಷ್...! (ಹಲ್ಲು ಕಡಿಯುವಳು) ನಿನ್ನ ಪೌರುಷ, ಪರಾಕ್ರಮವನ್ನು ಒಂದಲ್ಲ ಒಂದು ದಿನ ಇಳಿಸದೇ ಇದ್ದರೆ ನನ್ನ ಹೆಸರು ಇಷ್ತರಳೇ ಅಲ್ಲ!

ಗಿಲ್ಗಮಿಷ್: ನೋಡಿದೆಯಾ ಮಿತ್ರ?

ಎಂಕಿಡು : ಆಗಿನಿಂದಲೂ ನೋಡುತ್ತಲೇ ಬಂದಿರುವೆ. ಮೊದಲ ದಿನವೇ ನಿನ್ನ ಪೌರುಷ, ಪರಾಕ್ರಮಗಳಿಗೆ ಮೆಚ್ಚಿ ಶರಣಾಗತನಾದೆ. ಅದಾದ ಮೇಲೆ ಹುಂಬಾಬನನ್ನು ಕತ್ತರಿಸಿದುದನ್ನು ನೋಡಿದೆ. ಈಗ ಗೂಳಿಯನ್ನು ಸೀಳಿ ಬಿಸುಟು ಇಷ್ತರ್ ದೇವತೆಯ ಹಮ್ಮನ್ನು ಮುರಿದು, ಅವಳಿಗೆ ಸರಿಯಾದ ಬುದ್ಧಿಯನ್ನು ಕಲಿಸಿದೆ.

ಗಿಲ್ಗಮಿಷ್: ಮನಸ್ಸು ಮಾಡಿದರೆ ಇವೆಲ್ಲಾ ಯಾವ ಮಹಾ ಹೆಚ್ಚು?

ಎಂಕಿಡು : ಅದು ನನಗೆ ಸದಾ ಗೊತ್ತು. ಆದರೆ ನೀನು ಹೆಣ್ಣಿಗೆ ಆಶಿಸಿ, ಅವಳ ಕಾಮದ ಬಲೆಯಲ್ಲಿ ಸಿಕ್ಕಲಿಲ್ಲ. ನೀನು ಸಿಕ್ಕಿದ್ದರೆ ನಿನ್ನ ಪೌರುಷ ಪರಾಕ್ರಮಗಳು ನಶಿಸುತ್ತಿದ್ದವು. ನನ್ನ ಪೌರುಷ ಪರಾಕ್ರಮಗಳು ಒಬ್ಬ ವೇಶ್ಯೆಯ ಕನ್ಯೆಯಿಂದ ಕಳೆದುಹೋಯಿತು. ನನ್ನ ಶಕ್ತಿ ಕಳೆದುಹೋಯಿತು. ಪ್ರಾಣಿಗಳಿಂದ ದೂರಾದೆ, ಪ್ರಾಣಿಲೋಕದಿಂದ ದೂರಾಗಿ ಮಾನವನಾಗಲು ಕಾರಣಳಾದಳು ಆ ವೇಶ್ಯೆ.

ಗಿಲ್ಗಮಿಷ್: ಅಂತೂ ಈಗ ಅವಳಿಗೆ ಅವಮಾನವಾಯಿತು. ಇನ್ನೂ ಆಕೆಯು ನನ್ನ ಮೇಲೆ ರೋಷದ ಕೆಂಡವನ್ನು ಕಾರುತ್ತಿದ್ದಾಳೆ.

ಎಂಕಿಡು : ನಿನ್ನ ಮೇಲೇಕೆ, ನನ್ನ ಮೇಲೂ ಶಪಿಸುತ್ತಿದ್ದಾಳೆ.

ಗಿಲ್ಗಮಿಷ್: ಏಕೆ?

ಎಂಕಿಡು : ಏಕೆಂದರೆ ನಾನು ನಿನ್ನ ಪರ ವಹಿಸಿ ಮಾತನಾಡಿದೆನಲ್ಲಾ, ಅದಕ್ಕೇ.

ಇಷ್ತರ್ : (ಸ್ವಗತ) ಅನು ದೇವನು ಸೃಷ್ಟಿಸಿ ಕಳುಹಿಸಿದ ಗೂಳಿಯನ್ನೇ ಕಿತ್ತು ಬಿಸಾಡಿದ ಎಂಥ ವೀರ? ಈತನನ್ನಲ್ಲದಿದ್ದರೂ ಎಂಕಿಡುವನ್ನಾದರೂ ಬಲಿ

ತೆಗೆದುಕೊಳ್ಳಬೇಕು. ಹೋಗಿ ತಂದೆ ಅನುದೇವನನ್ನು ಪ್ರಾರ್ಥಿಸುವೆ. ಈಗಲಾದರೂ ಅನುದೇವ ಏನು ಮಾಡುತ್ತಾನೆಯೋ ನೋಡೋಣ.

ಅನುದೇವಾ ನೀನು ಕಳುಹಿಸಿದ ಗೂಳಿಯ ಕಥೆ ಏನಾಯಿತು ನೋಡಿದೆಯಾ? ಎಂಕಿಡುವಿಗೆ ಕೆಟ್ಟ ರೋಗವನ್ನು ಕೊಟ್ಟು ಸಾಯುವಂತೆ ಮಾಡು. ನನ್ನನ್ನು ಗಿಲ್ಗಮಿಷ್ ವರಿಸದೆ ಇರಲು ಆತನೂ ಕಾರಣ. ಅವನ ಹೇಳಿಕೆಯ ಮಾತಿನಿಂದ ಗಿಲ್ಗಮಿಷ್ ನನಗೆ ಒಲಿಯಲಿಲ್ಲ. ಅನುದೇವಾ... ಅನುದೇವಾ...

* * *

## ದೃಶ್ಯ-೮

(ಎಂಕಿಡು ಖಾಯಿಲೆಯಿಂದ ಹಾಸಿಗೆ ಹಿಡಿದಿದ್ದಾನೆ, ಅಲ್ಲಿಗೆ ಗಿಲ್ಗಮಿಷ್ ಬರುತ್ತಾ)

ಗಿಲ್ಗಮಿಷ್: ಏನಿದು ಎಂಕಿಡು ಹಾಸಿಗೆ ಹಿಡಿದುಬಿಟ್ಟಿದ್ದೀಯಾ?

ಎಂಕಿಡು : ಬಾ ಮಿತ್ರ... ಬಾ... ನಾನು ಇನ್ನು ಬದುಕುವಂತಿಲ್ಲ. ಯಾವುದೋ ಖಾಯಿಲೆ ನನಗೆ ಅಂಟಿಕೊಂಡು ಬಿಟ್ಟಿದೆ. ಬಿಡುವಂತೆ ಕಾಣದು.

ಗಿಲ್ಗಮಿಷ್: ಅದಕ್ಕೆ ಮದ್ದಿಲ್ಲವೇ? ಎಂತಹ ಮಾತನಾಡುತ್ತಿರುವೆ ಎಂಕಿಡು.

ಎಂಕಿಡು : ಹಾಗಲ್ಲಾ, ನಾನೊಂದು ಕನಸು ಕಂಡೆ.

ಗಿಲ್ಗಮಿಷ್: ಏನದು?

ಎಂಕಿಡು : ನನ್ನ ಸಾವು ಸನ್ನಿಹಿತವೆಂದು.

ಗಿಲ್ಗಮಿಷ್: ಅದೆಲ್ಲಾ ನಂಬದಿರು, ಅದು ಕನಸಷ್ಟೇ.

ಎಂಕಿಡು : ಇಲ್ಲ... ನಿನಗೆ ತಿಳಿಯದು ಗಿಲ್ಗಮಿಷ್...

(ಕಣ್ಣೀರಿಡುತ್ತಿರಲು)

ಗಿಲ್ಗಮಿಷ್: ಅಳಬೇಡ ಮಿತ್ರಾ....

ಎಂಕಿಡು : ಹಾಗಲ್ಲ ಮಿತ್ರಾ.... ದೇವರಿಗೆ ದಯೆ ಎಂಬುದಿಲ್ಲ. ನಾನು ಸಾಯುವುದಂತೂ ಸತ್ಯ. ಆದರೆ ನನಗೆ ದುಃಖವಾಗುತ್ತಿರುವದು ಈ ಕೆಟ್ಟ ಖಾಯಿಲೆಯಿಂದ ನರಳಿ ಸಾಯಬೇಕಲ್ಲಾ ಎಂದು. ಎಂಥ ಅವಮಾನಕರ? ಇದೊಂದು ಹೇಡಿ ಸಾವೆಂದು ಹೇಳುವೆ. ಯೋಧನಾಗಿ ಮಡಿದಿದ್ದರೆ ಅದು ಚೆನ್ನಾಗಿತ್ತು. ವೀರ ಯೋಧನ ಸಾವು ರಣಭೂಮಿಯಲ್ಲಾಗಿದ್ದರೆ ಸ್ವರ್ಗಕ್ಕೆ ಹೋಗುತ್ತಿದ್ದೆ.

ಗಿಲ್ಗಮಿಷ್: ಎಲ್ಲವನ್ನೂ ಏಕೆ ಹಂಬಲಿಸುತ್ತಿರುವೆ?

ಎಂಕಿಡು : ಇದು ಇಷ್ತರ್ ದೇವತೆಯ ಪ್ರಭಾವವಿರಬೇಕು. ಇಲ್ಲ ಮಿತ್ರ ನಾನು ಬದುಕಿರಲಾರೆ, ನನಗೆ ಸಾವು ಸಮೀಪಿಸಿದೆ. ನಿನ್ನನ್ನು ಬಿಟ್ಟು ಹೋಗುತ್ತಿರುವೆ ಮಿತ್ರಾ... ಹೋಗುತ್ತಿರುವೆ...

ಗಿಲ್ಗಮಿಷ್: ಎಂಕಿಡು... ಎಂಕಿಡು... ಎಂಥ ಕೆಲಸ ಆಗಿಹೋಯಿತು. ನಿನ್ನಂಥ ವೀರನನ್ನು ಆ ಮೃತ್ಯುದೇವತೆ ಸೆಳೆದೊಯ್ದನೇ ಅಯ್ಯೋ... (ಕಣ್ಣೀರಿಡುವನು) ನಿನ್ನ

ಮರಣ ನನ್ನನ್ನು ಅಧೀರನನ್ನಾಗಿ ಮಾಡಿದೆ. ಕಣ್ಣೀರ ಕೋಡಿ ಹರಿಯುತ್ತಿದೆ. ಹಿರಿಯರೇ, ನನ್ನ ಪ್ರಿಯ ಮಿತ್ರನನ್ನು ಕಳೆದುಕೊಂಡೆ. ಅಯ್ಯೋ ಎಂಕಿಡು ನೀನು ನನ್ನ ಕೈಲಿರುವ ಕೊಡಲಿಯಂತಿದ್ದೆ. ನನ್ನೊರೆಯ ಖಡ್ಗವಾಗಿದ್ದೆ. ನನ್ನ ರಕ್ಷಿಸುವ ಗುರಾಣಿಯಾಗಿದ್ದೆ, ವಕ್ಷಸ್ಥಳದ ವಜ್ರಕವಚವಾಗಿದ್ದೆ. ನನ್ನ ಬಲ ಭುಜವಾಗಿದ್ದೆ. ದುರ್ವಿಧಿಯೇ ನನ್ನನ್ನು ಮೋಸಗೊಳಿಸಿದೆ. ನನ್ನ ಜೊತೆಯಾಗಿದ್ದ ಎಂಕಿಡು ದೇಹವೆರಡು ಆತ್ಮ ಒಂದೇ ಎಂದು ನಂಬಿದ್ದೆ. ಅಂಥ ಮಿತ್ರನನ್ನು ನಾನು ಕಳೆದುಕೊಂಡೆ. ಎಂಕಿಡು ನನ್ನಿಂದಲೇ ನಿನಗೆ ಮರಣ ಬಂದುದು. ನನ್ನ ಕೃತ್ಯದಲ್ಲಿ ಆತ ಭಾಗವಹಿಸಿದುದರಿಂದ ದೇವತೆಗಳು ಕುಪಿತರಾಗಿ ಅವನನ್ನು ಕರೆದೊಯ್ದರೆಂದು ಕಾಣುತ್ತದೆ. ನಾವಿಬ್ಬರೂ ಜೊತೆಗೂಡಿ ಸಾಧಿಸಿದ ಸಾಧನೆಗಳೆಷ್ಟೋ!

(ತಲೆಯನ್ನು ಪರಚಿಕೊಳ್ಳುತ್ತಾ ಎಂಕಿಡುವಿನ ಹೆಣದ ಮುಂದೆ ನೂರಾರು ಪ್ರದಕ್ಷಿಣೆ ಮಾಡುತ್ತಾ)

ಎಂಕಿಡು, ನಾನು ನಿನ್ನ ಮಿತ್ರ, ಬಂಧು, ನಾನಿಂದು ದುಃಖಸಿಂಧು... ನೀನು ಶಾಶ್ವತವಾಗಿ ನಿದ್ರಿಸಲು ನಿನಗೊಂದು ದೊಡ್ಡ ಹಾಸು ಹಾಸುವೆ. ನನ್ನ ಕೈ ಹತ್ತಿರದ ಸಿಂಹಪೀಠವೊಂದರಲ್ಲಿ ನಿನ್ನನ್ನಿರಿಸಿ ಮೆರೆಸುವೆ. ಯುರೀಕ್ ಜನತೆಗೆ ಕಣ್ಣೀರ ಕೋಡಿ ಹರಿಸಿ ಹೇಳುತ್ತೇನೆ.

ಮನಸ್ಸಿನ ಗಾಯವನ್ನು ಕಾಲವೆಂಬ ಮುಲಾಮು ಮಾಯಿಸುತ್ತದೆ. ಆದರೆ ಮಿತ್ರನ ಮರಣದಿಂದ ನೋವಿನ ಗಾಯ ಆರಿಲ್ಲ.

(ಶವ ಸಂಸ್ಕಾರ ಮಾಡಿ ಹೊರಡುವನು)

(ಕಣ್ಣೀರಿಡುತ್ತಿದ್ದಂತೆ ರಂಗಮಂಟಪ ಕತ್ತಲಾಗುವುದು)

* * *

## ದೃಶ್ಯ-೯

(ದಾರಿಯಲ್ಲಿ ಬರುತ್ತಾ)

ಗಿಲ್ಗಮಿಷ್: ಎಂಕಿಡುವಿನ ಸಾವು ಅದೆಷ್ಟು ಬೇಗ ಬಂತು? ಈ ಮರಣ ನನಗೂ ತಪ್ಪಿದುದಲ್ಲ. ಇದನ್ನು ತಪ್ಪಿಸಿಕೊಳ್ಳಲು ಮಾರ್ಗವಿಲ್ಲವೇ? ಚಿರಂಜೀವಿತ್ವದ ರಹಸ್ಯವನ್ನು ತಿಳಿಯಲು ನನ್ನ ಪೂರ್ವಜ ಉತನಾಪಿಷ್ಟಂನಲ್ಲಿ ಹೋಗಿ ಕೇಳಬೇಕು. ಈತ ದೇವನೊಲುಮೆಗೆ ಪಾತ್ರನಾಗಿದ್ದವ. ಜಲಪ್ರಳಯದಲ್ಲಿ ಬದುಕಿ ಮರಣವೇ ಇಲ್ಲದ ಚಿರಂಜೀವಿತ್ವವನ್ನು ದೇವನಿಂದ ಪಡೆದ ಮಹಾ ಮಾನವ. ಪ್ರಳಯವಾದ ಮೇಲೆ ಅಮರತ್ವ ನೀಡಿ ಅವನನ್ನು ಸೂರ್ಯದೇವನ ಕೈದೋಟವಾದ ಡಿಲ್‌ಮೂನ್‌ನಲ್ಲಿಟ್ಟಿರುತ್ತಾರೆ. ಡಿಲ್ ಮೂನ್ ಬಹಳ ದೂರದಲ್ಲಿದೆ... ಅಲ್ಲಿಗೆ ನನ್ನ ಪಯಣ ಬೆಳೆಸಬೇಕು. (ಎಂದು ಮುಂದುವರಿಸುವನು)

ಅಡವಿಯಲ್ಲಿ ಅಲೆದಲೆದು ಸಾಕಾಗಿದೆ, ಇಲ್ಲೇ ಸ್ವಲ್ಪ ವಿಶ್ರಮಿಸಿಕೊಂಡು ಹೋಗುವೆ...

(ಮರದ ಕೆಳಗಡೆ ಮಲಗುವನು... ರಾತ್ರಿ ಕನಸು ಮೇಲೆದ್ದು) ಆಂ... ಎಂಥ ಕನಸು? ಸಿಂಹಗಳ ಹಿಂಡು ನನ್ನನ್ನು ಸುತ್ತುವರೆದುವು. ಅವುಗಳನ್ನು ಕತ್ತಿಯಿಂದ, ಕೊಡಲಿಯಿಂದ ಸಂಹರಿಸಿದೆ! ನೋಡೋಣ ನನ್ನ ಪಯಣವನ್ನು ಮುಂದುವರಿಸುತ್ತೇನೆ. ಗಿಲ್ಗಮಿಷ್ ಶಿಖರಕ್ಕೆ ಬರುತ್ತಾನೆ... ಅಲ್ಲಿ ದ್ವಾರದಲ್ಲಿ ಅರ್ಧಮಾನವ, ಅರ್ಧ ಡ್ರೇಗನ್ ಶರೀರವುಳ್ಳ ವಿಚಿತ್ರಪ್ರಾಣಿ ಇತ್ತು)

ಡ್ರೇಗನ್ : ನೀನು ಯಾರು? ಏಕೆ ಕೈಕೊಂಡೆಈ ಸಾಹಸ ಯಾತ್ರೆಯನ್ನು.

ಗಿಲ್ಗಮಿಷ್: ನಾನು ನನ್ನ ಮಿತ್ರ ಎಂಕಿಡುವಿಗಾಗಿ, ನಾವಿಬ್ಬರೂ ಆತ್ಮೀಯ ಗೆಳೆಯರು ಒಂದಾಗಿ ಬಾಳಿ ಬದುಕಿದವರು. ಅವನು ನನ್ನನ್ನು ಬಿಟ್ಟು ದೂರ ಹೋಗಿದ್ದಾನೆ. ಅವನನ್ನು ತರಬೇಕು. ಇಲ್ಲದಿದ್ದರೆ ನನಗೆ ಬದುಕಿಲ್ಲ. ಗೆಲುವಿಲ್ಲ, ಒಲವಿಲ್ಲ, ಜೀವವೇ ಮೊದಲಿಲ್ಲ. ನನ್ನ ಬಾಳು ಗೋಳಿನ ಗೂಡಾಗಿದೆ. ಅದನ್ನು ನಿವಾರಿಸಲು ಉತನಾಪಿಷ್ಟಂನ ಬಳಿ ಹೊರಟಿದ್ದೇನೆ. ಆ ದೇವಮಾನವನಲ್ಲಿ ಹುಟ್ಟು ಸಾವಿನ ರಹಸ್ಯವನ್ನರಿತು ಬರಲು ರಟಿರುವೆ.

ಡ್ರೇಗನ್ : ಭಲೇ ಗಿಲ್ಗಮಿಷ್, ನೀನು ಮಹಾ ಸಾಹಸಿ, ಇದು ಭೂಲೋಕದ ಮಾನವನಿಗೆ ಮೀರಿದ ಪ್ರಯತ್ನ.

ಗಿಲ್ಗಮಿಷ್: ಏನಾದರಾಗಲಿ ಇದಕ್ಕೆ ಚಿಂತಿಸುವುದಿಲ್ಲ, ನಾನು ಏನೇ ಬರಲಿ, ಎಷ್ಟೇ ದುರ್ಗಮವಿರಲಿ, ನೆರೆ ಬರಲಿ ನಾನು ಹೋಗಲೇಬೇಕು. ನಿನ್ನ ಪರ್ವತದ ದ್ವಾರವನ್ನು ತೆರೆ.

ಡ್ರೇಗನ್ : ನಿನಗಾಗಿ, ನಿನ್ನ ಸಾಹಸಕ್ಕಾಗಿ ಬಾಗಿಲನ್ನು ತೆರೆಯುವೆ. ಹೋಗಿ ಬಾ ಗಿಲ್ಗಮಿಷ್. ನಿನಗೆ ಶುಭವಾಗಲಿ.

ಗಿಲ್ಗಮಿಷ್: ಎಷ್ಟೊಂದು ಕಗ್ಗತ್ತಲು, ದಟ್ಟವಾದ ಅರಣ್ಯ, ಹನ್ನೆರಡು ಮಜಲುಗಳನ್ನೇರಿ ದ್ದೇನೆ. ಈಗತಾನೇ ಸೂರ್ಯನ ಕಿರಣ ಕಾಣುತ್ತಿದೆ. ಇದೇ ದೇವತೆಗಳ ನಂದನ. ಶಮಾಷ್ ನಿನಗೆ ಶರಣು.

ಶಮಾಷ್ : ನಿನಗೆ ಮಂಗಳವಾಗಲಿ, ನೀನು ಸಿದುರಿಯನ್ನು ಸಂದರ್ಶಿಸುವುದು ಉಚಿತ.

(ಮದಿರಾದೇವಿ ಸಿದುರಿಯನ್ನು ನೋಡಲು ಹೋಗಲು ಆಕೆ ಬಾಗಿಲನ್ನು ಭದ್ರಿಸಿದಳು)

ಗಿಲ್ಗಮಿಷ್: ಸಿದುರಿ ನಾನು ಬಂದುದೇಕೆ? ಏಕೆ ಬಾಗಿಲನ್ನು ಭದ್ರಿಸಿಕೊಳ್ಳುತ್ತಿರುವೆ?ತೆಗೆ ಬಾಗಿಲು, ಆಲಿಸು ನನ್ನ ದನಿಯ.

ಸಿದುರಿ : ಏತಕ್ಕಾಗಿ ಬರುತ್ತಿರುವೆ? ವ್ಯರ್ಥ ಸಾಹಸವನ್ನು ಮಾಡಬೇಡ.

ಗಿಲ್ಗಮಿಷ್: ನಾನು ಬರುತ್ತಿರುವುದು ನನ್ನ ಸ್ವಾರ್ಥಕ್ಕಲ್ಲ, ನನ್ನ ಮಿತ್ರ ಎಂಕಿಡುವಿನ ಪ್ರಾಣ ಭಿಕ್ಷೆಗೆ.

ಸಿದುರಿ : ಮನುಷ್ಯನನ್ನು ಸೃಷ್ಟಿಸಿದ ದೇವರು ಸಾವನ್ನು ಸೆರಗಿನಲ್ಲೇ ಕಟ್ಟಿ ಕಳುಹಿಸಿದ್ದಾನೆ. ನಿನಗಾಗಿ, ನಿನ್ನ ಒಳಿತಿಗಾಗಿ ಹೇಳುತ್ತಿರುವೆ. ಬಯಸಿದುದೆಲ್ಲವನ್ನೂ ತಿನ್ನು, ಕುಣಿ, ಮೋಜು ಮಾಡು, ಬೇಕಾದ ಬಟ್ಟೆಯುಟ್ಟು ಹೆಂಡತಿ ಮಕ್ಕಳೊಡಗೂಡಿ ಬಾಳ್ವೆ ನಡೆಸು.

ಗಿಲ್ಗಮಿಷ್: ಹಾಗೆ ಮಾಡಲು ನನಗೆ ಮನಸ್ಸಿಲ್ಲ. ಈ ಕಾರ್ಯವನ್ನು ಸಾಧಿಸಲೇಬೇಕು. ಅದಕ್ಕಾಗಿಯೇ ಬಂದಿರುವೆ.

ಸಿದುರಿ : ಉರುಷ್‌ನಾಬಿ ಈತನನ್ನು ಉತಾನಪಿಷ್ಟಿಮನ ಬಳಿಗೆ ದೋಣಿಯಲ್ಲಿ ಕುಳ್ಳಿರಿಸಿಕೊಂಡು ಹೋಗು. ನೂರ ಹನ್ನೆರಡು ಉದ್ದವಾದ ಗಳುಗಳಿಂದ ಒಂದಾದ ಮೇಲೊಂದು ತೆಗೆದು ಹುಟ್ಟುಹಾಕು. ಸಮುದ್ರದ ನೀರನ್ನು ಮೈಗೆ ಸೋಕಿಸಕೂಡದು. ಒಂದು ಹನಿ ಸೋಕಿದರೂ ಮರಣ ಸಂಭವಿಸುತ್ತದೆ. ಎಚ್ಚರ ಗಿಲ್ಗಮಿಷ್.

ಗಿಲ್ಗಮಿಷ್: ಆಗಲೀ ತಾಯೆ...!

(ಗಿಲ್ಗಮಿಷ್ ಉತನಾಪಿಷ್ಟಮನಲ್ಲಿಗೆ ಬರುತ್ತಾನೆ)

ಉತನಾ : ಏನಿದು ಗಿಲ್ಗಮಿಷ್! ನೀನು ಇಲ್ಲಿಗೆ ಬಂದೆ?

ಗಿಲ್ಗಮಿಷ್: ನನ್ನ ಮಿತ್ರ ಎಂಕಿಡುವು ಅಕಾಲ ಮೃತ್ಯುವಿಗೊಳಗಾದ. ಅವನನ್ನು ಬದುಕಿಸಿಕೊಳ್ಳಬೇಕೆಂದು ನಿಮ್ಮಲ್ಲಿಗೆ ಬಂದೆ.

ಉತನಾ : ಗಿಲ್ಗಮಿಷ್ ಇದು ದೇವನೊಬ್ಬನಿಗೆ ಹೊರತು ಮತ್ತಾರಿಗೂ ಇಲ್ಲ. ಮನೆ, ಮಾರು, ಹೆಂಡತಿ, ಮಕ್ಕಳು, ಮಿತ್ರ ಯಾರೂ ಶಾಶ್ವತವಲ್ಲ. ಜೀವನದಲ್ಲಿ ಪ್ರತಿಯೊಂದೂ ನಶ್ವರ. ಆಳಾಗಲೀ, ಅರಸನಾಗಲೀ, ಪಾಪಿಯಾಗಲೀ, ಪುಣ್ಯಮಯಿಯಾಗಲೀ, ಯಾರ ಮೇಲೂ ಮೃತ್ಯುವಿಗೆ ದಾಕ್ಷಿಣ್ಯವಿಲ್ಲ. ಎಲ್ಲರನ್ನೂ ತನ್ನಧೀನದಲ್ಲಿಟ್ಟು ಆಳುವುದು. ಹುಟ್ಟು ಸಾವುಗಳನ್ನು ದೇವರು ನಿಗದಿಪಡಿಸಿದ್ದಾನೆ. ವ್ಯಕ್ತಿಯ ಅಂತ್ಯದ ದಿನವನ್ನು ಬಚ್ಚಿಟ್ಟುಕೊಂಡಿರುವುದು ಮಗೂ. ಮಾನವನಿಗೆ ಸಾವು ಅನಿವಾರ್ಯ.

ಗಿಲ್ಗಮಿಷ್: ನಾನಾದರೂ ಅಮರತ್ವವನ್ನು ಪಡೆಯುವುದು ಹೇಗೆ ದೇವಾ..!

ಉತನಾ : ಮಗು, ಜಲಪ್ರಳಯದ ಕಥೆಯನ್ನು ನಿನಗೆ ಹೇಳುತ್ತೇನೆ ಕೇಳು. ಓಂದೆ ಒಮ್ಮೆ ಭೂಲೋಕದಲ್ಲಿ ಜನಸಂಖ್ಯೆ ಹೆಚ್ಚಿದಾಗ ದೇವತೆ, ಮನುಜ ಕುಲವೆಲ್ಲಾ ನಾಶವಾಗಲು ಜಲಪ್ರಳಯಕ್ಕೆ ಅನುಮತಿ ನೀಡಿದನಂತೆ. ಆದರೆ ನನ್ನ ಬಗೆಗೆ ಅಭಿಮಾನ ತಳೆದಿದ್ದ ಇಯಾದೇವತೆ ಜಲಪ್ರಳಯದಿಂದ ಉಳಿಸಬೇಕೆಂದು ದೋಣಿಯೊಂದನ್ನು ನಿರ್ಮಿಸಿ ಅದರಲ್ಲಿ ತನಗೆ ಬೇಕಾದ ವಸ್ತು, ವ್ಯಕ್ತಿಗಳನ್ನಿಟ್ಟುಕೊಂಡು ಪಾತಾಳದೆಡೆಗೆ ಹೋಗಬೇಕೆಂದು ಮನ

ಮಾಡಿವಳು. ಹಾಗೆ ಮಾಡಲು ನಾನು ನನ್ನ ಹೆಂಡತಿಯೊಡನೆ ಬಂದು ದೇವರ ಒಲುಮೆಗೆ ಪಾತ್ರನಾಗಿ ಅಮರತ್ವ ಪ್ರಾಪ್ತವಾಯಿತು. ನೀನು ದೈವ ವಿರೋಧಿ. ನಿನಗೆ ಇದು ಸಾಧ್ಯವಿಲ್ಲ ಎನಿಸುತ್ತದೆ. ಆದರೂ ದೈವವನ್ನು ಒಲಿಸಲು ಒಂದು ವ್ರತ ಇದೆ. ಅದನ್ನು ಅನುಸರಿಸಿದರೆ ಆಗಬಹುದು.

ಗಿಲ್ಗಮಿಷ್: ಆ ವ್ರತವೇನು?

ಉತನಾ : ಆರು ಹಗಲು, ಏಳು ರಾತ್ರಿಗಳು ಬಿಟ್ಟ ಕಣ್ಣನ್ನು ಬಿಟ್ಟಂತೆ ಕುಳಿತಿರಬೇಕು.

ಗಿಲ್ಗಮಿಷ್: ಅದಕ್ಕೇನಂತೆ ಮಾಡುವೆ ದೇವಾ.

ಉತನಾ : ಮಡದೀ ನೋಡು ಈತ ಏಳು ರಾತ್ರಿಗಳು ಬಿಟ್ಟ ಕಣ್ಣನ್ನು ಬಿಟ್ಟಂತೆಯೇ ಇರುತ್ತಾನಂತೆ, ಮಾನವರನ್ನು ನಂಬಲಾಗದು. ಮನುಷ್ಯ ಶುದ್ಧ ಮೋಸಗಾರ. ನೀನು ಒಂದು ಕೆಲಸ ಮಾಡು. ದಿನಕ್ಕೊಂದರಂತೆ ರೊಟ್ಟಿ ಮುರುಕನ್ನು ಗಿಲ್ಗಮಿಷ್‌ನ ಬಳಿ ಇಡು. ಆಗ ನಮಗೆ ಗೊತ್ತಾಗುತ್ತದೆ ಎಷ್ಟು ದಿನ ಆತ ವ್ರತ ಮಾಡಿದ ಎಂಬ ಮಾಹಿತಿ ದೊರೆಯುತ್ತದೆ.

(ಗಿಲ್ಗಮಿಷ್ ವ್ರತಕ್ಕೆ ಕುಳಿತ ಒಂದೊಂದು ದಿನಕ್ಕೂ ಒಂದೊಂದು ರೊಟ್ಟಿಯನ್ನು ಇಡಲಾಯಿತು. ಏಳು ದಿನಗಳು ಕಳೆದಂತೆ ಉತನಾಪಿಷ್ಟಂ ಬಂದು ಗಿಲ್ಗಮಿಷ್‌ನನ್ನು ನಿದ್ದೆಯಿಂದ ಎಚ್ಚರಿಸಿದ.)

ಉತನಾ : ಗಿಲ್ಗಮಿಷ್ ನಿದ್ದೆಯಾಯಿತೇ?

ಗಿಲ್ಗಮಿಷ್: ಹಾಗೇನಿಲ್ಲ.

ಉತನಾ : ನೋಡಲ್ಲಿ ರೊಟ್ಟಿಯ ಚೂರುಗಳು.

ಗಿಲ್ಗಮಿಷ್: ಆಂ... ಎಂಥ ಕೆಲಸ ಮಾಡಿದೆ ವ್ರತ ಭಂಗವಾಯಿತು. ಇಷ್ಟಾರ್ಥಸಿದ್ಧಿಯಾಗಲಿಲ್ಲ. ಅಮರತ್ವ ಒದಗಲಿಲ್ಲ. ಇನ್ನು ಉಳಿದಿರುವುದೊಂದೇ ಮಾರ್ಗ. ಬಂದ ದಾರಿಗೆ ಸುಂಕವಿಲ್ಲ ಎಂದು ಉರ್‌ಷನಾಬಿಯ ಜೊತೆಯಲ್ಲಿ ನನ್ನೂರಿಗೆ ಹಿಂತಿರುಗುವುದು.

ಉತನಾ : ಗಿಲ್ಗಮಿಷ್ ಬಾ ಇಲ್ಲಿ, ಏನು ಮಾಡುವುದು? ವ್ಯರ್ಥ ಬಳಲಿಕೆ ನಿನ್ನ ಪಾಲಿಗೆ ಬಂತು. ಆದರೆ ನಿರಾಶನಾಗಿ ಕಳುಹಿಸುವ ಇಚ್ಛೆ ನನಗಿಲ್ಲ.

ಗಿಲ್ಗಮಿಷ್: ಹಾಗಾದರೆ ಅದಾವ ಆಶಾಕಿರಣ ಮೂಡಿಸುವಿರಿ. ಬೇಗ ಹೇಳಿ ಉತನಾಷಿಷ್ಟಂದೇವಾ.

ಉತನಾ : ನಿನಗೊಂದು ಉಪಕಾರ ಮಾಡಬೇಕೆಂದಿರುವೆ ಮಗೂ ಗಿಲ್ಗಮಿಷ್.

ಗಿಲ್ಗಮಿಷ್: ಆದೇನು ಹೇಳಿ.

ಉತನಾ : ಸಮುದ್ರದ ಗರ್ಭದಲ್ಲಿ ಒಂದು ಸಸ್ಯ ಇದೆ. ಅದನ್ನು ದೇವರುಗಳು ಗುಟ್ಟಾಗಿ ಬೆಳೆಸಿದ್ದಾರೆ. ಅದು ಗುಲಾಬಿಯಂಥ ಮುಳ್ಳು-ಹೂವುಳ್ಳ ಗಿಡ. ಅದನ್ನು

ತರುವುದು ಬಲು ಕಷ್ಟ. ನೀನು ಜಾಣತನದಿಂದ ಒಯ್ಯುವವನಾದರೆ ಅದು ಕಳೆದುಹೋದ ಯೌವನವನ್ನು ಮತ್ತೆ ತಂದುಕೊಡುತ್ತದೆ. ಆ ಸಸ್ಯದ ಸ್ವಲ್ಪ ಭಾಗ ತಿಂದರೆ ಸಾಕು, ಮುದಿವಂತನೂ ಯೌವನ ತುಂಬಿಕೊಳ್ಳುತ್ತಾನೆ. ನಿತ್ಯ ನವಯೌವನ ಪ್ರಾಪ್ತವಾಗುತ್ತದೆ.

ಗಿಲ್ಗಮಿಷ್: ನನ್ನ ಮೇಲೆ ಕರುಣೆ ಇಟ್ಟು ಇಷ್ಟಾದರೂ ಹೇಳಿದಿರಲ್ಲಾ ನಾನು ನಿಮಗೆ ಚಿರಋಣಿ. ನಾನು ಇದೀಗಲೇ ಹೊರಡುವೆ. ತಮ್ಮ ಆಶೀರ್ವಾದ ನನ್ನ ಮೇಲೆ ಸಾದ ಇರಲಿ.

ಉತನಾ : ತಥಾಸ್ತು!

ಗಿಲ್ಗಮಿಷ್: ಆ ಸಸ್ಯ ಸಿಕ್ಕಿಬಿಟ್ಟರೆ ನಾನು ಸದಾ ಯೌವನಸ್ಥನೇ, ನನಗೆ ಮುಪ್ಪಡರುವುದಿಲ್ಲ... ಸಾವು ಬರುವುದಿಲ್ಲ. ಚಿರ ಯೌವನ ತುಂಬಿ ತುಳುಕಾಡುತ್ತದೆ, ಆಗ ನಾನೇ ಜಗದ ಸಾರ್ವಭೌಮ! ಎಂಥ ಸುವರ್ಣಯುಗ ಕಾದಿದೆ ನನಗೆ! ನನ್ನಂಥ ಪುಣ್ಯವಂತ ಜಗತ್ತಿನಲ್ಲಿ ಯಾರೂ ಇಲ್ಲ. ತಡಮಾಡದೆ ಈಗಲೇ ಹೊರಡುವೆ. ಸಮುದ್ರದ ತಳವಲ್ಲಿ ಆ ಸಸ್ಯ ಎಲ್ಲಿದ್ದರೂ ಬಿಡದೆ ತಂದು ತಿಂದು ಅಮರತ್ವವನ್ನು ಪಡೆಯುವೆ. ನನ್ನ ರಾಜ್ಯದ ಎಲ್ಲಾ ಮುದಿಯರನ್ನೂ ಯುವಕರನ್ನಾಗಿ ಮಾಡುವೆ.

(ಗಹಗಹಿಸಿ ನಗುತ್ತಾ ಸಮುದ್ರದತ್ತ ನಡೆಯುವನು. ಅಲ್ಲಿಂದ ಸಂತೋಷದಿಂದ ಬರುತ್ತಾ...)

ಸಿಕ್ಕಿತು... ಸಿಕ್ಕಿತು... ಸಿಕ್ಕೇ ಬಿಟ್ಟಿತು...! ಯೌವನ ತರುವ ಗಿಡ! ಇದೇ ಇರಬೇಕು ಉತನಾಪಿಷ್ಟಂನು ಹೇಳಿದಂತೆಯೇ ಇದೆ. ಇದನ್ನು ಪ್ರಯೋಗಿಸುವ ಮೊದಲು ಉಪ್ಪು ನೀರು ಕುಡಿದ ಮೈಯನ್ನು ಕೊಳದಿಂದ ಸ್ನಾನ ಮಾಡಿ ನಾನು ಮೊದಲು ಪ್ರಯೋಗಿಸಿ ಆಮೇಲೆ ಊರಿಗೆ ತೆರಳುವೆ.

(ಸ್ನಾನ ಮಾಡುತ್ತಿರುವಾಗ ದಡದಲ್ಲಿ ಇಟ್ಟಿದ್ದ ಸಸ್ಯವನ್ನು ಆತ ನೋಡುತ್ತಿದ್ದಂತೆಯೇ ಸರ್ಪವೊಂದು ಬಂದು ತಿಂದುಬಿಟ್ಟಿತು. ಆಂ... ಎಂದು ಬರುತ್ತಿರಲು ಅದು ಸರಸರನೆ ಹರಿದುಹೋಯಿತು)

ಗಿಲ್ಗಮಿಷ್: ಎಷ್ಟೊಂದು ಕಷ್ಟಪಟ್ಟು ಇಲ್ಲಿಗೆ ತಂದೆ. ಆದರೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲಾ. ಉತನಾಪಿಷ್ಟಂ ಕರುಣೆ ತೋರಿ ನನಗೆ ಅಮರತ್ವದ ಸಂಜೀವಿನಿ ಸಸ್ಯವನ್ನು ತಿಳಿಸಿದ್ದ. ಆದರೆ ಅದು ನನ್ನ ಪಾಲಿಗೆ ಗಗನ ಕುಸುಮವಾಯಿತು. ಆಯ್ಯೋ ಹೊರಟೇ ಹೋಯಿತೇ? ನನ್ನ ಕೈಮೀರಿ ಹೊರಟೇ ಹೋಯಿತೇ? (ಗಳಗಳನೆ ಅಳುವನು) ಇನ್ನಾರು ಇದ್ದಾರೆ? ನನ್ನ ಭಾಗಕ್ಕೆ ಈಗ ಎಂಕಿಡು ಪ್ರೇತವಾಗಿದ್ದಾನೆ. ಅವನನ್ನು ಆಹ್ವಾನಿಸಿದರೆ! ಎಂಕಿಡು ಬಾ... ನೀನು ಎಲ್ಲಿದ್ದರೂ, ಹೇಗಿದ್ದರೂ ಬಾ! ನನ್ನೊಡನೆ ಮಾತನಾಡು. ಆಗಲಾದರೂ ನನಗೆ ಸಮಾಧಾನ!

ಎಂಕಿಡು : (ಧ್ವನಿ) ನತದೃಷ್ಟ ನಾನು. ನಿನ್ನಂಥ ಸ್ನೇಹಿತನನ್ನು ಬಿಟ್ಟು ಈಗ ಪ್ರೇತವಾಗಿದ್ದೇನೆ. ನಿನ್ನೊಂದಿಗೆ ಬರೇ ಮಾತನಾಡಲು ಶಕ್ತ ನಾನು.

ಗಿಲ್ಗಮಿಷ್: ಈ ಸಾವಿನ ಬಗೆಗೆ ನೀನೇನಾದರೂ ಹೇಳುವೆಯಾ?

ಎಂಕಿಡು : (ಧ್ವನಿ) ನಾನೇ ಸಾವಿಗೀಡಾಗಿದ್ದೇನೆ. ಸಾವಿನ ಬಗೆಗೆ ನಾನು ಹೇಳುವುದಾದರೂ ಏನು?

ಗಿಲ್ಗಮಿಷ್: ನೀನು ಬದುಕಿದ್ದಾಗ ನನ್ನ ಆತ್ಮ ಮಿತ್ರನಾಗಿದ್ದೆ. ನನ್ನನ್ನು ಅಗಲಿ ನೀನಿರುತ್ತಿರಲಿಲ್ಲ. ನಿನ್ನ ಬಿಟ್ಟು ನಾನಿರುತ್ತಿರಲಿಲ್ಲ. ನೀನು ನನ್ನನ್ನಗಲಿ ಪ್ರೇತವಾದೆ. ನಿಜವಾಗಿಯೂ ನನಗೆ ತುಂಬಾ ವ್ಯಥೆಯಾಗುತ್ತದೆ. ನೀನಾದರೂ ಸಾವಿನ ಬಗೆಗೆ ಹೇಳಲಾರೆಯಾ? ನನಗೆ ಬದುಕು ಭಾರವೆನಿಸುತ್ತಿದೆ. ಎಲ್ಲೆಲ್ಲೂ ನಿರಾಶೆ ತುಂಬಿ ತುಳುಕುತ್ತಿದೆ... ಎಂಕಿಡು ನೀನು ಮಡಿದರೂ ನಿನ್ನ ಮೈತ್ರಿ ಮಡಿದಿಲ್ಲ.

ಎಂಕಿಡು : (ಧ್ವನಿ) ಇದು ಯಾರನ್ನೂ ಬಿಟ್ಟಿದ್ದಲ್ಲ. ದೈವ ಮನುಷ್ಯನಿಗೆ ಇಷ್ಟೆಂದು ಆಯಸ್ಸೆಂದು ಬರೆದಿರುತ್ತಾನೆ. ಆದರೆ ಅದಕ್ಕೂ ಮೊದಲು ಯಾವುದಾದರೂ ಅಪಘಾತದಲ್ಲಿ ಸತ್ತರೆ ನನ್ನ ಹಾಗೇ ಪ್ರೇತವಾಗಿ ಬಾಳಬೇಕಾಗುತ್ತದೆ ಮಿತ್ರಾ. ನನ್ನ ಆಯಸ್ಸು ತೀರುವವರೆಗೂ ಹೀಗೆಯೇ ಇದ್ದು, ಆಮೇಲೆ ನನ್ನ ಪಿಶಾಚತ್ವ ನಾಶವಾಗುತ್ತದೆ. ಹಾಗೆಯೇ ನೀನೂ ಅಷ್ಟೇ. ನಿನ್ನ ಆಯಸ್ಸು ಮುಗಿಯುವವರೆಗೆ ಇದ್ದು ಒಂದು ದಿನ ಸಾಯುತ್ತೀಯೆ. ಮಾನವ ಮೃತ್ಯುವನ್ನು ಎಂದಿಗೂ ತಪ್ಪಿಸಿಕೊಳ್ಳಲಾರ, ಇದು ಅನಿವಾರ್ಯ. ದೈವ ನಿಯಾಮಕ. ಏನು ಮಾಡುವುದು? ನನಗೂ ನಿನ್ನನ್ನಗಲಿ ದುಃಖವಾಗಿಲ್ಲವೆಂದೆನಬೇಡ... ಶೂನ್ಯದಿಂದ ಬಂದ ಈ ದೇಹ ಮತ್ತೆ ಶೂನ್ಯಕ್ಕೆ ಸೇರುತ್ತದೆ. ಬಯಲಿನಿಂದ ಬಂದ ದೇಹ ಬಯಲಿಗೆ ಸೇರುತ್ತದೆ. ಬಟ್ಟ ಬಯಲಿಗೆ ಸೇರುತ್ತದೆ. (ಅಳುವ ದನಿ ಬೆರೆಸಿ ತನ್ನ ಮಾತನ್ನು ಮುಗಿಸುತ್ತಾನೆ. ಎಂಕಿಡು ನಿಟ್ಟುಸಿರು ಬಿಡುವನು) ಇದಕ್ಕೆ ಹೆದರಬೇಡ, ಅಂಜಬೇಡ, ಅಳುಕಬೇಡ, ಸುಸ್ವಾಗತವನ್ನು ಬಯಸು. ಅಷ್ಟೇ ನಾನು ಹೇಳುವುದು.

ಹುಲುಮಾನವ ತನ್ನ ಕೆಲವೇ ದಿನಗಳ ಪರಿಮಿತ ಜೀವಿತದಲ್ಲಿ ಮಾನವತೆಯ ಆದರ್ಶವನ್ನು ಸಾಧಿಸಲು ತನಗೆ ಸಾಧ್ಯವಿರುವುದನ್ನೆಲ್ಲಾ ಮಾಡಲೇಬೇಕು. ಅದಕ್ಕಾಗಿ ಅಂತ್ಯದಲ್ಲಿ ಎಲ್ಲವನ್ನೂ ತ್ಯಾಗ ಮಾಡಲು ನೀನು ಸಿದ್ಧನಾಗಬೇಕು. ಜೀವನವನ್ನು ಬಂದ ರೀತಿಯಲ್ಲಿ ಸ್ವೀಕರಿಸಬೇಕು. ಬದುಕಿನ ಹೋರಾಟದಲ್ಲಿ ಎಂದಿಗೂ ಹೇಡಿತನ ಸಲ್ಲದು. ಮರಣಕ್ಕೆ ಎಂದಾದರೊಂದು ದಿನ ಶರಣಾಗಲೇಬೇಕು. ಅದು ಪೌರುಷದ ಕಕ್ಷೆಯಲ್ಲಿ ಎಂದಿಗೂ ಸಿಗದ ಶಕ್ತಿ. ಮಾನವ ಎಷ್ಟೇ ವೀರನಿರಲಿ ಮೃತ್ಯುವಿನಿಂದ ದೂರವಿರಲಾರ.

ಗಿಲ್ಗಮಿಷ್: ಮೃತ್ಯು, ಸಾವು, ಈ ಭೌತ ದೇಹದಿಂದ ಹೋಗುವ ಉಸಿರು! ದೇಹಕ್ಕೆ ಸಾವು. ಆದರೆ ಆತ್ಮಕ್ಕೆ ಸಾವಿಲ್ಲವಂತೆ. ಮಣ್ಣಿನಿಂದ ಬಂದ ದೇಹ ಮತ್ತೆ ಮಣ್ಣಿಗೇ ಸೇರಬೇಕಂತೆ. ಪುನರಪಿ ಜನನಂ ಪುನರಪಿ ಮರಣಂ ಎಂದೂ ಹೇಳುತ್ತಾರೆ. ಆದರೆ ಅದನ್ನು ಬಲ್ಲವರಾರು? ಮನುಷ್ಯನ ಜೀವ ನಶ್ವರ, ಗಾಳಿಯ ಮುಂದಿನ ಸೊಡರಂತೆ. ನೀರ ಮೇಲಣ ಗುಳ್ಳೆಯಂತೆ. ಕದಳೀ ವೃಕ್ಷವು ತಾನು ಸಾಯುವಾಗ ಬುಡದಲ್ಲೇ ಮತ್ತೊಂದಕ್ಕೆ ಜನ್ಮ ವಿತ್ತು ಹೋದಂತೆ. ಸಾವೂ ಮತ್ತೊಂದು ಜೀವಕ್ಕೆ ಜನ್ಮವಿತ್ತು ಹೋಗುವುದು. ದೇವಾಧಿ ದೇವತೆಗಳಿಗೆ ಅಮರತ್ವ. ಆದರೆ ಮಾನವನಿಗೆ ಅದರ ಭಾಗ್ಯವಿಲ್ಲ. ಅದರಲ್ಲಿ ನಾನೂ ಒಬ್ಬ ಸತದೃಷ್ಟ. ನನ್ನ ಆಸೆ ಆಕಾಂಕ್ಷೆಗಳೆಲ್ಲಾ ನುಚ್ಚು ನೂರಾದುವು. ನನಗೂ ಆಯುಷ್ಯದ ಪಾತ್ರೆ ತುಂಬಿ ಬಂದಿದೆ. ಅದು ಇಂದು ಒಡೆದು ಚೂರಾಗುವುದು. ವಿಧಿಯನ್ನು ಮೀರಲಾರದೆ ಹೋದೆ. ಆಯುಷ್ಯ ಮುಗಿದ ಮೇಲೆ ಅಡಿಕೆ ಕಡಿದು ಎಲೆ ಅಗಿಯುವವರೆಗೂ ಮನುಷ್ಯ ಇರಲಾರ. ಇದೆಲ್ಲಾ ನಮ್ಮ ಹಿರಿಯರು, ಅನುಭವಸ್ಥರು ಹೇಳಿದ ಅಮೃತವಾಣಿ! ಎಲ್ಲರಿಗೂ ಬಂದಂತೆ ನನಗೂ ಸಾವು ಬಂದರೆ ಬರಲಿ. ಎಂಕಿಡು ಹೇಳಿದಂತೆ ಸ್ವಾಗತಿಸುವೆ! ಆಹ್ವಾನಿಸುವೆ. ಸಂತೋಷದಿಂದ ಹೋಗುವೆ ಹ್ಲಾಂ... ವಿಧಿಯೇ ನನ್ನನ್ನೊಪ್ಪಿಸಿಕೋ, ಇದೋ ಬರುತ್ತಿರುವೆ... ಹಾ... ವಿಧಿಯೇ... ಬದುಕು ಮುಗಿದ ಮೇಲೆ ಸರ್ವವೂ ಶೂನ್ಯ. ಬಾಳಿನಲ್ಲಿ ಸಿಹಿಕಹಿಗಳನ್ನುಂಡಾಯಿತು. ದುಃಖ ದುಮ್ಮಾನಗಳನ್ನು ಸಹಿಸಿಯಾಯಿತು. ಅಷ್ಟು ದಿನಗಳಿಂದಲೂ ಈ ಮೃತ್ಯುವಿನ ಭೀತಿ ಬೆನ್ನು ಹತ್ತಿದ ಬೇತಾಳದ ಹಾಗೆ ನನ್ನನ್ನೂ ಎಡೆಬಿಡದೆ ಕಾಡುತ್ತಿತ್ತು. ಅದರಿಂದ ಬಿಡುಗಡೆ ಪಡೆಯಲು ಯತ್ನಿಸಿ ಹೋರಾಟವನ್ನು ಮುಂದುವರಿಸಿದೆ. ಆದರೆ ಅದರಿಂದ ವೈಫಲ್ಯವನ್ನು ಕಂಡೆ. ನನಗೆ ಸರಿಸಮಾನರು ಈ ಪ್ರಪಂಚದಲ್ಲಿ ಯಾರೂ ಇಲ್ಲ ಎಂದು ಮೆರೆದೆ. ಇಂದು ಹೀಗಾಗುತ್ತೇನೆಂದು ಅರಿವೇ ನನಗಿರಲಿಲ್ಲ. ಮರುಭೂಮಿಯಲ್ಲಿಂದು ಒರಗಲೇ? ಕೈ ಮುದುಡಿ ಕೂರುವುದು ನನ್ನ ಜಾಯಮಾನಕ್ಕಿಲ್ಲ. ಬೆಳಕು ವಿಸ್ತಾರವಾಗಿ ಹರಿದಂತೆ ಕತ್ತಲೆ ಕರಗುವುದು. ಸತ್ತವನು ಸೂರ್ಯನನ್ನು ಮತ್ತೆ ಕಾಣುವನೆ? ಉಜ್ವಲ ತೇಜದಲ್ಲಿ ಅವನ ಕಣ್ಣು ತೃಪ್ತಿಗೊಳ್ಳುವುದೆ? ಬದುಕಿದ್ದರೆ ಎಲ್ಲವನ್ನೂ ಉಣ್ಣಬಹುದು ತಿನ್ನಬಹುದು. ಸತ್ತರೇನು? ಬದುಕಲೇಬೇಕು, ಚಿರನೂತನ ಚೇತನದ ಬಾಳಲ್ಲಿ ಬದುಕಬೇಕು ಎಂದೆಲ್ಲಾ ಯೋಚಿಸಿದ್ದೆ. ಆದರೆ ದೈವ ಯೋಚಿಸಿದ್ದೇ ಬೇರೆ. ಈ ಗುರಿ ಸಾಧನೆಗೆ ನನ್ನ ಶಕ್ತಿಯನ್ನೆಲ್ಲಾ ಧಾರೆ ಎರೆದೆ. ಆದರೆ ಅದರಿಂದ ನನಗೆ ದೊರೆತದ್ದು ಶೂನ್ಯ. ಶೂನ್ಯ!! ಎಲ್ಲರೂ ಹೇಳಿದರು ಸಾವು ಖಚಿತ ಎಂದು. ದೇವಾಧಿ ದೇವತೆಗಳನ್ನು ಕೇಳಿದರೂ ಅದೊಂದು ಬಿಟ್ಟು ಬೇರೆ

ಕೇಳಿಕೋ ಎಂದರು. ಏಕೆಂದರೆ ನಾನೂ ದೈವತ್ವ ಪಡೆದು ಅವರನ್ನೇ ಆಳುತ್ತೇನೆಂದೋ ಏನೋ ಇರಬೇಕು. ಆದರ ನಾನು ಹೇಗಾದರೂ ಮಾಡಿ ಅಮರತ್ವ ಪಡೆಯಬೇಕೆಂದು ಆಸೆಪಟ್ಟೆ. ಅದು ನಿರಾಸೆಯಿಂದ ಕೊನೆಗೊಂಡಿತು. ದೈವೇಚ್ಛೆ ಇದ್ದಂತಾಗಲಿ, ಸಾವಿಗೆ ನಾನು ಹೆದರುವುದಿಲ್ಲ. ಎಲ್ಲರೂ ಅಪ್ಪಿದ ಸಾವನ್ನು ನಾನೂ ಒಪ್ಪಿ ಸಾಯುವೆ... ಧೈರ್ಯದಿಂದ ಸಾಯುವೆ... ಆಂ... ಅನು... ಅನು...!!

(ಎನ್ನುತ್ತಿದ್ದಂತೆಯೇ ನೆಲಕ್ಕುರುಳುವನು. ಬೆಳಕು ಆತನ ಮೇಲೆ ಕೇಂದ್ರೀಕೃತವಾಗಿ ಹಾಗೆಯೇ ರಂಗಮಂಟಪ ಕತ್ತಲನ್ನಪ್ಪುವುದು)



# ಕಲೇವಾಲ

**ಪಾತ್ರ ವರ್ಗ**

೧. ಲೆಮಿಂಕನೆನ್-ಫಿನ್‌ಲೆಂಡಿನ ಸಾರಿ ದ್ವೀಪದ ತರುಣ ೨. ಲಿಯಂಕಾ- ಲೆಮಿಂಕನೆನ್‌ನ ತಂಗಿ ೩. ಕಿಲ್ಲಿಕ್ಕಿ-ಲೆಮಿಂಕನೆನ್‌ನ ಹೆಂಡತಿ ೪. ಲೆಮಿಂಕನೆನ್‌ನ ತಾಯಿ ೫. ಲೌಹಿಯ-ಮಾಟಗಾತಿ ೬. ಒಬ್ಬಾಕೆ ೭. ಮತ್ತೊಬ್ಬಾಕೆ ೮. ದೂತ

## ದೃಶ್ಯ-೧

(ಲೆಮಿಂಕನೆನ್ ತನ್ನ ಪೀಠದಲ್ಲಿ ಕುಳಿತು ಯೋಚಿಸುತ್ತಾನೆ)

ಲೆಮಿಂಕನೆನ್ : (ಸ್ವಗತ) ಕಿಲ್ಲಿಕ್ಕಿ ಎಂಬುವಳು ಇಹಳಂತೆ
ಅವಳ ಸೌಂದರ್ಯ ಹೇಳಲಸದಳವಂತೆ
ಸೌಂದರ್ಯರಾಶಿಯ ಒಡೆಯ ನಾನಾಗಬೇಕು
ಹೇಳುವುದುಂಟು ಜನ ಹಲವು ಪರಿಯಲಿ
ನನ್ನ ಆಕಾರ ನೋಡಿ, ಸೌಂದರ್ಯ ನೋಡಿ
ಅಂಗ ಸೌಷ್ಠವ ಕಂಡು ಬೆರಗಾದರೂ ಆಗಬಹುದು
ಒಲಿದರೂ ಒಲಿಯಬಹುದು
ಕಲಿಗೆ ಒಲಿಯದೆ ಇಲಿಗೆ ಒಲಿವಳೆ?
ಹೋದರಾಯಿತು ಆಕೆಯನ್ನೇ ಕೇಳಿದರಾಯಿತು
ಅಲ್ಲವೆಂದ ಮೇಲಲ್ಲವೇ ಮುಂದಿನ ಮಾತು
ನಮ್ಮೂರ ಹತ್ತಿರದವಳು.
ನನ್ನ ಹತ್ತಿರವೇಕೆ ಬರಬಾರದು?
ಮದುವೆ ಆದರೆ ಅವಳನ್ನೇ
ಆ ಸುಂದರಿಯನ್ನೇ, ಕಿಲ್ಲಿಕ್ಕಿಯನ್ನೇ!
ಕೊಟ್ಟೆನಾದರೂ ಮುತ್ತನಾಕೆಯ ಗಲ್ಲಕೆ
ಇದೆ ನನ್ನ ಸಂಕಲ್ಪ... ಪಣ...
ಏನಾದರಾಗಲಿ ತಾಯಿಗಿದ ತಿಳಿಸುವುದುಚಿತ
ನನ್ನ ಬಯಕೆ ಹಣ್ಣಾಗುವುದು ಖಚಿತ.

(ತಾಯಿಯ ಪ್ರವೇಶ)

ಲೆ. ತಾಯಿ : ಏನು ಲೆಮಿಂಕನೆನ್ ಚಿಂತಿಸುತ ಕುಳಿತಿಹೆ.
ಖಿನ್ನನಾಗಿ ಕುಳಿತಿರಲು ಕಾರಣವೇನು ಮಗನೇ?

ಲೆಮಿಂಕನೆನ್ : ಏನು ಹೇಳಲಿ ತಾಯಿ?

ತಾಯಿ : ನನ್ನಲಿ ಮುಚ್ಚು ಮರೆಯಾಕೆ?
ನಾಚಿಕೆಯಾದರೂ ಏಕೆ?
ಮದುವೆಯ ವಿಚಾರವೋ,
ಅದಕ್ಕೂ ಬಲು ಗಹನವಾದುದೋ?

ಲೆಮಿಂಕನೆನ್ : ಹಾಗಂತಲೆ ನಂಬು.

ತಾಯಿ : ಅದರಲಿ ಗುಟ್ಟೇನು?
ತಾಯಿಯಲಿ ಹೇಳದೆ
ಮತ್ತಾರಲಿ ಹೇಳುವೆ ಲೆಮಿಂಕನೆನ್
ಯೋಚನೆಯ ಯೋಜನೆಗಿಳಿಸೋಣ

(ಲಿಯಂಕಾ ಲೆಮಿಂಕನೆನ್ ತಂಗಿ ಪ್ರವೇಶಿಸುತ್ತಾ, ತಾಯಿ ಮಾತಿಗೆ ಉತ್ತರವಾಗಿ)

ಲಿಯಂಕಾ : ಯೋಚನಯೇನಮ್ಮಾ
ಯಾವುದೋ ಸುಂದರಿಯ
ಕನಸಿನಲ್ಲಿ ವಿಹರಿಸುತ್ತಿರಬಹುದು.

ಲೆಮಿಂಕನೆನ್ : ಸರಿಯಾಗಿ ಹೇಳಿದೆ.
ಎಷ್ಟಾದರೂ ನನ್ನೊಡ ಹುಟ್ಟಿದವಳಲ್ಲವೇ?
ನನ್ನ ಮನಸನು ಅರ್ಥ ಮಾಡಿಕೊಂಡ
ತಂಗಿಯೇ ಸರಿ ನೀನು.

ಲಿಯಂಕಾ : ಇಲ್ಲವೆಂದೆನೆ ಅಣ್ಣಾ
ಆ ಹೆಣ್ಣು ಯಾವುದು?
ನಿನ್ನ ಕನಸಿನ ಕನ್ಯೆ ಎಲ್ಲಿಹಳು?
ನಮಗೂ ಸ್ವಲ್ಪ ಪರಿಚಯಿಸು.

ಲೆಮಿಂಕನೆನ್ : ಇಲ್ಲೆ ಹತ್ತಿರದ ಊರಲ್ಲೆ ಇಹಳು.

ಲಿಯಂಕಾ : ಹೆಸರೇನು ಕೇಳಬಹುದೇ?

ಲೆಮಿಂಕನೆನ್ : ಧಾರಾಳವಾಗಿ ಕೇಳು
ಹೇಳುವೆನು ಅದರಲಿ
ನಾಚಿಕೆ ಏನು ಬಂತು?
ಕಿಲ್ಲಕ್ಕಿ ಎಂಬುದವಳ ನಾಮಧೇಯ.

ಲಿಯಂಕಾ : ಭಲೇ ಹೆಸರನ್ನೂ ಕೇಳಿಹೆ
ಅತ್ತಿಗೆ ಬರುವುದೇ ಬಾಕಿಯಲ್ಲವೇ?

ಲೆಮಿಂಕನೆನ್ : ಯೋಧರಾ ಮನೆತನಕೆ
ಬಾರದಿಹಳೇನು?

ಲಿಯಂಕಾ : ಕಾದು ನೋಡಬೇಕು
ಅದಕಾಗಿ ನೀನು ಕಾಯಬೇಕು
ಕತ್ತಿಯ ವರಸೆಯಲ್ಲಿ ಭಯವಿಲ್ಲ
ಕುದುರೆ ಸವಾರಿ ನೀರು ಕುಡಿದಂತೆ
ಸಾಮರ್ಥ್ಯದ ಜೊತೆ ಸೌಂದರ್ಯ
ತುಂಬಿರಲು ಮಾತೇನು?
ಗಂಡಿಂದ ಇನ್ನು ಬಯಸುವುದಾದರೂ ಏನು?

ಲೆಮಿಂಕನೆನ್ : ಕಾಯುವುದೇನು ಬಂತು?
ನಾನು ಮನಸ ಮಾಡಿದರೆ
ಮೂರು ಮತ್ತೊಂದು ಗಳಿಗೆಗೆ ಸಾಧನೆ.

ತಾಯಿ : ಸಾಧನೆಯೋ, ವೇದನೆಯೋ
ಯೋಚಿಸಿ ನೋಡು
ಆಲೋಚಿಸಿ ಮುಂದಾಗು ನನ ಕಂದ.

ಲೆಮಿಂಕನೆನ್ : ಹೌದಮ್ಮ ಹೌದು
ಕಿಲ್ಲಕ್ಕಿ ಎಂಬುವಳು
ನಮ್ಮೂರ ಹತ್ತಿರದವಳು.
ಅವಳ ಸೌಂದರ್ಯ
ಎಲ್ಲರ ಮನೆಮಾತು ಆಗಿಹುದು
ಅವಳ ವರಿಸಿದರೆ ಹೇಗೆಂಬ ಚಿಂತೆ?

ತಾಯಿ : ಅದು ಚಿಂತೆಪಡುವಂತಹದೇ
ಸ್ವಲ್ಪ ಯೋಚಿಸಿ ನೋಡು ಮಗನೇ

ಲೆಮಿಂಕನೆನ್ : ಏಕಮ್ಮ?

ತಾಯಿ : ಅವಳ ಅಂತಸ್ತು
ನಮ್ಮ ಅಂತಸ್ತುಗಳ
ನಡುವೆ ಎನಿತೊ ಅಂತರವು?
ಇದ ಕೇಳಿವರೆ ನನಗೇಕೋ ಭಯವಪ್ಪಾ
ಧನ ಕನಕ ತುಂಬಿದ್ದು

ಸಿರಿವಂತರಾ ಮಗಳಾಗಿದ್ದು
ನನ್ನ ಮನೆಯಲಿ ಬಾಳುವಳೆ
ಎಂಬುದೆನ್ನ ಶಂಕೆ ಮಗು
ಇಂಥ ಕೆಲಸಕೆ ಕೈ ಹಾಕದಿರು
ನಮ್ಮಂತಿಸ್ತಿನವರ ನೋಡಿದರಾಯ್ತು
ಬಿಳಿ ಕುದುರೆಯ ಸಹವಾಸ ಬೇಡ ಕಂದ.

ಲೆಮಿಂಕನೆನ್ : ಏನಮ್ಮಾ ನೀನು ಏನು ಹೇಳುವುದು
ಈ ಲೆಮಿಂಕನೆನ್‌ಗೆ ಮಿಗಿಲಾದ
ಕಾರ್ಯವಾವುದು?

ತಾಯಿ : ನಿನ್ನ ಸಾಮರ್ಥ್ಯದ ಬಗೆಗೆ
ನಿನಗೇ ಅಪಾರ ನಂಬಿಗೆ
ನಿನ್ನ ಕತ್ತಿಯ ಮೇಲೆ
ನಿನಗೆ ಅಪಾರ ವಿಶ್ವಾಸವಾದರೂ,
ನನ್ನುಪದೇಶಕ್ಕೆ ಕಿವಿಗೊಡು ಕಂದ.
ದೊಡ್ಡವರ ಮಾತಿಗೆ ಬೆಲೆ ಕೊಡು
ಅದರಿಂದ ನಿನಗೊಳಿತು.

ಲೆಮಿಂಕನೆನ್ : ಏನಾದರೂ ಕೇಳೇನು
ಇದೊಂದ ಬಿಟ್ಟು.
ಇದಕೆ ಸ್ವಾತಂತ್ರ್ಯ ಬೇಕೆಂದು
ಬೇಡುವೆನು ನಿನ್ನಡಿಗಳಲಿ
ನಿನ್ನಾಶೀರ್ವಾದವಿರಲವ್ವ
ಅವಳೆ ನನ್ನ ಪ್ರೇಯಸಿಯಾಗಿ ದೊರೆಯಲೆಂದು.

ತಾಯಿ : ಹೇಳಿದರೆ ಕೇಳುವವ ನೀನಲ್ಲ
ಹಠವೆಂಬುದಂಟಿ ಬಂದುದು

ಲೆಮಿಂಕನೆನ್ : ಮಾಯ ಮಂತ್ರ ತಂತ್ರವ ಬಲ್ಲೆ
ನನಗವಳ ವಶಮಾಡಬಾರದೇಕೆ?

ತಾಯಿ : ಮನಸಿಲ್ಲದ ಕೆಲಸಕೆ
ಕೆಟ್ಟ ಕೆಲಸಕೆ ಮಂತ್ರವನು
ಬಳಸುವುದು ನ್ಯಾಯ ಸಮ್ಮತವಲ್ಲ

ಲೆಮಿಂಕನೆನ್ : ನೂರು ಸುಳ್ಳು ಹೇಳಿ
ಕಲ್ಯಾಣ ಮಾಡೆನುತಾರೆ

ಇದರಲ್ಲಿ ತಪ್ಪೇನು?
ಇದು ಕಲ್ಯಾಣ ಕೆಲಸವಲ್ಲವೆ?

ತಾಯಿ : ಏನಾದರೇಳು ಮಗನೆ
ನಾನು ಮಾಯಮಂತ್ರ ಕಲಿತದ್ದೇ ತಪ್ಪು
ಅದರ ಪ್ರಯೋಗ ಮಾಡದುದೆ ಒಪ್ಪು.

ಲೆಮಿಂಕನೆನ್ : ಮನಸ ಮಾಡಿರುವೆ
ಹಿಂಸರಿಸಲಾರೆ
ಹೆಜ್ಜೆ ಮುಂದಿಟ್ಟಿಹೆನು
ಹಿಂಸರಿಸಲಾರೆ
ಇದು ನನ್ನ ಏಕಮೇವ ಧ್ಯೇಯ
ಛಲವ ಸಾಧಿಸುವ ಹೆಬ್ಬಯಕೆ
ಅದಕಾಗಿ ತನು ಮನ ಧನಗಳನರ್ಪಿಸಲೂ ಸಿದ್ಧ.

ತಾಯಿ : ಆ ಕಾರ್ಯವನು ನಿರ್ವಹಿಸಲು ಸಂಪೂರ್ಣ ಬದ್ಧ.

ಲೆಮಿಂಕನೆನ್ : ಕಿಲ್ಲಕ್ಕಿ ಪಡೆಯುವುದು
ಫಿನ್ಲೆಂಡಿನ ಸಾರಿ ದ್ವೀಪದ
ಒಡೆತನವ ಸಾಧಿಸಿದ ತೆರದಿ
ಇದಕೆ ಬೇರೆ ಮಾತಿಲ್ಲ
ಈಗಲೇ ಹೊರಡುವೆನು
ಹಿಡಿದ ಕಾರ್ಯವನು ಜಯಿಸುವೆನು

ತಾಯಿ : ನನ್ನ ಹರಕೆ ಸದಾ ಇಹುದು ಮಗು
ಹೋಗಿ ಬಾ... ಜೈಸಿ ಬಾ...

(ಲೆಮಿಂಕನೆನ್ ಕತ್ತಿಯನ್ನು ಮೇಲೆತ್ತಿ, ತಾಯಿಗೆ ನಮಿಸಿ ಹೋಗುವನು. ಆಕೆಯ ಕಂಗಳು ನೀರಿನಿಂದ ತುಂಬಿ ಉರುಳಿತು. ಅದನ್ನು ಒರೆಸಿಕೊಳ್ಳುತ್ತ ನಿಂತಿರಲು ಮಗನು ಮುಂದುವರಿಯುವನು)

* * *

## ದೃಶ್ಯ-೨

(ಕಿಲ್ಲಕ್ಕಿಯ ಊರು ತಲುಪಿದ. ಆ ಊರಿನ ಕೆಲವು ಮಹಿಳೆಯರು ಸಿಕ್ಕಿ,)

ಲೆಮಿಂಕನೆನ್ : ನಾನು ಸಾರಿ ದ್ವಾಪದ ಕಡೆಯವನು
ಕಿಲ್ಲಕ್ಕಿಯ ನೋಡಲೆಂದು ಬಂದವನು
ಅವಳು ಇರುವ ಮನೆಯ ದಾರಿ ತೋರುವಿರಾ?

ಒಬ್ಬಳು : ಅವಳ ನೋಡಲೆಲ್ಲಿ ಸಾಧ್ಯವಹುದು?
ಅವಳು ರೂಪಸಿ, ಲಾವಣ್ಯ ಸುಂದರಿ

ಈ ಜನಮನದ ಸುಂದರಿ
ಒಮ್ಮೆ ಕಣ್ಣಲ್ಲಿ ನೋಡುವುದೇ ಪುಣ್ಯ.

ಲೆಮಿಂಕನೆನ್ : ಅದ ಕೇಳಿಯೇ ಬಂದಿಪೆ
ನೋಡಲು ಕಾತರಿಸಿಹೆ.

ಇನ್ನೊಬ್ಬಳು : ವರಿಸಲೇನು ಮನಸು ಮಾಡಿಲ್ಲವಲ್ಲ.

ಲೆಮಿಂಕನೆನ್ : ಅದು ಮುಂದಿನ ಮಾತು
ಈ ವೀರ, ಯೌವ್ವನದ
ಸೊಗಸುಗಾರನ ಮೆಚ್ಚಿ
ತನ್ನಿಚ್ಛೆ ವ್ಯಕ್ತಪಡಿಸಿದರೂ
ಪಡಿಸಬಹುದು.
ನಾನು ಕೈ ಹಿಡಿದರೂ
ಹಿಡಿಯಬಹುದ್ದು
ಆಗ ನೀವು ಅಚ್ಚರಿಯನೂ ಪಡಬಹುದು.

ಇನ್ನೊಬ್ಬಳು : ಆಗದಿದ್ದರೆ ನಾವು ನೋಡಿ
ನಗಲೂಬಹುದು

(ಎಲ್ಲರೂ ನಗುವರು)

ಒಬ್ಬಾಕೆ : ಸೂರ್ಯನೇ ಹೋಗಿ
'ನೀನು ನನ್ನ ಮಗುವಿನ,
ತಾಯಿಯಾಗುವಿಯಾ?' ಎಂದ.
ಅದಕ್ಕವಳ ಉತ್ತರವೇನೆಂಬುದು ಗೊತ್ತಾ?
"ಹೋಗಾಚೆ ನಿನ್ನ ಉರಿವೇಗವ
ನೋಡಲಾಗದು" ಎಂದು.

ಇನ್ನೊಬ್ಬಳು : ಚಂದ್ರನೂ ಬಂದು ಬೇಡಿದನಂತೆ
'ನೀನು ಅತಿ ತಂಪು, ರಾತ್ರಿ ಸಂಚಾರ'
ಎಂದು ಅಲ್ಲಗಳೆದಳಂತೆ.

ಒಬ್ಬಾಕೆ : ನಕ್ಷತ್ರ ಬಂದು ಕೇಳಿದರೆ
"ಮಿಣ ಮಿಣ ಮಿಣಕುವ
ನೀನೇನ ಸುಖ ಕೊಡುವೆ?"
ಎಂದು ನಕ್ಕು ಸುಮ್ಮನಾದಳಂತೆ.

ಒಬ್ಬಾಕೆ : ಇಸ್ತೋನಿಯಾದ ತರುಣನೂ
ತಿರಸ್ಕೃತನಂತೆ.

ಒಬ್ಬಾಕೆ : ಇಂಗ್ರೀಯಾ ದೇಶದ ತರುಣನ ಬೇಡಿಕೆಗೆ
ಅವಳುತ್ತರ ಬಲು ಬಿತ್ತರ
"ನಿನ್ನೂರಲಿ ಗಿಡವಿಲ್ಲ, ಮರವಿಲ್ಲ, ನೀರಿಲ್ಲ
ನಿನ್ನನಾಗುವುದೆಂತು?" ಎಂದು ನಿರಾಕರಿಸಿ ಅಟ್ಟಿಪಳು.
ಇನ್ನು ಮಿಕ್ಕವರ ಪಾಡೇನು
ಹಗಲುಗನಸು ಕಾಣದಿರು
'ಅವಳ ಕೈ ಹಿಡಿಯುವೆ' ಎಂದು
ಅವಳು ನಿನ್ನ ಪ್ರೇಯಸಿಯಾಗುವಳೆಂದು

ಒಬ್ಬಾಕೆ : ಕೀಳು ಕುಲದ ಗಂಡಿಗೆಷ್ಟೊಂದು ಪೊಗರು
ಕಿಲ್ಲಕ್ಕಿ ಬಯಸಿ ಬಂದಿಹನು
ವರಿಸಬಯಸಿಹನು ಬರೆ ಮರುಳನಿವನು.

(ನಗುವರು)

ಲೆಮಿಂಕನೆನ್ : ನಗಬೇಡಿ, ನಗಬೇಡಿ
ಹೇಗಾದರೂ ಮಾಡಿ
ಅವಳ ಮನ ಒಲಿಸುವೆ
ಪ್ರೀತಿ ಧಾರೆ ಎರೆಯುವೆ
ಆಕೆ ಹೃದಯದಲ್ಲಿ ಬೆರೆಯುವೆ
ಹಿಡಿದ ಛಲವ ಬಿಡದೆ
ಸಾಧಿಸಿ ತೋರಿಸುವೆ.

ಇನ್ನೊಬ್ಬಾಕೆ : ಹುಚ್ಚು ಬಿಡುವವರೆಗೂ ಮದುವೆ ಇಲ್ಲ
ಮದುವೆ ಆಗದೆ ಹುಚ್ಚು ಬಿಡುವಂತಿಲ್ಲ
ಈತಗೆ ಹುಡುಗಿಯರ ಹುಚ್ಚು

ಲೆಮಿಂಕನೆನ್ : ಅದನಿಲ್ಲವೆಂದ್ಹೇಗೆ ಹೇಳಲಿ?
ಹುಡುಗಿಯರೇ ನನಗಚ್ಚು ಮೆಚ್ಚು
ವೀರನಿಗೆ ಇರಬೇಕಾದುದಲ್ಲವೇ?
ಕನ್ಯೆಯರ ಬೇಡವೆನ್ನಲು ಷಂಡನೇ? ಬ್ರಹ್ಮಚಾರಿಯೇ
ನಾನು?

ಇನ್ನೊಬ್ಬ : ಲಲ್ಲೆ ಹೊಡೆಯುವುದರಲಿ
ನಿಸ್ಸೀಮನೆಂಬುದು
ಅರಿಕೆಯಾಗುತಿದೆ
ನಿನ್ನ ಮಾತಿನ ಧಾಟಿಯಲೇ.

ಲೆಮಿಂಕನೆನ್ : ತಪ್ಪೇನು ಹೆಣ್ಣ ಕಂಡರ
ಕಡೆಗಣ್ಣಲಲಕ್ಷ್ಯ ತೋರುವುದು ಸರಿಯೇ?
ಆದರೆ ಅವಳನ್ನೇ ಹಿಡಿವೆ
ಇದು ನನ್ನ ಸಂಕಲ್ಪ
ಹೇಳುತಿಹೆನು ನಿಮ್ಮ ಮುಂದಿಲ್ಲ
ಸುಮ್ಮನೆ ನಗುವಿರೇಕೆ?

ಇನ್ನೊಬ್ಬಾಕೆ : ಗಂಡು ಎಂದರೆ ಗಂಡು
ವೀರನೆಂದರೆ ವೀರ
ಇವನ ಪೌರುಷವ ನೋಡೋಣ
ಅಳಿಯನ ಕುರುಡು ಬೆಳಗಾದ ಮೇಲೆ.

ಲೆಮಿಂಕನೆನ್ : ಯಾರು ಏನೇ ಹೇಳಲಿ
ಅಂಜುವವನು ನಾನಲ್ಲ
ಅಳುಕುವವ ನಾನಲ್ಲ
ಕೆಚ್ಚೆದೆಯ ವೀರ ನಾನು.

ಒಬ್ಬಾಕೆ : ನಡೆ ಮರುಳೆ ನಡೆ...
ಅವಮಾನ ಕಾದಿಹುದು
ನಿರಾಸೆ ತೋರುವುದು
ಆಮೇಲೆ ಕಣ್ಣು ಬಾಯ
ಬಿಡಬೇಕಾಗುವುದು.

ಲೆಮಿಂಕನೆನ್ : ನಿಮ್ಮ ಗೊಡ್ಡು ಬೆದರಿಕೆಗೆ
ಹೆದರುವವ ನಾನಲ್ಲ,
ಹೆಂಬೇಡಿ ನಾನಲ್ಲ
ನಾನೋರ್ವ ವೀರ ಯೋಧ
ಎಂಬುದು ನೆನಪಿರಲಿ.

(ಮೂವರೂ ನಗುತ್ತಿರಲು ಲೆಮಿಂಕನೆನ್ ಅಲ್ಲಿಂದ ಮುಂದೆ ಹೊರಡುವನು.)

## ದೃಶ್ಯ-೩

ಒಬ್ಬಾಕೆ : ಎಂಥ ಚಾಣಾಕ್ಷ?
ಎಂಥ ಚತುರ?
ಕುದುರೆ ಸವಾರಿಯಲಿ
ಕತ್ತಿ ವರಸೆಯಲಿ
ಈತನಿಗೆ ಸರಿ ಸಾಟಿ ಯಾರೆನಿಸುವರು?

ಇನ್ನೊಬ್ಬಾಕೆ : ಇಂಥ ಸುಂದರನ ಕಂಡಿರಲಿಲ್ಲ
ಇಂಥ ವೀರನ ಸಾಹಸ ನೋಡಿರಲಿಲ್ಲ
ನೃತ್ಯವೆಸಗುವವನು ಅಪ್ರತಿಮ ಕಲಾವಿದ.

ಒಬ್ಬಾಕೆ : ನನ್ನೊಡನೆ ನರ್ತಿಸು
ಬೇಸರವ ಕಳೆಸು.

ಇನ್ನೊಬ್ಬಾಕೆ : ಏನೋ ನಾನೂ ನರ್ತಿಸುವೆ
ನಿಮ್ಮ ಸಂತಸವೇ ಎನ್ನ ಸಂತಸ
ಆಗಲಾಗಲಿ ಏಕೆ ಮುಜುಗರ
ಬನ್ನಿ ಕೈ ಹಿಡಿಯಿರಿ, ಮೈ ಕುಣಿಸಿರಿ.
ಹಾಡಿರಿ ನನ್ನ ಜೊತೆ ಆಡಿರಿ.

ಲೆಮಿಂಕನೆನ್ : ನಿಮ್ಮೊಡನೆ ನೃತ್ಯವೆಸಗಿದರೆ
ನನ್ನ ದನಗಳ ಕಾಯುವವರಾರು?

ಒಬ್ಬಾಕೆ : ಅವೂ ನೋಡಿ ಸಂತಸಪಡುವವು
ಕಾಯುವುದೇನು ಬಂತು?
ಬೇಗ ಬಾ...
ಕಣ್ಮನವ ಸೆಳೆದಿಹೆ
ಅಂದು ಆಡಿದ ನೃತ್ಯ
ಮತ್ತೆ ನೋಡುವ ಆಸೆ ತುಂಬಿಹುದು
ನಿನ್ನ ತೋಳ ತೆಕ್ಕೆಯಲಿ ಬಂಧಿಯಾಗಲು.

ಇನ್ನೊಬ್ಬಾಕೆ : ನಿನ್ನ ತೋಳ ಉಯ್ಯಾಲೆಯಲಿ
ನಾ ಆಡ ಬಯಸಿದೆ.
ನಿನ್ನ ದನಿಗೆ ಸಂಗೀತ ಬೆರೆಸ ಬಯಸಿಹೆ
ಈ ಹಬ್ಬದ ದಿನ ಇಲ್ಲವೆನಬೇಡ
ನಿರಾಸೆ ಮಾಡದಿರು ಬಯಕೆ ತುಂಬಿಸುವೆ ಬಾ.

ಲೆಮಿಂಕನೆನ್ : ಹೆಣ್ಣು ಬಯಸಿದ ಮೇಲೆ
ಈ ಲೆಮಿಂಕನನು
ಇಲ್ಲ ಎನ್ನುವ ಮಾತೇ ಇಲ್ಲ.
ಸುಖ ಕೊಡಲು ಅಣಿಯಾಗಿ ಇಹನು.

ಒಬ್ಬಾಕೆ : ನೃತ್ಯ ನೋಡಲು ಸುಂದರಿ ಕಿಲ್ಲಿಕ್ಕಿಯೂ ಬಂದಿಹಳೇ
ನೋಡು ನೋಡಲ್ಲಿ ಮೊಗದ ಲಾಸ್ಯ ತುಂಬಿ ನಿಂದಿಹಳು.

ಲೆಮಿಂಕನೆನ್ : (ಸ್ವಗತ) ಆಂ... ಕಿಲ್ಲಕ್ಕಿ ಇಲ್ಲೆ ಬಂದಿಹಳೆ
ಎಂಥ ಕಣ್ಣು ಕೋರೈಸುವ ರೂಪರಾಶಿ.
ಅವಳು ನಿಂತ ಭಂಗಿ, ಇಟ್ಟ ದೃಷ್ಟಿ
ಎಷ್ಟೊಂದು ಆಕರ್ಷಕ!
ಇಂಥ ರೂಪದ ಗಣಿಯ ಕಂಡಿರಲಿಲ್ಲ
ನನ್ನ ಜನುಮದಲ್ಲೇ ನೋಡಿರಲಿಲ್ಲ
ಅತ್ಯದ್ಭುತ ಸೌಂದರ್ಯ ಕಿಲ್ಲಕ್ಕಿಯದು
ಹಾಗೆ ಇರುವುದು ಬೇಡ
ಯೋಧನಂತೆ ವೇಷ ಧರಿಸಿ ಬರುವೆ.

(ಲೆಮಿಂಕನೆನ್ ಹೊರಡುವನು. ನೃತ್ಯಗಾರ್ತಿಯರಿಂದ ನೃತ್ಯ ಸಾಗುತ್ತಿತ್ತು. ಕಿಲ್ಲಕ್ಕಿ ಅದನ್ನು ನೋಡಿ ಆನಂದಿಸುತ್ತಿದ್ದಳು. ಲೆಮಿಂಕನೆನ್ ಯೋಧನ ವೇಷ ಮಾಡಿಕೊಂಡು ಕುದುರೆಯ ಮೇಲೆ ಬಂದು ಅಲ್ಲೊಂದು ಜಾಗದಲ್ಲಿ ಕಟ್ಟಿ ಬಂದು)

ಲೆಮಿಂಕನೆನ್ : ಕೈಗೆ ಸಿಕ್ಕಿದ ಹಣ್ಣು ತಿನ್ನದಿದ್ದರೆ ಎಂತು?
ನಾನಾಗಿ ಕೇಳಿದರೆ ಒಪ್ಪಿದರೆ ಒಳಿತು
ಇಲ್ಲದಿದ್ದರೆ ಅವಮಾನವಲ್ಲವೇನು?
ಏನು ಮಾಡಲಿ?
ಮಾಡುವುದೇನು ಶಕ್ತಿಯನು ಯುಕ್ತಿಯನು ಬಳಸಿ
ನನ್ನವಳಾಗಿ ಮಾಡಿಕೊಳ್ಳುವುದೇ ನನಗುಳಿದ ದಾರಿ.

(ಜನರ ಮಧ್ಯೆ) ಲೆಮಿಂಕನೆನ್ ನುಸುಳಿಕೊಂಡು ಬಂದು ಕಿಲ್ಲಕ್ಕಿಯನ್ನು ಎತ್ತಿಕೊಂಡು ಕುದುರೆಯ ಮೇಲೆ ಕುಳ್ಳಿರಿಸಿಕೊಂಡಾಗ ಜನರ ಹಾಹಾಕಾರ... ಕಿಲ್ಲಕ್ಕಿ ಬಿಡಿಸಿಕೊಳ್ಳುವ ಪ್ರಯತ್ನದಲ್ಲಿ "ಬಿಡು... ಬಿಡು, ಪಾಪಿ... ನನ್ನ ಬಿಡು." ಎಂದರೂ ಮಾತಿಲ್ಲದೆ ಕುದುರೆಯನ್ನು ಹತ್ತಿ ಹೊರಡುವನು. ಕುದುರೆಯ ಕಾಲಿನ ಶಬ್ದ ಕೇಳಿಬರುವುದು.)

ಕಿಲ್ಲಕ್ಕಿ : ಇದು ನಿನಗೆ ತರವಲ್ಲ ತರಳ
ನನ್ನ ಓಡಿಸಿಕೊಂಡು ಹೋದಡೆ
ನಿನ್ನ ಅಟ್ಟಿಸಿಕೊಂಡು ಬರುವರು
ನಮ್ಮೂರ ನೂರಾರು ತರುಣರು
ನೀನೊಬ್ಬನೆ ವೀರನೆಂದು ತಿಳಿಯದಿರು
ನಿನ್ನ ಮುತ್ತಿಬಿಡುವರು ಕ್ಷಣಮಾತ್ರದಲಿ.

ಲೆಮಿಂಕನೆನ್ : ನಿನ್ನ ಊರಿನ ನೂರು ಜನ
ನನ್ನ ಖಡ್ಗಕ್ಕೆ ಬಲಿಯಾಗುವುದು ಖಂಡಿತ.

ಕಿಲ್ಲಕ್ಕಿ : ಏನ ಹೇಳುವೆ ತರುಣ
ನನಗೆ ಐದು ಜನ ಸೋದರರು

ನನ್ನ ಚಿಕ್ಕಪ್ಪನಿಗೆ ಏಳು ವೀರಕುವರರು
ಅವರು ಬಂದು ನಿಂತರೆ ತೀರಿತು
ನಿನ್ನ ದಂಡಿಸದೆ ಬಿಡರವರು.

ಲೆಮಿಂಕನೆನ್ : ಅವರೆಲ್ಲ ನನ್ನ ಕೂರಲಗಿಗೆ
ನೆಲಕಚ್ಚಿಬಿಡುವುದೂ ಖಚಿತ.

ಕಿಲ್ಲಕ್ಕಿ : (ಮೆಲುವಾಗಿ) ನನ್ನನ್ನಗಲಿ ನನ್ನ ತಾಯಿ ಇರಲಾರಳು.
ಆಕೆಗೆ ದುಗುಡವನು ನೀಡದಿರು
ದಯಮಾಡಿ ಬಿಡು ಎನ್ನನು.

ಲೆಮಿಂಕನನ್ : ನಿನ್ನ ಸೌಂದರ್ಯ ಸೊಬಗ ಕೇಳಿ ಬಂದೆ
ನಿನ್ನ ವರಿಸದೆ ಬಿಡೆ ನಾನು
ನೀನು ನನ್ನವಳಾಗಬೇಕು
ನನ್ನ ತೋಳ ಸೆರೆಯಲಿರಬೇಕು
ಮದುವೆಯಾಗುವ ತನಕ ತಾಯಿ, ತವರು
ಆಮೇಲೆ ಗಂಡನ ಮನೆಯೇ ಸ್ಥಿರವು
ತವರಿನಾ ಹಂಗೇಕೆ ತರಳೆ.

ಕಿಲ್ಲಕ್ಕಿ : (ಸ್ವಗತ) ಏನ ಮಾಡಲಿ?
ಈತನ ಬಂಧನದಿ ಬಿಡುಗಡೆ ಎಂತು?
ಏನಾದರೂ ಕರಾರು ಹಾಕಿ ಮುರಿದರಾಯಿತು
ಏನ ಹೇಳಲಿ?
(ದೃಢ ದನಿಯಲ್ಲಿ) ಹ್ಲಾಂ... ಕೇಳು ನೀನೊಬ್ಬ ಯೋಧ
ಮೂರೂ ಹೊತ್ತು ರಣರಂಗ ಗಸ್ತು
ಯುದ್ಧಕೆ ಹೋಗುವುದೇ ನಿನ್ನಯ ಕೆಲಸ
ನಿನ್ನೊಡನೆ ಸುಖವಾಗಿರುವುದೆಂತು?

ಲೆಮಿಂಕನೆನ್ : ಇಲ್ಲ ಎಂದವರಾರು?
ಆ ವೀರ ನಿನ್ನ ಗಂಡನಾಗುವುದು
ನಿನಗೆ ಹೆಮ್ಮೆಯ ವಿಷಯವಲ್ಲದೆ ಮತ್ತೇನು?

ಕಿಲ್ಲಕ್ಕಿ : ಒಂದು ಷರತ್ತಿಗೆ ಒಪ್ಪುವೆಯಾದರೆ
ನಾನು ನಿನ್ನ ಮದುವೆಯಾಗಲು ಸಮ್ಮತಿಸುವೆ.

ಲೆಮಿಂಕನೆನ್ : ಏನದು ವಚನ
ಹೇಳು ಬೇಗನೆ?

ಕಿಲ್ಲಕ್ಕಿ : ಯುದ್ಧಕ್ಕೆ ಹೋಗದೆ
ಸದಾ ನನ್ನ ಜೊತ
ಇರುವೆಯಾದರೆ ಒಪ್ಪಿಗೆ
ಇಲ್ಲವಾದರೆ ಇಲ್ಲ.

ಲೆಮಿಂಕನೆನ್ : ನಿನ್ನ ಕರಾರಿಗೆ ಒಪ್ಪಲು
ನನ್ನದೊಂದು ಕರಾರಿಹುದು
ಹೇಳಲೇ?

ಕಿಲ್ಲಕ್ಕಿ : ಏನದು? ಹೇಳು ಲೆಮಿಂಕನೆನ್.

ಲೆಮಿಂಕನೆನ್ : ನೀನು ನಿನ್ನೂರ ಓರಗೆಯ ಹುಡುಗಿಯರ ಜೊತೆ
ಕುಣಿದು ನಲಿದು ನರ್ತಿಸಬಾರದೆಂಬ
ಕಟ್ಟಪ್ಪಣೆಯು ಎನ್ನದು.

ಕಿಲ್ಲಕ್ಕಿ : ಕೈ ಮೇಲೆ ಕೈ ಇಟ್ಟು
ಭಾಷೆಯನು ಇತ್ತಿಹೆನು
ಇದಕೆ ಈ ಗಿಡ ಮರಗಳೇ ಸಾಕ್ಷಿ
ಪ್ರಕೃತಿ ದೇವಿಯೆ ಸಾಕ್ಷಿ.

ಲೆಮಿಂಕನೆನ್ : ಇಬ್ಬರಾ ಒಪ್ಪಿಗೆಯು ಆಗಿಹುದು
ನಾವಿನ್ನು ನಮ್ಮೂರಿಗೆ ಹೊರಡಬಹುದೇ?

ಕಿಲ್ಲಕ್ಕಿ : (ಮನಸ್ಸಿಲ್ಲದೆ) ಆಯ್ತಾಯ್ತು.

ಲೆಮಿಂಕನೆನ್ : ಆ ನನ್ನ ಕಿಲ್ಲಕ್ಕಿ
ನನ್ನ ಕನಸಿನ ಆಸೆ
ನನಸಾಗಿಸಿದ ಸೌಂದರ್ಯ ರಾಣಿ
ನನಗಿಂತ ಸುಖ ಯಾರಿಗಿಲ್ಲ ವಿಶ್ವದಲೆ
ನಡೆ ನಮ್ಮ ಗೂಡ ಸೇರೋಣ.

(ಕುದುರೆ ಹತ್ತಿ ಹೊರಡುವರು... ಕುದುರೆಯ ಖುರಪುಟಗಳ ಶಬ್ದ ಮೆಲ್ಲನೆ ಆರಂಭವಾಗಿ ಮತ್ತೆ ಜೋರಾಗಿ ಹಾಗೆಯೇ ಲೀನವಾಗುವುದು)

* * *

## ದೃಶ್ಯ-೪

(ಲೆಮಿಂಕನೆನ್ ಕುದುರೆಯಿಂದ ಇಳಿದು)

ಲೆಮಿಂಕನೆನ್ : ಇದೇ ನನ್ನ ಮನೆ
ಚಿಕ್ಕದೆಂದು ಮನಕೆ ಬೇಸರವೆ

ಬೇಸರವ ಪಡದಿರು ಚೆಲುವೆ
ನಿನಗಾಗಿ ದೊಡ್ಡ ಅರಮನೆಯ ನಿರ್ಮಿಸುವೆ
ಇನ್ನು ಕೆಲವೇ ದಿನಗಳಲಿ
ನನ್ನ ರಾಣಿಯನ್ನು ಹೇಗಿರಿಸಬೇಕೆಂದು
ನನಗರಿವಿಲ್ಲವೇ ಕಿಲ್ಲಕ್ಕಿ?
ಅಮ್ಮ ನಿನ್ನ ನೋಡಿ ಎಷ್ಟು ಸಂತಸಪಡುವಳೋ
ಹೇಳಿ ಬಂದಿದ್ದೆ
ನಿನ್ನ ಕರೆತರುವೆ ಸೊಸೆಯಾಗಿ ಎಂದು.
ಅಮ್ಮಾ ಬೇಗ ಬಾರಮ್ಮಾ
ನಿನ್ನ ಸೊಸೆ ಬಂದಿಹಳು
ಕಿಲ್ಲಕ್ಕಿ ಕಿಲಕಿಲನೆ ನಗುತ ನಿಂದಿಹಳು
ಆರತಿಯ ಎತ್ತು ಬಾ...
ಮಗ ಸೊಸೆಯರಿಗೆ ರತನೀರು ನೀವಳಿಸಿ ಹಾಕು ಬಾ.

ತಾಯಿ : ಓ... ಲೆಮಿಂಕ... ಬಂದೆಯಾ ಮಗನೆ
ನೀನು ವೀರ, ಶೂರನೆಂಬುದ ಅರಿತಿದ್ದೆ
ಹಿಡಿದ ಕಾರ್ಯವನು ಸಾಧಿಸುವೆ ಎಂಬ ನಂಬಿಗೆಯು
ಎನಗಿತ್ತು ಹಾಗೆಯೇ ಮಾಡಿದೆ. ಬಂದೆ ಬಂದೆ, ಆರತಿಯ
ಸಿದ್ಧಪಡಿಸಿರುವೆ ತಂದು ಎತ್ತುವೆ, ತಡಮಾಡದೆ ತಾಳು...
ಮಗನೆ (ಆರತಿ ಹಿಡಿದು ಬರುತ್ತಿರಲು)

ಲೆಮಿಂಕನೆನ್ : ಅಮ್ಮಾ ನೋಡಿದೆಯಾ ಚೆಂದುಟಿಯ ಚೆಲುವೆ ಸೊಸೆಯನು
ಹೇಗಿಹಳು ಹೇಳಮ್ಮ?

ತಾಯಿ : ಮೊದಲು ನನ್ನ ಕಣ್ಣು ಬಿದ್ದೀತು
ಕಣ್ಣೇಸರಾದೀತು ತಾಳು, ಆರತಿ ಎತ್ತಿ ಮುಂದಿನ ಮಾತು.

(ಎಂದು ಇಬ್ಬರಿಗೂ ಆರತಿ ಎತ್ತುತ್ತಿರಲು ಇಬ್ಬರೂ ನಮಸ್ಕರಿಸುವರು)

ತಾಯಿ : ಏಳಿ, ಮೇಲೇಳಿ
ನೂರ್ಕಾಲ ಹಾಯಾಗಿ ಬಾಳಿರಿ
ಸತಿ ಪತಿಯರಾ ಬಾಳು ಹಾಲು ಜೇನಾಗಲಿ
ಸುಖದ ಸುಪ್ಪತ್ತಿಗೆಯಾಗಲಿ ಜೀವನ
ಒಳಬನ್ನಿ, ಇನ್ನೂ ಏಕೆ ನಿಂತಿಹಿರಿ?
ನೋಡುತ್ತಿದ್ದರೆ ಇನ್ನೂ ನೋಡಬೇಕೆನ್ನುವ
ಆಸೆ ಹುಟ್ಟಿಸುವ ಅವಳ ಚೆಲುವ
ಯಾವ ಜನ್ಮದ ಪುಣ್ಯವೋ ನಿನಗೆ ಸತಿಯಾಗಿ

ನನಗೆ ಸೊಸೆಯಾಗಿ ದೊರೆತದ್ದು
ಬಾಳು ಸಾರ್ಥಕವಾಯ್ತು ಮಗನೆ
ಓಡಿಪ ಹಠ ಸಾಧಿಸಿದ ವೀರ ಯೋಧನೆ ಸರಿ ನೀನು
ನನ್ನ ಸುಂದರ ಮಗನಿಗೆ ಸುಂದರ ಸತಿ ನೀನಾದೆ
ನೀನೂ ಪುಣ್ಯವಂತೆ ತಾಯಿ
ಹಾಯಾಗಿ ಬಾಳ್ವೆಯನು ನಡೆಸಿ
ಆನಂದ ಲೋಕದಲಿ ವಿಹರಿಸಿ.

ಲೆಮಿಂಕನೆನ್ : ಎಲ್ಲಾ ನಿನ್ನ ಆಶೀರ್ವಾದವಮ್ಮ

(ಮೂವರೂ ಮನೆಯ ಒಳಗಡೆ ಹೊರಡುವರು)

* * *

## ದೃಶ್ಯ-೫

ಲೆಮಿಂಕನೆನ್ : ಈ ನವ ವಿಲಾಸ ಮಂದಿರದಲಿ
ನಮ್ಮಿಬ್ಬರ ಮಿಲನವಾಯಿತು
ಮಾಸಗಳು ಕಳೆದಿಹವು
ಆದರೂ ನಮ್ಮ ವಿಲಾಸ ಮಾಸದಿಹದು

ಕಿಲ್ಲಕ್ಕಿ : ಹೀಗೆ ಕಳೆಯುವುದು ಎನ್ನಾಸೆ,
ರಸ ನಿಮಿಷಗಳು ವರುಷ ಪೂರವಿರಲಿ
ನಿನ್ನ ಬಿಟ್ಟು ನಾನಿರಲಾರೆ,
ನಿನ್ನಂಗ ಸಂಗ ಬಯಸುವೆ
ನಿನ್ನ ರೂಪ ಲಾವಣ್ಯಕೆ ನಾನು ಮನಸೋತೆ
ತನು ಮನವ ನಿನಗರ್ಪಿಸಿದೆ
ವೀರನಾ ಸತಿಯಾದೆ, ಸವಿಯುಂಡೆ
ನಮ್ಮ ಮಧುಚಂದ್ರ ಮರೆಯಲಾಗದು
ರಸ ಘಳಿಗೆಗಳು!
ತುಟಿಗೆ ತುಟಿ ಬೆಸೆದು
ಮೈಗೆ ಮೈ ಬೆಸೆದು
ಕಾಮ ವಿಲಾಸದಲ್ಲಿ ಮೈ ಮರೆಯೋಣ
ಬಾ ನನ್ನ ಪ್ರಿಯತಮ

ಲೆಮಿಂಕನೆನ್ : ಇಲ್ಲವೆಂದೆನೆ ನಾನು
ನಿನ್ನ ಮೈ ಬಳ್ಳಿ ಬಳಸಿ,
ನಿನ್ನ ಚೆಲುವ ಸಾರವ ಹೀರಿ

ಹೂವ ಬಳಿ ದುಂಬಿಯಾಗ ಬಯಸುವೆ
ಸದಾ ಮಧುಚಂದ್ರದಲಿ ಮಿಂದು
ಸಾರ ಸವಿಯ ಸವಿಯೋಣ.

ಕಿಲ್ಲಕ್ಕಿ : ಎಷ್ಟು ದಿನ ಇದ್ದೀತು
ಈ ಸರಸ ವಿಲಾಸ?

ಲೆಮಿಂಕನೆನ್ : ಸೂರ್ಯ ಚಂದ್ರರಿರುವತನಕ
ನಾನು ನೀನು ಇರುವತನಕ
ಇದು ಸುಳ್ಳಾಗುವುದಿಲ್ಲ
ದಿಟ್ಟತನವು ನಮಗೆ ದಿಟವಾಗುವುದು

ಕಿಲ್ಲಕ್ಕಿ : ಗೊತ್ತಲ್ಲ ನನ್ನ ಬಿಟ್ಟರೆ
ನನ್ನನ್ನಗಲಿದರೆ
ನಾನಿಲ್ಲವಾಗುವೆನು ನಿನಗೆ
ಮಿಂಚಿದುದರೆ ಚಿಂತಿಸಿ ಫಲವಿಲ್ಲ.

ಲೆಮಿಂಕನೆನ್ : ಉಂಟೆ, ಕೊಟ್ಟ ಭಾಷೆಗೆ ತಪ್ಪಲಾರೆ
ನಿನ್ನ ಬಿಟ್ಟು ನಾನಿರಲಾರೆ
ನಂಬು ಕಿಲ್ಲಕ್ಕಿ ನನ್ನ ನಂಬು
ಯೌವನದ ಹೊಳೆಯಲ್ಲಿ
ಹಂಸವಾಗಿ ತೇಲಿ ಈಜುವ

ಕಿಲ್ಲಕ್ಕಿ : ಬೇಡ ಎಂದೆನೆ ನಾನು
ಬಯಕೆ ಪೂರೈಸುವೆನು ನಾನು
ಬಾಳ ಬೃಂದಾವನದಲಿ
ಕುಣಿದು ನಲಿಯುವ ನಾವು

(ಇಬ್ಬರೂ ಆಲಂಗಿಸಿಕೊಳ್ಳುವಂತೆ ಹರ್ಷ ಸಂಗೀತ)

## ದೃಶ್ಯ-೬

ಕಿಲ್ಲಕ್ಕಿ : ಇಡಿಯ ರಾತ್ರಿಯನು
ಏಕಾಂತದಲಿ ಕಳೆದಾಯಿತು
ಇದುವೆ ನನಗೆ ಸರಿಯಾದ ಸಮಯ
ಲೆಮಿಂಕನನ ತೊರೆದು ಹೋಗಲು
ಬೇಟೆಯಾಡಲು ಹೋದವನು
ನಿನ್ನೆ ಹೋದನೇನೋ ಅವನು

ಆತನಾಡಿಸಿದ ಆಟಕ್ಕೆ ನಾನಾಡಿಸುವೆ
ಸರಿಯಾದ ಬುದ್ಧಿಯನು ಕಲಿಸುವೆ.

ಲೆ.ತಾಯಿ : ಏನವ್ವ ಕಿಲ್ಲಕ್ಕಿ? ಅತ್ತೆ.....! (ಬಿರುಸಾಗಿ ನುಡಿಯುವಳು)

ಕಿಲ್ಲಕ್ಕಿ : ನಾನು ನನ್ನ ತವರಿಗೆ ಹೊರಟಿದ್ದೀನಿ.

ಲೆ.ತಾಯಿ : ಏಕವ್ವಾ ಬೇಸರವಾಯಿತೆ ನಿನಗೆ?

ಕಿಲ್ಲಕ್ಕಿ : ಅಲ್ಲಾ.......

ಲೆ.ತಾಯಿ : ಕೋಪ ಬೇಡ ಕಿಲ್ಲಕ್ಕಿ ಸೌಮ್ಯಳಾಗು.

ಕಿಲ್ಲಕ್ಕಿ : ನಿಮ್ಮ ಮಗನು ಕರಾರು ಮುರಿದಿಹನು

ಲೆ.ತಾಯಿ : ಕರಾರೇನು ತಾಯಿ?

ಕಿಲ್ಲಕ್ಕಿ : ನನ್ನಣ್ಣಗಲಿ ಹೋಗಿಹನು.

ಲೆ.ತಾಯಿ : ಏನೋ ಮೀನ ಬೇಟೆಗೆ ಹೋಗಿಹನು
ಬೇಟೆ ಜೋರಿರಬಹುದು
ರಾತ್ರಿ ಹಾಗೆ ಕಳೆದಿರಬಹುದು
ಬರುವನು ಸ್ವಲ್ಪ ಸಮಾಧಾನ ತಾಳಿಕೋ ಕಿಲ್ಲಕ್ಕಿ

ಕಿಲ್ಲಕ್ಕಿ : ಮಾತಿಗೆ ನಡೆಯುವವಳು ನಾನು
ಮುಂದಿಟ್ಟ ಹೆಜ್ಜೆಯನು ಹಿಂದಿಡಲಾರೆ
ನಾನೀಗಲೆ ಹೊರಟೆ.......

ಲೆ.ತಾಯಿ : ನಿನ್ನಣ್ಣಗಲಿ ಅವನಿರಲಾರ
ವೇದನೆಯ ಕೊಡಬೇಡ
ನಿಧಾನಿಸು ಕಿಲ್ಲಕ್ಕಿ ಶಾಂತಳಾಗು

ಕಿಲ್ಲಕ್ಕಿ : ನಿಧಾನಿಸುವ ಹೆಣ್ಣಲ್ಲ ನಾನು
ಇದೋ ಹೊರಟೆ... ಹೊರಟೇ ಬಿಟ್ಟೆ.

ಲೆ.ತಾಯಿ : ಕಿಲ್ಲಕ್ಕಿ... ಕಿಲ್ಲಕ್ಕಿ...

(ಕಿಲ್ಲಕ್ಕಿ ಹೊರಟಳು)

ಎಂಥ ಕೆಲಸವ ಮಾಡಿದಳು?
ಏನ ಹೇಳಲಿ ಅವನು ಬಂದು ಕೇಳಿದರೆ?
ಲೋಕವೇ ಶೂನ್ಯವಾಗಿಹುದು!
ಅಕಟಕಟಾ... ಎಂಥ ಬಿರುಸಿನ ಹೆಣ್ಣು?
ಬೇಡ ಬಿಂಕದ ಹೆಣ್ಣು ಎಂದಿದ್ದೆ

ಸಿರಿತನದ ಹೆಣ್ಣ ಸಹವಾಸ ಕಷ್ಟವೆಂದಿದ್ದೆ
ಬಿಳಿಯ ಕುದುರೆಯೆಂದು ಬಣ್ಣಿಸಿದ್ದೆ
ಬಾಳುವುದು ಕಷ್ಟ ಎಂದು ನುಡಿದಿದ್ದೆ
ಅದು ನಿಜವೇ ಆಯಿತಲ್ಲಾ
ಹೇಳೇಳ ಬಂದೆಬಿಟ್ಟನಲ್ಲಾ
ನೂರು ವರುಷ ಆಯಸ್ಸ ಅವಗೆ
ಬಂದಕೂಡಲೆ ಹೇಳುವುದು ಕೂಡ
ಲಿಯಂಕನೆ ಮಾತಾಡಲಿ.
ನಾನು ಮರೆಯಾಗುವೆ.

ಲೆಮಿಂಕನೆನ್ : ರಾತ್ರಿ ಎಲ್ಲಾ ಬೇಟೆ.
ಆಮೇಲೆ ನಿದ್ದೆ
ಬರುವುದು ತಡವಾಯ್ತು ಲಿಯಂಕಾ
ಕಿಲ್ಲಕ್ಕಿ... ಕಿಲ್ಲಕ್ಕಿ...
ಎಲ್ಲಿ ಹೋಗಿಹಳು ಇಷ್ಟು ಕೂಗಿದರೂ?
ಆಲಿಸದೆ ಅಸಹ್ಯವಾಗಿ ಕೂತಿಹಳೆ?

ಲಿಯಂಕಾ : ಏಕೆ ಕೂಗುವೆ
ಗಂಟಲೊಣಗಿಸಿಕೊಳ್ಳುವೆ?

ಲೆಮಿಂಕನೆನ್ : ಏಕೆ ಏನಾಯಿತು?

ಲಿಯಂಕಾ : ಆಗುವುದೇನು ಆಗಬೇಕಾದುದೇ ಆಗಿಹುದು
ಮಾತು ಮುರಿದಿಹರೆಂದು
ತವರಿಗೆ ಹೋಗಿಹಳು ನಿನ್ನಾಕೆ.

ಲೆಮಿಂಕನೆನ್ : ಆಹಾ ಎಂಥ ಪೊಗರು ಅವಳಿಗೆ
ಹೋದರೇನಾಯಿತು ಹೋಗಲಿ ಬಿಡು
ಮತ್ತೊಬ್ಬಳು ತರುವೆ

ಲೆ.ತಾಯಿ : ಎಂಥ ಕೆಲಸವಾಯಿತು
ಬಂದೆಯಾ ಮಗನೆ
ಏಕೆ ರಾತ್ರಿ ಬರಲಿಲ್ಲ?

ಲೆಮಿಂಕನೆನ್ : ಬೇಟೆಯ ಹುಚ್ಚಿನಲ್ಲಿ
ರಾತ್ರಿಯನು ಕಳೆದೆ
ತಪ್ಪೇನು ಅದರಲಿ?

ಲಿಯಂಕಾ : ತಪ್ಪೆಂದೇ ಹೇಳಿ
ಹೋದಳಲ್ಲ ಕಿಲ್ಲಕ್ಕಿ...
ಅದಕಿಂತ ಬೇಕೇ ನಿನಗೆ?

ಲೆ.ತಾಯಿ : ದುಡುಕದಿರು ಮಗನೆ.

ಲೆಮಿಂಕನೆನ್ : ದುಡುಕುವುದೇನು ಬಂತು?
ಹೋದವಳು ಹೋಗಲಿ
ಮತ್ತೊಬ್ಬಳು ಬರುವಳು
ಉತ್ತರದ ಸುಂದರಿಯರು
ಅವಳ ನೀವಳಿಸಿ ಹಾಕುವವರಿಹರು.
ಅದಕೇಕೆ ಚಿಂತೆ?

ಲೆ.ತಾಯಿ : (ಸ್ವಗತ) ಉತ್ತರದ ಜನಕೆ ಉತ್ತಮರು ಎಂಬ
ಪೊಗರಿಹುದು.
ಮಾಟ ಮಂತ್ರದಲಿ ಎತ್ತಿದ ಕೈನವರು
ರಾಕ್ಷಸರು ನೆಲೆಸಿರುವ ತಾಣವದು
ನನ್ನ ಕರುಳ ಕುಡಿಗೆ ಏನಾದರಾದೀತು
ಅವನ ಸುಖವೇ ನನ್ನ ನೆಮ್ಮದಿ.

ಲೆಮಿಂಕನೆನ್ : ಏನೋ ಚಿಂತಿಸುವಂತಿದೆಯಲ್ಲ ತಾಯಿ
ಅದಕೇಕೆ ಕೊರಗು?
ಯೋಚಿಸದಿರವ್ವಾ ನಿನಗೆ ಅನುಪಮ
ಸುಂದರಿ ಸೊಸೆಯ ತಂದಿರುವೆ.

ಲೆ.ತಾಯಿ : ಹಾಗಲ್ಲ ಮಗುವೆ
ಉತ್ತರವು ಅಪಾಯದಾ ತಾಣ
ಅಲ್ಲಿಗೂ ಹೋಗುವುದುಚಿತವಲ್ಲ
ನಿನ್ನ ಖಡ್ಗದ ಮೇಲೆ ನನಗೆ
ಅಪಾರ ವಿಶ್ವಾಸವಿಹುದು
ಆದರೂ ಅಳುಕು ತಪ್ಪಿಲ್ಲ.

ಲೆಮಿಂಕನೆನ್ : ವೀರ ಯೋಧನ ಹೆಂಡತಿ
ವೀರ ಯೋಧನ ತಾಯಿಗೆ
ಇದು ವೀರೋಚಿತ ಮಾತೇ?

ಲೆ.ತಾಯಿ : ಏಕೋ ಮನವು ತಡೆಯುತ್ತಿಲ್ಲ
ತಳಮಳವು ಉಕ್ಕುತಿದೆ

ಹೋಗುವುದನ್ನು ನಿಲ್ಲಿಸು ಮಗು.
ನಮ್ಮೂರ ಕನ್ಯೆಯೊಬ್ಬಳನು ಆದರಾಯಿತು
ಉತ್ತರದ ಆಸೆಯನು ಮರೆತುಬಿಡು ಮಗನೇ.

ಲೆಮಿಂಕನೆನ್ : ಯಾರಿಗೂ ಹೆದರುವ ಗಂಡು ಇದಲ್ಲ
ಅಳುಕುವ ಗುಂಡಿಗೆಯು ನನ್ನದಲ್ಲ
ಇದೋ ಈಗಲೆ ಮುನ್ನಡೆದೆ.

ಲೆ.ತಾಯಿ : ಕೇಳು ಮಗು ಕೇಳು ನನ್ನಯ ಮಾತ
ಆಲಿಸು ನನ್ನಯ ನುಡಿಯ
ಬೇಡ ಎನ್ನುವ ಕೆಲಸಕೆ
ಕೈಹಾಕದಿರು ಮಗನೇ
ನಿನ್ನೊಳಿತಿಗೇ ಹೇಳುತಿಹೆನಲ್ಲಾ.

ಲೆಮಿಂಕನೆನ್ : ಹೆಂಬೇಡಿ ನಾನಲ್ಲ
ಹಿಡಿದ ಕೆಲಸವ ಸಾಧಿಸಿ ಬರುವಂಥ
ನಿನ್ನಾಶೀರ್ವಾದ ಒಂದಿರಲಿ
ಅದಕಿಂತ ಹೆಚ್ಚು ಬೇಕಿಲ್ಲವೇನೋ
ಇದೋ ನಮಿಸಿ ಹೊರಟೆ ತಾಯಿ...

ತಾಯಿ : ಲೆಮಿಂಕನೆನ್... ಲೆಮಿಂಕಾ...

(ಎಂದರೂ ಕೇಳದೆ ಹೊರಡುತ್ತಿರಲು ತಾಯಿ ಮಗನನ್ನೇ ನೋಡುತ್ತಾ ಕಣ್ಣೀರುಗರೆಯುತ್ತಾಳೆ)

ಲೇಮಿಂಕನೆನ್ : ಏಕವ್ವಾ ಕಣ್ಣೀರು ಒರಸಿಕೋ
ಧೈರ್ಯ ತಾಳಿಕೋ, ಧ್ಯೇಯ ತುಂಬು
ಅದೇ ನನಗೆ ನವಚೇತನ
ಇಕೋ ಇಲ್ಲಿಹುದು ಬಾಚಣಿಗೆ ಬ್ರೆಷ್
ನನಗೆ ಸಂಕಟವೇನಾದರೂ ಬಂದರೆ
ಸಾವನ್ನು ಅಪ್ಪಿದರೆ
ಬಾಚಣಿಗೆಯಿಂದ ರಕ್ತದ ಹನಿಗಳುದುರುವುವು
ಬ್ರಶ್ಶಿನ ಕೂದಲುಗಳುದುರುವುವು
ಇವೇ ಕುರುಹೆಂದು ತಿಳಿದುಕೋ ತಾಯಿ.

ಲೆ.ತಾಯಿ : ಕೊನೆಗೂ ನಿನ್ನದೇ ಹಠವು
ಏನ ಹೇಳಲಿ?
ಬ್ರಹ್ಮನೇ ಬಂದು ಹೇಳಿದರೂ ಅಷ್ಟೇ
ಮಾಡುವೆನೆಂಬ ಮನ ಬಂತೆಂದರೆ

ಮಾಡಿಯೇ ತೀರುವೆ.
ನಿನಗಿನ್ನು ಹೇಳಲಾರೆ ಮಗನೆ
ಹರೆಯಕ್ಕೆ ಬಂದವನಿಗೆ ಇನ್ನೆಷ್ಟು ಹೇಳಲಿ?
ಹೆತ್ತ ತಾಯಿಗೆ ದುಗುಡ ಕೊಡಬೇಡ
ನೀನು ಸಂತಸವಾಗಿರು ನನಗೂ ಸಂತಸಕೊಡು.

ಲೆಮಿಂಕನೆನ್ : ನನ್ನ ಸಂತಸಕೆ ಈ ಪಯಣ
ಅದರಿಂದ ನಿನಗೂ ಸಂತಸವಾಗುವುದು ತಾಯಿ
ಇದು ಶತಸ್ಸಿದ್ಧ.

ಲೆ.ತಾಯಿ : ಇದು ನಿನ್ನ ಕೊನೆಯ ಸಂಕಲ್ಪವೇನು?

ಲೆಮಿಂಕನೆನ್ : ಅಹುದಮ್ಮ ಅಹುದು.

ಲೆ.ತಾಯಿ : ನಾನಿನ್ನು ತಡೆಯಲಾರೆ
ಹೋಗಿ ಬಾ ಮಗನೆ
ನನ್ನ ಆಶೀರ್ವಾದ ಸದಾ ಇಹುದು
ಹೋದ ಕಾರ್ಯದಲಿ ಜಯವಾಗಲಿ
ಸುಂದರಿಯು ನಿನಗೆ ದೊರೆಯಲಿ
ನಿನಗೆ ಸಂತಸ ಉಂಟಾಗಲಿ
ನಿನ್ನ ಸಂತಸವೇ ನನ್ನ ಸಂತಸವು.

(ಲೆಮಿಂಕನೆನ್ ಹೊರಡುವನು. ತಾಯಿ ಮಗನನ್ನೇ ದಿಟ್ಟಿಸಿ ನೋಡುವಳು)

## ದೃಶ್ಯ-2

(ಲೌಹಿಯ ಅರಮನೆಗೆ ಬಂದ ಲೆಮಿಂಕನೆನ್)

ಲೌಹಿಯಾ : ಯಾರು ನೀನು?

ಲೆಮಿಂಕನೆನ್ : ನಾನು ಸಾರಿ ದ್ವೀಪದ ಯೋಧ
ನಿಮ್ಮ ಮಗಳು ಸುಂದರಿಯಂತೆ
ಸಂಗೀತಗಾರ್ತಿಯೆಂದೂ ಕೇಳಿಹೆ
ಆಕೆಯ ಕೈ ಹಿಡಿಯುವಾಸೆಯಿಂದ ಬಂದಿಹೆ
ಒಲವ ತೋರಿ ಲೌಹಿಯಾ ಮಾತೆ
(ಲೌಹಿಯಾ ಆತನನ್ನೇ ದಿಟ್ಟಿಸಿ ನೋಡಿದಳು ಠೀವಿಯಲ್ಲಿ)

ಲೌಹಿಯಾ : ಓ.. ನನ್ನ ಮಗಳೊಂದಿಗೆ ನಿನಗೆ ವಿವಾಹವೇ?

(ನಗುವಳು)

ಲೆಮಿಂಕನೆನ್ : ತಪ್ಪೇನು?

ಲೌಹಿಯಾ : ತಪ್ಪಿಲ್ಲ... ಒಪ್ಪೂ ಅಲ್ಲ.
ಹುಚ್ಚು ಪ್ರಲಾಪವೆಲ್ಲಾ.

ಲೆಮಿಂಕನೆನ್ : ಏಕೆ?

ಲೌಹಿಯಾ : ನನ್ನ ಮಗಳನ್ನು ವರಿಸುವುದು
ಅಷ್ಟೊಂದು ಸುಲಭದ ಕೆಲಸವಲ್ಲ.

ಲೆಮಿಂಕನೆನ್ : ಸುಲಭವಾಗಿಸಲು ಮಾಡಬೇಕಾದುದೇನು?

ಲೌಹಿಯಾ : ಮಾಡುವುದಿದೆ
ನಿನ್ನ ಶೂರತ್ವದ ಪರೀಕ್ಷೆಯಾಗಬೇಕು
ಹಾಗಾದರೆ ನನ್ನ ಮಗಳೊಡನೆ ವಿವಾಹ.

ಲೆಮಿಂಕನೆನ್ : ಹೇಳಿ ಮಾಡಿ ಸಾಧಿಸುವೆ
ನನ್ನ ಶೂರತ್ವ ಪ್ರದರ್ಶನ ಮಾಡುವೆ.
ನಿಮ್ಮ ಸುಂದರ ಮಗಳ ಕೈಹಿಡಿವೆ.

ಲೌಹಿಯಾ : ನಾನು ಹೇಳುವ ಮೂರು ಕರಾರುಗಳು
ಕಾರ್ಯಗತವಾಗಲೇಬೇಕು
ಹಾಗಿದ್ದಲ್ಲಿ ನನ್ನ ಮಗಳು ನಿನ್ನ ವಶ
ಇಲ್ಲದಿದ್ದರೆ ಬಂದ ದಾರಿಗೆ ಸುಂಕವಿಲ್ಲವೆಂದು
ಹಿಂತಿರುಗಬೇಕಾಗುವುದು ತರುಣ.

ಲೆಮಿಂಕನೆನ್ : ಹೇಳಿ... ಏನೆಂದು ಹೇಳಿ
ಸಾಧಿಸಿ ತೋರಿಸುವೆ
ನಿಮ್ಮ ಮಗಳ ಪಡೆಯುವೆ.
ನಿಮ್ಮ ಅಳಿಯನಾಗುವ
ಅವಕಾಶ ಮಾಡಿಕೊಡಿ.

ಲೌಹಿಯಾ : ಕಾಡು ಬೆಟ್ಟಗಳ ಹಿಂಬದಿಯಲಿ
'ಹಿಸಿ' ಎಂಬ ರಾಕ್ಷಸನಿಹನು
ಅವನ ಬಳಿಯೊಂದು ಕಡವೆ ಇಹುದು
ಅದ ತಂದು ಒಪ್ಪಿಸಬೇಕು.

ಲೆಮಿಂಕನೆನ್ : ಅಪ್ಪಣೆ ತಾಯೆ.

ಲೌಹಿಯಾ : ಪಕ್ಕದ ಕಾನನದಲಿ
ಬಲಿಷ್ಠವಾದ ಕುದುರೆಯೊಂದಿಹುದು
ಅದ ಹಿಡಿದು ಪಳಗಿಸಿ ತರಬೇಕು
ಇದು ನನ್ನ ಮತ್ತೊಂದು ಕರಾರು.

ಲೆಮಿಂಕನೆನ್ : ಕುದುರೆ ಸವಾರಿಯಲಿ ಎತ್ತಿದ ಕೈ ನಾನು
ಇದು ಯಾವ ಮಹಾ ಹಿರಿಯ ಕೆಲಸ, ಚಿಟಿಕೆ ಹಾರಿಸಿದಂತೆ
ಎಂದು ತಿಳಿಯಿರಿ
ಮುಂದಿನದನುಸುರಿ.

ಲೌಹಿಯಾ : ಇನಿತು ದೂರದಲಿ
'ತು ಅನಿಲಾ' ನದಿ ಹರಿಯುವುದು
ಅಲ್ಲಿ ಸುಂದರ ಹಂಸವಿಹುದು
ಅದ ತಂದು ಒಪ್ಪಿಸಬೇಕು
ಹಾಗಿದ್ದಲ್ಲಿ ನನ್ನ ಮಗಳು ನಿನ್ನವಳು.

ಲೆಮಿಂಕನೆನ್ : (ನಗುತ್ತಾ) ಇದು ಮಹಾ ದೊಡ್ಡ ಸಾಹಸದ ಕೆಲಸವೇ
ಆಯಿತು... ಎಲ್ಲವನ್ನೂ ಸಾಧಿಸಿ ತರುವ
ಸಾಧಿಸಿ ತೋರುವೆ, ಮಹಾ ತಾಯಿ
ನಿಮ್ಮ ಮಗಳ ಗಂಡನಾಗುವೆ.
ಇದೋ ಈಗಲೇ ಹೊರಟೆ...

(ಲೆಮಿಂಕನೆನ್ ನಗುತ್ತಾ ಹೊರಟ. ಲೌಹಿಯಾ ಆತನನ್ನೇ ನೋಡುತ್ತಾ ನಗಲಾರಂಭಿಸಿದಳು ಜೋರಾಗಿ)

## ದೃಶ್ಯ-೮

(ರಾಕ್ಷಸನೊಂದಿಗೆ ಕಾದಾಡಿ ಆತನನ್ನು ಓಡಿಸಿ ಕಡವೆ ಮರಿಯನ್ನು ಹಿಡಿದುಕೊಂಡು ಬಂದ)

ಲೆಮಿಂಕನೆನ್ : ಮೊದಲ ಕಾಣಿಕೆಯ ತಂದಿಹೆನು ತಾಯಿ
ನೀವು ಹೇಳಿದ ಕಡವೆ ಮರಿಯು ಇಲ್ಲಿಹುದು
ಮುಂದಿನದು ಕುದುರೆಯ ಸರದಿ
ಅದನ್ನು ಇಷ್ಟರಲಿ ತರುವೆ.

ಲೌಹಿಯಾ : ಅದಾದ ಮೇಲೆ ಮೂರನೆಯದು ಇಹುದೆಂಬುದನು
ಮರೆಯದಿರು ತರುಣ.
ಎಲ್ಲವನೂ ಜಯಿಸಿದಾ ಮೇಲೆ
ನೀನು ಜಯಿಸಿದಂತೆ.

ಲೆಮಿಂಕನೆನ್ : ಅದಕೆ ಎರಡನೆಯ ಮಾತೇ ಇಲ್ಲ
ಒಂದೊಂದನೂ ತಂದೊಪ್ಪಿಸುವುದೇ ಕಾಯಕ
ನಿಮ್ಮ ಮಗಳ ಪಡೆಯುವುದೆ ನನ್ನಯ ಸಂಕಲ್ಪ.

ಲೌಹಿಯಾ : ಆಯಿತಾಯಿತು ಮಾಡಿ ತೋರಿದ ಮೇಲೆ ಮಾತು.

ಲೆಮಿಂಕನೆನ್ : ಯಾವುದೂ ನನ್ನ ಪಾಲಿಗೆ ಹುಸಿಯಲ್ಲ.

(ಕುದುರೆ ಹತ್ತಿ ಮತ್ತೆ ಹೊರಡುವನು. ಕುದುರೆಯೊಡನೆ ಸೆಣಸಾಡಿ ಅದನ್ನು ಪಳಗಿಸಿ ತರುವನು.)

ಲೆಮಿಂಕನೆನ್ : ಎರಡನೆಯ ಕಾಣಿಕೆ ತಂದಿಹೆನು ತಾಯಿ
ನೀವು ಹೇಳಿದ ಕುದುರೆಯನು ಪಳಗಿಸಿ ತಂದಿಹೆನು.

ಲೌಹಿಯಾ : ಆಯಿತು ಮೂರನೆಯದು ಬಂದ ಮೇಲೆ ತಾನೆ
ನನ್ನ ಮಗಳನ್ನು ಮದುವೆ ಮಾಡುವ ಮಾತು.

ಲೆಮಿಂಕನೆನ್ : ಇಲ್ಲವೆಂದೆನಲಿಲ್ಲ ಇಗೋ ಹೊರಟಿಹೆ
ಮುಂದಿನ ಸಾಹಸಕೆ ಕೈ ಹಾಕಲಿಕ್ಕೆ.

(ಮತ್ತೆ 'ತು' ಅನಿಲಾ ನದಿಯ ಹತ್ತಿರ ಬಂದ. ಅಲ್ಲಿದ್ದ ಹಂಸವನ್ನು ನೋಡಿ ಸಂತಸವಾಯಿತು. ಅಲ್ಲಿಗೆ ನೆಗೆದ. ಸ್ವಲ್ಪ ಹೊತ್ತಿನಲ್ಲಿಯೇ ಚೀರಿದ. ಅಲ್ಲಿನ ಸುಳಿಯಲ್ಲಿದ್ದ ಭೂತವೊಂದು ಆತನ ಸೀಳಿ ಐದು ತುಂಡು ಮಾಡಿತು. ರಕ್ತಮಯವಾಯಿತು ನದಿ. ಹಾಗೆಯೇ ರೋದನ ಲೀನವಾಯಿತು)

ಲೌಹಿಯಾ : ಅವನೆಲ್ಲಿ ಬರಲಿಲ್ಲ
ಯಮಲೋಕವನು ಸೇರಿಹನೋ ಏನೋ
ಆ ಭೂತದ ಕೈಗೆ ಸಿಕ್ಕಿ ಉಳಿಯುವನೇ?
ಇಲ್ಲ ಖಂಡಿತ ಇಲ್ಲವೇ ಇಲ್ಲ!
ಎಷ್ಟೊಂದು ಆಸೆ?
ಆ ಕಳಪೆ ದೀಪದವನಿಗೆ
ನನ್ನ ಮಗಳ ಗಂಡನಾಗುವ ಆಸೆ
ಅಂತಸ್ತು ಬೇಡವೇ? ಅಡ್ಡಿ ಬೇಡವೇ?
ನಮ್ಮ ಸಂಬಂಧ ಪಡೆಯಲು
ಅದಕಾಗಿ ಕೊಟ್ಟೆ ಅಗ್ನಿ ಪರೀಕ್ಷೆ
ಎರಡನೂ ಜಯಿಸಿ ಬಂದ ವೀರ
ಮೂರನೆಯದಕ್ಕೆ ಮೃತ್ಯುಪಾಲಾದನೇನೋ.
ಇದಕೇಕೆ ಇಷ್ಟೊಂದು ಆಸೆ?
ಆಸೆ ಎಲ್ಲಾ ದುಃಖಕ್ಕೂ ಕಾರಣ
ಎಂಬುದು ಅರಿವಾಯಿತಲ್ಲಾ ಬಡಪಾಯಿಗೆ
ಎರಡು ಗೆದ್ದು ಮೂರನೆಯದಕೆ ಸೋತನಲ್ಲಾ
ಇನ್ನೆಲ್ಲಿ ಬರುವನವ?
ಭೂತನ ಬಾಯಿನ ಆಹಾರವಾಗಿ ಹೋಗಿಹನು.

(ಅಷ್ಟರಲ್ಲಿ ಆಕೆಯ ದೂತ ಅಲ್ಲಿಗೆ ಹೋಗಿ ಬಂದು)

ದೂತ : ಜಯವಾಯಿತು ಮಹಾರಾಣಿ
ತಮಗೆ ಜಯವಾಯಿತು

ಲೌಹಿಯಾ : ನನಗೆ ಗೊತ್ತಿತ್ತು
ಜಯವು ನನ್ನದು
ಸೋಲು ಆತನದೆಂದು

ದೂತ : ಭೂತ ಸಿಗಿದು
ಐದುಪಾಲು ಮಾಡಿದುದ ಕಂಡೆ
ರಕ್ತಸಿಕ್ತವಾಯಿತು ನದಿಯ ನೀರೆಲ್ಲಾ
ಕೆಂಪು ನದಿಯ ಕಂಡು ಬೆಚ್ಚಿ ಬಂದೆ
ನಿಮಗರುಹಲು ಓಡೋಡಿ ಬಂದೆ.

ಲೌಹಿಯಾ : ನನ್ನ ಮಗಳ ಮೇಲೆ
ಆಸೆ ಪಡುವಾಗ ನಿಗಾ ಬೇಡವೇ ಅವನಿಗೆ?
ಎಷ್ಟೊಂದು ಸೊಕ್ಕು ಆ ಬಡ ತರುಣನಿಗೆ?
ಆಯ್ತು ನೀನಿನ್ನು ಬರಬಹುದು.

ದೂತ : ಅಪ್ಪಣೆ ಮಹಾತಾಯಿ.

ಲೌಹಿಯಾ : ಬಡ ತರುಣ ಬಯಲಾದನೇ
ನದಿಯ ನೀರು ಪಾಲಾದನೇ
ಭೂತದ ಬಾಯ ಆಹಾರವಾದನೇ
ಸಂತಸ ಬಲು ಸಂತಸ ಬಿಡು
ಒಂದು ಪೀಡೆ ಕಳೆದಂತಾಯಿತು.

(ವಿಚಿತ್ರವಾಗಿ ನಗುವಳು)

* * *

## ದೃಶ್ಯ-೯

ಲೆ.ತಾಯಿ : ಅಯ್ಯೋ ವಿಧಿಯೇ!
ಎಂಥ ಕೆಲಸವಾಯಿತು?
ಬಾಚಣಿಕೆಯಲಿ ರಕುತದ ಹನಿಗಳುಕ್ಕುತಿವೆ,
ಬ್ರೆಶ್ಶಿನಲಿ ಕೂದಲುಗಳುದುರುತಿಹವು
ನನ್ನ ಮಗ ಮೃತ್ಯುಪಾಲಾಗಿ ಹೋಗಿಹನು
ಹೇಳಿದ ಮಾತು ಕೇಳದುದಕೆ ಫಲ
ಉತ್ತರದವರ ನಂಬದಿರು, ನೆಚ್ಚದಿರು

ಎಂದು ಎಷ್ಟು ಹೇಳಿದರೂ ಕೇಳದೆ ಹೋದ.
ಏನು ಮಾಡಲಿ? ನನ್ನ ಮಗನ ಕಾಣುವುದು ಹೇಗೆ?
ವಿಧಿಯೆ ನೀನೆಂಥ ಕ್ರೂರಿ? ನನ್ನ ಮಗನ ಕಸಿದುಕೊಂಡೆ
ಅವನಿಲ್ಲದೆ ನಾ ಬದುಕೇನು ಪ್ರಯೋಜನ?

## ದೃಶ್ಯ-೧೦

ಕಿಲ್ಲಕ್ಕಿ : ಎಂಥ ಕೆಲಸವ ಮಾಡಿದೆ?
ಎಂಥ ದುಡುಕನು ಮಾಡಿದೆ?
ಯೌವನದ ಬಿಸಿ ರಕುತ
ಅವಿವೇಕವನೆ ಮಾಡಿತು
ಇಂದು ಅರ್ಥವಾಗುತಿದೆ
ವಿರಹ ವೇದನೆಯ ತಾಪ
ಲೆಮಿಂಕನನ ಜೊತೆ ಕಳೆದ
ಕ್ಷಣ ಕ್ಷಣವೂ ಎಷ್ಟೊಂದು ರಸ ನಿಮಿಷವೆಂದು!
ಅವನೇನು ಯಾರಿಗೇನೂ ಇರಲಿಲ್ಲ
ರೂಪದಲಿ, ಯೌವನದಲಿ, ದೇಹದಾರ್ಢ್ಯದಲಿ.
ಸವಿ ಮುತ್ತು ತುಟಿಗಳು ಬಯಸುವುವು
ಅವನಂಗ ಸಂಗಕೆ ನನ್ನ ಮನ ಹಾತೊರೆಯುತಿಹುದು
ಅತ್ತೆಯ ಮಾತ ಕಡೆಗಣಿಸಿ
ಬಿಂಕ ಬಿಗುಮಾನ ತೋರಿ
ಅಂಕೆ ಇಲ್ಲದವಳಂತೆ ಸಾರಿದೀಪದಂಕಣವ ಬಿಟ್ಟೆ
ಮತ್ತೆ ಹೋದರೆ ಅತ್ತೆ ತಿರಸ್ಕರಿಸುವಳು
ಪತಿ ದೂರ ಮಾಡುವನೋ
ಇಷ್ಟು ದಿನಗಳ ತನಕ ಬಾರದುದ ಕಂಡರೆ
ಅವನಾವ ಸುಂದರಿಯನ್ನಾದರೂ ಕೈ ಹಿಡಿದನೋ?
ನನ್ನ ಸಂಪೂರ್ಣ ಮರೆತು ಹೋದನೋ?
ಈ ನೋವ ಯಾರಿಗೆ ಹೇಳಲಿ?
ಆನೆ ತನ್ನ ತಲೆಯ ಮೇಲೆ ತಾನೇ
ಮಣ್ಣೆರಚಿಕೊಂಡಂತಾಯಿತು. ನನ್ನ ಮೆಚ್ಚಿಕೊಂಡ
ಲೆಮಿಂಕನ್ ನನ್ನ ಕಡೆಗಣಿಸಲಾರ
ಕೈ ಬಿಡಲಾರ ಹೋದರೆ ಹೋಗೆನಲಾರ
ಆದರೂ ಮನದಳುಕು ಏನೋ ಎತ್ತೋ ಎಂಬುದು

ಹೆಣ್ಣೊಮ್ಮೆ ಗಂಡನ್ನ ಒರಿಸಿದ ಮೇಲೆ
ತವರ ಹಂಗ ತೊರೆದು ಗಂಡನ ಮನೆಯಲ್ಲೇ ಇರಬೇಕು
ಎಂದು ಲೆಮಿಂಕನನೇ ಹೇಳಿದ ಮಾತು
ಇಂದು ನಿಜವೆನಿಸುತಿಹುದು
ಏನ ಮಾಡಲಿ ಈಗ?
ಮಾಡುವುದೇನು ಮತ್ತೆ ಹೋಗುವುದೇ ಉಚಿತ
ಲೆಮಿಂಕನನೊಡನೆ ಸುಖ ಬಾಳ್ವೆ ನಡುಸುವುದೇ ಲೇಸು
ಇದೇ ನನ್ನ ಕೊನೆಯ ನಿರ್ಧಾರ
ನನ್ನ ಕ್ಷಮಿಸಿಬಿಡು ಲೆಮಿಂಕನೆನ್ ನನ್ನ ಕ್ಷಮಿಸಿಬಿಡು
ಇನ್ನೊಮ್ಮೆ ಈ ತಪ್ಪ ಎಸಗಲಾರೆ
ಅರಿಯದೆ ಮಾಡಿದ ತಪ್ಪಿಗೆ ಏನಾದರೂ ಶಿಕ್ಷಿಸು
ನಾನದಕೆ ಮತ್ತೇನೂ ಹೇಳಲಾರೆ
ಇದೋ ಬರುತಿಹೆ ನಿನ್ನೆಡೆಗೆ
ಸುಖ ದಾಂಪತ್ಯ ಜೀವನದ ಹಾದಿಗೆ.

(ಲೆಮಿಂಕನೆನ್ ತಾಯಿ ಕಣ್ಣೀರ್ಗರೆಯುತ್ತಿರಲು-ಕಿಲ್ಲಕ್ಕಿಯು ಬಂದು ನಿಲ್ಲುವಳು. ಸ್ವಲ್ಪ ಹೊತ್ತು ಮಾಡನಾಡಿಸದೆ ನಿಂತಳು)

ಕಿಲ್ಲಕ್ಕಿ : ಅವರೆಲ್ಲಿ ಅತ್ತೆ?

ಲೆ.ತಾಯಿ : ನೋಡಲ್ಲಿ...

ಕಿಲ್ಲಕ್ಕಿ : ಬಾಚಣಿಗೆಯಲಿ ರಕುತದ ಹನಿಗಳು
ಬ್ರೆಶ್ಶಿನಲಿ ಕೂದಲುಗಳುದುರಿಹವು
ಇದರರ್ಥ ನನಗಾಗಲಿಲ್ಲ.

ಲೆ.ತಾಯಿ : ನನ್ನ ಮಗನಿಗೆ ಆಪತ್ತು ಬಂದೊದಗಿಹುದು
ಕಿಲ್ಲಕ್ಕಿ, ಹೆತ್ತ ಕರುಳಿಗೆ ಸಂಕಟವಾಗಿಹುದು.
ನಿನಗೇನು ಗೊತ್ತಾಗಬೇಕು?

ಕಿಲ್ಲಕ್ಕಿ : ಕೈ ಹಿಡಿದ ನನಗಿಲ್ಲವೇ?

ಎ.ತಾಯಿ : ಅಂದು ನಾನು ಹೇಳಿದ ಮಾತು ಕೇಳದೆ
ಬಿಂಕದಲಿ ಬೀಗಿ ತವರೂರಿಗ್ಹೊರಟೆ
ಆಗಲೇ ನನ್ನ ಮಾತು ಕೇಳಿದ್ದರೆನಿತು ಸೊಗಸಿತ್ತು
ನನ್ನ ಮಗ ನನಗಿರುತ್ತಿದ್ದ
ನಿನ್ನ ಗಂಡ ನಿನ್ನವನಾಗಿರುತ್ತಿದ್ದ
ಅವ ಬೇರೆ ಹೆಣ್ಣು ನೋಡಲು ಹೋಗುತ್ತಿರಲಿಲ್ಲ.

ಕಿಲ್ಲಕ್ಕಿ : ಇದು ನಿಜವೆ ಅತ್ತೆ?

ಲೆ.ತಾಯಿ : ನಿಜವಲ್ಲದೆ ಸುಳ್ಳೇನು?
ಅವ ತರುಣನಲ್ಲವೇ?

ಕಿಲ್ಲಕ್ಕಿ : ಮಾಡಿದುದು ತಪ್ಪಾಯ್ತು
ಅದಕೇನಾದರೂ ಶಿಕ್ಷಿಸಿ ಅತ್ತೆ
ಆದರೆ ನನ್ನಯ ಬಾಳ ಸಂಗಾತಿ
ಅವರ ಬಿಟ್ಟು ನಾನು ಬದುಕಿರಲಾರೆ
ಹೇಗಾದರೂ ಮಾಡಿ ನನ್ನವರ ನನಗೆ ಕರೆದುತನ್ನಿ
ಮಾಯ ಮಂತ್ರ ತಿಳಿದವರು ನೀವು
ಅವರನ್ನು ಕರೆ ತರುವ ಭಾರ ನಿಮ್ಮದು.

ಲೆ.ತಾಯಿ : ಮಾಡುವುದ ಮಾಡಿ ಈಗ ಚಿಂತಿಸುವೆ?
ಅದಕೇ ಹೇಳುವುದು
ಹಿರಿಯರು ಹೇಳಿದ ಮಾತು ಕೇಳಬೇಕೆಂದು

ಕಿಲ್ಲಕ್ಕಿ : ತಪ್ಪೆಂದು ಒಪ್ಪಿರುವೆ
ಕ್ಷಮಿಸೆಂದು ಕೇಳಿರುವೆ
ಕ್ಷಮಿಸುವುದು ನಿಮ್ಮ ಧರ್ಮ ಅತ್ತೆ

(ನಮಸ್ಕರಿಸಿ ಕಣ್ಣೀರ್ಗರೆಯಲು)

ಲೆ.ತಾಯಿ : ಹೋಗುವೆನು ಉತ್ತರ ದೇಶಕ್ಕೆ
ಎಲ್ಲೇ ಇರಲಿ ಹುಡುಕಿ ತರುವೆನು ಕಂದ
ಅಂಜದಿರು, ಅಳದಿರು ಕಿಲ್ಲಕ್ಕಿ
ನಿನ್ನ ಪತಿಯ ನಿನಗೆ ತಂದೊಪ್ಪಿಸುವೆ
ಇದು ದೇವರ ಮೇಲಾಣೆ.

ಕಿಲ್ಲಕ್ಕಿ : ಅಷ್ಟು ಮಾಡಿದರೆ ನನ್ನಂಥ ಪುಣ್ಯವಂತೆ ಇಲ್ಲ
ನನಗೆ ಗೊತ್ತಿತ್ತು ನೀವು ನಿರಾಸೆ ಮಾಡುವವರಲ್ಲವೆಂದು
ಬೇಗ ಹೊರಡಿ ಅತ್ತೆ ಬೇಗ ಹೊರಡಿ,
ಅಣಿಯಾಗಿ ನಿಮ್ಮ ಮಗನ ಕರೆತರಲು.

ಲೆ.ತಾಯಿ : ಆಯ್ತಾಯ್ತು...

(ಲೆಮಿಂಕನನ್‌ನ ತಾಯಿ ಹೊರಡುವಳು)

## ದೃಶ್ಯ-೧೧

(ಲೆಮಿಂಕನೆನ್ ತಾಯಿ ಲೌಹಿಯಾಳ ಅರಮನೆಗೆ ಬಂದು ಗುಡುಗಿದಳು)

ಲೆ. ತಾಯಿ : ಲೌಹಿ... ಏಯ್ ಮಾಟಗಾತಿ
ಎಲ್ಲೆ ನನ್ನ ಮಗ ಲೆಮಿಂಕನೆನ್?
ಏನು ಮಾಡಿದೆ ಹೇಳೆ?

ಲೌಹಿಯಾ : ಏನು ಮಾತನಾಡುತಿಹೆ
ಯಾರು ನೀನು ಬೊಗಳೆ
ನನ್ನರಮನೆಗೆ ಬಂದು
ನನ್ನನ್ನೇ ಏಕವಚನದಲ್ಲಿ ಕರೆವೆ
ನನ್ನ ಮಗನೆಲ್ಲಿ ಎಂದರೆ
ನಾನೇನು ಅವನ ಅವಚಿಟ್ಟುಕೊಂಡಿಹೆನೆ
ನಿನ್ನ ಮಗ ಚಿನ್ನದಪುರದ ಗೆಡ್ಡೆಯೇನೋ?
ಎಂಥ ಮಾತು ಎಂದಾಡುತಿಹೆ ಪೊಗರುಗಾತಿ?

ಲೆ.ತಾಯಿ : ನಿನಗಿಂತ ನಾನೇನು ಕಡಿಮಿಲ್ಲ
ನಾನೂ ಯೋಧನ ಹೆಂಡತಿ
ಯೋಧನ ತಾಯಿ ನಾನು
ನನ್ನ ಮಗ ಇಲ್ಲಿಗೆ ಹೋಗುವೆನೆಂದು ಹೇಳಿದ್ದ
ಅದಕೆ ಗೊತ್ತು ಅವನಿಲ್ಲೇ ಇರಬೇಕೆಂದು
ಹೇಳು ನಿಜ ಸಂಗತಿಯ ಗರ್ವಿಷ್ಠೆ.

ಲೌಹಿಯಾ : ನಾಲಿಗೆಗೆ ಮೂಳೆಯಿಲ್ಲವೆಂಬುದು ಗೊತ್ತು
ಮಾತು ಎಲ್ಲೆಲ್ಲೋ ಹೋಗುತಿಹುದು.

ಲೆ.ತಾಯಿ : ನೇರ ಉತ್ತರಬೇಕು ನನಗೆ
ನನ್ನ ಮಗ ಇಲ್ಲಿಗೆ ಬಂದಿದ್ದು ಉಂಟೇ?

ಲೌಹಿಯಾ : ಹೌದು ನಿನ್ನ ಮಗ ಬಂದದ್ದು ಉಂಟು
ಹೊಟ್ಟೆ ತುಂಬಾ ಊಟ ಬಡಿಸಿದೆ
ಕುಡಿಯಲು ಮದ್ಯ ಕೊಟ್ಟೆ
ಎಲ್ಲೋ ಇಲ್ಲೇ ಶಿಕಾರಿಗೆ ಹೋಗಿರಬಹುದು
ಮುಂದೇನಾಯಿತೋ ನಾನರಿಯೆ.

ಲೆ.ತಾಯಿ : ಶಿಕಾರಿ ಎಂದರೆ?

ಲೌಹಿಯಾ : ನನ್ನ ಮಗಳ ಜೊತೆ ವಿವಾಹ ಬೇಕೆಂದ
ಅದಕೆ ಮೂರು ಷರತ್ತುಗಳ ಹಾಕಿದೆ.
ಮೊದಲನೆಯದ ಪೂರೈಸಿ, ಎರಡನೆಯದರಲಿ
ಜಯಶೀಲನಾದ
ಮೂರನೆಯದ ಕಾಣೆಯಾಗಿ ಹೋಗಿಹನು.

ಲೆ. ತಾಯಿ : ಇದು ಸುಳ್ಳು, ಶುದ್ಧ ಸುಳ್ಳು
ಸತ್ಯವನು ಮರೆಮಾಚುತಿಹೆ
ಇದ್ದುದನು ಇದ್ಧಂತೆ ಹೇಳಿದಿದ್ದರೆ
ನನ್ನ ಮಂತ್ರಶಕ್ತಿಯಿಂದ
ನಿನ್ನಂತಸ್ತಿನರಮನೆಯ
ನೆಲಸಮ ಮಾಡಿಬಿಡುವೆ
ಹೇಳು ನಿಜ ಸಂಗತಿಯನುಸಿರು ಬೇಗ
ನನ್ನ ಹೆತ್ತ ಕರುಳು ನನ್ನ ಮಗನ ಸುತ್ತಿಹುದು
ಪುತ್ರ ಶೋಕವು ಕೊಡುವುದು ನಿನಗುಚಿತವಲ್ಲ.

ಲೌಹಿಯಾ : (ಸ್ವಗತ) ಇವಳು ಸಾಮಾನ್ಯಳಲ್ಲ ಎಂದು ಕೇಳಿಹೆ
ಈಕೆಯೂ ಮಾಟಗಾತಿ, ಮಾಯ ಮಂತ್ರಗಾತಿ
ಹೇಳಿದಿದ್ದರೆ ಬಿಡುವವಳಲ್ಲ.
ಹೇಳಿದರೇನು? ಹೇಳಿಯೇ ಬಿಡುವೆನು,
(ಅಂಜಿದವಳಾಗಿ) ತಾಯೆ ಮೂರನೆ ಷರತ್ತಿಗೆ
ತು ಅನಿಲಾ ನದಿಯ ನೀರಲ್ಲಿಹ
ಹಂಸವನು ತರಲು ಹೇಳಿದ್ದೆ
ಅಲ್ಲಿಗೆ ಹೋಗಿಹನು ಅವನು
ಮತ್ತೆ ಬಂದಿಲ್ಲ ಅಲ್ಲಿರುವನೇನೋ
ನೋಡು ಹೋಗು ತಾಯಿ.

ಲೆ.ತಾಯಿ : ನನ್ನ ಮಗನ ಪೌರುಷ ಪರೀಕ್ಷಿಸುವಳೀಕೆ
ಹೇಳಿದ್ದೆ ಉತ್ತರದವರು ಗರ್ವಿಷ್ಠರು
ಅವರ ಸಹವಾಸ ಬೇಡ, ಸಂಬಂಧ ಬೇಡವೆಂದು
ಕೇಳದೆ ಬಂದನವ ಮೂರ್ಖ
ಮಾಯ ಮಾಟಗಳ ಕಲಿತು
ಮಾನವರ ಮೇಲೆ ಪ್ರಯೋಗಿಸುವವರ
ಸಹವಾಸ ಬೇಡವೆಂದರೂ ಕೇಳದೆ ಬಂದ.

ಲೌಹಿಯಾ : ನೀನು ಲಭ್ಯಳೇನೋ
ನೀನು ಅದೇ ವಿದ್ಯೆಯಲ್ಲಿ ಮುಳುಗಿದವಳಲ್ಲವೇ
ಅದಕೆ ನನ್ನನ್ನು ಹೆದರಿಸುತಿಹೆ

ಲೆ.ತಾಯಿ : ಮುಳ್ಳನ್ನು ಮುಳ್ಳಿಂದ ತೆಗೆಯಲೇಬೇಕು
ವಜ್ರವನು ವಜ್ರದಿಂದಲೇ ಕತ್ತರಿಸಬೇಕು.

ಮಾಯಮಂತ್ರ ಕಲಿತವರಿಗೆ
ನಾವೂ ಕಲಿತೇ ಪ್ರಯೋಗಿಸಬೇಕಲ್ಲವೇ?

ಲೌಹಿಯಾ : ಭಲೇ ಹೆಣ್ಣೆ ಏನೋ ಎಂದಿದ್ದೆ
ನೀನು ಸರಿಯಾದ ಮಾಯಾ ಮಂತ್ರ ಕಲಿತವಳೆ
ಹೋಗಿ ನಿನ್ನ ಮಗನನ್ನು ಹುಡುಕುವ ಗೋಜಿಗೆ ಹೋಗು
ತು ಅನಿಲಾ ನದಿಗೆ ಹೋಗು ಅಲ್ಲಿ ಸಿಗಬಹುದು.

ಲೊ.ತಾಯಿ : ಆಯ್ತಾಯ್ತು ಹೋಗಿ ಬರುವೆ
ಆಮೇಲೆ ನಿನ್ನನ್ನೊಂದು ಕೈ ನೋಡಿಕೊಳ್ಳುವೆ ಹೆಣ್ಣೆ.

ಲೌಹಿಯಾ : ಮಾಡುವೆಯಂತೆ ಹೋಗಿ ಬಾ.
ನಿನ್ನಂಥ ಸಾವಿರಾರು ಮಾಟಗಾತಿಯರ ನಾ ಬಲ್ಲೆ
ನಾನೇನು ನಿನಗಿಂತ ಕಡಿಮೆ ಇಲ್ಲ.

ಲೆ.ತಾಯಿ : ಏನ ಮಾಡುವೆ ಮಾಡು ನೋಡುವೆ
ಏನ ಮಾಡುವೆ ಎಂಬುದಾಮೇಲೆ ನಿನಗರಿವು.

ಲೌಹಿಯಾ : ಬಲು ಗಡಸುಗಾರ್ತಿ ಕಣಾ
ಮಗನ ಹುಚ್ಚಿನಲಿ ಸಿಡಿದೆದ್ದಿಹಳು.

ಲೆ.ತಾಯಿ : ನಿನ್ನ ಕರುಳ ಕುಡಿಗೆ ಹೀಗಾಗಿದ್ದರೆ
ನೀನು ಏನಾಗುತ್ತಿದ್ದೆ ಎಂಬುವ ನೀನೇನು ಬಲ್ಲೆ?
ಹುಚ್ಚು ಮಾತಾಡಿ ನನಗೆ ಪುಚ್ಚು ಹಿಡಿಸದಿರು.

ಲೌಹಿಯಾ : ಹೆಚ್ಚಿಗೆ ಮಾತು ನನಗೆ ಬೇಕಿಲ್ಲ
ಹೊರಡುವೆಯೋ ಹೊರಡಿಸಬೇಕೋ.

ಲೆ.ತಾಯಿ : ತಳ್ಳಿಸಿಕೊಂಡು ಹೋಗಲು ಬಂದವಳಲ್ಲ ನಾನು
ತಳ್ಳುವ ಬುದ್ಧಿಯಂತೂ ನನ್ನದಲ್ಲವೇ ಅಲ್ಲ
ಮರ್ಯಾದೆ ಕೊಟ್ಟು ಮರ್ಯಾದೆ ತೆಗೆದುಕೊಳ್ಳುವುದ ಕಲಿ
ಜೀವನ ಮೊದಲ ಪಾಠವಾಗಿ.

ಲೌಹಿಯಾ : ನಿನ್ನ ಉಪದೇಶ ನನಗೆ ಬೇಕಿಲ್ಲ
ನಾನೇ ಈ ದೀಪದ ರಾಣಿ
ನಾನು ನಿನ್ನಂಥ ಕುನ್ನಿಗಳಿಗೆ
ಬುದ್ಧಿ ಹೇಳುವುದ ಬಲ್ಲೆ.

ಲೆ.ತಾಯಿ : ನಿನ್ನ ರಾಣಿ ಪಟ್ಟವ ನಾನು ಬಲ್ಲೆ
ಮಾತಿನಲಿ ಬಿಗಿ ಇರಲಿ ನಿಗಾವಿರಲಿ.

ಲೌಹಿಯಾ : ಪ್ರಶ್ನೆಗೆ ಉತ್ತರ ಕೊಟ್ಟಾಯಿತು
ಇನ್ನು ನೀನು ಇಲ್ಲಿಂದ
ಅಡಿ ಇಡಬಹುದು
ತಡವೇಕೆ ಮಾಡುತಿಹೆ
ಮಾತು ಬೆಳೆಸುತಿಹೆ?

ಲೆ.ತಾಯಿ : ಅದಕೆ ಕಾರಣ ನೀನು
ನಿನ್ನ ವರ್ತನೆಯು
ಸರಿಯಾಗಿ ಮಾತಾಡುವುದ ಕಲಿ
ನಾನಿನ್ನು ಬರುವೆ
ನನ್ನ ಮಗ ಸಿಗದಿರಲಿ
ಆಗ ನಿನ್ನ ಸಿಗಿದು ತೋರಣಕಟ್ಟುವೆ.

(ಹೊರಡುವಳು)

ಲೌಹಿಯಾ : ಬಲ್ಲೆ ಬಲ್ಲೆ ನಡಿಯೆ ಕಂಡಿರುವೆ ನಿನ್ನ ಶೌರ್ಯ (ಲೆಮಿಂಕನನ ತಾಯಿ ಬಿರುನಡೆದಳು. ದಾರಿಯಲ್ಲಿ ಹೋಗುತ್ತಾ)

ಲೆ.ತಾಯಿ : ತರುಲತೆಗಳೇ ನನ್ನ ಲೆಮಿನೆಂಕ ಇತ್ತ ಹೋದುದ ಕಂಡಿರಾ?

ಮರ : ನಮ್ಮ ಕತೆ ನಮಗೆ
ನಿನ್ನ ಮಗನ ನೋಡುವ ಗೊಡವೆ ನಮಗೇಕೆ?
ನಮಗೆ ಅವಕೆಲ್ಲ ಸಮಯವೆಲ್ಲಿಹುದು ತಾಯಿ?
ನೋಡು ನೋಡು ಎಲ್ಲಹನೆಂದು?

ಲೆ.ತಾಯಿ : ಎಲೆ ದಾರಿಯೇ
ನನ್ನ ಮಗ ಯಾವ ದಾರಿಯಲಿ ಸಾಗಿದ ಹೇಳುವಿರೆ?

ದಾರಿ : ಎಷ್ಟೋ ಜನ ಬರುತಿಹರು, ಹೋಗುತಿಹರು
ನಿನ್ನ ಮಗನನ್ನು ನಾವೆಲ್ಲ ಕಾಣಬೇಕು?
ಗುರುತು ಇಟ್ಟುಕೊಳ್ಳಬೇಕು?
ಸುಮ್ಮನೇಕೆ ವ್ಯರ್ಥದ ಮಾತು?

ಲೆ.ತಾಯಿ : ಚಂದ್ರಾ ನೀನೇನಾದರೂ ಕಂಡೆಯಾ?
ನನ್ನ ಮಗ ಲೆಮಿಂಕನನ್ನು ಎತ್ತಹೋದನೆಂದು?
ಹೆತ್ತ ಕರುಳ ಕೂಗು ನಿಮಗರಿವಾಗದೇನು?

ಚಂದ್ರ : ಯಾರೋ ತಿಳಿಯದು ತಾಯಿ.
ಎಲ್ಲಿ ಹೋಗಿಹನೋ ನೋಡು ಹೋಗು
ನಮಗೆ ನಿಮ್ಮ ಮಗನ ನೋಡಿಕೊಂಡಿರುವುದೇ ಕೆಲಸವೇ?

ಲೆ.ತಾಯಿ : ಸೂರ್ಯದೇವಾ
ನಿನ್ನ ಬೆಳಕು ನನ್ನ ಮಗನ ಕಂಡೆಯಾ?
ಎತ್ತ ಹೋಗಿಹನು ಹೇಳು ದೇವಾ
ಸುತ್ತಿ ಸುತ್ತಿ ಸಾಕಾಗಿಹೆನು
ಎಲ್ಲರನು ಕೇಳಿ ಸುಸ್ತಾಗಿಹೆನು.

ಸೂರ್ಯ : ಏನು ಹೇಳಲಿ ತಾಯಿ?

ಲೆ.ತಾಯಿ : ಹೇಳು ಹೇಳು ಕಂಡದ್ದ ಕಂಡಂತೆ ಹೇಳು
ನನಗೆ ನೆಮ್ಮದಿಯ ಕೊಡೋ ದೇವಾ.
ಮಾತಿನಲಿ ಏನೋ ಮರುಕವಿಹುದು

ಸೂ.ದೇವ : ನೆಮ್ಮದಿಯ ಕಲಕುವ ಸೋಜಿಗ
ನಿನ್ನ ಮಗನು ಇನ್ನಿಲ್ಲ ತಾಯಿ
ತು ಅನಿಲಾ ನದಿಯಲ್ಲಿನ ಭೂತ
ಆತನನ್ನು ತುಂಡರಿಸಿಬಿಟ್ಟಿತು
ಎಂಬುದನ್ನು ಹೇಳಲು ಬಾಯಿ ಹಿಡಿಯಿತು.

ಲೆ.ತಾಯಿ : ...ಆ...ಎಂಥ ಕೆಲಸವಾಯಿತು?
ಅಯ್ಯೋ ಮಗನೇ ಲೆಮಿಂಕನೆನ್!
ಹೇಳಿದ ಮಾತು ಕೇಳದೇ ಪೋದೆಯಲ್ಲಾ
ಮೃತ್ಯುವಿನ ದವಡೆಗೆ ಸಿಲುಕಿದೆಯಲ್ಲಾ
ಹೆತ್ತ ಕರುಳಿಗೆ ದುಗುಡ ತಂದೊದಗಿಸಿದೆಯಲ್ಲಾ
ಏನ ಮಾಡಲಿ ಈಗ? ಎತ್ತ ಮಾಡಲಿ ಈಗ?
ಅಕಟಕಟ ವಿಧಿಯೇ...

ಸೂರ್ಯ : ದುಃಖಪಡಬೇಡ ತಾಯಿ
ಸಮಾಧಾನ ತಂದುಕೋ ಆದದ್ದು ಮಾಡಲಾಗದು.

ಲೆ.ತಾಯಿ : ಅದಕೆ ನಿನ್ನಿಂದ ಒಂದು ಉಪಕಾರವಾಗಬೇಕು
ಸೂರ್ಯದೇವಾ ಮಾಡುವೆಯಾದರೆ ಸೆರಗೊಡ್ಡಿ ಬೇಡುವೆ
ನನ್ನ ಮಗನ ನಾನು ಬದುಕಿಸಿಕೊಳ್ಳುವೆ.

ಸೂರ್ಯ : ಏನು ಹೇಳು ತಾಯಿ
ನಿನ್ನ ದುಃಖ ಎನಗರಿವಾಗಿದೆ
ನಿನ್ನ ಮಗ ನಿನಗೆ ದೊರೆತರೆ ನನಗೂ ಸಂತಸ.

ಲೆ.ತಾಯಿ : ಸೂರ್ಯದೇವಾ ನಾನು ಆ ಹೊಳೆಗೆ ಇಳಿಯುವೆ
ನೀನು ನಿನ್ನ ಪ್ರಖರ ಕಿರಣಗಳನ್ನು
ಆ ಭೂತದ ಮೇಲೆರಚಿ ಅದನ್ನು ನಿಶ್ಶಕ್ತವಾಗಿ ಮಾಡು
ನನ್ನ ಮಗನ ಹೆಣವನ್ನು ಹೊರತರುವ ತನಕ ಸಹಕರಿಸು
ಸಹಸ್ರ ಕಣ್ಣುಗಳ ಸಾಕಾರ ದೇವತೆ.

ಸೂರ್ಯ : ಆಯ್ತು ಹಾಗೆಯೇ ಮಾಡುವೆನು
ಹೋಗಿ ಬಾ ತಾಯೆ
ನಿನಗೆ ಜಯವಾಗಲಿ
ಕಮ್ಮಾರನಿಂದ ತಾಮ್ರದ ದೋಣಿ ಮಾಡಿಸಿ
ಹೊಳೆಗೆ ಇಳಿ ತಾಯಿ
ಅಳಿದ ಮಗನ ಉಳಿಸಿಕೋ.

ಲೆ.ತಾಯಿ : ಅಪ್ಪಣೆ ದೇವ ನೀನು ಹೇಳಿದಂತೆ ಮಾಡುವೆನು
ನಿನಗೆ ಶರಣು ಶರಣಾರ್ಥಿಗಳು, ಸೂರ್ಯದೇವಾ
ನಿನ್ನ ಕೃಪೆಯೊಂದಿದ್ದರೆ ಇದು ಯಾವ ದೊಡ್ಡ ಕೆಲಸ?

(ಅಲ್ಲಿಂದ ಹೊರಡುವಳು ನದಿಯತ್ತ)

ಲೆ.ತಾಯಿ : ಸೂರ್ಯದೇವಾ ನೀನು ಮಾತನು ನೀನು ನಡೆಸು.
ನನ್ನ ಕಾಯಕದಲ್ಲಿ ನಾನು ತೊಡಗುವೆ
ನನ್ನ ಮಗನ ಶವವನ್ನು ಶೋಧಿಸುವೆ
ಸೂರ್ಯದೇವಾ ನಮೋ ನಮಃ

(ಎಂದು ಕೈ ಮುಗಿದು ನದಿಯಲ್ಲಿ ಮುಳುಗುವಳು. ಸೂರ್ಯನ ತೇಜಕ್ಕೆ ಆ ಭೂತ ನಿಸ್ತೇಜವಾಯಿತು. ಮಗನ ಶವಕ್ಕಾಗಿ ಹುಡುಕಿದಳು)

ಲೆ.ತಾಯಿ : ಹ್ಞಾಂ... ನನ್ನ ಮಗನ ಬಟ್ಟೆಗಳಿವು.
ಇದೇ ಲೆಮಿಂಕನೆನ್ ದೇಹದ ಚೂರು
ಐದು ತುಂಡುಗಳೂ ಸಿಕ್ಕಿದುವು.
ಸೂರ್ಯದೇವಾ ನಿನ್ನುಪಕಾರವನ್ನು ನಾನೆಂದೂ ಮರೆಯೆ.
ಧನ್ಯಳಾದೆ ಸೂರ್ಯದೇವಾ ಧನ್ಯಳಾದೆ.

(ಎಲ್ಲವನ್ನು ತಂದು ದಡದಲ್ಲಿರಿಸಿ ಬಂದಳು)

ಲೆ.ತಾಯಿ : ಈತನ ದೇಹಕ್ಕೆ ಪ್ರಾಣವನ್ನು ತುಂಬುವುದು
ನನ್ನಯ ಮುಂದಿನ ಕೆಲಸ
ಇದಕ್ಕಾಗಿ ಸ್ವರ್ಗದ ಜೇನುರಸವೆ ಬೇಕಲ್ಲಾ

ಏನು ಮಾಡಲಿ, ಯಾರ ಕೇಳಲಿ?
ನಿಸರ್ಗ ದೇವತೇ, ಜೇನುರಸವನು ಕರುಣಿಸು
ನನ್ನ ಮಗನ ಉಸಿರು ತುಂಬು ತಾಯೇ

(ಅಷ್ಟರಲ್ಲಿ ಒಂದು ಪತಂಗ ಹಾರಿ ಬಂತು)

ಲೆ.ತಾಯಿ : ಪತಂಗವೇ ನನ್ನ ಮಗನ ಜೀವ ಉಳಿಸಲು
ಸ್ವರ್ಗದಿಂದ ಮಧುವನು ತರಬೇಕು
ಬೇಗ ಹೋಗಿ ತರುವೆಯಾ ಉಪಕಾರಿ

ಪತಂಗ : ನಾನು ಅಷ್ಟು ದೂರ ಹಾರಲಸಮರ್ಥ ತಾಯಿ.

ಲೆ.ತಾಯಿ : ಸೂರ್ಯದೇವ ನೀನು ಮಾಡಿದ
ಉಪಕಾರವನು ನಾನೆಂದು ಮರೆವಂತಿಲ್ಲ
ಎಲ್ಲವನೂ ಮಾಡಿದೆ, ಆದರೆ ಇದೊಂದು ಅರಿಕೆ ನಿನ್ನಲಿ
ಈ ಪತಂಗ ಸ್ವರ್ಗಕೆ ಹಾರಿ
ಜೇನ ತರುವ ಶಕುತಿಯನ್ನು ತಂದೊದಗಿಸು ದೇವಾ.

ಸೂರ್ಯ : ತಥಾಸ್ತು!

(ಪತಂಗ ಸ್ವರ್ಗಕ್ಕೆ ಹಾರಿ ಹೋಗಿ ಮದುವನ್ನು ತಂದಿತು. ಅದನ್ನು ಲೆಮಿಂಕನೆನ್‌ನ ತಾಯಿ ಮಗನ ತುಟಿಗೆ ಸವರುತ್ತಿದ್ದಂತೆ ನಿದ್ದೆಯಿಂದ ಎಚ್ಚೆತ್ತವನಂತೆ ಆಕಳಿಸಿ ಕುಳಿತ. ಲೆಮಿಂಕನೆನ್ ತಾಯಿಯನ್ನು ನೋಡಿ)

ಲೆಮಿಂಕನನ್ : ಇದೇನು ತಾಯಿ ನೀನಿಲ್ಲಿ
ಏಕೆ ಕಣ್ಣೀರು?

ಲೆ.ತಾಯಿ : ನಿನಗೆ ಗೊತ್ತಿಲ್ಲವೇ ಮಗು
ನೀನು ಎಲ್ಲಿಹೆ ಎಂಬುದು?
ಇದು ತು ಅನಿಲಾ ನದಿ
ಹಂಸವನು ತರಲೆಂದು ಬಂದೆ ನೀನು
ಭೂತ ನಿನ್ನನು ಸೀಳಿ ಹಾಕಿತು.
ನನ್ನ ಮಂತ್ರಶಕ್ತಿಯ ಜೊತೆಗೆ
ಸೂರ್ಯದೇವನ ಕರುಣೆಯಿಂದ
ನಿನ್ನ ಬದುಕಿಸಿಕೊಂಡೆ ಮಗು

(ಇಬ್ಬರೂ ಆಲಂಗಿಸಿಕೊಳ್ಳುವರು)

ಲೆಮಿಂಕನೆನ್ : ಎಂಥ ಕೆಲಸವಾಯಿತು
ಹಂಸ ತರಲು ಬಂದವ ಹತನಾದೆನೆ?

ಹಂಸ ತೆಗೆದುಕೊಂಡು ಹೋಗಿ
ಆ ಲೌಹಿಯ ಕುವರಿಯ ವಿವಾಹವಾಗಲೇಬೇಕು ತಾಯಿ
ಈಗ ಅರಿವಾಯಿತು ನಾನು ಬಂದ ಕೆಲಸ.

ಲೆ.ತಾಯಿ : ಬೇಡ ಮಗನೆ ಬೇಡ

ಲೆಮಿಂಕನೆನ್ : ಬೇಡವೆಂದರೆ ಹೇಗೆ?
ಎರಡು ಸಾಹಸ ಮಾಡಿ ತೋರಿಸಿದೆ
ಮೂರನೆಯ ಸಾಹಸಕೆ
ಮಣ್ಣು ಮುಕ್ಕಿದೆ.
ಈಗಲಾದರೂ ಹಂಸ ತೆಗೆದುಕೊಂಡು ಹೋಗುವೆ.
ಲೌಹಿಯ ಮಗಳ ವಶಮಾಡಿಕೊಂಡು ಬರುವೆ

ಲೆ.ತಾಯಿ : ಅದೋ ನೋಡು ಸೂರ್ಯ ದೇವ
ಆನಂದದಿ ಪಶ್ಚಿಮದತ್ತ ತೆರಳುತಿಹನು
ಸಂತಸದಿ ಪತಂಗ ಹಾರಿ ಹೋಗುತಿಹುದು
ಉತ್ತರ ದೇಶದವರ ಸಹವಾಸ ಸಾಕು ನಡೆ ಮಗನೆ
ಕಿಲ್ಲಕ್ಕಿ ಬಂದಿಹಳು, ನಿನಗಾಗಿ ಕಾದಿಹಳು
ನಿನ್ನ ಉಳಿಸಿಕೊಂಡು ಹೋಗಲು ಬಂದೆ ನಾನು
ಸೂರ್ಯದೇವನ ಕರುಣೆ ಬಲು ಹಿರಿದು
ನನ್ನ ಮಾಯ ಮಂತ್ರವನು ನಿನಗಾಗಿ
ನಿನ್ನನ್ನುಳಿಸಿಕೊಳ್ಳಲು ಬಳಸಬೇಕಾಯಿತು ಕಂದ
ನಡೆ ನಮ್ಮ ದ್ವೀಪಕ್ಕೆ ನಾವು ತೆರಳೋಣ
ಕಿಲ್ಲಕ್ಕಿಯೊಡನೆ ಸುಖ ಸಂಸಾರ ಮಾಡಿವಿಯಂತೆ
ಮರು ಮಾತೆ ಬೇಡ

ಲೆಮಿಂಕನೆನ್ : ಅಮ್ಮಾ.... ಎಂಥ ದೇವತೆ ನೀನು?
ನಿನ್ನ ಮಗನನ್ನು ಉಳಿಸಿಕೊಂಡೆ
ಕಿಲ್ಲಕ್ಕಿಯ ಜೊತೆ ಬಾಳ್ವೆಗಣಿಗೊಳಿಸಿದೆ
ನನ್ನಂಥ ಪುಣ್ಯವಂಥ ಬೇರಿಲ್ಲ.
ಈ ಮಾತೃ ಋಣ ತೀರಿಸುವುದೆಂತು ತಾಯಿ?

ಲೆ.ತಾಯಿ : ಸೂರ್ಯ ದೇವನಿಗೆ ವಂದಿಸು ಕಂದ
ಆತನೇ ನೀನು ಮತ್ತೆ ಬದುಕಲು ಕಾರಣಕರ್ತೃ.
ಅವನ ಮುಂದೆ ನಾವಾರು?

ಲೆಮಿಂಕನೆನ್ : ಅವನಿಗೆ ಮೊದಲು ವಂದಿಸುವೆ ತಾಯಿ
ಅವನ ಜೊತೆಗೆ ನಿನ್ನ ಮರೆವಂತಿಲ್ಲ
ನೀನು ನನ್ನ ಬದುಕಿಸಲು ಕಾರಣಕರ್ತಳು.
ನಿನಗೂ ಶರಣು ಶರಣಾರ್ಥಿಗಳು.

ಲೆ.ತಾಯಿ : ಮಾತು ಸಾಕು ನಡೆ
ಕಿಲ್ಲಕ್ಕಿ ನಿನಗಾಗಿ ಕಾದಿಹಳು
ಕಾತರಿಸಿ ಕುಳಿತಿಹಳು
ಇನ್ನು ನಿಧಾನವೇ ಬೇಡ.

ಲೆಮಿಂಕನೆನ್ : ಬಾ ತಾಯೆ ಬಾ, ಕುದುರೆ ಏರಿ ಹೋಗೋಣ
ಬೇಗ ಬೇಗ ನಮ್ಮ ದ್ವೀಪ ಸೇರೋಣ
ಕಿಲ್ಲಕ್ಕಿಯನು ಮನೆ ತುಂಬಿಸಿಕೊಳ್ಳುವ

ಲೆ.ತಾಯಿ : ಆಯ್ತಾಯ್ತು ನಡೆ ನಡೆ ಮಗುವೆ
ನಿನಗಿಂತ ನನಗೆ ಕಾತುರವು ಹೆಚ್ಚಿಹುದು

(ಇಬ್ಬರೂ ಕುದುರೆ ಏರಿ ಹೊರಡುವರು)

## ದೃಶ್ಯ-೧೨

(ಲೆಮಿಂಕನೆನ್ ಮತ್ತು ಆತನ ತಾಯಿ ಕುದುರೆಯಿಂದ ಇಳಿದು ಬಂದ ಕೂಡಲೇ ಕಿಲ್ಲಕ್ಕಿ ಓಡಿಬಂದು ಲೆಮಿಂಕನೆನ್‌ನನ್ನು ಅಲಂಗಿಸಿಕೊಂಡಳು. ಕಣ್ಣುಗಳು ಒದ್ದೆಯಾದವು)

ಕಿಲ್ಲಕ್ಕಿ : ನನ್ನನ್ನು ಕ್ಷಮಿಸಿ ಲೆಮಿಂಕನೆನ್..
ನಾನು ಮಾಡಿದುದು ಸರ್ವಥಾ ತಪ್ಪು
ಅರಿತೋ ಅರಿಯದೆಯೋ ಮಾಡಿದೆನು.
ನಿನ್ನನ್ನರ್ಥ ಮಾಡಿಕೊಳ್ಳದೆ ತಪ್ಪೆಸಗಿದೆ.
ಕೊನೆಗೂ ನಿನ್ನನ್ನೇ ಸೇರಿದೆನಲ್ಲ.
ನಿನ್ನ ವಿರಹ ನನ್ನ ಕೊಂದಿತ್ತು
ಇಂದು ಅತ್ತೆಯಿಂದ ಸಮಾಧಾನ ತಂದಿತು.

(ಅತ್ತೆಗೆ ನಮಸ್ಕರಿಸುತ್ತಿದ್ದಂತೆ)

ಲೆ.ತಾಯಿ : ಏಳು ಕಿಲ್ಲಕ್ಕಿ ಮೇಲೇಳು
ನಿನ್ನ ಪತಿಯ ನಿನಗೊಪ್ಪಿಸಿಹೆ
ದಾಂಪತ್ಯ ಜೀವನವು ಸುಗಮವಾಗಲಿ
ನೂರು ವರುಷ ಹಾಯಾಗಿ ಬಾಳಿರಿ
ಇದೇ ನನ್ನ ಕೊನೆಯಾಸೆ, ಹಿರಿಯಾಸೆ

ಲೆಮಿಂಕನೆನ್ : ನಿನ್ನ ತಾಯಿಯಾಗಿ ಪಡೆದುದೇ ನನ್ನ ಭಾಗ್ಯ
ನಿನ್ನ ಅತ್ತೆಯಾಗಿ ಪಡೆದುದು ಕಿಲ್ಲಕ್ಕಿಯ ಸೌಭಾಗ್ಯ
ನಮಗಿಂತ ಪುಣ್ಯವಂತರಿಲ್ಲ ಈ ಜಗದೊಳಗೆ
ಒಪ್ಪಿಗೆಯ ಗಂಡನು ಬಂದಿಹನು ಅಪ್ಪಿಕೋ ಕಿಲ್ಲಕ್ಕಿ
ಈ ಬೆಸುಗೆ ನೂರ್ಕಾಲ ಸಡಿಲವಾಗದಿರಲಿ
ನಮ್ಮ ಪ್ರೇಮ ಅಜರಾಮರವಾಗಲಿ
ನಮ್ಮ ಅನುರಾಗ ಅನುಗಾಲವಿರಲಿ.
ಇದಕಿಂತ ಸ್ವರ್ಗ ಇನ್ನಾವುದು? ಇನ್ನೆಲ್ಲಿಹುದು?
ಈ ಸಾರಿ ದ್ವೀಪವೇ ಸ್ವರ್ಗ
ಈ ತಾಯಿಯೇ ದೇವರು
ನೀನೇ ನನ್ನ ಸರ್ವಸ್ವ
ಬಾ ಕಲ್ಲಕ್ಕಿ... ಬಾ... ನಿನ್ನ ಬಂಧನ ಬಯಸಿಹೆ
ನಿನ್ನಂಗ ಸಂಗ ಸಾರ ಸವಿಯುವ ಬಾ ನನ್ನ ಬಳಿ

(ಇಬ್ಬರೂ ಒಬ್ಬರನ್ನೊಬ್ಬರು ಆಲಂಗಿಸಿಕೊಳ್ಳುವರು)





# ಮಲೆಯ ಮಾದೇಶ್ವರ

**ಪಾತ್ರ ವರ್ಗ**

೧. ಮಾದೇಶ್ವರ- ೧೨ ವರ್ಷದ ಬಾಲಕ. ಕಚ್ಚೆ, ಶಲ್ಯ, ವಿಭೂತಿ, ರುದ್ರಾಕ್ಷಿ, ಬಟ್ಟೆಯಲ್ಲಿ ಕಟ್ಟಿದ ಇಷ್ಟಲಿಂಗ, ಬೋಳುತಲೆ (ಎರಡನೇ ಸಾಲಿನಿಂದ ವಯಸ್ಸಾದ ಪಾತ್ರವಿರಬೇಕು)

೨. ಸುತ್ತೂರು ಸ್ವಾಮಿಗಳು- ೫೦ ವರ್ಷ, ವೀರಶೈವ ಜಗದ್ಗುರುಗಳ ವೇಷಭೂಷಣ.

೩. ಪ್ರಭುಲಿಂಗ ಸ್ವಾಮಿಗಳು- ೫೦ ವರ್ಷ, ವೀರಶೈವ ಜಗದ್ಗುರುಗಳ ವೇಷಭೂಷಣ.

೪. ಇಬ್ಬರು ಶಿಷ್ಯರು- ೧೨ ವರ್ಷದ ವಟುಗಳು.

೫. ಉತ್ತರಾಜಮ್ಮ- ೩೦ ವರ್ಷದ ಮಹಿಳೆ, ಶಿವಶರಣೆ.

೬. ಬೇವಿನ ಕಾಳಿ- ೬೦ ವರ್ಷದ ಸ್ಥೂಲಕಾಯದ ಮಹಿಳೆ.

೭. ಮಲ್ಲಣ್ಣ- ೫೦ ವರ್ಷ, ಬೇವಿನ ಕಾಳಿಯ ಆಳು.

೮. ದೇವಾಜಮ್ಮ- ೩೦ ವರ್ಷ, ಬೇವಿನ ಕಾಳಿಯ ಸೊಸೆ, ಸಾಧಾರಣ ಉಡುಗೆ, ಕಾಡುಜನರ ಹೋಲಿಕೆ.

೯. ನೀಲಯ್ಯ- ೩೦ ವರ್ಷದ ಕಾಡು ಸೋಲಿಗ, ಉಡಿಗೆ-ತೊಡಿಗೆ ಕಾಡು ಜನರಂತೆ.

೧೦. ಸಂಕಮ್ಮ- ೨೦ ವರ್ಷದ ಕಾಡು ಸೋಲಿಗಿತ್ತಿ.

೧೧. ಬಿಲ್ಲಯ್ಯ- ಕಾರಯ್ಯ... ಅನ್ನಸಾಲಮ್ಮ.. ಬಿಲ್ಲಯ್ಯರ ಮಕ್ಕಳು.೬,೭ವಷಗಳ ಕಾಡು ಸೋಲಿಗರು.

೧೨. ಇಕ್ಕೇರಿ ದೇವಮ್ಮ- ೫೦ ವರ್ಷ, ಸಾಮಾನ್ಯ ಉಡುಗೆ-ತೊಡಿಗೆಗಳು.

೧೩. ಶ್ರವಣ- ೪೫ ವರ್ಷ, ರಾಜನಂತೆ ವೇಷ-ಭೂಷಣಗಳು.

೧೪. ಸೇವಕ- ಶ್ರವಣನ ಅರಮನೆಯ ಸೇವಕ. ೪೦ ವರ್ಷ, ಉಡುಗೆ ಕಾವಲುಗಾರನ ವೇಷ.

೧೫. ರಂಗಸ್ವಾಮಿ- ೫೦ ವರ್ಷ, ಕಚ್ಚೆ ಮೇಲೆ ಶಲ್ಯ, ಕಟ್ಟಿದ ಮುಡಿ.

೧೬. ನಿಂಗಮ್ಮ- ೫೬ ವರ್ಷಗಳು, ಇಕ್ಕೇರಿ ದೇವಮ್ಮನ ಸೋದರಿ.

೧೭. ಗೌರವ್ವ- ೫೦ ವರ್ಷ, ಹಳ್ಳಿಯಾಕೆ.

೧೮. ಬಲ್ಲವ್ವ- ೫೦ ವರ್ಷ, ಹಳ್ಳಿಯಾಕೆ.

೧೯. ಮೂಗಯ್ಯ- ೨೫ ವರ್ಷ, ಸರಗೂರಯ್ಯನ ಮಗ.

೨೦. ಕೆಂಪ- ೨೫ ವರ್ಷ, ಆಳು.

೨೧. ಜುಂಜೇಗೌಡ- ೫೦ ವರ್ಷ, ಕಟ್ಟಿದ ತಲೆ, ಗಡ್ಡ ಮೀಸೆ ಬಿಟ್ಟ ಕಟ್ಟು ಮಸ್ತಾದ ಆಳು.

೨೨. ಆಲಮ್ಮ- ೪೦ ವರ್ಷದ ಮಹಿಳೆ, ಜುಂಜೇಗೌಡನ ಹೆಂಡತಿ.

(ನೇಪಥ್ಯದಲ್ಲಿ ಮಂಗಳ ಹಾಡು)

ಸಮೂಹ ಗಾನ

ಮಂಗಳಾರತಿ ಮಾದೇವರಿಗೆ।
ಕಾರಯ್ಯ ಬಿಲ್ಲಯ್ಯ ದೇವರಿಗೆ।
ಮಂಗಳಾರತಿ ಮಾದೇವರಿಗೆ।
ಸರಣು ಸರಣು ಗುರುದೇವರಿಗೆ।
ಮಂಗಳಾರತಿ ಮಾದೇವರಿಗೆ।
ದೂಪ ದೀಪ ದೇವರಿಗೆ।
ಮಂಗಳಾರತಿ ಮಾದೇವರಿಗೆ।
ಸರಣು ಸರಣು ಗುರುದೇವರಿಗೆ।
ಮಂಗಳಾರತಿ ಮಾದೇವರಿಗೆ।
ಸರಣು ಸರಣು ಗುರುವೇ।
ಇದ್ಯಾ ಬುದ್ಧಿ ಕಲಸವರೆ।
ಸರಣು ಸರಣು ಗುರುದೇವರಿಗೆ।
ದೇವ ದೇವ ದೇವರಿಗೆ।
ಮಂಗಳಾರತಿ ಮಾದೇವರಿಗೆ।
ಧೂಪ ದೀಪ ದೇವರಿಗೆ।
ಕಾರಯ್ಯ ಬಿಲ್ಲಯ್ಯ ದೇವರಿಗೆ।
ಸರಣು ಸರಣು ಗುರುದೇವರಿಗೆ।
ಸರಣಾರ್ತಿ ಗುರುದ್ಯಾವರಿಗೆ।
ಮಂಗಳಾರತಿ ಮಾದೇವರಿಗೆ।
ಮಂಗಳಾರತಿ ಎತ್ತುವರೆ।
ಮಾದೇವ ನಿನಗೆ।
ಬೆಳಗಿದರು ಆರತಿಯ।
ಮಂಗಳಾರತಿ ಎತ್ತಿದರು ಸಿವನಿಗೆ।
ನಿಮಗೆ ಮಂಗಳಾರತಿ ಎತ್ತಿದರು ಗುರುದೇವಾ।
ಹೂವ ಚೆಲ್ಲಾಡ ಬನ್ನಿರೋ, ಮಾದೇವ ನಿಮಗೆ।
ಪುಸ್ಪ ಚೆಲ್ಲಾಡ ಬನ್ನಿರೋ।
ಮಂಗಳಾರತಿ ಎತ್ತಿದರೋ।
ಸಿವನೆ ನಿಮಗೆ ಮಂಗಳಾರತಿ ಎತ್ತ ಬನ್ನಿರೋ।
ಅಯ್ಯೋ ಮೊಗ್ಗು ಚೆಲ್ಲಾಡಿ ಬನ್ನಿರೋ ಮಾದೇವನಿಗೆ।
ಕಮಲ ಚೆಲ್ಲಾಡ ಬನ್ನಿರೋ।
ಹೂವ ತರುವಾಗ ಸರಣೆಂದು।
ದೇವ ಬೇಡುವೆನಯ್ಯಾ ಸಿವನೆ ನಿಮ್ಮವ।
ಮಂಗಳಾರತಿ ಎತ್ತಿದರು।
ಮಂಗಳಾರತಿ ಎತ್ತಿದರು।
ಮಾದೇವ ಕಮಲಾ ಚೆಲ್ಲಾಡ ಬನ್ನಿರೋ॥

ಸಾಲು-೧

(ತೆರೆಯು ಸರಿಯುತ್ತಿದ್ದಂತೆ ಐದಾರು ಕಂಸಾಳೆಯವರು ಮೇಳ ಕುಳಿತಿದ್ದು ತಮ್ಮ ಗಾಯನವನ್ನು ಆರಂಭಿಸುವರು.)

ಸಮೂಹ ಗಾನ : "ಮಲೆಯೋ ಮಾದೇವ ಬರುವ ಚಂದವಾ
ಆಹಾ ನೋಡಿ ನಮ್ಮ ಸಿವನಾ...
ಮಲೆಯೋ ಮಾದೇವ ಬರುವ ಚಂದವಾ
ಆಂ... ನೋಡಿ ನಮ್ಮ ಸಿವನಾ..."

(ಕಂಸಾಳೆಯ ದನಿ ಕಡಿಮೆ ಆಗುತ್ತಿದ್ದಂತೆ)

ಪ್ರಮುಖ ಕಥೆಗಾರ -(ವಚನ)

*"ಹರ ಹರಾ.. ಸಿವ ಸಿವಾ... ಮರಿದೇವರು ಮಾದಪ್ಪನವರು ಮುಗಿಲಲ್ಲೇ ಹುಟ್ಟಿ ಮುಗಿಲಲ್ಲೇ ಉದ್ಭವವಾಗಿ ನಮ್ಮಪ್ಪಾಜಿಯವರು ನಡುರಾಜ್ಯದಲ್ಲಿ ನಿಂತ್ಕಂಡು (ಸುಮಾರು ಹನ್ನೆರಡು ವರ್ಷದ ಬಾಲಕ ಮಾದಪ್ಪ ಕಾವಿ ಬಟ್ಟೆಯನ್ನುಟ್ಟು ವಿಭೂತಿ, ರುದ್ರಾಕ್ಷಿ, ಇಷ್ಟಲಿಂಗವನ್ನು ಕೊರಳಲ್ಲಿ ಧರಿಸಿಕೊಂಡು ದಿವ್ಯಕಳೆಯಿಂದ ತುಂಬಿ ರಂಗದ ಮಧ್ಯೆ ನಿಂತು ಸುತ್ತಲೂ ದೃಷ್ಟಿಸುತ್ತಾನೆ) ನಾನು ನಡು ರಾಜ್ಯದಲ್ಲಿ ನಿತ್ಕಂಡ್ನಲ್ಲಾ, ಈ ರಾಜ್ಯದಲ್ಲಿಯಾರಾರೂ ನನ್ನ ಸಾರಿಗೆಯವರು, ಸರಿಸಮರು, ಬಂದು ಯಾರಯ್ಯ ನೀನು ಈ ಅರಣ್ಯದಲ್ಲಿ ನಿಂತ್ಕಂಡಿರತಕ್ಕವನು? ನಿನ್ನ ಹೆಸರೇನು? ಯಾರ ಮಗನು ಅಂತ ಕೇಳಿದ್ರೆ ನಾನೇನೇಳ್ಬೇಕು ಅಂತ ಯೇಳ್ಬುಟ್ಟು, ಈಗ ನಾನು ಸರಿಯಾದ ತಂದೆ-ತಾಯಿ ಪಡ್ಕಳ್ಳಕದ್ದೇ ಸರಿ. ನನಗೆ ತಂದೆ-ತಾಯಿ ಆಗಬೇಕಾದ್ರೆ ಅವರು ಯಾವ ತರ ಇರಬೇಕು ಅಂದ್ರೆ ಅಂಟಾಗಿರಲಿಕ್ಕಿಲ್ಲ, ಮುಟ್ಟಾಗಿರಲಿಕ್ಕಿಲ್ಲ. ಅಂತವರನ್ನು ನಾನು ಪಡಿಬೇಕು ಅಂತ ನಮ್ಮಪ್ಪಾಜಿಯವರು ತಮ್ಮ ದಿವ್ಯ ದೃಷ್ಟಿಯಿಂದ ನಾಲ್ಕೂ ಕಡೆ ಮಾದಪ್ಪನವರು ದೃಷ್ಟಿ ಮಡಗವ್ರೇ... ಮಾದೇವಾ...*

"ಆಂ... ನೋಡಿ ನಮ್ಮ ಸಿವನಾ
ಮಲೆಯೋ ಮಾದೇವ ಬರುವ ಚಂದವಾ
ಆಂ... ನೋಡಿ ನಮ್ಮ ಸಿವನಾ..."

(ಹಾಡು ಆರಂಭವಾಗುತ್ತಿದ್ದಂತೆ ರಂಗಮಂಟಪ ಕತ್ತಲಾಗುವುದು. ಸ್ವಲ್ಪ ಹೊತ್ತಿನಲ್ಲೇ ರಂಗಮಂಟಪದಲ್ಲಿ ಬೆಳಕು ಹರಿಯುವ ದೃಶ್ಯ. ಕೋಳಿಗಳ ಕೊಕ್ಕೋಶಬ್ದ, ಹಕ್ಕಿಗಳ ಇಂಚರ, ಕೊಳಲಿನ ದನಿಯೊಡನೆ ಬೆರೆಯುವುದು. ಉತ್ತರಾಜಮ್ಮ ಕೊಳಕ್ಕೆ ನೀರ ತಂಬಿಗೆ ಹಿಡಿದುಕೊಂಡು ಬರುತ್ತಾಳೆ. ಅಂದವಾಗಿ ಅರಳಿ ನಿಂತಿದ್ದ ತಾವರೆ ಹೂವನ್ನು ನೋಡಿ)

ಉತ್ತರಾಜಮ್ಮ : ಅಹಾ... ಈ ತಾವರೆ ಹೂವು ಎಷ್ಟೊಂದು ಚೆನ್ನಾಗೈತೆ?
ಅದನ್ನ ಕಿತ್ತು ನನ್ನ ಇಷ್ಟಲಿಂಗಕ್ಕೆ ಪೂಜೆ ಮಾಡ್ಕಬೇಕು
ಈವೊತ್ತು.

(ತಾವರೆ ಹೂವನ್ನು ಕಿತ್ತಿಕೊಂಡು ಇನ್ನು ಕೆಲವು ಹೂವುಗಳನ್ನು ಆರಿಸಿಕೊಂಡು ಶಿವಪೂಜೆಗೆ ಕುಳಿತುಕೊಳ್ಳಬೇಕೆಂದು ಬರುತ್ತಾ)

ಉತ್ತರಾಜಮ್ಮ - ಅಮ್ಮ ನನ್ನ ಓಣೇಲಿ ಉಟ್ಟವಳೆ।
ನನ್ನ ಓಣೇಲಿ ಬೆಳೆದವಳೆ।
ನನ್ನ ಓಗುವರ ಸೆರಗ ಇಡಿಯವಳೆ।
ಸುವ್ವ ಬಸವಯ್ಯ। ಓಗುವರ ಸೆರಗ ಹಿಡಿಯುವಳೆ।
ಉತ್ತರಾಣೆ ನೀ ಬೇಗ ಬಾರವ್ವ ನನ್ನ ಸಿವಪೂಜೆಗೆ।
ಸುವ್ವ ಬಸವಯ್ಯಾ...।
ತಾಯಿ ಹಳ್ಳದಲ್ಲಿ ಹುಟ್ಟವಳೆ ಕುಳ್ಳಾಸಿ ಬೆಳೆಯವಳೆ।
ಚಿಳ್ಳುಗಿರಿನಲ್ಲಿ ಹೆತ್ತವಳೆ।
ಸುವ್ವ ನಾ ಸುವ್ವಿ ಬಸವಯ್ಯ।
ಚಿಳ್ಳುಗಿರಿನಲ್ಲಿ ಹೆತ್ತವಳೆ ತುಂಬಿದ್ರಷ್ಟು ನೀ ಬೇಗ ಬಾರವ್ವ।
ನಿನ್ನ ಸಿವಪೂಜೆಗೆ ಸುವ್ವ ಚನ್ನಬಸವಯ್ಯ।
ತೋಪಿನಲ್ಲಿ ಹುಟ್ಟಿದವಳೆ, ನೀ ತೋಪಿನಲ್ಲಿ ಬೆಳೆದವಳೆ।
ಲಿಂಗಾಯಿತರ ಉತ್ತಾರ್ರಾ ಕೇರೀಲೆ ಬೆಳದವಳೇ।।
ಬಿಲ್ವಿಪತ್ರ ಬೇಗ ಬಾರಮ್ಮ।
ನನ್ನ ಸಿವಪೂಜೆಗೆ ಸುವ್ವ ಬಾ ಚನ್ನ ಬಸವಯ್ಯ।
ಅಮ್ಮ ತ್ವಾಟದಲ್ಲಿ ಹುಟ್ಟಿದವಳೆ, ತ್ವಾಟದಲ್ಲಿ ಬೆಳೆದವಳೆ।
ತೊಟ್ಟು ಸಣ್ಣಾಗಿ ಬಿಡುವಂತ ನನ ಸಿವಪೂಜೆಗೆ।
ಸುವ್ವ ಬಾ ಚನ್ನ ಸುವ್ವ ಬಸವಯ್ಯ।
ಹಿತ್ತಲ್ಲಿ ಹುಟ್ಟಿದವಳೆ ಹಿತ್ತಲ್ಲಿ ಬೆಳೆದವಳೆ।
ನೀ ಸೂರ್ಯನಿಗೆ ಮುಖವ ತೋರುವಳೆ।
ಸುವ್ವ ಬಾ ಸುವ್ವ ಬಸವಯ್ಯ।
ಸೂರ್ಯನಿಗೆ ಮಕಮಾಡಿ ಸೂರ್ಯಕಾಂತಿ ನೀ ಬೇಗ।
ಬಾರವ್ವಾ ನನ್ನ ಸಿವಪೂಜೆಗೆ।
ಸುವ್ವ ಬಾ... ಬಾ... ಸುವ್ವ ಬಸವಯ್ಯ।

(ತಾವರೆ ಹೂವಿನಿಂದ ಇಷ್ಟಲಿಂಗ ಪೂಜೆ ಮಾಡಿ ಕರಡಿಗೆಗೆ ಹಾಕಿ ಕೊಳ್ಳಲು ಉತ್ತರಾಜಮ್ಮ ಗರ್ಭೀಣಿ ಅದಳು. ಆಗ ಆಕೆಗೆ ಅಚ್ಚರಿ)

ಉತ್ತರಾಜಮ್ಮ : ಈ ಇಳಿ ವಯಸ್ನಾಗೆ ಬಿಮ್ಮನ್ಸೇ ಆಗ್ಬುಟ್ನಲ್ಲಾ, ಏನು ಆಚರ್ಯ? ಈ ಭೂಮಿಮ್ಯಾಗೆ ತಲೆ ಎತ್ಕಂಡು ಎಂಗ್ಯಪ್ಪ ತಿರ್ಗಾಡದು? ಮಕ್ಕಿಲ್ಲ ಅಂತ ದುಃಖಪಡ್ತಿದ್ದಕ್ಕೇ ಈ ವಯಸ್ನಾಗಾ ಕೊಡದು? ಈ ವಯಸ್ನಾಗೆ ಬಿಮ್ಮನ್ಸೆ ಆಗವಳಲ್ಲಾ ಅಂತ ಜನಗಳು ಆಡಿದ್ರೇನಪ್ಪಾ ಗತಿ?

(ಕಣ್ಣೀರು ಮಿಡಿಯುವುದು)

ಋಷಿ(ಮಾದೇಶ್ವರ): (ನಗುತ್ತಾ) ತಾಯೇ ಇದಕ್ಕೆ ನೀನು ಹೆದರಬೇಕಿಲ್ಲ. ಕಾಲಕಟ್ಟೆ ಆಳಬೇಕಂತ ನಿನ್ನ ಗರ್ಭಸೇರಿ ಈಗ ನಿನ್ನ ಬೆನ್ನಮಚ್ಚೆ ಸೀಳಿಕೊಂಡು 'ಮಾದೇಶ್ವರ" ಎಂಬ ಹೆಸರಿನಿಂದ ಬರುತ್ತಿದ್ದೇನೆ.

(ಗುಡುಗು, ಸಿಡಿಲು, ಬಿರುಗಾಳಿಗಳ ಶಬ್ದ, ರಂಗಮಂಟಪ ಕತ್ತಲಾಗುವುದು. ಮಾದೇಶ್ವರರು ತಾಯಿಯ ಮುಂದೆ ನಿಂತುಕೊಳ್ಳುವರು. ಆಗ ಹಾಡು)

ಆಂ... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವ ಚಂದವಾ।
ಹಾಂ... ನೋಡಿ ನಮ್ಮ ಸಿವನಾ।

ಮಾದೇಶ್ವರ : ತಾಯಿ ನಾನು ವಿದ್ಯೆ ಬುದ್ಧಿ ಕಲಿಯಬೇಕು, ಗುರುಗಳನ್ನು ಹುಡುಕಿಕೊಂಡು ಹೋಗಬೇಕು. ಮಠ-ಮಾನ್ಯಗಳನ್ನು ಸುತ್ತಿ ದೀಕ್ಷೆ ಪಡಕೊಂಡು ಬರಬೇಕು. ನಾನಿನ್ನು ಬರ್‍ತೀನಿ ತಾಯಿ.

ಉತ್ತರಾಜಮ್ಮ : (ಕಣ್ಣೀರು ಹಾಕಿಕೊಂಡು)

ಹಾಂ... ಇದೇನು ಆಚರ್ಯ? ಮೊಗ ಇಷ್ಟು ಬೇಗನೆ ಈಟೊಂದು ದೊಡ್ಡವಾಗಿ ಬೆಳೆದು ನಿಂತ್ಬುಟ್ಟವ್ನೆ! ಮಾತಾಡ್ತಾವ್ನೆ. ಒಂದು ತೊಟ್ಟು ಹಾಲು ಕುಡೀನಿಲ್ಲ. ನಾಲ್ಕಾರು ಜಿನಕೂಡಾ ನಮ್ಮ ಜೊತ್ಯಾಗಿರ್‍ಲಿಲ್ಲ. ಆಗ್ಲೇ ವೋಗ್ಬೇಕು ಅಂತಿಯಲ್ಲ. ಎಷ್ಟೋ ದಿನಗಳ ಮ್ಯಾಗೆ ಮೊಗ ಆಗಿ ಈಗಾಗ್ಲೇ ಬಿಟ್ಟು ವೊಂಟೋಯ್ತೀನಿ ಅಂತಿದ್ದೀಯಲ್ಲ. ನಿನ್ನ ಬುಟ್ಟು ನಾನೆಂಗಿರ್‍ಲಪ್ಪಾ?

ಮಾದೇಶ್ವರ : ಕಾಲ ಬಂದಾಗ ನಿಮ್ಮನ್ನು ನನ್ನ ಮೂಡಲ ಮಲೆ ಕೈಲಾಸಕ್ಕೆ ಕರಿಸ್ಕೊಳ್ತೀನಿ ತಾಯಿ.

(ಕಣ್ಣೀರು ಹಾಕುವುದನ್ನು ನೋಡಿ)
ಸಂತೋಷದಿಂದ ಕಳಿಸ್ಕೊಡವ್ವಾ

ಉತ್ತರಾಜಮ್ಮ: ನಿನ್ನಂತ ದೈವಾಂಸ ಪುರುಸನಿಗೆ ಜನ್ಮ ಕೊಟ್ಟ ನಾನೇ ಪುಣ್ವಂತೆ. ಇದು ಜಲ್ಮಜಲ್ಮಾಂತರದ ಪುಣ್ಯ ಇತ್ತೇನೋ. ಆದ್ರೆ ನೀನು ಈಟೊಂದ ಬೇಗ ವೋಯ್ತೀನಿ ಅಂತೀಯಲ್ಲಾ ನಿನ್ನ ಬುಟ್ಟು ನಾನ್ಯಾಗಿರ್‍ಲಪ್ಪಾ? ಬೋ ದುಕ್ಕಾಯ್ತದೆ. ಯಾವ ಹೆತ್ತ ತಾಯ್ಗ ಮಗನ್ನ ಕಳಿಸಕ್ಕೆ ದುಕ್ವಾಗಲ್ಲ...?

ಮಾದೇಶ್ವರ : ಆದೃಢ ಮನಸ್ಸಿರೋದರಿಂದಲೇ ನಿನ್ನನ್ನು ಹುಡುಕಿಕೊಂಡು ಬಂದು ತಾಯಿಯಾಗಿ ಪಡೆದೆ.

ಉತ್ತರಾಜಮ್ಮ: ಮಗೂ ಬುತ್ತಿ ಕಟ್ಟಿದ್ದೀನಿ, ತಾಳು ತತ್ತೀನಿ (ಹೋಗಿ ಬಂದು) ಇದನ್ನು ದಾರೀಲಿ ವೊಟ್ಟೆ ಹಸಿದಾಗ ಉಣ್ಕೋ... (ಅದನ್ನು ತೆಗೆದುಕೊಂಡು

ಹೆಗಲ ಜೀಲಕ್ಕೆ ಹಾಕಿಕೊಂಡು ನಡೆವ. ತಾಯಿ ಮಗನನ್ನೇ ನೋಡುತ್ತಾ ನಿಂತಳು. ರಂಗಮಂದಿರ ಕತ್ತಲಾಗುವುದು. ಮಾದೇಶ್ವರರೊಬ್ಬರೇ ನಿಂತಿರಲು ಬೆಳಕು ಹರಿಯುವುದು. ರಂಗಮಂಟಪದಲ್ಲಿ ಮಾದೇಶ್ವರರು ಯೋಚಿಸುತ್ತಾ ನಿಂತಿರಲು)

ಕಂಸಾಳೆ ಕಲಾವಿದ: ಮಲೆಯೋ ಹುಲಿವಾಹನವಯ್ಯ ಬರುವಾ ಚಂವಾ
ಆಂ... ನೋಡಿ ನಮ್ಮ ಸಿವನಾ...
ಮಲೆಯೋ ಮಾದೇವ ಮೆರೆವ ಚಂವಾವ!
ನೋಡಿ ನಮ್ಮ ಸಿವನಾ...!

ವಚನ : ಗುರು ಹಡೀಬೇಕು ಅಂತ ಬಂದ್ನಲ್ಲಾ, ನನಗೆ ತಕ್ಕಾದ ಗುರು ಎಲ್ಲಿದ್ದಾರೆ, ಯಾತರ ಇದ್ದಾರೆ ಅಂತ ಯೋಳ್ಬುಟ್ಟು ಆರು ಮೂರು ಘಳಿಗೆಯಲ್ಲಿ ತಮ್ಮ ದೃಷ್ಟಿಯಲ್ಲಿ ನೋಡ್ಬುಟ್ರಂತೆ. ಓಹೋ ಸುತ್ತೂರು ಮಠ ಸುಖಿ ಅಂತ ಏಳ್ತಾರಲ್ಲ. ಸುತ್ತೂರು ಮಠಕ್ಕೆ ಮೊದಲಾಗಿ ಹೋಗವಾ. ಆಸುತ್ತೂರು ಮಠದ ಗುರುಗಳ ನೋಡವಾ ಅಂತ ಏಳ್ಬುಟ್ಟು ನಮ್ಮಪ್ಪಾಜಿಯವರು ಸುತ್ತೂರು ಮಠಕ್ಕೆ ವೋಯ್ತಾರೆ ಮಾದೇವ.

(ಮಾದೇಶ್ವರರು ಸುತ್ತೂರು ಮಠಕ್ಕೆ ಬಂದು ನಿಂತಂತೆ ರಂಗ ಮಂಟಪ ಬೆಳಕಾಗುವುದು.)

ಮಾದೇಶ್ವರ : ಹರ ಹರಾ ಹರನ ಬಿಕ್ಸ, ಗುರುವಿನ ಬಿಕ್ಸ, ಗುರುಕ್ಕಾರಣ್ಯ ಬಿಕ್ಸ.

ಸುತ್ತೂರು ಸ್ವಾಮಿಗಳು : ಯಾರಪ್ಪಾ?

ಮಾದೇಶ್ವರ : ನಾನು ಮಾವಪ್ಪ ಬುದ್ಧಿ. ನಿಮ್ಮ ಮಠಕ್ಕೆ ಸೇರಿಕೊಂಡು ವಿದ್ಯೆ, ಬುದ್ಧಿ ಕಲಿಯಬೇಕು ಅಂತ ಬಂದಿವ್ನಿ ಬುದ್ಧಿ.

ಸ್ವಾಮಿಗಳು : ಮಠದಲ್ಲಿ ಕೆಲಸಕ್ಕೆ ಬರವೇ? ರಾಗಿ ಬೀಸೋ ಕೆಲಸ ಒಂದಿದೆ. ಅದನ್ನು ಮಾಡ್ತೀಯಾ? ಮಾಡು ನಿನಗೆ ಊಟ, ಬಟ್ಟೆ, ವಿದ್ಯೆ ಎಲ್ಲಾ ಕೊಡ್ತೀವಿ.

ಮಾದೇಶ್ವರ : ಆಗ್ಲಿ ಬುದ್ಧಿ, ಮಾಡ್ತೀನಿ.

(ಸಂಗೀತ)

(ಮಠದ ಒಂದೆಡೆ ರಾಗಿಕಲ್ಲು. ದೊಡ್ಡ ತೊಂಬೆಯಲ್ಲಿ ರಾಗಿ ತುಂಬಿದೆ. ಅದನ್ನು ಮಾದೇಶ್ವರರು ಮುಟ್ಟಿದ ಕೂಡಲೇ ಗರಗರನೆ ಬೀಸಿ ಹಿಟ್ಟಾಯಿತು. ಗುರುಗಳು ಅದನ್ನೇ ನೋಡುತ್ತಿದ್ದರು.)

ಸ್ವಾಮಿಗಳು : ಭಲೇ... ಮಾದಪ್ಪ ನೀನು ಸಾಮಾನ್ಯನಲ್ಲ.

ಮಾದೇಶ್ವರ : ಇದೆಲ್ಲಾ ನಿಮ್ಮ ಆಶೀರ್ವಾದದ ಬಲ ಗುರುದೇವಾ.

(ಹಿನ್ನೆಲೆಯಲ್ಲಿ ಕೆಲವುಶಿಷ್ಯರು "ಸುತ್ತೂರು ಮಠ ಸುಖ ಅಂದ್ರೆ ಕುಕ್ಕೇಲಿ ತುಂಬಿತ್ತುರಾಗಿ..." ಎಂಬ ದನಿಯು ಎತ್ತರದಿಂದ ಆರಂಭವಾಗಿ ಹಾಗೆಯೇ ಲೀನವಾಗುವುದು. ರಂಗಮಂಟಪ ಕತ್ತಲಾಗಿ ಹಾಗೆಯೇ ಬೆಳಕು ಚೆಲ್ಲುವುದು. ಮಾದೇಶ್ವರರು ಕುಂತೂರು ಮಠಕ್ಕೆ ಹೋಗುವ ಮನಸ್ಸು ಮಾಡಿ ಗುರುಗಳಿಗೆ ನಮಸ್ಕರಿಸಿ)

ಮಾದೇಶ್ವರ : ಗುರುದೇವಾ... ಅಷ್ಟು ದಿನಗಳಿಂದ ಸಾಕಷ್ಟು ವಿದ್ಯೆಬುದ್ಧಿ ಕಲಿತೆ. ನನಗೆ ಮುಂದಿನ ಊರಿಗೆ ಹೋಗಲು ಅಪ್ಪಣೆ ಕೊಡಿ.

ಸ್ವಾಮಿಗಳು : ನೀನು ಇಲ್ಲೇ ಇರಬೇಕು ಮಾದೇಶ್ವರ, ನಿನ್ನಂಥ ಶಿಷ್ಯರು ಅಪರೂಪ!

ಮಾದೇಶ್ವರ : ಇಲ್ಲ ಗುರುದೇವಾ ನಾನು ಇದ್ದ ಕುರುಹಿಗಾಗಿ ಈ ತ್ರಿಶೂಲ, ಹೆಗಲೊಸೆ, ಕಾಲಿನ ಜಂಗು ಇಟ್ಟು ಹೋಗುತ್ತೇನೆ.

ಸ್ವಾಮಿಗಳು : ಇದೇ ಕೊನೆಯ ನಿರ್ಧಾರವೇ?

ಮಾದೇಶ್ವರ : ಹೌದು ಗುರುದೇವಾ...

ಸ್ವಾಮಿಗಳು : ಹೋಗಿ ಬಾರಪ್ಪಾ ನಿನಗೆ ಮಂಗಳವಾಗಲೀ...

(ಸಂಗೀತ)

(ಕಂಸಾಳೆಯವರು) ಹಾಡು...

ಮಂಡೇಲಿ ಕಿರೀಟ, ಕೈಯಲ್ಲಿ ಬೆತ್ತ ಹಿಡಿದರು ಮಾದೇವಾ।
ಕುಂತೂರು ಮಠದ ಪಂಚೇಳು ಬಿನ್ನಕೆ ಬಂದರು ಮಾದೇವಾ।
ಕುಂತೂರು ಬಟ್ಟಲು ಕೈಯೊಳಗೇ ನನ್ನ ನಾಗಮಲೆ ಮಾದೇವನಿಗೆ।
ಕುಂತೂರು ಮಠದ ಪಂಚೇಳು ಬಿನ್ನಕೆ ಬಂದರು ಮಾದೇವಾ ಘನ
ಮಂಡೇಲಿ ಕಿರೀಟ, ಕೈಯಲ್ಲಿ ಬೆತ್ತ ಹಿಡದರು ಮಾದೇವಾ।
ಕುಂತೂರು ಮಠದ ಪಂಕ್ತಿಯ ಬಿನ್ನಕೆ ಬರುತಾರು ಮಾದೇವಾ।
ಹುಟ್ಟುಗಲ್ಲು ಹುಲಿ ಮಾಡವನೇ ಏಳು ಮಲೆ ಮಾದೇವೋ॥

ಪ್ರಭುಸ್ವಾಮಿಗಳು : ಯಾರಪ್ಪಾ ಮಗು?

ಮಾದೇಶ್ವರ : ನಾನೊಬ್ಬ ನಿಮ್ಮ ಶಿಷ್ಯನಾಗಿ ಬಯಸಿ ಬಂದವ. ನನ್ನನ್ನು ಮರಿದೇವರು, ಮಾದಪ್ಪ ಎಂದು ಕರೀತಾರೆ. ನಾನು ನಿಮ್ಮಿಂದ ದೀಕ್ಷೆ ಪಡೆಯಬೇಕು, ವಿದ್ಯೆ-ಬುದ್ಧಿ ಕಲಿಯಬೇಕು ಅಂತ ಆಸೆ ಹೊತ್ಕಂಡು ಬಂದಿದ್ದೀನಿ ಬುದ್ಧಿ.

ಪ್ರಭುಸ್ವಾಮಿಗಳು : ಆಕಾಶ ನೋಡೋಕೆ ನೂಕು ನುಗ್ಗಲೇ? ಬಾರಪ್ಪಾ ಸೇರಿಕೋ, ವಿದ್ಯೆ-ಬುದ್ಧಿ ಕಲಿ, ದೀಕ್ಷೆ ಪಡ್ಕೋ. ನಮ್ಮ ಮಠದಲ್ಲಿ ಹೂವಿನ ಊಳಿಗ ಮಾಡು, ದನಕರುಗಳನ್ನು ಕಾದುಕೊಂಡಿರು ಮರಿದೇವರೇ.

ಮಾದೇಶ್ವರ : ಬಹಳ ಸಂತೋಷ ಗುರುಗಳೇ, ತಾವು ಹೇಳಿದ ಕೆಲಸಗಳನ್ನೆಲ್ಲಾ ಮಾಡಿಕೊಂಡು ಹೋಗ್ತೀನಿ.

ಪ್ರಭುಸ್ವಾಮಿಗಳು : ಆಗ್ಲಪ್ಪಾ...

ಆಂ... ನೋಡಿ ನಮ್ಮ ಸಿವನಾ।
ಮಲೇಯೋ ಮಾದೇವ ಬರುವ ಚಂದವಾ।
ಆಂ... ನೋಡಿ ನಮ್ಮ ಸಿವನಾ॥

(ಹರ್ಷ ಸಂಗೀತ)

(ಪ್ರಭುದೇವರು ಪೂಜೆಗೆ ಕುಳಿತಿದ್ದಾರೆ. ಕೆಲವು ಶಿಷ್ಯರು ಕೈಕಟ್ಟಿಕೊಂಡು ನಿಂತಿದ್ದಾರೆ.)

ಪ್ರಭುಸ್ವಾಮಿಗಳು : ಏನು ಎಲ್ಲಾ ಬರೇ ಪತ್ರಗಳನ್ನು ತಂದಿದ್ದೀರಿ...?

ಶಿಷ್ಯ೧ : ಈ ಸರಿ ಬ್ಯಾಸ್ಗೆಯಾಗೆ ನೆಲದ ನೀರ್ನೆಲ್ಲಾ ಸೂರ್ಯನೇ ಹೀರ್ಕೊಂಡು ಗಿಡ್ಗಳು ತಾನೆ ಏನ ಹೂವು ಬಿಟ್ಟಾವು?

ಶಿಷ್ಯ೨ : ಗಿಡ್ಗಳೇ ಬೋಳಾಗಿ ಪತ್ರಗಳೇ ಸಿಕ್ಕದೇ ಇರುವಾಗ...?

(ಅಷ್ಟರಲ್ಲಿ ಮಾದೇಶ್ವರ ಘಮಘಮಿಸುವ ಹೂಗಳನ್ನು ತಂದು ಗುರುಗಳ ಪೂಜೆಗೆ ಸುರಿದ.)

ಪ್ರಭುಸ್ವಾಮಿಗಳು : ಸಾಕು ನಿಲ್ಲಿಸಿ ನಿಮ್ಮ ಪುರಾಣ. ಈಗ ಬಂದ ಹೊಸ ಚಿಟುಗನಿಗೆ ಹೇಗೆ ಸಿಕ್ತು? ನೀವು ಅಷ್ಟು ವರ್ಷಗಳಿದ್ದರೂ ಅರದಂಡೆಯಾಯ್ತು ಹೋಗಿ.

(ಎಲ್ಲರೂ ತಲೆತಗ್ಗಿಸಿಕೊಂಡರು. ಘಂಟಾನಾದವಾಗುತ್ತಿದ್ದಂತೆ ರಂಗಮಂಟಪ ಕತ್ತಲಾಗುವುದು.)

(ಸಂಗೀತ)

ಶಿಷ್ಯ೧ : ಈ ಹೊತ್ತು ಮಾದಪ್ಪ ಎಲ್ಲಿ ಹೂವ ತತ್ತಾನೆ ಅನ್ನದನ್ನ ನೋಡ್ಲೇಬೇಕು.

ಶಿಷ್ಯ೨ : ಹೌದು...ಗುರ್ಗೂಳೇನೂ ಸುಳ್ಳೇಳ್ಳಿಲ್ಲ.

ಶಿಷ್ಯ೧ : ನಮಗೆ ಸಿಕ್ಕೇವೋದ್ದು ಅವನ್ಯಾಗೆ ಸಿಕ್ತು?

ಶಿಷ್ಯ೨ : ನೋಡಕ್ಕೆ ಹೊಂಟೀವಲ್ಲ ನಡೀರಿ, ಮರ್‍ಯಾಗಿ ನಿಂತ್ಕಂಡು ನೋಡವಾ.

ಶಿಷ್ಯ೧ : ಅದೋ ಅಲ್ಲಿ ದನ್ಗಳ ಬುಟ್ಕಂಡು, ಲಗ್ಗೆ ಚಂಡಾಟ ಆಡ್ತಾ ಅವ್ನೆ ಮರಿದೇವ್ರು.

ಶಿಷ್ಯ೨ : ಅಷ್ಟಾದ್ಕಂಡು ಏನಾರ ತತ್ತಾನಲ್ಲ, ಎಲ್ಲಿ ತತ್ತಾನೆ ನೋಡವ. ಮುಚ್ಚಂಜೆ ಆತು...ಓ...ಈ ಕಡೆ ಬತ್ತಾ ಅವ್ನೆ!

(ಮಾದಪ್ಪ ಬುಟ್ಟಿಗೆ ಸಿಕ್ಕಿದ ಹಾವು, ಚೇಳು ಎಲ್ಲಾನೂ ಹಾಕಿದ. ಕೆಲವು ಬುಟ್ಟಿಗೆ ಬಂದು ಬಿದ್ದುವು.)

ಮಾದೇಶ್ವರ : ಎಲೈ ಪ್ರಾಣಿಗಳೇ... ಬನ್ನಿ.. ಬನ್ನಿ...

ಶಿಷ್ಯ : ನೋಡಿದ್ರಾ ಹಾವು, ಚೇಳು, ಗೊದ್ದ, ಗೋಸಂಬೆಗಳನ್ನು ಬುಟ್ಟಿಗಾಕ್ಕಂಡಾ, ಯಾಕೋ. ಹಳ್ಳದತ್ತ ವೋದ, ನೀರಿಗದ್ದಿದ...!

ಮಾದೇಶ್ವರ : ಎಲೈ ಪ್ರಾಣಿಗಳೇ, ನೀವು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತವು ನಿಮಗಿಂದು ಲಭಿಸಿದೆ. ಈಗಲಾದರೂ ಪರಶಿವನ ತಲೆಯ ಮೇಲೆ ಹೂವಾಗಿ ಬಿದ್ದು ಪಾಪವನ್ನು ಕಳೆದುಕೊಂಡು ಪುಣ್ಯ ಪಡೆಯಿರಿ. ಪ್ರಭುಲಿಂಗ ಸ್ವಾಮಿಗಳೇ ನಿಮ್ಮ ಕೃಪೆಯಿಂದ ಇವೆಲ್ಲಾ ಹೂವಾಗಲಿ.

ಶಿಷ್ಯ೨ : ಓ... ಹೂಗಳಾದ್ವು... ಇವನು ಸಾಮಾನ್ಯನಲ್ಲ...

ಶಿಷ್ಯ೧ : ವಾಸನೆ ನೋಡು ಹ್ಯಾಗಿದೆ. ಇವನು ಅವತಾರದ ಪುರುಸನೇ ಇರಬ್ಯಾಕು.

ಶಿಷ್ಯ೨ : ಗುರುಗಳತ್ರ ವೋಗಿ ಯೇಳನ ನಡಿ.

ಶಿಷ್ಯ೧ : ಓ! ಗುರುಗಳು ಇಲ್ಲೇ ಅವ್ರೆ.

ಪ್ರಭು : ಏನು?

ಶಿಷ್ಯ೧ : ನಾವು ಮಾಡಿದ್ದು ತಪ್ಪಾಯ್ತು ಗುರುಗಳೇ, ಈಗ ಬಂದಿರುವಾತ ಮಾವಪ್ಪ ಸಾಮಾನ್ಯನಲ್ಲ ಬುದ್ಧಿ.

ಪ್ರಭು : ನಾನು ಅದನ್ನೆಲ್ಲ ಗಮನಿಸಿದೆ.

(ಅಷ್ಟರಲ್ಲಿ ಮಾದೇಶ್ವರ ಬಂದು ಕೈ ಮುಗಿದು ನಿಂತ. ಶಿಷ್ಯರೆಲ್ಲಾ ಮಾದಪ್ಪನ ಕಾಲಿಗೆ ಬಿದ್ದು)

ಶಿಷ್ಯ೧ : ನಮ್ಮನ್ನು ಕ್ಷಮಿಸು ಮಾದಪ್ಪಾ...

ಮಾದೇಶ್ವರ : ಏನು... ಏನು... ಇದೆಲ್ಲಾ. ಮೇಲೇಳಿ.

ಪ್ರಭು : ನೀನು ಸಾಮಾನ್ಯ ವ್ಯಕ್ತಿಯಲ್ಲ ಮಾದಪ್ಪ. ನೀನು ಇಂದಿನಿಂದ ಮಾದೇಶ್ವರ. ಬರೇ ಮಾದೇವರಲ್ಲ, ಮಾದಪ್ಪನಲ್ಲ, ಮಹಾದೀಶ್ವರ.

ಮಾದಪ್ಪ : ಇವೆಲ್ಲಾ ದೊಡ್ಡ ಮಾತುಗಳು ಗುರುದೇವಾ, ತಮ್ಮಿಂದ ಈಗ ದೊಡ್ಡ ನಾಮಕರಣವಾಯಿತು, ಇನ್ನು ದೀಕ್ಷೆಯಾಗ ಬೇಕು.

ಪ್ರಭು : ಅಗತ್ಯವಾಗಿ ಆಗಲಿ ಮಗೂ... ನಿನ್ನ ಬಗೆಗ ಸುತ್ತೂರಿನಲ್ಲಿದ್ದಾಗಲೇ ಕೇಳಿದ್ದೆ. ಹಾವು ಕಚ್ಚಿ ಸತ್ತಿದ್ದವನನ್ನು ಬದುಕಿಸಿದ್ದೆ, ದನಗಳನ್ನು ಆಶೀರ್ವದಿಸಿ ಬಾಯಿಲೆ ವಾಸಿ ಮಾಡಿದ್ದೆ, ರಾಗಿ ಬೀಸಿದ ಪವಾಡ ಮಾಡಿದ್ದೆ ಎಂದು ಕೇಳಿದ್ದೆ. ಇಂದು ಹೂವಿನ ಪವಾಡವನ್ನು ಕಂಡೆ. ನಿಜಕ್ಕೂ ನಿನ್ನ ಮಹತ್ತು ಬೃಹತ್ತಾದುದು. ನಮ್ಮ ಮಠದ ಮುಂದಿನ ಅಧಿಕಾರಿಯಾಗಲು ನೀನು ಎಲ್ಲಾ ವಿಧಗಳಲ್ಲೂ ಅರ್ಹ.

ಮಾದಪ್ಪ : ಇದು ಆನೆಯ ಭಾರವನ್ನು ಹೊತ್ತ ಆಮೆಯ ಸ್ಥಿತಿಯಾಗುತ್ತದೆ ಗುರುಗಳೇ.

ಪ್ರಭು : ನಮ್ಮ ಶಿವಲೋಕದ ಯಾತ್ರೆ ಸಿದ್ಧವಾಗಿದೆ.

ಮಾದಪ್ಪ : ಹಾಗಾದರೆ ಮುಂದೆ?

ಪ್ರಭು : ನೀನು ಅದಕ್ಕೆ ಯೋಚಿಸಬೇಕಿಲ್ಲ ಮಗು. ಹುಟ್ಟಿದವನು ಎಂದಾದರೂ ಸಾಯಲೇಬೇಕು.

ಮಾದಪ್ಪ : ತಮ್ಮ ಸಂದೇಶ.

ಪ್ರಭು : ನಿನಗೆ ವೈರಾಗ್ಯ, ವಿವೇಕ, ಷಟ್ಸಂಪತ್ತು, ವಿದ್ವತ್ತು, ಅನುಭಾವ, ಅನುಸಂಧಾನ, ಸರ್ವಪ್ರೇಮ, ಮಹಾಮುನಿತ್ವವಿದೆ. ಜನನ-ಮರಣಾತ್ಮಕ ಸಂಸಾರದ ಚಕ್ರದಲ್ಲಿ ಉರುಳುತ್ತಿರುವ ಮಾನವನನ್ನು ಮಹೋನ್ನತವಾದ ಶಾಂತಿಪ್ರದವಾದ ಮೋಕ್ಷ ಸ್ಥಾನಕ್ಕೊಯ್ಯಲು ಮುಖ್ಯ ಪುರುಷನನ್ನಾಗಿ ಸ್ವೀಕರಿಸುತ್ತಿರುವುದು.

ಮಾದಪ್ಪ : ನನ್ನ ಶಿವಯೋಗಕ್ಕೆ ಯೋಗ್ಯವಾದ ನೆಲ ಯಾವುದು ಗುರುಗಳೇ?

ಪ್ರಭು : ಕಾವೇರಿ ತೀರದ ಪೊನ್ನಾಚಿ ಬೆಟ್ಟದ ತಪ್ಪಲಿನ ಪೂರ್ವ ಘಟ್ಟಗಳ ಮಧ್ಯೆ ಆನೆಮಲೆ, ಕಾನಮಲೆ, ಗುತ್ತಿಮಲೆ, ಗುಲಗಂಜಿಮಲೆ, ಪಚ್ಚಮಲೆ, ಎಪ್ಪತ್ತೇಳು ಮಲೆಗಳ ಮಧ್ಯದ ವಜ್ರಮಲೆಯಲ್ಲಿ ನಿನ್ನ ತಪಸ್ಸು ಸಿದ್ಧಿಸುತ್ತದೆ. ಅದು ಮುಂದಿನ ಪುಣ್ಯಕ್ಷೇತ್ರವಾಗುತ್ತದೆ.

ಮಾದೇಶ್ವರ : ಎಲ್ಲಾ ತಮ್ಮ ಆಶೀರ್ವಾದ ಗುರುಗಳೇ.

ಪ್ರಭು : ನಡೆಯಿರಿ, ಮಠದತ್ತ ಹೋಗೋಣ. (ದಾರಿಯಲ್ಲಿ ಹೋಗುತ್ತಾ) ಮಾದಪ್ಪ ನಾಳೆಯಿಂದ ಬಸವಣ್ಣನಿಗೆ ಪೂಜೆ ಮಾಡಿ ತಳಿಗ ಅನ್ನ ಎಡೆಮಾಡಿಕೊಂಡು ಬಾರಪ್ಪಾ.

ಮಾದೇಶ್ವರ : ಆಗಲಿ ಗುರುಗಳೇ.

(ಎಲ್ಲರೂ ಹೊರಡುವರು, ರಂಗಮಂಟಪ ಕತ್ತಲಾಗುವುದು. ಹರ್ಷ ಸಂಗೀತ)

* * *

**ಸಾಲು-೨**

ಕಂಸಾಳೆ ಮೇಳ...

ಕೋಲು ಮಂಡೆ ಜಂಗಮರು ಕ್ಷಾರಣ್ಯಕ್ಕೆ ದಯ ಮಾಡಿದರು
ಗುರು ಮಾದಯ್ಯನೆ ದಯಮಾಡವರೇ
ಕ್ಷಾರಣ್ಯಗಳ ನೀಡಮ್ಮ ಕೋಪುಗಲ್ಲು ಮುನಿಗೆ॥
ನೋಡಿ ನಮ್ಮ ಶಿವನ।

ವಚನ : *ಕೌದಳ್ಳಿ ಒಳಗೆ ಕಾಳಮ್ಮ ಅಂತಕ್ಕವಳು ಬಹಳ ಬಡಸ್ತಾನ ಬನ್ಬುಟ್ಟು ಅವಳ ಗಂಡ ಕೆಂಪೇಗೌಡ, ಅವಳಿಗೆ ಏಳು ಜನ ಗಂಡು ಮಕ್ಕಳು. ಆ ಮಕ್ಕಳನ್ನು ಸಾಕಕ್ಕಾಗ್ದೇ ಆ ಮಕ್ಕಳನ್ನು ತಕ್ಕಂಡೋಗ್ಬುಟ್ಟು ಅವಳ ಅಣ್ಣ ಆಲಂಬಾಡಿ ಜಂಜೆಗೌಡನ ಮನೆಗೆ ಬಿಟ್ಬುಟ್ಟು ಕಾಳಮ್ಮ ಮತ್ತು ಅವಳ ಗಂಡ ಇಬ್ರೂ ಕೌದಳ್ಳಿ ಒಳಗೆ ಉಣ್ಣಕ್ಕೆ ಅನ್ನಿಲ್ದೆ, ಉಟ್ಗಳಕ್ಕೆ ಬಟ್ಟಿಲ್ಲದೆ, ಬಡಸ್ತಾನದಲ್ಲಿ ಎಲ್ಲರ ಮನೇಲಿ ಕವಳ ಎತ್ಕಂಡು ಒಬ್ಬರ ಜಗಲಿಮ್ಯಾಲೆ ಕೂತ್ಕಂಡು ತಿನ್ಬುಟ್ಟು ಬಾಳ ಬಡಸ್ತಾನದಲ್ಲಿ ಕೂತವಳೇ.*

ಆಂ... ನೋಡಿ ನಮ್ಮ ಸಿವನಾ
ಮಲೆಯೋ ಮಹದೇವ ಬರುವ ಚಂದಾವ
ನೋಡಿ ನಮ್ಮ ಸಿವನ...

(ಮಾದೇಶ್ವರರು ಬರುತ್ತಿರಲು)

ಮಾದೇಶ್ವರರು ಕೈಲಾಸಕ್ಕೆ ಹೋಗುವಂತ ಕಾಲದಲ್ಲಿ ಜಂಗು ಜಲೀರ್ ಅಂತು,

ಲಿಂಗ ಗಲೀರ್ ಅನ್ಬುದ್ದು. ಜಂಗಿನ ಮೊರೆತ ಕೇಳ್ಬುಟ್ಟು, ಲಿಂಗದ ಬೆಳಕ ನೋಡ್ಬುಟ್ಟು, ಗುಡೀರ್ನೆ ಮೇಲಕ್ಕೆ ಎದ್ದು ಕೂತುಬಿಟ್ಟು ಪಾದ ಹಿಡ್ದು ಪಟ್ಟಾಭಿಸೇಕ ಮಾಡ್ಬುಟ್ಟು ನಾನು ಬ್ಯಾಗ ಕೇಳ್ಬೇಕಲ್ಲಾ ಅನ್ಬುಟ್ಟು ಕಾಳಮ್ಮನಾಗಿರತಕ್ಕಂತವಳು ಜಗಲಿಯಿಂದ ಕೆಳಗೆ ಬಂದು ನಿಂತ್ಕಂಡು ನಮ್ಮಪ್ಪಾಜಿಯವರ ಪಾದ ಹಿಡಿದವಳೇ ಕಾಳಮ್ಮ...

ಬೇವಿನಕಾಳಿ : ಮಾತಾಡು ಮಾತಾಡು ಲಿಂಗವೇ। ಮಾತಾಡು ಕಾಸಿಯ
ಲಿಂಗವೇ ಮಾತಾಡದಿದ್ದರೆ ನಾ ತಾಳಲಾರೆ।
ಮಾತಾಡು ಮಾದೇವನ ಲಿಂಗವೇ
ಮಾದೇವ ನಾನರಿಯೆ ನಿನ್ನ ಮಾಯೆ
ನಾನರಿಯೆ ಮಾಯೆ... ಮಾತಾಡು ಮಾತಾಡು ಸಿವನಾ।
ಲಿಂಗವೇ ಮಾತಾಡು ಮಾದೇವನ ಲಿಂಗವೇ।
ಮಾತಾಡದಿದ್ದರೆ ನಾ ತಾಳಲಾರೆನು।
ಮಾತಾಡು ಮಾದೇವ ಲಿಂಗವೇ।
ಮಾದೇವ ನಾನರಿಯೆ ನಿನ್ನ ಮಾಯೆ।

ಬೇವಿನಕಾಳಿ : ಗುರುವೇ ನಾನು ಈ ಒಡಕೇ ಹಳ್ಳದ ಬೇವಿನ ಕಾಳಿ, ನನ್ನ ಗಂಡ ಕೆಂಪೇಗೌಡ. ನಾನು ಆಲಂಬಾಡಿ ಜುಂಜೈ ತಂಗಿ. ನನಗೆ ಬಹಳ ಬಡಸ್ತಾನ ಬಂದು, ಏಳು ಜನ ಮಕ್ಕಳನ್ನು ಅಣ್ಣನ ಮನೆಗೆ ಕಳುಸಿವ್ನಿ. ನನ್ನ ಬಡಸ್ತಾನ ಬಯಲು ಮಾಡಿ, ಸಿರಿಸ್ತನ ಮಾಡಿ ನನಗೆ ಬಾಗ್ಯ ಕೊಡು ಗುರುವೇ.

ಮಾದೇಶ್ವರ : ನಾನು ಮೂಡಲಮರೆ ಕೈಲಾಸದಲ್ಲಿ ನೆಲಸಿದ್ದೀನಿ. ನೀನು ತಿಂಗಳಿಗೊಂದಾವರ್ತಿ ತುಂಬಿದ ಅಮಾವಾಸ್ಯೆಯ ದಿನ ಬಂದು ಕಾಸಿನ ಧೂಪ ಹಾಕಿ ಕರವೆತ್ತಿ ಕೈಮುಗಿದು ಹನ್ನೊಂದು ತಿಂಗಳು ನೋಡಿಬಿಟ್ಟು ಹನ್ನೆರಡು ತಿಂಗಳು ನಾನು ಭಾಗ್ಯ ಕೊಡ್ತೀನಿ ಕಂದವ್ವಾ...

ಬೇವಿನಕಾಳಿ : ಆಗಲಿ ಗುರುವೇ...

(ಹರ್ಷ ಸಂಗೀತ)

(ಬೇವಿನ ಕಾಳಿ ಮಾದೇಶ್ವರನನ್ನು ಪೂಜೆ ಮಾಡುವಳು, ದೇವಾಜಿ ಬರುತ್ತಾ)

ದೇವಾಜಮ್ಮ : ಅತ್ತೇ... ಒಡ್ಬನ್ನಿ ಕೊಪ್ಪರಿಕೆ ಹಣವನ್ನು ಮಾದ್ಯಾವ ಇಟ್ಟು ಮೋಗವ್ನೆ...

ಬೇವಿನಕಾಳಿ : ನಾನು ನಂಬಿ ಪೂಜೆಸಿದ್ದಕ್ಕೆ ಆತ ಯೇಳ್ದಂಗೆ ಕೊಟ್ಬೋಗವ್ನೆ... ನನ್ನಂತ ಪುಣ್ವಂತೆ ಯಾರೂ ಇಲ್ಲ, ನಡೀ ನೋಡವಾ...

(ದೂರದಿಂದ): ಅಯ್ಯೋ... ಮಾದೇವಾ.. ಮಾದೇವಾ... ಮನೆ ತುಂಬ ಬಾಗ್ಯ ಕೊಟ್ಬುಟ್ಯಲ್ಲಪ್ಪಾ...

(ಹರ್ಷ ಸಂಗೀತ) .

ಮಾದೇಶ್ವರ : ಒಡಕೇ ಹಳ್ಳದ ಕಾಳಮ್ಮನಿಗೆ ಭಾಗ್ಯಕೊಟ್ಟೆ. ಇನ್ನು ಆಕೆಯ ದೃಢ ಮನವನ್ನು ಪರೀಕ್ಷಿಸಬೇಕು. ಅವಳಿಂದ ಎಳ್ಳಿನ ದಾನ ಪಡೀಬೇಕು. ಅವಳ ಆಡಳಿತ ಸ್ವಲ್ಪ ನೋಡಬೇಕಲ್ಲಾ...

(ಮಾದೇಶ್ವರರು, ಬೇವಿನಕಾಳಿಯ ಮನೆಗೆ ಬಂದರು)

ಬೇವಿನಕಾಳಿ : ಆಲಾಜಿ, ಬ್ಯಾಲಾಜಿ, ನಿಂಗಾಜಿ, ನೀಲಾಜಿ, ಸುವರ್ಣ, ಪದ್ಮಾವತಿ, ದೇವಾಜಿ ಎಲ್ಲಾ ಏನು ಮಾಡ್ತಾ ಇದ್ದೀರಿ? (ಗುಡುಗುವಳು)

ದೇವಾಜಿ : ಕಾಲ್ಗೆ ನೀರು ತತ್ತೀವ್ನಿ ಅತ್ತೆಮ್ಮಾ...

ಬೇವಿನಕಾಳಿ : ಎಪ್ಪತ್ತು ಕಂಡುಗ ಎಳ್ಳು ಬೆಳ್ದಾಕ್ಕುಟ್ಟು ಬಂದಿವ್ನಿ. ತಲ್ಗೊಂದಿಡಿ ತಿನ್ಬುಟ್ರೆ ರಾಸಿ ಕಮ್ಮಿ ಆಗೋಯ್ತದೆ. ಬಿರ ಬಿರ್ನೇ ಅಡ್ಗೆ ಮಾಡಿ.

ದೇವಾಜಿ : ಪಾಲು ಪಂಚಾಮೃತ ಮಾಡಿವ್ನೆ ಅತ್ತೆ.

ಬೇವಿನಕಾಳಿ : ಯಾರ್ನ ಕೇಳಿ ಮಾಡ್ದೆ? ತೆಳ್ಳಗೆ ಅಂಬ್ಲಿನಲ್ವಾ ಮಾಡದು?

ದೇವಾಜಿ : ಅದ್ನೂ ಮಾಡಿವ್ನಿ ನಮ್ಗೆ.

ಬೇವಿನಕಾಳಿ : ಅದ್ನೇ ತಕ್ಕಂಬಾ... (ಬೆರಳು ಹಾಕಿ ನೋಡಿ) ಇಷ್ಟು ಗಟ್ಟಿಗಾ ಮಾಡದು? ಇನ್ನೊಸಿ ನೀರಾಕಿದ್ರೆ ಎಚ್ತಿರ್ನಿಲ್ವಾ? ನಿನ್ಗೇನಾರ ಬುದ್ಧಿ ನೆಟ್ಟಿತಾ ಎಂಗೆ? ನಾನು ಎಳ್ಳು ಕಣಕ್ಕೆ ವಾದಮ್ಯಾಲೆ ಅಯ್ಯಗಳು, ಅಪ್ಪಗಳು, ಗುಡ್ಡಜೋಗಿ, ಗುರು ಜಂಗಮರುಗಳು ಬರ್ತಾರೆ. ಅವರ್ಗೆಲ್ಲಾ ಒಂದೊಂದಿಡಿ ಕೊಟ್ರೆ ರಾಗಿ ಕಾಲಿ ಆಗ್ಬುಡ್ತದೆ. ಸುಣ್ಣ ಕೊಡು ಅಂತಾರೆ. ಪ್ರಾಣ ವೋಯ್ತದೆ ನೀರು ಕೊಡು ಅಂದ್ರೂ ಕೊಡಬ್ಯಾಡ.ರಾಗಿ ಕಲ್ಲಿನ ಸುತ್ತಾ ಉಕ್ಕಿನ ಜೂಚಿ ಊಳ್ಸವ್ವಾ, ಹದ್ದು, ಪಾರಿವಾಳ, ಗುಬ್ಬಚ್ಚಿ ಎಲ್ಲಾ ಬರ್ತಾವೆ, ಕಾಳು ಕುಟುಕ್ತವೆ. ಮೊದ್ಲು ಮಂಜಿನ ಬಲೆ ಬೀಸು.

ದೇವಾಜಿ : ಆಯ್ತು ನೀವು ಊಟ ಮಾಡತ್ತೆಮ್ಮ.

ಬೇವಿನಕಾಳಿ : ಅಯ್ಯೋ ಹಾಳಾದ ನೊಣ ಬಿದ್ದುಬಿಡ್ತು. ತರೀನೆಲ್ಲಾ ಕಾಲ್ಗಂಟಸ್ಕಂಬುಡ್ತು.

ದೇವಾಜಿ : ತಗ್ದೆಸ್ತುಬಿಡಿ.

ಬೇವಿನಕಾಳಿ : ಎಂತಾ ಮಾತ ಯೋಳ್ದೆ. ನಿಮ್ಮಪ್ಪನ ಮನೆಯಿಂದ ತಂದು ನಿನ್ನೆದೆ ನೊರಕ್ಕಂದೋಗಿತ್ತಾ? ಅದ್ನೆಲ್ಲಾ ಚೀಪ್ಕಂಡು ಎಸೀತೀನಿ ತಾಳು.

(ಅದರ ಕಾಲನ್ನು ಚೀಪಿ ಎಸೆಯುತ್ತಾಳೆ)

(ಸಂಗೀತ)

ವಚನ : ಬೇವಿನಕಾಳಿ ಮೇಲಕ್ಕೇಳಕ್ಕೋದ್ರೆ ಮೂಡೆಗಾತ್ರ ಡೊಳ್ಳು, ಮುಂಗೈನ ಮೇಲೆ ಮಡಿಕ್ಕಂಡು, ನನ್ನ ಸಟೀಗೆ ಎತ್ತಿಬನ್ನಿ ಅಂತ ಯೋಳ್ಬುಟ್ಲು.

ಮೂರು ಜನ ಈಚರಿ ರಟ್ಟೆ, ಮೂರು ಜನ ಆಚರಿ ರಟ್ಟೆ, ಇಬ್ಬರು ನಡ ತಬ್ಬಿ ಇಡ್ಕಂಬಿಟ್ರು. ಅಷ್ಟು ದೂರ ಹೋಗಿ ದೊಪ್ಪನೆ ಕೆಳಗೆ ಬಿದ್ಲು. ಇದೇ ತರವಾಗಿ ಎರಡು-ಮೂರು ಸಾರಿ ಆಯ್ತು. ಕೋಪ ಕಾರ್ಕಂಡು ಗುಟ್ರಾಕಿವರೆ, ಮುಂಗಾರು ಸಿಡ್ಲಾಡಂಗಾಗೋಯ್ತು. ಒಂದು ಕವಳಿಗೆ ಎಲೆ ಒಂದು ಬಳ್ಳ ಅಡಿಕೆ, ಬ್ಯಾಲದಕಾಯಿ ಗಾತ್ರ ಸುಣ್ಣ ತಂದು ದ್ಯಾವಾಜಮ್ಮ ಸುಣ್ಣವನ್ನು ಕಪ್ಪಡಿಸಿ ಕಪ್ಪಡಿಸಿ ಆಕ್ತವ್ಳಲ್ಲಾ ದ್ಯಾವಾಜಮ್ಮ ಹಲಸಿನಕಾಯಿ ಗಾತ್ರದ ತಾಂಬೂಲ ಒತ್ತರಿಸಿಕೊಂಡು ಏಳು ಮೊಳ ಸೀರೆ ಉಟ್ಕೊಂಡು, ತೇಗಿನ ಗಾಡಿ ಮ್ಯಾಲೆ ಮಡ್ಗದ್ಲು. ಚಕ್ರ ಅಂತಸ್ಕದ್ದು ಪೂತೋಯ್ತಲ್ಲಾ. ಕಣ್ಗೆಲ್ಲಾ ಪೊರೆ ಬನ್ಬುಟ್ಟಿದೆ. ಅವಳು ತೇಗಿನ ಗಾಡಿ ಮ್ಯಾಲೆ ಕೂತ್ಕಂಡು ಎಳ್ಳು ಕಣಕ್ಕೆ ಓಯ್ತಾವಳೆ. ಅಲ್ಲಿಗೆ ಮಾದಪ್ಪನವರು ಬಿಕ್ಷೆಗೆ ಬತ್ತಾ ಅವ್ರೆ.

"ಮಾದೇವಾ... ನೋಡಿ ನಮ್ಮ ಸಿವನಾ।
ಮಲೆಯೋ ಮಾದೇವ ಬರುವ ಚಂದಾವ।
ಕಾಡಿ ಬೇಡಿ ಸಿವನಾ..."

ಮಾದೇಶ್ವರ : ಕಚ್ಕೋನಾಯಿ, ಕಾಳಿಂಗಸರ್ಪ, ಬಿಚ್ಚುಗತ್ತಿ ಪಾರಾ ಇದೆ. ಈ ಹಟ್ಟಿಗೆ ನಾನು ಪ್ಯಾಗಾರು ನುಗ್ಗಬೇಕು, ಭಿಕ್ಷೆ ಕೇಳಬೇಕು. ತಾಯೇ ಮನೆಯೊಳಗೆ ಮೂರು ಭಿಕ್ಷೆ ತಂದಾಕ್ರವ್ವಾ. ನಿನ್ನ ಕೈ ಮುಟ್ಟಿ ಕ್ವಾರಣ್ಯ ನೀಡವ್ವಾ.

ದೇವಾಜಿ : ಯಾರೋ ಜಂಗಮದೇವ್ರು ನಮ್ಮ ಮನೆಗೆ ಬರಬೇಕಾವ್ರೆ......

ಮಾದೇಶ್ವರ : ನಿಮ್ಮಪ್ಪನ ಮನೆ ಮಾದೇವಾ.

ದೇವಾಜಿ : ಅಯ್ಯೋ ಮಾದೇವ, ನಾವು ಇಲ್ಲಿಗೆ ಬರೋದ ನಮ್ಮಪ್ಪನ ಮನೋಗೋಗಿದ್ರೆ ಪಾಲು-ಪಂಚಾಮೃತ ಎರೆದು ಪಟ್ಟಾಭಿಸೇಕ ಮಾಡ್ತಿದ್ರಲ್ಲಾ ಇಲ್ಲಿಗ್ಯಾಕೆ ಬಂದ್ರಿ? ಯಾರ್ಗೇನಾದ್ರೂ ಕೊಟ್ಟರೆ ಮತ್ತೆ ನಮ್ಮತ್ತೆ ಕೊಲಬಾರದ ಕೊಲೆ ಕೊಡ್ತಾಳೆ.

ಮಾದೇಶ್ವರ : ಹಾಲ್ನಾದ್ರೂ ಸ್ವಲ್ಪ ಕೊಡವ್ವಾ.

ದೇವಾಜಿ : ಕೊಡುವಾಗಿಲ್ಲ.

ಮಾದೇಶ್ವರ : ಒಂದು ಎಲೆ ಅಡಿಕೆ ಚೂರ್ನಾದ್ರೂ ಕೊಡವ್ವಾ.

ದೇವಾಜಿ : ನಾಳೆ ಇಷ್ಟೊತ್ತಿಗೆ ಬಂದ್ರೆ ನಾನಾಕಳದ್ನೇ ಕೊಡ್ತೀನಿ.

ಮಾದೇಶ್ವರ : ನೀರ್ನಾದ್ರೂ ಕೊಡವ್ವಾ.

ದೇವಾಜಿ : ಯಾರಾರು ಜಂಗಮನಿಗೆ ನೀರು ಕೊಟ್ಬುಬುಟ್ಟೆ ಅಂತ ಏಳ್ಬುಟ್ರೆ ನಮ್ಮತ್ತೆ ನನ್ನ ಸುಮ್ನೇ ಬುಡಲ್ಲಾ. ನೀವು ಜಾಲದಟ್ಟೆ ಕೊಳಕ್ಕೋಗಿ. ನಾನು ದಾರಿ ತೋರಿಸ್ತೀನಿ ದಮ್ಮಯ್ಯ.

ಮಾದೇಶ್ವರ : ನಿಮ್ಮತ್ತೆ ಎಲ್ಲವ್ವಾ?

ದೇವಾಜಿ : ಎಳ್ಳು ಕಣದಲ್ಲವ್ರೇ.

ಮಾದೇಶ್ವರ : ಆ ಎಳ್ಳು ಕಣಕ್ಕೆ ದಾರಿ ತೋರ್ಸವ್ವಾ.

ದೇವಾಜಮ್ಮ : ನೀವು ವೋಗ್ತಾ ಇರಿ. ನಾನು ನೀರು ತರವ್ಾಗೆ ಬಂದು ನಿಮ್ಗೆ ದಾರಿ ತೋರಿಸ್ತೀನಿ.

(ಮಾದೇಶ್ವರರು ಹೊರಡುವರು. ಸ್ವಲ್ಪ ಹೊತ್ತಿನ ಮೇಲೆ ದೇವಾಜಮ್ಮ ಬಂದು ಕೊಳಪತ್ತ ಕೂತಳು.)

ದೇವಾಜಮ್ಮ : ನಮ್ಮಪ್ಪಾಜಿಯವರಿಗೆ ಏನೂ ಕೊಡ್ಲಿಲ್ಲ, ನೀರನ್ನೂ ಕೊಡ್ಲಿಲ್ಲ, ಯಾಕೋ ಎಲ್ಲೋದ್ರು? ಕೆರೆ ಒಳಗೇನಾದರೂ ಬಿದ್ವೋದ್ರೋ (ಅಳುವಳು)

ಮಾದೇಶ್ವರ : ಇಲ್ಲಮ್ಮ ಬದಿಕಿದ್ದೀನಿ ಅಳಬ್ಯಾಡ...

(ಎಂದು ಎದುರಾಗುವರು.)

ದೇವಾಜಮ್ಮ : ಅದೋ ನೋಡಿ ಅಲ್ಲಿ ನಮ್ಮತ್ತೆ ಕಾಳಮ್ಮ ಆ ಎಳ್ಳಿನ ಕೊಠಾರಕ್ಕೆ ವೋಗಿ ಬಿಕ್ಸೆ ಕೇಳಿ ದೇವರೇ.

(ದೇವಾಜಮ್ಮ ಹೊಡುವಳು).

ಮಾದೇಶ್ವರ : ಆಗ್ಲವ್ವಾ... (ಹೊರಡುವರು)

ಏನು ಆಕೆ ತಲೆ ಎತ್ತಲೇ ಇಲ್ಲ. ಬೇವಿನಕಾಳವ್ವ ಎಳ್ಳಿನ ಬಿಕ್ಸೆ ನೀಡವ್ವಾ. ನೀನು ಬೆಳೆದಿರತಕ್ಕ ಎಳ್ಳುರಿಪ್ಪತ್ತು ಖಂಡುಗ ಈ ರಾಶೀನ ಕೊಡು ಅಂತ ನಾನು ಕೇಳಲಿಲ್ಲ ಹೇಳ್ತೀನಿ ಕೇಳಿ ಕಂದಮ್ಮಾ, ಅಚ್ಚ ಹನ್ನೆರಡು ಬಳ್ಳ ಎತ್ತಿ ನನ್ನ ಮುತ್ತಿನ ಜೋಳಿಗೆಗೆ ಹಾಕಿ, ಪಾದ ಮುಟ್ಟಿ ಪಟ್ಟಾಭಿಷೇಕ ಮಾಡಿ, ನನ್ನ ಏಳುಮಲೆ ಕೈಲಾಸಕ್ಕೆ ನನ್ನ ಎಣ್ಣೆ ಮಜ್ಜನಕ್ಕೆ ಕಳಿಸವ್ವಾ.

ಬೇವಿನಕಾಳಿ : ಹೋಗೋ... ಇನ್ನೂ ನನ್ನ ಎಳ್ಳು ಕಣಕ್ಕೆ ಪೂಜೆ ಮಾಡಿಲ್ಲ. ನಮ್ಮಪ್ಪನ ಮನೆ ದೇವರಿಗೇ ಎತ್ತಿ ಮಡ್ಗಿಲ್ಲ. ಅಸ್ಟ್ರಾಗೆ ಬಂದು ಕೇಳ್ತಾನೆ. ನನ್ನ ಜೀತದಾಳಿಗೆ ಹಿಟ್ಟೊತ್ಕೊಂಡು ನೆತ್ತಿ ಕೂದ್ಲುದ್ರೋಗಿತ್ತಾ? ಅಷ್ಟಲ್ಲ ಇಷ್ಟಲ್ಲಾ ಹನ್ನೆರಡು ಬಳ್ಳ ಕೇಳ್ತೀಯಲ್ಲಾ, ನಿನ್ನೆದೆ ಕೆಚ್ಚು ಎಷ್ಟಿರಬೇಕು? ಹನ್ನೆಡು ಬಳ್ಳವಲ್ಲ, ಹನ್ನೇಡು ಕಾಳನ್ನು ಎತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದರೆ ಹೇಳ್ತೀನಿ ಕೇಳು, ಮಳೆ ಉಯ್ದುಬಿಟ್ಟು, ಎಳ್ಳು ಕಣ ಕೊಚ್ಚಿಕೊಂಡೋಗಿ ಊರ ಮುಂದಿರೋ ಕೆರೆ ತಲ್ಪುಬುಟ್ರೂ ಸರಿ ನಿಂಗೆ ಒಂದು ಎಳ್ಳಿನ ಕಾಳು ಕೊಡುವಂಥ ಮಗಳಲ್ಲಾ...

ಮಾದೇಶ್ವರ : ನಿನ್ನ ಬಾಯಲ್ಲಿ ಕಡ್ಡಾಗೇ ಮಾಡ್ತೀನಿ ಕಣವ್ವಾ, ಕಂದಮ್ಮಾ ಅದರಲ್ಲಿ ಒಂದು ಬಳ್ಳ ತೆಗೆದಾಕಿ ಹನ್ನೊಂದು ಬಳ್ಳ ಎಳ್ಳಾದ್ರೂ ಎತ್ತಿ ನನ್ನ ಮುತ್ತಿನ ಜೋಳಿಗೆಗೆ ಹಾಕಿ ಪಾದ ಮುಟ್ಟಿ ಪಟ್ಟಾಭಿಷೇಕ ಮಾಡಿ ನನ್ನ ಏಳುಮಲೆಗೆ ನನ್ನ ಎಣ್ಣೆ ಮಜ್ಜನಕ್ಕೆ ಕಳುಹಿಸವ್ವಾ.

ಬೇವಿನಕಾಳಿ : ಹನ್ನೊಂದು ಬಳ್ಳ ಎತ್ತಿ ನಿನ್ನ ಮುತ್ತಿನ ಜೋಳಿಗೆಗೆ ನೀಡಬೇಕಾದ್ರೆ, ನಂಗೆ ಏಳು ಜನ ಸೊಸೇರು, ಅವರಿಗೆ ಜಗಳ ಉಟ್ಬುಟ್ಟು. ಆ ಮನೇಲಿರೋ ಹಿಟ್ಟಿನ ದೊಣ್ಣೆ, ಕುಡುಗೋಲು ತಕ್ಕಂಡು ಒಬ್ಬೊಬ್ಬರೂ ಹೊಡೆದಾಡಿ, ಬಡಿದಾಡಿ ಕಣ್ ಕಣ್ ತಿವಿದಾಡ್ಬುಟ್ರೂ, ಒಂದು ಎಳ್ಳಿನ ಸ್ವಾಲೆಯನ್ನು ಕೊಡುವವಳು ನಾನಲ್ಲ.

ಮಾದೇಶ್ವರ : ನಿನ್ನ ಬಾಯಲ್ಲಿ ಕಡದಾಗೇ ಆಗ್ಲಮ್ಮಾ ಅದರಲ್ಲೂ ಒಂದು ಬಳ್ಳ ಕಡಿಮೆ ಹಾಕಿ ಹತ್ತು ಬಳ್ಳ ಕೊಡಮ್ಮಾ

ಬೇವಿನಕಾಳಿ : ನನ್ನ ಏಳು ಜನ ಗಂಡು ಮಕ್ಕಳು ಒಡದಾಡಿ ಗೊಬ್ಬಳಿ ಮರದ ಗೋಟಾಗ್ಬುಟ್ರೂ, ಎಳ್ಳಿನ ಮೇಲಿನ ದುಂಬನ್ನೂ ಕೊಡುವಂಥ ಮಗಳಲ್ಲ ನಾನು.

ಮಾದೇಶ್ವರ : ಕಷ್ಟಪಟ್ಟು ಬೆಳೆದಿದ್ದೀಯ ಕಣವ್ವಾ, ಹೋಗ್ಲಿ ಒಂಭತ್ತು ಬಳ್ಳ ಕೊಡವ್ವಾ...

ಬೇವಿನಕಾಳಿ : ನನ್ನ ಏಳು ಜನ ಮೊಮ್ಮಕ್ಕಳು ಪಳ್ಳಿ ಮನೆಯಿಂದ ಬರುವಾಗ ದೊಡ್ಡ ರೋಗ ಬಂದು ಸತ್ರೂ ಕೊಡೋಲ್ಲ.

ಮಾದೇಶ್ವರ : ನಿನ್ನ ಬಾಯಲ್ಲಿ ಕಡೆದ ಹಾಗೇ ಮಾಡ್ತೀನಿ; ಹೋಗ್ಲಿ ಆರು ಬಳ್ಳನಾರೂ ಕೊಡವ್ವಾ.

ಬೇವಿನಕಾಳಿ : ಕೌದಳ್ಳಿ ಬೀದಿ ಒಳಗೆ ಅಟ್ಟರದಾರಿ ನಿಟ್ಟರದಾರಿ, ಏಳು ಏಳು ಹದಿನಾಲ್ಕು ಲೋಕದ ತೊಟ್ಟಿ ಅಟ್ಟೀನೇ ಕಟ್ಟಿವ್ನಿ. ಆ ಅಟ್ಟಿಮ್ಯಾಲೆ ಮಟ ಮಟ ಮಂಗಳವಾರ ಗೂಗೆ ಕೂತು ನನ್ನಟ್ಟಿ ದಗ್ಗನತ್ತಿ ದಿಗ್ನುರಿದ್ರೂ ಒಂದು ಎಳ್ಳಿನ ಸ್ವಾಲೆಯನ್ನೂ ಕೊಡುವಂಥ ಮಗಳಲ್ಲಾ.

ಮಾದೇಶ್ವರ : ಕೊನೇ ಪಕ್ಷ ಮೂರು ಬಳ್ಳಾ...!

ಬೇವಿನಕಾಳಿ : ನಿನ್ನ ಬಾಯಲ್ಲಿ ಕೊಡು ಅನ್ನದು ತಪ್ಪಿಲ್ಲ, ನನ್ನ ಬಾಯಿಂದ ಕೊಡಲ್ಲ ಅನ್ನದು ತಪ್ಪಿಲ್ಲ. ಏಳಟ್ಟಿ ದನ, ಕುರಿ ಎಲ್ಲಾ ಚಪ್ಪೇರೋಗ, ದೊಡ್ಡರೋಗ ಬಂದು ಸತ್ರೂ ಕೊಡೋಲ್ಲ.

ಮಾದೇಶ್ವರ : ಅಂಗೈ ತೇವ ಮಾಡ್ಕಂಡು ರಾಸಿ ಮೇಲೆ ಒತ್ತುಬಿಟ್ಟು ಎಷ್ಟು ಬರ್‍ತದೋ ಅಷ್ಟನ್ನಾದ್ರೂ ಕೊಡವ್ವಾ.

ಬೇವಿನಕಾಳಿ : ತತ್ತೀನಿ ತಾಳು.

(ಮೆರೆಕೋಲನ್ನು ತರುತ್ತಿರಲು, ಮಾದೇಶ್ವರರು ಸತ್ತವರಾಗಿ ಬಿದ್ದುಬಿಟ್ಟರು. ಕಾಳಮ್ಮ ಕಾಲು ಎಳೆಯಲು ಕಾಲು, ಕೈ ಕಾಲು ಬರುವುದು)

ಬೇವಿನಕಾಳಿ: ಆಲಾಜಿ, ಬ್ಯಾಲಾಜಿ, ನಿಂಗಾಜಿ, ನೀಲಾಜಿ, ದೇವಾಜಿ, ಬ್ಯಾಗೋಡ್ಬನ್ನಿ. ಈ ಜಂಗಮನ ಕತೆ ಮುಗ್ದೋಗದೆ. ವೋಗಿ ಬ್ಯಾಗ ಮಣ್ಣುಮಾಡಿ ಬನ್ನಿ.

ದೇವಾಜಿ : ಅಯ್ಯೋ ಎತ್ತಿಕೊಂಡು ಹೋಗವಾ ಬನ್ನಿ.

ಲಿಂಗಾಜಿ : ಎತ್ತಿದ್ರೆ ಎತ್ತ ಭಾರ.

ದೇವಾಜಿ : ನಂಗೇನು ಮಲ್ಲಿಗೆ ಹೂವಿನ ತೂಕ ಆದ್ರಲ್ಲಾ...!

ಲಿಂಗಾಜಿ : ನಂಗೆ ಪಲ್ಲದ ತೂಕವ್ರೆ ಕವ್ವಾ

ದೇವಾಜಮ್ಮ: ಎತ್ತಿ ಎತ್ತಿ ನಾನೇ ಭಾರ ವೊರ್ತೀನಿ...

(ಎತ್ತಿಕೊಂಡು ಹೋಗಿ ಒಂದು ಕಡೆ ಇಟ್ಟು ಕುಳಿತುಕೊಳ್ಳುವರು. ಬೇವಿನ ಸೊಪ್ಪನ್ನು ತಂದು ಗಾಳಿ ಬೀಸುವಳು. ಮಾದಪ್ಪ ಎದ್ದು ಕುಳಿತುಕೊಳ್ಳುವರು.)

ದೇವಾಜಿ : ಅಯ್ಯೋ ಯಾಕಪ್ಪಾ ದೇವ್ರು ನಮ್ಮಪ್ಪನ ಮನ್ಗೋಗ್ದೆ ಇಲ್ಲಿಗೆ ಬಂದ್ರಿ?

ಮಾದೇಶ್ವರ : ನೀನು ಹೋಗಿ ಬಾರವ್ವಾ, ನಿನಗೆ ಒಳ್ಳೆಯದಾಗಲೀ.

(ಭಯಂಕರವಾದ ಜೊತೆಗೆ ದುಃಖಭರಿತ ಸಂಗೀತ)

(ಬೇವಿನಕಾಳಿ ಹೊಟ್ಟೊಟ್ಟೆ, ಬಾಯಿ ಬಡಿದುಕೊಂಡು ಹುಚ್ಚಿಯಂತೆ ಬರುತ್ತಿದ್ದಾಳೆ ತಪ್ಪರಿಸಾಡುತ್ತಾ.)

ಬೇವಿನಕಾಳಿ : ಅಯ್ಯೋ... ನನ್ನ ಎಳ್ಳಿನ ಕೊಠಾರವೆಲ್ಲಾ ಕೊಚ್ಚೋಯ್ತು. ಈ ಹಾಳು ಮಳೆ ಎಲ್ಲಿತ್ತು? ದಾರೀಲಿ ಸೊಸೇರು ಕಣ್ಣು ಕಾಣದೆ ತಡ್ಕಾಡ್ತಿದ್ದಾರೆ, ಜಗಳ ಮಾಡ್ಕಂಡು ಎಪಿಳು ಜನ ಗಂಡು ಮಕ್ಕಳು ಸತ್ತು ಬಿದ್ದವ್ರೆ, ಕುರಿ-ದನ ಸತ್ತಿವೆ. ಮೊಮ್ಮಕ್ಕಳು ದಾರಿಯಲ್ಲಿ ಸತ್ತಿವೆ. ಅಯ್ಯೋ ಮನೆ ಹತ್ತಿ ಉರ್ದೋಯ್ತು. ನನ್ನ ಗಂಡ ಕೆಂಪೇಗೌಡನ್ನ ಹುಲಿಕುಕ್ಬುಡ್ತು. (ತಾಲಿ ಕಿತ್ತೆಸೆಯುವಳು) ಅಯ್ಯೋ ವೊಟ್ಟೆ ಹಸಿಯುತ್ತೆ. ಏನು ಮಾಡಲೀ ಯಾರೂ ಬಿಕ್ಸೆ ನೀಡ್ತಿಲ್ಲ. (ಎಲ್ಲಾ ಕತ್ತಿಡ್ಡು ನೂಕ್ತವರೆ) ಅನ್ನಕ್ಕುಟ್ಟಿದ ಪರಮಾತ್ಮ ಅನ್ನವುಂಡು ಹನ್ನೇಡು ಜಿವವಾಯ್ತು ಯಾರೂ ಕೊಡ್ತಿಲ್ಲ. ನನ್ನ ಆಳು ಮಲ್ಲಣ್ಣನತ್ರ ಹೋಗಿ ಕೇಳ್ತೀನಿ ಮಲ್ಲಣ್ಣಾ ಮಲ್ಲಣ್ಣಾ...

ಮಲ್ಲಣ್ಣ : ಏನವ್ವಾ ತಾಯಿ?

ಬೇವಿನಕಾಳಿ : ನನ್ನಪ್ಪನ ಮನೆ ದ್ಯಾವರ್ನ ನಿಂದಿಸ್ಬುಟ್ಟಿಕನಪ್ಪಾ... ಅದ್ಕೇ ಇಂಗಾಗೋಯ್ತು... ವೊಟ್ಟೆ ಹಸಿತಾ ಇದೆ. ಮೂರು ಮುದ್ದೆ ಹಿಟ್ನಾರೂ ಕೊಡಪ್ಪಾ.

(ಅಳುತ್ತಾ ಕಣ್ಣೊರಸಿಕೊಂಡಳು.)

ಮಲ್ಲಣ್ಣ : ಬನ್ನವ್ವಾ ನನ್ನಟ್ಟಿ ನಡುಮನೇಲಿ ಕೂರ್ಸಿ ಹಾಕ್ತಿನಿ. ಮಲ್ಲೀ... ಮಲ್ಲೀ...

ಮಲ್ಲಿ : (ಒಳಗೇ) ಇಲ್ಲಿಲ್ಲ, ಮಾಡಿಟ್ಟದ್ದೂ ಇಲ್ಲ. ಅದ್ಯಾವ ಅನಿಷ್ಟದವಳ ಕರ್ಕಂಬಂದೆ, ಕಳಿಸು ಆಚ್ಗೆ, ದಟ್ಟ ದರಿದ್ರದವಳು.

ಮಲ್ಲಣ್ಣ : ಅಂಗನ್ನಕ್ಕಾಗಲ್ಲ ಅವರು ನಮ್ಮ ದಣಿ. ನಾನೆ ಮಾಡಿಕೊಡ್ತೀನಿ.

(ಭಯಂಕರ ಸಂಗೀತ)

ಮಲ್ಲಣ್ಣ : ಕೊಸ್ಯವ್ವಾ...

ಬೇವಿನಕಾಳಿ : ಈ ಮೂರು ಮುದ್ದೆ, ಈ ಎಸ್ರು ಸನ್ನ ಕಳ್ಳಿಗೆ ಸೇರ್ಬುಟ್ರೆ ಆ ಮಲೆ ಮಾಪಯ್ಯಗೆ ಮೂರು ವರ್ಸ ಜಗ್ಗಲ್ಲ.

(ವಿಚಿತ್ರವಾಗಿ ನಗುವಳು.)

ಧ್ವನಿ : ಮಾದೇಶ್ವರ... ಈ ಮುದ್ದೆ ನಿನ್ಹೊಟ್ಟೆಗ್ಹ್ಯಾಗೋಗುತ್ತೆ ನೋಡ್ತೀನಿ.

(ಹಿಟ್ಟು ಬಿದ್ದು ಉರುಳಿತು.)

ಬೇವಿನ: ಆ ಹಿಟ್ಟೂ ಬಿದ್ದೋಯ್ತು. ಆಯ್ಯೋ... ನಾಯ್ಗಳು ಗಬಕ್ ಗಬಕ್ ಅಂತ ತಿನ್ಕಂಬುಡ್ತಲ್ಲ... ಅಯ್ಯೋ ಹಾಳು ನಾಯಿ ಏಟು ದಿನದಿಂದ ಕಾಯ್ಕಂಡಿತ್ತು? ಈ ಎಸ್ರಾರೂ ಕುಡ್ಕಂಡು ಆ ಮೂಡಲ ಮನೆ ಬೂದಿಬಡ್ಕನಿಗೆ ಇನ್ನೊಂದು ವರ್ಷ ಬಗ್ಗವಳಲ್ಲ.

(ಬರುತ್ತಿರಲು ಎಡವಿ ಬಿದ್ದು ಸಾರೆಲ್ಲಾ ಉರುಳಿತು, ಮಡಿಕೆ ಒಡೆಯಿತು.)

ಅಯ್ಯೋ ನನ್ನ ಅದೃಷ್ಟ ಇಂಗಾಗೋಯ್ತು. ಅನ್ನಕ್ಕುಟ್ಟಿದ ಪರಮಾತ್ಮನೇ... ಅಯ್ಯೋ...

(ದುಃಖದ ಸಂಗೀತ)

(ಮಾದೇಶ್ವರರು ಕಣಿ ಹೇಳುವ ವೇಷದಲ್ಲಿ ಬರುತ್ತಾರೆ)

ಬೇವಿನಕಾಳಿ : ಬಾವ್ವಾ... ಪುಟ್ಟಕೊರಮಿತ್ತವ್ವಾ... ನಂಗೊಸಿ ಕಣಿಯೇಳು ಬಾವ್ವಾ...

ಕಣಿವೇಷಧಾರಿ : ನಿನ್ನ ಕಣಕ್ಕೆ ಒಬ್ರು ಜಂಗಮ್ರು ಬಂದು ಎಳ್ಳಿನ ದಾನ ಕೇಳಿದ್ರು ನೀನು ಕೊಡ್ಲಿಲ್ಲ.

ಬೇವಿನ : ನಿಜಕನಪ್ಪಾ ಆದ್ರೆ ನಂಗೆ ಅವರು ಯಾರು ಅಂತಾ ಗೊತ್ತಾಗ್ಲಿಲ್ಲ.

ಮಾದೇಶ್ವರ : ಅವರ ಪಾದವೇ ನೀನು ಹಿಡೀಬೇಕು... ಇಂಗೇ ವೋಗು ಸಿಕ್ತಾರೆ...

ಬೇವಿನಕಾಳಿ : ಆಗ್ಲಿ ಕನಪ್ಪಾ...

(ಎಂದು ಹೊರಡುವಳು. ಸಂಗೀತ)

(ದಾರಿಯಲ್ಲಿ ಹೋಗುತ್ತಿದ್ದಾಗ ಮಾದೇಶ್ವರರು ಸಿಗುವರು)

ಬೇವಿನಕಾಳಿ : (ಓಡಿ ಬಂದು ನಮಸ್ಕರಿಸಿ) ಗುರುವೇ ಮಾದಪ್ಪಾ... ನಾನು ತಪ್ಪು ಮಾಡ್ಬುಟ್ಟೆ ಕ್ಷಮುಸ್ಬುಡಿ ಸ್ವಾಮಿ. ನಾನು ನೀವು ಅನ್ನದ ಮಾದೇವ್ರು, ಏನೇನೋ ಅಂದ್ಬುಟ್ಟೆ. ಮಾದೇವ್ರು ಅಂತ ಗೊತ್ತಾಗ್ನಿಲ್ಲ. ಈಗ ಅದೇ ಭಾಗ್ಯ ಕೊಟ್ರೆ ಬೆಳೆದದ್ರಲ್ಲಿ ನಿಂಗೆ ಮೀಸಲಾಗಿದ್ತೀನಿ. ನಂಗೆ ಮತ್ತೆ ನನ್ನ ಮಕ್ಕಳು-ಮರಿ, ದನ-ಕರು, ಮನೆ ಎಲ್ಲಾನೂ ಕೊಡಿ ಸ್ವಾಮಿ.

(ಮಾದೇಶ್ವರರು ಬೇವಿನಕಾಳಿ ತಲೆಯ ಮೇಲೆ ನಾಗಬೆತ್ತ ಇಡುತ್ತಾರೆ. ಆಕೆ ಗೋಗಲ್ಲಾಗುವಳು.)

ವಚನ : ದ್ಯಾವಾಜಮ್ಮನನ್ನು ಅವಳ ಗಂಡನನ್ನು ಹರಸಿ ಆಶೀರ್ವಾದ ಮಾಡ್ಬುಟ್ಟು ಇನ್ನು ಮುಂದೆ ನಿನ್ನ ಮನೆಯಿಂದ ನನಗೆ ವರ್ಸಕ್ಕೊಂದು ಸಾರಿ ತುಂಬಿದ ಅಮಾಸೆ ದಿಸ, ನವರಾತ್ರೀಲಿ ಮಜ್ಜನಕ್ಕೆ ಎಳ್ಳು ತರಬೇಕು ಅಂತ ಅವರ ವೂಕ್ಕಲು ಮಾಡ್ಕಂಬುಟ್ಟು, ನಮ್ಮ ಪ್ವಾಜಿಯವರು ಆಶೀರ್ವಾದ ಮಾಡ್ಬುಟ್ಟು ಏಳುಮಲೆಗೆ ಓಯ್ತಾ ಅವ್ರೆ ಮಾದೇವ...

ಆಹಾ... ನೋಡಿ ನಮ್ಮ ಶಿವನಾ।
ಮಲೆಯೋ ಮಾದಪ್ಪ ಬರುವ ಚೆಂದಾವ ನೋಡಿ।
ಆಂ... ನೋಡಿ ನಮ್ಮ ಸಿವನಾ।

* * *

ಸಾಲು-೩

ಕಂಸಾಳೆ ಮೇಳ : ಕೋಳಿ ಕೂಗೋ ಜಾಮದಲ್ಲಿ।
ಎದ್ದು ಮಕವ ನೋಡಿದರೆ।
ನೀಲದ ನೀರು ದಾಟಿದರೆ।
ಸಿವನೇ ಮಕ್ಕಳೇ ಬಂಜಾದೋವೋ।
ದನಗಳೆ ಬಂಜೆಯಾದೋವು।

ನೀಲಯ್ಯ : ಸಂಕಣ್ಣೆ ಯಾಕೆ ಕಣ್ಣೀರಾಕ್ತಾ ಇದ್ದೀಯ?

ಸಂಕಮ್ಮ : ನೀಲಯ್ಯನೆಂಡ್ತಿ ಬಂಜೆ ಬಂಜೆ ಅಂತಾಡ್ತಿದ್ರೆ ಕಣ್ಣೀರಾಕ್ದೆ ಇನ್ಯಾನ್ಮಾಡ್ಲಿ? ಈ ಸಬ್ದ ಕೇಳ್ಲಾರೆ ನಾನು.

ನೀಲಯ್ಯ : ನೀನು ಯೋಸ್ನೆ ಮಾಡ್ಬ್ಯಾಡ, ನಾವು ಯಾರೂ ಇಲ್ಲದ ಕಾಡ್ಗೋಗವ, ಅಲ್ಲೇ ವಾಸವಾಗಿರವಾ.

ಸಂಕಮ್ಮ : ಅಂಗೇ ಮಾಡಿ, ನಡೀರಿ ವೋಗವಾ

ಕಂಸಾಳೆ ಮೇಳ: ಅಯ್ಯಾ ಪಟ್ಟ। ಗುದ್ಲಿ ತೆಗೆದವನೆ।
ಗರಕೆ ಮಾಳ। ತೆಗೆದವನೇ
ಕಗ್ಗಲಿ ಕರಾಚಿ। ತೆಗೆದವನೇ।
ಕವ್ವು ತಾವೊತ್ತು। ಮಾಡವನೆ।
ಸುಗ್ಗ ಮರವ। ಕಡಿದವನೆ।
ಜಂಬವ ತಾನೊಂದು। ಮಾಡವನೆ।
ಕಕ್ಕೆ ಗಳವನ್ನು । ತರದವನೆ।
ಅಂಕಣಕೊಂದು। ಬೀಸವನೆ।
ಬಿದಿರ ಗೋಡೆ। ತೆಗೆದವನೆ।
ಅಂತರ ತಾವೊಂದ। ಮಾಡವನೆ।
ಅಯ್ಯಾ ಉಗ್ನಿ ಸೊಪ್ಪ ತಂದವನೇ।
ಒಪ್ಪಾದ ಗುಡಲ। ಕಟ್ಟವನೇ।

ನೀಲಯ್ಯ : ಸಂಕಣ್ಣೆ ನಾನು ಹೆಜ್ಜೇನು ಬೇಟೆಗೆ ವೋಯ್ತೀನಿ.

ಸಂಕಮ್ಮ :
ತಾಯಿ ತಂದೆ ಉಳ್ಳವಳು।
ಅಕ್ಕ ತಂಗಿ ಉಳ್ಳವಳು।
ಅತ್ತೆ ಮಾವ ಉಳ್ಳವಳು।
ಮೈದ ಭಾವ ಉಳ್ಳವಳು।
ಹಿಂದೇಳು ಬಳಗ ಉಳ್ಳವಳು।
ಮುಂದೇಳು ಬಳಗ ಉಳ್ಳವಳು।
ಇಂತ ಹಿಂಡು ಬಳಗನ ಬಿಡಬೌದೇ।
ನಿನ್ನ ಸಂಗಡ ಬರಬೌದೇ॥

ನೀಲಯ್ಯ : ಬೇಡ ಹೆಣ್ಣೆ. ಗಂಡಸರಿಗೇ ಕಷ್ಟ. ನೀನು ಹೆಣ್ಣು, ನಿನ್ನ ಕೈಲಿ ಆ ಗೋರ ಕಾಡುಪೋಡು ಸುತ್ತಕ್ಕಾಗಲ್ಲ.

ಕಂಸಾಳೆ ಮೇಳ:
ಹೆಜ್ಜೇನು ಬೇಟೆ। ಮಾಡವ್ನೇ।
ಕೊಕ್ಕೇ ರುಮಾಲು। ಸುತ್ತವನೇ।
ದಾರದ ಟೋಪಿ। ಇಕ್ಕವ್ನೇ।
ಹನುಮಂತ ರೇಕು। ಎದೆಯಲ್ಲಿ।
ಬಾರಿ ಬಂದೂಕ। ಹೆಗಲಲ್ಲಿ।
ಕೊಡಗತ್ತಿ। ಕೈಯಲ್ಲಿ।
ತುಪ್ಪದ ಗಡಿಗೆ। ಬೆನ್ನಮ್ಯಾಲೆ।
ಜೂಲುನಾಯಿ। ಹಿಡಿದವನೆ।
ಹೆಜ್ಜೇನು ಬೇಟೆಗೆ। ಒಯ್ತಾವ್ನೇ॥
ದೇವ ಸ್ವಾಲಿಗ ನೀಲಯ್ಯ...॥

ನೀಲಯ್ಯ : ಸಂಕಣ್ಣೆ ಜ್ವಾಪಾನ, ಬಳೆಯವನು ಬತ್ತಾನೆ, ಬಳೇಕೊಡ್ತೀನಿ ಅಂತ ಬಂದು ನಿನ್ನ ರೂಪ-ರೇಕೆ ನೋಡ್ತಾನೆ. ಮಾಯಾಗಾರ ಮಂತ್ರಗಾರರು ಬರ್ತಾರೆ. ಅದ್ಕೇ ಈಗಿಲ್ಲೇ ಮಂಡಲ ಬರೀತೀನಿ. ನೀನು ಈಚೆ ಬರಬ್ಯಾಡ, ಈ ಸೊಪ್ಪಿನ ಗುಡ್ಲಲ್ಲೇ ಇರಬ್ಯಾಕು. ಯಾರನ್ನೂ ಕಣ್ಣೆತ್ತಿ ನೋಡಲ್ಲ ಅಂತ ಬಲಗೈನ ಬಾಸೆ ಕೊಡು.

ಸಂಕಮ್ಮ : ಬಂಜೆ ಕೈನ ಬಾಸೆ ತರವಲ್ಲ.

ನೀಲಯ್ಯ : ನಿನ್ನ ಸಿಂಗಾರನೆಲ್ಲಾ ತಗಿ.

(ಸಂಕಮ್ಮ ಕಣ್ಣೀರು ಹಾಕಿಕೊಂಡು, ಒಂದೊಂದಾಗಿ ತೆಗೆಯುವಳು.)

ಕಂಸಾಳೆ ಮೇಳ : (ದುಃಖ, ನಿಧಾನವಾಗಿ ಹಾಡುವನು)
ಹುಟ್ಟಿದ ಸೀರೆ। ಅಳಿದವಳೇ।
ತೊಟ್ಟಿದ ಕುಪ್ಪಸ। ಕಳೆದವಳೇ।
ಕತ್ತಿನ ಪದಕ। ಕಳೆದವಳೇ।
ಮೂಗಿನ ಸಿರಿಯ। ಕಳೆದವಳೇ।

ಸಾಲು ಭಾಗ್ಯ। ಕಳೆದವಳೇ।
ತೋಳ ಬಾಪುರಿ। ಕಳೆದವಳೇ॥

ನೀಲಯ್ಯ : ಯಾರು ಬಂದು ಕೂಗುದ್ರೂ ನೀನು ಹೊರಗೆ ಬರಬ್ಯಾಡ. ನಾನು ಇನ್ನು ಮೂರು ತಿಂಗಳಿಗೆ ಬನ್ಬುಡ್ತೀನಿ, ಜೇನು, ಬಿದರಕ್ಕಿ, ಗಡ್ಡೆ, ಗೆಣಸು ಎಲ್ಲಾನೂ ತಕ್ಕಂಬತ್ತೀನಿ. (ಸಂಕಮ್ಮ ಬಿಕ್ಕಿ ಬಿಕ್ಕಿ ಅಳುತ್ತಿರಲು, ಗುಡಿಸಲು ಬಾಗಿಲು ಮುಚ್ಚಿ, ಏಳು ಮಂಡಲ ಬರೆದು ನೀಲಯ್ಯ ಹೊರಡುವನು.)

(ದುಃಖ ಸಂಗೀತ)

ಕೋಲು ಮಂಡೆ ಜಂಗಮ ದ್ಯಾವರು ಕ್ವಾರಣಕೆ
ದಯಮಾಡಿದರು। ಕ್ವಾರಣ್ಯ ನೀಡಮ್ಮಾ ವೀರತ್ತ
ಮುನಿಗಳಿಗೇ।
ಕೋಲು ಮಂಡೆ ಜಂಗಮ ದೇವರು ಮಾದೇವ ಕ್ವಾರಣ್ಯಕೆ
ದಯಮಾಡುವರೇ।
ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ॥

ವಚನ : *ಹರ ಹರಾ ನಮ್ಮಪ್ಪಾಜಿ ಏಕಾಂಗಿ ವಸ್ತು, ಏಳುಮಲೆ ಕರುತು, ಮಾಯ ಕಾರ ಮಾದೇಶ್ವರ, ಅಡವಿ ಅರಣ್ಯ, ಗೋರಾರಣ್ಯ, ಏಳು ಮಲೆ ಕೈಲಾಸ, ಸೀಗೆ ಸಿಂಗರದ ಬಾಡ ಬಾಗವತ್ತಿನಲ್ಲಿ ಒರಗಿರುವಂತ ಕಾಲದಲ್ಲಿ ಸರಣೆ ಸತ್ಯವಂತೆ ಸಂಕಮ್ಮ ಎಂಬುವಳ ಪತಿಯಾದಂತ ದೇವ ಸ್ವಾಲಿಗ ನೀಲೇಗೌಡ ಸಂಕಮ್ಮನಿಗೆ ಕೊಲಬಾರದ ಕೊಲೆ, ಮಾಡಬಾರದ ಸಿಕ್ಷೆಯನ್ನು ಮಾಡಿಬಿಟ್ಟು ಹೆಜ್ಜೇನು, ಕಿರುಜೇನು ಬೇಟೆಗೆ ಹೋದಂತ ಕಾಲದಲ್ಲಿ, ಆದರೆ ಸರಣೆ ಸಂಕಮ್ಮನವರು, ಅಯ್ಯೋ ಪರಮಾತ್ಮ ಕೊಟ್ಟಾಗ ಈ ನನ್ನ ಕಷ್ಟವನ್ನು ಯಾವ ದೇವರಾದ್ರೂ ಆಗಲೀ, ನನ್ನ ಗಂಡನ ಮನೆ ದೇವರಾಗಲಿ, ನಮ್ಮಪ್ಪನ ಮನೆಯ ದೇವರಾಗಲಿ ನನ್ನ ಕಷ್ಟವನ್ನು ಕಾಯಕ್ಕಿಲ್ಲವಾ, ಅಂತ ಹೇಳಿ ಅಯ್ಯೋ ದುಕ್ಕ ಮಾಡವಳೇ, ಸಿವನಿಗೆ ಸೋಕ ಮಾಡವಳೇ. ಆ ಕಣ್ಣೀರು ಅಂತಕ್ಕದ್ದು ಏಳುಮಲೆ ಕೈಲಾಸದ ಮಾದಪ್ಪನಿಗೆ ಅರಿವಾಯಿತು. ಆವಾಗಲೇ ನಮ್ಮಪ್ಪಾಜಿ ಹುಲಿ ಮ್ಯಾಲೆ ಮೂರ್ತ ಮಾಡಿಕೊಂಡು ಸೊಪ್ಪಿನ ಗುಳ್ಳಿಗೆ ಬತ್ತಾರಲ್ಲೋ... ಮಾಯಕಾರ ಮಾದೇವ, ಹೆಣ್ಣು ಮಗಳು ಹೆದರಿ ಹೋದಾಳು ಹುಲಿ ಮೇಲೆ ಹೋದ್ರೆ ಅಂತೇಳಿ ಬರಿ ಪಾದದಲ್ಲಿ ಬಂದು...*

ಮಾದೇಶ್ವರ : ಯತಿಲಿಂಗ ಭಿಕ್ಷೆ, ಜ್ಯೋತಿ ಸಂಗಯ್ಯನ ಭಿಕ್ಷೆ, ಸೂರ್ಯ ಚಂದ್ರಾದಿಗಳ ಭಿಕ್ಷೆ, ಗುರುವಿನ ಭಿಕ್ಷೆ ನೀಡಮ್ಮ

ಕಂಸಾಳೆಯವರು: ಆಹಾ...ಕ್ವಾರಣ್ಯ ನಿಮ್ಮ ಕೋಡುಗಲ್ಲಿನ ಮ್ಯಾಲೆ.
ಅಂಗೈಗಾಧಾರ ಮುಲಗೈಲಿ ಜೋಳಿಗೆ ಲಿಂಗಯ್ಯ ದಯ
ಮಾಡವರೇ।

ಗುರು ಧರ್ಮದ ಕ್ವಾರಣ್ಯದ ಬಿಕ್ಷಕೆ ಮಾದೇವ ಬಂದರೆ
ಮುತ್ತಿನ ಮುನಿಗಾಳ॥

(ಸಂಕಮ್ಮ ಉಗಿನಿಸೊಪ್ಪಿನ ಉಡುಗೆ ಉಟ್ಟುಕೊಂಡು ಸೊಪ್ಪಿನ ಗುಳ್ಳಲ್ಲಿ ಮಲ್ಗಿದ್ವಾಳೆ. ಅಲ್ಲಿಂದಲೇ)

ಸಂಕಮ್ಮ : ತಾವು ಯಾವ ಊರಿನ ಜಂಗಮರಪ್ಪಾ?

ಮಾದೇಶ್ವರ : ನಿಮ್ಮಮನೆಯ ಮಾದೇವ, ಅಟ್ಟ ಹತ್ತಿ ಬೆಟ್ಟ ಇಳಿದು, ಎತ್ತಿದ ಜೋಳಿಗೆ ಮೇಲೆ ಮೊಟ್ಟ ಮೊದಲು ನೆಟ್ಟಗೆ ಬಂದೆ ಕಣಮ್ಮಾ. ನಿನ್ನ ಮುತ್ತೈದೆ ಬಿಕ್ಸೆ ನೀಡವ್ವಾ.

ಸಂಕಮ್ಮ : ಗುರುವೇ ಈ ಅರಣ್ಯದಲ್ಲಿ ಒಂದು ಕಾಳು ರಾಗಿ ಇಲ್ಲ.

(ಒಳಗಿಂದ)

ಮೂರು ಕಾಳು ಅಕ್ಕಿ ಇಲ್ಲ, ಮೂರು ಹಣವೂ ಇಲ್ಲ. ಕ್ವಾಪ ಮಾಡಬ್ಯಾಡಿ. ನನ್ನ ಗಂಡ ನೀಲಯ್ಯ ಹೆಜ್ಜೇನು ಬೇಟೆಗೆ ವೋಗವ್ನೆ, ಬಂದಮ್ಯಾಲೆ ಮೀಸಲಿಡ್ತೀನಿ.

ಮಾದೇಶ್ವರ : ನೀನು ಒಳ್ಗೇ ಯಾಕವ್ವಾ ಮಾತಾಡ್ತಾ ಇದ್ದೀಯಾ?

ಸಂಕಮ್ಮ : ಗಂಡನ ಅನುಮತಿ ಇಲ್ದೇ ಬರಾಂಗಿಲ್ಲ ಬುದ್ಧಿ. ಬೇಟೆಗೋಗಕ್ಕೂ ಮೊದ್ಲೇ ಅನುಮಾನಪಟ್ಟು ನನ್ನನ್ನು ಈ ಬಂಧನದಲ್ಲಿ ಇಟ್ಟವ್ನೆ. ನಾನು ಕ್ವಾರಣ್ಯ ನೀಡಬೇಕಾದ್ರೆ ಮಾನ ಮುಚ್ಚಿಕೊಳ್ಳಲಿಕ್ಕೆ ಒಂದು ಸಿವ ಸೆರಗು ಕೊಡಪ್ಪಾ.

ಮಾದೇಶ್ವರ :
ಅವ್ವಾ ಬಡಗಲಟ್ಟಿ ಒಳಗೆ ಹೋಗವ್ವಾ
ನೀ ಬಡಗಲಟ್ಟಿಗೆ ಹೋಗವ್ವ।
ಎಡಗೀನ ಏಣಿ। ಊಡವ್ವಾ।
ಅಟ್ಟಾದ ಮೇಲಕ್ಕೆ। ಹತ್ತವ್ವಾ।
ತಂದೆ ತಾಯಿ। ನೆನೆಯವ್ವಾ।
ಅತ್ತೆ ಮಾವನ। ನೆನೆಯವ್ವಾ।
ನಿನ್ನ ಕೈಹಿಡಿದ ಗಂಡನ। ನೆನೆಯವ್ವಾ।
ನಿನ್ನ ಪೆಟ್ಟಿಯ ಮುಸುಗ। ತೆಗೆಯವ್ವಾ।
ನನ್ನ ಮಾದೇವ ಅಂತ ನೆನೆಯವ್ವಾ॥
ಆಹಾ ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।
ಕೋಲು ಮಂಡೆಯ ಜಂಗಮರು ಕ್ವಾರಣ್ಯಕೆ ದಯಮಾಡವ್ರ।
ಕ್ವಾರಣ್ಯ ನೀಡಮ್ಮ ವಿರತ್ತ ಮುನಿಗೆ॥

ಸಂಕಮ್ಮ : ಗುರು ಕೃಪೆಯಿಂದ ಗುಡಿಸಲು ಅರಮನೆ ಆಗೋತು, ಕ್ವಾರಣ್ಯ ತತ್ತಾ ಇವ್ನಿ ಗುರುವೇ...

(ಎಂದು ಕೈ ಮುಗಿದು ಸಂತೋಷದಿಂದ ಕ್ವಾರಣ್ಯ ತರುತ್ತಿವ್ದಾಳೆ.)

ಕಂಸಾಳೆ ಮೇಳ :   ಒಂದು ಬಾಗಿಲ। ತೆಗೆದವಳೇ।
ಒಂದು ಬಾಗಿಲು। ಕಡೆದವಳೇ।
ಎರಡು ಬಾಗಿಲು। ಕಡೆದವಳೇ।
ಅತ್ತೆ ಮಾವನ। ನೆನದವಳೇ।
ಮೂರು ಬಾಗಿಲ। ಕಡೆದವಳೇ।
ಅಣ್ಣ ತಮ್ಮರ। ನೆನೆದವಳೇ।
ನಾಲ್ಕು ಬಾಗಿಲ। ಕಡೆದವಳೇ।
ಅಕ್ಕ ತಂಗೀರ। ನೆನೆದವಳೇ।
ಐದು ಬಾಗಿಲ। ಕಡೆದವಳೆ।
ಸುತ್ತೇಳು ಬಳಗ। ನೆನೆದವಳೆ।
ಆರು ಬಾಗಿಲ। ಕಡೆದವಳೆ।
ಕೈ ಹಿಡಿದ ಗಂಡನಾ। ನೆನೆದವಳೆ।
ಏಳು ಬಾಗಿಲಿಗೆ। ಬಂದಾವಳೆ।
ಒಳ್ಳೆ ಮಾದೇವ ಅಂತ। ನೆನೆದವಳೆ।।

ಆಹಾ... ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ ಕೋಲು ಮಂಡೆ ಜಂಗಮದೇವರು ಕ್ವಾರಣ್ಯಕೆ ದಯಮಾಡವರೆ।

ಕ್ವಾರಣ್ಯ ನೀಡಮ್ಮಾ ಕೋಡಲ್ಲಯ್ಯನಿಗೆ...।।
ಬೆತ್ತದ ಮೊರವ । ತೆಗೆದವಳೆ।
ಒಳ್ಳೆ ಮುತ್ತು ರತ್ನವನು। ತುಂಬವಳೆ।
ಸ್ವಾಮಿ ರೂಪಿಸುತ್ತ ಬಂದು। ನಿಂದವಳೆ।
ಮಡ್ಡಿಯ ಧೂಪ। ಹಾಕವಳೆ।
ಇದ್ದಲು ಕೆಂಡ। ತುಂಬವಳೆ।
ಬಾಗಿ ಬಳುಕಿ। ಬಂದವಳೆ।
ಬಾಗಿಲು ಕಿಂಡಿಗೆ। ಬಂದವಳೆ।
ಭಾಗ್ಯ ಕೊಟ್ಟ ಮಾದೇವನಿಗೆ।
ದಾನ ತಕ್ಕಂಡು ಬರ್ತವಳೇ।।

(ಕರ್ಪೂರ ಮಂಗಳಾರತಿ ಮಾಡಿ, ಬೆತ್ತದ ಮೊರವನ್ನು ನೀಡುತ್ತಾ)

ಸಂಕಮ್ಮ   : ತಕ್ಕಳಿ ಗುರುಗಳೇ ಕ್ವಾರಣ್ಯ...

ಮಾದೇಶ್ವರ :   ತಾಯಿ ತಂದೆ ಇರುವಾರ।
ಅಣ್ಣ ತಮ್ಮ ಇರುವಾರ।
ಬಂಧು ಬಳಗಾವು ಇರುವೂದ।
ಹೆಣ್ಣು ಮಕ್ಕಳು ಎಷ್ಟಮ್ಮ ನಿನಗೆ।
ಗಂಡು ಮಕ್ಕಳು ಎಷ್ಟಮ್ಮ ನಿನಗೆ।
ನಿನ್ನ ಮಕ್ಕಳ ಕರೆಯವ್ವಾ।
ನಾನು ಕಪ್ಪು ದೂಳತ ಇಕ್ಕುವೇನು।।

(ಸಂಕಮ್ಮನ ಕಣ್ಣಿಂದ ನೀರು ಸುರಿಯುತ್ತಾ ಮೊರವು ಕೆಳಗೆ ಬಿದ್ದಿತು.)

ಕಂಸಾಳೆಯವರು : ಮಕ್ಕಳ ಭೋಗ। ಮೊದಲಿಲ್ಲ।
ಮೈಯಿನ ಬಣ್ಣ। ಕೆಡಲಿಲ್ಲ।
ತೋಳಿನ ಬಾಮ। ನೋಡಿದರೆ।
ಬಾಳೆಯ ಮರದ। ಲಪ್ಪಂದ।
ತೊಡೆಯ ಬಾಮ। ನೋಡಿದರೇ।
ಕಗ್ಗಲಿ ಬಾಮ। ಲಪ್ಪಂದ।
ಕತ್ತಿನ ಬಾಮ। ನೋಡಿದರೆ।
ತಿದ್ದಿದ ಗೌರಮ್ಮ। ನಾಗ।

ಮಾದೇಶ್ವರ : ಹುಟ್ಟಿ ವರ್ಸ ಮೂವತ್ತು।
ಮಂಡೆ ಮಾಸಿ ಹನ್ನೆರಡು।
ಮಕ್ಕಳ ಫಲವ ಕೊಡಲಿಲ್ಲ।
ಹುಟ್ಟು ಬಂಜೆ ಅನ್ನುವರು।
ಅವಳ ಬಂಜೆ ಕೈನ ಬಿಕ್ಸ ಬೇಕಿಲ್ಲ।

ಸಂಕಮ್ಮ : ಅಯ್ಯೋ ಪಾಪಿ ಈ ಜನ್ಮ ಯಾತಕ್ಕಿರಬೇಕು? ದೇವಾ ಈ ದೇಹ ಹುಟ್ಟಿದ್ದು ಈ ಪೊತ್ತೇ ಸತ್ತೋಗ್ಬುಡ್ಲಿ. ನನ್ನ ಬಂಜೆ ಎಂಬ ನಾಮಾಂಕಿತವನ್ನು ತಪ್ಸಿ ಮಾದೇವ, ಇಲ್ಲದೇ ವೋದ್ರೆ ನೀವು ಕೊಟ್ಟ ಭಾಗ್ಯವನ್ನೆಲ್ಲಾ ನೀವೇ ತೆಗೆದುಕೊಳ್ಳಿ ದೇವಾ...

ಮಾದೇಶ್ವರ : ಮಕ್ಕಳ ಫಲ ಕೊಟ್ಟರೆ ಏನು ಕೊಡ್ತೀಯವ್ವಾ?

ಸಂಕಮ್ಮ : ನಿನ್ನ ದೇವಸ್ಥಾನಕ್ಕೆ ರಸ್ತೆ ಗೇಯಿಸ್ತೀನಿ ದ್ಯಾವ.

ಮಾದೇಶ್ವರ : ಅದ್ಕೆ ಬೇರೆ ಭಕ್ತರು ಇದ್ದಾರೆ ಕಣವ್ವಾ. ನಿನಗೆ ಮಕ್ಕಳ ಫಲ ಕೊಟ್ಟರೆ ಏನು ಹರಿಕೆ ಮಾಡ್ತೀಯೆ?

ಸಂಕಮ್ಮ : ಏಳೆಂಟು ಜನ ತುಂಬದ್ರೊಳ್ಗೆ ಬೆಳ್ಳಿ ಕರಡಿಗೆ, ಚಿನ್ನದ ಕರಡಿಗೆ, ಮುತ್ತಿನ ಕುಲಾವಿ ಮಾಡಿಸಿಕೊಂಡು ಬಂದು ನಿನ್ನ ಪಾದಕ್ಕೆ ಒಪ್ಪಿಸ್ತೀನಿ. ನನಗೆ ಮಕ್ಕಳ ಫಲ ಕೊಟ್ಬೋನು ನನ್ನಪ್ಪನ ಮನೆ ಮಾದೇವ.

ಮಾದೇಶ್ವರ : ಅದಕ್ಕೂ ಬೇರೆ ಭಕ್ತರಿದ್ದಾರೆ ತಾಯಿ.

ಸಂಕಮ್ಮ : ಹುಟ್ಟಿದ ಮಕ್ಕಳನ್ನು ನಿನ್ನ ಜೋಳಿಗೆಗೆ ದಾನ ನೀಡ್ತೀನಿ.

ಮಾದೇಶ್ವರ : ಶಭಾಷ್ ನನ್ನ ಕಂದಮ್ಮಾ ಆದ್ರೆ... ನಿನ್ನ ಗಂಡ ಒಪ್ಪದೆವೋದ್ರೆ...?

ಸಂಕಮ್ಮ : ಯಜಮಾನ ಕೇಳಿದ ಪಕ್ಸದಲ್ಲಿ ಉಪಾಯದ ಮಾತಾಡಿ ಉಪ್ಪರಿಗೆ ಮ್ಯಾಲೆ ಓಡಿಸ್ತೀನಿ, ಬೆಲ್ಲದ ಮಾತಾಡಿ ಬೆಟ್ಟದ ಮ್ಯಾಲೆ ಕುಂಡಿಸ್ತೀನಿ. ನನ್ನ ಗಂಡನ ಇಚಾರ ಬ್ಯಾಡಿ. ದಮ್ಮಯ್ಯ ನೀವು ಮಕ್ಕಳ ಫಲ ಕೊಟ್ಬೋಗಿ ಗುರುವೆ.

ಕಂಸಾಳೆ ಮೇಳ : ಕಾಡು ಪೋಡಿಗೆ। ಹೋಗವ್ರೆ।
ಕಾಡು ಬೆಂಡೆಕಾಯಿ। ತಂದವ್ರೆ।
ಅಂಗೈ ಮ್ಯಾಲೆ। ಮಡ್ಗವ್ರೆ।
ಮೂರು ತುಕ್ಕಡವ ಮಡ್ಗವ್ರೆ।
ಮಾಯದ ಬೇಳ್ಮೆ ತುಂಬವ್ರೆ।
ಅಮ್ಮಾ ಪಿಂಡ ಪ್ರಸಾದ ಕೊಡ್ತಾವ್ರಲ್ಲಾ।
ಸತ್ಯವಂತ ಸಂಕಮ್ಮನಿಗೆ।
ಆಹಾ ಕ್ವಾರಣ್ಯ ನೀಡಮ್ಮ ವೀರತ್ತ ಮುನಿಗಳೇ।
ಆ ಹುಟ್ಟು ಬಂಜೆಗೆ ಮಕ್ಕಳ ಕೊಟ್ಟು।
ಮೆಟ್ಟಿದ ಗಾಳಿ ಹೊಡೆದವರೇ॥

ಮಾದೇಶ್ವರ : ನಾನಿನ್ನು ಬರ್ತೀನಿ ಕಣವ್ವಾ... ಯಾಕವ್ವಾ ದುಃಖ ಮಾಡ್ತಾ ಇದ್ದೀಯೆ?

ಸಂಕಮ್ಮ : ನನ್ನ ಗಂಡ ಬಂದು ಕ್ಯೊಳಿದ್ರೆ!

ಮಾದೇಶ್ವರ : ಬೆಚ್ಚಲು ಬ್ಯಾಡ ಕಂದಮ್ಮ!
ಅಂಜಲು ಬೇಡ ಕಂದಮ್ಮ!
ನಾನಿರುವಾಗ ನಿನಗೇನು ಬಯ ಕಂದಮ್ಮ!
ಬಿಳಿಯ ಪಲ್ಲಿಯಾಗಿ ಬತ್ತೀವ್ನಿ!
ನಿನ್ನ ಬೆನ್ನು ಹಿಂದುಗಡೆ ಕಾದಿವ್ನಿ!
ಹೊನ್ನ ದುಂಬಿಯಾಗಿ ಬಂದಿವ್ನಿ!
ನಿಮ್ಮ ಹೊಸ್ತಲಲ್ಲಿ ನಿಂದಿವ್ನಿ!
ಕಕ್ಕಂದುಂಬಿಯಾಗಿ ಬತ್ತಿವ್ನಿ!
ನಿಮ್ಮ ನಡುಮನೆಯಲ್ಲಿ ನಿಂತಿವ್ನಿ!
ನಾನಿದ್ದ ಮೇಲೆ ನಿನಗೆ ಬಯಬೇಡ ಕಂದಮ್ಮಾ!

ಕಂಸಾಳೆ ಮೇಳ: ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಿನ ಮ್ಯಾಲೆ।
ಕೊಂಗರು ಕೊಟ್ಟ ಚೇಜ ಶೃಂಗಾರವಾದರು ಮಾದೇವ।
ಬಂಗಾರದ ಹುಲಿವಾಹನದ ಮೇಲೆ ಬೀಗಿ ಮೆರೆದಾರು।
ಬೆಳ್ಳೀ ದರುವೆಯ। ತೆಗೆದೀಕೊಂಡು।
ಜೂಲ ನಾಯೊಂದ। ಹಿಡಿದುಕೊಂಡು।
ಆಗ ಬಾಚು ಮಚ್ಚನ್ನು। ತೆಗೆದೀಕೊಂಡು।
ಗಿರಕಿಯ ಜೋಡ। ಮೆಟ್ಟಿಕೊಂಡು।
ಅಡವಿಯ ಬಿಟ್ಟು॥ ಮನೆ ಮಂದಿರಕ್ಕೆ।
ಬಂದರಲ್ಲಾ ನೀಲಯ್ಯ।
ಆರು ಮಂಡಲ। ಆಗೋಯ್ತು।
ಗೆಜ್ಜಲು ಮಂಡಲ। ಎದ್ದೋಯ್ತು।
ಕೊಳಕು ಮಂಡಲ। ಕೊಳ್ತೋಯ್ತು।
ಕಾಳಿಂಗಸರ್ಪ ಕಡೆದೋಯ್ತು।

ವಚನ : *ಸೊಪ್ಪಿನ ಗುಳ್ಳು ಹಾಕ್ಬುಟ್ಟು ಹೋಗಿ, ಇಷ್ಟು ಸಿಕ್ಷೆ ಮಾಡಿ ಬಿಟ್ಟು ಹೋಗಿದ್ನಲ್ಲಾ, ಈವಾಗ ನೋಡಿದ್ರೆ ಮಾಡಿ ಮಚ್ಚು ಕಟ್ಟಿಸ್ಕಂಬುಟ್ಟವಳೆ! ಎಲ್ಲಿ ಅಂತೇಳಿ ದೇವಸ್ವಾಲಿಗ ನೀಲೇಗೌಡನು ಉಕ್ಕಿನ ಕತ್ತಿ ಬಲಿಗೈಲಿಡ್ಕಂಡು ಮಡದಿ... ಮಡಿದಿಯೆಲ್ಲಿ? ಅಂತ ಕೂಗ್ತಾ ನಿಂತವ್ನೇ ನೀಲಯ್ಯಾ...*

ನೀಲಯ್ಯ : ಸಂಕಮ್ಮಾ... ಮಡದಿ ಸಂಕೀ... ಸಂಕೀ......

ಕಂಸಾಳೆ ಮೇಳ :

ಹೆಜ್ಜೇನು ಗಡಿಗೆ। ತಂದವನೆ।
ಕಿರುಜೇನ ಗಡಿಗೆ। ತೆಗೆದವನೇ।
ಬಿದರಕ್ಕಿಯ। ತಂದವನೇ।
ಮಾಕಳಿ ಬೇರ। ತೆಗೆದವನೇ।
ನೇಗಿಲ ಗೆಡ್ಡೆ। ತೆಗೆದವನೇ।
ಕರ್ಜೂರದಣ್ಣು। ತಗೆದವನೇ।
ಅಯ್ಯಾ ತಕ್ಕಂತ ಸಾಮಾನ ತಕ್ಕಂಡು।
ಬಾಗಿಲಿಗಿನ್ನು ಬಂದವನೇ॥

ವಚನ : ಓ... ಬಿಮ್ಮನ್ಸೇನೂ ಆಗವಳೇ...

ನೀಲಯ್ಯ : ನೋಡ್ದಾ... ಯಾವನೋ ಮಾಯ ಮದ್ದು ಮಾಡಿ ಇಟ್ಕಂಡ್ನಲ್ಲೇ, ಸಂಕಣ್ಣೆ ಯಾರಿಗೆ ಬಿಮ್ಮನ್ಸೇ ಆದೆ?

ಸಂಕಮ್ಮ : ಕ್ವಾಪ ಮಾಡಬ್ಯಾಡ ದಮ್ಮಯ್ಯ, ನಮ್ಮಪ್ಪನ ಮನೆ ಮಾದೇವ ಕೊಟ್ಟ ಭಾಗ್ಯ ಇದೆಲ್ಲಾ.

ವಚನ :

ಜಡಿದು ಮುಂದಲೆ ಇಡ್ದವ್ನೆ।
ಚಾಕು ಚೂರಿನಿಡ್ದವ್ನೆ।
ದಮ್ಮ ದಮ್ಮನಿಡ್ದವ್ನೆ।
ಕಟ್ಟಿದ ತಲೆನ ಕಟ್ಟೆಣ್ಣೆ।
ನಿಮ್ಮಪ್ಪನ ಮನೆಗೆ ಹೋಗೆಣ್ಣೆ॥

ನೀಲಯ್ಯ : ಮೂರು ಕಂಡುಗ ಒಳ್ಳೆಣ್ಣೆ, ಮೂರು ಕಂಡುಗ ಕೈ ಎಣ್ಣೆ, ಮೂರು ಕಂಡುಗ ಕೊಬ್ಬರೆಣ್ಣೆ ಭರ್ತಿಮಾಡ್ಬುಟ್ಟು ಅದನ್ನ ಕುದಿಸ್ತೀನಿ. ಒಂದು ಸೀಸದ ಗುಂಡಾಕ್ತೀನಿ. ನೀನು ಅದರೊಳಗೆ ಮುಳುಗಿ ಅದನ್ನು ತರಬೇಕು. ಬರೋವೊತ್ಗೆ ಸಿವ ಸೆರಗು ಸೀಯಲಿಕ್ಕಿಲ್ಲ. ಮಂಡೆ ಮಾಸಕ್ಕಿಲ್ಲ. ಹಣೆಕುಂಕುಮ ಕೆಡಕೂಡ್ದು. ಹಾಗಾದ್ರೆ ನಿನ್ನ ಸತ್ಯ ಒಪ್ತೀನಿ.

ಸಂಕಮ್ಮ :

ಬಡವರ ಚೆಲುವೆ।
ಭಕ್ತರ ಪ್ರೇಮ।
ಬಡವರ ಕಾಯೋ ಮಹದೇವ।
ಬಡವರ ಚೆಲುವೆ।

ಭಕ್ತರ ಪ್ರೇಮ।
ಬಡವರ ಕಾಯೋ ಮಾದೇವ।
ಮಾಯವಾದರು ಸ್ವಾಮಿ।
ಅಡವಿ ಅರಣ್ಯಕೆ ಬಂದು।
ನೀಲಯ್ಯನ ಸತ್ಯವಲ್ಲಿ ನೋಡಿದರು।
ಬಡವರ ಚೆಲುವೆ ಭಕ್ತರ ಪ್ರೇಮ।
ಬಡವರ ಕಾಯೋ ಮಾದೇವ।

ಮಾದೇಶ್ವರ(ಧ್ವನಿ)- ಕಂದಮ್ಮ ದುಃಖ ಮಾಡಬ್ಯಾಡವ್ವಾ. ನಿನ್ನ ಬಲಭಾಗದಲ್ಲಿ ನಾನಿರ್ತೀನಿ. ಹೆದರಬ್ಯಾಡ, ಧೈರ್ಯಗೆಡಬ್ಯಾಡ.

(ಸಂಕಮ್ಮ ಕಾದ ಕೊಪ್ಪರಿಕೆಯಿಂದ ಹೊರ ಬರುತ್ತಾಳೆ.)

(ಅದನ್ನು ನೀಲಯ್ಯ ನೋಡಿ...)

ನೀಲಯ್ಯ : ಮಾಯ ಮದ್ದ ಮಾಡವ್ನ।
ಯಂತರ ಮಂತರ ಮಾಡವ್ನ।
ನಾ ನೋಡ್ತೀನಿ ಕಾಣೆ ಸಂಕಣ್ಣೆ।
ಸತ್ಯ ನಾ ಒಪ್ಪೋಲ್ಲ ನೀ ಇನ್ನೊಂದು ಸತ್ಯ ಮಾಡೆಣ್ಣೆ॥
ತುಂಬಿದ ಅಮಾಸೆ ಜಿನ ಕಲ್ಲು ನೀರು ಕರ್ಗೋ ಹೊತ್ನಲ್ಲಿ, ಸಪ್ಪಟ ಸರಿರಾತ್ರೀಲಿ, ಅಡವಿಗೆ ಕರ್ಕಂಡೋಗಿ, ನಿನ್ನ ಕುಂಡುಸ್ಬುಟ್ಟು ಬತ್ತೀನಿ. ಮಣ್ಣಲ್ಲಿ ಗಡಿಗೆ ಮಾಡಕೂಡದು, ಸಣ್ಣ ಮರಳಲ್ಲಿ ಏಳು ಗಡಿಗೆ ಮಾಡಬೇಕು. ನಿಂತ ನೀರು ತುಂಬಕ್ಕಿಲ್ಲ, ಹರಿವ ನೀರು ತುಂಬಕ್ಕಿಲ್ಲ, ಮಳೇ ನೀರ ತುಂಬಕ್ಕಿಲ್ಲ. ಬೆಳಿಗ್ಗೆ ಸುರಿವ ಮಂಜನ್ನ ಏಳು ಗಡಿಗೆ ತುಂಬಿಕೊಂಡು, ಏಳು ತಲೆ ಸರ್ಪದ ಸಿಂಬಿ ಸುತ್ಕಂಡು ಏಳು ಗಡಿಗೆ ಇಟ್ಕಂಡು ಬಂದು ತಂದೊಪ್ಪಿಸಿದ್ರೆ ನಿನ್ನೋಡ್ತೀನಿ ಕಣೆಣ್ಣೆ.

ಸಂಕಮ್ಮ : ಆಗ್ಲೀ... ನನ್ನೊಡ್ಯಾ...

ನೀಲೇಗೌಡ : ಹನ್ನೇಡು ಮೂರು ಉದ್ದದ ಗುಂಡಿ ತೋಡಿ, ಹನ್ನೆರಡು ಗಾಡಿ ಕೆಂಡ ಸುರಿಸ್ತೀನಿ, ಅಲ್ಲಿಗೆ ಬಿಸಾಕ್ತೀನಿ, ಅಲ್ಲಿಂದ ಬಂದ್ರೆ ಒಪ್ತೀನಿ.

ಸಂಕಮ್ಮ : ಆತು...

(ಕೆಂಡಕ್ಕೆ ಆಕೆಯನ್ನು ಎಸೆಯುವನು. ಎಷ್ಟು ಹೊತ್ತಾದರೂ ಮಡದಿ ಬರದಿರಲು ಮಡದೀ... ಮಡದೀ... ಅಂತ ವೋದಮ್ಯಾಕೆ ನನ್ನ ಗಟ ಇದ್ದೇನು ಪ್ರಯೋಜನ? ಇದೇ ಕೆಂಡಕ್ಕೆ ಬಿದ್ದು ನಾನು ಪ್ರಾಣಹತ್ಯೆ ಮಾಡ್ಕಬೇಕು)

ಮಾದೇಶ್ವರ : ನಿಲ್ಲು ನಿಲ್ಲು ನಿನ್ನ ಮಡದಿ ಕರ್ಕಂಬತ್ತಾ ಇವ್ನಿ.

ನೀಲಯ್ಯ : ಆಹಾ ಎಂತಾ ಯಂತ್ರಗಾರ, ಮಂತ್ರಗಾರ, ಮಾಯ ಮಾಟ ಮಾಡಿ ಗಾಡಿಗೆ ಯಿದ್ಯ ಮಾಡಿದ... ಸಂಕೆಣ್ಣೆ ಇನ್ನು ನಾ ಒಪ್ಪಕ್ಕಿಲ್ಲ.

ಸಂಕಮ್ಮ : ಇನ್ಯಾನ ಸತ್ಯ ಮಾಡ್ಬೇಕು ಹೇಳಿ ಸ್ವಾಮಿ.

(ಅಷ್ಟರಲ್ಲಿ ಸಂಕಮ್ಮನಿಗೆ ಹೊಟ್ಟೆನೋವು ಅಂತ ಮಲಗಿಕೊಳ್ಳುವಳು.)

ಧ್ವನಿ : ತಾಯೇ ನಾವು ಎಲ್ಲಿಂದ ಜನ್ಮಿಸಿ ಬರೋಣ್ವವ್ವಾ?

ನೀಲಯ್ಯ : ಆಂ... ಇದೇನು ಹೊಟ್ಟೆ ಒಳಗೆ ಒಡೆದು ಮಾತಾಡ್ತಾ ಅವೆ ಮಕ್ಕಳು! ಮೂರು ಮಕ್ಕಳ ಧ್ವನಿಗಳು!!

ಸಂಕಮ್ಮ : ಪ್ರಪಂಚದಲ್ಲಿ ಎಲ್ಲರೂ ಹ್ಯಾಗೆ ಬರ್ತಾರೆ, ಹಾಗೇ ಬನ್ರಪ್ಪಾ.

ಧ್ವನಿ : ತಾಯೇ ನಾವು ಹಾಗೇ ಬಂದ್ರೆ ನಾವು ಏಳುಮಲೆ ಕೈಲಾಸಕ್ಕೆ ಸಲ್ಲೋದಿಲ್ಲ. ಬಾಯೊಳಗೆ ಬಂದ್ರೆ ಎಂಜಲಾಗ್ಬುಡ್ತೀವಿ. ಮೂಗಲ್ಲಿ ಬರಕ್ಕೆ ಮುಸುರೆ, ಕಿವಿವೊಳಕ್ಕೆ ಗುಗ್ಗೆ, ಕಣ್ಣಲ್ಲಿ ಜಿಬರು ಏನ್ಮಾಡದವ್ವಾ? ಆದ್ದರಿಂದ ಬೆನ್ನ ಮಚ್ಚೇನ ಚಿಳ್ಳುಗುರಿನಲ್ಲಿ ಸೀಳಿಕೊಂಡು ಬರ್ತೀವಿ. (ರಂಗ ಮಂಟಪ ಕತ್ತಲಾಗುವುದು. ಮಕ್ಕಳ ಅಳುವಿನ ಶಬ್ದ.)

ಸಂಕಮ್ಮ : ಮಕ್ಕಳು ಹಾಲು ಕುಡ್ಯಾಕೇ ಇಲ್ಲ. ಮೂರು ಮಕ್ಕಳಿವೆ. (ಅಷ್ಟರಲ್ಲಿ ಮಾದೇಶ್ವರರು ಬರುತ್ತಾರೆ.)

ಸಂಕಮ್ಮ : ಓ... ಮಾದೇವು ಮಕ್ಕಳ ಬಿಕ್ಸೆಗೆ ಬಂದ್ರೆ ನನ್ನ ಕರುಳು ಚುರುಕ್ ಅನ್ನೈತೆ ಎಂಗೆ ಕೊಡಲಿ?

ನೀಲಯ್ಯ : ನಂಗೂ ಅಂಗೇ ಅನ್ನಿಸ್ತೈತೆ, ಮಕ್ಕಳೆತ್ಕಂಡು ಕಾಡ್ಗೊಂ ಟೋಯ್ತೀನಿ ಕೊಡು.

(ಮಕ್ಕಳನ್ನು ತೆಗೆದುಕೊಂಡು ಹೊರಡುವನು)

ಕಂಸಾಳೆ ಕಲಾವಿದ :

ಕ್ವಾನಾಚಿ ಕೊಲಗಯ್ಯ ಬಾ।
ಕಾರೆಕುತ್ರ ಸಂಕೋಲೆ ಬಾ।
ಕೊತ್ತಿಯ ಮೆಳೆಯ ಚಕ್ಕೆ ಬಾ।
ಯಕ್ಕದ ಮೆಳೆಯ ಮಲ್ಲೆ ಬಾ।
ನೊಕ್ಕನಹಳ್ಳಿ ಕುಳ್ಳ ಬರಗ ಬಾ।
ಇಕ್ಕಡಳ್ಳಿ ಚುಂಚು ಬರಗ ಬಾ।
ಉಳ್ಳುದೊರೆ ಕುಳ್ಳ ಬರಗ ಬಾ।
ಕೌದಳ್ಳಿ ಕರು ಬರಗ ಬಾ।
ಸಂತೆಕಾನಿ ತಲೆದೂಗ ಬಾ।
ಒಡಕೆ ಹಳ್ಳದ ಕೆಂಬರಗ ಬಾ।
ತಾಳಬಾಯ ಮ್ಯಾಳ ಮುರಕ ಬಾ।
ಕುಂತೂರು ಮಠದ ಗುರುಗೊಳ್ಕೊಟ್ಟ।
ಹನ್ನೆರಡು ಹೆಜ್ಜೆ ಬರಗ ಬಾ।
ಆಹಾ... ಕ್ವಾರಣ್ಯ ನೀಡಮ್ಮಾ ಕೋಡುಗಲ್ಲಿನ ಮ್ಯಾಲೆ॥

(ಗುಹೆಯಲ್ಲಿ ನೀಲಯ್ಯ ಸೇರಿಕೊಂಡಿದ್ದಾನೆ. ಅಲ್ಲಿಗೆ ಹುಲಿ ನುಗ್ಗಲು ಭಯದಿಂದ ಈಚೆ ಓಡಿ ಬರುತ್ತಾನೆ. ನೀಲಯ್ಯ ಮಕ್ಕಳೊಂದಿಗೆ.)

ನೀಲಯ್ಯ : ಅಯ್ಯೋ ನಾ ಮಾಡಿದ್ದು ತಪ್ಪು. ಮಕ್ಕಳನ್ನು ಮಾದೇವರಿಗೆ ಕೊಟ್ಬುಡ್ತೀನಿ ಸ್ವಾಮಿ. ನಾನು ಮಾಡಿದ್ದು ಸರ್ವತಾ ತಪ್ಪಾತು. ನಿಮ್ಮ ಮಕ್ಕಳನ್ನು ನಿಮಗೆ ದಾನ ನೀಡ್ತೀವಿ.

(ಸಂಕಮ್ಮ ನೀಲಯ್ಯ ಪಾದದಲ್ಲಿ ಇಟ್ಟು ಕೈ ಮುಗಿಯುವರು)

ಕಂಸಾಳೆ ಮೇಳ : ಆಹಾ... ಕ್ವಾರಣ್ಯ ನೀಡಮ್ಮ ಕೋಡುಗಲ್ಲಯ್ಯನಿಗೆ।
ಒಜ್ಜರದಲಗೆ ಒಳಗೆ ಕಿರೀಟ ಗುಂಜುಮಲೆ ಕೋಡುಗಲ್ಲೊಳಗೆ।
ಆಹಾ... ಒಕ್ಕಲ ಗಂಟೆ ಹುಲಿಯ ಚರ್ಮ ದೊಡ್ಡಮಲೆ ಮಾವಪ್ಪನಿಗೆ।
ಕ್ವಾರಣ್ಯ ನೀಡಮ್ಮ ಕೋಡಗಲ್ಲು ಮುನಿಗೆ॥

ಮಾದೇಶ್ವರ : ಬಿಲ್ಲಯ್ಯ ಕಾರಯ್ಯರನ್ನು ಕರೆದುಕೊಂಡು ಹೋಗ್ತೀನಿ. ಮೂರನೇ ಮಗ ಮಲ್ಲಣ್ಣನನ್ನು ನೀವು ವಂಶೋದ್ಧಾರಕ್ಕೆ ಇಟ್ಕೊಳ್ಳಿ.

(ಮಕ್ಕಳನ್ನು ತೆಗೆದುಕೊಂಡು ಹೋಗುವರು. ನೀಲಯ್ಯ ಸಂಕಮ್ಮ ದುಃಖಿಸುತ್ತಾ ನಮಸ್ಕರಿಸುತ್ತಾರೆ. ದುಃಖದ ಸಂಗೀತ)

* * *

(ಮಕ್ಕಳಾದ ಬಿಲ್ಲಯ್ಯ, ಕಾರಯ್ಯ ಆರೇಳು ವರ್ಷದವರಾದರು. ಮಾದೇಶ್ವರರು ಸತ್ತಂತೆ ಮಲಗಿ ಕೊಂಡರು. ಮಕ್ಕಳು, "ತಾತಯ್ಯ... ತಾತಯ್ಯ..." ಎಂದರೂ ಶಬ್ದ ಬರದಿರಲು...)

ಕಾರಯ್ಯ : ಓ... ತಾತಯ್ಯನವರು ನಮ್ಮನ್ನು ಬಿಟ್ಟು ಸತ್ತೋಗ್ಬುಟ್ಟವ್ರೆ.

(ಕತ್ತಿಯನ್ನು ತೆಗೆದುಕೊಂಡು ಪ್ರಾಣಹತ್ಯೆ ಮಾಡಿಕೊಳ್ಳಲು ಇಬ್ಬರೂ ಮುಂದಾಗುತ್ತಿರಲು...)

ಮಾದೇಶ್ವರ : ಮಕ್ಕಳೇ ಕಾರಯ್ಯ, ಬಿಲ್ಲಯ್ಯರೇ, ನಿಮ್ಮ ಭಕ್ತಿಗೆ ಮೆಚ್ಚಿದೆ. ಇನ್ನು ಮುಂದೆ ಈ ಸ್ಥಳಕ್ಕೆ 'ಕತ್ತಿ ಪವಾಡದ ಕೊಳ' ಅಂತ ಹೆಸರಾಗಲಿ ನಡೆಯಿರಿ. ಹೋಗೋಣ...

(ಮಕ್ಕಳ ಜೊತೆಯಲ್ಲಿ ಹೊರಡುವರು.) (ಹರ್ಷ ಸಂಗೀತ)

ಸಾಲು-೪

(ಮಾದೇಶ್ವರರು ಇಕ್ಕೇರಿ ದೇವಮ್ಮನ ಮನೆ ಮುಂದೆ ನಿಂತು...)

ಮಾದೇಶ್ವರ : ಅಮ್ಮ ಯಾರು ಕಂದ ಮನೆಯೊಳಗೆ।
ಯಾರು ಕಂದ ಮನೆಯೊಳಗೆ।
ಹರನೀಗೆ ದಾನ ನೀಡವ್ವ।
ಸಿವನೀಗೆ ದಾನ ನೀಡಮ್ಮ।
ದಾನ ಧರ್ಮ ಸಾರವರೇ।

ಮೂಡಲ ಮಲೆಯ ಮಾದೇವ।
ಆಹಾ... ಕ್ವಾರಣ್ಯ ನೀಡಮ್ಮ ಮಾದೇವ ಲಿಂಗನಿಗೆ।
ಕೋಲು ಮಂಡೆ ಜಂಗಮರು ಕ್ವಾರಣ್ಯಕೆ ದಯಮಾಡವರೆ।
ಆಹಾ... ಕ್ವಾರಣ್ಯ ನೀಡಮ್ಮಾ ಮಾದೇವ ಲಿಂಗನಿಗೆ।
ಯಾರವ್ವಾ ಮನೆಯೊಳಗೆ ಅತಿಲಿಂಗನ ಭಿಕ್ಷೆ, ಜ್ಯೋತಿ
ಸಂಕಯ್ಯನ ಭಿಕ್ಷೆ, ಯತಿ-ಮತಿಗಳ ಭಿಕ್ಷೆ, ಸೂರ್ಯ
ಚಂದ್ರಾದಿಗಳ ಭಿಕ್ಷೆ, ನಾಲ್ಕು ಪಾದದ ಜೋಳಿಗೆ ಭಿಕ್ಷೆ,
ಜೋಳಿಗೆ ಹಿಡಿದ ಮುತ್ತಿನ ಭಿಕ್ಷೆ.

(ಇಕ್ಕೇರಿ ದೇವಮ್ಮ ಬಂದು..)

ಇಕ್ಕೇರಿ ದೇವಮ್ಮ: ಬನ್ನಿಸ್ವಾಮಿ, ತಾವು ನಮ್ಮ ಮನೆಯ ಭಿಕ್ಷ ತೀರಿಸ್ಕೊಂಡು ಹೋಗಬೇಕು. ನೀವು ಚಾವಡಿಯಲ್ಲಿರಿ, ನಾನು ಮನೆ ಸಾರಿಸಿ ಗುಡಿಸಿ ಅಡಿಗೆ ಮಾಡಿಬಿಡ್ತೀನಿ. ನಮ್ಮ ಮಕ್ಕಳನ್ನು ಕಳಿಸ್ತೀನಿ. ನೀವು ಬಂದು ಭಿಕ್ಷ ತೀರಿಸ್ಕೊಂಡೇ ವೋಗ್ಬೇಕು. ಯಾವ ಗುಡ್ಡ, ಗುರ, ಜಂಗಮ ಬರಲಿ ಅವರಿಗೆ ನಾನು ಭಿಕ್ಷ ನೀಡಿಯೇ ಕಳಿಸದು.

ಮಾದೇಶ್ವರ : ಆಗ್ಲವ್ವಾ. ನಾನು ಊರಲ್ಲೆಲ್ಲಾ ಭಿಕ್ಷೆ ಮಾಡ್ಕಂಡು ಮಧ್ಯಾಹ್ನಕ್ಕೆ ಬಂದುಬಿಡ್ತೀನಿ.

ಇಕ್ಕೇರಿ : ಆಗ್ಲಿ ಗುರುಗಳೇ. (ಗುರುಗಳು ನಿರ್ಗಮಿಸುವರು) ಮಕ್ಳಾ...

('ಬಂದೋ'... ಎಂದು ಏಳು ಮಕ್ಕಳೂ ಬಂದು ನಿಂತರು.)

ವೋಗಿ ಹಾವೊಡ್ಕಂಡು ಇಸ ತನ್ನಿ, ಕೋಡ್ಗಳ್ಳಿ ಹಾಲು, ಕಳ್ಳಿ ಹಾಲು ಕರ್ಕಂಡು ತುಂಬ್ಕಂಬನ್ನಿ. ಮಧ್ಯಾನಕ್ಕೂ ಮುಂಚೆ ಬಂದುಬುಡಿ.

ಮಕ್ಕಳು : ಆಗ್ಲಿ ಕನವ್ವಾ...

(ನಿರ್ಗಮಿಸುವರು, ಹರ್ಷ ಸಂಗೀತ)

(ಮಾದೇಶ್ವರರು ಬರುವರು)

ಇಕ್ಕೇರಿ : ಬನ್ನಿ ಗುರುಗಳೇ. ಈ ಚಾಪೆಯ ಮೇಲೆ ಕೂತುಕೊಳ್ಳಿ

ಮಾದೇಶ್ವರ : ಆಗ್ಲವ್ವಾ...

(ಇಕ್ಕೇರಿ ದೇವಮ್ಮ ವಿಷದ ಕಜ್ಜಾಯ, ಕೋಡ್ಗಳ್ಳಿ ಹಾಲು, ಕಳ್ಳಿ ಹಾಲು ತಂದಿಟ್ಟಳು. ಮಾದೇಶ್ವರರು ಕಜ್ಜಾಯವನ್ನು ತಿಂದು, ಕಳ್ಳಿ ಕೋಡ್ಗಳ್ಳಿ ಹಾಲು ಎಲ್ಲವನ್ನೂ ಗಟಗಟನೆ ಕುಡಿಯುವರು. ನಗುತ್ತಾ ಆಕೆಗೆ ಕಾಣದಂತೆ ವಿಷದ ಕಜ್ಜಾಯವನ್ನು ಹಸುಬೆಗೆ ಹಾಕಿಕೊಂಡರು.)

ಮಾದೇಶ್ವರ : ಬಹಳ ಚೆನ್ನಾಗಿತ್ತವ್ವಾ...

ಇಕ್ಕೇರಿ : (ಮೆಲ್ಲನೆ ಮಕ್ಕಳನ್ನುದ್ದೇಶಿಸಿ) ಇನ್ನು ಈ ಜಂಗಮಯ್ಯ ನೆಗೆದುಬಿದ್ದು ನೆಲ್ಲಿಕಾಯಾದಾಗೇ, ಇನ್ನೊಂದು ಗಳಿಗೆಗೇ ಗೊಟಕ್ ಅಂತಾನೆ. ಮೈನಾಭರಣನೆಲ್ಲಾ ಕಳ್ಕಂಡು ಹಳ್ಳಕ್ಕಾಕಿ ಮುಚ್ಚಿಬಿಡಬೇಕು.

ಮಕ್ಕಳು : ಆಗ್಴ಲವ್ವಾ... (ಹೊರಡುವರು.)

ಮಾದೇಶ್ವರ : ತೃಪ್ತಿಯಾಯ್ತವ್ವಾ... ನಾನಿನ್ನು ಬರ್ತೀನಿ.

(ಇಕ್ಕೇರಿ ದೇವಮ್ಮ ಅವರ ಹಿಂದೆ ನೆಟ್ಟಿ ನರಕುತ್ತಾಳೆ.)

ಇಕ್ಕೇರಿ : (ಸ್ವಗತ) ಎಲ್ಲಾ ಜಂಗಮ್ರೂ ಈಟೊತ್ಗೆ ಸತ್ತು ಬಿದ್ದೋಯ್ತಿದ್ರು. ಇವನೇನು ಇನ್ನೂ ಗುಂಡುಕಲ್ಲು ಗೂಳಿಯಾಗವ್ನೆ. ಹೋಗಿ ಬನ್ನಿ, ಇನ್ನೊಂದು ಸಾರಿ ಬನ್ನಿ.

ಮಾದೇಶ್ವರ : ಆಯ್ತವ್ವಾ... ನೀ ಮಾಡ ಉಪಚಾರಕ್ಕೆ ಬರ್ದೇ ಇರಕ್ಕಾಯ್ತದವ್ವಾ...

(ಮಾದೇಶ್ವರರು ಹೊರಡುವರು. ಅಷ್ಟರಲ್ಲಿ ಮಕ್ಕಳು ಬರವರು.)

ಮಕ್ಕಳು : ಆಯ್ತವ್ವಾ ಹಳ್ಳ ತೋಡಿ.

ಇಕ್ಕೇರಿ : ಯಾರಿಗೆ ತೋಡಿದ್ರಿ, ವೋಗಿ ಎಂತ ಇಸ ತಂದ್ರಿ... ಎಂತ ಹಾಲು ತಂದ್ರಿ...? ಜಂಗಮಯ್ಯ ಸಾಯ್ನೇ ಇಲ್ಲ. ವೋಗಿ ವೋಗಿ, ನಿಮಗೆ ಎಳ್ಳು ಕಾಳಸ್ಟೂ ಬುದ್ಧಿ ಇಲ್ಲ. (ಸಂಗೀತ ದುಃಖದಲ್ಲಿ ಕೊನೆಗಾಣುವುದು.)

* * *

(ಮಾದೇಶ್ವರರು ದಾರಿಯಲ್ಲಿ ಬರುತ್ತಿರಲು ಇಕ್ಕೇರಿ ದೇವಮ್ಮನ ತಂಗಿ ನಿಂಗಮ್ಮ ಒಂದು ಪುಟ್ಟಿಯಲ್ಲಿ ಕಜ್ಜಾಯವನ್ನು ಹೊತ್ತುಕೊಂಡು ಬರುತ್ತಿದ್ದಾಳೆ. ಮುಖದ ಮೇಲೆ ಮುಸುಕು ಹಾಕಿಕೊಂಡು ಮಾದೇಶ್ವರರು ದೊಣ್ಣೆ ತೋರಿಸಲು, ಆಕೆ ಲಬಲಬನೆ ಬಾಯಿ ಬಡಿದುಕೊಂಡು ಬುಟ್ಟಿ ಕೆಳಗಿಟ್ಟು ಓಡುತ್ತಿರಲು, ಮಾದೇಶ್ವರರು ತಮ್ಮ ಜೋಳಿಗೆಯಲ್ಲಿದ್ದ ವಿಷದ ಕಜ್ಜಾಯ ಹಾಕಿ, ಒಳ್ಳೆ ಕಜ್ಜಾಯವನ್ನು ತಮ್ಮ ಜೋಳಿಗಗೆ ಹಾಕಿಕೊಂಡರು.)

ಮಾದೇಶ್ವರ : ನಿಲ್ತೀಯೋ ಹ್ಯಾಗೋ...?

ನಿಂಗಮ್ಮ : ಸ್ವಾಮಿ ನನ್ನ ಬುಟ್ಟುಬುಡಿ.

ಮಾದೇಶ್ವರ : ಬುಟ್ಟೀಲೇನು?

ನಿಂಗಮ್ಮ : ನಮ್ಮಕ್ಕನ ಮನೆಗೆ ಅಪರೂಪಕ್ಕೊಯ್ತಾ ಇವ್ನಿ. ಕಜ್ಜಾಯ ಸುಟ್ಕಂಡೊಯ್ತಾ ಇವ್ನಿ ಬುದ್ಧಿ. ಮನ್ಗೋದ್ರೆ ವುಡುಗ್ರು ಕೈ ಬಾಯಿ ನೋಡ್ತವ್ರೆ ಕನಪ್ಪಾ.

ಮಾದೇಶ್ವರ : ವೋಗ್ಲಿ ತಕ್ಕಂಡೋಗು.

(ನಿಂಗಮ್ಮ ಪುಟ್ಟಿಯನ್ನು ಮೆಲ್ಲನೆ ಎತ್ತಿಕೊಂಡು ಹೊರಡುವಳು.)

(ಹರ್ಷ ಸಂಗೀತ)

(ಇಕ್ಕೇರಿ ದೇವಮ್ಮನ ಮನೆಗೆ ನಿಂಗಮ್ಮ ಬಂದಳು. ಎಲ್ಲರಿಗೂ ಕಜ್ಜಾಯ ಕೊಟ್ಟಳು. ಸ್ವಲ್ಪ ಹೊತ್ತಿನಲ್ಲಿಯೇ ಮಕ್ಕಳೆಲ್ಲಾ ವಾಂತಿ ಮಾಡಿಕೊಂಡು ಸತ್ತು ಬಿದ್ದರು. ಅದನ್ನು ನೋಡಿದ ದೇವಮ್ಮ...)

ಇಕ್ಕೇರಿ : (ಬಾಯಿ ಬಾಯಿ ಬಡಿಯುತ್ತಾ) ಅಯ್ಯೋ ಪಾಪಿ ಎಂಥ ಕೆಲಸ ಮಾಡ್ಬುಟ್ಟೆ...? ಹೀಗ್ಮಾಡಬೇಡ ಅಂತ ಅದೇಟು ಜೆನಗಳಿಂದ ಗುರುಗಾಯಿಸ್ಕಂಡಿದ್ದೆ? ಅಯ್ಯೋ ನನ್ನ ಮಕ್ಕಳಿಗೆ ಇಸಹಾಕಿ ಕಜ್ಜಾಯ ಮಾಡ್ಕಂಬಂದಿದ್ಯಾ? ಅಯ್ಯೋ...

(ಗೋಳಾಡುತ್ತಿರಲು ಪೆಚ್ಚಳಾದ ನಿಂಗಮ್ಮ)

ನಿಂಗಮ್ಮ : ನಾನೇನು ಅಂತ ಕೆಲ್ಸ ಮಾಡ್ನಿಲ್ಲ ಕನವ್ವಾ...

(ಅಷ್ಟರಲ್ಲಿ ಮಾದೇಶ್ವರರು ಪ್ರವೇಶಿಸಿ)

ಮಾದೇಶ್ವರ : ಅವಳೇನೂ ಅಂತವ್ಳಲ್ಲವ್ವಾ, ನೀವೇ ಕಂಡವರ ಮಕ್ಕಳಿಗೆ ಹಾಕವ್ವು. ನೀ ಹಾಕಿದ ಇಸ ನಿನ್ನ ಮಕ್ಕಳಿಗೆ ಆಗಿದೆ. ಈಗನ್ಪೋಗ್ಸು. ನಿನ್ನ ಮಕ್ಕಳಾಗ್ಯಲ್ಲವ್ವಾ ಬೇರೆಯವರ ಮಕ್ಕಳು?

ಇಕ್ಕೇರಿ : (ಪೆಚ್ಚಳಂತಾಗಿ) ಸ್ವಾಮಿ ನಾನು ಮಾಡಿದ್ದು ತೆಪ್ಪಾತು... ಕ್ಷಮ್ಸಿ... ನಿಮ್ಮ ದೇವಸ್ಥಾನದ ರಜ ವೊಡ್ಕಂಡು ಜೀವನ ಸಾಗ್ತಿಸ್ತೀನಿ. ನನ್ನ ದ್ರವ್ಯನೆಲ್ಲಾ ನಿಮ್ಮ ದೇವಸ್ಥಾನಕ್ಕೆ ಕೊಡ್ತೀನಿ. ನನ್ನ ಮಕ್ಕಳನ್ನು... ಕಾಪಾಡಿ...

ಮಾದೇಶ್ವರ : ಹಾಗೇಯೇ ಮಾಡು...

(ಮಾದೇಶ್ವರರು ಅದೃಶ್ಯರಾಗುವರು)

(ಸಂಗೀತ)

**ಸಾಲು-೫**

**ಕಂಸಾಳೆ ಮೇಳ :** ಇಳಿದಾರು ಇಳಿದಾರು ಮಾದೇವ।
ಗಿರಿಯಿಂದ ಇಳಿದಾರು ಮಾದೇವ। ಇಳಿದಾರು।
ಬಂಗಾರು ಪಟ್ಟ ತೇಜೀಯ ಮ್ಯಾಲೆ
ಗಿರಿಯಿಂದ ಇಳಿದಾರು ಮಾದೇವ।
ಹೊನ್ನ ಬಣ್ಣದ ಬರಗನ ಮೇಲೆ।
ಗಿರಿಯಿಂದ ಇಳಿದಾರು ಮಾದೇವ।
ಗೆಜ್ಜಲಹಟ್ಟಿ ಕೋಡುಗಲ್ಲೊಳಗೇ।। ಇಳಿದಾರು।।
ಮಕ್ಕಳ ಮನೆಯ ಮಾಡವರೇ।
ಗಿರಿಯಿಂದ ಇಳಿದಾರು ಮಾದೇವ।
ಗಂಡುಗಲಿಯ ಮ್ಯಾಲೆ ಗದ್ದುಗೆಯೋ।
ಗಿರಿಯಿಂದ ಇಳಿದಾರು ಮಾದೇವ। ಇಳಿದಾರು।।

ವಚನ : *ಸಿವ ಸಿವಾ... ಈಶಾನ್ಯ ಮೂಲೆ ಒಳಗೆ, ಬಂಕಾಪುರಿ ಶ್ರವಣ ದೊರೆ ಅಂದ್ರೆ ಯಾವ ರೀತಿ ರಾಜ್ಯಭಾರ ಆಳ್ತಾಅವ್ನೆ ಅಂದ್ರೆ, ಅವನ ರಾಜ್ಯಭಾರ ಅನ್ತಕದ್ದು ಮುಡುಕು ತೊರೆ ಮಲ್ಲಣ್ಣ, ಕೋಟೆ ಬಾಗಿಲಲ್ಲಿ ಪಾರುವಂತೆ, ಪಟ್ಟದ ರಂಗಸ್ವಾಮಿ, ಸ್ತೀಮನ್ನಾರಾಯಣ ಪಂಚಾಂಗ ನೋಡವಕ್ಕೆ ಸಾಸ್ತ ಹೇಳೋದಕ್ಕೆ ಅವನ್ನ*

ನಿಲ್ಲಿಸ್ಕಂಡಿದ್ದ. ಭೂಲೋಕದಲ್ಲಿ ಲಕ್ಷೀದೇವಿ, ಪಾರ್ವತಿದೇವಿ, ಸಾರದಮ್ಮ ಇವ್ರೆಲ್ಲಾ ಮೂರು ಜನರೂ ಆವನ ಅರಮನೆಯಲ್ಲಿ ಅಕ್ಕಿ ಬ್ಯಾಳೆ ಮಾಡ್ಕಂಡು, ಮಾರಿ ಮಸಣಿಯವರೆಲ್ಲಾ ಸೇರಿ ಮೂಗ್ಗೆ ಬಾಯ್ಗೆ ಕವಡೆ ಕಟ್ಕಂಡು, ಅವನರಮನೆಗೆ ನೀರು ಹೊರೋವ್ಕಂತೆ. ದೇವೇಂದ್ರ ಸಗಣಿ ನೀರು ಹಾಕಿದ್ರೆ ವಾಸುದೇವ ಕಸ ಗುಡ್ಸಕ್ಕೆ. ಇಷ್ಟು ಜನರನ್ನು ಸೆರೆ ಇಟ್ಕಂಡು ಕೊನೆ ಮೀಸೆ ತಿರುಗಿಸಿಕೊಂಡು ಬಿಟ್ಟ ಕಣ್ಣು ಬಿಟ್ಟಾಗೆ, ನೀಡಿದ ಕಾಲು ನೀಡಿದ ಹಾಗೆ, ಅವನು ದೊರೆತನದಲ್ಲಿ ಬರ್‍ಗಿವ್ನಲ್ಲಪ್ಪಾ... ಶ್ರವಣಯ್ಯಾ...

"ಆಹಾ ನೋಡಿ... ನಮ್ಮ ಸಿವನಾ।
ಮಲೆಯೋ ಮಾದೇವ ಬರುವ ಚಂದಾವ।
ಕಾಡಿ ಬೇಡಿ ಸಿವನಾ...॥"

ಜಂಗಮ ಜಂಗಮ। ಮಾದೇವ॥ ಎತ್ತಲ ಜಂಗಮರು।
ಮಾದಯ್ಯ ಮಾದಯ್ಯ। ಮಲೆ ಮಾದಯ್ಯ ಜಂಗಮರು।
ಜಂಗಮ ಜಂಗಮರು। ಮಾದೇವ ಎತ್ತಲ ಜಂಗಮರು।
ಮಲೆನಾಡು ಮಲೆಸೀಮೆಗೆ। ಒಬ್ಬ ಮಾದೇವ ಜಂಗಮರು।
ಮಾಡಿದ ಮಾಯವ ಬಲ್ಲವನೇ। ಸರಿಯಾಗಿ ಇನ್ನು ಬಂದವನೆ।
ಮಲೆನಾಡು ಮಲೆಸೀಮೆಗೆ। ಒಬ್ಬ ಮಾದೇವ ಜಂಗಮರು।
ಜಂಗಮ ಜಂಗಮರು। ಅಯ್ಯ ಎತ್ತಲ ಜಂಗಮರು।
ಬಡವರ ಮನೆಗೆ ಬಂದವನೇ। ನನ್ನ ನಾಗಮಲೆಯ ಮಾದೇವಾ।
ಮಲೆನಾಡು ಮಲೇಸೀಮೆಗೆ। ಒಬ್ಬ ಮಾದೇವ ಜಂಗಮರು।

(ಸೇವಕರಿಬ್ಬರು ಕೈ ಮುಗಿದು ನಿಂತು...)

ಸೇವಕ : ಸ್ವಾಮಿ ಯಾರೋ ಮಾದೇಶ್ವರರಂತೆ, ನಿಮ್ಮನ್ನು ಕೇಳಿಕೊಂಡು ಬಂದವ್ರೆ.

ಶ್ರವಣ : ಮಾದಾರ್‍ನೇ, ಒಳಕ್ಕೆ ಬರಹೇಳು.

(ಇಬ್ಬರೂ ಹೊರಡುವರು. ಮಾದೇಶ್ವರರನ್ನು ಕರೆತರುತ್ತಾರೆ.)

ಮಾದೇಶ್ವರ : ಶ್ರವಣ ದೊರೆಗೆ ಜಯವಾಗಲಿ.

ಶ್ರವಣ : ಏಯ್ ಮಾದಾರಿ, ನೀನು ನನ್ನ ಕಾಲಿಗೆ ಸರಹೋಗುವ ಎರಡು ಪಾದರಕ್ಷೆ ಮಾಡಿ ತರ್‍ತೀಯಾ?

ಮಾದೇಶ್ವರ : ಓಹೋ! ನನ್ನನ್ನು ಮಾದಾರಿ ಅಂತ ತಿಳ್ಕೊಂಡು ಕೇಳ್ತಿದ್ದಾನೆ ಅಂತ ಕಾಣುತ್ತೆ. ಆನೆ ತನ್ನ ತಲೆಮೇಲೆ ತಾನೇ ಮಣ್ಣು ಹಾಕಿಕೊಂಡಂತೆ. ಈತ ಕೇಳಿದುದರಲ್ಲೇ ಈತನ ಹತವಾಗಬೇಕು, ಒಳ್ಳೆಯದೇ ಆಯಿತು. (ಜೋರಾಗಿ) ಆಗಬಹುದು. ಒಂದು ಹಲಗೆ ತರಿಸಿ, ಅಳತೆ ತೆಗೆದು ಕೊಳ್ತೀನಿ.

(ಅಷ್ಟರಲ್ಲಿ ಒಂದು ಹಲಗೆಯನ್ನು ಸೇವಕ ತಂದಿಟ್ಟ)

ಮಾದೇಶ್ವರ : ಇದರ ಮೇಲೆ ಪಾದ ಇಡಿ.

(ಇಟ್ಟ ಕೂಡಲೇ ಮುರಿಯಿತು)

ಶ್ರವಣ : ಇದೇನು ಅಪಶಕುನ, ಪಂಚಾಂಗ ನೋಡು ರಂಗಯ್ಯ.

ರಂಗಸ್ವಾಮಿ : ನಿಮಗೆ ಚಟ್ಟ.

ಶ್ರವಣ : ಏನಂದೆ?

ರಂಗಸ್ವಾಮಿ : ನಿಮಗೆ ಪಟ್ಟ...!

ಶ್ರವಣ : ರಂಗಸ್ವಾಮಿ ಇವನಿಗೆ ಚಂಚಕಾರ್‍ಕೆ ಕೊಟ್ಟು ಕಳ್ಸು.

ರಂಗಸ್ವಾಮಿ : ಆಗ್ಲಿ ಸ್ವಾಮಿ.

(ರಂಗಸ್ವಾಮಿ ಕೊಡಲು ಅದನ್ನು ತೆಗೆದುಕೊಂಡು ಮಾದೇಶ್ವರರು ಹೊರಡುವರು. ದಾರಿಯಲ್ಲಿ ಬರುತ್ತಿರಲು ಚನ್ನಯ್ಯ ದೂರದಲ್ಲಿ ಸಿಕ್ಕಲು ಆತ ಮಾದೇಶ್ವರರಿಗೆ ನಮಸ್ಕರಿಸಿದ.)

ಮಾದೇಶ್ವರ : ಚನ್ನಯ್ಯಾ ನೀನು ಸಿಕ್ಕಿದುದು ಒಳ್ಳೇದೇ ಆತು. ನೀನು ಒಂದು ಜೊತೆ ಪಾದರಕ್ಷೆ ಮಾಡಬೇಕಲ್ಲಪ್ಪಾ.

ಚನ್ನಯ್ಯ : ಅದ್ಕೇನಂತೆ, ನಾನಿರದೇ ಅದ್ಮಾಡಕ್ಕೆ. ಇಂದೇ ಅಳತೆ ಕೊಡಿ ಬುದ್ಧಿ.

ಮಾದೇಶ್ವರ : ಆದ್ರೆ ಅದು ಸಾಮಾನ್ಯವಲ್ಲ, ಮನುಷ್ಯನ ಚರ್ಮದಲ್ಲಿ ಆಗಬೇಕು. ಮಂಗಳವಾರ ಮಧ್ಯಾಹ್ನ ಹುಟ್ಟರೇ ಕಲ್ಲಿನ ಮ್ಯಾಲೆ ತಂದಿರಿಸಬೇಕು.

ಚನ್ನಯ್ಯ : ಆಯ್ತು ನನ್ನೊಡೆಯಾ.

(ನಮಸ್ಕರಿಸಿ ಅಳತೆ ತೆಗೆದುಕೊಂಡು ಹೊರಟ)

(ದುಃಖ ಸಂಗೀತ)

* * *

ಮಲ್ಲುಗದೇವಿ: ಇದ್ಯಾನ ಈವತ್ತು ಈಪಾಟಿ ಯೋಸ್ನೆ ಮಾಡ್ತಾ ಕೂತ್ಬುಟ್ರಿ?

ಚನ್ನಯ್ಯ : ಈವೊತ್ತೊಂದು ಕೆಲ್ಸವಾಗೋತು ಮಲ್ಲುಗದೇವಿ.

ಮಲ್ಲುಗ : ಏನಾತು?

ಚನ್ನಯ್ಯ : ಮಾದೇಶ್ವರರು ಸಿಕ್ಕಿ ಚಮ್ಮಾವುಗೆ ಮಾಡ್ಕೊಡು ಒಂದು ಜೊತೆ ಅಂದ್ರು.

ಮಲ್ಲುಗ : ಅದ್ಯಾಕೆ ಯೋಸ್ನೆ. ಮಾಡಿದ್ರಾತು ತಕ್ಕಳಿ.

ಚನ್ನಯ್ಯ : ಚಮ್ಮಾವುಗೆ ಅಂದ್ರೆ ಸಾಮಾನ್ಯವಲ್ಲ. ಅದು ಮನಸನ ಚರ್ಮದಿಂದ ಆಗ್ಬೇಕು.

ಮಲ್ಲುಗ : ಅದ್ಯಾಕೆ ಯೋಸ್ನೆ? ನನ್ನ ಸಿರ ಕೂದು, ಬಾಂಡ್ಲಿಗೆ ರಕ್ತ ಬಸ್ಕಂಡು, ತೊಡೆ ಚರ್ಮಾನ ತೆಗೆದು ಸಣ್ಣ ಮೂಳೇನೇ ಸೂಜಿ ಮಾಡ್ಕಳಿ, ನರಾನೇ

ದಾರ ಮಾಡ್ಕಂಡು ಎದೆ ಕೊಬ್ಬನ್ನೇ ಮ್ಯಾಣ ಮಾಡ್ಕಂಡು, ನನ್ನ ತಲೆ ಬುರ್ಡೆನೇ ಅಡಿಗಲ್ಲು ಮಾಡ್ಕಂಡು ನೀವು ಚಮ್ಮಾವುಗೆ ಮಾಡಿ.

ಚನ್ನಯ್ಯ : ಎಂಡ್ತೀನೇ ಎಂಗೆ ಕೊಲ್ಲಲಿ ಈ ಕೈಲಿ? ಸ್ತ್ರೀ ಹತ್ಯ ದೋಸವಾಯ್ತದಲ್ಲ.

ಮಲ್ಲುಗ : ನಿಮ್ಮ ಸರಣತ್ವ ಉಳಿಸ್ಕಳಿಕ್ಕೇ ರುದ್ರಗ್ವಾಪ ತಾಳ್ಕಂಡು, ನನ್ನ ಪ್ರಾಣಹತ್ಯ ಮಾಡಿ. ಇದಕ್ಯಾಕೆ ಸೋಕ ಮಾಡಿಕೊಂಡು ಕೂತ್ಕಂಡಿರಿ?

(ಚೆನ್ನಯ್ಯ ಮಲಗಿದ ಹೆಂಡತಿಯ ರುಂಡವನ್ನು ಕತ್ತರಿಸುವನು. ಚರ್ಮವನ್ನು ಅಳಿದು ಚೆಮ್ಮಾವುಗೆ ಮಾಡಿ ಅದನ್ನು ತೆಗೆದುಕೊಂಡು ಮಾದೇಶ್ವರರಿಗೆ ಕೊಡಲು ಹೊರಡುವನು.)

(ಹರ್ಷ ಸಂಗೀತ)

(ಮನೆಗೆ ಮಾದೇಶ್ವರರು ಬಂದು...)

ಮಾದೇಶ್ವರ : ಏನು ಚೆನ್ನಯ್ಯಾ ಚಮ್ಮಾವುಗೆ ಆಯ್ತಾ?

ಚೆನ್ನಯ್ಯ : ಆಯ್ತು ಬುದ್ಧಿ ತೆಗೆದುಕೊಳ್ಳಿ.

(ಪಟ್ಟವಸ್ತ ತೆಗೆಯಲು ಪ್ರಕಾಶಿಸಿತು.)

ಮಾದೇಶ್ವರ : ಈ ಚಮ್ಮಾವುಗೆ ಕೊಡಬೇಕಾದ್ರೆ ದಂಪತಿಗಳ ಸಹಿತ ಬಂದು ಕೊಡಬೇಕು, ಅಷ್ಟೂ ಗೊತ್ತಾಗಬಾರ್ದೇ? ಯಾಕೆ ಮುಖ ಮುಖ ನೋಡ್ತಿದ್ದೀಯ, ಮೂಕನಾಗಿದ್ದೀಯಾ, ಕರೆ ನಿನ್ನ ಹೆಂಡತಿನಾ!

ಚನ್ನಯ್ಯ : ಅವ್ವು ಊರ್ಗೋಗವ್ಳೇ ನನ್ನೊಡ್ಯಾ.

ಮಾದೇಶ್ವರ : ಸುಳ್ಳು, ಕೂಗು ಒಳ್ಗೇ ಅವಳೇ.

ಚನ್ನಯ್ಯ : ಸುಳ್ಳು ಅವಳು ಒಳಗಿರೋದು. (ಸ್ವಗತ) ಅವಳೆಲ್ಲಿ ಬತ್ತಾಳೆ ಕೂಗಿದ್ರೆ?

ಮಾದೇಶ್ವರ : ನನ್ನ ಮೇಲೆ ನಂಬಿಕೆ ಇಲ್ವಾ?

ಚನ್ನಯ್ಯ : ನಿಮಗೆ ನನ್ನ ಮ್ಯಾಲೆ ನಂಬಿಕೆ ಇಲ್ವಾ? ಅವ್ಳನ್ನ ಕತ್ತರಿಸಿ ಅವಳ ಚರ್ಮದಾಗಿ ಚಮ್ಮಾವುಗೆ ಮಾಡಿದೆ, ಇನ್ನೆಲ್ಲಿ ಬರ್ತಾಳೆ?

ಮಾದೇಶ್ವರ : ಮಲ್ಲುಗದೇವಿ ಬಾರವ್ವಾ...

(ಎನ್ನಲು ಬಂದೆ ಬುದ್ಧೀ ಬಂದೇ... ಎಂದು ಬರುವಳು. ಆಶ್ಚರ್ಯದಿಂದ ನೋಡುತ್ತಾ ನಿಂತ ಚನ್ನಯ್ಯ)

ಮಾದೇಶ್ವರ : ಏನು ಆಶ್ಚರ್ಯವಾಗಿ ನೋಡ್ತಾ ಇದ್ದೀಯೆ?

ಚನ್ನಯ್ಯ : ನೀವು ಸಾಮಾನ್ಯರಲ್ಲ ಬುದ್ಧಿ. (ಕಾಲಿಗೆ ಬೀಳುವರು.)

ಮಾದೇಶ್ವರ : ಏಳು, ಏಳು ಏಳು ತಾಯಿ ಮಲ್ಲುಗದೇವಿ. ಈಗ ಈ ಮೆಟ್ಟುಗಳನ್ನು ತೆಗೆದುಕೊಂಡು ಹೋಗಿ ಪುಟ್ಟರೆಕಲ್ಲಿನ ಮೇಲೆ ಇಟ್ಟು ಬನ್ನಿ. ನಾನು ಶ್ರವಣನನ್ನು ಕರೆದುಕೊಂಡು ಬರ್ತೀನಿ, ಮುಂದಿನ ಕಥೆ ನೋಡುವ್ರಿ.

ಚನ್ನಯ್ಯ : ಎಲ್ಲಾ ನಿಮ್ಮಲೀಲೆ ಬುದ್ಧಿ, ನಾವು ವೋಗ್ತೀವಿ ಬುದ್ಧಿ. ತಮ್ಮ ಅಪ್ಪಣೆಯಂತೆ ಇವನ್ನು ಹುಟ್ಟರೆಕಲ್ಲು ಮ್ಯಾಗಿಟ್ಟು ನಿಂತಿರ್ತೀವಿ.

ಮಾದೇಶ್ವರ : ಆಯ್ತು ಅಷ್ಟು ಮಾಡಿ, ನಿಮಗೆ ಮಂಗಳವಾಗಲಿ.

(ರಂಗಮಂಟಪ ಕತ್ತಲಾಗುವುದು) (ಸಂಗೀತ)

* * *

(ಮಾದೇಶ್ವರರು ಶ್ರವಣನ ಅರಮನೆಗೆ ಬಂದರು)

ಶ್ರವಣ : ಮಾದಾರಿ ಚಮ್ಮಾವುಗೆ ಸಿದ್ಧವಾಯ್ತಾ?

ಮಾದೇಶ್ವರ : ಆಗಿದೆ. ಹುಟ್ಟರೆಕಲ್ಲಿನ ಮೇಲೆ ಮಾಡಿಟ್ಟಿದೆ, ಅಲ್ಲಿ ನೋಡಬಹುದು.

ಶ್ರವಣ : ಆಗಲಿ ನಡೆಯಿರಿ.

(ರಂಗನಾಥ, ಶ್ರವಣ, ಮಾದೇಶ್ವರ ಆತನ ಕಡೆಯ ಕೆಲವರು ಹೊರಡುವರು ಹುಟ್ಟರೆಕಲ್ಲಿಗೆ. ಅಲ್ಲಿ...)

ಮಾದೇಶ್ವರ : ಕಾಲು ಹಾಕಿ ಮೆಟ್ಟಬಹುದು.

(ಶ್ರವಣ ಕಾಲು ಹಾಕುತ್ತಿದ್ದಂತೆಯೇ ಧಗಧಗನೆ ಉರಿಯಲಾರಂಭಿಸಿತು. ಜನರೆಲ್ಲಾ 'ಮಾದೇಶ್ವರರಿಗೇ... ಉಘೇ... ಉಘೇ...' ಎಂದು ಘೋಷಿಸಿದರು.)

ಶ್ರವಣ : ಆಂ... ನನಗೆ ಇವ ಇಂಥವ ಅಂತ ಗೊತ್ತಿದ್ದರೆ, ಮಾದೇಶ್ವರ ಅನ್ನೋದು ಗೊತ್ತಿದ್ದರೆ ಸೆರೆಗಾಕ್ತಿದ್ದೆ. ನನಗೆ ಮೋಸವಾಯ್ತು. ನಾನು ನಿನ್ನ ಬಲೆಗೆ ಬಿದ್ದೋಗ್ಬುಟ್ನಲ್ಲಾ. ನಾನು ನಿನ್ನ ಮಲೆಗೆ ಬರೋ ಪರಿಸೆಗೆ ಕಾಲಿಗೆ ನುಗ್ಗು ಮುಳ್ಳಾಗಿ ಚುಚ್ಚಿ ಅಯ್ಯೋ ಅನ್ನಿಸ್ತೀನಿ.

ಮಾದೇಶ್ವರ : ಹೋಗ್ಲಿ ನಿನ್ನ ಕೊನೇ ಆಸೆ ಏನಿದೆ ಕೇಳ್ಕೋ.

ಶ್ರವಣ : ನನ್ನ ಹೆಸರು ಸದಾ ಇರುವಂತೆ ಮಾಡಬೇಕು.

ಮಾದೇಶ್ವರ : ವರ್ಷಕ್ಕೊಂದುಸಾರಿ ದೀಪಾವಳಿಗೆ ನಿನಗೆ ಪಂಜಿನ ಬೆಳಕನ್ನು ತೋರಿಸ್ತೀನಿ, ಎಲ್ಲರ್ರೂಗ್ಗ ಸೆರೆಮನೆ ವಾಸ ಮುಗೀತು. (ಉಘೇ... ಮಾದಪ್ಪನಿಗೆ ಉಘೇ... ಎಂಬ ಘೋಷವಾಗುತ್ತಿರಲು ರಂಗನಾಥ ಓಡುತ್ತಿದ್ದಾನೆ.)

ಮಾದೇಶ್ವರ : ಯಾಕೆ ರಂಗನಾಥ ಓಡ್ತಾ ಇದ್ದೀಯಾ? ನಿಲ್ಲು, ಶ್ರವಣ ಸುಟ್ಟು ಬೂದಿಯಾದ. ನಿನ್ನನ್ನು ತಡೆದ ಈ ಸ್ಥಳಕ್ಕೆ 'ರಂಗನಾಥನ ಒಡ್ಡು' ಅಂತ ಹೆಸರಾಗಲಿ. ಬಂಕಾಪುರಿ ಶ್ರವಣನ ಸಂಹಾರ ಮಾಡಿದ್ದಕ್ಕೆ ಇಲ್ಲಿ ತಪಸ್ಸು ಮಾಡ್ತೀನಿ. ಇದಕ್ಕೆ ತಪಸೆರೆ ಅಂತಾಗಲಿ. ಇಲ್ಲಿ ವರ್ಷಕ್ಕೊಂದು ಸಾರಿ ರೊಟ್ಟಿ ಸೇವೆಯ ಪರವಾಗಲಿ.

(ತುಂಬಾ ಸಂತೋಷದ ಸಂಗೀತ)

(ಮಾದೇಶ್ವರರಿಗೆ ಉಘೇ... ಉಘೇ... ಎಂಬ ಘೋಷ.)

ಕಂಸಾಳೆ ಕಲಾವಿದರ ಮೇಳ

ವಚನ : ದೃಷ್ಟಿ ಮಡಗಿ ನೋಡುವಂತ ಕಾಲದಲ್ಲಿ ಸೆಟ್ಟ ಸರಗೂರಯ್ಯ, ಸರಗೂರಿನಲ್ಲಿ ಸರಗೂರಪ್ಪನ ಮಗ ನಿಜಗುಣ ಮೂಗಯ್ಯ. ಮೂಗಯ್ಯ ಅಂದ್ರೆ ಅವನು ಉಟ್ಟ ಬಟ್ಟೆ ಒಗೆದಿಲ್ಲ, ತಲೆ ಕೊಳೆ ತೆಗೆದಿಲ್ಲ, ಹಲ್ಲಿನ ಕಿಂಡ್ಯಲ್ಲಾ ಒಂದಿಷ್ಟು ಕಿಟ್ಟ ಕಟ್ಟಿತ್ತಂತೋ, ಅಲ್ಲಿಗೆ ಒಂದೊಂದು ನಿಂಬೆಕಾಯಿ ಗಾತ್ರ ಜಿಬರಂತೆ, ಒಂದು ಹಿಟ್ಟಿನ ಮುದ್ದೆ ಗಾತ್ರ ಮೂಗಲ್ಲಿ ಮುಸುರೆ ಅಂತೆ. ಅಷ್ಟು ಕೊಳಕ ಬಟ್ಟೆ ತಕ್ಕಂಡೋಗಿ ಬೆಂಕಿಗಾಕುದ್ರೂ ಬೇಯೋಲ್ಲ. ಅಂತ ಕೊಳಕ ಮೂಗಯ್ಯ. ಕೊಳಕನಾದ್ರೂ ಅವನೆದೆ ಒಳಗೆ ಪಂಚ ಕಳಸ. ಸರಣರ ಕಂಡಿದ್ರೇ ಉಂಟಾದ್ರೆ ಆ ಕಳಸ ಅಂತಕ್ಕಾದ್ದು ಕಿಲಕಿಲ ಅಂತ ನಗುತ್ತಲ್ಲಾ ಪರಂಜ್ಯೋತಿ. ಇವನು ಇಷ್ಟು ಕೊಳಕನಾದ್ರೂ ನಿಜ ಚೆನ್ನಾಗಿದೆ ಅನ್ನುಟ್ಟು ನಮ್ಮಪ್ಪಾಜಿ ಮಾದಪ್ಪನವರು ಅವನನ್ನು ನಾನು ಒಕ್ಕಲು ಪಡೀಬೇಕಲ್ಲಾ ಎಣ್ಣೆ ಮಜ್ಜನಕ್ಕೆ ಅಂತೇಳ್ಬುಟ್ಟೆ ಅವರು ಸರಗೂರಿಗೆ ಬತ್ತವರೇ...

ಆಹಾ ನೋಡಿ ನಮ್ಮ ಸಿವನ।
ಮಲೆಯೋ ಮಾದೇವ ಬರುವ ಚಂದಾವ ನೋಡಿ।
ನೋಡಿ ನಮ್ಮ ಸಿವನ।

ಮಾದೇಶ್ವರ : ಸರಗೂರು ಚಂದಾ। ಸರದ ಮಲ್ಲಿಗೆ ಚಂದ।
ಕೆರೆಯಮ್ಮ ಹಾಲು ನೊರೆ ಚಂದಾ। ಕೆರೆಯಮ್ಮ ಹಾಲು
ನೊರೆ ಚಂದ।
ಗೌರಮ್ಮ ನಿನ್ನ ಕೊರಳಲ್ಲಿರುವ ಸಣ್ಣ ರುದ್ರಾಕ್ಷಿ ಸರಚಂದ।
ಭಿಕ್ಷೆ ನೀಡವ್ವಾ...

ಗೌರವ್ವೆ : ಯಾರಪ್ಪಾ... ನಾವು ವೆಂಕಟರಮಣಸ್ವಾಮಿ ಒಕ್ಕಲು. ಸಿರ ಕೂದು ಮಡಗುದ್ರೂ ನಾವು ಭಿಕ್ಷೆ ನೀಡಕ್ಕಿಲ್ಲ.

ಮಾದೇಶ್ವರ : ನಾನು ಏಳು ಮಲೆಯ ಕೈಲಾಸದಲ್ಲಿ ನೆಲೆಗೊಂಡಿದ್ವಿ. ವರ್ಷಕ್ಕೊಂದು ಸಾರಿ ತುಂಬಿದ ಅಮಾವಾಸ್ಯೆಯ ದಿನ ನಿನ್ನ ಮಗನ ಕೈಯಲ್ಲಿ ಎಣ್ಣೆ ಮಜ್ಜನ ತೆಗೆದುಕೋಬೇಕು ಅಂತ ಬಂದಿವ್ನಿ ಕಣವ್ವಾ, ಕ್ವಾರಣ್ಯ ನೀಡವ್ವಾ.

ಗೌರವ್ವೆ : ಉಪ್ಪನ್ನೆ ಮಾರುವರು।
ಸೊಪ್ಪನ್ನೆ ಬೆಳೆಯುವರು। ತಂದನ್ನಾ ತಾನ॥
ಗುರುವೆ ಊರುರು ವೊತ್ತು ಮಾರುತ್ತ।
ಬರುವ ಗುರುವೆ। ತಂದನ್ನಾ ತಾನ॥
ಏನಪ್ಪಾ ಉಪ್ಪು ಮಾರುವರು॥
ಸೊಪ್ಪು ಬೆಳೆಯುವರು।
ಊರೂರು ವೊತ್ತು ಮಾರುವಂತ॥
ಜಾತಿ ಒಳಗೆ ಉಪ್ಪಲಿಗರು ಕಾಣಪ್ಪಾ॥

ಗೌರವ್ವೆ : ನಮ್ಮಪ್ಪನ ಮನೆದೇವರು ಮುಡುಕುತೊರೆ ಮಲ್ಲಿಕಾರ್ಜುನ, ಗಂಡನ ಮನೆದೇವರು ವೆಂಕಟರಮಣ ಸ್ವಾಮಿ, ಇವೆರಡು ಒಕ್ಕಲು ಬಿಟ್ಟು ನಾವು ಪರದೇವರಿಗೆ ಒಕ್ಕಲಾಗೋದಿಲ್ಲ.

ಮೂರು ನಾಮದವರು ಮುತ್ತತ್ತಿ
ಕುಲದವರು। ತಂದನ್ನ ತಾನ।
ಅಯ್ಯಾ ತಿರುಪತಿ ವೆಂಕಟಾಚಲರು ಮನೆದೇವರು।
ತಂದನ್ನ ತಾನು ತಾನು ತಂದೇನ। ತಾನು ತಂದನ್ನ ತಾನ।
ಸಿವ ತಂದನ್ನ ತಾನ। ತಾನೆಂದೆ ನಾನು ತಂದನ್ನ ತಾನ॥

ಮಾದೇಶ್ವರ : ಆಯ್ತವ್ವಾ... ನಾನು ಬರ್ತೀನಿ...

(ಹೊರಡುವರು. ಸಂಗೀತ....)

ಮಾದೇಶ್ವರ : ಈಕೆಯನ್ನು ಬಗ್ಗಿಸಬೇಕಾದ್ರೆ ಮತ್ತೊಂದು ದಾರಿ ಇದೆ. ಅವರ ಕುಲಗುರು ಕೆಂಪೇಗೌಡನ ಅವತಾರ ತಾಳಿಕೊಂಡು ಹೋದ್ರೆ ಹ್ಯಾಗೇ? ಹೌದು... ಅದಃ ಸರಿಯಾದ ಉಪಾಯ...!

(ನಿಲುವಂಗಿ, ಅಡ್ಡ ರುಮಾಲು, ಉದ್ದದಂಗಿ ಹಾಕಿಕೊಂಡು ಕೈಯಲ್ಲಿ ದೊಣ್ಣೆ ಹಿಡಿದುಕೊಂಡು ಮತ್ತೆ ಗೌರವ್ವೆಮನೆಯ ಹತ್ತಿರ ಬಂದು...)

ಮಾದೇಶ್ವರ : ಗೌರವ್ವೇ...

ಗೌರವ್ವೆ : ಬನ್ನಿ ಸ್ವಾಮಿ ಬನ್ನಿ...

(ಮಾದೇಶ್ವರರು ಅವಳನ್ನು ನೋಡಿ ಮುಗುಳ್ನಗುವರು. ಗೌರವ್ವೆ ತೆವಟಿಗೆ ತಂದು ಇಟ್ಟು ಕುಳಿತುಕೊಳ್ಳುವಂತೆ ಕೈ ಮುಗಿಯುತ್ತಾಳೆ. ಕುಳಿತುಕೊಂಡ ಮೇಲೆ ಮೂಗಯ್ಯನೂ ಅಷ್ಟರಲ್ಲಿ ಬರುತ್ತಾನೆ.)

ಮಾದೇಶ್ವರ : ಮೂಗಯ್ಯನಿಗೆ ಮಕ್ಕಳೆಷ್ಟವ್ವಾ?

ಗೌರವ್ವೆ : ಇದೇನು ಗುರುಗಳೇ ಹೀಗೆ ಕೇಳ್ತೀರಿ?

ಮಾದೇಶ್ವರ : ಥೂ, ನನ್ನ ಬುದ್ಧಿಗೆ, ಹೆಣ್ಣು ಎಲ್ಲಿ ನೋಡಿದ್ದೀರಿ?

ಗೌರವ್ವೆ : ಕೊತ್ತೇಗಾಲದ ಬಲ್ಲವೆ ಮಗಳು. ಈ ವರ್ಸವೇ ಮದ್ವೆ ಮಾಡ್ತೀವ್ನಿ.

ಮಾದೇಶ್ವರ : ನಾನು ಆ ಹೆಣ್ಣೊಪ್ಪಿಲ್ಲ ಬುಡವ್ವಾ. ಬೂದುಗುಂಬಳ ಕಾಯಿನ ಮುಖ, ಊದಲುಗೆಕ್ಕೆ, ಕಣ್ಣಲ್ಲಿ ನೀರು, ಬಾಯಲ್ಲಿ ಜೊಲ್ಲು ಹರಿಸ್ತಾಳೆ, ಕಿವುಡು ಬ್ಯಾರೆ, ಇತ್ತ ಕೂಗಿದ್ರೆ ಅತ್ತ ತಿರುಗುತ್ತಾಳೆ, ಆ ರಾಮವ್ವೆನಾ?

ಗೌರವ್ವೆ : ಏನಾಮ್ಡ್ಲಿ? ಒಪ್ಪೀಳ್ಯ ಮಾಡ್ಬುಟ್ಟೀವ್ನಿ, ಅರಿಸಿನ ಬಾಳೇ ಹಣ್ಣು ಆಗೋಯ್ತು. ಈಗ ಆ ಹೆಣ್ಣು ಬ್ಯಾಡ ಅಂದ್ರೆ ಸುಮ್ನೇ ಬಿಟ್ಟಾರ.

ಮಾದೇಶ್ವರ : ಋಣಾನುಸಂಬಂಧ ಆಗೋಯ್ತು. ಬಿಡವ್ವಾ ನಾನಿನ್ನು ಬರ್ತೀನಿ.

ಕೇಳು ಕೇಳಪ್ಪಾ ಮಾದೇವಾ।
ಲಿಂಗವ ಕಟ್ಟಿದರೆ ಜಂಗನ್ನು ಧರಿಸಿದರೆ। ತಂದನ್ನ ತಾನ।
ಲಿಂಗವಂತರ ಮಗನಯ್ಯೋ। ತಂದನ್ನ ತಾನ।
ತಂದನ್ನ ತಾನ ತಂದನಾ। ತಂದನ್ನ ತಾನ।
ಸಿವ ತಂದನ್ನ ತಾನ। ತಾನೆಂದೆ ನಾನು ತಂದನ್ನ ತಾನು।

* * *

(ರಂಗಮಂಟಪ ಕತ್ತಲಾಗಿ ಹಾಗೇಯೇ ಬೆಳಕು ಚೆಲ್ಲುವುದು.)

ಮಾದೇಶ್ವರ : ಬಲ್ಲವ್ವಾ...

ಬಲ್ಲವ್ವೆ : ಓ! ಬನ್ನಿ ಗುರುಗಳೇ.

ಮಾದೇಶ್ವರ : ಏನವ್ವಾ... ನಿನ್ನ ಮಗಳಿಗೆ ಮದ್ವೆ ಅಂತೆ?

ಬಲ್ಲವ್ವೆ : ಹೂಂ ಸ್ವಾಮಿ. ಸರಗೂರಪ್ಪನ ಮಗ ಮೂಗಯ್ಯನಿಗೆ ಕೊಟ್ಟು ಮಾಡ್ತೀವಿ...

ಮಾದೇಶ್ವರ : ಏನೇ ಆಗಲೀ ನಿನ್ನ ಮಗಳ ರೂಪ್ಗೆ ಸರಿಯಾದ ವರವಲ್ಲ ಬಿಡು. ಅವನ್ಗೆ ತಲೇಲಿ ಮೂಗಂಡಗ ಹೇನು, ಸೀರು, ಮೂಗಂಡಗ ನತ್ತು, ಕಣ್ಣಲ್ಲಿ ನಿಂಬೇಕಾಯಿ ಗಾತ್ರ ಜಿಬುರು, ಮೂಗಲ್ಲಿ ಹಿಟ್ಟಿನ ಗಾತ್ರ ಮುಸುರೆ, ಬಟ್ಟೆ ಬೆಂಕಿಗಾಕುದ್ರೂ ಬೇಯೋದಿಲ್ಲ. ನೀನು, ನಿನ್ನ ಮಗಳು ಅದ್ಯಾಗೊಪ್ಕಂಡ್ರಿ ಬಲ್ಲವ್ವಾ?

ಬಲ್ಲವ್ವೆ : ಒಪ್ಪಂಡಾತು, ಮದ್ವೆ ಬಂದ್ಬುಡ್ತು ಈಗ್ಯಂಗೆ ಬ್ಯಾಡ ಅನ್ನದು?

ಮಾದೇಶ್ವರ : ಏನು ಲಗ್ನಕ್ಕೆ ನನ್ನ ಕರ್ದ್ರ್ಯೋ ಹ್ಯಾಗೆ?

ಬಲ್ಲವ್ವ : ನಿಮ್ಮ ಬುಟ್ಟು ಬ್ರೈಸ್ತವಾರ ಲಗ್ನಕಟ್ಟಿಸಬೇಕು.

ಮಾದೇಶ್ವರ : ಆಯ್ತು ಕಣವ್ವಾ...

(ಬೇಸರವಾದಂಥ ಸಂಗೀತ)

(ಮಾದೇಶ್ವರರು ಜ್ಯೋತಿಷ್ಯಗಾರನಂತೆ ವೇಷ ಧರಿಸಿ ಬರುತ್ತಿದ್ದಾರೆ. ಕಚ್ಚೆ, ಮೈಗೆ ಒಂದು ಶಬ್ದ ಹೊದ್ದುಕೊಂಡು ಪಂಚಾಂಗ ಕೈಯಲ್ಲಿ ಹಿಡಿದುಕೊಂಡು ಬರುವರು.)

ಗೌರವ್ವೆ : ನಿಮ್ಮನ್ನೇ ಹುಡಿಕ್ಕಂಡು ಬತ್ತಿದ್ದು ನೀವೇ ಸಿಕ್ಬುಟ್ರೆ ನಮ್ಮ ಮಗನಿಗೆ ಲಗ್ನ ಕಟ್ಟಿಸ್ಬೇಕಲ್ಲಾ.

ಮಾದೇಶ್ವರ : ಇಲ್ಲೇ ಅರಳೀ ಮರದ ತವ ಕಳ್ತು ಕಟ್ಬುಡ್ತೀನಿ ಬನ್ನಿ ಮನೆಗ್ಯಾಕೋದರಿ.

ಬಲ್ಲವ್ವೆ : ಅಂಗೇ ಮಾಡಿ.

(ಮೂವರೂ ಕುಳಿತುಕೊಳ್ಳುವರು)

ಮಾದೇಶ್ವರ : ನಿಮಗೆ ಅಮೃತ ಲಗ್ನ ಬರೀಬ್ಯಾಕೋ, ವಿಸದ ಲಗ್ನ ಬೇಕೋ?

ಗೌರವ್ವೆ : ಅದ್ಯಾನೋ ನಂಗಂಗಂದ್ರೆ ಗೊತ್ತಿಲ್ಲ.

ಮಾದೇಶ್ವರ : ವಿಷದ ಅಂದ್ರೆ ಸುಕ್ರವಾರ ಚಪ್ಪರ, ಸನಿವಾರ ಧಾರೆ, ಅಮೃತಲಗ್ನ ಅಂದ್ರೆ ಆಯಿತವಾರ ಚಪ್ಪರ, ಸೋಮವಾರ ಧಾರೆ.

ಬಲ್ಲವ್ವೆ : ಇದ್ಯಾನ ಇಂಗಂದರಿ?

ಗೌರವ್ವೆ : ನಾನು ಸೋಮಾರದಕ್ಕೊಪ್ಪಕ್ಕಿಲ್ಲ. ಏನೇ ಆಗಲೀ ಸುಕ್ರವಾರ ಚಪ್ಪರ, ಸನಿವಾರ ಧಾರೆ ಅಂತ್ಲೇ ಮಾಡಿ.

ಮಾದೇಶ್ವರ : ಆಯ್ತು ನೀವ್ಯಾಳಿದ ಮ್ಯಾಕೆ.

(ಇಬ್ಬರೂ ನಮಸ್ಕರಿಸಿ ಅವರು ಬರೆದುದನ್ನು ತೆಗೆದುಕೊಂಡು ಹೊರಡುವರು. ಮಾದೇಶ್ವರರು ನಗುತ್ತಾ ಹೊರಡುವರು.)

* * *

(ಹರ್ಷ ಸಂಗೀತ ಮದುವೆ ಓಲಗ.)

(ಕೆಂಪೇಗೌಡನ ಅವತಾರದಲ್ಲಿ ಮಾದೇಶ್ವರರು ಗೌರವ್ವೆ ಮನೆಗೆ ಬಂದರು)

ಮಾದೇಶ್ವರ : ಏನು ಗೌರವ್ವೆ ಚೆನ್ನಾಗಿದ್ದೀರಾ? ಮದ್ವೆ ಎಲ್ಲಾ ಚೆನ್ನಾಗಾಯ್ತೇ?

ಗೌರವ್ವೆ : ಏನೋ ಮದ್ವೆ ಬ್ಯಾಗ ಬಿದ್ಬುಡ್ತು, ನಿಮ್ಮನ್ನ ಕರ್‍ಯಕಾಗ್ನಿಲ್ಲ. ಮೂಗಯ್ಯ ಬಾರಪ್ಪಾ ಗುರುಗಳಿಗೆ ನಮಸ್ಕಾರ ಹಾಕಿ ಎಲೆ ಅಡಿಕೆ, ತೆಂಗಿನಕಾಯಿ ತಂದಿಡು.

ಮೂಗಯ್ಯ : ಎಲ್ಲಿದ್ದದವ್ವಾ?

ಗೌರವ್ವೆ : ಅಟ್ಟದ ಮ್ಯಾಗದ ಎತ್ಕಂಬಾರ್ಲಾ.

ಮೂಗಯ್ಯ : ತತ್ತೀನಿ ಕವ್ವೆ...

(ಅಟ್ಟಲಿಗೆ ಹತ್ತಿದ ಸ್ವಲ್ಪ ಹೊತ್ತಿನಲ್ಲೇ 'ಅಯ್ಯೋ' ಎಂದು ಬಾಯಿ ಬಡಿಯುವ ಶಬ್ದ.. ದುಃಖದ ಸಂಗೀತ.)

ಗೌರವ್ವೆ : ಏನೋ ಕೈ ಕಚ್ಬುಡ್ತು.

(ಎಲ್ಲರೂ ಬಾಯಿ ಬಡಿಯುತ್ತಾ ಆತನನ್ನು ಕೆಳಗೆ ಕರೆತರಲು ಸತ್ತುಬಿದ್ದ. ಆಗಲೇ...)

ಧ್ವನಿ : ಇದು ನೀನು ಮಾಡಿದ ಅವಿವೇಕ, ನೀನು ಮಾದಪ್ಪನ ಒಕ್ಕಲಾಗದುದಕ್ಕೆ ಹೀಗಾಯ್ತು. ಈಗಲೂ ನೀನು ಅವರ ಪಾದವನ್ನು ಹಿಡಿ, ಅವರ ಒಕ್ಕಲಾಗು, ನಿನ್ನ ಮಗನಿಂದ ಮಜ್ಜನ ಮಾಡಿಸ್ತೀನಿ ಅಂತ ಹರಸಿಕೋ, ನಿನ್ನ ಮಗ ಬದುಕಿಕೊಳ್ತಾನೆ. ದಾರಿಯಲ್ಲಿ ಹೋಗ್ತಾ ಇದ್ದಾರೆ, ಅವರ ಪಾದ ಹಿಡಿ ಕಾರ್ಯ ಸಾಧಿಸುತ್ತೆ.

ಗೌರವ್ವೆ : ಅಯ್ಯೋ ಎಂಥ ಕೆಲಸ ಮಾಡ್ಬಿಟ್ಟೆ?

(ಹೊರಡುವರು. ದುಃಖ ಸಂಗೀತ. ದಾರಿಯಲ್ಲಿ ಮಾದೇಶ್ವರರು ಸಿಕ್ಕಲು...)

ಗೌರವ್ವೆ : ಸ್ವಾಮೀ... ಮಾದಪ್ಪಾ... ನಾನು ಅವಿವೇಕಿ, ತಪ್ಪು ಮಾಡ್ಬುಟ್ಟೆ. ನಾನು ಆಂಕಾರದ ಮಾತಾಡ್ದೆ. ನನ್ನ ಮಗ ಹಾವು ಕಡ್ದು ಸತ್ತೋಗವ್ನೆ, ಬದುಕಿಸಿಕೊಡು ಗುರುವೇ. ನಾನು ನಿಮ್ಮ ಸೋಮಾರದೊಕ್ಕಲಾಯ್ತೀನಿ ನನ್ನ ಮಗನ್ನ ಬದುಕ್ಸಿ ದೇವ್ರೇ...

ಮಾದೇಶ್ವರ : ಆಗ್ಲಿ ನಡೆಯವ್ವಾ ನೋಡ್ತೀನಿ

(ಇಬ್ಬರೂ ಮನೆಗೆ ಹೋಗುವರು. ಮಾದೇಶ್ವರರು ಆತನ ಮೇಲೆ ತೀರ್ಥವನ್ನು ಪ್ರೋಕ್ಷಿಸಲು ಆತ ಎದ್ದು ಕುಳಿತುಕೊಂಡ. ಎಲ್ಲರಿಗೂ ಸಂತೋಷವಾಯಿತು. ಎಲ್ಲರೂ ಮಾದೇಶ್ವರರಿಗೆ ನಮಸ್ಕರಿಸುವರು.)

ಮೂಗಯ್ಯ ತುಂಬಿದ ಅಮಾವಾಸ್ಯೆ ದಿವಸ, ಶಿವರಾತ್ರಿ ಹಬ್ಬದಲ್ಲಿ ಬಂದು ನನಗೆ ಎಳ್ಳು ಮಜ್ಜನ ಮಾಡೋದಕ್ಕೆ ನನ್ನ ಒಕ್ಕಲು ಪಡ್ಕೋಳ್ಳೋಕೆ ಇಷ್ಟೆಲ್ಲಾ ಮಾಡ್ದೆ. ಇನ್ನಾದ್ರೂ ಮಾಡ್ತೀರಾ?

ಮೂಗಯ್ಯ : ಮಾಡ್ತೀನಿ ಬುದ್ಧಿ.

ಗೌರವ್ವೆ : ಖಂಡಿತ ಮಾಡ್ತೀನಿ ಬುದ್ಧಿ... ನನ್ನ ಮನೆದೇವರು ನೀವು.

(ಮತ್ತೆ ನಮಸ್ಕರಿಸುವರು.)

ಹಾಡು : ತಂದನ್ನ ತಾನೆ....

(ಹರ್ಷ ಸಂಗೀತ)

* * *

**ಸಾಲು-೭**

ಕಂಸಾಳೆ ಮೇಳ : ಅಯ್ಯ ಬಾ। ಮಾದಯ್ಯ ಬಾ।
ಗಿರಿಯೊಳು ಮಾದೇವ ಲಿಂಗ ಬಾ।
ಅಯ್ಯ ಬಾ ಮಾದೇವ ಬಾ।
ಧರ್ಮಕಾರ ಮಾದಯ್ಯ ಲಿಂಗ ಬಾ।
ಗಿರಿಯೊಳು ಮಾದಯ್ಯ ಬಾ।
ಗಿರಿಯೊಳು ಮಾದಯ್ಯ ಲಿಂಗ ಬಾ।
ಬಂಗಾರದ ಪಟ್ಟ ತೇಜಿಯನೇರಿ।
ಅಯ್ಯಾ ಬಾ ಮಾದಯ್ಯ ಬಾ।
ಗಿರಿಯೊಳು ಮಾದೇವ ಲಿಂಗ ಬಾ।
ಮರೆತೋರ ಮನೆಯ ಮುರಿದವನೇ।
ಗಿರಿಯೊಳು ಮನೆಯ ಮುರಿದವನೆ।

ಗಿರಿಯೊಳು ಮಾದೇವ ಲಿಂಗ ಬಾ।
ಅಯ್ಯಾ ಬಾ ಮಾದಯ್ಯ ಬಾ।
ಅಂಗೈಲಿ ಸಿವ ಆದಾರಿಗಳೋ ಗುರುವೇ।
ಮುಂಗೈಲಿರಿಸಿದೆ ಜೋಳಿಗೆಯೋ।
ಮಹಾರುದ್ರ ಲಿಂಗರು ಪೂಜೆಗೆ ಗುರುತರ।
ಕ್ವಾರಣ್ಯಕ್ಕೆ ಬಂದವರೇ।
ಕ್ವಾರಣ್ಯ ನೀಡಮ್ಮಾ ಕೋಡುಗಲ್ಲು ಮುನಿಗೆ।

ವಚನ : *ನಮ್ಮ ಪ್ವಾಜೆಯವರು ಮುಂದಕ್ಕೆ ಹೊರಟು ಹೋಗ್ಬಿಟ್ರು. ಆದ್ರೆ ವೋಯ್ತಾ ವೋಯ್ತಾ ನಮ್ಮಪ್ವಾಜೆಯವರು ಮೂಡಲ ಮಲೆ ಕೈಲಾಸದಲ್ಲಿ ಯಾವ ತರವಪ್ಪಾ ಅಂತೇಳಿದ್ರೆ ಸೀಗೆ ಸಿರಿಗಂಧ, ಬಾಡ ಬಾಗಲಗಿತ್ತು, ನುಗ್ಗಲಾರದ ಜಾಲಿ ಒಳಗೆ ಹುಲಿ-ಕರಡಿ ಎಲ್ಲಾ ವಾಸ ಮಾಡತಕ್ಕಂತ ದೇಸ. ಆ ಮಲ್ಗೆ ಹೆತ್ತಯ್ಯನವರು ಹನ್ನೆರಡು ಉದ್ದ ಜಲ ಕಂಡು ನಮ್ಮ ಪ್ವಾಜೆಯವರು ಕರಿಯಕಲ್ಲಾಗಿ ಒಡೆದು ಮೂಡವ್ರೇ ಮಾದೇವಾ...*

ಆಹಾ ನೋಡಿ ನಮ್ಮ ಸಿವನಾ?
ಮಲೆಯೋ ಮಾದೇವಾ ಬರುವ ಚಂದವಾ।
ಆಂ... ನೋಡಿ ನಮ್ಮ ಸಿವನಾ॥

ಮಾದೇಶ್ವರ : (ಸ್ವಗತ ಧ್ವನಿ) ನಾನು ಈಗ ನರರನ್ನು ಪಡೀಬೇಕಾದ್ರೆ ಯಾವುದಾದರೂ ಒಂದು ಗುಡಿ ಬೇಕು. ಆಗ ಕಾಸಿನ ಧೂಪ ಹಾಕ್ತಾರೆ, ಕರವೆತ್ತಿ ಕೈ ಮುಗೀತಾರೆ, ಮಳೆಗೆ ನೆನಿತೀನಿ, ಬಿಸಿಲು ಬಂದ್ರೆ ಒಣಗ್ತೀನಿ. ಒಂದು ಅಂಕಣ ಗುಡಿಕಟ್ಟೋ ಅಂತ ಭಕ್ತರು ಯಾರಿದ್ದಾರೆ? ಓ... ಆಲಂಬಾಡಿ ಜುಂಜೇಗೌಡ ಇದ್ದಾನಲ್ಲ ಅವನನ್ನು ಒಕ್ಕಲುಪಡಿಸಬೇಕು. ಓ... ಆತನ ಹಸುವು ಇತ್ತ ಕಡೆಯೇ ಬರ್‍ತಾ ಇದೆ. ಬರಲಿ.

(ಹಸುವು ಬಂದು ಲಿಂಗಕ್ಕೆ ಹಾಲು ಕರೆದು ಹೋಗುವುದು.)

(ಹರ್ಷ ಸಂಗೀತ.)

* * *

ಆಲಮ್ಮ : ಏನೂ ಅಂದ್ರೆ...?

ಜುಂಜೇಗೌಡ : ಏನೇ ಆಲಿ...?

ಆಲಮ್ಮ : ಈವೊತ್ತು ಹಸ ಹಾಲು ಕರ್‍ಯೋದ್ರ ಬದ್ಲು ರಕ್ತ ಕರದ್ಬುಡ್ತಲ್ಲಾ!

ಜುಂಜೇಗೌಡ : ಆ ಆಳೇನಾರೂ ಕರ್‍ಕಂಡ್ಕುಡುದ್ಬುಟ್ನೋ...ವೋಗ್ಲಿ ಸರೀಗ್ ಕೇಳ್ತೀನಿ ತಾಳು. ಕೆಂಪಾ... ಬಾರ್‍ಲಾ ಇಲ್ಲಿ.

ಕೆಂಪ : ಏನ್ಬುದ್ಧಿ?

ಜುಂಜೇಗೌಡ : ಹಸ ಯಾಕ್ಲಾ ರಕ್ತ ಕರ್‍ದೈತಿ? ಏನು ನೀನು ಕರ್‍ಕಂಡು ಕುಡುದ್ಬುಟ್ಯಾ ಎಂಗೆ? (ಹೊಡೆಯುವನು ಕಡ್ಡಿಯಲ್ಲಿ)

ಕೆಂಪ : ಅಯ್ಯೋ... ವೊಡಿಬ್ಯಾಡಿ ಬುದ್ಧಿ ನಾನಾಕೆಲ್ಸ ಮಾಡಿಲ್ಲ.

ಜುಂಜೇಗೌಡ : ಈವೊತ್ತು ಸರಿಯಾಗಿ ಗ್ಯಾನವರ್ತು ಮೇಯಿಸ್ಕಂಬಾ.

ಕೆಂಪ : ಆಗ್ಲಿ ಬುದ್ಧಿ.

(ಎಂದು ಹೊರಡುವನು.)

ಜುಂಜೇಗೌಡ : ನಾನೇ ಈ ಹೊತ್ತೋಗಿ ಏನ್ ಮಾಡ್ತಾನೋ ನೋಡ್ಕಂಬತ್ತೀನಿ ತಾಳು.

ಆಲಮ್ಮ : ಅಂಗೇ ಮಾಡಿ.

* * *

(ದೃಶ್ಯ ಬದಲಾವಣೆಯ ಸಂಗೀತ)

(ಜುಂಜೇಗೌಡ ಮಲಗಿದ್ದಾನೆ, ಮಾದೇಶ್ವರರು ಕನಸಿನಲ್ಲಿ ಬಂದು...)

ಜುಂಜೇಗೌಡ : ಯಾರು?

ಮಾದೇಶ್ವರ : ನಾನು ಮಾದೇಶ್ವರ ಇಲ್ಲಿ ಒಡೆದು ಮೂಡಿವ್ನಿ. ನಿನ್ನ ಮೇಲೆ ನನಗೆ ಮನಸ್ಸು ಬಂತು. ನಿನ್ನ ಹಸ ಬಂದು ಲಿಂಗರೂಪದ ಮಾದೇಶ್ವರರ ಮೇಲೆ ಹಾಲು ಕರೆದು ಬಂದಿದೆ. ನಿನ್ನಿಂದ ಮೂರಂಕಣ ಗುಡಿ ಆಗಬೇಕು, ದೀಪಾವಳಿಗೆ ಹಾಲರುವೆ ಸೇವೆ ಆಗಬೇಕು.

ಜುಂಜೇಗೌಡ : ಆಗ್ಲಿ ಗುರುವೇ...

(ಹರ್ಷ ಸಂಗೀತ)

(ಜುಂಜೇಗೌಡ ಹಾಡುತ್ತಾ ಬರುತ್ತಾನೆ ಲಿಂಗದೆಡೆಗೆ)

ಕೋಳಿ ಕೂಗೋ ಮುದ್ದು ಮಾದೇವನಾ।
ಕೂಗೋ ಕೂಗೋ ಮುದ್ದು ಮದೇವನಾ
ಕೂಗೋ ಕೂಗೋ ಮಾದೇವನಾ।
ಇಂದು ಕೂಗೋ ದುಂಡು ಮಾದೇವನಾ।
ಮೂಡಲ ಮಲೆಯ ಮಾದೇವನಾ।
ಇಂದು ಕೂಗೋ ದುಂಡು ಮಾದೇವನಾ।
ಇಂದು ಕೂಗೋ ದುಂಡು ಮಾದೇವನಾ।
ಕೋಳಿ ಕೂಗೋ ಮಾದೇವನ।
ಇಂದು ಕೂಗೋ ದುಂಡು ಮಾದೇವನಾ।
ಎಲ್ಲರ ದೃಥವ ನೋಡವನೆ।
ಇಂದು ಕೂಗೋ ದುಂಡು ಮಾದೇವನ।
ಕೂಗೋ ಕೂಗೋ ಮಾದೇವನಾ।
ಇಂದು ಕೂಗು ದುಂಡು ಮಾದೇವನಾ॥

## ಪೌರಾಣಿಕ

# ಮಲುಹಣಿ

**ಪಾತ್ರ ವರ್ಗ**

೧. ಮಲುಹಣ ದೇವ - ಸುವರ್ಣಭಟ್ಟನ ಮಗ ೨. ಸುವರ್ಣ ಭಟ್ಟ - ಮಿತ್ರ ಮಲಹಣನ ತಂದೆ ೩. ಪ್ರವರ ಸೇನ - ಮಹಾರಾಜ ೪. ಕಲ್ಪಣ - ಮಲುಹಣನ ಮಂತ್ರಿ ೫. ಮಲುಹಣಿ - ಪದ್ಮಾವತಿಯ ಮಗಳು ೬. ಪದ್ಮಾವತಿ - ವೇಶ್ಯೆ

(ಮಹಾ ಕವಿ ಹರಿಹರನು ರಚಿಸಿದ "ಮಲುಹಣ ದೇವ ಚರಿತೆ"ಯ ಆಧಾರದ ಮೇಲೆ ರಚಿಸಿದ ನಾಟಕ)

### ದೃಶ್ಯ-೧

(ಮಲುಹಣ ಮಲುಹಣಿಯರು ವಿಲಾಸ ಗೃಹದಲ್ಲಿ ಹಂಸ ತೂಲಿಕಾ ತಲ್ಪದಲ್ಲಿ ಕುಳಿತು)

ಮಲುಹಣಿ : ಈ ಸವಿ ಹಾಲು ರಸದುಂಬಿದ ಹಣ್ಣುಗಳನ್ನು ತೆಗೆದುಕೊಳ್ಳಿ.

ಮಲುಹಣ : ನಿನ್ನಂಗಾಂಗ ಸೌಂದರ್ಯವೇ ಹೊಟ್ಟೆ ತುಂಬಿರುವಾಗ ಈ ಭಕ್ಷ್ಯಗಳಾವ ರುಚಿ ತಂದೀತು ಮಲುಸಣಿ?

ಮಲುಹಣಿ : ಈ ಹಂಸತೂಲಿಕಾತಲ್ಪದಲ್ಲಿ ಈ ನವೋದಯ ಯೌವನ ಕಾಲದಲ್ಲಿ ಆಡಿದ ಮಾತುಗಳು ಚಿರಕಾಲ ನಿಲ್ಲಲಿ

(ಇಬ್ಬರೂ ಆಲಂಗಿಸಿಕೊಳ್ಳುವರು ಮತ್ತೆ)

ಮಲುಹಣ : ನಮ್ಮಿಬ್ಬರ ನಾಮಕಾರಣವನ್ನು ಆ ವಿಜಯೇಶ್ವರನೇ ಮಾಡಿದನೋ ಏನೋ. ಈಗ ನಿನ್ನನ್ನೇ ಸಂಪೂರ್ಣ ವರಿಸಿರುವೆನು. ಕೈಮೇಲೆ ಕೈ ಇಟ್ಟು ಹೇಳುತ್ತಿರುವೆ ಮಲುಹಣೀ.....

ಮಲುಹಣಿ : ನನಗೂ ಹಾಗೆಯೇ ಎನ್ನಿಸುತ್ತದೆ. ಇದು ಸತ್ಯ, ನಿತ್ಯ, ಶಾಶ್ವತವೆಂದು. ಕರುಣವೆಲ್ಲಾ ನೋಟ, ನೋಟವೆಲ್ಲಾ ನುಡಿ, ನುಡಿಯೆಲ್ಲಾ ವಿರಹ, ವಿರಹವೆಲ್ಲಾ ದೈನ್ಯ, ದೈನ್ಯವೆಲ್ಲಾ ಸಾತ್ವಿಕ, ಸಾತ್ವಿಕವೆಲ್ಲಾ ಮೈ, ಮೈಯೆಲ್ಲಾ

ಸೋಲ, ಸೋಲವೆಲ್ಲಾ ರಸಮಯವಾಗಿ ದಿನಗಳು ನಿಮಿಷಗಳಂತೆ ಕಳೆಯುತ್ತಿವೆ, ಸಂವತ್ಸರಗಳು ಮಾಸಗಳಾಗುತ್ತಿವೆ ನೀವೇ ನಾನು- ನಾನೇ ನೀವು... ನೀವೇ ನನ್ನ ಸರ್ವಸ್ವ. ಇದು ಮಾತ್ರ ನನ್ನುಸಿರಿರುವತನಕ ನಿರಂತರ, ನಿರಂತರ ಮಲುಹಣ.

ಮಲುಹಣ : ನನ್ನ ಪ್ರೀತಿಯ ಸರ್ವ ಭಾಗ್ಯವನ್ನು ನಿನಗೆ ಧಾರೆಯೆರೆದಿರುವೆ. ನನ್ನ ಪ್ರೇಮದ ಎರಕವನ್ನು ನಿನ್ನ ಪ್ರೇಮದ ಅಚ್ಚಿಗೆ ಹೊಯ್ದಿದ್ದೇನೆ. ನನ್ನ ಐಸಿರಿಗೆ ನೀನೇ ಸಾಕ್ಷಾತ್ ಅಧಿದೇವತೆ, ಲಕ್ಷ್ಮಿಯು.

ಮಲುಹಣಿ : ನನಗೆ ನಶ್ವರವಾದ ಐಶ್ವರ್ಯ ಬೇಕಿಲ್ಲ. ನೀವೇ ನನಗೆ ಬೇಕಾದದ್ದು.

ಮಲುಹಣ : ಹೆಣ್ಣಿನ ಹೃದಯವನ್ನೂ ತಣ್ಣಗಿರುವ ನೀರಿನ ವರ್ಣನೆಯನ್ನು ಬಣ್ಣಿಸುತ್ತಾ, ಕುಣಿಯುವ ಮಹಾಶಯರು ಹೆಣ್ಣಿನ, ನೀರಿನ ಕುದುರೆಯ ನಿಲುವನ್ನು ಕಂಡಿರುವರೇ?

ಮಲುಹಣಿ : (ಚಿಗುರು ನಗುವಿನಿಂದ) ಅದು ನನ್ನ ಭಾಗ್ಯಕ್ಕಿಲ್ಲವೆಂದು ತಿಳಿಯಿರಿ.

ಮಲುಹಣ : ಸಮುದ್ರದ ಹಾಡನ್ನು, ಮೋಡಗಳ ತಾಕಾಟವನ್ನು ಸ್ತ್ರೀಯರ ಮಹಿಮೆಯನ್ನು ಅರಿತವರಾರು?

ಮಲುಹಣಿ : ಜಗತ್ತಿನ ಹುಟ್ಟುವಿಕೆಗೆ ಕಾರಣನಾದ ಶಿವನೇ ಅರ್ಧ ದೇಹವನ್ನು ಪಾರ್ವತಿಗೆ ಅರ್ಪಿಸಿದನು. ಇನ್ನುಳಿದ ಗಂಡಸರ ಮಾತೇನು?

ಮಲುಹಣ : ಹೆಣ್ಣಿನ ಗುಣವನ್ನು ಕಣ್ಣಿಂದ ತಿಳಿಯಲಸಾಧ್ಯ, ಸುಣ್ಣದ ಕಲ್ಲಿನಲ್ಲಿ ಅಡಗಿರುವ ಭಯಂಕರ ಬೆಂಕಿಯಂತೆ ಹೆಣ್ಣು.

ಮಲುಹಣಿ : ಹೆಣ್ಣು ಹಾಗಾದರೆ, ಗಂಡುಜಾತಿಯೆಲ್ಲಾ ಸಾಚವಾಗಿಯೇ ಇರುವರೇ?

ಮಲುಹಣ : ಹೌದು ಆತನು ಯಾರೊಂದಿಗಾದರೂ ಮರೆಮಾಚದೆ ಬಾಯ್ಬಿಟ್ಟೇ ಬಿಡುತ್ತಾನೆ. ಆದರೆ ಹೆಣ್ಣಿನ ಗುಣವರಿಯುವುದು "ಹೆಂಚು ಮಣ್ಣಲ್ಲಿ ಹುಟ್ಟಿ ವಂಚನೆಯಲ್ಲಿರುವಂತೆ."

ಮಲುಹಣಿ : ಆ ಭಾವವು ನನ್ನಲ್ಲಿಲ್ಲವೆಂದು ತಿಳಿಯಿರಿ.

ಮಲುಹಣ : ಶುಂಠಿಯು ಸಿಹಿಯಾದ ನಂತರ, ನೆಲ್ಲಿಯೆ ಫಲವು ಹಣ್ಣಾದ ನಂತರ, ಕಲ್ಲಿನ ಬೊಂಬೆಗಳು ಕುಣಿದಾಡಿದ ನಂತರ, ಸ್ತ್ರೀಯ ಬುದ್ಧಿಯನ್ನು ಕಂಡುಹಿಡಿಯುವುದು ಸಾಧ್ಯ! ಅದಿರಲಿ ನಾವೀಗ ವಿಲಾಸದಲ್ಲಿ ಯಾವ ಅಡ್ಡಿ ಆತಂಕಗಳೂ ಇಲ್ಲದೆ ಹತ್ತು ವರ್ಷಗಳನ್ನು ಹತ್ತು ನಿಮಿಷಗಳಂತೆ ಕಳೆದೆವು ಅಲ್ಲವೇ?

(ಇಬ್ಬರೂ ಆಲಂಗಿಸಿಕೊಳ್ಳುತ್ತಿರಲು ಅಲ್ಲಿಗೆ ಪದ್ಮಾವತಿಯು ಬಂದು ಜೋರಾಗಿ)

ಪದ್ಮಾವತಿ : "ಏಳೇಳ್ ಮಗಳೇ, ಮಲುಹಣೇ, ನಿಮ್ಮ ಮಾವಂ ದ್ವಿಪಾಂ ತರದಿಂ ದಿವ್ಯ ವಸ್ತ್ರಾಭರಣಗಳಂ ಕೊಂಡು ಬಂದನವಂ, ನೋಡಲ್ಕೆಂದೇಳ್ ಮಗಳೇ ಮಲುಹಣೇ....

ಮಲುಹಣ : (ದುಗುಡದಲ್ಲಿ ಕೈ ಸಡಿಲಿಸಿ) ಮಲುಹಣೇ ನೋಡಿದೆಯಾ ಅಷ್ಟು ಹೊತ್ತಿನಿಂದಲೂ ಸಂತಸವಾಗಿರಲು ಮರು ನಿಮಿಷವೇ ವಿಷವಾಗಿ ಹೋಯಿತು.

ಮಲುಹಣೆ : (ಕೋಪದ ಭರದಲ್ಲಿ) ಮಿಕ್ಕ ಮೀರಿದ ರಕ್ಕಸಿ ಗುಂಟಣೆ, ಚೂತನಮನಪ್ಪಿದ ಮಲ್ಲಿಕಾಲತೆಯುಂ ಸಡಲಿಸುವ ಬಿರುಗಾಳಿಯಂತೆ, ಬೇರುಂಡ ಜಕ್ಕವಕ್ಕಿಯ ನಡುವೆ ಸೀಳ್ವ ಹೊಯ್ವ ಲುಬ್ಧಕನಂತೆ, ಮಗಳನಗಲ್ಚಲ್ ಬಗೆಯ ಬಂದೆಯೋ ಬಿಡಿ. ಈ ರಕ್ಕಸಿಯ ಮುಡಿಯಂ ಬೇಡಗಚ್ಚಂ ನಂದಿಸಿ ಬರ್ಪೆನಂಜದಿರಿ, ಅಂಜದಿರಿ ಮಲುಹಣಾ.

ಪದ್ಮಾವತಿ : (ಅತ್ತ ತಿರುಗಿ) ಸಖಿಯರೇ ಇವಳನ್ನು ಹಿಡಿದುಕೊಳ್ಳಿ (ಅವರು ಬರುತ್ತಿರಲು)

ಮಲುಹಣೆ : ನನ್ನನ್ನು ಹಿಡಿದುಕೊಳ್ಳುವ ಅವಶ್ಯಕತೆಯಿಲ್ಲ ಬಿಡಿ, ಎಲೆ ಪಾಪಿ ಸುಖವೈರಿ..... ಕಮಲ ತುಂಡಲವನಾರೋಗಿಸುವ ಹಂಸಂಗೆ ಹರಳನಿಕ್ಕುವರೇ? ಕೋರಕಮಂ ಸವಿವ ಕೋಕಿಳಕ್ಕೆ ಕೊರಡನಿಕ್ಕುವರೇ? ನವ್ಯ ಫಳರಸಮನೀಂಟುವರ್‌ಗಳಿಗೆ ಕಾದ ನೀರೆರೆವರೆ? ದಿವ್ಯ ಪರಿಮಳವನುಂಬ ತುಂಬಿಗೆ ಹೊಗೆಯನಿಕ್ಕುವರೇ? ಜೆಳ್ದಿಂಗಳನಾ-ಸ್ವಾದಿಪ ಚಕೋರಂಗೆ ಬಿಸಿಲಿಂ ಮಾಳ್ಪರೇ? ಮಲುಹಣನ ನವೀನ ಬೇರ್ದ ಸುಖದೊಳಪ್ಪೆನ್ನೊಡನೀ ಮಾತನುಡಿದರೆ? ಲೋಭಮುಂ ತಾಗಿ ಹುಟ್ಟಿದ ನೀರಸೆ ಸುಖಮಂ ಕೊಯ್ವ ಮಾನಸ ಗರಗಸವೇ? ಅಯ್ಯೋ, ಏಕೆನ್ನ ಸರಿದುರಿದು ಬಸುರಿದರಿದು ಸುಟ್ಟಿಪೆ? ದಾಕ್ಷಿಣ್ಯ ದಹನೆ ಹೋಗು ಹೋಗು.

ಪದ್ಮಾವತಿ : (ನಗುತ್ತಾ ಮೆಲ್ದನಿಯಲ್ಲಿ) ಹೊಸ ರಾಜಪುತ್ರರು ಹರೆಯ ಹಣ ತುಂಬಿ ಬಂದಿಹರು. ನೀನು ಮೆಲ್ಲನೆ ಪೊಗಳೆದು ಬಿಸುಟು ಬೇನೆಯಿಂ ನರಳಿ ಶೋಕಂಗೆಯ್ದು ಮಲುಹಣನಂ ಪೊರಪಡಿಸುವವಳಾಗು ಮಗಳೇ.

ಮಲುಹಣೆ : ನನ್ನನ್ನು ಈ ರೀತಿಯಾಗಿ ಹೊಟ್ಟೆಯುರಿಸಬೇಡಮ್ಮ

ಮಲುಹಣ : (ಕಂಬನಿದುಂಬಿ) ಮಲುಹಣೆ - ಮಲುಹಣೆ.... ನಿನ್ನ ಹೊಟ್ಟೆಯೇಕೆ ಉರಿಯಬೇಕು? ನಿನ್ನ ತಾಯಿಯ ಹಂಬಲವೇಕೆ ಮುರಿಯಬೇಕು? ನವ ಯೌವನದ ರಾಜಕುಮಾರರೇ ಬಂದಿದ್ದಾರಲ್ಲ, ನನ್ನ ಯೌವನ, ಐಶ್ವರ್ಯಗಳು ಮುಗಿದವು, ಮಲುಹಣೇ ನೀನು ಹೋಗು

ಮಲುಹಣೆ : ಆ ಕುಲಕ್ಕೆ ನನ್ನನ್ನು ಸೇರಿಸಬೇಡಿ ಸ್ವಾಮಿ.

ಮಲುಹಣ : (ದುಗುಡ ತುಂಬಿದ ದನಿಯಲ್ಲಿ) ತಾಯಿಯ ಮಾತನ್ನು ಮೀರಬೇಡ, ಹೊರಡು ನಿನಗಾವ ಸ್ವಾಮಿ? ನಿನಗಾವ ದೇವ? ನಿನ್ನ ಹೊಸ ದೇವನು ನಿನಗಾಗಿ ಕಾದಿರುವನು ಹೋಗು ಹೋಗು- ಹೊತ್ತಾದೀತು.

ಮಲುಹಣೆ : ದೇವರೇ ಹಾಗೆನ್ನಬೇಡಿ. ನಿಮ್ಮನ್ನು ಬಿಟ್ಟು ಪರಪುರುಷರನ್ನು ಕಣ್ಣೆತ್ತಿಯೂ ನೋಡಿದವಳು ನಾನಲ್ಲ. ವೈಶ್ಯೆಯ ಮಗಳಾದರೂ ವೇಶ್ಯಾತನವನ್ನು ಅರಸುವವಳು ನಾನಲ್ಲ.

ಮಲುಹಣ : ಮಲುಹಣೇ- ಮಲುಹಣೇ..... ಹೋಗು...... ಹೋಗು ಸುಖವಾಗಿರು.

ಮಲುಹಣೆ : ಸ್ವಾಮಿೞ. ಸ್ವಾಮಿೞ-

(ಹೊರಡುವನು. ಮಲುಹಣೆ ಅಳುತ್ತಾ ನಿಲ್ಲುವಳು)

## ದೃಶ್ಯ-೨

(ಮಲುಹಣ ಹುಚ್ಚನಂತೆ ಹಂಬಲಿಸುತ್ತಾ ಹೊರಡುವನು)

ಮಲುಹಣ : ನನ್ನ ತಂದೆ ಸವರ್ಣಭಟ್ಟರ ಆಸೆಯ ಗೋಪುರವು ಹಾರಿ ಹೋಯಿತು. ಹಂಸತೂಲಿಕಾತಲ್ಪದಲ್ಲೇ ಮೆರೆಯುತ್ತಾನೆಂಬ ಹಿರಿ ಹಿಗ್ಗು ಇಂದಿಗೆ ಕುಗ್ಗಿತು ಆದರೇನು? ನಾನು ಪರದೇಶಿಯಾಗಿ ಸುತ್ತುವ ಭಾಗ್ಯ ತಪ್ಪಿತೇ? ನಿನ್ನನ್ನೇ ನಂಬಿ ಆನಂದಿಸಿದ ಮಲುಹಣನು ಈಗ ಬೇಡವಾದನೇ? ಮಲುಹಣೇ- ಮಲುಹಣೇ-

ಪ್ರತಿಧ್ವನಿ : "ಏಳೇಳ್ ಮಗಳೇ, ನಿಮ್ಮ ಮಾವಂ ದ್ವಿಪಾಂತರದಿಂ ದಿವ್ಯ ವಸ್ತ್ರಾಭರಣಗಳಂ ಕೊಂಡು ಬಂದನವಂ ನೋಡಲ್ಕೆಂದೇಳ್ ಮಗಳೇ ಮಲುಹಣೆ ಎಲೆ ಮರುಳ್ ಮಗಳೇ ಅರ್ಥಂ ತೀರ್ದುದು, ಯೌವನಂ ಸಾರ್ದುದು ಇನ್ನೀ ಮಲುಹಣನಂ ಬಿಡು ಬಿಡು."

ಮಲುಹಣ : ಅಯ್ಯೋ ವಿಧಿಯಾಟವೇ, ಮಲುಹಣೇ- ಮಲುಹಣೇ-
ಕೊಳದ ಕಮಲಗಳಲ್ಲೂ ನಿರ್ಜೀವ ವಸ್ತುಗಳಲ್ಲಿ ನಿನ್ನರಳಿದ ಮುಖದ ಸಜೀವ ಪ್ರತಿಬಿಂಬ ನಲಿದು ನರ್ತಿಸುತ್ತಿದೆ. ಗಾಳಿಯಲ್ಲಿ ಅಲುಗಾಡುತ್ತಿದೆ, ಬೆಳಕಿನಲ್ಲಿ ಬೆಳಗುತ್ತಿದೆ. ಏನೇ ಆದರೂ ಆಗಲಿ ನೀನು ಮಾತ್ರ ನನ್ನವಳೇ ಮಲುಹಣೇ- ನೀನು ಮಾತ್ರ ನನ್ನವಳು, ಈ ವಿರಹದಿಂದ ನಾನು ಬಾಡಿ ಬಸವಳಿದು ಇರಲಾರೆ ಮಲುಹಣೇ- ಮಲುಹಣೇ

ಮಲುಹಣ : ಅದೊಂದು ದಿನ-

## ದೃಶ್ಯ-೨

(ಕಾಶ್ಮೀರ ದೇಶದ ಮಂತ್ರಿ ಸುವರ್ಣಭಟ್ಟನು ವಿಶ್ರಾಂತಿ ಗೃಹದ ಮಂಚದಮೇಲೆ ಮಲಗಿ ನರಳುತ್ತಿರಲು ಮಲುಹಣ ದೇವನು ಪ್ರವೇಶಿ)

ಮಲುಹಣ : (ಬೆಚ್ಚುತ್ತಾ) ಅಪ್ಪಾಜಿ ಏನಾಯ್ತು? ಏಕೆ ಹೀಗೆ ಹೊರಳಾಡುತ್ತಿರುವಿರಿ ಸರಿಯಾಗಿ ಮಲಗಿಕೊಳ್ಳಿ ಹೊದ್ದಿಸಲೇ?

ಸುವರ್ಣ : (ತೊದಲಿಸುತ್ತಾ) ಮಗನೇ ಒಂದೇ ಬಾರಿಗೆ ನನ್ನನ್ನು ಹೊದ್ದಿಸಿ ಮಲಗಿಸುವ ಸಮಯ ಬಂದಿದೆ ಮಲುಹಣಾ - ಸಮಯ ಬಂದಿದೆ (ಕೆಮ್ಮುವನು)

ಮಲುಹಣ : ನೀವು ಹೇಳುತ್ತಿರುವುದು ನನಗೆ ಭಯ ಭೀತಿಗಳನ್ನು ತಂದಿದೆ ಅಪ್ಪಾಜಿ.

ಸುವರ್ಣ : ಸುವರ್ಣಭಟ್ಟನ ಮಗನಾದ ಸುವರ್ಣ ಕವಿಗೂ ಭಯಭೀತಿಗಳೇ? ನಿನಗೀ ಉಗ್ರತಾಪ ಅರಿಯಲಿಲ್ಲವೇ? ನಾನಿನ್ನು ಬದುಕುವಂತೆ ತೋರುವುದಿಲ್ಲ, ನಿನ್ನನ್ನು ಮತ್ತೊಮ್ಮೆ ನೋಡುವ ಆಸೆಯಾಗುತ್ತಿದೆ ಬಾ ಮಗನೇ, ಬಾ.

ಮಲುಹಣ : (ಕಣ್ಣೀರನ್ನು ಒರಿಸಿ) ಅಪ್ಪಾಜಿ- ಹಾಗೆಲ್ಲಾ ಅನ್ನಬೇಡಿ -

(ಅಷ್ಟರಲ್ಲಿ ಸೇವಕನು ಪ್ರವೇಶಿಸಿ)

ಸೇವಕ : ಸ್ವಾಮಿ ಪ್ರವರಸೇನ ಮಹಾರಾಜರು ಇತ್ತ ದಯಮಾಡಿಸುತ್ತಿದ್ದಾರೆ.

(ದೂರದಿಂದ ವಾದ್ಯ ಮೊಳಗುವುದು)

ಸುವರ್ಣ : (ಆನಂದದಭರದಲ್ಲಿ) ಮಹಾ ಪ್ರಭುಗಳನ್ನು ಮರ್ಯಾದೆಯಿಂದ ಸತ್ಕರಿಸಿ ಕರೆದು ತಾ ಮಗನೆ.

(ಅಷ್ಟರಲ್ಲಿ ಮಹಾರಾಜರು ದಯಮಾಡಿಸುವರು. ಮಲುಹಣ ಅವರನ್ನು ಕಂಡಕೂಡಲೇ ನಮಿಸಿ)

ಮಲುಹಣ : ಮಹಾ ಪ್ರಭುಗಳು ಇತ್ತ ದಯಮಾಡಿಸಬೇಕು (ದೂರದಿಂದ ಜನಸ್ತೋಮದ ದನಿ) ರಾಜಾಧಿರಾಜ ರಾಜ ಪರಮೇಶ್ವರ, ಶ್ರೀಮನ್ಮಹಾರಾಜಶ್ರೀ ಕಾಶ್ಮೀರದೇಶ ಭಾರತೀಪೀಠ ಪಟ್ಟಾಧಿಪತಿ ಪ್ರವರಸೇನ ಮಹಾರಾಜರಿಗೆ ಜೈಪರಾಕ್.... ಜೈಪರಾಕ್....!)

ಪ್ರವರಸೇನ : ಸುವರ್ಣಭಟ್ಟರೇ - ಸುವರ್ಣಭಟ್ಟರೇ-

ಸುವರ್ಣಭಟ್ಟ : ಮಹಾ ಪ್ರಭುಗಳೇ ತಮಗೆ ಶರಣು ಶರಣಾರ್ಥಿಗಳು. ಆದರೆ.... ಮಹಾಸ್ವಾಮಿಗಳಿಗೆ ಸತ್ಕರಿಸುವ ಕಾಲ ನನಗಿನ್ನು ಮುಗಿಯಿತು.

ಪ್ರವರಸೇನ : ಯೋಚಿಸಬೇಡಿ, ಸುವರ್ಣಭಟ್ಟರೇ ಸ್ವಲ್ಪ ಚೇತರಿಸಿಕೊಳ್ಳಿ, ಹಲವನ್ನು ಹಂಬಲಿಸಬೇಡಿ.

ಸುವರ್ಣ : ಮಹಾಪ್ರಭುಗಳೇ ನನ್ನ ಅನೇಕ ಆಕಾಂಕ್ಷೆಗಳು ಮುಗಿದವು. ಅಲ್ಲದೆ ನನಗಿರುವ ಒಬ್ಬನೇ ಮಗನಾದ ಮಲುಹಣನಿಗೆ ವಿದ್ಯೆ, ಧರ್ಮ ಸಂಸ್ಕಾರಗಳನ್ನು ನಡೆಸಿದೆನು. ಮಗನ ವ್ಯಾಮೋಹದಿಂದ ಚಿಂತಿಸುತ್ತಾ ನಿತ್ಯವೂ ಒಂದು ಸಾವಿರ ಹೊನ್ನು ವೆಚ್ಚ ಮಾಡಿದರೂ, ಎಂದಿಗೂ ಆತನಿಗೆ ಕೊರತೆಯುಂಟಾಗಬಾರದೆಂದು ಮೂರುಕೋಟಿ ಅರವತ್ತು ಲಕ್ಷ ಹೊನ್ನನ್ನು ತೆಗೆದಿಟ್ಟಿದ್ದೇನೆ. ಈ ಯೌವನೋದಯದ ಕಾಲದಲ್ಲಿ ಮದುವೆ ಮಾಡಿ ಕಣ್ಣಾರೆ ಮಗನನ್ನು ನೋಡಿದ್ದರೆ....

ಪ್ರವರಸೇನ : ಚೆನ್ನಾಗಿತ್ತು.... ಆದರೆ ಏನು ಮಾಡುವುದು? ಅಳಬೇಡಿ ಮಹಾಮಂತ್ರಿಗಳೇ, ಅಳಬೇಡಿ.

ಸುವರ್ಣ : ಮಹಾರಾಜರೇ, ಇಂದಿಗೆ ನಮ್ಮಿಬ್ಬರ ಸ್ನೇಹ ಸಂಕೋಲೆಯು ಸಡಿಲಿಸಿತು. ನಾನಿನ್ನು ಈ ಲೋಕವನ್ನು ತ್ಯಜಿಸಿ ಪರಲೋಕವನ್ನು ಸೇರುವುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲ, ಆದರೆ ನನ್ನ ಮಗನಾದರೂ ಸುಖದಿಂದಿರುವನೆಂದು ನಂಬಿರುವೆ.

ಪ್ರವರಸೇನ : "ಸಾವಿರವಿದ್ದರೂ ಸಂಜೆಗೇ ಲಯ" ಎಂಬಂತೆ ಹಣವು ಅಶಾಶ್ವತವು. ನಿನ್ನ ಮಗನು ಸುಮಾರ್ಗ ಹಿಡಿದರೆ ಹಣ ಕೀರ್ತಿಗಳು ಶಾಶ್ವತವಾಗುಳಿಯುತ್ತವೆ. ದುರ್ಮಾರ್ಗ ಹಿಡಿದರೆ ನಿನ್ನಾಶಾ ಗೋಪುರಗಳುರುಳುವುವು ಸುವರ್ಣಭಟ್ಟಾ.

ಸುವರ್ಣ : ಏನೋ ಆ ವಿಜಯೋಶ್ವರನಿಗೇ ಗೊತ್ತು ಅದಕ್ಕೆ ನಾನೇನು ಮಾಡಲು ಸಾಧ್ಯ? ಹಿಂದಿನ ಜನ್ಮದ ಸಕೃತ ಫಲದಿಂದ ನಿಮ್ಮ ಸ್ನೇಹವು ದೊರೆತದ್ದು ಸರಿಯಷ್ಟೆ. ಆ ಆತ್ಮವಿಶ್ವಾಸವು ಬಹುಕಾಲ ನಿಲ್ಲಲಿ. ಆದರೆ ಇನ್ನು ಕೆಲವು ಘಳಿಗೆಯಲ್ಲಿ ಈ ಭೌತ ದೇಹದ ನಿಕಟ ಸಂಬಂಧವನ್ನು ಕಡಿದು ನಿಮ್ಮನ್ನಗಲಿಸಿ ಹೋಗಬೇಕಾಗಿದೆ ಮಹಾಪ್ರಭುಗಳೇ.

ಪ್ರವರಸೇನ : ಮಿತ್ರಾ - ಮಿತ್ರಾ ನನಗೇನೂ ಆಗದು ಸುಮ್ಮನಿರು.

ಸುವರ್ಣ : ಮಲುಹಣಾ.... ಮಲುಹಣಾ.... ಮಹಾರಾಜರೇ.....

(ಆತನ ಆತ್ಮಜ್ಯೋತಿ ಪರಲೋಕವನ್ನು ಸೇರುವುದು)

ಪ್ರವರಸೇನ : (ದುಗುಡದಿಂದ) ಸುವರ್ಣಭಟ್ಟಾ, ಸುವರ್ಣಾಭಟ್ಟಾ

ಮಲುಹಣ : (ಕಣ್ಣೀರು ಉಕ್ಕುವುದು) ಅಯ್ಯೋ ಪ್ರವರಸೇನ ಪ್ರಭುಗಳೇ ಇನ್ನೆಲ್ಲಿಯ ಸುವರ್ಣಭಟ್ಟರನ್ನು ಕರೆಯುವಿರಿ? ಅವರನ್ನಾಗಲೇ ಯಮದೂತರು ದರೆದೊಯ್ದರು, ಕರೆದೊಯ್ದರು.

ಪ್ರವರಸೇನ : (ದುಃಖದಲ್ಲಿ) ಮಲುಹಣಾ.... ನಿನ್ನ ತಂದೆ ನಿನಗಿಲ್ಲವಾದ, ನನ್ನ ಮಿತ್ರ ನನಗಿಲ್ಲವಾದ, ದಾನಿಯು ಜನಗಳಿಗಿಲ್ಲವಾದ.

ಮಲುಹಣ : ಮಹಾಪ್ರಭುಗಳೇ..... ಮಹಾಪ್ರಭುಗಳೇ......

ಪ್ರವರಸೇನ : ಇನ್ನು ಶವ ಸಂಸ್ಕಾರದ ಸಿದ್ಧತೆಗಳಾದರೂ ನಡೆಯಲಿ.

ಮಲುಹಣ : ಅಯ್ಯೋ ಮಹಾರಾಜರೇ ತಂದೆಯನ್ನು ಕಳೆದುಕೊಂಡ ತಬ್ಬಲಿಯ ಗತಿಯೇನು?

ಪ್ರವರಸೇನ ; ಮಲುಹಣಾ.... ದೇವರಿದ್ದಾನೆ. ಧೈರ್ಯಗೆಡದಿರು ನಿನ್ನಂತಹಾ ಕವಿಯೇ ಹೀಗೆ ಸೋತು ಹೋದರೆ ಗತಿಯೇನು? ನಾಲ್ಕು ಜನಗಳಿಗೆ ಸಮಾಧಾನ ಹೇಳುವ ನೀನೇನ ಹೀಗಾದರೆ ಹೇಗೆ? ಸಮಾಧಾನ ತಂದುಕೋ ಮಲುಹಣಾ.....

(ರಂಗಭೂಮಿ ಕತ್ತಲಾಗುವುದು)

## ದೃಶ್ಯ-೪

(ಶವ ಸಂಸ್ಕಾರ ಮಾಡಿ ದಾರಿಯಲ್ಲಿ ಮಿತ್ರನೊಂದಿಗೆ ಬರುತ್ತಾ)

ಮಲುಹಣ : (ಕಣ್ಣೀರ್ಗರೆಯುತ್ತಾ) ಅಯ್ಯೋ- -ಅಪ್ಪಾಜೀ ಪುತ್ರನ ಸುಖಕ್ಕಾಗಿ ಎಷ್ಟೊಂದು ಕಾಳಜಿ ವಹಿಸಿದಿರಿ? ಸಕಲಶಾಸ್ತ್ರ ವಿದ್ಯಾಭ್ಯಾಸ ಕೊಡಿಸಿ, ಶೈವೋಪದೇಶ ಮಾಡಿಸಿ, ದಿವ್ಯ ವಸ್ತ್ರವನ್ನು ನೀಡಿ, ಗಂಧ ಕಸ್ತೂರಿಯನ್ನು ಚಿಮುಕಿಸಿ, ಗೀತ, ವಾದ್ಯ, ನೃತ್ಯಲೀಲೆ, ನೂತನ ವಿನೋದ ಸರಸೋಕ್ತಿಗಳನ್ನು ನನ್ನ ಮುಂದೆ ಮಾಡಿಸಿ ಆನಂದಪಡಿಸಿದಿರಿ. ನವರಸ ಫಲಗಳನ್ನು ನೂತನ ರತ್ನಗಳನ್ನು ನೀಡಿ ಪುತ್ರನನ್ನು ಕಣ್ತುಂಬ ನೋಡುತ್ತಿದ್ದಿರಿ. ನನ್ನ ಸುಖಕ್ಕೋಸ್ಕರ ಏನೆಲ್ಲಾ ಮಾಡಿದಿರಿ? ಅಂಥ ಪ್ರೀತಿಯ ತಂದೆಯನ್ನು ಅಗಲಿ ನಾನು ಹೇಗಿರಲಿ?..... ಅಯ್ಯೋ ಅಪ್ಪಾಜಿ ನಿಮ್ಮನ್ನು ಕಾಡ್ಗಿಕ್ಕಿ ಕೈ ತೊಳೆದುಕೊಂಡ ಸಮಯ ಬಂತೇ? ನಿಮ್ಮನ್ನಪ್ಪಿ ಆನಂದಿಸುವ ಕೈಗಳು ಕಿಚ್ಚಿಕ್ಕಿ ರಕ್ತಮಾಂಸಮಯ ದೇಹವನ್ನು ಬೂದಿ ಮಾಡಿ ನೀರಿಗೆ ತೇಲಿಬಿಟ್ಟು ನೋಡುವ ಸಮಯ ಬಂದೊದಗಿತೇ? ನನ್ನನ್ನು ನಡುಹೊಳೆಯಲ್ಲಿ ಕೈಬಿಟ್ಟು ಹೊರಟಿರಿ. ನಿಮ್ಮ ಆತ್ಮಕ್ಕೆ ಹಾಲನ್ನೆರೆದು ಪರಲೋಕದಲ್ಲಿ ಸುಖ-ಶಾಂತಿಗಳನ್ನು ಆ ಕರುಣಾಮಯ ದೇವನು ಕರುಣಿಸಲೆಂದು ಬೇಡಿಕೊಳ್ಳುತ್ತೇನೆ. ಆದರೆ ನನ್ನ ಆತ್ಮಕ್ಕೆ ಕುದಿವ ಸುಣ್ಣವನ್ನು ಹೊಯ್ದು ಹೊರಟು ಹೋದಿರಿ.... ಅಯ್ಯೋ.... ಅಪ್ಪಾಜಿ.....

ಕಲ್ಹಣ : ಏನಯ್ಯಾ ಮಿತ್ರ.... ತಿಳಿದ ಕವಿ ಸಾರ್ವಭೌಮನೇ ಹೀಗೆ ಹೆದರಿದರೇನು?

ಮಲುಹಣ : ಮಿತ್ರಾ ಕಲ್ಹಣಾ, ಕರುಳ ಸಂಬಂಧ ನನ್ನನ್ನು ದುಃಖಕ್ಕೀಡುಮಾಡಿದೆ.

ಕಲ್ಹಣ : ನಡೆ.... ನಡೆ.... ಅತ್ತ ದೇವಾಲಯಕ್ಕಾದರೂ ಹೋಗಿ ತಿರುಗಾಡಿಕೊಂಡು ಬರೋಣ. ಆತ್ಮಕ್ಕೆ ಸ್ವಲ್ಪ ಶಾಂತಿಯಾದರೂ ದೊರೆಯಲಿ.

(ಇಬ್ಬರು ತೆರಳುವರು)

## ದೃಶ್ಯ-೫

(ವಸಂತ ಮಾಸದಂದು ಮಲುಹಣನು ಮಿತ್ರನೊಡನೆ ವಿಜಯೇಶ್ವರ ದೇವಾಲಯಕ್ಕೆ ಪ್ರವೇಶಿಸಿ ಕೈ ಮುಗಿಯುತ್ತಿರಲು ಘಂಟಾನಾದವಾಯಿತು. ಮಲುಹಣೆ ನೃತ್ಯಕ್ಕೆ ಅಣಿಯಾಗಿದ್ದಾಳೆ)

ಮಲುಹಣ : ಶಿವ ಶಿವಾ.... ವಿಜಯೇಶ್ವರ.... ಸೋಮಧರಾ.... ನಮ್ಮ ತಂದೆಯ ಆತ್ಮಕ್ಕೆ ಶಾಂತಿಯನ್ನು ಕರುಣಿಸು ಮಹಾದೇವಾ....!

ಮಲುಹಣ : ಇದೇಕೆ ಕಲ್ಹಣಾ..... ಈ ಗುಂಪು......?

ಕಲ್ಹಣ : ಇವರು ರಾಜಪುತ್ರರು, ಸತ್ಯರು, ಸಾಹಿತ್ಯರು, ವಡ್ಡ ವ್ಯವಹಾರಿಗಳು, ಕವಿ, ಕಲಾವಿದರು, ವಿಲಾಸಿನಿಯರು, ಪುರ, ಪರಿಜನರು ಮುದ್ದಲೆ ಸಂಗೀತಗಾರರು ಸೇರಿರುವರು. ಏರು ಜವ್ವನದ ಕನ್ನೆಯ ಕೆನ್ನೆ ಕೆಂಪಡರಿ ಪುಷ್ಪಾಂಲಿಯುತಳಾಗಿರುವಳು.

(ಪರದೆ ಮೆಲ್ಲನೆ ತೆರೆಯುವುದು)

ಮಲುಹಣ : ಹೊಸ ನಡೆ, ಹೊಸ ನುಡಿ, ಹೊಸ ಮುಡಿ, ಹೊಸ ಹೊಸ ಸೌಭಾಗ್ಯಮೆಸೆವ ಹೊಸ ಲಾವಣ್ಯಂ ಹೊಸ ಹರೆಯಂ ಹೊಸ ನೋಟಂ ಹೊಸ ಜವ್ವನದೇಳ್ಗೆ....... ಆಕೆ ಯಾರು?

ಕಲ್ಹಣ : ಆಕೆ ನವ ತರುಣಿ......

ಮಲುಹಣ : ನಿನ್ನ ತಲೆಹರಟೆಗಳು ಬೇಕಿಲ್ಲ. ಗೊತ್ತಿದ್ದರೆ ಹೇಳೆಂದು.

ಕಲ್ಹಣ : ಗೊತ್ತಾದುದನ್ನು ಹೇಳಿದೆ ಅಷ್ಟೆ.

ಮಲುಹಣ : ಆ ತೀವಿದ ಮಂದಗತಿ, ಪೆರ್ಮೊಲೆ. ಮೊಗ, ಲೋಚನ, ಚೆಲ್ವು ಜವ್ವನದ ನವ ತರುಣಿ.

ಕಲ್ಹಣ : ಅಯ್ಯೋ ಪೆಚ್ಚ ಹೋಗು, ಇನ್ನೂ ಅರ್ಥವಾಗಲಿಲ್ಲವೇ? ವಿಜಯೇಶ್ವರ ದಾಸಿಯಾದ ಪದ್ಮಾವತಿಯ ಮಗಳು ಮಲುಹಣೀ...... ಕೆಳದಿಯರು ಶೃಂಗಾರ ಮಾಡುತ್ತಿದ್ದಾರೆ. ಪಾದ ಮುದ್ರಿಕೆಯನ್ನು ಅಲಂಕರಿಸಿದ್ದಾರೆ. ನೂಪುರಮನಳವಡಿಸಿ ಕುಂಕಣಮಂತಿರುಂಪಿ, ನೂಂಕಿ, ರತ್ನ ಮುದ್ರಿಕೆಗಳನ್ನು ಕೈಗಳಿಗೆ ತೊಡಿಸಿ. ಬಾಹುಪೂರಯಮನಿಕ್ಕಿ ಕರ್ಣಾವತಂಸಮಂ ಕಳೆಗೊಳಿಸಿ, ಚಕ್ರಮಿಥುನಕ್ಕೆ ಗಸವಣಿಗೆಯಿಕ್ಕುವಂತೆ ಕಂಚುಕಿ ತೊಡಿಸಿ, ತೋರು ಮುತ್ತಿನ ಹಾರಂ ಹತ್ತೆ ಸಾರ್ಚಿ, ಶಶಿ ಬಿಂಬಕ್ಕೆ ಶುಕ್ರನು ಸೇರಿಸುವಂತೆ ಮುಖಬಿಂಬದೊಳ್ ಮೂಕುತಿಯಂ ಮೇಳೈಸಿದ್ದಾರೆ. ಕಾಮಸಂಬು ಕತ್ತುರಿಯ ಸಾಣೆಯಿಕ್ಕುವಂತೆ ಕಜ್ಜಳಮನೆಚ್ಚಿ ಎಳ ಲತೆಯಂ ಬೆಳ್ದಿಂಗಳಿಂ ಬಾಸಣಿವಂತೆ ನವ್ಯ ದುಕೂಲಮಂ

ಸೀರಿವಿಡಿಮುಡಿಸಿ ನಿರ್ಮಳ ಶಶಿಬಿಂಬದಂತಿರ್ದ ಮುಖ ಮಂಡಳಕ್ಕೆ ಚಂದ್ರನ ದೃಷ್ಟಿ ತಾಗದಂತೆ ಕಸ್ತೂರಿ ತಿಲಕ ನೊಸಲಲ್ಲಿ ಕಾಮನ ಮೆಯ್ವಳಗು ಮರೆ ಹೊಕ್ಕಂತೆ ಕಳ್ತಿಲಿಪ ಮುಡಿಯೊಳ್ ಪೊಸ ಕುಸುಮದೆಸಳಂ ತುರುಂಬಿ, ತುಡಿಸಿದಾಭರಣವಂ ಮುಸುಕಿಟ್ಟಿದ್ದಾರೆ.

ಮಲುಹಣ : ಇಲ್ಲಿ ನೆರೆದಿರುವ ಉದ್ದೇಶ?

ಕಲ್ಹಣ : ಅವಳು ನೆರೆದಿದ್ದಾಳೆ. ಅದಕ್ಕೇ

ಮಲುಹಣ : ಅದಕ್ಕೇನು ಇವರಲ್ಲಿ ಮಾಡುವುದು?

ಕಲ್ಹಣ : ನಿಮ್ಮಂಥ ನವೀನ ವರಾನ್ವೇಷಣೆಗೆ. ಆ ವೈಯ್ಯಾರಿಗಿಂದು ಗೆಜ್ಜೆ ಪೂಜೆ. ಅದೇ ಉದ್ದೇಶ, ಜೋಪಾನ! ನೀನೇನಾದರೂ ಆ ಜೇಟೆಗೆ ಸಿಕ್ಕಿ ಬಿದ್ದೀಯೆ? (ಆಕೆಯನ್ನೇ ದೃಷ್ಟಿಸಿ ಬರುತ್ತಾ) ಮಲುಹಣಾ ಸರಿಯಾಗಿ ದಾರಿ ನೋಡಿಕೊಂಡು ನಡೆ. ಮಲುಹಣೆಯ ತಾಯಿ ಪದ್ಮಾವತಿಯರು ಬರುತ್ತಿದ್ದಾರೆ.

ಮಲುಹಣೆ : ಸರಿ ಸರಿ ನಡೆ.

ಪದ್ಮಾವತಿ : ಮಲುಹಣೇ ನೋಡುವುದೇನು? ಕಾರ್ಯಮಿಂಚುವುದನ್ನು ನೋಡು. ನಿನ್ನ ಮೋಹ ಬಲೆಗೆ ಸರಿಯಾದ ಬೇಟೆ ಸಿಕ್ಕಿರುವುದು. ಅವನನ್ನಿನ್ನೇನು ನೋಡಬೇಕು? ನಿನ್ನ ಹಾವ ಭಾವ ನರ್ತನದ ಎಲ್ಲೆ ಮೀರಿ, ಅವನಲ್ಲಿ ಅನುರಾಗ ಬೆಳೆಸುವವಳಾಗು. ಆಗರ್ಭ ಶ್ರೀಮಂತನಓರ್ವನೇ ಪುತ್ರ. ನಡೆ ನಡೆ, ಹಂಸತೂಲಿಕಾತಲ್ಪದಲ್ಲಿ ಮೆರೆಯಲು ಈತನೇ ಸೂಕ್ತ ವರನು. ಮಾಲೆಯನ್ನು ಹಾಕಲು ಮುನ್ನುಗ್ಗು. ಹೆಜ್ಜೆ ಹೆಜ್ಜೆಗೂ ಲಜ್ಜೆ ಇರಲಿ.

ಮಲುಹಣೆ : (ಸ್ವಗತ) ನೊಸಲಲಿ ಭಸಿತ, ಕೀಲಿಸಿದ ಕರ್ಣಾಭರಣ, ಕಂಗೊಳಿಸಿದ ತೋರಹಾರ ಪುಣಗಿನ ಚಂದನ.

ಆ್ಞಂ.... ಆತನನ್ನು ನೋಡಿದರೆ ಮನ ಬೆದರುವುದು, ಹೃದಯ ನಡುಗುವುದು, ತನು ತುಳುಕುವುದು, ರೋಮ ಪುಳಕಿಸುವುವು, ಹೃದಯ ಉಬ್ಬುವುದು, ಆತನ ರೂಪ ರೇಖೆಗಳು ನನ್ನ ಪಂಚೇಂದ್ರಿಯಗಳನ್ನು ಆಕರ್ಷಿಸಿ ಆತನೇ ನನಗೆ ಸೂಕ್ತ ವರನೆಂದು ತೋರುತ್ತದೆ.

(ಆನಂದದಿಂದ ಕಣ್ಮುಚ್ಚಿ ಬಿಡುವಳು)

ಪದ್ಮಾವತಿ : ಹೋಗು ಹೋಗು ನಿಧಾನಿಸಬೇಡ, ಹೊತ್ತು ಮೀರಿದರೆ ಏನಾದೀತೋ? ಹಾರವನ್ನು ಅಲಂಕರಿಸುವವಳಾಗು.

(ಮಲುಹಣನು ಆ ಕಡೆಯಿಂದ ಬರುತ್ತಿರಲು ಹಾರವನ್ನು ಹಾಕಲು, ಮಿತ್ರ ಕಲ್ಹಣ, ಮಲ್ಹಣ ಇಬ್ಬರೂ ಬೆಚ್ಚುವರು)

ಮಲುಹಣ : ಇದೇನು ಈ ಪುಷ್ಪಹಾರ?

ಕಲ್ಹಣ : ಕನ್ನಡ ನಾಡಿನಿಂದ ಬಂದ ಮಲ್ಲಿಗೆ ಹೂವಿನಿಂದ ತಯಾರಾದ ಪುಷ್ಪಹಾರ ಅತ್ತ ಪದ್ಮಾವತಿಯವರು ಬರುತ್ತಿದ್ದಾರೆ. ಅವರೇ ಹೇಳುತ್ತಾರೆ ಕೇಳಿ.

ಪದ್ಮಾವತಿ : (ಹುಸು ನಗುವಿನಿಂದ) "ಹೆಣ್ಣನ್ನು, ಹೊನನ್ನು, ಹಣ್ಣಾದ ಮರಗಳನ್ನು ಕಂಡು ಮನದಲ್ಲಿ ಬಯಸದಿಹ ಅಣ್ಣಗಳು ಯಾರು?

ಮಲಹಣ : ಮಿತ್ರಾ ನನಗೊಂದೂ ತೋಚದು

ಕಲ್ಹಣ : ಕವಿವರ್ಯರಿಗೆ ತಿಳಿಯದೇ? ಮನೆಗೆ ಹೋಗಿ, ಸಕಲ ಸವಿಭಕ್ಷ್ಯ ಭೋಜ್ಯಗಳು ಸಿದ್ಧವಾಗಿವೆ. ಅದಾದಮೇಲೆ ಮುಂದಿನ ಶುಭಕಾರ್ಯ ಜರುಗಲಿದೆ. ಆಮೇಲೆ ಎಲ್ಲಾ ತಿಳಿಯುತ್ತವೆ.

ಮಲುಹಣ : ಇಲ್ಲ... ಇಲ್ಲ.

(ಹಾರವನ್ನು ಕಿತ್ತೆಸೆಯಲು ಪ್ರಯತ್ನಿಸುವನು)

ಪದ್ಮಾವತಿ : ಏನದು ಆಟ? ಒಂದು ಸಾರಿ ಹೆಣ್ಣು ಹಾವನ್ನರ್ಪಿಸಿ ವರಿಸಿದ ಮೇಲೆ ಅದನ್ನು ತಪ್ಪಿಸಲಾಗುತ್ತದೆಯೇ?

ಮಲುಹಣ : ಕಲ್ಹಣಾ... ಕಲ್ಹಣಾ...

ಕಲ್ಹಣ : ನೀನು ಹೋಗಿ ಬಾ... ಆಮೇಲೆ ನೋಡೋಣ.

(ಎಂದು ಹೇಳಿ ಹೊರಡುವನು. ಪದ್ಮಾವತಿಯ ಕಡೆಯವರು ಅವನನ್ನು ಬಲವಂತದಿಂದ ಕರೆದುಕೊಂಡು 'ಹೊರಡುವರು)

## ದೃಶ್ಯ-೬

(ಮಲುಹಣನ ಮಿತ್ರ ಕಲ್ಹಣ್ರ ದಾರಿಯಲ್ಲಿ ಹೋಗುತ್ತಾ ತನ್ನಲ್ಲೇ)

ಕಲ್ಹಣ : ಎಲ್ಲಾ ವಿಧಿ ನಿಯಮ! ಯಾರು ತಾನೇ ಅದನ್ನು ಮೀರಲು ಸಾಧ್ಯ? ಕುಬೇರನಂತಹ ಸುವರ್ಣಭಟ್ಟನು ಸಂಪನ್ನತೆ ಕುಬೇರಂಗೆ ಸರಿನೋಡು ಬಂಟರ್ಗೆ, ದಾಸರ್ಗೆ, ಸಹಸ್ರ ಸಂಖ್ಯೆಯ ಧನಂ, ನೆಂಟರ್ಗೆ ನಲ್ಲರ್ಗೆ ಲಕ್ಷ ಸಂಖ್ಯೆಯ ಧನಂ, ಪೊಟ್ಟದರ್ ಪೊರೆದರ್ಗೆ ಕೋಟಿ ಸಂಖ್ಯೆಯ ಧನಂ, ಪೆಸರ ಛತ್ರಂ, ಪೊಟ್ಟದರ್ ಪೊರೆದರ್ಗೆ ಕೋಟಿ ಸಂಖ್ಯೆಯ ಧನಂ, ಪೆಸರ ಛತ್ರಂ ಪುರವರ್ಗವಲ್ಲಲ್ಲಿ, ಪೆಸರ ಕರೆಯರವಟಿಗೆ ಯಾರವಗಳಲ್ಲಲ್ಲಿ ಪೆಸರಗ್ರಹಾರಂ ಶಿವಾಲಯಗಳಲ್ಲ, ಪೆಸರ ಧರ್ಮ ಪ್ರಕರವೆಣಿಸಲರಿದಲ್ಲಲ್ಲಿ. ಆತನ ಮಗನಿಗೂ ಹೀಗಾಯಿತೆ? ಮಗನ ಶ್ರೇಯಸ್ಸಿಗಾಗಿ ಕೊನೆಯುಸಿರೆಳೆಯುವತನಕ ದುಡಿದು ಮಡಿದ. ಆದರೆ ಆತನು ಆ ಜ್ಯೋತಿಯನ್ನು ಉಳಿಸುತ್ತಾನೋ ಕೆಡಿಸುತ್ತಾನೊ, ಆ ಉರಿಮು

ಬರುವನೊಬ್ಬನಿಗೇ ಗೊತ್ತು! ಏನೋ ಪ್ರಪಂಚದ ಆಟ ನಡೆಯಲಿ... ನಡೆಯಲಿ....

## ದೃಶ್ಯ-2

(ದಿಕ್ಕು ಕಾಣದೆ ಮಲುಹಣನು ಮಲುಹಣೆಯ ಮನೆಗ ಬರುತ್ತಿರಲು, ಆಕೆಯ ಮನೆಯ ಮುಂದುಗಡೆ ಹಿಮದ ಗಡ್ಡೆಯಿಂದ ಗೂಡು ಮಾಡಿಕೊಂಡು ಕುಳಿತಿರಲು ಮಲುಹಣೆಯ ಸೇವಿಕೆ ಮಲುಹಣೆ ಊಟ ಮಾಡಿದ ಎಂಜಲನ್ನು ಆತನ ಮೇಲೆ ಸುರಿಯಲು ಆತ ಅಂತು ನೋಡಿ)

ಮಲುಹಣ : ಇದೇನು ಈ ಎಂಜಲು? (ಒದರಿಕೊಂಡು ದೃಷ್ಟಿಯನ್ನು ಮೇಲೆ ಹರಿಸಿ) ಮಲುಹಣೆಯ ಮನೆ, ಮಲುಹಣೆ... ನೀನುಂಡ ಎಂಜಲನ್ನು ನಿನ್ನ ಪತಿಗೆ ನಿನ್ನ ಸೇವಿಕೆಯಿಂದ ಸುರಿಸಿದೆಯಾ? ... ಹೌದು ಮರೆತಿದ್ದೆ. ಈಗ ನಾನು ಪತಿಯಲ್ಲವಲ್ಲ? ನಾನು ಮಲುಹಣಾ...ಪರದೇಶಿ... ಬಾಗಿಲನ್ನು ಭದ್ರಿಸಿದೆಯಾ? ಇಚ್ಛೆಯಾ ಮನೆಯಲ್ಲಿ ಬೆಚ್ಚನೆ ಇರು, ಕಳ್ಳಕಾಕರ, ದೆವ್ವ-ಭೂತಗಳ ಭಯವಿಲ್ಲದೆ, ಚಳಿಮಳೆಗೆ ಸಿಕ್ಕದೆ ಸೌಖ್ಯದಿಂದಿರು. ನಿನ್ನಾತ ಹಿಮದಲ್ಲಿ ಕೊರಗುತ್ತಿದ್ದಾನೆ. ನಿನ್ನನ್ನು ನೋಡಲು ಕಾತರಿಸುತ್ತಿದ್ದಾನೆ. ನೀನೆ ಕನಸು-ಮನಸುಗಳ ಅಧಿದೇವತೆಯಾಗಿ ಕುಣಿಯುತ್ತಿರುವ. ಇನ್ನೂ ಉಸಿರುಳಿದು ಘಟ ಮಾತ್ರ ಜೀವಿಸುತ್ತಿದೆ. ಒಂದೇ ಒಂದು ಸಾರಿ ನಿನ್ನ ಮುಖ ದರ್ಶನವನ್ನು ನೀಡು. (ಮಲುಹಣೆ ಬಂದು ನೋಡಲು) ಆಹಾ... ಮಂದಹಾಸಿನೀ... ಕಣ್ಮಣೀ... ಸುಂದರೀ... ಮಲುಹಣೀ...

ಮಲುಹಣೆ : ಅಕಟಕಟಾ... ಮಲುಹಣಂ ಹಿಮದೊಳಗೆ ಮುರುಟಿದಂ.... ಅಕಟಕಟಾ... ಪಾಪಿಗೆನಗೊಲಿದು ನೆರೆ ಮಳ್ಗುದಂ ಪಾಪಿಯಾದೆಂ ಪಾಪಿಯಾದೆಂ (ಅಳುತ್ತಾ) ಅಯ್ಯೋ ಮಲುಹಣಾ ಈ ಹಿಮದಲ್ಲಿ ನೀವು ಮುಚ್ಚಿಕೊಂಡು ವಿರಹಕ್ಕೆ ತೆರಪಾಗಿ ತಾಪಕ್ಕೆ ತಂಪಾಗಲೆಂದು ಇದ್ದೀರಾ? ತೆಗೆಯಿರಿ... ಮುಖವನ್ನು ತೋರಿಸಿ... ಹಿಮದೊಳಗೆ ಮುರುಟದಿರಿ ಇದನ್ನು ಕಣ್ಣಾರೆ ನೋಡಲಾರೆ... ಅಯ್ಯೋ

ಮಲುಹಣ : ಇದೋ ಹಿಮವನ್ನು ಕಳಚಿರುವೆ ನೋಡು ಕಣ್ಮನಿಯೆ ನೋಡು ಮಲಹಣೀ... (ಗಾಳಿ ಬರ್‍ರೆಂದು ಬೀಸುವುದು)

ಮಲುಹಣೆ : ಎನ್ನ ಮೇಲಿಕ್ಕುವೀ ಚಿತ್ತದಾತುರತೆಯಂ ಪನ್ನಗಾಭರಣನೊಳು ಮಾಳ್ಪದೆನ್ನೊಲುಮೆಯಂ ಇಂದುಧರನಂ ಬೇಡು, ನಿನ್ನತ್ತ ನಾಂ ಬರ್ಪೆ ಎನ್ನ ಹವಣೇಂ ಕೋಟಿ ಮಲುಹಣೆಯರಾಗರೇ, ಮುನ್ನಂ ಶಿವನರಿದು ದುಃಖಮಂ ನೀಗಿರೇ ಬೇಡಿಕೊಳ್ಳೀಶ್ವರನೊಳೆನ್ನ ಮಲುಹಣ ಹೋಗು, ನೋಡಬಾರದ ವಿರಹದನುತಾಪಮಂ ನೀಗು. ಒಲುಮೆಯನ್ನು ಧ್ಯಾನಿಸು,

ವಿಚಾರಿಸು, ಕುಡಿಕನಸಿನಲ್ಲಿ ಕಾಣು, ಆಗ ನಿನ್ನ ಜೀವನವು ಸುಂದರವೂ, ವೈಭವಯುತವೂ, ಉನ್ನತವೂ ಆಗುವುದು. ನಲ್ಮೆಯ ಸಗ್ಗದೊಳು ವಾಸ ಮಾಡು, ಪ್ರೀತಿಯ ಸ್ಫಟಿಕಮಯ ಗಾಳಿಯಲ್ಲಿ ತೇಲು. ಚಿರಂತನವಾದ ಪ್ರಣಯ ಪ್ರೇಮದೋದ್ಯಾನದೊಳು ಚರಿಸಾಡು, ನಲ್ಮೆಯ ಕುಸುಮದ ಸುಗಂಧವಲ್ಲಿ ವಾಸಿಸು, ಆ ಗಾನಗಳನ್ನೇ ಕೇಳು. ನಿನ್ನ ಉಚ್ಛತಮ ಧ್ಯೇಯಗಳು, ನಲುಮೆಯ ಕಂಪಿನಂತೆ ಹೂವಿನ ತುರಾಯಿಯಾಗಲಿ. ಹೆಚ್ಚೆಚ್ಚು ನಲುಮೆಯ ಸಂಪಾದಿಸಿ ಪ್ರೇಮ ಸ್ವರ್ಗದ ಕೇಂದ್ರವಾಗಿ ನೀನು ಬಾಳು. ಈ ವಿರಹ ವೇದನೆಯನ್ನು ನೋಡಲಾರೆ, ದೇವರಲ್ಲಿ ಚಿತ್ತವಿಟ್ಟು ಕೇಳಿದರ ನನ್ನಂತಹ ನೂರಾರು ಮಲುಹಣೆಯರು ದೊರೆಯುವರು.

ಮಲುಹಣ : ಅಷ್ಟು ದಿನಗಳಿಂದಲೂ ಸಂತೋಷದ ತೂಗು ಉಯ್ಯಾಲೆಯಲಿ ಸುಭೋಜನದಿಂದ ಬೆಳೆದು ಬಂದೆ. ಆದರೆ ದೇವರು ಸುಖ-ದುಃಖಗಳನ್ನು ಒಂದಾದ ಮೇಲೊಂದಿಟ್ಟಿರುವನು. ಈಗ ನಾನು ಬೀದಿಯ ಬಿಕಾರಿಯಾದೆ, ತಂದಪ್ಪನ್ನೆಲ್ಲಾ ಅನುಭೋಗಿಸುತ್ತಿದ್ದೇನೆ. ಆದರೆ ವಿಧಿಯಾಟ ಬಿಡದು, ಅಲ್ಲವೇ ಮಲುಹಣೇ...

ಮಲುಹಣೆ : ಕಠೋರ ಹೃದಯದ ನನ್ನ ತಾಯಿ ಹರಿವ ಗಾಲಿಯ ಕೀಲು ಮುರಿದಂತೆ ಮಾಡಿದಳು. ಇದರಲ್ಲಿ ಕಿಂಚಿತ್ತೂ ನನ್ನ ತಪ್ಪಿಲ್ಲ ಕ್ಷಮಿಸಿ ಸ್ವಾಮಿ.

ಮಲುಹಣ : ಹೋಗು ಮಲುಹಣೇ... ನಿಮ್ಮ ತಾಯಿಯೂ ಹೊಸ ರಾಜ ಪುತ್ರರೂ ಸುಖದಿಂದಿರಿ, ಸುಖದಿಂದಿರಿ.

ಮಲುಹಣೆ : ನನ್ನಲ್ಲಿಟ್ಟಿದ್ದ ಪ್ರೀತ್ಯಾದರಗಳನ್ನು ದೇವರಲ್ಲಿಟ್ಟಿದ್ದರೆ ಮೋಕ್ಷ ಸಿಗುತ್ತಿತ್ತು. ಮನುಷ್ಯನು ಇಷ್ಟು ಕಾಮಾತುರನಾಗಬಾರದು.

ಮಲುಹಣ : ಆದರೇನಾಯ್ತು? ನಾನು ನಿನಗೆ ಬೇಡವಾದನೇ?

ಮಲುಹಣೆ : ಈ ಹಿಮವನ್ನು ನೂಕಿ ವಿಜಯೇಶ್ವರನ ರಂಗಮಂಟಪವನ್ನು ಪ್ರವೇಶಿಸಿ. ಅದೋ... ದುಂದುಭಿಯ ಶಬ್ದ, ಶಂಖಸ್ವರ, ಶಿವ ಕೀರ್ತನೆ, ವೇದಗಳ ಘೋಷ, ಅಲ್ಲಿ ಹೋಗಿ ತಪವಸಗಿರಿ. ಆಗ ನಿಮ್ಮ ಅಭೀಷ್ಟಗಳು ನೆರವೇರಿ ಜೀವನವು ಪವಿತ್ರಮಯವಾಗುವುದು.

ಮಲುಹಣ : ಇದೋ... ಈಗಲೇ ಹೊರಟೆ...ಮಲುಹಣೇ... ಹೊರಟೇ...

(ಹೊರಡುವನು)

## ದೃಶ್ಯ-೮

(ಪದ್ಮಾವತಿ ಮಲುಹಣೆಯಿದ್ದಲ್ಲಿಗೆ ಬರಲು)

ಪದ್ಮಾವತಿ : ಮಲುಹಣೆ... ಅವರು ಬಂದಿದ್ದಾರಮ್ಮಾ...

ಮಲುಹಣೆ : ಛೀ... ನೀನು ಹೋಗಮ್ಮಾ

ಪದ್ಮಾವತಿ : ಹಾಗೆಲ್ಲಾ ಅನ್ನಬಾರದಮ್ಮಾ ಅವರು ಮಹಾರಾಜರು...!

ಮಲುಹಣೆ : ರಾಜನಾದರೂ ಬೇಡ, ಕುಬೇರನಾದರೂ ಬೇಡ, ನಾನು ಪತಿವ್ರತೆ... ನಡೆ...ನಡೆ...

ಪದ್ಮಾವತಿ : (ಸ್ವಾಗತ) ಮಹಾಪ್ರಭುಗಳಿಗೆ ತಿಳಿಸುವೆ ಸ್ವಲ್ಪ ಸಮಾಧಾನ ಹೊಂದಲಿ ಎಂದು... ನಿನಗೆ ಎಷ್ಟು ಹೇಳಿದ್ರೂ ಅಷ್ಟೆ. ಕತ್ತೆಗೆ ವಯಸ್ಸಾದಾಗಾಯ್ತು. ಆದ್ರೆ ಬುದ್ಧಿ ಮಾತ್ರ ರವಷ್ಟೂ ಬರಲಿಲ್ಲ... ಬರ್ತೇನೆ ಕರೆದ್ಕೊಂಡು.

ಮಲುಹಣೆ : ಕರೆದುಕೊಂಡು ಬರಬೇಡ, ಏನು ಮಾಡಿಕೊಂಡು ಬರಬೇಡ ಹೊರಡು.

(ಪದ್ಮಾವತಿ ಮುಖ ಸೊಟ್ಟ ಮಾಡಿಕೊಂಡು ಹೊರಡುವಳು)

## ದೃಶ್ಯ-೯

(ಪದ್ಮಾವತಿ ಮಲುಹಣೆಯನ್ನುದ್ದೇಶಿಸಿ)

ಪದ್ಮಾವತಿ : ಇನ್ನೂ ನಿನಗೆ ಅವನ ಹುಚ್ಚು ಬಿಡಲಿಲ್ಲವೇನು? ನಾನು ತೋರಿಸಿದ, ಆರಿಸಿದ ಐಸಿರಿ ರಾಶಿಯನ್ನು ಕಾಲಿಂದೊತ್ತರಿಸಿದೆ. ಅವನನ್ನು ಯೋಚಿಸುತ್ತಾ ಕುಳಿತಿರುವೆ. ನಿನಗೂ ಹುಚ್ಚು, ಅವನೂ ಹುಚ್ಚನಂತೆ ಬೀದಿ ಬೀದಿ ಅಲೆಯುತ್ತಿದ್ದಾನೆ.

ಮಲುಹಣೆ : ಅಮ್ಮಾ ಪಾಪ ಪುಣ್ಯಗಳನ್ನು ತಿಳಿದು ಮಾತನಾಡಬೇಕು. ಸುಖದಿಂದ ಹಾಲಿನಂತೆ ಸಂಸಾರ ನಡೆಸುತ್ತಿದ್ದುದಕ್ಕೆ ಹುಳಿಯನ್ನು ಹಿಂಡಿದೆ. ನೀನು ನಮ್ಮಿಬ್ಬರ ಬಾಳಿಗೆ ಕತ್ತರಿಯಾದೆ. ಆತನ ಐಸಿರಿಯನ್ನೆಲ್ಲಾ ನಿನ್ನದಾಗಿಸಿಕೊಂಡೆ, ಆತನನ್ನು ಬಿಕಾರಿಯಾಗೆ ಮಾಡಿದೆ. ನನ್ನನ್ನು ಯೋಚನಾ ಪೀಡಿತಳಾಗಿ ಮಾಡಿದೆ. ಇದು ನಿನಗೆ ಧರ್ಮವಲ್ಲಮ್ಮಾ ಧರ್ಮವಲ್ಲ.

ಪದ್ಮಾವತಿ : ನಿನಗೋಸ್ಕರ, ನಿನ್ನ ಸುಖಕ್ಕೋಸ್ಕರ ನಾನು ಹಗಲಿರುಳು ಇರುವೆಯಂತೆ ಕಾಯಕದಿಂದ ಶ್ರಮಿಸುತ್ತಿರುವುದು.

ಮಲುಹಣೆ : ಅವರು ನನ್ನ ಮೇಲೆ ಎಷ್ಟೊಂದು ಪ್ರೀತಿ ಇಟ್ಟಿದ್ದಾರೆ ಗೊತ್ತೆ? ತಿಳಿದಿಕೋ. ಏಕಪತ್ನೀ ವ್ರತಸ್ಥರಾಗಿ ವಿರಹವೇದನೆಯನ್ನು ತಾಳಲಾರದೆ ವಿಜಯೇಶ್ವರ

ದೇವಾಲಯದಲ್ಲಿ ವಿರಹ ಸ್ತೋತ್ರ ಮಾಡಿ ಶಿವ ಸಾಕ್ಷಾತ್ಕಾರ ಪಡೆಯಲು ಸಿದ್ಧರಾಗಿದ್ದಾರೆ.

ಪದ್ಮಾವತಿ : ಹೌದು, ಹಾಗಾದರೆ... ನಡೆಯೇ ನೋಡೋಣ...

ಮಲುಹಣೆ : ಅಗತ್ಯವಾಗಿ ನಡೆಯಮ್ಮ...

## ದೃಶ್ಯ-೧೦

(ಮಲುಹಣನು ವಿಜಯೇಶ್ವರ ದೇವಾಲಯದಲ್ಲಿ ತಪವೆಸಗುತ್ತಿದ್ದಾನೆ.)

ಮಲುಹಣ : "ದೇವ ಶಂಕರ ಭಕ್ತಜನ ಮನೋರಥ ।
ರೂಪ ದೇವ ಶಶಿಧರ ಶರಣ ಹೃದಯ ।
ಸದಮಳ ದೀಪ ಮೆರೆವ ಗರಳದಗರುವ ।
ಕರುಣಿಪುದು ದೇವ ಮುನ್ನಿತ್ತೊರಮಂ ಕುಣಿಪುದು ತಂದೆ ।
ದೇವ ಇಲ್ಲಿರಮೆಮಗೆ ಸಾಲ್ವುದೆಂದಲೆ ತಂದೆ ।
ಕಾರುಣ್ಯವಾರ್ಧಿ ವಿಜಯೇಶ್ವರನೆ ಕರುಣಿಪುದು ।
ಮಾರಾರಿ ದುರಿತಾರಿ ಕಾಲಾರಿ ಕರುಣಿಪುದು ।
ಭಕ್ತ ಸಂತುಷ್ಟ ಸ್ವಷ್ಟನಿಧಿ ಕರುಣಿಪುದು ।
ಭಕ್ತ ಪ್ರಶಸ್ತ ಸಂಯುಕ್ತ ವರ ಕರುಣಿಪುದು ॥

(ದೂರದ ನಾದವನ್ನು ಕೇಳುತ್ತಾ)

ಮಲುಹಣೆ : ನೋಡಿದೆಯಮ್ಮಾ ಅವರು ಹೇಗೆ ದೇವ ಧ್ಯಾನದಲ್ಲಿ ಮಗ್ನರಾಗಿದ್ದಾರೆ.

ಪದ್ಮಾವತಿ : ಆದದ್ದಾಯ್ತು... ನಾನು ಮಾಡಿದ ತಪ್ಪನ್ನು ಕ್ಷಮಿಸು ಮಲುಹಣೆ. ಏನೋ ಯಾವುದೋ ವಿಷ ಘಳಿಗೆಯಲ್ಲಿ ಹಾಗಾಯ್ತು. ನನ್ನ ವೃತ್ತಿ ಚಾಳಿಯಂತೆ ಮಾತನ್ನು ಆಡಿದೆ, ಹಾಗೆ ವರ್ತಿಸಿದೆ.

(ಎಂದು ನಮಸ್ಕರಿಸುವಳು)

ಮಲುಹಣ : ಮೇಲೇಳಿ. ಮೇಲೇಳಿ.

ಮಲುಹಣೆ : (ಕಾಲಿಗೆ ಬಿದ್ದು) ಮಲುಹಣದೇವಾ... ನಾನು ಮಾಡಿದ ತಪ್ಪನ್ನು ಕ್ಷಮಿಸಿ ಪ್ರಭು ಕ್ಷಮಿಸಿ. ನನ್ನ ತಾಯಿಯಿಂದ ನಿಮ್ಮನ್ನು ತುಚ್ಛೀಕರಿಸಿ ಬೀದಿಯ ಬಿಕಾರಿಯಾಗೆ ಮಾಡಿದೆ.

ಮಲುಹಣ : ಮಲುಹಣೆ ಯೋಚಿಸಬೇಡ ಮೇಲೇಳು, ಆದದ್ದಾಯ್ತು ಅನೇಕ ಕೆಟ್ಟ ಕೆಲಸಗಳಾಗುವುದು ಒಳ್ಳೆಯದಕ್ಕೆ, ಆದದ್ದೂ ಆಗಿಹೋಯ್ತು. ಅದನ್ನಾಡಿ ಇನ್ನೇನು ಪ್ರಯೋಜನ? ನಿಮ್ಮಿಂದ ನನಗೆ ಒಳ್ಳೆಯದೇ ಆಯಿತು. ಮೋಹಾಂಧಕಾರ ತೊಲಗಿ ದೈವಭಕ್ತಿ ಒಡಮೂಡಿತು.

ಪದ್ಮಾವತಿ : ಮಲುಹಣದೇವರೇ ನಾನು ಮಾಡಿದುದು ಸರ್ವತಾ ತಪ್ಪು. ಕುಲಕಸುಬಿನಂತೆ ನಾನು ನನ್ನ ಕೆಟ್ಟ ಚಾಳಿಯನ್ನೇ ಮಗಳಿಗೂ ಕಲಿಸಲೆತ್ನಿಸಿದೆ, ಆದರೆ ಆಕೆ ಪತಿವ್ರತೆ, ನೀವು ಏಕಪತ್ನೀವ್ರತಸ್ಥರು.

ಮಲುಹಣ : ಆಪದ್ಬಾಯ್ತು ಬಿಡಿ. ಇನ್ನೇಕೆ ಆ ಹಳೆಯ ಕೇಳಬಾರದ ಮಾತುಗಳು. ಮಲುಹಣೇ ಪದ್ಮಾವತಿಯರೇ ಈಗ ನಾನೊಂದು ಸಂಕಲ್ಪ ಮಾಡಿರುವೆ.

ಮಲುಹಣೆ :
ಪದ್ಮಾವತಿ : ಏನು ಮಾಡಿರುವಿರಿ?

ಮಲುಹಣ : ನಾನು ಐಶ್ವರ್ಯವನ್ನೆಲ್ಲಾ ಬಡಬಗ್ಗರಿಗೆ ಹಂಚಿ ತಪವನ್ನಾಚರಿಸಿ ಮುಕ್ತಿಯನ್ನು ಪಡೆಯಬೇಕೆಂದಿರುವೆ.

ಮಲುಹಣೆ : ಅಗತ್ಯವಾಗಿ, ಎಲ್ಲವನ್ನೂ ಇಲ್ಲಿಗೇ ತರಿಸಿ ದಾನ ನೀಡಿ, ನಿಮ್ಮೊಡನೆ
ಪದ್ಮಾವತಿ : ಪತಿ ಹಾಗೂ ದೈವಪೂಜಾ ನಿರತಳಾಗುತ್ತೇನೆ. ಮುಂದಿನ ಕೆಲಸ ಮಾಡೋಣ.

ಮಲುಹಣ : ಇದು ನಿಜವೇ...

ಪದ್ಮಾವತಿ : ಹೌದು. ಹೂವಿನಿಂದ ನಾರು ಸ್ವರ್ಗವನ್ನು ಸೇರುವಂತೆ ಮಲುಹಣಾ ನಿನ್ನಿಂದ ಮಲುಹಣೆಯೂ ಪುಷ್ಪಕ ವಿಮಾನದಲ್ಲಿ ಕೈಲಾಸವನ್ನು ಸೇರಿ, ಈಶ್ವರ-ಪಾರ್ವತಿಯರ ಹತ್ತಿರ ರುದ್ರಕನ್ಯೆ ರುದ್ರಗಣರಾಗಿ ಇಬ್ಬರೂ ಅಮರರಾಗಿ. ನಾನು ನಿಮ್ಮ ಜೊತೆಯಲ್ಲಿ ಕೈಲಾಸವನ್ನು ಸೇರುವ ಪುಣ್ಯವಿಲ್ಲ. ನಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಅನುಭವಿಸಿ ಬರುವೆನು.

(ಅಳುವಳು)

(ಪದ್ಮಾವತಿ ಕೈಮುಗಿದು ಕಣ್ಮುಚ್ಚಿರಲು, ಮತ್ತೆ ಮಲುಹಣನ ಪ್ರಾರ್ಥನೆ ಆರಂಭವಾಗುವುದು, ಮಲುಹಣೆಯೂ ಆತನ ಜೊತೆ ದನಿಗೂಡಿಸುತ್ತಾ ಪಕ್ಕದಲ್ಲೇ ಕುಳಿತು ತಪವನ್ನೆಸಗಲಾರಂಭಿಸುವಳು)

ಮಲುಹಣ : ಕಾರುಣ್ಯವಾರ್ಧಿ ವಿಜಯೇಶ್ವರನೆ ಕರುಣಿಪುದು
ಭಕ್ತಿ ಸಂತುಷ್ಟ ಸ್ವಪ್ನನಿಧಿ ಕರುಣಿಪುದು ।
ಮಲುಹಣೆ : ಭಕ್ತಿ ಪ್ರಶಸ್ತ ಸಂಯುಕ್ತವರ ಕರುಣಿಪುದು ।
..........................................................
..........................................................

(ಹಾಡು ಮುಂದುವರಿಯುತ್ತಿದ್ದಂತೆಯೇ ಪರದೆ ಬೀಳುವುದು)

*

# ಕುಂತಿಯ ನಿರ್ಧಾರ

**ಪಾತ್ರ ವರ್ಗ**

೧. ಕುಂತಿ ೨. ಮಾದ್ರಿ ೩. ಪಾಂಡುರಾಜ ೪. ಸೇವಕ ೫. ಮುನಿ

ಪಾಂಡುಮಹಾರಾಜ : ಕುಂತಿ, ಯಾಕೋ ಚಿಂತೆಯಲ್ಲಿರುವಂತೆ ಕಾಣುತ್ತಿದೆ. ಕಾರಣವೇನು ಕೇಳಬಹುದೇ?

ಕುಂತಿ : ಪಾಂಡು ರಾಜನ ಪಟ್ಟದ ರಾಣಿಯಾದ ನನಗೆ ಚಿಂತೆಯೇನಿಲ್ಲ ಪ್ರಭು....

ಪಾಂಡು : ಮದ್ರರಾಜನ ಮಗಳಾದ ಮಾದ್ರಿಯನ್ನು ಮದುವೆಯಾದೆ ಎಂತಲೇ?

ಕುಂತಿ : ಹಾಗೇನಿಲ್ಲ.. ಓ... ಮಾದ್ರಿ

ಪಾಂಡು : ಮಹಾರಾಣಿಯವರನ್ನು ಹುಡುಕಿಕೊಂಡು ಕಿರಿಯ ರಾಣಿಯವರು ಬಂದ್ರು ಅಂತ ಕಾಣುತ್ತೆ.

ಕುಂತಿ : ಮಹಾಪ್ರಭು ಪಾಂಡುರಾಜರನ್ನು ನೋಡಲು ಯಾಕೆ ಬಂದಿರಬಾರದು?

ಪಾಂಡು : ಎರಡೂ ಇರಬಹುದು.

ಮಾದ್ರಿ : ಪ್ರಶ್ನೆ ಉತ್ತರ ಎರಡನ್ನೂ ಪ್ರಭುಗಳು, ಮಹಾರಾಣಿಯವರೇ ಮಾಡುವುದರಿಂದ ನಾನೇನು ಮಾತನಾಡುವ ಅವಶ್ಯಕತೆಯೇ ಇಲ್ಲ ಅಂತ ಕಾಣುತ್ತೆ.

ಪಾಂಡು : ಹಾಗೇನಿಲ್ಲ...ನಿನ್ನಿಂದ ಉತ್ತರ ಬರದೇ ಇದ್ದುದರಿಂದ ನಾವೇ ಊಹಾಪೋಹಗಳ ಸುಳಿಯನ್ನು ಆಡಬೇಕಾಯಿತು. ಹೋಗಲಿ...ಈಗ ಹಸ್ತಿನಾಪುರದ ಅರಮನೆಯಲ್ಲಿ ಇಬ್ಬರಿಗೂ ಬೇಸರವಾದಂತೆ ಕಾಣುತ್ತೆ.

ಮಾದ್ರಿ : ಹೌದು... ಅದಕ್ಕೆ ಎಲ್ಲಾದರೂ ಹೊರಗಡೆ ತಿರುಗಾಡಿಕೊಂಡು ಬರಬಹುದಲ್ಲವೇ?

ಪಾಂಡು : ಯಾಕೆ, ಬೇಜಾರಾಗಿದ್ದರೆ ಕಾಡಿಗೆ ಬೇಟೆಯಾಡಲು ಹೋಗೋಣವೇ?

ಕುಂತಿ : ಅಗತ್ಯವಾಗಿ.

ಮಾದ್ರಿ : ನನಗೂ ಅದೇ ಬೇಕಾದುದು.

ಪಾಂಡು : ಅದಕ್ಕೇನಂತೆ ರಥವನ್ನು ಸಿದ್ಧಮಾಡಲು ಆಜ್ಞಾಪನೆಕೊಡಿಸಿಬಿಡಲೇ?

ಮಾದ್ರಿ : ಅಪ್ಪಣೆ ಮಹಾಪ್ರಭು...

ಪಾಂಡು : (ಕೈ ತಟ್ಟಿ) ಯಾರಲ್ಲಿ?

ಸೇವಕ : ಮಹಾಪ್ರಭು...

ಪಾಂಡು : ಬೇಟೆಗೆ ರಥ ಸಿದ್ಧವಾಗಲೆಂದು ಹೇಳಿ ಬಾ..

ಸೇವಕ : ಚಿತ್ತ ಪ್ರಭು.

ಕುಂತಿ : ನನ್ನನ್ನು ಬೇಸರವೇ ಎಂದು ಕೇಳಿದರು ಪ್ರಭುಗಳು. ಆದ್ರೆ ಮಾದ್ರಿ ಹೇಳಿದ ಕೂಡಲೇ ಬೇಟೆಗೆ ಅಣಿ ಮಾಡಿಸಿಬಿಟ್ಟರು. ಎಷ್ಟೇ ಆಗಲಿ ಮಾದ್ರಿ ರೂಪವತಿ. ಯಥೇಚ್ಚವಾಗಿ ಹಣವನ್ನು ಕೊಟ್ಟು ಭೀಷ್ಮರು ಆದುದರಿಂದಲ್ಲವೇ ಆಕೆಯನ್ನು ತಂದದ್ದು? ಅದಕ್ಕಾಗಿಯೇ ಪಾಂಡು ಮಹಾ ಪ್ರಭುಗಳು ಆಕೆ ಹೇಳಿದ ಹಾಗೆ ಕೇಳುತ್ತಾರೆ.

ಮಾದ್ರಿ : ಇಲ್ಲ ಮಹಾರಾಣಿ, ಪಾಂಡು ಮಹಾರಾಜರು ನಾನು ನೋಡಿದಂತೆ ಕುಂತಿ, ಮಾದ್ರಿಯರನ್ನು ಎರಡು ಕಣ್ಣುಗಳಂತೆ ನೋಡಿಕೊಳ್ಳುತ್ತಿದ್ದಾರೆ.

ಕುಂತಿ : ಈ ಭಾವನೆ ಕೊನೆಯವರೆಗೆ ಉಳಿದರೆ ನಾವೇ ಧನ್ಯರು.

ಪಾಂಡು : ನಿಮ್ಮಿಬ್ಬರ ಆಸೆ ಆಕಾಂಕ್ಷೆಗಳನ್ನು ಎಂದಿಗೂ ಮುರಿಯುವುದಿಲ್ಲ. ಸದಾ ನನ್ನ ಪ್ರೀತಿಯನ್ನು ನಿಮ್ಮಿಬ್ಬರಲ್ಲೂ ಸಮನಾಗಿ ಹಂಚಿರುವೆ.

ಮಾದ್ರಿ : ಅಷ್ಟಾದರೆ ನಾನೇ ಪುಣ್ಯವಂತರು.

ಸೇವಕ : ಮಹಾಪ್ರಭುಗಳೇ ರಥವು ಸಿದ್ಧವಾಗಿದೆ.

ಪಾಂಡು : ರಾಣಿಯರೆ... ಇನ್ನು ಹೊರಡಬಹುದೇ?

ಮಾದ್ರಿ : ಅಗತ್ಯವಾಗಿ...

(ನಗುವರು)

* * *

ಮಾದ್ರಿ : ಮಹಾಪ್ರಭು

ಪಾಂಡು : ಏನು ಮಾದ್ರಿ...?

ಮಾದ್ರಿ : ಅರಮನೆಯ ಒಳಗಿದ್ದ ಸಮಗೆ ಇಷ್ಟೊಂದು ಹರುಷ ದೊರೆಯುತ್ತಿರಲಿಲ್ಲವೆಂದೇ ಹೇಳಬಹುದು.

ಪಾಂಡು : ಹೌದು ಎಷ್ಟೇ ಆಗಲೀ... ಪ್ರಕೃತಿ ಸೌಂದರ್ಯ ಕಣ್ಣಿಗೆ ಹಬ್ಬವನ್ನೀಯುವುದೆಂಬುದರಲ್ಲಿ ಆಶ್ಚರ್ಯವೇ ಇಲ್ಲ.

ಕುಂತಿ : ಎಂಥ ಪ್ರಶಾಂತವಾದ ಸ್ಥಳ... ಕಣ್ತುಂಬುವ ಹಸಿರು... ಹಕ್ಕಿಗಳ ಇಂಪಾದ ದನಿ, ಮೈಗೆ ಹಿತವಾಗಿ ಬೀಸುವ ತಂಗಾಳಿ... ಆ ಪ್ರಾಣಿಗಳು ಎಷ್ಟೊಂದು ಸಂತೋಷದಿಂದ ಸುಳಿದಾಡುತ್ತಿವೆ ನೋಡಿ.

ಮಾದ್ರಿ : ಹೇಗೆ ನಮ್ಮ ಕಡೆಯೇ ಆ ಆನೆಗಳು ನೋಡುತ್ತಿವೆ. ಮೇಲಿದ್ದರೆ ನಮ್ಮನ್ನು ಸೀಳಿಬಿಡುತ್ತಿದ್ದವೋ ಏನೋ?

ಕುಂತಿ : ವೀರಾದಿ ವೀರ ಮಹಾರಾಜರಿರುವಾಗ ಮನಗೆಂಥ ಭಯ?

ಪಾಂಡು : ಆ ವೀರತನವನ್ನು ತೋರಿಸಲಿಕ್ಕೆ ತಾನೇ ನಾನು ಈ ಭೇಟೆಗೆ ನಿಮ್ಮಿಬ್ಬರನ್ನು ಕರೆದುತಂದಿರೋದು.

ಕುಂತಿ : ಬೇಟೆ ಅಂದ್ರೆ ನಿಮ್ಮನ್ನು ಕೇಳಬೇಕೇ? ಎತ್ತಿದ ಕೈ ... ಒಂದೊಂದು ಬಾಣಕ್ಕೆ ಒಂದೊಂದು ಪ್ರಾಣಿಯನ್ನೇ ಉರುಳಿಸಿಬಿಡುಸ್ತೀರಿ.

ಮಾದ್ರಿ : ಈ ಹೊತ್ತು ನೋಡೋಣ... ಪ್ರಭುಗಳ ಪರಾಕ್ರಮವನ್ನು...

ಪಾಂಡು : (ರಥ ಹೋಗುತ್ತಿರಲು) ನೋಡುತ್ತಾ ಸರಿ...

(ಸ್ವಲ್ಪ ಹೊತ್ತು ರಥ ಓಡುತ್ತಿದೆ. ಪಾಂಡುರಾಜರು ಮೌನವಾಗಿ ಸಾಗುತ್ತಾ ಇದ್ದಾಗ ಬಾಣ ಹೂಡಿದ ಯಾವುದೋ ಜಿಂಕೆಗೆ)

ಪಾಂಡು : ನೋಡು ಮಾದ್ರಿ ಈಗ ಆ ಜಿಂಕೆಗಳನ್ನು ಕೆಳಗುರುಳಿಸುತ್ತೇನೆ. (ಐದು ಬಾಣಗಳನ್ನು ಒಂದರ ಮೇಲೊಂದು ಬಿಡುವನು. ಅವು ಚೀರಾಡುತ್ತ ಹೊರಳಾಡುವುವು)

ಗಂಡುಧ್ವನಿ : "ಎಲೈ ರಾಜನೇ, ಧರ್ಮಾತ್ಮರಾದವರ ವಂಶದಲ್ಲಿ ಹುಟ್ಟಿಯೂ ಏಕೆ ಕಾಮಲೋಭಗಳಿಗೆ ವಶವಾಗಿ ನಿನ್ನ ಬುದ್ಧಿ ಕೆಟ್ಟು ಹೋಯಿತು. ವಿಧಿಯು ಬುದ್ಧಿಯನ್ನು ತಪ್ಪಿಸಿಬಿಡುತ್ತದೆ. ಬುದ್ಧಿಯು ವಿಧಿಯನ್ನು ತಪ್ಪಿಸಲಾರದು. ಕಾಡಿನಲ್ಲಿ ಹೆಣ್ಣಿನೊಡನೆ ಕೂಡಿದ್ದ ಮೃಗವನ್ನು ಹಾಗೆ ಯಾರು ಹೊಡೆದಾರು? ಕಾಡಿನಲ್ಲಿ ಹುಲ್ಲು ಮೇಯಿದುಕೊಂಡು ಸಂಚರಿಸುತಿದ್ದ ನಮ್ಮನ್ನು ಹೀಗೆ ಕ್ರೂರವಾಗಿ ಕೊಂದದ್ದರಿಂದ ನಿನ್ನ ಜೀವಿತವೂ ಹೀಗೆ ಕೊನೆಯಾಗಲಿ"

ಮಾದ್ರಿ : ಹಾಂ ಇದೇನು ಧ್ವನಿ? ಅಕ್ಕಾ ಆ ಜಿಂಕೆಯದು ಗಂಡು ಧ್ವನಿ... ಮನುಷ್ಯನಂತೆ...

ಧ್ವನಿ : ನಾನು ಕಿನ್ದಮನೆಂಬ ಋಷಿ, ಈ ಹಗಲು ಹೊತ್ತು ಸುಖ ಅನುಭವಿಸಬೇಕೆಂದು ಜಿಂಕೆಯ ರೂಪಿನಲ್ಲಿ ಪ್ರಿಯತಮೆಯೊಂದಿಗೆ ಕ್ರೀಡಿಸುತ್ತಿದ್ದೆ. ನೀನು ಬಾಣ ಪ್ರಯೋಗ ಮಾಡಿ ಕೊಂದೆ.

ಕುಂತಿ....ಓ... ಅವು ಸಾವನ್ನಪ್ಪಿದವು...

ಪಾಂಡು : ಹಾಂ...ಎಂಥ ಕೆಲಸ ಮಾಡಿಬಿಟ್ಟೆ...ನಿಜವಾಗಿಯೂ ನನಗೆ ಈಗ ನನ್ನ ಬಂಧುವನ್ನು ಕಳೆದುಕೊಂಡಷ್ಟೇ ದುಃಖವಾಗಿದೆ. ಸದ್ವಂಶದಲ್ಲಿ ಹುಟ್ಟಿದರೂ ಪಾಪಿಷ್ಠರಾದವರು ಕರ್ಮವಶದಿಂದ ಕಾಮ ಜಾಲದಲ್ಲಿ ಸಿಕ್ಕಿ ದುರ್ಗತಿಯನ್ನು

ಹೊಂದುತ್ತಾರೆ. ಧರ್ಮಾತ್ಮನಿಂದ ಹುಟ್ಟಿದರೂ ನಮ್ಮ ತಂದೆ ಕಾಮಾತ್ಮನಾಗಿ ಚಿಕ್ಕವಯಸ್ಸಿನಲ್ಲಿಯೇ ಪ್ರಾಣಬಿಟ್ಟನಂತೆ, ಆ ಕಾಮಾತ್ಮನ ಕ್ಷೇತ್ರದಲ್ಲಿ ಕೃಷ್ಣದ್ವೈಪಾಯನನು ನನ್ನನ್ನು ಪಡೆದನೆಂದೂ ಹೇಳುತ್ತಾರೆ. ಈ ಅಧಮ ಕೆಲಸದಿಂದ ನನ್ನ ಮನಸ್ಸು ವ್ಯಸನದಲ್ಲಿ ಸಿಕ್ಕಿಕೊಂಡಿದೆ. ವ್ಯಸನ ಎಂಬ ದೊಡ್ಡ ಬಂಧನದಲ್ಲಿ ನಾನೀಗ ಸಿಕ್ಕಿಕೊಂಡಿರುವೆ ಮಾದ್ರಿ... ಕುಂತೀ...

ಕುಂತಿ : ಪ್ರಭು... ಚಿಂತೆಯನ್ನು ಮಾಡಬೇಡಿ....

ಪಾಂಡು : ಮಾದ್ರಿ...ಕುಂತಿ... ಈ ನನ್ನ ವ್ಯಸನ ಬಂಧನದಿಂದ ದೂರವಾಗಲು ಈ ಪ್ರಾಣಿ ಹತ್ಯದೋಷದಿಂದ ದೂರವಾಗಲು. ಈ ರಾಜ ವೈಭವಗಳನ್ನು ತ್ಯಜಿಸಿ ಸನ್ಯಾಸವನ್ನು ಕೈಕೊಂಡು ಮೋಕ್ಷಪಡೆಯಲು ಪ್ರಯತ್ನಿಸುತ್ತೇನೆ.

ಮಾದ್ರಿ :
ಕುಂತಿ : ಪ್ರಭು....

ಪಾಂಡು : ಹೌದು... ಮುನಿವೃತ್ತಿಯನ್ನು ಕೈಕೊಂಡು ಭಿಕ್ಷೆಯಿಂದ ಜೀವಿಸುತ್ತಾ, ಘೋರವಾದ ತಪಸ್ಸು ಮಾಡುತ್ತೇನೆ. ಮರದಡಿಯಲ್ಲಿ ವಾಸ ಮಾಡಿಕೊಂಡಿದ್ದು ಸಂತೋಷ,ದುಃಖ, ಹೊಗಳಿಕೆ, ತೆಗಳಿಕೆ, ಆಶೀರ್ವಾದ, ನಮಸ್ಕಾರ ಒಂದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಎಲ್ಲರೊಡನೆಯೂ ನಗು ನಗುತ್ತಿರುತ್ತೇನೆ.

ಕುಂತಿ : ಪ್ರಭು... ಇದೇ ನಿಮ್ಮ ಸಂಕಲ್ಪವೇ?

ಪಾಂಡು : ಹೌದು ಕುಂತಿ, ಮತ್ತೊಬ್ಬನ ಅಧೀನದಲ್ಲಿರದೆ, ಗಾಳಿಯಂತೆ ಸ್ವತಂತ್ರನಾಗಿರುತ್ತೇನೆ ಇಂದ್ರಿಯಗಳನ್ನು ಗೆದ್ದು ನನ್ನ ಪಾಪಗಳನ್ನು ಕಳೆದುಕೊಳ್ಳುತ್ತೇನೆ.

ಮಾದ್ರಿ : ಹಾಗಾದರೆ ನಮ್ಮ ಗತಿ?

ಕುಂತಿ : ಮಹಾರಾಜ ಧರ್ಮಪತ್ನಿಯರೊಡನೆ ಇದ್ದುಕೊಂಡು ತಪಸ್ಸು ಮಾಡಬಹುದಲ್ಲ, ನಾವು ಸ್ವರ್ಗ ಪಡೆಯಬೇಕಾದರೂ ನಿಮ್ಮಿಂದತಾನೇ. ನಾವು ಸಹ ಇಂದ್ರಿಯ ನಿಗ್ರಹಮಾಡಿಕೊಂಡು ನೀವಿರುವ ಕಡೆಯೇ ತಪಸ್ಸು ಮಾಡುತ್ತೇವೆ.

ಮಾದ್ರಿ : ಹಾಗಲ್ಲದೆ ನೀವು ನಮ್ಮನ್ನು ಬಿಟ್ಟು ಇಲ್ಲೇ ಉಳಿಯುವುದಾದರೆ ನಾವು ಇಂದೇ ಪ್ರಾಣವನ್ನು ಕಳೆದುಕೊಳ್ಳುತ್ತೇವೆ.

ಕುಂತಿ : ಹೌದು, ನೀವು ಹಾಗೆ ಮಾಡಿ, ನಮ್ಮನ್ನು ಕೈ ಬಿಟ್ಟರೆ ನಾವು ಪ್ರಾಣವನ್ನು ಕಳೆದುಕೊಳ್ಳುವುದು ಖಂಡಿತ.

ಪಾಂಡು : ರಾಣಿಯರೇ, ನೀವು ಹಾಗೇ ನನ್ನ ಜೊತೆ ತಪಸ್ಸು ಮಾಡಿಕೊಂಡು ಇರುವುದಾದರೆ, ಇಲ್ಲಿ ಸಿಗುವ ಗಡ್ಡೆ ಗೆಣಸು, ಹಣ್ಣು ಹಂಪಲುಗಳನ್ನು

ತಿಂದು ಈ ಕಾಡಿನಲ್ಲೇ ವಾಸವಾಗಬೇಕಾಗುತ್ತದೆ. ನಾರು ಮಡಿಯನ್ನುಟ್ಟು, ಚಳಿಗಾಳಿ ಬಿಸಿಲೆನ್ನದೆ, ಹಸಿವು ನೀರಡಿಕೆಗಳನ್ನು ತಡೆದು, ಕಾಲ ಕಳೆಯುತ್ತಾ ತಪಸ್ಸಿನಲ್ಲಿಯೇ ದೇಹವನ್ನು ನೀಗಬೇಕಾಗುತ್ತದೆ.

ಕುಂತಿ : ಆಗಲಿ ಪ್ರಭು.. ನಾವು ನೀವು ಹೇಳಿದುದಕ್ಕೆ ಸಿದ್ಧ, ... ನಿಮಗೇ ಆಸೆ ಇಲ್ಲದುದು ನಮಗಾದರೂ ಏನು ಆಸೆ ಇದೆ ಹೇಳಿ...?

ಪಾಂಡು : ಹಾಗಾದರೆ ಈಗಲೇ ನಿಮ್ಮ ಒಡವೆ ವಸ್ತುಗಳನ್ನು ತೆಗೆದು ನಮ್ಮ ಪರಿವಾರದವರಿಗೆ ಕೊಟ್ಟು ಬಿಡಿ. ಅದೋ ನಾವು ಬರುವುದು ಹೊತ್ತಾಯಿತೆಂದು ಅವರೇ ಬರುತ್ತಿದ್ದಾರೆ.

ಕುಂತಿ : ಅಗತ್ಯವಾಗಿ ಆಗಲಿ ಪ್ರಭು.

ಪರಿವಾರ : ಮಹಾ ಪ್ರಭುಗಳು ಇಷ್ಟು ಹೊತ್ತಾದರೂ ಬರಲೇ ಇಲ್ಲವೆಂದು ಹುಡುಕಿಕೊಂಡು ಬರುತ್ತಿದ್ದೇವೆ.

ಪಾಂಡು : ಆದರೆ ನೀವು ನಮ್ಮ ಯೋಚನೆಯನ್ನೇ ಮಾಡಬೇಕಾಗಿಲ್ಲ. ಇದೋ ಕುಂತಿ, ಮಾದ್ರಿ ನಾನು ಯೋಚನೆಯನ್ನೇ ಮಾಡಬೇಕಾಗಿಲ್ಲ. ಇದೋ ಕುಂತಿ, ಮಾದ್ರಿ ನಾನು ಕಳೆದಿಟ್ಟಿರುವ ರಾಜ ವೈಭವದ ಒಡವೆ ವಸ್ತುಗಳನ್ನು ತೆಗೆದುಕೊಂಡು ಹಸ್ತಿನಾವತಿಗೆ ಹೋಗಿ ಕೊಟ್ಟು ಬಿಡಿ.

ಪರಿವಾರ : ಏಕೆ ಮಹಾಪ್ರಭು?

ಪಾಂಡು : ನಾವಿನ್ನು ಸನ್ಯಾಸತ್ವ ಸ್ವೀಕರಿಸಿದ್ದೇವೆ.

ಪರಿವಾರ : ಮಹಾಪ್ರಭೂ ಇನ್ನೂ ವೃದ್ಧಾಪ್ಯ ಬರಲಿಲ್ಲ. ಹಾಗಾದರೂ ಏಕೆ ಈಗಲೇ ಇಂಥ ಸಂಕಲ್ಪ ಮಾಡಿದಿರಿ?

ಪಾಂಡು : ನಡೆದ ಕತೆಯನ್ನು ಸಾರಥಿ ಹೇಳುತ್ತಾನೆ ನೀವಿನ್ನು ಎಲ್ಲವನ್ನು ತೆಗೆದುಕೊಂಡು ಹೊರಡಿ.

ಪರಿವಾರ : ಪ್ರಭೂ... ನಿಮ್ಮನ್ನು ಬಿಟ್ಟು ಹೋಗಲು ನಮಗೆಲ್ಲಾ ಬಹಳ ದುಃಖವಾಗುತ್ತದೆ. ಈ ವಿಷಯವು ಹಸ್ತಿನಾವತಿಗೆ ತಿಳಿಸಿದರೆ, ಪ್ರಜೆಗಳೆಲ್ಲಾ ಇನ್ನು ದುಃಖಭರಿತರಾಗುತ್ತರೆ. ನಾವಿನ್ನು ಬರುತ್ತೇವೆ... ಪ್ರಭು...

(ದುಃಖದಿಂದ ಎಲ್ಲರೂ ಹೊರಡುವರು)

ಪಾಂಡು : ಕುಂತಿ, ಮಾದ್ರಿ...

ಕುಂತಿ :
ಮಾದ್ರಿ : ಪ್ರಭೂ...

ಪಾಂಡು : ಇನ್ನೆಂಥ ಪ್ರಭು...? ಈಗ ನಾನು ಸನ್ಯಾಸಿ...

ಕುಂತಿ : ನೀವು ಸನ್ಯಾಸಿಯಾದರೂ ನಮ್ಮಿಬ್ಬರ ಪಾಲಿಗೆ ಪ್ರಭು.

ಮಾದ್ರಿ : ಪ್ರಭುವಲ್ಲದಿದ್ದರೂ ಸ್ವಾಮಿ... ನಮ್ಮಿಬ್ಬರ ಪತಿ ... ದೈವ...

ಪಾಂಡು : ನಿಮಗೆಲ್ಲಾ ದುಃಖವಾಗಿರಬಹುದು.

ಮಾದ್ರಿ : ಇಲ್ಲ ಪ್ರಭು... ನಿಮ್ಮ ಹಿತವನ್ನೇ ಬಯಸುವ ನಮಗೆ ಅರಮನೆಯಾದರೇನು ಗುಡಿಸಲಾದರೇನು?

ಕುಂತಿ : ಊರಾದರೇನು? ಕಾಡಾದರೇನು?

ಪಾಂಡು : ಈಗ ನಮ್ಮ ತಪಸ್ಸು ಎಲ್ಲಿ ನೆರವೇರಬೇಕು ಗೊತ್ತೇ?

ಮಾದ್ರಿ : ಎಲ್ಲಿ ಪ್ರಭು?

ಪಾಂಡು : ಹಿಮಾಲಯದ ಮುಂದಿರುವ ಶತಶೃಂಗದಲ್ಲಿ ಈಗ ನಾವು ಇಲ್ಲಿಂದ ಉತ್ತರಾಭಿಮುಖವಾಗಿ ಹೋಗಬೇಕಾಗಿದೆ. ಅದಕ್ಕೆ ತಮಗೆ ಒಪ್ಪಿಗೆಯೇ?

ಮಾದ್ರಿ : ಚಿತ್ತ ಪ್ರಭು.

ಪಾಂಡು : ಸರಿ ನಡೆಯಿರಿ ಈಗ ರಥವಲ್ಲ..

ಕುಂತಿ : ಕಾಲುಗಳೇ ರಥ...

ಪಾಂಡ : ಹೌದು, ನಡೆಯಿರಿ.

ಪಾಂಡು ಮುನಿಗಳಿಗೆ ವಂದನೆಗಳು. ನಾನು ಪಾಂಡುಮಹಾರಾಜ, ಇವರೀರ್ವರು ನನ್ನ ಕೈಹಿಡಿದ ಸತಿಯರಾದ ಕುಂತಿ ಮಾದ್ರಿಯರು.

(ಶತಶೃಂಗಕ್ಕೆ ಪ್ರಯಾಣ)

ಮುನಿ : ರಾಜರಾದ ನಿಮಗೆ ಗಿರಿದುರ್ಗಗಳು, ದೇವ ಗಂಧರ್ವಾಪ್ಸರೆಯರು ಕ್ರೀಡಾ ಭೂಮಿಗಳು, ಕುಬೇರನ ಉದ್ಯಾನವು, ನದೀ ಪ್ರದೇಶಗಳೂ, ಗಿರಿಕಂದಕಗಳೂ ಸಿಕ್ಕುತ್ತವೆ. ಇನ್ನು ಮುಂದೆ ಹೋದರೆ ಸದಾ ಹಿಮ ಮುಚ್ಚಿಕೊಂಡು ಗಿಡ ಮೃಗ ಪಕ್ಷಿಗಳೊಂದೂ ಇಲ್ಲದ ಹೋಗುವುದಕ್ಕೆ ಅಸಾಧ್ಯವಾದಂಥ ಪ್ರದೇಶಗಳು ಕಂಡು ಬರುತ್ತವೆ. ಅಲ್ಲಿ ಗಾಳಿಮಾತ್ರ ಬೀಸುತ್ತಿರುತ್ತದೆ. ಅಲ್ಲದೆ ಅಲ್ಲಿ ಕೆಲವು ಸಿದ್ಧರೂ, ಮಹರ್ಷಿಗಳೂ ಇರುತ್ತಾರೆ. ಅಲ್ಲಿಗೆ ಹೆಂಗಸರನ್ನು ಕರೆದುಕೊಂಡು ಹೇಗೆ ಹೋಗುತ್ತೀಯಾ ಪಾಂಡುರಾಜ?

ಪಾಂಡು : ಇನ್ನೇನು ಮಾಡುವುದು ಮುನಿವರ್ಯರೇ. ನನಗೂ ಮಕ್ಕಳಿಲ್ಲ. ಮಕ್ಕಳಿಲ್ಲದವರಿಗೆ ಸ್ವರ್ಗವಿಲ್ಲವಂತೆ. ನಾನು ನಮ್ಮ ತಂದೆಯ ಕ್ಷೇತ್ರದಲ್ಲಿ ಹುಟ್ಟಿದಂತೆ ಇಲ್ಲಿ ನನ್ನ ಕ್ಷೇತ್ರದಲ್ಲಿ ಮಕ್ಕಳು ಹುಟ್ಟುವುದು ಹೇಗೆಸಾಧ್ಯ?

ಮುನಿ : ಅದು ಅಸಾಧ್ಯ. ಅದೃಷ್ಟವು ಫಲ ಕೊಡಬೇಕಾದರೆ ದೃಷ್ಟವಾಗಿ ಕರ್ಮ ಮಾಡಬೇಕು. ಹಾಗೆ ಮಾಡಿಯಾದರೆ ನಿನಗೆ ಗುಣ ಸಂಪನ್ನರಾದ ಮಕ್ಕಳಾಗಿ ನೀನು ಸಂತೋಷಪಡುವಿ.

ಪಾಂಡು : ಆಗಲೀ ಮುನಿವರ್ಯರೇ ನಿಮ್ಮ ಪಯಣವು ಶುಭವಾಗಲೆಂದು ಹಾರೈಸಿ ಕಳುಹಿಸಿ.

ಮುನಿ : ನಿಮಗೆ ಮಂಗಳ ಉಂಟಾಗಲಿ...

ಪಾಂಡು
ಕುಂತಿ : ಸಾಷ್ಟಾಂಗ ವಂದನೆಗಳು ಮುನಿವರ್ಯರಿಗೆ.
ಮಾದ್ರಿ

ಮುನಿ : ಸರ್ವರಿಗೂ ಶುಭವಾಗಲಿ ಹೋಗಿಬನ್ನಿ.

(ಹೊರಡುವರು)

* * *

ಕುಂತಿ : ಪ್ರಭು ತಪಸ್ಸು ಮಾಡಿಯೂ ನೀವು ಚಿಂತಾಮಗ್ನರಾಗಲು ಕಾರಣವೇನು?

ಪಾಂಡು : ಕುಂತಿ... ನಾವು ಬೇಕಾದ ದಾನ ಧರ್ಮ ಮಾಡಿದೆವು. ತಪಸ್ಸನ್ನು ನಿಯಮವನ್ನು ಆಚರಿಸಿದೆವು ಆದರೆ ಸಂತಾನವಿಲ್ಲದೆ ಪಾವನವಿಲ್ಲ. ಮೃತಶಾಪವಿರುವುದರಿಂದ ನಾನು ಮಕ್ಕಳನ್ನು ಪಡೆಯುವ ಬಗೆ ಹೇಗೆ?

ಕುಂತಿ : ಪಾಂಡು ಮಹಾರಾಜ... ಈಗ ನನಗೊಂದು ಜ್ಞಾಪಕಕ್ಕೆ ಬಂತು.

ಪಾಂಡು : ಅದೇನು ದೇವಿ.

ಕಾಂತಿ : ನಾನು ಇನ್ನೂ ಚಿಕ್ಕವಳಾಗಿ ತಂದೆ ಶೂರರಾಜನ ಮನೆಯಲ್ಲಿದ್ದಾಗ ದೂರ್ವಾಸ ಮುನಿಗಳು ಬಂದಿದ್ದರು. ಆಗ ನಾನು ಶ್ರದ್ಧೆ ಭಕ್ತಿಗಳಿಂದ ಅವರ ಮಂತ್ರೋಪದೇಶ ಮಾಡಿ "ನೀನು ಈ ಮಂತ್ರಗಳಿಂದ ಯಾವ ದೇವತೆಯನ್ನು ಸ್ಮರಿಸದರೂ ಆ ದೇವನು ನಿನ್ನ ವಶವಾಗುತ್ತಾನೆ" ಎಂದು ಆಶೀರ್ವದಿಸಿದರು. ಅದಕ್ಕೆ ಈ ಕಾಲ ಒದಗಿತೆಂದು ಕಾಣುತ್ತಿದೆ, ನಿಮ್ಮ ಆಜ್ಞೆಯಾದರೆ-

ಪಾಂಡು : ಅಗತ್ಯವಾಗಿ... ಬಹಳ ಒಳ್ಳೆಯದೇ ಆಯಿತು. ನಾನು ಬಯಸಿದುದು ಫಲಗೂಡಿತು ಅಂತ ಕಾಣುತ್ತೆ.

ಕುಂತಿ : ಹಾಗಾದರೆ ನಿಮ್ಮ ಅಪ್ಪಣೆಯ ಮೇರೆಗೆ ಒಬ್ಬ ದೇವತೆಯನ್ನು ಕರೆದು ನನಗೆ ಸಂತಾನವನ್ನು ಕೊಡುವಂತೆ ಕೇಳುತ್ತೇನೆ.

ಪಾಂಡು : ಬಹಳ ಸಂತೋಷ.

ಕುಂತಿ : ಹಾಗಾದರೆ ಈಗ ನಾನು ಯಾವ ದೇವತೆಯನ್ನು ಕರೆಯಲಿ?

ಪಾಂಡು : ದೇವತೆಗಳಿಗೆಲ್ಲಾ ಪುಣ್ಯ ಪ್ರಭಾವವುಳ್ಳವನಾದ ಧರ್ಮನನ್ನು ಬರಮಾಡು. ಅವನಾದರೆ ನಮ್ಮಲ್ಲಿ ಅಧರ್ಮ ಸೇರುವುದಿಲ್ಲ. ಲೋಕವು ಇದನ್ನು ಧರ್ಮವೆಂದೇ ತಿಳಿಯುತ್ತದೆ. ಅವನು ಕೊಟ್ಟ ಸಂತಾನಕ್ಕೂ ಅಧರ್ಮದಲ್ಲಿ ಮನಸ್ಸು ನೋಯುವುದಿಲ್ಲ.

ಕುಂತಿ : ತಮ್ಮಿಷ್ಟದಂತೆಯೇ ಆಗಲಿ ಪ್ರಭು.

* * *

ಜೋ ಜೋ... ಜೋ ಜೋ... ಜೋ ಜೋ...
ಲಾಲಿ ಕಂದ... ನಿನ್ನ ಮೊಗವು ಬಲು ಚೆಂದ॥

ಕುಂತಿ : ಅಕ್ಕಾ ಮಗು ಹೇಗಿದೆ ಮಾದ್ರಿ...?

ಮಾದ್ರಿ : ತುಂಬಾ ಚೆನ್ನಾಗಿದೆ... ಓ ಹೇಗೆ ನಗ್ತಾನೆ ನೋಡಿ...

ಪಾಂಡು : ಯೋಗ ಮೂರ್ತಿ ಧರ್ಮನ ಕೃಪೆಯಿಂದ ಬಂದಿರುವವನು. ಸಾಮಾನ್ಯನೇ? ಧರ್ಮ ಮೂರ್ತಿಯ ಹಾಗೆ ಇದ್ದಾನೆ.

ಕುಂತಿ : ಹೋಗಲಿ ಈಗ ಮಗುವಿಗೆ ಏನು ಹೆಸರು ಇಡೋಣ?

ಪಾಂಡು ಧರ್ಮರಾಜ ಅಂತಲೇ ಇಡೋಣ.

ಮಾದ್ರಿ : ನಮ್ಮ ಒಪ್ಪಿಗೆ ಇದೆ.

ಕುಂತಿ : ನೀವೆಲ್ಲಾ ಹೇಳಿದ ಮೇಲೆ... ನನ್ದೂ ಒಪ್ಗೆ ಇದೆ, ಏಯ್ ಧರ್ಮ ರಾಜಾ, ನಿನ್ನ ಹೆಸರಿಗೆ ತಕ್ಕ ಹಾಗೆ ಧರ್ಮವಂತನಾಗಬೇಕು. ಹೂಂ... ಎಷ್ಟು ಶಾಂತವಾಗಿ ನೋಡ್ತಾ ಇದ್ದಾನೆ ನೋಡಿ.

* * *

ಮಾದ್ರಿ : ಪ್ರಭು ಯಾರೋ ಬಂದಂತೆ ಕಾಣುತ್ತದೆ.

ಪಾಂಡು : ಯಾರದು?

ಸೇವಕ : ನಾನು ತಮ್ಮ ಪಾದ ಸೇವಕ ಮಹಾಪ್ರಭು.

ಪಾಂಡು : ಏನು ಹಸ್ತಿನಾವತಿಯಲ್ಲಿ ಎಲ್ಲರೂ ಹದುಳವೇ?

ಸೇವಕ : ಹೌದು ಪ್ರಭು. ದೃತರಾಷ್ಟ್ರ ಮಹಾ ಪ್ರಭುಗಳಿಗ ನೂರೊಂದು ಮಕ್ಕಳು ಆಗಿ ಅವರೀಗ ಸಂತೋಷದಿಂದಿದ್ದಾರೆ.

ಮಾದ್ರಿ : ನೂರೊಂದು ಇದೇನು ನೀನು ಹೇಳುತ್ತಿರುವುದು?

ಸೇವಕ : ಅದೊಂದು ದೊಡ್ಡ ಕತ ರಾಣಿಯವರೇ.

ಕುಂತಿ : (ಬರುತ್ತಾ) ಹಾಗಾ.... ಇದೇನು ಆಶ್ಚರ್ಯ...? ಒಂದೇ ಸಾರಿಗೆ ನೂರೊಂದು ಮಕ್ಕಳು!

ಸೇವಕ : ಹೌದು ತಾಯೇ. ಗಾಂಧಾರಿ ಮಹಾರಾಣಿಯವರು ಗರ್ಭಿಣಿಯಾಗಿ ಎರಡು ವರುಷವಾದರೂ ಹೆರಿಗೆ ಆಗಲಿಲ್ಲ. ಆದರೆ ತಾವು ಧರ್ಮರಾಜನಿಗೆ ತಾಯಿಯಾದುದನ್ನು ಕೇಳಿ ಸಹಿಸಲಾರದೆ, ತಮ್ಮ ಬಸುರಿನ ಭಾರವನ್ನು

ತಾಳಲಾರದೆ ಹೊಟ್ಟೆಯನ್ನು ಹೊಸೆದುಕೊಂಡರು. ಆಗ ಗಟ್ಟಿಯಾದ ಒಂದು ಮಾಂಸದ ಪಿಂಡ ಹೊರಬಿತ್ತು. ಆಕೆ ಇದೆಯೇ ಈಶ್ವರನು ವರಕೊಟ್ಟದ್ದು, ವ್ಯಾಸನು ಅನುಗ್ರಹಿಸಿದ್ದು, ಎಂದು ಅದನ್ನು ಬೀಸಾಡುವುವರಲ್ಲಿರಲು, ವ್ಯಾಸ ಮುನಿಗಳು ಬಂದು ಅದನ್ನು ತಣ್ಣೀರಿಂದ ತೊಳೆಸಲು ಅದು ಕೂಡಲೇ ನೂರೊಂದು ಚೂರಾಯಿತು. ಅವುಗಳೊಂದೊಂದನ್ನೂ ಬೇರೆ ಬೇರೆಯಾಗಿ ತುಪ್ಪದ ಗಡಿಗೆಯಲ್ಲಿ ಇಡಿಸಿದರು. ಅವು ಕ್ರಮೇಣ ಮಕ್ಕಳಾಗುತ್ತಾ ಬಂದುವು ಮೊದಲನೆಯವನೇ ದುರ್ಯೋಧನ. ಅವನ ಹಿಂದೆ ಒಬ್ಬೊಬ್ಬರಾಗಿ ಒಂದು ತಿಂಗಳೊಳಗೆ ಇನ್ನು ನೂರು ಜನ ಹುಟ್ಟಿದರು.

ಮಾದ್ರಿ : ವಿಚಿತ್ರವಾಗಿದೆ.

ಪಾಂಡು : ಗಾಂಧಾರಿಯವರದು ಒಂದು ರೀತಿ ವಿಚಿತ್ರವೇ. ಆದರೆ, ನಮ್ಮ ಕುಂತಿಗೆ ಎರಡನೇ ಮಗುವಿನಿಂದ ವಿಚಿತ್ರ ಗೊತ್ತೇ?

ಸೇವಕ : ಅದೇನು ಪ್ರಭು?

ಪಾಂಡು : ಯುದಿಷ್ಠಿರ ಹುಟ್ಟಿದ ಮೇಲೆ ನಾನು ಕುಂತಿಯನ್ನು ಈ ಮಗ ನೇನೋ ಧಾರ್ಮಿಕನಾದನು. ಆದರೆ ಕ್ಷತ್ರಿಯರಿಗೆ ಪ್ರಾಶಸ್ತ್ಯವಿರುವುದು ಬಲದಿಂದ, ಆದ್ದರಿಂದ ಬಲಶಾಲಿಯಾದ ಒಬ್ಬ ಮಗನನ್ನು ಪಡೆದಳು. ಅವನು ಹುಟ್ಟಿದಾಗ ಒಂದು ಅದ್ಭುತ ನಡೆಯಿತು

ಸೇವಕ : ಏನು ಪ್ರಭು?

ಪಾಂಡು : ಅವನು ತಾಯಿಯ ತೊಡೆಯ ಮೇಲಿಂದ ಕೆಳಗಿದ್ದ ಒಂದು ಬಂಡೆಯ ಮೇಲೆ ಉರುಳಲು ಮಗುವಿಗೆ ಪೆಟ್ಟಾಗುವುದಕ್ಕೆ ಬದಲು ಆ ಕಲ್ಲೇ ನುಚ್ಚು ನೂರಾಯಿತು.

ಸೇವಕ : ಅಬ್ಬಬ್ಬಾ... ಏನು ಶಕ್ತೀನಪ್ಪಾ ಈಗ್ಲೇ? ಇನ್ನು ಬೆಳೆದ ಮೇಲೆ ಹ್ಯಾಗೆ ಪ್ರಭು? ದುರ್ಯೋಧನ ಕೂಡಈ ಭೀಮಪ್ಪ ಹುಟ್ಟಿದ ದಿನವೇ ಹುಟ್ಟಿದ್ದಾನೆ. ಪ್ರಭು... ಆತನು ಬಲು ಬಿರುಸಾಗಿಯೇ ಇದ್ದಾನೆ.

ಪಾಂಡು : ಹೂಂ... ಹಣ್ಣು ತೆಗೋ... ನಮ್ಮ ಮಕ್ಕಳು ಹುಟ್ಟಿದುದಕ್ಕೆ...

ಸೇವಕ : ಆಗಲಿ ಪ್ರಭು... ನಾನಿನ್ನು ಹಸ್ತಿನಾವತಿಗೆ ತೆರಳುತ್ತೇನೆ.

ಪಾಂಡು : ಆಗಲಿ...

ಕುಂತಿ : ಎಲ್ಲರನ್ನೂ ನಾವೆಲ್ಲಾ ಕೇಳಿದೆವು ಎಂದು ತಿಳಿಸು.

ಸೇವಕ : ಚಿತ್ತ ತಾಯೇ.

* * *

ಪಾಂಡು : ಕುಂತೀ... ದೇವರ ಪೂಜೆಯಾಯಿತೇ?

ಕುಂತಿ : ಆಯ್ತು ಪ್ರಭು...

ಪಾಂಡು : ಈಗ ಏನು ಕೇಳಿಕೊಳ್ಳುವುದಾಯ್ತು.

ಕುಂತಿ : ಎಲ್ಲರಿಗೂ ಒಳ್ಳೆಯದನ್ನು ಮಾಡಪ್ಪಾ... ಎಂದು ಕೇಳಿಕೊಂಡ ಹಾಗಾಯ್ತು.

ಪಾಂಡು : ಅಲ್ಲ ಮಕ್ಕಳು...

ಕುಂತಿ : ಇದೇನು, ಮಕ್ಕಳ ಆಸೆ ಇನ್ನು ನಿಮಗೆ ಮುಗಿಯಲಿಲ್ಲವೇ? ಕೆಲವು ದಿನಗಳ ಹಿಂದೆ ಲೋಕೋತ್ತರನಾದ ಮಗಬೇಕು ಎಂದು ದೇವತೆಗಳ ರಾಜನಾಜ ಇಂದ್ರ ಅತಿಶಯವಾದ ಬಲ ಉತ್ಸಾಹ ಕಾಂತಿಯುಳ್ಳವನು, ಅವನನ್ನು ಮೆಚ್ಚಿಸಿದರೆ ಶೂರನಾದ ಮಗನನ್ನು ಪಡೆಯಬಹುದೆಂದು ಯೋಚಿಸಿ, ನಾನು ನೀವು ಒಂದು ವರ್ಷ ನಿಯಮದಲ್ಲಿದ್ದು ಅವನನ್ನು ಪ್ರಸನ್ನನಾಗಿ ಮಾಡಿಕೊಂಡು ಮಾಹಾ ತೇಜಶ್ಯಾಲಿಯಾದ ಅರ್ಜುನನ್ನೂ ಪಡೆಯಲಿಲ್ಲವೇ?

ಪಾಂಡು : ಅದರೇನು ಮತ್ತೊಬ್ಬ ಪುತ್ರನಾದರೆ ಕೇಡೇ? ಮಳೆ ಬಿದ್ದರೆ ಕೇಡೇ? ಮಕ್ಕಳಾದರೆ ಕೇಡೇ? ಗಾಂಧಾರಿ ನೂರೊಂದು ಮಕ್ಕಳನ್ನು ಪಡೆದಿಲ್ಲವೇ?

ಕುಂತಿ : ಮಾಹಾಪ್ರಭು ಇದನ್ನು ನಾನು ಒಪ್ಪುವುದಿಲ್ಲ. ಆಕೆಗೆ ನೂರೊಂದು ಮಕ್ಕಳಾದರೇನು ಪ್ರಯೋಜನ? ಮುತ್ತಿನಂಥ ಮೂರೇ ಮಕ್ಕಳುಸಾಕು ಮೂರು ಮಕ್ಕಳಿಗಿಂತ ಹೆಚ್ಚಾಗಿ ಯಾವ ಧರ್ಮವೂ ಒಪ್ಪುವುದಿಲ್ಲ. ಆದ್ದರಿಂದ ನಾಲ್ಕನೆಯ ಮಗನನ್ನು ಪಡೆದರೆ ನಾನು ಸ್ವೇಚ್ಛಾಚಾರಣಿಯಾದೇನು?

ಪಾಂಡು : ಹಾಗಾದರೆ ಬೇಡವೇ?

ಕುಂತಿ : ಖಂಡಿತಬೇಡ...

ಪಾಂಡು : ಮಾದ್ರಿ ಏಕೆ ತುಂಬಾ ಯೋಚನೆ ಮಾಡ್ತಾ ಕುತಿಳಿದ್ದೀಯಲ್ಲಾ? ಕಾರಣವೇನು?

ಮಾದ್ರಿ : ಪ್ರಭು...

ಪಾಂಡು : ಏನು ಮಾತಾಡು ರಾಣಿ...

ಮಾದ್ರಿ : ನಿಮ್ಮಲ್ಲಿ ಹೇಳಲಿಕ್ಕೆ ನನಗೇನು ಹೇಳುತ್ತನೆ ಕೇಳಿ, ಸವತಿಯ ಕೈ ಕೆಳಗಿದ್ದೇನಲ್ಲಾ ಎಂದಾಗಲಿ ನನಗೆ ಕೊರಗಿಲ್ಲ. ಗಂಧಾರಿಗೆ ನೂರೊಂದು ಮಕ್ಕಳಾದವು. ಅದಕ್ಕೂ ನಾನು ಯೋಚಿಸುವುದಿಲ್ಲ ಆದರೆ ಕುಂತಿಗೆ ಮಕ್ಕಳಾದವು ಒಂದಲ್ಲ ಮೂರು. ಆಕೆಗೆ ಸರಿಮಳಾದ ನನಗೆ ಮಕ್ಕಳಿಲ್ಲ ಎಂಬುದೇ ಕೊರಗಾಗಿದೆ.

ಪಾಂಡು : ಅದು ನನಗೆ ಗೊತ್ತು ಮಾದ್ರಿ. ಆದರೆ... ಇದಕ್ಕೆ ಕುಂತಿ ಮನಸ್ಸು ಮಾಡಿದರೆ ಆದೀತು.

ಮಾದ್ರಿ : ಈ ವಿಷಯವನ್ನು ನಾನು ಆಕೆಯಲ್ಲಿ ಕೇಳಲು ಬಾಯಿ ಬರದು. ನೀವೇ ದೊಡ್ಡ ಮನಸ್ಸು ಮಾಡಿದರೆ ನನಗೂ ಮಕ್ಕಳಾಗುವುವು.

ಪಾಂಡು : ನನಗೂ ಈ ವಿಷಯ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಆದರೆ ನಿನ್ನ ಮನಸ್ಸು ಹೇಗೋ ಎಂದು ಸುಮನಿದ್ದೆ. ನಾನು ಹೇಳಿದರೆ ಕುಂತಿ ನನ್ನ ಮಾತು ನಡೆಸಿಕೊಡುತ್ತಾಳೆ.

ಕುಂತಿ : ಏನು ಪ್ರಭು ನಡೆಸಿಕೊಡುವುದು?

ಪಾಂಡು : ನನ್ನ ಮಾತನ್ನು.

ಕುಂತಿ : ಏನು ಹೇಳಿ

ಪಾಂಡು : ನೀನಾದರೂ ಮೂರು ಮಕ್ಕಳನ್ನು ಹಡೆದು ಸಂತೋಷವಾಗಿ ತಾಯಿಯಾದ. ಆದರೆ ನಿನ್ನ ಸವತಿಯ ಕಡೆ ಗಮನವೇ ಇಲ್ಲವಲ್ಲಾ...

ಕುಂತಿ : ಆಕೆ ಒಪ್ಪಿದರೆ ಮಂತ್ರೋಪದೇಶವನ್ನು ಹೇಳಿ ಕೊಡುತ್ತೇನೆ.

ಪಾಂಡು : ಆಗತ್ಯವಾಗಿ ಅದಕ್ಕಾಗಿ ಅವಳು ಕಾದಿದ್ದಾಳೆ.

ಮಾದ್ರಿ : ಹೌದು ಅಕ್ಕ...

ಕುಂತಿ : ಮಾದ್ರಿ ಈ ಮಂತ್ರದ ಉಪದೇಶ ನೀಡುತ್ತಿದ್ದೇನೆ. ಅಶ್ವಿನೀ ದೇವತೆಯನ್ನು ನೆನೆ. ಅದರಿಂದ ನಿನಗೆ ಸಂತಾನವಾಗುತ್ತದೆ.

ಮಾದ್ರಿ : ಆಗಲಿ ಅಕ್ಕ... ನಿಮ್ಮ ತ್ಯಾಗಕ್ಕೆ ಹೇಗೆ ನಾನು ವಂದಿಸುವುದೋ ತಿಳಿಯದು.

ಕುಂತಿ : ಅಷ್ಟೇನು ಹಿರಿಮೆ ನನಗೆ ಬೇಡ ತಾಯಿ ಎಲ್ಲಾ ಆ ದೂರ್ವಾಸರ ಮಂತ್ರೋಪದೇಶದ ಪ್ರಭಾವ, ಅವರಿಗೆ ನಮಿಸುವುದು ಒಳಿತು.

ಪಾಂಡು : ಆದರೆ ಆ ಮಂತ್ರೋಪದೇಶವನ್ನು ಬೇರೆಯವರಿಗೆ ನೀಡಲು ಒಳ್ಳೆಯ ಮನಸ್ಸು ಬೇಕಲ್ಲ. ಅದಕ್ಕಾಗಿ ನಿನಗೆ ವಂದನೆಗಳನ್ನು ನೀಡುತ್ತಿದ್ದಾಳೆ.

ಮಾದ್ರಿ : ಹೌದು.....

* * *

ಪಾಂಡು : ಕುಂತೀ.....

ಕುಂತಿ : ಏನು ಪ್ರಭು ?

ಪಾಂಡು : ನೀನೇನೋ ಮಕ್ಕಳು ಸಾಕು ಎಂದೆ. ಆದರೆ ಮಾದ್ರಿಗೆ ಆದರೆ ಮತ್ತೊಂದು ಸಂತಾನಬೇಡವೆ?

ಕುಂತಿ : ಪ್ರಭೂ... ಆಕೆಯು ಅಶ್ವಿನೀ ದೇವತೆಯ ಪ್ರಭಾವದಿಂದ ಸುಂದರವಾದ ಅವಳಿ ಮಕ್ಕಳಾದ ನಕುಲ ಸಹದೇವರಿಗೆ ಜನ್ಮವಿತ್ತಳು. ಎರಡು ಮಕ್ಕಳಿಗಿಂತ ಬೇಕೇ? ಇನ್ನು ಮಕ್ಕಳಾಗುವ ವಿಚಾರವನ್ನು ಎತ್ತಬೇಡಿ.

ಪಾಂಡು : ಅಷ್ಟೇನಾ ?

ಕುಂತಿ : ಹೌದು.

* * *

ಪಾಂಡು : ಮಾದ್ರಿ..... ಸ್ವಲ್ಪ ತಿರುಗಾಡಿಕೊಂಡು ಬರೋಣವೇ?

ಮಾದ್ರಿ : ಆಗಲಿ ಪ್ರಭೂ.....

ಪಾಂಡು : ಈ ವಸಂತ ಋತುವಿನಲ್ಲಿ ಈ ವನವು ಅತ್ಯಂತ ಸುಂದವಾಗಿ ಕಾಣುತ್ತಿದೆ. ಮುತ್ತುಗ, ತಿಲಕ, ಮಾವು, ಸಂಪಿಗೆ, ತಾವರೆ ಮುಂತಾದ ಪುಷ್ಪಗಳು, ಎಷ್ಟು ಸೊಗಸಾಗಿವೆ. ಅವುಗಳನ್ನು ನೋಡುತ್ತಿದ್ದರೆ ಹಾಗೆಯೇ ಇಲ್ಲೇ ಇರೋಣ ಅನ್ನಿಸುತ್ತದೆ ಅಲ್ಲವೇ ಮಾದ್ರಿ.

ಮಾದ್ರಿ : ಹೌದು ಈ ಪ್ರಶಾಂತ ಪ್ರದೇಶ, ಏಕಾಂತ ಸ್ಥಳ.... ಅಲ್ಲಾ.... ಎಂಬ ರತಿ ಮನ್ಮಥರನ್ನೂ ಸೂರೆಗೊಳ್ಳುವುದು.... ನನಗೂ ಏಕೋ ಒಂದು ಥರ ಆಗುತ್ತಿದೆ. ದೇಹದಲೆಲ್ಲಾ ಅನುರಾಗ ಸಂಚಾರವಾಗುತ್ತಿದೆ. ಈ ಅನುರಾಗ ಹೆಚ್ಚಿ ದೇಹವನ್ನೆಲ್ಲಾ ಪಬ್ಬಿದೆ. ನಾನು.... ಇದನ್ನು..... ಸಹಿಸಲಾರೆ.... ಬಾ..... ಮಾದ್ರಿ..... ನನ್ನ ಹತ್ತಿರ ಬಾ....

ಮಾದ್ರಿ : ಪ್ರಭೂ ಬಿಡಿ ಬಿಡಿ.... ನನ್ನನ್ನೂ ಬಿಡಿ.... ಅಯ್ಯೋ ಅಯ್ಯೋ.... ಪ್ರಭೂ.... ಪ್ರಭೂ.... (ಚೀರುವಳು) ಮಾತಾಡಿ.....

ಕುಂತಿ : ಮಾದ್ರೀ.... ಮಾದ್ರೀ.... ಏನಾಯ್ತು?

ಮಾದ್ರಿ : ಕುಂತೀ ಮಕ್ಕಳನ್ನು ಅಲ್ಲೇ ಇರಿಸಿ ನೀನೊಬ್ಬಳು ಮಾತ್ರ ಬಾ....

ಕುಂತಿ : ಅಯ್ಯೋ.... ಕೆಟ್ಟವೇ ಅಯ್ಯೋ ಪ್ರಭೂ ..... ಮಾದ್ರಿ ಎಂಥ ಕೆಲಸ ಮಾಡಿಬಿಟ್ಟೆ..... ನಾನು ಅವರನ್ನು ಯಾವಾಗಲೂ ರಕ್ಷಿಸಿಕೊಂಡಿರುತ್ತಿದ್ದೆ. ಋಷಿ ಶಾಪ ತಿಳಿದಿದ್ದರೂ, ನೀನು ಹೀಗೆ ವರ್ತಿಸಿದೆಯಾ? ರಾಜನನ್ನು ಕಾಪಾಡಿಕೊಳ್ಳುವುದು ಬೇಡವೇ ಮಾದ್ರಿ.....?

ಮಾದ್ರಿ : ನನಗೆ ಏಕಾಂತದಲ್ಲಿ ಹರ್ಷವುಂಟಾಗಲಿಲ್ಲ.... ನಾನೆಷ್ಟು ತಡೆದರೂ ಸುಮ್ಮನಾಗಲಿಲ್ಲ. ವಿಧಿಪ್ರೇರಿತರಾಗಿಯೇ ಹಾಗೆ ನಡೆದುಕೊಂಡರು.

ಕುಂತಿ : ಮಹಾರಾಜರ ನಗುಮುಖವನ್ನು ಕಂಡ ನೀನೆ ಧನ್ಯೆ. ನಾನು ನನ್ನ ಪತಿಯೊಡನೆ ಹೋಗುತ್ತೇನೆ. ನಾನು ಆತನ ಹಿರಿಯ ಸತಿ. ಧರ್ಮಫಲ ನನ್ನದು. ನನ್ನನ್ನು ಅಡ್ಡಿಪಡಿಸಬೇಡ. ನಾನು ಪತಿಯೊಡನೆ ಸಹ ಗಮನ ಮಾಡಿಕೊಳ್ಳುತ್ತೇನೆ.

ಮಾದ್ರಿ : ಇಲ್ಲ, ನಾನು ಕಿರಿಯರಳು.... ನನ್ನ ಆಸೆ ಇನ್ನೂ ತೀರಿಲ್ಲ. ಆದ್ದರಿಂದ ಹಿರಿಯಳಾದ ನೀನು ನನಗೆ ಅನುಮತಿಕೊಡು. ನನಗಾಗಿ ಆಸೆಪಟ್ಟು ರಾಜರು

ಮೃತಿಹೊಂದಿದರು. ಆದ್ದರಿಂದ ನಾನೇ ಅವರ ಹತ್ತಿರಪಿರುವೆ. ನಿನ್ನ ಮಕ್ಕಳನ್ನು ನಾನು ನೋಡಿಕೊಳ್ಳುವುದಕ್ಕಿಂತ ನೀನು ನನ್ನ ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುತ್ತೀಯ. ನಾನೇ ಚಿತೆಗೆ ಹಾರುತ್ತೇನೆ.

ಕುಂತಿ : ಅಯ್ಯೋ.... ಪ್ರಭೂ.... ಪಾಂಡು.... ಮಹಾರಾಜಾ.... ಮಾದ್ರಿ.... ನಿಮ್ಮಿಬ್ಬರ ಮರಣವನ್ನು ನೋಡುವ ವಿಧಿಯು ನನಗಾಯಿತೇ? ಮುತ್ತೈದೆತನವೂ ಹೋಯಿತೇ? ನಮ್ಮ ಮಕ್ಕಳು ತಬ್ಬಲಿಯಾಗ ಬೇಕಾಯಿತೇ? ಅಯ್ಯೋ..... ಪಾಂಡುಮಹಾರಾಜಾ.... ಮಾದ್ರಿ ನನಗೆ ಮೂರೇ ಮಕ್ಕಳು ಸಾಕೆಂದು ಹೇಳಿದ್ದೆ. ಅದಕ್ಕೆ ಒಪ್ಪಿ ಸುಮ್ಮನಾಗಿದ್ದರು. ನಿನಗೆ ಎರಡು ಮಕ್ಕಳಾಗಿದ್ದುವು. ಇಬ್ಬರು ಹೆಂಡತಿಯರಿಗೂ ಎರಡು ಮೂರು ಮಕ್ಕಳು ಸಾಕಾಗುತ್ತಿರಲಿಲ್ಲವೇ? ಮಕ್ಕಳ ಆಸೆಯಿಂದ ಅತಿಕಾಮದಿಂದ, ನನ್ನ ನಿರ್ಧಾರವನ್ನು ಮುರಿದುದಕ್ಕೆ ನನ್ನ ಮುತ್ತೈದೆತನವು ಹೋಯಿತು. ಸ್ವೇಚ್ಛಾಚಾರವಾದುದೇ ಅವರ ಮರಣಕ್ಕೆ ಕಾರಣ ಆಯಿತು. ಎಷ್ಟು ಹೇಳಿದರೂ ಕೇಳದೆ ಕಾಮಕ್ಕೆ ತುತ್ತಾದರು. ನಿಮ್ಮಿಬ್ಬರ ದೇಹವು ಈ ಚಿತೆಯಲ್ಲಿ ಬೂದಿಯಾಗುವುದನ್ನು ನಾನು ನೋಡಬೇಕಾಯಿತೇ? ಅಯ್ಯೋ ವಿಧಿಯೇ?

*

## ಐತಿಹಾಸಿಕ

# ಅಲಮೇಲಮ್ಮ

**ಪಾತ್ರ ವರ್ಗ**

೧. ಅಲಮೇಲಮ್ಮ - ಶ್ರೀರಂಗರಾಜರ ಹೆಂಡತಿ ೨. ವೀರರರಾಜಮ್ಮಣ್ಣಿ - ರಾಜಒಡೆಯರ ಹೆಂಡತಿ ೩. ರಾಜಒಡೆಯರು - ಶ್ರೀರಂಗಪಟ್ಟಣದ ಪ್ರಭುಗಳು ೪. ಇಬ್ಬರು ರಾಜಭಟ್ಟರು - ೫. ರಾಜಗುರುಗಳು -

(ತಲಕಾಡಿನ ಐತಿಹಾಸಿಕ ಹಿನ್ನೆಲೆಯಮೇಲೆ ರಚಿತವಾದ ಶ್ರವ್ಯ ನಾಟಕ ಇದು)

## ದೃಶ್ಯ-೧

(ಅರಮನೆಯಲ್ಲಿ ರಾಜ ಒಡೆಯರು ಸಭಾಲಂಕೃತರಾಗಿರಲು ಅಲ್ಲಿಗೆ ತಳವಾರರು ಬರುವರು)

ರಾಜಒಡೆಯರು: ಯಾರದು ?

ರಾಜಭಟ್ಟರು : ನಾವು ಪ್ರಭು ಸೇವಖರು, ಇದೀಗ ತಾನೇ ತಲಕಾಡಿನಿಂದ ಬಂದೆವು.

ರಾಜಒಡೆಯ : ಹೋದ ವಿಚಾರವೇನಾಯ್ತು ?

ರಾಜಭಟ : (ದುಃಖಿತನಾಗಿ) ಎರಡನೆಯ ಸಾರಿ ನಾವು ಹೋಗಿ ವಿಚಾರವನ್ನು ತಿಳಿಸುವಾಗ, ಅಲಮೇಲಮ್ಮನವರು ಪ್ರಶಾಂತವಾದ ತಲಕಾಡಿನ ವೈದ್ಯೇಶ್ವರ ದೇವಾಲಯದ ಮುಂಭಾಗದಲ್ಲಿ ಅಲಂಕಾರ ರಹಿತವಾಗಿ ಕಲ್ಗೊಂಬೆಯಂತೆ ಕುಳಿತಿದ್ದರು. ನಾವಿಬ್ಬರೂ ದೂರದಿಂದ ನಿಂತು ನೋಡಿ-

೧ನೇ ಭಟ : ಏನಿದು ಅಲಮೇಲಮ್ಮ ಮಹಾರಾಣಿಯವರು ಶಿಲೆಯಂತೆ ಕುಳಿತಿದ್ದಾರಲ್ಲ?

೨ನೇ ಭಟ : ಪತಿಯನ್ನು ಕಳೆದುಕೊಂಡು ಬಹಳ ದುಃಖದ ಸ್ಥಿತಿಯಲ್ಲಿ ಕುಳಿತಿದ್ದಾರೆ. ಅವರನ್ನು ಮಾತನಾಡಿಸುವುದಾದರೂ ಹೇಗೆ?

೧ನೇ ಭಟ : ಹೌದು ನನಗೂ ಹಾಗೆ ಅನ್ನಿಸುತ್ತದೆ, ಆದರೂ ರಾಜಾಜ್ಞೆಯನ್ನು ಮೀರುವಂತಿಲ್ಲ.

ಅಲಮೇಲಮ್ಮ : ಯಾರದು ?

೧ನೇ ಭಟ : ನಾವು ಶ್ರೀರಂಗಪಟ್ಟಣದಿಂದ ಬಂದಿರುವ ರಾಜಭಟರುಗಳು ತಾಯೇ...

ಅಲಮೇಲಮ್ಮ : ತಾವು ರಾಜಭಟರುಗಳಲ್ಲ, ನನ್ನ ಭಾಗಕ್ಕೆ ಯಮಭಟರುಗಳಾಗಿ ಕಾಣುತ್ತೀರಿ.

೨ನೇ ಭಟ : ಏಕೆ ತಾಯೇ ನಾವು ಹಾಗೆ ಕಾಣುತ್ತಿದ್ದೇವೆಯೇ?

ಅಲಮೇಲಮ್ಮ : ಹೌದು.... ಮತ್ತೆ ಏಕೆ ಬಂದಿರಿ?

೧ನೇ ಭಟ : ರಾಜಒಡೆಯ ಮಹಾಪ್ರಭುಗಳು ಮತ್ತೆ ಇಲ್ಲಿಗೆ ಕಳುಹಿಸಿದ್ದಾರೆ.

ಅಲಮೇಲಮ್ಮ : ಮಹಾ ಪ್ರಭುಗಳು ಹದುಳವಷ್ಟೇ?

೨ನೇ ಭಟ : ಅವರ ಕ್ಷೇಮಕ್ಕೇನು ಕಡಿಮೆ ಬಿಡಿ ತಾಯೆ.

ಅಲಮೇಲಮ್ಮ : ಈಗ ನಿರ್ಭಾಗ್ಯಳಿಂದ ಏನನ್ನರಸಲು ಬಂದಿರುವಿರಿ?

೧ನೇ ಭಟ : ಮಹಾಮಾತೆ, ಮಹಾಪ್ರಭುಗಳು ಮತ್ತೆ ಆಭರಣಗಳನ್ನು ತೆಗೆದುಕೊಂಡು ಬರುವಂತೆ ಆಜ್ಞೆ ಮಾಡಿದ್ದಾರೆ.

ಅಲಮೇಲಮ್ಮ : ಹ್ಞಾಂ ಆಜ್ಞೆ.

೨ನೇ ಭಟ : ಹೌದು ಮಹಾರಾಣಿಯವರೇ.

ಅಲಮೇಲಮ್ಮ : ಬೆನ್ನಫಣಿಯಿಂದ ನರಳುತ್ತಿದ್ದ ಪತಿಯನ್ನು ಕಳೆದುಕೊಂಡರೂ ಪಂಚಲಿಂಗೇಶ್ವರರ ಧ್ಯಾನವನ್ನು ಮಾಡುತ್ತಾ ಕಾಲ ಕಳೆಯುತ್ತಿರುವ ನನ್ನಿಂದ ಮತ್ತೆ ಆಭರಣ ತೆಗೆದುಕೊಂಡು ಬನ್ನಿರೆಂದು ಆಜ್ಞಾಪಿಸಿದ್ದಾರೆಯೆ? ಅಂದು ನಾನು ಹೇಳಿದುದನ್ನು ನೀವು ರಾಜರಲ್ಲಿ ಬಿನ್ನೈಸಿಕೊಳ್ಳಲಿಲ್ಲವೇ?

೧ನೇಭಟ : ಹೇಳಿದೆವು ತಾಯೆ.... ಆದರೂ....

ಅಲಮೇಲಮ್ಮ : ತರಲೇಬೇಕೆಂದು ಆಜ್ಞಾಪಿಸಿದ್ದಾರೆ ಅಲ್ಲವೇ/

೨ನೇ ಭಟ : ಹೌದು ಮಹಾಮಾತೆ. ತಪ್ಪು ನಮ್ಮದಲ್ಲವ್ವ.

ಅಲಮೇಲಮ್ಮ : (ದುಗುಡದಲ್ಲಿ) ಪಾಪ, ಅದರಲ್ಲಿ ನಿಮ್ಮದೇನಿದೆ ತಪ್ಪು? ನಿಮ್ಮ ರಾಜನಲ್ಲೇನಿದೆ ತಪ್ಪು? ತಪ್ಪು ನಮ್ಮದಾಯ್ತು ಅಷ್ಟೆ. 'ಉಂಡ ಮನೆಗೆ ಎರಡು ಬಗೆಯುವರುಂಟೆ? ಸಕಲ ಸಾಮ್ರಾಜ್ಯವನ್ನೇ ಧಾರೆಯೆರೆದು ಸಿಂಹಾಸನದ ಮೇಲೆ ಕುಳ್ಳಿರಿಸಿ ಕಿರೀಟಧಾರಣೆ ಮಾಡಿಸಿದುದು ನಮ್ಮ ತಪ್ಪು. ನನ್ನ ಪತಿ ಶ್ರೀರಂಗರಾಯರ ತಪ್ಪು. ಈಗ ನನ್ನನ್ನು ರಾಜಒಡೆಯರು ಅಷ್ಟಮದಗಳಿಂದ ಮೆರೆಯುತ್ತಾ ತಮಿಷ್ಟ ಬಂದಂತೆ

ವರ್ತಿಸುತ್ತಿರುವವೇ? ಉಪ್ಪಿಕ್ಕಿದ್ದವರನ್ನು ಮುಪ್ಪಿನತನಕ ನೆನೆಯುವ ಬದಲು ಹೀಗೆ ಮಾಡುವುದುಂಟೇ? ದೈವೇಚ್ಛೆ ಇದ್ದಂತೆ ಆಗಲಿ ಬಿಡಿ ನೀವೇಕೆ ಕಣ್ಣೀರುಗರೆಯುತ್ತಿರುವಿರಿ? ಕಣ್ಣೀರಲ್ಲಿ ಕೈತೊಳೆಯ-ಬೇಕಾಗಿರುವವಳು ಅಲಮೇಲಮ್ಮ ನೀವಲ್ಲ ರಾಜಭಟರೇ ನೀವಲ್ಲ.

೨ನೇ ಭಟ : ತಾಯೇ ತಾವು ಸಹ ಮಹಾರಾಜರ ಕೈ ಹಿಡಿದು ಅರಮನೆಯ ಅಂತಃಪುರವನ್ನು ಬಿಟ್ಟು, ಈ ತಲಕಾಡಿನಲ್ಲಿನ ಗುಡಿಸಲಲ್ಲಿದ್ದೀರಿ. ಅಂತಹುದುದರಲ್ಲೂ ರಾಜರು ಹೀಗೆ ಬಲವಂತದಿಂದ ಮೂಗುತಿಯನ್ನು ತನ್ನಿ ಎಂದಿರುವುದು ನಿಜಕ್ಕೂ ನಮಗೂ ದುಃಖವನ್ನು ತಂದಿದೆ ತಾಯೇ. ತಮ್ಮಿಂದ ಬಲವಂತ ಮಾಡಿ ತೆಗೆದುಕೊಳ್ಳಲು ನಮಗೂ ಮನಸ್ಸು ಬರುತ್ತಿಲ್ಲ ಮಹಾತಾಯೆ.

ಅಲಮೇಲಮ್ಮ : (ಹುಸಿನಗುವಿನಿಂದ) ಭಟರೇ ನನಗೆ..... ನನ್ನಾಭರಣಕ್ಕೆ ನೀವೇಕೆ ಕಷ್ಟಪಡಬೇಕು? ಅಯ್ಯೋ ಹುಚ್ಚು ರಾಜಒಡೆಯಾ ನನ್ನ ಅನ್ನ ತಿನ್ನುವ ನಿನಗೆ ಇಷ್ಟೊಂದು ನಿಷ್ಕರುಣೆ ಬಂತೇ? ನಿನಗೆ ಸಕಲ ಸಾಮ್ರಾಜ್ಯವನ್ನು ಕೊಟ್ಟದಕ್ಕೆ ಪ್ರತಿಫಲವಾಗಿ ಈ ಕಟ್ಟಾಜ್ಞೆಯೇ? ಪತಿಯನ್ನು ಕಳೆದುಕೊಂಡ ನನ್ನ ದುಃಖ ಹೊಟ್ಟೆಯಲ್ಲಿ ಸುಣ್ಣ ಕುದಿಯುವಂತೆ ಕುದಿಯುತ್ತಿದೆ. ಅದರ ಜೊತೆಗೆ ಇದನ್ನು ತಂದೊಡ್ಡಿದೆಯಾ? ನಿನ್ನ ಗರ್ವ, ಐಶ್ವರ್ಯಗಳು ಎಷ್ಟು ದಿನಗಳತನಕ? ನಿನಗೆ ಸಕಲ ಸಾಮ್ರಾಜ್ಯವೂ ಸಾಲದೆ? ಈ ಅಲ್ಪ ಐಶ್ವರ್ಯಕ್ಕಾಗಿ ಆಸಿಸಿ ಅಲ್ಪನಾದೆಯಾ? ನಾನೂ ಕೂಡ ಮಹಾಪ್ರಭು ಶ್ರೀರಂಗರಾಯರ ಹೆಂಡತಿ..... ಮಹಾರಾಣಿ ಅಲಮೇಲಮ್ಮ ನನ್ನಲ್ಲೂ ಅರಸು ಛಲಗಳಿವೆ.

೨ನೇ ಭಟ : ಮಹಾರಾಣಿಯವರೇ ತಾವು ಹೇಳುತ್ತಿರುವುದು ಸತ್ಯವೇ ಸರಿ. ಆದರೆ ಈ ಅಲ್ಪ ಕಾರ್ಯಕ್ಕೆ ತಾವು ಇಷ್ಟೊಂದು ಯೋಚಿಸಬೇಕಾಗಿಲ್ಲ ತಾಯೇ

ಅಲಮೇಲಮ್ಮ : ಭಟರೇ ನನಗೆ ಈ ಆಭರಣಗಳೇನೂ ದೊಡ್ಡವಲ್ಲ. ನನ್ನ ರೂಪಾಲಂಕಾರಕ್ಕೆ ಕಾರಣವಾದ ದೊಡ್ಡ ಆಭರಣವನ್ನೇ ಕಳೆದುಕೊಂಡಿರುವ ನನಗಿವಾವ ಹೆಚ್ಚು? ನಾನು ಇದಕ್ಕೆ ಯೋಚಿಸುತ್ತಿಲ್ಲ. ರಾಜನ ಕೃತ್ರಿಮಕ್ಕೆ, ದುರಾಸೆಗೆ, ಅಷ್ಟಮದಗಳಿಗೆ ಅಯ್ಯೋ ಎನಿಸುತ್ತದೆ.

೧ನೇ ಭಟ : ಬಿಡಿ ತಾಯೇ ಇನ್ನೇಕೆ?

ಅಲಮೇಲಮ್ಮ : ಹುಟ್ಟುಛಲ, ವೀರತ್ವ ನನ್ನಲ್ಲಿಯೂ ತುಂಬಿದೆ... ಬನ್ನಿ ನನ್ನ ಹಿಂದೆ ಆಭರಣಗಳನ್ನು ಕೊಡುತ್ತೇನೆ.

೨ನೇ ಭಟ : ಏಕೆ ತಾಯೇ ಆಭರಣಗಳು ಆಶ್ರಮದಲ್ಲಿವೆಯಾ?

ಅಲಮೇಲಮ್ಮ : ಹೌದು.... ಬನ್ನಿ.... ನನ್ನ ಹಿಂದೆ....

೧ನೇಭಟ : ಅಪ್ಪಣೆ ಮಹಾತಾಯೇ

(ಮೂವರೂ ಹೊರಡುತ್ತಿರಲು ದೂರದಲ್ಲಿನ ಕಾವೇರಿ ಕಂಡು)

೨ನೇ ಭಟ : (ಮೆಲ್ದನಿಯಲ್ಲಿ ಮತ್ತೊಬ್ಬನನ್ನುದ್ದೇಶಿಸಿ) ಕಾವೇರಿನದಿಯ ಹತ್ತಿರ ಹೋಗುವಂತೆ ಕಾಣುತ್ತಿದೆಯಲ್ಲಾ.

೧ನೇ ಭಟ : ಅತ್ತ ಕಡೆಯೇ ಹೋಗುತ್ತಿರುವುದು, ಏನು ಕಣೆ ಕೇಳುತ್ತೀಯಾ?

೨ನೇ ಭಟ : ಏಕೆ?

೧ನೇ ಭಟ : ಕೇಳು, ನನ್ನನ್ನೇನು ಕೇಳುತ್ತೀಯಾ?

೨ನೇ ಭಟ : ಓಹ್..... ಏಕೆ ತಾಯೆ ಇತ್ತ.... ನಿಂದಿರಿ.

ಅಲಮೇಲಮ್ಮ : ಇದು ತಲಕಾಡಿನ ಹತ್ತಿರದ ಮಾಲಂಗಿ. ಇದೋ ಇಲ್ಲೇ ನನ್ನ ಆಶ್ರಮವಿರುವುದು. ಇಲ್ಲಿಯೇ ನಾನು ನಿತ್ಯ ನಿರಂತರವಾಗಿ ಕಾಲ ಕಳೆಯಬೇಕೆಂದಿರುವ. ಬನ್ನಿ....ಇಗೋ ಮೂಗುತಿಯನ್ನು ತೆಗೆದುಕೊಳ್ಳಿ. ಇದನ್ನು ಕೊಡುತ್ತಿರುವುದು ರಾಜಒಡೆಯರಿಗಲ್ಲ. ಅವರ ಕಟ್ಟಾಜ್ಞೆಗಲ್ಲ, ದೇವಿಗೋಸ್ಕರ.... ಇದನ್ನು ಈ ನನ್ನ ಕೊನೆಯ ಕಾಣಿಕೆಯನ್ನು ಮಹಾತಾಯಿಗೆ ಅರ್ಪಿಸಿಬಿಡಿ. ಇನ್ನು ನಿಮಗೆ ಪ್ರಾಣಭಯವಿಲ್ಲ. ನನಗೆ ಪ್ರಾಣದಾಸೆ ಇಲ್ಲ.

೧ನೇ ಭಟ : (ಮೆಲ್ದನಿಯಲ್ಲಿ) ಸೀರೆಯ ಸೆರಗಿನಲ್ಲಿ ಆಭರಣಗಳೆಲ್ಲವನ್ನೂ ಕಟ್ಟಿಕೊಂಡರು.

೨ನೇ ಭಟ : ಕಣ್ಮುಚ್ಚಿ ದೇವಿಗೆ ಕೈ ಮುಗಿಯುತ್ತಿರಬಹುದು.

೧ನೇ ಭಟ : ಹೌದು.

ಅಲಮೇಲಮ್ಮ : ಪಂಚಲಿಂಗೇಶ್ವರರೇ, ನಿಮ್ಮನ್ನು ಎಷ್ಟೇ ನಿಷ್ಠೆಯಿಂದ ಭಕ್ತಿಯಿಂದ ಪೂಜಿಸಿದರೂ ನನ್ನ ಮೇಲೆ ಕರುಣೆ ತೋರಲಿಲ್ಲ. ನಾನು ವಿಧವೆತನವನ್ನು ಅನುಭವಿಸಬೇಕಾಯಿತು, ಹ್ಞುಂ.... ನೀವು ಹೋಗಿ ಬನ್ನಿ ರಾಜಭಟರೇ.

ಇಬ್ಬರು : ಅಪ್ಪಣೆ ಮಹಾಮಾತೆ....

ಅಲಮೇಲಮ್ಮ : ಭವರೋಗ ವೈದ್ಯೇಶಾ, ನನ್ನ ಪತಿಯು ನನ್ನ ಭಾಗಕ್ಕೆ ಇಲ್ಲವಾದನೇ? ನನ್ನ ಅರಕೆಗಳಿಗೆ ಕರುಣೆ ತೋರದೆ ಕಠಿಣ ಹೃದಯನಾದೆಯಾ?

ಅರ್ಕೇಶ್ವರಾ? ನನ್ನಾಶಾಗೋಪುರಗಳನ್ನು ಮರುಳಲ್ಲಿ ಕಟ್ಟಿದಂತೆ ಮಾಡಿದೆಯಾ ಮರುಳೇಶ್ವರಾ? ನನ್ನ ಪತಿಯನ್ನು ಪಾತಾಳಕ್ಕೆ ತುಳಿದೆಯಾ ಪಾತಾಳೇಶ್ವರಾ, ನನ್ನ ಜೀವನವನ್ನೆಲ್ಲಾ ದುಃಖಮಯ ಮಾಡಿದೆಯಾ ಮಲ್ಲಿಕಾರ್ಜುನೇಶ್ವರಾ, ನನ್ನ ಜೀವನವನ್ನೇ ಕತ್ತಲು ಮಾಡಿದ ತಲಕಾಡೇ ಮರುಳಾಗು, ಎಲ್ಲರ ಜೀವನವನ್ನೂ ಸಂತೋಷಗೊಳಿಸಬೇಕಾದ ನೀನು ನನ್ನ ಭಾಗಕ್ಕೆ ದುಃಖವನ್ನೇ ಒದಗಿಸಿದ ಕಾವೇರಿ, ಈ ಮಾಲಂಗಿಯಲ್ಲಿ ನೀನು ಮಡುವಾಗು, ನನ್ನನ್ನು ನಿನ್ನಲ್ಲಿಗೆ ಕರೆದುಕೋ, ಒಪ್ಪಿಸಿಕೋ ಇಷ್ಟಕ್ಕೆಲ್ಲಾ ಕಾರಣ ಮೈಸೂರು ಅರಸರಿಗೆ ಮಕ್ಕಳಾ ಫಲವಿಲ್ಲದಾಗಲಿ. ಮಹಾತಾಯೇ ಕಾವೇರಿ ನನ್ನನ್ನು ಆದರಿಸಿ ಆಲಂಗಿಸಿಕೋ, ನಿನ್ನಲ್ಲಿ ಭದ್ರವಾಗಿ ಸೇರಿಸಿಕೋ. ತಾಯೇ ಭದ್ರವಾಗಿ ಸೇರಿಸಿಕೋ.

(ಕಾವೇರಿಗೆ ಮುಳುಗುತ್ತಿದ್ದಂತೆಯೇ)

೨ನೇ ಭಟ : ಅಲಮೇಲಮ್ಮನವರು..... ಕಾವೇರಿಗೆ ಬಿದ್ದುಬಿಟ್ಟರು..... ಕೊಚ್ಚಿಕೊಂಡು ಹೋಗೇಬಿಟ್ಟರು ಅಯ್ಯೋ......

೧ನೇ ಭಟ : ಅಯ್ಯೋ ಮಹಾರಾಜರು ಇದೊಂದು ಮೂಗುತಿಗಾಗಿ ಒಂದು ಪ್ರಾಣವನ್ನೇ ಕಳೆದರೇ?

೨ನೇ ಭಟ : ಅತ್ತ ನೋಡು ತಲಕಾಡು ಮರುಳಿನಲ್ಲಿ ಹೂತುಹೋಗ್ತಾ ಇದೆ....

೧ನೇ ಭಟ : ಇಂಥ ಪತಿವ್ರತಾ ತಾಯಿಯ ಕಣ್ಣೀರು ಬಿದ್ದರೆ ಸಾಮಾನ್ಯವೇ? ಆಕೆಯ ಶಾಪ ತಗುಲಿದೆಯೇ ಇರುತ್ತದೆಯೇ? ಅಂಥ ಮಹಾತಾಯಿಯ ದರ್ಶನವನ್ನು ಮಾಡಿದ ನಾವೇ ಧನ್ಯರು.... ನಡೆ...... ಬೇಗ ನಡೆ, ನಡೆದ ವಿಚಾರವನ್ನು ರಾಜರಿಗೆ ಅರಿಕೆ ಮಾಡಿಕೊಳ್ಳೋಣ.

(ಕುದುರೆ ಹತ್ತಿ ಇಬ್ಬರೂ ಹೊರಡುವರು)

## ದೃಶ್ಯ-೨

(ರಾಜಒಡೆಯರ ಆಸ್ಥಾನ. ರಾಜ ಒಡೆಯರು ಸಭಾಲಂಕೃತರಾಗಿರಲು ರಾಜಭಟರು ತಲಕಾಡಿನಿಂದ ಬರುವರು)

ರಾಜಒಡೆಯರು: ಯಾರದು?

ರಾಜಭಟರು : (ದುಗುಡದ ದನಿಯಲ್ಲಿ) ನಾವು ಪ್ರಭು, ತಲಕಾಡಿನಿಂದ ಬಂದೆವು, ತಾವು ಹೇಳಿದುದನ್ನು ತಂದೆವು, ಆದರೆ.....

ರಾಜಒಡೆಯರು: ಆದರೇನು?

೧ನೇ ಭಟ : (ದುಃಖದಲ್ಲಿ) ಅಲಮೇಲಮ್ಮನವರು ಈ ಮೂಗುತಿಯೊಂದವನ್ನು ಕೊಟ್ಟು "ತಲಕಾಡು ಮರುಳಾಗಿ, ಮಾಲಂಗಿ ಮಡುವಾಗಿ ಮೈಸೂರು ಅರಸರಿಗೆ ಮಕ್ಕಳಾ ಫಲವಿಲ್ಲದಾಗಲಿ" ಎಂದು ಶಾಪವಿತ್ತು ಮಾಲಂಗಿಯ ಮಡುವಿನಲ್ಲಿ ಮುಳುಗಿ ಹೋದರು. ನಾವೆಷ್ಟು ಪ್ರಯತ್ನಿಸಿದರೂ ಅವರ ದೇಹ ಸಿಗಲಿಲ್ಲ. ಕಾವೇರಿಯಲ್ಲಿ ಅವರು ಐಕ್ಯ ಹೊಂದಿದರು.

ರಾಜಒಡೆಯರು: ....ಆ್ಹಂ.... ಎಂಥ ಕೆಲಸವಾಯಿತು? ನೀವು ಕೇಳಿದ ಈ ಸಣ್ಣ ಮೂಗುತಿಗೆ ಮಹಾರಾಣಿ ಆಹುತಿಯಾಗಬೇಕಾಯಿತೇ? ಪುತ್ರ ಸಂತಾನವಾಗುವ ಭಾಗ್ಯವನ್ನೇಕೆ ಕಿತ್ತೊಗೆದೆ ತಾಯೆ..... ಅಯ್ಯೋ..... ಶ್ರೀರಂಗನಾಯಕಮ್ಮನಿಗೋಸ್ಕರ ಬಲವಂತ ಮಾಡಿದನೇ ಹೊರತು, ನನ್ನಲ್ಲಿ ಹೊನ್ನಿಲ್ಲವೆಂದಲ್ಲ. ಕೇವಲ ಮೂಗುತಿಯಾಗಿ ದೇಹವನ್ನು ನೀರಿನಲ್ಲಿ ಅರ್ಪಿಸಬೇಕಾಯಿತೇ? ಅಯ್ಯೋ ಶ್ರೀರಂಗನಾಥ, ರಂಗನಾಯಕಮ್ಮನವರೇ..... ಅಲಮೇಲಮ್ಮನವರಿಗೆ ಏಕೆ ಆ ರೀತಿ ಬುದ್ಧಿ ಕೊಟ್ಟೆ. ಪಂಚಲಿಂಗೇಶ್ವರರೇ ನಿಮಗೂ ಕರುಣೆಬಾರದೆ ಹೋಯ್ತೇ? ಹ್ಞಂ.... ನೀವು ನಡೆಯಿರಿ. ಎಲ್ಲಾ ವಿಧಿನಿಯಮದಂತೆ ನಡೆದುಹೋಯಿತು.

ಭಟರು : ಮಹದಪ್ಪಣೆ ಪ್ರಭು.

## ದೃಶ್ಯ-೩

(ಪ್ರಭುಗಳು ಮಲಗಿ ಕನಸಿನ ಲೋಕದಲ್ಲಿ ವಿಹರಿಸುವರು)

ರಾಜಒಡೆಯರು: ಇದೇನು ನಾನು ತಲಕಾಡಿನಲ್ಲಿ ಚರಿಸಾಡುತ್ತಿರುವೆ... ಆ್ಹಂ.... ಅಲಮೇಲಮ್ಮನವರು ಇತ್ತ ಬರುತ್ತಿದ್ದಾರೆ, ಬಂದೇಬಿಟ್ಟರು. ಅಲಮೇಲಮ್ಮನವರೇ ತಮ್ಮನ್ನು ಈ ಸ್ಥಿತಿಯಲ್ಲಿ ನೋಡಲು ನನಗೆ ಬಹಳ ದುಃಖವಾಗುತ್ತಿದೆ. ಸಕಲ ಸಾಮ್ರಾಜ್ಯವನ್ನು ಎನಗಿತ್ತು ಶ್ರೀರಂಗರಾಯರು ವೈದ್ಯೇಶ್ವರನಲ್ಲಿ ಐಕ್ಯರಾದುದು ದೈವ ಸಂಕಲ್ಪ. ಆದರೆ ತಮ್ಮ ಕಣ್ಣೀರನ್ನು ನೋಡಲಾರೆ. ಕುಂಕುಮ ಅರಿಸಿನಗಳಿಲ್ಲದ ಮುಖ, ಓಲೆಯಿಲ್ಲದ ಕಿವಿಗಳು, ಮೂಗುತಿಯಿಲ್ಲದ ಮೂಗು, ಹೂವಿಲ್ಲದ ತಲೆ, ಬಳೆಯಿಲ್ಲದ ಕೈಗಳು.... ಸೌಭಾಗ್ಯವನ್ನು ಕಳೆದುಕೊಂಡ ನಿಮ್ಮನ್ನು ಕಂಡು ನನಗೆ ದುಃಖವಾಗಿದೆ ತಾಯೀ.

ಅಲಮೇಲಮ್ಮ : ಇದು ಕಣ್ಣೀರೊಂದೇ ಅಲ್ಲಾ ಮಹಾರಾಜ ಕರ್ನಾಟಕ್ಕೂ ಗತ ವೈಭವದ ಕಣ್ಣೀರು. ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು ಆಳಿ ಬಾಳಿ ಸುಖವನ್ನುಂಡು ಕಣ್ಮುಚ್ಚಿದ ತಲಕಾಡು,

ರಾಜರಾಜಪುರ, ದವಲಪುರ ಎಂದು ಮೆರೆಯುತ್ತಿದ್ದ ಕರ್ನಾಟಕದ ಕಸ್ತೂರಿಯಂತೆ ಶೋಭಿಸುತ್ತಿದ್ದ ತಲಕಾಡಿನ ಸ್ಥಿತಿ ಯಾವ ಗತಿಯಾಯಿತು ಕಂಡಿರಾ? ಮಹಾರಾಜ, ರಾಜಒಡೆಯರೇ ನೋಡಿ, ಒಂದು ಮೂಗುತಿಯ ಆಸೆಗೆ ಸೌಂದರ್ಯಾರದ ಬೀಡಾಗಿ ಮೆರೆಯುತ್ತಿದ್ದ ತಲಕಾಡು ಹೇಗೆ ಮರಳಿನಲ್ಲಿ ಹೂತುಹೋಗಿದೆ, ನಾಡಾಗಿ ಇದ್ದುದು ಎಂಥ ಕಾಡಾಗಿದೆ. ಇದು ಸಾಮಾನ್ಯ ಕ್ಷೇತ್ರವಲ್ಲ. ಕಾಶಿಗಿಂತಲೂ ಒಂದು ಗುಲಗಂಜಿ ತೂಕಕ್ಕಿಂತ ಹೆಚ್ಚು ಮಹಿಮೆಯುಳ್ಳದ್ದು. ಆದುದರಿಂದಲೇ ಇದನ್ನು ದಕ್ಷಿಣ ಕಾಶಿ ಎನ್ನುತ್ತಾರೆ. ಇಲ್ಲಿ ಹರಿಯುತ್ತಿರುವ ಸಹ್ಯಾದ್ರಿ ಕುಂಡತೀರ್ಥ ಭಗಂಡಾಶ್ರಮ, ಕಪಿಲ ಸಂಗಮ, ಚಂದ್ರ ಪುಷ್ಕರಣಿ, ಸಮುದ್ರದ ಸಂಗಮಳೆಂಬ ಹದಿನೈದು ತೀರ್ಥಗಳಿಂದ ಪವಿತ್ರಳಾದ ಗಂಗೆಯು ಇಲ್ಲಿಹಳು. ಈ ಗಜಾರಣ್ಯದ ಪುಷ್ಕರಣಿಯಲ್ಲಿ ಸ್ನಾನ ಮಾಡಿ ಆಗ ನಿಮ್ಮ ಪಾಪದ ಸ್ವಲ್ಪ ಭಾಗ ಕಳೆಯುತ್ತದೆ.

ರಾಜಒಡೆಯರು: ಅಗತ್ಯವಾಗಿ ಆಗಬಹುದು ತಾಯೆ, ಮತ್ತೆ ಏನು ಮಾಡಬೇಕು ಹೇಳಿ.

ಅಲಮೇಲಮ್ಮ : ಇದೋ ಇಲ್ಲೇ ಈಶ್ವರನು ತನ್ನ ಪಂಚರೂಪುಗಳಿಂದ ರಾರಾಜಿಸುತ್ತಿರುವಳು.

ರಾಜಒಡೆಯರು: ತಾವು ಎಷ್ಟೇ ಆಗಲಿ, ಈ ಕ್ಷೇತ್ರದಲ್ಲಿ ಅನೇಕ ವರ್ಷಗಳಿಂದಲೂ ನೆಲೆಸಿ ಈ ಸ್ಥಳ ಮಹಾತ್ಮವನ್ನು ತಿಳಿದುಕೊಂಡಿದ್ದೀರಿ. ನೀವು ಹೇಳಿ, ನಾನು ಅವುಗಳನ್ನು ಕೇಳಿ ಪುಣ್ಯ ಪುನೀತನಾಗುತ್ತೇನೆ.

ಅಲಮೇಲಮ್ಮ : ಈಶ್ವರನು ಇಲ್ಲಿ ನೆಲೆಯಾಗಲು ಕಾರಣ ಏನು ಅಂತ ಹೇಳ್ತೀನಿ ಕೇಳಿ, ಹಿಂದೆ ವಸಿಷ್ಠ ಗೋತ್ರೋತ್ಪನ್ನ ಬ್ರಾಹ್ಮಣನಾದ ಸೋಮದತ್ತನು ಕಾಶಿಯಲ್ಲಿ ಸಾವಿರ ಶಿಷ್ಯರೊಡಗೂಡಿ ತಪವನ್ನಾಚರಿಸುತ್ತಿರಲು ಆತನಿಗೆ ಮೆಚ್ಚಿದ ಈಶ್ವರನು ಏನು ಬೇಕೆಂದು ಕೇಳಿದನು. ಆಗ ಆತ ಮುಕ್ತಿಯನ್ನು ಪಡೆಯಲು ಕೊನೆಯದಾಗಿ ನಿನ್ನನ್ನು ಎಲ್ಲಿ ಸೇವೆ ಮಾಡಿದರೆ ಮುಕ್ತಿ ದೊರೆಯುವುದೆಂದು ಪ್ರಾರ್ಥಿಸಿಕೊಳ್ಳಲು ಈಶ್ವರನು ಈ ಕಪಿಲಾ ಕಾವೇರಿ ಸಂಗಮದ ಸಿದ್ಧಾಶ್ರಮದಲ್ಲಿ ಋಚೀಕ ಋಷಿಗಳಿರುವರು. ಅಲ್ಲಿಗೆ ಹೋಗೆನ್ನಲು ಆ ಮೇರೆಗೆ ಇಲ್ಲಿಗೆ ಬಂದು ತಪವನ್ನಾಚರಿಸುತ್ತಿರಲು, ಈಶಾನ, ಅಘೋರ, ಸದ್ಯೋಜಾತ ವಾಮದೇವ, ಎಂಬ ರೂಪದಲ್ಲಿ ಈಶ್ವರನು, ಪಾತಾಳೇಶ್ವರ, ಅರ್ಕೇಶ್ವರ, ವೈದ್ಯೇಶ್ವರ, ಮಲ್ಲಿಕಾರ್ಜುನೇಶ್ವರರಾಗಿ

ರಾರಾಜಿಸುತ್ತಾ ಸೋಮದತ್ತನಿಗೆ ಮುಕ್ತಿಯನ್ನು ಕರುಣಿಸಿದನು. ಅದೋ ಪಕ್ಕದಲ್ಲಿ ಕಾಣುವ ಗೋಕರ್ಣದಲ್ಲಿ ಬೆಳೆದಿದ್ದ ಕೆಂದಾವರೆ ಹೂಗಳನ್ನು ಕಿತ್ತು, ಆನೆಯ ರೂಪಿನಲ್ಲಿದ್ದ ಸಾವಿರ ಶಿಷ್ಯರೂ ದಿನವೂ ಪೂಜಿಸುತ್ತಿರಲು ಈಶ್ವರನು ವೈಶಾಖ ಶುದ್ಧ ಪೌರ್ಣಮಿಯ ಅಭಿಜನ್ಮ ಮುಹೂರ್ತದಲ್ಲಿ ಅವರಿಗೆ ಸಾಯುಜ್ಯವನ್ನು ಕೊಟ್ಟನು. ಅಂದಿನಿಂದ ಅದು ಗಜಾರಣ್ಯವಾಯ್ತು.

ರಾಜಒಡೆಯರು: ತಾವು ಹೇಳುತ್ತಿರುವುದನ್ನು ಕೇಳುತ್ತಿದ್ದರೆ ನಿಜಕ್ಕೂ ಈ ತಲಕಾಡು ಎಷ್ಟೊಂದು ಪವಿತ್ರವಾದ ಸ್ಥಳ ಎಂದು ನನಗನ್ನಿಸುತ್ತದೆ.

ಅಲಮೇಲಮ್ಮ : ಇದೋ ನೋಡಿ ಇಲ್ಲಿ ಕಾಣುತ್ತಿರುವುದು ಗೋಕರ್ಣ ತೀರ್ಥ. ದಿನವೂ ಇಲ್ಲಿಂದ ಆನೆಯೊಂದು ಕೆಂದಾವರೆಯೊಂದನ್ನು ಕಿತ್ತು ತನ್ನ ಕುಂಭಸ್ಥಳದಲ್ಲಿಟ್ಟುಕೊಂಡು ಹೋಗಿ ವೈದ್ಯೇಶ್ವರ ಲಿಂಗಕ್ಕೆ ಅರ್ಪಿಸುತ್ತಿತ್ತು. ತಲ, ಕಾಡ ಎಂಬಿಬ್ಬರು ಬೇಡರು ಒಂದು ದಿನ ಈ ಆನೆ ಏನು ಮಾಡುತ್ತದೆಂದು ನೋಡುವ ಕುತೂಹಲದಿಂದ ಅದನ್ನು ಹಿಂಬಾಲಿಸಿಕೊಂಡು ಹೋದರು. ಹೋಗುವಾಗ ಪೊದೆಗಳನ್ನು ಕತ್ತರಿಸುತ್ತಾ ಹೋದರು. ಇದ್ದಕ್ಕಿದ್ದಂತೆ ಕೊಡಲಿ ಪೆಟ್ಟು ಕಲ್ಲಿಗೆ ತಾಕಿದಂತಾಗಲು ರಕ್ತಕಾರಿ, ಹರಿದು ಮಡುವು ಕಟ್ಟಲಾರಂಭಿಸಿತು. ಅದನ್ನು ನೋಟಿ ಇಬ್ಬರೂ ಪ್ರಜ್ಞಾಹೀನರಾಗಿ ಬಿದ್ದರು. ಆಗ ಇದ್ದಕ್ಕಿದ್ದಂತೆ ಅಶರೀರವಾಣಿಯಾದಂತಾಯಿತು. "ಈ ರಕ್ತ ಅಮೃತ ಇದನ್ನು ನೀವು ಕುಡಿದು ಅಮರರಾಗಿ" ಎಂದು ಹೇಳಿದಾಗ ಅದು ಅಮೃತವಾಯಿತು. ಇಬ್ಬರೂ ಕುಡಿದರು. ಬೂರುಗದ ಮರದ ಫಲವನ್ನು ಅರೆದು ಲಿಂಗಕ್ಕೆ ಲೇಪಿಸಿ ಲಿಂಗವನ್ನು ರಕ್ಷಿಸಿದರು. ಅಂದಿನಿಂದ ಆ ಲಿಂಗಕ್ಕೆ "ವೈದ್ಯೇಶ್ವರ" ಎಂದು ಹೆಸರಾಯಿತು. ಇಬ್ಬರೂ ಕೈಲಾಸವನ್ನು ಹೊಂದಿದರು. ಅಂದಿನಿಂದ ಈ ಸ್ಥಳಕ್ಕೆ "ತಲ ಕಾಡು" ಎಂದು ಹೆಸರಾಯಿತು.

ರಾಜಒಡೆಯರು: ಆ ಶಿಖರ ಯಾವುದು?

ಅಲಮೇಲಮ್ಮ : ಅದು ಮಲ್ಲಿಕಾರ್ಜುನನ ಸೋಮಶೈಲ. ಪೂರ್ವದಲ್ಲಿ ಇಕ್ಷ್ವಾಕು ವಂಶಜನಾದ ದಿಲೀಪನು ಯುದ್ಧದಲ್ಲಿ ಸೋತ. ವೈರಿಗಳು ಆತನಿಗೆ ವಿಷ ಕುಡಿಸಿ ಕಳುಹಿಸುವರು. ಇಬ್ಬರೂ ಇಲ್ಲಿ ಬಂದು ಮಲ್ಲಿಕಾರ್ಜುನನ್ನು ಪೂಜಿಸುತ್ತಿರಲು ದಿಲೀಪ ಸಾಯುವನು. ಆತನ ಸತಿಯು ಚಿತಾರೋಹಣಕ್ಕೆ ಸಿದ್ಧಳಾಗಲು, ಅಶರೀರವಾಣಿಯೊಂದು "ಶಿಶುಹತ್ಯೆ" ಎಂದು ಹೇಳಿತು. ಆಗ ಆಕೆ ಚಿತೆಗೆ ಹಾರುವುದನ್ನು

ಬಿಟ್ಟಳು. ಕೆಲವು ದಿನಗಳಲ್ಲಿಯೇ ಗಂಡುಮಗುವನ್ನು ಪಡೆದಳು. ಆತನಿಗೆ ಸಗರ ಎಂದು ನಾಮಕರಣ ಮಾಡಿದಳು. ಸಗರನು ತಾಯಿಯಿಂದ ಶತ್ರುಗಳ ವಿಚಾರವನ್ನು ತಿಳಿದು ತಪವಾಚರಿಸಿ ಚೇತನ ಪಡೆದು ಅವವನ್ನೆಲ್ಲಾ ಸದೆಬಡಿದು ಅರವತ್ತು ಸಾವಿರ ಮಕ್ಕಳ ಫಲವನ್ನು ಹೊಂದಿ ಸುಖಹೊಂದಿದ್ದು, ಅನಂತರ ಶಿವಸಾಯುಜ್ಯವನ್ನು ಸಗರ ಪಡೆದ.

ರಾಜಒಡೆಯರು: ಮುಂದೆ ಎಲ್ಲಿಗೆ ಕರೆದೊಯ್ಯುತ್ತಿರುವಿರಿ?

ಅಲಮೇಲಮ್ಮ : ಅರ್ಕೇಶ್ವರನಲ್ಲಿಗೆ. ಈತನನ್ನು ಸೂರ್ಯನು ಪೂಜಿಸಿ ಗ್ರಹಗಳ ನಾಯಕನಾದನು. ಅಲ್ಲಿಗೆ ಹೋಗೋಣ.

ರಾಜಒಡೆಯರು: ಮಹಾದೇವ ಅರ್ಕೇಶ್ವರಾ.... ನಿನ್ನ ಪಾದವೇ ಗತಿ.... ನಿನಗೆ ಶರಣು ಶರಣಾರ್ಥಿ.

ಅಲಮೇಲಮ್ಮ : ಪಾತಾಳವಾಸಿಯಾದ ವಾಸುಕಿಯು ಪಾತಾಳೇಶ್ವರನನ್ನು ಪೂಜಿಸಿ ನಾಗಲೋಕದ ಅಧಿಪತ್ಯವನ್ನು ಪಡೆದನು. ಆತನ ದರುಶನ ಮಾಡಿ ಮುಂದೆ ಹೋಗೋಣ.

ರಾಜಒಡೆಯರು: ಅಗತ್ಯವಾಗಿ...... ನಡೆಯಿರಿ ಹೋಗೋಣ.

ಅಲಮೇಲಮ್ಮ : ಪಾತಾಳೇಶ್ವರನ ಪೂಜೆ ಆಯಿತು. ಇನ್ನು ಬ್ರಹ್ಮನು ಪೂಜಿಸಿದ ಮರುಳೇಶ್ವರನ ದಿವ್ಯದರ್ಶನವನ್ನು ಪಡೆಯೋಣ.

ರಾಜಒಡೆಯರು: ಬ್ರಹ್ಮನು ಇಲ್ಲಿ ಬಂದು ಪೂಜಿಸಲು ಕಾರಣ?

ಅಲಮೇಲಮ್ಮ : ಹಿಂದೆ ಬ್ರಹ್ಮನು ಸರಸ್ವತಿಯನ್ನು ಸೃಷ್ಟಿಸಿದನು. ಸುಂದರಿಯಾದ ಆಕೆಯನ್ನು ನೋಡಿ ಮೋಹಿತನಾಗುವನು. ಆಗ ಆಕೆ ಹೆಣ್ಣು ಜಿಂಕೆಯ ರೂಪವನ್ನು ಪಡೆನು ಈಶ್ವರನ ಹತ್ತಿರ ಓಡುವಳು. ಬ್ರಹ್ಮನು ಗಂಡು ಜಿಂಕೆಯ ವೇಷದಲ್ಲಿ ಹಿಂಬಾಲಿಸಿಕೊಂಡು ಹೋಗುವನು. ಈಶ್ವರನು ಬ್ರಹ್ಮನ ಶಿರಸ್ಸನ್ನು ಕತ್ತರಿಸಿ ಸರಸ್ವತಿಗೆ ಅಭಯವಿತ್ತನು. ಬ್ರಹ್ಮ ಈಶ್ವರನನ್ನು ಪ್ರಾರ್ಥಿಸಿ ತನ್ನ ತಪ್ಪನ್ನು ಕ್ಷಮಿಸೆಂದು ಕೇಳಲು ಆಗ ಈಶ್ವರನು, "ಭೂಲೋಕದಲ್ಲಿರುವ ಮರುಳೇಶ್ವರನನ್ನು ಪೂಜಿಸಿದರೆ ಒಳ್ಳೆಯದಾಗುತ್ತದೆ" ಎಂದು ಹೇಳಲು ಹಾಗೆಯೇ ಮಾಡಿ ಈಶ್ವರನ ಕುರಿತು ತಪವೆಸಗುವನು. ಈಶ್ವರ ಈತನ ತಪಸ್ಸಿಗೆ ಮೆಚ್ಚಿ ಸರಸ್ವತಿಯನ್ನು ಶಬ್ದಬ್ರಹ್ಮಮಯಳನ್ನಾಗಿ ಮಾಡಿ ಮದುವೆ ಮಾಡಿದನು.

ರಾಜಒಡೆಯನು: ಅಂತೂ ಪಂಚಲಿಂಗೇಶ್ವರನ ಮಹಿಮೆ ಬಹು ಹಿರಿದು. ಈ ಪಂಚಲಿಂಗೇಶ್ವರನನ್ನು ದರ್ಶನ ಮಾಡಿದರೆ ತುಂಬಾ ಒಳ್ಳೆಯದು.

ಯಾವಾಗ ಇವರ ಮಹಾದರುಶನ ಮಾಡಿದರೆ ನಮಗೆ ಒಳ್ಳೆಯದಾಗುವುದು.

ಅಲಮೇಲಮ್ಮ : ವೈಶಾಖ ಶುದ್ಧ ಪೌರ್ಣಮಿಯಲ್ಲಿ ವೈದ್ಯೇಶ್ವರನನ್ನು ಮಾಘ ಶುದ್ಧ ಸಪ್ತಮಿಯಲ್ಲಿ ಅರ್ಕೇಶ್ವರನನ್ನೂ ಶ್ರಾವಣ ಶುದ್ಧ ಪಂಚಮಿಯಲ್ಲಿ ಪಾತಾಳೇಶ್ವರನನ್ನೂ ಮಾಘ ಕೃಷ್ಣ ಚತುರ್ದಶಿಯಲ್ಲಿ ಮಲ್ಲಿಕಾರ್ಜುನೇಶ್ವರನನ್ನೂ ಪೂಜಿಸಿದರೆ ಸಕಲ ಇಷ್ಟಾರ್ಥಗಳೂ ಕೈಗೂಡುವುವು.

ರಾಜಒಡೆಯರು: ಇಷ್ಟ ದೇವತೆಗಳನ್ನು ಪೂಜಿಸುವುದು ಹೇಗೆ ಅಲಮೇಲಮ್ಮನವರೇ?

ಅಲಮೇಲಮ್ಮ : ಹೌದು. ಅದಕ್ಕೂ ಸಹ ಒಂದು ಕ್ರಮವಿದೆ. ಕೇಳಿ ಹೇಳುತ್ತೇನೆ. ಕಾಶಿಯಲ್ಲಿ ನೂರುವರ್ಷ, ಗೋದಾವರಿಯಲ್ಲಿ ಐವತ್ತು ವರ್ಷ ಸ್ನಾನ ಪೂಜೆ ಮಾಡುವ ಫಲವನ್ನು ಒಂದೇ ದಿನದಲ್ಲಿ ಪಡೆಯಬಹುದು. ಗೋಕರ್ಣದಲ್ಲಿ ಸ್ನಾನ ಮಾಡಿ, ಚೌಡೇಶ್ವರಿಗೆ ನಮಸ್ಕರಿಸಿ, ವೈದ್ಯೇಶ್ವರನ ಸನ್ನಿಧಿಗೆ ಬಂದು ಅಪ್ಪಣೆ ಪಡೆದು ವಿಜಯಾಪುರದ ಉತ್ತರ ವಾಹಿನಿಯಲ್ಲಿ ಸ್ನಾನ ಮಾಡಿ, ಅರ್ಕೇಶ್ವರನ ದರ್ಶನ ಮಾಡಿ ದಕ್ಷಿಣ ವಾಹಿನಿಯಲ್ಲಿ ಸ್ನಾನಮಾಡಿ ಮರುಳೇಶ್ವರನನ್ನು ಪೂಜಿಸಿ ಪ್ರತಿಯೊಂದು ಸಾರಿಯೂ ವೈದ್ಯೇಶ್ವರನಿಗೆ ವರದಿಯನ್ನು ಒಪ್ಪಿಸಿ, ಕೊನೆಗೆ ಎಲ್ಲವನ್ನೂ ಒಟ್ಟಿಗೆ ವೈದ್ಯೇಶ್ವರನಿಗೆ ವರದಿ ಒಪ್ಪಿಸುವುದು. ಇದರಿಂದ ಇಷ್ಟಾರ್ಥಗಳು ಕೈಗೂಡುವುವು. ಪಂಚಲಿಂಗಗಳ ದರ್ಶನ ಪೂಜೆಗಳಿಂದ ಒಳ್ಳೆಯದಾಗುವುದು.

ರಾಜಒಡೆಯರು: ಈ ಪಂಚಲಿಂಗೇಶ್ವರರ ದರ್ಶನ ಪೂಜೆ ಮಾಡುವುದು ಒಳಿತೇ?

ಅಲಮೇಲಮ್ಮ : ಹೌದು....

ರಾಜಒಡೆಯರು: ತಮ್ಮಪ್ಪಣೆಯಂತೆ ಪಂಚಲಿಂಗದರ್ಶನ ಪೂಜೆಯನ್ನು ನಿಷ್ಠೆಯಿಂದ ಮಾಡಲು ನಾನು ಒಪ್ಪಿಕೊಳ್ಳುತ್ತೇನೆ. ಒಂದು ಸಣ್ಣ ಮೂಗುತಿಯಿಂದ ಇಷ್ಟೊಂದು ಹಗರಣವಾಗುತ್ತದೆಂದು ನಾನು ಕನಸಿನಲ್ಲೂ ನೆನಸಿರಲಿಲ್ಲ. ತಾಯೇ ಹೇಗಾದರೂ ಆಗಲಿ ನಾನು ಮಾಡಿದ ತಪ್ಪನ್ನು ಕ್ಷಮಿಸಿ ಶಾಪವಿಮೋಚನೆ ನೀಡಿ.

ಅಲಮೇಲಮ್ಮ : ರಾಜಒಡೆಯರೇ, ತಲಕಾಡನ್ನು ಮರಳಿಂದ ಬೇರ್ಪಡಿಸಲಾದೀತೇ? ಮಾಲಂಗಿ ಮಡುವನ್ನು ಆಳವಿಲ್ಲದಂತೆ ಮಾಡಲಾದೀತೇ? ಮೈಸೂರು ಅರಸರಿಗೆ ಮಕ್ಕಳಿಲ್ಲದೆ ಫಲವಾಗಲಿ ಎಂಬ ಶಾಪ ವಿಮೋಚನೆ ಮಾಡಲಾದೀತೇ? ನೀವೇ ಹೇಳಿ.....

ರಾಜಒಡೆಯರು: ಆದರೆ ಪುತ್ರಸಂತಾನವಾದರೂ ಆಗುವಂತೆ ಮಾಡಲಿಕ್ಕಾಗುವುದಿಲ್ಲವೇ? ತಾಯೀ ತಮ್ಮಂಥ ದೈವಾಂಶಸಂಭೂತರಿಂದ ಇದು ಸಾಧ್ಯ. ನಾನು ಮಾಡಿದ ತಪ್ಪಿಗೆ ನನ್ನ ಹೆಂಡತಿಯಲ್ಲಿದ್ದ ಮುಂದಿನ ಪೀಳಿಗೆಯವರೆಲ್ಲಾ ಈ ಪಾಪಕ್ಕೆ ಗುರಿಯಾಗಬೇಕೇ?

ಅಲಮೇಲಮ್ಮ : ಹೌದಲ್ಲವೇ?

ರಾಜಒಡೆಯರು: ಹೌದು ತಾಯೆ....

ಅಲಮೇಲಮ್ಮ : ಮಹಾರಾಜ ನಿನ್ನ ಜಾಣತನಕ್ಕೆ ಮೆಚ್ಚಿ ಈ ಶಾಪದಲ್ಲಿ ಸ್ವಲ್ಪ ಬದಲಾವಣೆ ಮಾಡುತ್ತೇನೆ. ಒಂದು ತಲೆಮಾರಿಗೆ ಮಕ್ಕಳಾಗಲಿ ಮತ್ತೊಂದು ತಲೆಮಾರಿಗೆ ಇಲ್ಲವಾಗಲಿ.

ರಾಜಒಡೆಯ : ಹಾಗೆ ಮಾಡಬೇಡಿ ತಾಯೆ... ಅಲಮೇಲಮ್ಮನವರೇ ಅಲಮೇಲಮ್ಮನವರೇ... ಅದೃಶ್ಯರಾಗಬೇಡಿ ತಾಯೇ ಅದೃಶ್ಯರಾಗಬೇಡಿ... ಅಲಮೇಲಮ್ಮನವರೇ... ಅಲಮೇಲಮ್ಮನವಗೇ...

(ಕೂಗುತ್ತಿದ್ದಂತೆ ವೀರರಾಜಮ್ಮಣ್ಣಿಯವರು ಬರುತ್ತಾ)

ವೀರರಾಜಮ್ಮಣ್ಣಿ: ಏನಿದು ಮಹಾಪ್ರಭುಗಳೇ ನೀವು ಹೀಗೆ ಬೆಚ್ಚಿಬಿದ್ದು ಕೂಗಿಕೊಳ್ಳುತ್ತಿರುವಿರಿ?

ರಾಜಒಡೆಯರು: (ನಗುತ್ತಾ) ಕನಸು..... ಅದ್ಭುತ ಕನಸು..... ಅಲಮೇಲಮ್ಮನವರು ಬಂದು....

ವೀರರಾಜಮ್ಮಣ್ಣಿ: ಏನು ಹೇಳಿದರು?

ರಾಜಒಡೆಯರು: ನಡೆದ ಕತೆಯನ್ನು ಕಣ್ಣೀರಿನಿಂದ ತೋಡಿಕೊಂಡರು. ತಲಕಾಡು ದರುಶನ ಮಾಡಿಸಿದರು.

ವೀರರಾಜಮ್ಮಣ್ಣಿ: ನೀವು ತಪ್ಪು ಕೆಲಸ ಮಾಡಿಬಿಟ್ಟಿರಿ. ದುಡುಕಿಬಿಟ್ಟಿರಿ. ನಮ್ಮ ಬೊಕ್ಕಸದಲ್ಲಿ ಐಶ್ವರ್ಯಕ್ಕೇನು ಕಡಿಮೆ ಇತ್ತು? ಸಣ್ಣ ಮೂಗುತಿಗೆ, ಹೊನ್ನಿಗೆ ಒಂದು ಹೆಣ್ಣಿನ ಜೀವವನ್ನು ತೆಗೆದುಕೊಂಡ ಹಾಗಾಗಲಿಲ್ಲವೇ? ಇದು ಮಹಾಪಾಪದ ಕೆಲಸವಾಗಲಿಲ್ಲವೇ?

ರಾಜಒಡೆಯರು: ನಾನು ದೇವರ ಕಾರ್ಯ, ಅಮ್ಮನವರ ಅಲಂಕಾರಕ್ಕೆಂದು ಹಾಗೆ ಮಾಡಿದೆ. ಅಲಮೇಲಮ್ಮನವರು ಅಷ್ಟು ದುಡುಕುತ್ತಾರೆಂದು ನಾನು ಕಂಡಿದ್ದನೇ?

ವೀರರಾಜಮ್ಮಣ್ಣಿ: ಅದೋ ರಾಜಗುರುಗಳು ಇತ್ತಲೆ ದಯಮಾಡುತ್ತಿದ್ದಾರೆ ಅವರಲ್ಲೇ ಅರಿಕೆ ಮಾಡಿಕೊಳ್ಳೋಣ ಏನು ಮಾಡುವುದೆಂದು?

ರಾಜಗುರು : ಏನು ತಾಯೇ?

ವೀರರಾಜಮ್ಮಣ್ಣಿ: ಗುರುಗಳೇ, ಅಲಮೇಲಮ್ಮನವರು ರಾತ್ರಿ ಕನಸಿನಲ್ಲಿ ಬಂದು ದುಃಖವನ್ನು ತೋಡಕೊಂಡರಂತೆ ಮಹಾಪ್ರಭುಗಳಲ್ಲಿ.

ರಾಜಗುರು : ಆದ ಕಾರ್ಯಗಳು ಆಗಿಹೋದುವು. ಅದು ಆಗದಿರುವಂತೆ ಮಾಡಲು ಸಾಧ್ಯವಿಲ್ಲ. ಈಗಲಾದರೂ ಆಕೆಯ ಪ್ರತಿಮೆಯನ್ನು ಬೆಳ್ಳಿಯಲ್ಲಿ ಮಾಡಿಸಿ ಪೂಜಿಸುತ್ತಾ ಬನ್ನಿ. ಆಕೆ ದೈವಾಂಶ ಮಾತೆ. ಆಕೆಯ ಬೆಳ್ಳಿಯ ಪ್ರತಿಮೆಗೆ ರತ್ನಾಭರಣಗಳನ್ನು ತೊಡಿಸಿ ಭಕ್ತಿಯಿಂದ ಪೂಜಿಸಿ, ಶಾಂತಿಯಾದಂತಾಗುವುದು.

ವೀರರಾಜಮ್ಮಣ್ಣಿ: ಅಗತ್ಯವಾಗಿ, ಅಪ್ಪಣೆ ರಾಜಗುರುಗಳೇ.

ರಾಜಒಡೆಯರು: ಅಗತ್ಯವಾಗಿ ಆಗಲೀ ಆಚಾರ್ಯರೇ

ರಾಜಗುರು : ಗಂಡಸಿನ ದುಡುಕಿನಿಂದ ಈ ಅಚಾತುರ್ಯ ನಡೆದುಹೋಯಿತು. ತಪ್ಪನ್ನು ಕ್ಷಮಿಸೆಂದು ಆಕೆಗೆ ಮುತ್ತಿನ ಮೂಗುತಿಯ ಅಲಂಕಾರ ಮಾಡಿ ಪುತ್ರಭಿಕ್ಷೆ ಕೇಳು ತಾಯೆ. ಒಳ್ಳೆಯದಾಗುವುದು, ಕುಲ ಜ್ಯೋತಿ ಬೆಳಗುವುದು.

ವೀರರಾಜಮ್ಮಣ್ಣಿ: ಅಪ್ಪಣೆ ಗುರುದೇವಾ.... ಅಲಮೇಲಮ್ಮ ಮಹಾಮಾತೇ ಮುನಿಯಬೇಡ ತಾಯೇ. ಮೈಸೂರು ಅರಸರ ಕುಲದೀಪವನ್ನು ಕೆಡಿಸದಂತೆ ಪ್ರಜ್ವಲವಾಗಿ ಉರಿಯುವಂತೆ ಮಾಡು ಮಹಾತಾಯೇ.... ಶ್ರೀರಂಗನಾಯಕೀ.... ಶ್ರೀರಂಗನಾಥಾ.... ಗುರುದೇವಾ.... ಅಲಮೇಲಮ್ಮ ಅಲಮೇಲಮ್ಮಾ.....

✳

# ಲಕ್ಷ್ಮಿ

**ಪಾತ್ರ ವರ್ಗ**

೧. ಕೆಂಪೇಗೌಡ ೨. ವೀರಣ್ಣ ೩. ಕೆಂಪಸೋಮಯ್ಯ ೪. ಬಸವಯ್ಯ ೫. ಜಗದೇವರಾಯ ೬. ಅಚ್ಯುತರಾಯ ೭. ಇಮ್ಮಡಿ ಕೆಂಪೇಗೌಡ ೮. ರಾಮರಾಯ ೯. ಸದಾಶಿವರಾಯ ೧೦. ಜಗದೇವರಾಯನ ಮಂತ್ರಿ ೧೧. ಭೈರಯ್ಯ (ಕಾಲ್ಪನಿಕ) ೧೨. ಚೆನ್ನಾಂಬೆ ೧೩. ಲಕ್ಷ್ಮಮ್ಮ ೧೪. ಕನಸಿನ ಲಕ್ಷ್ಮಿ

(ಬೆಂಗಳೂರನ್ನು ಕಟ್ಟಿದ ಕೆಂಪೇಗೌಡನ ಸೊಸೆ ಲಕ್ಷ್ಮಿಯ ಧೈರ್ಯ, ಸ್ಥೈರ್ಯಗಳನ್ನು ಚಿತ್ರಿಸುವ ಐತಿಹಾಸಿಕ ನಾಟಕ ಇದು)

## ದೃಶ್ಯ-೧

(ಕೆಂಪೇಗೌಡ ಚನ್ನಾಂಬೆಯರು ಭೈರವೇಶ್ವರ ದೇವಾಲಯಕ್ಕೆ ಬರುತ್ತಿದ್ದಂತೆಯೇ ಘಂಟಾನಾದ-ವಾಗುವುದು)

ಕೆಂಪೇಗೌಡ : ಶರಣು ಕೆಂಪಮ್ಮ.... ಭೈರವೇಶ್ವರಾ.... ಈ ಕೆಂಪಮ್ಮ ಭೈರವೇಶ್ವರರು ಅವಾತಿ ನಾಡ ಪ್ರಭುಗಳಾದ ನಮ್ಮ ತಂದೆ ಕೆಂಪನಂಜೇಗೌಡ, ತಾಯಿ ಲಿಂಗಮಾಂಬೆಯ ಹಲವು ದಿನಗಳ ಹಂಬಲದ ಬೇಡಿಕೆಗಾಗಿ ನನ್ನನ್ನೇ ಪ್ರಸಾದವಾಗಿ ಕೊಟ್ಟಿಹರು ಚನ್ನಾಂಬೆ.

ಚನ್ನಾಂಬೆ : ಅವರಿಬ್ಬರಿಗೂ ಶರಣು ಶರಣಾರ್ಥಿ.

(ಅಷ್ಟರಲ್ಲಿ ಬಸವಯ್ಯ, ಕೆಂಪಸೋಮಯ್ಯ ಓಡಿಬಂದು)

ಬಸವಯ್ಯ : ಅಣ್ಣಾ.... (ಕಂಪಿಸುವ ದನಿಯಿಂದ ಮತ್ತೆ) ಅಣ್ಣಾ-

ಕೆಂಪೇಗೌಡ : (ಬೆಚ್ಚಿ) ಏನು ಬಸವಯ್ಯ?

ಬಸವಯ್ಯ : ಅಣ್ಣಾ ಸೀರ್ಯ, ಸೋಮಾರು, ಹೊಳವನಹಳ್ಳಿ, ದೊಡ್ಡಬಳ್ಳಾಪುರದ ಪಾಳೇಗಾರರು, ಚನ್ನಪಟ್ಟಣದ ಜಗದೇವರಾಯನ ನಾಯಕತ್ವದಲ್ಲಿ ಅಷ್ಟು ದಿನಗಳಿಂದಲೂ ರಾಹುವಿನಂತೆ ಸಂಚು ಹಾಕುತ್ತಿದ್ದವರು ಇಂದು ಯುದ್ಧಕ್ಕೆ ಮುಂಚಿರುವರು.

ಕೆಂಪಸೋಮ : (ಕೋಪದಲ್ಲಿ) ಅಣ್ಣಾ, ವಿಜಯನಗರದ ಕೃಷ್ಣದೇವರಾಯರಿಂದ ದೊರಕಿದಂದಿನಿಂದ ಕರುಬಿ ಕಲ್ಲನ್ನಿಡುತ್ತಿದ್ದರು. ಸಮಯವನ್ನು ಕಾಯುತ್ತಿದ್ದರು. ಇಂದು ಕಾರ್ಯತಃ ಮಾಡಲು ಸೈನ್ಯವನ್ನು ಸಿದ್ಧಿಸಿಕೊಂಡು ಶಿವಗಂಗೆಗೆ ಮುತ್ತಿಗೆ ಹಾಕಲು ಆರಂಭಿಸಿದ್ದಾರೆ.

ಕೆಂಪೇಗೌಡ : ಯುದ್ಧಕ್ಕೆ ಸಿದ್ಧರಾಗೋಣ, ಮುನ್ನುಗ್ಗೋಣ ಭೈರವೇಶ್ವರನ ಇಚ್ಛೆ ಇದ್ದಂತಾಗಲಿ.

ಚನ್ನಾಂಬೆ : ದೇವರನ್ನು ಪೂಜಿಸಿ ಸಂತೋಷದಲ್ಲಿದ್ದ ನಾವು ಈಗ ರಣರಂಗದಲ್ಲಿ ನಿಲ್ಲುವಂತಾಯಿತೆ ಭೈರವೇಶ್ವರಾ.....

ಕೆಂಪೇಗೌಡ : ಕೆಂಪೇಗೌಡ ಅರ್ಧಾಂಗಿನಿಯಾದ ನೀನೂ ಹೀಗೆ ಕುಸಿಯಬಹುದೇ? ನನಗೆ ಧೈರ್ಯ ತುಂಬು. ನನ್ನ ಗುರು ಮಾಧವಭಟ್ಟರು ನನಗೆ ಸಕಲ ವಿದ್ಯೆಗಳನ್ನು ಕಲಿಸಿದ್ದಾರೆ. ಆ ಗುರುವಿನ ಕೃಪೆಯಿಂದ ಖಂಡಿತ ಜಯವಾಗುವುದು.

ಚನ್ನಾಂಬೆ : ಸ್ವಾಮಿ, ನಮಸ್ಕರಿಸುತ್ತಿದ್ದೇನೆ. ಎಲ್ಲರೂ ಹೋಗಿ ಬನ್ನಿ..... ಅತ್ತಿಗೆಯವರೇ.

(ಕತ್ತಿಯನ್ನು ಝಳಪಿಸುತ್ತಾ ಹೊರಡುವರು)

## ದೃಶ್ಯ-೨

(ಸ್ವಲ್ಪ ದಿನಗಳಲ್ಲೇ ಯುದ್ಧದಲ್ಲಿ ಜಯಹೊಂದಿ ಅರಮನೆಗೆ ಬಸವಯ್ಯ, ಕೆಂಪೇಗೌಡ ಎಲ್ಲರೂ ಬರುವರು)

ಬಸವಯ್ಯ : (ಸಂತಸದ ದನಿಯಲ್ಲಿ) ಅತ್ತಿಗೆಯವರೇ ನಿಮ್ಮ ಹರಕೆಯಿಂದ ನಮಗೆ ಜಯವಾಯಿತು. ಜಗದೇವರಾಯನ ಪಲಾಯನ! ರಣಭೈರೇಗೌಡನ ಸೈನ್ಯ ಸಮಮಟ್ಟ!

ಕೆಂಪಸೋಮ : ಶಿವಗಂಗೆ, ರಾಮಗಿರಿ ಹುತ್ತರಿದುರ್ಗಗಳನ್ನು ಬಲಪಡಿಸಿಕೊಂಡು ಧ್ವಜವನ್ನು ಹಾರಿಸಿದೆ. ಅದೋ ಸಂತೋಷದ ಗಾಳಿಯಲ್ಲಿ ಗೂಳಿ ಗುಟುರು ಹಾಕುತ್ತಿದ್ದಾನೆ. ವೀರಭದ್ರನ ವೀರವೇಶದಿಂದ ಗೆದ್ದು ನಕ್ಕು ನಗುತ್ತಿದ್ದಾನೆ.

ಚನ್ನಾಂಬೆ : ಸಂತೋಷ ಕೆಂಪಸೋಮಯ್ಯ, ಬಸವಯ್ಯ.

ಕೆಂಪೇಗೌಡ : ಎಲ್ಲಾ ನಿನ್ನ ದೈವಭಕ್ತಿಯ ಫಲ.

(ಹೀಗೆ ಮಾತನಾಡುತ್ತಿರಲು ಸೈನಿಕನೊಬ್ಬ ಓಲೆಯನ್ನು ತಂದುಕೊಡುವನು. ಬಸವಯ್ಯ ಓದುತ್ತಾ)

ಬಸವಯ್ಯ : (ಕುಪಿತನಾಗಿ) ಅಣ್ಣಾ ವಿಜಯನಗರವು ಮಹಮ್ಮದಿಯರ ಹಾವಳಿಗೆ ಸಿಕ್ಕಿರುವುದಂತೆ. ಅದಕ್ಕೆ ಸುತ್ತಮುತ್ತಣ ಪಾಳೆಯಗಾರರು ಇದರಲ್ಲಿ

ಭಾಗವಹಿಸಬೇಕೆಂದು ಶ್ರೀಕೃಷ್ಣದೇವರಾಯರು ವಿಜಯನಗರದಿಂದ ಪತ್ರ ಕಳುಹಿಸಿದ್ದಾರೆ.

ಕೆಂಪೇಗೌಡ : ಕೇಳೋಣ.

ಬಸವಯ್ಯ : ಅದಕ್ಕೆ ಒಪ್ಪುವರೇ ಎಂಬ ಅನುಮಾನ ನನ್ನದು.

ಕೆಂಪೇಗೌಡ : ಪತ್ರಗಳನ್ನು ಭೈರಯ್ಯನ ಮೂಲಕ ಎಲ್ಲರಿಗೂ ಕಳುಹಿಸು.

ಬಸವಯ್ಯ : ಅಪ್ಪಣೆ ಪ್ರಭು.

## ದೃಶ್ಯ-೩

(ಜಗದೇವರಾಯನು ತನ್ನ ಅರಮನೆಯಲ್ಲಿ)

ಮಂತ್ರಿ : ಜಗದೇವ ಪ್ರಭುಗಳೇ, ಏಕೆತಾವಿಷ್ಟು ಕಳವಳ ಪಡುತ್ತಿರುವಿರಿ?

ಜಗದೇವ : (ನಿಟ್ಟುಸಿರಿಂದ) ಯುದ್ಧದಲ್ಲಿ ಸೋತ ನಾನು ಜಿದ್ದು ತೀರಿಸಿಕೊಳ್ಳುವ ಬಗೆ ಹೇಗೆ ಮಂತ್ರಿಗಳೇ? ನನ್ನ ಎದೆಯ ಕಿಚ್ಚು ಇನ್ನೂ ಆರಿಲ್ಲ ಸೈರಣೆ ತಾಳಲಾಗದು, ಸೈನ್ಯ ಸಿದ್ಧತೆ ಸಾಲದು, ಕೆಂಪೇಗೌಡನನ್ನು ಕೆಳಗೆ ತುಳಿದವರೆಗೂ ಈ ತಳಮಳ ನಿಲ್ಲದು. ಹೀಗಿರುವಾಗ ನನಗೆ ಶಾಂತಿ ಎಲ್ಲಿ ಸಿಗಬೇಕು?

(ಭೈರಯ್ಯ ಪತ್ರದೊಂದಿಗೆ ಬರಲು) ಯಾರದು?

ಭೈರಯ್ಯ : ನಾನು ಕೆಂಪೇಗೌಡನ ಕಡೆಯ ಸಿಪಾಯಿ. ಈ ಪತ್ರವನ್ನು ತಮ್ಮ ಸನ್ನಿಧಿಗೆ ತಲುಪಿಸಲು ಬಂದಿರುವೆ.

(ಪತ್ರ ಕೊಡಲು ಓದುವನು. ಕೋಪದಲ್ಲಿ)

ಮಹಾಶಯರೇ, ಮಾಗಡಿ ಚನ್ನಪಟ್ಟಣದ ಪಾಳೆಯಗಾರರಾದ ಜಗದೇವರಾಯರ ಸಮಕ್ಷಮಕ್ಕೆ ಕೆಂಪೇಗೌಡರ ಶರಣಾರ್ಥಿಗಳೊಡನೆ ಮನವಿ. ಇದರಿಂದ ತಿಳಿಯಪಡಿಸುವುದೇನೆಂದರೆ, ಸಾಮಂತ ರಾಜರುಗಳಾದ ನಾವೆಲ್ಲಾ ಒಗ್ಗಟ್ಟಾಗಿ ವಿಜಯನಗರದ ಏಳ್ಗೆಗೆ ದುಡಿಯಬೇಕು. ಮುಸ್ಲಿಮರ ಶತ್ರುಗಳ ಹಾವಳಿ ತಡೆಗಟ್ಟದಿದ್ದರೆ ನಮಗೆ ಉಳಿಗಾಲವಿಲ್ಲ ಇದರಲ್ಲಿ ತಾವು ಭಾಗವಹಿಸಿ ಭುವನೇಶ್ವರಿ ನಾಡನ್ನು ಉಳಿಸುವುದು ಎಂದು ಶ್ರೀಕೃಷ್ಣದೇವರಾಯರ ಅಪ್ಪಣೆಯಾಗಿದೆ.

ಇಂತು ತಮ್ಮವನೇ ಆದ,

**ಕೆಂಪೇಗೌಡ**

ಜಗದೇವ : ಹೆಸರು ನಮ್ಮದಾದರೆ, ಮೊಸರು ಕೆಂಪೇಗೌಡನದು. ಕಷ್ಟದಿಂದ ಊಳಿಗದ ಎತ್ತಿನಂತೆ ಯುದ್ಧದಲ್ಲಿ ಮಡಿದು ಮಣ್ಣಾಗುವವರು ನಾವಾದರೆ ಕೀರ್ತಿಯ ಉನ್ನತ ಶಿಖರ ಕೆಂಪೇಗೌಡನಿಗೆ! ಇದಕ್ಕೆ ನಮ್ಮ ಸಹಾಯ

(ನಗುತ್ತಾ) ಕೆಂಪೇಗೌಡ.....! ನಿನ್ನ ಮಾನ ಕಳೆಯಲು ಇದೇ ಸಮಯ. ಕೃಷ್ಣದೇವರಾಯರು ಸೋಲಲಿ. ಆಗ ನಾನು ನೋಡಿ ಚನ್ನಾಗಿ ನಗುವೆ. ನಿನ್ನ ವೀರತ್ವಕ್ಕೆ ಕುಂದು ಬರಲಿ! ನಿನ್ನನ್ನು ಪಾತಾಳಕ್ಕೆ ತುಳಿಯದಿದ್ದರೆ ನನ್ನ ಹೆಸರು ಜಗದೇವರಾಯನೇ ಅಲ್ಲ.

## ದೃಶ್ಯ-೪

(ಕೆಂಪೇಗೌಡ ಯೋಚನಾ ಮಗ್ನನಾಗಿರಲು ಭೈರಯ್ಯ ಬರುವನು)

ಕೆಂಪೇಗೌಡ : ಹೋದ ಕೆಲಸವಾಯ್ತು ಭೈರಯ್ಯ.

ಭೈರಯ್ಯ : ಆಗುವುದೇನು ನಗುವವರ ಮುಂದೆ ಎಡವಿ ಬೀಳುವಂತಾಯ್ತು. ಜಗದೇವರಾಯನು ಉರಿದು ಉಪ್ಪಾದನು. ಪೊಳವನ ಪಳ್ಳಿಯವನು ನಕ್ಕನು, ಸೋಲೂರಿನವನು ವಿನಯದಿಂದ ನಟಿಸಿದನು, ಸಾಲದೇ?"

ಕೆಂಪೇಗೌಡ : ಅವರ ಅಹಂಕಾರಕ್ಕೆ ಉದಾಸೀನವೇ ಮದ್ದು!

(ಹೀಗಿರುವಲ್ಲಿ ವಿಜಯನಗರದ ಭಟ್ಟನೊಬ್ಬನು ಪತ್ರ ಕೊಡುವನು. ಓದಿದ ಭೈರಯ್ಯ)

ಭೈರಯ್ಯ : ಮಹಾಪ್ರಭುಗಳಿಗೆ ಓಲೆ.

ಕೆಂಪೇಗೌಡ : ಕೊಡು. ಹ್ಲಾಂ.... ಕೃಷ್ಣದೇವರಾಯರು ತೀರಿಕೊಂಡರೇ? ಶಿವ ಶಿವಾ! ಗಂಗಾಧರಾ, ನನ್ನಾಶಾ ಕಡಲು ನಿರಾಶೆಯಿಂದ ಬತ್ತಿತು ಬೆಳಕಿನ ಜ್ಯೋತಿ ಕೆಟ್ಟು ಗಾಡಾಂಧಕಾರವಾಯ್ತು. ವಿಜಯನಗರವನ್ನು ಶೃಂಗರಿಸಬೇಕೆಂಬ ಪ್ರಯತ್ನವನ್ನು ಅಳಿಸಲು ಕೃಷ್ಣದೇವರಾಯರಿಗೆ ಮೃತ್ಯು ದೇವತೆಯು ಎಷ್ಟುದಿನಗಳಿಂದ ಕಾದು ಕುಳಿತಿತ್ತು ವಿಧಿಯು.....?

(ಚಿಂತೆಯಲ್ಲಿರಲು ಮಿತ್ರ ವೀರಣ್ಣ ಬರುವನು)

ವೀರಣ್ಣ : ಏನು ಪ್ರಭು?

ಕೆಂಪೇಗೌಡ : ಬಾ ಮಿತ್ರ ವೀರಣ್ಣಾ - ಕೃಷ್ಣದೇವರಾಯರು ತೀರಿಕೊಂಡರಂತೆ.

ವೀರಣ್ಣ : ವಿಜಯನಗರಕ್ಕೆ ಕಳಶಪ್ರಾಯರಾಗಿದ್ದ ಅವರಿಗೆ ಮೃತ್ಯು ಎಲ್ಲಿ ಕಾದು ಕುಳಿತಿತ್ತು?

ಕೆಂಪೇಗೌಡ : ನನ್ನ ಮನಸ್ಸು ಬೇಜಾರಿನಲ್ಲಿ ಮುಳುಗಿದೆ. ವಿಶ್ರಾಂತಿಗೆ ಶಿವನ ಸಮುದ್ರದ ಹತ್ತಿರ ಹೋಗಿ ಸ್ವಲ್ಪ ಶಾಂತಿಯನ್ನು ಪಡೆಯೋಣ.

ವೀರಣ್ಣ : ಸಕಲ ಸಿದ್ಧತೆಗಳನ್ನು ಮಾಡುತ್ತೇನೆ ಪ್ರಭು.

(ಹೊರಡುವನು)

## ದೃಶ್ಯ-೫

ಕೆಂಪೇಗೌಡ : ದೇವರು ನಮಗಾಗಿಯೇ ಈ ಹೊಂಗೇ ಮರಗಳನ್ನು ಸೃಷ್ಟಿಸಿರುವನೋ ಏನೋ! ಈ ಸ್ಥಳದಲ್ಲಿ ನನ್ನ ಜೀವ ತಂಪಾಯಿತು. ಈ ಪ್ರಕೃತಿ ಸೌಂದರ್ಯ ನನ್ನನ್ನು ಸೂರೆಗೊಂಡಿದೆ ವೀರಣ್ಣ.

ವೀರಣ್ಣ : ನನ್ನ ತೊಡೆಯಮೇಲೆ ವಿಶ್ರಮಿಸಿಕೊಳ್ಳಿ ಪ್ರಭು.

ಕೆಂಪೇಗೌಡ : ಎಷ್ಟೇ ಆದರೂ ನಾವು ಬಾಲ್ಯದಿಂದಲೂ ಒಂದಾಗಿ ಬೆಳೆದ ಮಿತ್ರರು. ನಿನ್ನ ಪ್ರೀತಿಯ ಹೃದಯ ತಳದ ಆಸೆ ಆಗಲಿ ವೀರಣ್ಣಾ....

(ಮಲಗಲು ಕನಸು.... ಲಕ್ಷ್ಮಿ ಬಂದು....)

ಲಕ್ಷ್ಮಿ : "ನೆಚ್ಚಿರಲಿ, ಕೆಚ್ಚಿರಲಿ, ತುಚ್ಛತೆಯ ಕಡೆಯಿರಲಿ ಘಲಿರು.... ಘಲಿರು ಕನಸರಾಜ್ಯ ನಿನ್ನೆದೆಯ ತುಂಬಿರಲಿ" ನಾನು ಲಕ್ಷ್ಮಿ. ನಿನ್ನಿಂದ ಇಲ್ಲಿ ಸಾಮ್ರಾಜ್ಯ ಸ್ಥಾಪನೆಯಾಗಬೇಕು. ನಿನಗೆ ಒಲಿಯುತ್ತಿದ್ದೇನೆ. ನಿನಗೆ ನೆಚ್ಚಿದೆ, ಕೆಚ್ಚಿದೆ, ಮನಸ್ಸಿದೆ, ದೃಢ ಸಂಕಲ್ಪವಿದೆ. ಕೆಂಪೇಗೌಡ ಇಲ್ಲಿ ಮುಂದೆ ದೊಡ್ಡ ನಗರವಾಗುವುದು.

ಕೆಂಪೇಗೌಡ : ನಾನು ಎಂದರೇನು? ಒಂದು ಸಣ್ಣ ಕೊಂಪೆಯ ಕೆಂಪೇಗೌಡನಿಂದ ನಗರ ನಿರ್ಮಾಣ. ಇದು ಆಗದ ಮಾತು.

ಲಕ್ಷ್ಮಿ : ಮಾನವನ ಪ್ರಯತ್ನಕ್ಕಿಂತ ಮತ್ತೊಂದುಂಟೇ? ಮನಸ್ಸಿದ್ದರೆ ಮಾರ್ಗ. ದೃಢಸಂಕಲ್ಪವಿದೆ, ಕೆಚ್ಚಿದೆ. ಏಕಮನಸ್ಸು ಇದಕ್ಕೆ ಮುಖ್ಯ.

ಕೆಂಪೇಗೌಡ : ಅವೆಲ್ಲಾ ಇವೆ. ದೈವ ಬಲವೂ ಸೇರಿದರೆ ಆಗಬಹುದೇನೋ.

ಲಕ್ಷ್ಮಿ : ಆಗಿಯೇ ಆಗುವುದು.

(ಲಕ್ಷ್ಮಿ ಅದೃಶ್ಯಳಾಗುವಳು, ಕೆಂಪೇಗೌಡ ಕಣ್ಣೆಟ್ಟು)

ಕೆಂಪೇಗೌಡ : ಹ್ಲಾಂ....

ವೀರಣ್ಣ : ಏನು ಪ್ರಭು?

ಕೆಂಪೇಗೌಡ : ಕನಸು! ನಿನ್ನಿಂದ ಇಲ್ಲಿ ಸಾಮ್ರಾಜ್ಯ ಕಟ್ಟಲ್ಪಡಬೇಕು ಎಂದ ಹಾಗಾಯ್ತು. ಅದನ್ನು ನೆನೆಸಿಕೊಂಡರೆ ಹಿಂದೆ ನಾನು ಮಾಗಡಿಯಲ್ಲಿ ಬೇರೆಯವರ ಮನೆಯಲ್ಲಿ ಕೆಲಸಕ್ಕಿದ್ದಾಗ ಒಂದು ದಿನ ಬಾಳೆಯ ತೋಟದಲ್ಲಿ ಮಲಗಿರಲು ಸರ್ಪ ನನ್ನ ಮುಖದಮೇಲೆ ಹೆಡೆಯಾಡಿಸುತ್ತಿತ್ತು. ಅದನ್ನು ನೋಡಿದ ನಮ್ಮ ಯಜಮಾನರು ನೀನು ಮಹಾಪುರುಷನಾಗುವೆ ಎಂದು ಹರಿಸಿದ್ದರು.

ವೀರಣ್ಣ : ಇದರಲ್ಲಿ ಸೋಜಿಗವೇನೋ ಇದೆ. ಅದು ಇಂದು ನಿಜವಾಯ್ತೆಂದು ತೋರುತ್ತಿದೆ. ಅರಮನೆಯಲ್ಲಿ ಹೋಗಿ ವಿಚಾರಿಸೋಣ ನಡೆಯಿರಿ ಪ್ರಭು.

## ದೃಶ್ಯ-೬

(ಕೆಂಪೇಗೌಡರು ಅರಮನೆಯ ಅಂತಃಪುರದಲ್ಲಿ ಚಿಂತಾ ಮಗ್ನರಾಗಿರಲು ಬಸವಯ್ಯ ಬರುವನು)

ಕೆಂಪೇಗೌಡ : ಬನ್ನಿ..... ಬನ್ನಿ..... ನಿಮ್ಮಲ್ಲಿ ಒಂದು ವಿಷಯ ಮಾತನಾಡಬೇಕಾಗಿತ್ತು.

ಬಸವಯ್ಯ : ಏನು ಪ್ರಭು?

ಕೆಂಪೇಗೌಡ : ಶಿವನ ಸಮುದ್ರದಲ್ಲಿರಲು ಒಂದು ಕನಸಾಗಿ, ಕನಸಿನ ಲಕ್ಷ್ಮಿ ರಾಜ್ಯ ಕಟ್ಟಬೇಕು ಎಂದು ಆಜ್ಞೆ ಮಾಡಿದ್ದಾಳೆ.

ಕೆಂಪಸೋಮ : ಅದಕ್ಕೇನಂತೆ ಕನಸನ್ನು ನನಸು ಮಾಡೋಣ.

ವೀರಣ್ಣ : ಅದಕ್ಕೆ ವಿಜಯನಗರದ ಅಚ್ಯುತರಾಯರ ಅಪ್ಪಣೆ ಬೇಕು.

ಬಸವಯ್ಯ : ಅದಕ್ಕೇನಂತೆ ಎಲ್ಲರೂ ಹೋಗೋಣ. ಮಾಗಡಿ ಕೆಂಪೇಗೌಡರಿಗೆ ಯಾರು ಇಲ್ಲವೆನ್ನುತ್ತಾರೆ?

## ದೃಶ್ಯ-೭

ಅಚ್ಯುತರಾಯ: ಸ್ವಾಮಿ ದ್ರೋಹರ ಗಂಡಾ.... ಅರಿರಾಯ ಭೇರುಂಡ, ಚಿಕ್ಕರಾಯ, ಮಾಗಡಿ ಕೆಂಪೇಗೌಡರೇ ಕೃಷ್ಣದೇವರಾಯರಂತೆ ನಾನೂ ಆ ಮರ್ಯಾದೆಗಳಿಂದ ಆದರಿಸಿ ಸತ್ಕರಿಸುವೆ.

ಕೆಂಪೇಗೌಡ : ಅಪ್ಪಣೆ ಪ್ರಭು. ಕೇವಲ ಒಂದು ಸಣ್ಣ ಕೊಂಪೆಯ ಕೆಂಪೇಗೌಡನಿಗೆ ಇಷ್ಟೊಂದು ಬಿರುದಾಂಕಿತವೇ?

ಅಚ್ಯುತರಾಯ: 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಅದಿರಲಿ ತಾವು ಬಂದ ಸಮಾಚಾರ?

ಕೆಂಪೇಗೌಡ : ಪ್ರಭು, ನಾವೀಗ ಒಂದು ಹೊಸ ನಗರ ನಿರ್ಮಾಣ ಮಾಡಬೇಕೆಂಬ ಹಂಬಲದಿಂದ ತಮ್ಮ ಅನುಮತಿಯೊಡನೆ ಆಶೀರ್ವಾದ ಪಡೆದುಕೊಂಡು ಹೋಗಲು ಬಂದೆವು.

ಅಚ್ಯುತ : ನನ್ನ ಸಾಮ್ರಾಜ್ಯದ ಸಾಮಂತ ರಾಜರು ಹೊಸ ನಗರ ನಿರ್ಮಾಣ ಮಾಡುವುದೆಂದರೆ ನನಗೆ ಸಂತೋಷ. ನಿಮಗೆ ಬೇಗೂರು ಹಲಸೂರು, ಜಿಗಣಿ, ವರ್ತೂರು, ಬಾಣಾವರ, ತಾಣಳ್ಳಿಗಳನ್ನು ಕೊಟ್ಟು ಸನ್ಮಾನಿಸಿರುವೆ, ಜೊತೆಗೆ ನಮ್ಮ ಅನುಮತಿ ಆಶೀರ್ವಾದಗಳು ತಮ್ಮ ಮೇಲೆ ಸದಾ ಇರುತ್ತವೆ.

ಕೆಂಪೇಗೌಡ : ತಮ್ಮ ಆಳ ಹೃದಯಕ್ಕೆ ಹೇಗೆ ವಂದಿಸಬೇಕು ಎಂಬುದೇ ನನಗೆ ತಿಳಿಯದು. ನನ್ನ ರಕ್ತ ರಕ್ತದ ಕಣವೂ ವಿಜಯನಗರ ಸಾಮ್ರಾಜ್ಯದ ಏಳ್ಗೆಗೆ ಮೀಸಲು ಅಚ್ಯುತರಾಯರೇ.

ಅಚ್ಯುತ : ಇದೊಂದು ಭಾವವಿದ್ದರೆ ವಿಜಯನಗರದ ಏಳ್ಗೆಯಾಗುವುದು.

ಕೆಂಪೇಗೌಡ : ನಾವಿನ್ನು ಬರುವೆವು ಪ್ರಭು.

ಅಚ್ಯುತ : ವಿಜಯದಶಮಿ ಹೊತ್ತಿಗೆ ಬರಬೇಕು.

(ಹೊರಡುವರು)

## ದೃಶ್ಯ-೮

(ಚೆನ್ನಾಂಬೆ ದೇವರ ಪೂಜೆ ಮಾಡಿ ಆರತಿ ಎತ್ತುತ್ತಿರಲು ಕೆಂಪೇಗೌಡರು ಪ್ರವೇಶಿಸುವವರು)

ಚೆನ್ನಾಂಬೆ : ಹೋದ ಕಾರ್ಯ ಸಿದ್ಧಿಸಿತೇ?

ಕೆಂಪೇಗೌಡ : ನಿನ್ನ ಪೂಜಾಫಲದಿಂದ ಸಿದ್ಧಿಸಿತು. ಇನ್ನು ನಗರ ನಿರ್ಮಾಣ ಕಾರ್ಯದಲ್ಲಿ ವೀರಣ್ಣ, ಕೆಂಪಣ್ಣ ಎಲ್ಲರೂ ಅಣಿಯಾಗಬೇಕು. ನನ್ನ ಭಾರ ರಾಜ್ಯ ನೋಡಿಕೊಳ್ಳುವುದು.

ಚೆನ್ನಾಂಬೆ : ಅಷ್ಟೊಂದು ದೊಡ್ಡಭಾರ ನನ್ನ ಮೇಲೆ ಬೇಡಿ.

(ಇಬ್ಬರೂ ನಗುವರು)

## ದೃಶ್ಯ-೯

(ಲಕ್ಷ್ಮಿಯು ಹೋಗುತ್ತಿರಲು ಚೆನ್ನಾಂಬೆ)

ಚೆನ್ನಾಂಬೆ : ಲಕ್ಷ್ಮಿ....ಏನು ಇಷ್ಟೊಂದು ತಿರುಗಾಟ......

ಲಕ್ಷ್ಮಿ : ಹೀಗೆ ನನ್ನ ಕೋಣೆಯ ಕಡೆ ಹೋಗ್ತಾ ಇದ್ದೀನಿ ಅತ್ತೆಯವರೇ.

ಚೆನ್ನಾಂಬೆ : ಬಸುರಿ ಹೆಂಗಸು ಹೀಗೆಲ್ಲಾ ತುಂಬಾ ತಿರುಗಿ ಆಯಾಸ ಮಾಡ್ಕೊಳ್ಬಾರದಮ್ಮ...... ಊಟ ಆಯ್ತೇ?

ಲಕ್ಷ್ಮಿ : ಯಾವಾಗ್ಲೂ ನನ್ನೂಟ, ತಿಂಡಿ ಬಗ್ಗೆ ನನ್ನ ಚಿಂತನೇ ಮಾಡ್ತಾ ಇದ್ದೀರಿ ನೀವು, ಆದ್ರೆ ಮುಖ್ಯವಾಗಿ ಮಾವಯ್ಯನವರ ಬಗ್ಗೆ ಚಿಂತೆ ಮಾಡಿ. ಏಕೋ ಇತ್ತೀಚೆಗೆ ಅವರು ಸರಿಯಾಗಿ ಊಟಾನು ಮಾಡ್ತಾ ಇಲ್ವಂತೆ.

ಚೆನ್ನಾಂಬೆ : ಊಟ ಏನ್ಬಂತು? ನಿದ್ದೇನೂ ಮಾಡ್ತಾ ಇಲ್ಲ. ಅರ್ಧರಾತ್ರಿಯವರೆಗೂ ಮಾತಾಡ್ತಾನೆ ಇರ್ತಾರೇ. ಬೆಳಕು ಹರೀತಿದೆ ಅನ್ನುವಷ್ಟರಲ್ಲಿ ದಡಕ್ಕನೆ ಎದ್ದು ಕೂತುಕೊಂಡು ಏನೇನೋ ಕನವರಿಸ್ತಾ ಇರ್ತಾರೆ. ಯಾಕಾದ್ರೂ ಅಷ್ಟೊಂದು ತಲೆಗೆ ಹಚ್ಕೊಳ್ಬೇಕೋ ನನಗಂತೂ ಒಂದು ತಿಳೀದು. ನಾನು ಹೇಳ್ತಾನೆ ಇರ್ತೀನಿ ಊಟ ಮಾಡಿ, ತಿಂಡಿ ತಿನ್ನಿ, ಗೆಲವಾಗಿರಿ ಕೆಲಸ ಆಗುತ್ತೆ ಅಂತ. ಕೋಟೆಯನ್ನು ಕಟ್ಟಿದಮೇಲೆ ಅವರಿಗೆ ನೆಮ್ಮದಿ ಆಗುತ್ತಂತೆ. ದುರದೃಷ್ಟಕ್ಕೆ ಅದು ನಿಲ್ತಾನೆ ಇಲ್ವಂತೆ. ಆ ಕಡೆಯಿಂದ ಬಿದ್ದು ಹೋಗುತ್ತಂತ. ಅದೇನೋ ಅದೇನ್ ಕಥೇನೋ.

ಲಕ್ಷ್ಮಿ : ಜೋಯಿಸರನ್ನು ಕೇಳಿ ಒಳ್ಳೆ ಮುಹೂರ್ತದಲ್ಲಿ ಮಾಡಿಸ್ಲಿಲ್ಲ ಅಂತ ಕಾಣುತ್ತೆ.

ಚನ್ನಾಂಬೆ : ಏನ್ಮಾಡಿದ್ರೊ ಎತ್ತು ಮಾಡಿದ್ರೋ.....

ಲಕ್ಷ್ಮಿ : ಅವರು ಊಟ ನಿದ್ದೆ ಬಿಡ್ತಾರೆ ಅಂತ ನೀವೂ ಬಿಟ್ಟು ಇಷ್ಟೊಂದು ಕೊರಗಿ ದಿನದಿನಕ್ಕೆ ಸಣ್ಣವಾಗಿದ್ದೀರಲ್ಲಾ. ಯಾವ ದೇವರಿಗೆ ಪ್ರೀತಿ?

ಚನ್ನಾಂಬೆ : ಆ ಭೈರವೇಶ್ವರ ಏನ್ಮಾಡ್ತಾನೋ ನೋಡೋಣ. ಅವರು ಸಮಾಧಾನವಾದ್ರೆ..... ನನಗೂ ನೆಮ್ಮದಿ ಶಾಂತಿ ಜೀವನದಲ್ಲಿ ಅವ್ರೇ ಸಮಾಧಾನ ಬಂದೀತು?

ಲಕ್ಷ್ಮಿ : ಆ ಕೆಂಪಮ್ಮ ಭೈರವೇಶ್ವರರು ಒಳ್ಳೆಯದನ್ನು ಮಾಡ್ತಾರೆ ಅಂತ ನನ್ನ ಅಂತರಾತ್ಮ ನುಡಿಯುತ್ತೆ ಅತ್ತೆಯವರೇ.

ಚನ್ನಾಂಬೆ : ದೇವರ ದಯೆಯಿಂದ ಅಷ್ಟಾದ್ರೆ ಸಾಕಮ್ಮ ನಾವೆಲ್ಲಾ ಹಂಬಲಿಸುವುದೂ ಅಷ್ಟಕ್ಕೆ.

ಲಕ್ಷ್ಮಿ : ಈಗ ನೀವೂ ಊಟ ಮಾಡುವ್ರಂತೆ ನಡೀರಿ.....

ಚನ್ನಾಂಬೆ : ನಾನು ಮಾಡ್ತೇನೆ ನಡೆಯಮ್ಮಾ ಲಕ್ಷ್ಮಿ..... ನಿನ್ನ ಗಂಡನನ್ನು ಮೊದ್ಲು ನೋಡು ಹೋಗು. ನೀನ್ಯಾಕೇ ಇದ್ನೆಲ್ಲಾ ತಲೆಗೆ ಹಚ್ಕೊಳ್ತಿಯಾ ನಡೆ ನಡೆ....

ಲಕ್ಷ್ಮಿ : ಇದು ನಮ್ಮ ಪ್ರಶ್ನೆಯಲ್ಲ ನೋಡಿ ಅತ್ತೆಯವರೇ. ನಮ್ಮ ರಾಜ್ಯದ ಪ್ರಜೆಗಳ ಹಿತಚಿಂತನೆಯ ದೃಷ್ಟಿ. ಅದಕ್ಕಾಗಿ ಎಲ್ಲರೂ ಚಿಂತನೆ ಮಾಡಬೇಕಾದ ವಿಷಯವೇ.

ಚನ್ನಾಂಬೆ : ಹುಚ್ಚು ಹುಡುಗಿ.... ನಡೆ ನಡೆ.... (ನಗುವಳು)

ಲಕ್ಷ್ಮಿ : ಆಗ್ಲಿ ಅತ್ತೆಯವರೇ

(ಹೊರಡುವಳು)

ಚನ್ನಾಂಬೆ : ಲಕ್ಷ್ಮಿ ನಿಜಕ್ಕೂ ನೀನು ನಮ್ಮ ಮನೆಯ ಲಕ್ಷ್ಮಿ ಜನರು ತಮ್ಮ ಮನೆಯ ಚಿಂತೆ ಮಾಡುವುದೇ ಕಷ್ಟ. ಅಂತಹುದರಲ್ಲಿ ದೇಶದ ಬಗ್ಗೆ ಚಿಂತೆ ಮಾಡುವುದು ಅಪರೂಪವೇ. ಎಲ್ಲರೂ ಸ್ವಾರ್ಥಕ್ಕಾಗಿ ಚಿಂತೆ ಮಾಡುವುದನ್ನು ಒಪ್ಪಬಹುದು. ಆದರೆ ಹೀಗೆ ದೇಶ, ದೇಶದ ಪ್ರಜೆಗಳ ಚಿಂತನೆ ಮಾಡುವವರು ಅಪರೂಪವೇ. ಅಂಥ ಸೊಸೆಯನ್ನು ಪಡೆದ ನಾವೇ ಧನ್ಯರು..... ಕೆಂಪಮ್ಮಾ..... ಭೈರವೇಶ್ವರಾ...... ಅವರೊಬ್ಬರು ಗೆಲುವಾಗಿದ್ದರೆ ಸಾಕು.

## ದೃಶ್ಯ-೧೦

(ಲಕ್ಷ್ಮಿ ತನ್ನ ಕೋಣೆಗೆ ಹೋಗಿ ಕುಳಿತಳು. ಕಣ್ಣುಗಳಿಂದ ನೀರು ಹಾಗೆಯೇ ಉದುರುತ್ತಿತ್ತು. ಅಷ್ಟರಲ್ಲಿ ಇಮ್ಮಡಿ ಕೆಂಪೇಗೌಡ ಬಂದು ಆಕೆಯನ್ನು ನೋಡಿ)

ಇಮ್ಮಡಿ ಕೆಂಪೇಗೌಡ : ಲಕ್ಷ್ಮೀ-

ಲಕ್ಷ್ಮೀ : (ಸೆರಗಲ್ಲಿ ಕಣ್ಣನ್ನು ಒರಸಿಕೊಂಡು ಎದ್ದು) ಬನ್ನಿ - ಬನ್ನಿ

ಇ. ಕೆಂಪೇ : ಕುಳಿತುಕೋ...... ಕುಳಿತುಕೋ.... ಅದಿರಲಿ ಕಣ್ಣಲ್ಲಿ ಏಕೆ ನೀರು?

ಲಕ್ಷ್ಮಿ : ಏನಿಲ್ಲ.....

ಇ. ಕೆಂಪೇ : ಏಕೋ ಒಂದು ಥರ ಸಪ್ಪಗೆ ಇದ್ದೀಯಾ?

ಲಕ್ಷ್ಮಿ : ಏನಿಲ್ಲ ಬನ್ನಿ.... ಕುಳಿತುಕೊಳ್ಳಿ.....

ಇ. ಕೆಂಪೇ : ಯಾರಾದರೂ ಏನಾದರೂ ಅಂದರೆ?

ಲಕ್ಷ್ಮಿ : ಇಲ್ಲ ಏಕೆ?

ಇ. ಕೆಂಪೇ : ಮತ್ತೆ ಮುಖದಲ್ಲಿ ಚಿಂತೆ ಎದ್ದು ಕಾಣುತ್ತಿದೆಯಲ್ಲಾ ಏಕೆ?

ಲಕ್ಷ್ಮಿ : ನನ್ನೊಬ್ಬಳಿಗೇ ಅಲ್ಲ ಎಲ್ಲರಿಗೂ.....

ಇ. ಕೆಂಪೇ : ಕಾರಣ.....?

ಲಕ್ಷ್ಮಿ : ಕೋಟೆಯ ಕೆಲಸ ಮುಗಿಯದಿರುವುದು.

ಇ. ಕೆಂಪೇ : ಕೋಟೆ ಮುಗಿಯದುದ್ದಕ್ಕೂ, ನೀವೆಲ್ಲಾ ಚಿಂತೆ ಮಾಡಲಿಕ್ಕೂ ಏನು ಸಂಬಂಧ? ಮಾಡ್ತೀವಿ..... ಮುಗಿಯುತ್ತೆ. ಅದರ ಕೆಲಸಕ್ಕೂ ನೀನು ಸಪ್ಪಗಿರಕ್ಕೂ ಏನು ಸಂಬಂಧ?

ಲಕ್ಷ್ಮಿ : ಮಾವಯ್ಯನವರನ್ನು ನೀವು ಸರಿಯಾಗಿ ಗಮನಿಸಿಲ್ಲ ಅಂತ ಕಾಣುತ್ತೆ.

ಇ. ಕೆಂಪೇ : ಅವರು ಯಾವುದನ್ನು ತಲೆಗೆ ಹೆಚ್ಚು ಹಚ್ಕೊಳ್ತಾರೆ. ಯಾಕಾದ್ರೂ ಅಷ್ಟು ಯೋಚನೆ ಮಾಡಬೇಕು? ನನಗರ್ಥವಾಗ್ತಾ ಇಲ್ಲ. ಅಳಬೇಡ..... ಚಿನ್ನಾ ನಾನಿದ್ದೇನೆ. ಆ ಕಾರ್ಯವನ್ನು ನಾನು ಮಾಡಿ ಮುಗಿಸಲಿಕ್ಕೆ ಪ್ರಯತ್ನ ಮಾಡ್ತೀನಿ, ಆಯ್ತಾ?

(ತಲೆಯನ್ನು ನೇವರಿಸಿ ಅಪ್ಪಿಕೊಳ್ಳಲು)

ಲಕ್ಷ್ಮಿ : ಸ್ವಾಮಿ ತಾವು ಇಷ್ಟೊಂದು ಪ್ರೀತಿಸುವುದು ಒಳ್ಳೆಯದಲ್ಲ.

ಇ. ಕೆಂಪೇ : ಹಾಗಂದ್ರೇನು? ನಾನು ನಿನ್ನನ್ನು ಸದಾ ಕಾಲ ಪ್ರೀತಿಸುವುದೇ? ಖಂಡಿತ.....!

ಲಕ್ಷ್ಮಿ : ನನ್ನನ್ನು ಕಂಡ್ರೆ ಅಷ್ಟೊಂದು ಪ್ರೀತಿನಾ ನಿಮಗೆ?

ಇ. ಕೆಂಪೇ : ಹಾಗಾದ್ರೆ, ಅಷ್ಟು ದಿನಗಳಿಂದ ಪ್ರೀತಿ ಇಲ್ಲ ಅಂತ ತಿಳ್ಕೊಂಡಿದ್ಯಾ?

ಲಕ್ಷ್ಮಿ : ಇಲ್ಲವಾಗಿದ್ದರೆ ಇಷ್ಟೊಂದು ರಮಿಸುತ್ತಿದ್ರಾ?

ಇ. ಕೆಂಪೇ : ಉಂಟೇ ಉಂಟೇ.... ನೀನೇ ನನ್ನ ಬಾಳಿನ ಸರ್ವಸ್ವ.

ಲಕ್ಷ್ಮಿ : ನಾನು ಹೀಗಂತಾಳೇ ಅಂತ ನೀವು ಬೇಜಾರು ಮಾಡಿಕೊಳ್ಳಬೇಡಿ. ನಾನೊಂದು ಮಾತು ಹೇಳಬೇಕು ಅಂತಿದ್ದೀನಿ ಹೇಳ್ಲಾ?

ಇ. ಕೆಂಪೇ : ಏನದು ಹೇಳು ಲಕ್ಷ್ಮಿ?

ಲಕ್ಷ್ಮಿ : ನಾನು ಪೆರಿಗೆಯಲ್ಲಿ ಇಹವನ್ನು ತ್ಯಜಿಸಿಬಿಟ್ರೆ....

ಇ. ಕೆಂಪೇ : ಲಕ್ಷ್ಮಿ.... ಸಾಕು ನಿನ್ನ ಮಾತು.... ಅಂಥ ಅಪಶಕುನದ ಮಾತು ಈಗ್ಯಾಕೆ?

ಲಕ್ಷ್ಮಿ : ಮುಂದೆ ಆಗೋವನ್ನು ಯಾರು ಕಂಡಿದ್ದಾರೆ? ಆಕಸ್ಮಿಕವಾಗಿ ನಾನು ನಿಮ್ಮಿಂದ ದೂರವಾದರೆ ನನ್ನದೊಂದು ಆ ಸೇನಾ ಪೂರೈಸ್ತೀರಾ.....?

ಇ. ಕೆಂಪೇ : ಲಕ್ಷ್ಮಿ ಸುಮ್ಮನೆ ಇಲ್ಲದೇ ಹೋದದ್ದೆಲ್ಲಾ ಹಂಬಲಿಸಬೇಡ್ವೆ? ಏನೂ ಆಗೋಲ್ಲ. ಸುಮ್ನಿರು, ಅಷ್ಟು ದಿನಗಳಿಂದ್ಲೂ ಆಗದದ್ದು ಈ ಹೊತ್ತೇನು ಆಯ್ತು?

ಲಕ್ಷ್ಮಿ : ಹಾಗೇನಾದ್ರೂ ಆದ್ರೆ ಕೋಟೆಯ ಕೆಲಸವನ್ನು ಸಂಪೂರ್ಣ ಮಾಡಿ. ಅಷ್ಟೇ ನನ್ನ ಕೊನೆ ಆಸೆ!

ಇ. ಕೆಂಪೇ : ನಿನಗೆ ಜ್ಞಾನ ಯಾವ ಕಡೆ ಇದೆ?

ಲಕ್ಷ್ಮಿ : ಕೋಟೆ ಭವಿಷ್ಯದ ಕಡೆ!

ಇ. ಕೆಂಪೇ : ಗಂಡಸರಾದ ನಮಗಿರಬೇಕಾದ ಚಿಂತೆ ನಿನಗ್ಯಾಕೆ?

ಲಕ್ಷ್ಮಿ : ಗಂಡಸರಾದ ನೀವೆಲ್ಲಾ ಚಿಂತೆ ಮಾಡ್ತಾರೆ ಅಂತ್ಲೇ, ನಾವು ಆ ಕೆಲಸ ಬೇಗನೆ ಆದ್ರೆ ಸಾಕು, ನೀವು ನೆಮ್ಮದಿಯಾಗಿರಬಹುದು ಅಂತ. ಸದಾ ದೇವರಲ್ಲಿ ಬೇಡ್ತಾ ಇದ್ದೇನೆ. ನೀವು ಚನ್ನಾಗಿದ್ರೆ ನಾವು ಚನ್ನಾಗಿದ್ದಂತೆ. ಅದಕ್ಕೂ ಮಿಗಿಲಾಗಿ ನಮ್ಮ ಪ್ರಜೆಗಳು ನೆಮ್ಮದಿಯಾಗಿದ್ರೆ ನಾವೆಲ್ಲಾ ನೆಮ್ಮದಿಯಾಗಿದ್ದಂತೆ.

ಇ. ಕೆಂಪೇ : ವೀರತ್ವದ ಕುರುಹು ನಿನ್ನಲ್ಲಿ ಮೂಡಿಬಂದಿದೆ ಲಕ್ಷ್ಮಿ ಆದರೆ ನೀನು ಅದಕ್ಕಾಗಿ ಚಿಂತಿಸಬೇಕಿಲ್ಲ. ಪ್ರಜೆಗಳ ಹಿತಚಿಂತನೆಗೆ ನಾವೆಲ್ಲಾ ಇದ್ದೇವೆ. ಅಪ್ಪಾಜಿ ಪ್ರಜೆಗಳಿಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ. ಅಂದಮೇಲೆ

ಆ ಯೋಚನೆಯನ್ನು ಹೆಂಗಸರಿಗೆಲ್ಲಾ ಕೊಡಬೇಕು ಅಂತ ನಾನು ಮನಸ್ಸು ಮಾಡಿಲ್ಲ.

ಲಕ್ಷ್ಮಿ : ಮಾವಯ್ಯನವರ ಶ್ರಮ, ಚಿಂತೆ ನೋಡಿಯೇ ನಾನು ನಿಮಗೆ ಈ ವಿಷಯ ಹೇಳಿದ್ದು. ಅವರಿಗಂತೂ ಹಗಲಿರುಳೂ ಅದೇ ಚಿಂತೆಯಂತೆ. ಕೋಟೆಯ ಕಾರ್ಯ ಮುಗಿದರೆ ನನ್ನ ಜೀವ ಸಾರ್ಥಕ ಎಂದು ಹೇಳುತ್ತಿದ್ದಾರಂತೆ. ಅದಕ್ಕಾಗಿ ನಾವೂ ಚಿಂತಿಸುತ್ತಿರುವುದು.

ಇ. ಕೆಂಪೇ : ಅದನ್ನು ನಾನು ನೋಡಿಕೊಳ್ಳುತ್ತೇನೆ ಸರಿಯಾ?

ಲಕ್ಷ್ಮಿ : ಬಹಳ ಸಂತೋಷ!

ಇ. ಕೆಂಪೇ : ಇಂದಿನ ಶ್ರಾವಣ ಮಾಸದ ಚಂದ್ರನ ಬೆಳದಿಂಗಳು ಆಗಸದಲ್ಲಿ ಚೆಲ್ಲಿದಂತೆ ನಿನ್ನ ಮೊಗದಲ್ಲಿ ಕಾಂತಿ ಹೊರ ಹೊಮ್ಮುತ್ತಿದೆ. ಇದಕ್ಕೆ ಕಾರಣವಾದರೂ ಏನು ಲಕ್ಷ್ಮಿ?

ಲಕ್ಷ್ಮಿ : ಇಮ್ಮಡಿ ಕೆಂಪೇಗೌಡರ ಕಣ್ಣಿಗೆ ಹಾಗೆಯೇ.

ಇ. ಕೆಂಪೇ : ಆ ರಸಿಕನ ರಸಿಕತೆಗೆ ಕಾರಣವಿದ್ದಿರಬೇಕು. ಅಲ್ಲವೇ?

ಲಕ್ಷ್ಮಿ : ಅದನ್ನು ಹೇಳುವುದಿಲ್ಲ.

ಇ. ಕೆಂಪೇ : ನೀನು ಹೇಳದಿದ್ದರೆ ಗೊತ್ತಾಗುವುದಿಲ್ಲವೇ?

ಲಕ್ಷ್ಮಿ : ಸಾಕು ಹೋಗಿ...... (ಹೊರಡುವಳು)

(ಹಜಾರಕ್ಕೆ ಬರುತ್ತಿರಲು ಚಿಂತೆಯಿಂದ ಕುಳಿತ ಮಾವನನ್ನು ನೋಡಿ)

ಲಕ್ಷ್ಮಿ : ಮಾವಯ್ಯ.... ಯಾಕೆ ಚಿಂತೆ ಮಾಡ್ತಾ ಕುಳಿತುಬಿಟ್ರಿ. ಊಟವನ್ನೂ ಮಾಡಲಿಲ್ಲವಂತೆ. ಏಳು ಕೊಪ್ಪರಿಕೆ ಹಣ ದೊರೆತಿದೆ. ಮತ್ತೆ ಕಟ್ಟಿಸಿದರಾಯ್ತು. ಕೋಟೆ ಉರುಳಿತು ಅಂತ ಯೋಚನೆ ಏಕೆ ಮಾಡಬೇಕು?

ಕೆಂಪೇಗೌಡ : ಕೋಟೆ ಕಟ್ಟುವವರೆಗೂ ನನ್ನ ಮನಸ್ಸಿಗೆ ಸಮಾಧಾನವಿಲ್ಲಮ್ಮ ಲಕ್ಷ್ಮಿ ಎಷ್ಟು ಕಟ್ಟಿದ್ರೂ ಬೀಳ್ತಾನೆ ಇದೆ. ಅದೇ ಚಿಂತೆಯಮ್ಮ ನಾನು ಊಟ ಮಾಡ್ತೇನೆ ನೀನು ಹೋಗಮ್ಮ

ಲಕ್ಷ್ಮಿ : ಆಗ್಩ಿ ಮಾವಯ್ಯ

(ತನ್ನ ಕೋಣೆಗೆ ಹೋಗುವಾಗ ಕೆಂಪಿ ಮಾತು ಪ್ರತಿಧ್ವನಿಸುವುದು)

ಧ್ವನಿ : "ತುಂಬಿದ ಬಸುರು ಹೆಂಗಸನ್ನು ಬಲಿಕೊಟ್ರೆ ಅದು ಹ್ಯಾಗೆ ನಿಲ್ಲೋಲ್ಲ ನಾನು ನೋಡ್ತೇನೆ." ಹೌದು .... ಕೆಂಪಿ ಹೇಳಿದ್ದು ನಿಜವಿರಬೇಕು.

ನನ್ನ ಮನಸ್ಸು ನೆಮ್ಮದಿಯಲ್ಲಿಲ್ಲ. ಕೋಟೆ ಕಟ್ಟುವವರಿಗೆ ನನಗೆ ಸಮಾಧಾನವಿಲ್ಲ. ಅದೋ ನೋಡು ಆ ಎಣ್ಣೆ ತೀರಿದ ದ್ವೀಪ ಪ್ರಜ್ವಲಿಸಿ ಕೆಡುತ್ತಿದೆ. ಹಾಗೇ ಜೀವನ ನಶ್ವರ. ನೀನು ಬಲಿಯಾದರೆ ಈ ಕೋಟೆ ನಿಂತು ಅನೇಕ ಪ್ರಜೆಗಳು ಸುಖಪಡುತ್ತಾರೆ. ನಿನಗೆ ಇಹಪರಗಳಲ್ಲಿ ಕೀರ್ತಿ ಬರುತ್ತದೆ. ಎಂದಾದರೊಂದು ದಿನ ಗೆದ್ದಲು ತಿನ್ನುವ ದೇಹ, ದೇಶದ ಹಿತಕ್ಕಾಗಿ ಅರ್ಪಿತವಾಗಲಿ. ಇನ್ನೂ ತಡವೇಕೆ? ಮುಂದಿಡು ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಡ.

ಲಕ್ಷ್ಮಿ : ಹೊರಟೆ.... ಹೊರಟೆ.... ಜೈ ಭೈರವೇಶ್ವರಾ.... ಜೈ ಗಂಗಾಧರೇಶ್ವರಾ.

(ಹೊರಡುವಳು. ಕೋಟೆಯ ಮೇಲಿಂದ ಹಾರಿ ಪ್ರಾಣವನ್ನು ಬಲಿ ಕೊಡುವಳು)

## ದೃಶ್ಯ-೧೧

(ಚಿಂತೆಯಿಂದ ಕೆಂಪೇಗೌಡರು ಅಂತಃಪುರದಲ್ಲಿ ಕುಳಿತಿರಲು ಭೈರಯ್ಯ ಬಂದು)

ಭೈರಯ್ಯ : ಪ್ರಭೂ.... ಲಕ್ಷ್ಮಿಯವರು....

ಕೆಂಪೇಗೌಡ : ಹೆರಿಗೆ ಬೇನೆಯಾಗಿದೆಯೇನು?

ಭೈರಯ್ಯ : ಅಲ್ಲ ಪ್ರಭೂ.... ಕೋಟೆಯಿಂದ ಬಿದ್ದು ರಕ್ತದ ಮಡುವಿನಲ್ಲಿದ್ದಾರೆ ಪ್ರಭು.

ಕೆಂಪೇಗೌಡ : ಹ್ಹಾಂ.... ಲಕ್ಷ್ಮೀ.....

(ಅಷ್ಟರಲ್ಲಿ ಇಮ್ಮಡಿ ಕೆಂಪೇಗೌಡನು ಲಕ್ಷ್ಮಿಯನ್ನು ರಥದಲ್ಲಿ ತಂದು ಮುಖದಲ್ಲಿ ನಿಂತಿದ್ದಾನೆ.)

ಚನ್ನಾಂಬೆ : ಅಯ್ಯೋ..... ಲಕ್ಷ್ಮೀ.....

ಇ. ಕೆಂಪೇ : ಅಮ್ಮ ದೇಶದ ಹಿತಕ್ಕೆ ದೇಹವನ್ನು ಅರ್ಪಿಸಿದಳು ದಾನಿ. ಆಕೆಯ ಜನ್ಮ ಇಹ ಪರಗಳಲ್ಲಿ ಸಾರ್ಥಕವಾಯಿತು ತಾಯೇ. ಆಕೆಯು ನಗುತ್ತ, ನಗುತ್ತಾ ಹೊರಟಳು. ಆದರೆ ನಮಗೆ ದುಃಖವನ್ನು ಕೊಟ್ಟು, ನೆನಪೊಂದನ್ನು ಇಟ್ಟಳು. ಇನ್ನೆಷ್ಟು ಚಿಂತಿಸಿದರೂ ಲಕ್ಷ್ಮಿ ಬರುವವಳಲ್ಲ, ಪುಷ್ಪವನ್ನು ಅರ್ಪಿಸಿ ಮುತ್ತೈದೆಯನ್ನು ಕಳುಹಿಸಿಕೊಡಿ.

(ಎಲ್ಲರೂ ಹೂವನ್ನು ಎರಚಿ ಕಣ್ಣೀರ್ಗರೆಯುವರು)

## ದೃಶ್ಯ-೧೨

(ಕೆಂಪಸೋಮಯ್ಯ ಅಣ್ಣ ಕೆಂಪೇಗೌಡನ ಹತ್ತಿರ ಬಂದು)

ಕೆಂಪಸೋಮ : ಕೋಟೆಯ ನಿರ್ಮಾಣದಲ್ಲಿ ಯೋಚಿಸಿ ಬಳಲಿದ್ದೀರಿ. ಈಗ ಲಕ್ಷ್ಮಿಯ ಸಾವಿನಿಂದ ಮತ್ತಷ್ಟು ಕೃಶರಾದಿರಿ. ನೀವು ವಿಶ್ರಾಂತಿ ತೆಗೆದುಕೊಳ್ಳುವುದು ಉತ್ತಮ. ಕೋಟೆ ಈಗ ಭದ್ರವಾಗಿ ನಿಂತಿದೆ.

ಕೊಂಪೇಗೌಡ : ಏನಾದರಾಗಲಿ ಬಿಡು ಕೆಂಪಸೋಮಯ್ಯ ಇನ್ನು ಮೇಲೆ ನನಗೆ ವಿಶ್ರಾಂತಿಯೇ. ರಾಮಗಿರಿಯನ್ನು ಬಸವಯ್ಯನೂ, ಹುತ್ತರೀದುರ್ಗವನ್ನು ನೀನೂ ನೋಡಿಕೊಳ್ಳುವುದು. ನಾನು ಶಿವಗಂಗೆಗೆ ಹೋಗುವೆ ವಿಶ್ರಾಂತಿಗಾಗಿ.

ಬಸವಯ್ಯ : ಅಪ್ಪಣೆ ಪ್ರಭು.

ವೀರಣ್ಣ : ಕೃಷ್ಣದೇವರಾಯರ ನಂತರ ವಿಜಯನಗರದ ಆಡಳಿತದಲ್ಲಿ ಬಿಗಿಯೇ ತಪ್ಪಿದೆಯಂತೆ. ತಮ್ಮ ಮೇಲೆ ಜಗದೇವರಾಯನೇ ಮೊದಲಾದ ಪಿಸುಣರ ಮಾತುಗಳಿಂದ ಚಕ್ರವರ್ತಿಗೆ ಅನುಮಾನ ಬಂದಿದೆಯಂತೆ. ರಾಜ್ಯಾಡಳಿತ ಪ್ರಜಾ ಹಿತಕ್ಕೋಸ್ಕರ ಈ ಅನುಮಾನ ಪರಿಹಾರವಾಗಬೇಕಾಗಿದೆ. ನಾನು ಆ ಕಾರ್ಯ ಮಾಡಬಲ್ಲೆ.

ಕೆಂಪೇಗೌಡ : ಕೃಷ್ಣದೇವರಾಯರ ಅಳಿಯ ರಾಮರಾಯನ ಹಿಡಿತದಲ್ಲಿ ವಿಜಯನಗರವಿದೆ. ಆತ ಕ್ರೂರಿ. ದರ್ಪಿಷ್ಟ, ನಿಷ್ಕರುಣಿ. ಆತನ ಕೈಗೊಂಬೆ ಸದಾಶಿವರಾಯ. ಅದು ನನಗೆ ಮೊದಲೇ ಗೊತ್ತಿತ್ತು. ಪ್ರಜೆಗಳ ಹಿತಕ್ಕೋಸ್ಕರ ಒಳ್ಳೆಯದನ್ನು ಮಾಡಿ ಹೋಗಿ. ಮುಂದೆ ಬರುವುದನ್ನು ಆಮೇಲೆ ನೋಡೋಣ.

ವೀರಣ್ಣ : ಆಗಲೀ ಪ್ರಭು......

## ದೃಶ್ಯ-೧೩

(ವಿಜಯನಗರದ ರಾಮರಾಯರ ಆಸ್ಥಾನಕ್ಕೆ ಜಗದೇವರಾಯನು ಬರುತ್ತಾನೆ)

ರಾಮರಾಯ : ಬನ್ನಿ..... ಬನ್ನಿ.... ಜಗದೇವರಾಯರೇ ವಿಜಯನಗರದವರೆಗೆ ತಾವು ದಯಮಾಡಿಸಿರುವುದು ಬಹಳ ಸಂತಸದ ಸಂಗತಿ. ತಾವು ಹದುವಳೇ?

ಜಗದೇವ : ತಮ್ಮ ಕರುಣೆಯಿಂದ

ರಾಮರಾಯ : ಏನು ವಿಶೇಷ?

ಜಗದೇವ : ತಮಗೆ ತಿಳಿದಂತೆ ಕೆಂಪೇಗೌಡ ನಡತೆ ಕೆಟ್ಟಿದೆ ಎಂಬುದು ನಿಜವಷ್ಟೆ. ಕ್ಷಾಮ ಬಂದಿದ್ದರೂ ಸಹ ಬೊಕ್ಕಸದಲ್ಲಿ ಹಣವನ್ನು ಶಿವಗಂಗೆ, ಹುತ್ತರೀದುರ್ಗ, ಸಾವನದುರ್ಗ, ಹುಲಿಯೂರು ದುರ್ಗವೇ ಮೊದಲಾದವುಗಳಲ್ಲಿ ಶೇಖರಿಸಿಕೊಂಡು, ಕ್ಷಾಮದಲ್ಲಿ ಉಪಯೋಗಿಸುತ್ತಿಲ್ಲವಂತೆ.

ರಾಮರಾಯ : ಹೌದೇ....

ಜಗದೇವ : ಏಕೆ ಮಾಡಬಾರದೇ?

ರಾಮರಾಯ : ಮಾಡಬೇಕು.

ಜಗದೇವ : ನಿಮಗೆ ತಿಳಿಸಲಿಲ್ಲವೇ?

ರಾಮರಾಯ : ಇಲ್ಲ, ಈಗ ಏನು ಮಾಡಬೇಕೆಂಬುದೇ ನನಗೆ ತೋಚುತ್ತಿಲ್ಲ. ಇದಕ್ಕೆ ಯುದ್ಧವೊಂದೇ ದಾರಿ.

ಜಗದೇವ : ಅಷ್ಟಕ್ಕೇಕೆ ಹೋಗುತ್ತೀರಿ ಅವರನ್ನು ಉಪಾಯದಿಂದ ಕರೆಸಿ ಬಂಧಿಸಿದರಾಯಿತು.

ರಾಮರಾಯ : ಒಳ್ಳೆಯ ಉಪಾಯ.

(ಇಬ್ಬರೂ ನಗುವರು)

## ದೃಶ್ಯ-೧೪

(ಕೆಂಪೇಗೌಡರು ಗಂಗಾಧರ ದೇವಾಲಯದ ಹಜಾರದಲ್ಲಿ ಕುಳಿತಿರಲು ಭಟನು ಪತ್ರ ಒಂದನ್ನು ತಂದುಕೊಟ್ಟು)

ಭಟ : ಮಹಾಪ್ರಭುಗಳಿಗೆ ಓಲೆ ಬಂದಿದೆ.

(ಕೆಂಪೇಗೌಡರು ಪತ್ರವನ್ನು ಓದುವರು)

ಅಣ್ಣಯ್ಯನವರಿಗೆ ಬಸವಯ್ಯನ ಪ್ರಣಾಮಗಳು,

ಬಸವಯ್ಯ ಕೆಂಪಸೋಮಯ್ಯ ಅಷ್ಟು ದಿನಗಳಿಂದಲೂ ನಿಮಗೆ ಭುಜವಾಗಿ ನಿಂತು ಹೋರಾಡಿ, ಪೀಠಕ್ಕೆ ತಮ್ಮನ್ನು ಅಲಂಕರಿಸಿದುದಕ್ಕೆ ಇದೇ ನೀವಿತ್ತ ಪ್ರಾಯಶ್ಚಿತ್ತ. ಹುತ್ತರಿದುರ್ಗದ ಬಂಧೀಖಾನೆಗೆ ಕೆಂಪಯ್ಯನ್ನೂ, ರಾಮಗಿರಿ ಬಂಧೀಖಾನೆಗೆ ನನ್ನನ್ನೂ ಹಾಕಿ, ತಮ್ಮ ಪುತ್ರನಿಗೆ ಪಟ್ಟಾಭಿಷೇಕ ಮಾಡಿಸಲು ಒಳಗೊಳಗೆ ಸಿದ್ಧತೆ ನಡೆಸುತ್ತಿರುವುದು ಸರಿಯೆ? ಸರಿಸಮಾನರಾದ ಇಬ್ಬರು ತಮ್ಮಂದಿರಿರುವಾಗ ಹೀಗೆ ಮಾಡಿದರೆ ನೆರೆ ಹೊರೆಯ ಪಾಳೇಗಾರರು ಹೇಸಿ ನಗುವುದಿಲ್ಲವೇ? ಸರಿಯಾದ ಉತ್ತರ ಬರದಲ್ಲಿ ಸಕಲ ಸಿದ್ಧತೆಗಳು ನಮ್ಮಿಂದಲೂ ಆಗುವುದೆಂದು ತಿಳಿಯಿರಿ.

(ಕಣ್ಣೀರು ಸುರಿಸುತ್ತಾ) ಈ ರೀತಿ ಪತ್ರವನ್ನು ಬಸವಯ್ಯನು ಬರೆಯುತ್ತಾನೆಂದು ಕನಸಲಿಲ್ಲ ನೆನಸಿರಲಿಲ್ಲ ಪಿಸುಣರ ಮಾತಿಗೆ

ಕಿವಿಗೊಟ್ಟಂತೆ ಕಾಣುತ್ತದೆ. ವಿಧಿಯಾಟ ಹೇಗೆ ನಡೆಯುವುದೋ ನಡೆಯಲಿ. ನಾನು ಪತ್ರ ಬರೆಯುವೆ.

(ಕೂಡಲೇ ಪತ್ರ ಬರೆಯುವನು)

ಪ್ರೀತಿಯ ತಮ್ಮನೇ, ಶಿವಗಂಗೆ

ನಿನ್ನ ಪತ್ರ ತಲುಪಿ ನನಗೆ ಎಲ್ಲವೂ ಅರ್ಥವಾಯಿತು. ಹೆಂಡತಿಯನ್ನು ಕಳೆದುಕೊಂಡ ನನ್ನ ಮಗನೂ ಇದಕ್ಕೆ ಸಿದ್ಧವಿಲ್ಲ. ಇದು ಪಿಸುಣರ ಮಾತೇ. ಬೇಕಾದರೆ ನಿನಗೇ ಪಟ್ಟ ಕಟ್ಟುವೆ. ನಾನೀಗ ಶಿವಗಂಗೆಯ ಕ್ಷಾಮವನ್ನು ನೀಗಿಸುವ ಪ್ರಯತ್ನದಲ್ಲಿದ್ದೇನೆ. ಇಲ್ಲದಿದ್ದರೆ ನಾನೇ ನಿನ್ನ ಸಮಕ್ಷಮ ಮಾತಾಡುತ್ತಿದ್ದೆ. ಯಾವುದಕ್ಕೂ ನೀನು ಭೇಟಿಯಾಗುವುದು ಉತ್ತಮ.

ನಿನ್ನ ಪ್ರೀತಿಯ ಅಣ್ಣ

**ಕೆಂಪೇಗೌಡ**

(ಅಷ್ಟರಲ್ಲೇ ಮತ್ತೊಂದು ಪತ್ರಬಂದು, ಅದನ್ನು ಓದಲನುವಾಗುವನು ಆ ಸಮಯಕ್ಕೆ ಸರಿಯಾಗಿ ಚೆನ್ನಾಂಬೆಯೂ ಬರುವಳು)

ಮಹಾಶಯರೇ,

ಮಾಗಡಿಯ ಸಾಮಂತರಾಜ ಶ್ರೀಮಾನ್ ಕೆಂಪೇಗೌಡರ ಸನ್ನಿಧಾನಕ್ಕೆ ರಾಮರಾಜರ ಆದರದ ಆಹ್ವಾನ. ತಮಗೆ ಮೊದಲೇ ತಿಳಿಸಿದಂತೆ ವಿಜಯದಶಮಿ ಹೊತ್ತಿಗೆ ವಿಜಯನಗರಕ್ಕೆ ಸಕುಟುಂಬ ಸಪರಿವಾರ ಸಮೇತ ಆಗಮಿಸಬೇಕೆಂದು ಬಯಸುವೆ,

ಇತಿ ನಿಮ್ಮವರೇ ಆದ,

**ರಾಮರಾಯ**

ಚೆನ್ನಾಂಬೆ : ಏನು ವಿಜಯದಶಮಿಗೆ ಬರುವಂತೆ ಬರೆದಿರುವರೇ? ವಿಜಯನಗರಕ್ಕೆ ಪ್ರಯಾಣ ಮಾಡುವುದು ಎಂದರೆ ನನಗೇಕೋ ಮನಸ್ಸಿಗೆ ಕಳವಳವಾಗುತ್ತಿದೆ.

ಕೆಂಪೇಗೌಡ : ಆಹ್ವಾನವನ್ನು ತಿರಸ್ಕರಿಸುವುದೇ? ಹೋಗಲೇಬೇಕು ಚೆನ್ನಾ.

ಚೆನ್ನಾಂಬೆ : ನಾನೂ ನಿಮ್ಮ ಜೊತೆಯಲ್ಲೇ ಬರುವೆ.

ಕೆಂಪೇಗೌಡ : ಈಗ ಬೇಡ ಇನ್ನೊಮ್ಮೆ ಕರೆದುಕೊಂಡು ಹೋಗುವೆ, ನೀನಿಗ ಊರಿಗೆ ಹೋಗು.

(ವಿಜಯನಗರಕ್ಕೆ ತೆರಳುವರು)

## ದೃಶ್ಯ-೧೫

(ವೀರಣ್ಣ ಕೆಂಪೇಗೌಡರು ರಾಮರಾಯನ ಆಸ್ಥಾನಕ್ಕೆ ಆಗಮಿಸುವರು)

ರಾಮರಾಯ : ಕೆಂಪೇಗೌಡರಿಗೆ ಆದರದ ಸುಸ್ವಾಗತ.

ಕೆಂಪೇಗೌಡ : ತಾವೀಗ ಕ್ಷೇಮವಷ್ಟೆ.

ರಾಮರಾಯ : ತಮ್ಮ ಹಾರೈಕೆಯಿಂದ, ಕುಳಿತುಕೊಳ್ಳಿ, ಅಂ..... ಅಂದಹಾಗೆ ತಮಗೂ ಚನ್ನಪಟ್ಟಣದ ಜಗದೇವರಾಯರಿಗೂ ಸ್ನೇಹ ಹೇಗಿದೆ?

ಕೆಂಪೇಗೌಡ : ತುಂಬಾ ಚೆನ್ನಾಗಿದೆ.

ರಾಮರಾಯ : ಕ್ಷಾಮ ಬರಲು ಶಿವಗಂಗೆಯ ಬೊಕ್ಕಸದ ಸುಲಿಗೆಯೇ ಕಾರಣವಂತೆ:

ಕೆಂಪೇಗೌಡ : ಇದು ಪಿಸುಣರ ಮಾತಿರಬೇಕು

ರಾಮರಾಯ : ಹಾಗಾದರೆ ಹಣವೆಲ್ಲಾ ಏನಾಯ್ತು?

ಕೆಂಪೇಗೌಡ : ದಾನ ಧರ್ಮ, ಗಂಗಾಧರ ದೇವಾಲಯದ ನಿರ್ಮಾಣಕ್ಕೆ ಖರ್ಚಾಯಿತು.

ರಾಮರಾಯ : ಈಗೀಗ ತಾವು ಸ್ವತಂತ್ರರಾಗುವ ಬಯಕೆ ಇರಬಹುದು.

ಕೆಂಪೇಗೌಡ : ಇಲ್ಲವಲ್ಲ.

ರಾಮರಾಯ : ಹಾಗಾದರೆ ಮದ್ದು ಗುಂಡಿನ ಶೇಖರಣೆ ಏಕೆ?

ಕೆಂಪೇಗೌಡ : ಶತ್ರುಗಳ ನಾಶಕ್ಕೆ, ರಾಜ್ಯದ ಭದ್ರತೆಗೆ.

ರಾಮರಾಯ : ತಾವು ಭೈರವೇಶ್ವರ ನಾಣ್ಯ ತಯಾರಿಸಿದುದು ನಿಜವೇ?

ಕೆಂಪೇಗೌಡ : ಹೌದು. ಪ್ರಜೆಗಳ ಸುಖಕ್ಕೆ, ಕ್ಷಾಮ ನೀಗಿಸಲಿಕ್ಕೆ ಮಾಡಿದೆ ಅಷ್ಟೆ. ಸದಾಶಿವರಾಯರಿಗೆ ಇದನ್ನು ಕುರಿತು ಬರೆದಿದ್ದೆ. ಅವರು ಅದನ್ನು ಅಲಕ್ಷಿಸಿದ್ದಾರೆ ಎಂದು ಕಾಣುತ್ತೆ.

ರಾಮರಾಯ : ಅದಕ್ಕೋಸ್ಕರ ನೀವು ಆನೆಗೊಂದಿಯಲ್ಲಿರಬೇಕು.

ಕೆಂಪೇಗೌಡ : ಏಕೆ?

ರಾಮರಾಯ : ವಿಷಯಗಳ ಬಗ್ಗೆ ತನಿಖೆಯಾಗಬೇಕಾಗಿದೆ

ಕೆಂಪೇಗೌಡ : ಅಗತ್ಯವಾಗಿ ಆಗಬಹುದು

(ಆನೆಗೊಂದಿಯ ಬಂದೀಖಾನೆಯಲ್ಲಿರಿಸುವರು)

## ದೃಶ್ಯ-೧೬

(ಚನ್ನಾಂಬೆ ಪತಿಯ ಚಿಂತೆಯಲ್ಲಿರಲು ವೀರಣ್ಣನವರು ಬರುವರು)

ಚನ್ನಾಂಬೆ : ವೀರಣ್ಣನವರೇ..... ಅವರೆಲ್ಲಿ ಬರಲೇ ಇಲ್ಲವಲ್ಲ.

ವೀರಣ್ಣ : ವಿಧಿಯನ್ನು ಏನೆಂದು ಹೇಳಲಿ ತಾಯೇ. ನಾನು ಹೋಗಿ ಕರೆತರುವೆ. ನೀವು ಯೋಚನೆ ಮಾಡಬೇಡಿ.

ಚನ್ನಾಂಬೆ : ಅಂದರೆ?

ವೀರಣ್ಣ : ಅವರು ಇನ್ನೂ ಅಲ್ಲೇ ಇರುವರಂತೆ.

ಚನ್ನಾಂಬೆ : ಕಾರಣ?

ವೀರಣ್ಣ : ತಿಳಿದುಕೊಂಡು ಬರಲೆಂದೇ ಹೋಗಿಬರುವೆ.

ಚನ್ನಾಂಬೆ : ನಾನು ಬರಲೇ.

ವೀರಣ್ಣ : ಆತುರಬೇಡಿ. ನೀವು ಬರುವ ತೊಂದರೆಯನ್ನು ಏಕೆ ತೆಗೆದುಕೊಳ್ಳಬೇಕು? ನಾನು ಆ ಕೆಲಸವನ್ನು ಮಾಡಿ ಬರುವೆ.

ಚನ್ನಾಂಬೆ : ನನಗೇಕೋ ಮನಸ್ಸು ತುಟಿದುಕೊಳ್ಳುತ್ತಿದೆ ಅವರಿಲ್ಲದೆ, ಅವರನ್ನು ನೋಡುವ ಕಾತುರತೆ ನನ್ನಲ್ಲಿ ಅತಿಯಾಗುತ್ತಿದೆ. ಬೇಗ ಹೋಗುವಿರಾ?

ವೀರಣ್ಣ : ಅಪ್ಪಣೆ ಮಹಾರಾಣಿಯವರೇ.

## ದೃಶ್ಯ-೧೭

(ಆನೆಗುಂದಿಗೆ ಬಂದ ವೀರಣ್ಣ ಕೆಂಪೇಗೌಡರನ್ನು ನೋಡಿ ದುಃಖಿಸುತ್ತಿರಲು)

ಕೆಂಪೇಗೌಡ : ಏಕೆ ವೀರಣ್ಣಾ ಕಣ್ಣುಗಳಲ್ಲಿ ನೀರು?

ವೀರಣ್ಣ : ಸ್ವಾಮಿ.... ರಾಮರಾಯರು ಪಿಸುಣರ ಮಾತಿಗೆ ಮಣಿದಿದ್ದಾರೆ. ಇದು ಜಗದೇವರಾಯನ ಕೆಲಸವೇ. ಈಗ ರಾಜ್ಯವೇ ನಾಶವಾಗುವಂತೆ ಯಲಹಂಕಕ್ಕೆ ನುಗ್ಗಿ ಲೂಟಿ ಮಾಡುತ್ತಿರುವನು. ಯಥೇಚ್ಛವಾಗಿ ತೆರಿಗೆಗಳನ್ನು ವಿಧಿಸಿ ಜನರನ್ನು ಹಿಂಸಿಸುತ್ತಿದ್ದಾನೆ. ಊರ ಜನರೆಲ್ಲಾ ವಿರೋಧವಾಗಿ ಕಾದಾಡುತ್ತಿದ್ದಾರೆ. ಈ ಪಾಪ ರಾಮರಾಯರಿಗೆ.

ಕೆಂಪೇಗೌಡ : ಅದು ದೊಡ್ಡ ಮಾತು.

ವೀರಣ್ಣ : ನೀವು ಇಲ್ಲಿಂದ ಹೊರಡಬಹುದಲ್ಲ.

ಕೆಂಪೇಗೌಡ : ಹಾಗೆ ಹೋಗುವುದು ಹೇಡಿತನ, ಅದು ರಾಜಧರ್ಮವಲ್ಲ.

ವೀರಣ್ಣ : ಆ ರಾಮರಾಯನಿಗೆ ಇನ್ನೂ ಕರುಣೇ ಬರಲಿಲ್ಲವೇನೋ?

(ವೇಷ ಮರೆಸಿಕೊಂಡ ವ್ಯಕ್ತಿ ಕಾವಲುಗಾರನಾಗಿ ಬಂದು)

ಕಾವಲುಗಾರ : ಬಿಟ್ಟು ಬಿಡುತ್ತೇನೆ ಹೋಗಿ ಸ್ವಾಮಿ.

ಕೆಂಪೇಗೌಡ : ಇದು ನಿನಗೆ ಸ್ವಾಮಿದ್ರೋಹವಾಗುತ್ತದೆ.

ಕಾವಲುಗಾರ : ಪಾಪ ಹೆಂಡತಿ ನೋಡಲಿ ಎಂದು ಬಿಡುವೆ ಎಂದೆ.

ಕೆಂಪೇಗೌಡ : ಯಾವಾತನಿಗೆ ನೋಡುವ ಆಸೆ ಇಲ್ಲ! ಆದರೆ ಹೇಡಿಯಂತೆ ಮೋಸ ಮಾಡಿ ಹೋಗಲು ಇಷ್ಟವಿಲ್ಲ. ಮಿಗಿಲಾಗಿ ನೀನು ಸ್ವಾಮಿ ದ್ರೋಹಿಯಾಗುವೆ. ಧರ್ಮದಿಂದ ನಡೆಯುವುದನ್ನು ಕಲಿ.

ಕಾವಲುಗಾರ : (ವೇಷ ಬಿಚ್ಚಿ) ನಾನು..... ರಾಮರಾಯ.... ನನ್ನನ್ನು ಕ್ಷಮಿಸಿ. ನಿಮ್ಮನ್ನು ತಪ್ಪು ತಿಳಿದೆ. ಜಗದೇವರಾಯನ ಮಾತಿಗೆ ಮಣಿದೆ. ತಮ್ಮ ಆಳವಾದ ಹೃದಯವನ್ನು ಅರಿಯದೆ ತಪ್ಪು ಮಾಡಿದೆ. ನೀವು ವಿಜಯದಶಮಿಯ ಉತ್ಸವವನ್ನೂ ನಮ್ಮ ಅತಿಥ್ಯವನ್ನು ತೀರಿಸಿಕೊಂಡು ಹೋಗಬೇಕು.

(ಬಾಗಿಲು ತೆಗೆಯುವರು)

ಕೆಂಪೇಗೌಡ : ಅಷ್ಟಕ್ಕೆಲ್ಲಾ ನಾನು ಅನರ್ಹ ಪ್ರಭೂ.

ರಾಮರಾಯ : ಕ್ಷಮಿಸಿ ಕೆಂಪೇಗೌಡರೇ,

(ಆನಂದದ ಭರದಲ್ಲಿ ಇಬ್ಬರೂ ಆಲಂಗಿಸಿಕೊಳ್ಳುವರು)

## ದೃಶ್ಯ ೧೮

(ಚನ್ನಾಂಬೆ ದೇವರ ಪೂಜೆಯಲ್ಲಿ ನಿರತಳಾಗಿರಲು ಕೆಂಪೇಗೌಡ, ವೀರಣ್ಣ ಬರುವರು)

ವೀರಣ್ಣ : ತಾಯೇ ಈಗ ನಾನು ಸಾಮಾನ್ಯವಾಗಿ ಬಂದಿಲ್ಲ. ನಿಮ್ಮವರನ್ನು ಸನ್ಮಾನಗಳೊಂದಿಗೆ ಕರೆದು ತಂದಿದ್ದೇನೆ, ಅದೋ ಕೊಂಬು ಕಹಳೆಗಳ.... ದನಿಯು....

ಚನ್ನಾಂಬೆ : ಸ್ವಾಮಿ..... ಸ್ವಾಮಿ ಈ ರೂಪೇನು? ರಾಮರಾಯ ಈ ರೀತಿ ಮೂಳೆ ಮನುಷ್ಯರನ್ನಾಗಿ ಮಾಡಿ ಕಳುಹಿಸಿದನೇ? (ಅಳುವಳು)

ಕೆಂಪೇಗೌಡ : ಸಮಾಧಾನ ತಂದುಕೋ ಚೆನ್ನಾ ನಡೆಯಬೇಕಾದುದು ನಡೆಯಿತು

(ಅಷ್ಟರಲ್ಲಿ ಬಸವಯ್ಯನು ಬರುವನು)

ಬಸವಯ್ಯ : ಅಣ್ಣಾ ನನ್ನ ಅಪರಾಧವನ್ನು ಕ್ಷಮಿಸಿ. ಜಗದೇವರಾಯನಿಂದ ಇಷ್ಟೆಲ್ಲಾ ಅನರ್ಥಗಳಾದುವು. ನನಗೆ ರಾಜ್ಯದಾಸೆ ಇಲ್ಲ. ಯಾರಿಗಾದರೂ ಕೊಡಿ, ನನಗೆ ಬೇಕಿಲ್ಲ. ನಾನು ನಿಮ್ಮ ಜೊತೆ ಕಾಲ ಕಳೆಯುವೆ.

(ಅಷ್ಟರಲ್ಲಿ ಸೇವಕನೊಬ್ಬನು ಪತ್ರ ತಂದು ಕೊಡುವನು. ಅದನ್ನು ಓದಿ ಕುಪಿತನಾದ ಬಸವಯ್ಯ)

ಬಸವಯ್ಯ : ಅಣ್ಣಾ.... ಪಾಪಿ ರಾಮರಾಯನಿಂದ ಪತ್ರ ಬಂದಿದೆ.

ಕೆಂಪೇಗೌಡ : ನಿಧಾನಿಸು. ಏನದು?

ಬಸವಯ್ಯ : ವಿಜಯನಗರದ ಧಾಳಿ. ಬಹಮನಿ ರಾಜರುಗಳು ಮುತ್ತುತ್ತಿರುವ ಸಂದರ್ಭ!

ಕೆಂಪೇಗೌಡ : ಉಪ್ಪಿಕ್ಕಿದವರನ್ನು ಮುಪ್ಪಿನ ತನಕ ನೆನೆಯಬೇಕು. ವಿಜಯನಗರ ಸಾಮ್ರಾಜ್ಯವನ್ನು ಸಿಂಗರಿಸಬೇಕು. ಜಯಭೇರಿ ಹೊಡೆಸಬೇಕು. ಅದಕ್ಕೆ ಅನ್ಯಾಯ ಮಾಡಿದರೆ ಸ್ವಾಮಿದ್ರೋಹ ಮಾಡಿದಂತಾಗುತ್ತದೆ.

ಚೆನ್ನಾಂಬೆ : ನನಗೂ ಹಾಗೆಯೇ ಅನ್ನಿಸುತ್ತದೆ.

ಕೆಂಪೇಗೌಡ : ನಾನೇ ಹೋಗುತ್ತೇನೆ.

(ಅಷ್ಟರಲ್ಲಿ ಕೆಂಪಸೋಮಯ್ಯ, ವೀರಣ್ಣ ಬರುವರು)

ಕೆಂಪಸೋಮ : ನಾನು ಸಿದ್ಧ......

ವೀರಣ್ಣ : ನಾವೆಲ್ಲಾ ಹೊರಡುವೆವು. ಜೈ ಗಂಗಾಧರ!

(ಎಲ್ಲರೂ ಹೊರಡುವರು)

## ದೃಶ್ಯ-೧೯

(ಶಿವಗಂಗೆಯ ಗಂಗಾಧರ ದೇವಾಲಯದಲ್ಲಿ ಚನ್ನಾಂಬೆ ಕೆಂಪೇಗೌಡರಿದ್ದಾರೆ)

ಕೆಂಪೇಗೌಡ : ಚನ್ನಾ ಈ ಲೋಕವೇ ಶೂನ್ಯವೆನಿಸುತ್ತಿದೆ, ತಲೆ ಸುತ್ತುತ್ತಿದೆ,

ಚನ್ನಾಂಬೆ : ಸ್ವಾಮಿ ಏನಾಯಿತು?

ಕೆಂಪೇಗೌಡ : ನಾನು ಬದುಕುವಂತೆ ಕಾಣದು

ಚನ್ನಾಂಬೆ : ಸ್ವಾಮಿ ಹಾಗೆಲ್ಲಾ ಅಂದು ನನ್ನನ್ನು ಇನ್ನೂ ದುಃಖಕ್ಕೆ ಈಡುಮಾಡಬೇಡಿ. ನಿಮಗೇನು ಕಡಿಮೆ? ನೀವು ಯಲಹಂಕ ಭೂಪಾಲರು. ಬೆಂಗಳೂರು ನಿರ್ಮಾಪಕರು ನೀವೇಕೆ ನಮ್ಮನ್ನೆಲ್ಲಾ ಬಿಟ್ಟುಹೋಗಬೇಕು? ಶಾಂತವೀರರೆಂದು ಖ್ಯಾತಿವೆತ್ತಿದ ನೀವು ನನಗೆ ಕಾಲು ಬೀಳಿಸಬೇಡಿ.

(ಅಷ್ಟರಲ್ಲಿ ಭೈರಯ್ಯ ಬರುವನು)

ಕೆಂಪೇಗೌಡ : ಏನಿದು ಭೈರಯ್ಯ ಶೋಕ?

ಭೈರಯ್ಯ : ನಮ್ಮ ಭಾಗ್ಯಕ್ಕೆ ವಿಧಿಯು ಕ್ರೂರವಾಗಿರುವನು. ತಾಳೀಕೋಟೆ ಯುದ್ಧದಲ್ಲಿ ಮಹಮ್ಮದೀಯರೇ ಗೆದ್ದರು. ನಮ್ಮವರೆಲ್ಲಾ ಸೋತು ಹೋದರು.

ಕೆಂಪೇಗೌಡ : ಹ್ಞಾಂ.... ಅಯ್ಯೋ..... ಶಿವ ಶಿವಾ..... ಗಂಗಾಧರಾ.

ಚನ್ನಾಂಬೆ : ಎಲ್ಲರೂ ಮಹಮ್ಮದೀಯರ ಕತ್ತಿಗೆ ಆಹುತಿ ಆದರೇ? ಎಲ್ಲರನ್ನೂ ಕಳೆದುಕೊಂಡ ತಬ್ಬಲಿಗಳಾದೆವಲ್ಲಾ ನಾವು.

ಕೆಂಪೇಗೌಡ : ವಿಜಯನಗರಕ್ಕೆ ಸೋಲು. ಕೊನೆಯವರೆಗೂ ನಾವು ವಿಜಯನಗರವನ್ನು ಉಳಿಸಲಾಗಲಿಲ್ಲವೇ? ಕೃಷ್ಣದೇವರಾಯ.... ಶಿವಶಿವಾ..... ಗಂಗಾಧರೇಶ್ವರಾ..... ವೀರಣ್ಣಾ ಬಸವಯ್ಯ..... ಕೆಂಪೇಗೌಡ..... ಕೆಂಪೇಗೌಡ.... ಕೆಂಪಸೋಮಯ್ಯ.... ಚೆನ್ನಾ.... ಚೆನ್ನಾ...

ಚನ್ನಾಂಬೆ : ಸ್ವಾಮಿ......

(ಕೆಂಪೇಗೌಡನ ಆತ್ಮಜ್ಯೋತಿ ಬೇರ್ಪಟ್ಟಿತು. ಚೆನ್ನಾಂಬೆ ಪತಿಯಮೇಲೆ ಬಿದ್ದಳು. ಆಕೆಯ ಪ್ರಾಣಪಕ್ಷಿಯೂ ಸಹ ಹಾರಿತು.)



# ಪರಮಾತ್ಮ ಆಡಿಸಿದಂತೆ

**ಪಾತ್ರ ವರ್ಗ**

೧. ರಂಗಿ ೨. ಮಾದ ೩. ರಂಗ ೪. ಸಿದ್ಧ ೫. ಬ್ಯಾಂಕ್ ಮ್ಯಾನೇಜರ್ ೬. ಡಾಕ್ಟರ್

## ದೃಶ್ಯ-೧

(ರಂಗನ ಗುಡಿಸಲು. ರಂಗಿ ಮನೆಯ ಮುಂದೆ ನಿಂತಿರಲು ಇಬ್ಬರು ರಂಗನನ್ನು ಹೊತ್ತುಕೊಂಡು ಬಂದು ಮಲಗಿಸಲು)

ರಂಗಿ : ಅಯ್ಯೋ.... ಏನಾತಪ್ಪಾ... ರಂಗಾ.... ರಂಗಾ....

(ಎಂದು ಮುಖವನ್ನು ಅತ್ತಿತ್ತ ಅಳ್ಳಾಡಿಸಿ ಬಾಯಿ ಬಡಿದುಕೊಳ್ಳಲಾರಂಭಿಸಿದಳು)

ಮಾದ : ಇನ್ನೂ ಸತ್ತಿಲ್ಲ.....

ಸಿದ್ದ : ಇಂಗೇ ಮಾಡ್ತಿದ್ರೆ ಒಂದು ದಿನ ಗೊಟಕ್ ಅನ್ನದೇ.

ರಂಗಿ : ನನ್ನ ಗಂಡ....

ಸಿದ್ದ : ಬದ್ಕವ್ನೆ ಅಂತ ಮಾದ ಹೇಳಿದ್ನಲ್ಲಾ.

ರಂಗಿ : ಏನ್ಮಾತು ವಸಿ ಹೇಳಪ್ಪಾ.

ಸಿದ್ದ : ನಿನ್ನ ಗಂಡನ ಇಸಯ ನಿಂಗ್‌ಗೊತ್ತಿಲ್ವಾ, ಒಂದು ಸಟೀಗೆ ಕೇಳು.

ರಂಗಿ : ಏನಾತು ವಸಿ ಬ್ಯಾಗ ಏಳ್ರಪ್ಪಾ.

ಮಾದ : ಆಗದೇನು ಸಕತ್ತಾಗಿ ಪರಮಾತ್ಮನ ಸೇವ್ಸಿ ರಸ್ತೆಲೆಲ್ಲಾ ರಂಪ ಮಾಡ್ಕಂಡು ಲಾರಿ, ಬಸ್ಸು ಎಲ್ಲವನ್ನೂ ನಿಲ್ಲಿಸಿ ಅಂತ ಅಡ್ಡ ನಿಂತ್ಕೊತ್ತಿದ್ದ. ಕೊನೆಗೆ ತೂರಾಡಿ ಒಂದು ಹಳ್ಳದಲ್ಲಿ ಬಿದ್ದು ಒದ್ದಾಡ್ತಿದ್ದ. ನಾವು ಎತ್ಕಂಬಂದೋ. ಈಗ ನಿನ್ನ ಮುಂದಿಟ್ಟವಿ.... ಅಷ್ಟೇ.

ರಂಗಿ : ಏಟು ಬಾಯಿ ಬಡ್ಕಂಡ್ನೋ ಬ್ಯಾಡ ಬ್ಯಾಡ ಅಂತ. ಅಂಗಾರೂ ಬಿಡ್ನಿಲ್ಲ.... ಈಗ ಬಿದ್ದಿರದ ನೋಡಿದ್ರೆ ನಂಗೆದ್ರುಕೆ ಆತದೆ.

ಸಿದ್ದ : ಎದ್ರು ಬೇಕಿಲ್ಲ ಒಂದು ಕೊಡ ನೀರು ತಕ್ಕಂಬಾ. ಮೇಲಿಂದೂದ್ರೆ ಪರಮಾತ್ಮ ಕೆಳಕಿಳಿತಾನೆ ನೋಡು. ಇಲಿ ಸುಂಡ ಒದರಕಂಡು ನಗ್ಯಂಗೆ ನಗೀತವ್ನೆ.

(ರಂಗಿ ನೀರು ತಂದುಕೊಡಲು, ಅದನ್ನು ಮಾದ ಅವನ ಮೇಲೆ ಸುರಿಯಲು.... ಒದರಾಡುತ್ತಾ)

ರಂಗ : ಯೇಮ್... ಯಾರ್ಲ್ಲಾ ಅದು?

ಮಾದ : ನಾನು ಮಾದ.

ರಂಗ : ನಿಂಗೆ ಬುದ್ದಿ ಇಲ್ಲ ಕಣ್ಲಾ....

ಮಾದ : ನಿಂಗೆ ಬಲು ಬುದ್ದಿ ಅಯ್ತೆ ಅಲ್ವಾ?

ರಂಗ : ಇದ್ಯಾನ್ರಲ್ಲಾ ನೀವ್ಯಾಳದು?

ಸಿದ್ದ : ನೀ ಎಲ್ಲಿದ್ದೆ?

ರಂಗ : ಇಲ್ಲೇ.....

ಮಾದ : ಇಲ್ಲಿದ್ರೆ ನಾವ್ಯಾಕೆ ಬರ್ತಿದ್ವಿ. ನಿಂಗ್ಯಾಕೆ ತಲೆಯಿಂದ ನೀರು ಹಾಕ್ತಿದ್ವಿ?

ರಂಗ : ಮತ್ತೆಲ್ಲಿದ್ದಿ ನಾನು?

ಸಿದ್ದ : ಅತ್ತಿಗುಪ್ಪೆ ಹಳ್ಳದಲ್ಲಿ ಮಲಗಿ ಒದ್ದಾಡ್ತಾ ಮಲಿಕ್ಕಂಡಿದ್ದೆ.

ಮಾದ : ಸುಖವಾದ ನಿದ್ರೆ ಮಾಡ್ತಿದ್ದೆ.

ಸಿದ್ದ : ಆಗ ನಿನ್ನ ಎತ್ಕಂಡು ಬಂದು....

ರಂಗ : ಈಗೇನು ನಷ್ಟಾತು?

ಸಿದ್ದ : ನೀರಿಲ್ಲದ ಕಾಲದಲ್ಲಿ ಒಂದು ಕೊಡ ನೀರು....

ರಂಗ : ಅಷ್ಟೇತಾನೇ ಬುಡು. (ನಗುವನು)

ರಂಗಿ : ನಿಂಗಾಟ ನಮ್ಕೆ ಪ್ರಾಣಸಂಕಟ.

ಮಾದ : ನಿಂಗ್ಯಾರೂ ಬುದ್ಧಿ ಹೇಳವ್ರಿಲ್ಲ ಅಂತ ಕಾಣ್ಸೈತೆ?

ರಂಗ : ಅಲ್ಲಾ ಕಣ್ಲಾ ಮಾದ ನಾನು ಮಾಡಿದ್ದಾದ್ರೂ ಏನು?

ಸಿದ್ದ : ಮಾಡಬಾರದ್ದ ಮಾಡಿದ ನಾನು ಮಾಡಿದ್ದೇನು ಅಂತ ಕೇಳ್ತೀಯಾ?

ರಂಗಿ : ವಸಿ ಕ್ಯಾಕರ್ಸಿ ಮೊಕಕ್ಕೆ ಉಗೀರಪ್ಪಾ. ನಂಗೂ ಯೇಳಿ ಯೇಳಿ ಸಾಕಾಗೋತು.

ರಂಗ : ಅದ್ಯಾನಾ ನಿಂಗಾಗಿರದು?

ರಂಗಿ : ನಿನ್ನ ಕಟ್ಕಂಡು ಸಾಯದು!

ರಂಗ : ನಿಂಗ್ಯಾನು ವಸಿ ಅರೆ ಆಗೀರುದು?

ರಂಗಿ : ಪ್ರಾಣ ತಕ್ಕಳದೊಂದೇ ಬಾಕಿ ಉಳ್ದಿರದು. ಈ ಬೀದ್ಯಾಗೆ ಜನಗಳಿಗೆ ಮುಖ ತೋರಿಸ್ಕಂಡು ಇರಬ್ಯಾಕಲ್ಲಾ ಅಂತ. ಎಲ್ಲಾ ನಗ್ತವ್ರೆ.

ಮಾದ : ಇವರಿಗೆಲ್ಲಾ ಮಾನ ಮರ್ಯಾದಿ ಇಲ್ಲ ಕಣವ್ವ.

ರಂಗ : ಅಲ್ಲಾ ಎಲ್ರೂ ನನ್ನ ತರಾಟೆಗೆ ತಕ್ಕಂಡ್ರ್ಯಲ್ಲಾ ನಾನೇನು ತೆಪ್ಪು ಮಾಡ್ದೆ ಅಂತ? ಅವರ ಗಂಡಂದ್ರೆಲ್ಲಾ ಸಾಕ್ಯಾರೇನೋ?

ಮಾದ : ಚಳಿಯಾಗೆ ನಡುಗಬ್ಯಾಡ. ವಸಿ ಬಟ್ಟೆ ಬದ್ಲಾಯಿಸ್ಕಂಡು ಬಾವೋಗು. ಆಮ್ಯಾಕೆ ಮಾತಾಡುವ.

ರಂಗಿ : ವಸಿ ನಡುಗ್ಲಿ ಬುಡಿ, ಅವನಿಗೆ ಬುದ್ಧಿ ಬರಲಿ.

ರಂಗ : ನೋಡಿದ್ರಾ ಎಂಥ ಎಡ್ತಿ ಇವಳು ನಂಗೆ?

ರಂಗಿ : ನೋಡಿದ್ರಾ ಎಂಥ ಗಂಡನ್ನ ಪಡ್ದೆ ನಾನು?

ಮಾದ : ನೀನು ಇಂಗೇ ಆಡ್ತಿದ್ರೆ ಬ್ಯಾಗ್ನ ಪರಮಾತ್ಮನ ಪಾದ ಸೇರ್ಕಬುಡ್ತೀಯಾ.

ರಂಗ : ಅಲ್ಲಾ ನಾನೇನು ತೆಪ್ಪು ಮಾಡಿದೆ ಅಂತ ನೀವೆಲ್ಲಾ ಅಂಗಾಡ್ದರಿ?

ಮಾದ : ಪರಮಾತ್ಮನ್ನ ಸೇವಿಸಿದ್ದನ್ನ ನಾನೇ ಯೇಳ್ಬೇಕಾ?

ರಂಗ : ಅಷ್ಟೇತಾನೇ, ನಾನಿದೇನಪ್ಪಾ, ಕಳ್ತನ ಮಾಡಿದ್ನಾ, ಕೊಲೆ ಮಾಡಿದ್ನಾ ಅಂತಿದ್ದಿ, ನಮ್ಮ ಬೀದ್ಯಾಗೆ ಎಲ್ರೂ ಮಾಡ್ದಂಗೆ ಮಾಡಿದ್ನಿ ಅಷ್ಟೇ ತಾನೇ?

ಸಿದ್ದ : ಇದೂ ಆಯ್ತೆಲ್ಲಾ ಮುಂದಿನ ದಾರಿ.

ರಂಗ : (ನಗುತ್ತಾ) ಇದೇನು ನೀನೇಳದು? ಎಲ್ರೂ ಮಾಡಿದ್ದೇ ನಾನು ಮಾಡಿದ್ದು.

ಮಾದ : ಎಲ್ರೂ ನಿನ್ನಾಗೆ ಮಾಡಲ್ಲ.

ರಂಗ : ಸಾವುಕಾರ್ರು ಒಂದು ಥರ ಮಾಡ್ತಾರೆ, ನಾ ವೊಂದು ತರ ಮಾಡ್ತೀನಿ. ಅವರು ಫಾರಿನ್ ಜಿನ್, ಬ್ರಾಂದಿ, ವೈನ್, ಅದು ಇದು ಅಂತ ಕುಡೀತಾರೆ. ನಾನು ಸೇಂದಿ ಸೇವಿಸ್ತೀನಿ. ಅಷ್ಟೇತಾನೇ, ನಾನು ಇದೇನಪ್ಪಾ ಅಂತಿವ್ನಿ...?

ಮಾದ : ಈವತ್ತು ಇದು ಕಲ್ತು....

ರಂಗಿ : ನನ್ನ ತಾಲೀನೂ ಮುಕ್ಸ ಮಾರ್ಕಂಡು ತಿಂದ್ಕಂಡ. ಮನೇಲಿದ್ದ ಪಾತ್ರೆಪನ್ನಂಗನೆಲ್ಲಾ ಕಳ್ಕಂಡ. ಈ ಗುಡಿಸಲ್ನಾಗ ಇನ್ನೇನೈತೆ? ಸಾರಿಸಿ ಗುಡಿಸಿ ರಂಗೋಲಿ ಬಿಟ್ಟಿವ್ನಿ ಅಷ್ಟೇ.

ಮಾದ : ಇನ್ನೂ ಸಾಲ ಸೋಲ ಮಾಡ್ತವ್ನೆ.

ರಂಗಿ : ಈ ಮುಸುಡಿಗೆ ಸಾಲ ಯಾರು ಕೊಡ್ತವ್ರೆ?

ಸಿದ್ದ : ಇವ್ನಂತ್ಯವ್ನೆ ಯಾರಾರ ಕೊಡಬೇಕು ಅಷ್ಟೇ.

ರಂಗ : ನೀವೆಲ್ಲಾ ಯಾಕಪ್ಪಾ ಬಂದು ಅವಳ ತಲೆ ಕೆಡಿಸ್ತಿದ್ದೀರಿ?

ಸಿದ್ದ : ನೋಡ್ದಾ ಮಾದ; ನಾನಾಗಲೇ ನಿಂಗೇಳಿದ್ದಿ, ಅದನ್ನ ಅಂಗೇ ತಿಳ್ಕಂಡು ಬಿಡು. ನಾವು ಉಪಕಾರ ಮಾಡಿದ್ರೂ ಏನಾಗುತ್ತೆ ನೋಡ್ದಾ?

ರಂಗ : ಏನು ಗಂಟಲುಗಂಟ ಹಾಕಿಸ್ಬಿಟ್ಟಿದ್ನ್ಯೋ?

ಮಾದ : ಇಲ್ಲಾ ಹಾಕ್ಕಂಡಿದ್ದಾಗ ಹಳ್ಳದಲ್ಲಿ ಬಿದ್ದು ಒದ್ದಾಡ್ತಿದ್ದದ್ದು ನೋಡಿ ಎತ್ಕಂಬಂದು ನಿನ್ನ ಜನ್ಮ ಸ್ಥಳಕ್ಕೆ ತಂದಾಕಿದ್ವು. ನಡ್ಯಪ್ಪಾ ಸಿದ್ದಣ್ಣಾ ಹೋಗವಾ. ಈ ಕುಡಕನೊಂದಿಗ್ಯಾವ ಮಾತಾ?

ರಂಗಿ : ಜನ ಎಷ್ಟು ಉಪಕಾರ ಮಾಡಿದ್ರ ನಿಂಗೆ ಕರುಣೆಲ್ಲ. ಕುಡ್ಕನಿಗೆ ಕರುಣೆ ಏನ್ಬಂತು? ತೆಪ್ಪಾದ್ರೂ ಕ್ಷಮುಸ್ಬುಡಿ ಸಾಮಿ.

ಮಾದ : ಬಾರ್ಲ್ಲಾ ಸಿದ್ದಣ್ಣ ವೋಗಮು.

ರಂಗಿ : ದ್ಯಾವ್ರು ನಿಂಗೆ ಅದ್ಯಾವತ್ತಿಗೆ ಬುದ್ದಿ ಕೊಟ್ಟಾನೋ ನಂಗೆ ಗೊತ್ತಿಲ್ಲ. ನಿನ್ನ ಕಟ್ಕೊಂಡು ಸಾಯೋದು ನನ್ನಣೇಬರವಾಗಿತ್ತು. ಮನ್ಯಾಗ ಒಂದು ಹೋಳು ರಾಗಿಲ್ಲ, ಉಪ್ಪು, ಮೆಣಸಿನಕಾಯಿಲ್ಲ, ನೀರು ಕುಡ್ದು ಬದ್ಕುಕಾಯ್ತದಾ? ನಾಯೇನ ಮಾಡಬ್ಯಾಕು? ನನ್ನ ಮಕ್ಕಳಿಗೇನು ಕೊಡಬೇಕು? ನೀನೇ ಹೇಳು.

ರಂಗ : ಇವತ್ತೊಂದಿನ ಏನಾರಾ ಕೊಟ್ಬಿಡು.

ರಂಗಿ : ನೀನು ಸಂಪಾದ್ನ ಮಾಡ್ಕಂಬತ್ತೀನಿ ಅಂತ ಏನಾ ವೋತೀಯಾ?

ರಂಗ : ವೋತೀನಲ್ಲಾ.....

ರಂಗಿ : ವೋಗಿ ಉಯ್ಕಂಬನ್ಬುಡ್ತೀಯಲ್ಲಾ.

ರಂಗ : ರಂಗಿ ನಂಗೆ ಸಾಕಾಗೋಗಿರ್ತದೆ, ಮೈ ಕೈ ನೋವಾಗುತ್ತೆ, ತಡ್ಕೊಳಕಾಗಕ್ಕಿಲ್ಲ, ನಿನ್‌ತವ ತುಳಸಿಕೊಳಾಕೆ ಆಗಕಿಲ್ಲ, ಅದ್ಕೇ ವಸಿ ತುಳಿಸ್ಕಂಡ್ರೆ ಏನೋ ಒಂದು ತರಹ ಮನಸ್ಸಿಗೆ ಸಮಾಧಾನ.

ರಂಗಿ : ಇಲ್ಲಿ ಮಕ್ಕಳ ಬಾಯಿಗೇನಾಕ್ಲಿ? ನನ್ನ ಬಾಯಿಗೇನು ಹಾಕಲಿ?

ರಂಗ : ಏನಾದ್ರೂ ಹಾಕು. ಅಂಗೇ ನಂಗೂ ವಸಿ ತತ್ತಾ.

ರಂಗಿ : ಮಕ್ಳಿಗೇ ಇಲ್ಲ ಅಂತೀನಿ ನಿಂಗೇನಾಕ್ಲಿ?

ರಂಗ : ನೀ ವಸಿ ಮನ್ಸ್ ಮಾಡಿದ್ರೆ ಯಂಗಾರಾ ಆತದೆ.

ರಂಗಿ : ಒಳ್ಗಿಲ್ಲ.... ತೋಡಿಕ್ಕು ಬಡ್ಡಿ ಅಂದ್ರೆ ಆತ್ತದಾ? ಸುಮ್ಕೆ ಬಿದ್ಕೊ, ಆಮೇಲೆ ನಿಂಗೇ ಬುದ್ದಿ ಬತಾದೆ.

ರಂಗ : ವಸಿ ಅಜೆಸ್ಟ್ ಮಾಡ್ಕೋ ನಿನ್ನ....

ರಂಗಿ : ನನ್ನ ಬಾಳೆಲ್ಲಾ ಅಳೋಂಗಾತು ನನ್ನಪ್ಪ ನೋಡಿ ಕೊಟ್ಟಿದ್ರೆ ಇಂಗಾತಿರ್ನಿಲ್ಲ, ನಾನಿರಕ್ಕಿಂತ ಸಾಯದು ಲೇಸು, ಏನೋ ನಾನು ಮಕ್ಕಳ ಮುಖ ನೋಡಿಕ್ಕಂಡು

ಇರದು, ಇಲ್ದೇ ವೋಗಿದ್ರೆ ಈಟೊತ್ಗೆ ನಾನು ನೀರಿನ ಪಾಲು ಆಯ್ತಿದ್ದೆ. ನಿನ್ನಂತವ್ನ ಕಟ್ಕಂಡು ಸುಖಪಡಕ್ಕಿಂತ ಬೇಗ ಸಾಯದು ಲೇಸು ಬಿಡು.

ರಂಗ : ಸಾಕು ಸಾಕು ನಡ್ಯಮ್ಮಿ.

ರಂಗಿ : ನಡ್ಯದಿರ್ಲಿ, ಏನಾರ ತಕ್ಕ ಬಾ. ವಸಿ ಕೂಳು ಬೇಯ್ಸಿ ಹಾಕ್ತಿನಿ.

ರಂಗಿ : ಆ ಮಾದಪ್ಪ ನಿಂಗೆ ಅದ್ಯಾವತ್ತಿಗೆ ಬುದ್ದಿ ಕೊಟ್ಟಾನೋ ನಾ ಕಾಣೆ

(ಅಳಲಾರಂಭಿಸುವಳು)

ರಂಗ : ಯಾರು ಸತ್ರು ಅಂತ ಅಳ್ತೀಯಾ ಮುಂಡೇದೆ?

ರಂಗಿ : ನನ್ನ ಭಾಗಕ್ಕೆ ನೀ ಸತ್ಯಲ್ಲಾ ಅಂತ....

ರಂಗ : ಹ್ಞಾಂ.... ಈ ತರ ಗಂಡನ್ನ ಅನ್ನವರ್ನ ನಾ ಕಂಡಿರ್ನಿಲ್ಲ.

ರಂಗಿ : ನಿನ್ನಂತ ಗಂಡ ಇರಕ್ಕಿಂತ ಇಲ್ದೇ ಇರದೇ ವಾಸಿ. ನಿನ್ನಂತವ್ನ ಕೈ ಹಿಡಿದು ನಾ ಪಟ್ಟ ಸುಖ ನಂಗೇ ಗೊತ್ತು. ನಾಕು ಜನಕ್ಕೂ ಗೊತ್ತು. ದ್ಯಾವರೇ ಜನ್ಮ ಜನ್ಮಕೂ ಈ ಸುಖ ಬ್ಯಾಡವಪ್ಪಾ.

* * *

## ದೃಶ್ಯ-೨

(ಮಾದ, ಸಿದ್ದ ಇಬ್ಬರೂ ಮಾತಾಡುತ್ತಾ ಕುಳಿತಿರಲು ಅಲ್ಲಿಗೆ ರಂಗನ ಪ್ರವೇಶ)

ಮಾದ : ಸಿದ್ದಣ್ಣ..... ಏನೋ ಈ ಕಾಲದಾಗೆ ಸಂಸಾರ ಮಾಡೋದೇ ಕಸ್ಟವಾಗೈತೆ.

ಸಿದ್ದ : ರಟ್ಟೆ ಬಗ್ಗಿಸ್ಬೇಕಪ್ಪಾ ರೊಟ್ಟಿ ತಿನ್ನಕ್ಕೇ.

ಮಾದ : ಅದ್ ಮಾಡಿದ್ರೂ ಸಾಲಕ್ಕಿಗೆ ಏನ್ ಮಾಡದು?

ಸಿದ್ದ : ನಿಂಗೆ ಸಾಲ ಕೊಡವ್ರಾದ್ರೂ ಒಬ್ರವ್ರಲ್ಲಾ.

ಮಾದ : ಅಲ್ಲಾ ಕಣ್ ಸಿದ್ದಣ್ಣ ಕೊಡವ್ರು ಏಟುದಿನ ಕೊಡ್ತಾರೆ? ನಾನು ಅದನ್ನ ತಿರ್ಗಿ ಕೊಡಬೇಕಲ್ಲ. ಕೊಡಾಕೂ ಆಗಕಿಲ್ಲ. ಆಗ ಮೊದ್ಲು ಕೊಡ್ತಿದ್ದವ್ರೂ ಕೊಡಲ್ಲ.

ಸಿದ್ದ : ಅಲ್ಲಾ ನಿಂಗೆ ಯಾವುದು ಬಂದ್ರೂ ಸಾಲಕ್ಕಿಲ್ಲ ಅಂತಿದ್ಯಲ್ಲಾ ವಸಿ ಖರ್ಚು ಕಮ್ಮಿಮಾಡ್ಬೇಕಪ್ಪಾ. ನಿಂಗೂ ರಂಗನಾಗೆ ಕುಡಿತದ ಮೇಜುಟ್ಟುಬೈತೆ. ಅದ್ಕೇ ಸಾವಿರವಿದ್ರೂ ಸಂಜಿಗೇ ಲಯ.

ರಂಗ : ಅದ್ಯಾನ ನಾವೊಬ್ಬಾ.... ನೀವೇನು ಸಾಬ್ಯರೇನೋ. ಕುತ್ಕಳ್ರೋ ಸಾಕು.

ಸಿದ್ದ : ಆದ್ರೆ ನಿನ್ನಷ್ಟು ಜೋರಿಲ್ಲ.... ಬಿಡಪ್ಪಾ.

ರಂಗ : ಇಷ್ಟಾದ್ರೇನು ಅಷ್ಟಾದ್ರೇನು ಒಟ್ನಾಗಿ ನೀವು ನನ್ನಂಗೆ ಚಪಲ ಹತ್ತಿಸ್ಕಂಡವ್ರೇ.

ಸಿದ್ದ : ಯಾವ್ದಾದ್ರೂ ಒಂದು ಮಿತಿ ಇರಬೇಕು. ಅದು ಮೀರಿದ್ರೆ ಆಗಬಾರದ್ದೆಲ್ಲಾ ಆಗೋಯ್ತದೆ. ಅದು ಮನಸ್ನ ಆರೋಗ್ಯಕ್ಕೂ ತೊಂದರೆ ಅಂತವ್ರೆ. ಒಂದು

ಸಾರಿ ನಾನು ಹೆಚ್ಗೆ ಕುಡ್ದು ವಾಂತಿ ಮಾಡ್ಕಂಡು ಬೀದಿಲಿ ಬಿದ್ಕಂಡಿದ್ದೆ. ನಮ್ಮ ಮಾದಣ್ಣನೇ ಆಸ್ಪತ್ರೆಗೆ ಸೇರಿಸಿದ್ದು. ಡಾಗಟ್ರು ಕೇಳಿದ್ರು. ಇರ ಇಸಯ ಏಳ್ದೆ. ಇಂಗೇ ಮಾಡ್ಕಂಡು ಬಂದ್ರೆ ನಾನಾ ರೋಗ ಬರ್ತೈತೆ, ಕ್ಯಾನ್ಸರಂತೆ, ಹೊಟ್ಟೆ ನೋವು ಏನೇನೋ ಬತ್ತೈತೆ, ಬುಟ್ಬುಡು ಅಂದ್ರು, ಆವತ್ನಿಂದ ವಸೊಸಿ ಬುಡ್ತಾ ಬಂದ್ನಪ್ಪಾ.

ರಂಗ : ಮುಂಡೇದು ಅತ್ತಗಂಟ್ಲೇ, ಅತ್ಬುಟ್ಮೇಲೆ ಏನಾರ ಮಾಡಿ ಕುಡಿಲಾ, ಮತ್ತೊಸಿ ಕುಡಿಲಾ ಅನ್ನಸ್ತೈತೆ. ಇನ್ನೊಂದು ಗುಟ್ಟೈತೆ ಏಳ್ತೀನಿ ಕೇಳಿ.

ಸಿದ್ದ : ಏನದು?

ರಂಗ : ಏಳ್ಲೇ ಬೇಕು ಅಂತೀಯಾ?

ಮಾದ : ಏಳು ನಿನ್ನನುಭವ ಕ್ಯಾಳಮಾ.

ಸಿದ್ದ : ರಂಗನನುಭವ ಜೋರು.

ರಂಗ : ಇದ ಕುಡ್ಯದ್ರಿಂದ ಕಾಮ ಹೆಚ್ಚೈತ್ತಂತೆ. ಆನಂದವಾಗಿರಬೋದು ಅಂತ....

ಮಾದ : ಇದೆಲ್ಲಾ ಹೊಸದರಲ್ಲಿ ಅಂಗಿರ್ತೈತೆ, ಅಮ್ಯಾಕೆ ದುರ್ಬಲವಾಗ್ಬುಡುತ್ತೆ ಅಂತ ದಾಗಟ್ರು ಏಳಿದ್ರು. ಬರೇ ಯಾತನೆಯೇ ಹೊರತು ಆಮ್ಯಾಕೆ ಕಾಮ ತೃಪ್ತಿ ಕೊಡಕಿಲ್ಲವಂತೆ.

ಸಿದ್ದ : ಹಿಂದಿನ ಕಾಲದಾಗ ಯಾರಾದ್ರೂ ಕಷ್ಟ ಕಾಲದಲ್ಲಿದ್ದರೆ ಅವರನ್ನ ಕಾಪಾಡಬೇಕು, ರಕ್ಷಿಸಬೇಕು ಅಂತೇಳ್ತಿದ್ರು. ಅಂಗೇ ಮಾಡ್ತಿದ್ರು. ದಾರೀಲಿ ಅಕಸ್ಮಾತ್ ಯಾರಾದ್ರೂ ಅಪ್ಪಿತಪ್ಪಿ ಬಿದ್ದುಬಿಟ್ರೆ ಅವರನ್ನ ಆಸ್ಪತ್ರೆಗೆ ಸಾಗಿಸೋರು ಇಲ್ಲ, ಸುಸ್ರೂಸೆ ಮಾಡೂರು. ಈಗ್ಲಂತೂ ಬಿಡಿ. ರಂಗನಂಥವ್ರು ಬೀದೀಲಿ ಕುಡಿದು ಬಿದ್ರೆ, ಸತ್ತಂತೆ. ನಮ್ಮಂಥ ಕಂಡವ್ರು ಎತ್ತಿಕೊಂಡು ಮನೆಗೆ ಬರಬೇಕೇ ಹೊರ್ತು ಬ್ಯಾರೆ ಯಾರೂ ಯಾರೂ ಮುಟ್ಟಾಕಿಲ್ಲ. ಪ್ಯಾಟೆಗಳಲ್ಲಿ ಇಂಥವ್ರೇ ಹೆಚ್ಚು. ಬೀದಿ, ಫುಟ್‌ಪಾತ್‌ನಲ್ಲಿ ಬಿದ್ದಿರ್ತಾರೆ. ಯಾವನೋ ಕುಡಿದು ಬಿದ್ದವನೆ ಅಥವಾ ಮೂರ್ಛೆರೋಗ ಬಂದವನಂತೆ ನಟನೆ ಮಾಡ್ತಾ ಬಿದ್ದವನೆ ಅಂತ ದೂರ ಹೊರಟೋಯ್ತಾರೆ. ಇದೆಲ್ಲ ನೋಡಿದ್ರೆ ಪ್ರಾಣಗಿಂತ್ಲೂ ಕಮ್ಮಿ ಆತಲ್ಲಾ.

ಮಾದ : ನಿಜ.... ನಿಜ.... ಯಾವುದೂ ಕಮ್ಮಿ ಇರಬೇಕು.

ಸಿದ್ದ : ಮಾದಣ್ಣಾ ಕಮ್ಮಿ ಆಗೋದಕ್ಕಿಂತ ಈ ಚಟನೇ ಬಿಟ್ಟು ಬಿಡಬೇಕು.

ಮಾದ : ಅದೂ ನಿಜವೇ ಅನ್ನಿ. ನಮ್ಮ ರಂಗನಂತವರಿಗೆ ತುಂಬಾ ಕಷ್ಟ ಬಂದ ಮ್ಯಾಲೆ ಗೊತ್ತಾಗದು.

ರಂಗ : ಎಲ್ಲಿ ಆಗ್ತೈತೆ. ಏನಾರೂ ಮಾಡಿ, ಎಲ್ಲಾರೂ ಕದ್ದಾರೂ, ತಲೆ ಹೊಡೆದಾದ್ರೂ ಕುಡಿಬೇಕು ಅನ್ನೋ ಚಟ ಬಂದುಬಿಟ್ಟೈತಲ್ಲಾ ನಾನು ಏನ್ಮಾಡಲಿ?

ಸಿದ್ದ : ಇದ್ಯಾನ್ಯಾನೋ ಮಾತಾಡ್ತಾ ಒಂದು ಮಾತು ಹೇಳದ್ನೇ ಮರ್ತುಬಿಟ್ಟೆ.

ರಂಗ : ಏನು ಸಿದ್ದಣ್ಣ?

ಸಿದ್ದ : ಇದ ಯೇಳ್ಬಿಟ್ರೆ ರಂಗಣ್ಣ ಕುಸಿಯಾಗ್ಬಿಡ್ತಾನೆ.

ರಂಗ : ಅದ್ಯಾನಪ್ಪಾ ಅಂತಾದ್ದು?

ಮಾದ : ಏಳು ಸಿದ್ದಣ್ಣಾ ನಾವೂ ವಸಿ ಕೇಳವಾ.

ಸಿದ್ದ : ಈಗ ಬ್ಯಾಂಕಿನವ್ರು ಸಾಲ ಕೊಡ್ತಾರಂತೆ.

ಮಾದ : ಎಮ್ಮೆ ಹಸ ತಕ್ಕೊಳ್ಳಕ್ಕಾ?

ಸಿದ್ದ : ಅದನ್ನ ತಕ್ಕಂಬುಟ್ಟಿವಲ್ಲಾ.

ಮಾದ : ರಂಗ ತಕ್ಕಂಡು ಮಾರ್ಕಂಡೂ ಬುಟ್ಟ.

ಸಿದ್ದ : ಈಗ ಬ್ಯಾರೆ.

ರಂಗ : ಅದ್ಯಾನ ವಸಿ ಯೋಳು ಮತ್ತೆ.

ಸಿದ್ದ : ಅದ್ಯಾನೋ ಈಗ ನಮ್ಮರೇಸನ್ ಕಾರ್ಡ್ ತೋರಿಸಿದ್ರೆ ಸಾಲ ಕೊಡ್ತಾರಂತೆ.

ರಂಗ : ಏಟು ಕೊಡ್ತಾರೆ?

ಸಿದ್ದ : ಎರಡು ಸಾವಿರಗಂಟ ಕೊಡ್ತಾವ್ರೆ ಅಂತಿದ್ರು.

ಮಾದ : ಏನಕ್ಕೆ?

ಸಿದ್ದ : ರಂಗಣ್ಣನ್ನೇ ಕೇಳಿ.

ರಂಗ : ನಂಗೇನು ಗೊತ್ತು. ನೀತಾನೆ ಯೇಳಿದ್ದು.

ಮಾದ : ಯಾತಕ್ಕೆ ಅಂತೊಸಿ ಯೋಳಪ್ಪಾ ರಂಗಣ್ಣನಿಗೆ ಬೇಗ.

ಸಿದ್ದ : ಯವಸಾಯಕ್ಕೆ, ಯಾಪಾರಕ್ಕೆ.

ರಂಗ : ಸರ್ಕಾರದೋರು ಒಳ್ಳೆ ಕೆಲ್ಸ ಮಾಡಿದ್ರು ಬುಡಿ. ನಾಳಕ್ಕೆ ಹೋಗೋವ ನಡೀರಿ, ರೇಸನ್ ಕಾರ್ಡ್ ತಕ್ಕಂಡು.

ಸಿದ್ದ : ಏನ್ಮಾಡಬೇಕೂಂತಿ?

ರಂಗ : ಏನಾದ್ರೂ ಮಾಡೂದು.

ಮಾದ : ಅದು ಇದಕ್ಕೆ ಮಾಡಿದ್ರಾಗ್ದು. ಒಳ್ಳೇ ಕೆಲ್ಸಕ್ಕೆ ಮಾಡಬೇಕು. ಈಗ ಒಂದು ಕೆಲ್ಸ ಮಾಡು.

ರಂಗ : ಏನು?

ಮಾದ : ಎಲ್ಲಾನೂ ತಂದು ನಿನ್ನೆಂಡ್ತಿ ಕೈಗೆ ಕೊಡು. ಅವಳು ವಸಿ ತರಕಾರಿನಾರೂ ತಂದು ಮಾರಲಿ, ಒಂದು ಯಾಪಾರ ಮಾಡಿದ್ರೆ ಮಕ್ಕಳು ಒಂದು ತುತ್ತು

ಅನ್ನ ಕಂಡಂಗಾಯ್ತದೆ. ನೀನು ಕೂಲಿ ಮಾಡಿದ್ದೂ ತಂದಾಕು, ಆಮ್ಯಾಕಾದ್ರೂ ಸುಖವಾಗಿರಬೋದು.

ಸಿದ್ದ : ಮೊದಲು ತಕ್ಕಂಡು ಕುರಿ, ದನ ತಕ್ಕತೀನಿ ಅಂತ ಯೇಳಿ ಬ್ಯಾಂಕಿನವ್ರು, ಇನ್‌ಸ್ಪೆಕ್ಷನ್‌ಗೆ ಬಂದಾಗ ಬ್ಯಾರೆಯವರದನ್ನ ತಂದು ತೋರ್‍ಸಿ ಆಮ್ಯಾಕೆ ಬಂದ ಹಣವನ್ನೆಲ್ಲಾ ಕುಡಿದು ತೀರಿಸ್ಬಾರ್‍ದು.

ರಂಗ : ಆಮ್ಯಾಕೆ ಸಾಲ ತೀರಿಸ್ಬೇಕಲ್ಲಾ.

ಸಿದ್ದ : ಹಿಂದಿನದೆಲ್ಲಾ ತೀರಿಸ್ದ್ಹಾ....

ರಂಗ : ತೀರಿಸ್ಬೇಕು.

ಸಿದ್ದ : ಹೊಸದು ಕೊಡಬೇಕಾದ್ರೆ ಹಳೇದು ತೀರಿಸಬೇಕಪ್ಪಾ.

ರಂಗ : ತೀರಿಸ್ತೀಮಿ ಅನ್ನದು.

ಸಿದ್ದ : ಕೊಡ ಮಟ್ಟಿಗೆ ಕಾಣಕ್ಕಿಲ್ಲ.

ರಂಗ : ಬ್ಯಾರೆ ಬ್ಯಾಂಕಿಗೋದ್ರೆ?

ಸಿದ್ದ : ಅಂತೂ ನಿನ್ನ ತಲೆ ಇಂತದ್ಕೆಲ್ಲಾ ಬಲೇ ಜೋರಾಗಿ ಓಡುತ್ತೆ ಅಲ್ವಾ?

ರಂಗ : ಬ್ಯಾಗ್ನೋಗಮು ನಡೀರಿ. ಸಣ್ಣಪುಟ್ಟ ಯವಾರ ಮಾಡ್ತೀಮು ಅಂತ್ಯಾಳೋವಾ.

ಸಿದ್ದ : ನೀಯೇಳ್ದಂಗೆ ಮಾಡಬೇಕು. ತಾಸಿಲ್‌ದಾರರ ತವ ನಿನ್ನ ಆದಾಯ ಬರಿಸ್ಕಬ್ಯಾಕು, ರೇಸನ್ ಕಾರ್ಡ್ ತಕ್ಕಬೇಕು, ಅಲ್ಗೋಗ್ಬೇಕು.

ರಂಗ : ಅಂಗೇ ಆಗ್ಲೀ ನಡೀರಿ.

ಮಾದ : ನಡೀರಿ ವೋಗವ....

(ಎಲ್ಲರೂ ಹೊರಡುವರು)

* * *

## ದೃಶ್ಯ-೩

(ರಂಗ ಮನೆಗೆ ಬರುತ್ತಾನೆ)

ರಂಗಿ : ಏನು ಈವತ್ತು ಈಟೊಂದು ಕುಸಿಯಾಗಿದ್ದೀರಾ?

ರಂಗ : ಕುಸಿಯೇನ್ಬಂತು ವಸಿ ರೇಸನ್ ಕಾರ್ಡ್ ತತ್ತಾ?

ರಂಗಿ : ಏನ್ ಅಕ್ಕಿ ತಂದಿರ್‍ಯಾ? ಇದ್ಯಾನ್ ಈವತು ನೀವು ತತ್ತೀನಿ ಅಂದಿರಿ. ದುಡ್ಡುಗಿಡ್ ತಂದಿದ್ದೀರಾ?

ರಂಗ : ನೋಡ್ಕಂಬತ್ತೀನಿ ಕೊಡಮ್ಮಿ....

(ರಂಗಿ ಸಂತಸದಿಂದ ತಂದುಕೊಡುವಳು)

ರಂಗಿ : ದ್ಯಾವರು ನಿನ್ಗೆ ಒಳ್ಳೆ ಬುದ್ದು ಕೊಟ್ಟಂಗೆ ಕಾಣುತ್ತೈತೆ. ಈವತ್ತಿನ ಸಂಪಾದ್ನೆ ಕುಡಿದಿಲ್ಲ.

ರಂಗ : ಹೂಂ.... ಹೂಂ.... ಬರ್ತೀನಿ.

ರಂಗಿ : ಬ್ಯಾಗ್ನ ಬಂದುಬುಡಿ.

ರಂಗ : ಬರಕ್ಕೇ ತಾನೆ ವೊಯ್ತಾ ಇವ್ನಿ.... ಬಂದ್ಬುಡ್ತೀನಿ.

(ಹೊರಡುವನು)

ರಂಗಿ : ಇದನ್ನ ನೋಡುಕೊಂಡ್ರೆ ನನ್ನ ಮಕ್ಕಳ ವೊಟ್ಟೆ ಮ್ಯಾಗೆ ತಣ್ಣೀರು ಬಟ್ಟೆ ಅಷ್ಟೇ...

(ನಿಟ್ಟುಸಿರು ಬಿಡುತ್ತಾ ಹೊರಡುವಳು)

* * *

(ದಾರಿಯಲ್ಲಿ ಬರುತ್ತಾ)

ರಂಗ : ಎರಡು ಸಾವಿರ ರೂಪಾಯಿ, ಹೆಂಡ್ತಿ ಮಕ್ಕಳಿಗೇಕೆ? ನಾನೇ ಇಟ್ಗಂಡು ಬೇಕಾದಷ್ಟು ಕುಡೀಬೋದು. ಈ ಪ್ರಪಂಚದಲ್ಲುಟ್ಟಿದ್ಮ್ಯಾಕೆ ಉಂಡು ತಿಂದು ಗಂಟಲು ತುಂಬ ಕುಡ್ದು, ಕುಣಿದು ಕುಪ್ಪಳಿಸಿ ವೋಗಬೇಕು. ಕುಡಿತದ ರುಚಿ ಗಮ್ಮತ್ತು ಬಲ್ಲವರೇ ಬಲ್ಲರು. ಬ್ಯಾರೆಯವರ್ಗೇನು ಗೊತ್ತು.

ರಂಗಿ : ಇದ್ಯಾನ ಅಪರೂಪಕ್ಕೆ ರೇಸನ್ ಕಾರ್ಡ್ ತಕ್ಕಂಡೋದ. ದ್ಯಾವರು ವಸಿ ಒಳ್ಳೆ ಬುದ್ದಿ ಕೊಟ್ಟಂಗೆ ಕಾಣ್ತದೆ. ಈವೊತ್ತು ಸಂಪಾದ್ನೆ ಜೋರಾಗಿ ಮಾಡಿರಬೋದು. ಅದ್ಕೇ ತತೀನಿ ಅಂತ ಯೇಳಿ ವೋಗವ್ನೆ. ಎಂಗೋ ಮಕ್ಕಳಿಗೆ ವಸಿ ಅನ್ನ ಕಾಣ್ಸವಾ. ತತ್ತನೋ ಅಂಗೇ ಬತ್ತನೋ. ಅಪರೂಪಕ್ಕೆ ವೋಗವ್ನೆ, ಅದೆಲ್ಲಿ ಸಿಕ್ಕೈತೆ. ಇಲ್ಲ ಅನ್ಕಂಡೇ ಬತ್ತನೋ ಏನೋ, ದಿನ ಬೆಳಗಾತು ಅಂದ್ರೆ ಈ ಹೊಟ್ಟೆ ಪಟ್ಟಣ ತುಂಬೋದೆ ಒಂದು ಕಷ್ಟವಾಗೋಗೈತೆ. 'ಈಸಬೇಕು ಇದ್ದು ಜೈಸಬೇಕು' ಅಂತಾರೆ. ಅದ್ಯಾಗೋ ನಾ ಕಾಣ್ನಪ್ಪಾ....

* * *

ರಂಗ : ಅಂತೂ ಸಿದ್ದಣ್ಣ ಅಮಲ್ದಾರ್ರ ಆಫೀಸ್ನಿಂದ ತಕ್ಕಂಬಂದ್ಬುಟ್ನಪ್ಪಾ.

ಸಿದ್ದ : ಇನ್ನ ಒಂದೈತೆ ಕಣ್ ರಂಗಣ್ಣಾ. ಸಾಲ ಕೊಡಾದು.

ರಂಗ : ಅದ್ಯಾವ್ದು ಒಂದು ಸಟೀಗೇಳು ಕಿವಿಗಾಕ್ಕಂಡಿರವಾ? ಸಾಧ್ಯವಾದಾಗ ಆ ಮಾತು.

ಸಿದ್ದ : ನಿಂಗೆ ಮಕ್ಕಳೆಷ್ಟು?

ರಂಗ : ನಾಕವೆ.

ಸಿದ್ದ : ಸಾಕು ಬುಡು.

ರಂಗ : ಅದ್ಯಂಗೇಳ್ತೀಯ.

ಸಿದ್ದ : ಹೆಚ್ಚಿಗೆ ಬ್ಯಾಡ.

ರಂಗ : ಅದ್ಯಾಕಪ್ಪಾ?

ಸಿದ್ದ : ಈಗ ನೀನು ಮಕ್ಕಳು ಸಾಕು ಅಂತ ಆಪರೇಸನ್ ಮಾಡಿಸ್ಕಂಬುಟ್ರೆ, ಅಂದ್ರೆ ಮಕ್ಕಳಾಗದಂಗ....

ರಂಗ : ಆಗ....

ಸಿದ್ದ : ಆಗ ಹಸಿರು ಪತ್ರ ಕೊಡ್ತಾರೆ, ನಮ್ಮ ಮಾದಣ್ಣ ತಕ್ಕಂಡ್ನಲ್ಲಾ.

ರಂಗ : ಹಸಿರು ಪತ್ರ ಅಂದ್ರ್ಯಾನಪ್ಪಾ?

ಸಿದ್ದ : ಅದೊಂದು ತರ ಗುರ್ತಿನ ಚೀಟಿ. ಆಪರೇಷನ್ ಮಾಡಿಸ್ಕಂಡವರ್ಗೆ ಅದನ್ನ ತಕ್ಕಂಡೋಗಿ ಬ್ಯಾಂಕಿನಲ್ಲಿ ಕೇಳಿದ್ರೆ ಸಾಲ ತಕ್ಕಬೋದಂತೆ. ಈ ಮಕ್ಕಳ್ನೇ ಸಾಕಕ್ಕಾಗಕ್ಕಿಲ್ಲ ಮಾಡಿಸ್ಕಂಡ್ರೇನು?

ರಂಗ : ನಂಗಾಗಕಿಲ್ಲ ಬುಡು.....

ಸಿದ್ದ : ನಿನ್ನೆಂಡ್ತಿಯಾದ್ರೂ ಮಾಡಿಸ್ಕಬೋದು....

ರಂಗ : ಅವ್ಳು ಬ್ಯಾಕಾದ್ರೆ ಮಾಡಿಸ್ಕಳ್ಳಿ ನಂಗೆ ಬ್ಯಾಡ, ಸುಮ್ಮನೆ ತೊಂದರೆ, ಆಮ್ಯಾಕೆ ಆಪ್ರೇಸನ್ ಮಾಡಿಸ್ಕಂಡು ನಂಗೇನಾರ ಆಗೋದ್ರೆ.

ಸಿದ್ದ : ಮಾದ ಮನಸ್ನಲ್ವಾ, ಆವ ಮಾಡಿಸ್ಕಂಡಿಲ್ವಾ?

ರಂಗ : ನೋಡಮು ಬೇಕಾದಾಗ....

ಸಿದ್ದ : ಇರ ಇಚಾರ ಯೇಳ್ದೆ.....

ರಂಗ : ಒಳ್ಳೇದೇ ಆತು ಬುಡು. ಬ್ಯಾಂಕಿಗೋಗಮ ನಡೀರಿ.

ಮಾದ : ನಡೀರಿ....

(ರಂಗ ಬ್ಯಾಂಕ್ ಮ್ಯಾನೇಜರ್ ಇದ್ದಲ್ಲಿಗೆ ಬರುತ್ತಾನೆ)

ರಂಗ : ನಮಸ್ಕಾರ ಬುದ್ದಿ.

ಮ್ಯಾನೇಜರ್ : ಏನಪ್ಪಾ ಬೆಳಗೆದ್ದು ಬಂದುಬಿಟ್ಟಿದ್ದೀಯಲ್ಲಾ?

ರಂಗ : ಅದೇ ಸಾಮಿ....

ಮ್ಯಾನೇ: ಎಲ್ಲಾ ಸರಿಯಾಗಿ ಅಪ್ಲಿಕೇಶನ್ ತುಂಬಿಸಿಕೊಂಡು ಬಂದಿದ್ದೀಯಲ್ಲಾ.

ರಂಗ : ಊಂ ಸಾಮಿ.

ಮ್ಯಾನೇ: ಹಿಂದಿನ ಸಾಲ ಏನೂ ಇಲ್ಲ ತಾನೆ?

ರಂಗ : ಇಲ್ಲ ಸಾಮಿ.

ಮ್ಯಾನೇ: ಬೇರೆ ಕಡೆ ಏನಾದ್ರೂ ಮಾಡಿದ್ದೀಯಾ?

ರಂಗಿ : (ತೊದಲುತ್ತಾ) ಏನೂ.... ಏನಿಲ್ಲ.... ಬುದ್ದಿ.

ಮ್ಯಾನೇ: ಈಗ ಸಾಲ ಏತಕ್ಕೆ?

ರಂಗ : ತರಕಾರಿ ವ್ಯಾಪಾರಕ್ಕೆ ಬುದ್ಧಿ.

ಮ್ಯಾನೇ: ತಿಂಗಳು ತಿಂಗಳು ಬಡ್ಡಿ ಕಟ್ತೀಯಾ?

ರಂಗ : ಕಟ್ತೀನಿ ಸಾಮಿ.

ಮ್ಯಾನೇ: ತೆಗೆದುಕೊಳ್ಳುವಾಗ ನೀವು ಬಂದು ನಮ್ಮ ಹತ್ತಿರ ದಮ್ಮಯ್ಯಗುಡ್ಡೆ ಹಾಕ್ತೀರಿ. ಆದ್ರೆ ಸಾಲ ತೀರಿಸದೇ ನಮ್ಮ ಸಿಬ್ಬಂದಿ ಜರುಪಾಗ್ ಮಾಡ್ತೀರಿ. ಅದನ್ನು ನಿಜವಾಗಿಯೂ ಯಾವುದಕ್ಕೆ ತೆಗೆದುಕೊಳ್ತೀರೋ ಅದಕ್ಕೇ ಸದುಪಯೋಗ ಪಡಿಸಬೇಕು. ಇಲ್ಲದೇ ಹೋದ್ರೆ ಸರಕಾರದ ಹಣದ ದುರುಪಯೋಗ ಮಾಡಿದಂತಾಗುತ್ತೆ.

ರಂಗ : ಅಂಗೆಲ್ಲಾರೂ ಉಂಟಾ ಸಾಮಿ? ಆಗಾಗ್ಗೆ ಬಂದು ಕಟ್ಬುಡ್ತೀನಿ, ನೀವೇನೂ ಯೋಸ್ನೆ ಮಾಡ್ಬೇಡಿ ಬುದ್ದಿ.

ಮ್ಯಾನೇ: ಆಯ್ತು ನಡೀರಿ ನಿಮಗೆ ಸಾಲಕೊಟ್ಟಿದ್ದೀನಿ.

ರಂಗ : ಬಾಳ ಉಪಕಾರ ಮಾಡ್ಡಿ ನನ್ನೊಡ್ಯಾ.

ಮ್ಯಾನೇ: ಉಪಕಾರ ಏನ್ಬಂತು? ನಿಮ್ಮಂಥ ಬಡವರಿಗೆ ದೀನದಲಿತರಿಗೆ ಸಹಾಯ ಮಾಡದ್ಕೇ ನಾವಿರೋದು. ಅದನ್ನ ನೀವು ಸದುಪಯೋಗಪಡಿಸಿಕೊಂಡು ಅದರಿಂದ ಉದ್ಧಾರವಾಗಿ ಸರ್ಕಾರದ ಹಣವನ್ನು ಹಿಂತಿರುಗಿಸಬೇಕು. ಅಷ್ಟು ಮಾಡಿದರೆ ನೀವು ದೇಶಕ್ಕೆ ಉಪಕಾರ ಮಾಡಿದಾಗಾಗುತ್ತೆ.

ರಂಗ : ಹೌದು ಸಾಮಿ.

ಮ್ಯಾನೇ: ಆಯ್ತು ಅಲ್ಲಿ ಹಣ ಕೊಡ್ತಾರೆ ತೆಗೆದುಕೊಂಡು ಹೋಗಿ.

ರಂಗ : ನಮಸ್ಕಾರ ಸಾಮಿ.

ರಂಗ : ಅಂತೂ ದ್ಯಾವರ ದಯೆಯಿಂದ ಬ್ಯಾಂಕ್ ಮ್ಯಾನೇಜರ್ ಸಾಲ ಕೊಟ್ಬುಬುಟ್ರು.

ಸಿದ್ದ : ಏನ್ಲಾ ರಂಗ ಪರಮಾತ್ಮನ್ನ ಸೇವಿಸಿದ್ದೀಯಾ?

ರಂಗ : ಅದೆಂಗೋ ನಿಂಗೂ ಗೊತ್ತಾಗ್ಬುಟ್ಟಿದೆಯಲ್ಲ. ಏನೋ ವಸಿ ಹಾಕಿದ್ನಪ್ಪಾ.

ಸಿದ್ದ : ಅದೇ ಬ್ಯಾಡ ಅಂತ ನಾವೇಳದು.

ರಂಗ : ದುಡ್ಡು ಇದ್ದಾಗ್ಲೂ ಬ್ಯಾಡ ಅಂದ್ರ್ಯಾಗಪ್ಪಾ.

ಸಿದ್ದ : ಯಾವ ದುಡ್ಡು ಬಂತಪ್ಪಾ ಸಿದ್ದಣ್ಣ?

ರಂಗ : ಬ್ಯಾಂಕ್ನಲ್ಲಿ ಸಾಲ ತಕ್ಕಂಡ್ನಲ್ಲಪ್ಪಾ.

ಮಾದ : ಏಟು?

ರಂಗ : ಎರಡು ಸಾವಿರ.

ಸಿದ್ದ : ಅದ್ಕೇ ಈವತ್ತು ಸಕತ್ತಾಗಿ ತಕ್ಕಂಬುಟ್ಟಂತೆ ಕಾಣ್ಸೈತೆ.

ರಂಗ : ಏನೋ ವಸಿ ತಕ್ಕೊಂಡೇ ಬುಡು.

ಸಿದ್ದ : ವಸಿ ತಕ್ಕೊಂಡ್ರೆ ಇಂಗಾಡ್ತಿದ್ದಯಿ, ಇನ್ನು ಜಾಸ್ತಿ ತಕ್ಕಂಡ್ರೆ ಅದೇಟು ಕುಣ್ದಿಯೋ. ಬಾಯ್ಯಾ ಇತ್ತಾಗೆ ರಸ್ತೆಲೇನ್ ನಿನ್ನಾಟ. ಸರ್ಕಸ್ ಮಾಡ್ತವ್ನೆ.

ರಂಗ : ಇದ್ದೊಳ್ಳಿ ಸರಿ ಕಣ್ ಬುಡಪ್ಪೋ....

ಮಾದ : ದುಡ್ಡೆಲ್ಲ್ಯಪ್ಪಾ?

ರಂಗ : ಇದೇನ್ ಮಾದಣ್ಣ ನೀ ಯೇಳೋದು? ಅದೆಲ್ಲಾ ತೀರೋತಲ್ವಾ?

ಮಾದ : ಕುಡಿತಕ್ಕೆ ಎರಡು ಸಾವಿರ ಕೊಟ್ಯನ್ಯಾ?

## ದೃಶ್ಯ-೪

(ಲಾರಿ ಬರುತ್ತಿದೆ ಆಗ ರಂಗ)

ರಂಗ : ಹೋಲ್ಡಾನ್, ಹೋಲ್ಡಾನ್ ನಿಲ್ಸಯ್ಯೋ ನಾ ಬರದು ನಿಂಗೆ ಕಾಣಕಿಲ್ವಾ.... ರಂಗ ಅಂದ್ರೆ ನಿಂಗ್ ಇಸ್ಟೂ ಸಸಾರವಾ? ಕಂಡಿವ್ನಿ.... ಏಟೊಂದು ಪೊಗರು ನಿಂಗೆ.... ಕು.... ಕುಡ್ದಿರ್ಬೋದು ಯಾರೂ ಕುಡ್ಯರಿಲ್ವ? ಕುಡಿದ್ರೇನು ತಪ್ಪು? ಮರ್‍ವಾದೆ ತೋರ್‍ಸಾಕೆ ಗೊತ್ತಿಲ್ವಾ ನಿಂಗೆ.... ವೋ.... ವೋ.... ವೋಲ್ಡಾನ್....

(ಕೈ ಅಡ್ಡ ಹಾಕುತ್ತಾ ರಸ್ತೆಯಲ್ಲಿ ನಿಂತುಕೊಳ್ಳಲು ಸಿದ್ದ, ಮಾದ ಆ ಕಡೆ ಬರುತ್ತಿದ್ದರು)

ಸಿದ್ದ : ಫಿಯ್ ರಂಗಾ ಇತ್ತ ಬಾರ್‍ಲಾ. ಲಾರಿ ಬತ್ತೈತೆ. ಬಸ್ -ಕಾರು ಬತ್ತೃತೆ. ನಿಂಗೇನು ಜೀವದ ಮ್ಯಾಲೂ ಎದ್ರುಕ್ಕಿಲ್ವಾ?

ರಂಗ : ನೋಡ್ಲಾ ಸಿದ್ದಣ್ಣ ನಾ ಬಂದಿವ್ನಿ ಅಂತ ಅವನಿಗೆ ಗೊತ್ತಾಗ್ಬಾಡ್ವಾ? ಏನೋ ಅಪ್ಪಾ ಕಾಲ ಕೆಟ್ಟೋತು ಬುಡು.

ರಂಗ : ಅದ್ಯಾಕ್ ನನ್ನ ಮ್ಯಾಲೇ ಬುಟ್ಟಾನು? ಇವರಪ್ಪನ ಮನೆ ಗೆಪ್ಪೆ ತಿಂದಿದ್ನಾ ನಾನು?

ಮಾದ : ಯಾಕೆ ಇಸ್ಟೊಂದು ಕುಡ್ದು ತೂರಾಡ್ತಿದ್ದಿ.

ರಂಗ : ಆ ಮುಂಡೇವು ಬುಡ್ನೇ ಇಲ್ಲ ನೋಡು ಕರ್‍ಕೊಂಡೋಗಿ ಚೆನ್ನಾಗಿ ಕುಡಿಸಿ ದುಡ್ನಾಟಕ್ಕೆ ಕುಡುಸ್ಬುಟ್ರು. ಎಲ್ಲಾನೂ ಕಿತ್ಕಂಬುಟ್ರು. ಎಲ್ಲಾನೂ ಸೋತ್ಬುಟ್ಟೆ ಕಣಪ್ಪಾ.

ಸಿದ್ದ : ಮತ್ತೀಗ ಸಾಲ ತೀರ್ಸದ್ಯಾಗ?

ರಂಗ : ನಂಗೇನೊಗ್ತು?

ಮಾದ : ನೀನು ಎಂಡ್ತಿ ಮಕ್ಕಳಿಗೆ ಇಟ್ಟಿಕ್ಕಾ ಮುಸುಡಿ ಕಣ್ ತಕ್ಕ.

ಸಿದ್ದ : ಅಲ್ಲ ರಂಗ ನಾಲ್ಕು ಮಕ್ಕಳು, ಎಂಡ್ತಿ ಅವರ ಗತಿ ಏನೂ ಅಂತ ನೋಡ್ದೆ ಸಾಲ ಮಾಡಿ ಒಂದೇ ದಿನಕ್ಕೆ ಈ ಪಾಟಿ ಖರ್ಚು ಮಾಡ್ಬುಟ್ಟು ಕುಡ್ಕಂಡು ಒದ್ದಾಡ್ತಾ ಇದ್ದಿಯಲ್ಲಾ ನಿಂಗ್ ಬುದ್ದಿ ಅನ್ನದು ಕಿಂಚಿತ್ತೂ ಇಲ್ವಾ? ಎಂಡ್ತಿ ಮಕ್ಕಳಿಗೆ ಇಟ್ಟೇನಾಕ್ತಿಯಪ್ಪಾ?

ರಂಗ : (ಆಕಳಿಸುತ್ತಾ) ನಿದ್ದೆ ಬತ್ತದೆ ಕಣ್ಣಾ.... ನೀನು ಮಾದಣ್ಣೋ, ಸಿದ್ದಣ್ಣೋ.....

ಸಿದ್ದ : ಅಂತೂ ಲೈಟ್ ಬೆಳಕಿಗೆ ಕಣ್ಣು ಕುಣಿತ್ತೈತೆ ಅನ್ನು. ಸಿದ್ದನೋ, ಮಾಬ್ನೋ ಒಬ್ಬ ಕಣ್ ತಕ್ಕ, ನಿನ್ನ ಮುಕಕ್ಕೊಸಿ ಮಂಗ್ಳಾರ್ತಿ ಎತ್ತ. ಎಂಡ್ತಿ ಮಕ್ಕಳಿಗೆ ಇಟ್ಟಾಕಯ್ಯೋಗ್ತಿ ಇಲ್ದೇ ಹೋದ್ರೂ ಕುಡಿತ, ಜೂಜು, ಬೀಡಿ, ಸಿಗರೇಟ್, ಇತರ ಚಟ ಮಾತ್ರ ನಿಂಗೆ ತಪ್ಪಿಲ್ಲಾ.

ಮಾದ : ಅದ್ಯಾನೇ ಯಾಳಕಿಲ್ವಾ ಗಾದ್ಯಾ, ಕಲ್ತದ್ದು ಬುಡು ಅಂದ್ರೆ ಊರು ಬುಟ್ರೂ ಕಲ್ತದ್ದು ಮಾತ್ರ ಬುಡಲ್ಲ ಅಂದಾಗಾತು ಬುಡು.

ಸಿದ್ದ : ಹುಟ್ಟ ಗುಣ ಗಟ್ಟ ಹತ್ತದ್ರೂ ಬುಡಲ್ಲಾ ಅಂದ ಅಂಗಾತು ಬುಡು.

ರಂಗ : ಎಂಗ್ಯೋ ಒಂದು ಬುಡಣ್ಣಾ.

ಸಿದ್ದ : ನಿಂಗೆ ಬುದ್ದಿ ಯೇಳೋ ನಮಗೆ ಬುದ್ದಿ ಇಲ್ಲ ನಡೀ ಮಾದಣ್ಣಾ ವೋಗವಾ. ನೆಟ್ಟಗೆ ಮನೆಗೋಗ್ಲಾ.

ರಂಗ : ವೋತೀನಿ ವೋಗ್ರಣ್ಣೋ.

ಮಾದ : ಇನ್ನೂ ಅಮಲು ಇಳಿದಿಲ್ವಾ ರಂಗ.

(ಇಬ್ಬರೂ ಹೊರಡುವರು)

ರಂಗ : ಇಳಿದೇ ಏನಾತದೆ ತಕ್ಕಾ.... ಅಯ್ಯೋ.... ಇವರು ಬುದ್ದಿವಂತ್ರು. ನಂಗೇಳಕ್ಕೆ ಬಂದವ್ರೆ ಬುದ್ದಿವಾದಾ? ನಾನು ಹಾಲು ಕುಡ್ಯೋ ಮಗಾ ಅಲ್ಲಾ. ನಂಗೂ ಗೊತ್ತೈತೆ ಈ ಪರಪಂಚದಾಗ ಎಂಗಿರಬ್ಯಾಕು ಅಂತ ಮಂಕುದಿಣ್ಣೆಗಳಾ. (ವಿಚಿತ್ರವಾಗಿ ನಗುವನು) ನಮ್ಮಿಷ್ಟದಂಗೋಗಕೆ ಬಿಡ್ದೆ ಇವರು ಬ್ಯಾರೆ ದಾರಿ ತೋರ್ರಾರೆ ನಾನು ಚಿಕ್ಕೋನಲ್ಲಾ. ರಂಗ ಪೆದ್ದ ಅಂತ ತಿಳ್ಕಂಡವ್ರೇ. ಲಕ್ಷ್ಮಿ ಯಾರ್ದೂಗ್ಗಿ ಸ್ಥಿರವಲ್ಲಾ. ಅವಳು ನನ್ನ ಕೈಲುಳಿತಾಳಾ? ವೋದ್ರೋಗ್ತಾಳೆ ವೋಗು.

ಕಳ್ಳರ ಭಯವಿಲ್ಲ.... ನನ್ನ ಓದ್ನು ಏನೂ ಸಿಕ್ಕಕಿಲ್ಲಾ. ನನ್ನಿಂತ ಯಾರಿದ್ದಾನು ಈ ಪ್ರಪಂಚದಾಗೆ ತಕ್ಕಳ್ಳಿ....

(ತಟ್ಟಾಡುತ್ತಾ ನಡೆಯುವನು)

ಥೂ ಮುಂಡೇದೇ, ನನ್ನ ಕೈನಾಗೆ ಬರಿ ತೂತೈತೆ ಕಾಸೆಲ್ಲುಳಿತದೇ? ನನ್ನದೇನು ತಪ್ಪು? ಮೊದಲೇ ಯೇಳ್ತವ್ರೆ ಲಕ್ಷ್ಮಿ ಯಾರ್ಗೂ ಸ್ಥಿರವಲ್ಲಾ ಅಂತಾ, ಅದಕ್ಕೇ ಯೋನೋ ನನ್ಗೂ ಅಂಗೇ ಆಗೋದು ಏನು ಮಾಡಲಿ.... ಎಲ್ಲಾರೂ ವೋಗವ್ರೇ, ಅಲ್ಲಿಗಂಟ ಪರಮಾತ್ಮ ಆಡಿಸಿದಂತೆ ಆಡುವೆ ನಾನು.... ಆಹಾ ಪರಮಾತ್ಮ ಓಡಿಸಿದಂತೆ ಓಡುವೆ ನಾನು....

(ಓಡಿ, ಜಾರಿ ಬೀಳುವನು)

* * *

## ದೃಶ್ಯ-೫

(ರಂಗಿ ಅಳುತ್ತಿದ್ದಾಳೆ ಮಗು ಸತ್ತು ಹೋಗಿದೆ)

ರಂಗಿ : ಅಯ್ಯೋ, ಎಂಟೊರ್ಸದ ಮಗನ್ನೆ ಕರ್ಕಂಬುಟ್ಯಲ್ಲಪ್ಪಾ. ಏಟೊಂದು ಕಷ್ಟಪಟ್ಟು ಸಾಕಿದ್ನಪ್ಪಾ. ಅಯ್ಯೋ ದ್ಯಾವರೇ ನಿಂಗೇ ಕರುಣೇ ಅನ್ನದಿಲ್ಲಪ್ಪಾ ಬನ್ನಿ, ಬನ್ನಿ.... ಚನ್ನ ವೊಂಟೋದಾ.... ನಮ್ಮ ಬುಟ್ ಬುಟ್‌ವಂಟೋದಾ....

ರಂಗ : ಅಯ್ಯೋ.... ಚೆನ್ನಾ.... ಚೆನ್ನಾ....

ರಂಗಿ : ಎಲ್ಲೋಗಿದ್ರಿ ಮೂರು ದಿನಗಳಿಂದ ನಾವು ಊರನ್ನೆಲ್ಲಾ ವುಡುಕುಸ್ಬುಟ್ವೇ. ನಿಮಗೆ ಮುಖಾನೂ ಸಿಕ್ನಿಲ್ವಲ್ಲಾ?

ರಂಗ : ಈ ಊರ್ನಾಗೆ ಇದ್ದೆ.

ರಂಗಿ : ನಿಮ್ಮ ಕುಡ್ತದ ಅಮಲ್ನಲ್ಲಿ ಎಲ್ಲೋ ಬಿದ್ಕಂಡು ನಿಮ್ಮ ಮಗ ಸತ್ರೂ ನೋಡಕ್ಕೆ ಬರ್ನಿಲ್ವಲ್ಲಾ.....

ರಂಗ : ಇಂಗಾತದೆ ಅಂತ ನಂಗೆಂಗೆ ಗೊತ್ತಾಗಬೇಕು ಯೇಳು.

ರಂಗಿ : ಅಯ್ಯೋ ಅವನ್ನ ವಸಿ ದೊಡ್ಡಾಸ್ಪತ್ರೆಗೆ ಸೇರಿಸಿದ್ರೆ ಬದಿಕತಿದ್ದ. ನೀವು ಒಂದು ಸರ್ತಗೂ ಕಿವಿಯಲ್ಲಾಕ್ಕಳಿಲ್ಲ. ಈಗ ಎಂಟೊರ್ಸದ ಮಗನ್ನ ಕಳ್ಕಂಡ್ರಿ. ಇಪರೀತ ಜ್ವರದ ತಾಪದಲ್ಲಿ ಅಪ್ಪಾ ಅಪ್ಪಾ ಅಂತಾ ವೊಗ ಏಟೊಂದು ಕನವರಿಸ್ಕಂತು ಗೊತ್ತಾ?

ರಂಗಿ : ಮೂರು ನಾಕು ದಿನ ಕುಡಿದು ಬಿದ್ದಿರಕ್ಕೆ ದುಡ್ಡೆಲ್ಲಿ ಬಂತು?

ರಂಗ : ಸಾಲ ಮಾಡ್ದೆ!

ರಂಗಿ : ತೀರ್‍ಸಕ್ಕೆ ಸಕ್ತಿ ಇಲ್ದೇವೋದ್ರೂ ಸಾಲ ಯಾಕೆ ಮಾಡಿದ್ರಿ? ಅದ್ನಾರೂ ಒಳ್ಳೇದಕ್ಕೆ ಉಪಯೋಗಿಸಿದ್ರಾ? ಅದನ್ನ ಮಗನಿಗಾರ ಉಪಯೋಗ್ಸಿದ್ರೆ ಮೊಗ ಬದುಕುತ್ತಿತ್ತು. ಮುಂದಕ್ಕೆ ಸಂಸಾರ ಒಳ್ಳೇದಾಗ್ತಿತ್ತು. ಸಾಲ ಏಟು ಮಾಡಿದ್ರಿ?

ರಂಗ : ಎರಡು ಸಾವಿರ.

ರಂಗಿ : ಎಲ್ಲಿ?

ರಂಗ : ಬ್ಯಾಂಕ್ನಲ್ಲಿ?

ರಂಗಿ : ಎಲ್ಲಾನೂ ಏನು ಮಾಡಿದ್ರಿ?

ರಂಗ : ಸುಳ್ಯಾಕೇಳ್ಬೇಕು ಎಲ್ಲಾನೂ ಕುಡಿದೆ, ದುಡ್ಡಿನಾಟ ಆಡಿ ಹೆಚ್ಚು ಸಂಪಾದ್ನೆ ಮಾಡಬೋದು ಅಂತ ಆಸೆಯಿಂದ ಎಲ್ಲಾನೂ ಕಳ್ಕಂಬುಟ್ಟೆ.

ರಂಗಿ : ಸಾಲ ಎಂಗ್ ತೀರಿಸ್ತೀರಿ? ಕೂಲಿ ಸಂಬಳ ಮಾಡೋದು ಮನೆ ಸಂಸಾರಕ್ಕಾಗೋಲ್ಲ, ನಿಮ್ಮ ಕುಡಿತಕ್ಕೆ ಸಾಲಲ್ಲ. ನಮ್ಮನ್ನೇನು ಇರಬೇಕು ಅಂತ ಮಾಡಿದ್ದೀರೋ ಸಾಯಬೇಕೋ ಹೇಳಿ.

ರಂಗ : ನಂಗೇನೂ ತೋಚ್ತಾ ಇಲ್ಲ.

ರಂಗಿ : ಮಾಡೂದ್ನೆಲ್ಲಾ ಮಾಡಿ.

* * *

## ದೃಶ್ಯ-೬

(ಆಸ್ಪತ್ರೆಗೆ ಸಿದ್ದ, ಮಾದ ರಂಗನನ್ನು ತಂದು ಹಾಕಿದರು)

ಡಾಕ್ಟರ್: ಏನಾಯ್ತಪ್ಪಾ ಇವನಿಗೆ?

ಸಿದ್ದ : ಏನೋ ಕುಡಿದುಬುಟ್ಟಿದ್ದಾನೆ ಅಂತ ಕಾಣ್ಸೈತೆ ಡಾಕ್ಟ್ರೇ. ಮೊದ್ಲೆಲ್ಲಾ ವಸಿ ನೀರು ಹಾಕಿದ್ರೆ ಎದ್ದು ಬುಡವ್ನು. ಈಗ ಎಷ್ಟು ನೀರು ಬಗ್ಗಿಸಿದ್ರೂ ಎದ್ದೇಳ್ಲೇ ಇಲ್ಲ. ಉಸಿರಾಟ ನಿಂತೋತೋ ಏನೋ ಅಂತ ಅನ್ಮಾನದ ಮ್ಯಾಗೆ ಎತ್ಕಂಬಂದ್ಬುಟ್ವೋ.

ಡಾಕ್ಟರ್: ಹೆಚ್ಚಾಗೇ ಸೇವಿಸಿದ್ದಾನೆ.

(ಡಾಕ್ಟರ್ ಕಿವಿ ಹಿಡಿದು ಪಟಪಟನೆ ಹೊಡೆದು ನೋಡಿದರು. ಆತ ಏಳುವಂತಿರಲಿಲ್ಲ)

ಡಾಕ್ಟರ್: ಈಗ ಇವನ ಹೊಟ್ಟೇಲೀರೋ ಸೇಂದಿನೆಲ್ಲಾ ಹೊರತೆಗಿಬೇಕು, ಇಲ್ಲದೇ ಹೋದ್ರೆ ಪ್ರಜ್ಞೆ ಬರದೂ ಇಲ್ಲ, ಸತ್ತು ಹೋದ್ರೂ ಹೋಗ್ಬಿಟ್ಟಾನು.

ಮಾದ : ಮೊದ್ಲು ಅದೇನು ಬೇಕು ಮಾಡಿ ಸಾಮಿ ಮಕ್ಕಳಂದಿಗ.

ಡಾಕ್ಟರ್: ಅಷ್ಟೆಲ್ಲಾ ಗೋಳಿದ್ರೂ ಕುಡಿತ ಮಾತ್ರ ನಿಲ್ಲಿಸಲ್ಲವಲ್ಲಾ.

ಮಾದ : ಏನೋ ಕಲ್ತುಬುಟ್ಟ. ನಾವು ಬೇಕಾದಷ್ಟು ಸಾರಿ ಯೋಳಿದೋ ಡಾಕ್ಟ್ರೇ. ಬುದ್ತೇನಿ ಅನ್ನುದು ಹಾಗೇ ಕುಡಿದು ಸಿಕ್ಕಿದ ಜಾಗದಲ್ಲಿ ಬಿದ್ಕಂಡು ಒದ್ದಾಡದು. ಏನು ಮಾಡುದು? ಅವನಿಗೆ ವಸಿ ಬುದ್ದಿ ಹೇಳಬೇಕು.

ಡಾಕ್ಟರ್: ಇಂಗ್‌ಬಿದ್ದಿರವನ್ಗೇನೇಳ್ಲಿ?

ಮಾದ : ಮೊದ್ಲು ಅವನಿಗೆ ಪ್ರಜ್ನೆ ಬರ್ಸಿ ಡಾಕ್ಟ್ರೇ ಅಮ್ಯಾಕೆ ಯೇಳೂರಿ.

ಡಾಕ್ಟರ್: ಆಯ್ತು.

(ಎಂದು ಒಳಗೆ ಹೋಗುವರು. ಹೊರಗಡೆ ಸಿದ್ದ, ಮಾದ ಮಾತನಾಡುತ್ತಾ ಕುಳಿತಿಪ್ಪಾರೆ)

ಮಾದ : ಇವನ್ಗೇನ್ಲಾ ಬಂದಿರದು, ಈ ಪಾಟಿ ಕುಡ್ದುಬುಟ್ಟವ್ನಲ್ಲಾ?

ಸಿದ್ದ : ಸತ್ತುಗಿತ್ತೋಗ್ಬುಟ್ರ್ಯೋ?

ಮಾದ : ಅವನೆಂಡ್ತಿಗಾರಾ ವಸಿ ಯೋಳಿ ಕಳಿಸ್ಬೇಕಾಗಿತ್ತು.

ಮಾದ : ಏನಾರೂ ಹೆಚ್ಚು ಕಮ್ಮಿ ಆಗೋದ್ರೆ?

ಸಿದ್ದ : ಡಾಕ್ಟ್ರವ್ರೆ ನೋಡ್ಕತಾರೆ ಬುಡು.

ಮಾದ : ನಾನು ಗಿಣಿಗೇಳ್ದಂಗೇಳ್ದೆ, ದುಡ್ನೆಲ್ಲಾ ಮಕ್ಕಳಿಗೆ, ಸಂಸಾರಕ್ಕೆ ಹಾಕು, ಈ ಕುಡಿತಕ್ಕೆ ಹಾಕ್ಬ್ಯಾಡ ಅಂತ, ಆದ್ರೂ ಬುದ್ನಿಲ್ಲ. ಕುಡಿತಕ್ಕೆ ಜೂಜಿಗೆ ಹಾಕಿ ಎಲ್ಲನೂ ಅದ್ವಾನ ಮಾಡ್ಬುಟ್ಟ, ಎರಡು ಸಾವಿರ ರೂಪಾಯನ್ನು ಮೂರು ದಿನದಲ್ಲೇ ಲಯ ಮಾಡ್ಬುಟ್ನಲ್ಲಪ್ಪಾ....

ಸಿದ್ದ : ಏನುಮಾಡಕಾದದು? ಎಲ್ಲಾ ಸಾವಾಸ ದೋಸ.

ಮಾದ : ಕುಡ್ತ, ಜೂಜು ಕಲಿತಮ್ಯಾಕೆ ಉದ್ದಾರಾದ ಬುಡು.

ಸಿದ್ದ : ಏಟೊಂದು ಬುದ್ದಿವಾದ ಯೋಳಿದ್ದು. ಆದ್ರೂ ಕ್ಯಾಳ್ನೇ ಇಲ್ಲ, ಪ್ರಾಣ ವೋತದ ಅಂದ್ರು ಕುಡ್ದು ಕುಡ್ದು ಬೀದಿ ಬೀದೀಲಿ ಒದ್ದಾಡ್ತಾ ಅವ್ನಲ್ಲಾ, ಅವನೇನು ಮನಸ್ನೋ, ಮರ್ರ್ವೋ ಅಂತ ನಂಗೆ ಗೊತ್ತಾಗಕ್ಕಿಲ್ಲ.

ಮಾದ : ಸ್ನೇಯಿತ್ರು ಏಳಾತು, ಎಂಡ್ತಿ ಏಳಾತು, ಇನ್ನು ಉಳಿದವ್ರು ಏಳಾತು, ಡಾಕ್ಟ್ರು ಏಳ್ಬುಟ್ರೆ ನಿಲ್ಲಿಸ್ತಾನೆ ಅಂತ ಕಾಣ್ಕತೆ.

ಸಿದ್ದ : ಇಂಗೆ ಇನ್ನೂ ಮುಂದೆ ಕುಡಿಯದ್ನ ಮುಂದುವರಿಸಿದ್ರೆ ಜೀವ ವೊಂಟೋತದೆ ಅಂದ್ರೆ ಬುಟ್ಟು ಬುಡಬೋದು.

ಮಾದ : ಏನೇ ಆಗ್ಲಪ್ಪಾ ಎಂಡ್ತಿ ಮಕ್ಕಳ ಸ್ಥಿತಿ ನೋಡಕ್ಕಾಗಕ್ಕಿಲ್ಲ. ಒಂದೊತ್ತು ಗಂಜಿಗೂ ದಿಕ್ಕಿಲ್ಲ, ಅಲ್ಲಿ ಎರಡು ಸಾವಿರ ಸಿಕ್ತು ಅಂತ ಇಂಗೆ ಹಾಳ್ಮಾಡ್ಬುಟ್ನಲ್ಲಾ.

(ಅಷ್ಟರಲ್ಲಿ ರಂಗಿ ಅಳುತ್ತಾ ಬರುವಳು)

ರಂಗಿ : ಸಿದ್ದಣ್ಣ ಏನಾತು?

ಮಾದ : ಆಗದೇನವ್ವಾ ಮಾಮೂಲಿ, ಗಂಟಲು ತುಂಬ ಕುಡಿದು ಬಿದ್ದಿದ್ದ ಮರದ ಕೊರಡ್ನಾಗೆ, ಆಸ್ಪತ್ರೆಗೇ ಎತ್ಕಂಬಂದ್ವು, ಇನ್ನು ಮನೆಗೆ ತಂದ್ರೇ ಪ್ರಯೋಜ್ನ ಆಗಲ್ಲ ಅಂತ.

ರಂಗಿ : ಅಂಗಾರೆ ನನ್ನ ಗಂಡ ಉಳವಾಗಿಲ್ವಣ್ಣಾ ಅಯ್ಯೋ ಏನವ್ವಾ ನನ್ನದೃಷ್ಟ, ಒಂದು ವಾರ ಆಯ್ತು ಮಗನ್ನ ಕಳ್ಕಂಡು, ಈಗ ಇದೊಂದು ಬಂತು.

(ಜೋರಾಗಿ ಅಳುವಳು)

ಮಾದ : ಡಾಗಟ್ರವ್ರೆ ಸುಮ್ಕಿರಮ್ಮಾ ಅಳಬ್ಯಾಡ.... ಇನ್ನು ಅಳಬ್ಯಾಡ.... ಇನ್ನು ಏನೇನೋ ಮಾಡ್ತಾರೆ, ಬದುಕುಸ್ಕೊಡ್ತಾರೆ.

ಸಿದ್ದ : ಸ್ವಲ್ಪ ಸಮಾಧಾನ ಮಾಡ್ಕೋ ತಾಯಿ

(ಅಷ್ಟರಲ್ಲಿ ಡಾಕ್ಟರ್ ಬಂದು)

ಸಿದ್ದ : ಡಾಕ್ಟ್ರೇ ಎಂಗನ್ನೇ ನಮ್ಮ ರಂಗ?

ಡಾಕ್ಟರ್: ಇರದೇನು, ಪ್ರಾಣ ಉಳಿಸಬೇಕಾದ್ರೆ ಬೇಕಾವಷ್ಟು ಕಷ್ಟವಾಯ್ತು.

ರಂಗಿ : ಡಾಕ್ಟ್ರೇ ನೋಡಬಹುದಾ?

ಡಾಕ್ಟರ್: ಕರೆದುಕೊಂಡು ಬರ್ತೀನಿ, ಸ್ವಲ್ಪ ಹೊತ್ತು ಹಾಗೆ ಇರಿ.

(ಡಾಕ್ಟರ್ ರಂಗನನ್ನು ಕೈ ಹಿಡಿದು ಕರೆದುಕೊಂಡು ಬಂದರು)

ಸಿದ್ದ : ರಂಗ ಹ್ಯಾಗಿದ್ದೀಯಪ್ಪಾ?

ರಂಗ : ಎಲ್ಲಾ ಈ ದೇವ್ರು ಮಾಡದ್ರು ಕಣಪ್ಪಾ, ಬದುಕಿಸಿದ್ದೇ ಇವ್ರು, ಇವರೇ ನಂಗೆ ದೇವರು, ಇವರ ಫೋಟೋ ಇಟ್ಕಂಡು ಪೂಜೆ ಮಾಡ್ತೀನಿ.

ಡಾಕ್ಟರ್: ನೋಡಪ್ಪಾ ರಂಗ- ನೀನು ದೇವರೂ ಅನ್ನೋದೂ ಬ್ಯಾಡ, ನನ್ನ ಫೋಟೋ ಇಟ್ಟು ಪೂಜಿಸೋದು ಬೇಡ, ಈಗ ನೀನು ಮಾಡಬೇಕಾದ್ದು ಒಂದಿದೆ.

ರಂಗ : ಅದೇನು ಡಾಕಟ್ರೆ ನಾನು ಕೇಳ್ತೀನಿ.

ಡಾಕ್ಟರ್: ಕುಡಿಯೋದು ನಿಲ್ಲಿಸಬೇಕು, ಯಾಕೇ ಮಾತಾಡದೆ ನಿಲ್ಲಿಸ್ಬುಟ್ಟೆ.

ರಂಗ : ಆಯ್ತು ಡಾಕ್ಟ್ರೇ.

ರಂಗಿ : ದೇವರು ಅಷ್ಟು ಒಳ್ಳೆ ಬುದ್ದಿ ಕೊಟ್ರೆ ಸಾಕು.

ನಾನು ನನ್ನ ಮಕ್ಕಳು ಬದಿಕೊತೀವಿ. ಒಂದು ಹೊತ್ತು ಗಂಜಿ ಕುಡಿದು ಜೀವನ ಮಾಡ್ತೀವಿ.

ಸಿದ್ದ : ಈಗ ಹೂ ಅನ್ಬುಟ್ಬು ಆಮೇಲೆ ಮತ್ತೆ ಬೀದೀಲಿ ಬಿದ್ರೆ ನಾವು ಎತ್ಕೊಂಡು ಬರೋದಿಲ್ಲ.

ರಂಗ : ನಿಜ ನಾನು ಅಷ್ಟು ದಿನಗಳಿಂದಲೂ ಸಹವಾಸದ ದೋಷದಿಂದ ಇಂಗಾಗೋದೆ. ಇನ್ನು ಸರ್‍ಯಾಗಿ ನಡ್ಕೋತೀನಿ.

ಡಾಕ್ಟರ್: ಇದೂ ಅಲ್ದೇ ಬೀಡಿ ಸಿಗರೇಟ್ ಸೇದೋಕ್ಕಿಲ್ಲ, ನಶ್ಯ ಹಾಕೋಕ್ಕಿಲ್ಲ, ತಂಬಾಕು ತಿನ್ನಕ್ಕಿಲ್ಲ, ಮಕ್ಕಳ ಕಾಪಾಡ್ತೀನಿ, ಸಾಲ ತೀರಿಸ್ತೀನಿ, ಈ ಪ್ರಪಂಚದಲ್ಲಿ ಎಲ್ಲರ ಋಣಾನೂ ತೀರಿಸ್ಬುಡ್ತೀವಿ ಅಂತ ಹೇಳಿ.

ರಂಗ : ಇನ್ನ್ಯಾವುದನ್ನೂ ಹತ್ತಿರಕ್ಕೆ ಸೇರಿಸಲ್ಲ ಬುಡಿ.

ಡಾಕ್ಟರ್: ಒಳ್ಳೇದು ಎಲ್ಲಾ ಕರ್ಕಂಡೋಗಿ ಮನೇಗೆ.

ರಂಗ : ಬರ್ತೀನಿ ಡಾಕ್ಟ್ರೆ ನಮಸ್ಕಾರ.

ಡಾಕ್ಟರ್: ನಮಸ್ಕಾರ.

(ಎಲ್ಲರೂ ನಮಸ್ಕರಿಸಿ ಹೊರಡುವರು)

*

# ಮಹಾದಾನಿ

## ಪಾತ್ರ ವರ್ಗ

೧. ಸಂಕಣ್ಣ ೨. ಡಾಕ್ಟರ್ ೩. ಮಾಯಣ್ಣ ೪. ಶಾಂತಾ ೫. ರುದ್ರವ್ವ ೬. ರಾಜಪ್ಪ ೭. ಸುಶೀಲಾ

(ಆಸ್ಪತ್ರೆಯ ವಾತಾವರಣ. ಡಾಕ್ಟರ್ ಸಂಕಣ್ಣನ ಬ್ಯಾಂಡೇಜನ್ನು ಬಿಚ್ಚಿ-)

ಡಾಕ್ಟರ್ : ಕಣ್ಣು ಬಿಡಿ ಸಂಕಣ್ಣ, ಏನಾದ್ರೂ ಕಾಣ್ತಾ ಇದ್ಯಾ?

ಸಂಕಣ್ಣ : ಏನೋ ಮಬ್ಬು ಮಬ್ಬಾಗಿ ಕಾಣ್ತಾ ಇದೆ.

ಡಾಕ್ಟರ್ : ಕಾಣ್ತಾ ಇದೆ.... ಕಾಣ್ತಾ ಇದೆ.... (ಸಂತೋಷದ ಭರದಲ್ಲಿ ಓಡಾಡುತ್ತಾ) ನನಗೆ ಕಣ್ಣು ಕಾಣಿಸ್ತಾ ಇದೆ. ಗಿಡ, ಮರ, ಬಳ್ಳಿ, ಹೂ, ಕಾಯಿ, ಹಣ್ಣು, ಮನುಷ್ಯ, ಮೃಗ ಎಲ್ಲಾ ಕಾಣ್ತಾ ಇದೆ. ಮತ್ತೆ ಇವೆಲ್ಲಾ ಕಾಣ್ತೇನೆ ಅಂತ ಕನಸಿನಲ್ಲೂ ನೆನಸಿರಲಿಲ್ಲ. ನೀವೇ ನನ್ನ ಭಾಗಕ್ಕೆ ದೇವರು.

(ಕಾಲುಮುಟ್ಟಿ ನಮಸ್ಕರಿಸುತ್ತಿರಲು)

ಡಾಕ್ಟರ್ : ಏಳಿ, ಏಳಿ, ಮೇಲೇಳಿ, ನಮಸ್ಕಾರ ಸಲ್ಲಬೇಕಾದ್ದು ನನಗಲ್ಲ ಬೇರೆಯವರಿಗೆ.

ಸಂಕಣ್ಣ : ಅಂದ್ರೆ ನಿಮಗಲ್ಲದೆ ಮತ್ತಾರಿಗೆ ನಾನು ಕೃತಜ್ಞತೆ ಸಲ್ಲಿಸಬೇಕು ಹೇಳಿ ಡಾಕ್ಟರ್.

ಡಾಕ್ಟರ್ : ನಿಮಗೆ ಕಣ್ಣು ಕೊಟ್ಟವರು.

ಸಂಕಣ್ಣ : ಅವರನ್ನು ಮರೆಯುವಂತಿಲ್ಲ. ಖಂಡಿತ ಈ ಜನ್ಮದಲ್ಲಿ ಮರೆಯುವಂತಿಲ್ಲ ಅವರ್ಯಾರು ಹೇಳಿ ಡಾಕ್ಟರ್.

ಡಾಕ್ಟರ್ : ಈಗ ಅವರು ಲಭ್ಯವಿಲ್ಲ ಬಿಡಿ. ಅವರಿಗೆ ನಿಮ್ಮ ಮನಸಿನಲ್ಲೇ ಕೃತಜ್ಞತೆ ಸಲ್ಲಿಸಿಬಿಡಿ.

ಸಂಕಣ್ಣ : ಅವರಿಗೆ ಖಂಡಿತ ನನ್ನ ನಮಸ್ಕಾರ ಸಲ್ಲಿಸಿದ್ದೀನಿ. ಅದರ ಜೊತೆಗೆ ನಿಮಗೂ ಮಾಡ್ತೀನಿ. ನೀವು ಕಣ್ಣುಗಳನ್ನು ಜೋಡಿಸಿ ಕಸಿ ಮಾಡುವ ಕೆಲಸವನ್ನು ಯಶಸ್ವಿಯಾಗಿ ಮಾಡಿದ್ದೀರಿ. ಇಲ್ಲದೇ ಇದ್ದಿದ್ರೆ ನನಗೆಲ್ಲಿ ದೃಷ್ಟಿ ಬರ್ತಿತ್ತು ಡಾಕ್ಟರ್ ನಮಸ್ಕಾರ. ನನ್ನ ಜೀವನಕ್ಕೆ ಬೆಳಕು ನೀಡಿದ್ರಿ. ಇಲ್ಲದಿದ್ದರೆ ನಾನು ಅಂಧನಾಗಿರಬೇಕಾಗಿತ್ತು.

ಡಾಕ್ಟರ್ : ಅಂತೂ ನಿಮ್ಮ ಅದೃಷ್ಟ ಚೆನ್ನಾಗಿತ್ತು. ಆಯ್ತು ಬಿಡಿ.

ಸಂಕಣ್ಣ : ನಾನೇನಾದ್ರೂ ಕುರುಡನಾಗಿಬಿಟ್ಟಿದ್ರೆ ನಮ್ಮ ಮನೆಯವರು, ಕೈ ಹಿಡಿದ ಹೆಂಡತಿ ಅವರ ಮನೆಯವರು ಎಲ್ಲರೂ ಎಷ್ಟೊಂದು ತುಚ್ಛತೆಯಿಂದ ಕಾಣ್ತಾ ಇದ್ರು? ಸಮಾಜದವರು ಕುರುಡ ಅಂತ ಹಂಗಿಸ್ತಿದ್ರು. ಅವನ್ನೆಲ್ಲಾ ತಪ್ಪಿಸಿದ್ರಿ ಡಾಕ್ಟ್ರೇ.

(ಕಣ್ಣುಗಳಲ್ಲಿ ನೀರಾಡಲಾರಂಭಿಸಿತು)

ಡಾಕ್ಟರ್ : ಸಮಾಧಾನ ಮಾಡಿಕೊಳ್ಳಿ, ಅಳಬೇಡಿ.

ಸಂಕಣ್ಣ : ಇದು ಕಣ್ಣೀರಲ್ಲ, ಆನಂದಬಾಷ್ಪ ಡಾಕ್ಟರ್, ಆನಂದಭಾಷ್ಪ ಡಾಕ್ಟರ್, ನಿಜವಾಗ್ಲೂ ನನ್ನಂಥ ಪಾಪಿ ಯಾರೂ ಇಲ್ಲ. ನನ್ನಂಥ ದುಃಖಿ ಯಾರೂ ಇಲ್ಲ ಅಂತ ತೀರ್ಮಾನ ಮಾಡಿಕೊಂಡಿದ್ದೆ. ಕಣ್ಣಿಲ್ಲದ ಹಾಗಾಯ್ತಲ್ಲ ಅಂತ ಕಣ್ಣೀರು ಹಾಕಿಕೊಳ್ತಿದ್ದೆ. ಕತ್ತಲು ಮಾತ್ರ ನನ್ನ ಕಣ್ಣಲ್ಲಿ ತುಂಬಿಕೊಂಡಿತ್ತು.

ಡಾಕ್ಟರ್ : ಈಗ ಬೆಳಕು ಬಂತಲ್ಲಾ ಬಿಡಿ.

ಸಂಕಣ್ಣ : ಭೂಮಿಗೆ ಭಾರವಾದೆನಲ್ಲಾ ಅಂತ ಅತ್ತದ್ದೂ ಉಂಟು ಆಗ ನಮ್ಮ ಸೋದರಮಾವ ಮುತುವರ್ಜಿ ವಹಿಸಿ ನಿಮ್ಮ ಹತ್ತಿರ ಕರೆದುಕೊಂಡು ಬಂದ್ರು. ಆಗ ನಿಮ್ಮಲ್ಲಿಗೆ ಬಂದೆ.

(ಆಸ್ಪತ್ರೆಗೆ ಸಂಕಣ್ಣ ಅವರ ಮಾವ ಬರುತ್ತಾರೆ.....)

(FLASH BACK)

ಡಾಕ್ಟರ್ : ಏನಾಯ್ತು?

ಮಾಯಣ್ಣ : ಕಣ್ಣು.... ದೃಷ್ಟಿ ಹೋಗ್ಬಿಟ್ಟಿದೆ ಡಾಕ್ಟ್ರೇ.

ಡಾಕ್ಟರ್ : ನೋಡೋಣ ಪರೀಕ್ಷೆ ಮಾಡೋಣ. ಯಾಕೆ ಹೀಗಾಯ್ತು?

ಮಾಯಣ್ಣ : ಮೊನ್ನೆ ಮೊನ್ನೆವರೆಗೂ ಚೆನ್ನಾಗಿತ್ತು ಡಾಕ್ಟ್ರೇ. ಆದ್ರೆ ಈಗ ನಾಲ್ಕೈದು ದಿನಗಳಲ್ಲಿ ಹೀಗಾಗಿಹೋಯ್ತು. ಹೊಸದಾಗಿ ಮದುವೆ ಆಗಿದೆ ಡಾಕ್ಟ್ರೇ. ಮದುವೆಗೂ ಮೊದ್ಲೇ ಕಣ್ಣುಗಳು ತುಂಬಾ ಚೆನ್ನಾಗಿಯೇ ಇದ್ವು. ಪಾಪ ಬಿ.ಎ. ಮುಗಿಸಿ ಎಷ್ಟೋ ದಿನಗಳವರೆಗೆ ಕೆಲಸ ಇರಲಿಲ್ಲ. ಯಾವುಯಾವುದಕ್ಕೋ ಅರ್ಜಿ ಹಾಕಿಕೊಳ್ತಿದ್ದ. ಎಷ್ಟೋ ವರ್ಷಗಳವರ್ಗೂ ಕೆಲಸ ಸಿಕ್ಕಲೇ ಇಲ್ಲ. ಮನೆಯವರು ಸಂಕಣ್ಣ ಎಷ್ಟು ಬ್ಯಾಡ ಅಂದ್ರೂ ಮದ್ವೆ ಮಾಡಬೇಕು ಅಂತ ಹಠ ಹಿಡಿದು ಚಿಕ್ಕಮಗಳೂರಿನಲ್ಲಿ ಒಂದು ಹೆಣ್ಣು ನೋಡಿ ಮದ್ವೆ ಮಾಡಿಯೇ ಬಿಟ್ಟರು. ಹೊಸದಾಗಿ ಮದುವೆಯಾದ ಈತ ಅತ್ತೆ ಮನೆಗೆ ಹೋದ. ಒಂದು ದಿನ ವಿಹಾರಾರ್ಥವಾಗಿ ನವ ದಂಪತಿಗಳು ತೋಟದ ಕಡೆ ಹೋದ್ರು.

(Effect ಹಕ್ಕಿಗಳ ಗಾನ) (FLASH BACK)

ಶಾಂತಾ : ಏನ್ರೀ ಹ್ಯಾಗಿದೆ ನಮ್ಮ ತೋಟ?

ಸಂಕಣ್ಣ : ಆಹಾ ನಿಜವಾಗಿಯೂ ಚೆನ್ನಾಗಿದೆ. ಈ ತಂಪಾದ ಗಾಳಿ, ಹೂಗಳ ಕಂಪು, ಅಚ್ಚ ಹಸುರಾದ ಪ್ರಕೃತಿ ಕಣ್ಣಳಿಗೆ ತಂಪನ್ನೀಯುವಂತಿವೆ. ಇಂಥ ಸುಂದರ ತಾಣವನ್ನು ನಾನು ಇದುವರ್ರೂ ಕಂಡಿರಲಿಲ್ಲ. ಸ್ವರ್ಗವೇ ಭೂಮಿಗಿಳಿದಿದೆಯೋ ಅನ್ನಿಸ್ತಿದೆ.

ಶಾಂತಾ : ಬರೇ ತೋಟ, ಪ್ರಕೃತಿಯನ್ನೇ ಹೊಗಳ್ತೀರಲ್ಲಾ....

ಸಂಕಣ್ಣ : ಅಂದ್ರೆ ಶಾಂತಾಳನ್ನ ಹೊಗಳಲಿಲ್ಲವಲ್ಲಾ ಅಂತ್ಲಾ?

ಶಾಂತಾ : ನಾನು ಹಾಗೆ ಕೇಳಲಿಲ್ಲ ಸಂಕಣ್ಣ ಮಹಾಶಯರೇ.

ಸಂಕಣ್ಣ : ನನಗೆ ಗೊತ್ತು ನೀನು ಹೆಸರಿಗೆ ತಕ್ಕ ಹಾಗೆ ಶಾಂತ. ನಿನ್ನನ್ನು ಈ ಪ್ರಕೃತಿ ನಡುವೆ ನೋಡ್ತಾ ಇದ್ರೆ ಇಲ್ಲೇ ನಿನ್ನ ಜೊತೆ ಹಿಡಿದಾಟ, ಜೂಟಾಟ ಆಡಿ ಕುಣಿದು ಕುಪ್ಪಳಿಸಿ ಬಿಡ್ಲಾ ಅನ್ನಿಸುತ್ತೆ.

ಶಾಂತ : ಅದಕ್ಕೇ ತಾನೇ ನಾವಿಲ್ಲಿಗೆ ಬಂದಿರೋದು. ಇಂಥ ಸುದಿನ ಇನ್ನೆಲ್ಲಿ ಬರಬೇಕು?

ಸಂಕಣ್ಣ : ನಮ್ಮ ಹನಿಮೂನ್ ಇಲ್ಲೇ..... ನಿನ್ನ ಆಯ್ಕೆ ಚೆನ್ನಾಗಿದೆ ಬಾ.... ಬಾ..... ಹತ್ತಿರ ಬಾ....

ಶಾಂತ : ಥೂ ಸುಮ್ಮನಿರ್ರೀ....

ಸಂಕಣ್ಣ : ಮದುವೆ ಆದ ಮೇಲೂ ನಾಚಿಕೇನೇ?

ಶಾಂತ : ಲಜ್ಜೆ ಹೆಣ್ಣಿನ ಸ್ವಭಾವವಲ್ಲವೇ?

ಸಂಕಣ್ಣ : ಗಿಡಗಳೆಲ್ಲಾ ಹೂ ಬಿಟ್ಟು ರಂಜಿಸ್ತಿವೆ.... ನೋಡು ಅಂತು ನೋಡು, ಎಷ್ಟು ಚೆನ್ನಾಗಿದೆ. (ಕಣ್ಣಿಗೆ ಏನೋ ಬಿದ್ದಂತಾಯಿತು. ಕಣ್ಣನ್ನು ತಿಕ್ಕಿಕೊಳ್ಳಲಾರಂಭಿಸಿದ ಸಂಕಣ್ಣ)

ಶಾಂತ : ಏನಾಯ್ತು, ಏನಾಯ್ತು?

ಸಂಕಣ್ಣ : ಕಣ್ಣಿಗೆ ಏನೋ ಬಿದ್ದು ಬಿಡ್ತು. (ಕೈಯಿಂದ ತಿಕ್ಕುವನು)

ಶಾಂತ : ಅಯ್ಯೋ ತಿಕ್ಕಬೇಡಿ.

ಸಂಕಣ್ಣ : ತುಂಬಾ ಉರಿ ಆಗುತ್ತೆ. ತಿಕ್ಕಬ್ಯಾಡ ಅಂದ್ರೆ ಹ್ಯಾಗೆ ಹೇಳು

ಸಾಂತ : ಅಯ್ಯೋ ಕಣ್ಣೆಲ್ಲಾ ಕೆಂಪಾಗೋಯ್ತು.

(ಸೀರೆಯ ಸೆರಗಲ್ಲಿ ಬಾಯಲ್ಲಿ ಉಫ್ ಎಂದುಕೊಂಡು ಕಣ್ಣಿಗೆ ಒತ್ತಲಾರಂಭಿಸಿದಳು. ಆದರೂ ಬಿಡದೆ ಕಣ್ಣುಗಳನ್ನು ತಿಕ್ಕಲಾರಂಭಿಸಿದ. ಅಯ್ಯೋ ಉರಿ.... ಉರಿ.... ಎನ್ನುತ್ತಿರಲು)

ಶಾಂತ : ನಡೆಯಿರಿ ಮನೆಗಾದ್ರೂ ಹೋಗೋಣ. ಅಮ್ಮ ಏನಾದ್ರೂ ಔಷಧ ಮಾಡ್ತಾಳೆ.

ಸಂಕಣ್ಣ : ಆಸ್ಪತ್ರೆಗೇ ಹೋಗೋಣ.

ಶಾಂತ : ಈ ಹಳ್ಳಿಯಲ್ಲಿ ಆಸ್ಪತ್ರೆ ಇಲ್ವಲ್ಲಾ ದೂರ ಹೋಗಬೇಕು. ಮೊದಲು ಕೈಯಾನ ಪಾನ ಏನಾದ್ರೂ ಮಾಡಿಸೋಣ. ಆಮೇಲೆ ಆಸ್ಪತ್ರೆಗೆ ಹೋಗೋಣ.

ಸಂಕಣ್ಣ : ಆಯ್ತು ನಡೆ.... ನಡೆ.

(ಗಂಡನ ಕೈ ಹಿಡಿದುಕೊಂಡು ಬಿರುಸಾಗಿ ಸಾಗಿ ಬಂದಳು ಮನೆಯ ಕಡೆಗೆ, ತಾಯಿ ಮಗಳು ಗಂಡನ ಕೈ ಹಿಡಿದುಕೊಂಡು ಬರುವುದನ್ನೇ ಮನೆಯ ಮುಂದೆ ಬಂದು ನಿಂತು ನೋಡುತ್ತಾ ಹತ್ತಿರವಾಗಲು ಮನೆಯ ಒಳಗಡೆ ಪ್ರವೇಶಿಸುವಳು.)

ರುದ್ರವ್ವ : ಶಾಂತಾ.... ಏನಾಯ್ತು?

ಶಾಂತ : ಕಣ್ಣಿಗೇನೋ ಬಿತ್ತು. ಚೆನ್ನಾಗಿ ತಿಕ್ಕಿ ಬಿಟ್ರು ಕೆಂಪಾಯ್ತು.

ರುದ್ರವ್ವ : ಇಷ್ಟೇ ತಾನೇ, ತಾಳವ್ವಾ..... ವಸಿ ಔಷಧ ಮಾಡಿ ಹಾಕ್ತೀನಿ.

(ಎದ್ದು ಹೋಗಿ ಸುಣ್ಣ ನಿಂಬೆಹಣ್ಣನ್ನು ಹಾಕಿ ಕಲಸಿ ತಂದು)

ರುದ್ರವ್ವ : ತೆಗೊಳವ್ವ, ಇದನ್ನ ಹಚ್ಚು.

(ಶಾಂತ ತೆಗೆದುಕೊಂಡು ಹಾಕಿದಳು. ಆತ ಅಯ್ಯೋ ಉರಿ ಉರಿ.... ಎಂದು ರೋದಿಸುತ್ತಿರಲು)

ರುದ್ರವ್ವ : ಸರಿ ಹೋಗುತ್ತೆ ಸ್ವಲ್ಪ ಸುಮ್ನಿರಪ್ಪಾ.

(ಅಷ್ಟರಲ್ಲಿ ಮಾಯಣ್ಣನ ಪ್ರವೇಶ)

ಮಾಯಣ್ಣ : ಇದೇನು ಎಲ್ಲಾ ಹೀಗ್ ಕೂತಿದ್ದೀರಿ?

ರುದ್ರವ್ವ : ಅವರಿಗೇ.... ಕಣ್ಣಿಗೇನೋ ಬಿತ್ತಂತೆ. ಅದ್ಕೇ ವಸಿ ಔಷದಿ ಹಾಕಿದ್ದೀವಿ.

ಮಾ : ಏನು ಹಾಕ್ದೆ.... ಅಕ್ಕಾ?

ರು : ಸುಣ್ಣಾ, ನಿಂಬೆಹಣ್ಣು, ಮೂಲಿಕೆ ಹಾಕಿದ್ದೀನಿ.

ಮಾ : ಕಣ್ಣಿಗೆ ಇದನ್ನೆಲ್ಲಾ ಹಾಕದು ಅಂದ್ರೇನು? ಏನು ಸಂಕಣ್ಣಾ ನೀವು ವಿದ್ಯಾವಂತರು ನಿಮ್ಗೂ ತಿಳೀಬಾರ್ದಾ?

ಸಂ : ಅವರಿಗೆ ಸರಿಯಾಗಿ ಗೊತ್ತಿರಬಹುದು ಅಂತ ಹಾಕಿಸಿಕೊಂಡೆ. ಇಷ್ಟು ಉರಿ ಅಂದ್ರೆ ಹಾಕಿಸಿಕೊಳ್ತಿರಲಿಲ್ಲ. ನಾನಾಗ್ಲೆ ಹೇಳ್ದೆ ಶಾಂತಾಳಿಗೆ ಆಸ್ಪತ್ರೆಗೆ ಹೋಗೋಣ ಅಂತ. ಯಾರೂ ನನ್ನ ಮಾತು ಕೇಳಲಿಲ್ಲ.

ಮಾ : ಹೋಗಲೇಬೇಕಾಗಿತ್ತು. ಈಗೆಲ್ಲಾ ಚೆನ್ನಾಗಿ ನೀರಲ್ಲಿ ತೊಳೀರಿ.

(ಸಂಕಣ್ಣನಿಗೆ ನೀರು ತಂದುಕೊಡಲು ಕಣ್ಣುಗಳಿಗೆ ನೀರೆರೆಚಿ ಸ್ವಚ್ಛ ಮಾಡಿದ, ಕಣ್ಣು ಕೆಂಪಗಿತ್ತು)

ಮಾ : ಏನು ನೋವು ಹೋಯ್ತಾ?

ಸಂ : ಇನ್ನೂ ಉರಿ ಚುಮು ಚುಮು ಅನ್ತದೆ.

ಮಾ : ಸ್ವಲ್ಪ ಹೊತ್ತು ಸರಿಹೋಗಬಹುದು.

ಸಂ : ಈಗ ಕಣ್ಣು ಕಾಣ್ತಾನೇ ಇಲ್ಲ.

ಶಾಂ : ಆ್ಞಂ..... ಕಣ್ಣು ಕಾಣಲ್ವೇ?

ರು : ಅಯ್ಯೋ ಎಂಥ ಕೆಲಸ ಆಗಿಹೋಯ್ತು.

ಮಾ : ಅಲ್ಲಾ ರುದ್ರಕ್ಕ ಕಣ್ಣು ಬಹಳ ಸೂಕ್ಷ್ಮವಾದ ಅಂಗ. ಅದರ ಬಗ್ಗೆ ಇಷ್ಟೊಂದು ಅಲಕ್ಷ್ಯನಾ? ಯಾರಾದ್ರೂ ಹೀಗ್ ಮಾಡ್ತಾರಾ....? ನನಗೊಂದು ತೋಚ್ತಾ ಇಲ್ಲ. ಕಯ್ಯಾರೆ ಕಣ್ಣು ಕಾಣದ ಹಾಗೆ ಮಾಡಿಬಿಟ್ಯಲ್ಲಾ....?

ರು : (ಅಳುತ್ತಾ) ಅಯ್ಯೋ.... ನನ್ನ ಅಳಿಯನಿಗೆ ನಾನು ಕುರುಡು ಮಾಡಬೇಕು ಅಂತ ಮಾಡಿದ್ನಾ ಮಾಯಣ್ಣ. ನನಗೇನು ಮಂಕು ಕವಿಚಿಕೊಂಡಿತ್ತೋ ಇಂಗಾಗೋಯ್ತು? ಈಗೇನಪ್ಪಾ ಮಾಡೋದು? ಎಲ್ಲಾರ ಆಸ್ಪತ್ರೆಗೆ ಕರ್ಕಂಡೋಗು, ಏಟಾರ ಖರ್ಚಾಗ್ಲಿ?

ಮಾ : ಎಲ್ಲಾ ನಾಟಿ ಔಷಧಿ ಮಾಡಕ್ಹೋಗಿ ಕಣ್ಣಿನ ದೃಷ್ಟೀನೇ ಕಳೆದುಬಿಟ್ರಿ. ನಿನ್ನ ಅದೃಷ್ಟ ಅಲ್ಲ, ನಿನ್ನ ಅಳಿಯನ ಅದೃಷ್ಟ ಹ್ಯಾಗಿದ್ಯೋ ನೋಡೋಣ? ಸಂಕಣ್ಣಾ ಮೊದಲು ಆಸ್ಪತ್ರೆಗೋಗುವ ನಡೀರಿ.

(ಇಬ್ಬರು ಬಸ್ಸಿನಲ್ಲಿ ಹೊರಡುವರು ಆಸ್ಪತ್ರೆಗೆ)

ಸಂ : ಹೀಗಾಯ್ತು ಡಾಕ್ಟ್ರೇ....

ಡಾ : (ಪರೀಕ್ಷೆ ಮಾಡಿ) ಯೋಚನೆ ಮಾಡಬೇಡಿ, ದೃಷ್ಟಿ ಬರೆಸಲಿಕ್ಕೆ ಪ್ರಯತ್ನ ಮಾಡೋಣ. ದೃಷ್ಟಿ ಬರುತ್ತೆ ಅನಿಸುತ್ತೆ ಪರೀಕ್ಷೆಮಾಡೋಣ.

ಸಂ : (ಆನಂದದ ಭರದಲ್ಲಿ) ನಿಜ್ವೇ ಡಾಕ್ಟ್ರೇ?

ಡಾ : ಖಂಡಿತ. ಆದರೆ ಇದಕ್ಕೆ ಬೇರೆ ಯಾರಾದ್ರೂ ಕಣ್ಣು ಕೊಡಬೇಕಾಗುತ್ತೆ.

ಸಂ : (ವಿಶಾದದ ನಗುವಿನಿಂದ) ನನಗೆ ಕಣ್ಣು ಯಾರು ಕೊಡ್ತಾರೆ ಹೇಳಿ ಡಾಕ್ಟರ್?

ಡಾ : ಇದಕ್ಕೆ ಬದುಕಿರುವವರ ಕಣ್ಣೇ ಬೇಕಿಲ್ಲ. ಸತ್ತವರ ಕಣ್ಣಾದರೂ ಸಾಕು.

ಸಂ : ಇದೇನು ಡಾಕ್ಟ್ರೇ ನೀವು ಹೇಳೋದು?

ಡಾ : ಇದಕ್ಕೆ ಆಶ್ಚರ್ಯಪಡಬೇಕಾಗಿಲ್ಲ. ಎಷ್ಟೋ ಜನ ಪಡೆದಿದ್ದಾರೆ. ಈಗಿನ ಕಾಲದಲ್ಲೇನು ಕಣ್ಣು ದಾನ ಮಾಡೋವ್ರು ಇದ್ದಾರೆ, ಕಣ್ಣುಗಳು ಸಿಕ್ಕಿದ ಕೂಡಲೇ ನಿಮ್ಮನ್ನು ಕರಿಸ್ತೀನಿ, ನೀವು ಬಂದು ಅದರ ಲಾಭ ಪಡೆದುಕೊಳ್ಳಬಹುದು.

ಸಂ : ಅಷ್ಟು ಮಾಡಿ ಪುಣ್ಯ ಕಟ್ಕೊಳ್ಳಿ ಡಾಕ್ಟ್ರೇ......

ಸಂ : ದಾರಿಯಲ್ಲಿ ಹೋಗ್ತಿದ್ರೂ ಇದೇ ಯೋಚನೆ ಆಗಿತ್ತು. ಮನದಲ್ಲಿ ಇದೇ ತುಮುಲ ತುಂಬಿತ್ತು. ನಿಮ್ಮ ಕರೆಗಾಗಿಯೇ ಕಾಯ್ತಿದ್ದೆ. ಒಂದು ದಿನ ನಿಮ್ಮ ಕರೆಯೂ ಬಂತು. ಕಣ್ಣಿನ ಕಸಿಮಾಡುವ ಕೆಲಸವನ್ನು ಯಶಸ್ವಿಯಾಗಿ ಮಾಡಿಯೇಬಿಟ್ರಿ ಈಗ.

ಡಾ : ಇದಕ್ಕಾಗಿ ಎಷ್ಟು ಶ್ರಮಪಡಬೇಕಾಯ್ತು ಗೊತ್ತಾ?

ಸಂ : ಅದನ್ನು ನಾನೆಂದೂ ಮರೆಯೋಲ್ಲ ಡಾಕ್ಟ್ರೇ. ಸದಾ ನಿಮಗೆ ಚಿರ-ಋಣಿಯಾಗಿದ್ದೀನಿ.

ಡಾ : ನಾನು ಮೊದಲೇ ಹೇಳಿದೇ ನೀವು ಋಣಿಯಾಗಿರಬೇಕಾದ್ದು ನನಗಲ್ಲ, ಆ ಕಣ್ಣು ಕೊಟ್ಟವರಿಗೆ ಅಂತ.

ಸಂ : ಅದು ಯಾರು ಡಾಕ್ಟ್ರೇ?

ಡಾ : ಅವರೆಲ್ಲಿ ಸಿಕ್ತಾರೆ?

ಸಂ : ಅವರ ತಂದೆ ತಾಯಿಯರೋ ಬಂಧು ಬಳಗದವರೋ ಯಾರಾದ್ರೂ ಇದ್ರೆ ಹೇಳಿ ಅವರಿಗೆ ಹೋಗಿ ಹೂವಿನಹಾರ ಹಾಕಿ ಫಲತಾಂಬೂಲ ಕೊಟ್ಟು ಅವರು ಏನು ಕೇಳಿದ್ರೂ ಕೊಟ್ಟು ಬರ್ತೀನಿ.

ಡಾ : ಬೇಕಾದಷ್ಟು ಈ ರೀತಿ ಕಣ್ಣುಗಳು ಬರ್ತಿರ್ತವೆ. ಅದರಲ್ಲಿ ಯಾರದು ಅಂತ ನಾವು ಗುರುತಿಟ್ಟುಕೊಳ್ಳೋಣ? ಯಾರದಾದ್ರೇನು? ನಿಮ್ಮ ಕಣ್ಣಿನ ದೃಷ್ಟಿ ಬಂದದ್ದು ತಾನೇ ಮುಖ್ಯ.

ಸಂ : ಹೌದು ಡಾಕ್ಟ್ರೇ.

ಡಾ : ನಾನು ಹೇಳಿದಾಗೆ ಮನಸ್ಸಿನಲ್ಲೇ ನಮಸ್ಕರಿಸಿ ಸಾಕು.

ಸಂ : ಆಯ್ತು ಡಾಕ್ಟ್ರೇ.....

ಡಾ : ಕಣ್ಣಿನದಾನ ಪಡೆಯೋದು ಅಷ್ಟೊಂದು ಸುಲಭವಲ್ಲ. ಪಾಪ ಸಾಯ್ತೀನಿ ಅನ್ನುವವರು ಒಂದೇ ಮನಸ್ಸಿನಿಂದ ತಮ್ಮ ಹೆಸರನ್ನು ನೊಂದಾಯಿಸಿಕೊಂಡು ಕಣ್ಣಿನ ದಾನ ಮಾಡಿದ್ದೀನಿ ಅಂತ ಹೇಳ್ತಾರೆ, ಆದ್ರೆ ಅವರು ಸತ್ತ ಮೇಲೆ ಅವರ ತಂದೆ- ತಾಯಿಯರೇ ಆಗಲೀ ಬಂಧು ಬಳಗದವರೇ ಆಗಲೀ, ಸಹಕರಿಸದೇ ಹೋದ್ರೆ ಅವರ ಆಸೆ ನೆರವೇರುವುದಿಲ್ಲ. ದಾನ ಮಾಡಿದ್ದುದು ನಿಷ್ಪ್ರಯೋಜನವೇ ಆಗುತ್ತೆ.

ಸಂ : ಹೌದಾ ಡಾಕ್ಟ್ರೇ.....?

ಡಾ : ಅಂಥದೊಂದು ಘಟನೆ ಹೇಳ್ತೀನಿ ಕೇಳಿ....

ಅಂದು ನಾನು ಆಸ್ಪತ್ರೆಯ ಕೋಣೆಯಲ್ಲಿ ರೋಗಿಗಳ ಪರೀಕ್ಷೆ ಮಾಡ್ತಾ ಇದ್ದೆ. ಆಗ ಒಂದು ಫೋನ್ ಕಾಲ್ ಬಂತು....

(ಫೋನಿನ ಧ್ವನಿ)

ರಾಜಪ್ಪ : (ದುಗುಡದ ದನಿಯಲ್ಲಿ) ಡಾ|| ಶಂಕರ್.... ಅವರೇ?

ಡಾಕ್ಟರ್ : ಹೌದು ಯಾರು?

ರಾ : ನಾನು ರಾಜಪ್ಪ

ಡಾ : ಏನುಬೇಕು ಹೇಳಿ.

ರಾ : ನಮ್ಮ ಮಗ ಈ ಹೊತ್ತು ತೀರಿ ಹೋಗ್ಬಿಟ್ಟಾ ಡಾಕ್ಟರ್.

ಡಾ : ಐ ಆಮ್ ವೆರಿ ಸಾರಿ.

ರಾ : ನಮ್ಮ ಮನೆ ಜಯನಗರದಲ್ಲಿ ತಮಗೆ ಗೊತ್ತೇ ಇದ್ಯಲ್ಲಾ ಕೂಡ್ಲೇ ಬಂದು ಬಿಡಿ. ನಮ್ಮ ಮಗ ತನ್ನ ಕಣ್ಣನ್ನು ತಮ್ಮ ಕಣ್ಣಿನ ನಿಧಿ ಕೇಂದ್ರದಲ್ಲಿ ರಿಜಿಸ್ಟರ್ ಮಾಡಿಸಿದ್ದ. ಅದನ್ನು ತೆಗೆದುಕೊಂಡು ಬೇರೆಯವರಿಗೆ ಅಳವಡಿಸಿಕೊಳ್ಳಿ.

ಡಾ : ಆಯ್ತು ನಮ್ಮ ಸಿಬ್ಬಂದಿಯೊಡನೆ ಈಗ್ಲೇ ಬಂದೇ.....

(ಫೋನ್ ಇಡುವರು)

(ವೈದ್ಯರು ತಮ್ಮ ಕಾರಿನಲ್ಲಿ ಹೋದರು ಮನೆಗೆ. ಮನೆಯ ಮುಂದೆ ಹಲವಾರು ಜನರು ಅಳುತ್ತಾ ನಾನಾ ರೀತಿಯಾಗಿ ವೇದನೆ ಪಡುತ್ತಿದ್ದಾರೆ. ಅಲ್ಲಿಗೆ ಕಾರು ಬಂದು ನಿಂತಿತು. ಡಾಕ್ಟರ್ ಹಾಗೂ ಅವರ ಸಿಬ್ಬಂದಿಗಳು ಇಳಿದರು ಕಾರಿನಿಂದ)

(ಅವರ ಹತ್ತಿರ ಹೋಗಿ)

ಡಾ : ತಮ್ಮ ಫೋನು ಕಾಲ್ ಬಂತು. ಪಾಪ ಹೀಗಾಗಬಾರದಾಗಿತ್ತು. ಏನು ಮಾಡೋದು? ಕೈ ಮೀರಿ ಹೋಗಿದೆ. ಸ್ವಲ್ಪ ಧೈರ್ಯ ತಾಳ್ಕೊಳ್ಳಿ.

ರಾ : ನಮ್ಮಂಥ ವಯಸ್ಸಾದವರು ಇರಬೇಕು, ಇಂಥ ಚಿಕ್ಕಪುಟ್ಟ ವಯಸ್ಸಿನವರು ಸಾಯಬೇಕೇ? ಏನೋ ವಿಧಿ ವಿಚಿತ್ರಗಳು ಡಾಕ್ಟರ್.

(ಕಣ್ಣೀರನ್ನು ಒರಿಸಿಕೊಂಡು)

ಡಾ : ಯಾರು ಯಾರು ಎಷ್ಟು ಆಯಸ್ಸು ತಂದಿದ್ದಾರೋ ಅಷ್ಟೇ. ಈಗ ನಾನು ಡಾಕ್ಟ್ರು, ಹಾಗಾದ್ರೆ ನನಗೆ ಸಾವಿಲ್ಲವೇ? ಎಲ್ರೂ ಒಂದಲ್ಲ ಒಂದು ದಿನ ಸಾಯಲೇಬೇಕು. ಮಣ್ಣಿನಿಂದ ಬಂದ ಕಾಯ ಮಣ್ಣಿಗೆ ಹೋಗಲೇಬೇಕು ಅಲ್ವೇ? ಇದು ಕೆಲವರಿಗೆ ಸ್ವಲ್ಪ ಹಿಂದು ಮುಂದು ಅಷ್ಟೇ.

ರಾ : ಏನೋ ನನಗೆ ಒಂದೂ ತೋಚ್ತಾ ಇಲ್ಲ ಡಾಕ್ಟ್ರೆ..... ನಡೀರಿ...... ಕಣ್ಣುಗಳನ್ನು ತೆಗೆದುಕೊಳ್ಳುವಿರಂತೆ. ಅವನು ಹೇಳಿದ್ದ. ನಾನು ನನ್ನ ಕಣ್ಣುಗಳನ್ನು ದಾನಕೊಟ್ಟಿದ್ದೀನಿ ಅದಕ್ಕೆ ರಿಜಿಸ್ಟ್ರೇಷನ್ ಮಾಡಿಸಿದ್ದೇನೆ. ನಾನು ಸತ್ತರೂ

ಬದುಕಿರುವವರಿಗೆ ಉಪಯೋಗವಾಗ್ಲಿ ಅಂತ ಅಂದಿದ್ದ. ಆದ್ರೆ ಆತನ ಕಣ್ಣನ್ನು ದಾನವಾಗಿ ಕೊಡಲಿಕ್ಕೇ ನಾನೇ ಆಗಬೇಕಾಯ್ತೇ?

ಡಾ : ಮನುಷ್ಯ ಸತ್ತ ಮೇಲೆ ಹೂತಾಗ ಗೆದ್ದಲು ತಿಂದು ಬಿಡುತ್ತೆ. ಸುಟ್ಟರೆ ಬೂದಿಯಾಗ್ಬಿಡುತ್ತೆ. ಅದರ ಬದಲು ಬೇರೆಯವರಿಗೆ ಇದರಿಂದ ಉಪಯೋಗವಾಗಿ ದೃಷ್ಟಿ ಬಂದರೆ ಎಷ್ಟೊಂದು ಉಪಕಾರ ಮಾಡಿದಾಗಾಗುತ್ತೆ? ಈಗೇನು ದೇಹದ ಅಂಗಾಂಗವೂ ಕೂಡ ಸ್ಪೇರ್‌ಪಾರ್ಟ್ಸ್ ಇದ್ದ ಹಾಗೆ ಎಲ್ಲವೂ ಉಪಯೋಗಕ್ಕೆ ಬರ್ತವೆ. ನಿಜವಾಗಿಯೂ ನನಗೆ ತಿಳಿಸಿ ಒಳ್ಳೆ ಕೆಲಸ ಮಾಡದ್ರಿ.

ರಾ : ಆಯ್ತು ತೆಗೆದುಕೊಳ್ಳಿ ಡಾಕ್ಟರೇ.....

ಡಾ : ಎಷ್ಟು ಗಂಟೇನಲ್ಲಿ ಸತ್ತದ್ದು?

ರಾ : ಒಂದು ಘಂಟೆಯಾಗಿರಬೇಕು ಡಾಕ್ಟ್ರೇ

ಡಾ : ಒಳ್ಳೇ ಕೆಲಸ ಮಾಡಿದ್ರಿ. ಸತ್ತ ವ್ಯಕ್ತಿಯಿಂದ ಆರು ಘಂಟೆಯ ಒಳಗೆ ಈ ಕಣ್ಣನ್ನು ಬೇರ್ಪಡಿಸಬೇಕು ರಾಜಪ್ಪನವರೇ. ಇಲ್ಲದೇ ಹೋದ್ರೆ ಆಮೇಲೆ ಉಪಯೋಗಕ್ಕೆ ಬರೋಲ್ಲ. ಆಮೇಲೆ ಅದನ್ನು ಶೀತೀಕರಣ ಉಪಕರಣದಲ್ಲಿಟ್ಟು, ದೃಷ್ಟಿ ಕಳೆದುಕೊಂಡವರಿಗೆ ಅಕ್ಷಿ ಪಟಲವನ್ನು ಜೋಡಣೆ ಮಾಡಬೇಕಾಗುತ್ತೆ.

ರಾ : ಅದಕ್ಕೇ ಕೂಡಲೇ ಫೋನ್ ಮಾಡಿದೆ ಡಾಕ್ಟರ್.

ಡಾ : ತುಂಬಾ ಉಪಕಾರವಾಯ್ತು ಬಿಡಿ.

(ಡಾಕ್ಟರ್ ಸಿಬ್ಬಂದಿಗಳು, ರಾಜಪ್ಪ ಹೆಣದ ಮುಂದೆ ಬಂದರು ಆಗ ಸುಶೀಲಾ....)

ಸುಶೀಲಾ: ಯಾರು.....?

ರಾಜಪ್ಪ : ಡಾಕ್ಟರ್.....

ಸುಶೀಲಾ: ಸತ್ತ ಮಗನನ್ನು ಬದುಕ್ಸಕ್ಕೆ ಬಂದ್ರಾ....? ಅಯ್ಯೋ ನನ್ನ ಮಗ ಇನ್ನೆಲ್ಲಿ ಬದುಕ್ತಾನೆ? (ಒಂದೇ ಸಮನೆ ಅಳುವಳು)

ಡಾ : ಸಮಾಧಾನ ತಂದ್ಕೊಳ್ಳಿ ತಾಯಿ. ಬದುಕಿಸಬೇಕು ಅಂತ ಬರಲಿಲ್ಲ..... ನಿಮ್ಮ ಮಗನ ಕಣ್ಣುಗಳನ್ನು ತೆಗೆದುಕೊಂಡು ಹೋಗೋಣ ಅಂತ ಬಂದ್ವು.

ಸು : ಯಾಕೆ? ಲಕ್ಷಣವಾದ ನನ್ನ ಮಗನ ಕಣ್ಣನ್ನು ತೆಗೆದು ಅವಲಕ್ಷಣ ಮಾಡಬೇಕು ಅಂತ ಬಂದ್ರಾ? ಅದನ್ನು ನಾನು ಕಣ್ಣಿಂದ ನೋಡಲಾರೆ ನೀವು ತಗ್ಯೋದ್ನ; ದಯವಿಟ್ಟು ಹೊರಟು ಹೋಗಿ.

(ಸ್ವಲ್ಪ ಹೊತ್ತುಮೌನದ ವಾತಾವರಣ. ದುಃಖ ಸೂಚಕ ಸಂಗೀತ)

ಡಾ : ನೋಡಿ ತಾಯಿ ನಿಮ್ಮ ಮಗ ತಾನು ಸತ್ತ ಮೇಲೆ ತನ್ನ ಕಣ್ಣನ್ನು ದಾನವಾಗಿ ತೆಗೆದುಕೊಳ್ಳಬಹುದು ಅಂತ ಬರೆದುಕೊಟ್ಟಿದ್ದಾನೆ ನೋಡಿ ಈ ಕಾರ್ಡಿನಲ್ಲಿ.

ಸು : ನಮ್ಮ ದುಃಖ ನಮಗೆ, ನಿಮ್ಮ ಸುಮಾನ ನಿಮಗೆ. ದಯವಿಟ್ಟು ಹೊರಟುಹೋಗಿ ಡಾಕ್ಟ್ರೇ.... ದಯವಿಟ್ಟು ಹೊರಟುಹೋಗಿ.

ಡಾ : ಇದು ಸಂತೋಷ, ಸುಮ್ಮಾನವಲ್ಲ ತಾಯಿ, ಕಣ್ಣಿಲ್ಲದವರಿಗೆ ಅಕ್ಷಿಪಟಲ ಜೋಡಿಸಿದ್ರೆ ದೃಷ್ಟಿಬರುತ್ತೆ. ಅವರು ಸಂತೋಷಪಟ್ರೆ ನೀವು ನಿಮ್ಮ ಮಗನ ಕಣ್ಣನ್ನು ಜೀವಂತವಾಗಿ ನೋಡಿ ಸಂತೋಷಪಡಬಹುದು.

ಸು : ಯಾರಿಗೆ ಕಂಡು ಏನಾಗಬೇಕು ಹೋಗಿ, ಇವರನ್ನು ಕರೆಸಿದವ್ರ್ಯಾರು?

ರಾ : ನಾನು.

ಸು : ಯಾಕ್ ಕರಿಸಿದ್ರಿ? ನಮ್ಮ ಮಗನ ಕಣ್ ಕೀಳೋದನ್ನ ನೋಡಬೇಕಾ? ಬರೇ ಸತ್ತದ್ದು ಸಾಲದು ಅಂತ್ಲಾ. ಈಗಾಗಿರೋ ದುಃಖ ಸಾಲ್ದಾ ನಿಮ್ಗೆ?

ರಾ : ಇದು ರವಿಯ ಕೊನೆಯ ಆಸೆ, ಅದನ್ನು ಪೂರೈಸಬೇಕು. (ಜೋರಾಗಿ) ಎಲ್ಲರೂ ಆ ಕಡೆ ಹೋಗಿ. ನೀವು ನಿಮ್ಮ ಕೆಲಸ ಪೂರೈಸಿ ಡಾಕ್ಟ್ರೇ.....

ಸು : ಆಗೋಲ್ಲಾ ಆಗೋಲ್ಲ. ಹೊರಟುಹೋಗಿ. ಹೊರಟು ಹೋಗಿ. (ಜೋರಾಗಿ ಅಳುವಳು)

ಡಾ : ತಾಯೇ ನಾವು ಕೃತಕ ಕಣ್ಣು ಹಾಕಿ ಮೊದಲಿದ್ದಂತೇ ಮಾಡ್ತೀವಿ. ಏನು ಅವಲಕ್ಷಣವೂ ಆಗೋಲ್ಲ ಯೋಚಿಸಬೇಡಿ ತಾಯಿ.

ರಾ : ನೀವು ತೆಗೆದುಕೊಳ್ಳಿ ಡಾಕ್ಟ್ರೇ...... ಇದು ಉಪಯೋಗವಾಗಲೀ ಅಂತ್ಲೇ ನಿಮ್ಮನ್ನು ಕರೆಸಿದ್ದು. ಎಲ್ಲರೂ ದೂರ ಸರೀರಿ. (ಗದರುವರು)

(ಡಾಕ್ಟರ್ ಕಣ್ಣು ತೆಗೆದು, ಕೃತಕ ಕಣ್ಣುಹಾಕಿ ರೆಪ್ಪೆ ಮುಚ್ಚಿ)

ಡಾ : ರಾಜಪ್ಪನವರೇ ಆಯ್ತು. ಕಣ್ಣಿನ ದಾನ ಕೊಡುತ್ತೇನೆ ಅಂತ ತಮ್ಮ ಹೆಸರನ್ನು ರಿಜಿಸ್ಟರ್ ಮಾಡಿಸುವುದು ಮುಖ್ಯವಲ್ಲ. ಸತ್ತ ಮೇಲೆ ಅವರ ಬಂಧು ಬಾಂಧವರು ಸತ್ತ ಆರು ಘಂಟೆಯೊಳಗೆ ಕೊಡುವುದು ಮುಖ್ಯ. ನಿಧನವಾದ ಕೂಡಲೇ ಸಂಪರ್ಕಿಸಿದರೆ ಉಪಯೋಗವಾಗುತ್ತದೆ. ಆ ಕೆಲಸವನ್ನು ನೀವು ಮಾಡಿ ಸಾರ್ಥಕವಾಗಿದ್ದೀರಿ.

ರಾ : ನಿಜ ಡಾಕ್ಟ್ರೇ ನೋಡಿದ್ರಲ್ಲಾ ನಮ್ಮ ಮನೆಯ ರಾದ್ಧಾಂತವನ್ನು.

ಡಾ : ಪಾಪ ಅವರು ಸಂಕಟದಲ್ಲಿ ಏನೇನೋ ಹೇಳುತ್ತಾರೆ. ಅದಕ್ಕೆ ಸ್ವಲ್ಪವೂ ಬೇಸರವಿಲ್ಲ ಬಿಡಿ.

ರಾ : ನಿಮ್ಮ ಸಂಯಮ ಮೆಚ್ಚತಕ್ಕದ್ದು.

ಡಾ : ಮೂಢನಂಬಿಕೆ, ಭಯ, ಬೇಸರ, ದುಃಖ ಎಲ್ಲಾ ಸೇರಿ ಆ ಸಮಯದಲ್ಲಿ ಬಂಧು ಬಾಂಧವರು ಹಾಗೆ ವರ್ತಿಸುತ್ತಾರೆ. ಅಂಥವರಿಗೆ ಸಮಾಧಾನ ಮಾಡುವುದು ನಮ್ಮ ಕೆಲಸ. ತಿಳುವಳಿಕೆ ಹೇಳುವುದು ಮುಖ್ಯ. ನಾನಿನ್ನು ಬರ್ತೀನಿ. ನಿಮ್ಮ ಮಗ ಕಣ್ಣು ಕೊಟ್ಟ ದಾನಿ ಆದ್ರೆ ನೀವು ನಿಜವಾಗಿ ಕಣ್ಣುಗಳನ್ನು ದಾನ ನೀಡಿದ ಮಹಾದಾನಿಗಳು.

ರಾ : ಅವೆಲ್ಲಾ ದೊಡ್ಡ ಮಾತು ಡಾಕ್ಟ್ರೇ. ಆತನ ಆಸೆ ಫಲಿಸಿ ಬೇರೆಯವರಿಗೆ ದೃಷ್ಟಿ ಬಂದರಾಯ್ತು. ಅದಕ್ಕಿಂತ ಒಂದು ಸಮಾಧಾನ ನಮಗೆ ಬೇರಿಲ್ಲ.

ಡಾ : ನಿಮ್ಮ ಮಗ ಸತ್ತೂ ಅವನ ಕಣ್ಣು ಸತ್ತಿಲ್ಲ. ಸತ್ವ ಪೂರ್ಣವಾಗಿ ಜೀವಂತವಾಗಿ ಬೇರೆಯವರಿಗೆ ದೃಷ್ಟಿಕೊಡುತ್ತವೆ ಆ ಕಣ್ಣುಗಳು. ಹೆಣ್ಣುಕೊಟ್ಟವರೂ ಕಣ್ಣುಕೊಟ್ಟವ್ರೂ ಒಂದೇ ಅಂತ ಹೇಳ್ತಾರೆ. ಆದ್ರೆ ಕಣ್ಣು ಕೊಟ್ಟವ್ರು ಹೆಣ್ಣು ಕೊಟ್ಟವರಿಗಿಂತ ಹೆಚ್ಚು ಅನ್ತೀನಿ. ಅನ್ನದಾನ, ನೀರು ದಾನ, ರಕ್ತದಾನ, ಮೂತ್ರಪಿಂಡಗಳ ದಾನ ಹೆಚ್ಚು ಅನ್ತಾರೆ. ಆದ್ರೆ ಇವುಗಳ ಜೊತೆಗೆ ಕಣ್ಣಿನ ದಾನವೂ ಪ್ರಮುಖವಾಗಿದೆ.

ಡಾ : ನಾನಿನ್ನು ಬರ್ತೀನಿ ರಾಜಪ್ಪನವರೇ.

ರಾ : ನಮಸ್ಕಾರ ಡಾಕ್ಟ್ರೇ.....

* * *

(ಹರ್ಷ ಸಂಗೀತ)

ಡಾ : ನೋಡಿ ಹೀಗೆಲ್ಲಾ ಕಷ್ಟಪಟ್ಟು ಕಣ್ಣುಗಳ ಶೇಖರಣೆ ಮಾಡಬೇಕಾಗುತ್ತೆ, ಯಾವಾಗ್ಲೂ ಅಷ್ಟೇ ಯಾವಾಗ ಅವರು ಅನುಭವಿಸ್ತಾರೋ ಆಗ ಅದರ ಬೆಲೆ ಗೊತ್ತಾಗೋದು. ಸುಶೀಲಮ್ಮನವರು ಅಷ್ಟೆಲ್ಲಾ ರಾದ್ಧಾಂತ ಮಾಡಿದ್ರಲ್ಲ. ಅವರ ಮಗನ ಕಣ್ಣು ತೆಗೆದುಕೊಂಡು ಬಂದ ಮೇಲೆ ಒಂದು ದಿನ ರಾಜಪ್ಪ, ಸುಶೀಲಾ ಅವರ ಮೊಮ್ಮಕ್ಕಳು ಎಲ್ಲರೂ ಮದ್ವೆಗೆ ಕಾರಿನಲ್ಲಿ ಹೊಗ್ತಾ ಇದ್ರಂತೆ. ಕಾರಿನ ಬ್ರೇಕ್ ಫೈಲೂರ್ ಆಯ್ತಂತೆ. ಹತೋಟಿ ತಪ್ಪಿ ಅದು ಮರವೊಂದಕ್ಕೆ ಡಿಕ್ಕಿ ಹೊಡೆದು ಒಳಗಿದ್ದವರಿಗೆ ಲಘು ಅಪಘಾತಗಳಾದವು. ಅದರಲ್ಲಿ ಐದಾರು ವರ್ಷದ ಒಂದು ಹುಡುಗನಿಗೆ ಕಣ್ಣಿಗೆ ಸ್ವಲ್ಪ ಏಟು ಬಿತ್ತು. ರಾಜಪ್ಪನವರು ನೇರವಾಗಿ ನಮ್ಮ ಆಸ್ಪತ್ರೆಗೆ ಕರೆದುಕೊಂಡು ಬಂದರು.

ಸು : ಡಾಕ್ಟ್ರೇ..... ನಮ್ಮ ಮಗೂನ ಕಣ್ಣು ಏನಾಗಿದೆ ಸ್ವಲ್ಪ ಬೇಗ ನೋಡಿ ಡಾಕ್ಟ್ರೇ.

ಡಾ : ಆಯ್ತಮ್ಮಾ ನೋಡೋಣ..... ಗಾಬರಿ ಪಡಬೇಡಿ ಕೂತ್ಕೊಳ್ಳಿ. ರಾಜಪ್ಪನವರೇ, ಭಯಪಡಬೇಡಿ ನಾನಿದ್ದೇನೆ.

ರಾ : ಆಯ್ತು ಡಾಕ್ಟ್ರೇ....

(ಡಾಕ್ಟರ್ ಮಗುವಿನ ಕಣ್ಣನ್ನು ಪರೀಕ್ಷಿಸಿ ಬಂದು)

ಡಾ : ರಾಜಪ್ಪನವರೇ, ಸುಶೀಲಮ್ಮನವರೇ ನೀವು ಯೋಚನೆ ಮಾಡಬೇಡಿ. ನಿಮ್ಮ ಮಗುವಿನ ಕಣ್ಣಿನ ದೃಷ್ಟಿ ಬರಿಸುವ ಭಾರ ನನ್ನದು.

ಸು : ಅಷ್ಟು ಮಾಡಿ ಡಾಕ್ಟ್ರೇ. (ಕಣ್ಣೀರು ಹಾಕಿಕೊಳ್ಳುವಳು)

ಡಾ : ಅಳಬೇಡಮ್ಮ ಅಳಬೇಡಿ ಕೂತುಕೊಳ್ಳಿ.

(ಡಾಕ್ಟರ್ ಆಪರೇಷನ್ ಥಿಯೇಟರಿಗೆ ಹೊರಡುವರು, ಮಗುವಿಗೆ ಕಾರ್ನಿಯಾ ಗ್ರಾಫ್ಟಿಂಗ್ ಮಾಡುವರು)

(ಹರ್ಷ ಸಂಗೀತ)

(ಆಪರೇಷನ್ ಮಾಡಿ ಬಂದ ವೈದ್ಯರು....)

ಡಾ : ರಾಜಪ್ಪನವರೇ, ಸುಶೀಲಮ್ಮನವರೇ ನೀವು ನಿಜವಾಗ್ಲೂ ಪುಣ್ಯವಂತರು. ನೋಡಿ ನೀವು ನಿಮ್ಮ ಮಗನ ಕಣ್ಣನ್ನು ದಾನ ಕೊಟ್ಟಿರಿ. ಆದರೆ ಈಗ ಬೇರೆಯವರು ದಾನ ಮಾಡಿದ ಕಣ್ಣು ನಿಮ್ಮ ಮಗುವಿಗೆ ದೊರೆಯಿತು. ಯಶಸ್ವಿಯಾಗಿ ಜೋಡಣೆಯೂ ಆಯ್ತು.

ಸು : ಹೌದು ಡಾಕ್ಟ್ರೇ ಆ ಹೊತ್ತು ನಾನು ಪುತ್ರಶೋಕದಲ್ಲಿ ಏನೇನೋ ಅಂದುಬಿಟ್ಟೆ. ನೇತ್ರ ದಾನದ ಮಹತ್ವ ನನಗೆ ತಿಳಿದಿರಲಿಲ್ಲ. ಈಗ ಈಗ ಅದರ ಅರಿವಾಯಿತು.

ಡಾ : ನೀವು ಮಾಡಿದ ದಾನ ಬೇರೆಯವರಿಗೆ ಉಪಯೋಗವಾದಂತೆ ಬೇರೆಯವರು ಮಾಡಿದ ದಾನ ನಿಮ್ಮ ಮಗುವಿಗೆ ಉಪಯೋಗವಾಯಿತಲ್ಲಾ ಅಷ್ಟಕ್ಕೆ ಸಂತೋಷಪಡಿ.

ಸು : ಆ ನೇತ್ರದಾನಿಗಳಿಗೆ ನಾನು ಚಿರಋಣಿಯಾಗಿದ್ದೀನಿ, ನನ್ನ ಕಣ್ಣನ್ನೂ ರಿಜಿಸ್ಟರ್ ಮಾಡಿಕೊಳ್ಳಿ.

ಡಾ : ಬಹಳ ಸಂತೋಷವಮ್ಮ. ಈಗ್ಲಾದ್ರೂ ನಿಮ್ಗೆ ಅರಿವಾಯ್ತಲ್ಲ.

ರಾ : ಆ ಹೊತ್ತು ಡಾಕ್ಟರ್ ಮೇಲೆ ಸಿಡಿಕಿಕೊಂಡು ನಿನ್ನ ಸತ್ತ ಮಗನ ಕಣ್ಣು ಕೊಡಲಿಕ್ಕೆ ಒಪ್ಪದೇ ಹೋದೆ. ಹಾಗೇ ಜನರೆಲ್ಲಾ ಮಾಡಿದ್ರೆ ನಿನ್ನ ಮೊಮ್ಮಗನಿಗೆ ಕಣ್ಣು ದೊರೀತಿತ್ತಾ?

ಸು : ನಿಜವಾಗ್ಲೂ ನಾನು ಅವಿವೇಕಿಯಾಗಿದ್ದೆ.

ರಾ : ಎಲ್ಲಾ ಅಷ್ಟೇ ತಮಗೆ ಕಷ್ಟ ಬಂದಾಗ ಇವೆಲ್ಲಾ ಗೊತ್ತಾಗೋದು.

ಸು : ನಿಜ ನೀವು ಹೇಳೋದು ನೂರಕ್ಕೆ ನೂರು ಪಾಲು ಸತ್ಯ.

(ಇಬ್ಬರು ವೈದ್ಯರಿಗೆ ಕೈ ಮುಗಿಯುವರು)

ಡಾ : ನೋಡಿದ್ರಾ ಕಣ್ಣುಗಳ ದಾನದ ಕತೆನಾ?

ಸಂ : ನಿಜ ಡಾಕ್ಟ್ರೇ ಯಾರಿಗೂ ಅಷ್ಟೇ ತಮಗೆ ಕಷ್ಟ ಬಂದಾಗ ಅದರ ಅರಿವಾಗುತ್ತೆ. ನಿಜ ನೀವು ಹೇಳಿದಂತೆ ಕಣ್ಣನ್ನು ದಾನ ಮಾಡಿದವನಿಗಿಂತ ಅವನು ಸತ್ತ ಮೇಲೆ ಕಣ್ಣನ್ನು ವೈದ್ಯರಿಗೆ ತಲುಪಿಸುವಂತೆ ಮಾಡುವವರು ನಿಜವಾದ ದಾನಿಗಳು, ಮಹಾದಾನಿಗಳು.

ಮಾ : ಡಾಕ್ಟ್ರೇ ನಿಮ್ಮ ಉಪಕಾರವನ್ನು ನಾನೆಂದೆಂದಿಗೂ ಮರೆಯೋಲ್ಲ. ಬರ್ತೀನಿ ನಮಸ್ಕಾರ.

ಡಾ : ನಮಸ್ಕಾರ.

ಸಂ : ಡಾಕ್ಟ್ರೇ ನನ್ನ ಒಂದು ಕಣ್ಣಿನ ಕಾರ್ನಿಯ ಚೆನ್ನಾಗಿದ್ರೆ ನಾನು ಸತ್ತ ಮೇಲೆ ನೇತ್ರವನ್ನು ದಾನವಾಗಿ ಕೊಡಲು ಇಷ್ಟಪಟ್ಟದ್ದೀನಿ. ನನ್ನ ಹೆಸರನ್ನು ದಾಖಲು ಮಾಡಿಕೊಳ್ಳಿ ಡಾಕ್ಟ್ರೇ.

ಡಾ : ಅಗತ್ಯವಾಗಿ ಆಗ್ಲಪ್ಪಾ.

ಸಂ : ನೀವು ನನ್ನ ಭಾಗಕ್ಕೆ ದೇವರು

ಡಾ : ಅದೆಲ್ಲಾ ದೊಡ್ಡ ಮಾತು

ಸಂ : ಇದು ನನ್ನ ವೈಯಕ್ತಿಕ ಅಭಿಪ್ರಾಯ ಡಾಕ್ಟ್ರೇ. ಬರ್ತೀನಿ ಡಾಕ್ಟ್ರೇ ನಮಸ್ಕಾರ.

ಡಾ : ನಮಸ್ಕಾರ.



# ಸ್ವರ್ಗವಾಯಿತು ಇಳೆ

(ಕೋಮು ಸೌಹಾರ್ದತೆ ಬಿಂಬಿಸುವ ನಾಟಕ)

---

ಕೋರಸ್ : ಆಲಿಸಿ ಜನಗಳೆ ನಮ್ಮೂರ ಕಥೆಯ
ಚೆಂದನೂರ ಕಥೆಯ ಚಂದನೂರ ವ್ಯಥೆಯ ॥ ಪ ॥

ನಮ್ಮೂರು ಅಂದದೂರು
ನಮ್ಮೂರು ಚೆಂದದೂರು
ಹಿಂದು- ಮುಸ್ಲಿಮ್ ಕ್ರೈಸ್ತರೆಲ್ಲರು
ಒಟ್ಟಾಗಿ ಬಾಳಿ ಬದುಕಿದ ನಮ್ಮೂರು ॥ ೧ ॥

ಇಂದು ಜನರಲ್ಲಿ ಭೀತಿಯ ಹುಟ್ಟಿಸಿದೆ
ಇಂದು ಜನರಲ್ಲಿ ಭಯವನ್ನು ತಟ್ಟಿಸಿದೆ
ಇಂದು ಜನರನ್ನು ತಲ್ಲಣಗೊಳಿಸಿದೆ
ನೆಮ್ಮದಿ ಉಸಿರು ತುಂಬಾ ಬಿಗಿಮಾಗಿದೇ ॥ ೨ ॥

ಇಮಾಂ : ಸಲಾಂ ಚೆನ್ನೇಗೌಡ್ರೇ.....

ಚೆನ್ನೇಗೌಡ: ಬನ್ನಿ ಇಮಾಂ ಸಾಬ್...... ಏನ್ ಸಮಾಚಾರ ಯೇಳಿ.

ಇಮಾಂ : ನಾಳೆ ನಮ್ದು ದರ್ಗದ ಉರ್ಸ್ ಅದ. ತಾವು ಮಾಮೂಲಾಗಿ ಬಂದು ಯಶಸ್ವಿ ಮಾಡಬೇಕ್ರಿ....

ಚೆನ್ನೇ : ಕಂಡ್ತ ಬನ್ಬುಡ್ತೀನಿ ವೋಗಿ. ವರ್ಸೊರ್ಸ್ ಇದು ಮಾಮೂಲಿ ಅಲ್ವಾ ಬುಡಿ. ವೋದ ವರ್ಸಕ್ಕಿಂತ ಬೋ ಚನ್ನಾಗಾಗ್ಬೇಕು, ನಮ್ಮುಗಳ ಸಾಕಾರ ಇದ್ದೇ ಅದೆ ಬುಡಿ.

ಇಮಾಂ : ಎಲ್ಲಾ ಆ ಅಲ್ಲಾನ್ದೂ ಇಚ್ಛೆ.... ಜೊತ್ಗೆ ನಿಮ್ಗಳ್ದು ಸಾಕಾರ ಬಾಳ ಮುಖ್ಯ ಅಲ್ವೇ ಗೌಡ್ರೇ.

ಚೆನ್ನೇ : ನಮ್ಮುಗಳ ಸ್ನೇಹ ತಲತಲಾಂತರದಿಂದ ನಡ್ಕಂಬಂದೈತೆ ಈಗ ಇಲ್ಲ ಅನ್ನಕ್ಕಾಗುತ್ಯಾ ಯೋಳಿ.

ಇಮಾಂ : ಯಾವ್ದು ಯಾವ್ದು ಕಾಲಕ್ಕೆ ಏನಾಗುತ್ತೊ ಯಾರು ಬಲು ಯೇಳಿ.

ಚೆನ್ನೇ : ನಮ್ಮೂರ್ನಾಗ ಅದು ಸದ್ಯಕಿಲ್ಲ ಬುಡಿ.

ಇಮಾಂ : ಅಂಗಾಗ್ದೆ ಇರ್ಲಿ ಅನ್ನೋದು ನಮ್ಮಾಸೆ.

ಚೆನ್ನೇ : ಎಲ್ರಾನ್ನೂ ಅದೇ....

(ಜಾತ್ರೆಯ ಉತ್ಸವದ ಹರ್ಷೋದ್ಗಾರ)

* * *

ಇದು ಅಂದಿನ ಸಂತಸ : ಆದರೆ ಇಂದು-

ಚೆನ್ನೇ : ನಮ್ಮೂರು ಚಂದನೂರು. ಹೆಸರಿಗೆ ತಕ್ಕಂಡೆ ಚಂದದೂರು, ಅಂದದೂರು, ಹಿಂದು- ಮುಸ್ಲಿಮ್ ಕಿರಿಸ್ತಾನದದವರೆಲ್ಲಾ ಅನ್ಯೋನ್ಯವಾಗಿ ನಡ್ಕಂಬಂದೂರು, ಅನೇಕ ಧರ್ಮಗಳನ್ನು ಬೆಸದ ಬೀಡು. ಮಾನವರೆಲ್ಲಾ ಒಂದೇ ಅಂತ ಮಂತ್ರ ಸಾರ್ತಾ ಬಂದದೆ. ಈವತ್ತಿನ ದಿನ ಮಸಣದ ಮೌನ ತಾಳ್ಬುಡ್ತು. ಜನಗಳಲ್ಲಿ ಭೀತಿ ಹುಟ್ಟಿಸ್ಬುತ್ತದೆ. ಭಯ ತಂದೊಡ್ತದೆ, ಶಾಂತಿ ಕದಡ್ಬುಟ್ಟದೆ, ಅಹಿಂಸೆ, ಅತ್ಯಾಚಾರ, ಅನಾಚಾರ ತಾಂಡವವಾಡ್ತಾ ಜನರ್ನೆಲ್ಲಾ ತಲ್ಲಣ ಮಾಡ್ಬುಟ್ಟಿದೆ. ನೆಮ್ಮದಿ ಉಸಿರೇ ಇಲ್ದಾಗಿದೆ. ಯಾವ ಗಳಿಗೇಯೇನೋ ಅನ್ನೋವಾಗಿದೆ. ನಮ್ಮೂರ್ಗೆ ಇಂತ ಸ್ಥಿತಿ ಆಗ್ಬಾರ್ದಾಗಿತ್ತು. ಆಗೋಗ್ಬುಟ್ಟಿದೆ. ಈಗೇನು ಮಾಡೋದು ಅನ್ನೋದೇ ಯೋಚ್ನೆ ಆಗ್ಬುಟ್ಟಿದೆ.

ಚೆನ್ನೇ : ಬನ್ನಿ.... ಬನ್ನಿ.... ಇಮಾಂ ಸಾಬ್....

ಇಮಾಂ : ಇಂಗಾಗ್ಬಾರ್ದಾಗಿತ್ತು ಚೆನ್ನೇಗೌಡ್ರೆ.....

ಚೆನ್ನೇ : ಆಗೋದದ್ನ ಆಗ್ದೇ ಇರಂಗ್ ಮಾಡಕ್ಕಾಯ್ತದಾ ಇಮಾಂ ಸಾಬ್.

ಇಮಾಂ : ಏನೋ ಇಸ ಗಳಿಗೆ ಆಗೋತು ಬುಡಿ.

ಚೆನ್ನೇ : ಯಾರೋ ಮಾಡಿದ್ ತಪ್ಪಗೆ ಯಾರೋ ಕಸ್ಟ ಪಡಬೇಕಾತು, ಊರೇ ಅಸಾಂತೀಲಿ ಮುಳ್ಗೋತು.

ಇಮಾಂ : ಧಾರ್ಮಿಕ ಕ್ರಾಂತಿ ಯಾವಾಗ ನಡ್ದಿಲ್ಲ ಯೇಳಿ. ಇದು ಆಗಾಗ ನಡೀತಾನೇ ಇರ್ತದೆ. ಇದರಲ್ಲಿ ಅನೇಕ ಜನರು ಪ್ರಾಣಾನೂ ತೆತ್ತಬೇಕಾಗಿದೆ. ಏನೂ ತಪ್ಪು ಮಾಡದ ಮುಗ್ಧರೂ ಇದಕ್ಕೆ ಬಲಿ ಆಗಬೇಕಾತದ. ಅಂಗೇ ಆಗದೆ ಈಗ್ಲೂವೆ.

ಚೆನ್ನೇ : ನೀವು ಯೇಳದು ನೂರಕ್ಕೂ ನೂರು ಸತ್ಯ ಬುಡಿ. ಬಸವಣ್ಣನೋಕಟ್ಟ ಕಲ್ಯಾಣ ಕ್ರಾಂತೀಲಿ ಕೊನೆಗೊಂಡು ಸಾವು ನೋವುಗಳಲ್ಲಿ ಮುಕ್ತಾಯವಾಗಿ ಬಿಕೋ ಅಸ್ನೊವಂಗಾತು. ಇಜಯನಗರ ಸಾಮ್ರಾಜ್ಯ ಆಟೊಂದು ಮೆರ್ದು ಹಾಳು ಹಂಪ್ಯಾತು. ಅಂಗೇ ಆಗೈತೆ ನಮ್ಮೂರ ಸ್ಥಿತಿ; ನಿಜವಾಗ್ಲೂ ನಾವು ತಲೆ ತಗ್ಗಿಸ ಬೇಕಾಗೈತೆ.

ಇಮಾಂ : ಯಾರೋ ಮಾಡ್ಬುಟ್ಟ ತಪ್ಗೆ ನಮ್ದು ಜನಗಳು ಕೊರಗಿ ಕಣ್ಣೀರಿಡ್ತಾ ಅವ್ರೆ. ಬೆಳೆ ಒಣಗಿ ಕಡಗಾಗ್ತಾ ಇದೆ. ಯಾರು ಕೊಯ್ಯಕ್ಕೆ ಬರ್ತಿಲ್ಲ, ಜನರು ಮಾತಾಡ್ತಿಲ್ಲ. ಕೆಡಿ ಕಾರ್ತಾ ಅವ್ರೆ.

ಚೆನ್ನೇ : ಜನಗಳು ಸಲ್ಪ ಸಮಾದಾನವಾಗೋ ವರ್ಗೆ ಸ್ವಲ್ಪ ತಾಳ್ಮೆಯಿಂದಿರ-ಬೇಕಾಗುತ್ತದೆ.

ಇಮಾಂ : ನಾವು ಈಗ ಊರು ಬುಟ್ಟು ಬ್ಯಾರೆ ಊರ್ಗೆ ವಲ್ಸೆ ವೋಗಕ್ಕಾಗ್ತದಾ ಗೌಡ್ರೆ. ಈ ಊರ ವಾಸಿಗಳಾಗಿದ್ದು ನಾವು ಹೋಗೋದು ಹ್ಯಾಗ ಹೇಳಿ.

ಚೆನ್ನೇ : ಆಗಕ್ಕಿಲ್ಲ ಬುಡಿ.... ಬಾ, ....... ಬಾ ........ ಬೀರಯ್ಯ.

ಬೀರಯ್ಯ : ಮಾಡ್ಲೇ ಬೇಕಾತದೆ. ಅವರು ಮಾಡದ್ದೂ ಸರಿಯೊ, ಅವರು ಮಸೀದಿಯಾಗ ನಮಾಜು ಮಾಡುವಾಗ ನಮ್ಮ ಜಾತ್ರೆ ಸದ್ದು ಬ್ಯಾಡವಾತು, ಕಲ್ಲುವೊಡದ್ರು, ಹಿಂಸೆ ಮಾಡದ್ರು ಅದು ಸದ್ಯಾ ಇಮಾಂ ಸಾಬ್ರೆ.....

ಇಮಾಂ : ಎಲ್ಲಾನೂ ಮರತ್ಬುಡ್ಯಪ್ಪಾ ಮಾಡ್ಬಾರ್ದಾಗಿತ್ತು ಮಾಡ್ಬುಟ್ರು, ಅವರವರ ಧರ್ಮ ಅವರಿಗೆಚ್ಚು ಅದನ್ನ ನಾ ಒತ್ತೀನಿ.

ಚೆನ್ನೇ : ನಮ್ಮ ರಾಜ್ಯದಾಗೇ ಹಿಂದೂ ಮುಸ್ಲಿಮರು ಅಣ್ಣತಮ್ಮರಾಗಿ ಅವ್ರೆ. ಹಿಂದೂಗಳು ಮಸೀದಿಗೊಯ್ತಾರೆ ಮುಸ್ಲಿಂ ಸಂತರಿಗೆ ಸಿರ ಬಾಗಿ ಆಸೀರ್ವಾದ ಪಡೀತಾರ. ರೋಗ ರುಜ್ನೆ ಪರಿಹಾರ ಮಾಡ್ಕೊತಾರೆ. ಹರ್ಕೆ ಹೊತ್ತು ತೀರಸ್ತಾರೆ. ಅಂಗೇ ಮುಸ್ಲಿಮ್ರು ಹಿಂದೂ ದೇವಸ್ಥಾನಕ್ಕೆ ಬಂದು ಪೂಜೆ ಮಾಡ್ತವ್ರೆ. ಬಾಳ ಹಿಂದ್ನಿಂದ ಇದು ನಡ್ಕಂಬಂದದೆ ಸರಣರ ಕಂಡ್ರೆ ಸಿರಬಾಗೋದು ನಮ್ಮ ಧರ್ಮ ಆಗ್ಬುಟ್ಟಿದೆಕನತ್ವಾ.

ಬೀರಯ್ಯ : ಅಂಗಾರೆ ನಮ್ಮೂರ್ಗೆ ಆ ಅನ್ಯಾಯ ಸರಿ ಅಂತೀರೋ ಲೂಟಿ, ಬೆಂಕಿ, ಆಸ್ತಿ ನಷ್ಟ..... ಯಾವ ಗಳಿಗ್ಯಾಗೆ ಏನು ಭಯ ಭೀತಿ ಕಾಡ್ತದೋ ಅದ್ಕೆಲ್ಲಾ ಇವ್ರೇ ಕಾರಣ್ರಲ್ವಾ.

ಇಮಾಂ : ಅಂಗನ್ಬ್ಯಾಡಿ ಇಂತ ಸಮಯ ನೋಡಿ ಕೆಲವು ದುಸ್ಟ ಪತ್ತಿಗಳು ದುರಪಯೋಗ ಪಡಿಸ್ಕತಾವೆ.

ಚೆನ್ನೇ : ಅದು ನಿಜ ಇಮಾಂ ಸಾಹೇಬ್ರು ಯೋಳದು ನೂರಕ್ಕೆ ನೂರು ಸತ್ಯ. ಇಂತ ಸಮಯಾನೇ ಕಾಯ್ತಿರ್ತಾರೆ. ದುರುಪಯೋಗ ಪಡಸ್ಕತಾರೆ. ಜನಗಳ ಆಸ್ತಿ ದೋಚ್ತಾರೆ.

ಬೀರಯ್ಯ : ಪೊಲೀಸ್, ಏಟು ತಿಂದವ್ರೆ ಏಟೋ ಜನ ಮನೆಯಿಂದ ವೊರಕ್ಕೆ ಬರಕ್ಕೇ ಎದುರ್ತವ್ರೆ.

ಚೆನ್ನೇ : ಆದದ್ದಾತು ಈಗ ನಾವು ಹಳೇದ ಮರ್ತು ಅಣ್ಣ ತಮ್ಮರಾಗಿ ನಡ್ಕಬೇಕು.

ಬೀರಯ್ಯ : ಜನ ತಮಗಾಗಿರಾ ನೋವು ಮರ್ರ್‍ಯಕಾತ್‌ದಾ?

ಚೆನ್ನೇ : ಏಟು ದಿನ ಅಂತ ಈ ದ್ವೇಷ ಮುಂದುವರಿಸ್ತೀರಿ ಯೋಳಿ ನಮ್ಮ ಮನ್ಯಾಗೂ ಅಣ್ಣತಮ್ಮದೀರು, ಅಕ್ಕತಂಗೀರು ಜಗಳ ಆಡೋಲ್ವೇ? ಆಮ್ಯಾಕೆ ಒಂದಾಗಲ್ವೇ? ಕ್ವಾಪ ಒಂದು ಇರ್‍ತೈತೆ. ಹಿಂದನದ್ನೆಲ್ಲಾ ಮರ್ತು ಒಂದಾಗ್ಬೇಕಪ್ಪಾ.

ಇಮಾಂ : ಇವ್ವೆಲ್ಲಾ ನಿಜ್ವಾಗಿ ಮಾಡಬೇಕು ಅಂತ ಮಾಡದ್ದಲ್ಲ, ಇದರ ಹಿಂದೆ ರಾಜಕೀಯ ಕೈವಾಡ, ಕೆಲವು ದುಷ್ಟ ಶಕ್ತಿಗಳ ಕೆಲಸ. ಎಲ್ಲಾ ತಂದಿಟ್ಟು ನೋಡ್ತಾರೆ.

ಬೀರಯ್ಯ : ಅಂಗಾರೆ ಸಾಮಾನ್ಯ ಜನರ ಪಾಡು.

ಇಮಾಂ : ಅನೇಕ ಜನ್ರು ಚಾಕು ಚೂರಿ ಪಾಲಾದ್ರು, ಬಡಿಗೆ ಏಟಿಗೆ ಆವು ಆದ್ರು. ಗುಂಡ್ನೇಟಿಗೆ ಬಲಿ ಆದ್ರು. ಟೀಮರ್ ಗ್ಯಾಸ್‌ನಿಂದ ಕಣ್ಣೀರು ಸುರಿಸುದ್ರು. ಆಸ್ತಿಕಳ್ಕಂಡ್ರು, ಬಂಧು ಬಾಂದವರನ್ನ ಕಳ್ಕಂಡ್ರು.

ಚೆನ್ನೇ : ಇದ ನೋಡಿಯೇ ಅಶೋಕ ಯುದ್ಧದಲ್ಲಿ ಸಾವು- ನೋವು ರಕ್ತದ ಕೋಡಿ ಕಂಡು ಯುದ್ಧ ಮಾಡಲ್ಲ ಅಂತ ಪಣ ತೊಟ್ಟು ಬೌದ್ಧ ಸನ್ಯಾಸತ್ವ ಸ್ವೀಕರಿಸಿದ. ಇಂತ ಸಮಯದಲ್ಲಿ ಜನ ಜಾಗ್ರತೆಯಾಗಬೇಕು.

ಇಮಾಂ : ನಮ್ಮವರ ಹೊಲ ಗದ್ದೆ ಪೈರು ಕೂದ್ರು ದನ ಬುಟ್ಟು ಮೇಯಿಸ್ಬುಟ್ರು. ಹೆಂಗಸರುಗಳಿಗೆ ಬೆದರಿಕೆ ಹಾಕುದ್ರು. ಸೊಕ್ಕೂ ಅಡಗಿಸ್ದೇ ಬುಡೋಲ್ಲ ಅಂತ ಮಚ್ಚರ ಪಟ್ಟು ಅದರ ರೋಷ, ಮಿೂರಿದ ಕೋಪ, ನಮ್ಮೆಲ್ಲಾ ಸದೇ ಬಡೀಯಬೇಕು ಅನ್ನ ಸಂಕಲ್ಪ ಜನರನ್ನು ತಲ್ಲಣ ಮಾಡ್ಬುಟ್ಟಿದೆ. ರೋಸದ ಹುಲಿ ಕೆಣಕ ಬ್ಯಾಡಿ ಅಂತ ನಾನು ನಮ್ಮ ಜನರೆಲ್ಲಾ ಬುದ್ದಿಯೇಳ್ದೆ. ಕೆಲವರಂತೂ ತಪ್ಪ ಮಾಡ್ದೇ ಜೈಲು ವೋಗವೆ, ಅವರ ಹೆಂಡ್ತಿ ಮಕ್ಕಳ ಪತ್ನ ನೋಡಕ್ಕಾಗಕ್ಕಿಲ್ಲ. ಅವರೆನೆಲ್ಲಾ ಬುಡ್ಸಿ ಪುಣ್ಯಕಟ್ಕಳಿ.

ಬೀರಯ್ಯ : ಗೌಡ್ರೆ ನಿಮ್ಮ ಪ್ರಾಣವೇ ತಗೀಬೇಕು ಅಂದವ್ರನ್ನ ಬುಡೋದೇ.

ಚನ್ನೇ : ಸರಣಾಗತರಾದವರ್ನ ಕ್ಷಮ್ಸೋದು ಮಾನವನ ಧರ್ಮ ಅಲ್ವಾ ಬೀರಯ್ಯಾ.

ಬೀರಯ್ಯ : ನೀವು ಬುಡಿ ಬಲು ಧರ್ಮಗೊಡ್ಡು.

ಇಮಾಂ : ಅವರ ಪರವಾಗಿ ನಾನು ಕ್ಷಮೆ ಕೇಳ್ತೀನ್ನಿ

ಬೀರಯ್ಯಾ: ಕ್ಷಮ್ಸುದೇನ್ಬಂತೂ.

ಇಮಾಂ : ದ್ವೇಸಕ್ಕೆ ದ್ವೇಸ, ಸೇಡಿಗೆ ಸೇಡು ಒಳ್ಳೇದಲ್ಲ.

ಬೀರಯ್ಯ : ಅವರು ಮಸೀದಿಲಿ ಮಾಡೋ ನಮಾಜ್ ಕೆಡಿಸ್ತೀವಿ.

ಇಮಾಂ : ಅಮ್ಯಾಕೆ ಅವರು ನಿಮ್ಮ ದೇವಸ್ಥಾನದ ಪೂಜೆ ಕೆಡಿಸ್ತಾರೆ.

ಬೀರಯ್ಯ : ಆಮ್ಯಾಲೆ ಅವರನ್ನೇ ಇಲ್ಲ ಅನ್ನುಸ್ಬುತ್ತೀವಿ

ಚನ್ನೇ : ಆಮ್ಯಾಕೆ ಅವರು ಸುಮ್ನೆ ಬುಡ್ತಾರ ನಿಮ್ಮನ್ನ. ಇದು ಇಂಗೇ ಬೆಳ್ಕಂಡೋಗಿ ದ್ವೇಸದ ಕಿಡಿ ಅತ್ಕಂಡು ಉರಿತದೆ. ಸಾಂತಿ ನೆಮ್ಮದಿ ಒಂದೂ ಇರಕಿಲ್ಲ.

ಬೀರ : ಏನೇ ಆಗ್ಲಿ ರೋಸ ಉಕ್ಕುತ್ತೆ.

ಚೆನ್ನೇ : ಹಂಗೇ ಅವರ್ಗೂ ಉಕ್ಕುತ್ತೆ.

ಬೀರಯ್ಯಾ: ಅವರು ನಮ್ಮವರಿಗೆ ಮಾಡಿದ ಹಿಂಸೆ, ಲೂಟಿ, ಧ್ವಂಸ, ನೋಡಿದ್ರೆ, ರಕ್ತ ಕುದೀತದೆ, ಹಲ್ಲು ಹಸಿಟ್ಬಾತದೆ. ಅನ್ಯಾಯ ಮಾಡ್ದವ್ರ ಹುಟ್ಟಡಗಸ್ಬುಡೋಣ್ವಾ ಅನ್ನಸ್ತೈತೆ.

ಚೆನ್ನೇ : ತಾಳ್ದವ್ನು ಬಾಳೀಯಾನು ಅಂತ ಅದಕ್ಕೆ ಹಿರ್ಯಾಕೇಳಿದರು.

ಬೀರಯ್ಯ : ಇದು ನನ್ನೋಬ್ಬನದೇ ಅಲ್ಲ, ಊರವ್ರೆಲ್ಲರ ಅಭಿಪ್ರಾಯ.

ಒಬ್ಬ : ಚೆನ್ನೇಗೌಡ್ರೇ, ನಮ್ಮ ಹುಲ್ಲುಮೆದಾಗ ಬೆಂಕಿ ಬಿದ್ದೋತು. ನಮ್ಮ ದನಗಳ ಗತಿ?

ಚೆನ್ನೇ : ಪರಿಹಾರ ಕೊಡ್ಸವ.

ಒಬ್ಬಾಕೆ : ಗೌಡ್ರೆ ನನ್ನೊಬ್ಬನೇ ಮಗ ಗುಂಡಿಗಾವುತಿ ಆದ ನನ್ನ ಗತಿ?

ಚೆನ್ನೇ : ಸರ್ಕಾರ ಪರಿಹಾರಕೊಡ್ತಾರೆ.

ಒಬ್ಬಾಕೆ : ಗೌಡ್ರೆ ಹಣ ಕೊಟ್ರೆ ನನ್ನ ಮಗ ಬಂದಾಗಾತದಾ. ನನ್ನ ಮಗನ್ನ ಎಂಗ್ ಬುಟ್ಟಿರ್ರಿ?

ಒಬ್ಬ : ನನ್ನ ಅಂಗಡಿ ಲೂಟಿ ಮಾಡಿ ಈಗ ನನ್ಗೆ ಏನೂ ಇಲ್ಲ. ಅನ್ನಕ್ಕೆಗತಿ ಇಲ್ಲ ಗೌಡ್ರೆ.

ಒಬ್ಬ : ನನ್ನ ಮನೆ ಹತ್ತಿ ಉರುದೋತು ಗೌಡ್ರೆ.

ಚೆನ್ನೇ : ಪರಿಹಾರ ಕೊಡ್ಸೋಣ.

ಮತ್ತೊಬ್ಬ : ನನ್ನ ಕೈ.

ಒಬ್ಬ : ನನ್ನ ಕಾಲು.....

ಚೆನ್ನೇ : ಇದ್ನೆಲ್ಲಾ ನೋಡಿ ನಂಗೆ ದುಃಖ ಆಗಲ್ಲ ಅಂತ ತಿಳ್ಕಂಡಿದ್ದೀರಾ?

ಇಮಾಂ : ಯಾರ್ಗೂ ಸಂತೋಸವಿಲ್ಲ. ಎಲ್ಲರ್ಗೂ ದುಃಖ್ವಾಗದೆ.

ಚೆನ್ನೇ : ಪರಿಸ್ಥಿತಿ ಬಿಗಡಾಯಿಸದಂತೆ ನೋಡ್ಕಬೇಕು, ಹತೋಟಿಗೆ ತರ್ಬೇಕು. ಇದೇ ಎಲ್ಲರ ಆಸೆ. ಮುಖ್ಯಮಂತ್ರಿಗಳು, ರಕ್ಷಣಾ ಮಂತ್ರಿಗಳ ಆದೇಸವೂ ಅದೇ.

ಈ ಸಾವು ನೋಡಿ ನನ್ನದೇನು ಎಲ್ಲರ ಕರುಳೂ ಕಿತ್ತೂ ಬರೋದೇ ಆಗದೆ. ಕೈ ಮೀರದ್ದಕ್ಕೆ ಏನು ಮಾಡದು?

ಬೀರಯ್ಯ : ಸೇಡಿಗೆ ಸೇಡು......

ಚೆನ್ನೇ : ಅದೇ ತಪ್ಪು ಅನ್ನದು. ಅಪಕಾರ ಮಾಡ್ದವರ್‍ಗೂ ಉಪಕಾರ ಮಾಡು ಅಂತ ದಾಸರು ಯೇಳಿಲ್ವಾ?

ಬೀರಯ್ಯ : ಇದ್ಯಾವ ನ್ಯಾಯ ಅಂತೀನಿ?

ಚೆನ್ನೇ : ನಮ್ಮೂರ್‍ರಾಗೆ, ಚರ್ಚ್ ಇರದು ಕ್ರೈಸ್ತರು ಪ್ರಾರ್ಥನೆ ಮಾಡಕ್ಕೆ, ಅಲ್ಲ ಗಲಾಟೆ ಅಂದ್ರ್ಯಾಗೆ? ಮಸೀದಿ ಇರದು ಮುಸ್ಲಿಮರು ನಮಾಜ್ ಮಾಡಕ್ಕೆ ಅದು ಗಲಾಟೆ ಅಂದ್ರ್ಯಾಗೆ? ಹಬ್ಬ ಹರಿದಿನಗಳೆಲ್ಲಿ ಹಿಂದುಗಳು ಕುಣಿದು, ಕುಪ್ಪಳಿಸಿ ಹಾಡಿದ್ರೆ ಗಲಾಟೆ ಅಂದ್ರ್ಯಾಗೆ? ಅವರವರ ಧರ್ಮ ಅವರ್‍ಗೆಚ್ಚು. ಅವ್ನೆಲ್ಲಾ ಒಬ್ಬೊಬ್ರೂ ಅನುಸರಿಸಿಕೊಂಡೋಗ್ಬೇಕು. ಕೂಡಿ ಬಾಳಿದ್ರೆ ಕೋಟಿ ಪುಣ್ಯವಲ್ವ? ನಮ್ಮ ಹಳ್ಳಿ ಇಬ್ಭಾಗ ಮಾಡದು ಸರಿ ಇಲ್ಲ.

ಇಮಾಂ : ಮುಯ್ಯಿಗೆ ಮುಯ್ಯಿ ಬ್ಯಾಡ. ಯಾವ್ದೋ ತಪ್ಪಿದ್ರೂ ಎಲ್ದನ್ನೂ ಕ್ಷಮುಸ್ಬುಡಿ.

ಚೆನ್ನೇ : ಇದ್ನೋದಿಯೇ ಬಸವಣ್ಣನ್ರು ದೇಹವೇ ದೇಗುಲ ಅಂದ್ರು, ಎಲ್ಲಾ ತೀರ್ಥ ಕ್ಷೇತ್ರಗಳೂ ನಮ್ಮಲ್ಲೇ ಅವೆ ಅಂದ್ರು. ಸರ್ಪಭೂಷಣ ಶಿವಯೋಗಿಗಳು ಅರಿವೇ ಗುರು, 'ತನ್ನ ತಾನರಿದಂಗೆ ಬಿನ್ನ ಬಾವನೆ ಇಲ್ಲ' ಅಂತ ಅದ್ದೇಯೇಳರು.

ಇಮಾಂ : ಎಲ್ಲಾ ಧರ್ಮದ ತಿರುಳೂ ಒಂದೇ ಬುಡಿ.

ಬೀರಯ್ಯ : ಜನರು ಕಲ್ಲಾಂಡಿದ್ದಾರೆ......

ಚೆನ್ನೇಗೌಡ : ಈ ಕಾದ ನೀರು ಅಲ್ಲೇ ಬೇಕು. ಅದೇ ಸಮಯ ಬೇಕು. ಏನು ರಂಗಯ್ಯಾ ಏನೂ ಸುದ್ದಿ ತಂದ್ಯಪ್ಪಾ?

ರಂಗಯ್ಯ : ಈಗ ಸ್ವಲ್ಪ ಸಾಂತವಾತಾರ್‍ ಅದೆ. ಜನ ಇನ್ನೂ ವಸಿ ಬಿಸಿಯಾಗ್ಯೆ ಅವ್ರೆ.

ಚೆನ್ನೇ : ನಮ್ಮ ಬೀರಯ್ಯನವ್ರು ತಣ್ಣಾಗಕ್ಕೂ ನೀವೇ ಬರಬೇಕಾಗದೆ.

ರಂಗಯ್ಯ : ಬೇಕಾದಷ್ಟು ಜನ ಧಾರ್ಮಿಕ ವ್ಯಕ್ತಿಗಳು ಹಗೆ ಸಾದಿಸ್ನಿಲ್ಲ ಅಂದ ಮ್ಯಾಲೆ ನಾವು ಯಾವ ಮಹಾ ಬುಡಿ. ಅದ್ಕೇ ಸಾವಳಗಿ ಶಿವಲಿಂಗೇಶ್ವರ, ಗುಲ್ಬರ್ಗದ ಸೂಫಿ ಸಂತ ಖಾಜಿ ಬಂದೇ ನವಾಜ್ ಇವರ ಸ್ನೇಹ ಒಳ್ಳೇ ಉದಾಹರಣೆ.

ಬೀರಯ್ಯ : ಏನದು ಸ್ವಲ್ಪ ಬುದ್ಧಿ ಹೇಳಿ ಮತ್ತೆ.

* * *

ರಂಗಯ್ಯ : ಹೇಳುವೆ ಕೇಳಿರಿ ನೀವೆಲ್ಲಾ
ಕಲ್ಬುರ್ಗಿ ಸೂಫಿಯ ಸಂತರು
ಖಾಜಿ ಬಂದೆ ನವಾಜರು
ಸಾವಳಿಗಿಯ ಶಿವಲಿಂಗೇಶ್ವರರು
ಮೆರೆದ ಮೈತ್ರಿಯೂ ಕಥೆಯಾ

ಸಾವಳಗಿ ಶಿವಲಿಂಗೇಶ್ವರರ ಪ್ರಭಾವವನ್ನು ಕೇಳಿದ ಕಲ್ಬುರ್ಗಿಯ ಖಾಜಿ ಬಂದೇ ನವಾಜರು ತಮ್ಮ ಶಿಷ್ಯರಾದ ದೊರೆ ರೋಜಾದ ಸಾಹೇಬನನ್ನು ಕರೆದು ಶಿವಲಿಂಗೇಶ್ವರರನ್ನು ಉರಿಸಿಗೆ ಬರಬೇಕು ಅಂತ ಹೇಳಿ ಕಳಿಸ್ತಾರೆ.

ರೋಜಾ : ಸಲಾಂ ಗುರುದೇವ್ ಜೀ.

ಶಿವಲಿಂಗೇಶ್ವರ : ಯಾರು ?

ರೋಜಾ : ನಾನು ರೋಜಾದ್ ಸಾಬ್ ಹುಜೂರ್. ನಾನು ಗುಲ್ಬರ್ಗದಿಂದ ಬಂದೀನಿ. ನಮ್ಮ ಗುರು ಖಾಜೇ ಬಂದೇ ನವಾಜ್ರು ತಮ್ಮನ್ನು ಕಲ್ಬುರ್ಗಿ ಉರ್ಸ್‌ಗೆ ಆಹ್ವಾನ ಕೊಟ್ಟು ಬಾ ಅಂದಾರ್ರೀ......

ಶಿವ : ನನಗೆ ಬರಲು ಸಾಧ್ಯವಿಲ್ಲ ಅಂತ ಹೇಳಪ್ಪಾ. ಅವರು ಪ್ರೀತಿಯಿಂದ ಕರೆದದ್ದು. ನನಗೂ ತುಂಬಾ ಸಂತೋಷ ಅಂತ ಹೇಳಿ. ಇನ್ನೊಮ್ಮೆ ಬರೋಣ.

ರೋಜ : ಅಪ್ಪಣೆ ಗುರುದೇವ.

* * *

ಶಿಷ್ಯ : ಪೂಜ್ಯರೇ ಬಂದೇ ನವಾಜರು ತಮ್ಮನ್ನು ಕರೆತರಲು ಸೈನ್ಯವನ್ನೇ ಕಳುಹಿಸಿದ್ದಾರೆ.

ಶಿವ : ಬಲವಂತ ಮಾಡುವುರೋ ಕಾಳಗ, ಬಾ ಇಲ್ಲಿ......

ಕಾಳಗ : ಏನಪ್ಪಣೆ ಗುರುದೇವಾ?

ಶಿವ : ಆ ಸೈನ್ಯವನ್ನು ಸದೆಬಡಿದು ಬಾ......

ಕಾಳಗ : ಈ ದೈತ್ಯನಿಗೆ ಇದಾವ ಲೆಕ್ಕಾ. ರಕ್ತದ ಕೋಡಿ ಹರಿಸಿ ಬರುವೆ.

(ಸೈನ್ಯಗಳ ಕಾದಾಟ, ಹೊಡೆದಾಟ, ಚೀರಾಟ)

(ಸಂಗೀತ)

* * *

ಶಿಷ್ಯ : ಬುದ್ಧಿ...... ಎಂಗಾಗೊಯ್ತು ನೋಡಿದ್ರಾ?

ಶಿವ : ವಿನಾಶ ಕಾಲಕ್ಕೆ ವಿಪರೀತ ಬುದ್ಧಿ ಅಂತ ಹೇಳೋದು ಅದಕ್ಕೇ, ಬಂದೇನವಾಜರು ಹುಲಿಯ ಮೇಲೇರಿ ನನ್ನನ್ನು ಸ್ವಾಗತಿಸಲು ಬಂದಿದ್ದರು.

ನಾನು ಕಟ್ಟೇ ಮೇಲೆ ಕೂತಿದ್ದೆ. ಅವರನ್ನು ನೋಡಲು ಕಟ್ಟೆ ಸಹಿತವಾಗಿಯೇ ಹೋಗಿ ಸ್ವಾಗತಿಸಿದೆ. ಆಶ್ಚರ್ಯ ಪಟ್ಟು ಹುಲಿಯ ಮೇಲಿಂದ ಕೆಳಗೆ ಇಳಿಸಿ ಆತ್ಮೀಯವಾಗಿ ಆಲಿಂಗಿಸಿಕೊಂಡ್ರು. ಈ ಶಮನ, ಟೊಪ್ಪಿಗೆ, ಶಲ್ಯನ ಇವುಗಳನ್ನು ಉಡುಗೊರೆಯಾಗಿ ಕೊಟ್ಟು ಮತ್ತೆ ಕಲ್ಬುರ್ಗಿಗೆ ಉರಿಸಿಗೆ ಬರಬೇಕು ಅಂತ ಆಮಂತ್ರಿಸುವ ಆಮಂತ್ರಣ ಎನ್ನುತ್ತಾರೆ ಎಲ್ಲರು. ಅಲ್ಲದೆ ನಾನು ಧರಿಸಿದ ವಿಭೂತಿಯಿಂದ ಪ್ರೋಕ್ಷಿಸಿದ ತೀರ್ಥದಿಂದ ಸೈನಿಕರಿಗೆ ಮರುಜನ್ಮ ನೀಡಿದೆ. ಅದನ್ನು ನೋಡಿ.

ಶಿವಯ್ಯ : ಮಾತ ಪುರಷರೆಂದು ಹೊಗಳಿರಬೇಕು.

ಶಿವ : ಹೌದು.

ಶಿವಯ್ಯ : ಆಮೇಲೆ.

ಶಿವ : ನಾನೂ ಹೋದೆ. ಬಂದೇ ನವಾಜರು ಸಕಲ ಮರ್ಯಾದೆಗಳೊಂದಿಗೆ ಕರೆಸಿಕೊಂಡು ಆಲಂಗಿಸಿಕೊಂಡರು. ಇದಾಗುವುದಕ್ಕೆ ಮೊದಲು ಕೆಲವು ವಲ್ಲಿಗಳು ಮಾಂಸದ ಅಡಿಗೆ ಮಾಡಿ ತಂದು ನನಗೆ ಬಡಿಸಿದರು. ಅದರ ಮೇಲೆ ನಾನು ತೀರ್ಥ ಪ್ರೋಕ್ಷಿಸಲು ಅವು ಹೂಗಳಾದುವು. ಆಗ ಅವರೆಲ್ಲಾ ತಾವು ಮಾಡಿದ ತಪ್ಪಿಗೆ ಕ್ಷಮೆ ಕೇಳಿದರು. ಈ ವಿಷಯ ತಿಳಿದ ಬಂದೇ ನವಾಜರು "ಮಹಾತ್ಮರನ್ನು ಪರೀಕ್ಷಿಸಬಾರದು" ಎಂದು ಅವರಿಗೆ ಛೀಮಾರಿ ಹಾಕಿದರು. ನಾನು ಅವರಿಗೆ ಹೇಳಿದೆ, ನಮ್ಮಗುರು ಸಿದ್ಧೇಶ್ವರರು ನಿಮ್ಮದರ್ಗಾದಲ್ಲಿ ಇರುತ್ತಾರೆ. ಅವರನ್ನು ನಿತ್ಯ ಪೂಜೆ ಮಾಡಿ ಸರ್ವರಿಗೂ ಒಳ್ಳೆಯದಾಗುತ್ತದೆ ಎಂದೆ. ಅದಕ್ಕೆ ಅವರು ಆಗಲೆಂದು ಒಪ್ಪಿ ನನ್ನನ್ನು ಆತ್ಮೀಯತೆಯಿಂದ ಬೀಳ್ಕೊಟ್ಟರು.

ಶಿವಯ್ಯ : ಇಬ್ಬರು ಮಹಾತ್ಮರಲ್ಲವೇ?

* * *

ರಂಗಯ್ಯ : ನೀರಿನ ಮೇಲೆ ನಮಾಜು ಮಾಡುವ
ಔರಂಗಾಬಾದ್ ಪವಾಡ ಕೇಳಿ
ಸಾವಳಗಿಯ ಶಿವಲಿಂಗೇಶ್ವರರು
ಮತ್ತೊಂದು ಪವಾಡವನು ಮೆರೆದರು,
ಅಂತರಿಕ್ಷದಲ್ಲಿ ಪದ್ಮಾಸನ ಹಾಕಿ
ಅಚ್ಚರಿಯನು ಬೀರಿದರು.
ಹಮ್ಮು ಮುರಿದ ಬಾದ್‌ಶಹನು
ಶರಣಾಗಿ ಬೇಕಾದುದ ಕೇಳೆಂದ
ಬೇಡಿದವನ ನಾಡ ಕೊಡು
ಹಸಿದವಗೆ ಅನ್ನ ನೀಡೆಂದು

ನಕ್ಕು ಎನಗೇನು ಬೇಡವೆಂದರು ಶಿವಯೋಗಿಗಳು
ಬಿಡದ ಬಾದಶಹ ಬಾಲಖೇಡದಲಿ
ಮಠವೊಂದ ನಿರ್ಮಿಸಿದ ಶಿವಲಿಂಗೇಶ್ವರಗೆ.

ಚೆನ್ನೇ : ಕೇಳ್ದಾ ಬೀರಯ್ಯ

ಬೀರಯ್ಯ : ಕೇಳಿದ್ನಪ್ಪಾ

ರಂಗಯ್ಯ : ಮತ್ತೊಂದು, ಗುಲ್ಬರ್ಗಾದಲ್ಲೇ ನಡೆದ ಮುಸ್ಲಿಮ್ ಸೂಫಿ ಸಂತರು ಬ್ರಾಹ್ಮಣರ ಭಾವೈಕ್ಯ ಸಂಗಮ ತಿಳಿಸಬೇಕು ಅನ್ನಿಸುತ್ತೆ.

ಚೆನ್ನೇ : ಹೇಳಿ....

(ಸಂಗೀತ)

* * *

ರಂಗ : ರುತ್ನುದ್ದೀನ್ ತೋಲಾ ಅವರ ಸಮಾಧಿ ಗುಲ್ಬರ್ಗಕ್ಕೆ ಸುಮಾರು ಐದು ಕಿಲೋಮೀಟರ್ ದೂರದಲ್ಲಿದೆ. ಹಿಂದೆ ಇಲ್ಲಿ ಬೆಟ್ಟ ಗುಡ್ಡ ಕಾಡು, ಪ್ರಾಣಿ ಪಕ್ಷಿಗಳಿದ್ದು. ರುತ್ನುದ್ದೀನ್ ತೋಲಾ ಹನ್ನೆರಡನೇ ವಯಸ್ಸಿಗೆ ಇಲ್ಲಿಗೆ ಬಂದು ತಪ ಮಾಡುತ್ತಿದ್ದರು. ಒಮ್ಮೆ ಚಿರಾಗ್ ಡೇಲಿನ್ ನಾಸಿರುದ್ದೀನ್ ಅವರನ್ನು ನೋಡಲು ಬಂದರು. ಆಗ ಬಂದೇ ನವಾಜರು ಅವರನ್ನು ಕುರಿತು ನೀವು ಇಷ್ಟು ದೂರ ಬಂದಿದ್ದೀರಿ, ಇಲ್ಲೇ ಹತ್ತಿರದ ಗುಂಡದಲ್ಲಿ ನಲವತ್ತು ವರ್ಷಗಳಿಂದ ತಪಸ್ಸು ಮಾಡುತ್ತಿರುವ ರುತ್ನುದ್ದೀನ್ ತೋಲಾ ಎಂಬ ಮಹಾ ಸಂತರಿದ್ದಾರೆ. ಅವರ ದರ್ಶನ ಮಾಡುವುದೇ ಒಂದು ಭಾಗ್ಯ ಎಂದು ಅಲ್ಲಿಗೆ ಕರೆದುಕೊಂಡು ಬಂದರು, ಹುತ್ತ ಬೆಳೆದಿತ್ತು. ಅದು ಸೀಳಿ ಗುರುಗಳು ತಪದಿಂದ ಎಚ್ಚೆತ್ತರು. ಖಾಜಾ ಬಂದೇ ನವಾಜರು ನಾವು ಬಂದು ತಮ್ಮ ತಪಸ್ಸಿಗೆ ಭಂಗ ತಂದ್ವು ಎಂದು ಕಾಲಲ್ಲಿ ರಕ್ತ ಬರುತ್ತಿರುವುದನ್ನು ಶಲ್ಯದಲ್ಲಿ ಒರಿಸಿದರು. “ಆ ರಕ್ತವೇ ಚಿನ್ನವಾಯಿತು.” ಏಕ್ ತೋಲಾ ಹೈ ತುಮ್ ನೀವು ನಿಜವಾಗ್ಲೂ ರತ್ನುದ್ದೀನ್ ತೋಲಾ. ರುತ್ನುದ್ದೀನ್ ತೋಲಾ ಅವರನ್ನು ನೋಡಬೇಕಂತ ಚಿರಾಗ್ ಡೇಲಿನ್ ನಾಸಿರುದ್ದೀನ್, ಅವರು ಬಂದೇ ನವಾಜರ ಜೊತೆ ಬಂದ್ರು. ಅವರಿಗೆ ರುತ್ನುದ್ದೀನ್ ತೋಲಾ ಅವರು ಜಾತಿ ಭೇದ ಎಣಿಸದೆ ಸರ್ವರನ್ನೂ ಒಂದಾಗಿ ಕಾಣಬೇಕು, ಮನುಷ್ಯ ಜನ್ಮ ಸಾರ್ಥಕವಾಗಬೇಕಾದ್ರೆ ನಾಲ್ಕಾರು ಜನಕ್ಕೆ ಉಪಕಾರ ಮಾಡಬೇಕು. ಸೇವೆ ಮಾಡಬೇಕು. ದೀನ ದಲಿತರ ಉದ್ದಾರವಾಗಬೇಕು ಎಂದರು.

ಮೊದಲು, ಈ ರುತ್ನುದ್ದೀನ್ ತೋಲಾ ಅವರ ಗೋರಿ ಇರುವ ಸ್ಥಳದಲ್ಲಿ ದಲಾತೂರ್ ಎಂಬ ಊರಿತ್ತಂತೆ. ಇಲ್ಲಿ ಎಲ್ಲಮ್ಮದೇವಿ ಇದ್ದಳಂತೆ. ಆಮೇಲೆ ಸುಲ್ತಾನ್ ಪುರಕ್ಕೆ ಹೋಗಿ ಹಳ್ಳದಲ್ಲಿ ನೆಲೆಸಿದಳಂತೆ. ಈ ದೇವತೆಗೆ ಹಿಂದೂ- ಮುಸ್ಲಿಮರಿಬ್ಬರೂ ನಡೆದುಕೊಳ್ಳುತ್ತಾರೆ.

ರುತ್ನುದ್ದೀನ್ ತೋಲಾ ಅವರು ತಮಗೆ ಮಿನಾರ್ ಕಟ್ಟಲು ಬೇಡ ಎಂದರಂತೆ, ಆದರೂ ಭಕ್ತನೊಬ್ಬ ಬಿಡದೆ ಕಟ್ಟಲು ಆತನ ಎರಡು ಕಣ್ಣುಗಳೂ ಹೋದುವಂತೆ. ಆತ ತಾನು ಮಾಡಿದುದು ತಪ್ಪಾಯ್ತು ಕ್ಷಮಿಸಬೇಕೆಂದು ಕೇಳಲು ಮತ್ತೆ ಕಣ್ಣುಗಳು ಬಂದುವೆಂಬ ಪವಾಡದ ಕತೆಯನ್ನು ಜನರು ಹೇಳುತ್ತಾರೆ.

ರಾಣೋಜಿ ಹಾಗೂ ರತ್ನುದ್ದೀನ್ ತೋಲಾ ಇವರಿಬ್ಬರ ಸಮಾಧಿಗಳು ಹತ್ತಿರ ಹತ್ತಿರ ಇವೆ.

ಚೆನ್ನೀ : ರಾಣೋಜಿ ಯಾರು?

ರಂಗಯ್ಯ : ರಾಣೋಜಿ, ರುತ್ನುದ್ದೀನ್ ತೋಲಾ ಅವ್ರ ಬ್ರಾಹ್ಮಣ ಶಿಷ್ಯ.

ಬೀರಯ್ಯ : ಮುಸ್ಲಿಮ್ ಗುರುಗಳಿಗೆ ಹಿಂದೂ ಶಿಷ್ಯ.

ರಂಗಯ್ಯ : ಆ ಶಿಷ್ಯತ್ವ ಪಡ್ಯಕ್ಕೂ ಎಷ್ಟು ಕಷ್ಟ ಪಟ್ಟರು ಗೊತ್ತ?

ಚೆನ್ನೀ : ಹೇಳಿ.

ರಂಗಯ್ಯ : ಹಂಬಲವು ಎನಗಿಹುದು ಗುರುವೆ ಕಾಶಿ ವಿಶ್ವನಾಥನ ದರುಶನಕ್ಕೆ ಅಪ್ಪಣೆಯ ನೀಡಿರೆಂದು ಶಿರಬಾಗಿ ಬೇಡಿದ ರಾಣೋಜಿ ರತ್ನುದ್ದೀನ್ ತೋಲ ಸಂತರನು ಹೋಗಲಾರು ತಿಂಗಳು, ಬರಲಾರು ತಿಂಗಳು ಈಗೇಕೆ ನೋಡೋಣ ತಾಳೆಂದರವರು ಆರು ತಿಂಗಳಾಗಲಿ ಮತ್ತೆ ಗುರುಗಳ ಬಳಿ ಬಂದು ಬೇಡಿದ ರಾಣೋಜಿ ಬಗಲ ಜೋಳಿಗೆ ತೋರಿ, ತಲೆಹಾಕಿ ಒಳ ಹೋಗೆಂದರು ರಾಣೋಜಿಯನು, ಅಲ್ಲಿಂದಲೇ ನಡೆದು ಪಯಣ ಬೆಳೆಸಿದ ರಾಣೋಜಿ.

ರಾಣೋಜಿ ಬರುವ ಮುನ್ನ
ಕಾಶಿಯಲ್ಲಿ ರುತ್ನುದ್ದೀನ್‌ರು ಪೂಜೆಗಣಿಯಾಗಿದ್ದೂದ ಕಂಡು
ಬೆಕ್ಕಸ ಬೆರಗಾಗಿ ವಂದಿಸಿದ ರಾಣೋಜಿ ಗುರುಪದ ತಲಕೆ.

ರಂಗಯ್ಯ : ರಾಣೋಜಿ ರುತ್ನುದ್ದೀನ್ ತೋಲಾ ಅವರ ಶಿಷ್ಯತ್ವವಹಿಸಬೇಕು ಅಂತ ಕೇಳಿದ. "ನಾವು ಮುಸ್ಲಿಮರು ನೀವು ಬ್ರಾಹ್ಮಣರು ನಾನು ಹೇಳಿದುದನ್ನು ಮಾಡುತ್ತಿಯಾ" ಅಂದ್ರು. "ಜೀವ ಕೊಡಲಿಕ್ಕೂ ಸಿದ್ಧ ಅಂದ. "ಮಾಂಸದ ಅಂಗಡಿಯಿಂದ ಮಾಂಸ ತರಬೇಕು ಅಂದ್ರು." ಹಾಗೆ ಮಾಂಸ ತರುತ್ತಿರಲು ಕೆಲವು ಬ್ರಾಹ್ಮಣರು ಆತನಿಗೆ ಛೀಮಾರಿ ಹಾಕಿದರು. ಬಟ್ಟೆಯ ಮುಸುಕನ್ನು

ತೆರೆಯಲು ಅದರಲ್ಲಿ ಗುಲಾಬಿ ಹೂಗಳಿದ್ದುವು. ಆಗ ಎಲ್ಲರೂ ನೀನು ಸಾಮಾನ್ಯನಲ್ಲ ಎಂದು ಹೊಗಳಿದರು. ತ್ರಿಕಾಲಜ್ಞಾನಿಗಳಾದ ಗುರುಗಳಿಗೆ ನಡೆದ ವಿಚಾರ ತಿಳಿದಿತ್ತು. ಕೊನೆಗೆ ಆತನನ್ನು ಶಿಷ್ಯನಾಗಿ ಸ್ವೀಕರಿಸಿದರು.

ರಂಗಯ್ಯ : ಈಗಲೂ ಮಕ್ಕಳಿಲ್ಲದವರು ರುತ್ನುದ್ದೀನ್ ತೋಲಾ ಅವರ ಸಮಾಧಿ ಪೂಜೆ ಮಕ್ಕಳನ್ನು ಪಡೆಯುವ ನಂಬಿಕೆ.

ಚೆನ್ನೇ : ಇವೆಲ್ಲಾ ಕಟ್ಟುಕತೆಯಲ್ಲಪ್ಪಾ ನಿಜವಾಗಿ ನಡದ್ದು.

* * *

ರಂಗಯ್ಯ : ಕೇಳಿರಿ ಜನಗಳೆ ಹೇಳುವೆ ನಾನು ಮತ್ತೊಂದು ಕಥೆಯಾ,
ಮಕ್ಕಾದಿಂದ ಬಂದ ಸೂಫಿ ಸಂತರು
ಕಲ್ಬುರ್ಗಿ ಜಿಲ್ಲೆಯ ಶಹಪುರ ತಾಲ್ಲೂಕಿನ
ಗೋಗಿ ಎಂಬ ಗ್ರಾಮದಲಿ ನೆಲೆಸಿದರು
ಗಿಯಾಜುದ್ದೀನ್ ಬಲಬನ್ ಅರಸರ ಕಾಲಕೆ
ರದ್ದೇವಾಡಿಯಲಿ ಜನನ ತಾಳಿದರು.
ಹಜರತ್ ಸಯದ್ ಚಂದಾ ಹುಸೇನಿಯವರು
ಮಹಮದ್ ಪೈಗಂಬರರ ಕುಟುಂಬದವರು
ಗಂಜಾಪುರ ಗ್ರಾಮಕೆ ತೊಟ್ಟಿಲಲಿ ಬಂದರು
ಮುಂದೆ ಚಂದಾಪುರಕ್ಕೆ ತೆರಳಿದರು.
ಖಾಜೆ ಬಂದೆ ನವಾಜರು ಔತಣ ನೀಡಿ
ಹೊಗಳಿದರು. ಚಂದಾಹುಸೇನಿಯವರನು
ರಕ್ತ ಕರೆವ ಹಸುವ ಹರಸಿ ಹಾಲು ಕರೆಸಿದರು
ಚಂದಾಹುಸೇನಿ ಮಹಾಸಂತರು
ನೆರವಾದರು ಮನುಜ ಕುಲಕ್ಕೆ
ಜಾತಿ ಮತ ಭೇದವೆಣಿಸದೆ
ರೋಗ ಪರಿಹಾರ ಮಾಡಿದರು
ಅನ್ನ ಬಟ್ಟೆ ವಿದ್ಯೆ ನೀಡಿ
ಸಕಲರ ಪ್ರೀತಿಯ ಪಡೆದರು.

ರಂಗಯ್ಯ : ಒಬ್ಬ ಅಕ್ಕಸಾಲಿಗ ಗಂಡೇಮಾಲೆ ರೋಗಕ್ಕೆ ತುತ್ತಾಗಿದ್ದ. ಈತನ ಕಿವಿಗೆ ಹಜರತ್ ಚಂದಾಹುಸೇನಿಯವರು ಮುರುವು ಹುಟ್ಟಿದಾಗ ರೋಗ ವಾಸಿಯಾಯಿತಂತೆ. ಆದಿಲ್‌ಷಾಹಿ ಅವರು ದಾಸೋಹ ಕಟ್ಟಡ ಕಟ್ಟಿಸಿಕೊಟ್ಟರು. ವಿದ್ಯಾಭ್ಯಾಸದ ಏರ್ಪಾಡು ಮಾಡಿದರು. ೧.೪೩೭ರಲ್ಲಿ ಹಜರತ್ ಚಂದಾಹುಸೇನಿಯವರು ಕಾಲವಾದರು. ಗೋರಿಸುತ್ತಾ ಅನೇಕ ಸೂಫಿ ಸಂತರು ಆಗ ಹೋಗಿದ್ದಾರೆ.

ರಂಗಯ್ಯ : ಸುರಪುರ ತಾಲ್ಲೂಕಿನ

ಗೋನಾಳ ಗ್ರಾಮದಿ
ಜನಿಸಿದ ನಮ್ಮ ಮೌನೇಶ್ವರ
ಅಂಕುಶ ಖಾನನ
ದರ್ಬಾರಿಗೆ ಹೋಗುವ ಮುನ್ನ
ಮಸೀದಿಯೊಂದರಲಿ
ವಿಶ್ರಾಂತಿ ಪಡೆಯುತಿರೆ
ಕೆಲವು ಮುಸ್ಲಿಮ್ ಮಂದಿ
ಮದ್ಯ ಮಾಂಸವನು
ಕಳುಹಿದರು ಮೌನೇಶಗೆ
ಮೌನೇಶ ಅದರ ಮುಸುಕು ತೆರೆಯೆ
ಮದ್ಯ ಹಾಲಾಗಿತ್ತು
ಮಾಂಸ ಹಾರವಾಗಿತ್ತು
ಬೆಕ್ಕಸ ಬೆರಗಾದರು.

ಮೌನೇಶ ೧೭ನೇ ಶತಮಾನದಲ್ಲಿದ್ದ ಶರಣ. ಹಿಂದೂ ಮುಸ್ಲಿಮರ ಮೊಹರಂ ಹಬ್ಬದಲ್ಲಿ ಪಲ್ಲಕ್ಕಿಯಲಿ ಮೌನೇಶನ ಪರಿಪೂರ್ಣದ ಕುರುಹಾದ ಹೂಜೆಯನ್ನು ದುಷ್ಟದಮನದ ಸಂಕೇತವಾದ ಜಪಗೊಡಲಿಯನ್ನು ಇಟ್ಟು ಭಕ್ತರೊಂದಿಗೆ ಅಲಾಯಿ ಕುಣಿಯುತ್ತಾರೆ. ಈ ದೇವಾಲಯಕ್ಕೆ ಹಿಂದೂ ಮುಸ್ಲಿಮರಿಬ್ಬರೂ ನಡೆದುಕೊಳ್ಳುವರು. ಕೆಳಗಡೆ ಮೌನೇಶ್ವರನ ಗದ್ದುಗೆ, ಮೇಲ್ಭಾಗದ ಮಹಡಿಯಲ್ಲಿ ಮಹಮ್ಮದೀಯ ಸಂತರ ಸಮಾಧಿಯಂತಿದೆ. ಮೋನಪ್ಪನ ಕಾರ್ಯದಲ್ಲೂ ಹಿಂದೂ ಮುಸ್ಲಿಮರ ಐಕ್ಯತೆ ಇದೆ.

ಚೆನ್ನೇ : ಬೆಂಗಳೂರ್‍ನಾಗ ಅರಳೇ ಪ್ಯಾಟೇಲಿ ಹಜರತ್ ತವ್ಕಲ್ ಮಸ್ತಾನ್ ಸಂತರ ದರ್ಗ ಇದೆ. ಇಲ್ಲಿಗೆ ಧರ್ಮರಾಯನ ಕರಗ ಬಂದಾಗ ಮುಸ್ಲಿಮರು ಹೂವಾಕಿ, ದೂಪದಾರತಿ ಎತ್ತಿ ಪೂಜ್ತಾರೆ. ಇವರು ಕರಗ ಶಕ್ತಿ ಭಕ್ತರಾಗಿದ್ದರಿಂದ ಈ ಆಚರಣೆ ನಡೀತದಂತೆ.

ರಂಗ : ಶರಣ ಷಣ್ಮುಖ ಶಿವಯೋಗಿಗಳ
ಮಹಿಮೆಗೆ ಶಿರಬಾಗಿ ವಂದಿಸಿ
ಕೊನ್ನೂರು ಸಾಬರು
ಅವರ ಮಡದೆದುರು ನಿಂದು
ಶಿಷ್ಯತ್ವವನು ವಹಿಸಿದರು
ಹಿಂದೂ ಮುಸ್ಲಿಮ್ ಬಾಂಧವ್ಯ ಬೆಸೆದರು.

ಚೆನ್ನಯ್ಯ : ಬೊರೇಗೌಡನ ಪುರದಲ್ಲಿರೋ ಮಂಟೇಸ್ವಾಮಿಯವರನ್ನ ಹಿಂದುಗಳ ಅಲ್ಲಹು ಅಂತ ಕರದ್ರೆ ಮುಸ್ಲಿಮರು ಅಲ್ಲ ಅಂತಾರೆ.

ಇಮಾಂ : ಮೊಹರಂ ಅಥವಾ ಅಲಾಯಿ ಹಬ್ಬನ ಹಿಂದೂ ಮುಸ್ಲಿಮರಿಬ್ರೂ ಆಚರಿಸ್ತೀವಿ. ಕರಬಲಾ ಹಾಡು ಜಂಗಿನ ಪದಗಳನು ಹಾಡ್ತೀವಿ. ಇದರಲ್ಲಿ

ಮಹಾಭಾರತ, ಸಾಮಾಜಿಕ ಕಥನ ಕವನ, ಹಿಂದೂ ಧರ್ಮದ ಪುರಾಣ ಪುಣ್ಯ ಕತೇನಾ ಹಾಡ್ತೀವಿ.

ರಂಗಯ್ಯ : ವರನಂದಿ - ಚೆಲುವ ನಾರಾಯಣರ ಕಥೆಯೂ ಮತ್ತೊಂದು ಹಿಂದೂ-ಮುಸ್ಲಿಮರ ಭಾವೈಕ್ಯದ ಕತೆ. ದೆಹಲಿಯ ನವಾಬನ ಆಸ್ಥಾನಕ್ಕೆ ರಾಮಾನುಜಾಚಾರ್ಯರು ಬಂದರು. ಸೇವಕ ಅವರನ್ನು ವಿಚಾರಿಸಿಕೊಂಡು ಬಂದು-

ಸೇವಕ : ಸಲಾಮ್ ಹುಜೂರ್, ರಾಮಾನುಜಾಚಾರ್ಯರೆಂಬ ಗುರುಗಳು, ತಮ್ಮನ್ನು ನೋಡಲಿಕ್ಕೆ ಬಂದಿದ್ದಾರೆ.

ನವಾಬ : ಕರೆದುಕೊಂಡು ಬಾ.....

(ಸಂಗೀತ)

ನವಾಬ : ಸಲಾಮ್ ಹಜರತ್........

ರಾಮಾನು : ತಮಗೆ ಮಂಗಳ ಉಂಟಾಗಲಿ.

ನವಾಬ : ತಾವು ನಮ್ಮ ಆಸ್ಥಾನಕ್ಕೆ ಬಂದದ್ದು ಬಹಳ ಸಂತೋಷವಾಯ್ತು ನನ್ನಿಂದೇನಾಗಬೇಕು ಅಪ್ಪಣೆಯಾಗಲಿ.

ರಾಮಾನು : ನವಾಬರೇ ತಮ್ಮ ಮಗಳು ವರನಂದಿಯ ಹತ್ತಿರ ಚೆಲುವನಾರಾಯಣ ಮೂರ್ತಿ ಇದೆ ಎಂದು ತಿಳಿಯಿತು. ಮೇಲುಕೋಟೆಯಲ್ಲಿ ಅದರ ಪ್ರತಿಷ್ಠಾಪನೆ ಮಾಡಬೇಕೆಂಬುದು ನಮ್ಮ ಬಯಕೆ. ಅದನ್ನು ತಾವು ಕೊಡಿಸಿದರೆ ಬಹಳ ಪುಣ್ಯ ಬರುತ್ತದೆ.

ನವಾಬ : ಆಕೆ ಅದನ್ನು ತುಂಬಾ ಪ್ರೀತಿಸುತ್ತಿದ್ದಾಳೆ. ಆಕೆ ನಿದ್ದೆ ಮಾಡುವ ಸಮಯ ನೋಡಿ ತರಿಸಿಕೊಡಬೇಕಾಗಿದೆ. ಅದನ್ನು ತೆಗೆದುಕೊಂಡು ನೀವು ಮರುದಿನ ಬೇಗ ಹೊರಟು ಬಿಡಬೇಕಾಗುತ್ತದೆ.

ರಾಮಾನು : ಆಗಬಹುದು.

* * *

ರಂಗಯ್ಯ : ರಾತ್ರಿ ವರನಂದಿ ಮಲಗಿರಲು ಆಕೆಯ ಕೋಣೆಯಲ್ಲಿದ್ದ ಚೆಲುವ ನಾರಾಯಣ ಮೂರ್ತಿಯನ್ನು ನವಾಬರು ತರಿಸಿದರು. ಮರುದಿನ ಬೆಳಿಗ್ಗೆ ಮತ್ತೆ ಸಭೆಗೆ ರಾಮಾನುಜರ ಆಗಮನ......

ಸೇವಕ : ಚೆಲುವ ನಾರಾಯಣ ಮೂರ್ತಿಯನ್ನು ತಂದಿದ್ದೇನೆ ಹುಜೂರ್.

ನವಾಬ : ತಾವು ಅಪೇಕ್ಷಿಸಿದ ಚೆಲುವ ನಾರಾಯಣ ಮೂರ್ತಿಯನ್ನು ತೆಗೆದುಕೊಳ್ಳಿ ಗುರುಗಳೇ.

ರಾಮಾನು : ತುಂಬಾ ಉಪಕಾರವಾಯ್ತು.

* * *

ರಂಗಯ್ಯ : ಬೆಳಿಗ್ಗೆ ಎದ್ದು ವರನಂದಿ ಮೂರ್ತಿಗಾಗಿ ಹುಡುಕಾಡಿದಳು. ಮೂರ್ತಿ ಕಾಣದೆ ಕಂಗಾಲಾದಳು....

ವರನಂದಿ : ಚೆಲುವ ನಾರಾಯಣ ಮೂರ್ತಿ ಏನಾಯಿತು? ಬಹುಶಃ ಇದು ಆ ಸನ್ಯಾಸಿಯ ಕೈವಾಡವೇ ಇರಬಹುದು. (ದುಗುಡ) ನನ್ನ ಪ್ರೀತಿಯ ಚೆಲುವರಾಯನನ್ನು ಅಗಲಿ ಹೇಗಿರಲಿ? ಈ ವಿರಹ ವೇದನೆಯನ್ನು ನಾನು ತಾಳಲಾರೆ, ಎಲ್ಲಿದ್ದರೂ ಬಿಡುವುದಿಲ್ಲ. ಹುಡುಕಿಕೊಂಡು ಈಗಲೇ ಹೊರಡುವೆ.......

ರಂಗಯ್ಯ : ನಾರಾಯಣಪುರದಲ್ಲಿ ರಾಮಾನುಜಾಚಾರ್ಯರು ಬಂದರು, ಕೆಲವು ಜನರು ಗುರುಗಳಿಗೆ ನಮಸ್ಕರಿಸುವರು.

ರಾಮಾನು : ಶಿಷ್ಯರೇ ನಾನು ಈ ಚೆಲುವನಾರಾಯಣ ಮೂರ್ತಿಯನ್ನು ನವಾಬನ ಮಗಳಾದ ವರನಂದಿಯಿಂದ ತಂದಿರುವೆ, ಈಗ ದಾರಿಯಲ್ಲಿ ಆಕೆ ಹುಡುಕಿಕೊಂಡು ಬರುತ್ತಾಳೆಂಬ ಸುದ್ದಿ ತಿಳಿಯಿತು. ಇಲ್ಲೇ ಉತ್ಸವ ಮೂರ್ತಿಯಾಗಿ ಪ್ರತಿಷ್ಠಾಪಿಸುವೆ.

ಶಿಷ್ಯರು : ಅಪ್ಪಣೆ ಗುರುಗಳೇ.

(ಪೂಜೆ)

ರಂಗಯ್ಯ : ಪೂಜೆ ಮುಗಿಯುತ್ತಿದ್ದಂತೆ ಹೊರಗಡೆ ಬಂದು “ಚೆಲುವ ನಾರಾಯಣ” ಎಂದು ಹೇಳಿ ಅಸುನೀಗಿದಳು, ಇದು ಆಕೆಯ ಪ್ರೇಮದ ಅತ್ಯುಚ್ಛ ಶಿಖರ. ಆಮೇಲೆ ಆಕೆಯ ಮೂರ್ತಿಯನ್ನು ಚೆಲುವ ನಾರಾಯಣ ಮೂರ್ತಿಯೊಡನೆ ಪ್ರತಿಷ್ಠಾಪಿಸಲಾಯಿತು.

ರಂಗಯ್ಯ : ಸಿರ್ಸಿಯಾ ಸೋಂದಾಮಠಕ್ಕೆ ಉತ್ತರ ಕನ್ನಡದ ಹವ್ಯಕ ಬ್ರಾಹ್ಮಣರು ನಡೆದುಕೊಳ್ಳುತ್ತಾರೆ. ಈ ಮಠದ ಸ್ವಾಮಿಗಳ ಅಂಗರಕ್ಷಕರು ಮುಸ್ಲಿಮರಂತೆ. ಇದು ಬಹಳ ಹಿಂದಿನಿಂದ ನಡೆದು ಬಂದಿದೆ. ಸಂತಶಿಶುನಾಳ ಶರೀಫರು ಬ್ರಾಹ್ಮಣ ಗುರುಗಳಾದ ಗೋವಿಂದ ಭಟ್ಟರನ್ನು ತಮ್ಮ ಗುರುಗಳಾಗಿ ಸ್ವೀಕರಿಸಿದರು.

ಚೆನ್ನೇ : ತಪ್ಪ್ಯಾರು ಮಾಡಕಿಲ್ಲ ಎಲ್ರೂ ಒಂದಲ್ಲ ಒಂದು ಸಮಯದಲ್ಲಿ ಮಾಡೇ ಮಾಡ್ತಾರೆ. ಏನೋ ಇಸಗಳಿಗೆ ಆಗೋತು. ಮನೆ ಅಂದಮ್ಯಾಕೆ ಕಿತ್ತಾಡ್ತೀವಿ, ಬಿನ್ನಾಭಿಪ್ರಾಯ ಪಡ್ತೀವಿ. ಊರು ಅಂದಮ್ಯಾಗೆ ಅವೆಲ್ಲಾ ಇದ್ದೂದ್ದೇ. ಹಿಂದಿನ ಕಲಹನೆಲ್ಲಾ ಮರ್ತು ಹೊಸ ಮನುಸ್ರಾಗ್ಬೇಕು.

ಇಮಾಂ : ಬೀರಯ್ಯನವರು ವಸಿ ಸಾಂತವಾಗಬೇಕು. ಇದು ನಮ್ಮೂರ್‍ನ ಮರ್ವಾದೆ ಪ್ರಸ್ನೆ.

ಚೆನ್ನೇ : ಎಲ್ಲಾ ನಾಕು ದಿನದ ಬಾಳಪ್ಪಾ. ಎಲ್ರೂ ಒಂದಲ್ಲ ಒಂದು ದಿನ ಗೊಟಕ್ ಅನ್ಲೇ ಬ್ಯಾಕು. ಅಲ್ಲಿವರ್‍ಗೆ ಈ ದ್ವೇಸ, ಹಣ, ಆಮೇಲೆ ಮಣ್ಣಲ್ಲಿ ಮಣ್ಣಾಗೋತದೆ ಅಲ್ವಾ, ನಮ್ಮ ದೇವರಾಣೆ ಸರಣರು, ಸಂತರು, ದಾಸರು ಎಲ್ರೂ ಒಂದಾಗಿ ಚಂದಾಗಿ ನಡ್ದವೆ, ನಾವು ಅದೇ ದಾರಿ ತುಳ್ಸವಾ.

ಬೀರಯ್ಯ : ಊರ ಗೌಡ್ರಾಗಿ ಹೇಳ್ತೀರಿ ಹೇಳಿ..... ನಾವು ಕೇಳ್ತೀವಿ.

ಚೆನ್ನೇ : ನಮ್ಮೂರ್‍ಗೆ ಕೆಟ್ಟ ಎಸ್ರು ಬರಬಾರ್‍ದು- ನಮ್ಮೂರು ಮಾದರಿ ಊರಾಗಿತ್ತು. ಈಗ ಮಸಿಬಳಕ್ಕ ಕೆಲವು ಪ್ರಯತ್ನ ಪಡ್ತಾ ಅವ್ರೆ..... ನಾವು ಬ್ಯಾರೆ ಊರ್‍ಗೋದಾಗ ತಲೆ ತಗ್ಗಸುವಂತಾಗಬಾರದು. ಹೆಮ್ಮೆಪ್ರಡಬೇಕು ಅನ್ನದೇ ನನ್ನಾಸೆ.

ಇಮಾಂ : ನಾವೆಲ್ಲಾ ಒಂದೇ ಯಾರೂ ಹೆಚ್ಚಲ್ಲ, ಯಾರೂ ಕಡಿಮೆ ಅಲ್ಲಾ.

ಬೀರಯ್ಯ : ಎಲ್ರೂ ವೇದಿಕೆ ಮೇಲೆಳ್ತರೆ. ಆದ್ರೆ ಬಸವಣ್ಣನರ್‍ರಾಗ ನುಡಿದಂತ ನಡ್ಯರು ಇಲ್ವಾಗದೆ.

ಚೆನ್ನೇ : ಅದ್ಕೇ ಅಲ್ವಾ ಯೇಳದು ಅರಿತಡೆ ದಾನದ ಮರತಡೆ ಮಾಸವ ಅಂತ

ಇಮಾಂ : ಬೀರಯ್ಯನವರ ಕೋಪ ಇನ್ನೂ ಆರ್‍ನಿಲ್ವಾ?

ಬೀರಯ್ಯ : ನಾನೂ ಮನಸ, ಸಾಮಾನ್ಯ ಮನಸ, ಕ್ವಾಪ ಅನ್ನದು ಬರ್‍ತುತ್ತದೆ. ಸಾಜವಾಗಿ ಈ ನೀವೆಲ್ಲಾ ಏಳಿದ ಮ್ಯಾಲೆ.

ರಂಗಯ್ಯ : ಹಿಂದು, ಮುಸ್ಲಿಮ್ ಮುಖಂಡ್ರು ಮನಸ್ಸು ಮಾಡಿದ ಮೇಲೆ ಮುಗೀತು. ನಾಳೇನು ಡಂಗೂರ ಸಾರಿಸ್ಬುಡಿ. ಚಾವಡಿ ಹತ್ತಿರ ಸೇರಿ ತೀರ್‍ಮಾನ ಮಾಡ್ಬಿಡಿ. ಮತ್ತೆ ನಮ್ಮೂರು ಸ್ವರ್ಗವಾಗಲಿ.

ಬೀರಯ್ಯ : ಈ ನರಕ ಯಾರಿಗೆ ಬೇಕಾಗಿದೆ.

ರಂಗಯ್ಯ : ಎಲ್ರೂ ಒಳ್ಳೆದಾದ್ರೆ ಸ್ವರ್ಗ.

ಡಂಗೂರ : ಕೇಳ್ರಪ್ಪೋ ಕೇಳ್ರೀ....... ಊರಿನ ಪಂಚಾಯಿತಿ ಕಟ್ಟೆಗೆ ಎಲ್ಲಾ ಹಿಂದೂಗಳೂ ಮುಸ್ಲಿಮರು, ಕ್ರೈಸ್ತರು ಎಲ್ರೂ ಸೇರಬೇಕಂತೆ. ಗೌಡ್ರ ಅಪ್ಪಣೆ ಆಗದೆ.

(ಜನ ಸೇರುವರು)

ಚೆನ್ನೇ : ಅಣ್ಣ ತಮ್ಮದೀರೆ, ಅಕ್ಕ ತಂಗೀರೇ, ಎಲ್ರೂ ಸಾಂತವಾಗಬೇಕು. ನಾವೆಲ್ಲಾ ಒಂದು ತಾಯಿ ಮಕ್ಕಳು. ಜಗಳ ಬರ್‍ತೈತೆ, ಹೋಗ್ತೈತೆ, ಅದಕ್ಕೂ ಗಮನ ಕೊಡದೆ ನಮ್ಮೂರು ಇನ್ನು ಒಡಕಾಗದಂತೆ ಒಂದಾಗಿ ನಡ್ಕಬ್ಯಾಕು.

ಇಮಾಂ : ಹಿಂದ್ನದೆಲ್ಲಾ ಮರ್ಯವ, ಹೊಸ ಬಾಂದವ್ಯ ಬೆಸೆಯೋವ ನಮ್ಮೂರ್ರು ಮತ್ತೆ ಚಂದದೂರಾಗಬೇಕು. ಯಾರು ತಪ್ಪು ಮಾಡಿದ್ರೂ ಗೌಡ್ರು ಮಾಫಿ ಮಾಡವ್ರೆ......

ಹಿಂದು : ನಾವಲ್ಲ ತಪ್ಪು ಮಾಡಿದ್ದೂ.

ಮುಸ್ಲಿಂ : ನಾವಲ್ಲ ತಪ್ಪು ಮಾಡಿದ್ದೂ.

ಕ್ರೈಸ್ತ : ನಾವಲ್ಲ ತಪ್ಪು ಮಾಡಿದ್ದೂ.

ಚೆನ್ನೇ : ಯಾರೇ ಮಾಡಿರ್ರಿ ಮರೆಯೋವ....... ಮುಂದಾರೂ ಒಂದಾಗಿ ಚಂದಾಗಿ ಬಾಳವ.

ಗುಂಪು : ಚೆನ್ನೇಗೌಡರಿಗೇ.......

ಜನ : ಜಯವಾಗಲಿ.......

ಗುಂಪು : ಇಮಾಂ ಸಾಬ್‌ಗೆ...... ಜಯವಾಗಲಿ....... ಊರಿಗೆ....... ಜಯವಾಗ್ಲೀ.....

ಹಾಡು : (ಹೆಣ್ಣು ಧ್ವನಿ)

ಒಂದೆ ಒಂದೇ,
ಜಗದ ಜನರೆಲ್ಲಾ ಒಂದೇ,
ಕೂಡಿ ಬಾಳಿದರೆ ಕೋಟಿ ಪುಣ್ಯ ಅಲ್ಲವೇನೋ
ಮನುಜ ಅಲ್ಲವೇನೋ ॥ ಪ ॥

ಕುಲ ಕುಲವೆಂದು ಕೊರಗುವಿರೇತಕೋ,
ಜಾತಿ ಜಾತಿ ಎಂಬ ಜಾಣ್ಮೆ ಯಾತಕೋ
ಭೇದ ಭೇದವೆಂದು ಭೇದ ಯಾತಕೋ
ಮರೆಯಿರೋ, ತೊರೆಯಿರೋ, ಬೆರೆಯಿರೋ ॥ ೧ ॥

ಕ್ರಾಂತಿ ಕ್ರಾಂತಿ ಎಂದು ಕಾಂತಿ ಹೀನರಾಗಬೇಡಿರೀ
ಭ್ರಾಂತಿ ಭ್ರಾಂತಿಯನ್ನು ಬಿಟ್ಟು ಭೇದ ತೊಲಗಿರೀ
ವಿಶ್ರಾಂತಿಗಾಗಿ ಶಾಂತಿ ಶಾಂತಿ ಎಂದು ಸಾರಿರೀ,
ಏನೇ ಇರಲಿ, ಏನೇ ಬರಲಿ ಒಗ್ಗಟ್ಟೊಂದನ್ನನುಸರಿಸಿರಿ ॥ ೨ ॥

ಭಾರತಾಂಬೆ ಮಕ್ಕಳೆಂದು ಮನವ ತಾಳಿರೀ,
ವೇಗದಿಂದ ವರ್ಗವ್ಯಾಧಿ ತೊಲಗಿಸೀ,
ಜಡಉಸಿರ ತಂಪಿರಿಸಿ ಐಕ್ಯಪರ ಇಂಪಿರಿಸಿ
ಬೇಗ ಬೇಗ ಐಕ್ಯ ಮತದ ಗುಣವ ಸಾರಿರೀ ॥ ೩ ॥

ಚೆನ್ನೇ : ಅಂತೂ ನಮ್ಮ ರಂಗಯ್ಯನವ್ರು ಬೀರಯ್ಯನಂಥವ್ರನ್ನ ಪರಿವರ್ತನೆ ಮಾಡ್ಬುಟ್ರು.

ರಂಗಯ್ಯ : ಅದು ದೊಡ್ಡ ಮಾತು.

ಚೆನ್ನೇ : ಅಂತೂ ನಮ್ಮ ಹಳ್ಳೀಲಾದ ಅಲ್ಲೋಲ ಕಲ್ಲೋಲ ನೋಡಿ ಎಂಥ ಕಠಿಣ ಹೃದಯಿಗಳೂ ಮೃದುವಾಗ್ತಾರೆ. ಎಂತವ್ರ ಕರುಳೂ ಚುರುಕ್ ಅನ್ನುತ್ತೆ, ಕಣ್ಣೀರು ಮಿಡ್ಯುತ್ತೆ. ಅನುಕಂಪ ತೋರಬ್ಯಾಕು ಅನ್ನುತ್ತೆ. ಈ ಪರಪಂಚ್ದಾಗ ಯಾರೂ ಹೆಚ್ಚಲ್ಲ, ಯಾರು ಕಮ್ಮಿಲ್ಲ. ಎಲ್ರೂ ಸಮಾನ್ರೇ, ಎಲ್ರೂ ದೇವರ ಮಕ್ಕಳೇ ಅಂತ ಅಂತು ನಡ್ಯೋದೇ ಮನಸ್ನ ಧರ್ಮ. ಎಲ್ಲಾ ಧರ್ಮಕ್ಕಿಂತ ಮಾನವ ಧರ್ಮ ದೊಡ್ಡದು.

ರಂಗಯ್ಯ : ಮನುಷ್ಯ ದಾನವನಾಗಲೇ ಬೇಕಿಲ್ಲ ಮಾನವನಾದ್ರೆ ಸಾಕು....... ಆಗ್ಲೆ ಇಳೆ ಸ್ವರ್ಗವಾಗುತ್ತೆ, ಮಹಾಸ್ವರ್ಗವಾಗುತ್ತೆ.

✳

# ಯಥಾ ರಾಜ

**ಪಾತ್ರ ವರ್ಗ**

೧. ಶಿವು - ಆರು ವರ್ಷ
೨. ಮಾದ - ಆಳು
೩. ವೀರಭದ್ರ,
೪. ಶಿವಮ್ಮ ದಂಪತಿಗಳು
೫. ಚಂದ್ರಣ್ಣ - ಸಾಲ ಕೊಟ್ಟವ
೬. ಜಂಬಣ್ಣ
೭. ಭದ್ರಯ್ಯ - ಉಪಾಧ್ಯಾಯ

*ಆರು ವರ್ಷದ ಶಿವು ಶಾಲೆಗೆ ಚಕ್ಕರ್ ಹೊಡೆಯುತ್ತಿದ್ದ. ಆಗ ಮನೆಯ ಆಳು (ಮಾದ) ಆತನನ್ನು ಮಂಕರಿಯೊಂದರಲ್ಲಿ ಕುಳ್ಳಿರಿಸಿಕೊಂಡು ಹೋದಾಗ ನಾಚಿಕೆಯಾದಂತಾಗಿ ಅಂದಿನಿಂದ ಶಾಲೆಗೆ ಹೋಗುವುದನ್ನು ಆರಂಭಿಸಿದ. ಶಾಲೆಯ ಒಳಗೆ ಹೋದಾಗ ಚೇಷ್ಟೆ. ಪಾಠದಲ್ಲಿ ಆಸಕ್ತಿ ಇಲ್ಲದಾಗ ಉಪಾಧ್ಯಾಯರು ಅವರ ತಂದೆ - ತಾಯಿಯ (ವೀರಭದ್ರ - ಶಿವಮ್ಮ) ರಲ್ಲಿ ಹೇಳಿದರು. ತಾವು ದಂಡಿಸಿದರು. ಒಳ್ಳೆಯ ಮಾತಿನಲ್ಲಿ ಬುದ್ಧಿ ಹೇಳಲು ಸ್ವಲ್ಪ ಬದಲಾವಣೆಯಾದ, ತಂದೆ-ತಾಯಿಯರು ಮಾತನಾಡುವುದನ್ನೇ ಗಮನಿಸುವ ಮಕ್ಕಳು ಅವರು ಹೇಳಿದಂತೆಯೇ ಕೇಳುವರು. ಒಮ್ಮೆ ಹೊಸದಾಗಿ ಬಂದವರು ಶಿವುಗೆ ಕೊಟ್ಟ ತಿಂಡಿ, ಹಣ, ಹಣ್ಣುಗಳಿಂದ ಸಂಪ್ರೀತನಾಗಿ ಒಳ್ಳೆಯವರೆಂದು ಹೊಗಳಿದರು. ಆಗ ಆ ಶಿವು ಅವರ ಬಗ್ಗೆ ಒಳ್ಳೇ ಅಭಿಪ್ರಾಯ ತಾಳುತ್ತಾನೆ, ಪ್ರೀತಿಸುತ್ತಾನೆ. ಆತ ಒಮ್ಮೆ ಸಾಲ ಕೊಡದಿರಲು ತಂದೆ ತಾಯಿಯರು ಬೈದು ಕೆಟ್ಟವ ಎಂದಾಗ ಆತನೂ ಮನೋಭಾವ ಬದಲಾಯಿಸಿ ಬಯ್ಯುವುದು, ಹೀನಾಯವಾಗಿ ಮಾತನಾಡುತ್ತಾನೆ. ಸಾಲದವರು ಬಂದಾಗ ಮನೆಯಲ್ಲಿ ತಂದೆ ಇಲ್ಲ ಎಂದು ಹೇಳಿದರೆ ಹಾಗೆಯೇ ಹೇಳುತ್ತಾನೆ. ಮೊದಲು ಇದ್ದಾರೆ ಎಂದು ಹೇಳುತ್ತಿದ್ದವ ತಂದೆ-ತಾಯಿಯರು ಹೇಳಿದಂತೆ ಶಿಕ್ಷಣ ನೀಡಿದಂತೆ ಆತ ಆಗುತ್ತಾನೆ. ಶಾಲೆಯಲ್ಲಾಗಲೀ, ತಂದೆ-ತಾಯಿಯರ ಮನೆಯಲ್ಲಾಗಲೀ ನಾವು ಮಕ್ಕಳಿಗೆ ಯಾವ ರೀತಿ ಶಿಕ್ಷಣ ಕೊಡುತ್ತೇವೆಯೋ ಹಾಗೆಯೇ ಬೆಳೆಯುವರು ಎಂಬುದೇ ಈ ಕಥಾಸಾರ. ಯಥಾರಾಜ ತಥಾಪ್ರಭು ಎಂದು ಹೇಳುವಂತೆ ಯಥಾ ತಂದೆ ತಾಯಿ ತಥಾ ಮಕ್ಕಳು ಎಂಬುದನ್ನು ಈ ಕಥೆ ನಿರೂಪಿಸುತ್ತದೆ.*

(ಮನೆಯ ಕಾಲಿಂಗ್ ಬೆಲ್ ಒತ್ತಿದ ಚಂದ್ರಣ್ಣ. ಅಷ್ಟರಲ್ಲಿ ಆರು ವರ್ಷದ ಬಾಲಕ ಶಿವು ಬಾಗಿಲು ತೆಗೆದು)

ಚಂದ್ರಣ್ಣ : ನಿಮ್ಮ ಅಪ್ಪ ಇದ್ದಾರಪ್ಪಾ?

ಶಿವು : ಇದ್ದಾರೆ, ನೀವ್ಯಾರು?

ಚಂದ್ರ : ನಾನು ಚಂದ್ರಣ್ಣ ಅಂತ ಹೇಳ್ತೀಯಾ ಮರಿ.

ಶಿವು : ಆಯ್ತು...... ಅಪ್ಪಾ.... ಚಂದ್ರಣ್ಣ ಅವರು ಬಂದಿದ್ದಾರೆ ನಿಮ್ಮನ್ನ ನೋಡಬೇಕಂತೆ.

ವೀರಭದ್ರಯ್ಯ : (ಹಲ್ಲುಜ್ಜಿ ಕಚ್ಚುತ್ತಾ) ಅಯ್ಯೋ ಅಯ್ಯೋ ಪೀಡೆ ಬಂತಾ.... (ಮೆಲ್ದನಿಯಲ್ಲಿ ಅಂದುಕೊಳ್ಳುತ್ತಾ ಬರುತ್ತಾನೆ)

ಓ...... ಚಂದ್ರಣ್ಣ ಈಗ ಬಂದ್ಯಾ ಇದ್ಯಾಕೆ ಹಾಗೇ ನಿಂತಿದ್ದೀಯ ಕೂತಕೊಳ್ಳಬಾರದಾಗಿತ್ತಾ....... ಬಾಬಾ..... ಕೂತ್ಕೊ ಬಾ....

ಚಂದ್ರ : ಕೂತ್ಕೊಂಡೇ ಬಿಡಬೇಕು ಅಂತ ಬಂದೆ.

ವೀರ : ನಾನು ಬೇಡ ಅಂದ್ನೇನಯ್ಯಾ?

ಚಂದ್ರ : ಸಾಲದ ಹಣ ಕೊಡೋವರ್ಗೆ ಜಪ್ಪಯ್ಯ ಅಂದ್ರೂ ಎದ್ದೇಳೊಲ್ಲ ಅಂದೆ.....

ವೀರ : ಏನೋ ಸ್ವಲ್ಪ ಕಷ್ಟವಪ್ಪ ಸ್ವಲ್ಪ ತಡ್ಕೋ.....

ಚಂದ್ರ : ಯಾವ ಹೊತ್ತು ಬರಲೀ.... ಮನೇಲಿ ಸಿಗೋಲ್ಲ. ಸಾಲ ಕೊಟ್ಟು ಬಿಟ್ಟು ನಾವು ನಿನ್ನ ಮನೆಗೆ ತಿರ್ಗಿ ಭಿಕ್ಷೆ ಬೇಡಬೇಕು ಅಲ್ವಾ?

ವೀರ : ತಿರ್ಗು ಅಂದ್ನಾ, ಭಿಕ್ಷೆ ಬೇಡು ಅಂದ್ನಾ?

ಚಂದ್ರ : ಕೊಡ್ತೀನಿ ಅಂತೀಯಾ.

ವೀರ : ಹೌದು.

ಚಂದ್ರ : ಇನ್ನೊಂದು ಕೆಲ್ಸ ಮಾಡಯ್ಯ

ವೀರ : ಏನು ಹೇಳಪ್ಪಾ ನೀನು ಹೇಳಿದಾಗೇ ಮಾಡ್ತೀನಿ.

ಚಂದ್ರ : 'ನಾಳೆ ಬಾ' ಅಂತ ಬಾಗಿಲ ಮೇಲೆ ಬರೆದು ಬಿಡು.

ವೀರ : ಆಯ್ತು..... ಅಯ್ಯಯ್ಯೋ......

ಚಂದ್ರ : ನೀನು ಮಾಡೋದೆ ಅದು ಕಣ್ ಬಿಡಯ್ಯ.

ಶಿವು : ಅಪ್ಪಾ ಸೀಮೆಸುಣ್ಣ ತರ್ಲಾ..?

ಚಂದ್ರ : ತರೋದೇನು ಬರೆದೇಬಿಡು. ನಿಮ್ಮ ಅಪ್ಪನ ಹತ್ತಿರ ಎಲ್ಲಾ ನಾಳೇನೇ, ಈ ಹೊತ್ತು ಅನ್ನೋದಿಲ್ಲ.

ಶಿವು : ಬರೀಲಪ್ಪಾ....

ವೀರ : ಸಾಕು ಹೋಗೋ ಮನೆಗೆ..... ತಲಹರಟೆ ತಂದು.

ಚಂದ್ರ : ಈಗೇನು ಹೇಳ್ತೀಯಾ ವೀರಭದ್ರಪ್ಪಾ?

ವೀರ : ಅದೇ.... ಸ್ವಲ್ಪ ಒಂದು ತಿಂಗಳು ಟೈಮು ಕೊಡಪ್ಪಾ, ಅಸಲು ಬಡ್ಡಿ ಸಮೇತ ಕೊಟ್ಟು ಬಿಡ್ತೀವಿ.

ಚಂದ್ರ : ಆಯ್ತು..... ಬರ್‍ತೀವಿ.

ವೀರ : ಸ್ವಲ್ಪ ಕಾಫಿ,

ಚಂದ್ರ : ನಿನ್ನ ಕಾಫಿ ಮನೆ ಹಾಳಾಯ್ತು ಹೋಗಯ್ಯಾ.

(ಸರಸರನೆ ಹೊರಡುವನು)

ಶಿವಮ್ಮ: ಅದೇನಪ್ಪಾ.... ಗುಡುಗು ಸಿಡ್ಲು ಮಿಂಚು....

ಶಿವು : ಅಷ್ಟೇ ಅಲ್ಲಾ ಭಾರಿ ಆನೆ ಕಲ್ಲು ಮಳೆ.

ವೀರ : ಎಲ್ಲಾ ಆದದ್ದೂ ಇವ್ನಿಂದ್ಲೇ.....

ಶಿವು : ನಾನೇನಪ್ಪಾ ಮಾಡ್ದೇ?

ವೀರ : ಲೇ...... ಸ್ವಲ್ಪ ಬುದ್ಧಿ ಉಪಯೋಗಿಸಬೇಕು ಕಣೋ ಅಪ್ಪಾ ಇದ್ದಾರ ಅಂದ್ರೆ. ನೋಡ್ತೀನಿ ಅಂತೇಳಿ ಒಳಗೆ ಬಂದು ನನ್ನ ಕೇಳಿಕೊಂಡು, ಯಾರು ಬಂದ್ರು ಅನ್ನೋದು ತಿಳಿದು ನನಗೆ ಹೇಳಿದ್ರೆ ನನಗೆ ಬೇಕಾದವ್ರಾದ್ರೆ ಇದ್ದಾರೆ ಅಂತೇಳ್ತಿನಿ, ಆಗ ಇದ್ದಾರೆ ಅಂತೇಳು. ನಾನು ಅವ್ರಿಲ್ಲ ಅಂದ್ರೆ ಅವ್ರಿಲ್ಲಾ ಅಂತೇಳ್ಬೇಕು.

ಶಿವು : ನೀನು ಈ ವಿಷಯನ ಆಗ್ಲೇ ಹೇಳಿದ್ರೆ ಹಾಗೇ ಹೇಳ್ತಿದ್ದೆ. ಇನ್ನುಮೇಲೆ ನೀವು ಹೇಳಿದ ಹಾಗೇ ಮಾಡ್ತೀನಿ.

ಶಿವಮ್ಮ: ಹೌದು ಪಾಪ ಹುಡುಗನ್ಗೇನು ಗೊತ್ತು ಹೀಗೆಲ್ಲಾ ಹೇಳಬೇಕು ಅಂತ. ಈ ಹೊತ್ತು ಹೇಳಿದ್ರಲ್ಲಾ ಇನ್ನು ಮೇಲೆ ಎಚ್ಚೆತ್ತುಕೊಳ್ತಾನೆ.

ವೀರ : ಆಯ್ತು ಇನ್ಮೇಲಾದ್ರೂ ಜೋಪಾನವಾಗಿರು.

ಶಿವು : ಆಯ್ತಪ್ಪಾ ಆಯ್ತು.

ಶಿವಮ್ಮ: ಲೇ..... ಶಿವೂ.....

ಶಿವು : ಏನಮ್ಮಾ?

ಶಿವಮ್ಮ: ಯಾಕೋ ಸ್ಕೂಲಿಗೆ ಹೋಗೋಲ್ವಾ ಹೊತ್ತಾಯ್ತು....

ಶಿವು : ಹೋಗ್ತಿನಮ್ಮಾ

ಶಿವಮ್ಮ: ದಿನಾ ಚಕ್ಕರ್ ಹೊಡದು ಎಲ್ಲೆಲ್ಲೋ ಅಲೆದಾಡಿಕೊಂಡು ಬರ್‍ತೀಯಂತೆ ಸಿಜ್ವಾ?

ಶಿವು : ಯಾರಮ್ಮಾ ಹೇಳಿದವ್ರು?

ಶಿವಮ್ಮ: ಪಕ್ಕದ ಮನೆ ಸೀನ....

ಶಿವ : ಅವನಿಗಿನ್ನೇನು ಕೆಲಸಾ? ಬರೇ ಕಿತ್ಲು ಮಾಡೋಡೇ? ಜಗಳಗಂಟಿ.

ಶಿವಮ್ಮ: ಸರಿ ಈ ಹೊತ್ತಾದ್ರೂ ಹೋಗ್ತೀಯೋ ಇಲ್ವೊ?

ಶಿವ : ಈ ಹೊತ್ತ್ಯಾಕೋ ಬೇಜಾರಾಗ್ತದೆ ಹೋಗೋಲ್ಲಮ್ಮ

ಶಿವಮ್ಮ: ಬರೇ ಕಳ್ಳಾಟ ಆಡಬೇಡ ಹೋಗು......

ಶಿವ : ನಾನು ಹೋಗೋಲ್ಲ ಹೋಗೋಲ್ಲ....... ಹೋಗೋಲ್ಲ.

ಶಿವಮ್ಮ: ಹಠ ಮಾಡಬೇಡಾ.

ಮಾದ : ಏನವ್ವಾ ಹಠಾ?

ಶಿವಮ್ಮ: ಸ್ಕೂಲಿಗೆ ಹೋಗೋಲ್ಲ ಅಂತ ಹಠ ಮಾಡ್ತಿದ್ದಾನೆ .

ಮಾದ : ಅವರನ್ನು ನಾನು ಕರ್‍ಕೊಂಡೋಗ್ತೀನಿ ಬಿಡಿ.

ಶಿವಮ್ಮ: ಅಲ್ಲಾ ಕಣೋ ಮಾದ, ನಮ್ಮ ಕೈಲೇ ಆಗಲಿಲ್ಲ ನೀನೇನೋ ಮಾಡ್ತೀಯೋ.

ಮಾದ : ನೋಡಿ ಇದೇನಿದೆ ನನ್ನ ಕೈಲಿ?

ಶಿವಮ್ಮ: ಮಂಕರಿ.

ಮಾದ : ಎತ್ತಿ ಇದರೊಳಗೆ ಕುಳ್ಳಿರಿಸಿ ಎತ್ತುಕೊಂಡೋಗಿ ಶಾಲೆಗೆ ಬಿಟ್ಟು ಬರ್‍ತೀನಿ.

ಶಿವಮ್ಮ ಮಗನನ್ನು ಎತ್ತಿ ಒಳಗೆ ಕುಳ್ಳಿರಿಸಲು ಆತ ತೆಗೆದುಕೊಂಡು ಹೋಗುವನು ಒಳಗೆ ಕುಳಿತ ಹುಡುಗ "ಯೇಯ್ ಬಿಡೋ..... ಬಿಡೋ' ಎಂದು ಕೊಸರಾಡಿದರೂ ಮಾದ ಮಾತಾಡದೆ ಎತ್ತಿಕೊಂಡು ಹೋಗುತ್ತಿದ್ದ. ಹುಡುಗರೆಲ್ಲಾ ನೋಡಿ ನಗುತ್ತಿರಲು ತಲೆ ಬಗ್ಗಿಸಿಕೊಂಡು ಮುಖ ತೋರಿಸದವನಂತೆ ಕುಳಿತ. ಶಾಲೆ ಬರಲು ಅಲ್ಲಿ ಬಿಟ್ಟು ಬಂದ. ಹುಡುಗ ಶಾಲೆಗೆ ಹೋದ ಮೇಲೆ ಮಾದ ಮನೆಗೆ ಹೊರಟ.

(ಶಾಲೆಯಲ್ಲಿ..... ಪಾಠ ಆರಂಭಿಸುವರು. ಉಪಾಧ್ಯಾಯ ಭದ್ರಯ್ಯನವರು)

ಭದ್ರ : ಈ ಹೊತ್ತು ಏನು ಪಾಠ ಮಾಡೋಣ?

ಶಿವು : ದಿವ್ವಾ ಮಾಡಬೇಕಾ ಸಾರ್.

ಭದ್ರಯ್ಯ : ಎಲಾ ಇವ್ನಾ..... ಈ ಹೊತ್ತು ಸ್ಕೂಲಿಗೆ ಬಂದಿದ್ದೀಯಾ?

ಶಿವು : ಯಾಕೆ ಬರಬಾರದಾಗಿತ್ತಾ ಸಾರ್?

ಭದ್ರ : ದಿನ ಚಕ್ಕರ್ ಕೊಡ್ತಿದ್ದೆ.....

ಶಿವು : ಇನ್ನು ಮೇಲೆ ಕೊಡೋದಿಲ್ಲ ಸಾರ್.

ಭದ್ರ : ಒಳ್ಳೇ ಹುಡುಗ.....

ಶಿವು : ಕೆಟ್ಟವನಾಗೆಷ್ಟು ದಿನ ಇರಕ್ಕಾಗುತ್ತೇ ಸಾರ್.

ಭದ್ರ : ಪಾಠ ಮಾಡಬೇಡ ಅಂತೀಯಲ್ಲಾ ಏನು ಮಾಡಬೇಕು?

ಶಿವು : ಎಷ್ಟೋ ಜನ ಮೇಷ್ಟ್ರುಗಳು ನಿದ್ದೆ ಮಾಡ್ತಾರೇ ಸಾರ್.

ಭದ್ರ : ನಾನು ಆ ಜಾತಿಗೆ ಸೇರಿದವನಲ್ಲಾ. ನಾನು ಬಂದಿರೋದು ಮಕ್ಕಳ ವಿದ್ಯಾಭ್ಯಾಸ ಮಾಡಿಸಲಿಕ್ಕೆ, ಪಾಠ ಮಾಡಲಿಕ್ಕೆ. ಇಲ್ಲಿ ನಿನ್ನ ತಲೆ ಹರಟೆ ಸಾಕು. ಈ ಹೊತ್ತು ಪೌಷ್ಟಿಕ ಆಹಾರದ ಬಗ್ಗೆ ಮಾಡೋಣ.

ಶಿವು : ಏನು ಸಾರ್, ನಮ್ಮ ದೇಶದಲ್ಲಿ ಎರಡು ಹೊತ್ತಿಗೇ ಊಟ ಇಲ್ಲ, ಇನ್ನು ಪೌಷ್ಟಿಕ ಆಹಾರ ಎಲ್ಲಿ ಸಿಗಬೇಕು ಸಾರ್.

ಭದ್ರ : ಅಲ್ಲಪ್ಪಾ ಬರೇ ತುಪ್ಪ, ಬೆಣ್ಣೆ, ಸೇಬು, ಬೆಲೆಯುಳ್ಳ ಆಹಾರ ಪದಾರ್ಥ ತಿಂದ್ರಲ್ಲಾ, ನಮ್ಮ ಸುತ್ತ ಮುತ್ತ ಸಿಗೋ ಸೊಪ್ಪು, ಸೆದೆ, ಕಡಿಮೆ ಬೆಲೆಯ ಆಹಾರ ಪದಾರ್ಥಗಳಲ್ಲಿ ಪೌಷ್ಟಿಕ ಆಹಾರಾಂಶ ಇದೆ. ಅಂಥವನ್ನು ನಾವು ತೆಗೆದುಕೊಳ್ಳಬಹುದು.

ಶಿವು : ಬರೇ ಮಾತು, ಪುಸ್ತಕದಲ್ಲೇ ಸಾರ್. ಕಾಡಿನ ಸೊಪ್ಪು ತಕ್ಕೊಂಡು ತಿನ್ನಬೇಕು ಪ್ರಾಣಿಗಳಂತೆ ಅಷ್ಟೇ.

ಭದ್ರ : ಪುಸ್ತಕದಲ್ಲಿರೋದೇ ಹೇಳೋಲ್ಲ, ನಾನು ನನ್ನ ಅನುಭವದ ಮೇಲೂ ಹೇಳ್ತೀನಿ.

ಶಿವು : ಹೇಳಿ ಸಾರ್ ನೀವು ಹೇಳೋಕೇ ಇರೋದು, ನಾನು ಕೇಳೋಕೇ ಇರೋದು.

ಭದ್ರ : ಶಿವೂ ತಲೆ ಹರಟೆ ಮಾಡಬೇಡ ಕೂತ್ಕೊಂಡ್ ಕೇಳು.

(ಉಪಾಧ್ಯಾಯ ಭದ್ರಯ್ಯನವರು ವೀರಭದ್ರಪ್ಪನವರು ಸಿಕ್ಕಿದಾಗ ನಮಸ್ಕಾರ ಎಂದರು)

ವೀರ : ಏನು ಸಾರ್ ನಮ್ಮ ಹುಡುಗ ಹ್ಯಾಗಿದ್ದಾನೆ?

ಭದ್ರ : ಅವನೊಬ್ಬ ಬಫೂನ್ ಕಣ್ರೀ. ಅವನ್ನ ಸ್ಕೂಲಿಗೆ ಸೇರಿಸೋಕ್ಕಿಂತ ಯಾವುದಾದ್ರೂ ಒಂದು ಸರ್ಕಸು ಕಂಪನಿಗೆ ಸೇರಿಸ್ಬಿಡ್ರಿ. ನಿಮ್ಗೂ ಹಣ ಬರುತ್ತೆ...

ವೀರ : ಏನು ಸ್ವಲ್ಪ ಬೆಸೆಯಾಗಿಟ್ಟರಿ ಸಾರ್.

ಭದ್ರ : ತಂದೆ-ತಾಯಿಗಳು ಬುದ್ಧಿ ಹೇಳಿ ಮಕ್ಕಳನ್ನು ಶಾಲೆಗೆ ಕಳಿಸಬೇಕು.

ರೀರ : ಆಗ್ಲಿ ಸಾರ್. ಜೊತ್ಗೆ ನೀವೂ ಸ್ವಲ್ಪ ಗದರಿಕೆ ಹಾಕಿದ್ರೆ ನರಂ ಆಗ್ತಾನೆ.

ಭದ್ರ : ನಮ್ಮದು ಇಷ್ಟೆ. ಇದೆ ನೀವು ಸ್ವಲ್ಪ ಕೇರ್ ತೆಗೆದುಕೊಳ್ಳಬೇಕು. ಏತಿ ಅಂದ್ರೆ ಪ್ರೇತಿ ಅಂತಾನೆ. ಪಾಠ ಓದಕ್ಕೆ ಬುದ್ಧಿ ಉಪಯೋಗಿಸೋಲ್ಲ...... ಮಕ್ಳಿಗೆಲ್ಲಾ ಬುದ್ಧಿ ಇದೆ ಅಂದ್ರೆ ಬುದ್ಧಿ ಇಲ್ಲ ಅಂತಲ್ಲ Over dose

ವೀರ : ಏನೋ ಸಣ್ಣ ಹುಡುಗ ತಿದ್ದಬೇಕು.

ಭದ್ರ : ಸರಿಯಾಗಿ ಓದದೇ ಇದೆ, ಜೊತೆಯವರೊಂದಿಗೆ ಉಪಾಧ್ಯಾಯರೊಂದಿಗೆ ಸರಿಯಾಗಿ ನಡ್ಕೊಳ್ದೇ ಹೋದ್ರೆ ಊಟ ಹಾಕಲ್ಲ ಅನ್ನಿ ಅವನಷ್ಟಕ್ಕೆ ಅವನೆ ಒಳ್ಳೇ ದಾರಿಗೆ ಬರ್ತಾನೆ.

ವೀರ : ನೀವೂ ಸ್ವಲ್ಪ ತಾವ ಪಾಠ ಬರ್ಕೊಂಡು ಬರೋದ್ಕೆ ಹೇಳಿ, ಬರ್ಕೊಂಬರ್‍ದೆ ಇದ್ರೆ ಚಮಟ ಊರ್‍ತೀನಿ ಅನ್ನಿ ಅವ್ನೇ ಓದಿಕೊಂಡು ಬರ್ಕೊಂಡು ಬರೋದ್ರಲ್ಲಿ ಚೇಷ್ಟೆ ನಿಲ್ಲಿಸ್ತಾನೆ.

ಭದ್ರ : ವೀರಭದ್ರಪ್ಪನವರೇ ನಾನು ಹೇಳಿದ್ದಕ್ಕೆ ಪ್ರತಿಯಾಗಿ ಒಂದು ಮಾತು ಹೇಳ್ತೀರೋ ಹೊರ್ತು ನನ್ನ ಮಗನಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ ಅನ್ನಲ್ಲ.

ವೀರ : ಇಬ್ಬರದೂ ಪಾತ್ರ ಇದೆ ಅಂತ ನಾನು ಹೇಳೋದು.

ಭದ್ರ : ನಾನು ಸುಮ್ನೇ ಬಿಟ್ರೆ, ಹಾಳಾಗ್ಲಿ ಅಂತೀರಾ?

ವೀರ : ಇಲ್ಲ ಮೇಷ್ಟ್ರೆ ಹಾಗೇಳ್ಲಿಲ್ಲ. ಏನೋ ತಪ್ಪಿದ್ದಕ್ಕೆ ಕ್ಷಮಿಸಬೇಕು.

ಭದ್ರ : ಸರಿ..... ಬರ್ತೀನಿ.....

ವೀರ : ಸ್ವಲ್ಪ ಕಾಫಿ ಕುಡ್ಯೋಣ ನಡೀರಿ ಹೋಟೇಲಿಗೆ.

ಭದ್ರ : ನಿಮ್ಮ ಮಗನ್ಗೆ ಒಳ್ಳೇ ಬುದ್ಧಿ ಹೇಳಿ ಕಳಿಸಿದ್ರೆ, ಕಾಫಿ ಕೊಡಿಸಿದ್ದಕ್ಕಿಂತ ಹೆಚ್ಚು ವೀರಭದ್ರಪ್ಪನವರೇ.

ವೀರ : ಆಗ್ಲಿ ಸಾರ್ ನಾನು ಈ ಹೊತ್ತು ಅವನ್ನ ತರಾಟೆಗೆ ತೆಗೆದುಕೊಂಡು ಭೂತ ಬಿಡಿಸ್ತೀನಿ.

(ಉಪಾಧ್ಯಾಯರು ಹೊರಡುವರು)

(ಮನೆಗೆ ಬಂದ ವೀರಭದ್ರಪ್ಪನವರು ಗುಡುಗಿದರು)

ವೀರ : ಶಿವೂ..... ಶಿವೂ.....

ಶಿವ : ಅದೇನಪ್ಪಾ ಇಷ್ಟೊಂದು ಗುಡುಗ್ತಾ ಇದ್ದೀರಿ?

ವೀರ : ನೀನು ಮಾಡಿರೋ ಕೆಲ್ಸಕ್ಕೆ.

ಶಿವ : ನಾನೇನ್ಮಾಡಿದ್ನೆಪ್ಪಾ.

ವೀರ : ನಿಮ್ಮ ಮೇಷ್ಟ್ರು ಸಿಕ್ಕಿದ್ರೂ, ಎಲ್ಲಾ ಪ್ರವರ ಹೇಳಿದ್ರು.

ಶಿವ : ನನ್ನ ಜಾತಕ ಜಾಲಾಡಿಸ್ಯದ್ರಾ? ಅಲ್ಲಾ ನಾನು ಅಂಥ ತಪ್ಪೇನು ಮಾಡಿದೆ ಅಂತ. ಗೊತ್ತಿಲ್ಲದ್ದ ಕೇಳಿದ್ರೂ ತಪ್ಪೇ?

ವೀರ : ದೊಡ್ಡವ್ರು, ಉಪಾಧ್ಯಾಯರು ಅವರ ಜೊತೆಯಲ್ಲಿ ಸರಿಯಾಗಿ ನಡ್ಕೊಳ್ಳದು ಕಲಿತ್ಕೋ. ವಿಧೇಯನಾಗಿರು, ವಿನಯ, ಸಂಪನ್ನನಾಗು. ಅವ್ರು ಅಪ್ಪ ಅಮ್ಮದಿರು ಮಕ್ಕಳಿಗೆ ಬುದ್ಧಿ ಕಲಿಸಲ್ಲಾ ಅಂತಾರೆ, ನಾನು ಸಿನ್ನ ಕೆಟ್ಟವನಾಗು ಅಂದ್ನಾ.

ಶಿವ : ಅಲ್ಲಪ್ಪಾ ನಾನು ಕೆಟ್ಟವನಾಗಬೇಕು ಅಂತ ಆಗೇನೂ ಇಲ್ಲ. ಖಂಡಿತ ಇಲ್ಲಪ್ಪಾ-

ವೀರ : ಸುಮ್ನೇ ಇದೇ ಬೇಡ ಅನ್ನೋದು, ಮಾತಿಗೆ ಮಾತು ಬೆಳೆದು ದೊಡ್ಡವರು ಹೇಳಿದ ಮೇಲೆ ಹೂಂ ಅಂತ ಒಪ್ಪಿಕೊಳ್ಳಬೇಕು. ತಲೆಹರಟೆ ಮಾಡಬಾರದು.

ಶಿವ : ತಪ್ಪೇಳಿದ್ರೂ..... ಸರಿ ಅನ್ಸ್ಬೇಕಾ, ಚರ್ಚೆ ಬೇಡ್ವಾ.

ವೀರ : ನನ್ಗೆ ಕೋಪ ಬರಿಸ್ಬೇಡ್ವೋ

ಶಿವ : ಆಯ್ತಪ್ಪಾ ನೀವು ಶಾಂತವಾಗಿ.

(ಜಂಬಣ್ಣ ಪ್ರವೇಶಿಸುತ್ತಾ)

ಜಂಬಣ್ಣ : ಏನು ಅಪ್ಪ ಮಕ್ಳ ವಾಕ್ ಯುದ್ಧ?

ವೀರ : ಎಲ್ಲರ ಮನೆಯಲ್ಲೂ ಇದು ಇದ್ದದ್ದೇ ಬಾರಯ್ಯ. ಇವರ ಮೇಷ್ಟ್ರು ಸಿಕ್ಕಿದ್ರು ನಿಮ್ಮ ಮಗನಿಗೆ ಸ್ವಲ್ಪ ಬುದ್ಧಿ ಹೇಳಿ ಸ್ವಲ್ಪ ವಿಪರೀತವಾಗಾಡ್ತಾನೆ ಅಂದ್ರು ಅದ್ಕೇ ಕಣಯ್ಯ.

ಜಂಬ : ಬಾರೋ ಶಿವು ತೆಗೋ ಹಣ್ಣು ನಿನಗೆ ಪ್ರಿಯವಾದ ಸೇಬು.... ತಿನ್ನು.... ಆಮೇಲೆ ಮಿಕ್ಕ ಮಾತು. ಬಾರೋ ನಿಮ್ಮಪ್ಪ ಏನೂ ಅನ್ನೋದಿಲ್ಲ ತೆಗೋ.....

ಶಿವು : ತೆಗೋಳ್ಳಪ್ಪಾ.....

ವೀರ : ಇದು ಮಾತ್ರ ಕೇಳ್ತೀಯಾ. ಒಳ್ಳೇ ಬುದ್ಧಿ ಕಲಿತ್ಕೋ ದೊಡ್ಡವ್ರು ಚಿಕ್ಕವ್ರು ಅಂತ ನೋಡು ಅಂದ್ರೆ ನೋಡೋಲ್ಲ. ತಿಂಡಿಪೋತ ಕಣೋ ನೀನು..... ಊಂ.... ತೆಗೋ....

(ತೆಗೆದುಕೊಂಡು ತಿನ್ನುವನು)

ಲೇ ನೀ ತಿನ್ನದ್ನೇ ನೋಡ್ತೀಯಲ್ಲಾ ಹೋಗಿ ಅಮ್ಮನಿಗೆ ಏನಾದ್ರೂ ತಿಂಡಿ ಇದ್ರೆ ಕೊಡು ಭೋಜಯ್ಯನವರಿಗೆ ಅಪರೂಪಕ್ಕೆ ಬಂದವ್ರೆ.

ಜಂಬ : ಅಂದ್ರೆ ದಿನಾ ಬಂದ್ರೆ ಕೊಡಬ್ಯಾಡ ಅಂತೀಯೇನೋ.

ವೀರ : ಯೇ ಬೆಪ್ಪ ನಡ್ಯೋ ಸುಮ್ಮನೆ ಕೂತ್ಕಯ್ಯ, ಏನು ಸಮಾಚಾರ ಹೇಳು.

ಜಂಬ : ಹೇಳೋದೇನು?

ವೀರ : ಅಂದ ಹಾಗೆ ನನಗೆ ಒಂದು ಸಾವಿರ ರೂಪಾಯಿ ಬೇಕಾಗಿತ್ತಲ್ಲ.

ಜಂಬ : ಕೊಡೋಣ.

ವೀರ : ಯಾವತ್ತು ಕೊಡ್ತೀಯಪ್ಪಾ?

ಜಂಬ : ಮುಂದಿನ ತಿಂಗಳು ಸಂಬಳ ಬರ್ಲಪ್ಪಾ ಹ್ಯಾಗೋ ಅಡ್‌ಜೆಸ್ಟ್ ಮಾಡಿ ಕೊಡ್ತೀನಿ.

ವೀರ : ಏನೋ ಅಷ್ಟು ಉಪಕಾರ ಮಾಡಪ್ಪಾ.

(ಅಷ್ಟರಲ್ಲಿ ತಿಂಡಿ ಬಂತು ನಮಸ್ಕಾರ ಮಾಡಿ ಶಿವಮ್ಮ ಇಟ್ಟರು ಜಂಬಣ್ಣ ನಮಸ್ಕರಿಸಿ ತಿಂಡಿ ತಿಂದು ಮುಗಿಸುತ್ತಿದ್ದಂತೆ ಕಾಫಿ ಬಂತು ಕುಡಿದು)

ಜಂಬ : ಬರ್ತೀನಪ್ಪಾ.

ವೀರ : ಆಯ್ತು.

ಶಿವು : ಎಷ್ಟು ಒಳ್ಳೆಯವರು ಅಲ್ವಮ್ಮಾ ಜಂಬಣ್ಣ Uncle.

ಶಿವಮ್ಮ: ಹೌದು...... ಏನ್ರೀ.ಸಾಲಾನೂ ಕೊಡ್ತೀನಿ ಅಂದ್ರು. ಏನೋ ಮುಂದಿನ ತಿಂಗಳ ಸಂಬಳದಲ್ಲಿ ಒಂದು ಸಾವಿರ ಕೊಡ್ತೀನಿ ಅಂತಂದ್ರಲ್ಲಾ ದೇವ್ರಂಥ ಮನುಷ್ಯ. ಈಗಿನ ಕಾಲದಲ್ಲಿ ಯಾರು ಕೇಳಿದ ತಕ್ಷಣ ಕೊಡವ್ರು.

ವೀರ : ಹೌದು.... ಒಳ್ಳೇ ಮನುಷ್ಯ. ಎಲ್ಲರಿಗೂ Help ಮಾಡ್ತಾನೆ ಕಣೆ.

ಶಿವಮ್ಮ: ಹಾಗೇ ಇರಬೇಕ್ರಿ.... ನಮ್ಮ ಮನೆಗೆ ಬಂದಾಗೆಲ್ಲಾ ಹಣ್ಣು ಅದು ಇದು ಅಂತ ನಿಮ್ಮ ಶಿವುಗೆ ತಂದೇ ಕೊಡ್ತಾರೆ.

ಶಿವು : ಹೌದಮ್ಮ..... ನನ್ನ ಕಂಡ್ರೆ ಅದೆಷ್ಟು ಪ್ರೀತಿ ಅಂತಾ. ಒಂದೊಂದು ಸಾರಿ ಚಾಕಲೇಟ್, ಬಿಸ್ಕತ್ತು ಕೊಡ್ಸಿ ಹೋಗ್ತಾರೆ.

ವೀರ : ಬರೇ ಮಾತಾಡ್ತೀಯೋ ಸ್ಕೂಲಿಗೆ ಹೋಗ್ತೀಯೋ ಹ್ಯಾಗೆ?

ಶಿವು : ಹೋಗ್ತೀನಪ್ಪಾ.... ಇನ್ನೂ ಅರ್ಧ ಘಂಟೆ ಇದೆ.

ವೀರ : ನಡೆ ನಡೆ ಎಲ್ಲಾ ರೆಡಿ ಮಾಡ್ಕೊಂಡು ಹೊರಡು.

ಶಿವು : ಆಯ್ತಪ್ಪಾ.

(ಶಾಲೆಗೆ ಲಗ್ಗೇಜ್ ಹೊತ್ತು ಹೊರಡುವನು)

ಶಿವು : ನಮಸ್ಕಾರ ಸಾರ್.

ಭದ್ರ : Very Good ಕೂತ್ಕೋ..... ಎಲ್ಲಾ ಬರ್ಕೊಂಡು ಬಂದಿದ್ದೀಯಾ ಕಾಪಿ..... ಲೆಕ್ಕ.... ಎಲ್ಲಾ.

ಶಿವು : ಮಾಡಿದ್ದೀನಿ ಸಾರ್.

(ತೋರಿಸುವನು ಅದನ್ನು ನೋಡಿ ಟಿಕ್‌ಮಾರ್ಕ್ ಹಾಕುತ್ತಾ)

ಭದ್ರ : ಸರಿಯಾಗಿದೆ ಇನ್ನೂ ಚೆನ್ನಾಗಿ ಸ್ವಲ್ಪ Hand writing Improve ಆಗಬೇಕು.

ಶಿವು : ಮಾಡ್ತೀನಿ ಸಾರ್.

ಭದ್ರ : ಪದ್ಯ ಗಟ್ಟು ಮಾಡಿದ್ದೀಯಾ?

ಶಿವು : ಹೇಳ್ಲಾ ಸಾರ್.

ಭದ್ರ : ನಾನು ಆಮೇಲೆ ಕೇಳ್ತೀನಿ ಮೊದ್ಲು ಪಾಠ ಆರಂಭ ಮಾಡ್ತೀನಿ.

ಭದ್ರ : ಈ ಹೊತ್ತು ಕೆಲವು ಲೆಕ್ಕ ಹಾಕ್ತೀನಿ. ಬೋರ್ಡ್ ಮೇಲೆ ಎಲ್ಲಾ ಮಾಡಬೇಕು.

(ಬರೆಸು ಸ್ವಲ್ಪ ಹೊತ್ತಿನ ಮೇಲ)

ಏನು ಈ ಹೊತ್ತು ಶಿವುದು ಸದ್ದೇ ಇಲ್ಲ.

ಶಿವು : ನೀವು ಸದ್ದು ಮಾಡಬೇಡ ಅಂದ್ರಲ್ಲಾ ಸಾರ್.

ಭದ್ರ : ವಿಚಾರ ಪಾಠಕ್ಕೆ ಸಂಬಂಧಪಟ್ರೆ ವಿನಿಮಯ ಮಾಡಿಕೊಳ್ಳಬೇಕು, ಚರ್ಚೆ ಮಾಡಬೇಕು? ತಲಹರಟೆ ಬೇಡ ಅಂತ ನಾನು ಹೇಳಿದ್ದು. ಒಟ್ಟಿನಲ್ಲಿ

ಇಷ್ಟಾದ್ರೂ ಒಳ್ಳೇ ದಾರಿಗೆ ಬಂದ್ಯಲ್ಲಾ. ತಂದೆ-ತಾಯಿ ಮಾತು ಕೇಳ್ದಲ್ಲಾ ಅದೇನಂಗೆ ಸಂತೋಷ.

ಶಿವು : ನಿಮ್ಮ ಮಾತ್ನೂ ಕೇಳ್ತಾ ಇದ್ದೀನಲ್ಲಾ ಸಾರ್.

ಭದ್ರ : ಹಾಗ್ ಬಾ ದಾರಿಗೇ ಲೆಕ್ಕ ಎಲ್ಲಾ ಮಾಡ್ದಾ?

ಶಿವು : ಆಯ್ತು ಸಾರ್.

ಭದ್ರ : ತೆಗೊಂಬಾ....

(ತಂದು ತೋರಿಸು ಅದನ್ನು ನೋಡಿ) ಪರ್ವಾಗಿಲ್ಲ ಬಹಳ Improve ಮಾಡ್ಕೊಂಡಿದ್ದೀಯಾ. Keep it up..... ಹೀಗೇ ಮಾಡಿಕೊಂಡು ಹೋದ್ರೆ ಒಳ್ಳೆ ವಿದ್ಯಾರ್ಥಿ ಆಗ್ತೀಯಾ.)

ಶಿವು : ನೀವು ಹೇಳಿದಾಗೆ ಕೇಳ್ತೀನಿ ಸಾರ್.

ಭದ್ರ : ಒಟ್ನಲ್ಲಿ ಹೇಳಿದ್ದಕ್ಕೂ ಸಾರ್ಥಕವಾಯ್ತು ತಂದೆ-ತಾಯಿ ಉಪಾಧ್ಯಾಯರುಗಳಿಗೆ. ನಾಳೆಗೆ ಇನ್ನೂ ಚೆನ್ನಾಗಿ ಬರೀಬೇಕು. ನಾಳೆಗೆ ಕನ್ನಡ ಪಾಠಕ್ಕೆ ಏನು ಪ್ರಶ್ನೆ ಕೇಳಿದ್ರೂ ಉತ್ತರ ಹೇಳಬೇಕು. Dictation ಕೊಡ್ತೀನಿ.

ಶಿವು : ಆಯ್ತು ಸಾರ್.

ಭದ್ರ : ಅಂದಹಾಗೆ ಪದ್ಯ ಗಟ್ಟು ಮಾಡಿದ್ದೀನಿ ಅಂದ್ಯಲ್ಲಾ ಅದು ಹೇಳ್ತೀಯಾ?

ಶಿವು : ಆಯ್ತು ಸಾರ್.

(ಒಂದು ಪದ್ಯ ವಾಚನ ಮಾಡುತ್ತಾನೆ)

(ಜಂಬಣ್ಣ ಮನೆಗೆ ಪ್ರವೇಶಿಸಲು ಮಗ ಶಿವು ಕುಣಿಯುತ್ತಾ)

ಶಿವು : ಅಪ್ಪಾ.... ಜಂಬಣ್ಣ Uncle ಬಂದಿದ್ದಾರೆ. ಬನ್ನಿ.

ವೀರ : ಬಾರಪ್ಪಾ....... ಜಂಬಣ್ಣ ಈಗ ಬಂದ್ಯಾ.

ಜಂಬ : ಹೌದಪ್ಪಾ.....

ವೀರ : ಏನಯ್ಯಾ ಸಮಾಚಾರ?

ಜಂಬ : ಅದೇ ಕಣಯ್ಯ ನೀನು ಹೇಳಿದ್ಯಲ್ಲಾ.... ಸಾವಿರ ರೂಪಾಯಿ ಅದು ಸಾಧ್ಯವಾಗಲಿಲ್ಲ ಕಣಯ್ಯ ಈ ಸಾರಿ ಏನೇನೋ ಖರ್ಚು ಬಂದುಬಿಡ್ತಪ್ಪಾ.....

ವೀರ : ಏನೋ ಗಾದೆ ಹೇಳ್ತಾರಲ್ಲಾ ಹಾಗಾಯ್ತು. ಪಾಪಿ ಸಮುದ್ರಕ್ಕೋದ್ರು ನೆಕ್ಕ ನೀರು ಅಂತ.

ಜಂಬ : ಅದೇ ಅದ್ನೇ ಹೇಳಿ ಹೋಗೋಣ ಅಂತ ಬಂದೆ. ನಾನು ಬರ್ತೀನಿ ಕಣಯ್ಯ.

ವೀರ : ಸ್ವಲ್ಪ ಇರಪ್ಪಾ ... ಏನಾದ್ರೂ ಕಾಫಿನಾದ್ರೂ ಕುಡಿದು ಹೋಗುವೆ.

ಜಂಬ : ಇಲ್ಲಪ್ಪಾ ನಾನು ಬರ್ತೀನಿ.

(ಹೊರಡುವನು)

ಶಿವಮ್ಮ: ಏನು ಜಂಬಣ್ಣನವರು ಹೊರಟು ಹೋದ್ರಾ

ಹೋದ ಬಾ.... ಸಾವಿರ ಕೊಡ್ತೀನಿ ಅಂದ್ನಲ್ಲಾ ಕೈ ಎತ್ತುಬಿಟ್ಟ ಕಣೆ. ದುಡ್ಡು ಅಂದ್ರೆ ಎಲ್ರೂ ಅಷ್ಟೆ.....

ಶಿವಮ್ಮ: ಏನು ತೊಂದ್ರೆ ಆಯ್ತೋ....

ವೀರ : ಅವನಿಗೇನೋ ಕಮ್ಮಿಯೇ, ಕೊಡಬೇಕು ಅಂದಿದ್ರೆ ಹೇಗಾದ್ರೂ ಮಾಡಿ ಕೊಡ್ತಿದ್ದ. ಯಾರು ಏನು ಕಿತ್ಲು ಮಾಡಿದ್ರೋ. ಎಲ್ಲಿ ಮೋಸ ಮಾಡ್ತಾನೋ ಅಂತ ಕೊಡಲಿಲ್ಲ ಅಷ್ಟೇ. ದುಡ್ಡಿನ ವಿಚಾರ ತೆಗೆದ್ರೆ ಎಲ್ಲರೂ ಕೆಟ್ಟವ್ರೇ......

ಶಿವಮ್ಮ: ಅಲ್ರೀ ಎಷ್ಟು ಒಳ್ಳೆಯವರಾಗಿದ್ದರು?

ವೀರ : ಹಣ ಕೇಳಿದ ಕೂಡ್ಲೇ ಕೆಟ್ಟವರಾಗ್ತಾರೆ. ಹಾಳಾಗೋಗ್ಲಿ ಹೋಗು. ಅವನೊಬ್ಬ ಜಿಪುಣಾಗ್ರೇಸ ಚಕ್ರವರ್ತಿ ಮೊಮ್ಮಗ.

ಶಿವಮ್ಮ: ಬೇರೆ ಕಡೆ ನೋಡಿ ಹಾಗಾದ್ರೆ, ಚಂದ್ರಣ್ಣ ಬಂದ್ರೂ ಬರಬಹುದು ಈ ಹೊತ್ತು ಹಣ ಕೇಳಲಿಕ್ಕೆ.

ಚಂದ್ರ : ವೀರಭದ್ರಪ್ಪಾ.... ಇದ್ದಾರಪ್ಪಾ......

ಶಿವು : ನೋಡ್ತೀನಿ ತಾಳಿ (ಒಳಗೆ ಹೋಗಿ ಮೆಲ್ಲನೆ) ಅಪ್ಪಾ...... ಚಂದ್ರಣ್ಣ ಬಂದವ್ರೆ..... ಇಲ್ಲಾ ಅಂದುಬುಡ್ಲಾ......

ಅವರು ಎಲ್ಲೋ ಯಾವುದೋ ಊರಿಗೆ ಹೋಗ್ತೀನಿ ಅಂತ ಹೋದ್ರಂತೆ

ಚಂದ್ರ : ನಿಮ್ಮ ತಾಯಿ ಇದ್ದಾರಾ?

(ಮತ್ತೆ ಹೊರಡುವನು ತಾಯಿಗೆ ವಿಷಯ ಹೇಳುವನು ಆಕೆ ಬಂದು.....)

ಶಿವಮ್ಮ: ನಮಸ್ಕಾರ......

ಚಂದ್ರ : ನಿಮ್ಮ ನಮಸ್ಕಾರಕ್ಕೆ ಬೆಂಕಿ ಬಿತ್ತು. ಎಲ್ಲಿ ಹಾಳಾಗೋದ್ನಮ್ಮಾ ನಿನ್ನ ಗಂಡ.

ಶಿವಮ್ಮ: ಯಾಕೆ ಕೋಪ ಮಾಡ್ಕೋತೀರಿ.

ಚಂದ್ರ : ನೀವು ಸಾಲ ಕೊಟ್ಟರೆ ಗೊತ್ತಾಗ್ತಿತ್ತಮ್ಮಾ ಎಷ್ಟಮ್ಮಾ ತಿರುಗಿಸಿಕೊಳ್ಳೋದು?

ಶಿವಮ್ಮ: ಬಂದ ಮೇಲೆ ಹೇಳ್ತೀನಿ.

ಚಂದ್ರ : ಕೈನ ಕಾಸಕೊಟ್ಟು ತಿರುಗಬೇಕಾದ್ರೆ ನಮ್ಮ ಕರ್ಮವಲ್ವೇ?

ಶಿವಮ್ಮ: ಏನೋ ಕಷ್ಟ ಮನುಷ್ಯರಿಗೆ ಬರ್ದೇ ಇನ್ಯಾರಿಗೆ ಬರುತ್ತೆ? ಏನೋ..... ಸಾಲ ಮಾಡಿದ್ರು..... ಅದೇ ತಪ್ಪೇ, ಕೊಡ್ತೇವೆ ಎಂದಿದ್ರೂ ಸಾಲ ಕೊಡೋದೇ. ಬಡ್ಡಿ ಸಹಿತ ಕೊಡ್ತೀವ್ಯಲ್ಲಾ.....

ಚಂದ್ರ : ಈ ತಿಂಗಳ ಕೊನೆವರೆಗೆ ಕೊಡದೇ ಹೋದ್ರೆ ಆಮ್ಯಾಲೆ ಕೋರ್ಟು ಹತ್ತುಬೇಕಾಗುತ್ತೆ ಜ್ವಾಪಾನ ಅಂತ ಹೇಳಿ.

ಶಿವಮ್ಮ: ಆಯ್ತು ಹೇಳ್ತೀನಿ.

ಚಂದ್ರ : ನಿಮ್ಮ ಮನೆಗೆ ನಡೆದು ಎರಡು ಜೊತೆ ಜೋಡು ಸವೆದುಹೋಯ್ತು, ಅದನ್ನ ತೆಗೆದುಕೊಡೋವ್ರು ಯಾರು?

ಶಿವಮ್ಮ: ಕೊಡ್ತೀಣ ತೆಗೋಳ್ಳಿ.

ಚಂದ್ರ : ಸದ್ಯ ಕೊಟ್ಟಿದ ಕೊಟ್ರೆ ಸಾಕಾಗಿದೆ. ಇದು ಬೇರೆ ಕೊಡಿಸ್ತೀರಾ, ನಿಮ್ಮ ಯೋಗ್ಯತೆಗೆ.

ಶಿವಮ್ಮ: ನೋಡಿ ಹೆಚ್ಚಿಗೆ ಮಾತಾಡಬೇಡಿ, ಅವರಿಗೆ ಕೊಟ್ಟಿದ್ದೀರಿ ಅವರು ಬಂದ ಮೇಲೆ ಮಾತಾಡಿ.

ಚಂದ್ರ : ಹ್ಞಾಂ..... ಆತ ಇದ್ದಿದ್ರೆ ಮಾತಾಡ್ತಿದ್ದೆ ಆತನೊಂದಿಗೆ. ಆತ ಇಲ್ಲ ಅಂತ ತಾನೇ ನಿಮ್ಮ ಜೊತೆ ಮಾತಾಡಬೇಕು.

ಶಿವಮ್ಮ: ಅವರು ಬಂದಮೇಲೆ ಹೇಳ್ತೀನಿ

ಚಂದ್ರ : ಆಯ್ತು ಆತನನ್ನೇ ನಮ್ಮ ಮನೆಗೆ ಬಂದು ನೋಡು ಅಂತ ಹೇಳಮ್ಮ.

(ಹೊರಡುವನು)

ವೀರ : ಅಂತೂ ಈ ಹೊತ್ತೇನಾದ್ರೂ ಶಿವು ಹೇಳಿಬಿಟ್ಟಿದ್ರೆ ನನ್ನ ಗತಿ ಗೋವಿಂದನಾಗ್ತಿತ್ತು. ನನ್ನ ಮಾನ ಕಳೆದು ಹರಾಜಾಕ್ಬುಡ್ತಿದ್ದ.

ಶಿವು : ನಾನದ್ಕೇ...... ನೀವು ಹೇಳಿದ್ರಲ್ಲಾ ಕೇಳಿ ಹೇಳು ಅಂತ ಅದ್ಕೇ ಕೇಳ್ದೆ.

ವೀರ : Very Good ಜ್ಞಾಪಕ ಇಟ್ಕೊತಿದ್ಯಲ್ಲಾ.

ಶಿವಮ್ಮ: ಸಾಲದವ್ರು ಬಂದ್ರೆ ಜ್ಞಾಪಕ ಇರೋಲ್ವಾ. ಆ ಬೋಜಯ್ಯ ಬೇರೆ ಇಲ್ಲ ಅಂದ್ಬುಟ್ಟ..... ಅವನ್ಯಾವ ಸೀಮೆ ಮನಸ್ನಪ್ಪ .

ವೀರ : ದರವೇಸಿ ಬಡ್ಡಿಗಂಡ.

ಶಿವು : ಕಳ್ಳ.....

ಶಿವಮ್ಮ: ಯಾವತ್ತಿದ್ರೂ ಕೊಡಬೇಕಲ್ಲಾ, ಆ ಚಂದ್ರಪ್ಪನವರು ಅವನು ಬಿಡೋಲ್ಲ ಎಲ್ಲಾದ್ರೂ ಸಾಲ ಮಾಡಕ್ಕೆ ಆಗೋಲ್ಲ. ನನ್ನ ಚೈನು ಮಾರಿ ಕೊಟ್ಟುಬಿಡಿ. ಯಾಕೆ ಸುಮ್ನೇ ತೊಂದ್ರೆ

ವೀರ : ಯೋಚನೆ ಮಾಡ್ತೀನಿ.

ಶಿವಮ್ಮ: ಯೋಚನೆ ಮಾಡಿ ಮಾಡಿ ಯಾಕೆ ಕೊರಗ್ತೀರಿ. ದೇವರು ಕೊಟ್ಟಾಗ ಮಾಡಿಸ್ಕೊಂಡ್ರಾಯ್ತು ತಗೊಳ್ಳಿ.

(ತೆಗೆದುಕೊಡಲು ಅದನ್ನು ತೆಗೆದುಕೊಂಡು ಹೊರಡುವರು)

* * *

ಜಗದೀಶ : ಮಗೂ.... ಅಪ್ಪಾ ಅವ್ರು ಇದ್ದಾರಪ್ಪಾ

ಶಿವು : ಅವ್ರಿಲ್ವಲ್ಲಾ..... ನೀವ್ಯಾರು?

ಜಗ : ನನ್ನ ಹೆಸರು ಜಗದೀಶ ಅಂತ.

ಶಿವು : ಏನಾದ್ರೂ ಹೇಳಬೇಕೇ?

ಜಗ : ನಾನೇ ಅವರು ಕಾಣಬೇಕಾಗಿತ್ತಪ್ಪ.

ಶಿವು : ಅವ್ರು ಬಂದಮೇಲೇಳ್ತೀನಿ ನೀವು ಬಂದಿದ್ರು ಅಂತ.

ಜಗ : ಸುಮಾರು ಎಷ್ಟು ಹೊತ್ತಿಗೆ ಬರಬಹುದು?

ಶಿವು : ರಾತ್ರಿ ಬಹಳ ಹೊತ್ತಾಗಬಹುದು. ಇಷ್ಟು ಗಂಟೇ ಅಂತ ಹ್ಯಾಗೆ ಹೇಳಲಿ?

ಜಗ : ಆಯ್ತಪ್ಪಾ.... ನಾಳೆ ಬೆಳಿಗ್ಗೆ ಎಷ್ಟು ಹೊತ್ತಿಗೆ ಸಿಕ್ತಾರೆ?

ಶಿವು : ಅವರು ಬರೋದು ಹೋಗೋದು ಟೈಮ್ ಇಟ್ಟುಕೊಳ್ಳಲಿಕ್ಕೇ ಆಗೋಲ್ಲ, ಬೇಕಾದ್ರೆ ೬ ಘಂಟೆಗೆ ಬಂದು ನೋಡಿ.

ಜಗ : ಹೋಗ್ಲೀ ಅವರ್ನೇ ನಮ್ಮಮನೆಗೆ ಬರಕ್ಕೇಳಪ್ಪಾ. ಜಗದೀಶ್‌ಬಂದಿದ್ರು ಮನೆಗೆ ಬರಬೇಕಂತೆ ಅಂತ.

ಶಿವು : ಆಯ್ತು

(ಜಗದೀಶ ಹೊರಡುವನು! ಅಷ್ಟರಲ್ಲಿ ತಂದೆ ಬಂದ)

ವೀರ : ಅದ್ಯಾರೋ ಬಂದಿದ್ದವ್ರು?

ಶಿವು : ಯಾರೋ ಜಗದೀಶರಂತೆ.

ವೀರ : ಏನಂದ್ರೆ?

ಶಿವು : ಅವರಿಲ್ಲ ಅಂದೆ.

ವೀರ : ಲೇ ನಿನಗೆ ಬುದ್ಧಿ ಸ್ವಲ್ಪವಾದ್ರೂ ಇದೆಯೇನೋ.... ನಾನೇನು ಇಲ್ದೆ ಸತ್ತೋಗಿದ್ದನೇನೋ.

ಶಿವು : ಯಾರೋ ಸಾಲದವ್ರಿರಬೇಕು ಅಂತ ಸಾಗಹಾಕಿದ ಅದೂ ತಪ್ಪಾ.

ವೀರ : ಮಂಕು ಸಾಂಬ್ರಾಣಿ, ಎಲ್ಲಾರೂ ಸಾಲ ಕೇಳವ್ರೇನೋ. ಊರ ತುಂಬಾ ಸಾಲ ಮಾಡಿದ್ದನೇನೋ ನಾನು. ಸ್ವಲ್ಪ ಬುದ್ಧಿ ಉಪಯೋಗಿಸಬೇಕು. ಅಲ್ವೋ ಅಷ್ಟು ದಿನಗಳಿಂದ ಹ್ಯಾಗ್ ಮಾಡ್ತಿದ್ದೆ.

ಶಿವು : ಬಂದು ಕೇಳಿ ಆಮೇಲೆ ಹೇಳ್ತಿದ್ದೆ.

ವೀರ : ಈ ಹೊತ್ತೇನು ಬಂತು ನಿನ್ಗೆ.

(ಹೆಂಡತಿ ಆಗಮನ)

ಶಿವಮ್ಮ: ಅದೇನ್ರಿ, ಬೆಳಗಾಯ್ತಾ ನಿಮ್ಗೆ

ವೀರ : ನೋಡೇ ಯಾರ್ಗೊ ಹಣ ತಂದುಕೊಡೋಕೆ ಹೇಳಿದ್ದೆ, ಅದೇ ಕಣೇ. ಜಗದೀಶ..... ಬೆಪ್ಪು ತಕ್ಕಡಿ ಇಲ್ಲ ಅಂತ ಹೇಳಿ ಕಳಿಸೋದೇ.

ಶಿವು : ಸಾಲದವ್ರು ಅಂತ ಸಾಗಾಕ್ದೇ ಅಷ್ಟೇ.

ಶಿವಮ್ಮ: ಅದೇ ಮಕ್ಕಳಿಗೆ ನಾವು ಹ್ಯಾಗೆ ಕಲಿಸ್ತೀವಿ ಹಾಗೆ.

ವೀರ : ಅಲ್ವೇ ಬಂದು ಕೇಳಿ ಆಮೇಲೆ ಹೇಳಬಾರದೇ?

ಶಿವಮ್ಮ: ಮಕ್ಕಳು ಮನಸ್ಸು ಒಳ್ಳೇದಾಗಿರುತ್ತೆ ನೋಡಿ. ನಾವು ಯಾವ ರೀತಿ ರೂಪಿಸ್ತೀವಿ ಹಾಗಾಗ್ತಾರೆ. ಮೊದ್ಲು ಎಷ್ಟೊಂದು ಮುಗ್ಧನಾಗಿದ್ದ ಯಾರು ಬಂದ್ರು ಬನ್ನಿ ಇದ್ದಾರೆ ಅಂತಿದ್ದ. ನಾವು ಅವನಿಗೆ ಹೇಳಿ ಕೊಟ್ಟ ಮೇಲೆ ಇಲ್ಲ ಅಂತ ಕೇಳಿ ಹೇಳಿದ. ಈಗ ಅವನೇ ಅರ್ಥ ಮಾಡಿಕೊಂಡು ಸಾಲದವ್ರಿರಬೇಕು ಅಪ್ಪನಿಗ್ಯಾಕೆ ತೊಂದ್ರೆ ಅಂತ ಮಾಡಿದ. ಅದರಲ್ಲೇನು ತಪ್ಪು ಬಿಡಿ. ಎಷ್ಟೇ ಆಗಲೀ ಎಷ್ಟು ದಿನ ಹೀಗ್ ನಾಟ್ಕ ಆಡಕ್ಕೆ ಆಗುತ್ತೆ ಹೇಳಿ. ಇದಕ್ಕೆ ಮಕ್ಕಳ ದಂಡಿಸಿ ಬೈದು ಏನು ಪ್ರಯೋಜನ ಆಗುತ್ತೆ ಹೇಳಿ. ಮೊದಲು ನಾವು ಸರಿ ಇರಬೇಕು....ಆಗ ಮಕ್ಕಳೂ ಸರಿಹೋಗ್ತಾರೆ.

ವೀರ : ಸಾಕು ಸುಮ್ನಿರೇ ಭಾಷಣ ಬಿಗಿಬೇಡ ಊರಿಗೆ ಊರು ದುಃಖವಾದ್ರೆ ಕೋರಿಗೆ ಮದ್ವೆ ದುಃಖ್ವಂತೆ ಹಾಗಾಯ್ತು ನೀನು ಹೇಳೋದು.

ಶಿವ : ಇನ್ನು ಮೇಲೆ ಏನು ಮಾಡಬೇಕು ಹೇಳಪ್ಪಾ. ಮಾನವಾಗಿ ಕುಳಿತುಕೊಳ್ಳೋ ಯಾರಾದ್ರೂ ಬಂದ್ರೇ ಎದ್ದು ಬಂದು ಬಿಡ್ಲೋ.

ವೀರ : ಏನೂ ಮಾಡಬೇಡ ಒಳಗೆ ಬಂದು ಮೆಲ್ಲಗೆ ಹೇಳು ಸಾಕು. ನಾವಿದ್ರೆ, ಇಲ್ಲದೇ ಹೋದಾಗ ಬೇಕಾದ್ರೆ ಇಲ್ಲ ಅಂತ ಘೋಷಣೆ ಮಾಡು. ಅಲ್ವೋ ಈ ಹೊತ್ತು ಆ ಜಗದೀಶ ಹಣ ತಂದುಕೊಡ್ತೀನಿ ಅಂತಿದ್ದ, ಅವನ್ನ ಹಿಂದಕ್ಕೆ ಕಳಿಸಬಟ್ಯಪ್ಲೋ ಎಲ್ಲಾ ನನ್ನ ಕರ್ಮ.

ಶಿವ : ನೀವೇ ಈಗ ಹೋಗಿ ಅವರ ಮನೆಗೆ, ಕೊಡ್ತಾರೆ ಈಸ್ಕೊಂಡು ಬಂದುಬಿಡಿ.

ವೀರ : ಆಹಾ ಬಹಳ ಬುದ್ಧಿ..... ಹೇಳಕ್ಕೆ ಬಂದುಬಿಟ್ಟ ನನಗೇ.

ಶಿವ : ಬೇಕಾದ್ರೆ ಹೋಗಬೇಡದೆ ಹೋದ್ರೆ ಬಿಡಿ ನಂಗೇನು?

ವೀರ : ನನಗೆ ಕಷ್ಟ ಬಂದ್ರೆ ನಿನ್ಗೂ ಕಷ್ಟ ಅನ್ನೋದು ಗೊತ್ತಿಲ್ವಾ?

ಶಿವಮ್ಮ: ಸರಿ ಆ ಹುಡುಗನಿಗೊಂದು ಏನು ಮಾತು ಹೋಗ್ರಿ? ನೀವು ಈಗ್ಲೇ ಹಣ ಈಸ್ಕಂಡು ಬನ್ನಿ.

ವೀರ : ಆಯ್ತಾ ಅದೇನೋ ಗಾದೆ ಹೇಳ್ತಾರಲ್ಲಾ ಕೊಂಕಣ ಸುತ್ತಿ ಮೈಲಾರಕ್ಕೆ ಹೋದಂಗಾಯ್ತು.

ಶಿವಮ್ಮ: ಹಾಗಲ್ಲರೀ ಕೈಗೆ ಬಂದು ತುತ್ತು ಬಾಯ್ಗಿಲ್ಲ.

(ಶಿವು ಪಾಠ ಓದುತ್ತಾ ಕುಳಿತಿದ್ದಾನೆ ಜಂಬಣ್ಣ ಬರುತ್ತಾನೆ)

ಜಂಬ : ಶಿವೂ.......

ಶವು : ಏನಂಕಲ್?

ಜಂಬ : ನಿಮ್ಮಪ್ಪ ಇದ್ದಾರಪ್ಪಾ.

ಶಿವು : ನೋಡಿ ಬರ್ತೀನಿ ತಾಳಿ (ಮೆಲ್ಲನೆ) ಅಪ್ಪಾ..... ಜಂಬಣ್ಣ ಬಂದವ್ರೆ ಏನೇಳ್ಲಿ?

ವೀರ : ಇಲ್ಲ ಅಂತೇಳ್ಬಿಡು. ಮಾರ್ಕೆಟ್‌ಗೆ ಹೋಗಿದ್ದಾರ ಅಂತೇಳ್ಬಿಡು.

ಶಿವು : ಆಯ್ತಪ್ಪಾ.... ಅಂಕಲ್ ಅವ್ರು ಮಾರ್ಕೆಟ್ಟಿಗೆ ಹೋಗಿದ್ದಾರಂತೆ.

ಜಂಬ : ಬಂದು ಮೇಲೆ ನಮ್ಮ ಮನೆಗೆ ಬರೋಕೇಳಪ್ಪಾ.

ಶಿಫು : ಆಯ್ತು.

(ಮತ್ತೆ ಓದಲಾರಂಭಿಸುವನು ಅಷ್ಟರಲ್ಲಿ ಜಗದೀಶ್ ಅನ್ನುವವರು ಬರುತ್ತಾರೆ)

ಜಗ : ಅಪ್ಪಾ ಇದ್ದಾರಾ ಶಿವೂ.....

ಶಿವು : ನೋಡಿಕೊಂಡು ಬರ್‍ತೀನಿ ಅಂಕಲ್.

(ಒಳಗೆ ಬಂದು) ಅಪ್ಪಾ.... ಜಗದೀಶ್ ಅನ್ನುವವರು ಬಂದಿದ್ದಾರೆ ಏನೇಳ್ಲಿ?

ವೀರ : ಕುತ್ಕೊಳ್ಳಿ ಬತ್ತಾರೆ ಅಂತೇಳು.

ಶಿವು : ಆಯ್ತಪ್ಪಾ (ಹೊರಡುವನು) ಕುತ್ಕೊಳ್ಳಿ ಬರ್‍ತಾರೆ.

(ಜಗದೀಶ ಕುಳಿತುಕೊಳ್ಳುವನು ಅಷ್ಟರಲ್ಲಿ ವೀರಭದ್ರಪ್ಪ ಬರುತ್ತಾ)

ವೀರ : ನಮಸ್ಕಾರ ಜಗದೀಶ್.

ಜಗ : ನಮಸ್ಕಾರ, ಹಣ ಆ ಹೊತ್ತು ತಂದಿದ್ದೆ. ನೀನು ಸಿಕ್ಕಲಿಲ್ಲ, ನೀನು ಆ ಹೊತ್ತು ಮನೆಗೆ ಬಂದಾಗ ನಾನಿರಲಿಲ್ಲ.

ವೀರ : ಈಗ.

ಜಗ : ತಂದಿದ್ದೇನೆ ತೆಗೆದ್ಕೊಳ್ಳಯ್ಯ.

ವೀರ : ತುಂಬಾ ಉಪಕಾರ ಮಾಡಿದಾಗಾಯ್ತಯ್ಯ. ಆದಷ್ಟು ಬೇಗ ಕೊಟ್ಟುಬಿಡ್ತೀನಿ ಕಣಯ್ಯ.

(ತೆಗೆದುಕೊಳ್ಳುವನು)

ಜಗ : ಆಯ್ತು ಆತುರ ಬೇಡ ನಿನ್ಗೆ ಸಿಕ್ಕಿದಾಗ ಕೊಡಪ್ಪಾ.

ವೀರ : ತುಂಬಾ ಥ್ಯಾಂಕ್ಸ್ ಅಪ್ಪಾ.

ವೀರ : ಶಿವೂ ಕಾಫಿ ತಾರೋ.

ಶಿವೂ : ಆಯ್ತಪ್ಪಾ.

(ಕಾಫಿ ತಂದಿಡುತ್ತಾ ನಮಸ್ಕರಿಸುವಳು ಶಿವಮ್ಮ - ಕಾಫಿ ಕುಡಿದು)

ಜಂಬ : ಬರ್‍ತೀನಿ ಕಣಯ್ಯ.

ವೀರ : ತುಂಬಾ ಸಹಾಯ ಮಾಡಿದಾಗಾಯ್ತು.

(ಮತ್ತೆ ಓದುತ್ತಾ ಕುಳಿತುಕೊಳ್ಳುವನು, ಅಷ್ಟರಲ್ಲಿ ಚಂದ್ರಪ್ಪ ಬರುತ್ತಾನೆ...)

ಚಂದ್ರ : ನಿಮ್ಮಪ್ಪ ಇದ್ದಾರೋ ಈ ಹೊತ್ತು ಇಲ್ವೋ?

ಶಿವು : ನೋಡಿ ಬರ್‍ತೀನಿ.

ಚಂದ್ರ : ಮಾಮೂಲಿ ನಿನ್ನ ಸ್ಲೋಗನ್ ಬರ್‍ತಾ ಇಲ್ಲ ಅನ್ರೇ ನನಗೆ ಗೊತ್ತು (ಶಿವು ಹೊರಟ)

ಶಿವು : ಅಪ್ಪಾ ಚಂದ್ರಪ್ಪ ಬಂದವ್ರೇ ಏನೇಳ್ಲಿ?

ವೀರ : ಇದ್ದಾರೆ ಬರ್ತಾರೆ ಅನ್ನು.

ಶಿವು : ಸಾಲದ ಚಂದ್ರಪ್ಪ ಅಪ್ಪ

ವೀರ : ಈ ಹೊತ್ತು ಸಾಲ ತೀರಿಸ್ತೀನೋ, ಅವನ ಮುಖದ ಮೇಲೆ ಎಸೆದು ಕಳಿಸ್ತೀನಿ.

(ಶಿವ ಹೊರಡುವನು)

ಶಿವು : ಬರ್ತಾರೆ ಕುಳಿತ್ಕೊಳ್ಳಿ.

ಚಂದ್ರ : ಅಂತೂ ಈ ಹೊತ್ತು ನನ್ನ ಪುಣ್ಯ.

ವೀರ : ಚಂದ್ರಪ್ಪ ಪ್ರತಿಯೊಬ್ಬನಿಗೂ ಕಷ್ಟ ಬರುತ್ತೆ ಬಂದಾಗ ಇಷ್ಟು ಹೀನಾಯವಾಗಿ ಮಾತಾಡಬಾರ್ದು. ತೆಗೋ ನಿನ್ನ ಹಣ. ಅಸಲು ಬಡ್ಡಿ ಎಲ್ಲಾ ಇದೆ. ಇಂದಿಗೆ ನಾನು ಋಣ ಮುಕ್ತನಾದೆ.

ಚಂದ್ರ : ಸದ್ಯ ದೇವರು ನಿಂಗೆ ಒಳ್ಳೆ ಬುದ್ಧಿ ಕೊಟ್ನಲ್ಲ. (ತೆಗೆದುಕೊಂಡು) ಬರ್ತೀನಿ

ವೀರ : ಸ್ವಲ್ಪ ಕಾಫಿ.

ಚಂದ್ರ : ಎಲ್ಲಾ ರೊಕ್ಕಕ್ಕಿಂತ ಹೆಚ್ಚಾಯ್ತು ಬರ್ತೀನಿ. ಇನ್ಯಾವತ್ತೂ ನಿನ್ಗೆ ಕೊಡೋಲ್ಲ.

ವೀರ : ಯಾವತ್ತೂ ಯಾರ್ನ ಕೇಳಿದ್ರೂ ನಿನ್ನ ಕೇಳಲ್ಲ ಹೋಗಪ್ಪಾ. (ಹೊರಡುವನು)

(ಮತ್ತೆ ಓದುತ್ತಾ ಕುಳಿತಿರಲು ಉಪಾಧ್ಯಾಯರು ಭದ್ರಯ್ಯ ಬರುತ್ತಾರೆ)

ಭದ್ರ : ಅಂತೂ ಚೆನ್ನಾಗಿ ಓದ್ತಿದ್ದೀಯಾ Very Good ಅಪ್ಪಾ ಇದ್ದಾರಾ?

ಶಿವು : ಅಪ್ಪಾ ಭದ್ರಯ್ಯನವರು ಬಂದಿದ್ದಾರೆ ಏನು ಹೇಳಲಿ?

ವೀರ : ಅವರಿಗೆ ಸುಳ್ಳು ಹೇಳಬೇಕೇ. ಇದ್ದಾರೆ ಅನ್ನು. ಅವರು ನಿಮ್ಮ ಹಿತೈಷಿಗಳು. ನಮ್ಮ ಸುಖಕ್ಕೆ ಸಂತೋಷಕ್ಕೆ ನೆರವಾಗುವವರು. ಕೂತ್ಕೊಳ್ಳೋಕ್ಕೇಳು. ಕಾಫಿ ತರ್ತೀನಿ.

ಶಿವು : ಆಯ್ತು. (ಹೊರಡುವನು)

(ವೀರಭದ್ರಪ್ಪ ಬರುವರು ಶಿವಮ್ಮ ಕಾಫಿ ತಿಂಡಿ ತಂದಿಡುವರು ಉಪಾಧ್ಯಾಯರು ತೆಗೆದುಕೊಳ್ಳುತ್ತಾ)

ಭದ್ರ : ನಿಮ್ಮ ಹುಡುಗ ಈಗ ಒಳ್ಳೆಯವನಾಗ್ಬಿಟ್ನಪ್ಪಾ ಹೇಳಿದಾಗೆ ಕೇಳ್ತಾನೆ.

ವೀರ : ಮನೇಲೂ ಅಷ್ಟೇ ನಾವು ಹೇಳಿದಾಗೆ ಕೇಳ್ತಾನೆ.

ಭದ್ರ : ನಾವು Train ಮಾಡಿದಾಗೆ ವೀರಭದ್ರಪ್ಪಾ... ಏನೋ ಒಳ್ಳೇ ಹುಡುಗನಾದ್ರೆ ಸಾಕು.

ವೀರ : ಆಗ್ತಾನೆ.... ಎಲ್ಲಾ ನೀವು ಹೇಳಿದಾಗೆ ನಮ್ಮ ಕೈಲಿದೆ

ಭದ್ರ : ದೇವರು ಒಳ್ಳೆಯದು ಮಾಡಲಿ.

(ಉಪಾಧ್ಯಾಯರು ಹೊರಡುವರು)

*

# ದತ್ತು ಪುತ್ರ

**ಪಾತ್ರ ವರ್ಗ**

೧. ವಿನಯ- ಸೀತಾ ದಂಪತಿಗಳು ೨. ರಾಧಾ - ಅತ್ತೆ ೩. ರಾಜಮ್ಮ-ವಿಶ್ವನಾಥ ಅತ್ತೆ ಮಾವ ೪. ವಸಂತ-ವಿನಯ ರಾಜಮ್ಮ ವಿಶ್ವನಾಥರ ಮಕ್ಕಳು ೫. ರಾಘವ- ರಾಧಾಳ ಗಂಡ ೬. ವಿನಯ - ದೊಡ್ಡವ

*ರಾಧಾ (ಗಂಡ ರಾಘವ) ಮಕ್ಕಳಿಲ್ಲದೆ ತಮ್ಮ ಸಂಬಂಧಿ ರಾಜಮ್ಮನ (ಗಂಡ ವಿಶ್ವನಾಥ) ಮಗುವನ್ನು (ವಸಂತ) ದತ್ತು ತೆಗೆದುಕೊಳ್ಳುತ್ತಾಳೆ. ರಾಜಮ್ಮನು ತನ್ನ ಎರಡು ಮಕ್ಕಳಲ್ಲಿ ಒಂದನ್ನು ಕೊಟ್ಟಮೇಲೆ ಆಕೆಯ ಮನದಲ್ಲಾಗುವ ಅಲ್ಲೋಲ ಕಲ್ಲೋಲ, ಅಲ್ಲಿ ಆಕೆ ಅಂದರೆ ರಾಧಾ ಬೆಳೆಸುವ ವಿಧಾನ. ರಾಜಮ್ಮ ತಾನು ತನ್ನ ಮಗು (ವಿನಯ)ನನ್ನು ಬೆಳೆಸುವ ವಿಧಾನ ,ಮಕ್ಕಳು ಹೇಗೆ ಹೇಗೆ ರೂಪುಗೊಳ್ಳುತ್ತಾರೆ ಎಂಬುದನ್ನು ಈ ಕಥೆ ನಿರೂಪಿಸುತ್ತದೆ. ಸಾಕಿದ ಮಗುವಿಗೆ ಅತಿಯಾದ ಪ್ರೀತಿ. ತೋರಿ ಅದು ಮೊಂಡಾಗುವುದು, ಆಮೇಲೆ ಅದರಿಂದ ಆಕೆ ನೊಂದುಕೊಳ್ಳುವುದು. ರಾಜಮ್ಮ ಒಂದೇ ಸಮನಾಗಿ ನೋಡಿಕೊಂಡು ಮಗುವನ್ನು ಚೆನ್ನಾಗಿ ಸಾಕಿ ಒಳ್ಳೆಯ ಮಗನಾಗಿ ರೂಪಿಸುತ್ತಾಳೆ. ಎಷ್ಟು ಬೇಕು ಅಷ್ಟು ಪ್ರೀತಿ, ಎಷ್ಟು ದಂಡಿಸಬೇಕೋ ಅಷ್ಟು ದಂಡಿಸಿ ಅದು ಬೆಳೆಯುವ ಪರಿಸರದಲ್ಲಿ ಎಚ್ಚರಿಕೆವಹಿಸಿ ಒಳ್ಳೆಯವರ ಸಹವಾಸ ಮಾಡಬೇಕೆಂದು ಬುದ್ಧಿ ಹೇಳುವುದು- ಆಡುವಾಗ ಆಡಬೇಕು, ಓದುವಾಗ ಓದಬೇಕೆಂದು ಶಿಸ್ತು ಕಲಿಸುವುದು ಮಾಡುವುದರಿಂದ ಒಳ್ಳೆಯ ಮಗನಾಗಿ ರೂಪಿತವಾಗುತ್ತಾನೆ. ಇದೇ ತಾಯಿಯ ಮಗು ಬೆಳೆಸುವ ಬೆಳೆಯುವ ವಾತಾವರಣದಿಂದ ಮೊಂಡಾಗುವುದನ್ನು ಕಾಣಬಹುದು.*

(ವಿನಯನ ಹೆಂಡತಿ ರಾಧ ಅತ್ತೆ ಸೀತಾ ಸ್ನಾನಕ್ಕೆ ಹೋಗಿರಲು)

ಸೀತಾ : ಇನ್ನೂ ಮುಗಿಲಿಲ್ವೇ ಸ್ನಾನ? ಎಷ್ಟು ಹೊತ್ತು? ಕೆಲಸಕ್ಕ್ಹೋಗೋ ಗಂಡಸು, ಮನೆ ಕೆಲಸ ಮಾಡೋ ಹೆಂಗಸಿಗಿಂತ ಆತ್ರನಾ? ಹೊಟ್ಟೆ ಏನು ಹಸೀತಾ ಇದ್ಯಾ?

ರಾಧಾ : ಬಂದೆ ಕಣಮ್ಮಾ ಬಂದೆ..... ಯಾಕಮ್ಮಾ ಹಂಗಸ್ತೀಯಾ? ನಾನೇನು ದೊಡ್ಡ ಅಪರಾಧ ಮಾಡಿಬಿಟ್ಟಿದ್ದೀನಾ?

ಸೀತಾ : ಕೇಳಿದ್ರೇನ್ರೀ ನಿಮ್ಮ ತಾಯಿ ಮಾತ್ನ.......

ವಿನಯ : ಇದೇನಮ್ಮಾ ಇಂಥ ಸಣ್ಣ ವಿಷಯವನ್ನು ದೊಡ್ಡದಾಗಿ ಮಾಡಿ ಗಂಪನಿಗೆ ಹೇಳ್ತೀಯಾ?

ಸೀತಾ : ಈ ವಯಸ್ಸಾದವರ ಗೋಳೇ ಇಷ್ಟು.

ರಾಧಾ : ನೀನು ಒಂದು ದಿನ ಆಯ್ತೀಯಮ್ಮಾ.

ಸೀತ : ಈಕೆ ಮಾತು ದಿನದಿನಕ್ಕೆ ಮಿರ್ರಾ ಇದೆ. ನಾನು ಕೂಗಿದ್ರೂ ಯಾಕ್ರಿ ಒಳಗೇ ಇದ್ದೀರಿ ಬನ್ರೀ ಈಚೆ.

ರಾಧ : ಬಾರಪ್ಪಾ ಬಾ.....

ವಿನಯ : ಏನು ಅತ್ತೆ ಸೋಸೆರದು ಶುರು ಆಯ್ತು.

ಸೀತಾ : ಸೋಡ್ರಿ ಈ ಮನೇಲಿ ನಾನಿರಬೇಕು ಇಲ್ಲ ಈಕೆ ಇರಬೇಕು.

ವಿನಯ : ಅದನ್ನು ಡಿಸೈಡ್ ಮಾಡವು ನೀವಿಬ್ರು. ನನಗ್ಯಾಕೆ ಹೇಳ್ತೀರಿ?

ಸೀತಾ : ನಿಮ್ಮಂಥ ಗಂಡನ್ನ ಕಟ್ಟಿಕೊಂಡ್ರೆ ನಾವು ಸುಖ ಪಡೋದೇ.

ರಾಧಾ : ಅಮ್ಮಾ ಎಷ್ಟೋ ಜನ ನಿನ್ನ ಬೇಡ ಜೋರು ಅಂದ್ರು, ನಾನು ಯಾರ್ ಮಾತ್ನೂ ಕೇಳ್ದೆ ನಿನ್ನ ರೂಪು ನೋಡಿ ನನ್ನ ಮಗನಿಗೆ ತಕ್ಕ ವರ ಅಂತ ಮದ್ವೆ ಮಾಡಿಕೊಂಡೆ ಅದಕ್ಕೇ ಅಲ್ವಮ್ಮಾ ನೀನು ಕೊಡೋ ಬಹುಮಾನ ಇದು.

ಸೀತಾ : ಎಷ್ಟೇ ಆದ್ರೂ ಅತ್ತೆ ಅತ್ತೇನೆ ಬಿಡಿ ನೀವು.

ರಾಧಾ : ನಾನು ಹಿಂಸೆ ಕೊಡೋ ಅತ್ತೆ ಆಗಿದ್ರೆ ನನ್ನ ಮಗನ್ನ ಇಷ್ಟೊಂದು ಚೆನ್ನಾಗಿ ಸಾಕಿ, ಎಷ್ಟು ಅದ್ದೂರಿಯಾಗಿ ನಿನ್ನ ಮದ್ವೆ ಮಾಡಿದ್ನಮ್ಮಾ? ನಿನ್ನ ಮಾತು ಕೇಳಿಕೊಂಡು ವಿನಯ ನನ್ನ ಆಸ್ತೀನೆಲ್ಲಾ ನನ್ನ ಹೆಸರಿಗೆ ಬರೆ ಅಂದ. ನಾನು ನಮ್ಮ ಯಜಮಾನ್ರ ಕಳ್ಕೊಂಡು ಇನ್ಯಾರಿಗೆ ಅಂತ ಎಲ್ಲಾನೂ ವಿನಯನ ಹೆಸರಿಗೆ ಬರೀಲಿಲ್ವಮ್ಮಾ. ಇದಕ್ಕಮ್ಮಾ ನೀನು ಕೊಡೋ ಕೊಡುಗೆ ಇದು....

ವಿನಯ : ಏನು ಬೆಳಗಾಯ್ತು ಅಂದ್ರೆ ಅತ್ತೆ ಸೊಸೇರ ವಾಗ್ಯುದ್ಧ ಶುರು ಆಗ್ಬಿಡ್ತದಲ್ಲಾ. ಕೇಳಕ್ಕಾಗೋಲ್ಲಪ್ಪಾ.

ರಾಧ : ವಿನಯ ನಾನು ನಿನಗೆ ಭಾರವಾಗಿದ್ರೆ ಎಲ್ಲಾದ್ರೂ ಕಣ್ಣಿಗೆ ಮರೆಯಾಗಿ ಹೋಗಿ ಬಿಡ್ಲೇನೋ?

ವಿನಯ : ನಾನು ಹಾಗಂದನಮ್ಮಾ?

ರಾಧ : ಆಕೆ ಏನು ಮಾತಾಡಿದ್ರೂ ಒಂದು ಚಕಾರ ಎತ್ತೋಲ್ಲ. ನನ್ನನ್ನೇ ಪ್ರಶ್ನಿಸುತ್ತೀಯಲ್ಲೋ. ವಿನಯ ನಿಮ್ಮ ತಂದೆತಾಯಿ ನಿನ್ನ ವಿನಯ ಅಂತ ಕರೆದ್ರು ಅದಕ್ಕಾದ್ರೂ ನೀನು ಸರಿಯಾಗಿರಬೇಡ್ವೇನೋ?

ವಿನಯ : ಅಂದ್ರೆ ನಾನು ಕೆಟ್ಟವರ ಅಲ್ಲಾ... ನಿನಗೆ ಇಷ್ಟ ಇಲ್ಲದ ಮೇಲೆ ನನ್ನ ಮುಖ ದರಶನಾನೇ ಮಾಡಬೇಡಾ ಹೋಗಮ್ಮ.

ರಾಧಾ : ವಿನಯ ನಿನ್ನ ಬಿಟ್ಟು ಹೇಗಿರಲ್ಯಪ್ಪಾ. ನಿನ್ನ ಎಷ್ಟು ಕಷ್ಟಪಟ್ಟು ಸಾಕಿದ್ನೋ. ನೀನು ಹೇಳಿದಾಗೇ ಕೇಳಿಕೊಂಡು ಬಂದ್ನೆಲ್ಲೋ. ಆದ್ರೂ ನಿನಗೆ ಕರುಣೆ ಇಲ್ವಲ್ಲೋ.

ಸೀತಾ : ಕರುಣೆ ಇಲ್ಲ ಅದ್ಕೇ ಮನೆಬಿಟ್ಟು ಹೋಗಿ. ಎಲ್ಲಾದ್ರೂ ನೀವೂ ನೆಮ್ಮದಿಯಾಗಿರಿ, ನಾವು ನೆಮ್ಮದಿಯಾಗಿ ಬಾಳೋದ್ಕೆ ಅವಕಾಶ ಮಾಡಿಕೊಡಿ.

ಸೀತಾ : ಕೇಳಿದೇನು?

ವಿನಯ : ಕಿವಿ ಕಿವುಡಾಗಿದ್ಯಮ್ಮಾ?

ರಾಧಾ : ಅಂದ್ರೆ ನಾನು ಹೋಗೋದು ನಿನ್ಗೂ ಆಸೇನೋ?

ವಿನಯ : ಮತ್ತೆ ಬೆಳಗೆದ್ದು ಇಬ್ರೂ ಹೀಗೆ ರಣರಂಗ ಮಾಡ್ತಿದ್ರೆ ಮನೇನು ಹ್ಯಾಗಿರೋದು ನಾನಾದ್ರೂ.

ರಾಧಾ : ನನ್ನ ಪ್ರೀತಿನೆಲ್ಲಾ ಧಾರೆ ಎರೆದೆ. ಇಷ್ಟು ದೊಡ್ಡವನಾಗಿ ಮಾಡಿ ನನ್ನ ಆಸ್ತಿಗೆ ಒಡೆಯನಾಗಿ ಮಾಡಿದ್ದಕ್ಕೆ ಇದೇ ಏನೋ ನೀನು ಕೊಡೋ ಪ್ರತಿಫಲ. ಹೋಗ್ತೀನೋ ನಾನೊಬ್ಬಳು ಹೇಗೋ ಎಲ್ಲೋ ಜೀವಿಸ್ಕೊಂಡು ಇರ್ತೀನಿ. ಚಿಕ್ಕವ್ರು ಪುಟ್ಟವ್ರು ನೀವು ಸುಖವಾಗಿದ್ರೆ ಸಾಕಪ್ಪಾ.

ಸೀತಾ : ಅಷ್ಟು ಮಾಡಿದ್ರೆ ಒಳ್ಳೆ ಪುಣ್ಯ ಬರುತ್ತೆ.

ರಾಧಾ : ಎಷ್ಟೇ ಆಗಲಿ ನಾನು ನಿನ್ನ ಸಾಕಿದ ತಾಯಿ ಕಣೋ. ನಿನ್ನ ಬಗ್ಗೆ ಎಷ್ಟು ಆಸೆ ಆಕಾಂಕ್ಷೆ ತುಂಬಿಕೊಂಡು ನಿನ್ನ ಕಾಪಾಡಿದ್ನೋ ಅದಕ್ಕೆ ಸರಿಯಾದ ಬಹುಮಾನ ಕೊಟ್ಟೆ ಬಿಡು ನನ್ನ ಹೊಟ್ಟೇಲಿ ಹುಟ್ಟಿದ್ರೆ ಹೀಗ್ ಮಾಡ್ತಿರಲಿಲ್ಲ ನೀನು, ಎಷ್ಟೇ ಆದ್ರೂ ನಾನು ಸಾಕು ತಾಯಿ ಅಲ್ವಾ ನನ್ನ ಆಸ್ತಿ ಬೇಕು. ನನ್ನ ಪ್ರೀತಿ ಬೇಕು, ಆದ್ರೆ ನನಗೆ ನಿನ್ನ ಪ್ರೀತಿ ತೋರಿಸಕ್ಕಾಗೋಲ್ವೇನೋ?

ವಿನಯ : ಅಮ್ಮಾ...... ಅಮ್ಮಾ......

ರಾಧಾ : ಅಮ್ಮನಲ್ಲೋ ನಾನು..... ಇಂದಿನಿಂದ ನೀನ್ಯಾರೋ ನಾನ್ಯಾರೋ, ನನ್ನವರಿದ್ದರೆ ಬುದ್ಧಿ ಹೇಳ್ತಿದ್ರು, ನಮ್ಮ ಅತ್ತೆ - ಮಾವ ಇದ್ದಿದ್ರೆ, ನಿನಗೆ ಬುದ್ಧಿ ಹೇಳ್ತಿದ್ರು, ಆದ್ರೆ ಅವ್ರಾರೂ ಇಲ್ಲ ಈಗ. ನೀನು ದೊಡ್ಡವನಾದ್ಯಪ್ಪಾ ಜೊತೆಗೆ ಹೆಂಡ್ತಿ ಬಂದ್ಲು ಹೆತ್ತವರು, ಸಾಕಿದವರು ಯಾಕೆ ಬೇಕಪ್ಪಾ? ಯಾವುದೋ ವೃದ್ಧಾಶ್ರಮನೋ, ಅನಾಥಾಶ್ರಮನೋ ನೋಡಿಕೊಳ್ತೀನಿ ಬಿಡಪ್ಪ.

ವಿನಯ : ನಿನ್ನ ಇಷ್ಟ, ಒಪ್ಪಿದ ಹಾಗೆ ಮಾಡಮ್ಮ.

ರಾಧ : ನನ್ನ ಇಷ್ಟವಲ್ಲೋ ನಿನ್ನ ಇಷ್ಟ, ನಿನ್ನ ಹೆಂಡತಿ ಇಷ್ಟ. ನಿಮ್ಮ ಸುಖಕ್ಕೆ ಅಡ್ಡಿ ಬರೋಕೆ ನಾನ್ಯಾರು?

ಸೀತಾ : ಆ ಮುದ್ಕಿ ಮಾತು ಮುಗ್ಯಲ್ಲ ಬನ್ರಿ, ಮೊದ್ಲು ಸ್ನಾನ ಮಾಡಿಕೊಂಡು ಆಫೀಸ್ಗೋಗುವಿರಂತೆ.

ವಿನಯ : ಆಯ್ತು.

ರಾಧಾ : ವಿನಯ ಸಾಕಿದವರನ್ನು ಎಷ್ಟು ಬೇಗ ಮರೆತುಬುಟ್ಯೋ. ಇಲ್ಲಿವರ್ಗೆ ಬೆಳೆಸಿ, ವಿದ್ಯಾಭ್ಯಾಸ ಮಾಡ್ಸಿ, ಮದ್ವೆ ಮಾಡಿ, ಕಣ್ತುಂಬ ಆನಂದ ಪಟ್ಟು ಈಗ... ಹೆಂಡತಿ ಬಂದ ಮೇಲೆ ನಾವ್ಯಾರೋ ಪರದೇಶಿಗಳು ಅಲ್ವಾ? ನನ್ನ ಆಸ್ತಿ ಬೇಕು, ಆದ್ರೆ ನಾನು ಬೇಡ, ಅಲ್ವಾ ಹೀಗ್ ಮಾಡೋದ್ಕೇ ನನ್ನ ಹತ್ತಿರ ಎಲ್ಲವನ್ನು ಬರೆಸಿಕೊಂಡೆ ಅಲ್ವಾ ಹೆಂಡ್ತಿ ಮಾತು ಕೇಳಿ.

ವಿನಯ : ಈಗ ನಾವು ಮನೆ ಬಿಟ್ಹೋಗಬೇಕಮ್ಮ?

ರಾಧಾ : ಅಲ್ವೋ ನಾನು ಎಂದಿದ್ರೂ ಬಿದ್ಹೋಗೋ ಮರ ಕಣೋ. ನೀವು ಇನ್ನೂ ಎಳೆ ಗಿಡ ಕಣೋ, ಬಾಳಿ ಬದುಕಬೇಕಾದವ್ರು. ನನದೇನು ಕಂತೆ ಒಗೆದುಬಿಟ್ರೆ ಮುಗಿತು, ಆದ್ರೆ ನೀನು ಸಾಕಿದವರ ಬಗ್ಗೆ ಎಷ್ಟೊಂದು ಕೃತಜ್ಞತೆ ಇಟ್ಕೊಂಡ್ಯೋ? ಏನು ಮಾಡೋದು ಎಲ್ಲಾ ಕಲಿಗಾಲ.

ಸೀತಾ : ಮಾತು ಬೆಳೀತಾವೆ ನಡೀರಿ. ಕಣ್ಣೀರು ಹಾಕಿಕೊಂಡ್ರೆ ನೀವೇನೋ ಎಲ್ಲಾ ಆಸ್ತೀನೂ ಬರೆದುಕೊಟ್ಟುಬಿಡ್ತಾರೆ ಅಂತ ತಿಳ್ಕೊಂಡಿದ್ದಾಳೆ ಆಕೆ.

ರಾಧಾ : ಕೊಟ್ಟಿದ್ದಾಯ್ತಮ್ಮ ಅದನ್ನು ಹಿಂದಕ್ಕೆ ಕೇಳುವವಳು ನಾನಲ್ಲ. ಅದು ನನ್ನ ಜಾಯಮಾನಕ್ಕೆ ಬಂದಿಲ್ಲ. ನಾನು ವಿನಯನಿಗಾಗಿ ಎಲ್ಲವನ್ನೂ ತ್ಯಜಿಸಿದ್ದೆ. ಅವನಿಗಾಗಿ ಸರ್ವಸ್ವವನ್ನು ಕೊಟ್ಟೆ. ಮತ್ತೆ ಹಿಂತಿರುಗಿ ಈಸ್ಕೊಳ್ಳಕ್ಕಲ್ಲ. ನಿನಗೇನು ಗೊತ್ತು ಸೀತಾ? ಮಕ್ಕಳಿಲ್ಲದ ನಾನು ಈತನನ್ನು ಅವರ ತಂದೆ ತಾಯಿಯರಿಂದ ಪಡೆದು ಕಾಪಾಡ್ದೆ ಗೊತ್ತೆ. ಇವನ ಬೆಳವಣಿಗೆ ಹಂತ ಹಂತದಲ್ಲಿ ಎಷ್ಟು ಕಷ್ಟ ಅನುಭವಿಸಿದೆ ಗೊತ್ತಾ. ಅಂತೂ ನನಗೆ ಇಷ್ಟು ದಿನಗಳಗಂಟ ಕೊಟ್ಟ ಸುಖ ಮರ್ಯೋಲ್ಲ. ಆದ್ರೆ ನಿನ್ನ ಹೇಗೆ ಪಡೆದೆ ಸಾಕಿದೆ ಅನ್ನೋದನ್ನ ಕೇಳಿದ್ರೆ ನಿನಗೇ ಗೊತ್ತಾಗುತ್ತೆ ಕೇಳೋ.

(Flash Back)

ಅಂದು ನಮ್ಮ ಅತ್ತೆ ಮಾವ ರಾಜಮ್ಮ ವಿಶ್ವನಾಥ್ ತಮ್ಮ ಮಕ್ಕಳಾದ ವಸಂತ, ವಿನಯ ಅವರ ಜೊತೆ ಕುಳಿತಿರಲು ಅಲ್ಲಿಗೆ ನಾನು ನನ್ನ ಗಂಡ ರಾಘವನೊಡನೆ ಬಂದೆ. ಆಗ ಮಾವ ಹೇಳಿದ್ರು....

ವಿಶ್ವನಾಥ : ಏನು ರಾಧಾ ರಾಘವ ಅಪರೂಪಕ್ಕೆ ಬಂದು ಬಿಟ್ರಿ?

ರಾಧಾ : ಯಾಕೆ ಬರಬಾರದಾಗಿತ್ತಾ ಮಾವಾ?

ರಾಜಮ್ಮ : ಯಾರಮ್ಮ ನಿನ್ನನ್ನು ಬರಬೇಡ ಅಂತ ಹೇಳೋವ್ರು?

ರಾಧ : ಅದ್ಕೇ ಬಂದೀರೋದು.

ರಾಘವ : ದಂಪತಿಗಳ ಸಮೇತವಾಗಿ. ಅತ್ತೆ ಮಾವಂದಿರನ್ನ ನೋಡಿಕೊಂಡು ಹೋಗಲಿಕ್ಕೆ.

ರಾಜಮ್ಮ : ಎಲ್ಲಾ ಆರೋಗ್ಯ ತಾನೇ ?

ರಾಧ : ಆರೋಗ್ಯ ಇಲ್ಲದೇ ಹೋಗಿದ್ರೆ ಬರೋಕ್ಕಾಗ್ತಿತ್ತಾ?

ವಿಶ್ವ : ಏನು ಎಲ್ಲಾನೂ ಸೀರಿಯಸ್ಸಾಗಿ ತೆಗೆದುಕೊಳ್ತಾ ಇದ್ದೀಯಾ.

ರಾಧ : ಲೈಟ್ ಆಗಿ ತೆಗೊಳ್ಬೇಕಾ ಮಾವಾ?

ರಾಜಮ್ಮ : ಅಲ್ಲದೇ ಮತ್ತೇನು?

ವಿಶ್ವ : ಏನಮ್ಮಾ ವಿಶೇಷ?

ರಾಧಾ : ಏನಿಲ್ಲ ಮಾವ, ಹೀಗೆ ದಿನ ಕಳೀತಾ ಇದ್ದೀವಿ.

ವಿಶ್ವ : ಯಾಕಮ್ಮಾ ಇಷ್ಟೊಂದು ಬೇಸರವಾಗಿ ಮಾತಾಡ್ತಿದ್ದೀಯಾ?

ರಾಧಾ : ಜೀವನದಲ್ಲಿ ಇನ್ನೇನಿದೆ ಬಿಡು ಮಾವ.

ವಿಶ್ವ : ಏನು ಒಳ್ಳೇ ಸನ್ಯಾಸಿನಿಯಾಗಿ ಮಾತಾಡ್ತಿದ್ದೀಯಾ?

ರಾಧಾ : ಒಂದು ರೀತಿಲಿ ಮದುವೆಯಾದ ಸನ್ಯಾಸಿನಿ ಬಿಡು.

ರಾಜಮ್ಮ : ಯಾಕ್ ರಾಧಾ ಈ ಥರ ಮಾತಾಡ್ತೀಯಾ?

ರಾಧಾ : (ದುಗುಡದಲ್ಲಿ) ನಮ್ಮದೂ ಒಂದು ಬಾಳಾ ಅತ್ತೆ..... ಮದುವೆಯಾಗಿ ಇಪ್ಪತ್ತು ವರ್ಷಗಳಾಯ್ತು ತಾಯಿಯಾಗಲಿಲ್ಲ ನಾನು.

ರಾಜಮ್ಮ : ಈಗಿನ ಕಾಲದಲ್ಲಿ, ಇಷ್ಟು ಮುಂದುವರಿದ ಈ ದಿನಗಳಲ್ಲಿ ಡಾಕ್ಟರಿಗೆ ತೋರಿಸಬೇಕಾಗಿತ್ತು ರಾಧಾ......

ರಾಧಾ : ಎಲ್ಲಾ ಮಾಡಾಯ್ತು; ದೇವರು ದಿಂಡ್ರು ಅಂತ ಮಾಡಿದೆ, ನಾಗರ ಪ್ರತಿಷ್ಠೆ ಮಾಡಿದೆ. ಎಲ್ಲವನ್ನೂ ಮಾಡಿ ನಿಶ್ಚಯ ಮಾಡ್ಕೊಂಡಿದ್ದೀನಿ ಮಕ್ಕಳಾಗೋಲ್ಲ ಅಂತ.

ರಾಜಮ್ಮ : ಸಮಾಧಾನ ಮಾಡಿಕೋ ರಾಧಾ.....

ರಾಘವ : ಸಮಾಧಾನ ಮಾಡೋದು ನಿಮ್ಮ ಕೈಲೇ ಇದೆ.

ರಾಜಮ್ಮ : ಅದ್ಕೇ ಸಮಾಧಾನ ಮಾಡಿಕೋ ಅಂತ ಹೇಳ್ತಾ ಇದ್ದೀನಲ್ಲಾ.

ರಾಘವ : ಸುಮ್ನೇ ಹಾಗೇ ಬಾಯಿಯಲ್ಲಿ ಹೇಳಿದ್ರಾಯ್ತೆ?

ವಿಶ್ವ : ಮತ್ತೇನು ಮಾಡಬೇಕು?

ರಾಘವ : ಎಲ್ಲಾ ನಿಮ್ಮ ಕೈಲೇ ಇದೆ. ಹ್ಯಾಗಾದ್ರೂ ವಸಂತ, ವಿನಯ ಇಬ್ಬರು ಮಕ್ಕಳಿದ್ದಾರೆ. ನೀವು ಒಂದು ಮಗು ಕೊಟ್ರೆ ನಾವು ಸಾಕಿಕೊಂಡು ಅದನ್ನೇ ನಮ್ಮ ಮಗು ಅಂತ ನೋಡ್ಕಳ್ತೇವೆ

ರಾಧಾ : ಹೌದು ಮಾವ ಅವರು ಹೇಳೋದು ನಿಜ.

ವಿಶ್ವ : ನನ್ನದೇನೂ ಅಭ್ಯಂತರವಿಲ್ಲಮ್ಮ, ನಿಮ್ಮ ಅತ್ತೆ ಹೂಂ ಅಂದ್ರೆ ನನ್ನ ಸಹೀನೂ ಬಿತ್ತು ಅಂತ್ಲೇ..... ಏನೇಳ್ತಿಯಾ?

ರಾಜಮ್ಮ : ನಾವಿಬ್ರೂ ಒಪ್ಪಿದ್ರೆ ಆಯ್ತೇ. ಮಗು ಕೇಳಬೇಕಲ್ಲಾ.

ರಾಧ : ಮಗೂಗೇನು ಗೊತ್ತಾಗುತ್ತೆ ಅತ್ತೆ ನೀವು ಕಳುಹಿಸಿದ್ರೆ ಬರ್ತಾವೆ.

ರಾಜಣ್ಣ : ಬಂದು ತಕ್ಷಣ ಮಾತು ಕತೆಯೇ ಆಯ್ತು, ಎದ್ದು ಕೈ ಕಾಲು ತೊಳೆದುಕೊಳ್ಳಿ ಊಟ ಮಾಡುವಿರಂತೆ.

ರಾಧ : ಅತ್ತೆ ನೀವು ಇದಕ್ಕೆ ಹೂಂ ಅಂದ್ರೆ ನಾವು ಊಟ ಮಾಡ್ತೀವಿ, ಇಲ್ಲದೇ ಹೋದ್ರೆ ಹೀಗೇ ಹೊರಟು ಬಿಡ್ತೀವಿ.

ರಾಘವ : ಹೌದು...... ರಾಧಾ ಹೇಳೋದು ಸರಿ. ನೀವು ಹೂಂ ಅಂದುಬಿಡಿ ರಾಜಮ್ಮನವರೇ

ರಾಜಮ್ಮ : ಸ್ವಲ್ಪ ಯೋಚನೆ ಮಾಡಕ್ಕಾದ್ರೂ ಟೈಮ್ ಕೊಡ್ತೀರೋ ಹ್ಯಾಗೆ?

ರಾಧ : ಇದರಲ್ಲಿ ಯೋಚನೆ ಮಾಡೋದೇನಿದೆ. ಸಂತೋಷವಾಗಿ ಒಂದೇ ದೃಢದಿಂದ ಕೊಟ್ಟುಬಿಡಿ. ನಾನು ಸುಖವಾಗಿ ಸಾಕ್ತೀನಿ, ಆತನಿಗೆ ಯಾವ ತೊಂದರೇನೂ ಕೊಡೋಲ್ಲ.

ರಾಜಮ್ಮ : ದತ್ತು ಪುತ್ರನ ಸ್ವೀಕರಿಸಿದ ಮೇಲೆ ಚೆನ್ನಾಗಿ ನೋಡಿಕೊಳ್ಳೋಲ್ಲ ಅಂತ ನಾನು ಹೇಳೋಲ್ಲ. ಹೆತ್ತ ಮಗುವನ್ನ ಬಿಟ್ಟು ಹ್ಯಾಗಿರೋದು?

ರಾಘವ : ಅತ್ತೆ ನಿಮಗೆ ಬೇಕು ಅಂದಾಗ ನೀವು ನಮ್ಮ ಮನೆಗೆ ಬನ್ನಿ, ನೋಡಿಕೊಂಡೋಗಿ. ನಾನು ಬೇಕಾದ್ರೂ ಕರ್ತಂದು ತೋರಿಸ್ತೀವಿ. ನನ್ನ ಆಸ್ತಿ ಆಧಾರ ಎಲ್ಲಾ ಇನ್ನು ಯಾವುದೋ ಮಗುವಿಗೇಕೆ ಹೋಗಬೇಕು? ನಮ್ಮವನೇ ಆದ ವಿನಯನಿಗೆ ಆಗ್ಲಿ ಅಂತ ನನ್ನ ಆಸೆ. ಮನೆಯಲ್ಲಿ ಮಕ್ಕಳಿಲ್ಲದೇ ಬಿಕೋ ಅನ್ನಿಸ್ತದೆ. ಹೆತ್ತ ಮಕ್ಕಳ ಭಾಗ್ಯ ಇಲ್ಲದೇ ಹೋದ್ರೂ ಸಾಕಿದ ಮಕ್ಕಳ ಫಲವಾದ್ರೂ ಇರಲಿ ಅಂತ. (ದುಃಖಿಸುವಳು)

ವಿಶ್ವ : ರಾಧಾ..... ಇದಕ್ಕೆಲ್ಲಾ ಯಾಕೆ ಬೇಜಾರು ಮಾಡ್ಕೊಳ್ತೀಯಾ. ವಿನಯನನ್ನು ಸಾಕಿಕೊಳ್ಳಮ್ಮ.

ರಾಧ : ಅಬ್ಬಾ ಈಗ ಸಂತೋಷವಾಯ್ತು. ಅತ್ತೆ ನೀವು ಹಾಗೇ ಒಪ್ಪಿಕೊಳ್ಳಿ ನನಗೆ ಇನ್ನೂ ಸಂತೋಷವಾಗುತ್ತೆ.

ರಾಜಮ್ಮ : ಆಯ್ತು ವಿನಯನನ್ನು ಚೆನ್ನಾಗಿ ನೋಡ್ಕೋತಿಯಾ ಅಂತ ಸಂಪೂರ್ಣ ಭರವಸೆ ನನಗಿದೆ. ನಾನು ಸಂತೋಷದಿಂದ ಒಪ್ಪಿ ಮಗುವನ್ನು ಕೊಡ್ತೀನಮ್ಮಾ ನಿನ್ನ ಮನೆ ಇದರಿಂದಲಾದ್ರೂ ಬೆಳಕಾಗ್ಲಿ.

ರಾಧ : ತುಂಬಾ ಸಂತೋಷವಾಯ್ತು ಅತ್ತೆ ಊಟ ಮಾಡಿದ್ದಕ್ಕಿಂತ ಹೆಚ್ಚಾಯ್ತು.

ರಾಜಮ್ಮ : ಹಾಗಾದ್ರೆ ಊಟ ಮಾಡೋಲ್ವೇ?

ರಾಘವ : ಇಂಥ ಸಂದರ್ಭದಲ್ಲಿ ಸಿಹಿ ಊಟಾನೇ ಹಾಕ್ಸಿ.....

ರಾಜಮ್ಮ : ಎಲ್ಲಾ ರೆಡಿ ನಡ್ರಿ... ಕೈ ಕಾಲು ತೊಳೆದುಕೊಳ್ಳಿ.

(ಸಂತೋಷದಿಂದ ಎಲ್ಲರೂ ಎದ್ದೇಳುವರು ವಿನಯನನ್ನು ಎತ್ತು ಮುದ್ದಾಡುವಳು ರಾಘ)

ವಿಶ್ವ : ಇದೇ ಪ್ರೀತಿ ಮುಂದುವರಿಸಬೇಕು ರಾಧಾ.....

ರಾಧ : ಏನು ಮಾತು ಅಂತ ಆಡ್ತೀಯ ಮಾವ, ನನ್ನ ಹೊಟ್ಟೇಲಿ ಹುಟ್ಟಿದ ಮಗುವಿಗಿಂತ ಹೆಚ್ಚಿಗೆ ಪ್ರೀತಿಸ್ತೀನಿ, ಸಾಕ್ತೀನಿ, ಆಮೇಲೆ ನೀವೇ ನೋಡುವಿರಂತೆ.

ರಾಜಮ್ಮ : ಆಯ್ತು ಆಯ್ತು ನಡೀರಿ ಊಟಕ್ಕೆ

(ಎಲ್ಲರೂ ಊಟ ಮಾಡುವರು)

* * *

ರಾಧಾ : ಅತ್ತೆ ನಾವು ಹೊರಡ್ತೀವಿ.

ರಾಜಮ್ಮ : ಈ ಹೊತ್ತು ಬಂದು ಈ ಹೊತ್ತೇ ಹೋಗೋದು ಅಂದ್ರೇನು?

ವಿಶ್ವ : ಆಕೆಗೆ ಸಂತೋಷವಾಗಿದೆ. ಎಷ್ಟು ಬೇಗ ವಿನಯನನ್ನು ಮನೆತುಂಬಿಸ್ಕೋಬೇಕು ಅಂತ.

ರಾಧಾ : ಹೌದು..... ನೀವು ಹೇಳೋದು ನೂರಕ್ಕೆ ನೂರು ಸತ್ಯ.

ರಾಧಾ : ಆತನ ಬಟ್ಟೆ ಹಾಕ್ಬಿಡಿ ಅತ್ತೇ. ಆಮೇಲೆ ನಾನೇ ಹೊಸದು ಹೊಲಿಸ್ತೀನಿ. ಅಲ್ಲಿಯವರೆಗೆ ನಾಲ್ಕಿರಲಿ.

ರಾಜಮ್ಮ : ಆಯ್ತಮ್ಮಾ.....

(ಬಟ್ಟೆಯನ್ನು ಒಂದು ಬ್ರೀಫ್ ಕೇಸಿಗೆ ಹಾಕಿ ತಂದುಕೊಡುವಳು ಅದನ್ನು ತೆಗೆದುಕೊಂಡು)

ರಾಧಾ : ಬರ್ತೀನಿ ಅತ್ತೆ, ಬರ್ತೀನಿ ಮಾವ......

ರಾಜಮ್ಮ : ಮಗು ಜೋಪಾನವಮ್ಮಾ ಗಿಣಿಯಾಗಿ ಸಾಕಿದ್ದೀನಿ.

ರಾಧ : ನಾನು ಅರಗಿಣಿಯಾಗಿ ನೋಡ್ಕೊಳ್ತೀನಿ ಬಿಡಿ ಅತ್ತೆ.

ರಘು : ನೀವು ಅದರ ಬಗ್ಗೆ ಯೋಚನೇನೇ ಮಾಡಬೇಡಿ. ನಿಮ್ಮ ಮನೆಯಲ್ಲಿ ಹ್ಯಾಗೆ ಬೆಳಿತಿದ್ದ ಅದ್ಕಿಂತ ಚೆನ್ನಾಗಿ ಬೆಳೀತಾನೆ. ಇನ್ನು ಎಂಟು ದಿನಕ್ಕೆ ಬಂದು ನೋಡಿ.

ರಾಜಮ್ಮ : ಆ ಭರವಸೆ ಇರೋದ್ರಿಂದ್ಲೇ ವಿಯನನನ್ನು ನಿಮ್ಮ ಮನೆಗೆ ಕಳುಹಿಸುತ್ತಿರೋದು.

ರಘು : ಅವರ ಬಗ್ಗೆ ನಿಮಗೆ ಎಳ್ಳಷ್ಟೂ ಅನುಮಾನವೇ ಬೇಡ ಬರ್ತೀವಿ.

ರಾಜಮ್ಮ : ಬಾ..... ಬಾ.... ವಿನಯ ಹೋಗ್ತೀಯಪ್ಪಾ

(ಮತ್ತೆ ಕರೆದು ಮುತ್ತಿಟ್ಟು ಕಳುಹಿಸುವಳು. ಎಲ್ಲರೂ ಆಟೋ ಹತ್ತಿ ಬಸ್ಸಿಗೆ ಹೊರಡುವರು)

ವಿಶ್ವ : ಯಾಕೆ..... ಒಂದು ರೀತಿ ಪೆಚ್ಚಾಗಿದ್ದೀಯಾ?

ರಾಜಮ್ಮ : ವಿನಯನನ್ನು ಬಿಟ್ಟು ಹ್ಯಾಗಿರೋದು ಅಂತ.

ವಿಶ್ವ : ನಾಲ್ಕು ದಿನ ಮರೆಯವರೆಗೆ, ಆಮೇಲೆ ಸರಿಹೋಗುತ್ತೆ ಬಿಡೆ.

ರಾಜಮ್ಮ : ನೀವು ಎಷ್ಟೇ ಆಗಲಿ ಗಂಡಸ್ರು ಗುಂಡಕಲ್ಲು ಮನಸ್ಸು.

ವಿಶ್ವ : ನಿನಗೆ ಬೇಕು ಅಂದಾಗ ನೋಡಿಕೊಂಡು ಬಂದ್ರಾಯ್ತು. ಇಲ್ಲ ಇಲ್ಲಿಗೇ ನಾಲ್ಕು ದಿನ ಕರೆಸಿದರೆ ಆಯ್ತು.

ರಾಜಮ್ಮ : ಆಕೆ ಚೆನ್ನಾಗಿ ನೋಡ್ಕೋಳ್ತಾಳೆ ಅಂತ ಭರವಸೆ ಇಟ್ಕೊಂಡೇ ನಾನು ಒಪ್ಪಿದೆ.

ವಿಶ್ವ : ಖಂಡಿತ ಅವರ ಬಗ್ಗೆ ನಾವು ಏನೂ ಯೋಚನೆ ಮಾಡಬೇಕಾಗಿಲ್ಲ, ನಡೆ ನಡೆ ಬಾಗಿಲಲ್ಲೇ ನಿಂತ್ರೇ ಹ್ಯಾಗೆ? ಆಮೇಲೆ ನನ್ನ ವಸಂತನ ಕಡೆ ಗಮನ ಕೊಡೋದು ಮರೆತೀಯಾ?

ರಾಜಮ್ಮ : ಇಲ್ಲ ಅದು ಖಂಡಿತ ಹಾಗಾದೋಲ್ಲ. ಇಬ್ಬರ ಪ್ರೀತೀನೂ ಅವನೊಬ್ಬನಲ್ಲೇ ಎರೆದುಬಿಡ್ತೀನಿ.

ವಿಶ್ವ : ಅಷ್ಟೇ ಅಪ್ಪಾ ಅದಕ್ಯಾಕೆ ಯೋಚನೆ?

ರಾಜಮ್ಮ : ಅವನು ಅಲ್ಲಿರೋವ್ಕೆ ಏನಾದ್ರೂ ಗಲಾಟೆ ಮಾಡ್ತಾನೋ.... ಮತ್ತೆ ಕರೆದುಕೊಂಡು ಬಂದು ಬರ್ತಾರೋ ಏನೋ?

ವಿಶ್ವ : ನೋಡೋಣ...... ಅಲ್ಲಿವರಗೆ ಯಾಕೆ ಆತ್ರ? ಎಲ್ಲವನ್ನೂ ನೀನೇ ಹೇಳಿದ್ರೆ ಹ್ಯಾಗೆ. ನಾಲ್ಕುದಿನ ಇದ್ದ ಮೇಲೆ ಸರಿಯಾಗಿ ಪ್ರೀತಿಯಾಗಿ ಕಂಡ ಮೇಲೆ ನಮ್ಮನ್ನು ಮರೆತು ಬಿಡ್ತಾನೆ ಕಣೆ.

ರಾಜಮ್ಮ : ಆಮೇಲೆ ಮರೆತುಬಿಡ್ತಾನಾ?

ವಿಶ್ವ : ಹೆತ್ತ ತಾಯಿ ತಂದೆ ಬಗ್ಗೆ ಪ್ರೀತಿ ಇಲ್ಲದೇ ಇರುತ್ತಾ? ಮರೆತು ಅವರ ಮನೆ ವಾತಾವರಣಕ್ಕೆ ಹೊಂದಿಕೊಳ್ತಾನೆ. ಅವರನ್ನೇ ತಂದೆ-ತಾಯಿ ಅಂತ ತಿಳ್ಕೊಳ್ತಾನೆ.

ರಾಜಮ್ಮ : ಹ್ಯಾಗೋ ಅವನು ಸುಖವಾಗಿದ್ರೆ ಸಾಕು, ಅದೇ ನಾನು ಕೇಳೋದು.

ವಿಶ್ವ : ನಾನೂ ಅದೇ ಹೇಳೋದು ನಡಿ ನಡಿ.... ಮನೆ ಕೆಲಸ ದಂಡಿಯಾಗಿ ಬಿದ್ದಿದೆ ಮುಗಿಸುವೆಯಂತೆ.

ರಾಜಮ್ಮ : ಮಾಡೋಣ ಬಿಡಿ...

(ಇಬ್ಬರೂ ಒಳಗೆ ನಡೆಯುವರು)

ರಾಘವ : ಏನೇ.... ರಾಧಾ... ಮಗು ಅಳ್ತಾ ಇದೆ... ಇದಾ ನೀನು ನೋಡ್ಕೋತಾ ಇರೋದು.

ರಾಧಾ : ನೀವಿರೋದು ಏತಕ್ಕೇ ನಾನು ಸ್ವಲ್ಪ ಅಡಿಗೆ ಮಾಡ್ತಾ ಇರ್ತೀನಿ ಆಫೀಸಿಗೋಗೋದ್ಕು ಮೊದ್ಲೆ ನೋಡ್ಕೊಳ್ಳೊಕಾಗ್ತೇ?

ರಾಘವ : ಅವನಿಗೆ ನೀನೇ ಬೇಕಂತೆ ಕಣೆ ಬಾ.... ಬೇಗ. ಅಡಿಗೆ ಮಾಡದೇ ಹೋದ್ರೂ ಇಲ್ಲ ಹೋಟೇಲ್‌ನಲ್ಲಿ ಮಾಡ್ಕೊತೀನಿ ಮೊದ್ಲು ಮಗು ನೋಡ್ಕೋ ಬಾ....

ರಾಧಾ : ನೀವೇನೂ ಮಾಡ್ಕೊಳ್ತೀರಿ ನಾನು ಹಸಿಕೊಂಡಿರಬೇಕೇ? ವಿನಯನ್ಗೇನು ಮಾಡಬೇಕು. ಸ್ವಲ್ಪ ಹಾಲು ಕಾಯಿಸಿಕೊಂಡು ಬಂದುಬಿಡ್ತೀನಿ ತಾಳಿ, ಅವನು ಅಳ್ತಾ ಇದ್ದಾನೆ, ಅದ್ಕೇ ಇರಬೇಕು ಹಸಿವಾಗಿರಬೇಕು.

ರಾಘವ : ಆಯ್ತು ಬಾ... ನಾನು ಎತ್ತಿಕೊಂಡು ಸಂತೈಸ್ತೀನಿ. ಬಾರಪ್ಪಾ ಮಗೂ.... ವಿನಯ.... ಯಾಕಪ್ಪಾ ಗಲಾಟೆ ಮಾಡ್ತೀಯಾ? ವಿನಯಾ.... ವಿನಯ ಕಲಿಯೋ...

ರಾಧಾ : ಬಂದೆ ಬಂದೆ.... ಬಾರೋ.... ಹಾಲು ಕುಡಿ...

(ಹಾಲನ್ನು ಕುಡಿಸುವಳು.... ಸಮಾಧಾನವಾಗಿ ನಗುವನು)

ರಾಘವ : ನೋಡ್ದಾ ಈಗ ಸಮಾಧಾನವಾಯ್ತು.

ರಾಧಾ : ನಾನು ಹೇಳಲಿಲ್ವೇ ಅವನಿಗೆ ಹೊಟ್ಟೆ ಹಸಿದಿರಬೇಕು ಅಂತ ಹೊಟ್ಟೆ ತುಂಬಿದ್ರೆ ಪಾಪ ಅವನಷ್ಟಕ್ಕೆ ಅವನು ಹಾಡ್ತಾನೆ, ಇಲ್ಲ ಆಡ್ತಾನೆ.

ರಾಘವ : ಈಗ ಸ್ನಾನ ಮಾಡಿಸಿ ಬಟ್ಟೆ ಬದಲಾಯಿಸು. ಮಿಕ್ಕ ಕೆಲಸ ಆಮೇಲೆ ಮೊದಲು ಮಗು, ಆಮೇಲೆ ನಮ್ಮ ಕೆಲಸ.

ರಾಧಾ : ಬಾರಪ್ಪಾ..... ನಿನ್ನದೇ ಆಗಲೀ ಬಾ....

ರಾಘವ : ಆ ಹೊಸ ಷರ್ಟ್ ಹಾಕೇ ಈ ಹೊತ್ತು.... ಅದು ಅವನಿಗೆ ತುಂಬಾ ಚೆನ್ನಾಗಿ ಮ್ಯಾಚ್ ಆಗುತ್ತೆ.

ರಾಧಾ : ಆಯ್ತು ನೀವು ಹೇಳಿದಾಗೇ ಆಗಲೀ....

ರಾಘವ : ಅಗಸ ಹೊಸದರಲ್ಲಿ ಗೋಣಿ ಎತ್ತಿ ಎತ್ತಿ ಒಗೆದ ಅಂದ ಹಾಗಾಗ್ಬಾರ್ದು. ಚೆನ್ನಾಗಿ ನೋಡಿಕೊಳ್ಳಬೇಕು ಯಾವಾಗಲೂ.

ರಾಧ : ಅತೀ ಮುದ್ದು ಮಾಡ್ತೀವಿ.... ಆಮೇಲೆ ಆತ ತಲೆಮೇಲೆ ಕೂತ್ಕೋತಾನೆ....

ರಾಘವ : ಕೊತ್ಕೊಳ್ಲಿ ಬಿಡೇ..... ಬಾರೋ... ವಿನಯ ನಿನ್ನ ತಲೆ ಮೇಲೆ ಎತ್ತಿ ಮೆರಿಸ್ತೀನಿ.

* * *

(ವಸಂತ ಯಾರದೋ ಮಿತ್ರನ ಜೊತೆ ಜಗಳ ಆಡಿಕೊಂಡ ವಿಷಯ ತಾಯಿಗೆ ತಿಳಿಯಿತು... ಆಗ ಮಗನು ಬಂದಾಗ ತರಾಟೆ ತೆಗೆದುಕೊಂಡಳು)

ರಾಜಮ್ಮ : ವಸಂತ ಯಾಕೋ ಇಷ್ಟು ಹೊತ್ತು? (ತಾಯಿ ಕಣ್ಣು ಬಿಡುವಳು)

ವಸಂತ : ಆಟ ಆಡ್ತಾ ಇದ್ದೆ ಬರೋದು ಹೊತ್ತಾಯ್ತು.

ರಾಜಮ್ಮ : ಆಟವಲ್ಲೇನು ಮಿೂನಾ ಮಗನನ್ನು ಚೆನ್ನಾಗಿ ಹೊಡೆದೆಯಂತಲ್ಲಾ....

ವಸಂತ : ಆತ ಏಕೆ ಕೆಟ್ಟ ಮಾತು ಆಡಬೇಕಾಗಿತ್ತು?

ರಾಜಮ್ಮ : ಹಾಗಂತ ಹೊಡೆದು ಬಿಡೋದು. ಈ ಹೊತ್ತು ನೀನು ಬೇರೆಯವರಿಗೆ ಹೊಡೀತಿಯಾ.... ನಾಳೆ ನಿನ್ನನ್ನು ಬೇರೆಯವರು ಹೊಡೆದ್ರೆ?

ವಸಂತ : ಹಾಗೇನೂ ನಾನು ಮಾಡೋಲ್ಲ.

ರಾಜಮ್ಮ : ಒಳ್ಳೇ ಬುದ್ಧಿ ಕಲಿತುಕೋ. ತಂದೆ ತಾಯಿಗೆ ಒಳ್ಳೆ ಹೆಸರು ತೆಗೊಂಬಾ, ಇಲ್ಲದೇ ಹೋದ್ರೆ ಏನು ಪ್ರಯೋಜನ?

ವಸಂತ : ಆಯ್ತಮ್ಮ ಇನ್ನು ಮೇಲೆ ಮಾಡೋಲ್ಲ ತಪ್ಪಾಯ್ತು.

ರಾಜಮ್ಮ : ನಡೀ ಊಟ ಮಾಡುವಿಯಂತೆ. ಬಟ್ಟೆ ಬದಲಾಯಿಸು ಎಲ್ಲಾ ಮಣ್ಣಾಗಿದೆ.

ವಸಂತ : ಆಯ್ತಮ್ಮ.

ವಿಶ್ವ : ಏನೇ ಅದು ತಾಯಿ ಮಗನ ವಾಗ್ವಾದ.

ರಾಜಮ್ಮ : ಏನಿಲ್ಲ ಹುಡುಗರ ಕ್ಯಾತೆ. ಅದರಲ್ಲಿ ನಿಮ್ಮ ಮಗನ್ನೂ ಸೇರಿದೆ, ಇನ್ನು ಮೇಲೆ ಬೇರೆಯವರ ಜೊತೆ ಜಗಳ ಆಡಬೇಡ ಅಂತ ಹೇಳ್ತಿದ್ದೆ.

ವಿಶ್ವ : ಇದು ಮಕ್ಕಳ ಮಾಮೂಲಿ ಕಂಪ್ಲೆಂಟ್...

ರಾಜಮ್ಮ : ನೀವು ಹೀಗೆ ಸಡಿಲ ಬಿಟ್ರೆ ಹುಡುಗ ತುಂಟನಾಗ್ಬಿಡ್ತಾನೆ ಅಷ್ಟೇ. ಬಾರೋ ಊಟ ಮಾಡುವೆಯಂತೆ.

* * *

(ಕಿಟಕಿ ಪರದೆಗೆ ಕಡ್ಡಿ ಕೀರಿದ. ಹತ್ತಿಕೊಳ್ಳಲು ..... ರಾಧಾ ಓಡಿ ಬಂದು ಬಕೆಟ್ ನೀರು ಎರಚಿ ಆರಿಸಿದಳು)

ರಾಧಾ : ಎಂಥ ಅನಾಹುತ ಆಗೋಗ್ತಿತ್ತು. ಏನೋ ಬೆಂಕಿಲೂ ನಿನಗೆ ಸರಸಾನಾ.

ರಘು : ನೀನು ತುಂಬಾ ಲೂಸ್ ಬಿಟ್ಟಿದ್ದೀಯೆ ಕಣೆ. ಅವನ್ನ ಹೀಗೆ ಬೆಳೆಯಲಿಕ್ಕೆ ಬಿಟ್ರೆ ತುಂಬಾ ಮೊಂಡಾಗ್ಬಿಡ್ತಾನೆ.

ರಾಧ : ಮೊಂಡನಾಗೇ ಬಿಟ್ಟಿದ್ದಾನೆ.

ರಘು : ಅದ್ಕೆಲ್ಲಾ ನೀನೇ ಕಾರಣ.

ರಾಧ : ನಾವು ಉಪುಪಾ ಅಂತ ಸಾಕಿದ್ದೇ ತಪ್ಪೇ?

ರಘು : ಅದೇ ವಸಂತ ಎಷ್ಟೊಂದು ಸೌಮ್ಯ....

(ಆ ಮಾತನ್ನು ಕೇಳಿಸಿಕೊಂಡು ಬರುತ್ತಾ)

ರಾಘವ : ಅವನೂ ಮೊಂಡನೇ.... ಸರಿಯಾಗಿಟ್ಕೋಬೇಕು ಕಣಮ್ಮಾ ರಾಧಾ....

ರಘು : ನೋಡ್ಕೋತಾನೇ ಇದ್ದಾಳೆ. ಅತಿ ಮುದ್ದು ಮಾಡ್ತಾಳೆ, ಅದ್ಕೇ ಅವನು ಹಾಗೆ ಮಾಡ್ತಾನೆ.

ರಾಘ : ಇನ್ನೊಂದು ಸ್ವಲ್ಪ ನೋಡಿಕೊಳ್ದೇ ಹೋಗಿದ್ರೆ ಮನೇನೇ ಹತ್ತಿ ಉರದೋಗುತ್ತಿತ್ತು. ಕಿಟಕಿ ಪರದೆಗೆ ನೋಡಿ ಬೆಂಕಿ ಹಾಕಿದ್ದಾನೆ. ಬೇಗ

ನೀರು ಎರಚಿದೆ ಸದ್ಯ. ಏನೋ ಪರದೆ ಹೋಯ್ತು ಅಷ್ಟೇ. ಹೆಚ್ಚಿಗೆ ಅನಾಹುತ ಆಗಲಿಲ್ಲ.

ರಾಧ : ನಿಮಗೆ ಮಾತುಕೊಟ್ಟೆ ಅಂತಾ ಹೆಚ್ಚಿಗೆ ಹೊಡೆದೇ ಬೈದೇ ಬುದ್ಧಿವಾದ ಹೇಳ್ತಿದ್ದೀನಿ.

ರಾಜಮ್ಮ : ಅದೇ ನೀನು ತಪ್ಪು ಮಾಡಿದ್ದು, ಮಕ್ಕಳನ್ನು ಪ್ರೀತಿಸುವಾಗ ಪ್ರೀತಿಸಬೇಕು, ತಪ್ಪು ಮಾಡಿದಾಗ ಗದರಿಸಬೇಕು. ಹೆಚ್ಚಿಗೇ ಹೆದರಿಕೇನೂ ಹುಟ್ಟಿಸಬಾರದು, ಹೆಚ್ಚಿಗೆ ಪ್ರೀತೀನೂ ಮಾಡಬಾರದು Balance ಆಗಿ ಹೋಗಬೇಕು.

ರಾಧಾ : ಅದನ್ನ ನಿಮ್ಮಿಂದ ಕಲೀಬೇಕತ್ತೆ.

ರಾಜಮ್ಮ : ವಸಂತನೂ ಅಷ್ಟೇ ಚೇಷ್ಟೆ ಮಾಡದೇ ಇಲ್ಲ ಆಗಾಗ ಗದರಿಸಿಕೊಂಡು ಒಂದು ಹದ್ದುಬಸ್ತಿನಲ್ಲಿರ್ತೀನಿ.

ರಾಧ : ಅದನ್ನು ನಿಮ್ಮಿಂದ ಇನ್ನು ಕಲಿಯೋದು ಸ್ವಲ್ಪ ಕಷ್ಟವೇ. ಯಾಕೋ ಇತ್ತೀಚೆಗೆ ನಾವು ಏತಿ ಅಂದ್ರೆ ಅವನು ಪ್ರೇತಿ ಅನ್ತಾನೆ. ಹೇಳಿದ ಮಾತು ಕೇಳೋಲ್ಲ. ತನ್ನಿಷ್ಟ ಒಪ್ಪಿದ ಹಾಗೆ ಮಾಡ್ತಾನೆ.

ವಿಶ್ವ : ಹಾಗಾದ್ರೆ ಮಕ್ಕಳು ದಾರಿ ಕೆಟ್ಟು ಹೋಗ್ತಾರಮ್ಮಾ ಜ್ವಾಪಾನ.

ರಾಧ : ಏನೋ ದೇವರು ಮಾಡಿದ ಹಾಗಾಗುತ್ತೆ.

ವಿಶ್ವ : ಅದೇ ನೋಡು ತಪ್ಪು ಅನ್ನುವುದು.

ರಾಧ : ಬೇರೆಯವರ ಮಕ್ಕಳ ತಂದು ಅವರನ್ನು ಹೊಡೆದು ಬಡಿದು ನೋಯಿಸೋದು ಧರ್ಮವೇ?

ವಿಶ್ವ : ಅಲ್ಲಮ್ಮಾ ಒಳ್ಳೇ ದಾರೀಲೋಗೋಕೇ ಬುದ್ಧಿ ಹೇಳೋದೂ ಕಷ್ಟವೇ

ರಾಜಮ್ಮ : ಆಮೇಲೆ ಮುಂದೆ ತೊಂದ್ರೆ ಕಟ್ಟಿಟ್ಟ ಬುತ್ತಿ. ಒಂದು ಸ್ವಲ್ಪ ದಿವಸ ನಮ್ಮ ಮನೆಗೆ ಕಳುಹಿಸು, ಆಮೇಲೆ ಆತನಿಗೆ ಸರಿಯಾದ ಬುದ್ಧಿ ಕಲಿಸ್ತೀನಿ.

ವಿಶ್ವ : ಅಷ್ಟು ಮಾಡು ರಾಧಾ....

ರಾಧಾ : ಅವನನ್ನು ಬಿಟ್ಟು ನಮಗೆ ಇರಲಿಕ್ಕಾಗೋಲ್ಲ ಮಾವ.

ವಿಶ್ವ : ಏನೋ ನಿಮ್ಮ ಹಣೇ ಬರಹ ಅನುಭವಿಸಿ.

* * *

ರಾಧಾ : ಹೌದಪ್ಪಾ ನಿಮ್ಮ ತಾಯಿ ರಾಜಮ್ಮ ಹೇಳಿದಹಾಗೇ ಆಯ್ತು. ನಿನ್ನನ್ನು ಬಹಳ ಪ್ರೀತಿಯಿಂದ ಸಾಕಿದ್ದಕ್ಕೆ ಸಿಕ್ಕಿದ ಪ್ರತಿಫಲ ಇದೇನಪ್ಪಾ. ನೀವು ತಂಪಾಗಿರಿ ಆನಂದವಾಗಿರಿ ನಾನು ಬರ್ತೀನಪ್ಪಾ.

(ಹೊರಡುವಳು ಅನಾಥಾಶ್ರಮದ ಮುಂದೆ ರಾಧಾ ಕುಳಿತಿರಲು ಅಲ್ಲಿಗೆ ವಸಂತ ಕಾರಿನಲ್ಲಿ ಬರುತ್ತಾನೆ. ಆಕೆಯನ್ನು ನೋಡಿ ನಿಲ್ಲಿಸುತ್ತಾನೆ)

ರಾಧ : ಯಾರು?

ವಸಂತ : ನಾನಮ್ಮ ವಸಂತ.

ರಾಧಾ : ಚೆನ್ನಾಗಿದ್ದಿಯಪ್ಪಾ....?

ವಸಂತ : ಇದ್ದೇನಮ್ಮಾ ನೀನು ಇಲ್ಲಿ.

ರಾಧಾ : ಇದು ನಾನು ತಂದ ಕರ್ಮವಪ್ಪಾ, ವಿನಯನನ್ನು ಸಾಕಿ, ಸಲುಹಿ ಆಸ್ತಿ ಬರೆದುಕೊಟ್ಟ ಮೇಲೆ ಕೊಟ್ಟ ಉಡುಗೊರೆಯಪ್ಪಾ ಇದು.

ವಸಂತ : ಇದೇನಮ್ಮಾ ನೀನು ಹೇಳ್ತಾ ಇರೋದು?

ರಾಧಾ : ಎಲ್ಲಾ ಅಷ್ಟೇ ಅಪ್ಪಾ ಮಕ್ಕಳು ಹೆತ್ತವರೇ ಆಗಲಿ, ಸಾಕಿದವರೇ ಆಗಲಿ ಕೊಡುವ ಪ್ರತಿಫಲನಪ್ಪಾ.

ವಸಂತ : ವಿನಯ ಅಷ್ಟೊಂದು ಕೆಳಮಟ್ಟಕ್ಕೆ ಹೋದ್ನಮ್ಮ.

ರಾಧಾ : ಮೊದಲು ಒಳ್ಳೆಯವನೇ ಆಗಿದ್ನಪ್ಪಾ, ಹೆಂಡತಿ ಬಂದ ಮೇಲೆ ಹೀಗಾಯ್ತು. ಇದಕ್ಕೆ ಯಾರನ್ನು ಬಯ್ಯೋದು, ವಿಧಿಯನ್ನು ಬಯ್ಯಬೇಕು ಅಷ್ಟೇ.

ವಸಂತ : ಎಷ್ಟು ದಿನ ಆಯ್ತಮ್ಮಾ ಇಲ್ಲಿಗೆ ಬಂದು?

ರಾಧಾ : ಆಯ್ತಪ್ಪಾ ತಿಂಗಳು.

ವಸಂತ : ಅಮ್ಮಾ ಮೊದ್ಲು ನಡಿ ನಮ್ಮ ಮನೆಗೆ.

ರಾಧಾ : ಬೇಡಪ್ಪಾ ನಿನ್ನ ಹೆಂಡತೀನೂ ಹಾಗೆ ಮಾಡಿದ್ರೆ.

ವಸಂತ : ಅವಳು ಅಂಥವಳಲ್ಲಾ. ನಮ್ಮ ಅತ್ತೆ ಇದ್ದಾರೆ ಎಷ್ಟೊಂದು ಚೆನ್ನಾಗಿತ್ತು. ಮನೆಯಲ್ಲಿ ದೊಡ್ಡವರು ಅನ್ನುವವರು ಒಬ್ಬರು ಇರಬೇಕು ಅಂತ ದುಃಖ ಪಡ್ತಿರ್ತಾಳೆ. ನಿನ್ನ ಕರ್ಕೊಂಡೋದ್ರೆ ಬಹಳ ಸಂತೋಷ ಪಡ್ತಾಳಮ್ಮ ಅಮ್ಮಾ ಹೀಗಾದ್ ಮೇಲೆ ನಾನೇನು ಸತ್ತೋಗಿದ್ದೇನಮ್ಮಾ ನಮ್ಮ ಮನೆಗೆ ಬರಕ್ಕಿಲ್ವಾ?

ರಾಧಾ : ವಸಂತ, ನೀನು ಇಷ್ಟೊಂದು ಕರುಣಾಳು ಅನ್ನೋದು ಗೊತ್ತಾಗ್ಲಿಲ್ವೋ

ವಸಂತ : ಅಳಬೇಡಮ್ಮಾ ನಿನಗೆ ಏನೂ ತೊಂದ್ರೆ ಬರದಂಗೆ ನೋಡ್ಕೋತೀನಿ ಹತ್ತು ಕಾರ್ನ.

ರಾಧಾ : ನಿನ್ನ ಋಣವನ್ನು ಹ್ಯಾಗೆ ತೀರಿಸಲೋ?

ವಸಂತ : ಈಗಾಗ್ಲೇ ನಮ್ಮ ಅಣ್ಣನ ಸಾಕಿ, ಆಸ್ತಿ ಕೊಟ್ಟು ಋಣವನ್ನು ನಮ್ಮ ಮೇಲೆ ಇಟ್ಟಿದ್ದೀಯೇ ಹೊರ್ತು, ನೀನಲ್ಲಿ ಋಣವಂತೆಯಾಗಿದ್ದೀಯಮ್ಮಾ ಬಾರಮ್ಮಾ ನಮ್ಮ ಮನೆಗೆ ಬಂದು ಮಹಾಲಕ್ಷ್ಮಿಯಾಗು.

ರಾಧಾ : ಆಯ್ತಪ್ಪಾ...... ನಿನ್ನ, ನಿನ್ನ ಹೆಂಡತಿ ಆಸೇನೂ ಪೂರೈಸೋಕ್ಕೆ ಆ ದೇವ್ರು ನನ್ನನ್ನು ಇಟ್ಟಿದ್ದಾನೆ ಅಂತ ಕಾಣುತ್ತೆ ನಡೆಯಪ್ಪಾ. ಹೋಗೋಣ ನಡಿ.

(ಕಾರಿನಲ್ಲಿ ಹತ್ತಿ ಕುಳಿತು ಹೊರಡುವರು)

*

# ವಾತ್ಸಲ್ಯ

**ಪಾತ್ರ ವರ್ಗ**

೧. ಶಾರದಾ ೨. ಸವಿತಾ - ಶಾರದಾಳ ಫ್ರೆಂಡ್ ೩. ವಿಜಯ ತೇಜನ ಸ್ನೇಹಿತ ೪. ತೇಜ ೫. ಮಗು

*ಪಟ್ಟಣದ ಜೀವನ ಕಷ್ಟ. ಒಬ್ಬರ ಸಂಪಾದನೆಯಿಂದ ಸಂಸಾರ ತೂಗುವುದು ಕಷ್ಟ. ಅದಕ್ಕಾಗಿ ತೇಜ ತನ್ನ ಹೆಂಡತಿ ಸವಿತಾಳನ್ನು ಕೆಲಸಕ್ಕೆ ಸೇರಿಸಿದ. ಮಗುವಾದ ಮೇಲೆ ಹೇಗೆ ಅದನ್ನು ಕಾಪಾಡುವುದು ಎಂಬ ಚಿಂತೆ. ಮನೆಯಲ್ಲಿ ಯಾರೂ ನೋಡಿಕೊಳ್ಳುವವರಿಲ್ಲ. ಯಾರು ಬಂದು ಇರದಂತಹ ಪರಿಸ್ಥಿತಿ. ಆಕೆಯೂ ಆಳನ್ನು ಇಟ್ಟುಕೊಳ್ಳುವುದು ಮತ್ತಷ್ಟೂ ಕಷ್ಟದ ಪರಿಸ್ಥಿತಿ. ಆಕೆಯಾವರೂ ಸರಿಯಾಗಿ ನೋಡಿಕೊಳ್ಳುತ್ತಾಳೆಯೇ ಕೆಲವು ದಿನಗಳೇನು ಕೆಲವು ವರ್ಷಗಳೇ ದೂರದ ಅತ್ತೆಯ ಮನೆಯಲ್ಲಿರಿಸಿ ನೋಡಿಕೊಂಡು ಬರುವಂತಾಯಿತು. ಅವುಗಳ ಬಾಲಲೀಲೆಗಳನ್ನು ಕಾಣದೆ ಪ್ರೀತಿಯನ್ನು ಹತ್ತಿರದಲ್ಲಿ ತೋಡಿಕೊಳ್ಳಲಾಗದೆ  ವೇದನೆ ಪಡುವಂತಾಯಿತು. ಮಗುವು ಸ್ವಲ್ಪ ದೊಡ್ಡವಾಗಿ ಬೆಳೆದ ಮೇಲೆ ಅದನ್ನು ಬೇಬಿ ಸಿಟಿಂಗ್‌ನಲ್ಲಿಟ್ಟು ಬೆಳೆಸುವಾಗ ಅನುಭವಿಸಿದ ವೇದನೆಗಳು, ಸಂತೋಷಗಳು, ತಂದೆ-ತಾಯಿಯರಲ್ಲಿ ಕಂಡ ಪ್ರೀತಿ ಆದರಗಳು ಎಷ್ಟು? ಅದೇ ಮತ್ತೊಂದು ಸಂಸಾರ ಹೆಂಡತಿ ಕೆಲಸಕ್ಕೆ ಹೋಗದೆ ಮಗುವಿನ ತಾಯಿಯಾಗಿ ಕೊಟ್ಟ ಪ್ರೀತಿ, ಪೋಷಾಕು, ಎದೆ ಹಾಲು ಎರೆದು, ಆಟ ಆಡಿಸಿ, ತಿಂಡಿ ತಿನ್ನಿಸಿ, ಪೆಟ್ಟಾಗದಂತೆ ಗಮನವಹಿಸಿ ಬಹಳ ಕಾಳಜಿಯಿಂದ ಕಾಪಾಡುವ ರೀತಿ, ಆ ಮಗು ಬೆಳೆವ ರೀತಿ, ಮತ್ತೊಂದು ವಿಧ. ಮನೆಯ ಕೆಲಸ, ಮಕ್ಕಳ ಲಾಲನೆ ಪಾಲನೆ, ಪೋಷಣೆಯೇ ಮುಖ್ಯ ಗುರಿಯಾಗಿ ತಾಯಿಯ ಚಿತ್ರಣ ಒಂದು ರೀತಿಯಾದರೆ ಮತ್ತೊಂದು ಆಫೀಸು ಕೆಲಸ, ಮನೆಕೆಲಸ ಇವುಗಳಲ್ಲೇ ತಲ್ಲೀನಳಾಗಿ ಹೆಚ್ಚಿನ ಗಮನ ಕೊಡದ ಮಗುವಿನ ತಾಯಿಯಾಗಿರುವುದು ಮತ್ತೊಂದು ಚಿತ್ರಣ. ತಾಯಿ ಮಗುವಿನ ಸಂಬಂಧ ಎಷ್ಟರಮಟ್ಟಿಗಿದ್ದರೆ ಮಗುವಿನ ಸರ್ವಾಂಗೀಣ ಬೆಳವಣಿಗೆಯಾಗುವುದು ಎಂಬುದರ ಚಿತ್ರಣವನ್ನು ಈ ಕಥೆ ನಿರೂಪಿಸುತ್ತದೆ.*

(ಶಾರದಾ ಮಗುವಿಗೆ ಎದೆಹಾಲು ಕುಡಿಸುತ್ತಿರುವಾಗ ಸವಿತಾ ಪ್ರವೇಶಿಸುತ್ತಾಳೆ.)

ಶಾರದಾ : ಬಾ...ಬಾ... ಸವಿತಾ... ಏನಮ್ಮಾ ನಮ್ಮನ್ನೆಲ್ಲಾ ಮರೆತುಬಿಟ್ಟೆ ಅಂತ ಕಾಣುತ್ತೆ. ಎಷ್ಟು ದಿನ ಆಯ್ತು ನಿನ್ನ ನೋಡಿ.

ಸವಿತಾ : ಸಂಸಾರ ಸಾಗರ ಅಂತಾರಲ್ಲಮ್ಮಾ... ಹಾಗಾಗಿದೆ... ರವಿ ಹುಟ್ಟಿದ ಮೇಲೆ ನಮಗೆ ಒಂದು ರೀತಿಯ ನೆಮ್ಮದಿಯೇ ಇಲ್ಲ.

ಶಾರದಾ : ಎಲ್ಲಾ ಮಕ್ಕಳಾದ ಮೇಲೆ ನಂದನವನ ಮನೆ ಅಂತಾರೆ. ನೀನು ಇದೇನು ಈ ರೀತಿ ರಾಗ ತಗೆಯುತ್ತೀಯಾ?

ಸವಿತಾ : ಮಕ್ಕಳು ಯಾರಿಗೆ ಬೇಡ. ಎಲ್ಲಾ ಹೆಣ್ಣು ಬಯಸೋದು ತಾಯಿಯಾಗೋದ್ನೆ.. ಆದ್ರೆ ...ಮಗು ಇಟ್ಕೊಂಡು ನಿನ್ನ ಹಾಗೆ ಎದೆಹಾಲು ಕುಡಿಸಿ, ಅದರ ಲಾಲನೆ ಪಾಲನೆ ಪೋಷಣೆ ಮಾಡಬೇಕು ಅಂತ್ಲೇ, ಆದ್ರೆ.... ಮನೆಯಲ್ಲಿ ಇಬ್ಬರು ಕೆಲಸಕ್ಕೆ ಹೋದ್ರೆ ಮಗು ನೋಡಿಕೊಳೋವ್ರು ಯಾರೂ ಇಲ್ಲ. ಅದ್ಕೇ ರವಿ ಅಜ್ಜಿ ಮನೆಯಲ್ಲೇ ಬೆಳಿತಿದ್ದಾನೆ.

ಶಾರದಾ : ಸ್ವಲ್ಪ ದೊಡ್ಡವನಾಗುವವರೆಗೂ ಹೇಗೋ ಕಷ್ಟವನ್ನು ಅನುಭವಿಸಬೇಕು. ಸವಿತಾ ಅಂದಹಾಗೆ ಯಾವುದಾದ್ರೂ ಹುಡುಗಿ ಇರಿಸಿಕೊಂಡ್ರೆ ಹ್ಯಾಗೆ?

ಸವಿತಾ : ನಮ್ಮ ತಂದೆ, ನಮ್ಮ ಯಜಮಾನ್ರ ತಂದೆ-ತಾಯಿಯರ ಮನೆಯವ್ರೂ ನೋಡಿ ನೋಡಿ ನಿರಾಸೆಯಾದ್ರೂ, ಯಾರೂ ಬರೋದಿಲ್ಲ. ಬಂದ್ರೂ ಮಕ್ಕಳು ಮನೆ ನೋಡ್ಕೋತಾರೆ ಅನ್ನೋ ಯಾವ ಗ್ಯಾರೆಂಟಿ? ನಮ್ಮ ಮಕ್ಕಳನ್ನು ನಾವು ನೋಡಿಕೊಂಡಾಗಾಗೋಲ್ಲ. (ನಿಟ್ಟುಸಿರು ಬಿಡುವಳು)

(ಆಗಲೇ ಲತಾ ಬೀಳುವುದರಲ್ಲಿತ್ತು)

ಶಾರದಾ : ಲತಾ...ಲತಾ... ಬೀಳ್ತಿಯೆ ಬೀಳ್ತಿಯೇ ಬಾರಮ್ಮಾ...

(ಎತ್ತಿಕೊಂಡು ಬಂದು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಾಳೆ)

ಸವಿತಾ : ನಿನ್ನ ಮನೆ, ನಿನ್ನ ಮಕ್ಕಳು ಅಚ್ಚುಕಟ್ಟು ನೋಡಿದ್ರೆ ನನಗೆ ಸಂತೋಷವಾಗುತ್ತೆ. ನಾನು ಇಟ್ಟಿದ್ದೀನಿ ಮನೆ ಎಲ್ಲಾ ಅಸ್ತವ್ಯಸ್ತ. ನೋಡಿದ್ರೆ ವಾಂತಿ ಬರೋ ಹಾಗಾಗುತ್ತೆ. ಏನೇ ಅಚ್ಚುಕಟ್ಟು ಮಾಡಬೇಕಾದ್ರೂ ಟೈಮಿಲ್ಲ.

ಶಾರದಾ : ನಾನು Full Time ಗೃಹಿಣಿಯಲ್ಲಮ್ಮ ಮನೆ ಗುಡಿಸೋದು, ಸಾರಿಸೋದು, ಬಟ್ಟೆ ಒಗ್ಯೋದು ಎಲ್ಲರ ಬಟ್ಟೇನು ಇಸ್ತ್ರೀ ಮಾಡೋದು. ಮಗುವಿನ ಲಾಲನೆ ಪೋಷಣೆ, ಗಂಡನ ಯೋಗಕ್ಷೇಮ ನೋಡ್ಕೊಂಡೋಗೋದ್ಕಿಂತ ಇನ್ನೇನಿದೆ ನನಗೆ. ಪಾಪ ನೀನು ಮನೆ ಕೆಲಸ ಮಾಡಬೇಕು. ಆಫೀಸಿಗೋಗಬೇಕು, ಮಗು ನೋಡ್ಕೊಳ್ಳೋದು ಕಷ್ಟವೇ. ಮನೆಯಲ್ಲಿ ಯಾರೂ ಇಲ್ಲದೆ ಹೋದ್ರೆ ಕಷ್ಟವೇ.

ಸವಿತಾ : ಯಾಕೇಳ್ತೀಯಾಮ್ಮಾ ಮೊದ್ಲು ಕೆಲಸಕ್ಕೆ ಸೇರಬೇಕು, ಸಂಪಾದನೆ ಮಾಡಬೇಕು ಅಂತಿರುತ್ತೆ. ಈಗ ಇದ್ನೆಲ್ಲಾ ನೋಡಿದ್ರೆ...

ಶಾರದಾ : ಕೆಲಸ ಬಿಡಬೇಕು ಅಂತೀಯಾ? ಈಗಿನ ಕಾಲದಲ್ಲಿ ಕೆಲಸ ಸಿಗೋದೇ ಕಷ್ಟ, ಅದಕ್ಕೇನಾದ್ರೂ ರಾಜೀನಾಮೆ ಕೊಟ್ಟೆಗಿಟ್ಟೀಯಾ. ಆಮೇಲೆ ನಿನ್ನಂಥ ಪೆದ್ದು ಯಾರೂ ಇಲ್ಲ ಅಂತಾರೆ. ಹೆಂಗಸರು ಯಾವಾಗಲೂ ಆರ್ಥಿಕವಾಗಿ ಮುಂದುವರಿದಿರಬೇಕಮ್ಮಾ, ನಮ್ಮದೇನೋ ಆಯ್ತು ಬಿಡು.

ಸವಿತ : ಒಂದು ಸಂಬಳದಲ್ಲಿ ಜೀವನ ಹ್ಯಾಗೆ ಮಾಡೋಕಾಗುತ್ತೆ? ಬೆಂಗಳೂರಿನಂಥ ನಗರದಲ್ಲಿ ಜೀವನ ಅಷ್ಟೊಂದು ಸುಲಭವೇ? ಆ ಮನೆ ಬಾಡಿಗೆ, ಹಾಲು, ಮಿಕ್ಕ ಖರ್ಚುಗಳು ಸಾಮಾನ್ಯವೇ? ನೆನೆಸ್ಕೊಂಡ್ರೇ ಹೆದರಿಕೆ ಆಗುತ್ತೆ.

ಶಾರದಾ : ಏನೋ ನಮ್ಮ ತಂದೆ ಮನೆಯವ್ರೂ ಚನ್ನಾಗಿದ್ದಾರೆ, ನಮ್ಮ ಮಾವನ ಮನೆಯವರು ಚನ್ನಾಗಿದ್ದಾರೆ. ನನಗೆ ಹಣದ ಬಗ್ಗೆ ಚಿಂತೆಯಿಲ್ಲ. ಫ್ರಿಜ್, ಸೋಫಾ, ಡೈನಿಂಗ್ ಟೇಬಲ್, ಟೆಲಿವಿಜನ್ ಏನು ಬೇಕು ಎಲ್ಲವನ್ನೂ ತಂದಿದ್ದಾರೆ ನಮ್ಮ ಯಜಮಾನ್ರು. ಯಾವ ಜನ್ಮದ ಪುಣ್ಯದ ಫಲವೋ ಆರಾಮವಾಗಿದ್ದೀನಮ್ಮಾ.

ಸವಿತಾ : ನೋಡು ಶಾರದಾ ನೀನು ಹೇಳಿದ ಹಾಗೆ ಇವೆಲ್ಲಾ ಬೇಕು ಅಂತ ಆಸೆ. ನಮ್ಮ ತಂದೆ ಅಷ್ಟು ಸಾಹುಕಾರರಲ್ಲದೆ ಹೋದ್ರೂ ಏನಾದ್ರೂ ಮಾಡೋಣ ಅಂದ್ರೂ ನಮ್ಮ ಯಜಮಾನ್ರು ಒಪ್ಪೋದಿಲ್ಲ, ನಾವೇ ಕಷ್ಟಪಟ್ಟು ಸಂಪಾದಿಸಿ ತೆಗೆದುಕೊಳ್ಳಬೇಕು ಅಂತಾರೆ. ಅದ್ಕೇ ನಾನು ಕೆಲಸಕ್ಕೆ ಸೇರಿದೆ. ಮದ್ವೆಗೂ ಮೊದ್ಲೆ ಹಾಕಿದ್ದೆ ಕೆಲಸಕ್ಕೆ. ಅವರ ಕೈಹಿಡಿದ ಗುಣಾನೋ ಏನೋ ಮದ್ವೆ ಆದ ಕೂಡ್ಲೆ ಕೆಲ್ಸ.

ಶಾರದಾ : ಕೈಗೊಂದು ಮಗು. (ನಗು)

ಸವಿತಾ : ಶಾರದಾ ಅದೇನೋ ನಿಜ. ಆದ್ರೆ ನಾನು ಮದುವೆ ಆಗಿ ಎರಡು ಮೂರು ವರ್ಷ ಹಾಯಾಗಿ ತಿರುಗಾಡಿಕೊಂಡಿರಬೇಕು ಅಂತಿದ್ದೆ, ಆದ್ರೆ ಆಗಲಿಲ್ಲ. ಒಂದು ವರ್ಷಕ್ಕೆ ಮಗು ಆಗಿಬಿಡ್ತು.

ಶಾರದಾ : ಏನು ತಪ್ಪು ಬಿಡು. ಮಗು ಬೇಕು. ಬೇಗ ಆದದ್ದು ಒಳ್ಳೇದೇ ಆಯ್ತು.

(ಆಗಲೇ ಮಗು ಅಳುತ್ತಿರಲು ಏನು ಲತಾ.... ಊಟ ಮಾಡ್ತೀಯಾ? ತಾಳು ತರ್ತೀನಿ. ಎಂದು ಊಟ ತಿನ್ನಿಸುವಳು)

ಸವಿತಾ : ನಿನ್ನ ನೋಡ್ತಿದ್ರೆ ನಾನು ನನ್ನ ಮಗುವಿಗೆ ಎಷ್ಟು ವಂಚಿಸ್ತಿದ್ದೀನಿ ಅನ್ಸುತ್ತೆ.

ಶಾರದ : ಮಕ್ಕಳು ಐದು ವರ್ಷ ತುಂಬೋವರ್ಗೆ ಚೆನ್ನಾಗಿ ನೋಡ್ಕೋ ಬೇಕಮ್ಮಾ ಬುದ್ಧಿಬಂದು ತಿರುಗಾಡೋ ಹಾಗಾದ ಮೇಲೆ ನಾವು ಅವರನ್ನು ಸ್ವತಂತ್ರವಾಗಿ ಬಿಡಬಹುದು.

ಸವಿತಾ : ನಿಜವಾಗಿಯೂ ಮಗು ಚೆನ್ನಾಗಿ ಸಾಕಿದ್ದೀಯೆ ಕಣೆ. ಆರೋಗ್ಯದಿಂದ ಚೆನ್ನಾಗಿ ಕಾಪಾಡಿದ್ದೀಯಾ. ಥೀ..... ಕಣ್ಣೇಸ್ರಾದೀತು ಬಾರಮ್ಮ ಲತಾ.....

(ಎತ್ತಿಕೊಂಡು ಮುದ್ದಿಡುವಳು)

ಏನೂ ಗಲಾಟೆ ಮಾಡೋಲ್ಲ, ಯಾರು ಜೊತೆಗಾರ್ರೂ ಬಂದು ಬಿಡ್ತಾಳೆ. ನಮ್ಮ ರವಿ...... ಹೊಸಬ್ರು ಅಂದ್ರೆ ಅತ್ತು ಬಿಡ್ತಾನೆ ಕಣೆ - ಮಕ್ಕಳು ಅಂದ್ರೇ ಹೀಗಿರಬೇಕು.

ಶಾರದ : ನಾವು ಕಲಿಸಿದ ಹಾಗೇ ಇದೆ ಒಂದೊಂದು ಮಕ್ಕಳ ಸ್ವಭಾವ ಒಂದೊಂದು ರೀತಿಯಲ್ಲಿರುತ್ತೆ. ಕಲ್ತೊಕೊಳ್ತಾನೆ. ಜನಗಳ ಜೊತೆ ಬೆರೆತ್ರೆ ಸರಿಹೋಗ್ತಾನೆ. ನಿನ್ನ ಮಗ ಏನು ಸಾಮಾನ್ಯ ಅಲ್ಲ ಕಿಲಾಡಿ ಇದ್ದಾನಮ್ಮ.

ಸವಿತಾ : ಅದು ನಿಜ ಅನ್ನು...... ಅಂತೂ ಏನೇನೋ ಮಾತಾಡ್ತಾ ನಾನು ನೀನು ಬಂದದ್ನೇ ಮರೆತೆ.

ಶಾರದಾ : ಏನು ಹೇಳು?

ಸವಿತಾ : ನಾಳೆ ಮಂಗಳಗೌರಿ ಪೂಜೆ ಮಾಡ್ತಿದ್ದೀನಮ್ಮಾ ಕುಂಕುಮ ತೆಗೆದುಕೊಂಡು ಹೋಗಿವೆಯಂತೆ ಬಾರೆ.

ಶಾರದ : ಆಯ್ತು ಬರ್ತೀನಿ. ಏನೋ ಮಾತಾಡ್ತಾ ಏನೂ ಕೊಡದ್ನೇ ಮರೆತೆ.

ಸವಿತಾ : ಇಲ್ಲಮ್ಮಾ ಬರ್ತೀನಿ ರಾಜನ್ನ ಅವರಪ್ಪನ ಹತ್ತಿರ ಬಿಟ್ಟು ಬಂದಿದ್ದೀನಿ ನೋಡಬೇಕು.

ಶಾರದ : ಅಪರೂಪಕ್ಕೆ ಬಂದಿದ್ದೀಯೆ ಕೂತ್ಕೊಳ್ಳೇ.... ಈ ಹೊತ್ತು ನಿನಗೆ ಪ್ರಿಯವಾದ ಸೇವಿಗೆ ಖೀರು ಮಾಡಿದ್ದೀನಿ ತಿಂದು ಹೋಗುವೆಯಂತೆ.

(ತಿಂಡಿ ತಂದುಕೊಟ್ಟಳು ಅದನ್ನು ತಿನ್ನುತ್ತಾ)

ಸವಿತಾ : ಚೆನ್ನಾಗಿ ಮಾಡಿದ್ದೀಯೆ ಕಣೆ. ನಾವು ಯಾವಾಗ ಈ ರೀತಿ ಒಳ್ಳೆ ಅಡಿಗೆ ಮಾಡೋದೋ?

(ಲತಾ ನೀರು ತೆಗೆದುಕೊಂಡು ಬಟ್ಟೆಗೆ ಚೆಲ್ಲಿಕೊಳ್ಳಲು, ಕೂಡಲೇ ಶಾರದಾ ಬಟ್ಟೆ ಬದಲಾಯಿಸಿದಳು)

ಸವಿತಾ : ಬರ್ತೀನಿ ಕಣೆ ಶಾರದಾ.

ಶಾರದಾ : ಆಗಾಗ್ಗೆ ಬರ್ತಾ ಇರೇ ಕುಂಕುಮ ಇಟ್ಕೋ....

* * *

(ತೇಜ ಸ್ನೇಹಿತ ವಿಜಯನ ಜೊತೆ ಮನೆಗೆ ಬಂದು ಬೀಗ ತೆಗೆದ)

ವಿಜಯ : ಯಾಕಯ್ಯಾ ಹೆಂಡ್ತಿ ಊರಲ್ಲಿಲ್ವಾ?

ತೇಜ : ಆಕೆಗೆ ಬ್ಯಾಂಕಿನಲ್ಲಿ ಕೆಲಸ ಸಿಕ್ತು ಕಣಯ್ಯಾ. ಇನ್ನೇನು ಬಂದುಬಿಡ್ತಾಳೆ.

ವಿಜಯ : ಯಾಕಯ್ಯಾ ತೊಂದ್ರೆ ತೆಗೊಂಡೆ. ಇನ್ನೊಂದು ದಿನ ಯಾವ ಹೊತ್ತಾದ್ರೂ ರಜೆಯ ದಿನ ಬರ್ತಿದ್ದೆನಪ್ಪಾ.

ತೇಜ : ಏನು ನಷ್ಟವಾಯ್ತು ಬಿಡಯ್ಯಾ. ಬಿಸಿಲಲ್ಲಿ ಬಂದಿದ್ದೀಯೆ ತಾಳು, ತಣ್ಣಗೆ ಸ್ವಲ್ಪ ಜ್ಯೂಸ್ ಕುಡಿದು ಸ್ವಲ್ಪ ಮಾತಾಡೋಣ. ಕಾಡು ಹರಟೆ ಹೊಡೆದು ಎಷ್ಟೊಂದು ದಿನಗಳಾದ್ವು ಅಲ್ವಾ.

ವಿಜಯ : ನಿಜ.

(ಫ್ರಿಜ್‌ನಿಂದ ಎರಡು ಗ್ಲಾಸುಗಳಿಗೆ ಜ್ಯೂಸ್ ತುಂಬಿ ತಂದಿಟ್ಟ. ಇಬ್ಬರೂ ಕುಡಿಯುತ್ತಾ ಮಾತನಾಡಲಾರಂಭಿಸಿದರು)

ತೇಜ : ಸ್ವಲ್ಪ ಹಾಗೇ ಮ್ಯಾಗಜೀನ್ಸ್ ಪೇಪರ್‌ಗಳನ್ನು ತಿರುವಿ ಹಾಕ್ತಾ ಇರು. ಸ್ವಲ್ಪ ಹೊರಗೆ ಹೋಗಿ ಈಗ್ಲೇ ಬಂದುಬಿಟ್ಟೆ.

ವಿಜಯ : ನಾನು ಬರ್ತೀನಯ್ಯಾ...... ಇನ್ನೊಮ್ಮೆ..

ತೇಜ : ನನ್ನ ಮಗ ರಾಜನ್ನ ಬೇಬಿ ಸಿಟಿಂಗ್‌ನಿಂದ ಕರೆದುಕೊಂಡು ಬಂದುಬಿಡ್ತೀನಿ ಸ್ವಲ್ಪ ಕೂತ್ಕೋ.

ವಿಜಯ : ಸರಿ ಹೋಗಿದ್ದು ಬಾರಪ್ಪಾ.

(ಅಷ್ಟರಲ್ಲಿ ವ್ಯಾನಿಟಿ ಬ್ಯಾಗ್ ಹಿಡಿದು ಸವಿತಾ ಬರುತ್ತಾಳೆ. ವಿಜಯನನ್ನು ನೋಡಿ....)

ತೇಜ : ನಮಸ್ಕಾರ...... ಈಗ ಬಂದ್ರಾ?

ವಿಜಯ : ಆಯ್ತು ಒಂದು ಘಂಟೆ......

ಸವಿತಾ : ಅವ್ರು.....

ವಿಜಯ : ಮಗು ಕರೆದುಕೊಂಡು ಬರ್ತೀನಿ ಅಂತ ಹೋದ.

ಸವಿತಾ : ಸ್ವಲ್ಪ ಬಂದೆ.....

(ನಿರ್ಗಮನ, ಮುಖ ತೊಳೆದು ಮುಖ ಒರಿಸುತ್ತಾ ಬರುತ್ತಿರಲು ತೇಜ ಮಗುವನ್ನು ಕರೆದುಕೊಂಡು ಬಂದ)

ತೇಜ : ಮೊದಲು ಮಗುವಿಗೆ ಮುಖ ತೊಳಿಸಿ, ಬಟ್ಟೆ ಬದಲಾಯಿಸಿ ಹಾಲು ಕುಡಿಸು.

ಸವಿತಾ : ಆಯ್ತು ಬಾ ರಾಜಾ.... ಬಾ.... ಏಕೋ ಕೋಪ ಮಾಡ್ಕಂಡ್ಯೋನೋ? ಆಫೀಸ್ನಿಂದ ಈಗ ಬಂದೆ ಬಾರಪ್ಪಾ.... ಬಾ ಮರಿ.... ಜಾಣ ಮರಿ ಬಾರಪ್ಪಾ.

(ನಗುತ್ತಾ ತಾಯಿಯನ್ನು ಅಪ್ಪಿಕೊಂಡಿತು. ಹಾಲನ್ನು ಬಾಟಲಿಯಲ್ಲಿ ಕೊಡಲು ಲೊಚ ಲೊಚನೆ ಕುಡಿಯಲಾರಂಭಿಸಿತು).

ತೇಜ : ಏನೇ ಅಪರೂಪಕ್ಕೆ ವಿಜಯ್ ನಮ್ಮ ಮನೆಗೆ ಬಂದವ್ನೆ.... ಏನೂ ಕೊಡ್ದೇ....

ವಿಜಯ : ನನಗೇನೂ ಆತುರವಲ್ಲ ಮೊದಲು ಮಕ್ಕಳು ನೋಡಲಿ.

ಸವಿತಾ : ಉಪ್ಪಿಟ್ಟು ಮಾಡ್ಲಾ?

ತೇಜ : ಶಾಸ್ತ್ರ ಕೇಳು. ಮೊದಲು ಅದ್ಕೂ ಮೊದ್ಲು Intreem ಆಗಿ ಏನಾದ್ರೂ.....

ಸವಿತಾ : ಪರಂಗಿಹಣ್ಣು ಕತ್ತರಿಸಿ ಕೊಡ್ತೀನಿ.

(ಹಣ್ಣನ್ನು ಎರಡು ಪ್ಲೇಟನ್ನೂ ತಂದಳು. ರವಿ ತೊಡೆಯನ್ನು ಬಿಡದೆ ತಾಯಿಯನ್ನು ಅಪ್ಪಿಕೊಂಡಿತು).

ತೇಜ : ರಾಜಾ.... ಬಾರೋ.... ಅಮ್ಮ ಹಣ್ಣ ಕತ್ತರಿಸಲಿ.... ನನ್ನ ತೊಡೆಯ ಮೇಲೆ ಕೂತ್ಕಬಾರೋ..... ಹಣ್ಣು ಕೊಡಬೇಡೋ.

(ಮಗು ತಲೆಯಲ್ಲಾಡಿಸುವುದು ಕುಳಿತುಕೊಂಡೇ ಇದ್ದ ಹಾಗೆಯೇ ಕತ್ತರಿಸಿ ಕೊಟ್ಟಳು. ಅಮ್ಮನ ಕಂಡ್ರೆ ಅಂಟಿಕೊಂಡುಬಿಡ್ತಾನೆ ಕಣಯ್ಯ.)

ವಿಜಯ : ಪಾಪ ಬೇಬಿ ಸಿಟಿಂಗ್‌ನಿಂದ ಈಗ ಬಂದಿದ್ದಾನೆ. ಬೆಳಗಿನಿಂದ ಸಾಯಂಕಾಲದವರೆಗೆ ತಾಯಿ ನೋಡಿಲ್ಲ ಇನ್ನೇನು ಮಾಡ್ತಾನೆ? ಬೇಬಿಸಿಟಿಂಗ್‌ನಲ್ಲಿ ಅವರು ಹ್ಯಾಗೆ ನೋಡಿಕೊಳ್ತಿದ್ದಾರೋ? ಮಕ್ಕಳಿಗೆ ಸುಖ ಸಿಗೋಲ್ಲಕಣಯ್ಯ.

ತೇಜ : ಏನು ಮಾಡೋದಯ್ಯಾ ಮನೆಯಲ್ಲಿ ನೋಡಿಕೊಳ್ಳೋಕೆ ಯಾರೂ ಇಲ್ಲ. ಆಳು ಸಿಗೋಲ್ಲ.

ವಿಜಯ : ಮಕ್ಕಳ ಹಾಲನ್ನು ತಾವೇ ಕುಡಿದು ಬಿಡ್ತಾರೆ, ಸರಿಯಾಗಿ ನೋಡ್ಕೋಳ್ಳೋಲ್ಲ, ಬಿದ್ದೂ ಗಾಯ ಮಾಡ್ಕಳ್ತವೆ, ಮಕ್ಕಳು ಅತ್ತರೂ ನೋಡೋಲ್ಲ, ಮಲಮೂತ್ರ ಮಾಡಿಕೊಂಡ್ರೆ ಸರಿಯಾಗಿ ತೊಳೆಯೋಲ್ಲ.

ತೇಜ : ಏನೋ ಬೆಳೆತವೆ. ನಮಗೂ ಗತಿಯಿಲ್ಲ ಅವರಿಗೂ ಮತಿ ಇಲ್ಲ ಅಂದ ಹಾಗಾಗಿದೆ. ಹಾಗೂ ಇದೇ. ಚೆನ್ನಾಗಿ ನೋಡಿಕೊಳ್ಳುವವರೂ ಕೆಲವರು ಇದ್ದಾರೆ. ಸ್ವಲ್ಪ ಹಣ ಹೆಚ್ಚಿಗೆ ಕೊಟ್ರೆ ಎಲ್ಲಾ ಮಾಡ್ತಾರೆ. ಏನಾದ್ರೂ ಜ್ವರ ಬಂದ್ರೆ, ಖಾಯಿಲೆ ಬಿದ್ರೆ ಫೋನ್ ಮಾಡ್ತಾರಂತೆ ಆಫೀಸಿಗೆ. ಸರಿಯಾದ ಹೊತ್ತಿಗೆ ಊಟ ತಿಂಡಿ ಕೊಡ್ತಾರಂತೆ ಅಂತ ಕೇಳಿದ್ದೀನಲ್ಲಾ.

ವಿಜಯ್ : ಎಲ್ಲಾ ಅನುಭವ ಆದಮೇಲೆ ಗೊತ್ತಾಗೋದು ಅಷ್ಟೇ?ಏನೋ ಅಪ್ಪ ನೀನು ಹೇಳೋದು ನೋಡಿದ್ರೆ ನನಗೆ ಆಶ್ಚರ್ಯವಾಗುತ್ತೆ. ಎಷ್ಟೇ ಆಗಲಿ ಆಳಿನ ಕೆಲಸ ಹಾಳು ಅಂತ ಹೇಳ್ತಾರಲ್ಲಾ ಹಾಗೆ. ಈಗ ನಿನ್ನ ಮಗು ನೋಡು ಎಷ್ಟೊಂದು ಗಬಗಬನೆ ಹಾಲು ಕುಡಿತು. ಆಕೆ ಸರಿಯಾಗಿ ಹಾಲು ಕುಡಿಸಿದ್ಲೋ ಇಲ್ವೋ ತಿಳೀದು. ನೋಡಿದ್ನಲ್ಲಾ ಪಾಪ ಬೆಳಗಿನಿಂದ ತಾಯಿ-ತಂದೆ ಮುಖ ಕಾಣದ ಮಕ್ಕಳು ಎಷ್ಟು ಕಾತರವಾಗಿರ್ತಾವೆ. ಒಮ್ಮೊಮ್ಮೆ ಬೇಸರ ಮಾಡ್ಕೊಳ್ತಾವೆ.

(ತೇಜ ಕೋಪ ಮಾಡಿಕೊಂಡು ಸ್ವಲ್ಪ ಹೊತ್ತು ರಾಜ ತಾಯಿಯ ಜೊತೆ ಹೋಗೋಲ್ಲ. ಆಮೇಲೆ ರಮಿಸಿ ಹಾಲ ಕುಡಿಸಿದ ಮೇಲೆ ಸಮಾಧಾನವಾಗುತ್ತೆ)

ವಿಜಯ : ಏನು ಮಾಡೋದು?

ತೇಜ : "ಎಲ್ಲಾ ಕಾಲಾಯ ತಸ್ಮೈಯೇ ನಮಃ".

ವಿಜಯ : ನಿಮ್ಮನ್ನ ನೋಡಿದ್ರೆ ಅಯ್ಯೋ ಅನ್ನಿಸುತ್ತೆ.

ತೇಜ : ಏನ್ಮಾಡೋದಪ್ಪಾ... ಎಲ್ಲಾ ಮಾಡೋದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ. ಮನೆಗೆ ಇಷ್ಟೆಲ್ಲಾ ತರಬೇಕಾದ್ರೆ ನನ್ನೊಬ್ಬನ ಸಂಬಳದಿಂದ ಬರುತ್ತೇನಯ್ಯಾ?

ವಿಜಯ : ಆದ್ರೆ ನಾವು ನಮ್ಮ ಹೆಂಡತೀನ ಅಡಿಗೆ ಕೋಣೇಲಿ ಕೂರಿಸಿ....

ತೇಜ : ನಿನ್ನದೊಂದು ರೀತಿ ಸುಖ, ನಮ್ಮದೊಂದು ರೀತಿ ಸುಖ, ನೋಡ್ತಾ ಇದ್ದೀಯಲ್ಲಾ ನಮ್ಮ ಸುಖ. ಮಧ್ಯಮ ವರ್ಗದ, ಪಟ್ಟಣದ ವಾಸ ಬಹಳ ಕಷ್ಟಕಣಯ್ಯ. ಹಣ ಇದ್ರೆ ಸುಖ ಸಿಗೋಲ್ಲ ಅನ್ನೋದು ಈಗ ಅರ್ಥವಾಗ್ತಾ ಇದೆ. ಎಲ್ಲದ್ಕೂ ಪಡ್ಕೊಂಡು ಬಂದಿರಬೇಕು. ಏನೋ ಗಾದೆ ಹೇಳೋಲ್ವೇ ಹಣವಿದ್ದವನ ಮನೆಗೋದ್ರೂ ಋಣವಿದ್ದಷ್ಟೇ ಅಂತ, ಹಾಗಾಗಿದೆ ನಮ್ಮ ಸ್ಥಿತಿ.

ವಿಜಯ : ನಿಜವಾಗಲೂ ಜೀವನದಲ್ಲಿ ಯಾರಿಗೆ ಸುಖ?

ತೇಜ : ಸುಖ ಯಾರಿಗೂ ಇಲ್ಲ, ನಾವು ಕಲ್ಪಿಸಿಕೊಳ್ಳಬೇಕು ಅಷ್ಟೇ. ಒಬ್ಬೊಬ್ಬರಿಗೂ ಒಂದೊಂದು ರೀತಿ ಕಷ್ಟ ಇರುತ್ತೆ.

ವಿಜಯ : ಹೌದು....

(ಅಷ್ಟರಲ್ಲಿ ಉಪ್ಪಿಟ್ಟು ಬಂತು)

ತೇಜ : ತೆಗೋ... ಉಪ್ಪಿಟ್ಟು ತಿನ್ನು.

ವಿಜಯ : ಸುಮ್ಮನೇ ನಿನ್ನ ಹೆಂಡತಿಗೆ ತೊಂದ್ರೆನಪ್ಪಾ. ಈಗಾ ತಾನೇ ಆಫೀಸಿನಿಂದ ಬಂದಿದ್ದಾರೆ, ಸ್ವಲ್ಪ ಹೊತ್ತೂ ರೆಸ್ಟ್ ತೆಗೆದುಕೊಳ್ಳಲಿಲ್ಲ.

ತೇಜ : ಏನು ಕಷ್ಟ. ನಮಗಾದ್ರೂ ಮಾಡಬೇಕಾಗಿತ್ತಾ. ನಮಗೆ ಮಾಡೋದ್ರ ಜೊತೆ ನಿನಗೊಂದು ಚೂರು ಅಷ್ಟೇ. ಹಾಗೆಲ್ಲಾ ಭಾವನೆ ಮಾಡ್ಕೊಳ್ಬೇಡ ತಿನ್ನಯ್ಯಾ.

ವಿಜಯ : ಅಂತೂ ನೀ ಏನೇ ಹೇಳು ಗಂಡ -ಹೆಂಡತಿ ಇಬ್ಬರೂ ಕೆಲಸಕ್ಕೆ ಹೋದರೆ ಬಹಳ ಕಷ್ಟವಪ್ಪಾ. ನೀವು ಪಡೋ ಪಾಡನ್ನು ನೋಡಿದ್ರೆ ನಿಜವಾಗ್ಲೂ ಅಯ್ಯೋ ಅನ್ನಿಸುತ್ತೆ. ನಿಜವಾಗ್ಲೂ ಈ ಹೊತ್ತು ಮಕ್ಕಳಿಗೆ ತಾಯಿ ಎಷ್ಟು ಅವಶ್ಯ ಅನ್ನೋದು ಗೊತ್ತಾಯ್ತು.

ವಿಜಯ್ : ಎಷ್ಟೋ ಜನರು, ಇಬ್ಬರೂ ಕೆಲಸಕ್ಕೆ ಹೋಗಿ ಬಂದು ಸಾಕಾಗಿ ಅವರನ್ನು ಸರಿಯಾಗಿ ನೋಡಿಕೊಳ್ದೇ ಹೋದ್ರೆ ಮಕ್ಕಳು ಕೆಟ್ಟದಾರಿ ಗೋದ್ರೂ ಹೋಗ್ತಾರೆ ನೀವು ಜೋಪಾನವಾಗಿ ನೋಡಿಕೊಳ್ರಪ್ಪಾ.

ತೇಜ : ನೀನು ಹೇಳೋದು ನಿಜ; ನೋಡೋಣ..... ನಾವು ಎಷ್ಟು ಸಾಧ್ಯವೋ ಅಷ್ಟು ಪ್ರಯತ್ನ ಮಾಡ್ತೀವಿ.

ವಿಜಯ್ : ಕುಡಿಯಯ್ಯ.... ಕಾಫಿ....

ತೇಜ : ಆಯ್ತು.

ವಿಜಯ್ : ಬರ್ತೀನಪ್ಪಾ.... ಅಂತೂ ಅತಿಥಿ ಸತ್ಕಾರ ಮಾಡಿದೆ.

ತೇಜ : ರಾತ್ರಿಗೆ ಹಿತ್ಕವರೆ ಬೇಳೆ ಸಾರು ಹಿಟ್ಟು ಮಾಡಿಸ್ತೀನಿ ಊಟ ಮಾಡಿಕೊಂಡು ಹೋಗಯ್ಯ.

ವಿಜಯ್ : ಆಯ್ತು ಆಯ್ತು. ಹೀಗೆ ಮುಂದುವರಿಸ್ತಿರೂ.... ಆಮೇಲೆ ಸವಿತಾ ನನ್ನ ಬಯ್ಕೊಳ್ಳೋದೆ.

ಸವಿತಾ : ಹಾಗೇನಿಲ್ಲ. ಊಟ ಮಾಡ್ಕೊಂಡು ಹೋಗುವಿರಿ.

(ಮಗು ಟೇಬಲ್ ಮೇಲಿಂದ ಏನೋ ಕೆಡವಿಕೊಂಡಿತು. ಸ್ವಲ್ಪ ರಕ್ತವೂ ಬಂತು)

ವಿಜಯ್ : ಅಯ್ಯೋ ಅಯ್ಯೋ ಒಂದು ಒದ್ದೆ ಬಟ್ಟೆ ತಾರಮ್ಮಾ ಸ್ವಲ್ಪ ರಕ್ತ ಬಂದಿದೆ, ಕಟ್ಟೋಣ.

(ಸವಿತಾ ಒದ್ದೆ ಬಟ್ಟೆ ತರುವಳು. ಅದನ್ನು ಕಟ್ಟಲು ಮಗು ಅಳುವನ್ನು ಕಡಿಮೆ ಮಾಡಿತು)

ವಿಜಯ್ : ನೋಡ್ದ ಪೋಲಿ...... ಹ್ಯಾಗಾಯ್ತು? ಇನ್ನು ಮೇಲೆ ಹೀಗ್ ಮಾಡ್ತೀಯಾ? ಬರ್ತೀನಿ ಕಣಯ್ಯಾ...... ಟಾಟಾ..... ಟಾಟಾ......

(ಮಗು ಟಾಟಾ ಮಾಡುತ್ತಿದ್ದಂತೆ ವಿಜಯ್ ಹೊರಡುತ್ತಾನೆ)

ಸವಿತಾ : ಅಬ್ಬಾ ಒಂದು ನಿಮಿಷದಲ್ಲಿ ಎಂಥ ಅನಾಹುತ ಆಗೋಯ್ತು.

ತೇಜ : ಏನು ಮಾಡೋದು ಇವೆಲ್ಲಾ ಮಕ್ಕಳಿಗೆ ಆಗೋದು ಸರ್ವೇ ಸಾಮಾನ್ಯ.

* * *

ತೇಜ : ಯಾಕೆ ಬೇಜಾರಾಯ್ತೇ?

ಸವಿತಾ : ಯಾಕೆ ಬೇಜಾರು.... ಇಳಿಗೆ ಮಳುಗಿದವ ಚಳಿಗಂಜ್ತಾನ್ಯೇ? ಅಂದ ಹಾಗೆ.....

ತೇಜ : ನಿನ್ನ ಕೆಲಸಕ್ಕೆ ಸೇರಿಸಿದ್ದು ಕಷ್ಟವಾಯ್ತಲ್ವೇ?

ಸವಿತಾ : ಸಂಸಾರ ಸರಿದೂಗಬೇಕಾದ್ರೆ ಹೀಗ್ ಮಾಡ್ದೇ ವಿಧಿಯೇ ಇಲ್ಲ ಬಿಡ್ರಿ. ನಾನೊಬ್ಬಳೇನು? ಎಷ್ಟು ಜನ ಹೆಂಗಸರು ಕೆಲಸ ಮಾಡಿಕೊಂಡು ಬಂದು ಸಂಸಾರ ಸಾಗಿಸ್ತಾ ಇಲ್ವಾ ಹಾಗೇ ನನ್ನದೂ....

ತೇಜ : ಈಗ ಮಗು ನೋಡ್ಕೋಳ್ಳೋದ್ಕೇ ಕಷ್ಟವಾಯ್ತಲ್ಲ. ಅವರಜ್ಜಿ ಮನೇಲಿ ಇರಿಸಬೇಕಾಯ್ತಲ್ಲಾ.

ಸವಿತಾ : ಇದ್ರೇನಾಯ್ತು ಬಿಡಿ.

ತೇಜ : ಅವನ ಆಟ, ಬಾಲಲೀಲೆ ನೋಡುವ ಹಾಗಿಲ್ವೇ? ಒಂದು ಸಾರಿ ಇಬ್ರು ಹೋದ್ರೆ ಎಷ್ಟೊಂದು ಖರ್ಚು.

ಸವಿತಾ : ಸಂಪಾದ್ನೆ ಮಾಡೋದೇ ಖರ್ಚು ಮಾಡೋದ್ಕಲ್ವೇ? ನೀವ್ಯಾಕೆ ಇಷ್ಟೊಂದು ತಲೆಗೆ ಹಚ್ಚಿಕೊಂಡ್ರಿ.

ತೇಜ : ನಾನು ಆ ವಿಜಯನ ಸಂಸಾರ ನೋಡಿದ್ದೀನಿ.

ಸವಿತಾ : ನಾನು ನೋಡಿಲ್ಲಾ ಅಂತ ತಿಳ್ಕೊಂಡಿದ್ದೀರಿ. ನಾವು ನಾವು ತಂದದ್ದು ನಮಗೆ. ಯೋಗಿ ತಂದದ್ದು ಯೋಗಿಗೇ, ಜೋಗಿ ತಂದದ್ದು ಜೋಗಿಗೆ ಅಂತ ಹೇಳೋದಿಲ್ವೇ ಹಾಗೇ.

ತೇಜ : ಬೇರೆಯವರನ್ನು ನೋಡಿಕೊಂಡು ನಾವು ಸಮಾಧಾನ ಪಟ್ಟುಕೊಳ್ಳಬೇಕು ಅಷ್ಟೇ.

ಸವಿತಾ : ಅಷ್ಟೇ..... ನಡೀರಿ.... ಊಟ ಮಾಡಿವ್ರಂತೆ.

* * *

ಶಾರದ : ಏನು ರವಿ ಬಂದುಬಿಟ್ಟಿದ್ದಾನೆ.

ಸವಿತಾ : ಹೌದೇ... ಬಾ.... ಬಾ.... ಕೂತ್ಕೋ... ಒಂದೊಂದು ದಿನ ರಜೆ ಹಾಕಿದ್ದೆ ಕರಿಸಿದ್ದೀನಿ.

ಶಾರದ : ಏನೇ ಸವಿತಾ ಇಷ್ಟು ಹೊತ್ತಾಗಿದೆ, ಮಗುವಿಗೆ ಸ್ನಾನ ಮಾಡಿಸಿ ಒಳ್ಳೆ ಬಟ್ಟೆ ಹಾಕಿ ಒಂದು ಹಣೆಗೆ ಕಪ್ಪಿಟ್ಟು ಆಟ ಆಡಕ್ಕೆ ಬಿಡಬಾರದೇನೇ?

ಸವಿತಾ : ನಾನು ಹೇಳಿದ್ನಲ್ಲಾ... ನಾನು ಸೋಂಬೇರಿ ಕಣೇ. ರೂಢಿಯಾಗಿಬಿಟ್ಟಿದೆ. ಕೆಲಸಕ್ಕೋದಷ್ಟೇ ಏನೋ ಒಂದು ರೀತಿ ಬಿಸಿ. ಮಾಡಿಸಬೇಕು.

ಶಾರದಾ : ಅವನ ಬಣ್ಣಕ್ಕೆ, ರೂಪಿಗೆ ಯಾವುದೂ ಬೇಡ. ಆದ್ರೂ ಸ್ನಾನ ಶುದ್ಧವಾದ ಬಟ್ಟೆ ಹಾಕಿದ್ರೆ ಇನ್ನೆಷ್ಟು ಚೆನ್ನಾಗಿ ಕಾಣ್ತಾನೆ.

ಸವಿತಾ : ಆಮೇಲೆ ಕಣ್ಣೇಸರಾಗಿ ಉಷಾರು ತಪ್ಪಿ ಬಿಟ್ಟಾನೋ ಅಂತ.

(ಇಬ್ಬರೂ ನಗುವರು)

ಏಯ್ ಲತಾ..... ಬಾರೇ.... ರವಿ ಜೊತೆ ಆಟ ಆಡು ಬಾ...

(ಇಳಿದು ಬಂದು ಮಗುವಿನ ಕೈ ಹಿಡಿದುಕೊಳ್ಳಲು ಆತ ಬಿಡಿಸಿಕೊಂಡು ಹೊರಡುವನು.)

ಶಾರದಾ : ಯೇಯ್ ರವಿ..... ಬಾರೋ..... ನಿನ್ನ ತಂಗಿ ಕಣೋ.... ಆಟ ಆಡು ಬಾ.... ಏನೋ ನಾಚ್ಕೋತೀಯೆನೋ.... ಬಾ.... ಬಾ..... ಆಡು ಇಬ್ರೂ ಆಡ್ಕೊಳ್ಳಿ.

ಸವಿತಾ : ಹೊಸಬ್ರು ಇನ್ನೊಂದು ಸ್ವಲ್ಪ ಹೊತ್ತಾದ್ರೆ ಎಲ್ಲಾ ಸರಿಹೋಗುತ್ತೆ. ಏಯ್ ಶಾರದಾ ಮನೆ ನೋಡಿಕೊಂಡು ಆಡ್ಕೊಳ್ಳೆಡ್ವೇ, ನಿನ್ನಮ್ಮ ಅಚ್ಚುಕಟ್ಟಾಗಿಟ್ಟಿಲ್ಲ.

ಶಾರದ : ನಾನಾದ್ರೂ ಸಹಾಯ ಮಾಡ್ಲೇನೇ?

ಸವಿತಾ : ಆಯ್ತಾಯ್ತು.... ಸುಮ್ನೆ ಕೂತ್ಕೊಳ್ಳೇ. ಕುಂಕುಮಕ್ಕೆ ನಿನ್ನ ಕರ್ದಿರೋದು. ಮನೆ ಒಪ್ಪೋರಣ ಮಾಡಕ್ಕಲ್ಲ. ಮಾಡ್ತೀನಿ ನಾನು ನಿಧಾನಕ್ಕೇ. ನೀನೇನು ನನಗೆ ಹೊಸಬಳೇ. ನೀನು ಆಡಿಕೊಳ್ಳೋಲ್ಲಾ ಅಂತ ಗೊತ್ತು. ನಿನಗೂ ನನ್ನ ಕಷ್ಟ ಗೊತ್ತು.

ಶಾರದ : ನಾನು ಬೇರೆಯವರ ಮನೆ ನೀಟು ಮಾಡ್ತೀನಿ ಅಂತ ಹೇಳ್ತೀನಾ. ನನ್ನ ಆಪ್ತ ಸ್ನೇಹಿತೆಯಾದ ನಿನ್ನ ಕಷ್ಟ ನೋಡಲಾರದೆ ಹೇಳಿದ್ನಮ್ಮಾ. ಅಂದ ಹಾಗೇ ಏನೇ ವಿಶೇಷ?

ಸವಿತಾ : ಆಡ್ಕೋಬೇಡಮ್ಮಾ, ನಾನು ಅಡಿಗೆಯಲ್ಲಿ ನಿನ್ನಷ್ಟು Expert ಅಲ್ಲ. ಏನೋ ಒಂದಷ್ಟು ಈಗ ಕಲಿತವಳು.

ಶಾರದ : ಏನು ಮಾಡಿದ್ದೀಯಮ್ಮಾ?

ಸವಿತಾ : ಪಾಯಸ ಮಾಡಿದ್ದೀನಿ. ಅನ್ನ, ಸಾರು, ಪಲ್ಯ, ವಡೆ ಮಾಡಿದ್ದೀನಮ್ಮಾ ಊಟ ಮಾಡಿದ ಮೇಲೆ ರುಚಿ ಗೊತ್ತಾಗುತ್ತೆ.

ಶಾರದ : ನೀನೇನು ಹೆಂಸಲ್ವೇ ಬಿಡೇ ಕಲಿತುಕೊಳ್ತೀಯೆ, ಈ ಹೊತ್ತಲ್ಲಾ ನಾಳೆ.

ಸವಿತಾ : ಎಲ್ಲಾ ನಿಮ್ಮಂಥವರ ಗೈಡೆನ್ಸ್ ಇದ್ರೆ ಆಯ್ತಮ್ಮ...

ಶಾರದ : ಭಾನುವಾರ ಬಂದುಬಿಡೇ ಕಲಿಸಿಕೊಡ್ತೀನಿ, ನನಗೆ ಗೊತ್ತಿರುವಷ್ಟನ್ನು.

(ಕುಂಕುಮ ಕೊಡುವಳು)

ಸವಿತಾ ನನ್ನ ಮಗಳಿಗೆ ಊಟದ ಟೈಮ್ ಆಯ್ತು ಸ್ವಲ್ಪ ಬಡಿಸ್ತೀಯಾ.

ಸವಿತಾ : ಎಲ್ಲಾ ರೆಡಿ ಇದೆ ಬಾ ಕೂತ್ಕೋ.

(ಊಟ ತಾನು ಮಾಡುವುದಲ್ಲದೆ ಮಗುವಿಗೂ ಕೊಡಿಸುವಳು)

ಶಾರದಾ : ಸವಿತಾ ಬರ್ತೀನಮ್ಮಾ ಮಗು ಮಲುಗುವ ಹೊತ್ತಾಯ್ತು.

ಸವಿತಾ : ಆಯ್ತಮ್ಮಾ.....

* * *

ತೇಜ : ಸವಿತಾ....

ಸವಿತಾ : ಆ್ಞಂ.....

ತೇಜ : ಏನು ಯಾವ ಪ್ರಪಂಚದಲ್ಲಿದ್ದೀ?

ಸವಿತಾ : ಎಷ್ಟು ಬೇಗ ಎಂಟು ದಿನಗಳಾದ್ವು, ನಮ್ಮ ರವಿ ಕಳುಹಿಸಬೇಕಲ್ಲಾ. ಆತನ ಬಿಟ್ಟು ಹ್ಯಾಗಿರೋದು ಅನ್ನಿಸುತ್ತೆ.

ತೇಜ : ಅಲ್ವೇ ನಮ್ಮ ರವಿ ಅಜ್ಜಿ ಮನೇಲಿ ಏನೂ ಖಾಯಿಲೆ ಇಲ್ದೇ ಆರೋಗ್ಯವಾಗಿ ಆಡ್ಕೊಂಡಿರ್‍ತಾನೆ. ಇಲ್ಲಿಗೆ ಬಂದ್ರೆ ನೋಡ್ದಲ್ಲಾ ವಾಂತಿ ಭೇದಿ.... ಆಗಿ ಎಷ್ಟು ಕಷ್ಟಪಟ್ವೋ, ಹಗಲೂ ರಾತ್ರಿ ವ್ಯಥೆ ಪಟ್ವೋ, ಒಳ್ಳೇ Specialistಗೆ ತೋರಿಸಿದ್ದಕ್ಕೆ ಸರಿಹೋಯ್ತು.

ಸವಿತಾ : ಅದೇನೋ ನಿಜ. ಆದ್ರೆ... ಹೆತ್ತ ಕರಳು ಕೇಳಬೇಕಲ್ಲಾ. ನಮ್ಮ ಮಕ್ಕಳು ಹೇಗಿದ್ರೂ ನಾವು ನೋಡಿಕೊಂಡ ಹಾಗಾಗುತ್ತಾ? ಶಾರದ

ಮಗು ನೋಡ್ಕೋತಾಳೆ ಅಂದ್ರೆ ನಿಜವಾಗ್ಲೂ ಬಹಳ ಕಾಳಜಿ ಮಾಡ್ತಾಳೆ. ಹೊತ್ತು ಹೊತ್ತಿಗೆ ಊಟ, ತಿಂಡಿ, ನಿದ್ದೆ, ಎಲ್ಲದ್ಕೂ ತುಂಬಾ ಮುತುವರ್ಜಿ ವಹಿಸ್ತಾಳೆ. ಅದನ್ನು ನೋಡಿದ್ರೆ ನಾನು ಬಾಣಂತಿ ಆದಾಗ ಮೂರು ತಿಂಗಳು ನೋಡಿದ್ದಷ್ಟೇ, ಆಮೇಲೆ.... ಅಲ್ಲೊಂದು ತಿಂಗಳು, ಇಲ್ಲೊಂದು ತಿಂಗಳು ಅಬ್ಬಬ್ಬಾ ಈ ರೀತಿ ನೋವು ಯಾವ ಹಗೇಗೂ ಬೇಡಪ್ಪಾ.

ತೇಜ : ಕೆಲಸಬಿಟ್ಟು ಬಿಡೇ ಹೋಗ್ಲೀ ಹ್ಯಾಗೋ ಆಗುತ್ತೆ.

ಸವಿತಾ : ಶಾರದಾ ಹೇಳಿದ್ಲು ಸಿಕ್ಕಿರೋ ಕೆಲ್ಸ ಬಿಟ್ರೆ ಹುಚ್ಚಿ ನೀನು ಅಂತ.

ತೇಜ : ಅಕ್ಕಿ ಮೇಲೆ ಆಸೆ, ನೆಂಟರ ಮೇಲೆ ಇಷ್ಟ ಅಂದ ಹಾಗಾಯ್ತು, ಹೋಗ್ಲಿ ರವಿಗೆ ಸ್ನಾನ ಮಾಡಿ ಬಟ್ಟೆ ಹಾಕು ಚನ್ನಾಗಿರೋದು.

ಸವಿತಾ : ಇನ್ನೇನು ನೆಂಟರೆಲ್ಲಾ ಬಂದು ಹೋದ್ರು, ಈಗ ಮಾಡಿದ್ರೇನು ಬಿಟ್ರೇನು ಬಿಡಿ.

ತೇಜ : ಅಲ್ವೇ ನಮ್ಮ ಮಗುವನ್ನು ನಾವು ನೋಡೋದ್ಕೋ, ಬೇರೆಯವರು ನೋಡೋದ್ಕೋ ಸ್ನಾನ ಮಾಡಿ ಬಟ್ಟೆ ಮಾಡಿಸೋದು.

ಸವಿತಾ : ಇಬ್ಬರಿಗೂ.... ನೀವೇ ಮಾಡಿಸಿಬಿಡ್ರಿ....

ತೇಜ : ಏಯ್ ರವೀ ಬಾರೋ ಸ್ನಾನ ಮಾಡಿಸಿಕೊಡ್ತೀನಿ....

(ಮಗುವು ನಗುತ್ತಾ ಬರುವುದು) ಯಾಕೊ ಅಳ್ತಾನೆ ಹೊಟ್ಟೆ ಹಸಿವು ಅಂತ ಕಾಣುತ್ತೆ.

ಸವಿತಾ : ಸ್ವಲ್ಪ ತರಕಾರಿ ಬೇಯಿಸಿ ಇಟ್ಟಿದ್ದೀನಿ ಅದನ್ನು ಕಲಸಿಕೊಡ್ತೀನಿ. ನೀವು ಸ್ನಾನ ಮುಗಿಸಿ ಬನ್ನಿ.

ತೇಜ : ಬಾರೋ ಬಾರೋ.... ರವಿ.... ಬೇಗ ಬಾ.... ಸ್ನಾನ ಮಾಡಿ ತಿಂಡಿ ತಿನ್ನುವೆಯಂತೆ.

ಸವಿತಾ : ಶಾರದಾ ರೀ ಮಗು ಸಾಕೋಕೆ ಅದೇನು ಕಾಳಜಿ, ಅದೇನು ಅಕ್ಕರೆ, ಅದ್ಕೇ ಹಾಗೆ ಬೆಳೆದಿರೋದು ಲತಾ ಮುದ್ದು ಮುದ್ದಾಗಿದ್ದಾಳೆ .

ತೇಜ : ನಮ್ಮ ರವಿ ಏನು ಕಮ್ಮಿ?

ಸವಿತಾ : ಅವನು ಚನ್ನಾಗಿಲ್ಲ ಅಂತ ಹೇಳಲಿಲ್ಲ, ಆ ಹುಡುಗಿ ಈತನ ಬಣ್ಣವೂ ಇಲ್ಲ. ಆದ್ರೆ ನಮ್ಮ ಮಗನಮೈಕಟ್ಟು ಚನ್ನಾಗಿ ಆಗ್ಲಿಲ್ಲ.

ತೇಜ : ಇನ್ನೂ ಬೇಕಾದಷ್ಟು ದಿನಗಳಿವೆ ಮಾಡೋಣ ತಕ್ಕೋಳೆ.

(ಮಗುವನ್ನು ಕರೆದುಕೊಂಡು ಬಚ್ಚಲು ಮನೆಗೆ ಹೊರಡುವನು ಸವಿತಾ ಕಂಗಳಲ್ಲಿ ಕಣ್ಣೀರು ಬಟ್ಟಲಾಡತೊಡಗಿತು)

ತೇಜ : ಸವಿತಾ.... ಸವಿತಾ.... ಯಾಕೆ ಕಣ್ಣೀರು?

ಸವಿತಾ : ಈ ಹೊತ್ತು ನೀವು ರವಿಯನ್ನು ಕರೆದುಕೊಂಡು ಹೋಗಿ ಬಿಡಬೇಕಲ್ಲಾ ಮಡಿಕೇರಿಗೆ...

ತೇಜ : ನಾನು ಹ್ಯಾಗಿರಲಿ ರವಿ ಬಿಟ್ಟು ಅಂತ ಅಳ್ತಾ ಇದ್ದೀಯಲ್ಲಾ. ನಾಲ್ಕಾರು ದಿನಗಳಾದ ಮೇಲೆ ಎಲ್ಲಾ ಸರಿಹೋಗುತ್ತೆ, ಅಷ್ಟರತನಕ ಗಟ್ಟಿಮಾಡಿಕೊಳ್ಳಬೇಕು ಕಣೆ.

ಸವಿತಾ : ಮಾಡ್ಕೊಳ್ದೇ ಇದ್ರೆ ಕಳುಹಿಸಲಿಕ್ಕಾಗುತ್ಯೆ? ಮನೆಯಲ್ಲಿ ನಮ್ಮವ್ರು ಅಂತ ಇಲ್ಲದೆ ಹೋದ್ರೆ ಹೀಗೇ.... ಯಾರಾದ್ರೂ ಅತ್ತೇನೋ....

ತೇಜ : ಈಗಿನ ಕಾಲದವರು ಅತ್ತೆ ಇಲ್ಲದ ಮನೆಗೆ ಮದುವೆ ಆಗ್ತೀನಿ ಅಂತ ಹೇಳ್ತಾರೆ ನೀನು ಅತ್ತೆ ಕೇಳ್ತೀಯಲ್ಲಾ ಅದೇ ಆಶ್ಚರ್ಯ.

ಸವಿತಾ : ಬೇಕ್ರಿ... ಅತ್ತೆರೆಲ್ಲಾ ಕೆಟ್ಟವರಾಗಿರೋಲ್ಲ. ತಮ್ಮ ಮೊಮ್ಮಕ್ಕಳನ್ನಾದ್ರೂ ನೋಡಿಕೊಳ್ತಿದ್ರೋ. ನಾವು ಮನೆಗೆ ಬೀಗ ಹಾಕಿಕೊಂಡ ಹೋಗುವುದೂ ಕಷ್ಟ. ಕಳ್ಳ ಕಾಕರ ಭಯ ಮನೆಯಲ್ಲಿ ಯಾರಾದ್ರೂ ಒಬ್ರಿದ್ರೆ. ಏನ್ರೀ ಈಗಿನ ಕಾಲದಲ್ಲಿ ನಾವು ಕಷ್ಟಪಟ್ಟು ಸಂಪಾದಿಸಿದುದನ್ನು ಒಂದು ದಿನ ಕಳ್ಳರು ಹೊಡೆದ್ರೆ ಮತ್ತೆ ನಾವು ಸೇರಿಸಲಿಕ್ಕಾಗುತ್ಯೇ?

ತೇಜ : ಅದೇನೋ ನಿಜ. ಎಲ್ಲಾ ದೇವರ ಮೇಲೆ ಭಾರ ಹಾಕಿ ಮಾಡ್ತಾ ಹೋಗೋದು. ಆಗೋದನ್ನ ಯಾರು ತಪ್ಪಿಸಿಕೊಳ್ಳಲಿಕ್ಕಾಗುತ್ತೇ? ಸರಿ ಎಲ್ಲಾ ರೆಡಿ ಮಾಡಿದ್ದೀಯೆ ಬಸ್ಸಿಗೆ ಹೋಗಬೇಕಲ್ಲಾ.

ಸವಿತಾ : ಎಲ್ಲಾ ರೆಡಿ ಮಾಡಿದ್ದೀನಿ.

(ಎಲ್ಲವನ್ನು ತೆಗೆದುಕೊಂಡ ಮಗುವನ್ನು ಕರೆದುಕೊಂಡು ಸವಿತಾ ಹೊರಡುವಳು. ಬಸ್ಸಲ್ಲಿ ಕುಳಿತರು. ಬಸ್ಸಿನಲ್ಲಿ ತೇಜ ರವಿಯನ್ನು ಕುಳ್ಳಿರಿಸಿದಾ, ಟಾಟಾ ಮಾಡಿ ಕಳುಹಿಸಿದಳು ಸವಿತಾ. ದಾರಿಯಲ್ಲಿ ಬರುತ್ತಾ ಯೋಚಿಸುತ್ತಾ ಹೊರಡುವಳು)

ಸವಿತಾ ಧ್ವನಿ : ಇಂಥ ಗಂಡನನ್ನು ಪಡೆಯಬೇಕಾದ್ರೆ ನಾನೆಷ್ಟು ಪುಣ್ಯವಂತೆ. ರವಿಯಂಥ ಮಗುವಿಗೆ ತಾಯಿಯಾದ ನಾನು ಎಷ್ಟು ಪುಣ್ಯವಂತೆ? ಆದ್ರೆ... ಇಂದು ರವಿಯಂಥ ಮಗುವನ್ನು ಬಿಟ್ಟು ಇರಬೇಕಲ್ಲಾ ಎಷ್ಟು ಬೇಜಾರಾಗುತ್ತೆ. ಮನೆಯಲ್ಲಿ ತುಂಟಾಟ ಆಡಿಕೊಂಡು ಮುದ್ದಾಗಿದ್ದ. ನಗುನಗುತ್ತಾ ನಮ್ಮನ್ನೆಲ್ಲಾ ಎಷ್ಟೊಂದು ನಗಿಸ್ತಾ ಇದ್ದ. ಈಗ ಮನೆ ಬಿಕೋ ಅನ್ನಿಸುತ್ತೆ. ಕೆಲಸಕ್ಕೆ ಸೇರುವ ದಿನ ಅದೆಷ್ಟು ಹುರುಪು ಹುಮ್ಮಸ್ಸಿನಲ್ಲಿದ್ದೆ, ಮೊದಲನೆ ಸಂಬಳ ತೆಗೆದುಕೊಂಡಾಗ ಅದೆಷ್ಟು ಸಂತೋಷಪಟ್ಟೆ. ಮನೆಗೆ ಒಂದೊಂದು ವಸ್ತುವನ್ನು ತೆಗೆದುಕೊಂಡಾಗ್ಲೂ ಎಷ್ಟೊಂದು ಸಂತೋಷಪಟ್ಟೆ. ರವಿ ಹುಟ್ಟಿದಾಗ್ಲೂ ಹಿಗ್ಗಿ ಹೀರೆಕಾಯಿ ಆದೆ. ಆದ್ರೆ ಆತ ಹುಟ್ಟಿದ ಮೇಲೆ ಆತನ ವಿರಹದಿಂದ ನೊಂದು ಬೆಂದು ಹೋಗುವಂತಾಗಿದ್ದೀನಿ.

ತೇಜನ ಧನಿ : ಯಾಕೆ.... ಪೆಚ್ಚಾಗಿದ್ದೀಯೆ ಬೇಕಾದ್ರೆ ಕೆಲಸ ಬಿಟ್ಟುಬಿಡು ಮಗು ನೋಡಿಕೊಂಡು ಆರಾಮವಾಗಿರಬಹುದು.

ಶಾರದಾ ದನಿ : ಏಯ್ ಪೆದ್ದಿ ಆಗಂತ ಕೆಲಸಕ್ಕೆ ರಾಜೀನಾಮೆ ಕೊಟ್ಬುಗಿಟ್ಟೀಯಾ? ಈಗಿನ ಕಾಲದಲ್ಲಿ ಕೆಲಸ ಸಿಗೋದೇ ಕಷ್ಟ ಅಂಥದ್ರಲ್ಲಿ ಕೆಲಸ ಬಿಡ್ತೀಯಾ?

ಸವಿತಾ ದನಿ : ಇಲ್ಲ ಇಲ್ಲ ನಾನು ಕೆಲಸ ಬಿಡೋದಿಲ್ಲ ಧೈರ್ಯ ತಾಳ್ಕೊಳ್ತೀನಿ. ಬೇಕಾದ್ರೆ ಹಣ ಖರ್ಚಾದ್ರೂ ಪರ್ವಾಗಿಲ್ಲ ಆಗಾಗ ಮಗುವನ್ನು ನೋಡಿಕೊಂಡು ಬರ್ತೇನೆ. ನನ್ನಂಥ ಎಷ್ಟು ಜನ ಹೀಗಿರೋಲ್ಲ, ನಾನೊಬ್ಬಳೇ ಅಲ್ಲ ಈ ಪ್ರಪಂಚದಲ್ಲಿ. ಈಸಬೇಕು ಇದ್ದು ಜಯಿಸಬೇಕು. ಕೆಲ್ಸ ಬಿಡೋದು ಸರಿಯಲ್ಲ. ಮಕ್ಕಳನ್ನು ಯಾರಾದ್ರೂ ಕಾಪಾಡಿದ್ರೆ ಆಯ್ತು, ರವಿ ಅಜ್ಜಿ ಮನೇಲಿ ಚನ್ನಾಗಿರ್ತಾನೆ. ನಮ್ಮ ತಾಯಿ ನನಗಿಂತ ಚೆನ್ನಾಗಿ ಆರೈಕೆ ಮಾಡ್ತಾಳೆ, ನೋಡ್ಕೊತಾಳೆ. ರವಿ ಎಲ್ಲಾದರೂ ಇರು ಎಂತಾದರು ಇರು ನೀನು ಚೆನ್ನಾಗಿರು. ಆಗಲೇ ನನಗೆ ಸಂತೋಷ! ಆಗಲೇ ನನಗೆ ಸಂತೋಷ!

*

# ಅನಾಥ

**ಪಾತ್ರ ವರ್ಗ**

೧. ನಾಗನಾಥ ೨. ಸುನಂದ - ನಾಗನಾಥನ ಎರಡನೇ ಹೆಂಡತಿ ೩. ಗೋಪಿ- ಕಿರಣ್ ಮಿತ್ರರು ೪. ಲಲಿತಾ-ಅನಾಥಾಶ್ರಮದ ಮೇಲ್ವಿಚಾರಿಕೆ ೫. ಚಂದ್ರನಾಥ-ಇಂದ್ರನಾಥ ನಾಗನಾಥನ ಮಕ್ಕಳು ೭, ೮ ವರ್ಷಗಳು ೮. ರಂಗಮ್ಮ - ಆಳು

*ನಾಗನಾಥ ನಾಗಶ್ರೀಯಳ ಜೊತೆ ವಿವಾಹವಾದ. ಆಕೆ ಒಂದು ಮಗುವಿಗೆ ಜನ್ಮವಿತ್ತು ಅಸು ನೀಗಿದಳು. ನಾಗಶ್ರೀಗೆ ಯಾರೂ ಇಲ್ಲದಿರಲು ಮಗುವನ್ನು ನೋಡಿಕೊಳ್ಳಲು ನಾಗನಾಥನ ಮನೆಯಲ್ಲೂ ಯಾರೂ ಇಲ್ಲದಾಗ ಏನು ಮಾಡುವುದೆಂದು ಯೋಚಿಸಿ, ಅನಾಥಾಶ್ರಮಕ್ಕೆ ಕೊಟ್ಟು ಮತ್ತೊಂದು ವಿವಾಹವಾದ. ಆಕೆಯೇ ಸುನಂದಾ. ಆಕೆಗೂ ಒಂದು ವರ್ಷದಲ್ಲೇ ಮಗುವಾಯಿತು. ನಾಗನಾಥ ತನಗೆ ಹಿಂದೆ ಮದುವೆಯಾಗಿ ಮಗುವಾಗಿದ್ದು ಅನಾಥಶ್ರಮದಲ್ಲಿಟ್ಟಿದ್ದನ್ನು ಗೌಪ್ಯವಾಗಿಟ್ಟಿದ್ದ. ಆಗಾಗ ಮಗುವಿನ ಯೋಗಕ್ಷೇಮ ನೋಡಿ ಬರುತ್ತಿದ್ದ. ಮಗ ರಾಜ ಅತ್ತ ಬೆಳೆಯುತ್ತಿದ್ದ, ಅನಾಥಾಶ್ರಮದ ವಾತಾವರಣದಲ್ಲಿ. ಎರಡನೇ ಹೆಂಡತಿ ಸುನಂದಾಳ ಮಗ ಚಂದ್ರ ಮನೆಯ ಪರಿಸರದಲ್ಲಿ ಬೆಳೆಯಲಾರಂಭಿಸಿದ. ನಾಗನಾಥ ಎರಡು ಮಕ್ಕಳ ಮನೋಭಾವಗಳನ್ನು ವಿವಿಧವಾಗಿ ಕಾಣುತ್ತಾನೆ. ತಾಯಿಯ ಪ್ರೀತಿಯನ್ನು ಕೊಡುವ ಚಂದ್ರು, ಅನಾಥಾಶ್ರಮದಲ್ಲಿ ಸಿಗುವ ಪ್ರೀತಿ, ಊಟ, ಸ್ನೇಹ ಎಲ್ಲವೂ ಭಿನ್ನ ರಾಜನಿಗೆ. ಎರಡು ರೀತಿಯ ಬೆಳವಣಿಗೆ ಮಕ್ಕಳ ಮನೋಭಾವಗಳನ್ನು ಈ ಕಥೆ ನಿರೂಪಿಸುತ್ತದೆ.*

(ನಾಗನಾಥ ತುಂಬಾ ಚಿಂತೆಯಲ್ಲಿ ಕುಳಿತಿರಲು ಅಲ್ಲಿಗೆ ಆತನ ಮಿತ್ರ ಗೋಪಿ ಬರುತ್ತಾನೆ. ನಾಗನಾಥನ ಮಗು ಚಂದ್ರನಾಥ ಒಂದೆಡೆ ಇದ್ದಾನೆ.)

ಗೋಪಿ : ನಾಗನಾಥ... ನಾಗನಾಥ...

ನಾಗನಾಥ : ಬಾರಯ್ಯಾ ಗೋಪಿ.

ಗೋಪಿ : ದೇವರು ನಿನಗೆ ಹೀಗ್ ಮಾಡಬಾರ್ದಾಗಿತ್ತುಕಣಯ್ಯ.

ನಾಗ : ಏನು ಮಾಡೋದು ತಂದದ್ದೆಲ್ಲಾ ಅನುಭವಿಸಬೇಕಪ್ಪಾ.

ಗೋಪಿ : ನಾಗಶ್ರೀ... ತನ್ನ ಕುರುಹಾಗಿ ಈ ಚಂದ್ರನಾಥನನ್ನು ಬಿಟ್ಟು ಹೋಗಿದ್ದಾಳೆ.

ನಾಗ : ಈಗ ಅದೇ ಒಂದು ದೊಡ್ಡ ಕಷ್ಟಕ್ಕೆ ಸಿಕ್ಕಿ ಹಾಕಿಕೊಂಡಿರೋದು.

ಗೋಪಿ : ಯೋಚನೆ ಮಾಡಬೇಡಯ್ಯಾ ಎಲ್ಲದ್ಕೂ ದೇವ್ರಿದ್ದಾನೆ.

ನಾಗ : ರಜೆ ಮುಗೀತಾ ಬಂತು ಮಗು ಬಿಡೋಣ ಅಂದ್ರೆ ಎಲ್ಲಿಗೆ? ನನ್ನವ್ರು ಅನ್ನುವವರು ಯಾರೂ ಇಲ್ಲ. ಆಫೀಸಿಗೆ ಹ್ಯಾಗೆ ಹೋಗಲಿ?

ಗೋಪಿ : ಯಾವುದಾದ್ರೂ... ಬೇಬಿ ಸಿಟಿಂಗ್‌ನಲ್ಲಿ ಇರಿಸಿದ್ರೆ ಹ್ಯಾಗೆ?

ನಾಗ : ಆಮೇಲೆ ಹ್ಯಾಗಯ್ಯಾ ಎಲ್ಲಾ ಸರಿಪಡಿಸಲಿ. ನಾನು ಒಂದು ಯೋಚನೆ ಮಾಡಿದ್ದೀನಿ.

ಗೋಪಿ : ಇನ್ನೊಂದು ಮದ್ವೆ ಆಗೋದಾ?

ನಾಗ : ಆ ಯೋಚ್ನೆ ಇಲ್ಲ ಬಿಡಯ್ಯ....

ಗೋಪಿ : ಮಗು ನೋಡ್ಕೊಳ್ಳೋಕ್ಕಾದ್ರೂ....

ನಾಗ : ಈಗಿನ ಕಾಲದವರು ಮಲತಾಯಿ ಮಗೂನ ಸರಿಯಾಗಿ ನೋಡಿಕೊಳ್ತಾರ್ಯೇ?

ಗೋಪಿ : ಅದೂ ನಿಜ ಅನ್ನು.

ನಾಗ : ಆ ಮಗುವಿಗೆ ಕೊಡೋ ಹಿಂಸೆಯನ್ನು ನೋಡಬೇಕಾಗುತ್ತೆ

ಗೋಪಿ : ಮತ್ತೊಂದು ಕೆಲಸ ಮಾಡಬಹುದಲ್ಲಾ

ನಾಗ : ಏನದು?

ಗೋಪಿ : ಯಾರಿಗಾದ್ರೂ ದತ್ತು ಕೊಟ್ರೆ ಹ್ಯಾಗೆ?

ನಾಗ : ಅವೆಲ್ಲಾ ನಡ್ಯೋ ವಿಷಯವಲ್ಲ -ಈಗ ಯಾವುದಾದ್ರೂ ಒಂದು ಅನಾಥಾಶ್ರಮಕ್ಕೆ ಕೊಟ್ಟು ಆಗಾಗ ನೋಡ್ಕಂಡು ಬರುವದು ಅಂತ ಮನಸ್ಸು ಮಾಡಿದ್ದೀನಿ. ಅವರೂ ಅದೆಷ್ಟು ಚೆನ್ನಾಗಿ ನೋಡಿಕೊಳ್ತಾರ್ಯೋ ಗೊತ್ತಾಗೋಲ್ಲ. ಹೇಗಾದ್ರೂ ಆಗಲಿ ದೇವರೇ ಅಂತ ಅಲ್ಲಿರಿಸಿ ಒಂದು ದಾರಿ ಮಾಡಬೇಕು ಅಂತ ಮನಸ್ಸು ಮಾಡಿದ್ದೀನಿ.

ಗೋಪಿ : ಬೇಗ ಒಂದು ಮದುವೆ ಆಗೋದು ಉತ್ತಮನಪ್ಪಾ. ಎಷ್ಟು ದಿನ ಅಂತ ಹೀಗೆ ಯೋಚನೆ ಮಾಡ್ತಾ ಕೂತಿರ್ತೀಯಾ? ಮನಸ್ಸಿಗೆ ಶಾಂತಿ ನೆಮ್ಮದಿ ಸಿಕ್ಕಬೇಕಾದ್ರೆ ನೀನು ಇನ್ನೊಂದು ಮದುವೆ ಆಗಲೇಬೇಕಪ್ಪಾ.

ನಾಗ : ನಾಗಶ್ರೀ ಇನ್ನೂ ಮರೆತಿಲ್ಲ ಗೋಪಿ.

ಗೋಪಿ : ಹಾಗಂತ ಅವಳು ಮತ್ತೆ ಬರ್ತಾಳಾ?

ನಾಗ : ಅವಳನ್ನು ಮರೆತು ಇನ್ನೊಬ್ಬಳನ್ನು ಮದುವೆ ಆಗೋದೇ?

ಗೋಪಿ : ದುಃಖ ಕ್ಷಣಿಕ ನಾಗನಾಥ, ಒಂದು ದಿನ ಅಲ್ಲ ಒಂದು ದಿನ ಆಕೆ ಮರೀಬೇಕಾಗುತ್ತೆ. ಬೇರೆಯವಳ ಜೊತೆ ಬಾಳ್ವೆ ಮಾಡಬೇಕಾಗುತ್ತೆ.

ನಾಗ : ಮೊದಲು ನನ್ನ ಮಗನದೊಂದು ದಾರಿ ಮಾಡ್ತೀನಿ, ಆಮೇಲೆ ಮುಂದಿನ ವಿಚಾರ ಮಾಡೋಣ.

ಗೋಪಿ : ಧೈರ್ಯಗೆಡಬೇಡ, ನಾವೆಲ್ಲಾ ಮಿತ್ರರು ಇದ್ದೇವೆ. ನಿನಗೇನು ಸಹಾಯ ಬೇಕು ಮಾಡ್ತೀವಿ.

ನಾಗ : ಏಯ್ ಚಂದ್ರನಾಥ ಬಾರೋ... ಬಾ... ಬೀಳ್ತೀಯಾ ಬಾ... ಬಾ... ಏನು ಬೇಕೋ?

ಗೋಪಿ : ಈಗ ನಮ್ಮ ಮನೇಲಿ ಕೆಲವು ದಿನ ಇರಲಿ ಕಳಿಸೋ ನಾಗನಾಥ.

ನಾಗ : ಬೇಡಪ್ಪಾ... ನಾನು ಯಾರಿಗೂ ತೊಂದ್ರೆ ಕೊಡಲಿಕ್ಕೆ ಇಷ್ಟ ಪಡೋಲ್ಲ.

ಗೋಪಿ : ನಿನ್ನಿಷ್ಟನಪ್ಪಾ... ಗಂಡಸರು ಎಷ್ಟೇ ಆದ್ರೂ ನೋಡಿಕೊಳ್ಳಲಿಕ್ಕೆ ಆಗೋಲ್ಲ. ಎಷ್ಟು ದಿನ ಅಂತ ರಜೆ ಹಾಕ್ತೀಯಾ?

ನಾಗ : ಅದೇ ಬಂದಿರೋದು. ಒಂದೊಂದು ಸಾರಿ ಕೆಲಸಾನೇ ಬಿಟ್ಟುಬಿಡ್ಲಾ ಅಂತೀನಿ...

ಗೋಪಿ : ಹುಚ್ಚು ಕೆಲಸಕ್ಕೆ ಕೈ ಹಾಕಬೇಡ.

ನಾಗ : ಏನಿದೆ ಈ ಪ್ರಪಂಚದಲ್ಲಿ?

ಗೋಪಿ : ಅದನ್ನೆಲ್ಲಾ ನೋಡೋದು ಇನ್ನು ಇದೆಕಣಯ್ಯಾ.

ನಾಗ : ಈಗ್ಲೇ ಸಾಕಾದೆ ಕಣಯ್ಯ ಇದ್ನೆಲ್ಲಾ ನೋಡಿ.... ಈ ಮದ್ವೆ, ಈ ಮಕ್ಕಳು ಎಲ್ಲಾ ಯಾಕಪ್ಪಾ. ಸನ್ಯಾಸಿಯಾಗಿರೋದೇ ಲೇಸು ಅಂತ ಅನ್ನಿಸುತ್ತೆ.

ಗೋಪಿ : ಕಷ್ಟ ಮನುಷ್ಯರಿಗೆ ಬರದೆ ಮರಕ್ಕೆ ಬರುತ್ತಾ? ಎಲ್ಲವನ್ನು ಎದುರಿಸಬೇಕಪ್ಪಾ ಧೈರ್ಯವಾಗಿ.

ನಾಗ : ಜೀವನ ಹೆದರಿಸ್ತಾ ಇದೆ.

ಗೋಪಿ : ಅಂದ ಹಾಗೆ ನಮ್ಮ ಬೀದಿಯಲ್ಲೇ ರವೀಂದ್ರ ಅವರ ಮಗಳು ಸುನಂದಾ ಅಂತಿದ್ದಾಳೆ. ಅವಳು ತುಂಬಾ ಒಳ್ಳೇ ಹುಡುಗಿ. ನೀನು ಯಾಕೆ ಟ್ರೈ ಮಾಡಬಾರದು ಅಂತ ಕೇಳೋಣ ಅಂತ ಬಂದೆ.

ನಾಗ : ಸದ್ಯಕ್ಕೆ ಮದ್ವೆ ಮಾತು ಬೇಡ ಗೋಪಿ, ನನ್ನ ಮನಸ್ಸು ಇನ್ನೂ ಸಮಾಧಾನಕ್ಕೆ ಬಂದಿಲ್ಲ.

ಗೋಪಿ : ಆಯ್ತು ವಿಚಾರ ಮಾಡಿ ಹೇಳು, ನಾನು ಬರ್ತೀನಿ.

ನಾಗನಾಥನ ಮನಸ್ಸು : ನಾಗಶ್ರೀ ಮದುವೆ ಆಗಿ ಅಲ್ಪ ಸುಖ ಪಟ್ಟು ಹೊರಟು ಹೋದೆ. ಆದ್ರೆ ನನ್ನ ಒಂಟಿಯಾಗಿ ಮಾಡಿ ವಿರಹಾಗ್ನಿಯಿಂದ ಸುಡ್ತಾ ಇದ್ದೀಯಾ? ನಮ್ಮಿಬ್ಬರ ಪ್ರೀತಿಯ ಪ್ರತಿಬಿಂಬವಾದ ಚಂದ್ರನಾಥನನ್ನು ಬಿಟ್ಟು ಹೋದೆ. ಈಗ ಇವನ ಲಾಲನೆ, ಪಾಲನೆ, ಪೋಷಣೆ ಮಾಡುವುದು

ಹ್ಯಾಗೆ? ಅನಾಥಾಶ್ರಮಕ್ಕೆ ಸೇರಿಸುವುದೊಂದೇ ದಾರಿ. ಅಲ್ಲಿ ಮಗುವನ್ನು ಸರಿಯಾಗಿ ನೋಡ್ಕೊಳ್ತಾರೋ ಇಲ್ವೋ. ನನ್ನ ಮಗು ಅನಾಥಾಶ್ರಮದಲ್ಲಿ ಅನಾಥನಾಗಿ ಬೆಳೆಯಬೇಕಾದ ಪರಿಸ್ಥಿತಿ ಬಂತಲ್ಲಾ. ಈ ನೋವನ್ನು ಹ್ಯಾಗೆ ಸಹಿಸಿಕೊಂಡಿರಲಿ? ಯಾರಿಗೆ ಹೇಳಲಿ? ಆದ್ರೆ ಈಗ ನನಗಿರೋದು ಒಂದೇ ಒಂದು ದಾರಿ ಮಗುವನ್ನು ಅನಾಥಾಶ್ರಮಕ್ಕೆ ಸೇರಿಸೋದು... ಅದೇ ನನ್ನ ಅಂತಿಮ ತೀರ್ಮಾನ!

(ಮಗುವನ್ನು ನೋಡಿ ಕಣ್ಣೀರು ಹಾಕಿಕೊಳ್ಳುತ್ತಾನೆ)

* * *

ಕಿರಣ್ : ನಾಗನಾಥ್..... ಐ ಆಮ್ ಸಾರಿ...

ನಾಗ : ಬಾರಯ್ಯಾ... ಏನು ಮಾಡೋದು, ತಂದದ್ದೆಲ್ಲಾ ಅನುಭವಿಸಬೇಕಲ್ಲಾ.

ಕಿರಣ್ : ಮಗು...

ನಾಗ : ಅನಾಥಾಶ್ರಮಕ್ಕೆ ಸೇರಿಸಿಬಿಟ್ಟೆ ಕಣಯ್ಯ.

ಕಿರಣ್ : ಪಾಪ ಹೀಗಾಗ್‌ಬಾರ್ದಾಗಿತ್ತು ನಾಗ್.

ನಾಗ : ನಾಗಶ್ರೀ ಮರೆಯಕ್ಕಾಗಲ್ಲಾ ಕಿರಣ್. ಇನ್ನೂ ಅವಳದೇ ನೆನಪು ನನ್ನ ಮನದಾಳದಲ್ಲಿ ಬೇರೂರ್ಬಿಟ್ಟಿದೆ.

ಕಿರಣ್ : ನೀನು ಧೈರ್ಯಗುಂದಬೇಡ ಕಣಯ್ಯಾ. ನಾನು ನಿನಗೊಂದು ಮಾತ್ ಹೇಳ್ತೀನಿ As a friend ಒಪ್ಪಗೊಳ್ಳಬೇಕು.

ನಾಗ : ಮತ್ತೊಂದು ಮದುವೆ! ಅಷ್ಟೇ ತಾನೇ ನನಗೆ ಗೊತ್ತು.

ಕಿರಣ್ : ನೀನೇನು ಮುದುಕನಯ್ಯಾ ಹಾಗೇ ಇರೋಕೆ. ಮದುವೆಯಾಗಿ ಒಂದು ವರ್ಷ ಆಗಿಲ್ಲ, ಆಗ್ಲೇ ಏನೋ ದುರದೃಷ್ಟಕ್ಕೆ ಹೆಂಡ್ತಿಗೆ ಅಪಾಯ ತಪ್ಪಿತು... ಅದಕ್ಕೆ ಹಾಗೇ ಇರಬೇಕಾ, ಮದ್ವೆ ಆಗಬಾರದಾ...? ನಾಳೆ ಬಂದುಬಿಡು ನಮ್ಮ ಮನೆಗೆ ಅಲ್ಲಿಂದಲೇ ಹೋಗೋಣ, ನಮ್ಮ ಬೀದಿಯಲ್ಲೇ ಒಂದು ಹುಡುಗಿ ಇದೆ. ಬಡವರು ಹುಡುಗಿ ಗುಣ ಚಿನ್ನದಂಥದ್ದೇ. ನಿನಗೆ ಸೂಕ್ತವಾದ ಕನ್ಯೆ ಕಣಯ್ಯಾ, ನಿಭಾಯಿಸಿಕೊಂಡು ಹೋಗ್ತಾಳೆ ಸಂಸಾರನ. ಬೇಕಾದ್ರೆ ನಿನ್ನ ಮಗನನ್ನೂ ನೋಡಿಕೊಂತಾಳೆ.

ನಾಗ : ಆ ಕೆಲಸ ಬೇಡಪ್ಪಾ ನನ್ನ ಮಗನನ್ನು ಮಲತಾಯಿ ಕೈ ಕೆಳಗೆ ಇರಲಿಕ್ಕೆ ಬಿಡಲ್ಲಾ.

ಕಿರಣ್ : ನನ್ನಿಷ್ಟ ಒಪ್ಪಿದ ಹಾಗೇ ಮಾಡು. ಮದ್ವೆ ಆದ್ರೆ ಸಾಕು. ನೀನು ಒಂಟಿಯಾಗಿರೋದನ್ನ ನಾನು ನೋಡಲಾರೆ.... ಆಮೇಲೆ ನೀನು ಬರೇ

ಚಿಂತೆಯಲ್ಲೇ ಇದ್ದು ಬಿಡ್ತೀಯಾ. ವಿರಹದ ನೋವಿನಿಂದ ಹುಚ್ಚಿಡಿದ್ರೂ ಹಿಡಿದುಬಿಡುತ್ತೆ.

ನಾಗ : ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೀಯಾ ಬಿಡು ಕಿರಣ್

ಕಿರಣ್ : ವರ್ಷ ತುಂಬದ್ರೊಳ್ಗೆ ಆಗ್ಬಿಡು. ಆಮೇಲೆ ಒಳ್ಳೆ ಕಾಲ ಕಾಯಬೇಕಾಗುತ್ತೆ.

ನಾಗ : ನೋಡೋಣ.

ಕಿರಣ್ : ನೋಡೋಣ ಅಂದ್ರೆ ಹುಡುಗೀನ್ ತಾನೇ.

ನಾಗ : ಇಲ್ಲ ಮುಂದೆ ನೋಡೋಣ.

ಕಿರಣ್ : ಅದ್ಕೇ ನಾನು ಅನುಮಾನವಾಗಿ ಕೇಳ್ದೆ. ಅದು ಸರಿಯಾಗಿಯೇ ಆಯ್ತು.

ನಾಗ : ಈಗ್ತಾನೇ ಹೆಂಡ್ತಿ ಕಳ್ಕೊಂಡು ಈಗ್ಲೇ ಮದುವೆ ಆಗೋದು ಅಂದ್ರೆ ನನಗೆ ಬೇಸರಕಣಪ್ಪಾ.

ಕಿರಣ್ : ಇದೆಲ್ಲಾ ಮೊದಲಿಗೆ ಇದ್ದುದೇ. ಆದ್ರೆ ಮರೀಲೇಬೇಕು. ಜೀವನ ಸಾಗಿಸಲೇಬೇಕು, ಆಗೋಲ್ಲ ಅಂದ್ರೆ ಹ್ಯಾಗೆ, ನಾಳೆ ಬರಬೇಕು. ಸಾಯಂಕಾಲ ಹೋಗೋಣ ನಿನಗಾಗಿ ಕಾಯ್ತಿರ್ತೀನಿ.

ನಾಗ : ಆಯ್ತು....

(ಕಿರಣ್... ಹೊರಡುವನು)

ನಾಗ : ಹೌದು ಕಿರಣ್, ಗೋಪಿ ಹೇಳಿದ್ದು ನನಗೋಸ್ಕರವಾಗಿ. ನನ್ನ ಹಿತಕ್ಕೋಸ್ಕರವಾಗಿ... ಎಷ್ಟು ಜನ ಹೆಂಡ್ತಿ ತೀರಿಹೋದಮೇಲೆ ಮದುವೆ ಆಗಿಲ್ಲ. ಆಗದೇ ಹೋದ್ರೆ ನಿಜವಾಗಲೂ ಅದೇ ಯೋಚನೇಲಿ ಹುಚ್ಚು ಹಿಡಿದ್ರೂ ಹಿಡಿಯಬಹುದು.... ಎಲ್ಲಾ ದೈವೇಚ್ಛೆ. ಏನೇನು ನಡೆಯಬೇಕೋ ನಡೀಲಿ.

* * *

(ಅನಾಥಾಶ್ರಮಕ್ಕೆ ಬರುತ್ತಾನೆ ನಾಗನಾಥ, ಚಂದ್ರನಾಥನನ್ನು ನೋಡಲು ಅಲ್ಲಿನ ವಾರ್ಡನ್ ಲಲಿತಾ ಅವರನ್ನು ಕಂಡು)

ನಾಗ : ನಮಸ್ಕಾರ ಮೇಡಂ

ಲಲಿತಾ : ಬನ್ನಿ... ಕೂತ್ಕೊಳ್ಳಿ. ನಿಮ್ಮ ಮಗ ಚೆನ್ನಾಗಿದ್ದಾನೆ.

ನಾಗ : ಸ್ವಲ್ಪ ಕರಿಸ್ತೀರಾ?

ಲಲಿತಾ : ಆಯ್ತು... ರಂಗಮ್ಮ... ಚಂದ್ರನಾಥನನ್ನು ಕರ್ಕೊಂಡು ಬಾರಮ್ಮ

ರಂಗಮ್ಮ: ಆಗಲಿ ಮೇಡಂ

(ಹೋಗಿ ಕರೆತರುವಳು)

ನಾಗ : ಏನು ತಂಟೆ ಇಲ್ವಾ ಮೇಡಂ

ಲಲಿತಾ : ಇಲ್ಲ ಒಳ್ಳೆ ಹುಡುಗ, ಎಲ್ಲರೊಂದಿಗೂ ಹೊಂದಿಕೊಂಡು ನಡೀತಾನೆ. ಬಂದಾ ನೋಡಿ...

ಚಂದ್ರ : ಅಪ್ಪಾ...

ನಾಗ : ಬಾ ಚಂದ್ರನಾಥ..... ಹ್ಯಾಗಿದ್ದೀಯಪ್ಪಾ...?

ಚಂದ್ರ : ಚನ್ನಾಗಿದ್ದೀನಪ್ಪಾ.

ನಾಗ : ಚೆನ್ನಾಗಿ ಓದ್ತಾ ಇದ್ದೀಯಾ?

ಚಂದ್ರ : ಓದ್ತಾ ಇದ್ದೀನಪ್ಪಾ.

ನಾಗ : ಏನು ಬೇಕು ನಿನಗೆ?

ಚಂದ್ರ : ಏನು ಬೇಡಪ್ಪಾ.

ನಾಗ : ಲಲಿತಾ ಮೇಡಂ ಹತ್ತಿರ ಹಣಕೊಟ್ಟಿದ್ದೀನಿ ನಿನಗೇನು ಬೇಕು ಕೇಳು ತರಿಸಿಕೊಡ್ತಾರೆ.

ಚಂದ್ರ : ಆಯ್ತಪ್ಪಾ....

ನಾಗ : ಎಲ್ರೂ ನಿನ್ನ ಜೊತೆಯವರು ಚೆನ್ನಾಗಿದ್ದಾರಾ?

ಚಂದ್ರ : ಚೆನ್ನಾಗಿದ್ದಾರೆ. ಎಲ್ಲರೂ ಆಟ ಆಡ್ತೀವಿ, ಜೊತೇಲಿ ಊಟ ಮಾಡ್ತೀವಿ, ಓದಿಕೊಳ್ತೀವಿ, ನಂಗೇನೂ ಬೇಜಾರಾಗಲ್ಲಪ್ಪ. ನೀವು ಆಗಾಗ ಬರ್ತೀರಿ ನನ್ನ ಎಷ್ಟು ಚನ್ನಾಗಿ ನೋಡ್ಕೊಳ್ತಿದ್ದೀರಿ.

ನಾಗ : ಏನು ಚಂದಾನೋ ಏನೋ.... ಮೇಡಂ ಸ್ವಲ್ಪ ಹೊರಗಡೆ ತಿರುಗಾಡಿಸಿಕೊಂಡು ಬರ್ತೀನಿ.

ಲಲಿತಾ : ಹೋಗಿ ಬನ್ನಿ...

ನಾಗ : ಬಾ ಚಂದ್ರನಾಥ ಹೋಗೋಣ... ಯಾರೊಂದಿಗೂ ಜಗಳ ಆಡಬಾರದಪ್ಪಾ. ಲಲಿತಾ ಅವರು ಹೇಳಿದ ಹಾಗೆ ಕೇಳಬೇಕು... ಚನ್ನಾಗಿ ಓದಿ ದೊಡ್ಡವನಾಗಬೇಕಪ್ಪಾ ನೀನು.

ಚಂದ್ರ : ಹಾಗೇ ಆಗ್ಲಪ್ಪಾ...

ನಾಗ : ಹೋಟೇಲಿಗೋಗೋಣ.

ಚಂದ್ರ : ಆಯ್ತಪ್ಪಾ...

ನಾಗ : ಏನು ತಿನ್ನಬೇಕು ಹೇಳು.

ಚಂದ್ರ : ಏನಾದ್ರೂ ತಿಂದ್ರಾಯ್ತು ನಡ್ಯಪ್ಪಾ.

ನಾಗ : ಮಸಾಲೆದೋಸೆ, ಕೇಸರಿಬಾತ್... ನಿಂಗೇನ್ ಬೇಕು ತೆಗೋ...

(ಹೋಟೇಲ್‌ಗೆ ಹೋಗಿ ತಿಂಡಿ ತಿಂದು ಬರುತ್ತಾರೆ)

ನಾಗ : ನಾನಿನ್ನು ಬರ್ತೇನೆ ಮೇಡಂ....

ಲಲಿತಾ : ಒಳ್ಳೇದು....

ನಾಗ : ಚಂದ್ರನಾಥ ಬರ್‍ಲಾ... ಮತ್ತೆ ಭಾನುವಾರ ಬರ್‍ತೀನಿ

ಚಂದ್ರ : ಆಯ್ತಪ್ಪಾ.

* * *

ನಾಗ : ಸುನಂದಾ ನಾಗಶ್ರೀಯಷ್ಟೇ ಚೆನ್ನಾಗಿದ್ದಾಳೆ. ಬಡತನಕ್ಕೆ ತಕ್ಕ ಸರಳತೆ, ಸೌಜನ್ಯತೆ ಇದೆ. ಎಲ್ಲರೂ ಒಪ್ಪಿದ್ದು ಆಗಿದೆ. ನನ್ನ ಒಪ್ಪಿಗೆಯನ್ನು ಕೊಟ್ಟಿದ್ದಾಗಿದೆ. ಮದುವೆ ದಿನಗಳು ಬಂದೇ ಬಿಟ್ವು. ಈ ವಿಷಯವನ್ನು ಚಂದ್ರನಾಥನಿಗೆ ತಿಳಿಸಲೇ ಇಲ್ಲ. ತಿಳಿಸಿದ್ರೆ ಆತನಿಗೆ ಬೇಜಾರಾಗಬಹುದು. ಆದ್ರೆ.... ಈ ವಿಷಯ ಸುನಂದಳಿಗೆ ಗೊತ್ತಿದ್ರ್ಯೋ ಏನೋ ವಿಚಾರವನ್ನು ಕಿರಣ್ ಹೇಳಿದ್ರೂ ಹೇಳಿರಬಹುದು. ನಾನಾಗಿ ಈ ವಿಚಾರವನ್ನು ಇಬ್ಬರಲ್ಲೂ ಹೇಳದೆ ಇರೋದು ವಾಸಿ. ನನ್ನ ಮಗನಿಗೆ ಮದುವೆ ಆದೆ ಅಂತ ನನ್ನ ಬಗ್ಗೆ ದ್ವೇಷ ಬರಬಹುದು. ಅಥವಾ ಹೆಂಡ್ತಿಗೆ ಆತನ ಮೇಲೆ ದ್ವೇಷ ಬರಬಹುದು. ಆದ್ರೆ ಸುಸಂದಾ ಆ ರೀತಿ ವ್ಯಕ್ತಿಯಲ್ಲಾ.... ಆಕೆಗೆ ಯಾವ ರೀತಿಯ ಹಿಂಸೆಯೂ ಬೇಡ...

* * *

(ಮದುವೆ ನಡೆಯುವುದು ಸುನಂದಾ ನಾಗನಾಥನಿಗೆ ಎಲ್ಲರೂ ಆಶೀರ್ವದಿಸುವರು)

* * *

ನಾಗ : ಸುನಂದಾ... ಯಾಕೆ ಒಂದು ಥರ ಇದ್ದೀಯಾ? ಎರಡನೆ ಮದುವೆ ಅಂತ ಬೇಜಾರಾ?

ಸುನಂದ : ಹಾಗೇನಿಲ್ಲ ಪಾಪ ನಿಮಗೆ ಮದುವೆಯಾಗಿ ವರ್ಷಕ್ಕೇ ಹೀಗಾಗಬಾರದಾಗಿತ್ತು. ನಾಗಶ್ರೀ..... ಜಾಗ ತುಂಬಿಸಲಿಕ್ಕೆ ನಾನು ಬಂದೆ. ನಿಮ್ಮ ಮಗ ಹ್ಯಾಗಿದ್ದಾನೆ?

ನಾಗ : ಮಗ.... ಆ... ಚೆನ್ನಾಗಿದ್ದಾನೆ.

ಸುನಂದ : ಈಗ ಎಲ್ಲಿದ್ದಾನೆ?

ನಾಗ : ಈಗ ಅದೆಲ್ಲಾ ಯಾಕೆ?

ಸುನಂದ : ಆತನನ್ನು ಅನಾಥಾಶ್ರಮದಲ್ಲಿ ಬೆಳೆಸುವಂಥದ್ದೇನು?

ನಾಗ : ಯಾರೂ ನೋಡುವವರಿರಲಿಲ್ಲ.

ಸುನಂದ : ಈಗ್ಲಾದ್ರೂ ಕರ್ಕೊಂಡು ಬನ್ನಿ ನಾನಿದ್ದೀನಲ್ಲಾ.

ನಾಗ : ಬೇಡ ಸುನಂದಾ.... ಬೇಡ. ಈ ವಿಚಾರ ನಿನಗೆ ತಿಳಿಬಾರದು ಅಂತಿದ್ದೆ. ಆದ್ರೆ ಹ್ಯಾಗೋ ತಿಳಿದಿದೆ. ಇವನ್ನು ಮುಚ್ಚಿಡಲಿಕ್ಕೂ ಸಾಧ್ಯವಿಲ್ಲ. ಈ ಹೊತ್ತು ಪ್ರೀತಿಸ್ತೀಯಾ. ನಿನಗೆ ಒಂದು ಮಗು ಆದ್ರೆ ಆಮೇಲೆ ಏನಾಗುತ್ತೋ. ಮಲತಾಯಿ ಧೋರಣೆ ಬಂದು ಬಿಡುತ್ತೆ. ಈಗ ಆತ ಅಲ್ಲಿ ಸುಖವಾಗಿದ್ದಾನೆ. ಬೆಳೀಲಿ ಬಿಡು.

ಸುನಂದ : ಈ ಮದ್ವೆ ವಿಚಾರವೂ ಆತನಿಗೆ ತಿಳಿಸಲ್ಲ ಅಂತ ಕಾಣುತ್ತೆ. ಮದ್ವೇಲಿ ನಾನು ನೋಡಿದಂಗಿಲ್ಲ.

ನಾಗ : ತಿಳಿಸಿಲ್ಲ. ತಿಳಿಯಬಾರದು. ಆಮೇಲೆ ಆತ ನನ್ನ ಬಗ್ಗೆ ದ್ವೇಷ ತಾಳಬಹುದು.

ಸುನಂದ : ಆತನನ್ನು ಒಂದು ದಿನ ತೋರಿಸಿ

ನಾಗ : ಆಗ ನಿನ್ನ ಮೇಲೆ ಅನುಮಾನ ಬಂದರೆ?

ಸುನಂದ : ಎಲ್ಲಿದ್ದಾನೆ ಹೇಳಿ ನಾನೊಬ್ಬಳೇ ಹೋಗಿ ನೋಡಿಕೊಂಡು ಬರ್ತೀನಿ.

ನಾಗ : ನೋಡ್ಡೋ ದಿನ ಬರುತ್ತೆ ಆಗ ತೋರಿಸ್ತೇನೆ ಸುಮ್ನಿರು.

ಸುನಂದ : ನಿಮ್ಮ ಸಂತೋಷ ನಿಮ್ಮ ಮನೋಭಾವಕ್ಕೆ ನಾನು ಅಡ್ಡಿ ಬರೋಲ್ಲ.

ನಾಗ : ಅದೇ ನಾನು ನಿನ್ನಿಂದ ಬಯಸೋದು.

ಸುನಂದ : ಬನ್ನಿ ತಿಂಡಿ ಆಗಿದೆ.

ನಾಗ : ಆಯ್ತು ನಡೆ.

* * *

(ಗೋಪಿ ಅನೇಕ ವರ್ಷಗಳ ಮೇಲೆ ನಾಗನಾಥನ ಮನೆಗೆ ಬರುತ್ತಾನೆ)

ನಾಗ : ಅಂತೂ ಮರೆತುಬಿಟ್ಟೆ ಅಂತ ತಿಳ್ಕೊಂಡಿದ್ದೆ. ನಾಲ್ಕು ವರ್ಷಗಳ ಮೇಲೆ ಆಯ್ತು ನಿನ್ನ ನೋಡಿ.

ಗೋಪಿ : ಅಲ್ಲಯ್ಯಾ ಮರೆತವ್ನು ನೀನು. ಮದ್ವೆ ಆಗು ಅಂತ ಹೇಳಿದೆ ನಾನು, ನನ್ನ ಮಾತು ಕೇಳ್ಲಿಲ್ಲ, ಈಗ ಬೇಡ ಅಂದೆ, ಆದ್ರೆ ಈಗ ಮದುವೆ ಆಗ್ಬಿಟ್ಟು... ನಾಲ್ಕು ವರ್ಷದ ಮಗುನೂ ಇದ್ದಾನೆ.

ನಾಗ : ಆಶ್ಚರ್ಯ ಅಲ್ಲಾ.

ಗೋಪಿ : ಒಳ್ಳೇ ಕೆಲಸ ಮಾಡಿದೆ. ಓ... ಅವನೇನಾ ಮಗನೂ, ಏನೆಸ್ರಿಟ್ಟಿದ್ದೀಯಪ್ಪಾ?

ನಾಗ : ಇಂದ್ರನಾಥ.....

ಗೋಪಿ : ಬಾರೋ ಇಂದ್ರ.....

ಇಂದ್ರ : ಅಪ್ಪಾ ಇವರ್‍ಯಾರು?

ನಾಗ : ನಮ್ಮ ಫ್ರೆಂಡ್.

ಇಂದ್ರ : ಈಗ ನನ್ನ ಕರೀತಾರೆ, ಈಗ ನನ್ನ ಫ್ರೆಂಡ್ ಆದ್ರಲ್ಲಾ.

ಗೋಪಿ : ಹೌದಪ್ಪ ನಾನು ನಿಮ್ಮ ದೊಡ್ಡ ಫ್ರೆಂಡ್. ನಿಮ್ಮಪ್ಪ ನನ್ನ ಚೆಡ್ಡಿ ಫ್ರೆಂಡ್

ಇಂದ್ರ : ಈಗ ನಾನು ಚಡ್ಡಿ ಹಾಕಿದ್ದೀನಿ ನಾನು ನಿಮ್ಮ ಚಡ್ಡಿ ಫ್ರೆಂಡಲ್ವೇ?

ಗೋಪಿ : ಬಲೇ ಕಿಲಾಡಿ ಇದ್ದಾನಲ್ಲಯ್ಯಾ ನಿನ್ನ ಮಗ: ಹ್ಯಾಗೋ ಅಂತಿದ್ದೆ ಬೆರಳು ತೋರಿದ್ರೆ ಹಸ್ತ ನುಂಗ್ತಾನೆ.

ನಾಗ : ಈಗಿನ ಕಾಲದ ಹುಡುಗರನ್ನು ಏನು ಕೇಳ್ತೀಯ? ಅಸಾಧ್ಯದವರು.

ಗೋಪಿ : ಯಾವ ಕ್ಲಾಸೋ....

ಇಂದ್ರ : ಲೋವರ್ ಕೆಜಿ..

ಗೋಪಿ : ಅಪ್ಪರ್ ಕೆಜಿಗೆ ಯಾವಾಗ ಹತ್ತಿತಿಯೋ....?

ಇಂದ್ರ : Next Year.

ಗೋಪಿ : ಪಾಸ್ ಮಾಡಿಬಿಡ್ತೀಯಾ?

ಇಂದ್ರ : ಚನ್ನಾಗಿ ಬರೆದ್ರೆ ಪಾಸ್ ಮಾಡ್ತಾರೆ. ನಾನೇನು ಮಾಡೋದು ಅವ್ರೇ ಮಾಡೋದು.

ಗೋಪಿ : ಆಯ್ತಪ್ಪಾ ಬಾಳ ಸಂತೋಷ.

ಇಂದ್ರ : ಸಂತೋಷ.

ನಾಗ : ಏನು ಬಹಳ ಮಾತಾಡ್ತೀಯಾ?

ಇಂದ್ರ : ಅಪ್ಪಾ ಪ್ರಶ್ನೆ ಕೇಳಿದ್ರೆ ಉತ್ತರ ಹೇಳೋದು ಬ್ಯಾಡ್ವಾ.

ಗೋಪಿ : ಬೇಕಪ್ಪಾ... ಬೇಕು.

ನಾಗ : ಈಕೆ ನನ್ನ ಹೆಂಡತಿ ಸುನಂದಾ....

(ಇಬ್ಬರೂ ನಮಸ್ಕರಿಸುವರು)

ಗೋಪಿ : ಮದ್ವೇಲಿ Introduce ಮಾಡೋದ್ನ ಈಗ ಮಾಡ್ತಿದ್ದೀಯಾ ಪರ್ವಾಗಿಲ್ಲ ಬಿಡು.

ನಾಗ : ಏನು ನೋಡ್ತಾ ನಿಂತೆ. ಅಪರೂಪಕ್ಕೆ ಮನೆಗೆ ಅತಿಥಿ... ಅತಿಥಿ ಅನ್ನೋದ್ಕಿಂತ Close Friend, ಆತ್ಮೀಯ ಗೆಳೆಯ ಬಂದಿದ್ದಾನೆ. ಏನು ಮಾಡಿದ್ದೀಯಾ?

ಗೋಪಿ : ಏನು ಬೇಡ್ವಪ್ಪಾ. ಮಾಡಿರೋದು ಹಾಕಿದ್ರೆ ಸಾಕು.

ನಾಗ : ಹೊಟ್ಟೆ ತುಂಬಾ ಹಸಿವಾಗಿರುವಂತೆ ಕಾಣುತ್ತೆ.

ನಾಗ : ಈ ಹೊತ್ತು ನಮ್ಮ ಇಂದ್ರನಾಥನ 4th Birth Anniversary ಅಲ್ವೇ?

ಇಂದ್ರ : ಬಿಸಿಬೇಳೇ ಬಾತ್, ಹಾಲೊಬ್ಬಟ್ಟು ಮಾಡಿದ್ದಾಳೆ ಅಮ್ಮಾ.

ಗೋಪಿ : ನೋಡ್ದಾ... ಗುಟ್ಟು ರಟ್ಟು ಮಾಡಿಬಿಟ್ಟಾ?

ನಾಗ : ಎದ್ದೇಳಪ್ಪಾ- ಬಿಸಿಬೇಳೆ ಬಾತ್ ಆರಿಹೋದ್ರೆ ರುಚಿ ಇರೋಲ್ಲ, ಬಿಸಿಬಿಸಿಯಾಗಿಯೇ ಇರಬೇಕು.

ಸುನಂದ : ಇಲ್ಲಿ ಎಲ್ಲಾ ಬಿಸಿಯಾಗಿದೆ ಎದ್ದು ಬನ್ನಿ.

ನಾಗ : ನಡ್ಯಪ್ಪಾ.... Green Signal ಬಂತು.

ಗೋಪಿ : ಮದ್ವೆ ಸ್ವೀಟ್ ಸಿಗಲಿಲ್ಲ. ನಿನ್ನ ಮಗನ ೪ನೇ ವರ್ಷದ Birthday ಸಮಾರಂಭದ ಊಟವಾದ್ರೂ ಆಗಲಿ.

(ಎಲ್ಲರೂ ಹೊರಡುವರು)

ನಾಗ : ಇದೇನೇ ಸುನಂದಾ ಇಂದ್ರ ಅಳ್ತಾ ಇದ್ದಾನೆ.

ಸುನಂದ : ಮೊದಲನೇ ಪರೀಕ್ಷೇದು ಮಾರ್ಕ್ಸ್ ಕಾರ್ಡ್ ಬಂದಿದೆ, ನೋಡಿ ಸಂತೋಷಪಡಿ.

ನಾಗ : ಬರೀ ಮಾತಿನ ಮಲ್ಲ ಅಷ್ಟೇ... ಬೇರೆದ್ಕೆ ಬ್ರೈನ್ ಉಪಯೋಗಿಸ್ತಾನೆ, ಇದಕ್ಕೆ ಮಾತ್ರ ನಿಲ್....

ಸುನಂದ : ಅದ್ಕೇ ಬಮ್ದೆ ಅಳ್ತಾ ನಿಂತಿದ್ದಾನೆ.

ನಾಗ : ಮಕ್ಕಳನ್ನ ನೋಡಿದ್ರೆ ಒಂದು ಚೆಂದ. ನಿನ್ನೆ ಅನಾಥಾಶ್ರಮಕ್ಕೆ ಹೋಗಿದ್ದೆ, ಅಲ್ಲಿ ಮಕ್ಕಳ ಪ್ರತಿಭೆ ನೋಡೋದ್ಕೆ ಒಂದು ಚಂದ

ಇಂದ್ರ : ನನ್ನನ್ನೂ ಸೇರಿಸಿಬಿಡಿ....

ಸುನಂದ : ತಂದೆ-ತಾಯಿ ಇಬ್ರೂ ಜೀವಸಹಿತ ಇದ್ದೀವಲ್ಲಾ.... ಅದ್ಕೇ ಮನೆಯಲ್ಲೇ ಕಲಿ ನಿನ್ನ ಪ್ರತಿಭೆ ತೋರಿಸು ಅಂತ.

ಇಂದ್ರ : ನನಗೆಷ್ಟು ಸಾಧ್ಯವೋ ಅಷ್ಟು ಮಾಡ್ತೀನಿ, ಅದ್ಕೂ ಮಾಡು ಅಂದ್ರೆ ಆಗೋಲ್ಲ. ಒಬ್ಬೊಬ್ಬರಿಗೆ ಒಂದೊಂದು ರೀತಿ ಪ್ರತಿಭೆ ಇರುತ್ತೆ

ನಾಗ : ಅದರಲ್ಲಿ ಈತ ಮಾತಿನ ಮಲ್ಲ.

(ತಾಯಿ ನಗಲು)

ಇಂದ್ರ : ಬಿಡಬೇಡ ಹಲ್ಲ.

ಸುನಂದ : ಅಲ್ಲಲ್ಲೇ ಒಳ್ಳೇ ಬುದ್ಧಿವಂತನಾಗು, ಪ್ರತಿಭಾವಂತನಾಗು ಅಂತ ಹೇಳೋದು ತಪ್ಪೇ ತಂದೆ ತಾಯಿಗಳು.

ಇಂದ್ರ : ನಮಗೂ ಎಲ್ಲಾ ಆಗಬೇಕು, ಎಲ್ಲಾ ಪ್ರೈಜ್ ತೆಗೆದುಕೊಳ್ಳಬೇಕು, ಹೆಚ್ಚಿಗೆ ಮಾರ್ಕ್ಸ್ ತೆಗೆದುಕೊಳ್ಳಬೇಕು ಅಂತಿರುತ್ತೆ, ಆದ್ರೆ ನನಗಾಗಲ್ವೇ ಏನ್ಮಾಡ್ಲಿ.... ಮೇಲಕ್ಕೆ ಹತ್ತಿ ಕೆಳಕ್ಕೆ ಬೀಳ್ಲಾ.

ಸುನಂದ : ಅಂತೂ ಮಾತಿಗೆ ಮಾತು ಕೊಡೋದ್ನ ಕಲ್ತು ಬಿಟ್ಟೆ.

ನಾಗ : ಕೂತುಕೊಂಡು ಓದಲಿಕ್ಕಾಗದೇ?

ಇಂದ್ರ : ನಾನು ಈಗ ಓದುತ್ತಾ ಇಲ್ವಪ್ಪಾ...

ನಾಗ : ಏನು ಪ್ರಯೋಜನ? ನಿನ್ನ ಮಾರ್ಕ್ಸೇ ಹೇಳುತ್ತಲ್ಲಾ... ಮನೆಪಾಠ ಬೇರೆ ಹೇಳಿಸಿದ್ದೀನಿ. ಏನು ಓದುತ್ತೀಯೋ ಕೂತ್ಕೊಂಡು, ತೂಕಡಿಸ್ತೀಯೋ?

ಸುನಂದ : ಅದೇ ಅವನು ಮಾಡೋದು. ಹೊಟ್ಟೆ ತುಂಬಾ ಊಟ ಹಾಕ್ತೀಯೆ ಮೈ ತುಂಬಾ ಬಟ್ಟೆ ಕೊಡ್ತೀವಿ ಅದ್ಕೇ ಹೀಗಾಗಿದ್ದಾನೆ. ಬಡತನದಲ್ಲಿದ್ದ ಹುಡುಗರು ಅದೆಷ್ಟು ಚೆನ್ನಾಗಿ ಶ್ರದ್ಧೆಯಾಗಿ ಓದುತ್ತಾರೆ? ಕಷ್ಟಪಟ್ರೇ ಗೊತ್ತಾಗೋದು.

ನಾಗ : ಸರಿ ಈಗ ಊಟ ಹಾಕು ಹೊಟ್ಟೆ ಹಸಿದಿದೆ ಪಾಪ.

ಸುನಂದ : ಬಾಬಾ... ಬಾ....

ನಾಗ : ಏನೋ ಬರೋಲ್ಲ ಅಂತ ಕಾಣುತ್ತೆ ಮಾರ್ಕ್ಸ್ ಹೆಚ್ಚಿಗೆ ತೆಗೆಯೋವರೆಗೆ ಮಾಡಲ್ವಂತೆ.

ಇಂದ್ರ : ಅಂದ್ರೆ ಸಾಯಿ ಅಂತ್ಲಾ.

ಸುನಂದ : ಅಬ್ಬ ಅಬ್ಬಾ ಅದೇನು ಒರಟು ಒರಟಾಗಿ ಮಾತಾಡ್ತೀಯೋ ಬಾರೋ

ಇಂದ್ರ : ಬೇಡ ಹೋಗಿ.

ನಾಗ : ಹೊಟ್ಟೆಹಸಿದರೆ ಅವನೇ ಬರ್ತಾನೆ ಬಿಡೇ

ಸುನಂದ : ಸಾಕು ಸುಮ್ನಿರಿ.... ಬಾರಪ್ಪಾ.... ಬಾ ಮರಿ... ಮುಂದೆ ಓದಿ ಚನ್ನಾಗಿ ಮಾರ್ಕ್ಸ್ ತೆಗೆಯುವ್ಯಂತೆ ಬಾ....

(ಕೈ ಹಿಡಿದ ಎಳೆದುಕೊಂಡು ಹೊರಡುವಳು)

* * *

ಸುನಂದ : ಏನ್ರೀ... ಅನಾಥಾಶ್ರಮದಲ್ಲಿರೋ ನಿಮ್ಮ ಮೊದಲನೇ ಮಗನ ಹೆಸರೇನು?

ನಾಗ : ಈಗ ಆತನ ಹೆಸರು ಕಟ್ಟಿಕೊಂಡು ಏನಾಗಬೇಕು?

ಸುನಂದ : ಹೇಳಿದ್ರೇನು ಕಷ್ಟ.

ನಾಗ : ಚಂದ್ರನಾಥ ಅಂತ.

ಸುನಂದ : ಯಾವಾಗ ತೋರಿಸ್ತೀರಾ?

ನಾಗ : ಅವನ್ನ ನೋಡಿ ಏನು ಮಾಡಬೇಕು?

ಸುನಂದ : ಹೇಳಿದ್ರೆ ನಷ್ಟ ಏನು?

ನಾಗ : ನೀನು ಯಾರು ಅಂತ ಗೊತ್ತಾಗಿ ನನ್ನ ಮೇಲೆ ಮಗು ದ್ವೇಷ ಮಾಡಿದ್ರೆ?

ಸುನಂದ : ಹಾಗಾದ್ರೆ ಈ ವಿಷಯ ಆತನಿಗೆ ದೊಡ್ಡವನಾದ ಮೇಲೂ ಗೊತ್ತಾಗೋಲ್ವೇ?

ನಾಗ : ಆಮೇಲೆ ಗೊತ್ತಾದ್ರೆ ಏನಾದ್ರೂ ಆಗಲಿ.

ಸುನಂದ : ಮಕ್ಕಳಿಗೆ ಮೋಸ ಮಾಡಿದಾಗಾಗೋಲ್ವೆ. ಇರೋ ವಿಚಾರ ಹೇಳಿದ್ರೇನು? ಆಮೇಲೆ ನಮ್ಮಪ್ಪ ನನ್ನ ಅನಾಥಾಶ್ರಮಕ್ಕೆ ಸೇರಿಸಿ ಮದುವೆ ಆದ ಅಂತ ಹೇಳೋಲ್ವೇ?

ನಾಗ : ಈಗ ನೀನು ನೋಡಬೇಕು, ಮಲತಾಯಿ ಅಂತ ಹೇಳಬೇಕು ಅಲ್ವೇ?

ಸುನಂದ : ಯಾವುದ್ನೂ ಯಾಕೆ ಮುಚ್ಚಿಡಬೇಕು? ನೀವು ಮದ್ವೆ ಆದ್ರೂ ನಾನು ಮದುವೆ ಆಗಲಿಲ್ಲವೇ.

ನಾಗ : ಹೌದು... ಈಗೇನು ಮಾಡಬೇಕು ಅಂತಿದ್ದೀಯೆ?

ಸುನಂದ : ಹೋಗಿ ಅವನನ್ನೇ ನೋಡಬೇಕು, ಅವನ ಪ್ರತಿಕ್ರಿಯೆ ತಿಳಿಯಬೇಕು.

ನಾಗ : ತಿಳಿದು ಏನು ಮಾಡ್ತೀಯೆ?

ಸುನಂದ : ಎಲ್ಲದ್ಕೂ ಪ್ರಶ್ನೆ ಹಾಕಬೇಡಿ, ನೀವು ಅವನ ಹತ್ತಿರ ಕರ್‍ಕೊಂಡೋಗ್ತೀರೋ ಇಲ್ವೋ?

ನಾಗ : ಕರಕೊಂಡೋಗ್ತೀನಿ, ಆದ್ರೆ ಒಂದು ಕಂಡೀಷನ್‌ನ ಮೇಲೆ.

ಸುನಂದ : ಏನದು ಕಂಡೀಷನ್?

ನಾಗ : ನೀನು ಬೇರೆ ನಾನು ಬೇರೆಯಾಗಿ ಇರಬೇಕು. ನಾವಿಬ್ರೂ ಗಂಡ ಹೆಂಡಿರು ಅಂತ ತಿಳಿಬಾರದು. ದೂರದಲ್ಲೇ ಇದ್ದು ಎಲ್ಲವನ್ನು ತಿಳಿಕೋ. ನಾಳೆ ಹ್ಯಾಗಿದ್ರೂ ಅವರ 'ಸ್ಕೂಲ್‌ಡೇ' ಇದೆ. ಆತನೂ ಫ್ಯಾನ್ಸಿ ಡ್ರೆಸ್... ಏನೇನೋ ಮಾಡ್ತಾನಂತೆ. ಗೊತ್ತಿಲ್ಲದವಳಂತೆ ಮಾತಾಡಿಸು.

ಸುನಂದ : ಆಯ್ತು ನೀವು ಹೇಳಿದಾಗೆ ಗೂಢಾಚಾರಿಣಿ ಪಾತ್ರ ಮಾಡ್ತೀನಿ.

ನಾಗ : ಸರಿ ಈಗ ಸಂತೋಷವಾಯ್ತೇ? ಚಂದ್ರನಾಥ ಯಾರು ಅಂತ ಹೇಳಿ ವಿಷಯ ತಿಳಿದುಕೋ.

ಸುನಂದ : ಆಯ್ತು.....

* * *

(ಅನಾಥಾಶ್ರಮಕ್ಕೆ ಹೋಗುತ್ತಾರೆ. ಚಂದ್ರನಾಥ ಯಾರು ಅಂತ ಕೇಳಿಕೊಂಡು ಹೋಗುತ್ತಾಳೆ)

ಸುನಂದ : ಚಂದ್ರನಾಥ ಅನ್ನುವನು ಯಾರಪ್ಪಾ?

ಚಂದ್ರ : ನಾನೇ.... ಏನಾಗಬೇಕಿತ್ತು?

ಸುನಂದ : ನೀನ್ಯಾರ ಮಗ?

ಚಂದ್ರ : ನಾಗನಾಥ ಅವರ ಮಗ.

ಸುನಂದ : ನಿನ್ನನ್ನು ಯಾಕೆ ಇಲ್ಲಿ ಇರಿಸಿದ್ರು?

ಚಂದ್ರ : ನನ್ನ ನೋಡಿಕೊಳ್ಳಲಿಕ್ಕೆ ಯಾರೂ ಇಲ್ಲ ಅದ್ಕೇ.

ಸುನಂದ : ಬಂದು ನಿನ್ನನ್ನು ನೋಡಿಕೊಳ್ತಾರಾ?

ಚಂದ್ರ : ಪ್ರತಿ ಭಾನುವಾರ ತಪ್ಪದೇ ಬರ್ತಾರೆ. ನಂಗೇನು ಬೇಕು ಕೊಡಿಸ್ತಾರೆ.

ಸುನಂದ : ಈಗ ದೊಡ್ಡವನಾಗಿದ್ದೀಯಲ್ಲಾ ಈಗ್ಯಾಕೆ ಹೋಗಬಾರದು?

ಚಂದ್ರ : ಅಪ್ಪನಿಗೆ ತೊಂದ್ರೆ ಆಗುತ್ತೆ.

ಸುನಂದ : ನಿಮ್ಮ ತಾಯಿ?

ಚಂದ್ರ : ನಾನು ಮಗುವಾಗಿದ್ದಾಗ್ಲೇ ತಿರ್‍ಕೊಂಡ್ರಂತೆ.

ಸುನಂದ : ನಿಮ್ಮಪ್ಪ ಮತ್ತೆ ಮದ್ವೆ ಆಗಲಿಲ್ವಾ?

ಚಂದ್ರ : ಇಲ್ಲ.

ಸುನಂದ : ನೀನು ಮನೆಗೆ ಹೋಗೋಲ್ವೇ?

ಚಂದ್ರ : ಮನೇಲಿ ಯಾರೂ ಇಲ್ಲ ಯಾಕೆ ಹೋಗಲಿ, ಇಲ್ಲೇ ಎಲ್ಲಾ ಸೌಕರ್ಯ ಇದೆಯಲ್ಲಾ.

ಸುನಂದ : ನಿಮ್ಮಪ್ಪ ಇನ್ನೊಂದು ಮದುವೆ ಆಗಿದ್ರೆ ನಿನ್ನನ್ನು ನೋಡಿಕೊಳ್ಳಬಹುದಾಗಿತ್ತು ಅಲ್ವಾ?

ಚಂದ್ರ : ಹೌದು... ಅದೆಲ್ಲಾ ಅವರಿಷ್ಟ ತಾನೇ.

ಸುನಂದ : ಅವರು ಇನ್ನೊಂದು ಮದುವೆ ಆದ್ರೆ...

ಚಂದ್ರ : ಆಗಲಿ ಬಿಡಿ.

ಸುನಂದ : ಆಗ ನೀನು ಮನೆಗೆ ಬರ್ತೀಯಾ?

ಚಂದ್ರ : ಅಪ್ಪಾ ಹ್ಯಾಗೆ ಹೇಳ್ತಾರೆ ಹಾಗೆ ಕೇಳ್ತೀನಿ ಇಷ್ಟೆಲ್ಲಾ ಕೇಳ್ತೀರಲ್ಲಾ ಯಾಕೆ?

ಸುನಂದ : ಸುಮ್ಮನೆ ವಿಚಾರಿಸದೆ.

ಚಂದ್ರ : ನೀನ್ಯಾರು?

ಸುನಂದ : ಸುನಂದಾ ಅಂತ...

ಚಂದ್ರ : ಸುನಂದಾ ಅಂದ್ರೆ ಯಾರು?

ಸುನಂದ : ನಾನು ಇದೇ ಊರವಳಪ್ಪಾ.

ಚಂದ್ರ : ಒಳ್ಳೇದು ಬರ್ತೀನಿ.

ಸುನಂದ : ಏನು ಈ ಹೊತ್ತು ನಿನ್ನ ಪಾತ್ರ ಜೋರೇ School Day ನಲ್ಲಿ

ಚಂದ್ರ : ಏನೋ ಒಂದು ಫ್ಯಾನ್ಸಿ ಡ್ರೆಸ್ಸಿದೆ.... ಒಂದು Monoacting ಇದೆ ನೀವು ಇರ್ತೀರಾ? ನೋಡ್ತೀರಾ?

ಸುನಂದ : ನೋಡೋಣ ಅದ್ಯೇನಂತೆ.

ಚಂದ್ರ : ಹಾಗಾದ್ರೆ ನಾನು ಬರ್ತೀನಿ.

(ಹುಡುಗ ಹೊರಡುವನು ದೂರದಲ್ಲಿ ನಾಗನಾಥನೊಡನೆ ಮಾತಾಡುತ್ತಾಳೆ ಸುನಂದಾ)

ನಾಗ : ಏನೇ ಎಲ್ಲಾನೂ ವಿಚಾರಿಸಿಕೊಂಡಾ?

ಸುನಂದ : ವಿಚಾರಿಸಿಕೊಂಡೆ.... ಇನ್ನೊಂದು ಮದ್ವೇ ಆಗಲಿ ಅಪ್ಪ ಅಂದ.

ನಾಗ : ಹಾಗಾದ್ರೆ ನಿನ್ನ ಪರಿಚಯ ಹೇಳಿಬಿಟ್ಯಾ?

ಸುನಂದ : ಹೇಳಿದೆ.

ನಾಗ : ಎಂಥ ಕೆಲ್ಸನ ಮಾಡಿದ್ಯೇ?

ಸುನಂದ : ನಿಮ್ಮ ಹೆಂಡ್ತೀ ಅನ್ನೋದೊಂದು ಬಿಟ್ಟು.

ನಾಗ : ಅಬ್ಬಾ....

ಸುನಂದ : ಅಲ್ರೀ ಹೇಳಿದ್ರೆ ತಪ್ಪೇನು, ಈ ಹೊತ್ತು ಹೇಳಬೇಕಂತಿದ್ದೆ ನೀವು ಏನಂತಿರೋ ಅಂತ ಸುಮ್ಮನಾದೆ.

ನಾಗ : ಹೇಳೋದಿನ ಇದೆ ಕಣೆ. ಇನ್ನೇನು ಕೇಳಿದೆ?

ಸುನಂದ : ಎಲ್ಲಾನೂ ಕೇಳಿದೆ, ಎಲ್ಲಾನೂ ಹೇಳಿದ. ನಿಮ್ಮಪ್ಪ ಇನ್ನೊಂದು ಮದುವೆ ಆದ್ರೆ... ಅಂದದ್ಕೇ ಆಗ್ಲಿ ಅಂದ.

ನಾಗ : ಅಷ್ಟೆಲ್ಲಾ ಕೇಳಿಬಿಟ್ಯಾ? ಈಗ ನಾವಿಬ್ರೂ ಬೇರೆ ಬೇರೆ ಕಡೆ ಇದ್ದು ನೋಡಬೇಕು ಕಾರ್ಯಕ್ರಮನಾ.

ಸುನಂದ : ಹತ್ತಿರದಲ್ಲೇ ಕೂತ್ರೆ....

ನಾಗ : ಅನುಮಾನ ಬರುತ್ತೆ ಕಣೆ.

ಸುನಂದ : ಬರಲಿ ಬಿಡಿ... ಇರೋ ವಿಚಾರ ಹೇಳಿಬಿಟ್ರಾಯ್ತು.

ನಾಗ : ಅದಕ್ಕೇ ಇಲ್ಲಿಗೆ ಕರ್‍ಕೊಂಡು ಬಂದೆ ಅಂತ ಕಾಣುತ್ತೆ.

ಸುನಂದ : ಎಲ್ರೂ ಮಲ ಮಕ್ಕಳನು ಅಟ್ಟಿದರೆ ಸಾಕು ಅಂತಿರ್‍ತಾರೆ. ಅಂಥದ್ರಲ್ಲಿ ನಾನು ನೋಡಬೇಕು, ಮಾತಾಡಿಸಬೇಕು, ಇರೋ ವಿಚಾರ ಹೇಳ್ಬಿಡ್ಬೇಕು, ಕರ್‍ಕೊಂಡು ಬರಬೇಕು ಅಂತ ಪ್ರೀತಿ ಪಟ್ರೆ ತಪ್ಪೇ? ಹುಡುಗ ತುಂಬಾ ಸಂಭಾವಿತ ಕಣ್ರೀ. ನಮ್ಮ ಇಂದ್ರನಾಥನಾಗಲ್ಲಾ.... ಏನು ಸರಳತೆ, ಸೌಜನ್ಯತೆ ನಿಜವಾಗ್ಲೂ ಅನಾಥಾಶ್ರಮದಲ್ಲಿ ಶಿಸ್ತಿನಲ್ಲಿ ಬೆಳೆದಿದ್ದಾನೆ ಕಣ್ರೀ...

ನಾಗ : ಏನೋ ದೇವ್ರು ಒಳ್ಳೇ ಬುದ್ಧಿ ಕೊಟ್ಟಿದ್ದಾನೆ. ಅದಕ್ಕೆ ನನ್ಗೂ ಸಂತೋಷ

ಸುನಂದ : ನನಗೂ ಆತನ ನೋಡಿ ಅಯ್ಯೋ ಅನ್ನಿಸುತ್ತೆ. ಆತನನ್ನು ಮನೆಗೆ ಕರ್‍ಕೊಂಡು ಹೋಗೋಣ....

ನಾಗ : ಆತ ಒಪ್ಪಬೇಕಲ್ಲ.

ಸುನಂದಾ : ನಾನು ಒಪ್ಪಿಸ್ತೀನಿ.

ನಾಗ : ಹಾಗಾದ್ರೆ ನಮ್ಮ ಗುಟ್ಟನ್ನು ರಟ್ಟು ಮಾಡಿ ಬಿಡ್ತೀಯಾ?

ಸುನಂದ : ನಾನೇನ್ರೀ ಅಂಥ ತಪ್ಪು ಮಾಡಿರೋದು?

ನಾಗ : ಮಾಡಿಬಿಟ್ಟೋ?

ಸುನಂದ : ಏನು ಅದು?

ನಾಗ : ಅದೇ ನಾವು ಮದವೆ ಆಗೋವಿಚಾರ ತಿಳಿಸಲಿಲ್ಲ. ಇಷ್ಟು ವರ್ಷಗಳಾದ ಮೇಲೆ ಮತ್ತೊಬ್ಬ ತಮ್ಮ ಆಗಿದ್ದಾನೆ ಅನ್ನೋದ್ನೆಲ್ಲಾ ಮುಚಿಟ್ಟು ಅವನಿಗೆ ಮೋಸ ಮಾಡಿದ್ವಲ್ಲಾ?

ಸುನಂದ : ನಾನಾಗ್ಲೇ ಹೇಳ್ದೆ ನಿಮ್ಗೆ, ತಿಳಿಸೋಣ ಅಂದ್ರೆ ಬೇಡ ಅಂತಂದ್ರಿ.

ನಾಗ : ಸರಿ... ನಡೀ... ಹೋಗೋಣ. ಕಾರ್ಯಕ್ರಮ ನೋಡೋಣ, ಆಮೇಲೆ ನಿನ್ನ ಮಿಕ್ಕ ಮಾತು.

(ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಚಂದ್ರನಾಥನ ಪ್ರತಿಭೆಯನ್ನು ತಂದೆ ತಾಯಿಯರು ನೋಡಿ ಸಂತೋಷಪಡ್ತಾರೆ. ಕಾರ್ಯಕ್ರಮ ಮುಗಿದ ಮೇಲೆ ಅಪ್ಪನ ಹತ್ತಿರ ಬರುತ್ತಾನೆ)

ಚಂದ್ರ : ಇದ್ಯಾರಪ್ಪಾ ಇವರು ಆಗ್ಲೇ ನನ್ನ ಮಾತಾಡಿಸಿದ್ರಲ್ಲಾ.... ನೀವು?

ಸುನಂದ : ಹೌದಪ್ಪಾ ನಾನೇ... ಸುನಂದಾ ಅಂತ ನಿಮ್ಮ ತಾಯಿ...

ಚಂದ್ರ : ನಮ್ಮ ತಾಯಿ ಸತ್ತೋದ್ರಲ್ಲಾ.

ಸುನಂದ : ಮತ್ತೊಬ್ಬಳು ತಾಯಿನಪ್ಪಾ. ನಿಮ್ಮ ತಾಯಿ ಸತ್ತ ಮೇಲೆ ನಿಮ್ಮ ತಂದೆ ನನ್ನ ಮದುವೆ ಆದ್ರು, ಮತ್ತೆ ನಾನು ನಿಮ್ಮ ಚಿಕ್ಕಮ್ಮ

ಚಂದ್ರ : ನಿಜವೇನಪ್ಪಾ?

ನಾಗ : ಹೌದಪ್ಪಾ ನಿನಗೆ ಬೇಜಾರಾಗುತ್ತೆ ಅಂತ ಹೇಳಿರಲಿಲ್ಲ.

ಚಂದ್ರ : ಅದ್ಕೆ ನನ್ನನ್ನು ಇಲ್ಲಿರಿಸಿದ್ದೂ ಅಲ್ವಪ್ಪಾ?

ನಾಗ : ಅಲ್ವೋ ಆಗ ನಾನು ಮದುವೆ ಆಗ್ತೀನಿ ಅಂತ್ಲೂ ಇರಲಿಲ್ಲ, ಆಮೇಲೆ ಅನೇಕ ಸ್ನೇಹಿತರ ಮಾತಿಗೆ ಆಗಬೇಕಾಯ್ತು. ಆದ್ರೆ ನಿನ್ನ ಕರೆದುಕೊಂಡು ಬಂದ್ರೆ ನಿಂಗೆ ನೋವಾಗಬಹುದು ಅಂತ ಒಳಗೇ ಕೊರಗ್ತಿದ್ದೆ ಕಣಪ್ಪಾ.

ಚಂದ್ರ : ಆಯ್ತು ಬಿಡಪ್ಪಾ ಅದ್ಕೇನಾಯ್ತು?

ಸುನಂದ : ನಿಂಗೆ ಬೇಜಾರಾಯ್ತಾಪ್ಪಾ?

ಚಂದ್ರ : ಇಲ್ಲ ಚಿಕ್ಕಮ್ಮ.

ಸುನಂದ : ಈ ಸಾರಿ ಪರೀಕ್ಷೆ ಆಯ್ತಲ್ಲಾ. ನೀನು ನಮ್ಮ ಮನೆಗೆ ಬಂದು ಬಿಡಪ್ಪಾ. ನಿನ್ನ ತಮ್ಮ ಇಂದ್ರನಾಥ ಇದ್ದಾನೆ, ಅವನ ಜೊತೇಲಿ ಆಡ್ಕೊಂಡು ಸಂತೋಷವಾಗಿರಬಹುದು.

ಚಂದ್ರ : ಅಪ್ಪ ಏನೇಳ್ತಾರೋ ಹಾಗೆ

ನಾಗ : ನಾನಲ್ವೋ ನಾಳೆ ದಿನ ನಿನ್ನ ಸರಿಯಾಗಿ ನೋಡಿಕೊಳ್ಳಬೇಕಾದವಳು ಚಿಕ್ಕಮ್ಮ. ಆಕೆ ಸಂತೋಷವಾಗಿ ಇರಿಸಿಕೊಳ್ಳೋದಾದ್ರೆ ನನ್ನದೇನೂ ಅಭ್ಯಂತರವಿಲ್ಲ.

ಸುನಂದ : ನನ್ನ ಹೊಟ್ಟೇಲಿ ಹುಟ್ಟಿದ ಮಗನಿಗಿಂತ ಚೆನ್ನಾಗಿ ನೋಡ್ಕೋತೀನಪ್ಪಾ ಬಂದು ಬಿಡಪ್ಪಾ.

ಚಂದ್ರ : ಆಯ್ತಮ್ಮಾ ಬರ್ತೀನಿ. ಆಮೇಲೆ ತಮ್ಮನಿಗೆ ಬೇಜಾರಾಗೋಲ್ವೆ? ಅವನು ನನ್ನ ಮೇಲೆ ಕೋಪ ಮಾಡ್ಕೊಂಡ್ರೆ.

ಸುನಂದ : ಕೇರ್ ಮಾಡೋವ್ರು ಯಾರು? ಅವನಿಗೆ ಸರಿಯಾಗಿ ಬುದ್ಧಿ ಕಲಿಸ್ತೀನಿ.

ಚಂದ್ರ : ಇಷ್ಟು ಭರವಸೆ ಕೊಟ್ಟ ಮೇಲೆ ನಾನು ಬರ್ತೀನಿ.

ನಾಗ : ನೋಡ್ದೇನೇ ಎಷ್ಟು ವಿವೇಕವಾಗಿ ಮಾತಾಡ್ತಿದ್ದಾನೆ.

ಸುನಂದ : ಒಳ್ಳೆ ಶಿಸ್ತು, ಸರಳತೆ, ಎಲ್ಲಾ ಕಲಿಸಿದ್ದಾರೆ. ಒಳ್ಳೇ ಪರಿಸರದಲ್ಲಿ ಬೆಳೆದ ಹುಡುಗ, ಒಳ್ಳೆಯವನಲ್ವೇ ಕೆಟ್ಟವನಾಗ್ತಾನ್ಯೇ?

ನಾಗ : ಸರಿ ಹೊರಡಪ್ಪಾ ಸುನಂದ

ಸುನಂದ : ವಾರ್ಡನ್‌ಗೆಲ್ಲಾ ಹೇಳಿದ್ದೀನಿ.

ಚಂದ್ರ : ಓ ಎಲ್ಲಾ ಮೊದಲೇ ಪ್ಲಾನ್ ಮಾಡಿ ಬಂದಿದ್ದೀರಿ.

ನಾಗ : ನಾನಲ್ಲಪ್ಪಾ ನಿಮ್ಮ ಚಿಕ್ಕಮ್ಮನೇ.

ಚಂದ್ರ ಎಲ್ರೂ ಮಲತಾಯಿ ಅಂದ್ರೆ ಕೆಟ್ಟವರು ಅಂತಿರ್ತಾರೆ, ಆದ್ರೆ ನಮ್ಮ ಚಿಕ್ಕಮ್ಮ ಅದೆಷ್ಟು ಪ್ರೀತಿಸ್ತಾರೇ?

ನಾಗ : ನಾನೂ ಅದ್ಕೇ ಬೇಡ ಅಂತ ನಿನ್ನ ಬೇರೆ ಇರಿಸಿದ್ದಪ್ಪಾ. ಇವಳೇ ಹಿಂಸೆ ಮಾಡಿ ನೋಡಬೇಕು ಅಂತ ಈ ಹೊತ್ತು ಕರ್ಕೊಂಡು ಬಂದ್ಲು. ಅಂತೂ ಇಬ್ರೂ ಸಂಧಿಸಿದ ಹೊತ್ತಿನ ಘಳಿಗೆ ಚನ್ನಾಗಿದೆ. ಮತ್ತೆ ನೀನು ಮನೆಯಲ್ಲೇ ಬೆಳೆಯುವಂತಾಯ್ತು ಎಲ್ಲಾ ನನ್ನ ಪುಣ್ಯ.

ಚಂದ್ರ : ನನ್ನ ಪುಣ್ಯನಪ್ಪಾ.

ಸುನಂದ : ಇಲ್ಲ ನನ್ನ ಪುಣ್ಯ.

ನಾಗ : ಎಲ್ಲರ ಪುಣ್ಯನೂ. ನಡೀರಿ ಹೋಗೋಣ... ಸಿಹಿ ಊಟ ಮಾಡೋಣ ಮನೇಲಿ.

(ಎಲ್ಲರೂ ಹೊರಡುವರು)

*

# ಬಾಲಲೀಲೆ

**ಪಾತ್ರ ವರ್ಗ**

೧. ತಂದೆ - ೫೦ವರ್ಷ ೨. ತಾಯಿ - ೪೦ ವರ್ಷ ೩. ಕುಮಾರ - ೧೨ ವರ್ಷ (ತೆನಾಲಿ) ೪. ಉಪಾಧ್ಯಾಯರು - ೪೦ ವರ್ಷ ೫. ಶಾಂತಮೂರ್ತಿ - ೧೨ ವರ್ಷ ೬. ಕೃಷ್ಣದೇವರಾಯ- ೧೨ ವರ್ಷ ೭. ಕೇಶವ - ೧೨ ವರ್ಷ ೮. ನಾರಾಯಣಭಟ್ಟ - ೧೨ ವರ್ಷ ೯. ಸುಬ್ಬಾಶಾಸ್ತ್ರಿ - ೧೨ ವರ್ಷ ೧೦. ಜಟ್ಟಿ - ೧೨ ವರ್ಷ ೧೧. ಸತ್ಯ - ೧೨ ವರ್ಷ ೧೨. ಸತ್ಯಪತಿ - ೧೨ ವರ್ಷ ೧೩. ಸುಭದ್ರ -೧೨ ವರ್ಷ ೧೪. ರಶ್ಮಿ - ೧೨ ವರ್ಷ ೧೫. ಮಧು - ೧೨ ವರ್ಷ ೧೬. ಚೇತನ್-೧೨ ವರ್ಷ ೧೭. ನಂದ -೧೨ ವರ್ಷ ೧೮. ಚಂಪಾ - ೧೨ ವರ್ಷ ೧೯. ಶಾಂತಾ - ೧೨ ವರ್ಷ ೨೦. ಶಾಂತರಾಜು - ೧೨ ವರ್ಷ ೨೧. ಹೆಗ್ಗಡೆ - ೧೨ ವರ್ಷ ೨೨. ಶಾಕುಂತಲಾ - ೧೨ ವರ್ಷ (ಹಾಗು ಕೆಲವು ಮಕ್ಕಳ ಧ್ವನಿಗಳು)

## ತರಂಗ-೧

ಸತ್ಯವತಿ : ಬನ್ರೀ... ಮೈ ತೊಳ್ಕೊಳ್ಳಿ ನೀರು ಕಾದಿದೆ.

ಕುಮಾರ : ಅಡಿಗೆ ಆಯ್ತಾ?

(ಮಗು ಅಳು)

ಸತ್ಯವತಿ : ಆಯ್ತಾ ಇದೆ. ಸ್ವಲ್ಪ ಮೊಗ ಅಳ್ತಾ ಇದೆ. ತೊಟ್ಟಿಲು ತೂಗ್ರೀ....

ಕುಮಾರ : ಅಳಬೇಡ ಮರೀ... ಅಳಬೇಡ... ಬ್ಯಾಡ ಸುಮ್ನಿರಪ್ಪಾ ನನ್ನ ಕಂದ... ಪಾಚ್ಕೋ... ಏಕೋ ಅಳೋದ್ನ ನಿಲ್ಲಿಸ್ಲಿಲ್ಲ ನೀನೇ ಕರ್‍ಕೊಬಾರೆ ಸತ್ಯವತಿ.

ಸತ್ಯವತಿ : ಇನ್ನೂ ಅಡ್ಗೆ ಆಗಿಲ್ಲ, ಆಮೇಲೆ ಲೇಟಾಯ್ತು ಅಂತ ಗಾಬ್ರಿ ಪಡಿಸ್ತೀರಿ. ಸ್ವಲ್ಪ ತಾಳ್ರೀ ಬೇಳೆ ಇಟ್ಟಿದ್ದೀನಿ ಒಲೆಮೇಲೆ.

ಕುಮಾರ : ನಾನು ಆಫೀಸಿಗೆ ಹೋಗಬೇಡ್ವೇ? ಈಗ್ಲೇ ಹೊತ್ತಾಗೋಯ್ತು ನಿನ್ನ ಮಗು ಕರ್‍ಕೊಂಡು ಕೂತ್ರೆ ಅಲ್ಲಿ ಯಾರು ಕೇಳ್ತಾರೆ?

ಸತ್ಯವತಿ : ನನಗೇ ಎರಡೇ ಕೈ ಇರೋದು. ಎಲ್ಲಾ ಕೆಲಸನೂ ಮಾಡಬೇಡ್ವೆ?

ಕುಮಾರ : ಹೋಗ್ಲಿ ಬಿಡು ಹೋಟೆಲ್ನಲ್ಲೇ ಮಾಡ್ಕೊಳ್ತೀನಿ.

ಸತ್ಯವತಿ : ಸ್ವಲ್ಪ ನಿಧಾನ್ಸಿ.

ಕುಮಾರ : ಲೇಟಾದ್ರೆ ಆಫೀಸರ್ ಲೊಟ ಲೊಟ ಅಂತಾರೆ ಯಾಕೆ?

ಸತ್ಯವತಿ : ಬರುವಾಗ ತರಕಾರಿ ತನ್ನಿ.

ಕುಮಾರ : ಆಯ್ತು.

ಸತ್ಯವತಿ : ಸುಮ್ನಿರೋ ಮರಿ.... ಹಾಲು ಬಾಟ್ಲಿಗೆ ಹಾಕ್ತರ್‍ತೀನಿ ತಾಳು.

* * *

ಸತ್ಯವತಿ : ಬನ್ನೀ ಸುಭದ್ರಮ್ಮನವರೇ ಏನು ಅಪರೂಪ?

ಸುಭದ್ರ : ನಿಮ್ಮ ಮಗಳನ್ನು ನೋಡೋವ ಅಂತ ಬಂದೋ.

ಸತ್ಯವತಿ : ಋಣಾನುಬಂಧ ಇದ್ರೆ ಆಗ್ಲಿ ಬಿಡಿ ಮೊದಲು ಮಗಳನ್ನು ನೋಡಿ ಆಮೇಲೆ ಮಾತು.

ಸುಭದ್ರ : ನಾನು ನೋಡಿಲ್ವೇ ನಿನ್ನ ಮಗಳನ್ನು ನೀನು ನನ್ನ ಮಗನನ್ನೂ ನೋಡಿಲ್ವೇ? ನಂಗೇನೋ ಒಪ್ಪಿಗೆ ಆಗಿದೆ

ಸತ್ಯವತಿ : ನಿಂಗೊಪ್ಗೆ ಆದ್ಮೇಲೆ ನಂದೇನು; ನಾನು ಒಪ್ಪಿದ್ದೀನಿ ಬಿಡು.

(ಮದುವೆ ಓಲಗದ ಶಬ್ದ, ತೆಂಗಿನ ಸೋಗಿನ ಪೀಪಿ, ಡಬ್ಬದ ಶಬ್ದ)

ಸತ್ಯವತಿ : ಎಲ್ಲಾ ಫಲಧಾನ ತಕ್ಕೊಳ್ಳಿ. ಊಟ ಮಾಡಿಕೊಂಡು ಹೋಗಬೇಕು.

ರಾಮು : ಅಮ್ಮಾ ಅಮ್ಮಾ..... ಬೇಜಾರಾಯ್ತದೆ, ಪೆಪ್ಪಿ ತೆಕ್ಕೊಡಮ್ಮಾ

ಸತ್ಯವತಿ : ಕಾಸಿಲ್ಲ ತಾಳು ಮರಿ, ನಿಮ್ಮಪ್ಪ ಬರ್‍ಲಿ ತಕ್ಕೊಡ್ತೀನಿ.

ರಾಮು : ದೀಪಾವಳಿ ಹಬ್ಬಕ್ಕೆ ಪಟಾಕಿ ತಕ್ಕೊಡಮ್ಮ

ಸತ್ಯವತಿ : ನಿಮ್ಮಪ್ಪಾವ್ರೆ ತರ್‍ತಾರೆ, ನನ್ನ ಕೇಳಬೇಡಕಣೋ ಊಟಮಾಡು ಬಾ.

ರಾಮು : ನಾನು ಊಟಾನೂ ಮಾಡೋಲ್ಲ, ಏನೂ ಮಾಡೋಲ್ಲ.

ಸತ್ಯವತಿ : ಎಷ್ಟು ಹೊತ್ಗಂಟ ಹೊಟ್ಟೆ ಹಸಿಕೊಂಡಿರ್‍ತೀಯೋ ಇರು ನಂಗೇನು?

ರಾಮು : ಪೆಪ್ಪಿ ಪಟಾಕಿ ತೆಕ್ಕೊಡೋ ತನ್ಕ ಇಂಗೇ ಹಸ್ಕಂಡೇ ಇರ್‍ತೀನಿ. (ಅಳುವನು)

ಸತ್ಯವತಿ : ನಿಲ್ಸೋ, ಸುಮ್ನೇ ಬಾಯಿ ಬಡ್ಕೋಬ್ಯಾಡ.

ತಾಯಿ : ಕೂಸಳುತ್ತಲ್ಲಾ, ಪಟಾಕಿ ತೆಗೆದುಕೊಡಿ ಸತ್ಯವತಿ ಅವ್ರೇ....

ಸತ್ಯವತಿ : ಸುಮ್ನಿರಮ್ಮಾ....

ತಾಯಿ : ಈಗೇನಮ್ಮ ನೀನು ಅಮ್ಮನಾಗ್ಬಿಟ್ಟಿದ್ದೀಯಾ? ನಿಮ್ಮ ಯಜಮಾನ್ರು ಆಫೀಸ್ನಿಂದ ಬರಲಿಲ್ವಮ್ಮಾ?

ಸತ್ಯವತಿ : ಹೋಗಮ್ಮಾ

ತಂದೆ : ಅದೇನೇ ಅಳಿಸ್ತಿರೋದು ಮಕ್ಕಳನ್ನ.

ಸತ್ಯವತಿ : ಏನಿಲ್ರೀ... ಆಟುಗಳಿ ಆಡ್ತಾ ಇದ್ದಾರೆ. ಸತ್ಯವತಿ ಈಗ ಮದ್ವೆ ಮಾಡಿದ್ಲು. ಮಗಳನ್ನು ಮದ್ವೆ ಮಾಡಿದ್ದಾಳೆ, ಮೊಮ್ಮಕ್ಕಳನ್ನ ಸಂತೈಸಿದ್ದಾಳೆ. ಇದೇ ನೋಡಿ ಬಾಲಲೀಲೆ ಅನ್ನೋದು.

ತಂದೆ : ಹ್ಯಾಗೋ ಆಟುಗಳಿ ಆಟ ಆಡ್ಕೊಳ್ಳಿ ಬಿಡೆ, ಯಾಕೆ ನಾಚ್ಕೊಗ್ತೀಯಾ... ಬನ್ನಿ... ಬನ್ನಿ ಊಟ ಮಾಡುವ್ರಂತೆ.

* * *

(ಬೆಳಗಿನ ವಾತಾವರಣ)

## ತರಂಗ-೨

ತಾಯಿ : ರಾಜಮಣೀ ಏಳಪ್ಪಾ ಬಲಮಗ್ಗಲಲ್ಲಿ ಏಳು ಮರೀ... ಈಹೊತ್ತು ಪರೀಕ್ಷೆ ಅಂತ ಹೇಳ್ತಿದ್ಯಲ್ಲಾ ಕುಮಾರಾ ಕುಮಾರಾ ಏಳಪ್ಪಾ ಏಳು

ಕುಮಾರ : (ಆಕಳಿಸುತ್ತಾ) ಹೋಗಮ್ಮಾ(ಮೈ ಮುರಿಯುತ್ತಾ) ಇನ್ನೊಂದು ಸ್ವಲ್ಪ ತಾಳಮ್ಮ

ತಾಯಿ : ಅಯ್ಯೋ ಅಯ್ಯೋ ಎಡ ಮಗ್ಗಲಲ್ಲಿ ಏಕೋ ಏಳ್ತೀಯಾ? ಬಲಮಗ್ಗಲಲ್ಲಿ ಏಳು ದೇವರ ಫೋಟೋಕ್ಕೆ ಕೈ ಮುಗ್ಯೋ ಪಾಸಾಗ್ಲಿ....

ಕುಮಾರ : ಶಿವನೇ, ಸ್ವಾಮಿ ಶಂಕರ, ನನಗೆ ರ್‍ಯಾಂಕಿನಲ್ಲಿ ಪಾಸ್ ಮಾಡ್ಸಪ್ಪಾ.

ತಾಯಿ : ಹಾಗಿರಬೇಕು ಮಕ್ಕಳು, ದೇವರು ಒಳ್ಳೇದ್ಮಾಡ್ತಾನೆ... ಬಾ.... ಬಾ.... ಸ್ನಾನಮಾಡಿ ದೇವರ ಪೂಜೆನೂ ಮಾಡುವೆ ಒಳ್ಳೇದಾಗುತ್ತೆ ಪಾಸಾಗುತ್ತೆ. (ಗಡಿಯಾರದಲ್ಲಿ ಗಂಟೆ ಹೊಡೆಯುವುದು) ನೋಡ್ದಾ... ಘಂಟೆ ಹೊಡೀತು.... ಶುಭ ಸೂಚನೆ ಎದ್ದು ನಡಿ....

ಕುಮಾರ : ಆಯ್ತಮ್ಮಾ....

ತಾಯಿ : ನಿಮ್ಮಪ್ಪನ ಕಾಲಿಗೆ, ನನ್ನ ಕಾಲಿಗೆ ನಮಸ್ಕಾರ ಮಾಡು ನಿಂಗೆ ಪ್ಯಾಸಾಗ್ತದೆ. (ಹಲ್ಲಿ ಲೊಚ ಗುಟ್ಟುವುದು) ನೋಡ್ದಾ ಎಂಥ ಒಳ್ಳೆ ಶಕುನ ನಡೆ.... ನಡೆ... ಒಳ್ಳೇದಾಗುತ್ತೆ.

ಕುಮಾರ : ಅಮ್ಮಾ ಸ್ನಾನ ಆಯ್ತು ತಿಂಡಿಕೊಡ್ತೀಯಾ ಪರೀಕ್ಷೆಗೆ ಹೊತ್ತಾಯ್ತು.

ತಾಯಿ : ಸ್ವಲ್ಪ ತಡ್ಯೋ ಈಗ್ಲೇ ಹೋಗ್ಬೇಡಾ, ರಾಹು ಕಾಲ ತೀರಿಸ್ಕೊಂಡು ಹೋಗುವ್ಯಂತೆ.

ಕುಮಾರ : ನಿಂದೆಲ್ಲಾ ಇದೇ ಪುರಾಣ, ಪರೀಕ್ಷೆಗೆ ಹೊತ್ತಾಗುತ್ತೆ ನಾನೋಗ್ತೀನಿ.

ತಾಯಿ : ಊಟ ಮುಗಿಸಿಕೊಂಡು ಹೋಗು.

ಕುಮಾರ : ಆಗಲಮ್ಮ ಈಗ್ಲೇ ಲೇಟಾಯ್ತು, ನೀನೇ ವಿಘ್ನ ಮಾಡ್ತೀಯಾ. ತಿಂಡಿ ಬೇಕಾದ್ರೆ ಕೊಡು ಪರೀಕ್ಷೆ ಆದಮೇಲೆ ತಿನ್ಕೊತೀನಿ. ನಾನು ಬರ್ಲಾ.

ತಾಯಿ : ಅಯ್ಯೋ.... ಅಯ್ಯೋ.... ಸ್ವಲ್ಪ ನಿಲ್ಲೋ ಬೆಕ್ಕು ಅಡ್ಡವಾಯ್ತು.

ಕುಮಾರ : ಸರಿಹೋಯ್ತು, ಹಿಂದಿನ ಬಾಗಿಲಿನಿಂದ ಹೋಗ್ತೀನಿ.

ತಾಯಿ : ಸ್ವಲ್ಪ ತಡೆದು ಹೋಗು.

ಕುಮಾರ : ಏನಪ್ಪಾ ಗತಿ? ಅಮ್ಮನಿಂದ ನನಗೆ ಪರೀಕ್ಷೆನೇ ಹೋಯ್ತು.

ತಾಯಿ : ನಡ್ಯೋ ರಿಕ್ಷಾದಲ್ಲಿ ಕರ್ಕೊಂಡೋಗ್ತೀನಿ.

(ಆಟೋ ಶಬ್ದ)

ಕುಮಾರ : ಆಟೋ.... ಆಟೋ... ನಿಲ್ಸಪ್ಪಾ. ಏನ್ ಅವ್ನು ನಿಲ್ಲಿಸ್ತಾ ಇಲ್ಲ. ನೋಡ್ದಮ್ಮಾ ಆಗ್ಲೇ ಬಂದಿದ್ರೆ ಬಸ್ ಸಿಕ್ತಿತ್ತು. ರಿಕ್ಷಾ ಹಣಾನೂ ಮಿಗ್ತಿತ್ತು. ನಿನ್ನಿಂದ ನೋಡು ರಿಕ್ಷಾನೂ ಸಿಕ್ತಾ ಇಲ್ಲ. ಎಲ್ಲಾ ಪುರಾಣನೂ ಹೇಳ್ತಾ ಹೀಗೆ ಮಾಡ್ಬಿಟ್ಟೆ.

ತಾಯಿ : ಯೋಚನೆ ಮಾಡಬೇಡ ಬಂತೂ, ಬೇಗ ಸ್ಕೂಲತ್ರ ನಡ್ಯಪ್ಪಾ....

(ರಿಕ್ಷಾ ಹೊರಡುವುದು)

ಉಪಾ. : ಎಷ್ಟು ಹೊತ್ತಿಗೆ ಬರೋದು?

ತಾಯಿ : ಮೊದ್ಲು ಅವನನ್ನು ಪರೀಕ್ಷೆ ಬರ್ಯೋಕ್ಕೆ ಬಿಡಿ, ನಾನು ಹೇಳ್ತೀನಿ. ನೋಡಿ ಬೆಳಗೆದ್ದು ನೂರಾರು ವಿಘ್ನಗಳಾದ್ವು ಅದ್ಕೆ ಬರಕ್ಕಾಗ್ಲಿಲ್ಲ, ಬೆಕ್ಕು ಅಡ್ಡ ಬಂತು, ರಾಹು ಕಾಲಬಂತು, ಅವನ್ನೆಲ್ಲಾ ಮುಗಿಸಿಕೊಂಡು ಬರಬೇಡ್ವೆ. ಏನೋ ಸ್ವಲ್ಪ ಹೊತ್ತಾಯ್ತು. ಏನೋ ಹುಡುಗನಿಗೆ ಪಾಸಾಗ್ಲಿ ಅಂತ ಹೀಗೆಲ್ಲಾ ಮಾಡಿದೆ.

ಉಪಾ. : ಇಲ್ಲಿರೋವ್ರೆಲ್ಲಾ ಫೇಲಾಗ್ತಾರಲ್ಲಾ..... ನಿಮ್ಮ ಮಗನೊಬ್ಬನಿಗೆ ರಾಹುಕಾಲ ಅಲ್ವೇ....? ಏನಮ್ಮಾ ಈಗ ಉತ್ತರ ಬರಿತೀರೋವ್ರೆಲ್ಲಾ ಫೇಲಾಗ್ತಾರಾ?

ತಾಯಿ : ದೇವರಿದ್ದಾನೆ.

ಉಪಾ : ಉತ್ತರಾನೇ ಬರೀದೆ, ದೇವರಿದ್ದಾನೆ ಅಂತ ರಿಸಲ್ಟ್ ಬಂದ ದಿನ ನೋಡ್ತಾ ಇರಿ ಗೊತ್ತಾಗುತ್ತೆ.

* * *

## ತರಂಗ-೩

ತಾಯಿ : ನಿನ್ಗೆ ಬಾಲ ಒಂದು ಕಮ್ಮಿ ಕಣೋ.... ಅದಿದ್ದರೆ.....

ಕುಮಾರ : ಲಂಕೆ ಹಾರಬಹುದಾಗಿತ್ತು.

ತಾಯಿ : ಅದನ್ನೇ ಹೇಳೋಕ್ಕೆ ಬರ್‍ತಿದ್ದೆ. "ಅಂಕಿಲ್ಲದ ಕಪಿ ಲಂಕೆ ಹಾರಿತು" ಅಂತ. ಒಂದು ಘಳಿಗೆ ಮೈಕೈ ಬಾಯಿ..... ಸುಮ್ನಿರಲ್ವಲ್ಲಾ ನೀನ್ಯಾವ ನಕ್ಷತ್ರದಲ್ಲಿ ಹುಟ್ಟಿದ್ಯೋ.....?

ಕುಮಾರ : ಮೂಲೆ ನಕ್ಷತ್ರದಲ್ಲಿ.....

ತಾಯಿ : ಇರಬಹುದು ಅದು ಮೂಲೆಯಲ್ಲ ಮೂಲಾ ನಕ್ಷತ್ರ. ಎಷ್ಟು ಹೊತ್ತಲೂ ಮರಕೋತಿ ಆಟ ನೆಗೆಯೋದು ಕುಣ್ಯೋದು ಮಾಡ್ತಿಯಲ್ಲಾ ಓದೋದು ಮಾತ್ರ ಇಲ್ಲ... ಎಷ್ಟು ಹೊತ್ತಲೂ ಕುಣೀತಾ ಇದ್ರೆ ಓದೋದು ಯಾವಾಗ್ಲೋ? ರಾತ್ರಿ ಕೂತುಕೊಂಡ್ರೆ ತೂಕಡ್ಸಿ ತೂಕಡ್ಸಿ ಬೀಳ್ತೀಯಾ?

ಕುಮಾರ : ನಿದ್ರೆ ಬಂದ್ರೆ ತಡ್ಯಕ್ಕಾಗುತ್ತಾ?

ತಾಯಿ : ಅದ್ ನಿಜ ಬಿಡು, ನಿದ್ರಾದೇವಿ ತಿಪ್ಪೆ ಉಪ್ಪರಿಕೇಲಿದ್ರೂ ಬಿಡಲ್ವಂತೆ. ಬೆಳಗ್ನಿಂದ ಸಾಯಂಕಾಲದವರೆಗೂ ಕುಣಿದು ಬಿಸಿ ಬಿಸಿ ಮುದ್ದೆ ಹೊಡೆದು ಮಲಗಿದರೆ ನಿದ್ದೆ ಬರ್‍ದೇ ಇನ್ನೇನು? ಒಳ್ಳೇ ಕುಂಭಕರ್ಣನಾಗೆ ನಿದ್ದೆ ಮಾಡ್ತೀಯಾ. ಪ್ರಪಂಚದಲ್ಲಿ ಏನು ನಡೆಯುತ್ತೆ ಎಂಬುದು ನಿನಗೇನು ಗೊತ್ತು?

ಕುಮಾರ : ನೋಡಮ್ಮ ಮನುಷ್ಯ ಯಾವುದರಲ್ಲಾದ್ರೂ ಖ್ಯಾತಿ ಇರಬೇಕು ಅನ್ತೀಯಾ ನಾನು ಕುಣ್ಯೋದ್ರಲ್ಲಿ, ನಿದ್ದೆ ಮಾಡೋದ್ರಲ್ಲಿ ಬಹುಮಾನ ಪಡಿತೀನಲ್ಲಾ ಬಿಡು.

ತಾಯಿ : ಓದಿ ವಿದ್ಯಾವಂತನಾಗ್ತೀನಿ, ದೊಡ್ಡ ಕೆಲಸಕ್ಕೋಗ್ತೀನಿ ಅನ್ನಬ್ಯಾಡ ಹೀಗೆ ತಲಹರಟೆ ಹೊಡ್ಕೊಂಡು ತಿರ್ಗಾಡ್ತಿರು.

ಕುಮಾರ : ಕಾಯಿ ಗುದ್ದಿ ಹಣ್ಮಾಡಿದ್ರಾಗೋಲ್ಲ. ಅವರಿಷ್ಟಕ್ಕೆ ಸ್ವಲ್ಪ ಬಿಡಬೇಕು ಆಗ ಅವ್ರೇನಾಗ್ತಾರೆ ನೋಡ್ತಿರು.

ತಾಯಿ : ತನ್ನಿಚ್ಛೆ ಬಡ್ಡಿ ಹದಿನಾರು ಬಾಳು ಬದ್ಲು ಅಂದ ಹಾಗಾಗುತ್ತೆ. ಸ್ವಲ್ಪ ಹಿರಿಯರು, ಅನುಭವಸ್ತರು ಹೇಳಿದ ಮಾತನ್ನ ಕೇಳಬೇಕು.

ಕುಮಾರ : ಕೇಳ್ತಾನೇ ಇರ್‍ತೀವಲ್ಲಮ್ಮಾ

ತಾಯಿ : ಪ್ರಯೋಜನವೇನು? ಈ ಕಿವೀಲಿ ಕೇಳಿ ಆ ಕಿವೀಲಿ ಬಿಡೋದು.

ಕುಮಾರ : ಎಲ್ಲಾನೂ ಕೇಳ್ತೀನಿ, ಸಾಧ್ಯವಾದಷ್ಟು ಮಾಡ್ತೀವಿ.

ತಾಯಿ : ನೋಡು ನಾವು ತೆಂಗಿನ ಮರ ಹತ್ತಿಸ್ನ ಎಷ್ಟು ತಳ್ಳಬಹುದೋ ಅಷ್ಟು ತಳ್ಳಭಹುದು, ಆಮೇಲೆ... ನಿನ್ನ ಪ್ರಯತ್ನ....

ಕುಮಾರ : ಅಷ್ಟು ಮಾಡಿ ಬಿಟ್ಟುಬಿಡಿ. ಆಮೇಲೆ ನಾನು ನಿಮಗೆ ಫಲ ತಂದುಕೊಡ್ತೀನೋ ಇಲ್ವೋ ಅನ್ನೋದನ್ನ ನೋಡಿವ್ರಂತೆ.

ತಂದೆ : ಅದೇನು ತಾಯಿ ಮಗನ ವಾಗ್ಯುದ್ಧ.

ಕುಮಾರ : ಬೆಳಕು ಹರೀತು ಅಂದ್ರೆ ಅಮ್ಮನ ಸುಪ್ರಭಾತ ಇದ್ದದ್ದೇ. ಅದು ಮಾಮೂಲಿಯಾಗಿ ಹೋಯ್ತು ಬಿಡಪ್ಪಾ.

ತಾಯಿ : ನೋಡಿದ್ರಾ ಅವನ ಅಲಕ್ಷ್ಯೇನಾ?

ಕುಮಾರ : ನೀನು ಹೇಳಿದ್ನೆಲ್ಲಾ ಲಕ್ಷ್ಯ ಇಟ್ಟೇ ಕೇಳ್ತಿದ್ದೀನಿ, ನೀನು ಅಲಕ್ಷ್ಯ ಅನ್ತಿದ್ದೀಯಲ್ಲಾ.

ತಂದೆ : ಈಗೇನಂತೋ...?

ಕುಮಾರ : ಹನುಮಂತನ್ನ ಹೆತ್ತಾಗಾಯ್ತಂತೆ, ನನ್ನನ್ನು ಹೆತ್ತದ್ದು ಅಮ್ಮನಿಗೆ ಬಾಲ ಇದ್ದಿದ್ದರೆ ಚೆನ್ನಾಗಿತ್ತಂತೆ; ನಾನು ಕುಂಭಕರ್ಣನಂತೆ, ಅಪಾಪೋಲಿಯಂತೆ, ಒಂದೇ ಎರಡೇ ಬಿರುದಾಂಕಿತಗಳು ಅಮ್ಮನ ಬಾಯಿಗೆ ಬಂದದ್ದೇ ನನ್ನ ಬಿರುದಾಂಕಿತಗಳು.

ತಂದೆ : ಸುಮ್ನೆ ಯಾಕೆ ಬೆಳಗೆದ್ದು ಲೊಟ ಲೊಟ ಅನ್ತಿರ್ತೀಯಾ? ತುಂಬಾ ಬೇಜಾರು ಮಾಡಿಕೊಂಡಿದ್ದಾನೆ ಕುಮಾರ....

ತಾಯಿ : ಅವನು ಹೋದ ದಾರಿಗೆ ಬಿಡಿ ಆಮೇಲೆ ನಿಮಗೆ ಸರಿಯಾದ ಕೀರ್ತಿ ತರ್ತಾನೆ.

ತಂದೆ : ಸದ್ಯ ಅವನು ಕೀರ್ತಿ ತಕ್ಕೊಂಡ್ರೆ ಸಾಕು ನನಗಂತೂ ಅವನಿಂದ ಬೇಡ.

ತಾಯಿ : ನೀವು ನಾನು ಕನಸು ಕಾಣಬೇಕು ಅಷ್ಟೇ ಅವನಿಂದ ಕೀರ್ತಿ ಬರುತ್ತೆ ಅಂತ. ಸದ್ಯ ಅಪಕೀರ್ತಿ ಬರದೇಹೋದ್ರೆ ಸಾಕು.

ಕುಮಾರ : ಅಮ್ಮ ಹೀಗೆ ಅಪ್ಪ, ಮಾತಿಗೆ ಮಾತು.

ತಂದೆ : ಅವಳದೇ ಕಣೋ. ನಾನು ಏತಿ ಅಂದ್ರೆ ಅವಳು ಪ್ರೇತಿ ಅನ್ನೋದು ಸ್ವಭಾವ. ಅದು ಮಾಮೂಲಿ ಅಂತ ನಾವು ಸುಮ್ಮನಿರೋದು ಕಲಿತ್ಕೋಬೇಕು. ಅದ್ಕೇ ಹೇಳೋಲ್ವೆ, ಮೌನಂ ಕಲಹ ನಾಸ್ತಿ ಅಂತ.

ಕುಮಾರ : ಅದೇನೋ ನಿಜ ಅನ್ನಿ.

ತಾಯಿ : ಬರೇ ಮಾತ್ನೇ ಆಡ್ತಾ ಇದ್ದೀರೋ.... ಮಗನಿಗೆ ಸರಿಯಾದ ಬುದ್ಧಿ ಹೇಳಿ ಊಟಕ್ಕೆ ಬರ್ತೀರೋ?

ಕುಮಾರ : ಮೊದಲು ಊಟ ಆಗ್ಲೀ... ಸಮಾಧಾನವಾದ ಮೇಲೆ ಬುದ್ಧಿವಾದ ಹೇಳ್ತಾರೆ, ನಾನು ಸಮಾಧಾನವಾಗಿ ಕೇಳ್ತೀನಿ.

ತಾಯಿ : ಕೊಂಕು ಬುದ್ಧಿ ಕಣೋ, ಎದ್ದು ನಡ್ಯೋ.... ಸಾಕು.

* * *

## ತರಂಗ-೩

(ಹುಡುಗರು ಸಿಳ್ಳೆ ಹಾಕಿ ಚಪ್ಪಾಳೆ ತಟ್ಟುತ್ತಿದ್ದಂತೆ)

ಉಪಾ : ದಯವಿಟ್ಟು ಎಲ್ಲರೂ ಗಲಾಟೆ ಇಲ್ದೇ ಕೂತ್ಕೊಳ್ಬೇಕು. ಇನ್ನು ಕೆಲವು ಸೆಕೆಂಡುಗಳಲ್ಲಿ ನಮ್ಮ ಚರ್ಚಾ ಸ್ಪರ್ಧೆ ಆರಂಭವಾಗುತ್ತದೆ. ಪರ ವಿರೋಧದವರು ಈ ಕಡೆ ಆಕಡೆ ಕೂತುಕೊಳ್ಳಬೇಕು. ಮೊದಲಿಗೆ "ಒಳ್ಳೇ ಉಪಾಧ್ಯಾಯರಿಂದಲೇ ಒಳ್ಳೆ ವಿದ್ಯಾಭ್ಯಾಸ ಸಾಧ್ಯ" ಎಂಬ ವಿಷದ ಪರವಾಗಿ ಮಾತನಾಡುತ್ತಾರೆ ಕುಮಾರ್.

ಕುಮಾರ್: ಸನ್ಮಾನ್ಯ.... ಸಭಾಧ್ಯಕ್ಷರೇ.... ಮಿತ್ರರೇ....

ಹುಡುಗರು : ಏಕೋ.... ಗಡಗಡನೆ ನಡುಗ್ತಾ ಇದ್ದಾನೆ. ಮಾತೇ ಹೊರಳ್ತಾ ಇಲ್ಲ. ತೊಡೆ ನೋಡು ನಡಗ್ತಾ ಇದೆ.

(ಹುಡುಗರು ಕೇಕೇ ಹಾಕುವುದು, ಸಿಳ್ಳೆ ಹೊಡೆಯುವುದು)

ಕುಮಾರ್: (ಉಗುಳು ನುಂಗುತ್ತಾ) ಇಂದಿನ ವಿಷಯ......

ಹುಡುಗರು : ಯಾರಿಗೆ ಗೊತ್ತಿಲ್ಲ? "ಒಳ್ಳೇ.... ಉಪಾಧ್ಯಾಯರಿಂದ ಒಳ್ಳೇ.... ವಿದ್ಯಾಭ್ಯಾಸ ಸಾಧ್ಯ" ಎಂಬುದನ್ನು ಸಾಧಿಸಪ್ಪಾ....

ಕುಮಾರ್: ಹೌದು..... ಉಪಾಧ್ಯಾಯರು ಒಳ್ಳೆವ್ರಾದ್ರೇ... ನ...ನ...ಮಗೆ.... ವಿ...ದ್ಯಾಭ್ಯಾಸ.... ತಲೆಗತ್ತೋದಿಲ್ಲ

೧ : (ಪೇಪರ್ ಬಿಚ್ಚುತ್ತಾನೆ) ಹ್ಞೂಂ..... ಓದು.... ಓದು...

೨ : ನಿಲ್ಸು.... ನಿಲ್ಸು....

೧ : ಇಳಿದು ಹೊರಟೇ ಹೋದ.

ಉಪಾ : ವಿರೋಧವಾಗಿ ಶಾಂತಮೂರ್ತಿ ಅವರು.

ಶಾಂತಮೂರ್ತಿ : ಅಧ್ಯಕ್ಷರೇ.... ನನ್ನ ವಿರೋಧ ಮಾತಾಡಿದವರೇ, ನಾನು ಈ ಹೊತ್ತು ನಿಮ್ಮೆದುರಿಗೆ ನಿಂತಿರೋದು, ಒಳ್ಳೇ ಉಪಾಧ್ಯಾಯರಿಂದ ಒಳ್ಳೆ ವಿದ್ಯಾಭ್ಯಾಸ ಆಗೋಲ್ಲ ಅಂತ.

೧ : ಅಂದ್ರೆ ಕೆಟ್ಟ ಉಪಾಧ್ಯಾಯರಿಂದಾಗುತ್ತೆ ಅಲ್ವಾ?

ಶಾಂತ : ಯಾವ ಉಪಾಧ್ಯಾಯರು ಅಂತ ಹೇಳ್ತೀನಿ ಅಲ್ಲಿವರೆಗೆ ಸ್ವಲ್ಪ ತಡೆದುಕೊಳ್ತೀರಾ? ನೀವೆ ಹೇಳೋದಾಗಿದ್ರೆ ನಾನ್ಯಾಕಿಲ್ಲಿ ಬರಬೇಕಾಗಿತ್ತು?

೨ : ಆಯ್ತು.

ಶಾಂತ : ವಿದ್ಯಾಭ್ಯಾಸ ಚೆನ್ನಾಗಿ ಆಗಬೇಕು ಅಂದ್ರೆ ಉಪಾಧ್ಯಾಯರ ಗುಣ ಒಳ್ಳೇದಾಗಿರಬೇಕು ಅಂತೇನಲ್ಲ, ಈಗ ಕೆಲವು ವಿದ್ಯಾರ್ಥಿಗಳಿಗೆ ಒಂದು

ಸಾರಿ ಹೇಳಿದ್ರೆ ಅರ್ಥವಾಗುತ್ತೆ, ಕೆಲವರಿಗೆ ಎರಡು ಸಾರಿ ಹೇಳಿದ್ರೆ ಅರ್ಥವಾಗುತ್ತೆ, ಕೆಲವರಿಗೆ ಹಲವಾರು ಸಾರಿ ಹೇಳಬೇಕಾಗುತ್ತೆ, ಅಂದ್ರೆ ಕೆಲವರಿಗೆ ಹೇಳಿದ್ರಾಗುತ್ತೆ, ಕೆಲವರಿಗೆ ಬೈದರಾಗುತ್ತೆ. ಮೊದಲಿಗೆ ಮೇಷ್ಟ್ರು ಬುದ್ಧಿವಂತರಾಗಿರಬೇಕು, ಉಪಾಧ್ಯಾಯರು ಒಳ್ಳೆಯವರಾಗಿದ್ದು ಪಾಠ ಹೇಳಿ ಬುದ್ಧಿ ಕಲಿಸಕ್ಕಾಗೋಲ್ಲ, ಆಗ ಕೆಟ್ಟವರಾಗಲೇಬೇಕು, ಬೆದರಿಸಬೇಕು, ಗದರಿಸಬೇಕು, ಬಡೀಬೇಕು. ಹಲವಾರು ವಿಧಾನಗಳನ್ನು ಉಪಯೋಗಿಸಿ ಪಾಠ ಹೇಳಬೇಕಾಗುತ್ತದೆ. ಅಂದಮೇಲೆ ಒಳ್ಳೇ ಉಪಾಧ್ಯಾಯರಿಂದ ಹ್ಯಾಗೆ ಸಾಧ್ಯ ಒಳ್ಳೇ ವಿದ್ಯಾಭ್ಯಾಸಕ್ಕೆ ಸ್ವಲ್ಪ ಹೇಳ್ತೀರಾ?

(ಬೆಲ್ ಶಬ್ದ)

ಇನ್ನೊಂದು ಸ್ವಲ್ಪ ಸಮಯ ಕೊಡಿ. ಐದು ನಿಮಿಷ ಅಂದ್ರೆ ಐದು ನಿಮಿಷಕ್ಕೇ ಮುಗಿಸಕ್ಕಾಗೋಲ್ಲ.

೧ : ಬೆಳ್ಗಾನಾ ಹರಿಕಥೆ ಮಾಡು, ಅಧ್ಯಕ್ಷರು ಕೂತಿರ್ತಾರೆ ಮುಗಿಸಯ್ಯ ಬೇಗ. ಎರಡನೇ ಘಂಟೆ ಬಾರಿಸೋಕ್ಕು ಮುಂಚೆ ನಿಲ್ಲಲಿ.

ಶಾಂತ : ನಿಮಗಷ್ಟು ಬೇಜಾರಾಗಿದ್ರೆ ಸಾಕು ಬಿಡಿ.

ಉಪಾ : ದಯವಿಟ್ಟು ಚರ್ಚೆ ಮಾಡುವಾಗ ನಗೋದು, ಗೇಲಿಮಾಡೋದು ಮಾಡಬೇಡಿ. ನೀವು ಇಲ್ಲಿಗೆ ಬಂದು ನಿಂತ್ರೆ ಗೊತ್ತಾಗುತ್ತೆ ನಿಮ್ಮ ಬೇಳೆಕಾಳು. ತಮಾಷೆ ಮಾಡೋದ್ಕು ಇದ್ಕೂ ಬೇಕಾದಷ್ಟು ವ್ಯತ್ಯಾಸ ಇದೆ. ಆದ್ದರಿಂದ ನೀವು ಶಾಂತವಾಗಿ ಕೂತು ಕೇಳಿದ್ರೆ ಅವರಿಗೂ ಸ್ವಲ್ಪ ಹುಮ್ಮಸ್ಸು ಬರುತ್ತೆ. ವಿಷಯಗಳನ್ನು ಸರಿಯಾಗಿ ಹೇಳ್ತಾರೆ. ಈಗ ವಿಷಯದ ವಿರೋಧವಾಗಿ ಆಲ್ಬರ್ಟ್‌ನಿಂದ ಚರ್ಚೆ.

(ಹುಡುಗರಿಂದ ಕೈ ಚಪ್ಪಾಳೆ)

ಆಲ್ಬರ್ಟ್ : (ರಾಗದಲ್ಲಿ) ಅಧ್ಯಕ್ಷರೇ... ಮಿತ್ರರೇ... ಈ ಹೊತ್ತು ನಾನು ಒಳ್ಳೇ.... ಉಪಾಧ್ಯಾಯರಿಂದ ಒಳ್ಳೇ.... ವಿದ್ಯಾಭ್ಯಾಸ ಆಗುತ್ತೆ ಅಂತ ನಂಬಿಕೆ ನನಗಿಲ್ಲ.

ಹುಡುಗ : ಹೌದು ನಮಗೂ ಇಲ್ಲಾರೀ... ಯಾಕಿಲ್ಲ ಅಂತ ಹೇಳಿ.

* * *

## ತರಂಗ-೫

(ಹುಡುಗರ "ಸಿಳ್ಳು", ನಾಟಕ ಬೇಗನೆ ಶುರುಮಾಡಿ ಎಂಬ ಕೂಗು)

ಉಪಾ : ಎಲ್ಲರೂ ಶಾಂತರಾಗಿ, ಸಾವಧಾನವಾಗಿ ಕುಳಿತರೇ ನಿಮಗಾಗಿ ಹಾಸ್ಯ ಸಾರ್ವಭೌಮ 'ತೆನಾಲಿ ರಾಮಕೃಷ್ಣ'ನ ನಾಟಕವನ್ನು ಪ್ರದರ್ಶಿಸುತ್ತೇವೆ. ಇನ್ನು ಕೆಲವೇ ಸೆಕೆಂಡುಗಳಲ್ಲಿ ನಮ್ಮ ನಾಟಕ ಆರಂಭವಾಗುತ್ತೆ.

(ಮತ್ತೆ ಸಿಳ್ಳೆ ಕೈ ಚಪ್ಪಾಳೆ....)

(ಕೃಷ್ಣದೇವರಾಯನು ಆಸ್ಥಾನದಲ್ಲಿ ಒಂದು ದಿನ ಕುಳಿತಿರಲು)

ಕೃಷ್ಣದೇವರಾಯ : ತೆನಾಲಿ ರಾಮಕೃಷ್ಣ ಏನು ಸಮಾಚಾರ?

ತೆನಾಲಿ : ಈ ವರ್ಷ ವಿಪರೀತವಾಗಿ ಮಾವಿನ ಹಣ್ಣು ಬೆಳೆದಿದೆ. ಊರಿನಲ್ಲಿನ ಜನರು ಅರಮನೆಯ ಜನರೆಲ್ಲಾ ತಿಂದು ಕೊಳೆಯುತ್ತಾ ಇವೆ ಪ್ರಭು.

ಕೃಷ್ಣ : ನೀವು ಹಾಗಂದಮೇಲೆ ನನಗೊಂದು ಜ್ಞಾಪಕ ಬರುತ್ತಾ ಇದೆ, ದುಃಖವೂ ಒತ್ತರಿಸುತ್ತಿದೆ.

ತೆನಾಲಿ : ಕಾರಣ ಕೇಳಬಹುದೇ ಪ್ರಭು?

ಕೃಷ್ಣ : ನಮ್ಮ ತಾಯಿಯವರು ಅನೇಕ ತರಹದ ಮಾವಿನಹಣ್ಣು ತಿನ್ನುತ್ತಿದ್ದರು. ಅವರು ಸಾಯುವ ವೇಳೆಯಲ್ಲಿ ಮಾವಿನಹಣ್ಣು ತಿನ್ನಬೇಕು ಎಂದು ಆಸೆಪಟ್ಟರು. ಆದರೆ ನಾನು ಅದನ್ನು ತರಿಸಿಕೊಡುವಷ್ಟರಲ್ಲಿ ಅವರು ಇಹವನ್ನು ತ್ಯಜಿಸಿದ್ದರು. ಅವರ ಇಷ್ಟವೂ ಪೂರ್ತಿಯಾಗಲಿಲ್ಲ, ಎಂಬ ದುಃಖ ನನಗೆ. ನೀವು ಇದಕ್ಕೆ ಪರಿಹಾರ ಸೂಚಿಸ್ತೀರಾ ಕೇಶವಭಟ್ಟರೇ.

ತೆನಾಲಿ : ಹೇಳಿ ಪುರೋಹಿತರೇ.

ಕೇಶವ : ನನ್ನ ಮನಸ್ಸು ಹೀಗೆ ಹೇಳುತ್ತೆ. ನಮ್ಮ ತಾಯಿಯವರ ವರ್ಷದ ಶ್ರಾದ್ಧದ ದಿನ ಮಾವಿನ ಹಣ್ಣಿನ ಸೀಕರಣೆ ಮಾಡಿಸಿ ಬ್ರಾಹ್ಮಣರಿಗೆ ತೃಪ್ತಿ ಆಗುವವರೆಗೆ ಹಾಕಿಸುವುದು. ಆಮೇಲೆ ಪ್ರತಿಯೊಬ್ಬರಿಗೂ ಸಾಕಷ್ಟು ಮಾವಿನ ಹಣ್ಣನ್ನು ದಾನ ಮಾಡಿದರೆ ಹೇಗೆ?

ಕೃಷ್ಣ : ಇದನ್ನೇನು ಸಾಮಾನ್ಯ ಮನುಷ್ಯರೂ ಮಾಡಿ ಪೂರೈಸುತ್ತಾರೆ. ಆದರೆ ಕೃಷ್ಣದೇವರಾಯ ಇಷ್ಟು ಮಾಡಿದರೆ ಅದ್ಯಾವ ಮಹಾ? ಅದಕ್ಕೆ ಒಂದೊಂದು ಚಿನ್ನದ ಹಣ್ಣನ್ನೂ ಕೊಡಬೇಕು ಎಂದು ಮನಸ್ಸು ಮಾಡಿದ್ದೇನೆ.

ಕೇಶವ : ತಮ್ಮದು ದೊಡ್ಡ ಮನಸ್ಸು, ನಿಜವಾಗಿಯೂ ನಿಮಗೆ ತಾಯಿಯ ಮೇಲೆ ಅಪಾರವಾದ ಪ್ರೇಮ. ದಾನ ತೆಗೆದುಕೊಳ್ಳಲು ಯೋಗ್ಯರನ್ನು ಕರೆತರುವೆ.

* * * *

ಕೃಷ್ಣ : ಯಾರೂ ನಾಚಿಕೊಳ್ಳಬಾರದು, ಯಾರೂ ಯಾರಿಗೆ ಏನೇನು ಬೇಕು, ತೃಪ್ತಿಯಾಗಿ ತಿನ್ನಬೇಕು. ನಿಮ್ಮ ಪರಮಾತ್ಮ ತೃಪ್ತಿ ಆದರೆ ನಮ್ಮ ತಾಯಿಯ ಆತ್ಮಕ್ಕೆ ಶಾಂತಿ.

ಕೇಶವ : ಆಗಲೀ ಮಹಾಪ್ರಭು ತಮ್ಮ ತಾಯಿಯವರ ಆತ್ಮಕ್ಕೆ ಸಂತೋಷವಾಗಲಿ, ಸ್ವರ್ಗದಲ್ಲಿ ಅವರು ಶಾಂತಿಯಿಂದಿರಲಿ.

ಕೃಷ್ಣ : ಇದಾದಮೇಲೆ ಫಲತಾಂಬೂಲದ ಜೊತೆಗೆ ಚಿನ್ನದ ಮಾವಿನ ಹಣ್ಣೊಂದನ್ನು ಕೊಡಲಾಗುವುದು. ಎಲ್ಲರೂ ಮನೆಗೆ ತೆಗೆದುಕೊಂಡು ಹೋಗಿ ನಿಮ್ಮ ಮನೆಯವರೂ ಕೈಬಾಯಿ ನೋಡುತ್ತಿರುತ್ತಾರೆ. ಅರಮನೆಯ ಮಾವಿನ ಹಣ್ಣನ್ನು ತೆಗೆದುಕೊಂಡು ಹೋಗಿ ಕೊಡಿ. ಈ ಸಾರಿ ದೇವರು ಚಿನ್ನದ ಮಾವಿನ ಹಣ್ಣನ್ನು ಕೊಟ್ಟಿದ್ದಾನೆ. ಯಾರಿಗೆಷ್ಟು ಬೇಕು ತೆಗೆದುಕೊಂಡು ಹೋಗಿ.

ನಾರಾಯಣ : ಮಹಾಪ್ರಸಾದ ಪ್ರಭೂ... ತಮಗೆ ಒಳ್ಳೆಯದಾಗಲಿ, ತಮ್ಮ ತಾಯಿಯ ಆತ್ಮಕ್ಕೆ ಶಾಂತಿ ನೆಮ್ಮದಿ ದೊರೆಯಲಿ, ಬರ್ತೀವಿ... ನಮಸ್ಕಾರ.

ತೆನಾಲಿ : ಪುರೋಹಿತರುಗಳೇ, ಈ ಹೊತ್ತು ನಮ್ಮ ತಾಯಿಯ ಶ್ರಾದ್ಧ. ತಾವು ದಯಮಾಡಿಸಿ, ನಮ್ಮ ತಾಯಿಯ ಆತ್ಮಕ್ಕೆ ಶಾಂತಿ ಕೊಡಬೇಕು.

ಕೇಶವ : ತಾವು ಹೇಳಿದ ಮೇಲೆ ಆಯ್ತು ನಡೆಯಿರಿ.

* * *

(ದಾರಿಯಲ್ಲಿ)

ಕೇಶ : ನೋಡಿದ್ರಾ ನಾರಾಯಣ ಭಟ್ಟರೇ ತೆನಾಲಿಯವರ ಉದಾರತೇನಾ?

(ಕಮ್ಮಾರನು ತಿದಿ ಒತ್ತುವುದು ಕಬ್ಬಿಣ ತಟ್ಟುವ ಶಬ್ದ)

ತೆನಾಲಿ : ಎಲ್ಲರೂ ಕೈಕಾಲು ತೊಳೆದುಕೊಂಡು ಬನ್ನಿ ತೋಟದ ಬಾವಿಯಲ್ಲಿ.

ಸುಬ್ಬಾ : ಇದೇನು ಇವರ ತೋಟದಲ್ಲೇ ಕುಲುಮೆ ಇಡಿಸಿ ಬಿಟ್ಟಿದ್ದಾರೆ.

ಕೇಶವ : ವ್ಯವಸಾಯಕ್ಕೆ ಬೇಕಾದ ಸಾಮಾನುಗಳನ್ನು ಮಾಡಿಸ್ತಾ ಇರಬಹುದು.

ನಾರಾ : ಒಳ್ಳೇ ಜಟ್ಟಿಯಾಗಿದ್ದಾರೆ, ಕಬ್ಬಿಣದ ಕೆಲಸ ಮಾಡೋವ್ರು ಕಬ್ಬಿಣದ ಸೌಟುಗಳನ್ನು ಕಾಯಿಸ್ತಿದ್ದಾರೆ. ಒಳ್ಳೇ ಕೆಂಪಗೆ ಕಾದಿದೆ.

ತೆನಾಲಿ : ಏನು ಯೋಚನೆ?

ನಾರಾ : ಏನಿಲ್ಲ ನಿಮ್ಮ ಕಬ್ಬಿಣದ ಕೆಲಸ ನೋಡ್ತಾ ಇದ್ವಿ.

ತೆನಾಲಿ : ಅದೇನು ಆಶ್ಚರ್ಯ ಬಿಡಿ. ವರ್ಷಕ್ಕೊಂದು ಸಾರಿ ಇದು ಮಾಮೂಲು.

ಸುಬ್ಬಾ : ವ್ಯವಸಾಯಕ್ಕೆ.

ತೆನಾಲಿ : ನಮ್ಮ ತಾಯಿಗೆ ಈ ಬೇಸಿಗೆ ಕಾಲ ಬಂತೂ ಅಂದ್ರೆ, ಸಂದುಗಳ ನೋವು ಬರ್ತಾ ಇತ್ತು. ಆಗ ಕಬ್ಬಿಣದ ಸೌಟು ಕಾಯಿಸಿ ಬರೆಯನ್ನು ಅಂಗಾಲಿಗೆ ಎಳೆದುಕೊಳ್ಳುತ್ತಿದ್ದಳು. ಒಮ್ಮೆ ಈ ಕಾರ್ಯವನ್ನು ನನಗೆ ಒಪ್ಪಿಸಿದಳು. ನಾನು ಸೌಟು ಕಾಯಿಸಿ ಬರುವವರೆಗೆ ಇಹವನ್ನು ತ್ಯಜಿಸಿದ್ದಳು. ಅದಕ್ಕೆ ಪ್ರತಿವರ್ಷ ನಮ್ಮ ತಾಯಿಯ ಶ್ರಾದ್ಧ ಬಂದಾಗ ಬಂದ ಬ್ರಾಹ್ಮಣರಿಗೆ ಈ ಸೌಟಿನ ಬರೆ ಹಾಕುವುದು ಮಾಮೂಲಿ ಬನ್ನಿ.

ಕೇಶವ : ಕಾಲಿಗೆ ಬರೆ ಕೊಡುವುದರಿಂದ ನಿಮ್ಮ ತಾಯಿಗೆ ಹೇಗೆ ಶಾಂತಿ ಸಿಗುತ್ತೋ ನಾ ಕಾಣೆನಪ್ಪಾ... (ನಡುಗುವ ದನಿಯಲ್ಲಿ)

ತೆನಾಲಿ : ಮಹಾರಾಜರ ತಾಯಿ ಮಾವಿನ ಹಣ್ಣು ತಿನ್ನಿಸಿದರೆ ಮಹಾರಾಣಿಯವರ ಆತ್ಮಕ್ಕೆ ಶಾಂತಿ ದೊರೆಯುತ್ತದೆಯೋ....

ಸುಬ್ಬ : ನ.... ನಡೀರಿ....

* * *

(ಪಿಸುಗುಟ್ಟುವ ದನಿಯಲ್ಲಿ)

ಸುಬ್ಬು : ಆಸೆಪಟ್ಕೊಂಡು ಕರ್‍ಕೊಂಡು ಬಂದ್ರಿ ಕೇಶವ ಭಟ್ಟರೇ ಈಗ ನಮ್ಮ ಗತಿ?

ನಾರಾ : ಕೆಂಪಗೆ ಸೌಟುಗಳು ಕಾದಿವೆ ಬರೆ ಎಳಿಸ್ತಾನೆ.

ಸುಬ್ಬಾ : ಚಿನ್ನದ, ಹಣದ ಆಸೆಗೆ ಎಳ್ಕಂಡು ಬಂದ್ರಿ, ಈಗ ಅನುಭೋಗಿಸಿ. ಯಮಧೂತರಾಗಿ ನಿಂತುಕೊಂಡಿದ್ದಾರೆ. ಅಬ್ಬಾ.... ನನಗೆ ಚಳಿ ಜ್ವರ ಬಂದಿದೆ. ಹಲ್ಲು ಕಟಕಟ ಅಂತ ಒದರಕ್ಕೆ ಶುರುವಾಗಿದೆ. ನಾರಾಯಣ.... ನಾರಾಯಣ.... ಏನೇನು ಅನುಭವಿಸಬೇಕೋ ಆ ಉಗ್ರನರಸಿಂಹನೇ ಬಲ್ಲ.

ತೆನಾಲಿ : ಯಾಕೆ? ಬರೆ ಹಾಕಿಸಿಕೊಳ್ಳುವುದಕ್ಕೆ ಹೆದರ್ತಿದ್ದೀರಾ?

ಕೇಶ : ಇಂಥದ್ದಕ್ಕೆ ಯಾರು ಬರ್ತಾರೆ? ದಯವಿಟ್ಟು ನಮಗೆ ಬರೆಮಾತ್ರ ಎಳೆದು ನೋವು ಮಾಡಬೇಡಿ.

ತೆನಾಲಿ : ಇಲ್ಲದೇ ಹೋದ್ರೆ ಈ ಚಿನ್ನದ ಮಾವಿನ ಹಣ್ಣು ಬಿಟ್ಟು ಹೋಗಿ.....

ಕೇಶವ : ಸರಿ, ಈ ಚಿನ್ನದ ಮಾವಿನ ಹಣ್ಣನ್ನು ನೀವೇ ತೆಗೆದುಕೊಳ್ಳಿ. ನಮಗೆ ಬರೆ ಹಾಕೋದು ಬೇಡ.

ಮೂವರು : ಬರೇ ಕಾದ ಕಬ್ಬಿಣದ ಸೌಟಿನ ಬರೇ.... ಬೇಡಪ್ಪಾ.... ಬೇಡಾ.... ತೆಗೆದುಕೊಳ್ಳಿ.

(ಎಲ್ಲರೂ ಬಿಟ್ಟು ಹೊರಡುವರು)

* * *

(ಕೃಷ್ಣದೇವರಾಯನ ಆಸ್ಥಾನ)

ಕೇಶವ : ಮಹಾಪ್ರಭುಗಳಲ್ಲಿ ಒಂದು ವಿನಂತಿ.

ಕೃಷ್ಣ : ಏನದು?

ನಾರಾ : ಮಹಾಪ್ರಭು ತಾವು ಕೊಟ್ಟ ಚಿನ್ನದ ಮಾವಿನ ಹಣ್ಣನ್ನು ತೆನಾಲಿ ವಂಚಿಸಿಬಿಟ್ಟರು.

ಕೃಷ್ಣ : ಹೇಗೆ? ಅದು ಸಾಧ್ಯವಿಲ್ಲದ ಮಾತು. ನಾನು ಕರೆಯಿಸಿ ಕೇಳುತ್ತೇನೆ. ಓಹೋ.... ನಾವು ಮಾತನಾಡುವಷ್ಟರಲ್ಲಿ ತೆನಾಲಿಯೇ ಬಂದಾ.... ಬಾ..... ತೆನಾಲಿ..... ನಿನಗೆ ನೂರು ವರ್ಷ ಆಯಸ್ಸು.

ಕೃಷ್ಣ : ಇವರಿಗೆ ಚಿನ್ನದ ಮಾವಿನ ಹಣ್ಣಿನದೇ ಚಿಂತೆಯಲ್ಲಾ, ಅದನ್ನು ತಪ್ಪಿಸುವುದು ಹೇಗೆ? ಎಂದು ಯೋಚಿಸುತ್ತಿದ್ದೆ.

ತೆನಾಲಿ : ಮನೆಗೆ ಸೇರಲಿ ಆಗ ಅವರಿಗೇ ಸಂತೋಷವಾಗುತ್ತದೆ. ಅವರಿಗೂ ನಿಮ್ಮ ತಾಯಿಯ ಆತ್ಮಕ್ಕೂ ಶಾಂತಿಯಾಗುತ್ತದೆ.

ಕೃಷ್ಣ : ಅದು ಹೇಗೆ?

ತೆನಾಲಿ : ಅವರೆಲ್ಲಾ ಹೀಗೆ ಮಾಡುತ್ತಾರೆಂಬುದು ನನಗಾಗಲೇ ಗೊತ್ತಿತ್ತು. ಆದರೆ ದೊರೆಗಳು ದಾನ ಕೊಟ್ಟಿದ್ದು ವ್ಯರ್ಥವಾಗಬಾರದೆಂದು ತಿಳಿದು ಅವರವರ ಮನೆಗೆ ಚಿನ್ನದ ಮಾವಿನ ಹಣ್ಣು ತಲುಪಿಸಿದ್ದೇನೆ. ಇಂಥ ಕ್ಷುಲ್ಲಕ ವಿಚಾರಕ್ಕೆ ತಮ್ಮಲ್ಲಿ ಹೇಳಬೇಕಾಗಿರಲಿಲ್ಲ. ನಾನು ತಮ್ಮನ್ನು ನೋಡೋಣವೆಂದು ಬಂದೆ ಪ್ರಭು.

ಕೃಷ್ಣ : ಏಕೆ ಎಲ್ಲಾ ತಲೆ ತಗ್ಗಿಸಿ ನಿಂತಿರಿ. ನಿಮಗೆ ನಾಚಿಕೆ ಆಗುವುದಿಲ್ಲವೇ? ನನಗೆ ಗೊತ್ತಿತ್ತು ತೆನಾಲಿ ಹೀಗೆ ಮಾಡುವುದಿಲ್ಲ ಎಂದು. ಈತ ಬಡಬಗ್ಗರಿಗೆ ದಾನ ಮಾಡುವವ, ಸುಲಿದು ತಿನ್ನುವವನಲ್ಲ, ನಿಮ್ಮ ದುರಾಸೆ ಪರೀಕ್ಷಿಸಿದ್ದಾನೆ, ಅಷ್ಟೇ. ತೆನಾಲಿ ನಿನ್ನಂಥ ಯೋಗ್ಯರಿಗೆ ಕೊಟ್ಟರೆ ನಮ್ಮ ತಾಯಿಯ ಆತ್ಮಕ್ಕೆ ಶಾಂತಿ ಸಿಗುತ್ತದೆಯೇ?

ತೆನಾಲಿ : ಚಿತ್ತ ಪ್ರಭು.

ಕೃಷ್ಣ : ನಿಮ್ಮ ಮುಖ ನೋಡಲಾರೆ ನಡೆಯಿರಿ.

(ಇಬ್ಬರೂ ನಗುವರು)

* * *

## ತರಂಗ-೬

(ಶಾಲಾ ಗಂಟೆ ಹೊಡೆಯುವುದು ಮಕ್ಕಳ ಗುಜುಗುಜು ಶಬ್ದ. ಉಪಾಧ್ಯಾಯರು ಬರುತ್ತಾ ಬೆತ್ತದಿಂದ ಟೇಬಲ್ ಕುಟ್ಟಿ ಸದ್ದು ಸದ್ದು.... ಎಂದರು. ಅಷ್ಟರಲ್ಲಿ ಹುಡುಗರು ಮಾತು ನಿಲ್ಲಿಸಿದರು. ಉಪಾಧ್ಯಾಯರು ಪಾಠ ಆರಂಭ ಮಾಡಿದರು.)

ಉಪಾ : ಈ ಹೊತ್ತು ನಕ್ಷತ್ರಗಳ ಬಗೆಗೆ ತಿಳಿದುಕೊಳ್ಳೋಣ. ನೀವೆಲ್ಲಾ ನಕ್ಷತ್ರ ನೋಡಿಯೇ ಇದ್ದೀರಿ.

ಕುಮಾರ : ಸಾರ್ ಆಕಾಶದಲ್ಲಿ ಎಷ್ಟು ನಕ್ಷತ್ರಗಳಿವೆ?

ಉಪಾ : ನಿಮ್ಮ ಮನೆಯಲ್ಲಿರುವ ಕುರಿಗಳಿಗಿರುವ ರೋಮಗಳಷ್ಟು?

ಕುಮಾರ : ಹೋಗ್ಲೀ.... ಭೂಮಿಯ ಕೇಂದ್ರ ಎಲ್ಲಿದೆ?

ಉಪಾ : (ಬೆತ್ತದಿಂದ ಕುಟ್ಟುತ್ತಾ ಒಂದೆಡೆ ನಿಲ್ಲಿಸಿ) ಇದೇ.... ಇಲ್ಲಿಂದ ಅಳತೆ ಮಾಡಿಕೊಂಡು ಕೊನೆ ಹುಡುಕು ಸರಿಯಾಗಿದೆ.

ಕುಮಾರ್: ಸಾರ್ ಗುಲಾಬಿ ಹುಟ್ಟೋದು ಬೀಜದಿಂದಲೋ, ಖಾಂಡದಿಂದಲೋ?

ಉಪಾ : ಖಾಂಡದಿಂದ.

ಕುಮಾರ್: ಮೊದಲು ಹ್ಯಾಗೆ ಹುಟ್ಟಿತು ಬೀಜ ಇಲ್ಲಿದೆ? ಬೀಜದಿಂದ ಗಿಡವೋ ಗಿಡದಿಂದ ಬೀಜವೋ?

ಉಪಾ : ಗಿಡ ಇಲ್ಲದೆ ಬೀಜವಾಗೋಲ್ಲ, ಬೀಜ ಇಲ್ಲದೆ ಗಿಡ ಆಗೋಲ್ಲ, ಎರಡೂ ಅಷ್ಟೇ ಮುಖ್ಯ.

ಕುಮಾರ್: ಎಲ್ಲರ್ಗಿಂತ ದೊಡ್ಡವರು ಯಾರು ಸಾರ್?

ಉಪಾ : ದೇವರು.

ಕುಮಾರ್: ದೇವರು ಹ್ಯಾಗೆ ಹುಟ್ಟಿದ ಮೊದಲು?

ಉಪಾ : ನೀನು ಹುಟ್ಟೋದ್ಕ್ಕೂ ಮೊದ್ಲೇ ಹ್ಯಾಗುಟ್ದೇ ಗೊತ್ತಾ? ಬರೇ ತಲಹರಟೆ ಪ್ರಶ್ನೆ ಕೇಳಿ ಕಾಲ ಹಾಕಬೇಡಿ.

* * *

## ತರಂಗ-೭

(ಶಾಲಾಘಂಟೆ)

ಉಪಾ : ಪರೀಕ್ಷೆಯಲ್ಲಿ ನೀವು ಬರೆದ ಉತ್ತರಪತ್ರಿಕೆಗಳನ್ನು ತಂದಿದ್ದೇನೆ.

ಕುಮಾರ : ಹ್ಯಾಗ್ಮಾಡಿದ್ದೀವಿ ಸಾರ್?

ಉಪಾ : ಬೃಹಸ್ಪತಿ ಮುರುಕುಗಳು, ಬಾಯಿ ಬಿಟ್ರೆ ಬಂಡಗೇಡು ಅಂದಹಾಗಿದೆ. ವಿಚಿತ್ರವಾದ ಉತ್ತರಗಳನ್ನು ಹೇಳ್ತೀನಿ ಕೇಳಿ. ಇದು ಪರೀಕ್ಷಾ ಕ್ಷೀರ....

ಕುಮಾರ್: ಓದಬೇಡಿ ಸಾರ್ ನಾಚ್ಗೆ ಆಗುತ್ತೆ.

ಉಪಾ : ಉತ್ತರ ಸರಿಯಾಗಿ ಗೊತ್ತಿದ್ರೆ ಬರಿಬೇಕು, ಇಲ್ಲದೇ ಹೋದ್ರೂ ಯಾಕೆ ಪೇಜು ತುಂಬಿಸೋಕೆ ಬಾಯಿಗೆ ಬಂದದ್ದನ್ನು ಗೀಚಬೇಕು. ಪೇಪರ್, ಇಂಕು, ವೇಳೆ ಎಲ್ಲಾ ಹಾಳು. ವೆಂಕಣ್ಣ.... ೨೦ ಮಾರ್ಕ್ಸ್ ಇವರ ಅನುಭವಸಾರ ಕೇಳಿ. ಅತ್ಯಂತ ದೊಡ್ಡ ಗ್ರಹ ಕಂಬವಂತೆ. (ನಗು.... ಹುಡುಗರು)

ರಾಜು ಕಣ್ಣಿಗೆ ಕಾಣದ ಗ್ರಹ -ದೆವ್ವ, ಪೀಡೆ, ಪಿಶಾಚಿಯಂತೆ. ಸುಮಿತ್ರಾ ಬರೀತಾರೆ ವಾಯುವಿನ ಅಳತೆ ಮಾಡಲು ತಕ್ಕಡಿ, ಥರ್ಮಾಸ್ ಫ್ಲಾಸ್ಕ್ ಉಪಯೋಗಿಸುತ್ತಾರಂತೆ.

ಪತಂಗಕ್ಕೆ ಉದಾಹರಣೆ ಎಂದು ಕೇಳಿದ್ದರೆ ಅದು ಒಂದು ಸತ್ಯ ಎಂದು ಬರೆದಿದ್ದಾರೆ ರಾಣಿ.

ನಾಗಮಣಿ ಬರೆದಿದ್ದಾರೆ - ಆಹಾರ ಶ್ವಾಸಕೋಶದಿಂದ ಜಠರಕ್ಕೆ ಸೇರುತ್ತಂತೆ (ನಗು) ಹಾರಲಾರದ ಪಕ್ಷಿಗಳು ಕೋಳಿ, ಹಸು, ಕಪ್ಪೆ. ವಿದ್ಯುತ್ ವಿಶ್ಲೇಷಣೆಗೆ ಒಬ್ಬರು ಮಹಾನುಭಾವರು ಕೊಟ್ಟಿರುವ ವಿವರಣೆ ನೋಡಿ "ಜೋಗ್, ಶಿಂಷಾ, ಗಗನಚುಕ್ಕಿ, ಬರಚುಕ್ಕಿ ಜಲಪಾತಗಳಿಂದ ನೀರು ಧುಮುಕಿ ಕೆಂಡವಾಗಿ ವಿದ್ಯುತ್ ಆಗುವುದು. ಇದಕ್ಕೆ ವಿದ್ಯುತ್ ವಿಶ್ಲೇಷಣೆ ಎಂದು ಹೆಸರು". ಸಂಶೋಧನಾಕಾರರು ಚರಿತ್ರೆಯಲ್ಲಿ ಕೆಲವು ಹೊಸ ವಿಷಯಗಳನ್ನು ಕಂಡು ಹಿಡಿದಿದ್ದಾರೆ.

ಮೊಹೆಂಜೊದಾರೋ ಮತ್ತು ಹರಪ್ಪ ಅಣ್ಣ ತಮ್ಮಂದಿರಂತೆ ಅಂತ ಸ್ವಾಮಿ ಬರೆದಿದ್ದಾರೆ. ಮಾರ್ಚ್ ತಿಂಗಳಲ್ಲಿ ಹದಿನೈದು ದಿನಗಳಿವೆಯಂತೆ. ಮುದ್ದಣನ ಕಾಲ ೧೯೬೨ ಅಂತ ಬರೆದಿದ್ದಾರೆ. ಹೀಗೆ ಪಟ್ಟಿ ಮಾಡುತ್ತಾ ಹೋದರೆ ಒಂದೇ, ಎರಡೇ ಹಲವಾರು ಎಲ್ಲಾ ಹೊಸದಾಗಿ ಕಂಡು ಹಿಡಿದ ಸಂಶೋಧಕರೇ. ಸರಿಯಾಗಿ ಓದಿ ಉತ್ತರ ಬರೆಯಲಿಕ್ಕಾಗೋಲ್ವೇ? ಬರೀ ತಲಹರಟೆಗಳನ್ನು ಬರೆದಿದ್ದೀರಾ? ಸ್ವಲ್ಪವಾದರೂ ವಿವೇಚನೆ ಮಾಡ್ತೀನಿ ಅನ್ನೋ ಪರಿಜ್ಞಾನ ಬೇಡವೇ?

(ಗಂಟಾನಾದವಾಗುವುದು)

## ತರಂಗ-೮

ಉಪಾ : ಈಗ "ಕ್ವಿಜ್ ಕಾಂಪಿಟೆಷನ್ ರಸ ಪ್ರಶ್ನೆಕಾರ್ಯಕ್ರಮ ಅನ್ನಿ, ಇಲ್ಲ, ತಿಣುಕು ಕಾರ್ಯಕ್ರಮ ಅನ್ನಿ ನಿಮ್ಮ ಸಾಮಾನ್ಯ ತಿಳುವಳಿಕೆ ಎಷ್ಟಿದೆ ಪರೀಕ್ಷೆ ಮಾಡಬೇಕು ಅಂತ. ಇದರಲ್ಲಿ ಕುಮಾರ್, ಸಾವಿತ್ರಿ, ಚೇತನ್, ನವೀನ್, ರಶ್ಮಿ ಮಧು, ರಾಣಿ, ಎಲ್ಲಾ ಸೇರಿದ್ದೀರಿ. ನಾನು ಕೇಳಿದವರು ಮಾತ್ರ ಉತ್ತರ ಹೇಳಬೇಕು. ಪ್ರಶ್ನೆ ಕೇಳಿ. ಒಂದು, ಎರಡು ಮೂರು ಅಂತ ಹೇಳಿ, ನಿಮ್ಮ ಹೆಸರು ಹಿಡಿದು ಹೇಳಿ ಅಂತೀನಿ, ಆಗ ನೀವು ಹೇಳಬೇಕು ಗೊತ್ತಾಯ್ತೇ.....?

ಹುಡುಗರು : ಆಯ್ತು ಸಾರ್.

ಉಪಾ : ಭಾರತದ ಜನಸಂಖ್ಯೆ ಎಷ್ಟು? ೧, ೨, ೩, ಕುಮಾರ್

ಕುಮಾರ್: ೭೦೦ ಸಾವಿರ

ಉಪಾ : ತಪ್ಪು.... ಚೇತನ್-

ಚೇತನ್ : ಅರವತ್ತು ಕೋಟಿ.

ಉಪಾ : ತಪ್ಪು.

ರಶ್ಮಿ : ಎಪ್ಪತ್ತು ಕೋಟಿ.

ಉಪಾ : ತೊಂಬತ್ತೆರಡು ಕೋಟಿ ದಾಟಿದೆ. ಮುಂದಿನ ಪ್ರಶ್ನೆ, ಮೊದಲ ರಾಷ್ಟ್ರಪತಿ ಯಾರು? ಭಾರತಕ್ಕೆ..... ಮಧು

ಮಧು : ರಾಜೇಂದ್ರ ಪ್ರಸಾದ್.

ಉಪಾ : ವೆರಿಗುಡ್ ಮುಂದಿನ ಪ್ರಶ್ನೆ. ಮಳೆ ಹೆಚ್ಚಾಗಿ ಬೀಳುವ ಪ್ರದೇಶ ಯಾವುದಮ್ಮ ದೇಶದಲ್ಲಿ ಚೇತನ್:

ಚೇತನ್ : ಮೈಸೂರು.

ಉಪಾ : ತಪ್ಪು... ರಶ್ಮಿ....

ರಶ್ಮೀ : ಗೊತ್ತಿಲ್ಲ ಸಾರ್.

ಕುಮಾರ್: ನಾನೇಳ್ತೀನಿ ಸಾರ್.... ಅಸ್ಸಾಂನ ಚಿರಾಪುಂಜಿ

ಉಪಾ : ವೆರಿಗುಡ್......

* * *

## ತರಂಗ-೯

ಉಪಾ : ಈಗ ಮಕ್ಕಳಿಂದ ವಿವಿಧ ವಿನೋದಾವಳಿ ಕಾರ್ಯಕ್ರಮ. ಎಲ್ಲರೂ ಗಲಾಟೆ ಮಾಡದೆ ಸಹಕರಿಸಬೇಕಾಗಿ ಕೋರಿಕೆ, ಈಗ ಲಘು ಗೀತೆಗಳು.... ಕುಮಾರಿ ಚಂಪಾ.... ಅವರಿಂದ

ಚಂಪ : ನಗಬೇಕು ನಗಿಸಬೇಕು
ಇದೇ ನಮ್ಮ ಧರ್ಮ
ನಗಲಾರ ಅಳುವೆ ಎಂದರೆ ಅದು ನಿಮ್ಮ ಕರ್ಮ.

ಹುಡುಗ : ಈಗ ನಿನಗೆ ಅಳೋ ಸ್ಥಿತಿಯಾಗಿ ಹೋಯ್ತುಲ್ಲಾ ಸಾಹಿತ್ಯ ಮರ್ತೊಯ್ತಾ ಚಂಪಾ ಅವ್ರೆ?

ಉಪಾ : ನಂದಕಿಶೋರ್.

ನಂದ : ಎಂದೆಂದಿಗೂ.....

ಹುಡುಗ : ಬಿಡಲಾರೆನೂ.... ಹಿಡ್ಕಳ್ಳಕ್ಕೆ ಓಡೋದ ಅಂತ ಕಾಣುತ್ತೆ.

ಉಪಾ : ಪದ್ಮ....

ಪದ್ಮ : ಆಲಕ್ಕೆ ಹೂವಿಲ್ಲ
ಸಾಲಕ್ಕೆ ಕೊನೆಯಿಲ್ಲ
ಜಾಲಿಯ ಮರವು ನೆರಳಲ್ಲ ಮಗಳೇ...
ತಾಯಿಯ ಮನೆಯು ಸ್ಥಿರವಲ್ಲ.

ಹುಡುಗ : ನಿಮಗೆ ಪ್ರೈಜ್ ಸ್ಥಿರವಲ್ಲ

ಉಪಾ : ಶಾಂತ....

ಶಾಂತ : ಉದರ ವೈರಾಗ್ಯವಿದು ನಮ್ಮ ಪದುಮನಾಭನ ಲೇಶಭಕುತಿಯು

ಉಪಾ : ಕುಮಾರ್... ಅವರಿಂದ ಮಿಮಿಕ್ರಿ...

(ವಿವಿಧ ರೀತಿಯ ಅಣುಕು ಕೇಕೇ ಚಪ್ಪಾಳೆ.... ಹುಡುಗರಿಂದ ಕುಮಾರ್ ಅವರಿಂದ ಏಕಪಾತ್ರಾಭಿನಯ)

ಕಿಮಾರ್ : ಕೆಂಪೇಗೌಡ.... ಏನು ಬಸವಯ್ಯ?

(ರೋಷದಲ್ಲಿ) ಬಸವಯ್ಯ.... ಅಣ್ಣಾ ಸೀರ್‍ಯ, ಸೋಮಾರು, ಹೊಳವನಹಳ್ಳಿ, ದೊಡ್ಡಬಳ್ಳಾಪುರದ ಪಾಳೆಯಗಾರರು ಚನ್ನಪಟ್ಟಣದ ಜಗದೇವರಾಯನ ನಾಯಕತ್ವದಲ್ಲಿ ಅಷ್ಟು ದಿನಗಳಿಂದ ರಾಹುವಿನಂತೆ ಸಂಚು ಹಾಕುತ್ತಿದ್ದವರು ಇಂದು ಯುದ್ಧಕ್ಕೆ ಮುಂಚಿರುವರು.

ಕೆಂಪೇ : ಯುದ್ಧಕ್ಕೆ ಸಿದ್ಧರಾಗೋಣ, ಮುನ್ನುಗ್ಗೋಣ; ಭೈರವೇಶ್ವರನ ಇಚ್ಛೆ ಇದ್ದಂತಾಗಲಿ.

(ದುಗುಡದಲ್ಲಿ) ಚನ್ನಾಂಬೆ- ದೇವರನ್ನು ಪೂಜಿಸಿ ಸಂತೋಷದಲ್ಲಿದ್ದ ನಾವು ಈಗ ರಣರಂಗದಲ್ಲಿ ನಿಲ್ಲುವಂತಾಯಿತೆ ಭೈರವೇಶ್ವರಾ?

ಕೆಂಪೇ : ಚೆನ್ನಾಂಬೆ ಕೆಂಪೇಗೌಡನ ಅರ್ಧಾಂಗಿಯಾದ ನೀನೂ ಹೀಗೆ ಕುಸಿಯಬಹುದೇ? ನನಗೆ ಧೈರ್ಯ ತುಂಬು. ನನ್ನ ಗುರು ಮಾಧವಭಟ್ಟರು ನನಗೆ ಸಕಲ ವಿದ್ಯೆಗಳನ್ನು ಕಲಿಸಿದ್ದಾರೆ. ಆ ಗುರುವಿನ ಕೃಪೆಯಿಂದ ಖಂಡಿತ ಜಯವಾಗುವುದು.

ಚೆನ್ನಾಂಬೆ : ಸ್ವಾಮಿ ನಮಸ್ಕರಿಸುತ್ತಿದ್ದೇನೆ. ಎಲ್ಲರೂ ಹೋಗಿಬನ್ನಿ ಭೈರವೇಶ್ವರನಿದ್ದಾನೆ. ಜಯವು ನಿಮಗೆ ಕಟ್ಟಿಟ್ಟ ಬುತ್ತಿ.

ಉಪಾ : ಕುಮಾರ ಲಿಂಗಪ್ಪನಿಂದ ಹರಿಕಥೆ, ಕೋಳೂರು ಕೊಡಗೂಸು.

(ಹರಿಕಥೆಯಾದ ಮೇಲೆ ಎಲ್ಲರೂ ಚಪ್ಪಾಳೆ ಹೊಡೆಯುವರು)

ಈಗ ಫ್ಯಾನ್ಸಿಡ್ರೆಸ್, ಚೀನಾದೇಶದ ಮಹಿಳೆ, ಕೊಂಡಮಾಮ, ಲೇಡಿ ಡಾಕ್ಟರ್, ಬುಡಬುಡಕೆ, ಹಳೇಪೇಪರ್ ಖಾಲಿಸೀಸೆ ಮಾರುವವ, ಪೂಜಾರಿ, ಮಾಗಡಿಕೆಂಪೇಗೌಡ, ಕೊರವಂಜಿ.

(ಒಂದೊಂದು ವೇಷ ನೋಡಿದಾಗಲೂ ಹುಡುಗರ ಕೇಕೆ, ಕೈ ಚಪ್ಪಾಳೆ)

ಉಪಾ : ಕೊನೆಯದಾಗಿ "ಕವನವಾಚನ ಸ್ಪರ್ಧೆ"

ಹೆಗಡೆ :

ಚಾಮರಸನ ಪ್ರಭುಲಿಂಗಲೀಲೆಯ ಒಂದು ಪದ್ಯ
ದಾನವಿಲ್ಲದ ಧರ್ಮ ವಿಷಯ
ಧ್ಯಾನಳಿಲ್ಲದ ತಪವು ಜೀವ
ಸ್ಥಾನದನುಸಂಧಾನವಿಲ್ಲದ ಯೋಗದಭ್ಯಾಸ

ಜ್ಞಾನವಿಲ್ಲದ ಸಿದ್ಧಿವರಸಂ
ತಾನವಿಲ್ಲದ ಬಾಳ್ವೆಯಲಿ ಸುಖ
ವೇನು ದೊರಕುವುದೆನುತ ನಿರಹಂಕಾರ ಚಿಂತಿಸಿದ"

ಹುಡುಗ : ಓದಕ್ಕೆ ಬರದೇ ಹೋದ್ರೂ ಯಾಕಪ್ಪಾ ಸ್ಪರ್ಧೆಗೆ ಸೇರಿದೆ?

(ಎಲ್ಲರೂ ನಗುವರು)

* * *

## ತರಂಗ-೧೦

ತಂದೆ : ನೋಡ್ದೇನೆಲೇ... ಶಾಂತಾ... ಬೇಗ ಬಾರೆ... ನಿನ್ನ ಮಗನ್ನ ನೋಡು ಪ್ರೈಜ್‌ಗಳ ಮೊಟ್ಟೇನೇ ಹೊತ್ತು ತಂದಿದ್ದಾನೆ.

ಕುಮಾರ : ಇದು ಹೈಜಂಪ್‌ದು, ಇದು ಲಾಂಗ್ ಜಾಂಪ್‌ದು; ಇದು ಡಿಬೇಟ್‌ದು, ಇದು ಲಘುಗೀತೆ ಹಾಡಿದ್ದಕ್ಕೆ ಸಿಕ್ಕಿದ್ದು ಕಣಪ್ಪಾ.

ತಂದೆ : ತುಂಬಾ ಸಂತೋಷ. ಹುಡುಗ ತುಂಟ ಅಂತಿದ್ದೆ, ಬೈತಿದ್ಯಲ್ಲಾ ನೋಡ್ದಾ ಈಗ, ಅವನ ಪ್ರತಿಭೆ ಎಷ್ಟು ಅಂತ? ಇವೆಲ್ಲಾ ಬಾಲಲೀಲೆ ಕಣೆ. ಮಹಾಪುರುಷರು ಬಾಲಲೀಲೆ ತೋರಿ ಮುಂದೆ ಪ್ರಸಿದ್ಧರಾಗಿದ್ದಾರೆ. ಮಕ್ಕಳು ದೇವರಿದ್ದಾಗೆ, ಎಷ್ಟು ಜನ ಮಕ್ಕಳ ಬಾಲಲೀಲೆಯಿಂದಲೇ ಅಮರರಾದರು. ಶ್ರೀಕೃಷ್ಣನ ಬಾಲಲೀಲೆ ಸಾಮಾನ್ಯವೇ? ಪ್ರಹ್ಲಾದ, ಮಾರ್ಕಂಡೇಯ, ನಚಿಕೇತ, ಕೋಳೂರು ಕೊಡಗೂಸು, ಎಷ್ಟು ಉದಾಹರಣೆ ಇಲ್ಲ. ಎಷ್ಟೇ ದುಃಖದಲ್ಲಿರಲಿ ಬಾಲಲೀಲೆ ಕಂಡು ಸಂತೋಷವಾಗುತ್ತೆ.....

ತಾಯಿ : ನಾನೇನು ಕೆಟ್ಟು ಹೋಗು ಅನ್ತಿದ್ನೇನ್ರೀ... ಓದು.... ಓದುವಾಗ, ಆಡುವಾಗ ಆಡು ಅನ್ತಿದ್ದೆ ಅಷ್ಟೇ.

ತಂದೆ : ನಮ್ಮ ಮಗ ಓದಿ ಓದಿ ಮರುಳಾದ ಕೂಚುಭಟ್ಟ ಅಲ್ಲ. ಆತ ಇತರ ಚಟುವಟಿಕೆಗಳಲ್ಲೂ ಜಾಣನಾಗಿದ್ದಾನೆ. ಬರೀ ಓದುಬಿಟ್ರೇ ಬಂತೆ ಭಾಗ್ಯ? ಮಕ್ಕಳಲ್ಲಿ ಒಂದೊಂದು ರೀತಿ ಪ್ರತಿಭೆ ಇರುತ್ತೆ. ನಾವು ಅವನ ಪ್ರತಿಭೆ ನೋಡಿ ಪ್ರೋತ್ಸಾಹ ಕೊಡಬೇಕೇ ಹೊರತು ಅದನ್ನು ಮೊಟಕು ಮಾಡಬಾರದು.

ತಾಯಿ : ಹೌದು ನೀವು ಹೇಳೋದು ನೂರಕ್ಕೆ ನೂರು ಸತ್ಯ, ಮಕ್ಕಳ ಬಾಲಲೀಲೆ ಮರೆಯಕ್ಕಾಗೋಲ್ಲ!

(ಎಲ್ಲರೂ ನಗುವರು)

*

# ನಾನ್ಯಾರು

**ಪಾತ್ರ ವರ್ಗ**

೧. ಮಂಗಳ-ಚಂದ್ರ : ದಂಪತಿಗಳು ೨. ಪೊಮ್ಮಣಿ - ಮಗಳು ೩. ಪುಟ್ಟು - ಚಂದ್ರುವಿನ ಮಿತ್ರ

ಮಂಗಳ : ರೀ.... ರೀ.... ನಾನ್ರೀ....

ಚಂದ್ರ : ಇರಬಹುದು.

ಮಂಗಳ : ಇರಬಹುದೇನು ಬಂತು ಇದ್ದೇ ಇದ್ದೀನಲ್ಲಾ.

ಚಂದ್ರ : ಅದಕ್ಕಿಗೇನು ಮಾಡು ಅಂತಿಯಾ?

ಮಂಗಳ : ಸಧ್ಯ ಏನೂ ಮಾಡ್ಬೇಡಿ....

ಚಂದ್ರ : ಅಂದಮೇಲೆ ಯಾಕೆ ಮಾತ್ನಾಡಿಸ್ತೀ?

ಮಂಗಳ : ಮಾತಾಡ್ಲಿ ಅಂತ.

ಚಂದ್ರ : ಮಾತಾಡಿದ್ನಲ್ಲ.

ಮಂಗಳ : ಏನು ಮಾತು?

ಚಂದ್ರ : ಬಾಯಿನಿಂದ ಹೊರಟ ಮಾತು.

ಮಂಗಳ : ಸಾಕು.... ಮಾತಾಡ್ರೀ.....

ಚಂದ್ರ : ಸಾಕು ಅಂತಿಯೇ, ಬೇಕು ಅಂತೀಯಾ? ನಾನು ಮಾತಾಡ್ಲೋ ಬಿಡ್ಲೋ.....

ಮಂಗಳ : ಮಾತಾಡಿ

ಚಂದ್ರ : ಏನು ಮಾತಾಡ್ಲಿ?

ಮಂಗಳ : ಮಾತ್ನಾಡ್ಲಿಕ್ಕೆ ಮಾತುಗಳೇ ಇಲ್ವೇ? ನಮ್ಮದೇನು ಸಂಸಾರವಲ್ವೇ?

ಚಂದ್ರ : ಅಲ್ಲಾ ಅಂದವ್ರ್ಯಾರು?

ಮಂಗಳ : ಅದೇ ಸಂಸಾರವನ್ನೇ ಮರೆತಹಾಗೆ ಕಾಣುತ್ತೆ?

ಚಂದ್ರ : ಇರಬಹುದು.

ಮಂಗಳ : ನನ್ನನ್ನಾದ್ರೂ ಮರೆತ್ರೋ ಹೇಗೋ?

ಚಂದ್ರ : ಇದ್ದರೂ ಇರಬಹುದು.

ಮಂಗಳ : ಸದ್ಯ ನಿಮ್ಮನ್ನಾದ್ರೂ ನೀವು.....!

ಚಂದ್ರ : ಹೌಹೌದು..... ನನ್ನನ್ನೂ...... ನಾನಾದ್ರೆ ಹೆಚ್ಚೇ

ಮಂಗಳ : ನಾನೂ ಹೆಚ್ಚಲ್ಲ ನಿಮಗೆ ನೀವು ಹೆಚ್ಚಲ್ಲ, ಮತ್ತೆ ನಿಮಗ್ಯಾರು ಹೆಚ್ಚು?

(ಮಗುವು ಅಳುವ ಶಬ್ದ)

ಚಂದ್ರ : ಅವುಗಳು ತಾನೇ ಸಧ್ಯ ಹೆಚ್ಚು ಹೋಗು ಹೋಗು ಗಲಾಟೆ ಕೇಳಲಿಕ್ಕಾಗೋಲ್ಲ.

ಮಂಗಳ : ಹೌದು.... ಅವೇ ಅವೇ.... ನಿಲ್ರೋ..... ನಿಲ್ಲು.... ಉಸಿರು ಕಟ್ಟೋವರೆಗೂ ಅಳಬೇಡ.

* * *

ಪೊಮ್ಮಣಿ : ಡ್ಯಾಡೀ.....

ಚಂದ್ರು : ಅದೇನೆ ಯಾಡೀ?

ಪೊಮ್ಮಣಿ : ನಾನು ಕಣ್ಬಟ್ಟು ನೋಡಿ.

ಚಂದ್ರು : ಯಾಕೆ ನೋಡ್ಲೇಬೇಕಾ? ಸ್ವರ ಕೇಳದೆ, ನೀನಾರು ಅನ್ನೋದು ಗೊತ್ತಾಗೋಲ್ವೇ?

ಪೊ : ಮತ್ಯಾಕೆ ಸರಿಯಾಗಿ ಮಾತಾಡೋಲ್ಲ?

ಚಂದ್ರು : ಏಕೆ ಸೊಟ್ಟವಾಗಿ ಮಾತಾಡಿದ್ನೇ?

ಪೊ : ಇಲ್ಲಾ ಸಿಡಕಾಗಿ ಮಾತಾಡಿದ್ರಿ.

ಚಂದ್ರು : ಮತ್ಯಾಗೆ ಮಾತಾಡಬೇಕು?

ಪೊ : ನಗು ನಗುತ್ತಾ ಸಂತೋಷವಾಗಿ.

ಚಂದ್ರು : ನನಗೆ ಹೇಳ್ಕೊಡೋಕೆ ಬಂದ್ಲು

ಪೊ : ನಾನು ತಪ್ಪು ಮಾತಾಡಿದ್ನೇ ಡ್ಯಾಡಿ?

ಚಂದ್ರು : ಇಲ್ಲ ದೊಡ್ಡವರಾಗಿ ಉಪದೇಶ ಮಾಡಲಿಕ್ಕೆ ಬಂದೆ.

ಪೊ : ಇತ್ತೀಚೆಗೆ ಯಾಕೆ ಡ್ಯಾಡಿ ನೀವು ಹೀಗಾಡ್ತೀರಿ?

ಚಂದ್ರು : ಯಾಕೆ ಹುಚ್ಚು ಹುಚ್ಚಾರಾಗಾಡ್ತಾ ಇದ್ದೀನಾ?

ಪೊ : ಛೇ.... ಛೇ.... ಹಾಗೆಲ್ಲಾ ಅನ್ಬೇಡಿ....

ಚಂದ್ರು : ಮತ್ತೆ ಇನ್ಹೆಂಗೆ ಮಾತಾಡ್ಲಿ ಹೇಳು ಮತ್ತೆ....?

ಪೊ : ಈಗ ಹತ್ತು ವರ್ಷಗಳ ಹಿಂದೆ ಮಾತಾಡ್ತಿದ್ರಲ್ಲಾ ಹಾಗೆ.

ಚಂದ್ರು : ಆವಾಗ ಹಾಗಿತ್ತು ಹಾಗೆ ಮಾತಾಡ್ತಿದ್ದೆ. ಈವಾಗ ಹೀಗಿದೆ ಅದ್ಕೆ ಹೀಗೆ ಮಾತಾಡ್ತಿದ್ದೇನೆ.

ಪೂ : ಹೋಗ್ಲಿ ಮತ್ಯಾಕೆ ಬೆಳಿಸ್ಲಿ....?

ಚಂದ್ರು : ಅದನ್ನೇ ಬೇಡ ಅಂದದ್ದು.

ಪೂ : ಅದ್ಕೇ ಬಿಟ್ಟು ವಿಷಯಕ್ಕೆ ಬರೋದ್ಕೆ ಇಷ್ಟು ಸುತ್ತು ಬಳಸೆ?

ಚಂದ್ರು : ವಿಷಯಕ್ಕೆ ಬರೋದ್ಕೆ ಇಷ್ಟು ಸುತ್ತು ಬಳಸೆ?

ಪೂ : ಹೋಗ್ಲಿ ಬಿಡಪ್ಪ.

ಚಂದ್ರು : ಹೋಗ್ಲಿ ಬಿಡು.

ಪೂ : ಅದೇ.....

ಚಂದ್ರು : ಯಾವುದು?

ಪೂ : ಕಾಲೇಜಿನಿಂದ ಮುಂದಿನ ವಾರ ಊಟಿಗೆ ಟ್ರಿಪ್ ಹೊರಡುತ್ತಾರೆ ಡ್ಯಾಡಿ.

ಚಂದ್ರು : ಹೊರಟರೇನಂತೆ? ಹೊರಡಲಿ ಬಿಡು.

ಪೂ : ಅದಕ್ಕೆ ನಾನು ಸೇರಬೇಕೂ ಅಂತ.... ಕೇಳ್ತಾ ಇದ್ದೀನಿ.

ಚಂದ್ರು : ಅದಕ್ಕೇನಂತೆ ನೀನು ಹೋಗು ಅಂತ ನಾನು ಹೇಳ್ತಾ ಇದ್ದೀನಿ.

ಪೂ : ಅಂದ್ರಾಯ್ತೇ?

ಚಂದ್ರು : ಜೊತೆಗೆ ನಾನೂ ಬರಬೇಕೆ?

ಪೂ : ಸದ್ಯ ನನ್ನೊಬ್ಬಳನ್ನ ಕಳುಹಿಸಿದ್ರೆ ಸಾಕು.

ಚಂದ್ರು : ಕಳುಹಿಸಲಿಕ್ಕೆ ನನಗೇನು? ಹೋಗಿ ಬಾ ಅಂತ ಹೇಳಿದ್ನಲ್ಲಾ.

ಪೂ : ಅದಕ್ಕೇ.... ಹಣ ಬೇಡ್ವೇ?

ಚಂದ್ರು : ಹಣ ಬೇಡ್ವೇ?

ಪೂ : ಹಣ ಯಾರಿಗೆ ಬೇಡ, ಕೊಡಣ್ಣ.

ಚಂದ್ರು : ನನ್ನ ಹತ್ತಿರ ಇದ್ದರೆ ಕೊಡ್ತಿದ್ದೆ......

ಪೂ : ಮತ್ತೆ ಮಾತಾಡಿ ಏನು ಪ್ರಯೋಜನ?

ಚಂದ್ರು : ಮತ್ತೆ ಯಾಕೆ ಮಾತು ಮುಂದುವರಿಸ್ತಾ ಇದ್ದೀಯೇ?

ಪೂ : ಟ್ರಿಪ್ಪಿಗೆ ಬೇಕಾದ ಹಣ ಕೊಟ್ರೆ ಅಲ್ಲೆ ಮಾತು ಕಟ್.

ಚಂದ್ರು : ನನಗೆ ಅದೇ ಕಟ್.....

ಪೂ : ಹಾಗೆಂದ್ರೆ ಹ್ಯಾಗಪ್ಪ? ನಾನು ನಿಮ್ಮ ಮಗಳಲ್ವೇ?

ಚಂದ್ರು : ಮಗಳು..... ಇರಬಹುದು....

ಪೊ : ಅದಕ್ಕಾದ್ರೂ ಬೆಲೆ ಬೇಡ್ವೇ?

ಚಂದ್ರು : ಅದಕ್ಕೆ ಸದಾ ನನ್ನ ಹೃದಯದಲ್ಲಿ ಬೆಲೆ ಇದೆ.

ಪೊ : ಆದ್ರೇನು ಬಂತು? ಹೊಟ್ಟೆಗಿಟ್ಟು ಕೊಡಲಾರೆ ಗಿಣಿಯಾಗಿ ಸಾಕ್ತೀನಿ ಅಂತ ಅಂದ ಹಾಗೆ.

ಚಂದ್ರು : ಯಾಕೆ ಹೊಟ್ಟೆಗೆ ಇಟ್ಟು ಇಲ್ವೇ?

ಪೊ : ಹಿಟ್ಟು ಇಲ್ಲ, ಬಟ್ಟೆಯೂ ಇಲ್ಲ, ನೋಟವೂ ಇಲ್ಲ.... ಏನೂ ಇಲ್ಲ.

ಚಂದ್ರ : ಹಾಗಂತ ತಿಳಿದೂ ಯಾಕಮ್ಮ ಕೇಳ್ತಾ ಇದ್ದೀಯೆ?

ಪೊ : ಹಾಗಾಗಬಾರದು ಅಂತ ಕೇಳ್ತಾ ಇದ್ದೀನಿ.

ಚಂದ್ರು : ನೀನು ಕೇಳಿದ್ರೆ ನಾನು ಹಾಗೇ ಹೇಳ್ತಾ ಇರ್ತೀನಿ....

ಪೊ : ಡ್ಯಾಡಿ....?

ಚಂದ್ರು : ಅದೇನೇ ನಿನ್ನ ಮೋಡಿ.

ಪೊ : ಮೋಡಿ ಗೀಡಿ ನನಗೆ ಬ್ಯಾಡಿ..... ಬೇಕಾದ್ದು ನೂರು ರೂಪಾಯಿ.

ಚಂದ್ರು : ನೀನು ಹೇಳೋದು ಹೊತ್ತು ಹೋಗದ ಮಾತು.

ಪೊ : ಹೊತ್ತು ಕಳೆಯೋದು ಹೇಗೆ ಮತ್ತೆ? (ಮಗುವು ಅಳುವ ಶಬ್ದ)

ಚಂದ್ರು : ಅದೋ ನೋಡು ಹೋಗಮ್ಮ ತೊಟ್ಟಿಲು ತೂಗ್ತಾ ಕಾಲಕಳೆ ಹೋಗು.

ಪೊ : ಇದು ಮಾತ್ರ ಕೊಡ್ತೀರಿ.....

ಚಂದ್ರು : ಕಾಲ ನೂಕಲಿಕ್ಕೆ ಯಾವುದಾದ್ರೂ ಒಂದು ಕೆಲಸ, ಇಬ್ಬರಿಗೂ ಸಮಾಧಾನ ಸಂತೋಷ...... ಹೋಗು ಹೋಗು.....

ಪೊ : ಸದ್ಯ.... ಹೋಗ್ತೀನಿ ಸುಮ್ನಿರಿ.....

* * *

ಮಂಗಳ : ರೀ.... ಕಾಫಿ ಇಟ್ಟು ಒಂದು ಗಂಟೆ ಆಯ್ತಲ್ಲ ಏನು ಕುಡೀತೀರೋ.... ಇಲ್ವೋ....

ಚಂದ್ರು : ಕುಡಿತೀರೋ ಅಂದ್ರೆ ಕುಡಿಬೇಡ್ವೇ?

ಮಂಗಳ : ಕುಡೀರಿ ಅಂತ಼್ೇ ಹೇಳಿದ್ದು.

ಚಂದ್ರು : ಕುಡಿದ್ರಾಯ್ತು....

ಮಂಗಳ : ಕುಡಿದ್ರಾಗುತ್ತೇನು?

ಚಂದ್ರು : ಆದ್ರೂ ಆಗಬಹುದು.....

ಮಂ : ಮಗುವಾಗಿದ್ದಾಗ್ಲೆಲ್ಲಾ ವರಳೆ ಹಾಲು ಅಟ್ಟಲಿಲ್ವೇ?

ಚ : ಇಲ್ಲಾ ಅಂದವ್ರ್ಯಾರು?

ಮಂಗಳ : ಈಗ್ಲೂ ಅದೇನೇ ಅಂತ?

ಚಂದ್ರು : ಆದ್ರೇನು?

ಮಂಗಳ : ನೀವು ಐದಾರು ಮಕ್ಕಳ ತಂದೆ ನೀವು ನಿಮ್ಮ ಮಕ್ಕಳಿಗೆ ಕುಡಿಸೋ ಕಾಲ.

ಚಂದ್ರು : ಅಷ್ಟೇ ತಾನೇ....

ಮಂಗಳ : ಸರಿಹೋತು.... ನಿಮಗೆ ಈಗ್ಲೇ ಇಷ್ಟೊಂದು ಬುದ್ಧಿ ಕೆಡ್ತು ಅಂದ್ರೆ ಇನ್ನು ರಿಟೈರ್ ಆದಮೇಲೆ ಏನೂ ಅಂತ?

ಚಂ : ಆದ್ರೇನಂತೆ? ಎಂದಾದ್ರು ಒಂದು ದಿನ ಆಗ್ಲೇಬೇಕಲ್ಲ...

ಮಂಗಳ : ಹೀಗೆಲ್ಲಾ ಆಡೋರು ಅರವತ್ತರ ಅರುಳೋ.... ಮರುಳೋ ಅಂದ ಹಾಗೆ, ನಿಮಗಿನ್ನು ನಲವತ್ತೆರಡು ವಯಸ್ಸು. ಇನ್ನು ರಿಟೈರ್ಡ್ ಆಗಲು ೧೮ ವರ್ಷಗಳಿವೆ....

ಚಂದ್ರು : ಇಲ್ಲ ಅಂದವ್ರ್ಯಾರು?

ಮಂ : ಸರಿಹೋಯ್ತು ಅದೇನು ಒಂದು ಮಾತಾಡಕ್ಕೇ ಇಲ್ಲಾ ಆಗ್ಲೇ ಶುರುಮಾಡ್ಬಿಟ್ಟಿರಲ್ಲಾ ಏನು? ಮಾತು ಮನೆ ಕೆಡಿಸ್ತು ತುತ್ತು ತೂಕ ಕೆಡಿಸ್ತು ಅನ್ನೋ ಗಾದೆ ಕೇಳಿಲ್ವೇ? ಹಾಗಾಯ್ತು.

ಚ : ಮಾತಾಡಿದ್ರೆ ಮಾತು, ಮಾತಾಡ್ದಿದ್ರೇ ಮೂಗ, ಮತ್ತೆ ಹೇಗಿರಬೇಕು ಹೇಳು ಮತ್ತೆ.

ಮ : ಪ್ರಶ್ನೆಗುತ್ತರ ಸಾಕು.

ಚಂ : ಈಗ ನಾನು ಮಾಡ್ತಾ ಇರೋದೂ ಅದ್ಕೇ.

ಮಂ : ಹೋಗ್ಲಿ ಈಗ ಕಾಫಿ ಕುಡೀರಿ, ಎಲ್ಲಾ ಆರಿ ಅತ್ತಿಕಾಯಿ ಆಗಿಹೋಯ್ತು.

ಚಂ : ಮತ್ತೆ ಬಿಸಿ ಮಾಡಿದ್ರಾಯ್ತು.

ಮಂ : ಅದಕ್ಕೆ ಸೌದೆಯಾದ್ರೂ ಬೇಕಲ್ಲಾ.

ಚಂ : ತಂದ್ರಾಯ್ತು.

ಮಂ : ಅದನ್ನು ತನ್ನೀ ಅಂತ ಹೇಳಲಿಕ್ಕೆ ಬಂದದ್ದು.

ಚಂ : ಸರಿಹೋಯ್ತು.

ಮಂ : ತರದೇ ಇದ್ರೆ ಹೊಟ್ಟೆಗೇ ಶೂನ್ಯ ಮಧ್ಯಾಹ್ನಕ್ಕೆ

ಚಂ : ನೀನೇ ತಂದ್ರಾಗ್ದೇ?

ಮಂ : ತರೋದ್ಕೆ ಹಣ ಕೊಟ್ರಲ್ವೇ?

ಚಂ : ಕೊಟ್ರೇ ತಾನೆ ಕೊಡ್ದೇ ಸೌದೆ ಡಿಪೋನವರು ಕೊಡ್ತಾರೆಯೇ?

ಮಂ : ಅದ್ಕೇ ಹಣ ಕೊಡಿ ಅಂತ ನಿಮ್ಮನ್ನು ಕೇಳಲಿಕ್ಕೆ ಬಂದಿದ್ದೇನೆ.

ಚಂ : ಇದ್ದರಲ್ವೇ ಕೊಡೋದು?

ಮಂ : ಇಲ್ಲದೆ ಹೋದದ್ಕಲ್ವೇ ಕೇಳಿದ್ದು....

ಚಂ : ಬಂದಾಗ ಕೊಟ್ಟೇ ಕೊಡ್ತೀನಿ.

ಮಂ : ನಿಮಗೆ ಬರೋದು ಯಾವಾಗ, ಕೊಡೋದು ಯಾವಾಗ?

ಚಂ : ಫಸ್ಟ್‌ಗೆ....

ಮಂ : ಅಷ್ಟರತನಕ....

ಚಂ : ಸಾಲ...

ಮಂ : ಸಾಲಕೊಡೋವ್ರಾದ್ರೂ ಬೇಕಲ್ಲ.

ಚಂ : ಇಬ್ಬರ ಹತ್ತಿರ ಮಾಡಿದ್ರಾಯ್ತು.

ಮಂ : ಆ ಕೆಲ್ಸ ಮಾಡಬಹುದಲ್ಲ.

ಚಂ : ನನ್ನ ಕೈಯಲ್ಲಾಗೋಲ್ಲ ಅಂತ ಅಲ್ವೇ ನಿನಗೆ ಹೇಳಿದ್ರೆ.... ನೀನಾದ್ರೂ ಹೆಂಗಸು.... ಯಾರಾದ್ರೂ ಕರುಣೆ ತೋರಿ ಕೊಡುತ್ತಾರೆ, ಆದ್ರೆ.... ನಾನು ಗಂಡಸು.... ಈಗಾಗ್ಲೇ ಸಾಕಷ್ಟು ಗೊತ್ತಿರುವವರೆಲ್ಲಾ ಸಾಲ ಕೊಟ್ಟಿದ್ದಾರೆ. ಸಾಲ ಹೊಸಬರನ್ನು ಹೇಗೆ ಕೇಳ್ಲಿ?

ಮಂ : ನನಗೂ ಹಾಗೇ ಹಾಗಿದೆ, ಅದಕ್ಕೆ ನಾನೇನು ಮಾಡ್ಲಿ?

ಚಂ : ಮಾಡೋದೇನು ಉಪವಾಸ.

ಮಂ : ಎಷ್ಟು ದಿನಗಳ ತನಕ?

ಚಂ : ಸಾಲ ಹುಟ್ಟೋ ತನಕ ಅಥ್ವಾ ಸಂಬಳ ಬರೋತನ್ಕ.

ಮಂ : ಬಂದಮೇಲೆ ಕೈಲೆಲ್ಲಿ ಉಳಿಯುತ್ತೆ? ಹಳೇ ಸಾಲಕ್ಕೆ ವಜ.

ಚಂ : ಹಾಸಿಗೆ ಇದ್ದಷ್ಟಕ್ಕೇ ಕಾಲು ಚಾಚಬೇಕು ಅಷ್ಟೇ.

ಮಂ : ಉದ್ದವಾದ್ರೆ ಕಾಲು ನೆಲಕ್ಕೋಗುತ್ತೆ ಅಷ್ಟೇ ಏನು ಮಾಡ್ಲಿಕ್ಕಾಗುತ್ಯೆ?

ಚಂ : ಈಗೇನು ಮಾಡದು ಹೇಳಿ ಅಂದ್ರೆ?

ಚಂ : ದೇವರಿಗೆ ಕೈ ಮುಗಿಯೋದು?

(ಮಗುವು ಅಳುವ ಶಬ್ದ)

ಮಂ : ನೋಡಿದ್ರಾ ಅವರಿಗೇನು ಮಾಡೋದು? ಈಗ ಮಗೂಗೆ ಹಾಲಿಲ್ಲ ಕುಡಿಸಲಿಕ್ಕೆ....

ಚಂ : ಕುಡಿಸು ಹೋಗು ಹಾಲು.

ಮಂ : ಹಾಲಿಲ್ಲ.....

ಚಂ : ನಿನ್ನ ಹಾಲೇ ಕುಡಿಸಿದ್ರಾಯ್ತು.

ಮಂ : ನನ್ಗಾದ್ರೂ ಹಾಲು ಒಂದು ಎರಡು ತಿಂಗಳೇ ಆಯ್ತು ನನ್ನಲ್ಲಿಲ್ಲ. ಸುಮ್ನೆ ಏನು ಕುಡಿಸಲೀ?

ಚಂ : ನಾಯಿ ಸಮುದ್ರಕ್ಕೋದ್ರೂ ನೆಕ್ಕು ನೀರೇ?

ಮಂ : ನಾನಾದ್ರೂ ಸರಿಯಾಗಿ ಆಹಾರ ತೆಗೆದುಕೊಂಡ್ರಲ್ವೇ ನನ್ನ ಎದೆ ಹಾಲು ತುಂಬೋದು?

(ಮತ್ತೆ ಮಗುವಿನ ಅಳು)

ಚಂ : ಹೋಗು ಹೋಗು....

ಮಂ : ಒಂದೇ ಒಂದಾಗಿ ನಾನು ಹೋಗುಬಿಟ್ರೆ ಉತ್ತಮ ಕಾಫಿಯಾದ್ರೂ ಕುಡೀರಿ.

ಚಂ : ಅಷ್ಟು ಮಾಡು ಸಾಕು....

* * *

ಪುಟ್ಟ : ಚಂದ್ರ.....

ಚಂ : ಏನ್ಬಂದ್ರೂ....?

ಪುಟ್ಟ : ಹಾಗಾದ್ರೆ ಬರಬಾರದಾಗಿತ್ತೇ?

ಚಂ : ಹಾಗಂದವ್ರ್ಯಾರು?

ಪುಟ್ಟ : ನೀನು ಬೇಡ ಅಂದ್ರೆ ಬಿಡುವವರ್‍ಯಾರು?

ಚಂದ್ರು : ಬಿಡಬೇಡ ಹಿಡ್ಕೋ.

ಪುಟ್ಟ : ಅದಕ್ಕೆ ಬಂದಿರೋದು?

ಚಂದ್ರು : ಯಾರಯ್ಯಾ ನೀನು?

ಪುಟ್ಟ : ನಾನ್ಯಾರು ಅನ್ನೋದು ಕಿವಿಗೆ ನನ್ನ ಶಬ್ದ ಬಿದ್ದ ಮೇಲೂ ಗೊತ್ತಾಗಿಲ್ವೆ?

ಚಂದ್ರ : ಇಲ್ಲ....

ಪುಟ್ಟ : ಬಾಗಿಲು ತೆಗೆ.... ಗೊತ್ತಾಗುತ್ತೆ.

ಚಂದ್ರ : ಯಾರು ಅಲ್ಲೇ ಹೇಳಿದ್ರಾಗೋಲ್ವೇ?

ಪುಟ್ಟ : ನಾನು ಪುಟ್ಟ.

ಚಂದ್ರ : ಪುಟ್ಟನಾದ್ರೇನು ದೊಡ್ಡನಾದ್ರೇನು ಯಾರು ಹೇಳು.

ಪುಟ್ಟ : ಸಾಲ ಕೊಟ್ಟಿರೋ ಪುಟ್ಟಣ್ಣ.

ಚಂದ್ರ : ಓಹೋ.... ಹಾಗಾ....

ಪುಟ್ಟ : ಹಾಗಲ್ಲ ಹೀಗೆ ತೆಗ್ಯಯ್ಯಾ ಬಾಗ್ಲು. ಸಾಲವನು ಕೊಂಬಾಗ ಹಾಲೋ-ಗರವನುಂಡಂತೆ ಸಾಲಿಗನು ಬಂದು ಎಳೆದಾಗ ಕೀಲು ಕಿಬ್ಬರಿಯ ಕಿತ್ತಂತೆ ಸರ್ವಜ್ಞ!! ಅನ್ನೋದು ಒಳ್ಳೆ ಸರಿಯಾಗಿಯೇ ಇದೆ. ಬಾಗಿಲಿಗೆ ಬಂದು ಸಾಲ ಈಸಿಕೊಂಡು ಹೋಗೋದು, ಕೊಡಬೇಕಾದ್ರೆ ನಾನೇ ಬಂದು ಕೇಳಬೇಕು, ಅದಲ್ದೇ ನೀನ್ಯಾರು ಅಂತ ಪ್ರಶ್ನೆ ಹಾಕೋದು ಬೇರೆ..... ನೀನ್ಯಾರು ಅನ್ನೋದಾದ್ರೂ ಗೊತ್ತಿದೆಯೇನೋ ಪ್ರಾಣಿ....

(ಬಾಗಿಲು ತೆಗೆವನು)

ಚಂದ್ರ : ಗೊತ್ತಿದ್ರೇಕೇ ಬಾರೋ ಪ್ರಾಣಿ.

ಪುಟ್ಟ : ಸರಿಯಾದ ಮಿತ್ರ ಕಣಯ್ಯಾ ನೀನು.

ಚಂದ್ರ : ಬಾರೋ ಹತ್ತಿರ ಏಕೆ ಸುಮ್ಮನೆ ವಡವಡ ಅಂತಾ ಹೊಡ್ಕೋತೀಯಾ? (ಮಗು ಅಳುವ ಶಬ್ದ) ಯಾಕೋ..... ಯಾರು ಸತ್ತೂ ಬಡ್ಕೋತೀಯಾ?

ಪುಟ್ಟ : ಯಾಕಯ್ಯಾ ಅಪಶಕುನ?

ಚಂದ್ರ : ಇನ್ನೇನು ಮತ್ತೆ?

ಪುಟ್ಟ : ನೋಡು.... ನಾನೊಂದು ವಿಷಯ ಹೇಳ್ತೀನಿ ಕೇಳು.

ಚಂದ್ರ : ಹ್ಞೂಂ ನೋಡಾಯ್ತು.... ಅದೇನು ಹೇಳಪ್ಪಾ ಕೇಳ್ತೇನೆ.

ಪುಟ್ಟ : ನೋಡು ಮೊದ್ಲು ನೀನ್ಯಾರು ಅನ್ನೋದನ್ನ ಅರಿತುಕೋ, ಆಮೇಲೆ ಬೇರೆಯವರ ಬಂದಾಗ ಯಾರೂ ಅನ್ನೋದು ಅರ್ಥವಾಗುತ್ತೆ?

ಚಂದ್ರ : ಅರ್ಥವಾಗಿ ಏನು ಆಗಬೇಕಾಗಿದೆ?

ಪುಟ್ಟ : ಅರ್ಥ ಬೇಕಾಗಿದೆ.

ಚಂದ್ರ : ಅದೇ ಇಲ್ವಲ್ಲಾ.

ಪುಟ್ಟ : ಇಲ್ಲ ಅಂದ್ರೆ ಕೊಟ್ಟಿರೋೀವ್ರು ಸುಮ್ನಿರ್ತಾರೇನು?

ಚಂದ್ರು : ಕುಣೀಲೀ ಬಿಡು....

ಪುಟ್ಟ : ಕುಣಿದು ಕುಪ್ಪಳಿಸಿದರೆ ಗೆದ್ದೆ... ಕೈಗೆ ಬೇಡಿ ಹಾಕಿಸ್ತಾರೆ.

ಚಂದ್ರು : ಆಗ ಬೇಡ ಅಂದ್ರಾಯ್ತು.

ಪುಟ್ಟ : ಅಂದ್ರೆ ಕೇಳಬೇಕಲ್ಲ.

ಚಂದ್ರು : ಕೇಳದಿದ್ದರೆ ಬಿಡ್ಲಿ ಬಿಡು....

ಪುಟ್ಟ : ಇತ್ತೀಚೆಗೆ ನಿನ್ನ ತಲೆ ಸರಿಯಿಲ್ಲ ಅಂತ ಕಾಣುತ್ತೆ.

ಚಂ : ಯಾಕೆ ಎಣ್ಣೆ ಹಾಕಿ ನೀಟಾಗಿ ಕ್ರಾಪ್ ತೆಗೆದು ಬಾಚಿದ್ದೀನಲ್ಲಾ.... ಎಲ್ಲೋ ಗಾಳಿಗಿರಬೇಕು.

ಪುಟ್ಟ : ಇಲ್ಲ ನಿನ್ನ ನೋಡಿದ್ರೆ ಮೈಮೇಲೆ ಗಾಳಿ ಇರಬೇಕು ಅಂತ ಕಾಣಿಸುತ್ತೆ.

ಚಂ : ಮೈಮೇಲೆ ಗಾಳಿ ಬೀಸದೆ ಇರುತ್ಯಾ? ಇದೇನಯ್ಯಾ ನೀ ಹೇಳೋ ಮಾತು....

ಪುಟ್ಟ : ಚಂದ್ರು.... ನೀನು ಏನು ಮಾತಾಡ್ತಾ ಇದ್ದೀಯೊ, ಅಥ್ವಾ ಪೇಚಾಡ್ತಾ ಇದ್ದೀಯೋ?

ಚಂದ್ರು : ಹ್ಞಾಂ.... ಮಾತಾಡಿದ್ರೂ ತಪ್ಪೇ?

ಪುಟ್ಟ : ಮಾತಾಡಿದ್ರೆ ತಪ್ಪಲ್ಲ, ಮಾತು ಸರಿಯಾಗಿ ಆಡ್ದೇಹೋದ್ರೆ ತಪ್ಪು ಅಷ್ಟೇ.

ಚಂದ್ರು : ಹೋಗ್ಲಿ ಬಿಡಯ್ಯಾ.

ಪುಟ್ಟ : ಏನಪ್ಪಾ ನೀನು ಸಾಲ ತೆಗೆದುಕೊಂಡು ಆರು ತಿಂಗಳಾಯ್ತು. ಆರು ದಿನದಲ್ಲೇ ಕೊಡ್ತೀನಿ ಅಂದವ್ನು, ಹೀಗೆ ಕೈ ಕೊಡ್ತಾನೆ ಅಂತ ತಿಳಿದಿರಲಿಲ್ಲ. ಈಗ ತಿಳಿಸಲಿಕ್ಕೆ ಮಾಡ್ದೇ ಅಂತ ಕಾಣುತ್ತೆ.

ಚಂದ್ರು : ಹಾಗೇನೂ ಇಲ್ಲ

ಪುಟ್ಟ : ಆಗೂ ಏನೂ ಇಲ್ಲ..... ಈಗೂ ಏನೂ ಇಲ್ಲ.... ನೀನು ಕೊಡೋದು ಮತ್ತೆ ಯಾವಾಗ?

ಚಂದ್ರು : ಸಿಕ್ಕಿದ ತಕ್ಷಣ.

ಪುಟ್ಟ : ಅಂದ್ರೆ ದಾರೀಲಿ ಜನರು ಚೆಲ್ಲಿದಾಗ ಆಯ್ದುಕೊಂಡು ಬರ್ತೀಯೇನು?

ಚಂದ್ರು : ಸ್ವಲ್ಪ ತಡೆಯಪ್ಪಾ....

ಪುಟ್ಟ : ಇಲ್ಲಾ ಈ ಹೊತ್ತು ನಿನ್ನ ಪೂರ್ತಿ ತಡೆಯುತ್ತೇನೆ.

ಚಂದ್ರು : ಪ್ರಯೋಜನ ಏನು?

ಪುಟ್ಟ : ಸಾಲದ ವಸೂಲಿ....

ಚಂದ್ರ : ಒಳಗಿಲ್ಲ ತೋಡಿ ಹಾಕು ಅಂದ ಹಾಗಾಗುತ್ತೆ.

ಪುಟ್ಟ : ಮನೆ ಅಡಮಾನ ಮಾಡಿ ತಂದುಕೊಡು ಯಾರ ಕಷ್ಟಕ್ಕೆ ಕೊಡುತ್ತೀಯಾ?

ಚಂದ್ರ : ಮನೆ ಇದ್ರಲ್ವಯ್ಯಾ, ಇದ್ದ ಮನೆ ನಿನಗಿಂತ ಹಿಂದಿನ ಸಾಲದಪ್ರೇ ಬರೆಸಿಕೊಂಡು ಬಿಟ್ರು.....

ಪುಟ್ಟ : ಸದ್ಯ ಈಗ ನೀನಾದ್ರೂ ಉಳಿದಿದ್ದೀಯಲ್ಲಾ? ಹರಿಶ್ಚಂದ್ರನ ಹಾಗೆ.... ನಿನ್ನನ್ನೇ ನೀನು ಮಾರ್ಕೋ....

(ಮಕ್ಕಳ ಅಳು)

ಚಂದ್ರು : ಅದೋ ನೋಡು, ನಾನಲ್ಲ ಜತೆಗೆ ಅಪ್ರೂ ಇದ್ದಾರೆ ಅವರನ್ನೂ ಕೊಂಡುಕೊಂಡುಬಿಡು....

ಪುಟ್ಟ : ಸಾಕಯ್ಯಾ ಕುಚೋದ್ಯ.....

ಚಂದ್ರ : ನಿನಗೆಲ್ಲಾ ಕುಚೋದ್ಯ, ಬೆಕ್ಕಿಗೆ ಆಟ ಇಲಿಗೆ ಪ್ರಾಣ ಸಂಕಟ ಅಂತ ಗೊತ್ತಿಲ್ಲ.

ಪುಟ್ಟ : ನೋಡು, ನಾಳೆ ಫಸ್ಟ್‌ಗೆ ಕೊಡ್ದೇ ಹೋದ್ರೆ....

(ಅಳು ಮತ್ತೆ)

ಚಂದ್ರ : ಅವರನ್ನೆಲ್ಲಾ ಕೊಂದುಕೊಂಡುಬಿಡು....

ಪುಟ್ಟ : ಹ್ಞೂಂ..... ಜೋಪಾನ...... ಬರ್ತೀನಿ.

ಚಂದ್ರ : ಅದಕ್ಕೆಂಥ ಜೋಪಾನ.... ಅವೇ ನನ್ನ ಜೀವನದ ಸೋಪಾನಗಳು! ನಡೆ ನಡೆ....

ಪುಟ್ಟ : ನಡೆಯೋದೇನು ಬಂತು ಮತ್ತೆ ಫಸ್ಟ್‌ಗೆ ಬರ್ತೀನಿ.

ಚಂದ್ರ : ಫಸ್ಟ್‌ಗೆ ತಾನೇ.... ಬಾ ಹೋಗು...

ಪುಟ್ಟ : ಅಲ್ಲೇ ಬಟಾವಣೆ ಮಾಡ್ಬಿಟ್ಟೇಯೇ? ಇಲ್ದೇ ಹೋದ್ರೆ ಅಲ್ಲೇ ಬರ್ತೇನೆ ಆಫೀಸ್‌ನ ಹತ್ತಿರಕ್ಕೆ

ಚಂದ್ರ : ನೋಡೋಣ ಹೋಗು, ಇನ್ನು ಫಸ್ಟ್ ಬಂದಿಲ್ವಲ್ಲಾ

ಪುಟ್ಟ : ಅದು ಬರ್ದೇ ಉಳ್ಕೊಳ್ಳುತ್ತೋ?

ಚಂದ್ರ : ಆಗ್ಲಿ ಬಾರಪ್ಪಾ....

(ಮತ್ತೆ ಮಕ್ಕಳ ಅಳು)

ಪೊಮ್ಮಣಿ : ಹೋಗ್ಲಿ ಬಾರಪ್ಪ.... ನಿನ್ನ ಮಕ್ಕಳು ಶುರು ಮಾಡ್ದೋ.... ಅವರನ್ನು ಸ್ವಲ್ಪ ಸಮಾಧಾನಿಸುವ್ಯಂತೆ.

ಚಂದ್ರ : ಸಾಕಪ್ಪಾ... ಸಾಕು... ಅತ್ತ ಹುಲಿ ಇತ್ತ ದರಿ! ಬಂದೆ ಬಂದೆ ತಾಳಿ.

ಚಂದ್ರ : (ಸ್ವಗತ) ಅಲ್ಲಾ... ಇದೇನು? ನಾನ್ಯಾರು ಅನ್ನೋದು ನನಗೆ ಗೊತ್ತಿಲ್ವೇ? ಎಲ್ಲರೂ ಹೀಗೆ ಅನ್ತಾ ಇದ್ದಾರಲ್ಲ. ನಾನು..... ನಾನೇ.... ಅಲ್ಲ.... ಚಂದ್ರು....! ವೀರಣ್ಣನ ಮಗ! ಜ್ಯೇಷ್ಠ ಪುತ್ರ! ಅದರಲ್ಲೇನು ಹೊಸಮ? ನನ್ನ ತಂದೆ ನಾಮಕರಣ ಮಾಡಿದಂದಿನಿಂದ ಪುರೋಹಿತರ ಬಾಯೇ ಆದಿ ಎಲ್ಲರೂ ಕರೆದ ಹೆಸರು ಚಂದ್ರು.... ಅದನ್ನ ನಾನು ತಾನೇ ಮರಯಲಿಕ್ಕೆ ಸಾಧ್ಯವೇನು? ಯಾರಾದ್ರೂ ತಮ್ಮ ಹೆಸರನ್ನು ಸಾಯೋದಕ್ಕೂ ಮೊದ್ಲೇ ಮರೀತಾರೇನು? ಅಸಾಧ್ಯ ಅಸಾದ್ಯ. ಎಲ್ಲರೂ ಬೇಕು ಅಂತ ನನ್ನ ಆಟ ಆಡಿಸ್ತಾ ಇದ್ದಾರೆ! ಅಲ್ಲಾ ಆ ಪರಮೇಶ್ವರ ಹೇಗೆ ಆಡಿಸ್ತಾನೋ, ಮನುಷ್ಯರು

ಹಾಗೇ ಆಡೋದೇನೋ ನ್ಯಾಯ. ಸಣ್ಣ ಮಗುವಿನಿಂದ ದೊಡ್ಡವರು ಸಹ ನನ್ನನ್ನು ಭೂಲೋಕದ ಜನರುಗಳಾಗಿ ಆರಿಸಬೇಕು ಅಂತ ಹೂಡ್ತಿದ್ದಾರೆ. ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ. ನಾನು ಛಲದಂಕಮಲ್ಲ! ಅನ್ನೋದು ಪಾಪ ಅವರಿಗೇನು ಗೊತ್ತಾಗಬೇಕು?

ಮಂ : ಯಾರಿಗೇನು ಗೊತ್ತಿಲ್ವೇನ್ರಿ?

ಚ : ಯಾರಿಗೇನೂ ಗೊತ್ತಿಲ್ಲ.

ಮಂ : ನಿಮ್ಗೆಲ್ಲಾ ಗೊತ್ತಿದೆಯೇನು?

ಚಂ : ನಾನೇನು ಸರ್ವಜ್ಞನೇನು?

ಮಂ : ಅಭಿನವ ಸರ್ವಜ್ಞ ಯಾಕೆ ಆಗಿರಬಾರದು?

ಚಂ : ಹಾಗಾಗಿದ್ರೇ ನಿಮ್ಮಗಳ ಹತ್ತಿರವೆಲ್ಲಾ ಆಡಿಸಿಕೊಳ್ಳುತ್ತಿದ್ದೆ.

ಮಂ : ಅದೇನ್ರಿ ನಿಮ್ಮ ಸಮಸ್ಯೆ?

ಚಂ : ಸಮಸ್ಯೆಯ ಸಮಸ್ಯೆ ಅನ್ನಬೇಕು.

ಮಂ : ಅಂದ್ರೆ, ಏನು ಹೇಳಿ.

ಚಂ : ಅಲ್ಲಾ ಎಲ್ಲಾ ನನ್ನನ್ನು ಹುಚ್ಚ, ಮಂಕ, ಪೆದ್ದ ಅಂತ ತಿಳಿಯಬಹುದು.

ಮಂ : ಏಕೆ?

ಚಂ : ನಾನ್ಯಾರೂ ಅನ್ನೋದೇ ನನಗೆ ಗೊತ್ತಿಲ್ಲ ಅಂತೀರಿ!

ಮಂ : ಗೊತ್ತಿದ್ದರೆ ನೀವ್ಯಾಕೆ ಹೀಗಾಡ್ತಿದ್ರಿ?

ಚಂ : ಮತ್ತೆ ಅದೇ ಮಾತಾಡ್ತೀಯಲ್ಲಾ ಏನೆ?

ಮಂ : ಇದ್ದುದನ್ನು ಇದ್ದ ಹಾಗೆ ಹೇಳಿದ್ರೆ ಎದ್ದು ಬಂದು ಎದೆಗೊದ್ದರು ಅಂತ ಹಾಗೇಕೆ ಮಾತಾಡ್ತೀರಿ?

ಚಂ : ಕೋಪ ಬರೋಲ್ವೇ ಹೇಳು ಮತ್ತೆ ಹೀಗಂದ್ರೆ?

ಮಂ : ಯಾಕೆ?

ಚಂ : ನನ್ನ ಹೆಸರು ಚಂದ್ರು ಅಂತ... ನಾನು ಚಂದ್ರು. ನನ್ನ ಕೆಲಸ ಸೂಪರಿನ್‌ಟೆಂಡೆಂಟ್.... ನನ್ನ...

ಮಂ : ಸಾಕು ನಿಲ್ಸಿ ನಿಮ್ಮ ವ್ಯಾಖ್ಯಾನ.

ಚಂ : ಏಕೆ?

ಮಂ : ಅದ್ಕೇ ಹೇಳೋದು ಸ್ವಲ್ಪ ತಲೆ ಕಡಿಮೆ ಅಂತ.

ಚಂದ್ರ : ಎಲ್ರೂ ನಮ್ಮ ಫ್ರೆಂಡ್ಸ್ ನಿನ್ನ ತಲೆಯಷ್ಟು ದಪ್ಪ ಯಾರದೂ ಇಲ್ಲ ಬುರ್ಡೇ ಚಂದ್ರ.... ಅಂತಾರೆ.

ಮಂ : ಆ ಬುರುಡೆ ಬರೇ ಬುರುಡೇ ಮಾತಿಗೇ ಲಾಯಕ್ಕು. ವ್ಯವಹಾರಕ್ಕೆ ಜ್ಞಾನ, ಬುದ್ಧಿ, ಇಲ್ಲದ ಮಿದುಳಿನ ಪೆಟ್ಟಿ ಅಂತ.

ಚಂ : ಮತ್ಯಾಕೆ ಸರ್ಕಾರದವರು ಕೆಲಸ ಕೊಟ್ರು?

ಮಂ : ನಿಮ್ಮ ಓದಿಗೆ.

ಚಂದ್ರು : ಬುದ್ಧಿ ಇಲ್ಲದ ಮೇಲೆ ಹಾಗೆ?

ಮಂ : ಖಾಲಿ ಕೆಲಸ ತುಂಬಬೇಕಲ್ಲಾ ಅಂತ.

ಚಂ : ಹಾಗಾದ್ರೆ ಬುದ್ಧಿ ಇಲ್ವೇ ನನಗೆ? ವಿದ್ಯಾವಂತನಲ್ಲೇ ನಾನು?

ಮಂ : ವಿದ್ಯಾವಂತನಾದ್ರೆ ಏನು ಬಂತು? ವ್ಯವಹಾರಸ್ಥನೂ ಆಗಿರಬೇಕು ಮನುಷ್ಯ

ಚಂ : ನಾನು ವ್ಯವಹಾರಸ್ಥನಲ್ಲವೇ?

ಮಂ : ಆದರೇನು ಬಂತು? ವ್ಯವಸ್ಥಿತವಿಲ್ಲದ ವ್ಯವಹಾರ!

ಚಂ : ನೀನು ಹೇಳ್ತಾ ಇರೋದು ಅಂತ್ಲೇ ನನಗೆ ಅರ್ಥವಾಗ್ತಾ ಇಲ್ಲ.

ಮಂ : ನಿಮಗೆ ನಾನೇನು ಹೇಳ್ತಾ ಇದ್ದೇನೆ ಅನ್ನೋದು ಅರ್ಥವಾಗೋಲ್ಲ. ಸಂಸಾರದ ಕಷ್ಟ ಸುಖವೂ ಅರ್ಥವಾಗೋಲ್ಲ. ಮಧ್ಯದಲ್ಲಿ ಸಂಸಾರ ತೂಗಿಸೋದು ಒಂದು ದೊಡ್ಡ ಸಮಸ್ಯೆಯೇ ಆಗಿದೆ. ಸಂಸಾರದ ಭಾರ ನನ್ನೊಬ್ಬಳಿಗೇ ಹೊತ್ತದ್ದೇನೂ ಅಲ್ಲ. ಗಂಡ ಹೆಂಡಿರಿಬ್ಬರಿಗೂ ಸಮಭಾಗವಾಗಿರಬೇಕು ಅಂತ ತಿಳೀರಿ.

ಚಂ : ತಿಳಿದು ಏನು ಮಾಡಲಿ ಹೇಳಿ.

ಮಂ : ತಿಳಿಯದೇ ಸುಮ್ಮನಿರೋದ್ಕಿಂತ ತಿಳಿದು ಏನಾದ್ರೂ ಮಾಡಿದ್ರೆ ಉತ್ತಮ ಅಲ್ಲವೇನು?

ಚಂ : ಹೌದು; ಆದ್ರೆ ಅದು ಸಾಧ್ಯವಾಗ್ತಾ ಇಲ್ವಲ್ಲಾ.

ಮಂ : ಹಾಗಂದ್ರೇನು? ಸಾಧ್ಯ ಮಾಡಿಕೊಳ್ಳಬೇಕು.

ಚಂ : ಆಗಲಿ, ಸಾಧ್ಯ ಮಾಡಿಕೊಳ್ತೇನೆ.

ಮಂ : ನಾನು ಹದಿನೈದನೆಯ ವರ್ಷಕ್ಕೆ ನಿಮ್ಮ ಕೈ ಹಿಡಿದೆ.

ಚಂ : ಇಲ್ಲ ಅಂತ ನಾನು ಹೇಳಿದ್ನೇ?

ಮಂ : ಮದುವೆಯಾದ ಮರು ವರ್ಷವೇ ಮಗು.

ಚಂ : ಅದೇ ಸುಧೀಂದ್ರ.

ಮಂ : ಆಮೇಲೆ ವರ್ಷಕ್ಕೊಂದು ಅಂತರವಿಲ್ಲದ ಮಕ್ಕಳು.... ಸಂತಸವಿಲ್ಲದ ಜೀವನ... ಆರೋಗ್ಯಕ್ಕೆ ಕುಂದು.

ಚಂ : ಆರೋಗ್ಯಕ್ಕೆ ನಾನು ಕೊಟ್ಟ ಗಮನ ಎಷ್ಟೆಂಬುದನ್ನು ನೀನರಿಯೆಯಾ?

ಮಂ : ವರ್ಷಕ್ಕೊಂದು ಹಡೆಯುವುದರಿಂದ ರಕ್ತ ಎಲ್ಲಿ ಸಮೃದ್ಧಿಯಾಗಬೇಕು? ಆರೋಗ್ಯ ಎಷ್ಟೇ ಔಷಧ ಕೊಟ್ಟರೂ ಹೇಗೆ ಕುದುರಬೇಕು? ಅದು ಯಾರ ತಪ್ಪು?

ಚಂ : ತಪ್ಪಿಲ್ಲ ಅಂತ ಹೇಗೆ ಹೇಳು? ಕಾಲ, ವಯಸ್ಸು?

ಮಂ : ಅದಕ್ಕೆ ಈಗ ನಾವು ಹೀಗೆ ದುಃಖ ಅನುಭವಿಸಬೇಕು.

ಚಂ : ಆ ಕಷ್ಟವನ್ನು ತಪ್ಪಿಸಲು ನಾನೆಷ್ಟು ಪ್ರಯತ್ನಪಟ್ಟಿಲ್ಲ, ಪಡುತ್ತಿಲ್ಲ.

ಮಂ : ಆದರೇನು ಕಷ್ಟದ ಮೇಲೆ ಕಷ್ಟವೇ ಹೆಚ್ಚುತ್ತಿದೆಯೇ ಹೊರತು ಸುಖ ದೊರೆಯಲಿಲ್ಲ.

ಚಂ : ಅದನ್ನೇ ನಾನು ಅರಸುತ್ತಿರುವದು.

ಮಂ : ನೀವು ಅದನ್ನು ಅರಸುವುದು ಬಂಡೆಗಳ ಮಧ್ಯದ ಮಾದಳದ ಹಣ್ಣು ಪಡೆದಂತೆಯೇ ಸರಿ.

ಚಂ : ಸರಿಯಾಗಿ ಹೇಳ್ದೆ. ನಿನ್ನನ್ನು ನಾನು ಹುಡ್ಕೋದೂ ಹಾಗೆಯೇ ಆಗಿದೆ.

ಮಂ : ನೀವು ಯಾವ ವಿಷಯವನ್ನೂ ಇತ್ತೀಚೆಗೆ ಬಹಳ ಹಗುರವಾಗಿ ತೆಗೆದುಕೊಳ್ತೀರಿ.

ಚಂ : ಅದೊಂದು ದಿನ ಸಂಸಾರದ ಕಷ್ಟಾನ ಹಗುರವಾಗಿ ತಕ್ಕೊಳ್ಳಿ ಅಂತಿದ್ದೆ, ಈಗ ಅದಕ್ಕೆ ತದ್ವಿರುದ್ಧವಾಗಿ ಹೇಳ್ತೀಯೋ? ಇದೇನು ಕಾಲದ ಗುಣವೋ ನೆಲದ ಗುಣವೋ ತಿಳೀದು.

ಮಂ : ಕಾಲದ ಗುಣವೂ ಹೌದು ನೆಲದ ಗುಣವೂ ಸೇರಿ ಹಾಗೆ ಹೇಳಬೇಕಾಗಿ ಬಂತು.

ಚಂ : ಏನು ಮಾತಿನ ಎಳೆ ಇನ್ನೂ ಎಳೆಯಬೇಕು ಅಂತೀಯೋ ಅಥ್ವಾ.... ಇಲ್ಲಿಗೇನಾದ್ರೂ ಅರ್ಧವಿರಾಮ ಹಾಕಿ ನನಗೆ ಹಾಕ್ತೀಯೋ?

ಮಂ : ಇದು ಆಫೀಸ್ಗೋಗೋ ಹೊತ್ಗೆ ಆಡೋ ಕೊನೆಮಾತು ಅಲ್ವೇ?

ಚಂ : ಇನ್ನೇನು ಹುಸಿದು ಹೋಗು ಅಂತೀಯಾ?

ಮಂ : ಹಸಿದ್ರೆ ಹೊಟ್ಟೆಪಣ್ಣ ಕೇಳ್ಬೇಕಲ್ಲಾ?

ಚಂ : ಅದಕ್ಕೆ ಕೇಳಿದ್ದು.

ಮಂ : ಅದಕ್ಕೇ ಈಗ ರೆಡಿ ಮಾಡೋದು....

ಚಂ : ಸದ್ಯ ಅಷ್ಟು ನಡೆ.... ನಡೆ... ಅದೋ ಅವು ಜೇರೆ

(ಮಗು ಅಳುವ ಶಬ್ದ)

ಶುರು ಮಾಡ್ದೋ.... ನಿನ್ನ ಮಾತಿಗೆ ಪೂರ್ಣ ವಿರಾಮ ಹಾಕಲಿಕ್ಕೆ. ಮೊದ್ಲು ಅವರ ಸಮಾಧಾನವಾಗ್ಲಿ ಆಮೇಲೆ ಸಮ್ದು.

ಮಂ : ಅಯ್ಯಯ್ಯೋ ನಿಲ್ಲಿಸ್ರೋ.... ಇತ್ತ ನಿಮ್ಮ ಗಲಾಟೆಯಾದ್ರೆ ಅತ್ತ ಮಕ್ಕಳದು. ಯಾವ ಕೆಲಸ ಅಂತ ಮಾಡ್ಲಿ? ಯಾವ ಬದುಕು ಅಂತ ಮಾಡ್ಲೋ, ನನಗಂತೂ ಒಂದೂ ತಿಳೀದು.

* * *

ಮಂ : (ಸ್ವಗತ) ಏನು ಹಾಳು ವಿಧಿಯೋ?.... ಪಾಪ ವಿಧಿಯನ್ನು ಬಯ್ದರೆ ಏನು ಪ್ರಯೋಜನ? ನಮ್ಮ ನಮ್ಮ ಲಭ್ಯದಲ್ಲಿ ಎಷ್ಟೆಷ್ಟು ಇದೆಯೋ ಅಷ್ಟೇ. ಸಂಸಾರ.... ಸಾಗರ.... ದೊಡ್ಡವರು ಏಕೆ ಅಂತಾರೆ, ಇದಕ್ಕೆ ಪಾಪ ಸಂಸಾರ ದೊಡ್ಡದಾಗೋದ್ಕು ಮೊದ್ಲೇ ಜಾಣತನಪಟ್ಟಿದ್ರೆ ಚೆನ್ನಾಗಿರ್ತಿತ್ತು. ಆದ್ರೆ.... ಇದು .... "ಅಟ್ಟ ಮೇಲೆ ಒಲೆ ಉರಿತು ಕೆಟ್ಟಮೇಲೆ ಬುದ್ಧಿ ಬಂತು" ಅಂದ್ರೇನು ಪ್ರಯೋಜನ? ಮದುವೆ ಆದಾಗ ಮೂರು ಮಕ್ಕಳನ್ನು ಹಡೆಯುವವರೆಗೂ ಎಷ್ಟೊಂದು ಸುಖವಾಗಿದೆ. ಜೀವನ ಗಂಡ-ಮಕ್ಕಳ-ಎಲ್ಲಾ ಸ್ವರ್ಗ....ಭೂಲೋಕದಲ್ಲೇ ಇದೇ ಅಂತ ಹೇಳ್ತಿದ್ದೆ. ಆದ್ರೆ ಇಂದು! ಮನುಷ್ಯನನ್ನು ಪರೀಕ್ಷೆ ಮಾಡಬೇಕು ಅಂತ್ಲೇ ದೇವರು ಈ ಐಶ್ವರ್ಯ ಮಕ್ಕಳನ್ನು ಸೃಷ್ಟಿಸುತ್ತಾನೆ. ಅವುಗಳನ್ನು ಹಿತವಾಗಿ ಮಿತವಾಗಿಟ್ಕೊಂಡ್ರಲ್ವೇ ಸ್ವರ್ಗ ಸುಖ! ಇಲ್ಲದೇ ಹೋದ್ರೆ ಭೂಲೋಕದಲ್ಲಿ ನರಕ ಅನುಭವಿಸಬೇಕು. ಇನ್ನೆಷ್ಟು ಚಿಂತಿಸಿದ್ರೆ ತಾನೆ ಏನೊ?

ಚಂ : ಇದೇನು ಹಗಲು ಕನಸು.

ಮಂ : ಹೌದು, ನಮ್ಮಂಥ ಸಂಸಾರದಲ್ಲಿ ರಾತ್ರಿ ಕನಸೇನು ಹಗಲದೂ ಸೇರಿರುತ್ತದೆ.

ಚಂ : ಅಲ್ಲಾ ನನ್ನೇನು ಆಫೀಸಿಗೆ ಕಳುಹಿಸ್ತೀಯೋ ಇಲ್ವೋ?

ಮಂ : ಒಳ್ಳೆ ಸರಿಹೋಯ್ತು, ಈ ಹೊತ್ತು ಭಾನುವಾರ ಕಣ್ರೀ.

ಚಂ : ಹೌದಾ? ಅದೇ ಮರ್ತಿದ್ದೆ....

ಮಂ : ನೀವು ಒಂದಲ್ಲ ಎರಡಲ್ಲಾ ಎಲ್ಲಾನೂ ಇತ್ತೀಚೆಗೆ ಮರೆತಿದ್ದೀರಿ.

ಪೊ : ಸದ್ಯ ಮಕ್ಕಳನ್ನೇ ಮರ್ತಿದ್ದಾರೆ ಇತ್ತೀಚೆಗೆ, ಇನ್ನು ವಾರ ಮರ್ಯೋದೇನು ಬಂತು?

ಮಂ : ಹೆಂಡತೀನ ಮರೆತವರು ಮಕ್ಕಳನ್ನ ಮರ್‍ಯೋದ್ರಲ್ಲೇನು ಆಶ್ಚರ್ಯ?

ಚಂ : ಸಧ್ಯ ನನ್ನನ್ನು ನಾನೇ ಮರೆತಿರುವಾಗ ನಿಮ್ಮನ್ನು ಹೇಗೆ ಜ್ಞಾಪಕ ಇಟ್ಕೊಳ್ಲಿ ಹೇಳಿ.

ಮಂ : ಅದಪ್ಪಾ... ಕರೆಕ್ಟ್.....

ಚಂ : ಅಪ್ಪನಲ್ವೇ ನಿನ್ನ ಗಂಡ ನಾನು.

ಮಂ : ಸಧ್ಯ ಅದಾದ್ರೂ ಜ್ಞಾಪಕ ಇದೆಯಲ್ಲಾ.

ಚಂ : ಇಟ್ಕೋಳ್ದೇ ಇದ್ರೆ ದಿನಕ್ಕೆ ನೂರು ಸಾರಿ ಚುಚ್ಚಿ ಚುಚ್ಚಿ ಎಚ್ಚರಿಸುತ್ತೀಯಲ್ಲಾ ನನ್ನನ್ನು, ಅದ್ಕಾದ್ರೂ ಜ್ಞಾಪಕ ಬರುತ್ತೆ.

ಮಂ : ಸಧ್ಯ ಸುಮ್ಮನೆ ಜ್ಞಾಪಕ ಇದ್ರೇನ್ಬಂತು? ನಿನ್ನ ಕಷ್ಟ ಏನು, ಸುಖ ಏನು ಅಂತ ವಿಚಾರಿಸದೆ.

ಚಂ : ಟೈಮೆಲ್ಲಿದೆ ನೀನೇ ಹೇಳು? ಮದುವೆಯಾದ ಹೊಸತರಲ್ಲಿ ನೋಡ್ಕೊಂಡಿರ್ಲಲ್ವಾ. ಈಗೇನು ಮಾಡ್ಲಿ ಹೇಳು? ವ್ಯವಹಾರ, ಸಂಸಾರ ಬೆಳೀತ ಯಾರನ್ನೂ ಗಮನಿಸಲಿಕ್ಕೆ ಆಗೋಲ್ಲ.

ಮಂ : ಹೋಗ್ಲಿ ಮಕ್ಕಳು ಗಲಾಟೆ ನಿಲ್ಲಿಸಿದೋ ನಡೀರಿ ಕೈಕಾಲು ತೊಳೆದುಕೊಳ್ಳುವಿರಂತೆ.

ಚಂ : ಸಧ್ಯ ಮಲಗಿದವೋ ಇಲ್ವೋ ನೋಡು. ಸುಮ್ಮನೆ ಯಾಕೆ ದೊಡ್ಡದಾಗಿ ಸ್ವಾಗತ ಮಾಡ್ತೀಯಾ? ನೋಡ್ದಾ... ನೋಡ್ದಾ... ಜೋಡಿ ಓಲಗ... ನಿಲ್ಸು ನಿಲ್ಸು ಮೊದ್ಲು. ನನಗೆ ಗೊತ್ತಿತ್ತು ಹೀಗೇ ಆಗುತ್ತೆ ಅಂತ.

ಮಂ : "ಮನಸಿನಂತೆ ಮಹಾದೇವ" ಆಗ್ಲಿ ಬಿಡಿ... ನಿಮ್ಮ ಮನಸ್ಸಿನಲ್ಲಿದ್ದಂತೇ ಆಯ್ತು.

(ಅಳು ಮೆಲ್ಲನೆ ನಿಲ್ಲುವುದು)

* * *

ಪುಟ್ಟು : ಚಂದ್ರೂ....

ಚಂ : ಬಂದ್ರು.... ಬಂದ್ರು....

ಪುಟ್ಟು : ಬರೇ ಬಂದ್ರೋ, ಇಲ್ಲ ಏನಾದ್ರೂ ತಂದ್ರೋ...

ಚಂ : ತಂದಿದ್ದೇನೆ ಅಸಲು-ಬಡ್ಡಿ ಸಮೇತ ತಗೋಳಪ್ಪ ಮಹಾರಾಯ.

ಪುಟ್ಟು : ಸರಿಯಾಗಿದೆ ತಾನೇ.

ಚಂ : ಅದೂ ಅನುಮಾನ್ವೇ? ಸರಿಯಾಗಿದೆ ಬಿಡಪ್ಪ...

ಪುಟ್ಟ : ಬಿಡೋದ್ಕಲ್ಲ ಈಸಿಕೊಂಡೋಗೋದ್ಕೆ ಬಂದಿರೋದು.

ಚಂ : ತೆಗೊಳಪ್ಪಾ, ಅಸಲು ಬಡ್ಡಿ ಸೇರಿ ಎರಡನೂರ ಹತ್ತು ಇದೆ.

ಪುಟ್ಟು : ಅದು ಹ್ಯಾಗಯ್ಯಾ?

ಚಂ : ಅಸಲು ಬಡ್ಡಿ ಸೇರಿ.

ಪುಟ್ಟು : ಅಸಲೆಷ್ಟು?

ಚಂ : ಇನ್ನೂರ ಐವತ್ತು.

ಪುಟ್ಟು : ಬಡ್ಡಿ ಎಷ್ಟಾಯ್ತು?

ಚಂ : ನಲವತ್ತು.

ಪುಟ್ಟ : ಒಟ್ಟು ಎಷ್ಟಾಯ್ತು?

ಚಂ : ಇಷ್ಟೇ ಕಣ ತಕ್ಕೊಳಯ್ಯ.

ಪುಟ್ಟು : ನೀನು ಕೂಡಿಲ್ಲ..... ಕಳ್ದಿದ್ದೀಯಾ!

ಚಂ : ಹಾಗಾ?

ಪುಟ್ಟು : ಹೌದು ಕಣಯ್ಯಾ ಹೌದು. ಸರಿಹೋಯ್ತು ಈಗ್ಲೇ ಆಯ್ತು ನಿನ್ನ ಕಾಲ.

ಚಂ : ಹೋಗ್ಲಿ ಬಿಡು, ಮುಂದಿನ ತಿಂಗಳು ಚಕ್ರಬಡ್ಡಿ ಸೇರಿಸಿಕೊಡ್ತೇನೆ.

ಪುಟ್ಟ : ಚಕ್ರಬಡ್ಡಿ ಕೊಡ್ತೀಯೋ ಅಥವಾ ನನ್ನ ಸೈಕಲ್ ಚಕ್ರ ನಿನ್ನ ಮನೆಗೆ ತಿರುಗುವಂತೆ ಮಾಡ್ತೀಯೋ ಏನೋ?

ಚಂ : ಅದು ಇದ್ದೇ ಇದೆ ಬಿಡು.

ಪುಟ್ಟ : ಸದ್ಯ ಚಕ್ಕರ್ ಕೊಡಲ್ಲ ತಾನೇ.

ಚಂ : ಕೊಟ್ರೂ ಬಿಡೋಲ್ವಲ್ಲ ನೀನು. ಮತ್ತೆ ಸೈಕಲ್ ಚಕ್ರ ತಿರುಗಿಸಿಕೊಂಡು, ಉರುಳಿಸ್ಕೊಂಡು ಬರ್ತೀಯಲ್ಲಾ....

ಪುಟ್ಟ : ಅಲ್ದೇ ಹೋದ್ರೆ ನೀನೆಲ್ಲಿ ಕೊಡ್ತೀಯಾ?

ಮಂ : ಓಹೋ ಈಗ ಬಂದ್ರೇನು?

ಚಂ : ನೀವು ಕಾಫಿ ತಂದ್ರೇನು?

ಮಂ : ನೀವು ಹೇಳಿದ್ದೇನು?

ಚಂ : ಈಗ ಕೇಳಿದ್ನಲ್ಲಾ.

ಮಂ : ಇನ್ನೇನು ನಾನು ತರ್ತೀನಲ್ಲ

ಪುಟ್ಟ : ಬೇಡ್ರಿ.... ಸದ್ಯ ಕಾಫಿ ಕೊಟ್ಟಿದ್ದಕ್ಕಿಂತ ಹೆಚ್ಚಾಯ್ತು ನಿಮ್ಮ ಯಜಮಾನ್ರು ನನ್ನ ಅಸಲು ಹಣದಲ್ಲೇ ಬಡ್ಡಿ ಕಳ್ದಿದ್ದಾರೆ. ಅದನ್ನ ಕೊಟ್ರೆ ಸಾಕು.

ಮಂ : ಮುಂದಿನ ತಿಂಗಳು ಕೂಡಿಸಿಕೊಡ್ತಾರೆ ಬಿಡಿ.

ಪುಟ್ಟ : ಸದ್ಯ ಏನಾಮ್ಡ್ತಾನೋ ಮಹರಾಯ?

ಪೊ : ಮಾಡೋದೇನು ನಮ್ಮ ಡ್ಯಾಡಿ ಯಾವಾಗಲೂ ಸರಿಯಾಗಿಯೇ.

ಚಂ : ಸಾಕು ಸುಮ್ನಿರೇ ನೀನು ಬೇರೆ ಬಂದುಬಿಟ್ಯೇನು ನನ್ನ ಗೋಕೆ ತಿನ್ನೋದ್ಕೆ.

ಪುಟ್ಟ : ಅದೇನಮ್ಮಾ ನಿನ್ನ ಮಾತಿನ ಅರ್ಥ?

ಪೊ : ಅಂದ್ರೆ ನಮ್ಮ ತಂದೆಗೆ ಇತ್ತೀಚೆಗೆ ಸ್ವಲ್ಪ ಜ್ಞಾಪಕಶಕ್ತಿ ಕಡಿಮೆ.

ಪುಟ್ಟ : ಅದಕ್ಕೇನು ಮಾಡು ಅಂತೀಯಮ್ಮಾ?

ಪೊ : ಗೋಡೆ ಮೇಲೆ ನಾಳೆ ಬರ್ತೀನಿ ಅಂತ ಬರೆದುಬಿಡಿ.

ಪುಟ್ಟ : ಅಂದ್ರೆ ಗಣಪತಿ ಶನಿಮಹಾತ್ಮನಿಗೆ ಮಾಡಿದ ತಿರುಮಂತ್ರ ಮಾಡಬೇಕು ಅನ್ನು. ನೀನು ಆ ಅಪ್ಪನ ಮಗಳಲ್ವೇ? ಅಸಾಧ್ಯ ಬುದ್ಧಿ ನಿನ್ನದು.

ಪೊ : ನಾನು ಇದ್ದ ವಿಷಯ ಹೇಳಿದೆ.

ಚಂ : ಅವಳು ಹೇಳೋದೆಲ್ಲಾ ಇಲ್ಲದೇದ್ದ ವಿಷಯ. ನೀನು ಹೋಗಿ ಬಾರಪ್ಪ. ಮುಂದಿನ ತಿಂಗಳು ಋಣಮುಗಿಸಿಬಿಡುತ್ತೇನೆ

ಪುಟ್ಟ : ಸದ್ಯ ದೇವ್ರು ನಿನಗೆ ಒಳ್ಳೇ ಬುದ್ಧಿ ಕೊಟ್ನಲ್ಲಾ ಅಷ್ಟೇ ಸಾಕು.

ಮಂ : ಅಂದ್ರೆ ಸಾಲ ತೀರ್ಸೋದೊಂದೇ ಬುದ್ದಿ ಕೊಟ್ರೆ ಸಾಕೇ?

ಪುಟ್ಟ : ಸದ್ಯ ಸಾಲ ಮಾಡದೇ ಇರೋ ಬುದ್ಧಿ ಕೊಡಲಿ ಅಂತ ಹರಸ್ತೀನಿ.

ಚಂ : ಸಾಕು ಹೊರಡೋ ಪುಟ್ಟ, ನೀನು ಹರಸೋನು, ನಾನು ಹರಸಿಸಿಕೊಳ್ಳೋನು.

ಪುಟ್ಟ : ಅದೋ ನೋಡಪ್ಪ ನಿನ್ನ ಮಕ್ಕಳು ಹರಸ್ತಾ ಇದ್ದಾರೆ ಹರಸಿಸಿಕೋ, (ಮಗುವಿನ ಅಳು) ಸಧ್ಯ ಈಗ ಬಡ್ಡಿ ಕೊಡೋದಿರ್ಲಿ, ಅವರ ಹರಕೆ ನಿಲ್ಲಿಸುವಂತೆ ಮಾಡು.

ಪೊ : ಹಾಗಲ್ಲ; ಅವು ನಿಮ್ಮನ್ನು ಬೇಗ ಹೋಗ್ಲಿ ಅಂತ ಕೂಗ್ತವೆ.

ಮಂ : ಅದೂ ನಿಜ್ವೇ....

ಪುಟ್ಟ : ಸದ್ಯ ಕಿವಿಕಿವುಡಾಗಿ ಮಿಷನ್ ಇಟ್ಕೋಬೇಕಾದೀತು, ಬಂದೆ....

ಮಂ : ಸ್ವಲ್ಪ ತಾಳ್ರಿ ಕಾಫಿ ತಂದೆ...

ಚಂ : ಸದ್ಯ ನಾನು ಹೋದೆ ಅವ್ರ ಹಿಂದೆ.

ಪೊ : ಸದ್ಯ ನಾನು ಬಂದೆ ನಿಮ್ಮ ಹಿಂದೆ.

ಮಂ : ನಾನು ಹೋಗ್ತೀನಿ ನನ್ನ ಮಕ್ಕಳ ಮುಂದೆ

(ಅಳು ಮೆಲ್ಲನೆ ನಿಲ್ಲುವುದು)

* * *

ಪೊ : ಅಪ್ಪಾ ಏನಾಗಿದೆ ಗೊತ್ತೇ?

ಚಂ : ಆಗೋದಾಗ್ಲಿ ಬಿಡಮ್ಮ.

ಪೊ : ಅದೇನು ಅಪ್ಪಾ ಹಾಗಂದ್ರೆ? ಈ ಹೊತ್ತಿನ ಪೇಪರ್ ನೋಡ್ಲಿಲ್ವೇನು?

ಚಂ : ಪೇಪರ್ ತರಿಸೋಕೆ ದುಡ್ಡಿದ್ರಲ್ವಮ್ಮಾ ನೋಡೋದು?

ಪೊ : ಆಫೀಸ್ನಲ್ಲಾದ್ರೂ ನೋಡಬಾರ್ದೇನಪ್ಪಾ.

ಚಂ : ಟೈಂ ಇದ್ರಲ್ವಮ್ಮ ನಾವು ಹೋಗೋದು ಕೆಲಸಕ್ಕೋ ಪೇಪರ್ ಓದೋದ್ಕೋ?

ಪೊ : ಹೋಗ್ಲಿ ಆದರೆ ನಾಳೇನಾದ್ರೂ ಓದಬೇಡ್ವೇ?

ಚಂ : ನ್ಯೂಸ್ ಹಳೇದಾದ್ಮೇಲೆ ಯಾರು ಓದ್ತಾರೆ?

ಪೊ : ಹಾಗಾದ್ರೆ ಓದೋದೆ ಬೇಡ ಅಂತ್ಲೇನು?

ಚಂ : ಓದೋಕಾಲ ಆಯ್ತಮ್ಮಾ ಇನ್ನೋದಿ ನನ್ಗೇನಾಗ್ಬೇಕಾಗಿದೆ?

ಪೊ : ಕೇಳ್ತೇನಮ್ಮಾ?

ಮಂ : ಯಾಕೆ ಕಿವಿ ಬೇರೆ ಕಿವಿಡು ಮಾಡ್ಬಿಡ್ತೀಯಾ? ಇನ್ನದೊಂದಾದ್ರೆ ನಾನು ಉದ್ಧಾರವಾದ ಹಾಗೇ?

ಪೊ : ಹಾಗಲ್ಲಮ್ಮ ಡ್ಯಾಡಿ ಹೇಳಿದ್ದು.

ಮಂ : ಅವರಿಗೇಕೆ ಇನ್ನು ಜ್ಞಾನಾರ್ಜನೆ.

ಪೊ : ನೀನೊಳ್ಳೆ ಹೇಳ್ದೆಯಮ್ಮಾ.

ಮಂ : ಅದೇ ಸಾಯೋವಾಗ ಬಂತು ಕಿವಿಗೋಲೆ ಅಂದಹಾಗೆ.

ಪೊ : ಅದಕ್ಕೂ ವಯಸ್ಸು ಬೇಕಮ್ಮಾ.

ಮಂ : ಜೀವನವೇ ಆಗಸದಂತೆ ತಲೆಮೇಲೆ ಭಾರ ಬಿದ್ದಿರುವಾಗ, ಇನ್ನಾವ ಜ್ಞಾನಾರ್ಜನೆಯಮ್ಮ ಹೇಳು.... ಅವರು ಏನೂ ತಿಳಿಯೋ ಗೋಜಿಗೆ ಹೋಗ್ತಾ ಇಲ್ಲ, ಹೋಗೋದೂ ಇಲ್ವಂತೆ.

ಚಂ : ತಿಳಿದು ಏನು ಮಾಡಬೇಕಾಗಿದೆ ಹೇಳು?

ಪೊ : ಅದು ಸರಿಯಪ್ಪಾ.

ಪುಟ್ಟ : ಇನ್ನೂ ಮನುಷ್ಯನಿಗೂ ಪ್ರಾಣಿಗೂ ವ್ಯತ್ಯಾಸ ಏನು?

ಚಂ : ಓಹೋ ಶಿವಪೂಜೆ ಮುಂದೆ ಕರಡಿ ಹಾಗೆ ಇವ ಬೇರೆ.... ಏ... ಪುಟ್ಟ.... ನಿನ್ನ ಬಡ್ಡಿಗೆ ಸರಿಯಾಗಿ ಬರ್ತೀಯಲ್ಲಾ.

ಪುಟ್ಟ : ಮತ್ತೆ ಜ್ಞಾನಾರ್ಜನೆ ಮಾಡಿ ಏನಾಗಬೇಕು ಅಂತೀಯಲ್ಲಾ ದಡ್ಡ....

ಚಂ : ಪ್ರಪಂಚವೆಲ್ಲಾ ಇಷ್ಟು ವಯಸ್ಸಾಗೋತನ್ಕ ತಿಳಿಮು ಪರಿಪಕ್ವವಾಯ್ತು. ಇನ್ನೇನಿದೆ ಮಣ್ಣು ನನಗೆ ತಿಳ್ಕೊಳ್ಳೋಕೆ! ಮುದಿಗೊಡ್ಡಾದ ಮೇಲೆ?

ಪುಟ್ಟ : ಈಗ್ಲೇ ಹಾಗಂದ್ರಾಯ್ತು, ಇನ್ನೂ ಪ್ರಪಂಚ ಇಣುಕಿ ನೋಡಬೇಕಪ್ಪಾ.

ಮಂ : ಸದ್ಯ ಪ್ರಪಂಚ ಇರಲಿ ಅವವನ್ನ ಅವರು ಸರಿಯಾಗಿ ನೋಡ್ಕಳ್ಲಿ.

ಪೊ : ತರಲಪ್ಪಾ ಕನ್ನಡಿ.

ಚಂ : ಯೇ ತರಳೆ ನಡಿ....

ಮಂ : ಆ ಕನ್ನಡಿಯಲ್ಲಮ್ಮಾ ಜೀವನ ಕನ್ನಡಿ!

ಪುಟ್ಟ : ಹೌದು ನೂರರಷ್ಟು ಸತ್ಯವಾಗಿ ನುಡಿದ್ರಿ. ಸದ್ಯ ಅವನ್ಯಾರು? ಅವನ ಸಂಸಾರ ಏನೂ ಅಂತ ತಿಳಿದ್ರೆ ಸಾಕಾಗಿದೆ, ಪ್ರಯತ್ನಪಟ್ರಾಗುತ್ತೆ.

ಮಂ : ಹೌದಮ್ಮಾ... ಹೌದು....

ಚಂ : ನೋಡೋಣ.... ನೋಡೋಣ.... ಮುಂದೆ.... ಸಾಧ್ಯವಾದರೆ... ಪ್ರಯತ್ನಪಡ್ತೇನೆ....

ಮಂ : ಸದ್ಯ ದೇವ್ರು ನಿಮಗೆ ಈಗ್ಲಾದ್ರೂ ನೀವ್ಯಾರು? ನಿಮ್ಮ ಸಂಸಾರ ಏನೂ ಅನ್ನೋದನ್ನು ತಿಳಿದುಕೊಳ್ತೇನೆ ಅಂತ ಬಾಯಿ ಬಿಟ್ರಲ್ಲ ಅಷ್ಟೇ ನನಗೆ ಪುಣ್ಯ. ದೇವರಿಗೆ ಇದೋ ಈಗ್ಲೇ ತುಪ್ಪದ ದೀಪ ಹಚ್ತೇನೆ.

ಪುಟ್ಟ : ಅಷ್ಟೇ ಅಲ್ಲಮ್ಮಾ... ನಮಗೆಲ್ಲಾ ಬಾಯಿ ಸಿಹಿ ಮಾಡು ಈಗ.

ಮಂ : ನಿನ್ನೆ ತಾನೇ ಟೂರ್‌ಗೆ ಹೋಗಿದ್ದು ಮೈಸೂರು ಪಾಕು ತಂದಿದ್ದಾರೆ, ತರ್ತೇನೆ.

ಚಂ : ತರ್ತೀನಿ ಏನು ತಂದು ಹಾಕು ಎಲ್ಲರ ಬಾಯಿಗೂ, ಆ ಮಕ್ಕಳ ಅಳು ಶುರುವಾಗೋದ್ಕು ಮೊದ್ಲೇ....

ಪುಟ್ಟ : ಸರಿಯಾದ ಪಾಯಿಂಟ್....

ಪೊ : ಅದೋ ಶುರು ಮಾಡಿದ್ರು....

ಮಂ : ಸಾಕು ಸುಮ್ನಿರೆ ಎಲ್ಲಿ?.... ಇಲ್ಲ.... ಅವರಿಗೂ ಒಳ್ಳೇ ಬುದ್ಧೀ ಬಂತಲ್ಲಾ ಅಂತ ಅವು ಆಶ್ಚರ್ಯವಾಗಿ ನೋಡ್ತಾ ಇವೆ. ಕೇಕೇ ಹಾಕ್ತಾ ಇವೆ ನೋಡು.

ಪುಟ್ಟ : ಹೌದಯ್ಯಾ ಹೌದು....

ಮಂ : ಏಯ್ ಜಾಣಮರಿ ನಿನಗೂ ಹಾಲೂ ಕೊಡ್ತೀನಿ ಸುಮ್ನಿರು.

ಚಂ : ಹೋಗಿ ತರೋದೇನು, ತಂದೆಬಿಟ್ಟೆ.... ತೆಗೊಳ್ರೀ....

ಚಂ : ಸಾಕು.... ಸಾಕು... ಒಂದೇ....

ಮಂ : ಇನ್ನೊಂದೇ....

ಚಂ : ಎರಡೇ ಸಾಕು....

ಮಂ : ಮೂರಿರಲಿ....

ಪುಟ್ಟ : ಹೌದು.... ಹೌದು.... ಒಂದು ಎರಡು ಬೇಕು ಮೂರು ಸಾಕು. ನಿನ್ನಾಗೋಯ್ತು ಬೇರೆಯವರಿಗೆ.

(ಎಲ್ಲರೂ ನಗುವರು)

✳

# ಕಲಾವಿದೆ

**ಪಾತ್ರ ವರ್ಗ**

೧. ರವಿ ೨. ರಂಗಣ್ಣ ೩. ರಾಮಣ್ಣ ೪. ರಾಧಾ ೫. ರಮಣಿ ೬. ರಮೇಶ್ ೭. ರಾಗಿಣಿ ೮. ರಾಜಶೇಖರ್ ೯. ರವಿಶಂಕರ್

ರವಿ : ನಾಟ್ಕ ಹೇಗನ್ನಿಸ್ತು ರಂಗಣ್ಣನವ್ರೆ?

ರಂಗಣ್ಣ : ಬಹಳ ಚೆನ್ನಾಗಿರುತ್ತಯ್ಯಾ ರವಿ..... ನೀನೇನು ಸಾಮಾನ್ಯವೇ ಬಿಡು. ಛಲದಂಕಮಲ್ಲ ಕಲಾಕೇಸರಿ.

ರವಿ : ಅದೆಲ್ಲಾ ದೊಡ್ಡ ಮಾತು ಬಿಡಿ. ಏನೋ ನಾನು ಇದ್ದ ಒಂದು ಸ್ವಲ್ಪ ಮನೆ ಗದ್ದೆ ಎಲ್ಲವನ್ನೂ ಮಾರಿಬಿಟ್ಟು ಕಂಪೆನಿ ಆರಂಭಮಾಡ್ದೆ. ಗಜಾನನ ಕಂಪನಿಯಲ್ಲಿ ಕೆಲಸ ಮಾಡ್ತಾ ಇದ್ದಾಗ್ಲಿಂದ್ಲೂ ಕಂಪನಿ ವಿಚಾರ ಗೊತ್ತಿತ್ತು. ಅಲ್ಲಿನ ರಾಜಕೀಯ, ಹೊಟ್ಟೆ ಉರಿ, ಪಾತ್ರ ನಿರ್ವಹಣೆ ಕುರಿತು ನನಗೆ ಬಹಳ ಬೇಸರ ತಂದಿತ್ತು. ನಾನೇ ಒಂದು ಸ್ವಂತ ಕಂಪನಿ ಮಾಡಿ ಸರಿಯಾಗಿ ನಡೆಸಿಕೊಂಡು ಹೋಗಬೇಕು ಅನ್ನೋ ಆಸೆ ಇತ್ತು. ಆ ಕನಸನ್ನು ಈಗ ನಾನು ನನಸು ಮಾಡಿದ್ದೇನೆ. ದೇವ್ರು ಹ್ಯಾಗೋ ಈಗ್ನಂತೆ ಕಲೆಕ್ಷನ್ ನಡೆಸಿಕೊಟ್ರೆ ಸಾಕು.

ರಂಗಣ್ಣ : ದೇವ್ರಿದ್ದಾನೆ ಯೋಚ್ನೆ ಮಾಡಬೇಡ ರವಿ.

ರವಿ : ದೇವರ ದಯೆಯಿಂದ ನಿಮ್ಮ ಬಾಯಿ ಹರಕೆಯಿಂದ ಅಷ್ಟಾದರೆ ಸಾಕು.

ರಂಗಣ್ಣ : ಅದಿರ್ಲಪ್ಪ ಏನು ಮದ್ವೆಗಿದ್ವೆ ಆಗೋ ಯೋಚನೆ ಮಾಡಿದ್ದೀಯೊ ಇಲ್ವೋ?

ರವಿ : ನಮ್ಮ ತಂದೆ-ತಾಯಿ ತೀರಿಹೋದ ಮೇಲೆ ನನ್ನನ್ನು ಕೇಳೋವ್ರ್ಯಾರು?

ರಂಗಣ್ಣ : ನಾನಿಲ್ವೇನು? ನಾನು ಬೇರೆಯವ್ನಾದ್ರೂ....

ರವಿ : ನೀವು ತಂದೆಯ ಹಾಗಿದ್ದೀರಿ, ಅದು ನನಗೆ ಗೊತ್ತು. ನಾನು ಸಣ್ಣವ್ನಾಗಿದ್ದಾಗಿಂದ್ಲೂ ನೀವು ನನ್ನನ್ನು ವಿಚಾರ ಮಾಡ್ಕೊಳ್ತಾನೇ ಇದ್ದೀರಿ. ನೀವು ಹ್ಯಾಗೆ ಹೇಳಿದ್ರೆ ಹಾಗೆ ನಾನು.

ರಂಗಣ್ಣ : ಎಲ್ಲಾದ್ರೂ ಹೆಣ್ಣು ನೋಡಿದ್ದೀಯಾ?

ರವಿ : ಇಲ್ಲ ರಂಗಣ್ಣನವ್ರೇ....!

ರಂಗಣ್ಣ : ನಾನೊಂದು ವಧು ಹೇಳ್ತೀನಿ ನಿನಗೇನನ್ನಸ್ತದೋ ನೋಡು.

ರವಿ : ಯಾರು?

ರಂಗಣ್ಣ : ಗುಮಾಸ್ತ ರಾಮಣ್ಣನವರ ಮಗಳು.... ರಾಧಾ ಅಂತ.

ರವಿ : ಓಹೋ ಆ ಹುಡುಗೀನಾ.... ನಾನು ಆಕೆಯನ್ನ ಸ್ಕೂಲ್‌ಡೇ ನಾಟಕದಲ್ಲಿ ಭಾಗವಹಿಸಿದ್ದಾಗ ನೋಡಿದ್ದೆ.

ರಂಗಣ್ಣ : ಮತ್ತೆ ಸರಿ.... ನಿನ್ನ ಮನಸು ಏನನ್ನಸ್ತದೆ? ಅವರು ಸ್ವಲ್ಪ ಬಡವರು ಮಕ್ಕಳು ಹೆಚ್ಚು. ಏನೂ ಕೊಡುವವರಲ್ಲ ಬಿಡುವವರಲ್ಲ, ಅಂದ್ರೆ ಹುಡುಗಿ ಒಳ್ಳೇ ಕಲಾಸರಸ್ವತಿ.

ರವಿ : ಹೌದು.

ರಂಗಣ್ಣ : ಹಣ ಒಂದು ಬಿಟ್ರೆ ವಿದ್ಯೆ, ನಾಟ್ಯ, ಸಂಗೀತ, ಎಲ್ಲದರಲ್ಲೂ ಫಸ್ಟ್. ನೀನು ಹ್ಞೂಂ ಅಂದ್ರೆ ನಾನು ವಿಷಯ ಮುಂದುವರಿಸುತ್ತೇನೆ.

ರವಿ : ತಾವು ಒಪ್ಪಿದ ಹಾಗೆ ಮಾಡಿ.

ರಂಗಣ್ಣ : ಸಂತೋಷ..... ನಾನು ಬರ್ತೇನೆ.

* * *

ರಂಗಣ್ಣ : ಏನು ರಾಮಣ್ಣ, ಆರಾಮ ಕುರ್ಚಿಯಲ್ಲಿ ಕೂತಿದ್ರೂ ಯೋಚ್ನೆ ತಪ್ಪಲಿಲ್ಲ?

ರಾಮಣ್ಣ : ತಪ್ಪಲಿಲ್ಲ ಅಂದ್ರೇನು ಮಾಡ್ಲಿ ಹೇಳು, ನನ್ನ ಮಗಳು ರಾಧಾಳ ಮದುವೆಯೇ ಒಂದು ದೊಡ್ಡ ಸಮಸ್ಯೆಯಾಗಿ ನನ್ನನ್ನು ಕಾಡ್ತಾ ಇದೆ.

ರಂಗಣ್ಣ : ಸ್ವಲ್ಪ ಸಮಾಧಾನ ತಂದ್ಕೋ.....

ರಾಮಣ್ಣ : ಏನು ಸಮಾಧಾನ ತಂದ್ಕೊಳ್ಳೋ, ಏನೋ, ರಾಧಾಳ ಜತೆ ರಂಜನಿಯೂ ಬೆಳೆದು ನಿಂತಿದ್ದಾಳೆ. ಅವಳಾಗ್ತಿದ್ದಾಗ್ಲೆ ರಾಣಿ..... ಇವರಿಗೆಲ್ಲಾ ನಾನು ವರ ಹುಡುಕಿ ಮದುವೆ ಮಾಡೋದೇ ಒಂದು ದೊಡ್ಡ ಸಮಸ್ಯೆಯಾಗಿ ಹೋಗಿದೆ.

ರಂಗಣ್ಣ : ಮೊದಲು ರಾಧಾಳದು ಮಾಡು ಆಮೇಲೆ ಮಿಕ್ಕವರ ಮಾತು.

ರಾಮಣ್ಣ : ಹುಡುಗ?

ರಂಗಣ್ಣ : ಹುಡುಗ ರವಿ ಅಂತ ಮೊದ್ಲು ನಾಟಕದ ಕಂಪನಿಯಲ್ಲಿದ್ದ, ಈಗ ಆತನೇ ಸ್ವತಃ ಕಂಪನಿ ನಡೆಸ್ತಾ ಇದ್ದಾನೆ.

ರಾಮಣ್ಣ : ಇದೇನು ರಂಗಣ್ಣ ನೀನು ಆಡೋ ಮಾತು?

ರಂಗಣ್ಣ : ಅದರ್ಲೇನಣ್ಣ ತಪ್ಪು. ನಿನ್ನ ಮಗಳೂ ಉತ್ತಮ ಕಲಾವಿದೆ. ಅದಕ್ಕೆ ತಕ್ಕ ವರ ಮತ್ತೊಬ್ಬ ಕಲಾವಿದ.

ರಾಮಣ್ಣ : ಏನೋ ಸ್ಕೂಲ್‌ಡೇಲಿ ನಾಟಕದಲ್ಲಿ ಪಾತ್ರ ಮಾಡಿದಳು ಅಂದ್ರೆ ನಾಟಕ ಆಡೋ ರವಿಗೆ ಕೊಡು ಅಂತೀಯಾ?

ರಂಗಣ್ಣ : ಕಲೆಗೂ ನಿನಗೂ ಯಾಕೆ ಇಷ್ಟೊಂದು ದ್ವೇಷ ಅಂತೀನಿ?

ರಾಮಣ್ಣ : ಕಲೆಯನ್ನೇ ನಂಬಿಕೊಂಡಿರೋನಿಗೆ ಹೇಗೆ ಕೊಡೋದು?

ರಂಗಣ್ಣ : ಕಲೆಗೆ ಕಲೆ ಬೆರೆತಾಗಲೇ ಉತ್ತಮ ಕಲೆ ಹುಟ್ಟೋದು.

ರಾಮಣ್ಣ : ನಾಟಕದ ಕಂಪೆನಿ ಅಂದ್ರೆ ಆತನಿಗೆ ಈಗಾಗಲೇ ಎಷ್ಟು ಜನರ ಸಂಬಂಧ ಇಟ್ಕೊಂಡಿದ್ದಾನೊ ಏನೋ?

ರಂಗಣ್ಣ : ಹಾಗೆ ತಿಳಿಯೋದು ಸರಿಯಲ್ಲ.

ರಾಮಣ್ಣ : ನಮ್ಮಂಥ ಮನೆತನಸ್ಥರಿಗೆ ನಾಟಕದ ಕಂಪೆನಿ, ನಾಟಕ ಆಡೋದು ಒಳ್ಳೇದಲ್ಲ, ನಮ್ಮ ಮಾನಕ್ಕೂ ತಡ್ಯೋಲ್ಲ.

ರಂಗಣ್ಣ : ಅದೋ ನಿಮ್ಮ ಮಗಳೇ ಬರ್‍ತಾ ಇದ್ದಾಳಲ್ಲ ಅವಳನ್ನೇ ಕೇಳಿಬಿಡೋಣ.

ರಾಮಣ್ಣ : ಬಾರಮ್ಮ.... ಇವನು ರಂಗಣ್ಣ, ನನ್ನ ಸ್ನೇಹಿತ.

ರಾಧ : ನಮಸ್ಕಾರ, ಎಷ್ಟು ಹೊತ್ತಾಯ್ತು ಬಂದು?

ರಾಮಣ್ಣ : ಹತ್ತು ನಿಮಿಷವೇ ಆಯ್ತು

ರಾಧ : ಕಾಫಿನಾದ್ರೂ ತರ್‍ತೇನೆ.

ರಂಗಣ್ಣ : ಅದಕ್ಕಿಂತ ಈಗ ನಮ್ಮ ಸಮಸ್ಯೆಯನ್ನು ಬಗೆಹರಿಸಿಬಿಟ್ರೆ ಅದು ಎಲ್ಲದಕ್ಕಿಂತಲೂ ಹೆಚ್ಚಮ್ಮ.

ರಾಮಣ್ಣ : ಹೇಳಪ್ಪಾ.

ರಂಗಣ್ಣ : ನಿನ್ನ ಮದ್ವೆ ವಿಚಾರವಮ್ಮ

ರಾಧ : ಹೋಗಿ ರಂಗಣ್ಣನವ್ರೇ.

ರಂಗಣ್ಣ : ನಾಚಿಕೊಳ್ಳೋ ವಿಷಯವೇನ್ಬಂತಮ್ಮ? ಎಂದಾದ್ರೂ ಒಂದು ದಿನ ಆಗಬೇಕಾದ್ದು, ವರ ನಾಟಕದ ಕಂಪನಿ ರವಿಯಮ್ಮ.

ರಾಮಣ್ಣ : ಉತ್ತರವಿಲ್ಲ ಅದೋ ಓಡ್ತಾ ಇದ್ದಾಳೆ.

ರಂಗಣ್ಣ : ಹಾಗಂದ ಮೇಲೆ ಇಷ್ಟವಿದೆ ಅಂತ ಆಯ್ತು. ಇಲ್ದೇ ಹೋಗಿದ್ರೆ ಏನಾದ್ರೂ ಮಾತಾಡ್ತಿದ್ದಲ್ಲ

ರಾಮಣ್ಣ : ಅವಳ ಒಪ್ಪಿಗೆ ಆದ ಮೇಲೆ ನನ್ನದೇನು? ತಾಯಿಯಿಲ್ಲದ ಮಗಳ ಉದ್ಧಾರವಾದ್ರೆ ಸಾಕು.

* * *

(ಒಲಗ)

ರವಿ : ರಾಧಾ... ಏಕೆ ಇನ್ನೂ ನಾಚಿಕೇನಾ? ಹತ್ತಿರ ಬಾ.... ಸಂಕೋಚವೇಕೆ? ನೀನು ನನ್ನವಳಾಗಿ ಎಷ್ಟೋ ಹೊತ್ತಾಯ್ತು.

ರಾಧ : ಹೌದು....

ರವಿ : ನನ್ನನ್ನು ಮದ್ವೆ ಆದದ್ದು ಸಂತೋಷವಾಗಲಿಲ್ವೇ?

ರಾಧ : ಇಲ್ಲ ಅಂದವ್ರ್ಯಾರು?

ರವಿ : ಅಲ್ಲಾ ನಾಟಕದ ಕಂಪನಿಯವನ ಕೈ ಹಿಡ್ದೆ ಅಂತ.

ರಾಧ : ಛೀ.... ಛೀ... ಹಾಗೆಲ್ಲಾ ಅನ್ಬಾರ್ದು.... ನಾನು ಕಲೆಯನ್ನು ಪ್ರೀತಿಸುವವಳು, ಆರಾಧಿಸುವವಳು.

ರವಿ : ನಿನ್ನನ್ನು ನನ್ನ ಮನಸ್ಸು ಆಕರ್ಷಿಸಿದುದು ಸ್ಕೂಲ್ ಡೇನಲ್ಲಿ ನೀನು ಸೀಡಿದ ಶಕುಂತಲಾ ಪಾತ್ರದ ಅಭಿನಯ.

ರಾಧ : ಅಭಿನಯವನ್ನು ಮೆಚ್ಚಿ ಮದ್ವೆ ಆದ್ರೋ, ಅಥ್ವಾ.....

ರವಿ : ಕಲೇನೋ ಅಂತ್ಲಾ.... ಮೊದಲು ಕಲೆ, ಆಮೇಲೆ ರೂಪ.... ಗುಣ ಪರೀಕ್ಷೆ ಇನ್ನು ಮೇಲಾಗಬೇಕಾಗಿದೆ.

ರಾಧ : ಒಳ್ಳೆಯದು. ನಮ್ಮ ಸಂಸಾರ ಹಾಲು - ಜೇನು ಬೆರೆತಂತಾದ್ರೆ ಸಾಕು.

ರವಿ : ಈ ಮೊದಲ ರಾತ್ರಿ ನಾವುಗಳು ಆಡಿದ ಮಾತುಗಳು ಚಿರವಾಗಿ ನಿಲ್ಲಲಿ ಅಂತ ಹಾರೈಸುತ್ತೇನೆ.

* * *

ರವಿ : ರಾಧಾ, ನೀನು ನನ್ನನ್ನು ಮೆಚ್ಚಿದ್ದು ಹೇಗೆ ಅಂತ ಹೇಳ್ಲೇ ಇಲ್ವಲ್ಲ.

ರಾಧ : ನೀವು ಕಲಾವಿದರು ಅಂತ ಗೊತ್ತಾಯ್ತು, ಆಗ ನೀವು ಮಾಡಿದ ರಾಜಾವಿಕ್ರಮದಲ್ಲಿ ರಾಜಾವಿಕ್ರಮನ ಪಾತ್ರ ಬಹಳ ಹಿಡಿಸ್ತು. ಆಗ ನಿಮ್ಮ ಅಭಿನಯ ತುಂಬಾ ಮೆಚ್ಚಿಗೆ ಆಯ್ತು ನನಗೆ.

ರವಿ : ಆಮೇಲೆ ನಾನು ಹಿಡಿಸಿರ್ಬೇಕು; ಮೆಚ್ಚಿಗೆ ಆಗಿರ್ಬೇಕು.

ರಾಧ : (ನಗುತ್ತಾ) ಹಾಗೇನಿಲ್ಲ ಚಿಕ್ಕಂದಿನಿಂದಲೂ ನನಗೆ ನಾಟಕದ ಗೀಳು, ಸಿನಿಮಾದ ಹುಚ್ಚು ಇತ್ತು. ಅದನ್ನ ಸ್ಕೂಲ್‌ಡೇ ನಾಟಕದಲ್ಲಿ ಉಪಯೋಗಿಸಿಕೊಂಡೆ. ಆಗ್಩ೇ ಅಲ್ವೇ ನೀವು ನನ್ನನ್ನೂ ಮೊದಲು ನೋಡಿದ್ದು.

ರವಿ : ಆಗ ನಿನ್ನ ಅಭಿನಯ ತುಂಬಾ....

ರಾಧ : ಹಿಡಿಸಿತು ಆಮೇಲೆ ನಾನು ಮೆಚ್ಚಿಗೆಯಾದೆ ಅಂತ ಕಾಣುತ್ತೆ ಅಲ್ವೇ?

ರವಿ : ಕಲಾವಿದನಿಗೆ ತಕ್ಕ ಒಬ್ಬಳು ನನಗೆ ಬೇಕಾಗಿತ್ತು, ಅದಕ್ಕಾಗಿ ನಾನು ಶೋಧಿಸುತ್ತಿದ್ದೆ.

ರಾಧ : ಆಗ ನಾನು ನಿಮ್ಮ ಕಣ್ಣಿಗೆ ಬಿದ್ದೆ. ಅಚ್ಚು ಮೆಚ್ಚಾದದೆ ಅಲ್ವೇ?

ರವಿ : ಹೌದು... ಹೌದು...

(ಇಬ್ಬರೂ ನಗುವರು)

* * *

ರವಿ : ರಾಧಾ.....

ರಾಧ : ಏನು....?

ರವಿ : ನಿನ್ನನ್ನು ಒಂದು ವಿಷಯ ಕೇಳಬೇಕು ಅನ್ತಿದ್ದೆ.

ರಾಧ : ನೀವೇನು ಕೇಳಬೇಕು ಅನ್ನೋದು ನನ್ಗೂ ಗೊತ್ತಿದೆ.

ರವಿ : ಏನು ಗೊತ್ತಿದೆ ನಿನ್ಗೆ? ನಿನ್ನ ತಳೆ ಹೇಳು ಮತ್ತೆ.

ರಾಧ : ಸದಾಶಿವನಿಗೆ ಅದೇ ಜ್ಞಾನ ಅಂತ.

ರವಿ : ಅದಲ್ಲ ಮಾರಾಯ್ತಿ ಇದು ನೀನು ಪ್ರವರ್ಧಮಾನಕ್ಕೆ ಬರೋ ವಿಷಯ.

ರಾಧ : ಏನು....?

ರವಿ : ನೀನೇನೂ ತಿಳ್ಕೋಳ್ದೇ ಇದ್ರೆ ನಾಟಕದಲ್ಲಿ ನೀನು ಒಂದು ಪಾತ್ರ ಮಾಡ್ತೀಯಾ ಅಂತ ಕೇಳ್ತೇನೆ.

ರಾಧ : ಅದಕ್ಕೆ ಇಷ್ಟೆಲ್ಲಾ ಪೀಠಿಕೆ ಹಾಕಿದ್ರೇನು?

ರವಿ : ನಾಳೆಯಿಂದ "ಸತ್ಯ ಹರಿಶ್ಚಂದ್ರ" ನಾಟಕದ ಪ್ರ್ಯಾಕ್ಟೀಸ್ ಆಗಬೇಕಾಗಿದೆ. ಅದರಲ್ಲಿ ನಾನು ಹರಿಶ್ಚಂದ್ರ.

ರಾಧ : ಅದಕ್ಕೆ ನನ್ನನ್ನು ಚಂದ್ರಮತಿ ಮಾಡು ಅನ್ತೀರಾ?

ರವಿ : ಚಂದ್ರಮತಿ.

ರಾಧ : ಕಾಲೇಜಿನ ದಿನಗಳಲ್ಲೇನೋ ಮಾಡಿದ್ದು ಸರಿ. ನೀವು ನೋಡಿ ನನ್ನನ್ನು ಮೆಚ್ಚಿ ಮದುವೆ ಆದ್ರಿ. ಈಗ ಮದ್ವೆ ಆದಮೇಲೆ ಮಾಡೋದು ಅಂದ್ರೆ ಏಕೋ ನನ್ನ ಮನಸ್ಸು ಹಿಂಜರಿಯುತ್ತೆ.

ರವಿ : ನನ್ನ ಜತೆಯಲ್ಲಿ ತಾನೇ ಮಾಡೋದು?

ರಾಧ : ತಾವು ಮಾಡ್ಲೇಬೇಕು ಅಂದ್ರೆ ಮಾಡ್ತೀನಿ. ಕಲೆಗೆ ನಾನು ಎಂದೂ ಇಲ್ಲ ಅನ್ನಲಾರೆ. ನಿಮ್ಮ ಗೌರವದ ಪ್ರಶ್ನೆಗೆ ನಾನು ತಲೆಹಾಕಿದೆ.

ರವಿ : ನನಗೇನೂ ಸಂಕೋಚವಿಲ್ಲ. ನೀನೊಪ್ಪಿದೆಯಲ್ಲಾ ಅಷ್ಟಕ್ಕೆ ಸಂತೋಷ. ಅದಕ್ಕೆ ಏನಾದ್ರೂ ಬಹುಮಾನ ಕೊಡಬೇಡ್ವೇ ನಿನಗೆ?

ರಾಧ : ಮೊದಲು ಹಾಕಿದ ಪೀಠಿಕೆ, ಈಗ ಕೊನೆಮಾಡಬೇಕೆಂಬ ಸಂಕಲ್ಪವೇನು?

(ಇಬ್ಬರೂ ನಗುವರು)

* * *

ಪೋಸ್ಟ್ :
ರಾಮಣ್ಣ : ಪೋಸ್ಟ್......

ದಾವಣಗೆರೆ

ತೀರ್ಥರೂಪು ಸಮಾನವಾದ ಮಾವನವರಿಗೆ ರವಿಯು ಮಾಡುವೆ ನಮಸ್ಕಾರಗಳು. ನಮ್ಮ ಕಂಪೆನೀ ಈಗ ದಾವಣಗೆರೆಯಲ್ಲಿದ್ದು ಕಲೆಕ್ಷನ್ ಚೆನ್ನಾಗಿ ಆಗುತ್ತಿದೆ.

ಇತ್ತೀಚೆಗೆ ರಾಧಾಗೆ....ವಾಂತಿ ಹೆಚ್ಚು... ಹಾಸಿಗೆ ಹಿಡಿದು ಹತ್ತು ದಿನಗಳೇ ಆದುವು. ಒಂದು ದಿನದ ಮಟ್ಟಿಗೆ ನೀವು ಸಾಧ್ಯಮಾಡಿಕೊಂಡು ಬಂದು ನೋಡಿಕೊಂಡು ಹೋಗುವುದು.

ಇಂತಿ ನಮಸ್ಕಾರಗಳು.

ರವಿ

ರಾಮಣ್ಣ : ರಾಧಾಳಿಗೆ ತಾಯಿ ಇದ್ದಿದ್ದರೆ.... ಚೊಚ್ಚಲ ಶ್ರೀಮಂತ ಬಾಣಂತನವನ್ನು ಎಷ್ಟು ವಿಜೃಂಭಣೆಯಾಗಿ ಮಾಡ್ತಾ ಇದ್ಲು. ರುದ್ರಾ..... ನಿನ್ನ ಮಗಳಿಗೆ ಇನ್ನು ಯಾರು ಮಾಡಬೇಕು? ತಬ್ಬಲಿ ರಾಧಾಳಿಗೆ ದೇವರೊಬ್ಬನೇ ಮಾಡಬೇಕು. ಛೀ ಏಕೆ ಕಣ್ಣೀರು? ಹೋಗಿ ಆಕೆಗೆ ಧೈರ್ಯ ಹೇಳಿ ಬರಬೇಕಾದವನು ನಾನೇ ಅಲ್ವೇ? ರಾಧಾಳಿಗೆ ದೇವ್ರು ಒಳ್ಳೆಯದು ಮಾಡ್ಲಿ.

* * *

ರವಿ : ಒಳ್ಳೇ ಚನ್ನಾಗಿದೆ ಕಣೆ. ಏನು ಇತ್ತೀಚೆಗೆ ಮಗು ಆಡಿಸ್ತಾ ಕುಳಿತು ಬಿಟ್ಟೆಯಲ್ಲಾ ನಾಟಕದ ಕಂಪನಿ ಮರೆತೇ ಬಿಟ್ಟೇನು.

ರಾಧ : ಇದೇನು ನೀವು ಹೇಳ್ತಾ ಇರೋದು, ಬಾಣಂತನ ಇನ್ನೂ ಮೂರು ತಿಂಗಳು ಮುಗಿಲಿಲ್ಲ. ಮಗು ಕೈ ಬಿಡ್ತಾ ಇಲ್ಲ. ಚಂಡಿ ಮಾಟ್ತದೆ. ಈಗಲೇ ನಾಟಕದ ಕಂಪೆನಿಗೆ ಬಂದ್ಬಿಡು ಅನ್ತೀರಾ?

ರವಿ : ಆಯ್ತಪ್ಪ ಒಂದು ಮಗೂಗೇ ಹೀಗನ್ಬಿಟ್ರೆ ಹ್ಯಾಗೆ ಹೇಳು?

ರಾಧ : ಇನ್ನೊಂದು ಮೂರು ತಿಂಗಳಾದ್ರೂ ಬಿಡುವು ಕೊಡಿ ನನಗೆ. ಇನ್ನೂ ಮೈಕೈ ತುಬಿಕೊಂಡಿಲ್ಲ. ಒಣಗಿ ಓಟಗರಿಯಾಗಿದ್ದೇನೆ. ನಾಟಕವಲ್ಲಿ ಪಾತ್ರ ಮಾಡಿದ್ರೂ ಒಂದು ಲಕ್ಷಣ ಬೇಡ್ವೇ?

ರವಿ : ನಿಮ್ಮ ತಂದೆಯವ್ರು ಊರಿಗೆ ಹೊರಟು ಹೋದ್ರೇನು?

ರಾಧ : ಹೌದು ನಿಮಗೆ ಹೇಳಿ ಅಂತನ್ಬಿಟ್ಟು, ಹೊರಟು ಹೋದ್ರು.

ರವಿ : ಸರಿ ನಿನ್ನ ಪಾತ್ರಕ್ಕೆ ನಿನ್ನ ಸ್ನೇಹಿತೆ ರಮಣೀನೆ ಹಾಕ್ಬಿಡ್ತೇನೆ.

ರಾಧ : ಸಧ್ಯ ಅಷ್ಟು ಮಾಡಿದ್ರೆ ಒಳ್ಳೇದು.

ರವಿ : ಅವಳೂ ಒಂದು ಮಗೂಗೆ ತಾಯಿಯಾಗಿ ಮೂರು ತಿಂಗಳಾಯ್ತು. ಆಗ್಩್ಲೇ ಗೆಲುವಾಗಿ ಪಾತ್ರ ಮಾಡ್ತೀನಿ ಅಂತ ಬಂದಿದ್ದಾಳೆ. ಅದೇ ನೀನು..... ರಾಗ ತೆಗಿತೀಯೆ.

ರಾಧ : ಎಲ್ಲರ ದೇಹದ ಪ್ರಕೃತೀನೂ ಒಂದೇ ಆಗಿರೋಲ್ಲ. ಕೆಲವರು ಅಷ್ಟಕ್ಕೆ ಚೇತರಿಸಿಕೊಂಡು ಕೆಲಸ ಮಾಡ್ತಾರೆ, ನನ್ನಂಥವ್ರು ಸ್ವಲ್ಪ ಹೆಚ್ಚಿಗೆ ದಿನಾನೂ ತೆಗೆದುಕೊಳ್ಳುತ್ತಾರೆ.

ರವಿ : ಸರಿ ನಿನ್ನಿಷ್ಟ ಒಪ್ಪಿದ ಹಾಗೆ ಮಾಡು. ಓ ಅಂದ ಹಾಗೆ ಅವ್ರೇ ಬಂದ್ರು ಬನ್ನಿ.... ನಿಮಗೆ ನೂರು ವರ್ಷ ಆಯಸ್ಸು.

ರಮಣಿ : ನಮಸ್ಕಾರ ಹೇಗಿದ್ದೀರಿ ರಾಧಾ?

ರಾಧ : ಇದೇ ತಾನೇ ನಿಮ್ಮ ಮಾತನ್ನೇ ಆಡ್ತಿದ್ವು. ನಾನು ಬರೋವರ್ಗ್ಗೂ ನೀವೇ ಚಂದ್ರಮತಿ ಪಾರ್ಟ್ ಮಾಡಬೇಕು ಅಂತ ಹೇಳಿದ್ದೀನಿ.

ರಮಣಿ : ಒಳ್ಳೇದಮ್ಮ.

ರವಿರ : ನಾಳೇನೇ ನೀವು ರಿಹರ್ಸಲ್‌ಗೆ ರೆಡಿಯಾಗಿ ಬರ್ಬೇಕು.

ರಮಣಿ : ಆಗಲಿ ಸಾರ್.

ರಾಧ : ಮಗು ಚೆನ್ನಾಗಿದ್ಯಾ?

ರಮಣಿ : ಚೆನ್ನಾಗಿದೆ. ನಿಮ್ಮ ಹುಡುಗ.

ರಾಧ : ಅದೋ ಪೋಲಿ ಶುರು ಮಾಡ್ದ ರಾಗ....

* * *

ರವಿ : ರಾಧಾ...

(ವಾಂತಿ ಮಾಡುವ ಶಬ್ದ)

ಒಳ್ಳೇ ಸರಿಹೋಯ್ತು ಘಂಟೆ ಏಳಾಯ್ತು. ಇನ್ನೂ ಏಳೋಕೆ ಮನಸಿಲ್ವೇ? ಯಾಕೆ ಏನಾಯ್ತು?

ರಾಧ : ಏನೂ.... ಇಲ್ಲ.... ವಾಂತಿ...

ರವಿ : ಡಾಕ್ಟರ್ ಕರೆತರ್ಲೇನು? ಅಥವಾ ಔಷಧ ತರಲೋ?

ರಾಧ : ಏನೂ ಬೇಡಿ...

ರವಿ : ಯಾಕೆ ಏನಾಯ್ತು?

ರಾಧ : ಆಗೋದೇನು ಇನ್ನು ಕೆಲವು ದಿನಗಳಲ್ಲಿ ಇನ್ನೊಂದು ಪುತ್ರನೋ ಪುತ್ರಿಯೋ ಆಗುತ್ತೆ ಅಷ್ಟೇ.

ರವಿ : ಈ ಹೊತ್ತು ಬರೋದ್ಕಾಗುತ್ತಾ ಅಥವಾ.....

ರಾಧ : ಏನು ನೀವು ಹುಡುಗಾಟ ಆಡ್ತಾ ಇದ್ದೀರಾ? ಸಂಕಟ, ಕೈಕಾಲು ಗಡಗಡನೆ ನಡುಗಲಿಕ್ಕೆ ಶುರುವಾಗಿದೆ.

ರವಿ : ಹಾಗಾದ್ರೆ ಈ ಹೊತ್ತಿನ ನಾಟಕದ ಗತಿ.

ರಾಧ : ನನ್ನ ಪಾತ್ರ ಹೇಗಾದ್ರೂ ರಮಣಿ ಮಾಡ್ತಾಳಲ್ಲ, ಮಾಡಿಸಿಬಿಡಿ.

ರವಿ : ಸರಿ, ನೀನು ಯೋಚನೆ ಮಾಡಬೇಡ. ಸ್ವಲ್ಪ ವಿಶ್ರಾಂತಿ ತೆಗೆದುಕೋ. ನಾನು ಹೇಗೋ ಮಾಡ್ತೀನಿ. ಆಸ್ಪತ್ರೆಗೆ ಹೋಗಿದ್ದು ಬಾ, ಸ್ವಲ್ಪ ಡಾಕ್ಟರ್‌ಗೆ ತೋರಿಸಿದರೆ ಉತ್ತಮ.

ರಾಧ : ಆಗ್ಲಿ....

(ಸಿಳ್ಳೆಗಳು ಒಂದೇ ಸಮನೆ, ಜನಗಳ ಗದ್ದಲ)

(ರಾಧಾದೇವಿ ಕಾಲ ಮುಗಿದುಹೋಯ್ತು.... ಆಕೆಯ ಅಭಿನಯದಲ್ಲಿ ಗತ್ತೇ ಇಲ್ಲದಾಗಿದೆ. ಹೋಗ್ಲೀ... ಕಂಠ.... ಕೋಗಿಲೆ ದನಿ ಕಾಗೆ ದನಿಯಾಗ್ಬಿಟ್ಟಿದೆ. ಪಾಪ ನಿಶ್ಯಕ್ತಿ.... ಕಾಲ ಆಗ್ತಾ ಆಗ್ತಾ ಎಲ್ಲರಿಗೂ ಹಾಗೆ ವರ್ಷಕ್ಕೊಂದೊಂದು ಮಗುವಾಗ್ತಿದ್ರೆ... ಕಂಠ ಹೇಗೆ... ಚೆನ್ನಾಗಿ ಆಗುತ್ತೆ.....?....)

ರಾಧ : ಹೌದು.... ಹೌದು.... ಜನಗಳ ಮಾತು ನಿಜ...

ರವಿ : ಏನೇ ಜನಗಳ ಮಾತು ನಿಜ....?

ರಾಧ : ನಾನು ಇನ್ನು ನಾಟಕದಲ್ಲಿ ಮಾಡೋಲ್ಲರೀ.

ರವಿ : ಏಕೆ ಯೋಚ್ನೆ ಮಾಡ್ತೀಯಾ? ಸ್ವಲ್ಪ ಟಾನಿಕ್ ತೆಗೆದುಕೊಂಡ್ರೆ ಎಲ್ಲ ಸುಧಾರಿಸುತ್ತೆ ಸುಮ್ನಿರು. ಮೊದಲಿಗಿಂತ ಆಮೇಲೆ ಅಭಿನಯ ಚೆನ್ನಾಗಿ ಮಾಡ್ತೀಯಾ?

ರಾಧ : ಜನಗಳ ಮಾತು ಕೇಳಿದ್ರೋ ಇಲ್ವೋ.... ಇನ್ನೊಂದು ಸಾರಿಗೆ ಕಲ್ಲೇಟು ಬೀಳುತ್ತೆ ನನ್ನನ್ನು ಮುಂದುವರಿಸಿದ್ರೆ.

ರವಿ : ಏನೂ ಕನವರಿಸಬೇಡ ಸುಮ್ನಿರು. ಎಲ್ಲಾ ಸರಿ ಹೋಗುತ್ತೆ.

ರಾಧ : ಏನು ಸರಿಹೋಗುತ್ತೋ ಏನೋ ನನಗೂ ತಿಳೀದು.

* * *

ರಾಧ : ಬನ್ನಿ ರಾಮಣ್ಣನವ್ರೇ.....

ರವಿ : ಏಕೋ ಬರ್ತಾ ಬರ್ತಾ ತುಂಬಾ ಅಪರೂಪವಾಗ್ಬಿಟ್ರಿ?

ರಾಮಣ್ಣ : ಏನೋ ನಿಮ್ಮ ನೋಡಬೇಕು ಅನಿಸ್ತು ಬಂದೆ.

ರವಿ : ನಮ್ಮ ಕಂಪನಿ ನಾಟಕವಲ್ಲ, ನಮ್ಮ ನಾಟಕ ಅಲ್ವೇ?

ರಾಮಣ್ಣ : ಇದೇನಯ್ಯಾ ಹಾಗಂದ್ರೆ? ನಮ್ಮ ರಾಧಮ್ಮನ ಪಾತ್ರ ನೋಡಬೇಕೂ ಅಂತ ಬಂದೆ.

ರವಿ : ಆಕೆ ಇನ್ನು ಮಾಡೋದೇ ಇಲ್ಲ ಅಂತ ಹಠ ಮಾಡವ್ಳೇ.

ರಾಮಣ್ಣ : ಏಕೆ?

ರಾಧ : ಏಕೆ ಅಂದ್ರೆ ಶಕ್ತಿ ಇದ್ರಲ್ವೇ? ರಾಮಣ್ಣನವರೇ ಐದನೇ ಹೆರಿಗೆ ಆಯ್ತು. ದಿನ ದಿನಕ್ಕೂ ಶಕ್ತಿ ಹೆಚ್ಚುತ್ತೇ ಮನುಷ್ಯನಿಗೆ. ಮೊದಲು ಮಾಡ್ತಿದ್ದ ಅಭಿನಯಕ್ಕೆ ಈಗ ಶಕ್ತಿ ಎಲ್ಲಿ ಬರಬೇಕು?

ರಾಮಣ್ಣ : ಅದೂ ಒಪ್ಪಿಕೊಳ್ಳಬೇಕಾದ್ದೇ ಅನ್ನು.

ರಾಧ : ಕೈ ತೋರಿ ಅವಲಕ್ಷಣ ಅನ್ನಿಸ್ಕೊಳ್ಳೋದ್ಕಿಂತ, ಹಾಗೇ ಇರೋದು ಉತ್ತಮ ಅಂತ ಅಂದ್ರೆ ಕೇಳೋದೆ ಇಲ್ಲ ಇವ್ರು.

ರಾಮಣ್ಣ : ಯಾಕೆ ಬೇರೆ ಒಬ್ಬ ಹೊಸ ಕಲಾವಿದೆಗೆ ಛಾನ್ಸು ಕೊಟ್ಟು, ಈಕೆ ಪಾತ್ರ ಮಾಡೋದ ನಿಲ್ಸಿ, ಸ್ವಲ್ಪ ಆಕೆ ಆರೋಗ್ಯದ ಕಡೆ ಗಮನ ವಹಿಸಯ್ಯ.

ರವಿ : ಹಾಗೇ ಆಗ್ಲಿ ರಾಮಣ್ಣನವ್ರೇ. ನಾನು ಇತ್ತೀಚೆಗೆ ಬೇಡ ಅಂತ್ಲೇ ಅಂತೀನಿ. ಯಾಕೆ ಅಂದ್ರೆ ನಾಟಕ ಮಾಡಿದ್ಮೇಲೆ ಏದುಸಿರುಯ್ಯೋದು ನೋಡಿ ನನ್ಗೇ ಭಯವಾಗಿ, ಬೆಡ್ವೇ ಅಂದ್ರು ಕೇಳೋಲ್ಲ. ಸರಿ ಹೋಗುತ್ತೆ ಸುಮ್ನಿರಿ ಅಂತಾಳೆ.

ರಾಮಣ್ಣ : ಕಲೆಯ ಮೇಲಿನ ಅಭಿಮಾನದ ಮಾತು ಅಷ್ಟೇ. ನೀನು ಇನ್ನು ನಾಟ್ಕಾನ ಬಿಟ್ಬಿಡಮ್ಮ

ರಾಧ : ಆಗ್ಲಿ ರಾಮಣ್ಣನವ್ರೇ.

ರಾಮಣ್ಣ : ನಾನು ನಿಮ್ಮ ತಂದೇನ ಕಂಡಿದ್ದೆ. ಅವ್ರೂ ಇದೇ ಮಾತ್ನ ಹೇಳಿದ್ರು. ರಾಧಳನ್ನು ಆರೋಗ್ಯ ಚೆನ್ನಾಗಿ ಕಾಪಾಡ್ಕೊ ಅಂತ ಹೇಳು ಅಂತ ಹೇಳಿದ್ರು.

ರವಿ : ಆಗ್ಲಿ ರಾಮಣ್ಣನವರ್ರೇ, ಇನ್ನು ಮೇಲೆ ಮಾಡಿಸೋಲ್ಲ.

ರಾಮಣ್ಣ : ಒಳ್ಳೇದು ನಾನು ಬರ್ತೀನಿ.

ರವಿ : ಕಾಫಿ ಬಂತು ಸ್ವಲ್ಪ ತೆಗೆದುಕೊಂಡು ಹೋಗಬೇಕು.

* * *

ರಾಧ : ಇದ್ಯಾಕೆ ಸುಮ್ನೇ ಕುಳಿತುಬಿಟ್ರಿ?

ರವಿ : ಕೂತ್ಕೊಳ್ಳೀ ಕುಣೀ ಅಂತೀಯಾ ರಾಧಾ?

ರಾಧ : ಅದು ಇದ್ದೇ ಇದೆಯಲ್ಲಾ ರಂಗಭೂಮಿಯ ಮೇಲೆ.

ರವಿ : ಏನೇ ರಾಧಾ ನಮ್ಮ ಮದ್ವೆ ಆಗಿ ಹತ್ತು ವರ್ಷ ಆಯ್ತು.

ರಾಧಾ : ಜತೆಗೆ ಎಂಟು ಮಕ್ಕಳೂ ಆದ್ವು ಅನ್ನಿ.

ರವಿ : ಹೇಗೋ ದೇವ್ರು ನಮ್ಮ ಸಂಸಾರವನ್ನೂ ಸರಿಯಾಗಿ ತೂಗಿಸ್ತಾ ಇದ್ದಾನೆ.

ರಾಧ : ಸದ್ಯ ಹೀಗೆ ನಡೆಸ್ಕೊಟ್ರೆ ಸಾಕು. ಮೊದಲು ಹೆಣ್ಣು ಮಕ್ಕಳ ಮದ್ವೆ ಮಾಡ್ಬಿಟ್ರೆ ಸಾಕು.

ರವಿ : ಯಾಕೆ ಈಗ ಮಾಡಿರೋ ಆಸ್ತಿ ಸಾಲ್ದೇ ಹೇಳು ಎರಡು ಬಂಗ್ಲೆಗಳು, ಎರಡು ಕಾರುಗಳು, ಚಿನ್ನ, ಹಣಕಾಸು ಎಲ್ಲಾ.....

ರಾಧ : ಮಕ್ಕಳು ಒಳ್ಳೆಯದಾಗಿ ನಡೆದುಕೊಂಡ್ರೆ ಸರಿ. ಈಗ ಆಡೋ ಆಟ ನೋಡಿದ್ರೆ ಮುಂದೆ ಹೇಗಾಗ್ತಾರೋ.

ರವಿ : ಮಕ್ಕಳೆಲ್ಲಾ ಹಾಗೆ ಕಣೆ. ನಾನೇ ಎಷ್ಟು ತುಂಟಾಟ ಮಾಡ್ತಿದ್ದೆ ಗೊತ್ತಾ?

ರಾಧ : ಮಕ್ಕಳನ್ನ ಒಂದು ಹದ್ದು ಬಸ್ತಿನಲ್ಲಿ ಇಡ್ದೇ ಹೋದ್ರೆ ಬಲು ಕಷ್ಟವಾಗುತ್ತೆ. ನೀವೋ ಈಗ ಪ್ರೀತಿಯಾಗಿ ಸಾಕಿಬಿಟ್ಟಿದ್ದೀರಿ, ಕಂಪನಿ ಅಲಕೊಂಡಿವೆ. ಪ್ರೀತಿ ಇದ್ದರೂ ಅದನ್ನು ತೋರಿಸ್ಬಾರ್ದು ಸ್ವಲ್ಪ ಬಿಗಿಯಾಗಿರಬೇಕು.

ರವಿ : ಸಾಕು ನಡ್ಯೆ ಊಟ ಮಾಡೋಣ.

* * *

ರವಿ : ಏನಯ್ಯಾ ರಮೇಶ ಸಮಾಚಾರ?

ರಮೇಶ್ : ಈಗ ಮೈಸೂರೀದೊಂದು 'ವಿಜಯಾ ಕಂಪನಿ' ಬಂದಿದೆಯಲ್ಲಾ, ಅಲ್ಲಿ ಒಳ್ಳೊಳ್ಳೆ ಹೊಸ ಸಾಮಾಜಿಕ ನಾಟಕ ಮಾಡ್ತಾ ಇದ್ದಾರೆ. ನಮ್ಮ 'ಸತಿ ಸಾವಿತ್ರೀನೂ' ಹೌಸ್ ಫುಲ್ ಆಗ್ತಿತ್ತು, ಆದ್ರೆ.... ರಾತ್ರಿ.....

ರವಿ : ಏನು ರಮೇಶ್?

ರಮೇಶ್ : ಬೆಂಕಿ ಹಾಕ್ಬಿಟ್ರಪ್ಪಾ.....

ರವಿ : ಹ್ಞಾಂ......

ರಾಧ : ಆ್ಞಂ.... ಏನಾಯ್ತು ಅಂದೆ?

ರವಿ : ಕಂಪನಿ ಸುಟ್ಟುಹೋಯ್ತು.....

ರಾಧ : ರವಿ.... ರವೀ....

ಒಬ್ಬ : ಪೋಸ್ಟ್ ......

ರಾಧ : ಏನು ರಮೇಶ್?

ರಮೇಶ್ : ಸಿನಿಮಾದಲ್ಲಿ ನಟಿಸಲು ಕರೆಯಮ್ಮ ಸತ್ಯ ಹರಿಶ್ಚಂದ್ರಕ್ಕೆ

ರಾಧ : ಅಯ್ಯೋ.... ರವಿ.... ಇನ್ನೆಲ್ಲಿಯ ಪಾತ್ರ? ಪ್ರತಿಭಾವಂತ ಕಲಾವಿದ ಹೋದಮೇಲೆ ಅದೃಷ್ಟ! ಅಯ್ಯೋ ವಿಧಿಯೇ ಈ ಮಕ್ಕಳನ್ನು ಹೇಗೆ ಕಾಪಾಡ್ಲಿ? ಹೇಗೆ ದಾರಿಗೆ ತರಲಿ? ನಮ್ಮನ್ನೆಲ್ಲಾ ನಡುನೀರಲ್ಲಿ ಕೈ ಬಿಟ್ಟು ಹೊರಟರು.

* * *

ರಾಗಿಣಿ : ಅಣ್ಣಾ....

ರಾಗಿಣಿ : ಅಮ್ಮಾ ನಾನು ಡ್ಯಾನ್ಸಿಗೆ ಸೇರ್ಬಿಡ್ತೇನಮ್ಮ

ರಾಧ : ಯಾಕಮ್ಮಾ ಅವೆಲ್ಲಾ. ನಾನು ಸುಖಪಟ್ಟಿದ್ದೇ ಸಾಕು.

ರಾಗಿಣಿ : ನಾಟಕಕ್ಕೋ ಸಿನಿಮಾಗೋ ಸೇರಿ ಸಂಪಾದ್ನೆ ಮಾಡ್ತೇನಮ್ಮ.

ರಾಧ : ಅವೆಲ್ಲಾ ಹುಚ್ಚು ಮಗು. ನನ್ನ ತಂದೆಯವರು ಹೇಳ್ತಿದ್ರು, ಕಲೆ ಬೇಕು ಅದನ್ನೇ ನಂಬಿ ಜೀವಿಸ್ತೀನಿ ಅನ್ನೋದು ಕಷ್ಟ ಅಂತ ಆ ಭೂಮಿಯಲ್ಲೇ ಕುಣಿದ ನನ್ನ ಬಾಳಿಗಿಂತ ಒಂದು ಕಹಿಯಾದ ಪ್ರಸಂಗ ಬೇಕೇ? ಅದನ್ನ ಜೀವನದ ಒಂದು ಭಾಗ ಸಂತೋಷಪಡಲಿಕ್ಕೆ ಉಪಯೋಗಿಸಬೇಕು. ಹೇಗೋ ಒಂದು ಎಸ್.ಎಸ್.ಎಲ್.ಸಿ. ಮಾಡ್ಕೋ ಆಮೇಲೆ ನೋಡೋಣ.

ರಾಗಿಣಿ : ಸರಿಯಮ್ಮಾ.....

ರಾಧಾ : ರಾಗಿಣಿ, ನನ್ನರಗಿಣಿ ನಿನ್ನ ಆಸೆ ಪೂರೈಸೋಕೆ ನನಗೆ ಆ ದೇವರು ಶಕ್ತಿ ಕೊಡಲಿಲ್ಲ, ಎಂದು ಕೊಡ್ತಾನೋ ಅಂದು ನಿನ್ನ ಆಸೆ ಪೂರೈಸುತ್ತೇನೆ ಜನ್ಮ ಜನ್ಮಕ್ಕೂ ಈ ಕಷ್ಟ ಬೇಡಮ್ಮ.

ರಮೇಶ್ : ಅಮ್ಮಾ ಈಗ ನನ್ನ ಕಥೆ ಏನ್ಮಾಡ್ದೆ?

ರಾಧ : ಏನು ಮಾಡಬೇಕು ಅಂತೀಯಾ ರಮೇಶ್, ನಿಮ್ಮ ತಂದೆ ಕಳ್ಕೊಂಡ್ರೆ ಚಿಂತೆ ಒಂದು ಕಡೆಯಾದ್ರೆ, ನಿಮ್ಮ ಆಸೆಗಳನ್ನ ಪೂರೈಸಲಾರದೇ ಇರೋದು ಮತ್ತೊಂದು.

ರಮೇಶ್ : ಇನ್ನೇನು ಮಾಡು ಅಂತೀಯಮ್ಮಾ?

ರಾಧ : ಸಮಾಜಕ್ಕೆ ಹೊರೆಯಾಗಿ ನಿಮ್ಮನ್ನು ಹೆತ್ತದ್ದು ನನ್ನ ತಪ್ಪು. ನಿಮ್ಮ ತಂದೆ ತಪ್ಪು. ವಿಧಿಯಿಲ್ಲದುದಕ್ಕೆ ಏನ್ಮಾಡ್ಲಿ ಹೇಳು.

ರಮೇಶ್ : ದೇವ್ರು ದೇಹ ಕೊಟ್ಟಿದ್ದಾನೆ ಅಂತ ವಿಜಯ ಮಿಲ್ಟ್ರಿಗೆ ಸೇರ್ಕೊಳ್ತೀನಿ ಅಂತ ಹೊರಟ. ಹಾಗೇ ನಾನೂ ಮನೆ ಬಿಟ್ಟು ಜೀವನೋಪಾಯ ನೋಡ್ಕೋತೀನಿ ಬಿಡು.

ರಾಧ : ನೀನು ಮನೆಗೆ ದೊಡ್ಡ ಮಗನಾಗಿ ನಮ್ಮನ್ನೆಲ್ಲಾ ಕಾಪಾಡ್ದೆ ಹೋದ್ರೆ ಹೇಗೆ? ನಮ್ಮ ಹೆಣ್ಣು ಮಕ್ಕಳ ಗತಿ ಏನು? ಸುರೇಶ ಇನ್ನೂ ಚಿಕ್ಕವ. ಜತೆಗೆ ನಿನ್ನ ತಂಗಿಯರ ವಿವಾಹದ ಪ್ರಶ್ನೆ ಬೇರೆ ಭೂತಾಕಾರವಾಗಿ ನಿಂತಿದೆ.

ರಮೇಶ : ಸುರೇಶ ಆಗ್ಲೇ ಯಾವುದೋ ಅಂಗಡಿಗೆ ಸೇರಿಕೊಂಡಿದ್ದಾನಂತೆ.

ರಾಧ : ನೀನು ಕೈಬಿಟ್ರೆ ನಮ್ಮ ಗತಿ ಹೇಗೆ?

ರಮೇಶ್ : ಈ ಕಷ್ಟಕ್ಕೆ ನಮ್ಮನ್ನು ಭಾಗಿಯಾಗಬೇಕು ಅಂತೀಯಮ್ಮ ಮನೆಯಲ್ಲಿ ಏನಿದೆ ಅಂತ ಇರ್ಲಿ.

ರಾಧ : ಏನಾದ್ರೂ ಇದ್ರೆ ನಿಮಗೊಂದು ದಾರಿ ಮಾಡ್ದೇ ಇರ್ತಾ ಇದ್ವಾ. ಹೇಳು ಪ್ರತಿಯೊಬ್ಬ ತಂದೆ ತಾಯಿಗಳು ಮಕ್ಕಳನ್ನು ಸುಖಪಡಿಸ್ಬೇಕು ಅಂತ್ಲೇ ಇರ್ತಾರೆ. ವಯಸ್ಸಿನ ಕಾಲದಲ್ಲಿ ಮದ್ವೆ ಮಾಡ್ಬೇಕು ಅಂತಿರ್ತಾರೆ, ಆದ್ರೆ ಮಧ್ಯ ಕಾಲದಲ್ಲಿ ಹೀಗಾಗುತ್ತೆ ಅಂತ ಯಾರು ಕಂಡಿದ್ರು?

ರಮೇಶ್ : ಅದ್ಕೆ ನಮ್ಮ ಬಾಳೋ ಚರ್ಯವನ್ನು ನಾವು ನೋಡ್ತೀವಿ.

ರಾಧ : ಅಷ್ಟೊಂದು ಕಠಿಣ ಹೃದಯ ಹೊಂದಿದ್ರೆ ಏನೂ ಮಾಡಲಾರೆ, ನಾನು, ನೀನೇ ಸುಖವಾಗಿರು ಹೋಗು.

ರಾಗಿಣಿ : ಅಣ್ಣಾ ಹೋಗಬೇಡಣ್ಣಾ

ರಾಧ : ಹೋಗ್ಲಿ ಬಿಡಮ್ಮ ಜೀವನದ ಕಹಿ ಪಾಲನ್ನೂ ನಾವೇ ಹಂಚಿಕೊಳ್ಳೋಣ.

ರಾಗಿಣಿ : ಅಣ್ಣಾ....

* * *

ರಾಗಿಣಿ : ಅಮ್ಮಾ.... ಅಮ್ಮಾ....

ರಾಧ : ಏನಮ್ಮಾ?

ರಾಗಿಣಿ : ಅಮ್ಮಾ ಜಗದೀಶಣ್ಣ ಕುಡಿದು ಜೂಜಿನಲ್ಲಿ ಸೋತು, ಊರು ಬಿಟ್ಟು ಹೊರಟುಹೋದನಂತೆ. ಆತನ ಫ್ರೆಂಡ್ ರಾಜ ಸಿಕ್ಕಿದ್ದ ಎಲ್ಲಾ ಹೇಳಿದ.

ರಾಧ : ಹಣ!..... ರಂಗಣ್ಣನವರು ಕೊಟ್ಟ ಹಣ ಪೆಟ್ಟಿಲಿದ್ಯಾ ನೋಡು..... ಅದನ್ನೇನಾದ್ರೂ ಹೊತ್ಕೊಂಡು ಹೊರಟೋಗಿದ್ದಾನೋ.

ರಾಗಿಣಿ : ಇಲ್ಲಮ್ಮ ಖಾಲಿ ಪೆಟ್ಟಿ....

ರಾಧ : ಹೆಣ್ಣು ಮಗಳಿಗೇ ಅಂತ ಇಟ್ಟಿದ್ದ ಹಣವನ್ನೆಲ್ಲಾ ಲಪಟಾಯಿಸಿಬಿಟ್ನಾ.

ರಾಗಿಣಿ : ಇನ್ನೊಬ್ಬನ ವಿಚಾರ ಕೇಳಮ್ಮಾ, ಸುರೇಶ ಅಂಗಡೀಲಿ ಕದ್ದು ಜೈಲಿಗೆ ಹೋಗಿದ್ದಾನಂತೆ. ಇದು ನಮ್ಮ ಮನೆತನದ ಗೌರವಕ್ಕೇ ಕುಂದಲ್ವೇ

ರಾಧ : ಇನ್ನು ಆ ರತ್ನಯ್ಯ.... ಆತನ್ನ ನೋಡಲಿಕ್ಕಾಗುತ್ತೇನು? ನಾಟಕದ ಕಂಪೆನಿ ಸಾಹುಕಾರನ ಮಗನಾಗಿದ್ದವ್ನು ಈಗ ಗೇಟ್ ಕೀಪರ್ ಆಗಿದ್ದಾನೆ ಅಂದ್ರೆ ನನಗೆ ಬಹಳ ದುಃಖವಾಗುತ್ತೆ.

ರಮೇಶ್ : ಅಮ್ಮಾ

ರಾಧ : ಯಾರು ರಮೇಶ್ನೇ?

ರಮೇಶ್ : ಹೌದಮ್ಮ..... ಎಲ್ಲೂ ಕೆಲಸವೇ ಸಿಗಲಿಲ್ಲ ಬಂದುಬಿಟ್ಟೆ.

ರಾಧ : ಮತ್ತೆ ಹಾರಾಡ್ಬಿಟ್ಟು ಹೊರಟುಹೋದೆ.

ರಮೇಶ್ : ದಾರೀಲಿ ರಂಗಣ್ಣನವರು ಸಿಕ್ಕಿದ್ರು, ಐದು ಸಾವಿರ ಕೊಟ್ಟಿದ್ದೀನಿ ಮನೆಗೆ ದೊಡ್ಡ ಮಗನಾಗಿ ಒಳ್ಳೇ ದಾರಿಯಲ್ಲಿ ಹೋಗು ಅಂದ್ರಮ್ಮ

ರಾಧ : ದರ್ಬಾರು ಮಾಡೋಕೆ ಬಂದ್ಯಾ, ಆಗ್ಲೇ ಜಗದೀಶ ಕದ್ದು ಖರ್ಚು ಮಾಡಿಯಾಯ್ತು. ಇನ್ನು ಅದ್ರ ಮಾತು ಯಾಕೆ ಹೋಗು. ಊಟ ಮಾಡು ಹೋಗು. ಮಿಕ್ಕ ಮಾತು ಆಮೇಲೆ.

ರಾಗಿಣಿ : ಸುಮ್ನಿರಮ್ಮ ಯೋಚಿಸ್ಬೇಡ, ನಾನು ಯಾವುದಾದ್ರೂ ಕೆಲಸಕ್ಕೆ ಸೇರಿಕೊಂಡು ಕಷ್ಟಕ್ಕೆ ನೆರವಾಗ್ತೀನಿ, ಎಷ್ಟು ಓದಿದರೂ ಅಷ್ಟೆ.

ರಾಧ : ಅಯ್ಯೋ ಎಂಥ ಸ್ಥಿತಿ ಬಂತು? ನಿನ್ನನ್ನು ಓದಿಸ್ತೀನಿ ಅಂದ್ರೂ ಆಗೋದಿಲ್ವೇ... ಬಂಗ್ಲೆ ಮಾರ್ದೆ, ಕಾರು ಮಾರ್ದೆ, ಆದ್ರೆ ಈಗ ಏನೂ ಉಳಿದಿಲ್ಲ. ಇಂದು ಹತ್ತು ರೂಪಾಯಿನ ಬಾಡಿಗೆ ಮನೆಯಲ್ಲಿರುವಂತಾಯ್ತು. ಮಕ್ಕಳನ್ನು ಕಾಪಾಡ್ಲಿಕ್ಕೆ ಶಕ್ತಿ ಇಲ್ದೇ ಹೋದ್ರೂ ಇಷ್ಟು ಸಂತಾನ ಏಕೆ ಕೊಟ್ನೊ?

ರಾಗಿಣಿ : ಹಾಗೆಲ್ಲಾ ಅನ್ಬೇಡಮ್ಮಾ

ರಾಧ : ಕಾಲದಲ್ಲಿ ಎಚ್ಚರಿಕೆ ಇದ್ದಿದ್ರೆ ಹೀಗಾಗ್ತಿರ್ಲಿಲ್ಲ. ನಿಮಗೋಸ್ಕರ ನಾನು ಬದುಕಬೇಕಾಗಿದೆ, ನಿಮಗೊಂದು ದಾರಿ ಮಾಡ್ಲಿಕ್ಕೆ ಗಂಡು ಮಕ್ಕಳೂ ಹದವಾಗಿ ಹುಟ್ಲಿಲ್ಲ, ಹಂದಿಯಾಗಿ ಹತ್ತು ಹೆರೋದ್ರ ಬದ್ಲು ನಂದಿಯಾಗಿ ಒಂದು ಹೆತ್ತಿದ್ರೂ ಚೆನ್ನಾಗಿರ್ತಿತ್ತು.

ರಾಗಿಣಿ : ಈಗದೆಲ್ಲಾ ಯಾಕೆ ಬಿಡಮ್ಮ

ರಾಧ : ತಂದೆ ತಾಯಿಗಳು ಮಕ್ಕಳನ್ನು ಹೆತ್ತುಬಿಟ್ರೆ ಆಯ್ತಮ್ಮ ಅವರ ಶ್ರೇಯಸ್ಸನ್ನು ಕೋರಬೇಕಾದ್ದು ನಮ್ಮ ಧರ್ಮವಲ್ವೇ?

ರಾಗಿಣಿ : ರಾಮಣ್ಣನವ್ರು ಸಿಕ್ಕಿದ್ರೂ, ಅವರ ಆಫೀಸಿನಲ್ಲಿ ಒಂದು ಗುಮಾಸ್ತೆ ಕೆಲಸ ಇದೆ ಅಂದ್ರು, ಕೊಡಿಸ್ತೀನಿ ಅಂದಿದ್ದಾರೆ. ಸುಮ್ನಿರಮ್ಮ ಹೇಗೋ ಆಗುತ್ತೆ.

ರಾಧ : ನಿನ್ನ ತಂದೆ ಫ್ರೆಂಡ್ ಅಲ್ವೇ?

ರಾಗಿಣಿ : ಹೌದು.

ರಾಧ : ಸದ್ಯ ಅವ್ರು ನಮ್ಮ ಭಾಗದ ದೇವರು ಅಂತ ಕಾಣುತ್ತೆ. ಈ ಹೊತ್ತು ಶ್ರಾವಣ ಶುಕ್ರವಾರ. ರಾಹು ಕಾಲ ಕಳೆದ ಮೇಲೆ ಹೋಗು ಕೆಲಸ ಸಿಕ್ಕಿದ್ರೂ ಸಿಕ್ಕಬಹುದು.

ರಾಗಿಣಿ : ಎಲ್ಲಾ ನಿನ್ನ ಆಶೀರ್ವಾದವಮ್ಮ.

ರಾಧ : ಎಲ್ಲಕ್ಕೂ ದೇವ್ರಿದ್ದಾನೆ.... ನಡಿಯಮ್ಮ ನಡೆಯೋ ರಮೇಶ ಊಟಕ್ಕೆ ಇನ್ನೆಷ್ಟು ಚಿಂತಿಸ್ದೂ ಅಷ್ಟೆ. ದೇವರು ಮಾಡಿದ ಹಾಗೆ ಆಗುತ್ತೆ

* * *

ರಾಜಣ್ಣ : ನಮಸ್ಕಾರ ರಾಧಾದೇವಿಯವರಿಗೆ.

ರಾಧಾ : ಬನ್ನಿ ಕುಳಿತುಕೊಳ್ಳಿ. (ಕೈಮುಗ್ತ್ರ)

ರಾಜಣ್ಣ : ನಾನು ರಾಜಣ್ಣ ಅಂತ. ಈಗ ನಾನು ವಿನಾಯಕ ನಾಟಕ ಕಂಪನಿ ನಡೆಸ್ತಾ ಇದ್ದೀನಿ. ತಮ್ಮಂಥ ಹಿರಿಯ ಕಲಾವಿದೆಯರ ಹತ್ತಿರ ಸ್ವಲ್ಪ ಮಾತಾಡಬೇಕು ಅಂತ ಬಂದೆ.

ರಾಧಾ : ಏನಾ.....ಗ.... ಬೇಕಾಗಿತ್ತು?

ರಾಜಣ್ಣ : ನಿಮ್ಮ ಖ್ಯಾತಿ ಹಿಂದಿನಿಂದಲೂ ಇದೆ ಎಂಬುದನ್ನು ನಾನೂ ಬಲ್ಲೆ. ಸ್ವತಃ ನಾನು ನಿಮ್ಮ ಕಂಪನಿ ನಾಟಕ ನೋಡಿ ಆನಂದಪಟ್ಟಿದ್ದೇನೆ.

ರಾಧಾ : ಇದೆಲ್ಲಾ ಹಿಂದಿನ ಮಾತು ಬಿಡಿ.

ರಾಜಣ್ಣ : ತಾವು ಜೀವನದಲ್ಲೂ ಬಹಳ ನಿರಾಶರಾಗಿದ್ದೀರಿ, ನಾಟಕದ ಕಂಪನಿಯಲ್ಲಿ ಸಿಹಿ-ಕಹಿಯನ್ನು ಅನುಭವಿಸಿದ್ದೀರಿ. ಎರಡು ದಶಕಗಳಿಂದಲೂ ನನಗೂ ನಾಟಕ ಅಂದ್ರೆ ಬಹಳ ಹುಚ್ಚು. ಅದಕ್ಕೆ ಒಂದು ಕಂಪನಿ ತೆರೆದೆ.

ರಾಧಾ : ಒಂದಾನೊಂದು ದಿನ ನಮ್ಮವರೂ ಅದೇ ಆಸೆ ಇಟ್ಟು ಮಾಡಿದ್ದು, ಜನಗಳ ಅಭಿರುಚಿಗೆ ತಕ್ಕ ನಾಟಕಗಳನ್ನು ಪ್ರದರ್ಶಿಸಿದರು.

ರಾಜಣ್ಣ : ಪೌರಾಣಿಕ, ಐತಿಹಾಸಿಕ, ಜಾನಪದ, ಸಾಮಾಜಿಕ ವಸ್ತುಗಳನ್ನೊಳಗೊಂಡ ನಾಟಕಗಳನ್ನು ಆಯ್ಕೆ ಮಾಡಿರುವೆ.

ರಾಧಾ : ಬಹಳ ಒಳ್ಳೆಯದು.

ರಾಜಣ್ಣ : ನಮ್ಮ ಮೊದಲಿನ ನಾಟಕದಲ್ಲಿ ಒಂದು ಸಣ್ಣ ಪಾತ್ರ ಮಾಡಬೇಕು ನೀವು ಅಂತ ನನ್ನ ಆಸೆ.

ರಾಧಾ : ನಾನು ನಾಟಕ ಮಾಡಿ ಎಷ್ಟೋ ವರ್ಷಗಳೇ ಆದ್ವು. ಕಣ್ಣಿಗೆ ಕನ್ನಡ ಬೇರೆ ಬಂದಿದೆ. ಜೀವನದಲ್ಲಿ ತ್ರಾಣನೂ ಸಾಲದು. ಆದರೆ ತಾವಾಗಿಯೇ

ಕೇಳಿದಾಗ ನಾನು ಮಾಡೋದಿಲ್ಲ ಅಂತ ಹೇಳೋದಿಲ್ಲ, ಆಗಲಿ ಸಂತೋಷವಾಗಿ ಮಾಡ್ತಿನಿ.

ರಾಜಣ್ಣ : ಹಾಗಾದ್ರೆ ನಾಳೆ ರಿಹರ್ಸಲ್‌ಗೆ ಬರ್ತಿರಾ? ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ನಾವು ಸಿದ್ಧರಾಗ್ತೀವಿ.

ರಾಧ : ಆಗಲಿ ಕಲಾವಿದರು ಕಲಾವಿದರ ಮನೆಯಲ್ಲಿ ಸ್ವಲ್ಪ ಆತಿಥ್ಯ ಸ್ವೀಕರಿಸಬೇಕು.

* * *

(ನಾಟಕದ ಕಂಪನಿಯ ಗುಜು ಗುಜು ಶಬ್ದ)

ರಾಜ : ಓಹೋ ಬನ್ನಿ ರಾಧದೇವಿಯವ್ರೇ...ನಮಸ್ಕಾರ.

ರಾಧ : ನಮಸ್ಕಾರ.

ರಾಜ : ಇದು ಸ್ಕ್ರಿಪ್ಟ್ ..... ತೊಗೆದುಕೊಳ್ಳಿ ಒಂದು ಸಾರಿ ನೋಡಿಕೊಳ್ಳಿ.

ರಾಧ : ಆಗ್ಲಿ.....

ರಾಜ : ಎಲ್ಲಾ ಗಲಾಟೆ ನಿಲ್ಲಬೇಕು, ಒಂದು ಸಾರಿ ರಿಹರ್ಸಲ್ ನೋಡೋಣ್ವ?

ರಾಧ : ಆಗ್ಲಿ......

ರಾಜ : ನೀವು ಮೊದಲು ಪ್ರಾರಂಭ ಮಾಡಿ ರಾಧಾದೇವಿಯವರೇ.

ರಾಧ : ಅಕ್ಕ.... ತಂ....ಗಿಯರೇ ಇಂದಿನ ನಮ್ಮ ದೇಶ ಸಮ..... ಸ್ಯೆಯ.... ಮೊಟ್ಟೆಯಾಗಿದೆ. ಅದರಲ್ಲ ಇಂದು ಕಲಾವಿದರ ಸಮಸ್ಯೆಯೂ ಒಂದು, (ಗುಜ ಗುಜ ಶಬ್ದ) ಸ್ವಲ್ಪ ಕನ್ನಡಕ ಹಾಕಿಕೊಂಡು ಓದ್ತೀನಿ.

ರಾಜ : ನೀವು ಸ್ಕ್ರಿಪ್ಟ್ ಒಂದು ಸಾರಿ ನೋಡಿಕೊಂಡು ನಿಮ್ಮ ಮಾತಿನಲ್ಲೇ ಬೇಕಾದ್ರೆ ಹೇಳಿಬಿಡಿ.

ರಾಧ : ನನ್ನ ಕೈನಲ್ಲೇ ಬರೆದುಕೊಂಡ್ರೆ ಸ್ವಲ್ಪ ಉತ್ತಮ. ನಾಳೆ ಸರಿಯಾಗಿ ತಯಾರು ಮಾಡಿಕೊಂಡು ಬರ್ತೇನೆ.

ರಾಜಶೇಖರ್ : ಆಗ್ಲಿ ಅಮ್ಮ

ರಾಜ : ಏನಪ್ಪಾ ಅಂಥ ದೊಡ್ಡ ಕಲಾವಿದೆ ಅಂತಿದ್ರಿ, ಒಂದು ಲೈನ್ ಸರಿಯಾಗಿ....

ರಾಜಣ್ಣ : ಹಿರಿಯ ಕಲಾವಿದೆಯಯ್ಯ, ನಾನೇ ಆಕೆ ನಾಟಕ ನೋಡಿದ್ದೀನಿ. ಎಷ್ಟು ಜನ ಒನ್ಸ್ ಮೋರ್ ಕೊಡ್ತಿದ್ರು, ಎಷ್ಟು ಜನ ಚಪ್ಪಾಳೆ ಹೊಡೀತಿದ್ರು, ಸಿಳ್ಳೆ ಹಾಕ್ತಿದ್ರು. ಗೊತ್ತೇ?

ರಮಣಿ : ನಮಸ್ಕಾರ ತಾಯಿ.

ರಾಧ : ಏನೇ ರಮಣೀ ನನ್ನ ಗುರ್ತು ಸಿಕ್ತೇ?

ರಮಣಿ : ಇದೇನಮ್ಮ ಹೀಗಾಗ್ಬಿಟ್ಟಿದ್ದೀರಿ? ರಾಧಾದೇವಿಯವ್ರು ಅಂದ ಮೇಲೆ ನನಗೆ ಗೊತ್ತಾಯ್ತು. ಹೇಗಿದ್ದವ್ರು ಹೇಗಾಗ್ಬಿಟ್ಟಿದ್ದೀರಿ?

ರಾಧ : ದಿನದಿನಕ್ಕೆ ವಯಸ್ಸಾಗ್ತಾ ಚಿಕ್ಕವ್ಳೇ ಹೇಳು. ವಯಸ್ಸು ಕಾಲ ಇದ್ದಾಗ ಚೆನ್ನಾಗಿದ್ದೋ. ಈಗ ಹೇಗಿರೋಕ್ಕಾಗುತ್ತೆ? ನೀನು ಇನ್ನೂ ಹಿಂದಿನ ರಮಣಿಯಾಗಿಯೇ ಇದ್ದೀಯೇ? ಏನು ನಿನ್ನ ಮೈ ಕಟ್ಟು, ತುಂಬುಗೆನ್ನೇ? ನನಗೆ ಹೊಟ್ಟೆ ಉರಿಯುತ್ತಪ್ಪ ನಿನ್ನ ಅಂಗಸೌಷ್ಟವವನ್ನು ನೋಡಿದ್ರೆ.

ರಮಣಿ : ದೇಹ ಇಟ್ಕೊಳ್ಳೋ ಕೆಲ್ಸ ಮುಖ್ಯ ಕಲಾವಿದೆಗೆ. ಅದೇ ಇಲ್ದೇ ಹೋಗಿದ್ರೆ ನಾನು ಇಷ್ಟರ ತನಕ ನಾಟಕ ರಂಗದಲ್ಲಿರ್ತಿದ್ನೇ ಹೇಳಿ? ಇನ್ನೂ ನಾನು ಬೆಳಗಿನ ಹೊತ್ತು ಸ್ವಲ್ಪ ವ್ಯಾಯಮಾನೂ ಮಾಡ್ತೀನಿ. ಪುಷ್ಟಿಯಾದ ಆಹಾರನೂ ತೆಗೆದುಕೊಳ್ತಿದ್ದೀನಿ. ಮುಖ್ಯವಾಗಿ ಹೇಳಬೇಕು ಅಂದ್ರೆ ನನಗೆ ಎರಡೇ ಮಕ್ಕಳು.

ರಾಧ : ಎರಡೇನಾ?

ರಮಣಿ : ಆಗೋ ಹಾಗಿದ್ರೆ ಇನ್ನೂ ಹತ್ತು ಆಗಬಹುದಾಗಿತ್ತು. ಆದ್ರೆ ನಾನು ಇನ್ನೂ ಕಲಾವಿದೆಯಾಗಿರಬೇಕು ಅಂತ ದೇಹದ ಕಡೆಗೆ ಗಮನ ಕೊಟ್ಟು ಎರಡು ಮಕ್ಕಳಿಗೆ ನಿಲ್ಲಿಸಿ ಸಂಯಮ ಪರಿಪಾಲನೇ ಮಾಡ್ತಾ ಇದ್ದೀನಿ. ಇಲ್ದೇ ಹೋಗಿದ್ರೆ ನಾನು ನಿಮಗಿಂತ್ಲೂ ಕಡೆಯಾಗಿರ್ತಿದ್ದೆ.

ರಾಧ : ಅದು ನಿಜ ಅನ್ನು. ನಾನು ನಿನ್ನ ಹಾಗೆ ಇದ್ದಿದ್ರೆ ಚೆನ್ನಾಗಿರ್ತಿತ್ತು ಅನ್ನಿಸುತ್ತೆ. ನೀನು ಈ ವಯಸ್ಸಿನಲ್ಲಿ ಡ್ಯಾನ್ಸ್ ಮಾಡ್ತೀಯಾ ಅಂದ್ರೆ ಆಶ್ಚರ್ಯವಾಗ್ತಾ ಇದೆ ನನಗೆ. ಏನು ನಿನ್ನ ಅಂಗಸೌಷ್ಟವ? ಏನು ಅಭಿನಯ.... ಅಸಾಧ್ಯವಮ್ಮ.

ರಮಣಿ : ನಿಮ್ಮ ಕಂಪನಿ ಬಿಟ್ಟ ಮೇಲೆ ನನ್ನ ಮೈ ಆಕಾರ ಕೆಟ್ಟಿದ್ದಿದ್ರೆ ಯಾರು ಸೇರಿಸಿಕೊಳ್ತಾ ಇದ್ರು ಹೇಳಿ. ಹೇಗೋ ಈಗ ನನ್ನ ಜೀವನದಲ್ಲಿ ತೃಪ್ತಿ ಕಾಣ್ತಾ ಇದ್ದೀನಿ.

ರಾಧ : ಮಕ್ಕಳು ಏನು ಮಾಡ್ತಾ ಇದ್ದಾವೆ?

ರಮಣಿ : ನಾವು ಕಂಪನಿ ಜೀವನ ಮಾಡಿದ್ದೇ ಸಾಕು ಅಂತ ಚೆನ್ನಾಗಿ ಓದಿಸ್ತಾ ಇದ್ದೀನಿ. ಮಗ ಎಂ.ಎಸ್.ಸಿ ಮಗಳು ಪಿ.ಯು.ಸಿ ಓದ್ತಾ ಇದ್ದಾರೆ.

ರಾಧ : ಸಂತೋಷವಮ್ಮ! ಮನೆ ಕಡೆ ಒಂದು ದಿನ ಮಕ್ಕಳನ್ನು ಕರೆದುಕೊಂಡು ಬಾರಮ್ಮ.

ರಮಣಿ : ಆಗಲಿ ತಾಯಿ.

ರಾಜಶೇಖರ : ಒಳ್ಳೇ ರಾಧಾದೇವಿಯಾದ್ರು ಪಾಪ!

ರಾಜ : ಪಾಪ ಈಗ ಏನು ಮಾಡ್ಲಿಕ್ಕಾಗುತ್ತೆ ಸದ್ಯ ಇಷ್ಟರ ಮಟ್ಟಿಗೆ ಬಂದು ಮಾಡ್ತೀನಿ ಅಂತ ಹುಮ್ಮಸ್ಸಿನಿಂದ ಬಂದ್ರಲ್ಲ. ಮಿಕ್ಕ ಯಾರಾದ್ರೂ ಆಗಿದ್ರೇ ಹುಚ್ಚೇ

ಆಗ್ಬಿಟ್ಟಿದ್ರೋ ಏನೋ? ಪಾಪ ಗಂಡ ತೀರಿಹೋಗಿ ಬಿಟ್ಟ. ಮಕ್ಕಳಿಂದ ಜೀವನದಲ್ಲಿ ಅತಿ ನೊಂದುಕೊಂಡು ಬಿಟ್ಟಿದ್ದಾರೆ. ಹಿಂದಿನ ದಿನಗಳೇನು? ಅವರ ಕೀರ್ತಿ ಏನಿತ್ತು? ಅದಕ್ಕೆ ಅವರಿಗೆ ನಾನು ಸನ್ಮಾನವನ್ನೂ ಮಾಡಬೇಕು ಅಂತಿದ್ದೀನಿ.

ರಾಜಶೇಖರ : ಹೌದು.... ಇದನ್ನು ಎಲ್ಲರೂ ಒಪ್ಪಬೇಕಾದ್ದೆ.

ರವಿಶಂಕರ್ : ಹೌದು....ಅವರಿಗೆ ಗೌರವಿಸಬೇಕು. ಅವರ ಜೀವನದ ಕೊನೆಯ ದಿನಗಳಲ್ಲಿ ಅಸಹಾಯಕರಾದಾಗ ಸಹಾಯ ನೀಡಲೇಬೇಕಾದ್ದು ಮಾನವ ಧರ್ಮ.

ರಾಜ : ಆ ದೃಷ್ಟಿಯಿಂದಲೇ ನಾನು ಅವರನ್ನು ಇದರಲ್ಲೊಂದು ಪುಟ್ಟ ಪಾತ್ರ ವಹಿಸಿ ಅಂತ ಹೇಳಿದ್ದು. ಪಾಪ ಎಂಟು ಮಕ್ಕಳಲ್ಲಿ ಐದು ಹೆಣ್ಣು, ಮೂರು ಗಂಡು ಮಕ್ಕಳು. ಎಲ್ಲರೂ ಒಂದೊಂದು ದಾರಿಯಾಗಿ ಹೊರಟುಬಿಟ್ರು. ಇಬ್ಬರು ಹೆಣ್ಣು ಮಕ್ಕಳಿಗೆ ಮದ್ವೆ ಮಾಡಿದ್ದಾರೆ. ಇನ್ನೂ ಮದುವೆಗೆ ಹಾಲಿ ಎರಡು ಹೆಣ್ಣು ಮಕ್ಕಳು ಇವೆ. ಅವರಿಗಾದ್ರೂ ಸಹಾಯವಾಗಲಿ ಅಂತ ಒಬ್ಬ ಕಲಾವಿದೆ ನಿವೃತ್ತಳಾದ ಮೇಲಾದ್ರೂ ನೆಮ್ಮದಿಯಿಂದ ಬಾಳಲಿ ಅಂತ ಈ ಸನ್ಮಾನ ಸಮಾರಂಭ ಏರ್ಪಡಿಸಿಕೊಂಡಿದ್ದೇನೆ.

* * *

ರಾಜಣ್ಣ : ಇಂದಿನ ದಿನ ಹಿರಿಯ ಕಲಾವಿದ ರಾಧಾದೇವಿಯವರಿಗೆ ಮಹಾಜನಗಳ ಪರವಾಗಿ ನಮ್ಮ ವಿನಾಯಕ ಮಂಡಳಿಯ ಪರವಾಗಿ ಈ ಐದು ಸಾವಿರ ರೂಪಾಯಿಗಳ ಗೌರವ ಧನವನ್ನು ವಿಶ್ವಾಸ ಪೂರ್ವಕವಾಗಿ ಅರ್ಪಿಸುತ್ತೇನೆ.

ರಾಧ : ಬಂಧುಗಳೇ, ನಮಸ್ಕಾರ. ಬಣ್ಣದ ಬದುಕಿನಲ್ಲಿ ಸಿಲುಕಿ ಕಲೆಗಾಗಿ ಶ್ರಮಿಸಿ ಆಪತ್ಕಾಲದಲ್ಲಿ ಹಾಗೂ ವಿಶ್ರಾಂತಿಯಲ್ಲಿರುವ ಅಶಕ್ತ ಕಲಾವಿದರಿಗೆ ಇಂಥ ಸಹಾಯ ಅವಶ್ಯ ಎಂಬುದನ್ನು ತಿಳಿದು ಸನ್ಮಾನಿಸುತ್ತಿರುವುದು ಸ್ತುತ್ಯರ್ಹ. ಈ ಸಂದರ್ಭದಲ್ಲಿ ಮಾತಾಡಲಿಕ್ಕೆ ಪದಗಳೇ ಸಿಗುತ್ತಾ ಇಲ್ಲ. ರಂಗಭೂಮಿಯಲ್ಲಿ ಸಂಪಾದ್ನೆ ಮಾಡಿ ಇಟ್ಕೊಂಡು ಜೀವಿಸಲು ಸಾಧ್ಯವಿಲ್ಲ ಎಂಬುದಕ್ಕೆ ನನ್ನ ಜೀವನವೇ ಒಂದು ಉದಾಹರಣೆಯಾಗಿದೆ. ಈ ರೀತಿಯ ಗೌರವವನ್ನು ಕಷ್ಟದಲ್ಲಿರುವ ಕಲಾವಿದರಿಗೆ ನೀಡುವುದು ಮಹಾಪುಣ್ಯದ ಕೆಲಸ. ನಿಮ್ಮಗಳೆಲ್ಲರ ಋಣವನ್ನು ಹೇಗೆ ತೀರಿಸಬೇಕೋ ತಿಳೀತಾ ಇಲ್ಲ. ಸರ್ವರಿಗೂ ಮತ್ತೊಮ್ಮೆ ವಂದಿಸಿ ನನ್ನ ಈ ಎರಡು ಮಾತುಗಳನ್ನು ಮುಗಿಸುತ್ತೇನೆ.

(ಕರತಾಡನ)

* * *

(ಕಂಪನಿಯಿಂದ ಬರುತ್ತಾ)

ರಮಣಿ : (ಧ್ವನಿ) ದೇಹ ಇಟ್ಕೊಳ್ಳೋ ಕೆಲಸ ಮುಖ್ಯ ಕಲಾವಿದೆಗೆ. ಇಲ್ದೇ ಹೋಗಿದ್ರೇ ನಾನು ಇಷ್ಟರ ತನಕ ನಾಟಕದ ಕಂಪನೀಲಿರ್ತಿದ್ನೇ ಹೇಳಿ. ಇನ್ನೂ ನಾನು ವ್ಯಾಯಾಮ ಮಾಡ್ತೀನಿ, ಪುಷ್ಠಿಯಾದ ಆಹಾರ ತೆಗೆದುಕೊಳ್ಳುತ್ತೇನೆ. ಮುಖ್ಯವಾಗಿ ಹೇಳಬೇಕು ಅಂದ್ರೆ ನನಗೆ ಎರಡೇ ಮಕ್ಕಳು. ಇಲ್ದೇ ಹೋಗಿದ್ರೆ ನಾನು ನಿಮಗಿಂತಲೂ ಕಡೆಯಾಗುತ್ತಿದ್ದೆ.

ರಾಧ : ಹೌದು......ಹೌದು ಮಿಂಚಿಹೋದ ಕಾರ್ಯಕ್ಕೆ ಇನ್ನು ಚಿಂತಿಸಿ ಫಲವೇನು? ನನಗೂ ಎರಡೇ ಮಕ್ಕಳಿದ್ದರೆ ಇನ್ನೂ ಉತ್ತಮ ಕಲಾವಿದೆಯಾಗಿ ಜೀವಿಸಬಹುದಾಗಿತ್ತು..... ಹೌದು..... ಹೌದು ರಮಣಿ.

* * *

✳

## ಮುಗಿಯದ ಕಾದಂಬರಿ

---

**ಪಾತ್ರ ವರ್ಗ**

೧. ಲೀಲಾ ಕಿರಣ್: ದಂಪತಿಗಳು ೨. ಮಂಜು - ಮಗ ೩. ಸಂಜಯ - ಕಿರಣನ ಮಿತ್ರ

ಕಿರಣ್ : ಲೀಲಾ..... ಲೀಲಾ.... ಬಂದ್ಯೇನೇ?

ಲೀಲಾ : ಅದೇನ್ರಿ ಬಂದಿದ್ದೀನಲ್ಲಾ, ಏಕೆ ಕಾಣೋದಿಲ್ವೇ?

ಕಿರಣ್ : ಅಲ್ಲಾ ....

ಲೀಲಾ : ಅಲ್ಲಾ ಅದೇನ್ರಿ ನಿಮ್ಮ ಈ ಅವಾಂತ್ರ? ಸುಮ್ನೆ ಒಂದೇ ಸಮ್ನೆ ಕಪ್ಪೆ ಹಾಗೆ ವಟವಟ ಅಂತ ವಟ್ಗುಟ್ತೀರಿ....

ಕಿರಣ್ : ಏನೇ.... ಏನೇ...... ನಿನ್ನ.......

ಲೀಲಾ : ಅಲ್ಲಾರೀ ಸುಮ್ನೆ ಒಂದೇ ಸಮ್ನೆ ಉಸಿರು ಕಟ್ಟಿಕೊಳ್ಳೋ ಹಾಗೆ ಕೂಗಿಕೊಳ್ತೀರಲ್ಲಾ ಒಂದು ಸ್ವಲ್ಪನಾದ್ರೂ ಘನ, ಗಂಭೀರ ತೂಕ ಬೇಡ್ವೇ? ಹೊರ್ಗಡೆ ಯಾರಾದ್ರೂ ಕೇಳಿಸ್ಕೊಂಡಾರೂ ಅನ್ನೋ ಪರಿಜ್ಞಾನವಾದ್ರೂ ಬೇಡ್ವೇ? ಒಳ್ಳೇ ಕೂಗ್ಮಾರಿಯಾಗೆ ಕೂಕ್ಕೊಳ್ತೀರಿ.

ಕಿರಣ್ : ರೀ.... ರೀ.... ಅಂತಾ ರಾಗ ಎಳ್ಕೊಂಡ್ಬರ್ತೀಯಲ್ಲಾ ಅದು ಸರೀನಾ?

ಲೀಲಾ : ಹಲೋ ಮಿಸ್ಟರ್ ಕಿರಣ್.

ಕಿರಣ್ : ಹಾಗ್ಬಾ ದಾರೀಗೆ....

ಲೀಲಾ : ಥಾರೆ ದಿನ್ವೇ ನಿಮ್ಮ ದಾರಿಗ್ಬಂದಿದ್ದೇನೆ. ಈಗೇನು ಹೇಳಿ ಮಿಸ್ಟರ್ ಕಿರಣ್.

ಗರಣ್ : ಈಗ ನಾನು ಒಪ್ದೆ ಕಣೆ....

ಲೀಲಾ : ಅದೇನು ಹೇಳಿ.... ನನ್ಗೆ ಕೆಲ್ಸ ಇದೆ....

ಕಿರಣ್ : ಅಲ್ಲಾ ಯಾವಾಗ್ಲೂ ಕೆಲ್ಸ ಕೆಲ್ಸ..... ನಿಂಗೂ ನನ್ಗೆ ಯಾವಾಗ್ಲೂ ಗಲಾಟೆ.... ನಾನು ಒಂದು ತಿಂಗಳಿಂದ್ಲೂ ಮಂಗಳ ಮುಹೂರ್ತ ಎಂಬ ಕಾದಂಬರಿ ಬರೆಯೋಕೆ ಶುರು ಮಾಡ್ದೆ. ಆದ್ರೆ ಅದೆಂಥ ಹೊತ್ತಿನಲ್ಲಿ ಮಂಗಳ ಮುಹೂರ್ತ ಮಾಡಿದೆಯೋ ಏನೋ ಅದಕ್ಕೆ ಈಗ ಮಂಗ್ಳಾನೇ ಹಾಡಿದಂತಿದೆ.

ಲೀಲಾ : ಒಂದು ಕೆಲಸಕ್ಕೆ ಅನೇಕ ಅಡ್ಡಿಗಳು ಬಂದ್ರೇನೇ ಅದು ಚೆನ್ನಾಗಾಗುತ್ತಂತೆ. ಕಾದಂಬರಿನೂ ಅಷ್ಟೇ, ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇನ್ನೊಮ್ಮೆ ಬಂದ್ರೂ ಬರಬಹುದು.

ಕಿರಣ್ : ಹೂಂ..... ಕಣೇ.... ಬಂದ್ಬುಡುತ್ತೆ..... ಪ್ರಶಸ್ತಿ...... ನಿನ್ನಂಥ ಹೆಂಡತಿ ಈ ಮಕಳ್ನ ಕಟ್ಕೊಂಡು ಇನ್ನು ಪ್ರಶಸ್ತಿ ಬೇರೆ ಕೇಡು ನನ್ಗೆ. ಅಲ್ಲಾ ನಿನ್ನ ಮದ್ವೆ ಆಗೋಕ್ಕು ಮೊದ್ಲೇ ಪ್ರಶಸ್ತಿ ಬಂದಿರ್ಲಿಲ್ಲೇನು?

ಲೀಲಾ : ಅಲ್ಲಾ ಕಣ್ರೀ ಗಲಾಟೆ ಗಲಾಟೆ ಅಂತ ಹೊಡ್ಕೊಳ್ತೀರಲ್ಲಾ ಹೋಗಿ ಸಿದ್ಧರ ಬೆಟ್ಟದಲ್ಲಾದ್ರೂ ಕುಳ್ತು ಮನಸಿಟ್ಟು ಬರೀರಿ.

ಕಿರಣ್ : ಆಗುತ್ತೆ... ಆಗ ನಿನ್ನ ನೆನಪು. ನೀನು ಕಟ್ಕೊಂಡು ಬಂದಿರೋ ತಾಪತ್ರಯ. ಆಗ ಹೊಟ್ಟೆಗೇನು ತಣ್ಣೀರು ಬಟ್ಟೆ ಹಾಕೊಳ್ತೀರೇನು? ನೀವೆಲ್ಲಾ.

ಲೀಲಾ : ಮತ್ತೆ ಶಾಂತಿ ಶಾಂತಿ ಅಂತ ಕೂಕ್ಕೊಳ್ಳವ್ರಗೇನಾಡ್ಬೇಕು ಹೇಳಿ ಮತ್ತೆ.

ಕಿರಣ್ : ಅಲ್ಲಾ ಕಣೆ ನೀನು ನನ್ನ ಅರ್ಧಾಂಗಿ ಅಲ್ವೇನೆ? ನನ್ನ ಕಾದಂಬರಿ ಕೀರ್ತಿಗೆ ನೀನೂ ಭಾಗಿ ಆಗೋಲ್ವೆ? ನೀನು ನನ್ನನ್ನು ಮದುವೆ ಆದದ್ದು ನನ್ನ ಕಾದಂಬರಿಗಳ ಓದೇ ಅಲ್ವೇ?

ಲೀಲಾ : ಅದೇನೋ ನಿಜ, ಆದ್ರೆ ಈಗ ಅವೆಲ್ಲಾ ಏಕೆ ಬಿಡಿ.

ಕಿರಣ್ : ಲೀಲಾ ಏಕೆ ಬೇಸ್ರ ಮಾಡ್ಕೊಂಡಿದ್ದೀಯೆ? ಬೇಜಾರಾಗಿದ್ರೆ ನಡ್ಯೇ ತಿರುಗಾಡಿಕೊಂಡು ಬರೋಣ.

ಲೀಲಾ : ಹೋಗೋಣ್ವೇ ಹಾಗಾದ್ರೆ.....?

ಕಿರಣ್ : ನೋಡ್ದಾ ಆಗ್ಲೆ ನನ್ನ ಕೆಲ್ಸಕ್ಕೆ ವಿಘ್ನ.

ಲೀಲಾ : ನನ್ನ ಕಾರ್ಯಕ್ಕೆ ವಿಘ್ನ ಆಗ್ದೇ ಇರ್ಲಿ ಅಂತ ವಿಘ್ನೇಶ್ವರನಿಗೆ ಒಂದು ತೆಂಗಿನ ಕಾಯಿ ಹೊಡೆದು ಕುಳಿತುಕೊಳ್ಳಿ ಆಗ್ಲಾದ್ರೂ ಸರಿ ಹೋಗಬಹುದು.

ಕಿರಣ್ : ಏನೋ ಈ ಕಾದಂಬರಿ ಬರ್ದು ಸ್ವಲ್ಪ ದುಡ್ಡು ಬಂದ್ರೆ ವಿಘ್ನೇಶ್ವರನಿಗೊಂದು ಕಾಯಿ ಒಡಿಸ್ತೀನಿ ಅಂತ ಹರ್ಕೆ ಮಾಡ್ಕೊಂಡಿದ್ದೇನೆ. ಅಲ್ವೇ ನಿನ್ಗೊಂದು ಫಸ್ಟ್ ಕ್ಲಾಸ್ ಸ್ಯಾರಿ.

ಲೀಲಾ : ಇನ್ನೇನು ನಾನು ಉಟ್ಕೊಂಡು ಮೆರೆಯೋದೇ ಸುಮ್ನಿರಿ. ಏನ್ರಿ ನೀವು ಒಂದು ಘಳಿಗೆ ಮಾತಾಡೋಣ ಅಂದ್ರೂ ಆಗೋಲ್ಲ. ಅಡ್ಡಾಡಿಕೊಂಡು ಬರೋಣ ಅಂದ್ರೂ ಆಗೋಲ್ಲ. ಯಾವತ್ನೋಡಿದ್ರೂ ಕೆಲಸ ಕೆಲ್ಸ ಕೆಲ್ಸ.... ನಾನು ಬಿಸಿ.... ಈ ಹೊತ್ತು ಆ ಸಂಪಾದಕನ ಭೇಟಿ, ಈ ಹೊತ್ತು ಆ ಪ್ರಕಾಶಕನ ಭೇಟಿ, ಇನ್ನೊಂದು ದಿನ ಮಿತ್ರರೊಡನೆ.... ಹೀಗ್ಮಾಡ್ತಾ ನನ್ನನ್ನೇ

ಮರೆತುಬಿಡ್ತೀರಿ. ಅಷ್ಟೊಂದು ಬೇಜಾರಾದ್ರೆ ನಮ್ಮಪ್ಪನ ಮನೆಗೆ ಕಳುಹಿಸ್ಬಿಡಿ, ಆಗ್ಲಾದ್ರೂ ಸಮಾಧಾನವಾಗುತ್ತೆ.

ಕಿರಣ್ : ಇದೇನೇ ನೀನು ಹೇಳ್ತಾ ಇರೋದು?

ಲೀಲಾ : ಕಿರಣ್ ಸಾಕು ನಿಮ್ಮ ಜಾಣತನದ ಮಾತು.

ಕಿರಣ್ : ಲೀಲಾ.... ಹೋಗ್ಲಿ ಡ್ರೆಸ್ ಮಾಡ್ಕೋ ಹೋಗು.

ಲೀಲಾ : ಏಕೆ?

ಕಿರಣ್ : ಈ ಹೊತ್ತು ನಿನ್ನನ್ನು ಸಿನಿಮಾಕ್ಕೆ ಕರೆದುಕೊಂಡೋಗ್ತೇನೆ

ಲೀಲಾ : ಏನೋ ಅಪ್ಪಾ ಈ ಹೊತ್ತು ಪೂರ್ವದಲ್ಲಿ ಹುಟ್ಟೋ ಸೂರ್ಯ ಪಶ್ಚಿಮದಲ್ಲಿ ಹುಟ್ಟೋ ಹಾಗೆ ಕಾಣುತ್ತೆ.

ಕಿರಣ್ : ಏನೇ.... ನಾನು ನಿಗ್ಗೆ ಯಾವಾಗ ತಾನೇ ಯಾವುದರಲ್ಲಿ ತಾನೆ ಕಡಿಮೆ ಮಾಡಿದ್ದೇನೆ ಹೇಳು?

ಲೀಲಾ : ಇಲ್ಲಾ ಅಂತ ಹೇಳಿದ್ನೇನು?

ಕಿರಣ್ : ಏಕೆ ಒಂದು ತರಹಾ ಅಂತೀರಲ್ಲಾ......

ಲೀಲ : ಅಂದ್ರೆ ನಿಮ್ಮ ಪ್ರೀತಿ ಎಷ್ಟಿದೆ ಅನ್ನೋದನ್ನು ಜನಗಳು ಈ ಮಕ್ಕಳಿಂದ್ಲೇ ಲೆಕ್ಕ ಹಾಕ್ಬೇಕು.

ಕಿರಣ್ : ಲೀಲಾ ಏನೇ ನಿನ್ನ ಬುದ್ಧಿ.... ಒಳ್ಳೆ ಒನಕೆ ಮೊಂಡು ಚಿಗಿರ್ದಾಗೆ ಚಿಗುರ್ತಿದೆಯಲ್ಲಾ.... ಅದ್ಕೇ ಹೇಳೋದು ಹೆಂಗಸಿನ ಬುದ್ಧಿ ಅಂತ.

ಲೀಲಾ : ಅಂದ್ರೆ.

ಕಿರಣ್ : ಚುರುಕು ಅಂತ.

ಲೀಲಾ : ಏನು ಬುದ್ಧಿ ಇದ್ರೇನಾಯ್ತು? ನಿಮಗೆ ಮಾತ್ರ ಇನ್ನೂ ಬರ್ಲಿಲ್ಲಾ.

ಕಿರಣ್ : ಸಾಕು ಕಣೇ ಮಾತು. ಯಾವಾಗ್ಲೂ ಮಾತು ಕಡಿಮೆ ಇರಬೇಕು ಕೆಲಸ ಹೆಚ್ಚಿರ್ಬೇಕು. ಹೋಗು ಹೋಗು ಬೇಗನೆ ರೆಡಿ ಆಗು, ಆಮೇಲೆ ಮುಂದಿನ ಮಾತು.

ಲೀಲಾ : ಸರಿ ನೀವು ಹೋಗಿ ಡ್ರೆಸ್ ಮಾಡ್ಕೊಳ್ಳಿ.

ಕಿರಣ್ : ನನಗ್ಯಾವ ಡ್ರೆಸ್ ಹೋಗೇ......?

ಲೀಲಾ : ಮೊದ್ಲು ಗಡ್ಡ ಮೀಸೆ ಸರಿಮಾಡ್ಕೊಳ್ಳಿ. ನೋಡಿದ್ರೆ ಖಾಯಿಲೆ ಬಿದ್ದು ಎದ್ದವರಂತೆ ಕಾಣ್ತೀರಿ.

ಕಿರಣ್ : ಆಗಬಹುದು ಮಾರಾಯ್ತಿ ಅಷ್ಟು ಹೊತ್ತಿಗೆ ಸ್ವಲ್ಪ ರೂಮೆಲ್ಲಾ ನೀಟಾಗಿ ಕಸ ಹೊಡೆದು, ಹೂವಿನ ಕುಂಡಕ್ಕೆ ಸ್ವಲ್ಪ ಚೆನ್ನಾದ ಹೂವನ್ನ ಅಲಂಕಾರ ಮಾಡ್ಬಿಡು.

ಲೀಲಾ : ಏನಪ್ಪಾ ನಿಮ್ಮ ವಿಲಾಸ?

ಕಿರಣ್ : ಸಾಹಿತಿ ರೂಮು ಅಂದ್ರೆ ವೃಂದಾವನವಾಗಿರಬೇಕು. ಹಾಗಾದ್ರೆ ತಾನೇ ಕವಿಕಲ್ಪನೆಗೆ ಚುರುಕು ಬರುವುದು.

ಲೀಲಾ : ಸಾಕಪ್ಪ ಸಾಕು.... ಆಗ್ಬಹುದು. ನಿಮ್ಮ ರೂಮನ್ನೇ ಎರಡನೇ ಸ್ವರ್ಗ ಮಾಡ್ತೇನೆ..... ಸರಿಯೇ.....

* * *

ಮಂಜು : ಅಪ್ಪಾ.... ಅಪ್ಪಾ....

ಕಿರಣ್ : ಏನಪ್ಪಾ ಬಂತು ವಕ್ರ. ಇನ್ನೇನು ಸ್ಕೂಲಿಗೆ ಹೋದ್ನಲ್ಲ ಬರೆಯೋಕೆ ಶುರು ಮಾಡೋಣ ಅಂತ ಕೂತ್ರೆ, ಈಗ್ಲೇ ಅಪ್ಪಾ ಅಂತಿದ್ದಾನಲ್ಲ. ಬಂದೆ ಕಣೋ.... ಬಂದೆ ತಾಳು.... ಬಾಗಿಲ್ನೇ ಮುರ್ದಾಕ್ಬೇಡ.... (ಬಾಗಿಲು ತೆಗೆದು) ಯಾಕೋ ಸ್ಕೂಲಿಗೇ ಹೋಗ್ಲಿಲ್ವೇನೋ?

ಮಂಜು : ಈ ಹೊತ್ತು ನಮ್ಮ ಟೀಚರ್ ಸತ್ತುಹೋಗ್ಬಿಟ್ರು, ಅದಕ್ಕೆ ರಜಾ ಕೊಟ್ರಪ್ಪ.

ಕಿರಣ್ : ಏನು ಶುಭ ಸಮಾಚಾರ ತಂದ್ಯೋ "ಮಂಗಳ ಮುಹೂರ್ತ" ಕಾವಂಬರಿ ಬರ್ಯೋಕೆ ಶುರು ಮಾಡೋಣ ಅಂತ ಕುಳಿತ್ರೆ ಅಮಂಗಳದ ಸುದ್ದೀನೆ ಹೇಳೋಕೆ ಬಂದ್ಯೇನೋ?

ಮಂಜು : ಅವರು ಸತ್ರೆ ನಾನೇನು ಮಾಡ್ಲಪ್ಪ?

ಕಿರಣ್ : ಸಾಕು ಹೋಗಿ ಊಟ ಮಾಡಿ ಎಲ್ಲಾದ್ರೂ ಆಟ ಆಡ್ಕೋ ಹೋಗು.

ಮಂಜು : ಏನಪ್ಪಾ ನೀವು.... ನಿಮ್ಗೆ ಊಟ ಮಾಡ್ದಾಗೊಂದು ಜ್ಞಾನ ಹೊಟ್ಟೆ ಹಸಿದಾಗೊಂದು ಜ್ಞಾನ, ಮೊದಲೆಲ್ಲಾ ಆಟಕ್ಹೋಗ್ತೀಯಾ ಪಾಠ ಓದ್ಕೋ ಅಂತಿದ್ದೆ. ಈ ಹೊತ್ತು ನೀನೇ ಆಟ ಆಡ್ಕೋ ಅಂತೀಯಾ.

ಕಿರಣ್ : ಹೌದು ಕಣೋ ಆಡುವಾಗ ಆಡ್ಬೇಕು ಓದುವಾಗ ಓದ್ಬೇಕು.

ಮಂಜು : ಈಗ ಆಡೋ ಸಮಯವಲ್ಲಪ್ಪ.

ಕಿರಣ್ : ಹೋಗ್ಲಿ ಹೋಗಿ ತುಟಿಪಿಟಿಕ್ ಅನ್ದೇ ಓದ್ಕೋ ಹೋಗು.

ಮಂಜು : ತುಟಿ ಬಿಡ್ದೇ ಅದ್ಯಾಗಪ್ಪ.....?

ಕಿರಣ್ : ಮನಸ್ನಲ್ಲೇ ಕಣೋ.....

ಮಂಜು : ಹಾಗೆ ನನಗೆ ಅರ್ಥವಾಗೋದಿಲ್ಲಪ್ಪ.

ಕಿರಣ್ : ಹೋಗಿ ಯಾವುದಾದ್ರೂ ಪಾರ್ಕಿನಲ್ಲಿ ಜೋರಾಗಿ ಬಾಯ್ಬಿಡ್ಕೋ ಹೋಗು.

ಮಂಜು : ಇದೇನಪ್ಪ ಹೀಗಂತೀಯಾ?

ಕಿರಣ್ : ಲೇ ಮಂಜು ಹೋಗಪ್ಪ ನನ್ಗೆ ಮಾತಾಡೋಕ್ಕೆ ಟೈಮಿಲ್ಲ.

ಮಂಜು : ಯಾವ ಹೊತ್ತು ಹೀಗೇ..... ನನಗೆ ಟೈಮಿಲ್ಲ, ನನಗೆ ಆ ಕೆಲ್ಸ ಈ ಕೆಲ್ಸ ಅದ್ಬರೀಬೇಕು ಇದು ಬರೀಬೇಕು.

ಕಿರಣ್ : ನನ್ನನ್ನಾದ್ರೂ ನೋಡಿ ಬುದ್ಧಿ ಕಲಿತುಕೊಂಡು ಚೆನ್ನಾಗಿ ಓದಿ ಈ ಸಾರಿ ಕ್ಲಾಸಿಗೆ ಫಸ್ಟ್ ಬಾರೋ.

ಮಂಜು : ದಿನಾ ಓದ್ತೀನಿ, ಬರೀತೀನಿ ಅಂತೀರಿ. ಪುಸ್ತಕ ತೆಗೆದಾಗ್ಲೇ ಮಾತು ಶುರು ಮಾಡ್ತೀರಿ. ಅಲ್ದೆಹೋದ್ರೆ ಅವ್ರು ಇವ್ರು ನೋಡ್ಬೇಕು ಅಂತಾ ಹೋಗ್ತೀರಿ. ಕಾದಂಬರಿ ಬರೀತೀರಿ ಅಂತ ಬರೆಯೋದ್ಕೂ ಮೊದ್ಲೇ ಟೈಟಲ್ ಬರ್ದು ಹಾಗೇ ಜಪ ಮಾಡ್ತಾ ಇರ್ತೀರಿ.

ಕಿರಣ್ : ಮಂಜು ಮಾತು ಹೆಚ್ಚಾಯ್ತು. ಹೋಗೋ ತಲಹರಟೆ.......

ಮಂಜು : ಏನಪ್ಪಾ ಯಾವತ್ತೂ ನಿಮಗೆ ಮೂಗಿನ ಮೇಲೆ ಕೋಪ, ಹೋಗ್ತೀನಿ ಈಗ್ಲಾದ್ರೂ ಬರೀರಿ.

ಕಿರಣ್ : ಸದ್ಯ ಅಷ್ಟು ಮಾಡಪ್ಪ.

ಮಂಜು : ಬಾ ಬಾ.....

* * *

ಕಿರಣ್ : ಏನಪ್ಪಾ ನನ್ನ ಮಗನೂ ನನ್ನ ಯೋಗ್ಯತೆಯನ್ನು ಆಡ್ಕೊಳ್ಳೋ ಹಾಗಾಯ್ತೇ? ಪಾಪ ನನ್ನ ಹಿಂದಿನ ಯೋಗ್ಯತೆ ಏನು ಗೊತ್ತು? ಇವ್ರು ಭೂಲೋಕಕ್ಕೆ ಬಂದ ಮೇಲೆ ನನ್ನ ಸಾಹಿತ್ಯ ಪಾತಾಳಕ್ಕೆ ಇಳಿದೋಯ್ತು. ಏನು ಕಾಲ ಬಂತಪ್ಪ ಶಿವಶಿವಾ.

ಲೀಲಾ : ಏನ್ರೀ ಶಿವ, ಪಾರ್ವತಿ ಬಂದಿದ್ದೀನಿ.

ಕಿರಣ್ : ಏನಂತೀರಿ ಪಾರ್ವತಮ್ಮನವರು ಇನ್ನೇನು ಈಗ ಐದು ಮಕ್ಕಳ ಅಮ್ಮನಲ್ವೇನು? ನೀನು ಇನ್ನೂ ಕುಮಾರಿ ಅಂತ ತಿಳ್ಕೊಂಡಿದ್ದೀಯೇನು?

ಲೀಲಾ : ಇಲ್ಲ, ನೀವು?

ಕಿರಣ್ : ನಾನೇನು ಈ ಹೊತ್ತು ಮದ್ವೇ ಗಂಡಾಗಿಯೇ ಇದ್ದೇನೆ.

ಲೀಲಾ : ಸದ್ಯ ಎರಡನೆ ಮದ್ವೇ ಆಗೋ ಹಾಗಿದ್ರೆ ಆಗುತ್ತಿದ್ದಿರೋ ಏನೋ?

ಕಿರಣ್ : ಏಕೆ?

ಲೀಲಾ : ಅತ್ತೊಂದು ಇತ್ತೊಂದು ತೊಟ್ಟಿಲು ತೂಗೋದಕ್ಕೆ.

ಕಿರಣ್ : ಏನೇ ನೀನು? ಈಗ್ಲೇ ನಿನ್ನ ಪುತ್ರರತ್ನಗಳ ಮಂಜುಳರವ ಕಿವಿ ಗೊಟ್ಟು ಕೇಳೋಕ್ಕಾಗೋಲ್ಲ ಇನ್ನೆರಡಾದ್ರೆ ದೇವ್ರೇ ಗತಿ.

ಲೀಲಾ : ಸರಿ ಏನೇ ಅನ್ನೋದೇನು? ಮನೇಲೇನಿದೆ ಅಂತ ಕುಳಿತಿದ್ದೀರಿ.

ಕಿರಣ್ : ನೀನೆ ಇದ್ದೀಯಲ್ಲಾ ಅಂತ.

ಲೀಲಾ : ನನ್ನ ನೋಡಿದ್ರೇ ಹೊಟ್ಟೆ ತುಂಬಿದ ಹಾಗೆ.

ಕಿರಣ್ : ನಿನಗೆ ನನ್ನ ನೋಡಿ ಹೊಟ್ಟೆ ತುಂಬುತ್ತೆ. ನನಗೆ ನಿನ್ನ ನೋಡಿದ್ರೆ ಹೊಟ್ಟೆ ತುಂಬುತ್ತೆ. ನಮ್ಮಿಬ್ರನ್ನೂ ನೋಡಿದ್ರೆ ಮಕ್ಕಳಿಗೆ ಹೊಟ್ಟೆ ತುಂಬುತ್ತೆ ಅಲ್ವೇನು?

ಲೀಲಾ : ರೀ ಸ್ವಲ್ಪ ಹೋಗಿ ಅಷ್ಟು ಅಂಗಡಿ ಸಾಮಾನಾದ್ರೂ ತೆಗೆದುಕೊಂಡು ಬನ್ನಿ.

ಕಿರಣ್ : ಏನೇ ನೀನು.... ನಿನ್ನ ಐದು ಜನ ಪಂಚಪಾಂಡವರಾಗಿರೋ ಮಕ್ಕಳಲ್ಲಿ ಯಾರಾದ್ರೂ ಒಬ್ಬನ್ನ ಕಳುಹಿಸಿದರೆ ಆಗೋಲ್ವೇ?

ಲೀಲಾ : ಕಳಿಸದ್ಕೇನೋ ಸರಿ ಸಾಲ ತರಬೇಕಲ್ಲ.

ಕಿರಣ್ : ಏನೇ ನೀನು ಹೇಳೋದು.... ಸ್ವಲ್ಪ ಕಾದಂಬರಿ ಬರೆಯಬೇಕು ಅನ್ನೋ ಸಮಯಕ್ಕೆ ನಿನ್ಗೆ ಅರ್ಜೆಂಟ್ ಅಲ್ವೇನು?

ಲೀಲಾ : ರೀ..... ಕಾದಂಬರಿ ಬರೆಯೋದಿರ್ಲಿ..... ಮೊದ್ಲು ಹೊಟ್ಟೆ. ಆ ಹೊಟ್ಟೆ ತುಂಬಿದ್ರೆ ತಾನೆ ನಿಮಗೆ ಬರ್ಯೋಕೆ ಶಕ್ತಿ ಬರೋದು.

ಕಿರಣ್ : ಕಾದಂಬರಿ ಮುಗಿಸ್ದಲ್ವೇನು ಹಣ ಬರೋದು.

ಲೀಲಾ : ನೀವೇಳೋದು ಸರಿ, ಮೇಗಲ ಮೋಡ ನೋಡ್ಕೊಂಡು ಸೇದೋ ಬಾವಿಗೆ ಏನೋ ಮಾಡ್ದಾಗಾಯ್ತು. ಸಾಕು ಹೋಗ್ರಿ. ಆಡದ್ದೇ ಆಡು ಕಿಸ್ಬಾಯಿ ದಾಸಯ್ಯ ಅಂತ ಆಡ್ತಾ ಕುಳ್ತಿರ್ಬೇಡಿ.

ಕಿರಣ್ : ಆಗಬಹುದು ರಾಣಿ ಸಾಹೇಬ್ರೇ.....

* * *

(ಒಂದೇ ಸಮನೆ ಎರಡು ಮೂರು ಮಕ್ಕಳು ಶಬ್ದ)

ಕಿರಣ್ : ಪೆನ್ ಎತ್ತಿ ಪೇಪರ್ ಇಟ್ರೆ ಸಾಕು. ಏನಾದ್ರೂ ಒಂದು ವಿಘ್ನ..... ಅಬ್ಬಬ್ಬಾ.... ಕಿವಿ ಮುಚ್ಚಿಹೋಯಿತು..... ಮುಚ್ಚಿಹೋಯ್ತು. ಲೀಲಾ ಲೀಲಾ.... ಅದೇನ್ ಮಾಡ್ತಾ ಇದ್ದೀಯ ನಿನ್ನ ಮಕ್ಕಳ ವಾದ್ಯ ಕೇಳಕ್ಕಾಗಲ್ವೇ?

ಲೀಲಾ : ಅದೇನ್ರೀ ಆ ಮಕ್ಕಳ ಜತೆ ನಿಮ್ಮದು ಬೇರೆ ವಾದ್ಯ?

ಕಿರಣ್ : ಅಲ್ಲಾ ನಾನೇನಾದ್ರೂ ಓದಿ ಬರೆದು ಮಾಡಬೇಕು ಅಂತೀಯೋ ಅಥ್ವಾ.....

ಲೀಲಾ : ಸದ್ಯ ನೀವೇನು ಮಾಡ್ಬೇಡಿ.

ಕಿರಣ್ : ಇದೇನು ಮನ್ಯೇನೋ ಅಥ್ವಾ ಹೆರಿಗೆ ಆಸ್ಪತ್ರೆನೋ.....

ಲೀಲಾ : ಆಸ್ಪತ್ರೆಗೆ ಡಾಕ್ಟರ್ ಆಗಿ ಬಂದದ್ದೇ ಉಂಟಂತೆ ಇನ್ನು ಗೋಳು ಅಂದ್ರೆ ತಪ್ಪಿಹೋಗ್ತದೇನು?

ಕಿರಣ್ : ನೀನು ನರ್ಸ್ ಇದ್ದೀಯಲ್ಲಾ ಅವುಗಳನ್ನೆಲ್ಲಾ ಸರಿಮಾಡಕ್ಕಾಗಕ್ಕಿಲ್ವೇನು?

ಲೀಲಾ : ಒಬ್ಬಳು ಎಷ್ಟು ಮಕ್ಕಳ್ನ ನೋಡಿಕೊಳ್ಳೋದು ಅಪ್ಪನ್ನ ನೋಡ್ಕಳ್ಳೋದು. ಅದರಲ್ಲಿ ಬೇರೆ ನಿಮ್ಮನ್ನೂ ನೋಡ್ಕೊಳ್ಬೇಕು. ಘಂಟೆಗೊಂದ್ಸಾರಿ ಗಂಟ್ಲಿಗೆ ಕಾಫಿ ಬೇರೆ ಎರಿಬೇಕಲ್ಲ, ನಾನು ಯಾವುದು ಮಾಡ್ಲಿ ಯಾವುದು ಬಿಡ್ಲಿ?

ಕಿರಣ್ : ಹೋಗ್ಲಿ ಹೋಗಿ ಅವುಗಳ ಶಬ್ದ ನಿಲ್ಸು ಸದ್ಯ ಕಾಫಿ ಕೊಟ್ಟಿದ್ದಕ್ಕಿಂತ ಹೆಚ್ಚಾಗುತ್ತೆ.

ಲೀಲಾ : ಹಾಗಾದ್ರೆ ಕಾಫಿ ಬೇಡ್ವೇ?

ಕಿರಣ್ : ಇದೇನೇ ನೀ ಹೇಳೋದು ಹಾಗೆಲ್ಲಾದ್ರೂ ಮಾಡ್ಬಿಟ್ಟೀಯೇ? ಆಮೇಲೆ.....

ಲೀಲಾ : ಆಮೇಲೆ..... ಇದ್ಯಾಕ್ರಿ ಮಂಕು ಬಡ್ದವ್ರಾಗೆ ಕೂತುಬಿಟ್ರಿ.

* * *

ಕಿರಣ್ : ಇನ್ನೇನು ಮಾಡು ಅಂತೀಯಾ? ಬರೆಯೋ ಮೂಡೇ ಹೊರಟು ಹೋಯ್ತು. ಏನು ಬರೆಯಬೇಕೆಂತಿದ್ನೋ ಅವೇ ಮರ್ತೋಯ್ತು.

ಲೀಲಾ : ಒಳ್ಳೇ ಆಬ್‌ಸೆಂಟ್ ಮೈಂಡೆಡ್ ಪ್ರೊಫೆಸರ್ ಅಂದಂಗಾಯ್ತು. ಎಲ್ಲ ಗೊತ್ತಾಗುತ್ತಂತೆ ಆದ್ರೆ ಏನು ಬರೆಯಬೇಕು ಅನ್ನೋದೇ ಮರ್ತೋಯ್ತಂತೆ. ಇನ್ನೆಂಥ ಬರಹಗಾರರೋ ನೀವು? ಅಲ್ಲಾ ಇಂಥ ವರಕವಿಗಳಿಗೆ ಹೀಗೇಕಾಯ್ತೋ ದೇವ್ರೇ ಬಲ್ಲ.

ಕಿರಣ್ : ಸಾಕು ನಡ್ಯೇ.....

ಲೀಲಾ : (ನಗುತ್ತಾ) ಅಲ್ಲಾ ಇದೇನು?

ಕಿರಣ್ : ಅಯ್ಯೋ ಬೆಪ್ಪೇ ಇದ್ಯಾಕೆ ಹೀಗೆ ನಗ್ತೀಯೆ...?

ಲೀಲ : ಅಲ್ಲಾ ಇದೇನು ನಿಮ್ಮ ಅವಾಂತರ ಅಂತ ಇದೇನು ಈ ಗೊಂಬೆಗಳೆಲ್ಲ?

ಕಿರಣ್ : ಆಗ್ಲೇ ಹೇಳಿದ್ನಲ್ಲ ತಲೆಗೆ ಏನೂ ಹೊಳೀಲೇ ಇಲ್ಲ. ಅದ್ಕೆ ಇದನ್ನು ಗೀಚ್ತಾ ಕುಳ್ತಿದ್ದೆ ಅಂತ.

ಲೀಲಾ : ಸರಿ ಇದೇನು ಒಂದು ಪೇಜಿಗೆ ಇಷ್ಟೊಂದು ಒಡೆದು ಹಾಕಿದ್ದೀರಿ? ಹಿಂದಿನ ಕಾಲದಲ್ಲಿ ಲೇಖನಿ ಹಿಡಿದ್ರೆ ಒಂದು ತಪ್ಪಿಲ್ದೇ ಛಂದೋಬದ್ಧವಾಗಿ ಕವಿಗಳು ಕಾವ್ಯ ಬರೀತಾ ಇದ್ರು. ಆದ್ರೆ ಈ ಹೊತ್ತಿನ ದಿನ ಗದ್ಯ ಬರ್‍ಯೋಕು ಇಷ್ಟೊಂದು ಒಡೆದು ಹಾಕಿ ಬರೀತಾ ಇದ್ದೀರಿ.

ಕಿರಣ್ : ಅವ್ರೆಲ್ಲಾ ಅದ್ಕೇ ಬ್ರಹ್ಮಚಾರಿಗಳಾಗಿ ಏಕಾಂಗಿಯಾಗಿ ಬರೀತಿದ್ರು. ನಾವು ನಿಮ್ಮಂಥ ಹೆಂಡ್ತಿ ಈ ಮಕ್ಕಳ್ನ ಕಟ್ಕೊಂಡು ಬರ್‍ಯೋವಾದ್ರೂ ಹೇಗೆ? ಚಿತ್ತಕ್ಕೆ ಏಕಾಗ್ರತೆ ಹೇಗೆ ಬರುತ್ತೆ ಹೇಳು. ನಿನ್ನ ಮದ್ವೇ ಆಗೋಕೆ ಮೊದ್ಲು ನಾನು ಹಾಗೇ ಬರೀತಿದ್ದೆ.

ಲೀಲಾ : ಕಲಿಯುವ ಮನಸ್ಸುಂಟೆ ಮಣ್ಣಿನ ಗೊಂಬೆಯೂ ಕಲಿಸುವುದು, ಅಂದ ಹಾಗೆ ಬರ್ಯೋ ಮನ್ಸಿದ್ದವನಿಗೆ ಆಕಾಶ ಕಳಚಿ ಬಿದ್ರೂ ಸರಿಯಾಗಿ ಬರೀತಾನೆ. ಈಗೀಗ ಒಳಗೆ ಸತ್ವ ಇಲ್ಲ ಅನ್ನಿ ಏಕೆ? ಅಷ್ಟೊಂದು ಚೆನ್ನಾಗಿ ಬರೀತಿದ್ದ ನಿಮ್ಗೆ ಇದೇನ್ರಿ ಇಷ್ಟೊಂದು ಮಂಕು ಸುತ್ಕೊಂಡ್ತು.

ಕಿರಣ್ : ಸಾಕು ಸುಮ್ನಿರೇ.

ಲೀಲಾ : ಅಲ್ಲಾ ನಿಮ್ಮೊಬ್ರನ್ನೇ ಅಲ್ಲ ನಾ ಹೇಳೋದು ಈ ಗೀಳೆ ಇರೋರೆಲ್ಲ ಈಗ ಹೆಚ್ಚು ಕಡಿಮೆ ಹಾಗೆ.

ಕಿರಣ್ : ಲೇ.... ಲೇ... ಏನೇ ಒಂದು ಭಾಷಣಾನೇ ಶುರು ಮಾಡ್ಬಿಟ್ಯಲ್ಲಾ ಎಲ್ಲಾದ್ರೂ ಲೇಖಕಿಯರ ಸಂಘಕ್ಕೆ ಅಧ್ಯಕ್ಷಣೆಯಾದ್ರೂ ಆಗ್ಬಿಡೇ.

ಲೀಲಾ : ಸದ್ಯ ನಿಮ್ಮ ಇತ್ತೀಚಿನ ಲೇಖನ, ನನ್ನ ಭಾಷಣ ಜನಗಳು ಕೇಳ್ಬಿಟ್ರೆ ಎರಡು ತಲೇನೋವಿನ ಮಾತ್ರೆ ಇಟ್ಕೊಂಡಿರ್ಬೇಕು ಅಂತ ತೋರುತ್ತೆ ಅಲ್ಲಾ ಹಿಂದೆ ಅದೆಷ್ಟು ಚೆನ್ನಾಗಿ ಬರೀತಾ ಇದ್ರಿ. ನಿಮ್ಮ 'ಅನುಪಮಾ' ಕಾದಂಬರಿಯು ವಾರ್ತಾ ಪತ್ರಿಕೆಯಲ್ಲಿ ಧಾರವಾಹಿ ಬಂದಾಗಲೆ ನಿಮ್ಮ ರಸಿಕತೆ ತಿಳಿದು ನಿಮ್ಮನ್ನು ಭೇಟಿಯಾದದ್ದು. ಅದನ್ನು ಜ್ಞಾಪಿಸಿಕೊಳ್ಳಿ.

ಕಿರಣ್ : ಹೋಗ್ಲಿ ನಡ್ಯೇ ಕಾಫಿ ತಾ....

* * *

(ಎಲೆಕ್ಟ್ರಿಕ್ ಬೆಲ್ ಶಬ್ದವಾಗುವುದು)

ಕಿರಣ್ : ಏನಪ್ಪಾ ನನ್ನ ಮಗಂದಾಯ್ತು... ಇನ್ನೇಸ್ಬಂತಪ್ಪ ವಾರಂಟು.

ಸಂಜಯ : ಓ.... ಮಿ. ಕಿರಣ್....

ಕಿರಣ್ : ಓ.... ಸಂಜಯ್ ಬೇರೆ ಬಂದುಬಿಟ್ನೋ..... ಏನು ಕರ್ಮವಪ್ಪಾ ಒಂದು ಘಳಿಗೆ ಕೂತುಕೊಳ್ಳೋಣ ಅಂದ್ರೆ ಹೆಂಡ್ತಿ, ಮಕ್ಕಳ ಜತೆ ಈ ಜತೆಗಾರರ ಕಾಟ ಬೇರೆ.... ಅಯ್ಯೋ ಪ್ರಾರಬ್ಧ ಕರ್ಮ.

ಸಂಜಯ : ಮಿ. ಕಿರಣ್..... ಕಿರಣ್......

ಕಿರಣ್ : ಬಂದೆ ತಾಳಪ್ಪ (ಬಾಗಿಲು ತೆಗೆಯುವನು) ಹಲೋ ಕಂ ಅಂಡ್ ಟೇಕ್ ಯುವರ್ ಸೀಟ್.

ಸಂಜಯ : ಏನಯ್ಯಾ ಯಾವಾಗ್ನೋಡು ಓದೋದು ಬರ್ಯೋದು?

ಕಿರಣ್ : ಏನೋ ಗಾದೆ ಹೇಳ್ತಾರಲ್ಲ ಮದುವೆ ಆಗೋತನ್ಕ ಹುಚ್ಚು ಬಿಡೋಲ್ಲ. ಹುಚ್ಚು ಬಿಡೋತನ್ಕ ಮದುವೆ ಆಗೋಲ್ಲ ಅಂದಹಾಗೆ ನನ್ನ ಬರೆಯೋ ಹುಚ್ಚು ಬರ್ಯೋತನ್ಕ ನಿಲ್ಲಲ್ಲ.

ಸಂಜಯ : ಹುಚ್ಚು ನಿಲ್ಲೋತನ್ಕ ಬರ್‍ಯೋಕಾಗಲ್ಲ ಅಂತ ಪೂರ್ತಿ ಮಾಡಯ್ಯ, ಅಲ್ದೇ ಏಕೆ ಅರ್ಧ ವಿರಾಮ ಹಾಕ್ಬಿಟ್ಟೆ.

ಕಿರಣ್ : ಏನಯ್ಯಾ ಮಾಡೋದು ಏನಾದ್ರೂ ಓದೋಣ ಬರ್‍ಯೋಣ ಅಂತ ಕೂತ್ರೆ ಕಾಟಗಳ ಮೇಲೆ ಕಾಟ.

ಸಂಜಯ : ನಮ್ದು....

ಕಿರಣ್ : ಸಂಸಾರದ ಜಂಜಾಟ.

ಸಂಜಯ : ಹೂಂ..... ಅದಿರ್ಲಿ ನಾನ್ಬಂದ ವಿಚಾರ ಗೊತ್ತಾಯ್ತೇ?

ಕಿರಣ್ : ಅದೇನು ಹೇಳಯ್ಯಾ....

ಸಂಜಯ : ಅದೇ..... ಸ್ವಲ್ಪ ಬಾಕಿ ಕೊಡ್ಬೇಕಾದದ್ದನ್ನ......

ಕಿರಣ್ : ಸ್ವಲ್ಪ ತಡ್ಕಳಪ್ಪಾ.... ಈ ತಿಂಗಳೇ ಕೊಟ್ಬುಡ್ತೀನಿ, ಋಣಮುಕ್ತನಾಗ್ತೀನಿ.

ಸಂಜಯ : ಏನಯ್ಯಾ ಹತ್ತು ರೂಪಾಯಿ ಈಸ್ಕಂಡು ಹತ್ತು ತಿಂಗಳಿಂದ ಸತಾಯಿಸ್ತೀಯಲ್ಲಾ ಸರಿಯೇ?

ಕಿರಣ್ : ಏನ್ಮಾಡೋದಪ್ಪಾ.... ಸಂಸಾರ ತಾಪತ್ರಯ.

ಸಂಜಯ : ಏನಯ್ಯಾ ಯಾವಾಗ್ಬಂದ್ರೂ ನಿನ್ಗೆ ಇದೇ ಮಂತ್ರ ಅಂತ ಕಾಣುತ್ತೆ.

ಕಿರಣ್ : ಇಲ್ಲಪ್ಪಾ ಈ ಸಾರಿ ಖಂಡಿತ ಕೊಟ್ಬಿಡ್ತೀನಿ.

ಸಂಜಯ : ಸದ್ಯ ಸಂಬಳ ಬರೋ ದಿನ ತಪ್ಪಿಸ್ಕೊಂಡ್ಬಿಟ್ಟೀಯಾ?

ಕಿರಣ್ : ಖಂಡಿತ ಕೊಡ್ತೇನೆ ಹೋಗಪ್ಪಾ......

ಲೀಲಾ : ಮಿ. ಸಂಜಯ್ ಊಟ ತೀರಿಸ್ಕೊಂಡೋಗ್ಬೋದಲ್ಲ

ಸಂಜಯ : ಏನಿಲ್ಲ ಬರ್ತೀನಿ.

ಲೀಲಾ : ಮುಂದಿನ ಸಾರಿ ಬರುವಾಗ ಖಂಡಿತ ಗಾಯತ್ರಿ ಕರ್ತರ್ತೀರಾ?

ಸಂಜಯ : ಅಯ್ಯೋ ಬಾರೆ ಅಂದ್ರೂ ಆಕೆ ಬರೋದಿಲ್ಲ. ಯಾಕೋ ಈಗೀಗ ಎಲ್ಲಿಗೂ ಹೋಗ್ತಾ ಇಲ್ಲ. ಇನ್ನೊಂದು ಸಾರಿ ಬರೋವಾಗ ಕರೆದುಕೊಂಡು ಬರುತ್ತೇನೆ.

ಎಲ್ಲರೂ : ಗುಡ್‌ನೈಟ್.

* * *

ಲೀಲಾ : ರೀ.... ರೀ...

ಕಿರಣ್ : ಏನೇ ನಿನ್ನ ತುತ್ತೂರಿ

ಲೀಲಾ : ಏನ್ರೀ ಸ್ವಲ್ಪ ಬೇಜಾರಾಯ್ತು ಅಂತ ಬಂದ್ರೆ ರೇಗ್ತೀರಲ್ಲಾ.

ಕಿರಣ್ : ಅಲ್ಲಾ ಇನ್ನೇನಾದ್ರೂ ಸಂಚೋ ಏನೋ ಅಂತಿದ್ದೆ.

ಲೀಲಾ : ಸರಿ ಹಂಚಿಗೆ ಮಾತ್ರ ಬರೋದು ಅಂತ ತಿಳ್ಕೊಂಡಿದ್ದೀರೇನು?

ಕಿರಣ್ : ಅಲ್ಲಾ ನೀನು ಬಂದಾಗ್ಲೇ ನಾನು ಅರ್ಥವಾಗ್ಬಿಡ್ತೀನಿ ಏಕೆ ಅನ್ನು.....

ಲೀಲಾ : ಅಕ್ಕಿ ಇಲ್ಲ, ಬೇಳೆ ಇಲ್ಲ ಅಂತ್ಲೇನು?

ಕಿರಣ್ : ಅಲ್ವೇ.....

ಲೀಲಾ : ಸದ್ಯ ಹಾಗೇನೂ ಇಲ್ಲ. ಕೆಲಸಗಳನ್ನೆಲ್ಲಾ ಮುಗಿಸಿ ಮಕ್ಕಳಿಗೆಲ್ಲಾ ತಿಂಡಿಕೊಟ್ಟು ಆಟಕ್ಕೆ ಕಳುಹಿಸ್ಬಿಟ್ಟು ಹಾಗೇ ಮಾತಾಡೋಣ ಅಂತ ಬಂದೆ.

ಕಿರಣ್ : ಸದ್ಯ ಮಾತಾಡುವೆಯಂತೆ.... ಅದೋ.... ತೆಗೆದೋ ನೋಡು, ಶುರು ಮಾಡಿದ್ರು ವಾದ್ಯಾನ.... ನಿನ್ನ ಸಂಗೀತಗಾರರು.

ಲೀಲಾ : ನಿಮ್ಮ ಕಾದಂಬರಿಗೆ ಒಳ್ಳೇ ಶುಭ ಸೂಚ್ನೆ ಆಯ್ತಲ್ವೇ?

ಕಿರಣ್ : ಲೇ.... ಏನು ಹೇಳ್ಬೇಕು ಅನ್ನೋದ್ಕೆ ನನ್ಗೆ ನಾಚ್ಗೆ ಆಗುತ್ತೆ, ಹೋಗೇ ಸ್ವಲ್ಪ ತೊಟ್ಟಿಲು ತೂಗು ಹೋಗೆ. ಆಮೇಲೆ ಇಬ್ಬರೂ ಕುಳಿತುಕೊಂಡು ಮಾತಾಡೋಣ.

ಲೀಲಾ : ಸದ್ಯ ಆ ಪುಣ್ಯ ತರ್ಲಿಲ್ವಲ್ಲಾ ಯಾವ ಹೊತ್ತೂ ಈ ಮಕ್ಕಳ ಸೇವೆ ಮಾಡುವುದರಲ್ಲೇ ಹಗಲು ಇರುಳು ತುಂಬಿ ಹೋಗುತ್ತೆ.

ಕಿರಣ್ : ಹುಟ್ಟಿರೋದೇ ಅದಕ್ಕೆ ತಾನೇ ಬಿಡು.

ಲೀಲಾ : (ಹೋಗುತ್ತಾ) ಸ್ವಲ್ಪ ಹೊತ್ತು ಸುಮ್ಮಿರ್ಗ್ರೋ..... ಮಲಗಿಕೊಳ್ಳಿ..... ನಿಮ್ಮ ಸಂತೈಸೋವರ್ಗೆ ತೋಳೆಲ್ಲಾ ಬಿದ್ದು ಹೋಗಿವೆ. ಮಲಗಿಕೊಳ್ರೋ ಒಂದು ಸ್ವಲ್ಪ ಹೊತ್ತಾದ್ರೂ ಉಸಿರು ಬಿಡ್ತಾ ಕುಳಿತುಕೊಳ್ತೀನೆ. ಯಾಕೆ ನನ್ನ ಇಷ್ಟೊಂದು ಹೊಟ್ಟೆಯುರಿಸ್ತೀರೀ?

ಕಿರಣ್ : ಅವು ಒಂದೇ ಬಾರಿಗೆ ಉಸಿರು ಬಿಡಿಸಿಬಿಡುತ್ತಾವೆ ಕಣೆ.

* * *

ಮಂಜು : ಅಪ್ಪಾ..... ಅಪ್ಪಾ....

ಕಿರಣ್ : ಅದೇನೋ ಬೆಪ್ಪಾ... ಅಪ್ಪಾ ಅಪ್ಪಾ ಅಂತ ಬಾಯ್ಬಿಟ್ಕೊಂಡು ಬಂದ್ಬಿಟ್ಯಲ್ಲ.

ಮಂಜು : ಈ ಹೊತ್ತು ನಮ್ಮ ಸ್ಕೂಲಿನಲ್ಲಿ ಇಂದ್ರಜಾಲ ತೋರಿಸ್ತಾರಂತೆ ಇಪ್ಪತ್ತೈದು ಪೈಸೆ ಕೊಡಪ್ಪ.

ಕಿರಣ್ : ಹೋಗೋ ಇಂದ್ರಜಾಲಾನೂ ನೋಡ್ಬೇಡ, ಮಹೇಂದ್ರಜಾಲಾನೂ ನೋಡ್ಬೇಡ, ಸದ್ಯ ಈಗ ತಾನೇ ಯಾರ್ನೋ ನೋಡೋಣಂತ ಇದ್ದೀನಿ. ಅಲ್ಲಿಗೋಗಕ್ಕೆ ಇಪ್ಪತ್ತೈದು ಪೈಸಾ ಇಲ್ಲ ಇನ್ನು ನಿನಗೆಲ್ಲಿ ತರ್ಲಿ?

ಮಂಜು : ಹೋಗಪ್ಪಾ ನೀನ್ಯಾವಾಗ್ಲೂ ಇಲ್ಲ ಅನ್ನೋದೆ.

ಕಿರಣ್ : ಇದ್ರಲ್ಲೇನೋ ಇದೆ ಅನ್ನೋದು.

ಮಂಜು : ಈಗ್ಲಾದ್ರೂ ಶುರು ಮಾಡು ಬರ್ಯೋಕೆ.

ಕಿರಣ್ : ಅಯ್ಯೋ ಹೋಗು ಸದ್ಯ. ಅಯ್ ತೂಥ್ ...... ಕ್ಷಾಮಸಾಲಕ್ಕೆ ಅದಿಕ ಮಾಸ ಅಂದಹಾಗಾಯ್ತು.... ಬರ್ಯೋಣ ಅಂದ್ರೆ ಇಂಕೇ ತೀರಿಹೋಗ್ಬೇಕೆ? ಏನೇ ಲೀಲಾ.... ನಿನ್ನನ್ನೇ ಕರೀತಾ ಇರೋದು.... ಬಂದ್ಯಾ.... ನೀನೊಂದಷ್ಟು ಚಿಲ್ರೆ ಇಟ್ಟಿದ್ರೆ ತಾರೆ.

ಲೀಲ : ಏಕೆ?

ಕಿರಣ್ : ಬರ್ಯೋಣ ಅಂದ್ರೆ ಇಂಕೇ ತೀರಿಹೋಯ್ತು. ಸ್ವಲ್ಪ ತರ್ಸೇ ನಿನ್ನ ಮಗನಿದ್ರೆ.

ಲೀಲ : ಅದಕ್ಕಾ.

ಕಿರಣ್ : ಏನ್ಮಾಡೋದು?

ಲೀಲ : ನಾನೇನೋ ಬೇಜಾರು ಒಂದು ಘಳಿಗೆ ತಮಾಷೆಯಾಗಿ ಮಾತಾಡೋಣ ಅಂತ ಬಂದೆ.

ಕಿರಣ್ : ನಿನಗೆ ತಮಾಷೆ.... ನನ್ಗೆ ಪ್ರಾಣಸಂಕಟ.... ಇನ್ನೂ ಕಾದಂಬರಿ ಮುಗಿಲಿಲ್ಲ.

ಲೀಲ : ಸದ್ಯ ಮುಗೀದಿರೋದೆ ಉತ್ತಮ. ಇನ್ನು ತರಿಸಿ ಕೊಟ್ಬಿಟ್ರೆ ಬರಯುತ್ತ ಕುಳಿತುಕೊಂಡ್ರೆ ಮಾತಾಡೋದೇನು?

ಕಿರಣ್ : ಹೋಗೇ ನನಗೆ ಡಿಸ್ಟರ್ಬ್ ಮಾಡ್ಬೇಡ.

ಲೀಲ : ಸದ್ಯ ನಾನೋಗಲ್ಲಪ್ಪಾ... ನನ್ಗೆ ಬೇಜಾರು.... ಆಮೇಲೆ ಬರೆಯುವಿರಂತೆ ಈಗ ಮಾತಾಡಿ.

ಕಿರಣ್ : ಏನೂ ಇಲ್ಲ ಅಂದ್ರೆ ಮಾತಾಡದ್ಯಾಕದ್ರೂ ಬಂದು ನನ್ನ ಕೆಲಸ ನಿಲ್ಲಿಸ್ಬೇಕು ಅಂತ ಬಂದು ಬಿಟ್ಯಲ್ಲಾ.

ಲೀಲ : ಏನ್ರೀ.... ಇನ್ನೂ ನಿಮ್ಮ ಕಾದಂಬರಿ ಮುಗೀಲೇ ಇಲ್ವಾ?

ಕಿರಣ್ : ಮುಗಿಯೋದೇನು ಬಂತು ಅದು ಮುಗಿಯದ ಕಾದಂಬರಿ.

ಲೀಲ : ಹೋಗ್ಲಿ.... ಮುಗಿಯದ ಕಾದಂಬರಿ ಅಂತ್ಲೇ ಹೆಸರಿಟ್ಟು ನೀವು ಕಾದಂಬರಿ ಬರೆಯಬಹುದಲ್ಲ,.

ಕಿರಣ್ : ಸದ್ಯ ಹಾಗೇ ಹಾಗಿದೆ. ಈ ನಿನ್ನ ವ್ಯವಹಾರವೂ ಸಹ....

ಲೀಲ : ಅಲ್ವೇ ಮುಗಿಯದ ಕಾದಂಬರಿ ಬರೆಯುವವರಿಗೆ ಮುಗಿಯದ ಪ್ರೀತಿ ಏನ್ರೀ.... ಸಾಹಿತಿಗಳೂ, ಕಲಾವಿದರೂ ಇವರ್ನ ಕಟ್ಕೊಂಡವ್ರ ಹಣೇ ಬರೆಹ ಇಷ್ಟು ಅಂತ ಕಾಣುತ್ತೆ. ತಮ್ಮ ಏಕಚಿತ್ತವೇ ಹೊರತು ನಮ್ಮ ಪ್ರೀತಿ ಗಂಗಮ್ಮನ ಪಾಡು ಮಾಡ್ಬಿಡ್ತಾರೆ ಸಾಕಪ್ಪ ಸಾಕು. ನಿಮ್ಮಂಥವ್ರ ಮದ್ವೇ ಆಗೋದು.

ಕಿರಣ್ : ಲೀಲಾ.... ಏನೇ.... ನೀನು?

ಲೀಲ : ಏನ್ರೀ ಹಾಗಂದ್ರೆ?

ಕಿರಣ್ : ಅಲ್ಲಾ ಐದು ಮಕ್ಕಳಾಯ್ತು. ಈಗ ಪಡೋ ಕಷ್ಟ ನೋಡಿದ್ರೆ ದೇವರಿಗೆ ಪ್ರೀತಿ. ಏನೇ ಇನ್ನಾದ್ರೆ ಆಯ್ತು ನಮಗೆ ಪ್ರಾಣಸಂಕ್ಟ.

(ಬೆಲ್ ಶಬ್ದ)

ಸಂಜಯ : ಕಿರಣ್.

ಕಿರಣ್ : ಬಂದಾ ಕಣೆ.

ಲೀಲ : ಯಾರು?

ಕಿರಣ್ : ಗ್ರಹಗತಿ.

ಲೀಲ : ಹಾಗಂದ್ರ್ಯಾರ್ರೀ?

ಕಿರಣ್ : ಸಂಜಯ್.

ಲೀಲ : ಬಂದ್ರೇನಾಯ್ತು ಎರಡು ಮಾತಾಡಿ ಕಳಿಸಿದ್ರಾಯ್ತು.

ಕಿರಣ್ : ಹಾಗಲ್ವೇ ಹತ್ತು ರೂಪಾಯಿಯನ್ನೂ ಕೊಟ್ಟು ಕಳುಹಿಸಬೇಕು.

ಲೀಲ : ಕೊಟ್ಟು ಕಳಿಸಿ.... ನಾನು ಬೇಡಾ ಅಂದ್ನೇನು?

ಕಿರಣ್ : ಒಳ್ಗಿಲ್ಲ ತೋಡಿಕ್ಕು ಅಂದ್ರೆ ನಾನೇನು ಮಾಡೋದು.

ಸಂಜಯ : ಕಿರಣ್...... (ಬಾಗಿಲು ತಟ್ಟುವ) ಕಿರಣ್.....

ಬಾರಪ್ಪಾ.... ಬಾ.... ಬಲು ಅಪರೂಪವಾಗ್ಬಿಟ್ಯಲ್ಲಾ.

ಸಂಜಯ : ಅಪರೂಪವಾಗಿ ಬಂದ್ರೂ ನಿನ್ಗೆ ಪ್ರಾಣ ಹೋದಾಗಾಗುತ್ತೇನು ಇನ್ನು ದಿನಾ ಬಂದ್ರೆ ಗತಿಯೇನು? ಇದೇನಯ್ಯಾ ಸಾಹಿತಿ ರೂಮೋ ದೇವಾಲಯವೋ..... ಏನು ಧೂಪ ಹಾಕಿದ್ದೀಯೆ? ಈ ಹಾಳು ಸಿಗರೇಟು ಹಚ್ಚಿಸಿ ಅದ್ಯಾಗಯ್ಯಾ ಒಳ್ಗಿದ್ದೀಯೇ?

ಕಿರಣ್ : ಸಾಹಿತಿ ಅಂದ್ರೆ ಒಂದಲ್ಲ ಒಂದು ಚಟ ನೋಡು, ಬೀಡಿ ಸಿಗರೇಟೋ ಏನಾದ್ರೂ ಇರಬೇಕು. ನನ್ಗೆ ಸಿಗರೇಟು ಕಾಫಿ ಚಟ.

ಸಂಜಯ : ಚಟ ಚಟ ಅಂತ ಚಟ್ಟಕ್ಕೇರ್ಬೇಡ್ವೋ.... ಸ್ವಲ್ಪ ಕಡಿಮೆ ಮಾಡು. ಅದಿರ್ಲಿ ಈಗ ನನಗೆ ಕೊಡಬೇಕಾದುದನ್ನು ಕೊಟ್ಬಿಡು.

ಲೀಲಾ : ಮಿ. ಸಂಜಯ್ ಮುಂದಿನ ತಿಂಗಳು ಏನೇ ಕಷ್ಟ ಬಂದರೂ ನಿಮಗೆ ಕೊಡಿಸಿಬಿಡ್ತೀನೆ ಸ್ವಲ್ಪ ಅಷ್ಟರ ತನಕ ನಿಧಾನಿಸಿ.

ಸಂಜಯ : ಏನಮ್ಮಾ ಮುಂದಿನ ತಿಂಗಳು ಅಂತ ಗೋಡೆ ಮೇಲಾದ್ರೂ ಬರೀರಿ ನಾನು ಕೇಳುವುದೂ ತಪ್ಪಿ ಹೋಗುತ್ತೆ.

ಲೀಲಾ : ಏಕೆ ಗಣಪತಿ ಶನಿಮಹಾತ್ಮನಿಗೆ ತಿರಮಂತ್ರ ಹಾಕಿದಾಗೆ ಆಗ್ಲಿ ಅಂತ್ಲಾ.

(ನಗುವರು)

ಸಂಜಯ : ಅಲ್ವೇ?

ಲೀಲಾ : ಹಾಗೆಲ್ಲಾ ತಿಳ್ಕೊಳ್ಬೇಡಿ.... ಸ್ವಲ್ಪ ಸುಧಾರಿಸಿಕೊಳ್ಳಿ....

ಸಂಜಯ : ಏನೋ ಎತ್ತೋ ಅದಿರ್ಲಿ ಕಾದಂಬರಿ ಎಷ್ಟಾಯ್ತಯ್ಯಾ?

ಕಿರಣ್ : ಒಂದು ಅರವತ್ತು ಪೇಜಿಗೆ ಬಂದಿದ್ದೇನೆ.

ಸಂಜಯ : ಹೇಗೆ ಬರೆದಿದ್ದೇಯೇ ನೋಡೋಣ ತೆಗೆದುಕೊಂಡು ಬಾರಯ್ಯ.

ಕಿರಣ್ : ತರ್‍ತೇನೆ ತಾಳು, ಲೀಲಾ... ಲೀಲಾ... ಎಲ್ಲೇ ನನ್ನ ಕಾದಂಬರಿ ಹಾಳೆಗಳು.

ಲೀಲಾ : ಎಲ್ಲಿ ಅಂದ್ರೇನು ಎಲ್ಲೋ ಹಾಳಾಗಿರ್ಬೇಕು. ನೋಡಿ ಅದೋ ಮಂಜು ಬರ್‍ತಾ ಇದ್ದಾನೆ ಕೇಳಿ.

ಕಿರಣ್ : ಲೋ ಮಂಜು ಬಾರೋ ಇಲ್ಲಿ.

ಮಂಜು : ಏನಪ್ಪಾ?

ಕಿರಣ್ : ನನ್ನ ಟೇಬಲ್ ಕೆಳಗೆ ಹಾಳೆಗಳಿಟ್ಟದ್ನಲ್ಲಾ ಅದನ್ನ ನೀನೇನಾದ್ರೂ ತೆಗೆದುಕೊಂಡ್ಯೇನೋ?

ಮಂಜು : ಹೌದಣ್ಣ ಯಾವುದೋ ವೇಸ್ಟ್ ಪೇಪರ್ ಅಂತ ತೆಗೆದುಕೊಂಡು ಬೆಳಿಗ್ಗೆ ಚಳಿ ಆಯ್ತಿತ್ತು ಅದಕ್ಕೆ ಉರಿಸ್ಬಿಟ್ಟೆ ರವಿ.

ಕಿರಣ್ : ಅಯ್ಯೋ ಕರ್ಮ ಏನ್ಬಂತೋ ನಿನ್ಗೆ ಹೊತ್ತು, ನಾನೆಷ್ಟು ಪ್ರಯಾಸದಿಂದ ಬರಿದಿಟ್ಟಿದ್ದೆ. ಏನೋ ನೀನು.

(ಹೊಡೆಯಲು ಅಳುತ್ತಾ)

ಮಂಜು : ನನಗೆ ಗೊತ್ತಿಲ್ಲಪ್ಪಾ... ಇನ್ಮೇಲೆ ಮುಟ್ಟೋದಿಲ್ಲ... ಮುಟ್ಟೋದಿಲ್ಲ.

ಕಿರಣ್ : ಒಳ್ಳೇ ಪೀಡೆ.... ತೊಲಗಿ ಆಚೆ....ನೋಡ್ದಪ್ಪಾ ಸಂಜಯ ನನ್ನ ಮಕ್ಕಳ್ನ.....

ಸಂಜಯ : ಅದ್ಕೇ ಅಲ್ವಯ್ಯಾ ಹೇಳೋದು.... ಮಕ್ಕಳು ಮನೆ ವಾರ್ತೆ ಮಾಡಿದರೆ ಅಪ್ಪನಿಗ್ಯಾಕೆ ಇಬ್ರೆಂಡ್ತೀರು ಅಂತ.... ಕೈಗೆ ಸಿಕ್ಕಿದರೆ ಬರೇನೇ ಹಾಕಿ ಬಿಡುತ್ತಾರೆ. ನಿನ್ನ ಮಕ್ಕಳು ಪರವಾಗಿಲ್ಲ ಬಲು ಚುರುಕು.

ಕಿರಣ್ : ಸದ್ಯ ಒಬ್ಬ ಹೆಂಡ್ತಿ ಮಕ್ಕಳ್ನೇ ನೋಡಕ್ಕಾಗ್ತಾ ಇಲ್ಲ ಇನ್ನು ಇಬ್ರೆಂಡ್ತೀರ ಮಕ್ಕಳನ್ನು ನಾನು ಏನು ಮಾಡೋದೋ ಏನೋ?

ಸಂಜಯ : ಸದ್ಯ ಇನ್ನೊಂದು ಮದ್ವೆ ಆಗೋಕ್ಕೆ ಸರ್ಕಾರದವ್ರೇ ಒಪ್ಪೋಲ್ಲ. ಅಲ್ಲಾ ಕಣಯ್ಯಾ ಇಷ್ಟು ಕಷ್ಟ, ಬೇಸರ ಅಂತೀಯಾ ಇನ್ನೂ ನಿನಗೆ ಮೂವತ್ತಾರು

ವರ್ಷಗಳು. ಹೀಗೇ ಆಗ್ತಾ ಹೋದ್ರೆ ಗತಿ ಏನು? ನಾನಾಗ಼್್ಲೇ ಹೇಳ್ದೆ......
ಕೇಳಿದ್ರ್ಯಾಕೆ ಹೀಗಾಗ್ಬೇಕಿತ್ತು? ಇಗ್ಲಾದ್ರೂ ಬಂತೇನು ಬುದ್ಧಿ?

ಲೀಲಾ : ಬರುತ್ತೆ ಇನ್ನೂ ನಾಲ್ಕಾದ್ಮೇಲೆ.

ಕಿರಣ್ : ಏನಯ್ಯಾ?

ಸಂಜಯ : ಅಲ್ಲಪ್ಪಾ ನೀನು ಮದ್ವೆ ಆಗೋಕು ಮೊದ್ಲು ಅದೆಷ್ಟು ಚೆನ್ನ ಚೆನ್ನಾಗಿರೋ ಕಾದಂಬರಿ ಬರ್ದೆ. ಒಂದೊಂದು ಮಕ್ಕಳಾಗ್ತಾ ಆಗ್ತಾ ಅದರ ಸಂಖ್ಯೇನೂ ಕಡಿಮೆಯಾಯ್ತಾ... ಸತ್ವಾನೂ ಕಡಿಮೆ ಆಯ್ತು.... ನಿನ್ನ "ಮಹಾಕ್ರಾಂತಿ" ಏನು ಅದ್ಭುತ ಕಾದಂಬರಿಯಯ್ಯ? ಅದ್ಕೆ ಅಲ್ವಾ ರಾಜ್ಯ ಪ್ರಶಸ್ತಿ ದೊರೆತದ್ದು. ನೀನು ಹೂಂ ಅನ್ನಪ್ಪಾ, ಕಾದಂಬರಿ ಬೇಗ ಮುಗಿಸಬಹುದು.

ಕಿರಣ್ : ಏನ್ಮಾಡೋದಯ್ಯಾ ಅದನ್ನ ನೆನಸ್ಕೊಂಡ್ರೆ ಮೈ ಝುಂ ಅನ್ನಿಸ್ತದೆ. ಮನಸ್ಸು ಒಂದು ಸ್ಥಿಮಿತವಿಲ್ಲ. ಈ ಮಕ್ಕಳ ಎಡೇಲಿ ಏನೂ ಮಾಡಕ್ಕೆ ಆಗ್ತಿಲ್ಲ. ಈ ಸಂಸಾರ ಭಾರವಾಗಿದೆ. ನೀವೆಲ್ಲಾ ಒಪ್ಪಿದ್ರೆ ಇನ್ನು ನನ್ದೇನಿದೆ, ಸದ್ಯ ಸಂಸಾರದ ಭಾರ ಕಡಿಮೆ ಆದ್ರೆ ಸಾಕು ಅನ್ನಿಸ್ತದೆ, ಈಗಿನ ಕಾದಂಬರಿಗೂ ಆಗಿನ ಕಾದಂಬರಿಗೂ ಹೋಲಿಸಿದ್ರೆ ನಾನು ಅಷ್ಟು ಮಟ್ಟಿಗೆ ಬರೀತಿದ್ನಾ ಅನ್ನಿಸ್ತದೆ.

ಸಂಜಯ : ಅದ್ಕೇ ಅಲ್ವೇ ಹೇಳೋದು ಮಿತವಾಗಿದ್ರೆ ಹಿತ ಅಂತ. ಸರಿ ನಾಳೆ ಬರ್ತೇನೆ.

ಲೀಲಾ : ನಾಳೆ ಬರುವಾಗ ನಿಮ್ಮ ಗಾಯಿತ್ರೀನ ಕರ್ತನ್ನಿ.

ಸಂಜಯ : ಆಗ಼್್ಲೆ ಹೇಳಿದ್ನಲ್ಲ ಆಕೆ ಬರೋದೇ ಇಲ್ಲ.

ಲೀಲಾ : ನಾಳೆ ಮಂಗಳಗೌರಿ ಹಬ್ಬ ಇದೆ ಕುಂಕುಮಕ್ಕೆ ಕರ್ಕೊಂಡ್ಬನ್ನಿ.

ಸಂಜಯ : ಆಗ್ಲಿ.

* * *

(ವಾಂತಿ ಮಾಡುವ ಶಬ್ದ)

ಕಿರಣ : ಏನೇ..... ಏನೇ.....?

ಲೀಲಾ : ಅಂಥದ್ದೇನು ಇಲ್ಲರೀ.....

ಕಿರಣ್ : ಏಕೆ ಮುಚ್ಚಿಡ್ತೀಯಾ? ನನಗೆ ಗೊತ್ತಿಲ್ಲ ಅಂತ ತಿಳ್ಕೊಂಡಿದ್ದೀಯಾ?

ಲೀಲಾ : ಏನು ಹೇಳಿ ಮತ್ತೆ?

ಕಿರಣ್ : ಹುತ್ತದ ಮಣ್ಣನ್ನು ಮುರಿದು ಮುಕ್ತಿದ್ದೆ ಅಷ್ಟೇ..... ಹಾಗಾದ್ರೆ ಮತ್ತೆ.....

ಲೀಲಾ : ಹೌದು..... ವಿಭೂತಿಘಟ್ಟಿ ಇರೋದು ಹಣೆಗೆ ಧರಿಸ್ಕೊಳ್ಳೋದ್ಕೆ ಅಂತ ಹೇಳ್ತಿದ್ರಲ್ಲಾ ಅದ್ಕೆ ನಾನು ಈ ಹುತ್ತದ ಮಣ್ಣು, ದೊಡ್ಡ ಕೆರೆ ಎರೆ ಮಣ್ಣೂ ತಿಂತಾ ಇದ್ದೀನಿ.

ಕಿರಣ್ : ಸರಿಹೋಯ್ತು ಬಿಡು.... ದೇವ್ರೇ ಗತಿ... ಐದಿತ್ತು.... ಅರ್ಧ ಡಜನ್‌ಗೆ ಸರಿಹೋಗುತ್ತೆ.

ಲೀಲಾ : ಅದಕ್ಕೆ ನಾನೇನು ಮಾಡ್ಲಿ? ಅದೆಲ್ಲಾ ನಿಮ್ಮ ತಪ್ಪು.

ಸಂಜಯ : ಹೌದಯ್ಯಾ......

ಕಿರಣ್ : ಬಾರಯ್ಯಾ.... ಸಂಜಯ, ಸಪೋರ್ಟಿಗೆ ನೀನು ಬೇರೆ ಬಂದ್ಯಾ?

ಲೀಲಾ : ಓಹೋ ಗಾಯತ್ರಿ.... ಚೆನ್ನಾಗಿದ್ದೀಯಾ?

ಗಾಯತ್ರಿ : ಏನೋ ಇಷ್ಟು ಮಾತ್ರ

ಲೀಲಾ : ಎಲ್ಲಾ ಅವರದೇ ತಪ್ಪು.

ಸಂಜಯ : ಸರಿ ಹೀಗೆ ಇಬ್ರೂ, ಈ ಸಾರಿ ತಪ್ಪು ಮುಂದಿನ ಸಾರಿ ಅವರದು ತಪ್ಪು ಅಂತ ಹೇಳ್ಕೊಂಡೋಗ್ತಿದ್ರೆ ಸಂಖ್ಯೆ ಮಾತ್ರ ಬೆಳೀತ್ಲೇ ಇರ್ತಾವೆ. ಸಾಲಾನೂ ಹಾಗೇ ಬೆಟ್ಟದ ಹಾಗೆ ಬೆಳೀತ ಹೋಗ್ತಾವೆ. ಈ ಕಷ್ಟ ಯಾಕೆ ಅಂತೀನಿ.

ಗಾಯಿತ್ರಿ : ಪಾಪ ಯಾಕ್ರೀ ಏನೇನೋ ಅಂತೀರಿ?

ಕಿರಣ್ : ಏನು ಮಾಡು ಅಂತೀಯಾ? ಸಾಲ ಮಾಡ್ಬೇಡ ಅಂತ ತಾನೇ?

ಸಂಜಯ : ಸಾಲಾನೂ ಬೇಡ ಹೆಚ್ಚಿಗೆ ಮಕ್ಳೂ ಬೇಡ..... ನಿನ್ನ ಮುಗಿಯದ ಕಾದಂಬರಿಯಾಗೆ ಮಕ್ಕಳೂ ಆಗ್ತಾ ಹೋದ್ರೆ ನಿನ್ನ ಜೀವನದ ಕಾದಂಬರಿಯೂ ಹಾಗೇ ಆಗುತ್ತೆ ನೋಡು.

ಲೀಲಾ : ಅದು ನಿಜ ಅನ್ನಿ.

ಕಿರಣ್ : ನಾನೇನೂ ಸುಳ್ಳು ಅಂತ ಹೇಳ್ಲಿಲ್ವಲ್ಲಾ. ನಾನು ಹೊಸಿಲು ದಾಟಿದ್ದೀನಿ. ಮಿಕ್ಕವ್ರು ಹೊಸಲಿನೊಳಗಿರುವಾಗ್ಲೆ ಅನುಸರಿಸ್ಲಿ.

(ಎಲ್ಲರೂ ನಗುವರು)

*

# ತಬ್ಬಲಿ

**ಪಾತ್ರ ವರ್ಗ**

೧. ಶ್ರೀಮತಿ - ಬಾಬುವಿನ ಹೆಂಡತಿ ೨. ಚೆನ್ನಜ್ಜಿ - ಬಾಬುವಿನ ಅಜ್ಜಿ ೩. ಸುಧಾ- ವಿಜಯನ ಹೆಂಡತಿ ೪. ಗುಣ - ಬಾಬುವಿನ ಮಗ ೫. ಬಾಬು - ಶ್ರೀಮತಿಯ ಗಂಡ ೬. ವಿಜಯ್ - ಸುಧಾಳ ಗಂಡ

(ಹರ್ಷ ಸಂಗೀತ)

ಶ್ರೀಮತಿ : ಚಂದಕ್ಕಿಮಾಮ
ಚಕ್ಕುಲಿಮಾಮ
ಬಾಬಾ ಚಂದಮಾಮ.... । ಬಾಬಾ ..... ಓಡಿ ಬಾ.....

ಬಾಬು : ಬಂದೆ ಬಂದೆ.....

ಶ್ರೀಮತಿ : ನಿಮ್ಮನ್ನೆಲ್ಲ ನಾನು ಕೂಗಿದ್ದು, ನಮ್ಮ ಮಗೂನ.....

ಬಾಬು : ಏನು ಶ್ರೀಮತಿಯವರೇ ಮಕ್ಕಳಾಡಿಸ್ತಾ ಕುಳಿತ್ಬಿಟ್ರಲ್ಲಾ.....

ಶ್ರೀಮತಿ : ಸಂತೋಷವಾಗಿ ಕಾಲ ನೂಕೋದಕ್ಕೆ ಮಕ್ಕಳಾಟ್ವೆ ನನ್ಗೆ ಸಾಧನ ಬಾಬು ಸಾಹೇಬ್ರೆ.

ಬಾಬು : ಹೇಗಾಡ್ತಾ ಇವೆ ನೋಡು.

ಶ್ರೀಮತಿ : ಅದ್ಕೆ ಅಲ್ವೇ ದೊಡ್ಡವ್ರು ಮಕ್ಕಳಾಟ ಅನ್ನೋದು. ಅದರಲ್ಲಿ ಮೈ ಮರೆತು ಬಿಟ್ರೆ ಪ್ರಪಂಚವೇ ಕಾಣೋಲ್ಲ.

ಬಾಬು : ನಾನು ಮೊದ್ಲೇ ಕಾಣೋಲ್ಲ.

ಶ್ರೀಮತಿ : ಸಾಕಪ್ಪ ನಿಮ್ಮ ಹಾಸ್ಯ, ಅದಿರ್ಲಿ ಈ ಹೊತ್ತು ತಾರೀಖು ಎಷ್ಟು?

ಬಾಬು : ಏಕೆ ಹೀಗೆ ಕೇಳ್ತೀಯೆ? ತಾರೀಖೂ ಮರ್ರೋಯ್ತೇ ನಿನ್ಗೆ.

ಶ್ರೀಮತಿ : ಹೌದು.

ಬಾಬು : ಈ ಹೊತ್ತು ಹದಿನೈದಲ್ವೇ?

ಶ್ರೀಮತಿ : ಹ್ಞಾಂ.... ಹದಿನೈದೇ?

ಬಾಬು : ಏಕೆ ಇಷ್ಟೊಂದು ಆಶ್ಚರ್ಯವಾಗಿ ಕೇಳ್ತೀಯೆ?

ಶ್ರೀಮತಿ : ಇಲ್ಲ.... ನನಗೇಕೋ ಸಂಕೋಚ.

ಬಾಬು : (ಕುಸಿಯುವ ದನಿಯಲ್ಲಿ) ಹ್ಞಾ..... ಹಾಗಾದರೆ....?

ಶ್ರೀಮತಿ : ನಾನೂ ಅದನ್ನೇ ಕೇಳುವುದು.

ಬಾಬು : (ಸ್ವಗತ) ಛೆ, ಛೇ. ಏನಪ್ಪಾ ಬಂತು ನಮ್ಮ ಅದೃಷ್ಟಕ್ಕೆ.....?

ಚೆನ್ನಜ್ಜಿ : (ಉಸಿರು ಬಿಟ್ಟು) ಹ್ಞೂ.... ಬಾಬೂ.... ಬಾಬೂ.....

ಬಾಬು : ಬಾ.... ಚೆನ್ನಜ್ಜಿ.... ಬಾ....

ಚೆನ್ನಜ್ಜಿ : ಇದೇನಪ್ಪಾ ಈ ಧ್ವನಿ.

ಬಾಬು : ಏನೂ ಇಲ್ಲ... ಅಜ್ಜಿ.

ಚೆನ್ನಜ್ಜಿ : ಯಾಕೋ ಇಬ್ಬರ ಮುಖಾನೂ ಒಂದು ತರಹವಿದೆಯಲ್ಲಾ.

ಬಾಬು : ಏನು ಹೇಳ್ಲಿ ಅಜ್ಜಿ. ನಿನ್ನ ಆಶೀರ್ವಾದ ಮೀರಿಹೋಯ್ತು.

ಚೆನ್ನಜ್ಜಿ : ಏನಪ್ಪಾ ನೀನೇಳ್ತಾ ಇರೋದು?

ಬಾಬು : ಶ್ರೀಮತಿ ಪುನಃ.....

ಚೆನ್ನಜ್ಜಿ : ಗರ್ಭಿಣೀನಾ....

ಬಾಬು : ಪ್ರಕಾಶ ಹುಟ್ಟಿದ ಮೇಲೆ ಐದು ವರ್ಷಗಳು ಮಕ್ಕಳೇ ಆಗ್ಲಿಲ್ಲ.... ಇನ್ನು ಆಗುವುದಿಲ್ಲ ಅಂತ ತಿಳ್ಕೊಂಡಿದ್ದೋ ಆದರೆ....

ಚೆನ್ನಜ್ಜಿ : ಈಗೇನು ಮಿಂಚಿಹೋಯ್ತು ಸುಮ್ನಿರು. ಇನ್ನೊಂದು ಹೆಣ್ಣಾದ್ರೆ ಆಗ್ಲಿ.... ನಿಮ್ಮ ಬಯಕೆ ತೀರುತ್ತೆ

ಬಾಬು : ಏನಜ್ಜಿ ನಮ್ಮ ತಂದೆಯ ಕತೆಯನ್ನು ನೀನೇ ಹೇಳ್ತೀಯಾ, ಗಂಡು ಪಡೆಯುವ ಪ್ರಯತ್ನದಲ್ಲಿ ನಾನು ಏಳನೆಯವನಾದೆ.... ಹಾಗೆ ನಾನು ಹೆಣ್ಣಿಗಾಗಿ ಕಾದೆ. ಆದರೆ.....

ಚೆನ್ನಜ್ಜಿ : ಈ ಸಾರಿ ಸಾಕು ಮಾಡಿಬಿಡು ಬಾಬು.... ಹೆಣ್ಣಾದ್ರೂ ಸರಿ ಗಂಡಾದ್ರೂ ಸರಿ.

ವಿಜಯ್ : ಇದೇನು ಚೆನ್ನಜ್ಜಿ ಸಂಭಾಷಣೆ.

ಚೆನ್ನಜ್ಜಿ : ಬನ್ನಿ..... ಬನ್ನಿ ವಿಜಯಪ್ಪನವ್ರೇ.... ನೀವು ನಾಲ್ಕನೇ ಮಗುವಿನ ತಾತನಾಗ್ತೀರಿ.

ವಿಜಯ್ : ಈ ಸಾರಿನಾದ್ರೂ ಒಂದು ಹೆಣ್ಣಾಗ್ಲಿ ಅಂತಾ ಎಲ್ಲರ ಬಾಯ್ನೂ ಸಿಹಿಮಾಡು.

ಬಾಬು : ಹೆಣ್ಣಾದ್ರೆ ಸಿಹಿ ಕೊಡೋಲ್ಲ.... ಖಾರ.... ಶ್ರೀಮತಿ ಹೋಗು ಹೋಗು ಮೈಸೂರಿನಿಂದ ಖಾರ ತಂದಿದ್ದೀವಲ್ಲಾ ಅದ್ನೆ ತಂದು ಹಂಚ್ಬಿಡು.

(ಎಲ್ಲರೂ ನಗುವರು - ಹರ್ಷ ಸಂಗೀತ)

* * *

ಬಾಬು : ಶ್ರೀಮತಿ, ಶ್ರೀಮತಿ, ಏನ್ಮಾಡ್ತಾ ಇದ್ದೀಯೆ?

ಶ್ರೀಮತಿ : ಏನ್ಮಾಡ್ಬೇಕು ಅಂತೀರಾ?

ಬಾಬು : ಯಾಕೆ ಈ ರೀತಿ ಕೋಪ?

ಶ್ರೀಮತಿ : ಸಾಕಪ್ಪಾ ಸಾಕು ಅನ್ನಿಸ್ಬಿಟ್ಟಿದೆ ನನ್ಗೆ ಜೀವನ

ಬಾಬು : ಏಕೆ? ನಿನ್ಗೇನೇ ಅಂತಹ ಕಷ್ಟವಾಗಿರೋದು?

ಶ್ರೀಮತಿ : ಕಷ್ಟ ಮನೆಯೊಳ್ಗಿರೋಳಿಗೆ ಗೊತ್ತು. ನಿಮ್ಗೇನು ಗೊತ್ತು?

ಬಾಬು : ಅಂತಹದ್ದೇನು ಕಷ್ಟ ಹೇಳೇ. ನಾನಿರುವಾಗ್ಲೆ ನಿನ್ಗೇಕೆ ಭಯ?

ಶ್ರೀಮತಿ : ಅಯ್ಯೋ ನನ್ಯಾಕೋ ಮೈಗೇ ಸರಿಯಿಲ್ಲ.... ಡಾಕ್ಟರ್ ಬಹಳ ವೀಕ್ ಅಂದಿದ್ದಾರೆ.

ಬಾಬು : ಟಾನಿಕ್...... ಹಣ್ಣು.... ತೆಗೆದುಕೋ ಅಂದ್ರೆ ನಿನ್ಗೆ ಕಷ್ಟ ಅಲ್ವೆ.....

ಶ್ರೀಮತಿ : ಏನ್ಮಾಡ್ಲಿ ಏನ್ ತೆಗೆದುಕೊಂಡ್ರೂ ಎಲ್ಲಾ ವಾಂತಿಯಾಗ್ತಾ ಇದೆಯಲ್ಲಾ, ದೇವರು ಅನ್ನ ಕೊಟ್ಟಿದ್ರೂ ತಿಂದು ಅರಗಿಸಿಕೊಳ್ಳುವ ಆರೋಗ್ಯವನ್ನು ಕೊಡ್ಲಿಲ್ವಲ್ಲಾ ಏನ್ಮಾಡ್ಲಿ?

ಬಾಬು : ಹೋಗ್ಲಿ ನೀನು ಹೆಚ್ಚಿಗೆ ಕೆಲಸ ಮಾಡ್ಬೇಡ ಸ್ವಲ್ಪ ವಿಶ್ರಾಂತಿ ತೆಗೆದುಕೋ ಸರಿಹೋಗುತ್ತದೆ.

ಶ್ರೀಮತಿ : ನನಗೆ ಇದೊಂದೇ ಕಷ್ಟವಾಗಿದ್ದರೆ ಹೇಗೋ ಸೈರಿಸಿಕೊಳ್ಳಬಹುದಾಗಿತ್ತು.

ಬಾಬು : ಇನ್ನೇನು ಕಷ್ಟ ಹೇಳು.

ಶ್ರೀಮತಿ : ನಿಮ್ಮ ಸುಪುತ್ರರ ಕಾಟ ತಡೆಯಲಾಗದಪ್ಪಾ ತಡೆಯಲಾಗದು. ಮನೆ ತುಂಬಾ ಅವವ ಹುಯ್ಲೋ.... ಹುಯ್ಲು.... ಒಂದು ತಿಂಡಿ ತಿನ್ನೋದಕ್ಕೆ ಊಟ ಮಾಡೋದ್ಕೆ ಹೊಡ್ದಾಡ್ತಾರೆ.... ಒಬ್ಬನ ಮೇಲೊಬ್ಬ ಬಿದ್ದು ಕುಸ್ತಿ... ಮನೆ ತುಂಬಾ ರಣರಂಗ ಮಾಡ್ತಾರೆ.

ಬಾಬು : ನಾಲ್ಕು ಬಿಗ್ದಿದ್ರಾಗೋಲ್ವೆ......

ಶ್ರೀಮತಿ : ಊಂ ಅನ್ನೋಕ್ಕೆ ನನ್ಗೆ ಉಸ್ರಿಲ್ಲಾ ಅನ್ನುವಾಗ ಅವರ್ಗೆ ಬಿಗಿಯೋಷ್ಟು ಶಕ್ತಿ ನನ್ಗಿಲ್ಲ. ಅದಿರ್ಲಿ ಗುಣ ಏನ್ ಕೆಲ್ಸ ಮಾಡಿದ್ದಾನೆ ಗೊತ್ತೆ?

ಬಾಬು : ಏನು ಮಾಡಿದ್ದಾನೆ?

ಶ್ರೀಮತಿ : ಬೀರುವಿನಲ್ಲಿ ಹತ್ತು ರೂಪಾಯಿ ಹೇಳ್ದೇ ಕೇಳ್ದೇ ತೆಗೆದುಕೊಂಡು ಹೋಗಿದ್ದಾನೆ.

ಬಾಬು : ಅವನಿಗೆ ಈ ಹೊತ್ತು ಹುಟ್ಲಿಲ್ಲಾ ಅನ್ನಿಸ್ಬಿಡ್ತೀನಿ ತಾಳು....

ಶ್ರೀಮತಿ : ಹೋಗ್ಲಿ ಬಿಡಿ.... ಇದೊಂದು ಬಾರಿ....

ಬಾಬು : ಬಿಟ್ರೆ ಆಗೋಲ್ವೆ..... 'ದಂಡಂ ದಶಗುಣಂ ಅಂತ' ಬೀಳ್ತಿರ್ಬೇಕು. ಮಕ್ಕಳನ್ನು ಅಷ್ಟಾಗಿ ಪೂತನಿಸಬಾರದು. ಸರಿಯಾದ ಬಿಗಿಯಲ್ಲಿ ಇಟ್ಟಿರಬೇಕು. ತಿನ್ನುವುದನ್ನು ತಿನ್ನಿಸಬೇಕು ಉಣ್ಣುವುದನ್ನು ಉಣ್ಣಿಸಬೇಕು, ಆದ್ರೆ ಈ ಕಳ್ತನ ಸುಳ್ತನ ಕಲಿಯಲು ಬಿಡಬಾರದು.

ಶ್ರೀಮತಿ : ಅದು ಹಿಂದಿನ ಕಾಲಕ್ಕೋಯ್ತು, ಈಗಿನ ಕಾಲದ ಹುಡುಗರು..... ಕೇಳೋವ್ರಲ್ಲ.

ಬಾಬು : ತಾಳು ಇಲ್ಲಿ ನೀನು ಉಬ್ಬಿ ಹೀಗ್ಮಾಡಿದ್ದೀಯೆ.... ಗುಣಾ.... ಬಾ ಇಲ್ಲಿ... ಬಾ ಇಲ್ಲಿ

ಗುಣ : ಏನಣ್ಣಾ....

ಬಾಬು : ಏನ್ಮಾಡಿದ್ದೀಯೆ?

ಗುಣ : ಏನೂ ಇಲ್ಲ.

ಬಾಬು : ಬೀರುವಿನಲ್ಲಿ ಹತ್ತು ರೂಪಾಯಿ ತೆಗೆದುಕೊಂಡೆಯಂತೇ, ಅಮ್ಮನ್ನ ಕೇಳ್ದೆ.

ಗುಣ : ಇಲ್ಲ.... ಅಣ್ಣಾ.....

ಬಾಬು : ಸುಳ್ಳು ಬೇರೆ ಹೇಳ್ತೀಯಾ.....

(ಹೊಡೆಯಲು... ಅಳಲಾರಂಭಿಸುವನು)

ಗುಣ : ಅಣ್ಣಾ ಹೊಡೀಬೇಡ.... ಹೊಡೀಬೇಡಾ... ಹೇಳ್ತೇನೆ.

ಶ್ರೀಮತಿ : ಹೋಗ್ಲಿ ಬಿಡಿ..... ಇನ್ನೊಂದು ಸಾರಿ ಮಾಡೋಲ್ಲ.

ಬಾಬು : ನೀನು ಸುಮ್ನಿರು ಶ್ರೀಮತಿ ಹಾಗೆಲ್ಲಾ ತಡೀಬೇಡ. ಮಕ್ಕಳು ಚಿಕ್ಕಂದಿನಲ್ಲಿ ಕಲಿತದ್ದೇ ಮುಂದೆ ಬರೋದು.

ಶ್ರೀಮತಿ : ಬಾರೋ.... ಬಾ.... ಮಾಡುವಾಗ ಮಾಡ್ತೀರಿ... ಆಮೇಲೆ ಸುಳ್ಳು ಬೇರೆ ಹೇಳ್ತೀರಿ.

ಬಾಬು : ಸರಿಯಾಗಿ ನಾವು ಹೇಳ್ದಾಗೆ ಕೇಳಿಕೊಂಡು ಇರುಹಾಗಿದ್ರೆ ಇರ್ಬೇಕು ಇಲ್ದೇ ಹೋದ್ರೆ....

ಶ್ರೀಮತಿ : ಸಾಕು ಸುಮ್ನಿ.... ರಿ ಏನೋ ಇದೊಂದು ಸಾರಿ ತಿಳೀದೇ ಮಾಡ್ಬಿಟ್ಟ ಹೋಗೋ ಹೋಗು.... ಎಲ್ಲಾದ್ರೂ ಆಡಿಕೊಂಡು ಬಾ ಹೋಗು.....

(ಅಳುತ್ತಾ ಹೊರಡುವನು)

* * *

ಶ್ರೀಮತಿ : ಇದೇನು ಇಷ್ಟೊತ್ತಾದ್ರೂ ಗುಣಾ ಬರ್ಲೇ ಇಲ್ಲ. ಎಲ್ಲಿ ಮುನಿಸಿಕೊಂಡು ಹೋದ್ನೋ ಅಯ್ಯೋ.... ನಾನ್ಯಾಕೆ ಅವರಿಗೆ ಹೇಳ್ದೆ.... ಛೀ .... ಈ ರೋಗದ ಜತೆ ಈ ಮಕ್ಕಳದೊಂದು ಚಿಂತೆ ಏನ್ಮಾಡ್ಲಿ....?

ಸುಧಾ : ಶ್ರೀಮತೀ... ಶ್ರೀಮತೀ....

ಶ್ರೀಮತಿ : ಏನತ್ತೆ?

ಸುಧಾ : ಗುಣ ಸ್ಕೂಲಿನಿಂದ ಬಂದ್ನೇ....?

ಶ್ರೀಮತಿ : ಇನ್ನೂ ಬರ್ಲೇ ಇಲ್ಲ ಅತ್ತೆ..... ನಾನು ಅವನ್ಗೇ ಕಾಯ್ತಾ ಇದ್ದೇನೆ.

ಸುಧಾ : ಇಷ್ಟೊತ್ತಾದ್ರೂ ಯಾಕೆ ಬರ್ಲಿಲ್ಲಾ.

ಶ್ರೀಮತಿ : ಎಲ್ಲೋ ಆಟ ಆಡ್ತಾ ನಿಂತಿದ್ದಾನೆ.

ಸುಧಾ : ನಾನು ಹಾಗೇ ತಿಳ್ಕೊಂಡಿದ್ದೆ.... ಆದ್ರೆ ಘಂಟೆ ಎಂಟಾಯ್ತು ಇಷ್ಟೊತ್ತಿನತನ್ಕ ಬರ್ಬೇಕೆ?

ಶ್ರೀಮತಿ : ಏನೋ.... ಮುನಸ್ಕೊಂಡು ಜೊತ್ಗಾರರರ ಮನೆಯಲ್ಲಿರಬಹುದು.

ಸುಧಾ : ಏಕೆ? ಯಾರು ಏನಂದ್ರು ಶ್ರೀಮತಿ?

ಶ್ರೀಮತಿ : ಅದೇ ನೆನ್ನೆ ಬೀರುವಿನಲ್ಲಿ ಹತ್ತು ರೂಪಾಯಿ ತೆಗೆದುಕೊಂಡಿದ್ದ, ಅದ್ಕೆ ಹೀಗೆಲ್ಲಾ ಕಳ್ತನ ಈಗ್ಲೇ ಕಲಿತೀಯಾ ಅಂತ ನಾಲ್ಕು ಹೊಡೆದ್ರು. ಅದ್ಕೆ ಇರ್ಬೇಕು. ಅದೋ ಅವನ ತಂದೇನೆ ಬರ್ತಾ ಇದ್ದಾರೆ ಕೇಳಿ.

ಬಾಬು : ಏನು?

ಶ್ರೀಮತಿ : ನಿಮ್ಮ ಮಗ ಸ್ಕೂಲಿಂದ ಬರ್ಲೇ ಇಲ್ಲ.

ಸುಧಾ : ಹಾಗನ್ಬೇಡ ಹೋಗು. ಮೊದ್ಲು ಹೋಗ್ ನೋಡು....

ಬಾಬು : ಆಗ್ಲಿ ಅಮ್ಮಾ ಈಗ್ಲೆ ಹೋಗಿ ಎಲ್ಲಿದ್ರೂ ಹುಡ್ಕಿ ಕರ್ಕೊಂಡ್ಬರ್ತೀನಿ.

(ಹೊರಡುವನು)

ಸುಧಾ : ಶ್ರೀಮತಿ.... ಶ್ರೀಮತಿ.... ಏಕಮ್ಮಾ ಯೋಚ್ನೆ ಮಾಡ್ತಾ ಕುಳಿತಿದ್ದೀಯೆ? ಏಳು ಊಟ ಮಾಡುವಿಯಂತೆ.....

ಶ್ರೀಮತಿ : ನನಗೆ ಹಸಿವಿಲ್ಲಾ ನೀವು ಹೋಗಿ ಊಟ ಮಾಡಿ ಅತ್ತೆ.

ಸುಧಾ : ಬರ್ತಾನೆ ಬಾರಮ್ಮಾ..... ಯಾರ್ಮನೇಲೋ ಇದ್ದಾನೆ....

ಶ್ರೀಮತಿ : ಅವ್ನು ಹಾಗೆಲ್ಲಾ ಇರೋವ್ನಲ್ಲ ಅತ್ತೆ.... ಅವ್ನು ಸ್ವಲ್ಪ ಪ್ರಚಂಡ..... ಊರನ್ನೇ ಬಿಟ್ಟು ಹೋಗಿದ್ದಾನೋ ಏನೋ....

ಸುಧಾ : ಸುಮ್ನೆ ಏನೇನೋ ಹಂಬಲಿಸಬೇಡ ಸುಮ್ನಿರು ಶ್ರೀಮತಿ.

ಶ್ರೀಮತಿ : ನೀವು ಹೋಗಿ ಊಟ ಮಾಡಿ ಅತ್ತೆ.... ನನ್ನ ಗಂಟಲಿಗೆ ಇಳಿಯೋ ಹಾಗಿಲ್ಲ. ಅವನು ಬರೋವರೆಗೂ ನನಗೆ ಸಮಾಧಾನವಿಲ್ಲ ಅತ್ತೆ.... ಸಮಾಧಾನವಿಲ್ಲ.

(ದುಗುಡದಲ್ಲಿ)

ಸುಧಾ : ಇನ್ನೇನು ಬಾಬು ಕರ್ಕೊಂಡೇ ಬರ್ತಾನೆ ಸುಮ್ನಿರು... ಅದೋ ಬಾಬು ಬರ್ತಾ ಇದ್ದಾನೆ. ಬಾಬು.... ಎಲ್ಲಿ ಗುಣ? ಏಕೆ? ಸಿಗಲಿಲ್ಲವೇ?

ಶ್ರೀಮತಿ : ಕರೆತರಲಿಲ್ಲವೇ? ಮಾತಾಡಿ ನಾನು ಹೇಳಲಿಲ್ಲವೇ ಅತ್ತೆಯವರೇ? ಅವನು ಊರು ಬಿಟ್ಟು ಹೋಗಿರಬೇಕು.

ಸುಧಾ : ಬಾಬು.... ಸಿಗಲಿಲ್ಲವೇ ಗುಣ?

ಬಾಬು : ಅಮ್ಮಾ.... (ದುಗುಡದಿಂದ) ಊರನ್ನೆಲ್ಲಾ ಸುತ್ತಿಬಿಟ್ಟೆ.... ಎಲ್ಲರ ಮನೆಯನ್ನೂ, ತೋಟವನ್ನೂ ಹುಡುಕಿಬಿಟ್ಟೆ. ಆದರೆ ಎಲ್ಲೂ ಗುಣ ಕಾಣಲಿಲ್ಲ.... ಕಾಣ....ಲಿ.....ಲ್ಲ .... ಅಮ್ಮ.....

ಶ್ರೀಮತಿ : ನೋಡಿದಿರಾ.... ಅತ್ತೇ.... ನೋಡಿದಿರಾ?

ಬಾಬು : ಪೋಲೀಸಿನವರಿಗೆಲ್ಲಾ ತಿಳಿಸಿದೆ ಎಲ್ಲಿದ್ದರೂ ಹುಡುಕಿಸುತ್ತೇವೆ ಎಂದಿದ್ದಾರೆ.

ಶ್ರೀಮತಿ : ಗುಣಾ..... ನಿನ್ನ ತಾಯಿಯನ್ನೂ ಬಿಟ್ಟು ಹೊರಟುಬಿಟ್ಟೆಯಾ? ಗುಣಾ.... ಗುಣಾ....

ಸುಧಾ : ಸುಮ್ನಿರೂ ಶ್ರೀಮತಿ..... ಗುಣ ಬಂದೇ ಬರ್ತಾನೆ.

ವಿಜಯ್ : ಬಾಬು.... ಏಳಪ್ಪಾ.... ತಿರುಗಿ ತಿರುಗಿ ಬಳಲಿದ್ದೀಯೆ ಸ್ವಲ್ಪ ಮಜ್ಜಿಗೆ ಅನ್ನವನ್ನಾದರೂ ಊಟ ಮಾಡುವೆಯಂತೆ.

ಬಾಬು : ನನಗೊಂದು ಬೇಡ

ವಿಜಯ : ಏಳು ಬಾಬು. ನಾಳೆ ಹುಡುಕಿಸುತ್ತೇನೆ......

ಬಾಬು : ಇಲ್ಲಾ ಅಪ್ಪಾಜೀ... ದಯವಿಟ್ಟು ನನ್ನ ಬೆಂದ ಹೃದಯವನ್ನು ಬೆದಕಬೇಡಿ. ನನಗೆ ಊಟ ಬೇಕಿಲ್ಲ ಹೋಗಿ....

(ಆಕಳಿಸುತ್ತಾ ಮಲಗುವನು)

ಬಾಬು : (ಬಾಗಿಲು ತಟ್ಟುತ್ತಾ) ಅಮ್ಮಾ.... ಅಮ್ಮಾ....

ಸುಧಾ : ಬಾ ಬಾಬು ಬಾ....

ವಿಜಯ್ : ಏನು ಬಹಳ ಸಂತೋಷವಾಗಿದ್ದೀಯಲ್ಲಾ.....?

ಸುಧಾ : ಹೌದು ನನಗೂ ಹಾಗೇ ಅನ್ನಿಸುತ್ತಿದೆ.

ಬಾಬು : ನನಗೂ ಹಾಗೇ ಆಗಿದೆ ಅಣ್ಣಾ.... ನನಗೆ ಎಂ.ಎ. ಫಸ್ಟ್ ಕ್ಲಾಸ್ ಆಯ್ತು.

ವಿಜಯ್ : ಬಹಳ ಸಂತೋಷ.

ಸುಧಾ : ಸರಿ ಇನ್ನೇನು ಈ ವರ್ಷಾ ತಾನೇ.

ಬಾಬು : ಕೆಲಸಾನೇ....

ವಿಜಯ್ : ಕೆಲ್ಸವೆಲ್ಲಿ.... ಈಗ್ಲೆ ಸಿಕ್ಕುತ್ತೆ.... ನಾನೇಳಿದ್ದು ಮದ್ವೆ.

ಬಾಬು : ನಾನು ಪಿಹೆಚ್.ಡಿ. ಮಾಡ್ಬೇಕು ಆಮೇಲೆ ಮುಂದಿನ ಯೋಚನೆ.

ವಿಜಯ್ : ಚೆನ್ನಜ್ಜಿ ಬರ್‍ತಾ ಇದ್ದಾರೆ ಅವರನ್ನೇ ಕೇಳಪ್ಪಾ ಅವ್ರು ಒಪ್ಪಿದ್ರೆ ಸರೀತಾನೇ....

ಚೆನ್ನಜ್ಜಿ : (ಸ್ವಗತ) ಹ್ಞಾಂ.... ಬಾಬು ಎಷ್ಟು ಬೇಗನೆ ಬೆಳೆದು ದೊಡ್ಡವನಾಗಿದ್ದಾನೆ.... ಛಿ ಛೀ.... ನನ್ನ ಕಣ್ಣು ಸಿಡಿಯಾ.... ಕಣ್ಣೇಸ್ರಾದೀತು ನನ್ ಬಾಬುವಿಗೆ.... ಆ್ಞಂ.... ಏನಪ್ಪಾ ತಕರಾರು?

ಚೆನ್ನಜ್ಜಿ : ಏಕಪ್ಪಾ ಬಾಬು ಆಗೋಲ್ಲ ಅಂತೀಯಾ.

ಬಾಬು : ಮದುವೆ ಆಗ್ದೆ ಇರೋಕ್ಕಾಗುತ್ಯಾ ಅಜ್ಜಿ... ಪ್ರಕೃತಿಗೆ ತದ್ವಿರುದ್ಧವಾಗಿ ನಡೆಯಲಿಕ್ಕಾಗುತ್ಯಾ.... ಈಗ ನನಗೆ ಕೇವಲ ೨೩ ವರ್ಷ ಆಗಿದೆ, ಈಗ್ಲೇ ಏನು ಆತುರ? ಇನ್ನು ನಾಲ್ಕೈದು ವರ್ಷ ತಡೆಯಲಿ ಅಂದ್ರೆ ನಮ್ಮಂತಹವರು ಮದುವೆ ವಯಸ್ಸನ್ನು ಸ್ವಲ್ಪ ಏರಿಸಿದರೆ ದೇಶಕ್ಕೆ ಮಿತ ಸಂತಾನವಾಗುವುದು ಅಂತ ನನ್ನ ಅಭಿಪ್ರಾಯ.

ಚೆನ್ನಜ್ಜಿ : ಆದ್ರೇನಾಯ್ತು ಬಿಡು ಒಳ್ಳೆ ಸಂಯಮದಿಂದ ನಡೆದರೆ ಸಂತಾನ ಮಿತವಾಗಿಯೇ ಇರುತ್ತೆ.

ಬಾಬು : ನೀನು ಸರಿ ಅಜ್ಜಿ, ನೋಡೋಣ ನಾನ್ಬರ್‍ತೀನೆ ಅಜ್ಜಿ ನನ್ನ ಸ್ನೇಹಿತರು ಕಾದಿದ್ದಾರೆ.

ಮಹೇಶ : (ಬಾಬು ಮನೆಗೆ ಪ್ರವೇಶಿಸಿ) ಸುಶೀಲಾ.... ಸು.... ಶೀ.... ಲಾ (ಹುಚ್ಚನಂತೆ ನಗುವನು) ಬಾರೆ.... ಬಾ .... ನನ್ನ ಕಂದ್ರೆ... ಕೋಪಾನೇ..... ಬಾ.... ಬಾ....

ಬಾಬು : ಯಾರಯ್ಯಾ ನಡೆ.... ಆಚೆ.... ದೊಣ್ಣೆ ತರ್‍ತೀನಿ ತಾಳು.

ಚೆನ್ನಜ್ಜಿ : (ಬರುತ್ತಾ ದುಗುಡದಿಂದ) ಬಾಬು ಬಾಬು.... ತಡೆ ಸ್ವಲ್ಪ.... ಮಹೇಶ್ ಬೇಡ.... ಹೊರ್‍ಹೋಗಪ್ಪಾ.... ಹೊರ್‍ಹೋಗು....

ಮಂಜು : ದೊಣ್ಣೆ ತಗೊಂಡು ಬರ್‍ತೀಯಾ... ಬಾ.... ಬಾ.... (ಬೀಳುವನು)

ಚೆನ್ನಜ್ಜಿ : ಬಾಬು.... ಬಿದ್ದ.... ರಕ್ತ ಸುರಿತಾ ಇದೆ ತಣ್ಣೀರು, ಒಂದು ಚೂರು ಬಟ್ಟೆ ತೆಗೆದುಕೊಂಡು ಬಾರಪ್ಪ.

ಬಾಬು : ತೆಗೊಳ್ಳಜ್ಜಿ.... ಹಾಕು.... ಯಾಕಜ್ಜೀ ಕಣ್ಣೀರು?

ಚೆನ್ನಜ್ಜಿ : ಹೌದು ಬಾಬು.... ಹೌದು.... ಈತನು ನಿಮ್ಮ.... ಯಾರೆಂದು ಹೇಳಲಿ ಅವನ ವಿಧಿಗೆ ಯಾರು ಹೊಣೆ ಹೇಳು.... ಬಾಬು... ನಾನೇನು ಹೇಳ್ಬೇಕು

ಅಂತಾ ತೋಚ್ತಾ ಇಲ್ಲಪ್ಪಾ. ನಿನ್ನನ್ನು ನೋಡ್ಬೇಕು ಅನ್ನೋ ಆಸೇಲಿ ದಿನಾ ಬರ್‍ತಾನಪ್ಪಾ. ಈ ಹುಚ್ಚನೇ ನಿಮ್ಮ ತಂದೆ!

ಬಾಬು : ತಂದೆ....!

ಚೆನ್ನಜ್ಜಿ : ಹೌದು. ಮಗು ಹೌದು. ಅದೊಂದು ದುಃಖದ ಕಥೆ, ಅದನ್ನು ಹೇಳಿದರೇನು ಪ್ರಯೋಜನ? ಆತನನ್ನು ಮೊದಲು ಹುಚ್ಚಾಸ್ಪತ್ರೆಗೆ ಸೇರಿಸಿ ಗುಣಮುಖವಾಗಿ ಮಾಡು, ಅದು ನಿನ್ನ ಕರ್ತವ್ಯ.

ಬಾಬು : ಆಗಲಿ ಅಜ್ಜೀ, ಅದೇನು ಆ ಕತೆ ಹೇಳಜ್ಜಿ.

ಚೆನ್ನಜ್ಜಿ : ಹೆತ್ತವರಿಗಿಂತ ಸಾಕಿದವರಿಗೆ ಹೆಚ್ಚು ಪ್ರೀತಿ ಬಾಬು.... ಅನಾಥನಾದ ನಿನ್ನನ್ನು ಸಾಕಿದವಳು ನಾನು. ಆ ಕೈಗಳು ಇನ್ನೂ ಹತ್ತಿರ ಕರೆಯುತ್ತಿವೆ.

ಬಾಬು : ಹಾಗಾದರೆ ನಾನು ವಿಜಯಣ್ಣ ಸುಧಾರವರ ಮಗನಲ್ಲವೇ?

ಚೆನ್ನಜ್ಜಿ : ಈಗ ನೀನು ಅವರ ಮಗನಾಗಿದ್ದರೂ ನಿನ್ನ ಚರಿತ್ರೆಯೇ ಬೇರೆ ಮಗು.

ಬಾಬು : ಅದೇನು ಹೇಳಜ್ಜಿ....

ಚೆನ್ನಜ್ಜಿ : ಮಗೂ.... ನಿಮ್ಮ ತಂದೆ ಈತನೇ ಮಹೇಶ್.... ತಾಯಿ ಸುಶೀಲ.... ಅವರಿಗೆ ೬ ಜನ ಹೆಣ್ಣು ಮಕ್ಕಳು, ಗಂಡು ಮಗುವಿಗಾಗಿ ಆಶಿಸಿ ಕೊನೆಯದಾಗಿ ಜನ್ಮಿಸಿದ ಪುತ್ರನೇ ನೀನು. ನಿಮ್ಮ ತಂದೆ ಬಡತನದಲ್ಲಿ ಬೆಂದು ಬಳಲಿ ಹೆಣ್ಣು ಮಕ್ಕಳ ಮದುವೆಯನ್ನು ಮಾಡಲಾರದೆ ಕೊನೆಗೆ ದೊಡ್ಡ ಸಂಸಾರವನ್ನು ತೂಗಿಸಲು ಸಾಧ್ಯವಿಲ್ಲದೆ ಬಹಳ ಕಷ್ಟದಲ್ಲಿದ್ದನು. ತಾಯಿ ಇವುಗಳನ್ನು ನೋಡಲಾರದೆ ಒಂದು ದಿನ ಅರ್ಧ ರಾತ್ರಿಯ ಸಮಯದಲ್ಲಿ ಎದ್ದು ಬಾವಿಗೆ ದೇಹವನ್ನರ್ಪಿಸಿದಳು. ಹೆಣ್ಣು ಮಕ್ಕಳು ಆಕೆಯನ್ನು ಹಿಂಬಾಲಿಸಿದರು. ನೀನು ಮತ್ತು ನಿಮ್ಮ ತಂದೆ ಬೇರೆ ಕಡೆ ಮಲಗಿ ನಿದ್ರಿಸುತ್ತಿದ್ದಿರಿ ಬೆಳಿಗ್ಗೆ ವಿಷಯ ಗೊತ್ತಾಯಿತು. ನಿಮ್ಮ ಮನೆಯನ್ನು ಸಾಲಿಗರು ಬಂದು ಆಕ್ರಮಿಸಿದರು, ನಿಮ್ಮ ತಂದೆಗೆ ಹುಚ್ಚು ಹಿಡಿಯಿತು. ಆಗ ನಾನೇ ನಿನ್ನನ್ನು ಸಾಕುತ್ತಾ ಬಂದೆ. ನಿನ್ನನ್ನು ಕರೆದುಕೊಂಡು ಒಂದು ದಿನ ಈ ಊರಿಗೆ ಬಂದೆ. ಅಂದು ಕಾರ್ತೀಕ ಸೋಮವಾರ ಸೋಮನಾಥ ದೇವಾಲಯದಲ್ಲಿ ಲಕ್ಷ ಹಣತೆಗಳು ಉರಿಯುತ್ತಾ ಹೊಂಬೆಳಕನ್ನು ಸೂಸುತ್ತಿದ್ದವು. ಘಂಟೆ ಜಾಗಟೆಗಳ ಶಬ್ದ ಶುಭ ಸೂಚನೆಗಳನ್ನು ಸೂಚಿಸುತ್ತಿದ್ದುವು. ಮಕ್ಕಳಿಲ್ಲದ ಸಾಹುಕಾರ ದಂಪತಿಗಳಾದ ವಿಜಯಣ್ಣ ಮತ್ತು ಸುಧಾರು ಅಂದಿನ ಪೂಜೆ ಮುಗಿಸಿ ಬರುವಾಗ ನಿನ್ನೊಬ್ಬನನ್ನೇ ನೋಡಿ-

ಸುಧಾ : ನೋಡಿ ಯಾವುದೋ ಮಗು ಈ ಹತ್ತು ಘಂಟೆಯ ರಾತ್ರಿಯಲ್ಲಿ ಅದೆಷ್ಟು ಮುಗ್ಧತೆಯಿಂದ ಏಕಾಂತದಲ್ಲಿ ಕುಳಿತು ಪುಟ್ಟ ಕೈಗಳಲ್ಲಿ ದೊನ್ನೆ ಹಿಡಿದು

ಮೊಸರನ್ನವನ್ನು ತಿನ್ನುತ್ತಿದೆ? ಇಂತಹ ಮಗುವನ್ನು ಹೆತ್ತು ಹೊತ್ತು ಸಾಕಿ ಸಲುಹುವ ದಿನವೆಂದಿಗೆ ಬರುವುದೋ ಏನೋ?

ವಿಜಯ್ : ಆ ಸೋಮನಾಥನು ಕಣ್ಣು ಬಿಟ್ಟರೆ ಒಂದೇ ಕ್ಷಣದಲ್ಲಿ ಆಗುತ್ತೆ ಸುಧಾ.

ಸುಧಾ : ಆ ಮಗುವಿನ ಮೊಗವನ್ನು ನೋಡಿ, ಅದೆಷ್ಟು ಮುಗ್ಧತೆ ಉಲ್ಲಾಸಗಳಿಂದ ತುಂಬಿ ಪ್ರಕೃತಿಯ ಮಡಿಲಲ್ಲಿ ಕುಳಿತು ಸಾಕ್ಷಾತ್ ಸೋಮನಾಥನೇ ಬಾಲಲೀಲೆ ತೋರುವಂತಿದೆ. ಹೆಣ್ಣು ಹೂವನ್ನು ಎಷ್ಟು ಬಯಸುತ್ತಾಳೋ ಅದಕ್ಕಿಂತ ಹೆಚ್ಚಾಗಿ ಮಗುವನ್ನು ಬಯಸುವುದು ಸಹಜವಲ್ಲವೇ ವಿಜಯ್?

ವಿಜಯ್ : ಹೌದು ಆದರೆ ನನಗಾವ ಕಾಲ, ದಿನಗಳಾಗಿವೆ ಸುಧಾ. ಇಂದಲ್ಲ ನಾಳೆ ಆಗುತ್ತದೆ ಸುಮ್ಮನಿರು ಅದಕ್ಕೇಕೆ ಇಷ್ಟೊಂದು ಯೋಚಿಸುತ್ತೀಯೆ?

ಸುಧಾ : ವಿಜಯ್ ನಮ್ಮ ಮದುವೆಯಾಗಿ ಇಂದಿಗೆ ಆರು ವರ್ಷಗಳು ಸಂದವು. ಆದರೆ ಇನ್ನು ಮಕ್ಕಳಿಲ್ಲವೆಂದರೆ ಹೆಣ್ಣಿನ ಮನಸ್ಸು ಸುಮ್ಮನಿರುವುದೇ? ಒಳಗೊಳಗೆ ಕೊರೆಯುತ್ತಿದೆ. ಮಕ್ಕಳನ್ನು ಹೆತ್ತ ತಾಯಿಯನ್ನು ನೋಡಿದರೆ....(ದುಗುಡ)

ವಿಜಯ್ : ಸುಧಾ ಅದೆಷ್ಟು ಜನಗಳಿಗೆ ಮದುವೆಯಾದ ಹತ್ತು ಹದಿನಾಲ್ಕು ವರ್ಷಗಳಾದ ಮೇಲೆ ಮಕ್ಕಳಾಗಿಲ್ಲ. ಸುಗ್ಗವ್ವೆಯು ಹರೆಯ ಕಳೆದ ಮೇಲೆ ತಾಯಿಯಾಗಲಿಲ್ಲವೇ?

ಸುಧಾ : ಹಾಗಾದರೆ, ನನ್ನನ್ನೂ ಮುದಿತನದಲ್ಲಿ ತಾಯಿಯಾಗು ಎಂದು ಹೇಳುತ್ತೀರಾ?

ವಿಜಯ್ : ಹಾಗಲ್ಲ... ಸುಧಾ... ನಿನ್ನ ಸಮಾಧಾನಕ್ಕೆ ಹೇಳಿದ ಮಾತು.

ಸುಧಾ : ಈ ಮಗು ಯಾರದು? ಇವರ ತಂದೆ- ತಾಯಿ ಯಾರೂ ಬರಲೇ ಇಲ್ಲವಲ್ಲ.

ವಿಜಯ್ : ಈ ಮಗುವು ಸಾಮಾನ್ಯ ಮಗುವಾಗಿದ್ದರೆ ಇಷ್ಟೊಂದು ಮುಗ್ಧತೆ ಧೈರ್ಯದಿಂದಿರುತ್ತಿರಲಿಲ್ಲ. ಇದರಲ್ಲಿ ಏನೋ ವಿಶೇಷ ಅಡಗಿರಬೇಕು

ಸುಧಾ : ಮಗುವಿನ ಬಣ್ಣ ನೋಡಿ, ಕಿತ್ತಳೆ ಹಣ್ಣಿನಂತಿದೆ. ಕತ್ತಿನಲ್ಲಿ ಶೋಭಿಸುತ್ತಿರುವ ಆ ಕಾಶೀದಾರವನ್ನು ನೋಡಿ ಅದೆಷ್ಟು ಹೊಂದಿಕೊಂಡಿದೆ.

ವಿಜಯ್ : ಸುಮ್ನಿರು ಸುಧಾ.... ಕಣ್ಣೇಸರಾದೀತು ಮಗುವಿಗೆ....

ಸುಧಾ : ಏಕೆ ಕಣ್ಣೀರು?

ವಿಜಯ್ : ಇದು ಆನಂದಭಾಷ್ಪ.... ನಿನ್ನ ಕಣ್ಗಳಲ್ಲೂ....

ಸುಧಾ : ಹೌದು ಆನಂದಭಾಷ್ಪ. ನಮಗಾದರೂ ದೇವರು ಈ ಭಾಗ್ಯವನ್ನು ಕೊಡದಿದ್ದರೆ, ಆ ಭಾಗ್ಯವನ್ನು ಹೊಂದಿ ಪಡೆದವರ ಮಕ್ಕಳನ್ನು ನೋಡಿಯಾದರೂ ಆನಂದಭಾಷ್ಪ ಸುರಿಸಬಾರದೆ?

ವಿಜಯ್ : ಸುಧಾ..... ನನ್ನ ಹೃದಯ ವೇದನೆಯನ್ನು ಹೇಗೆ ಸೈರಿಸಲಿ?

ಸುಧಾ : ಗಂಡಿನ ಹೃದಯಕ್ಕೇ ಇಷ್ಟೊಂದು ವೇದನೆಯಾದರೆ ಇನ್ನು ಹೆಂಗರುಳಿಗೆ ಹೇಗಿರಬೇಕು ವಿಜಯ್?

ಮಗು : ಅಮ್ಮಾ....

ಸುಧಾ : ಹ್ಞಾಂ.... ಅಮ್ಮಾ.... ನಾನು ಹೆತ್ತ ಮಗುವಿನಿಂದ ಅಮ್ಮಾ ಎನ್ನಿಸಿಕೊಳ್ಳುವ ಭಾಗ್ಯವಿಲ್ಲದಿದ್ದರೂ ಬೇರೆಯವರ ಮಕ್ಕಳ ಬಾಯಿಂದಲಾದರೂ 'ಅಮ್ಮಾ' ಎಂದು ಕೂಗಿಸಿಕೊಂಡು ನನ್ನ ಜೀವನವನ್ನು ಸಾರ್ಥಕ ಮಾಡಿಕೊಳ್ಳುತ್ತೇನೆ.

ವಿಜಯ್ : ಇಲ್ಲ ಸುಧಾ.... ಆತನ ಕರುಣೆಯಿಲ್ಲದೆ ಈ ಲೀಲೆಗಳು ನಡೆಯವು. ಆತನ ಕರುಣೆ ನಮ್ಮ ಮೇಲೆ ಬಂದು ಈ ಮಗುವನ್ನು ನಮಗಾಗಿಯೇ ಕರುಣಿಸಿರಬೇಕು. ನಮ್ಮ ವೇದನೆ ಅರ್ಥವಾಗಿರಬೇಕು, ಮನ ನಾಟಿರಬೇಕು.... ಅದಕ್ಕೆ ಈ ಮಗುವನ್ನು ಇಲ್ಲಿಟ್ಟಿರಬೇಕು.

ಸುಧಾ : ಎಲ್ಲಾ ಆ ಸೋಮನಾಥನ ಕೃಪೆ. ಈ ಮಗುವಿನಿಂದಲಾರದರೂ ನನಗೆ ಇಂದು ಸಮಾಧಾನ, ಆತ್ಮಶಾಂತಿ ದೊರೆತು ಮನಸ್ಸಿನ ದುಃಖವೆಲ್ಲಾ ಕಳೆದು ಸಂತೋಷವಾಗಿದೆ.

ಮಗು : ಅಮ್ಮಾ.... ಅಮ್ಮಾ....

ಸುಧಾ : ಮಗೂ... ಮಗೂ... ಬಾ.... ಬಾ... ಬಾ... ನಿನ್ನ ಹೆಸರೇನಪ್ಪಾ....?

ವಿಜಯ್ : (ಆನಂದದಿಂದ) ಬಾ... ಬಾ.... ಬಾಬು.... (ಎಂದು ತೊದಲ್ನುಡಿಯುತ್ತದೆ...)

* * *

ಚೆನ್ನಜ್ಜಿ : ಮಕ್ಕಳಿಲ್ಲದ ಆ ದಂಪತಿಗಳು ಅಂದು ಪೂಜೆಮಾಡಿ ಬರುವಾಗ ನಿನ್ನನ್ನು ಕರೆದುಕೊಂಡರು. ನನ್ನ ಮನಸ್ಸು ನಿನ್ನನ್ನು ಕರೆದುಕೊಂಡು ಹೋಗಲೋ ಬಿಡಲೋ ಎಂಬ ತುಮಲದಲ್ಲಿ ತೂಗಾಡಿತು. ಸಾಹುಕಾರರ ಮನೆಯಲ್ಲೇ ಸುಖವಾಗಿ ಬೆಳೆಯಲಿ ಎಂದು ಬಿಟ್ಟೆ, ಆದರೆ ಪ್ರತಿದಿನಾ ಬಾಬು ನಿನ್ನನ್ನು ನೋಡಿಕೊಂಡು ಹೋಗುವುದು, ಆಡಿಸುವುದು ಮಾಡುತ್ತಾ ಮನಸ್ಸನ್ನು ನೆಮ್ಮದಿ ಮಾಡಿಕೊಂಡೆ, ಆದುದರಿಂದ ಸಾಕಿದ ಮನಸ್ಸು ನಿನ್ನನ್ನು ಬಿಟ್ಟಿರದು ಬಾಬು....

ಬಾಬು : ತಬ್ಬಲಿಯನ್ನು ಸಾಕಿದ ನಿನ್ನ ಋಣವನ್ನು ಹೇಗೆ ತೀರಿಸಲಿ ಅಜ್ಜಿ?

ಚೆನ್ನಜ್ಜಿ : ನಾನು ಇಹವನ್ನು ತ್ಯಜಿಸುವುದಕ್ಕೆ ಮೊದಲು ನನ್ನ ಕಣ್ಣೆದುರಿಗೆ ನಿನ್ನ ಮದುವೆಯನ್ನು ನೋಡಬೇಕು. ನಿನ್ನ ಮಕ್ಕಳನ್ನು ಎತ್ತಿ ಆಡಿಸಬೇಕೆಂಬ ಆಸೆ ಇದೆ ಅದನ್ನು ತೀರಿಸು ಸಾಕು ಬಾಬು.

ಬಾಬು : ಏಕಜ್ಜಿ..... ಹೀಗನ್ತೀಯಾ? ನಿನ್ನ ಮಾತಿಗೆ ಒಪ್ಪಿದ್ದೇನೆ ಅಜ್ಜಿ.

ಚೆನ್ನಜ್ಜಿ : ಬಹಳ ಸಂತೋಷಾಪ್ಪ. ಅದೋ ನಿಮ್ಮಮ್ಮ ಸುಧಾ ಬರುತ್ತಿದ್ದಾರೆ.

ಸುಧಾ : ಅದಕ್ಕೇ ಹೇಳೋದು ಯಾರು ಯಾರು ಹೇಳ್ಬೇಕೋ ಅವರು ಹೇಳಿದ್ರೇ ಕೆಲ್ಸ ಆಗೋದೂಂತಾ.

ಚೆನ್ನಜ್ಜಿ : ಇನ್ನು ಹೆಣ್ಣು ನೋಡೋದೊಂದೇ ಬಾಕಿ.

ಸುಧಾ : ಹೆಣ್ಣು ನೋಡಾಗಿದೆ ಮೈಸೂರಿನಲ್ಲಿ ಶ್ರೀಮತಿಯನ್ನು.

(ಎಲ್ಲರೂ ನಗುವರು)

(ನಾದಸ್ವರ - ಮದುವೆಯ ಓಲಗ)

* * *

ಚೆನ್ನಜ್ಜಿ : ಬಾಬು ಮೊದ್ಲು ನಿಮ್ಮ ತಂದೆತಾಯಿಗಳಿಗೆ ನಮಸ್ಕಾರ ಮಾಡಪ್ಪಾ.

ಬಾಬು : ಎಲ್ಲರಿಗಿಂತ ದೊಡ್ಡವಳು ನೀನಜ್ಜಿ, ನಿನ್ಗೆ ಮೊದ್ಲು ಆಮೇಲೆ ಅವರು.

ಚೆನ್ನಜ್ಜಿ : ಆಗ್ಲಪ್ಪಾ, ನಿನ್ಗೆ ಒಳ್ಳೆಯದಾಗಲಿ ನೂರು ವರ್ಷ ಬಾಳಪ್ಪಾ. ನೀನು ಮುತ್ತೈದೆಯಾಗಿ ಬಾಳು ತಾಯಿ. ಮಗೂ ನಿನ್ನ ತಂದೆಯ ಹಾಗೆ ಹೆಚ್ಚಿಗೆ ಮಕ್ಕಳ ಪುಣ್ಯ ಮಾತ್ರ ಬೇಡಪ್ಪಾ, ಮುತ್ತಿನಂತ ಎರಡೊ, ಮೂರೋ ಸಾಕು.

ಸುಧಾ : ಎರಡೂ ಹೆಣ್ಣೋ ಅಥವಾ ಗಂಡಾದ್ರೇ.

ಬಾಬು : ಏನೇ ಆಗ್ಲಿ ನನ್ಗಂತೂ ಎರಡೇ ಸಾಕು. ಗಂಡಾದ್ರೆ ಹೆಣ್ಣಿನ ಡ್ರೆಸ್ ಹಾಕಿ ನೋಡ್ತೇನೆ, ಹೆಣ್ಣಾದ್ರೆ ಗಂಡು ಡ್ರೆಸ್ ಹಾಕಿ ನೋಡಿ ಸಂತೋಷ ಪಡ್ತೇವೆ.

ಚೆನ್ನಜ್ಜಿ : ಹಾಗಲ್ಲಪ್ಪ ಹೆಣ್ಣಾದ್ರೆ ಅಳಿಯನನ್ನು ಪಡೆದು ಮಗ ಅಂತ ತಿಳ್ಕೋ ಗಂಡಾದ್ರೆ ಸೊಸೆ ತಂದು ಹೆಣ್ಣು ಅಂತ ತಿಳ್ಕೊಂಡ್ರಾಯ್ತು.

(ಎಲ್ಲರೂ ನಗುವರು - ಹರ್ಷಸಂಗೀತ)

* * *

(ಆಕಳಿಸುತ್ತಾ ಬಾಬು ಮೇಲೇಳುವನು ಅಷ್ಟು ಹೊತ್ತಿಗೆ ಸುಧಾ ಬಂದು)

ಸುಧಾ : ಬಾಬು....

ಬಾಬು : ಏನಮ್ಮಾ?

ಸುಧಾ : ಬಾಬು.... ಬೇಗ ಏಳಪ್ಪಾ... ಶ್ರೀಮತಿಗೆ ಹೆರಿಗೆ ಬೇನೆ, ಜೊತೆಗೆ ಗುಣಾ, ಗುಣಾ ಅಂತ ಕನವರಿಸ್ತಾ ಇದ್ದಾಳೆ, ಬೇಗನೆ ಹೋಗಿ, ಡಾಕ್ಟರ್‌ನ ಕರೆದುಕೊಂಡು ಬಾ.

ಬಾಬು : ಆಗ್ಲಿ ಅಮ್ಮಾ

ಶ್ರೀಮತಿ : ಗುಣಾ... ಗುಣಾ.... ಅಯ್ಯೋ.....

ಸುಧಾ : ಶ್ರೀಮತಿ ಸುಮ್ನೆ ಯೋಚಿಸಬೇಡಮ್ಮಾ ಬಂದು ಬಿಡುತ್ತಾನೆ ಯೋಚ್ನೆ ಮಾಡ್ಬೇಡ.

ಶ್ರೀಮತಿ : ಅಯ್ಯೋ.... ಗುಣಾ.... ನಿನ್ಗೆ ಅಪ್ಪ ಬೇಡ್ವೆ ಹೋದ್ರು, ಅಮ್ಮನ್ನಾದ್ರೂ ನೋಡೋಕ್ಕೆ ಬರ್ಬಾರ್ದೇನೋ.

ಸುಧಾ : ಡಾಕ್ಟರ್ ಬಂದ್ರು ಸುಮ್ನಿರಮ್ಮಾ

ಶ್ರೀಮತಿ : ಗುಣಾ.... ಗುಣಾ... (ಹೆರಿಗೆಯಾಯಿತು)

ಸುಧಾ : ಡಾಕ್ಟರ್ ಏನು? ಏಕೆ ಮೌನ....

ಲೇಡಿ ಡಾಕ್ಟರ್ : ಹೆರಿಗೆಯಾಯ್ತಮ್ಮಾ.... ಆದರೆ.... ಆಕೆ ಇಹವನ್ನು ತ್ಯಜಿಸಿದಳು.....

(ಎಲ್ಲರೂ 'ಶ್ರೀಮತಿ ..... ಶ್ರೀಮತಿ' ಎಂದು ಗೋಳಿಡುವರು)

* * *

ಬಾಬು : ಚೆನ್ನಜ್ಜಿ..... ಚೆನ್ನಜ್ಜಿ.... ನಿನ್ನ ಮಾತು ಕೇಳಿದ್ರೆ ಹೀಗಾಗುತ್ತಿರಲಿಲ್ಲ.... ನನ್ನ ಶ್ರೀಮತಿ ಬದುಕಿಕೊಳ್ಳುತ್ತಿದ್ದಳು. ನಾನು ಪಾಪಿ.... ಅವಿವೇಕಿ.

ಚೆನ್ನಜ್ಜಿ : ಬಾಬು ಆಕೆಗೆ ಅದೊಂದೇ ಅಲ್ಲ ಗುಣನ ಯೋಚನೆಯೂ ಬಹಳವಾಗಿ ಸೇರಿ ಇಹವನ್ನು ತ್ಯಜಿಸಿದಳು.

ಬಾಬು : ಚೆನ್ನಜ್ಜೀ...... ನನ್ನ ಮನೆ ಕತ್ತಲಾಯಿತು.... ಚೆನ್ನಜ್ಜೀ.....

ಚೆನ್ನಜ್ಜಿ : ಅದೋ ನಿನ್ನ ಮನೆಯನ್ನು ಬೆಳಗಲು ನಿನ್ನ ಗುಣಾ ಬರುತ್ತಿದ್ದಾನೆ.

ಗುಣ : ಅಪ್ಪಾಜೀ...... ಅಪ್ಪಾಜೀ..... (ಗೋಳಿಡುತ್ತಾ) ನನ್ನ ಕ್ಷಮಿಸಿ ಅಪ್ಪಾಜೀ.

ಬಾಬು : ಗುಣಾ.... ಈಗ ಬಂದುದಾದರೂ ಏಕೆ?

ಗುಣ : ಅಪ್ಪಾಜೀ.... ನಾನು ಪಾಪಿ.... ಚಂಡಾಲ.... ತಾಯಿಯ ಫೋಟೋ ಪೇಪರಿನಲ್ಲಿ ನೋಡಿ ಓಡೋಡಿ ಬಂದೆ ಅಪ್ಪಾಜೀ.... ಹೀಗಾಗುತ್ತೆ ಅಂತ ಮೊದಲೇ ಗೊತ್ತಿದ್ದರೆ ನಾನು ಹೋಗುತ್ತಿರಲಿಲ್ಲ.... ಅಪ್ಪಾಜೀ.... ಹೋಗುತ್ತಿರಲಿಲ್ಲ.

ಬಾಬು : ಗುಣಾ..... ನಮ್ಮ ತಂದೆಗೆ ಮಿತ ಸಂಸಾರವಿದ್ದಿದ್ದರೆ ನಾನು ತಬ್ಬಲಿಯಾಗುತ್ತಿರಲಿಲ್ಲ. ಈಗ ನಾನು ಮಿತ ಸಂಸಾರವನ್ನನುಸರಿಸಿದ್ದರೆ ನೀನು ತಬ್ಬಲಿಯಾಗುತ್ತಿರಲಿಲ್ಲ. ಆದರೆ ಈಗ ನೀನು ನಿಮ್ಮ ತಂದೆಯ ಕೈಯಿಂದ ಬೆಳೆಯುವೆ ಯೋಚಿಸಬೇಡ..... ಮಗು..... ಯೋಚಿಸಬೇಡ.

ಗುಣ : ಅಪ್ಪಾಜೀ..... ನನ್ನಂತಹ ಅಪರಾಧಿಗಳು ಸಮಾಜದಲ್ಲಿ ಅದೆಷ್ಟೋ..... ಅವರು ಬುದ್ಧಿ ಕಲಿತು, ತಮ್ಮ ತಪ್ಪನ್ನು ಅರಿತು ಸನ್ಮಾರ್ಗಿಗಳಾಗಿ ನಡೆಯಲಿ. ಇಲ್ಲದಿದ್ದರೆ ಇದರಿಂದ ಅನೇಕ ಅನಾಹುತಗಳಾಗುತ್ತದೆಂಬುದಕ್ಕೆ ನನ್ನ ಕತೆಯೇ ಮಾದರಿಯಾಗಿದೆ.

ಬಾಬು : ಹೋಗು ಗುಣಾ..... ನಿನ್ನ ತಾಯಿಯ ಫೋಟೋವಿಗಾದರೂ ಕೈ ಮುಗಿದು ಆಕೆಯ ಆತ್ಮಕ್ಕೆ ಶಾಂತಿಯುಂಟಾಗಲೆಂದು ದೇವರಲ್ಲಿ ಬೇಡು..... ಹೋಗು....

ಗುಣ : ಆಗಲಿ.... ಅಪ್ಪಾಜೀ.... ಅಮ್ಮಾ ನಾನು ಮಾಡಿದ ತಪ್ಪನ್ನು ಕ್ಷಮಿಸಿ ಬಿಡಮ್ಮಾ... ನಿನ್ನ ಸಾವಿಗೆ ನಾನೇ ಕಾರಣನಾದೆ. ನಿನಗೆ ಪರಲೋಕದಲ್ಲಾದರೂ ಶಾಂತಿಯುಂಟುಮಾಡಲೆಂದು ಆ ದೇವರನ್ನು ಪ್ರಾರ್ಥಿಸುತ್ತಿದ್ದೇನೆ..... ಅಮ್ಮಾ....

*

# ನಾಲ್ಕನೆಯ ಮಗಳು

**ಪಾತ್ರ ವರ್ಗ**

೧. ಹೇಮಾ-ಪುಲಕೇಶಿ : ಪ್ರೇಮಿಗಳು ೨. ನೀಲಾ - ಜಯಣ್ಣನ ಹೆಂಡತಿ ೩. ಪಾತು - ನಾಗಣ್ಣನ ಹೆಂಡತಿ ೪. ತಾಯವ್ವ - ಪಾತು ಪಕ್ಕದ ಮನೆಯಾಕೆ ೫. ಜಯಣ್ಣ - ನೀಲಾಳ ಗಂಡ ೬. ನಾಗಣ್ಣ - ರಾಜಣ್ಣನ ಮಿತ್ರ ೭. ರಾಜಣ್ಣ - ಜಯಣ್ಣನ ಮಿತ್ರ

ಹೇಮ : ರಾಜಾಧಿರಾಜ ಮಹಾರಾಜ ವೀರ ಪುಲಕೇಶಿ ಮಹಾಪ್ರಭುಗಳಿಗೆ ಜೈಪರಾಕ್.... ಜೈ ಪರಾಕ್....

ಪುಲಕೇಶಿ : ಹೇಮ, ಇದು ಸಧ್ಯಕ್ಕೆ ಆಸ್ಥಾನವಲ್ಲ.

ಹೇಮ : ನಿಮ್ಮ ಸ್ವಸ್ಥಾನ ಎಂಬುದು ಗೊತ್ತಾಗಿಯೇ ಹೇಳಿದುದು.

ಪುಲ : ರಾಜ ಮಹಾರಾಜರ ಕಾಲವೇ ಹೋದಮೇಲೆ ಇನ್ನೆಂಥ ಜೈ ಪರಾಕ್.

ಹೇಮ : ನೀವು ಬಾದಾಮಿಯ ರಾಜರಲ್ದೇ ಹೋದ್ರು ನನಗೆ ನೀವು ರಾಜ್ರೇ.... ನಾನು.....

ಪುಲ : ನಿಮ್ಮ ರಾಣಿ ಅಂತ ಹೇಳು....

ಹೇಮ : ನೀವೇ ಹೇಳಿದ್ರಲ್ಲಾ....

ಪುಲ : ಏನು ರಾಜ.... ರಾಣಿ? ಈ ನದಿದಂಡೆಯಲ್ಲಿ ಕುಳಿತು.....

ಹೇಮ : ಹಿಂದೆ ರಾಜಾಸ್ಥಾನದಲ್ಲಿತ್ತು. ಈಗ ನದಿ ದಂಡೆಯಲ್ಲೇ... ಎಲ್ಲಾ ದಂಪತಿಗಳೂ ರಾಜ ರಾಣಿಯರೇ.

ಪುಲ : ಆದ್ರೆ ನನಗೆ ಒಂದು ಅನುಮಾನ ಹೇಮ.

ಹೇಮ : ಏನಂತೀರಾ?

ಪುಲ : ರಾಜಾಧಿರಾಜರುಗಳನ್ನ ಕಿತ್ತು ಹಾಕಿದ ಹಾಗೆ ನಮ್ಮಿಬ್ಬರ ಪ್ರೀತಿನೂ ಯಾರಾದ್ರೂ ಕಿತ್ತು ಹಾಕಿಬಿಟ್ರೆ ಗತಿ ಏನು ಅಂತಾ.....?

ಹೇಮ : ಅದು ಯಾರಿಂದಲೂ ಸಾಧ್ಯವಿಲ್ಲ. ಈ ಸ್ಥಳದಲ್ಲೇ ನಮ್ಮಿಬ್ಬರ ಸಂಕಲ್ಪ ಇಂದು ಈ ನದಿಯ ಹತ್ತಿರ ನೆರವೇರಲಿ!

ಪುಲ : ಹಾಗಾಗದೇ ಇರಲಿ ಎಂಬುದೇ ನನ್ನ ಹಾರೈಕೆ.

ಹೇಮ : ನಮ್ಮಿಬ್ಬರ ಮನಸ್ಸು ಗಟ್ಟಿ ಮಾಡಿ ಛಲ ಹೂಡಿದರೆ ಯಾವ ಬ್ರಹ್ಮಬಂದ್ರೂ ನಮ್ಮಿಬ್ಬರ ಸಂಬಂಧದ ಗಂಟನ್ನು ಬಿಚ್ಚಲಾರ.

ಪುಲ : ನಮ್ಮಿಬ್ಬರ ಪ್ರೇಮ ಆ ನದಿ ಹರಿದು ಹೋಗುವಂತೆ ಸತತವಾಗಿರಬೇಕು. ಆ ಹಕ್ಕಿಗಳು ತಮ್ಮ ಪ್ರೇಮ ಚಿರ ಎಂಬ ಗೀತೆಯನ್ನು ಹಾಡುತ್ತಿರುವಂತಿರಬೇಕು. ಈ ಗಾಳಿ ಬೀಸುತ್ತಿರುವಂತೆ ನಿರಂತರವಾಗಿರಬೇಕು.

ಹೇಮ : ಅಂತೂ ನಿಮ್ಮ ಕಲ್ಪನೆ ಕವಿಗಳಿಗೂ ಒಂದು ಪಾಲು ಹೆಚ್ಚೇ!

ಪುಲ : ರಾಜರ ಸ್ಥಾನ ಕಿತ್ತು ಹಾಕಿದ ಮೇಲೆ ಕವಿ ಸ್ಥಾನ ಕೊಡ್ತಾ ಇದ್ದೀಯೆ, ಆಮೇಲೆ ಕವಿ ಸ್ಥಾನವನ್ನೂ ಕಿತ್ತು ಹಾಕಿ ಕೊನೆಗೆ ಏನೋ ಯಾರಿಗೆ ಗೊತ್ತು?

ಹೇಮ : ಅಷ್ಟೆಲ್ಲಾ ಆಗೋದೇ ಬೇಡ ಸಧ್ಯ, ನೀವು ನನ್ನ ಡೀಯರ್ ಫುಲ್......

ಪುಲ : ನೀನು ಡಾರ್ಲಿಂಗ್ ಹೇಮಾ.... (ಇಬ್ಬರೂ ನಗುವರು) ಮಾತು ಎಲ್ಲೆಲ್ಲೋ ಹೋಯ್ತು.... ಅದಿರ್‍ಲಿ ನೀನು ಬಂದು ಎಷ್ಟು ಹೊತ್ತಾಯ್ತು?

ಹೇಮ : ಪರ್ವಾಗಿಲ್ಲ ಚೆನ್ನಾಗಿ ವಿಚಾರಿಸಿಕೊಳ್ತೀರಿ? ಮನೆ ಹೋಗೋ ಸಮಯದಲ್ಲಿ ಬಂದು ಎಷ್ಟು ಹೊತ್ತಾಯ್ತು ಅಂತ ಕೇಳ್ತಾ ಇದ್ದೀರಿ. ಇನ್ನು ಮದ್ವೆ ಆದ್ಮೇಲೆ ಅದೆಷ್ಟು ಮಟ್ಟಿಗೆ ನೋಡ್ಕೊಳ್ತಿರೋ ಏನೋ ಅಪ್ಪಾ?

ಪುಲ : ನಾನು ರಾಜ ಅಂದಮೇಲೆ ಹೇಗೆ ನೋಡ್ಕೊಳ್ಬೋದು ಹೇಳು.

ಹೇಮ : ರಾಣಿ ಹಾಗೆ....!

ಪುಲ : ಹಾಗೇ... (ಮತ್ತೆ ಇಬ್ಬರು ಕಿಲಕಿಲನೆ ನಗುವರು) ಸಾಕೇ... ಅತಿ ಆನಂದವೂ ಕೊನೆಗೆ ದುಃಖಕ್ಕೆ ಕಾರಣವಾಗಬಹುದು.

ಹೇಮ : ನೀವಿದ್ದ ಮೇಲೆ ಸಂತೋಷವಾಗಿ ನಗು ಬರುತ್ಯೇ ಹೊರ್‍ತು ನನಗೆ ದುಃಖ ಎಲ್ಲಿ ಬರಬೇಕು?

ಪುಲ : ಆದ್ದರಿಂದ ಈ ಸಂತೋಷದ ಸಂಭ್ರಮ ಆಚರಿಸಲೇಬೇಕಲ್ವೇ?

ಹೇಮ : ಸ್ವೀಟ್ ಕೊಡಿಸ್ತೀರಾ?

ಪುಲ : ನಾನು ಕೇಳಿದ್ರೆ ನೀನೇ ನನ್ನನ್ನು ಕೇಳ್ತೀಯೆ? ಹೋಗ್ಲಿ ನಾನೇನೋ ಸ್ವೀಟ್ ಕೊಡಿಸ್ತೀನಿ, ನೀನು....

ಹೇಮ : ಖಾರ, ಕಾಫೀ...!

ಪುಲ : ಬೇಡ ಅದೆಲ್ಲಾ ನನ್ದೇ ಆಗ್ಲಿ. ನಿಂದು ಮನೋರಂಜನೆ ಆಗಲಿ....

ಹೇಮ : ಸಿನೆಮಾಕ್ಹೋಗೋ ಯೋಚನೆ ರಾಯರಿಗೆ....

ಪುಲ : ಹೌದು ಮಹಾರಾಯ್ತಿ.....

ಹೇಮ : ಸರಿ ಆಗ್ಲಿ ನಡೀರಿ ಹೋಗೋಣ....

ಪುಲ : ಓ. ಕೆ.....

* * *

ನೀಲಾ : ಏನೂಂದ್ರೆ....?

ಜಯಣ್ಣ : ಏನೂ ಅಂದೆ...!

ನೀಲಾ : ನಿಮ್ಮನ್ನ.... ಅಂದ್ರೆ....

ಜಯಣ್ಣ : ಅಂದ್ರೆ....?

ನೀಲಾ : ಜಯಣ್ಣನವರನ್ನ ..... ಸಾಹುಕಾರ್....!

ಜಯಣ್ಣ : ಮೊದ್ಲೇಳಿದ್ದು ಸಾಕು ಕಣೆ ನೀಲಾ.... ಮುಂದೆ ಹೇಳಿದ ಸಾಹುಕಾರ ನಾನಲ್ಲ ಈಗ....

ನೀಲಾ : ಮೆಣಸು ಮುಗ್ಗಿದರೂ ಜೋಳಕ್ಕೇನೂ ಕಡಿಮೆ ಇಲ್ಲ ಬಿಡಿ.

ಜಯ : ಬರೇ ಭಂಡಾಟದ ಜೀವನವಾಗಿದೆ ನಮ್ಮದು.

ನೀಲಾ : ಏನೇ ಆಗ್ಲಿ.... ಈಗ ಹೇಮಳ ಮದುವೆ ನಿಲ್ಲಿಸಲಿಕ್ಕಾಗುತ್ಯೇ ಹೇಳಿ.

ಜಯ : ಹೇಗಾದ್ರೂ ಮಾಡೋಣ ಅಂದ್ರೆ ವರಗಳೇ ಇಲ್ವಲ್ಲ ಏನು ಮಾಡೋದು? ಯಾರು ನೋಡು ಎಷ್ಟು ಕೊಡ್ತೀರಿ? ಏನು ಕೊಡ್ತೀರಿ ಅನ್ನುವವರೇ...

ನೀಲಾ : ಏನು ಕೊಡ್ತಾರೆ ಹೇಮಾಳಂತೆ ಒಬ್ಬ ಹುಡುಗಿ ಕೊಟ್ರೆ ಸಾಲ್ದೆ?

ಜಯ : ಅವಳ ಜೊತೆಗೆ ವರದಕ್ಷಿಣೆ.... ಹತ್ತು ಸಾವಿರ, ಇಪ್ಪತ್ತು ಸಾವಿರ ನಡವಳಿಕೆ ಲೊಟ್ಟೆ ಲುಸ್ಕು ಅಂತ ಕೇಳೋವ್ರೆ.

ನೀಲಾ : ಹಾಗಾದ್ರೆ ಹೇಮಾಳ ಮದ್ವೆ ಗತಿ?

ಜಯ : ದೇವರೇ ಗತಿ!

ನೀಲಾ : ಹಾಗನ್ಬಿಟ್ಟು ಕುಳಿತರೆ ಆಗೋದಿಲ್ಲಾರೀ....

ಜಯ : ಏನು ಮಾಡ್ಲಿ ಹೇಳು. ನಾನು ಮಾಡೋ ಪ್ರಯತ್ನ ಮಾಡತ್ಲೇ ಇದ್ದೇನೆ. ಇನ್ನೂ ಒಂದು ವರ ನಮ್ಮ ಯೋಗ್ಯತೆಗೆ ತಕ್ಕದ್ದು ಸಿಕ್ಕಿಲ್ಲ.

ನೀಲಾ : ಈಗ ನಮ್ಮ ಹಿಂದಿನ ಯೋಗ್ಯತೆ ನೋಡ್ಕೊಂಡು ಹೋದ್ರೆ ವರ ಸಿಗೋದು ಕಷ್ಟಾನೇ. ಹುಡುಗ ಬಡವನಾಗಿದ್ರೂ ಪರವಾಗಿಲ್ಲ ಏನಾದ್ರೂ ಒಂದು ಕೆಲಸದಲ್ಲಿದ್ದು ಒಂದು ನಾಲ್ಕು ನೂರು ಐನೂರು ಸಂಬಳ ತರ್ತಿದ್ರೂ ಸಾಕು.

ಜಯ : ಈಗ ಸಿಕ್ಕಿರೋ ಇನ್ನೂರು ರೂಪಾಯಿ ಸಂಬಳದವರೇ ಐದು ಹತ್ತು ಸಾವಿರ ಕೇಳುವಾಗ ನಾಲ್ಕು ನೂರು ಐದು ನೂರವ್ರು, ನಮ್ಮ ಆಸ್ತಿಯನ್ನೆಲ್ಲಾ ನುಂಗೋ

ಯೋಚನೆಲಿರ್ತಾರ್ಯೇ ಹೊರ್ತು ಸುಮ್ಮನೆ ಹುಡುಗಿನ ಮದುವೆ ಮಾಡ್ಕೊಳ್ತಾರೇನೇ ನೀಲಾ.

ನೀಲಾ : ನಿಮ್ಮ ಸ್ನೇಹಿತರ್‍ಯಾರಾದ್ರೂ ಇದ್ರೆ ಹೇಳಿ.....

ಜಯ : ಹೇಳ್ತೀನಿ.... ಏನೇ ಆಗ್ಲಿ ಮನುಷ್ಯನಿಗೆ ಹಣ ಇರಬೇಕು, ಇಲ್ಲ ಕೀರ್ತಿ ಇರಬೇಕು. ಇವೆರಡೂ ಇಲ್ದೆ ಹೋದ್ರೆ ಏನೂ ಪ್ರಯೋಜನವಿಲ್ಲ ಕಣೆ. ಹಿಂದೆ ಐಶ್ವರ್ಯ ಇದ್ದಾಗ ನನ್ನ ಬೆಲೆ ಎಷ್ಟಿತ್ತು? ಎಷ್ಟು ಜನ ಬರ್‍ತಿದ್ರು. ನನ್ನ ಕೇಳಲಿಕ್ಕೆ ಧೈರ್ಯ ಇರ್‍ತಿರ್‍ಲಿಲ್ಲ ಆದ್ರೆ ಈಗ ಅಂಥಾವ್ರು ನನ್ನ ಹತ್ತಿರ ಮಾತಾಡ್ತಾ ಇಲ್ಲ.

ನೀಲಾ : ಮೂರು ಜನ ಮಕ್ಕಳ ಮದ್ವೆಗೂ ನಾವು ಇಷ್ಟು ಕಷ್ಟ ಪಟ್ಟಿರಲಿಲ್ಲ. ಆದ್ರೆ ಇವಳಿಗೆ ಪಡ್ತಾ ಇರೋ ಪಾಡು.... ಯಾವ ಶತ್ರುಗಳಿಗೂ ಬೇಡ.

ಜಯ : ದೇವರಿದ್ದಾನೆ ಬಿಡು.

ನೀಲಾ : ಕಾಲದಿಂದಲೂ ಹೀಗೇ ಹೇಳ್ತಾ ಇದ್ದೀರಿ. ಮಕ್ಕಳು ಆಗ ಆಗ್ತಿದ್ದಾಗ಼್್ಲೂ ನನ್ನ ಮಕ್ಕಳನ್ನು ಹಣ್ಣು ಎತ್ತಿಕೊಂಡು ಹೋಗುವ ಹಾಗೆ ಎತ್ಕೋತಾರೆ ಯಾಕೆ ಯೋಚತನೆ ಅಂತಿದ್ರಿ.... ಆದ್ರೆ ಈಗಿನ ಸ್ಥಿತಿ....?

ಜಯ : ಯಾವಾಗ್ಲೂ ಅಷ್ಟೇ, ಕೆಟ್ಟ ಮೇಲೆ ಬುದ್ಧಿ ಬಂತು ಅಟ್ಟ ಮೇಲೆ ಒಲೆ ಉರೀತು ಅಂತ ಎಲ್ಲಾ ಈಗ ಅರ್ಥವಾಗುತ್ತೆ.

ನೀಲಾ : ಈಗ ಜಾನಕಿ ಗರ್ಭಿಣಿ ಅಂತೆ ಮುಂದಿನ ವಾರ ಬರ್‍ತಾಳಂತೆ.

ಜಯ : ಏನು ಗರ್ಭಿಣಿಯೋ, ಏನು ಬಾಣಂತನವೋ ಹೋಗು ನನಗೂ ಮಾಡಿ ಮಾಡಿ ಸಾಕಾಗಿಹೋಯ್ತು.

ನೀಲಾ : ಅವಳು ಬಂದ್ರೂ ಏನು ತೊಂದ್ರೆ ಇಲ್ಲ ಬಿಡಿ, ಅವಳಿಗೆ ಬೇಕಾದಷ್ಟು ಅವಳ ಗಂಡ ತಂದು ಹಾಕ್ತಾನೆ. ಮಾಡಿ ಕಳುಹಿಸೋ ಭಾರ ನಮ್ಮದು.

ಜಯ : ಏನೋ ಮಾಡು ಹೋಗು.

ನೀಲಾ : ಹಿರಿಮಗಳ ಮದ್ವೆ ಮುಂದಿನ ತಿಂಗಳು. ಮೊಮ್ಮಗ್ಳಿಗೆ ಏನಾದ್ರೂ ಪ್ರೆಸೆಂಟೇಷನ್ ಕೊಡಬೇಡ್ವೇ?

ಜಯ : ಹಣ ಮಾತ್ರ ನನ್ನ ಕೈಲಿಲ್ಲ ಇರೋದೊಂದು ಬೆಳ್ಳೀದೋ ಚಿನ್ನದ್ದೋ ಸಾಮಾನ್ ಕೊಟ್ಟು ಮುಗಿಸಿಬಿಡೇ.

ನೀಲಾ : ಈಗಷ್ಟೇ ಮಾಡೋದು "ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು."

ಜಯ : ಹಣ, ಹಣ ಅಂದ್ರೆ ಯಾವುದಕ್ಕೇ ಅಂತ ಒದಗಿಸಲಿ. ಮದುವೆ, ಶ್ರೀಮಂತ, ನಾಮಕರಣ..... ಅದೂ ಇದೂ ಅಂತ.

ನೀಲಾ : ಅಂದ ಹಾಗೆ ನಿಮ್ಮ ತಮ್ಮನ ಮಗನ ನಾಮಕರಣಕ್ಕೆ ಬೇರೆ ಹೋಗಬೇಕಲ್ಲಾ... ನಾಳಿದ್ದು.

ಜಯ : ಸರಿ ಉದ್ಧಾರವೇ ನಾನು!

ನೀಲಾ : ಉದ್ಧಾರವೇನೂ ಇಲ್ಲ ತೂದರೆ ದಾರ.... ನಾನೂ ಸಹಾ.... ಈ ಥರ ಸಂಸಾರದ ತೂದಾಟ ಎಂದ್ರೇನು? ಮುಂದೆ ದಸರಾ ರಜಕ್ಕೆ ಮೂರನೇ ಮಗಳ ಮೂರು ಮಕ್ಕಳೂ ಬರ್‍ತಾರೆ? ಯಾರನ್ನ ಬಾ ಅನ್ನೋದು ಯಾರನ್ನ ಬೇಡ ಅನ್ನೋದು? ಇಲ್ಲಿ ಸಾಮಾನು ಇಲ್ಲ, ಬದುಕಲು ಇಲ್ಲ ಅಂದ ಹಾಗಾಗಿದೆ ನಮ್ಮ ಜೀವನ.

ಜಯ : ನೋಡೋರಿಗೆ ದೊಡ್ಡವರು, ಒಳಗೆ ನೋಡಿದರೆ ಲೊಟಪಿಟ ಅಂತ.....

ನೀಲಾ : ಸಂಸಾರ ದೊಡ್ಡದಾಗ್ತಾ ಆಗ್ತಾ.... ಬರೇ ಜಂಜಾಟ, ಕಷ್ಟಗಳೇ ಹೊರ್‍ತು ಸುಖ ಅನ್ನೋದೇ ಈಗಿಲ್ಲವಾಯ್ತು....

ಜಯ : ಅದಕ್ಕೆ ಟೈಮ್ ಆಯ್ತು.

ನೀಲಾ : ಈಗ ನಿಮಗೂ ಊಟಕ್ಕೆ ಟೈಮಾಯ್ತು ಬನ್ನಿ.

ಜಯ : ನಡಿ ನಾನೂ ಅದಕ್ಕೇ ಕಾಯ್ತಾ ಇದ್ದೆ.

* * *

ರಾಜಣ್ಣ : ಓ ಏನು ಸಾಹುಕಾರ್‍ರೆ....?

ಜಯಣ್ಣ : ಏನು ಸಾಹುಕಾರ್‍ರೋ.... ಹೆಸರಿಗೆ...

ರಾ : ಹೇಗಿದ್ರೂ ನೀವು ಸಾಹುಕಾರರೇ.... ಬಡವರಿಗೊಂದು ಥರ ಕಷ್ಟವಾದ್ರೆ ಸಾಹುಕಾರರಿಗೊಂದು ಥರ ಕಷ್ಟ.

ಜಯ : ಆದ್ರೆ ನಮ್ಮಂಥ ಕಷ್ಟ ಯಾರ್‍ಗೂ ಬೇಡ ರಾಜಣ್ಣ.

ರಾ : ಏನಂಥ ಕಷ್ಟ ಗೊತ್ತಾಗಲಿಲ್ಲ ಹಣ ಬೇಕೇ?

ಜಯ : ಹಣ.... ಹಣಕ್ಕಿಂತ ಒಂದು ಮುಖ್ಯವಾದ ಉಪಕಾರ ನಿನ್ನಿಂದಲೇ ಆಗಬೇಕಾಗಿದೆ ಕಣಯ್ಯ!

ರಾ : ಅದೇನು ಹೇಳಯ್ಯಾ ಸಾಧ್ಯವಾದ್ರೆ ಮಾಡ್ತೇನೆ. ನಿನ್ನಂಥ ಸ್ನೇಹಿತನಿಗೆ ಉಪಕಾರ ಮಾಡದೆ ಮತ್ಯಾರಿಗೆ ಮಾಡ್ಬೇಕು ಹೇಳು.

ಜಯ : ನಿನ್ನಿಂದ ಅದು ಸಾಧ್ಯ. ಮನಸ್ಸು ಮಾಡಿದ್ರೆ ಮಾಡೇ ಮಾಡ್ತೀಯೆ. ನೀನು ಹೂಂ ಅಂದ್ರೆ ಹೇಳ್ತೇನೆ.

ರಾ : ಹಣ ಅಲ್ಲ ಅಂತೀಯೆ? ಮತ್ತಿನ್ನೇನು ಹೇಳಪ್ಪಾ ಪ್ರಯತ್ನ ಪಡ್ತೇನೆ.

ಜಯ : ನನ್ನ ಮಗಳು ಹೇಮಳ ಮದುವೆಗೆ ಯಾವುದಾದ್ರೂ ಒಂದು ವರ ಹುಡುಕಿಕೊಡಬೇಕು ಅಂತ ಕೇಳ್ಕೋಳ್ತಿದ್ದೀನಯ್ಯಾ.

ರಾ : ಅಷ್ಟೇ ತಾನೇ ನೋಡೋಣ ಬಿಡು.

ಜಯ : ನನ್ನ ಮೂರು ಹೆಣ್ಣು ಮಕ್ಕಳಿಗೆ ಮದುವೆ ಮಾಡ್ದೆ ಕಣಯ್ಯ, ನಾನಾಗಿ ವರ ಹುಡುಕಲಿಕ್ಕೆ ಹೋಗಲಿಲ್ಲ. ಆದ್ರೆ ನಾನು ನೋಡುವಷ್ಟು ವರ್ಷಗಳೂ ನೋಡ್ದೆ ಆದರೆ ಯಾರು ಬರುವ ಹಾಗೆ ಕಾಣಲಿಲ್ಲ.

ರಾ : ಇದು ಮುಖ್ಯವಾಗಿ ನೋಡ್ತಾ ಕುಳಿತ್ರೆ ಕುಂಡರಿಸಿಕೊಂಡೇ ಇರಬೇಕಾಗುತ್ತೆ, ಆದ್ರೆ ಈಗ ನಾವು ಹುಡಿಕ್ಕೊಂಡು ಹೋಗೋ ಕಾಲ. ಹಿಂದಿನ ಕಾಲದಲ್ಲಿ ಹೆಣ್ಣು ನೋಡಲಿಕ್ಕೆ ಎಂಟು ಜತೆ ಎಕ್ಕಡ ಸವೀತಿತ್ತು ಈಗ ಗಂಡು ಹುಡ್ಕೋಕ್ಕೆ ಎಂಟೇಕೆ ಎಂಭತ್ತು ಸವೀಬೇಕು ಅಂತ ಕಾಣುತ್ತೆ.

ಜಯ : ರಾಜಣ್ಣ ಈಗ ನಿನ್ನ ದೃಷ್ಟೀಲಿ ಯಾವುದಾದ್ರೂ ಗಂಡಿದೆಯಾ?

ರಾ : ಗಂಡುಗಳಿಗೇನಯ್ಯಾ ಬೇಕಾದಷ್ಟು ಜನ ಇದ್ದಾರೆ. ಎಲ್ಲರನ್ನೂ ಕೇಳಬೇಕು. ಯಾರು ಯಾರು ಏನೇನು ಹೇಳ್ತಾರೋ. ನಾನು ನಿನ್ನ ಮಗಳ ವಿಷಯ ಅವರ ಹತ್ತಿರ ಪ್ರಸ್ತಾಪ -ಮಾಡ್ತೇನೆ. ಆದ್ರೆ ಇನ್ನೊಂದು ಮಾತು ಕೇಳಬೇಕು ಅಂತಿದ್ದೆ....

ಜಯ : ಏನು ರಾಜಣ್ಣ?

ರಾ : ನಿಮ್ಮ ಅಂತಸ್ತಿಗೆ ತಕ್ಕ ಹಾಗೆ ಕೇಳ್ತೀರೋ ಅಥ್ವಾ.....

ಜಯ : ಅಂತಸ್ತು, ಅಂತಸ್ತು, ಅಂತಸ್ತು, ನನ್ನ ಮನೆ ಹಂತವೇ ಕುಸಿದು ಬಿದ್ದಿರುವಾಗ ಎಂಥ ಅಂತಸ್ತು. ಹುಡುಗ ಬಡವನಾಗಿದ್ರೂ ಪರ್ವಾಗಿಲ್ಲಯ್ಯ ಒಳ್ಳೆ ಲಕ್ಷಣವಂತ, ವಿದ್ಯಾವಂತನಾಗಿದ್ದು ಹೆಂಡ್ತಿನ ಸರಿಯಾಗಿ ನೋಡ್ಕೊಂಡ್ಹೋಗೋ ಗಂಡ್ಸಾದ್ರೆ ಸಾಕು.

ರಾ : ನನ್ನ ತಲೇಲಿ ಒಬ್ಬ ಹುಡುಗ ಇದ್ದಾನೆ....

ಜಯ : ಯಾರು?

ರಾ : ಅದೇ ನಾಗಣ್ಣನ ಮಗ ಪುಲಕೇಶಿ ಅಂತ.

ಜಯ : (ಸ್ವಗತ) ಆ್ಞ ಆತ.... ಹಿಂದೆ ಹಿರಿಯ ಮಗನಿಗೆ ಕೊಡೋದಕ್ಕೆ ಒಪ್ಪಲಿಲ್ಲ ಈಗ ಒಪ್ತಾನೆಯೇ? ನನ್ನ ಸಂಬಂಧ ಬೇಡ ಅನ್ತಾನೆಯೇ? ಈಗಿನ ಸ್ಥಿತಿ ಗೊತ್ತಾಗೇನಾದ್ರೂ.... ನೋಡೋಣ.... ಓ ಡಾಕ್ಟರ್ ಆಗಿದ್ದಾನಲ್ಲಾ....

ರಾ : ಹೌದೌದು.

ಜಯ : ಆಗಬಹುದು....

ರಾ : ನಾನು ನೀನು ಅಂದ್ರಲ್ಲಾ, ಅವರಪ್ಪ ಅಮ್ಮ ಹುಡುಗನ ಕೇಳಿ ಆಮೇಲೆ ಹೇಳ್ತೀನಿ. ಸುಮಾರಾಗಿ ಐಶ್ವರ್ಯವಂತರಾಗಿಯೇ ಇದ್ದಾರೆ ಅವರು.

ಜಯ : ನೀನು ಹೇಗಾದ್ರೂ ಮಾಡಿ ಒಪ್ಪಿಸಿದರೆ ಆಗುತ್ತೆ. ನಾಗಣ್ಣ ನಿನ್ನ ಸ್ನೇಹಿತ. ಅವನಿಗೆ ನೀನೊಂದು ಮಾತು ಹೇಳಿದ್ರೆ ಆಗುತ್ತೆ.

ರಾ : ನಾನು ಇವತ್ತೇ ಹೋಗಿ ಕೇಳಿ ಬರ್ತಿನಪ್ಪಾ. ನೀನು ಯೋಚನೆ ಮಾಡಬೇಡ ಸುಮ್ನಿರು.

ಜಯ : ನೀಲಾ..... ನೀಲಾ....

ನೀಲಾ : ಬಂದೆ....

ಜಯ : ನಮ್ಮ ಓಲ್ಡ್ ಫ್ರೆಂಡ್ ರಾಜಣ್ಣ ಬಂದಿದ್ದಾನೆ ಒಂದು ಗ್ಲಾಸು ಬೇಲದ ಹಣ್ಣಿನ ಪಾನಕ ತೆಗೆದುಕೊಂಡು ಬಾರೇ.

ನೀಲಾ : ಆಗ್ಲಿ.

ರಾ : ಯಾಕಪ್ಪಾ ಈಗ್ತಾನೇ ಕಾಫಿ ಕುಡಿದು ಬಂದಿದ್ದೇನೆ.

ಜಯ : ಬಿಸಿಲ ಹೊತ್ತು ಸ್ವಲ್ಪ ಹಣ್ಣಿನಪಾನಕ ಕುಡಿದ್ರೆ ನೀರಡಿಕೇಗೆ ಒಳ್ಳೆಯದು. ಅದೋ ಬಂದೇ ಬಿಡ್ತು. ತಗೋ ತಗೋ.... ಕುಡಿಯಯ್ಯಾ ಜೀವ ತಣ್ಣಗಾಗ್ಲಿ.....

ರಾ : ನೀನು ಯಾವಾಗ ಬಂದ್ರೆ ತಾನೆ ಸುಮ್ನೆ ಇರ್ತೀಯಾ? ಅತಿಥಿ ಸತ್ಕಾರ ಮಾಡೋದು ನಿನ್ನ ರಕ್ತದಿಂದಲೇ ಅಂಟಿಕೊಂಡು ಬಂದಿರೋದು, ಸರಿ ನಾನು ಬರ್ತೀನಿ. ನೀನು ಹೇಳಿರೋ ವಿಷಯಗಳೆಲ್ಲಾ ನನ್ನ ತಲೆಯಲ್ಲಿದೆ.

ಜಯ : ಖಂಡಿತಾ... ನಾನು ಇನ್ನು ಬರ್ತೇನೆ.

ಜಯ : ಒಳ್ಳೇದು.

ನೀಲಾ : ಏನಂದ್ರೆ?

ಜಯ : ನೀನಂದ್ಯಲ್ಲಾ ಅದೇ....

ನೀಲಾ : ಹೇಮಳ ಮದ್ವೇನಾ?

ಜಯ : ಹೌದು....

ನೀಲಾ : ಏನು ಪ್ರಯತ್ನ ಮಾಡ್ತಾರೋ ಇಲ್ವೋ....

ಜಯ : ಏನೋ ಮಾಡ್ತೀನಿ ಅನ್ನೋ ಭರವಸೆ ಕೊಟ್ಟಿದ್ದಾನೆ. ದೇವರು ಹ್ಯಾಗೆ ಮಾಡ್ತಾನೋ ನೋಡ್ಬೇಕು.

ನೀಲಾ : ಹೋಗ್ಲಿ ಪಾನಕ ಕುಡೀರಿ. ಯಾಕೆ ಹಾಗೇ ಇಟ್ಟಿದ್ದೀರಿ?

ಜಯ : ಈ ಯೋಚನೆಗಳೇ ತಲೆ ತುಂಬಾ ಇರುವಾಗ, ಈ ಪಾನಕ ಯಾರಿಗೆ ತಾನೇ ಜ್ಞಾಪಕಕ್ಕೆ ಬರುತ್ತೆ?

ನೀಲಾ : ಎಷ್ಟು ಯೋಚನೆ ಮಾಡಿದ್ರೇನು? ಗೇಣುದ್ದ ಹೊಟ್ಟೆ ಕೇಳುತ್ತಾ? ಕುಡಿರಿ.... ದೇವರು ಅವಳ ಕಂಕಣ ಸಂಬಂಧ ಯಾವ ಹೊತ್ತು ಇಟ್ಟಿದ್ದಾನೋ ಆ ಹೊತ್ಗೇ ಅದು ಆಗೋದು. ನಾವು ಹಾಗ್ಮತ್ತಿ ಹೀಗ್ಬಿದ್ರೂ ಅದು ನಡೆಯೋಲ್ಲ.

ಜಯ : ಹಾಗನ್ಬಿಟ್ಟು ಸುಮ್ನಿರಕ್ಕಾಗುತ್ಯೇ? ಪ್ರಯತ್ನ ಮಾಡಬೇಕು ಮಾಡ್ತಾ ಇದ್ದೀನಿ.

ನೀಲಾ : ಹೋಗ್ಲಿ ಪಾನಕ ಕುಡೀರಿ.

ಜಯ : ಆಗ್ಲಿ.....

* * *

ರಾಜಣ್ಣ : ನಿಮ್ಮನ್ನೇ ಹುಡಿಕ್ಕೊಂಡು ಬರ್‍ತಿದ್ದೆ.....

ನಾಗಣ್ಣ : ಹುಡ್ಕೋ ಗೋಜೇ ತಪ್ತಲ್ಲ....

ರಾ : ಏನಯ್ಯಾ.... ಒಂದೇ ಊರ್‍ನಲ್ಲಿದ್ರೂ ನನ್ನ ನಿನ್ನ ಭೇಟಿ ಬಹಳ ಅಪರೂಪ ಆಯ್ತಲ್ಲಾ....?

ನಾ : ಮನುಷ್ಯನಿಂದ ಏನಾದ್ರೂ ಉಪಯೋಗ ಇದ್ರೆ ತಾನೇ ಹುಡಿಕ್ಕೊಂಡು ಬರೋದು..... ಏನೂ ಲಾಭ ಇಲ್ದೆ ಯಾರು ತಾನೆ ಬರ್‍ತಾರೆ?

ರಾ : ಏನಯ್ಯಾ ಏನೋ ಕೇಳ್ಬೇಕೂ ಅಂತ್ಲೆ ಬಂದ್ರೆ ಥಟ್ ಅಂತಾ ಅನ್ಬಿಟ್ಯಲ್ಲಾ.

ನಾ : ಇನ್ನು ಬಂದದ್ದೇ ಆಯ್ತಲ್ಲಾ ಕೇಳಿಬಿಡಪ್ಪಾ ಸಾಧ್ಯವಾದರೆ ಹೂಂ ಅನ್ತೀನಿ. ಇಲ್ದೆ ಹೋದ್ರೆ ಇಲ್ಲ ಅನ್ತೀನಿ.

ರಾ : ಹೆದರಿಕೊಳ್ಳಬೇಡ ಕಣಯ್ಯಾ. ಹಣ-ಗಿಣ ಕೇಳಲಿಕ್ಕೆ ಬರಲಿಲ್ಲ.

ನಾ : ಮತ್ತದೇನು ಕೇಳಪ್ಪಾ....

ರಾ : ನೀನು ಹೂಂ ಅಂದ್ರೆ ಕೇಳ್ತೀನಿ.

ನಾ : ಸ್ನೇಹಿತ ಕೇಳಿದ್ದನ್ನ ಕೊಡೊಕ್ಕೆ ಆಗೋಲ್ಲ- ಅನ್ನೋಕ್ಕಾಗೋಲ್ಲ ಸಾಧ್ಯವಾದಷ್ಟಾದ್ರೂ ಸಹಾಯ ಮಾಡಬೇಡ್ವೆ ಅದೇನು ಹೇಳಯ್ಯಾ?

ರಾ : ಮಗನ ಓದೆಲ್ಲಾ ಮುಗೀತಲ್ಲಾ ?

ನಾ : ಮುಗಿದು ಇಲ್ಲೇ ಗೌರ್‍ನಮೆಂಟ್ ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿ ಆರು ತಿಂಗಳಾಯ್ತು.

ರಾ : ಮದ್ವೆ ಯೋಚನೆ ಇನ್ನೂ ಮಾಡಿಲ್ವೇ?

ನಾ : ಇಲ್ಲ ಏಕೆ.... ಏನು ಸಮಾಚಾರ?

ರಾ : ನಿನ್ನ ಮಗನಿಗೆ ಸರಿಯಾದ ಒಂದು ವಧು ಹುಡ್ಕಿದ್ದೀನಿ.

ನಾ : ವಧುಗೊಂದು ವರ ಹುಡಕಲಿಕ್ಕೆ ಬಂದ್ಯಾ ಏನು?

ರಾ : ಹೌದು.

ನಾ : ಅದ್ಕೇ ಇಷ್ಟೆಲ್ಲಾ ಪೀಠಿಕೆ ಹಾಕಿದೆಯೇನು?

ರಾ : ಏನು ಮಾಡೋದಪ್ಪಾ..... ನಮ್ಮ ಕೈಲಿ ಆದ ಸಹಾಯ ನಾವು ಮಾಡಬೇಕಲ್ಲಾ.

ನಾ : ಹೋಗ್ಲಿ ಹುಡ್ಗಿ ಯಾವುದು? ಏನು ವಿಚಾರ....?

ರಾ : ಅದೇ ನಮ್ಮ ಜಯಣ್ಣನ ನಾಲ್ಕನೆಯ ಹುಡುಗಿ.....

ನಾ : ರಾಜಣ್ಣ... ಸಾಕು ನಿನ್ನ ಮಾತು.

ರಾ : ಯಾಕೆ?

ನಾ : ಅವನ ಮನೆ ಬಿಟ್ಟು ಬೇರೆ ಮನೆಯ ಹುಡುಗಿ ಇದ್ರೆ ಹೇಳು.

ರಾ : ಈಗ ನಾನು ಬಂದಿರೋದು ಅದಕ್ಕೆ. ನೀನು ಅದುಬಿಟ್ಟು ಬೇರೆ ಅಂತ ಹೇಳ್ತಿಯಲ್ಲಾ ಯಾಕೆ? ಆತ ಏನು ಕಮ್ಮಿ....? ಸಾಹುಕಾರ ಜಯಣ್ಣನವರ ಮನೆಗಿಂತ ಒಂದು ಮನೆತನದ ಹೆಣ್ಣು ಬೇಕೆ?

ನಾ : ಅವನ ಸಾಹುಕಾರತನಕ್ಕೆ ಒಂದಷ್ಟು ಮಣ್ಣು.

ರಾ : ಈಗ ಸ್ವಲ್ಪ ಮುಗ್ಗಿದ್ದಾನೆ ಅಂತ್ಲೇನು?

ನಾ : ಅವನು ಮುಗ್ಗಿದ್ರೂ ಅಷ್ಟೇ ಹಿಗ್ಗಿದ್ರೂ ಅಷ್ಟೇ. ಅವನ ಮನೆ ಸಂಬಂಧದ ಹೆಸರೆತ್ತಬೇಡ.

ರಾ : ಅದೇನಯ್ಯಾ ನಿನಗೂ ಅವನ ಮನೆತನಕ್ಕೂ ದ್ವೇಷ?

ನಾ : ರಾಜಣ್ಣ ಒಪ್ಪೊತ್ತಿನ ಬಡವನ ಮನೆಯ ಹುಡುಗಿ ತೋರಿಸು ನಾನು ಒಪ್ಪಿಕೊಳ್ತೀನಿ, ಆದ್ರೆ ಅಂತ ದೊಡ್ಡ ಅಂತಸ್ತಿನವರ ಹೆಣ್ಣು ಮಾತ್ರ ನನಗೆ ಬೇಡ. ಲಕ್ಷಣವಾಗಿ ಸ್ವಲ್ಪ ವಿದ್ಯಾವಂತೆ ಹುಡುಗಿ, ಮನೆ ಸಂಸಾರ ನಡೆಸಿಕೊಂಡು, ಎಲ್ಲರನ್ನೂ ಹೊಂದಿಕೊಂಡು ನಡ್ಯೋ ಹುಡುಗಿ ನನಗೆ ಬೇಕಾದ್ದು. ಆಡಂಬರದ ಸಾಹುಕಾರರ ಮನೆ ಹೆಣ್ಣಲ್ಲ..... ಎಲ್ಲರ ಯೋಗ್ಯತೆಯನ್ನು ನಾನು ಅಳತೆ ಮಾಡಿ ನೋಡಿದ್ದೇನೆ.

ರಾ : ವಿಷಯ ಏನಯ್ಯಾ?

ನಾ : ಇದು ನಿನಗೆ ಗೊತ್ತಿಲ್ಲ ರಾಜಣ್ಣ....

ರಾ : ಅದ್ಕೆ ಕೇಳ್ತಾ ಇರೋದು. ಗೊತ್ತಿದ್ರೆ ನಿನ್ನನ್ನ ಛೇಡಿಸ್ತಿದ್ನೇ ಕಾರಣ ಏನು?

ನಾ : ಇದು ಹತ್ತು ವರ್ಷಗಳ ಹಿಂದಿನ ಮಾತು. ನನ್ನ ಹಿರಿಯ ಮಗ ಪ್ರಭುವಿಗೆ ಆತನ ಮನೆಯ ಸಂಬಂಧ ಬೆಳೆಸಬೇಕು ಅಂತ ಆಸೆ ಆಯ್ತು, ನನಗಲ್ಲ

ನನ್ನ ಹೆಂಡ್ತೀಗೆ. ಸರಿ ನನ್ನ ಪ್ರಯತ್ನ ಮುಂದುವರಿಯಿತು. ಒಂದು ದಿನ ಅವನ ಮನೆಗೆ ಹೋದೆ.

(ಬೆಲ್ ಮಾಡಲು ಜಯಣ್ಣ ಬಂದು)

ಜಯಣ್ಣ : ಯಾರು?

ನಾಗಣ್ಣ : ನಾನು ನಾಗಣ್ಣ ಅಂತ....

ಜಯ : ಯಾರು ಬೇಕಿತ್ತು?

ನಾ : ನಿಮ್ಮನ್ನೇ ನೋಡಬೇಕು ಅಂತ ಬಂದೆ.

ಜಯ : ಏನು ವಿಷಯ?

ನಾ : ನಿಮ್ಮಲ್ಲಿ ಒಂದು ಮುಖ್ಯ ವಿಷಯ ಮಾತಾಡಬೇಕಾಗಿತ್ತು.

ಜಯ : ಅದೇನು ಹೇಳಿ ಬೇಗ ನಾನು ಈಗ ಅಂಗಡಿಗೆ ಹೋಗಬೇಕಾಗಿದೆ.

ನಾ : ಅದೇ ನಿಮ್ಮ ಸ್ನೇಹಿತ್ರು ಪ್ರಭು ಕಳುಹಿಸಿದ್ರು. ಸ್ವಲ್ಪ ಮನೆ ಒಳಗೆ ಕುಳಿತು ಮಾತಾಡೋಣ್ವೇ?

ಜಯ : ಏನು ಇಲ್ಲೇ ಹೇಳಿದ್ರಾಗ್ದೆ? ಆದ್ರೆ ಆಗುತ್ತೆ ಅಂತೀನಿ ಇಲ್ದೇ ಹೋದ್ರೆ ಇಲ್ಲ.

ನಾ : ಅದೇ ನಮ್ಮ ಮಗ, ಗುಮಾಸ್ತನಾಗಿದ್ದಾನೆ. ಅವನಿಗೆ ನಿಮ್ಮ ಮಗಳನ್ನು ತರೋ ಆಸೆಯಾಯ್ತು ಅದಕ್ಕೆ ಪ್ರಭು ಕೇಳಿನೋಡಿ ಅಂದ್ರು.

ಜಯ : ಮದ್ವೇನಾ? ಈಗ ನಾನು ಮಾಡೋ ಯೋಚನೆ ಮಾಡಿಲ್ಲ. ಆದ್ರೂ ನಮ್ಮಹೆಂಗಸರನ್ನು ಸ್ವಲ್ಪ ಕೇಳಿ ಬರ್ತೇನೆ. ತಾವು ಏನೂ ತಿಳ್ಕೊಳ್ದೇ ಇದ್ರೆ.... ಸ್ವಲ್ಪ ಇಲ್ಲಿ ಕುಳಿತುಕೊಳ್ಳಿ......

ನಾ : ಆಗಲಿ.... ಹ್ಞಾಂ..... ಎಂಥ ಸೊಕ್ಕಿದೆ ಇವನಿಗೆ..... ಐಶ್ವರ್ಯದ ಮದ, ಆಕೆ ಏನು ಹೇಳ್ತಾಳೆ ನೋಡೋಣ. ಅವನ ಯೋಗ್ಯತೆಗೆ ಸ್ವಲ್ಪ ಒಳಗೆ ಬಂದು ಕುಳಿತುಕೊಳ್ಳಿ ಅನ್ನೋ ಸಂಯಮ ಬೇಡವೇ? ಈ ಹಣ್ಣು..... ಹೂ ತಂದೆ..... ಈತನ ಮರ್ಯಾದೆ ನೋಡಿಕೊಂಡು ಎಂತೆಂಥ ಜನರಿದ್ದಾರೆ ಪ್ರಪಂಚದಲ್ಲಿ....... ನೋಡೋಣ.....

ಜಯ : ನೀಲಾ.....

ನೀಲಾ : ಏನ್ರೀ.....?

ಜಯ : ಯಾವನೋ ಒಬ್ಬ ಜೋಳಿಗೆ ಹಿಡ್ಕೊಂಡು ಬಂದವ್ನೇ..... ನಮ್ಮ ಮಗಳು ಶೀಲಾನ ಮದ್ವೆ ಮಾಡ್ಕೋಳ್ಬೇಕು ಅಂತ.

ನೀಲಾ : ಅವನ್ಯಾವನ್ರೀ.....?

ಜಯ : ಅದೇ ನಮ್ಮೂರ ನಾಗಣ್ಣ.....

ನೀಲಾ : ಅವನಿಗೆ ನಮ್ಮ ಮನೆ ಹೆಣ್ಣು ಕೇಳೋ ಅಷ್ಟು ಧೈರ್ಯ ಬಂತೆ?

ಜಯ : ಇಲ್ದೇ ಬಂದಿದ್ದಾನೆಯೇ?

ನೀಲಾ : ಅವನಿಗೆಲ್ಲೋ ಹುಚ್ಚು.... ಭ್ರಮೆ.... ಅಲ್ಲಾ ನಮ್ ಅಂತಸ್ತೇನು? ತನ್ನ ಅಂತಸ್ತೇನು ಅನ್ನೋದು ನೋಡ್ಕೋಳ್ಬೇಡ್ವೇ?

ಜಯ : ಈಗ ಏನು ಹೇಳೋದು?

ನೀಲಾ : ಹೇಳೋದೇನು..... ನಾವು ಸಧ್ಯಕ್ಕೆ ಮದ್ವೆ ಮಾಡೋಲ್ಲ ಓದಿಸಬೇಕು ಅಂತ ಹೇಳಿ ಕಳುಹಿಸಿ ಅಂಗಡಿ ಕಡೆ ವ್ಯಾಪಾರ ನೋಡಿ ಹೋಗಿ.

ಜಯ : ಒಳಗೆ ಕರ್‍ಯೋದು ಬೇಡ ಅಂತೀಯಾ?

ನೀಲಾ : ಸಧ್ಯ ಇನ್ನು ಅವನಿಗೆ ಸತ್ಕಾರ ಮಾಡಿ ಎಂಜಲು ಬೆಳಗಲಿಕ್ಕೆ ಯಾರು ನಿಂತಿದ್ದಾರೆ ಹೇಳಿ ಕಳುಹಿಸಿ ಹೋಗಿ.

ಜಯ : (ಬರುತ್ತಾ) ಕಾಯಿಸ್ಬಿಟ್ಟೆ.... ನಿಮ್ಮನ್ನ.....

ನಾ : ಪರ್ವಾಗಿಲ್ಲ.....

ಜಯ : ನಾವು ಸದ್ಯಕ್ಕೆ ಮದ್ವೆ ಮಾಡಲಿಕ್ಕೆ ಯೋಚನೆ ಮಾಡಿಲ್ಲ..... ಕಾಯೋದೇನು ಮಾಡಬೇಡಿ, ನಮ್ಮ ಹುಡುಗಿಗೆ ಬೇರೆ ಕಡೆ ಒಪ್ಪಂದ ಆಗಿದೆ. ನೀವು ಬೇರೆ ಕಡೆ ನೋಡಿಕೊಳ್ಳೋದು ಉತ್ಮ.

ನಾ : ಆಗಲೀ.... ಬರ್ತೇನೆ.

ಜಯ : ಸಂತೋಷ....

ನಾ : (ಸ್ವಗತ) ಎಂಥ ಅವಮಾನವಾಯ್ತು. ನಿನ್ನ ಯೋಗ್ಯತೆಗೆ ಬೆಂಕಿ ಹಾಕಿ, ಬೆಳ್ಳಗ್‌ಮಾಡ.... ನಿನ್ನ ಸಿರಿ ಹೀಗೇ ಇರುತ್ತಾ? ನಿನಗೂ ಒಂದಲ್ಲ ಒಂದು ದಿನ ಈ ಥರ ಅವಮಾನ ಆಗೇ ಆಗುತ್ತೆ. ಅದನ್ನು ನಾನು ಕಣ್ಣೆದುರಿಗೆ ನೋಡ್ದೇ ಇರ್ತೀನಾ?

(ಮನೆಗೆ ಬಂದು)

ಪಾತು : ಯಾಕ್ರೀ.... ಬ್ಯಾಗು ಹಾಗೇ ಇದೇ? ಮುಖ ಪೆಚ್ಚಾಗಿದೆ?

ನಾ : ಪಾತು ನಾನು ಎಷ್ಟು ಹೇಳಿದರೂ ಕೇಳಲಿಲ್ಲ ಕಳುಹಿಸಿದೆ. ಈಗ ಸಂತೋಷವಾಯ್ತೋ? ಮನೆ ಒಳಗೆ ಬನ್ನಿ ಅನ್ನೋ ಸಂಸ್ಕೃತಿ ಇಲ್ಲದ ಕಾಡು ಜನ ಅವರು. ಆತನ ಹೆಂಡತಿ ಗರ್ವಿ, ಭ್ರಮೆ, ಹುಚ್ಚು, ಆತನಿಗೆ ನಮ್ಮ ಮನೆ ಹೊಸಲು ಹತ್ತುವ ಯೋಗ್ಯತೆ ಬಂತೇ? ಹಾಗೆ ಹೀಗೆ ಅಂತ ಜೋರಾಗಿಯೇ ನನಗೆ ಕೇಳುವ ಹಾಗೆಯೇ ಮಾತಾಡಿದಳು.

ಪಾತು : ನಾನು ತಪ್ಪು ಮಾಡ್ಬಿಟ್ಟೆ.... ಏನೋ ಕೊಡಬಹುದು ಅಂತ ತಿಳ್ದೆ. ಆತನಿಗೂ ಅಂತ ಕಾಲ ಬರ್ದೇ ಇರುತ್ಯೇ ಸುಮ್ನಿರಿ.

ನಾ : ಇಂಥ ಅವಮಾನ ಎಂದೂ ನನ್ನ ಜೀವನದಲ್ಲಿ ಆಗಿರ್ಲಿಲ್ಲ. ಪ್ರಪಂಚದಲ್ಲಿ ಇಂಥ ಜನರು ಇದ್ದಾರೆ ಎಂಬುದು ವ್ಯಕ್ತವಾಯಿತು.

ಪಾತು : ಹೋಗ್ಲಿ ಬಿಡಿ.... ಇನ್ನು ಯಾಕೆ ಚಿಂತೆ? ಕೈ ಕಾಲು ತೊಳ್ಕೊಳ್ಳಿ ತಿಂಡಿ ಆಗಿದೆ.

ನಾ : ಏನೂ ಬೇಡ ಹೋಗು ಪಾತು.... ಸ್ವಲ್ಪ ಮನಸ್ಸಿಗೆ ವಿಶ್ರಾಂತಿ ತೆಗೆದುಕೊಳ್ತೇನೆ.

* * *

ನಾ : ಅಂತ ಅಂದೆಲ್ಲಾ ಒಂದೆರಡು ತಿಂಗಳು ನನ್ನ ಹೃದಯವನ್ನು ಚುಚ್ಚಿತು ಈಗ್ಲೂ ಮರೆತಿಲ್ಲ.... ಇಂಥ ಸಂಬಂಧ ಬೆಳೆಸು ಅಂದ್ರೆ ಹೇಗೆ ತಾನೇ ಒಪ್ಪಲೀ ಹೇಳಿ.

ರಾ : ಸಾಧ್ಯಮಾಡಿ, ಹಿಂದಿನದು ಮರೆತು ಮನಸ್ಸು ಮಾಡು.... ಇನ್ನೊಂದು ದಿನ ನಿನ್ನನ್ನು ಬಂದು ನೋಡ್ತೇನೆ.

ನಾ : ಅದು ಮಾತ್ರ ಖಂಡಿತ ಸಾಧ್ಯವಿಲ್ಲ. ಅದರ ಯೋಚನೆ ಬಿಟ್ಟು ಬಿಡಿ ರಾಜಣ್ಣ.

(ಅಡಿಗೆ ಪಾತ್ರೆ ತೊಳೆವ ಶಬ್ದ)

ತಾಯವ್ವ : ಏನು ಪಾತು.... ಕೆಲ್ಸ ಎಲ್ಲಾ ಆಯ್ತೇ?

ಪಾತು : ಎಲ್ಲಾ ಆಯ್ತು ಪಾತ್ರೆ ತೊಳೀತಾ ಇದ್ದೀನಿ ಬನ್ನಿ.....

ತಾ : ಎಷ್ಟು ದಿನಾಂತ ಈ ಪಾಡು, ಬೇಗ್ನೆ ಸೊಸೆ ತನ್ನಿಬಿಡಿ....

ಪಾತು : ಮೊದಲನೆ ಸೊಸೆ ತಂದೆ, ಅದರ ಮುಂದಿನ ವರ್ಷಕ್ಕೆ ಮಂಗಳೂರಿಗೆ ಟ್ರಾನ್ಸ್‌ಫರ್ ಆಗಿ ಹೊರಟುಹೋದ್ರು. ಇನ್ನು ಇವಂದು ತಾನೇ ಏನು?

ತಾ : ಹೆಣ್ಣು ಎಲ್ಲಿ ನೋಡಿದ್ದೀರಿ?

ಪಾತು : ಇನ್ನೂ ಆ ಯೋಚನೆ ಮಾಡಿಲ್ಲ. ಈಗಿನ ಕಾಲದ ಹುಡುಗರು, ಓದಿದವರು ನಮ್ಮ ಮಾತು ಕೇಳ್ತಾರ್ಯೇ?

ತಾ : ಕೇಳ್ದೆ ಏನು ಮಾಡ್ತಾನೆ? ಜಯಣ್ಣನವರ ಮನೇಲಿ ಇನ್ನೊಂದು ಹೆಣ್ಣಿದೆ, ನೋಡ್ತೀರಾ?

ಪಾತು : ನೀವು ಹೇಳೋದು ಸರಿ. ಆತನ ಮನೇಲಿ ಹೆಣ್ಣು ತರೋದೆ. ಲಕ್ಷ ರೂಪಾಯಿ ಕೊಡ್ತೀನಿ ಅಂದ್ರೂ ಬೇಡಿ.

ತಾ : ಅವನು ಈಗ ನೀವು ಮೊದಲನೇ ಮಗಳು ಕೇಳಿದ್ರಲ್ಲಾ ಆಗಿನಷ್ಟು ಐಶ್ವರ್ಯವಂತನಾಗಿಲ್ಲ. ಈಗೆಲ್ಲಾ ವ್ಯಾಪಾರದಲ್ಲಿ ಲಾಸ್. ಮೊದಲನೇ ಮಗಳ ಮದುವೆ ಶ್ರೀಮಂತ, ಬಾಣಂತನ, ಎರಡನೇ ಮಗಳದು, ಅಚ್ಚುಕಟ್ಟಾಗೇ ನಡೀತು, ಮೂರನೇ ಮಗಳಿಂದಲೇ ಶುರುವಾಯ್ತು ಬಡತನ. ಮಕ್ಕಳು, ಮೊಮ್ಮಕ್ಕಳು ದಂಡು ನೋಡ್ಲಿಕ್ಕಾಗೋಲ್ಲ. ಈಗಂತೂ ಊಟಕ್ಕೂ ತೊಂದ್ರೆ ಅಂತೆ.

ಪಾತು : ಮತ್ತೆ ಈಪಾಟಿ ದುರಹಂಕಾರವೇ ಮನುಷ್ಯ ಪಡೋದು?

ತಾ : ಅಷ್ಟೆ ಅಲ್ದೇ ಮನೆಯಲ್ಲಿ ಮಕ್ಕಳು ಮೊಮ್ಮಕ್ಕಳು ಅಷ್ಟೊಂದು ಪಿತಿಪಿತಿ ಅಂತ ಹುಟ್ಟಿದ್ರೆ ಇನ್ನೆಲ್ಲಿ ಸಾಹುಕಾರತನ ಉಳಿಯುತ್ತೆ? ಈಗಿನ ಮಗಳ ಮದ್ವೆನೇ ಕಷ್ಟವಂತೆ. ಮೊದಲು ಎಂತೆಂಥ ಸಾಹುಕಾರರು ಆತನ ಮನೆ ಹೆಣ್ಣು ಕೇಳಿ ಇಲ್ಲ ಅನ್ನಿಸಿಕೊಂಡ್ರು. ಅದೇ ಈಗ ಯಾವನಾದ್ರೂ ಬಡವನಿಗೆ ಕೊಡಲೂ ಸಿದ್ಧವಂತೆ, ನಮ್ಮ ಯಜಮಾನ್ರು ಹೇಳ್ತಿದ್ದಾರೆ.

ಪಾತು : ನಮ್ಮ ಹಾಗೆ ಬಡವರಾಗಿದ್ದವರು ಬಡವರಾದ್ರೆ ಏನೂ ಇಲ್ಲ. ಬಲ್ಲಿದನಾಗಿ ಬಡವನಾದ್ರೆ ಅವನ ಪಾಡು ಬಲು ಕಷ್ಟವೇ. ಆತನ ಅಹಂಕಾರಕ್ಕೆ ತಕ್ಕ ಹಾಗೆ ಆತನಿಗೆ ನಮ್ಮ ಕಣ್ಣೆದುರಿಗೆ ಬಡತನ ಎದುರಿಸೋಹಾಗಾಯ್ತು.

ತಾ : ಹಾಗಾದ್ರೆ ನೀವು ಮಾಡ್ಕೋಳೋಲ್ಲ.

ಪಾತು : ಏನು ಹಾಸ್ಯ ಮಾಡ್ತಾ ಇದ್ದೀರಾ? ನಿಮ್ಮ ಮಗನಿಗೆ ಬೇಕಾದರೆ ಪ್ರಯತ್ನ ಮಾಡಿ.

ತಾ : ಆತನಿಗೇನಿದೆ? ಮದ್ವೆ ಮಾಡ್ತಾನೋ? ಬಾಣಂತನ ಮಾಡ್ತಾನೋ? ಒಪ್ಪೊತ್ತು ಅಳಿಯ ಹೋಗಿ ಅವರ ಮನೇಲಿ ತುತ್ತೆತ್ತುವ ಹಾಗಿಲ್ಲ. ಅಂತ ಬಡ್ತನ ಕಿತ್ತು ತಿನ್ತದೆ ಅವನ ಮನೇಲಿ ನಾನು ತರ್ತೀನಾ?

ಪಾತು : ನಿಮಗೆ ಮೊದ್ಲೇ ತಿಳಿದಾಗೆ ಅವಮಾನ ಮಾಡವ್ರೇ ನಾನು ಹೋಗ್ತೀನಾ?

ತಾ : ಅಯ್ಯೋ ತರೋದು ಎಲ್ಲಾದ್ರೂ, ಆತನಹತ್ರವೇ ಹೋಗಬೇಕೆ?

ಪಾತು : ಅಷ್ಟೇ.

ತಾ : ಏನೋ ಕೆಲ್ಸ ಮಾಡ್ತಿದ್ದೆ. ಮಾಡು ಹೋಗು ನಾನು ಬರ್ತೇನೆ.

ನಾಗಣ್ಣ : ಲೇ ಪಾತು....

ಪಾತು : ಅದೇನ್ರೀ ನಿಮ್ಮ ಮಾತು....

ನಾ : ಒಂದು ಪಿಸು ಮಾತು...

ಪಾತು : ಪಿಸುಮಾತಿನ ಕಾಲ ಮುಗಿದಿದೆ... ಜೋರಾಗೇ ಆಡಿ.

ನಾ : ಹೋಗ್ಲಿ ಹಾಗೇ ಆಗ್ಲಿ ಬಾ....

ಪಾತು : ಏನು ಹೇಳ್ರಿ....?

ನಾ : ಏನು ಸಿಡುಕು? ಏನು ಆತುರ, ಕಾತರ? ಸ್ವಲ್ಪ ತಡ್ಕೊಳ್ಳೇ....

ಪಾತು : ನೀವೇ ಆತುರವಾಗಿ ಕರೆದುಬಿಟ್ಟು ಈಗ ಹೀಗಂದ್ರೆ ಹ್ಯಾಗೇ.

ನಾ : ನಿನ್ನ ಮಗನ ಮದ್ವೆ ಅಷ್ಟು ಆತುರವೇನು ನಿನಗೆ?

ಪಾತು : ಅವನಿಗಾತ್ರವೇ?

ನಾ : ಹಾಗಾದ್ರೆ....

ಪಾತು : ಆಗ್ತಾನೇ.....?

ನಾ : ಹುಡುಗಿ ಯಾವುದೋ?

ಪಾತು : ಈಗಿನ ಕಾಲದ ಹುಡುಗರು ಹುಡ್ಗಿನ ನೋಡ್ಕೊಳ್ದೇ ಇರ್ತಾರೇನು?

ನಾ : ಅದೇ ಯಾವುದು ಅಂತ ಕೇಳ್ತಾ ಇದ್ದೀನಿ?

ಪಾತು : ನಂಗೇನು ಗೊತ್ತು ಅವನ್ನೇ ಕೇಳಿ... ಅದೋ ಬರ್ತಾ ಇದ್ದಾನೆ.

ನಾ : ಬಾರಯ್ಯಾ ಪುಲಕೇಶಿ....

ಪುಲಕೇಶಿ : ಅದೇನಮ್ಮಾ ಹುಡುಗಿ ಗಿಡಿಗಿ ಅಂತಿದ್ದೀರಿ?

ಪಾತು : ನಿನ್ನ ಭಾವಿ ಹುಡುಗಿ ಯಾರು ಅಂತ ಯೋಚನೆ ಮಾಡ್ತಾ ಇದ್ದಾರೆ ನಿಮ್ಮ ತಂದೆ.

ಪುಲ : ಹಾಗಾದ್ರೆ ನೀನು ಯೋಚನೆ ಮಾಡಿಲ್ಲ.

ಪಾತು : ನೀನು ಯೋಚನೆ ಮಾಡಿ ಹೂಂ ಅಂದದ್ದಕ್ಕೆ ನಾವು ಮಾಡೋದು, ಈಗಿನ ಕಾಲದವ್ರು ನಮ್ಮ ಸೆಲೆಕ್ಷನ್ ಒಪ್ತೀರಪ್ಪಾ...... ಎಲ್ಲಾ ಬಣ್ಣದ ಚಿಟ್ಟೆಗಳ ಅನ್ವೇಷಣೆಲಿ ಮೊದ್ಲೇ ಇರ್ತೀರಿ.

ಪುಲ : ಪಾತು ಮಾತು ಅಂದ್ರೆ ಕೇಳಬೇಕೆ? ಗಂಟೆ ಹೊಡ್ದಂಗೆ?

ಪಾತು : ಯಾರೋ ಹುಡುಗಿ....

ಪುಲ : ನಮ್ಮವರೇ ಕಣಮ್ಮ.

ಪಾತು : ಅದೇ ಕಣೋ ಅವಳ ಹೆಸ್ರು.... ತಂದೆ ಹೆಸ್ರು ಏನೂ ಇಲ್ವೇ?

ಪುಲ : ಹೆಸರು ತಂದೆ ಇಲ್ದೇ ಇರುತ್ಯೇ?

ಪಾತು : ಅದನ್ನೇ ಹೇಳೋ ತಲೆಹರಟೆ ಬೇಡ.

ಪುಲ : ಸಾಹುಕಾರ... ಜಯಣ್ಣನವರ ಪುತ್ರಿ ಹೇಮ....

ಪಾತು : ಅವನ ಸಾಹುಕಾರತನಕ್ಕೆ ಮುಳ್ಳು ಮಡ್ಗ.

ನಾ : ಅವನ ಮಗಳೊಂದಿಗೆ ಮದ್ವೆ.....!

ಪುಲ : ತಪ್ಪೇನಪ್ಪಾ?

ನಾ : ಇನ್ನೆಲ್ಲೂ ಹೆಣ್ಣು ಸಿಕ್ಲಿಲ್ವೇನೋ ನಿನಗೇ.

ಪುಲ : ಯಾಕೆ ಅವರೇನು ಒಳ್ಳೆ ಮನೆತನಸ್ತದವರಲ್ವೇನಪ್ಪಾ.

ನಾ : ನಾವು ಮದ್ವೆ ಮಾಡ್ಕೊಳ್ಳೋದು ಹುಡಿಗಿನೋ ಅವನ ಐಶ್ವರ್ಯವನ್ನೋ?

ಪುಲ : ಮಗಳನ್ನಾ....

ನಾ : ಅದನ್ನೇ ನಾನು ಬೇಡ ಅಂತಿರೋದು.

ಪುಲ : ಇಲ್ಲ ಅಪ್ಪಾ ನಾನು ಆಗೋದೆ ಆಕೇನೇ?

ನಾ : ನೀನು ಆ ಹುಡುಗಿನಾದ್ರೆ ಖಂಡಿತ ನೀನು ಮನೆಯಲ್ಲಿರುವ ಹಾಗಿಲ್ಲ.

ಪುಲ : ಸರಿ ಹೋಗ್ತೇನೆ ಬೇರೆ ಮನೆ ಮಾಡಿಕೊಂಡು.

ನಾ : ನೀನು ಆ ಹುಡುಗೀನ ಆದ್ರೆ ಈಗ್ಲೇ ಬಾವಿಗ್ಹಾರಿ ಪ್ರಾಣ ಕಳ್ಕೊಳ್ತೀನಿ.

ಪುಲ : ಯಾಕೆ ಅಂತ ಹೇಳಬಾರ್ದೇ?

ಪಾತು : ಅವನ ಹತ್ತಿರ ಏನು ಐಶ್ವರ್ಯ ಇದ್ಯೋ? ಇವನ್ಯಾವ ಸಾಪುಕಾರ ಅಂತ್ಲೋ?

ಪುಲ : ಈಗ್ತಾನೆ ಹೇಳಿದ್ರು ಐಶ್ವರ್ಯ ಅಲ್ಲ ಹುಡಗೀನ ಮದ್ವೆ ಮಾಡ್ಕೊಳ್ಳೋದು ಅಂತ ತಂದೆಯವರು.

ನಾ : ಆದ್ರೆ ಆತ ಈಗ ನನಗೆ ಕೊಡಲಿಕ್ಕೆ ಸಿದ್ಧವಾಗಿರೋದು ಹುಡುಗೀನ.

ಪಾತು : ಐಶ್ವರ್ಯ ಇದ್ದಾಗ ನಿಮ್ಮಣ್ಣನಿಗೆ ಆತನ ಹಿರಿಯ ಮಗಳನ್ನ ಕೊಡಲಿಲ್ಲ ತುಚ್ಛತೆಯಿಂದ ನಮ್ಮನ್ನ ಕಂಡ, ಅವಮಾನಗಳಿಸಿದ. ಆಗ ನಾವು ಬಡಸ್ಥಿತೀಲಿದ್ವೋ.

ಪುಲ : ಆದ್ರೆ ಹಳೆಯ ದ್ವೇಷವನ್ನೇ ಏಕೆ ಸಾಧಿಸಬೇಕು? ನನ್ನ ಮದುವೆಯಲ್ಲಿ ತೀರಿಸ್ಕೊಂಡ್ರಾಯ್ತು ನಾಲ್ಕಾರು ಜನರ ಸಮ್ಮುಖದಲ್ಲಿ.

ನಾ : ಅವನ ಮಗಳನ್ನ ಮದುವೆ ಮಾಡಿಕೊಂಡು ಅವಮಾನ ಮಾಡೋದಲ್ಲ. ಮಾಡೆದ್ಕಳ್ದೇ ಆತನಿಗೆ ನನ್ನ ಸೇಡನ್ನು ತೀರಿಸಿಕೊಳ್ಳಬೇಕು.

ಪುಲ : ಹೆಣ್ಣಿಗೊಂದು ಗಂಡಿರುತ್ತೆ. ನೀವಲ್ದೇ ಹೋದ್ರೆ ಮತ್ತೊಬ್ರು ಇದ್ದೇ ಇರ್ತಾರೆ.

ನಾ : ಆದ್ರೆ ನನಗೆ ನಮ್ಮ ಮನೆಗೆ ಮಾತ್ರ ಆತನ ಮನೆ ಹೆಣ್ಣು ಬೇಡ.

ಪುಲ : ನಿಮ್ಮಿಬ್ಬರ ಜಗಳದಲ್ಲಿ ನನ್ನ.... ಹೇಮಳ ಪ್ರೀತಿ ಯಾಕೆ ಕಡಿಬೇಕು?

ನಾ : ನಿನಗೆ ತಂದೆ-ತಾಯಿ ಹೆಚ್ಚೋ ನಿನ್ಗೆ ಒಂದು ಹೆಣ್ಣಿನ ಪ್ರೀತಿ ಹೆಚ್ಚೋ?

ಪುಲ : ಎರಡೂ ಹೆಚ್ಚು....!

ಪಾತು : ತಂದೆ ತಾಯಿ ಅನ್ನು, ಇಲ್ಲ... ಪ್ರೀತಿಸುವ ಹೆಣ್ಣು ಅಂತ ಹೇಳು.... ಒಂದು

ಪುಲ : ಇದು..... ಬಹಳ ಕಷ್ಟದ ಮಾತು.... ಇದಕ್ಕೆ ಉತ್ತರ ನಾನು ಕೊಡಲಾರೆ.

ಪಾತು : ನಿನಗೆ ತಾಯಿ ಬೇಕಾದ್ರೆ ಹೇಳು, ಇಲ್ದೇ ಹೋದ್ರೆ ತಾಯಿ ಕಳ್ಕೊಂಡು ತಬ್ಬಲಿ ಆಗು.

ಪುಲ : ಅಮ್ಮ... ಎಂಥ ಕಠಿಣ ಪರಿಸ್ಥಿತಿ ತಂದೊಡ್ಡಿದ್ದೀಯಮ್ಮಾ....?

ಪಾತು : ಇದು ಮಾನಾಪಮಾನದ ಪ್ರಶ್ನೆ ಪುಲಕೇಶಿ. ನಾವು ಮನುಷ್ಯರು ಆತ್ಮ ವಿಶ್ವಾಸ ನಮಗೂ ಇದೆ ಅನ್ನೋದನ್ನು ತೋರಿಸ್ಬೇಕೋ ಬೇಡ್ವೋ ಹೇಳು. ನಾವು ಬಡತನದಲ್ಲಿದ್ದಾಗ ನಮ್ಮ ಸಂಬಂಧ ಬೇಕಿರಲಿಲ್ಲ, ಈಗ ನಾವು ಗರಿ ಬಲಿತ ಮೇಲೆ ಬೇಕಂತೆ, ಎಂಥ ಜನ? ಎಂಥ ಬುದ್ಧಿ?

ಪುಲ : ಅಮ್ಮ... ಅವರು ಬುದ್ಧಿಗೆಟ್ಟು ಮಾಡಿದ್ರು ಅಂದ್ರೆ ನಾವು ಹಾಗೇ ಮಾಡ್ಬೇಕು ಅನ್ನೋದೆಲ್ಲಿದೆ?

ನಾ : ಅಂಥವರಿಗೆ ಬುದ್ಧಿ ಕಲಿಸೋ ವಿದ್ಯಾ ಅಂದ್ರೆ ಇದೊಂದೆ. ನಿನಗೆ ನಿಮ್ಮ ಅಕ್ಕನ ಮಗಳನ್ನೇ ನಾನು ಮಾಡೋದು ಅದೂ ಈ ವರ್ಷಾನೇ.

ಪುಲ : ಅಪ್ಪಾ.... ನೋಡಿ ಸ್ವಲ್ಪ ಮನಸ್ಸು ಬದಲಾಯಿಸಿ.

ನಾ : ನಾನು ಸತ್ತರೂ ನನ್ನ ಛಲ ಬಿಡೋಲ್ಲ. ಹಿಡ್ಕೊಂಡ್ರೇ ನಾನು ಉಡ, ಏರಿದ ವಿಷ.

ಪಾತು : ಕೌರವನ ಛಲ ಎಂಬುದು ಜ್ಞಾಪಕ ಇರಲಿ, ಪುಲಕೇಶಿ ನೋಡಿದ್ರಾ, ಹೇಗೆ ಹೊರಟುಹೋದ ಉತ್ತರ ಕೊಡದೇ.

ನಾ : ಹೇಗೆ ಆತ ಆತನ ಮನೆ ಸಂಬಂಧ ಬೆಳೆಸ್ತಾನೇ ನಾನು ನೋಡ್ತೇನೆ ಸುಮ್ನಿರೇ? ನಾನೇ ಈ ವಿಷಯ ನಿನ್ನಲ್ಲಿ ಪ್ರಸ್ತಾಪ ಮಾಡಬೇಕು ಅಂತಿದ್ದೆ ಅಷ್ಟರಲ್ಲಿ ಮಗ ಒಳಗೊಳಗೇ ಈ ಸಂಬಂಧವನ್ನು ನಡೆಸಿದ್ದಾನೆ ಅಂತ ಯಾರಿಗೆ ಗೊತ್ತು?

ಪಾತು : ನಮ್ಮಿಬ್ಬರಿಗೂ ಜಗಳ ಆಗಿದೆ ಅಂತ ತಾನೇ ಹ್ಯಾಗೆ ಗೊತ್ತು ಹೇಳಿ ಆಗ ಆತ ಮೂರು ನಾಲ್ಕು ವರ್ಷದ ದುಗುಡ.

ನಾ : ಅದಕ್ಕೆ ಈಗ ವಿಷಯಾನೆಲ್ಲಾ ವಿಷದವಾಗಿ ಹೇಳಿದ್ನಲ್ಲಾ. ನೀನು ಸ್ವಲ್ಪ ಅವನಿಗೆ ಸಮಾಧಾನವಾದಾಗ ಸ್ವಲ್ಪ ಹಿತೋಕ್ತಿ ಹೇಳು.

ಪಾತು : ಅದನ್ನು ನಾನು ಮಾಡ್ತೇನೆ ಅಲ್ಲಾಂದ್ರೆ.... ಆತ ಏನು ಮಾಡ್ತಾನೆ? ಮದ್ವೆ ಮಾಡ್ಲಿಕ್ಕಾದ್ರೂ ಶಕ್ತಿ ಇದ್ಯೆ? ಅಲ್ಲಾ ಅವನು ನಾಚಿಕೆ ಇಲ್ದೇ ನಿಮಗೆ ಹೇಳಿಕಳುಹಿಸಿದ್ನಲ್ಲಾ ಹೇಳಿ ಕಳುಹಿಸಬಹುದೇ?

ನಾ : ಅವನಿಗೇನೂ ಅರೆ.... ಒಳ್ಳೆ ಡಾಕ್ಟರ್ ಲಕ್ಷಣವಾದ ಹುಡುಗ ಸಿಕ್ಕಿದರೆ ಬೇಡ ಅಂತ್ಯಾರೇ ಹೇಳು. ಈಗ ಐಶ್ವರ್ಯವಂತ್ರಾದ್ರೂ ಅಂತ, ತಾನು ಐಶ್ವರ್ಯ ಕಳ್ಕೊಂಡು ಬಿಕಾರಿಯಾದ್ರೂ ನೆಲಕ್ಕೆ ಬಿದ್ರೂ ಮೀಸೆ ಮಣ್ಣಾಗಿಲ್ಲ ಅನ್ನೋ ಸ್ಥಿತೀಲಿದ್ದಾನೆ. ಮಾತು ಕತೆ ನಡೇಸ್ತಾನೆ.

* * *

ಹೇಮ : ಏನು ನನಗಿಂತ್ಲೂ ಮೊದ್ಲೇ ಬಂದು ಕೂತುಬಿಟ್ಟಿದ್ದಾರಲ್ಲಾ ಏನು ನನ್ನ ಬಿಟ್ಟಿರಲಾರೆ ಅಂತ ಬಂದಿದ್ದೀರೆ.

ಪುಲ : ಅಲ್ಲ ನಿನ್ನನ್ನ ಬಿಡಬೇಕಲ್ಲಾ ಅಂತ...

ಹೇಮ : ಪುಲಕೇಶಿ ಏನು ತಮಾಷೆ ಮಾಡ್ತಾ ಇದ್ದೀರಾ?

ಪುಲ : ಆದ್ರೆ ವಿಧಿಯಿಲ್ಲದೆ ಈಗ ಮಾಡಬೇಕಾಗಿದೆ.

ಹೇಮ : ಹಾಗಾದ್ರೆ ಯಾವ ಈ ನದಿ ಸಾಕ್ಷಿಯಾಗಿ, ಈ ಗಿಡ ಮರಗಳ ಸಾಕ್ಷಿಯಾಗಿ ನಮ್ಮಿಬ್ಬರ ಪ್ರೀತಿ ಕಡಿಯಬಾರದು ಎಂಬ ಸಂಕಲ್ಪ ಮಾಡಿದ್ವೋ ಅದೇ ಈ ಸ್ಥಳದಲ್ಲೇ ಇಂದು ಪರ್ಯವಸಾನವಾಗುವ ಕಾಲವಾಯ್ತೆ? (ದುಗುಡದ ದನಿಯಲ್ಲಿ) ಪುಲಕೇಶಿ.... ನನಗೆ ಗೊತ್ತಿತ್ತು .... ಯಾವಾಗ್ಲೂ ಅಷ್ಟೇ ನಮ್ಮ ಹಿಂದಿನವರು ಮಾಡಿದ ಹಾಗೆ ಮದುವೆ ಆಗಿ ಪ್ರೀತಿಸಿದ್ರೆ ಚೆನ್ನಾಗಿತ್ತು ಅಂತ.

ಪುಲ : ಹೇಮ ನಾನು ಎಷ್ಟೋ ಪ್ರಯತ್ನಪಟ್ಟೆ ಆದರೆ ನಮ್ಮ ತಾಯಿ ನಿಮ್ಮ ಮನೆಯ ಸಂಬಂಧ ಮಾಡಿದರೆ ನೀರಿಗೆ ಬೀಳುತ್ತೇನೆ ಎನ್ನುತ್ತಾರೆ. ಮನೆಯಲ್ಲಿ ತಂದೆ ತಾಯಿಗಳು ವಿರೋಧವಾಗಿದ್ದಾರೆ.

ಹೇಮ : ಕಾರಣ....?

ಪುಲ : ನಿಮ್ಮ ತಂದೆ ನಮ್ಮಣ್ಣನಿಗೆ ನಿಮ್ಮಕ್ಕನನ್ನು ಕೇಳ್ದಾಗ ನೀವು ಐಶ್ವರ್ಯ ವಂತರಾಗಿದ್ದರಂತೆ, ನಮ್ಮನ್ನ ತುಚ್ಛವಾಗಿ ಮಾತಾಡಿಸಿ ನಕ್ಕರಂತೆ.... ಈಗ ನಾವು ಸ್ವಲ್ಪ ತಲೆ ಎತ್ತುಕೊಂಡಿದ್ದರಿಂದ ಈ ಮದುವೆಗೆ ಬೇರೆಯವರಿಂದ ಹೇಳಿ ಕಳುಹಿಸಿದ್ದರು. ಅವರು ಮಾತಾಡುವಾಗ ನಾನು ಹೋದೆ. ಅವರು

ನನ್ನನ್ನು ಕೇಳಲು ನಾನು ನಿನ್ನನ್ನೇ ಆಗಬೇಕೆಂದೇ, ಹಠತೊಟ್ಟೆ. ಆದರೆ ತಾಯಿಯವರು ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಬೇರೆ ನಮ್ಮ ದೊಡ್ಡಮ್ಮನ ಮೊಮ್ಮಗಳನ್ನೇ ಮಾಡಬೇಕೆಂದಿದ್ದಾರೆ.

ಹೇಮ : (ದುಃಖ ತಡೆದು) ಪುಲಕೇಶಿ...ಸಂತೋಷ, ಬೇರೆ ಒಂದು ಹೆಣ್ಣು ನಿಮ್ಮ ಮನೆಯನ್ನು ಬೆಳಕು ಮಾಡಲಿ...ನಾನು ಬರ್ತೀನಿ...

ಪುಲ : ಹೇಮ ಕ್ಷಮಿಸು...

ಹೇಮ : ಈ ಜನ್ಮದಲ್ಲಿ ಅಲ್ಲದೇ ಹೋದ್ರೂ ಮುಂದಿನ ಜನ್ಮದಲ್ಲಾದರೂ ನಮ್ಮಿಬ್ಬರನ್ನು ದಂಪತಿಗಳಾಗುವಂತೆ ಆ ದೇವರು ಕರುಣಿಸಲಿ.

ಪುಲ : ಹೇಮಾ....

ಹೇಮ : ಬರ್ತೀನಿ.... ನಾನು ಬರ್ತೀನಿ....

* * *

ತಾಯವ್ವ : (ಮೆಲ್ಲನೆ) ಅದೇನು ಪಾತು ಮಗನೊಂದಿಗೆ ಗಂಡ ಹೆಂಡ್ತಿರು ವಾಗ್ಯುದ್ಧ ಮಾಡ್ತಿದ್ರಲ್ಲಾ....

ಪಾತು : ಅದೇ ಮದ್ವೇ ವಿಚಾರ, ತಾಯವ್ವ.....

ತಾ : ಹುಡುಗಿ ಯಾವುದು?

ಪಾತು : ನಾನು ನಮ್ಮಕ್ಕನ ಮೊಮ್ಮಗಳ ಮದ್ವೆ ಮಾಡ್ಬೇಕು ಅಂತ ತೀರ್ಮಾನ ಮಾಡಿದ್ದೀನಿ. ಆದ್ರೆ ಅವನು ಜಯಣ್ಣನ ಮಗಳು ಹೇಮಾಳನ್ನ ಮಾಡ್ಕೊಂತಾನಂತೆ.

ತಾ : ಇದೇನು ಪಾತು ಈಗಿನ ಕಾಲದ ಹುಡುಗರು. ತಂದೆ-ತಾಯಿ ಹೇಳಿದ ಮಾತಲ್ವೇ ಕೇಳೋದು. ತಮ್ಮದೇ ಪ್ರತಿಷ್ಠೆ ಏನು? ಅಲ್ಲಾ ನಿಮ್ಮಕ್ಕನ ಮೊಮ್ಮಗಳು ಜಯಂತಿ ಏನು ಚೆನ್ನಾಗವ್ಳೆ. ಅಚ್ಚುಕಟ್ಟಾಗಿ ಮದ್ವೇನೂ ಮಾಡ್ತಾರಲ್ಲ ಆ ಜಯಣ್ಣನ ಅವನ ಉಸಿರ್ನಾ ಮದ್ವೇ ಮಾಡೋದು. ಮೂರೊತ್ತು ಊಟಕ್ಕೂ ಈಗ ತುಂಡಂತೆ.

ಪಾತು : ನಿಮ್ಮಂಥವರು ಸ್ವಲ್ಪ ಅವನಿಗೆ ಬುದ್ಧಿ ಹೇಳಬೇಕು. ಅದೋ ಬರ್ತಾ ಅವ್ನೆ ನೋಡಿ.

ತಾ : ಅವನಿಗೆ ಗತಿಯೇ ಇಲ್ಲ ಈಗ. ಬರೇ ಮನೆ ಡಂಬಾಚಾರವೇ ಒಳಗೇನು ಲೊಟಾಪಿಟ.

ಪಾತು : ನಾನು ಅದನ್ನೇ ಅವನಿಗೆ ಹೇಳ್ದೆ.

ಪುಲ : ಏನು ನೀನು ಹೇಳಿದ್ದು?

ತಾ : ಅಲ್ಲಾ ಕಣಪ್ಪಾ ನಿನ್ಗೆ ಹೆಣ್ಣು ಕೊಡೋರು ಅಪರೂಪ್ವೇ? ಜಯಂತಿಗಿಂತ ಒಂದು ಹೆಣ್ಣು ಬೇಕೆ? ನೀನೋ ಜಯಣ್ಣನ ಮನೆ ನೊಡ್ಬಿಟ್ಟು ಸಾಹುಕಾರ ಅಂತ ತಿಳ್ಕೊಂಡು ಬಿಟ್ಟಿರಬೇಕು, ಈಗ ಆತ ಪಾಪರ್ ಆಗ್ಬಿಟ್ಟಿದ್ದಾನೆ. ಮೂರನೇ ಮಗಳ ಬಾಣಂತನಕ್ಕೆ ಕರ್ಕೊಂಡು ಬರೋಕ್ಕೆ ಗತಿ ಇಲ್ದೆ ಗಂಡನ ಮನೇಲಿ ಅವಳು ಹೆತ್ತಳು.

ಪಾತು : ಈಗ ಹೇಮಂತಿ ಮದ್ವೇಗೆ ತಾನೇ ದುಡ್ಡು ಅದೇ ಅಂತೀರಾ ಹೊಲ ಗದ್ದೆ ಎಲ್ಲಾ ಅಡಮಾನದಲ್ಲಿದೆ.

ತಾ : ತಾಯಿ ತಂದೆಯರ ಮಾತು ಕೇಳಪ್ಪ ಒಳ್ಳೇದಾಗುತ್ತೆ.

ಪುಲ : ನಿಮ್ಮಿಷ್ಟ ಬಂದಹಾಗೆ ಮಾಡಿ ಪಾರ್ವತಕ್ಕ.....

ತಾ : ಸಧ್ಯ ದೇವರು ನಿನಗೆ ಒಳ್ಳೇಬುದ್ಧಿ ಕೊಟ್ನಲ್ಲ ಈ ಶ್ರಾವಣಕ್ಕೆ ನಿನ್ನ ಮದ್ವೆ ಜಯಂತಿಯೊಂದಿಗೆ.

* * *

ರಾಜಣ್ಣ : ನಾಗಣ್ಣ.... ನಾಗಣ್ಣ....

ನಾಗಣ್ಣ : (ಬಾಗಿಲು ತೆಗೆದು) ಓ.... ಸಾಹುಕಾರ್ ಜಯಣ್ಣನವರು.... ರಾಜಣ್ಣ.... ಬನ್ನಿ ಬನ್ನಿ ಕುಳಿತುಕೊಳ್ಳಿ ಪಾತು.... ಬಾರೇ...

ಪಾತು : ಬಂದೇ....

ನಾ : ನೋಡು ಸಾಹುಕಾರ ದಂಪತಿಗಳು ನಮ್ಮ ಮನೆಗೆ ಬಂದಿದ್ದಾರೆ.

ಪಾತು : ಏನು ಸಮಾಚಾರ?

ನಾ : ಮೊದ್ಲು ತಿಂಡಿ ಕಾಫಿ ತಂದುಕೊಡು ಆಮೇಲೆ ಮಾತು.

ಪಾತು : ಆಗ್ಲಿ.

ನಾ : ತೆಗೆದುಕೊಳ್ಳಿ ಮೊದ್ಲು ಕಾಫಿ ತಿಂಡಿ... ಆಮೇಲೆ ಮಾತು.

ರಾ : ಈಗ ಬಂದ ವಿಷಯ ಬೇರೆ.

ನಾ : ಅದಕ್ಕೆ ಈಗ ಹೇಳಿದ್ನಲ್ಲಾ ಮೊದ್ಲು ಹೊಟ್ಟೆ ಕೆಲಸ ನಡೀಲಿ ಆಮೇಲೆ ಮಾತು.

ರಾ : ನೀನು ನಮ್ಮ ಮಾತಿಗೊಪ್ಪಿಗೆ ಕೊಡ್ತೀನಿ ಅಂದ್ರೆ... ಶುರು ಮಾಡ್ತೀವಿ.

ನಾ : ಅದೊಳ್ಳೆ ಸರಿ ನಡೆಯುವುದಾಗಿದ್ರೆ ಊಂ ಅನ್ತೀನಿ....

ರಾ : ಏನಿಲ್ಲಪ್ಪಾ ಅದು ನಡ್ಯೋದೇ.

ನಾ : ಅದೇನು ಹೇಳಿ.

ರಾ : ಈಗ ನಿಮ್ಮ ಪುಲಕೇಶಿ ಹೇಮ ಬಹಳ ಪ್ರೀತಿಸ್ತಾರಂತೆ ಅದ್ಕೆ ಯಾಕೆ ಆಕೆಯನ್ನೇ ಮಾಡಿಕೊಳ್ಳಬಾರದು?

ನಾ : ನಮ್ಮ ಅಂತಸ್ತಿಗೂ ಅವರ ಅಂತಸ್ತಿಗೂ ಹೊಂದಲ್ಲ.

ಜಯಣ್ಣ : ನಾಗಣ್ಣನವರೇ ನನ್ನದು ಮಹಾ ತಪ್ಪಾಯ್ತು. ನಾನು ಅಂತಸ್ತಿನ ಹಮ್ಮಿನ್ಸಲ್ಲಿ ಮಾತಾಡ್ದೆ.... ಆ ರೀತಿ ವರ್ತಿಸಿದೆ. ಆದ್ರೆ.... ಈಗ ತಾವು ದೊಡ್ಡ ಮನಸ್ಸು ಮಾಡಿ ನಮ್ಮ - ನಿಮ್ಮ ಮಕ್ಕಳ ಪ್ರೀತಿಗೆ ಅಡ್ಡಿ ಮಾಡ್ದೆ.... ನನ್ನ ಮಗಳನ್ನ ನಿಮ್ಮ ಸೊಸೆಯಾಗಿ ಸ್ವೀಕರಿಸಿ. ನೀವು ಎರಡೇ ಮಕ್ಕಳನ್ನು ಹಡೆದು ಸುಖಸಂಸಾರ ಸಾಗಿಸ್ತಾ ಇದ್ದೀರಿ. ಆದ್ರೆ ನಾನು ಗಂಡು ಮಗುವಿನ ಆಸೆಗೋಸ್ಕರ ಅತಿ ಮಕ್ಕಳನ್ನು ಮಾಡಿಕೊಂಡೆ. ಈಗಿನ ಸ್ಥಿತಿ ನೋಡಿಕೊಂಡ್ರೆ ಮೂರೇ ಮಕ್ಕಳು ಸಾಕಾಗಿತ್ತು ಅನ್ನಿಸುತ್ತೆ.

ನೀಲಾ : ಪಾತಮ್ಮ.... ಹಿಂದಿನದೆಲ್ಲಾ ಮರೆತು ಈಗ ಕ್ಷಮಿಸಿಬಿಡಿ.

ಪಾತು : ನೀವೇನು ಮಾಡಿದ್ದೀರಿ ಪಾಪ ಕ್ಷಮಿಸಲಿಕ್ಕೆ?

ರಾ : ಪಾತಮ್ಮನವರೇ ನೀವು ಊಂ ಅಂದ್ರೆ ಈ ಮದ್ವೆ ಖಂಡಿತ ಆಗುತ್ತೆ.

ಪಾತು : ನಮ್ಮದೇನು ಪುಲಕೇಶಿಯೇ ಬರ್‍ತಾ ಇದ್ದಾನೆ ಕೇಳಿ.

ರಾ : ಬಾರಪ್ಪಾ ಪುಲಕೇಶಿ ಏನು ಹೇಮಳ ಮದ್ವೆಗೆ ಒಪ್ಪಿಗೆ ಇದೆಯೇ?

ಪುಲ : ನಮ್ಮ ತಂದೆ-ತಾಯಿ ಊಂ.... ಅಂದ್ರೆ ನಾನು ಅಂದ ಹಾಗೆ.

ರಾ : ನೋಡ್ದ್ರಾ ನಾಗಣ್ಣ.... ಪಾತಮ್ಮನವರೇ.

ಪಾತು : ಅವನೇ ಒಪ್ಪಿದ ಮೇಲೆ ನಮ್ಮದೇನು?

ನೀಲಾ : ಏನೋ ಹಿಂದಿನದನ್ನು ಮರೆತು ಮನಸ್ಸು ಮಾಡಿದ್ರೈಲ್ಲಾ ನಿಮ್ಮಂಥ ಸಹೃದಯರನ್ನು ಏನಂತ ಹೊಗಳಬೇಕೋ ನನಗೆ ತಿಳೀತಾ ಇಲ್ಲ.

ಜಯ : ನಾಗಣ್ಣನವರೇ... ನಾನೆಷ್ಟೇ ಅಹಂಕಾರ ತೋರಿಸಿದ್ರೂ, ನೀವು ಅದನ್ನು ಗಮನಕ್ಕೆ ತೆಗೆದುಕೊಳ್ದೇ ನನ್ನ ಮಗಳನ್ನ ಸೊಸೆಯಾಗಿ ಸ್ವೀಕರಿಸ್ತೀನಿ ಅಂತ ಹೇಳ್ತಾ ಇದ್ದೀರಿ ನಿಜವಾಗಲೂ ನೀವು ಮನುಷ್ಯರಲ್ಲ.... ದೇವರು... ದೇವರು.

ನಾ : ಅಷ್ಟೆಲ್ಲಾ ಹೊಗಳಿಕೆಗೆ ನಾನು ಅರ್ಹನಲ್ಲ. ಮನುಷ್ಯತ್ವ ತೋರಿಸಿದೆ ಅಷ್ಟೇ.

ಜಯ : ಆದರೆ ಅದೇ ನೀವು ನಮ್ಮ ಮನೆಗೆ ಬಂದಾಗ ಪ್ರಾಣಿಗಿಂತಲೂ ಕೀಳಾಗಿ ಕಂಡೆ. ಈಗ ನನಗೆ ಮನುಷ್ಯತ್ವ ಅಂದ್ರೇನು ಅನ್ನೋದು ಅರ್ಥವಾಯ್ತು.

ರಾ : ಸರಿ ಇನ್ನು ಎಲ್ಲರ ಮಾತು ಸಾಕು, ಮದ್ವೆ ಯಾವಾಗ ಅದನ್ನು ಮಾತಾಡಿ. ನೋಡಯ್ಯಾ ನಿನ್ನ ಮಗನ ಸಂತೋಷಾನ, ನಗ್ತಾ ನಗ್ತಾ ಹೋಗ್ತಾ ಇದ್ದಾನೆ.

ಜಯ : ಮಾರ್ಚಿ ತಿಂಗಳಲ್ಲಿ ಮಾಡೋಣ.

ರಾ : ಏನಪ್ಪಾ?

ನಾ : ಎಲ್ಲಾ ತಮ್ಮ ಇಷ್ಟದಂತೇ ಆಗ್ಲಿ.

ರಾ : ಸರಿ ಇನ್ನು ನಾವು ಮದುವೆಗೆ ಮಾರ್ಚ್ ಆಗೋದೊಂದೇ ಬಾಕಿ.

ಜಯ : ಹೌದು ರಾಜಣ್ಣ ಎಲ್ಲಾ ನಿನ್ನ ಪ್ರಭಾವ!

ರಾ : ನನ್ನದೇನು ಎಲ್ಲಾ ನಾಗಣ್ಣ ಪಾರ್ವತಮ್ಮನವರದು.

ನಾ : ಈ ಮದ್ವೆಯು ಎಲ್ಲರ ಪ್ರಭಾವದಿಂದಲೂ ಆಗ್ತ ಇದೆ.

(ನಾದ ಸ್ವರ)



# ಆರಿಗಾರು ಇಲ್ಲ

**ಪಾತ್ರ ವರ್ಗ**

೧.ಭದ್ರಯ್ಯ ೨. ಚನ್ನಯ್ಯ ೩.ಶಾಂತಾ ೪.ಜಯಾ ೫.ಕೃಷ್ಣ ೬.ಕುಚೇಲ ೭. ಕುಚೇಲನ ಹೆಂಡತಿ ೮. ದ್ವಾರಪಾಲಕರು

(ಅಮ್ಮಾ' ಅತ್ತೇ... " 'ಅಜ್ಜೀ' ಎಂಬ ಅಳಿವಿನ ಕೂಗಿನ ಪ್ರತಿಧ್ವನಿ)

ಶಾಂತಾ : ಏನೂ ಅಂದ್ರೆ...?

ಚನ್ನಯ್ಯ : ಏನು ಶಾಂತ...?

ಶಾಂತಾ : ಸುಮ್ಮನೆ ಹೀಗೇ ಕುಳಿತುಬಿಟ್ರೆ ಅತ್ತೆಯವರ ಸಂಸ್ಕಾರ ನಡ್ಯೋದಾದ್ರೂ ಹ್ಯಾಗೆ?

ಚನ್ನಯ್ಯ : ಕೈನಲ್ಲಿ ಕ್ಯಾಷಿಲ್ಲ, ಬ್ಯಾಂಕಿನಲ್ಲಿ ಹಣವಿಲ್ಲ, ಏನು ಮಾಡ್ಲಿ? ಯಾರನ್ನ ಕೇಳಲಿ...? ನನಗೊಂದೂ ತೋಚ್ತಾ ಇಲ್ಲ ಶಾಂತ.

ಶಾಂತಾ : ಚನ್ನಯ್ಯ ಮೋಸ ಮಾಡ್ತಾರೆ ಅಂತ್ಲೇನು, ಜನಗಳ್ಯಾರೂ ಕೊಡ್ತೋಲ್ಲ ಸಾಲವನ್ನಾ?

ಚನ್ನಯ್ಯ : ಹೌದು ಜನಗಳು ನನಗೆ ಸಾಲಕೊಟ್ರೆ ತೀರಿಸಲಾರೆ ಅಂತ್ಲೇ ತೀರ್ಮಾನಕ್ಕೆ ಬಂದುಬಿಟ್ಟಿದ್ದಾರೆ ಕಣೆ. ಆಗಿನ ಚನ್ನಯ್ಯ ಅಲ್ಲ ಈಗ ನಾನು ಬಡವ ಚನ್ನಯ್ಯ.

ಶಾಂತಾ : ಹೇಗೆ ಹೆಣವನ್ನು ಎಷ್ಟು ಹೊತ್ತು ಇಟ್ಕೊಂಡಿರದ್ಯಾಗುತ್ತೆ ಅಂತ ಹೇಳಿ, ನಮ್ಮಲ್ಲಿದ್ದ ಇದ್ದ ಬಿದ್ದ ಬೆಳ್ಳಿ ಸಾಮಾನ್‌ಗಳನ್ ಮಾರ್ಸಿ ಐದು ನೂರು ರೂಪಾಯಿ ತರ್ಸಿದ್ದೀನಿ ಹ್ಯಾಗೋ ಮುಂದಿನ ಕೆಲಸ ಮಾಡಿ.

ಚನ್ನಯ್ಯ : (ನಿಟ್ಟುಸಿರು ಬಿಡುತ್ತಾ) ಅಯ್ಯೋ ದೇವ್ರೇ ಎಂಥ ಕಾಲವನ್ನು ತಂದಿಟ್ಟೆ...? ಆಗ್ಲೀ.... ಮಾಡಿ ಮುಗಿಸ್ತೇನೆ.

(ಮತ್ತೆ ಅಮ್ಮಾ... ಅತ್ತೆ... ಅಜ್ಜಿ ಎಂಬ ಅಳುವನಿ ಕೂಗಿನ ಪ್ರತಿಧ್ವನಿ)

* * *

ಭದ್ರಯ್ಯ: ಚೆನ್ನಯ್ಯ...

ಚನ್ನಯ್ಯ : ಬಾ ಭದ್ರಯ್ಯ? ಈಗ ಈ ಊರಿಗೆ ಟ್ರಾನ್ಸ್‌ಫರ್ ಆಯ್ತುಂತೆ.

ಭದ್ರಯ್ಯ: ಹೌದಯ್ಯ... ನಿಮ್ಮ ತಾಯಿ... ಈಗ ನಾಲ್ಕು ದಿನಗಳಲ್ಲಿ ತೀರಿಹೋದ್ರಂತೆ...

ಚನ್ನಯ್ಯ : ಹೌದಯ್ಯ...

ಭದ್ರಯ್ಯ: ಏನಾಗಿತ್ತು?

ಚನ್ನಯ್ಯ : ವಯಸ್ಸೂ ಆಗಿತ್ತು, ಹಾರ್ಟ್ ಹಟಾಕ್ ಯಾರಿಗೂ ನೋವು ಕೊಡ್ಲಿಲ್ಲ ಸುಖಮುಖವಾದ ಸಾವು ಕಣಯ್ಯ, ಆದ್ರೂ ಆಕೆ ಸುಮ್ನೆ ನಮ್ಮ ಮನೆಯಲ್ಲಿ ಇದ್ರೂ ಚೆನ್ನಾಗಿರ್‍ತಿತ್ತು.

ಭದ್ರಯ್ಯ: ಏನು ಮಾಡಕ್ಕಾಗುತ್ತೆ ಎಲ್ಲಾ ವಿಧಿಲೀಲೆ.

ಚನ್ನಯ್ಯ : ಅದು ಹೇಳು ಅದನ್ನು ಮೀರ್‍ದವ್ರ್ಯಾರು? ಕುಳಿತ್ಕೊ ಸುಮ್ನೆ ನಿಂತೇ ಬಿಟ್ಯಲ್ಲಾ!

ಭದ್ರಯ್ಯ: ನೀನು ಚೆನ್ನಾಗಿದ್ದೀಯೇ ತಾನೇ?

ಚನ್ನಯ್ಯ : ನೀನು ಭದ್ರವಾಗಿದ್ದೀಯೆ ತಾನೇ?

ಭದ್ರಯ್ಯ: ನಾನೇನೋ ಭದ್ರವಾಗಿದ್ದೀನಿ, ನೀನು ಸಡಿಲವಾಗಿದ್ದೀಯೇನು?

ಚನ್ನಯ್ಯ : ನಾಲ್ಕು ಮಕ್ಕಳಾದ್ಮೇಲೆ ಇನ್ನು ಭದ್ರ ಎಲ್ಲಿ ಬಂತು...
ನೀಹೇಳಿದ್ದೆ...!

ಭದ್ರಯ್ಯ: ನಮ್ಮ ಹಾಗೆ ಎರಡು ಪಡ್ಕೊಂಡು ಭದ್ರವಾಗಿರೋದ್ನೇಕೆ ಕಲೀಲಿಲ್ಲ ಅಂತ...

ಚನ್ನಯ್ಯ : ಏನು ಭಾಷಣ ಶುರು ಮಾಡ್ಬಿಟ್ಟೆ.

ಭದ್ರಯ್ಯ: ಭಾಷಣವಲ್ಲ, ಈಗ ನಿನ್ನೊಂದಿಗೆ ಸಂಭಾಷಣೆ ಕಣಯ್ಯ.

ಚನ್ನಯ್ಯ : ಹೋಗ್ಲಿ ಹಿಂದೆ ನೀನು ಮಾಡಿದ್ದ ಪ್ರತಿಜ್ಞೆ ಜ್ಞಾಪಕ ಇದೆಯೋ?

ಭದ್ರಯ್ಯ: ಇಲ್ಲ ಮರೆತು ಹೋಗಿದೆ.

ಚನ್ನಯ್ಯ : ಸಾಹುಕಾರ್‌ತನ, ನಿನ್ಗೆಲ್ಲಿ ನಮ್ಮ ವಿಷಯದ ಬಗ್ಗೆ ಜ್ಞಾಪಕ ಇರುತ್ತೆ ಹೇಳು?

ಭದ್ರಯ್ಯ: ಅದೇನು ಜ್ಞಾಪಿಸಯ್ಯಾ.

ಚನ್ನಯ್ಯ : ಚನ್ನಯ್ಯ ಭದ್ರಯ್ಯರ ಸ್ನೇಹ ಅಪರಂಜಿಯಷ್ಟು ಗಟ್ಟಿ, ಭದ್ರಯ್ಯ ಚನ್ನಯ್ಯ ಇಬ್ಬರ ಸ್ನೇಹ ಸಕತ್ ಭದ್ರ ಅಂತಾ, ಕೈಮೇಲೆ ಕೈಇಟ್ಟು ಪ್ರಾಣಕ್ಕೆ ಪ್ರಾಣ ಕೊಡೋ ಸ್ನೇಹಿತರು ಈ ಭೂಲೋಕದಲ್ಲಿರೋವರ್‍ಗೂ ಅಂತ ಹೇಳಿದ್ದು ಜ್ಞಾಪಕ ಇದ್ಯಾ?

ಭದ್ರಯ್ಯ: ಅಷ್ಟೇತಾನೆ ನಾನು ಇನ್ನೇನಪ್ಪಾ ಅನ್ಕಿದ್ದೆ.

ಚನ್ನಯ್ಯ : ಮತ್ತೇನಯ್ಯಾ ಇತ್ತೀಚ್ಗಂತೂ ಅಪರೂಪವಾಗಿಬಿಟ್ಟೆ.

ಭದ್ರಯ್ಯ: ಅದ್ಕೇ ನಿಜರೂಪವಾಗಿ ಬಂದು ನಿನ್ನ ಮುಂದು ನಿಂತಿದ್ದೀನಲ್ಲಾ. ಬರೇ ಮಾತೇ ಉಪಚಾರವಾಗೋಯ್ತೋ ಹ್ಯಾಗೆ?

ಚನ್ನಯ್ಯ : ಇಲ್ಲ... ಇಲ್ಲ... ಅಪಚಾರವಾಯ್ತು.

ಭದ್ರಯ್ಯ: ಸಾಕು ನಿಲ್ಸಯ್ಯ... ನಿನ್ನ ಆಷಾಡಭೂತಿತನ್ವ.

ಚನ್ನಯ್ಯ : ಅದೆಲ್ಲಾ ನಿಮ್ಗೆ ಬಿಟ್ಟಿದ್ದಪ್ಪಾ, ಶಾಂತಾ... ಏನು ಶಾಂತಾ ಅಂತ ಕೂಗಿದ್ರೂ ಶಾಂತವಾಗ್ಯೇ ಬಂದು ನಿಂತಿದ್ದೀಯೆ.

ಭದ್ರಯ್ಯ: ಶಾಂತಾ ಅಂತಂದೆ ಅದ್ಕೇ ಅವ್ರು ಶಾಂತವಾಗಿ ಬಂದು ನಿಂತವ್ರೆ.

ಶಾಂತ : ಇಲ್ಲ... ನೀವು ಹೆಂಡ್ತಿ ಕರೆದುಕೊಂಡು ನಮ್ಮ ಮನೆಗೆ ಬರಲಿಲ್ಲ. ನಿಮ್ಮೊಂದ್ಗೇನು ಮಾತಾಡೋದು ಅಂತ ನಾನು ಶಾಂತವಾಗಿದ್ದೆ ಅಷ್ಟೆ.

ಭದ್ರಯ್ಯ: ಅಂಪ ಮೇಲೆ ಗಂಡನವರ ಮೇಲೆ ಅಸಮಾಧಾನ ಇಲ್ಲ ಅಂದ ಹಾಗಾಯ್ತು.

ಚನ್ನಯ್ಯ : ಸರಿ ಕಣೆ ಕೇಳು.

ಭದ್ರಯ್ಯ: ಯಾಕೋ ಈಹೊತ್ತು, ಗಂಡ ಹೆಂಡ್ತಿರಿಂದ ಮಾತಿನ ಉಪಚಾರ ಅಂತ ಕಾಣುತ್ತೆ.

ಶಾಂತ : ಇದು ಅತಿಥಿಗಳಿಗೆ ಉಚಚರಿಸುವ ಕೈಗಳು, ಈ ಹೊತ್ತು ಭಾನುವಾರ... ಬಿಸಿಬೇಳೆಬಾತ್ ಮಾಡಿದ್ದೀನಿ ತರ್ತೀನಿ.

ಭದ್ರಯ್ಯ: ಏನು ಬಿಸಿಬೇಳೆ ಬಾತಿನಲ್ಲಿ ತರಕಾರಿಯೇ ಇಲ್ಲ ಮೊದ್ಲು ಹ್ಯಾಗೆ ಮಾಡ್ತಿದ್ರಿ, ಇದೇನು ಈಗ... ಹೀಗೆ...

ಚನ್ನಯ್ಯ : ಬಿಸಿಬೇಳೆ ಇದ್ಯೋ ಇಲ್ವೋ.

ಭದ್ರಯ್ಯ: ಅದೂ ಕಮ್ಮಿಯೇ... ಸಾರಿ ಹೀಗಂದ ಅಂತ ಬೇಜಾರು ಮಾಡಿಕೊಳ್ಬೇಡಿ.

ಚನ್ನಯ್ಯ : ನೀನು ಬರ್‍ತಾನೇ ಅನ್ನೋದ್ಯಾರಿಗ್ ಗೊತ್ತು. ಏನೋ ಮನೇಲಿರೋದು ಹಾಕ್ ಮಾಡಿದ್ದಾಳೆ. ಇನ್ನೊಂದು ದಿನ ಹೇಳಿಬಾ ಸೊಸಗಾಗಿ ಮಾಡಿಸ್ತೀನಿ.

ಶಾಂತ : ಹೌದು ಖಂಡಿತ, ನಿಮ್ಮ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬರಬೇಕು.

ಭದ್ರಯ್ಯ: ಅದ್ಕೇನಂತೆ ಆಗ್ಲಿ ಅಗತ್ಯವಾಗಿ ನೀವು ಯಾವಾಗ ಬರ್‍ತೀರಿ?

ಶಾಂ : ನೀವು ಬಂದು ಹೋದಮೇಲೊಂದು ದಿನ.

ಭದ್ರಯ್ಯ: ಸರಿ ಎಲ್ಲಿ ಮಕ್ಕಳು? ಸದ್ದೇ ಇಲ್ಲ ಯಾರ್‍ದೂ...

ಚನ್ನಯ್ಯ : ಸದ್ಯ ಅವ್ರಿದ್ದಿದ್ರೆ ಬಂದವರಿಗೆಲ್ಲಾ ಚಿಟ್ಬಾಗೋದು ಎಲ್ಲೋ ಕುಣಿಯೋಕ್ ಹೋಗಿವೆ. ಈ ಬೇಸಗೆ ರಜೆ ಬಂತು ನೋಡಿ, ಅವರು ಓದಕ್ಕಿಂತ, ಬೀದಿಲಾಡ್ಕಂಡು ತಲೆ ಬಿಸಿಮಾಡದೇ ಹೋದ್ರೆ ಸಾಕು.

ಭದ್ರಯ್ಯ: ಏನು ಮಾಡೋದು ಹುಡುಗ್ರೇ ಅಷ್ಟು ದಂಡು ಕಟ್ಟೋದೆ ಅವುಗಳ ಸ್ವಭಾವ. ಸರಿ ನಾನು ಬರ್‍ಲಾ?

ಚನ್ನಯ್ಯ : ಬೇಜಾರು ಮಾಡ್ಕೊಳ್ಬೇಡಾ ಇನ್ನೊಂದು ದಿವಸ ಬಾರಪ್ಪಾ.

ಭದ್ರಯ್ಯ: ನಾನೇನು, ನೀವು ಬೇಜಾರು ಮಾಡಿಕೊಳ್ದೇ ಹೋದ್ರೆ ಸಾಕು. ನಾನು "ಬಿಸಿಬೇಳೆಬಾತ್" ತೊಗಳಿಬಿಟ್ಟೆ.

ಶಾಂತಾ : ಇದ್ದದನ್ನು ಎದುರಿಗೆ ಹೇಳಿದ್ರೆ ಅದ್ರಲ್ಲೇನು ಬಂತು ಬೇಜಾರು.

ಭದ್ರಯ್ಯ: ನೀವು ಹಾಗೆ ಬೇಜಾರು ಮಾಡ್ಕೊಳ್ಳಿಲ್ಲ ಅಂತ್ಲೇ ನಾನು ಹೇಳಿದ್ದು. ಸರಿ ಬರ್‍ತೀನಪ್ಪಾ ಚನ್ನಯ್ಯ.

ಚನ್ನಯ್ಯ : ಆಗ್ಲಿ

ಶಾಂತಾ : ನಿಮ್ಮ ಸ್ನೇಹಿತ ಹೇಳಿದ್ನ ಕೇಳಿಸ್ಕೊಂಡ್ರಾ.

ಚನ್ನಯ್ಯ : ಇಲ್ಲ, ಕಿವಿ ಕಿವಿಡು ಮಾಡ್ಕೊಂಡೆ.

ಶಾಂತಾ : ಹೌದು ಇಂಥ ಸಂದರ್ಭಗಳಲ್ಲಿ ಹಾಗಿರೋದೊಂದೇ ಮಾರ್ಗ...

ಚನ್ನಯ್ಯ : ಸರಿ ಏನೋ ತಲೆಗಚ್ಕೋಡು ಯೋಚನೆ ಮಾಡಬೇಡ ಮಲಗುಹೋಗು.

ಶಾಂತಾ : ನೀವು...

ಚನ್ನಯ್ಯ : ನಾನೊಂದು ಸ್ವಲ್ಪ ಏನೋ ಬರೀಬೇಕು ಆಮೇಲೆ ಮಲಗ್ತೇನೆ.

ಶಾಂತಾ : ಸರಿ...

ಚನ್ನಯ್ಯ : ಏನು ಬರೀಬೇಕೂ ಅಂದ್ರೂ ಬೇಜಾರು. ರೇಡಿಯೋನಾದ್ರೂ ತಿರಗ್ಸೋಣ...

(ಆಕಾಶವಾಣಿ, ಬೆಂಗಳೂರು, ಭದ್ರಾವತಿ ಹಾಗೂ ಮೈಸೂರು. ಈಗ ಶ್ರೀಮತಿ ಶಾಮಲಾ ಜಹಗಿರ್‌ದಾರ್ ಅವರಿಂದ ವಚನಗಳ ಗಾಯನ. ಮೊದಲಿಗೆ ಬಸವಣ್ಣನವರ "ಚಂದ್ರೋದಯಕೆ ಅಂಬುಧಿ ಹೆಚ್ಚುವುದಯ್ಯಾ...?)

ಚನ್ನಯ್ಯ : ಹೌದು... ಶರಣರ ಅನುಭವ ಆಳವಾದದ್ದು, ನಿಜವಾಗಿಯೂ ಬಸವಣ್ಣನವರ ವಚನ ಅಮೃತವಾಣಿ. ಪ್ರಪಂಚದ ಆಟಗಳನ್ನು ನೋಡಿ ನುಡಿದ ಪಕ್ವವಾದ ಅನುಭವದ ವಾಣಿ ಯಾರದೇ ಜೀವನವನ್ನೇ ತೆಗೆದುಕೊಳ್ಳಲಿ ಇದು ನಿಜ. ನಾವು ಕಷ್ಟಪಡಬೇಕು, ದುಡಿಯಬೇಕು, ಸುಖವಾಗಿರಬೇಕು. ಹೆಂಡತಿ, ಮಕ್ಕಳು, ಅಣ್ಣ, ತಮ್ಮ ಸ್ವಂತ ಸೊಮ್ಮಿನವರು ಆಗುತ್ತಾರೆಂಬುದು ಬರೇ ಭ್ರಮೆಯೇ ಹೊರತು ಸತ್ಯಾಂಶ ಅಪರೂಪ. ಎಲ್ಲರ ಜೀವನದಲ್ಲೂ ಅವರವರ ಮಕ್ಕಳು, ಹೆಂಡತಿ ಅಕ್ಕ ತಂಗಿ, ಅಣ್ಣ ತಮ್ಮಂದಿರು ಅಷ್ಟಕ್ಕೇ ಸೀಮಿತ. ನನ್ನ ಭಾಗಕ್ಕೆ ಅವರು ಆಗ್ಲಿಲ್ಲ, ಇವರೂ ಆಗ್ಲಿಲ್ಲಾ ಅಂದ್ರೆ? ಯಾರೂ ಯಾಕಾಗ್ತಾರೆ? ನಾನ್ಯಾರ್‍ಗಾಗಿದ್ದೀನಿ? ಸ್ನೇಹಿತರು ಸ್ವಂತ ಸೊಮ್ಮಿನವರು ಎಲ್ಲರೂ ನಮ್ಮಲ್ಲಿ ಐಶ್ವರ್ಯ, ಕೀರ್ತಿ ಇದೆ ಹೂ... ಯೋಚನೆ ಮಾಡೋದ್ರಿಂದ ಏನೂ ಪ್ರಯೋಜನವಿಲ್ಲ. ಮಲ್ಗೋಣ ಲೈಟ್ ಆರಿಸಿಬಿಟ್ಟು...

(ಲೈಟ್ ಆರಿಸಿ ಮಲಗುವನು)

ಕುಚೇಲ : ಯಾಕೆ ತಲೆ ಮೇಲೆ ಕೈ ಹೊತ್ತು ಕುಳಿತ್ಕೊಂಬಿಟ್ಟೆ?

ಹೆಂಡತಿ : ಇನ್ನೇನು ಅದೊಂದೇ ದಾರಿ ಅಂದ್ರೆ.

ಕುಚೇಲ : ಕಷ್ಟ ಬಂತು ಅಂತ ಕುಗ್ಗಬಾರ್ದು ಕಣೆ.

ಹೆಂಡತಿ : ನಾವು ಕುಗ್ಗೋಲ್ಲಾ ಆದ್ರೂ ದೇಹ ಕುಗ್ಗೇ ಇರುತ್ಯೇ ಹೇಳಿ.

ಕುಚೇಲ : (ನಿಟ್ಟುಸಿರುಬಿಟ್ಟು) ಎಲ್ಲಾ ಆ ದೇವ್ರು ಮಾಡದ ಹಾಗುಗುತ್ತೆ ನನ್ನ ನಿನ್ನ ಕೈಲೇನಿದೆ.

ಹೆಂಡತಿ : ಅಂದಹಾಗೆ ದೇವರಿಗೆ ಸಮಾನನಾದ ಕೃಷ್ಣ, ನಿಮ್ಮ ಜೊತೇಲೆ ಗುರುಕುಲದಲ್ಲಿ ಆಪ್ತ ಸ್ನೇಹಿತ ಆಗಿದ್ರಿ ಅಂದ್ರಿ. ಈ ಕಷ್ಟದ ಪರಿಸ್ಥಿತಿಯಲ್ಲಿ ಯಾಕೆ ನೆರವು ಕೇಳಬಾರದು?

ಕುಚೇಲ : ಸ್ನೇಹ ಇದೆ ಅಂತ ಏನಾದ್ರೂ ಅಪೇಕ್ಷೆ ಪಟ್ಟರೆ ಅದು ಫಲಿಸುತ್ತೆ ಅನ್ನಾದಾದ್ರೂ ಹೇಗೆ?

ಹೆಂಡತಿ : ನಿಮ್ಮನ್ನ ಈ ಸ್ಥಿತೀಲಿ ನೋಡಲಾರ್ದೆ ಹೇಳ್ತಾ ಇರೋ ವಿಷಯ. ನನ್ನ ಮಕ್ಕಳ ಚಿಂತಾಜನಕ ಸ್ಥಿತಿನಾ ಗಮನಿಸಿ ನಿಮ್ಮಲ್ಲಿ ಬೇಡ್ತಾ ಇರೋದು. ದಿನದಿನಕ್ಕೆ ಸಂಸಾರ ಬೆಳದಂಗೆ, ಸಾಲ ಬೆಟ್ಟದಾಗಿ ಬೆಳೆದು ಹೋಗಿದೆ. ಕೊಡೋವ್ರು ಎಷ್ಟು ದಿನ ಕೊಡ್ತಾರೆ? ಮನುಷ್ಯನಾಗಿ ಹುಟ್ಟಿದಮೇಲೆ ಏನಿಲ್ದೇ ಹೋದ್ರೂ ಅನ್ನ, ಬಟ್ಟೆ, ವಸತಿ ಇವು ಮೂರಾದ್ರೂ ಇರಬೇಡ್ವೇ? ನನಗೇನು ಐಶ್ವರ್ಯಾನೂ ಬೇಡಿ, ನಿಮ್ಮನ್ನ ಚಕ್ರಾಧಿಪತ್ಯ ಕೇಳಿ ಅನ್ನಿಲ್ಲಾ.

ಕುಚೇಲ : ಇಷ್ಟಕ್ಕೆಲ್ಲಾ ತಪ್ಪು ನಮ್ಮದು ತಾನೇ, ಸಂಸಾರ ಬೆಳೆಸ್ತಾ ಬೆಳೆಸ್ತಾ ಕಷ್ಟವೂ ಬೆಳೀತಾ ಹೋಯ್ತು, ಅದಕ್ಕೆ ಕೃಷ್ಣನು ಏನ್ಮಾಡ್ತಾನೋ. ನನ್ನ ಅವಿವೇಕದ ಬಗ್ಗೆ ಏನಾದ್ರೂ ಛೀಮಾರಿ ಮಾಡಿ ಕಳುಹಿಸ್ಬಿಟ್ರೆ? ಹ್ಯಾಗೋಗ್ಲಿ? ಯಾವ ಮುಖ ಹೊತ್ಕೊಂಡೋಗ್ಲಿ?

ಹೆಂಡತಿ : ನನ್ನ, ನಿಮ್ಮ ವಿಷಯ ಬಿಟ್ಬಿಡಿ, ಪಾಪ ಏನೂ ಅರಿಯದ ಆ ಹಸುಳೆಗಳ ಅಭಿವೃದ್ಧಿಗಾಗಿಯಾದ್ರೂ ಹೋಗಿಬನ್ನಿ.

ಕುಚೇಲ : ಹಾಗಾದ್ರೆ ಹೋಗ್ಲೇಬೇಕು ಅನ್ತೀಯೇನು?

ಹೆಂಡತಿ : ಹೋಗ್ಲೇಬೇಕು. ಆ ಪುಣ್ಯಾತ್ಮನಿಂದ ನಮಗೆ ಒಳ್ಳೇದಾಗುತ್ತೆ ಅಂತ ನನ್ನ ಅಂತರಾತ್ಮ ನುಡೀತಾ ಇದೆ.

ಕುಚೇಲ : ಎಷ್ಟೋ ದಿನಗಳ ಮೇಲೆ ಸ್ನೇಹಿತನ ಹತ್ತರ ಹೋಗ್ತಾ ಇರೋದು, ಏನಾದ್ರೂ ತೆಗೆದುಕೊಂಡು ಹೋಗಬಾರದೆ?

ಹೆಂಡತಿ : ಹೌದು.... ಆದ್ರೆ ಈಗ ಮನೇಲಿ ಏನೂ ಇಲ್ವಲ್ಲಾ, ಏನಾದ್ರೂ ತಿಂಡಿ ಮಾಡ್ಕೊಡೋಣ ಅಂದ್ರೆ ಆತ ನನಗೇನೂ ಕೊಟ್ಟಿಲ್ವಲ್ಲಾ ತಾಳಿ.... ಏನಿದೆ ನೋಡ್ತೀನಿ...

ಕುಚೇಲ : ಏನೂ ಇಲ್ಲ ಅನ್ಸ್ತೀಯಾ... ಇನ್ನೇನು ನೋಡ್ತೀಯೆ ಬಾ...

ಹೆಂಡತಿ : ಇದೋ ನೋಡಿ ಮೂರು ಹಿಡಿ ಅವಲಕ್ಕಿ ಮಾತ್ರ ಇದೆ.

ಕುಚೇಲ : ಸರಿ ಅದ್ನೇ ಕೊಡು.

ಹೆಂಡತಿ : ಬರೇ ಅವಲಕ್ಕೀನ, ಕೃಷ್ಣನಿಗೆ ಕೊಡೋದ್ನೇ? ಪರಮಾತ್ಮ ದೇವರಿಗೆ ಇಷ್ಟು ಮಾತ್ರ ಕೊಡಬೇಕು ಅನ್ತಾ ಇಟ್ಟಿದ್ಯಾ?

ಕುಚೇಲ : ಯೋಚನೆ ಮಾಡಬೇಡ ಅದನ್ನೇ ಒಂದು ಬಟ್ಟೆಯಲ್ಲಿ ಕಟ್ಟಿಕೊಂಡು ತೆಗೆದುಕೊಂಡ್ಹೋಗ್ತೀನಿ.

ಹೆಂಡತಿ : ಆಗ್ಲಿ... ತೆಗೆದುಕೊಳ್ಳಿ.

ಕುಚೇಲ : ನಾನು ಬರ್ತೇನೆ ಆತನ ಕೃಪೆ ಹ್ಯಾಗಿದೆಯೋ ನೋಡೋಣ.

* * *

ದ್ವಾರಪಾಲಕ : ಯಾರದು?

ಕುಚೇಲ : ನಾನು ಕುಚೇಲ.

ದ್ವಾರಪಾಲಕ : ಏನಾಗ್ಬೇಕಾಗಿತ್ತು?

ಕುಚೇಲ : ಸ್ವಲ್ಪ ಶ್ರೀ ಕೃಷ್ಣನನ್ನು ನೋಡಬೇಕು.

ದ್ವಾರ : ಏನು ಸಮಾಚಾರ?

ಕುಚೇಲ : ಸಮಾಚಾರ ಏನೂ ಇಲ್ಲ. ಕೃಷ್ಣ ನನ್ನ ಬಾಲ್ಯ ಸ್ನೇಹಿತ. ಸ್ವಲ್ಪ ಹಾಗೇ ನೋಡ್ಕೊಂಡೋಗೋಣ ಅಂತ ಬಂದಿದ್ದೀನಿ.

ದ್ವಾರಪಾಲಕ : (ನಗುತ್ತಾ) ಕೇಳಿದ್ಯೇನು ದ್ವಾರಪಾಲಕ ಈತ ಹೇಳೋದು. ಕೃಷ್ಣ ಈ ಬಡ ಕುಚೇಲನ ಸ್ವಂತನಂತೆ, ಬಾಲ್ಯ ಸ್ನೇಹಿತನಂತೆ, ಸುಮ್ನೆ ಸುಳ್ಳು ಯಾಕ್ಹೇಳ್ತೀಯಾ? ಅವರ ಮುಖ ನೋಡಯ್ಯ ಮುಖಾನಾ ಹ್ಯಾಗಿದೆ?

ಕುಚೇಲ : ಯಾಕೆ ಸ್ನೇಹಿತ ಅಂತ ಸುಳ್ಳು ಹೇಳಿ ಒಳಕ್ಕೆ ಹೋಗಬೇಕಾ? ಬೇಕಾದ್ರೆ ವಿಚಾರಿಸಿ ನೋಡಿ.

ದ್ವಾರ : ನಡೆಯಯ್ಯಾ ಕಂಡಿದ್ದೀನಿ ಸ್ನೇಹಿತನಂತೆ, ಸ್ನೇಹಿತ ಮಾತಾಡಿದ್ರೂ ಒಂದು ತೂಕ ಬೇಡ್ವೇ, ನಡೀ.

(ಶ್ರೀ ಕೃಷ್ಣನು ಅಷ್ಟರಲ್ಲಿ ಪ್ರವೇಶಿಸುತ್ತಾ ದೂರದಿಂದಲೇ)

ಕೃಷ್ಣ : ಕುಚೇಲಾ... ಕುಚೇಲಾ... ಮಿತ್ರಾ ಬಾ...ಬಾ.

ಕುಚೇಲ : ಕೃಷ್ಣ ಪರಮಾತ್ಮ ನಿನ್ನ ಕೃಪಾಕಟಾಕ್ಷ ನನಗೆ ದೊರಕಿತಲ್ಲಾ ನಾನೇ ಧನ್ಯ, ಈಗಲಾದರೂ ಕೇಳಿದಿರಾ ದ್ವಾರಪಾಲಕರೇ?

ಕೃಷ್ಣ : ಏನು ಕುಚೇಲ?

ಕುಚೇಲ : ಕೃಷ್ಣಾ ನನ್ನನ್ನು ನಿಮ್ಮ ಸ್ನೇಹಿತ ಎಂದಾಗ ಹಾಸ್ಯಮಾಡಿ ನಗತ್ತಾ, ಒಳಗೆ ಪ್ರವೇಶವಿಲ್ಲವೆಂದು ಹೇಳಿದರು.

ದ್ವಾರ : ಮಹಾ ತಪ್ಪಾಯ್ತು ಕ್ಷಮಿಸಿ ದೇವಾ...

ಕೃಷ್ಣ : ಸತ್ಯಭಾಮೆ, ರುಕ್ಮಣಿಯರೇ ನನ್ನ ಬಾಲ್ಯ ಸ್ನೇಹಿತ ಬಂದಿದ್ದಾನೆ. ಈ ಅತಿಥಿ ಸತ್ಕಾರ ಸರಿಯಾಗಿ ನಡೆಯಿಲಿ, ಆರತಿಯನ್ನು ಬೆಳಗಿ.

ಕುಚೇಲ : ಪರಮಾತ್ಮ! ನನಗೇಕೆ ಅಷ್ಟೆಲ್ಲಾ ಸ್ವಾಗತ. ನಾನೊಬ್ಬ ಸಾಮಾನ್ಯ ಮನುಷ್ಯ, ನಿಮ್ಮಿಂದ ನಾನು ಸೇವೆ ಪಡೆಯುವುದೇ ನಾನು ನಿಮಗೆ ಮಾಡಬೇಕು. ಅಂಥದ್ದರಲ್ಲಿ ನೀವು ನನಗೆ... ಬೇಡ ದೇವ ದೇವಿಯರೇ ಬೇಡಿ.

ದ್ವಾರ : ಛೆಂ... ಎಂಥ ಅಪರಾಧವಾಯಿತು!

ಕುಚೇಲ : ದೇವ ನನಗೆ ಈ ಮಂಗಳ ಸ್ನಾನ, ಈ ಉಡುಪು, ಉಡುಗೊರೆ, ನನ್ನ ಹೆಂಡತಿ ನಿಮ್ಮನ್ನು ನೋಡಿಕೊಂಡು ಬಾ ಎಂದು ಕುಳುಹಿಸಿದಳು ಆದುದರಿಂದ ಬಂದೆ.

ಕೃಷ್ಣ : ನಿನ್ನ ಹೆಂಡತಿ ನನಗೇನು ಕೊಟ್ಟು ಕಳುಹಿಸಿದ್ದಾಳೆ?

ಕುಚೇಲ : ದೇವಾದಿದೇವನಿಗೆ... ನಮ್ಮಂಥ ಬಡವರು ಕೊಡುವುದಾದರೂ ಏನು?

ಕೃಷ್ಣ : ಹಾಗಾದರೆ ಏನೂ ತಂದಿಲ್ಲವೇ?

ಕುಚೇಲ : ತಂದಿದ್ದೇನೆ, ಅದನ್ನು ಹೇಗೆ ಕೊಡುವುದೆಂದು ಸಂಕೋಚ.

ಕೃಷ್ಣ : ಏನು ಕೊಡು... ಕೊಡು

(ಗಂಟನ್ನು ಕೊಡಲು ಬಿಚ್ಚಿ) ಆಹಾ ನನಗೆ ಪ್ರಿಯವಾದ ಅವಲಕ್ಕಿಯನ್ನು ಅತ್ತಿಗೆ ಕೊಟ್ಟು ಕಳುಹಿಸಿದ್ದಾರೆ. (ತಿನ್ನುತ್ತಾ) ಬಹಳ ರುಚಿಯಾಗಿದೆ... ಕುಚೇಲ, ಬಡತನ ಎಂದೆ... ಆದರೂ ಹೃದಯ ಮಾತ್ರ ಬಡವಾಗಿಲ್ಲ.

ಕುಚೇಲ : ಬಡವರು ಎಂದಿದ್ದರೂ ಬಡವರೇ ದೇವ.

ಕೃಷ್ಣ : ಹೌದು ಕುಚೇಲ... ನೀನೇಕೆ ಇಷ್ಟೊಂದು ಬಡವಾಗಿದ್ದೀಯ?

ಕುಚೇಲ : ಸಂಸಾರ ತಾಪತ್ರಯಗಳು.

ಕೃಷ್ಣ : ಮಕ್ಕಳು ಎಷ್ಟು?

ಕುಚೇಲ : ಇವೆ ಮನೆ ತುಂಬಾ... ಅದಕ್ಕಾಗಿಯೇ ನನ್ನ ಸಂಸಾರ ತೂಗಿಸುವುದು ಕಷ್ಟವಾಗಿದೆ. ನನ್ನ ಹೆಂಡತಿ, ನಾನು ಇಬ್ಬರೂ ಮಾಡಿದ ತಪ್ಪಿಗೆ ಈ ಕಷ್ಟವನ್ನು ಅನುಭವಿಸಬೇಕಾಗಿದೆ. ಜಗದ್‌ರಕ್ಷಕಾ ನಮ್ಮನ್ನು ರಕ್ಷಿಸಬೇಕಾದುದು ನೀನೇ. ಆದ್ದರಿಂದಲೇ ನಿನ್ನಲ್ಲಿಗೆ ನನ್ನಾಕೆ ಕಳುಹಿಸಿದಳು.

ಕೃಷ್ಣ : ಭಕ್ಷ್ಯ ಬೋಜ್ಯಗಳು ಆರಿಹೋಗುತ್ತದೆ ತೆಗೆದುಕೋ.

ಕುಚೇಲ : ನನ್ನಮನೆಯಲ್ಲಿ ಹೆಂಡತಿ ಮಕ್ಕಳು ಅನ್ನಕ್ಕೆ ಗತಿಯಿಲ್ಲದೆ ಕುಳಿತಿರುವಾಗ ನಾನು ಅದನ್ನು ಸೇವಿಸುವುದು ಎಂದರೇನು ಪ್ರಭು ಬೇಡ.

ಕೃಷ್ಣ : ನಾನು ಅವರಿಗೂ ಕರುಣಿಸಿರುವೆ ಮಾಡು. ನೀನು ನನ್ನ ಆಪ್ತ ಸ್ನೇಹಿತನಲ್ವೇ? ಸಾಂದೀಪನಾಶ್ರಮದಲ್ಲಿ ನಾವು ದನಗಳನ್ನು ಕಾಯ್ತಾ ಇದ್ದುದು ಜ್ಞಾಪಕ ಇದ್ಯೇ.

ಕುಚೇಲ : ಯಮುನಾ ನದಿಯಲ್ಲಿ, ಆಟ, ಗುರುಕುಲವಾಸ, ಮರೆಯಲಿಕ್ಕೆ ಸಾಧ್ಯವೇ? ನಿನ್ನ ಕೊಳಲಿನ ಗಾನಕ್ಕೆ ಆ ದನಗಳು ಮರುಳಾಗಿ ಓಡಿ ಬರುತ್ತಿದ್ದುದು ಇನ್ನು ನನ್ನ ಕಣ್ಣಿಗೆ ಕಟ್ಟಿದಂತಾಗಿದೆ.

ಕೃಷ್ಣ : ಆ ನವಿಲಿನ ಒಯ್ಯಾರ, ಜಿಂಕೆಯ ನಡಿಗೆ, ಹಕ್ಕಿಯ ಕೊರಳಿಂಚರ, ಕಾರ್ಮುಗಿಲ ಸೊಂಪು, ಆ ಪ್ರಕೃತಿ ಸೌಂದರ್ಯ, ಗುರುಕುಲಾಶ್ರಮವಾಸ ನಿಜಕ್ಕೂ ಇನ್ನೂ ರೋಮಾಂಚನಗೊಳಿಸುತ್ತದೆ.

ಕುಚೇಲ : ಗಿಡಗನನ್ನು ಬಾಣದಿಂದ ಹೊಡೆದುದ್ದ ಜ್ಞಾಪಕ ಇದ್ಯ?

ಕೃಷ್ಣ : ಪಾರಿವಾಳವನ್ನು ತಿನ್ನಲಿಕ್ಕೆ ಹೋಗ್ತಿದ್ದಾಗ ಹೊಡೆದೆ, ಆಗ ನೀನು ಪ್ರಾಣಿಹಿಂಸೆ ಮಾಡಬಾರದು ಎಂದು ಹೇಳಿದಾಗ ಗಿಡುಗನ ವರ್ತನ ಸರಿಯೇ? ಎಂದು ಗುರುಗಳನ್ನೇ ಕೇಳಿದಷ್ಟು ಆಗ ಅವರು ಹಿಂಸೆ ಪಾಪಕರ ನಿಜ, ಆದರೆ ಕೃಷ್ಣ ತೋರಿಸಿದ ಹಿಂಸೆಯಲ್ಲಿ ಅಹಿಂಸೆಯೆ ಮುಖ್ಯವಾಗಿದೆ. ಹಿಂಸೆ ಅಹಿಂಸೆ, ಅಹಿಂಸೆ ಹಿಂಸಿಯಾಗುತ್ತೆ. ಅದು ದೇಶ ಕಾಲಾನುಗುಣವಾಗಿ ವಿವಿಧ ರೂಪ ತಾಳುತ್ತೆ ಅಂದ್ರಲ್ವೇ.

ಕುಚೇಲ : ಹೌದು ಮತ್ತೊಂದು ಸಾರಿ ಸೌದೆ ತರಲಿಕ್ಕೆ ಹೋಗಿ ಪ್ರಚಂಡಮಾರುತ ಬೀಸಿ ಅಸಾಧ್ಯ ಮಳೆ ಹೊಯ್ದಾಗ ಮರದ ಬುಡವನ್ನು ಆಶ್ರಯಿಸಿದ್ದುದು, ಪ್ರವಾಹ ಹೆಚ್ಚಾಗಲು ಕೊಚ್ಚಿಕೊಂಡು ಹೋದುದು, ಒಂದು ಮರದ ಬೇರನ್ನು ಆಶ್ರಯಿಸಿ ಬೆಳಗಿನವರೆಗೂ ಪ್ರಜ್ಞೆ ಇಲ್ಲದ ಹಾಗೇ ಬಿದ್ದಿದ್ದಾಗ ಗುರುಗಳು ಬಂದು ಕರೆದುಕೊಂಡು ಹೋದುದು ನಿಜವಾಗ್ಲೂ ಇನ್ನೂ ಜ್ಞಾಪಕ ಇದೆ.

ಕೃಷ್ಣ : ಆ ಗುರುಕುಲಾಶ್ರಮದಲ್ಲಿ ಇಂಥದ್ದು ಎಷ್ಟು ಘಟನೆಗಳು ನಡೆದು ಹೋದವು? ಇನ್ನು... ಆ ದಿನಗಳು ಬರೋದು ಬಹಳ ಕಷ್ಟ.

ಕುಚೇಲ : ಸಾಂದೀಪನ ಗುರುಗಳ ಮಗ ಯಮುನಾ ಪ್ರವಾಹಕ್ಕೆ ಸಿಕ್ಕಿಕೊಂಡಾಗ ನೀನು ಹೇಗೇ ಕಾಪಾಡ್ದೆ... ಇನ್ನೂ ರೋಮಾಂಚನವಾಗುತ್ತೆ ಯಪ್ಪಾ.

ಕೃಷ್ಣ : ಅಂತೂ ಎಷ್ಟೋ ದಿನಗಳ ಮೇಲೆ ಬಂದ್ಯಲ್ಲಾ, ನಮ್ಮ ಹಿಂದಿನ ದಿನಗಳ ಮೆಲುಕು ಹಾಕಲಿಕ್ಕೆ ಸಮಯ ಆಯ್ತು.

ಕುಚೇಲ : ನಾನು ಬರ್ತೀನಿ ಕೃಷ್ಣ.

ಕೃಷ್ಣ : ಇನ್ನು ಕೆಲವು ದಿನ ಇದ್ದು ಹೊರಡಬಹುದಲ್ಲಾ ಕುಚೇಲಾ.

ಕುಚೇಲ : ನನ್ನ ಬರುವಿಕೆಯನ್ನು ಕಾಯ್ತಾ ಇರ‍್ತಾರೆ ಹೆಂಡ್ತಿ ಮಕ್ಕಳು.

ಕೃಷ್ಣ : ನೀನು ಯೋಚನೆ ಮಾಡಬೇಕಾಗಿಲ್ಲ ಈಗ ಅವರು ಸುಖವಾಗಿದ್ದಾರೆ. ನೀನು ಹೋಗಿ ಬಾ... ನಿನಗೆ ಅಷ್ಟೈಶ್ವರ್ಯ ಪ್ರಾಪ್ತಿಯಾಗಲಿ ತಗೋ ಈ ಮರ್ಯಾದೆಗಳು.

ಕುಚೇಲ : ನಿನ್ನನ್ನು ಯಾವ ರೀತಿ ಸ್ತುತಿಸಬೇಕೋ ತಿಳೀತಾ ಇಲ್ಲ, ಎಲ್ಲಾ ನಿನ್ನ ಅನುಗ್ರಹವೆಂದೇ ನಂಬಿದ್ದೇನೆ ಕೃಷ್ಣ.

ಕೃಷ್ಣ : ಅದಕ್ಯಾಕೆ ಅಳ್ತೀಯಾ?

ಕುಚೇಲ : ಕಣ್ಣೀರಲ್ಲಾ ಆನಂದಭಾಷ್ಪ ದೇವಾ, ಬರ‍್ತೀನಿ ದೇವಾ.

* * *

ಕುಚೇಲ : ಆಂ... ನಮ್ಮ ಮನೆ ಎಲ್ಲಿ? ದಾರಿತಪ್ಪಿ ಬಂದುಬಿಟ್ನೇ ಇಲ್ಲ... ಇದ್ಯಾವ್ದೊ ದೊಡ್ಡಮನೆ ಯಾರೋ ಹೆಂಗಸು? ದೊಡ್ಡ ಸಾಹುಕಾರರಾಗಿ ಕಾಯ್ತಾ ಇದ್ದಾರೆ.

ಹೆಂಡತಿ : ಓಂ... ನನ್ನ ಗಂಡ... ಕುಚೇಲ. ಶ್ರೀಕೃಷ್ಣ ಪರಮಾತ್ಮನಿಂದ ಮರ್ಯಾದೆ ಹೊಂದಿ ಬರುತ್ತಿದ್ದಾರೆ. ಬನ್ನಿ... ನಾನು... ನಿಮ್ಮ ಮನೆ ನಿಮ್ಮ ಮಕ್ಕಳು ಯಾಕೆ ಅನುಮಾನವೇ. ಎಲ್ಲಾ ಆತನ ಅನುಗ್ರಹ. ನಿಮ್ಮ ಮಿತ್ರನ ಆಶೀರ್ವಾದದ ಫಲ.

ಕುಚೇಲ : ನಾನು ಕನಸು ಕಾಣ್ತಾ ಇಲ್ಲವಲ್ಲಾ...

ಹೆಂಡತಿ : ಇಲ್ಲ. ನನಗೂ ಸ್ನೇಹಿತ ಅಂದರೆ ಹೀಗಿರಬೇಕು ನಮ್ಮ ಕಷ್ಟಕಾಲಕ್ಕೆ ಹೇಗಾದರೂ ನೋಡಿದಿರಾ. ನಾನು ಹೇಳಿದ್ದು ನಿಜವಾಯಿತೋ ಇಲ್ಲವೋ.

ಕುಚೇಲ : ಸ್ನೇಹಿತಾ... ಜಗತ್‌ರಕ್ಷಕ ಶ್ರೀ ಕೃಷ್ಣ... ಎಲ್ಲಾ ನಿನ್ನ ಕೃಪಾಕಟಾಕ್ಷ.

ಹೆಂಡತಿ : ಬನ್ನಿ ಬನ್ನಿ... ಮನೆಯಲ್ಲಿ ದೀಪಹಚ್ಚಿ ಆತನ ಪೂಜೆ ಮಾಡಿ ಪ್ರಸಾದ ತೆಗೆದು ಕೊಳ್ಳೋಣ.

ಕುಚೇಲ : ನಡೆ... ನಡೆ... ಬನ್ನಿ ಮಕ್ಕಳೇ... ನೀವೇ ಪುಣ್ಯವಂತರು ಎಲ್ಲಾ ಕೃಷ್ಣನ ಆಶೀರ್ವಾದದ ಫಲ.

* * *

ಚನ್ನಯ್ಯ : ಜೀವನವೇ ಅಷ್ಟು ಕಹಿ ಸಿಹಿಗಳ, ಸಮ್ಮಿಲನ. ಮೊದಲು "ಯಾರಿಗಾರೂ ಇಲ್ಲ" ಅಂದ್ರು ಬಸವಣ್ಣನವರು. ಆದರೆ ಕೃಷ್ಣ ಕುಚೇಲನಿಗೆ ಸ್ನೇಹಿತನಾಗಿ ಅನುಗ್ರಹ ನೀಡಿದ. ಯಾಕಿಲ್ಲ ಹಾಗೂ ಉಂಟು ಹೀಗೂ ಉಂಟು. ನಮ್ಮ ಜೀವನದಲ್ಲೂ ಅಷ್ಟೇ ಸ್ನೇಹಿತರು ಯಾಕಾಗಬಾರದು? ಭದ್ರಯ್ಯ

ನಿಜವಾಗಿಯೂ ನನಗೆ ಸಹಾಯ ಮಾಡಬಹುದು ಅಂತ ತಿಳ್ಕೊಂಡಿದ್ದೀನಿ. ಮಾಡದೇನೂ ಇರಬಹುದು. ನಾನು ಇಂಥ ಇಕ್ಕಟ್ಟಿಗೆ ಸಿಕ್ಕಿಕೊಂಡಿದ್ದೇನೆ. ನಮ್ಮ ಸಂಸಾರವನ್ನು ಯಾವ ಹೊತ್ತಿಗೆ ಒಂದು ಹದಕ್ಕೆ ತರ್ತಾನೋ ಆ ಮಹಾದೇವ, ನಾನಂತೂ ಒಂದು ಅರಿಯೇ.

ಶಾಂತ : ಏನೂ ಅಂದ್ರೆ ನೀವೇ ಏನೋ ಮಾತಾಡ್ಕೋತಾ ಇದ್ದೀರಿ ಅಂತ ಕಾಣುತ್ತೆ.

ಚನ್ನಯ್ಯ : ಸಂಸಾರಿಗೆ ಮಾಡಬೇಕಾದುದ್ನ ಮಾಡ್ದೆ ಅಷ್ಟೆ.

ಶಾಂತ : ಅದಕ್ಕೆ ಬರೇ ಯೋಚನೆ ಮಾಡಿದ್ರಾಯ್ತೆ? ನಾನು ಹೇಳೋದನ್ನ ಸ್ವಲ್ಪ ಕೇಳಿ.

ಚನ್ನಯ್ಯ : ಏನು ನೀನು ಹೇಳೋದು?

ಶಾಂತಾ : ನಿಮ್ಮ ಸ್ನೇಹಿತರಾರಾದ್ರೂ ಈ ಕಷ್ಟಕಾಲದಲ್ಲಿ ಆಗೇ ಆಗ್ತಾರೆ ಕಣ್ರೀ. ನಮ್ಮ ಅತ್ತೆಯವರ ತಿಥಿ ಕರ್ಮಕ್ಕೆ ಸ್ವಲ್ಪ ಹಣ ಕೇಳಿ ಯಾರ್ನಾದ್ರೂ. ಮುಂದಿನ ವರ್ಷದಲ್ಲಿ ಹಣವನ್ನು ಪೂರ್ತಿ ಕೊಟ್ಟು ಬಿಡ್ತೇವೇ, ಬಡ್ಡಿ ಮಾತ್ರ ತಿಂಗಳು ತಿಂಗಳೂ ಕೊಟ್ಬಿಡೋಣ.

ಚನ್ನಯ್ಯ : ಶಾಂತ ಒಂದು ಮಾತು ಹೇಳ್ತೀನಿ ಕೇಳು ಮತ್ತೆ.

ಶಾಂತ : ಏನು?

ಚನ್ನಯ್ಯ : ಸ್ನೇಹಿತರನ್ನು ಹಣ ಕೇಳಬಾರ್ದು ಕೇಳದ್ರೆ ಮರ್ಯಾದೆ ಹೋಗ್ಬಿಡ್ತದೆ, ಸ್ನೇಹನೇ ನಿಂತುಹೋಗುತ್ತೆ.

ಶಾಂತಾ : ನೀವು ತಿಳಿದುಕೊಂಡಿರೋದು ತಪ್ಪು. ಆಪತ್ಕಾಲಕ್ಕಾದವನೇ ಸ್ನೇಹಿತ.

ಚನ್ನಯ್ಯ : ಅಂಥವು ಬೆರಳು ಎಣಿಸುವಷ್ಟು ಜನ ಇದ್ದಾರ್‍ಯೋ ಏನೋ? ಈ ಕರ್ನಾಟಕವನ್ನೇ ತೆಗೆದುಕೊಂಡ್ರೇ.

ಶಾಂತಾ : ಇಲ್ಲ ನೀವು ಸುಮ್ನೇ ಸಂಕೋಚಪಟ್ಕೊಳ್ಬೇಡಿ ಹೋಗಿ ಕೇಳಿ, ದೇವರು ಮಾಡಿದ ಹಾಗಾಗುತ್ತೆ. ನಾನು ನನ್ನ ಸ್ನೇಹಿತೆಯೊಬ್ಬಳು ಇದ್ದಾಳೆ ಅವಳನ್ನು ವಿಚಾರ ಮಾಡ್ತೀನಿ.

ಚನ್ನಯ್ಯ : ಆಗ್ಲಿ ಹೋಗ್ತೇನೇ, ನಿನ್ನ ಚಪಲವೂ ತೀರಿಹೋಗುತ್ತೆ.

ಶಾಂತಾ : ಸದ್ಯ ಅಷ್ಟು ಮಾಡಿ.

* * *

ಶಾಂತಾ : ಏನ್ರೀ... ಹೋಗಿದ್ರಾ?

ಚನ್ನಯ್ಯ : ಹೋಗಿದ್ದೆ.

ಶಾಂತಾ : ಸಿಕ್ಕಿದ್ರಾ... ಅವ್ರು?

ಚನ್ನಯ್ಯ : ಸಿಕ್ಕಿದ್ರು...

ಶಾಂತ : ಏನಂದ್ರು?

ಚನ್ನಯ್ಯ : ಏನೋ ಅಂದ್ರು, ಇನ್ಯಾಕೆ ಅವೆಲ್ಲಾ ಪುರಾಣ ಬಿಡು.

ಶಾಂತ : ಅಲ್ಲಾ ಅತ್ತೆಯವರ ತಿಥಿ ಇನ್ನು ಮೂರುದಿನ ಉಳಿದಿದೆ, ಎಲ್ಲೂ ಸಿಕ್ಕಿಲ್ಲ ಅಂತಂದ್ರೆ ಏನು ಮಾಡೋದು?

ಚನ್ನಯ್ಯ : ಆ ದಿನಕ್ಕೆ ಏನು ವಿಕ್ರಯವಾಗುತ್ತೋ ನೋಡೋಣ ಬಿಡೆ, ಅಂದಹಾಗೆ ನಿನ್ನ ಸ್ನೇಹಿತೆಯರು ಏನಂದ್ರು?

ಶಾಂತ : ಅವ್ರು ಈಗ್ಯಾವ್ದೂ ಇಲ್ಲ ಅನ್ಬಿಟ್ರು.

ಚನ್ನಯ್ಯ : ನನ್ನ ಸ್ನೇಹಿತ್ರು ಇನ್ ಹ್ಯಾಗೆ ಅಂತೀಯಾ? ಅವ್ರದೂ ಅಷ್ಟೆ ಬೆಟ್ಟಯ್ಯ ಎಂಥ ಸ್ನೇಹಿತ. ದಿನಾ ಬರ್ತಿದ್ದ ನಮ್ಮ ಆಫೀಸಿಗೆ. ಈಗ ನನ್ನ ಸ್ಥಿತಿ ತಿಳ್ಕಂಡ ಮೇಲೆ ಬರೋದನ್ನೇ ಕಡಿಮೆ ಮಾಡ್ಬಿಟ್ಟ, ಹಾಗೂ ನಾನು ಒಂದು ದಿನ ಕೇಳ್ದೆ, ಏನಪ್ಪಾ ನನಗೊಂದು ಸ್ವಲ್ಪ ಸಾಲ ಕೊಡಿಸ್ತೀರಾ ಅಂದೆ. ಅದ್ಕೆ ಆತ ಏನ್ ಹೇಳ್ದ ಗೊತ್ತೆ?ನೀವು ಯಾರು ಸಾಲ ಕೊಡ್ತಾರೆ ತೋರ್ಸಿ... ಹೋಗೋಣ ಅಂದ. ಅಂದಿನಿಂದ ಬಹಳ ಎಚ್ಚೆತ್ಕೊಂಡು ಬರೋದ್ನೇ ಕಡಿಮೆ ಮಾಡ್ಬಿಟ್ಟ. ಹಣ ಕ್ಯಾಷ್ ಅನ್ನೇ ಇಟ್ಟಿದ್ದಾನೆ ಸುಮಾರು ಹತ್ತಿಪ್ಪತ್ತು ಸಾವಿರಾ?

ಶಾಂತ : ಇಟ್ಟಿರವ್ರೆಲ್ಲಾ ಕೊಟ್ಟುಬಿಡ್ತಾರ್ಯೇ? ಬೆಟ್ಟಯ್ಯ ನೀವು ಎಷ್ಟೊಂದು ಸ್ನೇಹಿತ್ರು ತರಕಾರಿ, ಹಣ್ಣು ತರೋಕೆ ವಾಕಿಂಗ್‌ಗೆ ಎಲ್ಲಾಕ್ಕೂ ಬರ್ತಿದ್ದವ್ರು ಬರ್ತಿಲ್ಲಾ... ಅಂದ್ರೆ ನಮ್ಮ ಸ್ಥಿತಿ ನೋಡಿ ಯಾರ್ನೂ ಯಾಕೆ ನಾವು ನಾವು ಬರ್ಲಿಲ್ಲಾ, ಕೊಡ್ಲಿಲ್ಲಾ ಅನ್ಬೇಕು. ನಮ್ಮ ತಪ್ಪು ನಮ್ಮ ಸಂಸಾರ ಬೆಳೆಸ್ಕೊಂಡು ಸಾಲ ಮಾಡ್ಕೊಂಡ್ರೆ... ಯಾರು ಯಾಕೆ ಕೊಡ್ತಾರೆ? ಕೊಡ್ಬೇಕು? (ನಿಟ್ಟುಸಿರು ಬಿಡುವಳು)

ಚನ್ನಯ್ಯ : ಎಲ್ರೂ ಅಷ್ಟೇ... ನಾನು ಸಾಲಕೊಡ್ತೀನಿ, ನಾನು ಹೋಟೇಲಿಗೆ, ಸಿನಿಮಾಕೆ ಕರೆದುಕೊಂಡು ಹೋಗ್ತಿನಿ ಅಂತಿದ್ದವ್ರೆಲ್ಲಾ ಬರೇ ಮಾತ್ಲೇ ಕೈಲಾಸ ತೋರಿಸ್ತಾರೆ ಕಣೇ...

ಶಾಂತಾ : ಹೌದು ಬೇರೆಯವರು ಅಷ್ಟು ಮಾಡಿದ್ರೆ, ನಾವು ಇಷ್ಟು ಮಾಡಿದ್ಯಾದ್ರೂ ಶಕ್ತಿ ಇರಬೇಕು, "ಬರೆಕೈ ಕಂಡರೆ ನಾಯಿಗೂ ದೂರ" ಅಂತ ದಾಸ ಶ್ರೇಷ್ಠರು ಹೇಳಿಲ್ವೇ? ಹಾಗೇ.

ಚನ್ನಯ್ಯ : ಈಸಬೇಕು ಇದ್ದು ಜೈಸಬೇಕು, ದೇವರ ಕೃಪೆ ಹ್ಯಾಗಾಗುತ್ತೋ ನೋಡೋಣ. ಸುಮ್ನೇ ಹಲವನ್ನು ಯಾಕೆ ಹಂಬಲಿಸ್ತೀಯಾ?

ಶಾಂತಾ : ಅಷ್ಟೇ... ನಡೀರಿ ಊಟಾನಾದ್ರೂ ಮಾಡುವಿರಂತೆ ನಾಳೆ ಭದ್ರಯ್ಯ ನವರೊಬ್ಬರಿದ್ದಾರೆ. ಅವರನ್ನ ಕೇಳ್ಬಿಟ್ಟು ಏನಾದ್ರೂ ಮಾರಿಯಾದ್ರೂ ಕಾರ್ಯ ಮುಗಿಸೋಣ.

ಚನ್ನಯ್ಯ : ಬ್ಯಾಂಕಿನಲ್ಲಿ ಸಾಲ ಕೇಳಿದ್ದೆ ನೋಡು ಅದಕ್ಕೆ ಷ್ಯೂರಿಟಿಗೆ ಸೈನ್ ಹಾಕು ಅಂದ್ರೆ ತಗಡೂರಯ್ಯ ಹಾಕ್ಲಿಲ್ಲ. ನನ್ನ ಹೆಂಡ್ತೀ ಕೇಳ್ಬೇಕು ಅಂದ, ಆಮೇಲೆ ಹೆಂಡ್ತಿ ಒಪ್ಪಲ್ಲ ಅಂದ.

* * *

ಭದ್ರಯ್ಯ: ಜಯಾ...

ಜಯಾ : ಬಂದೇರೀ... ಏನು ಕರ್‍ದ್ರಾ...?

ಭದ್ರಯ್ಯ: ಊಂ... ಕರ್‍ದೇ...

ಜಯಾ : ಏನು?

ಭದ್ರಯ್ಯ: ಚನ್ನಯ್ಯನ ಮನೆಗೆ ಹೋಗಿದ್ದೆ. ಆತನ ಹೆಂಡತಿ ನಿಮ್ಮನ್ನೆಲ್ಲಾ ಕರೆದಳು.

ಜಯಾ : ಹೋದ್ರಾಯ್ತು ಬಿಡಿ.

ಭದ್ರಯ್ಯ: ಮೊದ್ಲು ಹೋದ್ರೆ ಸಾಕು ಅಂತಿದ್ದವಳು. ಈವೊತ್ತು ಏನೋ ಒಂದು ಥರ ಮಾತಾಡ್ತೀಯಲ್ಲಾ ಯಾಕೆ?

ಜಯಾ : ಅವರ ಸ್ಥಿತಿ ನಿಮಗೆ ಅರ್ಥವಾಗಿಲ್ಲವೇನೋ...

ಭದ್ರ : ಏನು?

ಜಯಾ : ಏನು ಅಂದ್ರೆ ಮೈ ಕೈಯೆಲ್ಲಾ ಸಾಲ, ಆಕಡೆ ಗಂಡ ಈಕಡೆ ಹೆಂಡ್ತಿ ಇಬ್ರೂ ತಕ್ಕಡಿಗೆ ಹಾಕಿದ್ರೆ ಪೇರೇ ಇಲ್ಲ. ನೀವು ಸಾಲಗೀಲ ಕೊಟ್ಟು ಸಿಕ್ಕಿಹಾಕ್ಕೊಂಡೀರಿ. ಜೋಪಾನ.

ಭದ್ರಯ್ಯ: ಸರಿ ಅದರ ಬಗ್ಗೆ ನನಗೆ ಸಾಕಷ್ಟು ಅನುಭವ ಆಗಿದೆ.

ಜಯಾ : ಮಾತೆಷ್ಟೋ ಅಷ್ಟಾಡಿ, ಒಂದು ಕಪ್ ಕಾಫೀಲಿ ಕಳಿಸಿ.

ಭದ್ರಯ್ಯ: ಆಯ್ತು ಅಮ್ಮಾವ್ರು ಹೇಳಿದಾಗೇ ಕೇಳ್ತೀನಿ.

* * *

ಚನ್ನಯ್ಯ : ಭದ್ರಯ್ಯ.

ಭದ್ರಯ್ಯ: ಬಾರಪ್ಪಾ ಚನ್ನಯ್ಯ... ಏನು ಸಮಾಚಾರ?

ಚನ್ನಯ್ಯ : ಏನಿಲ್ಲ... ಹೀಗೆ... ಬಂದೆ...

ಭದ್ರಯ್ಯ: ಸ್ವಲ್ಪ ಕಾಫಿ ತೆಗೊಂಬಾರೆ ಜಯಾ... ಚನ್ನಯ್ಯಾ ಬಂದಿದ್ದಾನೆ.

ಚನ್ನಯ್ಯ : ಇಲ್ಲ... ಕಾಫಿ ಈಗ್ತಾನೇ ಆಯ್ತು.

ಭದ್ರಯ್ಯ: ಮತ್ತೆ

ಚನ್ನಯ್ಯ : ನಮ್ಮ ತಾಯಿ ತೀರಿಹೋಗಿ ಈ ಹೊತ್ತಿಗೆ ೬ ದಿನಗಳಾದ್ವು.

ಭದ್ರಯ್ಯ: ಹೌದಲ್ವೇ ಪಾಪ.

ಚನ್ನಯ್ಯ : ಎಲ್ಲೆಲ್ಲೋ ಕೇಳ್ದೆ ನನ್ಗೆ ಒಂದು ಸಾವಿರ ಸಾಲ ಬೇಕಲ್ಲಾ. ಬ್ಯಾಂಕಿನಲ್ಲಿ ಇನ್ನೊಂದು ಎಂಟು ದಿನದಲ್ಲಿ ಬರುತ್ತೆ ಕೊಟ್ಬಿಡ್ತೀನಿ. ಇಂಥ ಕಷ್ಟದ ಸಮಯದಲ್ಲಿ ಇಲ್ಲ ಅನ್‌ಬ್ಯಾಡಪ್ಪಾ.

ಭದ್ರಯ್ಯ: ಏನು ತಮಾಷೆ ಮಾಡ್ತೀಯಾ?

ಚನ್ನಯ್ಯ : ಇಂಥ ಸಮಯದಲ್ಲಿ ನೀನು ಉಪಕಾರ ಮಾಡಿದ್ರೆ ನಾನು ಸಾಯೋತನ್ಕ ಮರೆಯೊಲ್ಲ ಕಣಯ್ಯ ನನ್ನ ಮಾನ ಕಾಪಾಡು.

ಭದ್ರಯ್ಯ: ನಿನ್ಗೆ ನಾನು ಯಾವಾಗ್ಲಾದ್ರೂ ಇಲ್ಲ ಅಂತ ಸತಾಯಿಸ್ದಿದ್ದೀನಾ? ಇಲ್ಲಮ್ಮಾ... ಸಿಂಪಲ್ ಆಗಿ ಮಾಡಿ ಮುಗಿಸು ಸಾವಿರಾರು ರೂಪಾಯಿ ಏಕೆ ಖರ್ಚು, ನಮ್ಮ ದೇಶ ಜನ ಬಡ್ತತನಕ್ಕಿಳ್ದಿರೋದು ಈ ಮದುವೆ ಸಾವು ಹುಟ್ಟುಗಳಿಗೆ ವಿಪರೀತವಾಗಿ ಖರ್ಚು ಮಾಡೋದ್ರಿಂದ್ಲೆ.

ಚನ್ನಯ್ಯ : ಸರಿ... ನಾನು ಬರ್ತೀನಿ, ನಿನ್ನ ಎಕನಾಮಿಕ್ಸ್ ಪಾಠ ನನಗೀಗ ತಲೆಗಿಡ್ಸೋಲ್ಲಾ.

ಭದ್ರಯ್ಯ: ಇನ್ನೇನು ಕಾಫಿ ಬಂತು.

ಚನ್ನಯ್ಯ : ನಾನಿದೇ ಕೆಲ್ಸದಲ್ಲಿದ್ದೀನಿ ಬರ್ತೀನಿ ಇನ್ನೊಂದು ದಿನ.

ಭದ್ರಯ್ಯ: ನಿಲ್ಲಯ್ಯಾ...

ಚನ್ನಯ್ಯ : ಇಲ್ಲ... ಇಲ್ಲ... ಬರ್ತೀನಿ...

* * *

ಶಾಂತ : ಯಾಕೆ ಸುಮ್ನೆ ಪೆಚ್ಚು ಮೋರೆ ಹಾಕಿಕೊಂಡು ಕುಳ್ತ್ಕೊಂಡಿದ್ದೀರಿ.

ಚನ್ನಯ್ಯ : ಇನ್ನೇನು ಗೆಲುವಾಗಿರ್ಲಿ ಹೋದಕಡೆ ಸಂಬಂಧಿಕರು, ಸ್ನೇಹಿತರು, ಎಲ್ಲರೂ ಕೈ ಎತ್ತಿ ಬಿಟ್ರಲ್ಲಾ ಇನ್ನೇನು ಮುಂದೆ, ಒಂದೊಂದು ಸಾರಿ ಯೋಚನೆ ಮಾಡ್ತೀನಿ ತಿಥಿ ಕರ್ಮ ಮಾಡ್ಲೇಬೇಕೇ? ಅಂತ. ಎಲ್ಲಾ ಕುರುಡು ನಂಬಿಕೆ ಅಂತೀನಿ, ಆದ್ರೂ ಹಿಂದಿನಿಂದ ನಡೆದುಬಂದುದನ್ನು, ಜನ ಮೆಚ್ಚಿಸಲು ನಡೆಸಬೇಕಲ್ಲಾ.

ಶಾಂತಾ : ಯೋಚನೆ ಮಾಡಿಬೇಡಿ ನಾನು ಧೈರ್ಯ ಮಾಡಿದ್ದೀನಿ.

ಚನ್ನಯ್ಯ : ಏನು?

ಶಾಂತಾ : ಈ ಮಾಂಗಲ್ಯದ ಸರ ಮಾರಿ ಬಂದದರಲ್ಲಿ ಮಾಡಿ.

ಚನ್ನಯ್ಯ : ಶಾಂತಾ... ಮಾಂಗಲ್ಯದ ಸರ... ಇದೇನು ಹೇಳ್ತಾ ಇರೋದು.

ಶಾಂತಾ : ನೀವು ಕಟ್ಟಿರೋ ತಾಳಿ ಒಂದು ಸಾಕು... ಅದಕ್ಕೆ ಕರೀಮಣಿ ಕಟ್ಕೊಂಡಿದ್ದೀನಿ. ನೀವೊಬ್ರಿದ್ರೆ ಅದು ಮಾಂಗಲ್ಯದ ಸರಕ್ಕಿಂತ್ಲೂ ಹೆಚ್ಚು, ತೆಗೋಳಿ ಯೋಚ್ನೆ ಮಾಡಬೇಡಿ, ಇದರಿಂದ ಅತ್ತೆಯವರ ಕಾರ್ಯಮಾಡಿ ಮುಗಿಸಿ.

ಚನ್ನಯ್ಯ : (ಸ್ವಗತ) ಹೌದು ಹೌದು ಬಸವಣ್ಣನವರು ಹೇಳಿದಂತೆ ಯಾರಿಗಾರೂ ಇಲ್ಲ. ನಾನು ಕಷ್ಟಪಟ್ಟು ದುಡಿದು ಚಿಕ್ಕ ಸಂಸಾರ ಮಾಡಿಕೊಂಡುಬಿಟ್ರೆ ಇಷ್ಟೊಂದು ತೊಂದ್ರೆಗೆ ಸಿಕ್ಕಿಕೊಳ್ಳಬೇಕಾಗಿತ್ತೇ? ಈಗ್ಲೂ ನನಗೇನೂ ಕಾಲ ಮಿಂಚಿಲ್ಲ. ನಾಲ್ಕು ಮಕ್ಕಳು ಇನ್ನಾದ್ರೂ ಮಕ್ಕಳಾಗೋಲ್ಲ ಅನ್ನೋದೇನ್ ಗ್ಯಾರೆಂಟಿ ಕುಟುಂಬ ಯೋಜನೆ ಅನುಸರಿಸದೊಂದೇ ದಾರಿ.

(ಹಾಡು)

*

## ಸಂಗಮ

**ಪಾತ್ರ ವರ್ಗ**

೧.ಶ್ಯಾಮ್ ೨. ಶ್ರೀನಾಥ ೩. ಶೇಷಣ್ಣ ೪. ಸರಿತ ೫. ಜಾನಕಿ

ಶ್ಯಾಮ್ : ಸರೀತಾ...

ಸರಿತಾ : ಸರೀತಾನೇ ಬರ್‍ತಾ ಇರೋದು ಶ್ಯಾಮ್.

ಶ್ಯಾಮ್ : ಮತ್ತಿನ್ಯಾರು ಬರಕ್ಕಾಗುತ್ತೆ ಹೇಳು.

ಸರಿತಾ : ಸರೀತಾ ಅನ್ನೋದು ನಿಮಗೆ ಗೊತ್ತಿಲ್ಲಾ ಅಂತ್ಲಲ್ಲಾ ಹೇಳಿದ್ರೂ, ನಿಮ್ಮ ಹತ್ತಿರ ಸರೀತಾ ಇದ್ದೀನಿ ಅಂತ ಅಂದೆ.

ಶ್ಯಾಮ್ : ನಿನ್ನಹೆಸರಿಗೆ ತಕ್ಕ ಬುದ್ಧಿ ಇರಬೇಕಲ್ಲಾ ಅದ್ಕೇ ಹಾಗನ್ತೀಯ ಅಲ್ವಾ.

ಸರಿತಾ : ಅಂತೂ ಈ ಹೊತ್ತಿನ ದಿನ ಒಳ್ಳೆ ಸ್ಥಳಕ್ಕೆ ಕರೆದುಕೊಂಡು ಬಂದಿದ್ದೀರಿ?

ಶ್ಯಾಮ್ : ಹೌದು... ಈಗ ನಮಗೆ ಬೇಕಾದದ್ದೂ ಇಂಥ ಸ್ಥಳವೇ ಅಲ್ವೇ. ಕಪಿಲಾ, ಕಾವೇರಿಯರ ಸಂಗಮದ ಪ್ರಶಾಂತ ಸ್ಥಳದಲ್ಲಿ ನಮ್ಮಿಬ್ಬರ ಪ್ರೀತಿಯ ಹೃದಯಗಳು ಸಂಗಮವಾಗಲೀ ಅಂತ್ಲೇನೇ ಈ ಪವಿತ್ರವಾದ ಸ್ಥಳವನ್ನೇ ಆಯ್ಕೆಮಾಡಿ ನಿನ್ನ ಜೊತೆ ಬಂದಿರುವುದು.

ಸರಿತಾ : ಮಹಾ ಪ್ರಳಾಯಾಂತಕರು. ನಿಮ್ಮನ್ನು ಕೇಳಬೇಕೆ ಅಸಾಧ್ಯ ರಸಿಕರು. ನಮ್ಮ ಸ್ಕೂಲ್‌ಡೇನಲ್ಲಿ "ರಸಿಕ ಚಕ್ರಿ" ನಾಟಕದಲ್ಲಿ ಮಲುಹಣನ ಪಾತ್ರ ಮಾಡಿದ್ದ ಅಸಾಧ್ಯ ರಸಿಕ ಮಹಾಕವಿ ಚಕ್ರವರ್ತಿಯಲ್ಲವೇ ನೀವು?

ಶಾಮ್ : ನನ್ನದೇನೋ ಹೇಳಿಬಿಟ್ಟೆ ಆದ್ರೆ... ನೀನು ಆ ಅಸಾಧ್ಯ ರಸಿಕನ ಕೈ ಹಿಡಿದ ಮಲು ಹಣಿಯಲ್ವೇ?

ಸರಿತಾ : ಆದ್ರೆ ಅದು ನಿಜ ಜೀವನದಲ್ಲಿ ಅದೆಷ್ಟು ಬೇಗನೆ ಬರುತ್ತದೆಯೇ ಎಂಬುದನ್ನು ನಾನು ಕಾಯ್ತ ಇದ್ದೇನೆ.

ಶ್ಯಾಮ್ : ಹೌದು ಕಾಯಬೇಕು... ಕಾಯಬೇಕು.

ಸರಿತಾ : ಈಗ ಅಷ್ಟು ಹೊತ್ತಿನಿಂದ ನೀವು ಬರುವುದನ್ನು ಕಾಯ್ದೇ ಸಾಕಾಯ್ತು. ಆದ್ರೆ... ಇನ್ನೂ ನಿಮ್ಮ ಕೈ ಹಿಡಿಯುವುದಕ್ಕೆ ನಾನು ದಿನ ಕಾಯಬೇಕೋ ಏನೋ?

ಶ್ಯಾಮ್ : ಕಾಲ ಕೂಡಿ ಬರಬೇಕಲ್ಲ. ಈಗ ಇಲ್ಲಿ ನೋಡು ಈ ಕಪಿಲಾ ಕಾವೇರಿ ಎರಡು ಕೂಡಬೇಕಾದದ್ದು ಇಲ್ಲಾದುದರಿಂದ ತಾನೇ, ಇಲ್ಲೇ ಸಂಗಮವಾಗಿರುವುದು. ಹಾಗೇ ನಮ್ಮಿಬ್ಬರ ಕಂಕಣ ಸಂಬಂಧ ಯಾವಾಗ ಕೂಡಿ ಬರುತ್ತದೆಯೋ ಆಗಲೇ ಅದು ಆಗುವುದು. ಅದನ್ನು ನಾನು ಹೇಗೆ ಹೇಳಲಿ?

ಸರಿತಾ : ಶ್ಯಾಮ್, ಮದ್ವೆ ಆಗುವವರು ನಾವಿಬ್ಬರು, ನಾವೇ ಒಂದು ನಿರ್ಧಾರಕ್ಕೆ ಬರೋದ್ಕೆ... ಸಮಯ ಏನುಬೇಕು. ಈಗ ಸಮಯ ಇದೆಯಲ್ಲಾ ಈಗ್ಲೇ ಒಂದು ನಿರ್ಧಾಕ್ಕೆ ಬಂದ್ರಾಯ್ತು.

ಶ್ಯಾಮ್ : ಆ ನಿರ್ಧಾರಕ್ಕೆ ಸ್ವಲ್ಪ ಸಮಯ ಬೇಕೇಬೇಕು. ಆಲೋಚನೆ ಮಾಡಬೇಕು, ಮದುವೆ ಆಗೋದಕ್ಕೂ ಒಂದು ಯೋಜನೆ ಇರಬೇಕು.

ಸರಿತಾ : ಪಂಚವಾರ್ಷಿಕ ಯೋಜನೆಯಾ?

ಶ್ಯಾಮ್ : ಇದು ಯಾವ ಯೋಜನೆಯೂ ಅಲ್ಲ. ನಮ್ಮ ಭವಿಷತ್ತಿನ ಮುಂದಿನ ಜೀವನ ಹಾದಿ ಸಂಗಮವಾಗಲು ಹಾಕುವ ತಳಹದಿಯ ಯೋಚನೆ ಮತ್ತು ಯೋಜನೆ. ಅದಕ್ಕೆ ಅಷ್ಟು ಬೇಗನೆ ನಿರ್ಧಾರಕ್ಕೆ ಬರಲಿಕ್ಕಾಗೋಲ್ಲ. ಅದಕ್ಕೆ ನನಗೆ ಇನ್ನೂ ಟೈಂ ಬೇಕು-ಯೋಚನೆ ಮಾಡ್ಲಿಕ್ಕೆ ಅಂದದ್ದು.

ಸರಿತಾ : ಯೋಚನೆ ಯೋಚನೆ ಯೋಚನೆ ಹೋಗ್ರಿ...ಇಲ್ಲಿ...ನನ್ನಲ್ಲಿ ಪ್ರೀತಿ ಇದೆ ಅನ್ನಿ ಇಲ್ಲ ಇಲ್ಲ ಅನ್ನಿ...

ಶ್ಯಾಮ್ : ಇಲ್ಲ ಅಂತ ಅಂದವರ್‍ಯಾರು?

ಸರಿತಾ : ಮತ್ತೆ ಮದ್ವೆ ಬೇಗ ಆಗೋಕ್ಕೆ ಯಾಕೆ ಆಗ್ತಾ ಇಲ್ಲ. ಸುಮ್ನೆ ಪೋಸ್ಟ್‌ಪೋನ್ ಮಾಡ್ತಾನೇ ಇದ್ದೀರಿ.

ಶ್ಯಾಮ್ : ನಾನು ಎಂ.ಎ. ಕಂಪ್ಲೀಟ್ ಮಾಡಬೇಕು. ಆಮೇಲ ನೋಡೋಣ.

ಸರಿತಾ : ಆಮೇಲೆ ಏನೇನು ಕಾದಿರುತ್ತೋ?

ಶ್ಯಾಮ್ : ಏನೂ ಕಾದಿರೋಲ್ಲಾ ಸರಿತಾ, ಇದೋ... ಕೈಮೇಲೆ ಕೈ ಇಟ್ಟು ಹೇಳ್ತಾ ಇದ್ದೀನಿ. ನಿನಗಾಗಿ ನಾನು ನನಗಾಗಿ ನೀನು. ಈ ಕಪಿಲಾ ಕಾವೇರಿ ನದಿಗಳ ಸಂಗಮದಾಣೆಗೂ ನಮ್ಮಿಬ್ಬರ ಹೃದಯ ಸಂಬಂಧ ಯಾವ ಹೊತ್ತಿಗೂ ಕಡಿಯುವುದಿಲ್ಲ; ಅಂತ ಹೇಳ್ತಾ ಇದ್ದೀನಿ ನನ್ನನ್ನು ನಂಬು ಸರಿತಾ.

ಸರಿತಾ : ನಾನೇನೋ ನಂಬಿದ್ದೇನೆ. ಆದರೆ ಈ ನಿಧಾನ ಮಾತ್ರ ಸಹಿಸ್ಕೊಳ್ಳಲಾರೆ.

ಶ್ಯಾಮ್ : ತಾಳಿದವ ಬಾಳಿಯಾನು ಅಂತ ತಾಳಬೇಕು. ತಾಳಬೇಕು ಅಂತ ಡಿಬೇಟ್‌ನಲ್ಲಿ ಹೊಡ್ಕೊಳ್ತಿರ್‍ತೀಯೆ ಆದ್ರೆ ಈಗ ನಿಜ ಜೀವನದಲ್ಲಿ ಯಾಕೆ ಅನಿಸೋಲ್ಲ ಅಂತ ನನ್ನ ಪ್ರಶ್ನೆ...?

ಸರಿತಾ : ಸಾಕು ಸುಮ್ನಿರೀ.

ಶ್ಯಾಮ್ : ನಾನೇನೋ ಸುಮ್ನೇ ಆದೆ. ಆದ್ರೆ ನೀನು ತಾನೇ ಮಾತು ಬೆಳೆಸ್ತಾ ಇರೋಳು.

ಸರಿತಾ : ನೀವು ಯಾವುದಕ್ಕೂ ಸರಿಯಾದ ಉತ್ತರ ಹೇಳಿದ್ರೆ ನಾನು ಮಾತು ಮೊಟಕು ಮಾಡ್ತೇನೆ.

ಶ್ಯಾಮ್ : ಯೋಚನೆಗೆ ಟೈಂ ಕೊಡು.

ಸರಿತಾ : ಸರಿ ನಿಮಗೆಷ್ಟು ಬೇಕು ಅಷ್ಟು ಟೈಂ ತೆಗೆದುಕೊಳ್ಳಿ. ಅದೇ ಘಂಟಾನಾದ ಆಗ್ತಾ ಇದೆ. ದೇವಸ್ಥಾನಕ್ಕಾದ್ರೂ ಹೋಗಿ ಕೈ ಮುಗಿದು ನಿಮಗೆ ಬೇಗನೆ ಒಳ್ಳೇ ಬುದ್ಧಿಕೊಟ್ಟು ನನ್ನ ಕೈ ಹಿಡಿಯುವ ಹಾಗೆ ಮಾಡ್ಲಿ ಅಂತ ಕೇಳ್ತೀನಿ ನಡೀರಿ.

ಶ್ಯಾಮ್ : ನಡೆ ಹೋಗೋಣ.

ಸರಿತಾ : ಇಲ್ಲಿ ಒಂದು ವಿಶೇಷ ನೋಡಿ ಆ ಲಿಂಗದ ಮೇಲೆ ಒಂದು ದ್ವಾರ ಇದೆ. ಅದರಿಂದ ಉದ್ಧರಣೆಯಿಂದ ಎಷ್ಟು ನೀರು ತೆಗೆದ್ರೂ ಬರ್ತಾನೆ ಇರ್ತದೆ.

ಶ್ಯಾಮ್ : ಅದು ಸಾಮಾನ್ಯವಾಗಿ ಈ ಸಂಗಮದ ನದಿಗಳ ತೀರ್ಥವೇ ಇರಬೇಕು.

ಸರಿತಾ : ಹೌದು... ತೆಗೆದುಕೊಳ್ಳಿ ತೀರ್ಥ ಪ್ರಸಾದ...

ಶ್ಯಾಮ್ : ಆಗಲಿ.

(ಘಂಟಾನಾದವಾಗುವುದು, ತೀರ್ಥಪ್ರಸಾದ ಕೊಡುವರು)

ಸರಿತಾ : ಅಂತೂ ಸ್ವಕಾರ್ಯ, ಸ್ವಾಮಿಕಾರ್ಯ ನಡೆಯಿತು ಇನ್ನು ಹೊರಡೋಣ್ವೆ?

ಶ್ಯಾಮ್ : ಅಗತ್ಯವಾಗಿ...ಮತ್ತೆ ಮರುಬೇಟಿ...

ಸರಿತಾ : ಮರುದಿನವೇ...

ಶ್ಯಾಮ್ : ಓ.ಕೆ...ಬೈ.

* * *

ಶ್ರೀನಾಥ್: ಜಾನಕಿ...

ಜಾನಕಿ : ಬಂದೇರೀ...ಬಂದೆ...ಏನು ಸಮಾಚಾರ?

ಶ್ರೀನಾಥ್: ಸಮಾಚಾರ ಇದ್ದೇ ಇರುತ್ತೇ ಬಾ...ಎಳ್ಕೋ ಕುರ್ಚಿ, ಕುಳಿತ್ಕೋ ನಿಧಾನವಾಗಿ ಹೇಳ್ತೀನಿ.

ಜಾನಕಿ : ಕ್ಯಾರೆಟ್ ಹಲ್ವಾ ಮಾಡಿದ್ದೀನಿ ತರ್ತೀನಿ ತಾಳಿ. ಹಾಗೇ ತಿನ್ತಾ ಮಾತಾಡುವಿರಂತೆ.

ಶ್ರೀನಾಥ್: ಕ್ಯಾರೆಟ್ ಹಲ್ವಾ ಏಕೆ ಈಗ ಅಂತದ್ದೊಂದೇ ಸಿಹಿ ಮಾತಿದೆ. ತಾಳೇ ಅದು ಕೇಳಿ ಕುಳಿತು ಮಾತಾಡೋಣ.

ಜಾನಕಿ : ಅಂಥದ್ದೇನ್ರೀ ಮಾತು.

ಶ್ರೀನಾಥ್: ನಿನ್ನ ಮಗ ಶ್ಯಾಮುಗೆ ಒಂದು ಒಳ್ಳೇ ಕಡೆ ಸಂಬಂಧ. ಹುಡುಗಿ ಸ್ವಲ್ಪ ಕಪ್ಪು... ಅನ್ನೋದು ಒಂದೇ ಹೊರತು...ಮಿಕ್ಕ ವಿಚಾರಗಳಲ್ಲಿ ಯಾರೂ ಬೆರಳ ಎಣಿಸುವ ಹಾಗಿಲ್ಲ. ಕಾರು ಬಂಗ್ಲೆ ಕೊಟ್ಟು ಅದ್ದೂರಿಯಾಗಿ ಮದ್ವೆ ಮಾಡ್ತಾರೆ. ಬೇಕಾದ್ರೆ ಪಾರಿನ್‌ಗೂ ಕಳುಹಿಸುವ ಹಾಗಿದ್ದಾರೆ.

ಜಾನಕಿ : ಈಗ್ತಾನೆ ಬಿ.ಎ. ಪರೀಕ್ಷೆ ಮುಗಿದಿದೆ.

ಶ್ರೀನಾಥ್: ಅದ್ಕೇ ಮುಂದಿನ ಪರೀಕ್ಷೆ ಹೆಣ್ಣಿನದು ನಡೀಲಿ ಬಿಡು.

ಜಾನಕಿ : ಅವನೇನು ಸಧ್ಯಕ್ಕೆ ಈ ಪರೀಕ್ಷೆ ಒಪ್ಪುವ ಹಾಗೆ ನನಗೆ ಕಾಣೋಲ್ಲ.

ಶ್ರೀನಾಥ್: ಇಂಥ ಸಂಬಂಧ ಸಿಗಬೇಕಾದ್ರೂ ಪುಣ್ಯ ಮಾಡಿರಬೇಕು ಕಣೆ.

ಶ್ಯಾಮ್ : ಎಂಥ ಸಂಬಂಧ? ಎಂಥ ಪುಣ್ಯವಣ್ಣ?

ಶ್ರೀನಾಥ : ಸರಿ ಒಳ್ಳೆ ಸಮಯಕ್ಕೆ ನಾನು ಬಂದೆ ಬಾ. ನಿನಗೆ ಒಂದು ಹುಡುಗಿ ನೋಡಿದ್ದೆ, ಅದರ ವಿಚಾರ ಹೇಳ್ತಾ ಇದ್ದೆ.

ಶ್ಯಾಮ್ : ಆ ವಿಚಾರ ಹೇಳೋದು ಬೇಡ, ನಾನು ಕೇಳೋದು ಬೇಡ ಸಧ್ಯಕ್ಕೆ... ಮದ್ವೆ ವಿಚಾರವೇ ಬೇಡ. ಇನ್ನು ಶಿವನೇ ಅಂತ ಬಿ.ಎ. ಪರೀಕ್ಷೆಯೇ ಮುಗಿದಿಲ್ಲ ಆಗ್ಲೇ ಇದೊಂದು ಪರೀಕ್ಷೆಗೆ ಗುರಿ ಮಾಡಬೇಕು ಅಂತಿದ್ದೀರಿ. ಸ್ವಲ್ಪ ಸುಧಾರಿಸಿಕೊಂಡು ಎಂ.ಎ., ಪಿ.ಎಚ್.ಡಿ, ಮಾಡೋಣ ಮುಂದೆ ನೋಡಿದ್ರಾಯ್ತು. ಈಗ್ಲೇ ಏನು ಆತ್ರ... ತೊಟ್ಟಿಲ ಮಕ್ಕಳ ಮದ್ವೆಕಾಲ ಮುಗಿದು ಹೋಗಿ ಎಷ್ಟೋ ದಿನಗಳಾಯ್ತು. ಈಗ ಇಂಥ ಕಾಲದಲ್ಲಿ ನೀವು ಇಷ್ಟು ಬೇಗ ನನಗೆ ಮದುವೆ ಮಾಡಬೇಕು ಅಂತಿದ್ದೀರಲ್ಲ ಅದ್ಕೇನು ಹೇಳಬೇಕೋ ನನಗೆ ಗೊತ್ತಾಗ್ತಾ ಇಲ್ಲ.

ಜಾನಕಿ : ಕೇಳಿದ್ರಾ ನಾನು ಹೇಳಿದ್ದು ಕೇಳ್ದೇಹೋದ್ರಿ. ಈಗ ಶಂಕದಿಂದಲೇ ತೀರ್ಥ ಬಂದ್ರೆ ಸರಿ ಅನ್ತೀರಿ ಅಲ್ವಾ?

ಶ್ಯಾಮ್ : ಹಾಗಲ್ಲಮ್ಮ ಅಣ್ಣ ತಿಳಿದವ್ರು ಹೀಗೆ ಆತುರ ಪಡ್ತಾ ಇದ್ದಾರಲ್ಲ ಏಕೆ?

ಶ್ರೀನಾಥ್: ಅಲ್ಲಕಣೋ...ನಿನ್ನ ಶ್ರೇಯಸ್ಸಿಗೋಸ್ಕರ ಕಣೋ ಹೇಳ್ತಾ ಇರೋದು. ಮದ್ವೆ ಆದ್ರೇನು ನಷ್ಟ? ಆಮೇಲೆ ಓದ್ರಾಯ್ತು.

ಜಾನಕಿ : ಆಮೇಲೆ ಓದಿ ಬೂದಿ ಮುಕ್ಕಿದ್ದಾಗೆ.

ಶ್ರೀನಾಥ್: ಸಾಕು ಸುಮ್ನಿರೆ, ಮದ್ವೆ ಆಗಿ ಮಕ್ಕಳಾಗೋವರ್ಗೂ ಓದೋ ಜನಗಳೆಷ್ಟು ಇಲ್ಲ. ಕಲಿಯುವ ಮನಸೊಂದಿದ್ರಾಯ್ತು... ಎಲ್ಲಾ ಮಾಡಬಹುದು.

ಶ್ಯಾಮ್ : ಸಧ್ಯಕ್ಕೆ ನನಗೆ ಬೇಡ ಅಪ್ಪ. ಅದರಿಂದ ಒಂದು ಲಕ್ಷ ರೂಪಾಯಿನ ಆಸ್ತಿ ಸಿಕ್ಕಿದ್ರೂ ಬೇಡ. ನಿಧಾನವಾಗಿ ನಾನು ಆಗ್ತೇನೆ. ಕಾಸಿಗೋಸ್ಕರ ದಿಡ್ಡಿಪ್‌ನೆ ನಾನು ಬೀಳೋವ್ನಲ್ಲ.

ಶ್ರೀನಾಥ್: ಅದೇನಪ್ಪಾ ಈಗಿನ ಕಾಲದ ಹುಡುಗರು ಮದುವೆ ಆಗೋದು ಅಂದ್ರೆ ಅದೇನು ಸಕೋಚ ಪಡ್ತಾರೋ... ನಿನ್ನಿಷ್ಟ ಬಂದ ಹಾಗೆ ಮಾಡ್ಕೋ ಹೋಗು ನನಗೇನು? ಎಂ.ಎ ಇಲ್ದೇ ಹೋದ್ರೆ ಪಿ.ಎಚ್.ಡಿ. ಆದಮೇಲೆ ಆಗು. ಅದೂ ಬೇಡ ಅಂದ್ರೆ ಪಾರಿನಿಗೆ ಹೋಗಿ ಬಂದು ಆಗು. ಇರೋ ವಿಚಾರವನ್ನು ನಾನು ಹೇಳ್ದೇ. ಇದರ ಮೇಲೆ ನಿನ್ನ ಇಷ್ಟ.

ಶ್ಯಾಮ್ : ಸದ್ಯ ಅಷ್ಟು ಮನಸ್ಸುಮಾಡಿದ್ರೆ ಸಾಕು.

ಜಾನಕಿ : ಈಗಿನ ಕಾಲದ ಹುಡುಗರು ಹಿಂಸೆ ಮಾಡಿದ್ರೆ ಕೇಳ್ತಾರೆಯೇ. ಅವೆಲ್ಲಾ ನಮ್ಮ ಕಾಲಕ್ಕೆ ಮುಗಿದು ಹೋಯ್ತು.

ಶ್ರೀನಾಥ್: ಕೇಳು ಕೇಳು. ನಾವು ತಂದೆ-ತಾಯಿಗಳು ಹಾಕಿದ ಗೀರನ್ನು ದಾಟಿದವರಲ್ಲ. ಈಗ ನಾವು ಹಾಕೋ ಗೀರನ್ನು ನಾವು ಕಾಯ್ತಾ ಇರಬೇಕು ಅಂತ ಕಾಣುತ್ತೆ. ನಡೀಲಿ ನಡೀಲಿ ನಿಮ್ದೊಂದು ಕಾಲ ನಮ್ದೊಂದು ಕಾಲ.

ಶ್ಯಾಮ್ : ನಮ್ಮ ಕಾಲ ಚೆನ್ನಾಗಿತ್ತಪ್ಪ ಒಳ್ಳೆ ಸುಭಿಕ್ಷೆಯಾಗಿತ್ತು. ಈಗ ಆಗಿಲ್ಲ. ಬಹಳ ಕಷ್ಟ. ಕಾಲಕ್ಕೆ ತಕ್ಕ ಹಾಗೆ ನಡೆದುಕೊಳ್ಳೋದು ನಮ್ಮಂಥ ಯುವಕರ ಧರ್ಮವಲ್ವೆ?

ಶ್ರೀನಾಥ್: ಎಲ್ಲಾ ಯುವಕರು ಹೀಗಾದ್ರೆ ದೇಶ ಮತ್ತೆ ನಮ್ಮದೇಶವನ್ನು ಸುಭಿಕ್ಷೆಯಲ್ಲೇ ಕಾಣಬಹುದು ಕಣೋ.

ಶ್ಯಾಮ್ : ಹಾಗಾಗಬೇಕು ಅನ್ನುವುದೇ ನನ್ನ ಆಸೆ.

ಶ್ರೀನಾಥ್: ಏನು ಆಸೆನೋ ಏನೋ? ನಮ್ಮ ಆಸೆಗೆ ಸಧ್ಯಕ್ಕೆ ದಾರಿ ಇಲ್ಲ. ಜಾನಕೀ ನಡೆಯೇ ಮಾತಾಡಿ ಬಾಯೆಲ್ಲಾ ಒಣಗಿ ಹೋಯ್ತು ಸ್ವಲ್ಪ ಪೈನಾಪಲ್ ಜ್ಯೂಸ್‌ನಾದ್ರೂ ಕೊಡುವೆಯಂತೆ.

ಜಾನಕಿ : ನಡೀರಿ.

ಶ್ಯಾಮ್ : ಅಬ್ಬಾ ಅಬ್ಬಾ, ಅಸಾಧ್ಯ.... ಕಷ್ಟವಾಯ್ತಪ್ಪ. ಇತ್ತ ನೋಡಿದ್ರೆ ಅಪ್ಪನ ಕಾಟ ಅತ್ತ ನೋಡಿದ್ರೆ ಸರಿತಾ ಕಾಟ. ಜೊತೆಗೆ ನೆಂಟರಿಷ್ಟರ ಕಾಟ.ಇವೆಲ್ಲಾ ತಪ್ಪಿಸಿಕೊಳ್ಳೋದೇ ಕಷ್ಟವಾಗಿದೆಯಪ್ಪಾ...ದೇವರೇ...ಸ್ವಲ್ಪ ರೆಸ್ಟ್ ಕೊಡಪ್ಪಾ....

* * *

ಶೇಷಣ್ಣ : ಸರಿತಾ...

ಸರಿತಾ : ಏನಣ್ಣಾ...

ಶೇಷಣ್ಣ : ಈ ಹೊತ್ತು ಬಿಜಾಪುರಪದಿಂದ ನಿನ್ನನ್ನು ನೋಡ್ಲಿಕ್ಕೆ ಬರ್ತಾರಮ್ಮಾ.

ಸರಿತಾ : ಅಣ್ಣಾ ನನಗೆ ಈಗ್ಲೆ ಮದುವೆಬೇಡ. ನಾನು ಓದು ಮುಂದುವರಿಸಬೇಕು ಅಂತ ಮನಸ್ಸು ಮಾಡಿದ್ದೀನಿ.

ಶೇಷಣ್ಣ : ಅಲ್ಲಮ್ಮಾ ನಾನು ಅವರಿಗೆ ಬರಹೇಳ್ಬಿಟ್ಟಿದ್ದೇನಲ್ಲಮ್ಮ.

ಸರಿತಾ : ಈಗ ಬೇಡ ಅಂತ ಬರೆದರಾಯ್ತು.

ಶೇಷಣ್ಣ : ಹಾಗ್ಮಾಡಿದ್ರೆ ಈ ಶೇಷಣ್ಣನ ಬೆಲೆ ಏನುಳಿದುಕೊಳ್ಳುತ್ತಮ್ಮ?

ಸರಿತಾ : ಮದುವೆಗೆ ನನಗೆ ಈಗ್ಲೇ ಏನಾತ್ರನಣ್ಣಾ?

ಶೇಷಣ್ಣ : ಅಲ್ಲಮ್ಮಾ ಜೀವನದಲ್ಲಿ ನನಗುಳಿದಿರೋದೇನು? ತಾಯಿಯಿಲ್ಲದ ತಬ್ಬಲಿಯಾದ ನಿನ್ನನ್ನು ಸರಿಯಾದ ವರನಿಗೆ ಕೊಟ್ಟು ಬೇಗನೆ ತಾತನಾಗಬೇಕು ಅನ್ನೋ ಆಸೆಯನ್ನು ಕಡೀಲಿಕ್ಕೆ ಪ್ರಯತ್ನ ಮಾಡ್ತೀಯಾ ಹೇಳು.

ಸರಿತಾ : ಸ್ವಲ್ಪ ನಿಧಾನಿಸಿ ಅಣ್ಣಾ.

ಶೇಷಣ್ಣ : ಅಲ್ಲಮ್ಮಾ ನನ್ನ ಫ್ರೆಂಡ್ ಉಮದಿಗೆ ಹೇಳಿ ಕಳುಹಿಸ್ಬಿಟ್ಟಿದ್ದೀನಿ. ಆತ ಬಹಳ ಸೊಗಸಾದ ಸಂಬಂಧ ಅಂತ ಬರೆದಿದ್ದಾನೆ. ಎಲ್ಲಾ ಸರಿ ಹೋದ್ರೆ ಯಾಕೆ ಈ ಶುಭ ಕಾರ್ಯವನ್ನು ನೆರವೇರಿಸಬಾರದು? ಬಂದು ಹೋದ್ರೇನು ತಪ್ಪು? ಹೋಗು ಹೋಗು ನೀನು ಡ್ರಸ್ ಆಗು ಹೋಗು.

ಸರಿತಾ : ಬರಲಿ ಬಿಡಿ.

ಶ್ರೀನಾಥ್: ನಮಸ್ಕಾರ ಸ್ವಾಮಿ.

ಶೇಷಣ್ಣ : ಬನ್ನಿ ಬನ್ನಿ...ಕುಳಿತುಕೊಳ್ಳಿ. ತಗೋಳ್ಳಿ ವಾರಪತ್ರಿಕೆ, ದಿನಪತ್ರಿಕೆ ತಿರುವಿಹಾಕಿ. ಈಗ ಕಾಫಿ ತೆಗೆದುಕೊಳ್ತೀರೋ ಹಣ್ಣಿನ ರಸ ತಗೆದುಕೊಳ್ತೀರೋ?

ಶ್ರೀನಾಥ್: ಈ ಬಿಸಿಲಿಗೆ ಸ್ವಲ್ಪ ತಂಪಾಗಿದ್ದರೆ ಉತ್ತಮ ಅಲ್ಲವೇ?

ಶೇಷಣ್ಣ : (ದೂರದಿಂದ) ಅಮ್ಮಾ ಸರಿತಾ... ಸ್ವಲ್ಪ ಆರೆಂಜ್ ಜ್ಯೂಸ್ ತೆಗೆದುಕೊಂಡು ಬಾರಮ್ಮ

ಸರಿತಾ : (ಮೆಲ್ಲನೆ ಇಟ್ಟು) ತೆಗೆದುಕೊಳ್ಳಿ.

ಶೇಷಣ್ಣ : ಈಕೇನೇ ನನ್ನ ಒಬ್ಬಳೇ ಮಗಳು. ಬಿ.ಎ. ಆಯ್ತು.

ಶ್ರೀನಾಥ್: ಬಹಳ ಸಂತೋಷ ಶೇಷಣ್ಣನವರೇ- ಹುಡುಗಿಯೇನೋ ನನಗೆ ಹಿಡಿಸಿತು. ನೀವು ಜಾತಕ ಕೊಡಿ ಸರಿ ಬಂತು ಅಂದ್ರೆ ಹುಡುಗನನ್ನು ಕಳುಹಿಸಿ ಮುಂದಿನ ಕಾರ್ಯಕ್ರಮ ಜರಗಿಸೋಣ.

ಶೇಷಣ್ಣ : ಆಗತ್ಯವಾಗಿ ಆಗಲಿ.

ಶ್ರೀನಾಥ್: ನಾನು ಅರ್ಜೆಂಟ್ ಸ್ವಲ್ಪ ಮಂಗಳೂರಿಗೆ ಹೋಗಬೇಕಾಗಿದೆ. ಹೋಗಿದ್ದು ಬಂದು ಜಾತಕ ನೋಡಿಸಿಬಿಟ್ಟು ಹುಡುಗನನ್ನು ಕಳುಹಿಸ್ತೀನಿ. ಆತ ಒಪ್ಪಿದ ಅಂದ್ರೆ ಆಯ್ತು ನನಗೇನೋ ಒಪ್ಪಿಗೆಯಾಗಿದೆ. ಅಂದಮೇಲೆ ನನ್ನ ಮಗ ಒಪ್ದೇ ಇರೋಲ್ಲ.

ಶೇಷಣ್ಣ : ಬಂದೆ, ಜಾತಕ ತಂದುಕೊಡ್ತೇನೆ.

ಶ್ರೀನಾಥ್: ಆಗ್ಲಿ...

ಶೇಷಣ್ಣಾ : ತಗೊಳ್ಳಿ.

ಶ್ರೀನಾಥ್: ಶುಭಸ್ಯ ಶೀಘ್ರಂ...

(ಒಳಗಿನಿಂದ ಬರುತ್ತಾ)

ಸರಿತಾ : ಅಣ್ಣಾ...ಏನು ...ಅವರೊಪ್ಪಿದ್ರಾಗೋಯ್ತೇ?

ಶೇಷಣ್ಣ : ಇನ್ನೂ ಅವರ ಮಗ ಒಪ್ಪಬೇಕು.

ಸರಿತಾ : ಹಾಗಾದ್ರೆ ಆಗಿಹೋಯ್ತೇ?

ಶೇಷಣ್ಣ : ನಾನು ಒಪ್ಪಬೇಕು.

ಸರಿತಾ : ನಾನು...

ಶೇಷಣ್ಣ : ಎಲ್ಲರೂ ಒಪ್ಪಿದ ಮೇಲೆ, ನೀನು ಒಪ್ದೇ ಇರ್ತೀಯ ಹೇಳು.

ಸರಿತಾ : ಮೊದ್ಲು ನಾನೊಪ್ಪಿದರೇ ಆ ಮದುವೆಯಲ್ಲಾ ಅಣ್ಣಾ.

ಶೇಷಣ್ಣ : ಇನ್ನು ಜಾತಕ ಸರಿಬಂದು, ಗಂಡು ಬಂದು ನೋಡಿ, ಆಮೇಲೆ ತಾನೆ ಮಿಕ್ಕ ಮಾತು. ಇಷ್ಟೆಲ್ಲಾ ಅನುಮಾನ ಪಡ್ತಾ ಇದ್ದೀಯಲ್ಲಾ ನೀನು ಯಾವುದಾದ್ರೂ ಹುಡುಗನ ಗುರಿ ಇಡ್ಕೊಂಡಿದ್ದೀಯೆನಮ್ಮ?

ಸರಿತಾ : ಹೋಗಿಯಣ್ಣಾ...

ಶೇಷಣ್ಣ : (ಸ್ವಗತ) ಏನು ಹೇಳಲಿಕ್ಕೆ ಬರೋಲ್ಲ. ಈಗಿನ ಕಾಲದ ಹುಡುಗಿಯರು ಏನೇನು ಮಾಡ್ತಾರೋ ಏನೋ? ಅವರ ಮನೋಭಾವಗಳನ್ನು ಅರ್ಥ ಮಾಡಿಕೊಳ್ಳೋದೇ ಕಷ್ಟ. ಪಾಪ ಆಕೆ ಚೆನ್ನಾದ ವರನನ್ನು ನೋಡಿ ಈ ಮದುವೆ ಆದರೆ ನಮಗೆ ಸಂತೋಷವಲ್ಲವೇ?

ಸರಿತಾ : (ಸ್ವಗತ) ಹುಡುಗನ ತಂದೆ ಒಪ್ಪಿದಮೇಲೆ ಹುಡುಗ ಒಪ್ಪದೇ ಇರ್ತಾನೆಯೇ ಆಗ ಒಪ್ಪಿ ಮದುವೆ ಮಾಡಿ ಅಂದು ಬಿಟ್ರೆ ... ಅದಕ್ಕೇನಂತೆ ನನಗಿಷ್ಟವಿಲ್ಲ ಬೇಡ ಅಂದ್ರಾಯ್ತು. ಶ್ಯಾಮು ಬಿಟ್ಟು ಬೇರೆ ಮದುವೆಯಾಗೋದು ಅಂದ್ರೇನು? ಛೀ...ಛೀ...ಮೋಸ ಮಾಡಿದ ಹಾಗಾಗುತ್ತೆ... ನಾನು ಮದ್ವೆ ಆದ್ರೆ ಶ್ಯಾಮುವನ್ನೇ... ಅವನನ್ನು ಬಿಟ್ಟು ನಾನ್ಯಾರ್ನೂ ಆಗೋಲ್ಲ... ಆಗೋಲ್ಲ... ಆಗೋಲ್ಲ.....

* * *

ಜಾನಕಿ : ಶ್ಯಾಮು

ಶ್ಯಾಮು : ಏನಮ್ಮ...

ಜಾನಕಿ : ಬಾ ಕುಳಿತುಕೋ...ಎಂ.ಎ. ಫಸ್ಟ್ ಕ್ಲಾಸಿನಲ್ಲಿ ಆಯ್ತು ಬಹಳ ಸಂತೋಷ. ಮುಂದೆ ಏನು ಕೆಲಸ ಮಾಡಬೇಕು ಅಂತಿದ್ದೀಯೋ.

ಶ್ಯಾಮ : ಪಿ.ಎಚ್.ಡಿ. ಮಾಡಬೇಕು ಅಂತ. ನಿಮ್ಮ ಆಶೀರ್ವಾದ ಅವಶ್ಯಕ.

ಜಾನಕಿ : ಶ್ಯಾಮು ನೀನು ಇಷ್ಟು ವಿದ್ಯಾವಂತನಾದೆ, ಬುದ್ಧಿವಂತನಾದೆ. ಆದ್ರೆ ವ್ಯವಹಾರಸ್ಥನಾಗಲಿಲ್ಲವಲ್ಲೋ?

ಶ್ಯಾಮು : ಏಕಮ್ಮಾ...

ಜಾನಕಿ : ದಿನ ದಿನಕ್ಕೆ ನಮ್ಮದೊ ದೊಡ್ಡ ಸಂಸಾರವಾಗಿದೆ. ಒಂದು ಕೆಲಸಕ್ಕೆ ಸೇರಿ ಒಂದು ಮದುವೆ ಮಾಡಿಕೊಂಡು ಆರಾಮವಾಗಿ ಯಾಕೋ ಇರಲಿಕ್ಕೆ ಪ್ರಯತ್ನ ಮಾಡಬಾರದು?

ಶ್ಯಾಮು : ಕೆಲಸ ಸಿಗೋದು ಅಷ್ಟೊಂದು ಸಲಭವೇನಮ್ಮ. ಅದಕ್ಕೆ ಬಹಳ ಪ್ರಯತ್ನ ಪಡಬೇಕು. ಅದಕ್ಕೆ ಹೆಚ್ಚಿಗೆ ಕ್ವಾಲಿಫಿಕೇಷನ್‌ನಾದ್ರೂ ಬೆಳೆಸಿಕೊಂಡ್ರೆ ಸ್ವಲ್ಪ ಉತ್ತಮ. ಅನ ಎಂಪ್ಲಾಯ್‌ಮೆಂಟ್ ಪ್ರಾಬ್ಲಮ್ ಹೆಚ್ಚಾಗಿರೋ ದಿನದಲ್ಲಿ ನನಗೆ ಕೆಲಸವನ್ನು ಯಾರು ತಾನೇ ಕರೆದು ಕೊಡ್ತಾರಮ್ಮ?

ಜಾನಕಿ : ಹಾಗಂದ್ರೆ ಹ್ಯಾಗೋ. ನಮ್ಮ ಸಂಸಾರದ ಗತಿ? ಹೆಚ್ಚಾಗಿ ಓದಲಿಕ್ಕೆ ಹಣದ ಮುಗ್ಗಟ್ಟು ಬೇರೆ, ಅಂಥದ್ರಲ್ಲಿ ಏನು ಮುಂದುವರಿಸ್ತೀಯಾ? ಹೆಚ್ಚಿಗೆ ಏದುದ್ರೂ ಕೆಲಸ ಸಿಕ್ಕೋ ಭರವಸೆ ದಿನದಿನಕ್ಕೆ ಹೆಚ್ಚಾಗಲ್ವೇ ಸ್ವಲ್ಪ ಯೋಚನೆ ಮಾಡಿನೋಡು.

ಶ್ಯಾಮ : ಏನಮ್ಮ ಏನ್ಮಾಡೋದು ಕಾಲವೇ ಅಷ್ಟು "ಹಲ್ಲಿದ್ದವರಿಗೆ ಕಡ್ಲೆ ಇಲ್ಲ, ಕಡ್ಲೆ ಇದ್ದವರಿಗೆ ಹಲ್ಲಿಲ್ಲ" ಅನ್ನೋ ಸಮಾಚಾರ.

ಶ್ರೀನಾಥ್: ಏನು ತಾಯಿ ಮಗ ಸಮಾಲೋಚನೆ ಮಾಡ್ತಾ ಇದ್ದೀರಲ್ಲಾ.

ಜಾನಕಿ : ಏನೋ ಪಿಎಚ್.ಡಿ. ಕೊಡಬೇಕಂತೆ ನಿಮ್ಮ ಪುತ್ರನಿಗೆ.

ಶ್ರೀನಾಥ್: ಹೂಂ ಆಗುತ್ತೆ ಆಗುತ್ತೆ ಮೊದಲು ಬಿ.ಎ. ಯಿಂದ ಎಂ.ಎ. ಆಯ್ತು, ಆಮೇಲೆ ಪಿಎಚ್.ಡಿ. ಫಾರಿನ್‌ಗೋಗ್ತೀನಿ ಅಂತ ಆಸೆಗೆ ಕೊನೆ ಎಲ್ಲಿ? ಆತನಿಗೆ ಅರ್ಥವಾಗಬೇಕು ನಮ್ಮ ಸಂಸಾರದ ಕಷ್ಟ, ಸಾಲ ಸೋಲದ ವಿಚಾರ?

ಜಾನಕಿ : ಅದಕ್ಕೇ ಅಷ್ಟು ಹೊತ್ತಿನಿಂದ ಆತನಲ್ಲಿ ಹೇಳ್ತಾ ಇದ್ದೆ.

ಶ್ರೀನಾಥ್: ಈಗ ಬಿಜಾಪುರದಲ್ಲಿ ಒಂದು ಹುಡುಗಿ ನೋಡಿಕೊಂಡು ಬಂದಿದ್ದೇನೇ. ಹುಡುಗಿ ಚನ್ನಾಗಿದೆ, ಕೆಲಸ ಕೊಡಿಸಿ ಆತನ ಓದನ್ನು ಮುಂದುವರಿಸಬಹುದು. ಯಾಕೆ ಪ್ರಯತ್ನ ಮಾಡಬಾರದು?

ಜಾನಕಿ : ಇನ್ನೇನು ಒಳ್ಳೆ ವಿಚಾರವೇ ಆಯ್ತಲ್ಲಾ ಶ್ಯಾಮು.

ಶ್ಯಾಮು : ಸುಮ್ನಿರಮ್ಮ ಮಾವನ ಹತ್ತಿರ ಕೆಲಸ ತಗೆದುಕೊಂಡು ಅವನ ಮಗಳ ಮದ್ವೆ ಆಗಿ ಮನೆ ಅಳಿಯನಾಗೋಕ್ಕೆ ನನಗೆ ಇಷ್ಟವಿಲ್ಲ.

ಜಾನಕಿ : ಹಾಗ್ಯಾರು ಮಾಡು ಅಂತಾರೆ. ಒಳ್ಳೇ ಅನುಕೂಲಸ್ಥರು ಒಬ್ಬಳೆ ಮಗಳಂತೆ. ಆಸ್ತಿಯೆಲ್ಲಾ ಮಗಳಿಗೇ ಆಗುತ್ತೆ, ನೀನು ಎಲ್ಲಿ ಕೆಲಸಕ್ಕೆ ಸೇರ್ತೀಯೋ ಅಲ್ಲಿ ಇದ್ರಾಯ್ತು. ಅದಕ್ಯಾಕೆ ಯೋಚನೆ. ಈಗಿನ ಕಾಲದಲ್ಲಿ ಕೆಲಸ ಕೊಡಿಸಿ ಮದುವೆ ಮಾಡ್ತೀನಿ ಅಂತ ಬಂದಿದ್ದಾರಲ್ಲ ಅದಕ್ಕೆ ಸಂತೋಷಪಡು. ಮೊದ್ಲು ಹಾಗೆ ಹೇಳಿ ದೊಡ್ಡ ಸಂಬಂಧ ಕಳೆದುಕೊಂಡೆ. ಈಗ಼್್ಲೂ ಕಳ್ಕೊಂಡು ನಿನ್ನಂಥ ದುರದೃಷ್ಟರೇ ಇಲ್ಲ ಅನ್ನಿಸುತ್ತೆ ಅಷ್ಟೆ.

ಶ್ಯಾಮು : ನನಗೆ ಆ ಮದುವೆ ಬೇಡ ಅಪ್ಪಾ.

ಶ್ರೀನಾಥ್: ನಾಳೆ ಗಂಭೀರವಾಗ ಹೆಣ್ಣು ನೋಡಿಕೊಂಡು ಬಾ. ಆಮೇಲೆ ನೀನು ಮದ್ವೆಮಾಡಿ ಅನ್ಸೇಕು ಅಂಥ ರತಿಯಂಥ ಹೆಣ್ಣು.

ಶ್ಯಾಮು : ನನಗೆ ಅದ್ಯಾವ್ದೂ ಈಗ ಹಚ್ಚಬೇಡಿ ಸುಮ್ನಿರಿ.

ಜಾನಕಿ : ದೊಡ್ಡವರು ಹೇಳಿದ ಮಾತು ಸ್ವಲ್ಪ ಗಮನ ಇಟ್ಟು ಕೇಳು ಒಳ್ಳೇದಾಗುತ್ತೆ. ಸುಮ್ನೇ- ನೀನು ಆಗ್ಲಿಂದ್ಲೂ ಹಠ ಸಾಧಿಸ್ತೀಯೇ ಅಂದ್ರಿಂದ ಏನೂ ಪ್ರಯೋನವಿಲ್ಲ.

ಶ್ಯಾಮು : ನೋಡ್ತೇನೇ ಯೋಚನೆ ಮಾಡ್ತೇನೆ. ನನಗೆ ಸ್ವಲ್ಪ ಟೈಂ ಕೊಡಿ, ಆಮೇಲೆ ನೋಡೋಣ ಹೇಳ್ತೇನೆ.

* * *

ಶೇಷಣ್ಣ : ಏನಮ್ಮಾ ಸರಿತಾ ತುಂಬಾ ಯೋಚನೆ ಮಾಡ್ತಿದ್ದೀಯಲ್ಲ ಯಾಕೆ?

ಸರಿತಾ : ಏನೂ ಇಲ್ಲ ಅಣ್ಣಾ.

ಶೇಷಣ್ಣ : ಏನೂ ಇಲ್ಲ ಅಂದ್ರೆ ನಾನು ಒಪ್ಪಬೇಕಲ್ಲಮ್ಮಾ ನಿನ್ನ ಮನಸ್ಸು ಅರ್ಥವಾಯ್ತು ಬಿಡಮ್ಮ. ಈಗ ಆ ಬೆಂಗಳೂರು ಹುಡುಗನಿಗೆ ಕೊಡಲಿಕ್ಕೆ ಒಪ್ಪಿಲ್ಲ... ಸಂತೋಷವಾಯ್ತು ತಾನೇ.

ಸರಿತಾ : ಯಾಕಪ್ಪಾ?

ಶೇಷಣ್ಣ : ಅಯ್ಯೋ ಹತ್ತಾರು ಮಕ್ಕಳು, ಬಡವರು ಅವರ ಮನೆಗೆ ನಿನ್ನಂಥ ಅರಗಿಣಿ ಕೊಡೋದೆ ಹೇಳು. ಎಲ್ಲಾ ವಿಚಾರ ಮಾಡಿ ತಿಳಿದೆ.ಈಗ ಸಂತೋಷ ಆಯ್ತಲ್ಲಾ.

ಸರಿತಾ : ಒಳ್ಳೇ ಕೆಲಸಾನೇ ಮಾಡಿದ್ರಿ ಬಿಡಿ.

ಶೇಷಣ್ಣ : ಈಗ ಶಿವಮೊಗ್ಗದವರೊಬ್ಬರು ದೊಡ್ಡ ಅಡಿಕೆ ತೋಟದ ಸಾಹುಕಾರರು ನಿನನ್ನು ಕೇಳ್ತಾ ಇದ್ದಾರೆ. ಹುಡುಗನೂ ಓದಿದ್ದಾನಂತೆ ಯಾಕಾಗ್ಬಾರ್ದು?

ಸರಿತಾ : ಈಗ ಮದ್ವೆ ವಿಚಾರನೇ ಎತ್ತಬೇಡಿ ಅಣ್ಣ.

ಶೇಷಣ್ಣ : ಸರಿತಾ...ನಿನ್ನ ಮನಸ್ಸಿನಲ್ಲಿ ಏನಿದೆ ಬಿಚ್ಚಿ ಹೇಳು. ಏನಾದರೂ ಒಂದು ದಾರಿ ಮಾಡ್ತೀನಿ ಸುಮ್ನೆ... ಮರೆಮಾಡಬೇಡ.

ಸರಿತಾ : ನನಗ್ಯಾವ ವಯಸ್ಸಾಗಿದೆ ಅಣ್ಣ. ಸುಮ್ನೇನೆ ಆತುರ ಪಡ್ತೀರಲ್ಲಾ.

ಶೇಷಣ್ಣ : ಅಲ್ಲಮ್ಮಾ ಇಂದಿದ್ದವರು ನಾಳೆ ಇಲ್ಲ, ನಾಳೆ ಇದ್ದವರು ನಾಡಿದ್ದಿಲ್ಲ. ಹಾಗಿರುವಾಗ ಯಾಕೆ ಸುಮ್ಮನೆ ಪೋಸ್ಟ್‌ಪೋನ್ ಮಾಡಬೇಕು. ನಾನು ನಿನ್ನ ಮದುವೆ ಕಣ್ತುಂಬ ನೋಡಬೇಕು ಅಂತ ಆಸೆ ಪಡ್ತಾ ಇದ್ದೀನಿ.

ಸರಿತಾ : ಅಪ್ಪಾ ನಾನು ಕಾಲೇಜು ಓದುವಾಗ ....

ಶೇಷಣ್ಣ : ಆಂ.....

ಸರಿತಾ : ಹೌದು ಶ್ಯಾಮು ಅನ್ನೋವರನ್ನು ಮೆಚ್ಚಿಕೊಂಡಿದ್ದೆ. ಆದ್ರೆ ಆತ ಸಧ್ಯಕ್ಕೆ ಆಗೋಲ್ಲ ಅಂತ ಹೇಳ್ದಾ. ಆತನನ್ನು ನೋಡಿ ಬೇಕಾದ್ರೆ.

ಶೇಷಣ್ಣ : ಅದಕ್ಕೇನಂತಮ್ಮ ವಿಚಾರ ಮಾಡೋಣ.

ಸರಿತಾ : ಅದಕ್ಕೋಸ್ಕರವೇ ನಾನು ಮದುವೆ ಮಾತು ಬಂದಾಗ ಹಿಂದೆ ಸರಿಯುತ್ತಿದ್ದೆ.

ಶೇಷಣ್ಣ : ಈ ವಿಚಾರವನ್ನು ಆಗ್ಲೇ ಹೇಳಿದ್ದರೆ ನಾನು ಪ್ರಯತ್ನ ಪಡ್ತಾ ಇರಲಿಲ್ಲವೇ? ಗಂಡು-ಹೆಣ್ಣು ಒಪ್ಪಿಗೆ ಮೇರೆಗೆ ತಾನೇ ಮದ್ವೆ ಮಾಡೋದು, ಸಾಹುಕಾರತನ, ಅಂತಸ್ತು, ಗೌರವಗಳನ್ನಲ್ಲಮ್ಮ ಮದ್ವೆ ಆಗೋದು ನಾನು ಈ ಹೊತ್ತೇ ಹೊರಡ್ತೀನಿ ಬೆಂಗಳೂರಿಗೆ.

ಸರಿತಾ : ಹೌದು ಅಣ್ಣಾ, ತಾವು ಇಷ್ಟರಮಟ್ಟಿಗೆ ಅರಿತುಕೊಂಡು ಮಗಳ ಸಂತೋಷಕ್ಕೆ ಕಾರಣರಾಗಿರೋದು ನಿಜಕ್ಕೂ ನನ್ನ ಪುಣ್ಯ ಎಷ್ಟು ಜನರ ತಂದೆ-ತಾಯಿಗಳು, ಮಕ್ಕಳ ಮನಸ್ಸನ್ನು ಸಂತೋಷ ಪಡಸಲಿಕ್ಕೆ ಅವರು ಹೇಳಿದ ಹಾಗೆ ಕೇಳ್ತಾರೆ, ಅದು ಬಹಳ ಅಪರೂಪ.

ಶೇಷಣ್ಣ : ನಿಮ್ಮ ಭವಿಷ್ಯ, ನಿಮ್ಮ ಸಂತೋಷಕ್ಕೆ ತಂದೆ-ತಾಯ್ಗಳು ಹಾರೈಸಬೇಕು. ನೀನು ಅದರ ಬಗೆ ಸ್ವಲ್ಪಾನೂ ಯೋಚನೆ ಮಾಡಬೇಡ. ಹೋಗು ಹೋಗು ಇಂಥ ಸಂತೋಷದ ಸಂದರ್ಭದಲ್ಲಿ...

ಸರಿತಾ : ಬಾಯಿಮ ಬಾದಾಮಿ ಹಲ್ವಾ ತರ್ತೀನಪ್ಪಾ...

ಶೇಷಣ್ಣ : ಆಯ್ಯೋ ಹುಚ್ಚು ಹುಡುಗಿ...(ನಗುವರು)

* * *

ಸರಿತಾ : ಶ್ಯಾಮು...ರೆಸ್ಟ್... ರೆಸ್ಟ್ ಅಂತ ರಸ್ಟ್ ಹಿಡ್ಕೋಗ್ಬೇಡಿ. ಯೌವನ ಇದ್ದಾಗ ಸಾರ್ಥಕ ಪಡಿಸಿಕೊಳ್ಳಿ.

ಶ್ಯಾಮು : ಸರಿತಾ...ಯಾಕೆ ಇಷ್ಟೊಂದು ಆತುರ ಪಡ್ತೀಯಾ ನಾಕಾಣೆ.

ಸರಿತಾ : ಶ್ಯಾಮು...ನನಗೀಗಾಗ್ಲೆ ಮೂರು ಗಂಡುಗಳು ಬಂದ್ವು. ಆದರೆ ನನಗೆ ನಿಮ್ಮನ್ನು ಬಿಟ್ಟು ಮತ್ಯಾರನ್ನೂ ಮದುವೆ ಆಗಲಿಕೆ ಇಷ್ಟ ಇಲ್ಲ. ಅದಕ್ಕೋಸ್ಕರ ಬೇಗನೆ ನೀವು ಆಗ್ಬಿಡಿ ಅಂತ ಹಿಂಸೆ ಮಾಡ್ತಾ ಇದ್ದೇನೆ.

ಶ್ಯಾಮು : ನಿನಗೆ ಸರಿಯಾದ ವರ ಬಂದ್ರೆ ಆಗೋದು ಬಹಳ ಉತ್ಮ

ಸರಿತಾ : ಅದು ಇಷ್ಟವಿಲ್ಲ ಅನ್ನೋದ್ಕೇ ನಿಮ್ಮನ್ನು ಕೇಳಿದ್ದು.

ಶ್ಯಾಮು : ಹಾಗಾದರೆ ಅಲ್ಲಿಯವರೆಗೂ ತಡೆ.

ಸರಿತಾ : ಶ್ಯಾಮು ನೀವಾದ್ರೂ ಗಂಡಸರು ಎಷ್ಟು ವರ್ಷ ಮದ್ವೆ ಇಲ್ದೇ ನಿಂತಿರಬಹುದು. ಆದ್ರೆ ನಾನು ಹೆಂಗಸು ವಯಸ್ಸು ಮೀರಿ ನೀವು ಮನಸ್ಸು ಬದಲಾಯಿಸಿ ಬೇರೆ ಮದುವೆ ಆಗಿಬಿಟ್ರೆ ನನ್ನ ಮದುವೆ ಪ್ರಶ್ನೆ?

ಶ್ಯಾಮು : ಶೇಷ ಪ್ರಶ್ನೆ ಆಗುತ್ತೆ ಅಂತ್ಲಾ? ಖಂಡಿತ ಇಲ್ಲ. ನಾನು ಒಂದು ಸಾರಿ ಭರವಸೆ ಕೊಟ್ಟ ಮೇಲೆ ಆಯ್ತು. ನಿನಗ್ಯಾವ ವಯಸ್ಸು ಆಗಿರೋದು. ಈಗಿನ ಕಾಲದಲ್ಲಿ ಮದುವೆ ವಯಸ್ಸು ಸ್ವಲ್ಪ ಹೆಚ್ಚಿಸುವುದು ಉತ್ತಮ. ಗಡಸರಿಗೆ ೨೮, ಮೂವತ್ತಾದ್ರೂ ಇರಬೇಕು. ಹೆಂಗಸರಿಗೆ ಇಪ್ಪತ್ತರ ಮೇಲೆ ಇದ್ರೆ ಬಹಳ ಉತ್ತಮ ತಿಳೀತಾ...

ಸರಿತಾ : ಇದರಿಂದ ಏನು ಸಾಧಿಸಿದ ಹಾಗಾಯ್ತು?

ಶ್ಯಾಮು : ಗಂಡು ಹೆಣ್ಣು ಅರಿತು ನಡೆಯಲಿಕ್ಕೆ ದಿನ ದಿನಕ್ಕೆ ಏರ್ತಾ ಇರೋ ಜನ ಸಂಖ್ಯೆಯನ್ನು ಸ್ವಲ್ಪ ಮಾಡಲಿಕ್ಕೂ ಹೌದು.

ಸರಿತಾ : ಸರಿ ನೀವು ಮದುವೆ ಆಗ್ಲಿಕ್ಕೆ ಮೊದ್ಲು ಶುರುಮಾಡಿದ್ರಿ ಪುರಾಣ.

ಶ್ಯಾಮು : ಹಾಗಲ್ಲ ನಾನು ಎಕನಾಮಿಕ್ಸ್ ಸ್ಟೂಡೆಂಟ್ ಆಗಿ ಹೇಳ್ತಾ ಇರೋದು. ದಿನಂಪ್ರತಿ ನಮ್ಮ ಎದುರಿಗೆ ಕಾಡ್ತಿರೋ ಸಮಸ್ಯೆ ನೋಡು.

ಸರಿತಾ : ವಿದ್ಯಾವಂತರಿಗೆ ಇದೆಲ್ಲಾ ಅನವಶ್ಯ. ಎಚ್.ಜಿ.ವೇಲ್ ಎಂಬ ಕವಿ ಹೇಳುವಂತೆ ಮೂವತ್ತಾದ ಮೇಲೆ ಮುದುಕನೇ ಆಗ್ಬಿಡ್ತೀರಿ. ಆಮೇಲೆ ಜೀವನದಲ್ಲಿ ಸ್ವಾರಸ್ಯ ಸಿಗೋಲ್ಲ ಶ್ಯಾಮ್. ಯೌವನ ಸಾರ್ಥಕ ಪಡಿಸಿಕೊಳ್ಳಿ.

ಶ್ಯಾಮು : ನಿನಗೆ ಎಷ್ಟು ಹೇಳಿದ್ರೂ ಅಷ್ಟೆ ದೇಶದ ಸಮಸ್ಯೇನೇ ಅರ್ತವಾಗೋಲ್ಲ.

ಸರಿತಾ : ಸಮಸ್ಯೆ, ಸಮಸ್ಯೆ, ಸಮಸ್ಯೆ ಯಾರಿಗೆ ಇಲ್ಲದ ಸಮಸ್ಯೆ ನಿಮಗೆ. ಸಮಸ್ಯೆಗೆ ಪರಿಹಾರ ನಮ್ಮ ಕೈಲೇ ಇದೆ. ಮದುವೆ ಆಗಿ ಎರಡು ಮಕ್ಕಳನ್ನು ಬೇಗ

ಪಡೆದರೆ ವೃದ್ಧಾಪ್ಯದಲ್ಲೂ ಅವರು ದುಡಿದು ನಮ್ಮನ್ನು ಸಾಕ್ತಾರೆ. ಯೌವನ ಸಾರ್ಥಕವಾಗುತ್ತೆ... ಆಮೇಲೆ ಕುಟುಂಬ ಯೋಜನೆ ಅನುಸರಿಸಿದ್ರಾಯ್ತು ಅಲ್ಲಿಗೆ ನಿಮ್ಮ ಪ್ರಾಬ್ಲಂ ಮುಗಿಯುತ್ತಲ್ಲಾ.

ಶ್ಯಾಮು : ಅಂತೂ ತರ್ಕಶಾಸ್ತ್ರ ತೆಗೆದುಕೊಂಡಿರೋದ್ಕ್ಕು ಅದ್ಕೂ ಅಸಾಧ್ಯ ತರ್ಕ ಮಾಡ್ತೀಯ ಸರಿತಾ... ಸುಮ್ಮನೆ ಲಾ ಏಕೆ ಓದಬಾರದು ?

ಸರಿತಾ : ಮದುವೆ ಆಗಿ ಅಂತ ನಾ ಕೇಳಿದ್ರೆ ಇನ್ನೂ ಏಕೆ ಓದಬಾರದು ಅಂತಾ ನೀವು ಹೇಳ್ತೀರಾ?

ಶ್ಯಾಮು : "ಆಡಿದ್ದೆ ಆಡು ಕಿಸುಬಾಯಿ ದಾಸ" ಅಂದ ಹಾಗಾಯ್ತು. ನಿನ್ದೆ ಹಠ ಅಂದ್ರೆ...

ಸರಿತಾ : ಹೆಂಗ್ಸು ಇನ್ನೂ ಹಠ ಅನ್ನೋದನ್ನ ನಿಮಗೆ ಹೇಳಬೇಕೇ? ಆದ್ರೆ ನಾ ಹೇಳಿದುದನ್ನು ಬೇಗನೆ ನಡಿಸಿಕೊಡಿ ಇಲ್ಲದೇ ಹೋದ್ರೆ...

ಶಾಮು : ಏನು ಮಾಡ್ತೀಯಾ?

ಸರಿತಾ : ಮುಂದೆ ಏನು ಮಾಡ್ಕೋಬೇಕು ಅದನ್ನ ಮಾಡ್ಕೊಳ್ತೀನಿ.

ಶ್ಯಾಮು : ಎಜುಕೇಟೆಡ್ ಆಗಿ ಹೀಗೆಲ್ಲಾ ಮಾತಾಡ್ಬಾರ್ದು ಸರಿತಾ.

ಸರಿತಾ : ಮತ್ತೆ ನೀವು ಹೀಗೆ ಕೈ ಬಿಟ್ಟರೆ ... ಏನು ....ಮಾಡಲಿಕ್ಕಾಗುತ್ತೆ?

ಶ್ಯಾಮು ಸ್ವಲ್ಪ ನಿಧಾನಿಸು "ದಾನ ದಾನಕ್ಕೆಲ್ಲಾ ನಿಧಾನವೇ ಮೇಲೆ" ಅಂತ ತಿಳ್ದೂ...ತಿಳ್ದೂ, ಹೀಗ್ಮಾತಾಡೋದು ಸರಿಯಲ್ಲ.

* * *

ಶ್ರೀನಾಥ್: ಸಾಹುಕಾರ, ಅಂದ್ರೇ ಅಷ್ಟು, ನಮಗೆ ಬಡತನ ಇರಹುದು, ಆದ್ರೆ ನಮ್ಮ ಆತ್ಮಗೌರವ ನಮಗೂ ಇದೆ. ಶೇಷಣ್ಣ ಹೆಣ್ಣು ಕೊಡ್ದೇ ಹೋದ್ರೇ ಇನ್ಯಾರೂ ಕೊಡೋದೇ ಇಲ್ವೇ? (ಪುಸ್ತಕವನ್ನು ಎಸೆಯಲು ಅಷ್ಟರಲ್ಲಿ ಮಗ ಶ್ಯಾಮ್ ಬರುತ್ತಾನೆ)

ಶ್ಯಾಮು : (ಫೋಟೋವನ್ನು ತಗೆದುಕೊಂಡು) ಅಪ್ಪಾ ಇದೇನು? (ಮೆಲ್ಲನೆ) ಹ್ಞೂಂ... ಇದು ಸರಿತಾ ಫೋಟೋ ಇವರಿಗೇಗೆ ಬಂತು? ಇದೇ ಹುಡುಗಿಯನ್ನೇ ನೋಡಿದ್ದು... ಅಂ.... ಸರಿತಾ ....ನಮ್ಮ ಬಯಕೆ ಈಡೇರ್ದೇ ಇರುತ್ಯೇ?

ಶ್ರೀನಾಥ್: ಇದೇ ಹುಡುಗಿ ಕಣೋ ನೋಡಿಕೊಂಡು ಬಂದದ್ದು. ಆಮೇಲೆ ಯಾರೋ ಸಾಹುಕಾರ ಸಿಕ್ಕಿದಾ ಅಂತ ಕಾಣುತ್ತೆ - ನಮ್ಮ ಮನೆಗೆ ಕೊಡೋದನ್ನ ಕೈ ಬಿಟ್ಟರು ಅವರು.

(ಪೋಸ್ಟ್ ಎಂಬ ಧ್ವನಿ ಶ್ಯಾಮು ತಂದೆಗೆ ಕೊಡುವನು)

ಶ್ಯಾಮು : ಏನಪ್ಪಾ ಅದು?

ಶ್ರೀನಾಥ್: ಆತನೇ ಶೇಷಣ್ಣ ಆ ಫೋಟೋ ನೋಡ್ದ್ಮಲ್ಲಾ ಆ ಹುಡುಗಿ ಅಪ್ಪ ಮತ್ತೆ ಕಾಗದ ಬರ್ದಿದ್ದಾನೆ. ಈಗ ನಾವು ಬೇಡ ಅಂದ್ರಾಯ್ತು.

ಶ್ಯಾಮು : ಅವರು ಮಾಡಿದಾಗೆ ಮಾಡುವುದು ಸರಿಯಲ್ಲಪ್ಪ. ಮುಯ್ಯಿಗೆ ಮುಯ್ಯಿ ತೀರಿಸಿಕೊಂಡ ಹಾಗಾಗುತ್ತೆ. ಆದ್ರೆ...

ಶ್ರೀನಾಥ್: ಮದ್ವೆ ಮಾಡ್ಕೊಳ್ಳೋಣ ಅಂತ್ಲೇ.

ಶ್ಯಾಮು : ಇನ್ನು ಸ್ವಲ್ಪ ದಿವಸ ಆಗಲಿ ಅಂತ ಸಬೂಬು ಹೇಳಿದ್ರೆ ಆಯ್ತು.

ಶ್ರೀನಾಥ್: ಹೌದೂ... ಒಂದು ಒಳ್ಳೆ ಉಪಾಯವೇ. ಹಾಗೇ ಮಾಡ್ತೇನೆ. ನಮ್ಮ ಹುಡುಗನದು ಪಿಎಚ್.ಡಿ. ಆದ ಮೇಲೆ ನೋಡೋಣ ಅಂತ ಬರೆದುಬಿಡುತ್ತೇನೆ.

ಶ್ಯಾಮು : ಅಪ್ಪ...

ಜಾನಕಿ : (ದೂರದಿಂದ) ಏನು ಅಪ್ಪೆ.

ಶ್ರೀನಾಥ್: ನಿನ್ನ ಪುತ್ರನ ಮುಂದೆ ಅಷ್ಟೇ- ಕಣ್ ಬಾರೇ

(ಹೊರಗಡೆ ಕಾರ್ ಬರುವ ಶಬ್ದ)

ಶ್ರೀನಾಥ್: ಓ...ಶೇಷಣ್ಣನವರು, ಬನ್ನಿ...ಬನ್ನಿ...

ಶೇಷಣ್ಣ : ಶ್ರೀನಾಥ್ ನನ್ನನ್ನು ಕ್ಷಮಿಸಿಬಿಡಿ. ನಾನು ಏನೇನೋ ತಪ್ಪು ಮಾಡಿಬಿಟ್ಟೆ.

ಶ್ರೀನಾಥ್: ಏನು ಇವೆಲ್ಲಾ ಸಂಸಾರದಲ್ಲಿ ಆಗೋ ವಿಚಾರಗಳೇ ಅವನ್ನೆಲ್ಲಾ ಯಾಕೆ ಹಚ್ಚಿಕೊಂಡು ಬೇಜಾರು ಮಾಡ್ಕೊಳ್ತೀರಿ.

ಶೇಷಣ್ಣ : ಏನೋ ಅಪ್ಪಾ...ನೀವು ಅಷ್ಟು ಕರುಣೆ ಇಟ್ಟಿದ್ದೀರಲ್ಲಾ ಅದಕ್ಕೆ ಸಂತೋಷ.

ಸರಿತಾ : ಏನಪ್ಪಾ...ಇವ್ರೇ ಅಲ್ವೇ ಬಂದಿದ್ದರು.

ಶೇಷಣ್ಣ : ಹೌದಮ್ಮ ಅದ್ಕೆ ಈಗ ತಪ್ಪಾಯ್ತು ಅಂತ ಕೇಳಿಕೊಳ್ತಾ ಇರೋದು.

ಶ್ರೀನಾಥ್: ಶೇಷಣ್ಣನವರೇ ಈಗ ಆ ಮಾತು ಇರಲಿ, ಮೊದಲು ತೆಗೆದುಕೊಳ್ಳಿ ಕಾಫಿ ಆಮೇಲೆ ಉಳಿದ ಮಾತು.

ಶೇಷಣ್ಣ : ಆಂ...

ಶ್ರೀನಾಥ್: ತಾವು ಏನು ತಿಳ್ಕೊಬಾರ್ದು. ನಮ್ಮ ಮಗ ಪಿ.ಎಚ್.ಡಿ. ಮಾಡಬೇಕಂತೆ. ಆಮೇಲೆ ಮದ್ವೆ ವಿಚಾರ.

ಶೇಷಣ್ಣ : ನಾನು ಕ್ಷಮೆ ಕೇಳಿಕೊಂಡ್ರು ನೀವು ಹೀಗ ಸಬೂಬು ಹೇಳೋದು ಸರಿಯಲ್ಲ. ನನ್ನ ಮಗಳು ನಿಮ್ಮ ಮಗನನ್ನೇ ಆಗಬೇಕಂತೆ.

ಶ್ರೀನಾಥ್: ಅದು ಹ್ಯಾಗೆ?

ಶೇಷಣ್ಣ : ಇಬ್ಬರೂ ಒಬ್ಬರನ್ನೊಬ್ಬರು ಕಾಲೇಜಿನಲ್ಲಿ ಓದುವಾಗ್ಲೇ ಮೆಚ್ಚಿ ಮದುವೆ ಆಗಬೇಕೂಂತ ಮನಸ್ಸು ಮಾಡಿಕೊಂಡಿದ್ದಾರಂತೆ.

ಶ್ರೀನಾಥ್: ಇದು ನಿಜವೇ...ಶ್ಯಾಮು...ಶ್ಯಾಮು...

ಶೇಷಣ್ಣ : ಈಗಿನ ಕಾಲದಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿಕೊಂಡ್ರೆ ಆಯ್ತು ನಮ್ಮ ನಿಮ್ಮದೇನು?

ಶ್ರೀನಾಥ್: ಅದೇ ಬೇಡ ಅನ್ನೋದು ತಂದೆ-ತಾಯಿಗಳ ಮಾತು ಸ್ವಲ್ಪ ಇರಬೇಕು ಅಂತ.

ಶೇಷಣ್ಣ : ಅದಕ್ಕೆ ತಾನೇ ಈಗ ನಾವು ಬಂದಿರೋದು, ಕೂತು ಮಾತಾಡೋಣ.

ಶ್ಯಾಮು : ಏನಪ್ಪಾ?

ಶ್ರೀನಾಥ್: ಏನು ಇವರು ಹೇಳಿದ್ದೆಲ್ಲಾ ನಿಜತಾನೇ?

ಶ್ಯಾಮು : ಹೌದಪ್ಪಾ...

ಶ್ರೀನಾಥ್: ಸರಿ...ಸರಿ ಓಗ್ಲೋ ಸಮಾಚಾರ... ಈಗ ಅವರು ಬಂದಿದ್ದಾರಲ್ಲ ಏನು ಹೇಳ್ತೀಯಾ?

ಜಾನಕಿ : ಈಗ ಕೇಳಕ್ಕೆ ಬಂದಿರೋದು ನಿಮ್ಮನ್ನ ಅವನನ್ನಲ್ಲ.

ಶ್ರೀನಾಥ್: ನೀನೂ ಹೇಳು ತಾಯಿಯ ಹಾಗೆ.

ಜಾನಕಿ : ನನಗೇನು ಹುಡುಗಿ ನೋಡಿದ ಮೇಲೆ ಒಪ್ಪಿಗೇನೇ ಆಗಿದೆ ನಿಮಗೆ?

ಶ್ರೀನಾಥ್: ನಾನು ಆಗ್ಲೇ ಒಪ್ಪಿಕೊಂಡು ಬಂದ ಹುಡುಗಿ ತಾನೇ. ಅವರು ಐಶ್ವರ್ಯವಂತರನ್ನು ನೋಡಿದ್ರು, ಮಗಳ ಹಿಂಸೆಗೆ ನಮ್ಮ ಮನೆಗ ಮತ್ತೆ ಬಂದಿದ್ದಾರೆ ಅಷ್ಟೆ. ನಮಗೂ ತಾಪತ್ರಯ ಈಗ ಮದುವೆ ಅಂದ್ರೆ ಹ್ಯಾಗೆ ಸ್ವಲ್ಪ ನಿಧಾನಿಸಿ.

ಶೇಷಣ್ಣ : ದುಡ್ಡು ಕಾಸಿಗೆ ನೀವು ಹೆದರಬೇಕಿಲ್ಲ. ಕೊಡ್ತೇನೆ, ಓದಿಸ್ತೇನೆ, ಫಾರಿನ್‌ಗೂ ಕಳುಹಿಸ್ತೇನೆ.

ಶ್ರೀನಾಥ್: ಅವೆಲ್ಲಾ ನನ್ನ ನಗನಿಗೆ ಹಿಡಿಸೋಲ್ಲ. ವರದಕ್ಷಿಣೆ ಈಸಿಕೊಂಡು ಮದುವೆ ಆಗೋದ್ವಲ್ಲ ಅವ್ನು.

(ಫೋನು ಬರುವುದು)

ಶ್ರೀನಾಥ್: ಏನಪ್ಪಾ ಅದು. ಏನಾದ್ರೂ ಅಪಾಯಿಂಟ್‌ಮೆಂಟ್ ಆರ್ಡರೇನೋ?

ಶ್ಯಾಮು : ಅಲ್ಲಣ್ಣ ಫಾರಿನ್‌ಗೆ ಹೈಯರ್ ಸ್ಟಡೀಸ್‌ಗೋಸ್ಕರ ಹಾಕಿದ್ರಲ್ಲಾ ಅದು ಬಂದಿದೆ. ಆದ್ರೆ ನಮ್ಮ ಕೈಯಿಂದನೇ ಹಣ ಹಾಕೋ ಗೋಜಿಲ್ಲ. ಎಲ್ಲಾ ಖರ್ಚು ಅವರದೇ ಅಲ್ಲಿ ಸ್ಕಾಲರ್‌ಷಿಪ್ ಸಿಗುತ್ತೆ.

ಶೇಷಣ್ಣ : ನೋಡಿದ್ರಾ ಎಲ್ಲಾ ಒಳ್ಳೇದಕ್ಕೆ... ಮದ್ವೆ ಆಗಿಯೇ ಫಾರಿನ್‌ಗೋಗ್ಬೋದಲ್ಲಾ.

ಜಾನಕಿ : ಈಗೇನು ಹೇಳು ಶ್ಯಾಮು ನಮಗೆಲ್ಲರಿಗೂ ಒಪ್ಪಿಗೆ ನೀನು ಹೂಂ ಅಂದ್ರೆ ಆಯ್ತು.

ಶ್ಯಾಮು : ನೀವೆಲ್ಲಾ ಒಪ್ಪಿದ ಮೇಲೆ...

ಶ್ರೀನಾಥ್: ಅಂತೂ ಅಷ್ಟು ವರ್ಷಗಳಿಂದ ಹಠ ಸಾಧಿಸಿ ಎಂ.ಎ., ಪಿಎಚ್.ಡಿ. ಮಾಡಿ ಫಾರಿನ್ ಹೋಗೋ ಸಮಯಕ್ಕೆ ೩೦ ವರ್ಷಗಳು ಆಯ್ತು, ಮದುವೆಗೂ ಒಪ್ಪಿಗೆ ಕೊಟ್ಟೆ. ಬಹಳ ಸಂತೋಷವಪ್ಪ.

ಶೇಷಣ್ಣ : ಈಗ ಮದ್ವೆ ಮುಗಿಸಿ ಫಾರಿನ್‌ಗೆ ಕಳುಹಿಸಬೇಕು ಅಂತ ಮಾಡಿದ್ದೀನಿ, ನೀವು.

ಜಾನಕಿ : ಸಮುದ್ರದಾಚೆ...

ಶ್ರೀನಾಥ್: ಇದೇನೇ ನೀನು ಹಿಂದಿನ ಕಾಲದವರ ಹಾಗೆ ಅಡ್ತಿದ್ದೀಯ. ಹೆಣ್ಣು ಹುಡುಗೀನೆ ಕಳುಹಿಸ್ತೀನಿ ಅಂತಾರೆ. ನೀನು ಹೆದರ್ತೀಯಾ?

ಜಾನಕ್ : ಅವರ ತಾಯಿ, ಇದ್ರೂ ಅಷ್ಟೆ... ಮಗಳನ್ನು ಅಷ್ಟು ಸಂತೋಷವಾಗಿ ಕಳುಹಿಸುತ್ತಿರಲಿಲ್ಲ...

ಶೇಷಣ್ಣ : ಹಡಗಿನ ಮೇಲೇನು ಏರೋಪ್ಲೈನ್‌ನಲ್ಲೇ ಕಳಿಸೋದು. ಏನು ಭಯಪಡಬೇಕಿಲ್ಲ ಈಗಿನ ಕಾಲದಲ್ಲೇನು ಫಾರಿನ್‌ಗ್ಹೋಗೋ ಸರ್ವೇಸಾಮಾನ್ಯವಾದ ವಿಷಯವೇ ಆಗಿದೆ.

ಜಾನಕಿ : ಸರಿ ಎಲ್ಲರಿಗೂ ಒಪ್ಪಿದ ಮೇಲೆ ನನ್ದೇನು.

ಶ್ರೀನಾಥ್: ಮದ್ವೆ.

ಶೇಷಣ್ಣ : ನಮ್ಮೂರ್ನಲ್ಲೇ... ನೀನೇನೂ ಅದಕ್ಕೆ ಯೋಚಿಸಬೇಕಾಗಿಲ್ಲ.

* * *

(ಮದುವೇ ಓಲಗ)

ಶ್ರೀನಾಥ್: ಎಲ್ಲಾ ನಡೀರಿ, ಏರೋಡ್ರೂಮಿಗೆ (ಕಾರು ಹೊರಡುವುದು).

ಶ್ಯಾಮು : ಅಮ್ಮಾ... ಬರ್ತೇವೆ.

ಸರಿತಾ : ಅತ್ತೆ... ಬರ್ತೇವೆ.

ಜಾನಕಿ : ಶ್ಯಾಮು... ಸರಿತಾ... ಆಗಾಗ್ಗೆ ಕಾಗದ ಹಾಕ್ತಾ ಇರಿ. ಸರಿತಾ ಬರುವಾಗ ಒಂದು ಪುಟ್ಟ ಮಗುವನ್ನು ಕರ್ಕೊಂಡ್ಬರ್ತೀಯಾ.

ಸರಿತಾ : ನಿಮ್ಮ ಹರಕೆ ಅತ್ತೆ.

ಶ್ಯಾಮು : ಏನು ಯೋಚನೆ ಮಾಡಬೇಕಾಗಿಲ್ಲಮ್ಮಾ... ಒಂದು ಎರಡು ವರ್ಷ ಮಾತ್ರ ಅಲ್ಲಿರೋದು. ಅದೇನು ಆಡಾಡ್ತಾ ಬಂದು ಬಿಡುತ್ತೆ. ಆಮೇಲೆ ಬಂದುಬಿಡುತ್ತೇವೆ.

ಸರಿತಾ : ಅಣ್ಣಾ... ಬರ್ತೇನೆ...

ಶೇಷಣ್ಣ : ಜೋಪಾನಮ್ಮ... ಆಗಾಗ್ಗೆ ಪತ್ರ ಬರೀತಾ ಇರು...

ಸರಿತಾ : ಆಗ್ಲಿ ಅಣ್ಣಾ...ಬೈ... (ಏರೋಪ್ಲೇನ್ ಹೊರಡುವುದು.)

ಕೊನೆಗೂ ನಮ್ಮಿಬ್ಬರ ಹೃದಯಗಳು ಮತ್ತೆ ಸಂಗಮವಾಯ್ತು ಅಲ್ಲವೇ?

ಶ್ಯಾಮ : ಹೌದು...



## ಹಳ್ಳಿಯ ಜೀವನವನ್ನು ಚಿತ್ರಿಸುವ ಸಾಮಾಜಿಕ ನಾಟಕ

# ಭ್ರಾಂತಿ

**ಪಾತ್ರ ವರ್ಗ**

೧.ಬಜ್ಜಣ್ಣ ೨.ತಿಮ್ಮಣ್ಣ ೩.ರಂಗಣ್ಣ ೪.ಕೆಂಪಣ್ಣ ೫.ಹೊನ್ನಿ ೬.ಚೆನ್ನಿ

("ಮಡ್ಯೋಣ ಬನ್ನಿ..." ಸುಗ್ಗಿಯ ಹಾಡು ಹಾಡುತ್ತಾ ಗಾಡಿಯ ಮೇಲೆ ಕುಳಿತು ಮನೆಗೆ ಬಂದು)

ಹೊನ್ನಿ : ಅತ್ತ ವಲದತಪ ಮಡ್ಯದು, ಇತ್ತ ಮನ್ಯಾಗ್ಬಡ್ದ್ಯಾದು...ಅದ್ಯಾವತ್ಗದ್ಯಾವು ಕಣ್ಬುಟ್ಟಾನೋ ಯಾನೋ ಆ ದ್ಯಾವರ್ಗೇಗೊತ್ತು.

ತಿಮ್ಮ : ಅದ್ಯಾನ್ ಲೊಟ ಲೋಟ ಅಂದಾಯ ಬಾರ್ಲೆ... ದುಡ್ಯಾಕೆ ಪುಟ್ಟಿರೋದು. ಭೂಮ್ತಾಯಿ ಮ್ಯಾಗ ಗಮ್ನ ಇಟ್ಕಂಡೋದ್ರ ನಮ್ಮ್ ಬಡ್ತನ ನೀಗಿ ಸುಖ್ವಾಗಿ ಬಾಳ್ವೆ ನಡಸ್ಕಂಡ್ವಾಗ್ಬೋದು.

ಹೊನ್ನಿ : ಅದಿರ್ಲಿ ಇನ್ನೂ ಏಟ್ದಿನ ಈ ಬೋನ್ವಾಸ ಅಂತೀನಿ?

ತಿಮ್ಮ : ಅದ್ಯಾನೋ ನೀ ಯಾಳದು ನಂಗೊಂದೂ ಅರ್ತವಾಗಕ್ಕಿಲ್ಲ.

ಹೊನ್ನಿ : ದಿನ ದಿನಕ್ಕೆ ಸಂಸಾರ ತಿಪ್ಪ ಕಂಡಾಗ್ಬಳೀತಾ ವೋಗ್ಲಿ ಮುಂದಕ್ ನಮ್ಮ ಮಕ್ಕಳ ಕೈನಾಗ ಚಿಪ್ಪು ಇಡಿಸ್ಬೇಕಾದ್ದು ಅಂತ ವಸಿ ಸಂಗ್ಟವಾಯ್ತೈತೆ.

ತಿಮ್ಮ : ಹಣ್ಯಾಗ್ಬರದ್ದಕ್ಕ ವೊಣ್ಯಾರು ಅಂತ ಅದನ್ನ ತಪ್ಪುಸ್ಕಳಕ್ಕಾಯ್ತತೈತ ಹ್ಯಾಳು ಮಂತೆ.

ಹೊನ್ನಿ : ದ್ಯಾವ್ರು ಎಲ್ಲಾರಣೇಗೂ ಒಂದೇ ಬರ್ದಿರದು. ಅದನ್ನಮ್ಬೋಗ್ಸದು ನಮ್ಮ ಕೈನಾಗೆ ಅದ ಅನ್ನಾದ ಮರೀಬ್ಯಾಡ.

ತಿಮ್ಮ : ಈಗ್ಯಾನ್ಮಾಡು ಅಂತೀಯಾ?

ಹೊನ್ನಿ : ಬ್ಯಾರಾಗದು.

ತಿಮ್ಮ : ಮನ ವಡ್ಯಾ ಕೆಲ್ಸ ಮಾತ್ರ ಬ್ಯಾಡ. ಅಪ್ಪ ಅದ್ಕೊಪ್ಪಕ್ಕಿಲ್ಲ.

ಹೊನ್ನಿ : ಚೆನ್ನಿ ಅಪ್ಪನ್ಮನಯಿಂದ ಎಲ್ಲಾ ಬಂದು ಕೂರಕೂತು ಮಾರಿಯಬ್ಬ ಮಾಡಿದ್ರೆ ಇನ್ನ್ಯಾನು ಆಗಮು, ಮನ್ಸ್ಯೇ ಚೊಕ್ಟ? ಒಳ್ಳೆ ಕ್ವಾಚ ಕ್ವಾಚಾಗಾಡಿ ಇರ ಮಕ್ಕಳ ತಲಮ್ಯಾಗ ಚಪ್ಡಿ ಎಳದ್ಬುಡ್ಡ್ಯಾಡ.

ತಿಮ್ಮ : ವುಟ್ಟಸ್ತಮ ಉಲ್ಲ್ಲ ನೀರು ಬುಡು, ಬುಗು, ಅದನ್ನಾವೊಪ್ಪಕ್ಕಿಲ್ಲಕಣ. ಕೈ ತೋರಿ ಅವಲಕ್ಕಸ್ಲ ಅನ್ಸಸ್ಕಳಕ್ಕಿಂತ ಗನ್ನಾಗಿರಮುತ್ಕಲ್ಲೆ.

ಬಜ್ಜಣ್ಣ : ಲೋ ತಿಮ್ಮ... ಲೋ ತಿಮ್ಮ

ಹೊನ್ನಿ : ಬಂತು ಕಪ್ಪ ವಾರಂಟು.

ತಿಮ್ಮ : ತೊಫ್... ಇದ್ಯಾನ್ಸಂತಪ್ಪ ವೊತ್ತು? ಒಂದ್ಗಳ್ಗ ಕಣ್ಮುಚ್ಚಮೂ ಅಂದ್ರೂ ಈ ಗ್ವಾಳು ತಪ್ಪಾಕಿಲ್ಲ.

ಬಜ್ಜಣ್ಣ : ನಿನ್ನ ಕಣ್ಣಾ ಕೂಗ್ತಾ ಇರಾದು ಕಿವಿ ಕ್ಯಾಳಕ್ಕಿಲ್ವಾ?

ತಿಮ್ಮ : ಅದ್ಯಾನ್ ಬಂದಿವ್ಕೆಲ್ಲ ವ್ಯಾಳು.

ಬಜ್ಜಣ್ಣ : ಅದೇ ಕಣ್ಲಾ, ಸ್ವಲ್ಪ ಕಣೇನ್‌ತಪ್ಕೋಗಿ ಮಲಿಕೋ ವಾಗು ಅಂತ. ಕರ್ದ್ರಿ. ಅದ್ಯಾನ್ಮಾಡೀಯೆ ಇನ್ನೂ... ಈ ಹಾಳ್ಬೇಡಿ ಸೇದದೇ ಒಂದು ಕೆಲ್ಸ ಅನ್ನು. ತೂದೆಸದ್ಬುಟ್ಟು ಬಾರ್ಲಾ...

ತಿಮ್ಮ : ಯಾವಾಗ್ಲೂ ಇದೇ ಗ್ವೋಳಪ್ಪ. ಆ ರಂಗನ್ಕಳಿಸಿಕ್ಕಿಲ್ವಾ.

ಬಜ್ಜಣ್ಣ : ಅಪ್ನೂ ವಾಗವ್ನ ಕಣೇಲಾ... ಜೊತ್ಗ ನೀನು ವೋಗು ಅಂತ. ಈಗೀಗ ಕಳ್ತನಾ ಜೋರು ಅನ್ನದ್ಗೊತ್ತಾಗಕ್ಕಿಲ್ವ ನಿಂಗೆ. ನಿಂಗ ವಯಸ್ಸಾದ್ದು... ಕತ್ ಗಾದಾಗಾಯ್ತು.

ತಿಮ್ಮ : ನೀ ಮ್ಯಾನಾಜ್ ಮಾಡು ನಾಮು ಬಿಸ್ಲಾಗ ಸಾಯ್ತೀಮಿ. ವೊಯ್ತೀನಿ ವೋಗು.

ಬಜ್ಜಣ್ಣ : ಯಾಳ್ಟಪ್ಪು ಕ್ಯಾಳ್ಬ್ಯಾಕು. ತಲ್ಕಲ್ಲಾ ಮಾತಾಡ್ಬ್ಯಾಡ ವೋಗು ಬ್ಯಾಗ್ನ.

ತಿಮ್ಮ : ಅಲೇ ಹೊನ್ನಿ... ಬಾಗಲಕಬಾ... ವೊಯ್ತೀನಿ.

ಹೊನ್ನಿ : ಸರಿ ವೋಗು ನಾ ಇಲ್ಲಿ, ನೀ ಅಲ್ಲಿ ಅದಂಗಿರ್ಲಿ... ನನ್ನ ಮದ್ವಾ ಆಯ್ತಿನಿ ಅಂದಾಗ್ಯಾನಂದೆ ವಸಿ ಗೆಪ್ತಿ ಮಾಡ್ಕೋ...

(ಭಯಾನಕ ಹಿನ್ನೆಲೆ)

ತಿಮ್ಮಿ : ಹೊನ್ನೀ ಹೊನ್ನೀ...

ಹೊನ್ನಿ : ನಿಂಗ್ಯಾನ ಬುದ್ಧಿಗಿದ್ದಿ ಇದ್ದದಾ ಇಲ್ವೋ...

ತಿಮ್ಮ : ಹುಷ್...

ಹೊನ್ನಿ : ನನ್ಯಾಕ ಎತ್ಕಂಡ್ಯೆ ಬುಡು ಬುಡು...

ತಿಮ್ಮ : ನೋಡು ಅತ್ಲಾಗ್ಯಾನದ ಅಂತ

ಹೊನ್ನಿ : ಹಾವು... ಹಾವು... ಅಯ್ಯಪ್ಪಯ್..

ತಿಮ್ಮ : ಯಾನು ಯದ್ರಕಾ ಬ್ಯಾಡ ಸುಮ್ಕಿರು. ನನ್ಕೈನಾಗ ಗರುಡ್ನ ಬಲ ಅಯ್ತೆ. ವೊಯ್ತು ವೊಯ್ತು ನನ್ಕೈ... ಯಾಕಿಷ್ಟು ಬದ್ರಾಗ ಅಮ್ಕದೈ...

ಹೊನ್ನಿ : ನಂಗ ಭಯ ಆಗ್ತೈತೆ.

ತಿಮ್ಮ : ಅಲ್ಲಕಾ ಹೊನ್ನಿ ಅಟ್ಟಿನ್ನಿಂದ ನನ್ನ ಕಂಡ್ರ ಉರಿತಿದ್ದೆ. ಇವತ್ತು ಈಟೊಂದು ಬದ್ರಾಗಿಡ್ಕಂಡಿದ್ದಯಲ್ಲ ಯಾನು ಬುದ್ತಿಯೋ, ಕಟ್ಕಂಡಯೋ...

ಹೊನ್ನಿ : ಅಯ್ ಸುಮ್ಕಿರಪ್ಪ ನಂಗ ವಸಿ ನಾಚ್ಕಾ ಆಯ್ತ್ತೈತೆ.

ತಿಮ್ಮ : ನಂಗೂ ಅಟ್ಟಿನಿಂದ ಅಂಗೆ ಆಯ್ತಿತ್ತು. ಈವತ್ತು...

ಹೊನ್ನಿ : ಷುಷ್...

ತಿಮ್ಮ : ಅಂಗಾದ್ರ ನನ್ನ...

ಹೊನ್ನಿ : ಯಾನು?

ತಿಮ್ಮ : ಮದ್ವ ಆದಯಾ?...

ಹೊನ್ನಿ : ಊಂ...

ತಿಮ್ಮ : ಹೊನ್ನಿ... ನೀನೊಬ್ಳಿದ್ರೆ ನಂಗ ಪರಪಂಚ್ದಾಗ್ಯಾನೂ ಬ್ಯಾಡ. ನಿನ್ನೋಡ್ತಾ ದಿನ್ವೆಲ್ಲಾ ಕೂತ್ಬುಳ್ಳಾ ಅನ್ನಸ್ತದ.

ಹೊನ್ನಿ : ನಂಗೂ ಅಂಗೇ ಅನ್ನಸ್ತೈಯ್ತೆ.

ತಿಮ್ಮ : ನಿನ್ನ ಯೆಂಗ ನೋಡ್ಕತೀನಿ ಗೊತ್ತ...ಗಿಣಿ, ಗಿಣಿ ಸಾಕ್ದಾಗ ಸಾಕ್ತಿವ್ನಿ.

ಹೊನ್ನಿ : ಗೊತ್ತಾಯ್ತದಲ್ಲ ಮುಂದಕ್ಕ...

ತಿಮ್ಮ : ನೋಡ್ತೀರು...! (ನಗುವರು)

ತಿಮ್ಮ : ನಿಜಕಾ ವೊನ್ನಿ. ಅದು ನಿಜ. ಯಾನ್ಮಾಡ್ಲಿ?

ಹೊನ್ನಿ : ಸರಿ ವೋಗಿ... ವೊಲದತಪ್ಕಾ...

ತಿಮ್ಮ : ಸರಿ ಬತ್ತೀನಿ.

* * *

ಚೆನ್ನಕ್ಕ : ವೊನ್ನಕ್ಕೆ

ಹೊನ್ನಿ : ಯಾನು?

ಚೆನ್ನಕ್ಕ : ಅಟ್ಟಾಯ್ತು.

ಹೊನ್ನಿ : ಅದ್ಯಾನ್ಮಾಡು ಅಂದೆ?

ಚೆನ್ನಕ್ಕ : ಯಮ್ಗಳ ಕರ್ಕಂಡು ಹಾಲತಕ್ಕಂಬನ್ಸುಡು. ಊಟ ಮಾಡ್ಕಂಡು ಕಾಫಿ ಕುಡ್ಕಳಮು ಅಂದೆ.

ಹೊನ್ನಿ : ನಿಂಗೊಟ್ಟಸ್ಟ ಇಕ್ಕಂಡುಣ್ಣು ವೋಗು ನಾನಾಮೇಕ್ಮಾಡ್ತೀನಿ.

ಚೆನ್ನಿ : ಅದ್ಯಾಕ್ಕೋಪಸ್ಕಂಡ್ಯೆ... ಕರದ್ದೂ ತಪ್ಪಾ...? ನಿನ್ಕೆಲಾಗ್ದೆವಾದ್ರ ನಾನೇ ಕರ್ಕತೀನಿ ಊಟಕ್ ಬಾ.

ಹೊನ್ನಿ : ಚೆನ್ನಿ... ನೀನು ನಿನ್ನ ಗಂಡ ನಿಮ್ಮಕ್ಕು ತುರುಪ್ತಿಯಾದ್ರು ನಾವ್ ಆದಾಗೇ.

ಚೆನ್ನಿ : ಅದ್ಯಾಕ ಹೊನ್ನಕ್ಕೆ ಆಗಂದಯಿ. ನನ್ನ ಮುಕ್ಕ್ಯಾನ್ಮಾಡ್ಡು.

ಹೊನ್ನಿ : ನಿಮ್ಮೆಲ್ರಿಂದ್ಲೂ ಬಂತು ನಮ್ಗೊಗ್ತು?

ಚೆನ್ನಿ : ಅದ್ಯಾನ್ಮಾಡ್ಲಿ ನಾನು?

ಹೊನ್ನಿ : ಈ ಗೊಂದ್ಲದಿಂದ ತಪ್ಪಸ್ಕಂಡ್ರ ಸಾಕು.

ಚೆನ್ನಿ : ಹೊನ್ನಕ್ಕೆ ಆಗಂತ ಮಾವನ್ಸುಕಟ್ಟ ಕ್ಯಾಳು... ನನ್ನ ಮುಂಚರಿ ಲೊಟ ಲೊಟ ಅಂದ್ರ್ಯಾನ್ಸಂದುದು?

ಹೊನ್ನಿ : ಮಾನಪಾನ ಇದ್ದವ್ರಗ್ಯಾನಾದ್ರೂ ಯಾಳ್ಬೋದು. ನಿನ್ನಂತ ಭಂಡರ್ನಾ ನೋಳೋದು?

ಚೆನ್ನಿ : ನಾವೆಲ್ಲಾ ಮಾನಬುಟ್ಟು ನಿಂತವ್ರು... ನೀವು ಗ್ರಾಸ್ತು... ಯಾನಾರ ಅನ್ನಿ... ಏಟೇ ಆಗ್ಲಿ ನೀನು ಮನ್ಗಬಂದಿರ ಸೊಸ. ನೀನ್ಯಾಳ್ದಾಗ ನಾ ಕ್ಯಾಳ್ಬ್ಯಾಕು. ಅದಕ್ಯ ನಾ ಬಾಯ್ಮುಚ್ಕಂಡಿರ್ಬ್ಯಾಕು.

ಹೊನ್ನಿ : ನಾನ್ಯಾಳ್ದಾಗ ಕ್ಯಾಳಾಗಾಗಿದ್ರ್ಯಾಕೀಗಾಗ್ತಿತ್ತು. ಎಲ್ಲಾ ನಮ್ಮ ಕರ್ಮ ಅನ್ಬವಸ್ಬೇಕು ನೋಡು.

ಚೆನ್ನಿ : ವಾಗ್ಲಿ ಆಮ್ಯಾಕ ಕ್ಯಾಳವಂತೆ ಊಟ ಮಾಡುವೆ ಬಾ.

ಹೊನ್ನಿ : ಅದೋ ಮಾವಯ್ಯಾ ಬರಾಗವ್ರ.

ಚೆನ್ನಿ : ಸರಿ ಕ್ಯಾಳ್ಬುಡು.

ಹೊನ್ನಿ : ಅದ್ಯಾಕ ನನ್ಗಂಬ್ಯಾ... ಕ್ಯಾಳ್ತೀನಿ ತಾಳು.

ಬಜ್ಜಣ್ಣ : ಇದ್ಯಾನ್ರವ್ರ ಇನ್ನೂ ಕೂತ್ಕಂಡಿದ್ದರಲ್ಲಾ, ವೊಲಕ್ಕಿಟ್ಟೊತ್ಕಂಡೋಗಕಿಲ್ವ. ಬ್ಯಾಗ್ನ ಯಮ್ಗಳ ಕರ್ಕಂಡು ಕಾಲಾಡಕ್ ಬುಡಿ.

ಚೆನ್ನಿ : ವೋಯ್ತಿಮಿ.

ಬಜ್ಜಣ್ಣ : ಸರಿ ಯತ್ಕಂಡೋಗಿ ಮಂತೆ, ಅದ್ಕೂ ಯಾನಾರಾ ಕಣೀ ಕ್ಯಾಳ್ಬ್ಯಾಕಾ.

ಹೊನ್ನಿ : ನಂಗ್ಯಾಕೋ ಬ್ಯಾಜಾರಾಯ್ತುದ ವೊಯ್ತಿಮಿ.

ಬಜ್ಜಣ್ಣ : ನಿನ್ನ ಈಗಂದ್ಯೆ, ನಿನ್ಗಾನ್ಸಂತು ಕಷ್ಟ ಯಾಳವ್ವಾ ಪಸಿ.

ಹೊನ್ನಿ : ಕಷ್ಟವಲ್ದೇ ಸುಖ್ವಾ ಎಷ್ಟು ದುಡುದ್ರೂ ಬಾಡ್ಗಿ ಎತ್ತು ಮಷ್ಟಾಗೇ.

ಬಜ್ಜಣ್ಣ : ನಿನ್ನ ಕೈನಾಗ ಸಾಗಕ್ಕಿಲ್ಲ ಅಂದ್ರ ಆ ಚೆನ್ನಕ್ಕಿಲ್ಲಾ? ಬುಟ್ಟುಡು ಅವ ನೋಡ್ಕಂಡೋಗ್ತಳ, ಏನವ್ವ ಚೆನ್ನವ್ವ?

ಚೆನ್ನಿ : ಆಗ್ಲಿ ಮಾವೈ.

ಬಜ್ಜಣ್ಣ : ಸರಿ ಕಮ್ಮುನೆ ಇಟ್ಟುಣ್ಕಂಡ್ನಡಿರಿ ಪೊಲದ ತಪ್ಕ. ಕುಯ್ಯಲ್ನಾಳ್ಗಳು ಬಸ್ಬುಟ್ಟಿವು.

ಚೆನ್ನಿ : ಪಯ್ತೀನಿ ಪೋಗಿ.

ಬಜ್ಜಣ್ಣ : ಕೂಸು ಚೆನ್ನವ್ವ ನೀಪೋಗವ್ವ ಪೊನ್ನಿಗ್ನಾಕಾಗಿರ್ಬೇಕು

ಹೊನ್ನಿ : ಯಾನು ಬ್ಯಾಡ ನಾನೇ ಪೊಯ್ತಿನಿ. ಯಾವತ್ತಿದ್ರೂ ನಾ ತಾನೇ ದುಡಿಬ್ಯಾಕು. ಓರಿ ಸೊಸ್ಯಾಗ್ಬಂದ ತಪ್ಗೆ. ದುಡ್ದು ಸಾಯ್ತಿನಿ.

ಬಜ್ಜಣ್ಣ : ನೀನ್ಹೋಗಕ್ಯಾಗಕ್ಕಿಲ್ಲ ಮನ್ಲೇ ಇರ್ಬೇಕು. ಹೆಣ್ಮಕ್ಳು ಕಣ್ಣೀರು ಸುರಿಸ್ಕಂಡು ಕೆಲ್ಸ ಮಾಡ್ತ ಒಳ್ಳೇದಾಗಕ್ಕಿಲ್ಲ ನೀಪೋಗು ಚೆನ್ನಕ್ಕ ಕೊಟ್ಟು ಬ್ಯಾಗ್ಬಸ್ಬುಡು.

(ಓನ್ನೆಲೆ ಒಕ್ಕಣೆಯ ಶಬ್ದ)

ರಂಗಪ್ಪ : ಚೆನ್ನಿ...

ಚೆನ್ನಿ : ಯಾನು ಅಂದ್ರೆ!

ರಂಗಪ್ಪ : ನೀನು ಹೀಗ್ದುಡಿತಾ ಇದ್ರ ಯಾರ್ಗತಿ? ಪೊಟ್ಯಾಗ್ಯೊಂದೊತ್ಕಂಡು ಈ ಪಾಟಿ ಕೆಲ್ಸ ಮಾಡದ್ರ್ಯಾಗ್ಯಾ ಅಂತೀನಿ.

ಚೆನ್ನಿ : ಯಾನ್ಮಾಡೂ ಅಂದರಿ?

ರಂಗ : ಚೆನ್ನಿ ಕಸ ವಡ್ಯದ್ರಿಂದಿದ್ದು ಇಟ್ಕಳಾವರ್ಗೂ ನಿನ್ದೇ, ಅದನ್ನೊತ್ಕಂಬವ್ಳೂ ನೀನೇ ಆಗ್ಬುಟ್ಯಲ್ಲಾ. ಹೊನ್ನವ್ವ ಯಾನ್ಮಾಡ್ತಾಳು ಅಂತೀವ್ನಿ ಬಾ... ಬಾ...ಯಾಕೀಪಾಟಿ ಬೆವ್ರು ಮಕ್ದಾಗೆ.

ಚೆನ್ನಿ : ಅಯ್ ಬುಡಿ, ಭಾವನೋರು ನೋಡಿಗೀಡಿದಾರು... ನಾನೇ ಪೊರಸ್ಕತೀನಿ... ಬನ್ನಿ... ಬನ್ನಿ... ಊಟ ಮಾಡುರಿ... ಇನ್ಯಾಕ ಮಾತಾಡ್ಯಾನ್ ಪರಯೋಜ್ನ...

ರಂಗ : ಚೆನ್ನಿ... ನಾನೋಡ್ನಾರಿ...

ಚೆನ್ನಿ : ನಮ್ಮ ಮನ ಕತ ಇನ್ನೂ ಯಾನ್ಯಾನಾಗ್ಬೇಕಾಗಿವ್ದಮೋ.

ರಂಗ : ಯಾಕ?

ಚೆನ್ನಿ : ಹೊನ್ನಕ್ಕ ಮಾವಯ್ಯನ ಭಾಗ ಮಾಡ್ಬುಡಿ ಅಂತ ಕೂತವ್ಳೆ...

ರಂಗ : ಓಹೋ ಅಲ್ಲಿಗಂಟಾ ಬನ್ಬುಟ್ಲಾ? ಅದ್ಯಾಗ್ನಡೀತವ ನಾನ್ ನೋಡ್ಬುಡ್ತೀನಿ. ಅವ್ರೊಪ್ಪುದ್ರು ನಮ್ಮಣ್ಣ ಒಪ್ಪಬೇಕಲ್ಲ.

ಚೆನ್ನಿ : ಹೆಡ್ತಿ ಕಿವ್ಯ ಹಿತ್ತಾಳ ಕಿವಿ ಮಾಡ್ಲಾನೂ ಮಾಡಕ್ಕಾಗಕ್ಕಿಲ್ಲ.

ರಂಗ : ಅವ್ಕೆಲ್ಲಾ ಅವ ಜಗ್ಗಪ್ಲಲ್ಲ, ಅದ್ರಾಗ್ಲೂ ಅವ ನನ್ಮಾತ ಮೀರಕ್ಕಿಲ್ಲ. ನಾನು ಚಿಕ್ಕವ್ನಾದ್ರೂ ನನ್ನ ಕಂಡ್ರ ಬಲು ಪಿರೀತಿ, ನನ್ಮಾತ್ನಾಕ್ಳೇ ಕ್ಯಾಳ್ತಾನೆ. ಸರಿ ನಿಮ್ ಭಾವನ್ನೂ ಕರದ್ಬುಡು ಇಬ್ರೂ ಜೊತಾಲೇ ಕುತ್ಕಂಡೂಟ ಮಾಡ್ಕಳಮು.

ಚೆನ್ನಿ : ವೊಯ್ತೀನಿ ತಾಳಿ.

ರಂಗ : ಓ... ಅವ್ನೆ ಬತ್ತಾ ಅವ್ನೆ ಬುಡು. ಬ್ಯಾಗಸ್ಬಣ್ಣೋ... ಇಟ್ಬಾರೊಯ್ತ್ತೈತೆ.

ತಿಮ್ಮ : ಆರ್ಲಿ ತಕ್ಕೋ...

ರಂಗ : ಇದ್ಯಾಕಣ್ಣೆ ಬ್ಯಾಸ್ರ ಮಾಡ್ಕಂಡೈ.

ತಿಮ್ಮ : ಇನ್ಯಾಸ್ಲ ಈ ಜೀವನ್ವೆ ಅಷ್ಟು... ಬ್ಯಾಜಾರಿಡಿಸ್ಬುಟ್ಟದ.

ರಂಗ : ಮದ್ವ್ಯಾಗಕ್ಕೂ ಮುಂಚೆ ನನ್ನ ಕಂಡ್ರೆ ಪರಾಣ ಬುಟ್ಕತಿದ್ದೆ ಈಗೀಗ ನನ್ಕಂಡ್ರ್ಯಾಕ್ ಮಸ್ಕರಿತಿಯಲ್ಲಣ್ಣಾ... ಎಷ್ಟೇ ಆಗ್ಲಿ ನಾವಿಬ್ರು ಒಂದೋಳು ರಕ್ತ ಅಚ್ಕಂಡುಟ್ಟವ್ರಲ್ವಣ್ಣ.

ತಿಮ್ಮ : ಊಂ ಕಣ್ಲಾ... ನಿನ್ನ ಕಂಡ್ರ ಕಣ್ಣುರಿ ನನ್ಗೂ ನನ್ಹೆಂಡ್ತಿಗೂ, ಯಾಕ್ ನಾನು ನನ್ಹೆಂಡ್ತಿ ಬ್ಯಾರಾಗೋಗಿ ಸುಬ್ವಾಗಿರದ್ನೋಡದ್ರ ನಿಂಗ ಸಂಗಟ್ವಾ?

ರಂಗ : ಅಯ್ ಬುಡ್ತು ಅನ್ನೂ, ಅಂಗ್ಯಾನೂ ಇಲ್ಲ ಕಣ್ಣೆ.

ತಿಮ್ಮ : ಈ ಟಕ್ಕಣ್ ಟಿಕ್ಕಣ್ಣಾಟ ನಾನೊಪ್ಪಲ್ಲ ಕಣ್ಲಾ.

ರಂಗ : ಅದರ್ಕ್ಯೇಗ ನಿನ್ನಿಷ್ಟ ಕಣಣ್ಣಾ, ವೋಗ್ಲಿ ಈಗ ಊಟ ಮಾಡು ಯಾಕ್ ಸುಮ್ಗೆ ಕೂತ್ಬುಟ್ಟೆ.

ತಿಮ್ಮ : ತಕ್ಕೋ... ಅರಮಣಸು ಬಲು ಖಾರ... ಸೊಪ್ಪಿನ್ಸಾರು ಬಲು ಪಸಂದಾಗಯ್ತೆ...

(ಲೊಚ್ಚೆ ಹಾಕಿ)

ಚೆನ್ನಿ : ನೀವ್ಯಾಕ್ಬಾವ ಈಟೊಂದು ಕ್ವಾಪ ಮಾಡ್ಕಂಡ್ರಿ?

ತಿಮ್ಮ : ಅಂಗ್ಯಾನೂ ಇಲ್ಲ ಕವ್ವ... ನಮ್ ಬಾಳಚರ್ಯ ನಮ್ಕಿರ್ಲಿ. ನಿಮ್ಮ ಬಾಳಚರ್ಯ ನಿಮ್ಕಿರ್ಲಿ... ಇಬ್ರೂ ಸುಕ್ವಾಗಿರಮೂ ಅಂತ್ಲೇ ನನ್ನಿಷ್ಟ.

ಚೆನ್ನಿ : ಜೊತ್ಯಾಗಿದ್ರ ಸುಕ ಸಿಗಕ್ಕಿಲ್ವಾ ಭಾವೈ.

ತಿಮ್ಮ : ನನ್ಗೂ ಮೊದ ಮೊದ್ಲಾಗ ಆಗನ್ನಿಸ್ತಿರ್ನಿಲ್ಲ. ಈಗ್ಯಾಕೋ ಅನ್ನಿಸ್ತದಲ್ಲ ಇನ್ನೊಸಿ ದಿನ್ವಾದ್ರ ನಿಂಗೂ ಅನ್ನಿಸ್ತದ ಕಣವ್ವಾ.

ಚೆನ್ನಿ : ನಮ್ಮಾಗನ್ಸಕ್ಕಿಲ್ಲ ಭಾವೈ.

ರಂಗ : ಬುಡು ಚೆನ್ನಿ ಅವನ್ಗಿಷ್ಟಿಲ್ಲಾ ಅಂದ್ರ ಬಲ್ವಂತ ಮಾಡಿ ಯಾಕೆ ಪೀಡಿಸ್ಬೇಕು.

ತಿಮ್ಮ : ಸದ್ಯ ಅಷ್ಟು ಮಾಡಿದ್ರ ಸಾಕು.

ಚೆನ್ನಿ : ನೀವ್ಯಾನಾರ ಅನ್ನಿ ನಂಗಂತೂ ಸಮಾಧಾನ್ವಿಲ್ಲ.

ತಿಮ್ಮ : ಹೂ... ನಿನ್ಗೊ ಸಮಾಧಾನ್ವಿಲ್ಲ. ನಿನ್ಗಗಂಡನ್ಗೂ ಮೊದ್ಲೇ ಇಲ್ಲ. ಅಪ್ಪನ್ಗಾನೋ ಬ್ಯಾಕೇ ಇಲ್ಲ. ಒಟ್ನಾಗ ದುಡ್ದು ಸಾಯೇಕಾದವ್ರು ನಾವಲ್ವ.

* * *

ತಿಮ್ಮ : ಚೆನ್ನಿ... ಈವತ್ತೆ ವೊದ್ಲಾಯ್ತು, ಈವತ್ತೆ ಕೊನ್ಯಾಯ್ತು, ಇನ್ನೊಂದ್ಸಾರಿ ಕಂಡ್ರೆ ನಾ ಸುಮ್ನ ಬುಡ್ತೀನಿ ಅಂತ ತಿಳ್ಕಬ್ಯಾಡ ಅದ್ಕೇ... ಅವ್ಕೆಲ್ಲಾ ಸರಿಯೋಗುತ್ತೆ ಅಂತ ನಿಮ್ಮ ಜಾಣ್ತನ ಅಲ್ವಾ...

ಚೆನ್ನಿ : ಭಾವೈ... ಅಂಗ್ಯಲ್ಲಾ ತಿಳ್ಕಬ್ಯಾಡಿ. ನೀವು ಬ್ಯಾಡಿ ಅಂದ್ರ ನಾ ಕೊಡದೇ ಇಲ್ಲ.

ತಿಮ್ಮ : ಇದು ಅಪ್ಪನ್ಗ ಗೊತ್ತಾದ್ರ ಸುಮ್ಕೇ ಬುಟ್ಟಾನ!

ಹೊನ್ನಿ : ಅವ್ರ್ಯಾನ್ ಮಾಡದು?

ತಿಮ್ಮ : ವಾಗ್ಲಿ ಇದೊಂದ್ಸಾರಿ ಬುಡು.

ಹೊನ್ನಿ : ಅದೋ ಮಾವಯ್ಯ ಬತ್ತಾ ಅವ್ರಲ್ಲ. ಬನ್ನಿ ಬನ್ನಿ ಕೈಕಾಲ್ತೊಳ್ಕಂಡುಣ್ಣ ಕ್ಕೋಗಮು...

ತಿಮ್ಮ : ನಡಿ... ನಡಿ...

ಬಜ್ಜಣ್ಣ : ಯಾನೂ ಇಲ್ದಾಂಗೇ ಮ್ಯಾಟಿಂಗ್ ನಡೀತಾದ, ಅದ್ಯಾನ್ಲ ತಿಮ್ಮ?

ತಿಮ್ಮ : ಅಯ್ ಯಾನೂ ಇಲ್ಲಪ್ಪೈ.

ಬಜ್ಜಣ್ಣ : ಅದ್ಯಾಕಾ ಕೂಸು, ಗುಸು ಗುಸ ಪಿಸಿ ಪಿಸಿ. ಚನ್ನವ್ವೈ... ಅಳ್ತಾ ಇರಂಗದಾ?

ಚೆನ್ನಮ್ಮ : ಯಾನೂ ಇಲ್ಲ ಊಟಕ್ಬನ್ನಿ ಮಾವೈ.

ತಿಮ್ಮ : ಅಷ್ಟಕ್ಕೆಲ್ವಾ ಕಾರ್ನ ನಾವಿಬ್ರು ಈ ಮನ್ಯಾಗಿರವರ್ಗ ಈ ಕಣ್ಣೀರಾಕೇ ಆಕ್ತರ. ನಾವಿಬ್ರೂ ವೊಂಡೋದ್ರೆ ಆಮ್ಯಾಗ ಸಂತೋಸ್ವಾಗಿರ್ತಾರ ಅಂತ ತೋರ್ತೈತೆ.

ಬಜ್ಜಣ್ಣ : ನಿಮ್ಗವೆಲ್ಲಾ ಬರೀ ಹುಚ್ಚು ಅಂತ ತೋರ್ತೈತೆ.

ತಿಮ್ಮ : ನಿಮ್ಗದ್ಯಲ್ಲಾ ಗೊತ್ತಾಗಕ್ಕಿಲ್ಲಕಪ್ಪೈ.

ಬಜ್ಜಣ್ಣ : ನಡ್ಯೋ ಸಾಕು... ಸಂಕೆ ಬುದ್ಧಿ ಯಾಳಕ್ಬರ್‍ಬ್ಯಾಡ. ಬ್ಯಾಗ ಬ್ಯಾಗುಣ್ಕಂಡು ನಡಿ ದನ್ಗಳಿನ್ನೂ ಕೊಟ್ನಾಗೆ ಅವೆ. ಅವ್ನೂ ವಸಿ ಕಾಲಾಡಸ್ಕಂಡು ಹೋಲದ ತಪ ಉಣ್ಣಾಪಣ್ಣ ಬಡೀತಾ ಇರು. ರಂಗನ್ನ ಕಳಿಸ್ಬುಡ್ತೀನಿ.

ತಿಮ್ಮ : ಆಗ್ಲಿ... ವೊಯ್ತೀನಿ ನಡ್ಯೆ...

ಚೆನ್ನಿ : ತಣ್ಗೆ ಇಟ್ಟೀವ್ನಿ... ಬನ್ನಿ... ಎಲ್ಲಾರೂ...

ಬಜ್ಜಣ್ಣ : (ಚಪ್ಪರಿಸುತ್ತಾ) ಪದಾರ್ಥ ಒಳ್ಳೆ ಚೆನ್ನಾಗದಕಾ ಕೂಸು.

ಚೆನ್ನಿ : ಒಳ್ಳೆ ಸೋಂಣ ಅವ್ರಕಾಯ್ನೇ ಆಕಿದ್ದಿಕಾ ಮಾವ್ಯೆ... ಅದ್ಕೇ...

ಬಜ್ಜಣ್ಣ : ಇಟ್ಟು ಒಳ್ಳೆ ಗದ ಗದ ಅಸ್ತದ.. ಬಲು ಪಸಂದಾಗದ ಕವ್ವೆ. ಇನ್ನೊಸಿ ಹಾಕು.

ಚೆನ್ನಿ : ತಕ್ಕಳೀ ಮಾವ್ಯೆ.

ಬಜ್ಜಣ್ಣ : ವಸಿ ಬೆಣ್ಣ ತಕಂಬವ್ವೆ.

ಚೆನ್ನಿ : ಬೆಣ್ಯೆಲ್ಲ. ತುಪ್ಪ ಆಕಾನ್ಯ ಮಾವ್ಯೆ.

ಜಜ್ಜಣ್ಣ : ಅದ್ಯಾಕವ್ವ ಬೆಣ್ಣೆಲ್ವಾ?

ತಿಮ್ಮ : ಊಂ... ಕಣ್ಮಾವ್ಯೆ... ನಮ್ಮೂರ್‍ನಾಗೆ ಇಲ್ಲ ಅಂದ. ವಸಿನಾ ನಾನೇ ಕೊಟ್ಕಳಿಸ್ದಿ... ನಮ್ಮಣ್ಣಂಗೆ.

ಬಜ್ಜಣ್ಣ : ವಾಗ್ಲಿ ಬುಡವ್ವಾ... ಒಂದು ಗಳಾಸು ನೀರ್‍ತಕ್ಕಂಬಾವ್ವಾ...

ತಿಮ್ಮ : ನೀ ಆಗಂದು ಆಗಂದು ಸರಾಗ ಮಾಡ್ಬುಡು. ನಾವು ಕೊನ್ಗ ಸಾಲ್ಗಾರ್‍ರಾಗಮು ಅಂತ ಅಲ್ವಾ.

ಬಜ್ಜಣ್ಣ : ವೋ... ಸಾಕು ಸುಮ್ಕಿರ್‍ಲಾ ವಸಿ ಬೆಣ್ಣನೂ, ಹಾಲ್ನೂ ಕೊಟ್ರ ನಮ್ಮ ಗಂಟೋಗಕ್ಕಿಲ್ಲ. ಸೊಂತ ಸೊಮ್ಮು ಅಂತ್ಯಾಕಾಯ್ತು.

ತಿಮ್ಮ : ಈವತ್ತಿಷ್ಟು... ಇನ್ನೊಂದಿನಷ್ಟು, ಅಂತ ಸಾಗಸ್ತ ಬರ್‍ಲಿ ಕೊನ್ಗ ನಾವ್ತಾನೆ ಸಾಯವು.

ಬಜ್ಜಣ್ಣ : ಊಂ.... ಉಂಡ್ಯಾಳ್ಲ ಮ್ಯಾಕ್ಕಾ...

ತಿಮ್ಮ : ಈಗಂದು ಅಂದು ಮನ್ಯಾಳ್ಮಾಡು...

ಬಜ್ಜಣ್ಣ : ತಿಮ್ಮ... ಯಾಕ್ಲಾ ನಿನ್ಗೀ ದುರ್ಬುದ್ಧಿ ಬಂತು?

ತಿಮ್ಮ : ನಿಂಗ್ಯಾನಪ್ಪಾ, ಹೊಲ್ದಾಗ, ಬಿಸ್ಲಾಗೆ, ಮಳ್ಯಾಗ, ಚಳ್ಯಾಗ ದುಡ್ಯೋವ್ರು ನಾವು. ಕೂತ್ಕಂಡು ಹಳಾ ಕಾಲ್ದಾಗ ಎಲ್ಲಾನೂ ನೀದಾನ ಮಾಡಕ... ದಾನಸೂರ ಕರ್ಣ ನೀನು.

ಬಜ್ಜಣ್ಣ : ಅವ್ರು ದುಡ್ಡಾಕಿಲ್ವ... ಸುಮ್ಕಿರ್ಲಾ ಸಾಕು. ಈವತ್ತು ನಾವು ಬ್ಯಾರವರ್ಗ ಸಾಯ ಮಾಡ್ಬ ಮುಂದ ನಮ್ಮ ಕಷ್ಟಕ್ಕವ್ರಾರ್ಯಾತ್ತರಾ, ಅಲ್ಲೇನಾ ಯೋಸ್ನೆ ಮಾಡ್ಬೋದು.

ಹೊನ್ನಿ : ಸುಮ್ಕಿರಿ ಮಾವೈ ನೀವ್ಯಾವಾಗ್ಲೂ ಈಗೆ ಅನ್ಬ್ಯಾಡಿ.

ಬಜ್ಜಣ್ಣ : ಗಂಡಸ್ಗ ತಕ್ಕ ಎದ್ದಿ ಅಲ್ವ ಕೂಸು ಪೋಗಿ ವಸಿ ಮಜ್ಗನಾರೂ ಕುಡಿವೋಗು ಹೊಟ್ಟುರಿ ಕಮ್ಯಾಗ್ಲಿ.

ಹೊನ್ನಿ : ಒಂದು ದಿನ್ವಾದ್ರೂ ಸರಿ ಎರ್ಡು ದಿನ್ವಾದ್ರೂ ಸರಿ, ದಿನಾ ಸಾಯಪ್ರಗ್ಯಾರು ಅಳವ್ರು.

ಚನ್ನಿ : ಹೊನ್ನಿ ನಮ್ಮಪ್ನ ಮನ್ಗಿ ಇಟ್ಟಿಗೆ ಗತಿಯಿಲ್ಲಾ ಅಂತ ತಿಳ್ಕಬ್ಯಾಡ ಯಾಸೋ ಒಂದು ಜಿನ ಕೊಟ್ರು ಈಗಸ್ಟುಟ್ರಲ್ಲ... ಅವ್ರು ಇದ್ಕೇ ಗಿರತ್ಕಂಡಿದ್ರಾನ್ಗತಿ?

ಹೊನ್ನಿ : ಜಿನಾ ಜಿನಾ ಕೊಡವ್ರಿದ್ರ ಬುಡವರ್ಯಾರು?

ಚೆನ್ನಿ : ಹೊನ್ನಕ್ಕ ಸುಮ್ಯಾಕ ವೊಟ್ಟುರ್ಯಾ ಮಾತಾಡ್ತಯಿ “ಕೂಡ ಸೆಟ್ಟಿ ಕಂಡ್ರ ಯಾಸೋ ಯಾಳ್ತರಲ್ಲ ಅಂಗೆ.”

ಹೊನ್ನಿ : ನೀ ನಮ್ಮೊಟ್ಟುರ್ಲಾ ಅಂಗ ಮಾಡ್ಬ್ಯಾಡ.

ಬಜ್ಜಣ್ಣ : ಹೊನ್ನವ್ವ ನೀ ಬಲು ಜಾಣೆ ಕಣವ್ವಾ. ಗಂಡ ಮಂದ್ಲಿಗೆ ಕೆಳಗೆ ನುಗ್ಗದ್ರ ನೀನು ರಂಗೋಲೆ ಕೆಳ್ಗ ನುಗ್ಗವಳು.

ಹೊನ್ನಿ : ಅಂಗ ಜಾಣ್ತನ ಇಲ್ದವಾಗಿದ್ರೆ ಜೀವ್ನ ಮಾಡಕ್ಕಾಯಿತ್ತ ಮಾವೈ.

ಬಜ್ಜಣ್ಣ : ಚೆನ್ನವ್ವ ವಾಗ್ಲಿ ವೋಗವ್ವ. ಯೋಸ್ನೆ ಮಾಡ್ಬ್ಯಾಡ. ಅದ್ಯಾಕಳ್ಬೇಕು ನದಿ ಕೂಸು ಅವ್ರಪ್ಪಕ್ಕವ್ರು ಪೇಜ್ಲಿ.

* * *

ರಂಗ : ಚೆನ್ನೀ... ಚೆನ್ನೀ...

ಚೆನ್ನಿ : ಬತ್ತೀನಿ ವಸಿ ತಾಳು.

ರಂಗ : ಏಟೋತ್ತು ಬರಮೂ ಅಂತಿವ್ನಿ.

ಚೆನ್ನಿ : ಅಲ್ಲ ಕೆಲ್ಸಗಿಲ್ಸ ಮಾಡ್ಮುಗಿಸ್ಬ್ಯಾಕೋ ಇಲ್ಲ ಅಂಗಂಗೆ ವೊಂಟ್ಬರ್ಬ್ಯಾಕೋ.

ರಂಗ : ನಾಯಿರವಾಗ ಕೆಲ್ಸ ಯಾಕಾ ಬಾ...

ಚೆನ್ನಿ : ಆಯ್ ನಿಂಗ್ಯಾವಾಗ್ಲೂ ಸುಮಾನ್ವೇ.

ರಂಗ : ಮಂತಿನ್ಯಾನ ಅಳ ಮುಸುಡಿ ಕಂಡಾಗಿರ್ಬೇಕಾಗಿತ್ತ?

ಚೆನ್ನಿ : ನಿಂಗ ಮಾವಯ್ನೇ ಸರಿ ಕೂಗ್ಯಾ.

ರಂಗ : ಬ್ಯಾಡ ಕಣಾ ನಿನ್ ದಮ್ಮಯ್ಯ ಅಂತೀನಿ.

ಚೆನ್ನಿ : ಮತ್ತಿದ್ಯಾನಪ್ಪ ಈ ಪಾಟ ಕಾಪ್ಲರಿ. ಸಿವ ಬಂದ ಅನ್ನಗ್ಯಾಣ್ತವ ಅದೋ... ಸದ್ದಯ್ತದ... ಬುಡು ಮತ್ತ... ನನ್ನ ಕೈ ವೋಯ್ತು... (ಮೆಲ್ಲನೆ) ಮಾವೈ...

ರಂಗ : ಯಾಕ ಚೆನ್ನಿ ನನ್ನ ಕಂಡ್ರ ಇಷ್ಟೊಂದು ಅಸಡ್ಯಾಯ್ತು?

ಚೆನ್ನಿ : ಈಗ್ತಾನೆ ಸಿವನ್ಗ ಜಲ್ಮಕೊಟ್ಟು ಒಂದು ವರ್ಸೂ ಆಗಿಲ್ಲ ಆಗ್ಲೇ... ಪುನಾ... ನಾ ಯೇಸ್ಮುಳ್ಯಾ ಆಗಿಲ್ಲ.

ರಂಗ : ಉಕ್ಕು ಕಟ್ಟಾಡ ಸುಮ್ಕಿರು ಯಾನೂ ಆಗಕ್ಕಿಲ್ಲ.

ಬಜ್ಜಣ್ಣ : ರಂಗಾ... ರಂಗಾ...

ಚೆನ್ನಿ : ನೋಡ್ಡ್ಯಾ ಮಗನ್ಗ ತಕ್ಕ ಅವ್ವೆ ಅಂದ್ರ ಅವ್ರೇ ಸರಿ... ಇನ್ನೊಂದ್ಸಾರಿ ಕೂಗಿ ಮಾವೈ...

ಬಜ್ಜಣ್ಣ : ಇದ್ಯಾನ್ಲ ರಂಗ ಕ್ವೋಣಾಲ್ಸೇರ್ಕಂಡ್ಯಾನ್ಮಾಡ್ತಾಯಿ?

ರಂಗ : ಒಳ್ಳೆ ಗ್ವೋಳಾಯ್ತಪ್ಪ... ಬತ್ತೀನಿ ತಾಳು.

ಬಜ್ಜಣ್ಣ : ಯಾನ್ಲಾ ನಿನ್ನ ಕೂಗಿ ಗಂಟ್ಲೆಲ್ಲಾ ಆರೋಯ್ತು ಕಣ್ಲಾ.

ರಂಗ : ಅದ್ಯಾನಪ್ಪ...?

ಬಜ್ಜಣ್ಣ : ಈವತ್ತು ಕರಿಸ್ಪುರಕ್ಕೋಗಿ ಜೋಗಪ್ಪ ಕೊಡ್ಬೇಕಲ್ಲಾ ಒಂದು ಖಂಡುಗ್ನೆಗ್ಗರಾಗಿ ಅದನ್ನೊಸೂಲ್ಮಾಡ್ಕಂಬಾ ಕೊಡಕ್ಕಿಲ್ಲ ಗಿಡಕ್ಕಿಲ್ಲ ಅಂದ್ರೆ ಮನ ಬುಟ್ಟು ಮೂರೆಜ್ಜ ಹಾಕಕ್ಕಿಲ್ಲ ಅನ್ಬುಟ್ಟು ಪಟ್ಟಾಗ ಕೂತು ವಸೂಲಿ ಮಾಡ್ಕಂಬಾ... ಬಂಡಿ ಕಟ್ಕಂಡೋಗು.

ರಂಗ : ನೀಯಾಳಾದು ಸರಿಕಪ್ಪೈ... ವೊಳ್ಳಿ ಕೂಸುಟ್ಟಕ್ಕೂ ಮುಂಚೆ ಕುಲಾವಿ ವೊಲಿಸ್ದಾಗ... ವೊಯ್ತೀನಿ ವೋಗು...

ತಿಮ್ಮ : ಹೊನ್ನಿ... ಒಂದು ಸಟೀಗ ಬತ್ತೀಯಾ?

ಹೊನ್ನಿ : ಸೇಟಿಗ್ಯಾಕ ಪೂರಾ ಬತ್ತೀನಿ ತಾಳು.

ತಿಮ್ಮ : ಇದ್ಯಾನಾ ನಿನ್ನ ಅವತಾರ?

ಹೊನ್ನಿ : ಅಂಗಳ ತಾರಿಸ್ತಿದ್ದಿ. ನೀ ಕೂಕ್ಕಂಡ್ಯಲ್ಲಾ ಅಂಗೇ ತೊಪ್ಪದ ಕೈಲೇ ಬಂದ್ಬುಟ್ಟಿ. ಆದ್ಯಾನ ಕಮ್ಮ್ಕ್ನ್ಯಾಳು?

ತಿಮ್ಮ : ಇಟ್ಟೊತ್ತುಂಡ್ಯಾಕ ನೀನೇ ಬರ್ಬಾರ್ದು? ಒಂದು ಸುಟೀಗ ಮನಲಿ ಮಾತಾಡಮೂ ಅಂದ್ರೂ ಅಲ್ಲಿಗೆ ಬರಾಕಿಲ್ಲ. ನಮ್ಮಪ್ಪನ್ಗದ್ಯಾನು ಬುದ್ಯೋ ಯಾನೋ ನಾಕಾಣ್ಣಪ್ಪ.

ಹೊನ್ನಿ : ನಾ ವೊಯ್ತೀನಿ ಅಂದ್ರ ಸಾಕು, ಮಾವಯ್ಯ, ಬ್ಯಾಡಕ ಕೂಸು ಚೆನ್ನಿಯೇ ವೊಯ್ತಳ ಸುಮ್ಕಿರು ಅಂತಾರಲ್ಲ. ನಾವೋದ್ರ ಅಪ್ರಪ್ಪನ್ಗ ಗಂಟ್ಸಾಸ ವೋಗದು?

ತಿಮ್ಮ : ಈವತ್ತು ವಾಗ್ಲೇಬ್ಯಾಕು ಅಂತ ಬನ್ಬುಡು. ನೋಡಮ ಅದ್ಯಾನಾದ್ದು.

ಹೊನ್ನಿ : ನಾ ಅಂದ್ರ ನಮ್ಮಪ್ಪ ಒಪ್ಪಬೇಕಲ್ಲ.

ತಿಮ್ಮ : ಅವಂಗೇ ಆಡ್ಲಿ ನೋಡ್ಕಳೂವ.. ನಾನು ಸರ್ಯಾಕ್ಬುದ್ಧಿ ಕಲಸ್ದೆವೋದ್ರೆ ನನ್ನ ಕುರೋ ಕುರೋ ಅನ್ನು.

ಹೊನ್ನಿ : ಬರೀ ಸವ್ಡನೇ ವಡೀಬ್ಯಾಡ ನಡಿ ನಡಿ.

ಬಜ್ಜಣ್ಣ : ಯಾಕ್ಲಾ ತಿಮ್ಮ ಇನ್ನೂ ಇಲ್ಲೇ ಇದ್ದಾಯಿ. ನಾಯಾಳದ್ದು ಕಿಮಿಮ್ಯಾಕ್ ಬೀಳಕ್ಕಿಲ್ವ. ವೊಲಕ್ಕೋಗಕ್ಕೊತ್ತಾಗ್ಲಿಲ್ವಾ? ಅದ್ಯಾನ ಕ್ಯಾಮಗೋದೇ ಒಳ್ಗೆ?

ತಿಮ್ಮ : ಮನ್ಲಿ ನಗನಗ್ತ ಇದ್ರ ನಿಂಗ್ಯಾಕ ಕಣ್ಣಕೆಂಪಾದ್ದೋ ಯಾನೋ ನಾ ಕಾಣ್ನಪ್ಪ. ವೊಯ್ತೀನಿ ವೋಗು.

ಬಜ್ಜಣ್ಣ : ನಾ ಯಾಳಾಮು ಕೆಟ್ಟದ್ಕಲ್ಲ ಕಣ್ಲಾ. ನಮ್ಮೊಳ್ಳೇದ್ಕೆ... ನಿಮ್ಮುದ್ದಾರಕ್ಕೆ. ಈಗ್ಗೋತ್ತಾಗಕಿಲ್ಲ ನಿಮ್ಕೆಲ್ಲಾ ಮುಂದಕ್ಕ ಗೊತ್ತಾಯ್ತದ.

ತಿಮ್ಮ : ಯಾಸಟ್ಗೋ ನೀವೋಗಪ್ಪ ಸುಮ್ಮ್ಯಾನ್ಯಾನೋ ಅಂತಿರ್ಬ್ಯಾಡ.

ಬಜ್ಜಣ್ಣ : ರಂಗನ್ನೂ ಕೂಬುಡ್ಲಾ... ಲೋ... ರಂಗಾ...

ರಂಗ : ಬಂದೆ ಕಪ್ಪೋ...

ಬಜ್ಜಣ್ಣ : ಇದ್ಯಾಕ್ಲಾ... ವೊತ್ತೆತ್ತಗಾದ್ದು ನಡ್ಲಾ?

ರಂಗ : ವೊಂಟಿಕಪ್ಪೋವೊಂಟೇ... ಬಾಣ್ಣ... ವೋಗಮು.

* * *

(ಗಾಡಿಯನ್ನು ಕಟ್ಟಿ "ಹೊಯ್... ಹೊಯ್... ಚುಚ್... ಎಂದು ಹೊರಡುವನು)

* * *

(ಕೊಳಲಿನ ದನಿ)

ರಂಗ : ಅಪ್ಪೈ...

ಬಜ್ಜಣ್ಣ : ಯಾನ್ಲಾ?

ರಂಗ : ಅದೇ... ಆ... ಅದೇ...

ಬಜ್ಜಣ್ಣ : ಇದ್ಯಾನ್ಲ ಇಂಗ್ ಮಾತಾಡ್ದಯಿ ಬಾಯ್ಬುಟ್ಟೇಳ್ಲಾ.

ರಂಗ : ಚೆನ್ನೀಗ ಎಂಟ್ ತಿಂಗ್ಳು ತುಂಬೋಯ್ತು.

ಬಜ್ಜಣ್ಣ : ಅದ್ಕಿಗ್ಯಾನಾಗ್ಬೇಕು?

ರಂಗ : ನೀರ್ಮಿಯದು ಇಲ್ಲೋ ಅಲ್ಲ ಅವ್ರಪ್ಪನ್ಮನ್ಯಾಗೋ ಅಂತ.

ಬಜ್ಜಣ್ಣ : ನಿನ್ನೆಡ್ತಿ ಏನಂದಳು?

ರಂಗ : ಅವನೀ ಯಾಳ್ದಾಗ ಅಂತಾಳ.

ಬಜ್ಜಣ್ಣ : ಇಲ್ಲಿ ಮಾಡಕ್ಯಾರಿದ್ದರು? ಅವ್ರಪ್ಪನ್ಮನ್ಗೇ ವಾಗಕ್ಕೇಳು. ಅದೋ ಅವ್ಳೇ ಬತ್ತಾ ಅವ್ಳಲ್ಲ ಅವಳ್ಗೇ ಒಂದು ಮಾತ ಕ್ಯಾಳಮು ಬಾ ಕೂಸೈ ಬಾ... ನಿಂಗ ನೂರ್ವರ್ಸ ಆಯಿಸು.

ಚೆನ್ನಿ : ಯಾನ ಮಾವೈ...

ಬಜ್ಜಣ್ಣ : ಅದೇಕವ್ವಾ... ನೀನು ನೀರ್ಮಿಯದ್ವಲ್ಲೀ ಅನ್ನ ಇಸ್ಯನೇ ಮಾತಾಡ್ತಿದ್ಮು.

ಚೆನ್ನಿ : ನೀವ್ಯಂಗ್ಯಾಳಿರಿ ಅಂಗೇ ಕಾ ಮಾವೈ.

ಬಜ್ಜಣ್ಣ : ನೀವ್ಯಾಳ್ಟಾಗೆ ಅಂದ್ರ್ಯೇನವ್ವ ಅದು ನಿನ್ನಷ್ಟವಲ್ವಾ?

ಚೆನ್ನಿ : ನಾನ್ಯಾವಾಗ್ಲಾ ನಿಮ್ಮಾತ ಎತ್ತಾಗಿದ್ದಾನ ಮಾವೈ...

ಬಜ್ಜಣ್ಣ : ಅದು ನಂಗೊತ್ತಿಲ್ವಾ ಕೂಸೈ ನೀನು ನಮ್ಮ ಮಸ್ಗ ಗೌರಮ್ಮ ಇದ್ದಾಗ ಕವ್ವಾ. ಮಾವಯ್ಯ ಯಾಕೀಗಂದರೂ ಅಂತ ತಿಳ್ಕಿಬ್ಯಾಡ ಒಂದು ಮಾತ್ಕೇಳ್ತೀನಿ. ನಿಮ್ಮಪ್ಪನ ಮನ್ಗೇ ಮೋಗು, ನಿಂಗ್ಯಾನ್ಸ ಕರ್‍ಯ ಬ್ಯಾಕೋ ಅದ್ನೆಲ್ಲಾ ಮಾಡ್ತೀನಿ. ನೀನು ಒಂಭತ್ತು ತಿಂಗಳು ಗಂಟ ಬಾಣಂತನ ಚೆನ್ನಾಗಿ ಮಾಡಸ್ಕಂಬಾವ್ವಾ... ಆರೋಗ್ಯದ್ಕಡ ಗಮ್ನ ಇರ್ಲಿ.

ರಂಗ : ಒಂದು ವರ್ಸ... ಇದು ಎರಡ್ನೇದಲ್ವಪ್ಪಾ...

ಬಜ್ಜಣ್ಣ : ಅಲ್ದೇವೋದ್ರ ಬಲು ಕಷ್ಟಕಾ ಸುಮ್ಕಿರ್ಲಾ... ಇಲ್ಲಿರಾದು ಅಲ್ಲೇ ಇರ್ಲಿ ಬುಡು. ಬ್ಯಾಕಾದ ಸಲ್ಕರ್ನ ಮಾಡಿದ್ರಾಯ್ತು. ನಾಯಾಳದು ನಿಮ್ಮ ಸುಖಕ್ಕೆ... ಮಾವಯ್ಯ ಮಿಗ್ಸಕ್ಕ ಮಾಡ್ತನ ಅಂತ ತಿಳ್ಕಾಬ್ಯಾಡಕವ್ವಾ ನಿಂಗೆ ಒಳ್ಳದಾಯ್ತದಕವ್ವಾ.. ಇನ್ಯಾನ್ಲಾ ನಿನ್ನ ಯೋಚ್ನೆ ಮುಗಿತ್ತಲ್ಲ.

ರಂಗ : ಆಗ್ಲಿಕಪ್ಪ...

* * *

ಹೊನ್ನಿ : ಯಾನ್ ಚೆನ್ನಿ ಬಲು ಕುಸ್ಯಾಗಿದ್ದಯಲ್ಲಾ.

ಚೆನ್ನಿ : ಏನೂ ಇಲ್ಲಕಣಕ್ಕೆ... ನನ್ನ ನೀರ್ಮಿಯ ಇಚಾರ.

ಹೊನ್ನಿ : ಯಾನಂತೆ?

ಚೆನ್ನಿ : ನಮ್ಮಪ್ಪನ ಮನ್ಗೇ ವಾಗಕ್ಕೇಳವ್ರೇ?

ಹೊನ್ನಿ : ಆಗಾರ ಪುನಾ ಬರದು?

ಚೆನ್ನಿ : ಇನ್ನೊಂದ್ಸರ್ಲದ ಇಂತಾ ದಿನಕ್ಬನ್ಬುಡ್ತೀನಿ.

ಹೊನ್ನಿ : ಸರಿ ಇನ್ಯಾನ ಮನ ಕಾಲ್ಸಾರೆಲ್ಲಾ ನನ್ನ ತಲೆ ಮ್ಯಾಗ ಬಿಡದ್ಬುಟ್ಟು ಪೊಂಟೋಯ್ತೀಯ ನೀನು. ಇನು ಸಾಯ್ಬೇಕಾದವ್ಳು ನಾನು ಎಲ್ಲಾ ನನ್ನ ಕರ್ಮ. ವ್ಯಾವ್ರು ನಮ್ಮಣಾಲಿ ಸುಕಪಡವ್ನೇ ಬರಿಸಿಲ್ವೊ ಯಾನೋ.

ಚೆನ್ನಿ : ನಿಂಗೆ ನಾ ಯಿದ್ರೊಂದ್ಯಕಷ್ಟ, ಪಾದ್ರೊಂದ್ಯಕಷ್ಟ... ನಾನೇನ್ಮಾಡ್ಲಿಯಾಳಕ್ಕೆ.

ಹೊನ್ನಿ : ವಸ್ನು ರೋಸೋಯ್ತು. ಅದೆಂದ್ಗ ಸರೋಯ್ತಾದೇ ನಮ್ಮ ಜೀವ್ನ ಗೊತ್ತಿಲ್ಲ. ಒಬ್ಬರ್ಗಾದ್ರೂ ಮಾಡ್ಕೋಮು ಇಬ್ಬರ್ಗಾದ್ರೂ ಮಾಡ್ಕೋಮು. ಆಳ್ಗಿಳ್ಗಿಟ್ಕತ್ತು ಆಳಾಗವ ನನ್ನಿನಿಂದಾಗಕ್ಕಿಲ್ಲ.

ಚೆನ್ನಿ : ಆಗಾದ್ರ ನೀ ವಸಿ ದಿನಾ ನಿಮ್ಮಪ್ಪನ್ಮನ್ಗೋಗಿ ಸುಧಾರ್ಸ್ಕಂಡು ಬಾ...

ಹೊನ್ನಿ : ನಾನೊಂದೇ ಪೊಂದಾಗಿ ಸಾಯಾಗ ವಾಗ್ಬೇಕ ಕಣವ್ವಾ...

ಚೆನ್ನಿ : ಅದ್ಯಾಕಕ್ಕ ಯಾವಾಗ್ಲೂ ಈ ಅಮಂಗಳಾನೇ ಆಡ್ದಯಿ.

ಹೊನ್ನಿ : ಸುಕ ಪಡ್ಬೇಕಾದ್ರೂ ಪುಣ್ಯ ಮಾಡಿರ್ಬೇಕು ಕವ್ವಾ ಚೆನ್ನಿ... ನಾನಿಂದ್ನ ಜನ್ಮದಾಗೆ ಯಾವ ಮುತ್ತಗ್ದೂವ ಪೂಜಿಸಿದ್ನೋ ಯಾನೋ ಅದ್ಕೆ ಈ ಕರ್ಮ.

* * *

ಬಜ್ಜಣ್ಣ : ಇದ್ಯಾನ್ಲ ರಂಗ, ತಿಮ್ಮ ಈ ಪಾಟಿ ನರಳ್ತಾ ಅವ್ನಲ್ಲ.

ರಂಗ : ಯಾನ್ಯಾಳಪ್ಪಾ?

ಬಜ್ಜಣ್ಣ : ಅದ್ಯಾಕ್ಲ ತಿಮ್ಮ...?

ತಿಮ್ಮ : ಸಾಯಿಸ್ಲಿಲ್ಲ ಇನ್ನೂ ಉಳಿಸವ್ನ ಅಷ್ಟೇ... ನೋಡದ್ರ ಗೊತ್ತಾಗಕಿಲ್ಲ...

ಬಜ್ಜಣ್ಣ : ಇದ್ಯಾಕ್ಲ ಈಪಾಟಿ ಬಾಸುಂಡ್ಗಳು ರಂಗ ಬಾಯಿಲ್ವೇನ್ಲ ಮಾತಾಡಕ್ಕ?

ತಿಮ್ಮ : ಅದ್ಯಾಕ ಯಾಳ್ತಾ.

ರಂಗ : ನಾನೇ ಕಪ್ಪಾ ಚೆನ್ನಾಕೊಡ್ತು ಬುಟ್ಟಿಕಪ್ಪಾ

ಬಜ್ಜಣ್ಣ : ನಿಂಗ್ಯಾನ್ಲ ಬಂದಿತ್ತು ತೇವ್ಲು.

ರಂಗ : ಅವ್ನು... ಅವ್ನು...

ಬಜ್ಜಣ್ಣ : ಗಂಟ್ಸಾಲ್ಡ್ಕಂಡಿದ್ದನ್ಲಾ... ಕವಂಕ್ಗೇಳು.

ತಿಮ್ಮಣ್ಣ : ಅವ್ಯಾನ ಯಾಳದು ನಾನೇ ಯಾಳ್ತೀನಿ ಕ್ಯಾಳು... ಮೆದ್ಗ ಬೆಂಕಿಯಿಕ್ಬುಟ್ಟೋಯ್ತಿದ್ದಿ ಸರಿ ಇಡ್ಕಂಡು ಅಂತ ವೊಡ್ದ... ಅಷ್ಟೇ ಹ್ಲೂಂ...

ಬಜ್ಜಣ್ಣ : ಅವ್ನೂ ಮಾಡಿದ್ದೂ ಸರಿ. ಈಗೂ ಉಂಟೇನ್ಲ ತಿಮ್ಮ ಅಲ್ಲ ನಮ್ಮ ಮೆದ್ಗ ನಾವೇ ಬೆಂಕಿ ಇಡದುಂಟೇನ್ಲ? ತಮಾಸ್ಗೆ ಅವ್ವ ಇಸ ಕೊಟ್ಟಾಂಗಾಯ್ತು.

ಕೆಂಪಣ್ಣ : ಇದ್ಯಾನ್ಯೆಳಿ.

ಬಜ್ಜಣ್ಣ : ಬಾ ಕೆಂಪಣ್ಣ ನಿನ್ನ ಸಿನೇಯಿತನ ಇಸ್ಯ ವೊಸಿ ಕ್ಯಾಳು ಬಾಯಿಂಲ್ಲಿ.

ಕೆಂಪಣ್ಣ : ಯಾನಾಯ್ತು ಅಜ್ಜ?

ಬಜ್ಜಣ್ಣ : ಆಗದ್ಯೇನು ನಮ್ಮರಾಗಿ ಉಲ್ಲ ಮೆದ್ಗ ಬೆಂಕಿ ಅಕ್ಬುಟ್ಟ. ರಂಗಸ್ತಪ ಏಟ್ಟೆನ್ಕಂಡು ನರಳ್ತಾ ಅವ್ನಲ್ಲಾ ಕಾಣ್ದಪ್ಪೆ.

ತಿಮ್ಮ : ಸುಪ್ಕಿರಪ್ಪಾ, ಬುದ್ಧಿ ಯಾಳ್ಬೇಕಾದ್ರೂ ಒಂದು ಗೊತ್ತು ಮಿತಿ ಅದ. ನಂಗೂ ಮೊಸ್ಬಂದದ.

ಬಜ್ಜಣ್ಣ : ಮೂರ್ಕ್ರು ಆಗವ.

ತಿಮ್ಮ : ನಾಕ್ಯಾಳ್ನಾರಿ ನಿಮ್ಮ ಮಾತ್ಗಳ್ನ.

ಬಜ್ಜಣ್ಣ : ಕ್ಯಾಳ್ದೀವೋದ್ರ ವೊಂದಟೋಗ್ಲ ಮನಯಿಂದಾಚ್ಗ.

ತಿಮ್ಮ : ನಂಗೂ ಅದೇ ಬ್ಯಾಕಾದ್ದು.

ಬಜ್ಜಣ್ಣ : ಸರಿ ವೊಂಟೋಗ್ಲ.

ತಿಮ್ಮ : ಕೊಡ್ಬೇಕಾದ್ದ ಕೊಟ್ಬುಡು. ಈವತ್ತೇ ಇತ್ಯರ್ಥವಾಗ್ಲಿ ಕೆಂಪಣ್ಣ. ಅಂಗೇ ಮಾತಾಡ್ತಾ ಇರಿ ವಸಿ ಬತ್ತೀನಿ. ಹೊನ್ನೀ... ಹೊನ್ನಿ...

ಹೊನ್ನಿ : ಬಂದಿ ತಾಳು.

ತಿಮ್ಮ : ಒಂದ್ಸಟಗ ಬ್ಯಾಲ್ದಣ್ಣನ ಪಾಸ್ಕನಾರೂ ಮಾಡು, ಕೆಂಪ ಬಂದವ್ನಾ.

ಹೊನ್ನಿ : ಬ್ಯಾಲ್ದಣ್ಣಿಲ್ಲ.

ತಿಮ್ಮ : ವಾಗ್ಲಿ ವಸಿ ಮಜ್ಗನಾರೂ ಕೊಡಿ.

ಹೊನ್ನಿ : ತತ್ತೀನಿ...

ತಿಮ್ಮ : ಹೊನ್ನಿ... ಏಟೂತ್ತು ಬರದು? (ಮಕ್ಕಳ ಶಬ್ದ) ಅದ್ಯಾನಾರಿ ಬಡ್ಕಂಡವೋ, ಗಂಟ್ಲರ್ದೋದ್ದು ಮಲಕಳಿ ಸುಮ್ಗೆ.

ಹೊನ್ನಿ : ಯಾನ್ಮಾಡ್ಲ ನಿಮ್ಮಸಾಸುರ ಬಾಣಾಸುರ ಮಕ್ಕಳ ಸಂತೈಸಿ ಬರ್ಬ್ಯಾಕೋ ಬ್ಯಾಡ್ವೋ? ವಾಗ್ಲಿ ತಕ್ಕಂಡ್ಕುಡಿ...

ತಿಮ್ಮ : ಈ ಬಿಸಲ್ಲೂಗ್ಗ ಅದ್ಕೂ ಮಜ್ಗ ಸಿಕ್ಕುದ್ದು ಅಮುರ್ತ ಸಿಕ್ದಾಗಾಯ್ತು. ಇದ್ಯಾಕ ನಿಂತ್ಕಂಡೇ ಕುತ್ಕೋ ವಸಿ ಕುತ್ಕೋ...

ಹೊನ್ನಿ : ಕೂರ್ಮತು ಮಾರಿ ಹಬ್ಬ ಮಾಡಕ್ಕೆಲ್ಲಯ್ತೆ ಪುರಸತ್ತು ವೊಯ್ತಿನಿ ಕೆಲ್ಸ ಮನ್ತುಂಬ ಅದ ಅಡ್ಗಿ ಮಾಡಿ ಇನ್ನೂ ಗದ್ಗ ಕುಕ್ಕರಿಸ್ಟ್ಯಾಕೂ ನನ್ಕೈನಾಗಾಗಕಿಲ್ಲ.

ಬಜ್ಜಣ್ಣ : ಯಾನವ್ವ ನಿನ್ನ ಗಂಡ್ನ ಸಮಾಸಾರ ಕ್ಯಾಳ್ದವ್ವಾ.

ಹೊನ್ನಿ : ನಮ್ಮ್ಯಾಕೀಪಾಟ ಸತಾಯಿಸ್ದರಿ ಮಾವ್ಯೆ.

ಬಜ್ಜಣ್ಣ : ನಿಮ್ಮನ್ನು ಬ್ಯಾರ ಕಳೀಸಕ್ಕ ನನ್ನಕೈನಾಗಾಗಕ್ಕಿಲ್ಲವ್ವಾ. ಯಾಕ ಅಂದ್ರ ನಮ್ಮ ಮನೇವ ಸಾಯ ಆಗ ಇಬ್ರೂ ಸುಕ್ವಾಗಿಲ್ಲಿ ಒಂದ್ಯಕಡ್ಯಂಡೋಗ್ಲಿ, ಅಣ್ಣ-ತಮ್ಮ ಚೆನ್ನಾಗಿರ್ಲಿ ಅಂತ್ಯಾಳವ್ವ. ಅದ್ಕೇ ಕಣವ್ವಾ ನಾನು ಆಟ್ದನಿಂದ್ಲೂ ತಡೀತಿರದು. ನೀವು ಬ್ಯಾರಾದ್ರೂ ಕಷ್ಟಕ್ ಸಿಕ್ಕಾಕತೀರಿ ಅಂತ ಯೋಸ್ನೇಕವ್ವಾ. ಇನ್ನೂ ನಿಂಗ ಸಂಸಾರದ ಕಷ್ಟ ಗೊತ್ತಿಲ್ಲಕವ್ವಾ.

ಹೊನ್ನಿ : ನೀವ್ಯಾಳದೆಲ್ಲಾ ವೊಟ್ಗಿಟ್ಟಿಕ್ನಾರಿ ಗಿಣೆಯಾಗಿ ಸಾಕ್ತೀಮಿ ಅಂದಾಗ ನಾವು ಬ್ಯಾರಾಗ್ಲೇ ಬ್ಯಾಕು ಕಣ್ ಮಾವ.

ಬಜ್ಜಣ್ಣ : ದುಡುಕ್ಬ್ಯಾಡ ಚನ್ನಾಗಿ ಯೋಸ್ನೆ ಮಾಡವ್ವ. ಬ್ಯಾರಾದ್ರ ಸುಕಸಿಕ್ಕುತ್ತ ಅಂತ ತಿಳ್ಕಬ್ಯಾಡ... ಅದು ಭ್ರಾಂತು.... ಚೆನ್ನಾಗಿ ಯೋಸ್ನೆ ಮಾಡು...

ಹೊನ್ನಿ : ನಾವಿಬ್ರೂ ಯೊಚ್ನೆ ಮಾಡಿನೆ ನಿಬಂದ್ನೇಗ್ಬಂದೀಮಿ.

ಬಜ್ಜಣ್ಣ : ನೀವು ಮುಂದ್ವರ್‍ಯಾದು ಗೊತ್ತಾಯ್ತದ ಕೊಟ್ಬುಡ್ತೀನಿ ಆಮ್ಯಾಗ ಸಾಯುವ್ರಂತೆ ನಾಳೆಯಿಂದ್ಲೇ ವೋಗಿ ವೊಸ ಮನಲಿದ್ಬುಡಿ. ಎರಡೇಕ್ರೆವಲ ನಿನ್ಬಾಗಕದ, ಅದ ಈ ಸಾರಿಯಿಂದ್ಲೆ ಮಾಡಸ್ಕಂಡೋಗು. ಉಣ್ಣ ಮರದ ತಪ ಇರ ಎಲ್ಡೇಕ್ರೆಲೇ ನಾವು ಮಾಡ್ಕಂಡೋಯ್ತೀವಿ. ಅಳ ಅಟ್ಟಿಯೇ ನಮಗ ಸಾಕು ಈಗ ಸಂತೋಷವಾಯ್ತಾ? ಎನ್ಲಾ ರಂಗ.

ರಂಗ : ಎಲ್ಲಾ ನೀ ಯಾಳ್ದಾಗೆ ಕಪ್ಪೈ.

ಹೊನ್ನಿ : ಸರಿ ಕಾ ಮಾವ್ಯೆ... ನಂಗ ಚಿನ್ನ...

ಬಜ್ಜಣ್ಣ : ಅಡ್ಕಿ, ಕಾಸಿನ ಸರ ನೀ ಮಡಿಕೋ, ದಾಬು, ಚೈನು ಚೆನ್ನಿಗಾಗ್ಲಿ ಸಾವರ ರೂಪ್ಯೆಟ್ಟವ್ನಿ ನೀ ಅಯ್ನೂರ್‍ಮಡಿಕಂಡು ನಿನ್ನ ವಾರ್‍ಗಿತ್ತಿಗ್ಯೆನೂರು ಕೊಟ್ಬುಡು. ನಂಗ್ಯಾನೂ ಬ್ಯಾಡ. ನನ್ನಮಗತನವ್ಲೇ ಇದ್ದು ಬುಂಡ ಬುಟ್ಬುಡ್ತೀನಿ. ನೀವು ಸುಖ್ವಾಗಿದ್ರಷ್ಟೇ ಸಾಕು.

* * *

ಹೊನ್ನಿ : ಯೆಂಕ್ಯಾ... ಎಲ್ಲಾನು ಕಸವದ್ಕಳ್ಳಾ...ಏ ಈಕ... ವಸಿ ನೀರ ಸೈಕಂಬಾರ್‍ಲಾ... ಸುಬ್ಬಿ... ವಸಿ ವತ್ತಿಂಡ್ಯಬಾ... ನೀವು ವೋಗಿ ವಸಿ ಹಾಲ್ಕರ್‍ಕಂಬನ್ನಿ... ಹಾಲುಕ್ಕುಸ್ಟ್ಯಾಕು.

ತಿಮ್ಮ : ಆಗ್ಲಿ...

ಹೊನ್ನಿ : ಅಯ್ಯಳೆಲ್ಲಾ ರೆಡಿ ಮಾಡ್ಬುಟ್ಟೋ... ಇನ್ನಾನು ಹಾಲುಕ್ಕುಟ್ಮೇಗ ನಿಮ್ಗೂಟ.

ತಿಮ್ಮ : ನಿಧಾನಕ್ಕ ಮಾಡು ಹ್ಯಾಗಯ್ತೆ ನೋಡ್ವಾ?

ಹೊನ್ನಿ : ದ್ಯಾವ್ರು ದೊಡ್ಡವು... ಎಲ್ಲಾ ವೊಳ್ಳೇದಾಮ್ಡ್ಡ.

ತಿಮ್ಮ : ಆವತ್ನಿದಿನ...

ಹೊನ್ನಿ : ಯಾವತ್ನಿ ದಿನ?

ತಿಮ್ಮ : ನನ್ಮದ್ವೆ ಆಗಕ್ಕೂ ಮೊದ್ಲು ಅಂದಿದ್ನಲ್ಲ. ನನ್ನ ರಾಣಿ ಕಂಡಾಗ್ನೋಡ್ಕತೀನಿ ಅಂತ ಅದು ಈ ವತ್ಗ ಸಾರ್ಥಕವಾಯ್ತು ಅಲ್ವಾ.

ಹೊನ್ನಿ : ನೀವು ಮನ್ಸ್ ಮಾಡಿದ್ರ ಅಂಗೇ ಮಾಡ್ತಾರಾ ಅನ್ನದು ಗೊತ್ತಿತ್ತು ಅದ್ಕೆಲ್ವಾ ನಿಮ್ನೊಪ್ಕಂಡು ಮದ್ವೆ ಆದ್ದು.

ತಿಮ್ಮ : ಹಾಲ್ಕಸ್ಬುಟ್ಟು ವಲದ್ದ ತಪ್ಕಾ ಉಳಕ್ಕೋಗ್‌ಬ್ಯಾಕು.

ಹೊನ್ನಿ : ಯಾನಾಗ್ಲೀ ಸುರು ಅಚ್ಕಂಡ್ರಿ ಕೆಲ್ಸಕ್ಕೆ.

ತಿಮ್ಮ : ಎಷ್ಟೇ ಆಗ್ಲಿ ನನ್ನ ಭಾರಕ್ಕ್ ಬಿದ್ಬುಡ್ತು ನಾನು ನೀನು ಮಾಡ್ದೇವೋದ್ರ ಇನ್ಯಾರ ಮಾಡ್ತಾರ ಯಾಳು.

ಹೊನ್ನಿ : ಅದು ನಿಜ ಅನ್ನು... ನಾನು ಸುಮ್ಕೇ ಕೂತ್ಕಳಲ್ಲ ಕಳ ಕೀಳದು ಕುಯ್ಯದ ಕಟ್ಟದು ಎಲ್ಲಾಕ್ಕೂ ಸಾಯ ಮಾಡ್ತೀನಿ ನನ್ನ ಮಕ್ಳೂ ಅಷ್ಟೇ ವೈನಾಗಿ ಕೆಲ್ಸ ಮಾಡ್ತವೆ.

ತಿಮ್ಮ : ಯಾನೋ ದ್ಯಾವ್ರು ಕಣ್ಬುಟ್ಟ... ಬಾ... ಇನ್ನೊಸಿ ಅತ್ರಬಾ...

ಹೊನ್ನಿ : ಯಾಕ?

ತಿಮ್ಮ : ಇಷ್ಟೆಲ್ಲಾ ನಾ ಮಾಡ್ದಿ ನಂಗ್ಯಾನೂ ಬೋಮಾನ ಕೊಡಕ್ಕಿಲ್ವಾ?

ಹೊನ್ನಿ : ಯಾನ್ ಕೊಡ್ಬೇಕು?

ತಿಮ್ಮ : ವಸಿ ಅತ್ರಕ್ಬಾ... ಯಾಳ್ತೀನಿ.

ಹೊನ್ನಿ... ನೀವ್ಕೇಳಾದು ನಂಗೂ ಗೊತ್ತು...

ತಿಮ್ಮ : ಸರಿ ಕೊಡು ಮತ್ತ.

ಹೊನ್ನಿ : ನಿನ್ಗೊ ನಾಚ್ಕೆ ಆಗಕಿಲ್ವಾ... ಇಷ್ಟು ಮಕ್ಕಳಾಯ್ತು ಇನ್ನೂ ಸುಮಾನ ಬಿಡ್ನೇ ಇಲ್ಲ.

ತಿಮ್ಮ : ಯಾಕಾ ಬ್ಯಾಸ್ರಾಗೋಯ್ತಾ?

ಹೊನ್ನಿ : ಥೂ... ವಾಗಪ್ಪ... ನೀನು ಬಲು ಪ್ರಚಂಡಿ.

* * *

ತಿಮ್ಮ : ಕೆಂಪಣ್ಣ... ಕೆಂಪಣ್ಣಾ...

ಕೆಂಪಣ್ಣ : ಓಹೋ... ತಿಮ್ಮಣ್ಣಾ... ಬಾ... ಏನಪ್ಪ ಸಮಾಸಾರ? ಯಾನಯ್ಯ ಈಗೀಗ ಅರ್ರೂಪವಾಗ್ಬುಟ್ಟೆ? ನಮ್ಮಟ್ಗೆ ಬರದೇ ಕಮ್ಮ್ಯಾಗೋಯ್ತು.

ತಿಮ್ಮ : ಯಾನ್ಮಾಡ್ಲಿ ಸಂಸಾರದ ತಾಪತ್ರಯ.

ಕೆಂಪಣ್ಣ : ಯಾನಯ್ಯ ಇನ್ನೂ ಬ್ಯಾರಾಗಿ ಎರಡು ವರ್ಷ ಆಗ್ನಿಲ್ಲ. ಅಗ್ಲೇ..

ತಿಮ್ಮ : ಅದ್ಯಾನ್ಸಂತು ಭ್ಯಾಗ್ಯ? ಹೊಸ ಮನ ಗ್ವೋಡ ನೋಡದ್ರ ವಟ್ಟುಂಬ್ಕಂಡದ?

ಕೆಂಪಣ್ಣ : ಅದಿರ್ಲಿ ಈಗೇನ್ಬಂದೆ?

ತಿಮ್ಮ : ಯೇನೋ ಒಂದು ಇಸಯ ಇತ್ತು ಅಂಗೇ ಮಾತಾಡ್ಕಂಡೋಗಮ ಅಂತ ಬಂದಿವ್ನಿ.

ಕೆಂಪಣ್ಣ : ಅದ್ಯಾನಯ್ಯ?

ತಿಮ್ಮ : ಒಂದು ಖಂಡ್ಗ ರಾಗಿ ಇದ್ರ ಕೊಟ್ಬಾಯ... ಮುಂದಿನ ಪಸಲ್ನಾಗ ಖಂಡಗ್ಕೆಗ್ರ ಅಳದ್ಬುಡ್ತೀನಿ, ಸುಮ್ನೇ ಕೊಡ್ಬ್ಯಾಡಪ್ಪಾ, ಬಡ್ಡಿ ತಕ್ಕೋ...

ಕೆಂಪಣ್ಣ : ತಿಮಣ್ಣ ಇದೇನಾ ನೀ ಯಾಳ್ತಾ ಇರಾದು? ಈ ಸಾರಿ ನಂಗೆ ಕಮ್ಮಿ ಅಲ್ವಾ ಆದ್ದು ಪಸ್ಲು.

ತಿಮ್ಮ : ಯಾನ್ಮಾಡ್ಲಿ ಬ್ಯಾರಾಗ್ದಿದ್ರೆ ಈ ಗ್ವೋಳೇ ಬತ್ತೀರ್ನಿಲ್ಲ... ಯಾನೋ ತಾಪತ್ರಯ. ಇದೊಂದ ಸಾರಿ ದೊಡ್ಡ ಮನಸ್ಸು ಮಾಡ್ಬುಡಪ್ಪ. ನೀ ಕೊಟ್ರುಂಟು ಇಲ್ದೇವಾದ್ರಿಲ್ಲ. ಇಲ್ದೇವಾದ್ರ ನನ್ನೆಂಡ್ತಿ ಮಕ್ಳ ಕಸ್ಟ ನೋಡಕ್ಕಾಗಕ್ಕಿಲ್ಲ.

ಕೆಂಪಣ್ಣ : ನಿಂಗೆಷ್ಟು ಸಾರಿ ದೊಡ್ಡ ಮನ್ಸ ಮಾಡದು.

ತಿಮ್ಮ : ಆಪ್ತನಾದ ನೀನೇ ಇಂಗನ್ಬುಟ್ರೆಗ್ಯೆಯ್ಯಾ?

ಕೆಂಪ್ಪಣ್ಣ : ಆಪ್ತ ಅನ್ನದ ಮಾತ್ರ ಯಾಕಿಳ್ತೀಯಾ ವೊರ್ಡು ಅವನ್ಯಾಳ್ತಾನ ಅನ್ನೋದ ಲಾಲ್ಸಲ್ಲ.

ತಿಮ್ಮ : ಅದ್ಯಾನಯ್ಯ?

ಕೆಂಪಣ್ಣ : ನಿಂಗೆಷ್ಟಯ್ಯ ವಯಸ್ಸು...

ತಿಮ್ಮ : ಆಯ್ ನೆಂಗೊತ್ತಾ?

ಕೆಂಪಣ್ಣ : ಸುಮಾರು ನಲವತ್ತಾಗಿಲ್ವಾ.

ತಿಮ್ಮ : ಆಗಿರ್ಬೋದು...

ಕೆಂಪಣ್ಣ : ಎಷ್ಟಯ್ಯಾ ನಿಂಗ ಮಕ್ಳು? ಅದೂ ಗೊತ್ತೋ ಇಲ್ವೋ...

ತಿಮ್ಮ : ಒಂದಷ್ಟವ ಬುಡಪ್ಪ.

ಕೆಂಪ : ಅಲ್ಲ ಅಪ್ಪನ್ಗೇ ಎಷ್ಟು ಮಕ್ಕಳೂ ಅನ್ನಾದೇ ಗೊತ್ತಿಲ್ವಲ್ಲಾ ಇನ್ನೂ ಅವರ ಮ್ಯಾಲಿನ್ನೆಷ್ಟಗಗದ್ನು ವಯಸಿರ್ಬೋದು ನೋಡ್ಕೋ.

ತಿಮ್ಮ : ಐದಾಗ ಪುನಾ...

ಕೆಂಪ : ಅಲ್ಲ ಕಣಯ್ಯಾ ಹಿಂಗೇ ಆಯ್ತು ವೋದ್ರ್ಯಾಸಯ್ಯಾ ನಿನ್ನ ಗತಿ?

ತಿಮ್ಮ : ದ್ಯಾವ್ರು ಮಾಡ್ದಾಗಾಯ್ತಾದ ನಾಸ್ಯಾನ್ಮಾಡ್ಲಿ ವೋಗಯ್ಯ.

ಕೆಂಪ : ಅದ್ಕೇ ನೋಡು ದಡ್ಡ ಅನ್ನದು.

ತಿಮ್ಮ : ಉಟ್ಟಾದು ಸಾಯಾದು ನಮ್ಕೈನಾಗೈತಾ?

ಕೆಂಪ : ಪೆದ್ಮಾತ್ನೇ ಆಡ್ಬ್ಯಾಡ. ಸಾಯದೇನೋ ದ್ಯಾವ್ರನೇಮ್ಕ ಅನ್ನೋದನಾ ವೊಪ್ಪತೀನಿ. ಅದನ್ನ ತಪ್ಪಸಕ್ಕಾಗಕ್ಕಿಲ್ಲ ಮಳ ಬರ್ತಾ ಅದ, ಮಿಂಚು ಮಿಂಚ್ತಾ ಅದ ಗುಡುಗು ಗುಡುಗ್ತದ ಒಂದು ಪಟೀಗ ತಾಳು ಅಂದ್ರ ಅದು ನಿಲ್ಲುತ್ತ್ಯಾನು? ಅದ್ಯಾನೋ ದ್ಯಾವ್ರ ನ್ಯಾಮ್ಕ ಅಂದ್ರ ನಾ ವೊಪ್ತೀನಿ. ಅವರ ಉಟ್ಟಾದು ನಮ್ಕೈಲಿಲ್ಲ ಅನ್ನಾದ ನಾ ವೊಪ್ಪಕ್ಕಿಲ್ಲ. ನಾವು ಮನ್ಸನ ಬಿಗಿ ಇಡಿವ್ರಾಯ್ತಾದಪ್ಪ, ಈಗ ನನ್ನೇತಕ್ಕೋ ಮೂರೇ ಮಕ್ಳು ನಂಗೆ... ಮನಸಸನ ಪ್ರಯತ್ನಕ್ಕಿಂತ ಬ್ಯಾರೊಂದಿಲ್ಲ ಅನ್ನದು ನನ್ನ ಯೋಸ್ನೆ.

ತಿಮ್ಮ : ಅಂಗಾರ ಉಟ್ಟಿದಾ ಮಕ್ಳು ಬದ್ಕಲ್ಲಾ ಅಂತ್ಲಾ ನೀಯಾಳಾದು?

ಕೆಂಪ : ಜೀವುಸ್ತಾರ ಅನ್ನೋದು ಯಾಗೆ ನೋಡಿದ್ದೀಯಲ್ಲಾ ಧರ್ಗೊರ್ಗ್ಯಾಗಿ ಋಣಭಾದ್ಗಳಾಗಿ.

ತಿಮ್ಮ : ಅಷ್ಟೇ ತಾನೇ ಬುಡು.

ಕೆಂಪ : ಪ್ರಪಂಚ್ದಾಗ ಹುಟ್ಟದ್ಮಕ್ಳು ಸತ್ತೋಗಕ್ಕಿಲ್ಲ. ಯಾಗೋ ಯಾನೋ ಜೀಮಸ್ತಾಮ. ವಸಿ ಕಷ್ಟ ಬೀಳು ಭೂಯ್ತಾಯಿ ಕಣ್ಬುಟ್ರ ಬೆಳಬೆಳ್ದೂ ವಸಿಕಷ್ಟ ನೀಗ್ತೈತೆ ಜೀವನ ಸುಖ್ವಾಯ್ತಾಯ್ತೆ.

ತಿಮ್ಮ : ಸರಿ ಈಗ ನಾಕ್ಯಾಳದ್ಯಾನ್ಮಾಡ್ದೇ...

ಕೆಂಪ : ವೋಗ್ಲೀ... ನಿನ್ಕೈನಾಗ ಮಾತಾಡದು... ಏನೂ ಪ್ರಯೋಜನ ಆಗಕಿಲ್ಲ... ನಾಳಾಗ ನಿನ್ಮಗನ್ನಕಳಿಸು ಕೊಡ್ತೀನಿ.

ತಿಮ್ಮ : ಸಧ್ಯ ಅಷ್ಟು ಮಾಡದ್ರ ನಿನ್ನ ಮಕ್ಕಳ್ಗೂ ಪುಣ್ಯ ಬರುತ್ತಪ್ಪ ಸರಿನಾ ಬರಾನ್ಯಾ ವಸಿ ಮಣಸಿತೋಟದ್ದತಪ್ಕ ವಾಗ್ಬೇಕು ಯಂತ್ತಿಂದ್ಲಾರೂ ವಸಿ ನೀರು ಹಾಯಿಸ್ಬ್ಯಾಕು... ಅಲ್ದೇವಾದ್ರೆ ಒಣ್ಗೋಯ್ತವ ಬರನ್ಯಾ... ಆಗರ ನಾನು...

ಕೆಂಪ : ಹ್ಲಾಂ... ನಾ ಯಾಳದ್ದು ಗೆಪ್ತಿ ಇರ್ಲಿ...

* * *

ಬಜ್ಜಣ್ಣ : ಲೋ ರಂಗ... ಯಾನ್ಮಾಡ್ತಾ ಇದ್ದಯಿ.

ರಂಗ : ಕೊಟ್ಗೆ ಕಸ ಮಾಡೀತಾ ಇದ್ನಿ...

ಬಜ್ಜಣ್ಣ : ವಡ್ದು ಬಿಟ್ಬು ಆಗೇ ವಸಿ ಬಾ ಇಲ್ಲಿ...

ರಂಗ : ಯಾನಪ್ಪೋ?

ಬಜ್ಜಣ್ಣ : ಕೂತ್ಕಳ್ಲ.. ತಿಮ್ಮ ವೋಗಿ ಮೂರು ವರ್ಸ ಆಗೋಯ್ತು ಅಲ್ಲ.

ರಂಗ : ಊಂ... ನಾಳ ಬರಾ ಉಗಾದೀಗ ಮೂರು ವರ್ಸ ಆಯ್ತದ.

ಬಜ್ಜಣ : ಹೊನ್ನಿ ಮಕ್ಕಳೂ ಹ್ಯಾಗಿದ್ದವು!

ರಂಗ : ಅದ್ಯಾಕ್ಳ್ಯಾಡ ಬುಡಪ್ಪ... ಅವನ್ಗ ಮೈ ಕೈಯೆಲ್ಲಾ ಸಾಲ. ಮಗಳ ಮದ್ವ ಮಾಡಕ ಒಂದು ಏಕ್ರ ಆಗ್ಲೇ ಮಾರ್ದ... ಅದಲ್ದೇ... ಕೈಸಾಲ, ಸೊಸೈಟಿಲ್ಬೇರೆ ಸಾಲಿದ್ಯಾದಂತ. ಅಯ್ಕಳು ಅಂಪರಿತವ, ಒಂದಕ್ಕೂ ಸರಿಯಾಗಿಟ್ಟಿಲ್ಲ. ಬಟ್ಟಿಲ್ಲ. ಹರಕಲು ಪುರುಕಲು ಬಟ್ಗೊಳೋ... ಅಯ್ಯೊ ಅವನ್ಪಾಡ್ನೋಡಕ್ಯಾಗಕ್ಕಿಲ್ಲ. ನೋಡಿದ್ರ ಕರ್ಳು ಕಿತ್ಕಂಬರಾ ಆಗಾಯ್ತದ.

ಬಜ್ಜಣ್ಣ : ಯಾಳದಾಮ್ಯತ್ನೇಳಿದ್ರ್ಯಾಕಪ್ಪಾ ಅಂಗಾಯಿತ್ತ.

ರಂಗ : ಕೆಟ್ಟ ಮ್ಯಾಗ ಬುದ್ಧಿ ಬಂದು ಅಟ್ಟ ಮ್ಯಾಕ ಒಲುರದ್ರ್ಯಾನ್ಬಂತು? ವಾಗಪ್ಪ.

ಬಜ್ಜಣ್ಣ : ಯಾಳದಮ್ಯತ್ಕ್ಯಾಳ್ದವರ್ನ್ಯಾನಾರೂ ಯಾಳ್ಬೋದು ಅದ್ಬುಟ್ಟಬಿಟ್ಟು ತಲಮೆರ್ಯ್ಯಾವರ್ನ್ಯಾನ್ಯಾಳದು? ಅವರವರ್ತಂದದ ಅವ್ರವು ಅನುಭೋಗಿಸಬೇಕು. ಅದಕ್ಕ ನಾನು ನೀನು ಯಾನು ಮಾಡಕ್ಯಾಯ್ತೈತೆ.

ಬಜ್ಜಣ್ಣ : ವಾಗ್ಲಿ ನಾಳಕೆಲ್ಲರ್ಗೂ ಯಾಳ್ಬುಟ್ಟು ಬಾ... ಯಂಗಾರೂ ಸಿದ್ದೇಸ್ವರನ ಜಾತ್ರೆ... ವಸಿ ಹಣ್ಣು ಜನ್ಮ ಎದ್ದು... ಕರ್ಮ ಕಳ್ಕಳ್ಳಿ...

ರಂಗ : ಸರಿ... ಅದ್ಯಾನ ಕೆಲ್ಸ ಮಾಡು ವಾಗು...

* * *

ತಿಮ್ಮ : ಹೋಗ್ಲೀ... ಹೋಗ್ಲಿ.. ಅದ್ಯಯಾನ್ಮಾಡ್ದಯಿ ಇನ್ನೂವೇ

ಹೊನ್ನಿ : ನೆಲ್ಲು ಕುಟ್ತಾ ಇವ್ನಿ.

ತಿಮ್ಮ : ಮಿಸಿನ್‌ಗೇ ಕೊಟ್ಬುಟ್ಟದ್ರಾಗ್ದೆವಾಗಿತ್ತ?

ಹೊನ್ನಿ : ಅದಕ್ಕ ಕಾಸ್ಬ್ಯಾಕಲ್ಲ.

ತಿಮ್ಮ : ಯಾಕೋ ತಲ್ನವ್ವಾಯ್ತದ ವಸಿ ಕಾಪಿನಾದ್ರೂ ಮಾಡ್ಕೊಟ್ಟಯಾ?

ಹೊನ್ನಿ : ಕಾಫಿ ಮಾಡಕ್ಕ ಹಾಲೂ ಇಲ್ಲಾ, ಸಕ್ಕರೂ ಇಲ್ಲ, ಕಾಫಿಪುಡ್ಯೂ ಇಲ್ಲ ಯಾವ ಕಾಫಿ ಮಾಡ್ಲ ಯಾಳು.

ತಿಮ್ಮ : ಬ್ಯಾರಾದ್ದೇ ಆದ್ದು ನಿನ್ನ ವಾದ್ಯ ನಿಲ್ಲೇ ಇಲ್ವಲ್ಲ, ಆಗಕ್ಕು ಮೊದ್ಲೊಂದತರ ಸ್ವೋನ ಆಕ್ತಿದ್ದೆ, ಆದ್ಯಾಗೊಂದ್ತರ ಸೋನಾ ಆಕ್ತಿದ್ದೆಯಿ.

ಹೊನ್ನಿ : ಅಲ್ಲ ಒಳ್ಗಿಲ್ಲಾತೋಡಿಕ್ಕು ಬಡ್ಡಿ ಅಂದ್ರ ನಾಯಾನ್ಮಾಡ್ಲಿ? ನಾಳಕ ಸನಿಮಾತ್ರನ ಯಾಸ ಆಕ್ದರಂತ ಎರಡ್ರೂಪಾಯಿದ್ರ ಕೊಡು.

ತಿಮ್ಮ : ಯಾಕೀಗ ಹನ್ನೊಂದ್ನೇ ಕಡ ಸನಿ ಎಗ್ಲಮ್ಯಾಗ ಕೂತಿರದು ಸಾಲ್ದು ಅಂತ್ಲಾ ಅದ್ಕ ಬಾರವಾದ್ಯೆ.

ಹೊನ್ನಿ : ಅಯ್ ಬುಡ್ತು ಅನ್ನು ಅಂಗ್ಯಲ್ಲಾ ಅಂದ್ರ ಕ್ವಾಪ್ಕಂಡನು.

ತಿಮ್ಮ : ವಾಗ್ಲಿ ಇಟ್ನಾರಾ ಕಿತ್ಯಾ ಯಾನು?

ಹೊನ್ನಿ : ಹೊತ್ತಂತೆಯಿಂದ ನಂಗೂ ಇಟ್ಟಿಲ್ಲ. ಆ ಅಯ್ಯಳ್ಗೂ ಇಟ್ಟಿಲ್ಲ, ಇಪ್ಪತ್ ಪೈಸಿತ್ತು ಅದನ್ನ ಯೊಂಕಟ್ನಿಗೆ ಕೊಟ್ಟು ಕಳಿಸ್ದಿ. ದ್ಯಾವ್ರು ನಮ್ಗಾಕೀ ಸ್ಥಿತಿ ಕೊಟ್ನೋ ಯಾನೋ ಈ ಬಾಳ್ ಬಾಳಕಿಂತ ಬ್ಯಾಗ್ನ ಸಿವ ಸಿವ ಅನ್ನಾದೆ ಉತ್ಮ

ತಿಮ್ಮ : ಯಾಕ್ ಅತ್ತೆ ಸುಮ್ನಿರು.

ಹೊನ್ನಿ : ಇನ್ಯಾನೈತೆ ತಕ್ಕೋ ನಮ್ಮ ಬಾಳೆಲ್ಲಾ ಗ್ವೋಳೇ ತಾನೇ.

ತಿಮ್ಮ : ರಂಗನ್ನ ಸಂಸಾರ ನೋಡಿದ್ರೊಂದ ಸಡ್ಗರ. ಬುಟ್ಬುಟ್ಟು ಬ್ಯಾರಾಗು ಅಂದೆ ಅದ್ಕೇ ನ್ವೋಡು ಈಗ ವಡ್ಪಾಡು ನಂಗೇನು?

ಹೊನ್ನಿ : ಇನ್ನೊಂದ್ನಾಕಾಗ್ಲಿ ಸಂಸಾರ ಸುಕ್ವಾಯ್ತದ ನಾ ಕಣ್ಣಿಂದ ನೋಡ್ನಾರಿ ಎಲ್ಲಾ ಮಕ್ಳ ನನ್ನ ಮ್ಯಾಗೇ ಕುಸ್ತಿ ಮಾಡ್ತರ ಅದ್ಯಲ್ಲಾ ನಿಂಗ್ಯಾನ್ಗೊತ್ತು ನಾನೂ ಕೂಲಿ ಮಾಡಿ ಜೀವ್ನ ಮಾಡಾಗಾಯು ಆಗಾರೂ ಹೊಟ್ಗ ಸಾಲದ್ರ ಬಟ್ಗ ಸಾಲಕ್ಕಿಲ್ಲ ಬಟ್ಗ ಸಾಲದ್ರ ಹೊಟ್ಗ ಸಾಲಕ್ಕಿಲ್ಲ.

* * *

ಕೆಂಪಣ್ಣ : ರಂಗಣ್ಣಾ... ರಂಗಣ್ಣಾ...

ಬಜ್ಜಣ್ಣ : ಯಾರು ಕೆಂಪ್ನಾ... ಬಾರ್ಲಾ ಬಾ...

ಕೆಂಪಣ್ಣ : ರಂಗಿಲ್ಲಾ?

ಬಜ್ಜಣ್ಣ : ಅವೀಗ್ತಾನೆ ವಲದ ತಪ್ಕ ವಾದ.

ಕೆಂಪಣ್ಣ : ಸರಿ ಆಗರ ಆಮ್ಯಾಕ್ಬರ್ತೀನಿ.

ಬಜ್ಜಣ್ಣ : ಕೂತ್ಕಪ್ಪ... ಸಟೀಗ, ವಸಿ ಕಾಫಿನಾರೂ ಕುಡ್ಕಂಡೋಗುವೆ.

ಕೆಂಪಣ್ಣ : ಇಲ್ಲ ಈಗ್ತಾನ ಕುಂಬಳ ಕಾಯಿನ ವರ್ಕಲು, ಉಚ್ಚಳ್ಪುಡಿ ರೊಟ್ಟಿ ತಿನ್ಕಂಡು, ಕಾಫೀನೂ ಕುಡ್ಕಂಬಂದೀವ್ನಿ.

ಬಜ್ಜಣ್ಣ : ಅಂದಂಗಿರ್ಲಿ ನಮ್ಮ ತಿಮ್ಮನ ಇಸಯ ಯಾನು? ಯಾಗವ್ನೇ?

ಕೆಂಪಣ್ಣ : ಅವನ ಸುಖ ಕ್ಯಾಳಿ. ಅಯ್ಯೋ ಬಡ್ತನಕ್ಕೆ ಮಕ್ಳು ಹೆಚ್ಚು ಅವಾರು ಹದ್ದಾಗಿದ್ದವಾ ಆದೂ ಇಲ್ಲ. ಒಬ್ಬ ಸಾವ್ಕಾರ ನಾಗಪ್ಪನವರ ಮನಲಿವ್ನ ಕೆಲ್ಸಕ್ಕ, ಇನ್ನೊಬ್ಬ ಸೀನಪ್ಪನಂಗಡೀಲಿ ಅವ್ನ. ಮೂರಸೇವ ಸೌದ ತಂದು ಮಾರಿ ಅಷ್ಟೂ ಇಷ್ಟೂ ತತ್ತಾನ. ಇನ್ನು ಮಿಕ್ಕವು ಚಿಕ್ಕವು ಮಗಳ್ಗ.

ಬಜ್ಜಣ್ಣ : ಯಾಳದ್ಮಾತ್ಕ್ಯಾಳದ್ತಲ್ವಾ...

ಕೆಂಪಣ್ಣ : ಯಾನ್ಮಾಡಕ್ಕಾಯ್ತೈತೆ ನೀರಿರತಪ್ಪ ದನ ಅಟ್ಕೆಂಡೋಗ್ಬೋದು ಕುಡಿದೀ ವಾದ್ರ ಗೊಟ್ಟತಗಂಡಟ್ಟಕಾಯ್ತೈತಾ? ಈಟ್ಗ ಈ ಪ್ಯಾಮಲಿ ಪಲಾನೋ ಏನೋ ಬಂದದಲ್ಲ ಅದ್ನಾರೂ ಮಾಡಿಸ್ಕಳಕಾಗಕಿಲ್ವಾ?

ಬಜ್ಜಣ್ಣ : ನಮ್ಕಾಲ್ದಾಗ ಇದ್ಯಲ್ಲಾ ಇತ್ತ ಬುಡಪ್ಪಯ್ಯಾ?

ಕೆಂಪಣ್ಣ : ಗಾಂಧೀ ಮಾತ್ಮ ಯಾಳ್ದಾಗ ಬಾಳಕ್ಕಾಯ್ತದ ಬುಡಿ. ನಿಮ್ಕಾಲ ಬ್ಯಾರ. ಈಗ್ನಗ ಬಯಸ್ಕೋಪು ಆ ಅರ್ಕೆ ಮುಚ್ಚಿರ ಬಟ್ಗಳೂ, ಇವೆಲ್ಲಾ ನೋಡ್ತಾ ಯಾಗಿದ್ದರೂ ಯಾಳಿ. ಈಗೀಗ ಪಟ್ಟಣಕ್ಕಿಂತ ಹಳ್ಳೀಲೆ ಪ್ಯಾಸನ್ನು ಬನ್ಬುಟ್ಟದ . ಅದನ್ನೋಡ್ಕಂಡ ಮೆರೀತರ... ಥೂಥೂ ನೋಡಕಾಗಕ್ಕಿಲ್ಲ. ಯಾನ್ಬಂತಪ್ಪ ಕಾಲ.

ಬಜ್ಜಣ್ಣ : ನಮ್ಮಪ್ಪನ್ಗೂ ಹತ್ತು ಮಕ್ಳು ಅವ ಯಾಳ್ತಿದ್ದಾಗ ನಂಗೂವೆ ಬೇಜಾರು ಅನ್ನಸ್ತಿತ್ತು. ನಮ್ಮಪ್ಪ ನಮ್ಗ ಮಾಡ್ದಾಗೆ ನನ್ನ ಮಕ್ಕಳ್ಗೂ ಮಾಡ್ದಿ ಅದ್ಕೇ ಬ್ಯಾಜಾರು ಮಾಡ್ಕಂಡವ್ನ. ನಾ ವೊಂದಲ್ಲ ವೊಂದುಕೆಲ್ಸ ನೇಮಿಸ್ತಿದ್ದದು ಯಾಕೆ? ಹೆಂಡ್ತಿರ್ಗ ಒಂದು ವರ್ಷ ಬಾಣಂತನ ಮಾಡ್ಸದ್ಯಾಕೆ ಗೊತ್ತ? ಅವ್ರೆಲ್ಲಾ ಕುದ್ಯ ರಕ್ತಕ್ಕೆ ಗೊತ್ತಾಗ್ನಿಲ್ಲ ಬುಡು ಈಗ ಅನ್ಬೋಸ್ಲಿ.

* * *

ಕೆಂಪ : ತಿಮ್ಮಾ ತಿಮ್ಮಾ... ಇದ್ಯಾಕಯ್ಯ ಮಂಕಬಿದ್ದಾಗ ಕುತಿದ್ದಾಯಿ... ನಾನು ಕೆಂಪ.

ಹೊನ್ನಿ : ಅವ್ಯಾಕೋ ಈಗೀಗ ಬಲು ಮಂಕ ಬಡ್ಡಿವ್ರಾಗ್ಯೇ ಅವ್ರ..... ನೋಡಿ ತಿಂಡ್ಯಲ್ಲಾ ಆರೋಯ್ತು... ಕಾಪಿಯೆಲ್ಲಾ ಆರಿ ಅತ್ತಿಕಾಯಾಗೊಯ್ತು.

ಕೆಂಪ : ಇದ್ಯಾಕಯ್ಯ.

(ಭ್ರಾಂತಿ ಭ್ರಾಂತಿ ಎಂಬ ಧ್ವನಿ ಏರಿಳಿತದಲ್ಲಿ ನಾಲ್ಕಾರು ಕಡೆ ಪ್ರತಿಧ್ವನಿಸುತ್ತವೆ)

(ನಾಲ್ಕಾರು ಮಕ್ಕಳ ಧ್ವನಿ)

ತಿಮ್ಮ : ಹೋಯ್ತು, ಹೋಯ್ತು ನನ್ನ ತಲೆ ಕೆಟ್ಹೋಯ್ತು. ಇನ್ನ್ಯಾಕು ಬುಡಯ್ಯ... ನಿನ್ನ ಮಾತು... ನಮ್ಮಪ್ಪನ ಮಾತ್ಕಾಳಿದ್ರ್ಯಾಕೀಗಾಯ್ತಿಯ್ತು! ಈವತ್ತನ್ವಿನ ನಡ್ಯವ್ರ ಮುಂದ ಎಡವ್ ಬೀಳಾಗಾಯ್ತಲ್ಲಪ್ಪ( ನಿಟ್ಟುಸಿರು ಬಿಡುವನು) ಭ್ರಾಂತು!...

(ವಿಕಾರವಾಗಿ ನಗುತ್ತಾ) ಭ್ರಾಂತು... ನನ್ನ ಭ್ರಾಂತೇ ನನ್ನ ಜೀವನ್ದ ಕೊರಳ್ಗ ಕತ್ತಿಯಾಯ್ತು! ಬ್ಯಾರಾಗಿ ಸುಕ್ವಾಗಿರ್ಬೇಕು ಅನ್ನ ಆಸ್ಗೆ ಹುಲ್ಲ ಮೆದ್ಗೆ ಬೆಂಕಿ ಆ ಕದ್ದು ನಮ್ಗ ಅಟ್ಟಿ.. ನಮ್ಮಹೊಟ್ಗೆ ಬೆಂಕಿ ಆಕ್ದಾಗಾಯ್ತಲ್ಲ ಹೆಜ್ಜೆಜ್ಗೂ ನಮ್ಮಪ್ಪನ ಮಾತ್ಕ್ಯಾದ್ರ್ಯಾಕೀಗಾಯ್ತಿತ್ತು. ಈ ಅತಿಮಕ್ಳು... ನಮ್ಮ ಸೊಂಬೇರಿತನ್ವೇ... ಬಾಳ್ಗೆ ಕೊಡ್ಲಿಗೋಯ್ತು ಅಯ್ಯೋ ನಿಜವಾಗೂ ನನ್ಹೆಂಡ್ತಿ ಮಾತು ಕೇಳಿ ಹೀಗ್ಮಾಡುದ್ದು ಭ್ರಾಂತಿಯಲ್ದೇ ಇನ್ನೇನು...! ಭ್ರಾಂತಿ..... ಭ್ರಾಂತಿ...!

(ವಿಕಾರ ನಗು ಪ್ರತಿಧ್ವನಿಸುವುದು)



# ಜ್ಯೋತಿ ಬೆಳಗಿತು

## ದೃಶ್ಯ-೧

(ಗಣಪತಿಯ ಫೋಟೋ ಇಟ್ಟು ಪೂಜಿಸುತ್ತಾ ನಾಗು ಹಾಡುತ್ತಿದ್ದಾಳೆ.)

ನಾಗು-(ಪುರಂದರದಾಸರ ರಚನೆ)

ಹಾಡು-೧

ಶರಣು ಸಿದ್ಧಿ ವಿನಾಯಕ!
ಶರಣು ಬುದ್ಧಿ ಪ್ರದಾಯಕ।
ಶರಣು ಪಾರ್ವತಿ ತನಯ!
ಶರಣು ಮೂಷಿಕವಾಹನ ಶರಣು ಶರಣು ॥ ಪ ॥

ಅಚಲ ನೇತ್ರನ ದೇವಿ ಸುತನೆ ನಾಗ ವಿಭೂಷಿತ ಪ್ರಿಯನೇ।
ತಟಲ್ಲ ತಾಂಕಿತ ಕೋಮಲಾಂಗನೆ ಕರ್ಣಕುಂಡಲ ಧಾರನೆ ॥ ೧ ॥

ಬಟ್ಟ ಮುತ್ತಿನ ಪದಕ ಹಾರನೆ ಬಹು ಹಸ್ತ ಚತುಷ್ಟನೆ॥
ಇಟ್ಟ ತೊಡುಗೆಯ ಹೇಮ ಕಂಕಣ ಪಾಶಾಂಕುಶ ಧಾರನೆ ॥ ೨ ॥

ಕುಕ್ಷಿ ಮಹಲಂಬೋದರನೆ ಇಕ್ಷು ಜಾಪನ ಗೆಲದನೆ।
ಪಕ್ಷಿವಾಹನ ಸಿರಿ ಪುರಂವರ ವಿಠಲನ ನಿಜದಾಸನೆ ॥ ೩ ॥

ಮಹಾಗಣಪತಿ ನನ್ನ ಮಗನಿಗೆ ಒಳ್ಳೆ ವಿದ್ಯೆ ಬುದ್ಧಿ ಕೊಟ್ಟು ಕಾಪಾಡಪ್ಪ.

(ಅಷ್ಟರಲ್ಲಿ ಹೊರಗಡೆಯಿಂದ ಮಗ ಬರುತ್ತಾ)

ಮಾರುತಿ : ಅಮ್ಮಾ ಊಟ ಹಾಕ್ತೀಯಾ?

ನಾಗು : ಬಾರೋ ಈ ಹೊತ್ತು ಗಣಪತಿ ಹಬ್ಬ, ಗಣಪತಿ ಪೂಜೆ ಮಾಡಬೇಕಾದವನು ನೀನು ಬರಲೇ ಇಲ್ಲ ಅಂತ ನಾನೇ ಪೂಜೆ ಮಾಡಿದ್ದೇನೆ.

ಮಾರುತಿ : ಒಳ್ಳೇದೇ ಆಯ್ತು ಬಿಡಮ್ಮ.

ನಾಗು : ನೀನು ಸ್ನಾನ ಮಾಡಿ ಮಡಿ ಉಟ್ಕೊಂಡು ಬಾರೋ ಪೂಜೆ ಮಾಡುವೆಯಯಂತೆ ಸೋಂಬೇರಿ.

ಮಾರುತಿ : ನೀನು ಮಾಡಿದ ಮೇಲಾಯ್ತು ಬಿಡಮ್ಮ.

ನಾಗು : ಸಂಪ್ರದಾಯಸ್ಥರ ಮನೆಯಲ್ಲಿ, ಒಳ್ಳೇ ವೈದಿಕ ಮನೆತನದಲ್ಲಿ ಹುಟ್ಟಿ ಇಷ್ಟು ನಾಸ್ತಿಕನ್ಯಾಕೋ ಆದೆ. ಹೋಗೋ, ಮೊದ್ಲೇ ದಡ್ಡ ನೀನು ಸ್ವಲ್ಪ ಗಣಪತೀನಾದ್ರೂ ಪೂಜ್ಸು ಒಳ್ಳೇ ಬುದ್ಧಿ ಕರಣಿಸುತ್ತಾನೆ.

ಮಾರುತಿ : ನಿಮಗೆ ಕೊಟ್ರೆ ಸಾಕು ಬಾರಮ್ಮ.

ನಾಗು : ದೊಡ್ಡವರು ಗುರು ಹಿರಿಯರು ಹೇಳಿದ ಮಾತು ಕೇಳು. ದೇವರಲ್ಲಿ ಭಕ್ತಿ ಇಡು. ಹಿಡಿದದ್ದು ಹೆಚ್ಚುತ್ತೆ ಮುಟ್ಟಿದ್ದು ಒದಗುತ್ತೆ.

ಮಾರುತಿ : ಈಗ ಬರ್ತೀಯೋ ಹೋಗ್ಲೋ... (ತಂದೆ ಬರುತ್ತಾ)

ದೇವಯ್ಯಾ : ಅದೇನೋ ಆತ್ರ? ಎಲ್ಲಿಗೆ ಹೋಗಬೇಕು?

ಮಾರುತಿ : ಹೊರಗಡೆ.

ದೇವಯ್ಯ : ಏನು ದೊಡ್ಡ ಕೆಲಸದಲ್ಲಿರೋ ಅಧಿಕಾರಿಯೂ ನಿನ್ನಷ್ಟು ಆತ್ರ ಬೀಳೋಲ್ಲ ಕಣೋ. ಸ್ವಲ್ಪ ನಿಧಾನಿಸಿ ಹಾರೋ. ದೇವ್ರ ಪೂಜೆಮಾಡು ಬಾ ಒಳ್ಳೆದಾಗುತ್ತೆ.

ನಾಗು : ಬಾರಪ್ಪ... ಬಾ ಮಂಗಳಾರತೀನಾದ್ರೂ ತೆಗೆದುಕೋ ಬಾ ಮಾರುತಿ.

ಮಾರುತಿ : ನೀವು ಮಾಡಿದ್ರೆ ಸರಿ ಅಂತ ಎಷ್ಟು ಸಾರಿ ಹೇಳೋದು.

ದೇವಯ್ಯ : ಸರಿ ಹೋಗೇ ಕೇಳದವರನ್ನು ಇನ್ನೇನು ಮಾಡ್ಲಿಕ್ಕಾಗುತ್ತೆ? ಕೂಳ್ನಾದ್ರೂ ಹಾಕಿ ಕಳುಹಿಸು ಹೋಗು. ಬೀದಿ ಬೀದಿ ಅಲೆದಾಡಿಕೊಂಡು ಬರಲಿ ಸುಕುಮಾರ.

ಮಾರುತಿ : ತಕ್ಕೊಂಡು ಬಾ...

(ಮಂಗಳಾರತಿ ಎತ್ತಿ ಕೊಡಲು ಆತ ಕೈ ಮುಗಿದು ಹೊರಡುತ್ತಾನೆ.)

## ದೃಶ್ಯ-೨

(ರಾತ್ರಿ ವೇಳೆ, ಜ್ಯೋತಿ ಮಾರುತಿ ಇಬ್ಬರೂ ಓದಿಕೊಳ್ಳುತ್ತಿದ್ದಾರೆ. ತೂಕಡಿಸುತ್ತಿದ್ದ ಮಾರುತಿಯನ್ನು ಗಮನಿಸಿ ಆ ಕಡೆಯಿಂದ ತಂದೆ ಬರುತ್ತಿರಲು)

ಜ್ಯೋತಿ : ಮಾರುತಿ... ಮಾರು.. (ತಿವಿಯುತ್ತಾ) ಅಪ್ಪಾ ಬರ್ತಾ ಅವ್ರೆ.

(ಬೆಚ್ಚಿ ಕಣ್ಣು ಮಿಟುಕಿಸುತ್ತಾ ಪುಸ್ತಕ ನೋಡುತ್ತಿರಲು)

ದೇವಯ್ಯ : ಏನೋ ಮಾರುತಿ ದೇವರು ಬಂದಿದ್ಯೇನೋ? ಇಷ್ಟು ಹೊತ್ತಿಗೆ ಬಿಸಿ ಬಿಸಿ ಹಾಕ್ಬಿಡ್ತಾಳೆ ನಿಮ್ಮಮ್ಮ. ತೂಕಡಿಸದೆ ಏನು ಮಾಡ್ತೀಯಾ? ಹೇಳು.

ಮಾರುತಿ : ಯಾರಪ್ಪಾ ತೂಕಡಿಸಿದವ್ರು?

ದೇವಯ್ಯ : ನೀನು... ನಿಮ್ಮಪ್ಪನ ಮಗ.

ಮಾರುತಿ : ಇಲ್ಲಪ್ಪಾ... ಓದ್ತಾನೇ ಇದ್ದೇನೇ ಕೇಳಿ ಜ್ಯೋತೀನಾ!

ಜ್ಯೋತಿ : ಆತನ ಕಣ್ಣಿರೋದು ಹಾಗೆ ಕಣಪ್ಪಾ ಚಿಕ್ಕದು. ಪೂರ್ತಿ ಪುಸ್ತಕನಾ ಕೆಳಗಡೇನೆ ಕಣ್ಣುಗಳು ನೋಡ್ತಿರ್ತಾವೆ. ಅದ್ಕೆ ತೂಕಡಿಸ್ತಿರುವಾಗೆ ಕಾಣುತ್ತೆ ಅಷ್ಟೆ.

ದೇವಯ್ಯ : ಚೆನ್ನಾಗಿದೆ Silant Reading... ಸ್ವಲ್ಪ ಹೊತ್ತು ಬಾಯ್ಬಿಟ್ಟಾದ್ರೂ ಓದಬೇಡ್ವೇ?

ಜ್ಯೋತಿ : ಗಂಟಲು ಒಣಗಿ ಹೋಗುತ್ತೆ ಅಂತಾ... ಮುನ್ನೆಚ್ಚರಿಕೆ.

ಮಾರುತಿ : ಸುಮ್ನಿರೇ ಸಾಕು.

ದೇವಯ್ಯ : ಅದ್ಕೆ... ಪಲ್ಟಿ ಹೊಡಿತಿದ್ದಾನಲ್ಲಾ ಒಂದು ಕ್ಲಾಸಿನಲ್ಲೇ ನಾಲ್ಕು ಸಾರಿ ಐದು ಸಾರಿ... ನಾಚಿಕೆ ಇದೆಯೇ ನೋಡಮ್ಮ. ಮೀಸೆ ಮಾತ್ರ ಬೆಳ್ಯೋ ಹೊತ್ತಾಯ್ತು. ಆದ್ರೆ ಬುದ್ಧಿ ಮಾತ್ರ ಬೆಳೀಲಿಲ್ಲ.

ನಾಗು : (ಬರುತ್ತಾ) ಅದೇನು ಸುಮ್ನೆ ಲೊಟ ಲೊಟ ಅನ್ತೀರಲ್ಲಾ. ಹೀಗಂತಿದ್ರೆ ಹ್ಯಾಗ್ತಾನೆ ಓದುತ್ತಾನೆ. ಏನೋ ಈ ವಯಸ್ಸಿನಲ್ಲಿ ಹಾಗೇ ನಿದ್ದೆ ಬರುತ್ತೆ. ಏನು ಮಾಡಕ್ಕಾಗುತ್ತೆ ಬನ್ನಿ ಓದ್ಕೋತಾನೆ.

ದೇವಯ್ಯ : ಹೋಗ್ಲಿ ಓದ್ದೇ ಹೋದ್ರೆ ಅಷ್ಟಂದ್ಹೊಯ್ತು ಮಲಿಕ್ಕೊಳ್ಳಪ್ಪಾ, ಅಷ್ಟು ಹೊತ್ತಿಗೆ ಎದ್ದು ಓದುವಯಂತೆ.

ನಾಗು : ಈಗ್ಲೇ ಇಷ್ಟು, ಇನ್ನು ಅಷ್ಟೊತ್ತಿಗೆ ಎದ್ದು ಲ್ಯಾಟೀನ್‌ನಿಂದ ಹತ್ತಿಸ್ಕೊಳ್ಳೋಕೆ ದುಪ್ಪಟಿಗಿಪ್ಪಟೀನಾ... ಈಗ್ಲೇ ಸ್ವಲ್ಪ ಮುಖ ತೊಳ್ಕೊಂಡು ಓದಪ್ಪಾ ಮಗನೇ.

ದೇವಯ್ಯ : ನೋಡು ಯಾರೇನಂದ್ರೇ ತಾನೇ ಏನು? ಜಪ್ಪಯ್ಯ ಅಂತಾ ಇದ್ದಾನೇ. ಮತ್ತೆ ಜಡಿದು ಜಡಿದು ಬೀಳ್ತಾ ಇದ್ದಾನೆ ನೋಡು.

(ನಗುವರು)

ಮಾರುತಿ : ನಾನು ಓದೋದೇ ಇಲ್ಲ...

(ಪುಸ್ತಕ ಎಸೆದು ಹೊದ್ದುಕೊಂಡು ಮಲಗುವನು)

ದೇವಯ್ಯ : ನೋಡ್ದೇನೇ, ಓದೋಕೂ ಕಷ್ಟವಲ್ಲ.

ನಾಗು : ಅವನ ಹಣೇಲಿ ಬರ್ದಾಗೆ ಆಗುತ್ತೆ ಹೋಗಿ ನಾವೇನ್ ಮಾಡೋಣ.ತೆಂಗಿನ ಮರ ಹತ್ತುವವರನ್ನು ಕೈ ಎಟಕುವತನಕ ತಳ್ಳಬಹುದು, ಆಮೇಲೆ ಹ್ಯಾಗೆ... ಹಾಗೇ? ನಡೀರಿ ಊಟ ಮಾಡಿಕೊಂಡು ನೀವೂ ಮಲಗಿಕೊಳ್ಳುವಿರಂತೆ.

ದೇವಯ್ಯ : ನಿಮಗೆಲ್ಲಾ ಏನು ಮಂಕು ಬಡಿದಿದ್ಯೋ ಏನೋ ವಿದ್ಯೆಗೆ ಬೆಲೇನೆ ಇಲ್ಲದ ಹಾಗಾಯ್ತು ನಿಮ್ಮಂಥಹವರಿಂದ, ನಡೆ ನಡೆ... ನೀನಾದ್ರೂ ಓದಮ್ಮಾ.

ಜ್ಯೋತಿ : ಆಗ್ಲಪ್ಪಾ...

(ಹೋಗುತ್ತಾ)

ದೇವಯ್ಯಾ : ಈ ಹೆಣ್ಣು ಹುಡುಗಿಯಷ್ಟು ಚುರುಕಿಲ್ಲ... ದಡ್ಡ... ದಡ್ಡ...ದನ ಹುಟ್ಟಿ ದನ ಬೆಳೆದ ಹಾಗಾಯ್ತು... ನಡೆ... ನಡೆ...

ಜ್ಯೋತಿ : ಮಾರುತಿ ಏಳೋ ಪರೀಕ್ಷೆ ಹತ್ತಿರ ಬಂತು. ಓದ್ಕೋ ಎದ್ದೇಳು.

(ದುಪ್ಪಟೆ ತಳ್ಳಲು)

ಮಾರುತಿ : ಬಿಡೇ... ನೀನು ಓದಿ ಪ್ಯಾಸು ಮಾಡು. ನಂಗೇನೂ ಬೇಡ್ವೇ... ನಂಗೆ ನಿದ್ದೆ...

ಜ್ಯೋತಿ : ಸ್ವಲ್ಪ ಓದಿಬಿಟ್ಟು ಮಲಗಿಕೊಳ್ಳುವಂತೆ ಏಳು.

ಮಾರುತಿ : ನೋಡು ನಂಗೆ ಕೋಪ ಬರಿಸ್ಬೇಡ.

ಜ್ಯೋತಿ : ಅಪ್ಪಾಜಿ ಬೈತಾರೆ ಏಳು. ಕೋಪ ಯಾಕೆ? ನಿನಗೋಸ್ಕರ ತಾನೇ ಅವರು ಹೇಳಿದ್ದು.

ಮಾರುತಿ : ನೀನೊಬ್ಬಳು ಓದಿ ಮುಂದುವರಿದ್ರೆ ಸಾಕಮ್ಮ ನಾನು ಹಾಳೇ ಆಯ್ತೀನಿ ನಾನು ದಡ್ಡ... ಅಂತ ಹೇಳಿದ್ರಲ್ಲಾ ನಿಮ್ಮಪ್ಪನವ್ರು.

ಜ್ಯೋತಿ : ಅದ್ಕೇ ನೀನು ಹಠ ಮಾಡಿ ಜಾಣ ಅನ್ನಿಸ್ಕೊಳ್ಬೇಕು ಮಾರುತಿ.

ಮಾರುತಿ : ನನಗೇನೂ ಕೀರ್ತಿ ಬೇಡಮ್ಮ ಮೇಷ್ಟ್ರಿಂದ. ನೀನೊಬ್ಬಳೇ ತೆಕ್ಕೋ.

ಜ್ಯೋತಿ : ನೋಡು ಸುಮ್ನೇ ಕೋಪ ಮಾಡ್ಕೊಳ್ಬೇಡ ಮಾರುತಿ ಏಳು ಓದ್ಕೋ...

ಮಾರುತಿ : ನೋಡೇ ನನಗೆ ಕೋಪ ಬರಿಸ್ಬೇಡಾ. ಆಮೇಲೆ ನಾನು ಸುಮ್ಮನೇ ಬಿಡೋಲ್ಲ ಎದ್ದು ಹೋಗೇ.

(ಎಂದು ದುಪ್ಪಟ ಹೊದ್ದು ಮಲಗಿಕೊಳ್ಳುವನು. ಜ್ಯೋತಿ ತನ್ನ ಜಾಗಕ್ಕೆ ಹೋಗಿ ಕುಳಿತು ಓದಿಕೊಳ್ಳಲಾರಂಭಿಸಿದಳು. ಆತನ ಪುಸ್ತಕಗಳನ್ನೆಲ್ಲಾ ಒಂದೆಡೆ ಇಟ್ಟು ತನ್ನ ಕರ್ತವ್ಯದಲ್ಲಿ ನಿರತಳಾಗುವಳು)

## ದೃಶ್ಯ-೩

(ದೇವಯ್ಯ ಕುಳಿತು ಪತ್ರಿಕೆ ನೋಡುತ್ತಾ...)

ದೇವಯ್ಯ : ನಾಗೂ... ನಾಗೂ...

ನಾಗು : ಬಂದೇ... ಬಂದೇ... ಏನು ಅಂದ್ರೆ?

ದೇವಯ್ಯ : ಜ್ಯೋತಿ ಬಿ.ಎ.ನಾ ಫಸ್ಟ್‌ಕ್ಲಾಸಿನಲ್ಲಿ ಪಾಸು ಮಾಡಿಬಿಟ್ಟಿದ್ದಾಳೆ ಕಣೆ...

ನಾಗು : ಅಯ್ಯೋ... ಇಷ್ಟು ಹೊತ್ತಿಗೆ... ಮಾರುತೀನೂ ಓದಿದ್ರೆ ಬಿ.ಎ., ಎಂ.ಎ ಆಗಿದ್ದಿದ್ರೆ... ಏನು ಕಿಮ್ಮತ್ತಿರ್‍ತಿತ್ತು.

ದೇವಯ್ಯ : ಮಗಳು ಪಾಸಾದಳಲ್ಲಾ ಅಂತ ಸಂತೋಷಪಡೋದು ಬಿಟ್ಟು ನನ್ನ ಮಗ ಓದಿದ್ರೆ ಬಿ.ಎ. ಆಗೋನು... ಅಂತ ಗೋಳು ಶುರುಮಾಡ್ತಾಳೆ. 'ಸತ್ತ

ಕೂಸಿನ ಕಣ್ಣು ಬಟ್ಟಲಿನಾಗೆ' ಅಂದ ಹಾಗೆ ಕಣೆ ನಿನ್ನ ಯೋಚನೆ. ಆಗ ಓದಬೇಡ ನಿದ್ದೆ ಬಂದಿದ್ರೆ ಮಲಕ್ಕೋಪ್ಪ ಅಂತಿದ್ದ.

ನಾಗು : ಹೆಣ್ಣು ಇನ್ನೆಷ್ಟು ಓದಿದ್ರೆ ತಾನೇ ಏನು? ಮದ್ವೆ ಮಾಡಿ ಗಂಡನ ಮನೆಗೆ ಕಳಿಸೋದ್ ತಾನೇ... ಗಂಡು ಓದಿದ್ರೆ ಸಂಪಾದ್ನೆ ಮಾಡಿ ತಂದು ಹಾಕ್ತಿದ್ದ ನಮಗೆ ಅಂತ ಯೋಚನೆ ಅಷ್ಟೇ...

ಜ್ಯೋತಿ : (ಬರುತ್ತಾ) ಓದೋದ್ಕೇ ಗಂಡ್ಸೆ ಆಗಬೇಕೇ ಸಂಪಾದ್ನೇ ಮಾಡೋಕೆ ಗಂಡ್ಸೇ ಆಗಬೇಕೇ? ತಂದೆ-ತಾಯಿ ಸಾಕೋಕೆ ಗಂಡ್ಸೇ ಆಗಬೇಕೇ? ಅವೆಲ್ಲಾ ಸುಳ್ಳು ಕಣಮ್ಮ.

ನಾಗು : ಮತ್ತಿನ್ನೇನಮ್ಮ... ಮದುವೆ ಆದ ಮೇಲೆ ನಿನ್ನ ಗಂಡ ಮಕ್ಕಳು ಸಂಸಾರವಲ್ಲವೇ ಹೇಳು.

ಜ್ಯೋತಿ : ನನ್ನ ವಿಷಯದಲ್ಲಿ ಹಾಗೆ ತಿಳ್ಕೊಳ್ಬೇಡಮ್ಮ.

ನಾಗು : ನಿನಗೆ ಆಸೆ ಪ್ರೀತಿ ಇಲ್ಲ ಅಂತಲ್ಲಾ ಜ್ಯೋತಿ... ಇನ್ನು ನೀನು ಓದಕ್ಕಾಗುತ್ತಾ?

ಜ್ಯೋತಿ : ತಮ್ಮ ಓದಲಾರೆ ಅಂದ್ರೂ ಓದೋ ಓದೋ ಅಂತೀರಿ.. ನಾನು ಓದ್ತೀನಿ ಅಂದ್ರೆ ಆಗೋಲ್ಲ ಅಂತೀರಿ... ಇದೇನಮ್ಮ? ನಾನು ಹೆಣ್ಣಾದೆ ಅಂತ ಈ ಅನ್ಯಾಯನಾ?

ನಾಗು : ಹ್ಯಾಗೋ ಬಿ.ಎ. ಮುಗಿಸಿಕೊಂಡೆ... ಮುಂದೆ ಓದೋದು ಅಂದ್ರೆ ನಮಗೆ ತೊಂದ್ರೆಯಿಲ್ಲಮ್ಮಾ ಅಷ್ಟಕ್ಕೆ ನಮಗೆ ಚೈತನ್ಯ ಇದೆಯಮ್ಮ ಹ್ಯಾಗೋ ನಿಮ್ಮ ತಂದೇನೂ ರಿಟೈರ್ ಆಗೋಕೆ ಐದಾರು ವರ್ಷಗಳಿವೆ. ಅಷ್ಟರಲ್ಲಿ ಹ್ಯಾಗೂ ನಿನಗೊಂದು ಲಗ್ನ ಮಾಡಿಬಿಟ್ರೆ ನಮ್ಮ ಭಾರ ಕಳೆದ ಹಾಗಲ್ವಾ? ನಿನ್ನ ತಮ್ಮ ಗಂಡು ಹುಡುಗ ಅವನದು ಹ್ಯಾಗೋ ಆಗುತ್ತೆ...

ಜ್ಯೋತಿ : ಏನೋ ಗಾದೆ ಹೇಳ್ತಾರಲ್ಲಾ ಹಾಗೆ. ಹಲ್ಲಿದ್ದವರಿಗೆ ಕಡ್ಲೆ ಇಲ್ಲ, ಕಡ್ಲೆ ಇದ್ದವರಿಗೆ ಹಲ್ಲಿಲ್ಲ ಅಂತ ನಾನು ತಂದದ್ದು ಇಷ್ಟೇ ಅಂತ ತಿಳ್ಕೊಳ್ತೀನಿ ಅಷ್ಟೆ...

ದೇವಯ್ಯ : ನಾನೊಬ್ಬ ವಿದ್ಯಾವಂತನಾಗಿ ನಿನ್ನನ್ನು ವಿದ್ಯಾವಂತಳನ್ನಾಗಿ ಮಾಡಬೇಕು ಅಂತಿದ್ದೆ ಮಗು. ಆದ್ರೆ ದೇವ್ರು ನನಗೆ ಆ ಶಕ್ತಿ ಕೊಡಲಿಲ್ಲ. ನಿನ್ನ ತಮ್ಮನಿಂದ ನಾನು ಇದ್ದ ಬದ್ದ ನಾಲ್ಕು ಕಾಸನ್ನೂ ಕಳ್ಕೊಂಡು ಭಿಕಾರಿ ಆಗಿದ್ದೇನೆ ಈಗ.

ಜ್ಯೋತಿ : ಅಪ್ಪ ಯೋಚನೆ ಮಾಡಬೇಡಿ... ದೇವರು ನಿಯಾಮಕ ಹೇಗಿದ್ಯೋ ಹಾಗಾಗ್ಲಿ ಬಿಡಿ.

(ಕಣ್ಣೀರನ್ನು ಸೀರೆಯ ಸೆರಗಿನಿಂದ ಒರಸಿಕೊಂಡು ಅಲ್ಲಿಂದ ಒಳಗೆ ಹೋದಳು.)

ನಾಗು : ಮನೇಲಿ ಎಷ್ಟು ಕಷ್ಟ ಇದ್ದರೂ ಸೈರಿಸಿಕೊಂಡು ಊಟ ತಿಂಡಿಗೆ ಲೆಕ್ಕಿಸದೆ ಜ್ಯೋತಿ ಫಸ್ಟ್‌ಕ್ಲಾಸ್‌ನಲ್ಲಿ ಪಾಸ್ ಮಾಡಿ, ಓದಬೇಕು ಅನ್ನೋ ಆಸೆ ಇದ್ರೂ, ದೇವರು ನಮಗೆ ಓದಿಸಲಿಕ್ಕೆ ಶಕ್ತಿ ಕೊಡಲಿಲ್ಲವಲ್ಲಾ...

ದೇವಯ್ಯ : ನನಗೂ ಅದೇ ಚಿಂತೆ ನಾಗೂ, ಏನು ಮಾಡಲಿ...

ನಾಗು : ಮಾಡೋದೇನು... ಹಾಸಿಗೆ ಇದ್ದಷ್ಟಕ್ಕೆ ಕಾಲು ಚಾಚುವುದೊಂದೇ ದಾರಿ...

ದೇವಯ್ಯ : ಹೌದು... ನೀನು ಹೇಳೋದು ನೂರಕ್ಕೆ ನೂರು ಪಾಲು ಸತ್ಯ.

ನಾಗು : ಆ ಹೊತ್ತು ಜ್ಯೋತಿ ಅಕ್ಕಪಕ್ಕದವ್ರು ವೀಣೆ ಕಲೀತಾರೆ ನಾನೂ ಕಲೀತೀನಮ್ಮ ಅಂದ್ಲು. ಅದಕ್ಕೆ ತಿಂಗಳಿಗೆ ಇಪ್ಪತ್ತೈದು ಮೂವತ್ತೆಲ್ಲಿ ತರೋಣ್ವಮ್ಮ ಅಂದೇ... ಎಷ್ಟು ಜಾಣೆಯಾಗಿದ್ರೇನಾಯ್ತು? ಓದಿಸಲಿಕ್ಕೆ ಆಗಲಿಲ್ಲ... ಸಂಗೀತ ಕಲಿಸಲಿಕ್ಕೂ ಆಗಲಿಲ್ಲ.

ದೇವಯ್ಯ : ಈಗ ಓದು ಮುಗೀತು. ವೀಣೆನಾದ್ರೂ ಕಲಿತು ಕಾಲ ಹಾಕಲಿ...

ನಾಗು : ಮೇಷ್ಟರಿಗೆ ದುಡ್ಡು.

ದೇವಯ್ಯ : ನಾನು ಹ್ಯಾಗಾದ್ರೂ ಮಾಡಿ ನಾಲ್ಕು ಹುಡುಗರಿಗೆ ಪಾಠ ಹೇಳಿ ಅದ್ರಿಂದ ಬಂದ ಹಣದಲ್ಲಿ ಹೇಳಿಸಿದ್ರಾಯ್ತು.

ನಾಗು : ನಿಮಗೂ ವಯಸ್ಸಾಯ್ತು... ಈಗ್ಲೇ ಎದೆನೋವು ಅಂತೀರಿ. ಸ್ಕೂಲಲ್ಲಿ ಪಾಠ ಹೇಳೋದ್ರ ಜತೆಗೆ ಮನೆ ಪಾಠ ಹೇಳಿದ್ರೆ ನಿಮ್ಮ ದೇಹದ ಗತಿ? ಆಹಾರವೇ ಇಲ್ಲದಿರುವಾಗ ಇನ್ನು ಪುಷ್ಟಿಯಾದ ಆಹಾರ ಎಲ್ಲಿ ದೊರೆಯಬೇಕು...? ಏನೋ ದೇವರು ಇಷ್ಟನ್ನಾದ್ರೂ ಕೊಟ್ಟಿದ್ದಾನಲ್ಲ. ಹೊಟ್ಟೇ ತೇವವಾಗುತ್ತಲ್ಲ ಅದ್ಕೇ ಸಂತೋಷ ಪಟ್ಕೊಂಡಿರಬೇಕು. ಬೇಡಿ ಅಂದ್ರೆ ಅವಳು ಕಲೀಲೂ ಬೇಕಿಲ್ಲ, ನೀವು ದೇಹಾರೋಗ್ಯ ಕೆಡ್ಸಿಕೊಳ್ಳೋದೂ ಬೇಕಿಲ್ಲ. ಆಮೇಲೆ ನಮಗೆ ಯಾರಾಗ್ತಾರೆ? ಎಲ್ಲಾ ಭಾಗ್ಯಕ್ಕಿಂತ ನಮಗೆ ಆರೋಗ್ಯ ಭಾಗ್ಯವೇ ಸಾಕು.

ದೇವಯ್ಯ : ಏನಾಗುತ್ತೆ ಬಿಡೆ... ತುಪ್ಪ, ಸೇಬು ತಿಂದ್ರೇ ಪುಷ್ಟಿಯಾದ ಆಹಾರವೇ. ಕಡ್ಲೆಕಾಯಿನ ಎಣ್ಣೆ, ರಾಗಿ ಹಿಟ್ಟು, ಸೊಪ್ಪು ತಿಂದ್ರಷ್ಟೇ ಸಾಕು. ಅದರಲ್ಲೇ ಸತ್ವ ಇದೆ ಕಣೆ. ಇರೋದರಲ್ಲಿ ಹುಡುಕಿ ತಿಂದ್ರೆ ಪೌಷ್ಟಿಕತೆ ಇವೆ ಕಣೆ.

(ಮಾತನಾಡುವಲ್ಲಿಗೆ ಜ್ಯೋತಿ ಓಡಿ ಬಂದು)

ಜ್ಯೋತಿ : ಅಪ್ಪಾ... ಅಪ್ಪಾ...

ದೇವಯ್ಯ : ಏನಮ್ಮಾ ಜ್ಯೋತಿ...?

ಜ್ಯೋತಿ : ಮಾರುತಿ... ಶಾನುಭೋಗರು ಶಾಮಾಶಾಸ್ತ್ರಿಗಳ ಮಾವಿನ ಮರಕ್ಕೆ ಕಲ್ಲು ಹೊಡೆದು ಮಾವಿನ ಕಾಯಿಯನ್ನು ಕೆಡವಿದುದಕ್ಕೆ ಬೆಳಗಿನಿಂದ

ಪೋಲೀಸನವರಿಗೆ ದೂರು ಕೊಡ್ತೀನಿ ಅಂತಿದ್ದಾರಂತೆ, ಬಿಡಿಸಿಕೊಂಡು ಬನ್ನಿ ಹೋಗಿ... ಬೇಗ ಹೋಗಿ ಅಪ್ಪಾಜಿ...

ನಾಗು : ಸರಿಸಮಾನರಾದ ನಮ್ಮ ಸ್ವಂತದವರ ಮನೆಯಲ್ಲಿ ಹೀಗ್ ಮಾಡಿ ನಮ್ಮ ಮಾನ ಕಳೀತಾ ಇದ್ದಾನಲ್ಲಾ ದೇವರೇ ಅವನಿಗೆ ಯಾವ ಹೊತ್ತು ಒಳ್ಳೇ ಬುದ್ಧಿ ಕೊಡ್ತೀಯಪ್ಪಾ... ಹೋಗಿ ಅಂದ್ರೇ... ಹೋಗಿ...

ದೇವಯ್ಯ : ನಾನು ಹೋಗಿ ಆತನನ್ನು ನನ್ನ ಮಗನನ್ನು ಬಿಡಿ ಅಂತ ಯಾವ ಬಾಯಿಲ್ಲಿ ಕೇಳ್ಲೀ...? ಅವನೇ... ಬರ್ತಾನೆ ಬಿಡು.

ಜ್ಯೋತಿ : ನೀನಾದ್ರೂ ಬಾಮ್ಮಾ...

ನಾಗು : ನಾನು... ಬಂದು ಬೇಡಿಕೊಳ್ಳಲೇ?

ಜ್ಯೋತಿ : ನಾನು ಹೋಗಿ ಕೇಳಿದ್ರೆ ಬಿಡ್ತಿದ್ರೆ ಹೋಗ್ತಿದ್ದೆ ಕಣಪ್ಪಾ.

ದೇವಯ್ಯ : ಹಾಗೇ ಮಾಡ್ಲಿ ಬಿಡಮ್ಮ ಬುದ್ಧಿ ಬರುತ್ತೆ. ಮತ್ತೊಂದು ದಿನ ಹಾಗೆ ಮಾಡೋಲ್ಲ. ಈ ಹೊತ್ತು ಬಿಡಿಸಿಕೊಂಡು ಬಂದ್ರೆ ನಾಳೇನೂ ಹಾಗೇ ಮಾಡ್ತಾನೆ.

ನಾಗು : ದೇವರು ನಮಗೆ ಈ ಮಗನನ್ನ ಕೊಟ್ಟೇ ಈ ಅಗ್ನಿ ಪರೀಕ್ಷೆ ಮಾಡ್ತಾ ಇದ್ದಾನೆ ಅಂತ ಕಾಣುತ್ತೆ. ಬೇಗ್ನೆ ನನ್ನ ಕರ್ಕೊಪ್ಪಾ... ಯಾಕಾದ್ರೂ ನನ್ನನ್ನು ಇನ್ನೂ ಉಳಿಸ್ಕೊಂಡಿದ್ದೀಯಪ್ಪಾ...

ದೇವಯ್ಯ : ಇವನ್ನೆಲ್ಲಾ ನೋಡ್ಲೀ ಅಂತ.

## ದೃಶ್ಯ-೪

(ನಾಗು ಮನೆಯಲ್ಲಿ ತರಕಾರಿಯನ್ನು ಕತ್ತರಿಸುತ್ತಿರಲು ಅಲ್ಲಿಗೆ ದೇವಯ್ಯನು ಶಾಲೆಯಿಂದ ಬಂದು ಚಪ್ಪಲಿಯನ್ನು ಒಂದೆಡೆ ಬಿಟ್ಟು ಬರುತ್ತಾ)

ದೇವಯ್ಯ : ಏನು... ಇಷ್ಟು ಬೇಗನೆ ತರಕಾರಿ ಹೆಚ್ತಾ ಇದ್ದೀಯೆ?

ನಾಗು : ಏನೋ ಸಂಬಳ ಬಂದಿರೋ ದಿನ. ಕಡ್ಲೆಕಾಯಿನ ಎಣ್ಣೆ ಇದೆ. ಕಡ್ಲೆಹಿಟ್ಟು ಬಿಡಿಸಿದ್ದೆ. ಸ್ವಲ್ಪ ಬೋಂಡ ಮಾಡೋಣ ಅಂತ..

ದೇವಯ್ಯಾ : ಮಾಡು ಮಾಡು ನನಗೂ ಬೇಜಾರು ಬಾಯೆಲ್ಲಾ ಕಹಿ... ಆದ್ರೆ ಒಂದು ಸಿಹಿ ಮಾತು.

ನಾಗು : ಏನ್ರೀ ಅಂತಹದ್ದು?

(ಹೆಂಡತಿ ಪಕ್ಕಕ್ಕೆ ಬಂದು ಕುಳಿತುಕೊಳ್ಳುವರು)

ದೇವಯ್ಯ : ಈ ಹೊತ್ತು ನನ್ನ ಸ್ನೇಹಿತ ಚಂದ್ರಯ್ಯ ಅನ್ನವ್ನು ಸಿಕ್ಕಿದ್ದ... ಅವನ ಮಿತ್ರ ನಂಜುಂಡಯ್ಯ ಅಂತ ಇದ್ದಾನಲ್ಲಾ ಅವನ ಮಗನಿಗೆ ನಮ್ಮ ಮಗಳು ಜ್ಯೋತಿ

ಮದ್ವೆ ಮಾಡಿಕೊಳ್ಳಬೇಕು ಅಂತ ಹೇಳಿದ್ದಾನೆಯಂತೆ. ಒಳ್ಳೇ ಸಂಬಂಧ ಕಣೆ.

ನಾಗು : ಈಗಿನ ಕಾಲದಲ್ಲಿ ಮದ್ವೆ ಅಂದ್ರೆ ಹೆದರಿ ಆಗುತ್ತೇರಿ... ವರದಕ್ಷಿಣೆ ಏನಾದ್ರೂ...

ದೇವಯ್ಯ : ಅವ್ಯಾವ್ದೂ ಇಲ್ಲ, ಈಗ ವರದಕ್ಷಿಣೆ ಕೊಡೋದು, ತೆಗೊಳ್ಳೋದು ಎರಡೂ ನಡ್ಯೋಲ್ಲ ಕಣೆ? ಸಿಂಪಲ್ ಆಗಿ ಮಾಡಿದ್ರಾಯ್ತು ಅಂದಿದ್ದಾನಂತ. ಅವರ ಬಗ್ಗೆ ಏನೂ ಯೋಚನೆ ಮಾಡಬೇಕಾಗಿಲ್ಲ.

ನಾಗು : ಸಿಂಪಲ್ ಅಂದ್ರೂ ೪೦-೫೦ ಸಾವಿರ ರೂಪಾಯಿನ ವ್ಯವಹಾರವಲ್ಲವೇ?

ದೇವಯ್ಯ : ಅದ್ಕೇ ಏನು ಮಾಡೋದು ಅಂತ ಯೋಚನೆ ಮಾಡ್ತಾ ಇದ್ದೇನೆ.

ನಾಗು : ಹೆಣ್ಣು ಮಕ್ಕಳ ಮದುವೆ ನಿಲ್ಲಿಸಲಿಕ್ಕಾಗುತ್ಯಾ? ಹೇಗಾದ್ರೂ ಮಾಡಿ ಮುಗಿಸಬೇಡ್ವೇ?

ದೇವಯ್ಯ : ಹೀಗ್ ಮಾಡಿದ್ರೆ ಹ್ಯಾಗೆ? ನಮ್ಮ ಅರ್ಧ ಎಕ್ರೆ ಗದ್ದೆ ಮಾರಿದ್ರೆ ೨೦ ಸಾವಿರ ರೂಪಾಯಿ ಸಿಕ್ಕಬಹುದು. ಅದರ ಜೊತೆಗೆ ನಿನ್ನ ಚಿನ್ನದ ಸರ, ಅದು ಇದೂ ಮಾರಿ ಮನೇಲಿರೋ ಬೆಳ್ಳಿ, ಚಿನ್ನದ ಆಭರಣಗಳನ್ನು ಕೊಟ್ಟು ಮದ್ವೆ ಅಂತ ಮಾಡಿದ್ರೆ ನಮಗೆ ಜೀವನದಲ್ಲಿ ನೆಮ್ಮದಿಯಲ್ವೇ ಹೇಳು.

ನಾಗು : ಅಷ್ಟೇ... ಮಗನು ದುಡಿದುಕೊಂಡು ತಿಂತಾನೆ. ಹೆಣ್ಣು ಮಗಳಿಗೆ ಮದುವೆ ಮಾಡೋದೇ ಮುಖ್ಯ.

ದೇವಯ್ಯ : ಹಾಗಾದ್ರೆ ಬಂದ್ರೆ ಒಪ್ಪಿಕೊಂಡು ಬಿಡೋಣ್ವೇ?

ನಾಗು : ಆಂದ ಹಾಗೆ ಹುಡುಗ...?

ದೇವಯ್ಯ : ಹುಡುಗ ನೋಡೋಕೆ ಚೆನ್ನಾಗಿದ್ದಾನೆ. ಬಿ.ಎ. ಓದಿ ವ್ಯಾಪಾರ ವ್ಯವಸಾಯ ನೋಡ್ಕೊಳ್ತಾನೆ ಸಾಲ್ದೇ?

ನಾಗು : ಸಾಕು...

ದೇವಯ್ಯ : ಯಾಕೆ ಕೆಲಸದಲ್ಲಿರುವವನಿಗೆ ಕೊಡಬೇಕು ಅಂತ ಆಸೆಯೇನೋ?

ನಾಗು : ಹಾಗೇನೂ ಇಲ್ಲ, ಓದಿದವರಿಗೇನು ಕೋಡಿರುತ್ತೇನು. ಹುಡುಗ ಯೋಗ್ಯನಾಗಿದ್ದು ಹೊಟ್ಟೆ ಬಟ್ಟೆಗೆ ಹಾಕಿಕೊಂಡು ಜ್ಯೋತಿನ ಸರಿಯಾಗಿ ನೋಡಿಕೊಂಡ್ರೆ ಅಷ್ಟೇ ಸಾಕು.

ದೇವಯ್ಯ : ನನ್ನದಾಯ್ತು, ನಿನ್ನದಾಯ್ತು ಆಕೆಯನ್ನು ಕೇಳಬೇಕಲ್ಲಾ.

ನಾಗ : ಅವಳೇನು ನಮ್ಮ ಮಾತಿಗೆ ಬದ್ಲಾಡೋಲ್ಲ.

ಜ್ಯೋತಿ : (ಬರುತ್ತಾ) ಹ್ಯಾಗೆ ಹೇಳ್ತೀರಿ ಮಾತಿಗೆ ಬದಲು ಹೇಳೋದಿಲ್ಲ ಅಂತ.

ದೇವಯ್ಯ : ಕೇಳ್ದೇನೇ...

ನಾಗು : ಜ್ಯೋತಿ... ನೀನು ನಮ್ಮ ಮಾತು ಕೇಳೋಲ್ವೇ?

ಜ್ಯೋತಿ : ಏನಮ್ಮಾ?

ನಾಗು : ನಿನಗೆ ಮದುವೆ ಮಾಡಬೇಕು ಅಂತಾ ಇದ್ದಾರೆ...!

ಜ್ಯೋತಿ : ಈಗ ನನಗೆ ಯಾವ ವಯಸ್ಸಾಗಿದೆಯಮ್ಮಾ ಇಪ್ಪತ್ತೂ ಆಗಿಲ್ಲ, ಆಗ್ಲೇ ಮದುವೆ ಅಂತೀರಾ? ಈಗೆಲ್ಲಾ ಮದುವೆ ವಯಸ್ಸನ್ನ ಹೆಚ್ಚಿಸಿದ್ದಾರೆ. ಹೆಂಗಸರು ಹದಿನೆಂಟರ ಮೇಲೆ ಆಗಬೇಕು. ಗಂಡಸರು ಇಪ್ಪತ್ತೊಂದು ವರ್ಷಕ್ಕೆ ಮದುವೆ ಆಗೋದು ಉತ್ಮ ಅಂತ ಹೇಳ್ತಾರೆ. ಅಂತಹದ್ದರಲ್ಲಿ ನನಗೆ ಈಗ್ಲೇ ಏನು ಆತುರ ಬಂತು?

ನಾಗು : ವರ ಬಂದಾಗ ಬಿಟ್ಟು ಆಮೇಲೆ... ಪೇಚಾಡೋದು ಸರಿಯಮ್ಮಾ ವರದಕ್ಷಿಣೆ ವರೋಪಚಾರ ಬೇಡ ಅಂತ ಮುಂದೆ ಬಂದಿರೋವ್ರನ್ನ ಬಿಟ್ಟು ಬಿಟ್ಟು ಮುಂದೆ ಎಂತೆಂಥವರು ಬರುತ್ತಾರೋ ಏನೇನು ಕೇಳ್ತಾರೋ...

ಜ್ಯೋತಿ : ಆ ವರದಕ್ಷಿಣೆ ಕೇಳೋವ್ರು ಹೇಡಿಗಳಮ್ಮ ನ್ಯಾಯವಾಗಿ ಕಾನೂನು ಪ್ರಕಾರ ಯಾರೂ ವರದಕ್ಷಿಣೆ ತೆಗೆದುಕೊಳ್ಳುವಂತಿಲ್ಲಮ್ಮ ಅಂಥವ್ರು ಶಿಕ್ಷಾರ್ಹರಮ್ಮ

ನಾಗು : ಅದನ್ಯಾರು ಕೇಳ್ತಾರಮ್ಮ?

ಜ್ಯೋತಿ : ನಮ್ಮಂಥವ್ರು ಬಿಸಿ ಮುಟ್ಟಿಸಿದ್ರೆ ಸರಿಹೋಗುತ್ತೆ.ಎಲ್ಲಾ ಹೆಣ್ಣುಗಳು ಮದ್ವೆ ಬೇಡ ಅಂತ ಕುಳಿತ್ರೆ ಬ್ರಹ್ಮಚಾರಿಯಾಗಿ ಎಷ್ಟು ದಿನ ಇರ್ತಾರೆ ಗಂಡಸರು ಅನ್ನೋವ್ರು, ಆಗ ಅವರೇ ವಧು ದಕ್ಷಿಣೆ ಕೊಟ್ಟು ಮದ್ವೆ ಆಗೋ ಕಾಲ ಬರಬಹುದು.

ದೇವಯ್ಯ : ಹುಚ್ಚು ಹುಡುಗಿ... ನಿನ್ನ ಮನಸ್ಸಿನಲ್ಲೇನಿದೆ ಹೇಳಮ್ಮ... ಹಾಗೆ ಮಾಡೋಣ.

ಜ್ಯೋತಿ : ಅಪ್ಪಾ... ತಂದೆ ತಾಯಿಗಳು ಮದ್ವೆ ಮಾಡಬೇಕು ನಿಜ... ಆದ್ರೆ ನೀವು ಈಗ ಮದುವೆ ಮಾಡೋ ಸ್ಥಿತೀಲಿದ್ದೀರಾ ಹೇಳಿ.

ದೇವಯ್ಯ : ಹಾಗನ್ಬುಟ್ಟು ನಿಲ್ಲಿಸಲಿಕ್ಕಾಗುತ್ಯಮ್ಮಾ...

ಜ್ಯೋತಿ : ನಾನು ನನ್ನ ರೂಮಿನಲ್ಲಿ ಕೂತು ಕೇಳಿಸ್ಕೊಂಡೆ, ಆದ್ರೆ ಈಗ್ಲೇ ಆಸ್ತಿ ಮಾರಿ ಮದ್ವೆ ಮಾಡೋ ಅಂತ ಜರೂರು ಏನು ಹೇಳಿ. ಆಗುತ್ತೆ ನಿಧಾನವಾಗಿ ಆಗ್ಲಿ ಬಿಡಿ. ದೇವರು ನಮಗೆ ಯಾವತ್ತೂ ಎಲ್ಲಾ ಅನುಕೂಲವನ್ನು ಕೊಡ್ತಾನೋ ಆ ಹೊತ್ತಿಗೆ ಆಗುತ್ತೆ. ಅಂದ ಹಾಗೆ ಒಂದು ಒಳ್ಳೇ ಸುದ್ದಿ ಅಪ್ಪಾ.

ದೇವಯ್ಯ : ಏನಮ್ಮಾ...?

ಜ್ಯೋತಿ : ಈ ಹೊತ್ತು ನನಗೆ ತುಮಕೂರಿನಲ್ಲಿ ಒಂದು ಕ್ಲರ್ಕ್ ಕೆಲಸ ಸಿಕ್ಕಿದೆ. ಅದ್ಕೇ ಹೋಗಬೇಕು ಅಂತ ಮನಸ್ಸು ಮಾಡಿದ್ದೇನೆ ಅಪ್ಪಾ. ಸಂಪಾದ್ನೆ ಮಾಡ್ತೇನೆ. ಅಮೇಲೆ ಮದ್ವೆ ಮಾಡಿಕೊಂಡ್ರಾಯ್ತು.

ನಾಗು : ನೀನು ಸಂಪಾದನೆ ಮಾಡಿದ್ರಲ್ಲಿ ನಾವು ಜೀವನ ಮಾಡಬೇಕೇ? ಆ ಹಣದಲ್ಲಿ ನಿನ್ನ ಮದ್ವೆ ಮಾಡಬೇಕೇ ಜ್ಯೋತಿ. ಹೆಣ್ಣು ದುಡಿದು ತರಬೇಕೇ?

ಜ್ಯೋತಿ : ಅದಕ್ಕೇನಮ್ಮಾ ಒಳ್ಳೆ ಹಳ್ಳಿಯವರ ಹಾಗೇ ಇದ್ದೀಯಲ್ಲಾ. ಪಟ್ಟಣದಲ್ಲಿ ಹೆಣ್ಣುಗಳು ಕೆಲಸಕ್ಕೆ ಹೋಗೋಲ್ವೇ? ಕೆಲಸಕ್ಕೆ ಹೋಗೋಕ್ಕೆ ಹೆಂಗಸಾದ್ರೇನು? ಗಂಡಸಾವರೇನು? ಎಲ್ಲಾದ್ರಲ್ಲೂ ಹೆಣ್ಣು-ಗಂಡು ಸಮಾನ್ರು ಕಣಮ್ಮಾ.

ನಾಗ : ಇದುವರೆಗೂ ನಮ್ಮ ಮನೆತನದಲ್ಲಿ ಕೆಲಸಕ್ಕೆ ಹೋಗಿರ್ಲಿಲ್ಲ ಜ್ಯೋತಿ.

ಜ್ಯೋತಿ : ಆಗ ಕಾಲ ಚೆನ್ನಾಗಿತ್ತು ತಿಂದುಂಡು ಮುಗಿಯದ ಆಸ್ತಿಗೆ ಕೆಲಸದ ಅವಶ್ಯಕತೆಯಿರಲಿಲ್ಲ. ಇಂದಿನ ಕಷ್ಟದ ಯುಗಕ್ಕೆ ಹೆಣ್ಣು ಗಂಡು ಎಂಬ ಭೇದ ಭಾವ ಇಲ್ಲದೆ ದುಡಿದು, ಸಂಪಾದಿಸಿ ತಿನ್ನೋ ಕಾಲ ಬಂದಿದೆ, ಮಾಡಬೇಕು. ಕಾಲಕ್ಕೆ ತಕ್ಕ ಹಾಕೆ ನಡ್ಯೋದು ನಮ್ಮ ಧರ್ಮವಲ್ವೇ?

ನಾಗು : ಜ್ಯೋತಿ ನೀನು ಇಷ್ಟೊಂದು ಬುದ್ಧಿವಂತೆಯಾಗಿದ್ದೀಯಲ್ಲಾ ನಿನ್ನನ್ನು ಇನ್ನೂ ಓದಿಸಿದ್ರೆ ಇನ್ನೇನಾಗ್ತಿದ್ಯೋ...

ದೇವಯ್ಯ : ಸಾಮಾನ್ಯವಾಗಿ ಓದುತ್ತಾಳೆ. ಪೇಪರ್, ಮ್ಯಾಗ್‌ಝೀನ್ಸ್ ಪುಸ್ತಕಗಳು ಲೈಬ್ರರೀಲಿ ತಂದು ತಂದು ಓದೋದೇ ಕೆಲ್ಸ. ಬುದ್ಧಿ ಹೆಚ್ಚಿದೆ ಅಂದ್ರೆ ಇನ್ನೇನು ಹೇಳು. ಏನೋ ನಮ್ಮ ಬಡತನಕ್ಕೆ ಅವಳ ವಿದ್ಯಾಭ್ಯಾಸ ನಿಲ್ಲಿಸಬೇಕಾಯ್ತು.

ಜ್ಯೋತಿ : ಪರ್ವಾಗಿಲ್ಲ ಬಿಡಿ ಅಪ್ಪಾ... ಮುಂದಕ್ಕೆ ಎಂ.ಎ.ಓದ್ತೀನಿ.

ನಾಗು : ಜ್ಯೋತಿ ನಿಜವಾಗಲೂ ನೀನು ಹೆಸರಿಗೆ ತಕ್ಕ ಜ್ಯೋತಿ. ಬೇರೆ ಮನೆ ಬೆಳಕು ಮಾಡಬೇಕಾದವಳು. ನಮ್ಮ ಮನೆಯಲ್ಲಿ ಬೆಳಕು ಮಾಡಿದ್ದೀಯಮ್ಮಾ ಅಷ್ಟೇ ಸಂತೋಷ ನಮಗೆ.

ಜ್ಯೋತಿ : ನೀವು ಇದಕ್ಕೆ ಒಪ್ಪಿಕೊಳ್ಳಿ ನಾನು ಕೆಲಸಕ್ಕೆ ಹೋಗಲಿಕ್ಕೆ.

ನಾಗು : ನಿನ್ನಿಷ್ಟವಮ್ಮ

ಜ್ಯೋತಿ : ಸಧ್ಯ ನೀವು ಒಪ್ಪಿದರಲ್ಲಾ... ಸಂತೋಷವಮ್ಮಾ

ನಾಗು : ಗಂಡು ಛಾತಿವಂತ ಕೆಲಸ ಮಾಡಿ ಸಂಪಾದ್ನೆ ಮಾಡಿ ತಂದುಹಾಕ್ತಾನೆ ಅಂತ ಕನಸು ಕಟ್ಟಿದ್ದೆ. ಆದ್ರೆ ಮಗಳ ಕೈಲಿ ದುಡಿಸಿಕೊಂಡೇ ಹೊಟ್ಟೇ ಹೊರೆಯುವ ಕಾಲ ಬುತೇ?

ಜ್ಯೋತಿ : ನೋಡಮ್ಮ ಗಂಡಸು ಹೆಂಗಸು ಎಲ್ಲಾ ಒಂದೇ ಅಂತ ನಾನು ಆಗ್ಲೇ ಹೇಳಲಿಲ್ಲವೇ. ನೀನು ನನ್ನನ್ನು ಗಂಡು ಮಗು ಅಂತ್ಲೇ ತಿಳ್ಕೊಳ್ಳಮ್ಮ ಬೇಕಾದ್ರೆ. ಅದ್ಕೆ ಸಂಚಿ ಹೊನ್ನಮ್ಮ ಹೇಳಿದ್ದು ಹೆಣ್ಣಾದ್ರೇನು ಗಂಡಾದ್ರೇನು ಅಂತ? ಸೊಗಸಾಗಿ ಸಾಂಗತ್ಯದಲ್ಲಿ ಬರ್ದಿದ್ದಾಳಮ್ಮ.

ನಾಗು : ಏನು ಪದ್ಯ ಬರ್ದಿದ್ದಾಳೆ?

(ಜ್ಯೋತಿ ಪುಸ್ತಕವನ್ನು ತೆಗೆದುಕೊಂಡು ಬಂದು ಹಾಡುವಳು)

ಪೆಣ್ಣ ಪೆತ್ತವರ ಬಳಗ ಬೆಳೆವುದು ಬೇಗ
ಪೆಣ್ಣ ಪೆತ್ತವರು ಪೆರ್ಚುವರು
ಪೆಣ್ಣ ಪೆತ್ತು ದರಿಂದ ಪಸರೆನೆಸಿತು ಮಿಗ
ಬಣ್ಣವೇರಿತು ಪಾಲ್ಗಡಲು ॥ ೧ ॥

ಪೆಣ್ಣಿಂದ ಪೆರ್ಮೆಗೊಂಡನು ಹಿಮವಂತನು
ಪೆಣ್ಣಿಂದ ಭೃಗು ಪೆರ್ಚಿಸಿದನು
ಪೆಣ್ಣಿಂದ ಜನಕರಾಯನು ಜಸವಡೆದನು।
ಪೆಣ್ಣ ನಿಂದಿಸಲೇಕೆ ಪೆರರು ॥ ೨ ॥

ಸಿರಿರಾಣಿಯ ಸೀತೆಯ ರುಕ್ಮಿಣಿಯ ಶ್ರೀ
ಹರಿಯೊಡನೊಂದೆ ಹಂತಿಯೊಳು
ಇರಿಸಿ ಪೂಜೆಯನೊಡರಿಸುವರು ಪಿರಿಯರು
ಪರಕಿಸುವೊಡವರು ಪೆಣ್ಣೆಸೆ ॥ ೩ ॥

ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೇ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು ॥ ೪ ॥

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರೀರ್ವರೊಳೇಳ್ಗೆ ಪಡೆದವರಿಂದ
ಸವನಿಪುದಿಹಪರ ಸೌಖ್ಯ ॥ ೫ ॥

## ದೃಶ್ಯ-೫

(ದಾರಿಯಲ್ಲಿ ಜಗದೀಶ ಬರುತ್ತಿರಲು ಆ ಕಡೆಯಿಂದ ಮಾರುತಿ ಅಮಲಿನಲ್ಲಿ ಬರುತ್ತಿರಲು)

ಜಗದೀಶ : ಮಾರುತೀ... ಏನು ಹಾರುತೀ...?

ಮಾರುತಿ : ರೆಕ್ಕೆ ಬಂದೈತೆ...

ಜಗದೀಶ : ಎಲ್ಲಿಂದ ರೆಕ್ಕೆ ತಂದೆ?

ಮಾರುತಿ : ಬೆಂಗಳೂರಿಂದ...

ಜಗದೀಶ : ಸರಿಯಾಗಿ... ಸಕತ್ತಾಗಿ... ಪರಮಾತ್ಮನ ಸೇವಿಸಿರುವಂಗಿದೆ.

ಮಾರುತಿ : ಪುಣ್ಯಾತ್ಮಗಂಟಲವರ್ಗ್ಗೂ ಕೊಡಿಸ್ದ... ಕೈ ಮುಗೀಬೇಕು ನನ್ನ ಪ್ರಾಣ ಸ್ನೇಹಿತ...

ಜಗದೀಶ : ಪ್ರಾಣ ಉಳಿಸೋ ಸ್ನೇಹಿತನಲ್ಲಾ ಪ್ರಾಣ ತೆಗೆಯೋಕೆ ಕೊಡಿಸ್ದ ಅಷ್ಟೆ...

ಮಾರುತಿ : ನಿಂಗೇನ್ಗೊತ್ತು... ಬುಡಪ್ಪ...

ಜಗದೀಶ : ಈ ವಯಸ್ಸಿಗೇ ನಿನ್ಗೇನು ಬಂತು ಕೇಡು. ಮೇಷ್ಟರು ಎಷ್ಟು ಒಳ್ಳೆಯವರು. ಅಂಥಾ ಮನೆತನದಲ್ಲಿ ನೀನು ಯಾಕಾದ್ರೂ ಹುಟ್ಟಿದೆಯೋ?

ಮಾರುತಿ : ಹುಟ್ಟಡಗಸೋಕೇ...

ಜಗದೀಶ : ಸಾಕು... ನಡೆ...

ಮಾರುತಿ : ಯಾಕೆ ನಾನು ನಡೀತಾ ಇಲ್ವಾ... ಚೆನ್ನಾಗಿ ನಡೀತಾ ಇದ್ದೀನಿ...ನೀನು... ಮೇಷ್ಟ್ರೇ...

ಜಗದೀಶ : ಹ್ಯಾಗೆ ಕಾಣಿಸ್ತಾ ಇದ್ದೀನಿ...?

ಮಾರುತಿ : ಹಾಗೇ ಕಾಣ್ತೆ...

ಜಗದೀಶ : ಕಣ್ಣು ತೀಡ್ಕೊಂಡು ನೋಡು...

ಮಾರುತಿ : ಜಗದೀಶನೋ...

ಜಗದೀಶ : ಹಾಗಾದ್ರೆ ಅಮಲು ಇಳಿದಿರುವಾಗೆ ಕಾಣುತ್ತೆ.

ಮಾರುತಿ : ಇಳೀದೇ ಏನಾಗುತ್ತೆ?

ಜಗದೀಶ : ಇನ್ನೆಷ್ಟು ದಿನ ಕುಡಿದು ಹೀಗೆ ಒದ್ದಾಡ್ತೀಯಾ... ಬಿಡು...

ಮಾರುತಿ : ಯಾಕೋ...?

ಜಗದೀಶ : ಹೀಗೆ ಕುಡಿದು ಅಮಲು ಪಿತ್ತ ಹತ್ಕೊಂಡು ಕುಣೀತೀರಿ ಅಂತ... ನಿಮ್ಗಳನ್ನು ಕಾಪಾಡೋಕ್ಕೆ ಪಾನ ನಿರೋಧ ಜಾರಿಗೆ ತರ್ತಾರೆ. ಗಾಂಧಿ ಏನು ಬಯಸಿದ್ರು ಅದು ಮತ್ತೆ ಫಲಿಸೋ ಕಾಲ ಬಂದೈತೆ ಮಗಾ...

ಮಾರುತಿ : ಅಂಗಾ...?

ಜಗದೀಶ : ಅಂಗೇನು, ಇಂಗೆ. ಇನ್ನು ನಿಮ್ಮ ಗತಿ ತಣ್ಣಗೇ... ತಣ್ಣೀರು ಕುಡ್ಕೊಂಡಿರಬೇಕು.

ಮಾರುತಿ : ಇದು ಬೇರೆ ಬರುತ್ತಾ ಹಾಳಾಗಿ?

ಜಗದೀಶ : ಬಂದ್ರೆ ಉತ್ತಮವೇ ಆಗುತ್ತೆ ಬಿಡು.

ಮಾರುತಿ : ನಮ್ಮಂಥವರಿಗೆ ಕಷ್ಟವೇ ಆಯಿತು.

ಜಗದೀಶ : ನೀನು ಸಂಪಾದಿಸೋ ಹುಟ್ಟಿಗೆ ಕುಡೀಲೂ ಬೇಕೇ? ನಿಮ್ಮ ಅಪ್ಪ ಕೇಳಿದ್ರೆ ಸುಮ್ನೆ ಬಿಡ್ತಾರ್ಯೇ?

ಮಾರುತಿ : ಏನು ಮಾಡ್ತಾರೆ...?

ಜಗದೀಶ : ಅವರು ನಿನಗೇನೂ ಮಾಡಲ್ಲ. ಆವು ತಾವೇ ಪ್ರಾಣ ಕಳ್ಕೊಂಡ್ರೂ ಕಳ್ಕೊಂಡ್ರೇ ಯಾರಿಗೆ ಗೊತ್ತು...?

ಮಾರುತಿ : ತಳ್ಳಯ್ಯಾ...

ಜಗದೀಶ : ಮಾರುತೀ... ಏನು ತಂದೆಯಯ್ಯಾ ನಿಮ್ಮ ತಂದೆಗೆ ಕೀರುತಿ.

ಮಾರುತಿ : ನೀನು ಬಾ... ಬೇಕಾದ್ರೆ ಬೆಂಗಳೂರಿನಲ್ಲಿ ಬಾರಿಗೆ ಹೋಗಿ ಕುಡಿದು ಬರುವ್ಯಂತೆ...

ಜಗದೀಶ : ಸಪ್ಪ ನೀನೊಬ್ಬನೇ ಕುಡಿದು ಆನಂದ ಪಡೆಯಪ್ಪಾ... ನಮಗೇನೂ ಬೇಡ.

ಮಾರುತಿ : ಲೈಫ್ ಎಂಜಾಯ್ ಮಾಡೋದು ನಿನಗೇನು ಗೊತ್ತು? ಹೋಗು ಮಂಕುಸಾಂಬ್ರಾಣಿ.

ಜಗದೀಶ : ಓದ್ದೋದ್ರಲ್ಲಿ ತೋರಿಸ್ದೇಹೋದ್ರೂ ಇಂಥ ಕೆಟ್ಟ ಹವ್ಯಾಸಗಳಲ್ಲಿ ತೋರಿಸ್ತಿದ್ದೀಯಲ್ಲಾ.

ಮಾರುತಿ : ಓದಿ ಓದಿ ಮರುಳಾದ ಕೂಚುಭಟ್ಟ' ಅಂತ ಸುಮ್ಮನೆ ಪುಸ್ತಕದ ಹುಳುವಾಗಿ ಹೋಗು.

ಜಗದೀಶ : ಈಗ ಹೀಗೆ ದಾರೀಲೇ ನಿಂತ್ಕೊಂಡು ಮಾತಾಡ್ತೀಯೋ ಮನೆಗೆ ಬರ್ತೀಯೋ?

ಮಾರುತಿ : ನನಗ್ಯಾವ ಮನೆ. ಯಾರು ನನ್ನ ಹಿತವಾಗಿ ಕಾಣ್ತಾರೆ.

ಜಗದೀಶ : ನೀನು ಆಡೋ ಆಟಕ್ಕೆ ಯಾವ ತಂದೆ ತಾಯಿ ತಾನೇ ಪ್ರೀತಿಯಾಗಿ ಕಾಣ್ತಾರೆ. ಅದರಲ್ಲೂ ಮೇಷ್ಟ್ರೇ ಎಷ್ಟೋ ಮೇಲು. ಏನೋ ಗಾದೆ ಹೇಳೋಲ್ವೆ, 'ಹೆತ್ತವರಿಗೆ ಹೆಗ್ಗಣ ಮುದ್ದು' ಅಂದ ಹಾಗೆ ನಿನ್ನನ್ನು ಮಗ ಅಂತಾರೆ. ಬಂದಾಗ ನಿಮ್ಮ ತಾಯಿ ಊಟ ಹಾಕ್ತಾರೆ.

ಮಾರುತಿ : ಇಲ್ಲಪ್ಪಾ ನೀನು ತಿಳ್ಕೊಂಡಷ್ಟೇನೂ ಇಲ್ಲ, ಬೈತಾರೆ.

ಜಗದೀಶ : ಬೈದೆ ಹೊಗಳಬೇಕೇನೋ ನಿನ್ನ ಆಟಗಳನ್ನು.

ಮಾರುತಿ : ಅದ್ಕೇ ನಾನು ಎಲ್ಲಿರ್ತೀನೋ, ಯಾವ ದಾರೀಲಿರ್ತೀನೋ ಅದೇ ಮನೆ ಅಂತ ತಿಳ್ಕೋತೀನಿ.

ಜಗದೀಶ : ಏನೋ ಒಂದು ದಾರಿಯಾಗ್ತೀನಿ, ತಂದೆ-ತಾಯಿ ಮನಸ್ಸು ಸಂತೋಷ ಪಡಿಸ್ತೀನಿ ಅನ್ನೋದ್‌ಬೇಡ. ಸಿಕ್ಕಿದ ದಾರೀಲಿ ನಿಂತು ದಾರಿ ತಪ್ತೀಯಲ್ಲಾ ಸರಿಯಾ ಇದು?

ಮಾರುತಿ : ಏನಾದ್ರೂ ಕೆಲಸ ಕೊಡಿಸ್ತೀಯಾ?

ಜಗದೀಶ : ನೀನು ಓದಿ ಬೂದಿ ಮುಕ್ಕಿರೋದ್ಕೆ ಏನು ಕೆಲ್ಸ ಕೊಡಿಸೋದು?

ಮಾರುತಿ : ಏನಾದ್ರೂ ಒಂದು.

ಜಗದೀಶ : ಚಂದ್ರಯ್ಯ ಶೆಟ್ಟರ ಅಂಗಡೀಲಿ ಇದ್ಯೋ... ಒಂದು ಮುನ್ನೂರು ರೂಪಾಯಿ ಕೊಡ್ತಾರೆ ತಿಂಗಳಿಗೆ.

ಮಾರುತಿ : ಛೇ... ಹೇಳ್ತಾ ಹೇಳ್ತಾ ಎಂಥ ಕೆಲಸ ಹೇಳ್ತೀಯಾ? ಅವನು ಕೊಡೋ ಮುನ್ನೂರು ರೂಪಾಯಿ ನನ್ನ ಸಿಗರೇಟಿನ ಖರ್ಚಿಗಾಗೋಲ್ಲ.

ಜಗದೀಶ : ಓಹೋ ನೀನೋದಿರೋದ್ಕೆ ಡೆಪ್ಯುಟಿ ಕಮೀಷನರ್ ಕೆಲಸ ಕೊಟ್ಬು ಬುಡ್ತಾರೇನೋ? ನಿನ್ನ ಉತ್ಪತ್ತಿಗೆ ಸಿಗರೇಟ್ ಬೇರೆ ಕೇಡು... ನೋಡು ಅವೆಲ್ಲಾ ಒಳ್ಳೆಯದಲ್ಲ ಕಣಯ್ಯಾ ಮಾರುತಿ... ಸಿಗರೇಟು, ಮದ್ಯ ಇವು ದೇಹದ ಮೇಲೆ ಪರಿಣಾಮ ಬೀರಿ ಖಾಯಿಲೆಗಳಿಗೆ ಕಾರಣವಾಗುತ್ತವೆ.

ಮಾರುತು : ಅದಿಲ್ದೇ ನಾನು ಹೇಗಯ್ಯಾ ಜೀವಿಸೋದು? ನಾನಿಲ್ದೇ ಬೇಕಾದ್ರೆ ಅವಿರ್ತವೆ.

ಜಗದೀಶ : ಮಾರುತಿ ಸ್ವಲ್ಪ ನನ್ನ ಮಾತು ಕೇಳು ಒಳ್ಳೇದಾಗುತ್ತೆ.

ಮಾರುತಿ : ಎಲ್ರೂ ನನಗೆ ಬುದ್ಧಿ ಹೇಳೋವ್ರೆ.

ಜನದೀಶ : ಬುದ್ಧಿ ನೆಟ್ಟಗಿದ್ದು ಒಳ್ಳೇ ದಾರೀಲೇ ಹೋಗ್ತಿದ್ರೆ ಯಾರೂ ಬುದ್ಧಿ ಹೇಳ್ತಿರಲಿಲ್ಲ. ನಿನ್ನತ್ರಾನೇ ಬುದ್ಧಿ ಕಲ್ತ್‌ಕೊಳ್ತಿದ್ರು. ಈಗ ಹಾಗಲ್ವಲ್ಲೋ

ಮಾರುತಿ : ಜಗ... ಜಗತ್ತು ದೊಡ್ಡದಾಗಿದೆ. ನನ್ನ ಮನಸ್ಸಿಗೆ ಬಂದ ಹಾಗೆ ನಾನು ಮಾಡ್ತೀನಿ. ನೀನು ಹೋಗಪ್ಪಾ... ನಿನ್ನ ಉಪದೇಶ ನನಗೆ ಹಿಡಿಸೋಲ್ಲ.

ಜಗದೀಶ : ನೋಡು ಸಾರಿ ಸಾರಿ ಹೇಳ್ತೀನಿ. ನೀನು ಹೀಗೆಲ್ಲಾ ಆಡೋದು ನಿನಗೂ ಒಳ್ಳೇದಲ್ಲಾ... ನಿಮ್ಮ ಮನೆತನದ ಗೌರವಕ್ಕೂ ಕುಂದು ಕಣಯ್ಯಾ.

ಮಾರುತಿ : ನಾನು ಅಷ್ಟು ಕೀಳು ಅಂತ ಕಾಣಿಸ್ತೀನಾ?

ಜಗದೀಶ : ಕೀಳಿಗಿಂತ ಕೀಳು.

ಮಾರುತಿ : ಈ ಹೊತ್ತು ನಾನು ಕುಳಿತು ಯೋಚನೆ ಮಾಡಿ ಆಮೇಲೆ ನಿರ್ಧಾರಕ್ಕೆ ಬರ್ತೀನಿ ಹೋಗು.

ಜಗದೀಶ : ಈಗ ನಿಂತ ಕ್ಷಣವೇ ಯೋಚನೆ ಮಾಡಿ ಸಿರ್ಧಾರಕ್ಕೆ ಬರೋದಕ್ಕೆ ಆಗೋಲ್ವೇನೋ?

ಮಾರುತಿ : ತಲೆ ಬಿಸಿ...

ಜಗದೀಶ : ಸ್ವಲ್ಪ ತಣ್ಣೀರು ತಟ್ಟೆ ತಂಪು ಮಾಡಲೇ...

ಮಾರುತಿ : ನೋಡಪ್ಪಾ ನನ್ನ ಬಿಟ್ಬುಬಿಡು. ನಾನು ಫ್ರೀ ಬರ್ಡ್ ಹಾಗೆ ಹಾರ್ಕೊಂಡಿರ್ತೀನಿ.

ಜಗದೀಶ : ಹಾರಾಡ್ಕೊಂಡಿರ್ತೀಯಾ? ಊಟ ತಿಂಡಿ ಅವೆಲ್ಲಾ...

ಮಾರುತಿ : ಹುಟ್ಟಿಸಿದ ದೇವರು ಹುಲ್ಲು ನೀರು ಕೊಡ್ನೇ....

ಜಗದೀಶ : ಕೊಟ್ಟಿದ್ದಾನೆ ಹುಲ್ಲು ಮೇಯಿ, ನೀರು ಕುಡಿ... ಒಳ್ಳೆ ಮಾರುತಿ ಅಸ್ನೊಡ್ಕೂ... ಮಾರುತಿ... ಹಿಡಿಬೇಕು ನಿನ್ನ ಮುಖಕ್ಕೆ ಆರತಿ... ಕರ್ಪೂರದಾರತಿ.

ಮಾರುತಿ : ಆಂಜನೇಯನ ದೇವಸ್ಥಾನ ಇದೆ ಹೋಗಪ್ಪಾ.

ಜಗದೀಶ : ಹೌದು ಅಲ್ಲಿಗೇ... ಇನ್ನೇನು ನಿನಗೆ ಅಂತಾ ತಿಳ್ಕೊಂಡಿದ್ದೀಯಾ? ನಿನಗೆ ಆ ಯೋಗ್ಯತೆ ಎಲ್ಲಿದೆ? ಅದರಲ್ಲೂ ಈ ಜನ್ಮದಲ್ಲಂತೂ ಖಂಡಿತ ಸಾಧ್ಯವಿಲ್ಲ.

ಮಾರುತಿ : ಸರಿ ಅಷ್ಟು ಹೇಳಿ ನೀನು ದಾರಿ ಬಿಟ್ರೆ ಸಾಕು.

ಜಗದೀಶ : ದಾರಿ ದೊಡ್ಡದಾಗೆ ಬಿಟ್ಬಿರ್ತೀನಿ. ಅತ್ತಿಂದಿತ್ತ ಒದ್ದಾಡು...

ಮಾರುತಿ : ಆಯ್ತು ಜಗದೀಶ...

ಜಗದೀಶ : ನಿನಗೆ ಹೇಳಿದ್ದೆಲ್ಲಾ ಸರ್ವಜ್ಞ ಹೇಳಿದಂತೆ ಮೂರ್ಖನ ಮುಂದೆ ಹೇಳೋದೆಲ್ಲಾ ಗೋರ್ಕಲ್ಲಮೇಲೆ ಮಳೆ ಹೊಯ್ದ ಹಾಗಾಯಿತು ಅಂತ. ಅಂತೂ ಅದು ನಿಜವೇ ಅನ್ನಿಸ್ತದೆ. ಈಗ ಈ ಮಾರುತೀನ ನೋಡಿದ್ರೆ ಒಬ್ಬ ಮಗನಾದ್ರೇನು ಹತ್ತಾದ್ರೇನು? ಮೇಷ್ಟ್ರ ಒಬ್ಬ ಮಗನಿಂದ ಕೀರ್ತಿಪಡ್ಕೋದರ ಬದಲು ಅಪಕೀರ್ತಿ ಪಡೆಯೋಗ್ಹಾಯ್ತು, ಮಕ್ಕಳು ಹುಟ್ಟಿದರೂ ಪುಣ್ಯ ಬೇಕು. ಇಂಥ ಮಕ್ಕಳು ಧರೆಗೆ ಹೊರೆ ಅಲ್ದೇ ಇನ್ನೇನು?

(ಹೀಗೆ ಹೇಳಿಕೊಂಡು ಹೋಗುತ್ತಿರಲು ಮಾರುತಿ ತನ್ನಷ್ಟಕ್ಕೆ ತಾನು ಬಾಯಿಗೆ ಬಂದಂತೆ ಪೇಚಾಡುತ್ತಾ ಮತ್ತೊಂದೆಡೆಗೆ ನಡೆಯುತ್ತಾನೆ)

## ದೃಶ್ಯ-೬

ಮಾರುತಿ : ಅಪ್ಪಾ...

ದೇವಯ್ಯ : ಬಂದ್ಯಪ್ಪಾ...

ಮಾರುತಿ : ಹ್ಞೂಂ...

ದೇವಯ್ಯ : ನೀನು ನನ್ನ ಮಗನಾಗಿ ಹುಟ್ಟಬಾರದಾಗಿತ್ತು ಕಣೋ.

ಮಾರುತಿ : ಆದರೆ ಹುಟ್ಟಿಬಿಟ್ಟಿದ್ದೇನೆ.

ದೇವಯ್ಯ : ಆದರೆ ನಿನ್ನನ್ನು ಕೈಬಿಟ್ಟದ್ದೇನೆ.

ಮಾರುತಿ : ಏಕಪ್ಪಾ?

ದೇವಯ್ಯ : ನೀನು ನನ್ನ ಮಗ ಅಂತ ಹೇಳ್ಕೊಳ್ಳೋಕೆ ನನಗೆ ತುಂಬಾ ಸಂಕಟವಾಗುತ್ತೆ ಕಣೋ. ಬಾರೇ... ಬಾ ನೋಡು ಬಾ ನಿನ್ನ ಮಗನನ್ನ. ಯಾರೋ ಸ್ನೇಹಿತರ ಹತ್ತಿರ ೩೦೦ ರೂಪಾಯಿ ಈಸ್ಕೊಂಡು ತಿಂದು ಬಿಟ್ಟಿದ್ದಾನಂತೆ. ಆತ

ದಾರೀಲಿ ಸಿಕ್ಕಿ ನನ್ನನ್ನು ಕೇಳ್ದ. ಇವನು ಹೀಗೆ ಅಳಿಯುತ್ತಾ ಬರ್ಲಿ ನಾನು ಕೊಡ್ತಾ ಬರ್ತೀನಿ.

(ಅಷ್ಟರಲ್ಲಿ ತಾಯಿ ಬರುತ್ತಾರೆ)

ಮಾರುತಿ : ಅಮ್ಮಾ... ನೀನು ಏನಂತೀಯಮ್ಮಾ?

ನಾಗು : ಮಾರುತಿ... ನಿಮ್ಮ ತಂದೆಗಿಂತ ಹೆಚ್ಚು ದುಃಖವಾಗ್ತಾ ಇದೆ ಕಣಪ್ಪಾ...

ದೇವಯ್ಯ : ಈಗ ಈತ ಬಂದಿರೋ ಅವಸ್ಥೆ ನೋಡ್ದ್ಯಾ ಬೆಂಗಳೂರಿಗೆ ಹೋಗಿ ಕುಡಿದು ಬಂದಿದ್ದಾನೆ.

ನಾಗು : ಥೂ ಚಂಡಾಲ... ನಿಜವೇನೋ...

ಮಾರುತಿ : ಅಪ್ಪಾ ಸುಮ್ನೇ...

ನಾಗು : ಸುಮ್ನೇ ಹೇಳ್ತಿಲ್ಲ ಕಣೋ. ನೀನು ನನ್ನ ಮಗ ಅನ್ನೋದ್ಕೆ ಏನುಳಿದಿದೆ ಹೇಳು. ಊರಿನಲ್ಲೆಲ್ಲಾ ನನ್ನ ಮಾನ ಕಳೆದಿದ್ದೀಯೆ, ಮಾಡಬಾರದ ಕೆಲಸಗಳನ್ನ ಮಾಡಿದ್ದೀಯೆ.

ದೇವಯ್ಯ : ಕದ್ದೆ, ಮೋಸ ಮಾಡ್ದೆ, ಕುಡಿದೆ, ಇಸ್ಪೀಟಾಡ್ದೆ. ಒದ್ದೇ ಬರೀದೇ ದಂಡವಾಗಿ ಅನ್ನ ತಿಂದು ಘಟ ಬೆಳೆಸ್ದೆ, ಇನ್ನೇನು ಮಾಡಬೇಕು ಹೇಳಪ್ಪಾ? ಹಣಾನ ಈಗ ಕಳಕೊಂಡದ್ದಲ್ಲದೆ ಇನ್ನೂ ಸಾಲ ಮಾಡಿಕೊಡು ಅಂತ ಕೇಳಲಿಕ್ಕೆ ಬಂದೆ ಅಲ್ಲಾ.... ಥೂ ನಿನ್ನ ಮುಖ ನೋಡೋಕೆ ಬೇಜಾರಾಗುತ್ತೆ ಕಣೋ. ಹೊರಟ್ಹೋಗೋ ಇಲ್ಲಿಂದ...

ಮಾರುತಿ : ಹುಟ್ಟಿದಾಗ್ಲೇ ಸಾಯಿಸಿಬಿಟ್ಟಿದ್ರೆ ಚೆನ್ನಾಗಿರ್ತಿತ್ತಲ್ಲಾ.

ದೇವಯ್ಯ : ಆಗ ಹೀಗೆ ಅಂತ ಗೊತ್ತಿರಲಿಲ್ಲಾ.

ಮಾರುತಿ : ಈಗ ಗೊತ್ತಾಯ್ತಲ್ಲಾ, ಕೊಂದುಬಿಡಿ. ಒಂದು ಸ್ವಲ್ಪ ವಿಷ ಕೊಟ್ರಾಯ್ತಲ್ಲ. ನೀವೇ ಸುಖವಾಗಿರಬಹುದಲ್ಲಾ.

ನಾಗು : ಏನೋ ಮಾರುತಿ ನೀನು ಹೇಳ್ತಿರೋದು. ಹೆತ್ತವರು ನಿನಗೆ ವಿಷ ಕೊಟ್ಟು ಸಾಯಿಸಿಬಿಟ್ರೆ ಸಂತೋಷವಾಗುತ್ತೆ ಅಲ್ವೇನೋ? ತಂದೆತಾಯಿ ಕೆಟ್ಟ ದಾರೀಲಿ ಹೋಗೋ ಮಕ್ಕಳನ್ನ ಒಳ್ಳೇ ದಾರೀಗೆ ಬನ್ನೀಂತ ಬುದ್ಧಿವಾದ ಹೇಳೋದು ನ್ಯಾಯವಲ್ಲವೇನೋ? ತಂದೆ-ತಾಯಿ ಮಾತ್ನ ಮೀರ್ದ ನೀನು...

ಮಾರುತಿ : ನಿಮ್ಮದೇ ನ್ಯಾಯ, ನನ್ನದು ಅನ್ಯಾಯ ಅಲ್ವೇ?

ದೇವಯ್ಯ : ಅನ್ಯಾಯವಲ್ದೇ ಏನು? ಮಹಾ ಅನ್ಯಾಯ.

ಮಾರುತಿ : ಅಪ್ಪಾ... ನಾನು ನಿಮ್ಮ ಕಣ್ ಎದುರಿಗಿರೋದು ನಿಮಗೆ ಬೇಡಾಂತ ಕಾಣುತ್ತೆ.

ನಾಗು : ಸರಿಯಾಗಿದ್ರೆ... ಯಾವ ತಂದೆ-ತಾಯಿ ಮಕ್ಕಳನ್ನ ಕಣ್ಣೆದುರಿಗೆ ಇರಬ್ಯಾಡ ಅಂತಾರೆ?

ಮಾರುತಿ : ನೀವು ಹೇಳೋದ್ ನೋಡಿದ್ರೆ ನನ್ನನ್ನು ಮನೆಯಿಂದ ಹೊರಕ್ಹಾಕೋ ಹಾಗೆ ಕಾಣುತ್ತೆ.

ದೇವಯ್ಯ : ನಿನ್ನಂಥ ಮೂರ್ಖನನ್ನು ಮಗ ಅಂತ ಹೇಗೆ ದಿನ ಬೆಳಗಾದ್ರೆ ನೋಡೋದು. ಎಷ್ಟು ಹೇಳಿದ್ರೂ ಎಳ್ಳುಕಾಳಷ್ಟು ಬುದ್ಧೀನೂ ಕಲಿತುಕೊಳ್ದೇ ಹೋದ್ರೆ.

ಮಾರುತಿ : ಅಪ್ಪಾ ನೀವೇ ಸುಖವಾಗಿರಿ. ನಾನು ನಿಮ್ಮ ಕಣ್ಣೆದುರಿಗಿದ್ರೆ ತಾನೇ ದುಃಖ ಕಷ್ಟ. ನಾನೇ ಮನೆಬಿಟ್ಟು ಹೊರಟು ಹೋಗ್ತೀನಿ.

ದೇವಯ್ಯ : ಮನೆ ಬಿಟ್ಟು ಹೋಗೋದು ದೊಡ್ಡ ಕೆಲಸವೇನೋ. ಮನೆಗೆ ಒಬ್ಬನೇ ಗಂಡು ಮಗನಾದ ನೀನು ತಂದೆ-ತಾಯಿಯನ್ನ ಅವರ ಮುಪ್ಪಿನ ಕಾಲದಲ್ಲಿ ಸಾಕೋದು ನಿನ್ನ ಧರ್ಮವಲ್ಲವೇನೋ? ನಿನ್ನನ್ನು ಇಷ್ಟು ದೊಡ್ಡವನಾಗಿ ಮಾಡಲಿಕ್ಕೆ ನಾವು ಎಷ್ಟು ಕಷ್ಟು ಪಟ್ಟಿದ್ದೇವೆ ಎನ್ನುವುದು ನಮಗೆ ಗೊತ್ತು.

ಮಾರುತಿ : ನಿಮಗೆ ಬೇಜಾರಾದಾಗೆ ನಮಗೂ ಬೇಜಾರಾಗುತ್ತೆ. ನನ್ನಿಂದ ನಿಮಗ್ಯಾಕೆ ತೊಂದ್ರೆ... ನೀವೇ ಸುಖವಾಗಿರಿ... ನಾನೇ ಕಷ್ಟ ಪಡ್ತೀನಿ. ಇನ್ನು ಮೇಲೆ ನಿಮಗೆ ಮುಖಾನೂ ತೋರಿಸೋಲ್ಲ. ಇಂದೇ ತೊಲಗಿಹೋಗ್ತೀನಿ.

ದೇವಯ್ಯ : ದುಡುಕಬೇಡ್ವೋ...? ನಿಧಾನವಾಗಿ ಯೋಚನೆ ಮಾಡಿ ಒಳ್ಳೇ ದಾರಿಗೆ ಬಾ...

ಮಾರುತಿ : ಒಳ್ಳೇ ದಾರೀಗೆ ನಾನು ಹೋಗೋದು.

(ಎಂದು ಕೈ ಬೀಸಿಕೊಂಡು ಒಳಗೆ ಹೋಗುತ್ತಾನೆ)

## ದೃಶ್ಯ-೭

(ನಾಗು ಯೋಚನಾಮಗ್ನಳಾಗಿ ಕುಳಿತಿರಲು ಗಂಡ ದೇವಯ್ಯ)

ದೇವಯ್ಯ : ನಾಗು... ನಾಗು.... ಯಾಕೆ ಮಂಕು ಬಡಿದವರ ಹಾಗೆ ಕುಳಿತು ಬಿಟ್ಟಿದ್ದೀಯ?

ನಾಗು : ಮಂಕು ಬಡಿದವರ ಹಾಗೆ ಕುಳಿತುಕೊಳ್ದೆ ಇನ್ನೇನು ಉಳಿದಿದೆ ನಮ್ಮ ಜೀವನದಲ್ಲಿ ಹೇಳಿ, (ಅಳುತ್ತಾ) ಅತ್ತರಲ್ಲ ಸತ್ತರೆ ಸಮಾಧಾನ. ಸಾಯ್ಲೂ ಇಲ್ಲ ಬದುಕಲೂ ಇಲ್ಲ. ಹಾವು ಸಾಯೋಲ್ಲ ಕೋಲೂ ಮುರಿಯೋಲ್ಲ, ಹಾಗಾಗಿದೆ ನಮ್ಮ ಜೀವನ.

ದೇವಯ್ಯ : ಸದಾ ಒಂದಲ್ಲ ಒಂದು ಯೋಚನೆ, ಯಾವ ಹೊತ್ತು ಈ ನಿನ್ನ ಜೀವನಕ್ಕೆ ನೆಮ್ಮದಿ.

ನಾಗು : ಆಗ಼್ೇ ಹೇಳಿದ್ನಲ್ಲಾ ಈ ಲೋಕ ಬಿಟ್ಟು ಹೋದ ಮೇಲೆ ಚಿರಶಾಂತಿ ದೊರಕುತ್ತೆ ಅಂತ.

ದೇವಯ್ಯ : ಬಡವರಾಗಿ ಜೀವಿಸಬಹುದು, ಇಲ್ಲ ಸಾಹುಕಾರರಾಗಿ ಬಾಳಬಹುದು. ಆದ್ರೆ ಜನ್ಮಜನ್ಮಾಂತರಕ್ಕೂ ಈ ಮಧ್ಯಮ ವರ್ಗದಲ್ಲಿ ಹುಟ್ಟಿ ಜೀವಿಸುವುದು ಬೇಡ. ಮೇಲೆ ಏರೋಕ್ಕಾಗೋಲ್ಲ, ಕೆಳಕ್ಕಿಳಿಯೋಕ್ಕಾಗೋಲ್ಲ. ತ್ರಿಶಂಕು ಸ್ವರ್ಗದಂತೆ ನಮ್ಮ ಜೀವನ. ಅಂದ ಮೇಲೆ ಶ್ರೇಯಸ್ಸು ಕಾಣಲಿಕ್ಕಾಗುತ್ಯೇ ನೀನೇ ಹೇಳು.

ನಾಗು : ಸುಖ ಶ್ರೇಯಸ್ಸುಗಳು ನಮ್ಮನ್ನ ಅರಸಿಕೊಂಡು ಬರೋಲ್ಲ. ನಾವು ಸುಖವನ್ನು ಅರಸಿಕೊಂಡು ಹೋಗಬೇಕು ಕಣ್ರೆ, ಹಾಗೇ ಜೀವನದಲ್ಲಿ ಕಷ್ಟಗಳನ್ನ ಎದುರಿಸಿದ್ರೇ ಸುಖ ದೊರಕೋದು... ಕಣ್ರೇ. ಹುಡುಗ ನಾಲ್ಕುದಿನ ಹಾಗಾಡ್ತಾನೆ. ಆಮೇಲೆ ಆತನೇ ಸರಿಹೋಗ್ತಾನೆ. ನೋಡಿ ಮೀಸೆ ಬಂದವನು ದೇಶ ಕಾಣಾ ಅಂತ ಗಾದೆ ಇದೆ. ವಯಸ್ಸಿಗೆ ಬಂದ ಹುಡುಗರನ್ನ ಒಂದು ಮಾತಾಡೋದು ತಪ್ಪು. ಆಮೇಲೆ ಅದು ನಾನಾ ಅಭ್ಯಾಸಕ್ಕೆ ಗುರಿಯಾಗಬಹುದು. ಅದ್ಕೇ ಹೇಳ್ತಾರೆ ವಯಸ್ಸಿಗೆ ಬಂದ ಮಗನನ್ನ ಸ್ನೇಹಿತನಾಗಿ ಕಾಣಬೇಕು ಅಂತ.

ದೇವಯ್ಯ : ಅದೇ ಅವನು ಅಷ್ಟು ಹೆಚ್ಚಿಕೊಳ್ಳೋದ್ಕೆ ಕಾರಣ. ನೋಡು ನಾವು ಆತನನ್ನು ಸ್ನೇಹಿತನಂತೆ ಕಾಣಬೇಕೇ ಹೊರತು ಆತ ನಮ್ಮನ್ನ ಸ್ನೇಹಿತ ಅಂತ ಕಾಣಬಾರ್ದು. ಅವನು ತಂದೆಗೆ ಮರ್ಯಾದೆ ಕೊಡ್ತಾ ಇದ್ದಾನಲ್ಲ. ಅಲ್ಲಾ ಅವನು ತಂದೆ-ತಾಯಿ, ದೊಡ್ಡವರ ಚಿಕ್ಕವರು ಅನ್ನೋ ಮನೋಭಾವನೆ ಇಟ್ಟಿದ್ದಾನೆ ಅಂತ ತಿಳಿದು ಕೋಡಿದ್ದೀಯಾ?

ನಾಗು : ಅಲ್ಲಾ ಇರೋವ್ನು ಒಬ್ಬ ವಂಶದ ಕುಡಿ. ಅವನನ್ನೇ ಹೀಗಂತೀರಲ್ಲಾ ಇನ್ನು ನಮ್ಮ ಅಪ್ಪನ ಹಾಗೆ ಮಕ್ಕಳಿದ್ದಿದ್ದರೆ ಅಷ್ಟೊಂದು ಜನ.

ದೆವಯ್ಯ : ನಿಜ ಕೀರ್ತಿಗೆ ಒಬ್ಬ ಮಗನೇ ಸಾಕು. ಆದರೆ ನಮ್ಮ ಅಪಕೀರ್ತಿಗೆ ಇವನು ಒಬ್ಬನಾಗಿ ಹುಟ್ಟಿದ್ನೋ ಏನೋ.

ನಾಗು : ತಪ್ಪು ಮಾಡೋದು ಮಕ್ಕಳ ಸ್ವಭಾವ, ಅದನ್ನ ತಿದ್ದೋದು ತಂದೆ ತಾಯಿಗಳ ಕರ್ತವ್ಯ ಅಲ್ವೇ?

ದೇವಯ್ಯ : ನಿನ್ನ ಮಗ ಬೆರಳು ಚೀಪೋ ಮಗುವೇನೋ! ಮದ್ವೆ ಮಾಡಿದ್ರೆ...

ನಾಗು : ಸುಮ್ನೆ ಯಾಕೆ ಉದ್ವೇಗವಾಗ್ತೀರಾ? ನನ್ನ ಹೊಟ್ಟೆ ಸುಣ್ಣ ಕುದಿಯುವ ಹಾಗೆ ಕುದಿಯುತ್ತೆ ಕಣ್ರೇ... ಹತ್ತು ಕಟ್ಟುವ ಬದಲು ಒಂದು ಮುತ್ತು ಕಟ್ಟು, ಹಂದಿಯಾಗೆ ಹತ್ತು ಹೆರುವುದರ ಬದಲು ನಂದಿಯಾಗೆ ಒಂದು

ಹೆರು ಅಂತ ಒಬ್ಬನೇ ಮಗನನ್ನು ಪಡೆದೆ. ಆತ ಮುತ್ತಾದನೆ, ನಂದಿಯಾದನೆ, ಕೀರ್ತಿ ತಂದನೆ ನೀವೇ ಹೇಳಿ ಮತ್ತೆ. ಈ ವಯಸ್ನಲ್ಲಿ ಸ್ವಲ್ಪ ರಕ್ತವ ಕಾವು, ಯೌವನ... ಸ್ವಲ್ಪ ದುಡುಕು. ಸ್ವಲ್ಪ ದಿವಸ ಆದ ಮೇಲೆ ಒಂದು ಹೆಣ್ಣು ತಂದು ಮದುವೆ ಮಾಡಿಬಿಟ್ಟರೇ ಅವನೇ ಸರಿಯಾಗ್ತಾನೆ.

ದೇವಯ್ಯ : ಆತನನ್ನ ಸಾಕೋದೇ ಕಷ್ಟ ಅಂತಿರುವಾಗ ಅವನಿಗೊಬ್ಬಳು ಹೆಂಡತಿ ಬೇರ. ತಾಯಿಯಾದ ನೀನು ದಿನಾ ಕಣ್ಣೀರ್ನಲ್ಲಿ ಕೈ ತೊಳೆಯುವುದರ ಜೊತ್ಗೆ ಮತ್ತೊಂದು ಮನೆ ಹೆಣ್ಣಂದು ಕಷ್ಟಪಡಬೇಕು, ಇವನನ್ನು ಕಟ್ಕೊಂಡು ಏಗಬೇಕು ಅಂತೀಯಾ. ಬೇಡ ಆ ಕೆಲ್ಸ ಮಾಡಿ ಕಂಡವರ ಹೆಣ್ಣುಮಕ್ಕಳ ಮನಸ್ ನೋಯಿಸ್ಬೇಡ.

ನಾಗು : ಈಗ ಆದದ್ದಾದ್ರೂ ಏನು?

ದೇವಯ್ಯ : ವಿಷಯ ತಿಳಿದು ನಾನು ನೋಯುವುದರ ಜೊತೆಗೆ ನೀನೂ ನೋಯಬೇಕು ಅಂತ ಕೇಳ್ತಾ ಇದ್ದೀಯಾ?

ನಾಗು : ಕಷ್ಟ-ಸುಖ ಎರಡರಲ್ಲೂ ಹೆಂಡತಿ ಸಮಭಾಗಿಯಲ್ವೇನು? ಅದೇನು ಹೇಳಿ.

ದೇವಯ್ಯ : ಈ ಪೊತ್ತು ಯಾವುದೋ ಹುಡುಗಿಯನ್ನ ಚುಡಾಯಿಸಿದ್ದಕ್ಕೆ ಹೆಕ್ಕತ್ತಿನ ಮೇಲೆ ಹತ್ತು ಬಿಟ್ಟು ಸೊಂಟ ಮುರಿವಂತೆ ಹೊಡೆದು... ಅದ್ಕಿಂತ ಅವಮಾನ ಬೇಕೇ ತಂದೆ-ತಾಯಿಯಾದ ನಮಗೆ. ದೇವಯ್ಯ ಮೇಷ್ಟರ ಮಗ ಹೀಗಂತೆ ಅಂದ್ರೆ, ನಾವು ಈ ಊರ ಬೀದೀಲಿ ತಲೆ ಎತ್ತಿ ನಡ್ಯೋಕ್ಕಾಗುತ್ತಾ ನೀನೇ ಹೇಳು... ನಾವು ಇದ್ರೂ ಒಂದೇ ಸತ್ರೂ ಒಂದೇ... ಇದ್ದೂ ಸತ್ತಂತೇ ಈ ಹೊತ್ತು ಬರಲಿ ಆತನಿಗೆ ಸರಿಯಾಗಿ ಮಾಡ್ತೀನಿ.

ನಾಗು : ಅದೋ ಬರ್ತಾ ಇದ್ದಾನೆ... ಏನು ಮಾಡ್ತೀರಿ ಮಾಡಿ.

ದೇವಯ್ಯ : ಮಾರುತಿ...

(ಮಾರುತಿ ಅಂಗ ಚೇಷ್ಟೆಯಲ್ಲಿ ತೊಡಗಿರಲು)

ಹೆಸರಿಗೆ ತಕ್ಕ ಹಾಗೆ ಇದೆ ಚೇಷ್ಟೆ. ನೋಡು ತಂದೆ ತಾಯಿಯ ಎದುರಿಗೆ ಘನ ಗಂಭೀರ ಅನ್ನೋದು ಇದೆಯಾ? ಮಾರುತಿ ಇದು ಮನೆ...

ಮಾರುತಿ : ಗೊತ್ತಿಲ್ದೇ ಇದ್ಯೇ? ಮನೇಗೇ ಅಂತ್ಲೇ ಬಂದಿದ್ದೇನೆ.

ನಾಗು : ಗೊತ್ತಿದ್ರೆ ಹೀಗಾಡ್ತಿರಲಿಲ್ಲ, ಬೀದಿ ನಟನೆಯಲ್ಲೇ ಇದ್ದಾನೆ ನೋಡಿ... ಅವನ ಹಿಪ್ಪಿ ಡ್ರೆಸ್.... ಅವನ ಅವಾಂತರ ನೋಡಿ...

ದೇವಯ್ಯ : ನಾನು ನಿನ್ನನ್ ಮಾತಾಡಿಸ್ತಾ ಇರೋದು. ನಿಮ್ಮಮ್ಮ ಹೇಳ್ತಾ ಇರೋದು ಕೇಳ್ತಾ ಇದ್ಯೇನೋ?

ಮಾರುತಿ : ಅದು ಮಾಮೂಲಿ ಗೋಳು.

ದೇವಯ್ಯ : ಮಾರುತೀ...

ನಾಗು : ಕೇಳಿದ್ರಾ... ಆತನ ಮದಾಮಸ್ತಿನ ಮಾತ್ನ...

ದೇವಯ್ಯ : ನಿನಗೆ ಮನೇಲಿರೋದ್ಕೆ ಇಷ್ಟವಿದ್ಯೋ ಇಲ್ವೋ?

ಮಾರುತಿ : ಇಲ್ಲದೇ ಬಂದಿದ್ದೀನಾ?

ದೇವಯ್ಯ : ನೀನು ಆಡಿದ ಹಾಗೆಲ್ಲಾ ಆಡ್ಕೊಂಡು ಊಟದ ಹೊತ್ತಿಗೆ, ತಿಂಡಿ ಹೊತ್ತಿಗೆ ಬಂದ್ರೆ ನಿನಗೆ ಮಣೆ ಹಾಕ್ತಾರೆ ಅಂತ ತಿಳಿಮಕೊಂಡಿದ್ದೀಯಾ?

ಮಾರುತಿ : ಇಷ್ಟು ದಿನಗಳಿಂದಲೂ ತಿಳಿದುಕೊಂಡೇ ಬಂದಿದ್ದೇನೆ... ಈಗ...

ದೇವಯ್ಯ : ಅದೇ... ಈಗ ಸಾಧ್ಯವಿಲ್ಲ ಅಂತ ಹೇಳ್ತಿದ್ದೇನೆ.

ಮಾರುತಿ : ಸರಿ...

ದೇವಯ್ಯ : ನಾನು ಹೇಳೋದು ಸರಿ ಅಂತೀಯಾ?

ಮಾರುತಿ : ನೀವು ಹೇಳೋದು ಸರಿ ಅಂತ ನನಗೇನು ಗೊತ್ತು. ನೀವೇ ಸರಿ ಅಂತ ತಿಳ್ಕೊಂಡು ತಾನೇ ಮಾತಾಡ್ತಿದ್ದೀರಿ...

ದೇವಯ್ಯ : ಓದದೇ ಹೋದ್ರೂ ಮಾತು ಮಾತ್ರ ಚೆನ್ನಾಗಿ ಪೋಣಿಸ್ತೀಯಾ ಕಣೋ ಮಾರುತಿ. ಯಾವ ಹೊತ್ತಿನ ಘಳಿಗೆಯಲ್ಲಿ ನಿನ್ನ ಹೆಸರನ್ನು ಮಾರುತಿ ಅಂತ ಕರೆದ್ನೋ ಹಾಗೇ ಆಡ್ತೀಯಲ್ಲಾ...

ನಾಗು : ಮಾರುತಿ ಆಂಜನೇಯ ಸ್ವಾಮಿಯ ಹೆಸರು. ಆತನ ಶಕ್ತಿ, ಆತನ ಬುದ್ಧಿ... ಇವನಿಗೆಲ್ಲಿ ಬರಬೇಕು ಬಿಡಿ. ಹೆಸರನ್ನು ಸಾರ್ಥಕ ಪಡಿಸಿಕೊಳ್ಳಲಿಲ್ಲ. ಬರೇ ಮೈ ಬೆಳಸ್ಕೊಂಡ್ನೇ ಹೊರ್ತು ಬುದ್ಧಿ ಬೆಳೆಸಿಕೊಳ್ಳಲಿಲ್ಲ, ಎಲ್ಲಾ ನಮ್ಮ ಕರ್ಮ.

ದೇವಯ್ಯ : ನಮ್ಮದೇಕೆ ಅವನ ಕರ್ಮ ಕಣೇ... ಮಾರುತಿ... ಏನು ಮಾಡ್ಬೇಕು ಅನ್ನೋ ಮನಸ್ ಮಾಡಿದ್ದೀಯೋ ಅದ್ನಾದ್ರೂ ಹೇಳೋ...

ಮಾರುತಿ : ಯೋಚನೆ ಮಾಡಿಲ್ಲ.

ನಾಗು : ಈಗ ನಿಮ್ಮಪ್ಪ ಕೇಳಿದ್ರಲ್ಲಾ, ಯೋಚನೆ ಮಾಡಿ ಹೇಳು.

ಮಾರುತಿ : ನೀವೇ ಹೇಳಿ...

ದೇವಯ್ಯ : ಗಿಳಿಗೆ ಹೇಳಿದ ಹಾಗೆ ಹೇಳಿದ್ವಿ... ಅಪ್ಪ ಅಮ್ಮ ಅನಿಸ್ಕೊಂಡ ನಾವು ಇಷ್ಟು ದಿನಗಳಿಂದ. ಅವುಗಳಲ್ಲಿ ಒಂದು ಮಾತನ್ನಾದ್ರೂ ಕೇಳಿದ್ಯೇನೋ?

ಮಾರುತಿ : ಸುತ್ತಿಬಳಸಿನ ಮಾತು ಕೇಳಲು ನನಗೆ ಮನಸಿಲ್ಲ.

ದೇವಯ್ಯ : ಇಲ್ಲದೇ ಹೋದ್ರೆ ಮನೆ ಬಿಟ್ಟು...

ಮಾರುತಿ : ಅಷ್ಟೇ ತಾನೇ...

ದೇವಯ್ಯ : ನಾಗೂ...

ನಾಗು : ಮಾರುತಿ... ಮನೆ ಬಿಟ್ಟು ಹೋಗೋದು ದೊಡ್ಡ ಕೆಲಸವಲ್ಲ ಕಣೋ. ಮನೆ ಬಿಡೋದೂ ಒಂದೇ, ಮಾನ ಬಿಡೋದೂ ಒಂದೇ. ಮನ ಬಿಗಿ ಹಿಡಿದು ತಂದೆ-ತಾಯಿಯ ಮಾತು ಕೇಳೋ ಮನ ಮಾಡು, ನಿನಗೂ ಒಳ್ಳೇದಾಗುತ್ತೆ, ನಮಗೂ ಒಳ್ಳೇ ಹೆಸರು ಬರುತ್ತೆ. ಕುಲದ ದೀಪವಾಗಿ ಪ್ರಕಾಶಮಾನವಾಗಿರುವುದನ್ನ ಬಿಟ್ಟು... ಕಳಂಕ ಪ್ರಾಯದ ಕತ್ತಲೆ ಆಗಬೇಡ್ವೋ...

ದೇವಯ್ಯ : ಹೌದು ಕಣೋ... ನಿಮ್ಮಮ್ಮ ಹೇಳೋ ಮಾತು ಕೇಳಿ ಒಳ್ಳೆಯವನಾಗೋ ಮನೆ ಬೆಳಗೋದ್ರ ಜೊತೆಗೆ ಸಮಾಜ ಬೆಳಗೋ... ಆಗ ನಿನ್ನ ಮನವೂ ಬೆಳಗುತ್ತೆ.

ಮಾರುತಿ : ಏನು ಮಾಡ್ಬೇಕು ಅದ್ಕೆ...

ದೇವಯ್ಯ : ಓದಲಿಕ್ಕಾಗೋಲ್ಲ ಅಂತ ಹೇಳು.

ಮಾರುತಿ : ಹೌದು...

ದೇವಯ್ಯ : ಮತ್ತೇನು ಮಾಡಬೇಕು ಅಂತಿದ್ದೀಯ?

ಮಾರುತಿ : ನೀವು ಏನು ಮಾಡಿಸಬೇಕು ಅಂತಿದ್ದೀರಿ?

ದೇವಯ್ಯ : ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ಹೇಳಿದರೆ ನಾವು ಮಾಡಿಸುವುದು.

ಮಾರುತಿ : ನಿಮಗೆ ಏನು ಮಾಡಿಸಲಿಕ್ಕೆ ಶಕ್ತಿ ಇದೆ ಅಂತ ಹೇಳಿದ್ರೆ ತಾನೇ ನಾನು ಕೇಳೋದು.

ದೇವಯ್ಯ : ನಮ್ಮ ಯೋಗ್ಯತೆಗೆ ಓದಿಸಬೇಕು ಅನ್ನೋ ಆಸೆ ಇತ್ತಲ್ಲಾ...

ಮಾರುತಿ : ನನ್ನ ತಲೆಗೆ ವಿದ್ಯೆ ಹತ್ತಲಿಲ್ವಲ್ಲಾ...

ದೇವಯ್ಯ : ಅದ್ಕೇ ಮುಂದಿನ ನಿನ್ನ ದಾರಿ...

ಮಾರುತಿ : ನೀವು ತೋರಿದ್ದು...

ದೇವಯ್ಯ : ವ್ಯಾಪಾರ ಮಾಡ್ತೀಯಾ?

ಮಾರುತಿ : ಬಂಡವಾಳ ತುಂಬಿಟ್ಕೊಂಡಿದ್ದೀರಾ?

ದೇವಯ್ಯ : ಏನೋ ಈಗ ಬ್ಯಾಂಕಿನವರು ಸ್ವಯಂ ಉದ್ಯೋಗಕ್ಕೆ ಸಾಲ ಕೊಡ್ತಾರಂತೆ. ತೆಗೆದುಕೊಡ್ತೇನೆ, ಒಂದೆರಡು ಮೂರು ಸಾವಿರ ಮಾಡ್ತೀಯಾ?

ಮಾರುತಿ : ಹೋಟೆಲ್ ಮಾಡ್ಲಾ?

ನಾಗು : ತಿಂಡಿ ತಿನ್ನಬಹುದು ಅಂತ್ಲೇನೋ ಆಸೆ. ಆ ಕಡೆ ಸರಕ್ಕನೆ ಓಡಿತು.

ಮಾರುತಿ : ನೋಡಿದ್ರಪ್ಪಾ...

ದೇವಯ್ಯ : ನೋಡೋದೇನು ಕೇಳ್ಬೆ-ಮತ್ತೆ ನಿನಗೆ ಮೂವತ್ತು ನಲವತ್ತು ಸಾವಿರ ಕೊಟ್ಟು ಅಂಗಡಿ ಹಾಕಿಸಬೇಕೇನೋ... ಲೋ... ನಮ್ಮ ಯೋಗ್ಯತೆ ನೋಡ್ಕಂಡು ಚಿಕ್ಕದ್ರಿಂದ ದೊಡ್ಡವಕ್ಕೆ ಹೋಗಬೇಕು ಕಣೋ... ಹನಿ... ಹನಿ ಕೂಡಿದ್ರಲ್ವೇನೋ ಹಳ್ಳ... ತೆನೆ ತೆನೆ ಕೂಡಿದ್ರಲ್ವೇನೋ ದವಸ ಧಾನ್ಯ.

ಮಾರುತಿ : ಮತ್ತೆ ಅದರಲ್ಲಿ ಏನು ಮಾಡು ಅಂತಾ ನೀವು?

ದೇವಯ್ಯ : ಒಂದು ಸೈಕಲ್ ಷಾಪಿಡೋ...

ಮಾರುತಿ : ಸೈಕಲ್ ತೊಳಕೊಂಡು, ಕಬ್ಬಿಣ ಕುಟ್ಕೊಂಡು, ಕೈ ಮಸಿಮಾಡ್ಕೊಂಡು ಅವಲಕ್ಷಣವಾಗಿ ನಿಂತಿರಬೇಕೇನೋ... ಇದ್ಯಾವ ಜಾಣತನದ ಮಾತಾಡ್ತೀರಪ್ಪಾ...

ದೇವಯ್ಯ : ಮತ್ತೆ ನೀನಾದ್ರೂ ಅದೇನು ಮಾಡಬೇಕು ಹೇಳಿದ್ರಾಗೋಲ್ವೇ.

ಮಾರುತಿ : ಅದೇ ಮೊದ್ಲು ಹೇಳಿದ್ರಲ್ಲಾ ಅದು ಮಾಡೋದು ಬಲು ಪಸಂದ್ ಕೆಲಸ ಅಲ್ವೇ?

ದೇವಯ್ಯ : ಗಂಡಸು ಕೂತು ಕೆಟ್ಟ ಅಂತ... ಸುಮ್ನೇ... ಕೂತ್ಕೋ ಮೊಳೆ ಜಡಿಸ್ಕೊಂಡು.

ಮಾರುತಿ : ಏಸು ಕ್ರಿಸ್ತನಿಗೆ ಮಾಡಿದ್ರಲ್ವಾ ಹಾಗೆ ಮಾಡಿಸಿ ಬಿಡಿ. ಆಗ್ಲಾದ್ರೂ ನಿಮಗೆ ಸಂತೋಷವಾಗಬಹುದು.

ದೇವಯ್ಯ : ಯಾಕೋ ನಿನ್ನನ್ನು ಏಸುಕ್ರಿಸ್ತನಿಗೆ ಹೋಲಿಸಿಕೊಳ್ತೀಯೆ. ಆತನ ಪಾದಧೂಳಿಗೆ ಸಮನೇನೋ ನೀನು. ಈಗ ಯೋಚನೆ ಆಗ್ತಾ ಇದೆ. 'ಮಾರುತಿ' ಅಂತಲಾದ್ರೂ ಯಾಕೆ ನಿನಗೆ ಹೆಸರಿಟ್ನೋ ಅಂತ.

ಮಾರುತಿ : ಯಾಕೋ?

ದೇವಯ್ಯ : ತಂದ್ಯೆಲ್ಲೋ ನನಗೆ ಮಹಾ ಕೀರುತಿ.

ಮಾರುತಿ : ಏನೇನ್ ಅನ್ಬೇಕೋ ಅನ್ನಿ... ಅನ್ನಿಸ್ಕೊಳ್ಳೋಕ್ತಾನೆ ನಾನು ಇರೋದು.

ನಾಗು : ಸುಮ್ನೆ ಪ್ರತಿಷ್ಠೆ ಮಾಡಬೇಡ್ವೋ... ಅಪ್ಪ ಹೇಳಿದಾಗ ಕೇಳೋ...

ಮಾರುತಿ : ಈ ಮನೇಲಿ ಯಾರಿಗೆ ತಾನೇ ನಾನು ಬೇಕಿದ್ದೇನೆ. ಇಲ್ಲಿಂದ ಹಾಳಾಗೋದ್ರೆ ನಿಮಗೆಲ್ಲಾ ಸಂತೋಷ ಅಂತ ಕಾಣುತ್ತೆ.

ನಾಗು : ಪ್ರೀತಿ ಉಳಿಸ್ಕೊಳ್ಳೋದು ಬಿಡೋದು ನಿನ್ನ ಕೈಲಿದೆ ಕಣೋ... ಗುಣ ಬೆಳೆಸ್ಕೊಳ್ಳೋ... ದೇವರು ಒಳ್ಳೆಯದ್ ಮಾಡ್ತಾನೆ.

ಮಾರುತಿ : ಪ್ರೀತಿಯಾಗಿ ಕಾಣಬೇಕಾದವ್ರು, ಹರಸಬೇಕಾದವ್ರು ಶಾಪಹಾಕಿದ್ರೆ ಹಾಕಿ... ಹಾಕಿ... ನಾನು ತಂದದ್ದನ್ನು ಅನುಭೋಗಿಸ್ತೀನಿ.

ನಾಗು : ವಯಸ್ಸಿಗೆ ಬಂದ ಹುಡುಗ ಸಂಪಾದನೆ ಮಾಡಿ ಒಂದು ದಾರಿಗೆ ಬರಬೇಕಾದ್ದು ಧರ್ಮ. ಏನೋ ನಿನ್ನ ಹಣೇಲಿ ವಿದ್ಯೆ ಅನ್ನೋದು ಬರೆದಿಲ್ಲ ಈಗ ಒಂದು ವ್ಯಾಪಾರಾನೋ, ವ್ಯವಸಾಯನೋ ಮಾಡು. ಅದರಿಂದ ಸಂಪಾದ್ನೆ ಮಾಡು. ಓದಿ ಕೆಲಸ ಸಿಕ್ಕಿ ಸಂಬಳ ತರೋದು ಅಷ್ಟರಲ್ಲೇ ಇದೆ.

ಮಾರುತಿ : ನೇಗಿಲಿಡ್ಕೊಂಡ್ಹೋಗು ಅನ್ತಿಯಲ್ಲಾ... ಬಿಸಿಲ್ನಲ್ಲಿ ಸಾಯೋದು ನಿನಗೆ ಸಂತೋಷ ಅಲ್ವೇನಮ್ಮಾ? ಇರೋ ಪುಟಗೋಸಿ ಅರ್ಧ ಎಕ್ರೇಗೆ ಕೆಸರ ಮೆತ್ಕೊಂಡು ಥೂ... ಥೂ... ಅನ್ಬೇಕು ಅಲ್ವಾ...?

ದೇವಯ್ಯ : ಅದ್ಕೇನೂ ಅಂತ. 'ರಟ್ಟೆ ಮುರಿಬೇಕು ರೊಟ್ಟಿ ತಿನ್ಬೇಕು' ಅಂತ. ಕೈ ಮಣ್ಣಾಗ್ಬೆ ಮೈಗೆ ಬಿಸಿಲು ತಾಗದೆ ಭೂಮ್ತಾಯಿ ಅನ್ನ ಕೊಡ್ತಾಳೇನೋ ಅವಿವೇಕಿ... ತಪ್ಪಾಯ್ತು ಅನ್ನು... ನಿಮ್ಮಂಥವ್ರಿಂದ್ಲೆ ನಮ್ಮ ದೇಶದ ಸ್ಥಿತಿ ಹೀಗಾಯ್ತು.

ಮಾರುತಿ : ನೀವು ಯಾಕೆ ಮೇಷ್ಟರಾದ್ರಿ...?

ನಾಗು : ಲೇ... ಹುಚ್ಚ.... ಪ್ರತ್ಯುತ್ತರ ಕೊಡಬೇಡ್ವೋ... ಅವರು ಓದಿದ್ರು... ಆದ್ರು.. ನಿನ್ಗೆ ಅದ್ಕೂ ಯೋಗ್ಯತೆ ಇಲ್ವಲ್ಲಾ.

ಮಾರುತಿ : ತಲೆಗೆ ಹತ್ತಲಿಲ್ವಲ್ಲಾ...

ನಾಗು : ಪೋಲಿಯಾಗಿ ಅಲ್ವೆ... ಅದ್ಕೇ ಈಗ ಅನುಭೋಗಿಸು.

ಮಾರುತಿ : ನಿಮ್ಮ ಕಣ್ಣೆದುರಿಗಿದ್ರೆ ತಾನೇ ಮಾತಾಡೋದು ನಾನು ಹೊರಟು ಹೋಗ್ತಿನಿ. ಬಿಡಿ... ಇಲ್ಲಿಂದ ಕಣ್ಣಿಗೆ ಮರೆಯಾಗಿ.

ನಾಗು : ನೋಡಿದ್ರಾ ಊಟಾನೂ ಮಾಡ್ದೇ ಹಾಗೇ ಕೈಬೀಸಿಕೊಂಡು ಹೊರಟು ಹೋದ.

ದೇವಯ್ಯ : ಹೊಟ್ಟೆ ಹಸಿದವನು ಬಂದು ಉಣ್ತಾನೆ, ಚಳಿಯಾದವನು ಬಂದು ಹೊದ್ದುಗೊಂಡು ಮಲಗ್ತಾನೆ. ಅದನ್ನಾದ್ರೂ ನಾವು ಯಾಕೆ ಹೇಳಬೇಕು?

ನಾಗು : ಏನು ಅಂದ್ರೆ...? (ಅಳುತ್ತಾ)

ದೇವಯ್ಯ : ಅದೇನೇ ನಿನ್ನ ಶೋಕ...

ನಾಗು : ಮಾರುತಿಗೆ ಯಾರಾದ್ರೂ ಮಾಟ ಮಾಡಿಸಿದ್ದಾರ್ಯೇನೋ?

ದೇವಯ್ಯ : ನಿನಗೆಲ್ಲೋ ಹುಚ್ಚು...

ನಾಗು : ನವಗ್ರಹ ಕಾಡ್ತಿರಬಹುದು.

ದೇವಯ್ಯ : ನಿನಗೊಂದು ಭ್ರಮೆ.

ನಾಗು : ಇಲ್ಲ ಅಂದ್ರೆ ನವಗ್ರಹ ಪೂಜೆ ಮಾಡಿ, ನವಧಾನ್ಯ ದಾನ ಮಾಡಿದ್ರಾಪ್ರು ಆತ ಒಂದೊಳ್ಳೇ ದಾರಿಗೆ ಬರಬಹುದು.

ದೇವಯ್ಯ : ಪೀಡೆ ಹಿಡಿದಿರಬಹುದು ಬಿಡಿಸಿ ಅಂತ್ಲೂ ಹೇಳು.

ನಾಗು : ಅದ್ನೆಲ್ಲಾ ಯಾಕೆ ಅನ್ತೀರಿ ಬಿಡಿ.

ದೇವಯ್ಯ : ಮತ್ತೆ ಸುಮ್ನೆ ಚಪಲ ಹತ್ತುತ್ತೀಯಲ್ಲಾ ಯಾಕ ಅಂತ?

ನಾಗು : ಹೆತ್ತ ಕರುಳು ಅಯ್ಯೋ ಅನ್ನುತ್ತೆ. ಆತ ಇರೋ ಒಬ್ನೇ ಒಬ್ಬ ಮಗ ಹೊರಟುಬಿಟ್ರೆ ನಮ್ಗೆನ್ನೆಲ್ಲಾ ಬಿಟ್ಟು. ನನಗೆ ಮಗ ಆಗ್ಲೀ ಹೋಪ್ರಾ ಅಷ್ಟು ದುಃಖವಾಗ್ತಿರಲಿಲ್ಲ. ಈಗ ಆಗಿ ನಮ್ಮನ್ನ ಹೊಟ್ಟೆ ಉರಿಸ್ತಾ ಇದ್ದಾನಲ್ಲ. ಇದು ಮತ್ತಷ್ಟು ದುಃಖ ತಂದಿದೆ. ದೇವ್ರು ನಮ್ಮ ಹೊಟ್ಟೇಲಿ ಯಾಕಾದ್ರೂ ಆತನನ್ನು ಹಾಕಿದ್ನೋ... ಹೆತ್ತಕರಳು ಸಂಕಟ ಪಡ್ತಾ ಇದೆ.

ದೇವಯ್ಯ : ಎಲ್ಲಿ ಹೋಗ್ತಾನ ಬಿಡೆ. ಆಗೆಲ್ಲಾ ಬರ್ಲಿಲ್ಲಾ. ಹಾಗೆ ಬರ್ತಾನೆ.

ನಾಗು : ಇಲ್ಲ ಅಂದ್ರೆ, ಅವನ ಈ ಸಾರಿ ಮಾತು ಕೇಳಿದ್ರ. ಇನ್ನು ಖಂಡಿತ ಬರೋಲ್ಲ ಅಂತ ಹೇಳ್ಬಿಟ್ಟ, ನೀವು ಬೇಡ ಅನ್ನಲಿಲ್ಲ.

ದೇವಯ್ಯ : ಯಾವ ಬಾಯ್ನಿಂದ ಹೇಳಲಿ ಹೇಳು. ಬರ್ತೀ ಹೋಗ್ತಾನ್ಯೇನೇ ಕೂಳ್ ಸಿಕ್ಕದೇ ಹೋದ ದಿನ ಅವ್ನೇ ಓಡಿ ಬರ್ತಾನೆ. ಅದ್ಯಾಕೆ ಯೋಚನೆ ಮಾಡ್ತೀಯಾ?

ನಾಗು : ಅಯ್ಯೋ... ದೇವ್ರು ಯಾಕೆ ಈ ರೀತಿ ಪರೀಕ್ಷೆ ಮಾಡ್ತಾ ಇದ್ದಾನೋ ಗೊತ್ತಿಲ್ಲ.

(ಅಷ್ಟರಲ್ಲಿ ಜ್ಯೋತಿ ಬರುತ್ತಾಳೆ)

ಜ್ಯೋತಿ : ಏನಮ್ಮಾ...?

ನಾಗು : ನಿನ್ನ ತಮ್ಮ ಮನೆ ಬಿಟ್ಟು ಹೊರಟು ಹೋಗ್ತೀನಿ ಅಂತ ಹೊರಟು ಹೋದನಮ್ಮ

ಜ್ಯೋತಿ : ಸುಮ್ನೆ ಯಾಕೆ ರೇಗಾಡಿದ್ರಿ ನೀವು. ಇಂದಲ್ಲ ನಾಳೆ ಸರಿಹೋಗ್ತಿದ್ದ. ಈಗ ಇನ್ನೂ ಚಿಂತೆ ಹೆಚ್ಚಾಯ್ತಲ್ಲಮ್ಮ

ನಾಗು : ನೋಡಮ್ಮಾ.. ಎಲ್ಲೋ ಹೋಗ್ತಾ ಇರಬಹುದು ಕರೆ ಹೋಗು.

ಜ್ಯೋತಿ : ಆಗ್ಲಮ್ಮ ನೀವು ಅಳಬೇಡಿ. ನಾನು ಹೋಗಿ ಕರ್ಕೊಂಡು ಬರ್ತೇನೆ.

ನಾಗು : ಬೇಗ ಹೋಗಮ್ಮಾ.. ಹೋಗು.

(ಹೊರಡುವಳು)

ಸ್ವಗತ : ಮಾರುತಿ ಎಷ್ಟು ಆಸೆ ಇಟ್ಕೊಂಡಿದ್ನೋ ನಿನ್ನ ಮೇಲೆ? ಓದ್ಸಿ ದೊಡ್ಡ ಕೆಲಸಕ್ಕೆ ಸೇರಿಸಿ, ಪಟ್ಟಣದಲ್ಲಿ ಮನೆ ಮಾಡಿ, ಕಾರಿನಲ್ಲಿ ತಿರುಗಾಡಿಸಬೇಕು. ಮಗಳನ್ನ ಒಳ್ಳೆಯವನಿಗೆ ಕೊಟ್ಟು ಮದ್ವೆ ಮಾಡಿ, ನಿನಗೂ ಒಳ್ಳೇ ಕಡೆ ಹೆಣ್ತಂದು ಮದ್ವೆ ಮಾಡಿ, ಸೊಸೆ, ಅಳಿಯ, ಮೊಮ್ಮಕ್ಕಳು ಎಲ್ಲರನ್ನೂ ಕಣ್ತುಂಬ ನೋಡಿ ಸಂತೋಷಪಡಬೇಕು ಅಂತ್ಲೆ, ನಂಗೆ ಗಂಡೂ ಆಯ್ತು. ಹೆಣ್ಣೂ ಆಯ್ತು. ಇಬ್ಬರೇ ಮಕ್ಕಳು ಸಾಕು ಅಂತ ನಿಮ್ಮನ್ನೇ 'ಆರುತಿ-ಕೀರುತಿ' ಅಂದುಕೊಂಡಿದ್ನಲ್ಲೋ. ಎರಡು ಮಕ್ಕಳಾಗೇ ನನ್ನ ಜೀವನದಲ್ಲಿ ಸುಖ-ಶಾಂತಿ ಅನ್ನೋದು ದೂರಕಲಿಲ್ವಲ್ಲೋ ಮಾರುತಿ. ಯಾಕಪ್ಪಾ ನೀನು ಒಳ್ಳೆಯವನಾಗದೆ ಲೋಕ ಕಂಟಕನಾದೆ. ಜ್ಯೋತಿ ಎಂಥ ವಿವೇಕಸ್ಥಳಾದಳು ನೀನು ಅವಳಾಗೆ ಆಗ್ಲಿಲ್ವಲ್ಲೋ. ನಿನ್ನ ಸ್ಥಾನವನ್ನು ಅವಳು ತುಂಬ್ತಾ ಇದ್ದಾಳಲ್ಲೋ. ಅದೂ ನಿನಗೆ ಪರಿವರ್ತನೆ ಮಾಡಲಿಲ್ವೇನೋ ಮಾರುತಿ... ಮಾರುತಿ...

(ದಾರಿಯಲ್ಲಿ ಹೋಗುತ್ತಿದ್ದ ಮಾರುತಿಯನ್ನುದ್ದೇಶಿಸಿ ಜ್ಯೋತಿ)

ಜ್ಯೋತಿ : ಮಾರುತೀ... ಮಾರುತೀ...

ಮಾರುತಿ : ನೀನು ಬೇರೆ ಬಾಕೀ ಇದ್ಯೇನೋ ನನ್ನ ಕರೆಯೋದಿಕ್ಕೆ, ಏನವ್ವ?

ಜ್ಯೋತಿ : ಅಪ್ಪ ಅಮ್ಮ ಒಂದು ಮಾತಂದ್ರೆ ಹೀಗೆ ಬಿರಬಿರನೆ ಹೊರಟು ಹೋಗೋದೆ?

ಮಾರುತಿ : ಇನ್ನೇನು ಮಾಡು ಅಂತೀಯಾ?

ಜ್ಯೋತಿ : ಬೇಡ ಬಾ ಮನೆಗೆ ಹೋಗೋಣ.

ಮಾರುತಿ : ಮುಂದಿಟ್ಟ ಹೆಜ್ಜೇನಾ ಎಂದ್ರೂ ಹಿಂದಿಡ್ಲಾರ ಈ ಮಾರುತಿ. ನನ್ನೂ ಮಾರುತಿ ಅಷ್ಟೇ ಛಲ ಇದೆ ತಿಳ್ಕೋ ಅಕ್ಕಾ...

ಜ್ಯೋತಿ : ಚಿಕ್ಕವ್ರು ತಪ್ಪು ಮಾಡಿದಾಗ ದೊಡ್ಡವ್ರು ಒಂದು ಮಾತ್ ಅಂತಾರೆ. ಅದ್ಕೆ ನಾವು ಕೋಪಿಸ್ಕೊಳ್ಳೋದೆ? ಬೇಡ ಬಾ ಮಾರುತಿ, ಅಮ್ಮ ನಿನ್ನ ಯೋಚನೇಲಿ ಕೊರಗ್ತಾ ಇದ್ದಾಳೆ. ಬೇಡ ಬಾರೋ...

ಮಾರುತಿ : ನೋಡಕ್ಕ ಅವರಿಗೆ ನಾನು ಇಷ್ಟವಿಲ್ಲ. ನನ್ನ ನಡವಳಿಕೆ ಇಷ್ಟವಿಲ್ವಂತೆ. ಇಂಥ ನಾನಿಷ್ಟವಿಲ್ಲದವನು ಯಾಕೆ ಅವರ ಮುಂದೆ ಇರಬೇಕು?

ಜ್ಯೋತಿ : ಎಲ್ಲರಿಗೂ ನೀನಿಷ್ಟಾನೇ, ಆದ್ರೆ ನಿನ್ನ ನಡವಳಿಕೆ ಇಷ್ಟವಿಲ್ಲ. ಅದನ್ನ ಸರಿಪಡಿಸ್ಕೋ ಮಾರುತಿ.

ಮಾರುತಿ : ಅಕ್ಕಾ ಸುಮ್ನೇ ನನ್ನನ್ನು ತಡೀಬೇಡ ಬಿಡು, ಹೋಗ್ತೀನಿ. ನನಗೂ ನಿಮಗೂ ಸಂಬಂಧ ಇಂದಿಗೆ ಮುಗೀತು. ಇನ್ನು ನಾನ್ಯಾರೋ ನೀವ್ಯಾರೋ... ನಡೆ... ನಡೆ... ನಾನು ಹೋಗ್ತೀನಿ.

ಜ್ಯೋತಿ : ಎಲ್ಲಿಗೆ?

ಮಾರುತಿ : ಗುರಿಯಿಲ್ಲದ ಜಾಗಕ್ಕೆ.

ಜ್ಯೋತಿ : ಏನು ಮಾಡ್ತೀಯಾ?

ಮಾರುತಿ : ಏನೋ ಮಾಡ್ತೀನಿ.

ಜ್ಯೋತಿ : ಬೇಡ... ಬಾ ಮನೆಗೆ ಬಾರೋ ಮಾರುತಿ.

ಮಾರುತಿ : ಇಲ್ಲ... ಇಲ್ಲ... ಇಲ್ಲ... ನಡೆ ಅಕ್ಕ.

(ಎಂದು ಕೈ ಕಿತ್ತುಕೊಂಡು ಹೊರಡುವನು)

ಜ್ಯೋತಿ : ಮಾರುತೀ... ಮಾರುತೀ..

(ಎಂದು ಅವನು ಹೋದ ದಾರಿಯನ್ನೇ ನೋಡುತ್ತ ನಿಲ್ಲುವಳು)

* * *

(ಜ್ಯೋತಿ ಪೆಚ್ಚಳಾಗಿ ಮನೆಯೊಳಗೆ ಬರುತ್ತಿರಲು)

ನಾಗು : ಏನಮ್ಮಾ ಮಾರುತಿ ಸಿಕ್ಕಿದ್ನ...

ಜ್ಯೋತಿ : ಹ್ಞೂಂ...

ನಾಗು : ಏನಂದ?

ಜ್ಯೋತಿ : ಅನ್ನೋದೇನು ಬರೋಲ್ಲ ಅಂದ. ನಾನು ನಾನಾ ವಿಧವಾಗಿ ಕೇಳಿಕೊಂಡೆ. ಆದ್ರೂ ಆತ ಅದೊಂದಕ್ಕೂ ಕಿವಿಗೊಡಲಿಲ್ಲ.

ನಾಗು : ನಾನಾಗ್ಲೇ ಹೇಳ್ದೆ ದುಡುಕಬೇಡಿ. ಆತ ಮೊಂಡ ಪ್ರಚಂಡಿ, ಮನೆ ಬೀಡೋಕ್ಕೂ ಹೇಸೋಲ್ಲ ಅಂತ. ಇದ್ದ ಒಬ್ಬ ಮಗನನ್ನೂ ಕಳೆದು ಕೊಂಡ್ನಲ್ಲಮ್ಮ ಅಷ್ಟೇ ಏನೋ ಹಿಂದಿನವರು ಗಾದೆ ಹೇಳ್ತಿದ್ರು, ಒಂದು ಕಣ್ಣು ಕಣ್ಣಲ್ಲ, ಒಬ್ಬ ಮಗ ಮಗನಲ್ಲಾ ಅಂತಾ. ಇನ್ನೊಬ್ಬ ಮಗನಾದ್ರೂ ಇದ್ದಿದ್ರೆ ಚೆನ್ನಾಗಿರ್ತಿತ್ತೋ ಏನೋ?

ದೇವಯ್ಯ : ಅವನೂ ಹೀಗೇ ಆಗಿದ್ರೆ ಏನು ಮಾಡ್ತಿದ್ದೆ. ಮತ್ತಷ್ಟು ಚಿಂತೆಗೊಳಗಾಗಬೇಕಾಗಿತ್ತು ಕಣೆ ಅಷ್ಟೇ.

ಜ್ಯೋತಿ : ಅದೂ ನಿಜವೇ ಕಣಮ್ಮ.

ನಾಗು : ನನ್ನ ಕಷ್ಟ ನನಗೆ... ನೀವು ಉಪದೇಶ ಮಾಡೋಕ್ಕೆ ಬರ್ತೀರಿ.

ದೇವಯ್ಯ : ಹೀಗಾಗುತ್ತೆ ಅಂತ ಯಾರು ಕನಸು ಕಂಡಿದ್ರೇನೇ... ಬರ್ತಾನೇ...

ಜ್ಯೋತಿ : ಇನ್ನು ಸತ್ರೂ ನಿಮ್ಮಲ್ಲಿಗೆ ಬರೋಲ್ಲ ಅಂದುಬಿಟ್ಟ ಕಣಮ್ಮ...

ನಾಗು : ಕೇಳಿದ್ರಾ?

ದೇವಯ್ಯ : ಕೇಳ್ಬೆ...ಸುಮ್ಮನೆ ಚಪಲ ಪತ್ತಬೇಡ ನಡೆ. ಕೆಲಸ ನೋಡುಹೋಗು.

ನಾಗು : ಚಪಲ ಪತ್ತದೇ ಇನ್ನೇನಿದೆ ನನ್ನ ಜೀವನದಲ್ಲಿ, ಬಿಡಿ ಪತ್ತುತ್ತೇನೆ.

(ಎಂದು ಅಳುತ್ತಾ ನಡೆಯುವಳು)

## ದೃಶ್ಯ-೮

(ನಂಜುಂಡಯ್ಯನವರು ಆಯಾಸ ಕುರ್ಚಿಯ ಮೇಲೆ ಕುಳಿತಿದ್ದಾರೆ. ಮಗ ಜಗದೀಶ ಹೊರಗಿನಿಂದ ಬರುತ್ತಾನೆ.)

ನಂಜು : ಬಾ ಮಗು... ಬಾ...

ಜಗದೀಶ : ಏನಪ್ಪ...?

ನಂಜು : ನೀನು ಮುಂದೆ ಎಲ್ಲಿ ಓದಬೇಕು ಅಂತ ಮಾಡಿದ್ದೀಯೆ?

ಜಗದೀಶ : ನನಗೇನೂ ಓದೋದಕ್ಕೆ ಆಸೆ ಇತ್ತು. ಆದ್ರೆ ಈಗಿನ ಪರಿಸ್ಥಿತಿ ನೋಡಿದ್ರೆ ಕೆಲಸಗಳು ಸಿಕ್ಕುವುದು ಬಹಳ ಕಷ್ಟವಾಗಿರುವಾಗ ಯಾಕೆ ಓದಬೇಕು. ಓದಲಿಕ್ಕೆ ಬರೀಲಿಕ್ಕೆ ಕಲಿತದ್ದೇ ಸಾಕು. ವ್ಯವಹಾರ ಜ್ಞಾನಕ್ಕೆ ನನಗೆ ಈ ಬಿ.ಎಸ್‌ಸಿ. ಸಾಕು ಅನ್ನಿಸುತ್ತೆ.

ನಂಜು : ಮುಂದೆ... ಏನು ಮಾಡಬೇಕು ಅಂತ ಇದ್ದೀಯಾ?

ಜಗದೀಶ : ನೋಡಪ್ಪಾ ಈಗಿನ ಕಾಲದಲ್ಲಿ ಸೆಲ್ಫ್ ಎಂಪ್ಲಾಯ್‌ಮೆಂಟ್ ಬೆಟರ್... ನಾವೇ ಕಷ್ಟಪಟ್ಟು ಯಾಕೆ ದುಡೀಬಾರದು.

ನಂಜು : ಭೇಷ್... ನಿನ್ನಂಥ ಮಗನಿರಬೇಕು ನೋಡು, ಪ್ರತಿಯೊಬ್ಬರಿಗೂ ಯಾರ ಹಂಗೂ ಬೇಡ. ನಾನೇ ಸ್ವಯಂ ದುಡಿಮ ಸಂಪಾದಿಸುತ್ತೇನೆ ಅನ್ನೋ ಕೆಚ್ಚು ಬಂದಿದೆಯಲ್ಲಾ ಅಷ್ಟೇ ಸಾಕು. ಪ್ರತಿಯೊಬ್ಬರೂ ಹೀಗಾದ್ರೆ ಕೆಲಸಾನೇ ಯಾಕೆ ಹುಡುಕಿಕೊಂಡು ನಿರಾಶರಾಗಬೇಕು ಅಂತೀನಿ.

ಜಗದೀಶ : ಅಷ್ಟಲ್ದೇ ಇನ್ನೇನು ಬಿಡಿ ಅಪ್ಪಾ. ಕಾಲಕ್ಕೆ ತಕ್ಕ ಹಾಗೆ ನಾವೂ ನಡ್ಕೊಳ್ಳಬೇಕಲ್ಲಾ.

ನಂಜು : ಮತ್ತೊಂದು ವಿಷಯ ನಿನ್ನಲ್ಲಿ ಕೇಳಬೇಕು ಅಂತಿದ್ದೆ.

ಜಗದೀಶ : ಅದೇನು ಅಂತಹ ವಿಷಯ ಅಪ್ಪಾ.

ನಂಜು : ಮದುವೆ...

ಜಗದೀಶ : ಸರಿ... ಈಗೇನು ಆತುರ?

ನಂಜು : ಹಾಗಲ್ಲ, ನಮ್ಮೂರ ಮೇಷ್ಟ್ರು ದೇವಯ್ಯನವರ ಮಗಳು ಜ್ಯೋತಿ,ಅವ್ಳೂ ಒಂದು ಕೆಲಸದಲ್ಲಿದ್ದಾಳೆ. ಸಂಬಳ ಬರುತ್ತೆ. ಯೋಗ್ಯಸ್ಥ ಮನೆತನ, ಹುಡುಗಿ ಬಿ.ಎ. ಓದಿದ್ದಾಳೆ, ರೂಪಾಗೂ ಇದ್ದಾಳೆ, ಯಾಕೆ ತಂದುಕೊಳ್ಳಬಾರದು

ಅಂತ ಚಂದ್ರಯ್ಯನವರು ಹೇಳಿದ್ರು. ಅದ್ಕೆ ನಾನು ನಿನ್ನ ಕೇಳಿ ಹೇಳ್ತೀನಿ ಅಂತ ಹೇಳಿದೆ.

ಜಗದೀಶ : ನೋಡಪ್ಪಾ ಯಾವುದನ್ನೂ ಈಗ್ಲೇ ಹೇಳಲಾರೆ. ಯೋಚನೆ ಮಾಡಿ ಹೇಳ್ತೀನಿ.

ನಂಜು : ಹೌದಪ್ಪ. ಯೋಚನೆ ಮಾಡು, ಮದ್ವೆ ಅನ್ನೋದು ಜೀವನದಲ್ಲಿ ಒಮ್ಮೆ ಅದಕ್ಕೆ ದುಡುಕೋದು ಸರಿಯಲ್ಲ. ನಿನ್ನ ಮನಸ್ಸು ಒಪ್ಪಿದ್ರೆ ನಾನು ಮಾಡೋದು.

ಜಗದೀಶ : ಆಗ್ಲಿಪ್ಪಾ...

ನಂಜು : ಇನ್ನೊಂದು ಮಾತು, ಆ ಹುಡುಗಿ ಆದ್ರೆ ಯಾವ ರೀತಿ ವರದಕ್ಷಿಣೆ ವರೋಪಚಾರ ಸಿಗೋಲ್ಲ.

ಜಗದೀಶ : ಯಾಕಪ್ಪಾ ಕೇಳಬೇಕು? ಬೇಡ. ನಾನು ವರದಕ್ಷಿಣೆ ಕೇಳೋದ್ರಲ್ಲಿ ಕೊನೆಯವನು.

ನಂಜು : ಅದ್ಕೇ ಮೊದ್ಲೇ ತಿಳಿಸಿದೆ.

ಜಗದೀಶ : ಹಾಗೆಲ್ಲಾ ಕೇಳಿ ಅವರ ತಂದೆ-ತಾಯಿಯರ ಮನಸ್ಸನ್ನು ನೋಯಿಸೋದು ನಮ್ಮ ಧರ್ಮವಲ್ಲ.

ನಂಜು : ಅದ್ಕೇನಪ್ಪಾ ಇರೋ ವಿಷಯಾನಾ ಮೊದ್ಲೇ ಹೇಳಿಬಿಟ್ಟೆ. ಆಮೇಲೆ ನಮ್ಮ ತಂದೆ ಮಾಡಿದ್ರು, ಇಲ್ಲದೇ ಹೋಗಿದ್ರೆ ನಾನು ಕುಬೇರನಾಗಬಹುದಾಗಿತ್ತು, ಹಾಗೆ ಆಗಬಹುದಾಗಿತ್ತು, ಈಗಾಗ್ಬೋದಾಗಿತ್ತು ಅನ್ನೋ ಮಾತ್ ಬೇಡ. ಇದ್ದುದನ್ನು ಇದ್ದ ಹಾಗೆ ಹೇಳಿದೆ.

ಜಗದೀಶ : ಅಪ್ಪಾ ನಾನು ನಿಮ್ಮ ಮಗ. ನಿಮಗೆ ದುರಾಸೆ ಇಲ್ಲದಂತೆ ನಾನೂ ದುರಾಸೆ ಪಡೋವ್ನಲ್ಲ. ಕಷ್ಟಪಟ್ಟು ಸಂಪಾದ್ನೆ ಮಾಡಿ ನನ್ನ ಕಾಲ್ಮೇಲೆ ನಾನು ನಿಂತ್ಕೊಳ್ಳೋಕೆ ಪ್ರಯತ್ನ ಪಡೋ ಯುವಕ.

ನಂಜು : ಹಾಗಿದ್ರೇನಪ್ಪಾ... ಆ ಮನಸ್ಸಿದ್ರೇನಪ್ಪಾ ದೇವ್ರು ಒಳ್ಳೇದ್ ಮಾಡೋದು.

ಜಗದೀಶ : ಯಾರು ಕೊಟ್ಟು ಏನು ಬದುಕಿಸಲಿಕ್ಕೆ ಸಾಧ್ಯವಪ್ಪಾ. ದೇವರು ಕೊಡ ಬೇಕು, ನಮ್ಮ ಮನೆ ತುಂಬಬೇಕು. ಒಬ್ಬ ಮನುಷ್ಯನ ಆಸೇನಾ ಮತ್ತೊಬ್ಬ ಮನುಷ್ಯ ತುಂಬಿಸಲಿಕ್ಕೆ ಸಾಧ್ಯವಪ್ಪಾ ನೀವೇ ಹೇಳಿ.

ನಂಜು : ಒಂದೊಂದು ಸಾರಿ ನಿಜಜೀವನದಲ್ಲಿ ನೋಡ್ತೀವಿ. ದೇವರು ಕೊಟ್ಟಿದ್ದನ್ನೇ ಸಾಲದು ಅಂತ ಆಸೆ ಪಡೋ ಜನವಿರುವಾಗ ಮನುಷ್ಯನ ಆಸೆ ಪೂರ್ತಿ ಮಾಡಲಿಕ್ಕಾಗುತ್ತೇ ಹೇಳು.

ಜಗದೀಶ : ಆದ್ದರಿಂದಲೇ ನಾನು ಏನೂ ಆಶಿಸುವವನಲ್ಲ. ಹೆಣ್ಣನ್ನು ಒಂದೇ ದೃಢದಿಂದ ಮದುವೆ ಮಾಡಿಕೊಟ್ರೆ ಅಷ್ಟೇ ಸಾಕು.

ನಂಜು : ನಾನೂ ಅಷ್ಟೇ ಮನಸ್ಸು ಮಾಡಿರೋದು. ಹಾಗಾದ್ರೆ ನಾಳೆ ಹೆಣ್ಣು ನೋಡೋಕೆ ಹೋಗೋಣ.

ಜಗದೀಶ : ಆಗ್ಲಪ್ಪ.

## ದೃಶ್ಯ-೯

(ಮನೆಯಲ್ಲಿ ನಾಗು ಮಂಪಲಿಗೆ ಹಾಸಿಕೊಂಡು ಮಲಗಿರಲು ಅಲ್ಲಿಗೆ ಗಂಡ ದೇವಯ್ಯ ಬರುತ್ತಾ)

ದೇವಯ್ಯ : ನಾಗೂ... ನಾಗೂ...

ಜ್ಯೋತಿ : ಮಲಗಿರಬೇಕು ಕಣಪ್ಪ.

ದೇವಯ್ಯ : ಏಕೆ ಮೈ ಸರಿಯಿಲ್ವಂತ್ಯಮ್ಮಾ?

ಜ್ಯೋತಿ : ಮಗಾ ಹೋದಾಗಲಿಂದ ಸ್ವಲ್ಪ ಹಾಗೆಯೇ. ಕೆಲಸಾನೂ ಮಾಡಲ್ಲ ಅವನದೇ ಕನಸು, ಅವನದೇ ಮಾತು. ಸ್ವಲ್ಪ ಜ್ವರ ಬಂದ ಹಾಗೂ ಇದೆ. ನಾನೂ ನಮ್ಮೂರ್ ಡಾಕ್ಟರ್ ಹತ್ತಿರ ಔಷಧ ತಂದಿರಿಸಿದ್ದೇನೆ. ಕುಡಿಯೋಲ್ಲ ಅಂತಾರೆ.

ದೇವಯ್ಯ : (ಹತ್ತಿರ ಬಂದು) ಏಳೇ... ನಾಗೂ... ನಾಗೂ...

ನಾಗು : ಏಳದ ಹಾಗೆ ಯಾಕೆ ದೇವರು ಮಾಡಬಾರದು ನನಗೆ.

ದೇವಯ್ಯ : ನಮ್ಮ ಆಸೆ ಪ್ರಕಾರ ಹೋಗೋದಾಗಿದ್ರೆ ಪ್ರಪಂಚದಲ್ಲಿ ಕಷ್ಟ ಅನ್ನೋದ್ನೇ ಪಡಬೇಕಾಗಿರಲಿಲ್ಲ ಕಣೇ. ನಾವು ಏನೇನು ತಂದಿದ್ದೀವೋ ಅದನ್ನ ಅನುಭವಿಸಲೇಬೇಕು. ಹಿಂದಿನ ಕರ್ಮ ಅರಿಬೇಕು, ಆಗ್ಲೇ ನಮ್ಮ ಬಿಡುಗಡೆ ಕಣೆ.

ನಾಗು : ನಾನು ಯಾರಿಗೆ ಅನ್ಯಾಯ ಮಾಡಿದ್ದೆ. ನೀವು ಯಾರಿಗೆ ಮೋಸಮಾಡಿದ್ರಿ, ನಮ್ಗೂ ದೇವ್ರು ಈ ರೀತಿ ಅನ್ಯಾಯ ಮಾಡಬೇಕೇ?

ದೇವಯ್ಯ : ಹಿಂದೆ ಮಾಡಿರೋದನ್ನ ನಾವು ಬಲ್ವೇ?

ಜ್ಯೋತಿ : ಸುಮ್ಮೇ ಹಿಂದಿನದು, ಮುಂದಿನದು, ಪಾಪ ಪುಣ್ಯ ಅಂತ ಯಾಕೆ ಯೋಚನೆ ಮಾಡ್ತೀರಿ ಬಿಡಿ ಅಪ್ಪ... ಏಳಮ್ಮಾ ಸ್ವಲ್ಪ ಔಷಧ ತಗೋ ಎಲ್ಲಾ ಸರಿ ಹೋಗುತ್ತೆ.

ನಾಗು : ನನಗೇಕಮ್ಮ ಔಷಧಿ ತಂದೆ ಬಿಡು ಮಗು. ಅದು ಹೇಗೆ ಬಂತೊ ಹಾಗೆಯೇ ಹೋಗುತ್ತೆ. ಹೋಗದೇ ಹೋದರೆ ಅದರ ಜೊತೆಲಿ ನಾನು ಹೋಗ್ತೇನೆ.

ಜ್ಯೋತಿ : ಹಾಗೆಲ್ಲಾ ಅನ್ಬೇಡಮ್ಮಾ.

ದೇವಯ್ಯ : ಈಗ ನಂಜುಂಡಯ್ಯನವರು ಜ್ಯೋತೀನ ನೋಡ್ತೋದಿಕ್ಕೆ ಬರ್‍ತಾ ರಂತೆ ಕಣೆ.

ನಾಗು : ಹಾಗಾ...

ಜ್ಯೋತಿ : ಅಮ್ಮ ಈ ಸ್ಥಿತೀಲಿರುವಾಗ ಏಕೆ ಬರಬೇಕಪ್ಪಾ...?

ನಾಗು : ನನಗೇನಾಗಿದೆ ಬಿಡು, (ಎದ್ದು ಕುಳಿತು ತಲೆ ಕಟ್ಟಿಕೊಳ್ಳುತ್ತಾ ಮುಂಪಲಿಗ ಎತ್ತಿ ಹಾಕಿ) ಎಷ್ಟು ಹೊತ್ತಿಗೆ ಬರ್‍ತಾರೆ.

ದೇವಯ್ಯ : ಹತ್ತು ಘಂಟೆಗೆ ಬರ್‍ತಾರಂತೆ.

ನಾಗು : ಬರ್‍ಲಿ ಬಿಡಿ... ತಿಂಡಿ ಮಾಡ್ತೀನಿ.

ಜ್ಯೋತಿ : ಅಮ್ಮಾ ನೀನು ಮಲಕ್ಕೋ... ನೀ ಏನ್ ಮಾಡ್ತೀಯಾ... ನನಗೆ ಮದುವೆ ಬೇಡ ಅಪ್ಪಾ.

ದೇವಯ್ಯ : ಏಕಮ್ಮಾ...?

ಜ್ಯೋತಿ : ಏಕೆ ಅಂದ್ರೆ ನಿಮ್ಮಗಳನ್ನ ಸಾಕಲಿಕ್ಕೆ ಯಾರು? ತಮ್ಮನೂ ದಾರಿ ತಪ್ಪಿದ. ನಾನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಸಾರ್ಥಕವೇನು? ನಿಮ್ಮ ಈ ಕಾಲದ ಸ್ಥಿತಿಯಲ್ಲಿ ಸೇವೆ ಮಾಡಬಾರದೇ?

ದೇವಯ್ಯ : ಇದೇನಮ್ಮಾ ಈ ಮಾತಾಡ್ತೀ... ಮದುವೆ ಆದ್ರೆ ಮಾಡಬೇಡ ಅಂತೀವಾ? ನೀನು ಇದೇ ಊರ್‍ನಲ್ಲೇ ತಾನೇ ಇರೋದು. ನೀನೂ ಮದುವೆ ಆದ್ರೆ ನಿಮ್ಮ ತಾಯಿಗೆ ಸ್ವಲ್ಪ ಸಂತೋಷವಾಗುತ್ತೆ, ನನಗೂ ಅಷ್ಟೇ...

ನಾಗು : ಹೌದು ಜ್ಯೋತಿ...

ದೇವಯ್ಯ : ಹುಡುಗ ಸಾಕಷ್ಟು ಚೆನ್ನಾಗಿದ್ದಾನೆ, ಸ್ವಲ್ಪ ಓದಿಕೊಂಡಿದ್ದಾನೆ. ಆಸ್ತಿ ಇದೆ. ಇನ್ನೂ ಯಾಕೆ ಮದುವೆ ಮುಂದುವರಿಸಬೇಕು ಹೇಳುತಾಯಿ.

ನಾಗು : ಹೌದಮ್ಮ ನಾವು ಕಣ್ಣು ಮುಚ್ಕೋದ್ಕೂ ಮೊದ್ಲೇ ನಿನ್ಗೆ ದಾರಿ ಮಾಡಿಬಿಡಬೇಕು. ನಾವು ನಿನಗೆ ನಿನ್ನ ತಮ್ಮನಿಗೆ ಯಾವ ರೀತೀಲೂ ತೊಂದ್ರೆ ಆಗಬಾರದು ಅಂತ ಅಷ್ಟು ದಿನಗಳಿಂದಲೂ ಸಾಕ್ತಾ ಬಂದೋ... ನಿಮ್ಮ ಹಿತವೇ ನಮ್ಮ ಸುಖ ಕಣಮ್ಮಾ.

ದೇವಯ್ಯ : ನೋಡಮ್ಮ ನಮ್ಮ ತಂದೆಗೆ ಸಾಲಾಗಿ ನಾಲ್ಕು ಹೆಣ್ಣು ಮಕ್ಕಳೇ ಆದ್ವು. ಗಂಡು ಬೇಕೇ ಬೇಕು, ವಂಶ ಬೆಳೆಯೋದ್ಕಾದ್ರೂ ಗಂಡು ಬೇಕು. ನಾನು ಸತ್ತರೆ ತರ್ಪಣ ಬಿಡೋಕೆ, ಪಿಂಡ ಹಾಕೋಕೆ, ಗಂಡು ಬೇಕು ಅಂತ ಹಂಬಲಪಟ್ಟರು. ಆಸೆ ಫಲಿಸಿತು. ನಾನೂ ಅವರು ಸತ್ತ ಮೇಲೆ

ಅವರಾಸೆಯಂತೆ ತರ್ಪಣಬಿಟ್ಟೆ. ನಾನು ವಂಶದ ಹೆಸರನ್ನು ಹೇಳಲಿಕ್ಕೆ ಆದೆ. ಆದ್ರೆ ನನ್ನ ಪಡೆಯಲಿಕ್ಕೆ ಹೋಗಿ ಎಷ್ಟೊಂದು ಕಷ್ಟ ಪಡಬೇಕಾಯ್ತು ನಮ್ಮ ತಂದೆ-ತಾಯಿ ಇಬ್ಬರೂ ಅಂತ. ನನ್ನನ್ನು ಏಳನೇ ಮಗನಾಗಿ ಪಡೆದರು. ನನಗೋಸ್ಕರ ಆರು ಹೆಣ್ಣು ಪಡೆಯಬೇಕಾಯಿತು. ಅವರ ಮದ್ವೆ, ಮುಂಜಿ, ಬಾಣಂತನ ಅಂತ ಸಾಲ ಮಾಡಿ ನಮ್ಮ ಆಸ್ತಿಯೆಲ್ಲಾ ಕರಗಿ ಹೋಯಿತು. ಕೊನೆಯಲ್ಲಿ ನನ್ನ ಚಿಂತೇಲಿ ಇದ್ರು. ನಾನು ಓದಿ ಒಂದು ಉಪಾಧ್ಯಾಯ ವೃತ್ತಿ ಮಾಡಿ ಅವರನ್ನು ಚೆನ್ನಾಗಿ ನೋಡಿಕೊಂಡೆ. ಅವರು ಕೊಟ್ಟ ಆಸ್ತಿ ಅಂದ್ರೆ ವಿದ್ಯೆ ಕಲಿಸಿದ್ದಷ್ಟೆ. ಅದರಲ್ಲೇ ನಾನು ಪ್ರೈಮರಿ ಸ್ಕೂಲ್ ಮಾಸ್ಟರ್ ಆದೆ. ಈ ನಮ್ಮ ತಂದೆ ಪಟ್ಟ ಕಷ್ಟ ಬೇಡ ಅಂತ ಮನಸ್ಸು ಮಾಡಿದೆ.

ನಾಗು : ಮೊದಲು ಹೆಣ್ಣುಮಗು ನನಗೆ ಅಸಮಾಧಾನವೇ ಆಯಿತು. ತಂದೆಯಂತೆ ಸಾಲಾಗಿ ಹೆಣ್ಣಾದ್ರೆ, ಗಂಡಾಗ್ದೇ ಹೋದ್ರೆ ಎಂಬ ಚಿಂತೆಯನ್ನು ನಿಮ್ಮ ತಂದೆಯಲ್ಲಿ ತೋಡಿಕೊಂಡೆ. ಅವರು ಸಮಾಧಾನ ಮಾಡವ್ರು. ಮುಂದಿನದು ಹೆಣ್ಣಾಗ್ಲಿ, ಗಂಡಾಗ್ಲಿ ಅಷ್ಟಕ್ಕೆ ಸಾಕು ಅವರನ್ನೇ ಸಾಕೋಣ. ಅಳಿಯಂದಿರೇ ಮಕ್ಕಳು ಅಂತಿಟ್ಕೊಳ್ಳೋಣ ಅಂತ ಮನಸ್ಸು ಮಾಡಿದ್ರು. ಆದ್ರೆ ನನ್ನ ಪುಣ್ಯಕ್ಕೆ ಗಂಡಾಯ್ತು. ನನಗೆ ಅಂದಾದ ಸಂತೋಷ ಅಷ್ಟಿಷ್ಟಲ್ಲ. ನಿನಗಾಗಿ ನಾವು ಅರ್ಧ ಎಕ್ರೆ ಗದ್ದೆ ಸಂಪಾದಿಸಿದ್ವು, ಮನೆ ಖರೀದಿ ಮಾಡಿದ್ವು. ನಿಮ್ಮನ್ನು ಓದಿಸಿದ್ವೋ. ಆತನನ್ನು ಓದಿಸಬೇಕು ಅನ್ನೋ ಆಸೆ ಅಳಸಿಹೋಯ್ತು. ಗಂಡಾದ್ರೇನು ಹೆಣ್ಣಾದ್ರೇನು? ಎಂಬುದು ಈ ಹೊತ್ತು ನನಗೆ ಅರ್ಥವಾಗುತ್ತೆ. ಹೆಣ್ಣಾದ್ರೂ ನೀನೇ ಗಂಡಾಗಿ ನಮ್ಮ ಮನೆ ತೂಗಿಸ್ಕೊಂಡು ಹೋಗ್ತಾ ಇದ್ದೀಯೆ.

ಜ್ಯೋತಿ : ಈಗ ಅಂಥವಳನ್ನು ಮದುವೆ ಮಾಡಿಬಿಟ್ರೆ ನಿಮ್ಮ ಗತಿ.

ನಾಗು : ನೀನು ಮದ್ವೆ ಆದ್ರೆ ನಮಗೆ ಸಂತೋಷ, ನಮ್ಮದೇನು ಒಂದು ಕಾಲ ಸಮಾಧಿಲಿರೋದು ಹೇಗೋ ಆಗುತ್ತೆ. ನಮಗೋಸ್ಕರ ನೀಯೇಕೆ ಮದ್ವೆ ಆಗದೆ ಇರಬೇಕು?

ದೇವಯ್ಯ : ಮದ್ವೆ ಆಗಿ ನಮ್ಮನ್ನ ಸಾಕಲು ಆಗೋಲ್ವೇ?

ಜ್ಯೋತಿ : ಗಂಡ, ಮನೆಯವರು ಹ್ಯಾಗೋ?

ದೇವಯ್ಯ : ದೇವ್ರಂಥ ಮನುಷ್ಯರು ಅಂತ ಹೇಳ್ತಾರೆ ಕಣಮ್ಮಾ.

ಜ್ಯೋತಿ : ಮದ್ವೆ ಮಾಡೋ ವಿಧಾನ.

ದೇವಯ್ಯ : ಗದ್ದೆ ಮಾರ್ತೇನೆ.

ಜ್ಯೋತಿ : ತಮ್ಮನ ಆಸ್ತಿ, ಇರೋ ಅಲ್ಪ ಆಸ್ತೀನಾ ಮಾರಿ ಮದ್ವೆ ಮಾಡಲಿಕ್ಕಾಗೋಲ್ಲ.

ದೇವಯ್ಯ : ಸಾಲ ಮಾಡ್ತೀನಿ.

ಜ್ಯೋತಿ : ಅದೂ ಸಾಧ್ಯವಿಲ್ಲದ ಮಾತು.

ದೇವಯ್ಯ : ಹೇಗೋ ಆಗುತ್ತೆ ನೀನು ಹ್ಞೂಂ... ಅನ್ನು ಜ್ಯೋತಿ. ಗಂಡನ್ನು ನೋಡು, ಒಪ್ಪಿಗೆ ಆದ್ರೆ ಆಗು, ಹೋಗು... ಕೈಕಾಲು ಮುಖ ತೊಳ್ಕೊಂಡು ಸೀರೆ ಬದಲಾಯಿಸಿಕೊಂಡಿರು ಹೋಗು.

ನಾಗು : ನಡೆಯಮ್ಮಾ ಅಪ್ಪ ಹೇಳಿದ ಹಾಗೆ ಕೇಳು. ನಿನ್ನ ತಮ್ಮನ ಹಾಗೆ ಮೊಂಡಾಗಬೇಡ.

ದೇವಯ್ಯ : ನೀನು ಕರ್ಕೊಂಡ್ಹೋಗು- ಇನ್ನೇನು ಅವರು ಬರೋ ಹೊತ್ತಾಯಿತು.

ನಾಗು : ಆಗ್ಲಿ...

(ಇಬ್ಬರು ಹೊರಡಲು ಮನೆಯನ್ನು ಸರಿಪಡಿಸಿ ನಾಲ್ಕು ಕುರ್ಚಿ ಇಟ್ಟು ಒಂದು ಟೇಬಲ್ ಇಟ್ಟು ಕುಳಿತಿರಲು ಅಷ್ಟರಲ್ಲಿ ಗಂಡು ಮತ್ತು ಅವರ ತಂದೆ ಇಬ್ಬರು ಬರುತ್ತಾರೆ)

ದೇವಯ್ಯ : ನಮಸ್ಕಾರ... ಬರಬೇಕು... ಬರಬೇಕು... ನಂಜುಂಡಯ್ಯನವರು.

ನಂಜುಂಡಯ್ಯ : ನಮಸ್ಕಾರ... ನಮಸ್ಕಾರ.

ದೇವಯ್ಯ : ಕುಳಿತುಕೊಳ್ಳಿ

ನಂಜು : ಚಂದ್ರಯ್ಯನವರು ಬರ್ತೀನಿ ಅಂದ್ರು. ಆದ್ರೆ ಅರ್ಜೆಂಟ್ ಬೆಂಗಳೂರಿಗೆ ಹೋಗಬೇಕು ಅಂತ ಛೇರ್‌ಮನ್ ಜೊತೆ ಹೊರಟುಬಿಟ್ರು. ನಾನು ನೋಡಿದ್ದೀನಿ. ನೀವು ನೋಡಿ ಒಪ್ಪಿದ್ರಾಯ್ತು. ಹೋಗಿದ್ದು ಬನ್ನಿ ಅಂದ್ರು.

ದೇವಯ್ಯ : ಬಹಳ ಸಂತೋಷ. ಬಾರಮ್ಮ...

(ಜ್ಯೋತಿ ತಿಂಡಿ ತಂದು ಟೇಬಲ್ ಮೇಲಿಡುವಳು)

ನಂಜುಂಡಯ್ಯ : ಇವಳೇ ಜ್ಯೇಷ್ಠ ಪುತ್ರಿ ಅಲ್ವೇ?

ದೇವಯ್ಯ : ಹೌದು... ಈಕೆ ಹೆಸರು ಜ್ಯೋತಿ ಅಂತ. ಬಿ.ಎ.ಓದಿದ್ದಾಳೆ. ಕೆಲಸದಲ್ಲೂ ಇದ್ದಾಳೆ.

ನಂಜು : ಕುಳಿತುಕೊಳ್ಳಮ್ಮಾ.. ಒಂದು ಹಾಡು ಹೇಳಮ್ಮಾ

ದೇವಯ್ಯ : ಹೇಳಮ್ಮಾ...

ಜ್ಯೋತಿ :

"ನುಡಿದರೆ ಮುತ್ತಿನ ಹಾರದಂತಿರಬೇಕು,
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು,

ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು,
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು,
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ
ಸಂಗಮ ದೇವನೆಂತೊಲಿವನಯ್ಯಾ?

ನಂಜುಂಡಯ್ಯ : ಚೆನ್ನಾಗಿ ಹಾಡ್ದೆ... ಭೇಷ್... ಇಂಪಾಗಿದೆ ರಾಗ...ಧ್ವನಿ ತುಂಬಾ ಚೆನ್ನಾಗಿದೆ. ಸಂಗೀತ ಕಲಿತಿದ್ದಾಳೆಯೇ.

ದೇವಯ್ಯ : ಕಲೀಬೇಕೂ ಅಂತ ಆಸೆ ಇತ್ತು. ನಾವೇ ಕಲಿಸಲಿಲ್ಲ.

ನಂಜು : ಎಂಥ ಕಲೆ ಇದೆ. ಪಾಪ ಕಲಿಸಬಾರ್ದಾಗಿತ್ತೇ... ಹೋಗ್ಲಿ ಬಿಡಿ. ನಾವು ಕಲಿಸುತ್ತೇವೆ. ಸಂಗೀತ ಕಲೀದೇನೆ ಇಷ್ಟು ಸೊಗಸಾಗಿ ಹಾಡುವವಳು ಇನ್ನು ಸಂಗೀತ ಕಲಿತ ಮೇಲೆ ಇನ್ನೆಷ್ಟು ಚೆನ್ನಾಗಿ ಹಾಡಬಹುದು?

ದೇವಯ್ಯ : ಎಲ್ಲಾ ವಿಚಾರದಲ್ಲೂ ಅಷ್ಟೇ ಜ್ಯೋತಿ ತುಂಬಾ ಪ್ರತಿಭಾವಂತೆ. ತೋರಿಸಿದ್ರೆ ಹಾರಿಸ್ತಾಳೆ.

ನಂಜು : ಹೌದೌದು.

(ಅವರು ತಂದಿದ್ದ ಹಣ್ಣನ್ನು ತಟ್ಟೆಯಲ್ಲಿ ಇರಿಸಿದರು.
ಹೆಣ್ಣು ಸ್ವಲ್ಪ ಹೊತ್ತು ಕುಳಿತು ಮತ್ತೆ ಮೇಲೇಳಲು)

ನಂಜು : ಹಣ್ಣು ತೆಗೆದುಕೊಂಡು ಹೋಗಮ್ಮ.

(ಎನ್ನಲು ತೆಗೆದುಕೊಂಡು ಹೊರಡುವಳು, ಮಾತು ಆರಂಭ)

ನಂಜು : ಈತನೇ ನನ್ನ ಕೊನೆ ಮಗ. ನನಗೆ ಏಳು ಜನ ಗಂಡು ಮಕ್ಕಳು. ಆರು ಜನರೂ ಓದಿ ಬೇರೆ ಬೇರೆ ಊರಿಗೆ ಕೆಲಸಕ್ಕೆ ಹೊರಟರು. ಈತನೇ ಕೆಲಸಕ್ಕೆ ಹೋಗದೆ ನನ್ನನ್ನ ನೋಡ್ಕೊಂಡೋಗ್ತೀನಿ ಅಂತ ಉಳಿದು ವ್ಯವಸಾಯ ಸ್ವಂತ ವ್ಯಾಪಾರ ಮಾಡ್ಕೊಂಡಿದ್ದಾನೆ. ಇಪ್ಪತ್ತಾರು ವರ್ಷ ವಯಸ್ಸು.

ದೇವಯ್ಯ : ನನಗೆ ಇವಳೊಬ್ಬಳು ಮಗಳು. ಮಗನು ಮನೆ ಬಿಟ್ಟು ಮೂರು ವರ್ಷಗಳೇ ಆದ್ವು. ನನ್ನ ಮಗಳಿಗೆ ಮದುವೆ ಆಗೋದಿಕ್ಕೆ ಇಷ್ಟವಿಲ್ಲವಂತೆ.

ನಂಜು : ಏಕೆ?

ದೇವಯ್ಯ : ನಿಮ್ಮ ಮಗ ನಿಮಗೆ ಹ್ಯಾಗೆ ಕಾಪಾಡಲಿಕ್ಕೆ ಉಳಕೊಂಡನೋ ಹಾಗೆ.

ನಂಜು : ಒಂದೇ ಊರಿನಲ್ಲಿರುವಾಗ ನಿಮ್ಮನ್ನು ನೋಡ್ಕೊಳ್ಬೇಡಿ ಅಂತ ನಾನು ಹೇಳೋವ್ನಲ್ಲ. ನನ್ನ ಮಗನೂ ಅಂತವ್ನಲ್ಲ. ಹೆಣ್ಣು ಕೊಟ್ಟವ್ರೂ ಕಣ್ಣು ಕೊಟ್ಟವ್ರೂ ಒಂದಲ್ವೇ?

ದೇವಯ್ಯ : ನೋಡಿ ನಾನೂ ಅದೇ ವಿಷಯ ಹೇಳಿದೆ.

ನಂಜು : ನೋಡಮ್ಮಾ ಮಾಡುವವರು ಹೇಗಿದ್ರೂ ಮಾಡ್ತಾರೆ, ಮಾಡದೆ ಹೋಗುವವರು ಹ್ಯಾಗಿದ್ರೂ ಮಾಡೋಲ್ಲ. ಈಗ ನಮ್ಮ ತಂದೆ ವಿಷಯವನ್ನೇ ತೆಗೆದುಕೊಳ್ಳಿ. ಅವರಿಗೆ ಹೆಣ್ಣು ಮಕ್ಕಳೂ ಮಾಡಿದ್ರೂ,ಗಂಡು ಮಕ್ಕಳೂ ಮಾಡಿದ್ರು. ಪ್ರೀತಿ ಇದ್ದರೆ ಯಾರಾದ್ರೇನು ಹೇಳಿ ಮತ್ತೆ. ನನಗೂ ನನ್ನ ಹೆಂಡತಿಗೂ ಹೆಣ್ಣು ಬೇಕು ಅನ್ನೋ ಆಸೆಯಿಂದ ಏಳು ಮಕ್ಕಳಾದ್ರೂ ಏಳೂ ಗಂಡೇ ಆದ್ವು. ಸೊಸೆಯರೇ ನನಗೆ ಹೆಣ್ಣು ಮಕ್ಕಳು ಅಂತ ತಿಳ್ಕೊಂಡಿದ್ದೀನಮ್ಮಾ. ನೀನೂ ಒಬ್ಬ ಮಗಳು. ಸೊಸೆಯಷ್ಟೇ ಅಲ್ಲಾ, ನಿಮ್ಮ ತೆಂದೆ-ತಾಯಿ ನಮ್ಮ ಮನೇಲಿ ಬಂದಿದ್ರೂ ಯೋಚನೆ ಇಲ್ಲ. ನನ್ನ ಮಗ ನಿಮ್ಮ ಮನೇಲಿದ್ರೂ ಯೋಚನೆ ಇಲ್ಲ. ಸಂಬಂಧ ಬೆಳೆಸಿದ ಮೇಲೆ ನಾವೆಲ್ಲಾ ಒಂದೇ ಅಲ್ವೇ?

ದೇವಯ್ಯ : ಹೌದು ನಂಜುಂಡಯ್ಯನವರೇ, ತೆಗೊಳ್ಳಿ ಬಿಡಿ.

(ಮೂವರೂ ತಿನ್ನಲಾರಂಭಿಸುವರು)

ಮತ್ತೆ ಇನ್ನೊಂದು ವಿಷಯ ನಿಮ್ಮಲ್ಲಿ ಹೇಳಬೇಕಾಗಿದೆ.

ನಂಜು : ಹೇಳಿ.

ದೇವಯ್ಯ : ವರದಕ್ಷಿಣೆ, ವರೋಪಚಾರ.

ನಂಜು : ನೋಡಿ ಅವೊಂದಕ್ಕೂ ನಾನಿಷ್ಟ ಪಡೋವ್ನಲ್ಲ. ಒಂದು ದೇವಸ್ಥಾನದಲ್ಲಿ ಒಂದೇ ವೃಥದಿಂದ ಧಾರೆ ಎರೆದುಕೊಡಿ. ಬರುವ ಹೆಣ್ಣೇ ಮನೆಗೆ ಲಕ್ಷ್ಮಿಯಾಗ್ತಾಳೆ.

ದೇವಯ್ಯ : ನಿಮ್ಮಂಥವ್ರು ಈ ಕಾಲದಲ್ಲಿ ಅಪರೂಪ ನಂಜುಂಡಯ್ಯನವ್ರೇ.

ನಂಜು : ಸುಮ್ನೆ ದುರಾಸೆ ಏಕೆ ದೇವಯ್ಯನವ್ರೇ. ಹೋಗುವಾಗ ನಾನೇನು ತೆಗೆದುಕೊಂಡು ಹೋಗ್ತೀನಿ ನೀವೇ ಹೇಳಿ. ಹಿಂದೆ ಆಯ್ದಕ್ಕಿ ಮಾರಯ್ಯ ದಿನಕ್ಕೆ ಎಷ್ಟು ಅಕ್ಕಿ ಬೇಕೋ ಅಷ್ಟನ್ನ ಮಾತ್ರ ಸಂಪಾದಿಸಿ ಕಾಯಕ ಮಾಡಿ ತಿಂತಿದ್ರಂತೆ. ಕಾಶ್ಮೀರ ರಾಜನಾಗಿದ್ದ ಮೋಳಿಗೆ ಮಾರಯ್ಯ ಶರಣನಾಗಿ ಕಟ್ಟಿಗೆ ಮಾರಿ ಬಂದದ್ರಲ್ಲಿ ಜೀವನ ಮಾಡ್ತಿದ್ನಂತೆ. ನಮಗೆಷ್ಟು ಬೇಕೊ ಅಷ್ಟನ್ನು ಮಾತ್ರ ಸಂಪಾದಿಸಿ ಜೀವಿಸಬೇಕೇ ಹೊರತು ಹೆಚ್ಚಿಗೆ ದುರಾಸೆಯಿಂದ ಮುಕ್ತಿ ದೊರೆಯೋಲ್ಲ, ಅನ್ನೋದು ನನ್ನ ಮನಕ್ಕೆ ಬಂದಿದೆ. ಆದ್ದರಿಂದ ನಾನು ಯಾವುದಕ್ಕೂ ಆಶಿಸುವವನಲ್ಲ. ನನ್ನ ಮಗನೂ ಅಷ್ಟೇ.

ದೇವಯ್ಯ : ಬಹಳ ಸಂತೋಷ ದೇವರು ನಮಗೆ ಯಾವ ರೀತಿ ಆ ದಿನಕ್ಕೆ ಮನಸ್ಸು ಕೊಡ್ತಾನೋ ಹಾಗೆ ಮಾಡ್ತೀನಿ.

ನಂಜು : ಧಾರಾಳವಾಗಿ... ನೋಡಿ ನಾನು ಹಿಂದು ಮುಂದು ಮಾತಾಡುವವನಲ್ಲ. ನನಗೇನೋ ಹುಡುಗಿ ಒಪ್ಪಿಗೆ ಆಯಿತು... ಏನಪ್ಪಾ ಜಗದೀಶ...

ಜಗದೀಶ : ನೀವು ಹೇಳಿದ ಮೇಲೆ ಆಯಿತು.

ನಂಜು : ಅವನದೂ ಆಯಿತು. ಇನ್ನು ಮದುವೆಗೆ ರೆಡಿ ಮಾಡ್ಕೊಳ್ಳಿ. ಶಾಸ್ತ್ರ ಕೇಳಿಸಿದ್ದೇನೆ. ತುಂಬಾ ಚೆನ್ನಾಗಿದೆ ಅಂತ ರುದ್ರಾಶಾಸ್ತ್ರಿಗಳು ಹೇಳಿದ್ದಾರೆ. ಓಲಗ ಊದಿಸಿಬಿಡೋಣ.

ದೇವಯ್ಯ : ಅಗತ್ಯವಾಗಿ, ನಿಮ್ಮಂಥ ಬೀಗರು, ಅಳಿಯನ್ನ ಪಡೆಯಬೇಕಾದ್ರೆ ನಾವು ಎಷ್ಟು ಪುಣ್ಯ ಮಾಡಿದ್ವೋ.

ನಂಜು : ಅವೆಲ್ಲಾ ದೊಡ್ಡ ಮಾತು. ನಾವು ಬರೋಣ್ವೇ?

ದೇವಯ್ಯ : ಸಂತೋಷ.

(ಇಬ್ಬರೂ ಹೊರಡುವರು)

## ದೃಶ್ಯ-೧೦

(ಹಿನ್ನೆಲೆಯಲ್ಲಿ ಮದುವೆ ಓಲಗ... ಗಡಿ ಬಿಡಿ)

(ಗಂಡ-ಹೆಂಡ್ತಿ ನಮಸ್ಕರಿಸಿ ಮೇಲೇಳಲು)

ಜ್ಯೋತಿ : ಏಕಮ್ಮಾ ಅಳ್ತಾ ಇದ್ದೀಯಾ?

ನಾಗು : ಅಳು ಬರದೇ ಇರುತ್ತಮ್ಮಾ, ನಿಮ್ಮ ಅಕ್ಕನ ಮದುವೆ ಬಾ ಅಂತ ಕಾಗದ ಬರೆದ್ರೂ ಬರಲಿಲ್ಲವಲ್ಲ, ಎಂಥಹ ಕಠಿಣವಾದ ಹೃದಯ ಅವನದು.

ಜ್ಯೋತಿ : ಏನೋ ಅವನ ಮನಸ್ಸಿಗೆ ಬೇಕಾಗ್ಲಿಲ್ಲ ಬರಲಿಲ್ಲ. ಅದ್ಯೇನು ಬಿಡಮ್ಮ ಮೊದ್ಲೇ ಹೇಳ್ಬಿಟ್ಟಿಲ್ಲಾ ಇನ್ನು ಬರೋಲ್ಲ ನಿಮ್ಮ ಮನೆಗೆ ಅಂತ.

ನಾಗು : ಜ್ಯೋತಿ... ನೀನು ಮನೆ ಬಿಟ್ಟು ಹೋದ ಮೇಲೆ ನಾವಿಬ್ಬರೇ ಹೇಗಮ್ಮ ಬದುಕೋದು.

ಜ್ಯೋತಿ : ಇದೇನಮ್ಮಾ ಮೊದಲು ಹೇಳಿದೆ, ನೀನು ಇಲ್ಲೇ ಇರುತ್ತೀಯಾ ಅಂತ. ಬರ್ತೀನಿ ಹೋಗ್ತೀನಿ, ನಿಮಗೆ ಬೇಜಾರಾದಾಗ ನಮ್ಮ ಮನೆಗೆ ಬರಬಹುದಲ್ಲಮ್ಮಾ.

ದೇವಯ್ಯಾ : ಏನಂತೆ?

ಜ್ಯೋತಿ : ಮಾರುತಿ ಬರ್ಲಿಲ್ಲವಲ್ಲ, ನಿನ್ನ ಬಿಟ್ಟು ಹೇಗಿರೋದು ಅಂತ ಅಮ್ಮ ಕನವರಿಸ್ತಾ ಇದ್ದಾಳೆ ಅಪ್ಪ...

ದೇವಯ್ಯ : ಚೆನ್ನಾಗಿದೆ ಕಣೆ, ಬುದ್ಧಿವಾದ ಹೇಳಿ ಕಳುಹಿಸಬೇಕಾದವಳು ನೀನು. ನೀನೇ ಅಳ್ತಾ ಕುಳಿತ್ರೆ ಹ್ಯಾಗೆ... ನಾಲ್ಕು ಹೆಜ್ಜೆ ಹಾಕಿದರೆ ಅವಳ ಮನೆ. ನಮ್ಮ

ಮನೆ ಬಿಟ್ರೇನು ನಮ್ಮ ಮನ ಬಿಟ್ಟಿರ್ತಾಳೇನೇ ಜ್ಯೋತಿ. ಏಳು ಏಳು ಸಂತೋಷವಾಗಿ ಗಂಡನ ಮನೆಗೆ ಕಳುಹಿಸಿಕೊಡು.

ಜ್ಯೋತಿ : ನೀವ್ಯಾರು ನನ್ನ ಬಗ್ಗೆ ಯೋಚನೆ ಮಾಡಬೇಡಿ ನಾನು ಚೆನ್ನಾಗಿರ್ತೀನಿ.

(ತಂದೆಗೂ ನಮಸ್ಕರಿಸಿ)

ನಾಗು : ಹೋಗಿ ಬಾರಮ್ಮಾ ಈ ಮನೆ ಬೆಳಕು ಮಾಡಿದ ಹಾಗೆ ಹೋದ ಮನೆಯನ್ನೂ ಬೆಳಗಿಸಮ್ಮ

(ಇಬ್ಬರೂ ಹೊರಡುವರು)

ನಾಗು : ಮನೆ ಅದೆಷ್ಟು ಬಿಕೋ ಅಂತಿದೆ ನೋಡಿದ್ರಾ ಜ್ಯೋತಿ ಇಲ್ಲದ ಮನೆ. ಜ್ಯೋತಿ ಇಲ್ಲವಾದ ಮಾರುತಿಯಾದ್ರೂ ಇದ್ದಿದ್ರೆ ಆತನನ್ನಾದ್ರೂ ನೋಡಿ ಸಂತೋಷ ಪಡಬಹುದಾಗಿತ್ತು.

ದೇವಯ್ಯ : ಸುಮ್ನೆ ಯಾಕೆ ಹಂಬಲಿಸ್ತೀಯೇ?

ನಾಗು : ಏನು ಅಂದ್ರೆ ಆತನನ್ನು ಬೆಂಗಳೂರಿಗೆ ಹೋಗಿ ಕರ್ಕೊಂಡು ಬರೋದ್ಕಾಗೋಲ್ವೇ?

ದೇವಯ್ಯ : ಅವನು ಬರೋಲ್ಲ ಕಣೆ.

ನಾಗು : ನೀವು ಹೋಗಿ ಬನ್ನಿ ಅಂದ್ರೆ ನೋಡೋಣ.

ದೇವಯ್ಯ : ನಿನಗೆ ಅಷ್ಟು ದಿನಗಳಿಂದ ಹೇಳಿರಲಿಲ್ಲ ಕಣೆ. ಈ ಹೊತ್ತು ಹೇಳ್ತೀನಿ ಕೇಳು. ನಾನೇ ತಪ್ಪು ಮಾಡಿರಬಹುದು, ನೀನೇ ತಪ್ಪು ಮಾಡಿರಬಹುದು. ಈಗ್ಲಾದ್ರೂ ಬಾರೋ ಮನೆಗೆ ಅಂದೆ. ಖಂಡಿತ ಬರೋಲ್ಲ ಅಪ್ಪಾ ಅಂದುಬಿಟ್ಟ.

ನಾಗು : ಬೆಂಗಳೂರಿನಲ್ಲಿ ಏನು ಮಾಡಿಕೊಂಡಿದ್ದಾನೆ? ಹ್ಯಾಗಿದ್ದಾನೆ?

ದೇವಯ್ಯ : ಏನೋ ಕೆಲ್ಸ ಮಾಡ್ತಿದ್ದಾನೆ. ಆದ್ರೆ ಆತನಿಗೆ ನಮ್ಮ ಹತ್ತಿರ ಬಂದಿರೋಕೆ ಇಷ್ಟವಿಲ್ಲವಂತೆ. ಇನ್ನೊಂದು ಸಾರಿ ಹೋಗಿ ಕರೆದ್ರೂ ಅಷ್ಟೆ.

ನಾಗು : ನಾನು ಹೋಗಿ ಕರೆದರೆ.

ದೇವಯ್ಯ : ಬರೋಲ್ಲ ಕಣೆ... ಆತ ಬಲು ಮೊಂಡ. ಪ್ರಚಂಡತನ ನಡೆಸ್ತಾನೆ.

ನಾಗು : ಹ್ಯಾಗ್ರೀ... ಒಬ್ಬಳೇ ಕಾಲ ಹಾಕೋದು?

ದೇವಯ್ಯ : ರಿಟೈರ್ ಆಗಿದೆ. ಜೊತೆಗೆ ನಾನಿದ್ದೀನಲ್ಲ...

ನಾಗು : ಮಾರುತಿಗೆ ಮದುವೆ ಮಾಡಿ ಸೊಸೆ ಬಂದು ಒಂದು ಮೊಮ್ಮಗಳೋ ಮೊಮ್ಮಗನೋ ಆಗಿ ಎಷ್ಟು ಸಂತೋಷವಾಗಿರಬಹುದಾಗಿತ್ತು.

ದೇವಯ್ಯ : ಮನುಷ್ಯನ ಆಸೆಗೆ ಮಿಗಿಲೆಲ್ಲಿ ಹೇಳು. ಇಷ್ಟು ಕಂಡರೆ ಅಷ್ಟರಾಸೆ, ಅಷ್ಟು ಕಂಡರೆ ಮತ್ತಷ್ಟರಾಶೆ, ಮನುಷ್ಯನಿಗೆ ಒಂದಾದ ಮೇಲೆ ಒಂದು ಆಗುವುದು ಸಹಜ. ಆದರೆ ನಮ್ಮ ಪಾಲಿಗೆ ಎಷ್ಟು ಇದೆಯೋ ಅಷ್ಟೇ ಎಂದು ಸಮಾಧಾನ ಪಟ್ಕೊಂಡು ಜೀವನ ನಡೆಸ್ಬೇಕು ಅಷ್ಟೇ.

ನಾಗು : ನೀವೇನೋ ಹೇಳ್ಬಿಡ್ತೀರಿ ಆದ್ರೆ ನಾನು ಹೆಂಗಸು ಒಬ್ಬಳೇ ಕೂತು ಸಾಯುವಾಗ ಗೊತ್ತಾಗೋದು.

ದೇವಯ್ಯ : ಅತ್ತರೆಲ್ಲಾ ಸರಿಹೋಗುತ್ತ್ಯೋ?

ನಾಗು : ಏನೋ ಮನಸ್ಸಿಗೆ ಒಂದಷ್ಟು ನೆಮ್ಮದಿ, ಸಮಾಧಾನ, ಮನಸ್ಸಿನಲ್ಲಿರೋ ದುಃಖಾನಾ ಯಾರ ಜೊತೇಲಾದ್ರೂ ಹೇಳ್ಕೊಂಡ್ರೆ ಮನಸ್ಸು ಕುದೀತಿರುತ್ತೆ, ಅದನ್ನು ಹೇಳಿ ಮನಸ್ಸಿನಲ್ಲಿರೋದು ಉಗಿದು ಬಿಟ್ರೆ ಮನಸಿಗೆಷ್ಟೋ ಸಮಾಧಾನ, ಎಷ್ಟೋ ಹಗುರ.

ದೇವಯ್ಯ : ಹೋಗಿ ಊಟ ಮಾಡುಹೋಗು... ಯಾಕೆ ಸುಮ್ನೇ ಯೋಚನೆ ಮಾಡ್ತಾ ಇದ್ದೀಯೆ.

ನಾಗು : ಊಟ ಯಾರಿಗೆ ಬೇಕು ಬಿಡಿ...

ದೇವಯ್ಯ : ಸರಿ ನಿನ್ನಷ್ಟ ಬಂದ ಹಾಗೆ ಮಾಡು.

(ಎಂದು ಅಲ್ಲಿಂದ ಹೊರಡುವರು)

## ದೃಶ್ಯ-೧೧

(ಹೆಂಡತಿ ಚಾಪೆ ಹಾಕಿಕೊಂಡು ಮಲಗಿದ್ದಾಳೆ. ಅಲ್ಲಿಗೆ ಬಂದು)

ದೇವಯ್ಯ : ಏನೇ ಹೀಗೆ ಮಲಗಿಕೊಂಡ್ರೆ ಏನು ಗತಿ?

ನಾಗು : ಇನ್ನೇನು ಮಾಡ್ಲಿ ಮನೇಲಿ ಯಾರಿದ್ದಾರೆ, ಯಾರೊಂದಿಗೆ ನಗ್‌ನಗ್ತಾ ಮಾತಾಡ್ಕೊಂಡು ಕುಳ್ತಿರ್ಲಿ ಹೇಳಿ.

ದೇವ್ಯಯ : ನಿನ್ನ ಮಗಳ ಮನೆ ಕಡೆಗಾದ್ರೂ ಹೋಗಿಬರಬಾರದಾಗಿತ್ತೆ?

ನಾಗು : ಅಲ್ಲಿಗೆ ತಾನೇ ಎಷ್ಟು ದಿನಾ ಅಂತ ಹೋಗೋದು? ಎಷ್ಟು ಹೊತ್ತು ಅಂತ ಕಾಲ ಕಳೆಯೋದು.

ದೇವಯ್ಯ : ಒಂದು ಪುಸ್ತಕನಾದ್ರೂ ಓದಬಾರ್ದೇ?

ನಾಗು : ಏನೋದೋದೋ... ಯಾಕೋ ನನಗೆ ಬಲಗಣ್ಣು ಒಂದೇ ಸಮನಾಗಿ ಕುಣೀತ್ ಇದೇ ಕಣ್ರೀ... ಆದೇನನಿಷ್ಟ ಕಾದಿದ್ಯೋ.

ದೇವಯ್ಯ : ಏನು ಅನಿಷ್ಟ ಮಗ ಮನೆ ಬಿಟ್ಟು ಹೋದ್ನಲ್ಲಾ ಅದೇ ಅನಿಷ್ಟವಲ್ಲವೇ?

ನಾಗು : ಹೌದು.

ದೇವಯ್ಯ : ಇನ್ನು ಅವೆಲ್ಲಾ ತಲೆಗಚ್ಕೊಳ್ಬೇಡ ಕಣೆ.

ನಾನು : ಸಾಯೋತನ್ಕಾನೂ ಅದು ತಲೇಲಿರೋದು. ಹೆತ್ತ ಕರುಳು ಯೋಚನೆ ಮಾಡ್ದೇ ಇರುತ್ತಾ ನೀವೇ ಹೇಳಿ.

ದೇವಯ್ಯ : ಅದ್ಕೀಗ ಏನು ಮಾಡಲಿಕ್ಕಾಗುತ್ತೆ?

ನಾಗು : ಈಗ ನಾವಿಬ್ರೂ ಬೆಂಗಳೂರಿಗೆ ಹೋಗಿ ಅವನನ್ನು ಮನೆಗೆ ಬಾರಪ್ಪಾ ಅಂತ ಕರೆಯೋದು.

ದೇವಯ್ಯ : ಬರೋಲ್ಲ ಅಂತಾನಲ್ಲ.

ನಾಗು : ಮತ್ತೊಂದು ಸಾರಿ ನಾನು ಬಂದು ಕೇಳ್ತೇನೆ.

ದೇವಯ್ಯ : ಈಗೇನು ಹೋಗೋಣ ಸುಮ್ನಿರು. ನಿನ್ನ ಮನಸ್ಸಿನಲ್ಲಿರೋ ಆತುರವೂ ಸ್ವಲ್ಪ ಹೋಗಲಿ.

ನಾಗು : ನೀವು ಎಲ್ಲಿಗೆ ಹೋಗಿದ್ರಿ?

ದೇವಯ್ಯ : ಮನೆ ಪಾಠಕ್ಕೆ.

ನಾಗು : ರಿಟೈರ್ಡ್ ಆದ ಮೇಲೂ ಸಂಪಾದ್ನೆ ಮಾಡಿ ನಮ್ಮಗ್ಳ ಜೀವನ ಸಾಗ್ಸೋ ಹಾಗಾಯ್ತು.

ದೇವಯ್ಯ : ನೋಡು ಯಾವ ಮಕ್ಕಳನ್ನೂ ಕೇಳಬಾರ್ದು. ಶಕ್ತಿ ಇರೋವರೆಗೆ ನಾವೇ ದುಡಿದು ಮಡಿಬೇಕು.

ನಾಗು : ಇದಕ್ಕೆ ಮಕ್ಕಳ್ಯಾಕೆ ಮರಿಯಾಕೆ?

ದೇವಯ್ಯ : ನಮ್ಮ ಕಾಮವೆಂಬ ಅವಿವೇಕಕ್ಕೆ ಮಕ್ಕಳು ಅಷ್ಟೇ. ಏನೋ ಒಂದೆರಡಾದ ನಮ್ಮ ಗತಿಯೇ ಹೀಗಾದ್ರೆ, ಆಸ್ತಿಯೂ ಇಲ್ಲದೆ, ಮಕ್ಕಳೂ ಹೆಚ್ಚಾದ್ರೆ ಅವ್ರೂ ಸಮಾಜಕ್ಕೆ ಹೊರೆ. ಹೆತ್ತ ತಾಯಿ ತಂದೆಗಳ ಜೀವನವೂ ನರಕವಲ್ಲವೇ?

ನಾಗು : ಎಷ್ಟಾದ್ರೂ ಆಗೋಲ್ಲ. ಆಗೋ ಎರಡಾದ್ರೂ ದಾರೀಲಿಲ್ಲದೇ ಹೋದ್ರೆ, ಇದೋ ಹೀಗೆ ನಮ್ಮ ಬಾಳ್ನಾಗೆ ಆಗ್ತದೆ ಅಲ್ವಾ? ಊಂ... ನಡೀರಿ ಊಟ ಮಾಡುವಿರಂತೆ. ಇನ್ನೆಷ್ಟು ಅಳೆದು ಸುರಿದ್ರೂ ಅಷ್ಟೇ.

ದೇವಯ್ಯ : ಊಂ... ನಡೆ...

## ದೃಶ್ಯ-೧೨

(ನಾಗು ಮಗನ ಚಿಂತೆಯಲ್ಲಿ ಕುಳಿತಿರಲು ಅಲ್ಲಿಗೆ ದೇವಯ್ಯನವರು ಬರುತ್ತಾ..)

ದೇವಯ್ಯ : ನಾಗೂ... ನಾಗೂ... ಯಾಕೋ ಸಂಕಟವಾಗುತ್ತೆ. ಒಂದು ಸ್ವಲ್ಪ ನೀರು ತಾರೇ.

ನಾಗು : ಯಾಕೆ... (ದುಗುಡದಲ್ಲಿ) ಬನ್ನಿ ಬನ್ನಿ ಈ ಚಾಪೆ ಮೇಲೆ ಸ್ವಲ್ಪ ಮಲಗಿಕೊಳ್ಳಿ... ತಂದ್ಬಿಡ್ತೀನಿ.

(ನೀರು ತಂದು ಬಾಯಿಗೆ ಹಾಕುವಳು)

ದೇವಯ್ಯ : ನಾಗೂ... ನಾನು... ಉಳಿಯೋಲ್ಲ... ಜ್ಯೋತಿ ಜಗದೀಶನ್ನ ಕರೆಸಿಬಿಡು ನೋಡ್ಕೊಳ್ತೀನಿ.

ನಾಗು : ಯಾಕಂದ್ರೆ... ಹಾಗೆಲ್ಲಾ ಅಂತೀರಿ, ಅದೋ ನಿಮ್ಮ ಆಸೆಯಂತೆ ನಿಮ್ಮ ಮಗಳು ಅಳಿಯ ಬರ್ತಾ ಇದ್ದಾರೆ ನೋಡಿ.

ಜ್ಯೋತಿ : ಅಪ್ಪಾ...ಯಾಕೆ?

ನಾಗೂ : ಬಾರಮ್ಮಾ ಸಂಕಟ ಅಂತಿದ್ದಾರೆ. ಒಂದು ಸ್ವಲ್ಪ ನೀರು ಬಿಡಮ್ಮಾ ಬಾಯಿಗೆ.

ಜ್ಯೋತಿ : ಕೊಡಮ್ಮ (ಎಂದು ತೆಗೆದುಕೊಂಡು ಹಾಕುವಳು) ಅಪ್ಪಾಜಿ...ಕಣ್ಬಿಡಿ ಅಪ್ಪಾಜಿ... ನಿಮ್ಮ ಅಳಿಯ ಬಂದಿದ್ದಾರೆ ನೋಡಿ ಯಾಕೆ...ಎದ್ದು ಕೂತ್ಕೊಳ್ಳಿ.

ನಾಗು : ಏಳಿ ಅಂದ್ರೆ... ಏಳಿ...

ಜ್ಯೋತಿ : ಅಮ್ಮಾ... ಏನಾಯ್ತು?

ನಾಗು : ಸಂಕಟ... ಸಂಕಟ ಅಂದ್ರಮ್ಮ

ಜಗದೀಶ : ಸ್ವಲ್ಪ ತಲೇಗೂ ಎದೆಗೂ ನೀರು ತಟ್ತೀನಿ ಕೊಡಿ...

ಜ್ಯೋತಿ : ಮಾತಾಡ್ತಾ ಇಲ್ಲ...

ದೇವಯ್ಯ : ಮಾರುತೀ... ಮಾರುತೀ...

ಜ್ಯೋತಿ : ಅದೋ ಅಪ್ಪಾಜಿ ಮಾತಾಡ್ತಾ ಇದ್ದಾರೆ. ಮಾರುತೀನ ಕರೀತಿದ್ದಾರೆ.

ನಾಗು : ಅಯ್ಯೋ... ಮಾರುತಿ... ತಂದೆ ಇಂಥ ಸ್ಥಿತೀಲಿರುವಾಗ ಒಂದು ಉದ್ಧರಣೆ ನೀರು ಬಾಯಿಗೆ ಬಿಡಲಿಕ್ಕೆ ಬರಲಿಲ್ವಲ್ಲೋ.

ಜಗದೀಶ : ನೀವು ಸ್ವಲ್ಪ ಹಾಗೆ ಇರಿ ಗಾಬರಿ ಪಡಬೇಡಿ. ಹೋಗಿ ಅಪ್ಪಾಜಿ ಕರೆದುಕೊಂಡು ಬರ್ತೀನಿ.

(ಎಂದು ಹೊರಡುವನು)

ಜ್ಯೋತಿ : ಅಪ್ಪಾಜಿ... ಅಪ್ಪಾಜಿ... ಅಮ್ಮಾ ಅಪ್ಪಾಜಿ ಮಾತಾಡೋಲ್ಲ...

ನಾಗು : ಜ್ಯೋತಿ... ವಸ್ತು ಹೊರಟುಹೋಯಿತು ಕಣಮ್ಮಾ. ಇನ್ನೆಲ್ಲಿ ಅಪ್ಪಾಜಿ. ಅಯ್ಯೋ ನಮಗೆಲ್ಲಾ ಮೋಸ ಮಾಡಿ ಹೊರಟುಬಿಟ್ರಾಂದ್ರೇ... ಅಯ್ಯೋ....

(ಎಂದು ಅಳುತ್ತಾ ಮೇಲೆ ಬೀಳುವಳು. ಮಗಳು ಜ್ಯೋತಿಯೂ ಸಹ ಅಳುತ್ತಾ ಹೊರಳಾಡುವಳು. ಅಷ್ಟರಲ್ಲಿ ಜಗದೀಶನು ತಂದೆಯನ್ನು ಕರೆತಂದು)

ಜಗದೀಶ : ಸ್ವಲ್ಪ ಬಿಡಿ ಅಪ್ಪಾಜಿ ಬಂದಿದ್ದಾರೆ.

ನಂಜು : (ನೋಡಿ) ವಸ್ತು ಹೋಗಿದೆ.

ಜ್ಯೋತಿ : ಅಯ್ಯೋ... ಇನ್ನೆಲ್ಲಿ ನಿಮ್ಮ ಮಾವ... ಅಯ್ಯೋ...ಅಪ್ಪಾಜೀ... ಅಪ್ಪಾಜೀ...

ನಂಜುಂಡಯ್ಯ : ಜಗದೀಶ ಇನ್ನು ಅಳ್ತಾ ಇದ್ರಾಗೋಲ್ಲ. ಮುಂದಿನ ಸಂಸ್ಕಾರದ ಕೆಲಸ ಆಗಬೇಡ್ವೇ, ಹೋಗು ಯಾರು ಯಾರಿಗೆ ಹೇಳಬೇಕೋ ಎಲ್ಲರಿಗೂ ಟಲಿಗ್ರಾಂ ಮಾಡಿಬಿಡು. ಅವರ ಮಗನಿಗೂ ಮಾಡಿಬಿಡು.

ಜಗದೀಶ : ಆಗ್ಲಿ ಅಪ್ಪಾ.

(ಎಂದು ಅಲ್ಲಿಂದ ಹೊರಡುವನು)

ನಾಗು : ಜ್ಯೋತಿ ಮಗ ಕೈಬಿಟ್ಟು ಮರೆಯಾದ. ನೀನು ಮದ್ವೆ ಆಗಿಹೋದೆ. ಇವರು ಒಂದೇ ಒಂದಾಗಿ ನನ್ನನ್ನು ಬಿಟ್ಟು ಹೊರಟೋದ್ರಲ್ಲಾ ನನ್ನ ಗತಿ ಏನಮ್ಮಾ?

ಜ್ಯೋತಿ : ನಾನಿದ್ದೀನಿ ಸುಮ್ಮನಿರಮ್ಮ.... ನಿನ್ನನ್ನು ನೋಡ್ಕೊಳ್ಳೋ ಭಾರ ನನ್ನದು. ಅಪ್ಪಾಜಿ ಯಾರಿಗೂ ನೋವು ಕೊಡದೆ ಸುಖ ಸಾವಿನಲ್ಲಿ ಹೋದ್ರು, ಆದ್ರೆ ನಮ್ಮನ್ನ ತಬ್ಬಲಿ ಮಾಡಿಬಿಟ್ಟು.

ನಾಗು : ಗಂಡು ಮಕ್ಕಳು ತಂದೆ ಬಾಯಿಗೆ ನೀರು ಬಿಡಬೇಕು, ತರ್ಪಣ ಕೊಡಬೇಕು ಅಂತಾರೆ, ಚಿತೆಗೆ ಅಗ್ನಿಸ್ಪರ್ಶ ನೀಡಬೇಕು ಅಂತಾರೆ. ನನಗೆ ಗಂಡು ಮಗ ಆಗಿದ್ದು ಏನಾಯ್ತು ನೋಡು.

ಜಗದೀಶ : ನೋಡಿ ನಿಮ್ಮ ಮಗನೂ ನಾನೇ, ಅಳಿಯನೂ ನಾನೇ. ಚಿತೆಗ ಅಗ್ನಿ ಸ್ಪರ್ಶ ಮಾಡ್ತೇನೆ, ತರ್ಪಣ ಕೊಡ್ತೇನೆ.

ನಾಗು : ಅವನು ಬರುವವನಾಗಿದ್ರೆ ಇಷ್ಟು ಹೊತ್ತಿಗೆ ಬರಬೇಕಾಗಿತ್ತು.

ನಂಜುಂಡಯ್ಯ : ಅವನು ಬರೋಲ್ಲ ಕಾರ್ಯ ಮುಗಿಸಿ ಹೆಣವನ್ನು ಇನ್ನು ಎಷ್ಟು ಹೊತ್ತು ಇಟ್ಟುಕೊಳ್ಳಲಿಕ್ಕಾಗುತ್ತೆ?

ಜ್ಯೋತಿ : ಬರೋ ಹಾಗೆ ಕಾಣಲಿಲ್ಲ.

ನಂಜುಂಡಯ್ಯ : ಮುಂದಿನ ಕಾರ್ಯ ಮುಗಿಸೋಣ್ವೇನಮ್ಮ.

ಜ್ಯೋತಿ : ಆಗ್ಲಿ ಮಾವಯ್ಯ.

ನಾಗು : (ಸ್ವಗತ ಧ್ವನಿ-ನಾಗು ಅಳುತ್ತಾ ನಿಂತಿರಲು)

ವಂಶ ಬೆಳಗಲಿಕ್ಕೆ ಗಂಡು. ಸಾಯುವಾಗ ಬಾಯಿಗೆ ನೀರು ಬಿಡೋಕೆ ಗಂಡು, ಚಿತೆಗೆ ಅಗ್ನಿಸ್ಪರ್ಶ ನೀಡಲಿಕ್ಕೆ ಗಂಡು, ತರ್ಪಣ ಕೊಡಲಿಕ್ಕೆ ಪ್ರತಿಯೊಬ್ಬರಿಗೂ ಗಂಡು ಬೇಕೇಬೇಕು. ಆದ್ರೆ ನಮಗೆ ಗಂಡಿದ್ದು ಏನು ಪ್ರಯೋಜನವಾಯ್ತು? ಅಕ್ಕನ ಮದ್ವೆಗೆ ಬರಲಿಲ್ಲ. ಹೋಗ್ಲಿ ಅಂದ್ರೆ ಕಷ್ಟದ

ವಿಚಾರವಾದ ತಂದೆ ಸತ್ತು ಅಂದ್ರೂ ಬರಲಿಲ್ಲ. ಇಂಥ ಗಂಡು ಮಕ್ಕಳನ್ನು ಹೆರೋದ್ಕಿಂತ ಹಾಗೇ ಇರೋದು ಲೇಸಲ್ವೇ? ಗಂಡಾಗಿ ಜ್ಯೋತಿ ನಿಂತ್ಲು, ಮನೆ ಮಠ ನೋಡಿದ್ಲೂ. ಅಳಿಯ ಮಗನಾಗಿ ಕೆಲಸ ಮಾಡಿದ. ಇದಕ್ಕೆ ಗಂಡೇ ಬೇಕು ಅನ್ನೋ ಆಸೆಯಾದ್ರೂ ಯಾಕೆ? ನನ್ನ ಮಗಳು ಜ್ಯೋತಿಯಿಂದಲೇ ನನ್ನ ಮನೆ ಜ್ಯೋತಿ ಬೆಳಗಿತು. ಆಕೆಯೇ ಮಗಳು... ಮಗನು... ಗಂಡು ಮಗು ಬೇಕು ಅನ್ನೋದೆಲ್ಲಾ ಬರೇ ಭ್ರಮೆ... ಆಸೆ... ಚಪಲ ಅಷ್ಟೇ. ಯಾರಾದ್ರೇನು? ಇದಕ್ಕೆ ನಮ್ಮ ಸಂಸಾರವೇ ಆದರ್ಶವಾಗಲಿಲ್ಲವೇ...? ಅಯ್ಯೋ... ವಿಧಿಯೆ...! ಜ್ಯೋತಿಯಿಂದ ನನ್ನ ಮನೆಯ ಜ್ಯೋತಿ ಬೆಳಗಿತು, ಜ್ಯೋತಿ ಬೆಳಗಿತು... ಆ್ಹಂ... ಜ್ಯೋತಿ... ಜ್ಯೋತಿ...

(ಅಳುತ್ತಾ ಆಕೆಯನ್ನು ತಬ್ಬಿಕೊಂಡಿರುವಂತೆ ರಂಗವನ್ನು ಕತ್ತಲಾವರಿಸುವುದು)



# ಎಚ್ಚರ

**ಪಾತ್ರ ವರ್ಗ**

೧. ಮೀನಾಕ್ಷಿ ೨.ರಾಮಯ್ಯ ೩.ಶಾಂತಾ ೪.ಪ್ರಭು

ಮೀನಾಕ್ಷಿ : ನಾನು ಜೀವನದಲ್ಲಿ ಆಸೆ ಆಕಾಂಕ್ಷೆಗಳನ್ನು ತುಂಬಿಕೊಂಡಿದ್ದವಳು. ಮಾದರಿ ಜೀವನ ಮಾಡಬೇಕು ಎಂಬ ಹಂಬಲ ಇಟ್ಟುಕೊಂಡಿದ್ದವಳು. ಒಂದು ಪುಟ್ಟ ಮನೆ, ಎರಡು ಪುಟಾಣಿ ಮಕ್ಕಳನ್ನು ಪಡಕೊಂಡು ಅವರಿಗೆ ಬೇಕಾದುದನ್ನು ಕೊಟ್ಟು, ನಾನಾ ಡ್ರೆಸ್‌ಗಳನ್ನು ತೊಡಿಸಿ, ಸಂಗೀತ ನೃತ್ಯ ಕಲಿಸಿ, ಎಲ್ಲರಿಗೂ ನನ್ನ ಮಕ್ಕಳು ಆದರ್ಶರಾಗಬೇಕು ಅಂತ ಮನಸ್ಸು ಮಾಡಿದ್ದವಳು. ಜೀವನವನ್ನು ಕಷ್ಟವಿಲ್ಲದೆ ಸುಖದಲ್ಲಿ ಸಾಗಿಸಬೇಕು ಅಂತ ಮನಸ್ಸಿನಲ್ಲಿ ದೃಢ ಸಂಕಲ್ಪ ಮಾಡಿದ್ದವಳು. ಕೂಸು ಹುಟ್ಟುವ ಮುಂಚೆ ಕುಲಾವಿ ಹೊಲೆಸುತ್ತಿದ್ದವಳು. ಮದುವೆಯಾಗಿ ಮೂರು ನಾಲ್ಕು ತಿಂಗಳು ಯಾವ ಜಂಜಾಟವೂ ಇಲ್ಲದೆ ಕಾಲಕಳೆದೆ ಅಂತ ಕಾಣುತ್ತೆ. ಆಮೇಲೆ ಸಂಸಾರ... ಅದಕ್ಕೇ ಏನೋ 'ಸಂಸಾರ ಸಾಗರ' ಅಂತನ್ನೋದು. ನಿಜವಾಗಿಯೂ ಈ ಸಂಸಾರದಲ್ಲಿ ಈಜುವುದು ಬಹಳ ಕಷ್ಟ. ನನಗೆ ಅಂಥ ಕಿತ್ತು ತಿನ್ನುವ ಬಡತನವೇನೂ ಇಲ್ಲ ಮಧ್ಯಮ ವರ್ಗದ ಸಂಸಾರ. ಗಂಡನಿಗೂ ಕೈ ತುಂಬಾ ಸಂಬಳ. ಆದರೇನು? ಎಷ್ಟಿದ್ದರೂ ಈ ಕಾಲಕ್ಕೆ ಕಡಿಮೆಯೇ. ಮಕ್ಕಳು ಮರಿಗಳು... ಮನೆ ತುಂಬುವಷ್ಟು.ನಾಲ್ಕು ಮಕ್ಕಳ ಆರೈಕೆ, ಉಪಚಾರ ಮಾಡುವುದರಲ್ಲಿ ನನಗೆ ರಟ್ಟೆ ಬಿದ್ದುಹೋಗುತ್ತವೆ. ಇತ್ತೀಚೆಗಂತೂ ಯಾವ ಕೆಲಸ ಮಾಡಲಿಕ್ಕೂ ಇಷ್ಟವಿಲ್ಲ. ಯಾವುದರಲ್ಲೂ ಹುಮ್ಮಸ್ಸಿಲ್ಲ ನೀರಸವಾಗಿ ಕಾಣುತ್ತಿದೆ ಜೀವನ!

ರಾಮಯ್ಯ : ಏನೇ... ರಸ ತುಂಬಿಕೊಂಡರೂ ನೀರಸ ಅಂತಾ ಇದ್ದೀಯ?

ಮೀನಾಕ್ಷಿ : ನಾನು... ನಾನೆಲ್ಲಿ ರಸ ತುಂಬಿಕೊಂಡಿರುವುದು? ಒಣಗಿ ಓಟಗರಿಯಾಗಿದ್ದೀನಿ...

ರಾಮಯ್ಯ : ಉಣ್ಣಕ್ಕೆ ಕಡಿಮೆ ಮಾಡಿದ್ದೀನಾ? ತಿನ್ನಕ್ಕೆ ಕಡಿಮೆ ಮಾಡಿದ್ದೀನಾ? ಯಾವುದಕ್ಕೇನು ಕೊರತೆ ಮಾಡಿದ್ದೇನೆ?

ಮೀನಾಕ್ಷಿ : ಮನೆ ತುಂಬಾ ಮಕ್ಕಳ ಕೊಟ್ಟಿದ್ದೀನಿ ಅನ್ನೋದನ್ನು ಮರೆತು ಬಿಟ್ಟಿದ್ದೀರಾ?

ರಾಮಯ್ಯ : ಅದರಲ್ಲೂ ಏನೂ ಕೊರತೆ ಇಲ್ಲ. ಗಂಡು-ಹೆಣ್ಣು-ಕೊಟ್ಟು ನಿನ್ನ ತಾಯ್ತನಕ್ಕೇನು ಕುಂದು ತಂದಿಲ್ಲ.

ಮೀನಾಕ್ಷಿ : ಇಲ್ಲ ಅಂತ ಹೇಳಿದ್ನೇ...? ಆದ್ರೆ ಅದ್ರಿಂದ ಸುಖ ಸಿಗುತ್ತೆ ಅಂತ ತಿಳಿದುಕೊಂಡಿದ್ದೀರಾ?

ರಾಮಯ್ಯ : ನೀನು ಯಾಕ್ ಹೀಗೆ ಮಾತಾಡ್ತಿದ್ದೀಯೇ ನನಗೆ ಗೊತ್ತಾಗ್ತಿಲ್ಲ...

ಮೀನಾಕ್ಷಿ : ಕಷ್ಟ ನನಗೆ ಗೊತ್ತು. ನಿಮಗೇನು ಗೊತ್ತಾಗಬೇಕು? ಈ ಮಕ್ಕಳ ಜೊತೆ ಏಗಿ ಏಗಿ ನಾನು ಸೋತೋಗ್ಬಿಟ್ಟಿದ್ದೀನಿ...

ರಾಮಯ್ಯ : ಬಟ್ಟೆ ಒಗೆಯೋಕ್ಕೆ, ಮನೆ ಸಾರಿಸಿ, ಗುಡಿಸೋಕೆ ಒಂದು ಆಳು ಇರಿಸ್ಕೋಬ್ಯಾಡ ಅಂದ್ನೇ?

ಮೀನಾಕ್ಷಿ : ಆಳಿರಿಸ್ಕೊಂಡ್ಬಿಟ್ರೆ ಸುಖ ಸಿಗುತ್ತೆ ಅಂತ ತಿಳ್ಕೊಂಡಿದ್ದೀರೇನು?

ರಾಮಯ್ಯ : ಮತ್ತದೇನು? ನಿನ್ನ ಮನಸ್ಸಿನಲ್ಲಿರೋದು ಏನು ಅಂತ ಹೇಳು ಮಹಾರಾಯ್ತಿ...

ಮೀನಾಕ್ಷಿ : ನಾನು ಹೀಗಾಗುತ್ತೆ ಅಂತ ಭಾವಿಸಿಕೊಂಡಿರ್ಲಿಲ್ಲ.

ರಾಮಯ್ಯ : ಈಗ ಏನಾಯ್ತು ಅಂತ್ಲೇ ನನಗೆ ಅರ್ಥವಾಗ್ತಾ ಇಲ್ಲ. ನೀನು ಹೇಳಿದ್ರಲ್ವೇ ಗೊತ್ತಾಗೋದು?

ಮೀನಾಕ್ಷಿ : ನನ್ನನ್ನು ನೋಡ್ತಿದ್ರೆ ನಿಮಗೆ ಗೊತ್ತಾಗಲ್ವೇ! ಏನಾಗಿದೆ, ಏನು ಮಾಡಬೇಕು ಅನ್ನೋದನ್ನ ನಾನು ಹೇಳಬೇಕೇ? ಅಕ್ಕಪಕ್ಕದವರ ಜೀವನ ನೋಡಿದ್ರೆ ಒಂದು ಸಂತೋಷ.

ರಾಮಯ್ಯ : ಬೇರೆಯವರನ್ನು ನೋಡ್ದಾಗ ಹಾಗೇ ಅನ್ನಿಸೋದು ಅವರಿಗಿರೊ ಕಷ್ಟ ನಮಗೇನು ಗೊತ್ತು? ನಿನ್ನ ನೋಡಿ ಬೇರೆಯವರು ಎಷ್ಟು ಸುಖವಾಗಿದ್ದಾರೆ ಅಂದುಕೊಳ್ತಾರೆ...

ಮೀನಾಕ್ಷಿ : ಅಂದುಕೊಳ್ತಾರೆ... ನಡೀರಿ... ಹುಡುಗರದೊಂದು ಕತೆಯಾದರೆ ನಿಮ್ಮದೊಂದು ಥರ ಕತೆ. ಎಲ್ಲರೂ ಸೇರಿ ನನ್ನ ಪ್ರಾಣ ಹಿಂಡಿ ಬಿಡ್ತೀರಿ?

ರಾಮಯ್ಯ : ಪ್ರಾಣ ಹಿಂಡ್ತೀರಿ, ಪ್ರಾಣ ಹಿಂಡ್ತೀರಿ ಅಂತ ಹೊಡ್ಕೋತಿರ್ತೀಯಲ್ಲಾ, ನಿನಗೆ ಮಲ್ಲಿಗೆ ಹೂವಿನ ಸುಪ್ಪತ್ತಿಗೆ ಹಾಕಿಸಬೇಕು ಅಂತೀಯೋ ಹ್ಯಾಗೆ?

ಮೀನಾಕ್ಷಿ : ನಾನೇನು ಮಹಾರಾಣಿಯಲ್ಲ. ಅಷ್ಟೊಂದು ಕಿಮ್ಮತ್ತೆಲ್ಲಾ ಬ್ಯಾಡ. ನನ್ನನ್ನು ನಿಮ್ಮ ಹೆಂಡತಿಯಾಗಿ ನೋಡಿಕೊಂಡ್ರೆ ಸಾಕು.

ರಾಮಯ್ಯ : ನಿನ್ನೊಂದಿಗೆ ಮಾತಾಡೋವರಿಗೆ ಬುದ್ಧಿ ಇಲ್ಲ.

ಮೀನಾಕ್ಷಿ : ಆ್ಹಂ... ಎಷ್ಟೊಂದು ಸಿಡುಕು! ಇವರಿಗೇ ಇಷ್ಟು ಸಿಡುಕು ಇರಬೇಕಾದ್ರೆ ನನಗೆಷ್ಟು ಇರಬೇಕು?

ರಾಮಯ್ಯ : ಮಾಡ್ಕೋ ಬ್ಯಾಡ ಅಂದವರ್ಯಾರು?

ಮೀನಾಕ್ಷಿ : ಒಂದು ನಾಟಕಾನೇ, ಸಿನೆಮಾನೇ? ಒಂದು ವಿಚಾರವೇ? ಬರೇ ಸಂಬಳ ತಂದು ಹಾಕ್ಬಿಟ್ಟು ನಾಲ್ಕು ಮಕ್ಕಳು ಕೊಟ್ರಾಯ್ತೇ? ಬೆಳಗಿಂದ ಸಾಯಂಕಾಲದ ವರೆಗೆ ನಿಮ್ಮಗಳ ಜೀತನೆಲ್ಲಾ ಮಾಡ್ಕೊಂಡು ಹೋಗ್ಬಿಟ್ರೆ ಸಂಸಾರ ಅಂದ ಹಾಗಾಯ್ತೇನು? ಜೀವನ ಅಂದ್ರೆ ನಂದನವನ ಅಂತ ತಿಳ್ಕೊಂಡಿದ್ದೆ. ಹಾಗೆ ಮಾಡಿಕೊಂಡು ಹೋಗಬೇಕು ಅಂತಿದ್ದೆ. ಆದ್ರೆ ಅದು ಸಾಧ್ಯವಾಗ್ತಾ ಇಲ್ಲ. ಏನ್ಮಾಡ್ಲಿ? ನನ್ನ ಕಷ್ಟವನ್ನ ಯಾರಿಗೆ ಹೇಳಿಕೊಳ್ಳಲಿ? ಅತ್ತೆ ಮಾವಂದಿರ ಕಾಟವಿಲ್ಲ ಅಂದ್ರೆ, ಗಂಡ-ಮಕ್ಕಳ ಕಾಟವೇ ಹೆಚ್ಚಾಗಿದೆ.

ರಾಮಯ್ಯ : ಅಂದ್ರೆ ನಾವು ಸತ್ತರೆ ನೀನು ಸುಖದಿಂದರಬಹುದು ಅಂತ ಕಾಣುತ್ತೆ.

ಮೀನಾಕ್ಷಿ : ಹಾಗಂದ್ರೆ ಹಾಗಂತೀರಿ, ಹೀಗಂದ್ರೆ ಹೀಗಂತೀರಿ. ನಾನು ಬಾಯಿ ಮುಚ್ಚಿಕೊಂಡು ಮೂಗಿಗೆ ಕವಡೆ ಕಟ್ಕೊಂಡು ಮಡೀಬೇಕೇ? ಎಲ್ಲಾ ನಾನು ತಂದದ್ದು ಬಿಡಿ. ಹಣವಿದ್ದವನ ಮನೆಗೆ ಬಂದ್ರೂ ಋಣವಿದ್ದಷ್ಟೇ ಅಂತ ಹೇಳೋಲ್ವೇ ಹಾಗಾಯ್ತು! ತಂದದ್ದೆಲ್ಲಾ ಅನುಭವಿಸ್ತೀನಿ. (ಅಳುವಳು)

ರಾಮಯ್ಯ : ಬೆಳಗ್ಗೆದ್ದು ಏನು ನಿನ್ನ ದುಃಖ?

ಮೀನಾಕ್ಷಿ : ಸಂತೋಷ ಕೊಡಿ, ಸಂತೋಷ ಕೊಡಿ ಅಂತ ಬೇಡಿಕೊಂಡ್ರೆ, ದುಃಖಾನೇ ಕೊಡೋದು ಅಂದ್ರೆ ನಾನೇನು ಮಾಡ್ಲಿ?

ರಾಮಯ್ಯ : ಸಂತೋಷ ಬೇರೆಯವರು ಕೊಡೋಕ್ಕಾಗೋಲ್ಲ, ಬೇರೆ ಎಲ್ಲೂ ಸಿಗೋಲ್ಲ. ಅದನ್ನು...

ಮೀನಾಕ್ಷಿ : ಹೌದು ನಾನು ಹಾಗೇ ಅಂತ್ಲೇ ನಾನು ಭಾವಿಸ್ಕೊಂಡಿದ್ದೇನೆ.

ರಾಮಯ್ಯ : ಈಗ ಆಫೀಸಿಗೆ ಹೊತ್ತಾಯ್ತು ಏನಾದ್ರೂ ಆಗಿದ್ಯೋ ಏನು?

ಮೀನಾಕ್ಷಿ : ಆಗೋದು ಏನು ಸೀಮೆಎಣ್ಣೆ ಇಲ್ಲ, ಕರೆಂಟ್ ಇಲ್ಲ. ಅಂಗಡಿ ಸಾಮಾನನ್ನೂ ನಾನೇ ತರಬೇಕು. ನೀವು ಒಂದು ತರಕಾರಿ, ಅಂಗಡಿ ಸಾಮಾನು ತರೋ ಜವಾಬ್ದಾರೀನೂ ಹೊರದೇಹೋದ್ರೆ... ನಾನೇ ಕತ್ತೆ ಹಾಗೆ ದುಡ್ಯೋಕ್ಕಾಗೊಲ್ಲ.

ರಾಮಯ್ಯ : ಹಾಗಾದ್ರೆ?

ಮೀನಾಕ್ಷಿ : ಹೋಟೇಲ್‌ನಲ್ಲಿ ಮಾಡಿಕೊಳ್ಳಿ, ನನಗೆ ಸಮಯ ಸಿಕ್ಕಿದಾಗ ಇವ್ನೆಲ್ಲಾ ಮಾಡ್ತೀನಿ.

ರಾಮಯ್ಯ : ಮಾಡು... ಮಾಡು... ಮಾಡು. ಆ ಹುಡುಗರಿಗಾದ್ರೂ ಶಾಲೆಗೋಗಕ್ಕೆ ಮೊದ್ಲು ಮಾಡಿ ಕಳಿಸು.

ಮೀನಾಕ್ಷಿ : ಹೋದ್ರಾಯ್ತು... ಮಾಡಿದ್ರಾಯ್ತು... ನಡೀರಿ... ನೀವು, ನೀವು ಸುಖವಾಗಿದ್ರೆ ಸರಿ... ನಾವು ಹ್ಯಾಗಾದ್ರೂ... ಇಲ್ಲಿ ಕಷ್ಟ ಬೀಳ್ತೀವಿ.

ರಾಮಯ್ಯ : ಬಾಯ್ಲರ್ ಸ್ವಿಚ್ ಹಾಕಿದ್ಯಾ ನೋಡು, ಬಾಗಿಲು ಸರಿಯಾಗಿ ಹಾಕ್ಕೋ...

ಮೀನಾಕ್ಷಿ : ನೀವು ಒಂದೊಂದು ಜ್ಞಾಪಿಸಿಕೊಂಡು ಬಂದು ಹೇಳಬ್ಯಾಡಿ, ನಮ್ಗೂ ಬುದ್ಧಿ ಇದೆ ಮಾಡ್ತೀವಿ ಹೋಗಿ...

ರಾಮಯ್ಯ : ಅಪ್ಪ ಅಪ್ಪಾ... ಅದೇನು ಸಿಡಿ ಸಿಡಿ ಅಂತೀಯೆ? ಮನೆ ಕಡೆ ಜೋಪಾನ. ಹೇಳೋದೂ ತಪ್ಪೇ?

ಮೀನಾಕ್ಷಿ : ನಿಮ್ಮಷ್ಟು ಜೋಪಾನವನ್ನು ಯಾವ ಗಂಡಸೂ ಹೇಳೋಲ್ಲ ನಡೀರಿ. ನಮ್ಗೂ ಸ್ವಲ್ಪ ಬುದ್ಧಿ ಇದೆ.

ರಾಮಯ್ಯ : ಎಲ್ಲರಿಗೂ ಬುದ್ಧಿ ಇದ್ದೇ ಇದೆ. ಇಲ್ಲದಿದ್ದು ನನಗೆ ಅಲ್ವಾ... ಹೌದು ನೀವೆಲ್ಲಾ ಹೀಗಾಡ್ತಿದ್ರೆ ನನಗೆ ಬುದ್ಧಿ ಕಡಿಮೆನೇ ಆಗೋದು ... ಮಂಕೇ ಕವಿದು ಹೋಗೋದು...

(ದುಃಖ ಸಂಗೀತದೊಂದಿಗೆ ಮುಕ್ತಾಯ)

* * *

ಮೀನಾಕ್ಷಿ : ಎದುರು ಮನೆ ಶಾಂತಾ ಸಂಸಾರ ನೋಡಿದ್ರೆ ಸಂತೋಷ? ಗಂಡ ಹೆಂಡತಿ ಇಬ್ಬರು ಮಕ್ಕಳು. ನಮ್ಮಷ್ಟೇ ಮನೆ. ಬಾಡಿಗೆ ತಂಟೇಗೂ ಹೋಗಿಲ್ಲ. ತಾವೇ ಎಲ್ಲವನ್ನೂ ಸ್ವಂತಕ್ಕಿಟ್ಟುಕೊಂಡಿದ್ದಾರೆ. ಆದ್ರೆ ನಾವು ಬಾಡಿಗೇಗೆ ಕೊಟ್ಟು ಅವರೊಂದಿಗೆ ಜಗಳ ಬೇರೆ, ಮನೆ ಸರಿಯಾಗಿಟ್ಟುಕೊಂಡಿಲ್ಲ, ನೀರಿಲ್ಲ, ಲೈಟಿಲ್ಲ, ಅದು ಮಾಡ್ಸಿ, ಇದು ಮಾಡ್ಸಿ ನಮ್ಮ ಸಂಸಾರದ ತಾಪತ್ರಯದ ಜೊತೆಗೆ ಇದು ಬೇರೆ... ಏನು ಗೋಳೋ? ಮನೆ ಮುಂದುಗಡೆ ಶಾಂತಾ ಜಾಗ ಬಿಡಿಸಿ, ತೆಂಗಿನ ಮರ, ಹೂವಿನ ಗಿಡ ಬೆಳದಿರೋದನ್ನು ನೋಡಿದ್ರೆ ಎಷ್ಟೊಂದು ಚನ್ನಾಗಿದೆ? ಬೇಸಿಗೆ ಕಾಲಕ್ಕೆ ತಂಪಾಗಿದೆ. ನಮ್ಮದೂ ಇದೆ... ಒಂದು ಬಸವನ ಪಾದದಷ್ಟು ಜಾಗವನ್ನು ಬಿಟ್ಟಿಲ್ಲ ದೇವರಿಗೆ ಒಂದು ಹೂವು ಪೂಜೋಣ ಅಂದ್ರೆ ಒಂದು ಗಿಡ ಹಾಕಕ್ಕೆ ಜಾಗ ಬಿಡಲಿಲ್ಲಿ. ಏನು ತಲೆಯೋ, ಬರೇ ವಿದ್ಯಾವಂತನಾದ್ರೆ ಸಾಲದು. ಮನುಷ್ಯ ಬುದ್ಧಿವಂತನಾಗಬೇಕು, ವ್ಯವಹಾರಸ್ಥನಾಗಬೇಕು ಅಂತ ಅದಕ್ಕೇ ದೊಡ್ಡವರು ಹೇಳೋದು...

ಶಾಂತಾ : ಏನು ಮೀನಾಕ್ಷಮ್ಮನವರೇ... ಯೋಚನೆ ಮಾಡ್ತಾ ಕುಳಿತಿದ್ದೀರಿ?

ಮೀನಾಕ್ಷಿ : ಇನ್ನೇನಿದೆ ಬಿಡಿ, ನಮ್ಮಂಥವರ ಜೀವನದಲ್ಲಿ ಯೋಚನೆ ಒಂದೇ ಉಳಿದಿರೋದು!

ಶಾಂತಾ : ಅಂಥದ್ದೇನು ನಿಮಗೆ ಕಮ್ಮಿಯಾಗಿರೋದು? ನಿಮ್ಮ ಯಜಮಾನ್ರೂ ಕೆಲಸದಲ್ಲಿದ್ದಾರೆ. ಸಂಬಳ ಬರುತ್ತೆ.... ಜೀವನ ಮಾಡ್ಲಿಕ್ಕೇನು ತೊಂದರೆ?

ಮೀನಾಕ್ಷಿ : ನಾವು ನಿಮ್ಮಷ್ಟು ಪುಣ್ಯ ಮಾಡಿಲ್ಲ ಬಿಡಿ.

ಶಾಂತಾ : ಯಾಕೆ?

ಮೀನಾಕ್ಷಿ : ನಿಮಗೆ ಯಾರ ತಂಟೆ ಇಲ್ಲ ತಗ್ರಾರಿಲ್ಲ. ಗಂಡ ಹೆಂಡತಿ, ಎರಡು ಮಕ್ಕಳು... ನೀವು ನಿಮ್ಮ ಯಜಮಾನ್ರು ಬಹಳ ಬುದ್ಧಿವಂತರು. ಸಂಸಾರವನ್ನು ಚನ್ನಾಗಿ ನಡೆಸಿಕೊಂಡು ಹೋಗ್ತೀರಿ... ಹಾಸಿಗೆ ಇದ್ದಷ್ಟಕ್ಕೆ ಕಾಲು ಚಾಚುತ್ತೀರಿ.

ಶಾಂತಾ : ಪ್ರಪಂಚದಲ್ಲಿ ಎಲ್ಲಾ ಬೇಕು ಅಂದ್ರಾಗ್ತದಾ ಹೇಳಿ. ಆಚೆ ಮನೆಯವಳು ಒಲೆ ಇಟ್ಕೊಂಡ್ಲು ಅಂತ ಈಚೆ ಮನೆಯವಳು ಕಿವಿ ಕಿತ್ಕೊಳ್ಳಲಿಕ್ಕಾಗುತ್ಯೇ? ಮನುಷ್ಯ ಅಂದ ಮೇಲೆ ಆಸೆ ತುಂಬಿ ತುಳುಕುತ್ತೆ ಆದ್ರೆ... ಅದೆಲ್ಲಾ ನಿರ್ವಹಿಸಕ್ಕೆ ದುಡ್ಡು ಬ್ಯಾಡವೇ?

ಮೀನಾಕ್ಷಿ : ನಮ್ಮ ಯಜಮಾನ್ರಷ್ಟೇ ಸಂಬಳ, ನೀವೇಕೆ ಒಂದು ಟೆಲಿವಿಷನ್ ತೆಗೆದುಕೊಳ್ಳಲಿಲ್ಲ.

ಶಾಂತಾ : ಅಯ್ಯೋ... ಈಗ್ಲೇ ಯಾಕೆ ಬಿಡಿ. ಮಕ್ಕಲು ಓದೋಲ್ಲ ಅದನ್ನೇ ಕೊಂಡಿರ್ತಾರೆ. ಅವರ ಶಾಲೆಗೆ, ಫೀಸು ಒದಗಿಸುವುದು ಎಲ್ಲವೂ ಮಾಡಬೇಕು. ನಮ್ಮ ಯಜಮಾನ್ರಿಗೆ ಸಂಬಳ ಒಂದು ಬಿಟ್ರೆ ಬೇರೆ ಯಾವುದೂ ಉತ್ಪತ್ತಿ ಇಲ್ಲ. ಸಂಸಾರ ತೂಗಬೇಕಲ್ಲಾ...

ಮೀನಾಕ್ಷಿ : ನಮ್ಮಷ್ಟು ಬಟ್ಟೆಗಳನ್ನು ನೀವು ಹೊಲಿಸಿಲ್ಲ.

ಶಾಂತಾ : ನಿಮಗೆ ಊರಿಂದ ಸ್ವಲ್ಪ ಬರುತ್ತೆ, ಬಾಡಿಗೆ ಬರುತ್ತೆ. ನಮ್ಮದು ಹಾಗಲ್ಲ. ಎಲ್ಲಾ ಬರೋ ಸಂಬಳದಲ್ಲಾಗಬೇಕು. ಹಾಸಿಗೆ ಇದ್ದಷ್ಟಕ್ಕೆ ಕಾಲು ಚಾಚಬೇಕು ಅಲ್ವೇ?

ಮೀನಾಕ್ಷಿ : ನಿಮ್ಮ ಯಜಮಾನ್ರು ಜಾಣತನ ಇನ್ನೊಂದು ಜನ್ಮ ಪೊಕ್ಕರೂ ಬರೋಲ್ಲ. ಮನೆಗೇನೋ ಆಸ್ತಿ ಮಾಡ್ತಾರೆ. ಮಕ್ಕಳಿಗೆ ಸರಿಯಾದ ಸ್ಕೂಲಿಗೆ ಸೇರಿಸಿಲ್ಲ. ಒಂದು ದಿನ ಓದಿದ್ರೋ, ಬರೆದ್ರೋ ಕೇಳೋಲ್ಲ. ನಿಮ್ಮ ಯಜಮಾನ್ರು ಒಳ್ಳೇ ಸ್ಕೂಲಿಗೆ ಸೇರಿಸಿದ್ದಾರೆ. ಮನೆಯನ್ನು ಬಹಳ ನೀಟಾಗಿಟ್ಟಿದ್ದೀರಿ ಬಿಡಿ.

ಶಾಂತಾ : ಪಾಪ ನಮ್ಮ ಹುಡುಗರು ಸ್ವಲ್ಪ ದೊಡ್ಡವರಾಗಿ ಬೆಳೆದಿದ್ದಾರೆ. ಆದ್ರೆ ನಿಮ್ಮ ಮಕ್ಕಳು ಚಿಕ್ಕ ಚಿಕ್ಕವು... ಆಟ ಆಡ್ತವೆ ಏನು ಮಾಡೋದು?

ಮೀನಾಕ್ಷಿ : ಮನೆ ಒಳಗೆ ನೋಡಿದ್ರೆ ನಿಮ್ಮದು ಅಚ್ಚುಕಟ್ಟು, ಹೊರಗಡೆ ಪಾರ್ಕ್ ಮಾಡಕ್ಕೆ ದಿನಾ ದುಡೀತಾರೆ ಬಿಡವ್ವ ನಿಮ್ಮ ಯಜಮಾನ್ರು, ಅದಕ್ಕೆ ತಾನೇ ಮನೆ ನೋಡಲಿಕ್ಕೇ ಒಂದು ರೀತಿ ಸಂತೋಷವಾಗುತ್ತೆ. ತಿಂಡಿ ಊಟ ತೆಗೆದುಕೊಳ್ಳಿ, ನೋಡಿದ್ವೀನಲ್ಲಾ ಎಷ್ಟು ಚನ್ನಾಗಿ ಮಾಡ್ತೀರಿ. ನಾವು ಇಷ್ಟು ಜನಕ್ಕೂ ಮಾಡಿ ಮುಗಿಸಿದ್ರೆ ಸಾಕಪ್ಪಾ ಅನ್ನಿಸಿಬಿಡುತ್ತೆ.

ಶಾಂತಾ : ಏನೋ ನಮ್ಮ ಕೈಲಾದಷ್ಟು ಮಾಡಿಕೊಂಡು ಹೋಗ್ತೀವಿ...

ಮೀನಾಕ್ಷಿ : ಅಂದ ಹಾಗೆ ಚಿನ್ನ, ಬಣ್ಣವನ್ನ ಮಾಡಿಸಲಿಲ್ಲ...

ಶಾಂತಾ : ಸದ್ಯ... ಮನೆ ಕಟ್ಟಿಸಿದ ಸಾಲ ತೀರಿಸೋಣ. ಈಗ ಆ ಚಿನ್ನದ ಅವಶ್ಯಕತೆ ಏನಿದೆ?

ಮೀನಾಕ್ಷಿ : ಅದು ನ್ಯಾಯವೇ ಬಿಡ್ರಿ...

ಶಾಂತಾ : ಮೀನಾಕ್ಷಮ್ಮಾ ನೀವು ಸ್ವಲ್ಪ ನಿಮ್ಮ ಆರೋಗ್ಯದ ಕಡೆ ಗಮನ ಕೊಡಿ...

ಮೀನಾಕ್ಷಿ : ನಾವು ಆರೋಗ್ಯ ಭಾಗ್ಯದಲ್ಲೂ ಕೇಳ್ಕೊಂಡು ಬರಲಿಲ್ಲ ನೋಡಿ, ನಿಮ್ಮಗಳನ್ನು ನೋಡಿದ್ರೆ ಒಂದು ರೀತಿ ಸಂತೋಷವಾಗುತ್ತೆ. ನಿಮ್ಮ ಮಕ್ಕಳ ಬೆಳವಣಿಗೆ ನೋಡಿದ್ರೆ ತುಂಬಾ ಆನಂದವಾಗುತ್ತೆ. ಆದ್ರೆ ನಮ್ಮ ಮಕ್ಳು ಸರಿಯಾಗಿ ಹಲ್ಲು ಕ್ಲೀನ್ ಮಾಡಿಕೊಳ್ಳಲ್ಲ ನನಗೂ ಹೇಳಿ ಹೇಳಿ ಬಾಯೆಲ್ಲಾ ಸೋತೋಯ್ತು.

ಶಾಂತಾ : ಮನೆ ಕೆಲಸದ ಜೊತೆಗೆ ಈ ಹುಡುಗರೊಂದಿಗೆ ಏಗಿ ಏಗಿ ನೀವು ಹೀಗಾಗೋದ್ರಿ ಬಿಡಿ...

ಮೀನಾಕ್ಷಿ : ಯೋಗಿ ತಂದದ್ದು ಯೋಗೀಗೆ, ಜೋಗಿ ತಂದದ್ದು ಜೋಗಿಗೇ ಅಂತ... ತಂದದ್ದನ್ನೆಲ್ಲಾ ಅನುಭವಿಸಬೇಕು.

ಶಾಂತಾ : ಮೀನಾಕ್ಷಮ್ಮ ನೀವು ಹಾಗಂದ್ರೆ ನಾನು ಒಪ್ಪೋಳಲ್ಲ, ಇವೆಲ್ಲಾ ನಮ್ಮ ಕೈಲೇ ಇವೆ. ನಾವು ದೃಢ ಮನಸ್ಸು ಮಾಡಿ, ಹೀಗೆ ಮಾಡಬೇಕು, ಹೀಗೆ ನಡೆಮಕೊಳ್ಳಬೇಕು ಅಂತ ಮೊದ್ಲು ಆದರ್ಶರಾಗಿ ಆಮೇಲೆ ಮಕ್ಕಳನ್ನು ತಿದ್ದಿದರೆ ಸಂಸಾರ ಸರಿ ಹೋಗುತ್ತೆ.

ಮೀನಾಕ್ಷಿ : ನೋಡಿ ಶಾಂತಾ ನಿಮ್ಮ ಹಾಗೆ ಒಂದೋ ಎರಡೋ ಇದ್ದವರು ಮಾಡಬಹುದು. ನಮ್ಮದು ಸಂತೆ ಆಗಿಹೋಯ್ತು.

ಶಾಂತಾ : ಸಂತೆ ಆಗದ ಹಾಗೆ ನೋಡಿಕೊಳ್ಳಬೇಕಾಗಿತ್ತು.

ಮೀನಾಕ್ಷಿ : ಅಂದ ಹಾಗೆ ನಿಮಗೆ ಎಂಟತ್ತು ವರ್ಷಗಳಿಂದ್ಲೂ ಮಕ್ಕಳಿಲ್ಲ.

ಶಾಂತಾ : ಇಲ್ಲ ಅಂದ್ರೆ... ಅದಕ್ಕೆ ಮೊದ್ಲೇ... ಸ್ವಲ್ಪ ಎಚ್ಚರಿಕೆ ವಹಿಸಿ ನಮ್ಮ ಯಜಮಾನ್ರು ಆಪರೇಷನ್ ಮಾಡಿಸಿಕೊಂಡ್ರು.

ಮೀನಾಕ್ಷಿ : ಶಾಂತಾ, ನನಗೇನು ಮಕ್ಕಳು ಬೇಕು ಅಂತೀರಾ? ಈ ಸಾರಿ ಬೇಬಿ ಹೆರಿಗೆಯಲ್ಲಿ ನಾನು ತುಂಬಾ ನಿಶ್ಯಕ್ತಿಯಾಗಿಬಿಟ್ಟಿಮ್ಮ. ಮತ್ತೆ ಹೆರೋದೆ ಬೇಡ ಅನ್ನಿಸಿಬಿಟ್ಟದೆ. (ಅಳುವಳು)

ಶಾಂತಾ : ಇದ್ಕೆ ಅಳೋದೇಕೆ ನೀವು? ಏನಾದ್ರೂ ಯೋಜನೆ ಮಾಡಿಕೊಂಡ್ರೆ ಒಳ್ಳೇದು ಬಿಡಿ.

ಮೀನಾಕ್ಷಿ : ಏನಾಗುತ್ತೋ ನೋಡೋಣ, ನಿಮ್ಮ ಸಂಸಾರ ನೋಡಿದ್ರೆ ಬಾಯಿ ನೀರು ಬರುತ್ತೆ. ಗಂಡ-ಹೆಂಡತಿ, ಮಕ್ಕಳು ಎಲ್ಲರೂ ಬುದ್ಧಿವಂತರು, ವಿವೇಕಸ್ಥರು. ನಿಮ್ಮ ಮನೆ ಶಾಂತವಾಗಿದೆ ಶಾಂತ. 'ಶಾಂತ ನಿಲಯ' ಅಂತ ಇಟ್ಟದ್ದೂ ಸಾರ್ಥಕ.

ಶಾಂತಾ : ಹೆಸರಿಟ್ರಾಯ್ತೆ? ನಡೆದುಕೊಂಡು ಹೋಗಬೇಕು ಅಷ್ಟೇ. ಅವೆಲ್ಲಾ ನಮ್ಮ ಕೈಲಿದೆ ಬಿಡಿ ಮನಸ್ಸಿದ್ದರೆ ಮಾರ್ಗ ಅಂತ ಹೇಳೋಲ್ವೇ?

ಮೀನಾಕ್ಷಿ : ನಿಜ ಶಾಂತೂ... ನಾನು ದಿನ ನಿಮ್ಮ ಮನೆ ನೋಡ್ತೀನಿ, ನಿಮ್ಮ ಸಂಸಾರ ನೋಡಿ ಸಂತೋಷಪಡ್ತೀನಿ. ನಾನು ಹಾಗೆ ಮಾಡುವಂತಿಲ್ವಲ್ಲಾ ಅಂತ ದುಃಖಪಡ್ತೀನಿ-ಏನು ಮಾಡೋದು ಎರಡು ಕೈ ಸೇರಿದ್ರೆ ಅಲ್ವೇ ಚಪ್ಪಾಳೆ ಆಗೋದು? ಹಾಗೇ ನಮ್ಮದು ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು ಅಂದ ಹಾಗಿದೆ, ಗಂಡನ ಸಹಕಾರವೂ ಬೇಕು ಇಬ್ಬರೂ ಒಂದಾಗಿ ನಡೆದರೆ ಅಲ್ವೇ ಸುಖ ಸಂಸಾರ.

ಶಾಂತಾ : ಹೌದು... ನೀವು ನಿಮ್ಮ ಭವಿಷ್ಯದ ಬಗ್ಗೆ ಸ್ವಲ್ಪ ಯೋಚನೆ ಮಾಡಿ ನಿಮ್ಮ ಯಜಮಾನರಲ್ಲಿ ಹೇಳಿ.

ಮೀನಾಕ್ಷಿ : ಹೇಳ್ತಾನೆ ಇರ್ತೀನಿ ಯಾವುದನ್ನೂ ಕಿವಿಗೆ ಹಾಕಿಕೊಳ್ಳಲ್ಲ ಅವರು. ನಾನು ಹೇಳಿದ ಹಾಗೆ ಹೆಂಗಸು, ಕೇಳಿಕೊಂಡು ಬಿದ್ದಿರಬೇಕು ಎಂಬ ಮನೋಭಾವ.

ಶಾಂತಾ : ಅಲ್ಲಾ ನಿಮ್ಮ ಯಜಮಾನ್ರು ವಿದ್ಯಾವಂತರು ಅವರು ಸಮಾನತೆ ಕೊಡೋಲ್ವೇ?

ಮೀನಾಕ್ಷಿ : ಹೇಳಿದೆನಲ್ಲ ಶತ ವಡ್ಡು ಅಂತ...

ಶಾಂತಾ : ನಮ್ಮ ದೇಶದಲ್ಲಿ ಹೆಂಗಸರು ಇನ್ನೂ ವಿದ್ಯಾವಂತರಾಗಬೇಕು. ಆಗ ತಾನೇ ಸರಿಹೋಗುತ್ತೆ.

ಮೀನಾಕ್ಷಿ : ಈಗೇನು ವಿದ್ಯಾವಂತರು ಕಮ್ಮಿಯೇ ಶಾಂತಾ ಅವ್ರೇ. ಎಲ್ಲಾ ಆಫೀಸ್ನಲ್ಲೂ ಹೆಂಗಸ್ರು ಇದ್ದೇ ಇರ್ತಾರೆ. ವೃತ್ತಿ ಮಾಡ್ತಿದ್ದಾರೆ...

ಶಾಂತಾ : ನೂರಕ್ಕೆ ನೂರು ಭಾಗ ಆಗಬೇಕು ಬಿಡಿ.

* * *

ಪ್ರಭು : ಶಾಂತಾ ಎಲ್ಲಿಗೆ ಹೋಗಿದ್ದೆ?

ಶಾಂತಾ : ಎದರು ಮನೆಗೆ ಹೋಗಿದ್ದೆ. ಅದೇ ಮೀನಾಕ್ಷಮ್ಮನವರ ಮನೆಗೆ.

ಪ್ರಭು : ಏನು ಸಮಾಚಾರ?

ಶಾಂತಾ : ನಿಮ್ಮ ಸಂಸಾರ ಹೊಗಳಿದ್ರು.

ಪ್ರಭು : ಅವರ ಸಂಸಾರ ತೆಗಳಿಕೊಂಡ್ರು.

ಶಾಂತಾ : ಅದು ಮಾಮೂಲಿ ಬಿಡಿ. ಪಾಪ ಆಕೆಯನ್ನು ನೋಡಿದ್ರೆ ಅಯ್ಯೋ ಅನ್ನಿಸುತ್ತೆ.

ಪ್ರಭು : ನಾವೇನು ಮಾಡೋರಿದ್ದೀವಿ?

ಶಾಂತಾ : ಹಣ ಕೊಡೋದು ಬ್ಯಾಡ, ಇನ್ನೇನು ಮಾಡೋದು ಬೇಡ, ಒಂದು ಒಳ್ಳೆ ಮಾತಾಡಿದ್ರೆ ತಪ್ಪೇ?

ಪ್ರಭು : ಏನ್ ಅದು?

ಶಾಂತಾ : ನಿಮಗೆ ಅರ್ಥವಾಗದದ್ದು ಏನು? ಅದನ್ನು ನಾನೇ ಹೇಳಬೇಕೆ?

ಪ್ರಭು : ಗೊತ್ತಾಗ್ತ ಇಲ್ಲ.

ಶಾಂತಾ : ನಮ್ಮ ರಾಮಯ್ಯನವರನ್ನು ಮಕ್ಕಳಾಗದ ಹಾಗೆ ಆಪರೇಷನ್ ಮಾಡಿಸಿಕೊಳ್ಳಿ, ಇಲ್ಲ ಹೆಂಡತಿಗೆ ಮಾಡ್ಸಿ ಅಂತ ಹೇಳಿದ್ರೆ ಸಾಕು,ನಾಲ್ಕಾಗವೆ, ಒಂದು ಹೆಣ್ಣು ಮನೆಕೆಲಸ ನಿಭಾಯಿಸಿ ಅವರನ್ನೆಲ್ಲಾ ಸಾಕಿ ಸಲುಹಬೇಕಾದ್ರೆ ಸಾಮಾನ್ಯವೇ?

ಪ್ರಭು : ನಿಜ, ನಾನು ಪ್ರಸಂಗ ಬಿದ್ದಾಗ ಹೇಳ್ತೀನಿ.

ಶಾಂತಾ : ಅಷ್ಟು ಮಾಡಿ, ಒಳ್ಳೇ ಪುಣ್ಯ ಬರುತ್ತೆ.

ಪ್ರಭು : ಈ ಹೊತ್ತೇನೊ ಸಿನಿಮಾಕ್ಕೆ ಹೋಗಬೇಕು.

ಶಾಂತಾ : ಹೌದಲ್ಲ... ಬಂದೇ.

ಪ್ರಭು : ಸಿನಿಮಾ ಅಂದ್ರೆ, ತಿರುಗಾಟ ಅಂದ್ರೆ ಬಲು ಖುಷಿ. ಅವಳಿಗೂ ಪಾಪ ಮನೆಕೆಲಸ ಮಾಡಿ ಬೇಜಾರಾಗಿದೆ. ಅವಳೂ ನಮ್ಮ ಹಾಗೆ ಮನುಷ್ಯಳಲ್ವಾ?

* * *

ಮೀನಾಕ್ಷಿ : ಲಲಿತ ಕುಂಕುಮಕ್ಕೆ ಕರೆದಿದ್ದಾಳೆ. ಹುಡುಗರಿಗೇನಾದ್ರೂ ಗೊತ್ತಾದ್ರೆ ನಾ ಬರ್ತೀನಿ ಅಂತ ಕಚಪಿಚನೆ ಸುತ್ಕೊಳ್ತಾವೆ. ಅವಳ ಹುಡಗರ ಮುಂದೆ ನಾನು ತಲೆ ತಗ್ಗಿಸಬೇಕಾಗುತ್ತೆ. ಇವುಗಳ ಕಪಿಚೇಷ್ಟೆ, ಅದು ಕೊಡು, ಇದು ಕೊಡು ಅನ್ನೋದು, ಬಂದವ್ರೆಲ್ಲಾ ನಕ್ಕರೆ ನಾನು ಇದ್ರೂ ಒಂದೇ ಸತ್ರೂ ಒಂದೇ ರೀ...

ರಾಮಯ್ಯ : ಏನೇ ಅದು ನಿನ್ನ ರಾಗ? ನಿನಗೆ ಸರಾಗ, ನನಗೆ ಪ್ರಾಣ ಸಂಕಟ.

ಮೀನಾಕ್ಷಿ : ಅಂಥದೇನಿಲ್ಲ ಈಗ ನಾನು ಲಲಿತಳ ಮನೆಗೆ ಕುಂಕುಮಕ್ಕೆ ಹೋಗಿ ಬರ್ತೀನಿ-ನಿಮ್ಮ ಮಕ್ಕಳ ಸೈನ್ಯ ನೋಡ್ಕೊಂಡಿರಿ...

ರಾಮಯ್ಯ : ಅದು ಮಾತ್ರ ಬ್ಯಾಡ...

ಮೀನಾಕ್ಷಿ : ನಿಮಗೆ ಒಂದು ದಿನ ಒಬ್ಬರಮನೆಗೆ ಹೋಗಿ ಬರೋವರೆಗೆ ಮಕ್ಕಳನ್ನು ಸಾವರಿಸಿಕೊಂಡು ಹೋಗ್ಲಿಕ್ಕಾಗೋಲ್ಲ, ನಾನು ದಿನಾ ಸಾಯುತ್ತಿರಬೇಕಲ್ಲ... ಹ್ಯಾಗೆ?

ರಾಮಯ್ಯ : ನಿನಗೆ ನಿಭಾಯಿಸೋ ಶಕ್ತಿ ಇದೆ...

ಮೀನಾಕ್ಷಿ : ನಿಭಾಯಿಸಿ ಶಕ್ತಿ ಕುಂದುಹೋಗಿದೆ.

ರಾಮಯ್ಯ : ಸರಿ ಸಾಕು...

ಮೀನಾಕ್ಷಿ : ನಾನು ಇವನ್ನೆಲ್ಲಾ ಕಟ್ಟುಕೊಂಡು ಹೋದ್ರೆ ಜನರು ನಗೋಲ್ವೆ?

ರಾಮಯ್ಯ : ಸರಿ ಹೋಗಿ ಬೇಗ ಬಾ ಅಲ್ಲಿ ಕೂತ್ಕೊಂಡು ತಲೆ ಹರಟೆ ಹೊಡೀತಿರಬ್ಯಾಡ.

ಮೀನಾಕ್ಷಿ : ಸದ್ಯ ಅಷ್ಟಾದ್ರೂ ಅಪ್ಪಣೆ ಕೊಟ್ಟರಲ್ಲಾ...

ರಾಮಯ್ಯ : ನಿಮ್ಮಮ್ಮ ಬರವರ್ಗೆ ಎಲ್ರೂ ಒಡಾಕ್ಕೊಂಡು ಬಿದ್ದಿರಿ, ಇಲ್ಲದೇಹೋದ್ರೆ ನಿಮ್ಮನ್ನು ಹಟ್ಟಿನಿಲ್ಲ ಅನ್ನಿಸಿಬಿಡ್ತೀನಿ... ಜ್ವಾಪಾನ... ಉಸಿರುಬಿಟ್ರೆ... ಸುಮ್ಮನೇ ಬಿಡೋಲ್ಲ...

* * *

ಲಲಿತ : ಬಾರಮ್ಮ... ಬಾ... ನಿನ್ನ ನೋಡಿ ಎಷ್ಟು ದಿನಗಳಾಯ್ತು ಇದೇನೇ ಒಬ್ಬಳೇ... ಮಕ್ಕಳು ಮರಿ ಯಾರೂ ಇಲ್ಲ.

ಮೀನಾಕ್ಷಿ : ಅವು ಬ್ಯಾರೆ ಯಾಕೆ ತಕ್ಕೊ... ನಿನ್ನ ಮಕ್ಕಳ ಹಾಗೆ ಘನವಾಗಿ, ಗಂಭೀರವಾಗಿ ಇರ್ತವಾ? ಒಂದಕ್ಕಿಂತ ಒಂದು ಹೆಚ್ಚು ಬಲೇ ಚೇಷ್ಟೆ ತಡಿಯೋಕ್ಕಾಗೋಲ್ಲಮ್ಮ... ಹ್ಯಾಗೆ ಕೂತಿವೆ ನೋಡು ನಿನ್ನ ಮಕ್ಕಳು. ಒಳ್ಳೆ ತೂಕವಾಗಿ... ದೊಡ್ಡ ಮನುಷ್ಯರಾಗಿ, ನನ್ನ ಮಕ್ಕಳು ಹೀಗಾಗಬೇಕಾದ್ರೆ ಇನ್ನೊಂದು ಜನ್ಮ ಬೇಕು ಬಿಡೇ...

ಲಲಿತ : ಪಾಪ ಚಿಕ್ಕವು ಏನ್ಮಾಡೋದು?

ಮೀನಾಕ್ಷಿ : ಅದೇನೋ ನಿಜ... ಅಂತರವಿಲ್ಲದ ಮಕ್ಕಳು. ಅವರಿಗೆ ಸುಖ ಕೊಡಲಿಕ್ಕೂ ಆಗಲಿಲ್ಲ, ನಾನು ಸುಖ ಪಡ್ಲಿಕ್ಕೂ ಆಗ್ಲಿಲ್ಲ.

ಲಲಿತ : ನೀನಿನ್ನೂ ಹಳೇ ಕಾಲ್ದಲ್ಲೇ ಇದ್ದೀಯ ಬಿಡು ತಾಯಿ. ನಿನ್ನ ಗಂಡನ ಬರೋ ಸಂಬಳಕ್ಕೆ ಯಾಕೆ ಅಂತ ಇಷ್ಟೊಂದು ಮಕ್ಕಳು ನಮಗಂತೂ ಇವರಿಬ್ಬರ

ಆಸೆ ಪೂರೈಸಕ್ಕೇ ಆಗೋಲಮ್ಮ ಒಂದಲ್ಲ ಒಂದು ತಾಪತ್ರಯ. ಅಷ್ಟಕ್ಕೂ ನಿಮ್ಮ ಯಜಮಾನ್ರೂ ಅನಕ್ಷರಸ್ಥರಲ್ಲ ವಿದ್ಯಾವಂತರು.

ಮೀನಾಕ್ಷಿ : ವಿದ್ಯಾವಂತತನಕ್ಕೂ ವ್ಯವಹಾರ ಜ್ಞಾನಕ್ಕೂ ಬಹಳ ವ್ಯತ್ಯಾಸವಂತೆ ಬಿಡಮ್ಮ ನಾನು ಹೇಳಿ ಹೇಳಿ ಸಾಕಾಯ್ತು. ನಾನೂ ಇನ್ನೂ ಹೆರಲೂಲಾರೆ. ಹಾಗೇನಾದ್ರೂ ಆದ್ರೆ ಸತ್ತೋಗ್ಬಿಡ್ತೀನಿ ಅಂತ ಹೇಳಿದ್ದೀನಿ.

ಲಲಿತ : ಹಾಗಂದ್ರಾಗುತ್ತಾ? ಅದಕ್ಕೇನಾದ್ರೂ ಉಪಾಯ ಮಾಡ್ಕೊಳ್ಬೇಕಮ್ಮ ಕಾಲಕ್ಕೆ ತಕ್ಕ ಹಾಗೆ.

ಮೀನಾಕ್ಷಿ : ಈ ಸಾರಿ ಹ್ಯಾಗಾದ್ರೂ ಮಾಡಿ ಆಪರೇಷನ್ ಮಾಡಿಸಿಕೊಳ್ಳಬೇಕು ಅಂತ ಮನಸ್ಸು ಮಾಡಿವ್ನಿ. ಕೆಲಸ ಬದುಕು ಮಾಡ್ಲಿಕ್ಕೆ ಯಾರೂ ಇಲ್ಲ ಏನ್ ಮಾಡೋದು ಅಂತ ಯೋಚ್ನೆ.

ಲಲಿತ : ನಾನು ಜೇಕಾದ್ರೆ ಸಹಾಯ ಮಾಡ್ತೀನಿ ಕಣೆ.

ಮೀನಾಕ್ಷಿ : ಏನೋ ಅಷ್ಟು ಮಾಡಿದ್ರೆ ಪುಣ್ಯ ಬರುತ್ತವ್ವಾ.

ಲಲಿತ : ಆಯ್ತು... ಅದಕ್ಕೆಲ್ಲಾ ಏನು, ಇಲ್ಲಿವರ್ಗೂ ಬರೇ ಏನೇನೋ ಮಾತು ಆಯ್ತು. ಈಗ ಏನು ತೆಗೆದುಕೊಳ್ತೀಯಾ ಹೇಳು.

ಮೀನಾಕ್ಷಿ : ಏನೂ ಬೇಡ ಬಾರಮ್ಮಾ ಎಲ್ಲ ಆಗಿದೆ. ಕುಂಕುಮ ಕೊಡು ನಾನು ಬರ್ತೀನಿ.

ಲಲಿತ : ಅಪರೂಪಕ್ಕೆ ಬಂದಿದ್ದೀಯಾ, ಹ್ಯಾಗೆ ಸುಮ್ನೆ ಕಳುಹಿಸಲಿ...?

ಮೀನಾಕ್ಷಿ : ನಾನೇನೂ ತಿಳಿದುಕೊಳ್ಳಲ್ಲ ಬಾರಮ್ಮ

ಲಲಿತ : ನಿನಗೆ ಕಾಯಿ ಒಬ್ಬಟ್ಟು ಅಂದ್ರೆ ತುಂಬಾ ಆಸೆ ಅಲ್ವಾ ಅದ್ಕೇ... ಅದನ್ನೆ ಮಾಡಿದ್ದೀನಿ... ತಿನ್ನುವೆಯಂತೆ ಬಾ...

ಮೀನಾಕ್ಷಿ : ಅಂತೂ ನೀನು ಬಿಡುವ ಗಿರಾಕಿಯಲ್ಲ ಬಿಡವ್ವಾ.

ಲಲಿತ : ತಿನ್ನು ತಿನ್ನು... ಆಮೇಲೆ ಮಾತು ಏನೇ ಆಗ್ಲಿ ನೀನು ಸ್ವಲ್ಪ ಆರೋಗ್ಯದ ಕಡೆಗೆ ನಿಗ ಇಡವ್ವಾ... ಹೀಗಾದ್ರೆ ಗತಿ ಏನು? ಮಕ್ಕಳ ಜೊಂಜಾಟ ತುಂಬಾ, ಮನೆ ಕೆಲ್ಸ, ಸಂಸಾರ ತಾಪತ್ರಯ ಎಲ್ಲಾ ಸೇರಿ ನೀನು ಹೀಗಾಗ್ಬಿಟ್ಟದ್ದೀಯ? ನೋಡು ಇನ್ನು ನೀನು ಅಲಕ್ಷ್ಯ ಮಾಡಿಬಿಟ್ರೆ ನಾನು ಹೇಳಿದಾಗೆ ನೀನು ಈ ಲೋಕದಲ್ಲಿ ಇರೋಲ್ಲ. ಮಕ್ಕಳು ತಬ್ಬಲಿಯಾಗ್ತವೆ. ಆಮೇಲೆ ನಿನ್ನ ಗಂಡ ಕಣ್ಣು ಬಾಯಿ ಬಿಡಬೇಕಾಗುತ್ತೆ ಅದಕ್ಕೂ ಮೊದ್ಲೇ ಎಚ್ಚತ್ತುಕ್ಕೋ ತಾಯಿ.

ಮೀನಾಕ್ಷಿ : ನೀ ಹೇಳ್ದಾಗೇ ಮಾಡ್ತೀನಿ ಬಿಡವ್ವಾ...

ಲಲಿತ : ಕಾಫಿ ತಗೋ...

ಮೀನಾಕ್ಷಿ : ಲಲಿತಾ... ಕುಂಕುಮ ಕೊಟ್ರೆ ಹೊರಡ್ತೀನಿ. ಅಲ್ಲಿ ಏನೇನೋ ರಾದ್ಧಾಂತ ಮಾಡ್ತಾರೋ. ಅವರಪ್ಪನಿಗೆ ಹೇಳಿ ಬಂದಿದ್ದೀನಿ.

ಲಲಿತ : ಅವರು ಒಂದು ದಿನ ಅನುಭವಿಸಲಿ ಸುಮ್ಮಿರು ಗೊತ್ತಾಗುತ್ತೆ. ಮಕ್ಕಳು ಅಂದ್ರೆ ಅವರನ್ನು ತಡೆಯೋದು ಅಂದ್ರೆ ಎಷ್ಟು ಕಷ್ಟ ಅಂತ?

ಮೀನಾಕ್ಷಿ : ಹೌದು ನಾನೂ ಅದ್ಕೇ ಕರೆತರಲಿಲ್ಲ. ಒಂದು ದಿನವಾದ್ರೂ ಅನುಭವಿಸಿಲಿ ಅಂತ.

ಲಲಿತ : ಒಳ್ಳೇದು ಮಾಡಿದೇ ಬಿಡು. ಗಂಡಸರಿಗೆ ಅರಿವು ಮೂಡದೇಹೋದ್ರ ಬಹಳ ಕಷ್ಟ. ಅವರ ಪ್ರಪಂಚದಲ್ಲಿ ಅವರಿರ್ತಾರೆ.

ಮೀನಾಕ್ಷಿ : ಆಯ್ತು ನಾನಿನ್ನು ಬರ್ತೀನಮ್ಮ.

ಲಲಿತ : ನಾನು ಹೇಳಿದ್ದೆಲ್ಲಾ ಜ್ಞಾಪಕ ಇರಲೀ...

ಮೀನಾಕ್ಷಿ : ಶಾಂತಾ, ನಿನ್ನ ಸಂಸಾರ ನೋಡಿದಾಗಲೆಲ್ಲಾ, ಜ್ಞಾಪಕ ಆದಾಗೆಲ್ಲಾ ನನ್ನ ಅವಿವೇಕದ ಬಗ್ಗೆ ನಾನು ಶಪಿಸಿಕೊಳ್ತಾನೇ ಇರ್ತೀನಿ ಕಣೆ. ನಾನೇನೋ ಮನಸ್ಸು ಮಾಡಿದ್ದೇನೆ. ನಮ್ಮವರನ್ನು ಒಪ್ಪಿಸಿದ್ರೆ ಆಯ್ತು.

ಲಲಿತ : ಈ ಸಾರಿ ಅದಕ್ಕೇ ಪೂರ್ಣ ವಿರಾಮ ಹಾಕ್ಬಿಡೇ... ಎಲ್ಲಾ ಸರಿಹೋಗುತ್ತೆ. ಇನ್ನೂ ನಾಲ್ಕಾರು ವರ್ಷ ಮಕ್ಕಳಿಗೆ ಸ್ವಲ್ಪ ಬುದ್ಧಿ ಬಂದು ಬಿಟ್ರೆ ಸರಿ ಹೋಗ್ತವೆ...

ಮೀನಾಕ್ಷಿ : ಏನೋ ನಿನ್ನ ಬಾಯಿ ಹರಕೆಯಿಂದ ಅಷ್ಟಾದ್ರೆ ಸಾಕು ಬಿಡವ್ವಾ ನಾನಿನ್ನು ಬರ್ತೀನವ್ವಾ.

* * *

ಮೀನಾಕ್ಷಿ : ಲಲಿತಾ ಹೇಳಿದ ಮಾತು ನೂರಕ್ಕೆನೂರು ಪಾಲು ಸತ್ಯ. ಕಾಲ ಇಷ್ಟು ಬದಲಾಗಿರುವಾಗ ವಿಷಯ ತಿಳಿದೂ ನಾವು ಹೀಗೇಕಾಗಿದ್ದು? ವಿದ್ಯಾವಂತರಾದ ನಾವು ಮಾಡಿದ್ದಾದ್ರೂ ಏನು ಅಲಕ್ಷ್ಯ, ನಮ್ಮಂಥ ನತದೃಷ್ಟರು ಬೇರೆ ಯಾರೂ ಇಲ್ಲ.

ರಾಮಯ್ಯ : ಏನೇ ಇದು ಇಷ್ಟು ಹೊತ್ತಾದರೂ ತಲೆ ಮೇಲೆ ಕೈ ಹೊತ್ತು ಕುಳಿತ ಕೊಳ್ತೀಯಾ?

ಮೀನಾಕ್ಷಿ : ಯೋಚನಾ ತರಂಗಗಳು... ಜೀವನದಲ್ಲಿ ಆದ ಘಟನಾ ತರಂಗಗಳು ದುಃಖ ತರ್ತಾ ಇವೆ. ನನ್ನನ್ನು ನಾನೇ ಶಪಿಸಿಕೊಳ್ಳುವಂತೆ ಮಾಡ್ತಾ ಇದೆ. ನಾವು ನಮಗೆ ದ್ರೋಹ ಮಾಡಿಕೊಂಡಿದ್ದೀವಿ, ದೇಶಕ್ಕೆ ದ್ರೋಹ ಮಾಡಿದ್ದೀವಿ ಅಂತ ಮನಸ್ಸು ಎಚ್ಚರಿಸ್ತಾ ಇದೆ. ಆದ್ರೆ ಲೇಟಾಗಿ ಎಚ್ಚರಿಸ್ತಾ ಇದೆ... ಈಗ್ಲೂ ಕಾಲ ಮಿಂಚಿಲ್ಲ ಮುಂದೆ ಇನ್ನೂ ಕಷ್ಟವಾಗುತ್ತೆ. ಅದ್ಕೇ...

ನಾವು ಇಲ್ಲಿಗೆ ಮಕ್ಕಳು ಸಾಕು ಮಾಡಿಕೊಳ್ಳಬೇಕು. ಎದುರು ಮನೆ ಪ್ರಭು-ಶಾಂತಾ ಅವರ ಸಂಸಾರ ನೋಡಿಯಾದ್ರೂ ನೀವು ಪರಿವರ್ತನೆ ಆಗಬಾರದೇ? ಲಲಿತಾಳ ಸಂಸಾರ ನೋಡಿಯಾದ್ರೂ ಬುದ್ಧಿ ಕಲಿತುಕೊಳ್ಳಬಾರದೇ? ಎಲ್ಲರೂ ಹೇಳ್ತಾರೆ ಆಡಿಕೋಳ್ತಾರೆ ಹಳೇ ಕಾಲದವಳು, ಅಂಥ ಶ್ರದ್ಧೆಯವರೂ, ಮೂಢನಂಬಿಕೆಯುಳ್ಳವ್ರೂ ಅಂತ.

ರಾಮಯ್ಯ : ಅದ್ಕೇ ಈಗ ಏನು ಮಾಡೋಣ ಆಗೋಯ್ತಲ್ಲ.

ಮೀನಾಕ್ಷಿ : ಇನ್ನೂ ಆಗೋಲ್ಲ ಅನ್ನೋ ಖಾತ್ರಿ ಏನು?

ರಾಮಯ್ಯ : ಅದ್ಕೇನು ಮಾಡ್ಲಿ ಹೇಳು?

ಮೀನಾಕ್ಷಿ : ಮಕ್ಕಳಾಗದಂತೆ ಆಪರೇಷನ್ ಮಾಡಿಸಿಕೊಳ್ಳಬೇಕು.

ರಾಮಯ್ಯ : ಅಷ್ಟೇ ತಾನೇ... ಅಯ್ತು ಬಿಡು...

ಮೀನಾಕ್ಷಿ : ನಾನೇ ಮಾಡಿಸಿಕೊಳ್ಳಲೇ?

ರಾಮಯ್ಯ : ಯಾರೂ ಇಲ್ಲ ಮಾಡವು... ನಾನೇ ಮಾಡಿಸಿಕೊಳ್ತೀನಿ ಬಿಡು. ಗಂಡಸರ ಆಪರೇಷನ್ ಸುಲಭ.

ಮೀನಾಕ್ಷಿ : ಗೊತ್ತಿದ್ದೂ ಯಾಕೆ ಇಷ್ಟು ದುಡುಕಿ ನಾಲ್ಕು ಮಕ್ಕಳು ಮಾಡಿಕೊಂಡ್ರಿ, ನಾನೇ ಮಾಡಿಕೊಳ್ಳಬೇಕು ಅಂತ ಮನಸ್ಸು ಮಾಡಿದ್ದೆ, ಲಲಿತ ಅಲ್ಲಿಯವರೆಗೆ ಅಡಿಗೆ ಮಾಡಿಕೊಟ್ಟು ಸಹಾಯ ಮಾಡ್ತೀನಿ ಅಂತ ಒಪ್ಪಿಕೊಂಡಿದ್ಲು.

ರಾಮಯ್ಯ : ಬ್ಯಾಡ ಬಿಡು. ಮನೆ ಕೆಲಸ, ಮಕ್ಕಳ ಸಂಬಾಳಿಸೋದು ಎಲ್ಲಾ ಹೆಚ್ಚಿದೆ. ನಮಗೆ ಮಾಡುವವರಿಲ್ಲ. ನನ್ನದಾದರೆ ಸುಲಭ...

ಮೀನಾಕ್ಷಿ : ಅಂತೂ ನಿಮ್ಗೆ ದೇವ್ರು ಒಳ್ಳೇ ಬುದ್ಧಿ ಕೊಟ್ನಲ್ಲ. ನನ್ನಂಥ ಪುಣ್ಯವಂತಳೇ ಇಲ್ಲ... ನಮ್ಮ ಸ್ನೇಹಿತೆಯರಿಗೆ ಈ ವಿಷಯ ತಿಳಿಸಿದರೆ ಎಷ್ಟು ಸಂತೋಷಪಡ್ತಾರೆ ಗೊತ್ತಾ?

ರಾಮಯ್ಯ : ಯೋಚನಾ ತರಂಗಗಳನ್ನು ಹಿಂಸರಿಸು, ಸಂತೋಷದ ಜೀವನ ತರಂಗವನ್ನು ಆರಂಭಿಸು...

ಮೀನಾಕ್ಷಿ : ಈ ಸಂತೋಷದ ತರಂಗದಲ್ಲಿ ನನ್ನನ್ನು ನಾನೇ ಮರೆತೆ...! ನನ್ನನ್ನು ನಾನೇ ಮರೆತೆ!

(ಹರ್ಷಸಂಗೀತ)

*

# ಒಂದೇ ಸಾಕಿತ್ತು

**ಪಾತ್ರ ವರ್ಗ**

೧. ರಾಧಾ-ರವಿ ಗಂಡ-ಹೆಂಡತಿ ೩೫ ವರ್ಷ ೪೦ ವರ್ಷ ೨. ಶಾರದಾ-ರಾಧಾ ಸ್ನೇಹಿತೆ ೩೫ ವರ್ಷ ೩. ಮಹಿಳಾ ವೈದ್ಯರು ೪೦ ವರ್ಷ ೪. ಶಾಂತಾ-ಪಕ್ಕದ ಮನೆಯಾಕೆ ೩೫ ವರ್ಷ ೫. ಶಶಿ-ಮಗಳು ೧೦ವರ್ಷ

ರವಿ : ರಾಧಾ... ರಾಧಾ... ನಿನ್ನನ್ನೇ ಕಣೇ ಕರೀತಾ ಇರೋದು.

ರಾಧಾ: ಗುಂಟ್ಲು ಹರ್ಕೋಬ್ಯಾಡ್ರಿ... ಸ್ವಲ್ಪ ಸುಮ್ನೆ ಗಮ್ನಿಸ್ತಿರೋ?

ರವಿ : ನನ್ನ ಮಾತು ಅಂದ್ರೆ ನಿನ್ಗೆ ಇಷ್ಟೂ ಅಲಕ್ಷ್ಯವಾಯ್ತೇನು?

ರಾಧಾ: ನೀವು ಲಕ್ಷ್ಯದಲ್ಲಿದ್ರೆ ಯಾಕೀಗಾಗ್ತಿತ್ತು?

ರವಿ : ಅಲ್ವೇ ನಿನ್ಗೇನು ಕಮ್ಮಿ ಆಗಿರೋದು?

(ಮಕ್ಕಳು ಅಳು, ರಾದ್ಧಾಂತ)

ರಾಧಾ: ಇದೇ... ಇದೇ...

ರವಿ : ಅಂದ್ರೆ ಇನ್ನೂ ಹೆಚ್ಚು ಬೇಕೇನು?

ರಾಧಾ: (ಕೋರಸ್) ಹಾಡ್ಕೊಳಿ... ಬೇಕು ಬ್ಯಾಡ ಅಂದವ್ರ್ಯಾರು?

ರವಿ : ನಮ್ಗಿರೋ ಆಸ್ತಿ ಆಧಾರಕ್ಕೆ ಇದೇನ್ ಹೆಚ್ಚು ತೆಗೋ ನಮ್ಮಪ್ಪನಿಗೆ ನಾವು ಹನ್ನೆರಡು ಜನ.

ರಾಧಾ: ಡಜನ್ಗೆ ಸರಿಯಾಗಿ?

ರವಿ : ನಿಂಗೇ ಈ ಮೂರು ತಡ್ಕೋದೇ ಕಷ್ಟವೇ?

ರಾಧಾ: ನಿಮ್ಮ ತಾಯೀನೂ ವರ್ಷಕ್ಕೊಂದೊಂದು ಹಡಿತಿದ್ರೇನು?

ರವಿ : ಸಾಕೇ... ನಿನ್ನ ಪ್ರಶ್ನೆ.

(ಮಗುವಿನ ಅಳು)

ರಾಧಾ: ತೆಗೊಳ್ಳಿ... ಉತ್ತರ! ಯೇಯ್ ಬಾಯಿ ಬಡ್ಕೊಬ್ಯಾಡ ನಾನಿನ್ನೂ ಬದ್ಕಿದ್ದೀನಿ.

ರವಿ : ಅಲ್ವೇ ನೀ ಸತ್ತೆ ಅಂತ ಆ ಮಗು ಹೇಳ್ತೇನು?

ರಾಧಾ: ಇನ್ನು ಸ್ವಲ್ಪ ದಿನವಾದ್ರೆ ಆ ಕೆಲ್ಸನೂ ಮಾಡ್ತಾವೆ.

ರವಿ : ಅದೇನು ಅದಕ್ಕೆ ಹೊಟ್ಟೆ ಹಸೀತಾ ಇದ್ಯೋ ಏನೋ ಸ್ವಲ್ಪ ಹಾಲುಗೀಲು ಕೊಡು ಹೋಗು.

ರಾಧಾ: ಒಬ್ಬಳಿಗೇ ಮನೇ ಕೆಲಸ ಮಾಡಿ ಮಾಡಿ ರಟ್ಟೆ ಬಿದ್ದು ಹೋಗಿದೆ. ಈ ಮಕ್ಕಳ ಬೊಂಜಾಟ ಬೇರೆ. ಒಂದು ನಿಮಿಷ ಕಣ್ಮುಚ್ಚಕಾಗೋಲ್ಲ.

ರವಿ : ಏನು ಮಾತಾಡ್ತಾನೆ ನಿಂತಿಯೋ ಏನಾದ್ರೂ ಹೊಟ್ಟೆಗೆ ಕೊಡ್ತೀಯೋ ಇಲ್ಲ...

ರಾಧಾ: ರೊಟ್ಟಿ ಬಡ್ದು, ಚಟ್ನಿ ಅರ್ದಿಟ್ಟಿವ್ನಿ...

(ಎರಡು ಮಕ್ಕಳ ಅಳು)

ನೋಡಿದ್ರಲ್ಲಾ ಜೋಡಿ ವಾಲ್ಗ? ನಮ್ಮ ಮದ್ವೇಗೂ ನಮ್ಮಪ್ಪ ಕರಿಸಿರ್ಲಿಲ್ಲ.

ರವಿ : ನಿಮ್ಮಪ್ಪ ಆಗ್ಲಿಲ್ಲ ಅಂತ ಅವು ಈಗ್ಲಾದ್ರೂ ಶುಭ ಹಾರೈಸಕ್ಕೆ ಮಾಡ್ತಾ ಇವೆ.

ರಾಧಾ: ಅಯ್ಯೋ ಅಯ್ಯೋ... ನಿಮ್ಮ ಮನೆಕಾಯವಾಗಾ... ನಿಲ್ರೋ... ನಿಲ್ರೋ... ಎಲ್ಲಿ ಬಿದ್ದು ಸಾಯ್ತವೋ... ಬ್ಯಾಡ್ವಪ್ಪಾ ಬ್ಯಾಡ. ಈ ಗೋಳ್ ನೋಡ್ಲಿಕ್ಕಾಗೊಲ್ದು ಏನ್ರೀ... ನಿಮ್ಮನ್ನ ಕರೀತಾ ಇರೋದು.

ರವಿ : ಏನೇ ಅದು?

ರಾಧಾ: ಈ ಕೂಸಿನ ಕಾಲನ್ನ ಹಗ್ಗದಲ್ಲಿ ಕಟ್ರಿ ಅಬ್ಬಬ್ಬಾ... ಎಲ್ಲಾ ದಬದಬನೆ ಕೆಡವ್ತು ಡಬ್ಬಗಳನ್ನು. ಕೈಕಾಲು ಮುರಿಕೊಂಡೀತು ಸ್ವಲ್ಪ ನೋಡ್ರೀ ಆಮೇಲೆ ನೀನೇ ಆಸ್ಪತ್ರೆ ಮೆಟ್ಲು ಹತ್ತಬೇಕಾಗುತ್ತೆ ಯೇಯ್...ಯೇಯ್ ನಿಲ್ಲೋ ನಿಲ್ಲೋ... ಯಾಕೆ ಬೀದಿಗೊಗ್ತೀಯಾ ಬಸ್ಸು, ಕಾರು, ಸ್ಕೂಟರ್‌ಗೆ ಸಿಕ್ಕಿ ಹಾಕಿಕೊಂಡು ಸತ್ತೀಯೋ...

ರವಿ : ಲೇ... ಲೇ...ಯಾಕೆ ಕೂಸ್ನ ಸುಮ್ನೆ ದರದರ ಅಂತ ಎಳಿತಿದ್ದೀಯೆ? ಎಳೆ ಕೈಯೇ...

ರಾಧಾ: ಬೆಳಗಿಂದ ಸಂಜೆವರ್ಗೆ ಇವರೊಂದಿಗೆ ಹೊಡ್ದಾಡದು ನನಗೆ ಗೊತ್ತು ಕೆಲಸಕ್ಕೋಗೋ ನಿಮಗೇನ್ ಗೂತ್ತು? ಮಕ್ಕಳು ತಡ್ಯೋದು ನಿಮಗೇನು ಗೊತ್ತು?

ರವಿ : ಈಗ ಕಾಫಿ ನೀರ್ನಾದ್ರೂ ಕೊಡ್ತೀಯೋ ಇಲ್ಲ...

ರಾಧಾ: ಹೊಟೇಲ್‌ಗೋಗಿ ಕುಡಿದು ಬನ್ನಿ...

ರವಿ : ಅದಕ್ಕೆ ಇಷ್ಟೆಲ್ಲಾ ಪುರಾಣ ಅನ್ನು.

ರಾಧಾ: ಮನೆಯಲ್ಲಿ ಸಾಮಾನುಗಳು ತಂದು ಹಾಕಿರೋದು ಅಷ್ಟೊಂದು ಚಂದ. ನಿಮ್ಮ ಮುಖಕ್ಕೆ ಒಂದಷ್ಟು ಮುಗ್ಗಲು ಧೂಪ ಹಾಕದ್ರಂತೆ ನಡೀರೀ... ಒಲೆ ಹಚ್ಚಲಿಕ್ಕೆ ಗ್ಯಾಸಿಲ್ಲ, ಸೀಮೆಎಣ್ಣೆ ಇಲ್ಲ... ಕಾಫಿ ಮಾಡಬೇಕಂತೆ ಕಾಫಿ. ... ನೋಡ್ರೀ

ಈಗ ಕಾಫಿ ಕುಡಿದು ಸಾಮಾನು ತರ್ದೇ ಹೋದ್ರೆ ಹೊಟ್ಟೆಗೆ ರಾತ್ರಿ ಸೊನ್ನೆ... ಗೊತ್ತಾಯ್ತೋ?

ರವಿ : ಆಯ್ತು... ನೀನೇ ಮಾಡ್ಕೊಂಡು ತಿನ್ನು...

ರಾಧಾ: ಮಾಡ್ದವ್ರುಂಡ್ರು ಮನೇಗಾತ್ರ ಅಂತ ಹೇಳ್ತಾರೆ, ಆದ್ರೆ ಇದ್ರಲ್ವೇ ಮಾಡೋದು ಮಾಡಿದ್ರಲ್ವೇ ಉಣ್ಣೋದು...ನೀವೇನೋ ಹೋಗ್ತೀರಿ... ನಾನು ಇಲ್ಲಿ ಈ ಮಕ್ಕಳು ಕಟ್ಕೊಂಡು ಏನು ಮಾಡ್ಲಿ? ಒಂದಕ್ಕಿಂತ ಒಂದು ಹೆಚ್ಚು ಕೋತಿಗಳ ಹಾಗೆ ಆಡ್ತವೆ. ಒಂದು ಕಂಯ್ ಅಂದ್ರೆ ಮತ್ತೊಂದು ಪಿಂಯ್ ಅನ್ತದೆ. ಅಡ್ಗೇನೇ ಮಾಡ್ಲೋ, ಸಾರ್ಸ್ಲಿ, ಗುಡ್ಸ್ಲಿ, ರಂಗೋಲೆ ಬಿಟ್ಟು ಮನೆ ಕೆಲ್ಸಾನೇ ಮಾಡ್ಲೋ, ಇಲ್ಲ..... ಬಟ್ಟೆ ಒಗೀಲೋ..... ಮಕ್ಕಳ್ನೇ ಸಮಾಧಾನ ಮಾಡ್ಲೋ... ಸಂಗಂತೂ ಒಂದೂ ತೋಚ್ತಾ ಇಲ್ಲ... ತಲೆ ಕೆಟ್ಟು ಕಿಲುಬಾಗಿ ಹೋಗಿದೆ.

ರವಿ : ಪಟ್ಟಣಗಳಲ್ಲಿ ಹೆಣ್ಣು ಮಕ್ಕಳು ಕೆಲಸಕ್ಕೂ ಹೋಗ್ತಾರೆ, ಮನೆ ಕೆಲ್ಸನೂ ಮಾಡ್ತಾರೆ. ಮಕ್ಕಳನ್ನೂ ನಿಭಾಯಿಸುತ್ತಾರೆ ಅವರಿಗ್ಯಾಗಿರಬೇಕು ಜೀವನ? ನಿಂಗೆ ಬರೇ ಮನೆ ಕೆಲ್ಸ ಮಾತ್ರ. ಅದರ ಜೊತೆಗೆ ಈ ಮಕ್ಕಳನ್ನು ನೋಡ್ಕೊಳ್ಳಿಕ್ಕಾಗೋಲ್ಲ ಅಂದ್ರೆ ಹ್ಯಾಗೆ?

ರಾಧಾ: ಅವರಿಗೇನು ಪಾತ್ರೆ ತಿಕ್ಕಲಿಕ್ಕೆ, ಬಟ್ಟೆ ಒಗೀಲಿಕ್ಕೆ, ಮನೆ ಕಸ ಗುಡಿಸಲಿಕ್ಕೆ ಸಾರಿಸಲಿಕ್ಕೆ ಆಳು, ಕಾಲಿಗೊಂದಾಳು ಬಿಡಿ... ಅವರು ಮಕ್ಕಳ ಸಾಕೋದು ಅಷ್ಟರಲ್ಲೇ ಅಯ್ತೆ. ತಿಂಗಳಾಯ್ತು ಅಂದ್ರೆ ಸಂಬಳ ಬರುತ್ತೆ ಅಷ್ಟೇ ಅವರ ಸುಖ! ನಾವು ಬೆಳಿಗ್ಗೆ ರಾತ್ರಿ ದುಡೀತೀವಿ ಮನೆಗೆ ನಾನೇ ಆಳು ನಾನೇ ಅರಸಿ. ಸರಿ ನಡೀರಿ ಗದ್ದೆಕಡೆ ಆಳುಗಳು ಬರೋ ಹೊತ್ತಾಯ್ತು.

ರವಿ : ಸರಿ ಸರಿ ನಾನು ಹೋಗ್ತೀನಿ... ನೀನೇ ಅಡಿಗೆ-ಊಟ ಮಾಡಿ ಉಣ್ಣು...

(ಮತ್ತೆ ಮಗು ಅಳು)

ರಾಧಾ: ಅಬ್ಬಾ... ಈ ಮನೇಲಿ ಎಲ್ಲರಿಗೂ ಆತ್ರ... ನನಗೇನು ಹತ್ತು ಕೈ ಇದ್ಯಾ? ಇರೋದು ಎರಡೇ ಕೈ, ಚಾಮುಂಡಿಯಾಗಿ ಇಪ್ಪತ್ತು ಕೈ ಇದ್ದಿದ್ರೆ ಏನಾದ್ರೂ ಮಾಡಬಹುದಾಗಿತ್ತು.

(ಮಕ್ಕಳ ಜಗಳ)

ಅಯ್ಯೋ... ದೇವ್ರೇ... ಈ ಹಾಳು ಗಲಾಟೆ ಕೇಳಲಿಕ್ಕೆ ಆಗೋಲ್ಲ.. ಕಿವಿ ಮುಚ್ಚಿ ಹೋಯ್ತು... ತಡೀರೋ ಬರ್ತೀನಿ.

ರಾಜ : ಅವ್ವಾ ಹೊಟ್ಟೆ ಹಸೀತದೆ ಏನಾದ್ರೂ ಕೊಡವ್ವಾ.

ರಾಧಾ: ಮಾಡ್ತೀನಿ ಕುಕ್ಕರಿಸೋ...

(ಮತ್ತೊಂದು ಮಗುವಿನ ಅಳು)

ಆಗ್ಲೇ ಅದ್ಯೇನು ಬಂತಪ್ಪಾ ಅಯ್ಯೋ ಶಿವ್ನೇ... ನಾನಾದ್ರೂ ಇಷ್ಟು ಮಕ್ಕಳು ಬೇಕು ಅಂತ ದೇವರಲ್ಲಿ ಹರಕೆ ಮಾಡ್ಕೊಂಡಿದ್ನೇ? ಭತ್ತ ರಾಗಿ ಬೆಳೀಬಹುದು, ದೇವ್ರು ಕೊಟ್ಟಿದ್ದಾನೆ, ಇಲ್ಲ ಅಂತ ಹೇಳೋದಿಲ್ಲ. ಆದ್ರೆ ಈ ಮಕ್ಕಳು ತಡ್ಕೋ ಶಕ್ತಿ ಕೊಟ್ಟಿಲ್ಲವಲ್ಲ ದೇವ್ರು ಯೇಯ್... ಕುಡೀರ್ಯೋ ಹಾಲು, ತಿನ್ನೋ... ರಾಗಿರೊಟ್ಟಿ ಸುಮ್ನೆ ಯಾಕೆ ಬಾಯಿ ಬಿಡ್ತೀರಿ?

(ದುಃಖ ಸಂಗೀತ)

ಶಾಂತ : ಇದ್ದೀರಾ... ರಾಧಾ...

ರಾಧಾ: ಇದ್ದೀನಿ... ಬನ್ನಿ... ಬನ್ನಿ...

ಶಾಂತ : ಏನು ಮಾಡ್ತಾ ಇದ್ದೀರಿ?

ರಾಧಾ: ಇದ್ದಲ್ಲಾ ಮನೆ ಕೆಲ್ಸ... ಪಾತ್ರೆ ತಿಕ್ಕಿ, ಬಟ್ಟೆ ಒಗೆದು, ಕಸ ಹೊಡೆದು ಸಾರಿಸಿ ಗುಡಿಸಿ ಎಲ್ಲಾ ಅಚ್ಚುಕಟ್ಟು ಮಾಡ್ತಾ ಇದ್ದೆ. ಸಂಕ್ರಾಂತಿ ಬಂತಲ್ಲಾ ನಾಳೆ...

ಶಾಂತ : ಅಂತೂ ಅಡ್ಗೆ ಆಗಿ...

ರಾಧಾ: ಎಲ್ಲರಿಗೂ ಪೂರೈಸಿ ಆಯ್ತು. ಮುಂದನದಕ್ಕೆ ಅಣಿ ಮಾಡ್ತಾ ಇದ್ದೆ ಬನ್ನಿ... ನಿಂತೇ ಬಿಟ್ರಲ್ಲಾ ಕೂತ್ಕೊಳ್ಳಿ.

ಶಾಂತ : ನಿಧಾನಕ್ಕೆ ಮಾಡು ರಾಧಾ... ಏನು ಆತ್ರ?

ರಾಧಾ: ಅಡ್ಗೆ ಆಯ್ತು ನಿಮ್ದು.

ಶಾಂತ : ಹೊಟ್ಟೆಪಟ್ಟಣ ಕೇಳಬೇಕಲ್ಲಾ...

ರಾಧಾ: ಅದೇನೋ ನಿಜ ಅನ್ನಿ... ನಿಂದೇ ಹೀಗಾಧ ಮೇಲೆ ನನ್ನದದ್ದೇನು ಕೇಳ್ತೀಯೆ ಬಿಡು ಶಾಂತಾ. ಶಾಂತಾ ಮಕ್ಕಳು ಕೈ ಬಿಡೋಲ್ಲ. ಒಂದೊಂದನ್ನೂ ಒಂದು ತಾಬಂದಿಗೆ ತರಬೇಕಾದ್ರೆ ಸಾಕ್ ಸಾಕಾಗೋಯ್ತದೆ. ನಿಮ್ಮ ಮಕ್ಕಳು ದೊಡ್ಡವ್ರರಾಗವ್ರೆ. ನಿನ್ಗೆ ಅಷ್ಟೊಂದು ಕಷ್ಟವಿಲ್ಲ ಬಿಡು.

ಶಾಂತ : ರಾಧಾ ನಾನು ಕೂಡ ನಮ್ಮ ಮನೆಯಾಗೇ ವರ್ಷಕ್ಕೊಂದೊಂದು ಮಕ್ಕಳ ಹಡೆದವರ ಕತೆ ನೋಡಿದ್ನವ್ವಾ. ಅದ್ಕೆ ನನ್ನ ಮೊದಲನೇ ಮಗ ರಾಜ ಆದ್ಮೇಲೆ ಐದು ವರ್ಷಕ್ಕೆ ಈ ಶಶಿ ಹುಟ್ಟಿದ್ದು. ಅದಕ್ಕೇ ನನಗೆ ಅಷ್ಟೊಂದು ತೊಂದ್ರೆ ಆಗ್ಲಿಲ್ಲ ಬಿಡು.

ರಾಧಾ: ಅಂತೂ ನೀವು ಜೋಪಾನ ಬಿಡವ್ವಾ.

ಶಾಂತ : ಅಲ್ಲಾ ರಾಧಾ...ಕಾಲ ಈಗ ಎಷ್ಟು ಬದಲಾಗಿದೆ? ರೇಡಿಯೋ, ಟಿಲಿವಿಷನ್, ಸಿನೆಮಾ ಮುಂತಾದುವುಗಳಲ್ಲಿ ಬರ್ತಾನೇ ಇರುತ್ತೆ, ಒಂದು ಮಗುವಿಗೂ

ಮತ್ತೊಂದು ಮಗುವಿಗೂ ಮೂರು ವರ್ಷವಾದ್ರೂ ಅಂತರ ಇರಬೇಕು ಅಂತ. ಅದನ್ನು ಕೇಳಿಯೂ ಎಚ್ಚೆತ್ತುಕೊಳ್ಳಲಿಲ್ವಲ್ಲ ನೀನು.

ರಾಧಾ: ನಾನು ಅನ್ನೋದ್ಕಿಂತ...

ಶಾಂತ: ನಿಮ್ಮವ್ರೂ ಅಷ್ಟೇ... ಆರೋಗ್ಯ ಕಾರ್ಯಕರ್ತರು ಬಂದು ಹೇಳಿ ಹೋಗ್ತಾರೆ. ಡಾಕ್ಟರ್ ಕೇಳಿ ಏನಾದ್ರೂ ಒಂದು ಸಾದನ ಬಳಿಸಿದ್ರೆ ನಿಜವಾಗ್ಲೂ ಈ ಕಷ್ಟ ಅನುಭವಿಸಬೇಕಾಗಿರಲಿಲ್ಲ.

ರಾಧಾ: ಅಂದ್ರೆ ನೀನು?

ಶಾಂತ: ನಾನು ಒಂದು ಮಗು ಆದಮೇಲೆ ವಂಕಿ ಹಾಕಿಕೊಂಡಿದ್ದೆ. ಆಮೇಲೆ ೩ ವರ್ಷ ಆದ ಮೇಲೆ ಮತ್ತೆ ತೋರಿಸಿಕೊಂಡು ಅದನ್ನು ತೆಗೆಸಿ ಬೇರೆ ಹಾಕಿಸಿಕೊಂಡು ನಮ್ಮ ರಾಜ ದೊಡ್ಡವನಾಗಿ ಬೆಳೆದು ಮಾತಾಡಿ, ತಿರುಗಾಡುವವರ್ಗೆ ಮಕ್ಕಳು ಬೇಡ ಅಂತ ನಾನು ಮತ್ತು ನಮ್ಮ ಯಜಮಾನ್ರು ಯೋಚನೆ ಮಾಡ್ಕೊಂಡೇ ಆಮೇಲೆ ಐದು ವರ್ಷಗಳಾದ ಮೇಲೆ ವಂಕಿ ತೆಗಿಸ್ದೆ. ಮತ್ತೆ ಶಶಿ ಹುಟ್ಟಿದ್ಲು. ಆಮೇಲೆ ಸಾಕಪ್ಪಾ ಅಂತ ಆಪರೇಷನ್ ಮಾಡಿಸ್ಕೊಂಡು ಬಿಟ್ಟೆ ಒಂದೇ ಒಂದಾಗಿ. ಈಗ ಮಕ್ಕಳಾಗುತ್ತೆ ಅನ್ನೋ ಭಯವಿಲ್ಲ. ಹ್ಯಾಗಪ್ಪಾ ಅಂತ ಪರಿತಪಿಸೋ ಹಾಗಿಲ್ಲ. ನಮ್ಮ ಹುಡುಗನಿಗೆ ಊಟಕ್ಕೆ, ತಿಂಡಿಗೋ, ಆತನ ಆರೈಕೆಗೆ ಯಾವ ತೊಂದ್ರೆ ಆಗಲಿಲ್ಲ, ವಂಚಿಸಲಿಲ್ಲ, ನಾನು ಚೆನ್ನಾಗಿ ಕಾಪಾಡ್ದೆ. ಅವೇ ನಿನ್ನ ಹಾಗೆ ವರ್ಷಕ್ಕೊಂದೊಂದು ಆಗಿದ್ದಿದ್ರೆ ನನ್ನ ಪಾಡು ನಿನ್ದೇ ಆಗ್ತಿತ್ತು ಬಿಡು. ನಿನ್ನನ್ನು ನೋಡಲಿಕ್ಕಾಗೋಲ್ಲ ಊಟ ತಿಂಡಿ ಇಲ್ಲದವರಾಗಿದ್ದೀಯಲ್ಲೇ.

ರಾಧಾ: ಏನು ಹೊಟ್ಟೆ ಹಸಿಕೊಂಡಿರ್ತೀನಾ?

ಶಾಂತ: ಹಾಗಲ್ಲ ರಾಧಾ... ನೀನು ಉಂಡದ್ದೆಲ್ಲಾ ನಿನ್ನ ದೈಹಿಕ ಮಾನಸಿಕ ಶ್ರಮದಿಂದ ಕಡ್ಡಿಯಾಗಿದ್ದೀಯೇ ಬಿಡು.

ರಾಧಾ: ನನ್ನ ಹಾಗಿದ್ದಿದ್ರೆ... ನೀನೂ ನನ್ನ ಹಾಗೆ ಇರ್ತಿದ್ದೆ, ನಿಜ ಕಣ್ ಬಿಡವ್ವಾ.

ಶಾಂತ: ಮಕ್ಕಳ ಕಡೆ ಗಮ್ನ ಕೊಡೋದ್ಕೆ ಅದನ್ನು ನಾವು ಪ್ರೀತಿಸೋಕ್ಕೆ ಅವು ನಮ್ಮನ್ನು ಪ್ರೀತಿಸೋಕ್ಕೆ ಅಂತರ ಬೇಕು.

ರಾಧಾ: ನಿಜ ಒಂದು ತೊಡೆಮೇಲೆ ಕೂತ್ಕೋಬೇಕಂದ್ರೆ ಇನ್ನೊಂದು ನಾನು ಅಂತ ಬರುತ್ತೆ, ಅದು ಬೇಡ ಅನ್ನೋದು ಹಠ ಹಿಡ್ಕೊಡು. ಹೀಗೆ... ಜಗಳ... ಅಳು...

ಶಾಂತ: ಅದ್ಕೇ ನೋಡು ಪ್ರೀತಿ ವಂಚಿಸಿದ ಹಾಗಾಗೋಲ್ವೇ? ಯಾವುದಕ್ಕೂ ಅದ್ಕೇ ಹೇಳೋದು ಯೋಚನೆ ಬೇಕು ಯೋಜನೆ ಬೇಕು ಅಂತ.

ರಾಧಾ: ಹಣೇಲಿ ಬರೆದದ್ಕೆ ಹೊಣೆ ಯಾರು ಅಂತ?

ಶಾಂತ: ಪಣೇಲ್ ಬರ್ದಿಲ್ಲಾ ಬಿಡು ರಾಧಾ... ಎಲ್ಲಾ ನಾನು ಮಾಡ್ಕೊಂಡೇ ತಪ್ಪು ಅಷ್ಟೇ. ಅಂದ ಹಾಗೇ ನಾನು ಒಂದು ಪಾವು ಸಕ್ಕರೆ ಕೇಳೋಣ ಅಂತ ಬಂದೆ, ಮಾತಿನ ಮರೆತೇ ಭರದಲ್ಲಿ ಹೋಯ್ತು...

(ಮಗು ಏನೋ ಕೆಡವಿತು)

ರಾಧಾ: ಅಯ್ಯೋ ಅಯ್ಯೋ ಪೀಡೆ... ಏನು ಬಂತೋ ನಿನಗೇ ಬಂದೆ ತಾಳು...

(ಹೊಡೆಯುವಳು. ಮಗು ಅಳುವುದು)

ಶಾಂತ: ಪಾಪ ರಾಧಾ ಸ್ಥಿತಿ ನೋಡಿದ್ರೆ ಅಯ್ಯೋ ಅನ್ನಿಸುತ್ತೆ.

ರಾಧಾ: ತಗೋ ಶಾಂತಾ...

ಶಾಂತ: ಬರ್ತೀನಿ... ಇನ್ನೂ ದಂಡಿಯಾಗಿ ಬಿದ್ದಿದೆ ಕೆಲ್ಸ. ನಾಳೆ ತಂದುಕೊಡ್ತೀನಿ.

ರಾಧಾ: ಆಯ್ತು... ಶಾಂತಾ ನನ್ನ ವಾರಿಗೆಯವಳು ನಾನು ಹೀಗಿದ್ದೀನಿ, ಅವಳು ಹಾಗಿದ್ದಾಳೆ. ನಿಜ ಅವಳು ಹೇಳಿದ ಹಾಗೆ ಹಣೇ ಬರಹಲ್ಲ, ನಮ್ಮ ಬರಹ! ನಾವು ಮಾಡಿಕೊಂಡ ತಪ್ಪು!

(ದುಃಖ ಸಂಗೀತ)

ರವಿ : ಈ ಮನೇಗೆ ಬಂದ್ರೆ... ಗೋಳೊಂದೋ... ಕೇಳೋದು.

ರಾಧಾ: ಮತ್ತಿನ್ನೇನು ಕೇಳಬೇಕು ಅಂತ... ಸಂತೋಷ, ಉಲ್ಲಾಸ, ಉತ್ಸಾಹ, ಹುಮ್ಮಸ್ಸು...! ಇನ್ನೇನು ಬೇಕು ಹೇಳಿ... ಸಿಗುತ್ತೆ.

ರವಿ : ಇದ್ಯಾವ್ದೂ ಬೇಡ, ಶಾಂತಿ ಸಿಕ್ಕಿವರೆ ಸಾಕು, ಈ ಗೋಳೊಂದು ಬಿಟ್ಟು.

ರಾಧಾ: ಕಿವಿಗೆ ಸ್ವಲ್ಪ ಹತ್ತಿ ಇಟ್ಕೊಳ್ಳಿ ಆಗ ಯಾವ ಸದ್ದೂ ಕೇಳುವುದಿಲ್ಲ.

ರವಿ : ಬೆಳಗ್ನಿಂದ ದುಡಿದು ಬಂದು...

ರಾಧಾ: ಈ ಸದ್ದು ಕೇಳಬಾರ್ದು ಅಂತಹೇಳ್ಳೆ, ತಪ್ಪೇನು? ತಪ್ಪು ಯಾರದು? ಅದಕ್ಕೆ ಕಾರಣ ನೀವೇ ಅಲ್ವೇನು?

ರವಿ : ನೀನು ಏನು ಕಾರಣ ಇಲ್ಲ ಅಂತಿಯೇನು?

ರಾಧಾ: ನಂಗೇನು ವರ್ಷಕ್ಕೊಂದು ಮಗುಬೇಕಿರ್ನಿಲ್ಲ... ನಿಮಗೆ ಸಂಯಮ ಇಲ್ಲದೇ ಹೋದ್ರೆ ನಾನೇನು ಮಾಡ್ಲಿ?

ರವಿ : ಸರಿ ಇದೇ ವಾದ ಮಾಡ್ತಾ ನಿಂತಿರ್ತಿಯೋ ಅಥವಾ ಏನಾದ್ರೂ ಹೊಟ್ಟೆ ಪಟ್ಟಣ ತುಂಬಿಸ್ತೀಯೋ ಹ್ಯಾಗೆ?

(ಮಗು ಏನೋ ಕೆಡವಿಕೊಂಡು ಅಳಲಾರಂಭಿಸಿತು)

ರಾಧಾ: ಅಯ್ಯೋ ಅಯ್ಯೋ... ಏನಾಯ್ತೊ ಕುಲಶೇಖರಾ... ಅಯ್ಯೋ ಕಾಲ್ನಲ್ಲಿ ರಕ್ತ ಬಂತು... ಬನ್ರೀ... ಬನ್ನಿ...ಸ್ವಲ್ಪ ನೋಡಿ ಬನ್ನಿ ಒಂದು ಬಟ್ಟೇನಾ ನೀರದ್ದಿ ತನ್ರೀ...

ರವಿ : ಇನ್ನು ಇದೊಂದು ಬಾಕಿ ಇತ್ತಾ ಆಸ್ಪತ್ರೆ ಮೆಟ್ಟು ಹತ್ತಿ ತಿರುಗಲಿಕ್ಕೆ. ಮಕ್ಕಳ ಮೇಲೆ ನಿಗಾ ಇಲ್ಲ... ಅದರ ಕೈಗೆ ಏನು ಸಿಕ್ಕಬಾರದಾಗೆ ನೋಡ್ಕೊಳ್ಳಲಿಕ್ಕಾಗ್ದೇ ಇತ್ತೇ...

ರಾಧಾ: ಮೊದಲು... ನಡ್ರಿ ಆಸ್ಪತ್ರೆಗೋಗುವಾ...ರಕ್ತ ನಿಲ್ತಾ ಇಲ್ಲ. ಮೂಳೆಗೇನಾಗಿದ್ಯೋ ಏನೋ...

ರವಿ : ಸಾಕಪ್ಪಾ... ಸಾಕು... ಈ ಹಾಳು ಸಂಸಾರ...!

(ಆಸ್ಪತ್ರೆ ವಾತಾವರಣ...)

ರಾಧಾ: ಡಾಕ್ಟ್ರೇ... ಸ್ವಲ್ಪ ನೋಡಿ ಮಗೂನ...

ಡಾಕ್ಟರ್: ಏನಾಯ್ತಮ್ಮಾ?

ರಾಧಾ: ಟೇಬಲ್ ಉರುಳಿಸ್ಕೊಂಡು ಬಿಡ್ತು.

ಡಾಕ್ಟರ್ : ಏನು ಮಕ್ಕಳ ಮೇಲೆ ನಿಗಾ ಇರಬೇಡ್ವಮ್ಮಾ?

ರಾಧಾ: ಏನೋ ಕೆಲಸ ಮಾಡ್ತಾ ಕುಂತಿದ್ದೆ... ತಂಟೆ ಮಾಡ್ತಾ ಹೀಗ್ ಮಾಡ್ಕೊಂಡ್ತು ಡಾಕ್ಟ್ರೇ...

ಡಾಕ್ಟರ್ : ಸದ್ಯ ಮೂಳೆಗೇನೂ ಆಗಿಲ್ಲ...ಬ್ಯಾಂಡೇಜ್ ಮಾಡ್ಸಿ...

ರಾಧಾ: ಏನೋ ದೇವರು ದೊಡ್ಡವ...

ಡಾಕ್ಟರ್ : ಎಷ್ಟು ಮಕ್ಕಳು?

ರಾಧಾ: ಮೂರು.

ಡಾಕ್ಟರ್ : ಮೂರು ಮಕ್ಕಳ ವಯಸ್ಸೇನೇನು?

ರಾಧಾ: ನಾಲ್ಕು, ಮೂರು, ಎರಡು.

ಡಾಕ್ಟರ್ : ವರ್ಷಕ್ಕೊಂದೊಂದು ಅನ್ನಿ...

ರಾಧಾ: ಏನ್ಮಾಡೋದು ಎಲ್ಲಾ ನನ್ನ ಕರ್ಮ.

ಡಾಕ್ಟರ್ : ಇದೇನಮ್ಮ ಇನ್ನೂ ಹಳೇ ಕಾಲದ ಮಾತ್ನೇ ಆಡ್ತೀರಿ. ಆಸ್ಪತೆ ಇದೆ, ಡಾಕ್ಟರ್ ಇದ್ದೀವಿ. ಆರೋಗ್ಯ ಕಾರ್ಯಕರ್ತರು, ನರ್ಸಮ್ಮ ಯಾರೂ ನಿಮಗೆ ಹೇಳಲಿಲ್ವೇ? ಈ ರೀತಿ ವರ್ಷಕ್ಕೊಂದೊಂದು ಮಕ್ಕಳು ಆಗೋದು ಆರೋಗ್ಯಕ್ಕೆ ಒಳ್ಳೇದಲ್ಲ ಅಂತ ನೋಡ್ರೀ... ಅದ್ಕೇ ಒಂದು ಮಗುವಿಗೂ ಮೂರು ನಾಲ್ಕು ವರ್ಷಗಳಾದ್ರೂ ಅಂತರ ಇರಬೇಕವ್ವಾ, ತಾಯಿ ಆರೋಗಕ್ಕೂ ಈ ಅಂತರ ಅವಶ್ಯ. ಏನು ನೀವು ಹಳೇಕಾಲದವರಾಗಿದ್ದೀರಿ... ಈಗೇನು ರೇಡಿಯೋ, ಟೆಲಿವಿಷನ್, ಸಿನಿಮಾ ಎಲ್ಲದ್ರಲ್ಲೂ ತೋರಿಸ್ತಾರೆ. ನಿಮಗೆ ಗೊತ್ತಾಗಬಾರದೆ? ಆಸ್ಪತ್ರೆಗೆ ಬಂದು ಡಾಕ್ಟರ್‌ಗೆ ತೋರಿಸಿ ಸೂಕ್ತ ಸಲಹೆ ಸೂಚನೆ ಪಡೆಯಬಾರದಿತ್ತಾ?

ರಾಧಾ: ನಮ್ಮವ್ರು ಸ್ವಲ್ಪ ಮೂಢ ನಂಬಿಕೆಯವರು. ಇನ್ನೂ ಶುದ್ಧ ಹಳ್ಳಿಯವ್ರೇ ಬಿಡಿ. ಮಕ್ಕಳಾದ್ರೆ ಕೇಡೇ ಮಳೆ ಹೊಯ್ದರೆ ಕೇಡೇ ಎಂಬ ಮನೋಭಾವದವರು.

ಡಾಕ್ಟರ್ : ಒಂದು ಮಗು ಆದ ಮೇಲೆ ನೀನು ವಂಕಿ ಹಾಕಿಸಿಕೊಳ್ಳಬೇಕಿತ್ತು, ಅಥವಾ ನಿನ್ನ ಗಂಡ ನಿರೋಧ್ ಬಳಸಬಹುದಿತ್ತು.

ರಾಧಾ: ಏನು ಮಾಡೋದು ಎಲ್ಲಾ ಮಿಂಚಿ ಹೊಯ್ತು ಡಾಕ್ಟ್ರೇ.

ಡಾಕ್ಟರ್ : ಮಿಕ್ಕ ಮಕ್ಕಳ ಆರೋಗ್ಯ ಹ್ಯಾಗಿದೆ?

ರಾಧಾ: ರೋಗ ಇದ್ದೆ ಇರುತ್ಯೇ? ಒಂದಲ್ಲ ಒಂದಕ್ಕಿದ್ದೇ ಇರುತ್ತೆ ಬಿಡಿ ಅದಕ್ಕೇ ಅಷ್ಟು ಖರ್ಚು.

ಡಾಕ್ಟರ್ : ಮಕ್ಕಳಿಗೆ ಚುಚ್ಚು ಮದ್ದು ಕೊಡಿಸಿಲ್ವಾ?

ರಾಧಾ: ಇಲ್ಲ ಡಾಕ್ಟ್ರೆ...

ಡಾಕ್ಟರ್ : ಅಲ್ಲವ್ವಾ ಮಕ್ಕಳಿಗೆ ನಾಯಿ ಕೆಮ್ಮು ಗಂಟಲು ಬೇನೆ, ಕ್ಷಯ, ಪೋಲಿಯೋ ಮುಂತಾದ ರೋಗಗಳು ಬರದಂತೆ ಕೊಡೋ ಚುಚ್ಚುಮದ್ದು ಕೊಡಿಸಬಾರ್ದೇ? ಎಲ್ಲಾ ಉಚಿತವಾಗಿ ಕೊಡ್ತೀವಿ. ಆಯ್ತು... ಇನ್ನೂ... ಮಕ್ಕಳು ಬೇಕೋ ಇಲ್ಲ ಸಾಕೋ.

ರಾಧಾ: ಯಾರಿಗೆ ಬೇಕು ಹೇಳಿ ಡಾಕ್ಟ್ರೇ, ಈಗ್ಲೇ ಸಾಕಾಗೋಯ್ತು ನಂಗೆ, ಹೀಗಾಗುತ್ತೆ ಅಂತ ಗೊತ್ತಿದ್ದಿದ್ರೆ ನೀವು ಅಂತರ ಅಂತೇಳ್ತೀರಿ ಅಂತರ ಯಾಕೆ? ಒಂದೇ ಮಗು ಸಾಕು ಅನ್ನಿಸುತ್ತೆ!

ಡಾಕ್ಟರ್ : ಮತ್ತೆ ಈಗ ಮುಂದೆ ಇನ್ನು ಮಕ್ಕಳಾಗ್ತವಲ್ಲಾ ಅದ್ಕೆ ಏನಾದ್ರೂ ಉಪಾಯ ಮಾಡಿದ್ದೀರೋ ಇಲ್ಲ ಮುಂದುವರಿಸ್ತೀರೋ.

ರಾಧಾ: ನಾನೇನು ಮಾಡೋದು ಹೇಳಿ, ತಾವು ಏನು ಹೇಳಿದ್ರೆ ನಾನು ಹಾಗೇ ಮಾಡ್ತೀನಿ ಡಾಕ್ಟ್ರೇ...

ಡಾಕ್ಟರ್ : ಶಾಶ್ವತವಾಗಿ ಮಕ್ಕಳು ಬೇಡ ಅಂದ್ರೆ ಆಪರೇಶನ್ ಮಾಡಿಸ್ಕೊಂಡು ಬಿಡಿ. ಇನ್ನು ಮಕ್ಕಳು ಆಗೋದೇ ಇಲ್ಲ.

ರಾಧಾ: ತಾವೇಳ್ದಾಗೆ ಕೇಳ್ತೀನಿ ಡಾಕ್ಟ್ರೇ...

ಡಾಕ್ಟರ್ : ನೀನು ಯಾವ ಹೊತ್ತು ಬರ್ತೀಯೋ ಆ ಹೊತ್ತು ಆಪರೇಷನ್ ಮಾಡ್ತೀನಿ...

ರಾಧಾ: ಆಯ್ತು ಡಾಕ್ಟ್ರೇ...

(ಸಂಗೀತ)

ಶಶಿ : ಅವ್ವಾ... ಅವ್ವಾ...

ರವಿ : ಸ್ವಲ್ಪ ಸುಮ್ನಿರ್ತೀರೋ ಇಲ್ವೋ...

ಶಾಂತ: ಅವ್ವಾ... ಶಾರದಕ್ಕ ಬಂದಿದ್ರು.

ರಾಧಾ: ಏನಂತೆ?

ಶಶಿ : ಅವರ ಮಗನ ನಾಮಕರಣವಂತೆ. ಎಲ್ರೂ ಖಂಡಿತ ಬರಬೇಕು ಅಂತ ಹೇಳಿ ಹೋದ್ರು.

ರವಿ : ಒಳ್ಳೇದೇ ಆಯ್ತು ಬಿಡು. ನಿಮ್ಮವ್ವಗೆ ಈ ಹೊತ್ತು ಅಡಿಗೆ ಮಾಡೋದು ತಪ್ತು.

ರಾಧಾ: ಅಲ್ಲಾ... ನಿಮ್ಮ ಮಕ್ಕಳ ಕಟ್ಕೊಂಡೋದ್ರೆ ನನಗೆ ಮಾನ ಬಂದಾಗೇ...

ರವಿ : ಕರ್ಕೊಂಡೋಗ್ಬೇಡ...

ಮಕ್ಕಳು : ನಾನು ಬರ್ತೀನಿ... ನಾನು ಬರ್ತೀನಿ...

ರಾಧಾ: ನೋಡದ್ರಾ ಈಗ್ಲೇ ಹಠ ತೆಗೆದ್ರು.

ರವಿ : ಒಂದು ಕೆಲ್ಸ ಮಾಡು ಯಾರ್ನಾದ್ರೂ ಒಬ್ಬರನ್ನು ಕರೆದುಕೊಂಡು ಹೋಗು, ಮಿಕ್ಕವರನ್ನ ನಾನು ಮನೇಲೇ ಇರಿಸ್ಕೊಂಡು ನೋಡ್ಕೋತೀನಿ.

ರಾಧಾ: ಮನೆಯವ್ರೆಲ್ಲಾ ಬರಬೇಕು ಅಂತ ಹೇಳವಳಂತೆ. ನೀವು ಬರ್ದೇ ಹ್ಯಾಗೇ. ಈ ಮಕ್ಕಳ ಕಾಟದಿಂದ ಒಂದು ಸಂತೋಷವಾಗಿ ಒಂದು ಸಿನಿಮವೇ, ನಾಟಕವೇ, ಒಬ್ಬರ ಮನೇನೇ... ಎಲ್ಲಾ ನಾವು ಮಾಡ್ಕೊಂಡ ತಪ್ಪಿಗೆ.

(ಮಗು ಅಳು)

ಮತ್ತೆ ಶುರುವಾಯ್ತಲ್ಲಾ ವಾಲ್ಗ.

ರವಿ : ಏನೋ ಹೊಟ್ಟೆ ಹಸೀತೋ ಏನೋ... ನೋಡು ಹೋಗು ನಾವು ಆಸ್ಪತ್ರೆಗೆ ಹೋಗಿ ಬರೋವ್ರಲ್ಲಿ ಅವರನ್ನು ನೋಡದೇ ಹೊಟ್ಟೆ ಕೇಳಬೇಕಲ್ಲಾ.

ರಾಧಾ: ಬರ್‍ತೀನಿ ತಾಳೋ ಬಾಯಿ ಬಿಡಬೇಡ... ಭೂಲೋಕ ನುಂಗುವಂಗೆ...!

ರವಿ : ಬೇಗ ಎಲ್ಲರನ್ನೂ ಸಿದ್ಧ ಮಾಡು ಹೋಗಿ ಬರೋಣ... ಏನು ಮಾನವೋ ಅಪಮಾನವೋ ಸಹಿಸಿ ಬರೋಣ.

(ಸಂಗೀತ)

ರವಿ : ಓ... ಇನ್ನೂ ಯಾರೂ ಬಂದಿಲ್ಲ ಅಂತ ಕಾಣ್ಸುತೆ ನಾವೇ ಮೊದ್ಲೋ ಅಥವಾ ನಾವೇ ಕಡೇನೋ?

ರಾಧಾ: ಎಷ್ಟು ಹೊತ್ತಾಗಿದೆ... ಕೂತವ್ರೆ ಇರಬೇಕು ನಡೀ....

ರವಿ : ಬೇಗ ಹೊರಡು ಅಂದ್ರೆ ಕೇಳಬೇಕಲ್ಲಾ ನೀನು.

ರಾಧಾ: ನಿಮ್ಮ ಮಕ್ಕಳ.....

ರವಿ : ನಿನ್ನ ಮಕ್ಕಳಲ್ವೇನು?

ರಾಧಾ: ಇಬ್ಬರ, ಮಕ್ಕಳನೂ... ಅವರ್‍ನೆಲ್ಲಾ ಹೊರಡಿಸಿಕೊಂಡು ಬರಬೇಡ್ವೇ? ಗಂಡಸರು ಹೊರಡದೇನು ತಡವಾಗೋಲ್ಲ. ಆದ್ರೆ ಹೆಂಗಸ್ರು. ಎಲ್ಲಾ ನೋಡಿಕೊಂಡು, ಮಕ್ಕಳು ಮರಿ ಹೊರಡಿಸಿಕೊಂಡು ಬರಬೇಕಾದ್ರೆ ತಡ್ವೇ?

ರವಿ : ಸದ್ಯ ಎಲ್ಲಾ ಮುಗುದ್ಯೋ ಏನೋ? ಪಾಪಿ ಸಮುದ್ರಕ್ಕೋದ್ರು ನೆಕ್ಕು ನೀರು ಅಂದಹಾಗೆ...?

ರಾಧಾ: ಸುಮ್ನಿರ್ರಿ ಯಾರಾದ್ರೂ ಕೇಳ್ಯಾರು? ಬಂದ್ರು ಶಾರದಮ್ಮ. ಯಾಕೋ ಹಾಗೇ ನೋಡ್ತಾ ನಿಂತುಳು...

ರವಿ : ಹುಡುಗ್ರನಾದ್ರೂ ಸುಳ್ಳು ಹೇಳಿಗ್ರೇ...

ರಾಧಾ: ಹ್ಯಾಗೀದ್ದೀಯಾ ಶಾರದಾ? ಯಾಕೆ ಹಾಗೇ ನೋಡ್ತೀದ್ದೀಯೆ? ಗುರುತು ಸಿಗಲಿಲ್ವೇ? ನಾನು ರಾಧಾ...

ಶಾರದ : ಹೌದು ಯಾರೋ ಹೊಸಬರೇನೋ ಅಂತಿದ್ದೆ... ಬನ್ನಿ ಬನ್ನಿ ಕೂತ್ಕೊಳ್ಳಿ... ನಿನ್ನ ಮದ್ವೇಲಿ ನೋಡಿದ್ದು, ಮತ್ತೆ ಭೇಟೀನೇ ಇಲ್ಲ... ಆ ಹೊತ್ತು ಮನೆಗೆ ಬಂದಾಗ್ಲೂ ನೀನು ಇರಲಿಲ್ಲ.

ರಾಧಾ: ಮಪ್ವೆ ಆದ ಮೇಲೆ ಬಿಡು, ಅವರವರ ಸಂಸಾರವೇ ಭಾರ.. ಯಾರನ್ನ ಯಾರು ನೋಡಕ್ಕಾಗೋಲ್ಲ. ಇಂಥ ಸಂದರ್ಭವಗಳಲ್ಲಿ ನೋಡಬೇಕು ಅಷ್ಟೇ. ಹ್ಯಾಗಿದ್ದೀಯೇ?

ಶಾಂತ: ಚನ್ನಾಗಿದ್ದೀನಿ... ಅಲ್ವೇ... ನಿನ್ನನ್ನು ನೋಡಲಿಕ್ಕಾಗೋಲ್ವಲ್ಲೇ, ಗುರುತೇ ಸಿಕ್ಕದ ಹಾಗಿದ್ದೀಯಲ್ಲಾ, ಊಟಗೀಟ ಮಾಡ್ತೀಯೋ ಹ್ಯಾಗೆ?

ರವಿ : ಇಲ್ಲ ಉಪವಾಸ ಇರ್ತಾಳೆ.

(ಎಲ್ಲರೂ ನಗುವರು)

ಶಾಂತ: ಮುಖ ನೋಡಿದ್ರೆ ಹಾಗೇ ಕಾಣುತ್ತೆ.

ರವಿ : ಅವಳಿಗೇನು ಕಡಿಮೆ ಆಗಿದೆ.

ಶಾಂತ: ನಾನು, ರಾಧಾ ಇಬ್ಬರೂ ಒಂದೇ ವಯಸ್ಸಿನವರು, ನಾನು ಹೇಗಿದ್ದೀನಿ? ಅವಳು ಹೇಗಿದ್ದಾಳೆ ನೀವೇ ನೋಡ್ರಿ...

ರಾಧಾ: ನೀನು ಬಿಡು ಇನ್ನು ಮದುವೆಯಾಗದ ಕನ್ಯೆ ಇದ್ದ ಹಾಗೇ ಇದ್ದೀಯ.

ಶಾಂತ: ಅಂತೂ ಗಂಡ-ಹೆಂಡ್ತಿ ಇಬ್ರೂ ಹೊಗಳಕ್ಕೆ ಶುರು ಮಾಡಿಬಿಟ್ರಿ.

ರವಿ : ಹೊಗಳದೇನು ಬಂತು. ಇದ್ದದ್ದನ್ನು ಇದ್ದ ಹಾಗೆ ಹೇಳಿದ್ದಾಳೆ. ಆದ್ರೆ ನನ್ನಾಕೆಗೇನು ಕಡಿಮೆ ಮಾಡಿದ್ದೀನಿ ನೀವೇ ಕೇಳಿ.

(ಮಗುವಿನ ಅಳು)

ಶಾಂತ: ರಾಧಾ... ನೋಡು ಮಗು ಅಳುತ್ತೆ, ಹಾಲು ಗೀಲು ಕುಡಿಯುತ್ತೋ ಏನೋ?

ರಾಧಾ: ಕುಡ್ದಿದೆ... ಅದು ಚೀರೋದೇ... ಯಾವಾಗ್ಲೂ... ಅದೊಂದು ಚಾಳಿ ಆಗೈತೆ ಅದಕ್ಕೆ...

ಶಾಂತ: ಮಕ್ಕಳು ಬಹಳ ಸೊರಗಿವೆ.

ರಾಧಾ: ಒಂದಲ್ಲ ಒಂದು ಬೇನೆ... ಆಸ್ಪತ್ರೆಗೆ ಹೋಗ್ತಾನೇ ಇರ್ತೀವಿ... ಏನುಮಾಡೋದು ಎಲ್ಲಾ ನಮ್ಮ ಕರ್ಮ.

ಶಾಂತ: ಬರೇ ಮಾತೇ ಆಯ್ತು ತಾಳು ಬಡಿಸ್ತೀನಿ.

ರಾಧಾ: ಊಟ ಯಾರಿಗ್ ಬೇಕು ಕೊತ್ಕೋ ಸ್ವಲ್ಪ ಕಷ್ಟ ಸುಖ ಮಾತಾಡೋಣ. ಎಷ್ಟು ದಿನ ಆಯ್ತು ನಾನು ನೀನು ಹೀಗ್ ಕೂತ್ ಮಾತಾಡಕ್ಕೆ ಶುರುಮಾಡಿ, ಆಮೇಲೆ ಮಾಡಿದ್ರಾಯ್ತು.

ರಾಧಾ: ಮಕ್ಕಳು ನೋಡಿ ಹ್ಯಾಗಿವೆ? ಒಳ್ಳೆ ಪುಷ್ಟವಾಗಿ ಎಲ್ಲಾ ಅವರವರು ಪಡ್ಕೊಂಡು ಬಂದ ಪುಣ್ಯ, ಅದೇ ನಾವು ವರ್ಷಕ್ಕೊಂದೊಂದು ಮಕ್ಕಳು ಹಡೆದು ಹೀಗ್ ಚಿಂತೆ ಮಾಡೋವಂತಾಯ್ತು.

ರವಿ : ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲ ಏನು ಹೇಳು?

ರಾಧಾ: ಒಳ್ಳೆ ಮದ್ವೆ ಆಗದ ಹುಡುಗಿ ಇದ್ದ ಹಾಗಿದ್ದಾಳೆ.

ರವಿ : ಅದು ಅವರವರ ದೇಹದ ಪ್ರಕೃತಿ, ಏನು ಮಾಡೋದು?

(ಊಟಕ್ಕೆ ತಂದಿಡುವಳು)

ಶಾಂತ: ಊಟ ಮಾಡಿ... ಏನು ರಾಧಾ... ಮದ್ವೆಗೂ ಮೊದ್ಲೆ ಹ್ಯಾಗಿತ್ತು ನಿನ್ನ ಮೈಕಟ್ಟು, ಈಗ ಎಲ್ಲಿಗೋಯ್ತು?

ರವಿ. : ಮಕ್ಕಳಿಗೆ ಹಂಚಿಬಿಟ್ಲು...

ರಾಧಾ: ಸರಿಯಾಗಿ ಹೇಳಿದ್ರು... ಅದಕ್ಕೆ ಕಾರಣ ಇವ್ರೇ.

ಶಾಂತ: ಚೆನ್ನಾಗಿ ಪೌಷ್ಟಿಕ ಆಹಾರ ತೆಗೆದುಕೊಳ್ಳಬೇಕು.

ರಾಧಾ: ಎಷ್ಟೇ ತೆಗೆದುಕೊಂಡ್ರೂ ಅದೆಲ್ಲಿಗೆ ಹೋಗುತ್ತೋ ಏನೋ ಅಪ್ಪಾ... ಮೈಗೇ ಹತ್ತೋದಿಲ್ಲ.

ಶಾಂತ: ಆಗ಼್ೇ ನಿಮ್ಮ ಯಜಮಾನ್ರು ಹೇಳಿದ್ರಲ್ಲಾ ಅದಕ್ಕೇ.

ರಾಧಾ: ಅದರ್‌ಜೊತೆಗೆ ಈ ಮಕ್ಕಳ ಜೊತೆ ಏಗ್‌ಬೇಕು. ಒಂದು ಕೆಲಸ ಬದುಕು ಮಾಡಲಿಕ್ಕೆ ಬಿಡೋಲ್ಲ. ಒಂದಲ್ಲ ಒಂದು ಗದ್ದಲ ಮಾಡ್ತಾನೇ ಇರ್ತಾವೆ. ಕಚ್ಚಾಡ್ತಾ ಇರ್ತವೆ. ಅಬ್ಬಬ್ಬಾ ತಲೆ ಕೆಟ್ಟು ಹೋಗಿದೆ. ಮಕ್ಕಳೇ ಬೇಡ ಅನ್ನಿಸಿಬಿಟ್ಟಿದೆ.

ಶಾಂತ: ಹಾಗಾದ್ರೆ ಅದಕ್ಕೇನಾದ್ರೂ ಉಪಾಯ ಮಾಡಿದ್ದೀಯೆ ಏನು?

ರಾಧಾ: ಉಪಾಯ ಏನೂ ಇಲ್ಲ ಎಲ್ಲಾ ಬರೇ ಅಪಾಯನೇ.

ಶಾಂತ: ಹೀಗೇ ಸಾಲಾಗಿ ಮಕ್ಕಳಾಗಿ ಹೋಗ್ತಾ ಇರ್ಲಿ ಅಪಾಯನೇ ಕಟ್ಟಿಟ್ಟ ಬುತ್ತಿ

ರಾಧಾ: ಅಂತೂ ನಿನ್ನ ಮಕ್ಕಳು ಚೆನ್ನಾಗಿವೆ. ನನ್ನ ಮಕ್ಕಳ ಹಾಗೆ ನರಪೇತ್ಲ ನಾರಾಯಣರಾಗಿಲ್ಲ, ಗೆಲುವಾಗಿವೆ. ಒಂದು ಸದ್ದೇ... ಗಲಾಟೆನೇ...?

ಶಾಂತ: ದೊಡ್ಡದಾಗಿವೆ. ಬುದ್ಧಿ ಬಂದಿವೆ ತಂಗಿ ಕಂಡ್ರೆ ಬಲೇ ಪ್ರೀತಿ ಮುದ್ದಿಸ್ತಾಳೆ... ಚನ್ನಾಗಿ ಆಡಿಸ್ತಾಳೆ ಕವಿತಾ.

ರಾಧಾ: ನಮ್ಮ ಕೋಡಗಳಿವೆ... ಕಿರುಚೋದೇನು, ಕಚ್ಚಾಡೋದೇನು, ಕಿವಿ ತಮಟ್ಟೆ ಹರಿದು ಬಿಡ್ತಾವೆ.

ಶಾಂತ: ರಾಧಾ... ನೀನು ಇಷ್ಟು ಬೇಗ ಬೇಗ ಮಕ್ಕಳನ್ನು ಹಡೀಬಾರದಾಗಿತ್ತು. ಮಕ್ಕಳ ಜಂಜಾಟ, ಮನೆ ಕೆಲಸ, ಮಾಡಿಮಾಡಿ ನೀನು ಕಡ್ಡಿಯಾಗ್ಬಿಟ್ಟೇ. ನಿಜವಾಗ್ಲೂ ನಿನ್ನ ಮುಖ ನೋಡಲಿಕ್ಕಾಗ್ಲೂದ್ದ ನಿನ್ನನ್ನು ನೋಡಿದಾಗ ಯಾರೋ ಹೊಸಬರು ಮನೆಗೆ ಬಂದರೇನೋ ಅನ್ನಿಸ್ತು.

ರಾಧಾ: ಏನ್ಮಾಡ್ತೀಯಾ ಹೇಳು, ತಿಂಗಳಿಗೆ ನಮ್ಮವರು ಸಾವಿರಾರು ರೂಪಾಯಿ ಖರ್ಚು ಮಾಡ್ತಾರೆ. ಹಣ್ಣು ಹಂಪಲು ತರಕಾರಿ, ಡಾಕ್ಟರ್‌ಗೆ... ಆದ್ರೂ ಏನೂ ಉಪಯೋಗವಿಲ್ಲ ಬಿಡು.

ಶಾಂತ: ಡಾಕ್ಟರ್ ಏನಂದ್ರು?

ರಾಧಾ: ನೀವು ಏನು ಖರ್ಚು ಮಾಡಿದ್ರೂ ಏನೂ ಪ್ರಯೋಜನವಿಲ್ಲ ಬಿಡಿ. ಈ ಅತಿ ಮಕ್ಕಳು ಅಂತರವಿಲ್ಲದ ಮಕ್ಕಳ ಸಂತಾನ ನಿಲ್ಲಬೇಕು ಅಂತ ಅಷ್ಟೇ.

ಶಾಂತ: ನಿಜ ಡಾಕ್ಟರ್ ಹೇಳಿದ್ದು ಗದ್ದೆಯಲ್ಲಿ ನಾಟಿ ಹಾಕುವಾಗ ಪೈರನ್ನು ದೂರ ದೂರಕ್ಕೆ ನೆಡ್ತಾರೆ ಯಾಕೆ ಹೇಳು? ಚನ್ನಾಗಿ ಫಸಲು ಬರಲಿ ಅಂತ ದೂರ ದೂರ ಬೆಳೆದ ಗಿಡ ಹ್ಯಾಗಿರುತ್ತೆ? ಹತ್ತಿರ ಹತ್ತಿರ ಬೆಳೆದ ಗಿಡಗಳಲ್ಲ ಫಸಲು ಹ್ಯಾಗೆ ಬರುತ್ತೆ, ನೀವೇ ಹೇಳಿ, ಹಾಗೇನೇ ಹತ್ತಿರ ಹತ್ತಿರ ಮಕ್ಕಳಾಗ್ತಿದ್ರೆ ತಾಯಿಯ ಎದೆ ಹಾಲು ಸಿಗೋಲ್ಲ, ಅವರ ಬಗ್ಗೆ ತಾಯಿ ಹೆಚ್ಚು ಗಮನ ಕೊಡಲಿಕ್ಕಾಗೋಲ್ಲ, ತಾಯಿಯ ಆರೋಗ್ಯಕ್ಕೂ ಕುಂದು. ಅದ್ಕೆ ಒಂದು ಮಗೂಗೂ ಮತ್ತೊಂದು ಮಗೂಗೆ ೪,೫ ವರ್ಷ ಅಂತರ ಇರಬೇಕು.

ರಾಧಾ: ನೀನು ಹೇಳಿದ್ದು ಸರಿ ಬಿಡು ಇದರ ಜೊತೆಗೆ ಎರಡು ಮೈ ಇಳಿದೈತೆ.

ಶಾಂತ: ಮತ್ತೆ ಆರೋಗ್ಯಕ್ಕೆ ಇನ್ನೂ ತ್ರಾಸು ಬಿಡು. ನಿಮ್ಮ ಸಿದ್ದು ಮನೇಲಿ ನಮ್ಮಿಬ್ಬರ ಫೋಟೋನೋ ತೆಗೆದಿದ್ರಲ್ಲಾ ಜ್ಞಾಪಕ ಇದ್ಯಾ? ಆಗ ನಿನ್ನನ್ನು ಎಲ್ರೂ... ರತಿ...ರತಿ... ಅಂತ್ರಿದ್ರು.

ರಾಧಾ: ಈಗ ಮುದ್ಕಿ ಆದಂಗಾಗಿವ್ನಿ ಈ ಹೆಚ್ಚು ಮಕ್ಕಳು ಯಾವ ವೈರಿಗೂ ಬೇಡವ್ವಾ...

ಶಾಂತ: ರಾಧಾ ನನ್ಗೂ ಈಗನ್ನಿಸುತ್ತೆ ಈ ಅಂತರವೂ ಯಾರಿಗೆ ಬೇಕು? ಒಂದೇ ಮಗು ಆಗಿದ್ರೆ ಸಾಕಾಗಿತ್ತು ಅಂತ ಸರ್ಕಾರದವ್ರು ಮೂರು ಇರಲಿ ಅಂದ್ರು, ಆಮೇಲೆ ಎರಡು ಸಾಕು, ಅದು ಗಂಡೇ ಇರಲಿ, ಹೆಣ್ಣೇ ಇರಲಿ ಅಂತ. ಆದ್ರೆ ಇನ್ನು

ಮುಂದೆ ಒಂದು ಮಗು ಸಾಕು ಅಂತ ಚೈನಾದೇಶದವರಂತೆ ಬಂದ್ರೂ ಬರಬಹುದು... ಈ ಬುದ್ಧಿ ಈಗ ಇದ್ದಿದ್ರೆ...? ಒಂದೇ ಮಗು ಸಾಕು ಅನ್ತಿದ್ದೆ.

ರಾಧಾ: ನಾನು ಮಕ್ಕಳು ಇಲ್ಲದವರದೇ ಒಂದು ರೀತಿ ಸುಖ ಅನ್ತೀನಿ.

ಶಾಂತ: ಹಾಗೆ ಬೇಡ... ಮಗು ಬೇಕು ಕಣೆ ಒಂದಾದ್ರೂ, ಮಗುವಾಗಿ ತಾಯಿಯಾಗಿ ಆ ಮಗುವನ್ನು ಸಾಕಬೇಕು. ಇದರಿಂದ ಆನಂದ ಪಡಿಸಬೇಕು, ಅದಕ್ಕೆ ಆನಂದ ಪಡಿಸಬೇಕು. ನಂಗೆ ಎರಡೂ ಹೆಣ್ಣೇ. ಗಂಡು ಬೇಕು ಅಂತ ಆಸೇನೂ ಇಲ್ಲ... ಆಸೆ ಪಟ್ಟಿದ್ರೂ ಅದೂ ಹೆಣ್ಣೇ ಆಗಿದ್ದಿದ್ರೆ? ಈಗೇನು ಹೆಣ್ಣು ಮಕ್ಕಳಿಗೂ ಸಮ ಪಾಲು ಆಸ್ತಿ ಹಂಚಬೇಕು ಅಂತಾ ಕಾನೂನು ಬರುತ್ತೆ, ಗಂಡಾದ್ರೇನು ಹೆಣ್ಣಾದ್ರೇನು? ಸಂಚಿ ಹೊನ್ನಮ್ಮ ಹೇಳಿದ ಹಾಗೆ ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವಿರಿ ಕಣ್ಣು ಕಾಣದ ಗಾವಿಲರೆ? ಅಂತ ಎರಡು ಹೆಣ್ಣು ಮಕ್ಕಳಾದ ಮೇಲೆ ನಾನು ನಮ್ಮವರು ಮನಸ್ಸು ಮಾಡಿದ್ವು. ಎರಡೇ ಸಾಕು ಅಂತ ಆಪರೇಷನ್ ಸಹಾ ಮಾಡಿಸ್ಕೊಂಡೆ. ನೀನು...

ರಾಧಾ: ನಾನು ಮನಸ್ಸು ಮಾಡಿವ್ನಿ.

ಶಾಂತ: ನಾವು ಯೌವನ ತುಂಬಿಕೊಂಡು ಗಂಡನಿಗೆ ಸುಖ ಕೊಡಬೇಕು ಪಡೆಯಬೇಕು, ಆದ್ರೆ ಮಕ್ಕಳು ಹಡೆಯದೇ ಕೊಡಬೇಕು, ಕೊಡಬೋದು. ಕಾಲ ವೈಜ್ಞಾನಿಕವಾಗಿ ಎಷ್ಟು ಮುಂದುವರಿದಿದೆ. ಅದ್ಕೆ ಅಲ್ವೇ ಆಪರೇಷನ್ ಆದವರಿಗೆ ಪ್ರೋತ್ಸಾಹ ಧನ, ಊಟ, ಸಾರಿಗೆ ಖರ್ಚು ಎಲ್ಲಾ ಕೊಡೋದು. ದೇಶದಲ್ಲಿ ಸಮಸ್ಯೆ ಕಡಿಮೆ ಆಗ ಬೇಕಾದ್ರೆ, ಈ ಜನಸಂಖ್ಯಾ ಬೆಳವಣಿಗೆ ಕಡಿಮೆ ಆಗಬೇಕು. ನಮ್ಮ ದೃಷ್ಟಿಯಿಂದ ದೇಶದ ದೃಷ್ಟಿಯಿಂದ ಮಿತ ಸಂತಾನ ಅತ್ಯವಶ್ಯಕ. ನೋಡ್ತಾ ಇದ್ದೀವಲ್ಲಾ ಎಷ್ಟೋ ಜನ ಅನ್ನ, ಬಟ್ಟೆ, ವಸತಿ ಇಲ್ಲದೇ ತೊಳಲಾಡ್ತಾ ಇರೋದ್ನ.

ರಾಧಾ: ನಿಜ... ಅದ್ಕೇ ನಾನು ಈ ಸಾರಿ ಆಪರೇಷನ್ ಮಾಡಿಸ್ಕೊಳ್ಬೇಕು ಅಂತ ತೀರ್ಮಾನ ಮಾಡಿಬಿಟ್ಟಿವ್ನಿ.

(ಬರುತ್ತಾ)

ರವಿ : ಏನು ತೀರ್ಮಾನ...?

ಶಾಂತ: ಮಕ್ಕಳು ಸಾಕು ಅಂತ...

ರವಿ : ಏನು ನನ್ಗೆ ಮಕ್ಕಳು ಸಾಕಕ್ಕೆ ಆಗ್ದೇ...

ಶಾಂತ : ನಿಮಗೆ ಆಗುತ್ತೆ, ಆದ್ರೆ ಈಕೆಗೆ ಮಕ್ಕಳು ಹೆರಲಿಕ್ಕೆ ಆಗೋಲ್ಲ... ಆಕೆ... ಹೆರಿಗೆ ಯಂತ್ರವಲ್ಲಾ ತಿಳಿತೇ? ನೀವು ವರ್ಷಕ್ಕೊಂದೊಂದು ಮಕ್ಕಳ ಕೊಡಿಗೆ ಕೊಟ್ಟದುದರ ಫಲವೇ. ನಿಮ್ಮ ಹೆಂಡತಿ ಈಗ್ಲೇ ಮೂಳೆ ಬಿಟ್ಟುಕೊಂಡು ಮುದಿ ಆಗಲಿಕ್ಕೆ ಕಾರಣ! ಸೌಂದರ್ಯವೆಲ್ಲಾ ಕಳಕೊಂಡ್ಡು ಅವಳನ್ನು ನೋಡಿದ್ರೆ ಅಯ್ಯೋ ಅನ್ನಿಸೋದಿಲ್ವೆ ನಿಮಗೆ?

ರವಿ : ಎಲ್ಲಾ ಹೆಂಗಸರ ತೀರ್ಮಾನ?

ಶಾಂತ : ಗಂಡಸರು ಅರಿತುಕೊಳ್ಳದಾಗ ಹೆಂಗಸರೇ ತೀರ್ಮಾನ ಮಾಡಬೇಕಾಗುತ್ತೆ. ಅದ್ಕೇ ಈಗ ಆಕೆ ತೀರ್ಮಾನ ತೆಗೆದುಕೊಂಡಿದ್ದಾಳೆ. ಖಚಿದಲ್ವೇ... ಈ ಶುಭ ಸಂದರ್ಭ ಆಚರಿಸೋಣ, ನಮ್ಮ ಈ ಮಗುವಿನ ನಾಮಕರಣ ದಿನ... ಇದು ನಿಮ್ಮ ಜೀವನ ಭವಿಷ್ಯದ್ದು ಏನಂತೀರಿ?

ರವಿ : ನಿಮ್ಮ ದನಿ ಜೊತೆ ನಮ್ಮ ದನೀನೂ ಸೇರಿಸ್ತೀವಿ ಈಗ ನನ್ಗೂ ಅನ್ನಿಸ್ತಾ ಇದೇ... ಈ ಎಚ್ಚರಿಕೆ ಆಗ್ಲೇ ಯಾರಾದ್ರೂ ಕೊಟ್ಟಿದ್ದಿದ್ರೆ ಒಂದೇ ಸಾಕು ಅನ್ತಿದ್ದೆ...

(ನಗುವರು)

*

## ಕನಸುಗಳು

**ಪಾತ್ರ ವರ್ಗ**

೧. ಪ್ರಭು (೪೫ ವರ್ಷಗಳು) ೨. ಮೀನಾಕ್ಷಿ-ಹೆಂಡತಿ (೩೫ವರ್ಷಗಳು) ೩. ಶಂಕರ-ಮಗ (೨೦ವರ್ಷಗಳು) ೪. ಮಂಜುಳ-ಮಗಳು (೧೮ ವರ್ಷಗಳು) ೫.ಬಸವರಾಜ- ಶಂಕರನ ಮಿತ್ರ (೨೦ ವರ್ಷಗಳು) ೬. ಶಾಂತಿ-ಮೀನಾಕ್ಷಿಯ ಸ್ನೇಹಿತೆ (೩೫ವರ್ಷಗಳು)

### ತರಂಗ-೧

ಮೀನಾಕ್ಷಿ : (ದುಗುಡದ ದನಿಯಲ್ಲಿ) ಈ ಮನೆಗೆ ಏನೇನೋ ಆಸೆ ಇಟ್ಕೊಂಡು ಬಂದೆ.

ಪ್ರಭು : ಇಲ್ಲ ಅಂತ ಹೇಳಿದ್ನೆ ಮೀನಾಕ್ಷಿ.

ಮೀನಾಕ್ಷಿ : ಕನಸು ಕಂಡುಕೊಂಡು ಬಂದೆ.

ಪ್ರಭು : ಹೌದು.

ಮೀನಾಕ್ಷಿ : ಏನು ಪ್ರಯೋಜನ?

ಪ್ರಭು : ಏನು ಪ್ರಯೋಜನವಾಗಬೇಕಾಗಿತ್ತು?

ಮೀನಾಕ್ಷಿ : ಯಾವುದೇ ರೀತಿಯೂ ಪ್ರಯೋಜನವಾಗಿಲ್ಲ.

ಪ್ರಭು : ಅದಕ್ಕೆ ನಾನು ಕಾರಣನೇ?

ಮೀನಾಕ್ಷಿ : ಮತ್ತಾರು?

ಪ್ರಭು : ಇಬ್ಬರೂ ಕಾರಣರೇ.

ಮೀನಾಕ್ಷಿ : ಪ್ರಮುಖವಾಗಿ ನೀವೇ ಕಾರಣರು. ವಿದ್ಯಾವಂತರು, ಬುದ್ಧಿವಂತರು ಅಂತ ನಮ್ಮ ತಂದೆ-ತಾಯಿ ನಿಮ್ಮ ಕೈ ಹಿಡಿಸಿದ್ರು.

ಪ್ರಭು : ನಮ್ಮ ಮನೆ ಬೆಳಕಾಗ್ಲಿ ಅಂತ.

ಮೀನಾಕ್ಷಿ : ಆದ್ರೆ ಇಂದು ಕತ್ತಲಾಗಿದೆ.

ಪ್ರಭು : ಅದಕ್ಕೆ ಬೆಳಕು ಮಾಡಬೇಕಾದವಳು ನೀನು.

ಮೀನಾಕ್ಷಿ : ಬರೇ ದೀಪ ಹಚ್ಚೇ ಬೆಳಕು ಮಾಡಬಹುದು ಅಷ್ಟೇ...

ಪ್ರಭು : ಇನ್ನೊಂದು ರೀತಿ ಬೆಳಕನ್ನೂ ಮಾಡಬಹುದು. ನಮ್ಮ ಪ್ರಯತ್ನಕ್ಕಿಂತ ಒಂದು ಇದೆಯೇ?

ಮೀನಾಕ್ಷಿ : ಪ್ರಯತ್ನ ಮೀರಿಹೋಗಿದೆ.

ಪ್ರಭು : ಆದ್ರೂ ಇನ್ನೂ ಬೇಕಾದಷ್ಟು ದಿನಗಳಿವೆ...

ಮೀನಾಕ್ಷಿ : ಆರಂಭದ ದಿನಗಳಲ್ಲೇ ಕಂಡಾಯ್ತಲ್ಲ ಸುಖ ಸಂಪದ ಎಲ್ಲಾನೂ. ಆರಂಭವೇ ಹೀಗಿರುವಾಗ ಇನ್ನು ಸುಖಾಂತ ಎಲ್ಲಿ?

ಪ್ರಭು : ಮುಂದೆ ಅದು ಬರಬಹುದು. ಅನೇಕ ವಿಘ್ನಗಳು ಒಳ್ಳೇದಾಗೋದ್ಕೆ ಬರ್ತವೆ.

ಮೀನಾಕ್ಷಿ : ಹಾಗೆ ಭಾವಿಸಿಕೊಳ್ಳಬೇಕಾ?

ಪ್ರಭು : ಮನಸ್ಸಿನಂತೆ ಮಾದೇವ ಅಂತ ನಾವು ಜೀವನದಲ್ಲಿ ಹೇಗೆ ಭಾವಿಸ್ತೀವೋ ಹಾಗೇ ಮುಂದೆ ಆಗೋದು.

ಮೀನಾಕ್ಷಿ : ನಾನು ನಿಮ್ಮ ಕೈ ಹಿಡಿಯಲಿಕ್ಕೆ ಮುಂಚೆ ಬೇಕಾದಷ್ಟು ಭಾವಿಸ್ಕೊಂಡಿದ್ದೆ. ಕನಸು ಕಂಡು ಎಚ್ಚರಗೊಂಡು ಸಂತೋಷ ಪಟ್ಕೊಂಡಿದ್ದೆ. ಆದ್ರೆ ಅದು ಕನಸಾಗಿಯೇ ಉಳೀತೇ ಹೊರತು ನನಸಾಗಲಿಲ್ಲ.

ಪ್ರಭು : ನೀನು ತುಂಬಾ ಉದ್ವೇಗಗೊಂಡಿದ್ದೀಯೆ?

ಮೀನಾಕ್ಷಿ : ಸನ್ನಿವೇಶ ಹಾಗ್ಮಾಡಿದೆ.

ಪ್ರಭು : ಜೀವನದಲ್ಲಿ ಇವೆಲ್ಲಾ ಇದ್ದದ್ದೇ. ಅವುಗಳನ್ನೆಲ್ಲಾ ಎದುರಿಸಬೇಕು. ಜೀವನ ಅಂದ ಮೇಲೆ ಹೋರಾಟ ಇದ್ದೇ ಇರೋದೇ... ನಾಲ್ಕು ದಿನ ಕಷ್ಟ. ನಾಲ್ಕು ದಿನ ಸುಖ.

ಮೀನಾಕ್ಷಿ : ಕಷ್ಟವೇನೋ ಕಂಡಿದ್ದೆ, ಆದ್ರೆ ಸುಖ... ನಾನು ಅದೊಂದುದಿನ ಕಂಡ ಕನಸು ಅಷ್ಟೇ. ಸಾಹುಕಾರಸಲ್ಲದೇ ಹೋದ್ರೂ ವಿದ್ಯಾವಂತನನ್ನು ಮದ್ವೆ ಆಗ್ತೀನಿ, ಪಟ್ಟಣದಲ್ಲಿ ಸುಖವಾಗಿ ಒಂದು ಮನೆ ಕಟ್ಟಿಕೊಂಡು, ಸಿನೆಮಾ-ನಾಟಕಗಳನ್ನು ನೋಡ್ಕೊಂಡು, ಪಾರ್ಕ್‌ನಲ್ಲಿ ಸುತ್ತಾಡಿಕೊಂಡು, ಬೇಕಾದ ಸೀರೆ, ಒಡವೆ ತೊಟ್ಟುಕೊಂಡು, ರುಚಿರುಚಿಯಾದ ತಿಂಡಿ ತಿಂದು, ಯಾರ್ಗೇನೂ ಕಡಿಮೆ ಇಲ್ಲ ಅಂತ ಇರಬೇಕು, ಗಂಡನೊಡನೆ ಸದಾ ನಗುನಗ್ತಾ ಇರಬೇಕು ಅಂತ ಆಸೆ ಇಟ್ಕೊಂಡಿದ್ದೆ. ಕನಸು ಕಂಡಿದ್ದೆ. ಅದು ನನಸಾಗಲಿಲ್ವಲ್ಲಾ ಅಂತ ನನಗೆ ದುಃಖವಾಗಿದೆ.

ಪ್ರಭು : ನನಗೇನು ಸಂತೋಷ ಅಂತ ತಿಳ್ಕೊಂಡಿದ್ದೀಯಾ?

ಶಂಕರ : ನನ್ಗೇನು ಸಂತೋಷ ಅಂತ ತಿಳ್ಕೊಂಡಿದ್ದೀರಾ?

ಪ್ರಭು : ನಿನ್ನಾಗಿರೋ ಕಷ್ಟ ಏನೋ ಶಂಕರ.

ಶಂಕರ : ಸುಖವಾಗಿದ್ರೆ ನಾನ್ಯಾಕೆ ಹೀಗನ್ನಿದ್ದೆ?

ಮೀನಾಕ್ಷಿ : ನಿನ್ನ ಸುಖಕ್ಕೆ ಅಡ್ಡಿ ಬಂದವರ್‍ಯಾರು?

ಶಂಕರ : ನೀವಿಬ್ರೇ... ಮಗ ಅಂತ ಪಡೆದ್ಬುಟ್ರಾಯ್ತು?

ಪ್ರಭು : ನೀನೊಬ್ಬನೇ ಅಲ್ಲ. ಇನ್ನೂ ನಾಲ್ಕು ಜನರಿದ್ದಾರೆ. ನಿನ್ನ ಒಡಹುಟ್ಟಿದವರು ಅಂತ ಗೊತ್ತಿಲ್ವೇ?

ಶಂಕರ : ಗೊತ್ತಿಲ್ದೇ ಏನು? ಅದ್ಕೇ ಹೇಳಿದ್ದು.

ಪ್ರಭು : ಹೌದು... ಈಗ ಅನ್ನಿಸ್ತಿದೆ.

ಶಂಕರ : ಅಟ್ಟಮೇಲೆ ಒಲೆ ಉರಿದರೆ ಏನು ಪ್ರಯೋಜ್ನ? ನಾನು ಮಂಜುಳ ಇಬ್ರೇ ಇದ್ದಿದ್ರೇ...

ಮೀನಾಕ್ಷಿ : ಬಹಳ ಚೆನ್ನಾಗಿತ್ತು. ಅದೇ ನಾನೂ ಹೊಡ್ಕೊಳ್ತಿದ್ದುದು.

ಶಂಕರ : ಆದ್ರೇನು ಮಾಡೋದು? ಆಗಬಾರದ್ದು ಆಗಿಹೋಗಿದೆ. ಆಗ಼್ೇ ನನ್ನನ್ನು ಓದಿಸಿದ್ದಿದ್ದರೆ? ನಾನಿಷ್ಟೊಂದು ಕಷ್ಟಪಡಬೇಕಾಗಿತ್ತೆ? ನಾನು ಎಷ್ಟೊಂದು ಕನಸಿನ ಗೋಪುರ ಕಟ್ಕೊಂಡಿದ್ದೆ? ದೊಡ್ಡ ಡಾಕ್ಟರ್ ಆಗಿ ಜನಸೇವೆ ಮಾಡಬೇಕು ಅನ್ತಿದ್ದೆ. ಎಸ್.ಎಸ್. ಎಲ್.ಸಿ. ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿದ್ದೆ.

ಪ್ರಭು : ಜನಸೇವೆ ಮಾಡೋದ್ಕೇ ಡಾಕ್ಟರ್ರೇ ಆಗಬೇಕೇ? ಅನೇಕ ರೀತಿಯಲ್ಲಿ ಸೇವೆ ಮಾಡಬಹುದು; ಮಾಡಿದ್ರಾಯ್ತು.

ಶಂಕರ : ಈಗಿನ ಕಾಲದಲ್ಲಿ ತುಂಬಾ ವಿದ್ಯಾವಂತರಿಗೇ ಕೆಲಸ ಸಿಕ್ಕೋದು ಕಷ್ಟವಾಗಿರುವಾಗ, ನಮ್ಮಂಥ ಬರೇ ಎಸ್.ಎಸ್.ಎಲ್.ಸಿ. ಓದಿರೋರ್ಗೇನು ಸಿಗುತ್ತೆ?

ಪ್ರಭು : ಎಷ್ಟೋ ಜನ ಓದದೇ ಬರೆಯದೇ ದೇಶ ಸೇವೆ ಸಲ್ಲಿಸಿಲ್ಲವೇ? ಸ್ವಯಂ ಉದ್ಯೋಗ ಮಾಡಿ ಮುಂದುವರಿಯೋ? ಸರಕಾರಿ ಚಾಕರೀನೇ ಯಾಕೆ? ಅದೇನೋ ಸುಖ, ಸ್ವರ್ಗ ಅಂತ ತಿಳ್ಕೋಬ್ಯಾಡ.

ಶಂಕರ : ಅದು ಗೊತ್ತಿದೆ. ಆದ್ರೆ, ನಮ್ಮ ವ್ಯವಹಾರಕ್ಕೆ ಬಂಡವಾಳ ಬೇಕಲ್ಲಪ್ಪ.

ಪ್ರಭು : ಏನೋ ಸ್ವಲ್ಪದಿಂದ ಮುಂದುವರಿದುಕೊಂಡು ಹೋಗಬೇಕು. ಈಗ್ಲೆ ಒಂದು ಐವತ್ತು ಸಾವಿರ ಕೊಡು ಅಂದ್ರೆ ನಾನೆಲ್ಲಿಂದ ತರಲಿ?

ಶಂಕರ : ಸಾವಿರ ರೂಪಾಯಿ ಕೊಡಿ. ಒಂದು ಬೀಡಿ ಅಂಗಡಿ ಹಾಕಿಕೊಂಡು ಕೂತ್ಕೋತೀನಿ.

ಪ್ರಭು : ಏನಾದರೂ ಮಾಡಬೇಕಪ್ಪಾ. ಹಾಸಿಗೆ ಇದ್ದಷ್ಟಕ್ಕೆ ಕಾಲು ಚಾಚಬೇಕು.

ಮೀನಾಕ್ಷಿ : ನೋಡಿದ್ರಾ. ನನ್ನ ಬಾಯ್ನಿಂದ ಬರೋ ಮಾತೇ ಸರಿ ಇಲ್ಲ ಅಂದ್ರಿ. ಈಗ ಮಗನ ಬಾಯ್ನಿಂದ್ಲೂ ಅದೇ ರೀತಿ ಬಂತು.

ಶಂಕರ : ಎಲ್ಲಾ ರೀತೀಲೂ ಸರಿಯಾಗಿದ್ದಿದ್ರೆ ಯಾಕಾರೀತಿ ಮಾತು ಬರ್ತಿತ್ತು.

ಪ್ರಭು : ಶಂಕರ, ಬಾಯಿಗೆ ಬಂದಾಗೆಲ್ಲಾ ಮಾತಾಡಬೇಡ. ಈ ಪ್ರಪಂಚದಲ್ಲಿ ಯಾರೂ ಕೂಡ ಸರಿಯಾಗಿರಲಿಕ್ಕೆ ಸಾಧ್ಯವಿಲ್ಲ. ಒಬ್ಬ ಮನುಷ್ಯನನ್ನು ಎಲ್ಲಾ ವಿಧದಲ್ಲೂ ತೃಪ್ತಿಪಡಿಸಲಿಕ್ಕೆ ಸಾಧ್ಯವಿಲ್ಲ. ಅಂದಮೇಲೆ ನಿನ್ನ ಮಾತೇನು?

ಮೀನಾಕ್ಷಿ : ಬರೇ ಆಧ್ಯಾತ್ಮದ ಮಾತುಗಳು ಸಾಕು ಸುಮ್ನಿರಿ.

ಪ್ರಭು : ಜೀವನ ನೋಡಿ ಸಾಕಾದವ್ರಿಗೆ ಉಳಿದಿರೋದೇ ಆಧ್ಯಾತ್ಮ ಅನ್ನೋದು ಗೊತ್ತಿದ್ಯೇನೊ?

ಮೀನಾಕ್ಷಿ : ಈಗ ಗೊತ್ತು ಮಾಡ್ತಾ ಇದ್ದೀರಿ?

ಪ್ರಭು : ಮನುಷ್ಯ ಅಂದಮೇಲೆ ಅವೆಲ್ಲಾ ಗೊತ್ತಾಗಲೇಬೇಕು.

ಮಂಜುಳ : ಅದ್ಕೇ ಗೊತ್ತು ಮಾಡಿಕೊಟ್ಟಿರೋದು.

ಪ್ರಭು : ಹೆಂಡ್ತಿ ವರದಿ ಆಯ್ತು, ಮಗನದಾಯ್ತು. ಈಗ ಮಗಳು ಮಂಜುಳಾದ್ದು ಶುರುವಾಯ್ತೇ.

ಮಂಜುಳ : ವೈದ್ಯೇಶ್ವರ ಅಪ್ಪ ನೀವು, ನಿಮಗೆ ವರದಿ ಒಪ್ಪಿಸ್ತಾ ಇದ್ದೀವಿ ತಪ್ಪೇನು?

ಪ್ರಭು : ನಾನು ತಪ್ಪು ಅಂತ ಹೇಳಲಿಲ್ಲಮ್ಮಾ ಏನು ಉತ್ತರ ಹೇಳಬೇಕು ಅನ್ನೋದನ್ನ ಆಲೋಚಿಸ್ತಾ ಇದ್ದೀನಿ.

ಮಂಜುಳ : ಉತ್ತರ ಹೇಳಿ ಹಾರಿಸೋದರಲ್ಲಿ ನೀವು ತುಂಬಾ ಜಾಣ್ರಪ್ಪ.

ಪ್ರಭು : ಮನುಷ್ಯ ಯಾವುದರಲ್ಲಾದ್ರೂ ಜಾಣನಾಗಿರಲೇಬೇಕಲ್ಲಮ್ಮಾ...

ಶಂಕರ : ನಮ್ಮ ಅಭ್ಯುದಯಕ್ಕೆ ಮಾತ್ರ ಜಾಣ್ತನ ಮಾಡಲಿಲ್ವೇ?

ಪ್ರಭು : ಮಾಡ್ಲಿಕ್ಕೆ ಎಷ್ಟೆಷ್ಟೋ ಪ್ರಯತ್ನ ಮಾಡ್ತಿದ್ದೀನಿ ಕಣೋ ಆದ್ರೆ ಸಾಧ್ಯವಾಗ್ತಾ ಇಲ್ಲ.

ಮಂಜುಳ : ನಿಮಗಿಂತ ಕಮ್ಮಿ ಸಂಬಳ ತೆಗೆಯೋರು ಎಷ್ಟು ಸುಖವಾಗಿದ್ದಾರೆ? ಅವರ ಸೀರೆ ಏನು ರವಿಕೆ ಏನು? ಚಿನ್ನ ಬಣ್ಣ ಏನು? ಊಟ ತಿಂಡಿ ಏನು? ಸಿನಿಮಾ, ನಾಟ್ಕ ನೋಡೋದೇನು? ಕಾಲೇಜು ಓದೋದೇನು? ನಾವು ಇದ್ದೀವಿ ಧರೆಗೆ ಹೊರೆಯಾಗಿ.

ಪ್ರಭು : ನೋಡಮ್ಮ ನಿನಗೆ ಪ್ರಪಂಚದ ಅರಿವು ಇನ್ನೂ ಆಗಿಲ್ಲ. ಅವರೆಲ್ಲಾ ಅನೈತಿಕವಾಗಿ ಸಂಪಾದ್ನೆ ಮಾಡಿ ಸುಖ ತರ್ತಾ ಇರಬಹುದು. ಆದರೆ ಅದೆಲ್ಲಾ ಕ್ಷಣಿಕ. ನಾಳೆ ದಿನ ಅವರ ಜೀವನ ಹೀಗೆ ಮುಂದುವರಿಯುತ್ತೆ

ಅಂತ ತಿಳ್ಕೊಳ್ಬೇಡ. ನಾನು ಅನೈತಿಕವಾಗಿ ಸಂಪಾದ್ನೆ ಮಾಡಬಹುದು. ಆದ್ರೆ ಹಾಗೆ ಮಾಡಿ ಸುಖ ಜೀವನ ಮಾಡೋದು ನನಗೆ ಹಾಗೋಲ್ಲ. ಈ ಪ್ರಪಂಚದಲ್ಲಿ ಯಾರೂ ಸಾಹುಕಾರರಾಗಿ ಇರೋಕಾಗೋಲ್ಲಮ್ಮ ತುಂಬಾ ಕಷ್ಟಪಟ್ಟರೆ ಹಿಟ್ಟು-ಬಟ್ಟೆ ಒಂದು ನೆಲೆ ಮಾಡಬಹುದು, ಅದಕ್ಕಿಂತ ಹೆಚ್ಚಿನ ವೈಭವದ ಜೀವನ ಮಾಡಬೇಕು ಅಂದ್ರೆ ಮೋಸ ಮಾಡಬೇಕು. ಲಂಚ ಹೊಡಿಯಬೇಕು. ಅದ್ರೆ ಅದು ಕ್ಷೇಮವಲ್ಲಮ್ಮ.

ಮಂಜುಳ : ಏನೋ ನನ್ನನ್ನು ಎಲ್ಲರಂತೆ ಕಾಲೇಜಿಗೆ ಸೇರಿಸಿದ್ರೆ ಓದಿ ಯಾವುದಾದ್ರೂ ಕೆಲಸಕ್ಕಾದ್ರೂ ಹೋಗಬಹುದಾಗಿತ್ತು. ಸಂಬಳ ಬಂದಿದ್ರೆ ನಿಮಗೆ ಸಹಾಯ ಮಾಡಬಹುದಿತ್ತಲ್ಲಾ ಅಂತ ಯೋಚನೆ ನನಗೆ.

ಪ್ರಭು : ನಿನ್ನ ಮನಸ್ಸು ಬಹಳ ದೊಡ್ಡದಮ್ಮ ದೇವರು ಹ್ಯಾಗ್‌ಮಾಡ್ತಾನೋ ನೋಡೋಣ.

ಶಂಕರ : ಈಗ್ಲೇ ಓದ್ದೇ ಇರೋದ್ನ ಮುಂದೆ ಓದೋ ಹಾಗೆ ಮಾಡ್ತಾನ್ಯೇ ದೇವರು ಬಿಡ್ಯಪ್ಪಾ... ಈ ಮನೆಯಲ್ಲಿ ಒಬ್ಬರಿಗಲ್ಲಾ ಎಲ್ಲರಿಗೂ ಒಂದೊಂದು ರೀತಿಯ ಸಮಸ್ಯೆಯೇ. ಸಮಸ್ಯೆಯ ಆಗರವೇ ನಮ್ಮ ಮನೆ.

ಪ್ರಭು : ಅದ್ಕೆಲ್ಲಾ ಕಾರಣ ನಾನೇ ಅಂತ ಒಪ್ಪಿಕೊಳ್ತೀನಿ...

ಮೀನಾಕ್ಷಿ : ಅಂದ ಮೇಲೆ ಇನ್ನೇನು ಮಾತಿದೆ?

ಶಂಕರ : ಮುಗಿದುಹೋಯ್ತು. ನಡೀರಿ... ನಡೀರಿ...

(ನಿರಾಶಾದಾಯಕ ಸಂಗೀತ)

## ತರಂಗ–೨

ಪ್ರಭು : ಹೆಂಡತಿಯಾಗಿ ಕೈ ಹಿಡಿದು ಸುಖಪಡಲಿಲ್ಲ ಮೀನಾಕ್ಷಿ ನಿಜ. ಆಕೆ ನನ್ನ ಮೇಲೆ ಆರೋಪಿಸುವುದು ತಪ್ಪೇ? ಮಕ್ಕಳು ತಮಗೆ ಸುಖ ಸಿಗಲಿಲ್ಲ ಅಂತ ಹೇಳಿ ಆರೋಪ ಹೊರಿಸುವುದರಲ್ಲಿ ತಪ್ಪೇ, ಇಷ್ಟೆಲ್ಲಾ ಆರೋಪಕ್ಕೆ ಗುರಿಯಾದ ನನ್ನದೇ ತಪ್ಪು ಅಲ್ವೇ? ಯಾಕಾದ್ರೂ ಹೀಗ್ ಮಾಡ್ಕೊಂಡೆ? ಎಲ್ಲರಿಗೂ ಉತ್ತರ ಹೇಳಿ ಹೇಳಿ ಸಾಕಾಗೋಗಿದೆ... ಯಾಕಾದ್ರೂ ಮದ್ವೆ ಆದ್ನೋ. ಇಷ್ಟೊಂದು ಮಕ್ಕಳು ಮಾಡ್ಕೊಂಡ್ನೇ. ನಾನು ಮಾಡಿದ ತಪ್ಪಿಗೆ ನಾನೇ ಅನುಭೋಗಿಸಬೇಕು. "ಉಪ್ಪು ತಿಂದವ ನೀರು ಕುಡೀಲೇ ಬೇಕಲ್ವೇ?"

* * *

ಮೀನಾಕ್ಷಿ : ಮದುವೆಯಂತೆ, ಗಂಡನಂತೆ, ಮಕ್ಕಳಂತೆ, ಸಂಸಾರವಂತೆ ಯಾರು ಮಾಡಿದ್ರೋ? ಇದ್ನೆಲ್ಲಾ ನೋಡಿದ್ರೆ ನಾನು ಮದುವೆ ಆಗ್ದೇ ಹಾಗೇ

ಇದ್ದಿದ್ದರೆ ಚೆನ್ನಾಗಿತ್ತು ಅನ್ನಿಸ್ತದೆ. ಹೋಗ್ಲಿ ಮದುವೆ ಆಗಿದ್ರೂ ಮಕ್ಕಳಾಗದೇ ಇದ್ದಿದ್ದರೂ ಚೆನ್ನಾಗಿತ್ತು. ಹೋಗ್ಲಿ ಮಕ್ಕಳಿಲ್ಲದೆ ಹೋದ್ರೆ ಬಂಜೆ ಅನ್ತಿದ್ರು. ಒಂದೋ ಎರಡೋ ಇದ್ದಿದ್ರೆ ಎಷ್ಟೋ ವಾಸಿಯಾಗಿತ್ತು ಅನ್ನಿಸ್ತದೆ. ಆದ್ರೂ ಈಗ ಯೋಚನೆ ಮಾಡೋದ್ರಲ್ಲಿ ಅರ್ಥವಿಲ್ಲ. ಯಾರ ಮೇಲೆ ಆರೋಪಿಸುವುದರಲ್ಲಿ ಏನು ಪ್ರಯೋಜನ?

ಶಂಕರ : ಏನು ಪ್ರಪಂಚಾನೋ... ಸುಖ ಅನ್ನೋದು ಕೆಲವು ಜನರ ಮಕ್ಕಳಿಗೇ ಸೀಮಿತವೇನು? ದೇವರು ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ ಹಾಕಿದ್ದಾನೋ? ಅವರು ತಂದ ಪುಣ್ಯ ಏನು? ನಾವು ಮಾಡಿದ ಪಾಪವೇನು? ದೊಡ್ಡ ಬಂಗಲೇ, ಕಾರು, ಅಧಿಕಾರ... ಇನ್ನೂ ಏನೇನು ಸುಖ ಇರಬೇಕೋ ಅವೆಲ್ಲಾ. ನಮಗೆ ಹೊಟ್ಟೆಗಿದ್ರೆ ಬಟ್ಟೆಗಿಲ್ಲ, ಬಟ್ಟೆಗಿದ್ರೆ ಹೊಟ್ಟೆಗಿಲ್ಲ. ನಾವು ಇಂಥವ್ರ ಹೊಟ್ಟೇಲಿ ಹುಟ್ಟಬೇಕಾಯ್ತಲ್ಲಾ? ಬರೇ ಕಷ್ಟಾನೇ ಅನುಭವಿಸಬೇಕಾಯ್ತೇ?

(ದುಃಖ ಸಂಗೀತ)

* * *

ಮಂಜುಳ : ತಂದೆ-ತಾಯಿ, ಮಕ್ಕಳು, ಸಂಸಾರ, ಇವೆಲ್ಲಾ ಯಾಕಾದ್ರೂ ಮಾಡಿದ್ನೋ ಆ ದೇವರು. ನಮ್ಮಂಥ ಸಂಸಾರ ನೋಡಿಯೇ 'ಸಂಸಾರ ಸಾಗರ' ಅಂದಿರಬೇಕು. ಅನೇಕರು ಸನ್ಯಾಸತ್ವ ಸ್ವೀಕರಿಸಿದ್ದು ಇದಕ್ಕೆ ಇರಬೇಕು. ಹುಟ್ಟಿದ ಮೇಲೆ ನಾಲ್ಕು ದಿನ ಸಂತೋಷವಾಗಿ ನಗ್‌ನಗ್ತಾ ಕಾಲ ಕಳೀದೇ ಹೋದ ಮೇಲೆ ಏನು ಪ್ರಯೋಜ್ನ? ಚಿಕ್ಕಪುಟ್ಟ ವಯಸ್ಸಿನಲ್ಲಿ ನಾವು ಬೇರೆಯವರಂತೆ ಇರಬೇಕು ಅಂತ ಆಸೆ-ಆಕಾಂಕ್ಷೆ ಹೊತ್ತಿರುವುದು ತಪ್ಪೇ? ಅದನ್ನು ತಂದೆ-ತಾಯಿಯವರು ಆದಷ್ಟು ಒದಗಿಸದೇ ಹೋದ್ರೆ ನಮಗೂ ಬೇಜಾರಾಗೋಲ್ವೇ?

(ಮಧ್ಯಂತರ ಸಂಗೀತ)

* * *

ಶಾಂತಿ : ಏನು ಮೀನಾಕ್ಷಿ ಅಪರೂಪವಾಗ್ಬಿಟ್ಟೆ?

ಮೀನಾಕ್ಷಿ : ಏನಮ್ಮಾ ಮಾಡೋದು? ನಿನ್ನ ಹಾಗೆ ನಾನು ಆರಾಮವಾಗಿ ಹಾರಾಡ್ಕೊಂಡಿರೋ ಪುಣ್ಯ ತಂದಿಲ್ಲಮ್ಮ. ಬೆಳಗೂ ರಾತ್ರಿ ಮಕ್ಕಳುಮರಿ ಸಂಸಾರ ನೋಡ್ಕಂಡು ಹೋಗೋದ್ರಲ್ಲೇ ಮುಗಿದು ಹೋಗುತ್ತೆ. ಈ ಹೊತ್ತೂ ನಮ್ಮ ಯಜಮಾನ್ರೇ ತರಕಾರಿ ತರಬೇಕಾಗಿತ್ತು. ಸೌದೆ ಹೊಡೆಯಲಿಕ್ಕೆ ಹೋಗಿ ಕಾಲು ಕೊಚ್ಚಿಕೊಂಡು ನೋವು ಅಂತ ಮಲಗವ್ರೇ. ಅದ್ಕೇ ನಾನೇ ಬರಬೇಕಾಯ್ತು. ಏನಮ್ಮಾ ನೀನು, ನಿಮ್ಮವರು, ಮಕ್ಕಳು ಎಲ್ಲರೂ ಚೆನ್ನಾಗಿದ್ದಾರಾ?

ಶಾಂತಿ : ಏನೋ ದೊಡ್ಡವರ ಆಶೀರ್ವಾದದಿಂದ ಚೆನ್ನಾಗಿದ್ದರೆ. ನಿನ್ನನ್ನು ನೋಡಲಿಕ್ಕಾಗೊಲ್ವಲ್ಲ? ಮಕ್ಕಳು ಹ್ಯಾಗಿದ್ದಾರೆ? ಎಷ್ಟಿದ್ದಾರೆ?

ಮೀನಾಕ್ಷಿ : ನಾಲ್ಕು ಇವ್ವಮ್ಮ. ಚಂದಾಗಿರೋದ್ ಮಾತ್ರ ಕೇಳಬೇಡ, ಇದ್ದಾರೆ ಅಷ್ಟೆ. ಅಂದಹಾಗೆ ನಿನಗೆಷ್ಟು ಮಕ್ಕಳು?

ಶಾಂತಿ : ಇಬ್ರೇ... ಎರಡೂ ಗಂಡೇ...

ಮೀನಾಕ್ಷಿ : ಇನ್ನೊಂದು ಹೆಣ್ಣಾದ್ರೆ ಸಾಕು ಬಿಡು.

ಶಾಂತಿ : ಯಾಕೆ ನಿನ್ನ ಹಾಗೇ ಕಷ್ಟ ಪಡೋಣ್ವ?

ಮೀನಾಕ್ಷಿ : ಕೀರ್ತಿಗಾದ್ರೆ, ಆರತಿಗೆ ಬೇಡ್ವೇ?

ಶಾಂತಿ : ಆರತಿ, ಕೀರುತಿ ಎಲ್ಲಕ್ಕೂ ಅವ್ರೇ ಸಾಕಮ್ಮ.

ಮೀನಾಕ್ಷಿ : ಅಂತೂ ಒಳ್ಳೇ ನಿರ್ಧಾರ. ನಾನೂ ಇದ್ದೀನಿ ನೋಡಿ ದಡ್ಡಿ, ಗಂಡು ಬೇಕು ಅಂತ ಆಸೆಪಟ್ಟು, ಹೀಗಾಯ್ತು.

ಶಾಂತಿ : ಹಾಗಾದ್ರೆ, ಇನ್ನೊಂದು ಆಗಬೇಕಾಗಿದೆ.

ಮೀನಾಕ್ಷಿ : ಸದ್ಯ ಈಗ್ಲೇ ಸಾಕಾಗೋಗಿದೆ. ಇವ್ರೇ ಹೆಚ್ಚಲ್ಲಪ್ಪ ಅನ್ನೋ ಸ್ಥಿತಿ ಆಗಿದೆ, ಇನ್ನೊಂದು ಬೇಕಾ ಅಂತ ನೀನು ಕೇಳ್ತೀಯಾ? ಏನು ತಮಾಷೆ ಮಾಡ್ತೀಯೋ ಮಾಡಮ್ಮಾ.

ಶಾಂತಿ : ತಮಾಷೆಯಲ್ಲಮ್ಮ ನಿನ್ನ ಮೂಢನಂಬಿಕೆ ಎಷ್ಟಿದೆ ಅಂತ ತಿಳಿಯಲಿಕ್ಕೆ ಕೇಳ್ದೆ ಅಷ್ಟೇ. ಪಾಪ ನಿನ್ನ ನೋಡಿದ್ರೆ ನಂಗೆ ಅಯ್ಯೋ ಅನ್ನಿಸುತ್ತಮ್ಮ.

ಮೀನಾಕ್ಷಿ : ಇನ್ನೇನನ್ನಿಸಿದ್ರೇನು? ಎಲ್ಲಾ ಮಿಂಚಿ ಹೋದ ಕಾರ್ಯ.

ಶಾಂತಿ : ಒಂದು ದಿನ ಬಾರಮ್ಮ ಮನೆಗೆ. ಬಿಡುವಾಗಿ ಕೂತ್ಕೊಂಡ ಮಾತಾಡೋಣ.

ಮೀನಾಕ್ಷಿ : ಬಿಡುವೆಲ್ಲಿ? ಬರೋದೆಲ್ಲಿ? ಮಾತಾಡೋದೆಲ್ಲಿ? ನಮ್ಮ ಕಷ್ಟ ನಿನಗೇಳಿ ನಿನ್ನ ಮನಸ್ಸಿಗೇಕೆ ಅಯ್ಯೋ ಅನ್ನಿಸ್ಲಿ. ನಾವು ತಂದದ್ನ ನಾವೇ ಅನುಭೋಗಿಸಬೇಕಮ್ಮಾ. ಬಿಡು.

ಶಾಂತಿ : ಹಾಗಂದ್ರಾಗೋಲ್ಲ ಮೀನಾಕ್ಷಿ, ನಮ್ಮ ಮನಸ್ಸಿನಲ್ಲಿರೋ ದುಃಖಾನಾ ಬೇರೆಯವರಲ್ಲಿ ತೋಡಿಕೊಂಡಾಗ್ಲೇ ಸಮಾಧಾನ.

ಮೀನಾಕ್ಷಿ : ನೋಡೋಣ ಬರ್ತೀನಿ.

ಶಾಂತಿ : ಏನೋ ಅಮ್ಮ ನಿನ್ನ ನೋಡಲಿಕ್ಕಾಗೋಲ್ಲ. ತರಕಾರೀನಾದ್ರೂ ಚೆನ್ನಾಗಿ ತಿನ್ನು.

ಮೀನಾಕ್ಷಿ : ತರಕಾರಿ ತಿನ್ನೋ ಋಣವೂ ಎಷ್ಟು ದಿನ ಇದ್ಯೋ ಏನೋ ನೋಡೋಣ. ಆಗಲೂ ಮಕ್ಕಳು ಇದೇನೂಟಾನೋ, ಇದೇನು ತಿಂಡೀನೋ ಅಂತ

ದಿನಾ ಒಂದಲ್ಲ ಒಂದು ರೀತಿಯಲ್ಲಿ ಜಗಳ ಆಡ್ತಾನೇ ಇರ್ತಾರೇ. ಅದ್ಕೇ ಏನಾದ್ರೂ ಒಂದು ತರಕಾರಿ ತಕ್ಕೊಂಡೋಗೋಣ ಅಂತ ಬಂದೆ.

ಶಾಂತಿ : ಏನಾದ್ರೂ ಮಾಡಬೇಕಲ್ಲಾ. ನಮ್ಮ ಮನೆಗೂ ಬಂದು ಸುಮಾರು ದಿನಗಳೇ ಆದ್ವು, ಬಾಮ್ಮಾ ಈ ಹೊತ್ತು.

ಮೀನಾಕ್ಷಿ : ಈಹೊತ್ತಾಗಲ್ಲಮ್ಮ. ಇನ್ನೊಂದು ದಿನ ಬರ್ತೇನೆ.

(ದುಃಖ ಸಂಗೀತ)

* * *

ಶಾಂತಿ : ಪಾಪ, ಮೀನಾಕ್ಷಿ ನೋಡಲಿಕ್ಕಾಗೋಲ್ಲ. ಸಂಸಾರದ ಜಂಜಾಟದಲ್ಲಿ ಎಷ್ಟು ನೊಂದುಕೊಂಡಿದ್ದಾಳೆ. ನನಗೂ ಅವಳಿಗೂ ಒಂದೇ ಸಾರಿ ಮದುವೆ ಆದದ್ದು. ಇಬ್ಬರದೂ ಹೆಚ್ಚು ಕಡಿಮೆ ಒಂದೇ ವಯಸ್ಸು. ಆದ್ರೆ ಮೀನಾಕ್ಷಿ ನನಗಿಂತ ತುಂಬಾ ವಯಸ್ಸಾದವಳಾಗಿ ಕಾಣಿಸ್ತಾಳೆ. ಪಾಪ ಅವಳಿಗಿನ್ನಾರೂ ಮಾರ್ಗದರ್ಶಕರಿಲ್ಲದೆ ಹೀಗಾದ್ಳು ಅಂತ ಕಾಣುತ್ತೆ. ಈಗ್ಲೂ ಕಾಲ ಇದೆ. ಮಕ್ಕಳಾಗೋದ್ನ ತಪ್ಪಿಸ್ಕೋ ಅಂತ ಹೇಳಬಹುದು. ನಮ್ಮ ಮನೆಗೆ ಬಂದಾಗ ಹೇಳ್ತೀನಿ.

(ದುಃಖ ಸಂಗೀತ)

* * *

ಮೀನಾಕ್ಷಿ : ಶಾಂತಿ ಅನ್ನೋದ್ಕು ಅದೇನ್ ಶಾಂತಿ. ಮನೆಯಲ್ಲೂ ಶಾಂತಿ. ನೆಮ್ಮದಿಯ ಸಂಸಾರ. ಅವಳ ಮಾತುಕತೆ, ನಡೆ-ನುಡಿ ಎಲ್ಲಾ ಶಾಂತ. ಜೊತೆಯಿಂದಿದ್ದಾಗ್ಲೂ ಇದೇ ರೀತಿ ಇದ್ಲು. ಈಗ್ಲೂ ಅದೇ ಮನೋಭಾವ ಬೆಳೆಸ್ಕೊಂಡಿದ್ದಾಳೆ. ಎರಡು ಮಕ್ಕಳು, ನೆಮ್ಮದಿಯಾದ ಸಂಸಾರ. ನಮ್ಮಂಥವ್ರು ಅವಳನ್ನು ನೋಡಿ ಬುದ್ಧಿ ಕಲಿತ್ಕೋಬೇಕು. ಆದ್ರೂ ತುಂಬಾ ನಿಧಾನವಾಯ್ತು.

(ನಿರಾಶಾದಾಯಕ ಸಂಗೀತ)

* * *

## ತರಂಗ-೩

ಶಾಂತಿ : ಏನಪ್ಪಾ ಶಂಕರ ಎಲ್ಲಿದ್ದೀಯೇ? ಏನು ಮಾಡ್ತಾ ಇದ್ದೀಯಾ?

ಶಂಕರ : ಇಲ್ಲೇ ಇದ್ದೀನಿ. ಏನೋ ಹೊಟ್ಟೆಪಾಡಿಗೆ ಒಂದು ಪುಟ್ಟ ಅಂಗಡಿ ಇಟ್ಟಿದ್ದೀನಿ. ನಿಮ್ಮ ಬಸವರಾಜು ಎಲ್ಲಿದ್ದಾನೆ? ಏನು ಮಾಡ್ತಿದ್ದಾನೆ?

ಶಾಂತಿ : ಅವನು ಮೈಸೂರಲ್ಲಿದ್ದಾನೆ. ಎಂ.ಎ.ಓದ್ತಾ ಇದ್ದಾನೆ.

ಶಂಕರ : ಒಳ್ಳೆ ಪುಣ್ಯವಂತ.

ಶಾಂತಿ : ವ್ಯಾಪಾರ ಹ್ಯಾಗಪ್ಪಾ?

ಶಂಕರ : ಪುಟ್ಟ ಅಂಗಡೀಲೆ ವ್ಯಾಪಾರ ಹ್ಯಾಗೆ ಅಂತೇಳ್ಲಿ? ಈ ಹೊತ್ತಿದ್ದ ಬೆಲೆ ನಾಳೆಗಿಲ್ಲ. ಒಂದೊಂದು ಸಾರಿ ಸ್ವಲ್ಪ ಲಾಭವೂ ಬರುತ್ತೆ, ಒಂದೊಂದು ಸಾರಿ ನಷ್ಟವೂ ಆಗುತ್ತೆ. ನಮ್ಮದು ಜುಜುಬಿ ವ್ಯಾಪಾರ ಬಿಡಿ.

ಶಾಂತಿ : ಶಂಕರ ಜೀವನದಲ್ಲಿ ಆಶಾವಾದಿಯಾಗಿರಬೇಕು. ಅದಕ್ಕಾಗಿ ಶ್ರಮ ಪಡಬೇಕು. ಮೊದ್ಲೆ ನಿರಾಶುವಾದಿಯಾದ್ರೆ ಹ್ಯಾಗೆ?

ಶಂಕರ : ನನ್ನಾಸೆಗಿಂತ, ನಾನು ಕಟ್ಟಿಕೊಂಡಿದ್ದ ಕನಸ್ಗಳ್ಗಿಂತ, ಏನೋ ನಾವೂ ಆಶಾವಾದಿಗಳಾಗಿ ಏನೇನೋ ಆಗಬೇಕು, ಏನೇನೋ ಮಾಡಬೇಕು ಅಂತ ಇರ್ತೀವಿ. ಅವೆಲ್ಲಾ ನಡೀಬೇಕಲ್ಲಾ. ನಮ್ಮ ನಮ್ಮ ಹಣೆಯಲ್ಲಿ ಎಷ್ಟೆಷ್ಟು ಬರೆದಿದ್ಯೊ ಅಷ್ಟೇ!

ಬಸವರಾಜು : ನಾನು ಅದನ್ನೊಪ್ಪಲ್ಲ. ಮನುಷ್ಯ ಪ್ರಯತ್ನಕ್ಕಿಂತ ಬೇರೊಂದು ಇದ್ಯೇ? ಛಲ ಬೇಕು, ಸಾಧಿಸಬೇಕು ಅಂದ್ರೆ ಸಾಧಿಸಬೇಕು.

ಶಂಕರ : ಸಾಧಿಸಬೇಕು ಅನ್ನೋ ಛಲ ಇದ್ರೂ ಅದಕ್ಕೆ ಪ್ರೋತ್ಸಾಹ ಇಲ್ವಲ್ಲ. ಬಸವರಾಜು ಏನು ಮಾಡ್ಲಿ? ಡಾಕ್ಟರೋ, ಇಂಜನಿಯರೋ ಆಗಬೇಕು ಅಂತ ಆಸೆ ಇಟ್ಕೊಂಡಿದ್ದೆ. ಅದು ನಡೀಲಿಲ್ವಲ್ಲ. ಫಸ್ಟ್‌ಕ್ಲಾಸ್‌ನಲ್ಲೇ ಪಾಸ್ ಮಾಡಿಕೊಂಡೆ ಎಸ್.ಎಸ್.ಎಲ್.ಸಿ.ನ ಏನು ಪ್ರಯೋಜನ? ತಂದೆಯವರು ಸಂಸಾರ ಸಾಗಿಸೋದೆ ಕಷ್ಟವಾಗಿರುವಾಗ ನನ್ನ ಓದಿಸ್ಲಿಕ್ಕೆ ಆಗೋಲ್ಲ ಅಂತ ಕಣ್ಣೀರಾಕ್ಕೊಂಡ್ರು. ತಾಯಿಯವರಂತೂ ಹಗಲೂ ಇರಳು ನನ್ನದೇ ಚಿಂತೇಲಿ ಇನ್ನೂ ಕೊರಗ್ತಾನೆ ಇದ್ದಾರೆ. ಆದ್ರೆ ಅವರೂ ಏನು ಮಾಡ್ಲಿಕ್ಕಾಗದೆ ಸುಮ್ಮನಿದ್ದಾರೆ.

ಬಸವರಾಜು : ಎಷ್ಟೋ ಜನ ಓದಲಾರೆ ಅಂತಾರೆ, ಅವರಿಗೆ ಸೌಕರ್ಯವೆಲ್ಲಾ ಇರುತ್ತೆ, ನಿನ್ನಂಥವ್ರು ಓದಬೇಕು ಅನ್ತೀರಿ, ಸೌಕರ್ಯ ಏನೂ ಇಲ್ಲ. ಗಾದೆ ಹೇಳುವಂಗೆ 'ಹಲ್ಲಿದ್ದವರಿಗೆ ಕಡ್ಲೆ ಇಲ್ಲ, ಕಡ್ಲೆ ಇದ್ದವರಿಗೆ ಹಲ್ಲಿಲ್ಲ' ಅಂದತಾಯ್ತು. ನಿನಗೇನುತ್ತರ ಹೇಳಬೇಕು ಅನ್ನೋದೆ ನನಗೆ ಗೊತ್ತಾಗ್ತಿಲ್ಲ.

ಶಂಕರ : ಪಾಪ, ನೀನೇನು ಮಾಡ್ತಿಯಾ? ಮಾಡ್ಬೇಕಾದವರು ನಮ್ಮ ತಂದೆ-ತಾಯಿಗಳು. ಆದ್ರೆ ಅದು ಅವರಿಗೆ ಅನಿವಾರ್ಯವಾಗಿ ಆಗ್ಲಿಲ್ಲ ಬಿಡು.

ಬಸವ : ಹೋಗ್ಲಿ ಬಾರಯ್ಯ, ಕಾಫಿನಾದ್ರೂ ಕುಡಿದು ಹೋಗುವೆಯಂತೆ.

ಶಂಕರ : ನಮ್ಮ ಸ್ನೇಹವಾದ್ರೂ ವೃದ್ಧಿಯಾಗಲಿ, ನಡೆ... ನಡೆ... ಅಂತೂ ಎಂ.ಎ ಓದಿದ್ರೂ ನನ್ನಂಥ ವ್ಯಾಪಾರಿಗಳನ್ನು ಸ್ನೇಹಿತ ಅಂತ ಪರಿಗಣಿಸ್ತೆಯಲ್ಲಾ.

ಶಾಂತಿ : ವೃತ್ತಿ ಏನಾದ್ರೇನಂತೆ? ಸ್ವಯಂ ಉದ್ಯೋಗ ಒಳ್ಳೆಯದು. ಯಾವನ ಹಂಗೂ ಇಲ್ಲ. ಸ್ವಚ್ಛಂದವಾಗಿ ಹಕ್ಕಿಯಾಗೆ ಹಾರಾಡಿಕೊಂಡು ಎಷ್ಟು ಬೇಕೋ ಅಷ್ಟು

ಸಂಪಾದ್ನೆ ಮಾಡಿಕೊಂಡು ಬೇಕಾದ್ರೆ ವ್ಯಾಪಾರ ಮಾಡಬಹುದು. ಇಲ್ಲದೇ ಹೋದ್ರೆ ಬಾಗಿಲು ಮುಚ್ಚಿ ಆರಾಮವಾಗಿರಬಹುದು.

ಶಂಕರ : ಅದಂತೂ ಒಂದು ರೀತೀಲಿ ನಿಜವೇ ಅನ್ನಿ.

ಶಾಂತಿ : ಪಾಪ, ಶಂಕರ ಬುದ್ಧಿವಂತ. ಅವನ ಆಸೆ ಎಷ್ಟೊಂದು ಕಮರಿಹೋಯ್ತು. ಓದಿದ್ರೆ ಬಸವರಾಜುನ್ನ ಮೀರಿಸ್ತಿದ್ದ. ಆದ್ರೆ ಸಂಸಾರ ಆತನಿಗೆ ಎಲ್ಲಾನೂ ಅಡ್ಡಿ ಮಾಡಿಬಿಟ್ಟೋ... ಶಂಕರನ ಮುಖ ನೋಡಿದ್ರೆ ಅಯ್ಯೋ ಅನ್ನಿಸುತ್ತೆ.

ಶಂಕರ : ಬಸವರಾಜ ಎಷ್ಟೊಂದು ಸೌಮ್ಯ ಸ್ವಭಾವದವ. ವಿದ್ಯೆಗೆ ತಕ್ಕ ವಿನಯ. ಈತ ಇನ್ನೂ ಓದ್ತಾನೆ. ದೊಡ್ಡ ಅಂತಸ್ತು ಏರ್ತಾನೆ. ಕೀರ್ತೀನೂ ಪಡೀತಾನೆ. ಅವನ ನಡೆ-ನುಡಿ ನೋಡಿದ್ರೆ ನನಗೆ ತುಂಬಾ ಸಂತೋಷವಾಗುತ್ತೆ. ಒಳ್ಳೆ ಪರಿಸರದಲ್ಲಿ ಬೆಳೆದ. ಒಳ್ಳೇತನವನ್ನು ರೂಢಿಸ್ಕೊಂಡಿದ್ದಾನೆ. ನಿಜವಾಗ್ಲೂ ತಂದೆಯಾದವನಿಗೆ ಹೆಮ್ಮೆಯಾಗುತ್ತೆ. ತಂದೆ-ತಾಯಿಯರು ಆತನನ್ನು ಬೆಳೆಸಿರೋದನ್ನ ನೋಡಿದ್ರೆ ಆತನಿಗೂ ಹೆಮ್ಮೆ ಆಗ್ಲೇಬೇಕು.

(ಸಂತೋಷ ಸಂಗೀತ)

* * *

ಪ್ರಭು : ಎಲ್ಲಿಗೋಗಿದ್ದೆ ಮೀನಾಕ್ಷಿ?

ಮೀನಾಕ್ಷಿ : ಕೈಲಾಸಕ್ಕೆ...

ಪ್ರಭು : ಏನು ಈಗ್ಲೇ ಅಷ್ಟೊಂದು ಬೇಜಾರಾದ್ಹಾಗೆ ಮಾತಾಡ್ತೀಯಾ?

ಮೀನಾಕ್ಷಿ : ಇಲ್ಲಾರೀ ನಿಜವಾಗ್ಲೂ ಶಾಂತಿ ಮನೆ ಕೈಲಾಸವೇ? ಏನು ಚೆನ್ನಾಗಿ ಮನೆ ಕಟ್ಟಿದ್ದಾರೆ, ಮನೆಯಲ್ಲಿ ಸೋಫಾ ಸೆಟ್ ಏನು? ಡೈನಿಂಗ್ ಟೇಬಲ್ಲೇನು? ಟೆಲಿವಿಷನ್, ಸ್ಟೀರಿಯೋ ಸೆಟ್‌ಗಳೇನು? ರೆಫ್ರಿಜರೇಟರೇನು? ಮನೆ ಮುಂದೆ ಚಿಕ್ಕದಾದ ತೋಟ, ಕಾರಿನ ಪೋರ್ಟಿಕೋ... ಮಹಡಿ ಮನೆ ಚಿಕ್ಕದಾದ್ರೂ ಅದೇನು ಚೊಕ್ಕ? ಮಕ್ಕಳು ಇಬ್ರೇ ಅದೇನು ನೀಟು, ಹುಡುಗರು ಮಾತಾಡಿದ್ರೆ ಎಲ್ಲಿ ಮುತ್ತು ಸುರಿದು ಹೋಗ್ತಾವೆ ಅಂತನ್ನೋವಷ್ಟು ಸೌಮ್ಯ. ಅವರ ನಡವಳಿಕೆ ಏನು? ಮಾತುಕತೆ ಏನು? ಗಂಡ ಹೆಂಡತಿ ಇಬ್ಬರ ಸಂಸಾರ ನೋಡ್ತಿದ್ರೆ ಎರಡು ಕಣ್ಣಿದ್ರೂ ಸಾಲದು. ಮೊದಲು ಯಾಕಾದ್ರೂ ಬೇರೆಯವರ ಮನೆಗೆ ಹೋಗಬೇಕು ಅನ್ತಿದ್ದೆ. ಆದ್ರೆ ನಾಲ್ಕುರು ಮನೆ ನುಗ್ಗಿ ಒಡನಾಡಿದಾಗ್ಲೇ ಪ್ರಪಂಚದ ವ್ಯವಹಾರ ಜ್ಞಾನ ತಿಳಿಯೋದು. ನಮ್ಮಂತೆಯೇ ಅವರು ಆದ್ರೆ ಬುದ್ಧಿವಂತತನದಿಂದ ಅವರು ಅಷ್ಟೊಂದು ಸುಖವಾಗಿ ಜೀವನ ಸಾಗಿಸಲಿಕ್ಕೆ ಕಾರಣ ಆಯ್ತು ಅಂತ ಅರ್ಥವಾಯ್ತು.

ಪ್ರಭು : ನಾನು ಪ್ರತಿ ದಿವಸ ಒಂದಲ್ಲ ಒಂದು ಮನೆಗೆ ಹೋಗ್ತೀನಿ. ಹತ್ತಾರು ಸಂಸಾರಗಳನ್ನು ನೋಡ್ತೀನಿ. ಮನಸ್ಸಿನಲ್ಲಿ ಕೊರಗ್ತೀನಿ. ನನ್ನನ್ನು ನಾನೇ ಕರುಬಿಕೊಳ್ತೀನಿ, ಪ್ರಯೋಜನವೇನು? ಕಾದಂ ಬರಿ ಓದ್ತಿದ್ದೆ, ಸಿನಿಮಾ ನೋಡ್ತಿದ್ದೆ. ಅಕ್ಕ-ಪಕ್ಕ ಬಂಧು ಬಳಗದವರನ್ನು ನೋಡ್ತಿದ್ದೆ. ಆದ್ರೆ ನಾನು ನಡೆಮಕೊಳ್ಳುವುದರಲ್ಲಿ ಎಡುವಿ ಬಿದ್ದುಬಿಟ್ಟೆ. ಏನ್ಮಾಡ್ಲಿ? ಯಾವಾಗ್ಲೂ ನಾವು ಅನುಭವಿಸಿದ ಮೇಲೆ ಇವೆಲ್ಲಾ ಅರ್ಥವಾಗುವುದು ಅನ್ನಿಸುತ್ತೆ. ಪ್ರತಿಯೊಬ್ಬರೂ ಅವರು ಅನುಭವಿಸಿದ ಮೇಲೆ ಪ್ರತಿಯೊಂದೂ ತಿಳಿಯುವುದು. ಆದ್ರೂ ಅದ್ಕೂ ಮೊದಲೇ ನೋಡಿ, ಕೇಳಿ ತಿಳ್ಕೊಂಡು ನಡೆದುಕೊಳ್ಳುವವರು ತುಂಬಾ ಅಪರೂಪ. ಅವರೇ ಪುಣ್ಯವಂತರು ಅಂತ ಕಾಣಿಸುತ್ತೆ.

ಮೀನಾಕ್ಷಿ : ಹೌದ್ರಿ... ನೀವು ಹೇಳೋದು ನಿಜಾನೇ?

ಪ್ರಭು : ನಿಜವೇನು? ಅನುಭವಿಸ್ತಾ ಇದ್ದೀವಲ್ಲಾ. ನಾವು ಮಾಡಿದ ತಪ್ಪಿನಿಂದ ನಮ್ಮ ಮಕ್ಕಳಿಗೆ ಉತ್ತರ ಕೊಡೊಕ್ಕೆ ನಾಲಿಗೆ ಇಲ್ಲದ ಹಾಗಾಗಿದೆ, ಅವರಿಗೆ ಮಾಡಬೇಕಾದ ಕೈ ಇಲ್ಲದ ಹಾಗಾಗಿದೆ. ಅವರಿಂದ ಮಾತು ಕೇಳೋಕ್ಕೆ ದೇವ್ರು ಇನ್ನೂ ಕಿವಿಗಳನ್ನು ಚೆನ್ನಾಗಿಟ್ಟಿದ್ದಾನೆ. ಕಿವುಡು ಮಾಡಪ್ಪಾ ಅನ್ನೋ ಸ್ಥಿತಿ ಆಗಿದೆ. ಇದ್ರಿಂದ್ಲೇ ನಾವು ಸೋತು ಸುಣ್ಣವಾಗಬೇಕಾಗಿದೆ.

ಮೀನಾಕ್ಷಿ : ಹೌದು... ಈಗ್ಲೂ ನಾವು ಶಾಂತಳಂತೆ ಇರೋಕ್ಕೆ ಪ್ರಯತ್ನ ಪಡಬೇಕು.

ಪ್ರಭು : ಎಲ್ಲಿ ಸಾಧ್ಯವೇ? ಸಂಸಾರ ಸಾಗಿಸೋದೆ ಕಷ್ಟವಾಗಿರುವಾಗ ಸುಖದ ಕನಸು ನನಸು ಮಾಡ್ಕೊಳ್ಳೋಕ್ಕೆಲ್ಲಾಗುತ್ತೇ?

ಮೀನಾಕ್ಷಿ : ಶಾಂತ ಹೇಳಿದ್ಲು, ನಿನ್ನ ಸಂಸಾರದ ಸುಖಕ್ಕೆ ಅಡ್ಡಿ ಅತಿ ಮಕ್ಕಳು ಅಂತ. ಈಗ ಅದು ನಿಜ ಅನ್ನಿಸುತ್ತೆ.

ಪ್ರಭು : ಇಲ್ಲ ಅಂದವ್ರ್ಯಾರು?

ಮೀನಾಕ್ಷಿ : ಈಗ್ಲಾದ್ರೂ ನೀವು ಎಚ್ಚರಿಕೆವಹಿಸದೇ ಹೋದ್ರೆ ಇನ್ನೂ ಕಷ್ಟ ಅನುಭವಿಸಬೇಕಾಗುತ್ತೆ ಅಂತ ಹೇಳಿದ್ಲು.

ಪ್ರಭು : ಅದ್ಕೀಗೇನ್ಮಾಡ್ಬೇಕು ಅನ್ತೀಯಾ?

ಮೀನಾಕ್ಷಿ : ಇನ್ನು ಶಾಶ್ವತವಾಗಿ ಮಕ್ಕಳಿಲ್ಲದ ಹಾಗೆ ಮಾಡ್ಕೋಳ್ಬೇಕು.

ಪ್ರಭು : ಈಗ ಬೇಕು ಅಂತ ಯಾರೇಳ್ತಾರೆ?

ಶಂಕರ : ಈ ಊಟ, ತಿಂಡಿ, ಈ ಮನೆ ನೋಡಿ ನೋಡಿ ಸಾಕಾಗ್ಹೋಯ್ತು. ಒಂದು ನಿಮಿಷ ನೆಮ್ಮದಿ ಅನ್ನೋದೆ ಇಲ್ಲ. ಯಾವ ಹೊತ್ತಿಗೆ ಬರುತ್ತೋ ಕಾದು ನೋಡಬೇಕು. ಮನೆಗೇ ಬರಬಾರದು. ಯಾವುದಾದ್ರೂ ಹೋಟೆಲ್ನಲ್ಲಿ

ಒಂದು ಚೂರು ತಿಂದುಕೊಂಡು ಇದ್ದುಬಿಡೋಣ ಅನ್ನಿಸುತ್ತೆ. ವಿಧಿ ಇಲ್ಲದೆ ಈ ಮನೆಗೆ ಬರಬೇಕು.

ಪ್ರಭು : ಹಾಗೇ ಮಾಡಪ್ಪಾ. ನಿನ್ನ ಮನಸ್ಸಿಗೆ ಸಂತೋಷವಾದ್ರೆ ಸಾಕು.

ಶಂಕರ : ಹಾಗೇ ಮಾಡಿಟ್ಟಿದ್ದೀರಲ್ಲಾ?

ಪ್ರಭು : ನೋಡೋ ಅಂದು ಅಂದು ಪ್ರಯೋಜನವಿಲ್ಲ. ಸಂತೋಷ ಕೊಡಲಿಕ್ಕಾಗೋಲ್ಲ. ಎಲ್ಲಿಂದಲೂ ತರಲಿಕ್ಕಾಗೋಲ್ಲ. ನೀವೇ ಅದನ್ನು ಕಲ್ಪಿಸಿಕೊಳ್ಳಬೇಕು.

ಶಂಕರ : ಸಂತೋಷವಾಗಿದ್ದೀನಿ ಅಂತ ಭಾವಿಸಿಕೊಳ್ಳಬೇಕು.

ಪ್ರಭು : ಗೊತ್ತಿದ್ದೂ ಕೇಳ್ತಿಯಲ್ಲಾ...

ಶಂಕರ : ಎಲ್ಲಾ ಗೊತ್ತಾಗ್ಬಿಡುತ್ತೆ. ನಮ್ಮಂಥ ಸಂಸಾರದಲ್ಲಿ ನಾಲ್ಕಾರುದಿನ ಒದ್ದಾಡಿದ್ರೆ.

ಮೀನಾಕ್ಷಿ : ಯಾಕೆ ಮಾತಿಗೆ ಮಾತು ಬೆಳಸ್ತೀಯಾ ನಡೆಯೋ, ಕೈಕಾಲು ತೊಳ್ಕೊಂಡು ಊಟ ಮಾಡುವಿಯಂತೆ.

ಶಂಕರ : ಆಯ್ತು...

ಮಂಜುಳ : ನಮ್ಮ ಮನೆ ಜಗಳ ಊಟದಿಂದ ಮುಕ್ತಾಯವಾಗುತ್ತೆ ಶಂಕ್ರಣ್ಣ.

ಶಂಕರ : ಊಟದ ತೃಪ್ತಿಯಲ್ಲಾದ್ರೂ ನಮ್ಮ ಸಮಸ್ಯೆ ಬಗೆಹರಿಯುತ್ತಲ್ಲಾ ಅಷ್ಟಕ್ಕೆ ಸಂತೋಷಪಡಬೇಕು.

ಮಂಜುಳ : ಏನಮ್ಮಾ ನಾನು ಬರ್ಲಾ ಊಟಕ್ಕೆ...

ಮೀನಾಕ್ಷಿ : ಎಲ್ಲರೂ ಹುಟ್ಟಿರೋದೇ ಅದ್ಕಲ್ವಮ್ಮ 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ'.

ಶಂಕರ : ಹಾಗಲ್ಲಮ್ಮ ನೀನು ತಿಳ್ಕೊಂಡಿರೋದು ತಪ್ಪು, ಎಲ್ಲರೂ ಹುಟ್ಟಿದ ಮೇಲೆ ಹೊಟ್ಟೆ ಗೇಣು ಬಟ್ಟೆ ನೋಡ್ಕೊಳ್ಬೇಕು ಅಷ್ಟೇ ಹೊರ್ತು, ಹುಟ್ಟಿರೋದೇ ಹೊಟ್ಟೆ-ಗೇಣು ಬಟ್ಟೆಗಲ್ಲಾ.

ಮೀನಾಕ್ಷಿ : ಎರಡೂ ಒಂದೇ... ಬಿಡೋ...

ಮಂಜುಳ : ಅದ್ಯಾಗಾಗುತ್ತಮ್ಮ?

ಮೀನಾಕ್ಷಿ : ನಿಮ್ಮದೇ ಸರಿಯಪ್ಪಾ... ನಡೀರಿ...

ಪ್ರಭು : ಜೀವನದಲ್ಲಿ ಪ್ರತಿಯೊಬ್ಬರೂ ಕನಸು ಕಂಡೇ ಕಾಣ್ತಾರೆ. ನಿಜಜೀವನದಲ್ಲಿ ಅನುಭವಿಸಬೇಕು ಅನ್ತಿರ್ತಾರೆ. ಅದು ಕೆಲವರು ಪ್ರಯತ್ನದಿಂದ ಸಾಧಿಸಿಕೊಳ್ತಾರೆ. ಕೆಲವರು ಸಾಧಿಸ್ಕೊಳ್ದೇ ನಿರಾಶಾವಾದಿಗಳಾಗ್ಬಿಡ್ತಾರೆ. ಪ್ರತಿಯೊಂದು ಕುಟುಂಬದಲ್ಲೂ ತಂದೆ, ತಾಯಿ ಮಗ, ಮಗಳು, ಮೊಮ್ಮಕ್ಕಳು, ಎಲ್ಲರಿಗೂ ಅನೇಕ ಆಸೆಯ ಗೋಪುರಗಳು ಕನಸಿನಲ್ಲಿ

ಸೃಷ್ಟಿಯಾಗ್ತವೆ. ಆದ್ರೆ ಅದು ನನಸಾಗಬೇಕು ಅಂತ ತುಂಬಾ ಆಸೆ ಇಟ್ಕೊಂಡಿರ್ತಾರೆ. ಶಾಂತಿಯವರ ಸಂಸಾರದಾಗೂ ಆಗುತ್ತೆ, ನಮ್ಮ ಸಂಸಾರದಾಗೂ ಆಗುತ್ತೆ, ಆದ್ರೆ ನಮ್ಮ ಸಂಸಾರದಾಗೆ ಆಗೋದು ಮಾತ್ರ ಬೇಡ. ಶಾಂತಿಯ ಸಂಸಾರದಂತೆ ಎಲ್ಲರದೂ ಹಾಲ್ಜೇನು ಬೆರತಂತಾಗಬೇಕು. ಕನಸುಗಳನ್ನು ಕಾಣಬೇಕು. ಚೆನ್ನಾದ ಕನಸು ಕಾಣಬೇಕು. ಆ ಕನಸುಗಳು ನಿಜಜೀವನದಲ್ಲಿ ನನಸಾಗಬೇಕು ಎಂಬುದೇ ನನ್ನಾಸೆ. ಇದು ಸಾಧ್ಯ. ಅದಕ್ಕೆ ಸಾಧನೆ ಮಾಡಬೇಕು. ಸಂಸಾರದ ಅರಿವು, ಜವಾಬ್ದಾರಿ ಅರಿತು ಚಿಕ್ಕಸಂಸಾರವನ್ನು ಹೊಂದಿರಬೇಕು. ಆಗಲೇ ಸಾಧ್ಯ ಎಂಬುದು ಈಗ ಅರ್ಥವಾಯ್ತು. ಆದ್ರೂ... ತಡವಿಲ್ಲ ಮುಂದಾದ್ರೂ ನಾವು ತಿದ್ದಿಕೊಂಡ್ರೆ ಸಂಪೂರ್ಣ ಸಾಧಿಸದೇ ಹೋದ್ರೂ ಅಲ್ಪ ಸ್ವಲ್ಪವನ್ನಾದ್ರೂ ಸಾಧಿಸಬಹುದು.

(ಹರ್ಷ ಸಂಗೀತ)



# ಹೆತ್ತೊಡಲು

(ಪಟ್ಟಣದ ವಾತಾವರಣ. ಬಸ್ಸು, ರಿಕ್ಷಾಗಳ, ಜನರ ಗಲಾಟೆ)

ಭದ್ರವ್ವ : (ಸ್ವಾಗತ) ಎಪ್ಪೋ ಎಪ್ಪೋ ಏನು ಪಟ್ಟಣವಪ್ಪ? ನೋಡ್ತಿದ್ರೆ ಎದುರ್ಕೆ ಆಯ್ತೈತೆ. ಏಟೊಂದು ಬಸ್ಸುಗಳು, ಕಾರುಗಳು, ರಿಕ್ಷಾಗಳು, ಅದಕ್ಕೂ ಸೀಟಿಲ್ಲ. ನಿಂತ್ಕಂಡು ಎಂಗೊಯ್ತಾ ಅವ್ರೆ... ಅಣ್ಣಂ.... ಈಟೊಂದು ಜನಗಳ ಕಾಲಿಗೆ ಬೂರ್‍ಸೇನು? ಚಡಾವ್ಗಳೇನು? ಮೈ ಮೇಲಿನ ಬಟ್ಟೆಗಳೆಷ್ಟು? ಇವರಿಗೆಲ್ಲಾ ಅನ್ನ ಏನು? ಈ ಪಟ್ಟಣದ ಈಟೊಂದು ಜನಕ್ಕೆ ನೀರೊದಗ್ಸದ್ಯಂಗೆ ಅನ್ನಿಸ್ತೈತ. ಅದೆಕ್ಕೆ ತಾನೇ ನೀರಿಗೆ ತೊಂದರೆ. ನಿಜವಾಗ್ಲೂ ಆಶ್ಚರ್ಯವಾಯ್ತೈತೆ. ಇವರಿಗೆಲ್ಲಾ ಮನೆ ತಾನೇ ಕಟ್ಟಿಸಿ ಒದಗ್ಸದ್ಯೆಂಗೆ? ನಮ್ಮಂಗೆ ಹಳ್ಳಿಯಿಂದ ಪಟ್ಟಣಕ್ಕೆ ಬಂದ್ರೆ ಅವರ್ಗೆಲ್ಲಾ ಬಾಡ್ಗಿಗೇಗ್ ತಾನೇ ಮನೆ ಯೆಂಗ್ ಸಿಕ್ತೈತೆ? ಎಲ್ಲಿ ನೋಡು ಜನ ಜನ! ಜನಜುಂಗುಳಿ ದೇವರು ಅದೆಂಗ್ ನಡೀಸ್ತಾನೆ ಅಂತ? ಈಟೊಂದು ದುಬಾರಿ ಬಾಡ್ಗೆಗೆ ನಾವು ಮನೆ ಮಾಡ್ಕಂಡು ಜೀವನಮಾಡಕ್ಕಾಯ್ತದಾ? ಅದ್ಕೇ ತಾನೇ ಈ ಕೊಳಚೇ ಪ್ರದೇಸ್ದಾಗೆ ವಾಸ ಮಾಡ ಗತಿ ಬಂದು...

(ಸ್ವಲ್ಪ ಎತ್ತರಿಸಿದ ದನಿಯಲ್ಲಿ)

ಏನೋ ಕೆಟ್ಟು ಪಟ್ಟಣ ಸೇರು ಅಂತ ಯೋಳ್ತಿದ್ರಲ್ಲಾ ನಮ್ಮ ಹಿರೀರು ಅಂತ ಬಂದದ್ದಾಯ್ತು. ಈಗ ಪಟ್ಟಣದ ಸುಖ ಉಣ್ತಾ ಇವ್ನಿ. ಯಾವತ್ತಿಗೆ ನಮ್ಮೂರ್‍ಗೋಗ್ಬುಡೋನ ಅನ್ನಿಸ್ತೈತೆ. ಪಟ್ಟಣವೋ ಪರದೇಸಿಗಳ ಪರದಾಟವೋ ಅನ್ನಿಸ್ತೈತೆ.

ಪರ್ವತಪ್ಪ: ಈಗನಿಸ್ತೈತೆ ಅಲ್ವೇ... ಭದ್ರೂ... ನಾನು ನಿಂಗೆ ಗಿಣಿಗೇಳ್ದಂಗೇಳ್ದಿ ಕೇಳ್ಬ್ಯಾ? ಡಾಗಟ್ರು ಒಂದು ಮಾತು ಹೇಳಿದ್ರು... ನೆಪ್ತಿ ಐತಾ... 'ಕೆಟ್ಟು ಪಟ್ಟಣಕ್ಕೆ ಸೇರು' ಅಂತಲ್ಲ; 'ಪಟ್ಟಣಕ್ಕೆ ಸೇರಿ ಕೆಟ್ಟೆ ಅಂತ ಆಮ್ಯಾಕೆ ಯೋಸ್ನೆ ಮಾಡಬ್ಯಾಡ' ಅಂತ. ಅದು ಈಗ ನಿಜವಾಗೈತೆ. ಈ ಕೊಳಚೆ ಪ್ರದೇಸದಾಗೆ ವಾಸ ಮಾಡಲಿಕ್ಕೆ ನಿನ್ನಣೇಲೇನು ಬರ್‍ದಿತ್ತು? ಏನು ಕೊಳಕು! ಇಲ್ಲೇ ಬಚ್ಲು, ಇಲ್ಲೇ ಒಂದು, ಎರಡು ಬಟ್ಟೆ ಒಗ್ಯೋದು; ಅಡಿಗೆ ಮಾಡೋದು. ಸಿನೆಮಾ

ಬ್ಯಾನರ್‌ಗಳೇ ಗುಡಿಸಲುಗಳಿಗೆ ಹೆಂಚು... ಯಪ್ಪೋ... ಯಪ್ಪೋ... ನೋಡಕ್ಕಾಗಲ್ಲ.

ಭದ್ರವ್ವ : ವಸಿ ಬಾಡ್ಯೇನಾರೂ ಕೊಡವು ಅಂದ್ರ ಅದ್ಕೂ ಗತಿ ಇಲ್ಲ. ಈ ಮಕ್ಕಳ ಸಾಕಕ್ಕಾಗಿ ಬಂದದ್ದಾಯ್ತು.

ಪರ್ವತಪ್ಪ : ಈಗ ಅವರನ್ನ ಸಾಕುವಂಗಿಲ್ಲ, ಕೊಲ್ಲುವಂಗಾಯ್ತು. ಅಂಗೇ ಕೊಲ್ಲುವಂಗಿಲ್ಲ, ರೋಗ ತರಿಸಿ ಕೊಲ್ಲುವಂಗಾಯ್ತು.

ಭದ್ರವ್ವ : ಈ ಮಕ್ಕಳಿಗೆ ಹಿಟ್ಟೂಗ ಗತಿ ಇಲ್ವಲ್ಲಾ ಅಂತ ಬಂದದ್ದಾಯ್ತು. ಆದ್ರೆ ಇಂಗ್ಯಲ್ಲ ಆಯ್ತದೆ ಅಂತ ನಾ ಕಂಡಿದ್ನಾ?

ಪರ್ವತಪ್ಪ : ಈಗ ಕಂಡೆ ತಾನೇ. ಪಟ್ಟಣ ಅಂದ್ರ ಸುಖದ ಸುಪ್ಪತ್ತಿಗೆ, ದುಡ್ಡಿನ ಮಳೆ ಬರ್ತೈತೆ ಜೀವಣ ಮಾಡವ ಅಂತ ಬಂದ್ಯಾ ಎಂಗೆ?

ಭದ್ರವ್ವ : ಅದ್ಯಲ್ಲಾ ಗಾಳಿ ಗೋಪುರವಾಯ್ತು. ಯೋಚನೆ ಜೊತೆಯೋಚನೆ ಮಾಡುವಾಗಾಯ್ತು... ಆಟೇ...

ಸುಂದ್ರಿ : ಅವ್ವಾ... ಅವ್ವಾ... ನಂಗೆ ಇಲ್ಲಿರಕ್ಕೆ ಅಸಯ್ಯವಾಗ್ತೈತೆ. ನಮ್ಮಳ್ಳಿಯಾಗೆ ಏಟೊಂದು ಚನ್ನಾಕಿತ್ತು? ಇದು ಮನೆನೋ. ಇಲ್ಲಿ ವಾಸ್ನೆ ಮೂಗು ಕೊಡಕ್ಕಾಗಕ್ಕಿಲ್ಲ. ರಾತ್ರಿವೊತ್ತು ಸೊಳ್ಳೆಗಳ ಕಡಿತ ತಡ್ಯಕಾಗಕ್ಕಿಲ್ಲ.... ಕಾಲ್ನೀಡ್ಕಂಡು ಮಲಿಕಳ್ಳಲಿಕ್ಕೆ ಕುಳಿತ್ಕಳಕೆ ಆಗಕ್ಕಿಲ್ಲ. ಕುಡುಕರ ಕಾಟ ಬ್ಯಾರೆ. ನಂಗೆ ಇಲ್ಲಿ ಬೇಜಾರಾಗ್ಬುಟ್ಟದೆ ಕಣವ್ವಾ... ನನ್ನನ್ನೂ ನಮ್ಮೂರ್ಗೆ ಕಳಿಸ್ಕೊಡವ್ವಾ.

ಪರ್ವತಪ್ಪ : ಕ್ಯಾಳ್ವಾ... ಮಕ್ಕಳಿಗೂ ಬೇಜಾರಾಗೋಗದೆ. ಆಗ್ಲಿ ತಾಳವ್ವಾ... ವೊಂಟೋಗವಾ...

ಸುಂದ್ರಿ : ಏನವ್ವಾ... ಇವ್ರೆಲ್ಲಾ ಏಟೊಂದು ದೊಡ್ಡ ದೊಡ್ಡ ಮನೆ ಕಟ್ಕಂಡು ಸುಖವಾಗವ್ರೆ, ನಾವ್ಯಾಕವ್ವಾ ಇಂಥ ಗುಡಿಸಿಲ್ನಾಗಿರಬೇಕು?

ಭದ್ರವ್ವ : ಯೋಗಿ ತಂದದ್ದು ಯೋಗಿಗೆ, ಜೋಗಿ ತಂದದ್ದು ಜೋಗಿಗೇ ಅಂತ! ನಾವು ಬಡವರು ಕಣವ್ವಾ. ನಮಗೆ ಹಣಕಾಸು ಇಲ್ಲ. ದ್ಯಾವ್ರು ಕಣ್ಬುಟ್ರೆ ನಾವು ಅವರಂಗೇ ಇರಬೈದು.

ಸುಂದ್ರಿ : ಏಟು ವರ್ಸಗಳಿಂದ ನಾವು ಕಸ್ಟಪಟ್ಕಂಡೇ ಇವಿ.

ಭದ್ರವ್ವ : (ದುಗುಡದಲ್ಲಿ) ನಾಕು ದಿನ ಕಷ್ಟ, ನಾಕು ದಿನ ಸುಕ ಸಿಕ್ಕೈತೆ, ಸುಮ್ನಿರು ಮಗಾ.

ಸುಂದ್ರಿ : ಏನು ಸುಕ ಬರ್‍ತೈತೋ ಏನ್ಕಥೇನೋ ಬುಡು. ಹೊಟ್ಟೇಗೆ ಸರಿಯಾಗಿ ಊಟಿಲ್ಲ. ಮೈಮುಚ್ಚಕ್ಕೆ ಸರಿಯಾಗಿ ಬಟ್ಯಿಲ್ಲ. ಚಳೀಗೆ ಹೊದ್ಗಳಕೆ ಒಂದು ಬೆಚ್ಚಗಿನ ದುಬಟಿ ಇಲ್ಲ. ನಾವ್ಯಾಕಾರ ಈ ಪರಪಂಚಾದಾಗಿರಬೇಕವ್ವಾ?

ಭದ್ರವ್ವ : ಹೌದು ಕಣವ್ವಾ ಹೌದು. ನೀ ಯಾಳಾದು ಜಿಟ. ಆದ್ರ ಏನ್ಮಾಡ್ಲಿ? ಎಲ್ಲಾ ನಮ್ಮದ್ರೇ ತೆಪ್ಪು ಕಣವ್ವಾ ನಮ್ಮದ್ರೇ ತೆಪ್ಪು.

ಸುಂದ್ರಿ : ವೊಟ್ಟೆ ಹಸಿತೈತೆ ಏನಾರ ವಸಿ ಕೊಡವ್ವಾ...

ಭದ್ರವ್ವ : ನಿಮ್ಮಪ್ಪ ಸಾಮಾನ್ ತಂದ್ಬುಡ್ಲಿ... ಏನಾರ ವಸಿ ತಿಂಡಿ ಮಾಡ್ತೀನಿ... ಸುಮ್ಕಿರವ್ವಾ...

(ದುಃಖ ಸಂಗೀತ)

* * *

ಭದ್ರವ್ವ : (ಸ್ವಗತ-ಪ್ರತಿಧ್ವನಿಯಾಗಿ ಬರುವುದು)

ನೀಲಸಂದ್ರ; ನಮ್ಹಳ್ಳಿ ಅದೇಟೊಂದು ಚೆನ್ನಾದಳ್ಳಿ. ಹಕ್ಕಿಗಳ ಇಂಪಾದ ಕೂಗು ಕಿವಿ ಕೋರೈಸ್ತಿತ್ತು; ದನ-ಕರುಗಳ 'ಅಂಬಾ' ಎಂಬಕೂಗು ಕಿವಿಗೊಂದು ತರ ಆನಂದೈಗ್ತಿತ್ತು. ಕೋಳಿ 'ಕೊಕ್ಕೋ' ಅಂತ ಏಳಿಸ್ತಿತ್ತು. ಹೊಲ-ಗದ್ದೆಗೆ ತಿರ್ಗಾಡ್ಕಂಡು ಕೂಲಿ ಕಂಬಳ ಮಾಡ್ಕಂಡು ಅದೇನು ಶಾಂತವಾಗಿದ್ವಿ. ಇಲ್ಲಿ... ಕಿವಿ ಮುಚ್ಕೋಗೋ ಸ್ಥಿತಿಯಾಗೋಯ್ತು. ಸಾಕಪ್ಪ ಅನ್ನಿಸ್ಬುಟೈತೆ. ಇಲ್ಲಿನ ಹಿಂಸೆಗಳು, ಹಿಂದಿನ ದಿನ್ಗಳನ್ನ ನೆನೆಸ್ಕಂಡ್ರೆ...

(Flash Back)

(ಹಕ್ಕಿಗಳ ಇಂಚರ, ದನಗಳು-ಕುರಿಗಳ ಕೂಗು, ಕೋಳಿಗಳ ಕೊಕ್ಕೋ ಧ್ವನಿ, ಕೊಳಲಿನ ದನಿ ಸಣ್ಣವಾಗಿ ಬಂದು ಹಾಗೆಯೇ ಎತ್ತರಕ್ಕೆ ಹೋಗಿ ಸಣ್ಣವಾಗಿ ಲೀನವಾಗುವುದು.)

* * *

(ಗದ್ದೆಯಿಂದ ಬಂದ ಪರ್ವತಪ್ಪ ಬಾಗಿಲು ಬಡಿಯುತ್ತಾ)

ಪರ್ವತಪ್ಪ: ಬಾಗಿಲು ತೆಗ್ಯೆಭದ್ರಾ... (ಬಾಗಿಲು ತೆಗೆದು)

ಭದ್ರವ್ವ : ಯಾನು ಈಗ ಬಂದ್ರ್ಯಾ ಗದ್ದೆಯಿಂದ?

ಪರ್ವತಪ್ಪ: ಅಬ್ಬಾ ಅಬ್ಬಾ... ಬಾಗಿಲು ಭದ್ರ ಮಾಡಿಕೊಂಡು ಕೂತ್ರೆ ಮುಗೀತು. ಈ ನಮ್ಮ ನೀಲಸಂದ್ರದಾಗೆ ಯಾರೂ ಇಂಗ್‌ಮಾಡಕಿಲ್ಲ.

ಭದ್ರವ್ವ : ಜೀವನದಲ್ಲಿ ಇನ್ಯಾನಿದೆ? ಬಾಗಿಲು ಮುಚ್ಚಿದಾಗೇ ಅಲ್ವೇ?

ಪರ್ವತಪ್ಪ: ಸರಿ ಕ್ಯಾಳ್ದೆ, ತೆಪ್ಪಾಯ್ತು. ನೀರು ಕಾದಿದ್ಯಾ ಎಂಗೆ?

ಭದ್ರವ್ವ : ಕಾದೈತೆ... ಅಳ್ಳೆಣ್ಣೆ ಅಚ್ಚತೀರಾ ಎಂಗೆ? ಇಲ್ಲ ಅಂಗೇ ಸ್ನಾನ ಮಾಡ್ಕಂಡಿರ್ಯೋ?

ಪರ್ವತಪ್ಪ: ಆ ರೇಡಿಯೊನಾರಾ ವಸಿ ತಿರ್ಗುಸು. ಈಗ ಜನಪದ ಹಾಡ್ಗಳು ಬರ್ರೈತೆ ಕ್ಯಾಳವ ಒಂದು ಸಟೀಗೆ.

ಭದ್ರವ್ವ : ಜನಪದ ಹಾಡ್ಗಳು ಅಂದ್ರೆ ನಿಮ್ಗೆ ಒಂದು ಥರ ಹುಚ್ಚು. ಆಗ್ಲಿ... ತಿರುಗ್ಸಿತೀನಿ ತಾಳಿ.

(ರೇಡಿಯೋ ಟ್ಯೂನ್ ಮಾಡುವ ಧ್ವನಿ)

ಬಂಜಿ ಬಾಗಿಲ ಮುಂದೆ ಅಂಜೂರ ಗಿಡಹುಟ್ಟಿ
ಟೊಂಗಿ ಟೊಂಗೆಲ್ಲ ಗಿಣಿ ಕೂತು ಹೇಳ್ಯಾವ
ಬಂಜಿ ನಿನ ಬದುಕು ಹೆರವರಿಗೆ॥

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗೆ ಎತ್ತುದುಡಿದಂಗ ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗೆ॥

ಕಂದನ ಕೊಡು ಶಿವನೆ ಬಂದನ ಪಡಲಾರೆ
ಹಂಗೀನ ಬಾಳ ಉಣಲಾರೆ ಮತ್ತ್ಯಾಗ
ಬಂಜೆ ಶಬುದ ಹೊರಲಾರೆ॥

ಭದ್ರವ್ವ : (ಅಳುತ್ತಾ) ಹೌದು ಕೇಳ್ನಾರಿ... ಆರುಸ್ಬುಡಿ.

ಪರ್ವತಪ್ಪ: ಯಾಕ್ ಭದ್ರಿ... ಜನಪದ ಹಾಡು ಬತ್ತೈತೆ. ಒಂದು ಸಟೀಗ ಕ್ಯಾಳು... ಅದ್ಯಾಕ್ ಬ್ಯಾಡ ಅಂತೀಯಾ?

ಭದ್ರವ್ವ : (ದುಗುಡದಿಂದ) ಬಂಜೆ ಅನ್ನೋ ಸಬ್ದ ಕೇಳ್ತಿದ್ರೆ ನಂಗೆ ಹೊಟ್ಟೆಯಾಗೆ ಬೆಂಕಿ ಆಕ್ದಂಗಾಯ್ತದೆ. ದುಕ್ವಾಗ್ದೇ ಏನ್ ಸಂತೋಸವಾಯ್ತದಾ ನಂಗೆ, ನೀವೇ ಯೋಳಿ ಮತ್ತೆ.

ಪರ್ವತಪ್ಪ: ಅದ್ಯಾಕ್ ಯೋಸ್ನೆ ಮಾಡ್ತಿಯಾ, ಪಟ್ಟಣದಾಗ ದಾಗಟ್ರಿಗೆ ತೋರ್ಸಿ ಪರೀಕ್ಸೆ ಮಾಡಿಸಿದ್ರೆ ಮಕ್ಕಳಿಲ್ಲದವರ್ಗೂ ಮಕ್ಕಳಾಗುವಂಗೆ ಮಾಡ್ತರಂತೆ. ಅಂತ ನಮ್ಮ ಬೀದಿ ಬಸಣ್ಣ, ಈರಣ್ಣ ಮಾತಾಡ್ಕತಿದ್ರು.

ಭದ್ರವ್ವ : (ದುಃಖದಿಂದ) ಹಣ್ಯಲ್ಲಿ ಬರದದ್ದಕ್ಕೆ ಹೊಣ್ಯಾರು ಅಂತ. ಆ ದ್ಯಾವ್ರೇ ಬರದು ಕಳಿಸ್ನಿಲ್ಲ. ಇನ್ನು ಈಗ ಮಕ್ಕಳಾಗು ಅಂದ್ರ್ಯಾನಾಗುತ್ತೆ? ಇನ್ನು ದಾಗಟ್ರೇನ್ಮಾಡ್ಯಾರು? ನಾವು ಹಿಂದಿನ ಜನ್ಮದಾಗ್ ಏನ್ ಪಾಪ ಮಾಡಿದ್ವೋ ಈವೊತ್ತಿನ ದಿನ ಅನುಭೋಗಿಸ್ಬೇಕು ಅಷ್ಟೇ.

ಪರ್ವತಪ್ಪ: ಅಂಗಾರೆ ದಾಗಟ್ರು ಯೋಳೋದು ಸುಳ್ಳಾ? ದಾಗಟ್ರಿಗೆ ತೋರಿಸಿ ಚಿಕಿತ್ಸೆ ಆದ್ರೂ ಆಗ್ನಿಲ್ಲ ಅಂದ ಮ್ಯಾಲೆ ದ್ಯಾವ್ರು ನಮ್ಗನೇಲಿ ಬರದ್ದೂ ಅಂತ ಸುಮ್ಮಾಗ್ಬೋದು. ಈಗೇಟೋ ಜನಗ್ಳಿಗೆ ಪರೀಕ್ಷೆ ಮಾಡ್ಸಿ ಮಕ್ಕಳಾಗುವಂಗೆ ಮಾಡ್ಸಿದರಂತೆ, ಏಟೋ ಜನಕ್ಕೆ ಮಕ್ಕಳಾಗವೇ ಅಂತ ಬ್ಯಾರೆ ಯೋಳ್ತವ್ರೆ.

ಭದ್ರವ್ವ : ಅವ್ಕೆಲ್ಲಾ ದುಡ್ಡು... ಕಾಸು?

ಪರ್ವತಪ್ಪ: ಬಿಟ್ಯಾಗೇ ಮಾಡ್ತವ್ರಂತೆ.

(ಸಂಗೀತ)

* * *

ಅನೌನ್ಸರ್: ಆಕಾಶವಾಣಿ ಬೆಂಗಳೂರು, ಭದ್ರಾವತಿ, ಮೈಸೂರು. ಈಗ ಭಾಷಣ. ವಿಷಯ "ಬಂಜೆತನವನ್ನು ತಡೆಗಟ್ಟುವಿಕೆ" ಮಾತನಾಡುವವರು ಡಾ|| ಎಂ. ಶಾಂತರಾಜು.

ಭಾಷಣಕಾರರು:-

"ಬಂಜೆತನಕ್ಕೆ ಮಹಿಳೆ ಮೂರನೇ ಒಂದು ಭಾಗದಷ್ಟು ಕಾರಣ. ಆದ್ರೆ ಪುರುಷನೂ ಅಷ್ಟೇ ಪ್ರಮಾಣದಲ್ಲಿ ಕಾರಣನಾಗುತ್ತಾನೆ. ಪರೀಕ್ಷೆಯು ಸಣ್ಣ ಶಸ್ತ್ರಚಿಕಿತ್ಸೆಗಳನ್ನು ಒಳಗೊಂಡಿವೆ. ಪುರುಷರ ಶಸ್ತ್ರಚಿಕಿತ್ಸೆ ನಡೆಸಿದ ನಂತರ ಸ್ತ್ರೀಯರ ಪರೀಕ್ಷೆ ನಡೆಸುವುದು ಒಳಿತು. ಪುರುಷರಲ್ಲಿ ಮುಖ್ಯವಾಗಿ ಆರೋಗ್ಯಕರವಾದ ಬೀಜಾಣುಗಳ ಕೊರತೆ ಇದಕ್ಕೆ ಕಾರಣ. ಪುರುಷರು ತಮ್ಮ ಪುರುಷತನಕ್ಕೆ ಕುಂದುಬರುವುದೆಂದು ವೈದ್ಯರಿಗೆ ತೋರಿಸಲು ನಾಚಿಕೊಳ್ಳಬಾರದು. ಮದ್ಯಪಾನ, ಧೂಮಪಾನ ಮತ್ತು ಕೆಟ್ಟ ಚಾಳಿಗಳು ಬೀಜಾಣುಗಳ ಆರೋಗ್ಯಕ್ಕೆ ಹಾನಿಯನ್ನುಂಟು ಮಾಡುತ್ತವೆ. ಇಂಥ ಹಲವಾರು ನ್ಯೂನತೆಗಳನ್ನು ಶಸ್ತ್ರಚಿಕಿತ್ಸೆಯಿಂದ ಸರಿಪಡಿಸಬಹುದು.

ಗರ್ಭಪಾತದ ನಂತರ ಅಥವಾ ಹೆರಿಗೆಯಾದ ನಂತರ ಸ್ತ್ರೀಯ ಜನನೇಂದ್ರಿಯಕ್ಕೆ ಸೋಂಕು ತಗಲಿ, ಗರ್ಭಕೋಶ-ಗರ್ಭನಾಳಗಳಿಗೆ ತೊಂದರೆಯಾಗಬಹುದು. ಸಿಹಿಮೂತ್ರ, ಕ್ಷಯ, ರತಿರೋಗ, ಹೃದಯರೋಗ, ರಕ್ತಹೀನತೆಗಳು ಬಂಜೆತನಕ್ಕೆ ಕಾರಣವಾಗಬಹುದು. ಇದಕ್ಕೆ ಸರಿಯಾದ ಚಿಕಿತ್ಸೆ ಪಡೆದರೆ ಬಂಜೆತನ ಪರಿಹಾರವಾಗುತ್ತದೆ. ಸ್ತ್ರೀಯ ಜನನೇಂದ್ರಿಯದಲ್ಲಿ ನ್ಯೂನತೆಗಳಿದ್ದು ಪುರುಷನ ಬೀಜಾಣು ಗರ್ಭಕೋಶದೊಳಗೆ ಪ್ರವೇಶ ಮಾಡಲು ಸಾಧ್ಯವಾಗದಿದ್ದಲ್ಲಿ ಶಸ್ತ್ರಚಿಕಿತ್ಸೆಯಿಂದ ಅದನ್ನು ಸರಿಪಡಿಸಬಹುದು."

(ರೇಡಿಯೋ ಆರಿಸಲು)

ಪರ್ವತಪ್ಪ: ಯಾಕೆ ರೇಡಿಯೋ ಆರಿಸ್ದೆ? ನೋಡ್ದಾ... ಈಗ ದಾಗಟ್ರ ಬಾಯ್ಲೇ ಕೇಳ್ದಲ್ಲ. ಯಾಕೆ ಪೂರ್ತಿ ಕೇಳಕ್ಕಾಗ್ದೇ ಇತ್ತಾ?

ಭದ್ರವ್ವ : ಅಂಗಾರೇ ಇವೆಲ್ಲಾ ನಿಜ ಅಂತ ನೀವ್ ನಂಬ್ದ್ರ್ಯಾ?

ಪರ್ವತಪ್ಪ: ಎಷ್ಟೋ ಜನಕ್ಕೆ ಮಕ್ಕಳು ಆಗವ್ರಂತೆ.

ಭದ್ರವ್ವ : ನೀವ್ಯಾನಾರ ಏಳಿ, ನಂಗೆ ದಾಗಟ್ರಿಗೆ ತೋರ್ಸ್ಲಿಕ್ಕೆ ನಾಚ್ಕೆ ಆಗ್ತೈತೆ.

ಪರ್ವತಪ್ಪ: ದಾಗಟ್ರಿಗೆ ನಾಚ್ಕಂಡ್ರಾಯ್ತು ಬುಡು. ಹೆಣ್ಣು ದಾಗಟ್ರಿಗೆ ತೋರ್ಸ್ಲಿಕ್ಕೇನು ನಾಚ್ಕೆ ತಕ್ಕಾ.

ಭದ್ರವ್ವ : ಅದೂ ಒಂದು ನೋಡೇ ಬುಡುವಾ ಅಂತೀರಾ?

ಪರ್ವತಪ್ಪ: ಅಂಗಾರೆ ಈ ವಾರ ವೋಗಾವಾ?

ಭದ್ರವ್ವ : ಅದ್ಯಾನೋ ಸಿಬಿರವಂತೆ ಇಲ್ಲೇ ನೋಡ್ತಾರೆ ಅಂತ್ಯೋಳುದ್ರು ಬಾಗ್ಯವ್ವ.

ಪರ್ವತಪ್ಪ: ಓ... ಅಂಗಾರೆ ಇಸಯ ಕಿವಿ ಮ್ಯಾಕಾಕಂಡಿದ್ಯೆ. ಇಲ್ಲೇ ಆದ್ರೆ ಇನ್ನೂ ಉತ್ತಮವೇ ಆಯ್ತು ಬುಡು. ಇದ್ಯಾನು ಬರೀ ಮಾತಾಡ್ಕಂಡು ಕೂತ್ಕಂಡ್ಯಾ ಏನು? ಹಿಟ್ಟುಗಿಟ್ಟಿಕ್ಕಿಯಾ ಎಂಗೆ?

ಭದ್ರವ್ವ : ಹಿತ್ಕವ್ರೇಬ್ಯಾಳೆ ಎಸ್ರು, ರಾಗಿ ಮುದ್ದೆ ಮಾಡಿವ್ನಿ ಒಂದು ಚೆಂಡು ತಕ್ಕಳೂರಿ ಬನ್ನಿ.

ಪರ್ವತಪ್ಪ: ಸರಿ ತಣ್ಗೆ ಇಡು ಬನ್ಬುಟ್ಟೆ.

(ಹರ್ಷ ಸಂಗೀತ)

* * *

(ಪಕ್ಕದ ಮನೆಯ ಚೌಡಮ್ಮ ಜೋಗುಳ ಹಾಡುತ್ತಾ ಮಗುವನ್ನು ತೂಗುತ್ತಿದ್ದಾಳೆ. ಅದು ಭದ್ರವ್ವನಿಗೆ ಕೇಳಿಸುತ್ತದೆ. ಅದರಲ್ಲೇ ತಲ್ಲೀನಳಾಗಿದ್ದಾಳೆ.)

ಹಾಡು (ಹೆಣ್ಣು ಧ್ವನಿ):

ಜೋ... ಜೋ... ಶಂಭುಲಿಂಗ ಕೃಪಾಂಗ।
ಜೋ ಜೋ ಶಂಭುಲಿಂಗ ಇಷ್ಟಾಂಗ।
ಜೋ ಜೋ... ಶಂಭುಲಿಂಗ ಸುಸಂಗ। ನೀವು।
ಜೋಯೆಂದು ಪಾಡಿರಿ ಶಂಭು ಮುಕ್ತಾಂಗ।। ಜೋ ಜೋ।।

ಚಿನ್ನದ ತೊಟ್ಟಿಲಗ ರನ್ನದ ಹಗ್ಗ
ಕನ್ನೆ ಮುತ್ತೈದೆಯರು ಕೂಡುತಲಿ ಬೇಗ
ಚನ್ನನ ಕಾಣುತ ಹಿಗ್ಗಿದಾಂಗೆ ತಾವು
ತಂದಂತೆ ದಾಗೀನ ಹಾಕಿದರು ಶಿವಗ ಜೋ ಜೋ।।

ಭದ್ರವ್ವ : (ದುಃಖದಿಂದ) ನಂಗೆ ದ್ಯಾವ್ರು ತೊಟ್ಟಿಲು ತೂಗ ಪುಣ್ಯ ಕೊಡ್ನಿಲ್ಲ. ನಾನು ಯಾವ ಜನ್ಮದಾಗ ಏನು ಪಾಪ ಮಾಡಿದ್ನೋ ಅದರ ಫಲ ನಂಗೀಗಾತು ಅಯ್ಯೋ ದ್ಯಾವ್ರೇ... ನಂಗ್ಯಾವತ್ತು ಇಂಥ ಪುಣ್ಯ ಕೊಟ್ಟಿಯಪ್ಪಾ.

ಪರ್ವತಪ್ಪ: ನಿನ್ನ ಹೆಂಗರಳ ನಾನು ಬಲ್ಲಿಕಣ್ ಭದ್ರಾ. ಅದ್ಕೇ ಅಲ್ವಾ ನಾನೇಳಿದ್ದು...

ಭದ್ರವ್ವ : ನಾಗರ ಪ್ರತಿಷ್ಠೆ ಮಾಡಿಸ್ಬುಡಿ.

ಪರ್ವತಪ್ಪ: ನೋಡು ಭದ್ರಾ, ಅದ್ನೂ ಮಾಡ್ಸಾವ, ಜೊತ್ಗೆ ದಾಗಟ್ರನ್ನು ಒಂದು ಕಿತ್ತ ನೋಡವಾ...

ಭದ್ರವ್ವ : ನೋಡವಾ...

(ದುಃಖ ಸಂಗೀತ)

(ಭದ್ರವ್ವ ರೇಡಿಯೋ ತಿರುಗಿಸುವಳು. "ಈಗ ಕಂಸಾಳೆ ಮಹದೇವಯ್ಯನವರಿಂದ ಸಂಕಮ್ಮನ ಕಥೆ". ಮುಗಿಯುತ್ತಿದ್ದಂತೆ ಬಾಗವ್ವ ಬರುತ್ತಾಳೆ.)

ಬಾಗವ್ವ : ಇದ್ಯಾಕೆ ಬತ್ತಿದ್ದಂಗೆ ರೇಡಿಯೋ ನಿಲ್ಲಿಸ್ಬುಟ್ಟು ದುಕ್ಕ ಮಾಡ್ತಿದ್ದಿಯಲ್ಲವ್ವಾ.

ಭದ್ರವ್ವ : ಸರಣೆ ಸಂಕವ್ವನ ಕತೆ ಕ್ಯೇಳ್ತಿದ್ದಿ, ಅದ್ಕೆ ದುಕ್ವಾಯ್ತು.

ಬಾಗವ್ವ : ದುಕ್ಯಾಕಾಯ್ತು?

ಭದ್ರವ್ವ : ಅವಳ ಬಂಜೆತನದ ಹಿಂಸೆ ನೋಡಿ.

ಬಾಗವ್ವ : ನೀ ಕಥೆ ಪೂರಾ ಕ್ಯಾಳ್ಲಿಲ್ಲ ತಕ್ಕ, ಕೊನ್ಗ ಅವಳ್ಗೆ ಮಕ್ಕಳಾಯ್ತದ. ಇನ್ನು ಬಂಜೆ ಏನ್ಬಂತು?

ಭದ್ರವ್ವ : ಆದ್ರು ನಮ್ಮ ಬಾಳು ಅಂಗಲ್ಲ, ಬಂಜೇ ಬಾಳೆ ಕಣ್ ಬುಡವ್ವಾ.

ಬಾಗವ್ವ : ಮಾದೇಶ್ವರ ಕಣ್ಬುಟ್ರೆ ಅದ್ಯಾವ ಮಹಾ ಬುಡು. ನಿಂಗೂ ಆಯ್ತೈತೆ. ನೀನು ನಾಯೇಳ್ದಾಗೆ ಕ್ಯಾಳು. ನಾಳಕ ಆಸ್ಪತ್ರಗೋಗಮ. ದಾಗಟ್ರಮ್ಮಪ್ರತ್ರ ಪರೀಕ್ಷೆ ಮಾಡ್ಸವ. ಮಕ್ಕಳಾಗ್ದೇಯೇನಾಯ್ತದೆ?

ಭದ್ರವ್ವ : ಇದ್ಯಾನ ನಮ್ಮ ಮನೆಯವ್ರೂ ಅಂಗೇ ಅಂತಾರೆ. ನೀನೂ ಅಂಗೇ ಅಂತೀಯಾ?

ಬಾಗವ್ವ : ಸರಿಯಾಗೇಳಿದ್ರು ಬುಡು.

ಭದ್ರವ್ವ : ಅದ್ಯಾನಯ್ತದೋ ಏನೋ?

ಬಾಗವ್ವ : ನಾಳಕೋಗವಾ.

ಭದ್ರವ್ವ : ನಿನ್ನಿಷ್ಟ ಒಪ್ದಾಗ್ ಮಾಡವ್ವಾ.

(ಕಂಸಾಳೆ ಧ್ವನಿ ಸಣ್ಣದಾಗುತ್ತಾ ಹಾಗೆಯೇ ಲೀನವಾಗುವುದು)

* * *

(ಎತ್ತಿನ ಗಾಡಿಯಲ್ಲಿ ಆಸ್ಪತ್ರೆಗೆ ಹೋಗುವ ದೃಶ್ಯ. ಆಸ್ಪತ್ರೆಯ ವಾತಾವರಣ)

ಭದ್ರವ್ವ : ಸರಣು ದಾಗಟ್ರವ್ವ.

ಡಾಕ್ಟರ್ : ಬಾಗಮ್ಮಾ... ಏನಮ್ಮಾ ನಿಮ್ಮ ತೊಂದರೆ?

ಬಾಗವ್ವ : ತೊಂದರೆ ಅಂದ್ರೆ. ನಮ್ಮ ಭದ್ರವ್ವೆಗೆ ಮದ್ವೆ ಆಗಿ ನಾಕೈದು ವರ್ಸವಾಯ್ತು ದಾಗಟ್ರವ್ವಾ. ಇನ್ನೂ ನೀರು ಮೊಯಲಿಲ್ಲ. ಅದಕ್ಕೇ ವಸಿ ತೋರ್ಸವಾ ಅಂತ ಬಂದ್ವು.

ಡಾಕ್ಟರ್ : ಅದ್ಕೇನಂತೆ ನಾವಿರೋದೇ ಅದ್ಕಲ್ವಾ ಬಾಗವ್ವಾ. ಬನ್ನಿ, ಪರೀಕ್ಷೆ ಮಾಡೋಣ. ದೇವರು ನಿಮ್ಮ ಭಾಗಕ್ಕೆ ಒಳ್ಳೇದೇ ಮಾಡ್ತಾನೆ.

ಬಾಗವ್ವ : ಅಸ್ಟು ಮಾಡಿ ಪುಣ್ಯ ಕಟ್ಕಳವ್ವಾ.

ಡಾಕ್ಟರ್ : ಬನ್ನಿ ಭದ್ರಮ್ಮಾ... ಯಾಕೆ ಹಾಗೆ ನಾಚ್ಕೋತೀರಿ ಬನ್ನಿ. ನಾನೂ ನಿಮ್ಮ ಹಾಗೆ ಹೆಣ್ಣಲ್ವೇ ಬಾರಮ್ಮಾ... ಬಾ... ಮಕ್ಕಳು ಬೇಕು ಅಂತ ಆಸೆ ಇದೆ. ಆದ್ರೆ ಯಾಕಾಗ್ಲಿಲ್ಲ ಅಂತ ಡಾಕ್ಟರ್ ಹತ್ತಿರ ಪರೀಕ್ಷೆ ಮಾಡ್ಸಕೊಳ್ಳೋಕೆ ನಾಚ್ಕೇನಾ?

ಬಾಗವ್ವ : ಹೋಗವ್ವಾ... ತೆಸ್ಟ್ ಮಾಡ್ತರೆ.

ಭದ್ರವ್ವ : ಬರ್ತೀನಿ ದಾಗಟ್ರವ್ವಾ...

(ಹರ್ಷ ಸಂಗೀತ)

ಡಾಕ್ಟರ್ : ಬಾಗವ್ವಾ ಈಕೆಗೆ ಡಿ ಅಂಡ್ ಸಿ ಅಂತ ಮಾಡಬೇಕಾಗುತ್ತೆ. ಅದು ಮಾಡಿದ್ರೆ ಮಕ್ಕಳಾಗೋ ಸಾಧ್ಯತೆ ಇದೆ. ಈ ಹೊತ್ತೇ ಮಾಡ್ಬುಡ್ಲಾ ಭದ್ರವ್ವಾ.

ಭದ್ರವ್ವ : ಮಾಡ್ಬುಡ್ಯವ್ವಾ.

ಬಾಗವ್ವ : ಏಟು ಬ್ಯಾಗನಾದ್ರೂ ಆಟೂ ಒಳ್ಳೇದೇ ಮಾಡ್ಬುಡಿ ತಾಯಿ. ಆ ಮಾದ್ಯಾವ ಒಳ್ಳೇದ್ಮಾಡ್ಬುಟ್ರೆ ಸಾಕು. ಕಾಸಿನ ದೂಪ ಹಾಕಿ ಕರವೆತ್ತಿ ಕೈ ಮುಗಿದು ಒಂದೂಕಾಲು ರೂಪಾಯಿ ಕಾಣ್ಕೆ ಕಟ್ಕಂಬುಡ್ತೀನಿ. ಎಂಗೋ ಬಂಜೇ ಅನ್ನ ಸಬ್ದ ಅವಳ ಬಾಳಿಂದ ದೂರವಾದ್ರೆ ಸಾಕು ಕಣವ್ವಾ. ಎಣ್ಣಾದದ್ಕೆ ಸಾರ್ಥಕ ಮಾಡಿ ತಾಯಿ ಅವಳ್ನ...

ಡಾಕ್ಟರ್ : ಆಗ್ಲಿ...

(Bridge Music)

* * *

(ಭದ್ರವ್ವ ರೇಡಿಯೋ ತಿರುಗಿಸುವಳು)

ಧ್ವನಿ : ನಮ್ಮ ಹಿಂದಿನವರು ಪಿತೃಋಣ ತೀರಿಸಲಿಕ್ಕೆ ಗಂಡು ಬೇಕು, ಹೆಣ್ಣಾಗದೇ ಇದ್ದರೆ ಜನ್ಮ ಜನ್ಮವಲ್ಲ ಎಂದು ಹೇಳುವುದುಂಟು. ಕೆಲವರು ಸಮಾಧಾನ ಹೊಂದುವುದೂ ಉಂಟು.

ಹಾಡು :

ಹೆಣ್ಣು ಹುಟ್ಯಾದಂತ ಹೇಳಿ ಕಳುವಲಿ ಬ್ಯಾಡ
ಹೆಣ್ಣೆಂದಿರವರು ಹೆದರ್ಯಾರ। ಕಂದವ್ವಾ
ಹೆಣ್ಣಲ್ಲ ನಮಗೆ ರವಿ ಚಿನ್ನ॥

(ಹಿನ್ನೆಲೆ ಸಂಗೀತ)

ಪರ್ವತಪ್ಪ: ನೋಡ್ದಾ ನಮ್ಮ ಜನಪದ ಕವಿಗಳು ಯೋಳೋದ. ಎಣ್ಣಾದ್ರೇನು, ಗಂಡಾದ್ರೇನು? ಎಲ್ಲಾರ್ನೂ ಸಾಕಬೇಕು. ವಿದ್ಯ ಬುದ್ದಿ ಕಲಿಸ್ಬೇಕು. ಆರೋಗ್ಯವಾಗಿಡ್ಬೇಕಲ್ವಾ?

ಭದ್ರವ್ವ : ಅದೂ ನಿಜ್ವೇ ಅನ್ನಿ.

ಪರ್ವತಪ್ಪ: ಆಯ್ತು ಬುಡು ಗಂಡಾಯ್ತೂ ಅಂತ ಹಿಗ್ಗಲೂ ಬೇಕಿಲ್ಲ. ಹೆಣ್ಣಾಯ್ತು ಅಂತ ಕುಗ್ಗಲೂ ಬೇಕಿಲ್ಲ.

(Bridge Music)

* * *

ಪರ್ವತಪ್ಪ : ಇದ್ಯಾನೇ ಭದ್ರಿ ತಿನ್ತಾ ಇರೋದು?

ಭದ್ರವ್ವ : ವಿಬೂತಿ.

ಪರ್ವತಪ್ಪ: ನೋಡ್ದಾ ಎಂಗೈತಿ. ಈಗ ದಾಗಟ್ರ ಪರೀಕ್ಸೆ ಮಾಡಿಸಿದ ಮ್ಯಾಲೆ ಅದೃಸ್ಟ ಕುಲಾಯಿಸ್ಬುಡ್ತು. ಅಂದಾಗೆ ಈಗ...

ಭದ್ರವ್ವ : ಮೂರು ತಿಂಗಳು.

ಪರ್ವತಪ್ಪ: ಯಂಗೋ ಆ ತಿರುಪತಿ ಯೆಂಕಟರಮಣನ ದಯದಿಂದ ಒಂದು ವಂಸದ ಕುಡಿ ಆದ್ರ ಸಾಕು.

ಭದ್ರವ್ವ : ಎಲ್ಲಾ ಅವನಿಚ್ಛೆ ಬುಡಿ. ನಾವು ಮೂಡ್ರಾಗಿ ದೇವರು ಕೊಡ್ಲಿಲ್ಲ ಅಂತ ಅಂಗೆ ಕೂತಿದ್ರೆ...

ಪರ್ವತಪ್ಪ: ಎಲ್ಲಾಯ್ತಿತ್ತು? ಅದಕ್ಕೇ ಯೋಳೋದು ಕಾಲಕ್ಕೆ ತಕ್ಕಂಗೆ ನಡ್ಕಳ್ಬೇಕು ಅಂತ.

ಭದ್ವವ್ವ : ಈಗ ನಡ್ಕಂಬುಟ್ನಲ್ಲಾ... ಒಂದು ಗಂಡು ಮೊದಲ್ನೇದಾಗ್ಬೇಕು.

ಪರ್ವತಪ್ಪ: ಹೆಣ್ಣಾದ್ರೇ ಚೊಚ್ಚಲ ಮಗ ಮನೆಗೆ ಲಕ್ಷ್ಮಿ ಬಂದಾಗೆ. ಯಾನು ಹೊಸ ಸುದ್ದಿ ಕೊಟ್ಟು ನೀ ಈಬೂತಿ ತಿಂದುಬುಟ್ರಾಯ್ತಾ?

ಭದ್ರವ್ವ : ನಿಮ್ಗೂ ವಸಿ ಕೊಡಾನಾ...

ಪರ್ವತಪ್ಪ: ನಾನು ನಿನ್ನಾಗೆ...

ಭದ್ರವ್ವ : ಬಸ್ರಿ ಅಲ್ಲ (ನಗುವಳು) ಒಬ್ಬಟ್ಟು ಮಾಡಿವ್ನಿ. ನಡೀರಿ...

ಪವ್ರತಪ್ಪ : (ತೇಕುತ್ತಾ) ಅಂತೂ ಬಸರಿ ಬಯಕೇನೂ ತೀರ್ತು. ಅವಳ ಗಂಡನ್ಗೂ ಬಾಯಿ ಸೀಯಾಯ್ತು. (ನಗುವರು)

(ಸಂಗೀತ)

* * *

ಹೆಣ್ಣು (ಹಾಡು):

ನಿನ್ನಂಥ ಕೈಯೋನು, ನಿನ್ನಂಥ ಕಾಲೋನು
ನಿನ್ನಂತ ಸಾಲ ಮುಡಿಯೋನು। ಸೂರ್ಯದೇವ
ನಿನ್ನಂಥ ಮಗನೆ ಕೊಡು ನನಗೆ.

ಪರ್ವತಪ್ಪ: ಏನು ಭದ್ರೂ! ಸೂರ್ಯ ನಮಸ್ಕಾರ ಹಾಕ್ತಾ, ನಿನ್ನಂಥ ಮಗನನ್ನೇ ಕೊಡು ಅಂತ ಕ್ಯಾಳ್ಕತಿದ್ದಯಲ್ಲಾ.

ಭದ್ರವ್ವ : ನಮ್ಮಜ್ಜಿ ಏಳ್ತಿದ್ದ ಪದ ಗೆಪ್ತಿ ಬಂತು ಅದನ್ನೆ ಅಂಗೆ... ಅಂಗನ್ತಿದ್ದೆ.

ಪರ್ವತಪ್ಪ: ವೊಟ್ಯಾಗಿರಾದು ಕಂಡಿರವರ್ಯಾರ ತಕ್ಕ? ಅದಿರ್ಲಿ ಒಂಬತ್ತು ತಿಂಗಳು ತುಂಬ್ತಲ್ಲಾ, ಹೆರ್ಗೆ ಮಾಡಿಸ್ಕಳಕೆ ಆಸ್ಪತ್ರೆಗೋದಾಯಾ ಎಂಗೆ?

ಭದ್ರವ್ವ : ನಮ್ಮ ಹಿರೀರೆಲ್ಲಾ ಹಳ್ಯಾಗೆ ಮಾಡ್ಕತಿರ್ನಿಲ್ವಾ?

ಪರ್ವತಪ್ಪ: ಅಪರೂಪಕ್ಕೆ ಬಸಿರಾಗಿದ್ದಯಿ. ವಸಿ ದಾಗಟ್ರಮ್ಮನತ್ರ ಆಗಾಗ ತೆಸ್ಟ್ ಮಾಡಿಸ್ಕಂಡಿದ್ರಾಗಿತ್ತು. ನಮ್ಮ ಜನಗಳಿಗೆ ಬುದ್ಧಿ ಇಲ್ಲ ಅಂತ ಹೇಳೋದನ್ನೆ. ಇರಾ ಸೌಕರ್ಯ ಉಪಯೋಗಿಸ್ಕಳಕಿಲ್ಲ.

(ಹರ್ಷ ಸಂಗೀತ)

* * *

(ಮಗುವಿನ ಅಳುವಿನ ಶಬ್ದ)

ಪರ್ವತಪ್ಪ: ಅಂತೂ ಏಳೇಳಾ ಮಾರವ್ವೆ ಹೆತ್ಲು ಮರ್ಸ್ಯಾ ಅಂದಾಗಾತು ವೋಗ್ಲಿ ತಕ್ಕ... ಎಂಗೋ ಸುಖಮೊಕವಾಗಿ ಯೆರ್ಗೆ ಆಯ್ತಲ್ಲಾ... ಬುಡು.

ಭದ್ರವ್ವ : ಅದೂ ನಿಜ್ವೇ ಬುಡಿ.

* * *

(ರೇಡಿಯೋ... ಧ್ವನಿ)

ಹಾಡು:

ಹತ್ತು ಹಡೆಯುವುದಕ್ಕಿಂತ ಮುತ್ತೊಂದ ಹಡದೀನಿ
ಎತ್ತಿಕೋ ನಮ್ಮ ಬಗಲಾಗ ನನ ತಮ್ಮ
ಮುತ್ತಿನ ಶೆಲ್ಯಾವ ಮರೆ ಮಾಡೋ॥

ಪರ್ವತಪ್ಪ: ಮುತ್ತಿನ ಶಲ್ಯ ಮರೆ ಮಾಡ್ಲಿಕ್ಕೆ ನಿನ್ನ ತಮ್ಮ ಇನ್ನೂ ಬರ್ನಿಲ್ಲ!

ಭದ್ರವ್ವ : ಬರ್ತಾನೆ... ಬಂದ್ಬುಡ್ತಾನೆ. ಈವೊತ್ತು ಕಾಗಜ ಅಕ್ಲಿವ್ನಿ...ನಾಳಾಕ್ ಬಂದ್ಬುಡ್ತಾವ್ನೆ.

ಪರ್ವತ : ವೊಸಿ ತೋಟದ ತಕ್ಕೆ ವೋಗಿದ್ಬತ್ತಿವ್ನಿ.

(ಹರ್ಷ ಸಂಗೀತ)

ಬಾವವ್ವ : ಮಗಳು ಚೆನ್ನಾಕವ್ಳೇ. ನಿನ್ನಾಗೇ ಅವ್ಳೆ... ಎಂಗೋ ಚೆನ್ನಾಗಿ ನೋಡ್ಕ. ಎದೆ ಹಾಲು ಚೆನ್ನಾಗಿ ಕೊಡು ಅದ್ಕಿಂತ ಒಳ್ಳೇದು ಇನ್ನ್ಯಾವ್ದೂ ಇಲ್ಲ.

ಭದ್ರವ್ವ : ಎಲ್ಲಾ ನಿಮ್ಮಂಥವ್ರ ಆಶೀರ್ವಾದ.

(ಹರ್ಷ ಸಂಗೀತ)

* * *

(ದುಃಖ ಸಂಗೀತ)

ಬಾಗವ್ವ : ಇನ್ನು ಎಷ್ಟು ಅತ್ತರ ತಾನೇ ಏನಾಯ್ತದೆ? ಬುಡು...ಪೋದ ಮೊಗ ಬತ್ತೈತಾ?

ಭದ್ರವ್ವ : ಅಪರೂಪಕ್ಕೆ ಒಂದು ಮೊಗ ಆಗಿತ್ತು. ಅದ್ನೂ ದ್ಯಾವರು ಕಿತ್ಕಬ್ಯಾಕಾ?

ಬಾಗವ್ವ : ಬನ್ನಿ ಡಾಕ್ಟ್ರೇ...

ಡಾಕ್ಟರ್ : ಒಂದು ವರ್ಷ ಮಗೂನ ಚೆನ್ನಾಗಿ ನೋಡ್ಕಬೇಕಾಗಿತ್ತು. ಅದಕ್ಕೆ ಚುಚ್ಚುಮದ್ದು ಕೊಡಿಸಿದ್ರೆ ಯಾವ ರೋಗಾನೂ ಬರ್ತಿರ್ನಿಲ್ಲ. ನಾನಾಗ್ಲೇ ಯೇಳಿದ್ದೆ ಬಿ.ಸಿ.ಜಿ., ಡಿ.ಪಿ.ಟಿ., ಪೋಲಿಯೋ ಹಾಕಿಸಿ ಅಂತ ಕಿವಿಗಾಕಲ್ಲಿಲ್ಲ. ಸ್ವಲ್ಪ ಸಮಾಧಾನ ಮಾಡ್ಕವ್ವಾ. ಇನ್ನೊಂದಾಯ್ತದೆ ತಕ್ಕೋ...

ಭದ್ರವ್ವ : ಹೆತ್ತೊಡಲಿಗೆ ಗೊತ್ತು ಆ ಕಷ್ಟ... ಈಗಿಂದೇ ಉಳೀನಿಲ್ಲ. ಇನ್ನು ಮುಂದಿನ್ದೂ ...ಯಾರು ಕಂಡಿದ್ದಾರು?

ಬಾಗವ್ವ : ಎದ್ದೇಳು... ಸ್ವಲ್ಪ ಊಟ ಮಾಡು ಏಳು ಭದ್ರವ್ವಾ.

(ದುಃಖ ಸಂಗೀತ)

* * *

(ರೇಡಿಯೋ... ಧ್ವನಿ)

ಹಾಡು:

ಬಂಗಾರದಂಥ ತಾಯಿ ಬಾಯಿಗೊಂದು ಹಲ್ಲಿಲ್ಲ
ಮಿತಿಯಿಲ್ಲ ಹಡೆದವ್ವ ಮರಳು ತಾಯಿ॥

ಭದ್ರವ್ವ : (ಅಳುತ್ತಾ) ಸಾಕು ಆರಿಸ್ಬುಡಿ. ಆ ರೇಡಿಯೋ... ಮಕ್ಕಳಿಲ್ಲ ಅಂತ ಕಣ್ಣೀರಾಕ್ಕಂಡ ಕಾಲವೊಂದಿತ್ತು. ಈಗ ಮಕ್ಕಳು ಸಾಕು ಅನ್ನ ಸ್ಥಿತಿ ಬಂದಿದೆ. ದಾಗಟ್ರಮ್ಮ ಏಳಿದ್ರು ಮೂರು ಮಕ್ಕಳಾದಾಗ್ಲೇ ಆಪ್ಲೇಸನ್ ಮಾಡಿಸ್ಕೋ ಅಂತ. ಗಂಡು ಬೇಕು ಗಂಡು ಬೇಕು ಅಂತ ಆಸೆ ಪಟ್ಟೆ. ಸಾಲಿಗೆ ಅಂತರವಿಲ್ಲದ ನಾಲ್ಕು ಮಕ್ಕಳಾದ್ವು...

ಓ... ಬನ್ನಿ ದಾಗಟ್ರಮ್ಮಾವ್ರೇ. ಇದೀಗ ನಿಮ್ಮ ಮಾತ್ನೇ ಆಡ್ತಿದ್ವಿ.

(ಡಾಕ್ಟರ ಪ್ರವೇಶ)

ಡಾಕ್ಟರ್ : ಏನು?

ಭದ್ರಪ್ಪ : ಮಕ್ಕಳು ಸಾಕು ಅಂತ ನೀವಾಗ್ಲೆ ಹೇಳಿದ್ರಲ್ಲಾ. ಅದು ದೇವ್ರು ಕೊಡವ್ನಾ ಅಂತ ಈಟೊಂದು ಆಯ್ತು.

ಡಾಕ್ಟರ್ : ಅದ್ಕೆ ಈಗ ಅನುಭೋಗಿಸ್ತಿದ್ದೀರಿ.

ಭದ್ರಪ್ಪ : ಇಷ್ಟು ಜಿನ ಮಕ್ಕಳನ್ನ ಕೊಟ್ಟಿರ್ನಿಲ್ಲ. ಈಗ ಕೊಟ್ಟ...

ಡಾಕ್ಟರ್ : ಇವೆಲ್ಲಾ ನಿಮ್ಮ ಮೂಢನಂಬಿಕೆ ಅಷ್ಟೆ... ಅಂದ್ರೆ ಈಗುಟ್ಟಿರೋ ಮಕ್ಕಳು ಕಷ್ಟ ಪಡಬೇಕು ಅಂತ್ಲಾ, ನಿಮ್ಮ ಮನ್ಸು.

ಭದ್ರಪ್ಪ : ಯಾವ ಹೆತ್ತೂಡಲಿಗೆ ತನ್ನ ಮಗೂನ ಸರಿಯಾಗಿ ಸಾಕಬೇಕು ಅಂತಿರಲ್ಲಾ? ಗತಿ ಇಲ್ದೇ ಹೋದದ್ಕೆ ನಮ್ಮ ಮಕ್ಕಳು ಇಂಗೆ ಪುಷ್ಟಿಯಾದ ಆಹಾರ ಇಲ್ದೆ ನರಳ್ತಾವೆ... ಬಟ್ಟೆ ಇಲ್ದೆ ಸಳಿಗೆ ನಡುಗ್ತಿವೆ. ಓದ್ಸಕ್ಕೆ ಏರೀಸಕ್ಕಾಗ್ದೇ ಅಂಗೇ ಕೂಲಿ ಮಾಡ್ತವೆ. ಅದ್ಕೆ 'ಕೆಟ್ಟು ಪಟ್ಟಣ ಸೇರು" ಅಂತ ಪಟ್ನಕ್ಕೆ ವೋಗ್ಬೇಕು ಅಂತ ಮನಸ್ಸು ಮಾಡಿವ್ನಿ.

ಡಾಕ್ಟರ್ : ಆಮೇಲೆ ಪಟ್ಟಣ ಸೇರಿ ಕೆಟ್ಟೆ ಅನ್ನಬೇಡಿ. ಅಲ್ಲೇನು ಸುಖದ ಸುಪ್ಪತ್ತಿಗೆ ಇರೋಲ್ಲ. ಅಲ್ಲೂ ಕಷ್ಟ ಪಡಬೇಕು. ಎಲ್ಲೋದ್ರೂ ರಟ್ಟೆ ಮುರೀಬೇಕು, ರೊಟ್ಟಿ ತಿನ್ನಬೇಕು.

ಭದ್ರಪ್ಪ : ಇರೋ ಒಂದೇಕ್ರೆ ತರಿ ಜಮೀನ್ನಲ್ಲೇನವ್ವಾ ನಮ್ಮ ಜೀವನ ಸಾಗ್ತೈತೆ?

ಡಾಕ್ಟರ್ : ಅದ್ಕೇ... ಈಗ ಹೊಸದಾಗಿ ಲ್ಯಾಪ್ರಾಸ್ಕೊಪಿಕ್ ಆಪರೇಷನ್ ಬಂದಿದೆ... ತುಂಬಾ ಸುಲಭ...ಅದನ್ಯಾಕ್ ಮಾಡಿಸ್ಕೊಳ್ಬಾರ್ದು?

ಭದ್ರಪ್ಪ : ನೋಡವಾ.

(ಸಂಗೀತ)

ಭದ್ರಪ್ಪ : ನೀವ್ಯಾನೇ ಹ್ಯಾಳಿ ನಾನು ಈ ಮಕ್ಕಳ ಪಾಡು ಬೀಳುವುದನ್ನು ನೋಡ್ಡಾರಿ. ದಿನದಿನಕ್ಕೆ ಸಂಸಾರ ತೂಗ್ಸಕ್ಕಾಗಕಿಲ್ಲ. ನನ್ಗೂ ಈ ಹಳ್ಳಿಯಾಗೆ ಅಕ್ಕಪಕ್ಕದ ಮನೆಯಾಗೆ ಸಾಲ ಮಾಡಿ ತೀರಿಸ್ಲಾರ್ದೆ ಛೀ... ಥೂ... ಅನ್ನಿಸ್ಕಂಡು ಸಾಕಾಯ್ತು. ಇನ್ನೊಂದು ಕ್ಷಣ ಈ ಊರ್ನಾಗಿರ್ಲಾರಿ. ಮಕ್ಕಳು ಹೊಟ್ಟೆ ಹಸಿದುಕೊಂಡಿರೋದು ನೋಡಿದ್ರೆ ನನ್ನ ಕರುಳು ಚುರುಕ್ ಅನ್ನಿಸ್ತೈತೆ. ನಿಮ್ಗೇನು ಗೊತ್ತು ಹೆತ್ತೂಡಲ ದುಃಖ? ಪಟ್ಟಣಕ್ಕೋಗಿ ಎಂಗೋ ಕೂಲಿನಾಲಿ ಮಾಡಿ ಜೀವನ ಮಾಡವ ನಡೀರಿ.

ಪರ್ವತಪ್ಪ: ಪಟ್ಣದಾಗೆಲ್ಲಿರುದು, ಯೋಸ್ನೆ ಮಾಡಿ ನೋಡು. ತುಂಬಾ ಕಷ್ಟ ಬೀಳಬೇಕಾಗುತ್ತದೆ.

ಭದ್ರವ್ವ : ಜಿನ ಗಾಣದ ಎತ್ತಿನಾಗೆ ದುಡ್ಯೋದು, ಆದ್ರೂ ಸಂಸಾರ ತೂಗ್ಸಕ್ಕಾಗಕ್ಕಿಲ್ಲ. ಬೆಂಗಳೂರ್ನಾಗೆ ಎಲ್ಲಾರ ತರಕಾರಿ ಮಾರ್ಕ್ಂಡಾರೂ ಜೀವ್ನ ಮಾಡವ. ಇಳಿಗೆ ಮುಳುಗ್ದವ್ರು ಚಳಿಗಂಜ್ಕಳಕ್ಕಾಯ್ತದಾ?

ಪರ್ವತಪ್ಪ: ಊಂ... ಆಯ್ತು. ಗೌರಿ ಹಬ್ಬ ತೀರಿಸ್ಕಂಡೋಗಮು.

(Flash back ends with music)

ಭದ್ರವ್ವ : (ಸ್ವಗತ) ಏಟೇ ಮನಸ್ಸು ಗಟ್ಟಿ ಮಾಡಿಕೊಂಡ್ರೂ ನೆನಪು ಮಾತ್ರ ಅಳಿಸಕ್ಕಿಲ್ಲ. ಮಕ್ಕಳಿಲ್ಲ ಅಂತ ಅತ್ತ ಕಾಲ ಒಂದಿತ್ತು. ಈಗ ಮಕ್ಕಳು ಸಾಕು ಮಾಡಪ್ಪಾ ಅನ್ನೋ ಕಾಲ್ವಾಗಿದೆ. ಅದ್ಕೇ ನಮ್ಮಿರೀಕ್ರು ಯಾವುದಕ್ಕೂ ಒಂದು ಮಿತಿ ಬೇಕು ಅಂತೇಳುದ್ರು. ಇನ್ನು ಮುಂದೂ ಮಕ್ಕಳಾಗೋದು ಬ್ಯಾಡ... ಬ್ಯಾಡ. ಈ ಪಟ್ಟಣದ ವಾಸಾನೂ ಬ್ಯಾಡ... ನಮ್ಮಳ್ಳಿಗೇ ವೋಗ್ಬುಡ್ಬೇಕು ಅನ್ನಿಸ್ತೈತೆ.

ಪರ್ವತಪ್ಪ: ಅದ್ಯಾನೇ ಬ್ಯಾಡ ಬ್ಯಾಡ ಕನವರಿಸ್ಕತಾ ಇದ್ದಯಿ.

ಭದ್ರವ್ವ : ಹೆತ್ತೊಡಲು ಮಕ್ಕಳು ಹಸ್ಕೊಂಡಿರೋದನ್ನು ನೋಡಕ್ಕಾಗಕ್ಕಿಲ್ಲ. ಈಗ ಮಕ್ಕಳು ಸಾಕು ಅಂತ ಮನಸ್ಸು ಮಾಡ್ಬುಟ್ಟಿವ್ನಿ. ನಂಗೆ ಆಪ್ಲೇಸನ್ ಮಾಡಿಸ್ಬುಡು. ಹೀಗೆ ಮಕ್ಕಳಾಗ್ತಿದ್ರೆ ಅದ್ಕಿಂತ ಪಾಪದ ಕೆಲಸ ಮತ್ತೊಂದಿಲ್ಲ.

ಪರ್ವತಪ್ಪ: ನಂಗೇನು ಬೇಕು ಅನ್ನಿಸ್ತದಾ...? ನಾನೇ ಆಪ್ಲೇಸನ್ ಮಾಡಿಸ್ಕತ್ತೀನಿ ಬುಡು.

ಭದ್ರವ್ವ : ಏನೂ ಬ್ಯಾಡಿ. ನೀವು ದುಡ್ಯೋರು... ನಾನು ಮನ್ಯಾಗಿರವ್ಳು. ನಾನೇ ಆಪ್ಲೇಸನ್ ಮಾಡಿಸ್ಕಂಬುಡ್ತೀನಿ.

ಪರ್ವತಪ್ಪ: ಸರಿ...

(ಸುಖಾಂತದ ಸಂಗೀತ)

* * *

✳

# ಅಣ್ಣ - ತಮ್ಮ

**ಪಾತ್ರ ವರ್ಗ**

೧. ರಾಜಣ್ಣ- ರಮೇಶನ ಅಣ್ಣ, ಬಡ ಉಪಾಧ್ಯಾಯ (೪೫ ವರ್ಷಗಳು) ೨. ಬೆಳ್ಳಿ- ರಮೇಶನ ಮನೆಯಲ್ಲಿ ಕೆಲಸಮಾಡುವ ಬಡಹುಡುಗಿ (೧೪ ವರ್ಷ)೩. ಚಮನ್ನಯ್ಯ- ಬಡವ, ಬೆಳ್ಳಿಯ ತಂದೆ (೫೦ವರ್ಷ) ೪. ರಮೇಶ- ರಾಜಣ್ಣನ ತಮ್ಮ ಸಾಹುಕಾರ (೪೦ ವರ್ಷಗಳು) ೫. ರಘು- ರಾಜಣ್ಣನ ಹೆಂಡತಿ (೩೫ ವರ್ಷ) ೬. ಶಾರದ ೭. ಪುಷ್ಪ ೮. ಪುಷ್ಪ- ರಾಜಣ್ಣನ ಮಗಳು (೨೦ ವರ್ಷ) ೯. ನಾಗಮಣಿ- ರಮೇಶನ ಹೆಂಡತಿ (೩೫ ವರ್ಷ)

## ದೃಶ್ಯ-೧

(ರಂಗ ಮಂಟಪದ ಒಂದೆಡೆ ಬಡತನ ಮನೆ. ಮತ್ತೊಂದೆಡೆ ಬಲ್ಲಿದನ ಮನೆ. ಬಡವನ ಮನೆ ಸಾಮಾನ್ಯತರಹದ್ದು. ಒಂದೆಡೆ ಕುರ್ಚಿಗಳು. ಬಲ್ಲಿದನ ಮನೆ ಸೋಫಾ, ಮಂಚಾ; ಮನೆ ತುಂಬಾ ಫೋಟೋಗಳು, ಕುರ್ಚಿಗಳು. ಬಾಗಿಲು ಕಿಟಕಿಯಲ್ಲಿ ಪರದೆಗಳು. ರಮೇಶ ಪತ್ರಿಕೆಯ ಸಂಪಾದಕ. ತಮ್ಮ ರಾಜಣ್ಣ ಬಡ ಉಪಾಧ್ಯಾಯ, ಪ್ರೈಮರಿ ಶಾಲೆಯಲ್ಲಿ. ನಾಗಮಣಿ ಆಕೆಯ ಗಂಡ. ಕುರ್ಚಿಯ ಮೇಲೆ ಕುಳಿತಿರಲು ಚನ್ನಯ್ಯನ ಪ್ರವೇಶ.)

(ರಮೇಶನ ಮನೆ-ಲೈಟ್ಆನ್)

ನಾಗಮಣಿ : ಯಾರು?

ಚನ್ನಯ್ಯ : ನಾನು ಚನ್ನಯ್ಯ, ಬುದ್ಧಿ.

ರಮೇಶ : ಏನು ಸಮಾಚಾರ?

ಚನ್ನಯ್ಯ : ಏನೂ ಇಲ್ಲ, ಇಂಗೆ ಬಂದಿದ್ದೆ ಕಣ್ ರಮೇಶಪ್ಪಾ. ನನ್ನ ಹೆಂಡ್ತಿ ತೀರೋಗಿ ಎಂಟು ದಿನವಾಯ್ತು... ಅದ್ಕೆ...

ನಾಗಮಣಿ : ಏನು....?

ಚನ್ನಯ್ಯ : ಅನ್ನೇಡ್ನೆ ದಿನದ ಸಮಾರಾದ್ನೆ ಮಾಡ್ಬೇಕು ಕನವ್ವಾ...

ರಮೇಶ : ಅದ್ಕೆ ನಿನ್ನ ಮಗ ಬೆಳ್ಳಿ ಕಳಿಸ್ಕೊಡ್ಬೇಕಾ?

ಚನ್ನಯ್ಯ : ಹ್ಞು ಕನಾಪ್ಪಾ...... ಮತ್ತೆ.......

ನಾಗಮಣಿ : ಅದೇನು ಮತ್ತೆ ....... ಮತ್ತೆ....... ಅಂತ ರಾಗ........

ಚನ್ನಯ್ಯ : ಅದ್ಕೆ...... ವಸಿ ಹಣ ಬೇಕಾಗಿತ್ರ.

ರಮೇಶ : ಹಣ........ ಈಗೊಂದು ಸ್ವಲ್ಪ ದಿನಗಳಲ್ಲಿ ಕೊಟ್ಟಿದ್ದೆ......

ಚನ್ನಯ್ಯ : ಈ ಸಾರಿ ಬೆಳೆ ಬಂದೇಟ್ಕೆ ಕೊಟ್ಬುಡ್ತೀನಿ ಸ್ವಾಮಿ. ವೋಸ ಮಾಡಾಕಿಲ್ಲ. ನಾನೂ ಒಂದಾನೊಂದು ಕಾಲ್ದಾಗೆ ಚಂದಾಕ್ ಬಾಳಿ ಬದುಕ್ದವ್ನೇ ಕಣ್ ರಮೇಶಪ್ಪ..... ಆದ್ರೆ ಈವತ್ತಿನ ಕಷ್ಟ ಪರಿಹಾರ ಮಾಡ್ಕಳಕೇ ಈಟೊಂದು ದೂರ ಬರಬೇಕಾಯಿತು. ಯಾನೋ ನಿಮ್ಮೆಪ್ರೇಳ್ಕಂಡು ನನ್ನೆಂಡ್ತಿ ಹನ್ನೇಡ್ನೇ ದಿನದ ಆರಾದ್ನೇ ಮಾಡ್ಕತೀನಿ ಕನಪ್ಪಾ..... ಮಗನ್ನ ಇನ್ನೊಂದು ವಾರ ಬುಟ್ಕಂಡು ಕಳುಸ್ಬುಡ್ತೀನಿಕನಪ್ಪಾ.

ನಾಗಮಣಿ : ಇದೇನ್ ನೀನೇಳ್ತಾ ಇರೋದು. ಒಂದು ವಾರ......, ಹಣ ಕೊಟ್ಟಿದ್ದೇವೆ ಅನ್ನೋದು ಗೊತ್ತಿದೇ ತಾನೇ......?

ಚನ್ನಯ್ಯ : ನನ್ನನ್ನ ನಂಬಿ ತಾಯೀ, ನಾನೆಂದ್ಗೂ ವೋಸ ಮಾಡಾಕಿಲ್ಲ.

ರಮೇಶ : ಈ ಕಾಲದಲ್ಲಿ ಅದನ್ನೆಲ್ಲಾ ಎಲ್ಲಿ ನಂಬಕ್ಕಾಗುತ್ತೆ ಹೇಳು.

ಚನ್ನಯ್ಯ : ಯೋನೋ ಅವ್ರವ್ವ ಪರಸಾದ ವೊಸಿ ತಕ್ಕಂಬರ್ಲಿ ಅಂತ ಯೋಳ್ದೆ ಕನಪ್ಪಾ... ಅಂಗರೇ ಎಳ್ಡು ದಿನಗಳಲ್ಲಿ ಕಳಸ್ಬುಡ್ತೀನಿ ಬುಡಿ.

ಬೆಳ್ಳಿ : ಅಪ್ಪಾ...... ಬ್ಯಾಡ ವೋಗಪ್ಪಾ...

ಚನ್ನಯ್ಯ : ಬೆಳ್ಳಿ, (ಅಳುತ್ತಿರಲು)

ನಾಗಮಣಿ : ಏನೋ ಬಡವ ಅಂತ ಕರುಣೆ ತೋರ್ಸಿದ್ದಕ್ಕೆ ಶುರುಮಾಡ್ಬಿಟ್ಯಲ್ಲಾ ಪುರಾಣ... ಶುಕ್ರವಾರ, ಸೋಮವಾರ ಅಂತ ನಮ್ಮ ಮನೇಲಿ ಕಣ್ಣೀರಾಕಕ್ಕೆ ಬಂದ್ಯೇನು? ಇಷ್ಟ ಇದ್ರೆ ಇರಿಸು, ಕಷ್ಟ ಇದ್ರೆ ಕರ್ಕೊಂಡೋಗು. ನೀವು ಸೋನೆ ಹಾಕೋದಕ್ಕೆ ನಮ್ಮ ಮನೇನೇ ಆಗಬೇಕೇನು?

ಚನ್ನಯ್ಯ : ಅಂಗ್ಯಲ್ಲಾ ತಿಳ್ಕಾಬ್ಯಾಡ ಕನವ್ವಾ. ಎತ್ತ ಕಳ್ಳು... ಅವರವ್ವ ಪರಸಾದ ತಕ್ಕಂಬರ್ಲಿ ಅಂತ ಅಂದೆ. ಕ್ವಾಪ ಮಾಡ್ಕಬೇಡಿ.... ನೀವ್ಯಾಳ್ದಾಗೇ ಇಲ್ಲೇ ಇರಲಿ. ನಾ ಬತ್ತೇನೆ ಕಣಪ್ಪಾ...... ಬತ್ತೀನಿ ಕೂಸು, ಬೆಳ್ಳೀ..... ಬತ್ತೀನಿ...... ಕೂಸು ಬೆಳ್ಳಿ...... ಬತ್ತೀನಿ.......

ಬೆಳ್ಳಿ : ಆಗ್ಲಿಕನಪ್ಪಾ......

ಚನ್ನಯ್ಯ : ಬತ್ತೀನಿ ಕನ್ ರಮೇಷಪ್ಪಾ...ಬತ್ತೀನಿ ಕನ್ ನಾಗಮಣವ್ವಾ...

ಚನ್ನಯ್ಯ : ಬೆಳ್ಳಿ...... ಬಾ ಕೂಸು ಇಲ್ಲಿ ...... ಒಂದು ಐದು ರೂಪಾಯ್ ಕ್ವಾ......

ಬೆಳ್ಳಿ : ನಂಗ್ಯಾಕ್ ದುಡ್ಡು, ಬ್ಯಾಡಕನ್ ನೀನೇ ತಕ್ಕಂಡೋಗಪ್ಪಾ. ಬಸ್‌ಗೋಗೋಕೂ ಮುಂಚೆ ವಸಿ ಪುರಿಗಿರಿ ತಿನ್ಕಂಡು ನೀರ್ಕುಡ್ಕಂಡೋಗು, ಹೊಟ್ಟೆ ಹಸಿದು ತಲೆಗಿಲೆ ಸುತ್ತಿ ಬಿದ್ದು ಬುಟ್ಟೀಯೆ.

ಚನ್ನಯ್ಯ : ಆಗ್ಲಿ ಹೋಗಪ್ಪಾ...

ನಾಗಮಣಿ : ಸಾಕು ನಡ್ಯೊಲಾ ಮಾತು. ಬಚ್ಚಲ ಮನೆ ತೊಳೆದು ಬಟ್ಟೆ ಒಗೆದು ಹಾಕು ನಡಿ.

ಬೆಳ್ಳಿ : ಆಗ್ಲಿ ಕನವ್ವಾ...

ರಮೇಶ : ನಾನು ಪ್ರೆಸ್ಸಿಗೋಗ್ತೀನಿ ಹೊತ್ತಾಯ್ತು.

ನಾಗಮಣಿ : ಸರಿ...

(ರಮೇಶನ ನಿರ್ಗಮನ, ಬೆಳ್ಳಿ ಒಳಗೆ ನಡೆದ. ಚನ್ನಯ್ಯ ನಿರಾಶನಾಗಿ ನಡೆವ)

ನಾಗಮಣಿ : (ಹೋಗುತ್ತಿದ್ದ ಬೆಳ್ಳಿಯನ್ನುದ್ದೇಶಿಸಿ) ಲೋ ಬೆಳ್ಳಿ ಬಾರೋ ಇಲ್ಲಿ.

ಬೆಳ್ಳಿ : ಏನ್ರವ್ವಾ?

ನಾಗಮಣಿ : ನಾನು ಸ್ವಲ್ಪ ಇಲ್ಲೇ ನನ್ನ ಜೊತೆಗಾತಿ ಮನೆಗೆ ಹೋಗಿ ಬರ್ತೀನಿ, ನೀನು ಇಲ್ಲೇ ಇರಬೇಕು. ಯಾರು ಕೂಗಿದ್ರೂ ಬಾಗಿಲು ತೆಗೀಬೇಡ. ನಾನು ಮುಂದೆ ಬೀಗ ಹಾಕ್ಕೊಂಡ್ಹೋಗಿರ್ತೀನಿ. ಹಿಂದೆ ನೀನು ಬಾಗಿಲು ತಾಳ ಹಾಕ್ಕೊಂಡಿರು. ನಾನು ಬರೋ ಹೊತ್ಗೆ ಅಡಿಗೆ ಮಾಡಿ, ಬಟ್ಟೆ ಒಗೆದು ಹಾಕಿರಬೇಕು ಗೊತ್ತಾಯ್ತಾ?

ಬೆಳ್ಳಿ : ಆಗ್ಲವ್ವಾ...

ನಾಗಮಣಿ : ಸರಿ, ಮನೆ ಕಡೆ ಜ್ವಾಪಾನ. ಅಂದಹಾಗೆ ಸ್ವಾಮಿಯವ್ರು ಬಂದು ಕೇಳಿದ್ರೆ ಎಲ್ಲಾದ್ರೂ ಬಾಯ್ ಗೀಯ್ ಬಿಟ್ಟೀಯೇ? ತಾಯಿಯವರು ಅಲ್ಲಿಗ್ಹೋಗಿದ್ದಾರೆ ಇಲ್ಲಿಗ್ಹೋಗಿದ್ದಾರೆ ಅಂತ... ತಿಳೀತೇನು?

ಬೆಳ್ಳಿ : ಇಲ್ಲ ಕಣವ್ವಾ...ಏನೂ ಏಳಾಕಿಲ್ಲ.

ನಾಗಮಣಿ : ನಿನಗೆ ಬೇಕಾದ ಅಡಿಗೆ ಸಾಮಾನನ್ನೆಲ್ಲಾ ಅಡಿಗೆಮನೇಲೆ ಇಟ್ಟಿದ್ದೇನೆ ಅಷ್ಟರಲ್ಲಿ ಅಚ್ಚುಕಟ್ಟಾಗ್ ಮಾಡಬೇಕು.

ಬೆಳ್ಳಿ : ಆಗ್ಲವ್ವಾ....

(ಹೊರಡುವಳು)

* * *

## ದೃಶ್ಯ-೨

(ರಾಜಣ್ಣ ಸಾಮಾನ್ಯ ಉಡುಗೆಯಲ್ಲಿ ಯೋಚನಾಮಗ್ನನಾಗಿ ಕೂತಿರಲು ಅಲ್ಲಿಗೆ ಅವನ ಜೊತೆ ಕೆಲಸ ಮಾಡುವ ಮತ್ತೊಬ್ಬ ಉಪಾಧ್ಯಾಯ ರಘು ಬರುವನು-ಹೂವಿನ ಹಾರವನ್ನು ಹಿಡಿದುಕೊಂಡು)

ರಾಜಣ್ಣ : ಓಹೋ... ಬನ್ರಪ್ಪಾ ರಘು...ಬನ್ನಿ.

ರಘು : ಏನು ಮೂರ್ತಿಯವರು ಏನೋ ಗಾಢವಾಗಿ ಯೋಚನೆ ಮಾಡ್ತಾ ಕುಳ್ತಿದ್ದಾಗಿತ್ತು?

ರಾಜಣ್ಣ : ಮನುಷ್ಯ ಅಂದ ಮೇಲೆ ಅವೆಲ್ಲಾ ಇರೋದೇ, ಬಾರಯ್ಯಾ ಕುಳಿತ್ಕೋ,

(ಮತ್ತೊಂದು ಕುರ್ಚಿ ತೋರುವ. ಆತನು ಕುಳಿತುಕೊಳ್ಳುವನು)

ರಘು : ಏನು ಸಂಸಾರದ ತಾಪತ್ರಯಗಳನ್ನು ಲೆಕ್ಕ ಹಾಕ್ತಿದ್ದೆ ಅಂತ ಕಾಣುತ್ತೆ.

ರಾಜಣ್ಣ : ಅದು ಯಾರನ್ನ ತಾನೇ ಬಿಟ್ಟಿದ್ದು ಬಿಡಯ್ಯಾ. ಒಂದು ದಿನ್ವಲ್ಲ ಒಂದು ದಿನ ಎಲ್ಲರ ಪಾಲಿಗೂ ಬರೋದೇ.

ರಘು : ಅದೂ ನಿಜಕಣ್ ರಾಜಣ್ಣ... ನನಗೂ ಅಷ್ಟೇ. ಒಂಟರಗಾಳಿ ಸುಂಟರಗಾಳಿಯಾಗಿದ್ದಾಗ ನಮಗೆ ಇವೆಲ್ಲಾ ಇತ್ತೇ ನೀನೇ ಹೇಳು?

ರಾಜಣ್ಣ : ಎಲ್ಲಿತ್ತಯ್ಯಾ! ಒಳ್ಳೆ ಹಕ್ಕಿಗಳ ಹಾಗೆ ಹಾರಾಡ್ಕೊಂಡಿದ್ವೋ... ನಾವು ನೋಡ್ತಿದ್ದ ಸಿನಿಮಾ, ನಾಟಕ, ಸರ್ಕಸ್‌ಗಳೇನು? ನಾವು ತಿನ್ದೇ ಇರೋ ಹೋಟೆಲ್‌ಗಳ್ಯಾವು? ನೀನೆ ಹೇಳ್ತಿದ್ದೆ ಆಗ "ಹೆಂಡ್ತಿ ಇಲ್ಲ ಮಕ್ಕಳು ಇಲ್ಲ ಕದರದಾಸ"ಅಂತ, ನಿನಗೇನ್‌ಗೊತ್ತಯ್ಯಾ ಸಂಸಾರದ ಸುಖ ದುಃಖ ಅಂತ.

ರಘು : ಅದು ಹಳೇ ಮಾತಾಯ್ತು ಬಿಡಯ್ಯಾ ?

ರಾಜಣ್ಣ : ಈಗ ಹೊಸದೇನು?

ರಘು : ಈಗ ನಾವು ದಿನಂಪ್ರತಿ ಪಡೋ ಪಾಡೇ ಹೊಸದ.

ರಾಜಣ್ಣ : ಅದು ಇನ್ನೊಂದು ಸಾರಿ ಹೇಳು.

ರಘು : ಒಂದು ಸಾರಿ ಹೇಳಿದ್ರೆಲ್ಲಿ ಸಾಲತ್ತೆ? ಇನ್ನೂ ಹತ್ತು ಸಾರಿ ಹೇಳ್ತೀನಿ ಕೇಳು.

ರಾಜಣ್ಣ : ಹೋಗ್ಲಿ ನನ್ನ ಟ್ರಾನ್ಸ್‌ಫರ್ ವಿಷಯ ಏನಾಯ್ತಯ್ಯಾ?

ರಘು : ಏನೂ ಇಲ್ವಂತೆ ನಿನ್ಗೆ ಈ ಸಾರಿ. ನನ್ನದು ಮುಗೀತಲ್ಲ...ಇನ್ನು ನಾನು ಮಂಗಳೂರು ತಿಟ್ಟು ಹತ್ತಬೇಕು.

ರಾಜಣ್ಣ : ಪಾಪ ನಿನಗೆ ಈಗ್ಲೇ ಆಗಬಾರದಾಗಿತ್ತು. ಸದ್ಯ ನನ್ನದೇ ಪುಣ್ಯ ಬಿಡಪ್ಪಾ.

ರಘು : ಯಾಕೆ?

ರಾಜಣ್ಣ : ಮತ್ತಿನ್ನೇನಯ್ಯಾ ನನ್ನ ಸಂಸಾರ ಸಾಗಿಸೋದು ಅಂದ್ರೆ ಸರ್ಕಸ್ ಕಂಪನಿ ಒಂದು ಊರಿಂದ ಮತ್ತೊಂದೂರಿಗೆ ಸಾಗಿಸದ್ಹಾಗೆ...

ರಘು : (ನಗುತ್ತಾ) ಅದು ನಿಜ ಅನ್ನು...

ರಾಜಣ್ಣ : ನಿಜ ಅನ್ನೋದೇನು? ಆಗಿಯೇ ಹೋಗಿದೆಯಲ್ಲಾ.

ರಘು : ಏನಯ್ಯಾ, ನಾನ್ಹೇಳೋದು ಒಂದು ವಿಷಯ.

ರಾಜಣ್ಣ : ಒಂದೇಕೆ ಎರಡನ್ನೇ ಹೇಳು.

ರಘು : ಅಲ್ಲಾ, ಈ ಮೇಷ್ಟ್ರುಗಳಿಗೇ ಅಷ್ಟು ಅಂತ ತೋರುತ್ತೆ.

ರಾಜಣ್ಣ : ಏನು?

ರಘು : ಈ ಅತಿ ಮಕ್ಕಳು.

ರಾಜಣ್ಣ : ಹೌದಯ್ಯ...

ರಘು : ಏನು ಕಾರಣ?

ರಾಜಣ್ಣ : ಏನೋ ಅಪ್ಪಾ, ದಿವಸಾ ಅತಿ ಮಕ್ಕಳನ್ನು ನೋಡೀ ನೋಡೀ ನಮಗೂ ಹೆಚ್ಚಿನ ಸಂಖ್ಯೆ ಮಕ್ಕಳಾಗೋದ್ಕೆ ಕಾರಣ ಅಂತಾರೆ ನಮ್ಮ ಹಿರಿಯ ಮೇಷ್ಟ್ರು ಅಂದ್ರೆ ಎತ್ತಿದ ಕೈ ಅಂತಾರೆ. ಅದೇನೋ ಆ ದೇವರಿಗೇ ಗೊತ್ತಪ್ಪಾ.

ರಘು : ಅದು ಅವರ ಕಾಲದ ಮಹಿಮೆ ಅಂತೀನಿ ನಾನು. ಬಡ ಮೇಷ್ಟ್ರು, ಮೇಷ್ಟ್ರಿಗೆ ಮಕ್ಕಳು ಹೆಚ್ಚು ಅನ್ನೋದೆಲ್ಲಾ ಬರೇ ಕುರುಡು ನಂಬಿಕೆ ಅನ್ತೀನಪ್ಪಾ ನಾನು.

ರಾಜಣ್ಣ : ನಮ್ಮ ಭಾಗ್ಯಕ್ಕಿದೆಯಲ್ಲಾ ಏನು ಮಾಡೋದು?

ರಘು : ನೂರಕ್ಕೆ ಹತ್ತು ಜನಕ್ಕಿರಬಹುದು. ಅದಕ್ಕೇನು ಮಾಡೋಕಾಗುತ್ತೆ? ಇರ್ಲಿ ನಾನು ಬರ್ತೇನೆ ಕಣಯ್ಯ.

ರಾಜಣ್ಣ : ಎಲ್ಲಾದ್ರೂ ಉಂಟೆ? ಕಾಫಿ ಕುಡಿಮುಕೊಂಡು ಹೋಗಬೇಕು.

ರಘು : ಇಲ್ಲ ಅರ್ಜೆಂಟ್ ಎಲ್ಲೋ ಹೋಗಬೇಕು. ಇನ್ನು ಮಂಗಳೂರಿಗೆ ಹೋಗೋದು ಮೂರು ದಿನ ಉಳಿದಿದೆ. ಎಲ್ಲಾ ಪ್ಯಾಕ್ ಮಾಡಬೇಕು. ಇನ್ನೊಂದು ಸಾರಿ ಬರೋಣ.

ರಾಜಣ್ಣ : ನೀವು ಊರಿಗ್ಹೋಗೋ ಮುಂಚೆ ನಿಮ್ಮ ಮನೆಯವರನ್ನೆಲ್ಲಾ ಕರೆದುಕೊಂಡು ಬಾರಯ್ಯ ಮರೀಬೇಡ.

ರಘು : ಆಗಲಿ... ಈಗ ನಾನು ಹೊರಡ್ತೇನೆ.

ರಾಜಣ್ಣ : ಇದೇನಯ್ಯಾ ಹೂವಿನ ಹಾರಗಳ್ನೆಲ್ಲಾ ಇಲ್ಲೇ ಬಿಟ್ಟು ಹೋಗ್ತಿದ್ದೀಯೆ?

ರಘು : ನಿನ್ನ ಮನೆಯಲ್ಲಿ ನಿನ್ನ ಮಕ್ಕಳು ಮುಡಿದುಕೊಳ್ಳಿ ಬಿಡು...

ರಾಜಣ್ಣ : ಸಾಕೇ ಇಷ್ಟು...

ರಘು : ಇನ್ನೂ ಬೇಕಾದಷ್ಟಿತ್ತಯ್ಯ, ಎಲ್ಲವನ್ನೂ ಸ್ಕೂಲ್ನಲ್ಲೇ ಹೆಣ್ಣು ಮಕ್ಕಳಿಗೆ ಕೊಟ್ಟೆ. ಎಷ್ಟು ಅಂತ ತರೋದ್ಕಾಗುತ್ತೇ? ಯಾಕಿಷ್ಟೊಂದು ದುಬಾರಿಯಾಗಿ ಮಾಡಿದ್ರಪ್ಪಾ.

ರಾಜಣ್ಣ : ಏನೋ ಅಭಿಮಾನ. ಗುರು ಶಿಷ್ಯರ ಬಾಂಧವ್ಯ... ನಡೀಲಿ ಬಿಡು.

ರಘು : ಹುಡುಗರೆಲ್ಲಾ ಹೂವಿನ ಹಾರ ಹಾಕಿ ನಮಸ್ಕಾರ ಮಾಡಿ ಕಣ್ಣೀರು ಸುರಿಸ್ತಾ ಸುತ್ತುಗಟ್ಟಿಕೊಂಡು ದುಃಖ ಪಟ್ಟಿದ್ದನ್ನು ನೋಡಿ ನನ್ಗೂ ಕಣ್ಣೀರು ಬಂದು ಬಿಡ್ತು ಕಣಯ್ಯಾ.

ರಾಜಣ್ಣ : ಪಾಪ ಮಕ್ಕಳ ಮನಸ್ಸೇ ಅಷ್ಟು. ಹೂವು ಇದ್ದ ಹಾಗೆ, ಅಲ್ವೇ?

ರಘು : ಎಲ್ಲರಿಗೂ ಸಮಾಧಾನ ಮಾಡಿ ಬರೋಹೊತ್ಗೆ- ಇಷ್ಟು ಹೊತ್ತಾಯ್ತು. ಸರಿ ಹಾಗಾದ್ರೆ ಬರ್‍ಲಾ...

ರಾಜಣ್ಣ : ಸರಿಯಪ್ಪಾ...

(ರಘು ಹೊರಡುವನು)

(ನಿಟ್ಟುಸಿರಿಡುತ್ತಾ ರಾಜಣ್ಣ ಕುಳಿತಿರಲು ಹೆಂಡತಿ ಶಾರದ ಬರುವಳು)

ರಾಜಣ್ಣ : ಶಂಭೋ ಶಂಕರ ಮಹಾದೇವ!

ಶಾರದ : ಏನ್ರೀ...ಶಂಭೋ ಶಂಕರ ಮಹಾದೇವ ಅಂತ ಆರಾಮ ಕುರ್ಚಿ ಮೇಲೆ ಆರಾಮವಾಗಿ ಕುಳಿತು ಬಿಟ್ರಲ್ಲಾ...ಏಕೆ?

ರಾಜಣ್ಣ : ಇನ್ನೇನ್ಮಾಡು ಅಂತೀಯಾ?

ಶಾರದ : ಯಾರೋ ಸ್ನೇಹಿತರೊಂದಿಗೆ ಲೆಚ್ಚರ್ ಕೊಡ್ತಿದ್ರಲ್ಲಾ, ಅವರನ್ನು ಸ್ವಲ್ಪ ಕಾಫಿನಾದ್ರೂ ಕುಡಿದು ಹೋಗಿ ಅನ್ಬಾರ್‍ದಾಗಿತ್ತೇ?

ರಾಜಣ್ಣ : ಅಂದೆ, ಅವ್ರೇನೋ ಬೇರೆ ಊರಿಗ್ಹೋಗೋ ಅರ್ಜೆಂಟ್ನಲ್ಲಿದ್ರು, ಇನ್ನೊಂದು ದಿನ ಸಂಸಾರ ಸಮೇತರಾಗಿ ಬರಲಿಕ್ಕೆ ಹೇಳಿದ್ದೇನೆ. ಬರ್‍ತಾರೆ ಬಿಡು.

ಶಾರದ : ಏಕೆ ಈ ಹೊತ್ತು ಒಂದು ತರಹ ಬೇಸರದಲ್ಲಿರುವಂತೆ ಕಾಣುತ್ತೆ?

ರಾಜಣ್ಣ : ಸಂತೋಷ ಅನ್ನೋದು ಎಲ್ಲಿ ಬರಬೇಕು ಹೇಳು?

ಶಾರದ : ಏಕೆ?

ರಾಜಣ್ಣ : ಮನುಷ್ಯನನ್ನು ದೇವರು ಸೃಷ್ಟಿ ಮಾಡಿರೋದು ಕಷ್ಟ-ಸುಖ ಎರಡರಲ್ಲೂ ತೇಲೋದಕ್ಕೆ. ಅದರಲ್ಲಿ ಕಷ್ಟ ಅನ್ನೋದನ್ನ ನಮಗಿಟ್ಟು ಸುಖ ಅನ್ನೋದನ್ನು ಬೇರೆಯವರಿಗೆ ಮೀಸಲಾಗಿಟ್ಟಿದ್ದಾನೋ ಏನೋ?

ಶಾರದ : ಏನೋ ನಾವು ನಾವು ತಂದಿದ್ದನ್ನು ನಾವು ಅನುಭವಿಸಬೇಕು ಬಿಡಿ.

ರಾಜಣ್ಣ : ಆಗೋಲ್ಲ ಅಂದ್ರೆ ಅನುಭೋಸೋದಕ್ಕೆ ಯಾರು ಬರ್‍ತಾರೆ ಹೇಳು?

ಶಾರದ : ಅದಕ್ಕೆ ...ಈಗ ಅನುಭೋಗಿಸೋಣ. ಓಹೋ...ನಾಗಮಣಿ ಬಂದಳು... ಬಾರಮ್ಮ ಕುಳಿತುಕೋ...

ನಾಗಮಣಿ : ಕುಳಿತುಕೊಳ್ಳೋದಿರ್‍ಲಿ, ಈಗೇನು ನೀವು ಊರ್‍ನಲ್ಲೇ ಇದ್ದೀರೋ ಏನು?

ಶಾರದ : ಊರ್‍ನಲ್ಲಲ್ದೆ ಕಾಡ್ನಲ್ಲಿದ್ದೀವೇನು?

ನಾಗಮಣಿ : ನನಗೇನೋ ಹಾಗೆ ತೋಚುತ್ತೆ.

ಶಾರದ : ಯಾಕೆ?

ನಾಗಮಣಿ : ಮತ್ತೆ ನೀವು ನಮ್ಮ ಮನೆಗೆ ಬಂದು ಒಂದು ತಿಂಗಳೇ ಆಯ್ತು. ಯಾಕೆ ಮನೆ ಕಡೆ ಬರಬಾರ್ದೇ?

ಶಾರದ : ಒಂದೂರ್ನಲ್ಲಿ ಇದ್ಮೇಲೆ ಹೋಗೋದು ಇದ್ದೇ ಇರುತ್ತೆ. ಮಾತಾಡ್ತಾ ನಿಂತೇ ಬಿಟ್ಟೆ, ಬಾ... ಕುಳಿತುಕೋ ನಾಗಮಣಿ. ಬರ್ದೇ ಏನು ಯಾವ ಹೊತ್ತು ಬೇಕೋ ಆ ಹೊತ್ತು ಬರ್ತೇವೆ.

ರಾಜಣ್ಣ : ಬಾರಮ್ಮ ಕುಳಿತುಕೋ.

ನಾಗಮಣಿ : ಆಗ್ಲಿ ಭಾವಾಜೀ...(ಕುಳಿತುಕೊಳ್ಳುವಳು)

ರಾಜಣ್ಣ : ಮನೆ ಕಡೆ ಮಕ್ಕಳು ಎಲ್ಲಾ ಚನ್ನಾಗಿದ್ದಾರಮ್ಮ?

ನಾಗಮಣಿ : ಚೆನ್ನಾಗಿದ್ದಾರೆ ಭಾವಾಜಿ. ಈ ಹೊತ್ತು ನಮ್ಮ ಉದಯನಿಗೆ ಹುಟ್ಟಿದ ಹಬ್ಬ. ಅದಕ್ಕೆ ನಿಮ್ಮನ್ನೆಲ್ಲಾ ಕರೆದುಬಿಟ್ಟು ಹೋಗೋಣ ಅಂತ ಬಂದೆ.ಖಂಡಿತ ಬರಬೇಕು.

ರಾಜಣ್ಣ : ಆಗ್ಲಮ್ಮ.

ನಾಗಮಣಿ : ಅಂದ ಹಾಗೆ ಮಕ್ಕಳೆಲ್ಲಾ ಎಲ್ಲಿ ಶಾರದಾ?

ಶಾರದ : ಇದೀಗ ತಾನೇ ಎಲ್ಲರೂ ಸ್ಕೂಲಿಗ್ಹೋದ್ರು.

ನಾಗಮಣಿ : ಸಾಯಂಕಾಲ ಬರೋವಾಗ ಮಕ್ಕಳನ್ನೂ ಕರೆದುಕೊಂಡು ಖಂಡಿತ ಬರಬೇಕು ಎಲ್ಲಾ. ಆ್ಞಂ....

ಶಾರದ : ಆಗ್ಲಮ್ಮ

ನಾಗಮಣಿ : ಸರಿ ಹಾಗಾದ್ರೆ ನಾನು ಬರ್ತೀನಿ.

ಶಾರಧ : ಸ್ವಲ್ಪ ಕಾಫಿ ತರ್ತೇನೆ.

ನಾಗಮಣಿ : ಇಲ್ಲ ಇದೀಗ ತಾನೇ ಆಯ್ತು. ಖಂಡಿತ ಬೇಡಿ ಅಕ್ಕ ನನಗೆ ಇನ್ನೂ ಬೇಕಾದಷ್ಟು ಮನೆಗಳು ಉಳಿದುಕೊಂಡಿವೆ. ಎಲ್ಲರನ್ನೂ ಕರೆದು ಹೋಗಬೇಕು. ಇನ್ನೊಂದು ದಿನ ಬೇಕಾದ್ರೆ ಬಿಡುವಾಗಿ ಬಂದು ತಿಂಡಿನೂ ತಿಂದು ಕಾಫಿನೂ ಕುಡಿದು ಹೋಗ್ತೀನಿ ಸರಿಯಾ? (ಇಬ್ಬರೂ ನಗುವರು, ನಾಗಮಣಿ ಹೋಗುವಳು.)

ಶಾರದ : ಒಳ್ಳೇದು.

ರಾಜಣ್ಣ : ಏನೇ, ನೀನೂ ಹೋಗಿ ಬರ್ತೀಯೇನು?

ಶಾರದ : ನಾನು ಹೋಗೋಲ್ಲಪ್ಪ. ನೀವೇ ಹೋಗಿ ಬನ್ನಿ.

ರಾಜಣ್ಣ : ನೀನು ನಿನ್ನ ಮಕ್ಕಳು ಹೋಗಿ ಬನ್ನಿ.ನಾನು ಮಾತ್ರ ಹೋಗೋಲ್ಲ.

ಶಾರದ : ಅವರೆಲ್ಲಾ ಹುಟ್ಟಿದ ಹಬ್ಬ ಮಾಡಿ ಕರೀತಾರೆ. ನಮಗೆ ಹೊಟ್ಟೆ ಹಬ್ಬವೆ ದೊಡ್ಡದಾಗಿದೆ. ನಾಚಿಕೆ ಇಲ್ಲದೆ ವಾಯಾದಿ ಮನೆಗೆ ಹೇಗೆ ತಾನೇ ಹೋಗೋಮು? ನಾವು ಮಾಡಿ ಕರ್‍ಯೋಕೆ ಶಕ್ತಿ ಇದ್ರೆ ಹೋಗಬೇಕು, ಇಲ್ದೆ ಇದ್ರೆ ಯಾಕೆ ನಮಗೆ ದೊಡ್ಡಸ್ತನ?

ರಾಜಣ್ಣ : ಇರೋವ್ರು ಏನೋ ಮಾಡಿದ್ರೂ ಚಂದ. ಇಲ್ದೇ ಇರೋರು ಏನು ಮಾಡ್ದೇ ಹೋದ್ರು ಚೆಂದ ಕಣೇ. ಅದ್ಕೇನಂತೆ ಹೋಗಿ ಬಾ ನೀನು.

ಶಾರದ : ಹಾಗಂದ್ಬಿಟ್ಟು ಅವರ ಮನೆಗೆ ಹೋಗು ಅನ್ತೀರಾ?

ರಾಜಣ್ಣ : ಹೋಗಿ ನಾಲ್ಕು ಅಕ್ಷತೆ ಕಾಳು ತಲೆ ಮೇಲೆ ಹಾಕಿ ಬಾ.

ಶಾರದ : ಹೋಗೀ ಅಂದ್ರೆ ನೀವು ಹೇಳೋದು ಹೋಗಿ ನಾಲ್ಕು ಅಕ್ಷತೆ ಕಾಳನ್ನು ತಲೇ ಮೇಲೆ ಹಾಕಿ ಒಳ್ಳೇದಾಗ್ಲಿ ಅಂದ್ಬಿಟ್ಟು ಬರೋದಕ್ಕೆ ಹೋಗ್ಬೇಕೆ? ನಾವು ಬದ್ಕಿದಕ್ಕೆ ಸಾರ್ಥಕನಾಯ್ತು ಬಿಡಿ.

ರಾಜಣ್ಣ : ಯಾಕೆ?

ಶಾರದ : ಏನಾದ್ರೂ ಒಂದು ಪ್ರೆಸೆಂಟೇಷನ್ನಾದ್ರೂ ಕೊಡಬೇಡ್ವೇನು?

ರಾಜಣ್ಣ : ಈ ಕಾಲದಲ್ಲಿ ಅದನ್ನೆಲ್ಲಾ ಕಟ್ಕೊಂಡ್ರಾಯ್ತು ಹೋಗು.

ಶಾರದ : ಅಷ್ಟೆಲ್ಲಾ ಇಲ್ಲದ ಮೇಲೆ ಘನವಾಗಿ ಗಂಭೀರವಾಗಿ ನಮ್ಮ ಮನೇಲಿ ನಾವಿರೋದು ಲೇಸು ಬಿಡಿ.

ರಾಜಣ್ಣ : ಸರಿ ಇನ್ನು ನಿನ್ನ ಇಷ್ಟ. ನಾನು ಸ್ಕೂಲಿಗೆ ಹೋಗಿ ಬರ್ತೀನಿ ಹೊತ್ತಾಯ್ತು.

ಶಾರದ : ಸರಿ ಹೋಗಿ ಬನ್ನಿ. (ಹೊರಡುವನು)

* * *

## ದೃಶ್ಯ-೩

ನಾಗಮಣಿ : ಬೆಳ್ಳೀ...

ಬೆಳ್ಳಿ : ಏನವ್ವಾ...?

ನಾಗಮಣಿ : ಮನೆ ಕಸ ಎಲ್ಲಾ ಹೊಡ್ದೇನೋ?

ಬೆಳ್ಳಿ : ಆಗ್ಲೇ ಹೊಡ್ದೆ ಅಮ್ಮಾವ್ರೇ.

ನಾಗಮಣಿ : ಏನು ನಿನ್ನ ತಲೆ ಹೊಡ್ದಿರೋದು. ನಿನಗೆ ಕಣ್ಣುಗಿಣ್ಣು ಕಾಣ್ಸುತ್ತೋ ಇಲ್ವೋ? ಈ ಹೊತ್ತು ಉದಯನ ಹುಟ್ಟಿದಬ್ಬ. ನೆಂಟರು- ಇಷ್ಟರು ಬರ್‍ತಾರೆ ಅನ್ನೋ ಪರಿಜ್ಞಾನ ಬೇಡ್ವೇ ನಿಂಗೆ? ಬೆಪ್ಪು...ಗುಡಿಸಿದ್ದಾನಂತೆ...ಗುಡಿಸಿದ್ದಾನೆ? (ರೇಗುವಳು)

ಬೆಳ್ಳಿ : ನಾಗಮಣವ್ವ...ಗುಡಿಸ್ತೀನಿ ಕಣವ್ವಾ...ಗುಡಿಸ್ತೀನಿ...(ಅಳುತ್ತಿರಲು)

ನಾಗಮಣಿ : ಶುಭ ಕಾರ್ಯ ಮಾಡೋವಾಗ ಕಣ್ಣೀರು ಹಾಕಿದ್ರೆ ಕತ್ತರಿಸಿ ತೋರಣ ಕಟ್ಟಿಬಿಡ್ತೀನಿ ನೋಡು. ನಡಿ ಬೇಗ ಬೇಗ ಗುಡಿಸಿ ಮತ್ತೊಮ್ಮೆ ಸಾರಿಸು ಮನೆಯೆಲ್ಲಾ.....

ಬೆಳ್ಳಿ : ಇಲ್ಲವ್ವಾ...ಅಳೋಲ್ಲ...ಈಗ್ಲೇ ಪೊರಕೆ ತಂದು ಗುಡಿಸ್ತೀನಿ.

(ಪೊರಕೆ ತಂದು ಗುಡಿಸಿ ಹೋದಂತೆ ರಮೇಶ ಕೈಯನ್ನು ಹಿಂದಕ್ಕೆ ಕಟ್ಟಿಕೊಂಡು ಬರುತ್ತಿದ್ದಾನೆ.)

ನಾಗಮಣಿ : ಏನು ಸ್ವಾಮಿಯೋರು ಕೈ ಕಟ್ಟಿಕೊಂಡು ಒಳ್ಳೆ ಠೀವಿಯಿಂದ ಬರ್ತಾ ಇದ್ದೀರಿ?

ರಮೇಶ : ನೀವು ಏನು ಎದುರು ನೋಡ್ತಾ ನಿಂತಿದ್ದೀರಿ?

ನಾಗಮಣಿ : ತಮ್ಮ ಬರುವಿಕೆಯನ್ನೇ ಇದುರು ನೋಡ್ತಾ ಇದ್ದೆ.

ರಮೇಶ : ಆದೇ ಈಗ ಬಂದುಬಿಟ್ನಲ್ಲಾ.

ನಾಗಮಣಿ : ಬರೋದೇನೋ ಬಂದ್ರಿ- ಏನೂ ತರ್ಲಿಲ್ಲವಲ್ಲಾ ಅಂತ?

ರಮೇಶ : ನನಗಾಗಿ ಕಾದಿದ್ದೆ ಅದಕ್ಕಾಗಿ ನನ್ನನ್ನೇ ತಂದ್ಬಿಟದ್ದೀನಿ.

ನಾಗಮಣಿ : ಸಾಕು ನಿಮ್ಮ ಸರಸ!

ರಮೇಶ : ಹಾಗಾದ್ರೆ ವಿರಸದ ಮಾತಾಡ್ಲೇನು?

ನಾಗಮಣಿ : ಏಕೆ ಇನ್ನೊಬ್ಬಳನ್ನೇನಾದ್ರೂ ನೋಡಿದ್ದೀರೇನು?

ರಮೇಶ : ಬೇಕಾದಷ್ಟು ಜನ ನೋಡಿದ್ದೀನಿ.

ನಾಗಮಣಿ : ಯಾವ ಹೊತ್ತಿನಿಂದ ಈ ಬುದ್ಧಿ ಹುಟ್ಕೊಂತು ನಿಮ್ಮಲ್ಲಿ?

ರಮೇಶ : ನೀನು ಪ್ರಶ್ನೆ ಕೇಳಿದ ದಿನದಿಂದ.

ನಾಗಮಣಿ : ಗಂಡಸ್ರೇ ಅಷ್ಟು ಅಂತ ಕಾಣುತ್ತೆ. ಹೊಸ ಹೊಸಬರನ್ನು ನೋಡ್ತಿದ್ರೆ ಹಳಬಳಾಗಿ ಬಿಡ್ತಾಳೆ ಅಲ್ವೇನು?

ರಮೇಶ : ನಾಗಮಣಿ ಅನ್ನೋದ್ಕು ನಾಗಮಣೀನೆ ನೀನು. ಕಾಂತಿ ಕುಂದುತ್ತೀಯೇ? ಥೇಟ್... ನಾಗಮಣಿ ನೀನು.

ನಾಗಮಣಿ : ಸಾಕು ನಿಮ್ಮ ಹೊಗಳಿಕೆ ಬರ್ತಾ ಬರ್ತಾಸುತ್ತಿ ಬಳಸಿ ಮಾತಾಡೋದು, ಕವಿತ್ವ ಮಾಡೋದು ಕಲಿತುಬಿಟ್ಟಿದ್ದೀರಿ.

ರಮೇಶ : ಪತ್ರಿಕೆಯ ಸಂಪಾದಕ ಅಂದ ಮೇಲೆ ಅವೆಲ್ಲಾ ಇರ್ಲೇ ಬೇಕು, ಇಲ್ದೇ ಹೋದ್ರೆ ಹ್ಯಾಗೆ ಹೇಳು?

ನಾಗಮಣಿ : ಸರಿ ಆಯಾಸವಾಗಿ ಬಂದಿದ್ದೀರಿ. ಸ್ವಲ್ಪ ವಿಶ್ರಾಂತಿ ತಗೆದುಕೊಳ್ಳಿ ಬನ್ನಿ. ಆಮೇಲೆ ನಿಮ್ಮ ಬೆಲ್ಲದ ಮಾತು.

ರಮೇಶ : ನೀನಿದ್ದ ಮೇಲೆ ನನಗ್ಯಾವ ಆಯಾಸ ಬಿಡೇ?

ನಾಗಮಣಿ : ನಾನೊಬ್ಬಳಿದ್ರೆ ಸಾಕೇ?

ರಮೇಶ : ಜೊತೆಗಿದ್ದಾರಲ್ಲ ನನ್ನ ಮುತ್ತು ರತ್ನಗಳು.

ನಾಗಮಣಿ : ನೋಡ್ರಿ...ನಿಮ್ಮ ಮುತ್ತು ರತ್ನಗಳು ಎಷ್ಟೊಂದು ಪ್ರೈಜ್ ತಂದಿದ್ದಾರೆ? (ಎಂದು ಟೇಬಲ್ ಮೇಲಿದ್ದ ಪುಸ್ತಕಗಳು ಮೆಡಲ್‌ಗಳನ್ನು ತಂದು) ನೋಡಿ, ಇದು ಮಧುಮತಿಗೆ ಬಂದಿರೋದು; ರನ್ನಿಂಗ್ ರೇಸ್ಗಂತೆ. ಇದು ಲಾಂಗ್ ಜಂಪು, ಇದು ನಾಟಕಕ್ಕೆ ಬಂದುದು, ಇದು ಉದಯನಿಗೆ ರೆಸಿಟೇಷನ್ ಕಾಂಪಿಟೇಷನ್‌ಗೆ ಬಂದಿರೋದು, ಇದು ವಾಲಿಬಾಲ್‌ಗೆ ಬಂದಿರೋದು!

ರಮೇಶ : ಅಬ್ಬ ಅಬ್ಬ. "ನೋಡ್ದೇನೇ ನನ್ನ ಮುತ್ತು ರತ್ನಗಳನ್ನ?"

ನಾಗಮಣಿ : ಸಾಕು ಮಾಡಿ ನಿಮ್ಮ ಹೊಗಳಿಕೇನ.

ರಮೇಶ : ಇಂಥ ಮಕ್ಕಳನ್ನು ಪಡೆಯಬೇಕಾದ್ರೂ ಬೇಕೇ ಪುಣ್ಯ.

ನಾಗಮಣಿ : ಹೋಗ್ಲಿ ಈ ಹೊತ್ತು ಉದಯನ ಹುಟ್ಟಿದ ಹಬ್ಬ ಅನ್ನೋದಾದ್ರೂ ಗೊತ್ತಿದೆಯೇನು?

ರಮೇಶ : ಏನು ಪೇಪರ್‌ನಲ್ಲಿ ಬಂದಿತ್ತಾ?

ನಾಗಮಣಿ : ಏಕೋ ಬರ್ತಾ ಬರ್ತಾ ರಾಯರ ಕುದುರೆ ...ಎಲ್ಲಾನೂ ಪೇಪರ್ನಲ್ಲಿ ಪ್ರಿಂಟ್ ಮಾಡಿಸಬೇಕಾಗುತ್ತೇನು? ನೀವು ಪ್ರೆಸ್‌ನಲ್ಲಿದ್ದಿರೋ ಮನೆಯಲ್ಲಿದ್ದಿರೋ?

ರಮೇಶ : ಮನೆ...

ನಾಗಮಣಿ : ಆದ್ರೂ ಮನ ಅತ್ತಲೇ ಇದೆ ಅಂತ ತೋರುತ್ತೆ... ಮೂರು ಹೊತ್ತೂ ಅದೇ ಜ್ಞಾನ. ಸದಾಶಿವನಿಗೆ ಅದೇ ಜ್ಞಾನ ಅಂತ. ಒಳ್ಳೇ ಸಾಹಿತಿ ಆದ್ರಿ...ಪತ್ರಿಕೆ ಸಂಪಾದಕರಾದ್ರಿ.

ರಮೇಶ : ಅದಕ್ಕೆ ಈಗೇನು ಮಾಡು ಅಂತೀಯಾ?

ನಾಗಮಣಿ : ನಿಮ್ಮ ಮನಸ್ಸಿಗೆ ಒಪ್ಪಿದ ಹಾಗೆ ಮಾಡಿ ನನಗೇನು?

ರಮೇಶ : ನೆರೆ ಹೊರೆಯವ್ರೆಲ್ಲಾ ಬಂದಾಗ ಮಾನ ಹೋಗೋದು ಯಾರ್ಗೆ?

ನಾಗಮಣಿ : ನಿಮ್ಮಿಂದ ನನಗೆ!

ರಮೇಶ : ಸರಿ ಬಿಡು ನನಗೇನು?

ನಾಗಮಣಿ : ಕೈಯನ್ನೇಕೆ ಹಿಂದಕ್ಕೆ ಕಟ್ಕೊಂಡು ಸುಮ್ನೆ ನಿಂತೇ ಮಾತಾಡ್ತಿದ್ದೀರಾ? ಕೈಗೇನಾದ್ರೂ ಪೆಟ್ಟುಗಿಟ್ಟು ಬಿತ್ತೇನು?

ರಮೇಶ : ಬಿದ್ರೆ ನಿನ್ಗೆ ಸಂತೋಷವೇನು?

ನಾಗಮಣಿ : (ಕೈ ಬಿಡಿಸುತ್ತಾ) ಬಿಡ್ರಿ...ಕೈ...ಬರೀ ಹಾಸ್ಯಾನೇ ಮಾಡಲಿಕ್ಹೋಗಬೇಡಿ. ಇವನ್ನಾಗ್ಲೇ ತೋರ್ಸಿದ್ರೆ ಇಷ್ಟೆಲ್ಲಾ ಮಾತು ಬರ್‍ತಿತ್ತೇನು?

ರಮೇಶ : ಬರ್‍ಲಿ ಅಂತ್ಲೇ ನಾನು ಇಷ್ಟೆಲ್ಲಾ ಮಾಡ್ದೆ...

ನಾಗಮಣಿ : ಬರ್‍ತಾ ಬರ್‍ತಾ ಹುಡುಗ್ರಾದ್ರಿ ನೀವು.

ರಮೇಶ : ನೀನು ಹುಡುಗಿಯಾದೆ, ಅದಕ್ಕೆ ನಾನು ಹುಡುಗನಾದೆ.

ನಾಗಮಣಿ : ನಾಳೆ ದಿನ್ವೇ ಸೊಸೆ, ಅಳಿಯ ಬರೋ ಹೊತ್ತು...ನಾಚ್ಗೆ ಇಲ್ದೆ ಹುಡುಗ ಹುಡುಗಿ ಅಂತೀರಾ.

ರಮೇಶ : ನಾಚ್ಕೆ ಅನ್ನೋದೆಲ್ಲಾ ನಮ್ಮೂರ್‍ರಿಂದಾಚ್ಗೆ ಆಗಿಹೋಯ್ತು. ನಾನು ನೀನು ಗಂಡ ಹೆಂಡ್ತಿ. ಹೇಗಾಡಿದ್ರೂ ಅದು ಚೆಂದವೇ; ಅದು ಒಂದು ಆಟವೇ!

ನಾಗಮಣಿ : ಸಣ್ಣ ಹುಡುಗ್ರು ಗಂಡ ಹೆಂಡ್ತಿ ಅಂತ ಆಡ್ತಾರಲ್ಲ ಹಾಗಾಯ್ತು.

ರಮೇಶ : ಓಹೋ!ನಾನು ನೀನು ಸಣ್ಣವರಾಗಿದ್ದಾಗ ಆಡ್ತಿದ್ದ ಆಟಾನೆಲ್ಲಾ ಜ್ಞಾಪಕ ಮಾಡ್ಕೋತಿದ್ದೀಯಾ ಪರವಾಗಿಲ್ಲ ಕಣೆ. ಬಲು ಜ್ಞಾಪಕ ಶಕ್ತಿ ನಿನಗೆ.

ನಾಗಮಣಿ : ಬಾಯಿಗೆ ಬೀಗ ಹಾಕ್ಕೊಳ್ಳೀ...

ರಮೇಶ : ಅದೂ ಆಯ್ತಲ್ಲ, ಹಿಂದೆ ನೀನು ಕಾಯಿಲೆ ಬಿದ್ದಿದ್ದಾಗ ತಿರುಪತಿ ವೆಂಕಟರಮಣನಿಗೆ ಹರಕೆ ಹೊತ್ತು 'ನನ್ನ ಹೆಂಡತಿಗೆ ಹುಶಾರು ಮಾಡಪ್ಪಾ ಬಾಯಿಗೆ ಬೀಗ ಹಾಕಿಸಿಕೊಳ್ತೀನಿ'ಅಂತ ಹರಕೆ ತೀರ್‍ಸಿದ್ದೆ ಅಲ್ವೇ?

ನಾಗಮಣಿ : ಒಳ್ಳೆ ಸರಿಹೋಯ್ತು. ಮಾತಿಗೆ ಮಾತು ಪೋಣಿಸೋದು ಯಾವಾಗ್ಲೂ ನಿಮಗೆ.

ರಮೇಶ : ನೀನು ಕೇಳಿದ ಪ್ರಶ್ನೆಗೆ ಉತ್ತರ ಹೇಳಿದೆ ಅಷ್ಟೆ. ಹಾಗಾದ್ರೆ ಮಾತಾಡೊಲ್ಲ ಬಿಡು ಮೂಕನಾಗ್ತೀನಿ.

ನಾಗಮಣಿ : ಅದನ್ನೇ ಬಯಸಿಕೊಳ್ಳಿ (ಪ್ಯಾಕೆಟ್ ಬಿಚ್ಚಿ)ಸದ್ಯ ತಂದ್ರಲ್ಲಾ ಬಟ್ಟೆ...ಚೆನ್ನಾಗಿದೆ ಅಲ್ವಾ ಏಕ್ರಿ... ಮಾತಾಡ್ರೀ...

ರಮೇಶ : ಆಗ ಮಾತಾಡಬೇಡ ಅಂದೆ. ಈಗ ಮಾತಾಡಿ ಅಂತೀಯೆ. ನೀನೊಳ್ಳೆ ಪ್ರಚಂಡಿ ಕಣೆ. ನನ್ನನ್ನು ಬೇಕಾದ ಹಾಗೆ ಆಡಿಸ್ತೀಯಾ?

ನಾಗಮಣಿ : ನನಗೆ ಗೊತ್ತಿತ್ತು - ನೀವು ಮರೆಯೋವರಲ್ಲಾ ಅಂತ.

ರಮೇಶ : ನನಗೂ ಗೊತ್ತಿತ್ತು- ಮರೆತರೂ ಸುಮ್ನೆ ಬಿಡೊಲ್ಲ ಅಂತ.

ನಾಗಮಣಿ : ಸದ್ಯ ದೇವ್ರು ಒಳ್ಳೆ ಬುದ್ಧಿ ಕೊಟ್ಟನಲ್ಲ ನಿಮ್ಗೆ ಅಷ್ಟೇ ಸಾಕು .

ರಮೇಶ : ಅಂದ ಹಾಗೆ ಸ್ವೀಟ್ ಏನು ಮಾಡ್ತೀಯಾ?

ನಾಗಮಣಿ : ನನಗೆ ಗೊತ್ತೆ?

ರಮೇಶ : ನೀನು ಮಾಡೋದು ನಿನಗೆ ಗೊತ್ತಿಲ್ವೆ? ಅದು ಅಡುಗೆಯವರು ಮಾಡ್ತಾರೆ ಅನ್ನೋದು ಗೊತ್ತು.

ನಾಗಮಣಿ : ಈಗ ಮಾಡೋಕ್ಕಾಗುತ್ತೇನು? ಎಲ್ಲವನ್ನೂ ಸ್ವೀಟ್ ಮಾರ್ಟ್‌ನಲ್ಲೇ ತಂದು ಬಿಟ್ಟಿದ್ದೀನಿ; ಜಿಲೇಬಿ, ಲಾಡು ಉಂಡೆಗಳು. ಯಾವುದು ಬೇಕು ಅದು.

ರಮೇಶ : ವೆರಿಗುಡ್...ವೆರಿ ಗುಡ್...ನಡಿ ಸ್ವಲ್ಪ ರುಚಿ ನೋಡೋಣ.

ನಾಗಮಣಿ : ಈಗಲ್ಲಾ ಶಾಸ್ತ್ರ, ಮುಗಿದ ಮೇಲೆ.

* * *

## ದೃಶ್ಯ-೪

(ಹಿನ್ನಲೆಯಲ್ಲಿ ಮಕ್ಕಳ ಚೀರಾಟದ ಧ್ವನಿ, ರಾಜಣ್ಣನ ಮನೆಯಲ್ಲಿ. ಅದಾಗ ತಾನೇ ಶಾಲೆಯಿಂದ ಬಂದು ಬಟ್ಟೆ ತೆಗೆಯುತ್ತಿರಲು- ಹೆಂಡತಿ)

ಶಾರದ : ಕೇಳ್ತಾ ಇದ್ಯೇನು?

ರಾಜಣ್ಣ : ಇನ್ನೂ ಕಿವಿ ಕಿವುಡಾಗಿಲ್ಲ ಕಣೆ, ಕೇಳ್ತಾ ಇದೆ.

ಶಾರದ : ನಿಮ್ಮದು ಹೊರಗಡೆ ಒಂದು ಸ್ಕೂಲಾದ್ರೆ , ಮನೆ ಒಳಗೆ ಮತ್ತೊಂದು ಸ್ಕೂಲು. ಅದು ನಿಮಗೆ ಒಗ್ಗಿ ಹೋಗಿದೆ ಅಂತ ಕಾಣುತ್ತೆ.

ರಾಜಣ್ಣ : ಒಗ್ಗೊಲ್ಲ ಅಂದ್ರಾಗುತ್ತೇನು? ವಾತಾವರಣಕ್ಕೆ ಹೊಂದಿಕೊಂಡು ಹೋಗಬೇಕಲ್ವೇ?

ಶಾರದ : ಆದರೆ ನನಗೆ ಕೇಳಲಿಕ್ಕಾಗೊಲ್ವಲ್ಲ.

ರಾಜಣ್ಣ : ಕಿವಿಗೆ ಸ್ವಲ್ಪ ಅರಳೆ ಬತ್ತಿ ಹಾಕ್ಕೋ.

ಶಾರದ : ಇನ್ನೊಂದು ಸ್ವಲ್ಪ ದಿವಸವಾದ್ರೆ ಕಿವುಡ್ರಾಕ್ಕೋಳ್ಳೆ ಮಿಷನ್ನೇ ಹಾಕಿಸ್ಕೊಳ್ಳಬೇಕಾಗುತ್ತೆ.

ರಾಜಣ್ಣ : ಅದು ಈ ಜನ್ಮಕ್ಕೆ ಸಾಧ್ಯವಾಗದ ಮಾತು.

ಶಾರದ : ಅದೇನು ಬಂತೋ ನಿಮಗೆ... ನೀವು ನೆಗೆದು ಬಿದ್ದು ನೆಲ್ಲಿಕಾಯಾಗಾ... (ಎಂದು ಹೊರಡುವಳು)... ನಿಲ್ಲಿಸ್ರೋ ನಿಮ್ಮ ರಂಪಾಟ... (ಮತ್ತೆ ಕಾಫಿ ತಂದು ಇಟ್ಟು ) ತಗೆದುಕೊಳ್ಳಿ ಕಾಫಿ... (ಹಿನ್ನಲೆಯಲ್ಲಿ ದೂರದ ದಾಯಾದಿಯ ಮನೆಯಿಂದ ಸಂತಸದ ಧ್ವನಿ ಕೇಳಿ ಬರುವುದು.)

ಶಾರದ : ಕೇಳಿದ್ರಾ...

ರಾಜಣ್ಣ : ಕೇಳ್ತಾ ಇದ್ದೀನಿ...ದೇವ್ರು ಕಿವಿಕೊಟ್ಟಿರೋದೇ ಕೇಳಲಿಕ್ಕೆ ಅಲ್ವೇ?ಕೆಟ್ಟದ್ದು ಒಳ್ಳೆಯದು ಎರಡನ್ನೂ ಕೇಳಲೇಬೇಕು.

ಶಾರದ : ಅವರ ಸಂತಸ ಸಡಗರ...ಅದೋ ನೋಡಿ ನಮ್ಮ ಮನೆ ಕೋತಿಗಳು ಮತ್ತೆ ಶುರು ಮಾಡಿದ್ವೋ...(ಮತ್ತೆ ಮಕ್ಕಳ ಚೀರಾಟ) (ಅತ್ತ 'ಹ್ಯಾಪೀ ಬರ್ತ್‌ಡೇ ಟು ಯೂ' ಜನರ ಸಂತಸ ಜಯಘೋಷ.)

ರಾಜಣ್ಣ : ಹೋಗೇ ಹೋಗೇ ಅವರನ್ನು ಕರೆದುಕೊಂಡು ನನ್ನ ತಮ್ಮನ ಮನೆಗೆ.

ಶಾರದ : ಇವರನ್ನು ಕರೆದುಕೊಂಡ್ಹೋದ್ರೆ ನನ್ನ ಮಾನ ಉಳಿಯುತ್ಯೇ...?

ರಾಜಣ್ಣ : ಹೋಗೇ.... ಒಳ್ಳೆ ಮಾನ ಮಾನ ಅಂತ ಹೊಡ್ಕೋ ಬ್ಯಾಡ. ಮಾನ ಹೋಗಿ ಕೇಜಿ ಕಾಲ ಬಂದಿದೆ ಈಗ.

ಶಾರದ : ತಾಳ್ರೀ... ಅವರನ್ನು ಬಿಗಿದ್ಹಾಕಿ ಬರ್ತೀನಿ...ನಿಮಗೇನ್ರೋ ಬಂದಿಗೆ ಹೊತ್ತು ... (ಹೋಗ್ರೋ... ನಿಮ್ಮ ಚಿಕ್ಕಪ್ಪನ ಮನೆಗೆ, ಈ ಹೊತ್ತು ಹುಟ್ಟಿದ ಹಬ್ಬ ಮಾಡ್ತಾರೆ. (ಮತ್ತೆ ಬಂದು) ಸದ್ಯ ತೊಲಗಿದ್ವು...

(ಮತ್ತೆ ಸಡಗರದ ಧ್ವನಿ ದೂರದಿಂದ ಕೇಳಿ ಬರಲು ನಿಟ್ಟುಸಿರುಬಿಡುತ್ತಾ ಶಾರದಾ)ಪಾಪ ಅವು ಏನು ಮಾಡ್ತಾವೆ? ಮಕ್ಕಳಾಟ... (ದುಡುಗದಲ್ಲಿ) ಈ ಹಾಳು ಕೈಗಳು ಹೊಡೆದು ಅಟ್ಟಬಿಟ್ವು...

ರಾಜಣ್ಣ : ನಾವು ಅವನಾಗೇ ಇದ್ದಿದ್ರೆ... ಹುಟ್ಟಿದ ಹಬ್ಬ ಮಾಡಬಹುದಾಗಿತ್ತು. ಆದ್ರೆ...

ಶಾರದ : ಇನ್ನು ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿಯಾದ್ರೂ ಫಲವೇನು?

ರಾಜಣ್ಣ : ಆ ಕಾಲವೂ ಬರುತ್ತೆ.

ಶಾರದ : ಹೋಗ್ಲೀ ಕಾಫಿನಾದ್ರೂ ಕುಡೀರಿ; ಎಲ್ಲಾ ಆರಿ ಅತ್ತಿಕಾಯಾಗಿ ಹೋಯಿತು.

ರಾಜಣ್ಣ : ಇವನ್ನೆಲ್ಲಾ ನೋಡ್ತಾ ಇದ್ರೆ ಕಾಫಿ ತಾನೆ ಯಾರಿಗ್ಸೇರುತ್ತೆ ಹೇಳು...

ಶಾರದ : ಕಷ್ಟ ಬಂತು ಅಂದ್ರೆ ಹೊಟ್ಟೆ ಪಟ್ಟಣ ಕೇಳಬೇಕಲ್ಲ ತಗೆದ್ಕೊಳ್ಳಿ.

ರಾಜಣ್ಣ : ಅಂದ ಹಾಗೆ ಒಂದು ಶುಭ ಸಮಾಚಾರ ಹೇಳಬೇಕು ಅಂತ್ಲೇ ಬಂದೆ, ಆದ್ರೆ ಇದೇನೋ ಬಂದು, ಅದು ಮರ್ತೇ ಹೋಯ್ತು.

ಶಾರದ : ಏನು ಅಂದ್ರೆ?

ರಾಜಣ್ಣ : ನಾಳೆ ನಮ್ಮ ಪುಷ್ಪನ್ನ ನೋಡಲಿಕ್ಕೆ ತಿಪಟೂರಿನಿಂದ ರಾಮಣ್ಣ ಅನ್ನೋರು ಬರ್ತಾರಂತೆ. ನನ್ನ ಫ್ರೆಂಡ್ ರಘು ಹೇಳಿದ್ದಾನೆ.

ಶಾರದ : (ಆನಂದದ ಭರದಲ್ಲಿ) ಇದು ನಿಜವೇ?

ರಾಜಣ್ಣ : ಹೌದೇ... ನನ್ನ ಫ್ರೆಂಡ್ ಕಾಗದ ಬರೆದಿದ್ದಾನೆ.

ಶಾರದ : ಹಾಗಾದ್ರೆ ಅವರು ಬಂದ ಮೇಲೆ ಸ್ವಲ್ಪ ತಿಂಡಿ ಗಿಂಡಿ ಮಾಡಬೇಡ್ವೇ?

ರಾಜಣ್ಣ : ಮಾಡ್ದೆ ಹ್ಯಾಗೆ?

ಶಾರದ : ಈ ಮನೇಲಿ ಏನೂ ಅಂದ್ರೆ ಏನೂ ಇಲ್ಲ. ಸ್ವಲ್ಪ ಉಪ್ಪಿಟ್ಟು ಕಾಫಿನಾದ್ರೂ ಮಾಡೋಣ ಅಂತ. ಅದಕ್ಕೆ ಬೇಕಾದ ಸ್ವಲ್ಪ ಸಾಮಾನುಗಳನ್ನು ತರಬೇಕಲ್ಲ...ಪುಷ್ಪಾಗೆ ಉಡಿಸಲಿಕ್ಕೆ ಒಂದು ಅಚ್ಚುಕಟ್ಟಾದ ಸೀರೆಯೂ ಇಲ್ಲ... ನನ್ನಲ್ಲಿರೋದೆಲ್ಲಾ ಜೂಲ್ ಜುಪ್ಪಟವಾಗಿದೆ...ಏನ್ಮಾಡೋದು?

ರಾಜಣ್ಣ : ಈ ಹೊತ್ತು ತಾರೀಖು ಹತ್ತು...ಈಗ್ಲೆ ಅಷ್ಟಕ್ಕೆಲ್ಲಾ ಸಾಲ ಯಾರು ಕೊಡ್ತಾರೆ?

ಶಾರದ : ಹೋಗ್ಲಿ ನಾನು ಪಕ್ಕದ ಮನೆಯವರ ಹತ್ತಿರ ಸೀರೆ ಈಸ್ಕೊಂಡಿರ್‍ತೀನಿ.... ಮಿಕ್ಕ ಸಾಮಾನುಗಳನ್ನಾದ್ರೂ.....

ರಾಜಣ್ಣ : ಅಂಗಡಿ ಶೆಟ್ರ ಸಾಲ ಕೇಳೊಕ್ಹೋದ್ರೆ ಗುರ್ ಅಂತ ಹಿಂದಿನ ಸಾಲಕ್ಕೆ ಗಂಟು ಬೀಳ್ತಾರೆ. ಏನ್ಮಾಡ್ಲಿ? (ಕೂಡಲೇ ಕೋಣೆಯೊಳಗೆ ಹೋಗಿ ಬೆಳ್ಳಿ ಬಟ್ಟಲು ತಂದು)

ಶಾರದ : ಏನು ಮಾಡಲಿಕ್ಕಾಗುತ್ತೇ...... ಈ ಬಟ್ಟಲನ್ನಾದ್ರೂ ಮಾರಿ.... ತನ್ನಿ.....

ರಾಜಣ್ಣ : ಇಂಥ ಬೆಳ್ಳಿ ಇನ್ನು ನಾವು ತೆಗೆದುಕೊಳ್ಳಲಿಕ್ಕಾಗುತ್ಯೇನೇ?

ಶಾರದ : ಹಾಗಂದ್ರೆ ನಮ್ಮ ಮಗಳ ಮದ್ವೆ ಹೇಗಾಗ್ಬೇಕು?

ರಾಜಣ್ಣ : ಎಂಥ ಪರಿಸ್ಥಿತಿ ಬಂತು. ಕೊಡು ನಾನು ಪೇಟೆ ಕಡೆ ಹೋಗಿದ್ಬರ್‍ತೀನಿ. (ಗಂಡನ ಕೈಗೆ ಕೊಟ್ಟು ದುಗುಡಪಡುತ್ತಾಳೆ ಶಾರದ. ರಾಜಣ್ಣ ಅದನ್ನು ತೆಗೆದುಕೊಂಡು ಹೊರಡುವನು.... ಪುಷ್ಪ ಬರುವಳು)

ಪುಷ್ಪ : ಅಮ್ಮಾ..... ಇದೇಕೆ ಕಣ್ಣೀರು?

ಶಾರದಾ : ಏನೂ ಇಲ್ಲ ಪುಷ್ಪ..... ಕಣ್ಣೀರು ಹಾಕಿಕೊಳ್ಳೋದೇನು? ಸಂತೋಷ ಈಗ ನನಗೆ?

ಪುಷ್ಪ : ಏನಮ್ಮ ವಿಷಯ?

ಶಾರದಾ : ನಾಳೆ ನಿನ್ನನ್ನು ನೋಡಲಿಕ್ಕೆ ತಿಪಟೂರಿಂದ ಯಾರೋ ಬರ್‍ತಾರಂತೆ.

ಪುಷ್ಪ : ಆದಿರ್‍ಲಮ್ಮ ಚಿಕ್ಕಪ್ಪನ ಮನೆಗೆ ಹೋಗಿದ್ವಲ್ಲ. ಅಲ್ಲಿ ನಮ್ಮನ್ನು ಯಾರು ಅಂದಾಗ-ಇದೇ ಪಕ್ಕದ ಬೀದಿಯವರು ಅಂದ್ರು.... ಚಿಕ್ಕಮ್ಮ.

ಶಾರದ : ಅದಕ್ಕೇ ಅಮ್ಮ ನಾನು ಹೋಗದೆ ಹೋದುದು. ನಿಮಗೂ ಸರಿಯಾದ ಬಟ್ಟೆ ಬರೆ ಇದ್ದಿದ್ದರೆ ಯಾಕಮ್ಮ ಅವ್ರು ಹಾಗನ್ತಿದ್ರು?

ಪುಷ್ಪ : ನನ್ನ ತಂಗೀರು, ತಮ್ಮಂದಿರ್‍ನ..... ಒಂದು ಕಡೆ ಕುಕ್ಕರಿಸಿಕೊಳ್ರೋ ಅಂತ ಹೇಳಿ ಮುಖ ಸೊಟ್ಟಮಾಡ್ಕೊಂಡ್ರು ಚಿಕ್ಕಮ್ಮ....

ಶಾರದ : ಎಲ್ಲರಿಗೂ ಒಂದೊಂದು ಕಾಲ ಪುಷ್ಪ. ನಡೀಲಿ ಬಿಡು. ಮೊದಲು ಹೋಗಿ ಅಂತ ಕಳುಹಿಸಿದ್ದು ನನ್ನ ತಪ್ಪು. ಐಶ್ವರ್ಯವೆಂದರೆ ಮನೆಗೆ ಬಡವರು

ಹೋಗಿ ಛೀ ಅನ್ನಿಸಿಕೊಳ್ಳುವುದಕ್ಕಿಂತ ಘನವಾಗಿ ಗಂಭೀರವಾಗಿ ಅಂಬಲಿಯೋ ತುಂಬೇ ಸೊಪ್ಪೋ ತಿಂದುಕೊಂಡು ನಮ್ಮ ನಮ್ಮ ಮನೇಲಿರಬೇಕು. (ಕಣ್ಣುಗಳಲ್ಲಿ ನೀರುರುಳುವುದು)

ಪುಷ್ಪ : ನಾವೂ ಒಂದಲ್ಲ ಒಂದು ದಿನ ಹಾಗೇ ಆಗ್ತೀವಿ ಸುಮ್ನಿರಮ್ಮ ಅಳಬೇಡ.

ಶಾರದ : ಎಲ್ಲಾದಕ್ಕೂ ದೇವ್ರಿದ್ದಾನೆ ಪುಷ್ಪ. ನಡಿ..... ದೇವಸ್ಥಾನಕ್ಕಾದ್ರೂ ಹೋಗಿದ್ದು ಬರೋಣ.

ಪುಷ್ಪ : ಆಗ್ಲಮ್ಮ....

* * *

## ದೃಶ್ಯ-೫

(ಬೆಳಗಾಗುತ್ತಿದ್ದಂತೆಯೇ ರಾಜಣ್ಣನ ಮನೆಯಲ್ಲಿಮಕ್ಕಳು ಗಲಾಟೆಯನ್ನು ಆರಂಭಿಸಿರಲು ರಾಜಣ್ಣ)

ರಾಜಣ್ಣ : ಶಾರದ...... ಶಾರದ..... (ಒಳಗಿಂದ ಬಂದು)

ಶಾರದ : ಅದೇನ್ರೀ....ಗಂಟಲು ಒಂದೇ ಸಮನೆ ಹರಿದು ಕೊಳ್ತಾ ಇದ್ದೀರಿ - ನಂಟರು ಬರೋದಕ್ಕೂ ಮೊದ್ಲೆ ಕೆಲ್ಸ ಬದುಕು ಮಾಡಬೇಕು ಅಂತೀರೋ ಏನು?

ರಾಜಣ್ಣ : ಈಗ ಆ ಕೆಲ್ಸ ಮಾಡೋದಿರ್ಲಿ, ಕೇಳ್ತಾ ಇದ್ಯೇನು, ಬೆಳಗಾಗಿ ಹಕ್ಕಿಗಳ ಶಬ್ದ ನಿಂತ್ರೂ ನಿನ್ನ ಮನೆ ಹಕ್ಕಿಗಳ ಶಬ್ದ ಮುಂದುವರಿತಾ ಇದೆಯಲ್ಲಾ.

ಶಾರದ : ಅದಕ್ಕೆ ಈಗ ನಾನೇನು ಮಾಡ್ಲಿ......?

ರಾಜಣ್ಣ : ಮಾಡು ಮಾಟಾನ.

ಶಾರದ : ಯಾರಿಗೆ?

ರಾಜಣ್ಣ : ಅಲ್ವೇ ಇನ್ನೇನು ಒಂಭತ್ತು ಘಂಟೆ ಬಸ್‌ಗೆ ನೆಂಟ್ರು ಬರುತ್ತಾರೆ. ಹೀಗೆ ಇವು ಅವಲಕ್ಷಣವಾಗಿ ಅಯ್ಯೊಪ್ಪೋ....ಅಂತ ಶುರು ಮಾಡಿದ್ರೆ ಬಂದವ್ರು ಬಂದ್ಹಾಗೇ ಹೊರಟ್ಹೋಗ್ತಾರೆ ಹೊರ್ತು, ಮದ್ವೆ ಮಾಡ್ಕೊಳ್ಳಲಿಕ್ಕೆ ಒಪ್ಪಿಕೊಳ್ಳೊಲ್ಲ, ತಿಳಿತೇನು?

ಶಾರದ : ಅದಕ್ಕೇ ಈಗೇನು ಮಾಡ್ಲಿ ಹೇಳಿ ಮತ್ತೆ?

ರಾಜಣ್ಣ : ಏನೋ ಹೊಟ್ಟೇ ತುಂಬಾ ಊಟ ಹಾಕಿ ಎಲ್ಲಾದ್ರೂ ಆಡಿಕೊಂಡು ಸಾಯಂಕಾಲಕ್ಕೆ ಬನ್ನಿ ಅಂತ ಕಟ್ಟುಮಾಡಿ ಕಳಿಸು.

ಶಾರದ : ಆಗಬಹುದು..... (ಒಳಗೆ ಹೋಗಿ) ಹೋಗ್ರೋ.... ಪೀಡೆಗಳೇ, ಮನೆಯಿಂದ ತೊಲಗಿ. ನೀವು ಮಾನಸ್ತ ಮಕ್ಕಳಲ್ಲ. ಮಾನ ಕಳೆಯೋ ಮಕ್ಕಳು.

ರಾಜಣ್ಣ : ಶಾರದಾ..... ಶಾರದಾ.....

ಶಾರದ : ಬಂದೆ...... (ಬಂದು) ಏನ್ರೀ?

ರಾಜಣ್ಣ : ಅವ್ರೆಲ್ಲಾ ಬಂದ್ರು ಅಂತ ಕಾಣುತ್ತೆ - ಎಲ್ಲಾ ರೆಡಿ ತಾನೆ.

ಶಾರದ : ಓಹೋ ಎಲ್ಲಾ ರೆಡಿಯೇ.... (ಒಳಗೆ ಹೊರಡುವಳು)

ರಾಜಣ್ಣ : ನಮಸ್ಕಾರ.... ದಯಮಾಡಿಸಬೇಕು.

ರಾಮಣ್ಣ : ನಮಸ್ಕಾರ.

ರಾಜಣ್ಣ : ಬಿಸಿಲಿನಿಂದ ಬಂದಿದ್ದೀರಿ. ಒಂದು ಸ್ವಲ್ಪ ತಣ್ಣಗೆ....... ಮುಖ ಕೈಕಾಲು ತೊಳೆದುಕೊಳ್ಳಿ.....

(ಇಬ್ಬರೂ ಕುರ್ಚಿಯ ಮೇಲೆ ಕುಳಿತುಕೊಳ್ಳಲು - ಶಾರದ ಬೇಲದ ಹಣ್ಣಿನ ಪಾನಕ ತಂದಿಟ್ಟಳು.)

ರಾಜಣ್ಣ : ಈಕೆ ನಮ್ಮ ಹೆಂಗಸ್ರು.....

ಶಾರದ : ನಮಸ್ಕಾರ.

ರಾಮಣ್ಣ : ನಮಸ್ಕಾರ.

(ಶಾರದ ಮನೆಯ ಒಳಗೆ ಹೊರಡುವಳು)

ರಾಜಣ್ಣ : ತೆಗೆದುಕೊಳ್ಳಿ, ಸ್ವಲ್ಪ ಬೇಲದ ಹಣ್ಣಿನ ಪಾನಕಾ - ಬಿಸಿಲಿನ ಹೊತ್ತಿಗೆ ಒಳ್ಳೆಯದು.

ರಾಮಣ್ಣ : ಆಗ್ಲಿ........

(ಕುಡಿಯುತ್ತ - ಮಾತು ಆರಂಭವಾಗುವುದು)

ರಾಜಣ್ಣ : ತಾವು ಒಬ್ಬರೇ ಬಂದ್ರಾ......

ರಾಮಣ್ಣ : ಹೌದು..... ಹುಡುಗ, ನೀವೇ ನೋಡಿಕೊಂಡು ಬನ್ನಿ- ಆಮೇಲೆ ನಾನು ಹೋಗ್ತೇನೆ ಅಂದ ಅದಕ್ಕೆ.......

ರಾಜಣ್ಣ : ಪರವಾಗಿಲ್ಲ......

ರಾಮಣ್ಣ : ತಮಗೆ ಎಷ್ಟು ಜನ ಮಕ್ಕಳು?

ರಾಜಣ್ಣ : ಮೂರು ಹೆಣ್ಣು, ಎರಡು ಗಂಡು.

ರಾಮಣ್ಣ : ಈಗ ಮದುವೆ ಆಗೋ ಹುಡುಗಿ ಹೆಸರು.

ರಾಜಣ್ಣ : ಪುಷ್ಪ ಅಂತ.

ರಾಮಣ್ಣ : ವಯಸ್ಸು ಏನಾಗಿರಬಹುದು?

ರಾಜಣ್ಣ : ಇಪ್ಪತ್ತು.

ರಾಮಣ್ಣ : ಎರಡನೆಯವಳಿಗೆ ಹದಿನೆಂಟಿರಬೇಕು?

ರಾಜಣ್ಣ : ಹೌದು.

ರಾಮಣ್ಣ : ತಾವು ಏನೂ ತಿಳಿದುಕೊಳ್ಳದೇ ಹೋದ್ರೆ ಇಬ್ಬರನ್ನೂ ತೋರಿಸುತ್ತೀರಾ?

ರಾಜಣ್ಣ : ಅದಕ್ಕೇನೂ ಅಭ್ಯಂತರವಿಲ್ಲ- ಆದ್ರೆ ನಾವು ಮದುವೆ ಮಾಡಬೇಕಾಗಿರೋದು ಮೊದಲನೇ ಮಗಳು ತಾನೇ.

ರಾಮಣ್ಣ : ಅದು ಸರಿ, ನೋಡೋಣ ಅಂತ.

ರಾಜಣ್ಣ : ಒಂದು ಸ್ವಲ್ಪ ಬಂದೆ.

ರಾಮಣ್ಣ : ಆಗಬಹುದು.

(ಬಾಗಿಲ ಹತ್ತಿರ ಹೋಗಿ ಹೆಂಡತಿಯೊಡನೆ ಪಿಸಿ ಪಿಸಿ ದನಿಯಲ್ಲಿ)

ರಾಜಣ್ಣ : ಶಾರದಾ..... ಪುಷ್ಪ, ಪಂಕಜ ಇಬ್ಬರನ್ನೂ ನೋಡಬೇಕು ಅಂತಾರಲ್ಲ ಏನು ಮಾಡೋಣ?

ಶಾರದ : ಇದೇನು ಅಂದ್ರೆ ಯಾರಾದ್ರೂ ಮೊದಲನೆ ಹುಡುಗಿ ಬಿಟ್ಟು ಎರಡನೆ ಹುಡುಗಿಗೇ ಮೊದಲು ಮದ್ವೆ ಮಾಡ್ತಾರ್ಯೆ? ಆಮೇಲೆ ಮೊದಲನೆಯವಳಿಗಿಂತ ಎರಡನೆಯವಳು ಚೆನ್ನಾಗಿದ್ದಾಳೆ ಅಂದ್ರೇನು ಮಾಡೋದು?

ರಾಜಣ್ಣ : ಅದು ಮುಂದಿನ ಮಾತು. ಮೊದಲು ಪುಷ್ಪನ್ನ ಕಳುಹಿಸು ಕಾಫಿಕೊಟ್ಟು.

(ಪುಷ್ಪ ಕಾಫಿ ತಂದಿಟ್ಟು ನಮಸ್ಕರಿಸಲು)

ರಾಜಣ್ಣ : ಈಕೆಯೇ ನನ್ನ ಹಿರಿ ಮಗಳು ಪುಷ್ಪ.

ರಾಮಣ್ಣ : ಒಂದು ಹಾಡು ಹೇಳಮ್ಮ.

ರಾಜಣ್ಣ : ಪರ್ವಾಗಿಲ್ಲ ಹೇಳಮ್ಮ. ನಾಚಿಗೆ ಯಾಕೆ ರಾಮಣ್ಣನವರು ನಮ್ಮವ್ರೇ ಹೇಳಮ್ಮಾ.

ಪುಷ್ಪ :
ನಾದಪ್ರಿಯ ಶಿವನೆಂಬರು
ನಾದಪ್ರಿಯ ಶಿವನಲ್ಲವಯ್ಯ
ವೇದಪ್ರಿಯ ಶಿವನೆಂಬರು
ವೇದಪ್ರಿಯ ಶಿವನಲ್ಲವಯ್ಯ
ನಾದವ ಮಾಡಿದ ರಾವಣಂಗೆ
ಅರೆ ಆಯುಷ್ಯವಾಯಿತ್ತು
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ
ಭಕ್ತಪ್ರಿಯ ನಮ್ಮ ಕೂಡಲ ಸಂಗಮದೇವ!

ರಾಮಣ್ಣ : ಭೇಷ್....ಭೇಷ್.... ಬಹಳ ಚೆನ್ನಾಗಿ ಹಾಡಿದೆಯಲ್ಲಮ್ಮಾ...

(ಕಾಫಿಯನ್ನು ಕುಡಿಯುತ್ತಿರಲು ಹುಡುಗಿ ಒಳಗೆ ಹೊರಡುವಳು)

ರಾಮಣ್ಣ : ರಾಜಣ್ಣೋರೇ,

ರಾಜಣ್ಣ : ಏನು?

ರಾಮಣ್ಣ : ಎರಡನೆಯವಳನ್ನು ತೋರಿಸ್ಲಿಲ್ಲ....

ರಾಜಣ್ಣ : ಆಕೆ ಎಲ್ಲೋ ಹೋಗಿದ್ದಾಳಂತೆ.

ರಾಮಣ್ಣ : ಸರಿ ಹಾಗಾದ್ರೆ ನಾನು ಊರಿಗೆ ಹೋಗಿ, ಹುಡುಗನನ್ನು ಕಳುಹಿಸ್ತೀನಿ. ಆಮೇಲೆ ಮುಂದಿನ ಮಾತು ಆಡೋಣ. ಇನ್ನು ನಾನು ಬರ್ಲಾ?

ರಾಜಣ್ಣ : ಒಳ್ಳೆಯದು. ಅಂದಹಾಗೆ ಊಟ ತೀರಿಸಿಕೊಂಡು ಹೋಗಬಹುದಲ್ಲಾ ಸಾಯಂಕಾಲದ ಮೇಲೆ.

ರಾಮಣ್ಣ : ಒಪ್ಪಂದ ಆಗೋಕ್ಕೆ ಮೊದ್ಲೆ ಊಟ ಮಾಡಿ ಬಿಟ್ರೆ ಸರಿಯಲ್ಲ ಅಂತಾರೆ. ಮುಂದೆ ಇದ್ದೇ ಇದೆಯಲ್ಲ ಬರೋದು ಹೋಗೋದು, ಊಟ, ತಿಂಡಿ, ಕಾಫಿ, ಅದು ಇದು ಅಂತ.

ರಾಜಣ್ಣ : ಹಾಗಾದ್ರೆ ಸಂತೋಷ..... ಬನ್ನಿ..... ಯಾವುದಕ್ಕೂ ಪತ್ರ ಹಾಕಿ.

ರಾಮಣ್ಣ : ಆಗಬಹುದು. ಬರ್‍ತೇನೆ ನಮಸ್ಕಾರ.

(ಹೊರಡುವರು ಶಾರದ ಒಳಗಿಂದ ಬಂದು)

ಶಾರದ : ಏನ್ರೀ.... ಏನಂದ್ರು.....?

ರಾಜಣ್ಣ : ಪತ್ರ ಬರೀತಾರಂತೆ. ಹುಡುಗ ಬಂದು ನೋಡಿ ಹೋದ ಮೇಲೆ ಮಿಕ್ಕ ಮಾತುಗಳು ಅಂದ್ರು.

ಶಾರದ : ಏನು ಮಾಡ್ತಾರೋ.... ಈಗ ಒಂದು ಪಕ್ಷ ಮದ್ವೆಗೆ ಅವರು ಹೂಂ ಅಂತ ಒಪ್ಪಿಕೊಂಡ್ರೆ ಹಣಕ್ಕೆ ಏನು ಮಾಡ್ತೀರಿ?

ರಾಜಣ್ಣ : ಅದಕ್ಕೇ ಯೋಚನೆ ಮಾಡ್ತಾ ಇದ್ದೀನಿ.

ಶಾರದ : ಯಾರು ಕೊಡ್ತಾರೆ ಏಳೆಂಟು ಸಾವಿರ ರೂಪಾಯಿ ಸಾಲ?

ರಾಜಣ್ಣ : ಅದನ್ನೇ ಈಗ ಯೋಚನೆ ಮಾಡ್ತಾ ಇದ್ದೀನಿ.

ಶಾರದ : ನಿಮ್ಮ ಸ್ನೇಹಿತರ್‍ಯಾರಾದ್ರೂ ಉಪಕಾರ ಮಾಡ್ಲಾರ್ರೇನು?

ರಾಜಣ್ಣ : ನಾನು ಕಂಡ ಹಾಗೆ ಯಾರು ಕೊಡ್ತಾರ್‍ಯೆ ಅಷ್ಟು?

ಶಾರದ : ಹೋಗ್ಲಿ ನಿಮ್ಮ ತಮ್ಮನ್ನ ಕೇಳಿದ್ರೆ ಹ್ಯಾಗೆ?

ರಾಜಣ್ಣ : ನೋಡೋಣ. ಅದೇ ಯೋಚನೆ ಈಗ. ಆತನೂ ಏನಂತಾನೋ?

ಶಾರದ : ಓದಿಸಿ, ಬರೆಸಿ, ಇಷ್ಟು ದೊಡ್ಡ ಕೆಲಸಕ್ಕೆ ನೀವೇ ಕಾರಣರು. ಈಗ ನೀವು ಕೇಳಿದ್ರೆ ಇಲ್ಲಾ ಅನ್ನೋಲ್ಲ ಕೇಳಿ ನೋಡಿ.

ರಾಜಣ್ಣ : ಅದು ಹ್ಯಾಗೆ ಹೇಳ್ತೀಯೆ? ನೋಡಬೇಕು. ಹಣದ ವಿಚಾರ ಹೀಗೆ ಅಂತ ಹೇಳೋಕ್ಕೆ ಬರೋಲ್ಲ.

ಶಾರದ : ಕೇಳಿ ನೋಡಿ. ಮನುಷ್ಯನ ಯೋಗ್ಯತೆಯಾದ್ರೂ ಗೊತ್ತಾಗೋದಿಲ್ವೆ?

ರಾಜಣ್ಣ : ಅಷ್ಟೇ...... ನೋಡೋಣ. ನಿನ್ನ ಚಪಲವೂ ಆಮೇಲೆ ತೀರುತ್ತೆ.

(ಇಬ್ಬರೂ ಹೊರಡುವರು)

* * *

## ದೃಶ್ಯ-೬

(ನಾಗಮಣಿ ಮನೆಯ ಕಸ ಹೊಡೆಯುತ್ತಿದ್ದ ಬೆಳ್ಳಿಯನ್ನು ಸೌಟಿನಲ್ಲಿ ತಿವಿಯಲು)

ಬೆಳ್ಳಿ : ನಾಗಮಣವ್ವ.... ಹೊಡಿಬೇಡ ಕಣವ್ವಾ..... ಹೊಡೀಬೇಡಿ.

ನಾಗಮಣಿ : ಹೊಡ್ಯೋಲ್ಲ ಮುದ್ದಿಸ್ತೀನಿ ತಾಳು......

ಬೆಳ್ಳಿ : ನಾನೇನು ತಪ್ಪು ಮಾಡ್ದೆ ಅಂತ ಹೊಡೀತಿದ್ದೀರಿ?

ನಾಗಮಣಿ : ನೀನು ಮಾಡೋದು ತಪ್ಪಲ್ಲ, ರೈಟು ಕಣೋ.... ನೀನು ಬಟ್ಟೆ ಒಗೆದು ಬೆರಗು ಬಂತು, ಪಾತ್ರೆ ತಿಕ್ಕಿ ಪಿತ್ತ ಬಂತು, ಕಸಗಡಿಸಿ ಕ್ಷಯ ಬಂತು. ನೀನು ಕೆಲ್ಸ ಮಾಡೋ ಹುಟ್ಗೆ ಒಂದಷ್ಟು ಬೆಂಕಿ ಬಿತ್ತು. ಮಿಕ್ಕದ್ನೆಲ್ಲಾ ಉಣ್ತೀಯಲ್ಲಾ ನಿನಗೇನು ಅನ್ನ ಸಂಕಟವೋ

(ಬೆಳ್ಳಿಗೆ ರಕ್ತ ಬರುವುದು, ಕೈಯಲ್ಲೇ ಒತ್ತಿ ಹಿಡಿದುಕೊಳ್ಳುವನು)

ಬೆಳ್ಳಿ : ಇದೊಂದು ಸಾರಿ ಮಾಪು ಮಾಡ್ರವ್ವಾ.... ಇನ್ನು ಸರಿಯಾಗಿ ಮಾಡ್ತೀನಿ.

ನಾಗಮಣಿ : ತಲೆ ತೂತು ಮಾಡಿದ್ರೂ ಅಂತ ಎಲ್ಲಾದ್ರೂ ಬಾಯಿ ಬಿಟ್ರೆ.... ನಿನ್ನ ಇಲ್ಲ ಅನ್ನಿಸ್ಬಿಡ್ತೀನಿ ಗೊತ್ತಾಯ್ತಾ? ಹೋಗಿ ಒಂದಿಷ್ಟು ಪೌಡರ್ ಹಾಕ್ಕೊ. ರಕ್ತ ನಿಂತುಹೋಗುತ್ತೆ.

ಬೆಳ್ಳಿ : ಹೇಳಲ್ಲ ಕಣವ್ವಾ..... ನೀವೇಳ್ದಾಗೇ ಮಾಡ್ತೀನಿ.

ನಾಗಮಣಿ : ನನ್ನ ಮೇಲೆ ಆಣೆ ಇಡು.

ಬೆಳ್ಳಿ : ನಿಮ್ಮಾಣೆಗೂ ಯಾರಿಗೂ ಹೇಳಲ್ಲ ಕಣವ್ವಾ.

ನಾಗಮಣಿ : ನಿಮ್ಮ ಅವ್ವೆಯೊಂದಿಗಾಗ್ಲಿ ಅಕ್ಕಪಕ್ಕದವ್ರಿಗಾಗ್ಲಿ ಹೇಳಿದ್ರೆ ನಿನ್ನ ಹುಟ್ಟಿಲ್ಲ ಅನ್ನಿಸ್ಬಿಡ್ತೀನಿ ಗೊತ್ತಾಯ್ತೋ? ನಡಿ ಕೆಲಸ ಮಾಡು ಹೋಗು.

ಬೆಳ್ಳಿ : ಆಗ್ಲವ್ವಾ...... ಹೋಯ್ತೀನಿ.

(ರಮೇಶನು ಬರುತ್ತಿರಲು)

ನಾಗಮಣಿ : ಇದೇನು ಯಾವ ಕಡೆಯಿಂದ ನಿಮ್ಮ ಸವಾರಿ?

ರಮೇಶ : ನಾಳೆ ಗೃಹ ಪ್ರವೇಶಕ್ಕೆ ಶಾಸ್ತ್ರಿಗಳನ್ನು ಗೊತ್ತು ಮಾಡಿ ಬರೋದಕ್ಕೆ ಹೋಗಿದ್ದೆ.

ನಾಗಮಣಿ : ಆಯ್ತೇನು?

ರಮೇಶ : ಎಲ್ಲಾ ಆಯ್ತು.

(ಅಷ್ಟರಲ್ಲಿ ರಾಜಣ್ಣ ಬರಲು ರಮೇಶ ಆತನನ್ನು ನೋಡಿ ಮೊದಲು ಮುಖ ಪೆಚ್ಚಾಯಿತು, ಆದರೂ ಸಾವರಿಸಿಕೊಂಡು ಮುಗುಳ್ನಗುತ್ತಾ.)

ರಮೇಶ : ಬಾರಣ್ಣಾ...... ಬಾ..... ಕುಳಿತುಕೋ.

(ಇಬ್ಬರೂ ಕುಳಿತುಕೊಳ್ಳುವರು)

ನಾಗಮಣಿ : ನಾವು ಇದೀಗ್ತಾನೆ ಮಾತಾಡ್ಕೊಳ್ತಿದ್ವು.... ಬಾವಾಜಿ.

ರಾಜಣ್ಣ : ಏನಮ್ಮ?

ನಾಗಮಣಿ : ನೀವು ನಮ್ಮ ಉದಯನ ಬರ್ತ್‌ಡೇಗೂ ಬರಲಿಲ್ಲ. ಯಾಕೋ ಏನೋ ಅಂತ.

ರಾಜಣ್ಣ : ಏನೋ ಕೆಲಸ ಬಿದ್ದು ಬಿಡ್ತಮ್ಮ.

ನಾಗಮಣಿ : ಹೋಗ್ಲೀ ನಾಳೇನೂ ತಪ್ಪಿಸ್ಕೊಂಡು ಸಬೂಬು ಹೇಳಬೇಡಿ.

ರಾಜಣ್ಣ : ನಾಳೆ ಏನಮ್ಮ?

ನಾಗಮಣಿ : ನಮ್ಮ ಹೊಸ ಮನೆ ಗೃಹಪ್ರವೇಶ.

ರಾಜಣ್ಣ : ಆಗ್ಲಮ್ಮ.

ರಮೇಶ : ಬರೇ ಮಾತಾಡ್ತೇ ನಿಂತು ಬಿಟ್ಯೆಲ್ಲ ಸ್ವಲ್ಪ ತಿಂಡಿ ಕಾಫಿನಾದ್ರೂ ತೆಗೆದು ಕೊಂಡುಬಾರೇ.

ರಾಜಣ್ಣ : ಏನೂ ಬೇಡಮ್ಮ - ಇದೀಗ ತಾನೆ ನಾನು ಎಲ್ಲವನ್ನೂ ಮುಗಿಸಿಕೊಂಡು ಬಂದಿದ್ದೀನಿ.

ರಮೇಶ : ನೀನು ಹೋಗೇ. (ಹೊರಡುವಳು) ಏನಣ್ಣಾ ಸಮಾಚಾರ?

ರಾಜಣ್ಣ : ಒಂದು ವಿಚಾರ ನಿನ್ನಲ್ಲಿ ಪ್ರಸ್ತಾಪ ಮಾಡೋಣ ಅಂತ್ಲೇ ಬಂದೆ.

ರಮೇಶ : ಏನು?

ರಾಜಣ್ಣ : ಅದೇ.... ತಿಪಟೂರಿನಿಂದ ರಾಮಣ್ಣನವರು ನಮ್ಮ ಪುಷ್ಪಳನ್ನು ಕೇಳಲಿಕ್ಕೆ ಬಂದಿದ್ರು.

ರಮೇಶ : ಅದೇ ಆಕೆ ಹೇಳ್ತಿದ್ಲು.....

ರಾಜಣ್ಣ : ಏನು ಕೊಡಬಹುದೇ?

ರಮೇಶ : ನನಗೇನು ಗೊತ್ತು? ಚಿಕ್ಕವನನ್ನ ಕೇಳ್ತಾ ಇದ್ದೀರಿ. ನಿಮಗಿಂತ ನನಗೆ ಗೊತ್ತೇ?

ರಾಜಣ್ಣ : ಒಂದು ಶುಭ ಕೆಲಸ ಮಾಡುವಾಗ ಚಿಕ್ಕವ್ರಿಂದ ದೊಡ್ಡವರವರೆಗೂ ಅಭಿಪ್ರಾಯ ಕೇಳುವುದು ಒಳ್ಳೆಯದು.

ರಮೇಶ : ನಾನು ಹೇಳೋದು ಒಂದು. ಹೆಣ್ಣು - ಗಂಡುಗಳು ಒಬ್ಬರಿಗೊಬ್ಬರು ಒಪ್ಪಿದರಾಯ್ತು ಈ ಕಾಲ್ದಲ್ಲಿ.

ರಾಜಣ್ಣ : ಈಗ ಮದುವೆಗೆ ಒಪ್ಪಿದ್ರೆ..... ಗಂಡಿನ ಕಡೆಯವ್ರು.

ರಮೇಶ : ಮಾಡಿ ಬಿಡುವುದು ಒಳ್ಳೆಯದು....... ಅದರಲ್ಲೂ ಹೆಣ್ಣು ಮಕ್ಕಳ ಮದುವೆ ನಿಲ್ಲಿಸಲಿಕ್ಕಾಗುತ್ತೇನು?

ರಾಜಣ್ಣ : ಅದಕ್ಕೆ ಒಂದು ಏಳೆಂಟು ಸಾವಿರ ಬೇಡ್ವೇ? ಈಗಿನ ಕಾಲದಲ್ಲಿ.

ರಮೇಶ : ಬೇಕು ಬೇಕು - ಎಷ್ಟೇ ಹಿಡಿತವಾಗಿ ಮಾಡಿದ್ರೂ ಈ ಕಾಲದಲ್ಲಿ ಅಷ್ಟಿಲ್ದೇ ಆಗುತ್ಯೇ?

ರಾಜಣ್ಣ : ಅದಕ್ಕೆ ಈಗ ಏನ್ಮಾಡ್ತೋಣ ಅಂತ?

ರಮೇಶ : (ಮುಖ ಒಂದು ತರಹ ಮಾಡಿ) ನನ್ನ ತಾಪತ್ರಯಗಳು ನಿನಗೆ ಗೊತ್ತಿದೆಯಲ್ಲಾ. ಮನೆ ಕಟ್ಟಿಸಲಿಕ್ಕೆ ಕೈ ಹಾಕಿ ಕಣ್ಣು ಕಣ್ಣು - ಬಾಯಿ ಬಾಯಿ ಬಿಡ್ತಾ ಇದ್ದೇನೆ. ಹೇಗೋ ಇನ್ಸೂರೆನ್ಸ್ ಪಾಲಿಸಿ ಮೇಲೆ ಸಾಲ ಮಾಡಿದ್ದೀನಿ. ಕೈಯೆಲ್ಲಾ ಸಾಲ ಮಾಡಿ ಮುಗಿಸಿದೆ. ಇನ್ನು ಗೃಹ ಪ್ರವೇಶ. ಇದಕ್ಕೂ ಸಾಲವೇ ಮಾಡಿದ್ದೀನಿ ಅನ್ನು.

ರಾಜಣ್ಣ : ಈ ಶುಭಕಾರ್ಯಕ್ಕೆ ಇಲ್ಲ ಅನ್ನಬೇಡ. ರಮೇಶಾ, ನೀನು ಸುಮ್ನೇ ಏನೂ ಕೊಡಬೇಡ. ನನ್ನ ಗದ್ದೆಯನ್ನು ತಗೊಂಡು ಕೊಡು. ಈ ಸಮಯದಲ್ಲಿ ಉಪಕಾರ ಮಾಡಿದ್ರೆ ದೊಡ್ಡ ಸಾಮ್ರಾಜ್ಯ ಕೊಟ್ಟ ಹಾಗಾಗುತ್ತೆ ನನಗೆ.

ರಮೇಶ : ಏನೋ ಗಾದೆ ಹೇಳ್ತಾರಲ್ಲ ಹಾಗೆ....ನನ್ಗೇ ತಡಕಾಟ.... ನಿನ್ಗೆಲ್ಲಿಂದ ತರ್ಲಿ ಗೋಧಿ ಹಿಟ್ಟ ಅಂದ ಹಾಗೆ.

ರಾಜಣ್ಣ : ನಿನ್ನ ಹತ್ತಿರ ಇಲ್ದೇ ಹೋದ್ರು ನಿನ್ನ ಸ್ನೇಹಿತರಲ್ಲಾದ್ರೂ ಅಣಿ ಮಾಡ್ಕೊಡಪ್ಪಾ....... ಈ ತಿಂಗಳ್ನಲ್ಲೇ ಇಲ್ದೇ ಹೋದ್ರೂ ಮುಂದಿನ ತಿಂಗಳಾದ್ರೂ......

ರಮೇಶ : ಅಣ್ಣಾ.... ನಿನ್ಗೆ ಹೇಳಿದ್ರೆ, ಆಗ ನಿನಗೆ ಕೋಪ ಬಂದು ಬಿಡ್ತು, ಇಬ್ಬರೂ ಓದಿದೆವು. ನನಗೆ ಬೇರೆ ಯಾವ ಕೆಲಸವೂ ಬೇಡ ಉಪಾಧ್ಯಾಯನಾಗಿಯೇ ಸೇವೆ ಮಾಡ್ಬೇಕು, ವಿದ್ಯಾದಾನಕ್ಕಿಂತ ಮಿಗಿಲಾದ ದಾನವಿಲ್ಲ ಎಂದೆ. ನನ್ನನ್ನೂ ಹಾಗೇ ಆಗು ಅಂದೆ. ಆದ್ರೆ ನಿನ್ನ ಮಾತು ಕೇಳಿದ್ರೆ ನನಗೂ ಈ ಸ್ಥಿತಿಯೇ ಬರ್ತಿತ್ತೋ ಏನೋ? ಹೇಗೋ ಪತ್ರಿಕೆ ಸಂಪಾದಕನಾದೆ. ಮನೆ ಕಟ್ಟಿಸಿದೆ. ಎರಡು ಮಕ್ಕಳಿಗೆ ಬ್ಯಾಂಕಿನಲ್ಲಷ್ಟು ಇಷ್ಟು ಹಣವನ್ನು ಇಟ್ಟಿದ್ದು ಮಗನನ್ನು ಎಂ.ಎಸ್.ಸಿಗೆ ಕಳುಹಿಸಿದೆ. ಮಗಳನ್ನು ಎಂ.ಬಿ.ಬಿ.ಎಸ್.ಗೆ ಕಳುಹಿಸಿದೆ. ನೀನೂ ಆಗ್ಲೇ ಬುದ್ಧಿ ಉಪಯೋಗಿಸಿದ್ದಿದ್ದರೆ ಏಕಿಷ್ಟು ಕಷ್ಟಪಡಬೇಕಾಗಿತ್ತು?

ರಾಜಣ್ಣ : ರಮೇಶ.... ನಾನು ನಿನ್ನ ಕೇಳಲಿಕ್ಕೆ ಬಂದಿದ್ದು ಹಣವನ್ನು.... ಮಿಕ್ಕ ಉಪದೇಶದ ಮಾತುಗಳನ್ನಲ್ಲ.

ರಮೇಶ : ಅದಕ್ಕೇ ನಾನು ಆಗಲೇ ಹೇಳಿದೆನಲ್ಲ.

ರಾಜಣ್ಣ : ಅಷ್ಟು ಹೇಳು ಸಾಕು. ಅದಕ್ಕೇಕೆ ನಿನ್ನ - ನನ್ನ ಮನೆ ಪುರಾಣವನ್ನೆಲ್ಲಾ ಒದರ್ತೀಯಾ? ಎಷ್ಟೇ ಆದ್ರೂ ನಾನು ದಾಯಾದಿ ಅಲ್ವೇ?

ರಮೇಶ : ಈಗಿನ ಕಾಲದಲ್ಲಿ ಅವರವರ ಕಷ್ಟವೇ ಅವರಿಗೆ ಹೆಚ್ಚಾಗಿರುವಾಗ......

ರಾಜಣ್ಣ : ರಮೇಶ..... ಸ್ವಲ್ಪ ಹಿಂದಿನದನ್ನು ನೆನೆದುಕೊಂಡು ಮಾತಾಡು. ನಿನ್ನನ್ನು ಓದಿಸುವಾಗ ನಾನೆಷ್ಟು ಕಷ್ಟಪಟ್ಟೆ ಅನ್ನೋದು ನಿನಗೇನಾದ್ರೂ ಗೊತ್ತಿದ್ಯಾ.......? ನಮ್ಮ ತಂದೆ ನಮಗೆ ಇಟ್ಟಿದ ಆಸ್ತಿ ನಿನಗೆ ಗೊತ್ತಿಲ್ವೇ ರಮೇಶ....? ನನ್ನ ಹೆಂಡತಿ ಮಕ್ಕಳ ಹೊಟ್ಟೆ ಬಟ್ಟೆಗೆ ಕುಂದಿಸಿ ನಿನಗೆ ಒಂದು ನೂರು ರೂಪಾಯಿ ಕಳುಹಿಸುತ್ತಿದ್ದುದು ಜ್ಞಾಪಕ ಇಲ್ವೇನು?

ರಮೇಶ : ಅಣ್ಣಾ..... ಅದನ್ನು ನಾನು ಇಲ್ಲಾ ಅಂದ್ನೇ?

ರಾಜಣ್ಣ : ಒಂದು ಮಾತು ಮಾತ್ರ ಜ್ಞಾಪಕ ಇಟ್ಕೋ ರಮೇಶ. ಬಡತನ ಸಿರಿತನ ಯಾರಿಗೂ ಸ್ಥಿರವಲ್ಲ. ಬೆಳಕು ಬೆಳಕಾಗಿಯೇ ಉಳಿಯೋದಿಲ್ಲ. ಕತ್ತಲೆ ಬೆಳಕು ಆಗಲೇ ಬೇಕು. ಬೆಳಕು ಕತ್ತಲೇ ಆಗಲೇ ಬೇಕು. ಇದು ಪ್ರಕೃತಿ ನಿಯಮ. ಉಪ್ಪಿಕ್ಕಿದವರನ್ನು ಮುಪ್ಪಿನ ತನಕ ನೆನೆಯಬೇಕಾದ್ದು ಪ್ರತಿಯೊಬ್ಬ ಮಾನವನ ಧರ್ಮ ಕಣೋ.... ಧರ್ಮ.

ರಮೇಶ : ಅಣ್ಣಾ..... ನಾನು ಇಟ್ಟಿದ್ದರೆ ಕೊಡುತ್ತಿರಲಿಲ್ಲವೇ?

ರಾಜಣ್ಣ : ಸಾಕು ರಮೇಶ ಸಾಕು. ಹೋಗ್ತೀನಿ.... ನನಗಾಗಿ ಯೋಚನೆ ಮಾಡಬೇಡ. (ಎದ್ದು ಹೊರಡಲು)

ರಮೇಶ : ಅಣ್ಣಾ..... ಸ್ವಲ್ಪ ತಿಂಡಿ.....ಕಾಫಿ.... ತೆಗೆದುಕೊಂಡು ಹೋಗುವೆಯಂತೆ.

ರಾಜಣ್ಣ : ರಮೇಶ.... ನಾನು ತಿಂಡಿ ಕಾಫಿಗೆ ಗತಿಯಿಲ್ಲದೆ ಬಂದಿಲ್ಲ. ನೀನು ಆಡಿದ ಮಾತುಗಳು ತಿಂಡಿಕಾಫಿ ಕೊಟ್ಟಿದ್ದಕ್ಕಿಂತ ಹೆಚ್ಚಾಗಿದೆ. ನೀನೇ ಸುಖವಾಗಿರು. ನಾನು ಬರ್ತೇನೆ.

(ಹೊರಡುತ್ತಿರಲು ನಾಗಮಣಿ ತಿಂಡಿ ತರುತ್ತಾ)

ನಾಗಮಣಿ : ಬಾವಾಜೀ......

ರಮೇಶ : ಅವನಿಗೆ ಬೇಕಾದ್ದು ಹಣ ಕಣೇ ಇದಲ್ಲ, ನಡೆ ನಡೆ.

(ತಟ್ಟೆಯನ್ನು ಹಾಗೆಯೇ ಹಿಡಿದು ನಿಲ್ಲುವಳು. ರಾಜಣ್ಣ ಹೊರಡುವನು)

* * *

## ದೃಶ್ಯ-2

(ಪೆಚ್ಚು ಮೋರೆಯಿಂದ ಬಂದು ರಾಜಣ್ಣ ತನ್ನ ಮನೆಯಲ್ಲಿ ಕುರ್ಚಿಯ ಮೇಲೆ ಕುಳಿತಿರಲು ಹಿನ್ನೆಲೆಯಿಂದ ಹಾಡು ಕೇಳುವುದು. ಹಾಡು ಮುಗಿಯುತ್ತಿದ್ದಂತೆಯೇ ಮಗಳು ಬಂದು)

ಪುಷ್ಪ : ಅಣ್ಣಾ...... ಅಣ್ಣಾ......

ರಾಜಣ್ಣ : ಏನಮ್ಮ ಪುಷ್ಪ?

ಪುಷ್ಪ : ಯಾಕೆ ಒಂದು ತರಹವಾಗಿದ್ದೀರಲ್ಲಾ?

ರಾಜಣ್ಣ : ಏನೂ ಇಲ್ಲಮ್ಮಾ ಏಕೋ ತಲೆ ನೋವು ಆದ್ಹಾಗಾಯ್ತು ಅದಕ್ಕೇ. ಹಾಗೇ ತಲೆ ಹಿಡ್ಕೊಂಡು ಕುಳ್ತೆ.

ಪುಷ್ಪ : ಅಣ್ಣಾ......ಚಿಕ್ಕಪ್ಪ ಸ್ಕೂಟರ್ ತಂದ್ರಣ್ಣಾ......?

ರಾಜಣ್ಣ : ಸುಖವಾಗಿರ್ಲಿ ಬಿಡಮ್ಮ..... ನಮಗೆ ತೆಗೆದುಕೊಳ್ಳೊಕ್ಕೆ ಶಕ್ತಿ ಇಲ್ದೇ ಹೋದ್ರೂ, ತೆಗೆದುಕೊಂಡು ಸುಖವಾಗಿರುವವರನ್ನಾದ್ರೂ ನೋಡಿ ಸಂತೋಷ ಪಡೋಣ.......

ಪುಷ್ಪ : ಆಮೇಲೆ ಅವರ ಹೊಸಮನೆ ಗೃಹಪ್ರವೇಶವಂತೆ ಈವತ್ತು. ಚಿಕ್ಕಮ್ಮ ಬಂದು ಎಲ್ಲರೂ ಖಂಡಿತ ಬರಬೇಕು ಅಂತ ಹೇಳ್ಬಿಟ್ಟು ಹೋದ್ರು ಅಣ್ಣಾ.

ರಾಜಣ್ಣ : ಹೋಗಿ ಬನ್ನಿ ಅಮ್ಮ

ಪುಷ್ಪ : ನೀವೂ ಸ್ವಲ್ಪ ಸಾಲ ತೆಗೆದುಕೊಂಡು ಮನೆ ಕಟ್ಟಿಸಲಿಕ್ಕಾಗೋಲ್ವೇ ಅಣ್ಣಾ.

ರಾಜಣ್ಣ : ನನಗಿನ್ನೇನಮ್ಮಾ ರಿಟೈರು ಆಗೋ ಸಮಯ ಬಂತು. ಇನ್ನು ಯಾರು ಸಾಲ ಕೊಡ್ತಾರಮ್ಮ? ಅವರೆಲ್ಲ ಬಹಳ ಕಾಲದಿಂದ ಬುದ್ಧಿ ಉಪಯೋಗಿಸಿಕೊಂಡು ಹಣ ಸಂಪಾದಿಸಿದ್ದಾರೆ. ಬೇರೆಯವರು ಸ್ಕೂಟರ್ ತೆಗೆದುಕೊಂಡ್ರು, ಮನೆ ಕಟ್ಟಿಸಿಕೊಂಡ್ರೂ ಅಂದ್ರೆ ನಾವೂ ಹಾಗೇ ಮಾಡ್ಲಿಕ್ಕಾಗುತ್ಯೇನಮ್ಮ? ಹಾಸಿಗೆ ಇದ್ದಷ್ಟಕ್ಕೆ ಕಾಲು ಚಾಚುವುದು ಒಳ್ಳೆಯದಲ್ವೇ?

ಪುಷ್ಪ : ಹೌದಪ್ಪ.

ರಾಜಣ್ಣ : ನೀವು ಪುಣ್ಯ ಮಾಡಿದ್ರೆ ನೀವು ಹೋದ ಮನೆಯಲ್ಲಿ ಎಲ್ಲಾ ಪುಣ್ಯವನ್ನು ಅನುಭೋಗಿಸುವಿರಂತೆ.

ಪುಷ್ಪ : ಅಪ್ಪಾ..... ನನಗೆ ಎಸ್.ಎಸ್.ಎಲ್.ಸಿ. ಪಾಸು ಆಯ್ತು ಅನ್ನೋದು ಗೊತ್ತಾಯ್ತೇ?

ರಾಜಣ್ಣ : ನಿನಗೇನೋ ಪಾಸಾಯ್ತು ಅಂತ ಸಂತೋಷವಾಗಿದೆಯಮ್ಮಾ ಆದ್ರೆ ನನಗೆ.....

ಪುಷ್ಪ : ಹಾಗಾದ್ರೆ ಫೇಲಾಗ್ಬೇಕಾಗಿತ್ತಾಪ್ಪಾ?

ರಾಜಣ್ಣ : ಹಾಗಲ್ಲಮ್ಮ, ಹೀಗೆ ನೀನು ಪಾಸುಮಾಡಿದ್ರೂ ನನಗೆ ಓದಿಸಲಿಕ್ಕೆ ಶಕ್ತಿ ಇಲ್ವಲ್ಲಾ ಅಂತ.

ಪುಷ್ಪ : ಹಾಗಾದ್ರೆ ಈಗ ನಾನೇನು ಮಾಡ್ಲಿ ಅಪ್ಪಾ?

ರಾಜಣ್ಣ : ನನಗೇನು ಹೇಳೋಕೂ ತೋಚ್ತಾ ಇಲ್ಲ.

ಪುಷ್ಪ : ಬರೇ ಎಸ್.ಎಸ್.ಎಲ್.ಸಿ.ಗೇ ಯಾರು ತಾನೇ ಕೆಲಸ ಕೊಡ್ತಾರೆ ಅಣ್ಣಾ?

ರಾಜಣ್ಣ : ಏನಾದ್ರೂ ಪ್ರಯತ್ನ ಮಾಡೋಣ.

ಪುಷ್ಪ : ಹಾಗಾದ್ರೆ ನಾನು ಕಾಲೇಜು ಓದೋ ಪುಣ್ಯ ಇಲ್ವೇ ಅಪ್ಪಾ?

ರಾಜಣ್ಣ : ನನ್ನ ಕೈ ನಡೆಯುತ್ತಿಲ್ವಲ್ಲ ಮಗೂ, ಏನ್ಮಾಡ್ಲಿ?

ಪುಷ್ಪ : ಓದ್ತೇನೆ ಅನ್ನೋವರಿಗೆ ಓದಿಸ್ತೀನಿ ಅನ್ನೋವ್ರಿಲ್ಲ - ಓದದೆ ಇದ್ದವರಿಗೆ ಓದಿಸ್ತೀನಿ ಅಂತಾರೆ. ಹಲ್ಲಿದ್ದವರಿಗೆ ಕಡ್ಲೆ ಇಲ್ಲ, ಕಡ್ಲೆ ಇದ್ದವರಿಗೆ ಹಲ್ಲಿಲ್ಲ ಅಂದ ಹಾಗಾಯ್ತು. ಎಲ್ಲಾ ನಮ್ಮ ಕರ್ಮ. (ಹೀಗೆ ಮಾತಾಡುತ್ತಿರಲು ರಾಮಣ್ಣನವರು ಬರುತ್ತಾರೆ. ಅವರನ್ನು ನೋಡಿ ಪುಷ್ಪ ಒಳಗೆ ಹೋಗುತ್ತಾಳೆ. ರಾಜಣ್ಣ ಎದ್ದು)

ರಾಜಣ್ಣ : ರಾಮಣ್ಣನವರು ದಯಮಾಡಿಸಬೇಕು.

ರಾಮಣ್ಣ : ನಮಸ್ಕಾರ. (ಇಬ್ಬರೂ ಕುಳಿತುಕೊಳ್ಳುವರು)

ರಾಜಣ್ಣ : ಅಂತೂ ದೇವರು ಬಂದ ಹಾಗೆ ಬಂದ್ರಿ.

ರಾಮಣ್ಣ : ಅದೆಲ್ಲಾ ದೊಡ್ಡ ಮಾತು ಬಿಡಿ. ನಾನು ಕಾಗದವನ್ನೇ ಬರೆಯೋಣ ಅಂತಿದ್ದೆ. ಆದ್ರೆ ನಾನೇ ಬರೋದು ಸರಿ ಅಂತ ಬಂದೆ. ನಮ್ಮ ಮಗ ಒಪ್ಪಿದ್ದಾಗಿದೆ. ತಾವೇನೂ ತಪ್ಪು ತಿಳಿದುಕೊಳ್ಳದೇ ಇದ್ರೆ ಒಂದು ವಿಷಯ ಕೇಳಬೇಕು ಅಂತಿದ್ದೀನಿ.

ರಾಜಣ್ಣ : ಏನೂ ರಾಮಣ್ಣನವರೇ?

ರಾಮಣ್ಣ : ನಮ್ಮ ಹುಡುಗ ನಿಮ್ಮ ಎರಡನೇ ಹುಡಿಗೀನ ಇಷ್ಟಪಟ್ಟಿದ್ದಾನೆ.

(ಅಷ್ಟರಲ್ಲಿ ಒಳಗಿಂದ ಶಾರದಾ ಬರುತ್ತಾ)

ಶಾರದ : ಇದೇನು ರಾಮಣ್ಣನವ್ರೇ ಯಾರಾದ್ರೂ ಮೊದಲನೇ ಹುಡುಗಿ ಬಿಟ್ಟು ಎರಡನೇ ಹುಡಿಗಿಗೇ ಮದ್ವೆ ಮಾಡ್ತಾರ್ಯೇ? ಅವಳೇನು ಅಷ್ಟಕ್ಕೂ ಕುಂಟಿಯೋ ಕುರುಡಿಯೋ? ಹಾಗೆ ಒಂದು ಪಕ್ಷ ನಾವು ಮಾಡಿದರೂ ಬೇರೆಯವರು ಮುಂದೆ ಆಕೆಯನ್ನು ತಂದುಕೊಳ್ತಾರ್ಯೇ? ನೀವೇ ಯೋಚಿಸಿ. ಒಂದು ಪಕ್ಷ ನಿಮ್ಮ ಮನೆಯಲ್ಲಿ ಹೆಣ್ಣುಗಳಿದ್ದರೆ ಹಾಗನ್ತಿದ್ರಾ? ಮಾತಾಡಿ. ನಮ್ಮ ಹೆತ್ತ ಕರುಳಿಗೆ ಬೆಂಕಿ ಸುರಿಬೇಡಿ.

ರಾಮಣ್ಣ : ಹಾಗೇನಿಲ್ಲ, ನಿಮ್ಮ ಹಿರಿಯ ಮಗಳಿಗೆ ಸ್ವಲ್ಪ ವಯಸ್ಸು......

ರಾಜಣ್ಣ : ಇದೇನು ರಾಮಣ್ಣನವ್ರೇ ನೀವು ಹೀಗೆ ಮಾತಾಡ್ತಾ ಇದ್ದೀರಿ ಈ ಕಾಲದಲ್ಲೂ.....? ಹುಡಿಗೀಗೆ ಇಪ್ಪತ್ತು ವರ್ಷ ಆಗಿದೆ. ಅದೂ ಹೆಚ್ಚೇ? ಈಗ ಹೆಣ್ಣು ಮಕ್ಕಳ ಮದುವೆ ವಯಸ್ಸನ್ನು ಹದಿನೆಂಟರ ಮೇಲೆ ಮಾಡ್ಬೇಕು ಅಂತ ಮಾಡ್ತಿದ್ದಾರೆ. ತಿಳಿದಂಥ ನೀವೂ ಹೀಗಂದ್ರೆ ಹ್ಯಾಗೆ?

ರಾಮಣ್ಣ : ಹೋಗ್ಲೀ....... ವರನಿಗೆ ವರದಕ್ಷಿಣೆ..... ವರೋಪಚಾರ ಏನು? ನಮ್ಮ ಅಂತಸ್ತಿಗೆ ತಕ್ಕಹಾಗೆ ಮಾಡಬೇಡ್ವೇನು?

ಶಾರದ : ನಮ್ಮ ಕೈಲಾದಷ್ಟು ಮಾಡ್ತೇವೆ. ಈಗ ಏನೂ ಅಂತ ಹೇಳೋಣ.

ರಾಮಣ್ಣ : ಸರಿ ಹಾಗಾದ್ರೆ ನಾನು ಬರ್ತೇನೆ. ನೀವು ನಿಮ್ಮ ಮಗಳಿಗೆ ಬೇರೆ ಕಡೆ ನೋಡ್ಕೊಳ್ಳಿ.

ರಾಜಣ್ಣ : ರಾಮಣ್ಣನವರೇ ಸ್ವಲ್ಪ ನಿಧಾನಿಸಿ.

ರಾಮಣ್ಣ : ಇಲ್ಲ ನಾನು ಬರ್ತೇನೆ. (ಹೋಗುತ್ತಿರಲು)

ರಾಜಣ್ಣ : ರಾಮಣ್ಣನವರೇ.... ರಾಮಣ್ಣನವರೇ.......!

ಶಾರದ : ಯಾಕೆ ಸುಮ್ನೇ ಕೂಗಿಕೊಳ್ತೀರಿ ಬನ್ನಿ..... ಆಕೆ ಅದೃಷ್ಟ ಹೇಗಿದ್ಯೋ ಹಾಗಾಗುತ್ತೆ. ನಾವೇನು ಮಾಡ್ಲಿಕ್ಕಾಗುತ್ತೆ? ಇಲ್ಲದೇ ಹೋದ್ರೆ ಅವಳ ಅನ್ನ ಅವಳ ಕೈಯಲ್ಲೇ ಇದೆ.

ರಾಜಣ್ಣ : ಅಯ್ಯೋ ದೇವ್ರೇ..... ಎಂಥ ಕಾಲ ಬಂತಪ್ಪಾ....... ಯಾವಾಗ ಕಣ್ಬಿಡ್ತೀಯಪ್ಪಾ?

(ಇಬ್ಬರೂ ಕಣ್ಣೀರು ಸುರಿಸುವರು)

* * *

## ಮಧ್ಯಾಂತರ

## ದೃಶ್ಯ-೮

ರಮೇಶ : ನಾಗೂ.... ನಾಗೂ......

ನಾಗಮಣಿ : (ಒಳಗಿಂದ ಬರುತ್ತಾ) ಏನ್ರೀ....!

ರಮೇಶ : ಒಂದು ಹೊಸ ಬಿಸಿ ಸುದ್ದಿ!

ನಾಗಮಣಿ : ಹಳೇ ಸುದ್ದಿಯಾದ್ರೆ ಯಾರು ತಾನೇ ಕೇಳ್ತಾರೆ, ಹೇಳಿ, ಎಲ್ಲಿ ಏನು ಬಂದಿದೆ ನೋಡೋಣ.

ರಮೇಶ : ಪೇಪರ್ ಸುದ್ದಿಯಲ್ವೇ? ಸುದ್ದಿ ಅಂದ್ರೆ ನಿನ್ಗೆ ಬರೇ ಪೇಪರೇ ಜ್ಞಾಪಕ ಬರುತ್ತೆ ಅಲ್ವೆ?

ನಾಗಮಣಿ : ಪತ್ರಿಕೆ ಸಂಪಾದಕರು ಬಿಸಿ ಸುದ್ದಿ ಅಂದ್ರೆ ಪೇಪರಿನಲ್ಲಿ ಬಂದಿರೋದೆ ಅನ್ನೋದು ನಮ್ಮ ಭಾವನೆ.

ರಮೇಶ : ಸದ್ಯ ಅದಲ್ಲ ಮಹರಾಯತಿ ಇದು ನಮ್ಮ ಸ್ವಂತ ಸುದ್ದಿ - ಬಾಯಿ ಸುದ್ದಿ.

ನಾಗಮಣಿ : ಅದೇನು ಸ್ವಲ್ಪ ಕಿವಿಗ್ಹೇಳಿ.

ರಮೇಶ : ಹೇಳಿದ್ರೇನು ಕೊಡ್ತೀಯೆ?

ನಾಗಮಣಿ : ಬಿಸಿ ಬಿಸಿ ಬಿಸಿಬೇಳೆಬಾತ್ ಮಾಡಿದ್ದೀನಿ, ಕೊಡ್ತೇನೆ.

ರಮೇಶ : ಸದ್ಯ ಬಿಸಿಬಿಸಿ ಕಜ್ಜಾಯ ಅನ್ನಿಲ್ವಲ್ಲ. ಅಲ್ಲಾ, ಅಂಥ ಸುದ್ದಿಗೆ ಇಷ್ಟೇನಾ ನೀನು ಕೊಡುವುದು?

ನಾಗಮಣಿ : ಕೊಡೋದಿರ್‍ಲಿ ಮೊದ್ಲು ಸದ್ದಿ ಹೇಳಿ, ಬಿಸಿ ಬಿಸಿ ಆಮೇಲೆ ಆರಿ ಹಳಸಿಹೋಗುತ್ತೆ. ಆಮೇಲೆ ಹೇಳಿದ್ರೂ ಏನು ಪ್ರಯೋಜನವಾಗೋಲ್ಲ.

ರಮೇಶ : ಹೌದಲ್ವೇ....ಹೌದು.... ಮರೆತಿದ್ದೆ. ಕೇಳು ಹೇಳ್ತೀನಿ. ಅದೇ ನಮ್ಮ ಅಣ್ಣನ ಮನೇಗೆ ಬಂದಿದ್ರಲ್ಲಾ ಆ ತಿಪಟೂರಿನ ರಾಮಣ್ಣನವ್ರು.

ನಾಗಮಣಿ : ಹೌದು.

ರಮೇಶ : ಅವರು ನಮ್ಮ ಮಗಳನ್ನು ಕೇಳಲಿಕ್ಕೆ ಬರೋಣ್ವೇ ಅಂತ ಹೇಳಿ ಕಳುಹಿಸಿದ್ದಾರೆ.

ನಾಗಮಣಿ : ಏಕೆ ನಿಮ್ಮ ಅಣ್ಣನ ಮಗಳ ಒಪ್ಗೆ ಮಾಡ್ಕೊಳ್ಳಲಿಲ್ವೇ?

ರಮೇಶ : ಇಲ್ಲ ಕಣೆ.

ನಾಗಮಣಿ : ಯಾಕೆ?

ರಮೇಶ : ಅವರು ಸ್ವಲ್ಪ ಭಾರಿ ಕುಳಾನೇ ಅಂತೆ. ಗಂಡು ಎಂ.ಎ. ಓದಿದ್ದಾನೆ. ಅಂಥವ್ರು ಏನೂ ಕೊಡ್ದ ನಮ್ಮಣ್ಣನ ಮನೇಲಿ ತರ್‍ತಾರೇನೆ?

ನಾಗಮಣಿ : ಅದು ಸರಿ. ಈಗ ಅವರು ನಮ್ಮ ಮನೆಗೆ ಬರ್‍ತೀನಿ ಅಂದ್ರೇನು?

ರಮೇಶ : ನಾನು ಬನ್ನಿ ಅಂತ ಫೋನ್ ಮಾಡಿದ್ದೀನಿ. ಆದ್ರೆ ರಾಣಿ ಸಾಹೇಬರ ಸಲಹೆ ಕೇಳಲಿಲ್ಲ.

ನಾಗಮಣಿ : ಅದಕ್ಕೇನಂತೆ ಬಿಡಿ. ಹೆಣ್ಣಿರೋ ಮನೆಗೆ ನಾಲ್ಕಾರು ಜನಗಳು ಬರ್‍ತಾರೆ ಹೋಗ್ತಾರೆ. ಇಬ್ಬರಿಗೂ ಒಪ್ಪಿಗೆಯಾದ್ರೆ ತಾನೇ ಮದ್ವೆ?

ರಮೇಶ : ನೀನು ರಾತ್ರಿ ಊಟಕ್ಕೆ ಎರಡು ತರಹದ ಪಲ್ಯ, ಕೀರು, ಚಿತ್ರಾನ್ನ ಮಾಡಿಸಿಬಿಡು.

ನಾಗಮಣಿ : ಅದಕ್ಕೇನಂತೆ ಆಗ್ಲಿ.

(ಅಷ್ಟರಲ್ಲಿ ರಾಮಣ್ಣನವರು ಬರುವರು - ನಾಗಮಣಿ ಒಳಗೆ ಹೋಗುವಳು.)

ರಾಮಣ್ಣ : ನಮಸ್ಕಾರ ಸಾಹೇಬರಿಗೆ.

(ರಾಮಣ್ಣ ಕುರ್ಚಿಯ ಮೇಲೆ ಕುಳಿತುಕೊಳ್ಳುವರು)

ರಮೇಶ : (ಕೈ ತೋರುತ್ತಾ) ಅಷ್ಟೆಲ್ಲಾ ದೊಡ್ಡ ಮಾತು ಬೇಡಿ.... ಕುಳಿತುಕೊಳ್ಳಿ.

ರಾಮಣ್ಣ : ನೀವು ಹೇಳಿ ಕಳುಹಿಸಿದ ಮೇಲೆ ನನಗೆ ಧೈರ್ಯ ಬಂತು.

ರಮೇಶ : ಅದಕ್ಕೇನಂತೆ ಹೆಣ್ಣಿರೋ ಮನೆಗೆ ಬರೋದು ಪೋಗೋದು ಸಹಜ.

ರಾಮಣ್ಣ : ಮನೆಯನ್ನು ಹೊಸದಾಗಿ ಕಟ್ಟಿಸಿದ್ದೀರಿ ಅಂತ ಕಾಣುತ್ತೆ.

ರಮೇಶ : ಹೌದು - ಎಲ್ಲಾ ಒಂದು ಐವತ್ತು ಸಾವಿರ ಬಿತ್ತು ಅನ್ನಿ. ನಿನ್ನೆ ಒಂದು ಹೊಸ ಸ್ಕೂಟರನ್ನು ತೆಗೆದುಕೊಂಡೆ. ಅದನ್ನ ಮಗಳಿಗೆ ಕೊಡಬೇಕು ಅಂತ ಇದ್ದೇನೆ.

ರಾಮಣ್ಣ : ಅದು ಸರಿ ಬಿಡಿ.

ರಮೇಶ : ಮಧುಮತಿ ಮೂರನೇ ಎಂ.ಬಿ.ಬಿ.ಎಸ್., ಓದ್ತಾ ಇದ್ದಾಳೆ.

ರಾಮಣ್ಣ : ಅದು ಸರಿ.

ರಮೇಶ : ಭಾವಗೀತೆ ಚೆನ್ನಾಗಿ ಹಾಡ್ತಾಳೆ.

ರಾಮಣ್ಣ : ಅದೂ ಸರಿ.

ರಮೇಶ : (ಸ್ವಲ್ಪ ಬಾಗಿಲ ಹತ್ತಿರ ಹೋಗಿ) ಮಧುಮತೀಗೆ ಡ್ರೆಸ್ ಆಯ್ತೇ?

ರಾಮಣ್ಣ : (ಕೇಳಿಸಿಕೊಂಡು) ಬನ್ನಿ..... ನಾನು ಆಕೇನ ನೋಡಿದ್ದೇನೆ. ನೀವೇನೂ ತೋರಿಸಬೇಕಿಲ್ಲ. ಡ್ರೆಸ್ ಮಾಡದೇ ಇದ್ರೂ ಆಕೆ ಥೇಟ್ ಲಕ್ಷ್ಮೀದೇವಿ ಇದ್ದ ಹಾಗೆ ಇದ್ದಾಳೆ. ಸರಸ್ವತಿಯೂ ಹೌದು ಅನ್ನಿ.

ರಮೇಶ : ಬಹಳ ಸಂತೋಷ.

ರಾಮಣ್ಣ : ನನಗೇನೋ ಒಪ್ಪಿಗೆ ಇದೆ. ನಿಮ್ಮ ಅಭಿಪ್ರಾಯ ತಿಳಿಯೋಕೆ ಮಾತ್ರ ನಾನು ಬಂದೆ ಅಷ್ಟೆ.

ರಮೇಶ : ಹುಡುಗ ಒಪ್ಪಬೇಕಲ್ಲ ಹುಡಿಗೀನ.

ರಾಮಣ್ಣ : ಹುಡುಗಿ ಒಪ್ಪಬೇಕಲ್ಲ ಹುಡಗನ್ನ.

ರಮೇಶ : ಅದು ಸರಿ ಅನ್ನಿ.

ರಾಮಣ್ಣ : ನಮ್ಮ ಹುಡುಗ ಒಂದು ದಿನ ಹೇಳಿದ್ದ, ಆ ಹುಡುಗಿಯಾದ್ರೆ ನಾವು ನೋಡುವ ಹಾಗೇ ಇಲ್ಲ ಅಂತ. ನಿಮ್ಮ ಹುಡುಗಿಯೂ ಸಹ ಆತನನ್ನ ಕಾಲೇಜಿನಲ್ಲಿ ನೋಡಿರಬೇಕು.

ರಮೇಶ : ಅದು ತಿಳಿಯಬೇಕು ಸ್ವಲ್ಪ.

ರಾಮಣ್ಣ : ಅದು ಸರಿ ಅನ್ನಿ.

ರಮೇಶ : ಈ ಸಾರಿ ಮದ್ವೆ ಮಾಡಿಬಿಡಬೇಕು ಅಂತ ಆಸೆ.

ರಾಮಣ್ಣ : ಅದು ಸರಿ ಅನ್ನಿ.

(ಅಷ್ಟರಲ್ಲಿ ಕಾಫಿ ಬಂತು ನಾಗಮಣಿಯಿಂದ)

ರಮೇಶ : ಇದೇನೇ, ಹುಡುಗಿ ಕೈಲಿ ಕೊಟ್ಟು ಕಳುಹಿಸು ಅಂದ್ರೆ, ನೀನೇ ತಂದು ಬಿಟ್ಟಿದ್ದೀಯೆ? (ಎಲ್ಲರೂ ನಗುವರು)

ನಾಗಮಣಿ : ಆಕೆ ಸ್ಕೂಲಿಗೆ ಹೋಗಬೇಕು ಅಂತ ಹೊರಟಳು.

ರಾಮಣ್ಣ : ನಾನು ನೋಡುವ ಹಾಗಿಲ್ಲ ಅಂತ ಹೇಳಿದ್ನಲ್ಲ.

ರಮೇಶ : ಅದ್ಸರಿ ಅನ್ನಿ..... ತೆಗೆದುಕೊಳ್ಳಿ.... ಕಾಫಿ.....

ರಾಮಣ್ಣ : ಅದೂ ಸರಿ ಅನ್ನಿ........ (ಕಾಫಿ ಕುಡಿದು) ಸರಿ ಇನ್ನು ನಾನು ಬರ್ತೇನೆ ಸ್ವಾಮೀ.

ರಮೇಶ : ಬಹಳ ಒಳ್ಳೆಯದು. ಹುಡುಗನನ್ನು ಕಳುಹಿಸುತ್ತೀರಾ?

ರಾಮಣ್ಣ : ಕಳುಹಿಸಲೇ ಬೇಕು ಅಂದ್ರೆ ಕಳುಹಿಸುತ್ತೇನೆ; ನಿಮ್ಮ ಹುಡುಗಿಯನ್ನು ಕೇಳಿ. ಬೇಕು ಅಂದ್ರೆ ಕಳುಹಿಸುತ್ತೇನೆ.

ರಮೇಶ : ನಾನು ಯಾವುದಕ್ಕೂ ಪತ್ರ ಹಾಕ್ತೇನೆ.

ರಾಮಣ್ಣ : ಬಹಳ ಸಂತೋಷ ಬರ್ತೇನೆ. ಬರ್ತೇನಮ್ಮ

ನಾಗಮಣಿ : ನಮಸ್ಕಾರ

(ರಾಮಣ್ಣ ಹೊರಡುವರು)

* * *

## ದೃಶ್ಯ-೯

(ಶಾರದ ಮನೆಯ ಕಸವನ್ನು ಗುಡಿಸುತ್ತಿರಲು ಅಲ್ಲಿಗೆ ಬೆಳ್ಳಿ ಬರುತ್ತಾನೆ, ಕಸಬರಿಕೆ ಇಟ್ಟು)

ಶಾರದ : ಏನೋ ಬೆಳ್ಳಿ...... ಬಾ.... ಕುಳಿತುಕೋ...... ಕುರ್ಚಿ ಮೇಲೆ.....

ಬೆಳ್ಳಿ : ಪರ್ವಾಗಿಲ್ಲವ್ವ.... ಕೆಳಗೆ ಕೂತ್ಕೊಂತೀನಿ.....

ಶಾರದ : ಏನು ಬಂದೆ?

ಬೆಳ್ಳಿ : ಇಲ್ಲೇ ಪೋಸ್ಟ್ ಆಫೀಸಿಗೆ ಈ ಕಾಗದ ಹಾಕು ಅಂದ್ರು ಕಣವ್ವಾ ಆದ್ಕೆ ಬಂದಿದ್ದೆ. ಹಂಗೆ ನಿಮ್ಮಟ್ಟಿ ಹ್ಯಾಗಿದೆ ನೋಡ್ಕೊಂಡೋಗನ ಅಂತ ಬಂದಿವ್ನಿ.

ಶಾರದ : ಅಯ್ಯೋ ಬಡವರ ಮನೆ ಇನ್ಯಾಗಿರುತ್ತೆ ಹೇಳು ಮತ್ತೇ? ನಿಮ್ಮ ಸಾಹುಕಾರರ ಮನೆಯ ಹಾಗಿದೆಯಾ ಹೇಳು.

ಬೆಳ್ಳಿ : ಅಯ್ಯೋ, ನಾವು ಸಾಹುಕಾರರ ಮನೇಲಿದ್ರೂ ನಾವು ಬಡವರು ಕಣ್ ಶಾರದವ್ವಾ?......

ಶಾರದ : ಈಗಿನ ಕಾಲದಲ್ಲಿ ಬಡವರ್‍ಯಾರು, ಸಾಹುಕಾರ್‍ಯಾರು ಬಿಡು.

ಬೆಳ್ಳಿ : ಹಾಗನ್ಬುಟ್ರಾಗುತ್ಯವ್ವಾ? ಬಡವ್ರು ಬಡವ್ರೇ; ಸಾಹುಕಾರರು ಸಾಹುಕಾರ್ರೇ!

ಶಾರದ : ಅದೂ ಒಂದು ತರಹಕ್ಕೆ ನ್ಯಾಯವೇ ಅನ್ನು.

ಬೆಳ್ಳಿ : ನಾವು ಬಡವರಾಗಿಲ್ದೇ ಇದ್ರೆ ಯಾಕೆ ಇಲ್ಲೀವರೆಗೆ ಬರಬೇಕಾಗಿತ್ತವ್ವ? ಈ ಹೊಟ್ಟೆ ಬಟ್ಟೆ ತುಂಬಿಸಬ್ಯಾಡ್ವೇ ಹೇಳಿ?

ಶಾರದ : ಅದು ನಿಜ ಅನ್ನು.

ಬೆಳ್ಳಿ : ನಿಜ ಅನ್ನೋದೇನು ನಿಜವಾಗಿಯೇ ಆಗ್ಬುಟ್ಟಿದೆ. ನಮ್ಮಪ್ಪನಿಗೆ ಎಂಟು ಮಕ್ಕಳು ಶಾರದವ್ವಾ.... ಮಧ್ಯಕಾಲದಲ್ಲಿ ನಮ್ಮವ್ವ ನಮ್ಮನ್ನೆಲ್ಲಾ ನಡು ನೀರ್‍ನಲ್ಲಿ ಕೈ ಬಿಟ್ಟು ಹೋರಟೋದ್ಳು. ನಮ್ಮಪ್ಪ ಏನ್ಮಾಡ್ತಾನೆ ಹೇಳಿ. ಅದಕ್ಕೆ ಅವರಿವರ ಮನೆಗೆ ನಮ್ಮನ್ನಿರಿಸಿ ಜೀವನ ಕಳೀಬೇಕಾಯ್ತು.

ಶಾರದ : ಏನೇ ಆಗ್ಲಿ ಬೆಳ್ಳಿಯಪ್ಪ, ದೊಡ್ಡ ಸಂಸಾರ ಅನ್ನೋದೆ ಕಷ್ಟ. ಅದರಲ್ಲಿ ಸಂಪಾದನೆ ಇಲ್ದೇ ಜೀವನ ಸಾಗಿಸೋದೂ ಬಹಳ ಕಷ್ಟವೇ.

ಬೆಳ್ಳಿ : (ದುಗುಡದಲ್ಲಿ) ಅದಕ್ಕೆ ಅಲ್ವೇ ತಾಯಿ ನಮ್ಮ ಗತಿ ಹಿಂಗಾಯ್ತು.

ಶಾರದ : ಹೊಲ ಗದ್ದೆ ಏನೂ ಇಲ್ವಾ?

ಬೆಳ್ಳಿ : ಏನಿದ್ರೆ ತಾನೇ ಯಾನು ಪರಯೋಜನ ಬುಡಿ. ಮಳೂದ್ರಾಯ್ತು ಇಲ್ದಿದ್ರೆವೋಯ್ತು. ಅದರಲ್ಲೂ ಈಗೊಂದೆರಡು ಮೂರು ವರ್ಷಗಳಿಂದ ಬೆಳೇನೇ ಕಂಡಿಲ್ಲ. ಇನ್ನು ಏಳೆಂಟು ಜನರ ಸಂಸಾರ, ನಮ್ಮಕ್ಕಿರ ಬಾಣಂತನ, ಅದು ಇದು ಅಂತ ಮಾಡೋದ್ಯಾಗೆ ಹೇಳವ್ವಾ? ಅದ್ಕೆ ನಾವು ಅವರಿವ್ರ ಮನೆ ಬಾಗಿಲ್‌ಗಂಟ್ಲೂ ಬರಬೇಕಾಗಿತ್ತಾ ಯೋಳಿ ಮತ್ತೆ.

ಶಾರದ : ಬಹಳ ಕಷ್ಟ ಕಣಪ್ಪಾ ಬಹಳ ಕಷ್ಟ. ಏನು ಮಾಡೋದು? ಬಂದದ್ದೆಲ್ಲಾ ಅನುಭೋಗಿಸ್ಬೇಕಲ್ಲಾ, ಬೆಳ್ಳಿ...... ಎಲ್ಲರಿಗೂ ಒಂದೊಂದು ಕಾಲ. ನಡೀಲಿ ಬಿಡು. ಬಡತನ ಸಿರಿತನ ಯಾರಿಗೂ ಸ್ಥಿರವಲ್ಲ ಅನ್ನೋದೆಲ್ಲಾ ಆಮೇಲೆ ಅವರವರಿಗೆ ಅರ್ಥವಾಗುತ್ತೆ ನೋಡ್ತಿರು.

ಬೆಳ್ಳಿ : ಇನ್ನು ಅವನ್ನೆಲ್ಲಾ ಜ್ಞಾಪಕ ಮಾಡ್ಕಂಡ್ರೇನು ಪ್ರಯೋಜನ ಬಿಡವ್ವ.

ಶಾರದ : ನಾಗಮಣವ್ವ ಹ್ಯಾಗೆ? ನಿನ್ನ ಚೆನ್ನಾಗಿ ನೋಡ್ಕೋತಾಳಾ?

ಬೆಳ್ಳಿ : (ಅಳುವ ದನಿಯಲ್ಲಿ) ಶಾರದವ್ವಾ...... ಯಾರಿಗೇಳ್ಕೊಳ್ಲಿ ಹೇಳಿ? ಅದಕ್ಕೇ ಇಲ್ಲಿಗೆ ಬಂದೆ ಕಣವ್ವಾ. ಮನೆಯಿಂದ ಆಚೆಗೆ ಎಲ್ಲಿಗೋಗಲಿಕ್ಕೂ ಬಿಡೋಲ್ಲ.

ಮನೆ ಇಚಾರ ಹೇಳ್ಬುಡ್ತಾನೆ ಅಂತ. ಈಗ ಪೋಸ್ಟ್ ಆಫೀಸಿಗೆ ಕಾಗದ ಆಕೋಕೆ ಬಂದಿದ್ದೆ; ಹಂಗೆ ಬಂದೆ.

ಶಾರದ : ಊಟ ತಿಂಡಿ ಅಚ್ಚುಕಟ್ಟಾಗಾಗುತ್ಯೋ ಇಲ್ವೋ?

ಬೆಳ್ಳಿ : ಬೆಳಗಿನ ಹೊತ್ತು ತಿಂಡಿ ಮಾಡಿದ್ರೆ ಮೊದ್ಲು ಎಲ್ಲಾ ತಿಂದು ಮಿಕ್ಕದ್ದಷ್ಟು ಕೊಡ್ತಾರೆ. ಒಂದೊಂದು ದಿನ ಇಲ್ಲ ಅನ್ನಿ...... ಬೆಳಗಿನ ಹೊತ್ತು ಅರ್ಧ ಲೀಟರ್ ಹಾಲು ತೆಗೆದುಕೊಳ್ತಾರೆ. ಬೆಡ್‌ಕಾಫಿ ಎಲ್ಲರಿಗೂ ಮಾಡಬೇಕು. ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ನೀರೊಲೆಗೆ ಬೆಂಕಿಹಾಕಿ ಕಾಫಿ ಮಾಡಿ ಕೊಟ್ಟು ಆಮೇಲೆ ಅಡಿಗೆ ಮಾಡಬೇಕು.

ಶಾರದ : ನೀನು ಕುಡ್ಯೋಲ್ವೇ?

ಬೆಳ್ಳಿ : ಎಂದೋ ಒಂದೊಂದು ದಿನ ನೀನು ಸ್ವಲ್ಪ ತಕ್ಕೋ ಅಂದ್ರೆ ಕುಡಿತೀನಿ ಕಣವ್ವಾ. ಕಾಫಿ ಕುಡಿಯಕ್ಕೆ ಕೊಟ್ರೇ ತಿಂಡಿಗೇ ಸೊನ್ನೆ ಮಾಡಿಬಿಡ್ತಾರೆ ಕಣವ್ವಾ. ಕಾಫಿ ತಿಂಡಿ ತಿಂದ್ರೆ ಮಧ್ಯಾಹ್ನ ಊಟವೇ ಸೊನ್ನೆ ಬುಡಿ. ಮೊದಲು ಎಲ್ಲಾರೂ ಚೆನ್ನಾಗಿ ತಿಂದು ಉಂಡು ಮಿಕ್ಕದ್ದು ನನಗೆ. ಅದು ಬಂದ್ರೆ ಆಯ್ತು, ಇಲ್ದೇ ಹೋದ್ರೆ ಇಲ್ಲ. ಎಲ್ಲಾ ಅಳತೆ. ಇಷ್ಟೇ ಅಕ್ಕಿ ಹಾಕಬೇಕು, ಇಷ್ಟೇ ಬೇಳೆ ಅಂತ. ಎಲ್ಲಾ ಬೀಗ ಹಾಕ್ಕೊಂಡು, ಎಷ್ಟು ಬೇಕೋ ಅಷ್ಟೇ ಕೊಡ್ತಾರೆ ನಾಗಮಣವ್ವ. ಕಿವಿ ಮೇಲೆ ತಿವೀತಾರೆ, ಇಂಗ್ಯಾ, ಉಂಡು ಉಂಡು ಊದೋದೇ ಅನ್ತಾರೆ ಕಣವ್ವಾ. ಒಬ್ಬೊಬ್ಬರೂ ಒಂದೊಂದು ಥರ ಮಾತಾಡ್ತರೆ ಕಣವ್ವಾ. ಯಾನ್ ಮಾಡದು? ಎಲ್ಲಾ ನಾವ್ ತಂದದ್ ಕಣ್ ಬುಡವ್ವಾ.

ಶಾರದ : ಅಯ್ಯೋ ಪಾಪ.

ಬೆಳ್ಳಿ : ಕೂಲಿ ಮಾಡಿಕೊಂಡು ತಿಂದ್ರೂ ಒಬ್ಬರ ಮನೆಗೆ ಸೇರಿಕೊಳ್ಳಬಾರದು ಕಣವ್ವಾ...... ಅದ್ರೂ ನಾವು ತಂದದ್ದನ್ನ ಅನುಭೋಗಿಸಬೇಕು ನೋಡು.

ಶಾರದ : ಬೇರೆಯವರ ಮಕ್ಕಳನ್ನ ನಮ್ಮ ಮಕ್ಕಳ ಹಾಗೆ ಅನ್ತಾ ತಿಳ್ಕೋಬೇಕು.

ಬೆಳ್ಳಿ : ಇಷ್ಟು ಮಾಡಿ ಎಲ್ಲರ ಬಟ್ಟೇನೂ ಒಗೀಬೇಕು ಕಣವ್ವಾ. ಇನ್ನು ಬರ್ತೀನಿ ಕಣವ್ವಾ. ಹೊತ್ತಾಯ್ತು. ಎಲ್ಲಿಗೋಗಿದ್ದೇ ಅಂತಾರೆ?

ಶಾರದ : ಒಂದು ಸ್ವಲ್ಪ ಕಾಫೀನಾದ್ರೂ ಕುಡಿದು ಹೋಗ್ತೀಯಂತೆ ನಿಲ್ಲು.

ಬೆಳ್ಳಿ : ಇಲ್ಲ ಕಣವ್ವಾ...... ಅಂದ ಹಾಗೆ ಒಂದು ವಿಚಾರ ಹೇಳೋಕೆ ಅಂತ್ಲೇ ಬಂದೆ. ಅದ್ನೇ ಮರತು ಬಿಟ್ಟೆ.

ಶಾರದ : ಏನು ಅದು?

ಬೆಳ್ಳಿ : ನಿಮ್ಮ ಮಗಳನ್ನು ಕೇಳಕ್ಕೆ ಬಂದಿದ್ರಲ್ಲವ್ವಾ ಅವರು ನಮ್ಮ ಮಧುಮತೀನ ಕೇಳಕ್ಕೆ ಬಂದಿದ್ರು. ಒಪ್ಪಂದ ಆಗೋದ್ರಲ್ಲಿದೆ.

ಶಾರದ : ಯಾರದೋ ಒಂದು ಆದ್ರೆ ಆಯ್ತುಬಿಡು. ಆಕೆಯೂ ನಮ್ಮ ಮಗಳೆ ತಾನೇ.

ಬೆಳ್ಳಿ : ನಾನು ಬರ್ತೀನಿ ಕಣವ್ವಾ.

(ಹೊರಡುವನು. ಕೆಮ್ಮುತ್ತಾ ರಾಜಣ್ಣ ಬರುತ್ತಿರಲು)

ಶಾರದ : ಇದೇನಂದ್ರೆ ಇಷ್ಟೊಂದು ಕೆಮ್ಮು? ಆಸ್ಪತ್ರೆಗಾದ್ರೂ ಹೋಗಿ ಬರಲಿಕ್ಕಾಗ್ದೇ ಇತ್ತೇ?

ರಾಜಣ್ಣ : ಇದೆಲ್ಲಾ ಏನ್ಮಾಡುತ್ತೆ ಬಿಡೆ?

ಶಾರದ : ಬಹಳ ಸೊರಗಿಹೋಗಿದ್ದೀರಿ. ಇದೇನು ನಿಮ್ಮ ಆರೋಗ್ಯ ಸರಿಯಾಗಿದ್ರಲ್ವೇ ಮಿಕ್ಕವು.

ರಾಜಣ್ಣ : ಹೋಗೋಣ....ಹೋಗೋಣ.

(ಇಬ್ಬರೂ ಕುರ್ಚಿಯ ಮೇಲೆ ಕುಳಿತುಕೊಳ್ಳುವರು)

ಶಾರದ : ರೀ..... ನಮ್ಮ ಮನೆಗೆ ಬಂದಿದ್ರಲ್ಲಾ ಅವರು ನಿಮ್ಮ ತಮ್ಮನ ಮಗಳನ್ನು ನೋಡಲಿಕ್ಕೆ ಬಂದು ಒಪ್ಪಿಗೆಯೆಲ್ಲಾ ಆಯ್ತಂತೆ. ಮದ್ವೆ ಇನ್ನು ಸ್ವಲ್ಪ ದಿನದಲ್ಲೇ ಆಗಬಹುದು.

ರಾಜಣ್ಣ : ಆಗಲಿ ಸಂತೋಷ. (ಕೆಮ್ಮು ಹೆಚ್ಚುವುದು) ಆಕೆಯು ನಮ್ಮ ಮಗಳಲ್ಲವೇ?...... ಸುಖವಾಗಿರಲಿ....... ದೇವರು ಗಂಡಿಗೊಂದು ಹೆಣ್ಣು ನೇಮಿಸಿದ್ದಾನೆ. ಇವಳ ಕೈ ಹಿಡಿಯುವವ ಯಾವನಿದ್ದಾನೋ ಏನೋ?

ಶಾರದ : (ನಿಟ್ಟುಸಿರಿಂದ) ಏನೋ ಎತ್ತೋ ಆ ಪರಮಾತ್ಮನೊಬ್ಬನಿಗೇ ಗೊತ್ತು?

ರಾಜಣ್ಣ : ಅದಿರಲಿ, ನಿನ್ನ ಪುತ್ರನ ವಿಷಯ ಕೇಳಿದ್ದೀಯೇನು?

ಶಾರದ : ಏನು ಅಂದ್ರೆ?

ರಾಜಣ್ಣ : ಮನೆಗೆ ದಿನ ಸರಿಯಾಗಿ ಬರ್ತಾ ಇದ್ದಾನ್ಯೇ?

ಶಾರದ : ಹತ್ತು ಹನ್ನೊಂದು ಘಂಟೆಗೆ ಬರ್ತಾನೆ..... ಏಕೆ?

ರಾಜಣ್ಣ : ಹೂಂ.....ಏಕೆ ಅಂದ್ರೆ ಏನು ಹೇಳಲಿ? ಬೀದಿಲಾಗ್ಲಿ ಸ್ಕೂಲಿನಲ್ಲಾಗ್ಲಿ ಮುಖ ಹೊತ್ಕೊಂಡು ತಿರುಗಾಡಕ್ಕಾಗ್ದೇ ಇರ್ಲೀ ಅಂತ ಆತ ತಿರುಗ್ತಾ ಇದ್ದಾನೆ.

ಶಾರದ : ಗಂಡಸು ಕೂತು ಕೆಟ್ಟ. ಹೆಂಗಸು ತಿರುಗಿ ಕೆಟ್ಲು ಅಂತ ಬಯ್ತಿದ್ರಲ್ಲ ಅದಕೆ ಆತ ಹಾಗೆ ತಿರುಗ್ತಿದ್ದಾನೆ. ಚೆನ್ನಾಗಿ ಓದ್ತಾ ಇದ್ದ ಅವನನ್ನು ಓದಿಸ್ಲಿಲ್ಲ. ಕೆಲಸ ಇಲ್ಲ. ಅದಕ್ಕೇ ತಿರುಗ್ತಾ ಇದ್ದಾನೆ. ಯಾವುದಾದ್ರೂ ಒಂದು ಕೆಲಸಕ್ಕೆ ಸೇರಿಸಿ ಸರಿಹೋಗ್ತಾನೆ.

ರಾಜಣ್ಣ : ಅದೇ ಮಾಡಬೇಕು ಇಲ್ದೇ ಹೋದ್ರೆ ಸರಿಹೋಗೋಲ್ಲ.

ಶಾರದ : ಏನು ದಾರಿ ಕೆಟ್ಟಿದ್ದಾನ್ಯೆ ನಮ್ಮ ರಾಮು?

ರಾಜಣ್ಣ : ನಮ್ಮ ಸ್ಕೂಲಿನ ಮೇಷ್ಟ್ರು ನಾಗಭೂಷಣ ಹೇಳಿದ ಲಿಲ್ಲಿ ಅನ್ನೋ ಹುಡುಗಿ ಜತೆ ಲಲ್ಲೇ ಹೊಡ್ಕೊಂಡು ತಿರುಗ್ತಾನೆ ಅಂತ. ಒಂದು ಮದ್ವೇನಾದ್ರೂ ಮಾಡಿಬಿಡಿ ಬೇಗ ಅಂತ.

ಶಾರದ : ಹೂಂ.... ಅವನಿಗೇನು ಬಂತು?

ರಾಜಣ್ಣ : ವಯಸ್ಸು?

ಶಾರದ : ಸಾಕು ಸುಮ್ನಿರ್ರೀ.

ರಾಜಣ್ಣ : ಇದ್ದುದ್ದನ್ನು ಇದ್ದ ಹಾಗೆ ಹೇಳಿದ್ರೆ ಏನೋ ಹೇಳ್ತಾರಲ್ಲ, ಎದ್ದು ಬಂದು ಎದೆಗೆ ಒದ್ದ ಹಾಗೆ ಅಂತ..... ಹಾಗೇ.

ಶಾರದ : ಸಾಕು ಸುಮ್ನಿರಿ ಉರಿಯೋ ಕೊಳ್ಳಿಗೆ ಗಾಳಿ ಹಾಕಬೇಡಿ.

ರಾಜಣ್ಣ : ಬರ್ತಲೇ ನೀನೇ ವಿಚಾರಿಸು ಗೊತ್ತಾಗುತ್ತೆ. ನಾನು ಸ್ಕೂಲಿಗ್ಹೋಗ್ಬೇಕು.

(ಎಂದು ಹೊರಡುವನು.... ಸ್ವಲ್ಪ ಹೊತ್ತಿನಲ್ಲೇ ನಾಗಮಣಿ ಬರುವಳು)

ಶಾರದ : ಬಾ... ನಾಗಮಣೀ.... ಬಾ ಕುಳಿತುಕೋ, ಏನು ಸಮಾಚಾರ?

ನಾಗಮಣಿ : ನಮ್ಮ ಮಧುಮತಿಗೆ ಮದುವೆ ನಿಶ್ಚಯವಾಯ್ತು.

ಶಾರದ : ಬಹಳ ಸಂತೋಷ.

ನಾಗಮಣಿ : ನಿಮ್ಮ ಪುಷ್ಪಳಿಗೆ ಕೇಳಲಿಕ್ಕೆ ಬಂದಿದ್ರಲ್ಲಾ, ಅವರ ಮನೆಗೆ ನಮ್ಮ ಮನೆಯಲ್ಲೇ ಮಾಡ್ಕೊಡ್ಬೇಕು ಅಂತ ಕೇಳಿಕೊಂಡು ಒಪ್ಪಿಕೊಂಡರು. ಅದಕ್ಕೆ ನಿಮ್ಮ ಅಭಿಪ್ರಾಯವೇನು ಕೇಳೋಣ ಅಂತ ಬಂದೆ.

ಶಾರದ : ಬಹಳ ಒಳ್ಳೆಯದು - ಮಾಡಬಹುದು.

ನಾಗಮಣಿ : ನನಗಂತೂ ಮೊದಲು ಸಮಾಧಾನವಿರಲಿಲ್ಲ.

ಶಾರದ : ಏಕೆ?

ನಾಗಮಣಿ : ಏಕೆ ಅಂದ್ರೆ ಮನೆಗೆ ಕೇಳಲಿಕ್ಕೆ ಬಂದಿದ್ರು ಅಂತ.....

ಶಾರದ : ಯಾರ ಯಾರ ಸಂಬಂಧ ಎಲ್ಲೆಲ್ಲಿರುತ್ತೋ ಯಾರಿಗೆ ಗೊತ್ತು? ಅವಳಿಗೂ ಕಂಕಣ ಸಂಬಂಧ ಯಾವ ಹೊತ್ತು ಒದಗುತ್ತೋ ಆಗ ಆಗುತ್ತೆ.

ನಾಗಮಣಿ : ನೀನೇನೂ ತಿಳಕೊಳ್ಳದೇ ಇದ್ರೆ ಒಂದು ವರ ಇತ್ತು.....

ಶಾರದ : ಯಾರು?

ನಾಗಮಣಿ : ನಮ್ಮೂರಿನ ಬಜ್ಜಣ್ಣನ ಮಗ ಸೋಮಣ್ಣ.

ಶಾರದ : (ದುಗುಡದಲ್ಲಿ) ನಾಗಮಣಿ..... ಆ ಕಪ್ಪು ಮುಳ್ಳು ಮುಖದವನಿಗೆ ನನ್ನ ಪುಷ್ಪಳನ್ನು ಕೊಡೋದೆ? ಈ ಹಗೆಯನ್ನು ಅದೆಷ್ಟು ದಿನಗಳಿಂದ ಸಾಧಿಸ್ತಾ ಇದ್ದೆ? ಈ ಮಾತನ್ನು ನನ್ನ ಮಗಳೆದುರಿಗೆ ಅಂದುಗಿಂದ್ಬಿಟ್ಟೀಯೆ? ಆಕೆ ಮುಂದೆ ಏನಾಗ್ತಾಳೋ ಎಂಬುದನ್ನೇ ಹೇಳೋದು ಕಷ್ಟ. ದೇವರು ಬಡತನ ಕೊಟ್ಟಿರಬಹುದು. ಆದರೆ ಅದರ ಜತೆಗೆ ಸ್ವಾಭಿಮಾನ ಕರುಣಿಸಿದ್ದಾನೆ ಅನ್ನೋದು ಜ್ಞಾಪಕ ಇರಲಿ ನಾಗಮಣಿ. ಹೆಣ್ಣು ಮಕ್ಕಳನ್ನು ಇಂಥವರಿಗೆ ಕೊಟ್ಟು ಮದುವೆ ಮಾಡೋದ್ಕಿಂತ ನೀರಿಗೆ ತಳ್ಳೋದು ಲೇಸು. ಈ ವರ ಹೇಳಲಿಕ್ಕೆ ಬಂದ್ಯಾ ನಾಗಮಣಿ? ಮೆಣಸು ಮುಗ್ಗಿದ್ದರೂ ಜೋಳಕ್ಕಿಂತ ಕಡಿಮೆ ಇಲ್ಲ ಎಂಬುದನ್ನು ಜ್ಞಾಪಕ ಇಟ್ಕೋ? ನಿನ್ಗೆ ಎರಡು ಮಕ್ಕಳು. ಸರಿಯಾದವರಿಗೆ ನೀನು ಕೊಡಬೇಕು. ನನಗೆ ಹೆಚ್ಚು ಮಕ್ಕಳಿವೆ ಅಂತ ಯಾರ್‍ಗಾದ್ರೂ ಕೊಟ್ಟು ಬಿಡು ಅಂತ ಹೇಳ್ತಾ ಇದ್ದೀಯಾ ಅಲ್ವಾ?

ನಾಗಮಣಿ : ಒಪ್ಪಿದರೆ ಕೊಡಿ. ಇಲ್ದೇ ಹೋದ್ರೆ ಬಿಡಿ. ನಾನೇನು ಅವನಿಗೇ ಕೊಡಿ ಅಂತ ಕಡ್ಡಾಯ ಮಾಡಿ ಹೇಳಲಿಲ್ವಲ್ಲ. ನನಗೆ ಎರಡು ಮಕ್ಕಳಿದೆ ಅಂತ ಹಮ್ಮೂ ಇಲ್ಲ. ನನ್ನ ಕಲಿತ ಬುದ್ಧಿಯೇ ಅಷ್ಟು. ಗಳಗಳ ಅಂತ ಮಾತಾಡೋದು ನನಗೆ ಅಂಟಿ ಬಂದ ಬುದ್ಧಿ.

ಶಾರದ : ನಾಗಮಣಿ, ಬಡತನ ಸಿರಿತನ ಯಾರಿಗೂ ಸ್ಥಿರವಲ್ಲ. ಸಿರಿಬಂತು ಅಂತ ಹೀಗೆ ಓಲಾಡ್ಬಾರ್‍ದು. 'ಹೆತ್ತವರಿಗೆ ಹೆಗ್ಗಣವೇ ಮುದ್ದು', ಅವರವರ ಮಕ್ಕಳು ಅವರಿಗೆ ಹೆಚ್ಚು. ನಿನಗೆ ನಿನ್ನ ಮಕ್ಕಳನ್ನು ಕಂಡ್ರೆ ಎಷ್ಟು ಆಸೆ ಇದ್ಯೋ ಅಷ್ಟೇ ಆಸೆ ನನಗೂ ಇದೆ ಎಂಬುದನ್ನು ಮರೀಬಾರ್‍ದು. ಮಕ್ಕಳು ಹತ್ತಿದ್ರೂ ಒಂದೇ - ಒಂದೇ ಇದ್ರೂ ಅಷ್ಟೇ.

ನಾಗಮಣಿ : ಶಾರದಕ್ಕ ನಿನ್ಗೆಷ್ಟು ಹಿತವಾದ ಮಾತು ಆಡಿದ್ರೂ ಅಷ್ಟೇ.

ಶಾರದ : ಆರು ಹೆತ್ತವಳಿಗೆ ಮೂರು ಹೆತ್ತವಳು ಬಟ್ಟು ಇಡಲಿಕ್ಕೆ ಬಂದ್ಹಾಗೆ. ನೀನು ನನಗೆ ಹೇಳೋದೇನು ಹಿತವಾದ ಮಾತು?

ನಾಗಮಣಿ : ಆದ್ರೆ ಸಣ್ಣ ಮಗುವಿನಿಂದಲೂ ಅರಿಯುವ ಪ್ರಸಂಗಗಳು ಅನೇಕ ಇವೆ ಎಂಬುದು ತಿಳಿದಿರಿ.

ಶಾರದ : ನಾಗಮಣಿ, ನಿನ್ನ ಬುದ್ಧಿವಾದ ಸಾಕು ಹೋಗು.

ನಾಗಮಣಿ : ಹೋಗಲಿಕ್ಕೆ ಬಂದಿರೋದು? ಹೋಗೋತನ್ಕ ಆತ್ರ ಏಕೆ? ನಾನು ಹೇಳಿದ ಹಾಂಗೆ ನನ್ನ ಮಾತು ಕೇಳಿದ್ದಿದ್ರೆ ಇಷ್ಟು ಮಕ್ಕಳಾಗ್ತಿದ್ವೆ - ಇಷ್ಟೊಂದು ಕಷ್ಟಪಡಬೇಕಾಗಿತ್ತೇ?

ಶಾರದ : ನಾಗೂ.... ಸಾಕು ಹೊರಡು ಮನೆಯಿಂದ, ಇಲ್ದೇ ಹೋದ್ರೆ..... ಇಲ್ದೆ ಹೋದ್ರೆ...... ದಬ್ಬಬೇಕಾದೀತು.

ನಾಗಮಣಿ : ಶಾರದಕ್ಕ.... ನಾನೇ ಹೋಗ್ತೇನೆ. ಏಕೆ ದಬ್ಬಬೇಕು. ನಿನಗೆ ದಬ್ಬಲಿಕ್ಕಾದ್ರೂ ಶಕ್ತಿಯಿಲ್ಲ...... ಬರ್‍ತೀನಿ.....

ಶಾರದ : ನಾಗಮಣಿ..... ನಾಗಮಣಿ..... (ದನಿಗೂಡಿ ಅಳುವಳು. ನಾಗಮಣಿ ಬಿಂಕದಿಂದ ಅಲ್ಲಿಂದ ಹೆಜ್ಜೆ ಕೀಳುವಳು.)

(ರಾಜಣ್ಣ ಸಪ್ಪೆ ಮೋರೆಯಿಂದ ಪ್ರವೇಶಿಸುತ್ತಾನೆ. ಹೆಂಡತಿಯನ್ನು ನೋಡಿ)

ರಾಜಣ್ಣ : ಶಾರದಾ..... ಶಾರದಾ..... ಏಕೆ ಅಳುತ್ತಾ ಇದ್ದೀಯೆ?

ಶಾರದ : (ಕಣ್ಣೀರೊರಸಿಕೊಂಡು) ಏನೂ ಇಲ್ಲ. ಬನ್ನಿ.......

ರಾಜಣ್ಣ : ನಿನ್ನ ದುಃಖ ನನಗೆ ಅರ್ಥವಾಗ್ದೆ ಇಲ್ಲ ಶಾರದ. ಆದ್ರೆ..... ಏನು ಮಾಡ್ಲಿ? ಎಂದಾದ್ರೂ ಒಂದು ದಿನ ಪುಷ್ಪಳ ಮದ್ವೆ ಆಗಿಯೇ ಆಗುತ್ತೆ ಸುಮ್ನಿರೇ. ಅದಕ್ಕೇಕೆ ಅಳಬೇಕು.

ಶಾರದ : ಎಂದಿಗೆ ಬರುತ್ತ್ಯೋ ಏನೋ?

ರಾಜಣ್ಣ : ಅದಿರ್‍ಲಿ. ಮದುವೆಗೆ ಹೋಗೋಲ್ವೆ ನೀನು ನನ್ನ ತಮ್ಮನ ಮನೆಗೆ.

ಶಾರದ : ಮದುವೆಗೆ ನೀವೇ ಹೋಗಿ. ನಾನ್ಹೋಗೋಲ್ಲ.

ರಾಜಣ್ಣ : ಏಕೆ?

ಶಾರದ : ಏಕೆ ಅಂದ್ರೆ? ನನ್ನ ಮನೆಯ ಕಥೆಯೇ ದೊಡ್ಡದಾಗಿರುವಾಗ ಬೇರೆಯವರ ಸಂತೋಷದಲ್ಲಿ ಭಾಗವಹಿಸೋ ಭಾಗ್ಯ ಎಲ್ಲಿದೆ? ನೆಂಟರಿಷ್ಟರ ಮುಂದೆ ಉಟ್ಟುಕೊಳ್ಳಲಿಕ್ಕೆ ಸರಿಯಾದ ಬಟ್ಟೆ ಇದ್ಯೇ? ಹಾಕ್ಕೊಳ್ಳಲಿಕ್ಕೆ ಬಂಗಾರ ಇದ್ಯೇ? ನನಗೇಕೆ ಮದುವೆ? ಸಾಹುಕಾರರ ಮನೆಯ ಮದ್ವೆಗ್ಹೋಗೋಕಿಂತ ಹಾಗೇ ಮನೇಲಿರೋದು ಲೇಸು.

ರಾಜಣ್ಣ : ಸರಿ ನಿನ್ನಿಷ್ಟ.

ಶಾರದ : ಸರಿ ಊಟಕ್ಕಾದ್ರೂ ಸಿದ್ಧ ಮಾಡ್ತೀನಿ.

(ಹೊರಡುವಳು - ಚಿಂತಾಮಗ್ನ ರಾಜಣ್ಣ ಕುಳಿತು ಕೊಳ್ಳುವನು)

* * *

## ದೃಶ್ಯ-೧೦

(ಕುರ್ಚಿಯ ಮೇಲೆ ನಾಗಮಣಿ ಪೇಪರ್ ಓದುತ್ತಿರಲು ಬೆಳ್ಳಿ ಬಂದು ಕರೆಯುತ್ತಾ ನಿಲ್ಲುವನು. ಮುಖ ಮುಚ್ಚಿಕೊಂಡು ಓದುತ್ತಲೇ ಇರಲು ತನ್ನತ್ತ ಗಮನವನ್ನು ಸೆಳೆಯಲು ಬೆಳ್ಳಿ)

ಬೆಳ್ಳಿ : ನಾಗಮಣವ್ವಾ.....

ನಾಗಮಣಿ : (ತಟಕ್ಕನೆ ಕೆಳಗಿಳಿಸಿ) ಅದೇನೋ ಅರೆಗಿಣಿ ಹಾಗೆ ಬಾಯ್ಬಿಟ್ಕೊಂಡು ನಾಗ್ಮಣವ್ವಾ ಅಂತ ಬಂದು ಬಿಟ್ಟೆ.

ಬೆಳ್ಳಿ : ಮತ್ತೆ.... ಮತ್ತೆ........

ನಾಗಮಣಿ : ಅದೇನು ಮತ್ತೆ.....ಮತ್ತೆ...... ಹೇಸರಗತ್ತೆ..... ಅದೇನುಬೇಗ ಬೇಗನೆ ಹೇಳಕ್ಕಾಗೊಲ್ವೆ?

ಬೆಳ್ಳಿ : ಯಾಕೋ....... ನಂಗೆ......

ನಾಗಮಣಿ : ನಿನಗೂ ಮದ್ವೆ ಆಗಬೇಕು ಅನ್ನಿಸುತ್ತೇನು?

ಬೆಳ್ಳಿ : ಅದಲ್ಲವ್ವ......

ನಾಗಮಣಿ : ಅದೇನೋ ಪಟಪಟನೆ ಹೇಳಕ್ಕಾಗಲ್ವೇನೋ?

ಬೆಳ್ಳಿ : ನಮ್ಮಮನೆಯವರನ್ನ ನೋಡಿ ಮೂರು ತಿಂಗಳಾಗೋಯ್ತು ನಾಗಮಣವ್ವ, ಎರಡು ದಿನದ ಮಟ್ಟಿಗೆ ಕಳಿಸ್ಕೊಡಿ.

ನಾಗಮಣಿ : ನಿನ್ಗೆ ಎಲ್ಲೋ ತಲೆಗಿಲೆ ಕೆಟ್ಟುಹೋಗಿದ್ಯೇನೋ?

ಬೆಳ್ಳಿ : ಎರಡೇ ದಿನದ ಮಟ್ಟಿಗೆ ಸಾಕು ಕಣವ್ವ.

ನಾಗಮಣಿ : ಕಾಸು ಚಿನಕುರುಳಿ ಅಂತ ತಿಳ್ಕೊಂಡಿದ್ದೀಯೋ ಹೇಗೋ? ಮೂರು ತಿಂಗಳಾಗ್ಲಿಲ್ಲ ಆಗ್ಲೆ ಊರಂತೆ, ಕೇರ್‍ಯಂತೆ. ಮದ್ವೆ ಹತ್ತಿರ ಬಂತು. ಊರಲ್ಹೋಗಿ ಬೆಚ್ಚಗೆ ಕುಳಿತುಕೊಳ್ಳೋಣ ಅಂತ್ಲೇನು. ಹಣದ ಬೆಲೆ ನಿನಗೆ ಗೊತ್ತಿದ್ರಲ್ವೇ?

ಬೆಳ್ಳಿ : ಇಲ್ಲವ್ವ ನಾನು ಹೋಗ್ಲೇ ಬೇಕು.

ನಾಗಮಣಿ : ಕಳುಹಿಸಲಿಕ್ಕಾಗೊಲ್ಲ ಅಂತಿದ್ದೀನಿ.

ಬೆಳ್ಳಿ : (ಅಳುತ್ತಾ) ನನ್ನ ಸಂಬಳದಲ್ಲಿ ಹಿಡಿದುಕೊಳ್ಳಿ; ನಾನು ಹೋಗಿ ಬಂದು ಬಿಡ್ತೀನಿ.

ನಾಗಮಣಿ : ನಿನಗೆ ಯಾರೂ ಬುದ್ಧಿ ಕಲಿಸಲಿಲ್ಲ ಅಂತ ಕಾಣುತ್ತೆ. ಹೋಗಬೇಕಾದ್ರೆ ರೂಪಾಯ್ನ ನೆಲ ಉರುಬಿ ಕೊಟ್ಟುಬಿಟ್ಟು ಹೋಗು. ಅಲ್ದೇ ಹೋದ್ರೆ, ಇನ್ನೂ ನಿನ್ನ ಕೆಲಸಾನ ಮೂರು ತಿಂಗಳವರೆಗೆ ನ್ಯಾಯವಾಗಿ ಮಾಡಿಹೋಗು. ಕಣ್ಣೀರ್ಹಾಕ್ತಾ ನಿಂತ್ಕೋಬೇಡ. ಹೋಗು ಕೆಲಸ ಮಾಡು ಹೋಗು.

ಬೆಳ್ಳಿ : ನಿಮಗೆ ನಿಮ್ಮ ತಂದೆ ನೋಡಬೇಕು ಅಂದ ಹಾಗೆ ನಮಗೂ ಅನ್ನಸೋಲ್ವೆ ಹೇಳಿ ನಾಗಮಣವ್ವಾ.

ನಾಗಮಣಿ : ಅಂಥ ನಿಮ್ಮಪ್ಪ ಬೇರೆಯವರ ಮನೆಯಲ್ಲೇಕೆ ನಿನ್ನನ್ನು ಇರಿಸಬೇಕಾಗಿತ್ತು.

ಬೆಳ್ಳಿ : ಬಡತನಕ್ಕೆ?

ನಾಗಮಣಿ : ಅದಕ್ಕೇ ಹೇಳಿದಷ್ಟು ಮಾಡು. ತಂದೆನ್ನೋಡ್ಬೇಕಂತೆ ತಂದೆ......

ಬೆಳ್ಳಿ : ನಾಗಮಣವ್ವಾ.... ನಮ್ಮ ಅಪ್ಪನ್ ದೂಷಣೆ ಮಾಡಬೇಡಿ.

(ಇಬ್ಬರೂ ಮಾತನಾಡುತ್ತಿರಲು ಗಂಡ ರಮೇಶನು ಬರುವನು)

ರಮೇಶ : ಅದೇನೇ ದೂಷಣೆ ಪಾಷಣೆ ಅಂತಿದ್ದಾನೆ.

ನಾಗಮಣಿ : ಬೆಳ್ಳಿ ಅವರಪ್ಪನ್ನ ನೋಡಬೇಕಂತೆ ಪಾಪ ಕಳುಹಿಸಿಕೊಡಿ.

ರಮೇಶ : ಬಂದು ಮೂರು ತಿಂಗಳಾಗ್ಲಿಲ್ಲ ಅಗಲೇ ಬಾಲ ಬಿಚ್ಚಿಬಿಟ್ನೇನು?

ನಾಗಮಣಿ : ಕೇಳಿ.

ರಮೇಶ : ಅದೇನೋ ಬೆಳ್ಳಿ.

ಬೆಳ್ಳಿ : ಊರಿಗ್ಹೋಗಬೇಕು ಅಂದೆ ಅಷ್ಟೇ ರಮೇಶಪ್ಪ.

ರಮೇಶ : ಪಾಪ ಸಣ್ಣ ಮಗು ಆಡಬೇಕೇನೋ ತೊಡೇ ಮೇಲೆ?

ಬೆಳ್ಳಿ : ಎರಡು ದಿನದ ಮಟ್ಟಿಗೆ ಕಳುಹಿಸಿಕೊಡಿ ಬಂದು ಬಿಡ್ತೀನಿ.

ರಮೇಶ : ಪಿತ್ತಗಿತ್ತ ನೆತ್ತಿಗೇರಿದ್ಯೇನು? ಹೋಗು ಹೋಗು ಅಡಿಗೆ ಕೆಲಸ ನೋಡುಹೋಗು.

(ಬೆಳ್ಳಿ ಅಳುತ್ತಾ ನಿಂತುಕೊಳ್ಳುವನು)

ನಾಗಮಣಿ : ಅದಿರಲಿ, ಹೋದ ಸಮಾಚಾರ?

ರಮೇಶ : ಚಿನ್ನ ಎಲ್ಲಾ ರೆಡಿ ಆಗಿದೆಯಂತೆ - ಈಗ ತಾನೇ ಅಕ್ಕಸಾಲಿಗನ ಹತ್ತಿರ ಹೋಗಿದ್ದೆ. ಬಟ್ಟೆಗಳನ್ನೆಲ್ಲಾ ನಾಳೆ ಕಳುಹಿಸ್ತಾರಂತೆ. ರಾಮಯ್ಯ ಶೆಟ್ರು ಬೇಕಾದ್ರೆ ನೀವೇ ಹೋಗಿ ನಿಮಗೆ ಬೇಕಾದ್ದನ್ನು ಅಲ್ಲೇ ಸೆಲೆಕ್ಟ್ ಮಾಡಿ ಎಂದರು.

ನಾಗಮಣಿ : ಹುಡುಗನಿಗೆ ಹಣ ಕೊಟ್ರಾ ನೀವು ಬಟ್ಟೆಗಳಿಗೆ?

ರಮೇಶ : ಐದು ಸಾವಿರ ನೆನ್ನೇನೆ ಕೊಟ್ಟು ಕಳುಹಿಸಿದೆ.

ನಾಗಮಣಿ : ಅಡಿಗೆಯವರಿಗೆಲ್ಲಾ ಗೊತ್ತು ಮಾಡಿದ್ರಾ?

ರಮೇಶ : ವಾದ್ಯದವರು, ಅಡಿಗೆಯವರು ಎಲ್ಲರಿಗೂ ಅಡ್ವಾನ್ಸ್ ಕೊಟ್ಟಾಯ್ತು.

ನಾಗಮಣಿ : ಪಾಪ ದಣಿದಿದ್ದೀರಿ ನಡೀರಿ ಊಟಕ್ಕೆ.

ರಮೇಶ : ಇದೇನೋ ಕಂಬ ನಿಂತ್ಹಾಗೆ ನಿಂತ್‌ಬಿಟ್ಯಲ್ಲಾ ಹೋಗಿ ಕೆಲಸ ನೋಡು ಹೋಗೋ ಬೆಳ್ಳೀ......

(ಬಾಗಿಲು ತೆರೆದು ಒಳಗೆ ಗಂಡ ಹೆಂಡತಿ ಹೊರಡುವರು)

(ಬೆಳ್ಳಿಯ ಕಣ್ಣಲ್ಲಿ ನೀರು ತುಂಬಿವೆ. ಹಾಗೆಯೇ ನಿಂತಿದ್ದಂತೆ ಹಿಂದೊಮ್ಮೆ ನಡೆದ ಮಾತುಗಳು ನೆನಪಿಗೆ ಬರುತ್ತವೆ.)

ಚನ್ನಯ್ಯ : ನಾನೂ ಒಂದಾನೊಂದು ಕಾಲದಾಗೆ ಚೆನ್ನಾಗಿ ಬಾಳಿಬದ್ಕಿದವ್ನೆ ಕಣ್ ರಮೇಶಪ್ಪಾ.... ಆದರೆ ಈವತ್ತಿನ ಕಷ್ಟ ಪರಿಹಾರ ಮಾಡ್ಕಳ್ಳಕ್ಕೆ ಈಟೊಂದು ದೂರ ಬರಬೇಕಾಯಿತು. ಏನೋ ನಿಮ್ಮನ್ನೇಳ್ಕಂಡು ನನ್ನೆಡ್ತಿ ಅನ್ನೆಡ್ಡೇ ದಿನದ

ಆರಾದ್ನೆ ಮಾಡ್ಕತೀನಿ ಕಣಪ್ಪಾ. ಮಗನೂ ವಸಿ ಪರಸಾದ ತಕ್ಕಂಬದ್ಬುಡ್ತಾನೆ. ಒಂದು ವಾರ ಕಳಸ್ಕೊಡ್ತೀನಿಕಣಪ್ಪಾ.

ನಾಗಮಣಿ : ಏನೋ ಬಡವ ಅಂತ ಕರುಣೆ ತೋರಿಸಿದ್ದಕ್ಕೆ ಶುರು ಮಾಡ್ಬಿಟ್ಯಲ್ಲಾ ಪುರಾಣ. ಶುಕ್ರವಾರ ಸೋಮವಾರ ಅಂತ ನಮ್ಮನೇಲಿ ಕಣ್ಣೀರ್ಹಾಕಕ್ಕೆ ಬಂದ್ಯೇನು? ಇಷ್ಟ ಇದ್ರೆ ಇರಿಸು, ಕಷ್ಟವಾದ್ರೆ ಕರ್‍ಕೊಂಡ್ಹೋಗು.

ರಮೇಶ : ಬಂದು ಮೂರು ತಿಂಗಳಾಗ್ಲಿಲ್ಲ ಬಿಚ್ಹಾದ ಬಾಲಾನ..... ಪಾಪ ಸಣ್ಣ ಮಗು ಅಪ್ಪನ ತೊಡೆ ಮೇಲೆ ಆಡಬೇಕು...... ಪಿತ್ತ ನೆತ್ತಿಗೇರಿದ್ಯೋ ಏನು. ಹೋಗು ಹೋಗು.... ಅಡಿಗೆ ಕೆಲಸ ನೋಡು ಹೋಗು.

* * *

ಬೆಳ್ಳಿ : ಕೂಲಿ ಮಾಡ್ಕಂಡು ತಿಂದ್ರೂ ಒಬ್ಬರ ಮನೆ ಸೇರಿಕೊಳ್ಳಬಾರದು ಶಾರದವ್ವ. ಆದ್ರೂ ನಾವು ತಂದದ್ದನ್ನ ನಾವು ಅನುಭೋಗಿಸಬೇಕಲ್ಲಾ.

ಶಾರದ : ಬಹಳ ಕಷ್ಟಕಣಪ್ಪಾ, ಬಹಳ ಕಷ್ಟ. ಏನು ಮಾಡೋದು ತಂದದ್ದೆಲ್ಲಾ ಅನುಭೋಗಿಸಬೇಕಲ್ಲಾ ಬೆಳ್ಳಿ........ ಎಲ್ಲರ್ರಿಗೂ ಒಂದೊಂದು ಕಾಲ ನಡೀಲಿ ಬಿಡು. ಆದರೆ ಬಡತನ ಸಿರಿತನ ಯಾರಿಗೂ ಸ್ಥಿರವಲ್ಲ ಎನ್ನೋದು ಆಮೇಲೆ ಅವರವರಿಗೆ ಅರ್ಥವಾಗುತ್ತೆ ನೋಡ್ತಿರು.

(ಹಿನ್ನೆಲೆಧ್ವನಿ) ನಿನ್ನದೇ ಏನು ಹೆಚ್ಚು ಬಿಡು. ಹಿಂದೆ ಹರಿಶ್ಚಂದ್ರ ರಾಜನಾದ್ರೂ ಬೇರೆಯವರ ಮನೆ ಆಳಾಗಿ ಅದೆಷ್ಟು ಕಷ್ಟಪಟ್ಟನು? ಋಣ ತೀರಿಸಬೇಕಾದ್ರೆ ಕಷ್ಟಪಡಲೇಬೇಕು. ದುಃಖವನ್ನೆಲ್ಲಾ ನುಂಗಲೇಬೇಕು. ಹೋಗು ಹೋಗು ಕೆಲಸ ಮಾಡು ಹೋಗು. ಋಣ ತೀರಿದ ಮೇಲೆ ಅಡಿಕೆ ಕಡಿದು ಎಲೆ ಮಡಿಸುವ ತನಕ ಇರಲಿಕ್ಕಾಗುವುದಿಲ್ಲ. ಹೋಗು ಹೋಗು... ಕೆಲಸ ಮಾಡು ಹೋಗು. (ಬೆಳ್ಳಿ ಹೊರಡುವನು)

* * *

## ದೃಶ್ಯ-೧೧

(ರಾಜಣ್ಣ ಖಾಯಿಲೆಯಿಂದ ಹಾಸಿಗೆ ಹಿಡಿದಿರಲು ಪಕ್ಕದಲ್ಲಿ ಹೆಂಡತಿ ಔಷಧವನ್ನು ಕುಡಿಸುತ್ತಿದ್ದಾಳೆ. ಅಲ್ಲಿಗೆ ಮಗಳು ಪುಷ್ಪ ಬರುತ್ತಾಳೆ.)

ಪುಷ್ಪ : ಅಮ್ಮ ಅಪ್ಪಾಜಿಗೆ ಹೇಗಿದೆ?

ಶಾರದ : ಇನ್ನೂ ನರಳತ್ಲೇ ಇದ್ದಾರೆ. ಔಷಧ ತೆಗೆದುಕೊಳ್ಳಿ ಅಂದ್ರೆ ಹಠ ಮಾಡ್ತಾ ಇದ್ದಾರೆ.

ಪುಷ್ಪ : ಅಪ್ಪಾಜಿ ಹಾಗೆಲ್ಲಾ ಮಾಡಬೇಡಿ. ನೀವು ಹೀಗೆಲ್ಲಾ ಆಡ್ತಿದ್ರೆ ಅಮ್ಮನಿಗೆ ಕಾಲೇ ಬಿದ್ದು ಹೋಗುತ್ತೆ.

ರಾಜಣ್ಣ : ಏನ್ಮಾಡ್ಲಮ್ಮಾ? ಎಷ್ಟೆಷ್ಟೋ ಧೈರ್ಯ ಮಾಡ್ತೀನಿ. ಆದ್ರೂ ಒಂದೂ ಕೈಗೂಡ್ತಾ ಇಲ್ಲಾ.

ಪುಷ್ಪ : ನೀವು ಯೋಚನೆ ಮಾಡಬೇಡಿ ಅಪ್ಪಾಜಿ. ನನಗೆ ವಿಜಯ ಹೈಸ್ಕೂಲಿನಲ್ಲಿ ಟೈಪಿಸ್ಟ್ ಕೆಲಸ ಸಿಕ್ಕಿದೆ.

ಶಾರದ : ಸದ್ಯ ದೇವರು ನಮ್ಮ ಭಾಗಕ್ಕೆ ಸ್ವಲ್ಪ ಕಣ್ಣು ತೆರೆದ ಅಂತ ಕಾಣುತ್ತೆ! ಹಾಗೇ ನಮ್ಮವರಿಗೂ ಒಳ್ಳೆಯದು ಮಾಡಿದ್ರೆ ಸಾಕು.

ಪುಷ್ಪ : ಇನ್ನೆಂಟು ಹತ್ತು ದಿನಗಳಲ್ಲಿ ಓಡಾಡುತ್ತಾರೆ ಚೆನ್ನಾಗಿ ಸುಮ್ಮನಿರಮ್ಮ.

ಶಾರದ : ನಿನ್ನ ಬಾಯಿ ಹರಕೆಯಿಂದ ಅಷ್ಟಾದ್ರೆ ಸಾಕು ತಾಯಿ.

ಪುಷ್ಪ : ಆಗಿಯೇ ಆಗುತ್ತೆ ಸುಮ್ಮನಿರಮ್ಮ.

ರಾಜಣ್ಣ : ಏನೋ ನೀನು ಹೆಣ್ಣಾದ್ರೂ ನಮ್ಮ ಮನೆಗೆ ಗಂಡಾಗಿ ದುಡಿದು ನಮನ್ನೆಲ್ಲಾ ಸಾಕಬೇಕಾಯ್ತಲ್ಲ ಮಗು.

ಪುಷ್ಪ : ನೀವು ನಮ್ಮನ್ನೆಲ್ಲ ಸಾಕ್ಲಿಲ್ವ ಅಪ್ಪಾಜಿ?

ರಾಜಣ್ಣ : ನಿನ್ನ ಮದ್ವೆ ಮಾಡಿ ಕಣ್ತುಂಬ ನೋಡಬೇಕು ಅಂತ ಅದೆಷ್ಟೆಷ್ಟೋ ಪ್ರಯತ್ನ ಮಾಡಿದೆ. ಆದ್ರೆ ಅದು ಕೈಗೂಡಲಿಲ್ಲ ಅಮ್ಮ.

ಶಾರದ : ನೀವು ಆಯಾಸ ಮಾಡ್ಕೊಳ್ಬೇಡಿ ಮಲಗಿ.

(ಅಷ್ಟರಲ್ಲಿ ಮದುವೆಯ ಓಲಗದ ದನಿ ಕೇಳುತ್ತಿರಲು)

ರಾಜಣ್ಣ : ಏಕೆ ನೀವು ಮದ್ವೇಗ್ಹೊಗಲ್ವೇ?

ಶಾರದ : ಈ ಖಾಯಿಲೇ, ಮನುಷ್ಯನಿಗಲ್ದೇ ಮರಕ್ಕೆ ಬರುತ್ತೇನು? ಏನೂ ಆಗೋಲ್ಲ ಸುಮ್ನಿರೇ ಬೇಗ ವಾಸಿಯಾಗುತ್ತೆ.

(ಓಲಗದ ಶಬ್ದ. ರಮೇಶ ಮತ್ತು ನಾಗಮಣಿ ಇಬ್ಬರೂ ಬರುವರು.)

ನಾಗಮಣಿ : ಶಾರದಕ್ಕಾ..... ಶಾರದಕ್ಕಾ..... ಏನು ಭಾವಾಜಿಗೆ ಹುಷಾರಿಲ್ವೇ?

ಶಾರದ : ಹಾಸಿಗೇ ಹಿಡಿದು ತಿಂಗಳೇ ಆಯ್ತು.

ರಮೇಶ : ಆಸ್ಪತ್ರೆಗಾದ್ರೂ ಸೇರಿಸಬೇರದಾಗಿತ್ತೆ?

ಶಾರದ : ಇಂದು ಸರಿ ಹೋಗುತ್ತೆ ನಾಳೆ ಸರಿ ಹೋಗುತ್ತೆ, ಅಂತ ತಿಂಗಳು ತುಂಬಿತು.

ನಾಗಮಣಿ : ಅಲ್ಲ ನಿಮ್ಮನ್ನೂ ನಾವು ಕರೀಬೇಕೇ? ಈ ಕೆಲಸವನ್ನು ನೀವೇ ನಿಂತುಕೊಂಡು ಮಾಡಬೇಕು. ಅಂಥದ್ರಲ್ಲಿ ಇಷ್ಟೊಂದು ಉದಾಸೀನ ಮಾಡಿದ್ರೆ ಹ್ಯಾಗೆ ಶಾರದಕ್ಕ?

ಶಾರದ : ನನ್ನ ಕಷ್ಟ ಗೊತ್ತಿದೆಯಲ್ಲಾ......?

ರಮೇಶ : ಅಣ್ಣಾ, ಆಸ್ಪತ್ರೆಗೆ ಸೇರಿ ಬಿಡು.

ರಾಜಣ್ಣ : ಏನೂ ಇಲ್ಲ. ಇನ್ನೊಂದು ನಾಲ್ಕು ದಿನದಲ್ಲಿ ಸರಿಹೋಗುತ್ತೆ.

ರಮೇಶ : ಹಾಗಂತ ಅಸಡ್ಡೆ ಮಾಡಬೇಡ.

ರಾಜಣ್ಣ : ಸರಿ ನೀವು ಹೋಗಿ ಮದ್ವೆ ಮಾಡಿ ಮುಗ್ಸಿ.

ನಾಗಮಣಿ : ಹಾಗಾದ್ರೆ ನಾವು ಬರೋಣ್ವೇ..... ಖಂಡಿತ ಎಲ್ಲಾ ಬರಬೇಕು.

ಶಾರದ : ಬರ್ತ್ತೇವೆ. ಹೋಗಿ ಬನ್ನಿ. (ಇಬ್ಬರೂ ಹೋದ ಮೇಲೆ)

ರಾಜಣ್ಣ : ನಾನೆಂದಿಗೆ ಪುಷ್ಪಳ ಮದ್ವೇ ಕಣ್ತುಂಬ ನೋಡೋದು. ದೇವರೇ....

(ಮೆಲ್ಲದನಿಯಿಂದ ಕೊನೆಗೆ ನಿಟ್ಟುಸಿರು ಬಿಡುವನು)

ಶಾರದ : ಏಕೆ ಸುಮ್ನೆ ಹಲವನ್ನು ಹಂಬಲಿಸುತ್ತೀರಿ. ಮಲಗಿ........ ಒಂದಲ್ಲ ಒಂದು ದಿನ ಆಕೆಗೂ ಆಗುತ್ತೆ.

(ಹೀಗೆ ಇಬ್ಬರೂ ಮಾತಾಡುತ್ತಿರಲು - ರಘು ಪ್ರವೇಶಿಸುವನು)

ರಘು : ರಾಜಣ್ಣ...... ಇದೇನು ಹಾಸಿಗೆ ಹಿಡಿದ್ಬಿಟ್ಟಿದ್ದಿಯೇ?

ಶಾರದ : (ಅಳುತ್ತಾ) ಅವರು ಹಾಸಿಗೆ ಹಿಡಿದು ಒಂದು ತಿಂಗಳೇ ಆಗಿಹೋಯ್ತು ಈ ಹೊತ್ತಿಗೆ.

ರಘು : ಇದೇನಪ್ಪಾ, ತಮ್ಮನ ಮನೇಲಿ ಮದ್ವೆ ಆದ್ರೂ ಇಲ್ಲೇ ಇದ್ದಾನೆ ಅಂತೀನಿ,

ಶಾರದ : ನೀವು ಅವರ ಮದ್ವೇಗೆ ಬಂದಿದ್ರಾ?

ರಘು : ಹೂನಮ್ಮ

ಶಾರದ : ಏನೋ ಮೇಷ್ಟ್ರೇ, ಇವರಿಗೆ ಮಗನ ಚಿಂತೆ ಒಂದುಕಡೆ, ಮಗಳ ಚಿಂತೆ ಮತ್ತೊಂದ್ಕಡೆ. ನಮ್ಮ ಮನೇಗೆ ಬಂದಿದ್ದವ್ರು ಇವರ ತಮ್ಮನ ಮನೇಗೆ ಹೋಗಿ ಮದ್ವೆ ಮಾಡಿಕೊಳ್ಳಲು ಒಪ್ಪಿಕೊಂಡ್ರು. ಅಂದಿನಿಂದಲೇ ಖಾಯಿಲೆ ಬಿದ್ದುಬಿಟ್ರು.

ರಘು : ಅದೆಲ್ಲಾ ನನಗೆ ಗೊತ್ತಾಯ್ತು ಶಾರದಮ್ಮನವರೇ. ನಿಮ್ಮ ಮಗಳಿಗೂ ಒಂದಲ್ಲ ಒಂದು ದಿನ ಮದ್ವೆ ಆಗುತ್ತೆ ಸುಮ್ನಿರಿ. ನೀವು ಯೋಚನೆ ಮಾಡಬೇಡಿ. ಕಂಕಣ ಸಂಬಂಧ ಒದಗಿ ಬಂತು ಅಂದ್ರೆ ಅರೆಕ್ಷಣವೂ ನಿಲ್ಲೋಲ್ಲ.

ಶಾರದ : ಏನಾಗುತ್ತೋ, ಹೇಗಾಗುತ್ತೋ ನನಗಂತೂ ಒಂದು ತೋಚ್ತಾ ಇಲ್ಲ.

ರಘು : ಕಾಲ ಕೂಡಿ ಬಂದ್ರೆ ಹ್ಯಾಗಾದ್ರೂ ಆಗುತ್ತೆ. ನಾನದಕ್ಕೆಲ್ಲಾ ಏರ್ಪಾಡು ಮಾಡ್ತೇನೆ.

ರಾಜಣ್ಣ : ಮಗನ ಲೈಸು ಸರಿಯಿಲ್ಲಪ್ಪ. ಲಿಲ್ಲಿ ಅನ್ನೋ ಹುಡುಗಿ ಜತೆ ಲಲ್ಲೆ ಹೊಡೆದುಕೊಂಡು ತಿರುಗ್ತಾ ಇದ್ದಾನೆ.

ರಘು : ಆತನಿಗೆ ಕೆಲಸ ಕೊಡಿಸೋ ಭಾರ ನನ್ನದಾಗಿರ್ಲಿ. ನೀನು ಸುಮ್ನಿರಯ್ಯ.

ರಾಜಣ್ಣ : ಅಷ್ಟು ಮಾಡಿದ್ರೆ ಪುಣ್ಯ ಬರುತ್ತೆ ನಿಂಗೆ.

ರಘು : ಇನ್ನೊಂದು ವಿಷಯ.

ರಾಜಣ್ಣ : (ಕೆಮ್ಮುತ್ತಾ) ಏನು?

ರಘು : ಹಿಂದೆ ನಿನ್ನ ಶಿಷ್ಯನಾಗಿದ್ದು ಈಗ ನನ್ನ ಜತೆ ಕೆಲಸ ಮಾಡ್ತಾ ಇದ್ದಾನೆ, ನಾಗಭೂಷಣ ಅಂತ ಹುಡುಗ. ನೀನು ಹೂಂ ಅಂದ್ರೆ ನಾನು ಒಪ್ಪಿಸಿ ಮದ್ವೆ ಮಾಡಿಸ್ತೀನಿ.

ರಾಜಣ್ಣ : ನಮ್ಮಂಥ ಬಡವರ ಮನೆಯಲ್ಲಿ ಒಪ್ತಾನೆಯೇ ಹುಡುಗ?

ರಘು : ಒಪ್ಪಿದ್ದಾನೆ. 'ಗುರುಗಳ ಕಷ್ಟ ನೋಡಲಾರೆ ನಾನು. ಆಗುತ್ತೇನೆ ಕೇಳಿ' ಅಂದಿದ್ದಾನೆ. ಒಳ್ಳೇ ಲಕ್ಷಣವಂತ ಹುಡುಗ, ಒಳ್ಳೇ ಮನೆತನ. ಗುಣ ಒಳ್ಳೆಯದು.

ರಾಜಣ್ಣ : ತುಂಬಾ ಸಂತೋಷ....... ಇದು ನಿಜವೇ?

ರಘು : ನಿಜ ಕಣಯ್ಯ..... ಇಲ್ಲಿಗೆ ನಿನ್ನ ಪ್ರಾಬ್ಲಂ ಸಾಲ್ವ್ ಆಯ್ತಲ್ಲ.

ರಾಜಣ್ಣ : ನೀನೇ ನನ್ನ ಪಾಲಿಗೆ ದೇವರು...... ಇನ್ನು ನನ್ನಂತ ಪುಣ್ಯವಂತ ಯಾರೂ ಇಲ್ಲ.

ಶಾರದ : ಪ್ರತಿಯೊಬ್ಬನ ಪಾಲಿಗೂ ದೇವರಿದ್ದಾನೆ ಎಂಬುದು ನಿಜ. ಅದು ನಿಮ್ಮ ರೂಪದಲ್ಲಿ ದೇವರು ಕಳುಹಿಸಿದ್ದಾನೆ. ಹೇಗೋ ಗದ್ದೆ ಮಾರಿ ಮದುವೆ ಮಾಡಿದ್ರಾಯ್ತು. ಮಕ್ಕಳ ಸಂಬಳದಲ್ಲಿ ಸ್ವಲ್ಪ ಸಾಲ ತೀರಿಸೋದು.

ಅಂಚೆ : ಪೋಸ್ಟ್....... (ಒಡೆದು ಶಾರದ ಓದುವಳು)

ಶಾರದ : ತೀರ್ಥರೂಪು ತಂದೆಯವರಿಗೆ ದೇವಾನಂದನ ನಮಸ್ಕಾರಗಳು. ನಾನೀಗ ಮೈಸೂರಿನ ಜಯಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನಲ್ಲಿ ಸೆಕೆಂಡ್ ಡಿವಿಜನ್ ಕ್ಲಾರ್ಕ್ ಆಗಿ ಆಯ್ಕೆಯಾಗಿದ್ದೇನೆ. ಮುಂದಿನ ತಿಂಗಳು ಊರಿಗೆ ಬರುತ್ತೇನೆ. ತಾಯಿಯವರಿಗೂ ಮಿಕ್ಕೆಲ್ಲರಿಗೂ ನನ್ನ ನಮಸ್ಕಾರಗಳು.

ಇತಿ ತಮ್ಮ ಪ್ರೀತಿಯ ಮಗ
ದೇವಾನಂದ

ಶಾರದ : ರೀ...... ದೇವಾನಂದ ಕಾಗದ ಬರೆದಿದ್ದಾನೆ.

ರಾಜಣ್ಣ : ಏನಂತೆ?

ಶಾರದ : ಕೆಲಸ ಸಿಕ್ಕಿತು ಅಂತ ಬರೆದಿದ್ದಾನೆ.

ರಾಜಣ್ಣ : ಇವೆಲ್ಲಾ ನಿಜವೇ? ದೇವಾನಂದನಿಗೆ ಕೆಲಸ, ಪುಷ್ಪಳಿಗೆ ಮದುವೆ....... ನನಗಿಂತ ಸುಖಿ ಯಾರೂ ಇಲ್ಲ. ಈ ಪ್ರಂಪಚದಲ್ಲಿ ಯಾರೂ ಇಲ್ಲ....... ಯಾರೂ ಇಲ್ಲ.........

(ಕೊನೆಯುಸಿರೆಳೆಯುವನು)

ಶಾರದ : ರೀ.....ರೀ.....!

ರಘು : ರಾಜಣ್ಣ..... ರಾಜಣ್ಣ.......!

ಶಾರದ : ಅಯ್ಯೋ ಇಂಥ ಸುಖ ಸಂತೋಷದ ಸಮಯದಲ್ಲಿ ನೀವು ಕಣ್ಮುಚ್ಚ ಬೇಕಾಯ್ತೇ? ಅಯ್ಯೋ ದೇವ್ರೇ...... ನಿನಗೆ ಅದನ್ನು ನೋಡಲೂ ಹೊಟ್ಟೆಕಿಚ್ಚಾಯ್ತೇ?

ರಘು : ಶಾರದಮ್ಮನವರೇ..... ನಿಮ್ಮ ದುಃಖ ಗೊತ್ತಿದೆ......... ಆದ್ರೆ ವಿಧಿಯನ್ನು ಯಾರೂ ಮೀರಲಿಕ್ಕಾಗೊಲ್ಲ.

ಶಾರದ : ಅಯ್ಯೋ...... ನಮ್ಮ ಸಂಸಾರದ ಗತಿ ಏನು ರಘುಪತಿಯವ್ರೇ......?

ರಘು : ದೇವರಿದ್ದಾನೆ, ಮಕ್ಕಳಿದ್ದಾರೆ; ಜೊತೆಗೆ ನಾನು ಇದ್ದೀನಿ.

ಶಾರದ : ಈ ಮಕ್ಕಳಿಂದಲೇ ಕೊರಗಿ ಕೊರಗಿ ಅದು ಒಂದು ಹಂತ ಮುಟ್ಟುವಾಗ್ಲೇ ವಿಧಿ ಅವರನ್ನು ಎಳೆದುಕೊಂಡು ಹೋಗುವ ಹಾಗೆ ಆಯ್ತೆ?

ರಘು : ಬಂದದ್ದನ್ನೆಲ್ಲಾ ಅನುಭೋಗಿಸಬೇಕು.

(ಎಲ್ಲರೂ ಗೋಳೋ ಎಂದು ಅಳುವರು)

ರಘು : ಜೀವನ ಅಂದ ಮೇಲೆ ಕಷ್ಟ - ಸುಖ, ದುಃಖ-ಸಂತೋಷ, ಬೇವು-ಬೆಲ್ಲ, ಬಿಸಲು-ಬೆಳದಿಂಗಳು ಇರುವಂತೆ, ಅದು ಬಿಸಿಲಿಂದ ಬೆಳದಿಂಗಳಿಗೆ, ಬೆಳದಿಂಗಳಿಂದ ಬಿಸಿಲಿಗೆ ಬರುವುದು ಸಹಜವೇ. ಇರಲಿ, ಮುಂದಿನ ಕಾರ್ಯ ಮಾಡೋಣ.

ಶಾರದ : ಅಯ್ಯೋ........ ಅಯ್ಯೋ.........

(ದುಃಖ ಸೂಚಕ ವಾದ್ಯದನಿ)

* * *

## ದೃಶ್ಯ-೧೨

(ರಮೇಶ ಕೆಲವು ಬರೆಹಗಾರರ ಕತೆಗಳನ್ನು ನೋಡುತ್ತಾ ಕುಳಿತಿರಲು ಹೆಂಡತಿ ನಾಗಮಣಿ ಕಾಫಿಯನ್ನು ತಂದಿಟ್ಟು ಸ್ವಲ್ಪ ಹೊತ್ತು ಹಾಗೆಯೇ ಕುಳಿತುಕೊಳ್ಳುವಳು)

ನಾಗಮಣಿ : ಕಾಫಿ ತಂದಿಟ್ಟು ಐದು ನಿಮಿಷಗಳಾಯ್ತು. ಆರಿ ಹೋಗ್ತಾ ಇದೆ.

ರಮೇಶ : (ತಲೆ ಎತ್ತಿ) ಯಾರು?

ನಾಗಮಣಿ : ಸರಿಹೋಯ್ತು, ಸರಿಯಾಗಿ ನೋಡಿ ಯಾರಿದ್ದಾರೆ ಅಂತ?

ರಮೇಶ : ಓಹೋ..... ಕಾಫಿ......!

ನಾಗಮಣಿ : ಅದನ್ನೇ ನಾನು ಅಷ್ಟೊತ್ತಿನಿಂದ ಊದಿದೆ ಪೀಪಿ.

ರಮೇಶ : ಆಗಲಿ ಈಗ ಕುಡಿತೀನಿ ಕೋಪಿ!

ನಾಗಮಣಿ : ಇದೇನು ನಾಟಕದ ಸಂಭಾಷಣೆ ಒಪ್ಪಿಸ್ತಿದ್ದೀರೇನು?

ರಮೇಶ : ಇಲ್ಲ. ಯಾರೋ ನವ್ಯ ಕತೆ ಬರ್ದಿದ್ರು ಅದನ್ನು ಓದ್ತಾ ಇದ್ದೆ.

(ಕಾಫಿ ಕುಡಿದು ಇಡುತ್ತಿರಲು)

ನಾಗಮಣಿ : ಅಲ್ರೀ..... ನೀವ್ಯಾರು?

ರಮೇಶ : ರಮೇಶ.

ನಾಗಮಣಿ : ಹಾಗಂದ್ರ್ಯಾರು?

ರಮೇಶ : ನಾಗಮಣಿ ಗಂಡ.

ನಾಗಮಣಿ : ಹಾಗಂದ್ರೆ?

ರಮೇಶ : ಪತ್ರಿಕೆ ಸಂಪಾದಕರು.

ನಾಗಮಣಿ : ಎಲ್ಲಿ?

ರಮೇಶ : ಇಲ್ಲೇ.

ನಾಗಮಣಿ : ಇಲ್ಲಿ ಪ್ರೆಸ್ ಇದ್ಯೇನು?

ರಮೇಶ : ಇಲ್ಲ ಬೇರೆ ಕಡೆ ಇದೆ.

ನಾಗಮಣಿ : ಅಲ್ಲಾ ಅಲ್ಲೇ ಕುಳಿತು ಓದಿ, ತಿದ್ದಿ, ಪ್ರಕಟ ಮಾಡಬೇಕು, ಆ ಗೋಳನ್ನ ಮನೆಗೂತಂದು ಸಾಯಬೇಕೇ?

ರಮೇಶ : ಅದೇ ನಿಷ್ಠೆ ಕಣೆ.

ನಾಗಮಣಿ : ಏನು ನಿಷ್ಠೆಯೋ ನಿಮ್ಮದು ನನಗನಿಷ್ಟವಾಗಿ ಕಾಣುತ್ತೆ.

ರಮೇಶ : ಈಗ ಮಾಡ್ತಾ ಇದ್ದೀನಲ್ಲ.

ನಾಗಮಣಿ : ಸತ್ತ ಅಣ್ಣನನ್ನ ನೋಡ್ಲಿಕ್ಕೆ ಹೋಗದ ನೀವು ಎಂಥ ನಿಷ್ಠಾವಂತ್ರು?

ರಮೇಶ : ಅದಕ್ಕೆ ನೀನೇ ಹೋಗಿದ್ಯಲ್ಲ - ಅನಿಷ್ಟವಂತೆ.

ನಾಗಮಣಿ : ಅಲ್ರೀ ಹೆಚ್ಚಿನ ರಕ್ತ ಸಂಬಂಧ ನಿಮ್ಮದು, ನೀವು ಹೋಗಬಾರದೇನು?

ರಮೇಶ : ನಿನಗೆ ಅವೆಲ್ಲಾ ಗೊತ್ತಾಗೋದಿಲ್ಲ ಸುಮ್ಮನಿರು.

(ಇಬ್ಬರೂ ಮಾತನಾಡಿಕೊಳ್ಳುತ್ತಿರಲು ರಘು ಪ್ರವೇಶಿಸುವನು)

ರಘು : ಏನೋ ಇಬ್ರೂ ಮಾತಾಡ್ತಿದ್ದ ಜಾಗಕ್ಕೆ ನಾನು ಬಂದೆ.

ರಮೇಶ : ಬಂದ್ರೇನಾಯ್ತು ಬನ್ನಿ; ಬನ್ನಿ ಕುಳಿತುಕೊಳ್ಳಿ. ನಾಗೂ, ತಿಂಡಿ ಕಾಫಿ ತಗೊಂಡು ಬಾರೆ.

(ನಾಗಮಣಿ ಒಳಗೆ ಹೋಗುವಳು)

ರಘು : ಏನುಪಚಾರ ಮಾಡ್ತೀಯಪ್ಪಾ?

ರಮೇಶ : ಅತಿಥಿ ಅಭ್ಯಾಗತರು ಬಂದರೆ ಇಷ್ಟು ಮಾಡದೇ ಹೋದ್ರೇ ಅವನು ಮನುಷ್ಯನೇ ಹೇಳಿ.

ರಘು : ಹಾಗಾದರೆ ನೀನು ಮನುಷ್ಯನೇ?

ರಮೇಶ : ಹಾಗಂದ್ರೆ?

ರಘು : ಅಲ್ಲಾ ಮನುಷ್ಯನೇ ಅಂತ ಅನುಮಾನವಾಯ್ತು ನನಗೆ?

ರಮೇಶ : ಏನೋ ವಿಚಿತ್ರವಾಗಿ ಕೇಳ್ತಾ ಇದ್ದೀರಲ್ಲ ರಘು.

ರಘು : ವಿಚಿತ್ರವೇನ್ಬಂತು ನ್ಯಾಯವಾಗಿಯೇ ಕೇಳ್ತಾ ಇದ್ದೇನೆ.

ರಮೇಶ : ಏನೋ ನನಗೆ ಗೊತ್ತಾಗ್ತಾ ಇಲ್ಲ.

ರಘು : ಅದನ್ನು ಗೊತ್ತಾಗಿಸಲಿಕ್ಕೇ ನಾನು ಬಂದದ್ದು.

ರಮೇಶ : ನಾನು ಯಾರಿಗಾದ್ರೂ ಏನಾದ್ರೂ ಅನ್ಯಾಯ ಮಾಡಿದ್ದೀನಾ?

ರಘು : ಯಾಕೆ ಮಾಡಿಲ್ಲ?

ರಮೇಶ : ಏನು ಮಾಡಿದ್ದೀನಿ?

ರಘು : ನಿನ್ನ ಅಣ್ಣ ರಾಜಣ್ಣ ಸತ್ತ ಅಂತ ಒಂದು ಹಿಡಿ ಮಣ್ಣು ಹಾಕೋದಕ್ಕೂ ನಿನಗೆ ಯೋಗ್ಯತೆ ಇಲ್ಲದೇ ಹೋಯ್ತೇ? ನೀನು ಒಬ್ಬ ಮನುಷ್ಯನೇ? ನಿನಗೆ ಮನುಷ್ಯತ್ವ ಇದೆಯೇ?

ರಮೇಶ : ಅದು.... ಅದು.....

ರಘು : ಈ ನಟನೆ ನನಗೆಲ್ಲಾ ಗೊತ್ತು ಬಿಡಯ್ಯ.

ರಮೇಶ : ಪತ್ರಿಕೆಯ ಪರವಾಗಿ ಯಾವುದೋ ಊರಿಗೆ ಹೋಗಿದ್ದೆ.

ರಘು : ಹಿಂದಿನವ್ರು ಅದಕ್ಕೇ ಗಾದೆ ಮಾಡಿ ಹೋದ್ರು. ಹುಟ್ಟುತಾ ಹುಟ್ಟುತಾ ಸೋದರ, ಬೆಳೆಯ ಬೆಳೀತಾ ದಾಯಾದಿ ಅಂತ. ಅದು ಹಿಂದಿನಿಂದಲೂ ನಡೆದು ಬಂದದ್ದೆ. ಇದಕ್ಕೆ ಕೌರವ ಪಾಂಡವರ ಕಥೆಗಿಂತ್ಲೂ ಒಂದು ಕಥೆ ಬೇಕೇ?

ರಮೇಶ : ನೀವು ತೊಟ್ಟಿಲನ್ನೂ ತೂಗ್ತೀರಿ ಮಗೂನು ಚಿವುಟತೀರಿ

ರಘು : ಅಲ್ಲ ಕಣಯ್ಯಾ, ಇಂಥ ಸಮಯದಲ್ಲಿ, ಸೋದರ ಸೊತ್ತು ಹೋಗುವಾಗ ಯಾವ ಪತ್ರಿಕೆ? ಯಾವ ಕೆಲಸ? ಬೇರೆಯವರಿಗೆ ಒಪ್ಪಿಸಿ ಮಾಡಬಹುದಾಗಿತ್ತು. ಆದರೆ ನಿನಗೆ ಬೇಕಿರಲಿಲ್ಲ. ಏಕೆ ಅನ್ನೋದು ಯಾರಿಗೆ ತಾನೇ ಗೊತ್ತಾಗೋಲ್ಲ.

ರಮೇಶ : ಅಂದ್ರೆ.......

ರಘು : ನಿಮ್ಮಣ್ಣ ಬಡವ, ನೀನು ಆಸ್ತಿಯ ಸಾಹುಕಾರ. ಆದ್ರೆ, ಆತ ಸತ್ತ ಮೇಲೆ ಎಲ್ಲಿ ಯಾರಾದರು ಅವನ ಸಂಸಾರವನ್ನು ನಿನ್ನ ತಲೆಯ ಮೇಲೆ ಹೊರಿಸುಬಿಡ್ತಾರೋ ಅಂತ ಹೀಗ್ಮಾಡಿರಬೇಕು ಅಲ್ವೇ?

ರಮೇಶ : ಹಾಗೇನಿಲ್ಲ.

ರಘು : ಅವರನ್ನೆಲ್ಲಾ ಸಾಕುವುದಕ್ಕೆ, ಮುಂದುವರಿಸೋದಕ್ಕೆ ಯಾರಿಂದ್ಲೂ ಶಕ್ತಿ ಇಲ್ಲ. ಆದ್ರೆ ದೇವರೇ, ಏನೋ ಪಾಪ, ಹೆಚ್ಚು ಮಕ್ಕಳು, ಬಡತನ, ಅದರಲ್ಲೂ ಅಣ್ಣ, ಅಣ್ಣನ ಹೆಂಡತಿ ತಬ್ಬಲಿ ಮಕ್ಕಳು ಅಂತ ಅಷ್ಟು ಇಷ್ಟು ಉಪಕಾರ ಮಾಡಿದ್ರೂ ದೇವ್ರು ನಿನಗೇನು ಕಡಿಮೆ ಮಾಡ್ತಾ ಇದ್ದ? ನನಗಂತೂ ಒಂದೂ ಅರ್ಥವಾಗ್ತಾ ಇಲ್ಲಪ್ಪಾ.

ರಮೇಶ : ಏನೋ ದೊಡ್ಡವರು ನೀವು......

ರಘು : ನನ್ನ ದೊಡ್ಡ ಸ್ಥಾನಕ್ಕೆ ಬಿತ್ತು ಒಂದಷ್ಟು ಮಣ್ಣು. ಹೋಗಯ್ಯ..... ನನಗೆ ಏನಾದ್ರೂ ಅನ್ನು..... ಬಹಳ ಬೇಸರವಾಯ್ತು ನಿನ್ನ ನೋಡಿ.

ರಮೇಶ : ಏನೋ ತಪ್ಪಾಗಿರಬಹುದು ಕ್ಷಮಿಸಿ.

ರಘು : ನೀನು ನನ್ನಲ್ಲಿ ತಪ್ಪು ಯಾಕೆ ಕೇಳಬೇಕು? ನಾನು ಕ್ಷಮಿಸೋ ಸ್ಥಾನದಲ್ಲಿದ್ದೇನ್ಯೇ? ಏನೋ ಮನಸ್ಸು ತಡೆಯಲಾರದೆ ಬಂದೆ. ಬಂದ ಮೇಲೆ ಹೇಳಿದೆ; ನೀ ಕೇಳಿದೆ. ಅಷ್ಟೇ... ನಾನು ಬರ್ತೀನಿ.

ರಮೇಶ : ಸ್ವಲ್ಪ ತಿಂಡಿ ಮಾಡ್ಕೊಂಡು ಹೋಗಿ........

ರಘು : ಇಲ್ಲ ನಾನು ಪೂರ್ತಿ ಊಟವನ್ನೇ ಮಾಡಿ ಬಂದಿದ್ದೇನೆ. ಏನೋ ಅರ್ಜೆಂಟ್ ಕೆಲಸ. ತಿಥಿ ಕರ್ಮಗಳು ನನ್ನ ಮೇಲೆ ಬಿದ್ದಿದೆ. ಹೋಗಿ ಮಾಡಿ ಮುಗಿಸಬೇಕು.

ರಮೇಶ : ಅದೋ, ತಿಂಡಿ ಕಾಫಿ ಬಂತು.

(ನಾಗಮಣಿ ತಂದಿಡಲು)

ರಘು : ಅದೇ ನೀನು ಮಾಡೋ ಉಪಕಾರ ಅಂಥದ್ದು. ಏನೋ ಗಾದೆ ಹೇಳ್ತಾರಲ್ಲ. 'ಉಂಡವನಿಗೆ ಊಟ ಇಡಬೇಡ' ಅಂತ. ಹಾಗೇ ಕೊಟ್ಟದ್ದನ್ನು ಬೇಡ ಅನ್ಬಾರ್ದು ಕೊಡಿ. (ಕಾಫಿ ಕುಡಿದ ಮೇಲೆ) ನಾನು ಬರ್ತೇನಪ್ಪಾ ರಮೇಶ. ರಮೇಶ, ಏನೇನೋ ಅಂದ ಮುದುಕ ಅಂತ ಕೋಪ ಮಾಡ್ಕೊಳ್ಬೇಡ. ಇದ್ದದ್ದನ್ನು ಇದ್ದಾಗೆ ಹೇಳ್ದೆ. ಏನೋ ಗಾದೆ ಹೇಳೋಲ್ವೆ (ನಗುವನು).

ರಮೇಶ : ಏನೂ ಇಲ್ಲ.

(ರಘು ಅಲ್ಲಿಂದ ಹೊರಡುವನು. ಗಂಡ ಹೆಂಡಿರಿಬ್ಬರೂ ಕುರ್ಚಿಯ ಮೇಲೆ ಕುಳಿತಿರಲು ಬೆಳ್ಳಿ ಕಾಫಿ ತಂದಿಡಲು ಸ್ವಲ್ಪ ಚೆಲ್ಲುವುದು. ನಾಗಮಣಿ ತಲೆಯ ಮೇಲೆ ತಿವಿಯಲು ಚೆನ್ನಯ್ಯ ಬಂದು ನೋಡಿ ಕಣ್ಣೀರಿಡುತ್ತಾ).

ಚೆನ್ನಯ್ಯ : ನಾಗಮಣವ್ವಾ..... ಸಾಕು..... ತಲೆ ಮೇಲೆ...... ಕೈಮಾಡ್ಬೇಡಿ, ಆತನಿಗೆ ತಾಯಿ ಏನೋ ಇಲ್ಲ ನಿಜ, ಆದ್ರೆ ತಂದೆ ಅನ್ನಸ್ಕೊಂಡವನು ಇನ್ನೂ ಇದ್ದೀನಿ.

ನಾಗಮಣಿ : ಕಾಫಿ ಚೆಲ್ಲಿರೊದು ನೋಡ್ದೇನು?

ಚೆನ್ನಯ್ಯ : ಕೈ ತಪ್ಪಿದರೆ ಯಾರಿಗೆತಾನೇ ಚೆಲ್ಲೋಲ್ಲ?

ನಾಗಮಣಿ : ನಿನಗೆ ಕಾಸಿನ ಬೆಲೆ ಗೊತ್ತಿದ್ರಲ್ವೇ?

ಚೆನ್ನಯ್ಯ : ನಮಗಿಂತ ನೀವು ಬಹಳ ಬಲ್ರೀ...... ಅಲ್ಲವಾ?

ನಾಗಮಣಿ : ಮತ್ತೆ ಅಂಥವನು, ಯಾಕೆ ಬೇರೆಯವರ ಮನೆಯಲ್ಲಿ ನಿನ್ನ ಮಗನ್ನ ಇರಿಸಿದೆ?

ಚೆನ್ನಯ್ಯ : ಆ ತಪ್ಪಿಗೇ ಈಗ ಹಲ್ಮುಡಿ ಕಚ್ಚಿಕೊಂಡಿರೋದು. ಆದ್ರೂ ಎದುರಿಗೆ ಹಾಗೆ ಹೊಡೆದರೆ ಯಾವ ತಂದೆಗೆ ತಾನೇ ಸಂಕಟ ಬರೋಲ್ಲ ಹೇಳಿ.

ನಾಗಮಣಿ : ನೋಡೋಕಾಗ್ದಿದ್ರೆ ಕರ್ಕೊಂಡ್ಹೋಗ್ಬೇಕು.

ಚೆನ್ನಯ್ಯ : ನಿಮ್ಮ ಹತ್ತು ತಿಂಗಳ ವಾಯಿದೆ ಮುಗೀತು. ಆತನ್ನ ಕರ್ಕೊಂಡ್ಹೋಗಕೇ ಬಂದಿರೋದು. ನಿಮ್ಮಹತ್ತಿರ ಇರಿಸಕ್ಕಲ್ಲಾ ನಾನು ಬಂದಿರೋದು. ಬಡವರ ಹೊಟ್ಟೆ ಉರಿಸೋ ಕಾಲ ಮುಗಿದಿದೆ ಕಣವ್ವಾ. ಕರ್ಕೊಂಡ್ಹೋಗ್ತೀನಿ.

ನಾಗಮಣಿ : ಅಷ್ಟು ಮಾಡು.

ಚೆನ್ನಯ್ಯ : ನಿಮಗೂ ಮಕ್ಕಳವೆ. ನಿಮ್ಮ ಮಕ್ಕಳಿಗೂ ಒಳ್ಳೇದಾಗಬೇಕು. ಬೇರೆಯವರ ಮಕ್ಕಳು ಕಣ್ಣೀರ ಕರ್ಯೋದು ಒಳ್ಳೇದಾಗಾಕಿಲ್ಲ.

ನಾಗಮಣಿ : ನೀನು ಮಹಾಪುರುಷ ಹಾಕಿಬಿಟ್ಟೆ ಶಾಪ.... ನಮ್ಮ ಮಕ್ಕಳಿಗೆ ತಗಲುತ್ತೆ.... ಹೋಗು ಹೋಗೋ ಸಾಕು.

ಚೆನ್ನಯ್ಯ : ನಾಗಮಣವ್ವಾ..... ನೀವು ಯಾರೂ ಅಂತ ನಾನು ಬಲ್ಲೆ. ನಾನೂ ನಿಮ್ಮ ಹಾಗೆ ಮನುಷ್ಯ. ಏನೋ ಹೋಗ್ಲಿ ಅಂತ ಮರ್ಯಾದೆ ಕೊಟ್ಟೆ. ಆದ್ರೆ ಅದನ್ನ ಉಳಿಸ್ಕೊಳ್ಳಕ್ಕೆ ನಿಮಗೆ ಮರ್ಯಾದೆ ಇಲ್ಲ.

ನಾಗಮಣಿ : ಅಯ್ಯೋ ನಿನ್ನ ಮರ್ಯಾದೆಗಷ್ಟು ಬೆಂಕಿ ಬಿತ್ತು ಹೋಗು.

ಚೆನ್ನಯ್ಯ : ಎಲ್ಲರಿಗೂ ಕಷ್ಟ ಬರುತ್ತೆ, ಕಾಡುತ್ತೆ, ಮತ್ತೆ ಸರಿಹೋಗುತ್ತೆ. ಅಷ್ಟರ ತನಕಲೇ.... ಏನೋ ಮಕ್ಕಳು ಹೆಚ್ಚಾಗಿ ಬೇರೆಯವರ ಮನೇಲಿ ಇರಿಸಿದಕ್ಕಲ್ವಾ ನೀವು ಹಿಂಗ್ ಮಾತಾಡಾದು? ಕೂಲಿಯೋ ಕಂಬಳವೋ ಮಾಡಿ ಸಾಕ್ತೀವಿ ಬಿಡಿ. ಆದ್ರೆ ನೀವು ಹೀಗೆಲ್ಲಾ ಮಾಡೋದ್ರಿಂದ ಒಳ್ಳೇದಾಗಾಕಿಲ್ಲ ಕಣವ್ವಾ.

ರಮೇಶ : ಚೆನ್ನಯ್ಯ, ಸಾಕು ನಿನ್ನ ಮಾತು. ಹದ್ದು ಮೀರ್ತಾ ಇದ್ದೀಯ.

ಚೆನ್ನಯ್ಯ : ಸ್ವಾಮಿ ನೀವು ವಿದ್ಯಾವಂತರಲ್ವಾ? ಇದು ನ್ಯಾಯವೋ- ಅನ್ಯಾಯವೋ ನೀವೇ ಹೇಳಿ.

ರಮೇಶ : ಆ ಪ್ರಶ್ನೆಗಳಿಗೆಲ್ಲಾ ನಿನಗೆ ಉತ್ತರ ಹೇಳಲಿಕ್ಕೆ ನಾನು ಸಿದ್ಧವಾಗಿಲ್ಲ. ಇಷ್ಟ ಇದ್ರೆ ಇರಿಸು, ಇಲ್ದೇ ಹೋದ್ರೆ ಕರಕೊಂಡು ಹೊರಟು ಹೋಗು. ಹೆಚ್ಚಿಗೆ ಮಾತೇ ಬೇಕಿಲ್ಲ.

ಚೆನ್ನಯ್ಯ : ಆಗ್ಲಪ್ಪಾ ಆಗ್ಲಿ....ಬಾ ಬೆಳ್ಳಿ......

•

ಬೆಳ್ಳಿ : ಅಪ್ಪಾ...... (ಇಬ್ಬರೂ ಕಣ್ಣೀರು ಸುರಿಸುತ್ತಾ ತಬ್ಬಿಕೊಳ್ಳುವರು)

ನಾಗಮಣಿ : ಇಬ್ಬರೂ ನಮ್ಮ ಮನೇಲಿ ನಿಂತು ಕಣ್ಣೀರು ಹಾಕಬೇಡಿ ನಡೀರಿ.

ಚೆನ್ನಯ್ಯ : ನಾನು ಇಂದು ಹೋಗ್ತಿನಿ. ನೀವು ಎಂದಾದ್ರೂ ಒಂದು ದಿನ ಈ ಮನೆ ಬಿಟ್ಟು ಹೋಗ್ಲೇಬೇಕು ಅನ್ನೋದು ಜ್ಞಾಪಕದಲ್ಲಿಟ್ಕೊಂಡಿರಿ.

ರಮೇಶ : ನಿನ್ನ ಭಾಷಣ ಸಾಕು ತೊಲಗೋ.....

ಚೆನ್ನಯ್ಯ : ಆಗ್ಲಿ.... ಹೋಗ್ತಿನಿ..... ನಡಿಯಪ್ಪ.......

(ಇಬ್ಬರೂ ಹೊರಡುವರು)

* * *

## ದೃಶ್ಯ-೧೩

(ಗಂಡನ ತಿಥಿಯ ದಿನ ಶಾರದ ತುಂಬು ಶೃಂಗಾರವಲ್ಲಿದ್ದಾಳೆ. ನಾಗಮಣಿ ಮತ್ತು ರಮೇಶನ ಕರೆಯೋಣ ಎನ್ನುವಲ್ಲಿ ಆಕೆಯ ಮನಸ್ಸು ತೊಯ್ದಾಡುತ್ತಿದೆ.)

ಶಾರದ : (ಮನಸ್ಸು) ಇಂದು ನನ್ನ ಕೊನೆಯ ಶೃಂಗಾರ. ಅಣ್ಣನ ಮುಖವನ್ನೂ ನೋಡಲಿಲ್ಲ. ಆದರೆ ಅವರಣ್ಣನ ಪ್ರಸಾದವನ್ನಾದರೂ ತೆಗೆದುಕೊಳ್ಳುವ ಹಕ್ಕಿಲ್ಲವೇ? ಕರೆದುಬಿಡೋಣ; ಪಾಪ ಆಗ ಬಂದಿದ್ದರೆ ಎಲ್ಲಿ ನಮ್ಮ ಸಂಸಾರದ ಭಾರವನ್ನು ಹೊತ್ತುಕೊಳ್ಳಬೇಕಾದೀತೋ ಏನೋ ಎಂದು ಬರಲಿಲ್ಲವೋ ಏನೋ? ಪಾಪ, ಅವರಿಗಿಲ್ಲದ ಮನಸ್ಸನ್ನು ಏಕೆ ಒಲಿಸಿ ಕರೆಸಬೇಕು? ಇದು ಮದುವೆಯೋ, ಗೃಹ ಪ್ರವೇಶವೋ, ಹುಟ್ಟಿದ ಹಬ್ಬವೋ, ಸಂತಸ ಸಡಗರದ ಹಬ್ಬವೋ? ಇದಕ್ಕೂ ಹಿಂಸೆ ಮಾಡಿ ಕರೆಯಬೇಕೆ?...... ಅದಕ್ಕೇ ಹೋಗಿ ಕರೆದು ನಿನ್ನ ಮಾತನ್ನು ತಪ್ಪಿಸಿಕೋ. ಅಲ್ಲಾ; ಹಿಂದೆ ಅದೆಷ್ಟು ಅವಮಾನಕ್ಕೆ ಗುರಿಪಡಿಸಿದ್ದಾರೆ. ಅದನ್ನು ತಿಳಿದೂ ಮತ್ತೆ ಆಕೆಯ ಹೊಸ್ತಿಲು ಮೆಟ್ಟುವುದೇ?.... ದ್ವೇಷವನ್ನು ಎಷ್ಟರ ತನಕ ಸಾಧಿಸುವುದು? ನಾಲ್ಕು ದಿನದ ಪ್ರಪಂಚದಲ್ಲಿ ಬಾಳಿ ಅಳಿಯುವ ದೇಹಕ್ಕೇಕೆ ಛಲ? ಹೋಗು.... ಹೋಗು......

(ಹಿಂದಿನ ಸಂಭಾಷಣೆ ಕೇಳಿ ಬರುತ್ತದೆ)

ನಾಗಮಣಿ : ನಮ್ಮೂರಿನ ಬಜ್ಜಣ್ಣನ ಮಗ ಸೋಮಣ್ಣನಿಗೆ ಕೊಡುವಹಾಗಿದ್ದರೆ.....

ಶಾರದ : ನಾಗಮಣಿ.....ಇಂಥವರ ಹೇಳಲಿಕ್ಕೆ ಬಂದ್ಯಾ, ಮೆಣಸು ಮುಗ್ಗಿದರೂ ಜೋಳಕ್ಕೇನೂ ಕಡಿಮೆ ಇಲ್ಲ.

ನಾಗಮಣಿ : ನಿಮ್ಗಿಷ್ಟ ಇದ್ರೆ ಕೊಡಿ, ಇಲ್ದೇ ಹೋದ್ರೆ ಬ್ಯಾಡ.

ಶಾರದ : ನಾಗಮಣಿ, ಬಡತನ ಸಿರಿತನ ಯಾರಿಗೂ ಸ್ಥಿರವಲ್ಲ.

ನಾಗಮಣಿ : ನಾ ಹೇಳಿದ ಹಾಗೇ ಕೇಳಿದ್ದರೆ, ಇಷ್ಟು ಮಕ್ಕಳಾಗ್ತಿದ್ವೆ?

ಶಾರದ : ನಾಗಮಣಿ, ನಿನ್ನ ಬುದ್ಧಿವಾದ ಸಾಕು ಹೊರಡು. ಆರು ಹೆತ್ತವಳಿಗೆ ಮೂರು ಹೆತ್ತವಳು ಬಟ್ಟೆಡಲಿಕ್ಕೆ ಬಂದಹಾಗೆ. ಹೊರಡು ಮನೆಯಿಂದ... ಇಲ್ದೇ ಹೋಪ್ರ, ದಬ್ಬಬೇಕಾಗುತ್ತೆ.

ನಾಗಮಣಿ : ಶಾರದಕ್ಕ, ಏಕೆ ನಾನೇ ಹೋಗ್ತೀನಿ..... ನನ್ನನ್ನೇಕೆ ದಬ್ಬಬೇಕು ನಿನಗೆ ದಬ್ಬಲಿಕ್ಕೂ ಶಕ್ತಿ ಇಲ್ಲ.

ಶಾರದ : (ಮನಸ್ಸು) ಅಷ್ಟೆಲ್ಲಾ ಕೇಳಿ.... ಮತ್ತೆ ಆಕೆಯ ಮನೆಯ ಬಾಗಿಲಿಗೆ ಕಾಲಿಡುವುದೇ? (ಕಣ್ಣುಗಳಲ್ಲಿ ನೀರು ತುಂಬಿಕೊಂಡು ಸುತ್ತಾ ನೋಡುತ್ತಾಳೆ. ಮನಸ್ಸು ನಾನಾ ರೀತಿಯಾಗಿ ಹಂಬಲಿಸುವುದು.)

ಅವರವರ ಪಾಪಕ್ಕೆ ಅವರೇ ಹೊಣೆ. ಹೋಗಿ ಕರೆಯುವುದನ್ನು ಕರೆದು ಬಿಡು.... ಹೌದು ಕರೆಯುವುದೇ ಸರಿ. ಕರೆದು ಬಿಡುತ್ತೇನೆ. ಹೋಗುತ್ತೇನೆ. (ಅಲ್ಲಿಂದ ಹೊರಡುವಳು. ಮತ್ತೆ ನಿಂತು) ನಾನು ಕರೆದರೆ ಮರ್ಯಾದೆ ಕೊಟ್ಟು ಬಂದರೆ ಸರಿ. ಬರದೇ ಹೋದರೆ? ಬೇಕಾದವರು ಅಭಿಮಾನ ಇದ್ದವರು ಬರಲಿ, ಬರದವರು ಇಲ್ಲ. ಕೈ ತೋರಿ ಏಕೆ ಅವಲಕ್ಷಣ ಅನಿಸಿಕೊಳ್ಳಬೇಕು? ಯಾರಾದರೂ ಮಕ್ಕಳನ್ನು ಕಳುಹಿಸುವೆ. ನಾನೇ ಏಕೆ ಹೋಗಬೇಕು? ಅವರೇ ಬರಬೇಕು. ಬರದೇ ಹೋದ್ರೆ ಅವರ ಪ್ರಸಾದ ಅವರಿಗೇ ಇಲ್ಲ ಅಷ್ಟೆ.

(ವಿಧವೆ ಶಾರದೆ ಕುರ್ಚಿಯ ಮೇಲೆ ಕುಳಿತುಕೊಳ್ಳುವಷ್ಟರಲ್ಲಿ ಅಲ್ಲಿಗೆ ರಘು ಬರುವನು. ಶಾರದ ನಿಲ್ಲುವಳು)

ರಘು : ಕುಳಿತುಕೊಳ್ಳಿ ಶಾರದಮ್ಮನವರೇ ಯಾಕೆ ಎದ್ರಿ?

ಶಾರದ : ಪರವಾಗಿಲ್ಲ ಕುಳಿತುಕೊಳ್ಳಿ........

ರಘು : ನಾಗಭೂಷಣನ ಜಾತಕ ನೋಡಿಸಿದೆ. ಬಹಳ ಚೆನ್ನಾಗಿದೆ. ಲಗ್ನವನ್ನೂ ಕಟ್ಟಿಸಿಬಿಟ್ಟಿದ್ದೇನೆ ಇನ್ನೆಂಟು ದಿನವಿದೆ ಮದುವೆ.

ಶಾರದ : ಅದೇನೋ ಸಂತೋಷದ ವಿಚಾರ. ಆದ್ರೆ..........

ರಘು : ಆದ್ರೆ..... ಏನಮ್ಮ? ನಾನು ಎಲ್ಲಾ ನೋಡ್ಕೋತೀನಿ ನೀವು ಸುಮ್ನಿರಿ.

ಶಾರದ : ನೀವು ರಘು ಅಲ್ಲ.... ನಮ್ಮ ಪಾಲಿಗೆ ದೇವರು....... ರಘುಪತಿಗಳೇ.

ರಘು : ಅದರಲ್ಲಿ ನನ್ನದೇನು ಬಂತು ಹೇಳಿ. ಎಲ್ಲಾ ಆ ದೇವರ ನೇಮಕ.

ಶಾರದ : ನಿಮ್ಮ ಸಾಲವನ್ನು ಆದಷ್ಟು ಬೇಗ ತೀರಿಸಿ ಬಿಡ್ತೀನಿ. ಗದ್ದೆ ಮಾರಿಬಿಟ್ಟು.

ರಘು : ಅದರ ಮಾತು ಆಮೇಲಾಗ್ಲಿ. ಮೊದ್ಲು ಮದುವೆ.

ಶಾರದ : ನ್ಯಾಯವಾಗಿ ನೀವು ಅವರ ಅಣ್ಣ ತಮ್ಮ ಆಗಿದ್ದರೆ ಚೆನ್ನಾಗಿರ್ತಿತ್ತು ರಘುಪತಿಯವರೇ. ಆದ್ರೆ, ದೇವ್ರು ಬೇರೆ ಇಟ್ಟಿದ್ದು, ಈಗ ನಮಗೆ ಸಂಬಂಧ ಕಲ್ಪಿಸಿದ್ದಾನೆ.

ರಘು : ಅಷ್ಟೆಲ್ಲಾ ದೊಡ್ಡ ಮಾತು. ನಮ್ಮ ಕೈಲಾದ ಸೇವೆಯನ್ನು ನಾವು ಮಾಡ್ತೀವಿ. ನಾನು ಬರ್ತೇನೆ ಶಾರದಮ್ಮನವರೇ.

ಶಾರದ : ಆಗ್ಲಿ ರಘುಪತಿಯವರೇ.

ಧ್ವನಿ : ಇದು ಒಂದು ಮನೆಯ ಕಥೆಯಲ್ಲ. ಒಂದು ಮನೆಯ ಅಣ್ಣ ತಮ್ಮಂದಿರ ವ್ಯಥೆಯಲ್ಲ.ಇಡೀ ಕರ್ನಾಟಕದ, ಭಾರತದ ಕಥೆ. ಬಸವಣ್ಣನವರು ಹೇಳುವಂತೆ 'ಆರಿಗಾರೂ ಇಲ್ಲ ಕೆಟ್ಟವಂಗೆ ಕೆಳೆ ಇಲ್ಲ'. ಅಣ್ಣನಿಗೆ ತಮ್ಮ ತಮ್ಮನಿಗೆ ಅಣ್ಣ ಆಗಬೇಕಾದರೆ ಎಲ್ಲಾ ಚೆನ್ನಾಗಿದ್ದರೆ ಮಾತ್ರ. ಕೆಟ್ಟರೆ ಯಾರೂ ಅಷ್ಟೇ ಕಡೆಗಣಿಸುವುದು ಸಹಜ. ಆದುದರಿಂದ ಸರ್ವ ವಿಧದಲ್ಲೂ ಆರೋಗ್ಯವಾಗಿರಬೇಕಾದರೆ ಸಮಾಜದಲ್ಲಿ ಸಂತೋಷದಲ್ಲಿ ಬಾಳಬೇಕಾದರೆ ಮಿತವಾಗಿ ಸಂಸಾರವಾಗಿದ್ದಾಗಲೇ ಸಾಧ್ಯ. ರಾಜಣ್ಣ - ರಮೇಶರ ಸಂಸಾರವೇ ಇದಕ್ಕೆ ಸಾಕ್ಷಿ. ರಾಜಣ್ಣ ಅರಿತು ನಡೆದಿದ್ದರೆ ಈ ಕಷ್ಟಕ್ಕೆ ಸಿಲುಕಬೇಕಾಗಿರಲಿಲ್ಲ. ರಮೇಶನಂತೆ ಸುಖವಾಗಿರಬಹುದಾಗಿತ್ತು. ಅದಕ್ಕೆ ಕಾರಣ ಐದಾರು ಮಕ್ಕಳ ತುಂಬು ಸಂಸಾರ. ರಮೇಶನಂತೆ ಎರಡೇ ಮಕ್ಕಳಿದ್ದರೆ ಈ ಕಷ್ಟ ಬರುತ್ತಿತ್ತೇ? ಖಂಡಿತ ಇಲ್ಲ. ಪ್ರತಿಯೊಬ್ಬರಿಗೂ ಅಷ್ಟೇ "ನಗುವ ಮಕ್ಕಳು ಎರಡೇ ಸಾಕು" ಹೆಚ್ಚು ಮಕ್ಕಳಿದ್ದಷ್ಟೂ ಸಂಸಾರ ತೂಗಿಸುವುದು ಕಷ್ಟ. ತಾಯಿಯ ಆರೋಗ್ಯವನ್ನು ಕಾಪಾಡಿಕೊಂಡು ಬರುವುದೂ ಕಷ್ಟ. ಪ್ರತಿಯೊಬ್ಬರೂ ಇದನ್ನು ಅರಿತಾಗಲೇ ಸುಖ ಜೀವನ!

ಶಾರದ : ಹೌದು ನಿಜ.... ನಾನು ಕಾಲದಲ್ಲೇ ಎಚ್ಚೆತ್ತುಕೊಂಡು ನನ್ನ ವಾರಗಿತ್ತಿಯಂತೆ ಎರಡೇ ಮಕ್ಕಳಿಗೆ ಮಂಗಳ ಹಾಡಿದ್ದರೆ ಸುಖವಾಗಿರಬಹುದಾಗಿತ್ತು. ಜೀವನದಲ್ಲಿ ಶಾಂತಿ ನೆಮ್ಮದಿ ದೊರಕುತ್ತಿತ್ತು. ನನ್ನ ಗಂಡನೂ ಸಹ ವ್ಯಥೆಯಿಂದ ಪ್ರಾಣ ನೀಗುತ್ತಿರಲಿಲ್ಲ. ನನ್ನ ಮುತ್ತೈದೆ ಸ್ಥಾನವೂ ಉಳೀತಿತ್ತು. ನನ್ನ ಮಕ್ಕಳಿಗೂ ಒಳ್ಳೇ ವಿದ್ಯಾಭ್ಯಾಸ, ಆಹಾರ, ಬಟ್ಟೆ ಕೊಡಬಹುದಾಗಿತ್ತು, ಆದ್ರೆ ಅವೊಂದನ್ನೂ ಮಾಡಲಿಕ್ಕಾಗಲಿಲ್ಲ. ಮಗಳ ಮದ್ವೇ ಮಾಡಲಿಕ್ಕೆ

ಇಷ್ಟೊಂದು ಕಷ್ಟ ಪಡಬೇಕಾಗಿತ್ತೇ. ನಮಗೂ ಜೀವನದಲ್ಲಿ ನೆಮ್ಮದಿ ಸಿಗಲಿಲ್ಲ. ಮಕ್ಕಳಿಗೂ ಹಿತವಾಗಲಿಲ್ಲ.

ಪುಷ್ಪ : ಏನಮ್ಮ ಯೋಚನೆ?

ಶಾರದ : ನನ್ನ ಜೀವನದಲ್ಲಿ ಇನ್ನೇನುಳಿದಿದೆಯಮ್ಮಾ ಹೇಳು?

ಪುಷ್ಪ : ಆದದ್ದಾಯ್ತು. ಇನ್ನು ಇದಕ್ಕೆ ಚಿಂತೆ ಮಾಡಿದರೆ ಏನು ಪ್ರಯೋಜನ ಹೇಳಮ್ಮಾ

ಶಾರದ : ಹೌದಮ್ಮ ನೀನು ಹೇಳುವುದೂ ನಿಜವೇ. ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು. ನಾನಾದರೂ ಸಂಸಾರದಲ್ಲಿ ಅತಿ ಮಕ್ಕಳು ಪಡೆದು ಕಷ್ಟಪಟ್ಟೆ. ಆದ್ರೆ, ನೀವಾದ್ರೂ ಸಂಸಾರದಲ್ಲಿ ಎರಡು ಮಕ್ಕಳ ಪಡೆದು ಸುಖವಾಗಿರಿ. ಎರಡು ಮಕ್ಕಳ ಮೇಲೆ ಮಾತ್ರ ಹಡಿಬೇಡಮ್ಮ

ಪುಷ್ಪ : ಈ ಕಾಲದಲ್ಲಿ ತಿಳಿದವರಾರೂ ಎರಡು ಮಕ್ಕಳ ಮೇಲೆ ಹಡೆಯಲಿಕ್ಕೆ ಇಷ್ಟಪಡಲ್ಲಮ್ಮಾ ಅವರನ್ನೇ ಸಾಕಿ ಒಂದು ದಾರಿಗೆ ತಂದ್ರೆ ಅಷ್ಟೇ ಸಂತೋಷ.

ಶಾರದ : ಅದು ನಿಜ ಪುಷ್ಪ.... ನಿಜ!

(ತೆರೆ ಬೀಳುವುದು)

*

# ಜೀತ

(ಅಂಗಾತ ಮಲಗಿಸಿಕೊಂಡ ಸಿದ್ದನಿಗೆ ತಾಯಿ ಬಿಸಿನೀರಿನ ಶಾಖ ಕೊಡುತ್ತಿದ್ದಾಳೆ. ಅಯ್ಯಯ್ಯಪ್ಪೋ..... ಅಯ್ಯಯ್ಯಪ್ಪೋ.....")

ಸೀರ : ಅಯ್ಯೋ ಅವರಿಗೆ ಬರಬಾರದ್ದ ಬರಾ... ಅವರ ಮನೆ ಎಂಟೆಮ್ಮೆ ಕರ್ರು ಕುಂಟೆಮ್ಮೆ ಸಾಯಾ......

(ಅಷ್ಟರಲ್ಲಿ ಯಜಮಾನನ ಮಗ ಸಿಂಗ್ರಿಗೌಡ.... ಬರುತ್ತಾನೆ)

ಸಿಂಗ್ರ : ಲೇಯ್.... ಬಸವಾ... ಯಾಕ್ಲಾ ಈವೊತ್ತು ಸಿದ್ದ ಜೀತಕ್ಕೆ ಬರ್ಲಿಲ್ಲ.... ಒಡೇನವ್ರು ಕರ್ರು ಬುಟ್ಟು ಬಾ ಅಂದವ್ರ ಕಣ್ಲಾ....

ಬಸವ : ಬರ್ದಂಗ ಮಾಡ್ಬುಟ್ಟವ್ರಲ್ಲಪ್ಪಾ.... ಎಂಗ್ ಬತ್ತಾನೇ....

ಸಿಂಗ್ರ : ಅವ ಬರ್ದೇವೋದ್ರೆ ನೀನೇ ಬಾ....

ಬಸವ : ಬರಕ್ಕಾಗಕ್ಕಿಲ್ಲ ಅಂತ ಏಳ್ಬುಡಿ....

ಸಿಂಗ್ರ : ಏನ್ಲಾ ಬಸವಾ..... ಈಟೊಂದು ಉದ್ದಟತನ ತೋರ್‍ತಿದ್ದಯ ದಣ್ರೇಗೆ... ಆವೊತ್ತು ಹಣ ಈಸ್ಕಂಬರಾ ಆಗ ಹಲ್ಲು ಕಿರ್‍ಕಂಡು, ಕೈಕಟ್ಕಂಡು, ನನ್ನ ಮಾನಾ ಕಾಪಾಡಿ ಅಂತ ಅಂದವ ಹಣ ಈಸ್ಕಂಡು ಈಗ ಆಟ್ಪಾ ತೆಗ್ದೆಯಾ? ಅದ್ಯಾನೋ ಬಂದು ಯೋಳು ಬಾ... ಅವರಿಗೆ ಕ್ವಾಪ ಬಂದ್ರೆ ಸುಮ್ನೆ ಬುಡಕ್ಕಿಲ್ಲ.

ಬಸವ : ಏನು ಹಾಕಸ್ಬುಟ್ಟರಪ್ಪಾ....

ಸಿಂಗ್ರ : ಓಹೋ ಇಷ್ಟುಕ್ಕೂ ಬಂದು ಬುಟ್ಯೋ ಈಗ ವೋಗಿ ಏನೇಳ್ಲಿ ಯೇಳು.

ಬಸವ : ಮೊದ್ಲೇ ಯೇಳ್ನಿಲ್ವಪ್ಪಾ ಬರಕ್ಕಿಲ್ಲ ಹೋಗಿ...

ಸಿಂಗ್ರ : ಕೊಟ್ಟ ಹಣ ತಿರುಪತಿ ನಾಮವಾ.

ಬಸವ : ಗೇದು ರಕ್ತ ಸುರಿಸಲ್ವಾ ನನ್ನ ಮಗ ವೋಗಿ. ಈ ನೋವು ಮಾಡಿ ಕಳಿಸಿದ್ದೀರಲ್ಲಾ ಇದ್ನಾ ಪೋಲೀಸ್‌ಗೆ ಕಂಪ್ಲೀಟು ಕೊಟ್ರ ಏನ್ಮಾಡ್ತರಿ?

ಸಿಂಗ್ರ : ಯಾಕೋ ನಿಂಗೆ ತಲೆ ಮದ್ದು ವತ್ತವ್ರೇ....

ಬಸವ : ನಾವು ಮನಸ್ರು, ಮರವಲ್ಲಾ ನಡೀರಿ. ನಮ್ಮ ಮಕ್ಕಳಂಗ ನೋಡ್ಕತೀವಿ ಅಂತೇಳಿ ಇಂಗಾ ಮಾಡದು?

ಸಿಂಗ್ರ : ಸರಿ.... ಮುಂದೇನಾತದ ನೋಡ್ಕತಿರು....

(ಹೊರಡುವನು)

ಸಿಂಗ್ರ : ಅಪ್ಪಾ.....

ಯಜ : ಏನಪ್ಪಾ....

ಸಿಂಗ್ರ : ಜೀತಕ್ಕೆ ಕಳಿಸಲ್ವಂತೆ. ಪೋಲೀಸ್‌ಗೆ ಕಂಪ್ಲೀಟು ಕೊಡ್ತವ್ನಂತೆ.

ಯಜ : ಬಡ್ಡಿ ಮಗ ಅಲ್ಲಗಂಟ ಬನ್ಬುಟ್ನಾ? ಯೇಯ್ ನೀನೇನು ಗಂಡಸಲ್ವಾ. ಹೋಗಿ ಕತ್ತನ್ ಪಟ್ಟಿ ಇಡ್ಕಂಡು ದರ ದರ ಅಂತ ಎಳ್ಕಂಡು ಬಾ... ಜೊತೆಗೆ ನೀನು ವೋಗು ದೇವಪ್ಪ....

(ಇಬ್ಬರು ಬಂದರು ಬಸವನ ಮನೆಗೆ 'ಅಪ್ಪಾ ಅವ್ರು ಕರೀತವ್ರೆ ಬನ್ರಲಾ....' ದರ ದರನೆ ಎಳೆಯಲು)

ಬಸವ : ನಿಮ್ತಾವ ಎಳಿಸ್ಕಂಬರಕ್ಕ ನಾವ್ಯಾನು ಅಂತ ತೆಪ್ಪು ಮಾಡಿಲ್ಲ ಒಂದು ಸಟೀಗ ತಾಳು ಬತ್ತಿವ್ನಿ.....

(ಮನೆ ಒಳಗೆ ಹೋಗಿ ಬರುವನು) ನಡೀರಿ... ಬಾರ್ಲಾ ಮೊಗ.....

ಸಿದ್ದ : ನಾನು ಬರಕ್ಕಿಲ್ಲ.....

ಬಸವ : ನೀ ಬಾರ್ಲಾ... ನೀನ್ಯಾವ ಜೀತಕ್ಕ ಸೇರ್ಸವಾ...?

(ಅಪ್ಪ ಮಗ ನಡೆಯುವರು)

ಯಜ : ಎಲಾ ಹಲ್ಕಾ ನನ್ನ ಮಗ್ನೇ... ಕಾಸೀಸ್ಕಂಡು ಜಿನ ಚೆನ್ನಾಗಿತ್ತು ಅಲ್ವಾ....

ಬಸವ : ನನ್ನ ಮಗ ಜೀತ ಮಾಡ್ನಿಲ್ವಾ?

ಯಜ : ಹಲ್ಲ ಉದುರಿಸ್ಬುಡ್ತೀನಿ ಯಾರ್ ಜೊತೆಲಿ ಮಾತಾಡ್ತೀಯ ಅನ್ನದು ಗ್ಯಾನ ಇದ್ಯಾ?

ಬಸವ : ಯಾರಾದ್ರೇನು ನೀವೂ ನನ್ನಂಗೆ ಮನಸ್ರಲ್ವಾ...? ನಾವಾರೂ ಮನಸ್ರು ಅನ್ನೋದು, ನೀವು ಮನಸ್ರಲ್ಲಾ...

ಯದ : ಒದ್ದು ಬುಡ್ತೀನಿ ಬಂದು.

ಬಸವ : ಮುಟ್ಟು ನೋಡಿ ಗೊತ್ತಾತದ.... ನನ್ನ ಮಗನ್ನ ಒಡ್ದು ಜಯಸಿ ಕಂಡಿವ್ರಿ.... ನನ್ನೂ ವೊಡೀತೀರಾ? ಕಾಮಾನಿದ್ರು ನಾನು ಏನೋ ವೋಗ್ಲಿ ಆ ಕಾಲದಿಂದ ಜೀತ ಮಾಡ್ಕಂಡು ಬಂದಿದ್ದೇ ಅಂತ ನನ್ನ ಮಗನ್ನ ಸೇರಿಸಿದೆ, ಇದಾ ನೀವು ಮಾಡಿರದು? ಪೋಲೀಸ್‌ಗೆ ಕಂಪ್ಲೆಂಟ್ ಕೊಟ್ಟು ಬುಟ್ರೆ ಗೊತ್ತಾತದೆ.

ಯಜ : ಓಹೋ ಅಲ್ಲಿಗಂಟ ಬನ್ಬುಟ್ಯಾ? ಬೀಸಾಕ್ಲ ಹಣಾನಾ....

ಬಸವ : ಬೀಸಾಕಕೇ ಬಂದಿರದು.

ಯಜ : ಅದಕ್ಕೆ ನಿಂಗಿಷ್ಟು ಪೊಗರು.

(ಮಗನ ಬೆನ್ನು ತೋರಿಸಿ)

ಬಸವ : ಇದು ನಿನ್ನ ಪೊಗರು. ಬಡವ್ರು ಅಂತ, ಹಣ ಕೊಟ್ಟಿವ್ನಿ ಅಂತ ಇದಾ ಮಾಡಾದು ತೆಕೋ ನಿನ್ನ ಹಣ.

(ಎಂದು ಬಿಸಾಡಿ)

ಬಾರ್ಲಾ ಮಗ... ಇವ್ನ ಮನೆ ಜೀತ ಈವತ್ಗೇ ಕೊನೆ...

(ಇಬ್ಬರು ಹೊರಡುವರು ಹಲ್ಲುಮುಡಿ ಕಚ್ಚುತ್ತಾ ಮಾತಿಲ್ಲವಾದ ಯಜಮಾನ)

*

# ಗಂಡನ ಪೂಜೆ

(ಧ್ವನಿ, ಪ್ರತಿಧ್ವನಿ.... ಕೇಳಿ ಬರುತ್ತದೆ... ಅಂದು ಮಾಡಿದ ಶಾಸ್ತ್ರಿಗಳ ಭಾಷಣದ ಒಂದು ತುಣುಕು- ಪಕ್ಕದಲ್ಲೆ ಒಂದು ಎತ್ತರದ ಜಾಗದಲ್ಲಿ ಗಂಡನ ಫೋಟೋ ಇದೆ)

ಶಾಸ್ತ್ರಿ : ಗಂಡ ಅಂದ್ರೆ ದೇವರಿಗೆ ಸಮಾನ ಅಂತ ತಿಳ್ಕೊಬೇಕು ಪ್ರತಿಯೊಬ್ಬ ಹೆಂಡತಿಯೂ. ಹಿಂದಿನ ಕಾಲದಲ್ಲಿ ಅದೆಷ್ಟು ಜನ ಸತಿಯರು ಪತಿಸೇವೆ ಮಾಡಿ, ಪತಿವ್ರತೆಯರಾಗಿ ಸದ್ಗತಿ ಪಡೆದಿದ್ದಾರೆ. ಸತೀ ಅನುಸೂಯ, ಸತಿ ಸಾವಿತ್ರಿ ಇನ್ನೂ ಅನೇಕರು. ಆದ್ರೆ ಈಹೊತ್ತಿನ ದಿನ ಬಿಡಿ ಗಂಡನ್ನ ಆಟ ಆಡಿಸ್ಬಿಡ್ತಾರೆ. ಏನೋ ಗಾದೆ ಹೇಳ್ತೋಲ್ವೆ ಸಾವಿರ ಕುದುರೆ ಸವಾರ್‍ನಾದ್ರೂ ಹೆಂಡ್ತಿಗೆ ಗುಲಾಮ ಅಂತ ಅವರೂ ಅಂಗೇ ಇರ್ತಾರೆ. ಇವರೂ ಅಂಗೇ ಇರ್ತಾರೆ. ಗಂಡನ್ನ ಹೆದರಿಸಿಕೊಂಡು ನಡೀತಾರೆ. ಅವರೂ ಹೆಂಡತಿಗೆ ನಡುಗಿಕೊಂಡು ಅವರು ಹೇಳಿದ ಹಾಗೆ ಕೇಳ್ತಾರೆ. ಇದು ಬೇಕಾದಷ್ಟು ಜನರಿಗೆ ಅರ್ಥವಾಗಿದೆ. ಭೀಮನ ಅಮಾವಾಸ್ಯೆಯ ದಿನ ಗಂಡನ ಪೂಜೆ ಮಾಡಿ ಆತನಿಂದ ಅರಿಶಿನ ದಾರ ಕಟ್ಟಿಸಿಕೊಳ್ಳೋದು. ಗಂಡನ ಪೂಜೆ ಮಾಡದೇ ಹೋದ್ರೂ ಆತ ಫೋಟೋಕ್ಕಾದ್ರೂ ಕೈ ಮುಗಿದ್ರೆ ಸಾಕು ಜೀವನ ಸಾಫಲ್ಯವಾಗ್ತದೆ. ಏನಂತೀರಿ ಅನ್ನೋದೇನು ಮನಸಿಲ್ಲದೆ ಮಾಡ್ತೀರಾ? ಬೇಡ, ಭಕ್ತಿಯಿಂದ ಮಾಡಿ. ಸಾಂಬ ಜಯ ನಮಃ ಪಾರ್ವತಿ ಪತೇ ಹರಹರ ಮಹಾದೇವ್, ಜೈ ಅಲಕ್ ನಿರಂಜನ ಗುರು ಮಲ್ಲೇಶ್ವರ ಮಹಾ ಪ್ರಭುಗಳೇ.

ಹೆಂಡತಿ : ಇದೇನ್ರಿ.... ಇನ್ನು ಕುಟುಕ್ತಾ ಇದ್ದರಿ....

ಗಂಡ : ಅದೇ ನೀನು... ನಿನ್ನೆ ಹುರ್‍ಕೊಟ್ಟಿದ್ಯಲ್ಲಾ ಹಸಿಕಡ್ಲೆ ಅದು ಕಣೆ ಜೋಬ್‌ನೊಳ್ಗೆ ಇನ್ನೊಸಿ ಇತ್ತು.... ಅಂತೂ ಒಳ್ಳೆ ಕೆಲಸ ಮಾಡಿದೆ ಕಡ್ಲೆ ತಿನ್ತಾ ತಿನ್ತಾ ನಿದ್ದೇನೇ ಬರ್‍ನಿಲ್ಲ. ಒಳ್ಳೆ ಪ್ಲಾನು ನಿಂದು.

ಹೆಂಡತಿ : ರೀ.... ರೀ.... ಸ್ವಲ್ಪ ಬರ್‍ತೀರಾ?

ಗಂಡ : (ಸ್ವಗತ) ಇದೇನು ಈ ಹೊತ್ತು ಇದೊಂದು ಪ್ರೀತಿಯಾಗಿ ಕರೀತವ್ಳೆ ಏನೋ ಮಜಾ ಇರಬೇಕು? ಇಲ್ಲ ಏನಾದ್ರೂ ಗ್ರಹಚಾರ ವಕ್ಕರಿಸಿದ್ಯೋ, ಹೂವಿನ ಹಾರ ಬ್ಯಾರೆ ಇಟ್ಕಂಡವ್ಳೆ, ಆ ಹರಿಕಥೆ ಶಾಸ್ತ್ರಿಗಳ ಪ್ರಭಾವ ಇರಬೇಕು.

ಗಂಡನ ಕಂಡ್ರೆ ಪ್ರೀತಿ ಪ್ರೇಮ ಒಂದೇ ಸಮನಾಗಿ ಉಕ್ಕಿ ಹರೀತಾ ಇದೆ ಅಂತ ಕಾಣುತ್ತೆ.

ಹೆಂಡತಿ: ಇದೇನ್ರೀ ಎಷ್ಟು ಕೂಗದ್ರೂ ಬರೋಲ್ಲ.

ಗಂಡ : ಏನೇ ಅದು ವಡವಡಾ ಅಂತೀಯಲ್ಲಾ. ಬಂದೇ ತಾಳು ಏನೋ ಯೋಸ್ನೆ ಮಾಡ್ತಿದ್ದೆ ರಸಭಂಗ ಮಾಡ್ಬುಟ್ಯಲ್ಲಾ

ಹೆಂಡತಿ: ಇದೂ ಒಂದು ಅರ್ಜೆಂಟು ಕೆಲ್ಸಾನೇ ಬನ್ನೀ.

ಗಂಡ : ಬಂದು ನಿಂತವ್ನಲ್ಲೋ ನಿನ್ನ ಕಣ್ಣಿಗೆ ಮೂರು ದೊಣ್ಣೆಯಾಗಿ

ಹೆಂಡತಿ: ನಿಂತ್ರಾಯ್ತಾ ಬನ್ನೀ.

ಗಂಡ : ಯಾಕೆ?

ಹೆಂಡತಿ: ಬಗ್ಗಿ ಅಂದ್ರೆ ಬಗ್ಗಬೇಕು.

(ಆತನ ಮೇಲೆ ಹತ್ತಿ ಹೂವಿನ ಹಾರವನ್ನು ಫೋಟೋಕ್ಕೆ ಹಾಕಿ ಕೈ ಮುಗಿಯುವಳು)

ಇದೇನು ಇನ್ನೂ ಬಗ್ಗೇ ಇದೀರಲ್ಲಾ ಏಳ್ರೀ ಮೇಲೆ ಪೂಜೆ ಆಯ್ತು.

ಗಂಡ : ಇದೇನೇ ನೀ ಮಾಡಿದ್ದು?

ಹೆಂಡತಿ: ಅಷ್ಟು ಗೊತ್ತಾಗ್ಲಿಲ್ವಾ ಶಾಸ್ತ್ರಿಗಳು ನಿನ್ನೆ ಹೇಳಿದ್ದ ಮರತ್ಬುಟ್ರಾ? ಗಂಡನ ಪೂಜೆ....

ಗಂಡ : ಪುರಾಣ ಕೇಳಿದ್ದಕ್ಕೆ ಸಾರ್ಥಕವಾಯ್ತು ಬುಡು. ಹೀಗೆ ಮಾಡೋದಾ ಎಲ್ರೂ ಕಲುತ್ಕೊಳ್ಳಿ.

*

# ಯಜಮಾನ್ರ ನ್ಯಾಯ

(ಊರಿನ ಯಜಮಾನರು ಪಂಚಾಯಿತಿ ಕಟ್ಟೆಯಲ್ಲಿ ಕುಳಿತಿದ್ದಾರೆ. ಅಲ್ಲಿಗೆ ಅಲ್ಲಯ್ಯ ಪ್ರವೇಶಿಸುತ್ತಾ)

ಅಲ್ಲಯ್ಯ : ಸ್ವಾಮಿ..... ಯಜಮಾನ್ರೇ.... ಹೋಯ್ತು, ಹೊರಟೋಯ್ತು..... ಹೊರಟೋಯ್ತು.

ಯಜಮಾನ : ಏನಪ್ಪಾ.... ಹೋಯ್ತು....? ಯಾರದು ಹೋಯ್ತು? ಯಾವ ಹೊತ್ತು ಹೋಯ್ತು.... ಸುಮ್ನೆ ಹೋಯ್ತು ಹೋಯ್ತು ಅಂತ ಹೊಡ್ಕೊಂಡ್ರೆ ನಾನು ಏನು ಅಂತ ತಿಳ್ಕೋಬ್ಯಾಕು?

ಅಲ್ಲಯ್ಯ : ನಾನು ಅಲ್ಲಯ್ಯ ಸ್ವಾಮಿ... ಮಲ್ಲಯ್ಯೂರ್ನವ್ನು.... ಇಂಗೇ ಓತಿದ್ದೆ ಸ್ವಾಮಿ.... ಏಟೋ ದಿನಗಳಿಂದ ಸಂಪಾದ್ನೆ ಮಾಡಿ ಗಂಟಾಕಂಡಿದ್ದೆ. ಮಲ್ಲಯ್ಯನ ಜಾತ್ರೆಗೇ ಅಂತ ಇಟ್ಕಂಡಿದ್ದೆ ಸ್ವಾಮಿ ಅದೆಂಗೆ ಕಳ್ದೋಯ್ತೋ ಅದ್ಯಾನು ಆ ಮಲ್ಲಯ್ಯನೇ ಬಲ್ಲ.

ಯಜಮಾನ : ಅಲ್ಲಯ್ಯ ಎಷ್ಟಿಟ್ಕಂಡಿದ್ದೆ? ಎಲ್ಲಿ ಇಟ್ಕಂಡಿದ್ದೆ?

ಅಲ್ಲಯ್ಯ : ಇದೇ ಜೋಬ್ನಲ್ಲಿ ಮಡಿಕ್ಕಂಡಿದ್ದೆ ಸ್ವಾಮಿ. ಊರ್ಗೆ ಎಂಗೋಗ್ಲಿ ಸ್ವಾಮಿ...

ಯಜಮಾನ : ಎಷ್ಟು ಹೋಯ್ತಯ್ಯಾ.

ಅಲ್ಲಯ್ಯ : ನೂರು ರೂಪಾಯಿನ ಗಂಟು ಸ್ವಾಮಿ....

ಯಜಮಾನ : ಆಯ್ತು ಈವತ್ತೆ ಡಂಗುರ ಹೊಡಿಸ್ತೀನಿ. ನೀ ಯೇನು ಯೋಸ್ನೆ ಮಾಡ್ಬ್ಯಾಡ. ನಮ್ಮೂರ ಜನ ನಿಯತ್ತ್‌ನವ್ರು, ಸಿಕ್ಕಿದ್ರೆ ತಂದುಕೊಟ್ಟುಬುಡೋರೆ. ನಾಳೆ ಬಾ ನೋಡವಾ. ತಂದಕೊಟ್ಟವರ್ಗೆ ಒಂದು ಹತ್ತು ರೂಪಾಯಿ ಬೋಮಾನ ಕೊಟ್ಟುಬುಡವ್ವಾ....

ಅಲ್ಲಯ್ಯ : ಆಯ್ತು ಯಜಮಾನ್ರೇ... (ಹೊರಡುವನು, ತಲೆಮ್ಯಾಗೆ ಕೈಹೊತ್ತು)

(ತೋಟಿಯ ಪ್ರವೇಶ)

ಯಜಮಾನ : ಒಳ್ಳೇ ಸಮಯಕ್ಕೇ ಬಂದೇ ಬಾ. ಯಾವನೋ ಪರ ಊರ್ನವ್ನು ನೂರು ರೂಪಾಯಿ ಕಳ್ಕಂಡವ್ನಂತೆ. ಯಾರ್ಗಾದ್ರೂ ಸಿಕ್ಕಿದ್ರೆ ತಂದು ಕೊಡಬೇಕು

ಅಂತ ಊರ್ನಲ್ಲೆಲ್ಲಾ ಸಾರು. ಸಿಕ್ಕಿದವರ್ಗೆ ಹತ್ತು ರೂಪಾಯಿ ಬೋಮಾನ ಕೊಡ್ತೀವಿ ಅಂತ ಸಾರು.

ತೋಟಿ : ಆಯ್ತು ಯಜಮಾನ್ರೆ....

(ಇಬ್ಬರ ನಿರ್ಗಮನ)

(ತೋಟಿಯು ಊರಲ್ಲಿ ಸಾರುವನು)

ತೋಟಿ : ಕೇಳ್ರಪ್ಪೋ ಕೇಳ್ರೀ.... ಯಾರೋ ಪರ ಊರವ್ರದು ನೂರು ರೂಪಾಯಿ ಕಳ್ದೋಗದಂತೆ. ಸಿಕ್ಕಿದವರು ಯಜಮಾನ್ರ ಹತ್ರ ತಂದುಕೊಡಬೇಕು. ತಂದುಕೊಟ್ಟವರಿಗೆ ಹತ್ತು ರೂಪಾಯಿ ಬೋಮಾನ ಕೊಡ್ತಾರಂತೆ. ಕೇಳ್ರಪ್ಪೋ ಕೇಳ್ರೀ.... ಸಿಕ್ಕಿದವ್ರು ಬ್ಯಾಗ ತಂದುಕೊಡಬೇಕಂತ್ಯಪ್ಪೋ....

(ಯಜಮಾನ್ರು ಪಂಚಾಯಿತಿ ಕಟ್ಟೆಮೇಲೆ ಕೂತಿದ್ದಾರೆ ಅಲ್ಲಿಗೆ ಒಬ್ಬ ಬಂದು)

ಜಯಪ್ಪ : ನಮಸ್ಕಾರ ಯಜಮಾನ್ರೆ. ನನ್ನೆಸ್ರು ಜಯಪ್ಪ ಅಂತ. ನಿನ್ನೆ ದಾರೀಲಿ ಬರುವಾಗ ಈ ನೂರು ರೂಪಾಯಿನ ಕಟ್ಟು ಸಿಕ್ತು ಸ್ವಾಮಿ. ಪಾಪ ಪರೂರವರದು ಅಂತ ಡಂಗೂರ ಸಾರಸ್ದಮ್ಯಾಗೊತ್ತಾತು ಸ್ವಾಮಿ.

ಯಜಮಾನ : ಪಾಪ ಸಿಕ್ತಲ್ಲಾ. ಆತ ಅದೇಟು ಕಷ್ಟಪಟ್ಟು ಸಂಪಾದ್ನೆ ಮಾಡಿದ್ನೋ... ಬೋ ದುಃಖಪಡ್ತಿದ್ದ. ಈವೊತ್ತು ಬತ್ತವ್ನೆ ಬಂದ ಮ್ಯಾಕೆ ನಿನ್ನ ಕರಿಸ್ತೀವಿ. ಬಂದು ನಿನ್ನ ಬೋಮಾನ ಹಣ ಈಸ್ಕಂಡೋಗು ಜಯಪ್ಪ.

ಜಯಪ್ಪ : ಬೋಮಾನ ಯಾಕೆ ಬುಡಿ ಪಾಪ ಅವನ ದುಡ್ಡು ಅವಂಗೆ ಸೇರಿದ್ರೆ ಸಾಕು.

ಯಜಮಾನ : ನಿಂದು ಒಳ್ಳೆ ಮನ್ಸು ಬುಡು.

ಜಯಪ್ಪ : ಪರರ ಸೊತ್ತು ನಮ್ಗಾಕೆ ದಣಿ. ನಾವು ಕಷ್ಟಪಟ್ಟು ಸಂಪಾದ್ನೆ ಮಾಡೋದೆ ನಮ್ಗಿರಕ್ಕಿಲ್ಲ.

ಯಜಮಾನ : ಅದು ಸರಿ ಬುಡು...

ಜಯಪ್ಪ : ಬರ್ತೀನಿ ನನ್ನೊಡ್ಯಾ...

ಯಜಮಾನ : ಆಯ್ತು.

(ಜಯಪ್ಪನ ನಿರ್ಗಮನ)

(ಯಜಮಾನರು ಹೊರಡುವರು)

(ಅಲ್ಲಯ್ಯ ದಾರಿಯಲ್ಲಿ ಬರುತ್ತಾ ಯೋಚನೆ ಮಾಡ್ತಾನೆ)

ಅಲ್ಲಯ್ಯ : ಅಲ್ಲಾ ಎಂತಾ ಕೆಲ್ಸ ಆಗೋತು ಈಗೊಂದು ಪಕ್ಷ ನನ್ನ ಹಣ ಸಿಕ್ಕಿಬುಟ್ರೆ ನನ್ನಂತ ಪುಣ್ಯವಂತನೇ ಇಲ್ಲ. ಈಗ ಹಣ ಸಿಕ್ಕುಬಿಟ್ರೆ.... ಹತ್ತು ರೂಪಾಯಿ

ಬೋಮಾನ ಬೇರೆ ಸಾರಿಸಿಬುಟ್ನಲ್ಲಾ ನೂರು ರೂಪಾಯ್ಲಿ ಹತ್ತು ರೂಪಾಯಿ ಕಮ್ಮಿಯಾಗ್ಬುಡ್ತವಲ್ಲಾ ಏನ್ ಮಾಡ್ಲಿ? ಈಗೋಗಿ ನಂದು ಕಳ್ದೋಗಿರದು ನೂರತ್ತರೂಪಾಯಿ ಅಂದುಬಿಟ್ರೆ ಹತ್ತು ರೂಪಾಯಿ ಹೋದ್ರೂ ನೂರು ರೂಪಾಯಿ ಬುಟುವಾಗಿ ನಂಗೇ ಸಿಕ್ತೈತೆ. ಎಂಗದೆ ತನ್ನ ಪ್ಲಾನು?

(ಹೊರಡುವನು)

(ಯಜಮಾನರು ತಮ್ಮ ಪೀಠಕ್ಕೆ ಬಂದು ಕುಳಿತುಕೊಳ್ಳುವರು ಅಲ್ಲಯ್ಯನ ಪ್ರವೇಶ)

ಯಜಮಾನ : ಅಲ್ಲಯ್ಯ ನೀನು ಪುಣ್ವಂತ ಬುಡು.

ಅಲ್ಲಯ್ಯ : ಸಿಕ್ಬುಡ್ತಾ ಯಜಮಾನ್ರೆ..

ಯಜಮಾನ : ಹೂಂ....

ಅಲ್ಲಯ್ಯ : ಯಜಮಾನ್ರೆ ನಾನು ರಾತ್ರಿ ಲೆಕ್ಕ ಹಾಕ್ದೆ ಸ್ವಾಮಿ... ನನ್ನದು ಕಳಮೋಗಿದ್ದದ್ದು ನೂರತ್ತುರೂಪಾಯಿ ದಣಿ....

ಯಜಮಾನ : (ಯೋಚಿಸಿ) ಅಲ್ಲಯ್ಯ ನಿನ್ನೆ ಹೇಳಿದ್ದೂ ನೂರು, ಅದು ಸಿಕ್ಕಿದೆ.

(ಅಲ್ಲಿಗೆ ಜಯಪ್ಪನ ಪ್ರವೇಶ)

ಒಳ್ಳೇ ಸಮಯಕ್ಕೆ ಬಂದೆ ಬಾ.... ಇವನೇ ಸಿಕ್ಕಿದ್ದು. ಆದ್ರೆ.... ಈ ಹಣ ನಿನ್ನದಲ್ಲ ಅಲ್ಲಯ್ಯ ನೂರತ್ತು ರೂಪಾಯಿ ಸಿಕ್ಕಿದಾಗ ನಿನ್ನ ಕರಿಸ್ತೀನಿ ನೀನು ಹೋಗಬಹುದು.

ಅಲ್ಲಯ್ಯ : ಯಜಮಾನ್ರೇ... (ಅಳಲಾರಂಭಿಸುವನು)

ಯಜಮಾನ : ಇನ್ನೊಂದೆರಡು ದಿನ ಬಿಟ್ಟು ಬ್ಯಾ..... ನಡೆ.....

ಅಲ್ಲಯ್ಯ : ನಂಗೆ ನ್ಯಾಯ ಒದಗ್ಸಿ....

ಯಜಮಾನ : ಹೇಳಿದ್ರೆ ಗೊತ್ತಾಗೋಲ್ವೇ ನಡ್ಯಯ್ಯಾ ಕರಿಸ್ತೀನಿ ನಿನ್ನ ಹಣ ಸಿಕ್ಕಲಿ (ಹೊರಡುವನು ಆತ) ಊಂ..... ಜಯಪ್ಪ ನೀನು ನಿಜವಾಗ್ಲೂ ಜಯಪ್ಪ. ಈ ಹಣ ನಿಂಗೇ ಸೇರಬೇಕು ತೆಗೋ.

ಜಯಪ್ಪ : ಸ್ವಾಮಿ..... ಇದು ನನ್ನದಲ್ಲ.

ಯಜಮಾನ : ತೆಗೊಂಡು ಹೋಗ್ತೀಯೋ ಏನು. (ಗದರಲು)

ಜಯಪ್ಪ : (ತೆಗೆದುಕೊಂಡು ಕೈಮುಗಿದು) ಬರ್ತೀನಿ ಸ್ವಾಮಿ....

ಧ್ವನಿ : ಇದ್ದದ್ದೂ ಕಳ್ಕಂಡ್ಯಾ ಕಂಚುಗಾರಣ್ಣಾ....(Repeat)

*

# ದೇವರ ಕಾಣಿಕೆ

(ವೆಂಕಟೇಶ್ವರ ಮೂರ್ತಿಯ ಮುಂದೆ ಮೂರ್ತಿ ಬರುತ್ತಾ)

ಮೂರ್ತಿ : ತಿರುಪತಿ ವೆಂಕಟರಮಣ ಗೋವಿಂದಾ ಗೋವಿಂದ. ಶ್ರೀಮದ್ ರಮಾರಮಣ ಗೋವಿಂದಾ ಗೋವಿಂದಾ.... ಏನೀವತ್ತು ದೇವಸ್ಥಾನದಲ್ಲಿ ಯಾರೂ ಇಲ್ಲ. ನನ್ನ ಕಷ್ಟವೆಲ್ಲಾ ಹೂವನಾಗಿ ಕಳುದ್ಬುಟ್ಟೆ ಕಣ್ ಬುಡಪ್ಪಾ.... ಕೈ ಮುಗಿದು ಏನಾರ ಕಾಣಿಕೆ ಒಪ್ಪಸವಾ ಅಂತ ಬಂದಿವ್ನಿ. ನನ್ನೆಂಡ್ತಿ ನೂರೊಂದು ರೂಪಾಯಿ ( ಈ ಕಡೆ ತಿರುಗಿ) ಕಳಿಸಳ್ವೆ.

ಅ್ಞಂ..... ನೂರೊಂದು ರೂಪಾಯ್ನೂ ಕೊಡಬೇಕಾ? ಸ್ವಲ್ಪ ಚೌಕಾಶಿ ಮಾಡಿದ್ರೆಂಗೆ? ಐವತ್ತು ಕೊಟ್ರೆ ಸಾಲದಾ? ಚಿಲ್ರೆ ಮುರಿಸ್ಕಂಬತ್ತೀನಿ ತಾಳು.( ಅಂಗಡಿಗೆ ಹೋಗಿ ಬಂದು) ಇಪ್ಪತ್ತೈದ್ಯಾಕೆ ಕೊಡಬಾರ್ದು ? (ಅಷ್ಟು ದೂರ ದೇವರ ಹತ್ತಿರ ಹೋಗಿ ಮತ್ತೆ ಬಂದು) ಈಗಿನ ಕಾಲದಲ್ಲಿ ಇಪ್ಪತ್ತೈದು ಹೆಚ್ಚೇ. ನಮ್ಮ ತಾತ ಮುತ್ತಾತದೀರು ಮೂರು ಕಾಸು, ಆರು ಕಾಸು, ನಾಕಾಣೆ, ಹೆಚ್ಚು ಅಂದ್ರೆ ಒಂದು ಕಾಲು ರೂಪಾಯಿ ಅರಿಸಿನ ಬಟ್ಟೆಗೆ ಕಟ್ಕಂಬಂದು ಹಾಕಿದ್ನ ನಾನೇ ಕಂಡಿವ್ನಿ.... ಅಂಗಾರೆ ಹತ್ತು ರೂಪಾಯಿ ಸಾಲದಾ? ಹೂವಿನ ಹಾರಾನೇ ಹಾಕಬೇಕು. ಹೆಚ್ಚಿಗೆ ಹಣಾನೂ ಹಾಕ್ಬೇಕಾ? ದೂಪ ದೀಪದಾರಿತೀನೇ ಎತ್ತಬೇಕಾ? ಮತ್ತೆ ಈಗೆಷ್ಟು ಹಾಕಲಿ? ನೂರೊಂದು ರೂಪಾಯ್ಲಿ ಕೊರೆ ಒಂದು ರೂಪಾಯಿ ಹಾಕ್ಬಿಟ್ರೆ. ನೂರು ರೂಪಾಯಿನ ಗಂಟು ಉಳಿತದಾ ಅಲ್ವಾ? (ಜೇಬಿಗೆ ಕೈ ಹಾಕಿ) ಎಲಾ.... ಹತ್ತು ಪೈಸೆ... ವೆಂಕಟೇಶ್ವರನ ಋಣ ಹತ್ತು ಪೈಸೆ ಅಂತ ಕಾಣ್ತೈತೆ ಹಾಕ್ಬುಡ್ತಾಲ್ಲ... ಇನ್ನೂ ಹೆಚ್ಚಿಗೆ ಕೊಟ್ಬಾಗ ಇನ್ನೂ ಕಾಣಿಕೆ ಕೊಟ್ರಾಯ್ತು.... ವೆಂಕಟೇಶ್ವರನಿಗೇನು ಕಮ್ಮಿ ಸಾಕ್ಷಾತ್ ಲಕ್ಷ್ಮೀರಮಣನೇ ಆತ.... ನನ್ನದ್ಯಾವ ಗೊಂಗಾಣಿ? ಹಾಗೇ ಕೈ ಮುಗದುಬಿಟ್ಟು ಹೋದ್ರೆ ತಾನೆ ಹ್ಯಾಗೆ?

ವೆಂಕಟೇಶ್ವರ : ಲೇ ಭಿಕ್ಷುಗಾರ... ನಾನು ಭಿಕ್ಷುಗಾರರಿಗೆ ಭಿಕ್ಷೆ ಕೊಡವ್ನೆ ಹೊರ್ತು ಭಿಕ್ಷುಗಾರರಿಂದ ಭಿಕ್ಷೆ ತೆಗೆದುಕೊಳ್ಳವನಲ್ಲ. (ಮೂರ್ತಿ ತಿರುಗಿದ ದೇವರ ಕಡೆ)

ಮೂರ್ತಿ : ಅ್ಞಂ.... ಇದೇನಪ್ಪಾ ದೇವ್ರೆ ಒಡೆದು ಮೂಡಿ ಮಾತಾಡ್ತಾವ್ನೆ....

ವೆಂಕಟೇಶ್ವರ : ನಿನ್ನ ಬಡಭಕ್ತಿಗೆ ಮೆಚ್ಚಿ ಮಾತಾಡ್ಬೇಕಾಯ್ತು.... ಬಾ...

ಮೂರ್ತಿ : ಬಾ.... ಇದೇನಪ್ಪಾ ಆಶ್ಚರ್ಯ ಎಷ್ಟೇ ಆಗಲಿ ನೀನು ಬಡವರ ಬಂಧು.

ವೆಂಕಟೇಶ್ವರ : ನಿನ್ನ ಮನಸ್ಸನ್ನು ಅರ್ಥ ಮಾಡ್ಕೊಂಡೆ ಬಾ ಭಕ್ತ ನನ್ನ ಆರತಿ ತಟ್ಟೇಲೆ ಎತ್ತುಕೊಂಡು ಹೋಗ್ಬೇಕಂತಿದ್ದೆ. ಅದ್ಕೆ ನಾನೇ ಪ್ರತ್ಯಕ್ಷನಾಗಿ ನಿನಗೆ ಹತ್ತು ಪೈಸೆ ಕೊಡ್ತಿದ್ದೀನಿ ತೆಗೋ.

ಮೂರ್ತಿ : ಮಹಾ ಪ್ರಸಾದ.

(ಕೈಯೊಡ್ಡಲು ಹತ್ತುಪೈಸೆ ಹಾಕುವನು)



# ಹರಿಕಥಾ ವಿಹಂಗಮ

(ಹಾರ್ಮೋನಿಯಂ, ತಬಲ, ವಯಲಿನ್ ಒಂದೆಡೆ ಶೃತಿ ಲಯವಿಲ್ಲದೆ ಬಾರಿಸುತ್ತಿದ್ದಾರೆ. ಅದನ್ನು ಆಲಿಸುತ್ತಾ ತಲೆದೂಗುತ್ತಾ ಇನ್ನೇನು ಹಾಡುತ್ತಾನೆಯೋ ಎನ್ನುವಂತೆ ಜನರು ನೋಡುತ್ತಾ ಕುಳಿತಿದ್ದಾರೆ, ಗಂಡಸರು ಹೆಂಗಸರು ಎರಡು ಕಡೆಗಳಲ್ಲಿ.)

ಕಥೆಗಾರ : ಎಲ್ಲಾ ಬಂದ್ರಾ.... ಊರ ಯಜಮಾನ್ರು, ಪಟೇಲ್ರು, ಗೌಡ್ರು...

ಒಬ್ಬ : ಬಂದವ್ರೇ...

ಕಥೆಗಾರ : ಕಥೆಯನ್ನು ಆರಂಭ ಮಾಡಬಹುದೇ?

ಗೌಡ : ಕಥೆ ಮಾಡ್ಲಿ ಅಂತ್ಲೇ ಕರಿಸೀರಮು, ಹಣ ಕೊಟ್ಟಿರುವುದು ಅಡ್ವಾನ್ಸಾಗಿ ಅದ್ಕೆ ಅಲ್ವೇ ಸ್ವಾಮಿ.

ಒಬ್ಬ : ಊಟವನ್ನು ಪಗಡದಸ್ತಾಗಿ ಹಾಕಿರೋದು ಅದ್ಕೇ ತಾನೇ.

ಇನ್ನೊಬ್ಬ : ಮಾಡ್ರಿ.... ಚನ್ನಾಗಿ ಮಾಡಿದ್ರೆ ಕಾಣಿಕೆ ಬೇರೆ ಕೊಡ್ತಾರೆ ಭಕ್ತರು.

ಕಥೆಗಾರ : ಅಂದ ಮ್ಯಾಲೇ ಮಾಡ್ಲೇ ಬೇಕಪ್ಪಾ...

ಒಬ್ಬ : ಊರೂರ್ಲ್ಗೂ ಡಂಗುರ ಹೊಡಿಸಿ ಕರ್ಸ್ತಂದಿವಿ ಜನಗಳನ್ನು.... ನಿಮ್ಮ ಅದ್ಭುತ ಕತೆ ಕೇಳಲಿಕ್ಕೆ ಎಲ್ರೂ ಕೌತುಕವಾಗಿದ್ದಾರೆ ಶಾಸ್ತ್ರಿಗಳೇ.

ಕಥಗಾರ : ಅದು ಬಹಳ ಹೆಮ್ಮೆಯ ವಿಚಾರ ನಮಗೆ. ಹಾಗಾದ್ರೆ ಶುರುವೇ....

(ಹಾರ್ಮೋನಿಯಂ ತಬಲದವರ ಕಡೆ ಕೈಮಾಡಿ ಬಾರಿಸುತ್ತಿದ್ದಂತೆ ಕೆಟ್ಟದಾಗಿ ಒಂದು ಹಾಡು ಹಾಡ್ತಾನೆ)

"ಸಾಂಬ ಜಯ ನಮಃ ಪಾರ್ವತಿ ಪತೇ ಹರ ಹರ ಮಹಾದೇವ್" ಅನ್ನಿ ಎಲ್ರೂ

(ಜನರೆಲ್ಲಾ ಅನ್ನುತ್ತಾರೆ)

ಏನ್ರಪ್ಪಾ ಕಥೆ ಶುರು ಮಾಡ್ಲಾ?

ಒಬ್ಬ : ಕಣೆ ಕೇಳಿ... ಹಾಡಿದ್ದೇ ಹಾಡು ಕಿಸುಬಾಯಿ ದಾಸ ಅಂತ ಶುರು ಮಾಡ್ಲಾ ಶುರು ಮಾಡ್ಲಾ ಅಂತಾರ. ಕಣೆ ಕೇಳ್ರಿ....

(ಹೀಗೆ ಒಬ್ಬೊಬ್ಬರಾಗಿ ಒಂದೊಂದು ರೀತಿ ಹೇಳ್ತಾರೆ)

ಕಥೆಗಾರ : ಕೋಪಬೇಡಿ.... ಶುರು ಮಾಡಿಯೇ ಬಿಟ್ಟೆ.

"ನಮಸ್ಕಾರಂ ನವ ಕೋಟಿ ಪುಣ್ಯಂ ಘಂಟಾನಾದಂ ಘನಕೋಟಿ ಪುಣ್ಯಂ ಕೊಟ್ಟವರ ಗಂಟೆ ಕೊಡಲಾರದವರಿಗೆ ಕೋಟ್ಯಾನುಕೋಟಿ ಪುಣ್ಯಂ"

(ಜನರನ್ನು ನೋಡಲು)

ಜನ : ಹೇಳ್ತೀಯಪ್ಪಾ... ಹೇಳಿ

ಕಥೆಗಾರ : ಅಲ್ಲಪ್ಪಾ ನಾ ಹೇಳ್ತೀನಿ, ನಾಹೇಳಿದ್ದು ತಿಳಿತೇನು?"

ಜನ : ತಿಳಿಲಿಲ್ಲಪ್ಪ ತಿಳಿಲಿಲ್ಲ.

ಕಥೆಗಾರ : ತಿಳ್ಯಾಕಿಲ್ಲ ಅಂದ ಮ್ಯಾಲೆ ಇನ್ನೇನಿದೆ ಹೇಳದು ಸ್ವಾಮಿಗಳಾ ಕಟ್ಟಿ ಗಂಟು ಮೂಟೆ.

ಜಯ ನಮಃ ಪಾರ್ವತಿ ಪತೆಯೇ ಹರಹರ ಮಹಾದೇವ್"

(ಎಲ್ಲರೂ ಗಂಟು ಮೂಟೆ ಕಟ್ಟಿ ಎದ್ದರು. ಜನರ ಗದ್ದಲ. ಎಲ್ಲರೂ ನಿರ್ಗಮಿಸಿವರು)

ಜನರ ಗುಂಪು : ಗೌಡ್ರೇ.... ಇದೇನು ಇಷ್ಟು ಹಣ ಸುರುದು ಬೆಳೆಗಾರ ಕೀರ್ತನೆ ಮಾಡ್ತಾನೆ ಅಂದ್ರ ಒಂದೇ ಮಾಡ್ಲೆ ಮುಗಿಸಿ ಹೊರಟು ಬುಟ್ನಲ್ಲ.

ಗೌಡರು : ನಾಳೆಗೆ ಸರಿಯಾಗಿ ಮಾಡ್ಸೋವ ನಾವೆಲ್ಲಾ ಹೋಗಿ ಕೇಳ್ತೀವಿ. ನೀವು ನಾಳೆ ಏನಾದ್ರೂ ತಿಳೀತಾ ಅಂದ್ರೆ ತಿಳೀತು ಅಂದುಬಿಡಿ.

ಜನರು : ಆಯ್ತು.

* * *

ಗೌಡರು : ಏನು ಶಾಸ್ತ್ರಿಗಳೇ ನಮ್ಮ ಹಳ್ಳಿ ಜನಕ್ಕೆ ಆಟೊಂದು ನಿರಾಸೇನಾ ಮಾಡೋದು? ಬೆಳ್ಗಾನ ಕತೆ ಕೇಳಬೇಕು ಅಂತ ಬಂದವರಿಗೆ ಒಂದು ಮಾತಲಿ ಮುಗಿಸಿಬಿಟ್ರಲ್ಲಪ್ಪಾ.

ಕಥೆಗಾರ : ಕೀರ್ತನೇ ಮಾಡೋದೇ ನಮ್ಮ ಕೆಲಸ. ಬಲೇ ಚೆನ್ನಾಗಿ ಊಟ ಹಾಕಿದ್ದೀರಿ. ನೂರೊಂದು ರೂಪಾಯಿ ಕಾಣಿಕೆ ಬೇರೆ ಕೊಟ್ಟಿದ್ದೀರಿ. ಈ ಹೊತ್ತು ಒಂಭತ್ತಕ್ಕೆ ಕೀರ್ತನೆ ಇಡಿಸಿಬಿಡಿ.

ಗೌಡ : ಆಯ್ತು ಸ್ವಾಮಿ.

(ನಮಸ್ಕರಿಸಿ ಹೊರಡುವನು)

(ಜನರೆಲ್ಲಾ ಸೇರಿದ್ದಾರೆ. ಕಟ್ಟೆ ಮೇಲೆ ಬಂದು ಕುಳಿತರು ಶಾಸ್ತ್ರಿಗಳು ಮತ್ತು ಅವರ ಪರಿಚಾರಕರು. ತಮ್ಮ ವಾದ್ಯದ ಕಟ್ಟುಗಳನ್ನು ಬಿಚ್ಚಿ ಕುಳಿತರು. ಶುರು ಮಾಡಿದ್ರು. ಕಥೆಗಾರ ನಮಸ್ಕರಿಸಿ.)

ಶಾಸ್ತ್ರಿ : ಗೌಡರು, ಯಜಮಾನ್ರು ಎಲ್ರೂ ಬಂದಿದ್ದಾರೇನಪ್ಪಾ.

ಒಬ್ಬ : ಬಂದು ಕೂತವ್ರೆ.

ಕಥೆಗಾರ : ಹಾಗಾದ್ರೆ ಕಥೆ ಶುರು ಮಾಡ್ಲಾ.

ಒಬ್ಬ : ಅದೇ ರಾಗ.... (ಮೆಲ್ಲನೆ)

ಮತ್ತೊಬ್ಬ: ಅದೇ ರೋಗ (")

ಶಾಸ್ತ್ರಿ : ಜೈಯಾ ನಮಃ ಪಾರ್ವತೀ ಪತೇ ಹರ ಹರ ಮಹಾದೇವ್ ಅನ್ನಿ ಜೋರಾಗಿ ಎಲ್ಲಾ.

(ಜನರೆಲ್ಲಾ ಅಂದ ಮೇಲೆ)

ನಮಸ್ಕಾರಂ ನವಕೋಟಿ ಪುಣ್ಯಂ, ಘಂಟಾ ನಾದಂ ಘನಕೋಟಿ ಪುಣ್ಯಂ, ಕೊಟ್ಟವರ ಗಂಟ ಕೊಡಲಾರದವರಿಗೆ ಕೋಟ್ಯಾನುಕೋಟಿ ಪುಣ್ಯಂ ಎಲ್ಲಕ್ಕೂ ತೀಳೀತ್ರಪ್ಪಾ.

ಜನ : ತಿಳೀತ್ರಪ್ಪಾ.

ಶಾಸ್ತ್ರಿ : ತಿಳಿದವರಿಗೆ ಏನಿದೆ ಹೇಳಲಿಕ್ಕೆ? ಕಟ್ಟಿ ಸ್ವಾಮಿಗಳ ಗಂಟು ಜಯ ನಮಃ ಪಾರ್ವತೀ ಪತೇ ಹರಹರ ಮಹಾದೇವ್.

(ಎಲ್ಲರೂ ತಮ್ಮ ವಾದ್ಯಗಳ ಮುಚ್ಚಿ ಮೇಲೆದ್ದು ಹೊರಟರು, ಕಥೆಗಾರರು ಹೊರಟರು ಮತ್ತೆ ಜನಗಳ ಗದ್ದಲ)

ಗೌಡರು : ಏನು ಸ್ವಲ್ಪ ಸದ್ದು ನಿಲ್ಲಿಸಿ, ಶಾಂತರಾಗಿ.

ಜನ : ಈ ಹೊತ್ತು ಅದೇ ರಾಗ ನಿರಾಸೆ ಮಾಡಿದ್ನಲ್ಲಾ ಶಾಸ್ತ್ರಿ.

ಗೌಡ : ಈಗ ಇನ್ನೊಂದು ಪ್ಲಾನ್ ಹೊಳ್ದಯ್ತೆ.

ಒಬ್ಬ : ಏನದು?

ಗೌಡ : ನಾಳೇನೂ ಏರ್ಪಡಿಸೋವ, ಇನ್ನೂ ನೂರು ಹೆಚ್ಚಿಗೆ ಕೊಟ್ಟು ಮಾಡ್ಸವ. ಆತನ ಹತ್ತಿರ ಬರಲೇಬಾರದು. ಒಂದು ಕೆಲಸ ಮಾಡಿ, ನಾಳೆ ಒಂದು ಕಡೆಯವರು ಆತ ಅದೇ ರಾಗ ಹಾಡಿದ್ರೆ ತಿಳೀತು ಅನ್ನಿ. ಇನ್ನೊಂದು ಕಡೆಯವರು ತಿಳಿಲಿಲ್ಲಪ್ಪಾ ಅನ್ನಿ. ಆಮೇಲೆ ಆತ ಹೇಳಲೇಬೇಕು.

ಜನ : ಆಯ್ತು

(ಎಂದು ಎಲ್ಲರೂ ಹೊರಡುವರು)

* * *

(ಅಂದು ಕೀರ್ತನಾ ಸಮಾರಂಭ. ಶಾಸ್ತ್ರಿಗಳು ನಗುಮುಖದಿಂದ ನಿಂತಿದ್ದಾರೆ. ಜನ ಎಂದಿನಂತೆ ನೆರದಿದ್ದಾರೆ. ಹಾಡು ಬಾರಿಸಿದರು)

ಸಾಂಬ ಜಯಾ ನಮಃ ಪಾರ್ವತೀ ಪತೇ ಹರಹರ ಮಹಾದೇವ್.

ಕಥೆಗಾರ : ಗೌಡ್ರು... ಯಜಮಾನ್ರು ಎಲ್ಲರೂ ಬಂದಾರ.

ಒಬ್ಬ : ಬಂದವ್ರೆ ಶುರು ಮಾಡಿ

ಕಥೆಗಾರ : ನಾನು ಶುರು ಮಾಡ್ಲಾ ಅನ್ನೋದ್ಕೂ ಮೊದ್ಲೇ ಶುರು ಮಾಡಿ ಅಂತಿದ್ದೀರಿ ಆಯ್ತು ಮಾಡ್ತೇನೆ.

"ನಮಸ್ಕಾರಂ ನವಕೋಟಿ ಪುಣ್ಯಂ, ಘಂಟಾನಾದಂ ಘನ ಕೋಟಿ ಪುಣ್ಯಂ ಕೊಟ್ಟವರ ಗಂಟ ಕೊಡಲಾರದವಂಗೆ ಕೋಟ್ಯಾನುಕೋಟಿ ಪುಣ್ಯಂ....' (ಜನರ ಕಡೆ ನೋಡಿ) ತಿಳಿತೇನ್ರಪ್ಪಾ.

ಒಂದುಗುಂಪು : ತಿಳೀತ್ರೀ....

ಕಥೆಗಾರ : ಯಾಕೆ ಈ ಕಡೇಯವ್ರು.... ಸದ್ದಿಲ್ಲ.

೨ನೇ ಗುಂಪು : ತಿಳಿಲಿಲ್ಲರೀ.

ಕಥೆಗಾರ : ತಿಳಿದವರು ತಿಳಿಲಾರದವರಿಗೆ ತಿಳಿಸಿ ಹೇಳಿ, ತಿಳಿಲಾರದವರು ತಿಳಿದವ್ರತ್ರ ಕೇಳಿ ತಿಳಿರಿ. ಸ್ವಾಮಿಗಳ ಗಂಟು ಮೂಟೆ ಕಟ್ಟಿ. ಜಯ ನಮಃ ಪಾರ್ವತಿ ಪತೇ ಹರಹರ ಮಹಾದೇವ್.

(ಎಲ್ಲರೂ ಗಂಟು ಮೂಟೆ ಕಟ್ಟಿ ಹೊರಡುತ್ತಿರಲು)

ಗೌಡ : ನಿಮ್ಮ ಕೀರ್ತನ ಕೇಳದ್ವಿ ಸಾಕು. ನಿಮ್ಮ ಮುಂದಿನ ಊರಿಗೆ ಹೋಗ್ರಿ....

(ಎಲ್ಲರೂ ಹೊರಡುವರು)

*

# ಸೂಜಿ ಕಥೆ

(ಮುದುಕಿ ಹುಡುಕಾಡುತ್ತಿರುವಳು. ದಾರಿಯಲ್ಲಿ ಬರುವವರು ನಿಂತು)

ಒಬ್ಬ : ಏನವ್ವಾ ಹೀಗೆ ಹುಡುಕ್ತಾ ಇದ್ದೀರಿ?

ಮುದುಕಿ : ಸೂಜಿ ಕಳ್ಹೋಗದೆ ಕಣ್ ಪೊಗ.

(ಆತ ಹುಡುಕುವನು. ಇನ್ನೊಬ್ಬ ಬಂದು ಈತನನ್ನು ಕೇಳಿದಾಗ)

ಒಬ್ಬ : ಈ ಮುದ್ಕಿ ಸೂಜಿ ಕಳ್ಕೊಂಡಿದ್ದಾಳಂತೆ.

(ಆತನೂ ಹುಡುಕುವನು)

ಮತ್ತೊಬ್ಬ: ಅಯ್ಯೋ ಪಾಪ.

ಮುದುಕಿ : ಸಿಕ್ತಪ್ಪಾ....

ಇನ್ನೊಬ್ಬ : ಇಲ್ಲಜ್ಜಿ.

(ನಾಲ್ಕಾರು ಜನರು ಹುಡುಕಾಡುತ್ತಿರಲು ಮುದುಕಿ)

ಮುದುಕಿ : ಸಿಕ್ತವ್ವಾ....

ಎಲ್ಲರೂ : ಇಲ್ಲಜ್ಜಿ.... ಇಲ್ಲಜ್ಜಿ....

ಒಬ್ಬ : ಇದೇನು ಹೀಗೆ ಇಷ್ಟೊಂದು ಜನ ಹುಡುಕಾಡ್ತಿದ್ದೀರಿ.

ಮತ್ತೂಬ್ಬ: ಹೀಗೆ ಈ ಮುದುಕಿ ಸೂಜಿ ಕಳ್ಕೊಂಡಿದ್ದಾಳಂತೆ. ಪಾಪ ಕಣ್ಣ್ ಕಾಣದ ಮುದುಕಿ ಅಂತ ನಾವೆಲ್ಲಾ ಹುಡುಕಕ್ಕೆ ನೆರವಾಗಿದ್ದೀವಿ.

ಆತ : ಎಷ್ಟೊತ್ತಿಂದ ಹುಡುಕುತಿದ್ದೀರಿ?

ಒಬ್ಬ : ಆಯ್ತು ಒಂದು ಅರ್ಧ ಘಂಟೆ

ಆತ : ಹಾಗಾದ್ರೂ ಸಿಕ್ಕಿಲ್ವಾ....

ಒಬ್ಬ : ಇಲ್ಲ.

ಆತ : ಅಜ್ಜೀ.....

ಮುದುಕಿ : ಏನವ್ವಾ?

ಆತ : ಏನು ಇಷ್ಟು ಜನರು ಹುಡುಕ್ತಾ ಅವ್ರೆ?

ಮುದುಕಿ : ಸೂಜಿ ಕನಪ್ಪಾ. ಅರ್ಧ ಘಂಟೆಯಿಂದ್ಲೂ ಹುಡುಕ್ತಾನೇ ಇವಿ ಅದೇಟು ಸತಾಯಿಸ್ತದ. ಒಂದು ರಪಣದ ಸೂಜಿ

ಆತ : ಸೂಜಿ ಎಲ್ಲಿ ಕಳ್ಕಂಡ್ರವ್ವಾ...?

ಮುದುಕಿ : ಮನೇಲಿಕನಪ್ಪಾ.

ಆತ : ಅಲ್ಲವ್ವಾ ಮನೇಲಿ ಕಳ್ಕಂಡು ಇಲ್ಲಿ ಹುಡುಕಿದ್ರೆ ಎಂಗೆ ಸಿಕ್ತೈತೆ?

ಮುದುಕಿ : ಮನೇಲಿ ಹುಡುಕ್ತಿದ್ದೆಕನಪ್ಪಾ ನನ್ನ ಮಗ ಈ ಗಕುಂಕತ್ಲೇಲಿ ಹುಡುಕಿದ್ರೆಲ್ಲಿ ಸಿಕ್ತೈತೆ ಬೆಳಕಲಿ ಹುಡುಕು ಅಂದಕನಪ್ಪಾ.

ಆತ : ಪಯಸ್ಸಾದ ಮೇಲೆ ಆಕೆಗೇನೋ ತಡಕಾಟ, ಹುಡಕಾಟ, ನೀವೂ ಮಂಕು ಸಾಂಬ್ರಾಣಿಗಳಾ? ವಿಚಾರಶಕ್ತಿ ಬೇಕು. ಎತ್ತು ಈಯಿತು ಕೊಟ್ಟಿಗೆ ಕಟ್ಟು ಅನ್ನೋಂಗಾಯ್ತು. ಹೋಗಿ ಮನೇಲುಡುಕಿಕೊಡಿ ಹೋಗಿ.

*

# ಕುಟುಂಬ ಕಲ್ಯಾಣ
## ಯೋಜನೆಯ ರೂಪಕಗಳು
## ಸರ್ವೇ ಜನಾಃ ಸುಖಿನೋ ಭವಂತು

---

ಧ್ವನಿ ೧ : ನಾವು ಯಾರಿಗಾದರೂ ಪತ್ರ ಬರೆಯಬೇಕಾಗಿದ್ದರೆ ಮೊದಲು ಬರೆಯುವುದು ಇಲ್ಲಿ ನಾವು ಆರೋಗ್ಯ. ಅಲ್ಲಿ ನಿಮ್ಮಗಳ ಆರೋಗ್ಯಕ್ಕೆ ಪತ್ರ ಬರೆಯಿರಿ ಎಂದು. ಈ ವಾಡಿಕೆ ಏಕೆ? ನಾವು ಆರೋಗ್ಯವಾಗಿರಬೇಕು, ನಮ್ಮ ಬಂಧು ಮಿತ್ರರು, ಸುತ್ತಮುತ್ತಣ ಜನರೆಲ್ಲಾ ಆರೋಗ್ಯವಾಗಿರಬೇಕು ಎಂಬ ಕಳಕಳಿಯಿಂದ ತಾನೇ? ವಿಶ್ವ ಆರೋಗ್ಯ ಸಂಸ್ಥೆಯೂ ಅದನ್ನೇ ಸಾರುತ್ತದೆ. ಜಾತಿ-ಮತ, ಲಿಂಗ, ವಯಸ್ಸಿನ ಭೇದವಿಲ್ಲದೆ ಎಲ್ಲರಿಗೂ ಈ ಆರೋಗ್ಯ ಸೇವೆ ದೊರೆಯಬೇಕು.

ಧ್ವನಿ ೨ : ಇದು ವಿಶ್ವದ ಪ್ರತಿಯೊಬ್ಬ ಮಾನವನ ಹಕ್ಕು. ಇದನ್ನು ಒದಗಿಸುವುದು ಸರ್ಕಾರದ ಒಂದು ಕೆಲಸ. ವಿಶ್ವ ಆರೋಗ್ಯ ಸಂಸ್ಥೆಯು ಪ್ರತಿವರ್ಷವೂ ಒಂದೊಂದು ಸಮಸ್ಯೆಯ ಬಗೆಗೆ ಆದ್ಯತೆ ನೀಡುತ್ತದೆ. ಕಳೆದ ವರ್ಷ ಕ್ರಿ.ಶ. ೨೦೦೦ನೇ ಇಸವಿಗೆ ಸರ್ವರಿಗೂ ಆರೋಗ್ಯ ಸೌಲಭ್ಯವನ್ನು [illegible]ದು ಒಂದು ಉದ್ದೇಶವಾಗಿತ್ತು. ಸಮಾಜದ ಜನರು, ಸ್ವಯಂ ಸ[illegible]ಂಸ್ಥೆಗಳು, ಮುಖಂಡರು, ವೈದ್ಯರು, ಆರೋಗ್ಯ ಕಾರ್ಯಕರ್ತರು ಇದರಲ್ಲಿ ಸಕ್ರಿಯವಾಗಿ ಭಾಗವಹಿಸಿ ಸರ್ವರ ಆರೋಗ್ಯಕ್ಕೆ ನೆರವಾಗುವುದು ಅತ್ಯವಶ್ಯಕ.

ಧ್ವನಿ ೩ : ದೇಶದಲ್ಲಿ ಸರ್ವರೂ ಸುಖವಾಗಿರಬೇಕಾದರೆ ಸರ್ವರೂ ಆರೋಗ್ಯದಿಂದಿರಬೇಕು. ಅದಕ್ಕೇ ಆರೋಗ್ಯ ಭಾಗ್ಯಕ್ಕಿಂತ ಮತ್ತೊಂದು ಭಾಗ್ಯವಿಲ್ಲವೆಂದು ತಿಳಿದವರು ಹೇಳಿದ್ದಾರೆ. ಆರೋಗ್ಯ ಸರ್ವರಿಗೂ ಹಿತ - ಮಿತಿಯಿಲ್ಲದೆ, ಜನಸಂಖ್ಯೆ ಬೆಳೆಯುತ್ತಿದ್ದರೆ ಅವರಿಗೆ ಎಲ್ಲಾ ಸೇವೆಗಳನ್ನು ಒದಗಿಸುವುದು ತುಂಬಾ ಕಷ್ಟವಾಗುತ್ತದೆ. ವೈಜ್ಞಾನಿಕ ಯುಗದಲ್ಲಿ ಎಲ್ಲರ ಆರೋಗ್ಯವನ್ನು ಕಾಪಾಡಬಹುದು. ಎಲ್ಲರೂ ಈ ವೈದ್ಯಕೀಯ ಸೇವೆಯ ಸೌಲಭ್ಯವನ್ನು ಪಡೆದುಕೊಂಡು ಆರೋಗ್ಯದಿಂದ ಗೆಲುವಾಗಿರಬೇಕು.

ಧ್ವನಿ ೧ : ೨೦೦೦ನೇ ಇಸವಿಯ ಹೊತ್ತಿಗೆ ಸರ್ವರ ಆರೋಗ್ಯಕ್ಕೆ ಏನು ಮಾಡಬೇಕು? ಜನರು ಯಾವ ರೀತಿಯಾದ ಸಮಸ್ಯೆಗಳನ್ನು ಎದುರಿಸಬೇಕಾಗುತ್ತೆ? ಅವುಗಳ ನಿವಾರಣೋಪಾಯಗಳೇನು ಎಂಬುದನ್ನು ಅಕಾಡೆಮಿಕ್ ಕಮಿಟಿ, ಪೋಸ್ಟ್ ಗ್ರ್ಯಾಜುಯೇಟ್ ಇನ್ಸ್‌ಟಿಟ್ಯೂಟ್ ಆಫ್ ಮೆಡಿಕಲ್ ಎಜುಕೇಷನ್ ಅಂಡ್ ರಿಸರ್ಚ್‌ನ ಛೇರ್‌ಮನ್‌ರಾದ ಡಾ॥ ವೈ.ಪಿ. ರುದ್ರಪ್ಪ ಅವರು ಹೀಗೆ ನುಡಿದಿದ್ದಾರೆ -

(ಧ್ವನಿ ಮುದ್ರಣ)

ಧ್ವನಿ ೨ : ದಿನ ದಿನಕ್ಕೆ ಬೆಳೆಯುವ ಜನಸಂಖ್ಯೆಯನ್ನು ಪ್ರಕೃತಿಯೇ ತಡೆಗಟ್ಟುವಲ್ಲಿ ಲೆಕ್ಕ ಹಾಕುತ್ತದೆ. ಆದರೆ ಇಂದು ಜನಸಂಖ್ಯೆ ಏರುತ್ತಲೇ ಇದೆ. ವಿಜ್ಞಾನ ಮುಂದುವರಿದಂತೆ ಆರೋಗ್ಯ ಸೇವೆ ದೊರೆತು ಸರ್ವರೂ ಆರೋಗ್ಯವಂತರಾಗುತ್ತಾ, ಸಾವು ನೋವುಗಳು ಕಡಿಮೆಯಾಗುತ್ತಾ ಜನಸಂಖ್ಯಾ ಸ್ಫೋಟವೇ ಆಗುತ್ತಿದೆ. ೨೦೦೧ನೇ ಇಸವಿಯ ಹೊತ್ತಿಗೆ ವಿಶ್ವದ ಜನಸಂಖ್ಯೆ ೬೫೦ ಕೋಟಿಯಷ್ಟಾಗುತ್ತದೆ. ಭಾರತದಲ್ಲೇ ಈ ಮೊತ್ತದಲ್ಲಿ ಸುಮಾರು ೧/೬ ಭಾಗದಷ್ಟು ಜನಸಂಖ್ಯೆ ಹೆಚ್ಚಾಗುತ್ತದೆ. ೨೧ನೇ ಶತಮಾನಕ್ಕೆ ಭಾರತದ ಜನಸಂಖ್ಯೆ ಸುಮಾರು ಶತಕೋಟಿ ಆಗುತ್ತದೆ.

ಧ್ವನಿ ೩ : ಈಗಾಗಲೇ ಎರಡನೆಯ ಭಾರತದಷ್ಟು ಜನಸಂಖ್ಯೆ ಸೇರಿದೆ. ಈ ಶತಮಾನಕ್ಕೆ ಮುಂಚೆ ಮೂರನೆಯ ಭಾರತ ಸೇರುವುದರಲ್ಲಿದೆ. ಈಗಿರುವ ಜನಸಂಖ್ಯೆಯಲ್ಲಿ ಅರ್ಧದಷ್ಟು ಬಡತನದ ರೇಖೆಯ ಕೆಳಗಿನವರು. ಎರಡು ಗ್ರಹಗಳಲ್ಲಿ ವಾಸಿಸುವಷ್ಟು ಇದ್ದಾರೆ. ಮುಂದೆ ಅದು ಮೂರಾದರೆ?

ಧ್ವನಿ ೧ : ನಿಜಕ್ಕೂ ಅನೇಕ ಸಮಸ್ಯೆಗಳನ್ನು ದೇಶ ಎದುರಿಸಬೇಕಾಗುತ್ತದೆ. ಸಾವಿರ ವರ್ಷದ ಕೊನೆಗೆ ಜನರು ತಮ್ಮ ವಿವೇಚನೆಯನ್ನು ಕಳೆದುಕೊಳ್ಳುತ್ತಾರೆ. ಅಸಂಖ್ಯಾತ ಮಕ್ಕಳಾಗಿ ಅವರು ತಮ್ಮ ಬೌದ್ಧಿಕ, ನೈತಿಕ ಗುಣಮಟ್ಟಗಳನ್ನು ಕಳೆದುಕೊಳ್ಳುತ್ತಾರೆ. ಆಗ ನಾಯಿಗಳು, ಇಲಿಗಳು, ಹಾವುಗಳು ಮತ್ತು ಹುಳುಗಳು ಮಾನವರನ್ನು ನಾಶಮಾಡುತ್ತವೆ.

ಧ್ವನಿ ೨ : ಈಗಿನ ಒಂದು ಅಂದಾಜಿನ ಪ್ರಕಾರ ಪ್ರತಿವರ್ಷ ಮೊದಲನೇ ವರ್ಷ ತುಂಬುವುದರೊಳಗೆ ಸುಮಾರು ೫ ದಶಲಕ್ಷ ಮಕ್ಕಳು ಸಾಯಬಹುದೆಂಬ ಅಂದಾಜು. ಹುಟ್ಟುವ ಮಕ್ಕಳಲ್ಲಿ ದೈಹಿಕವಾಗಿ ಹಾಗೂ ಮಾನಸಿಕವಾಗಿ ಶೇಕಡಾ ಹದಿನೈದಕ್ಕಿಂತಲೂ ಕಡಿಮೆ ಇರುತ್ತದೆ.

ಧ್ವನಿ ೩ : ೨೧ನೇ ಶತಮಾನಕ್ಕೆ ಜನಸಂಖ್ಯೆ ಸಾವಿರ ದಶಲಕ್ಷ ಆಗುವುದು. ೨೦೪೦ರ ಹೊತ್ತಿಗೆ ಖಂಡಿತ ೧೨೦೦ ದಶಲಕ್ಷವಾಗುತ್ತದೆ. ಪ್ರಪಂಚದಲ್ಲಿ ಯಾವ

ದೇಶವೂ ೧೨೦೦ ದಶಲಕ್ಷ ಜನಸಂಖ್ಯೆಗಿಂತ ಹೆಚ್ಚು ಹೊಂದಲು ಸಾಧ್ಯವಿಲ್ಲ. ಹೊಸ ತಾಂತ್ರಿಕ ವಿಧಾನಗಳ ಸಫಲತೆ ಹೊಂದಿದ್ದರೂ ಯಾವ ಸರ್ಕಾರವೂ ಈ ರೀತಿ ಹೆಚ್ಚಿಗೆ ಜನಸಂಖ್ಯೆಯನ್ನು ಹಿಡಿತವಲ್ಲಿಟ್ಟುಕೊಳ್ಳಲು ಕಷ್ಟವಾಗುತ್ತದೆ.

ಧ್ವನಿ ೧ : ಜನಸಂಖ್ಯೆಯ ಸಮಸ್ಯೆಯನ್ನು ಬಹುವಾಗಿ ಎದುರಿಸುತ್ತಿರುವ ಮತ್ತೊಂದು ದೇಶವೆಂದರೆ ಚೈನಾ. ಇದು ಒಂದು ಮಗುವಿನ ಸಂಸಾರ ಹೊಂದಿರುವುದನ್ನು ಜಾರಿಗೆ ತಂದಿದೆ. ಇದರಿಂದ ಚೈನಾ ೭೦೦ ದಶಲಕ್ಷ ಜನಸಂಖ್ಯೆಯನ್ನು ತಡೆಗಟ್ಟಿದಂತಾಗುತ್ತದೆ. ಭಾರತ ದೇಶದ ಜನಸಂಖ್ಯೆಗಿಂತ ಹೆಚ್ಚು ಜನಸಂಖ್ಯೆ ಚೈನಾ ದೇಶದಲ್ಲಿದೆ.

ಧ್ವನಿ ೨ : ಇಂಡಿಯನ್ ಕೌನ್ಸಿಲ್ ಆಫ್ ಮೆಡಿಕಲ್ ರಿಸರ್ಚ್‌ನ ನಿರ್ದೇಶಕರಾದ ಡಾ॥ ರಾಮಲಿಂಗ ಸ್ವಾಮಿಯವರು ಚೈನಾ ದೇಶವನ್ನು ಸಂದರ್ಶಿಸಿ ಭಾರತದಲ್ಲೂ ಹೀಗೆ ಚಿಕ್ಕ ಸಂಸಾರವನ್ನು ಹೊಂದಿರುವುದನ್ನು ಆಶಿಸಿದ್ದಾರೆ.

ಧ್ವನಿ ೩ : ಎಷ್ಟೋ ಜನ ಪುರುಷರು ಜೀವನದಲ್ಲಿ ಮುಂದಾಗುವುದನ್ನು ಯೋಚಿಸುವುದೇ ಇಲ್ಲ, ಇದು ಒಂದು ರೀತಿಯ ಸ್ವಾರ್ಥತೆ. ಹುಟ್ಟಿದ ಮಕ್ಕಳ ಮುಂದಿನ ಭವಿಷ್ಯಕ್ಕೆ ಚಿಂತೆ ಮಾಡದೆ ಕುಟುಂಬದಿಂದ ಅವರನ್ನು ಬಿಟ್ಟು ಹೊಣೆಗಾರಿಕೆಯೇ ಇಲ್ಲದೆ ಅವರಿಗೆ ಬೇಕಾದ ಅವಶ್ಯಕತೆಗಳನ್ನು ಒದಗಿಸಿಕೊಡದೆ ಹಲವಾರು ತಂದೆ-ತಾಯಿಯರು ತಮ್ಮ ಮಕ್ಕಳನ್ನು ಗಮನಿಸದೆ ಅವರನ್ನು ಪಟ್ಟಣಗಳಲ್ಲಿ ತಿರುಗುವಂತೆ ಮಾಡಿದ್ದಾರೆ. ಜನಸಂಖ್ಯೆಯ ಸುಮಾರು ೨ ದಶಲಕ್ಷ ಇಂಥ ಮಕ್ಕಳು ಯಾವ ರೀತಿಯ ಪ್ರೋತ್ಸಾಹವೂ ಇಲ್ಲದೆ, ಮುಂದೆ ತರುವವರಿಲ್ಲದೆ ತಿರುಗಾಡುತ್ತಿದ್ದಾರೆ.

ಧ್ವನಿ ೧ : ಭೌತಿಕ ತೊಂದರೆಯಾಗಲೀ, ದೈಹಿಕ ತೊಂದರೆಯಾಗಲೀ ಹೆಂಗಸು ಅನುಭವಿಸಬೇಕು. ಮಹಿಳೆ ಹೆಚ್ಚಿಗೆ ಮಕ್ಕಳನ್ನು ಇಷ್ಟಪಡುವುದಿಲ್ಲ. ಸಮಾಜದಲ್ಲಿ ಮಹಿಳೆಗೆ ಹೆಚ್ಚು ವಿದ್ಯಾಭ್ಯಾಸ ಕೊಟ್ಟರೆ ತಾನೇ ತಾನಾಗಿ ಕುಟುಂಬದಲ್ಲಿ ಕಡಿಮೆ ಮಕ್ಕಳಿರಬೇಕೆಂದು ನಡೆಯಲು ಸಹಾಯವಾಗುತ್ತದೆ.

ಧ್ವನಿ ೨ : ನಮ್ಮ ದೇಶದ ದೊಡ್ಡ ಸಮಸ್ಯೆ ಎಂದರೆ ಗಂಡನಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟಿರುವುದು. ಅದರಲ್ಲೂ ಗಂಡು ಮಕ್ಕಳಿಗೆ ಹೆಚ್ಚು ಬೆಲೆ ಕೊಟ್ಟಿರುವುದು. ಆದ್ದರಿಂದ ಮಹಿಳೆ ಹೆಚ್ಚಿಗೆ ಮಕ್ಕಳನ್ನು ಪಡೆಯುವಲ್ಲಿ ಒತ್ತಡ ಹೆಚ್ಚಾಗಿದೆ. ಗಂಡು ಆಗದಾಗ ಗಂಡಾಗಲೇಬೇಕೆಂದು ಮಕ್ಕಳ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಗಂಡು-ಹೆಣ್ಣು ಎಲ್ಲಾ ಒಂದೇ ಎಂಬ ಮನೋಭಾವ ಬೆಳೆಯಬೇಕು.

ಧ್ವನಿ ೩ : ಕುಟುಂಬ ಯೋಜನೆ ೨೧ನೇ ಶತಮಾನದ ಸಮಸ್ಯೆಯೇನಲ್ಲ. ೨೦ನೇ ಶತಮಾನದಲ್ಲೇ ಈ ಕುಟುಂಬ ಯೋಜನಾ ಚಳವಳಿಗೆ ಭದ್ರ ಬುನಾದಿಯನ್ನು ಹಾಕಿದೆ. ಇದನ್ನು ಸರ್ಕಾರ ಹಾಗೂ ಸಾರ್ವಜನಿಕರು ಗಮನಕ್ಕೆ ತೆಗೆದುಕೊಳ್ಳಬೇಕು. ೨೦೦೦-೨೦೨೦ನೇ ಇಸವಿಗೆ ಈ ಕುಟುಂಬ ಯೋಜನೆಯನ್ನು ಯಶಸ್ವಿ ಮಾಡಬೇಕು. ಅಂದರೆ ೨೦ ವರ್ಷಗಳಲ್ಲಿ ಮಕ್ಕಳಾಗುವುದನ್ನು ತಡೆಗಟ್ಟುವುದು. ಕುಟುಂಬ ಯೋಜನಾ ವಿಧಾನಗಳನ್ನು ಅನುಸರಿಸುವುದರಿಂದ ವಲಸೆ ಹೋಗುವುದನ್ನು ತಡೆಯಲು ಉದ್ಯೋಗ ನೀಡುವಲ್ಲಿ ತೊಂದರೆ ತಪ್ಪಿಸಲು ಕುಟುಂಬ ಯೋಜನೆಯ ಬಗೆಗೆ ಅತ್ಯಂತ ಗಮನವಹಿಸಬೇಕು.

ಧ್ವನಿ ೧ : ೨೦೦೧ನೇ ಇಸವಿಗೆ ಬಹಳ ಮುಖ್ಯವಾದ ಸಮಸ್ಯೆ ಎಂದರೆ ಉದ್ಯೋಗವು. ಎರಡನೆಯದೆಂದರೆ ಹಳ್ಳಿಯಿಂದ ಪಟ್ಟಣ ಪ್ರದೇಶಗಳಿಗೆ ಜನರು ವಲಸೆ ಹೋಗುವುದು. ಇದರಿಂದ ಹಳ್ಳಿಗಳಿಗೂ ತೊಂದರೆಯಾಗುತ್ತದೆ. ಇದಕ್ಕೆ ಕಾರಣ ಕುಟುಂಬದ ಹಿರಿಯರು. ೧೯೮೧ರ ಜನಗಣತಿಯ ಪ್ರಕಾರ ಪಟ್ಟಿಗೆ ಕುಟುಂಬಗಳು ವಲಸೆ ಬರಲು ಪ್ರಮುಖವಾದ ಕಾರಣ ಬಡತನ, ಹಳ್ಳಿಗಳಲ್ಲಿ ಉದ್ಯೋಗಗಳ ಸೌಲಭ್ಯ ಇಲ್ಲದಿರುವುದು. ಅಂದ ಮಾತ್ರಕ್ಕೆ ಪಟ್ಟಣಕ್ಕ ಹೋದ ಕೂಡಲೇ ಕೆಲಸ ಸಿಕ್ಕುತ್ತದೆ ಎಂಬುದೇನಿಲ್ಲ. ಯಾವುದೋ ಒಂದು ಕೆಲಸದಲ್ಲಿ ತೊಡಗಿ ಜೀವನ ಮಾಡಬಹುದು ಎಂಬುದು ಆ ಜನರ ನಂಬಿಕೆ.

ಧ್ವನಿ ೨ : ನಮ್ಮ ಅಭಿವೃದ್ಧಿ ಕಾರ್ಯಗಳೂ ಕೂಡ ಬದಲಾಗಬೇಕು. ಪ್ರತಿಯೊಬ್ಬ ಮಂತ್ರಿಯೂ ಈ ಜನಸಂಖ್ಯಾ ಬೆಳವಣಿಗೆ ತಡೆಯಲು ಏನು ಮಾಡಬೇಕೆಂಬುದನ್ನು ಸ್ವಲ್ಪ ವಿವೇಚಿಸಬೇಕು.

ಧ್ವನಿ ೩ : ಆರೋಗ್ಯದ ವಿಚಾರದಲ್ಲಿ ನಾವು ಮಾಡಬೇಕಾದುದು ಬೇಕಾದಷ್ಟಿದೆ. ತಾಯಿ ಮತ್ತು ಮಕ್ಕಳ ಆರೋಗ್ಯ ಕಾರ್ಯಕ್ರಮ ಬಹಳ ಮುಖ್ಯವಾದುದು. ಇದನ್ನು ನಾವು ಅಭಿವೃದ್ಧಿಗೊಳಿಸಬೇಕು. ಆ ಸೇವೆಯನ್ನು ಮುಂದುವರಿಸಿಕೊಂಡು ಹೋಗಬೇಕು. ಇದರಲ್ಲಿ ತಾಯಿಯ ಪಾತ್ರ ಮುಖ್ಯ. ಆಕೆಗೆ ವಿದ್ಯಾಭ್ಯಾಸ ಅವಶ್ಯಕ, ಸುರಕ್ಷಿತ ನೀರನ್ನು ಉಪಯೋಗಿಸಬೇಕು. ಇದು ತಾಯಿ ಮಕ್ಕಳ ಆರೋಗ್ಯದ ಕಾರ್ಯಕ್ರಮಕ್ಕೇ ಸೇರುತ್ತದೆ. ಆದ್ದರಿಂದ ಇದರ ಬಗೆಗೆ ಬಹಳ ಗಮನವಹಿಸಬೇಕು.

ಧ್ವನಿ ೧ : ಕರ್ನಾಟಕದಲ್ಲಿ ಹಸಿರು ಪತ್ರ ವಿತರಣೆಯಾಗುತ್ತಿದೆ. ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆಗೆ ಒಳಗಾದವರಿಗೆ ಇದರ ಬಗೆಗೆ ಮೈಸೂರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳಾದ ಡಾ|| ಕೆ. ಪುಟ್ಟಸ್ವಾಮಿಯವರು ಏನು ಹೇಳುತ್ತಾರೆ ಕೇಳಿ -

(ಧ್ವನಿ ಮುದ್ರಣ)

ಧ್ವನಿ ೨ : ಕುಟುಂಬ ಯೋಜನೆ ಎಂದರೆ ಬರೆ ಜನನ ನಿಯಂತ್ರಣವಲ್ಲ. ಅದು ಒಂದು ಹೊಸ ಪ್ರಪಂಚದ ಸೃಷ್ಟಿ. ಇದಕ್ಕೆ ಒಂದು ಹೊಸ ಮೌಲ್ಯವಿದೆ ಸಂಬಂಧವಿದೆ. ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಮಾನವೀಯ ಮೌಲ್ಯಗಳ ಮೇಲೆ ನಿಂತಿದೆ. ಜನಸಂಖ್ಯಾ ವಿಶ್ಲೇಷಣಕಾರರು ಬಡತನ ಮತ್ತು ಜನಸಂಖ್ಯಾ ಸ್ಫೋಟಕ್ಕೂ ಸಂಬಂಧ ಕಲ್ಪಿಸಿದ್ದಾರೆ.

ಧ್ವನಿ ೧ : ೨೦೦೧ನೇ ಇಸವಿಯ ಹೊತ್ತಿಗೆ ಈ ಪಟ್ಟಣ ಪ್ರದೇಶಗಳಿಗೆ ವಲಸೆ ಹೋಗುವ ಸಮಸ್ಯೆ ಮತ್ತಷ್ಟು ಹೆಚ್ಚುತ್ತದೆ. ಹಳ್ಳಿಗಳಿಂದ ಪಟ್ಟಣಗಳಿಗೆ ಜನರು ಹೆಚ್ಚು ಹೆಚ್ಚು ಬರುತ್ತಾರೆ. ಕಳೆದ ದಶಕದಲ್ಲಿ ನಗರದ ಬೆಳವಣಿಗೆ ಶೇಕಡಾ ೪೬ರಷ್ಟು ಇತ್ತು. ಮುಂದೆ ಉದ್ಯೋಗಕ್ಕಾಗಿ ಬಹಳ ಪೈಪೋಟಿ ಇರುತ್ತದೆ. ಮತ, ಭಾಷೆ, ಜಾತಿ, ಜನಾಂಗಗಳಲ್ಲಿ ಕೆಲಸ ಕಾದಿರಿಸುವುದು ಎಲ್ಲಾ ಉದ್ಭವಿಸುತ್ತವೆ.

ಧ್ವನಿ ೨ : ಈ ಜನಸಂಖ್ಯಾ ಸಮಸ್ಯೆ ಜೋರಾಗಿ ಓಡುವ ರೈಲಿನಂತಿದೆ. ಕುಟುಂಬ ಯೋಜನೆಯ ಸಂದೇಶವನ್ನು ಜನಗಳಿಗೆ ಆರೋಗ್ಯದ ಚೌಕಟ್ಟಿನಲ್ಲಿ ತಿಳಿಯ ಹೇಳಬೇಕು.

ಧ್ವನಿ ೩ : ಇನ್ನು ೧೦ ವರ್ಷಗಳೊಳಗೆ ತಾಂತ್ರಿಕವಾಗಿ ಮುಂದುವರಿದು ಕೈಗಾರಿಕಾ ಉತ್ಪತ್ತಿಯನ್ನು ಹೆಚ್ಚಿಸಿ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಉಪಯೋಗಕ್ಕೆ ಬರುವಂತೆ ಮಾಡಬೇಕು. ಕ್ರಿ.ಶ. ೨೦೦೦ನೇ ಇಸವಿಯ ಹೊತ್ತಿಗೆ ಈ ತಾಂತ್ರಿಕತೆ ಮುಂದುವರಿಯಲು ಸಾಧ್ಯವಿದೆ. ಇದನ್ನು ನಾವು ತಲುಪಬೇಕಾಗಿದೆ.

ಧ್ವನಿ ೧ : ಇದು ಆರೋಗ್ಯದ ಕಡೆಗೆ ಗಮನವಹಿಸಿ ಪರಿಣಾಮಕಾರಿಯಾಗಿ ಮಾಡಿದರೆ ಒಳ್ಳೆಯದು. ನಮ್ಮ ಜೀವನಕ್ಕೆ ಬೇಕಾದ ಎಲ್ಲಾ ಅವಶ್ಯಕತೆಗಳೇ ಬೇರೆ, ಸರ್ಕಾರ ನಡೆಸುವುದೇ ಬೇರೆ.

ಧ್ವನಿ ೨ : ಒಂದು ಸಮೀಕ್ಷೆಯ ಪ್ರಕಾರ ಭಾರತದಲ್ಲಿ ಜನಸಂಖ್ಯಾ ಸಾಂದ್ರತೆಯ ಜೊತೆಯಲ್ಲಿ ಬಡತನದ ಮಟ್ಟವೂ ಹೆಚ್ಚಿದೆ.

ಧ್ವನಿ ೨ : ಸುತ್ತಮುತ್ತಣ ವಾತಾವರಣದಲ್ಲಿನ ಬೆಳೆದ ಭೂಮಿ, ನದಿ, ಅರಣ್ಯ, ಕರಾವಳಿ, ಅನೇಕ ಇದ್ದು, ಇವು ಸಮಾಜಕ್ಕೆ ಹೆಚ್ಚಿನ ಉಪಯೋಗಕ್ಕೆ ಬರುತ್ತವೆ. ಇದನ್ನು ನಾಶಮಾಡುತ್ತಾ ಬಂದರೆ ೧೦೦-೨೦೦ ದಶಲಕ್ಷ ಜನರು ಇದರ ನಾಶದಿಂದ ತೊಂದರೆಗೊಳಪಡಬೇಕಾಗುತ್ತದೆ.

ಧ್ವನಿ ೧ : ಉದಾಹರಣೆಗೆ ಕಾಡಿನ ಪ್ರಶ್ನೆಯನ್ನೇ ತೆಗೆದುಕೊಳ್ಳೋಣ. ಜನಸಂಖ್ಯೆಯಲ್ಲಿ ಶೇಕಡಾ ೭ರಷ್ಟನ್ನು ಪರಿಶಿಷ್ಟ ಜನಾಂಗವೆಂದು ಹೇಳುವುದುಂಟು. ಇದರ ಮೂಲಭೂತ ಅವಶ್ಯಕವೇ ಕಾಡು. ಅರಣ್ಯದ ಮೇಲ್ವಿಚಾರಕರ ಮೊದಲ

ಕರ್ತವ್ಯವೆಂದರೆ ಈ ಕಾಡಿನಲ್ಲಿರುವ ಜನರು ಹುಟ್ಟಿ ಬೆಳೆಯುವ ಸ್ಥಳವೆಂದು ಭಾವಿಸಬೇಕು. ಈ ಕಾಡಿನಿಂದ ಬರುವ ಸಾಧನೋಪಾಯಗಳಿಂದ ಕಾಗದ ಕೈಗಾರಿಕೆ ಉಪಯೋಗಿಸಲು ಬರುತ್ತದೆ. ನಗರ ಪ್ರದೇಶಗಳ ಜನರಿಗೆ ಬೇಕಾದ ಅವಶ್ಯಕತೆಗಳು ಹಲವಾರು. ಅಲ್ಲದೆ ಕಾಡಿನ ಜನರ ಸಾಮಾಜಿಕ ಜೀವನಕ್ಕೂ ತೊಂದರೆ ಮಾಡಿದಂತಾಗುತ್ತದೆ. ಹುಲ್ಲುಗಾವಲು ಪ್ರದೇಶಗಳೂ ಹಾಗೇ. ಪ್ರತಿಯೊಬ್ಬರೂ ತಮಗೆ ಬೇಕಾದ ಮೂಲಭೂತ ಅವಶ್ಯಕತೆಗಳನ್ನು ತಮ್ಮ ಸುತ್ತಮುತ್ತಣ ವಾತಾವರಣದಿಂದ ಪಡೆಯುತ್ತಾರೆ. ಇದು ಕಡಿಮೆ ಆದರೆ ಜೀವನ ದುಸ್ಸಾಧ್ಯವಾಗುತ್ತದೆ. ಈ ವಿನಾಶದಿಂದ ಮಹಿಳೆಯರಿಗೆ ತೊಂದರೆಯಾಗುತ್ತದೆ. ಆಗ ಬಾಲ ಕಾರ್ಮಿಕರ ಸಮಸ್ಯೆ ಉದ್ಭವಿಸುತ್ತದೆ. ಕುಟುಂಬವು ಹೆಚ್ಚು ಹೆಚ್ಚು ಸೌದೆ, ನೀರು, ಮುಂತಾವ ವಸ್ತುಗಳನ್ನು ಮಕ್ಕಳಿಂದ ತರಿಸಿ ದೊಡ್ಡವರು ಸಂಪಾದಿಸಲು ತೊಡಗುತ್ತಾರೆ. ಆದ್ದರಿಂದ ಈ ಬಾಲಕರು ಮನೆಗೆ ಬೇಕಾದ ಅವಶ್ಯಕ ವಸ್ತುಗಳನ್ನು ಸಂಗ್ರಹಿಸಲು ಕಾರಣರಾಗುತ್ತಾರೆ.

ಧ್ವನಿ ೨ : ಎಷ್ಟೋ ಜನರು ಮೈಲಿ ಮೈಲಿಗಟ್ಟಲೆ ಹೋಗಿ ಸೌದೆಯನ್ನು ತರುತ್ತಾರೆ. ಮಕ್ಕಳು ಈ ಕೆಲಸ ಮಾಡುವಾಗ ಶಾಲೆ ಇದ್ದರೂ ಓದಲು ಹೋಗುವುದಿಲ್ಲ. ಆಫ್ರಿಕಾದ ಸ್ವಹಾಲಿಯನ್ ಜನಾಂಗದ ಹೆಚ್ಚಿನ ಗುಂಪುಗಳು ಹುಲ್ಲು ಮತ್ತು ಸೌದೆಗಾಗಿ ಹೆಚ್ಚಿನ ಭಾಗ ಪ್ರವಾಸ ಕೈಗೊಳ್ಳುವುದನ್ನು ಕಾಣಬಹುದು.

ಧ್ವನಿ ೩ : ಸಾಂಗ್ಲಿಯಲ್ಲಿನ ಬ್ರಾಹ್ಮಣ ಕೃಷಿಕರು ಒಂದು ತೀವ್ರ ಚಳವಳಿಯನ್ನು ಆರಂಭಿಸಿ ಪರಿಶಿಷ್ಟ ಜಾತಿ ಕುಟುಂಬಕ್ಕೆ ಅರ್ಧದಿಂದ ಮುಕ್ಕಾಲು ಎಕರೆ ಭೂಮಿಯನ್ನು ಕೊಟ್ಟು, ಅದರಿಂದ ಬರುವ ಆದಾಯದಿಂದ ಅವರ ಕಾಲ ಮೇಲೆ ಅವರೇ ನಿಲ್ಲುವಂತೆ ಮಾಡಿ, ಹಳ್ಳಿಯ ಆರ್ಥಿಕ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಉತ್ತರ ಚಂದೀಘರ್‌ನಲ್ಲಿ ಇದೇ ರೀತಿಯ 'ಕುವಂಜಾರಿ' ಯೋಜನೆ ಎಂಬುದಿದೆ.

ಧ್ವನಿ ೧ : ೩೦,೦೦೦ದಿಂದ ೧೦,೦೦೦ ಜನಸಂಖ್ಯೆ ಇರುವ ಹಳ್ಳಿಯ ಪ್ರದೇಶಗಳಲ್ಲಿ ಯಶಸ್ವಿಯಾಗಿ ಹುಟ್ಟಿನ ದರ ಕಡಿಮೆಯಾಗಿದೆ. ಆರೋಗ್ಯ ಗುರಿಯನ್ನು ೨೦೦೦ನೇ ಇಸವಿಗೆ ಸಾಧಿಸಬಹುದು. ಇದು ಒಂದು ದೇಶದಲ್ಲಲ್ಲ, ದೇಶದ ಎಲ್ಲಾ ಭಾಗಗಳಲ್ಲೂ ಆಗಬೇಕು. ಆಗಲೇ ಸರ್ವಜನರ ಸುಖ. 'ಸರ್ವೇ ಜನಾಃ ಸುಖಿನೋ ಭವಂತು' ಎಂಬ ಮಂತ್ರದ ಸಾರ್ಥಕತೆ ಅಲ್ಲವೇ?

*

## ತಾಯಿ - ಮಗು

(ಮಗುವು ಕಿಲಕಿಲನೆ ನಗುವ ಶಬ್ದ)

ಧ್ವನಿ ೧ : ಇಂಥ ನಗು ಯಾರಿಗೆ ಬೇಡ? ಈ ಅರಳುವ ಪ್ರತಿಭೆಗಳ ಮುದ್ದಾಟ ಯಾರಿಗೆ ಬೇಡ?

(ಮಗುವಿನ ಅಳುವಿನ ಶಬ್ದ)

ಧ್ವನಿ ೨ : ಹೆತ್ತ ತಾಯಿ ಒಂದು ನಿಮಿಷ ಅಳಲೂ ಬಿಡುವುದಿಲ್ಲ. ಎತ್ತಿ ಮುದ್ದಾಡಿ, ಹಾಲುಣಿಸಿ, ಸಮಾಧಾನಿಸಿ ಅದು ಗೆಲುವಾಗಿರುವಂತೆ ಮಾಡುತ್ತಾಳೆ. ಅಳು ಮೋರೆ ಯಾವ ತಂದೆ - ತಾಯಿಗೂ ಬೇಕಿಲ್ಲ. ಗೆಲುವಾಗಿ ಹಾಲುಗಲ್ಲದ ಮಗುವು ನಗುನಗುತ್ತಿರಲೆಂದು ಸಮಾಧಾನಿಸುತ್ತಾಳೆ. ಜೋಗುಳ ಹಾಡಿ ನಿದ್ದೆಯನ್ನು ಮಾಡಿಸುತ್ತಾಳೆ. 'ಅಳುವ ಮಗುವಿನ ತುಟಿಯು ಹವಳದಂಗ' ಎಂದು ಜನಪದ ಕವಿ ಬಣ್ಣಿಸಿದ್ದಾನೆ. ಹೆತ್ತ ತಾಯಿಗೆ ಮಗು ನಕ್ಕರೂ ಚೆಂದ, ಅತ್ತರೂ ಚೆಂದ. ಮಕ್ಕಳಿಲ್ಲದ ಮನೆ ಶೋಭಿಸದು, ಹೂವಿಲ್ಲದ ತೋಟ ಶೋಭಿಸದು. ಹೆಣ್ಣು ತಾಯಿಯಾದಾಗಲೇ ಸಂತೋಷ. ಬಂಜೆಯ ಬಾಳನ್ನು ಎಂದಿಗೂ ಬಯಸಳು. ನಗುವ, ಅಳುವ, ಆಡುವ, ನಗಿಸುವ ಮಗುವನ್ನು ಕಂಡರೆ ಯಾರಿಗೆ ಬೇಡ? ತಾಯಿಗೆ ಮಗುವಿನ ಮೇಲೆ ವಾತ್ಸಲ್ಯ. ಅದೇ ತಾಯಿ ಮಗುವಿನ ಸಂಬಂಧ ಎಂಬ ನುಡಿಗಟ್ಟಾಗಿದೆ. ಅದಕ್ಕೇ 'ನಗು ಮಗು ನಗು ಬಿದ್ದು ಎದ್ದು ನಗು' ಎಂದು ಕವಿ ಕವಿತೆ ಕಟ್ಟಿ ಹಾಡಿದ್ದಾನೆ. ನಕ್ಕರೆ ಸಕ್ಕರೆ, ಅರಳಿದ ಗುಲಾಬಿ ಎಂದೆಲ್ಲಾ ಹೇಳುವುದುಂಟು.

ಧ್ವನಿ ೩ : ಮನುಷ್ಯನಿಗೆ ಎಷ್ಟೇ ಚಿಂತೆ ಇರಲಿ ನಗುವ ಮಗುವಿನ ಮುಖವನ್ನು ಕಂಡ ಕೂಡಲೇ ಎಲ್ಲವೂ ಮರೆತು ಆನಂದ ಉಂಟಾಗುತ್ತದೆ. ಕಷ್ಟಗಳೆಲ್ಲಾ ನಿಮಿಷ ಮಾತ್ರದಲ್ಲೇ ಮಾಯವಾಗುತ್ತವೆ. ಸಂಸಾರ ತಾಪತ್ರಯಗಳಲ್ಲಿ ಮುಳುಗಿದ್ದಾಗ ಅಶಕ್ತ, ಅಪೌಷ್ಟಿಕ, ಸದಾ ಅಳುವ, ನರಪೇತಲ ಮಕ್ಕಳನ್ನು ಕಂಡಾಗ ಮತ್ತಷ್ಟು ಬೇಸರವಾಗುವುದು ಸಹಜ. ಅಂಥ ಮಕ್ಕಳನ್ನು ಹಡೆಯುವುದಕ್ಕಿಂತ ಹಾಗೆಯೇ ಇರುವುದು ಲೇಸು ಎಂದು ಹೇಳಿರುವ ಅನುಭವಿಗಳು ಎಷ್ಟೋ!

ಧ್ವನಿ ೧ : ಮಕ್ಕಳು ದೇಶದ ಭಾವಿ ಪ್ರಜೆಗಳು. ದೇಶವನ್ನು ಕಟ್ಟುವವರು ದೇಶದ ಭವಿಷ್ಯವನ್ನು ರೂಪಿಸುವವರು. ಆದರೆ ಅವರನ್ನು ರೂಪಿಸುವವರು ತಂದೆ-ತಾಯಿ, ಸರಕಾರ, ಸಮಾಜ. ಮಕ್ಕಳ ಬಗೆಗೆ ತಾಯಿಯ ಹೊಟ್ಟೆಯಲ್ಲಿ ಭ್ರೂಣಾವಸ್ಥೆಯಿಂದ ಆರಂಭವಾಗಿ, ಬೆಳೆದು ದೊಡ್ಡವರಾಗುವವರೆಗೆ ಜವಾಬ್ದಾರಿ ಬಹಳ ದೊಡ್ಡದು. ತಾಯಿಯ ಹೊಟ್ಟೆಯಿಂದ ಮಗುವಿನ ಆರೈಕೆ ಆರಂಭವಾಗುತ್ತದೆ. ಆದುದರಿಂದಲೇ ಈ ವರ್ಷ ವಿಶ್ವ ಆರೋಗ್ಯ ದಿನಾಚರಣೆಯ ವಿಷಯ 'ಮಕ್ಕಳ ಆರೋಗ್ಯ ನಾಳಿನ ಭಾಗ್ಯ' ಎಂಬುದನ್ನು ಆರಿಸಿಕೊಳ್ಳಲಾಗಿದೆ.

ಧ್ವನಿ ೨ : ನಿಜ 'ಮಕ್ಕಳು ಮಾನವ ಲೋಕದ ಸುಂದರ ಪುಷ್ಪಗಳು' ಎಂದು ರಾಷ್ಟ್ರಕವಿ ರವೀಂದ್ರನಾಥ ಠಾಗೂರ್ ಅವರು ಹೇಳಿರುವುದು. 'ಮಕ್ಕಳು ದೇಶದ ಭವಿಷ್ಯಕ್ಕೆ ಕಾರಣರು, ಕುಟುಂಬ - ವಿಶ್ವಕ್ಕೆ ಆಸ್ತಿಯೂ ಕೂಡ'. ಅವರ ಯೋಗಕ್ಷೇಮವನ್ನು ನೋಡಿಕೊಂಡರೆ ದೇಶದ ಸಾಮಾಜಿಕ, ಆರ್ಥಿಕ ಅಭಿವೃದ್ಧಿಯನ್ನು ಬಲಗೊಳಿಸಿದಂತೆ.

ಧ್ವನಿ ೩ : ಹೆಣ್ಣು ತಾಯಿಯಾಗುತ್ತಿದ್ದಂತೆಯೇ ಜವಾಬ್ದಾರಿಯು ಹೆಚ್ಚುತ್ತದೆ. ಅದಕ್ಕೆ ಆಕೆ ಆರೋಗ್ಯವಾಗಿರುವುದು ಅವಶ್ಯ. ಗರ್ಭಿಣಿಯಾದಾಗ ಎಷ್ಟು ಎಚ್ಚರಿಕೆ ವಹಿಸುತ್ತಿದ್ದಳೋ ಅಷ್ಟನ್ನೇ ಬಾಣಂತಿಯಾದಾಗಲೂ ವಹಿಸಬೇಕಾಗುತ್ತದೆ.

ಧ್ವನಿ ೧ : ಈಗಲೂ ಹಳ್ಳಿಗಳಲ್ಲಿ ಹೆರಿಗೆ ಮನೆಯಲ್ಲೇ ಆಗುತ್ತದೆ. ಹೆರಿಗೆ ಆದಮೇಲೆ ಆಕೆಯನ್ನು ಕತ್ತಲೆ ಕೋಣೆಯಲ್ಲಿರಿಸಿ ಕಟ್ಟುನಿಟ್ಟಾದ ಆಹಾರ ಕೊಡುವರು. ಮೆಣಸಿನ ಸಾರು, ತುಪ್ಪ ಅಷ್ಟೇ, ಅಥವಾ ಉಪ್ಪು, ಮೆಣಸುಪುಡಿ ಹಾಕಿ ತುಪ್ಪ ಕಲಸಿಕೊಂಡು ಊಟ ಮಾಡುವಂತೆ ಮಾಡುತ್ತಾರೆ. ಹೆಚ್ಚಿಗೆ ನೀರನ್ನು ಕೊಡುವುದಿಲ್ಲ. ಇವೆಲ್ಲಾ ಬರೇ ಅಂಧಶ್ರದ್ಧೆಯೇ ಹೊರತು ವೈಜ್ಞಾನಿಕ ದೃಷ್ಟಿಯಿಂದ ಸರಿಯಲ್ಲ. ಗಾಳಿ ಬೆಳಕಿರುವ ಕೋಣೆಯಲ್ಲಿ ಇರಿಸಬೇಕು. ಪೌಷ್ಟಿಕ ಆಹಾರಗಳನ್ನು ನೀಡಬೇಕು. ಹೆಚ್ಚು ಹೆಚ್ಚು ನೀರನ್ನು ಕೊಡುವುದರಿಂದ ಮೈ ಬರುತ್ತದೆಂಬುದೆಲ್ಲಾ ಸುಳ್ಳು. ಆದುದರಿಂದ ಕಟ್ಟುನಿಟ್ಟಾಗಿ ಕೊಡುವ ಆಹಾರ ನಿಲ್ಲಿಸಿ ಪೌಷ್ಟಿಕ ಆಹಾರ, ಕಾಯಿಸಿ ಆರಿಸಿದ ನೀರನ್ನು ಸಾಕಷ್ಟು ಕೊಡಬಹುದು. ಹೆರಿಗೆಯ ನಂತರವೂ ಬಾಣಂತಿ ಸೇವೆಯು ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ದೊರೆಯುವುದು. ಆರೋಗ್ಯ ಕಾರ್ಯಕರ್ತರು ಮನೆ-ಮನೆಗೆ ಬಂದು ಸಲಹೆ ಸೂಚನೆಗಳನ್ನು ಕೊಡುತ್ತಾರೆ. ಕಬ್ಬಿಣ ಹಾಗೂ ಫೋಲಿಕ್ ಆಸಿಡ್ ಅಂಶದ ಮಾತ್ರೆಗಳನ್ನು ರಕ್ತಹೀನತೆ ಇದ್ದವರಿಗೆ ನೀಡುವರು. ಯಾವ ರೀತಿಯಾದ ಆಹಾರ ಪದಾರ್ಥಗಳನ್ನು

ತಿನ್ನಬೇಕು ಎಂಬುದನ್ನು ತಿಳಿಸುತ್ತಾರೆ. ಸೊಪ್ಪು, ಹಸಿರು ತರಕಾರಿ, ಹಾಲು ಮುಂತಾದುವುಗಳನ್ನು ವಿಶೇಷವಾಗಿ ಬಾಣಂತಿಗೆ ಕೊಡಬೇಕು.

ಧ್ವನಿ ೨ : ಹೆರಿಗೆಯಾದ ಮೇಲೆ ತಾಯಿ ಮಗುವಿಗೆ ಹಾಲುಣಿಸುವುದು ಮತ್ತೊಂದು ಮುಖ್ಯ ಕೆಲಸ. ಎಷ್ಟೋ ಜನ ಮೊದಲು ಸಕ್ಕರೆ ನೀರು ಅಥವಾ ಸ್ವಲ್ಪ ಜೇನುತುಪ್ಪ ಸೇರಿಸಿದ ನೀರನ್ನು ಕುಡಿಸುವರು. ಹೀಗೆ ಮಾಡಬಾರದು. ಕೆಲವರು ಮೊದಲು ಬರುವಂಥ ಗಟ್ಟಿಯಾದ ಹಾಲನ್ನು ತೆಗೆದು ಸುರಿಯುವವರೂ ಉಂಟು. ಆ ರೀತಿಯಾಗಿ ಮಾಡಿರುವ ಮಹಿಳೆಯೊಬ್ಬರನ್ನು ಸಂದರ್ಶಿಸಿದಾಗ (ಶ್ರೀಮತಿ ಮಲ್ಲಿಕಾ).

(ಧ್ವನಿ ಮುದ್ರಣ)

ಧ್ವನಿ ೩ : ಉದ್ಯೋಗಸ್ಥ ಮಹಿಳೆ ಮಗುವಿಗೆ ಸಂಪೂರ್ಣ ಹಾಲು ಕೊಡುವುದು ಎಷ್ಟೊಂದು ತೊಡಕೆಂಬುದನ್ನು ಶ್ರೀಮತಿ ನಿರ್ಮಲಾ ಸುಂದರಂ ಅವರು ನುಡಿದರು.

ಧ್ವನಿ ೧ : ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯಲ್ಲಿ ಮಕ್ಕಳ ತಜ್ಞರಾಗಿರುವ ಡಾ|| ಎಂ. ಜಯರಾಂ ಅವರು ಏನು ಹೇಳುತ್ತಾರೆ ಕೇಳಿ-

(ಧ್ವನಿ ಮುದ್ರಣ)

ಧ್ವನಿ ೨ : ಮಗುವಿಗೆ ತಾಯಿ ಹಾಲನ್ನು ಹುಟ್ಟಿದಂದಿನಿಂದ ೨ ವರ್ಷಗಳವರೆಗೂ ಕೊಡುವುದುಂಟು. ಮಗುವಿಗೆ ೪ ತಿಂಗಳಿಂದ ೬ ತಿಂಗಳವರೆಗೆ ಇದು ಬಹಳ ಪೌಷ್ಟಿಕ ಆಹಾರವಾಗಿರುತ್ತದೆ.

ತಾಯಿಯ ಹಾಲಿನ ಅವಶ್ಯಕತೆಯ ಬಗೆಗೆ ತಾಯಿಯೊಬ್ಬರನ್ನು ಸಂದರ್ಶಿಸಿದಾಗ (ಶ್ರೀಮತಿ ನಾಗರತ್ನ)

(ಧ್ವನಿ ಮುದ್ರಣ)

ಧ್ವನಿ ೩ : ಹಾಲನ್ನು ಕೊಡುವ ತಾಯಿಯಲ್ಲಿ ಗರ್ಭಧಾರಣೆ ಮುಂದೂಡುವಿಕೆ ವೈಜ್ಞಾನಿಕವಾಗಿ ಸಾಬೀತಾಗಿರುವ ವಿಷಯ. ಆದುದರಿಂದ ಮಕ್ಕಳನ್ನ ಹಡೆಯುವಲ್ಲಿ ಅಂತರವಿಡಲು ತಾಯಿ ಮಗುವಿಗೆ ಹಾಲನ್ನು ಕೊಡುತ್ತಿರಬೇಕು.

ಇದರ ಬಗೆಗೆ ಬೆಂಗಳೂರು ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ ಮಕ್ಕಳ ವಿಭಾಗದ ಪ್ರೊಫೆಸರ್ ಡಾ|| ಎಂ. ಜಯರಾಂ ಅವರು ಹೀಗೆ ನುಡಿದಿದ್ದಾರೆ -

(ಧ್ವನಿ ಮುದ್ರಣ)

ಧ್ವನಿ ೧ : ತಾಯಿಯ ಹಾಲು ಅಮೃತಕ್ಕೆ ಸಮಾನ. ಅದರಲ್ಲಿ ರೋಗ ನಿರೋಧಕ ಶಕ್ತಿ ಇರುತ್ತದೆ. ಮಗುವಿಗೆ ಬರುವ ಹಲವು ರೋಗಗಳನ್ನು ತಡೆಗಟ್ಟುತ್ತದೆ. ಅದರ ಸರ್ವಾಂಗೀಣ ಬೆಳವಣಿಗೆಗೆ ತಾಯಿಯ ಹಾಲು ಅತ್ಯವಶ್ಯಕ. ಭೌತಿಕ, ಮಾನಸಿಕವಾಗಿ ಮಗು ಬೆಳೆಯಲು ತಾಯಿಯು ಮಗುವಿಗೆ ತನ್ನ ಹಾಲನ್ನು ಕೊಟ್ಟಷ್ಟೂ ಒಳ್ಳೆಯದು.

ಮಗುವಿಗೆ ೪ ತಿಂಗಳಿಂದ ೬ ತಿಂಗಳವರೆಗೆ ತಾಯಿಯ ಎದೆ ಹಾಲು ಬಹಳ ಪೌಷ್ಟಿಕವಾದುದು. ತಾಯಿಯ ಹಿತದೃಷ್ಟಿಯಿಂದ ಮಗುವಿನ ಆರೋಗ್ಯದ ದೃಷ್ಟಿಯಿಂದ ಮಕ್ಕಳನ್ನು ಹಡೆಯುವಲ್ಲಿ ಅಂತರವಿಡಲು ಈ ಎದೆ ಹಾಲನ್ನು ಮಕ್ಕಳಿಗೆ ಕೊಡುವುದು ಒಳಿತು. ನಮ್ಮ ಭಾರತದಲ್ಲಿ ಅದರಲ್ಲೂ ಹಳ್ಳಿಗರು ಮಕ್ಕಳಿಗೆ ಬಹಳ ಹೆಚ್ಚಿಗೆ ದಿನಗಳು ಹಾಲನ್ನು ಕೊಡುವುದನ್ನು ನಾವು ಕಾಣುತ್ತೇವೆ. ಆದರೆ ವಿದ್ಯಾವಂತರು, ಸಾಮಾಜಿಕ - ಆರ್ಥಿಕ ಮಟ್ಟದಲ್ಲಿ ಉತ್ತಮವಾದ ಗುಂಪಿನವರು ಎದೆ ಹಾಲು ಕೊಡುವುದನ್ನು ಬೇಗ ನಿಲ್ಲಿಸುವುದನ್ನು ಕಾಣಬಹುದು. ತಮ್ಮ ಭೌತ ದೇಹ ಕೆಡುತ್ತದೆ ಎಂಬ ದೃಷ್ಟಿಯಿಂದ ಹಾಲನ್ನು ಬೇಗ ನಿಲ್ಲಿಸುತ್ತಾರೆ. ಆದರೆ ಎದೆ ಮೊದಲ ರೀತಿಯಲ್ಲಿ ಇರಬೇಕಾದರೆ, ತಾಯಿ ಮಗುವಿಗೆ ಹಾಲನ್ನು ಕೊಡುತ್ತಲೇ ಬರಬೇಕು. ಮಗು ಭೌತಿಕವಾಗಿ ಹಾಗೂ ಬೌದ್ಧಿಕವಾಗಿ ಚೆನ್ನಾಗಿರಬೇಕಾದರೆ ಎದೆ ಹಾಲನ್ನು ತಾಯಿ ಕೊಡಲೇಬೇಕು.

ಎದೆ ಹಾಲು ಎಲ್ಲಾ ರೀತಿಯಲ್ಲೂ ಒಳ್ಳೆಯ ಸರಿಯಾದ ಆಹಾರ. ಎದೆ ಹಾಲು ಬಹಳ ಸುಲಭವಾಗಿ ಜೀರ್ಣವಾಗುವುದು, ಆರೋಗ್ಯಕ್ಕೆ ಬಹಳ ಒಳ್ಳೆಯದು. ಮಗು ಸೋಂಕು ರೋಗಗಳಿಗೆ ತುತ್ತಾಗದೆ, ಖಾಯಿಲೆ ಬೀಳದೆ ಇರಲು ಅತ್ಯವಶ್ಯಕ. ತಾಯಿ ಎದೆ ಹಾಲನ್ನು ಕೊಡುತ್ತಿದ್ದರೆ ಮಗುವಿನ ಒಳಿತಿಗೆ ನೀಡುತ್ತಿದ್ದೇನೆ ಎಂಬ ತೃಪ್ತಿ ಆಕೆಗೆ ಇರುತ್ತದೆ. ಎದೆ ಹಾಲಿನಲ್ಲಿ ರೋಗ ನಿರೋಧಕ ಶಕ್ತಿ ಇದ್ದು ಅವು ರೋಗಾಣುಗಳನ್ನು ಎದುರಿಸುತ್ತವೆ. ಮಗು ಹುಟ್ಟಿದಂದಿನಿಂದ ೬ ತಿಂಗಳವರೆಗೆ ಈ ಎದೆ ಹಾಲು ಮಗುವಿಗೆ ಸಂಪೂರ್ಣ ಆಹಾರವಾಗಿರುತ್ತದೆ.

ಹೆರಿಗೆಯಾದ ಮೊದಲನೆ ದಿನದ ಹಾಲು ಹಳದಿ ಬಣ್ಣವಿರುತ್ತದೆ. ಇದರಲ್ಲಿ 'ಕೊಲೊಸ್ಟ್ರಮ್' ಇರುತ್ತದೆ. ಇದಕ್ಕೆ ರಕ್ತದಲ್ಲಿರುವ ಕೆಲವು ರೋಗಾಣುಗಳೊಡನೆ ಕಾದಾಡುವ ಶಕ್ತಿ ಇರುತ್ತದೆ ಹಾಗೂ ರೋಗ ನಿರೋಧಕ ಶಕ್ತಿಯನ್ನು ಹೊಂದಿರುತ್ತದೆ. ಆದ್ದರಿಂದ ಅದನ್ನು ಮಗುವಿಗೆ ಕುಡಿಸುವುದು ಒಳಿತು. ಕೆಲವರು ಅದನ್ನು ಕರೆದು ಚೆಲ್ಲುತ್ತಾರೆ. ಹಾಗೆ ಮಾಡಬಾರದು.

ಆರು ತಿಂಗಳಾದ ಮೇಲೆ ಮಗುವಿಗೆ ಪೂರಕ ಆಹಾರ ಬೇಕಾಗುತ್ತದೆ. ದ್ರವ ರೂಪದಲ್ಲಿ ಕೊಡಬೇಕಾಗುತ್ತದೆ. ಎದೆ ಹಾಲು ಪ್ರತಿದಿನ ೨೪ ಘಂಟೆಗಳು ಒಳ್ಳೆಯ, ಬಿಸಿಯಾದ, ಶುದ್ಧವಾಗಿ ಇರುವ ಆಹಾರ. ತಾಯಿಯ ಎದೆಯಲ್ಲಿ ಸರಿಯಾದ ಉಷ್ಣದಲ್ಲಿ

ಈ ಹಾಲು ತಯಾರಾಗುತ್ತದೆ. ತಾಯಿಯ ಹಾಲು ಪೌಷ್ಟಿಕವಾದ ಆಹಾರ, ಜೀವಸತ್ವಗಳು, ಮಗು ಬೆಳೆಯಲು ಪೋಷಕಾಂಶಗಳಾಗಿವೆ. ರಾತ್ರಿ ಕುರುಡು, ವಿಷಮಶೀತ ಜ್ವರ, ಪೋಲಿಯೋ, ಗಂಟಲು ಬೇನೆ, ಕಿವಿಯ ಸೋಂಕು, ಫ್ಲೂ, ಶ್ವಾಸಕೋಶಗಳು ಊದಿಕೊಳ್ಳುವುದು ಮೊದಲಾದ ರೋಗಗಳು ಎದೆ ಹಾಲು ಕುಡಿಸುವ ಮಕ್ಕಳಲ್ಲಿ ಬಹಳ ಕಡಿಮೆ ಇರುತ್ತದೆ. ತಾಯಿಯ ಎದೆ ಹಾಲಿಗೆ ಒಂದು ವರ್ಷದ ತನಕ ಈ ರೋಗ ನಿರೋಧಕ ಶಕ್ತಿ ಇರುತ್ತದೆ.

ತಾಯಿ ಸರಿಯಾದ ಪೌಷ್ಟಿಕ ಆಹಾರವನ್ನು ಸೇವಿಸಿದರೆ ಮಗುವಿಗೆ ಸಾಕಷ್ಟು ಹಾಲು ಒದಗುತ್ತದೆ. ಶಿಕ್ಷಣ ಮಟ್ಟ ಕಡಿಮೆ ಇರುವವರು ಹೆಚ್ಚು ಕಾಲ ಎದೆಹಾಲು ಕುಡಿಸುತ್ತಾರೆ. ಆದರೆ ವಿದ್ಯಾವಂತರು, ಕೆಲಸಕ್ಕೆ ಹೋಗುವವರು ಶೀಸೆಗೆ ಹಾಲು ತುಂಬಿ ಕುಡಿಸುವುದುಂಟು. ಎದೆಹಾಲು ಕುಡಿದು ಬೆಳೆದ ಮಕ್ಕಳಷ್ಟು ಆರೋಗ್ಯವಾಗಿ, ಎದೆ ಹಾಲು ಕುಡಿಯದ ಮಕ್ಕಳು ಇರುವುದಿಲ್ಲ. ತಾಯಿ ಮಗುವಿಗೆ ಹಾಲು ಕೊಡುವುದಕ್ಕೆ ಮೊದಲು ಹಣ್ಣಿನ ರಸ, ನೀರು ಅಥವಾ ಹಾಲನ್ನು ಕುಡಿಸಬೇಕು. ಮಗು ಹುಟ್ಟಿದಾಗಿನಿಂದ ಹತ್ತು ಘಂಟೆಯವರೆಗೆ ಹಾಲನ್ನು ಕುಡಿಸಬೇಕು. ಆಗತಾನೇ ಹುಟ್ಟಿದ ಮಗುವಿಗೆ ೪ರಿಂದ ೫ ನಿಮಿಷಗಳಿಗೊಮ್ಮೆ ಹಾಲನ್ನು ಕುಡಿಸಬೇಕು. ಇದನ್ನು ಹೀಗೆ ಹಂತ ಹಂತವಾಗಿ ಹೆಚ್ಚಿಸಬೇಕು. ಅನಂತರ ಮಗುವಿಗೆ ೭ ನಿಮಿಷಗಳು, ಆಮೇಲೆ ೧೦ ನಿಮಿಷಗಳಿಗೊಮ್ಮೆ ಪ್ರತಿ ಬಾರಿ ಮೊಲೆಯನ್ನು ತಾಯಿ ಕುಡಿಸಬೇಕು. ತಾಯಿಯ ಮೊಲೆಯನ್ನು ಮಗು ಕುಡಿಯುವಾಗ ಗಾಳಿಯನ್ನು ಸಹ ಮಗು ನುಂಗುತ್ತದೆ. ಇದು ಮಗುವಿಗೆ ನೋವನ್ನು ತರುತ್ತದೆ. ಆದ್ದರಿಂದ ಹಾಲು ಕುಡಿಸಿದ ಮೇಲೆ ಎದೆಯ ಮೇಲೆ ಮಲಗಿಸಿ ಬೆನ್ನನ್ನು ತಿಕ್ಕಿದರೆ ಆ ಗಾಳಿ ಹೊರಬರುತ್ತದೆ. ನಾಲ್ಕು ತಿಂಗಳ ತನಕ ತಾಯಿ ಮಗುವಿಗೆ ಎದೆ ಹಾಲನ್ನು ಕೊಡಬೇಕೆಂಬ ಒತ್ತು ಕೊಡಬೇಕು, ಆಮೇಲೆ ಮಗು ಬೆಳೆದಂತೆ ಹೆಚ್ಚಿಗೆ ಪೌಷ್ಟಿಕ ಆಹಾರವನ್ನು ಅಂದರೆ ಪೂರಕ ಆಹಾರವನ್ನು ಒದಗಿಸಬೇಕು. ಇದರಿಂದ ಮಗು ಬೆಳೆಯಲು ಅನುಕೂಲ ಆಗುತ್ತದೆ. ಮಗು ಬೆಳೆಯುತ್ತಾ ಹೋದಂತೆ ಎದೆ ಹಾಲಿನ ಜೋತೆಗೆ ಗೋದಿ, ಅಕ್ಕಿ, ರಾಗಿ ಪದಾರ್ಥಗಳ ಆಹಾರವನ್ನು ಸ್ವಲ್ಪ ಸ್ವಲ್ಪವಾಗಿ ಕೊಡುತ್ತಾ ಬರಬೇಕು.

ಹುಟ್ಟಿದಂದಿನಿಂದ ಮಗುವು ಕನಿಷ್ಠ ಪಕ್ಷ ೬ ತಿಂಗಳು ಆಗುವವರೆಗೆ ಎದೆ ಹಾಲನ್ನು ಪ್ರಮುಖವಾಗಿಯೂ, ಶೀಸೆಯ ಹಾಲನ್ನು ಪೂರಕ ಆಹಾರವಾಗಿಯೂ ನೀಡುವುದು ಬಹಳ ಮುಖ್ಯ.

ಧ್ವನಿ ೨ : ಸಮಾಜದಲ್ಲಿ ಮಗುವಿನ ಪಾತ್ರ ಹಿರಿದು. ಅದರ ಆರೋಗ್ಯಕ್ಕೆ ಆದ್ಯತೆಯನ್ನು ನೀಡಬೇಕು. ದೇಶದ, ವಿಶ್ವದ ಭವಿಷ್ಯವೇ ಆರೋಗ್ಯವಂತ, ದೃಢಕಾಯರಾದ ಮಕ್ಕಳ ಮೇಲೆ ನಿಂತಿದೆ. ಮಕ್ಕಳ ಯೋಗಕ್ಷೇಮ ಮನೆ, ಶಾಲೆ, ಸಮಾಜ, ಸರ್ಕಾರಗಳ ಮೇಲೆ ಬಿದ್ದಿವೆ. ಆದ್ದರಿಂದ ಅವರನ್ನು ಭೌತಿಕವಾಗಿ, ಬೌದ್ಧಿಕವಾಗಿ ಕಾಪಾಡಬೇಕು.

ಧ್ವನಿ ೩ : ತಾಯಿಯ ಹೊಟ್ಟೆಯಲ್ಲಿ ಬೆಳೆಯುವಾಗಲೇ ಮಗುವಿನ ಆರೋಗ್ಯವನ್ನು ಗಮನಿಸಬೇಕು. ರಕ್ತದ ಕೊರತೆ ಇದ್ದರೆ ತಾಯಿ ಕಬ್ಬಿಣ, ಫೋಲಿಕ್ ಆಸಿಡ್ ಮಾತ್ರೆಗಳನ್ನು ತೆಗೆದುಕೊಂಡು ವೈದ್ಯರ ಸಲಹೆ ಸೂಚನೆಗಳನ್ನು ಪಡೆಯಬೇಕು. ಗರ್ಭಿಣಿಯಾಗಿದ್ದಾಗಲೇ ತಾಯಿ ಮಕ್ಕಳಿಗೆ ಮುಂದೆ ಧನುರ್ವಾಯು ಬಾರದಿರಲೆಂದು ೭ ಮತ್ತು ೯ ತಿಂಗಳಿಗೆ ಎರಡು ಸಾರಿ ಧನುರ್ವಾಯು ಚುಚ್ಚುಮದ್ದುಗಳನ್ನು ಕೊಡಿಸಬೇಕು.

ಧ್ವನಿ ೧ : ಮಗು ಹುಟ್ಟಿದ ಮೇಲೆ ಮಕ್ಕಳಿಗೆ ರೋಗಗಳು ಬಾರದಂತೆ ಮುನ್ನೆಚ್ಚರಿಕೆಯ ಕ್ರಮವಾಗಿ ಚುಚ್ಚುಮದ್ದುಗಳನ್ನು ಕೊಡಿಸಬೇಕು. ಕ್ಷಯ, ಧನುರ್ವಾಯು, ಗಂಟಲು ಬೇನೆ, ನಾಯಿಕೆಮ್ಮು, ಪೋಲಿಯೋ ಮುಂತಾದ ರೋಗಗಳು ಬಾರದಿರಲೆಂದು ಬಿ.ಸಿ.ಜಿ., ಡಿ.ಪಿ.ಟಿ., ಪೋಲಿಯೋ ಚುಚ್ಚು ಮದ್ದುಗಳನ್ನು ಕೊಡಿಸಬೇಕು.

ಧ್ವನಿ ೨ : ಚುಚ್ಚು ಮದ್ದು, ಸಾಮಾನ್ಯ ಖಾಯಿಲೆಗಳ ಶಿಬಿರಗಳನ್ನು ಆಗಾಗ ಸರಕಾರ, ಸ್ವಯಂ ಸೇವಾ ಸಂಸ್ಥೆಗಳು, ಸಾರ್ವಜನಿಕ ಸೇವಾ ಸಂಸ್ಥೆಗಳು, ಯುವಜನ ಕೇಂದ್ರಗಳು, ಮಹಿಳಾ ಮಂಡಳಿಗಳು ಏರ್ಪಡಿಸುತ್ತವೆ. ಇವು ತಂದೆ - ತಾಯಿಯರಿಗೆ ಮಾರ್ಗದರ್ಶನವಾಗುತ್ತದೆ. ಇದಲ್ಲದೆ ಆರೋಗ್ಯ ಇಲಾಖೆಯ ಕ್ಷೇತ್ರ ಕಾರ್ಯಕರ್ತರು, ವೈದ್ಯರು, ಯುವಕ ಮುಂದಾಳುಗಳು, ಸಮಾಜದ ಪ್ರಮುಖರು, ಗ್ರಾಮೀಣ ಮುಖಂಡರು, ಸಾರ್ವಜನಿಕ ಸೇವಾಕರ್ತರು, ಜನತೆಯ ಪ್ರತಿನಿಧಿಗಳು, ಕಾರ್ಮಿಕ ಮುಖಂಡರು ಹೀಗೆ ಎಲ್ಲಾ ಸಂಘ ಸಂಸ್ಥೆಗಳು, ಜನರು ಕೆಲಸ ಮಾಡಿದರೆ ಮಕ್ಕಳ ಆರೋಗ್ಯ ಚೆನ್ನಾಗುವುದರಲ್ಲಿ ಯಾವ ಅನುಮಾನವೂ ಇಲ್ಲ. ಆಗಲೇ ಅವರು ರಾಷ್ಟ್ರದ ಆಸ್ತಿಯಾಗುತ್ತಾರೆ.

ಧ್ವನಿ ೪ : ಮಕ್ಕಳಲ್ಲಿ ವಾಂತಿ, ಭೇದಿ ಅಶುದ್ಧ ನೀರಿನಿಂದ ಬರುತ್ತದೆ. ಆದುದರಿಂದ ಕಾಯಿಸಿ ಆರಿಸಿದ ನೀರನ್ನು ಕುಡಿಸಬೇಕು. ಅತಿಯಾಗಿ ಭೇದಿಯಾಗುತ್ತಿದ್ದರೆ, ಕೂಡಲೇ ವೈದ್ಯರಿಗೆ ತೋರಿಸಬೇಕು. ಇಲ್ಲದಿದ್ದರೆ ಸಕ್ಕರೆ, ಉಪ್ಪು ಮತ್ತು ನೀರನ್ನು ಸರಿಯಾದ ಪ್ರಮಾಣದಲ್ಲಿ ಬೆರಸಿ, ಮಿಶ್ರಣವನ್ನು ಕುಡಿಸಬೇಕು. ಇಲ್ಲದಿದ್ದರೆ ನೀರಿನ ಅಂಶವನ್ನು ದೇಹ ಕಳೆದುಕೊಂಡು ಮಗುವು ಮರಣಕ್ಕೆ ತುತ್ತಾಗುವುದು. ಆದುದರಿಂದ ಮಕ್ಕಳಿಗೆ ಶುದ್ಧವಾದ ನೀರು ಅತ್ಯವಶ್ಯಕ ಮತ್ತು ಕ್ಷೇಮಕರ. UNISEF ಹೇಳಿಕೆಯ ಪ್ರಕಾರ ಇವರಿಂದ ಐದು ಮಿಲಿಯನ್ ಮಕ್ಕಳ ಮರಣವನ್ನು ತಪ್ಪಿಸಲಾಗುತ್ತಿದೆ.

ಮಕ್ಕಳ ಕ್ಷೇಮಕ್ಕೆ ಶುದ್ಧವಾದ ನೀರು ಅತ್ಯವಶ್ಯಕ. ಅಶುದ್ಧ ನೀರಿಂದಲೇ ಅನೇಕ ರೋಗಗಳು ಬರುತ್ತವೆ. ಭೇದಿ, ವಾಂತಿ, ಕಾಮಾಲೆ ಮುಂತಾದ ರೋಗಗಳಿಗೆ ತುತ್ತಾಗುತ್ತಾರೆ. ಮಕ್ಕಳ ಆರೋಗ್ಯ, ನೈರ್ಮಲ್ಯ, ವಿದ್ಯಾಭ್ಯಾಸ,

ಬೆಳವಣಿಗೆಗೆ ಸರಿಯಾದ ವಾತಾವರಣವನ್ನು ಕಲ್ಪಿಸಬೇಕಾದುದು ತಂದೆ, ಸಮಾಜ, ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಸರಕಾರದ ಕರ್ತವ್ಯ.

ಧ್ವನಿ ೧ : ಮಕ್ಕಳು ಮುಗ್ಧರು. ಹೇಳಿದಂತ ಕೇಳುತ್ತಾರೆ. ಆದರೆ ಕೆಲವೊಮ್ಮೆ ಕೇಳದಿರುವುದೂ ಉಂಟು. ಕೆಲವು ವೇಳೆ ಹಠ ಮಾಡುವ ಸ್ವಭಾವ ಅವರದು. ಅವರನ್ನು ಒಳ್ಳೆಯ ಮಾತಿನಿಂದ ದಾರಿಗೆ ತರಬೇಕು. ತಂದೆ-ತಾಯಿಯರು ಪ್ರೀತಿ ವಾತ್ಸಲ್ಯದ ಗಣಿಯಾಗಿರಬೇಕು. ಮಕ್ಕಳ ಭವಿಷ್ಯವನ್ನು ರೂಪಿಸುವಲ್ಲಿ ತಂದೆ-ತಾಯಿ, ಉಪಾಧ್ಯಾಯರ ಪಾತ್ರ ಬಹಳ ಮುಖ್ಯ. ಇವರ ಮಾತುಗಳನ್ನು ಮಕ್ಕಳು ಕೇಳುತ್ತಾರೆ. ಆದುದರಿಂದ ಇವರು ಮಕ್ಕಳನ್ನು ಒಳ್ಳೆಯ ಮಾರ್ಗಕ್ಕೆ ತರಬೇಕು. ಮಕ್ಕಳು ಒಳ್ಳೆಯ ವಾತಾವರಣದಲ್ಲಿ ಬೆಳೆಯುವುದು ಬಹಳ ಮುಖ್ಯ. ಅದಕ್ಕೇ ಹೇಳುವುದು 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ?' ಎಂದು. ಮಕ್ಕಳಾಗಿದ್ದಾಗ ದೊಡ್ಡವರು ಹೇಗೆ ಹೇಳುತ್ತಾರೆಯೋ ಹಾಗೆಯೇ ಕೇಳುತ್ತಾರೆ. ತಾಯಿ, ಮನೆಯಲ್ಲಿ ಮೊದಲ ಗುರು. ಅದಕ್ಕೇ ಟಿ.ಪಿ. ಕೈಲಾಸಂ ಅವರು 'ಮಕ್ಕಳ ಸ್ಕೂಲು ಮನೇಲಲ್ವೇ' ಎಂದು ಹೇಳಿದುದು. ಮುಂದೆ ಎರಡನೆಯ ಗುರು ಶಾಲಾ ಉಪಾಧ್ಯಾಯರು. ಮಕ್ಕಳು ಒಳ್ಳೆಯವರ ಸಹವಾಸ ಮಾಡುವಂತೆ ಭೋದಿಸಬೇಕು. ಇಲ್ಲದಿದ್ದರೆ ಕೆಟ್ಟ ಚಾಳಿಗಳು ಬೆಳೆದು ದುಷ್ಟರಾಗಲು ಕಾರಣರಾಗುತ್ತಾರೆ.

ಧ್ವನಿ ೨ : ತಂದೆ - ತಾಯಿಯರು ಮಕ್ಕಳನ್ನು ಚೆನ್ನಾಗಿ ಕಾಪಾಡಬೇಕಾದರೆ ಒಂದೆರಡು ಮಕ್ಕಳಿದ್ದಾಗ ಮಾತ್ರ ಸಾಧ್ಯ. ಜೊತೆಗೆ ತಾಯಿ ವಿದ್ಯಾವಂತೆಯಾಗಿದ್ದರೆ ತುಂಬಾ ಒಳಿತು. ಮಕ್ಕಳು ಹೆಚ್ಚಾಗುತ್ತಾ ಹೋದಂತೆ ಮಕ್ಕಳ ಆರೋಗ್ಯವೂ ಕುಂದುತ್ತದೆ.

ಧ್ವನಿ ೩ : ಮಕ್ಕಳಿಗೆ ಬರೇ ಊಟ - ಪಾಠವೇ ಅಲ್ಲ, ಆಟವೂ ಅಷ್ಟೇ ಮುಖ್ಯ. ಮಕ್ಕಳು ಸರ್ವಾಂಗೀಣವಾಗಿ ಬೆಳೆಯಬೇಕು. ಬೇರೆ ಚಟುವಟಿಕೆ ಕಾರ್ಯಗಳಲ್ಲಿ ಭಾಗವಹಿಸಿ ತಮ್ಮ ಪ್ರತಿಭೆಯನ್ನು ತೋರಿಸುವಂತೆ ಮಾಡಬೇಕು. ಒಂದೊಂದು ಮಗುವಿನಲ್ಲೂ ಒಂದೊಂದು ರೀತಿಯ ಅದ್ಭುತ ಶಕ್ತಿ ಅಡಗಿರುತ್ತದೆ. ಅವುಗಳನ್ನು ಹೊರಗೆಡಹುವ ಕಾರ್ಯ ತಂದೆ - ತಾಯಿ ಹಾಗೂ ಉಪಾಧ್ಯಾಯರದು. ಸಮಾಜಕ್ಕೆ ಬೇಕಾದ ವ್ಯಕ್ತಿಯನ್ನು ಮಾಡುವ ಕೆಲಸ ಉಪಾಧ್ಯಾಯರದು.

ಧ್ವನಿ ೧ : ಮಕ್ಕಳ ಬೆಳವಣಿಗೆ, ಅಭಿವೃದ್ಧಿಯಲ್ಲಿ ಸಮಾಜದ ಪಾತ್ರ ಬೃಹತ್ತಾಗಿದೆ. ಸಮಾಜ ಇವರ ಬಗೆಗೆ ಕಾಳಜಿ ವಹಿಸಿದರೆ ಮುಂದೆ ಅವರೂ ಸಹ ಸಮಾಜದ ಬಗೆಗೆ ಕಾಳಜಿ ವಹಿಸುತ್ತಾ, ಅಭಿಮಾನವಿಡುತ್ತಾರೆ. ದೇಶವನ್ನು ಕಟ್ಟುತ್ತಾರೆ. ಆದುದರಿಂದ ಅವರನ್ನು ವಿವಿಧ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಬೇಕು.

ಧ್ವನಿ ೨ : ಎಷ್ಟೋ ಹಳ್ಳಿ, ಪಟ್ಟಣ ನಗರದ ಕೊಳಚೆ ಪ್ರದೇಶಗಳಲ್ಲಿ ಮಕ್ಕಳು ಪೌಷ್ಟಿಕ ಆಹಾರವಿಲ್ಲದೆ ಸೊರಗುತ್ತಿದ್ದಾರೆ. ಸಮಾಜ ಇವರ ಕ್ಷೇಮವನ್ನು ನೋಡಿಕೊಳ್ಳಬೇಕು. ಸರ್ಕಾರ ಮಕ್ಕಳ ಕ್ಷೇಮಾಭಿವೃದ್ಧಿಗೆ ತಾಯಿ ಮಕ್ಕಳ ಆರೋಗ್ಯ, ಮಕ್ಕಳ ಅಭಿವೃದ್ಧಿ ಯೋಜನೆ, ಶಾಲಾ ಆರೋಗ್ಯ ಯೋಜನೆ, ಪೌಷ್ಟಿಕ ಆಹಾರ ಕಾರ್ಯಕ್ರಮ ಇವುಗಳೆಲ್ಲಾ ಅರ್ಹ ಮಕ್ಕಳಿಗೆ ದೊರೆಯುವಂತೆ ಸರಕಾರದ ಸಿಬ್ಬಂದಿಗಳ ಕರ್ತವ್ಯವಾದರೂ ಸಾರ್ವಜನಿಕರ ಪಾತ್ರ ಇವರಲ್ಲಿ ಬಹಳ ಮುಖ್ಯವಾದುದು.

ಧ್ವನಿ ೩ : ಸರ್ಕಾರ, ಸ್ವಯಂ ಸೇವಾ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು, ಮಹಿಳಾ ಮಂಡಲಿಗಳು ಸಕ್ರಿಯವಾಗಿ ಭಾಗವಹಿಸಬೇಕು. ಮಕ್ಕಳ ಆರೋಗ್ಯ ವಿಷಯವನ್ನು ತಿಳಿಸಲು ವಸ್ತು ಪ್ರದರ್ಶನ, ಚಲನ ಚಿತ್ರ ಪ್ರದರ್ಶನ, ಅನೇಕ ಶೈಕ್ಷಣಿಕ ಹಾಗೂ ಪ್ರಚಾರ ಕಾರ್ಯಗಳನ್ನು ನಡೆಸುತ್ತಿದ್ದಾರೆ. ಆಗಾಗ ಆರೋಗ್ಯ ಹಾಗೂ ಚುಚ್ಚುಮದ್ದಿನ ಸೇವಾ ಶಿಬಿರಗಳು ನಡೆಯುತ್ತಿವೆ. ಅಲ್ಲದೆ ಆರೋಗ್ಯ ಇಲಾಖೆಯ ಕ್ಷೇತ್ರ ಕಾರ್ಯಕರ್ತರು ಹಾಗೂ ವೈದ್ಯರು ಮನೆ ಮನೆಗೆ ಹೋಗಿ ಸೇವೆಯನ್ನು ಸಲ್ಲಿಸುವರು.

ಧ್ವನಿ ೧ : ಮಕ್ಕಳ ಜಗತ್ತೇ ಬೇರೆ. ಅವರು ನಕ್ಕು ನಲಿದರೆ ಸುತ್ತ ಮುತ್ತಣ ಪರಿಸರವೇ ನಕ್ಕು ನಲಿಯುವುದು. ಅದನ್ನು ಬಿಟ್ಟು ಬಾಲ ಕಾರ್ಮಿಕರನ್ನಾಗಿ ಮಾಡುವುದು, ಎಳೆಯ ದೇಹಕ್ಕೆ ನೋವು ಕೊಡುವುದು ಸರಿಯಲ್ಲ. ಅವರು ಚೇತನ ಚಿಲುಮೆಗಳಾಗಿ ಬಾಳಬೇಕು. ಹದಿನೆಂಟು ವರ್ಷಗಳಿಗ ಕೆಳಗಿನ ಮಕ್ಕಳನ್ನು ಬೆಳಗಿನಿಂದ ಸಂಜೆಯವರೆಗೆ ದುಡಿಸುವುದು ಮಾನವೀಯ ಧರ್ಮವಲ್ಲ. ಹೀಗೆ ಮಾಡಿಸುವುದರಿಂದ ದೇಶಕ್ಕೆ ಲಾಭವೇನಿಲ್ಲ. ಅದರಿಂದ ಹಾನಿಯೇ ಹೆಚ್ಚು. ಅವರ ಪ್ರತಿಭೆ ಮೊಟಕಾಗಿ, ಕತ್ತೆಯಂತೆ ದುಡಿಯುವ ವ್ಯಕ್ತಿಗಳಾಗುತ್ತಾರೆ ಅಷ್ಟೇ.

ಧ್ವನಿ ೨ : ಮಕ್ಕಳ ಸರ್ವಾಂಗೀಣ ವಿಕಾಸವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ವಿಶ್ವಸಂಸ್ಥೆ ೧೯೭೯ನೇ ಇಸವಿಯನ್ನು "ಅಂತರ ರಾಷ್ಟ್ರೀಯ ಮಕ್ಕಳ ವರ್ಷ" ಎಂದು ಘೋಷಿಸಿತು. ಆಗ ಅನೇಕ ಕಾರ್ಯಗಳನ್ನು ಹಮ್ಮಿಕೊಂಡಿತು. ಮಕ್ಕಳು ವಾಸ್ತವವಾಗಿ ದೇಶದ ಭವಿಷ್ಯಕ್ಕೆ ಕೀಲಿ ಕೈ ಇದ್ದಂತೆ. ಅವರು ಕುಟುಂಬಕ್ಕೆ ಮಾತ್ರವೇ ಅಲ್ಲ ದೇಶಕ್ಕೇ ಆಸ್ತಿ- ವಿಶ್ವಕ್ಕೇ ಆಸ್ತಿ. ಅವರ ಯೋಗಕ್ಷೇಮ ನೋಡಿಕೊಂಡರೆ ಕುಟುಂಬ, ದೇಶ ಮತ್ತು ವಿಶ್ವದ ಸಾಮಾಜಿಕ, ಆರ್ಥಿಕ, ಅಭಿವೃದ್ಧಿಯನ್ನು ಬಲಗೊಳಿಸಿದಂತೆ.

ಧ್ವನಿ ೩ : ಯಾವುದೇ ಸಮಾಜದ ಅಸ್ತಿತ್ವವಿರುವುದು ಆ ಸಮಾಜದ ಆರೋಗ್ಯವಂತ ಮಕ್ಕಳಲ್ಲಿ ಎನ್ನುವುದನ್ನು ಮರೆಯಬಾರದು. ದೇಶದ ಮತ್ತು ವಿಶ್ವದ

ಭವಿಷ್ಯವೇ ಮಕ್ಕಳು. ಆದುದರಿಂದ ಮಕ್ಕಳ ಯೋಗ್ಯ ಆರೈಕೆ, ಪಾಲನೆ ಮತ್ತು ಪೋಷಣೆಗಳಿಗೆ ನಾವು ಆದ್ಯ ಗಮನ ಕೊಡಬೇಕಾಗುತ್ತದೆ. ಇದಕ್ಕಾಗಿ ಸರ್ಕಾರ, ಖಾಸಗಿ ಎನ್ನದೆ ಎಲ್ಲಾ ಕ್ಷೇತ್ರಗಳಲ್ಲೂ ಪ್ರಾಮಾಣಿಕ ಪ್ರಯತ್ನ ನಡೆಯಬೇಕಾಗುತ್ತದೆ. ಮಕ್ಕಳ ಯೋಗಕ್ಷೇಮದ ಬಗೆಗೆ ಮನೆ, ಶಾಲೆ, ಸಮಾಜ, ಸರಕಾರಗಳ ಪಾತ್ರ ಹಿರಿದು.

ಧ್ವನಿ ೧ : ಮಕ್ಕಳು ಮುಗ್ಧರು, ಏನೂ ಅರಿಯದ ಪಸುಳೆಗಳು, ಅದಕ್ಕೆ ಅವರನ್ನು ದೇವರಿಗೆ ಸಮಾನರು ಎಂದು ಸಂಬೋಧಿಸುವುದೂ ಉಂಟು. ಮಕ್ಕಳೆಂದರೆ ಯಾರಿಗೆ ಆಸೆ ಇಲ್ಲ. 'ಮಕ್ಕಳೇ ಮನೆಗೆ ಮಾಣಿಕ್ಯ' ಎಂಬ ನುಡಿಗಟ್ಟಾಗಿದೆ. ಯಾವ ತಾಯಿಯಾಗಲೀ ಮಕ್ಕಳನ್ನು ಬಯಸುತ್ತಾಳೆಯೇ ಹೊರತು ಬಂಜೆತನವನ್ನು ಬಯಸುವುದಿಲ್ಲ. ಆದರೆ ತಾಯಿ ಮಕ್ಕಳು ಎಷ್ಟು ಬೇಕು ಎಂದು ಯೋಚಿಸುವುದು ಒಳಿತು. ಎರಡು ಮಕ್ಕಳಿದ್ದರೇ ಅವರುಗಳನ್ನು ಸುಖವಾಗಿ ಕಾಪಾಡಬಹುದು. ಮಕ್ಕಳು ಬರೇ ಕಷ್ಟದಲ್ಲಿ ಬೆಳೆಯುವುದಲ್ಲ, ರೋಗದಿಂದ ನರಳುವುದಲ್ಲ, ಸುಖವಾಗಿ ಇರಬೇಕಾದ್ದು, ನಗು ನಗುತ್ತಾ ಇರಬೇಕಾದ್ದು ಅತ್ಯವಶ್ಯಕ. ಮಕ್ಕಳು ನಗು ನಗುತ್ತಿದ್ದರೆ ಅವುಗಳ ಆರೋಗ್ಯಕ್ಕೂ, ತಂದೆ - ತಾಯಿಯರ ಸಮಾಧಾನಕ್ಕೂ ಕಾರಣ. ನಗುವ ಮಗುವು ಮನೆಗೆ ಚೆಂದ. ತಂದೆ - ತಾಯಿಯರಿಗೆ ಚೆಂದ, ದೇಶಕ್ಕೆ ಚೆಂದ ಎಂದಮೇಲೆ ಮಕ್ಕಳು ಸದಾ ನಗುನಗುತ್ತಿರಲಿ. ಮನೆಗೆ ಚೆಲುವಾದ ಗೆಲುವಾದ ಎರಡೆ ಮಕ್ಕಳಿದ್ದು ಅರಳಿದ ಗುಲಾಬಿಯಂತೆ ಶೋಭಿಸಲಿ. ಸೂರ್ಯ ಚಂದ್ರರಂತೆ ಪ್ರಕಾಶಿಸಲಿ. ಮಕ್ಕಳು ಕೀರ್ತಿಯ ಶಿಖರವನ್ನೇರಿ ತಂದೆ- ತಾಯಿಗೆ, ದೇಶಕ್ಕೆ ಹೆಸರು ತರುವಂತಾಗುವುದು ಒಳಿತಲ್ಲವೇ?

*

# ಅದೇನೋ ಗಾದೆ ಹೇಳ್ತಾರಲ್ಲಾ ಹಾಗೆ!

ಧ್ವನಿ ೧ : ಜನರ ನಡೆ - ನುಡಿಗಳನ್ನು ಗಮನಿಸಿದಾಗ ಹಿರಿಯರು ಹಾಸ್ಯವಾಗಿ, ಗಂಭೀರವಾಗಿ, ಸನ್ನಿವೇಶಕ್ಕನುಗುಣವಾಗಿ ತಮ್ಮ ಅನುಭವದ ಮಾತುಗಳನ್ನು ಆಡಿವರು. ಅವೇ ಗಾದೆಗಳಾದುವು. 'ಗಾದೆಗಳು ವೇದಕ್ಕೆ ಸಮ' ಎಂದು ಹೇಳುವುದುಂಟು.

ಧ್ವನಿ ೨ : ಜೀವನದಲ್ಲಿ ಅನೇಕ ಅಂಕು-ಡೊಂಕುಗಳು ಉಂಟಾಗುವುದು ಸಹಜ. ಆಗ ಅವುಗಳನ್ನು ತಿದ್ದುವಲ್ಲಿ ನಮ್ಮ ಹಿರಿಯರು ಅಣಿಯಾಗುತ್ತಾರೆ, ಮಾರ್ಗದರ್ಶನ ನೀಡುತ್ತಾರೆ. ಆ ಸಂದರ್ಭಕ್ಕನುಗುಣವಾಗಿ ಗಾದೆಗಳನ್ನು ಕಟ್ಟಿ ಎಚ್ಚೆತ್ತುವಂತೆ ಮಾಡುತ್ತಾರೆ.

ಧ್ವನಿ ೧ : ಒಂದೊಂದು ಗಾದೆಯೂ ಜೀವನದಲ್ಲಿ ನಡೆದ ರಸಘಟ್ಟಗಳು. ಹಾಸ್ಯ, ಕರುಣೆ, ವ್ಯಂಗ್ಯ, ಗಂಭೀರ ವಿಚಾರಗಳನ್ನೊಳಗೊಂಡ ಗಾದೆ ನಿಜಕ್ಕೂ ಅತ್ಯಂತ ಮಹತ್ವ ಉಳ್ಳದ್ದು. ಗಾದೆಯ ಮಾತು ಬೇಗ ಬಾಯಿಗೆ ಬಾರದಿದ್ದಾಗ, "ಅದೇನೋ ಗಾದೆ ಹೇಳ್ತಾರಲ್ಲಾ ಹಾಗಾಯ್ತು" ಎಂದು ಹೇಳುವುದುಂಟು.

ಧ್ವನಿ ೨ : ಗಾದೆಗಳನ್ನು ನಮ್ಮ ಹಿಂದಿನವರು ಮಾಡಿರುವುದರಿಂದ ಜನಪದ ಸಾಹಿತ್ಯಕ್ಕೆ ಸೇರಿಸಿರುವುದು. ಜನಪದ ಸಾಹಿತ್ಯದಲ್ಲಿ ಇದಕ್ಕೆ ವಿಶೇಷ ಸ್ಥಾನವುಂಟು. ಜೀವನ ಎಷ್ಟು ವೈವಿಧ್ಯಮಯವೋ, ಗಾದೆಯೂ ಅಷ್ಟೇ ವೈವಿಧ್ಯಮಯ. ಗಾದೆಗಳು ದೈನಂದಿನ ಜೀವನದಲ್ಲಿನ ಸಂಭಾಷಣೆಗಳಲ್ಲೂ ಅನೇಕ ಸಂದರ್ಭಗಳಲ್ಲಿ ಬಳಕೆಯಾಗುವ ಸಂಕ್ಷಿಪ್ತವಾದ ವಿವೇಕಯುತವಾದ ಸಂಪ್ರದಾಯದ ಅಭಿವ್ಯಕ್ತಗಳು.

ಧ್ವನಿ ೧ : ಊಟಕ್ಕೆ ಉಪ್ಪಿನಕಾಯಿ ಇದ್ದಂತೆ ಮಾತನಾಡುವಾಗ ಗಾದೆಯ ಮಾತು ರಂಜನೀಯವಾಗುತ್ತದೆ. ಇದು ಜನಸಾಮಾನ್ಯರ ಬದುಕು, ಭಾಷೆಗಳಲ್ಲಿ ಸೇರಿಕೊಂಡು ಬಂದಿದೆ.

ಧ್ವನಿ ೨ : ಸಂಕ್ಷಿಪ್ತತೆ ಗಾದೆಯ ಸ್ವರೂಪವನ್ನು, ವಿವೇಕಪೂರ್ಣತೆ ಗಾದೆಯ ಉಗಮವನ್ನು ಕುರಿತು ಹೇಳುವಂತಾಗಿದೆ. ಇಪ್ಪತ್ತು ಪದಗಳಿಗಿಂತ ಜಾಸ್ತಿಯಾದರೆ ಅದು ಗಾದೆಯಾಗುವುದಿಲ್ಲ. ಒಂದು ಅಥವಾ ಎರಡು

ವಾಕ್ಯಗಳಿರಬೇಕು. 'ಹಿತಮಿತ ಮೃದುವಚನಂ' ಎಂಬುದು ಇವಕ್ಕೆ ಅನ್ವಯವಾಗುತ್ತದೆ.

ಧ್ವನಿ ೧ : ಕೆಲವು ವೇಳೆ ಸುದೀರ್ಘವಲ್ಲದ, ಗಂಭೀರವಾಗಿ, ಸೂಚ್ಯವಾಗಿ ಅನುಭವವನ್ನು ವ್ಯಕ್ತಪಡಿಸುವ ವಾಕ್ಯವೇ ಗಾದೆಯಾಗುವುದು. ಇವು ಸದಾ ಜ್ಞಾಪಕದಲ್ಲಿ ಉಳಿಯುವುವು. ನಿತ್ಯಜೀವನದ ಸತ್ಯ ಅನುಭವಗಳಿಂದ ಹೊರ ಹೊಮ್ಮುವ ಕಿಡಿಗಳು ಸುಖ- ದುಃಖ, ನೋವು - ನಲಿವುಗಳನ್ನು ಪರಿಚಯ ಮಾಡಿಕೊಡುತ್ತವೆ.

ಧ್ವನಿ ೨ : 'ತಲೆತಲಾಂತರದಿಂದ ಶೇಖರವಾಗಿರುವ ಅನುಭವವು ಯಾವನಾದರೂ ಒಬ್ಬನ ಬಾಯಲ್ಲಿ ಮಾತಾಗಿ ಹೊರಬೀಳುವುದು. ಜನತೆಯು ಆ ಸೊಬಗಿಗೆ ಮಾರುಹೋಗಿ ಸಂಗ್ರಹಿಸಿ ಸಿದ್ಧವಾದ ಈ ಮೋಹಕ ವಾಕ್ಯವೇ ಗಾದೆ' ಎನ್ನುತ್ತಾರೆ ದೇವುಡು ನರಸಿಂಹ ಶಾಸ್ತ್ರಿಗಳು.

ಧ್ವನಿ ೧ : ಗಾದೆಗಳಲ್ಲಿ ಪ್ರಾಸ, ಅನುಪ್ರಾಸಗಳಿಂದ ಕೂಡಿದ ಲಯ ಕಂಡು ಬರುತ್ತದೆ. ಇವು ಪದ್ಯದ ಪಾದಗಳಲ್ಲಿ ಆಗಾಗ್ಗೆ ಕಂಡುಬರುತ್ತದೆ. ಇದಕ್ಕೆ ಉದಾಹರಣೆ ಅಂದ್ರೆ-

"ಮಾತು ಮನೆ ಕೆಡಿಸ್ತು, ತುತ್ತು ತೂಕ ಕೆಡಿಸ್ತು"

ಧ್ವನಿ ೨ : ಪ್ರಾಸ, ಲಯಗಳು ಅನುಭವ ತುಂಬುವ ಕವಿತೆ. ಗಾದೆಗಳನ್ನು ಜ್ಞಾಪಕ ಇಟ್ಟುಕೊಳ್ಳಲು ಲಯ ನೆರವಾಗುತ್ತದೆ.

ಧ್ವನಿ ೧ : ಗಾದೆಗಳನ್ನು ಸಾಮಾನ್ಯವಾಗಿ ವಯಸ್ಸಾದವರೇ ಹೆಚ್ಚಾಗಿ ಹೇಳುವುದನ್ನು ನಾವು ಗಮನಿಸಬಹುದು. ಅದರಲ್ಲೂ ಮಹಿಳೆಯರು ವಿಶೇಷವಾಗಿ ಮಾತು ಆಡುತ್ತಿದ್ದಾಗಲೇ ಅದರ ಸುರಿಮಳೆಯನ್ನು ಸುರಿಸುತ್ತಾರೆ. ಇದು ಯಾವಾಗ ಹುಟ್ಟಿತು ಎಂದು ಹೇಳುವುದು ಸಾಧ್ಯವಾಗುವುದಿಲ್ಲ. ಇದು ಮಾನವನ ಹುಟ್ಟಿನಿಂದ, ಮಾತು ಕಲಿತಂದಿನಿಂದಲೇ ಆರಂಭವಾಗಿರಬೇಕು. ಗಾದೆಯು ಮಾನವನ ವಿವೇಕವನ್ನು ಪ್ರತಿಬಿಂಬಿಸುವುದು.

ಧ್ವನಿ ೨ : ತಲೆಮಾರಿನ ಅನುಭವಗಳನ್ನು ಹಿಂದಿನವರು ಗಾದೆಯ ರೂಪದಲ್ಲಿ ವ್ಯಕ್ತಪಡಿಸಿದರು. ಆದರೆ ಬರೇ ಅನುಭವದ ಮಾತು ಗಾದೆಯಾಗಲಾರದು. ಅದೊಂದು ಹೇಳಿಕೆಯಾಗುತ್ತದೆ ಅಷ್ಟೇ. ಆದರೆ ಅದು ಪ್ರಚಾರ ಪಡೆದು ತನ್ನದೇ ಸಂಪ್ರದಾಯವನ್ನು ಗಳಿಸಿಕೊಂಡು ನಂತರ ಗಾದೆಯಾಗುತ್ತದೆ. ವಿವೇಕಪೂರ್ಣ ವ್ಯಕ್ತಿಯಿಂದ ಬಂದ ಮಾತು ಬಾಯಿಗೆ ಬಿದ್ದು ಗಾದೆಯಾಗುತ್ತದೆ.

ಧ್ವನಿ ೧ : ಗಾದೆಯ ಮತ್ತೊಂದು ಲಕ್ಷಣ ತೀಕ್ಷ್ಣತೆ. ವಿಷಯವನ್ನು ನೇರವಾಗಿ ಹೇಳುವುದು, ಗೂಢಾರ್ಥವನ್ನು ದ್ಯೋತಕವಾಗಿ ಹೇಳುವುದು. ಇದರಲ್ಲಿ ರೂಪಕಗಳು, ಉಪಮೆಗಳು, ಸ್ವಭಾವೋಕ್ತಿಗಳು ಕಂಡುಬರುತ್ತವೆ. 'ಗಾದೆಯಿಲ್ಲದ ಭಾಷೆಯಿಲ್ಲ, ಭಾಷೆಯಿಲ್ಲದ ಜನಾಂಗವಿಲ್ಲ' ಎಂಬುದೊಂದು ಸೂಕ್ತಿ.

ಧ್ವನಿ ೨ : ಬೇಂದ್ರೆಯವರು ಗಾದೆಯನ್ನು 'ಸಾವಿರ ಮಾತಿನ ಸರದಾರ' ಎಂದು ಕರೆದಿದ್ದಾರೆ. 'ಕೆಲವೇ ಶಬ್ದಗಳಲ್ಲಿ ಹೆಚ್ಚು ವಿಚಾರವನ್ನು ಒಳಗೊಂಡಿರುವುದೇ ಗಾದೆ' ಎಂದು ಥಾಮಸ್ ಫುಲ್ಲರ್‌ನ ಹೇಳಿಕೆ. ಡಬ್ಲ್ಯು.ವೈ. ಬೆನ್‌ಹಾಮ್ 'ಗಾದೆಗಳೆಂದರೆ ಸಂಪ್ರದಾಯದಲ್ಲಿರುವ ಒಂದು ಸಂಕ್ಷಿಪ್ತ, ನೀತಿಪರ ಹೇಳಿಕೆ' ಎಂದಿದ್ದಾರೆ.

ಧ್ವನಿ ೧ : ಒಂದು 'ಗಾದೆ' ಹೇಗೆ ಉತ್ಪತ್ತಿ ಆಗಬಹುದು ಅನ್ನೋದನ್ನ ಈಗೊಂದು ಗಾದೆ ಕಥೆಯಲ್ಲಿ ನೋಡಬಹುದು -

ಮನೆಯಲ್ಲಿ ಯಾರೇ ಇರಬಹುದು. ಗಂಡ ಹೆಂಡತಿಗೆ ಆಗಾಗ ಹೇಳ್ತಿರ್ತಾರೆ, 'ಸಾಕು ಮುಚ್ಚೇ ಬಾಯಿ' ಅಂತ. 'ಎಷ್ಟೋ ತಲೆಹರಟೆ ನಿಂದು?' ಅಂತ. ಮಾತು, ಮಾತು, ಯಾವಾಗ್ಲೂ ನನ್ನಾಕೇದು ಮಾತು. ಬರೇ ಬಾಯ್ಬಡ್ಕಿ, ಎಷ್ಟೋ ಸಾರಿ ನಾನು ಮಾತಾಡದೇ ಇದ್ದಾಗ್ಲೂ ಆಕೆಯೇ ಏನೇನೋ ಗೊಣಗೊಣ ಅಂದ್ಬಿಟ್ಟು ಸುಮ್ನಾಗೋವರ್ಗೂ ನಾನು ಸುಮ್ನೇ ಇರ್ತೀನಿ. "ಲೇ ಮಾತಾಡ್‌ಬೇಡ್ವೇ ಅಕ್ಕಪಕ್ಕದವರು ಏನಾದ್ರೂ ತಿಳ್ಕೊಂಡಾರು" ಅಂತೀನಿ.

"ತಿಳ್ಕೊಳ್ಳಿ ಬಿಡಿ" ಅಂತಾಳೆ ಅವಳು.

"ಏನಾದ್ರೂ ಪೋಲೀಸ್ ಸ್ಟೇಷನ್‌ಗೆ ಕಂಪ್ಲೆಂಟ್ ಬರ್ದು ಕೊಟ್ಟಾರು!"

"ಕೊಡ್ಲಿ ಬಿಡಿ."

"ನಾಳೆ ಇಬ್ರೂ ಹೋಗಬೇಕಾಗುತ್ತೆ"

"ಯಾಕೆ?"

"ಉತ್ತರ ಹೇಳೋಕೆ."

"ಗಲಾಟೆ ಮಾಡದೇ ಸಂಸಾರ ಮಾಡೋಕಾಗುತ್ತಾ? ಅವರೆಲ್ಲಾ ಬಾಯ್ಗೆ ಹೊಲಿಗೆ ಹಾಕಿಕೊಂಡಿದ್ದಾರಾ?"

"ಇಲ್ಲ ಕಣೆ ಅವರು ಮೆತ್ತಗೆ ಮಾತಾಡ್ತಾರೆ."

"ಹಾಗಾದ್ರೆ ನಾನು ಮೌನವ್ರತ ಆಚರಿಸಲೇ?"

"ಏನೂ ಬೇಡ. ಅಕ್ಕಪಕ್ಕದವರು ಆಡಿಕೊಳ್ಳದೇ ಇದ್ರೆ ಸಾಕು."

"ನಾನು ಕಲಿತದ್ದು ನನಗೆ, ಅವರು ಕಲಿತದ್ದು ಅವರ್ಗ."

"ಕಲಿತದ್ದು ಬಿಡು ಕಲಕೇತಿ ಅಂದ್ರೆ ಊರು ಬಿಟ್ರೂ ಬಿಡೋಲ್ಲ ಅಂದ್ಲಂತೆ."

"ನಾನೇನು ಮಾಡಲಿ? ಸಾಕು ಸುಮ್ನಿರಿ, ಹೇಗಾದ್ರೂ ಒಂದು ಮಾತಾಡ್ತೀರಿ".

"ನೀನು ಇಷ್ಟು ಮಾತಾಡಕ್ಕೆ ಶುರು ಮಾಡಿದ್ದಕ್ಕೆ ಮಾತಾಡ್‌ಬೇಕು ಅಲ್ವೇ? ಮಾತೇ ಮುತ್ತು ಮಾತೇ ಮೃತ್ಯು ಅನ್ನೋದು ಗೊತ್ತಿಲ್ವೇ?

"ಗೊತ್ತಿದೆ."

"ಮಾತಾಡಬೇಕು, ಆಡದೇ ಹೋದ್ರೆ ಮೂಗ್ರೂ ಅಂತಾರೆ. ಮಾತಾಡಿದ್ರೆ ಘನ, ಗಂಭೀರ, ತೂಕದ ಮಾತಾಡಬೇಕು."

"ಅಷ್ಟಿದ್ರೆ ಸರಿ ಕಣೆ."

"ಸರಿ ಇದ್ರೆ ಕಷ್ಟ."

"ಕಷ್ಟ ಅಂತ ಹೆಂಗಸು ಇಷ್ಟು ಮಾತಾಡಬಾರದು".

"ಇನ್ನೆಷ್ಟು ಮಾತಾಡಬೇಕು?"

"ಅದಕ್ಕೇ ನಮ್ಮ ಹಿರಿಯವರು ಹೇಳಿರೋದು?"

"ಏನಂತ?"

"ಮಾತು ಮನೆ ಕೆಡಿಸ್ತು, ತುತ್ತು ತೂಕ ಕೆಡಿಸ್ತು ಅಂತ"

"ನಿಮ್ಮನ್ನು ನೋಡ್ಯೇ ಮಾಡಿದ್ರೇನೋ?"

"ಅಲ್ಲ ಅಲ್ಲ, ನಿಮ್ಮಂಥವರನ್ನು ನೋಡಿ."

ಎಂದು ಗಂಡ ಅವಳನ್ನೇ ದುರುಗುಟ್ಟಿ ನೋಡಲಾರಂಭಿಸಿದ. ಹೆಂಡತಿ ಮುಖವನ್ನು ತಿರುಗಿಸಿಕೊಂಡು ಹೊರಟಳು ತನ್ನ ಕೆಲಸಕ್ಕೆ. ನಿರರ್ಗಳವಾಗಿ ಗಳಗಳ ಎನ್ನುವ ಚರ್ಚೆಯನ್ನೇ ಕೇಳುತ್ತಾ ದಿಗ್ಭ್ರಾಂತನಾಗಿ ಕುಳಿತ ಗಂಡ.

ಧ್ವನಿ : ಹೀಗೆ ದಿನನಿತ್ಯದ ಜೀವನದಲ್ಲಿ ಮಾತನಾಡುವಾಗ, ಕಥೆ ಹೇಳುವಾಗ, ಅದೆಷ್ಟು ಗಾದೆಗಳು ನಮ್ಮ ಬಾಯಿಂದ ನುಸುಳಿಹೋಗುತ್ತವೋ ಬಲ್ಲವರಾರು? ದಿನನಿತ್ಯ ಅದೆಷ್ಟು ಗಾದೆಗಳ ಕಥೆಗಳ ಸರಮಾಲೆ ಉಂಟಾಗುತ್ತದೆ ಎಂಬುದನ್ನು ಲೆಕ್ಕ ಹಾಕಿದವರಾರು?

ಧ್ವನಿ ೧ : ಗಾದೆಯನ್ನು ಬಿಟ್ಟು ಜೀವನವಿಲ್ಲ, ಜೀವನ ಬಿಟ್ಟು ಗಾದೆಯಿಲ್ಲ. ಒಂದನ್ನೊಂದು ಹೊಂದಿಕೊಂಡೇ ಇರುತ್ತದೆ.

ಧ್ವನಿ ೨ : ಕೆಲವು ಗಾದೆಗಳು ಕಥೆಗಳಿಂದ ಅಥವಾ ಕಥೆಗಳ ಆಧಾರದ ಮೇಲೆ ಹುಟ್ಟಿವೆ. ಪುರಾಣ, ಇತಿಹಾಸಗಳು ಕೆಲವು ಗಾದೆಗಳ ಉಗಮಕ್ಕೆ ಕಾರಣವಾದುವು.

'ಹಂಪೆಗೋಗೋಕ್ಕಿಂತ ಕೊಂಪೆಯೇ ವಾಸಿ.' ಇದು ವಿಜಯನಗರದ ಪತನವನ್ನು ಸೂಚಿಸುತ್ತದೆ.

ಧ್ವನಿ ೧ : ಕುರಾನ್, ವೇದ, ಉಪನಿಷತ್ತುಗಳಲ್ಲಿ ಗಾದೆಯ ನುಡಿಗಟ್ಟುಗಳಿವೆ. ಕೆಲವೊಮ್ಮೆ ಮಹಾಪುರುಷರು ಹೇಳಿದ ಮಾತುಗಳೇ ಗಾದೆಗಳಾಗಿವೆ. ಜೀವನದ ಅನುಭವಗಳು, ಆಚಾರ, ಆಶಯಗಳು, ಪ್ರವೃತ್ತಿ ಪರಿಶೀಲನೆ, ಸ್ವಭಾವದ ಅನುಶೀಲನೆ, ಚಾರಿತ್ರಿಕ ಅಂಶಗಳು, ಪ್ರಾಚೀನ ಪುರಾಣಗಳು ಗಾದೆಗಳ ಉಗಮಕ್ಕೆ ಕಾರಣ.

ಧ್ವನಿ ೨ : ಗಾದೆಗಳಿಂದ ಒಂದು ದೇಶದ ಸಂಸ್ಕೃತಿಯನ್ನು, ಸಾಮಾಜಿಕ ಜೀವನವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಆದ್ದರಿಂದ ಗಾದೆಗಳು ಜೀವನದ ಅನುಭವಕ್ಕೆ ಹಿಡಿದ ಕನ್ನಡಿ. ಇದರ ಇತಿಹಾಸ ಹೇಳುವುದು ಅಸಾಧ್ಯ. ಕವಿರಾಜಮಾರ್ಗದಿಂದ ಹಿಡಿದು ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕ, ಅಕ್ಕಮಹಾದೇವಿ, ಪುರಂದರದಾಸರು, ಬಸವಣ್ಣನವರೇ ಮೊದಲಾದವರ ಕಾವ್ಯಗಳಲ್ಲಿ ಗಾದೆಗಳ ಖಣಜವೇ ಇದೆ.

ಧ್ವನಿ ೧ : ಮತ್ತೊಂದು ಸನ್ನಿವೇಶ -

ಮುದುಕಿ ಒಂದಾನೊಂದು ಕಾಲದಲ್ಲಿ ಜಾಣೆಯಾಗಿದ್ದಳು. ಜ್ಞಾಪಕ ಶಕ್ತಿ ಇಟ್ಕೊಂಡಿದ್ಲು. ಆದ್ರೆ ಈಗ ವಯಸ್ಸಾಯಿತು, ಎಲ್ಲವೂ ಮರೆವು. ಮೊಮ್ಮಗನಿಗೆ ಕತೆ ಹೇಳ್ತಿದ್ರೂ ಮಧ್ಯೆ ನಿಲ್ಸಿ "ಅದೇನು ಹಾಳಾದ್ದು ಮರೆತೇ ಹೋಯಿತು" ಅಂತ ಲೊಚ್ಚೆ ಹಾಕೋದು. ಯಾರು ಅಂದ್ರೆ ಮಕ್ಕಳೇ ಆಗಲೀ, ಮೊಮ್ಮಕ್ಕಳೇ ಆಗ್ಲೀ, ಸೊಸೆಯರೇ ಆಗಲೀ, ಬಂದ ನೆಂಟರೇ ಆಗಲಿ, ಕಂಡ ಯಾವ ಜನವಾಗಲೀ, ಅವರು ತಮ್ಮದ್ರೇನಾದ್ರೂ ಪ್ರತಿಕ್ರಿಯೆ ತೋರಿಸಿದಾಗ ಮುದುಕಿ, "ಸಾಕು ಸುಮ್ನಿರೋ" ಅನ್ನೋದು. ಏನೋ ಹೇಳಲಿಕ್ಕೋಗಿ ಮಧ್ಯದಲ್ಲಿ ಮರೆತು ಸುಮ್ಮನಾಗೋದು. ಜ್ಞಾಪಿಸಿಕೊಳ್ಳಲಿಕ್ಕೆ ಹೋಗಿ ನಿಷ್ಫಲವಾಗುವುದು. ಹೀಗೆ ಮುದುಕಿಯ ಅವಸ್ಥೆಯನ್ನು ನೋಡಿ ಎಲ್ಲರೂ ನಗುವವರೇ. ಎಷ್ಟೇ ಆದರೂ ಅಜ್ಜಿ ವಯಸ್ಸಾದವಳು. ಅರುವತ್ತು ತುಂಬಿದ ಮೇಲೆ ಕೇಳಬೇಕೆ? 'ಅರುಳೋ ಮರುಳೋ ಅಂತ'. ಅವರು ಹಾಗೆಲ್ಲಾ ಛೇಡಿಸಿ ಗುಲ್ಲೆಂದು ನಕ್ಕಾಗ "ಸಾಕು ಸುಮ್ನಿರ್ರೋ ಕಂಡಿವ್ನಿ" ಎಂದು ಸಿಡುಕುವುದು ಹಳೆಯ ಕಾಲದ ಮುದುಕಿ. ಏನು ಮಾಡಿದ್ರೂ ಒಪ್ಪೋಲ್ಲ. ಯಾವ ತಿಂಡಿ, ಬಟ್ಟೆ, ನಡವಳಿಕೆ ಯಾವುದ್ನೂ ಒಪ್ಪೋಲ್ಲ. ಹಳೇ ಕಾಲದ್ದಿದ್ದರೆ ಆಕೆ ಹೊಗಳುವುದೇ ಹೊರತು ಏನಾದ್ರೂ ಹೊಸ ಥರ ಕಂಡ್ರೆ, "ಏನೋ ಹಾಳು ಪ್ಯಾಸನ್ನೋ ಉರ್ದ್ಹೋಯ್ತು ಹೋಗು"

ಅನ್ನುವುದು. ಮೊಮ್ಮಗನನ್ನು ಅಪ್ಪ ಒಂದು ದಿನ ತರಾಟೆಗೆ ತೆಗೆದುಕೊಂಡಿದ್ದ. ಅಲ್ಲಿಗೆ ಅಜ್ಜಿ ಬಂದು - "ಏನೋ ಆ ಹುಡುಗನನ್ನು ಅಷ್ಟು ದಂಡಿಸ್ತಾ ಇದ್ದೀಯಾ?"

"ಅವನು ಮಾಡಿರೋ ಕೆಲಸ ಕೇಳಿದ್ರೆ ನೀನೂ ಉರಿದು ಉಪ್ಪಾಗ್ಹೋಯಿತ್ತೀಯಾ?"

"ಆ ನನ್ನ ಮೊಮ್ಮಗನೇನೋ ಅಂತಾ ಕೆಲಸ ಮಾಡಿರೋದು?"

"ಅವ್ನನ್ನೇ ಕೇಳವ್ವ ಹೇಳ್ತಾನೆ."

"ಏನೋ ಹೇಳು, ಮಾಡಿರೋವ್ನೇ ಹೇಳ್ತಾನ್ಯೇ?"

"ಆತ ಬೇರೆ ಜಾತಿ ಹುಡುಗೀನ ಮದ್ವೆ ಆಗ್ಬೇಕು ಅಂತವ್ನೇ."

"ಆಗಲ್ಲ ಅಂದ್ರಾಯ್ತು."

"ಒಪ್ಪೋಲ್ವಲ್ಲ."

"ನಾನು ಒಪ್ಪಿಸ್ತೀನಿ."

"ಬೇರೆ ಹುಡುಗಿ ಜತೆ ಆಡಿದ್ದಾನೆ ಕಣವ್ವ."

"ಅಂಗಂದ್ರೇನು?"

"ಮತ್ತೇನು ಸುಳ್ಳೇಳ್ತೇನ್ಯೇ?"

ಸ್ವಲ್ಪ ಹೊತ್ತು ಮುದುಕಿ ಜ್ಞಾಪಿಸಿಕೊಂಡಳು, ಶೂನ್ಯ! ಏನೂ ಹೊಳೆಯಲಿಲ್ಲ. 'ಅದೇನೋ ಗಾದೆ ಹೇಳ್ತಾರಲ್ಲಾ ಹಾಗಾಯ್ತು' ಎಂದು ಬೊಚ್ಚು ಬಾಯಿಯನ್ನು ನಾಲ್ಕು ಸಾರಿ ಹಾರ್ಮೋನಿಯಂ ಬಾರಿಸಿದಳು. ಒಮ್ಮೆ ಮೊಮ್ಮಗ ಅಜ್ಜಿ ಕಡೆ ನೋಡಿ - 'ಅಜ್ಜಿ' ಎಂದ. 'ಏನೋ' ಎಂದಳು ತೊದಲ್ದನಿಯಲ್ಲಿ. ಆಗ ಆತ -

"ಒಂದು ಮೂರು ರೂಪಾಯಿ ಬೇಕಾಗಿತ್ತು."

"ಯಾರಿಗೆ ಬ್ಯಾಡ, ಎಲ್ಲರಿಗೂ ಬೇಕು ಕಣೋ, ಯಾಕೆ ಮೂರು ರೂಪಾಯಿ?."

"ಖರ್ಚು ಮಾಡೋಕೆ"

"ಕೊಟ್ಟರೆ ಮಾಡ್ದೆ ಇದ್ದರಾ ಯಾರಾರು?"

"ನಮ್ಮ ಕಾಲದಲ್ಲಿ ಪೈಸೆ ಇರ್ಲಿಲ್ಲ ಮೂರು ಕಾಸು ಕೊಡೋರು. ಅದೂ ಕೊಡಬೇಕಾದ್ರೆ ಬೇಕಾದಷ್ಟು ಕಾಡಿ ಬೇಡಬೇಕಾಗಿತ್ತು."

"ಆ ಕಾಲ ಹಾಗಿತ್ತು, ಈ ಕಾಲ ಹೀಗಿದೆ, ದುಡ್ಡಿಗೆ ಎಷ್ಟು ಬೆಲೆ ಗೊತ್ತಾ ಅಜ್ಜಿ?"

"ಹೌದು ಕಣಪ್ಪಾ ದುಡ್ಡಿಗೆ ಬೆಲೆ ಕಟ್ಟೋ ಕಾಲ ಇದು. ಸರಿ ಹೋಯ್ತು."

"ಮತ್ತೆ ಈಗ ಕೊಡ್ತೀಯಾ ಹ್ಯಾಗೆ?"

"ಯಾರಿಲ್ಲ ಬೇಕಾದ್ರೆ ಒಂದು ರೂಪಾಯಿ ಈಸ್ಕೋ."

"ಇನ್ನೂ ಹಳೇ ಕಾಲದ ಲೆಕ್ಕದಲ್ಲೇ ಇದ್ದೀಯಲ್ಲಾ."

"ಅಯ್ ನಿನ್ನ ಮುಖಕ್ಕೆ ಅಸಕ್ಕಿ ಬರ್‍ಯಾ ಹೋಗು."

"ಕೊಡ್ತೀಯೋ ಕೋಡೋಲ್ವೋ ಹೇಳಜ್ಜಿ."

"ಆಗಲ್ವೋ."

"ಇಷ್ಟು ಜಿಪುಣೆ ಆಗಬಾರದು."

"ಹೌದು, ಕೊಟ್ರೆ ಧಾರಾಳ ಕಣೋ. ನಿನಗೆ ಬುದ್ಧಿ ಯಾರು ಹೇಳಿದ್ರು?"

"ನಿಮ್ಮಂಥವ್ರೇ......"

"ಬಿಟ್ಟಿ ಕಾಸು ಎಷ್ಟು ಕೊಟ್ಟರೂ ಖರ್ಚು ಮಾಡ್ತೀನಿ ಅಂತಲ್ವೇ? ಏನೋ ಗಾದೆ ಹೇಳ್ತಾರಲ್ಲ ಹಾಗೆ ನಡೆ" ಎಂದಳು.

"ಸದ್ಯ ನೀನು ಕೊನೆಗೆ ಕೊಡೋದು ಏನು ಅಂತ ನನಗೆ ಗೊತ್ತಿತ್ತು" ಎಂದು ಮುಸುಡಿಯನ್ನು ಮಂಗನಂತೆ ಮಾಡಿದ.

ಮುದುಕಿಗೆ ಸಾಮಾನ್ಯವಾಗಿ ಇದೊಂದು ಚಾಳಿ ಆಗಿ ಹೋಗಿತ್ತು. ಊರಿನ ಅನೇಕರು ಅವಳನ್ನು "ಅದೇನೋ ಗಾದೆ ಹೇಳ್ತಾರಲ್ಲಾ ಹಾಗೆ" ಎಂದು ಕರೆಯುತ್ತಿದ್ರು. ಆಕೆ ಹತ್ರ ಬರೋದು, ಏನಾದ್ರೂ ಮಾತನಾಡೋದು, ಆಕೆಯ ಬಾಯಿಂದ ಆ ಮಾತು ಬಂದ ಮೇಲೆ ನಗುತ್ತಾ ಹೊರಡುವರು. ಆಕೆಯ ಆ ಮಾತು ಎಲ್ಲರಿಗೂ ಮನರಂಜನೆ. ಇದರಿಂದ ಆಕೆ ನಗುವಿಗೆ ವಸ್ತುವಾಗಿ ಪರಿಣಮಿಸಿದ್ದಳು. ಮಗಳು ಅವಳನ್ನುದ್ದೇಶಿಸಿ-

"ಅವ್ವಾ ಅವ್ವಾ" ಎಂದಳು.

"ಏನವ್ವಾ?

"ನಂಗೆ ಚಿನ್ನ ಸರ ಮಾಡಿಸ್ಕೊಡ್ತೀನಿ ಅಂದಿದ್ಯಲ್ಲಾ ಯಾವಾಗ ಮಾಡಿಸ್ತೀಯವ್ವಾ?"

"ಆಗ್ಲಿ ಮಾಡ್ಸಾವ ಸುಮ್ಕಿರು."

"ಮುಂದಿನ ತಿಂಗಳು...... ಮಾಡಿಸ್ದಯವ್ವಾ."

"ಅಯ್, ಅದ್ಯಾನಾತ್ರಾ ಸುಮ್ಕಿರು."

"ಬೇಗ ಮಾಡ್ಸವ್ವ ಮುಂದಿನ ತಿಂಗಳು ಊರಿಗೋಯ್ತೀನಿ."

"ಹೋಗಿದ್ದು ಬಂದ ಮ್ಯಾಕೆ ಮಾಡಿಸಿದ್ರಾಗಲ್ವೇನೋ?"

"ಇಲ್ದೇವೋದ್ರೆ ನಮ್ಮತ್ತೆ ಬೈಕತಾರೆ ಕನವ್ವಾ."

"ಬಲು ದುರಾಸೆ. ಅವಳು ಸಾವಿರ ಕೇಳಲಿ ಬುಡು, ನಿನ್ನ ಗಂಡ ಏನಾದ್ರೂ ಅಂದ್ನೇನೇ?"

"ಅವರೇನೂ ಕೇಳಿಲ್ಲ."

"ಮತ್ತೆ ಸುಮ್ಮನಿರು."

"ಅತ್ತೆ ಬೆಳಗಾದ್ರೆ ಲೊಟ - ಲೊಟ ಅನ್ತಾರಲ್ಲ."

"ಅವಳು ಅನ್ಲಿ ಬಿಡು. ಅದೇನೋ ಗಾದೆ ಹೇಳ್ತಾರಲ್ಲ ಹಾಗಾಯ್ತು ಬಿಡು."

ಅಜ್ಜಿಯ ಈ ಮಾತೇ ಫುಲ್‌ಸ್ಟಾಪು. ಮಗಳು ಹೆಚ್ಚಿಗೆ ಮಾತಾಡದೇ ನಡೆದಳು ಅಲ್ಲಿಂದ. ಮುದುಕಿಗೆ ಯಾವಾಗ್ಲೂ ತನ್ನದೇ ದೃಢನಿರ್ಧಾರ! ಒಮ್ಮೆ ಮೊಮ್ಮಗ ಅಜ್ಜಿಯನ್ನು ಕೇಳಿದ -

"ಅಜ್ಜಿ, ಈ ಹೊತ್ತು ಸಿನಿಮಾಕ್ಕೋಗಬೇಕು ದುಡ್ಡು ಕೊಡು ಐದು ರೂಪಾಯಿ."

"ಏನೋ ಉಂಡಾಗಾದ್ದೋ ಉಟ್ಟಾಗಾದ್ದೋ! ಊಟ ತಿಂಡಿ ತಿಂದು ಬೆಚ್ಚಗೆ ಕಂಬಳಿ ಹೊದ್ದುಕೊಂಡು ಮಲಗುಹೋಗು."

"ಕೊಡ್ತೀಯೋ ಹ್ಯಾಗೆ?"

"ನಿಂಗೆ ತಿಂದು ಕೊಬ್ಬು ಹೆಚ್ಚಿ, ಏನೇನೋ ಕೇಳುತೀಯ ಹೋಗು."

"ಬೇಜಾರು ಕಣಜ್ಜಿ."

"ಬೇಜಾರಾಗ್ದೇ ಏನ್ಮಾಡುತ್ತೆ? ಏನೋ ಗಾದೆ ಹೇಳ್ತಾರಲ್ಲಾ ಹಾಗೆ."

"ಎಲ್ಲದಕ್ಕೂ ಒಂದೇ ಮಂತ್ರ, ತಲೆಗೆಲ್ಲಾ ಒಂದೇ ಮಂತ್ರ, ಜ್ಞಾಪಕ ಇಲ್ಲದೇ ಹೋದ್ರೆ, ಹೇಳೋಕ್ಕೆ ಬರ್ದೇ ಹೋದ್ರೆ ಸುಮ್ಮಿರಕ್ಕಾಗೋಲ್ಲಾ ಸಾಕು ನಿನ್ನ, 'ಅದೇನೋ ಗಾದೆ ಹೇಳ್ತಾರಲ್ಲ' ಎಂದು ಸಿಡುಕಿಂದ ಹೊರಟ.

ಧ್ವನಿ ೨ : ಹಳತು ಹೊಸತಾಗಿ, ಹೊಸತು ಹಳತಾಗಿ, ಗಾದೆ ವೇದವಾಗಿ, ವೇದ ವಾಕ್ಯಗಳು ಪಂಡಿತ ಪಾಮರರ ಬಾಯಲ್ಲಿ ಕುಣಿಯುವುವು. ಇದು ಹಳ್ಳಿಯಿಂದ ಪಟ್ಟಣದವರೆಗೂ ವ್ಯಾಪ್ತಿಯಾಗಿರುವುದು. ಶಿಷ್ಟ ಸಾಹಿತ್ಯದಿಂದ ಜನಪದ ಸಾಹಿತ್ಯದವರೆಗೂ ಹರಡಿರುವುದು. ಗಾದೆಯಿಂದ ಜನರು ಎಚ್ಚೆತ್ತು ತಮ್ಮ ನೈತಿಕ ಜೀವನವನ್ನು ಉತ್ತಮಗೊಳಿಸಿಕೊಳ್ಳಬಹುದು ಎಂದ ಮೇಲೆ ಕನ್ನಡದಲ್ಲಿ ಗಾದೆಯ ಸ್ಥಾನ ಮೇರುಸ್ಥಾನದಲ್ಲಿದೆ ಎಂದರೆ ತಪ್ಪಾಗಲಾರದು ಅಲ್ಲವೇ?



# ಇದೇ ಎಲ್ಲರ ಬಯಕೆ

(ಹಾಡು : ಇದೇ ಎಲ್ಲರಾ ಬಯಕೆ)

ಧ್ವನಿ : ಮನುಷ್ಯ ಹುಟ್ಟಿದ ಮೇಲೆ ಸುಖವಾಗಿ ಜೀವನ ಮಾಡಬೇಕು. ಎಲ್ಲರ ಜೊತೆ ಬೆರೆತು ನಗುನಗುತ್ತಾ ಇರಬೇಕು ಅಂತ ಆಸೆ ಮೂಡುವುದು ಸಹಜ. ಆದರೆ ಅದಕ್ಕೆ ಹೋರಾಟ ಇದ್ದುದೇ.....! ಕಾಯಕ, ಸತತ ಪ್ರಯತ್ನಗಳಿಂದಲೇ ಇದು ಸಾಧ್ಯ. ನಮ್ಮ ಜೀವನವನ್ನು ರೂಪಿಸಿಕೊಳ್ಳುವುದು ನಮ್ಮ ಕೈಯಲ್ಲೇ ಇದೆ. ಬಾಳು ಬಂಗಾರವಾದರೆ ಎಷ್ಟು ಚಂದ?

ಧ್ವನಿ : ಮನುಷ್ಯ ಹುಟ್ಟಿದಂದಿನಿಂದಲೇ ಜೀವನ ಆರಂಭವಾಗುತ್ತದೆ. ಆದರೆ ಅದರ ಅರಿವು ಮದುವೆ ಆದ ಮೇಲೆಯೇ. ಹಿಂದಿನ ಕಾಲದಲ್ಲಿ ಮದುವೆ ಆದ ಮೇಲೆ ಹೆಣ್ಣನ್ನು ಗಂಡನ ಮನೆಗೆ ಕಳುಹಿಸಬೇಕಾಗಿದ್ದರೆ ಅದೆಷ್ಟು ಅಳುತ್ತಿದ್ದರು. ಬುದ್ಧಿವಾದ ಹೇಳಿ ಕಳುಹಿಸುತ್ತಿದ್ದರು. ಆದರೆ ಇಂದು ಹುಡುಗಿಯೂ ಸಂತೋಷವಾಗಿ ಹೋಗುತ್ತಾಳೆ. ಮನೆಯವರೂ ಸಂತೋಷದಿಂದ ಕಳುಹಿಸುತ್ತಾರೆ. ಏಕೆಂದರೆ ಹಿಂದೆ ಹುಡುಗಿಯ ವಯಸ್ಸು ಚಿಕ್ಕದಾಗಿರುತ್ತಿತ್ತು. ಬೇರೆ ಮನೆಗೆ ಹೋಗಿ ಎಷ್ಟು ಕಷ್ಟ ಪಡುತ್ತಾಳೋ ಏನೋ ಎಂಬ ಚಿಂತೆ ಇತ್ತು. ಊರು ದೂರ ಇರುತ್ತಿತ್ತು. ಇಂದಿನಷ್ಟು ವಾಹನ ಸೌಕರ್ಯಗಳಿರಲಿಲ್ಲ. ಆದರೆ ಇಂದು ಮಗಳನ್ನು ನೋಡಬೇಕೆಂದರೆ ರೈಲು, ಏರೋಪ್ಲೇನ್, ಬಸ್, ಕಾರು, ಸ್ಕೂಟರ್‌ಗಳಲ್ಲಿ ಹೋಗಿ ನೋಡಿ ಬರಬಹುದು. ಜೊತೆಗೆ ಹೆಣ್ಣು ಹದಿನೆಂಟರ ಹರೆಯ ದಾಟಿ, ವಿದ್ಯಾಭ್ಯಾಸ ಮುಗಿಸಿ ವಿದ್ಯಾವಂತಳೂ, ಬುದ್ಧಿವಂತಳೂ, ವ್ಯವಹಾರ ಜ್ಞಾನಿಯೂ ಆಗಿ ಜೀವನ ನಿರ್ವಹಣೆ ಮಾಡಲು ಪರಿಪಕ್ವವಾಗಿರುತ್ತಾಳೆ. ಅಂದ ಮೇಲೆ ಬುದ್ಧಿವಾದ ಹೇಳಬೇಡವೆಂದೇನಲ್ಲ.

ಧ್ವನಿ : ಹೇಳಲೇಬೇಕು, ಗಂಡನ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕು? ಸುಖ ಸಂಸಾರ ಸಾಗಿಸುವ ವಿಧಾನವನ್ನು ತಮ್ಮ ಅನುಭವದಿಂದ ಹೇಳುವುದು ಮುಖ್ಯ. ಕಾಲಕ್ಕೆ ತಕ್ಕಂತೆ ಬುದ್ಧಿವಾದ ಹೇಳಬೇಕು. ಇದು ತಾಯಿಯು ಹೇಳುವ ಪರಿ-

(ಹಾಡು....... ಜಯಸಿರಿಯ ಮಗಳೇ........)

ಧ್ವನಿ : "ಅಷ್ಟ ಪುತ್ರವತೀ ಭವ" ಹರಕೆ ಹೋಯಿತು. 'ನಾಲ್ಕಾರ ಮೇಲೆ ಆರತಿಗೊಬ್ಬಳು ಮಗಳು ಬೇಕು' ಎಂಬ ಜನಪದ ಗೀತೆಯ ವ್ಯಾಖ್ಯಾನ ಇವೆಲ್ಲಾ ಹಳೆಯ

ಕಾಲಕ್ಕೇ ಮುಗಿದುಹೋದುವು. ಇದು ಕುಟುಂಬ ಕಲ್ಯಾಣ ಯುಗ! ಇಂಥ ಸಂದರ್ಭದಲ್ಲಿ ಎರಡಕ್ಕಿಂತ ಹೆಚ್ಚು ಬೇಡೆಂಬುದೇ ಆಕೆಯ ಆಸೆ.

ಧ್ವನಿ : ಅದನ್ನು ಮಗಳೂ ಅರಿಯದೇ ಇಲ್ಲ. ಇಂದಿನ ರೇಡಿಯೋ, ಟೆಲಿವಿಷನ್, ಪತ್ರಿಕೆ, ಸಿನೆಮಾ ಮೊದಲಾದ ಮಾಧ್ಯಮಗಳಿಂದ ಚೆನ್ನಾಗಿ ತಿಳಿದುಕೊಂಡಿದ್ದಾಳೆ. ಮಕ್ಕಳ ಜಂಜಾಟವೂ ಆಕೆಗೆ ಬೇಡ. ವಿದ್ಯಾವಂತ ದುಡಿಯುವ ಮಹಿಳೆಯಾಗಿ, ಮನೆಯಲ್ಲಿ ನೋಡಿಕೊಳ್ಳುವವರಿಲ್ಲದೆ ಬೇಬಿ ಸಿಟಿಂಗ್‌ನಲ್ಲಿ ಮಗು ಇರಿಸಿ ಹೋಗಬೇಕಾದವರಿಗೆ ಮದುವೆಯಾದ ಕೂಡಲೇ ಮಗು ಬೇಕಿಲ್ಲ. ಮುಂದಿನ ಮಗು ಈಗಲೇ ಬೇಡ ಎಂಬುದು.

ಧ್ವನಿ : ಮದುವೆಯಾಗಿ ಒಂದೆರಡು ವರ್ಷ ಆರಾಮವಾಗಿ ಹನಿಮೂನ್ ಸವಿದು, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ವಿಹರಿಸಿ ಬಂದಾಗ ಮನಸ್ಸಿಗೆ ಅದೆಷ್ಟು ಆನಂದ.....? ನೆಂಟರು, ಇಷ್ಟರು, ಮಿತ್ರರುಗಳ ಮನೆಗಳಿಗೆ ತಿರುಗಾಟ, ಔತಣದ ಊಟ, ಗಂಡನೊಡನೆ ಏಕಾಂತ, ಮಾತು, ಕತೆ, ಹಾಸ್ಯ...... ನಿಜಕ್ಕೂ ಜೀವನದ ಸಂತೋಷದುಯ್ಯಾಲೆಯಲ್ಲಿ ಹಾಡಿ ಆಡುವ ಮದುವೆಯಾದ ಹೊಸ ದಿನಗಳು:

(ಹಾಡು : ಮುಂದಿನ ಮಗು ಈಗಲ್ಲ......)

ಧ್ವನಿ : ಆದರೆ ಎಷ್ಟು ದಿನ ಹಾಗೆಯೇ ಇರುವುದು? ಬಂಜೆತನವನ್ನು ಹೆಣ್ಣು ಬಯಸದು. ತಾಯ್ತನಕ್ಕೆ ತುಟಿದುಕೊಳ್ಳುವುದು ಸಹಜ. ಬೇರೆಯವರಂತೆ ತಾನೂ ಮಕ್ಕಳನ್ನು ಹೊತ್ತು ಅವರೊಡನೆ ನಲಿಯಬೇಕೆಂಬುದು ಹಿರಿಯಾಸೆ. ಮದುವೆಯಾದ ಎರಡು ಮೂರು ವರ್ಷಗಳಲ್ಲಿ ಮಗು! ಗಂಡ - ಹೆಂಡತಿ, ಇಬ್ಬರ ಮನೆಯವರೂ ಮಗುವನ್ನು ಥೈ ಥೈ ಎಂದು ಸಾಕುವ ಪರಿಯನ್ನು ನೋಡಲೇ ಒಂದು ರೀತಿ ಚಂದ. ತಾಯ ಹಾಲಿನಿಂದ ಹಿಡಿದು ಪೌಷ್ಟಿಕ ಆಹಾರದವರೆಗೆ ಅದರ ಆರೈಕೆ ಪೂರೈಕೆ, ಚುಚ್ಚುಮದ್ದುಗಳನ್ನು ಕೊಡಿಸಿ ಮಗುವಿನ ರಕ್ಷಣೆಯನ್ನು ಮಾಡಿಕೊಳ್ಳುವ ಪ್ರಜ್ಞೆ ಮೂಡಿಬಂದಿದೆ. ಆದರೂ ಹಳ್ಳಿಗಳಲ್ಲಿ ಇದರ ಬಗೆಗೆ ಇನ್ನೂ ಹೆಚ್ಚೆಚ್ಚು ಶಿಕ್ಷಣ ಕೊಡಬೇಕಾಗಿದೆ. ಆದರೆ ಹಳ್ಳಿಯಿಂದ ಪಟ್ಟಣದವರೆಗೂ ಇದರ ಅವಶ್ಯಕತೆ ತಿಳಿದು, ಅವರೇ ಆಸ್ಪತ್ರೆಗೆ ಬಂದು ಕೇಳುವ ದೃಶ್ಯಗಳಿಗೇನೂ ಕಡಿಮೆ ಇಲ್ಲ. ಆದರೆ ವೈದ್ಯರ ನೆರವೂ ಇದಕ್ಕೆ ಅತ್ಯವಶ್ಯ.

ಧ್ವನಿ : ಚೊಚ್ಚಲ ಮಗುವಿನ ಆರೈಕೆ ಚೆನ್ನಾಗಿ ಆಗಬೇಕು. ಮಗು ಚೆನ್ನಾಗಿ ಭೌತಿಕವಾಗಿ ಬೌದ್ಧಿಕವಾಗಿ ಬೆಳೆಯಬೇಕು. ಮಗುವಿನ ಬಗೆಗೆ ತುಂಬಾ ಗಮನ ಕೊಡಬೇಕಾದರೆ ಮುಂದಿನ ಮಗುವು ಕೂಡಲೇ ಆಗಬಾರದು. ಒಂದು ಮಗುವಿಗೂ ಮತ್ತೊಂದು ಮಗುವಿಗೂ ಮೂರು ವರ್ಷಗಳ ಅಂತರ ಇದ್ದಾಗಲೇ ತಾಯಿ - ಮಗು ಇಬ್ಬರೂ ಆರೋಗ್ಯ. ಅಲ್ಲವೇ?

(ಹಾಡು: ಅಂತರವಿರಬೇಕು.....)

ಧ್ವನಿ : ಮಗುವಾದ ಮೇಲೆ ತಿರುಗಾಟ, ಸಿನೆಮಾ, ವಿಹಾರ ಮುಂತಾದುವು ದೂರವಾಗುತ್ತವೆ. ಎಲ್ಲಾ ಮನೆಯಲ್ಲೇ ಆಗಬೇಕು. ಪಟ್ಟಣಗಳಲ್ಲಿ ಎಲ್ಲಿಗಾದರೂ ಹೋಗಬೇಕೆಂದರೆ ಬಸ್ಸು ಬರುವುದನ್ನೇ ಕಾಯಬೇಕು. ಹೋಟೆಲು, ಸಿನೆಮಾಗಳಿಗೆ ಹೋಗಲು ಇನ್ನೂ ಕಷ್ಟ. ಆದರೇನು, ಇಂದಿನ ದಿನಗಳಲ್ಲಿ ಮನೆಯಲ್ಲೇ ಟೆಲಿವಿಷನ್ ನೋಡಿ, ಕ್ಯಾಸೆಟ್ ಹಾಡುಗಳು, ರೂಪಕಗಳು, ನಾಟಕಗಳು, ಸಂಗೀತ ಕೇಳಿ, ರೇಡಿಯೋ ಕೇಳಿ, ವಿಡಿಯೋ ಹಾಕಿಕೊಂಡು ಮನರಂಜನೆಯನ್ನು ಪಡೆಯಬಹುದು. ಎಲ್ಲದಕ್ಕೂ ಕ್ಯೂ ನಿಂತು ಹೋಗುವ ವ್ಯವಧಾನವನ್ನೇ ಕಳೆದುಕೊಳ್ಳಬೇಕಾಗುತ್ತದೆ. ಅನುಭವಿಸಿದವರಿಗೆಲ್ಲಾ ಗೊತ್ತು.

(ಹಾಡು: ಕ್ಯೂ...... ಕ್ಯೂ.......)

ಧ್ವನಿ : ಎರಡು ಮೂರು ವರ್ಷಗಳಾದ ಮೇಲೆ ಮತ್ತೊಂದು ಮಗುವಾಗದೇ ಇಲ್ಲ. ಆರತಿಗೊಬ್ಬಳು ಮಗಳು, ಕೀರುತಿಗೊಬ್ಬ ಮಗ ಎಂಬ ಮನೋಭಾವ ಅಳಿಸಿರುವ ಕಾಲ. ಎಲ್ಲಾ ಒಂದೇ ಎಂಬ ನಿರ್ಧಾರಕ್ಕೆ ಬರಲೇಬೇಕು. ಇಲ್ಲದಿದ್ದರೆ ಮಕ್ಕಳ ಸಂಖ್ಯೆ ಬೆಳೆಯುತ್ತಾ ಹೋದರೆ ಮಕ್ಕಳನ್ನು ಕಾಪಾಡುವ ಬಗೆ? ತಾಯಿಯ ಆರೋಗ್ಯದ ಗತಿ? ತಂದೆಯ ಪಾಡು? ಬರೇ ಸಂಸಾರಕ್ಕಷ್ಟೇ ಹೊರೆ ಅಲ್ಲ, ದೇಶಕ್ಕೆ ಹೊರೆ ಅಂದಮೇಲೆ ಯಾವ ದಂಪತಿ ತಾನೆ ಎರಡರ ಮೇಲೆ ಬಯಸುತ್ತಾರೆ?

(ಹಾಡು : ಮಕ್ಕಳು ಬೇಕೇಬೇಕು.......ಆದರೆ ಎರಡೇ...... ಎರಡು ಸಾಕು)

ಧ್ವನಿ : ಸುಖ ಸಂಸಾರ, ಆರೋಗ್ಯ ಬಾಳ್ವೆ, ಸಂತಸದ ಜೀವನ, ಶಾಂತಿ ನೆಮ್ಮದಿಯ ಸಂಸಾರ ಎಲ್ಲರ ಜೀವ ಸೂತ್ರವಾಗಿರಬೇಕಾದರೆ ಎರಡು ಮಕ್ಕಳಿಗಿಂತ ಹೆಚ್ಚು ಬೇಡ ಎಂಬ ದೃಢ ಸಂಕಲ್ಪ ಮಾಡಬೇಕು. ಆಗಲೇ ನಮ್ಮ ಕಲ್ಯಾಣ ಹಾಗೂ ದೇಶದ ಕಲ್ಯಾಣ - ವಿಶ್ವ ಕಲ್ಯಾಣ! ಇದೇ ಎಲ್ಲರಾ ಬಯಕೆ ಬೇಕು ಅಲ್ಲವೇ?

(ಹಾಡು : ಇದೇ ಎಲ್ಲರಾ ಬಯಕೆ)



# ಕನಸು - ನನಸು

(ಸಂಗೀತ ರೂಪಕ)

ಕಾಲ : ೧ ಘಂಟೆ

**ಪಾತ್ರ ವರ್ಗ**

ರಾಧೆ-ಕೃಷ್ಣ: ದಂಪತಿಗಳು, ನಿರೂಪಕ, ರೇಡಿಯೋ ಧ್ವನಿ, ನೀಲಾ - ರಾಧೆಯ ಪಕ್ಕದ ಮನೆಯಾಕೆ, ಹಿನ್ನೆಲೆ ಧ್ವನಿಗಳು - ತಾಯಿ ಮತ್ತು ಮುತ್ತೈದೆಯರು.

**ಇದೊಂದು ಹೊಸ ಪ್ರಯತ್ನ :**

ಕುಟುಂಬ ಯೋಜನೆಯ ಬಗ್ಗೆ ಆಕಾಶವಾಣಿ ಬೆಂಗಳೂರು, ಭದ್ರಾವತಿ, ಧಾರವಾಡ ಮತ್ತು ಗುಲ್ಬರ್ಗ ಕೇಂದ್ರಗಳಿಂದ ಸಂಗೀತ ರೂಪಕ ಪ್ರಸಾರವಾದುದು ಇದೇ ಮೊದಲನೆಯದು. ಇದರ ಪ್ರಯತ್ನ ಎಷ್ಟರ ಮಟ್ಟಿಗೆ ಸಫಲವಾಯಿತು ಹೇಳಲಾರೆ. ಶ್ರೀ ಚೆ.ಎಲ್. ಕಾಶೀನಾಥಶಾಸ್ತ್ರಿಗಳು ನಿರ್ದೇಶನಕ್ಕೆ ಬಹಳ ಶ್ರಮವಹಿಸಿದರು. ನಾನು ರಚನೆ - ನಿರ್ವಹಣೆಯಲ್ಲಿ ತೊಡಗಿ ನಾಲ್ಕು ದಿನಗಳು ರಾತ್ರಿ ೧೦-೧೨ ಘಂಟೆಯವರೆವಿಗೂ ಶ್ರಮಿಸಿದೆವು. ಆದರೆ ಈ ನಾಟಕ ಪ್ರಸಾರವಾದ ಮೇಲೆ ನಮ್ಮ ತಾಯಿಯರೇ ಕೇಳಿದರು "ಇದೇನು ನಾಟಕ?" ಎಂದು. ಬೇರೆ ನಾಟಕಗಳಿಗೆ ಶ್ರೋತೃಗಳಿಂದ ನೂರಾರು ಪತ್ರಗಳು ಬರುತ್ತಿದ್ದುವು. ಆದರೆ ಇದಕ್ಕೆ ೩,೪ ಮಾತ್ರ ಬಂತು. ಸಂಗೀತ - ಸಾಹಿತ್ಯ ಪ್ರಿಯರು ಸೊಗಸಾಗಿತ್ತು ಎಂದರು. ಆದರೂ ಕೊನೆಯಲ್ಲಿ ನನ್ನ ಮನಸ್ಸಿಗಾದುದು ಅಸಮಾಧಾನ. ಇಷ್ಟು ಶ್ರಮವನ್ನು ಬೇರೆ ರೀತಿ, ಜನರಿಗೆ ಆಡುಭಾಷೆಯಲ್ಲಿ ನಾಟಕವನ್ನು ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು ಎನ್ನಿಸಿತು. ಆದರೂ ನನಗೆ ಇದೊಂದು ಹೊಸ ಅನುಭವವಾಯಿತು.

ರಾಧೆ : ಕೃಷ್ಣಾ...........!
ನಾನು ರಾಧೆಯಾದರೆ ನೀನು ಕೃಷ್ಣನಾಗಬೇಕು।
ಬೃಂದಾವನದಲ್ಲಿ ನಾವು ಕುಣಿದು ನಲಿಯಬೇಕು॥

ಕೃಷ್ಣ : ರಾಧಾ.........!
ನಾನು ಕೃಷ್ಣನಾದರೆ ನೀನು ರಾಧೆಯಾಗಬೇಕು।
ಬೃಂದಾವನದಲ್ಲಿ ನಾವು ಕುಣಿದು ನಲಿಯಬೇಕು॥

ರಾಧೆ : ಇದೇ ಎಲ್ಲರಾ ಬಯಕೆ, ಇದೇ ಎಲ್ಲರಾ ಹರಕೆ।
ಬಾಳು ಬಂಗಾರವಾಗಬೇಕೆಂಬ ಬಯಕೆ॥

ಕೃಷ್ಣ : ಬಾಳು ನೀಲ ಬಾನಿನಂತೆ ಬೆಳಗಬೇಕು।
ಬೆಳಗಿ ಬಾನ ಚುಕ್ಕೆಯಂತೆ ಮಿನುಗಬೇಕು॥

ರಾಧೆ : ಮಿನುಗಿ ಮುತ್ತಿನರಳಿನಂತೆ ಹೊಳೆಯಬೇಕು।
ಹೊಳೆದು ಬೆಳದಿಂಗಳಂತೆ ತೊಳಗಬೇಕು॥

ಕೃಷ್ಣ : ಬಾಳು ಭಾವಗೀತೆಯಲ್ಲಿ ಬೆರೆಯಬೇಕು।
ಬೆರೆತು ಸಂಗೀತದಲ್ಲಿ ಮೆರೆಯಬೇಕು॥

ರಾಧೆ : ಮೆರೆದು ತಾಳ ತಾನಗಳಿಗೆ ಹೊಂದಬೇಕು।
ಹೊಂದಿ ಹಾಡಿ ಆಡಿ ನಲಿಯಬೇಕು॥

ಕೃಷ್ಣ : ಬಾಳು ಜೇನಿನಂತೆ ಸಿಹಿಯಾಗಬೇಕು।
ಸಿಹಿಯಾಗಲು ಜೇನು ಯಾವ ಹುಡುಕಬೇಕು॥

ರಾಧೆ : ಹುಡುಕಿ ಮಕರಂದವನ್ನು ಹೀರಬೇಕು
ಹೀರಿ ಚಿಟ್ಟೆಯಂತೆ ಹಾರಾಡಬೇಕು॥

ಕೃಷ್ಣ : ಬಾಳು ಬನಿಯಾಗಲು ಸಂಗಾತಿಬೇಕು।
ಸಂಗಾತಿಯಾದ ಮೇಲೆ ನಾವು ಜತೆ ಇರಬೇಕು॥

ನಿರೂಪಕ :

ರಾಧಾ ಕೃಷ್ಣರ।
ಅನುರಾಗ ಬೆರೆತು।
ವಿವಾಹೋತ್ತರವಾಯಿತು।
ತಾಯಿ ಗೌರಿ ಹರಸಿ।
ಕಣ್ಣೀರ ಸುರಿಸಿ।
ಬೀಳ್ಕೊಟ್ಟಳು ರಾಧೆಯಾ ತವರಿಂದ।
ಕೃಷ್ಣನ ಮನೆ ತುಂಬಿಸಲು॥

ತಾಯಿ ಮತ್ತು ಮುತ್ತೈದೆಯರು :

ಜಯ ಸಿರಿಯ ಮಗಳೇ ಜಯವಾಗು।
ಬಲಗಾಲ ಮುಂದಿಟ್ಟು ಗೆಲುವಾಗು।
ಕತ್ತಲೆಯ ಮನೆಗೆ ಮಣಿದೀಪವಾಗು ॥ ಪಲ್ಲವಿ ॥

ನಿರೂಪಕ : ಮಧು ಚಂದ್ರದಾ ದಿನ
ಹಾಡಿ ನಲಿಯಿತು ಮನ।
ಹೆಣ್ಣು ಬಯಸಿತು ತನ್ನ।
ತಾಯಾಗುವ ಬಯಕೆ ತಾನ।
ಉಸುರಿದಳು ಇನಿಯನಲಿ ಮುರಿದ ಮೌನದಲಿ॥

ರಾಧ-ಕೃಷ್ಣ : ಒಂದಕ್ಕೆ ನಡೆ।
ಎರಡಕ್ಕೆ ತಡೆ।
ಮೂರಕ್ಕೆ ಕಡೆ॥

ಬಯಕೆ ಹೂವಾಗಲೊಂದು।
ಬಯಕೆ ಕಾಯಾಗಲೆರಡು।
ಬಯಕೆ ಹಣ್ಣಾಗೆ ಮೂರು॥

ಬಯಕೆ ಬೀಜ ಮೊಳೆಯಲೊಂದು।
ಬಯಕೆ ಗಿಡವಾಗಲೆರಡು।
ಬಯಕೆ ಮರವಾಗೆ ಮೂರು॥

ಬಯಕೆ ರನ್ನವಾಗಲೊಂದು।
ಬಯಕೆ ರಜತವಾಗಲೆರಡು
ಬಯಕೆ ಮೌಕ್ತಿಕವಾಗೆ ಮೂರು।
ಸಾಕು - ಸಾಕೆಂಬೆ ನಾ॥

ಬಯಕೆ ಬಿಲ್ವವಾಗಲೊಂದು।
ಬಯಕೆ ಬನ್ನಿಯಾಗಲೆರಡು।
ಬಯಕೆ ತುಳಸಿಯಾಗೆ ಮೂರು।
ಸಾಕು ಸಾಕೆಂಬೆನಾ॥

ನಿರೂಪಕ : ಬಯಕೆ ಬಳ್ಳಿ ಚಿಗುರಿತು।
ರಾಧೆ ಧರಿಸಿದಳು ಗರ್ಭಶ್ರೀಯ।
ಸಪ್ತ ಮಾಸಗಳುರುಳೆ।
ಶ್ರೀಮಂತವೆಸಗಿ। ಮುತ್ತೈದೆಯರಾರತಿ ಎತ್ತಿ।
ಬೀಳ್ಕೊಟ್ಟರು ತವರಿಗೆ।
ಪತಿಯ ಮನೆಯವರು॥

ಬಸುರಿ ಬಯಕೆಯ।
ತುಂಬಿದಳು ತಾಯೆ।
ನವಮಾಸ ಉರುಳೆ।
ಚೆಂದದ ಕಂದನ ಹಡೆದಳು।
ಜೋಗುಳ ಹಾಡಿದರು ಮುತ್ತೈದೆಯರು॥

ಮುತ್ತೈದೆಯರು: ಜೋ ಜೋ ಜೋ ಜೋ।
ಜೋಗುಳ ಜೋಪಾನ।
ತೂಗುದೊಟ್ಟಿಲ ಸೋಪಾನ।
ಸಾಕು ಸಾಕು ಮೂರೇ ಸಂತಾನ ॥ ಪ ॥

ತೂಗುದೊಟ್ಟಿಲನಿಟ್ಟು।
ಗೊಂಬೆಗಳನ್ನು ಕಟ್ಟು।
ಕಂದನ ತೊಟ್ಟಿಲಲ್ಲಿಟ್ಟು।

ಗಿಲ ಗಿಲ ಗಿಲಕಿ ಕೊಟ್ಟು।
ಸಾಕು ಮಾಡು ಮೂರನೆ ಹುಟ್ಟು॥

ತೂಗಿದೆ ತೂಗಿದೆ ತೊಟ್ಟಿಲು।
ತೋಳಿಗೆ ಆಯಾಸವೆನಬೇಡ।
ಜೋ ಜೋ ಜೋ ಜೋ ಜೋ ಜೋ।
ಲಾಲಿ ಲಾಲಿ ಲಾಲಿ ಎಂದು ।
ಬಾಯಿಗೆ ನೋವು ಎನಬೇಡ॥

ಒಂದನೆ ಜೋಗುಳ ಅಂದ।
ಎರಡನೆ ಜೋಗುಳ ಚೆಂದ।
ಮೂರನೆ ಜೋಗುಳದಿಂದ।
ಜೋಜೋ ಜೋಜೋ ಲಾಲಿ ಕಂದ।
ಮುಗಿಸು ಮುಗಿಸು ಮೂರರಿಂದ॥

ಧ್ವನಿ : ಮಕ್ಕಳು ಬೇಕೇಬೇಕು।
ಆದರೆ ಎರಡೇ ಮೂರೇ ಸಾಕು।
ಜೀವನ ಸುಖವಾಗಿರಬೇಕಾದರೆ ಎರಡೇ ಮೂರೇ ಸಾಕು ॥ಪ॥

ಗಂಡಾದರೂ ಮೂರೇ ಸಾಕು, ಪೆಣ್ಣಾದರೂ ಮೂರೇ ಸಾಕು।
ದೇಹದ ಹಿತಕೂ। ದೇಶದ ಹಿತಕೂ। ಮಕ್ಕಳು ಮಿತವಾಗಿರಬೇಕು।
ಮೂರು ಮಕ್ಕಳು ಗಂಡೇ ಆದರೂ ಹೆಣ್ಣಿನ ಹಂಬಲ ಪಡಬೇಡಿ।
ಎಲ್ಲಾ ಮಕ್ಕಳು ಹೆಣ್ಣೇ ಆದರೂ ಗಂಡಿಗಾಗಿ ಗುರಿ ಇಡಬೇಡಿ।
ಹುಟ್ಟಿಸಿದವನು ಹುಲ್ಲು ಮೇಯಿಸನೆ ಎನ್ನುತ ಕೈ ಚೆಲ್ಲಲು ಬೇಡಿ
ಹುಟ್ಟಿದ ಮಕ್ಕಳ ವಿದ್ಯಾಭ್ಯಾಸ ಪೋಷಣೆಗೆ ಅಣಿಮಾಡಿ॥

ರಾಧೆ : ಕೇಳಿದೆಯಾ ಇನಿಯ ಬಾನುಲಿಯ ದನಿಯ।
ಕೀರೂತಿಗೊಬ್ಬ ಮಗನು ಸಾಲನೇ?
ಆರತಿಗೊಬ್ಬ ಮಗಳು ಸಾಲಳೇ?
ಸಂಖ್ಯೆ ಅತಿಯೇಕೆ? ಬಾಳ ಸೊಗಕೆ?॥

ಕೃಷ್ಣ : ನಾವು ಇಬ್ಬರು।
ನಮಗೆ ಇಬ್ಬರು॥

ರಾಧೆ : ಹೆಣ್ಣು ನನಗಾದರೆ।
ಗಂಡು ನಿಮಗಾಗಲಿ॥

ಕೃಷ್ಣ : ಗಂಡು ನನಗಾದರೆ।
ಹೆಣ್ಣು ನಿನಗಾಗಲಿ॥

ರಾಧೆ : ಗಂಡು ಹೆಣ್ಣು ಎರಡೇ।
ನಿಮಗು ನನಗು ಆಗಲಿ॥

ಕೃಷ್ಣ : ಬಾನಿನಲಿ ಚುಕ್ಕೆಯೆನಿತಿದ್ದಡೇನು?
ಚಂದ್ರನೊಬ್ಬನಿಗೆ ಸರಿಸಾಟಿಯೇನು?

ರಾಧೆ : ಮಿಣುಕು ಹುಳುಗಳೆನಿತಿದ್ದಡೇನು?
ಹಣತೆಗೆ ಸರಿ ಸಾಟಿಯೇನು?

ಕೃಷ್ಣ : ಹಣತೆಗಳು ಹಲವಿದ್ದಡೇನು?
ಭಾನುವಿಗೆ ಸಮವೇನು?

ರಾಧೆ : ಬಾಳ ಬಟ್ಟೆಯಲಿ ಹಳ್ಳತಿಟ್ಟು।
ಹಲವು ಚಿಂತೆಯಲಿ ಮತಿಗೆಟ್ಟು।
ಹತ್ತು ಕಟ್ಟುವೊಡೆ।
ಒಂದು ಮುತ್ತು ಕಟ್ಟು॥

ನಿರೂಪಕ : ಹಡೆದು ಇನ್ನೂ ವರುಷವಿಲ್ಲ।
ತಡೆ ಇನಿಯಾ ದುಡುಕದಿರು।
ಎಂದು ಎಚ್ಚರಿಸಿದಳು ರಾಧೆ ಕೃಷ್ಣನಿಗೆ॥

ರಾಧೆ : ಅಂತರವಿರಬೇಕು।
ಅಂತರವಿದ್ದೇ ಇರಬೇಕು।
ಒಂದು ಮಗುವು ಮತ್ತೊಂದು ಮಗುವಿಗೂ।
ತೀರ ಕಡಿಮೆಯೆನೆ ಮೂರು ವರುಷಗಳ ॥ ಪ ॥

ತಾಯಿಯು ಗೆಲುವಾಗಿರಲು।
ಮಕ್ಕಳು ನಗು ನಗುತಿರಲು।
ಸಂಸಾರವು ಸಮಸಾರವೆನಿಸಲು।
ಚಿರ ಯೌವನ ಚಿರ ಕಾಂತಿ ನೆಲೆಸಲು॥

ಅಂತರವಿರೆ ಮಗುವಿಗೆ ಪೋಷಣೆಯು।
ಹಂಚಿ ಹೋಗುವುದು ಆರ್ಥಿಕ ಹೊಣೆಯು॥

ಮೀರಿ ಬೆಳೆವುದು ಮಕ್ಕಳ ಪ್ರೀತಿ।
ಇದುವೇ ಹಿತಮಿತ ಜೀವನ ರೀತಿ।
ವ್ಯಕ್ತಿಯ ಹಿತವೇ ನಾಡಿನ ಹಿತವು।
ಶಕ್ತಿಯ ಗುಟ್ಟೇ ಮಕ್ಕಳ ಮಿತಿಯು॥

ನಿರೂಪಕ : ಇನಿಯಾ, ಒಂದಾಯಿತು।
ಎರಡಾಯಿತು, ಮೂರಾಯಿತು।
ಸಾಲದೇ? ಇನ್ನೂ ಸಾಲದೇ?
ಆಲಿಸು ಆ ದನೀ।
ಗೆಳತಿ ನೀಲ ಹಾಡುತಿಹಳು।
ಎಂದುಸುರಿದಳು ರಾಧೆ ಕೃಷ್ಣಗೆ॥

ನೀಲಾ : ಮುಂದಿನ ಮಗು ಈಗಿಲ್ಲ।
ಮೂರರ ನಂತರ ಮತ್ತಿಲ್ಲ।
ಹುಟ್ಟಿನಾ ಗುಟ್ಟನು ಬಲ್ಲ ಮಾನವನಿಗೆ
ಅತಿ ಸಂತಾನ ಬೇಕಿಲ್ಲ॥

ಅಂತರವಿಲ್ಲದೆ ತಾಯಿಗೆ ಭಾರ।
ಸಂತಸವಿಲ್ಲದೆ ತಂದೆಗೆ ಭಾರ।
ಗತಿಯಿಲ್ಲದೆ ಸರ್ವರಿಗೂ ಭಾರ।
ಮಿತಿ ಮೀರಿದರೆ ಭೂಮಿಗೆ ಭಾರ॥

ಉತ್ತಮ ಮಕ್ಕಳು ದೇಶಕೆ ಕೊಡುಗೆ।
ಅವರೆತ್ತರವೇ ದೇಶದ ಏಳಿಗೆ।
ನಮ್ಮಯ ಸಂತಸ ನಾಳಿನ ಪೀಳಿಗೆ।
ಮಿತವೇ ತಳಹದಿ ಸುಖದ ಬಾಳಿಗೆ॥

ನಿರೂಪಕ : ರಾಧಾ ಆಲಿಸು।
ಆ ದನಿಯಾ।
ಅತಿ ಮಕ್ಕಳಿಂದ।
ಪಡುವ ವೇದನೆಯ।
ಬಾಳ ಜಂಜಾಟದ ಗೋಳ।
ಎಂದನು ಕೃಷ್ಣ, ರಾಧೆಗೆ॥

ಗಂಗೆ : ಸಾಕಾಯ್ತೀ ಸಂಸಾರವವ್ವಾ । ಬಹು ।
ಮಕ್ಕಿಂದ ಸಂಸಾರ ಜಂಜಾಟವವ್ವಾ॥

ಎಲ್ಲರಂತಲ್ಲ ಎನ್ನ ಮಕ್ಕಳು।
ನೋಡಿ ನೋಡಿರಿಂಥ ಮಕ್ಕಳವ್ವ।
ಗೋಜಿನ ಮಕ್ಕಳವ್ವ । ನನ್ನ ।
ಸಂಸಾರ ಬಹು ಜಂಜಾಟವವ್ವಾ॥

ಮೋಜಿಗಾಗಿ ಗಂಡ ಮದ್ವೆಯಾದನವ್ವಾ।
ಮುದ್ದೆ ಉಂಡು ಮೂಲೆ ಹಿಡಿತಾನವ್ವಾ।
ಕುಟ್ಟು ಎನುತಾನೆ ಕುಟ್ಟೋಕವ್ವಾ।
ಭತ್ತಿಲ್ಲ ಏನು ಮಾಡಲವ್ವಾ।
ಬೋನ ಉಣ್ಣೋಕೆ ಮಕ್ಳು ಬಾಯಿ ಬುಡುತಾವೆ।
ಮಾಡೂ ಎನುತಾನೆ ಮಾಡಕ್ಕೆ ರಾಗ್ಯಿಲ್ಲ।
ಬೀಸೂ ಎನುತಾನೆ ಬೀಸೋಕ್ಕೆ ಜೋಳಿಲ್ಲ।
ಹೊಟ್ಟೆ ಬಿರಿಯಂಗೆ ತಿಂದು ಕಟ್ಟೆ ಮೇಲೆ ಕುಂದ್ರುತಾರವ್ವಾ॥

ನಿರೂಪಕ : ಅತಿ ಮಕ್ಕಳಾ ಕಾಟ।
ಮಿತ ಮಕ್ಕಳಾ ಆಟ।
ನೋಡಿದಳಾ ರಾಧೆ ಕುಡಿಗಣ್ಣಿನಲಿ।
ಎಚ್ಚರಿಸಿದಳು ಕೃಷ್ಣನಾ ಬಗೆಬಗೆಯಲಿ।
ಹಾಲು ನೀರಿನಂತೆ ಬೆರೆತರಿಬ್ಬರು ಜೀವನದಿ।
ಸಂಸಾರ ನೌಕೆಯಲಿ ತೇಲಿ ಸಾಗಿದರು।
ಸಂತಸದ ನೌಕೆಯಲಿ ತೇಲಿ ಸಾಗಿದರು।

ಸಂತಸದ ಜೋಗುಳವ ಹಾಡಿದರು।
ಮಿತ ಸಂಸಾರದಿಂದಲೆ ಸಂತಸ ಹೊಂದಿದರು॥

ರಾಧೆ : ನನ್ನಂತೆ ನೀನು।
ನಿನ್ನಂತೆ ನಾನು।
ಬಾಳಲು ಬಾಳು।
ಬಂಗಾರವಾಯಿತು॥

ಕೃಷ್ಣ : ನಿನ್ನಂತೆ ನಾನು।
ನನ್ನಂತೆ ನೀನು।
ಸಮರಸದಿಂದ।
ಬಾಳು ಸೊಗಸಾಯಿತು॥

ಹಿನ್ನೆಲೆ : ಅತಿಸುಖ; ಅತಿ ಸುಖ।
ಮಿತ ಮಕ್ಕಳಿಗೆ ಅತಿ ಸುಖ।
ಬಯಕೆ ಬಳ್ಳಿ ಚಿಗುರಲು।
ಮೊಗ್ಗು ಮೊಲ್ಲೆ ಅರಳಲು।
ಬಾಳು ಬೆಳಕ ಕಾಣಲು।
ಬಂಗಾರವಾಗಿ ಹೊಳೆಯಲು॥
ಜೇನು, ಬೇಕು, ಹಿತ - ಮಿತ।
ಜೀವನ ಸುಖ ಖಂಡಿತ।
ಹಗಲು ಇರುಳು ದುಡಿತ।
ಸೊಗ ಜೀವನ ಖಂಡಿತ।

ನಿವೇದಕ : ರಾಧಾ ಕೃಷ್ಣರ ಕನಸೆಲ್ಲಾ ನನಸಾಯಿತು।
ಬಾಳೆಲ್ಲ ಬಂಗಾರವಾಯಿತು ಮಿತ ಮಕ್ಕಳಿಂದ॥



# ನಾಗರ ಪಂಚಮಿ

ಧ್ವನಿ ೧ : ಆಷಾಢ ಮಾಸ ಮುಗಿದು ಶ್ರಾವಣಕ್ಕೆ ಕಾಲಿಡುತ್ತಿದ್ದಂತೆ ನಾಗರಪಂಚಮಿ ಹಬ್ಬ! ಮಳೆಗಾಲದ ಹಬ್ಬಗಳಲ್ಲಿ ಇದೂ ಒಂದು. ಮಹಿಳೆಯರಿಗೆ ವಿಶೇಷ ಹಬ್ಬ. ಭಾದ್ರಪದ, ಆಶ್ವೀಜ ಶುದ್ಧ ಪಂಚಮಿಯಲ್ಲಿ ನಾಗರ ಪೂಜಿಸಿದರೆ ಸರ್ಪದೋಷ ನಿವಾರಣೆ ಎಂಬುದು ಹಿರಿಯರ ನಂಬಿಕೆ.

ಧ್ವನಿ ೨ : ಬೇಸಿಗೆಯ ಬಿಸಿಲತಾಪ ಕಡಿಮೆಯಾಗಿ ಮಳೆ, ಚಳಿ ಆರಂಭವಾಗುತ್ತಿರಲು ಮೈಕೈ ಒಡೆಯುವುದು ಸಾಮಾನ್ಯ. ನಾಗರ ಪಂಚಮಿಯಂದು ದೇವರಿಗೆ ಎಳ್ಳಿನ ತಂಬಿಟ್ಟು, ಅಕ್ಕಿಯ ತಂಬಿಟ್ಟು, ಕಿಚಡಿ ನೈವೇದ್ಯ ಮಾಡಿ ಸೇವಿಸುವುದುಂಟು. ಇದರ ದೃಷ್ಟಿಯಾದರೂ ಎಳ್ಳೆಣ್ಣೆ ದೇಹಕ್ಕೆ ಸೇರಿದರೆ ಈ ಮೈಕೈ ಒಡೆಯುವುದು ತಪ್ಪಲೆಂದು ಇರಬೇಕು. ದೇವರ ಪೂಜೆ ಮಾಡಿ ನಮ್ಮ ಆರೋಗ್ಯವನ್ನೂ ಹೆಚ್ಚಿಸಿಕೊಳ್ಳುವ ವಿಧಾನ ಅದೆಷ್ಟು ಒಳಿತು?

ಧ್ವನಿ ೨ : ದ್ರಾವಿಡರು ಸಸ್ಯ ಪ್ರಾಣಿಗಳನ್ನು ಪೂಜಿಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿದುಬಂದ ವಿಷಯ. ಹಾಗೆಯೇ ನಾಗಪ್ಪನನ್ನು ಪೂಜಿಸುವುದನ್ನು ನಾವು ಕಾಣುತ್ತೇವೆ. ದೇಶದಾದ್ಯಂತ ಜಾತಿ - ಮತ ಬೇಧವಿಲ್ಲದೆ ನಾಗಪೂಜೆಯನ್ನು ಮಾಡುತ್ತಾರೆ. ನಾಗಪ್ಪನ ಹಿರಿಮೆ ಅತ್ಯಮೋಘವಾದುದು. ಆದಿಶೇಷನೆಂಬ ನಾಮಾಂಕಿತದಲ್ಲಿ ಭೂಮಿಯನ್ನು ಹೊತ್ತಿದ್ದಾನೆ. ವಿಷ್ಣುವಿನ ಹಾಸಿಗೆಯಾಗಿದ್ದಾನೆ. ಈಶ್ವರನ ಕೊರಳನ್ನು ಸುತ್ತಿದ್ದಾನೆ. ಗಣಪತಿಯ ಹೊಟ್ಟೆಯನ್ನು ಸುತ್ತಿದ್ದಾನೆ. ಅಂಥ ನಾಗಪ್ಪನ ಪೂಜೆಯೇ ನಾಗರಪಂಚಮಿ.

ಧ್ವನಿ ೧ : ಮನುಷ್ಯ ನಾಗರಹಾವನ್ನು ಕಂಡು ಭಯದಿಂದ ದೂರವಾಗಿರಲು ಪೂಜೆ ಮಾಡಿ ಮೊರೆಹೋಗಿರಬೇಕು. ಯಾವುದೇ ಪ್ರಾಣಿಯನ್ನು ನಾವು ಹಿಂಸೆ ಮಾಡಿದರೆ ತಾನೇ ಅವು ನಮ್ಮ ತಂಟೆಗೆ ಬರುತ್ತವೆ. ದೇವರು ಅವುಗಳ ರಕ್ಷಣೆಗೆ ಕೆಲವು ಸ್ಥಾನಗಳನ್ನು ಕೊಟ್ಟಿದ್ದಾನೆ. ಹಾಗೆಯೇ ಹಾವಿಗೆ ವಿಷವನ್ನು ಕರುಣಿಸಿದ್ದಾನೆ.

ಧ್ವನಿ ೨ : ನಾಗರ ಪಂಚಮಿಯಂದು ಹಾಲನ್ನು ಹುತ್ತಕ್ಕೆ ತನಿ ಎರೆಯುವುದನ್ನು ಕಾಣುತ್ತೇವೆ. ಗೆದ್ದಲು ಮನೆ ಮಾಡಿಕೊಂಡ ಹುತ್ತಕ್ಕೆ ಹಾವು ಬಂದು ಅವುಗಳನ್ನು ತಿನ್ನುವುದಲ್ಲದೆ ತನ್ನ ಮನೆ ಮಾಡಿಕೊಂಡು ಜೀವಿಸುತ್ತದೆ.

ಧ್ವನಿ ೧ : ಹುತ್ತಗಳಿಲ್ಲದ ಪ್ರದೇಶಗಳಲ್ಲಿ ಅರಳೀಮರದ ಕೆಳಗೆ ನಾಗರಪ್ರತಿಮೆ ಮಾಡುತ್ತಾರೆ. ಅಲ್ಲಿಗೂ ಕೆಲವರು ಪೂಜೆ ಮಾಡಿ ಹಾಲನ್ನೆರೆಯುತ್ತಾರೆ. ಅದನ್ನು ನೋಡಿಯೇ ಬಸವಣ್ಣನವರು ಹೇಳಿರಬೇಕು. 'ಕಲ್ಲು ನಾಗರ ಕಂಡರೆ ಹಾಲನೆರೆಯುವರಯ್ಯಾ, ದಿಟದ ನಾಗರ ಕಂಡರೆ ಕೊಲ್ಲುಕೊಲ್ಲೆಂಬರಯ್ಯಾ' ಎಂದು. ಕೆಲವರು ಲೋಹದಲ್ಲಿ ಮಾಡಿದ ನಾಗರ ಹಾವನ್ನು ಇಟ್ಟು ಹಾಲನ್ನು ಎರೆಯುವುದುಂಟು. ಕುಂಕುಮ, ಅರಸಿನ ಮುಂತಾದವು ಸರ್ಪದ ಕಣ್ಣಿಗೆ ಬೀಳಬಾರದು ಎಂಬ ಕಾಳಜಿ ವಹಿಸಿ ಪೂಜಿಸುವರು. ನಾಗಪ್ಪನನ್ನು ಕಂಡರೆ ಅಷ್ಟೊಂದು ಭಯ-ಭಕ್ತಿ ನಮ್ಮ ಜನಗಳಿಗೆ.

ಧ್ವನಿ ೨ : ಜನಮೇಜಯ ರಾಜ ತಾನು ಮಾಡುತ್ತಿದ್ದ ಸರ್ಪ ಯಜ್ಞವನ್ನು ನಿಲ್ಲಿಸಿ ಮಹಾಭಾರತವನ್ನು ಕೇಳಲು ಪ್ರಾರಂಭಿಸಿದುದು ಈ ಶ್ರಾವಣ ಶುದ್ಧ ಪಂಚಮಿಯ ದಿನ. ಇದೇ ನಾಗರ ಪಂಚಮಿ.

ಧ್ವನಿ ೧ : ಬಹಳ ಹಿಂದಿನಿಂದಲೂ ಈ ಹಬ್ಬ ನಡೀತಿತ್ತು ಅನ್ನೋದಕ್ಕೆ ನಮ್ಮ ಜನಪದ ಕಾವ್ಯದಲ್ಲಿ ಸಿಗುವ ಹಾಡುಗಳು, ಕಥೆಗಳು ಸಾಕ್ಷಿಯಾಗಿ ನಿಂತಿವೆ. ನಾಗರ ಪಂಚಮಿ ಒಂದು ಜಾನಪದ ಹಬ್ಬ. ಒಂದೊಂದು ಪ್ರಾಂತ್ಯದಲ್ಲಿ ಇದು ಒಂದೊಂದು ರೀತಿಯ ವೈವಿಧ್ಯತೆಯಿಂದ ಕೂಡಿದೆ. ಪೂಜೆ, ಆಚರಣೆ, ಊಟ ತಿಂಡಿಗಳ ಸಿದ್ಧತೆಯಲ್ಲಿ ವ್ಯತ್ಯಾಸಗಳನ್ನು ಕಾಣಬಹುದು.

ಧ್ವನಿ ೧ : ನಾಗರ ಪಂಚಮಿಗೆ ಹೆಣ್ಣು ಮಗಳು ತವರಿಗೆ ಬಂದು ಈ ಸಂತೋಷದ ಹಬ್ಬದಲ್ಲಿ ಭಾಗವಹಿಸುತ್ತಾಳೆ. ತಂದೆ - ತಾಯಿ ಇಲ್ಲದಿದ್ದರೂ ಅಣ್ಣ - ತಮ್ಮಂದಿರು ಈ ಹಬ್ಬಕ್ಕೆ ಆಷಾಢಮಾಸಕ್ಕೂ ಮೊದಲೇ ಅಕ್ಕ - ತಂಗಿಯರನ್ನು ಕರೆತರುತ್ತಾರೆ.

ಧ್ವನಿ ೨ : ಜನಪದ ಸಾಹಿತ್ಯದಲ್ಲಿ ಇದರ ಬಗ್ಗೆ ಹಲವಾರು ಪದ್ಯಗಳಿವೆ.

ಧ್ವನಿ ೧ : ನಾಗರ ಪಂಚಮಿಗೆ ಅಣ್ಣ ಕರೆಯಲಿಕ್ಕೆ ಬರಲಿಲ್ಲ ಅಂತ ಎಷ್ಟು ತವಕವನ್ನು ಮತ್ತೊಬ್ಬ ಸ್ನೇಹಿತೆಯ ಜೊತೆಯಲ್ಲಿ ಹೀಗೆ ತೋಡಿಕೊಳ್ಳುತ್ತಿದ್ದಾಳೆ.....

(ಹೆಣ್ಣು ಧ್ವನಿಯಲ್ಲಿ)

ನಾಗರಪಂಚಮಿ ಬಂತು ನೋಡ ತಂಗೀ।
ಅಣ್ಣ ಯಾಕ ಬರಲಿಲ್ಲ ಕರಿಲಾಕ ॥ ಪಲ್ಲವಿ ॥

ನನ್ನ ಪತಿ ಇರುವುದು ರಾಜ ಮಂದಿರಾ।
ಯವ್ವಾ ಹ್ಯಾಂಗ ಇರಲಿ ತೌರುಮನಿ ಮರತ ॥ ೧ ॥

ನನ್ನ ತೌರೂರ ಪಂಚಮಿ ಭಾರಿ।
ವಾರಗಿ ಗೆಳತ್ಯಾರು ನಾವುಕೂಡಿ।
ಒಳ್ಳೆ ಸೊಗಸೀಲೆ ಜೋಕಾಲಿಯೇರಿ ॥ ೨ ॥

ಎಳ್ಳು ಅವಲಕ್ಕಿ ತಂಬಿಟ್ಟು ಕುಟ್ಟಿ।
ನಾನು ತಿನುವಾಕಿ ಮನ ಬಂದ್ಹಾಂಗ।
ಯಾರಿಗೆ ಏನೇನು ಉಳಿದ್ಹಾಂಗ ॥ ೩ ॥

ನನ್ನ ತೌರೂರು ದೇವಪುರ ನಗರ।
ಅಲ್ಲಿ ನೆಲಸ್ಯಾನ ಬಸವಣ್ಣ ದೇವರ
ಯೆವ್ವಾ ಬೇಡುವೆ ನಾನೊಂದು ವರವ ॥ ೪ ॥

ಧ್ವನಿ ೧ : ಮಗಳು ಬರದೇ ಹೋದಾಗ ತಾಯಿ ಮಗಳನ್ನು ನೆನೆದುಕೊಳ್ಳುತ್ತಾಳೆ.

ಹೆಣ್ಣು : ತಾಯಿ ತನ್ನ ಮಗಳ ಯಾವಾಗ ನೆನೆವಾಳು
ಉಂಬಾಗ ಮುಡಿಯುವಾಗ। ತಾಯವ್ವ
ಹಿತ್ತಲ ಹೂ ಕುಯ್ವಾಗ ಗೋಳಿಡುವಾಳು॥

ಧ್ವನಿ ೧ : ಆ ಹೆಣ್ಣು ಮನದಲ್ಲೇ ಅಣ್ಣ ಬೇಗ ಬಂದು ನಾಗರ ಪಂಚಮಿ ಕರೆದುಕೊಂಡು ಹೋಗಲಿ ಎಂದು ಚಿಂತಿಸುತ್ತಾಳೆ.

ಹೆಣ್ಣು : ಒಡಹುಟ್ಟು ಒಂದು ಜನುಮ ಕಡೆಗೆ ಜನುಮಗಳೆಲ್ಲ
ಕಡುಕೋಪ ಬೇಡ ಅಣ್ಣಯ್ಯ। ನಿನ್ನ ತಂಗಿ
ಒಡಹುಟ್ಟು ನೆನೆದು ಅಳುವಾಳು॥

ಧ್ವನಿ ೨ : ಅಣ್ಣ ಬರುವ ತನಕ ಅಂಗಳವನ್ನೆಲ್ಲಾ ಸಿಂಗರಿಸಿ ಆತನ ಬರುವಿಕೆಗೆ ತಂಗಿ ಕಾದಿರುತ್ತಾಳೆ. ತವರಿನಲ್ಲಿ ಮಾಡಿದ ನಾಗರಪಂಚಮಿ ಜ್ಞಾಪಕ ಬಂದು -

ಗುಳ್ಳವ್ವನ ಮಣ್ಣ ತರಲಿಲ್ಲ
ಗುಲಗಂಜಿ ಹಚ್ಚಿ ಆಡಲಿಲ್ಲ
ಸುಳ್ಳೇ ಆದೀತೇನ ನಾಗರಪಂಚಮಿ ॥ ಸುವ್ವಿನಾರಿ ॥

ಹುತ್ತಿನ ಮಣ್ಣ ತರಲಿಲ್ಲ
ಹೂಗಳ ಹಚ್ಚಿ ಆಡಲಿಲ್ಲ
ಸುಳ್ಳೇ ಆದೀತೇನ ನಾಗರಪಂಚಮಿ ॥ ಸುವ್ವಿನಾರಿ ॥

ಆಷಾಢ ಪಾಸಾಡ ಹೋದವ।
ಯವ್ವ ಕಾಸ ಅಣ್ಣ ಬರಲಿಲ್ಲ
ಏಸ ದಿನ ನೋಡಲಿ ಅಣ್ಣ ದಾರಿ ॥ ಸುವ್ವಿನಾರಿ ॥

ಹೆಣ್ಣು : ಕಾರ್ಹುಣಮಿ ಹಬ್ಬಕ ಕರಿಲಾಕ ಬರಬ್ಯಾಡ
ಕಾಲ ಬಾಡೀಗಿ ಕೊಡಬ್ಯಾಡ। ನನ್ನಣ್ಣ
ಹೊನ್ನ ದೀವಳಿಗೆ ಮರಿಬ್ಯಾಡ

ಹೆಣ್ಣು : ಅಂಗಾರೆ ನಿಮ್ಮಣ್ಣ ಅಂತವ್ನಾ?

ಹೆಣ್ಣು : ಏನಂದೀ?

ನಮ್ಮಣ್ಣ ಬಲು ಸಾವಕಾರ
ಸಂತಿಪ್ಯಾಟಿ ಮಾಡುವರ
ಯಾವ ಮಾತಿಂದೇನ ಹೇಳು ॥ ಸುವ್ವಿನಾರಿ ॥

ನಮ್ಮಣ್ಣನ ಹೆಂಡತಿ ಆಕಿ
ಬಾಳ ಬೆಂದಲ ಬೆರಕಿ
ಬ್ಯಾಡೆಂದಿದ್ದಾಳೇನ ಪೂರ ॥ ಸುವ್ವಿನಾರಿ ॥

ಊರ ಬಿಟ್ಟು ಮೂರು ಹರಿದಾರಿ।
ಹತ್ತಿರ ಹಳ್ಳ ಸನೆ ಇಲ್ಲ
ಯಾರ ಕೈಯಲಿ ಹೇಳಿ ಕಳುಹಲಿ ॥ ಸುವ್ವಿನಾರಿ ॥

ಹೆಣ್ಣು : ಯೇನೂ ಯೋಸ್ನೆ ಮಾಡ್ಬೇಡ ಅಕ್ಕ. ನಿಮ್ಮ ಅಣ್ಣ ಬಂದು ಬುಡ್ತಾನೆ.

ಹೆಣ್ಣು : ಆಂಗಂದಯಾ.......?

ಹೆಣ್ಣು : ಹ್ಞೂಂ.....

(ಸಂಗೀತ)

* * *

ತಾಯಿ : ಹೊತ್ತು ಮುಳುಗಿ ಕತ್ತಲಾಗಿ
ದೀಪ ಹಚ್ಚೊ ವ್ಯಾಳ್ಯಾ ಆಗಿ
ಅಣ್ಣ ಬಂದನವ್ವ ಮೂರು ಚಂಜಿ॥ ಸುವ್ವಿನಾರಿ ॥

ಅಣ್ಣನ ಮಾರಿ ಕಂಡಾಳ
ಕಣ್ಣಿಗೆ ನೀರ ತಂದಾಳ
ನಾರಿ ಮಾಡ್ಯಾಳವ್ವ ಸಣ್ಣ ಮಾರಿ ॥ ಸುವ್ವಿನಾರಿ ॥

ಧ್ವನಿ ೧ : ಅಣ್ಣ ಬಂದು ತಂಗಿಯನ್ನು ನೋಡಿ ಸಮಾಧಾನಿಸುತ್ತಾನೆ -

ಗಂಡು : ಯಾಕ ಅಳತಿದಿ ತಂಗೆವ್ವ
ಸಾಕು ಸುಮ್ಮನಿರ ಹೋಗ
ಮೀರಿ ಹೋಗಿಲ್ಲವ್ವ ನಾಗರಪಂಚಮಿ ॥ ಸುವ್ವಿನಾರಿ ॥

ತಾಯಿ : ಅಣ್ಣ - ತಂಗಿ ಮಾತಾಡಿಕೊಂಡು
ಅತ್ತಿ ಮಾವನ ಕೇಳ್ಯಾರ
ನಾಳೆ ನಮ್ಮ ತಂಗೀನ ಕಳವರಿ ॥ ಸುವ್ವಿನಾರಿ ॥

ರೊಟ್ಟಿ ಬುತ್ತಿ ಮಾಡಿಕೊಂಡು
ಎತ್ತಿನ ಮ್ಯಾಲೆ ಹೇರಿಕೊಂಡು
ನಾರಿ ಇಟ್ಟಾಳವ್ವ ಕರಿಸೀರಿ॥
ಅಗಸಿ ಹೊಲಾ ಕಂಡಾಳ
ಅವಸರ ಮಾಡಣ್ಣ ಎತ್ತ
ಯಾವಾಗ ನೋಡೆನವ್ವ ತಾಯಿ ಮಾರಿ ॥

ತಂಗಿ ಕರಕೊಂಡು ಕೆಂದೀನ ಹೊಡಕೊಂಡು
ತಂಗೀ ಮಕ್ಕಳಿಗೆ ಬಿಸುಲೆಂದು । ತಮ್ಮಯ್ಯ
ವಲ್ಲಿ ಮುಂಜೆರಗ ಹಿಡಿದಾನೇ॥

ಹೆಣ್ಣು : ತುಂಬುತ ತುಳುಕೂತ ನಿಂಬೆಯ ಕಾಯೆಣೇಸುತ
ನಿಂಬೇಯ ಗೊನೆಯ ಮುರಿಯೂತ । ನಾ ಬಂದೆ
ಚಂದ್ರಮತಿ ನನ್ ತೌರೀಗೆ॥

ಧ್ವನಿ ೧ : ಹೆಣ್ಣು ತೌರುಮನೆಯಲ್ಲಿ ಅಕ್ಕ - ತಂಗಿಯರನ್ನು ಭೇಟಿ ಮಾಡುತ್ತಾಳೆ. ಆಗ ಅಕ್ಕ - ತಂಗಿಯನ್ನು ಕುರಿತು -

ಹೆಣ್ಣು : ನಾಗರಪಂಚಮಿಗೆ ಬಳೆ ತೊಟ್ಟಿದ್ದಯಿ ಹೊಸವು
ನೀಲೀನ ಬಳೆಯ ತೊಟ್ಟು ನೀರಿಗ್ಹೋಗೋ ತಂಗ್ಯಮ್ಮ
ನಿನಗೆ ಯಾವ ತಮ್ಮಯ್ಯ ಬಳಿ ತೊಡಿಸಿದನೆ
ದೊಡ್ಡ ತಮ್ಮ ಕರೆತಂದು ಚಿಕ್ಕ ತಮ್ಮ ತೊಡಿಸೀದ
ವೀರಣ್ಣನೆಂಬ ಜಗಲೀಯ
ವೀರಣ್ಣನೆಂಬ ಜಗಲೀಯ ಕಲ್ಲಿನ ಮೇಲೆ
ನನ್ನಣ್ಣ ನನಗೆ ತೊಡಿಸೀದ

ಧ್ವನಿ ೧ : ಹೆಣ್ಣಿನ ತೌರ ಆಸೆಯನ್ನು ಅಣ್ಣ ಪೂರೈಸಿದ. ಹಬ್ಬದ ನೆಪದಲ್ಲಿ ಹೊಸಬಳೆ, ಹೊಸಬಟ್ಟೆ, ವಿಶೇಷ ಹಬ್ಬದೂಟ, ತಿಂಡಿಗಳನ್ನು ತೌರಿನಲ್ಲಿ ಪಡೆದು ಸಂತೋಷಪಡುತ್ತಾಳೆ. ಪ್ರಪಂಚದ ಜಂಜಾಟಗಳನ್ನು ಮರೆತು ಸಂತೋಷವಾಗಿ ಈ ಹಬ್ಬದ ದಿನವಾದರೂ ದೇವರನ್ನು ನೆನೆಯಲೆಂದು ನಮ್ಮ ಹಿರಿಯರು ಇದನ್ನು ಸಂಪ್ರದಾಯವಾಗಿ ಬೆಳೆಸಿಕೊಂಡು ಬಂದಿದ್ದಾರೆ.

ಧ್ವನಿ ೨ : ಈ ಹಬ್ಬವನ್ನು ಉತ್ತರ ಕರ್ನಾಟಕದಲ್ಲಿ ಬೇರೆ ರೀತಿ ಆಚರಿಸುತ್ತಾರೆ. ಅವರ ಊಟ - ತಿಂಡಿ ವೈವಿಧ್ಯತೆಗಳೇ ಬೇರೆ. ಇವರು ಜೋಳದ ಹರಳಿನ ಉಂಡೆ, ಉಸಲಿ, ಕಡಬು ಮಾಡುತ್ತಾರೆ. ಹುತ್ತದ ಮಣ್ಣಿನಲ್ಲಿ ಏಳು ಹೆಡೆ ಸರ್ಪ ಮಾಡಿ ಮನೆಯವರ ಎಲ್ಲರ ಹೆಸರನ್ನು ಹೇಳಿ 'ನಿನಗರ್ಪಿತ' ಎಂದು ಹಾಲನ್ನು ತನಿ ಎರೆದು, ಎಡೆ ತೋರಿ ತಿಂಡಿಗಳನ್ನು ತಿನ್ನುವರು. ಜೋಕಾಲಿ ಕಟ್ಟಿ ವಯಸ್ಸಿನ ಹೆಣ್ಣು ಮಕ್ಕಳು ಗುಂಪಿನಲ್ಲಿ ಆಡುತ್ತಾರೆ. ಒಬ್ಬರು ಕುಂತು ಇನ್ನೊಬ್ಬರು ನಿಂತು ಜೋಕಾಲಿ ಆಡುವರು. ಉಯ್ಯಾಲೆ ಆಡಿ ಹಾಡುವ ಪರಿ ಇದು -

"ನಾಗಪ್ಪಗ್ಹಾಲ ಹುಯ್ಯೋಣ
ನಾಗರ ಹೆಡೆಯ್ಹಾಂಗ ಆಡೋಣ
ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ
ನಾಗಪ್ಪಗ್ಹಾಲಾ ಎರೆಯೋಣ ನನಗೆಣತಿ ।
ನಾಗರ ಹೆಡೆಯ್ಹಾಂಗ ಆಡೋಣ"

ಧ್ವನಿ ೧ : ನಾಗರಪಂಚಮಿ ಬಗ್ಗೆ ಮತ್ತೊಂದು ಕಥೆ ಹೇಳ್ತೀನಿ. ಹಿಂದೆ ಕಶ್ಯಪ ಅದಿತಿ ಮತ್ತು ದಕ್ಷಬ್ರಹ್ಮನ ಮಕ್ಕಳಾದ ವಿನತೆ, ಕದ್ರು, ಮೊದಲಾದ ಹನ್ನೆರಡು ಜನ ಪುತ್ರಿಯರನ್ನು ಮದುವೆ ಆಗಿದ್ದ. ಅದಿತಿಗೆ ಹನ್ನೆರಡು ಮಕ್ಕಳಾದರು. ಕದ್ರುವು ಗರ್ಭವತಿ ಆಗಿದ್ದಾಗ ವಿನತೆಯು ಸವತಿಯ ಮಾತ್ಸರ್ಯದಿಂದ ತಾನು ಗರ್ಭವತಿಯಾಗುವುದಕ್ಕಿಂತ ಮುಂಚೆಯೇ ಆತುರದಲ್ಲಿ ಮೊಟ್ಟೆ ಇಟ್ಟಳು. ಅದರಿಂದ ಹೆಳವನಾದ ಅರುಣ ಹುಟ್ಟಿದ. ಆಮೇಲೆ ಗರುಡ ಹುಟ್ಟಿದ. ಕದ್ರುವಿಗೆ ತಕ್ಷಕ ವಾಸುಕಿ ಮುಂತಾದವರು ಜನಿಸಿದರು. ಗರುಡ ತನ್ನ ಮಲತಾಯಿ ಕದ್ರುವಿನ ಮಕ್ಕಳಾದ ನಾಗರಿಗೆ ಶತ್ರುವಾದನು. ನಾಗರು ಕಶ್ಯಪನ ಉಪದೇಶದಿಂದ ತಪವನ್ನಾಚರಿಸಿ ಲಿಂಗಾಕಾರದ ರತ್ನವನ್ನು ಧರಿಸಿ ಪಾತಾಳ ಸೇರಿದರು. ತಕ್ಷಕನು ಇಂದ್ರನಿಗೆ ಮಿತ್ರನಾಗಿ ಆಸ್ತಿಕ ಮಹರ್ಷಿಯ ಸಹಾಯದಿಂದ ಜನಮೇಜಯನು ನಡೆಸುತ್ತಿದ್ದ ಸರ್ಪಯಾಗದಲ್ಲಿ ನಾಗಕುಲವನ್ನು ರಕ್ಷಿಸಿದನು. ವಾಸುಕಿ ಮೊದಲಾದವರು ಗರುಡನ ಹಾವಳಿ ತಾಳಲಾರದೆ ಶಿವನ ಮೊರೆಹೊಕ್ಕರು. ಆಗ ಶಿವ ಹಾವನ್ನು ತನ್ನ ಕಂಠಾಭರಣ ಮಾಡಿಕೊಂಡ. ಈ ವಾಸುಕಿಯೇ ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲ್ಲಿಗೆ ಹೆಡೆಯಾಗಿ, ಸಮುದ್ರಮಥನ ಕಾಲದಲ್ಲಿ ಮಂದಾರ ಪರ್ವತವೆಂಬ ಕಡೆಗೋಲಿಗೆ ಹಗ್ಗವಾಗಿಯೂ ಇದ್ದನು. ಸರ್ಪ - ಗರುಡ ಜಾತಿ ವೈಷಮ್ಯವಿದ್ದರೂ ವಿಷ್ಣುವಿನ ಬಳಿ ಅನ್ಯೋನ್ಯ ಅಣ್ಣ - ತಮ್ಮಂದಿರು. ಇಬ್ಬರೂ ವಿಷ್ಣುವಿನ ವಾಹನಗಳು.

ಧ್ವನಿ ೨ : ಅನೇಕ ಶರಣರು, ಹಿರಿಯರು ಪ್ರಾಣಿಗಳ ಮೇಲೆ ದಯೆಯಿಡಿ ಎಂದು ಹೇಳಿದ್ದಾರೆ. ಹಾಗೆಯೇ ನಮ್ಮ ಹಿಂದಿನವರು ಪ್ರಾಣಿಗಳನ್ನು ಭಕ್ತಿಯಿಂದ ಪೂಜೆ ಮಾಡಿಕೊಂಡು ಬಂದರು. ಹಾವಿನಂಥ ಪ್ರಾಣಿಯ ಮೇಲೂ ಅನುಕಂಪ ಬರಲಿ ಎಂಬ ದೃಷ್ಟಿಯಿಂದ ಅವುಗಳನ್ನು ಪೂಜಿಸಿಕೊಂಡು ಬಂದರು.

ಧ್ವನಿ ೧ : ಅಣುರೇಣು ತೃಣ ಕಾಷ್ಠಗಳಲ್ಲೂ ಈ ದೈವಾಂಶ ಇದೆ ಎಂದ ಮೇಲೆ ನಾಗರಹಾವು ಕೂಡಾ ಏಕೆ ದೈವಾಂಶಸಂಭೂತವಾಗಿರಬಾರದು? ಅದರ ಸಂಕೇತವಾಗಿ ನಾಗರಪಂಚಮಿ ಹಬ್ಬವನ್ನು ಆಚರಿಸುತ್ತಾ ಬಂದಿದ್ದೇವೆ.

*

# ಎಳ್ಳು - ಬೆಲ್ಲ

ಧ್ವನಿ ೧ : ಭಾರತದಾದ್ಯಂತ 'ಸಂಕ್ರಾಂತಿ' ಹಬ್ಬವನ್ನು ಆಚರಿಸದೆ ಇರುವವರೇ ಅಪರೂಪ. ಸಂಕ್ರಾಂತಿ ಎಂದರೆ 'ಉಜ್ವಲವಾದ ಬೆಳಕು', 'ಹೊಸ ತಿರುವು' ಎಂದರ್ಥ.

ಧ್ವನಿ ೨ : ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗುವುದೇ ಸಂಕ್ರಮಣ.

ಧ್ವನಿ ೩ : ಸೂರ್ಯನು ಮಕರ ರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳು ಪಯಣ ಬೆಳೆಸುತ್ತಾನೆ. ಈ ದಿನವನ್ನೇ 'ಮಕರ ಸಂಕ್ರಾಂತಿ' ಎಂದು ಕರೆಯುವುದು. ಹಿಂದೂಗಳು ಇದನ್ನು 'ಉತ್ತರಾಯಣ ಪುಣ್ಯಕಾಲ' ಎನ್ನುವರು.

ಧ್ವನಿ ೧ : ಮಕರ ಸಂಕ್ರಾಂತಿ ಹಬ್ಬ ಸಾಮಾನ್ಯವಾಗಿ ಜನವರಿ ತಿಂಗಳ ಹದಿನಾಲ್ಕರಂದು ಬೀಳುತ್ತದೆ.

ಧ್ವನಿ ೨ : ಯುಗಾದಿ ವರ್ಷದ ಮೊದಲ ಹಬ್ಬವಾದರೆ, ಸಂಕ್ರಾಂತಿ ಕೊನೆಯದು. ವಸಂತ ಋತುವಿನ ಬೇಸಾಯದ ಆರಂಭದ ದಿನದಲ್ಲಿ ಯುಗಾದಿಯನ್ನು ಆಚರಿಸಿದರೆ, ಸಂಕ್ರಾಂತಿ ಫಸಲು ಕೊಯಿಲಿನ ದಿನ ಆಚರಿಸುವ ಹಬ್ಬ. ಸುಗ್ಗಿಯ ಹಿಗ್ಗಿನ ಹಿರಿ ಹಬ್ಬ.

ಧ್ವನಿ ೩ : ಕಣದಲ್ಲಿ ಭತ್ತ ಬಡಿದ ರೈತ ಅದನ್ನು ಒಕ್ಕಣೆ ಮಾಡುತ್ತಿದ್ದರೆ, ಕೆಲವರು ಮೇಟಿಗೆ ದನಗಳನ್ನು ಕಟ್ಟಿ ಹುಲ್ಲನ್ನು ತುಳಿಸುತ್ತಾ "ಹೊಯ್ಲಿಗಾ.... ಸ್ವಾಮಿ... ಒಯ್ಲಿಗೋ.....ಒಯ್ಲಿಗೋ" ಎಂದು ಹಿಗ್ಗಿನಿಂದ ಹಾಡುತ್ತಾರೆ. ಮತ್ತೆ ಕೆಲವರು ಜೊಳ್ಳನ್ನು ತೂರಲು ವಾಸುದೇವನನ್ನು ನೆನೆಯುತ್ತಾರೆ. ಅಣಿಮುತ್ತಿನ ಕಣವನ್ನು ಸಿದ್ಧಪಡಿಸುತ್ತಾರೆ. ಆ ಸಂದರ್ಭದಲ್ಲಿ ರೈತರ ಹಿಗ್ಗು ವರ್ಣಿಸಲಸದಳ!

ಸಮೂಹ ಗೀತೆ :-

"ಒಲಿಗ್ಯ.... ಒಲಿಗ್ಯ...... ಒಲಿಗ್ಯ......
ಹಿಗ್ಗಾಳಿ ಮುಗ್ಗಾಳಿ ಬರದಿರು ಕಣಕೆ
ಕುಗ್ಗಿದ ಗುಣವ ಕೊಡದಿರು ಮನಕೇ ॥ ಒಲಿಗ್ಯಾ ॥

ಮೂಡಲ ಗಾಳಿಗೆ ಏನ್ಬಂತು ಮಾಯ
ನೋಡಿ ನೀ ದಯಮಾಡೋ ದೇವ ಶಿವರಾಮ
ಕೂಡೀದ ರಾಸೀಗೆ ಕೊಡುವನು ಆಯ ॥ ಓಲಿಗ್ಯಾ ॥

ಎತ್ತೀನ ಪಾದದ ಮುತ್ತಿನ ಜೋಳ
ಸುತ್ತ ಗುಡಿಸೇನು ಹವಳದ ಕಾಳ
ಅತ್ತಿಗಕ್ಕಯ್ಯರ ಬಳೆಗಳ ತಾ।
ಹೊತ್ತಾತು ತರಬೇಕು ನೂರಾರು ಆಳ ॥ ಓಲಿಗ್ಯಾ ॥

ಮಾಯದ ಗಾಳಿ ಬಂತು ಬರ್ತಾನೆ ಬೀಸಿ
ಶ್ರೀಶೈಲ ಶಿಖರಕ್ಕೆ ಸಮನಾದ ರಾಶಿ
ಮುಂದೇವ್ರಿಗ್ಹೋಗಾಕೆ ಬಲು ದೂರ ಕಾಸಿ
ಮಲ್ಲಿಗೆ ದಂಡೇಲಿ ಪೂಜೇವು ರಾಶಿ ॥ ಓಲಿಗ್ಯಾ ॥

ಧ್ವನಿ ೧ : ಒಂದೊಂದು ಪ್ರದೇಶದಲ್ಲಿ ಒಂದೊಂದು ರೀತಿಯ ಆಚರಣೆ. ಕೊಡಗಿನಲ್ಲಿ ರೈತರ ಮನೆಯವರೆಲ್ಲಾ ಇಷ್ಟದೇವರನ್ನು ಪ್ರಾರ್ಥಿಸಿ ಆಕಾಶದತ್ತ ಗುಂಡೊಂದನ್ನು ಹಾರಿಸಿ ಗ್ರಾಮಸ್ಥರು ಪರಸ್ಪರ ಕೋಲು ಹೊಡೆಯುತ್ತಾ ಸಂತೋಷದಿಂದ ಹಾಡುವ ಹಾಡು ಅದೆಷ್ಟು ಇಂಪು!

ಸಮೂಹ ಗೀತೆ:-

ಪೂಮಾಲೆ ಮಂಡಲ್ ಕೋಲ್‌ಕ್‌ಳಿಂಜ।
ಪೋಯಿಲೇ ಪೋಯಿಲೇ॥
ಓಂಕಾರ ಬೆಚ್ಚಿತ್ ಊಡುವ ಕೊಂಜ್
ರೀಂಕಾರ ಬೆಚ್ಚಿತ್ ಕೊಟ್ಟುವ ಪರೆ
ಏಳಂದರತ್ತಾಟ್ ಏಳ್ ಸುತ್ತಾಡಿ
ಕೋಲ್‌ಕ್ ಕೋಪೊಜ್ಜಿ ಕೈಯಡ್‌ತ್ತಾಡಿ।
ಬಗ್ಗಿ ಬಾ ಪುತ್ತರಿನೇಂಡ್ ಬಾಕೋಲ್।
ಕೊಟ್ಟಡ ವೇದ ನೀ ಊದ್ ಪೊರೆಯ॥

ಧ್ವನಿ ೧ : ಹಬ್ಬ ಹರಿದಿನಗಳು ಧರ್ಮ ಶ್ರದ್ಧೆಯ ಪ್ರತೀಕ. ಇಹಪರದ ಚಿಂತನೆಯ ಸಾಧನೋಪಾಯಗಳು. ಹಬ್ಬಗಳೆಂದರೆ ಬರೇ ಉಂಡು ಉಟ್ಟು ನಲಿದಾಡುವದಷ್ಟೇ ಅಲ್ಲ, ಅಂತರಂಗದ ಶುದ್ಧಿ ಮಾಡುವುದು ಮುಖ್ಯ ಧ್ಯೇಯ ಎಂಬುದು ಕೆಲವರ ಅಭಿಮತ.

ಧ್ವನಿ ೨ : ನಮ್ಮ ಹಳ್ಳಿಯ ರೈತಾಪಿ ಜನಗಳು ಶ್ರಮಜೀವಿಗಳು. ತಾವು ಬೆಳೆದ ತರಕಾರಿ, ಸೊಪ್ಪು, ಹಣ್ಣು - ಹಂಪಲುಗಳನ್ನು ಪೇಟೆಗೆ ಮಾರುವರು. ಹಾಲು ಹಣ್ಣುಗಳನ್ನು ಪೇಟೆಯ ಜನಕ್ಕೆ ಕೊಟ್ಟು, ತಾವು ಪೌಷ್ಟಿಕ ಆಹಾರ ಕಾಣದೆ ಕಷ್ಟ ಜೀವನವನ್ನು ಸಾಗಿಸುವರು. ಆ ದೃಷ್ಟಿಯಿಂದ ಹಬ್ಬ ಹರಿದಿನಗಳನ್ನು ಮಾಡಿ ಆ ದಿನವಾದರೂ ಪೌಷ್ಟಿಕ ಆಹಾರವನ್ನು ಸೇವಿಸಲೆಂದೇ ಹುಟ್ಟಿದೆಯೇನೋ ಹಬ್ಬ!

ಧ್ವನಿ ೧ : ಒಕ್ಕಲಿಗರಿಗೆ ಹೊಲಗೆಲಸವೇ ಕಾಯಕ, ಸುಗ್ಗಿಯೇ ದಾಸೋಹ. ಸಮಾಜದಲ್ಲಿ ಒಕ್ಕಲಿಗನು ತನ್ನ ಗಳಿಕೆಯನ್ನು ಹೇಗೆ ಬಳಸುತ್ತಿದ್ದಾನೆಂಬುದು ಇಳಿಹಾಳ ಬೊಮ್ಮಯ್ಯನ ಹಂತಿಯ ಹಾಡಿನಲ್ಲಿ ಬಂದಿದೆ.

ಸಮೂಹ ಧ್ವನಿ :-

ಇಳಿಹಾಳ ಬೊಮ್ಮಯ್ಯ। ಹೊಲಗೆಲಸ ಕಾಯಕವ
ನಲುಮೆಯಲಿ ಸುಗ್ಗಿ ದಾಸೋಹ। ಹರಸೇವೆ
ಸಲಿಸಿ ಲಿಂಗದೊಳ ಬಯಲಾದ॥

ಮೂಡಲ ಹೋರಿಗೆ ಮುರಗೀಯ ಕಟಿಕೊಂಡು।
ಸವಳಾಗಿ ಹಂತಿ ತುಳಿದನೋ॥

ಹಡ ಹವಳ್ಳನ ಕಟ್ಟು ಗಂಡುಗಳ್ಯಾನ ಕಟ್ಟು
ಮಾಲಿಂಗನ ಕಟ್ಟು ಮೇಟ್ಯಾಗ । ನಮ್ಮತ್ತ ।
ರಾಡಿದರ ಕಟ್ಟೊ ಕಾಡಿಸುತ್ತೋ।
ಹಂತೀಯ ಕಟ್ಟವನ ಹೊಸ ಹುರುಪನು ನೋಡೊ।
ಹಂತಿಯ ಧೂಳ ಮೈಧೂಳೊ। ಹದಿನಾರು
ಹಂತಿ ಎತ್ತಿನಾ ಹಣಿ ಧೂಳೊ॥

ಧ್ವನಿ ೧ : ಕಣಕ್ಕೆ ತಾಯಿ ಬುತ್ತಿಯನ್ನು ಹೊತ್ತು ಬಂದು ಮಗನ ಸಂಪತ್ತನ್ನು ನೋಡಿ ತುಂಬಾ ಅಭಿಮಾನಪಡುವಳು. ಆ ಪರಿಯನ್ನು ಕೇಳಿ -

ಹಂತಿಯ ಹೊಡೆದಿತ್ತು ಹಂತೇಲಿ ಬಂದಾರ
ಸುಂಕ ಜಾಡಿಸಿದ ಸೆರಗೀಲೇ ಕಂದನಿಗೆ।
ಹಂತೀಯ ಎತ್ತು ಹದಿನೆಂಟು

ಧ್ವನಿ ೨ : ಒಕ್ಕಲಿಗನಿಗೆ ಬೆಳೆಯೇ ಸಂಪತ್ತಿನ ರಾಶಿ. ಅದನ್ನು ನೋಡಿದಾಗ ಆದ ಸಂತೋಷ ಬಣ್ಣನೆಗೆ ಮೀರಿದ್ದು -

ಶಂಕೂರಿ ಗಂಡನ, ಸೇವಕನ ಮೃಗ
ಸುಂಕ ಮೈದರಿಸಿ ಉಣ ಬಂದ। ಮುನಿ ಸೊಸಿ
ಸಂಪತ್ತ ನೋಡಿ ಬೆರೆತಾಳೊ।

ಧ್ವನಿ ೩ : ಸುಗ್ಗಿಯ ಕಾಲ ಬಿಡುವಿನ ಕಾಲ. ಆನಂದಪಡುವ ಕಾಲ. ಸಂತಸದಲ್ಲಿ ಹಾಡಿ ರೈತ ತಣಿಯುತ್ತಾನೆ -

ದೈವ ದೇವರ ಹಂತಿ ಭವದೊಳಗೆ ನಮ್ಮಂತಿ।
ತೇದುಂಡ ಹಂತಿ ನಮ್ ಬಾಳು ಒಕ್ಕಲಿಗ
ಕೊಂದ ತೆನಿಹಂತಿ ಜನುಮಕೂ॥

ಧ್ವನಿ ೧ : ಇಚ್ಛಾಮರಣಿ ಭೀಷ್ಮಾಚಾರ್ಯರು ಸಹ ಶರಶಯ್ಯೆಯಲ್ಲಿ ಮಲಗಿದ್ದು ಮಕರ ಸಂಕ್ರಾಂತಿ ಬರಲೆಂದು ಮರಣಕ್ಕಾಗಿ ಕಾದಿದ್ದರಂತೆ.

ಧ್ವನಿ ೨ : ಸಂಕ್ರಾಂತಿ ದಿನದಿಂದ ದೇವತೆಗಳಿಗೆ ಹಗಲು, ರಾಕ್ಷಸರಿಗೆ ರಾತ್ರಿ ಆಗುವುದೆಂಬುದನ್ನು ಪುರಾಣಗಳು ಸಾರುತ್ತವೆ.

ಧ್ವನಿ ೩ : ಎಳ್ಳಿನ ದಾನ ಈ ಹಬ್ಬದಲ್ಲಿ ಬಹಳ ಪ್ರಮುಖವಾದುದು. ಈ ದಾನದಿಂದ ಪಾಪ ಪರಿಹಾರ ಎಂಬುದು ಕೆಲವರ ನಂಬಿಕೆ.

ಧ್ವನಿ ೧ : ಎಳ್ಳು - ಬೆಲ್ಲ ತಿಂದು ಒಳ್ಳೇ ಮಾತಾಡೋಣ ಎಂಬ ದೃಷ್ಟಿಯಿಂದಲೂ ಎಳ್ಳನ್ನು ಜನರಿಗೆ ಹಂಚುತ್ತಾರೆ.

ಧ್ವನಿ ೨ : ಮಕ್ಕಳನ್ನು ಹಸೆಯ ಮೇಲೆ ಕೂರಿಸಿ ಎಲಚೀ ಹಣ್ಣು, ಹಸಿ ಅವರೇಕಾಯಿ, ಕಡ್ಲೆ, ಕಡ್ಲೆಕಾಯಿ, ಬೆಲ್ಲ, ಕೊಬ್ಬರಿ - ಎಲ್ಲವನ್ನೂ ತಲೆಯ ಮೇಲಿಂದ ಸುರಿದು ಮುತ್ತೈದೆಯರು ಶಾಸ್ತ್ರ ಮಾಡುವರು. ಅನಂತರ ವೀಳ್ಯದೆಲೆ, ಅಡಿಕೆ, ಕಬ್ಬಿನ ತುಂಡು, ಎಳ್ಳನ್ನು ಕೊಡುವರು.

ಧ್ವನಿ ೩ : ಈ ಹಬ್ಬದಲ್ಲಿ ಅವರೇಕಾಳು, ಬದನೇಕಾಯಿನ ತಾಳದ, ಕಿಚಡಿ ಅನ್ನ ಮಾಡುವುದು ಹಳ್ಳಿಗಳಲ್ಲಿ ವಿಶೇಷ.

ಧ್ವನಿ ೧ : ತಮಿಳುನಾಡಿನಲ್ಲಿ ಈ ಹಬ್ಬಕ್ಕೆ ಹೆಚ್ಚು ಪ್ರಾಶಸ್ತ್ಯ. "ಪೊಂಗಲ್ ಹಬ್ಬ"ವೆಂದೇ ಇದಕ್ಕೆ ಹೆಸರು. ಜನರು ಕಿಚಡಿ ಮಾಡಿ, ಕಬ್ಬಿನ ಜಲ್ಲೆಯನ್ನು ಪೂಜೆ ಮಾಡಿ, ಸೂರ್ಯನಿಗೆ ನೈವೇದ್ಯ ಮಾಡುತ್ತಾರೆ.

ಧ್ವನಿ ೨ : ಆಂಧ್ರದಲ್ಲೂ ಈ ಹಬ್ಬವನ್ನು ಆಚರಿಸುವುದುಂಟು. ಶ್ರೀರಾಮ ರಾವಣನನ್ನು ಕೊಂದು ಸೀತೆಯನ್ನು ಕರೆದು ತಂದ ದಿನವೆಂದು ಮನೆಯ ಮುಂದೆ ಉರಿಯನ್ನು ಹಾಕಿ 'ರಾವಣ ದಹನ'ವನ್ನು ನಡೆಸುತ್ತಾರೆ. ಅಲ್ಲದೆ ಸ್ವರ್ಗಸ್ಥರಾದ ತಂದೆ-ತಾಯಿಯರು ಈ ಹಬ್ಬದ ದಿನದಂದು ತಮ್ಮ ಮನೆಯೊಳಗೆ ಬಂದು ಕಾಣಿಸಿಕೊಳ್ಳುವರು ಎಂಬ ನಂಬಿಕೆ.

ಧ್ವನಿ ೩ : ಉತ್ತರ ಭಾರತದಲ್ಲೂ ಈ ಹಬ್ಬವನ್ನು ಆಚರಿಸುತ್ತಾರೆ. ಇದೇ ಸಂದರ್ಭದಲ್ಲಿ ಅಲಹಾಬಾದಿನಲ್ಲಿ ಕುಂಭಮೇಳ ಜಾತ್ರೆ ನಡೆಯುವುದು.

ಧ್ವನಿ ೧ : ನಮ್ಮ ಹಳ್ಳಿಗರಲ್ಲಿ 'ಸಂಕ್ರಾಂತಿ' ಆಚರಿಸುವ ಉದ್ದೇಶವೇ ಬೇರೆ. ಸಂಕಲಾತಮ್ಮ ಎಂಬವಳು ಒಬ್ಬಳು ದೇವತೆ. ಆಕೆ ಎಲ್ಲಿ ಕಾಣಿಸಿಕೊಳ್ಳುತ್ತಾಳೋ ಆ ಭಾಗಕ್ಕೂ, ಅಲ್ಲಿ ಉಪಯೋಗಿಸುವ ವಸ್ತುಗಳಿಗೂ ಹಾನಿ ಉಂಟಾಗುವುದೆಂಬ ನಂಬಿಕೆ. ಅದಕ್ಕಾಗಿ ಭತ್ತದ ಮೆದೆಗೆ, ಮನೆಯ ಸೂರಿಗೆ, ಗದ್ದೆ - ಹೊಲಗಳ ಮೂಲೆ ಮೂಲೆಗಳಿಗೂ ಉತ್ತರಾಣಿ, ಬೇವು ಮಾವಿನ ಸೊಪ್ಪುಗಳನ್ನು ಕಟ್ಟಿ ಇರಿಸುವುದುಂಟು.

ಧ್ವನಿ ೨ : ದನ - ಕರುಗಳಿಗೆ, ಆಡುಗಳಿಗೆ ಮೈ ತೊಳೆದು ಅವುಗಳ ಕೊಂಬನ್ನು ಹೆರೆದು, ಬಣ್ಣ ಹಾಕಿ, ಗುನ್ನಂಪಟ್ಟೆಗಳನ್ನು ಅಂಟಿಸಿ, ಗೆಜ್ಜೆಗಳ ಅಲಂಕಾರ ಮಾಡಿ, ಗೋಮಾಳಕ್ಕೆ ದನಗಳನ್ನು ತಮ್ಮಟೆಗಳ ಶಬ್ದದ ನಾದದೊಂದಿಗೆ

ಕರೆದೊಯ್ಯುವರು. ವಿಭೂತಿ, ಕುಂಕುಮ, ಹೂಗಳಿಂದ ದನಗಳನ್ನು ಪೂಜಿಸಿ, ಗಾದಿಯನ್ನು ಮೈಮೇಲೆ ಹೊದಿಸಿ, ಗಂಟೆಗಳ ನಾದದೊಡನೆ ಕರೆದೊಯ್ಯುತ್ತಾರೆ. ಗೋಮಾಳದಲ್ಲಿ 'ಪೊಂಗಲೋ' ಎಂದು ಹೇಳಿ ಕಿಚಡಿ ಎರಚಿ, ಗೋಪೂಜೆ ಮಾಡಿ, ಕಿಚ್ಚು ಹಾಯಿಸುವರು. ನಾಲ್ಕೆಮ ಕಡೆ ಉರಿಯನ್ನು ಹಾಕಿ ದನಗಳನ್ನು ಓಡಿಸಿಕೊಂಡು ಹೋಗುತ್ತಾರೆ. ನಿಜಕ್ಕೂ ಈ ದೃಶ್ಯವನ್ನು ನೋಡಲು ಮಹದಾನಂದವಾಗುವುದು. ಕೆಲವರು ಕುರಿಗಳನ್ನೂ ಕಿಚ್ಚಿನ ಮೇಲೆ ಹಾಯಿಸುವುದುಂಟು. ಅನಂತರ ಕಿಚ್ಚಿನ ಬೂದಿಯನ್ನೂ ದನಗಳ ಮೈಗೆ ತಿಕ್ಕುವರು. ದನಗಳಿಗೆ ಕಣ್ಣೇಸರಾಗದಿರಲಿ ಎಂದು ಇದು ಬಹಳ ಪವಿತ್ರ ಎಂಬುದು ನಮ್ಮ ರೈತರ ನಂಬಿಕೆ. ಮನೆಯವರೂ ದೋಷ ಪರಿಹಾರಕ್ಕೆಂದು ಹಚ್ಚಿಕೊಳ್ಳುವರು.

ಧ್ವನಿ ೩ : ಹಳ್ಳಿಯಲ್ಲಿ ನಡೆಯುವ ಹಬ್ಬ ಅಲ್ಲಿನ ಸಂಸ್ಕೃತಿ, ಆಚಾರ, ವಿಚಾರಗಳನ್ನು ನಿಜವಾಗಿಯೂ ಕಣ್ಣಿನಲ್ಲಿ ನೋಡಿ ಅನುಭವಿಸಿ ಆನಂದಪಡಬೇಕು. ಆಗಲೇ ಬಾಳು ಸೊಗಸು. ಅದೆಷ್ಟು ಸಂತೋಷದಿಂದ ರೈತರು ಸುಗ್ಗಿಯ ದಿನವಾದ ಮಕರ ಸಂಕ್ರಾಂತಿಯಂದು ನಲಿಯುತ್ತಾರೆ, ಕೇಳಿ-

ಸುಗ್ಗಿ ದಾಸೋಹಿಂದು ಹಿಗ್ಗು ಬೆಳವಲು ನೋಡು।
ಹುಗ್ಗಿ ಹೋಳಿಗೆಯ ನಿನ್ನಾಡು । ಸೂಗ್ಯಾಟ
ನನ್ನೇಡು ಇದಕೆ ಮಲೆನಾಡು।
ಹಾರಿ ಬರುವುದು ಹುಲುಸು ಏರಿ ಮಾದನ ಪತ್ರಿ।
ಸೂರಿ ಹಾಡುವೆನು ನಿನ್ನಾಡ। ಬೆಳತನಕ
ಯಾರು ಕೈಕಟ್ಟಿ ನಿಲ್ಲುವರು॥

ಒಡೆದು ಹಾಡುವೆವೆಂದು ಎಡವಿ ಬೀಳುವರೆಷ್ಟೊ।
ಜಡಮತಿಗಳೆಲ್ಲ ಚಡಪಡಿಸಿ । ನಿನ್ನಾಡ
ಮಿಡಿಯುವುದಕೆ ಬಾಯಿ ಕಳಕೊಂಡು॥
ಬಾಡದೀ ಹೂ ಹಾಡ ಕಾಜ ಮಲ್ಲಿಗೆಯೆಂದು
ಕಾಡ ಗಾಳಿಗಳು ಪರಿಮಳದ। ಹೊತ್ತೊಯ್ದು
ನಾಡೊಳಗೆ ಸುಳಿದು ಬೀಸುವುದು॥

ಧ್ವನಿ ೨ : ಎಳ್ಳು - ಬೆಲ್ಲ ಹಂಚಿ ತಿಂದ ಇಂದಿನಿಂದಲಾದರೂ ಬೇಧಭಾವವಿಲ್ಲದೆ ಒಳ್ಳೇ ಮಾತಾಡುವುದು ಉಚಿತವಲ್ಲವೇ?

*

# ವಿಜಯೋತ್ಸವ

ಶಾಂತ : (ಹಾಡು)

ಸಾಹಿತ್ಯ ಸಂಸ್ಕೃತಿಗೆ ನಿಲುಗನ್ನಡಿ
ವಾಗ್ದೇವಿ ಶಾರದೆಯರ ಮೇಲ್ನುಡಿ
ಮನದಂಬೆ ನೀನಂಬೆ ಶ್ರೀ ಶಾರದಾಂಬೆ॥

ಕುಮಾರ : ಯಾಕೆ ಶಾಂತಾ..... ನಿಲ್ಲಿಸ್ಬುಟ್ಟೆ ಹಾಡೋದ್ನ, ಹಾಡು..... ಗೊಂಬೆಗಳನ್ನೆಲ್ಲಾ ಇಟ್ಟು ಪೂಜೆ ಬಲು ಚೆನ್ನಾಗಿ ಮಾಡ್ಬುಟ್ಟಿದ್ದೀಯೆ.

ಶಾಂತ : ನವರಾತ್ರಿ ಹಬ್ಬ ಅಂದ್ರೆ ಇದು ಮಾಮೂಲಿ ಮಾವ.

ರಾಜಮ್ಮ : ಓ....ಕುಮಾರ್ ಯಾವಾಗ ಬಂದೆ?

ಕುಮಾರ : ಈಗ್ತಾನೆ ಬಂದೆ ಅಕ್ಕಾ. ನಿನ್ನ ಮಗಳು ಒಳ್ಳೆ ಚೆನ್ನಾಗಿ ಹಾಡು ಹೇಳ್ತಿದ್ಲು, ನನ್ನ ಕಂಡ ಕೂಡ್ಲೆ ನಿಲ್ಲಿಸಿಬಿಟ್ಲು. ಶಾರೀರ ಚೆನ್ನಾಗಿದೆ. ಸಂಗೀತ ಕಲಿಸಿಬಿಡು, ಇನ್ನೂ ಚೆನ್ನಾಗಿ ಹಾಡ್ತಾಳೆ. ಕಛೇರಿ ಮಾಡಿಸಬಹುದು.

ರಾಜಮ್ಮ : ನೋಡೋಣ.....

ಕುಮಾರ : ಎಷ್ಟು ಗೊಂಬೆಗಳ್ನ ಶೇಖರಣೆ ಮಾಡವಳೆ, ಅದೆಷ್ಟು ಚೆನ್ನಾಗಿ ಅಲಂಕಾರ ಮಾಡವಳೆ? ನೋಡೋಕೆ ಎರಡು ಕಣ್ಣದ್ರೂ ಸಾಲದು ಬಿಡು.

ರಾಜಮ್ಮ : ವರ್ಷ ವರ್ಷ ಹೊಸ ಹೊಸದಾಗಿ ಹಲವಾರು ಗೊಂಬೆಗಳನ್ನು ಸೇರಿಸಿ ಆ ಮರದ ಪೆಟ್ಟಿಯಲ್ಲಿ ಶೇಖರಿಸಿ ಇಡುತ್ತಾಳೆ. ವರ್ಷಕ್ಕೊಂದು ಸಾರಿ ನವರಾತ್ರಿ ಹಬ್ಬಕ್ಕೆ ತೆಗೆದು ಸೊಗಸಾಗಿ ಅಲಂಕಾರ ಮಾಡ್ತಾಳೆ.....

ಕುಮಾರ : ನೀವೆಲ್ಲಾ ದೇವರ ಮನೆಯಲ್ಲಿ ದೇವರು ಪೂಜಿಸಿದ್ರೆ ಇವಳು ಈ ಬೊಂಬೆಗಳಲ್ಲೇ ದೇವರನ್ನು ಕಾಣುತ್ತಾಳೆ.

ರಾಜಮ್ಮ : ಅದೇನೋ ನಿಜ ಅನ್ನು. ಆಡಲಿ ಅವರು ನವರಾತ್ರಿಯಲ್ಲಿ ಸಂತೋಷವಾಗಿ ಕಾಲ ಕಳೀಲಿ, ರಜೆ ಬೇರೆ ಇದೆ.

ಕುಮಾರ : ಅದೇನೋ ಹಾಡೇಳಿಕೊಂಡು ಪೂಜಿಸುತ್ತಿದ್ದೆ, ಪೂಜಿಸಮ್ಮ ನಾವೂ ಕೇಳ್ತೀವಿ ನಾಚ್ಕೋಬೇಡ.

(ಹಾಡು ಮುಗಿಯುವುದು)

ಕುಮಾರ : ಬಹಳ ಚೆನ್ನಾಗಿ ಹಾಡಿದೆ ಕಣಮ್ಮಾ.... ತಿಂಡಿ ಪ್ರಸಾದ ಏನಾದ್ರೂ ಕೊಡುತ್ತೀಯಾ ಶಾಂತಿ....

ಶಾಂತ : ಎಲ್ಲಾ ಮಾಡಿಟ್ಟಿದ್ದೀನಿ.... ಸಕ್ಕರೆ - ಕೊಬ್ಬರಿನಾ ಕೊಟ್ಟುಬಿಡ್ತೀನಿ .

ನಿರೂಪಣೆ : ಆಶ್ವೀಜ ಮಾಸದ ಶುದ್ಧ ಪಾಡ್ಯಮಿಯಿಂದ ದಶಮಿಯವರೆಗೆ ಹತ್ತುದಿನಗಳು ಪ್ರಶಸ್ತವಾದುದು. ಮೊದಲ ಒಂಬತ್ತು ದಿನಗಳನ್ನು ನವರಾತ್ರಿ ಎಂದೂ ಹತ್ತನೆಯ ದಿನವನ್ನು ವಿಜಯದಶಮಿ ಎಂದೂ ಆಚರಿಸುತ್ತಾರೆ. ಒಂದು ರೀತಿಯಲ್ಲಿ ಹೇಳುವುದಾದರೆ ವಿಜಯೋತ್ಸವವನ್ನು ಆಚರಿಸುವ ಹಬ್ಬವೇ ನವರಾತ್ರಿ!

ಶಾಂತ : ಮಾವ ಈ ನವರಾತ್ರಿ ಹಬ್ಬ ಹೇಗೆ ಹುಟ್ಟಿತು, ಅದಕ್ಕೇನಾದರೂ ಹಿನ್ನೆಲೆ ಇದೆಯಾ? ಸ್ವಲ್ಪ ಹೇಳ್ತೀಯಾ?

ಕುಮಾರ : ಹೌದಮ್ಮ ಇದೆ. ಅದೆಷ್ಟೋ ಸಾವಿರ ವರ್ಷಗಳ ಹಿಂದಿನ ಕಥೆ. ದೇವತೆಗಳಿಗೂ ದಾನವರಿಗೂ ಅನೇಕ ವರ್ಷಗಳು ಯುದ್ಧವಾಗಿ ದೇವತೆಗಳು ಆ ಯುದ್ಧದಲ್ಲಿ ಸೋತರು. ಅನಂತರ ರಾಕ್ಷಸರಿಂದ ಆಗುತ್ತಿದ್ದ ಕಿರುಕುಳವನ್ನು ಸಹಿಸಿಕೊಳ್ಳಲಾರದೆ ದೇವಾದಿ ದೇವತೆಗಳು ಬ್ರಹ್ಮಲೋಕವನ್ನು ತಲುಪಿದರು.

ದೇವತೆ ೧ : ಬ್ರಹ್ಮದೇವಾ, ನಿನಗಿನ್ನೂ ಅರಿವಾಗಲಿಲ್ಲವೇ? ರಾಕ್ಷಸರಿಂದ ಆಗುವ ನರಕಯಾತನೆಯನ್ನು ನಾವು ಅನುಭವಿಸಲಾರೆವು.

ಬ್ರಹ್ಮದೇವ : ಅದಕ್ಕೆ ನಾನೇನು ಮಾಡಬೇಕು

ದೇವತೆ ೧ : ರಾಕ್ಷಸರ ಸಂಹಾರವಾಗಲೇಬೇಕಲ್ಲವೇ?

ಬ್ರಹ್ಮದೇವ : ನನ್ನದು ಬರೀ ಸೃಷ್ಟಿಯ ಕಾರ್ಯವೇ ಹೊರತು ಲಯದ ಕಾರ್ಯವಲ್ಲ.

ದೇವತೆ ೨ : ಅದಕ್ಕೆ ಈಗ ಏನು ಮಾಡಬೇಕು?

ಬ್ರಹ್ಮ : ತಂದೆ ವಿಷ್ಣುವಿನಲ್ಲಿ ಹೋಗಿ ಕೇಳೋಣ ನಡೆಯಿರಿ. ನಾನೂ ಬರುವೆ.

ದೇವತೆಗಳು: ಅಪ್ಪಣೆ ಬ್ರಹ್ಮದೇವ.

(ಎಲ್ಲರೂ ವೈಕುಂಠಕ್ಕೆ ಆಗಮಿಸುವರು)

ದೇವತೆಗಳು: ಮಹಾವಿಷ್ಣುವಿಗೆ ನಮೋ...... ನಮೋ......

ವಿಷ್ಣು : ಎಲ್ಲರಿಗೂ ಶರಣು. ಇದೇನು ಎಲ್ಲರೂ ಇಷ್ಟೊಂದು ಸಂಖ್ಯೆಯಲ್ಲಿ ಆಗಮಿಸಿದ್ದೀರಿ?

ಬ್ರಹ್ಮ : ಈ ದೇವತೆಗಳು ಮೊದಲು ನನ್ನಲ್ಲಿಗೆ ಬಂದಿದ್ದರು ತಂದೆಯೇ, ದೇವತೆಗಳು ಹಾಗೂ ರಾಕ್ಷಸರಿಗೆ ನಡೆದ ಯುದ್ಧದಲ್ಲಿ ರಾಕ್ಷಸರೇ ಗೆದ್ದು ದೇವತೆಗಳಿಗೆಲ್ಲಾ ಹಿಂಸೆ ಕೊಡುತ್ತಿದ್ದಾರೆಯಂತೆ.

ವಿಷ್ಣು : ಹಾಗಾ?

ನಿರೂಪಣೆ : ಈ ವಿಷಯವನ್ನು ಕೇಳಿದ ವಿಷ್ಣುವಿಗೆ ದುಃಖ ಉಕ್ಕಿತು, ಕೋಪ ಏರಿತು. ದೈವೀಶಕ್ತಿಯ ಭಾವೋದ್ರೇಕದಿಂದ ಕ್ರೋಧ ಜ್ವಾಲೆ ಹೊರಹೊಮ್ಮಿತು. ಅದು ಇಡೀ ವಿಶ್ವವನ್ನು ಆಕ್ರಮಿಸಿತು. ಅದು ಕ್ರಮವಾಗಿ ಮಾನವ ರೂಪನ್ನು ಪಡೆಯಿತು.

ವಿಷ್ಣು : ಈಕೆಯೇ ತಾಯಿ ಆದಿಶಕ್ತಿ. ಈಕೆಯು ನಿಮ್ಮ ಸುತ್ತ ಹರಡಿರುವ ಭೀತಿಯನ್ನು ತಪ್ಪಿಸಲು ಕಾರಣಳಾಗುತ್ತಾಳೆ.

ಆದಿಶಕ್ತಿ : ಹೌದು ದೇವಾದಿ ದೇವತೆಗಳೇ ನಿಮ್ಮ ನೂರು ವರ್ಷದ ಯುದ್ಧದ ಬಳಲಿಕೆಯನ್ನು ನಿವಾರಣೆ ಮಾಡುತ್ತೇನೆ. ನೀವು ರಾಕ್ಷಸರಿಗೆ ಇನ್ನು ಅಂಜಬೇಕಾಗಿಲ್ಲ.

(ಯುದ್ಧದ ಹಿನ್ನೆಲೆ)

ನಿರೂಪಣೆ : ಆದಿಶಕ್ತಿ ಯುದ್ಧದಲ್ಲಿ ರಾಕ್ಷಸರನ್ನು ಧ್ವಂಸ ಮಾಡಿದಳು. ದೇವಾದಿದೇವತೆಗಳೆಲ್ಲಾ ಅಪೂರ್ವ ವಸ್ತುಗಳನ್ನು ಅರ್ಪಿಸಿ ತಮ್ಮನ್ನೇ ಆಕೆಯ ಪದತಲಕ್ಕೆ ಸಮರ್ಪಿಸಿಕೊಂಡರು. ಕಾಣಿಕೆಯನ್ನು ಸ್ವೀಕರಿಸಿ ತೃಪ್ತಳಾದ ಜಗನ್ಮಾತೆ ಗಟ್ಟಿಯಾಗಿ ನಕ್ಕಳು. ದೇವತೆಗಳು ಸಂತೋಷಗೊಂಡರು. ಆ ಆನಂದದ ಉತ್ಸಾಹವೇ ಮಹಾನವಮಿಯಾಯಿತು. ವಿಜಯೋತ್ಸವಕ್ಕೆ ಹಿನ್ನೆಲೆಯಾಗಿ ನವರಾತ್ರಿ ಉಂಟಾಯಿತು. ದೇವತೆಗಳಿಗೆ ದೇವಲೋಕವನ್ನು ಜಯಿಸಿಕೊಟ್ಟಿದ್ದು ಈ ನವರಾತ್ರಿಯಲ್ಲೇ!

ಕುಮಾರ : ಈಗತಾನೇ ಪೇಟೆಯಿಂದ ಬಂದೆ. ಹಳ್ಳಿಯಲ್ಲಿ ಬೆಳೆದ ಬಾಳೆಯ ಕಂದುಗಳೆಲ್ಲಾ ಬಂದು ದಂಡಿಯಾಗಿ ಬಿದ್ದೋಗಿತ್ತು. ಶ್ಯಾಮಂತಿಗೆ ಹೂಗಳನ್ನ ಗೂಡೆಗಳಲ್ಲಿ ತಂದು ತಂದು ಸುರಿಯುತ್ತಿದ್ದರು. ಅವರಿಗೆ ಒಳ್ಳೇ ವ್ಯಾಪಾರ.

ರಾಜಮ್ಮ : ಅವೆಲ್ಲಾ ಇಲ್ಲದೇ ಹೋದ್ರೆ ಹ್ಯಾಗೆ? ವಿಜಯದಶಮಿಯ ಹತ್ತು ದಿನಗಳೂ ಶಕ್ತಿ ಪೂಜೆ ಮಾಡಿ ಉಪವಾಸ ಮಾಡುತ್ತಾರೆ. ಶಕ್ತಿ ಪೂಜೆ ನಮ್ಮ ಕರ್ನಾಟಕ ರಾಜ್ಯದಲ್ಲೇನು? ಜಗತ್ತಿನಲ್ಲೇ ಒಂದಲ್ಲ ಒಂದು ರೀತಿಯಲ್ಲಿ ಈ ಶಕ್ತಿಯನ್ನು ಪೂಜಿಸುತ್ತಾರೆ. ಪಾರ್ವತಿ, ಕಾಳಿ, ಭವಾನಿ, ಚಾಮುಂಡೇಶ್ವರಿ ಹೀಗೆ

ಹಲವು ರೀತಿಯಲ್ಲಿ ಆರಾಧಿಸುತ್ತಾರೆ. ಈ ಸಂದರ್ಭದಲ್ಲಿ ಲಕ್ಷ್ಮಿ, ಸರಸ್ವತಿ, ಕಾಳಿಯರನ್ನು ಹಿಂದುಗಳು ಉಪಾಸನೆ ಮಾಡುತ್ತಾರೆ.

ಶಾಂತ : ಇದರಿಂದ ಏನು ಪ್ರಯೋಜನ ಮಾವ?

ಕುಮಾರ : ಹಿಂದಿನ ಕಾಲದಿಂದಲೂ ಮಳೆ, ಬೆಳೆ, ಧನ, ಸಂತಾನ, ಯಶಸ್ಸು ಮೊದಲಾದುವುಗಳು ಪ್ರಾಪ್ತಿಯಾಗಲು ದೇವಿಯ ಕೃಪೆ ಬೇಕು ಅಂತ ನಂಬಿ ಹೀಗೆ ಶಕ್ತಿಯನ್ನು ಆರಾಧಿಸುವ ರೂಢಿ ಬಂತು.

ನಿರೂಪಣೆ : ಹಿಂದೆ ಮೈಸೂರಿನಲ್ಲಿ ಬಹಳ ವೈಭವವಾಗಿ ನವರಾತ್ರಿ ಹಬ್ಬವನ್ನು ಆಚರಿಸುತ್ತಾ ಇದ್ದರು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲೂ ಇದನ್ನು ಆಚರಿಸುತ್ತಿದ್ದರು. ಈಗಲೂ ಹಂಪೆಯ ಬಳಿ 'ಮಾನ್ರೋಮಿದಿಬ್ಬ' ಎಂದು ಜನರು ತೋರಿಸುವುದನ್ನು ಕಾಣಬಹುದು. ಕೃಷ್ಣದೇವರಾಯ ಈ ಹಬ್ಬವನ್ನು ಆಚರಿಸಿ, ಕ್ರೀಡೆಗಳನ್ನು ಏರ್ಪಡಿಸಿ ಕಲಾವಿದರಿಗೆ ಪುರಸ್ಕಾರವನ್ನು ನೀಡುತ್ತಿದ್ದನಂತೆ. ಮೈಸೂರು ದಸರಾ, ಜಂಬೂ ಸವಾರಿ ಲೋಕಪ್ರಸಿದ್ಧಿ. ಇದು ಜಯಚಾಮರಾಜ ಒಡೆಯರ ಕಾಲಕ್ಕೆ ಮುಗಿಯಿತು. ವಿದ್ವಾಂಸರು, ಸಂಗೀತಗಾರರುಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ದೇವಾಲಯಗಳಲ್ಲಿ ಪೂಜೆ, ಬೊಂಬೆ ತೊಟ್ಟಿಯಲ್ಲಿ ಪೂಜೆ, ಏಳು ದಿನವೂ ದರ್ಬಾರು ನಡೆಯುತ್ತಿತ್ತು. ಕುಸ್ತಿ, ಕಾಳಗ, ದೊಣ್ಣೆ, ಕತ್ತಿ, ಪಂಜಿನ ವರಸೆಗಳು, ಮನರಂಜನಾ ಕಾರ್ಯಕ್ರಮಗಳು ನಡೆಯುತ್ತಿದ್ದವು. ಚಾಮುಂಡಿ ಬೆಟ್ಟದಲ್ಲಿ ವಿಶೇಷ ಪೂಜೆ ನಡೆಯುತ್ತಿತ್ತು. 'ಮೈಸೂರು ನೋಟ', 'ದಸರಾ ನೋಟ' ಎಂದೇ ಈ ಉತ್ಸವ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಪ್ರಸಿದ್ಧಿಯಾಗಿತ್ತು. ಇದು ಈಗ ದಸರಾ ನಾಡಹಬ್ಬವಾಗಿ, ಚಾಮುಂಡಿಯ ಉತ್ಸವವಾಗಿ ಪರಿಣಮಿಸಿದೆ.

ಪದ್ಯ : ಕನ್ನಂಬಾಡಿಯ
ಬೃಂದಾವನವೇ
ನೋಟಕೆ ಚಂದಾ।
ಮಿಂಚಿನ ದೀಪಗಳಿಂದಾ॥
ಜಂಬು ಸವಾರಿಯದೊಂದೇ ಸಾಕ್ಕೆ
ಸುರಪನು ನೀನೆ ಎನಲೂ
ಜಯಹೇ ಜಯಹೇ ಜಯಹೇ॥
ಜಯ ಜಯ ಜಯ ಜಯಹೇ
ನಾಲ್ವಡಿ ಕೃಷ್ಣ ನೃಪಾಲ.

ನಿರೂಪಣೆ : ನವರಾತ್ರಿಯಲ್ಲಿ ನಾಡಹಬ್ಬ ಆಚರಿಸುವುದುಂಟು. ಕವಿ, ಕಲಾವಿದರು. ದಾರ್ಶನಿಕರುಗಳ ಕಲೆ-ಸಾಹಿತ್ಯ-ಸಾಂಸ್ಕೃತಿಯ ಪ್ರತಿಧ್ವನಿ ಎಲ್ಲಾ ಕಡೆಯೂ ಮೊಳಗಬೇಕು ಎಂಬ ಉದ್ದೇಶದಿಂದ.

ಕುಮಾರ : ನಮ್ಮ ಕೊಡಗಿನಲ್ಲಿ ಈ ಅಶ್ವಯುಜ ಮಾಸವಲ್ಲಿ ತಪ್ಪದೇ ಬರುವ ತುಲಾ ಸಂಕ್ರಮಣ ಕಾವೇರಿಯ ಹುಟ್ಟುಹಬ್ಬವಾಗಿರುವುದು. ಅಂದು ತುಂಬಿ ಹರಿವ ಕಾವೇರಿಯನ್ನು ಪೂಜೆ ಮಾಡಿ ಪೂರ್ಣ ಫಲಗಳನ್ನು ತೇಲಿಬಿಟ್ಟು ತಮ್ಮ ಭಕ್ತಿಯನ್ನು ಅರ್ಪಿಸುತ್ತಾರೆ. ಜನರು ಅಧಿಕ ಉತ್ಸಾಹದಿಂದ 'ಕಾವೇರಿ ಜಾತ್ರೆ'ಯನ್ನು ಮಾಡುವರು.

ರಾಜಮ್ಮ : ನಮ್ಮೂರ್‍ನಲ್ಲಿ ದೇವಿಯ ಪ್ರೀತ್ಯರ್ಥವಾಗಿ ಮನೆಮನೆಗಳಲ್ಲಿ 'ಶ್ರೀ ಲಲಿತಾ, ತ್ರಿಪುರ ಸುಂದರಿ' ಎಂಬ ಹೆಸರಿನಿಂದಲೂ ಶ್ರೀಚಕ್ರಗಳನ್ನು ಸ್ಥಾಪಿಸಿ ಕುಂಕುಮಾರ್ಚನೆ ಮಾಡಿ ಪಾನಕ, ಎಳನೀರು, ಹಾಲು, ಕೋಸಂಬರಿಯನ್ನು ಹಂಚುವರು.

ಕುಮಾರ : ನಾನೂ ಕೂಡ ಚಿಕ್ಕವನಾಗಿದ್ದಾಗ ಮೈಸೂರಿನ ಪೂಜೆಗೆ ಹೋಗಿದ್ದೀನಿ. ಮಹಾರಾಜರ ದರ್ಬಾರು, ಕುಸ್ತಿ, ವಿವಿಧ ವಿನೋದಾವಳಿಗಳನ್ನು ನೋಡಿದ್ದೇನೆ. ಆಗ ದೇಶ ವಿದೇಶಗಳಿಂದ ಜನರು ಬಂದು ನೋಡುತ್ತಿದ್ದರು. ಮಹಾರಾಜರು ದರ್ಬಾರಿಗೆ ಬಂದು ಸಿಂಹಾಸನಕ್ಕೆ ಪೂಜೆ ಮಾಡಿ ಹತ್ತುತ್ತಿದ್ದಂತೆ ಅರಮನೆಯ ಲಕ್ಷಾಂತರ ದೀಪಗಳು ಝಗಝಗಿಸುತ್ತಿದ್ದವು. ಕೂಡಲೇ ವಿಶೇಷ ವಾದ್ಯಗಳು ಮೊಳಗುತ್ತಿದ್ದವು. ಅವುಗಳನ್ನು ನೋಡಲು ಕಣ್ಣಿಗೇ ಒಂದು ರೀತಿ ಹಬ್ಬವಾಗುತ್ತಿತ್ತು. ಅರಮನೆ ಸುತ್ತ ನೋಡಲಿಕ್ಕೆ ಒಂದು ರೀತಿ ಚಂದ. ಆಯುಧ ಪೂಜೆಯ ದಿನ ಮಹಾರಾಜರು ಬೆಳ್ಳಿಯ ಪಲ್ಲಕ್ಕಿ, ರಥಗಳು, ಧನಾಭರಣ, ಆಯುಧಗಳು, ಗಜಾಶ್ವ, ಛತ್ರ ಚಾಮರ, ರಾಜಲಾಂಛನ ಪ್ರತಿಯೊಂದನ್ನು ಪೂಜೆ ಮಾಡುತ್ತಿದ್ದರು.

ರಾಜಮ್ಮ : ರಾಜರು ಆಗ ಮಾಡ್ತಿದ್ದರೆ ಈಗ ವ್ಯಾಪಾರಿಗಳು ತಮ್ಮ ವ್ಯಾಪಾರದ ತಕ್ಕಡಿ, ಬಟ್ಟು, ಸೇರು ಮುಂತಾದುವುಗಳನ್ನೂ, ರೈತರು ತಮ್ಮ ವ್ಯವಸಾಯದ ಸಲಕರಣೆಗಳನ್ನೂ, ಸೈಕಲ್, ಕಾರು, ರೇಡಿಯೋ, ಟೆಲಿವಿಷನ್ ಮುಂತಾದುವುಗಳನ್ನೆಲ್ಲಾ ಪೂಜೆ ಮಾಡುವ ಪರಿಪಾಠ ಬೆಳೆದುಬಂದಿದೆ.

ನಿರೂಪಣೆ : ರಾಜ ಮಹಾರಾಜರು ರಾಷ್ಟ್ರದ ಸುಖ ಸಂಪತ್ತು, ಕಲ್ಯಾಣ, ನೆಮ್ಮದಿ, ಬಲವರ್ಧನೆಗೆ, ಶತ್ರುವಿನಾಶಕ್ಕೆ ಈ ಶಕ್ತಿಯನ್ನು ಆರಾಧಿಸುತ್ತಿದ್ದರು. ವೈಭವದಿಂದ ದರ್ಬಾರು ನಡೆಸುತ್ತಿದ್ದರು, ವ್ರತಗಳನ್ನು ಆಚರಿಸುತ್ತಿದ್ದರು.

ಜ್ಞಾನ, ಐಶ್ವರ್ಯ, ಸಾಹಸ, ಸಂಪತ್ತುಗಳನ್ನು ಅಪೇಕ್ಷಿಸುವವರು ಶಕ್ತಿಯನ್ನು ಪೂಜಿಸುತ್ತಾರೆ. ವಿಜಯದಶಮಿಯನ್ನು ಆಚರಿಸುತ್ತಾರೆ. ಶರದೃತುವಿನ ಮೊದಲ ಒಂಬತ್ತು ದಿನಗಳು ಆಶ್ವೀಜ ಶುದ್ಧ ಪಾಡ್ಯಮಿಯಿಂದ ನವಮಿಯವರೆಗೆ 'ನವರಾತ್ರಿ' ಎಂದು ಕರೆಯಲಾಗಿದೆ. ಇದಕ್ಕೆ ಶರನ್ನವರಾತ್ರಿ ಎಂದು ಹೇಳುವುದೂ ಉಂಟು. ನವರಾತ್ರಿ ಹಬ್ಬವೂ ಹೌದು, ವ್ರತವೂ ಹೌದು, ಆಯುಧ ಪೂಜೆ, ಯುದ್ಧದ ಹಬ್ಬವೂ ಹೌದು. ದುರ್ಗಾ ಪೂಜೆ, ಧ್ಯಾನ, ತಪಸ್ಸು ಮುಂತಾದವುಗಳಿಗೆ ಪ್ರಶಸ್ತವಾದ ಕಾಲ. ಒಂಬತ್ತು ರಾತ್ರಿಗಳು ಮಾತೆಯನ್ನು ಆರಾಧಿಸಲು ಈ ಶಕ್ತಿ ಅನುಷ್ಠಾನಕ್ಕೆ ರಾತ್ರಿಯೇ ಪ್ರಶಸ್ತವಾದುವು. ಅಷ್ಟಮಿಯ ದಿನ ರಾತ್ರಿ ಮಹಾದೇವಿ ಪ್ರತ್ಯಕ್ಷಳಾದಳೆಂದು ಆ ದಿನಕ್ಕೆ ದುರ್ಗಾಷ್ಟಮಿ ಎಂದು ಕರೆಯಲಾಗಿದೆ. ನವಮಿಯ ರಾತ್ರಿ ದೇವತೆಗಳು ಬಲಿತರ್ಪಣಾದಿಗಳಿಂದ ಆಕೆಯನ್ನು ಪೂಜಿಸಿ ಒಲಿಸಿಕೊಂಡರು. ಆದ್ದರಿಂದ ಅದು ಮಹಾನವಮಿ ಆಯಿತು. ರಾಜ ಮಹಾರಾಜರು ರಾಜ್ಯ ವಿಸ್ತರಣೆ, ಶತ್ರುಗಳ ನಿಗ್ರಹಕ್ಕೆ ತೊಡಗಲು ಇದು ಪ್ರಶಸ್ತವಾದ ದಿನ.

ಕುಮಾರ : ನಮ್ಮ ಹಳ್ಳಿಗಳಲ್ಲಿ ಈಗ ತಾನೇ ರೈತರಿಗೆ ಬಿಡುವು. ಬೀದಿಗಳಲ್ಲಿ ಕುಣಿತ ಕುಣಿದು ಮಳೆ ಕರೆದು ಧರೆ ತಣಿದು 'ಬೆಳೆ ಬೆಳೆಯಲೆಂದು' ಧ್ವನಿ ಎತ್ತಿ ಹಾಡಿ ಹರಸುವುದು. ದಸರಾ ಹಬ್ಬದ ಕುರಿತು ಕವಿಗಳು ಕಾವ್ಯ ಕಟ್ಟಿ ಹಾಡಿದ್ದಾರೆ. ದಿನಕರ ದೇಸಾಯಿಯವರ ಒಂದು ಹಾಡು ಹೇಳು ಶಾಂತಾ.

ಶಾಂತ : ರನ್ನನ ಕಾವ್ಯದ ಕೊಂಬನು ಊದಿ
ದೇಹದಲ್ಲೆಲ್ಲ ಶೌರ್ಯವ ತುಂಬಿ
ಪಂಪನ ಹೆಸರನು ಸೊಂಟಕೆ ಸುತ್ತಿ
ರನ್ನನ ಭೀಮನ ಗದೆಯನು ಎತ್ತಿ
ಹಕ್ಕನ ಬುಕ್ಕನ ಶಸ್ತ್ರವ ಹೂಡಿ
ವಿದ್ಯಾರಣ್ಯರ ಚಿಂತೆಯ ಹಾಡಿ
ದಸರೆಯ ಹಬ್ಬವ ಹಬ್ಬಿಸಿರಿ
ಕನ್ನಡದ ನಾಡನು ಹಿಗ್ಗಿಸಿರಿ

ನಿರೂಪಣೆ : ಶ್ರೀರಾಮ ರಾವಣನನ್ನು ಮರ್ಧಿಸಿದುದೂ ವಿಜಯದಶಮಿಯ ದಿನವೇ. ಅದಕ್ಕಾಗಿ ಶ್ರೀರಾಮನ ವಿಜಯೋತ್ಸವವನ್ನು ಆಚರಿಸುತ್ತಾರೆ.

ಶಾಂತ : ವಿಜಯದಶಮಿಯಂದು ಮೈಸೂರು ಮಹಾರಾಜರು ಬನ್ನಿ ಮಂಟಪಕ್ಕೆ ಜಂಬೂ ಸವಾರಿ ಹೋಗಿ, ಬನ್ನಿಮರ ಪೂಜಿಸಿ ಬರುತ್ತಿದ್ದರಂತೆ. ಅದರ ಉದ್ದೇಶವೇನಮ್ಮ?

ರಾಜಮ್ಮ : ಪಾಂಡವರು ಬನ್ನಿಮರದ ಮೇಲೆ ಕಟ್ಟಿದ್ದ ತಮ್ಮ ಶಸ್ತ್ರಾಸ್ತ್ರಗಳನು ಅಜ್ಞಾತವಾಸ ಮುಗಿದ ಮೇಲೆ ವಿಜಯದಶಮಿಯ ದಿನ ಹೊರ ತೆಗೆದು ವಿಜಯೋತ್ಸವವನ್ನು ಆಚರಿಸಿದರು. ಕಾಳಿಕಾದೇವಿ ಬನ್ನಿ ಮರದಲ್ಲಿರುತ್ತಾಳೆ. ಅವಳು ರಕ್ಷೆ ಕೊಡುತ್ತಾಳೆಂಬ ಪ್ರತೀತಿ ಈಗಲೂ ಜನರಲ್ಲಿದೆ. ಈ ದಿನವೇ ವಿದ್ಯಾರಣ್ಯರು ಬನ್ನಿಯ ಮರದ ಮೇಲೆ ಹೊನ್ನಿನ ಮಳೆಗರೆದುದು. ಶಮೀಪತ್ರ ವಿಜಯದ ಸಂಕೇತ.

ನಿರೂಪಣೆ : ವಿಜಯದಶಮಿಯ ದಿನ ಶುಭ ಕೆಲಸಗಳಿಗೆ ಯೋಗ್ಯವಾದುದು. ವ್ಯಾಪಾರ, ವ್ಯವಹಾರಗಳನ್ನು ಪ್ರಾರಂಭಿಸುವುದು, ಗೃಹಪ್ರವೇಶ, ತಳಪಾಯ ಹಾಕುವರು. ಮದುವೆಯಾಗದ ಕನ್ಯೆಯರು ಮನೆ ಬಿಟ್ಟು ಬೇಗ ಗಂಡನ ಮನೆಗೆ ಹೋಗಲಿ ಎಂದು ಹೊಸ್ತಿಲ ಪೂಜೆಯನ್ನು ಮಾಡುತ್ತಾರೆ. ಹಿಂದೆ ಎಲ್ಲರಿಗೂ ಶುಭವಾಗಲಿ, ಮಂಗಳವಾಗಲಿ ಎಂದು ರಾಜರು ದೇಶದ ಹಿತದೃಷ್ಟಿಯಿಂದ ಆಚರಣೆ ಮಾಡುತ್ತಾ ಇದ್ದರು. ಅದಕ್ಕೇ ಅಲ್ಲವೇ ಹೇಳುವುದು "ಸರ್ವೇ ಜನಾಃ ಸುಖಿನೋ ಭವಂತು" ಅಂತ.

ಕುಮಾರ : ಒಂದು ರೀತಿಯಲ್ಲಿ ಹೇಳುವುದಾದರೆ ಈ ಹಬ್ಬ ವಿಜಯೋತ್ಸವದ ಸಂಕೇತ. 'ಮಹಾನವಮಿ ಹಬ್ಬ ಮಗನಿಗಾಗಿ' ಎಂಬ ಗಾದೆ ರೂಢಿಯಲ್ಲಿದೆ. ಮಹಿಷಾಸುರನನ್ನು ಚಾಮುಂಡಿ ಕೊಂದುದರಿಂದ ಇದು ಚಾಮುಂಡಿಯ ವಿಜಯೋತ್ಸವ!

ಉತ್ತರದಲ್ಲಿ ರಾಮ - ರಾವಣರ ಯುದ್ಧವಾಗಿ ಹತ್ತನೇ ದಿನ ಬಂದು ರಾಮ ಅಯೋಧ್ಯೆಯಲ್ಲಿ ಪಟ್ಟಾಭಿಷೇಕ ಪಡೆಯುತ್ತಾನೆ. ಎಂಟು ದಿನ ರಾವಣ, ಕುಂಭಕರ್ಣ ಇವರ ಪ್ರತಿಮೆಯನ್ನು ಸುಡುತ್ತಾರೆ. ವಿಭೀಷಣನನ್ನು ಪೂಜಿಸುತ್ತಾರೆ. ಅಂದು ರಾಮಾಯಣ ಪಾರಾಯಣ ಮಾಡುತ್ತಾರೆ. ಇದುರಾಮನ ವಿಜಯೋತ್ಸವ! ಉತ್ತರ ಕರ್ನಾಟಕದ ಕೆಲವು ಕಡೆ ಹತ್ತು ದಿನಗಳು 'ವೆಂಕಟೇಶ ಪಾರಿಜಾತ' ಓದಿಸುತ್ತಾರೆ. ಹತ್ತನೆಯ ದಿನ ಪದ್ಮಾವತಿ - ವೆಂಕಟೇಶ್ವರರ ಮದುವೆಯನ್ನು ಆಚರಿಸುತ್ತಾರೆ.

ದಸರಾ ಆದ ಐದು ದಿನಗಳ ಮೇಲೆ ಸೀಗೆ ಹುಣ್ಣಿಮೆ ಬರುತ್ತೆ. ಅಂದು ಗೌರಿಪೂಜೆ ಮಾಡುತ್ತಾರೆ. ರೈತಾಪಿ ಜನರು ಮಣ್ಣಿನ ಎತ್ತು, ಗಣಪತಿ ಮಾಡಿ ಪೂಜಿಸುವರು. ಗೋಕುಲಾಷ್ಟಮಿಯ ದಿನ ಕೃಷ್ಣ - ಬಲರಾಮರ ಪ್ರತಿಮೆಯನ್ನು ಮಣ್ಣಲ್ಲಿ ಮಾಡಿ ಪೂಜೆ ಮಾಡುವರು. ಭೂಮಿತಾಯಿ ಪೂಜೆ ಮಾಡುವ ಉದ್ದೇಶ ಒಳ್ಳೆಯ ಬೆಳೆ ಬೆಳೆಯಲಿ ಎಂದು..... ಮಣ್ಣಿನ ಗಡಿಗೆಯ ಮುಚ್ಚಳಕ್ಕೆ ಮುಖ ಬರೆದು ಬೇರೆ ಬೇರೆ

ಮೂರ್ತಿಗಳನ್ನು ಚಿತ್ರಿಸಿ ಗೌರಿಪೂಜೆಯನ್ನು ನಾಲ್ಕು ಶುಕ್ರವಾರ ಮಾಡಿ, ಐದನೇ ದಿನ ಅಂದರೆ ಸೀಗೆಹುಣ್ಣಿಮೆಯ ದಿನ ನೈವೇದ್ಯ ಮಾಡಿ ಹೊಲದ ನಾಲ್ಕು ದಿಕ್ಕಿಗೂ ಹಾಕಿ ಹೊಲದಲ್ಲಿ ಕಲ್ಲುಗಳನ್ನಿಡುತ್ತಾರೆ. ಇದನ್ನು ಪಾಂಡವರು ಎಂದು ನಮ್ಮ ಜನರು ಭಾವಿಸಿ ವಿಜಯಿಗಳಾದ ಪಾಂಡವರು ನಮಗೆ ಸುಖಸಂಪತ್ತು ಕೊಡಲೆಂದು ಪೂಜಿಸುತ್ತಾರೆ.

ನಿರೂಪಣೆ : ನಮ್ಮ ಜನಪದರು ಭೂಮಿಗೆ ಬೇರೆ ಬೇರೆ ಆಕಾರ ಕೊಟ್ಟು ಪೂಜೆ ಮಾಡುವುದು ರೂಢಿಯಲ್ಲಿ ಬಂದಿದೆ. ನಾಗರಚೌತಿಯಲ್ಲಿ ಕಲ್ಲು ನಾಗರ ಪೂಜೆಯನ್ನು ಊರ ಹೊರಗೆ ಮಾಡಿದರೆ, ಮಣ್ಣಿನ ನಾಗರಪೂಜೆಯನ್ನು ಮನೆಯಲ್ಲಿ ಮಾಡುವ ಪದ್ಧತಿ ನಡೆದುಕೊಂಡು ಬಂದಿದೆ. ಮಣ್ಣಿನ ಮಗಳು ಪಾರ್ವತಿಯ ಪೂಜೆ ಮಣ್ಣಿನ ಗಣಪತಿ ಪೂಜೆ, ಭೀಮನ ಅಮಾವಾಸ್ಯೆಯಂದು ಮಣ್ಣಿನ ಗೌರಿಯ ಪೂಜೆ. ಮಣ್ಣೆತ್ತಿನ ಅಮಾವಾಸ್ಯೆಯಂದು ಎತ್ತಿನ ಪೂಜೆ ನಡೆಯುವುದು ಕುಮಾರಿಯರು ಶಿವಲಿಂಗವನ್ನು ಮಣ್ಣಲ್ಲಿ ಮಾಡಿ ಪೂಜೆ ಮಾಡುವರು. ಸೀಗೆಗೌರಿ, ಕೃಷ್ಣ - ಬಲರಾಮ ಇವರೆಲ್ಲರ ಪೂಜೆಯ ಸಂಕೇತ ಭೂಮಿತಾಯಿಗೆ ನೀಡುವ ನಮನ.

ಶಾಂತ : ಸರಸ್ವತಿಯ ಪೂಜೆ ಮಾಡದೇನೋ ಮಾಡ್ತೀವಿ. ಅದರ ಉದ್ದೇಶ ಏನು?

ರಾಜಮ್ಮ : ಅಷ್ಟಮಿಯ ಹಿಂದಿನ ದಿನ ಸರಸ್ವತಿಯ ಪೂಜೆ ಮಾಡುತ್ತೇವೆ. ಶರತ್ ಸಂಪಾತ ಕಾಲದಲ್ಲಿ ಮಹಿಷಾಸುರನು ಮೃಗದ ಶಿರವನ್ನು ಧರಿಸಿ ಸರಸ್ವತಿಯಿಂದ ಮುಕ್ತನಾದನೆಂದು ಪುರಾಣದ ಕತೆ. ಈ ಕಾರಣದಿಂದ ಮೂಲಾ ನಕ್ಷತ್ರದಂದು ಆಕೆಯನ್ನು ಪೂಜಿಸಬೇಕೆಂಬುದು ವಿಧಿ!

ಕುಮಾರ : ಅಷ್ಟಮಿಯಂದು ದಕ್ಷಯಜ್ಞನ ನಾಶಕ್ಕಾಗಿ ದುರ್ಗಾವತಾರವಾಯಿತು ಎಂದು ಹೇಳುವರು. ದೇವೇಂದ್ರ ಜಂಬಾಸುರನನ್ನು ಸಂಹಾರ ಮಾಡಿದುದೂ ಇಂದೇ. ಆದ್ದರಿಂದ ಕೆಲವರು ಈ ದಿನವೇ ಆಯುಧ ಪೂಜೆಯನ್ನು ಮಾಡುತ್ತಾರೆ. ಹತ್ತನೆಯ ದಿನ ದಶಮಿ. ದುರ್ಗಾದೇವಿ ರಾಕ್ಷಸರನ್ನೆಲ್ಲಾ ನಿರ್ಮೂಲಗೊಳಿಸಿ ವಿಜಯಿಯಾದಳು. ಆದ್ದರಿಂದ ಈ ದಿನವನ್ನು 'ವಿಜಯ ದಶಮಿ' ಎಂದು ಆಚರಿಸುವರು. ದಶಮಿಯ ಸಂಜೆ ನಕ್ಷತ್ರೋದಯ ಕಾಲಕ್ಕೆ ವಿಜಯ ಎಂದು ಹೆಸರು. ಇದು ಎಲ್ಲಾ ಕಾರ್ಯ ಸಾಧನೆಗೂ ಪ್ರಶಸ್ತ ಕಾಲವಂತೆ. ಬನ್ನಿ ಮರದ ಹತ್ತಿರ ಮಂಗಳವಾದ್ಯದೊಡನೆ ಬಂದು ಪೂಜಿಸಿ "ಶ್ರೀರಾಮನಿಂದ ಪೂಜಿಸಲ್ಪಟ್ಟ ಪಾಪ ನಿವಾರಣೆ, ಮುಳ್ಳಿನ ವೃಕ್ಷವೇ ಅರ್ಜುನನ ಬಾಣಗಳನ್ನು ಧರಿಸಿದವಳೇ, ನನ್ನ ಯಾತ್ರೆ ನಿರ್ವಿಘ್ನವಾಗುವಂತೆ ಅನುಗ್ರಹಿಸು" ಎಂದು

ಪ್ರಾರ್ಥಿಸಬೇಕು. ಆಮೇಲೆ ಎಲೆಗಳನ್ನು ಪ್ರಸಾದವಾಗಿ ಸ್ವೀಕರಿಸಿ ಹಿರಿಯರಿಗೆ ಕೊಟ್ಟು ನಮಸ್ಕರಿಸುತ್ತಾರೆ.

ನಿರೂಪಣೆ : ಕಾಳಿದಾಸನು ಹೇಳುವಂತೆ "ವರ್ಷ ಋತು ಕಳೆದರೆ ಆಗ ಸುರಿವ ಮಳೆಯಿಂದ ಇಳೆಯ ತೊರೆ, ಕೆರೆ, ಹೂಗಳೆಲ್ಲಾ ತುಂಬಿವೆ. ಎಲ್ಲೆಲ್ಲೂ ಸಂತಸ ಕಾಣುತ್ತಿದೆ. ಸರ್ವಾಲಂಕಾರಭೂಷಿತಳಾಗಿ ಅರಳಿದ ಪದ್ಮದಂತೆ ಮುಖವುಳ್ಳ ಮದಿಸಿದ ಹಂಸಗಳಂತೆ ಹೆಜ್ಜೆ ಇಡುವ ರೂಪ ರಮ್ಯಳಾದ ಹೊಸ ಸೊಸೆ ಅತ್ತೆಯ ಮನೆಗೆ ಬಂದ ಹಾಗೆ ಶರದೃತು ಬಂದಿದೆ. ಇಂಥ ಸಂತಸದ ಕಾಲವೇ ಉತ್ಸವದ ಕಾಲ. ಸಮೃದ್ಧಿಯಿಂದ ಸಂತೃಪ್ತನಾದ ಮಾನವ ಜಗನ್ಮಾತೆಗೆ ತನ್ನ ಕೃತಜ್ಞತೆಗಳನ್ನು ಅರ್ಪಿಸಲು ಇದೇ ಸಕಾಲವೂ ಆಗಿದೆ.

ಶಾಂತ : ಪರ್ವಾಗಿಲ್ಲ ನವರಾತ್ರೀ ಅಂದ್ರೆ ಸುಮ್ಮನೆ ನಾವು ಗೊಂಬೆ ಪೂಜೆ ಮಾಡ್ಬಿಟ್ಟು ಕಾಲ ಕಳೀತಾ ಇದ್ವು. ಆದ್ರೆ ಇದರ ಮಹತ್ತು ಇಷ್ಟು ಅಂತ ನನಗೆ ಕಲ್ಪನೇನೆ ಇರಲಿಲ್ಲ.

ಕುಮಾರ : ಅಷ್ಟೇ ಅಲ್ಲಾ ಶಾಂತಾ. ಇದು ಭಾರತೀಯತೆ, ರಾಷ್ಟ್ರೀಯತೆಯನ್ನು ಉಜ್ವಲಗೊಳಿಸುವ ಪ್ರತಿಯೊಬ್ಬರ ನಾಡಿ ನಾಡಿಯಲ್ಲಿ ಮಿಡಿಯುವ ಹಬ್ಬ. ಇದು ಬರೇ ಬೊಂಬೆಯಾಟದ ಅಲಂಕಾರದ ಪೂಜೆಯಾಗಬಾರದು. ಇದು ರಾಷ್ಟ್ರೀಯ ಪರಾಕ್ರಮದ ಸಾಧನೆಯ ಸುದಿನವಾಗಬೇಕು. ಪ್ರತಿಯೊಬ್ಬರೂ ಸಾಹಸಮಯ ಜೀವನ ಆರಂಭಿಸಬೇಕು. ಶಕ್ತಿ ಕೇವಲ ಹಿಂಸೆಗೆ ಮೀಸಲಾಗಬಾರದು. ಇದು ಸಿದ್ಧಿ.... ಆತ್ಮೋನ್ನತಿಯ ಬೆಳವಣಿಗೆಗೆ ಪೋಷಕವಾಗಬೇಕು. ಇಂಥ ಒಳ್ಳೆಯ ಶಕ್ತಿಯೇ ಭಾರತದ ಪವಿತ್ರಾತ್ಮವಾಗುವುದು.

ರಾಜಮ್ಮ : ನಮ್ಮ ಹಿಂದಿನವರು ಸಂಪ್ರದಾಯ ಮಾಡಿಕೊಂಡು ಬಂದಿರುವುದಕ್ಕೆ ಒಂದು ಮಹತ್ವವಿದೆ. ಹಾಗೆಯೇ ಈ ಹಬ್ಬವೂ ಸಹ ಸುಖ - ಸಂತೋಷದ ಸಂಕೇತ. ಜಾತಿ - ಮತಗಳನ್ನು ಬಿಟ್ಟು ಎಲ್ಲರೂ ಕೂಡಿ ಆಚರಿಸಬೇಕು ಎಂಬುದೇ ಇದರ ಪ್ರಮುಖ ಉದ್ದೇಶ.

ಶಾಂತ : ಬೊಂಬೆಗಳನ್ನು ಕೂರಿಸಿ ಎಲ್ಲರನ್ನೂ ನಾನು ಕರೆಯುತ್ತೀನಲ್ಲಾ ಅದೂ ಭಾವೈಕ್ಯವಲ್ಲವೇ? ಜಾತಿ - ಮತ ಬೇಧ ಬಿಟ್ಟು ಎಲ್ಲರೂ ಒಟ್ಟಾಗಿ ಸೇರುತ್ತೇವೆಯಲ್ಲಾ.

ಕುಮಾರ : ಖಂಡಿತ ನೀನು ಹೇಳಿದುದರಲ್ಲಿ ನೂರಕ್ಕೆ ನೂರು ಪಾಲು-ಸತ್ಯ ಇದೆ ಶಾಂತಾ.....

ನಿರೂಪಣೆ : ನಾಡ ಜನರ ಭಾವೈಕ್ಯದ ಸಂಕೇತ ಈ ನವರಾತ್ರಿ ರಾಜಾಧಿರಾಜರ ವಿಜಯೋತ್ಸವದ ಹಬ್ಬ ಈ ವಿಜಯದಶಮಿ. ಆದಿಶಕ್ತಿ, ಚಾಮುಂಡಿ, ದುರ್ಗಿ, ಕಾಳಿ, ಭವಾನಿ, ಲಕ್ಷ್ಮಿ ಸರಸ್ವತಿಯರನ್ನು ಪೂಜಿಸಿ ಶಕ್ತಿ ಉಪಾಸನೆ ಮಾಡಿ ಯಶಸ್ಸು ಕೋರುವ ನವಮಿ. ನಾಡ ಕವಿ ಕಲಾವಿದರು ಹಾಡಿ, ಕುಣಿದು ನಲಿದು ನರ್ತಿಸುವ ನಾಡಹಬ್ಬ, ರಾಷ್ಟ್ರದ ಸುಖ ಸಂಪದ ಕಲ್ಯಾಣ ನೆಮ್ಮದಿ ಬಲವರ್ಧನೆ, ಶತ್ರು ವಿನಾಶಕ್ಕೆ ಆಚರಿಸುವ ವ್ರತ. ಜ್ಞಾನ, ಸಂಪತ್ತು, ಐಶ್ವರ್ಯ, ಸಾಹಸ ಅಪೇಕ್ಷಿಸಿ ಪೂಜಿಸುವ, ಧ್ಯಾನ ತಪಗಳಿಗೆ ಪ್ರಶಸ್ತವಾದ ಹಬ್ಬ. ಸದಾ ಈಶ್ವರನು ಪ್ರಪಂಚದ ಜನರನ್ನೇ ಬೆಂಬೆಯಾಟ ಆಡಿಸಿ ಅವನಿಗಿಂತ ಕಡಿಮೆ ಇಲ್ಲವೆಂದು ಸಾರುವ ವಿಜಯೋತ್ಸವ ಈ ವಿಜಯದಶಮಿ.

*

# ಮಮತೆ

ಧ್ವನಿ ೧ : ನಾನು, ನನ್ನದು ಸ್ವಂತ ಸೊಮ್ಮಿನ ಬಗ್ಗೆ ಯಾರಿಗೆ ಮಮತೆ ಇಲ್ಲ?

ಧ್ವನಿ ೨ : ತಾಯಿಯ ಬಗ್ಗೆ ಮಗಳು, ಮಗಳ ಬಗ್ಗೆ ತಾಯಿ, ಅಕ್ಕನ ಬಗ್ಗೆ ತಂಗಿ, ತಂಗಿಯ ಬಗ್ಗೆ ಅಕ್ಕ, ಅಣ್ಣನ ಬಗ್ಗೆ ತಂಗಿ, ತಂಗಿಯ ಬಗ್ಗೆ ಅಣ್ಣ, ತಮ್ಮನ ಬಗ್ಗೆ ಅಕ್ಕ, ತಾಯಿ ಮಗುವಿನ ಬಗ್ಗೆ, ಅತ್ತೆ - ಸೊಸೆಯ ಬಗ್ಗೆ, ಹೆಣ್ಣು ತವರಿನ ಬಗ್ಗೆ ಇಟ್ಟಿರುವ ಮಮತೆಯನ್ನು ಹಿಂದಿನಿಂದಲೂ ಕಾಣುತ್ತಿದ್ದೇವೆ. ಇದನ್ನು ಜನಪದ ಕವಿಗಳು ಹಾಡಿ ಹೊಗಳಿದ್ದಾರೆ.

ಧ್ವನಿ ೧ : ಮಮತೆಯ ಕರೆಯೋಲೆ ಯಾರಿಗೆ ಬೇಡ? ಈ ಮಮತೆ ಅದೆಷ್ಟು ಆನಂದ ತರುವುದು? ಜೀವನದಲ್ಲಿ ಒಬ್ಬರು ಮತ್ತೊಬ್ಬರೊಡನೆ ಹಿತವಾಗಿ ಮಾತನಾಡಿದಾಗ, ಮಮತೆ ತೋರಿದಾಗ ಹಿರಿಹಿಗ್ಗು ಉಂಟಾಗುತ್ತದೆ.

ಧ್ವನಿ ೨ : ಮಮತೆ ಸಂಕೋಲೆಯಲ್ಲಿ ಸುತ್ತಿರುವ ಅಕ್ಕ-ತಂಗಿ, ಅಣ್ಣ-ಅಕ್ಕ, ಅಕ್ಕ-ತಮ್ಮ ತಾಯಿ-ಮಗಳು ಇವರ ಬಗ್ಗೆ ನಮ್ಮ ಜನಪದ ಕವಿಗಳು ಅದೆಷ್ಟು ಮಾರ್ಮಿಕವಾಗಿ ಹಾಡಿದ್ದಾರೆ?

ಧ್ವನಿ ೧ : 'ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ' ಇದು ತಾಯಿಯ ಬಗ್ಗೆ ನಮ್ಮ ಜನಪದರು ಕಟ್ಟಿದ ಗಾದೆ. ಒಂಬತ್ತು ತಿಂಗಳು ಹೊತ್ತು, ಹೆತ್ತು, ಸಾಕಿ-ಸಲಹಿದಾಕೆಯ ಹೃದಯ ವಿಶಾಲವಾದುದು. ಆಕೆಯ ಸಹನೆ ಹಿರಿದು. ಮಕ್ಕಳ ಮೇಲೆ ವಾತ್ಸಲ್ಯ ಅಪಾರ!

ಧ್ವನಿ ೨ : ಹೆಣ್ಣು ತಾಯಿಯಾದಾಗಲೇ ನಿಜವಾದ ಹೆಣ್ಣೆಂದು ಸಮಾಜದಲ್ಲಿ ಸ್ಥಾನವನ್ನು ಗಳಿಸಿಕೊಳ್ಳುವುದು. 'ಜೋಜೋ' ಎಂದು ಜೋಗುಳ ಹಾಡಿದಾಗಲೇ 'ತಾಯಿ' ಎನ್ನಿಸಿಕೊಳ್ಳುವುದು. ಜಗವನ್ನು ತೂಗುವವಳು ಭೂತಾಯಿಯೇ. ಜಗದ ಸೃಷ್ಟಿಗೂ ಆದಿಪರಾಶಕ್ತಿಯೇ ಕಾರಣಕರ್ತಳು. ಅದಕ್ಕೇ ನಮ್ಮ ಹಿಂದಿನವರು ತಾಯಿಗಿಂತ ದೇವರಿಲ್ಲ ಎಂದರು. ಮಾತೃವಾತ್ಸಲ್ಯ ಯಾರಿಗೆ ತಾನೇ ಬೇಡ? ಮಗುವನ್ನು ಮಡಿಲಲ್ಲಿ ಬೆಳೆಸಿ, ಉಣಿಸಿ, ಉಡಿಸಿ, ತೊಟ್ಟಿಲ್ಲಿ ತೂಗಿ ಕುಣಿಸಿ, ನಗಿಸಿ, ಆಡಿಸಿ, ಸಂತೈಸಿ, ಪ್ರೀತಿ-ವಾತ್ಸಲ್ಯದ ತೊರೆಯನ್ನು ಹರಿಸುವ ತಾಯಿ ನಿಜಕ್ಕೂ ಕುಟುಂಬದ ನಾಡಿಯೇ ಹೌದು!

ಧ್ವನಿ ೧ : ಮನೆಯೇ ಮೊದಲ ಪಾಠ ಶಾಲೆ, ತಾಯಿಯೇ ಮೊದಲ ಗುರು. ಎಷ್ಟೋ ಹಳ್ಳಿಯ ತಾಯಂದಿರು ಅನಕ್ಷರಸ್ಥರಾದರೂ ಜೀವನ ವ್ಯವಹಾರಗಳನ್ನು ಮಾತಿನಿಂದಲೇ ಕಲಿಸುವುದುಂಟು. ತಾಯಿ ಮಗುವಿಗೆ ಬುದ್ಧಿ ಹೇಳುವಳು, ಕೈ ತುತ್ತು ನೀಡಿ ಸಾಕಿ ಸಲಹುವವಳು.

ಧ್ವನಿ ೨ : ತಾಯಿಯನ್ನು ಭೂಮಿತಾಯಿಗೆ ಹೋಲಿಸುವುದುಂಟು. ಅತ್ತೆ ಮನೆಯಲ್ಲಿ ಜೀವನ, ಕೌಟುಂಬಿಕ ಜೀವನ, ತವರಿನ ಹಂಬಲ, ಧಾರ್ಮಿಕ ಹಾಗೂ ಆಧ್ಯಾತ್ಮಿಕ ದೃಷ್ಟಿಯಿಂದಲೂ ತಾಯಿಯ ಹಿರಿಮೆ ದೊಡ್ಡದು. ನಿಸ್ವಾರ್ಥ ಪ್ರೇಮವೇ ತಾಯಿ. ಈಕೆ ಆದಿಶಕ್ತಿಗೆ ಸರಿಸಮಳು.

ಧ್ವನಿ ೧ : ತಾಯಿ ಹೆಣ್ಣು ಹೆತ್ತ ಮೇಲೆ ಆಕೆಯನ್ನು ಮದುವೆ ಮಾಡಿ ಬೇರೆ ಮನೆಗೆ ಕೊಟ್ಟು, ಬೇರೆ ಮನೆಯ ಜ್ಯೋತಿ ಬೆಳಗಿಸುವುದು ಅನಿವಾರ್ಯ. ಆಕೆಯನ್ನು ಅತ್ತೆ ಮನೆಗೆ ಕಳುಹಿಸುವಾಗ ತಾಯಿಯ ದುಗುಡವನ್ನು ನೋಡಲಾಗದು. ಆಗ ಆಕೆ-

ಒಂಬತ್ತು ತಿಂಗಳು ನಿನ್ನ ತುಂಬಿಕೊಂಡು ತಿರುಗೇನ।
ಹಂಬಲಿಸಿ ನಿನ್ನ ಹಡದೇನ। ಸೋ।
ಹಂಬಲಿಸಿ ನಿನ್ನ ಪಡೆದೇವ ಚಿತ್ರದ।
ಗೊಂಬಿ ನಿನಗೊಪ್ಪಿಸಿ ಕೊಡಲ್ಯಾಂಗ।। ಸೋ ।।

ಧ್ವನಿ ೨ : ಮತ್ತೆ ಮುಂದುವರಿದು ಮಕ್ಕಳಿಗೆ ಬುದ್ಧಿವಾದ ಹೇಳುವ ಪರಿ ಇದು -

ಅತ್ತೀಯ ಮನೆಯಾಗ ಮುತ್ತಾಗಿ ಇರಬೇಕ
ಹೊತ್ತ ನೀಡಿದರ ಉಣಬೇಕು। ತವರವರ
ಉತ್ತಮರ ಹೆಸರ ತರಬೇಕ।।

ಧ್ವನಿ ೧ : ವೇದ, ಗಾದೆ, ಆಗಮಗಳು ತಾಯಿಯ ಸ್ಥಾನದ ಹಿರಿಮೆಯನ್ನು ಹೇಳುತ್ತವೆ. ಜ್ಯೋತಿಯಂತೆ ಶಾಶ್ವತವಾದ ಪ್ರಕಾಶ ಬೀರುವ ಸಂಬಂಧ ಎಂದರೆ ಮಾತೃ ಸಂಬಂಧ. ಮದುವೆಯಾದರೂ ಹೆಣ್ಣು ತಾಯಿಯನ್ನು ಗಂಡನ ಮನೆಯಲ್ಲೇ ನೆನೆಯುತ್ತಿರುತ್ತಾಳೆ. ಎಳೆತನದಲ್ಲಿ, ತಾರುಣ್ಯದಲ್ಲಿ, ವೃದ್ಧಾಪ್ಯದಲ್ಲಿ ಯಾವ ಕಾಲದಲ್ಲೂ ಅಚ್ಚಳಿಯದೆ ಮನದಲ್ಲಿ ಉಳಿಯುತ್ತಾಳೆ ತಾಯಿ.

ಆಸರಿಕಿ ಬ್ಯಾಸರಿಕಿ ತೊಡೆಯ ಮ್ಯಾಲ । ಆಡಿದರ
ಕೂಸ ಕಂದಯ್ಯ ತೊಡೆಯ ಮ್ಯಾಲ। ಆಡಿದರ
ಬಂದ ಬ್ಯಾಸರಿಕಿ ಬಯಲಾಗ।।

ಧ್ವನಿ ೨ : ಮಗಳು ಮೈತುಂಬಾ ಸೆರಗು ಹೊದ್ದುಕೊಂಡು ಹೊರ ಬಂದರೆ ಸಾಕ್ಷಾತ್ ಪಾರ್ವತಿಯಂತೆ ಮೆಚ್ಚಿಕೊಳ್ಳಬೇಕು ಎಂಬುದು ತಾಯಿಯ ಹಂಬಲ. ಉಂಡು, ಉಟ್ಟು, ತೊಟ್ಟು, ನಗುತ್ತಾ ತವರಿಂದ ಹೋಗೆಂದು ಹೇಳುತ್ತಾಳೆ

ತಾಯಿ. ಬೇರೆ ಗಂಡಸರು ಎದುರು ಬಂದಾರ ಸರಿದು ಮೆರೆಯಾಗುವುದು ಗರತಿಯ ಸಂಪ್ರದಾಯ. ಹಬ್ಬ, ಹರಿದಿನ ಮುಂತಾದ ವಿಶೇಷ ಸಂದರ್ಭಗಳಲ್ಲಿ ಉಡುಗೊರೆ, ತಿಂಡಿ ಕೊಟ್ಟು ಕಳುಹಿಸುವುದುಂಟು.

ಧ್ವನಿ ೧ : ತಾಯಿ ವಾತ್ಸಲ್ಯದ ಗಣಿ. ಹತ್ತು ಗಂಡು ಹೆತ್ತರೂ ತಾಯಿ ಬಂಜೆಯೇ. ಆಕೆ ಒಂದು ಹೆಣ್ಣು ಹಡೆದಾಗಲೇ ನಿಜವಾದ ತಾಯಿ ಎನಿಸಿಕೊಳ್ಳುವುದು.

ಧ್ವನಿ ೨ : ತಾಯಿ ಕೊಡುವ ಅದರ ಮತ್ತಾರೂ ಕೊಡಲಾರರು ನಿಜ. ತಾಯಿ ಮಗುವಿಗೆ ಉಣಿಸುವಾಗ ಯಾರೂ ನೋಡಬಾರದು. ಕಣ್ಣೆಸರಾದೀತೆಂದು ದಿಟ್ಟಿ ತೆಗೆಯುವುದು, ಮೆಣಸಿನಕಾಯಿ - ಇದ್ದಲು, ಇಳಿ ತೆಗೆದುಹಾಕುವುದು, ಕಸಬರಿಕೆ ಇಳಿ ತೆಗೆದು ಹಾಕುವುದು ಮಾಡುತ್ತಾಳೆ-

ತಾಯವ್ವ ಕಟ್ಟಿದ ಬುತ್ತಿ ನಾಯೆಲ್ಲಿ ಬಿಚ್ಚಲಿ
ಭೀಮರತಿಯೆಂಬ ಹೊಳಿಯಾಗ । ಬಿಚ್ಚಿದರೆ
ತಾಯವ್ವ ಕಟ್ಯಾಳ ಮೊಲಿಹಾಲ॥

ಧ್ವನಿ ೧ : ಮಗಳು ತಾಯಿಕೊಟ್ಟ ಬುತ್ತಿ ಎಲ್ಲಿ ಬಿಚ್ಚಲಿ ಎಂದು ಯೋಚಿಸುತ್ತಾಳೆ. ಕಣ್ಣು ಕಾಣುವ ತನಕ, ಬೆನ್ನು ಬಾಗುವ ತನಕ ತಾಯಿಯಿರಲಿ, ನನಗೆ ತವರಿರಲಿ ಎಂದು ದೇವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾಳೆ.

ಧ್ವನಿ ೨ : ಕೋಲಾಟ ಪದಗಳು, ಮೊಹರಂ, ಕರ್ಬಲ ಹಾಡು, ಗೋವಿನ ಹಾಡುಗಳಲ್ಲಿ ತಾಯ್ತನದ ಬಗೆಗೆ ಇದೆ. ತಾಯ್ತನಕ್ಕೆ ಮನುಷ್ಯ, ಮೃಗ, ಪಕ್ಷಿ ಎಂಬ ತಾರತಮ್ಯವಿಲ್ಲ. ಗೋವಿನ ಹಾಡಿನಲ್ಲಿ ತಾಯಿಯನ್ನು ಕೊಲ್ಲಬೇಡ, ನನ್ನನ್ನೇ ಕೊಂದು ತಿನ್ನು ಎನ್ನುವುದು ನಿಜಕ್ಕೂ ಒಂದು ದಾರುಣ ಕಥೆ!

ಧ್ವನಿ ೧ : ಮಗುವಿನ ಗುಣಗಾನ ಎಷ್ಟು ಮಾಡಿದರೂ ಕಡಿಮೆಯೇ. ಅದರ ಲಾಲನೆ-ಪಾಲನೆಯಲ್ಲಿ ಜಗವನ್ನೇ ಮರೆಯುತ್ತಾಳೆ.

ಧ್ವನಿ ೨ : ಮಡದಿ ಸತ್ತರೆ ತರಬಹುದು, ಹಡೆದಂಥ ತಂದೆ-ತಾಯಿಯೆಲ್ಲಿ ಸಿಕ್ಯಾರು? ನಮ್ಮ ಜನಪದ ಕವಿಗಳು ತಾಯಿಯನ್ನು ಸರಸ್ವತಿಗೆ ಹೋಲಿಸಿದ್ದಾರೆ-

ತಾಯಿಯ ನೆನೆದರೆ ಬೇಗನೆ ಪದಬರಲಿ
ತಾಯವ್ವೆ ಗಂಗೆ ದಡದಲ್ಲಿ ಸರಸೋತಿ
ಕಾಯ ಕುಂಡ್ಹೋಗಿ ಕರೆತನ್ನಿ॥

ಧ್ವನಿ ೧ : ತಾಯಿ ಗುರು, ದೇವರು, ವಾತ್ಸಲ್ಯ ಗಣಿ. ಜನಪದ ಸಾಹಿತ್ಯದಲ್ಲಿ ತಾಯಿ-ಮಗಳ ಮಮತೆ ಅಪಾರವಾಗಿರುವುದನ್ನು ಕಾಣಬಹುದು. ಮಗುವಿನ ಮಮತೆಯಲ್ಲಿ ತಾಯಿ ಮೈಮರೆಯುವ ಜೋಗುಳವನ್ನು ಕೇಳಿ-

ಜೋಗುಳ ಹಾಡಿದರೆ ಆಗಲೆ ಕೇಳ್ಯಾನು।
ಹಾಲ ಹಂಬಲಿನ ಮರೆತಾನು ಕಂದೈಗೆ।
ಜೋಗುಳದಾಗೆ ಅತಿ ಮುದ್ದ॥

ಧ್ವನಿ ೨ : ಕೂಸು ಆಡಿದುದನ್ನು ನೋಡಿ ಹಸಿವು, ನೀರಡಿಕೆ ಮಾಯವಾಗುವುದು. ನೋವು, ವೇದನೆ ಕಾಣದಾಗುವುವು. ಮನುಷ್ಯರಷ್ಟೇಅಲ್ಲ, ಹಕ್ಕಿ-ಪಕ್ಷಿಗಳೂ ಸಹ ಹರುಷಗೊಳ್ಳುವುವು.

ಧ್ವನಿ ೧ : ತಾಯಿಯನ್ನು ಕಾಣದ ಮಗುವೂ ಅಷ್ಟೇ ಚಡಪಡಿಸುತ್ತದೆ. ಮಗುವಿನ ತವಕ ಅದೆಷ್ಟು ಎಂಬುದು ಇಲ್ಲಿ ಚಿತ್ರಿತವಾಗಿದೆ.

ತಾಯಿಕಾಣದ ಜೀವ ತಾವೂರಿ ಬಾವೂರಿ
ಭಾಳ ಬಿಸಿಲಾದ ಅವರೀಯ। ಹೂವಿನ್ಹಾಂಗ
ಬಾಡತೀನಿ ತಾಯಿ ಕರೆದೊಯ್ಯೋ॥

ಧ್ವನಿ ೧ : ಗಂಡನ ಮನೆಯಲ್ಲಿ ಹೆಣ್ಣು ಹಾಲುಣ್ಣುವ ಕರುವನ್ನು ನೋಡಿದಾಗ ತಾಯಿಯ ನೆನಪಾಗಿ ಹಾಡುತ್ತಾಳೆ-

ಆಕಳ ಕರು ಬಂದು ಅಂಬಾ ಎಂದು
ತಮ್ಮಮ್ಮನ ಮೊಲೆಯ ನಲಿನಲಿದು। ಉಂಬಾಗ
ನಮ್ಮವ್ವನ ಧ್ಯಾನ ನನಗಾಗಿ॥

ಧ್ವನಿ ೧ : ಹಡೆದ ತಾಯಿಯ ನೆನೆದರೆ ಮಾಸಿದ ತಲೆ ಮಡಿಯಾಯ್ತು ಎಂಬುದನ್ನು ಕವಿ ಹೀಗೆ ಚಿತ್ರಿಸುತ್ತಾಳೆ-

ತಂಗಾಳಿ ತೀಡಿವರ ತಂಗಳ ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ವ । ನೆನೆದರ
ಮಾಸಿದ ತಲೆಯು ಮಡಿಯಾಯ್ತು॥

ಧ್ವನಿ ೧ : ಹೆಣ್ಣಿನ ತವರಿನ ಮಮತೆ ಅಪಾರ-

ಬಡವರು ಬಗ್ಗರು ಹೆಡಗಿ ಬುಟ್ಟಿಯವರು
ಹೋಗರಿ ನನ್ನ ತವರೀಗೆ। ಅಣ್ಣಯ್ಯ
ಧರುಮದ ಹಗೇವ ತೆಗೆದಾಗ॥

ಧ್ವನಿ ೧ : ತವರಿನ ಹೆಮ್ಮೆಯ ಜೊತೆಗೆ ಅಣ್ಣನ ಮಮತೆಯನ್ನು ಆ ಹೆಣ್ಣು ತೋಡಿಕೊಂಡಿದೆ.

ಧ್ವನಿ ೨ : ತವರುಮನೆ ಚೆನ್ನಾಗಿರಲೆಂಬುದೇ ಹೆಣ್ಣಿನ ಚಿಂತೆ.

ಹಾಲುಂಡ ತವರೀಗಿ ಏನೆಂದು ಹಾಡಲಿ।
ಹೊಳೆ ದಂಡೆಯಲಿರುವ ಕರಕೀಯ। ಕುಡಿಯಂಗೆ
ಹಬ್ಬಲಿ ಅವರ ರಸಬಳ್ಳಿ।

ಧ್ವನಿ ೧ : ತಂಗಿ ಹಾಡಿದರೆ ಅಣ್ಣನಿಗೆ ಹಸಿವಾಗುವುದಿಲ್ಲ.

ಹಾಡಿನ ದನಿ ಕೇಳಿ ಹೂಡಕ ಹೋದಣ್ಣ ಬಂದ
ಹಾಡಲೆ ತಂಗಿ ದನಿ ಚೆಂದ ನಿನ್ನಯ
ಹಾಡು ಹೇಳಿದರೆ ಹಸಿವಿಲ್ಲ

ಧ್ವನಿ ೨ : ತಾಯಿ, ಅಣ್ಣಂದಿರ ಮೇಲೆ ಈ ಹೆಣ್ಣಗೆ ಅದೆಷ್ಟು ಮಮತೆ?

ಕಣ್ಣು ಕಾಣುವ ತನಕ ಬೆನ್ನು ಬಾಗುವ ತನಕ
ತಾಯಿರಲಿ ನನಗೆ ತವರಿರಲಿ। ನನ್ನವ್ವ
ಅಣ್ಣಯ್ಯರಿರಲಿ ಕರಿಸಾಕ

ಧ್ವನಿ ೨ : ತಮ್ಮ ನಾಯಿ ಸಾಕಲಿ, ಕುರಿ ಕಾಯಲಿ, ತಮ್ಮ ತಮ್ಮನೇ ಅಕ್ಕನಿಗೆ.

ಎಲೆ ಹುಲ್ಲು ಅಡವ್ಯಾಗ ತಿಳಿನೀರು ಕೊಳದಾಗ
ಬಲವುಳ್ಳ ನಾಯಿ ಸಾಕ್ಯಾನ। ನನ್ನ ತಮ್ಮ
ಒನಪೀಲೆ ಕುರಿಯ ಕಾಯ್ದಾನ

ಧ್ವನಿ ೧ : ಅಕ್ಕನ ಊರಿನ ಮೆಕ್ಕೆ ಜೋಳದ ಗಿಡಗಳು ಒಣಗುತ್ತಿರುವಾಗ ತಂಗಿ ಮಳೆಯು ಗಕ್ಕನೆ ಬಂದು ಎಲ್ಲವನ್ನೂ ಬದುಕಿಸು ಎಂದು ಪ್ರಾರ್ಥಿಸುವಲ್ಲಿ ತಂಗಿಯ ಮಮತೆ ಎದ್ದು ಕಾಣುತ್ತದೆ.

ಅಕ್ಕನ ಊರಾಗ ಮೆಕ್ಕೆಯ ಫಡದಾಗ
ಗಕ್ಕನೆ ಬಾರೊ ಮಳೆರಾಜ। ನನ್ನಕ್ಕ
ಮಕ್ಕಳ ತಾಯಿ ಮರಗ್ಯಾಳೋ॥

ಧ್ವನಿ ೨ : ಅಕ್ಕ ಚಿಕ್ಕ ತಮ್ಮಯ್ಯನ ಬೆವರಿನ ಹನಿಯನ್ನು ಮುತ್ತೆಂದೂ ಬೆಲೆ ಕಟ್ಟುವವರಾರು ಎಂದು ಸೊಲ್ಲಿಕ್ಕುತ್ತಾಳೆ-

ಎತ್ತು ಕಾಯಲು ಹೋದ। ಚಿಕ್ಕ ತಮ್ಮಯ್ಯನು
ಹುತ್ತವ ಒರಗಿ ಮಲಗ್ಯಾನ। ಹಣೆಯ ಮೇಲ
ಮುತ್ತು ಬಂದಾವೆ ಬೆಲೆ ಮಾಡ।

ಧ್ವನಿ ೧ : ತಂಗಿ ಅಣ್ಣನ ಮೇಲಿನ ಮಮತೆಯನ್ನು ಈ ಪದ್ಯದಲ್ಲಿ ಕವಿ ಹೀಗೆ ಚಿತ್ರಿಸಿದ್ದಾನೆ-

ಅವರೀಗಿ ಅವರಣ್ಣ। ಅವಲಕ್ಕಿ ಕಳುವ್ಯಾನ
ನಮ್ಮಣ್ಣವೇನು ಬಡವೇನ। ಕ್ಯಾದಿಗಿ
ಗರಿಯೊಳಗೆ ಫಳಗಿ ಕಳಿಸ್ಯಾನ॥

ಧ್ವನಿ ೨ : ತಂಗಿ ಗಂಡನ ಮನೆಗೆ ಬೇಗ ಹೊರಟು ಹೋಗುತ್ತಾಳಲ್ಲ ಎಂದು ಅಕ್ಕ ಮಳೆರಾಯ ಬಾ, ಪಯಣ ಉಳಿಯಲಿ ಎಂದು ಪ್ರಾರ್ಥಿಸುತ್ತಾಳೆ-

ಕಾಲುಂಗುರ ತಂಗೀಯ। ಕರೆಯ ಬಂದಿದಾರೆ
ಕಾರೊಡ್ಡಿ ಹುಯ್ಯೋ ಮಳೆರಾಯ। ತಂಗೀಯ
ಇಂದೀನ ಪಯಣ ಉಳಿಯಾಲಿ॥

ಧ್ವನಿ ೧ : ಅತ್ತೆ ಕಂಡರೆ ಸೊಸೆಗೆ ಆಗುವುದಿಲ್ಲ. ಆದರೆ ಸೊಸೆಯನ್ನು ಪ್ರೀತಿಸುವ ಅತ್ತೆಯರಿಗೇನೂ ಕಡಿಮೆಯಿಲ್ಲ.

ಕಣ್ಣು ಮೂಗಲಿ ನನ್ನ। ಹೆಣ್ಣು ಮಗಳು ಚೆಲುವಿ
ಬಣ್ಣದಲಿ ನನ್ನ ಸೊಸಿ ಚೆಲುವಿ। ದಸರೀಯ
ಬನ್ನಿ ಮುಡಿವಾಗ ಮಗ ಚೆಲುವ॥

ಧ್ವನಿ ೨ : ಜನಪದ ಸಾಹಿತ್ಯದಲ್ಲಿ ಮಮತೆಯ ಮಹೋನ್ನತ ಚಿತ್ರಣವನ್ನು ಗುರುತಿಸಬಹುದು. ನಿಜ ಜೀವನದಲ್ಲಿನ ಮಮತೆಯನ್ನು ಕವಿ ತನ್ನ ಕಾವ್ಯ ಭಾಷೆಯಲ್ಲಿ ಜಾನಪದ ಸೊಗಡನ್ನು ತುಂಬಿ ಅದೆಷ್ಟು ಸೊಗಸಾಗಿ ಚಿತ್ರಿಸಿದ್ದಾನೆ!

ಧ್ವನಿ ೧ : ತಾಯಿಯಿಂದ ಮಗು, ಅಕ್ಕನಿಂದ ತಂಗಿ, ತಂಗಿಯಿಂದ ಅಕ್ಕ, ಮಗಳಿಂದ ತಾಯಿ, ಅಣ್ಣನಿಂದ ತಂಗಿ, ತಂಗಿಯಿಂದ ಅಣ್ಣ ಎಲ್ಲರೂ ಬಯಸುವುದು ಮಮತೆ. ಇದರಿಂದ ಅಮಿತಾನಂದ ಹೊಂದುವರು. ಇದು ಮಾನವೀಯ ಪ್ರೇಮ. ಈ ಮಮತೆ ಪ್ರತಿಯೊಬ್ಬರ ಹೃದಯಾಂತರಾಳದಿಂದ ಬರಬೇಕಲ್ಲವೇ?

✳

# ಏಳು ಮಂದಿ ರಾಮರು

ಗಾರೇ ಚಾವುಡಿ ಒಳಗೆ
ಗಜ ಮುತ್ತಿನರಮನೆ।। ತಂದನ್ನೇ.... ತಾನ।
ಗಜ ಮುತ್ತಿನರಮನೆ
ಏಳು ಮಂದಿ ರಾಮರು ” ”

ಧ್ವನಿ ೧ : ಅರಮನೆಯಲ್ಲಿ ಕುಳಿತು ಏಳು ಮಂದಿ ರಾಮರು ತಮ್ಮಲ್ಲೇ ಮಾತನಾಡಿಕೊಳ್ಳುತ್ತಿದ್ದಾರೆ. ಸೌದೆ ತರಬೇಕು, ಬೇಟೆ ಆಡಬೇಕು ಅಂತ. ಕಾವಲಿನವನಿಗೆ ಅರಮನೆಗೆ ಯಾರನ್ನೂ ಬಿಡಬೇಡ ಎಂದು ಹೇಳಿ, ತಾಯಿ ಮಲ್ಲುಗದೇವಿಗೂ ತಾವು ಬೇಟೆಗೆ ಹೋಗುವ ವಿಷಯವನ್ನು ತಿಳಿಸಿದರು. ಚಿಕ್ಕವಳಾದ ನಾಗರ ಕನ್ಯೆ ಏಳುದಿನದ ಬಾಣಂತಿಯಾಗಿದ್ದಳು. ಅವಳನ್ನು ಬಿಟ್ಟು ಬೇಟೆಗೆ ಹೊರಟರು’

ಧ್ವನಿ ೨ : ಏಳುಜನ ರಾಮರು ಬೇಟೆಗೆ ಹೋದುದನ್ನು ತಿಳಿದ ಜೋಗಿಯೊಬ್ಬ ಅರಮನೆಯ ಕಡೆ ಬಂದ. ಅರಮನೆಯ ಮುಂದೆನಡೆಯುತ್ತಿದ್ದ ನಾಟ್ಯವನ್ನು ನೋಡುತ್ತ ನಿಂತಿದ್ದು ಒಳಗೆ ಹೋಗಲು ಪ್ರಯತಿಸಿದಾಗ ಬಾಗಿಲ ಕಾಯುವ ಗೊಲ್ಲರು ಬಿಡಲಿಲ್ಲ. ಆಗ ಆ ಜೋಗಿ-

“ಉರಿಗಣ್ಣ ಬಿಟ್ಟರೆ
ಉರಿದೆ ಹೋದೆಯ ಕಾಣೋ ।। ತಂದನ್ನ..... ತಾನ।।
ಕಿಡಗಣ್ಣ ಬಿಟ್ಟರೆ।
ಸಿಡದೇ ಹೋದೆಯೊ ಕಾಣೊ।।

ಧ್ವನಿ ೧ : ಎಂದು ಹೇಳಿದ. ನಾಗರಗನ್ನೆ ಅರಮನೆಯ ಮುಂದೆ ಸಾಗುತ್ತಿದ್ದ ನಾಟ್ಯವನ್ನು ನೋಡುತ್ತಿದ್ದಳು. ಅರಮನೆಯ ಮುಂದೆ ನಾಟ್ಯ ನೋಡುತ್ತಿದ್ದ ಜೋಗಿಯನ್ನುನೋಡಿ ನಾಗರಗನ್ನೆ ತೊಡೆಯ ಮೇಲೆ ಇದ್ದ ಬಾಲಕನನ್ನು ತೊಟ್ಟಿಲಿಗೆ ಹಾಕಿ ಮುತ್ತುರತ್ನ ತಂದು-

ನವರತುನ ತುಂಬಿಕೊಂಡು
ಕೊಳ್ಳಯ್ಯ ಎಲೆ ಜೋಗಿ ।। ತಂದನ್ನ ತಾನ ।।

ಜೋಗಿ : ನಿನ್ನ ಕೈಯೊಳಗಿನ ಬಕ್ಕುಸ।
ಎಂದಿಗೂ ನಾನೊಲ್ಲೆ॥
ಆಲು ನಾಯಿ ಜೂಲು ನಾಯಿ
ಮಾಡಿಕೊಂಡು ಕರುಕೊಂಡೇ ಹೋಗಿಬಿಟ್ಟ॥

ಧ್ವನಿ ೧ : ತೊಟ್ಟಿಲಲ್ಲಿದ್ದ ರಾಮ ಬಲು ದುಃಖ ಮಾಡುತ್ತಿತ್ತು. ಬಾಗಿಲು ಕಾಯುತ್ತದ್ದ ಗೊಲ್ಲರು ಅರಮನೆಗೆ ದೊರಸಾನಿ ಬರಲೇ ಇಲ್ಲವಲ್ಲ ಎಂದು ಚಿಂತಿಸತೊಡಗಿದರು.

ಧ್ವನಿ ೨ : ಜೋಗಿ ನಾಗರಗನ್ನೆಯನ್ನು ನಾಯಿ ಮಾಡಿ ಕರೆದುಕೊಂಡು ಒಂದು ಪಟ್ಟಣಕ್ಕೆಬಂದ. ಅಲ್ಲಿ ದೊರೆಗಳು ಆ ಕರಿಯ ನಾಯಿಯನ್ನು ನೋಡಿ "ನಿಲ್ಲಯ್ಯ ಜೋಗಿ" ಎಂದರು. ಆಗ ಜೋಗಿ-

ಧ್ವನಿ ೧ : "ನಿಮ್ಮ ನಾಯಿಯಾದರೆ ನೀವೇ ಕಟ್ಟಿಕೊಳ್ಳಿ ಸ್ವಾಮಿ" ಎಂದಾಗ ಅವರು ಕಬ್ಬಿಣದ ಸರಪಣಿ ಹಾಕಿ ಕಲ್ಲು ಕಂಬಕ್ಕೆ ಅವನ್ನು ಬಿಗಿದರು. ಆ ನಾಯಿ ಕಬ್ಬಿಣದ ಸರಪಣಿಯನ್ನು ನುಚ್ಚುನೂರು ಮಾಡಿ ಜೋಗಿಯನ್ನು ಹಿಂಬಾಲಿಸಿತು.

ಧ್ವನಿ ೨ : ಮುಂದಕ್ಕೆ ಹೋಗುವಾಗ ಅಲ್ಲಿ ಒಂದು ತೊರೆ ಸಿಕ್ಕಿತು. ಅಲ್ಲಿಗೆ ಮೂರು ಮುಳ್ಳುಂಡೆಯನ್ನು ಎಸೆದ ಜೋಗಿ. ಆಗ ಆ ನಾಯಿ ಹಿಂದಿನ ರೂಪತಾಳಿತು. ಆ ತೊರೆಯ ಹತ್ತಿರ ನಾಗರಗನ್ನೆಯನ್ನು ಮುಟ್ಟುತ್ತಾನೆ. ಆಗ ಆಕೆ "ನನ್ನ ಕೈಯ ಮುಟ್ಟಬೇಡ" ಎಂದರೂ ಆಕೆಯನ್ನೇ ಜೋಗಿ ಹಿಂಬಾಲಿಸಿ ಹೋಗುತ್ತಾನೆ. ಆಗ ಆಕೆ -

"ಏಳು ವರುಸದ ಲೋಪಿ ನೂಲುತೀನಿ।
ಎಲೆ ಜೋಗಿ॥ ತಂದನ್ನೇ....... ತಾನ।
ನಾನು ವ್ರತವನ್ನು ಇಡುತೀನಿ
ಏಳು ವರುಸ ತುಂಬಿದ ಮ್ಯಾಲೆ ॥ ತಂದನ್ನೇ ತಾನ॥

ಧ್ವನಿ : ಎಂದರೂ ಸಹ ಕೇಳದೆ ಆಕೆಯನ್ನು ಹಿಂಬಾಲಿಸಿ ಮೈಕೈ ಮುಟ್ಟುತ್ತಾನೆ. ಆಗ ನಾಗರಗನ್ನೆ - "ರಾಮರು ಬೆಟ್ಟಕ್ಕೆ ಹೋದಾಗ ನೀನು ಈ ರೀತಿ ಮಾಡಿದುದು ಸರಿಯಲ್ಲ. ನನ್ನ ಕಂದ ರಾಮಣ್ಣನಿಗೆ ಹಾಲು ಕೊಡುವವರು ಯಾರು?" ಎಂದು ದುಃಖ ಮಾಡಲಾರಂಭಿಸಿದಳು.

ನಿನ್ನ ಕಂದ ರಾಮನ । ತಂದನ್ನ ತಾನ
ಸುದ್ದಿಗಳ ಬಿಟ್ಟುಬಿಡೇ ಎಲೆರಾಣಿ॥

ಜೋಗಿ : ಈ ಜೋಗಿಯನ್ನು ಇನ್ನು ನಂಬಿಕೊಂಡು ಬರಬೇಕು.

"ನಿನ್ನ ಚಂದವ ನೋಡಿ
ನಿನ್ನ ಚತುರವ ನೋಡಿ
ಕರೆ ನಾಯಿ ಮಾಡಿಕೊಂಡು
ಕರಕೊಂಡು ಬಂದಿವ್ನಿ"

ಧ್ವನಿ : ಎಂದು ಹೇಳುತ್ತಾ ಜೋಗಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೊರಟ.

ಧ್ವನಿ : ಇತ್ತ ರಾಮರು ಬೇಟೆಯನ್ನು ಮುಗಿಸಿ ಅರಮನೆಗೆ ಬಂದರು ಏಳು ಮಂದಿ ರಾಮರು ಬಂದ ಕೂಡಲೇ ಆರು ಜನ ಅತ್ತಿಗೆಯರು ಆರತಿಯನ್ನು ತಂದರು. ಚಿಕ್ಕ ಮಗನಾದ ರಾಮನಿಗೆ ತಾಯಿ ಆರತಿ ತಂದಳು. ಆಗ ಆತ, "ಅಮ್ಮಾ ನೀನ್ಯಾಕೆ ಆರತಿ ತಂದೆ?" ಎಂದು ಕೇಳಲು ತಾಯಿ ದುಃಖಿಸುತ್ತಾ- "ನೀನು ಹೋದ ದಿನವೇ ಆಕೆ ಹೊರಟು ಹೋದಳು" ಎಂದ ಕೂಡಲೇ ರಾಮ ಕಾವಲಿನವನನ್ನು ಕರೆಯಿಸಿ - "ನಾಗರಗನ್ನೆ ಎಲ್ಲಿ?" ಎಂದು ಪ್ರಶ್ನಿಸಿದ. ಅದಕ್ಕೆ ಆತ, "ನೀವು ಹೋದ ದಿನವೇ ಜೋಗಿಯೊಬ್ಬ ಬಂದಿದ್ದ. ಆತ ನಾಗರಗನ್ನೆಯವರನ್ನು ನಾಯಿ ಮಾಡಿಬಿಟ್ಟ. ನಮ್ಮ ಮೇಲೆ ಒಂದು ಮುಳ್ಳುಂಡೆ ಎಸೆದುಬಿಟ್ಟ. ನಾವು ಹಾಗೆಯೇ ಕೂತದ್ದೋ, ಎಷ್ಟೋ ಹೊತ್ತಿನ ಮೇಲೆ ನಮಗೆ ಜ್ಞಾನ ಬಂತು ಎನ್ನಲು ಕುಪಿತರಾದ ಏಳು ಮಂದಿ ರಾಮರು ಕುದುರೆಯನ್ನು ಹತ್ತಿ ಕಗ್ಗಲ್ಲ ಬೆಟ್ಟದ ಕಡೆ ಹೊರಟರು. ಮುಂದೆ ಒಂದುತೊರೆ ಸಿಕ್ಕಿತು.

ಧ್ವನಿ : ಕುದುರೆಗಳ ಓಟದ ಸಪ್ಪಳ ನಾಗರಕನ್ನೆಯ ಕಿವಿ ಮುಟ್ಟಿತು. ಇದು ರಾಮರ ಕುದುರೆಗಳ ಶಬ್ದವೆಂದು ಯೋಚಿಸಿ ತಿರುಗಿ ನೋಡಿದಳು. ಅದು ರಾಮರ ಕುದುರೆಗಳೇ ಆಗಿದ್ದುವು. ಅವುಗಳನ್ನು ನೋಡಿದಾಗ ಆಕೆಗಾದ ಸಂತೋಷ ಅಷ್ಟಿಷ್ಟಲ್ಲ. ಕೂಡಲೇ ಜೋಗಿ ಆಕೆ ಕೈಯನ್ನು ಹಿಡಿದುಕೊಳ್ಳಲು ಬರಲು ಆಕೆ-

ಧ್ವನಿ : ನನ್ನ ಕೈ ಹಿಡಿದುಕೊಳ್ಳಬೇಡ, ನೋಡು ಅಲ್ಲಿ ಯಾರು ಬಂದಿದ್ದಾರೆ ಅಂತ. ಕೂಡಲೇ ಜೋಗಿ ಏಳು ಮುಳ್ಳುಂಡೆಗಳನ್ನು ಎಸೆದ. ಏಳು ಮಂದಿ ರಾಮರು, ಕುದುರೆಗಳು ಎಲ್ಲಾ ಕರಿ ಕಲ್ಲಾದರು. ನಿಂತು ದುಃಖಿಸುತ್ತಿದ್ದ ನಾಗರಗನ್ನೆಯನ್ನು ಜೋಗಿ ಕರೆದುಕೊಂಡು ಮತ್ತೊಂದು ಪಟ್ಟಣಕ್ಕೆ ಹೋಗಿ ಅಲ್ಲಿರಿಸಿದ. ಆಕೆಯನ್ನು ಮತ್ತೆ ಬಿಡದೆ ಜೋಗಿ-

"ಮೈಕೈಯ ಮುಟ್ಟುತ ಬರುತಾನೆ
ಕೈಯ ಬಾಯ ಸವರುತಾನೆ ॥ ತಂದನ್ನೆ ತಾನ॥

ಧ್ವನಿ : ನೀನು ನನ್ನ ಕೈಯ ಮುಟ್ಟಬೇಡ. ನಾನು ಏಳು ವರ್ಷಗಳಿಂದ ವ್ರತ ಮಾಡುತ್ತಿದ್ದೀನಿ, ಆತುರ ಬೀಳಬೇಡ. ಅದಾದ ಮೇಲೆ ನಾನು ನಿನ್ನವಳೇ

ಆಗುತ್ತೇನೆ" ಎಂದು ಸಮಾಧಾನಿಸಿದಳು. ನನಗೆ ಏಳು ದಿನದ ಮಗು ಇದೆ. ಆರು ಜನ ದೊಡ್ಡವ್ವೆದೀರು ಕಂಡ ರಾಮಣ್ಣನನ್ನು ಸಾಕುತ್ತಿದ್ದಾರೆ" ಎಂದಳು.

ಧ್ವನಿ : ಇತ್ತ ಒಂದು ದಿನ ಊರ ಹುಡುಗರೆಲ್ಲಾ ಚೆಂಡು, ಗೆಜ್ಜುಗೆ, ಬುಗುರಿ ಆಡುತ್ತಿದ್ದರು. ಆಟದಲ್ಲಿ ಎಲ್ಲರನ್ನೂ ರಾಮ ಸೋಲಿಸಿದ. ಆಗ ಆತನ ಮಿತ್ರರು 'ಅದಕ್ಕೇ ನಿಮ್ಮವ್ವೆ ಜೋಗಿ ಜೊತೆ ಓಡಿಹೋದಳು' ಎಂದು ಆಡಿಕೊಂಡರು. ಆ ಮಾತನ್ನು ಕೇಳಿದ ರಾಮನಿಗೆ ಕೋಪ ಉಕ್ಕಿ ಹರಿಯಿತು. ಚೆಂಡು, ಬುಗುರಿಗಳನ್ನು ಬಿಸುಟು ಬಂದು ಮನೆಯಲ್ಲಿ ಮಂಚದ ಮೇಲೆ ಮಲಗಿಕೊಂಡ. ದೊಡ್ಡವ್ವೆಯರು ಬಂದು ಊಟಕ್ಕೆ ಕರೆದರು.

ದೊಡ್ಡಮ್ಮ : ಎದ್ದೇಳು ಎದ್ದೇಳು ಸ್ನಾನ ಮಾಡಿ, ಊಟ ಮಾಡು

ರಾಮ : ನಮ್ಮ ತಾಯಿ ಯಾರು ಅಂತ ಹೇಳೋವರೆಗೆ ಊಟ ಮಾಡೋಲ್ಲ

ದೊಡ್ಡಮ್ಮ : ನಾವು ಆರು ಜನ ತಾಯಿರಿಲ್ವಪ್ಪಾ?

ರಾಮ : ನಮ್ಮ ತಾಯಿನ ನನಗೆ ತೋರಿಸಿ, ಇಲ್ಲದೇ ಹೋದ್ರೆ ನನ್ನ ಪ್ರಾಣವನ್ನೇ ಕಳೆದುಕೊಳ್ಳುತ್ತೀನಿ.

ಧ್ವನಿ : ದೊಡ್ಡವ್ವೆ ನಡೆದುದನ್ನು ವಿವರಿಸಿದಳು-

ದೊಡ್ಡವ್ವೆ : ಮಗನೇ ನಮ್ಮರಮನೆಗೆ ಒಬ್ಬ ಜೋಗಿ ಬಂದಿದ್ದ. ನಿಮ್ಮ ತಾಯಿ ಭಿಕ್ಷೆ ನೀಡಲು ಹೋದಾಗ ಆತ ನಾಯಿಯನ್ನಾಗಿ ಮಾಡಿಕೊಂಡು ಹೊರಟುಹೋದ.

ರಾಮ : ಅಷ್ಟು ಸಾಕು.

ಧ್ವನಿ : ಮಲ್ಲಿಗೆ ಹಂಬನ್ನೂ ತಂದ ರಾಮ.

ರಾಮ : ಇದಕ್ಕೆ ಆರು ಜನ ದೊಡ್ಡವ್ವೆದೀರೂ ನೀರು ಹೊಯ್ಯುತ್ತಿರಿ. ಮಲ್ಲಿಗೆ ಗಿಡ ಬಾಡಿದರೆ ನನ್ನನ್ನು ಸುತ್ತ ಅಂತ ತಿಳಿದುಕೊಳ್ಳಿ. ಮಲ್ಲಿಗೆ ಗಿಡ ಬೆಳೆದರೆ ಇದ್ದಾನೆ ಎಂದು ತಿಳಿದುಕೊಳ್ಳಿ.

ಮಲ್ಲಿಗೆ ಗಿಡ ಕಳಕಳ ಅಂದರೆ
ನಮ್ಮ ಮಗನನ್ನೇ ಅನ್ನಮ್ಮ । ತಂದನ್ನೇ ತಾನ।

ಧ್ವನಿ : ನನ್ನ ತಾಯಿಯನ್ನು ನೋಡಿಯೇ ನೋಡುತ್ತೇನೆ ಎಂದು ಹೇಳಿ ಕುದುರೆ ಲಾಯಕ್ಕೆ ಹೋಗಿ ಕುದುರೆ ತಂದು ಏಳು ವರ್ಷದ ರಾಮ ಜೋಗಿ ಪಟ್ಟಣದ ಮಾರ್ಗವನ್ನು ಹಿಡಿದ. ದಾರಿಯಲ್ಲಿ ಹೋಗುವಾಗ ಒಂದು ನೀರಿನ ಬಾವಿ ಸಿಕ್ಕಿತು. ಅಲ್ಲಿ ಕುದುರೆಯನ್ನು ಬಿಟ್ಟ. ಅಲ್ಲಿಗೆ ಜೋಗಿ ದಿನವೂ ಬಂದು ನೀರು ತೆಗೆದುಕೊಂಡು ಹೋಗುತ್ತಿದ್ದ. ಆ ಹೊತ್ತು ಆತ ನೀರಿಗೆ ಬರಲಿಲ್ಲ.

ನಾಗರಗನ್ನೆ ಒಬ್ಬ ಅಜ್ಜಿಗೆ ನೀರು ತಂದುಕೊಡಲ ಹೇಳಿದಳು. ಅಜ್ಜಿ ನೀರು ತುಂಬಿಕೊಂಡು ಮೇಲಕ್ಕೆ ಬಂದಳು. ಅಲ್ಲಿ ರಾಮಣ್ಣ ಆಕೆಯನ್ನು ನೋಡಿ-

ರಾಮ : ಅಜ್ಜಿ. ಅಜ್ಜಿ ಬಾಯಾರಿಕೆ ಆಗುತ್ತೇ ಸ್ವಲ್ಪ ನೀರು ಕೊಡುತ್ತೀಯಾ?

ಧ್ವನಿ : ಅಜ್ಜಿ ನೀರು ಕೊಟ್ಟಳು. ಅದನ್ನು ಕುಡಿದ ಮೇಲೆ ರಾಮ -

ರಾಮ : ನಿಮ್ಮದು ಯಾವೂರಜ್ಜಿ?

ಅಜ್ಜಿ : ಜೋಗಿ ಪಟ್ಟಣದವಳು ಮೊಗ.

ರಾಮ : ಜೋಗಿ ಪಟ್ಟಣದ ಆಡಳಿತ ಹೇಳಜ್ಜಿ.

ಅಜ್ಜಿ : ಜೋಗಿ ಪಟ್ಟಣಕ್ಕೆ ನಾಗರಕನ್ಯೆ ಬಾಣಂತಿ. ಅವಳನ್ನು ಜೋಗಿ ಕರೆತಂದ. ದಿನಾ ಆ ಜೋಗಿ ನೀರಿಗೆ ಬರ್ತಿದ್ದ. ಈ ಹೊತ್ತು ಬರ್ನಿಲ್ಲ.

ಧ್ವನಿ : ರಾಮಣ್ಣ ಒಂದು ಚೀಟಿ ಬರೆದು, "ಇದನ್ನು ನಾಗರಗನ್ನೆಗೆ ಕೊಡಜ್ಜಿ" ಎಂದು ಆಕೆಯ ಸೆರಗಿಗೆ ಕಟ್ಟಿದ.

ಧ್ವನಿ : ಮತ್ತೆ ಅಜ್ಜಿ ಕಥೆಯನ್ನು ಮುಂದುವರಿಸಿದಳು.

ಅಜ್ಜಿ : ಈಗ್ಗೆ ಕೆಲವು ದಿನಗಳ ಹಿಂದೆ ಏಳುಮಂದಿ ರಾಮರು ಬಂದಿದ್ರು. ಈಗ ಅವರು ಕಲ್ಲಾಗಿ ನಿಂತವ್ರೆ. ಅವರ ಏಳು ಕುದುರೆಗಳೂ ಕಲ್ಲಾಗಿ ನಿಂತವೆ. ಈ ಜೋಗಿ ಪಟ್ಟಣಕ್ಯಾಕಪ್ಪಾ ಬಂದೆ?

ರಾಮ : ಈ ಚೀಟಿ ಅಮ್ಮನಿಗೆ ಕೊಡಜ್ಜಿ.

ಧ್ವನಿ : ಅಜ್ಜಮ್ಮ ಆಗಲೆಂದು ನೀರು ತೆಗೆದುಕೊಂಡು ಹೂವನ್ನು ಕಟ್ಟಿಕೊಂಡು ರಾಮಣ್ಣ ಕೊಟ್ಟ ಚೀಟಿಯನ್ನು ಅದರಲ್ಲಿಟ್ಟು ಕೊಟ್ಟಳು. ಹೂ ಮುಡಿವಾಗ ನಾಗರಗನ್ನೆ ಆ ಚೀಟಿ ತೆಗೆದು ನೋಡಿ-

"ಕಂದ ರಾಮನ ಮೊಗವನ್ನು
ಎಂದೀಗೆ ನೋಡಲಯ್ಯ। ತಂದನ್ನ ತಾನ॥

ಧ್ವನಿ : ಅಜ್ಜಿಯನ್ನುದ್ದೇಶಿಸಿ ನಾಗರಗನ್ನೆ ಹೇಳಿದಳು-

ನಾಗರಗನ್ನೆ: ಅಜ್ಜಿ ಆ ರಾಮಣ್ಣನನ್ನು ಒಂದು ದಿನ ಮನೆಗೆ ಕರೆದುಕೊಂಡು ಬಾರಜ್ಜಿ. ಅವನಿಗೆ ದಿನಾ ಊಟ ಕೊಡುತ್ತೀನಿ. ದಿನಾ ಹೂಕಟ್ಟಿಕೊಂಡು ಬಾ.

ಅಜ್ಜಿ : ಆಗಲಿ....

ಧ್ವನಿ : ಅಜ್ಜಿ ಒಪ್ಪಿಗೆ ನೀಡಿದಳು. ಇತ್ತ ನಾಗರಗನ್ನೆ ಮೈ ಕೈ ನೋಯುತ್ತದೆ, ತಲೆ ಸಿಡಿಯುತ್ತದೆ, ಅಡಿಗೆ ಮಾಡಲಿಕ್ಕೆ ಆಗುವುದಿಲ್ಲ ಎಂದು ಹೇಳಿ ಬಹಳ ದುಃಖ ಮಾಡಿಕೊಂಡು ಮಲಗಿದಳು. ಜೋಗಿ ಅದನ್ನು ನೋಡಿ ಅಂಬನ್ನು ತರಲು ಹೊರಟ.

ಊಟಾವೂ ನನಗಿಲ್ಲ
ತಾನವೂ ನನಗಿಲ್ಲ। ತಂದೆನ್ನತಾನ।
ನಾನೇನು ಮಾಡಲಿ ಸ್ವಾಮಿ।
ತಲೆಯಾದರೋ ವೊಡಿತಾರೇ।
ಜ್ವರಗಾಳ ಬಂದಾವೆ।
ಮೈ ಕೈಯಿ ಒಡಿತಾವೆ॥

ಧ್ವನಿ : ರಾಮ ಚೀಟಿ ಬರೆದು ಅಜ್ಜಿಯ ಹತ್ತಿರ ಕಳುಹಿಸಿದ ತಾಯಿಗೆ ಅದರಲ್ಲಿ "ಜೋಗಿಯ ಜೀವ ಯಾತರಲ್ಲಿ ಇದೆ ಎಂಬುದನ್ನು ತಿಳಿದುಕೋ" ಎಂದಿತ್ತು. ತಾಯಿ ಅದನ್ನು ಓದಿಕೊಂಡು ಜೋಗಿ ಬಂದಾಗ-

ನೀವು ಸತ್ತರೂ ನಾನೇಯಾ।
ನಾನು ಸತ್ತರೂ ನೀನೆಯಾ। ತಂದನ್ನೇ...... ತಾನ।
ನಿಮ್ಮ ಜೀವಾಳ ಇನ್ನೇನು।
ಯಾತರಲಿ ದೇಹ ಸ್ವಾಮಿ।

ಜೋಗಿ : ಏನು ಎಂದೂ ಇಲ್ಲದೆ ಮಾತನ್ನು ಇಂದು ಕೇಳುತ್ತೀಯಾ?

ನಾಗರಗನ್ನೆ: ಸ್ವಾಮಿ ನಮಗ್ಯಾರು ದಿಕ್ಕು?

ಅಂತ ಅರಮನೆ ಬಿಟ್ಟು ಬಂದೆ
ನಿಮಗಾಗಿ ಗುರುಮನೆ ಬಿಟ್ಟು ಬಂದೆ। ತಂದನ್ನ ತಾನ।

ಧ್ವನಿ : ಜೋಗಿಗೆ ಮರುಕ ಹುಟ್ಟಿತು. ಆಗ ಆತ ಹೇಳಿದ-

ಜೋಗಿ : ಏಳು ಸಮುದ್ರದ ಆಚೆ ಒಂದೆರಡು ದಿಣ್ಣೆಗಳಿವೆ. ಆ ದಿಣ್ಣೆ ಹೊರ ಒಳಗೆ ಏಳು ಕರಿಬನದ ಸಾಲು. ಹಾಲು ಬಾವಿ, ನೀರು ಬಾವಿ, ಹಾಲು ಬಾವಿ ಒಳಗೆ ಒಂದು ಮಾತಿನ ಗಿಣಿ ಇದೆ. ಅದನ್ನು ಹಿಡಿದುಕೊಂಡ್ರೆ ನನಗೆ ಚಳಿಜ್ವರ ಬರುತ್ತೆ. ಅದರ ಕೈ ಮುರಿದರೆ ನನ್ನ ಕೈ ಮುರಿದ್ಹಾಗೆ. ಅದರ ಕುತ್ತಿಗೆ ಮುರಿದರೆ ನನ್ನ ಪ್ರಾಣವೇ ಹೋಗುತ್ತೆ. ಏಳು ಹೆಬ್ಬುಲಿಗಳಿವೆ, ಅಲ್ಲಿಗೆ ಹೋದರೆ ಅವು ಆತುರಸಿ ಬರುತ್ತವೆ. ಅದಕ್ಕೆ ಏಳು ಮುಳ್ಳುಂಡೆ ಎಸೆಯಬೇಕು.

ಧ್ವನಿ : ಅದನ್ನು ಕೇಳಿಕೊಂಡು ನಾಗರಗನ್ನೆ ಅಜ್ಜಿಯ ಮನೆಗೆ ಹೋಗಿ ಚೀಟಿಯನ್ನು ಬರೆದು ಕಳುಹಿಸಿದಳು. ರಾಮ ಅದರಂತೆ ಹೊರಟ.ಒಂದು ಆಲದ ಮರಕ್ಕೆ ಕುದುರೆ ಕಟ್ಟಿ ಒಬ್ಬ ಋಷಿ ಕುಳಿತಿದ್ದ. ರಾಮ ನಮಸ್ಕರಿಸಿ. ಆಗ ಋಷಿಗಳು ಕಣ್ಬಿಟ್ಟು-

ಋಷಿ : ಏನಪ್ಪಾ ಮಗು?

ರಾಮ : ನನಗೆ ಬುದ್ಧಿ ಹೇಳಬೇಕು.

ಋಷಿ : ಏಳು ಮಂದಿ ಅಣ್ಣದೀರು ಇಲ್ಲಿಕಲ್ಲಾಗಿ ನಿಂತವ್ರೆ. ನೀನ್ಯಕಪ್ಪಾ ಇಲ್ಲಿಗೆ ಬಂದೆ?

ರಾಮ : ನಿಮ್ಮಾಶೀರ್ವಾದ ಇದ್ದರೆ ಏನೂ ಆಗೋಲ್ಲ ಸ್ವಾಮಿ.

ಋಷಿ : ನಿನ್ನ ಧೈರ್ಯಕ್ಕೆ ಮೆಚ್ಚಿದೆ. ಬಾ ಮಗು, ಮೂರು ಮುಳ್ಳುಂಡೆ ಕೊಡ್ತೀನಿ. ಏಳು ಮಂದಿ ರಾಮರಿಗೆ ಏಳು ನಿಂಬೆಹಣ್ಣು ಮಂತ್ರಿಸಿ ಕೊಡ್ತೀನಿ, ಏಳು ಕುದುರೆಗಳಿಗೆ ಏಳು ಇದ್ದಲು ಮಂತ್ರಿಸಿ ಕೊಡ್ತೀನಿ, ಏಳು ಹೆಬ್ಬುಲಿಗಳಿಗೆ ಏಳು ಮುಳ್ಳುಂಡೆ ಮಂತ್ರಿಸಿ ಕೊಡುತ್ತೇನೆ ಹೋಗು.

ರಾಮ : ಆಗಲಿ ಗುರುಗಳೇ.

ಧ್ವನಿ : ಎಂದು ಎಲ್ಲವನ್ನೂ ತೆಗೆದುಕೊಂಡು ಹೊರಟ ರಾಮ. ಏಳು ಸಮುದ್ರ ದಾಟಿ, ಎರಡು ದಿಣ್ಣೆ ಇಳಿದು ಹಾಲು ಬಾವಿ, ಕರಿಬನದ ಸಾಲಿಗೆ ಬಂದು ಮಾತಿನ ಗಿಣಿ ಹಿಡಿದುಕೊಂಡ. ಜೋಗಿಗೆ ಜ್ವರ ಬಂತು. ರೆಕ್ಕೆ ಮುರಿದು ಜೇಬಿಗೆ ಹಾಕಿಕೊಂಡು ಋಷಿ ಹತ್ತಿರ ಬಂದು ನಮಸ್ಕಾರ ಮಾಡಿದ.

ರಾಮ : ನಮ್ಮ ಏಳು ಜನ ಅಪ್ಪದೀರ ಉಳಿಸಿಕೊಡಬೇಕಪ್ಪಾ.

ಋಷಿ : ನೀನು ಜೋಗಿ ಪಟ್ಟಣಕ್ಕೆ ಹೋಗಿ ನಿಮ್ಮ ತಾಯಿ ನಾಗರಕನ್ಯೆ ಕೇಳು. ಈ ಏಳು ರಾಮರಿಗೆ ಮುಳ್ಳುಂಡೆ ಮಡಗು. ಅವರು ಮೇಲೇಳುತ್ತಾರೆ.

ಧ್ವನಿ : ಋಷಿಗಳು ಹೇಳಿದಂತೆ ಮಾಡಿದ. ಏಳು ಜನ ರಾಮರು, ಕುದುರೆಗಳು ಮೇಲೆದ್ದು ಬಂದುವು. ಜೋಗಿ ಪಟ್ಟಣಕ್ಕೆ ಬರುವಾಗ್ಗೆ ಗಿಣಿಯ ಕಾಲನ್ನು ಮುರಿವ. ಇನ್ನೂ ಸ್ವಲ್ಪ ಮುಂದೆಬರುವಾಗ ಕುತ್ತಿಗೆ ಮುರಿದ. ಜೋಗಿ ಕೂಗುತ್ತಾ-

ಜೋಗಿ : ಅಯ್ಯೋ ನಾಗರಗನ್ನೆ ತಂದು ನನ್ನ ಪ್ರಾಣಕ್ಕೆ ಕುತ್ತಾಯಿತು.

ಧ್ವನಿ : ಜೋಗಿ ಪ್ರಾಣಬಿಟ್ಟ. ರಾಮಣ್ಣ ಏಳು ಮಂದಿ ಅಪ್ಪದೀರು, ತಾಯಿ, ಎಲ್ಲರನ್ನೂ ಕರೆದುಕೊಂಡು ಅರಮನೆಗೆ ಬಂದ. ಎಲ್ಲರೂ ಸಂತೋಷದಿಂದ ಆರತಿ ಹಿಡಿದುಕೊಂಡು ಬಂದರು. ನಾಗರಗನ್ನೆಗೆ ಯಾರೂ ಆರತಿ ತರಲಿಲ್ಲ. ಚಿಕ್ಕವನು ಕಂದ ರಾಮನೇ ಆರತಿ ತಂದ. ಏಳು ಜನ ದೊಡ್ಡಪ್ಪದಿರು, ತಾಯಿಯರನ್ನು ನಿಲ್ಲಿಸಿ-

ನೀನೊಬ್ಬ ಗಂಡಗೆ ಸೆರಗಾಸಿ।
ಒಬ್ಬ ತಂದೆಗೆ ಹುಟ್ಟಿದರೆ। ತಂದನ್ನ ತಾನ।
ನಮ್ಮ ರಾಮರ ಮ್ಯಾಲೆ ಗ್ಯಾನ ಮಾಡಿಕೊಂಡು।
ನಮ್ಮ ತಾಯಿ ಇದ್ದರೆ॥
ಏಳು ತೆರೆ ಹಾಕುತೀನಿ।
ಏಳು ತೆರೆಗಳಿಂದ ಆಚೆಕಡೆ ನಿಂತುಕೊಳ್ಳಮ್ಮ॥
ನೀನು ಪತಿವ್ರತ ಶಿರೋಮಣಿ ಆದರೆ।

ಈಗಲೇ ತಾಯಮ್ಮ॥
ನಿನ್ನ ಎದೆಯಾಲು।
ಇಂದಾಲೇ ಏಳು ತೆರೆನೆ ನೀಲಮ್ಮ।
ಏಳು ತೆರೆ ನೆನೆದಿಸ್ನು।
ನನ್ನ ಬಾಯಿಗೆ ಬೀಳಲಮ್ಮ॥

ಧ್ವನಿ : ಏಳು ಜನ ರಾಮರು, ಅವರ ಹೆಂಡತಿಯರು ಒಂದು ಕಡೆ ನಿಂತವರೆ.

ಏಳು ತೆರೆ ನೆನದಿಸ್ನು
ಚಿಕ್ಕೋನು ರಾಮಣ್ಣನ ಬಾಯಿಗೆ ಬಿತ್ತು। ತಂದನ್ನ ತಾನ।

ರಾಮ : ನಮ್ಮಮ್ಮ ಶರಣು.... ದೊಡ್ಡಮ್ಮದೀರೆ ಎಲ್ಲರೂ ಆರತಿ ತನ್ನಿ.

ಆರತೀ ಕರಕಂಡು
ಅರಮನೆಗೆ ಓಗಿಬಿಟ್ರು ॥ ತಂದನ್ನ ತಾನ ॥



## ಬಿಲ್ಲಾಳರಾಯ

ಧ್ವನಿ : ಆರು ಮಂದಿ ಅಣ್ಣ - ತಮ್ಮಂದಿರಲ್ಲಿ ಬಿಲ್ಲಾಳರಾಯ ಚಿಕ್ಕವನು. ಇವನು ಬಹಳ ವೈಭವದಿಂದ ಜೀವನ ನಡೆಸುತ್ತಿರುತ್ತಾನೆ. ಮಿಕ್ಕವರೆಲ್ಲಾ ಕಗ್ಗಲು ರಾಗಿಹಿಟ್ಟು, ಮುಗ್ಗಲು ಹುರಳಿಕಾಳು ತಿಂದುಕೊಂಡು ಜೀವಿಸುವ ಸ್ಥಿತಿ ಬಂತು. ಬೇಸರಗೊಂಡು -

"ಅವರಾರು ಮಂದಿ ಅಣ್ಣದೀರು॥
ಮಾತೊಂದನಾಡ ಬಿಟ್ಟು। ತಂದನ್ನೇ.... ತಾನ
ಮಾತೊಂದ ಆಡಬಿಟ್ಟು
ಬಾಗಕೆ ಕೂತ್ರವ್ರ॥" ”

ಧ್ವನಿ : ಆರು ಮಂದಿ ಅಣ್ಣದೀರು ಒಳ್ಳೊಳ್ಳೆ ನೇಗಿಲು, ಹೊಲ, ಮನೆ ಹೋರಿಗಳನ್ನೆಲ್ಲಾ ತಾವು ಇಟ್ಟುಕೊಂಡು, ಗರಿಕೆ ಹೊಲ, ಮುರುಕಲು ಮನೆ, ಮುದಿ ಎತ್ತುಗಳು, ಒಡಕಲು ಗಂಗಳ, ತೂತು ಚಂಬನ್ನು ಬಿಲ್ಲಾಳರಾಯನಿಗೆ ಕೊಟ್ಟರು. ಇದನ್ನು ನೋಡಿದ ಅತ್ತಿಗೆ ಕುಪ್ಪಾಜಮ್ಮ ಮಲ್ಲುಗದೇವಿ, ತಂದೆ ಗೌಳು ರಾಯ, ತಾಯಿ ಅರಿಯಲದೇವಿ ಎಲ್ಲರೂ ಬಿಲ್ಲಾಳರಾಯ ಮಾಡಿದ ತಪ್ಪೇನು? ಎಂದು ಕೇಳಲು ಅದಕ್ಕೆ ಅವರು ಮುಖ ಕೊಟ್ಟು ಮಾತನಾಡುವುದಿಲ್ಲ.

ಅವರು ಬಾಗವ ಮಾಡಿದರು
ಮೂಡಲ ಮಳೆ ವೋಯ್ತು । ತಂದನ್ನ ತಾನ.....

ಕಾಯೋರಿ ಬಂದಾರೆ।
ಮುದಿ ಎತ್ತು ಬರವಲ್ದು ॥ ” ॥

ವೊಲದ ಬದಿನ ಮ್ಯಾಲೆ
ಬಾಳ ದುಕ್ಕ ಮಾಡ್ತವ್ನೆ ॥ ” ॥

ಧ್ವನಿ : ಹೀಗೆ ಬಿಲ್ಲಾಳರಾಯ ದುಃಖ ಮಾಡುತ್ತಿರುವಾಗ ಈಶ್ವರ ಪಾರ್ವತಿ ರಥದಲ್ಲಿ ಹೋಗುತ್ತಿದ್ದರು. ಪಾರ್ವತಿ ಈಶ್ವರನನ್ನು ಕುರಿತು -

"ನರಲೋಕದೊಳಗಿನ್ನು।
ನರ ಮನ್ಸನ ಸಪ್ಪತ ಆತದೆ । ತಂದನ್ನ.... ತಾನ ।

ಮಾಸ್ವಾಮಿ ನೋಡ್ಕಂಬರವು
ನಡೀರಿ ಅಂತಾಳೆ।   "   "

ಈಶ್ವರ : ದೆವ್ವಾನೋ ಗಾಳಿನೋ..... ಅದನ್ನೇನು ನೋಡುವುದು?

ಪಾರ್ವತಿ : ಏನಾದ್ರೂ ಆಗಲಿ ನೋಡಬೇಕು, ನೀವು ನೋಡಲಿಲ್ಲ ಅಂದ್ರೆ ನಿಮ್ಮ ರಥದಿಂದಲೇ ನಾನು ಇಳಿಮುಬಿಡ್ತೀನಿ.

ಧ್ವನಿ : ಈಶ್ವರ ಪಾರ್ವತಿ ಮಾತಿಗೆ ತಲೆದೂಗಿ ರಥದಿಂದಿಳಿದು ಹೊಲದ ಬದೀನ ಮೇಲೆ ಬರುತ್ತಾನೆ.

ಈಶ್ವರ : ಭಕ್ತಾ, ಏನಪ್ಪಾ ನಿನ್ನ ಕಷ್ಟ?

ಬಿಲ್ಲಾಳ : ಏನು ಅಂದ್ರೆ ನಾನೇನು ಹೇಳಲಿ ದೇವಾ? ಆರು ಮಂದಿ ಅಣ್ಣದೀರು ನನಗೆ. ನಾನು ಕಿರಿಯವ ಬಿಲ್ಲಾಳರಾಯ ಅಂತ. ಇದೋ ನೋಡಿ ನನ್ನ ಭಾಗಕ್ಕೆ ಕೊಟ್ಟಿರೋ ಮುದಿ ಎತ್ತು, ಇದು ಹೊಡೆದರೂ ಹೋಗದು. ಹೇಗೆ ಕೆಲಸ ಮಾಡಲಿ? ಜೀವನ ಸಾಗಿಸ್ಲಿ ಅಂತ ಯೋಚನೆ ಮಾಡ್ತಿದ್ದೆ ನನ್ನೊಡೆಯಾ.

ಧ್ವನಿ : ಈಶ್ವರ ಆ ಎತ್ತುಗಳಿಗೆ ಚಾಟಿಯಲ್ಲಿ ಮೂರೇಟು ಹೊಡೆದ. ಆಗ ಅವು ಮುತ್ತಿನ ಕೊಂಬು, ಬೆಳ್ಳಿ ಕೊಂಬಿನ ಬಸವಗಳಾದವು.

ಈಶ್ವರ : ಅಡ್ಡ ಆರು ಗಾವುದ ಮಧ್ಯಾಹ್ನಕ್ಕೆ ಉಳು, ಉದ್ದ ಮೂರು ಗಾವುದ ಮಧ್ಯಾಹ್ನಕ್ಕೆ ಉಳು. ಅಡ್ಡ ಆರಡಿ ಧಾನ್ಯ ಚೆಲ್ಲು, ಉದ್ದ ಆರಡಿ ಧಾನ್ಯ ಚೆಲ್ಲು, ನಿನ್ನ ಬೇಸಾಯದ ಸಹಾಯಕ್ಕೆ ಆರುಸಾವಿರ ಗಿಳಿ ಕಳುಹಿಸಿತೀನಿ, ಕಳೆಕೀಳಲಿಕ್ಕ ಐದುಸಾವಿರ ಗಿಳಿ ಕಳಿಸ್ತೀನಿ, ಕೊಯ್ದು ಮೆದೆ ಹಾಕಲಿಕ್ಕೆ ಎಂಟುಸಾವಿರ ಗಿಣಿ ಕಳಿಸ್ತೀನಿ.

ಬಿಲ್ಲಾಳ : ಎಲ್ಲಾ ನಿಮ್ಮ ಕರುಣೆ ದೇವಾ.

ಧ್ವನಿ : ಎಂದು ಹೇಳಿ ಕಣ್ಬಿಡುತ್ತಿದ್ದಂತೆ ಈಶ್ವರ - ಪಾರ್ವತಿ ಅದೃಶ್ಯರಾಗಿದ್ದರು. ತಾಯಿ ಅರಿಯಲದೇವಿ ಮಗನಿಗೆ ಅರಕದ ಹಿಟ್ಟು, ಹುರುಳಿಕಾಳು ಸಾರು ಮಾಡಿಕೊಂಡು ಹೊಲಕ್ಕೆ ಬಂದಳು. ಮಗನನ್ನು ಊಟಕ್ಕೆ ಕರೆದಳು. ಬಿಲ್ಲಾಳರಾಯ ಕಲ್ಯಾಣಿಗೆ ಹೋಗಿ ಕೈಕಾಲು - ಮುಖ ತೊಳೆದು, ವಿಭೂತಿ ಧರಿಸಿಕೊಂಡು ಈಶ್ವರನ ಧ್ಯಾನವನ್ನು ಮಾಡುತ್ತಾ ತಂದೆ ಗೌಳುರಾಯನನ್ನು ನೆನೆದು-

ನಮ್ಮಾರು ಮಂದಿ ಅಣ್ಣಂದೀರು।
ನಿಮ್ಮ ಪಾದವೇ ಗತಿ ಎಂದ । ತಂದನ್ನೇ ತಾನ ।
ನಮ್ಮ ತಾಯಿ ಅರಿಯಲದೇವಿ।
ನಿಮ್ಮ ಪಾದವೇ ಗತಿ ಎಂದ ॥   "   ॥

ಧ್ವನಿ : ಹೀಗೆ ಎಲ್ಲರಿಗೂ ನಮಸ್ಕರಿಸಿ ಊಟ ಮಾಡಿ ಎದ್ದು ಮತ್ತೆ ಹೊಲಕ್ಕೆ ಕಾಳು ಚೆಲ್ಲಿ ಬಸವನನ್ನು ನೇಗಿಲಿನಿಂದ ಬಿಚ್ಚಿ ಮನೆಯ ಕಡೆ ಹೊರಟ. ಗಿಣಿಗಳು ಈತನ ವ್ಯವಸಾಯಕ್ಕೆ ಸಹಾಯ ಮಾಡಿದುವು.

ಧ್ವನಿ : ಅತ್ತ ಆರುಮಂದಿ ಅಣ್ಣದೀರು ಒಳ್ಳೊಳ್ಳೆ ಮನೆಗಳನ್ನು ಕಟ್ಟಿಕೊಂಡು, ಹೊಲವನ್ನು ಮಾಡುತ್ತಾ ಸುಖವಾಗಿದ್ದರು. ಒಂದು ದಿನ ಬಿಲ್ಲಾಳರಾಯ ತನ್ನ ಅರಮನೆಯ ಕೋಟೆಯಲ್ಲಿ ನಿಂತು ಬೆಳೆದಿರುವ ಬೆಳೆಯನ್ನು ನೋಡಿ, ಇವನನ್ನು ಹೇಗಾದರೂ ಮಾಡಿ ಬಾವಿಗೆ ತಳ್ಳಬೇಕೆಂದು ಅಣ್ಣಂದಿರು ಆತನನ್ನು ಸೌದೆಗೆ ಕರೆದುಕೊಂಡು ಹೋಗಿ-

ಬಾವಿಗೆ ತಳ್ಳಬೇಕು।
ಅನ್ನ ಬದುಕುಬಾಳು ತಿನ್ನಬೇಕು । ತಂದನ್ನ..... ತಾನ ।

ಧ್ವನಿ : ಹೀಗೆ ಯೋಚಿಸಿ, ಬಿಲ್ಲಾಳರಾಯನನ್ನು ಒಪ್ಪಿಸಿ, ಸೌದೆಗೆ ಬೆಟ್ಟದ ಕಡೆ ಕರೆದುಕೊಂಡು ಹೋಗಲು ಅಣಿಯಾದರು. ಬಿಲ್ಲಾಳರಾಯ ಅತ್ತಿಗೆ ಕುಪ್ಪಾಜಮ್ಮನಲ್ಲಿ 'ತಾನು ಅಣ್ಣಂದಿರ ಜೊತೆಯಲ್ಲಿ ಸೌದೆಗೆ ಹೋಗಿ ಬರುತ್ತೇನೆ' ಎಂದು ಹೇಳಿದ. ಅದಕ್ಕೆ ಆಕೆ -

ಮೈದಯ್ಯ ಮೈದಯ್ಯ।
ಕಂಡಿತ ವೋಗುಬ್ಯಾಡ।
ನಿನ್ನ ಬಾವಿಗೆ ತಳ್ಳುತಾಗೆ।
ನಿನ್ನ ಬದುಕು ಬಾಳು ತಿನ್ನುತ್ತಾರೆ । ತಂದನ್ನೇ ತಾನ।

ಬಿಲ್ಲಾಳ : ಬಿಡಿ ಬಿಡಿ ಅತ್ತುಗಮ್ಮ
ಬಲು ಸುದ್ದಿ ಏಳಬ್ಯಾಡಿ। ತಂದನ್ನೇ ತಾನ ।

ಧ್ವನಿ : ಆರು ಜನ ಅಣ್ಣಂದಿರೊಡಗೂಡಿ ಕಾಡಿಗೆ ಹೊರಟ ಬಿಲ್ಲಾಳರಾಯ. ಅಣ್ಣದೀರು ಮುಂದೆ ಮುಂದೆ ಹೊರಟರು. ಅವರನ್ನು ಹಿಂಬಾಲಿಸಿದ ಬಿಲ್ಲಾಳರಾಯ. ನಮ್ಮ ಹಿಂದೆ ಬರಬ್ಯಾಡ ಎನ್ನಲು -

ಬಿಲ್ಲಾಳ : ಅಣ್ಣದಿರಾ, ನಾನು ನಿಮ್ಮ ಜೊತೆಯಲ್ಲಿ ಹುಟ್ಟಲಿಲ್ಲವೇ? ನೀವು ಕುಡಿದ ಹಾಲನ್ನು ನಾನು ಕುಡಿಯಲಿಲ್ಲವೇ ನಿಮ್ಮ ಹಿಂದೆ ನಾನು ಹುಟ್ಟಿಲ್ಲವೇ?

ಧ್ವನಿ : ಎಂದು ಹೇಳಿ ಅವರನ್ನು ಹಿಂಬಾಲಿಸಿದ. ಕಾಡಿಗೆ ಹೋಗಿ ಸೌದೆ ತಂದ. ಆದರೂ ಈತನನ್ನು ನಡುದಾರಿಯಲ್ಲಿ ಬಿಟ್ಟು ಅಣ್ಣದೀರು ಹೊರಟರು. ಎಷ್ಟು ಬೆಟ್ಟ ಸುತ್ತಿದರೂ ಅಣ್ಣದೀರು ಸಿಗಲಿಲ್ಲ.

ಧ್ವನಿ : ಕಾಡಿನಲ್ಲಿ ಹೋಗುವಾಗ ಏಳು ಹೆಡೆ ಸರ್ಪ ಸಿಕ್ಕಿತು. ಅದನ್ನು ಕಡಿದು ಹಾಕಿ, ಕೇರೆ ಹಾವನ್ನು ಸಿಂಬಿ ಮಾಡಿಕೊಂಡು ಸೌದೆ ಹೊರೆಯನ್ನು

ಕಟ್ಟಿಕೊಂಡು ಅಣ್ಣದೀರು ಇನ್ನೂ ಸಿಗಲಿಲ್ಲವಲ್ಲ ಎಂದು ಯೋಚನೆ ಮಾಡುತ್ತಾ ಬರುತ್ತಾ ಇದ್ದಾನೆ ಬಿಲ್ಲಾಳರಾಯ.

ಧ್ವನಿ : ಅತ್ತ ಕಡೆ ಆರುಮಂದಿ ಅಣ್ಣದೀರು ಬಿಲ್ಲಾಳರಾಯನನ್ನು ನೋಡಿ ಓಡಿ ಬಂದರು. ಅವರನ್ನು ನೋಡಿ ಬಿಲ್ಲಾಳರಾಯ-

'ಅಣ್ಣದೀರಾ, ಯಾಕೋ ಬಾಯಾರಿಕೆ ಆಗುತ್ತಾ ಇದೆ. ನೆತ್ತಿ ಬೇರೆ ಉರಿಯುತ್ತಾ ಇದೆ' ಎಂದು ಹೇಳಿ ಹೊರೆಯನ್ನು ಒಂದೆಡೆ ಇಟ್ಟು ನೀರು ಕುಡಿಯಲು ಹೊರಟ. ಅಣ್ಣಂದಿರು ಅಣ್ಣಂದಿರು ಕೂಡಲೇ ಅವನನ್ನು ಹಿಡಿದು ಕೈಕಾಲು ಕಟ್ಟಿ ಬಾವಿಗೆ ತಳ್ಳುವುದರಲ್ಲಿದ್ದರು. ಆಗ ಬಿಲ್ಲಾಳರಾಯ-

ನನ್ನ ಬದುಕು ಬಾಳನು।
ನೀವೇ ತಿನ್ನೂರಿ। ತಂದನ್ನೇ.... ತಾನ।
ನನ್ನ ಪ್ರಾಣವ ತೆಗಿಬ್ಯಾಡಿ।
ಅಣದೀರೆ ನನ್ನ ಮಾತು ಕೇಳಿ ॥ ತಂದನ್ನೇ.... ತಾನ॥

ಧ್ವನಿ : ಕುಪ್ಪಾಜಮ್ಮ ಹೇಳಿದ ಮಾತು ನಿಜವೆನಿಸಿತು. ಆತನನ್ನು ಬಾವಿಗೆ ತಳ್ಳುವಾಗ-

ಬಿಲ್ಲಾಳ : 'ನೀವು ಬೆಟ್ಟಕ್ಕೋದ್ರೂ ಅನ್ನ ಸಿಗದಿರಲಿ, ರಾಗಿ ಎಲ್ಲಾ ಮಣ್ಣುಂಡೆಯಾಗಲಿ, ಗಂಗಳಗಳು ತಾವರೆ ಎಲೆ ಆಗಲಿ, ಕುಡಿವ ಚಂಬೆಲ್ಲಾ ಸೋರೆ ಬುರುಡೆ ಆಗಲಿ.'

ಧ್ವನಿ : ಎನ್ನುತ್ತಿದ್ದಂತೆಯೇ ಬಿಲ್ಲಾಳರಾಯ ಬಾವಿಯನ್ನು ಸೇರಿದ.

ಧ್ವನಿ : ಆರುಮಂದಿ ಅಣ್ಣಂದಿರು ಊರಿಗೆ ಹೋದರು. ಕೆಲವು ದಿನಗಳಾಗುತ್ತಿದ್ದಂತೆಯೇ ಕಿತ್ತುತಿನ್ನುವ ಬಡತನ. ಎಲ್ಲರೂ ಸೌದೆಮಾರಿ ಜೀವನ ಮಾಡುವ ಪರಿಸ್ಥಿತಿಯಾಯಿತು.

ಧ್ವನಿ : ಬಿಲ್ಲಾಳರಾಯನನ್ನು ಕಾಣದ ಆತನ ಬಸವಗಳು ನಮಗ್ಯಾರುದಿಕ್ಕು ಎಂದು ದುಃಖ ಮಾಡಲಾರಂಭಿಸಿದುವು. ಹುಲ್ಲು - ನೀರು ಕೊಡುವವರೂ ಯಾರೂ ಇಲ್ಲವಾದರು. ತಾವೇ ಗೂಟದಿಂದ ಕಳಚಿಕೊಂಡು ಮೇಯಲು ಹೊರಟವು. ಎತ್ತುಗಳು ನೀರು ಕುಡಿಯಲೆಂದು ಬಾವಿಯ ಹತ್ತಿರ ಬಂದುವು. ಅಲ್ಲಿ ಬಲ್ಲಾಳ ರಾಯನ ಕೂದಲು ಕಾಣಿಸಿಕೊಂಡಿತು. ಎತ್ತುಗಳು ಒಡೆಯನನ್ನು ಮೇಲೆ ಕರೆತಂದುವು. ಹೆಣವನ್ನು ಹದ್ದುಗಳು ಕಿತ್ತು ತಿನ್ನಲಾರಂಭಿಸಿದುವು. ನೊಣಗಳು ಒಂದೆಡೆ ಮುತ್ತಿದುವು. ಎತ್ತುಗಳು ಈಶ್ವರ - ಪಾರ್ವತಿಯರಿಂದ ವರ ಕೇಳಿಕೊಂಡು ಬರುತ್ತೇವೆಂದು ಹೊರಟವು. ಅಷ್ಟರಲ್ಲಿ ಈಶ್ವರ - ಪಾರ್ವತಿಯರು ಇಬ್ಬರೂ ರಥವನ್ನು ಇಳಿದು-

ಏನಪ್ಪಾ ಬಸವೇಶ್ವರ।
ಬಂದಿರುವ ಕಷ್ಟಗಾಲ । ತಂದನ್ನೇ ತಾನ।

ಬಸವಗಳು: ನಮ್ಮೊಡ್ರೆಯ ಸತ್ತು ಎಷ್ಟೋ ದಿನಗಳಾದುವು. ನಮಗೆ ಹುಲ್ಲು ಹಾಕುವವರಿಲ್ಲ, ನೀರು ಕುಡಿಸುವವರಿಲ್ಲ. ಹದ್ದು, ಗೂಬೆಗಳು ಅವರನ್ನು ಕಿತ್ತು ತಿನ್ನುತ್ತಿವೆ. ಆತನನ್ನು ಉಳಿಸಿಕೊಡಿ ಸ್ವಾಮಿ.

ಧ್ವನಿ : ಈಶ್ವರ ಚಡಿಯಲ್ಲಿ ಮೂರು ಪಟುಗಳನ್ನು ಹೊಡೆಯಲು ಬಿಲ್ಲಾಳರಾಯ ಮೇಲೆದ್ದು ಈಶ್ವರನಿಗೆ ನಮಸ್ಕರಿಸಿದ. ಈಶ್ವರ ಅಲ್ಲೇ ಅರಮನೆಯನ್ನು ಕರುಣಿಸಿದ. ಬೆಳಗಾಗುತ್ತಿದ್ದಾಗಲೇ ಎಲ್ಲರೂ ಬಂದು ನೋಡಿ ಆಶ್ಚರ್ಯ ಪಡುವವರೇ. ಯಾರೋ ರಾಜರು ಬಂದು ಬಿಟ್ಟಿರಬೇಕೆಂದು ಯೋಚಿಸಿದವರೇ. ಅಂದು ಬಿಲ್ಲಾಳರಾಯನ ಅಣ್ಣಂದಿರು ಈ ಪಟ್ಟಣಕ್ಕೆ ಸೌದೆ ಹೊತ್ತುಕೊಂಡು ಬಂದರು.

ಧ್ವನಿ : ಅಣ್ಣಂದಿರು, ಅತ್ತಿಗೆಯರು ತಂದ ಸೌದೆಯನ್ನೆಲ್ಲಾ ಬಿಲ್ಲಾಳರಾಯ ತೆಗೆದುಕೊಂಡು ನಾಳೆಯೂ ತನ್ನಿ ಎಂದು ಹೇಳಿದ.

ನಾಳೀಕೂ ಸಮಾರಾಜ್ನೆ
ತಾವೆಲ್ಲರೂ ಬರಬೇಕು। ತಂದನ್ನ ತಾನ ।

ಧ್ವನಿ : ಅಂದು ಗೌಳುರಾಯ, ತಾಯಿ ಅರಿಯಲದೇವಿ, ಅತ್ತಿಗೆ ಕುಪ್ಪಾಜಮ್ಮ ಅಣ್ಣಂದಿರು ಎಲ್ಲರೂ ಸೌದೆಯ ಹೊರೆಯನ್ನು ತಂದಿದ್ದರು. ಅಂದು ಎಲ್ಲರಿಗೂ ಪಟ್ಟೆಸೀರೆ ಸೇಯಿಸಿ, ತಂದೆ ಗೌಳು ರಾಯನಿಗೆ ಬಟ್ಟೆ ಸಿದ್ಧ ಮಾಡಿಸಿ, ಎಲ್ಲರೂ ಬಂದ ಕೂಡಲೇ ಜಟ್ಟಿಯರ ಕೈಯಲ್ಲಿ ಎಣ್ಣೆ ಹೊತ್ತಿಸಿ, ಸ್ನಾನ ಮಾಡಿಸಿ, ಊಟಕ್ಕೆ ಹಾಕಿಸಿ ತಾಂಬೂಲ ನೀಡಿಸಿದ.

ತಾಯ ಮಲ್ಲುಗದೇವಿ।
ಅಪ್ಪ ಗೌಳರಾಯನು। ತಂದನ್ನ ತಾನ।
ನಮ್ಮ ಅರಮನೆಯಲ್ಲಿ।
ಇರಬೇಕೆಂದು ಕೇಳ್ಯವ್ರೆ। ತಂದನ್ನ ತಾನ।
ನಮ್ಮತ್ತಿಗೆ ಕುಪ್ಪಾಜವ್ವ।
ಕಂಡಿತ ಇರಬೇಕು। ತಂದನ್ನ ತಾನ।

ಧ್ವನಿ : ಎಲ್ಲಾ ಆದಮೇಲೆ....

ಬಿಲ್ಲಾಳ : ಸ್ವಲ್ಪ ನನ್ನ ತಲೆ ಬಗೆಯವ್ವಾ.

ತಾಯಿ : ನನಗೆ ಕಣ್ಣು ಕಾಣೋಲ್ಲವಲ್ಲಪ್ಪಾ.....

ಧ್ವನಿ : ತಲೆ ಬಗೆಯುತ್ತಾ ಅಳಲಾರಂಭಿಸಿದಳು.

ಬಿಲ್ಲಾಳ : ಯಾಕಜ್ಜಮ್ಮಾ ಅಳ್ತಿದ್ದೀರಿ ?

ತಲೆಯೊಳಗೆ ಕಪ್ಪು ಇತ್ತಪ್ಪ
ಅದನೋಡಿ ಅತ್ತನಪ್ಪ । ತಂದನ್ನೇ.... ತಾನ ।

ಬಿಲ್ಲಾಳ : ನನ್ನ ಬೆನ್ನು ನೋಡವ್ವಾ.

ತಾಯಿ : ಇದೇನು ಇಷ್ಟೊಂದು ಜುಡ್ಡುಗಟ್ಟಿ ನಿಂತಿದೆ!

ಬಿಲ್ಲಾಳ : ಅದು ನಿನ್ನ ಆರುಮಂದಿ ಮಕ್ಕಳು ಗುದ್ದಿಗುದ್ದಿ ಮಾಡಿದ್ದು.

ಧ್ವನಿ : ತಾಯಿಗೆ ಆ ಮಾತು ಕೇಳಿ ತಡೆಯಲಾರದಷ್ಟು ದುಃಖವಾಯಿತು. ಬಿಲ್ಲಾಳರಾಯ ಎಲ್ಲರಿಗೂ ನಮಸ್ಕರಿಸಿ-

ಬಿಲ್ಲಾಳ : ತಾವೆಲ್ಲಾ ಇಲ್ಲೇ ಇರಬೇಕು.

ಧ್ವನಿ : ಅರಮನೆಯ ಬಿಟ್ಟು।
ವೋಗಬ್ಯಾಡಿ ಅಣ್ಣದೀರ। ತಂದನ್ನ ತಾನ।
ನನ್ನ ಪ್ರಾಣವ ಕಳಿದು।
ಬದುಕೀರಾ ಅಣ್ಣದೀರಾ। " " ।
ಅರಮನೆಗಿನ್ನು।
ದೊರೆತನ ಕೊಟ್ಟವ್ನೇ.....॥ " " ॥

ಧ್ವನಿ : ಬಿಲ್ಲಾಳರಾಯ ಎಲ್ಲರ ತಪ್ಪನ್ನೂ ಕ್ಷಮಿಸಿ ಎಲ್ಲರನ್ನೂ ತನ್ನ ಅರಮನೆಯಲ್ಲಿ ಇರಿಸಿಕೊಂಡ. ಅಣ್ಣದೀರು ತಮ್ಮ ತಪ್ಪಿಗೆ ಕ್ಷಮೆ ಕೇಳಿದರು.

*

# ಈರದಿಮ್ಮಿ

ಈರದಿಮ್ಮಿ । ಸುವ್ವಯ್ಯಾ।
ಆರು ಮಂದಿ ಅಣ್ಣಂದೀರು।
ಚಿಕ್ಕೋಳು ಈರದಿಮ್ಮವ್ವ॥

ಧ್ವನಿ : ಈರದಿಮ್ಮವ್ವೆಯನ್ನು ದಂಡಿನಲ್ಲಿದ್ದ ರೊಡ್ಡಿಗೌಡನಿಗೆ ಮದುವೆ ಮಾಡಿದ್ದರು ಆರುಮಂದಿ ಅಣ್ಣಂದಿರು. ಒಂದು ದಿನ ಆರು ಮಂದಿ ಅಣ್ಣಂದಿರು ಮೂಡಲಕೆಬ್ಬೆ ಹೊಲಕ್ಕೆ ವೊನ್ನಾರವನ್ನು ಹುಡುಕಿಕೊಂಡು ಹೊರಟರು. ಈರದಿಮ್ಮಿ-

ಅಂಗೈಲಿ ಅಕ್ಕಿ ನಾದು। ಸುವ್ವಯ್ಯಾ
ಮುಂಗೈಲಿ ಬೇಳೆ ನಾದು। ”
ಬ್ಯಾಗುದಲಿ ಅಡುಗೆಯ ದುಡುಕರಿಸಿ।
ಗೂಡೆಗೆ ತುಂಬವಳೆ।

ಧ್ವನಿ : ಈರದಿಮ್ಮಿ ಕುಂಬಾರರ ಬೀದಿಗೆ ಹೋಗಿ ಮಡಿಕೆ ತಂದು "ನಮ್ಮಪ್ಪನ ಕಾಲದಿಂದ ಕೆಬ್ಬೆ ಹೊಲ ನೋಡಿಲ್ಲ, ಈ ಪೊತ್ತಾದ್ರೂ ಹೋಗಬೇಕಲ್ಲಾ" ಅಂತ ಯೋಚಿಸಿ ಅತ್ತಿಗೆಯನ್ನು ಕೇಳಿದಳು-

ಈರದಿಮ್ಮಿ: ಅತ್ತಿಗಮ್ಮ ನಾನು ಈ ಹೊತ್ತು ಕೆಬ್ಬೆ ಹೊಲಕ್ಕೆ ಹಿಟ್ಟೊತ್ಕಂಡು ಹೋಗ್ತೀನಿ.

ಅತ್ತಿಗೆ : ನಾವಿರುವಾಗ ನೀಯಾಕೆ ಹೊತ್ತುಕೊಂಡು ಹೋಗಬೇಕವ್ವಾ, ನಾನೇ ಹೋಗ್ತೀನಿ ಬುಡು ಈರದಿಮ್ಮಿ.

ಈರದಿಮ್ಮಿ: ನಾನು ನೋಡಿಲ್ಲ ಅತ್ತಿಗಮ್ಮಾ ಅದಕ್ಕೇ ಹೋಗಿದ್ದು ಬರ್ತೀನಿ.

ಧ್ವನಿ : ಈರದಿಮ್ಮಿ ಹೇಗೋ ಒಪ್ಪಿಗೆ ಪಡೆದುಕೊಂಡು ಪಟ್ಟೆಸೀರೆ ಉಟ್ಟುಕೊಂಡು, ಮುತ್ತಿನ ಬಟ್ಟು ಇಟ್ಟುಕೊಂಡು, ಚಿನ್ನದ ಸಿವಾಡುಡಿ ತೊಟ್ಕಂಡು, ಹಿಟ್ಟಿನ ಹೆಡಿಗೆ ಹೊತ್ತುಕೊಂಡು, ಹೊಲಕ್ಕೆ ನಡೆದಳು. ಅಡ್ಡ ತಿರುಗುವಾಗ ಒಬ್ಬ ಹುಡುಗ ಸಿಕ್ಕಿದ. ಆತನನ್ನುದ್ದೇಶಿಸಿ-

ಈರದಿಮ್ಮಿ: ಯಾವ ಸೀಮೆಯವನಪ್ಪ?

ಹುಡುಗ : ನನಗೊಂದು ಸೀಮೆಯೇ, ನಮ್ಮದು ಯಾವ ಊರು ಅಂತ ಹೇಳಲಿ? ಹೀಗೇ ತಿರುಗಾಡಿಕೊಂಡೋಗೋದು. ಹಿಟ್ಟು - ಬಟ್ಟೆ ಕೊಟ್ಟರೆ-

ಅವರಮನೆ ದನ ಕಾಯತೀನಿ। ಸುವ್ವಯ್ಯಾ
ಅವರಮನೆ ಕಸ ಒಡಿತೀನಿ ”

ಈರದಿಮ್ಮಿ: ಹಾಗಾದ್ರೆ ನಮ್ಮಮನೆಯಲ್ಲಿದ್ದುಬಿಡ್ತೀಯಾ? ಹಿಟ್ಟು- ಬಟ್ಟೆ ಕೊಡ್ತೀವಿ.

ಹುಡುಗ : ಆಗಲೇಳಿ ತಾಯಿ.

ಈರದಿಮ್ಮಿ: ಈ ಹಿಟ್ಟಿನಡಗೆ ಹೊತ್ತುಕೊಂಡು ನಡೀ, ನಿನ್ನದು ಯಾವ ಊರು, ಯಾವ ಜಾತಿ, ಯಾವ ಕುಲ, ನಿನ್ನ ಬಳಗದವರ್‍ಯಾರಿದ್ದಾರೆ ತಮ್ಮ?

ಹುಡುಗ : ಬೆಡಗು ಬ್ಯಾಡರುಡುಗ। ಸುವ್ವಯ್ಯಾ
ಕುಲದಾಗೆ ನಾಯ್ಕರ ಮಗ। ”

ಧ್ವನಿ : ಈರದಿಮ್ಮಿ ಪೇಟೆಯಾಗೆ ಅಂಗಿ ಕುಲಾವಿ, ಚಿನ್ನದ ಮಚ್ಚು ಕೊಡಲಿ, ರತ್ನದ ಪಿಳ್ಳಂಗೋವಿ ತೆಗೆದುಕೊಂಡು ಗಂಟುಮೂಟೆ ಕಟ್ಟಿಕೊಂಡು ಮನೆಗೆ ಬಂದಳು. ಜಟ್ಟಿಯರನ್ನು ಕರೆಯಿಸಿ ಎಣ್ಣೆ ಒತ್ತಿಸಿ. ಸೀಗೆಕಾಯಿ ಹಾಕಿ ನೀರು ಹಾಕಿಸಿದಳು. ಅಂಗಿ ಕುಲಾವಿ ತೊಡಿಸಿದಳು. ಹಾಲು - ಅನ್ನ ಹಾಕಿ ವಿದ್ಯೆ ಕಲಿಸಿದಳು. ಹುಡುಗನಿಗೆ ದನಕಾಯುವ ಕೆಲಸ ನಿಯಮಿಸಿದಳು.

ಧ್ವನಿ : ಒಂದು ದಿನ ಈರದಿಮ್ಮಿ ಹಿಟ್ಟಿನೆಡಿಗೆ ಹೊತ್ತುಕೊಂಡು ಹೊಲಕ್ಕೆ ಹೋಗುತ್ತಿರಲು, ಬ್ಯಾಡರ ಬೊಮ್ಮದನಕಾಯುತ್ತಾ ಕುಳಿತಿದ್ದ ಈರದಿಮ್ಮಿಯನ್ನು ಕಂಡು ಓಡೋಡಿ ಬಂದ. ಆತನನ್ನು ನೋಡಿ-

ಈರದಿಮ್ಮಿ: ಯಾಕಪ್ಪಾ ಕಂದಾ ಹೊಟ್ಟೆ ಹಸಿವಾಗುತ್ತೇನೋ, ಬಾಯಾರಿಕೆ ಆಗುತ್ತೇನೋ?

ಹುಡುಗ : ಹೊಟ್ಟೆ ಹಸಿವಿಲ್ಲ. ಬಾಯಾರಿಕೆ ಆಗಿಲ್ಲ.

ಈರದಿಮ್ಮಿ: ಇನ್ಯಾಕೆ ಬಂದೆ ಕಂದ ನನ್ನೊಂದಿಗೆ ಯೇಳೋ ಮಗನೇ.

ಹಿಟ್ಟಿನಡಿಗೆ ತಳ್ಳಿಬಿಟ್ಟ
ಪಟ್ಟೆಸೀರೆ ಅರಿದುಬಿಟ್ಟ
ಕೊತ್ನಿ ಕುಬ್ಬಸ ಗೀಳ್‌ಬಿಟ್ಟ
ಕೈಹಿಡಿದು ಏಳುತಾನೇ
ಮೈಕೈಯ ಮುಟ್ಟುತಾನೇ

ಈರದಿಮ್ಮಿ: ನಾನು ಸಾಕಿದ ಮಗನಲ್ಲೋ, ನನ್ನ ಕೈ ಮುಟ್ಟಬೇಡ ಬ್ಯಾಡರ ಬೊಮ್ಮ

ಧ್ವನಿ : ಬ್ಯಾಡರ ಬೊಮ್ಮ ಹಾಗಂದರೂ ಬಿಡಲಿಲ್ಲ. ಅಲ್ಲಿಂದ ಹೇಗೋ ಬಿಡಿಸಿಕೊಂಡು ಆರುಮಂದಿ ಅಣ್ಣಂದಿರ ಮುಂದೆ ಬಂದು ನಿಂತುಕೊಂಡಳು. ಹಿರಿಯ ಅಣ್ಣ ಹಿಟ್ಟಿನ ಹೆಡಿಗೆಯನ್ನು ಇಳಿಸಿದ.

ಅಣ್ಣ : ಯಾಕವ್ವಾ ಪಟ್ಟೆಸೀರೆ ಹರಿದಿದೆ, ಕೊತಿನಿ ಕುಬ್ಬಸ ಗೀಳಿದೆ, ಮುತ್ತಿನ ಬಟ್ಟು ಇಕ್ಕೋದು ಮರೆತುಬಿಟ್ಯವ್ವಾ, ಯಾಕವ್ವಾ ಈರುದಿಮ್ಮವ್ವಾ?

ಈರದಿಮ್ಮಿ: ಮುಳ್ಳಿನ ಮ್ಯಾಲೆ ಬಿದ್ದುಬಿಟ್ಟೆ. ಸೀರೆ ಹರಿದು ಹೋಯ್ತು ಮುತ್ತಿನ ಬಟ್ಟು ಹಾಕಿಕೊಳ್ಳುವುದನ್ನು ಮರೆತುಬಿಟ್ಟೆ ಕಣಣ್ಣ.

ಅಣ್ಣ : ಯಾಕವ್ವಾ ಮುಳ್ಳಿನ ಮ್ಯಾಲೆ ಬಿದ್ದುಬಿಟ್ಟೆ? ಜೋಪಾನ್ವಾಗಲ್ವವ್ವಾ ಬರೋದು?

ಧ್ವನಿ : ಅಣ್ಣಂದಿರಿಗೆ ಊಟ ಬಡಿಸಿ ವೀಳ್ಯ ಕೊಟ್ಟಳು.

ಅಣ್ಣ : ಯಾಕೆ ಅಳ್ತೀಯಾ ಬಾರವ್ವಾ ಊಟ ಮಾಡು ಬಾ.

ಈರದಿಮ್ಮಿ: ನಂಗ್ಯಾಕೋ ಬಹಳ ಭಯವಾಗುತ್ತೆ, ಅರಮನೆ ಕಾವಲಿನವರಿಗೆ ಬಿಟ್ಟು ನನ್ನ ಆಚೆಗೆ ಕಳುಹಿಸು.

ಅಣ್ಣ : ಆಗಲಿ.

ಧ್ವನಿ : ಅಣ್ಣ ಅರಮನೆ ಕಾವಲಿನವರಿಗೆ ಬಿಟ್ಟು ಮತ್ತೆ ಹೊಲಕ್ಕೆ ಹೋದ. ದಾರಿಯಲ್ಲಿ ಒಂದು ಅಡ್ಡ ತೊರೆ. ಅಲ್ಲಿ ಬ್ಯಾಡರ ಬೊಮ್ಮ ಈರದಿಮ್ಮಿಗಾಗಿ ಕಾಯ್ದುಕೊಂಡು ಕುಳಿತಿದ್ದ. ಈರದಿಮ್ಮಿ ಅಣ್ಣ ಹಿಂದಕ್ಕೆ ಹೋದುದನ್ನು ನೋಡಿ ಬಂದು ಈರದಿಮ್ಮಿಯನ್ನು ಎಳೆದ. ಆಗ -

ಯಾಕಪ್ಪ ಬ್ಯಾಡರು ಬೊಮ್ಮ! ಸುವ್ವಯ್ಯಾ
ನಾ ಸಾಕಿದ ಮಗನಲ್ಲೋ। "
ನನಗನ್ಯಾಯ ಮಾಡುಬ್ಯಾಡ। "
ನನ್ನಾರು ಮಂದಿ ಅಣ್ಣರೊಳಗ। "
ನೀನೊಬ್ಬ ತಮ್ಮ ಕಣಯ್ಯಾ। "

ಈರ : ನಮ್ಮ ಮನೆಗೆ ಬಾರೋ ಮಗನೆ ಹಾಲು - ಅನ್ನ ಉಣ್ಣುವಿಯಂತೆ.

ಧ್ವನಿ : ಬೊಮ್ಮ ಬಿಮ್ಮು ಬಿಡಲಿಲ್ಲ. ಆದರೂ ಈರದಿಮ್ಮಿ ಆತನ ಸೆರೆಯಿಂದ ಬಿಡಿಸಿಕೊಂಡು ದಾರಿಯುದ್ದಕ್ಕೂ ಅಳುತ್ತಾ ಮನೆಗೆ ಬಂದಳು.

ಧ್ವನಿ : ಹೊಲದಿಂದ ಬಂದ ಈರದಿಮ್ಮಿಯನ್ನು ನೋಡಿ ಆರು ಮಂದಿ ಅತ್ತಿಗೆಯರು-

ಅತ್ತಿಗೆ : ಯಾಕೆ ಈರದಿಮ್ಮವ್ವ ನಿನ್ನ ಮುಖ ಬಾಡಿವೆ. ಅತ್ತಂಗಿದೆ ಏನವ್ವಾ?

ಈರದಿಮ್ಮಿ: ಏನಿಲ್ಲ.....

ಧ್ವನಿ : ಈರದಿಮ್ಮಿಯು ಜೊತೆಗಾರ್ತಿಯರ ಜೊತೆ ಮಲ್ಲಿಗೆ ಹಂಬಿನ ಹತ್ತಿರ ನಿಂತರೂ ಅಳು ತಡೆಯಲಾಗಲಿಲ್ಲ. ಬ್ಯಾಡರ ಬೊಮ್ಮನ ವರ್ತನೆಯ ಬಗ್ಗೆ ತುಂಬಾ ನೊಂದುಕೊಂಡಳು. ಮನೆಯ ಮಗನಂತೆ ಸಾಕಿದುದಕ್ಕೆ ಎಂಥ ಅನ್ಯಾಯ ಮಾಡಿದ ಎಂದು ಚಿಂತೆ ಮಾಡತೊಡಗಿದಳು. ಅಂದೇ ಈರದಿಮ್ಮವ್ವ ಋತುಮತಿ ಆದಳು. ವಿಷಯವನ್ನು ಗೆಳತಿಯರು ಅವಳ ಅತ್ತಿಗೆಯರಲ್ಲಿ ಹೇಳಿದರು.

ಧ್ವನಿ : ಅತ್ತಿಗೆಯರು ಈರದಿಮ್ಮಿಗೆ ಎಣ್ಣೆಯನ್ನು ಒತ್ತಿಸಿ, ಸೀಗೆಕಾಯಿ ಹಾಕಿಸಿ ಸ್ನಾನ ಮಾಡಿಸಿದರು. ಹೊಸಬಟ್ಟೆ ಉಡಿಸಿದರು. ಬೇಕಾದ ಆಭರಣಗಳನ್ನು ತೊಡಿಸಿದರು. ಗಂಧ ಹಾಕಿ ಹೂ ಮುಡಿಸಿ ಸೊಪ್ಪಿನ ಗುಡ್ಲಿನಾಗೆ ಆಕೆಯನ್ನು ಇರಿಸಿದರು.

ಧ್ವನಿ : ಕೂಡಲೇ ಈರದಿಮ್ಮಿಯ ಗಂಡ ರೊಡ್ಡಿಗೌಡನಿಗೆ "ನಿನ್ನ ಹೆಂಡತಿ ದೊಡ್ಡಮನಸೆ ಆಗವಳೆ" ಎಂದು ದಂಡಿಗೆ ಕಾಗದ ಬರೆಸಿದರು. ರೊಡ್ಡಿಗೌಡನಿಗೆ ಪತ್ರ ಓದಿ ಸಂತೋಷವಾಯಿತು. ಪಟ್ಟಣಕ್ಕೆ ಹೋಗಿ ಹೂವು, ಗಂಧ, ಸೀರೆ, ಕುಪ್ಪಸ, ಆಭರಣ ಎಲ್ಲವನ್ನೂ ತೆಗೆದುಕೊಂಡು ಹೆಂಡತಿಯ ಮನೆಗೆ ಬಂದ.

ಧ್ವನಿ : ಇತ್ತ ಈರದಿಮ್ಮಿಯ ಅಣ್ಣಂದಿರು ದನಕರುಗಳನ್ನೆಲ್ಲಾ ಹೊಡೆದುಕೊಂಡು ಬಂದು ದೊಡ್ಡಿಗೆ ಕೂಡಿ ರೊಡ್ಡಿಗೌಡನ ಬರುವಿಕೆಗಾಗಿ ಕಾಯ್ದು ಕುಳಿತಿದ್ದರು. ಈರದಿಮ್ಮಿಯ ಗುಡಿಸಲಿಗೆ ಬ್ಯಾಡರ ಬೊಮ್ಮ ಬಂದು ತಾನು ತಂದಿದ್ದ ಸೀರೆ, ಕಿಪ್ಪಸ ತೋರಿ-

ಹುಡುಗ : ಹೂವು ಮುಡುಕೋ ಈರದಿಮ್ಮಿ.

ಧ್ವನಿ : ಈ ಮಾತನ್ನು ಕೇಳಿದ ಈರದಿಮ್ಮಿ -

"ಓಗೋಗೋ ಎಲೆ ನಾಯಿ। ಸುವ್ವಯ್ಯಾ
ನಮ್ಮಣ್ಣದೀರು ಕಂಡರೆ।
ನಿನ್ನರಸಿ ತಲೆಯ ಬಡವಾರು "

ಧ್ವನಿ : ಬೊಮ್ಮಸಿಟ್ಟನಿಂದ ಗುಳ್ಳನ್ನೇ ಕೆಡವಿ ಹೊರಟ. ಈರದಿಮ್ಮಿಯ ಅಣ್ಣಂದಿರು ಬಂದು-

ಅಣ್ಣ : ಗುಳ್ಳು ಯಾಕವ್ವಾ ಬಿದ್ದುಹೋಯಿತು?

ಈರದಿಮ್ಮಿ: ನೆರೆಮನೆ ಬೆಕ್ಕು ಬಂದು ಕೆಡವಿತುಕಣಣ್ಣಾ.

ಧ್ವನಿ : ರೊಡ್ಡಿಗೌಡ ಆರು ತಿಂಗಳು ರಜೆ ಹಾಕಿ ಹೆಂಡತಿ ನೋಡಲು ಮೂರೇ ತಿಂಗಳಿಗೆ ಊರಿಗೆ ಬಂದುಬಿಟ್ಟ. ಮನೆ ಬಾಗಿಲಿಗೆ ಬರುತ್ತಿದ್ದಂತೆ ಆರುಜನ ಅತ್ತಿಗೇದೀರು, ಬಾವ - ಮೈದುನದಿರು ಆತನ ಪಾದವನ್ನು ತೊಳೆದು ಒಳಗೆ ಕರೆದುಕೊಂಡು ಬಂದು ಮಂಚದ ಮೇಲೆ ಕುಳ್ಳಿರಿಸಿದರು.

ನಿಮ್ಮೊಡತಿ ಚಿಕ್ಕೋಳು ಈರದಿಮ್ಮವ್ವನ। ಸುವ್ವಯ್ಯಾ
ನಿಸೇಕ ಮಾಡುತೀವಿ।

ಧ್ವನಿ : ನಿಸೇಕ ಶಾಸ್ತ್ರ ಮಾಡಿ ಬಗೆ ಬಗೆಯ ಊಟವನ್ನು ಜನರೆಲ್ಲಾ ಉಂಡರು. ಈರದಿಮ್ಮವ್ವನನ್ನು ದಂಡಿಗೆ ಕಳುಹಿಸಬೇಕು ಎಂದು ಎಲ್ಲರೂ ಆಕೆಗೆ ನಾನಾ ವಿಧವಾಗಿ ಬುದ್ಧಿ ಹೇಳಿದರು. ಈರದಿಮ್ಮವ್ವ ಕಣ್ಣೀರು ಹಾಕಿಕೊಳ್ಳಲು ಆರು

ಮಂದಿ ಅತ್ತಿಗೆಯರು, "ಅಳಬೇಡ ಈರದಿಮ್ಮವ್ವ" ಎಂದು ಸಮಾಧಾನಿಸಿ ಬುದ್ಧಿವಾದ ಹೇಳಿದರು. ಹಾಲು - ಅನ್ನ ಹಾಕಿದರು. ಈರದಿಮ್ಮಿ ಆರುಜನ ಅಣ್ಣಂದಿರೊಡನೆ ಮನೆ ಒಳಗಿಂದ ಬಂದಳು.

"ಮುತ್ತು ಹೋಗಲ ಕಟ್ಟಿ। ಸುವ್ವಯ್ಯಾ।
ಮಡಲಕ್ಕಿ ಕಟ್ಯಾರಾಗಾ। "
ಪಟ್ಟೆಸೀರೆ ಉಡಿಸ್ಯಾರೆ "
ಕುತಿನಿ ಕುಬ್ಬಸ ತೊಡಿಸ್ಯಾರೆ। "
ಇದ್ಕ ಬುದ್ಧಿ ಏಳುತಾರೆ। "

ಧ್ವನಿ : ಈರದಿಮ್ಮವ್ವೆಗೊಂದು ಕುದುರೆ, ರೊಡ್ಡಿಗೌಡನಿಗೊಂದು ಕುದುರೆ ಅಣಿಮಾಡಿ ಕುಳ್ಳಿರಿಸಿ ದಂಡಿಗೆ ಕಳುಹಿಸಿದರು. ದಂಪತಿಗಳು ತುಂಗಭದ್ರಾ ನದಿಯನ್ನು ದಾಟಿ ಹೋಗುವಾಗ ಬ್ಯಾಡರ ಬೊಮ್ಮ ಬೆನ್ನತ್ತಿ ಬಂದ. ರೊಡ್ಡಿಗೌಡನ ತಲೆಯನ್ನು ಹೊಡೆದುಬಿಟ್ಟ. ಈರದಿಮ್ಮವ್ವನನ್ನು ಎತ್ತಿ ಕುಳ್ಳಿರಿಸಿಕೊಂಡು ಆತನ ತಲೆಯನ್ನು ಕಾಲಲ್ಲಿ ಒದೆದು ಕುದುರೆಯನ್ನು ತೆಗೆಸಿಕೊಂಡಿ ಹೊರಟ. ಈರದಿಮ್ಮಿ ಕಿಟ್ಟೆಂದು ಚೀರಿ-

ನಾ ಸಾಕಿದ ಮಗನಲ್ಲೋ। ಸುವ್ವಯ್ಯಾ
ನನ್ನ ಮುಂಡೆ ಮಾಡಿಬಿಟ್ಟ "
ಕಟ್ಟಿದ ಮಡಿಲಕ್ಕಿ ಅಳೆಯಲಿಲ್ಲ "
ತಲೆ ಮ್ಯಾಗಳ ಹೂವು ಬಾಡಲಿಲ್ಲ "
ತೌರು ಮನೆಗೆ ಹೋಗಲಿಲ್ಲ "
ನನ್ನ ಗಂಡನ ಮನೆಗೆ ವೋಗಲಿಲ್ಲ "
ನನ್ನ ಮುಂಡೇನ ಮಾಡಿಬಿಟ್ಟಾ। ಸುವ್ವಯ್ಯಾ
ನಾ ಸಾಕಿದ ಮಗನಲ್ಲೋ.....। "

ಧ್ವನಿ : ಈರದಿಮ್ಮಿ ಅತ್ತು ಅತ್ತು ಬಳಲಿದಳು. ಮತ್ತೆ ರೋಷ ಉಕ್ಕಿತು. ಕಾಳಿಯ ಅವತಾರ ತಾಳಿದಳು. ಚಂದ್ರಾಯುಧವನ್ನು ತೆಗೆದು-

ನನ್ನ ಗಂಡನ ತಲೆಯ ಈಗ। ಸುವ್ವಯ್ಯಾ
ತಕ್ಕಳ್ಳೋ ಬ್ಯಾಡರ ಬೊಮ್ಮ। "

ಧ್ವನಿ : ಬ್ಯಾಡರ ಬೊಮ್ಮ ಆತನ ತಲೆಯನ್ನು ತೆಗೆದುಕೊಳ್ಳಲು ಬಗ್ಗಿದ. ಈರದಿಮ್ಮಿ ಆತನ ತಲೆಯನ್ನು ಚಂದ್ರಾಯುಧದಿಂದ ಒಂದೇ ಏಟಿಗೆ ಹೊಡೆದುಬಿಟ್ಟಳು. ಆತನ ರುಂಡ ಕಳಚಿತು ಮುಂಡದಿಂದ. ಈರದಿಮ್ಮಿ ದುಃಖಿಸುತ್ತಾ- 'ನಾನು ಮುಂಡೆ ಆದ್ನಲ್ಲೋ, ಪಾಪಿ ಮುಂಡೇ ಮಗನೇ' - ಎಂದು ಹೇಳುತ್ತಾ ಗಂಡನ ರುಂಡವನ್ನು ಮಡಿಲಿಗೆ ಕಟ್ಟಿಕೊಂಡು ಬ್ಯಾಡರ ಬೊಮ್ಮನ ತಲೆಯಲ್ಲಿ ಕೈಯಲ್ಲಿ ಹಿಡಿದುಕೊಂಡು ಗಂಡನ ಕುದುರೆಯನ್ನೇರಿ ಮನೆಗೆ ಬಂದಳು. ಎಲ್ಲರೂ ಅವಳನ್ನೇ ಆಶ್ಚರ್ಯದಿಂದ ನೋಡಿದರು.

ಅತ್ತಿಗೆ : ಯಾಕ್ ಬಂದುಬಿಟ್ಟೆ ಈರದಿಮ್ಮಿ?

ಈರದಿಮ್ಮಿ: ನಿಮ್ಮ ಮನೆ ಆಳು ನನ್ನನ್ನು ಮುಂಡೇ ಮಾಡಿಬಿಟ್ಟ.

ಧ್ವನಿ : ಎಂದು ಗೋಳೆಂದು ಕಣ್ಣೀರುಗರೆಯಲು ಎಲ್ಲರೂ ಆಳಲಾರಂಭಿಸಿದರು. ಆರುಮಂದಿ ಅಣ್ಣಂದಿರಿಗೆ ಸಿರಿಗಂಧ ಸೌದೆಯನ್ನು ತರಲು ಹೇಳಿದಳು. ಭೂಲೋಕದೊಳಗೆ ನಾನು ಇರವುದಕ್ಕಿಂತ ಸಾಯುವುದೇ ಲೇಸು. ನನ್ನ ಗಂಡನೇ ಹೋದ ಮೇಲೆ ಯಾಕಾದರೂ ನನ್ನ ಪ್ರಾಣ ಇರಬೇಕು? ಮನೆಯವರೆಲ್ಲಾ ಅತ್ತಿಗೆ, ಅಣ್ಣ ಮುಂತಾದವರು ಸಮಾಧಾನಿಸಿದರೂ ಕೇಳಲಿಲ್ಲ. "ನಿನಗೆ ಬೇಕಾದ ಮನೆ ಕೊಡುತ್ತೇವೆ, ನಿನಗೆ ಬೇಕಾದ ಸಹಾಯ ಮಾಡುತ್ತೇವೆ, ನೀನು ಪ್ರಾಣಹತ್ಯೆ ಮಾಡಿಕೊಳ್ಳಬೇಡ" ಎಂದು ಎಲ್ಲರೂ ಕಾಡಿ-ಬೇಡಿದರು. ಅದಕ್ಕೆ ಈರದಿಮ್ಮಿ-

ಈರದಿಮ್ಮಿ: ನನ್ನ ಗಂಡ ಸತ್ತ ಮೇಲೆ ಒಂದು ಘಳಿಗೆಯೂ ಕೂಡ ನಾನು ಇರುವುದಿಲ್ಲ.

"ಕೊಂಡ ಕೆಂಡ ಆಗಿಬಿಟ್ಲು! ಸುವ್ವಯ್ಯಾ
ಚಿಕ್ಕೋಳು ಈರದಿಮ್ಮವ್ವ॥



# ಕಾಮಕ್ಕ

ಧ್ವನಿ : ಸಿರಿಸೆಟ್ಟಿ, ಸಿರಿಗೌರಿ ಎಂಬ ದಂಪತಿಗಳಿಗೆ ಎಷ್ಟು ದಿನಗಳಾದರೂ ಮಕ್ಕಳಾಗಲಿಲ್ಲ. ಆಗ ಅವರು -

ಕಲ್ಲಾಂಬ ದೇವರಿಗೆ। ಸುವ್ವಲಾಲಿ ॥
ಕೈಯೆತ್ತಿ ಮುಗಿದರು। ”
ಮುಳ್ಳಾಂಬ ದೇವರಿಗೆ। ”
ಅಣ್ಣುಕಾಯಿ ಮಾಡಿಸ್ಯಾರು। ”

ಧ್ವನಿ : ಹೀಗೆ ಅವರು ಮಾಡಿದ ಪೂಜಾಫಲದಿಂದ ಪನ್ನೆರಡು ವರ್ಷಕ್ಕೆ ಒಬ್ಬ ಮಗ ಹುಟ್ಟಿದ. ಆತನಿಗೆ 'ರವಿಕಣ್ಣ' ಎಂದು ನಾಮಕರಣ ಮಾಡಿದರು. ಆತ ಹುಟ್ಟಿದ ಒಂದು ವರ್ಷಕ್ಕೆ ಮತ್ತೊಂದು ಹೆಣ್ಣಾಯಿತು. ಅದಕ್ಕೆ 'ಕಾಮಕ್ಕ' ಎಂದು ಹೆಸರಿಟ್ಟರು. ಕಾಮಕ್ಕ ಹುಟ್ಟಿದ ಹನ್ನೆರಡು ವರ್ಷಕ್ಕೆ ತಂದೆ, ತಾಯಿ ಇಬ್ಬರೂ ಕಾಲವಾಗಿ ಹೋದರು. ಕಾಮಕ್ಕ, ರವಿಕಣ್ಣ ದಾರಿಯಲ್ಲಿ ಹೋಗುತ್ತಿದ್ದರೆ, ಬೀದಿಯಲ್ಲಿ ತಿರುಗಾಡುವ ಜನ, ಗೊತ್ತಿದ್ದವರು ಅಣ್ಣ - ತಂಗಿ ಎನ್ನುತ್ತಿದ್ದರು. ಗೊತ್ತಿಲ್ಲದವರು ಗಂಡ - ಹೆಂಡತಿ ಅನ್ನುತ್ತಿದ್ದರು. ಒಂದು ದಿನ ರವಿಕಣ್ಣ ತಂಗಿಯನ್ನುದ್ದೇಶಿಸಿ-

"ನಾನು ದಂಡಿಗೆ ಓಗುತೀನಿ। ಸುವ್ವಲಾಲೆ।
ತಂಗಿ ಅರಮನೆ ಪೌಜಕ್ಕೆ ॥ ”
ಗುರುಮನೆ ಪೌಜುಕ್ಕೆ। ”
ಗುರುಮನೆ ಪೌಜುಕ್ಕೆ। ”

ಪಟ್ಣಾವೆ ಬಲು ಜೋಕೆ। ಸುವ್ವಲಾಲಿ।
ಪಟ್ಣಾವೆ ಬಲು ಜೋಕೆ। ”
ಪಾಳ್ಯವೆ ಬಲು ಜೋಕೆ। ”

ಧ್ವನಿ : ಪಟ್ಟಣಕ್ಕೆ ಹೋದರೆ ಹುಷಾರಾಗಿರಬೇಕು ಎಂದು ಹೇಳಿ ಕುದುರೆ ಲಾಯಕ್ಕೆ ಹೋಗಿ ತಂಗಿಗೆ ಮತ್ತಷ್ಟು ಬುದ್ಧಿವಾದ ಹೇಳಿ-

ಚಿನ್ನದ ನಿಕ್ಕೋಲು। ಸುವ್ವಲಾಲಿ
ರನ್ನದ ಬಾಚಣಿಗೆ।
ಚಿನ್ನಾದ ತಗೋ ಅಗ್ಗ।
ಅಮ್ಮ ನಿನಗೆ ತರುವೆನು॥

ಧ್ವನಿ : ಕುದುರೆಯನ್ನು ಹತ್ತಿ ಕಾಮಕ್ಕನ ಅಣ್ಣ ಬಿರಬಿರನೆ ಹೊರಟ. ಕಾಮಕ್ಕ ಅಣ್ಣನನ್ನುದ್ದೇಶಿಸಿ-

ಕಾಮಕ್ಕ : ಒಂದೇ ಮನೆಯಲ್ಲಿ ನಾನೊಬ್ಬಳೇ ಹೇಗಿರಲಿ? ನಾನು ಇರಲಾರೆ. ನಾನು ನಿನ್ನ ಜೊತೆಯಲ್ಲಿ ಬರುತ್ತೇನೆ.

ಧ್ವನಿ : ಎಂದರೂ ಕೇಳದೆ ರವಿಕಣ್ಣ ಕುದುರೆಯನ್ನು ಹತ್ತಿ ಹೊರಟ. ಆದರೆ ಕಾಮಕ್ಕ ಅಣ್ಣನ ಹಿಂದೆಯೇ ಹೊರಟಳು.

ಧ್ವನಿ : ರವಿಕಣ್ಣ ದಾರಿಯಲ್ಲಿ ಸಿಕ್ಕಿದ ಬಾವಿಯ ಮುಂದೆ ಕುದುರೆ ಕಟ್ಟಿ ಹಾಕಿ ಕೈಕಾಲು ಮುಖ ತೊಳೆದುಕೊಂಡು ಬುತ್ತಿಬಿಚ್ಚಿ ಇನ್ನೇನು ಊಟ ಮಾಡಬೇಕು, ಅಷ್ಟರಲ್ಲಿ ಹಿಂದೆ ನಿಂತ ಕಾಮಕ್ಕನನ್ನು ನೋಡಿ ಅಣ್ಣನಿಗೆ ಆಶ್ಚರ್ಯವಾಯಿತು. ಕಾಮಕ್ಕ ಅಣ್ಣನನ್ನು ನೋಡಿ ದುಃಖಿಸಲಾರಂಭಿಸಿದಳು.

ಅಣ್ಣ : ಬಾರವ್ವಾ ತಂಗಿ ಊಟ ಮಾಡು ಬಾ.

ಧ್ವನಿ : ಅಣ್ಣನ ಪ್ರೀತಿಯ ಕರೆಗೆ ಓಗೊಟ್ಟು ಒಂದು ತುತ್ತನ್ನು ಕೈಗೆ ತೆಗೆದುಕೊಂಡು ಬಾಯಿಗೆ ಹಾಕುತ್ತಿದ್ದಳು. ಕೂಡಲೇ ಆತ ಕುದುರೆ ಹತ್ತಿ ಹೊರಟ. ಕಾಮಕ್ಕ ತುಂಬಾ ದುಃಖ ಮಾಡುತ್ತಾ ಕುಳಿತಿದ್ದಳು. ಆಗ ಆ ಊರಿನ ಗೌಡರು ಅಲ್ಲಿಗೆ ಬಂದರು. ಈಕೆಯ ದುಃಖ ಮಾಡುತ್ತಿದ್ದುದನ್ನು ನೋಡಿ-

ಗೌಡ : ಯಾರವ್ವಾ ನೀನು? ಏನವ್ವಾ ಕಷ್ಟ ನಿನಗೆ? ನಿಮ್ಮ ತಂದೆ ತಾಯಿ ಯಾರವ್ವಾ?

ಕಾಮಕ್ಕ : ಯಾರೂ ಇಲ್ಲ.

ಗೌಡ : ಮತ್ಯಾಕೆ ಇಲ್ಲಿ ಅಳುತ್ತಾ ಕುಳಿತಿದ್ದೀಯಾ?

ಕಾಮಕ್ಕ : ನನ್ನ ಅಣ್ಣ ರವಿಕಣ್ಣ ನನ್ನನ್ನು ಬಿಟ್ಟು ದಂಡಿಗೆ ಹೊರಟುಹೋದ ಗೌಡ್ರೇ.

ಧ್ವನಿ : ಗೋಳೆಂದು ಕಾಮಕ್ಕ ಅಳುತ್ತಿರಲು ಗೌಡರು ಸಮಾಧಾನಿಸುತ್ತಾ-

ಬಾರಮ್ಮ ನೀನೀಗ। ಸುವ್ವಲಾಲೆ
ನಾನೇಯ ಸಾಕುತೀನಿ। "
ಅಂಗಂತೆ ಅಂದವರು। "
ಕರೆದುಕೊಂಡೋದರು। "
ಬೇರೊಂದು ಮನೆಮಾಡಿ। "
ಕಾಮಕ್ಕನ ಇರುಸ್ಯಾರೆ। "
ಮಲ್ಲಿಗೆ ಮರದಡೆ। "
ಆಡಕೆ ಆಗವ್ಳೆ। "
ಮಲ್ಲಿಗೆ ಮರದಡೆ। "
ಅವ್ಳು ದೊಡ್ಡ ಮನುಸೆಯಾಗವ್ಳೆ॥

ಧ್ವನಿ : ತಾಯಿಯಿಲ್ಲ, ತಂದೆ ಇಲ್ಲ, ಅಣ್ಣಿಲ್ಲ, ತಮ್ಮಿಲ್ಲ, ಇದ್ದ ಒಬ್ಬ ಜೊತೆಯಲ್ಲುಟ್ಟಿದ ಅಣ್ಣನೂ ನನ್ನನ್ನು ಬಿಟ್ಟು ಹೊರಟುಹೋದನಲ್ಲಾಎಂದು ಕಾಮಕ್ಕ ದುಃಖ ಮಾಡತೊಡಗಿದಳು. ಈಕೆ ದುಃಖ ಮಾಡುವುದನ್ನು

ನೋಡಿದ ಈಕೆಯ ಗೆಳತಿಯರು ಕಾಮಕ್ಕ ಋತುಮತಿಯಾದ ವಿಷಯವನ್ನು ಅವರ ಮನೆಗೆ ತಿಳಿಸಿದರು. ಆಗ ಕಾಮಕ್ಕನನ್ನು ಮನೆಗೆ ಕರೆದುಕೊಂಡು ಹೋಗಿ, ಎಣ್ಣೆ ಸ್ನಾನ ಮಾಡಿಸಿದರು. ತುಪ್ಪ - ಅನ್ನವನ್ನು ಬಡಿಸಿದರು.

ಧ್ವನಿ : ದಿನಗಳುರುಳಿದವು. ದಂಡಿಗೆ ಹೋಗಿದ್ದ ರವಿಕಣ್ಣ ಆ ಊರಿಗೆ ಬಂದ. ಆ ಊರಿನ ತೋಟಿಯನ್ನು ಕರೆಯಿಸಿ-

ರವಿಕಣ್ಣ : ಸೂಳೇರ ಮನೆಗೊಂದು। ಸುವ್ವಲಾಲಿ
ಆದೀಯ ತೋರಯ್ಯ।
ಸೂಳೇರ ಮನೆಗಾದಿ ಯಾವುದಯ್ಯಾ।

ಧ್ವನಿ : ಆಗ ಆತ-

ಬಾಳೆಯ ಬಲಕಿಟ್ಟು । ಸುವ್ವಲಾಲಿ
ಸೀಗೆಯ ಎಡಕಿಟ್ಟು। ”
ನಾಗಸಂಪಿಗೆ ನಡುವಿಟ್ಟು ಓಗಯ್ಯ
ಸೂಳೇರ ಮನೆಗಾದಿ ಅದೆಯೋ। ”

ಧ್ವನಿ : ರವಿಕಣ್ಣ ಆತನು ಹೇಳಿದಂತೆ ದಾರಿಯನ್ನು ಹುಡುಕಿಕೊಂಡು ಹೊರಟ. ಅಲ್ಲಿ ಆಕೆಯ ಕೈಗೆ ಕಡಲೆಯನ್ನು ಕೊಡಲು ಆಕೆ ಕೈ ನೀಡಲಿಲ್ಲ. ಆಕೆಯ ಸುಂದರವಾದ ಮುಖವನ್ನು ನೋಡಿ-

ರವಿಕಣ್ಣ : ನಿಮ್ಮ ತಾಯಿಯ ಹೆಸರೇನು ಸುಂದರಿ?

ಕಾಮಕ್ಕ : ತಾಯೆಸ್ರು ತಾವರೆ। ಸುವ್ವಲಾಲೆ।
ತಂದೆ ಎಸ್ರು ಚಂದ್ರಮಂಡಲ।
ವಂದಗುಟ್ಟಿದವನ ಹೆಸರು।
ರವಿಕಾಣೋ.....।

ರವಿಕಣ್ಣ : ಬೆಲ್ಲ ಕೊಳ್ಳಲ ಬಾಲೆ। ಸುವ್ವಲಾಲಿ।
ಕೈಯ ನೀಡಲು ಬಾಲೆ।
ಕೈಯಿ ನೀಡಿದರೆ ರವಿಕಣ್ಣನಾಣೆ ”
ರವಿಕಣ್ಣ ರವಿಕಣ್ಣಂದು ”
ಬಿಂಕದ ಮಾತೊಂದು। ”
ಆಡಬ್ಯಾಡ। ”
ಬೆಡಗಿನ ಮಾತೊಂದನಾಡಬ್ಯಾಡ ”
ನೀನುಟ್ಟಿದೂರು ಯಾವೂರು? ”

ಕಾಮಕ್ಕ : ಹುಟ್ಟಿದ್ದು ಉಲಿದುರ್ಗ। ಸುವ್ವಲಾಲಿ।
ಬೆಳೆದದ್ದು ಮಲನಾಡ। ”
ಇರುವುದೊಂದೆ ಈರಾಜಪುರ ”

ರವಿಕಣ್ಣ : ನಿಮ್ಮ ತಾಯಿ ಹೆಸರೇನು?

ಕಾಮಕ್ಕ : ತಾಯೆಸ್ರು ತಾವರೆ । ಸುವ್ವಲಾಲಿ।
ತಂದೆಯಸ್ರು ಚಂದ್ರಮಂಡಲ
ವಂದಿಗುಟ್ಟಿದ ಅಣ್ಣ ರವಿಕಣ್ಣ ಕಾಣೋ॥

ಧ್ವನಿ : ಈ ಮಾತನ್ನು ಕೇಳಿದ ರವಿಕಣ್ಣನಿಗೆ ಬಹಳ ದುಃಖವಾಯಿತು. ಆಕೆ ತನ್ನ ತಂಗಿ ಎಂಬುದು ಅರಿವಾಯಿತು. ಕೂಡಲೇ ರವಿಕಣ್ಣ ನಾನು ಎಂಥ ಪಾಪದ ಕೆಲಸ ಮಾಡಿಬಿಟ್ಟೆ, ನಾನಿರುವುದೂ ಒಂದೇ ಸಾಯುವುದೂ ಒಂದೇ ಎಂದು ಅಳುತ್ತಾ -

ಕೊಡಲೀಲಿ ಕಡಿಕೊಳಲ। ಸುವ್ವಲಾಲಿ ।
ಮಚ್ಚಲಿ ಇರಿಕೊಳಲ । "
ಕಂಬ ಕಂಬಕ್ಕೂ ತಲೆಯ । "
ಆಯಲಮ್ಮ । "

ಧ್ವನಿ : ಎಂದು ತನ್ನ ತಪ್ಪಿಗೆ ಪ್ರಾಯಶ್ಚಿತ್ತವನ್ನು ಅನುಭವಿಸಬೇಕೆಂದು ಹೇಳುತ್ತಾನೆ ರವಿಕಣ್ಣ ತಂಗಿ ಕಾಮಕ್ಕನಿಗೆ. ಅಣ್ಣನೆಂದು ತಿಳಿದ ಕಾಮಕ್ಕ ದುಃಖಿಸುತ್ತಾ-

ಕೊಡಲೀಲಿ ಕಡಿಬ್ಯಾಡ। ಸುವ್ವಲಾಲಿ।
ಮಚ್ಚಲ್ಲಿ ಇರಿಬ್ಯಾಡ। "
ಕಂಬ ಕಂಬಕ್ಕೂ। "
ತಲೆಯ ಆಯಬ್ಯಾಡಣ್ಣ। "
ಸಾಲು ಮರವ ಆಕುಸಣ್ಣ। "
ಸಾಲು ಕಟ್ಟೆಯ ಕಟ್ಟಿಸಣ್ಣ। "
ಮಾಡಿದ ಕರ್ಮವೆಲ್ಲ ಪರಿಹಾರವಣ್ಣಾ॥

ಧ್ವನಿ : ಅಣ್ಣನು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ತಂಗಿ ಕಾಮಕ್ಕ ತಡೆದಳು. ಅಣ್ಣನ ಕಣ್ಣೀರನ್ನು ಒರೆಸಿದಳು. ತಂಗಿಯ ಕಣ್ಣಲ್ಲಿ ಹರಿಯುತ್ತಿದ್ದ ನೀರನ್ನು ಅಣ್ಣ ಒರಸಿದ. ತನ್ನ ತಪ್ಪಿಗೆ ಕ್ಷಮೆ ಕೇಳಿ ರವಿಕಣ್ಣ ಕಾಮಕ್ಕನನ್ನು ಕರೆದುಕೊಂಡು ತನ್ನೂರಿಗೆ ಪಯಣ ಬೆಳೆಸಿದ.

*

ಅಂಗ್ಯೆಲಿ ಅಕ್ಕಿನಾದು ನಮ್ಮ ತಾಯಿ।
ಮುಂಗ್ಯೆಲಿ ಬೇಳೆನಾದು।
ನಮ್ಮ ತಾಯಿ ಮುಂಗ್ಯೆಲಿ ಬೇಳೆನಾದು।
ಮುಂಗ್ಯೆಲಿ ಬೇಳೆನಾದು ನಮ್ಮ ತಾಯಿ।
ಪಾಲು ಪಂಚಾಮೃತದಡಿಗೆ ನಮ್ಮ ತಾಯಿ।
ಬೇಗನೆ ಮಾಡ್ಯಾಳ।
ಅಡಿಗೆಯಾ ದುಡಕಿದಳು ನಮ್ಮ ತಾಯಿ।
ಗಿಂಡಿಯ ತಂದು।
ನಮ್ಮ ತಾಯಿ ಚಿನ್ನಾದ ಗಿಂಡಿಯೊಳಗೆ।
ಚಿನ್ನಾದ ಗಿಂಡಿಯೊಳಗೆ ನಮ್ಮ ತಾಯಿ।
ಪನ್ನೀರಿಂದೆರಚಿದಳಾಗ।
ನಮ್ಮ ತಾಯಿ ಪನ್ನೀರಿಂದೆರಚಿದಳಾಗ॥

ಧ್ವನಿ : ಕುಂತಿ ಪಂಚಾಮೃತದ ಅಡಿಗೆ ಮಾಡಿ, ತನ್ನ ಐದು ಜನ ಪಾಂಡವರಿಗೂ ಕೈ-ಕಾಲಿಗೆ ನೀರು ಕೊಟ್ಟು, ಊಟಕ್ಕೆ ಅಣಿಮಾಡಿದಳು. ಮಕ್ಕಳೆಲ್ಲಾ ಅರಮನೆಗೆ ಬಂದು ಅಲ್ಲಿ ನಾಮದ ಸೇವೆಯನ್ನು ಮಾಡಿಕೊಂಡು, ಸೂರ್ಯದೇವನಿಗೆ ನಮಸ್ಕಾರ ಮಾಡಿ ಊಟಕ್ಕೆ ಕುಳಿತುಕೊಂಡರು. ಊಟವಾದ ಮೇಲೆ ತಾಂಬೂಲವನ್ನು ಸೇವಿಸಿದರು. ಅದಾದ ಮೇಲೆ ಬೇಟೆಗೆ ಹೋಗಲು ಸಿದ್ಧತೆಯನ್ನು ಮಾಡಲಾರಂಭಿಸಿದರು. ತಾಯಿ ಕಟ್ಟಿಕೊಟ್ಟ ಬುತ್ತಿಯನ್ನು ಭೀಮ ತನ್ನ ಬೆನ್ನಿಗೆ ಕಟ್ಟಿಕೊಂಡ.

ಐದು ಜನರೂ ಕುದುರೆಯನ್ನು ಹತ್ತುವುದಕ್ಕೆ ಮುಂಚೆ ತಾಯಿ ಕುಂತಿದೇವಿಯನ್ನು ಕರೆಸಿದರು. ತಾಯಿಗೆ ನಮಸ್ಕರಿಸಿ, ಕುದುರೆಯನ್ನು ಹತ್ತಿ ಬೇಟೆಗೆ ಹೊರಟರು. ಐವರೂ ಮುನ್ನೂರು ಬಾಣಗಳು, ಇನ್ನೂರು ಬಿಲ್ಲುಗಳನ್ನು ತೆಗೆದುಕೊಂಡರು.

ಆಯ್ದು ಮಸ್ತಾಫಗಳ ಅವರೈವರು।
ಜೋಡಿಸಿಕೊಂಡು ಒರಟರಾಗ।
ಅವರೈವರು ಜೋಡಿಸಿಕೊಂಡು ಒರಟರಾಗ।

ಓಗೆಂದೆ ಓಗುವಾಗ ಅವರೈವರು॥
ಸುರುವಾದದೊಕ್ಕ ಒಳಗೆ।

ಸುರುವಾರದೊಕ್ಕ ಒಳಗೆ।
ಅವರೈವರು ಬಗ್ಗಿ ಬೇಟೆ ಆಡ್ಯಾರಾಗ।
ಅವರೈವರು ಬಗ್ಗಿ ಬೇಟೆ ಆಡ್ಯಾರಾಗ।
ಬೇಟೆಯ ಆಡುವಾಗ ಅವರೈವರು।
ಮೂಗುತ್ತ ಕಂಡರಲ್ಲಿ।
ಅವರೈವರು ಮೂಗುತ್ತ ಕಂಡರಲ್ಲಿ।
ಮೂಗುತ್ತ ಕಂಡರಲ್ಲಿ ಅವರೈವರು॥

ಧ್ವನಿ : ಮೂಗುತ್ತವನ್ನು ಕಾಲಿಂದ ಒದೆಯಲು ಮಣ್ಣೆಲ್ಲಾ ಕಳಚಿ ಬಿದ್ದಿತು. ಆಗ-

ನನ್ನಯ್ಯ ಮಾಯದ ಮಳೆಗಳೇ ಬಂದೋ
ಮಾಯದ ಮಳೆಗಳೇ ಬಂದೋ
ಅವರೈವರು ಮುಂದಕೆ ವೊರಟರಾಗ
ಅವರೈವರು ಮುಂದಕೆ ವೊರಟರಾಗ

ಧ್ವನಿ : ಹೀಗೆ ಐವರೂ ಹೋಗುವಾಗ ಅಲ್ಲೊಂದು ಹಾಲು ಬಾವಿ, ನೀರು ಬಾವಿಯನ್ನು ಕಂಡು ಅವರು ತಮ್ಮ ಬಿಲ್ಲು - ಬಾಣಗಳನ್ನೆಲ್ಲಾ ತೆಗೆದು ಒಂದು ಕಡೆ ಇಟ್ಟರು. ಕೈ-ಕಾಲು, ಮುಖವನ್ನು ತೊಳೆದು ಮೇಲಕ್ಕೆ ಬಂದರು. ನಾಮದ ಸೇವೆಯನ್ನು ಮಾಡಿ, ಸೂರ್ಯದೇವನಿಗೆ ನಮಸ್ಕಾರ ಮಾಡಿದರು. ತಾಯಿ ಕಟ್ಟಿ ಕೊಟ್ಟಿದ್ದ ಬುತ್ತಿಯನ್ನು ಐವರೂ ಊಟ ಮಾಡಿದರು. ಅದಾದ ಮೇಲೆ ತಾಂಬೂಲವನ್ನು ಸೇವಿಸಿದರು. ಕುದುರೆ ಸಿದ್ಧಮಾಡಿಕೊಂಡು ಪಟ್ಟಣದ ಕಡೆಗೆ ಬಂದರು. ತಾಯಿಯನ್ನು ಉದ್ದೇಶಿಸಿ, 'ಬಾಗಿಲು ತೆಗೆಯವ್ವಾ' ಎಂದರು. ಕುಂತಿ ಬಾಗಿಲು ತೆಗೆದು ಸಂತೋಷದಿಂದ ನೋಡಿದಳು.

ಕುಂತಿ : ವೋಗುವಾಗ ಐದಾಳು ವೋದಿರ।
ಬಾಲಯ್ಯ ಬರುವಾಗ ನಾಲ್ವರಲ್ಲೋ।
ಬಾಲಯ್ಯ ಬರುವಾಗ ನಾಲ್ವರಲ್ಲೋ॥
ಲೋಕಾವ ಆಳುವಂತ ನನ್ನಯ್ಯ।
ಅರ್ಜುನನೇ ಇಲ್ಲವಲ್ಲೋ।
ನನ್ನಯ್ಯ ಅರ್ಜುನನೇ ಇಲ್ಲವಲ್ಲೋ॥

ಧ್ವನಿ : ನಮಗೀಗ ಒಂದೇ ಆದಿ।
ತಾಯಮ್ಮ ಬಾಲಯ್ಗೆ ಒಂದೇ ಆದಿ।
ತಾಯಮ್ಮ ಬಾಲಯ್ಗೆ ಒಂದೇ ಆದಿ॥

ಧ್ವನಿ : ಅರ್ಜುನ ಬಂದೇ ಬರುತ್ತಾನೆ ಎಂಬ ಆಶ್ವಾಸನೆಯನ್ನು ನಾಲ್ವರೂ ತಾಯಿಗೆ ಹೇಳುತ್ತಾರೆ.

ಇತ್ತ ಅರ್ಜುನ ದಾರಿಯಲ್ಲಿ ಬರುವಾಗ-

ದ್ರೌಪದಿ : ನನ್ನಯ್ಯ ಕಾಲ ಕಡಗವ ಕಂಡ।
ನನ್ನಯ್ಯ ಕಾಲ ಕಡಗವ ಕಂಡ।
ಕಾಲ ಕಡಗವ ಕಂಡು।
ನನ್ನಯ್ಯ ದೆವ್ವಗಳ ಅಂದನಾಗ।
ನನ್ನಯ್ಯ ದೆವ್ವಗಳ ಅಂದನಾಗ।
ದೆವ್ವಾನ ಅಲ್ಲಾ ಕಣೋ।
ಮಾರಾಯ ಗಾಳಿ ನಾನಲ್ಲ ಕಣೋ।
ಮಾರಾಯ ಗಾಳಿ ನಾನಲ್ಲ ಕಣೋ॥

ಅರ್ಜುನ : ಯೆಣ್ಣೆ ನಿನ್ನ ಮುಟ್ಟಾಲೇನೆ।
ದ್ರೌಪದಿಯೆ ಕಣ್ಣ ಕಟ್ಟೊಂದೊ ವೊಡೆಯಲೇನೆ।
ದ್ರೌಪದಿಯೆ ಕಣ್ಣ ಕಟ್ಟೊಂದೊ ವೊಡೆಯಲೇನೆ॥

ದ್ರೌಪದಿ : ಸ್ವಾಮಿ ನನ್ನ ಮುಟ್ಟಬೇಡಿ
ಮಾರಾಯ ಕಣ್ಣು ಕಟ್ಟೊಂದ ವೊಡೆಯಬ್ಯಾಡಿ।
ಮಾರಾಯ ಕಣ್ಣು ಕಟ್ಟೊಂದ ವೊಡೆಯಬ್ಯಾಡಿ।

ಧ್ವನಿ : ಬರದಂತ ಯೆಣ್ಣೇಗವನು ಮಾರಾಯ।
ಬೋದನೆಯ ತುಂಬುತಾನೆ।
ಮಾರಾಯ ಬೋದನೆಯ ತುಂಬಾತನೆ।

ಅರ್ಜುನ : ಕೋಟೆ ಕೊತ್ತಲ ನೋಡೆ
ಎಲೆ ಯೆಣ್ಣೆ ಉಪ್ಪರಿಗೆ ನೋಡೆ।
ಎಲೆ ಯೆಣ್ಣೆ ಉಪ್ಪರಿಗೆ ನೋಡೆ।
ಕ್ವಾಟೆ ಕೊತ್ತಲುಯಿಂದೆ ಉಪ್ಪರಿಗೆ ನೋಡಿ॥
ಬ್ಯಾಸೀಗೆ ಬಿಸಿಲಲ್ಲೋ।
ಎಲೆ ನಾರಿ ಸಾರೀದ ಮಳೆಗಾಳಲ್ಲಿ।
ಎಲೆ ನಾರಿ ಸಾರೀದ ಮಳೆಗಾಳಲ್ಲಿ।
ಸಾರಿದ ಮಳೆಗಳಿಗೆ।
ಮಕರತ್ನ ಕೊಂಡೇನು ಒಂದು ಅಚ್ಚಡದ
ಸೆರಗಾಕೊಳ್ಳಿ
ಸಾರಿದ ಮಳಿಗೆಗಳಿಗೆ।
ಮಕರ್ನಕೊಂಡೇನೊಂದು
ಅಚ್ಚಡದ ಸೆರಗಾಕೊಳ್ಳಿ।
ಬರದಂತೆ ಯೆಣ್ಣೇಗವನು॥

ಧ್ವನಿ : ಅರ್ಜುನ ದ್ರೌಪದಿಗೆ ನಾನಾ ರೀತಿಯ ಬೋಧನೆಯನ್ನು ತುಂಬುತ್ತಾನೆ. ದ್ರೌಪದಿಯ ಮನಸ್ಸನ್ನು ಒಲಿಸಿ ಕುದುರೆಯನ್ನು ಹತ್ತಿ ಪಟ್ಟಣಕ್ಕೆ ಆಕೆಯನ್ನು ಕರೆಮುತರುತ್ತಾನೆ. ತಾಯಿ ಕುಂತಿಯ ಹತ್ತರ ಬಂದ ಅರ್ಜುನ-

"ತಾಯಿ ಕುಂತ್ಯಮ್ಮ ತಾಯಿ
ನಮ್ಮ ತಾಯಿ ಹೆಣ್ಣು ತಂದಿದ್ದೀನಲ್ಲೆ।
ನಮ್ಮ ತಾಯಿ ಹೆಣ್ಣು ತಂದಿದ್ದೀನಲ್ಲೆ।

ಕುಂತಿ : ಅಣ್ಣು ತಂದಿದ್ದಾರೇನೋ ಬಾಲಯ್ಯ
ಐವರು ಅಂಚಿ ಉಣ್ಣೆ
ಬಾಲಯ್ಯ ಅಯ್ವರು ಅಂಚಿ ಉಣ್ಣೆ॥

ಧ್ವನಿ : ಆ ಮಾತನ್ನು ಕೇಳಿದ ಅರ್ಜುನ ನಗುತ್ತಾ-

ಅಣ್ಣು ಅಲ್ಲವೆ ತಾಯೆ
ಕಿವುಡು ಕುಂತಿ ಎಣ್ಣು ತಂದಿದ್ದೀನಲ್ಲೆ।
ತಾಯಿ ಯೆಣ್ಣು ತಂದಿದ್ದೀನಲ್ಲೆ

ಕುಂತಿ : ಬಾಲಯ್ಯ ಬೇರೊಂದರಮನೆ ಮಾಡೋ
ಬಾಲಯ್ಯ ಬೇರೊಂದರಮನೆ ಮಾಡೋ

ಧ್ವನಿ : ತಾಯಿಯ ಮಾತಿನಂತೆ ಅರ್ಜುನ ದ್ರೌಪದಿಯನ್ನು ಬೇರೆ ಇರಿಸಿದನು. ಒಮ್ಮೆ ದ್ರೌಪದಿ, ಅರ್ಜುನ ಇಬ್ಬರೂ ಪಗಡೆ ಆಟಕ್ಕೆ ಕುಳಿತುಕೊಂಡರು. ಆಟದಲ್ಲಿ ಪಂತವನ್ನು ಕಟ್ಟಿದರು.

ದ್ರೌಪದಿ : ಪಗಡೆ ಆಟದಲ್ಲಿ ನಾನು ಸೋತರೆ ಹನ್ನೆರಡು ವರ್ಷಗಳು ನೋಪಿ ನೂಲುತ್ತೇನೆ. ನೀವು ಸೋತರೆ ಹನ್ನೆರಡು ವರ್ಷಗಳು ಜೋಗಿಯಾಗಬೇಕು.

ಅರ್ಜುನ : ಆಯಿತು.

ಧ್ವನಿ : ಆಟದಲ್ಲಿ ಇಬ್ಬರೂ ನಿರತರಾದರು. ಪಗಡೆಯನ್ನೂ ಬಿಟ್ಟರು.

ಮೂರು ಮರು ಸಲಿಗೂ
ನನ್ನಯ್ಯ ದ್ರೌಪತೀನೆ ಗೆದ್ದಳಾಗ।
ನನ್ನಯ್ಯ ಅರ್ಜುನನೇ ಸೋತನಾಗ॥
ಸೋತ ಸುದ್ದಿಯ ಕೇಳಿ।
ನನ್ನಯ್ಯ ಬೆಟ್ಟದ ಮ್ಯಾಗಾಳಾ ಬುರುಡೆ।
ನನ್ನಯ್ಯ ಬೆಟ್ಟದ ಮೇಗಳಾ ಬಿದುರು।
ನನ್ನಯ್ಯಾ ಜೋಗ್ಯಾಗೆ ಒಗೇಬಿಟ್ಟ॥
ನನ್ನಯ್ಯ ಅಲ್ಲೊಂದು ತೋಟಕ್ಕೋದ।
ನನ್ನಯ್ಯ ಈರುಳ್ಳಿ ತ್ವಾಟಕ್ಕೋದ।
ಈರುಳ್ಳಿ ಒಡೆಕಾರ ಬೆನ್ನಾಡಿ ಬರುವಾಗ।

ಕನ್ನಡಿಯ ಮರತೇ ಬಂದ।
ಓಗಂದೆ ಓಗುವಾಗ।
ನನ್ನಯ್ಯ ಬೆಳ್ಳುಳ್ಳಿ ತ್ವಾಟಕ್ಕೋದ।
ನನ್ನಯ್ಯ ಬೆಳ್ಳುಳ್ಳಿ ತ್ವಾಟಕ್ಕೋದ।
ಬೆಳ್ಳುಳ್ಳಿ ಒಡಕಾರ ಬೆನ್ನಾಡಿ ಬರುವಾಗ।
ಜೋಳಿಗೆಯ ಮರತೇ ಬಂದ॥

ಧ್ವನಿ : ಅರ್ಜುನ ಮತ್ತೊಂದು ಪಟ್ಟಣಕ್ಕೆ ಬಂದ. ಅಲ್ಲಿ ವರ್ತಕರ ಬೀದಿಗೆ ಹೋದ. ಅಲ್ಲಿ ಬಗ್ಗಿ ನಾಟ್ಯವಾಡುತ್ತಿರಲು ವರ್ತಕರ ಹೆಣ್ಣು ಮಕ್ಕಳು ನಾಟ್ಯವನ್ನು ಕುತೂಹಲದಿಂದ ನೋಡಲಾರಂಭಿಸಿದರು. ಆಗ ಅವರ ತಾಯಿಯರು ಬೈಯ್ಯಲಾರಂಭಿಸಿದರು. ಆದರೂ ಅವರು ನೋಡುತ್ತಿರಲು ಅವರ ತಂದೆಯರೂ ಬೈಯ್ಯತೊಡಗಿದರು. ಬೈದರೂ ಬಯ್ಯಲಿ ಎಂದು ನೋಡುತ್ತಲೇ ನಿಂತರು. ಆಗ ಅವರ ತಂದೆಯರು-

ಜೋಗಿಗೊಂದೂರು ಊರೇನಾ?
ನಾರಿಯರ ಪಕ್ಷಿಗೊಂದು ಗೂಡು ಉಂಟ।

ಧ್ವನಿ : ಎಂದರು. ಅದಕ್ಕೆ ಆ ಹುಡುಗಿಯರು-

ಜೋಗಿಗೊಂದು ಊರು ಉಂಟು।
ಮಾರಾಯ ಪಕ್ಷಿಗೊಂದು ಗೂಡು ಉಂಟು।
ಮಾರಾಯ ಪಕ್ಷಿಗೊಂದು ಗೂಡು ಉಂಟು।

ಧ್ವನಿ : ಜೋಗಿಯನ್ನು ಹಿಂಬಾಲಿಸಿಕೊಂಡೇ ಹೊರಟರು. ಜೋಗಿ ಮತ್ತೊಂದು ಪಟ್ಟಣಕ್ಕೆ ಹೋದ. ಅಲ್ಲಿ ವೋಸ್ಟಮರ ಬೀದಿಗೆ ಬಂದ. ಈತನನ್ನು ನೋಡಿ ವೋಸ್ಟಮರ ಹೆಣ್ಣು ಮಕ್ಕಳೆಲ್ಲಾ ಆತನ ಹಿಂದೆ ಬಂದರು.

ಜೋಗಿ : ಕೊಕ್ಕರೆಗೊಂದು ಕೆರೆಯೂ ಉಂಟು।
ಮಾರಾಯ ಪಕ್ಷಿಗೊಂದು ಗೂಡು ಉಂಟು।
ಮಾರಾಯ ಪಕ್ಷಿಗೊಂದು ಗೂಡು ಉಂಟು।
ತೊಟ್ಟಿಲಾಗ ಬಾಲಯ್ಯ ಬೆನ್ನಾಡಿ ಬರುವಾಗ
ನಾವು ನಿನ್ನಿಂದೆ ಬರುಬ್ಯಾಡವಾ।

ಜೋಗಿ : ಹೋಗಿ ಅಂದ್ರೆ ಹೋಗಬೇಕು ಎಂದು ಹೇಳಿ ಜೋಗಿ ತನ್ನ ಪಟ್ಟಣವನ್ನು ಸೇರಿದ.

ಶಾಸ್ತ್ರ ಪುರಾಣಗಳ।
ಯಾರಾದ್ರೂ ಕೇಳಬಹುದಮ್ಮ ಈಗ।
ನನ್ನಯ್ಯ ಕೇಳಬಹುದಮ್ಮ ಈಗ॥

ಧ್ವನಿ : ಈ ಮಾತನ್ನು ಕೇಳಿದ ಕುಂತಿ ಬಂದು ಆತನನ್ನು ಕೇಳಿದಳು- ಲೋಕವನ್ನು ಆಳುವಂಥ ನನ್ನ ಮಗ ಅರ್ಜುನ ಎಲ್ಲಿಗೆ ಹೋದ? ಅದನ್ನು ಸ್ವಲ್ಪ ಹೇಳಪ್ಪಾ. ಈ ಪ್ರಶ್ನೆ ಕೇಳುವಾಗ ಕುಂತಿ ಬಹಳ ದುಃಖಪಡುತ್ತಿದ್ದಳು. ಆಗ ಜೋಗಿ-

"ನಾಲ್ವರು ನಿನ್ನಾ ಮಕ್ಳಾ।
ಬೇಗಾನೆ ಕರೆಸಮ್ಮ ನೀನು।
ನನ್ನಮ್ಮ ಬೇಗಾನೇ ಕರೆಸಮ್ಮ।
ನಾಲ್ವರು ನಿನ್ನ ಮಕ್ಳಿಗೆ।
ನನ್ನಯ್ಯ ಉಪದೇಸ ಮಾಡುತೀನಿ।।
ನನ್ನಯ್ಯ ಉಪದೇಸ ಮಾಡುತೀನಿ।
ಅಂಗಂತ ಅನ್ನುವಾಗ।
ನನ್ನಯ್ಯ ಅವನ ಹೆಸರು ಬೇಗ।
ನನ್ನಯ್ಯ ಅವನ ಹೆಸರು ಬೇಗಾ।
ತಾಯಿ ಒಡೆದು ಯೇಳಾನೇ ಆಗ।
ನನ್ನಯ್ಯ ಒಡೆದು ಯೇಳಾನೇ ಆಗ।।

ಧ್ವನಿ : ಜೋಗಿ ಇದ್ದಕ್ಕಿದ್ದಂತೆ ತನ್ನ ವೇಷವನ್ನು ತೆಗೆದಾಗ ಜೋಗಿಯ ಅವತಾರದಲ್ಲಿದ್ದವನೇ ಅರ್ಜುನ. ಮಗನನ್ನು ನೋಡಿದ ತಾಯಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಅರ್ಜುನ ದ್ರೌಪದಿಯೊಡನೆ ನಡೆದ ಪಂತಕ್ಕೆ ತಾನು ಹನ್ನೆರಡು ವರ್ಷ ಜೋಗಿಯ ಅವತಾರ ತಾಳಿರಬೇಕಾಯಿತು ಎಂದ. ತಾಯಿಯ ಕಂಗಳಲ್ಲಿ ಆನಂದಭಾಷ್ಪ ಹರಿಯಲಾರಂಭಿಸಿತು. ಅರ್ಜುನನ ಕಣ್ಣಲ್ಲೂ ಪ್ರತಿಕ್ರಿಯಿಸಿತು!

✳

# ಜೀವನ ಸಂಗೀತ

ನಿರೂಪಕ : ಸಂಗೀತದ ಸಂಕೇತ ಇಲ್ಲಿ ಸಂತೋಷ. ಜೀವನದಲ್ಲಿ ಪ್ರತಿಯೊಬ್ಬರೂ ಎಂದೆಂದೂ ಬಯಸುವುದು ಸಂತೋಷ. ನಮ್ಮ ಹಳ್ಳಿಗರು ಹಿಂದಿನಿಂದಲೂ ಅರಸುತ್ತಿದ್ದುದು ಸುಖ, ಸಂಪದ. ಜೀವನ ಸಂಗೀತವಾಗಬೇಕೆಂಬ ಹಂಬಲದಿಂದ ಪ್ರಯತ್ನಪಟ್ಟಿರುವುದು ಕರ್ನಾಟಕ ಜನಪದ ಸಾಹಿತ್ಯದಲ್ಲಿ ನಮಗೆ ಹೇರಳವಾಗಿ ದೊರೆಯುವುವು.

ಧ್ವನಿ ೧ : ಹೆಣ್ಣು - ಗಂಡುಗಳ ಬಾಳು ಆರಂಭವಾಗುವುದು ಯೌವನದ ಹೊಸ್ತಿಲನ್ನು ಹತ್ತುತ್ತಿರುವಂತೆಯೇ. ಕಾಮದ ಕಣ್ಣು ಲಜ್ಜೆ, ಧೈರ್ಯಗಳೊಡನೆ ಹೋರಾಡಲಾರಂಭಿಸುವುವು.

ಧ್ವನಿ ೨ : ಪ್ರಣಯ ಬೆಳೆಸಿ ವಯಸ್ಸಿಗೆ ಬಂದ ಹೆಣ್ಣು ಗಂಡಿನ ಜೊತೆ ತಿರುಗಾಡಿದರೆ ನೀತಿಗೆಟ್ಟವಳು ಎಂದು ನಮ್ಮ ಜನರು ದೂರುವುದುಂಟು. ಇದರಿಂದ ದೂರ ಇಡಲೆಂದೇ ಮದುವೆ ಎಂಬ ಕಟ್ಟಳೆಗೆ ಒಳಗಾಗಿಸುತ್ತಾರೆ ತಂದೆ-ತಾಯಿಯರು.

ಧ್ವನಿ ೧ : ಹಳ್ಳಿಗರು ವರದಕ್ಷಿಣೆಗೆ ದೂರ. ಮಾನವಂತ ಹೆಣ್ಣೇ ಅವರಿಗೆ ಆಸ್ತಿ. ಬಣ್ಣಕ್ಕಿಂತ ಗುಣವೇ ನಮ್ಮ ಹಳ್ಳಿಗರಿಗೆ ಮುಖ್ಯ. ಹಿಂದೆ ತೊಟ್ಟಿಲು ಮಕ್ಕಳನ್ನೇ ಗಂಡ-ಹೆಂಡಿರೆಂದು ನಾಮಕರಣ ಮಾಡುತ್ತಿದ್ದುದುಂಟು. ಹಾಗೆ ಮಾಡದವರು ಅನೇಕ ಕಡೆ ಹೆಣ್ಣು ನೋಡಬೇಕಾಗುತ್ತಿತ್ತು.

ಧ್ವನಿ ೨ : ನಮ್ಮ ಹಿಂದಿನವರು ಹೆಣ್ಣು ನೋಡಲು ಅದೆಷ್ಟು ಚಡಾವುಗಳನ್ನು ಸವೆಸುತ್ತಿದ್ದರು ಎಂಬುದನ್ನು ಅವರ ಬಾಯಿಂದಲೇ ಕೇಳಿದರೆ ಸ್ವಾರಸ್ಯ.

ಧ್ವನಿ ೧ : ಹತ್ತಿರದ ಹೆಣ್ಣನ್ನೇ ನಮ್ಮ ಹಳ್ಳಿಗರು ಒಪ್ಪುವುದು ಹೆಚ್ಚು. ಆದರೆ ಹಾಗೆ ಸಿಗದಿದ್ದರೆ ಗುರು - ಹಿರಿಯರೊಡನೆ ಎತ್ತಿನಗಾಡಿಯಲ್ಲಿ ಹೋಗಿ ಹುಡುಕುವುದು ರೂಢಿ.ಈ ಸಂದರ್ಭದಲ್ಲಿ ವರನನ್ನು ಮಾತ್ರ ಕರೆದೊಯ್ಯುವುದಿಲ್ಲ. ಅಲಂಕಾರ ಮಾಡಿದ ನೊಗ ಹೂಡಿದ ಎತ್ತುಗಳು ಗೆಜ್ಜೆಯ ಕೊರಳನ್ನು ಕುಣಿಸುತ್ತಾ, ಎಲ್ಲರನ್ನೂ ಕರೆದುಕೊಂಡು ಹೋಗುವುವು.

ಧ್ವನಿ ೨ : ಉಭಯ ಕುಶಲೋಪರಿ, ಉಪಚಾರವಾದ ಮೇಲೆ ಮದುವೆಯ ಮುಹೂರ್ತವು ಹೆಣ್ಣಿನ ಮನೆಯಲ್ಲಿ ನಡೆಯುವುದು.

ಧ್ವನಿ ೧ : ಸುಗ್ಗಿಯ ಕಾಲ ಮುಗಿಸಿ ರೈತರು ಹಿಗ್ಗಿನಿಂದ ಮದುವೆಗೆ ದವಸ ಧಾನ್ಯಗಳನ್ನು ಮಾರಿ ಅಣಿಮಾಡಿಕೊಳ್ಳುತ್ತಾರೆ.

ಧ್ವನಿ ೨ : ಮದುವೆ ಎಂದರೆ ಬಂಧು-ಬಳಗ, ಆಪ್ತೇಷ್ಟರೆಲ್ಲರಿಗೂ ಸಂಭ್ರಮವೋ ಸಂಭ್ರಮ! ಊರವರೆಲ್ಲರ ಸಹಕಾರದೊಡನೆ ಮದುವೆ ಮುಂದುವರಿಯುತ್ತದೆ.

ಧ್ವನಿ ೧ : ಮದುವೆಯ ಮೊದಲ ದಿನ ದೇವತಾಕಾರ್ಯ ಸಾಂಗೋಪಸಾಂಗವಾಗಿ ನಡೆಯುವುದು. ಮಂಗಳಕಾರ್ಯದಲ್ಲಿ ಮುತ್ತೈದೆಯರು ಸೋಪಾನ ಹಾಡುತ್ತಾ ಗುರುಗಳನ್ನು ಸ್ವಾಗತಿಸುತ್ತಾರೆ-

ಗುರುಲಿಂಗ ಕರೆತನ್ನಿ, ಜಂಗಮರ ಕರೆತನ್ನಿ
ಒಂದೆ ಹಿಡಿಯಕ್ಕಿ ಎಡೆಯೋರ। ಸೋಬಾನವ॥
ಹೆಜ್ಜೆಜ್ಜೆಗೆ ನಿಲ್ಲುತ, ಹೆಜ್ಜೆಜ್ಜೆಗಿ ಕುಂದ್ರೂತ
ಮೊಗ್ಗು ಕಂಡಲ್ಲಿ ಶಿವಪೂಜೆ ಸೋಬಾನವ॥
ಮೊಗ್ಗು ಕಂಡಲ್ಲಿ ಶಿವಪೂಜೆ ಸೋಬಾನವ।
ಮೊಗ್ಗು ಕಂಡಲ್ಲಿ ಶಿವಪೂಜೆ ಮಾಡಿಕೊಂಡು
ಮೆಲ್ಲಕೆ ಬನ್ನಿ ನಮ ಗುರುವೆ ಸೋಬಾನವ॥

ಧ್ವನಿ : ಮನೆ, ಕುಲ, ಗ್ರಾಮದೇವತೆಗಳಾದ ಬಸವಣ್ಣ, ಈರಣ್ಣ, ಲಕ್ಕವ್ವ, ದುರ್ಗವ್ವ, ದ್ಯಾಮವ್ವ, ಹನುಮಪ್ಪ ಮುಂತಾದವರಿಗೆ ಪೂಜೆ ಆಗುವುದು. ಡೊಳ್ಳು, ಕರಡಿ ಮಜಲು ಮಾಡುತ್ತಾ ಗುಡಿಯಿಂದ ಗುಡಿಗೆ ಹಣ್ಣುಕಾಯಿಗಳನ್ನು ಅರ್ಪಿಸುತ್ತಾರೆ.

ಧ್ವನಿ ೨ : ಮದುವೆಗೆ ಗಾಡಿಗಳಲ್ಲಿ ಜನರು ಹೊರಡುತ್ತಾರೆ. ದಾರಿಯಲ್ಲಿ ಹಳ್ಳಕೊಳ್ಳ ದಾಟಿ, ಮಳೆಗೆ ಸಿಲುಕಿ, ಪಾಡುಪಟ್ಟುಕೊಂಡು ಮದುವೆ ಮನೆಗೆ ಬರುತ್ತಾರೆ.

ಧ್ವನಿ ೧ : ಮದುವೆ ಮನೆಗೆ ಬಂದ ಕೂಡಲೇ ಬೀಗರು ಹಾಸ್ಯದ ಚಟಾಕಿಯನ್ನು ಹಾರಿಸುತ್ತಾರೆ. ಹೊಸ ಬೀಗರನ್ನುದ್ದೇಶಿಸಿ-

ಬೀಗರು : ಅಷ್ಟಗಂಧ ಗುಲಾಲ್ ಬುಕೀಟಾ।
ಹಾರಿಸುತ್ತ ನಿಂತಿಪರು ಹಣೆಮ್ಯಾಲೆ ತಿಲಕನಿಟ್ಟಿಪರು
ಊದಿನ ಕಡ್ಡಿ ಹಚ್ಚಿಪರು
ಸಿಸ್ತೀಲಿ ಬಂದಿಪರು
ಕರಿಲಾಕ ಬಂದಿವೆ ನಾವು
ಬಾರದ ಬಿಗಿಯೇನ ನೀವು॥

ಬೀಗರು : ಅಷ್ಟಗಂಧ ಇನ್ನೆಷ್ಟ ಹೇಳತಿದಿ
ಇಷ್ಟೊಂದು ಬಡಿವಾರ ಯಾಕ
ಕವಳೀಯ ತೌಡು ಬಾರೀಕ।
ಊದೀನ ಕಡ್ಡಿ ಸುಳ್ಳೇ ಸಾಕ
ಇಷ್ಟೊಂದು ನಮಗ್ಯಾಕ?
ಕರಿ ಬಂದದ್ದು ಬರೆಯವು ಸರಿಯೆ
ನೀ ಕರಿಯುವದಿಂತಾ ಪರಿಯೆ॥

ಧ್ವನಿ : ಮದುವೆಯ ಹೆಣ್ಣನ್ನು ಹಸೆಗೆ ಕರೆಯುತ್ತಾ,

ಮುತ್ತೈದೆಯರು :

ಮುದದಲಿ ಮದಗಜಗಮನೆ ಬಾ
ಚೆದರಿದೆರಳ ಮರಿನಯನೆ ಬಾ
ಪದುಳದ ಕೋಕಿಲಗಾನ ಬಾ
ಮದನದ ಮಾರ್ಬಲದಹನೆ ಬಾ
ಬಹು ಜಾಣೆ ಬಾ ಕಲ್ಯಾಣಿ ಬಾ
ಫಣಿವೇಣಿ ಬಾರೆಂದ್ಹಸೆಗೆ ಕರದರಸೋ॥

ಧ್ವನಿ : ಬೀಗರು ಮನೆಗೆ ಬಂದ ಮೇಲೆ ಮಂಗಳಕಾರ್ಯ, ಅರಿಸಿನ ಹಚ್ಚುವುದು, ಬಿಸಿನೀರ ಸ್ನಾನ ಮಾಡಿಸುವುದು, ಮತ್ತೆ ಅರಿಸಿನ ಹಚ್ಚುವುದು, ಮತ್ತೆ ಸ್ನಾನ ಮಾಡಿಸುವುದು-

ನೀರಿಲ್ಲದಂಗಳಕ ನೀರ್ಯಾಕ ಚಲ್ಯಾವ।
ಊರಿಗೆ ದೊಡ್ಡವರ ಮಗ ಮಿಂದ।
ಹರಹರ ನಮ್ಮ ಶಿವಗ।
ನೀರಿಲ್ಲದಲೆ ನೀರ ಬೆರಸ್ಯಾಳ ಶರಣಮ್ಮ
ಪಿಲ್ಲ ನೀರಾಗ ಹೊಳೆದಾವ।
ಹರಹರ ನಮ್ಮ ಶಿವಗಾ।
ಕಂಚೆಂಬು ಹರಿವ್ಯಾಗ ಮಿಂಚೆಂಬು ಮಗು ಹಾಕಿ।
ಚೆಲ್ಲುತ ನೀರ ಬೆರಸ್ಯಾಳ
ಹರಹರ ನಮ್ಮ ಶಿವಗ।
ಚೆಲ್ಲುತ ನೀರ ಬೆರಸ್ಯಾಳ ಶರಣಮ್ಮ
ನಲ್ಲೆ ನಿನ್ನ ಮನಿಗೆ ಸೊಸಿ ಬಂದ।
ಹರಹರ ನಮ್ಮ ಶಿವಗ।

ಧ್ವನಿ ೧ : ಹೊಸ ಬಟ್ಟೆಯನ್ನು ತೊಡಿಸಿ, ಮನೆಯ ದೇವರು ವೀರಭದ್ರನಾದರೆ ಗುಗ್ಗುಳ ಹೊತ್ತು, ಸುರಗಿ ಸುತ್ತಿ, ಐರಣಿ ತಂದು ಬಾಸಿಂಗ ತರಿಸಿ, ಹಾಲುಗುಂಬ ತಂದು, ಹಂದರದಲ್ಲಿ ನಿಲ್ಲಿಸುತ್ತಾರೆ. ಭೂಮಆಡಿ ಮುತ್ತೈದೆಯರು ಶೃಂಗಾರ ಮಾಡಿಕೊಂಡು ಆರತಿ ಎತ್ತಿ ಸಮಯೋಚಿತವಾಗಿ ಹಾಡುಗಳನ್ನು ಹಾಡಲಾರಂಭಿಸುವರು.

ಧ್ವನಿ : ಹೆಣ್ಣನ್ನು ಕೇಳಲು ಬಂದು ಅಳಿಯನನ್ನು ಉದ್ದೇಶಿಸಿ-

ಒಂಟಿಯ ಹತಿಕೊಂಡು ಎಂಟಾಳ ಕರಕೊಂಡು।
ಬಂದ ಕಾಣವ್ವ ನಮ್ಮ ಮಗ। ಸೋಬಾನವ।
ಬಂದ ಕಾಣವ್ವಾ ನಮ್ಮ ಮಗ। ನಿಮ್ಮಳಿಯ।
ನೆಂಟನಯ್ಯನಾ ಹೆಣ್ಣಗೇಲಿ ಬಂದ। ಸೋಬಾನವಾ।
ನಾಲ್ವತ್ತು ವರುಷ ತಪಸಿ ಮಾವನ ಮಗಳ
ಕಾಲೆರಡೆ ಕಂಡೆ ಮಕವ ಕಾಣೆ। ಸೋಬಾನವ।
ಕಂದಯ್ಯ ಬಾಡಿ ಮಕ ಬಾಡಿ। ಒಳಗಿರುವ।
ಕಂದವ್ವನ ತಂದ ಕೈಗೂಡಿ। ಸೋಬಾನವಾ।
ಪುತ್ರಯ್ಯ ದಂಡೀಗೀ ಇಳಿದಾನ ಒಳಗಿರುವ
ನಿಸ್ತೆ ಪಾರ್ವತಿಯ ಕರೆತನ್ನಿ। ಸೋಬಾನವ।।

ಧ್ವನಿ : ಹೂವಿನ ಬಾಸಿಂಗ ಕಳುಹಿಸಿರುವುದನ್ನು ನೋಡಿ ಇದನ್ನು ಯಾರು ಕಳುಹಿದರು ಎಂದಾಗ ಹೆಣ್ಣಿನ ಕಡೆಯವರು ಕೊಡುವ ಉತ್ತರ ಇದು-

ಹೂವಿನ ಬಾಸಿಂಗ ಈಗ್ಯಾರು ಕಳುಹ್ಯಾರು
ಗುತ್ತಿಂದ ಹೊಳಲಕರೆಯಿಂದ । ಮದಲಿಂಗನ।
ಅಣ್ಣನ ಗೆಳೆಕಾರ ಕಳುಹ್ಯಾನ।।

ಧ್ವನಿ : ನಾಗೋಲೆಯ ದಿನ ಜೂಜಾಟದಲ್ಲಿ ನಿರತರಾಗಿರುವ ಸತಿಪತಿಗಳು-

ಜೂಜನಾಡಿದರು। ಸತಿಪತಿ। ಜೂಜೊಂದನಾಡಿದರು
ಆರು ಅಂಕಣದ ಸಾಲು ಮಳಿಗೆಯೊಳಗೆ।
ರಾಯ ಅಪ್ಪಯ್ನ ಸುಖನಿದ್ರೆ। ನುಡಿದಾಗ
ಕಾರುಡು ಬಂದಾವೆ ಹುಳಿಯಾರು।
ಜೂಜನಾಡಿದರು ಸತಿಪತಿ। ಜೂಜೊಂದನಾಡಿದರು।

ಧ್ವನಿ : ಮದುವೆ ಮುಗಿದನಂತರ-

ಕಡಗ ಕಾಲುಂಗುರ ಬೆರಳ ಮಡಿ ಉಂಗುರ
ಸಡಗರದಿಂದಲ್ಲಿ ಒಡೆಯ ಸಾಂಬನಿಗೆ
ಮದುವೆಯ ಮಾಡಿದರು
ಸಾಂಬನಿಗೆ ಗಿರಿಜೆಗೆ। ಮದುವೆಯ ಮಾಡಿದರು

ಧ್ವನಿ : ಗುರು- ಹಿರಿಯರೆಲ್ಲಾ ಸುಖವಾಗಿ ಬಾಳಲೆಂದು ಹರಸಿ ಅಕ್ಷತೆಯನ್ನು ನೀಡಿದರು.

ಧ್ವನಿ : ಹೆಣ್ಣು ಬೇಡುವ ಹಾಡನ್ನು ತಂಗಿ ಹೀಗೆ ದನಿಗೂಡಿಸುವಳು-

ನಾಕೆಮ್ಮ ಒಲ್ಲೆನಣ್ಣ। ಹಾಕಿದ ಹಗೆಯವನೊಲ್ಲೆ
ನಿನಬಾಲಿ ಕೊಡ ನನ ಬಾಲಗ
ಬಾಗಿಲ ತೋಳ ಬಿಡಲಾರೆ ಕಾಲ।।

ಧ್ವನಿ : ಅಣ್ಣನು ಹೇಳುವುದನ್ನು ಕೇಳಿ-

ಅಣ್ಣ ಕಂಠೀಯ ಸರ ಕೊಡುವೆ। ಅಳಿಯಾಗ ತಂಗೆವ್ವ।
ನನ ಚೊಚ್ಲ ಮಗಳ ಕೊಡಲಾರೆ
ಬಾಗಿಲ ತೋಳ ಬಿಡ ತಂಗಿ ಕಾಲ॥

ಧ್ವನಿ : ವಧೂವರರಿಗೆ ಆಶೀರ್ವಾದ, ಸನ್ಮಾನ ಕಾರ್ಯ ನಡೆಯುವುದು. ಮುಂದೆ ಉಡಿ ತುಂಬಿ ವಧುವನ್ನು ವರನ ಮನೆಗೆ ಕಳುಹಿಸುವಾಗ ತಂದೆ, ತಾಯಿ, ಬಂಧು, ಬಳಗ ಶೋಕದಲ್ಲಿ ಮುಳುಗಿ ಕಣ್ಣೀರ್ಗರೆಯುತ್ತಾ-

ನಮ್ಮ ಮನೆಯ ಮುಂಬೆಳಕು ನಿಮ್ಮನೆಯ ಹೊಂಬೆಳಕು।
ನಮ್ಮಗಳು ನಿಮಗೆ ಹಿಂಬೆಳಕು। ಈ ಬೆಳಕ
ನಿಮ್ಮ ಕೈಯಾಗ ಇಡತೀವಿ। ಸೋಬಾನವ।
ಹುಟ್ಟೂತ ನಮ್ಮಗಳು ಬೆಳೆಯುತ ನಮ್ಮಗಳು
ಕೊಟ್ಟ ಮ್ಯಾಲ್ಹೊರತು ನಮ್ಮಗಳು। ಕಂದಮ್ಮ
ಕೊಟ್ಟೇವು ನಿಮ್ಮ ಮನಿಗಾಗಿ ॥ ಸೋಬಾನವಾ॥

ಧ್ವನಿ : ವಧುವಿನ ತಾಯಿ ಈ ಸಮಯದಲ್ಲಿ ವರನ ತಾಯಿಗೆ ಹೀಗೆ ಉಸುರುತ್ತಾಳೆ.

ಬೀಗತಿ : ಇವಳೆಮ್ಮ ಮಗಳಲ್ಲ ನಿಮ್ಮ ಮಗು ಸುಳ್ಳಲ್ಲ
ಇವಳಾಗು ಹೋಗು ನಿಮಗೀಗ ತಾಯವ್ವೆ
ಕವಳವ ಕೊಟ್ಟು ಕಾಪಾಡು ॥ಸೋಬಾನವ॥

ಧ್ವನಿ : ಮಗಳನ್ನು ಬೀಳ್ಕೊಡುತ್ತಾ ತಾಯಿ ನುಡಿವ ಬುದ್ಧಿವಾದದ ಮಾತುಗಳಿವು-

ಹೋಗಿ ಬಾ ನನ ಬಾಲಿ, ಬಾಗಿ ನಡಿ ನನಲಾಲಿ
ಮಾಗೀಯ ಹೆತ್ತು ಸ್ಥಿರವಿಲ್ಲ ।ತಂಗೆವ್ವ।
ಬೇಗ ತಾಹೂವ ತವರೀಗ ॥ಸೋಬಾನವ॥

ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರು ಉಣಬೇಕ ತೌರವರ
ಎತ್ತವರ ಹೆಸರ ತರಬೇಕು॥

ಧ್ವನಿ : ಹೆಣ್ಣು ಕೊನೆಗೆ ತಾಯಿಯನ್ನು ಸಮಾಧಾನಿಸುತ್ತಾ-

ತಾವರೆ ಗಿಡ ಹುಟ್ಟಿ ದೇವರಿಗೆ ನೆರಳಾದಿ
ನಾ ಹುಟ್ಟಿ ಮನೆಗೆ ಎರವಾದೆ। ಹಡೆದವ್ವ
ನೀ ಕೊಟ್ಟಮನೆಗೆ ಹೆಸರಾದೆ

ಧ್ವನಿ : ಮೊದಲು ಗಂಡ ಹೆಂಡತಿಯನ್ನು ಬಹಳ ಪ್ರೀತಿಯಿಂದ ಕಾಣುತ್ತಾನೆ.

ಧ್ವನಿ : ಗಂಡನ ಮುದ್ದು ಮಾತುಗಳನ್ನು ಕೇಳಿದಾಗ ಹೆಂಡತಿಗೆ ಸ್ವರ್ಗ ಮೂರೇ ಗೇಣು!

ಧ್ವನಿ : ಹೆಣ್ಣು ಮಗಳಿಗೆ ಮಕ್ಕಳಾಗುವುದು ಸ್ವಲ್ಪ ತಡವಾದರೆ ಆಕೆಯ ಚಡಪಡಿಕೆಯನ್ನು ನೋಡಲು ಅಸಾಧ್ಯ. ಆಕೆಯ ದುಗುಡದ ದನಿಯನ್ನು ಕೇಳಿ-

ಬಂಜಿ ಬಾಗಿಲ ಮುಂದ ಅಂಜೂರಗಿಡ ಹುಟ್ಟಿ
ಟೊಂಗಿ ಟೊಂಗೆಲ್ಲ ಗಿಣಿ ಕೂತು ಹೇಳ್ಯಾವ
ಬಂಜಿ ನಿನ ಬದುಕು ಹೆರವರಿಗೆ
ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದಂಗ ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗ
ಕಂದನ ಕೊಡು ಶಿವನೆ ಬಂಧನ ಬಿಡಲಾರೆ
ಹಂಗೀತ ಬಾನ ಉಣಲಾರೆ ಮರ್ತ್ಯದಾಗ
ಬಂಜೆಂಬ ಶಬುದ ಕೇಳಲಾರೆ

ಧ್ವನಿ : ಅನುರಾಗದ ಹೊನಲು ಹರಿದು ಗರ್ಭಿಣಿಯಾದಳು ಹೆಣ್ಣು ಒಂಬತ್ತು ತಿಂಗಳಲ್ಲಿ ಅವಳಲ್ಲಾದ ಬದಲಾವಣೆ ಇದು-

ಪ್ರಥಮದ ತಿಂಗಳಿನ ಅತಿ ಬಳಲುತ ನಾರಿ
ಸುತನ ಬಯಕೆಯ ಕಾಯ ತಾಳುತಲಿ
ಪ್ರತಿಕ್ಷೀರ ಪರಮಾನ್ನ ಹಿತವಾಗುವುದು ತನ್ನ
ಸುತನ ಬಯಕೆಯ ಕಾಟ ತಾಳುತಲಿ
ಒಂಬತ್ತು ತಿಂಗಳು ತುಂಬಲು ಅಂಗನೆಗೆ
ಬಂದು ಟೊಂಕದ ಬ್ಯಾನಿ ಸೂಲಿಗಳು
ಸಂದು ಸಂದನೆ ಬಿಗಿದು ಶ್ರಮಪಡುತಲಿ ಬಾಳ
ಸಂದ್ರಾನಾಂಗನೆ ಪೋಲ್ವ ಕಂದನ ಪದದಾಳ॥

ಧ್ವನಿ : ಏಳು ತಿಂಗಳಿಗೆ ಸೀಮಂತ ಆರಂಭವಾಗುವುದು. ಆಗ ಮುತ್ತೈದೆಯರು-

ಉಡಿಯ ತುಂಬಿರಿ ಏಳರ ಒಳಗ
ಕರೆಸಿಕೊಳ್ರಿ ಬಂಧು ಬಳಗ
ನಾನು ಕೂಡ್ರುವೆ ಮಕರದೊಳಗೆ
ಮಾಡ್ರಿ ಸಡಗರಾ। ಮಾವಾ।
ಮಾಡ್ರಿ ಸಡಗರಾ।
ಮಾವಂತಾನ ನಮ್ಮನೆಯಲ್ಲಿ।
ಉಡಿ ತುಂಬುವ ನಡೆಯೇ ಇಲ್ಲ।
ನಿನ್ನ ಹೊಟ್ಟೇಲಿ ಗಂಡುಮಗನ
ಕೊಡಲಿ ದೇವರು। ಸೊಸಿಯೇ।
ಕೊಡಲಿ ದೇವರು।
ಗುಡ್ಡದ ಬಸವನ ದಯದಿಂದಾ।

ಪುಂಡ ಮಗವು ನಿಮಗೆ ಸಿಗಲಿ।
ನಿನ್ನ ಹೊಟ್ಟೇಲಿ ಹುಟ್ಟಲಿ ಗಂಡು।
ಮಾಡಾನು ಸಡಗರ। ಸೊಸಿಯೇ।
ಮಾಡಾನು ಸಡಗರ॥

ಧ್ವನಿ : ಒಂಬತ್ತು ತಿಂಗಳು ಮುಗಿಯುತ್ತಿದ್ದಂತೆಯೇ ಮಗು ಜನಿಸುವುದು. ಆಗ ತಾಯಿಯು ಜೋಗುಳ ಹಾಡಿ ಸಂತಸಪಡುತ್ತಾಳೆ. ಆಕೆಯ ಜೋಗುಳದ ಹಾಡಿನ ದನಿ ಕೇಳಿ-

ಜೋಜೋ ಶಂಭುಲಿಂಗ ಕೃಪಾಂಗ।
ಜೋಜೋ ಶಂಭುಲಿಂಗ ಇಷ್ಟಾಂಗ।
ಜೋಜೋ ಶಂಭುಲಿಂಗ ಸುಸಂಗ। ನೀವು।
ಜೋಯೆಂದು ಪಾಡಿರಿ ಶಂಭು ಮುಕ್ತಾಂಗ ಜೋಜೋ ॥ ೧ ॥

ಪನ್ನೀರ ನೆರಕೊಂಡುಬಾಲೆಯರೆಲ್ಲ।
ಚೆನ್ನಾಗಿ ವಸ್ತ್ರವ ಧರಿಸಿಕೊಂಡೆಲ್ಲ।
ಕನ್ನಡಿಯೊಳು ಮುಖ ನೋಡಿಕೊಂಡೆಲ್ಲ । ನಮ್ಮ।
ಪನ್ನಗಧರನ ಸ್ತುತಿಸಿದರಲ್ಲ ಜೋಜೋ ॥ ೨ ॥

ಎಳೆಯ ಬೆಳದಿಂಗಳೊಳು ಹೊಳೆವ ಚಂದ್ರಮನ।
ಕಳೆಯ ಕವಳ ಮುಖ ತಾ ಬಂದು ಶಿವನ।
ಸೆಳೆದುಕೊಂಡೋದಾಳೋ ಸೆರಗ ಹಿಡಿದಾನ। ಅಂದು।
ಅಳೆವನಾಡಿಸಿದಾಳೋ ಮನದೊಳೀಶ್ವರನ ಜೋಜೋ ॥ ೩ ॥

ಚಿನ್ನದ ತೊಟ್ಟಿಲಿಗೆ ರನ್ನದ ಹಗ್ಗ।
ಕನ್ನೆ ಮುತ್ತೈದೇರು ಕೂಡುತಲ ಬೇಗ।
ಚನ್ನನ ಕಾಣುತ ಹಿಗ್ಗಿದಾರಗೆ ತಾವು।
ತಂದಂತೆ ದಾಗೀನ ಹಾಕಿದರು ಶಿವಗೆ ಜೋಜೋ ॥ ೪ ॥

ಕೈಲಾಸದೊಡೆಯನ ಜೋಗುಳ ಪದವ
ಹರುಷದಿಂದಲಿ ಹಾಡಿದವರಿಗೆ ಒಲವ
ತ್ವರಿತದಲಿ ಬೇಡಿದ ವರಗಳ ಕೊಡುವ । ನಮ್ಮ
ಸಿರಿಶೈಲ ಪರ್ವತದ ಶಂಭು ಮಾದೇವ ಜೋಜೋ ॥ ೫ ॥

ಧ್ವನಿ : ತಾಯಿಗೆ ಮಗುವನ್ನು ಎಷ್ಟು ರಮಿಸಿದರೂ ಕಡಿಮೆಯೇ. ಕಣ್ಣೇಸರಾದೀತೆಂದು ನಟ್ಟಿ ತೆಗೆಯುವುದು, ಕೆಂಡ ಬಲಿ ಮಾಡುವುದು, ಮೆಣಸಿನಕಾಯಿ, ಕಸಬರಿಕೆ ಇಳಿತೆಗೆದು ಬೀದಿಗೆ ಚೆಲ್ಲುವಳು.

ಧ್ವನಿ : ತಾಯಿಗೆ ಮಗು ಅತ್ತರೂ ಚೆಂದ, ನಕ್ಕರೂ ಚೆಂದ. ತಾಯಿ ಮಗುವನ್ನು ಬಣ್ಣಿಸುವ ಬಗೆ ಇದು-

ಅಳಬ್ಯಾಡೆಂದರ ಹಟ ಮಾಡಿ ಅತ್ತಾನ
ಹವಳದ ಜೊಲ್ಲು ಸುರಿಸ್ಯಾನ। ಸಂಗಣಗ
ನಾನೆಲ್ಲಿ ತರಲಿ ನೊರೆ ಹಾಲು॥

ಧ್ವನಿ : ಮಕ್ಕಳ ಲಾಲನೆ - ಪಾಲನೆ, ಪೋಷಣೆಯಲ್ಲಿ ತಾಯಿ ಪ್ರಪಂಚವನ್ನೇ ಮರೆಯುವುದು ಸಹಜ. ತೊಟ್ಟಿಲ ತೆಗೆದುಕೊಂಡು, ಅಪ್ಪ ಕೊಟ್ಟ ಎಮ್ಮೆ ಹೊಡೆದುಕೊಂಡು ಹೆಣ್ಣು ಗಂಡನ ಮನೆಗೆ ಬರುತ್ತಾಳೆ.

ತೊಟ್ಟಿಲ ಹೊತ್ಕೊಂಡು ತೌರುಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡೆಕಂಡು। ತಂಗ್ಯಮ್ಮ
ತಿಟ್ಹತ್ತಿ ತಿರುಗಿ ನೋಡ್ಯಾಳ।

ಧ್ವನಿ : ಗಂಡನ ಮನೆಗೆ ಹೋದ ಮೇಲೆ ಹೆಣ್ಣು ತವರುಮನೆಯನ್ನು ಮರೆಯುವುದಿಲ್ಲ. ಆಗಿಂದಾಗ್ಗೆ ತವರಿಗೆ ಹೋಗಿ ಬರುತ್ತಾಳೆ.

ಧ್ವನಿ : ಜೀವನದಲ್ಲಿ ಸರಸ ವಿರಸದ ಸನ್ನಿವೇಶಗಳು ಬರುವುದು. ಜೀವನ ಎಂಬುದು ಕಷ್ಟ ಸುಖಗಳ ಸಮ್ಮಿಲನ. ಅತ್ತೆ, ಮಾವ, ಮೈದನ, ನಾದಿನಿಯರೊಡನೆ ಸಮರಸದಿಂದ ಜೀವನವನ್ನು ಸಾಗಿಸಬೇಕಾಗುತ್ತದೆ.

ಧ್ವನಿ : ಗಂಡ ಕೆಟ್ಟ ದಾರಿ ಹಿಡಿಯುತ್ತಿದ್ದರೆ ಗರತಿ ಬುದ್ಧಿವಾದ ಹೇಳಿ ತಿದ್ದುವುದು ಸಹಜ.

ಧ್ವನಿ : ಜೀವನದಲ್ಲಿ ಮಕ್ಕಳು ಮಿತವಾಗಿದ್ದರೆ ಹಿತ ಆದರೆ ಅತಿಯಾಗುವುದರಿಂದ ತೊಂದರೆ ಎಂಬುದು ಜನಪದ ಪದ್ಯಗಳಲ್ಲಿ ವ್ಯಕ್ತವಾಗಿದೆ.

ಬಂಗಾರದಂಥ ತಾಯಿ ಬಾಯಿಗೊಂದು ಹಲ್ಲಿಲ್ಲ
ಮಿತಿಯಲ್ಲ ಹಡೆದವ್ವ ಮರುಳು ತಾಯಿ

ಧ್ವನಿ : ಸಂಸಾರ ದೊಡ್ಡದಾಗುತ್ತಿದ್ದಂತೆ ಮಕ್ಕಳು ಹೆಚ್ಚಾಗುತ್ತಿದ್ದಂತೆಯೇ ಜೀವನದಲ್ಲಿ ಅಶಾಂತಿ ಒಡ ಮೂಡುವುದು ಸಹಜ. ದೊಡ್ಡ ಸಂಸಾರದ ಹೆಣ್ಣಿನ ಕಷ್ಟ ಕೇಳಿ-

ಕೋಲು ಕೋಲನ ಒಲ್ಲಿವನ
ಸಂಗಲೀಲ ಲೀಲ॥
ಹತ್ತಿ ಬಿತ್ತಿ ಬಿತ್ತಿ ಕಾಣೆ
ಜೋಳ ಬಿತ್ತಿ ಬೋನ ಕಾಣೆ
ಮನಿ ತುಂಬ ಮಕ್ಕಳ್ಹಡದು
ಗಂಡನ ಸುಖ ಕಾಣೆ ॥ ೧ ॥

ಅತ್ತೆಮಾತ ಕೇಳಿ ನಾನು
ಆರು ಸೇರು ಅಳ್ಳಿ ತಂದೆ

ಓಂಜಲಿಲ್ಲ ಪಿಸಕಲಿಲ್ಲ
ಬತ್ತಿಗೆ ಸರಿ ಹೋದಿತತ್ತಿ ॥ ೨ ॥

ಮಾವನ್ಹೆಸರು ಮಂಚದ್ವಾಲ।
ಅತ್ತಿ ಹೆಸರು ಜಾಪಿ ಕಡಕ।
ಗಂಡನ್ಹೆಸರು ಟುಂಗೆ ಟುಂಗೆ
ನನ್ನ ಹೆಸರು ಮುತ್ತಿನ ಚೆಂಡು ॥ ೩ ॥

ಧ್ವನಿ : ಆದ್ದರಿಂದಲೇ ಜನಪದ ಹೆಣ್ಣು ಉತ್ತಮವಾದ ಒಬ್ಬ ಮಗನನ್ನೇ ಪಡೆಯಲು ಬಯಸುತ್ತಾಳೆ. ಆಕೆಯ ಪ್ರಾರ್ಥನೆಯೆ ಇದು-

ನಿನ್ನಂಥ ಕೈಯೋನು, ನಿನ್ನಂಥ ಕಾಲೋನು
ನಿನ್ನಂಥ ಸಾಲ ಮಾಡಿಯೇನು। ಸೂರ್ಯದೇವ
ನಿನ್ನಂಥ ಮಗನ ಕೊಡು ನನಗೆ॥

ಧ್ವನಿ : ಮತ್ತೊಬ್ಬ ಹೆಣ್ಣು ತನ್ನ ಹಂಬಲವನ್ನೂ ಹೀಗೆ ತೋಡಿಕೊಳ್ಳುತ್ತಾಳೆ-

ಬಾರೋ ನನಕಂದ, ಬಾರೋ ನನ್ನ ಚಿನ್ನ
ಹತ್ತು ಮಕ್ಕಳ್ಯಾಕೋ ನಿನ್ನಂಥನೊಬ್ಬ ಸಾಕೋ
ಕನ್ನಡ ನಾಡಿನಲ್ಲಿ ಮನೆಗೊಬ್ಬ ಇಂಥವ ಸಾಕು।
ಸಂಸಾರವೆಂಬೂದ ಸಾಗರ ಹೊಳೆಯವ್ವ
ಈಸ ಬಲ್ಲವಗ ಎದೆಯುದ್ದ ಗಿಳಿರಾಮ
ಓದ ಬಲ್ಲವಗೆ ಕೈಲಾಸ
ಸಂಸಾರ ದುಂದುಗ ಹಿಂಗದೊ ಶಿವರಾಯ
ಹಿಂಗದಕ ಶರಣರ ಹಾದಿ। ಹಿಡಿಕೊಂಡು
ಗೆದಿಬೇಕ ಇದ್ದೂ ಸಂಸಾರ॥
ಗಂಡ ಹೆಂಡಿರ ಬಾಳು ಗಂಧ ತೀಡಿದಂಗ।
ಇದ್ದರ ಇರಬೇಕ ಒಂದಾಗಿ ಸೋ
ಇದ್ದರ ಇರಬೇಕ ಒಂದಾಗಿ - ಚಂದಾಗಿ
ಸುಖದಿಂದ ಸಂಸಾರ ನಡೀಬೇಕು ಸೋ॥

ಧ್ವನಿ : ನಮ್ಮ ಹಿಂದಿನವರು ಪಿತೃ ಋಣ ತೀರಿಸಲಿಕ್ಕೆ ಗಂಡು ಬೇಕು. ಹೆಣ್ಣಾಗದೇ ಇದ್ದರೆ ಜನ್ಮ ಜನ್ಮವಲ್ಲ ಎಂದು ಹೇಳುವುದುಂಟು. ಕೆಲವರು ಸಮಾಧಾನ ಹೊಂದುವುದೂ ಉಂಟು.

ಹೆಣ್ಣು ಹುಟ್ಯಾದಂತ ಹೇಳಿ ಕಳುವಲಿ ಬ್ಯಾಡ
ಹೆಣ್ಣಂದರವರು ಹೆದರ್‍ಯಾರ । ಕಂದವ್ವ
ಹೆಣ್ಣಲ್ಲ ನಮಗೆ ರವಿಚಿನ್ನ॥

ಧ್ವನಿ : ಹಿಂದೆ ಅಷ್ಟಪುತ್ರವತೀ ಭವ ಎಂದು ಹರಸುತ್ತಿದ್ದವರೂ ಉಂಟು. ಮತ್ತೆ ಕೆಲವರು ನಾಲ್ಕು ಗಂಡಾದ ಮೇಲೆ ಒಂದು ಹೆಣ್ಣು ಕೊಡು ಎಂದು ಕೇಳುತ್ತಿದ್ದುದೂ ಉಂಟು.

ನಾಕು ಮಕ್ಕಳ ಕೊಟ್ಟು। ಸಾಕು ಮಾಡು ಶಿವನೆ
ನಾಕಾದ ಮ್ಯಾಲೆ ಆರೂತಿ। ಹಿಡಿಯಾಕ
ನಾರಿಯ ಕೊಟ್ಟು ಕಡೊ ಮಾಡೋ

ಧ್ವನಿ : ಹೀಗೆ ಹೇಳುತ್ತಿದ್ದ ಕಾಲವೊಂದಿತ್ತು. ಆದರೆ ಇಂದು ನಮ್ಮ ಹಿತದೃಷ್ಟಿಯಿಂದ, ದೇಶದ ಹಿತದೃಷ್ಟಿಯಿಂದ ಎರಡೇ ಮಕ್ಕಳು ಹೆಣ್ಣಾಗಲೀ, ಗಂಡಾಗಲೀ ಸಾಕೆಂಬುವ ಕಾಲ. ನಿಜಕ್ಕೂ ಇದು ದೇಹದ ಹಿತ, ದೇಶದ ಹಿತ! ಮಕ್ಕಳಿಗೆ ಸುಖ, ತಂದೆ - ತಾಯಿಯರ ಜೀವನದಲ್ಲಿ ಸಂಗೀತ. ಎರಡೇ ಮಕ್ಕಳು ಸಾಕೆಂಬುದು ಪ್ರತಿಯೊಬ್ಬರ ಜೀವನದಲ್ಲೂ ಜೀವನ ಸಂಗೀತವಾಗಿ ಹಾಡಿ ನಲಿಯಬೇಕು. ಇದು ಎಲ್ಲರ ಆಶಯವಲ್ಲವೇ?

ಗಂಡ ಹೆಂಡಿರ ಜೋಡು ದುಂಡು ಮುತ್ತಿನ ಜೋಡು
ಗಂಡೆರಡು ಜೋಡು ಆಡಿವ್ಯಾಗ ನನ ಬಾಲ
ನೀ ಜೋಡು ನನ ಮನಿಯಾಗ।
ತೋಳುದ್ದ ತಲೆದಿಂಬು ಮಾರುದ್ದ ಹಾಸಿಗೆ
ಮಾಣಿಕದಂಥ ಗೊಡವೆ ನನಗೇನ॥



# ಜೋಡೆರಡು ದೀವಿಗೆ

ಧ್ವನಿ ೧ : ವ್ಯಕ್ತಿಯಾಗಿ ವ್ಯಕ್ತಿಗೇನು ದಾನವಾಗಿ ಕೊಟ್ಟೀತು? ಸಂತಾನವೆಂದರೆ ಅದೇನು ಸುಳ್ಳಲ್ಲ. ಆದರೆ ಅಷ್ಟೇ ಸಾಲದು. ಇದೇನು ಅಷ್ಟೊಂದು ಸಣ್ಣದೂ ಅಲ್ಲ. ಬಯಕೆ, ಬಸಿರು, ಪ್ರಸವ ವೇದನೆ, ತಾಯಿ ಮಗುವಿಗೆ ಉಣ ಬಡಿಸಿದುದನ್ನು ಎತ್ತಿ ಮುದ್ದಾಡಿ ಬೆಳೆಸುವುದು ಎನ್ನುತ್ತಾರೆ ಸಿಂಪಿ ಲಿಂಗಣ್ಣನವರು.

ಧ್ವನಿ ೨ : ಪ್ರತಿಯೊಂದು ಹೆಣ್ಣು ತಾಯ್ತನವನ್ನು ಬಯಸುವುದು ಸಹಜ. ಆಕೆ 'ಕಂದನ ಕಂಡು ಶಿವನ ಬಂಧನ ಬಿಡಲಾರೆ' ಎಂದು ಪ್ರಾರ್ಥಿಸುತ್ತಾಳೆ. ವಿಠ್ಠಲನ ಗುಡಿಯ ಮುಂದೆ ನಿಂತು ಕುಂಕುಮ ಬೆವತು ಹೋಗುವವರೆಗೆ 'ಟೊಪ್ಪಿಗಿ ಮಗನ ದಯ ಮಾಡೋ' ಎಂದು ಅಂಗಲಾಚುವಳು. ಬಂಜೆ ಬಾಳನ್ನು ಬಯಸದ ಆಕೆ ಹೆಣ್ಣು ಆಗದೆ ಮಣ್ಣಾಗಿದ್ದರೆ ಚೆನ್ನಾಗಿತ್ತು. ಮರವಾಗಿ ಹುಟ್ಟಿದ್ದರೆ ಬೇರೆಯವರಿಗೆ ನೆರಳನ್ನು ನೀಡಬಹುದಾಗಿತ್ತು ಎಂದು ಚಿಂತಿಸುವಳು.

ಧ್ವನಿ ೧ : ಬಸುರಿ, ಶರೀರ ಆಲಸ್ಯ, ಆಹಾರ ವರ್ಜ್ಯ, ಆಯಾಸ ಮೊದಲಾದ ಸಂಕಟಗಳನ್ನು ಮರೆತು ಜೀವ ಸೃಷ್ಟಿಯ ಹೊರೆ ಆಕೆಗೆ ಹೂವಿಗಿಂತ ಹಗುರಾಗಿ ತೋರುವುದು.

ಹೆಣ್ಣು : ಆರು ಮಕ್ಕಳ ಬೇಡಿತ್ತ ನನ್ನ ಜೀವ
ಕೇಳಿದ್ದೆನೇನ ಶಿವರಾಯ। ಹೊಟ್ಯಾಗ
ಮಾಡಿದ್ದಾನೇನು ಮಗರಾಯ॥

ಕಂದ ಹುಟ್ಟುವಾಗ ಕುಂದ್ಯಾವಕ್ಕನ ಮಾರಿ
ಕಂದ ಚಂದಾಡಿ ಬರುವಾಗ। ಆ ಮಾರಿ
ಕುಂದಲ್ಹರಳಾಗಿ ಹೊಳೆದಾತ।
ಬ್ಯಾನೀಯ ತಿನುವಾಗ ಬ್ಯಾಡವ್ವ ಮಕ್ಕಳು
ಬಾಗಿ ಬಚ್ಚಲ ಹೊಗುವಾಗ। ಬಯಸ್ಯಾರ
ನೂರೊಂದು ಫಲವ ಕುಡು ಶಿವನೆ॥

ಧ್ವನಿ ೨ : ಸೊಸೆ ಬಸುರಿಯಾದಾಗ ಅತ್ತೆಗೆ ಅದೆಷ್ಟು ಹಿಗ್ಗು? ಹತ್ತು ಮಕ್ಕಳನ್ನು ಹಡೆಯೆಂದು ತನ್ನ ಬಯಕೆಯನ್ನು ಉಸುರುತ್ತಾಳೆ. ಮಾವ ಮಾಯದ ಮಕ್ಕಳ ಹಡೆಯೆಂದು ಹರಸುತ್ತಾ, ಭಾವ ಬಹಳ ಹಡೆಯೆಂದು ಹರಸುತ್ತಾನೆ.

ಅತ್ತಿಕಾಯಿ ತಂದು ಅತ್ತೆ ಉಡಿಯಲಿ ತುಂಬಿ
ಅತ್ತೆಯೆದ್ದು ಹರಕಿ ಕುಡುತಾಳ । ತಂಗವಗ
ಹತ್ತು ಮಕ್ಕಳ ಹಡೆಯೆಂದು॥
ಮಾವಿನ ಕಾಯಿ ತಂದು ಮಾವ ಉಡಿಯಲಿ ತುಂಬಿ
ಮಾಯದ ಮಕ್ಕಳ ಹಡೆಯೆಂದು। ತಂಗವಂಗ
ಮಾವ ಬಂದ್ಹರಕಿ ಕೊಡುತಾನ॥
ಬಾಳೆಕಾಯಿ ತಂದು ಭಾವ ಉಡಿಯಲಿ ತುಂಬಿ
ಭಾವ ಎದ್ದು ಹರಕಿ ಕೊಡುತಾನ। ತಂಗೆವ್ವ
ಬಾಳ ಮಕ್ಕಳ ಹಡೆಯವ್ವ॥

ಧ್ವನಿ ೧ : ಹಿರಿಯರ ಆರೈಕೆ, ಆಪ್ತೇಷ್ಟರ ಮಂಗಲೋತ್ಸವಗಳಿಂದ ಬಸುರಿಗೆ ಉಲ್ಲಾಸ ನೀಡುವುದು. ಪ್ರಸವ ವೇದನೆಯಿಂದ ಹೊಟ್ಟೆ ಕುಟ್ಟೆಂದು ನಡುವನ್ನು ಕೊಡಲಿಯಿಂದ ಕಡಿದಂತಾಗಿ, ತಾಸಿಗೊಮ್ಮೆ ತಾಳ ಬಾರಿಸಿದಂತಾಗಿ, ಥರ ಥರ ನಡುಗುತ್ತಾ, ತೊಡೆಗಳು ಅದುರುತ್ತಾ, ದೇವರನ್ನು ನೆನೆಯುತ್ತಾ, ಕೈ ಮುಗಿಯುತ್ತಾ ಮಗುವಿಗೆ ತಾಯಾದಾಗ ಆಕೆಗಾದ ಹಿಗ್ಗು ಹೇಳಲಸದಳ.

ದೇವರ ಮನಿಯಾಗ ಜೋಡೆರಡು ದೀವಿಗೆ
ದ್ವಾರೇಡ ಕೈಯ ತಲೆದಿಂಬ । ಇಟಕೊಂಡು
ಕಂದನ ಹಡೆದು ಮಲಗ್ಯಾಳ॥

ಧ್ವನಿ ೨ : ಹೆರಿಗೆ ಬೇನೆಯನ್ನು ಸಹಿಸಲಾರದಾದಾಗ ಇನ್ನು ಮಕ್ಕಳು ಬೇಡ ಎನಿಸಿದರೂ ಹೆರಿಗೆಯಾದ ಮೇಲೆ ಮತ್ತೆ ಮಕ್ಕಳನ್ನು ಹಡೆಯಲು ಬಯಸುತ್ತಾಳೆ.

ಮಕ್ಕಳ ಕೊಡು ಶಿವನೆ ಮತ್ತೊಂದು ನಾ ಒಲ್ಲೆ
ಬಡತನ ನನಗಿರಲಿ ಬಾಳ ಮಕ್ಕಳಿರಲಿ
ಮ್ಯಾಗ ಗುರುವಿನ ದಯೆಯಿರಲಿ। ನನ ಗುರುವೆ।
ಬಡತನದ ಚಿಂತೆ ನನಗಿರಲಿ
ಕಾಮನಂಥ ಕಣ್ಣು ಬೀಮನಂಥ ಹುಬ್ಬು
ರಾವಣನಕಿಂತ ನಡು ಸಣ್ಣ। ನನ ಬಾಲಿ
ಹುಲಿಯ ನಿನಗ್ಯಾರು ಕೆಣಕ್ಯಾರ।
ಕಾಮನ ತೋಟಕೆ ಭೀಮನ ಕಾವಲ
ಜೇನು ತುಪ್ಪದ ಮಡಿಯೆಳೆದು ನನ ಬಾಲಿ
ಕಾಮ ಬೆಳದಾನ ಕರಿಕಬ್ಬ।

ಧ್ವನಿ : ಇಂಥ ಮಕ್ಕಳು ಯಾರಿಗೆ ತಾನೇ ಬೇಡ?

ತವರೂರಿಗೋದ್ದಾಗ ನವಿಲ ಬಣ್ಣದ ಪಕ್ಷಿ
ತಲಿಬ್ಯಾನಿ ಎದ್ದು ಆಳತಿತ್ತ! ಕಂದನ
ಚೆಲುವಿಕೆ ನೋಡಿ ನಗುತಿತ್ತು!!

ಧ್ವನಿ ೨ : ಕಂದನ ನೋಡಿ ಸಂತಸಪಟ್ಟಿತು ಬಣ್ಣದ ಪಕ್ಷಿ ಎಂದ ಮೇಲೆ ಕಂದನ ತಾಯಿಗೆ ಆನಂದ ಅದೆಷ್ಟಾಗಿರಬೇಡ?

ಧ್ವನಿ ೧ : ಗಂಡಾದರೆ ಮನೆತನಕ್ಕೆ ಕೀರ್ತಿ, ಯಶಸ್ಸು. ಹೆಣ್ಣಾದರೆ ಮನೆಗೂ ಕೊಟ್ಟ ಮನೆಗೂ ಕೀರ್ತಿ, ಯಶಸ್ಸುಗಳು ದೊರೆಯುವುವು. ಹುಟ್ಟಿದ ಮನೆಗೆ ಎರವಾದರೂ ಚಿಂತೆಯಿಲ್ಲ, ಕೊಟ್ಟ ಮನೆಗೆ ಹೆಸರು ತರುವುದಕ್ಕಿಂತ ಹೆಚ್ಚಿನ ಪ್ರಯೋಜನ ಹೆಣ್ಣಿಗೆ ಇನ್ನಾವುದಿದೆ?

ಧ್ವನಿ ೨ : ಹೆಣ್ಣು ಹುಟ್ಟಿದ ಮನೆ ಹೆಗ್ಗಣ ಹತ್ತಿದ ಹಾಗೆ ಎಂದು ಆಡಿಕೊಳ್ಳುವುದುಂಟು. ಆದರೆ ಹಡೆದವ್ವ ಹೆಣ್ಣಲ್ಲ ನಮಗೆ ರವಿ ಚಿನ್ನ ಎಂದು ಹೆಮ್ಮೆಯಿಂದ ನುಡಿದಳು. ಕಣ್ಣು ಮೂಗಿಲೆ ಸನ್ನ ಹೆಣ್ಣು ಮಗಳು ಚೆಲುವಿ ಎಂಬುದು ಆಕೆಯ ನಂಬುಗೆ.

ಧ್ವನಿ ೧ : ಗರತಿಯರು ತಮಗಿರುವ ಬಡತನ ಹಾಗೂ ಬಹು ಸಂತಾನ ಎಂಬ ಚಿಂತೆಯನ್ನು ಗುರುವಿನ ಮೇಲೆ ಹೊರಿಸಿ ತಾವು ನಿಶ್ಚಿಂತರಾಗಿದ್ದಾರೆ.

ಧ್ವನಿ ೨ : ಮುರುಕು ತೊಟ್ಟಿಲಿಗೊಂದು ಹರಕು ಚಾಪೆಯನ್ನು ಹಾಸಿ ಅರಚು ಪಾಪನ ಮಲಗಿಸಿ ಹಾಡಿ ಹಿಗ್ಗುವಳು. ನುಚ್ಚಂಬಲಿ ಉಣಿಸಿ ಮಕ್ಕಳನ್ನು ಸಲಹುವಳು. ಬಹುಮಕ್ಕಳ ತಾಯಿ ಮಕ್ಕಳಿಗೆ ಸಾಕಾಗುವಷ್ಟು ಹಾಸಿಗೆ ಇಲ್ಲದಾಗಲೂ ಉಟ್ಟ ಸೀರೆಯನ್ನೇ ಅರ್ಧ ಹಾಸಿ ಅವುಗಳನ್ನು ಮಲಗಿಸುವಳು. ಉಳಿದ ಸ್ಥಳದಲ್ಲಿ ಮಲಗಿಸಲು ಇನ್ನಿಬ್ಬರು ಮಕ್ಕಳಿದ್ದರೆ ಲೇಸಾಗುತ್ತಿತ್ತು ಎಂದು ಚಿಂತಿಸಿದಳೆಂಬ ಜನಪದ ಕಥೆ ಇದೆ.

ಧ್ವನಿ ೧ : ಜನಪದ ಸಾಹಿತ್ಯದಲ್ಲಿ ಬರುವ ಬರದ ಹಾಡು ಒಂದು ಕಥೆಯಲ್ಲ ಕಥನ. ಒಮ್ಮೆ ಬರಗಾಲ. ಅಣ್ಣನಿಗೆ ಮಕ್ಕಳಿಲ್ಲ, ತಮ್ಮನಿಗೆ ಎಂಟು ಮಕ್ಕಳು, ಜೊತೆಗೆ ಬಡತನ. ನೀಲವ್ವೆ ತನ್ನ ಎಂಟು ಮಕ್ಕಳನ್ನು ಸಾಕಲಾರದೆ ಕಂಗಾಲಾಗಿ ಅಣ್ಣನ ಮನೆಗೆ ಜೋಳ ಕೇಳಲು ಹೊರಡುತ್ತಾಳೆ.

ಹೆಣ್ಣು : ಏ ಅಣ್ಣಾ...... ಏ ಅಣ್ಣಾ ಸೊಲಗಿ ಜೋಳಾ ಕೂಡಾ।
॥ ಕೋಲೆನ್ನ ಕೋಲ ॥
ಸೊಲಗಿ ಜೋಳ ಕಡನೆ ಕೊಟ್ಟರ ನಟ್ಟ ಕಡಿಯಲಿ
ಹೋದೇನೆಂದ ॥ ಕೋ ।

ಧ್ವನಿ ೨ : ಕೈಗಡ ಬೇಡುವ ಈ ಮಾತು ಎಂಥವರ ಕರುಳನ್ನಾದರೂ ಕೂಡ ಚುರುಕ್ ಎನ್ನಿಸುತ್ತದೆ.

ಗಂಡು : ಬಿರಿಬಿರಿ ಹೋದನಲ್ಲ ಗಾದ ಮೆತ್ತಿಗಿ ತಗದಾನಲ್ಲ ।।ಕೋ।।
ಗಾದ ಮೆತ್ತಿಗಿ ತನದಾಗಲ್ಲ ಸೊಲಗಿ ಜೋಳ ಕೊಟ್ಟಾನಲ್ಲ ।।ಕೋ।।
ಸೊಲಗಿ ಜೋಳಾ ಒಯ್ದು ಕೇರಿ ಹೆಣತಿ ಕೈಯಾಗಕೊಟ್ಟನಲ್ಲಾ।।ಕೋ।।
ಒಲಿಮ್ಯಾಲ ಎಸರನಿಟ್ಟು ಒಡಿಲಾಕಾವರು ಕುತ್ತವಳಲ್ಲ ।।ಕೋ।।

ಹೆಣ್ಣು : ಎಂಟು ಮಕ್ಕಳ ಕರಕೊಂಡು ತವರುಮನಿಗೆ ಹೋದಾಳು ।।ಕೋ।।

ಹೆಣ್ಣು : ಏ ಅತಿಗಿ, ಏ ಅತಿಗಿ ಸೇರ ಜೋಳಾ ಕಡಾ ಕೊಡ ।।ಕೋ।।

ಹೆಣ್ಣು : ಸೇರ ಜೋಳಾ ನಮ್ಮಲ್ಲಿಲ್ಲಾ ಹೇರ ಜೋಳಾ ನಮ್ಮಲ್ಲಿಲ್ಲ।।

ಹೆಣ್ಣು : ಅಷ್ಟು ಮಕ್ಕಳ ಕೈಯಾಗ ತುತ್ತು ರೊಟ್ಟಿ ಕೊಡು ಅವ್ವಾ।

ಹೆಣ್ಣು : ತುತ್ತು ರೊಟ್ಟಿ ಬೇಡಲಿಕ್ಕೆ ಬಿಕ್ಕೀಗಾದರೂ ಬಂದಿಯೇನ।

ಧ್ವನಿ ೧ : ಆಕೆಯ ಮಾತು ಕೇಳಿ ಮಕ್ಕಳನ್ನು ಕರೆದುಕೊಂಡು ಮನೆಯ ಕಡೆ ಬಂದಳು.
ಆಗ ಆಕೆಗೆ ಮತ್ತೊಂದು ಉಪಾಯ ಹೊಳೆಯಿತು.

ಹೆಣ್ಣು : ತಾಳಿಸಾರ ತಗೊಂಡಾಳ, ಅಂಗಡಿದಾರ ಹೋಗಿದಾಳ ।ಕೋ।
ಅದ್ದನಕ್ಕಿ ಕೊಡಿರಪ್ಪ ದುಡ್ಡಿನ ವಿಷ ಕೊಡಿರಪ್ಪಾ । " ।

ಗಂಡು : ಅದ್ದನಕ್ಕಿ ಯಾರೀಗಪ್ಪಾ ದುಡ್ಡಿನ ವಿಷ ಯಾರಿಗವ್ವ । " ।

ಹೆಣ್ಣು : ಅದ್ದನಕ್ಕಿ ಮಕ್ಕಳಿಗಪ್ಪಾ ದುಡ್ಡಿನ ವಿಷ ಹೆಗ್ಗಣಕಪ್ಪಾ ।ಕೋ।

ಧ್ವನಿ ೨ : ಅನ್ನಕ್ಕೆ ವಿಷ ಬೆರಸಿ ಸಿದ್ಧಪಡಿಸಿದಳು.

ಹೆಣ್ಣು : ನೀಲವ್ವ ನಿಂಬವ್ವ ಒಂದೆ ಎಡಿ ಮಾಡಿದಾಳ ।ಕೋ।
ಗಂಗವ್ವ ಗೌರವ್ವ ಒಂದೆ ಎಡಿ ಮಾಡಿದಾಳ "
ಭೀಮಣ್ಣ ಕಾಮಣ್ಣ ಒಂದೆ ಎಡಿ ಮಾಡಿದಾಳ । "
ರಾಮಣ್ಣ ಲಕ್ಮಣ್ಣ ಒಂದೆ ಎಡಿ ಮಾಡಿದಾಳ । "
ಗಂಡ-ಹೆಂಡಿರ ನಡುವೆ ಒಂದೆ ಎಡಿ ಮಾಡಿದಾಳ। "

ಧ್ವನಿ ೧ : ಸಂಜೆ ಊಟವಾಯಿತು. ಮಲಗಲು ಸಿದ್ಧತೆ ಆಯಿತು.

ಹೆಣ್ಣು : ನೀಲವ್ವ ನಿಂಬೆವ್ವ ತನ್ನ ಬಲಕ ಹಾಕಿದಾಳ ।ಕೋ।
ಗಂಗವ್ವ ಗೌರವ್ವ ತನ್ನ ಎಡಕ ಹಾಕಿದಾಳ। "
ರಾಮಣ್ಣ ಲಕ್ಷ್ಮಣ್ಣ ಗಂಡನ ಬಲಕ ಹಾಕಿದಾಳ "
ಭೀಮಣ್ಣ ಕಾಮಣ್ಣ ಗಂಡನ ಎಡಕ ಹಾಕಿದಾಳ "
ಗಂಡ ಹೆಂಡರಿಗಿ ನಟ್ಟ ನಡುವೆ ಹಾಸಿದಾಳ ।।ಕೋ।।

ಧ್ವನಿ ೨ : ಹೀಗೆ ಮಾಡಿ ಬಾಗಿಲು ಮರೆಮಾಡಲು ಹೋದಳು. ಆಗ ಆಕೆಗಾದ ಭಾವನೆ- ಈಗ ನಾನು ಮುಚ್ಚಿದ ಬಾಗಿಲನ್ನು ತೆರೆಯುವವರು ಯಾರು? ಯಾವಾಗ?.... ಮುಂತಾದವು.

ಹೆಣ್ಣು : ಮಾಯದ ನನ್ನ ಅಣ್ಣ ಮಲ್ಲಾಡ ತಾರೆ ಹೋಗಿದಾವ। ಕೋ
ದಿಕ್ಕಿಲ್ಲದ ಬರ ನಮ್ಮ ಮಕ್ಕಳ ಸುತ್ತ ಬಂದಿತ್ತೇನು।
ರಾಜಾಕಿಲ್ಲದ ಬರ ನಮ್ಮ ರಾಯರ ಸುತ್ತ ಬಂದಿತ್ತೇನ।

ಧ್ವನಿ ೧ : ಹೀಗೆ ಹತ್ತು ಹಲವಾರು ಯೋಚನೆಗಳನ್ನು ಮಾಡುತ್ತಿದ್ದಾಗ ಮಕ್ಕಳು, ಗಂಡ ಎಲ್ಲಾ ನಿದ್ದೆ ಹೋದರು. ಅತ್ತ ಆಕೆಯ ಅಣ್ಣ ತಾಯಿಯಲ್ಲಿ ತನ್ನ ತಂಗಿ ನೀಲವ್ವನ ಸುದ್ದಿಯನ್ನು ಕೇಳಿದ. ಅದಕ್ಕೆ ಆಕೆ-

ಹೆಣ್ಣು : ಮೊನ್ನೆ ಯಾರೆ ಬಂದಿದ್ದಳಪ್ಪ ಸೇರ ಜೋಳ ಬೇಡಿದಳಪ್ಪಾ। ಕೋ
ಸೇರ ಜೋಳಾ ಬೇಡಿದರ ಹೇರ ಜೋಳಾ ಕೊಡದಿತ್ತ
ಮಕ್ಕಳ ಗಿತ್ತಿ ಬಡವ್ಯಾದರ ಇದ್ದಾಳವ್ವ ।ಕೋ।

ಧ್ವನಿ ೨ : ಹೇರು ಜೋಳ ತೆಗೆದುಕೊಂಡು ತಂಗಿಯ ಊರಿಗೆ ಬಂದ. ತಂಗಿಯ ಸಮಾಚಾರ ತಿಳಿಯುವ ಕಾತುರತೆ ಹೆಚ್ಚಾಯಿತು.

ಗಂಡು : ನೀರಿಗಿ ಅವ್ವಗಳಿರಾ ನೀಲೀನ ಸುದ್ದಿ ಕೇಳಿದರೇನ । ಕೋ

ಹೆಣ್ಣು : ಆಕೀ ಸುದ್ದಿ ಕೇಳಿಲ್ಲಪ್ಪಾ ಆಕಿ ಮನಿಗಿ ಹೋಗಿಲ್ಲಪ್ಪಾ। "

ಧ್ವನಿ ೧ : ಎಷ್ಟು ಹೊತ್ತಾದರೂ ತಂಗಿ ಸದ್ದಿಲ್ಲ. ಬಿಸಿಲು ಮಾರು ಬಂದರೂ ಮಕ್ಕಳ ಶಬ್ದವಿಲ್ಲ. ಮನೆಯಲ್ಲಿದ್ದಾರೋ ಇಲ್ಲವೋ ಎಂದು ಅನುಮಾನಿಸಿ ಬಾಗಿಲು ನೂಕಿದ. ಆಗ ಕಂಡ ದೃಶ್ಯ ಅದೇನು ಭೀಕರ?

ಬಾಗಿಲು ತೆರೆದು ನೋಡುತನಾ ಹತ್ತು ಹೆಣ ಬಿದ್ದೀದಾವ ।।ಕೋ।।
ಹತ್ತರ ಕೂಡ ಹನ್ನೊಂದಂತ ಪೇಟ ಗಟಾರ ಮಾಡಿಕೊಂಡ ।।ಕೋ।।

ಧ್ವನಿ ೨ : ಸತ್ತ ಆ ಎಲ್ಲರ ಅಂತ್ಯ ಸಂಸ್ಕಾರವನ್ನು ಬಳಗದವರು ಮಾಡದೇ ಇರಲಿಲ್ಲ.

ನೀಲವ್ವಗ ನಿಂಬವ್ವಗ ನಿಂಬಿ ಬನವಾಗಿಟ್ಟವಾರ ।ಕೋ
ಗಂಗವ್ವನ ಗವರವ್ವನ ಬಾಳೀ ಬನದಾಗಿಟ್ಟೀದಾರ।
ರಾಮಣ್ಣನ ಲಕಣನ ತೆಂಗಿನ ಬನದಾಗಿಟ್ಟದಾರ।
ಭೀಮಣ್ಣನ ಕಾಮಣ್ಣನ ಪೇರಲ ಬನವಾಗಿಟ್ಟದಾರ।
ಗಂಡ ಹೆಂಡಿರನೊಯ್ದು ಶಿವನ ಪಾದವಲಿಟ್ಟವಾರ।
ಮಾಯದ ಅಣ್ಣನ ಒಯ್ದು ತಂಗೀ ಪಾದವಲಿಟ್ಟದಾರ।

ಧ್ವನಿ ೧ : ಎಂಥ ದಾರುಣ ಚಿತ್ರ! ಅತಿ ಸಂತಾನ, ಬಡತನ, ಜೊತೆಗೆ ಬರ ಇವು ಮೂರು ಸೇರಿಕೊಂಡಾಗ ಎಂಥ ಆತಂಕ? ಹಿಂದಿನ ಕಾಲಕ್ಕೆ ಅಷ್ಟೊಂದು ಕಷ್ಟವಾಗಿರಬೇಕಾದರೆ ಇಂದು ಎಷ್ಟೊಂದು ಯೋಚಿಸಬೇಕು?

ಧ್ವನಿ ೨ : ಜೀವನಕ್ಕೆ ಬಡತನ, ಗೃಹಕಲಹ, ಬಹುಸಂತಾನ ಇವು ಅನಿಷ್ಟಪ್ರಾಯವಾಗಿದೆ. ಬಡತನದಿಂದ ಸ್ಥಿತಿವಂತಿಗೆಯೂ, ಗೃಹಕಲಹದಿಂದ ಗೃಹ ಶಾಂತಿಯೂ, ಬಹು ಸಂತಾದಿಂದ ಹಿತಮಿತ ಸಂತಾನವೂ ಮೊಗವೆತ್ತಿ ಬರಬೇಕಾಗಿದೆ.

ಧ್ವನಿ ೧ : ನೂರೊಂದು ಫಲಕೊಡು ಎಂಬ ಹಿಂದಿನ ಮಾತು ಹಿಂದೆ ಅನುಭವಿಸಿದವರಿಗೇ ಗೊತ್ತು. ನೂರೊಂದು ಮಕ್ಕಳನ್ನು ಹೆತ್ತ ಗಾಂಧಾರಿಯ ಮಕ್ಕಳಾದ ಕೌರವರು ಕಲಹದಲ್ಲಿ ನಾಶವಾದರು. ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳು ಮುನಿಯ ಕೋಪಕ್ಕೆ ಸಿಲುಕಿ ಸುಟ್ಟು ಭಸ್ಮವಾದರು. ಬೇಕಾದಷ್ಟು ಮಕ್ಕಳು ಬೇಕು ಎಂಬ ಹಿಂದಿನ ತಾಯಿಯರ ಬಯಕೆ ಇಂದು ಬೇಕಾದಷ್ಟು ಮಕ್ಕಳಿಗೆ ಇಳಿದಿದೆ. ಅತಿ ಯಾವಾಗಲೂ ಕೊಟ್ಟದ್ದೇ, ಮಿತಿ ಎಂದಿದ್ದರೂ ಒಳಿತೇ!

ಧ್ವನಿ : "ಅಷ್ಟ ಪುತ್ರವತೀ ಭವ, ಮನೆ ತುಂಬ ಮಕ್ಕಳಿರಲವ್ವ" ಎಂಬ ಹರಕೆಗಳೂ ಇಂದು ಬೇಕಿಲ್ಲ. ಇಂದಿನ ಸ್ಥಿತಿಗೆ ದೇವರ ಮುಂದಿನ ಜೋಡಿ ದೀವಿಗೆಯಂತೆ ಎರಡು ಮಕ್ಕಳಾದರೆ ಅವೇ ಮನೆಗೆ ಪ್ರಕಾಶ! ಜಗಕ್ಕೆ ಜ್ಯೋತಿ!!

*

# ತವರಿನ ಕರೆ

ನಿರೂಪಕ :

ಹೆಣ್ಣಾದವಳು ಒಂದಲ್ಲ ಒಂದು ದಿನ ತವರುಮನೆಯನ್ನು ಬಿಟ್ಟು ಗಂಡನ ಮನೆಯನ್ನು ಸೇರಲೇಬೇಕು. ಗಂಡನ ಮನೆಗೆ ಸೇರಿದ ಹೆಣ್ಣು ಅಷ್ಟಕ್ಕೇ ತನ್ನ ತವರನ್ನು ಮರೆಯುವುದಿಲ್ಲ. ಹಬ್ಬ ಹರಿದಿನಗಳು ಬಂದಾಗ ಆಕೆಯ ತವಕವನ್ನು ಹೇಳಲಸಾಧ್ಯ. ತವರಿನ ಬಗ್ಗೆ ಹಲವಾರು ರೀತಿಯಲ್ಲಿ ಹಂಬಲಿಸುತ್ತಾಳೆ. ತಾಯಿ, ಅಕ್ಕ, ತಂಗಿ, ಅಣ್ಣ, ತಮ್ಮಂದಿರನ್ನು ಜ್ಞಾಪಿಸಿಕೊಳ್ಳುತ್ತಾಳೆ. ಅಣ್ಣ-ತಮ್ಮಂದಿರು ನಾಗರಪಂಚಮಿಗೆ ಕರೆಯುತ್ತಾರೆಂದು ಆಶಿಸುತ್ತಾಳೆ. ತವರಿನ ಕರೆಗೆ ಕಾತರಳಾಗಿ ಅದೇ ಗುಂಗಿನಲ್ಲಿ ಇರುತ್ತಾಳೆ. ಬಳೆಗಾರನ ಜೊತೆಯಲ್ಲಿ ಹೇಳಿ ಕಳುಹಿಸುತ್ತಾಳೆ. ತವರಿನ ಕರೆಗೆ ತವಕಿಸುವುದನ್ನು ನಮ್ಮ ಜನಪದ ಕವಿಗಳು ಸುಂದವಾಗಿ ಬಣ್ಣಿಸುವುದನ್ನು ಜನಪದ ಸಾಹಿತ್ಯದಲ್ಲಿ ಕಾಣಬಹುದು.

ಬಳೆಗಾರ : ಬಳೀ ಬೇಕಮ್ಮಾ ಬಳೀ..... ಸಾಣೆಬಳೀ, ಸಣ್ಣಕ್ಕಿಬಳೀ, ಮುತ್ತೈದೆ ಬಳೀ, ಬಳಿ ಬೇಕಮ್ಮಾ ಬಳೀ.........

ಹೆಣ್ಣು : ಈಗ ನಂಗೇನು ಬಳಿ ಬ್ಯಾಡ..... ನನ್ನ ತವರೂರ್ಗೋಗಪ್ಪಾ ಬಳೆಗಾರಾ..... ಬೇಕಾದಷ್ಟು ತಕ್ಕತಾರೆ........

ಬಳೆಗಾರ : ಅಂಗಾರೆ ನೀನು ಬಳೀನ ಇವತ್ತು ತೊಟ್ಕಳಕಿಲ್ವವ್ವಾ?

ಹೆಣ್ಣು : ಈವತ್ತು ತೊಟ್ಕಳಕಿಲ್ಲ.... ಅಂತ ಯಾಳಿದ್ನಲ್ಲಾ.

ಬಳೆಗಾರ : ಯಾಕವ್ವ ಈವತ್ತು ಒಂದು ತರ್ವಾಗಿದ್ದರ್ಯಲ್ಲಾ?

ಹೆಣ್ಣು : ಬಳಗಾರ ಶೆಟ್ಟಿ ಊರೀಗೆ ಬಂದವರೆ ನಾಡಿಂದ ಅಣ್ಣ ಬರಲಿಲ್ಲ!
ನಾಡಿಂದ ಅಣ್ಣ ಬರಲಿಲ್ಲ. ಈ ನಾಡಿನಲ್ಲಿಂತಾ ಬಳೆಯಿಲ್ಲಾ!
ಈ ನಾಡಿನಲ್ಲಿಂತ ಬಳೆಯಿಲ್ಲಾ ಬಳೆಗಾರ ಹೋಗಯ್ಯ ನಮ್ಮ
ತೌರೀಗೆ॥

ಬಳೆಗಾರ : ಬಳಿ ಚೆನ್ನಾಗೈತಿ ಅಂತೀರಾ ಮತ್ತೆ ಬ್ಯಾಡ ಅಂತೀರ ಯಾಕವ್ವಾ?

ಹೆಣ್ಣು : ಅದು ಕಾಣೋ ನಮ್ಮ ತವರೂರಪ್ಪಾನ ಮನೆ
ನಾನು ಹಬ್ಬಾಕೆ ಬಂದಾಗ ತೊಡುವೇನು
ಬಳೆಗಾರಯ್ಯ ಅಂಗಾರೆ ನೀನು ವೋಯ್ತೀಯಾ ಎಂಗೆ?

ಬಳೆಗಾರ : ವೋಗ್ಬೋದು...... ಆದ್ರ....
ನಿನ್ನ ತವರೂರ ನಾನೇನು ಬಲ್ಲೇನು?
ಹೆಸರ್ಹೇಳೆ ಅದರ ಕುರುವ್ಹೇಳೆ।
ನಿನ್ನ ಹೆಸರ್ಹೇಳೆ ಅದರ ಕುರುವ್ಹೇಳೆ॥

ಹೆಣ್ಣು : ಅಂಚಿನ ಮನೆಕಾಣೋ, ಕಂಚಿನ ಕದ ಕಾಣೋ।
ಆಲೆ ಆಡುತಾವೆ, ಗಾಣ ತಿರುಗುತಾವೆ।
ಗಾಣ ತಿರುಗುತಾವೆ, ಜೋಡೆರಡು ದಾಯನಾಡುತಾವೆ।
ನನ್ನ ತವರೂರ ಮುಂದೆ ಬಾಳೇಯ ವನಗಾಳು।
ರುದ್ರಾಕ್ಷಿ ಮರ ಕಾಣೋ।
ರುದ್ರಾಕ್ಷಿಮರ ಕುರು ಕಾಣೋ। ಬಳೆಗಾರ
ಹೋಗಯ್ಯ ನನ್ನ ತವರೀಗೆ॥

ಹೆಣ್ಣು : ಬಳೆಗಾರಣ್ಣ ಬಾಗಿಲೀಗೆ ಬಂದಾನು।
ನೀನು ಬಾಗಿ ಬಾರೋ ಬಳೆಗಾರ।
ನೀನು ಬಾಗಿ ಬಾರೋ ಬಳೆಗಾರ।

ಹೆಣ್ಣು ೧ : ಯಾಕ ಅಕ್ಕಯ್ಯ ಬಳಿ ತೊಟ್ಕನಿಲ್ಲ?

ಹೆಣ್ಣು ೨ : ತೊಟ್ಕ ಬ್ಯಾಕು......

ಹೆಣ್ಣು ೧ : ಯಾಕಕ್ಕಯ್ಯ ಒಂದು ತರವಾಗಿದ್ದಯಿ. ಚಿಂತಿ ಮಾಡುವಾಗ ಕಾಣ್ತಯಿ.

ಹೆಣ್ಣು ೨ : ಮನ್ಸ ಅಂದ ಮ್ಯಾಕೆ ಚಿಂತಿ ಆಗದೇ ಬುಡು ಮತ್ತ.

ಹೆಣ್ಣು ೧ : ಅದ್ಯಾನ ನಿನ್ನ ಮನಸ್ನಾಗಿರ ದುಃಖ, ತಂಗಿಸೊಸಿ ಯೇಳ್ಬಾರ್ದಾ?

ಹೆಣ್ಣು ೨ : ಹೂಂಕನವ್ವ ನಮ್ಮ ಮನಸ್ನಾಗಿರವ್ನ ಬ್ಯಾರೆವ್ನಿಗೆ ಯೇಳಿದ್ರೆ ವೂಸಿ ಸಮಾಧಾನವಲ್ಲವ್ವ.

ಹೆಣ್ಣು ೧ : ಮತ್ ಅದ್ಯಾನ ಯೇಳ್ಬಾರ್ದಾ?

ಹೆಣ್ಣು ೨ : ಬಂದೇ ಬರ್ತಾವ್ನೇ.... ನಮ್ಮವ್ವೆಯೂ ಅಷ್ಟೆ...... ನಂಗೇ ಯೋಸ್ನೆ......
ನನ್ನನ್ನ ನೆನ್ಕಂಡು ಅಳ್ತಿರ್ತವ್ಳೇ.......
ತಾಯಿ ನನ್ನ - ಮಗಳ ಯಾವಾಗ ನೆನೆವಾಳು
ಉಂಬಾಗ ಮುಡಿಯುವಾಗ । ತಾಯವ್ವ।
ಹಿತ್ತಲ ಹೂ ಕುಯ್ವಾಗ ಗೋಳಿಡುವಾಳು॥

ಹೆಣ್ಣು ೧ : (ಸ್ವಗತ) ಅಕ್ಕಪಕ್ಕದವ್ರು ಬೀದಿ ಊರ್ನವ್ರು ಆಡ್ಕಳ್ವಂಗ ಮಾಡ್ಬೇಡಾ ಅಣ್ಣ ಬ್ಯಾಗ ಬಂದುಬಿಡು. ನಾಗರಪಂಚಮಿಗೆ ನನ್ನನೂ ಕರ್ಕಂಡೋಗು, ಬ್ಯಾಗ್ನ ಬಂದುಬಿಡಣ್ಣ.

ಒಡಹುಟ್ಟು ಒಂದು ಜನುಮ ಕಡೆಗೆ ಜನುಮಗಳಿಲ್ಲ।
ಕಡುಕೋಪ ಬೇಡ ಅಣ್ಣಯ್ಯ । ನಿನ್ನ ತಂಗಿ
ಒಡಹುಟ್ಟು ನೆನೆದು ಅಳುವಾಳು ॥

ಗಂಡು : ಅಣ್ಣ ಬರತಾನಂತ ಅಂಗಳಕ ಥಳಿಕೊಟ್ಟ । ರನ್ನ ಬಚ್ಚಲಕ
ಮಣೆ ಹಾಕಿ ಕೇಳೇನ। ಥಣಗ್ಗಾರಿಲ್ಲ ತವರವರು॥

ಹೆಣ್ಣು : ನೀ ಯಾಸ ಅಣ್ಣ ಬರ್ತವ್ನೇ ಅಂತಾ ಎಲ್ಲ ಆಣೆ ಮಾಡ್ಕಂಡು ಕೂತ್ಕಂಡಿದ್ದಾಯಿ. ನಾನು ಇಂಗೇ ಆಣ ಮಾಡ್ಕಂಡು ಕುಂತ್ಕಳವ್ಳೇ ನಿನ್ನಾಗೆ ಅಂಬಲ್ಲವ್ವ.

ಹೆಣ್ಣು : ಇನ್ನೂ ಬರ್ನೆ ಇಲ್ಲ ಅಣ್ಣ ಯಾಕಿಂಗ್ ಮಾಡ್ದಾ? ಈ ವರ್ಸ ವರ್ಸೊರ್ಸಾ ನಾನು ತವರ್ನಾಗ ಮಾಡ್ದ ನಾಗಪಂಚಮಿ ಗೆಪ್ತಿ ಬರ್ತೈತಿ.

ಹೆಣ್ಣು : ಅಂಗಾರೆ ನಿಮ್ಮಣ್ಣ ಅಂತವ್ನಾ.....?

ಹೆಣ್ಣು : ಯೇನೂ ಯೋಸ್ನೆ ಮಾಡ್ಬ್ಯಾಡ ಅಕ್ಕ ನಿಮ್ಮ ಅಣ್ಣ ಬಂದು ಬುಡ್ತಾನೆ.

ಹೆಣ್ಣು : ಅಂಗಂದೆಯಾ.....?

ಹೆಣ್ಣು : ಹ್ಞೂಂ......

ಹೆಣ್ಣು : ಊರು ಬಿಟ್ಟು ಮೂರು ಹರದಾರಿ।
ಹತ್ತಿದ್ದಳ್ಳಿ ಸನೇ ಇಲ್ಲ।
ತಾಯಿ ಹೊಟ್ಯಾಗ ಆಗಿಲ್ವೇನ ಬ್ಯಾರಿ ॥ಸುವ್ವನಾರಿ॥ ॥೨॥

ನನ್ನ ಕಳುವಿ ತಿಂಗಳಾಯಿತು
ಕಲ್ಲ ವೊಗದಂಗ ಅಲ್ಲೆ ಕುಂತ್ರಿ।
ತೂರತಾರ ನಿಮ್ಮನ್ನ ನೆರೆಹೊರೀ ॥ಸುವ್ವಾನಾರಿ॥ ॥೩॥

ಅಂಗಿಯ ಮೇಲಂಗಿ ಸುಂಗರದ ಮೇಲುಕಟ್ಟು
ಎಲ್ಲಿಗೆ ತಮ್ಮಯ್ಯ ನಿನ್ನ ಪಯಣ । ಸಂಕೀಹಳ್ಳಿ॥
ಮಲ್ಲಿಗಕ್ಕಯ್ನ ಕರಿಯಾಕೆ।

ಧ್ವನಿ : ಅಣ್ಣ ತಂಗಿ ಮಾತಾಡಿಕೊಂಡು।
ಅತ್ತಿ ಮಾವನ ಕೇಳ್ತಾರ
ನಾಳೆ ನಮ್ಮ ತಂಗೀನ ಕಳವರಿ ॥ಸುವ್ವನಾರಿ॥ ॥೧॥

ಧ್ವನಿ : ಅತ್ತಿಮಾವ ಕೂಡಿಕೊಂಡು।
ಸಂತಿ ಪ್ಯಾಟಿ ಮಾಡ್ಯಾರ॥
ತಗಸ್ಯಾರವರು ದಂಡಿವನ ಸೀರೆ॥ ॥೧॥

ಚೌಪದದಲ್ಲಿ ಚಂದ್ರಕಾಳಿ।
ರೂಪದಲ್ಲಿ ರುದ್ರಗಂಟಿ।
ರಂಬೆರುಡುವ ನಿಂಚಿ ಪಪ್ಪಳಿ ಸೀರಿ ॥೬॥

ರೊಟ್ಟಿ ಬುತ್ತಿ ಮಾಡಿಕೊಂಡು।
ಎತ್ತಿ ಮ್ಯಾಲ ಹೇರಿಕೊಂಡು।
ನಾರಿ ಉಟ್ಯಾಳವ್ವ ಕರಿಸೀರಿ॥ ॥೭॥

ಅಗಸಿ ಹೊಲಾ ಕಂಡಾಳ
ಅವಸರ ಮಾಡಣ್ಣ ಎತ್ತ
ಯಾವಾಗ ನೋಡೆನವ್ವ ತಾಯಿ ಮಾರಿ ॥ಸುವ್ವನಾರಿ॥ ॥೮॥

ತಂಗೀಯ ಕರಕೊಂಡು ಕೆಂದೀನ ಹೊಡಕೊಂಡು
ತಂಗೀ ಮಕ್ಕಳಿಗೆ ಬಿಸುಲೆಂದು। ತಮ್ಮಯ್ಯ
ವಲ್ಲಿ ಮುಂಜೆರಗ ಹಿಡದ್‌ನೇ॥

ಹೆಣ್ಣು : ಹೊತ್ಮುಳುಗಿ ಕತ್ತಲಾಯ್ತು।
ದೀಪ ಹಚ್ಚು ವ್ಯಾಳ್ಯಾ ಆಯ್ತು
ಎತ್ತು ಹೊಡಿ ಲಗು ಬಗಿ॥ ॥೧॥

ಅತ್ತೀಯ ಮನಿ ಸೊಸ್ತೇರ।
ತೌರು ಮನಿ ಹೆಣ್ಣು ಮಕ್ಕಳ।
ಕೂಡ್ಯರವ್ವ ನೀರ ಹೊಳಿಯಾಗ ॥ಸುವ್ವನಾರಿ॥ ॥೨॥

ಹೆಣ್ಣು : ನಂದು ಹ್ಯಾಂಗ ನಿಂದು ಹ್ಯಾಂಗ।
ಅಂದಾಳ್ಹಾಂಗ ಚಂದಾಳ್ಹಾಂಗ।
ಮಾತಾಡ್ಯಾರವರು ಅತ್ತಿಮನಿ ಸುದ್ದಿ ॥ಸುವ್ವನಾರಿ॥ ॥೩॥

ಅತ್ತಿ ಹಾಳ ಒತ್ತಿದ ಬೆಂಕಿ।
ನಾದಿನಿ ಹಾಳು ನಾಯಿ ಹಂಗ।
ಮಾವ ನನ್ನ ಮ್ಯಾಲ ಮಾವಚಾರಿ॥ಸುವ್ವನಾರಿ॥ ॥೪॥

ಗುಂಡು : ಕರಿಯ ಸೀರಿ ಗೆರೆಯ ಕುಬಸ।
ಕನ್ನೋಡಿ ಬಳಿಯ ಕೈಯೊಳಗ ಕೊಂಬ್ರಿ।
ಹೆಣ್ಣು ಮಕ್ಕಳ ಹಬ್ಬ ಏನು ಚಂದ। ॥೧॥

ವಾರಿಗಿ ಗೆಳತೇರು ಕೂಡಿಕೊಂಡು
ಏಣಿಗುಂಟ ಬರುವಾಗ।
ಇನ್ನು ಕಟ್ಟಲಿಲ್ಲ ಜೋಕಾಲಿ। ॥೨॥

ರಾಯರಿಲ್ಲದ ಊರಾಗ।
ರಾಜ ಮಾಡಿ ಆಡೇವಂದ್ರ।
ಇನ್ನು ಕಟ್ಟಲಿಲ್ಲ ಜೋಕಾಲಿ ॥ಸುವ್ವನಾರಿ॥ ॥೩॥

ಜೋಕಾಲೋಗಿ ಪಾಕಾಲಾಯ್ತು।
ಪೋಲೀಸಗೌಡ ಊರಾಗಿಲ್ಲ।
ಹಗ್ಗ ಹರದರ ನಮ್ಮ ಜೀವ ಜಾಡಿ॥ ॥೪॥

ಬಾಗುತ ಬಳುಕುತ ಬಾಳಿ ಕಾಯೆಣಿಸುತ
ಬಾಳೀಯ ಗೊನೆಯ ಮುರಿಯುತ। ನಾ ಬಂದೆ
ಯಾದವತಿ ನನ್ ತೌರೀಗೆ॥ ॥೧॥

ತುಂಬುತ ತುಳುಕೂತ ನಿಂಬೆ ಕಾಯೆಣಿಸುತ
ನಿಂಬೇಯ ಗೊನೆಯ ಮುರಿಯೂತ। ನಾ ಬಂದೆ
ಚಂದ್ರವತಿ ನನ್ ತೌರೀಗೆ॥ ॥೨॥

ಹೆತ್ತಮ್ಮನರಮನೆ ಮತ್ತೆಲ್ಲಯಿತೊ ಶಿವನೆ
ಕಿತ್ತಲಿ ಹಾಕಯಿತೆ ಎಡಗಡೆ। ಹರ್ತಿಯ
ಮತ್ತಯಿತೆ ತೌರ ಅರಮನೆ॥ ॥೩॥

ತಾಯಮ್ಮನರ ಮಾನೆ ಮಾವಲ್ಲಿಯಿತೊ ಶಿವನೆ।
ಬಾಳೆ ಹಾಕಯಿತೆ ಎಡಗಡೆಗೆ। ಹರ್ತಿಯ
ಅಲ್ಲಯಿತೆ ತಾಯಮ್ನ ಅರಮನೆ॥ ॥೪॥

ಹೊತ್ತು ಮುಳುಗಿದೋ ಸುತ್ತ ಬೈಗಾದೋ
ಹಚ್ಚಮ್ಮ ತಾಯಿ ಜಗಜ್ಯೋತಿ। ಅಣ್ಣನ ಮನೆಯ
ಎತ್ತುಗೊಂದಿಗೆ ತೊಡಕ್ಯಾವು॥ ॥೫॥

ಸೂರ್ಯ ಮುಳಿಗ್ಯಾನು ದೂರ ಬೈಗಾದೊ
ಹೂಡಮ್ಮ ತಾಯಿ ಜಗಜ್ಯೋತಿ। ಅಣ್ಣನ ಮನೆಯ
ಹೋರಿಯೊಂದಿಗೆ ತೊಡಕ್ಯಾವು॥ ॥೬॥

ಬಳೆಗಾರ : ಬಳೇ ಬೇಕಮ್ಮಾ ಬಳೇ...... ಸಾಣೆ ಬಳೇ, ಗೌರಿಬಳೆ, ಸಣ್ಣಕ್ಕಿ ಬಳೆ, ಮುತ್ತೈದೆ ಬಳೆ....ಬಳೆ ಬೇಕಮ್ಮಾ ಬಳೇ..... ತಾಯವ್ರು, ತವರ ಒಂದು ಬಿಟ್ರೆ.

ಹೆಣ್ಣು : ಬಾಪ್ಪಾ.... ಬಾ..... ಬಳೆಗಾರಪ್ಪಾ.... ಬಳೆ ತೊಡು ಬಾ. ನಮ್ಮಣ್ಣಯ್ಯ ತೊಡಿಸ್ತಾನೆ....ತೊಡು.

(ಬಳೆ ತೊಡುವಾಗ ಸೀನುವರು. ಆಗ ಆಕೆ)

ಬಳೆಯ ತೊಡುವಾಗ ಬಲಗಡೆ ಸೀತೋರ್‍ಯಾರೆ।
ಬಿಡಯ್ಯಾ ನನ್ನ ಬಲಗಯ್ಯಾ
ಬಿಡಯ್ಯಾ ನನ್ನ ಬಲಗಯ್ಯಾ
ಬಿಡಯ್ಯಾ ನನ್ನ ಬಲಗೈಯ್ಯ। ಬಳೆಗಾರಶೆಟ್ಟಿ
ನಾನು ಬಳಗಾವ ಕೇಳಿ ಬರುತೀನಿ।

ಬಳೆಗಾರ : ಆಗ್ಲವ್ವ

ಹೆಣ್ಣು : ಹೋಗ್ಲಿ ಈಗ ತೊಡು, ಬಲಗಡೆ ಸೀತ್ರೆ ಯಾನೂ ಇಲ್ಲ....

(ಮತ್ತೆ ಎಡಗಡೆ ಸೀನು)

ಬಳೆಯ ತೊಡುವಾಗ ಎಡಗಡೆ ಸೀತೋರ್‍ಯಾರೆ
ಬಿಡಯ್ಯ ನನ್ನ ಎಡಗಯ್ಯ।
ಬಿಡಯ್ಯ ನನ್ನ ಎಡಗಯ್ಯ। ನಾನು
ಬಳಗಾವ ಕೇಳಿ ಬರುತ್ತೀನಿ।।

ತಮ್ಮ : ನೆನ್ನೆ ತೊಟ್ಟ ಬಳೆ ಇಂದು ಇಲ್ಲವಲ್ಲೆ
ಎಲ್ಲಾಡಿ ಕಳೆದಿ ಹಿರೆಯಕ್ಕ।
ನೀನು ಎಲ್ಲಾಡಿ ಕಳೆದಿ ಹಿರಿಯಕ್ಕ।
ಪಟ್ಟೆ ಮಂಚದ ಮೇಲೆ ಪಗಡ್ಡೇಯನಾಡುವಾಗ।
ಚಿನ್ನಾಟವಾಡಿ ಬಳೆಯೊಡೆದು
ಚಿನ್ನಾಟವಾಡಿ ಬಳೆಯೊಡೆದೊ - ಕಿರಿತಮ್ಮ।
ನೀನು ಬಳೆಯ ತೊಡಿಸಪ್ಪ ಬಹುಬೇಗ।।

ತಮ್ಮ : ತೊಟ್ಕಕ್ಕ....

ಹೆಣ್ಣು ೧ : ಆಗ್ಲಪ್ಪ

ಹೆಣ್ಣು ೨ : ಅಂತೂ ಊರಿಗೆ ಬಂದ್ಯಲ್ಲ ತಂಗಿ. ನಾನು ಊರಿಗೆ ಬಂದೀವ್ನಿ ನಾಗರಪಂಚಮಿಗೆ ಬಳೆ ತೊಟ್ಟಿದ್ದಯಿ ಹೊಸ ಹೊಸವು.

ಹೆಣ್ಣು ೧ : ಅಂತೂ ತವರಿಗೆ ಕರಿ ಬರ್‍ನಿಲ್ಲ ಅಂತ ಒಣ್ಕಾಡಿತ್ತಿದ್ದಿ, ಅಣ್ಣ ಬಂದು ಕರ್‍ಕಂಬಂದ್ನಲ್ಲಾ.

ಹೆಣ್ಣು ೨ : ಹೂಂ ನಮ್ಮ ಅವ್ವ ಬುಡಬೇಕಲ್ಲಾ.... ಅಣ್ಣ ನಾಗರಪಂಚಮಿಗೆ ಕರೆತಂದೇ ಬುಟ್ಟ. ಬಳೇನ ಚಿಕ್ಕತಮ್ಮ ತೊಡ್ಸೇಬುಟ್ಟ, ಅಪ್ಪ ಸೀರೆ ತಗೆದೇ ಬುಟ್ರು.

ಹೆಣ್ಣು ೧ : ಏಟೇ ಆದ್ರೂ ಅದು ನನ್ನ ತವ್ರಲ್ವಾ?
ಯಾರಿದ್ದರೇನೆ ತಾಯಮ್ಮಿಲ್ಲದ ಮೇಲೆ।
ನೂರೊಂದು ಸೌದೆ ಒಲೆಗೊಟ್ಟಿ। ಉರುಬಿದರೆ।
ಜ್ಯೋತಿಯಮ್ಮನಂತ ಬೆಳಕುಂಟೆ।
ಅಕ್ಕ ಬದುಕಿದರೇನೆ ಕಕ್ಕ ಕದವಿದರೇನೆ।
ಲಕಪತಿಯೆಂಬ ತವರೂರು।
ಲಕಪತಿಯೆಂಬ ತವರೂರು-ಬದುಕಿದರೆ
ನಮ್ಮಾರಿಗೊಜ್ಜುರುವ ಬಿಗಿಸ್ಯಾರು।।

✳

# ತಾಳ ತರಂಗ

ನಿರೂಪಕ ೧ : ನಾದದ ಪ್ರವಾಹದ ನಿಶ್ಚಿತ ಚಲನೆ ಗುರುತಿಸಲು ತಾಳ ಬೇಕೇ ಬೇಕು. ಸಂಗೀತಕ್ಕೆ ನಾದವು ಉಸಿರಾದರೆ ತಾಳ ಅದರ ದೇಹವಿದ್ದಂತೆ "ಯಾವಾತನಿಗೆ ತಾಳ ಗೊತ್ತಿಲ್ಲವೋ ಅವನು ಗಾಯಕನೂ ಆಗಲಾರ, ವಾದಕನೂ ಆಗಲಾರ" ಎಂದು ಭರತ ಹೇಳಿದ್ದಾನೆ. ಗಾಯನ, ವಾದನ, ನೃತ್ಯಗಳಲ್ಲಿ ಈ ತಾಳಗಳ ಪಾತ್ರ ಹಿರಿದು ಭರತನಾಟ್ಯ ಶಾಸ್ತ್ರದಲ್ಲಿ "ತಾಲವೆಂಬುದು ಘನವಾದ್ಯ, ಅದು ಕಾಲವನ್ನು ಅವಲಂಬಿಸಿದೆ."

ಧ್ವನಿ : ಅಂಧಕಾಸುರನ ಸಂಹಾರವಾದ ಮೇಲೆ ಶಿವನು ಸಂತೋಷದಿಂದ ನೃತ್ಯ ಮಾಡಿದ. ಆ ನೃತ್ಯಕ್ಕೆ ಬ್ರಹ್ಮ ತಾಳವಾದ್ಯ ನುಡಿಸಿದ ನೃತ್ಯ ಮಂದಿರದಲ್ಲಿ ಇಬ್ಬರು ತಾಳಧಾರಿಗಳಿರಬೇಕೆಂದು ಸಿಂಹಭೂಪಾಲ ಹೇಳಿದ್ದಾನೆ. ಪ್ರಾಚೀನ ಕನ್ನಡ ಕೃತಿಗಳಲ್ಲಿ ತಾಳದ ಉಲ್ಲೇಖ ವಿಪುಲವಾಗಿವೆ. ವಡ್ಡಾರಾಧನೆ ಮೋಹನ ತರಂಗಿಣಿ, ಪದ್ಮರಾಜ ಪುರಾಣ, ಚನ್ನಬಸವ ಪುರಾಣ, ಸಿಂಗಿರಾಜ ಪುರಾಣ ಸಿದ್ಧರಾಮ ಪುರಾಣ ಮುಂತಾದುವುಗಳಲ್ಲಿ ಉಲ್ಲೇಖಗಳು ಬಂದಿವೆ.

ನಿರೂಪಕ ೨ : ಭಾರತೀಯ ವಾದ್ಯಗಳು ವೇದಗಳಷ್ಟು ಪ್ರಾಚೀನ. ಈಗಿನ ಶಿಷ್ಟ ವಾದ್ಯಗಳು ಜಾನಪದ ಮೂಲದಿಂದಲೇ ಬಂದುವು. ಹಳ್ಳಿಗಳಲ್ಲಿ ದೇವಾಲಯ ಜಾತ್ರೆ ಮುಂತಾದುವುಗಳಿಗೆ ಈ ವಾದ್ಯಗಳು ಬೇಕೇಬೇಕು. ತಾಳವಿಲ್ಲದೆ ಮೇಳವಿಲ್ಲ. ಮೇಳಕ್ಕೆ ತಾಳವೇ ಮೆರಗು. ಕೆಲವು ಜಾನಪದ ಕುಣಿತ ಹಾಡುಗಳಲ್ಲಿ ತಾಳಗಳ ವೈವಿಧ್ಯತೆಯನ್ನು ಗುರುತಿಸುವ ಪ್ರಯತ್ನವೇ ಈ ತಾಳ-ತರಂಗ.

ಧ್ವನಿ : ತಾಳ ಚರ್ಮದ್ದಿರಬಹುದು, ಮಣ್ಣಿನದಿರಬಹುದು, ಲೋಹದ್ದಿರ- ಬಹುದು ಮರದದ್ದಿರಬಹುದು, ಮೇಳಕ್ಕೆ ಯಾವುದಾದರೂ ಮೆರುಗು ಈಗ ಕೆಲವು ಚರ್ಮವಾದ್ಯಗಳ ತಾಳ ವೈಶಿಷ್ಟ್ಯಗಳನ್ನು ಕೇಳೋಣ.

(ವಾದ್ಯದ ವಾದನ)

ಧ್ವನಿ : ಇದು ಅರೆವಾದ್ಯ ಅಥವಾ ಉರುಮೆ. ಮಾರಿದೇವಾಲಯದ ಉತ್ಸವದಲ್ಲಿ, ಮಾರಮ್ಮನನ್ನು ಹೊತ್ತು ಊರೂರು ಅಲೆಯುವ ಹೆಂಗಸರು ಗಂಡಸರು ಇದನ್ನು

ಬಾರಿಸುವರು. ದೊಡ್ಡಬಳ್ಳಾಪುರ ತಾಲ್ಲೂಕು ಆದ್ರಿಪುರ ಗ್ರಾಮದ ಬೈಲ ಹನುಮಂತಪ್ಪ ಹಾಗೂ ಚನ್ನಯ್ಯ ಅವರು ನುಡಿಸುತ್ತಾರೆ. ಇದರಲ್ಲಿ ಹಿಂದೂಸ್ಥಾನಿ ಪದ್ಧತಿಯ 'ಕೆಹರವಾ' 'ದಾದರಾ'ದ ವಿವಿಧ ಪ್ರಕಾರದ ತಾಳಗಳಿವೆ.

(ವಾದ್ಯ)

ಧ್ವನಿ : ಇದು ಕರಡಿ ಮೇಳ. ಉತ್ತರ ಕರ್ನಾಟಕದಲ್ಲಿ ಕರಡಿ ಮಜಲ್, ದೇವರ ಉತ್ಸವ, ಜಾತ್ರೆ, ಧಾರ್ಮಿಕ ಗುರುಗಳನ್ನು ಸ್ವಾಗತಿಸಲು ನುಡಿಸುತ್ತಾರೆ. ಇದರಲ್ಲಿ ಆದಿತಾಳ, ಜಂಪೇತಾಳ, ಚಾಲು ಬಾರಿಸುವರು. ಇದರಲ್ಲಿ ಒಂದ್ಹೆಜ್ಜೆ ಎರಡ್ಹೆಜ್ಜೆ, ಮೂರ್ಹೆಜ್ಜೆ, ಮಂಡಲ ಕುಣಿತ ಮುಂತಾದ ಗತ್ತುಗಳಿವೆ. ಗುರುಲಿಂಗಪ್ಪ ಕರಡಿ ಮತ್ತು ಸಂಗಡಿಗರಿಂದ ವಿವಿಧ ಗತ್ತುಗಳು. ಶಾಸ್ತ್ರೀಯ ಸಂಗೀತದಲ್ಲಿ ತನಿ ತಬಲ ನುಡಿಸುವಾಗ ಲೆಹರಾ ಇಟ್ಟುಕೊಳ್ತಾರೆ. ತಾಳದ ಆವರ್ತಕ್ಕೆ ತಕ್ಕಂತೆ ಒಂದು ಸ್ವರಗುಚ್ಛ ಸಿದ್ಧಪಡಿಸಿ ಸ್ವರದ ಆವರ್ತಕ್ಕೆ ತಕ್ಕಾಗಿ ತಬಲಾ ನುಡಿಸುತ್ತಾರೆ ಅದೇ ರೀತಿ ಕರಡೀ ಮಜಲ್‌ನಲ್ಲಿಯೂ ಇರುತ್ತದೆ. ಇದರಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಪದ್ಧತಿಯ ವಿಲಂಬಿತ್ ತೀನ್‌ತಾಳ್ ಗುರುತಿಸಬಹುದು

(ಕರಡಿಮೇಳ)

ಧ್ವನಿ : ಉತ್ತರಕನ್ನಡ ಜಿಲ್ಲೆಯ ಸಿದ್ಧಿ ಜನಾಂಗದ ಗೋಪುದುರ್ಗಾ ಸಿದ್ಧಿ ನುಡಿಸುವ ಡುಮಾಮಿ- ತ್ರಿಶ್ರದಿಂದ ಆರಂಭವಾಗಿ ಚತುರಶ್ರ ಗತಿಯೊಳಗೆ ಹೋಗುತ್ತೆ ಮತ್ತೆ ತ್ರಿಶ್ರಕ್ಕೆ ಬರುತ್ತೆ.

ಧ್ವನಿ : ಉತ್ತರ ಕನ್ನಡ ಜಿಲ್ಲೆಯ ಮತ್ತೊಂದು ವಿಶೇಷ ಗುಮಟೆ ಕುಣಿತ. ಇದಕ್ಕೆ ಗುಮಟೆಪಾಂಗ್ ಎನ್ನುವರು. ಇದು ಮಣ್ಣಿನಿಂದ ತಯಾರಾದ ಕಲಶ. ಹೂಜಿಯಾಕಾರವಾಗದ್ದೂ ಅಗಲವಾದ ಬಾಯಿಗೆ ಚಾಪ ಎಂಬ ಪ್ರಾಣಿಯ ಚರ್ಮವನ್ನು ಹೊದಿಸಿರುತ್ತಾರೆ. ಇದನ್ನು ಹಾಲಕ್ಕಿಯವರು ಸುಗ್ಗಿ ಕುಣಿತದಲ್ಲಿ ಉಪಯೋಗಿಸುವರು. ಗುಮಟೆ ವಾದ್ಯವನ್ನು ಪುಗಡಿ ನೃತ್ಯದಲ್ಲೂ ಉಪಯೋಗಿಸುವರು. ಇದು ಪುಗಡಿ ನೃತ್ಯದ ಒಂದು ಅಂಶ.

ಬಾಬು ಸಿದ್ದೀಗೌಡ ಹಾಗೂ ಸಂಗಡಿಗರಿಂದ ಪುಗುಡಿ ನೃತ್ಯ ಹಾಗೂ ಸಂಗೀತ ಇದರಲ್ಲಿ ಚತುರಶ್ರ ನಡೆಯನ್ನು ಕಾಣಬಹುದು.

ಧ್ವನಿ : ಡೊಳ್ಳು, ಮರ ಮತ್ತು ಚರ್ಮದಿಂದ ಮಾಡಿದ ದೊಡ್ಡ ಪಿಪಾಯಿ ಆಕಾರದ ವಾದ್ಯ. ಇದು ಕುರಿಯ ಚರ್ಮದಿಂದ ಮಾಡಿರುತ್ತದೆ.

ಧಾರವಾಡ ಜಿಲ್ಲೆಯ ಮಾನಿಕಟ್ಟಿಯ ಬೋರದಪ್ಪ ಮಲಪ್ಪ ಮುಖರಿ ಮತ್ತು ಸಂಗಡಿಗರಿಂದ. ಇದರಲ್ಲಿ ಚತುರಶ್ರ ಮತ್ತು ತ್ರಿಶ್ರಗತಿಗಳನ್ನು ಗಮನಿಸಬಹುದು.

ಧ್ವನಿ : ಗೊರವರ ಕುಣತದಲ್ಲಿ ಡಮರುಗವನ್ನು ಉಪಯೋಗಿಸುತ್ತಾರೆ. ಗೊರವರು ಮೈಲಾರಲಿಂಗನ ಕುರಿತು ಹಾಡು ಹಾಡುತ್ತಾ ಕುಣಿಯುವರು. ನಾಲೈದು ಗೊರವಯ್ಯಗಳು ವಿಶಿಷ್ಟ ತಾಳ ಲಯಗಳೊಂದಿಗೆ ಡಮರುಗದೊಡನೆ ಸ್ತುತಿಪದ ಹಾಡಿ ಕುಣಿಯುವ ದೃಶ್ಯ ರುದ್ರಸ್ವರೂಪ ತಾಳುತ್ತವೆ. ಢಮರುಗವ ಜೊತೆಗೆ ಪಿಳ್ಳಂಗೋವಿ ಊದಿದಾಗ ಕಿವಿಗೆ ಮತ್ತಷ್ಟು ಇಂಪು. ಚನ್ನಪಟ್ಟಣ ತಾಲ್ಲೂಕಿನ ಗೊರವರ ಕೆಂಚಮಲ್ಲಯ್ಯ ಹಾಗೂ ಸಂಗಡಿಗರ ಈ ಹಾಡಿನಲ್ಲಿ ತ್ರಿಶ್ರಗತಿ, ಮಿಶ್ರಗತಿ ಛಾಯೆಯನ್ನು ಗುರುತಿಸಬಹುದು.

ಧ್ವನಿ : ಹಬ್ಬ, ಹರಿದಿನ ಜಾತ್ರೆಗಳಲ್ಲಿ ಕುಣಿಯುವ ವೀರಗಾಸೆಯಲ್ಲಿ ಕರಡಿ, ಚಮಾಳ ವಾದ್ಯದ ಗತ್ತಿಗೆ ಕುಣಿಯುತ್ತಾ ಮಧ್ಯೆ ಮಧ್ಯೆ ವೀರಭದ್ರನ ಒಡಪು ಹೇಳುವರು. ಈ ಸಂದರ್ಭದಲ್ಲಿ ಖಂಡ, ಚತುರಶ್ರ, ತ್ರಿಶ್ರ ಗತಿಗಳಲ್ಲಿ ತಾಳವನ್ನು ನುಡಿಸುತ್ತಾರೆ.

ಚಿಕ್ಕನಾಯಕನಹಳ್ಳಿ ತಾಲ್ಲೂಕು ದೊಡ್ಡ ಬೀರನ ಕೆರೆಯ ಡಿ.ಎಸ್. ನಾಗಭೂಷಣ ಹಾಗೂ ಸಂಗಡಿಗರಿಂದ

ಧ್ವನಿ : ಹಲಗೆ ಅಥವಾ ತಮಟೆಯನ್ನು ಹಳ್ಳಿಯ ತೇರು, ಉತ್ಸವಗಳಲ್ಲಿ ಬಾರಿಸುವರು. ಹಲಗೆ ಬಾರಿಸುವಲ್ಲಿ ದೀನಬಾಬು, ಹನುಮಂತನಗತ್ತು, ಕುದುರೆಗತ್ತು, ಗವಾರ್ ಹೆಜ್ಜೆ, ನವಬತ್ತು, ದೇವರಗತ್ತು ಖುತಾಲ, ಚಿತ್ರಕೂಟ ಮೊದಲಾದ ಗತ್ತುಗಳಿವೆ. ಇದು ಗಂಗಪ್ಪ ಅವರು ಬಾರಿಸಿದ ತಮಟೆ ಇದು ಚತುರಶ್ರ ತ್ರಿಶ್ರಗತಿಯಲ್ಲಿದೆ.

ಧ್ವನಿ : ಹಿಂದೆ ದೇವಸ್ಥಾನದಲ್ಲಿ ಹಾಗೂ ಯುದ್ಧದ ಸಮಯದಲ್ಲಿ ವೈರಿಗಳು ಬರುವುದನ್ನು ಸೂಚಿಸಲು ನಗಾರಿಯನ್ನು ಬಳಸುತ್ತದ್ದರು. ಇದು ಸೈನಿಕರು ಸಿದ್ಧರಾಗಲು, ಸಮಯ ಸ್ಫೂರ್ತಿ ನೀಡಲು ನೆರವಾಗುತ್ತಿತ್ತು. ಮುನಿಶಾಂತಪ್ಪನವರಿಂದ ನಗಾರಿವಾದನ. ಈ ನಗಾರಿ ವಾದನದಲ್ಲಿ ತ್ರಿಶ್ರಗತಿಯ ವಿಧಾನಗಳಿವೆ.

ಧ್ವನಿ : ಚಂಡೆ-ಮದ್ದಳೆ ಉತ್ತರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಯಕ್ಷಗಾನದಲ್ಲಿ ಉಪಯೋಗಿಸುತ್ತಾರೆ. ಸಾತ್ವಿಕ ಪಾತ್ರಕ್ಕೆ ಮದ್ದಳೆ, ವೀರರಸಕ್ಕೆ, ರಾಕ್ಷಸ ಪಾತ್ರಕ್ಕೆ ಚಂಡೆಯನ್ನು ಉಪಯೋಗಿಸುತ್ತಾರೆ.

ಈ ಮದ್ದಳೆ ಮಿಶ್ರನಡೆಯಲ್ಲಿ ಆರಂಭವಾಗಿ ಚತುರಶ್ರನಡೆಯಲ್ಲಿ ಉರುಟುಗಳನ್ನು ಬಾರಿಸಿ ಯಕ್ಷಗಾನದ ಪದ್ಧತಿಯೊಡನೆ ಮುಕ್ತಾಯ ಮಾಡುವರು. ಇದು ಶೃಂಗಾರ ರಸದಲ್ಲಿದೆ. ಇದನ್ನು ನುಡಿಸುತ್ತಾರೆ. ಸುದರ್ಶನ ಉರಾಳ್. ಇದು ಚತುರಶ್ರ ಗತಿಗಳಲ್ಲಿ ಉಂಟು.

ಚಂಡೆಯಲ್ಲಿ ಮಿಶ್ರನಡೆ, ಉರುಟುಗಳನ್ನು ಬಾರಿಸುತ್ತಾರೆ, ಮಾಧವ ಮಣೂರ್.

ಇದು ಶೃಂಗಾರ ರಸಕ್ಕೆ ಬರುವ ಚಂಡೆ, ಮದ್ದಳೆ, ತಾಳ, ಹಾರ್ಮೋನಿಯಂ, ಶೃತಿ ಇದರಲ್ಲಿ ಎಲ್ಲವೂ ಸಮನಾಗಿರುತ್ತವೆ.

ಇದು ವೀರರಸಕ್ಕೆ ಬರುವ ಚತುರಶ್ರ, ಉರುಟು ಇದರಲ್ಲಿ ಚಂಡೆ ಮುಖ್ಯ.

ಧ್ವನಿ : ಇದು ತಾನ. ಮುನಿಶಾಂತಪ್ಪನವರು ನುಡಿಸುತ್ತಾರೆ. ಇದರಲ್ಲಿ ತ್ರಿಶ್ರಗತಿಯನ್ನು ಕಾಣಬಹುದು.

ಧ್ವನಿ : ನಾಗಸ್ವರದ ಜೊತೆ ಬಾರಿಸುವ ಡೋಲು. ಕೋಲೆ ಬಸವನ ಆಟದಲ್ಲಿ ಡೋಲನ್ನೂ ಉಪಯೋಗಿಸುವರು. ಇದರ ಜೊತೆ ನಾಗಸ್ವರ ಮುಖವೀಣೆಗಳನ್ನು ಉಪಯೋಗಿಸುತ್ತಾರೆ. ಈ ಡೋಲು ನುಡಿಸುವಲ್ಲಿ ಆದಿ ತಾಳವನ್ನು ಗುರುತಿಸಬಹುದು.

ಧ್ವನಿ : ಚಿಟ್ ಮೇಳದಲ್ಲೂ ಡೋಲು ಉಪಯೋಗಿಸುವರು ಡೋಲಿನ ಜೊತೆ ಮುಖವೀಣೆ ಅಥವಾ ಓಲಗ ಸಡ್ಡೆ (ಶೃತಿ) ಕರಡೆ, ದೋಣು, ಡೋಲು, ಜಾಲರ (ತಾಳ) ಡಂಕಗಳು ಮೇಳೈಸುವುವು. ಇದು ಚಿಟ್ ಮೇಳದ ಒಂದು ತುಣುಕು.

ತುಮಕೂರು ಜಿಲ್ಲೆಯ ತುರುವೆಕೆರೆ ತಾಲ್ಲೂಕಿನ ಮಾರಪ್ಪನಹಳ್ಳಿಯ ಶ್ರೀಶಿವಣ್ಣ ಮತ್ತು ಸಂಗಡಿಗರಿಂದ-  ಇವರಲ್ಲಿ ಚತುರಶ್ರದಿಂದ ತ್ರಿಶ್ರನಡಿಗೆ ಬರುವುದನ್ನು ಗಮನಿಸಬಹುದು.

ಧ್ವನಿ : ಕೋಲಾಟದ ಕೋಲುಗಳು ಮರದ ತಾಳಗಳು ತುರುವೇಕೆರೆ ತಾಲ್ಲೂಕು ದೊಡ್ಡ ಬೀರನಕೆರೆ ಗ್ರಾಮದ ಡಿ.ಎಚ್. ರಾಜಣ್ಣ ಹಾಗೂ ಸಂಗಡಿಗರಿಂದ ಕೋಲಾಟ. ಇದು ಚತುರಶ್ರ ಗತಿಯಲ್ಲಿ ಸಾಗುತ್ತದೆ.

ಧ್ವನಿ : ತತ್ವಪದಗಳಲ್ಲಿ ಏಕತಾರಿ ಶೃತಿಯಾದರೆ ಚಿಟಿಕೆ ತಾಳ ಹಾಡಿನ ಜೊತೆ [illegible] ಅದರ ಗತ್ತು - ಮತ್ತೊಂದು ತಾಳ ದಮ್ಮಡಿ-

ಜವರಯ್ಯ ಮತ್ತು ಬೋರಮ್ಮ ಅವರ ದನಿಯಲ್ಲಿ ತತ್ವಪದ ಇವರಲ್ಲಿ '[illegible]' ತಾಳವನ್ನು ಕಾಣಬಹುದು.

ಧ್ವನಿ : ಕಂಸಾಳೆ ಲೋಹದ ತಾಳ ಮಾದೇಶ್ವರನ ಕಥೆ ಹಾಡುವಾಗ ಬಾರಿಸುತ್ತಾರೆ. ಬೀಸು ಕಂಸಾಳೆ ಬಾರಿಸಿಕೊಂಡು ನೃತ್ಯವನ್ನು ಮಾಡುವರು.

ಬೆಂಗಳೂರಿನ ಗಣೇಶ್ ಹಾಗೂ ಸಂಗಡಿಗರಿಂದ ತ್ರಿಶ್ರಗತಿಯಲ್ಲಿ ಸಾಗುತ್ತಿದೆ.

ಧ್ವನಿ : ಹೆಳವರು ಹಾಡುವ ಹಾಡುಗಳಲ್ಲಿ ಘಂಟೆಯನ್ನು ತಾಳವಾಗಿ ಉಪಯೋಗಿಸುವರು.

ಮಾಗಡಿ ತಾಲ್ಲೂಕು ಚಿಕ್ಕನ ಹಳ್ಳಿ ಎಚ್. ಕೃಷ್ಣಪ್ಪ ಹಾಗೂ ಸಂಗಡಿಗರಿಂದ ಚಾಮುಂಡಿ ಪುರಾಣ. ಈ ಹಾಡಿಗೆ ನುಡಿಸಿದ ಗಂಟೆಯಲ್ಲಿ ಚತುರಶ್ರ ಗತಿಯನ್ನು ಕಾಣಬಹುದು. ಹಿಂದೆ ಕುಂಬಾರ ಗುಂಡಯ್ಯನ ಮಡಿಕೆಯ ತಾಳಕ್ಕೆ ಈಶ್ವರನೇ ನೃತ್ಯವೆಸಗಿದನಂತೆ

ಧ್ವನಿ : ಇದು ಮಣ್ಣಿನ ತಾಳ ಘಟ.......... ಇದನ್ನು ಆರ್.ಎ. ರಾಜಗೋಪಾಲನ್ ನುಡಿಸಿದ್ದಾರೆ. ಇದು ಮಿಶ್ರಚಾಪು ತಾಳದಲ್ಲಿದೆ.

ಧ್ವನಿ : ಹೀಗೆ ಪಲವಾರು ಜಾನಪದ ಮೇಳಗಳಲ್ಲಿ ತಾಳಗಳು ಕಿವಿಗೆ ಇಂಪು ನೀಡುವುವು. ಮನಸ್ಸಿಗೆ ಆನಂದ ತಾರುವುವು. ಮೇಳದ ವಾದ್ಯಗಳ ತಾಳ ತರಂಗಗಳು ಕಿವಿಯಲ್ಲಿ ಗುಯ್ ಗುಟ್ಟುವುವು. ಜಾನಪದ ಮೇಳಗಳಲ್ಲಿ ಅವರು ನುಡಿಸುವ ಗತ್ತುಗಳು ಒಂದು ರೀತಿ ಗುಪ್ತಗಾಮಿನಿಯಾಗಿ ಶಾಸ್ತ್ರೀಯವಾಗಿಯೂ ಹರಿದಿದೆ ಎಂಬುದರಲ್ಲಿ ಅನುಮಾನವೇ ಇಲ್ಲ.

*

# ಇನ್ನಿತರ ಜನಪದ ರೂಪಕಗಳು

## ಗೊರವರು

ಹೆಣ್ಣು ಧ್ವನಿ : ಭಕ್ತರ ನಂಬುಗೆಯಂತೆ ಮೈಲಾರ ಪರಶಿವನ ಅವತಾರ. ಮೈಲಾರ ಎನ್ನುವುದು ಮಲಹರ, ಮಲ್ಹಾರ - ಮೈಲಾರವಾಗಿ ರೂಪಾಂತರಗೊಂಡಿದೆ. ಮಲ್ಲಾಸುರ ಜನಕೋಟಿಗೆ ಕಂಟಕ ಪ್ರಾಯನಾಗಿದ್ದ. ಈ ಕಂಟಕ ನಿವಾರಿಸುವುದರ ಮೂಲಕ ಪರಶಿವ ಮೈಲಾರನಾದ.

ಗಂಡು ಧ್ವನಿ : ಮೈಲಾರನು ಮಹಾರಾಷ್ಟ್ರದಲ್ಲಿ ಖಂಡೋಬಾ ಎಂಬ ಹೆಸರಿಂದ ಪೂಜಿಸಿಕೊಂಡರೆ ಕರ್ನಾಟಕದಲ್ಲಿ ಮೈಲಾರಲಿಂಗವೆಂದು ಪೂಜಿಸಿಕೊಳ್ಳುತ್ತಿದ್ದಾನೆ.

ಧ್ವನಿ : ಮಲ್ಲಾರಿ ಮಹಾತ್ಮ್ಯ ಎಂಬ ಸಂಸ್ಕೃತ ಗ್ರಂಥದಲ್ಲಿ ಮಣಿಚೂಲ ಪರ್ವತದಲ್ಲಿ ತಪಸ್ಸಿನಲ್ಲಿ ನಿರತರಾಗಿದ್ದ ತಪಸ್ವಿಗಳನ್ನು ಅಸುರರು ಹಿಂಸಿಸುತ್ತಿದ್ದರು. ಆತನ ಉಪಟಳ ನಿವಾರಿಸಲು ಪರಶಿವನು ತನ್ನ ಪೂರ್ಣ ರೂಪದಲ್ಲಿ "ಮಾರ್ತಂಡ ಭೈರವನಾಗಿ ಆ ದೈತ್ಯನನ್ನು ಸಂಹರಿಸಿದ.

ಧ್ವನಿ : ಮತ್ತೊಂದು ಕಥೆ ಹೀಗಿದೆ.

ಹೆಣ್ಣು ಧ್ವನಿ : ಬ್ರಹ್ಮನ ವರಪಡೆದ ಮಲ್ಲಾಸುರ - ಮಣಿಕಾಸುರರು ಮಣಿಚೂಲ ಫರ್ವತದಲ್ಲಿದ್ದು ಋಷಿಗಳನ್ನು ಪೀಡಿಸತೊಡಗಿದರು. ಋಷಿಗಳು ಇಂದ್ರನನ್ನು ಬೇಡಿದರು. ಇಂದ್ರಾದಿ ದೇವತೆಗಳು ವಿಷ್ಣುವಿನೊಂದಿಗೆ ಹೋಗಿ ಶಿವನ ಬಳಿ ಕೇಳಿದರು. ಆಗ ಶಿವ ಕೋಪದಿಂದ ತನ್ನ ಜಡೆಯನ್ನು ಭೂಮಿಗೆ ಅಪ್ಪಳಿಸಲು ಜಡೆಯಿಂದ ಭೀಕರ ಮಾರಿ ಪ್ರತ್ಯಕ್ಷಳಾದಳು. ಮುನಿಗಳು ಅವಳಿಗೆ ತುಪ್ಪದ ಅಭಿಷೇಕ ಮಾಡಿ ತುಪ್ಪದ ಮಾರಿ ಎಂದು ಕರೆದು ಆಕೆಯಿಂದ ರಾಕ್ಷಸ ಸಂಹಾರದ ಅಭಯ ಪಡೆದರು. ಈಶ್ವರ ಮಾರ್ತಾಂಡ ಭೈರವನಾಗಿ ಡಮರುಗ ಬಾರಿಸಿದ ಸದ್ದಿಗೆ ಮೂರು ಲೋಕ ನಡುಗಿದುವು. ಯುದ್ಧದಲ್ಲಿ ಭೈರವನ ಪಾಶು ಪತಾಸ್ತ್ರ ಮಲ್ಲಾಸುರನನ್ನು

ಸೀಳುತ್ತದೆ. ಆಗ ಆತ ಶಿವನ ಪಾದ ಹಿಡಿದು ಸದಾ ನಿನ್ನ ಪಾದದಲದಲ್ಲಿರಲು ಕರುಣಿಸು ಎಂದು ಬೇಡಿದ.

ಧ್ವನಿ : ಉತ್ತರ ಕರ್ನಾಟಕದ ಜನಪದ ಕಥೆ ಹೀಗಿದೆ- ಮೈಲಾರಲಿಂಗ ಗಂಗಿಮಾಳಿಯಲ್ಲಿ ಅನುರಕ್ತನಾದ. ಆಕೆ ಮನೆಗೆ ಬಂದು ಏಳ್ಕೋಟಿ ಏಳ್ಕೋಟಿ ಎಂದು ಭಿಕ್ಷೆ ಸಾರುತ್ತಾನೆ. ಮಾಳಮ್ಮನ ತಾಯಿಯ ಭಿಕ್ಷೆ, ಬೇಡ ಎಂದಾಗ ಮಾಳಿ ಬರುತ್ತಾಳೆ. ಆತ ನನ್ನ ಸತಿಯಾಗು ಎಂದು ಕೇಳುತ್ತಾನೆ. ನನ್ನ ಗಂಡನಿಗೆ ಈ ಸುದ್ದಿ ತಿಳಿದರೆ ರುಂಡ ಹಾರೀತು ಎಂದಾಗ, ಮಾಳಮ್ಮನ ಮಗುವನ್ನು ಎತ್ತಿಕೊಂಡು ಹೊರಡುತ್ತಾನೆ. ಆಗ ಆಕೆ ಆತನ ಹಿಂದೆ ಓಡುತ್ತಾಳೆ. ಯುದ್ಧಕ್ಕೆ ಹೋಗಿದ್ದ ಮಾಳಿಯ ಗಂಡ ತಾಯಿಯಿಂದ ಸುದ್ದಿ ತಿಳಿದು ಆತನ ಸಂಹಾರ ಮಾಡುವೆ ಎಂದು ಬರುತ್ತಾನೆ. ಇದನ್ನು ತಿಳಿದು ಮೈಲಾರ ಮಾಳಮ್ಮನ ಮನೆಯ ಮೇಲೆ ಮಾಯದ ಬೂದಿ ಚೆಲ್ಲುತ್ತಾನೆ. ಎಲ್ಲರೂ ನಾಶವಾಗುತ್ತಾರೆ. ಮೈಲಾರ ಲಿಂಗ-ಮಾಳಮ್ಮ ಅಲ್ಲೇ ಕಲ್ಲಾಗಿ ನಿಲ್ಲುತ್ತಾರೆ.

ಧ್ವನಿ : ಡಾ: ಜೀ.ಶಂ. ಪರಮಶಿವಯ್ಯನವರು ಅವರು ದೊಡ್ಡಬಳ್ಳಾಪುರ ತಾಲ್ಲೂಕು ತೂಬುಗೆರೆಯಲ್ಲಿ ಸಂಗ್ರಹಿಸಿದ ಕತೆ ಹೀಗಿದೆ.

ಹೆಣ್ಣು ಧ್ವನಿ : ಮಣಿಶೂಲ ಪರ್ವತದಲ್ಲಿ ಮಣಿ ಮಲ್ಲಾಸುರ ಎಂಬ ರಾಕ್ಷಸ ಬ್ರಹ್ಮನ ವರದಿಂದ ಮೆರೆಯುತ್ತಾ ಯತಿಭಂಗ, ಸ್ತ್ರೀಭಂಗ, ಗೋವು, ಶಿಶು ಹತ್ಯೆ ಮಾಡುತ್ತಿದ್ದ. ದೇವತೆಗಳು ಈಶ್ವರನಲ್ಲಿ ಮೊರೆ ಹೋದರು. ಶಿವ ಜಡೆ ನೆಲಕ್ಕೆ ಒದರಲು ಗುರುತು ಮಾರಿ ಎಂಬಾಕೆ ಉದ್ಭವಿಸಿದಳು (ಗಂಗೆ ಮಾಳಮ್ಮ) ಶಿವನ ಸಮಸ್ತ ಪರಿವಾರ ಎಷ್ಟೋ ಸಾವಿರ ವರ್ಷಗಳು ಯುದ್ಧಮಾಡಿದರೂ ಮರಣ ಹೊಂದಲಿಲ್ಲ. ಆಗ ಸ್ವಾಮಿ ಗೊರವಯ್ಯನ ಅವತಾರ ತಾಳಿ ಮಣಿಮಲ್ಲಾಸುರನನ್ನು ಕೊಂದು ಪಾದವನ್ನು ಹಿಡಿದ. ರಾಕ್ಷಸನಿಗೆ ಮೋಕ್ಷ ಕೊಟ್ಟು ಗುಡ್ಡದಯ್ಯ ಎಂಬ ಹೆಸರಿನಿಂದ ಅಲ್ಲೇ ನೆಲೆಸಿದ.

ಧ್ವನಿ : ಡಾ: ಎಂ.ಚಿದಾನಂದಮೂರ್ತಿಯವರು ಗೊರವರ ಬಗೆಗೆ ಹೇಳುತ್ತಾ "ಕರ್ನಾಟಕದಲ್ಲಿ ಬಹು ಹಿಂದಿನಿಂದ ಲಕುಲೀಶ - ಪಾಶುಪತ ಎಂಬ ಹೆಸರಿನ ಮತದ ಶೈವರು ಪ್ರಬಲವಾಗಿದ್ದರು. ಇವರು ಶಿವನ ಆರಾಧಕರು ಲಕುಲೀಶ - ಪಾಶುಪತರು ಸಾತ್ವಿಕ ಸನ್ಯಾಸಿಗಳಾಗಿದ್ದರು. ಇವರಲ್ಲಿ ಮಾಂಸಾಹಾರ ಮದ್ಯಪಾನ ಸೇವನೆ ಇರುತ್ತಿರಲಿಲ್ಲ. ಜನರೊಡನೆ ಇವರು ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು. ಕೆಲವರಂತೂ ಶಿವಭಕ್ತಿಯಲ್ಲಿ ತನ್ಮಯರಾಗಿದ್ದು ಲೌಕಿಕ ಆಸೆಗಳನ್ನು ತೊರೆದು ಭಗವತ್ ಸಾಕ್ಷಾತ್ಕಾರವನ್ನೇ

ತಮ್ಮ ಬಾಳಿನ ಗುರಿಯಾಗಿ ಮಾಡಿಕೊಂಡಿದ್ದರು. ಇವರನ್ನು ಗೊರವರೆಂದು ಕರೆಯುತ್ತಿದ್ದರು"

ಹೆಣ್ಣು ಧ್ವನಿ : ವೇಷ ಭೂಷಣಗಳಲ್ಲಿ ಉತ್ತರ ಕರ್ನಾಟಕದ ಗೊರವರಿಗೂ ದಕ್ಷಿಣ ಕರ್ನಾಟಕ ಗೊರವರಿಗೂ ಸ್ವಲ್ಪ ಸ್ವಲ್ಪ ವ್ಯತ್ಯಾಸಗಳಿವೆ. ಉತ್ತರ ಕರ್ನಾಟಕದವರು ಕಂಬಳಿಯ, ನಿಲುವಂಗಿ, ಕೊರಳಲ್ಲಿ ಹುಲಿಚರ್ಮದ ಭಂಡಾರಚೀಲ, ಕವಡೆ ಸರ, ಹೆಗಲಲ್ಲಿ ಭಿಕ್ಷಾಪಾತ್ರೆ, ದೋಣಿ, ಕೈಯಲ್ಲಿ ಡಮರುಗ, ತ್ರಿಶೂಲಗಳನ್ನು ಹಿಡಿದಿರುತ್ತಾರೆ. ತಲೆಗೆ ಬಿಳಿಯ ರುಮಾಲು ಸುತ್ತಿರುತ್ತಾರೆ. ದಕ್ಷಿಣ ಕರ್ನಾಟಕ ಗೊರವರು ಇದರ ಜೊತೆಗೆ ಒಕ್ಕಳಗಂಟೆ ಹುಲಿಚರ್ಮ, ರಟ್ಟೆ ಬಳೆ, ಮೊಳಕಾಲಿಗೆ ಜಂಗು, ಕೊರಳಿಗೆ ಕವಡೆ ಸರ, ಎದೆಗೆ ಕವಡೆಸರದ ಅಡ್ಡಪಟ್ಟಿ, ಸುತ್ತಪಗಡೆ ಸರ, ಮಧ್ಯೆ ಕಿರಿದಾದ ತ್ರಿಶೂಲ ಇರುವ ಭಂಡಾರ ಖಡ್ಗ, ಕೈಯಲ್ಲಿ ನಾಗಬೆತ್ತ, ಕೊಳಲು, ಹುಲಿಚರ್ಮದ ನುಡುಗಟ್ಟು, ಕಾಲಲ್ಲಿ ಭಾರಿ ಮುಳ್ಳಿನ ಹಾವುಗೆ ಧರಿಸುವುದುಂಟು.

ಧ್ವನಿ : ತಲೆಗೆ ಕರಡಿ ಕೂದಲಿನ ಕುಲಾವಿ, ಅಥವಾ ಜಂಗು ಧರಿಸುತ್ತಾರೆ. ಹಣೆ ಮತ್ತು ಕಣ್ಣುಗಳು ಆವರಿಸುವಂತೆ ವಿಭೂತಿ ಪಟ್ಟೆಗಳು ನಡುವೆ ಅಷ್ಟಗಲಕ್ಕೂ ಕುಂಕುಮ ಢಾಳಾಗಿ ಬಳಿಯುತ್ತಾರೆ. ಕುತ್ತಿಗೆ ಕಿವಿಗಳಿಗೆ ವಿಭೂತಿ ಹಚ್ಚುತ್ತಾರೆ. ಮುಖ ಭೀತಿಯನ್ನು ಹುಟ್ಟಿಸುವಂತಿರುತ್ತದೆ. ಅದಕ್ಕೆ ದೊಡ್ಡವರು, ಮಕ್ಕಳು ಗಲಾಟೆ ಮಾಡಿದಾಗ ಗೊಗ್ಗಯ್ಯನಿಗೆ ಕೊಡ್ತೀನಿ ಎಂದು ಹೆದರಿಸುತ್ತಾರೆ.

ಧ್ವನಿ : ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಗೊರವರ ಆಚಾರ ವಿಚಾರ, ಸಂಪ್ರದಾಯಗಳಲ್ಲೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿವೆ.

ಹೆಣ್ಣು ಧ್ವನಿ : ಇವರಲ್ಲೂ ಇತರರಂತೆ ದೀಕ್ಷೆ ಉಂಟು. ಇದಕ್ಕೆ ಮಣಿ ಕಟ್ಟುವುದು ಎನ್ನುತ್ತಾರೆ. ಮನೆಯ ಹಿರಿಯ ಮಗನಿಗೆ ದೀಕ್ಷೆ ನೀಡುವರು. ಕರಿಕಂಬಳಿ ಗದ್ದಿಗೆ ಹಾಸಿ, ಕೂಡಿಸಿ, ಸುತ್ತಲೂ ಪಟ್ಟಬಿಟ್ಟು ಕಳಶ ಕನ್ನಡಿ ಇಟ್ಟು ಕಾಲಿಗೆ ಬಾರಿ, ಕೈಗೆ ಕಂಕಣ ತೊಡಿಸುವರು. ದಾಸಯ್ಯ, ಜೋಗಯ್ಯ, ಜಂಗಮಯ್ಯರು ಹಾಜರಿರುತ್ತಾರೆ. ಗುರುಗಳಿಂದ ಮಣಿಕಟ್ಟಿಸಿದ ಮೇಲೆ ದೀಕ್ಷೆ ಪಡದಾತ ದೇವರ ಹೆಸರಲ್ಲಿ ಪ್ರಮಾಣ ಮಾಡುತ್ತಾನೆ. "ಹೆತ್ತತಂದೆ ತಾಯಿಯರ ನಿಂದಿಸುವುದಿಲ್ಲ. ಹೊಲದಲ್ಲಿ ರಾಸು ಮೇಯುತ್ತಿದ್ದರೆ ಓಡಿಸುವುದಿಲ್ಲ. ಕರು ಹಾಲು ಕುಡಿಯುತಿದ್ದರೆ ಬಿಡೋದಿಲ್ಲ. ಗಾದಿ ಮೇಲೆ ಕೂರುವುದಿಲ್ಲ. ಮನೆಗೆ ಬಂದ ಜಂಗಮರಿಗೆ ಊಟ ಹಾಕ್ತೀನಿ, ಇಲ್ಲದಿದ್ರೆ ಬೇರೆಮನೆ ತೋರಿಸ್ತೀನಿ" ಎಂದು ಪ್ರಮಾಣ ಮಾಡುತ್ತಾನೆ.

ಧ್ವನಿ : ಗೊರವರು ಮೈಲಾರಲಿಂಗನ ಮೇಲೆ ಸುದೀರ್ಘ ಕಥನ ಕಾವ್ಯವನ್ನು ನಾಲ್ಕು ರಾತ್ರಿ. ಹಾಡುವರು ದಕ್ಷಿಣಕರ್ನಾಟಕದಲ್ಲಿ ತಾಳುಗತೆಯಾದ ಮೈಲಾರಲಿಂಗನ ಅವತಾರದ ಉದ್ದೇಶ, ಅವತಾರ, ಕೈಲಾಸದಿಂದ ಭೂಲೋಕಕ್ಕೆ ಬಂದ ರೀತಿ, ಮಣಿ ಮಲ್ಲಾಸುರನನ್ನು ಕೊಂದದ್ದು, ಹಿರೇಮೈಲಾರದಲ್ಲಿ ನೆಲೆಸಿದ ಪ್ರಸಂಗಗಳು ಲಭ್ಯವಿಲ್ಲ. ಮೈಲಾರಲಿಂಗ ಕೋಮಲೆಯರ ಪ್ರಣಯ ಪ್ರಸಂಗಕ್ಕೆ ಸಂಬಂಧಿಸಿದ ಕಥನ ಗೀತೆಯನ್ನು ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಸ್ತ್ರೀಯರು ಹಾಡುತ್ತಾರೆ. ಈ ಕಾವ್ಯ ೨೦೦೦ ಸಾಲುಗಳಷ್ಟು ಸುದೀರ್ಘವಾದುದು.

ಹೆಣ್ಣು ಧ್ವನಿ : ಇವರ ಜೊತೆಗೆ ಲೌಕಿಕ ಕಾವ್ಯವನ್ನೂ ಹಾಡುತ್ತಾರೆ. ನಾರಾಯಣಸ್ವಾಮಿ ಅಲಮೇಲ ಮಂಗಮ್ಮನ ತಂದದ್ದು, ನಂಜುಂಡೇಶ್ವರ ಚಾಮುಂಡಿ ಮನೆಗೆ ಹೋದದ್ದು, ಬಂಜೆ ಕತೆ, ನೀಲವೇಣಿ ಕತೆ, ಬಾಲನಾಗಮ್ಮ ಸಾರಂಗಧರ, ಗಂಗೆ - ಗೌರಿ, ರಾಮರ ಕಥೆ, ಕೊಡಗಿನ ವೀರರಾಜನ ಕಥೆ, ಮಾದೇಶ್ವರ, ಮಂಟೇಸ್ವಾಮಿಗಳ ಮೇಲೂ ಹಾಡುವವರು.

ಧ್ವನಿ : ಸ್ವತಂತ್ರ ಕಾವ್ಯವಾದ ಇದು ಇಷ್ಟದೈವದ ಪವಾಡಗಳನ್ನು ವರ್ಣಿಸುವಾಗ ಕಥೆಗಾರ ಮೈದುಂಬಿ ಹಾಡುತ್ತಾನೆ.

ಧ್ವನಿ : ವೃತ್ತಿಗಾಯಕರ ಪರಂಪರೆಯಲ್ಲಿ ಗೊರವರ ಸಂಪ್ರದಾಯವೂ ಒಂದು. ಇವರು ಧಾರ್ಮಿಕ ವೃತ್ತಿ ಗಾಯಕರು. ಗೊರವರ ಮೇಳದಲ್ಲಿ ಮೂರು ಜನರಿದ್ದು, ಪ್ರಧಾನ ಹಾಡುಗಾರ ಡಮರುಗ ಬಾರಿಸಿಕೊಂಡು ಹಾಡಿದರೆ, ಉಳಿದವರು ಚಿಟಕೆ, ತಾಳ, ದಮ್ಮಡಿ ಬಾರಿಸುತ್ತಾ ದನಿಗೂಡಿಸುವರು. ಮೊದಲು ಮೈಲಾರ ಲಿಂಗನ ಸಂಪ್ರದಾಯಕ್ಕೆ ಸೇರಿದ ಭಕ್ತರ ಮನೆಯಲ್ಲಿ ಕಥೆ ಮಾಡುತ್ತಿದ್ದರು. ಆದರೆ ಈಗ ಕರೆದವರ ಮನೆಗಳಿಗೆ ಹೋಗುತ್ತಾರೆ.

ಧ್ವನಿ : ಮೈಲಾರಲಿಂಗನ ಕಾವ್ಯ ಹೀಗೆ ಆರಂಭವಾಗುತ್ತದೆ.

(ಮೈಲಾರು ಮೈಲಾರು ಮಲ್ಲಣ್ಣ)

ಹೆಣ್ಣು ಧ್ವನಿ : ಪಾರ್ವತಿ ಭಕ್ತಿಯಿಂದ ಸ್ವಾಮಿಯವರಿಗೆ ಪಾದಪೂಜೆ ಮಾಡಿ ದಾನವನ್ನು ತೆಗೆದುಕೊಂಡು ಬರುವ ಸಂದರ್ಭ

ಧ್ವನಿ : ಶಿವ ಗೊರವಯ್ಯ ವೇಷ ತಾಳಿ ತುಪ್ಪದ ಮಾಳಮ್ಮನ ತಕ್ಕೊಂಡು ಹೋಗೋದಕ್ಕೆ ಬರುವಾಗ ಹೆಗ್ಗಡ ದೇವುನ ಕ್ವಾಟೆಗೆ ಸ್ವಾಮಿ ಬರುವುದು ವಿಷ್ಣುವಿಗೆ ಅರಿವಾಯಿತು. ಇತ್ತಿಂದ ಸ್ವಾಮಿಯವರು ಬರ್‍ತಾ ಇದ್ದಾರೆ- ಇಬ್ಬರೂ ಮಧ್ಯೆ ಹಾದೀಲಿ ಗೋಕರ್ಣದಲ್ಲಿ ಸೇರಿದರು. ಗೋಕರ್ಣದಲ್ಲಿ ನಿಂತುಕೊಂಡು ಮಹಾವಿಷ್ಣು ಶಿವನನ್ನು ಕೇಳುತ್ತಾ ಇದ್ದಾರೆ.

ಧ್ವನಿ : ಮಾಳಮ್ಮ ಕುರುಬರ ಹೆಣ್ಣು, ಆದ್ದರಿಂದ ಬೇಡ ಸದಾಶಿವ ಎಂದುಹೇಳುತ್ತಾರೆ.

ಹೆಣ್ಣು ಧ್ವನಿ : ಮಾಳಮ್ಮ ಬರುವಾಗ ಆಕೆಯ ಮುಖದ ಮೇಲೆ ಬಿಸಿಲು ಬೀಳುತ್ತ ಅಂತ ಸರ್ಪ ಹೆಡೆ ಎತ್ತಿ ನೆರಳು ಮಾಡಿತು. ಸ್ವಾಮಿಯವರು ನೋಡಿದ್ರು. ಕೈಲಾಸದಲ್ಲಿ ಪಾರ್ವತಿ ಹೆಚ್ಚು ಅಂತ ನಾನೇಳ್ತಿತಿದ್ದೆ. ಇವಳು ಎಂಥ ಪತಿವ್ರತೆ ಇರಬೇಕು ಅಂತೇಳಿ ಸದಾಶಿವ ಅಲ್ಲೊಂದು ರೂಪ ಬದಲಾಯಿಸುತ್ತಾನೆ. (ತುಪ್ಪಾದ ಬಾಲೆ)

ಧ್ವನಿ : ಶಿವ ಬಂದು ಆ ಅಮ್ಮನ ನೋಡಿ, ನಾನು ಮೂಡಲ ಸೀಮೆಗೆ ದಾನಕ್ಕೋಗಿದ್ದೆ. ನನಗೆ ತುಂಬಾ ಹಸಿವಾಗ್ತಿದೆ. ನಿನ್ನ ಕೈಮುಟ್ಟಿ ನನ್ನ ಬಟ್ಟಲುಗೆ ಇಷ್ಟು ಅಂಬಲಿ ಬುಡು ಅಂದುಬಿಟ್ಟು ಸ್ವಾಮಿಯವರು ಆ ಅಮ್ಮ ಬರೋ ದಾರಿ ಒಳಗೆ ಒಂದು ಪಟ್ಟೆ ಬರೆದು ಬುಟ್ಟು "ನೋಡೆಣ್ಣೆ ನೀನು ಈ ಪಟ್ಟೆ ದಾಟಿ ಬಂದ್ರೆ ಸುಟ್ಟು ಬೂದಿ ಆಯ್ತಿ. ನಾನು ದಾಟಿ ಬಂದು ನಿನ್ನ ಮುಟ್ಟಿಬುಟ್ರೆ ನಾನು ಸುಟ್ಟು ಬೂದಿಯಾಯ್ತೀನಿ. ಆಕೆ ನೋಡ್ತಾಳೆ ಸ್ವಾಮಿ ಪಗಡೆಸರ ಹಾಕವ್ರೆ, ಡಮರುಗ, ತ್ರಿಶೂಲ, ನೆತ್ತಿಮೇಲೆ ಕರಡಿಗುಂಜು, ಕತ್ತಲಿ ಕಾಳಿಂಗ ಸರ್ಪ, ಕರಿಕಂಬಳಿ, ಕಂಕುಳಲ್ಲಿ ಮುತ್ತಿನ ಜೋಳಿಗೆ ಹಾಕಿ, ಮೈಲಾರ ಲಿಂಗಪ್ಪನಾಗಿ ಆ ಕಾಡುಗೆ ಬಂದು ಮಾಳಮ್ಮನ್ನ ಊಟಕ್ಕೆ ಕೊಡು ಅಂತ ಕೇಳಿದಾಗ ಆ ಶರಣೆ ಸ್ವಾಮಿಯವರಿಗೆ ಒಂದು ಮಾತು ಹೇಳತವು (ಅಂಬಲಿಯವಿರವುದಕೆ)

ಹೆಣ್ಣು ಧ್ವನಿ : ಮಹಾಶರಣೆ ಸ್ವಾಮಿಯ ಪಾದಕ್ಕೆ ಮಲ್ಲಿಗೆ ಚೆಲ್ಲಿ ಸ್ತೋತ್ರ ಮಾಡುವಾಗ ಮಕ್ಕಣ್ಣೀಶ್ವರನಿಗೆ ಮಲ್ಲೇಶ್ವರ ಅಂತ ನಾಮಕರಣವಾಯಿತಂತೆ. ಮಲ್ಲಿಗೆ, ತುಂಬೆ ಹೂವುಗಳನ್ನು ತಂದು ಸ್ವಾಮಿಯ ಪಾದಪೂಜೆ ಮಾಡುವಾಗ ಸ್ವಾಮಿಯವ್ರು ಗೊರವಯ್ಯನಾಗಿ ಪುನಃ ಮೇಲಕ್ಕೆದ್ರು (ಮೂಡಾಲ ಸೀಮೆಗೆ)

ಧ್ವನಿ : ಏಳು ಹುಲಿಗಳು ಅಬ್ಬರಿಸಿಕೊಂಡು ಬರ್‍ತಾ ಇರೋದು ಮಾಳಮ್ಮನಿಗೆ ಅರಿವಾಯ್ತು ತುಪ್ಪದ ಮಾಳಮ್ಮ ಬರುವಂಥ ಹುಲಿಗಳನ್ನು ನೋಡಿ ಸ್ವಾಮಿಗಳು ಹೇಳುತ್ತಾರೆ.

(ಅಲ್ನೋಡಿ ಅಲ್ನೋಡಿ)

ಹೆಣ್ಣು ಧ್ವನಿ : ತುಪ್ಪದ ಮಾಳಮ್ಮ ಏಳು ಜನ ಅಣ್ಣಂದಿರೊಂದಿಗೆ ಶಿವಲಿಂಗಕ್ಕೆ ಪೂಜೆಗಳನ್ನು ಮಾಡಿ ಹೆಗ್ಗಡದೇವನ ಕೋಟೆಗೆ ಬರುತ್ತಾರೆ.

(ಶಿವಲಿಂಗಕ್ಕೆ.........)

ಧ್ವನಿ : ಸ್ವಾಮಿಯವರು ಈಗ ಕುರಿ ಮೇಯ್ಸಿ ಆದ ಮೇಲೆ ಮತ್ತೊಂದು ಕೆಲಸ ಮಾಡ್ತಾ ಅವ್ರೆ ಹೆಗ್ಗಡದೇವನ ಕೋಟೆ ಒಳಗೆ (ಕುರಿಯ ಈಗಲೇ ಮೇಯಿಸು)

ಧ್ವನಿ : ಬಸವನನ್ನು ನೀನು ಭೂಲೋಕದಲ್ಲಿ ನಂದೀಶ್ವರನಾಗಿ ಬಾಳು ಅಂತೇಳಿ ಕಾಡಿಗೆ ಓಡಿಸಿದ ಶಿವ. ಅದು ಕಾಡು ಸೇರಿತು ಸ್ವಾಮಿಯವ್ರು ಮುಂದಕ ಬಂದ್ರು......

(ಬಂಗಾರದ.....)

ಹೆಣ್ಣು ಧ್ವನಿ : ಪಾರ್ವತಿ ಏಳಸಿ ಬಾಗಿಲಿಗೆ ಬಂದು ಪನ್ನೀರು ತಂದು ಸ್ವಾಮಿಯವರ ಪಾದ ಪೂಜೆ ಮಾಡುತ್ತಿದ್ದಾರೆ.

(ಜೆಲ್ಲಾರೋ..... ಮಲ್ಲಿಗೆಯಾ)

ಧ್ವನಿ : ತುಪ್ಪದ ಮಾಳಮ್ಮ ಕೊಪ್ಪಲ್ಲಿ ಮಲಗವಳೆ ಕರಿಕಂಬಳಿ ಹಾಸಿಗೆ ಹಾಸ್ಬಿಟ್ಟು ಸ್ವಾಮಿ ಈಗ ಬೆಳಗಿನ ಹೊತ್ನಲ್ಲಿ ಬ್ಯಾರೆ ರೂಪ್ದಲ್ಲಿ ಆ ದೊಡ್ಡಿ ಗೊಯ್ತುವ್ರೆ

(ಹರ ನನ್ನ)

ಹೆಣ್ಣು ಧ್ವನಿ : ಬಸವ ಪುರಾಣ, ಸಾನಂದ ಚರಿತ್ರೆ, ಗುರುರಾಜಚರಿತೆ, ತೋಂಟದ ಸಿದ್ಧೇಶ್ವರ ಪುರಾಣ, ಶಂಕರ ವಿಜಯ, ಶಂಕರ ದಾಸಿಮಯ್ಯ ಪುರಾಣಗಳಲ್ಲಿ ಮೈಲಾರಮಾಳಜಿಯವರ ಅನೇಕ ಕಥೆಗಳು ನಿರೂಪಿಸಲ್ಪಟ್ಟಿವೆ. ಚನ್ನಬಸವಣ್ಣ, ಬಸವಣ್ಣನವರ ವಚನ, ನಯಸೇನನ ಧರ್ಮಾಮೃತದಲ್ಲೂ ಉಲ್ಲೇಖವಿದೆ. ೧೪ನೇ ಶತಮಾನದ ಆನಂದ ಗಿರಿಯು ತನ್ನ 'ಶಂಕರ ವಿಜಯ'ದಲ್ಲೂ ಮೈಲಾರಲಿಂಗನ ಬಗ್ಗೆ ಹೇಳಿದ್ದಾನೆ.

ಧ್ವನಿ : ಕ್ರಿ.ಶ.೧೧೫೦ರಲ್ಲಿದ್ದ ಜೈನ ಕವಿ ಬ್ರಹ್ಮಶಿವ 'ಸಮಯ ಪರೀಕ್ಷೆ' ಕೃತಿಯಲ್ಲಿ ಮೈಲಾರಲಿಂಗನ ಪೂಜಿಸುವುದನ್ನು ಹೇಳಿದ್ದಾನೆ. ಸುಮಾರು ೧೫ ಶಾಸನಗಳಲ್ಲಿ ಮೈಲಾರನ ಬಗ್ಗೆ ಉಲ್ಲೇಖವಾಗಿರುವುದನ್ನು ಡಾ:ಚಿದಾನಂದಮೂರ್ತಿಯವರು ಗುರುತಿಸಿದ್ದಾರೆ.

ಧ್ವನಿ : ಕರ್ನಾಟಕದಲ್ಲಿ ರಾಯಚೂರು ಜಿಲ್ಲೆಯ ಆನೆಗೊಂದಿ, ಬೆಳಗಾವಿ ಜಿಲ್ಲೆಯ ಕರೀಮನಿ, ಶಿವಮೊಗ್ಗ ಜಿಲ್ಲೆಯ ಖಬಟೂರು, ಧಾರವಾಡ ಜಿಲ್ಲೆಯ ದೇವರ ಗುಡ್ಡ, ದೇವಿ ಹೊಸೂರು, ಮೈಲಾರದೇವರಗುಡ್ಡ, ಬೀದರ್‌ಜಿಲ್ಲೆಯ ಮೈಲಾಪುರ, ಬಳ್ಳಾರಿ ಜಿಲ್ಲೆಯ ಮೈಲಾರ, ಬೆಳಗಾಂ ಜಿಲ್ಲೆಯ ಮಂಗಸೂಳಿ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಮೈಲಾರ ಪಟ್ಟಣ, ಬೆಂಗಳೂರು ಜಿಲ್ಲೆ ಎಳ್ನಾಗರ, ಹಾಗೂ ಮೈಸೂರು ಜಿಲ್ಲೆಯ ಮುಡುಕುತೊರೆ ಕ್ಷೇತ್ರಗಳಲ್ಲಿ ಮೈಲಾರಲಿಂಗ ದೇವಾಲಯಗಳಿವೆ.

ಹೆಣ್ಣು ಧ್ವನಿ : ಸಾಮಾನ್ಯವಾಗಿ ಎಲ್ಲಾ ಜನರೂ ಮೈಲಾರಲಿಂಗನನ್ನು ಪೂಜಿಸಿದರೂ ಪ್ರಧಾನ ಭಕ್ತರು ಗೊರವರೇ. ಕುರುಬರ ನೆಚ್ಚಿನ ಆರಾಧ್ಯದೈವ, ಗೊಲ್ಲ, ಕುರುಬ, ಬೇಡ, ಒಕ್ಕಲಿಗ ಮುಂತಾದ ಜನಾಂಗಗಳಲ್ಲಿ ಗೊರವರನ್ನು ಬಿಡುವ ಸಂಪ್ರದಾಯ ರೂಢಿಯಲ್ಲಿದೆ.

ಧ್ವನಿ : ಹತ್ತನೇ ಶತಮಾನದ ಹಿಂದಿನಿಂದಲೂ ಗೊರವರು ಕರ್ನಾಟಕದಲ್ಲಿ ಇದ್ದರೆಂಬುದು ತಿಳಿದು ಬರುತ್ತದೆ. ಗೊರವರಿಗೆ ಗೊಗ್ಗಯ್ಯ, ಕಡಬಡ್ಡಯ್ಯ, ಎಂದು ಕರೆಯುವರು.

ಹೆಣ್ಣು ಧ್ವನಿ : ವರ್ಷಕ್ಕೊಮ್ಮೆ ದಸರಾ ತಿಂಗಳಲ್ಲಿ ನಡೆವ ಮೈಲಾರ ಲಿಂಗಪ್ಪನ ಜಾತ್ರೆಗೆ ಹಿರೇ ಮೈಲಾರಕ್ಕೆ ಅಸಂಖ್ಯಾತ ಗೊರವರು ಸೇರುತ್ತಾರೆ. ಹಿಂದೆ ಏಳುಕೋಟಿ ಜನ ಸೇರುತ್ತಿದ್ದುದರಿಂದ ಇದಕ್ಕೆ ಏಳುಕೋಟಿಜಾತ್ರೆ ಎಂದು ಕರೆವರು. ಆ ದಿನ ಸ್ವಾಮಿಗೆ ಶಿವಖಡ್ಗವನ್ನು ಸಾರುವರು. ಕೈಯಲ್ಲಿ ಢಮರುಗ ಹಿಡಿದು ಕಂಬಳಿ ಹೊದ್ದು ಮಣೆ ಸೇವೆ ನಡೆಸುವರು.

ಧ್ವನಿ : ಮೈಲಾರಲಿಂಗನ ಕ್ಷೇತ್ರದಲ್ಲಿ ಅನೇಕ ಪವಾಡಗಳನ್ನು ನಡೆಸುತ್ತಾರೆ. ಕಬ್ಬಿಣದ ಸುಳಿ ಮುರಿಯುವುದು, ಸರಪಳಿ ತುಂಡರಿಸುವುದು, ತೊಡೆಮೀನಖಂಡಗಳಲ್ಲಿ ಬಿಗನೀಗೂಟವನ್ನು ತೂರಿಸುವಂಥ ಕಾರ್ಯಭರಿತ ಪವಾಡಗಳನ್ನು ಮೆರೆಯುತ್ತಾರೆ. ಕಟ್ಟಿಗೆ ಬಿಲ್ಲನ್ನೇರಿ ಭವಿಷ್ಯ ನುಡಿಯುವರು. ಮಕ್ಕಳಿಲ್ಲದವರು ಗಂಡಾದರೆ ಗೊರವರನ್ನು, ಹೆಣ್ಣಾದರೆ ಗೊರವಿಯನ್ನು ಬಿಡುತ್ತೇನೆಂದು ಹರಸಿಕೊಳ್ಳುವರು. ಚಕ್ಕರೆ ಶಿವಶಂಕರ್ ಅವರು ಹೇಳುವಂತೆ-

ಹೆಣ್ಣು ಧ್ವನಿ : ಮೈಲಾರ ಕಾಲಾನುಕ್ರಮದಲ್ಲಿ ನಾಗರಿಕತೆ ಬೆಳೆಯುತ್ತಾ ಬಂದಂತೆ ಶಿಷ್ಟ ಮತ್ತು ಜನಪದ ವ್ಯವಸ್ಥೆಗಳ ನಡುವೆ ಸಿಕ್ಕ ಅವರವರ ಕಲ್ಪನೆಯಲ್ಲಿ ಹೊಸ ಹೊಸ ರೀತಿಯಲ್ಲಿ ಮೈದಾಳಿದನು. ಭಿನ್ನ ಜನಾಂಗಗಳ ಆರಾಧನೆಗೆ ವಸ್ತುವಾಗಿ ವೈಭವೀಕರಿಸಲ್ಪಟ್ಟು ಶಿಷ್ಟರಿಂದ ಮತ್ತು ಜನಪದರಿಂದ ದೇವತೆಯಾಗಿ ಪೂಜಿಸಿಕೊಳ್ಳುತ್ತಾ ಬಂದಿದ್ದಾನೆ. ಸಾಂಸ್ಕೃತಿಕ ವೀರನೆನಿಸಿಕೊಂಡಿದ್ದಾನೆ.

*

# ಕಿನ್ನರಿ ಜೋಗಿಗಳು

ಧ್ವನಿ ೧: ಕಿಂದರಿ ಒಂದು ಜನಪದ ವಾದ್ಯ, ಜನಪದ ವೀಣೆ ಎಂದೂ ಕರೆವರು. ಇದೊಂದು ತಂತಿ ವಾದ್ಯ. ಎರಡು ತಂತಿಗಳ ಈ ವಾದ್ಯವನ್ನು ಕಿನ್ನರಿ ಎನ್ನುತ್ತಾರೆ. ಇದು ಕಿನ್ನರಿ ವಾದ್ಯದ ಇಂಪಾದ ದನಿ-

ಧ್ವನಿ ೨: ಇದರ ರಚನೆ ಎಂದರೆ ಮೂರು ಅಡಿ ಉದ್ದದ ಸಣ್ಣ ಗಳುವಿಗೆ ಒಂದು ತುದಿಯಲ್ಲಿ ಮರದ ಗಿಣಿಯನ್ನು ಮಾಡಿ ಸಿಕ್ಕಿಸಲಾಗುವುದು. ಈ ಗಿಣಿಯನ್ನು ಮೂಗ ಅಥವಾ ಸೂಲಂಗಿ ಮರದಲ್ಲಿ ಮಾಡಿಕೊಳ್ಳುತ್ತಾರೆ. ಇದು ತಂತಿಯನ್ನು ಒಂದು ತುದಿಯಲ್ಲಿ ಕಟ್ಟಲು ಸಹಾಯವಾಗುವುದು. ಗಳುವಿನ ನಡುವೆ ಹತ್ತು ಹನ್ನೆರಡು ಮೆಟ್ಟಲುಗಳನ್ನು ಅಳವಡಿಸುತ್ತಾರೆ. ಇದನ್ನು ಸಾರಿ ಎನ್ನುತ್ತಾರೆ. ಇವು ಚಿಪ್ಪು ಹಂದಿಯ ಮೈಮೇಲಿರುವ ಚಕ್ಕೆಯಂಥ ಸಾಧನಗಳು. ಇವನ್ನು ಜೇನು ಮೇಣದಿಂದ ಗಳುವಿನ ಮೇಲೆ ಕೂರಿಸಿರುತ್ತಾರೆ. ಒಂದು ತುದಿಯ ಗಿಣಿಯ ಆಕೃತಿಗೆ ಕಟ್ಟಿದ ತಂತಿಗಳನ್ನು ಇನ್ನೊಂದು ತುದಿಯಲ್ಲಿ ಶೂಲದ ಕಟ್ಟಿಗೆ ಸುತ್ತಿ ಎರಡು ತಿರುಪುಗಳಿಗೆ ಸೇರಿಸುತ್ತಾರೆ. ಶೃತಿ ಮಾಡಿಕೊಳ್ಳುವಾಗ ಈ ತಿರುವುಗಳನ್ನು ತಿರುಗಿಸಿ ಬಿಗಿ ಅಥವಾ ಸಡಿಲ ಮಾಡಿಕೊಳ್ಳುವರು. ಎರಡು ತಂತಿಗಳು ಸಾರಿಗಳ ಮೇಲೆ ಹಾದು ಹೋಗಿರುತ್ತವೆ. ಗಳುವಿಗೆ ಎರಡು ಅಥವಾ ಮೂರು ಮಾಗಿಯ ಬುರುಡೆಗಳನ್ನು ಕೆಳಭಾಗದಲ್ಲಿ ಅಳವಡಿಸಿರುತ್ತಾರೆ. ಈ ಮಾಗಿ ಬುರುಡೆಗಳನ್ನು ದಾರದಿಂದ ಗಳುವಿಗೆ ಬಿಗಿದು ಆ ಬಿಗಿದ ಜಾಗದಲ್ಲಿಯೂ ಮೇಣವನ್ನು ಮೆತ್ತಿರುತ್ತಾರೆ. ಒಂದು ತುದಿಯಲ್ಲಿ ಗಿಣಿ ಮತ್ತೊಂದು ಕಿರಿದಾದ ತುದಿಯಲ್ಲಿ ನವಿಲು ಗರಿಗಳನ್ನು ಸಿಕ್ಕಿಸಿರುತ್ತಾರೆ.

ಧ್ವನಿ : ಇವರ ವೇಷಭೂಷಣಗಳು ಆಕರ್ಷಕ. ಕಾವಿವಸ್ತ್ರ ಧರಿಸಿ ವಿಭೂತಿ ಬಳಿದು ಇವರು ಸಿದ್ಧರಂತೆ ಕಾಣುವರು. ಇವರದು ಶಿವನು ಗಂಗೆಯನ್ನು ತರಲು ಜೋಗಿಯಾಗಿ ಹೋದ ವೇಷವೋ ಎಂಬಂತೆ ತೋರುವುದು. ಬಣ್ಣಬಣ್ಣದ ವೇಷ ಭೂಷಣ, ಹಾಡುಗಾರಿಕೆ ಇವರ ವೈಶಿಷ್ಟ್ಯ. ಕೈಯಲ್ಲಿ ಉದ್ದವಾದ ಕೋಲು ತಲೆಗೆ ಬಣ್ಣದ ಮುಂಡಾಸು, ಮಣಿಕುಚ್ಚುಗಳು, ಸರಗಳು ಕರಿಯ ಸಿಲುವಂಗಿ ಮುಂಡಾಸಿನ ಮೇಲೆ ಬಣ್ಣ ಬಣ್ಣದ ಮಣಿಗಳ ಸರ, ಗಾಜಿನ

ಕೊಳವೆಗಳನ್ನು ಇಳಿಬಿಡುತ್ತಾರೆ. ಗಾಜಿನ ಗುಳೋಪುಗಳು ಸುತ್ತಲೂ ನೇತಾಡುತ್ತಿರುತ್ತವೆ. ಮುತ್ತಿನ ತುರಾಯಿ, ಕೆಲವೊಮ್ಮೆ ಕಲ್ಗಿ, ಸಣ್ಣ ತ್ರಿಶೂಲವನ್ನು ಮುಂಡಾಸಿಗೆ ಸಿಕ್ಕಿಸಿರುತ್ತಾರೆ. ನಿಲುವಂಗಿ ಮೇಲೆ ಶಲ್ಯ, ಕೊರಳಿಗೆ ರುದ್ರಾಕ್ಷಿ, ಸಿಂಗನಾದವೆಂಬ ಬೆರಳುದ್ದದ ವಾದ್ಯ, ಒಂದು ಕೈಯಲ್ಲಿ ಕಿನ್ನರಿ ಮತ್ತೊಂದರಲ್ಲಿ ಚಿಟಗಿ. ಕಾಲಿಗೆ ಗೆಜ್ಜೆ, ಹಣೆಗೆ ಅಡ್ಡ ವಿಭೂತಿ, ಎರಡು ಕಂಕುಗಳಲ್ಲಿ ದೊಡ್ಡ ಜೋಳಿಗೆಗಳು ಇರುತ್ತವೆ.

ಧ್ವನಿ : ಜೋಗಿ ಎಂದರೆ ಯೋಗಿ, ಈ ಜೋಗಿ ಲೋಕದ ಸುಖ ಭೋಗಗಳನ್ನು ತ್ಯಜಿಸಿದವನಲ್ಲ. ಶಿವನ ಹೆಸರಲ್ಲಿ ದೀಕ್ಷೆ ಪಡೆದ ಒಂದು ವರ್ಗ. ಜೋಗಿಗಳಲ್ಲಿ ಸಾಮಾನ್ಯ ಜೋಗಿಗಳು, ಕಿನ್ನರಿ ಜೋಗಿಗಳು ಭೈರವನ ಧಾರ್ಮಿಕ ಸಂಪ್ರದಾಯಕ್ಕೆ ಹೆಚ್ಚು ಅಂಟಿಕೊಂಡಿಲ್ಲ. ಕಥೆಗಳನ್ನು ಹಾಡುತ್ತಾ ಜೀವನ ಮಾಡುತ್ತಾರೆ. ದೀಕ್ಷೆ ಪಡೆದು ಲಾಂಛನ ಧರಿಸಿ, ಸಾಮಾನ್ಯ ಜೋಗಿಗಳಂತೆ, ಶಿವಪೂಜೆಗಳಲ್ಲಿ, ಧಾರ್ಮಿಕ ಆಚರಣೆಗಳಲ್ಲಿ ಭಾಗವಹಿಸುವುದಿಲ್ಲ. ಶಿವನ ಅಂಶದಿಂದ ಬಂದವರಾದ್ದರಿಂದ ಇವರನ್ನು ಶಿವಜೋಗಿಗಳು, ದುರ್ಗಿಯ, ಆರಾಧಕರಾದುದರಿಂದ ದುರ್ಗಾ ಜೋಗಿಗಳು; ಅರ್ಜುನನಿಗೆ ಮೆಚ್ಚಿನವರಾದುದರಿಂದ ಪಾಂಡವ ಜೋಗಿಗಳು, ಅಥವಾ ಅರ್ಜುನ ಜೋಗಿಗಳೆಂದು ಕರೆವರು. ಜೋಗಿ ಎಂಬುದು ಒಂದು ಬುಡಕಟ್ಟು ಜನಾಂಗ. ಇವರಲ್ಲಿ ಕಿನ್ನರಿ ಜೋಗಿಗಳದ್ದೂ ಒಂದು ವರ್ಗ. ಇವರಲ್ಲಿ ಮರಾಠಿ, ಕನ್ನಡ, ತೆಲುಗು, ತುಳು ಮಾತಾಡುವ ಕದರಿಮಠದ ವ್ಯಾಪ್ತಿಗೆ ಸೇರಿದ ಜೋಗಿಗಳುಂಟು. ಇವರು ಕಿನ್ನರಿ ಹಿಡಿದು ಹಾಡುವುದಿಲ್ಲ. ಇವರು ಕನ್ನಡ ಹಾಡನ್ನು ಹಾಡುವವರು.

ಧ್ವನಿ : ಕಿನ್ನರಿ ಜೋಗಿಗಳು ಬಳ್ಳಾರಿ ಜಿಲ್ಲೆಯ ಜೋಗಿಹಳ್ಳಿ, ಚಿತ್ರದುರ್ಗ, ಧಾರವಾಡ, ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು, ಜಿಲ್ಲೆಗಳಲ್ಲಿ ಕಂಡು ಬರುವರು.

ಧ್ವನಿ : ಕಿನ್ನರಿ ವಾದ್ಯ ಪೌರಾಣಿಕ ಹಾಗೂ ಜಾಣತನ ಹಿನ್ನಲೆಯನ್ನು ಹೊಂದಿದೆ. ಇದರ ಬಗೆಗೆ ಕಿನ್ನರಿ ಸಿದ್ದಪ್ಪನವರು ನಿರೂಪಿಸಿದ ಕಥೆ.

(ಸಂದರ್ಶನದ ಭಾಗ)

ಧ್ವನಿ : ಕಿನ್ನರಿ ವಾದ್ಯ ಭಾರತದ ಎಲ್ಲೆಡೆ ಕಂಡು ಬಂದಿದೆ. ಪುರಾಣ ಕಥೆಗಳಲ್ಲಿ ಕಂಡು ಬರುವ ಕಿನ್ನರರು ಎಂಬ ದೇವತೆಗಳು ಸಂಗೀತಕ್ಕೆ ಹೆಸರಾದವರು. 'ಕಿನ್ನರ' ಶಬ್ದದಿಂದ ಕಿನ್ನರಿ ಬಂದಿರಬಹುದು. ಕಿನ್ನಡಿ ಎಂದೂ ಹೇಳುವುದುಂಟು. ಜೋಗಿಗಳು ಇದನ್ನು ಸರಸ್ವತಿ ಎಂದು ಕರೆಯುವರು. ದಮ್ಮಡಿ, ಕಿರುಗೆಜ್ಜೆ,

ಗಗ್ಗರ, ಪಿಳ್ಳಂಗೋವಿ, ಕಿನ್ನರಿ ಮೇಳದಲ್ಲಿದ್ದು ಇದರಲ್ಲಿ ಮೂರರಿಂದ ಆರು ಮಂದಿಯವರೆಗೆ ಇರುತ್ತಾರೆ.

(ಕಿನ್ನರಿ ಹಾಡು)

ಧ್ವನಿ : ಮುಖ್ಯ ಕಥೆಗಾರ ಕಿನ್ನರಿ ಹಿಡಿದು ಹಾಡಿ ಸೊಲ್ಲನ್ನೆತ್ತಿಕೊಡುತ್ತಾನೆ. ಉಳಿದವರು ಸೊಲ್ಲು ಮುಂದುವರಿಸಿ ಕುಣಿವರು. ಇದು ರಾಜಂಶ - ಘರಂಶ ಕಥೆಯಲ್ಲಿ ಬರುವ ದುಃಖ ಸನ್ನಿವೇಶ ಜೋಗಿಗೆ ದೀಕ್ಷೆ ಕೊಡುವ ವಿಧಾನವನ್ನು ಕಿನ್ನರಿ ಜೋಗಿ ಸಿದ್ದಪ್ಪನಿಂದ ಕೇಳುವುದು ಉಚಿತ-

(ಸಂದರ್ಶನ)

ಧ್ವನಿ : ಕಿನ್ನರಿ ಜೋಗಿಗಳು ಶೈವ ಪಂಥಕ್ಕೆ ಸೇರಿದವರು. ಕಾಪಾಲಿ ಧರ್ಮಕ್ಕೆ ಸೇರಿದವರು ಏಕೆಂದರೆ ಅವರು ನಾಥ ಸಂಪ್ರದಾಯ ಮಠಗಳಲ್ಲಿ ದೀಕ್ಷೆ ಪಡೆಯುತ್ತಾರೆ. ನಾಗಮಂಗಲ ತಾಲ್ಲೂಕು ಆದಿಚುಂಚನಗಿರಿ, ಮಂಗಳೂರಿನ ಕದರೀಮಠಗಳಲ್ಲಿ ನಾಥ ಸಂಪ್ರದಾಯವಿದೆ. ಮಹಾರಾಷ್ಟ್ರದ ನಾಸಿಕ್ ಇವರ ಮೂಲ ಕ್ಷೇತ್ರವೆಂದು ಹೇಳಿಕೊಳ್ಳುತ್ತಾರೆ. ಚುಂಚನ ಗಿರಿಯಲ್ಲಿ ಭೈರವನೇ ಕಿನ್ನರಿ ಹಿಡಿದು ಹಾಡುತ್ತಾನೆಂದು ಜನಪದ ಗೀತೆಗಳು ಬಣ್ಣಿಸುತ್ತವೆ.

ಧ್ವನಿ : ಶಿವನೇ ತನ್ನ ಬೆವರಲ್ಲಿ ಹುಟ್ಟಿದ ಜೋಗಿಗೆ ಕಿನ್ನರಿ ಕೊಟ್ಟು ಶೈವಧರ್ಮ ಪ್ರಸಾರ ಮಾಡಲು ಕಳುಹಿಸಿದಂತೆ ಜೋಗಿಗಳು ಹೇಳಿಕೊಳ್ಳುತ್ತಾರೆ.

ಧ್ವನಿ : ಇದಕ್ಕೊಂದು ಕಥೆ:

ಧ್ವನಿ : ಭೂಲೋಕದಲ್ಲಿ ರಾಕ್ಷಸರ ಹಾವಳಿ ತಪ್ಪಿಸಲು ಶಿವ ಕಾಲಭೈರವನ ರೂಪದಲ್ಲಿ ಅವತಾರವೆತ್ತಿ ರಾಕ್ಷಸರೊಡನೆ ಹೋರಾಡುವಾಗ ಒಂಬತ್ತು ಜನ ಜೋಗಿಗಳು ಸಹಾಯಕರಾಗಿ ನಿಂತರು. ದುರ್ಗಿಯೂ ಸಹಾಯಕ್ಕೆ ಬಂದಳು. ರಾಕ್ಷಸರ ನಾಶವಾಯಿತು ಇವರು ದುರ್ಗಿಯ ಕೃಪೆಗೆ ಒಳಗಾದರು, ಇವರೇ ನವನಾಥರು. ಇವರು ತಮ್ಮ ಮೂಲ ಪುರುಷರೆಂಬುದು ಜೋಗಿಗಳ ಅಭಿಪ್ರಾಯ.

ಧ್ವನಿ : ಮತ್ತೊಂದು ಕಥೆ ಹೀಗಿದೆ.

ಧ್ವನಿ : ಚುಂಚನ ಗಿರಿಯಲ್ಲಿ ಚುಂಚನ ಪ್ರಾಬಲ್ಯ ಹೆಚ್ಚಿ ಜನರಿಗೆ ಹಿಂಸೆ ಕೊಡುತ್ತಿದ್ದ. ಶಿವ ಈತನನ್ನು ಸಹಕರಿಸಿ ಗಿರಿಯಲ್ಲಿ ನೆಲಸಿದ. ಈತನಿಗೆ ಸಹಾಯಕರಾದ ಜೋಗಿಗಳನ್ನು ಭಕ್ತರಾಗಿ ಮಾಡಿಕೊಂಡು ಸಿಂಗನಾಥ, ತ್ರಿಶೂಲ ಕಪಾಲ, ಮೊದಲಾದ ಬಿರುದುಗಳನ್ನು ಕೊಟ್ಟ ಕಿನ್ನರಿಯನ್ನು ಕಿಗಿತ್ತು ತನ್ನ ಮಹಿಮೆ ಮೆರೆಸುವಂತೆ ತಿಳಿಸಿದ. ಆದಿ.ಸಿದ್ಧನಿಂದ ಒಂದು ಮಠವನ್ನು ಅಲ್ಲಿ ಸ್ಥಾಪಿಸಿ ಮುಂದಿನ ಜೋಗಿಗಳು ದೀಕ್ಷೆ ಪಡೆಯುವಂತೆ ಮಾಡಿದೆ.

ಧ್ವನಿ : ಕಿನ್ನರಿ ಜೋಗಿಗಳು ವೃತ್ತಿಗಾಯಕರು, ದೊಡ್ಡ ದೊಡ್ಡ ಜನಪದ ಕಾವ್ಯಗಳನ್ನು ಹಾಡುವರು. ಅರ್ಜುನ ಜೋಗಿ ಹಾಡು, ಗಂಗೆ - ಗೌರಿ ವಿರಾಟಪರ್ವ, ಐರಾವತ, ಅರಣ್ಯವಾಸ, ಕರ್ಣಾರ್ಜುನರ ಕಾಳಗ, ಜನಪ್ರಿಯವಾದುವು. ಅರ್ಜುನಜೋಗಿ ಹಾಡಿನ ಮಾಧುರ್ಯ ತುಂಬಾ ವಿಶಿಷ್ಟವಾದುದು. ನೀಲಗಾರರೂ ಅರ್ಜುನ ಜೋಗಿ ಹಾಡು ಹಾಡಿದರೂ ಭಾರತದ ಕಥೆ ಅವರಿಗೆ ಬರುವುದಿಲ್ಲ. ಭಾರತವನ್ನು ಆಮೂಲಾಗ್ರವಾಗಿ ಹಾಡುವವರು ಕಿಂದರಿ ಜೋಗಿಗಳೇ.

ಧ್ವನಿ : ರಮ್ಯ ಕಾವ್ಯಗಳಾದ ಇಗ್ನಾವತಿ, ಲಿಂಬಯ್ಯ - ಲಚುಮಯ್ಯ, ಅಸಾವತಿ ನೀಲಸೇನ, ಧರ್ಮಶೀಲರಾಜ, ರಾಜಹಂಸ - ಪರಮಹಂಸ ಕಥೆಗಳನ್ನು ಗದ್ಯಪದ್ಯ ಮಿಶ್ರಿತ ಶೈಲಿಯಲ್ಲಿ ಮೇಳ ಮಾಡುತ್ತಾರೆ. ರಾತ್ರಿಯೆಲ್ಲಾ ಅಭಿನಯದೊಂದಿಗೆ ಹಾಡುತ್ತಾರೆ.

ಧ್ವನಿ : ಇದು ಬಂಗಾರ ಗಿರಿ ಬಾವಾಜಿಯಲ್ಲಿ ಬರುವ ಸಂತೋಷದ ಸಂದರ್ಭ. ಯಾವುದೇ ಕಾವ್ಯವನ್ನು ಹಾಡಬೇಕಾದರೂ ನಮ್ಮ ಜನಪದ ಕಲಾವಿದರು ದೇವರ ಪ್ರಾರ್ಥನೆಯೊಡನೆ ಆರಂಭಿಸುತ್ತಾರೆ. ಹಾಗೆಯೇ ಕಿಂದರಿ ಜೋಗಿಗಳೂ ಸಹ ಹಾಡುತ್ತಾರೆ. ಕಿನ್ನರಿ ಜೋಗಿಗಳು ಹಾಡುವ ಕೆಲವು ಕಥೆಗಳಲ್ಲಿ ಬರುವ ಕೆಲವು ಸನ್ನಿವೇಶಗಳನ್ನು ಕೇಳೋಣ.

ಧ್ವನಿ : ಚಂದ್ರಹಾಸನು ಹುಟ್ಟಿದ ಸನ್ನಿವೇಶ

ಧ್ವನಿ : ಇದು ಗಂಗೆ - ಗೌರಿ ಜಗಳದ ಪ್ರಸಂಗ

ಧ್ವನಿ : ಶಂಕಿನ ಕುಮಾರನ ಕಥೆಯಲ್ಲಿ ಹೇಳುವ ಒಂದು ಉಪ ಕಥೆ

ಧ್ವನಿ : ಇದು ಅರ್ಜುನ ಜೋಗಿ ಹಾಡಿನ ಒಂದು ಭಾಗ

ಧ್ವನಿ : ಅರುಣ ಕುಮಾರನ ಕಥೆ

ಧ್ವನಿ : ಕಥೆಗಳನ್ನಲ್ಲದೆ, ಭಜನೆಗಳನ್ನೂ ಹಾಡುತ್ತಾರೆ. ಎಂಬುದಕ್ಕೆ ಈ ಭಜನೆ ಪದ ಒಂದು ಉದಾಹರಣೆ:

ಧ್ವನಿ : ಇದು ಕವಲಿ ಕಥೆಯ ಒಂದು ತುಣುಕು

ಧ್ವನಿ : ಮಂಗಳದೊಡನೆ ಕಾವ್ಯ ಮುಕ್ತಾಯವಾಗುತ್ತದೆ ಇದು ಮಂಗಳ ಗೀತೆ

ಧ್ವನಿ : ವರನಂದಿ ಎಂಬ ಮಹಮದೀಯ ಕನ್ಯೆಯನ್ನು ಕರೆತರಲು ಚೆಲುವನಾರಾಯಣ ಹೋದಾಗ ಜೋಗಿಯ ವೇಷದಲ್ಲಿ ಹೋಗಿರಬೇಕು. ಅದಕ್ಕಾಗಿ ಮೇಲುಕೋಟೆ ಸ್ವಾಮಿ ಕುರಿತ ಹಾಡಿನಲ್ಲಿ ಕಿನ್ನರಿ ಜೋಗಿಗಳ ಪ್ರಸ್ತಾಮಾಡಿರುವುದು.

ಬೆಟ್ಟದ ಮ್ಯಾಗಳ ಜಲ್ಲೆ ಬಿದಿರು
ಬೇಲಿ ಮ್ಯಾಗಳ ಸೋರೆ ಬುರುಡೆ
ಲೋಲು ಕಿನ್ನುಡಿ ನುಡಿಸೊನ್ಯಾರಯ್ಯೊ
ನಿಲ್ಲಯ್ಯ ರಾಜ

ಧ್ವನಿ : ಆಕೆ ಈ ಜೋಗಿಗೆ ಮನಸೋತು ಆತನ ಹಿಂದೆ ಓಡಿ ಬಂದಿರಬೇಕು.

ಧ್ವನಿ : ಚುಂಚನಗಿರಿಯ ಭೈರವನ ಹಾಡುಗಳಲ್ಲಿ ದೇವರೇ ಜೋಗಿಯಾಗಿ ಕಿಂದರಿ ಬಾರಿಸಿದ ವರ್ಣನೆ ಬರುತ್ತದೆ.

ಚುಂಚನ ಗಿರಿಯಪ್ಪನ ಸೂಜಿಗಲ್ಲಿನ ಮೇಲೆ
ನಿಂತು ಕಿನ್ನುಡಿಯ - ನುಡಿಸೋನೆ - ಭೈರುವ
ನಿನ್ನ ಸೊಲ್ಲಾದವೆಲ್ಲ ಅಪರಂಜಿ

ಕಿನ್ನರಿಯ ಸ್ವಾಮಿ ನನ್ನ ಕೇರಿಗೆ ಬಾರೋ
ನಮ್ಮಲ್ಲಿ ಒಬ್ಬ ಸೂಜಾಣ ಕಂದಯ್ಯ
ನಿನ್ನ ಕಿನ್ನರಿಗೆ ದನಿಯ ಕೊಡುತ್ತಾನೆ

ಧ್ವನಿ : ಬಸವನ ಪುರಾಣದಲ್ಲೂ ಕಿನ್ನರಿಯ ಉಲ್ಲೇಖವಿದೆ. ಕಿನ್ನರಿ ಬೊಮ್ಮಯ್ಯ ೧೨ನೇ ಶತಮಾನದಲ್ಲಿದ್ದವ. ಇದಕ್ಕೂ ಹಿಂದೆ ಕಿನ್ನರಿ ಇದ್ದಿರಬಹುದು. ಜನಪದ ಕವಿಗಳೂ ಪ್ರೌಢ ಕವಿಗಳೂ ಕಿಂದರಿಜೋಗಿ ಕಿಂದರಿ ವಾದ್ಯವನ್ನು ಕೊಂಡಾಡಿದ್ದಾರೆ.

ಧ್ವನಿ : ಕಥೆಯನ್ನು ಹಾಡುವವರೆಂದರೆ ಹಂಡೇ ಜೋಗಿಗಳು, ಬಾಲಜೋಗಿಗಳು. ಬಾಲಜೋಗಿ ಬಾಲನಾಗಮ್ಮನ ಕಥೆ ಹಾಡುವರು. ಹಂಡೇ ಜೋಗಿಗಳೇ ಕಿನ್ನರಿ ಜೋಗಿಗಳು. ಕಿನ್ನರಿ ಜೋಗಿಗಳು ದೇವರ ಹೆಸರಲ್ಲಿ ದೀಕ್ಷೆ ಪಡೆದರೂ ಧಾರ್ಮಿಕ ವಿಧಿಗಳಲ್ಲಿ ಹಾಡಬೇಕಾದುದಿಲ್ಲ. ಕ್ಷೇತ್ರಕ್ಕೆ ಹೋಗಬೇಕಿಲ್ಲ. ತಮಗಿಷ್ಟ ಬಂದ ಕಥೆಗಳನ್ನು ಹಾಡಬಹುದು. ಇವರು ಊರೂರು ಅಲೆದು ಜೀವನ ಸಾಗಿಸುವರು. ಇವರು ಅಲೆಮಾರಿ ಜನಾಂಗಗಳು

ಧ್ವನಿ : ಮಳೆಗಾಲದಲ್ಲಿ ವ್ಯವಸಾಯ, ಸುಗ್ಗಿಯ ಕಾಲಕ್ಕೆ ಊರೂರು ಸೇರಿ ಗುಡಾರ ಹಾಕುತ್ತಾರೆ. ಜೊತೆಯಲ್ಲಿ ನಾಯಿ, ಕೋಳಿ, ಆಡು, ಕುರಿ, ದನ, ಕುದುರೆಗಳಿರುತ್ತವೆ. ಸಂಜೆಯವರೆಗೂ ಜೋಗಿ ವೇಷ ಧರಿಸಿ ಜೋಳಿಗೆ ತುಂಬಿಸಿಕೊಂಡು ಬರುತ್ತಾರೆ. ಮೂರು ನಾಲ್ಕು ತಿಂಗಳು ಹೀಗೆ ಮಾಡಿ ಊರಿಗೆ ಬರುತ್ತಾರೆ.

ಧ್ವನಿ : ಇವರ ಮದುವೆ ಗಂಡಿನ ಮನೆಯಲ್ಲಿ ೨ರಿಂದ ೫ದಿನಗಳು ಆಗುವುದು. ಹೆಣ್ಣಿನ ಪಕ್ಕದಲ್ಲಿ ಒಂದು ಕುಂಭ ಇಟ್ಟು ಲಗ್ನ ಮಾಡುವರು ಹೆಣ್ಣಿನ. ಮನೆಯಲ್ಲೇ ಗಂಡಿನ ಮುಖದರ್ಶನವಾಗುವುದು.

ಧ್ವನಿ : ಸತ್ತವರನ್ನು ಹೂಳುವಾಗ ಜೋಗಿಯ ಬಿರುದಾದ ಸೋರೆಯ ಬುರುಡೆಯ ಅಕ್ಷಯಪಾತ್ರೆಯನ್ನು ಜೊತೆಯಲ್ಲಿ ಇಡುತ್ತಾರೆ. ಜನಪದ ಗಾಯಕರಲ್ಲಿ ಕಿನ್ನರಿ ಜೋಗಿಗಳು ಕಿನ್ನರರಿದ್ದಂತೆ ಗಾನ ಗಂಧರ್ವರಿದ್ದಂತೆ ಇವರನ್ನು ಎಲ್ಲರೂ ಆಧರಿಸಿ ಸತ್ಕರಿಸುವರು. ಇವರು ತಮ್ಮ ಕಲೆಯನ್ನು ಇನ್ನೂ ಉಳಿಸಿ ಬೆಳೆಸಿಕೊಂಡು ಬಂದಿರುವುದು ನಿಜಕ್ಕೂ ಸಂತಸದ ಸಂಗತಿ ಅಲ್ಲವೇ.?



ಬರುತ್ತದೆ. ಕಥೆಯಲ್ಲಿ ನಾಯಕ ನಾಯಕಿಯರ ಮಗುವಾದ ಮೇಲೆ ಮಗುವಿಗೆ ಹೆಸರಿಡುವಾಗ ಸನ್ನಿವೇಶಕ್ಕೆ ಹೊಂದಿಕೊಂಡಂತೆ ಸಂಜ್ಞೆಗಳ ಮೂಲಕ ಹೇಳಿ ಕಾಣಿಕೆಯನ್ನು ಸಂಗ್ರಹಿಸುತ್ತಾರೆ.

ದೇವರ ಪಟಕ್ಕೆ ಮಂಗಳಾರತಿ ಮಾಡಿ ತಟ್ಟೆಯೊಡನೆ ಶಿಷ್ಯ ಜನರ ನಡುವೆ ಬರುತ್ತಾನೆ. ಗುರುಗಳು ಚಪ್ಪರದಲ್ಲಿರುತ್ತಾರೆ. ಶಿಷ್ಯ ಅವರ ಹೆಸರು ತಿಳಿದು ಕೈ ಸನ್ನೆಯಿಂದ ಸಂಕೇತಗಳ ಮೂಲಕ ಗುರುವಿಗೆ ತಿಳಿಸಿದಾಗ ಗುರು ಪದ್ಯದಲ್ಲಿ ಉತ್ತರಕೊಡುತ್ತಾರೆ. ಕೈ ಸಂಜ್ಞೆಗಳಿಗೆ ಕೈಕರಣೆ ಎಂದು ಹೆಸರು. ಮತ್ತೊಂದು ಮಾತಿನ ಮೂಲಕ ಸೂಚಿಸುವ ಸಂಕೇತಗಳು. ಬೆಳಕಿನ ಅನುಕೂಲ ಇಲ್ಲದೆಡೆ ಕೈಗಳಿಂದ ಸಂಜ್ಞೆ ಮಾಡದೆ ಮಾತಿನ ಸಂಕೇತ ಉಪಯೋಗಿಸುತ್ತಾರೆ.

ರಾಮಣ್ಣ : ಇದರ ಪರಿಚಯ ಸ್ವಲ್ಪ ಮಾಡಪ್ಪಾ, ನಾನು ಸ್ವಲ್ಪ ಟಿಪ್ಪಣಿಗಳನ್ನು ಗುರುತು ಹಾಕಿಕೋಳ್ತೀನಿ.

ಕಲ್ಲಣ್ಣ : ಆಮೇಲೆ ಒಂದು ಪ್ರಬಂಧ ಬರೆದುಬಿಡ್ತೀಯಾ?

ರಾಮಣ್ಣ : ಅದು ಮುಂದಿನದು.

ಕಲ್ಲಣ್ಣ : ಆಯ್ತಪ್ಪಾ ಹೇಳ್ತೀನಿ, ಈ ಮೇಳದಲ್ಲಿ ಮೂರು ಜನರಿರ್ತಾರೆ. ಸಾಮಾನ್ಯವಾಗಿ ಇದರಲ್ಲಿ ಮುಖ್ಯವಾದವನು 'ಗುರು'. ಮಿಕ್ಕಿಬ್ಬರು ಸಹಾಯಕರು ಅಥವಾ ಶಿಷ್ಯರು. ಇವರಲ್ಲಿ ಗುರುಗಳು ತಲೆಗೆ ಕಿರೀಟಾಕೃತಿಯ ವರ್ಣರಂಜಿತ ಕುಲಾವಿ, ಅದರಿಂದ ಇಳಿದು ಬಂದ ಮುತ್ತಿನ ತುರಾಯಿ, ಕಿವಿಯಲ್ಲಿ ಕರ್ಣ ಕುಂಡಲ, ಕೊರಳು, ಕೈಗಳಲ್ಲಿ ರುದ್ರಾಕ್ಷಿ ಮಾಲೆ, ಕಾಲಿಗೆ ಗೆಜ್ಜೆ, ಕಾವಿಯ ನಿಲುವಂಗಿ ನಡುವಿಗೆ ವಸ್ತ್ರ, ಕಾಸೆ ಪಂಚೆ, ಹಣೆಗೆ ವಿಭೂತಿ ಧರಿಸಿಕೊಂಡಿರುತ್ತಾರೆ. ಶಿಷ್ಯರು ತಲೆಗೆ ಕಾವಿ ಪೇಟ, ನಿಲುವಂಗಿ, ಕಾಸೆ ಪಂಚೆ, ಕಾಲಿಗೆ ಗೆಜ್ಜೆ, ನಡುವಿಗೆ, ಬಿಳಿ ವಸ್ತ್ರದ ನಡುಪಟ್ಟಿ ಹಣೆಗೆ ವಿಭೂತಿಯನ್ನು ಧರಿಸಿರುತ್ತಾರೆ.

ರಾಮಣ್ಣ : ಇವರು ಯಾವ್ಯಾವ ಕಥೆ ಮಾಡ್ತಾರಯ್ಯ?

ಕಲ್ಲಣ್ಣ : ಸೋಮಶೇಖರ-ಚಿತ್ರಶೇಖರ, ಕಪ್ಪುಗುರುಗಳ ಚೂಡಾಮಣಿ ಕಥೆ, ಶೀಲಾವತಿ, ಅರಣ್ಯಕುಮಾರ ಕಾಡುಸಿದ್ದಮ್ಮನ ಕಥೆ, ಬಸವಕುಮಾರ, ಲೋಹಿತಕುಮಾರ, ರುದ್ರೇಶ್ವರ ಮಹಾತ್ಮ್ಯ, ಸಿರಿಯಾಳ, ಶಿವಯೋಗಿ ಪರಯೋಗಿ, ಮಹಾಂದಾತಭೂಪತಿ, ನೀಲಕಂಠ - ರೂಪಾವತಿ ಮುಂತಾದ ಕುತೂಹಲ ಭರಿತ ಕಥೆಗಳನ್ನು ಹಾಡ್ತಾರೆ. ಜನಪದ ಕಥೆಗಳೇ ಇವಕ್ಕೆ ವಸ್ತು. (ಆಟ ಆರಂಭವಾಗುತ್ತೆ) ಇದರಲ್ಲಿ ಪದ್ಯ-ಗದ್ಯ ಮಿಶ್ರಿತ ಚಂಪೂ ಶೈಲಿಯಲ್ಲಿ ಇರುತ್ತೆ ಅಂತ ಹೇಳ್ತಾರೆ. ಹರಿಕಥೆಯ ಮೋಹಕತೆ,

ಬಯಲಾಟದ ಧಾಟಿ, ಜನಪದ ಸಂಗೀತದ ಸ್ವಾರಸ್ಯವಿದೆ ಹೌದು.....
ಈಗ ಪ್ರಾರ್ಥನೆಯೊಡನೆ ಕಾರ್ಯಕ್ರಮ ಆರಂಭವಾಗುತ್ತೆ

(ಪ್ರಾರ್ಥನೆ)

ಇನ್ನು ಕಥೆ ಆರಂಭ......

ರಾಮಣ್ಣ : ಮುಖ್ಯ ನಿರೂಪಕ ಕೀರ್ತನಕಾರ ಇದ್ದಂತೆ ನವರಸಗಳನ್ನು ಬೆರಸಿ ಕಥೆಯ ನಿರೂಪಣೆಯನ್ನು ಮಾಡ್ತಾ ಇದ್ದಾನೆ. ಶಿಷ್ಯರು ಗುರುಗಳ ವ್ಯಾಖ್ಯಾನಕ್ಕೆ ಹೂಂಗುಟ್ಟುತ್ತಿದ್ದಾರೆ. ಏನೇನೋ ಸಣ್ಣಪುಟ್ಟ ಪ್ರಶ್ನೆಗಳನ್ನೂ ಹಾಕ್ತಿದ್ದಾರೆ.

ಕಲ್ಲಣ್ಣ : ಶಿಷ್ಯರ ಪಾತ್ರನೇ ಈ ಗುರುಗಳ ಕಥೆಯ ನಿರೂಪಣೆಗೆ ಪೋಷಣೆ. ಅದಕ್ಕೇ....

ಕಲ್ಲಣ್ಣ : ಇವರು ನಗರ, ರಾಜವೈಭವದ ವರ್ಣನೆಯನ್ನು ತುಂಬಾ ಸೊಗಸಾಗಿ ಮಾಡ್ತಾರೆ. ಈಗ ಕೇಳು.

(ವರ್ಣನೆ)

ರಾಮಣ್ಣ : ಅಂದಹಾಗೆ ಇವರು ಯಾವ ಪಂಥಕ್ಕೆ ಸೇರಿದವರು?

ಕಲ್ಲಣ್ಣ : ಶೈವ ಪಂಥಕ್ಕೆ ಮೂಲತಃ ವೀರಶೈವ ಜಂಗಮರಿಂದ ಬಂದರೂ ಬೇರೆ ಬೇರೆ ಜಾತಿಯವರೂ ಇದನ್ನು ಹಾಡುತ್ತಾರೆ.

ರಾಮಣ್ಣ : ಈ ಮೇಳವನ್ನು ಯಾವ ಸಂದರ್ಭಗಳಲ್ಲಿ ಹಾಡ್ತಾರೆ?

ಕಲ್ಲಣ್ಣ : ಹಬ್ಬ ಹರಿದಿನ, ಜಾತ್ರೆಗಳ ಸಂದರ್ಭದಲ್ಲಿ ನಡೆಸಿಕೊಡ್ತಾರೆ. ಕೆಲವರು ಬೇಕಾದಾಗ ಕರೆಯಿಸಿ ಹಾಡಿಸ್ತಾರೆ.

ರಾಮಣ್ಣ : ಕಥೆಯಲ್ಲಿ ಹಾಸ್ಯನೂ ಇರುತ್ತೆ ಅಲ್ವಾ?

ಕಲ್ಲಣ್ಣ : ಹಾಸ್ಯ ಇಲ್ಲದೆ ಜನರನ್ನು ರಂಜಿಸೋದು ಹ್ಯಾಗೆ? ಇದೀಗ ಬರುತ್ತೆ ನೋಡು.... ನಕ್ಕೂ ನಕ್ಕೂ ಉರುಳುವೆಯಂತೆ

(ಹಾಸ್ಯ)

ಈ ಕಲಾವಿದರಿಗೆ ಹಿಂದೆ ದವಸ ಧಾನ್ಯ ಕೊಡ್ತಿದ್ರು. ಈಗ್ಲೂ ಕೊಡ್ತಾರೆ ಕೆಲವು ವೇಳೆ ಹಣವನ್ನೂ ಕೊಟ್ಟು ಕರೆಸುತ್ತಾರೆ.

ರಾಮಣ್ಣ : ಕಲ್ಲಣ್ಣ ಉತ್ತರ ಕರ್ನಾಟಕದಲ್ಲಿ ಇವರಿಗೆ 'ಕರಪಾಲರ ಅಯ್ಯಗಳು' ಅಂತ್ಲೂ ಕರೀತಾರೆ. ಇವರು ಇನ್ನೊಂದು ಮೋಜಿನ ಆಟ ಮಾಡ್ತಾರಯ್ಯಾ ಗೊತ್ತಾ?

ಕಲ್ಲಣ್ಣ : ನಾನು ನೋಡಿಲ್ಲಪ್ಪಾ.

ರಾಮಣ್ಣ : ನಾನು ಮಾದೇಶ್ವರನ ಜಾತ್ರೆಗೆ ಹೋಗಿದ್ದೆ. ಆಗ ಅಲ್ಲಿಗೆ ಕರಪಾಲದ ಅಯ್ಯಗಳು ಬಂದಿದ್ರು. ಅದರಲ್ಲೂ ಒಬ್ಬ ಗುರು ಇಬ್ಬರು ಶಿಷ್ಯರು. ಗುರು ದಮ್ಮಡಿ ವಾದ್ಯ ಹಿಡಿದು ನಿಲ್ತಾರೆ. ಶಿಷ್ಯರು ಸ್ವಲ್ಪ ದೂರದಲ್ಲಿ ನಿಂತಿರ್ತಾರ

ತಾಳವನ್ನು ಹಿಡಿದುಕೊಂಡು. ಇವರು ಶರಣರಿಗೆ ಸಂಬಂಧಿಸಿದ ಕಾಲಜ್ಞಾನವನ್ನು ಗುರುಗಳನ್ನು ಅನುಸರಿಸಿ ಹಾಡ್ತಾರೆ. ಇವರು ಇನ್ನೊಂದು ವಿಶಿಷ್ಟ ಕಲೆಯನ್ನು ಕರತಲಾಮಲಕ ಮಾಡಿಕೊಂಡಿರ್ತಾರೆ. ಇದನ್ನು ನೋಡಲಿಕ್ಕೆ ಬಂದ ಜನರ ಗುಂಪಿನಲ್ಲಿ ಯಾವನಾದರೊಬ್ಬನ ಹೆಸರನ್ನು ತಿಳಿದುಕೊಂಡ ಗುರು ದೂರದಲ್ಲಿರುವ ೨೦೦-೩೦೦ ಅಡಿ ದೂರದಲ್ಲಿ ಶಿಷ್ಯನಿಗೆ ಆ ಹೆಸರಿನ ಸಂಜ್ಞೆಯನ್ನು ಬೆರಳುಗಳಲ್ಲಿ ತೋರಿಸುತ್ತಾರೆ. ಈ ಸನ್ನೆಯನ್ನು ಅರ್ಥಮಾಡಿಕೊಂಡು ಆತನ ಹೆಸರನ್ನು ಜೋರಾಗಿ ಹೇಳುತ್ತಾನೆ. ಈ ಕಲೆ ನಿಜಕ್ಕೂ ಜನರಲ್ಲಿ ಅಚ್ಚರಿ ಉಂಟುಮಾಡುತ್ತದೆ.

ಕಲ್ಲಣ್ಣ : ಒಳ್ಳೆ ಕಲೆ ಕಣಯ್ಯ

ರಾಮಣ್ಣ : ಕಲ್ಲಯ್ಯ ಈಗೇನೋ ಒಂದು ಸಂಪೂರ್ಣ ಕಥೆಯನ್ನು ನೋಡಿದ ಹಾಗಾಯ್ತಯ್ಯ!

ಕಲ್ಲಯ್ಯ : ಏನನ್ನಿಸಿತು ನಿನಗೆ?

ರಾಮಣ್ಣ : ಹಿಂದೆ ಶರಣರ ಕಥೆಗಳನ್ನು ಬಹುರೂಪಿ ಚೌಡಯ್ಯ ವೇಷಭೂಷಣ ಹಾಕಿಕೊಂಡು ರಂಜಿಸ್ತಿದ್ದನಂತಲ್ಲಾ ಹಾಗೇ ಅನ್ನಿಸ್ತು. ಇದು ಆಂಧ್ರದ ಬುರ್‍ರಕಥಾ ಹೋಲಿಕೆ ಇದೆ ಎಂಬುದು ಜಾನಪದ ತಜ್ಞರ ಅಭಿಪ್ರಾಯ.

ಕಲ್ಲಯ್ಯ : ಹಾಗೆಯೇ ಇದು ಮೂಲರೂಪವಾಗಿ ಬಂದಿರಬೇಕು. ಜನರನ್ನು ರಂಜಿಸುವುದರ ಜೊತೆಗೆ ನೀತಿಯನ್ನೂ ಹೇಳುತ್ತವೆ ಕೆಲವು ಕಥೆಗಳು.

ರಾಮಣ್ಣ : ಕಲ್ಲಯ್ಯ ಕೆಲವು ಕಥೆಗಳನ್ನೂ ಹಾಡಿಸಿ ಕೇಳಬೇಕಯ್ಯ.

ಕಲ್ಲಯ್ಯ : ನೀನು ಬಂದು ಕೇಳಿದ ಮೇಲೆ ಹೇಳೋಲ್ಲ ಅಂತಾರಾ? ಹೇಳಿಯೇ ಹೇಳ್ತಾರೆ. ಹೇಳಿಸೋಣ ಬಾ.... ನಾಳೆ ಎಲ್ಲಾ ಅದೇ ಕೆಲಸವಾಗಲಿ. ನೀನು ಸ್ವಲ್ಪ ಸಂಶೋಧನೆ ಮಾಡುವೆಯಂತೆ, ಅವರನ್ನು ಮಾತಾಡಿಸುವೆಯಂತೆ.

(ಸಂಗೀತ)

ಕಲ್ಲಣ್ಣ : ಇದುವರೆಗೂ ಎಲ್ಲರೂ ಕರಪಾಲ ಮೇಳವನ್ನು ನೋಡಿ ಆನಂದಿಸಿರಿ. ಈಗ ಶ್ರೀಯುತ ರಾಮಣ್ಣನವರು ವೇದಿಕೆ ಮೇಲೆ ಬಂದು ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಬೇಕು.

ರಾಮಣ್ಣ : ನಾನು ಅಧ್ಯಕ್ಷತೆ ವಹಿಸುವುದಕ್ಕಿಂತ ಕಲ್ಲಣ್ಣನವರೇ ವಹಿಸಿದರೆ ಬಹಳ ಒಳ್ಳೆಯದು. ಈ ಕಲೆ ಬಗ್ಗೆ ಸಮಗ್ರ ಪರಿಚಯ ಇರೋದ್ರಿಂದ ನಾನು ತಿಳಿದುಕೊಳ್ಳಲಿಕ್ಕೆ ಇಷ್ಟ ಪಡ್ತೀನಿ ಅಷ್ಟೆ.

ಕಲ್ಲಣ್ಣ : ನನಗೆ ಗೊತ್ತಿರುವಷ್ಟನ್ನು ಹೇಳ್ತೀನಿ ಆದ್ರೆ, ರಾಮಣ್ಣನವರೇ ನೀವೇ ಅಧ್ಯಕ್ಷತೆ ವಹಿಸಿ ಎರಡು ಮಾತಾಡಬೇಕು.

(ಜನರ ಹರ್ಷೋದ್ಗಾರ... ಕೂಗು...... ಮಾತಾಡಿ.... ಮಾತಾಡಿ ಎಂದು)

ರಾಮಣ್ಣ : ಆಯ್ತು

ಕಲ್ಲಣ್ಣ : ಜನಪದ ಕಲಾಸಕ್ತರೇ, ಈ ಕರಪಾಲ ಮೇಳ ಬಯಲಾಟದಂತೆ ಇರುತ್ತ. ಇಲ್ಲಿ ಎಲ್ಲಾ ಪಾತ್ರವನ್ನು ನಿರೂಪಕನೇ ಮಾಡ್ತಾನೆ. ಆದ್ರೆ ಬಯಲಾಟವಲ್ಲಿ ಅನೇಕ ನಟ ನಟಿಯರು ಮಾಡ್ತಾರೆ. ಸರಳ ಜನಪದ ಕಲೆಗಳ ಸಾಲಿನಲ್ಲಿ ಇದು ಅಗ್ರಗಣ್ಯ ಅಂತಾರೆ ಜೀ.ಶಂ. ಪರಮಶಿವಯ್ಯನವರು.

"ಕುರುಡಯ್ಯನೆಂಬ ಜಂಗಮರು ಈ ಕಲೆಯನ್ನು ದಕ್ಷಿಣಕ್ಕೆ ತಂದು ಪ್ರಚಾರ ಮಾಡಿದ್ರು. ಕರಪಾಲದ ಸಿದ್ದಯ್ಯನವರಿಂದ ವ್ಯಕ್ತಿಯಿಂದ ವ್ಯಕ್ತಿಗೆ, ಬಾಯಿಯಿಂದ ಬಾಯಿಗೆ ಈ ಕಲೆ ಬಂತು. ಇದು ಜಂಗಮರಿಗೆ ಮೀಸಲಾದುದು. ಇದನ್ನು ಕಲಿತವರು ಕರಪಲ್ಲದ ಐಗಳು, ಎಂದು ಕರೆಯುತ್ತಾರೆ. ಬಸವ, ಚನ್ನಬಸವ ಮುಂತಾದ ಶರಣರಿಗೆ ಸಂಬಂಧಿಸಿದ ಕಾಲಜ್ಞಾನಗಳನ್ನು ಹಾಡುತ್ತಾರೆ." ಎನ್ನುತ್ತಾರೆ ಡಾ.ಎಂ. ಚಿದಾನಂದ ಮೂರ್ತಿಯವರು.

ಇದು ದಕ್ಷಿಣದ ಮೇಳ ಜನಪದ ನಾಟಕ ರೂಪವೇ ಆಗಿದೆ. ಉತ್ತರ ಕರ್ನಾಟಕದ ಕರಪಲ್ಲದಲ್ಲಿ ಈ ಅಂಶಗಳಿಲ್ಲ. ಕರಪಲ್ಲ ಚಮತ್ಕಾರ, ಜಾಣ್ಮೆಗೆ ಸಂಬಂಧಿಸಿದರೆ, ಕರಪಾಲ ಕಲೆಗೆ ಸಂಬಂಧಪಡುತ್ತದೆ. ಕರಪಲ್ಲವ, ಕರಪಲ್ಲ ಕರಪಾಲವಾಗಿರಬಹುದೆಂಬುದು ಜಾನಪದತಜ್ಞ ಜೀ.ಶಂ.ಪ. ಅವರ ಅಭಿಪ್ರಾಯ.

ರೂಪಾವತಿ ಕಲ್ಯಾಣವನ್ನು ತುಂಬಾ ಸೊಗಸಾಗಿ ನಡೆಸಿಕೊಟ್ರಿ. ಎಲ್ಲಾ ಕಲಾವಿದರಿಗೂ ನನ್ನ ವಂದನೆಗಳು.... ಇನ್ನು ರಾಮಣ್ಣನವರು ನಾಲ್ಕು ಮಾತಾಡ್ತಾರೆ.

ರಾಮಣ್ಣ : ಈಗಾಗ್ಲೇ ಕಲ್ಲಣ್ಣನವರು ಈ ಕಲೆ ಬಗ್ಗೆ ಎಲ್ಲವನ್ನೂ ಹೇಳಿದ್ದಾರೆ. ನಾನೇನೂ ಹೇಳ್ಬೇಕಾಗಿಲ್ಲ. ನಾನು ಈ ಕಲೆಯನ್ನು ನೋಡಿ ಆನಂದಿಸಿದ್ದೇನೆ. ಕಲ್ಲಣ್ಣನವರು ಸಮಗ್ರವಾದ ಈ ಕಲೆಯನ್ನು ನನಗೆ ಪರಿಚಯ ಮಾಡಿಕೊಟ್ಟದ್ದಕ್ಕಾಗಿ ತುಂಬಾ ಆಭಾರಿಯಾಗಿದ್ದೇನೆ. ಈ ಜನಪದ ಕಥೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರಬೇಕು ಮುಂದಿನ ಪೀಳಿಗೆಯವರು.

(ಸಂಗೀತ)

ಕಲ್ಲಣ್ಣ : ಕರಪಾಲಮೇಳ ನಡೆಸಿಕೊಟ್ಟ ತಿಪಟೂರು ತಾಲ್ಲೂಕಿನ ಸಿದ್ಲಹಳ್ಳಿ ಗ್ರಾಮದ ಎಸ್.ಆರ್. ಚಂದ್ರಶೇಖರಯ್ಯನವರು ಹಾಗೂ ಸಂಗಡಿಗರು ಬಂದಿದ್ದಾರೆ. ಅವರನ್ನು ಮಾತಾಡ್ಸಿ ನಿಮಗೆ ಬೇಕಾದ ಪ್ರಸಂಗಗಳನ್ನು ಕೇಳಬಹುದು.

(ಸಂದರ್ಶನ)

ರಾಮಣ್ಣ : ಬನ್ನಿ ಚಂದ್ರಶೇಖರಯ್ಯನವರೇ

ಬಸವಕುಮಾರ - ಲೋಹಿತ ಕುಮಾರದಲ್ಲಿ ಬರುವ ಶಿವನು ಜಂಗಮ ವೇಷದಿಂದ ಬಂದಾಗ ಅಕ್ಕ ತಂಗಿಯರು ಸಂಭ್ರಮದಿಂದ ದೂರದಲ್ಲಿ ಮುತ್ತು ರತ್ನ ತುಂಬಿಕೊಂಡು ಬಂದ ಸನ್ನಿವೇಷವನ್ನು ಸ್ವಲ್ಪ ಹಾಡಿ ತೋರಿಸ್ತೀರಾ?

(ಹಾಡುವರು)

ರಾಮಣ್ಣ : ಕಾಡು ಸಿದ್ದಮ್ಮ ಕಥೆಯಲ್ಲಿನ ಭಕ್ತಿಯ ವರ್ಣನೆ ಸ್ವಲ್ಪ ಮಾಡ್ತೀರಾ?

ರಾಮಣ್ಣ : ಭುಜಗೇಂದ್ರರಾಜ ಯುದ್ಧಕ್ಕೆ ಹೋಗುವ ಸಂದರ್ಭವನ್ನು ಸ್ವಲ್ಪ ವಿವರಿಸ್ತೀರಾ?

ರಾಮಣ್ಣ : ಕಾಡು ಸಿದ್ದಮ್ಮನ ಕಥೆಯಲ್ಲಿ ಬರುವ ಶೃಂಗಾರ ರಸದ ಒಂದು ಸಂದರ್ಭ ಹಾಡಿ ತೋರಿಸ್ತೀರಾ?

ರಾಮಣ್ಣ : ಕಾಳಿಂಗ ಕುಮಾರದಲ್ಲಿ ಬರುವ ಕರುಣಾರಸರ ಒಂದು ಸನ್ನಿವೇಶ ಮಾಡಿ ತೋರಿಸ್ತೀರಾ?

(ಎಲ್ಲವನ್ನೂ ಹಾಡುವರು)

## ಹಾಸ್ಯ ರೂಪಕಗಳು

## ತಾಪತ್ರಯ ಅಂಡ್ ಕೋ

ಕುಮಾರ್ : ಸಾರ್....... ಸಾರ್.......... ಕಂಠಿಯವ್ರೇ..... ಕಂಠಿಯವ್ರೇ.

ವೆಂಕಮ್ಮ : ಅವರಿಲ್ಲಪ್ಪ.

ಕುಮಾರ್ : ಯಾವಾಗ ಬರಬಹುದು?

ವೆಂಕಮ್ಮ : ಹಳ್ಳೀ ಕಡೆ ಹೋಗಿದ್ದಾರೆ ಯಾವಾಗ ಬರ್ತಾರೆ ಅಂತ ಹೇಳೋಣ- ಈ ವಾರದಲ್ಲಿ ಬರಬಹುದು.

ಕುಮಾರ್ : ಹಾಗಾದ್ರೆ ಶನಿವಾರ ಬರ್ಲೇ.....

ವೆಂಕಮ್ಮ : ಏನಾಗ್ಬೇಕಾಗಿತ್ತು?

ಕುಮಾರ್ : ಆಗ಼್ೇ ಹೇಳಿದ್ನಲ್ಲ ಅವರನ್ನ ಸ್ವಲ್ಪ ನೋಡಬೇಕಾಗಿತ್ತು.

ವೆಂಕಮ್ಮ : ಅವರು ಬಂದ ಮೇಲೆ ತಾವು ಬಂದಿದ್ರಿ ಅಂತ ಹೇಳ್ತೀನಿ.....

ಕುಮಾರ್ : ಸರಿ.

ವೆಂಕಮ್ಮ : ಅಂದ ಹಾಗೆ ತಮ್ಮ ಹೆಸರು?

ಕುಮಾರ್ : ಕುಮಾರ್ ಅಂತ.

ರಾಜಣ್ಣ : ಯಾರತ್ತೆ?

ವೆಂಕಮ್ಮ : ಯಾರೋ ಕುಮಾರಂತೆ.

ರಾಜಣ್ಣ : ಏನ್ಬೇಕಿತ್ತಂತೆ?

ಕುಮಾರ್ : ಸ್ವಾಮಿ ನನ್ನ ಪರಿಚಯ ನಾನೇ ಮಾಡ್ಕೊಂಬಿಡ್ತೀನಿ- ನಾನೊಬ್ಬ Publisher..... ನನ್ನ ಬಿಸಿನೆಸ್ ಇಂಥದೇ ಅಂತೇನಿಲ್ಲ PRESS ಇದೆ..... Publisher ಊ ಹೌದು, Contractor ಊ ಹೌದು. ಕಮೀಷನ್ ಏಜೆಂಟೂ ಹೌದು - Kumar Enterprises ಅನ್ನೋದು ನಮ್ಮ ಕಂಪನಿ.

ರಾಜಣ್ಣ : ನಮ್ಮ ಕಂಪನಿ ಬೇರೆ ಅಂತಾ ಆಯ್ತೇ ಹಾಗಾದ್ರೆ

ಕುಮಾರ್ : ತಮ್ಮದು ಯಾರ ಕಂಪ್ನಿ?

ರಾಜಣ್ಣ : ನಮ್ಮದು ತಾಪತ್ರಯ ಅಂಡ್ ಕಂಪನಿ.

ಕುಮಾರ್ : ತಾಪತ್ರಯ ಯಾರ ಕಂಪನೀಗಿಲ್ಲ ಹೇಳಿ - ಮನೆಯಾದರೇನು? ಮಠವಾದರೇನು?

ರಾಜಣ್ಣ : ಸರಿ ಈಗ ತಾವು ಇಲ್ಲಿ ಬಂದ ಉದ್ದೇಶ?

ಕುಮಾರ್ : ಕಂಠಿಯವರ Book ಒಂದು Publish ಮಾಡ್ತಿದ್ದೇನೆ.

ರಾಜಣ್ಣ : ಏನು..... ನಮ್ಮ ಮಾವ ಪುಸ್ತಕ ಬೇರೇ ಬರೀತಾರಾ?

ಕುಮಾರ್ : Publisher ನಾನು..... ನನ್ನನ್ನೇ ಈ ಪ್ರಶ್ನೆ ಕೇಳಿದರೆ ಏನು ಹೇಳಲಿ?

ರಾಜಣ್ಣ : ಅತ್ತೇ..... ಏನು ಮಾತು ಇವರು ಹೇಳೋದು ಮಾವ ಕತೆ..... ಗಿತೆ ಬರೆದಿದ್ರೆ?

ಕುಮಾರ್ : ಕತೆ ಅಲ್ಲ ಅವರು ಬರೆದಿರೋದು.... ಕಾದಂಬರಿ.......

ರಾಜಣ್ಣ : ಹೌದೆ ಓದಿದ ಮೇಲೆ ಕಾದಂಬರಿಯೂ ಅಲ್ಲ ಅಂತ ಅರ್ಥವಾಗೋದೂ ಅಂತ್ಕಾಣುತ್ತೆ.

ಕುಮಾರ್ : ಛೆ.... ಛೆ.... ಮನೆಯವರೇ ಮನೆಯವರಿಗೆ ಹೀಗೆ ಪ್ರೋತ್ಸಾಹ ಕೊಟ್ಟರೆ ಹ್ಯಾಗೆ?

ವೆಂಕತ್ತೆ : ನಾವೆಲ್ ಬರೆದ್ರೆ ಅವ್ರು ನಂಗೆ ಓದಕ್ಕೆ ಕೊಡಬೇಕಾಗಿತ್ತು.

ರಾಜಣ್ಣ : ಅದೇ ನನ್ನ ಹತ್ತಿರವೂ ಒಂದು ದಿನವೂ ಹೇಳಲಿಲ್ಲ.

ಕುಮಾರ್ : ಮೊದಲನೇ ಕಾದಂಬರಿಯಾದ್ದರಿಂದ ನಾಚಿಕೊಂಡಿರಬಹುದು.

ವೆಂಕತ್ತೆ : ಇದ್ರೂ ಇರಬಹುದು.... ದಿನಾ ರಾತ್ರಿ ನಾನು ಮಲಗಿದ ಮೇಲೆ ಬಹಳ ಹೊತ್ತು ದೀಪ ಹಾಕ್ಕೊಂಡು ಅದೇನೋ ಬರೀತಾ ಇರೋರು.

ರಾಜಣ್ಣ : ಅಲ್ಲಾ ಅತ್ತೆ ಒಬ್ಬ Writer ಮನೇಲಿದ್ದೂ ನಾವು ಅವರನ್ನು ಗುರುತಿಸಲಿಲ್ಲ ಅಂದರೆ ಅಕ್ಷಮ್ಯ ಅಪರಾಧ.

ವೆಂಕತ್ತೆ : ಹೋಗ್ಲಿ ಬಿಡು ರಾಜಣ್ಣಾ - ಈಗ ಹ್ಯಾಗಿದ್ರೂ ವಿಷಯ ಗೊತ್ತಾಗಿ ಹೋಯಿತು. ಗುಟ್ಟಿನಲ್ಲಿ ಬುಕ್ ಮಾಡಿಸಕ್ಕೆ ಹೋಗಿದ್ದಾರೆ. ಅವರು ಇಲ್ಲದೇ ಇದ್ದಾಗ ಗುಟ್ಟು ರಟ್ಟಾಯಿತು.

ರಾಜಣ್ಣ : Good.....

ಕುಮಾರ್ : ನಾನು ಬರ್ತೀನಿ ಸಾರ್........

ರಾಜಣ್ಣ : ಬನ್ನಿ ರಾಜಣ್ಣ ಅಂತ ನನ್ನ ಹೆಸರು..... ಕೂತ್ಕೊಳ್ಳಿ.....

ವೆಂಕತ್ತೆ : ಕೂರಿ - ಒಂದು ಲೋಟ ಷರಬತ್ತ ತಂದು ಬಿಡ್ತೀನಿ.....

ಕುಮಾರ್ : ಇವೆಲ್ಲಾ ಸುಮ್ಮನೆ ತೊಂದರೆ.....

ರಾಜಣ್ಣ : ಛೆ.... ಛೆ - ನಮ್ಮ ಮಾವನ ಮೊದಲ ಕೃತೀನ ಅಚ್ಚು ಹಾಕೋಕೆ ನೀವು ತೆಗೊಂಡಿಲ್ವೇ?

ಕುಮಾರ್ : Mr. ರಾಜಣ್ಣ .... ತಾವು ಏನು ಮಾಡ್ತಿದ್ದೀರಿ?

ರಾಜಣ್ಣ : ಗ್ರಾಜುಯೇಟು.... ಕೆಲ್ಸ ಸಿಕ್ಕಿಲ್ಲ..... ದಿನಾ ಅಲೀತಿರೋದೆ. ನೀವು ಬಂದಿದ್ರಿಂದ ಇವತ್ತು ಇಲ್ಲಿ ಕೂತಿದ್ದೀನಿ

ಕುಮಾರ್ : ಅರೆರೆ ಮೊನ್ನೆ ಸಿಕ್ಕಾಗ ಒಂದು ಮಾತು ಹೇಳಿದ್ರೆ ಕೆಲಸವಾಗಿ ಬಿಡ್ತೋದಾಗಿತ್ತು. ಇಷ್ಟು ಹೊತ್ತಿಗೆ. ನನ್ನ ಸ್ನೇಹಿತನ ಫ್ಯಾಕ್ಟರೀಲಿ ೮೦೦ರೂ. ಒಂದು ಕೆಲಸ ಇತ್ತು...... ಇರಲಿ ಬಿಡಿ ನಾಳೆ ನಾಡಿದ್ದರಲ್ಲಿ ೪೨ಡಬ್ಬಲ್ ಜೀರೋಗೆ Phone ಮಾಡಿ.... Visiting Card ನೋಡಿ, ತಗೋಳ್ಳಿ.

ರಾಜಣ್ಣ : ಛೆ..... ಮುಂಚೇನೆ ನಿಮ್ಮ ಪರಿಚಯ ಆಗಿದ್ದಿದ್ರೆ......

ಕುಮಾರ್ : ನಂದೇನು ತಪ್ಪಿಲ್ಲ...... ನಿಮ್ಮಪ್ಪ ಒಂದು ಮಾತು ಹೇಳೋಕೆ ಆಗತಿರಲಿಲ್ವೆ?

ರಾಜಣ್ಣ : ತಂದೆ!

ಕುಮಾರ್ : ಕಂಠಿಯವರು ನಿಮ್ಮ ತಂದೆ ಅಲ್ಲವೆ?

ರಾಜಣ್ಣ : ಅಲ್ಲ.... ಮಾವ......

ಕುಮಾರ್ : ಇರಲಿ ಆದ್ರೂ ಇಬ್ರಲ್ಲೂ ಒಂದು ಥರಾ ಹೋಲಿಕೆ ಅದೆ......

ರಾಜಣ್ಣ : ಸ್ವಭಾವದಲ್ಲಿ ಅನ್ನಿ ಒಪ್ಕೋತೀನಿ.....

ಕುಮಾರ್ : ಹ ಹ ಹ.... ನಾನೂ ಅದೇ ಹೇಳಿದ್ದು.

ವೆಂಕಮ್ಮ : ತಗೊಳ್ಳಿ ಷರಬತ್ತು.....

ಕುಮಾರ್ : ವೆಂಕಮ್ಮನವರೇ ನೀವು ಷರಬತ್ತು ಕೊಟ್ರಿ..... ನಿಮಗೆ ಏನು ಕೊಡ್ತೀನಿ ಗೊತ್ತೋ?

ವೆಂಕಮ್ಮ : ನಮ್ಮೆಜಮಾನರ ಪುಸ್ತಕಕ್ಕೆ Advance ಕೊಡ್ತೀರಿ ಅಂತ ಕಾಣುತ್ತೆ.

ಕುಮಾರ್ : ಊಹುಂ.

ರಾಜಣ್ಣ : ಹಾಗಾದರೆ ನಮ್ಮಾವ ಬರೋದ್ರಲ್ಲಿ ಇಡೀ ಪುಸ್ತಕದ ಅಚ್ಚು ಮಾಡಿ Calico Bind Copy ನಾಲ್ಕು ತಂದ್ಕೊಡ್ತೀರಿ ಅಂತ್ಕಾಣುತ್ತೆ.

ಕುಮಾರ್ : ಇಲ್ಲ.......

ವೆಂಕಮ್ಮ : ಮತ್ತೆ??

ಕುಮಾರ್ : ಸದ್ಯಕ್ಕೆ ನಿಮ್ಮ ಕೈಗೆ ನಿಮ್ಮವರ ಪುಸ್ತಕದ 16 Page ಪ್ರೂಫ್ ಕೊಡ್ತೀನಿ...... ತಗೊಳ್ಳಿ.

ವೆಂಕಮ್ಮ : ಅರೆ! ೧೬ ಪೇಜ್ ಅಚ್ಚಾಗಿದೆ ಆಗ್ಲೇ.

ರಾಜಣ್ಣ : Good .........

ವೆಂಕಮ್ಮ : ಅಂದ ಹಾಗೆ.... ಅವರ ಹೆಸರೇ ಇಲ್ಲ.....

ಕುಮಾರ್ : ಪೇಜು ಪೇಜಿಗೂ ಯಾರಮ್ಮ ಹೆಸರು ಹಾಕ್ತಾರೆ..... ನಾವೆಲ್ ಹೆಸರು ಎಲ್ಲ Pageನಲ್ಲೂ ಇದೆಯಲ್ಲ 'ಪ್ರಮೋದ' ಅಂತ.

ರಾಜಣ್ಣ : ಅದೇನೋ ನಿಜ Cover Page, ಮುನ್ನುಡಿ ಆ ಮೇಲೆ Print ಮಾಡ್ತೀರೀಂತ ಕಾಣುತ್ತೆ.

ಕುಮಾರ್ : Correct ............

ವೆಂಕಮ್ಮ : ಮುನ್ನುಡೀಲಿ ನನ್ನ ಹೆಸರು, ನಮ್ಮ ರಾಜಣ್ಣನ ಹೆಸರೂ ಹಾಕಿದ್ದಾರ್ಯೇ ನೋಡಬೇಕಾಗಿತ್ತು. ಆ ಹಾಳೆ ತಂದಿದ್ದೀರಾ?

ಕುಮಾರ್ : ಇಲ್ಲವಲ್ಲಮ್ಮ...... ಮರೆತೆ..... ಬೇಕಾದರೆ ಆ ಹಾಳೆ ನಾಳೆ - ನಾಡಿದ್ದರಲ್ಲಿ ನಾನೇ ತಂದು ತೋರಿಸ್ತೀನಿ. ಈ ಕಾದಂಬರೀಗೆ ನೀವೇ ಸ್ಫೂರ್ತಿ ಅಂದಿದ್ದಾರೆ, ರಾಜಣ್ಣ ಒಂದು ಪಾತ್ರಕ್ಕೆ ಅನೇಕ ಸಾಲುಗಳನ್ನು ಒದಗಿಸಿದ್ದಾನೆ ಅಂತ್ಲೋ ಏನೋ ಬರೆದಿದ್ದಾರೆ.

ರಾಜಣ್ಣ : ಹ ಹ ಹ ನಮ್ಮ ಮಾವ ನನ್ನ ಹಾಗೆಲ್ಲ ಮರೆಯಲ್ಲ.

ವೆಂಕಮ್ಮ : ಪುಸ್ತಕ ಯಾವಾಗ ಬರುತ್ತೆ ಹೇಳಿ?

ಕುಮಾರ್ : ಪೇಪರ್ರು - ರ್ಯಾಪರು. ಆರ್ಟ್ ಬ್ಲಾಕ್ ಬಂದ ತಕ್ಷಣ......

ರಾಜಣ್ಣ : ಓ...... ಅದನ್ನ ತರಕ್ಕೆ ಹೋಗಿರಬೇಕು ಮಾವ.

ಕುಮಾರ್ : ಛೆ ಛೇ..... ಮೂರು ದಿನದ ಹಿಂದೇನೇ ಬರ್ತೀನಿ ಅಂದವರು ಇನ್ನೂ ನಾಪತ್ತೆ......

ವೆಂಕಮ್ಮ : ಒಂದು ಕೆಲಸ ಮಾಡು ರಾಜಣ್ಣ..... ಅದೇನೇನು ಹೇಳ್ತಾರೋ ಅಷ್ಟನ್ನೂ ನೀನೇ ಹೋಗಿ ತಂದುಬಿಡು ದುಡ್ಡು ಇಟ್ಕೊಂಡು.

ಕುಮಾರ್ : ದುಡ್ಡು ನಾನು ಕೊಡೋದೆ.... ಹಾಗೆ ಅಂದಿದ್ರೆ ನಾನು ಇವರ Novel ಯಾಕೆ ತಗೋಳ್ತಿವೆ? ಅವರು ಹೇಳಿದ್ದೆ ೫೦೦ರೂ, ನಾನು ಕೊಡ್ತೀನಿ ಅಂತ ಕೊಟ್ಟಿದ್ದು ೨೦೦ ಮಾತ್ರ...... ಇನ್ನು ಮುನ್ನೂರು ರೂಪಾಯಿ ಕೊಡದೆ ಪುಸ್ತಕ ಹ್ಯಾಗೆ ಪೂರ್ತಿ ಆಗುತ್ತೆ.

ರಾಜಣ್ಣ : ನೋಡಿದೆಯಾ ಅತ್ತೆ - ಇಲ್ಲಿ ತಾಪತ್ರಯ - ತಾಪತ್ರಯಾ ಅಂತಾ ಅಲ್ಲಿ ೨೦೦ ರೂಪಾಯಿ ಕೊಟ್ಟಿರೋದು.....

ಕುಮಾರ್ : ರಾಮರಾಮ.... ಏನು ತಪ್ಪು...... ಅದರಿಂದ ಬರೋ ಕೀರ್ತಿ, ಪೇಪರಲ್ಲಿ ವಿಮರ್ಶೆ ಬಂದಾಗ, ಅಕಾಡೆಮಿ Award ಬಂದು ಅವರ Photo ಪೇಪರಲ್ಲಿ ಬಂದಾಗ-

ವೆಂಕಮ್ಮ : ನಿಜವಾಗ಼್-

ಕುಮಾರ್ : ಮತ್ತೆ ಅದೇನು ರಂಜಿತ Style..... ಆ ವರ್ಣನೆಗಳ ಚೆಂದ ಅರ್ಥಗರ್ಭಿತವಾದ ವ್ಯಾಖ್ಯಾನ, ವಿಚಿತ್ರ ಪಾತ್ರಗಳ ಸೃಷ್ಟಿ - ಅವುಗಳ ವಿಶ್ಲೇಷಣೆ.... Oh!

ರಾಜಣ್ಣ : ಬೇಗ ಆ ಕೃತಿ ಮಾರ್ಕೆಟ್ಟಿಗೆ ಬಿಡಿ ಮತ್ತೆ.

ಕುಮಾರ್ : ಅದೇನು ಬೀಡಿ ಕುಡಿಯೋ ಅಷ್ಟು ಸುಲಭ ಅನ್ಕೊಂಡ್ರಾ?

ವೆಂಕಮ್ಮ : ಬೇಗ ಹೇಳಿ ಏನಾಗಬೇಕು?

ಕುಮಾರ್ : ಬಾಕಿ ೩೦೦ ತಕ್ಷಣ ಬೇಕು.

ರಾಜಣ್ಣ : ಅಲ್ಲಾರೀ - Writers ಹುಡುಕಿಕೊಂಡು ಹೋಗಿ Publishers ದುಡ್ಡ ಕೊಡ್ತಾರೆ ನೀವು ನೋಡಿದ್ರೆ.....

ಕುಮಾರ್ : ನಿಮ್ಮ ಮಾವನೂ ದೊಡ್ಡ Writer ಅಂತ ಹೆಸರಾದರೆ- ನಾನೇ ನಮಸ್ಕಾರ ಹೊಡೆದು ಟೈಟ್ಲ್ ಕೊಟ್ಟರೆ ಸಾವಿರ ಕೊಡ್ತೀನಿ. ಫಿಲಂ ಪ್ರೊಡ್ಯುಸರ್ಸ್ ಕನ್ನಡ Rights ಒಂದಕ್ಕೆ ೮-೧೦ ಸಾವಿರ ಕೊಡ್ತಾರೆ.......

ವೆಂಕಮ್ಮ : ನಿಜವಾಗಲೂ.....

ಕುಮಾರ್ : ಮತ್ತೆ ನಾನು ಯಾಕೆ ಇಷ್ಟು ಅವಸರ ಮಾಡ್ತಿದ್ದೆ. ಈಗ ಇಬ್ಬರು Producers ಇದ್ದಾರೆ. ಮದರಾಸಿನಿಂದ ಒಬ್ಬರು ಇದೇ Novel ಕೇಳ್ತಿದ್ದಾರೆ. ಕೊಡ್ತೀರೋ- ಬಿಡ್ತೀರೋ......? ಹೊಸಬರ ನಾವೆಲ್ ಆದ್ರೂ - ಅವರಿಗೆ ಒಂದು ಉಪಕಾರ ಆಗಲಿ ಅಂತ ಮಾಡಿದೆ. ಬೇಡಾಂದ್ರೆ ಬಿಡಿ - ಪೇಟೇಲಿ ನೂರಾರು ನಾವೆಲ್‌ಗಳಿರುತ್ವೆ...... ಬೇರೆ ಯಾವುದಾದರೂ ಚಿತ್ರ ಮಾಡಿ ಅಂದ್‌ಬಿಡ್ತೀನಿ.

ವೆಂಕಮ್ಮ : ಛೆ ಛೆ ಅಂತಾ ಕೆಲಸ ಎಲ್ಲಾರೂ ಮಾಡೀರ ಸಧ್ಯ......

ರಾಜಣ್ಣ : ಅತ್ತೇ!! ಏನಂತೀ.......?

ವೆಂಕಮ್ಮ : ಬಾರೋ ಇಲ್ಲಿ..... ಈಗ ಕಾದಂಬರಿಗಳನ್ನು ಚಿತ್ರ ಮಾಡ್ತಿದ್ದಾರ ಬೇಕಾದಷ್ಟು. ಇದು ಬೇಗ ಪ್ರಿಂಟ್ ಆದರೆ ಆಮೇಲೆ ಚೆನ್ನಾಗಿ ವ್ಯಾಪಾರವಾಗುತ್ತೆ. ೩೦೦ ರೂಪಾಯಿ ಕೊಟ್ಟರೆ ೩ ಸಾವಿರ ಬರೋವಾಗ ನಾವು ಯಾಕೆ ಹಿಂದೆ ಮುಂದೆ ನೋಡಬೇಕು?

ರಾಜಣ್ಣ : ಅದ್ಸರಿ ೩೦೦ ಎಲ್ಲಿಂದ ತರೋದು?

ವೆಂಕಮ್ಮ : ೩೦೦ ಕಷ್ಟ.....

ರಾಜಣ್ಣ : ಹಾಗಾರೆ ಎಷ್ಟಾದರೆ ನಿನಗೆ ಸುಲಭ?

ವೆಂಕಮ್ಮ : ಅವ್ರು ಸೊಸೈಟೀಲಿ ೨೦೦ರೂ. ಸಾಲ ಮಾಡಿ ತಂದಿದ್ದಾರೆ - ಮನೆ ಬಾಡಿಗೆ ಬಾಕಿ ಕೊಟ್ಟು ಬಿಡೋಣ ಅಂತ. ಮೊನ್ನೆ ಅವರು ಬರಲಿಲ್ಲ ಅಂತ ನನ್ನ ಕೈಲೇ ಕೊಟ್ಟು ಹೋಗಿದ್ದಾರೆ.

ರಾಜಣ್ಣ : ಅದನ್ನ ಕೊಟ್ಟುಬಿಟ್ಟರೆ.... ನಾಳೆ ಮನೆ ಬಾಡಿಗೆಯವನಿಗೆ ಏನು ಉತ್ತರ ಹೇಳೋದು?

ವೆಂಕಮ್ಮ : ನೀನು ರಾಜಣ್ಣನಲ್ಲ - ಪೆದ್ದಣ್ಣ ಕಣೋ.... ಅಲ್ಲಾ ಅವರು ಈಗ ಬೇರೆ ಊರಿಗೆ ಹೋಗಿರೋದೇ ಪ್ರಾಯಶಃ ಪುಸ್ತಕಕ್ಕೆ ೩೦೦-೪೦೦ರೂ. ಸಾಲ ತರಕ್ಕೆ.

ರಾಜಣ್ಣ : ಹಾಂ!

ವೆಂಕಮ್ಮ : ಆ ದುಡ್ಡು ತಂದೇ ತರ್ತಾರಲ್ಲ- ಆವಾಗ ವಿಷಯ ಹೀಗೆ ಅಂತ ಹೇಳಿದ್ರೆ ನಾವು ಕೊಟ್ಟಿರೋ ದುಡ್ಡ ವಾಪಸ್ಸು ಕೊಟ್ಟೇ ಕೊಡ್ತಾರೆ.....

ರಾಜಣ್ಣ : Correct........ಥೂ......... ನನ್ನ ತಲೆಗೆ ಇದು ಹೊಳೀಲೇ ಇಲ್ಲ.... ಸರಿ ಹಾಗೆ ಮಾಡಿ.... Mr. ಕುಮಾರ್..... ಬನ್ನಿ...... ನಮ್ಮತ್ತೆ ಹತ್ತಿರ ಎಲ್ಲಾ ಮಾತಾಡಿದೆ.....

ರಾಜಣ್ಣ : ಸದ್ಯಕ್ಕೆ ೨೦೦ರೂ. ಮಾತ್ರ ಸಾಧ್ಯ.

ಕುಮಾರ್ : ಸಾಧ್ಯವೇ ಇಲ್ಲ..... ೩೦೦ ಇಲ್ಲ ಅಂದ್ರೆ ಪುಸ್ತಕ ಪೂರ್ತಿ ಆಗೋದೇ ಇಲ್ಲ.

ವೆಂಕಮ್ಮ : ಇರಲಿ...... ತಗೋಳೀಪ್ಪಾ...... ಅವರು ಬಂದ ತಕ್ಷಣ.... ಬಾಕಿ ೧೦೦ ಕಳಿಸ್ತೀನಿ.....ನಿನಗ್ಯಾಕೆ.... ನನ್ನ ಮಾತು ನಂಬಿ...... ನನ್ನ ಮಾತಿನಲ್ಲಿ ಅಷ್ಟು ನಂಬಿಕೆ ಇಲ್ಲವೇ?

ಕುಮಾರ್ : ನಂಬಿಕೇನೇ ಅಲ್ಲಮ್ಮ...... ಎಷ್ಟಾಗಲಿ ಇದು ವ್ಯಾಪಾರ......

ವೆಂಕಮ್ಮ : ಏಕ್ದಂ ಕೊಡಿ ಅಂದ್ರೆ ಹ್ಯಾಗಪ್ಪ....? ಕಷ್ಟ-ಸುಖ ನೀವೂ ನೋಡಬೇಕು... ನಮಗೂನು ನೂರೆಂಟು ತಾಪತ್ರಯ.... ನೀವು ಇಷ್ಟು ಹೇಳಿದಿರಲ್ಲ ಅಂತ ನಾನು ಬಾಡಿಗೆ ದುಡ್ಡಲ್ಲಿ ಕೊಡ್ತಿದ್ದೀನಿ ಗೊತ್ತೋ?

ಕುಮಾರ್ : ಕೊಡಿ..... ಹಣ..... ನಾನು ಬರ್ತಿನಿ.....

ರಾಜಣ್ಣ : ರೀ ೯..... Proof ಇರ್ಲ್ರೇಬಿಟ್ರಿ-

ಕುಮಾರ್ : ಪರವಾಗಿಲ್ಲ ಬಿಡಿ..... ನನ್ನ ಹತ್ರ ಬೇರೆ Copy ಇದೆ...... ನೋಡ್ಲಿ ಅವರೂ ತಮ್ಮ Novel Forms! ಬರ್ತೀನಿ-

ರಾಜಣ್ಣ : Right ಓ.......

ವೆಂಕಮ್ಮ : ಮೊನ್ನೆ ಆ ಸೀತಮ್ಮ ನಮ್ಮ ಯಜಮಾನರು ಭಾರಿ ಕಾದಂಬರಿಕಾರರು - ಅಷ್ಟು ಪುಸ್ತಕ ಬರೆದಿದ್ದಾರೆ ಅಂತ ಮಂಗಳಮ್ಮನ ಮಗು ನಾಮಕರಣದಲ್ಲಿ ಜಂಬ ಕೊಚ್ಚಿದ್ದೂ ಕೊಚ್ಚಿದ್ದೆ ಇನ್ನೂ ಜಂಬ ಕೊಚ್ಚಲಿ. ಅವಳು. ಇವರ ಪುಸ್ತಕ ಅವಳ ಮುಂದೆ ಹಿಡೀತೀನಿ.....

ರಾಜಣ್ಣ : ಅಷ್ಟೆ ಹಾಗೆ ಮಾಡು ಅತ್ತೆ.... ಕುಮಾರ್ ಅವರ PRESS ಇದೆಯಂತೆ..... ಅಲ್ಲೇ ನಂಗೆ ಒಂದು ಕೆಲಸವೂ ಸಿಕ್ಕಿಬಿಟ್ಟರೆ ಈ ಪರದಾಟ ಇರಲ್ಲ.

ವೆಂಕಮ್ಮ : ನಿಜ.... ನಿಜ..... ಈ ಸಂತೋಷಕ್ಕೆ ಒಂದು ಲೋಟಾ ಬಿಸಿ ಕಾಫಿ ಕೊಡಲೇ.

ರಾಜಣ್ಣ : ಓಹೊ ಧಾರಾಳವಾಗಿ......

ವೆಂಕಮ್ಮ : ಬಂದೆ.......

ರಾಜಣ್ಣ : PRESSನಲ್ಲಿ ಒಂದು ಕೆಲ್ಸ, ನಾಳೆಯಿಂದ ಹಿಡಿಯೋರ್‍ಯಾರು ನನ್ನ? ಇನ್ನು ಹೇಳಿ ಸೋಮಾರಿಯಾಗಿ ಕಾಲ ಕಳೆಯೋ ತಂಟೆ ತಪ್ಪು. ತಿಂಗಳಾದ್ರೆ ಸಂಬಳ ಬರೋ ದಿನ ಬಂತು.

ವೆಂಕಮ್ಮ : ಏನು ರಾಜಣ್ಣ.... ನಾನು ಆ ಕಡೆ ಹೋದದ್ದೇ ಸಾಕು ಅಂತ ಹಾಡ್ತಿದ್ದೆ....

ರಾಜಣ್ಣ : ತಪ್ಪಾಗ್ಲಿ - ಸರಿಯಾಗ್ಲಿ ಎಲ್ಲಕ್ಕೂ ಒಂದೊಂದು ಕಾರಣ ಇರುತ್ತೆ ಹಾಗೆ ಈಗ ನನ್ನ ಗುರೀಗೂ ನಾಲ್ಕಾರು ಕಾರಣಗಳು.

ನಂಬರ್ ಒನ್: ಮಾವಯ್ಯ ಕಾದಂಬರಿಕಾರರಾದ ಸಂತೋಷದ ಸುದ್ದಿ.

ನಂಬರ್ ಟು : ಮಾವಯ್ಯ ಮುಚ್ಚಿಟ್ಟಿದ್ದ ಗುಟ್ಟು ನಮಗೆ ಬೇರೆಯಾದರಿಂದ ತಿಳಿದದ್ದು.

ನಂಬರ್ ಫೋರ್: ತಾಪತ್ರಯದ ಮೋಡಗಳು ಚದುರುವ ಸೂಚನೆ ಈಗ ಸಿಕ್ಕಿದ್ದು.

ವೆಂಕಮ್ಮ : ಅದು ನಿಜಾ ಅನ್ನು-

(ಬಾಗಿಲ ಶಬ್ದ)

ರಾಜಣ್ಣ : ಯಾರು? ?..... ಓ ....... ಸತ್ಯ.... ಬಾರಯ್ಯ

ವೆಂಕಮ್ಮ : ಓ ನಿನ್ನ ಸ್ನೇಹಿತನೋ......

ಸತ್ಯ : ಹಾಂ ನಾನೇ......

ರಾಜಣ್ಣ : ಯಾಕೆ ಸಪ್ಪಗಿದ್ದೀ..... ಏನಾಯ್ತು?

ಸತ್ಯ : ಎಲ್ಲಾ ಮೋಸ..... ಟೋಪಿ....ಕತ್ತೆಗಳು...... ಕತ್ತೆಗಳು.......

ರಾಜಣ್ಣ : ಯಾರು ಕತ್ತೆಗಳು - ಏನು?

ಸತ್ಯ : ನಾವು ಯಾರನ್ನ ಮನುಷ್ಯರು - ದೊಡ್ಡ ಮನುಷ್ಯರು ಅನ್ಕೊಂತೀವೀ ಅವರು ಕೊನೆಗೆ ಕತ್ತೆಗಳು ಅನ್ಸುತ್ತೆ, ಯಾರನ್ನ ನಾವು ತಾತ್ಸಾರ ಮಾಡ್ತೀವಿ- ಕತ್ತೆಗಳು ಅಂತ ಬೈತೀವಿ ಅವರು ಮನುಷ್ಯರ ತರಾ ವರ್ತಿಸ್ತಾರೆ.

ವೆಂಕಮ್ಮ : ಯಾಕಪ್ಪಾ ಇವತ್ತು ಒಗಟಿನ ಕಂಪನಿ ಆಗಿರೋದರಿಂದ

ರಾಜಣ್ಣ : ಅರ್ಥವಾಗಲಿಲ್ಲ ನೀನು ಹೇಳಿದ್ದು.

ಸತ್ಯ : ನೀವು ಅಂಥಾ ನೋವು ಅನುಭವಿಸಿದಾಗ್ಲೆ ಗೊತ್ತಾಗೋದು ನನ್ನ ಮಾತಿನ ಸೂಕ್ಷ್ಮ......

ರಾಜಣ್ಣ : ಹ ಹ ಹ ಹ....ಸತ್ಯಣ್ಣ.... ನೋವಿನ ಸಮಾಚಾರ ನನಗೆ ಹೇಳ್ತೀಯಾ.... ಕೆಲಸ ಕೊಡಿ ಅಂತ ಕಂಡ ಆಫೀಸ್ ಕಂಬಕ್ಕೆಲ್ಲ ನಮಸ್ಕಾರ ಮಾಡ್ತಾ ಬರ್‍ತಿದೀನಿ......

ಸತ್ಯ : ನಂಗೆ ಎಂಥಾ ಸಂಕಟವಾಗ್ತಿದೆ ಗೊತ್ತಾ?

ರಾಜಣ್ಣ : ಹ ಹ ಹ ಹ ಇಷ್ಟಕ್ಕೆಲ್ಲ ಸಂಕಟ ಪಟ್ಟರೆ ಆಯಿತು ಹ ಹ ಹ.... ತಾಪತ್ರಯದ ಸುಳಿ ಭಾರಿ ಇದೆ ಅಂತ ತಿಳಿದೂ ಅಲ್ಲಿ ಧೈರ್ಯವಾಗಿ ಈಜಾಡೋದೇ ನಿಜವಾದ ಬದುಕು ಕಣಮ್ಮಾ......

ಸತ್ಯ : ನಾನು ಸೋತ್ನಪ್ಪಾ ಸೋತೆ

ರಾಜಣ್ಣ : ಹ ಹ ಹ ಹ ಹ..... ನಂಗೆ ಹ್ಯಾಗೆ ನಗಬೇಕೂ ಅಂತ್ಲೂ ಗೊತ್ತಾಗಿಲ್ಲ.... ಅಲ್ವೋ ಇಷ್ಟಕ್ಕೆಲ್ಲ ಸೋತರೆ ಹ್ಯಾಗೆ?... ಧೈರ್ಯಂ ಸರ್ವತ್ರ ಸಾಧನಂ.... ಬದುಕಲಿಕ್ಕೆ ಹೆಣಗಾಡಬೇಕಾದ ದಿನ ಇದು

ವೆಂಕಮ್ಮ : ನಿಜ ನಿಜ..... ಸರಿಯಾಗಿ ಹೇಳಿದ ರಾಜಣ್ಣ...... ಇಷ್ಟಕ್ಕೆಲ್ಲಾ ಸಪ್ಪಗಾಗಬಾರದಪ್ಪ...... ಕಷ್ಟ ಮನುಷ್ಯನಿಗಲ್ದೆ ಮರಕ್ಕೆ ಬರುತ್ಯೇ.......?

ಸತ್ಯ : ಅಮ್ಮಾ...... ನಾನೊಂದು ನಾಟಕದಲ್ಲಿ ಪಾರ್ಟ್ ಮಾಡಿದ್ದು ನೋಡಿ...... ಸೀದಾ Green Roomಗೆ ಬಂದು ಕೈ ಕುಲುಕಿ Film Star ಮಾಡ್ತೀನಿ ಅಂತ ಆಸೆ ತೋರಿ Studioನಲ್ಲಿ ಫೋಟೋ ತೆಗೆಸಿ, ಶೋರೂನಲ್ಲೆ ೫೦೦ರೂ ಕಿತ್ಕೊಂಡ ಒಬ್ಬ....., College Fees ಅಲ್ಲಿ ಕೊಟ್ಟ ವಿದ್ಯಾಭ್ಯಾಸಕ್ಕೆ ಮಂಗಳಾ ಹಾಡಿದೆ,..... ಮೊನ್ನೆ ಅದೇ ಮನುಷ್ಯ ಮತ್ತೆ ಸಿಕ್ಕ, ನಂಗೆ ನೂರು ರೂಪಾಯಿ ವಾಪಸ್ಸು ಕೊಟ್ಟಾ ಅದ್ರೆ ನನ್ನ ಜತೇಲಿದ್ದವನ ಕೈಲಿ ಎರಡು ಸಾವಿರ ಕಿತ್ಕೊಂಡು ಒಂದು Side Role ಕೊಟ್ಟಿದ್ದ......, ಇನ್ನೊಂದು ಹೆಣ್ಣಿಗೆ ಕೆಲಸ ಕೊಡಿಸ್ತೀನಿ ಅಂತ ೧೦೦೦ರೂ ಎರಡು ಸಲ ಕಿತ್ಕೊಂಡ......, ಮಂತ್ರಿಗಳು ನನ್ನ ಖಾಸಾ ಸ್ನೇಹಿತರು ಅಂತ ಬೊಗಳೆ ಹೊಡೆದದ್ದು ಕೇಳಿ ನನ್ನ ಸ್ನೇಹಿತನ ತಂದೆ ೫೦೦ ರೂಪಾಯಿ ಅವನ ಪಾದಕ್ಕೆ ಅರ್ಪಿಸಿದರು.

ವೆಂಕಮ್ಮ : ಅಂಥೋರನ್ನ ಒದೀಬೇಕು.

ರಾಜಣ್ಣ : ನಿಜ..... ನಮ್ಮ ಸಮಾಜದಲ್ಲಿ ಇಂಥ ಕೆಟ್ಟ ಶಕ್ತಿಗಳು ಹೆಚ್ಚಿರೋದ್ರಿಂದ್ಲೇ ಈ ದುರವಸ್ಥೆ......

ಸತ್ಯ : ಆಶ್ಚರ್ಯ ಏನು ಅಂದರೆ.... ನಾನು ಹೇಳಿದ ಎಲ್ಲಾ ಕಡೆ ಜನಕ್ಕೆ ಟೋಪಿ ಹಾಕಿದ ಮನುಷ್ಯ ಒಬ್ಬನೇ.......

ರಾಜಣ್ಣ : ಯಾರವನು?

ಸತ್ಯ : ಕುಮಾರ್ ಅಂತ-

ವೆಂಕಮ್ಮ : ಏನಂದೆ?

ಸತ್ಯ : ಕುಮಾರ್....

ವೆಂಕಮ್ಮ : ಸ್ವಲ್ಪ ಬೆಳ್ಳಗೆ - ಕುಳ್ಳಗೆ.......

ರಾಜಣ್ಣ : ಚಿಗುರು ಮೀಸೆ - ಟೈಟ್ ಪ್ಯಾಂಟು.

ಸತ್ಯ : ಹೌದು ಹೌದು.....

ರಾಜಣ್ಣ : ಕೆದರಿದ ಕೂದಲು ಸೀರೇಲಿ ಬುಷ್‌ಷರ್ಟು.......

ಸತ್ಯ : ನಿಜ ನಿಜ-

ವೆಂಕಮ್ಮ : ದೊಡ್ಡ ಕನ್ನಡಕ.....

ರಾಜಣ್ಣ : ಮೊಂಡು ಮೂಗು.......

ಸತ್ಯ : ನಿಜ ನಿಜ...... ಅವನೇ ಈಗ ಸಿಕ್ಕಿಬಿಟ್ಟ ಹೋಟಲಲ್ಲಿ.... ಏಕ್‌ದಮ್ ಕತ್ತಿನಪಟ್ಟಿ ಹಿಡಿದೆ... ಮಗನೆ.... ಸಿನಿಮಾ ತೇಗಿತೀಯಾ?....ಕೆಲಸ ಕೊಡಿಸ್ತೀಯಾ. ಎಷ್ಟು ಜನಕ್ಕೆ ಮೋಸ ಮಾಡಿದೆ ಹಾಗೇ, ಹೀಗೆ ಅಂದೆ....

ರಾಜಣ್ಣ : ಏನಂದ ಅದಕ್ಕೆ......

ಸತ್ಯ : ಅನ್ನೋದಕ್ಕೆ ಬಿಡೋರು ಯಾರು? ತೆಗೆ ಇರೋ ಕಾಸೆಲ್ಲಾ ಅಂದೆ.... ನಡೀ Police Stationಗೆ ಅಂದೆ.....

ವೆಂಕಮ್ಮ : ಒಳ್ಳೇ ಕೆಲಸ ಮಾಡಿದೆ.

ಸತ್ಯ : ತಕ್ಷಣ ಅವನು ನಮ್ಮ ತಾಯಿ ತೀರ್‍ಕೊಂಬಿಟ್ರು.... ಇಗೋ ಟೆಲಿಗ್ರಾಂ..... ಊರಿಗೆ ಹೋಗ್ತೀದೀನಿ.....ಇಂಥ ಅನ್ಯಾಯ ಮಾಡೋ ಹೊತ್ತಿಗ ನಮ್ತಾಯಿ ತೀರ್‍ಕೊಂಡ್ರೂ ಅಂತ ಕಾಣುತ್ತೆ, ಅಂತ ಗೋಳೋ ಅಂತ ಅತ್ತ, ಈಗ ಬಡ್ಡಿಗೆ ಸಾಲ ಮಾಡಿ ೨೦೦ರೂ ತಂದಿದೀನಿ ಅಂತ ಹಣ ತೆಗೆದಿಟ್ಟ, ಬೇಕಿದ್ರೆ ತಗೋ ಬಿಡಿ.... ನಮ್ಮಮ್ಮನ್ನ ಮಣ್ಣು ಮಾಡೋದೇ ಬೇಡ.... ನಾಯಿ, ನರಿ ತಿಂದ್ಹಾಕ್ಲಿ ಅಂದ..... ನಂಗೆ ಅಷ್ಟು ಕಟುಕನಾಗೋದು ಇಷ್ಟವಾಗಲಿಲ್ಲ. ನಾನು ದುಡ್ಡು ವಾಪಸ್ಸು ಕೊಟ್ಟು - ಇನ್ನು ಮೇಲಾರೂ ಇಂಥ ಮೋಸ - ಅನ್ಯಾಯ ಬಿಟ್ಟು ನ್ಯಾಯವಾಗಿ ನಡ್ಕೋ ಅಂದು ಬಂದೆ.

ರಾಜಣ್ಣ : ಛೆ ಛೆ....ಆ ೨೦೦ ರೂಪಾಯಿ ತಂದು ಬಿಡಬೇಕಾಗಿತ್ತು.

ವೆಂಕಮ್ಮ : ಹೌದು ಹೌದು......

ಸತ್ಯ : ಆ ಮನುಷ್ಯನ ಕಷ್ಟ ತಿಳಿದ ಮೇಲೂ ಹ್ಯಾಗೆ ಅನ್ನೋದು ಪಾಪ?

ರಾಜಣ್ಣ : ಪಾಪ ಅಂತೆ ಪಾಪ ಕಾಡ್ ಪಾಪ..... Rascal.......

ಸತ್ಯ : ಗೊತ್ತ ಅವನು?

ರಾಜಣ್ಣ : ಹಾಳಾದವನು ಆ ೨೦೦ರೂ ತಂದಿದ್ದೇ ಇಲ್ಲಿಂದ.

ಸತ್ಯ : ನೀವೇಕೆ ಸಾಲ ಕೊಡೋಕೆ ಹೋದಿರಿ?

ರಾಜಣ್ಣ : ನಾವು ಸಾಲ ಕೊಡಲಿಲ್ಲ ಪುಸ್ತಕ ಪ್ರಿಂಟ್ ಮಾಡ್ತೀನಿ ಅಂತ ನಮಗೆ ಟೋಪಿ ಹಾಕಿದ.....

ಸತ್ಯ : ಆ್ಞಂ.... ನಿಜವೇ?

ವೆಂಕಮ್ಮ : ಹೌದಪ್ಪ....... ನಮ್ಮೆಜಮಾನ್ರ ನಾವೆಲ್ಲು ಪ್ರಿಂಟ್ ಆಗ್ತಿದೆ ಅಂದ.... ೩೦೦ ರೂ ಕೊಡಿ ಅಂದ.... ನೋಡಿ Proof ಅಂತ ಹಾಳೆ ಇಲ್ಲಿಟ್ಟ......

ಸತ್ಯ : ಹೌದೆ..... ಅರೆ... "ಪ್ರಮೋದ"...... ಇದು ನನ್ನ ಸ್ನೇಹಿತ ಬರೆದಿರೋ, PRINT ಆಗಿರೋ Novel ...... ಪುಸ್ತಕ ಹರಿದು ಒಂದಷ್ಟು ಹಾಳೆ ತಂದಿದ್ದಾನೆ ಅಷ್ಟೆ... ಮೋಸ ಮೋಸ ಹ ಹ ಹ ಹ .......

ರಾಜಣ್ಣ : ಲೇ ಕುಮಾರ...ಯಾಕೆ ಹಾಗೆ ನಗ್ತೀ?

ಸತ್ಯ : ಆಗ ನೀನು ಅಂದೆಯಲ್ಲಾ ಈಗ ನಂಗೆ ಹ್ಯಾಗೆ ನಗಬೇಕು ಗೊತ್ತಾಗ್ತಿಲ್ಲ ಅಂತಾ....ಈಗ ನೀವೇ ಟೋಪಿ ಬಿದ್ರಿ.

ರಾಜಮ್ಮ : ಲೇ ಈಗ ಏನು ಮಾಡೋದು ಹೇಳೋ...... ಅಡ್ರೆಸ್ ಕೊಟ್ಟಿದ್ದಾನೆ ಅಲ್ಲಿ ಹೋಗೋಣ.

ಸತ್ಯ : ಫೋರ್ Two One Zero ಅಲ್ಲ- ಡಬ್ಬಲ್ zero ಅವನ ನಂಬರ್ರು ಅವನ ಅಡ್ರೆಸ್ ಯಾವನಿಗೆ ಗೊತ್ತು....... ಮೋಸ ಮಾಡ್ತಾ ಮಾಡ್ತಾ ಊರೂರು ತಿರುಗೋದೆ ಅವನ ಕಸುಬು...... ಇನ್ನು ಅವನು ಕೊಟ್ಟ, ನೀವು ಈಸ್ಕೊಂಡ್ರಿ.

ವೆಂಕಮ್ಮ : ಏನಪ್ಪಾ ಗತಿ ಇನ್ನು?

ರಾಜಣ್ಣ : ಅತ್ತಮ್ಮ....... ಮನೆ Owner ಬರ್ತಿದಾರೆ..... ಏನು ಮಾಡೋದು ಈಗ, ಏನು ಹೇಳೋದು ಈಗ....ತಾಪತ್ರಯ ಬೇಡ.......

ವೆಂಕಮ್ಮ : ಅಯ್ಯೋ...... ಅವರಿಗೆ ಕೊಡಬೇಕಾದ ಬಾಡಿಗೆ ದುಡ್ನೇ ಇವನಿಗೆ ಕೊಟ್ಟೆ ಇನ್ನು ಗತಿ..... ಓ ಇದ್ದಾನೆ ಆ ಮನುಷ್ಯ...... ಒಳ್ಳೇ ತಾಪತ್ರಯವಾಯಿತೇ?

*

# ಡಾ. ಪಿಂಟು

(ಕರೆ ಗಂಟೆ ಒತ್ತಿದ ಶಬ್ದ, ಬಾಗಿಲು ತೆಗೆದು)

ಯಸ್ತರ್ : ಯಾರು?

ಗೋವಿಂದ : ನನ್ನ ಹೆಸ್ರು ಗೋವಿಂದ......

ಯಸ್ತರ್ : ಏನು ಬೇಕಾಗಿತ್ತು?

ಗೋವಿಂದ : ಡಾಕ್ಟರ್ ಇದ್ದಾರೇನು?

ಯಸ್ತರ್ : ಇದ್ದಾರೆ ಕೂತ್ಕೊಳ್ಳಿ.....

ಗೋವಿಂದ : ಥ್ಯಾಂಕ್ಯು

(Pause......)

ಯಸ್ತರ್ : ರೀ....... ರೀ....... ಪಿಂಟೂ ಸಾಹೇಬ್ರೆ..... ಡಾ......ಪಿಂಟೂ ಅವ್ರೆ.......

ಪಿಂಟೂ : ಏನೇ ಅದು.......ರೀ...... ಪಿಂಟೂ ಸಾಹೇಬ್ರೆ..... ಡಾ..... ಪಿಂಟೂ ಅವ್ರೇ ಅಂತ ಒಂದೇ ಸಮ್ನೆ ವಡ ವಡ ಅಂತ ಹೊಡ್ಕೊಂತೀಯಾ?

ಯಸ್ತರ್ : ಯಾರೋ ನಿಮ್ಮನ್ನು ನೋಡಕ್ಕೆ ಬಂದವ್ರೆ.... ಯಾಕೆ ಬಾಯಿ ದೊಡ್ಡದು ಮಾಡ್ತೀರಿ.....

ಪಿಂಟೂ : ಪರ್ವಾಗಿಲ್ಲ ಕಣೆ ನೀನೇ ಬಾಯಿ ತೆರೆದು.... ಜೋರು ಮಾಡಿ ನನ್ನನ್ನು....... Silence ಅಂತೀಯಲ್ಲಾ..... ಪ್ರೀತಿ ರಾಣಿಯವ್ರೇ..... ನೀವು ಹೇಳಿದ ಮೇಲೆ.

ಯಸ್ತರ್ : Silence ಸಾಕು...... ಯಾರೋ ಬಂದವ್ರೇ....... ಅವರ ಮುಂದೆ ನಿಮ್ಮ Silence ಮುರಿದು ಮಾತಾಡಿ ಕಳುಹಿಸಿ ಹೋಗಿ......

ಪಿಂಟೂ : ಎಡ ಹೊತ್ತಿನಲ್ಲಿ ಬಂದ ಸನ್ನ ಎದೆ ಕೆರೆಯೋ ದಾಸಯ್ಯ ಅಂತ....... ಇಷ್ಟು ಹೊತ್ತಿನಲ್ಲಿ ಅದ್ಯಾರಪ್ಪಾ ಬಂದವ್ರು......?

ಯಸ್ತರ್ : ಯಾರೋ ಬಂದವ್ರೇ..... ನಿಮಗೆ ಗೊತ್ತಿಲ್ಲದೇ ಇರುವವರು ನಮಗೆ ಹ್ಯಾಗ್ ಗೊತ್ತಾಗಬೇಕು?

ಹೋಗಿ ನೋಡಿ ಹೋಗಿ....

ಪಿಂಟೂ : ಆಯ್ತು ಮಾರಾಯ್ತಿ.... ಹೊರಟೆ.....

ಗೋವಿಂದ : ನಮಸ್ಕಾರ ಸಾರ್......

ಪಿಂಟೂ : ನಮಸ್ಕಾರ..... ಅಂದ ಹಾಗೇ... ತಾವು..... ತಮ್ಮ ಪರಿಚಯ......

ಗೋವಿಂದ : ನನ್ನ ಹೆಸರು ಗೋವಿಂದ ಅಂತ.....

ಪಿಂಟೂ : ಏನು ವಿಷಯ?

ಗೋವಿಂದ : ಪಾಪ ನಿಮಗೆ ತೊಂದರೆ ಕೊಟ್ಟೆ. ಸ್ನಾನ ಮಾಡಿ ಟವಲ್ ಸುತ್ತು ಕೊಂಡೇ ಹಾಗೇ ಬಂದ್ರಿ....... ಎಷ್ಟೇ ಆಗಲಿ ತಾವು ಡಾಕ್ಟರ್ ನಿಜವಾಗ್ಲೂ ನಿಮ್ಮಂಥವ್ರು ಅಪರೂಪ......

ಪಿಂಟೂ : ಅದು ಸರಿ.

ಗೋವಿಂದ : ಏನಿಲ್ಲ ನಮ್ಮ ಮಗೂಗೆ ತುಂಬಾ ಭೇದಿಯಾಗ್ತಾ ಇದೆ. ಅದ್ಕೇ ಸ್ವಲ್ಪ ಔಷಧ ಕೇಳೋಣ ಅಂತ ಬಂದೆ.

ಪಿಂಟೂ : ಭೇದೀನಾ......

ಗೋವಿಂದ : ಹೌದು ಸಾರ್, ಬೇಗ್ನೆ ಏನಾದ್ರೂ ಔಷಧ ಕೊಡ್ರಿ..... ಇಲ್ಲದೇ ಹೋದ್ರೆ ಮಗು ಸುಸ್ತಾಗ್ಬುಡುತ್ತೆ.

ಪಿಂಟೂ : (ಸ್ವಗತ) ಪಾಪ.... ಈ ಹೊತ್ತಿನಲ್ಲಿ ಬಂದಿದ್ದಾನೇ.... ಇಲ್ಲ ಅಂತ ಹ್ಯಾಗ್ಹೇಳೋದು? ಹ್ಯಾಗಾದ್ರೂ.... ಅದಿದ್ಯಲ್ಲಾ ಆಯ್ತು..... ಬಂದೆ..... ಬಂದೆ.... ನೋಡಿ ಈ ಔಷಧ ಬರೆದು ಕೊಟ್ಟಿದ್ದೀನಿ ಅದನ್ನು ತೆಗೆದುಕೊಳ್ಳಿ. ಭೇದಿ ನಿಂತು ಹೋಗಿ ಬಿಡುತ್ತೆ. ಸದ್ಯ ಇದು ನನ್ನಲ್ಲಿಲ್ಲ.... ಔಷಧದ ಅಂಗಡೀಲಿ ಸಿಗುತ್ತೆ.

ಗೋವಿಂದ : ತುಂಬಾ ಉಪಕಾರವಾಯ್ತು.... ತಮ್ಮ..... Cosultation Fees ತೆಗೆದುಕೊಳ್ಳಿ.......

ಪಿಂಟೂ : ಪರ್ವಾಗಿಲ್ಲ ಹೋಗಿ ಬನ್ನಿ.

ಗೋವಿಂದ : ಹಾಗೂ ಉಂಟಾ...... ತೆಗೆದುಕೊಳ್ಳಿ ಸಾರ್ ಇಲ್ಲಿಟ್ಟಿದ್ದೇನೆ. ನಾನು ಬರ್ತೇನೆ ಸಾರ್. ತುಂಬಾ Thanks Sir.

ಯಸ್ತರ್ : ಯಾರ್‍ರೀ...... ಅದು?

ಪಿಂಟೂ : ಯಾರೋ... ಗೋವಿಂದನಂತೆ...... ಮಗುವಿಗೆ ಭೇದಿಯಂತೆ. ಔಷಧ ಬೇಕು ಅಂದ. ಬರೆದು ಕಳುಹಿಸಿದೆ.

ಯಸ್ತರ್ : ಆಯ್ತಾಯ್ತು ನಡೀರಿ..... ಬಟ್ಟೆ ಹಾಕ್ಕೊಂಡು. ಬಂದ್ರೆ ಊಟ ಬಡಿಸ್ತೀನಿ......

ಪಿಂಟೂ : ಆಯ್ತಾಯ್ತು.......

(ಸಂಗೀತ)

ಯಸ್ತರ್ : ಏನ್ರೀ..... ನಿಮ್ಮನ್ನ.......

ಯಸ್ತರ್ : ಏನು ಮಾಡ್ತಾ ಇದೀರಿ ಅಂದೆ.....?

ಪಿಂಟೂ : ಮಾಡಬೇಕಾದದ್ದು.......

ಯಸ್ತರ್ : ಅಂಥದ್ದೇನು.... ಕಡೆದು ಕಟ್ಟೆ ಹಾಕ್ತಾ ಇರೋದು ನೀವು?

ಪಿಂಟೂ : ನೋಡು ಬಾ....... ಪಾಟ್‌ಗಳ ಮಣ್ಣು ಬದಲಾಯಿಸಿ, ಹೊಸ ಮಣ್ಣು ಗೊಬ್ಬರ ಹಾಕ್ತಾ ಇದ್ದೀನಿ.....

ಯಸ್ತರ್ : ಆಯ್ತು ಬನ್ನಿ....... ಬಿಸಿ ಬಿಸಿ ಪಕೋಡ..... ತಿಂದು......

ಪಿಂಟೂ : ತಣ್ಣಗಿರೋ ಕಾಫಿ ಕುಡಿದು. ಆಮೇಲೆ ಕೆಲಸ ಮಾಡು ಅಂತ್ಲಾ?

ಯಸ್ತರ್ : ಇಲ್ಲ.... ಬಿಸಿ ಬಿಸಿ ಪಕೋಡ, ಬಿಸಿ ಬಿಸಿ ಫಿಲ್ಟರ್ ಕಾಫಿ ಕುಡಿದು......

ಪಿಂಟೂ : ನಿನ್ನಂಥ ಹೆಂಡ್ತೀರು ಅಪರೂಪ ಕಣೇ. ಗಂಡನನ್ನು ಕಂಡ್ರೇ..... ಅಬ್ಬಬ್ಬಾ ಅದೇನು ಪ್ರೀತೀನೋ?

ಯಸ್ತರ್ : ಆದ್ರೆ ನಿಮಗಿಲ್ಲವಲ್ಲಾ......

ಪಿಂಟೂ : ನೀನು ಅಡಿಗೆಯಲ್ಲಿ ತೋರಿಸ್ತಾ ಇದ್ದೀಯಾ? ನಾನು.......

ಯಸ್ತರ್ : ಯಾವ ರೀತಿ ತೋರಿಸ್ತೀರಿ.....?

ಪಿಂಟೂ : ಮನೆ ಮುಂದುಗಡೆ ಬೃಂದಾವನ ಮಾಡಿ ಅಲ್ಲಿ ನಲಿದು ನರ್ತಿಸಲು ಸಿದ್ಧ ಮಾಡ್ತಿದ್ದೀನಿ......

ಯಸ್ತರ್ : ನಲಿದು ನರ್ತಿಸಲಿಕ್ಕೆ ವಯಸ್ಸು ಸಾಕೇ?

ಪಿಂಟೂ : ಬೇಕಾದಷ್ಟು.....

ಯಸ್ತರ್ : ಸಾಕು ನಿಮ್ಮ ಸರಸ ಸಲ್ಲಾಪ...... ಬನ್ನಿ....... ಒಳಗೇ

(ಬಾಗಿಲು ಮುಚ್ಚುವ ಶಬ್ದ)

ಯಸ್ತರ್ : ಹ್ಯಾಗಿದೆ ಪಕೋಡ?

ಪಿಂಟೂ : ನೀನು ಮಾಡಿದ ಮೇಲೆ ಕೇಳಬೇಕೇ? ಬೆರಳು ಕಡಿದುಕೊಳ್ಳುವ ಹಾಗಿದೆ ಕಣೆ.

ಯಸ್ತರ್ : ಆ ಕೆಲಸ ಮಾಡಬೇಡ್ರೀ, ಆಫೀಸಿನಲ್ಲಿ ಕೆಲಸ ಮಾಡಲಿಕ್ಕೆ ತೊಂದ್ರೆ ಆದೀತು?

ಪಿಂಟೂ : ಹಾಗಾದ್ರೆ....... ನಿನ್ನ ಬೆರಳನ್ನ.......

ಯಸ್ತರ್ : ಯಾಕೋ ಅತಿಯಾಯ್ತು ನಿಮ್ಮ......

ಪಿಂಟೂ : ಜೀವನದಲ್ಲಿ ಇನ್ನೇನೇ ಇರೋದು...... ನಕ್ಕು ನಲಿದು...... ಒಂದು ದಿನ.... ಹಾಗೇ ಹೊರಟು ಹೋಗೋದಲ್ವೇ?

ಯಸ್ತರ್ : ಅದಕ್ಕೇ......

ಪಿಂಟೂ : ಜೀವನವನ್ನ ಚೆನ್ನಾಗಿ ನಲಿಯಬೇಕು ಕಣೆ, ಬೆಚ್ಚನೆಯ ಮನೆ...... ಇಚ್ಛೆನೆಯ ಸತಿ.......

ಯಸ್ತರ್ : ಸರ್ವಜ್ಞನ ವಚನ ಜ್ಞಾಪಿಸ್ಕೊಳ್ತಿದ್ದೀರೇನು.... ಸಾಕೇ..... ಬೇಕೋ ಅಂತ....

ಪಿಂಟೂ : ತಿನ್ತಾ ಇದ್ರೆ..... ಬೇಕು ಅನ್ನಿಸುತ್ತೆ. ಅದರಲ್ಲೂ ನಿನ್ನ ಪ್ರೀತಿಯ ಒತ್ತಡದಿಂದ..... ಹೊಟ್ಟೆಯಲ್ಲಿ ಅದೇನು ಜಾಗ ವಿಸ್ತಾರವಾಗ್ತಾ ಇದ್ಯೋ ಹೇಳಲಿಕ್ಕೆ ಆಗ್ತಿಲ್ಲಾ.....

ಯಸ್ತರ್ : ಗುಡಾಣ ಆಗ್ತಾ ಇದೆಯೇನು? ಇದು ತಿಂಡಿರೀ..... ಊಟವಲ್ಲಾ.

ಪಿಂಟೂ : ಏನೇ ಹಾಗೂ ಅಂತೀಯಾ, ಹೀಗೂ ಅಂತಿಯೋ ನಾನು ತಿನ್ನೋ ಬ್ಯಾಡ್ವೋ.... ಏನೋ..... ಸದ್ದು... ನನ್ನ ಜೊತೆಗೆ ನೆಂಟರು.

ಯಸ್ತರ್ : ನಿಮಗೇ ಇಲ್ಲ ಅನ್ತಿರೋ ನಾನು..... ಬೇರೆಯವರಿಗೆ......

ಪಿಂಟೂ : ಬೇಕಾದವ್ರು ಬಂದ್ರೆ......

ಯಸ್ತರ್ : ಸುಮ್ನಿರೋದು......

ಪಿಂಟೂ : ಆದರೆ ಈ ಘಮನ.... ಮನೆ ತುಂಬಾ ತುಂಬಿ ಹೋಗಿದ್ಯಲ್ಲೇ.....?

ಯಸ್ತರ್ : ಹೋಗಿ...... ನೋಡ್ರಿ......

ಪಿಂಟೂ : ನನ್ನನ್ನೇ ಹೋಗು ಅಂತೀಯಾ?

ಯಸ್ತರ್ : ಹೋಗಿ ಹಾಗೇ ಅಲ್ಲೇ ಮಾತಾಡ್ಸಿ ಕಳುಹಿಸಿಬಿಡಿ.

ಪಿಂಟೂ : ಆಯ್ತು ರಾಣಿ ಸಾಹೇಬ್ರೇ.....

(ಬಾಗಿಲು ತೆಗೆದು)

ಪಿಂಟೂ : ಯಾರು?

ಜಯರಾಜ : ನಾನು ಸಾರ್ ಜಯರಾಜಂತ......

ಪಿಂಟೂ : ಕೂತುಕೊಳ್ಳಿ......

ಯಸ್ತರ್ : ನಾವು ಕೂತುಕೊಳ್ಳುವ ಸ್ಥಿತಿಯಲ್ಲಿಲ್ಲ ಸಾರ್.....

ಯಸ್ತರ್ : ಏನು ಸಮಾಚಾರ.....?

ಜಯರಾಜ : ನಮ್ಮ ಮಗೂಗೆ ತುಂಬಾ ವಾಂತಿ ಭೇದಿ ಆಗಿ ಬಿಟ್ಟಿದೆ. ನಮ್ಮ ಬೀದಿ ಗೋವಿಂದಯ್ಯ.... ತಮ್ಮನ್ನು ಕಾಣಲು ಹೇಳಿದ.

ನೀವು ಅವರ ಮಗೂಗೆ ಕೊಟ್ಟ ಔಷಧಿಗೆ ಬೇಗನೆ ಒಂದೇ ದಿನದಲ್ಲೇ ವಾಸಿ ಆಯ್ತಂತೆ..... ನೋಡಿ ಸಾರ್.

ಪಿಂಟೂ : ಏನ್ರೀ ಮಗು ಇಷ್ಟು ಸುಸ್ತಾಗಿದೆ ನೋಡ್ರೀ...... ಹೀಗೆ ಇನ್ನೂ ಸ್ವಲ್ಪ ಹೊತ್ತಾದ್ರೆ.... ಮುಗೀತು Dehydration ಆಗ್ಬಿಡ್ತದೆ. ಮೊದಲು ಮಗೂಗೆ ಡ್ರಿಪ್ಸ್ ಕೊಡ್ಸಿ.... ಔಷಧ ಈಗ ನಡ್ಯೋ ಸ್ಟೇಜಲ್ಲಾ, ಮೊದಲು ಮಗು ಚೇತರಿಸಿಕೊಳ್ಳಲಿ....ಈಗ್ಲೇ..... ಒಂದು ಆಟೋ ಹಿಡಿದು ಹೊರಟು ಬಿಡಿ ಆಸ್ಪತ್ರೆಗೆ.....

(ಆಟೋ.... ಶಬ್ದ)

ಅಬ್ಬಬ್ಬಾ..... ಒಳ್ಳೇ.....ಗಿರಾಕಿಗಳು.....!

ಯಸ್ತರ್ : ಆಯ್ತೇನ್ರೀ......

ಪಿಂಟೂ : ಆಗೋದೇನು.... ಸಾಗು ಹಾಕಿದೆ.

ಯಸ್ತರ್ : ಏನಂತೆ?

ಪಿಂಟೂ : ಮಗೂಗೆ ಭೇದಿ ವಾಂತಿ ಅಂತೆ. ಅದೇ ಆ ಹೊತ್ತು ಬಂದಿದ್ದವನ ಬೀದಿಯವನೇ ಕಣೇ. ನಾನು ಬರೆದು ಕೊಟ್ಟ ಔಷಧ ಒಂದೇ ದಿನದಲ್ಲಿ ಗುಣವಾಯ್ತು ಅಂತ ಬಂದಿದ್ದ. ಆದ್ರೆ ಮಗು ನೋಡಿದೆ ಸುಸ್ತಾಗಿತ್ತು. ಕಣ್ಣು ಗುಳಿಬೀಳೋ ಸ್ಥಿತಿ ಇತ್ತು....ನಾನದ್ಕೇ.... ಮೊದಲು ಆಸ್ಪತ್ರೆಗೆ ಸೇರ್ಸಿ ಡ್ರಿಪ್ಸ್ ಕೊಡಿಸಲಿಕ್ಕೆ ಹೇಳಿದೆ.

ಯಸ್ತರ್ : ಸದ್ಯ ಒಳ್ಳೇ ಕೆಲ್ಸ ಮಾಡಿದ್ರಿ?

ಪಿಂಟೂ : ಏನು ಮಾಡೋದು ಈ ಶರೀರ ಇರೋದು ಯಾತಕ್ಕೆ?

ಯಸ್ತರ್ : ಪರೋಪಕಾರಾರ್ಥಂ ಇದಂ ಶರೀರಂ.... ಅಂತ

ಪಿಂಟೂ : ಸರಿಯಾಗಿ ಹೇಳ್ದೆ ಹೂಂ ಈಗ್ಯಾವ ಪೇಷೆಂಟೋ ನೋಡು.

ಯಸ್ತರ್ : ಪಕೋಡಾ.....

ಪಿಂಟೂ : ಆಯ್ತು ನಡೆ.... ನಡೆ.......

(ಸಂಗೀತ)

ಯಸ್ತರ್ : ಏನ್ರೀ.....? ಏನ್ರೀ......?

ಪಿಂಟೂ : ಅದೇನೇ.... ಏನ್ರೀ.....ಏನ್ರೀ ಅಂತ ರಾಗ ಎಳೀತೀಯಾ?

ಯಸ್ತರ್ : ಈ ಹೊತ್ತು ಏನಾಯ್ತು ಅಂತಿರೋ.....

ಪಿಂಟೂ : ಏನಾಯ್ತೋ..... ಹೇಳೇ, ಸುತ್ತಿ ಬಳಸಿ ಯಾಕೆ ಮಾತಾಡ್ತೀಯಾ? ಅದೇನೇ ಹೇಳೋದಿದ್ರೆ ಬಾಯ್ಬಿಟ್ಟು ನೇರವಾಗಿ ಹೇಳೇ.

ಯಸ್ತರ್ : (ನಗು)

ಪಿಂಟೂ : ಯಾಕೇ ಅಯ್ಯಯ್ಯೋ... ಯಾಕಿಂಗ್ ನಗ್ತೀಯ ಅಂತ?

ಯಸ್ತರ್ : ಅದೇ ಈ ಹೊತ್ತು.

ಪಿಂಟೂ : ಮಾಮೂಲಿ ಬೆಲ್ ಒತ್ತಿದ್ರಾ ಯಾರಾದ್ರು?

ಯಸ್ತರ್ : ಸರಿಯಾಗಿ ಹೇಳಿದ್ರಿ.

ಪಿಂಟೂ : ಡಾಕ್ಟರ್ ಇದ್ದಾರಾ ಅಂದ್ರು.

ಯಸ್ತರ್ : ಹೌದಲ್ಲಾ... ಸರಿಯಾಗೇ ಹೇಳ್ತಾ ಇದ್ದೀರಿ.

ಪಿಂಟೂ : ಅದ್ಕೆ ನೀನು ಅವ್ರಿಲ್ಲಾ...... ಅಂದೆ, ಮತ್ತೆ ಯಾವಾಗ ಬರ್ತಾರೇ ಅಂತ ಕೇಳಿದ್ರು......ಸಾಯಂಕಾಲ ಬರ್ತಾರೇ ಅಂದೆ.

ಯಸ್ತರ್ : ಏನು ಭವಿಷ್ಯ ನುಡಿದಾಗೆ ನುಡೀತೀರಿ.

ಪಿಂಟೂ : ಆ ಮೇಲೆ......

ಯಸ್ತರ್ : ಆಮೇಲೆನಿರಬಹುದು?

ಪಿಂಟೂ : ಆಮೇಲೆ ಬನ್ನಿ ಅಂದಿದ್ದೀಯಾ?

ಯಸ್ತರ್ : ಅದಕ್ಕೇ ಮೊದ್ಲೇ ಅವರೇನೂ ಕೇಳಿರಲಿಕ್ಕಿಲ್ವಾ?

ಪಿಂಟೂ : ಕೇಳಿರಬಹುದು, ಅದನ್ನು ಹ್ಯಾಗೆ ಊಹಿಸಲಿ?

ಯಸ್ತರ್ : ಸೋತ್ರಿ ಬಿಡಿ......

ಪಿಂಟೂ : ನೀನೇ ಗೆಲ್ಲು..... ನಾನೇ ಸೋಲ್ತೀನಿ, ವಿಷಯ ಏನು ಹೇಳು? ಬಾಡಿಗೆಯವರೋ.... ಸಾಲದವರೋ.....ವಿದ್ಯಾರ್ಥಿಗಳೋ.....?

ಯಸ್ತರ್ : Hold on hold on ಅವರಾರು ಅಲ್ಲ..... Patients..... ಹೊಟ್ಟೆನೋವಿನ Patients......

(ಕರೆಗಂಟೆಯ ಶಬ್ದ)

ಪಿಂಟೂ : ಈಗ ಯಾವ ಪೇಷೆಂಟೋ ನೋಡು......

(ಬಾಗಿಲ ತೆಗೆಯಲು ನಾಯಿ ಬೊಗಳುವ ಶಬ್ದ)

ಚನ್ನಣ್ಣ : ನಮಸ್ಕಾರ

ಯಸ್ತರ್ : ಏನು?

ಚನ್ನಣ್ಣ : ಡಾಕ್ಟರ್ ಇದ್ದಾರ್ಯೇ?

ಯಸ್ತರ್ : ಏನು ಬೇಕಾಗಿತ್ತು?

ಚನ್ನಣ್ಣ : ನಮ್ಮ ನಾಯಿಗೆ ಗಾಯವಾಗಿದೆ......

ಯಸ್ತರ್ : ಅದ್ಕೇ ನಮ್ಮ ಯಜಮಾನ್ರು ಏನು ಮಾಡಬೇಕು?

ಚನ್ನಣ್ಣ : ಔಷಧ......

ಯಸ್ತರ್ : ನಿಮಗೆ ತಲೆ ಇದ್ಯೇನ್ರಿ....ನಮ್ಮ ಯಜಮಾನ್ರು Vaternary Doctor ಅಲ್ಲ. ಹೋಗ್ರೀ ಪಶುವೈದ್ಯ ಶಾಲೆಗೆ.

(ಬಾಗಿಲು ಮುಚ್ಚಿದ ಶಬ್ದ)

ಪಿಂಟೂ : ಏನಂತೆ ಅದು.....?

ಯಸ್ತರ್ : ಇದು ಅವಿವೇಕದ ಪರಮಾವಧಿ.......

ಪಿಂಟೂ : ಯಾಕೇ? ಯಾರೇ? ಏನಂದ್ರೇ?

ಯಸ್ತರ್ : ಜನ.... ಏನಂತಾರೆ?..... ಅಷ್ಟು ದಿನಗಳಿಂದ ಜನರು ಬರ್‍ತಿದ್ರು ನಿಮ್ಮ ಔಷಧ ಕೇಳಲಿಕ್ಕೆ. ಇಂದು ಒಂದು ನಾಯಿ ತೆಗೆದುಕೊಂಡು ಬಂದಿದ್ರು......

ಪಿಂಟೂ : ಏನು..... ಏನು ಹುಚ್ಚು ಜನಗಳಪ್ಪಾ.....

ಯಸ್ತರ್ : ಅವರಲ್ರೀ ಹುಚ್ರು..... ನಾವು.

ಪಿಂಟೂ : ಈಗ ಒಂದು ಕೆಲಸ ಮಾಡು.

ಯಸ್ತರ್ : ಏನು?

ಪಿಂಟೂ : ಯಾರು ಬಂದ್ರೂ ಅವ್ರಿಲ್ಲ ಅಂದು ಬಿಡು.

ಯಸ್ತರ್ : ನೀವಿಲ್ದಾಗ್ಲೆ ಬಂದ್ರಪ್ಪಾ..... ಆಗ......?

ಪಿಂಟೂ : ಆಮೇಲೆ ನಾನು ಸರಿಯಾದ ಉತ್ತರ ಹೇಳ್ತೀನಿ.

ಯಸ್ತರ್ : ಇಲ್ಲದಾಗ ಆಫೀಸಿನಲ್ಲಿ ನೋಡಿ ಅಂತ ಹೇಳ್ಲಾ......?

ಪಿಂಟೂ : ಆಮೇಲೆ ಕ್ಯೂ ಆದ್ರೆ ಇಲ್ಲ ಅಂದು ಬಿಡು ಸಾಕು. ನೋಡ್ದಾ.... ಹೇಳ್ತಿದ್ದೆ ನನ್ನ ಮಾತು ಕೇಳ್ದಾ ನೀನು......?

ಪ್ರೀತಿ : ಏನ್ರೀ ಅದು?

ಪಿಂಟೂ : ಅದೇ ಮನೆ ಕಟ್ಟಿಸಿದಾಗ ಮನೆ ಮುಂದೆ ಬೋರ್ಡ್ ಹಾಕಿಸಬಾರದು ಅಂದಾಗ, ನೀನು ಇಲ್ಲ ಅಮೃತಶಿಲೆಯಲ್ಲಿ ನಿಮ್ಮ ಹೆಸರು ಕೆತ್ತಿರಲೇಬೇಕು, ಅದು ಶೋಭಾಯಮಾನ ಅಂತ ಹೇಳ್ದೆ. ನಾನು ತಂದು ಹಾಕಿಸಿದಾಗ ಅದನ್ನು ನೋಡಿ ಬಹಳ ಖುಷಿ ಪಟ್ಟೆ, ಅದ್ಕೇ ಈಗ ಅನುಭೋಗಿಸು.

ಪ್ರೀತಿ : ಹಾಗಾದ್ರೆ ಹೆಸರಿನ ಬೋರ್ಡ್ ಕಿತ್ತು ಹಾಕಬೇಕು ಅಂತೀರಾ?

ಪಿಂಟೂ : ಹಾಕ್ಸಿ ಅಂದವಳೇ ನೀನು, ಈಗ ಬೇಡ ಅಂತ ಹೇಳಲಿಕ್ಕಾಗುತ್ಯೇ? ಹುಚ್ಚು ಜನಗಳಿಗೆ ಏನು ಹೇಳೋದು?

ಪ್ರೀತಿ : ಜನಗಳದಲ್ಲ ತಪ್ಪು ನಿಮ್ಮದು......

ಪಿಂಟೂ : ನನ್ನದು ಹ್ಯಾಗೇ?

ಪ್ರೀತಿ : ಅಲ್ರೀ ಡಾಕ್ಟರೇಟ್ ಬಂತು ಅಂತ ಖುಷಿಯಾಗಿ ಹೆಸರು ಕೆತ್ತಿಸಿಟ್ರಲ್ಲಾ. ಅದರಲ್ಲಿ ಸರಿಯಾಗಲ್ವೇ ಬರಿಸೋದು?

ಪಿಂಟೂ : ಡಾ॥ ಅಂತ್ಲೇ ಬರಿಸೀರೋದು ಅದರಲ್ಲಿ ತಪ್ಪೇನು?

ಪ್ರೀತಿ : ಹಾಗಲ್ರೀ, ಡಾಕ್ಟರ್ ಅಂದ ಕೂಡ್ಲೇ- ಇವರು ಎಂ.ಬಿ.ಬಿ.ಎಸ್ ಅಂತ ತಿಳಿದುಕೊಂಡು ಏನೋ ಔಷಧ ಕೇಳಬೇಕು ಅಂತ ಬರ್ತಾರೆ.

ಪಿಂಟೂ : ನಾನು ಹಾಗೆ ಬರೀಸಿಲ್ವಲ್ಲಾ.

ಪ್ರೀತಿ : ಅಲ್ಲೇ ನೀವು ತಪ್ಪು ಮಾಡಿರೋದು.

ಪಿಂಟೂ : ಏನು ತಪ್ಪು?

ಪ್ರೀತಿ : ಡಾ. ಪಿಂಟು ಎಂ.ಎ. ಪಿಎಚ್.ಡಿ ಅಂತ ಹಾಕ್ಸಿದ್ರೆ, ಯಾರೂ ನಿಮ್ಮ ಹತ್ತಿರ ಸುಳಿತಿರಲಿಲ್ಲ. ಇಷ್ಟೊಂದು ಅವಾಂತರಾನೂ ಪಡಬೇಕಾಗಿರ್ಲಿಲ್ಲ. ನಾಳಿಗಾದ್ರೂ ನಿಮ್ಮ ಹೆಸರಿನ ಮುಂದೆ ಆ ಪ್ರವರ ಬರೆಸಿಬಿಡಿ- ಜನಗಳು ಬರೋದ್ ನಿಂತು ನಿಮ್ಮ ಮಾನ ಉಳಿಸ್ಕೊಳ್ಳಿ.

ಪಿಂಟೂ : ನೀನು ಹೇಳಿದ ಮೇಲೆ ಇನ್ನು ಎರಡನೇ ಮಾತೇ ಇಲ್ಲ ಬಿಡು. ನಾನು ಜನರ ಡಾಕ್ಟರೂ ಅಲ್ಲ, ದನೀನ ಡಾಕ್ಟ್ರೂ ಅಲ್ಲ, ಡಾ. ಪಿಂಟು ಎಂ.ಎ ಪಿಎಚ್.ಡಿ.

ಪ್ರೀತಿ : ಇನ್ನು ರೋಗಿಗಳ ಸುಳಿವಿಲ್ಲ, ಪಶುಗಳ ದರ್ಶನ ಭಾಗ್ಯವಿಲ್ಲ-

ಪಿಂಟೂ : ಆದ್ರೆ ಒಂದು ದರ್ಶನ ಸದಾ..... ಅದೇ......

ಪ್ರೀತಿ : ಪ್ರೀತಿ.....!
ನಮ್ಮಿಬ್ಬರ ಪ್ರೀತಿ.

(ಇಬ್ಬರೂ ನಗುವರು)

(ಸಂತೋಷದ ಸಂಗೀತ)



# ಮಂಗಣ್ಣ

ರಂಗಣ್ಣ : ಮಂಗಣ್ಣ.......

ಮಂಗಣ್ಣ : ಏನಪ್ಪಾ.....?

ರಂಗಣ್ಣ : ನಿನಗೆ ಹೆಣ್ಣು ನೋಡಿ ಕಾಲಿನ ಚಡಾವು ಸಮದೋಯ್ತು ಬುಡಪ್ಪಾ.... ದೇಸ ಕೋಸವೆಲ್ಲಾ ನೋಡಿ ನಂಗೂ ಸಾಕ್ ಸಾಕಾಗೋತು.....ಈ ರಂಗಣ್ಣನ ಮನೀಗ.... ಸರಿಯಾದ ಸೊಸಿ ಸಿಕ್ತಾ ಇಲ್ವಲ್ಲಾ ಏನ್ಮಾಡ್ಲಿ ಯೋಳು?

ಮಂಗಣ್ಣ : ಸಿಕ್ದೇ ಎಲ್ಲೋತಾಳ ಬುಡಪ್ಪಾ,

ರಂಗಣ್ಣ : ನಾಳಕ್ ಸಿದ್ದವಾಗ್ಬುಡು ಚಿಂಚೋಳಿಗೋಗವ.

ಮಂಗಣ್ಣ : ನೀನೇಳಿದ್ ಮ್ಯಾಗಾತು ಬುಡಪ್ಪ, ನಾನು ಊಹೂಂ ಅಂದಾನಾ ಊಂ ಅಂತೀವ್ನಿ.....

ರಂಗಣ್ಣ : ಲೇ ಮೊಗ ವುಡ್ಗಿ.... ಬಿ.ಎಲ್. ಪ್ಯಾಸ್ ಮಾಡವ್ಳಂತೆ ಅಂತ ಎಡ್ರಾಮಿಗೋದೆ ನೋಡು.

ಮಂಗಣ್ಣ : ಅಂಗಪ್ಪಾ,

ರಂಗಣ್ಣ : ಅಂಗಲ್ಲ ಇಂಗ. ಒಳ್ಳೆ ಮಂಗಣ್ಣ ಕಣೋ.

ಮಂಗಣ್ಣ : ಒಳ್ಳೇವ್ನಲ್ದೆ ಕೆಟ್ಟವ್ನಪ್ಪಾ ನಾನು, ಅದೇನು ಯೋಳಪ್ಪಾ ವುಡುಗಿ ಎಂಗಿದ್ಲಪ್ಪಾ?

ರಂಗಣ್ಣ : ಚಲೋ ಇದ್ಲೋ......

ಮಂಗಣ್ಣ : ನಾನು ನೋಡ್ಲೇ ಇಲ್ಲ......

ರಂಗಣ್ಣ : ನನ್ನ ನೋಡಿ..... ನಿಮ್ಮ ಮಗ ಬ್ಯಾಡ ನಿಮ್ಮನ್ನೇ ಮದ್ವೆ ಆತೀನಿ ಅಂದ್ಲು.

ಮಂಗಣ್ಣ : ಅಂಗಪ್ಪಾ..... ಇದೇನಪ್ಪಾ.... ಪುನಾ ನೀನು.......

ರಂಗಣ್ಣ : ಊಂ ಕಣೋ ಬೇಗಾ......

ಮಂಗಣ್ಣ : ಆಂಗಾರೆ.... ನೀನೇ ಮದ್ವೆ ಮಾಡ್ಕತೀಯಪ್ಪಾ.....

ರಂಗಣ್ಣ : ಅಯ್ಯೋ ಯಾಕೇ......?

ಮಂಗಣ್ಣ : ಮತ್ತೇನೇಳ್ದೇ..... ಅಪ್ಪಾ ಅವರಿಗೆ.....

ರಂಗಣ್ಣ : ಅವ್ವ ಕಿತ್ಕಂಡು ತಿನ್ನುವಳು ಅನ್ನುಸ್ತು.... ಏನೂ ಬ್ಯಾಡ ತಾಯಿ ನನಗೆಂಡ್ರವ್ಳೆ ಅಂತೇಳಿ ಬಂದ್ಬುಟ್ಟೆ. ನಾನು ಎಣ್ಣು ನೋಡಕ ಬಂದದ್ದು ನನಗಲ್ಲ ನನ್ನ ಮಗಂಗೆ.... ಅನ್‌ಬುಟ್ಟು ಬಂದುಬಿಟ್ಟೆ.

ಮಂಗಣ್ಣ : ಚಲೋ ಕೆಲಸ ಮಾಡ್ದೆ ಬುಡಪ್ಪ, ಯಾಕೋ ಮದ್ವೆ ಆಗೋ ಋಣ ಕೂಡಿ ಬರ್ಲಿಲ್ಲ ಅಂತ ಕಾಣ್ತೈತೆ... ಕಣಪ್ಪಾ ನಂಗೆ.

ರಂಗಣ್ಣ : ಯೋಚ್ನೆ ಮಾಡ್ಬ್ಯಾಡ ಬೇಗ.... ನೋಡುವ.... ಮದುವೆ ಮಾಡೇ ಮಾಡ್ತೀನಿ - ನಿಂಗೆ.

ಮಂಗಣ್ಣ : ಚಿಂಚೋಳಿನಲ್ಲಪ್ಪಾ....

ರಂಗಣ್ಣ : ಅರಸೀಕೆರೇಲಿ ಒಂದು ಚಲೋ ಹೆಣ್ಣದ ಅಂತ ಹೇಳವ್ರ ಅಲ್ಲೋಗ ಬರವಾ.....

ಮಂಗಣ್ಣ : ಊಂ.... ಕನಪ್ಪಾ..... ನಿನ್ನ ಮಾತ ಯಾವತ್ತು ಎತ್ತಾಕಿವ್ನಪ್ಪಾ ಸರಿಕನಪ್ಪಾ, ಅಪ್ಪ ಅಪ್ಪ.... ಎಣ್ಣೆಸ್ರೇನಪ್ಪಾ?

ರಂಗಣ್ಣ : ಅವ್ವ ಎಸ್ರು ಬಸವ್ವ, ಮಗಳೆಸ್ರು ಸರಸವ್ವ

ಮಂಗಣ್ಣ : ಅಪ್ಪಾ ಅವು ಕೊಟ್ಟರಪ್ಪಾ ನಂಗೆ.... ಎಸ್ರು ಬೋ ಚನ್ನಾಗದಪ್ಪ.

ರಂಗಣ್ಣ : ಕೇಳ್ಕಂಬದಿವ್ನಿ ಮಗ, ಬಸವ್ವ ಹೇಳಿದ್ಲು ರಂಗಣ್ಣಾ ಈ ಕಾಲದಲ್ಲಿ ಹೆಣ್ಣೊಪ್ಪಿದ ಗಂಡು, ಗಂಡೊಪ್ಪಿದ ಹೆಣ್ಣು.... ನಿನ್ನ ಮಗನ್ನ ಕರ್ಕಂಬಾ, ಆದ್ರೆ ನನ್ನ ಮಗಳೇನಾರೂ ಒಪ್ಕಂಡ್ರೆ ಕೊಡ್ತೀನಿ ಅಂದವ್ಳೆ.

ಮಂಗಣ್ಣ : ಅಪ್ಪಾ ಅಪ್ಪಾ ಯಾವತ್ತೋಗದಪ್ಪಾ?

ರಂಗಣ್ಣ : ನಾಳಾಕೆ ಕಣ್ಲಾ ಮಗಾ.....

(Bus Effect)

ರಂಗಣ್ಣ : ಮಂಗಣ್ಣ.....ನೋಡು ಅಲ್ಲಿ ನೀರೆತ್ಕಂಡೋತಾ ಇಲ್ವಾ......

ಮಂಗಣ್ಣ : ಅವಳೇ ಏನಪ್ಪಾ ನನ್ನೆಡ್ತಿ ಆಗವಳು-

ರಂಗಣ್ಣ : ಥೂ..... ನಿನ್ನ....... ಮಂಕು ಸಾಂಬ್ರಾಣಿ ಅವಳು ನಿಮ್ಮತ್ತೆ ಕಣ್ಲಾ.

ಮಂಗಣ್ಣ : ನಂಗೇನು ಗೊತ್ತು, ಅವಳೇ ಏನೋ ಅಂತ ತಿಳ್ಕಂಡಿದ್ದೆ ಅಪ್ಪಾ....... ಅಪ್ಪಾ......

ರಂಗಣ್ಣ : ಅದೇನೋ ಮಂಗಣ್ಣಾ.....ಹೊಟ್ಟೆ ಹಸೀತದೇನೋ-

ಮಂಗಣ್ಣ : ಅಲ್ಲಾ,

ರಂಗಣ್ಣ : ಮತ್ಯಾಕೆ ಅಂಗ್ ರಾಗಾ ತಗಿತೀಯಾ?

ಮಂಗಣ್ಣ : ನಾನು ಹೆಣ್ಣು ನೋಡಗಂಟ ಊಟ ಮಾಡಕಿಲ್ಲ.

ರಂಗಣ್ಣ : ನಡಿ ನಡೀ.... ನಾವು ಬತ್ತೀವಿ ಅಂತ ಒಳ್ಳೆ ಅಡ್ಗೂಟ ಮಾಡಿಸಿರ್ತಾರೆ.... ಪಗಡ್ದಸ್ತಾಗಿ.... ಹೊಡೆಯುವಾ.

ಮಂಗಣ್ಣ : ಊಂ ಕನಪ್ಪಾ.....

ರಂಗಣ್ಣ : ಇದೇ ಕನ್ಲಾ.... ಬಸವ್ವ ಮನೆ... ನಡಿ ನಡಿ.... ಬಲಗಾಲ್ ಮುಂದಾಕ್ಕಂಡು ನಡೀ.....

ಮಂಗಣ್ಣ : ನೀನೇ ಮುಂದು ನಡಿಯಪ್ಪಾ ಸಂಗ್ಯಾಕೋ ಎದುರ್ಕೆ ಆತದೆ..... ಗುಂಡಿಗೆ ನಡುಗ್ತೈತೆ.

ರಂಗಣ್ಣ : ತಕ್ಕಳಪ್ಪಾ..... ಏನು ಪುಕ್ಕಲು ನನ್ನ ಮಗನೋ ನೀನು, ಏಳೂವರೆ ತಿಂಗಳುಗುಟ್ಟಿವನ್ನೆ.

ಬಸವ್ವ : ಬನ್ನಿ..... ಬನ್ನಿ..... ರಂಗಣ್ಣ ಈಗ ಬಂದ್ರಾ.

ರಂಗಣ್ಣ : ಊಂ ಕನವ್ವಾ..... ಬಸವ್ವಾ..... ನಿನ್ನ ಮಗಳನ್ನ ನನ್ನ ಮಗ ನೋಡಬೇಕಂತೆ.... ಕರೆಯವ್ವಾ....

ಬಸವ್ವ : ಕಳಿಸ್ತೀನಿ ತಕ್ಕಳಪ್ಪಾ...... ನರಸೀ ಬಾರವ್ವಾ ರಂಗಣ್ಣ ಬಂದವ್ರೆ, ಅವರ ಮಗ ಮಂಗಣ್ಣ ನಿನ್ನ ನೋಡಬೇಕಂತೆ......

ರಂಗಣ್ಣ : ನೋಡ್ದನ್ಲಾ...... ಮೊಗಾ....

ಮಂಗಣ್ಣ : ನೋಡ್ದಕನಪ್ಪಾ.

ರಂಗಣ್ಣ : ಎಂಗೈತಿ ಹೆಣ್ಣು? (ಮೆಲ್ಲನೆ)

ಮಂಗಣ್ಣ : (ಪಿಸುಗುಟ್ಟುವ ದನಿ) ಕೈಕಾಲು ಸಣ್ಣಗವೆ, ವಟ್ಟೆ ಮಾತ್ರ ವಾಡೆ ಗಾತ್ರ....., ಆದ್ರೆ ಈ ಹೆಣ್ಣನೇ ಆಯ್ತೀನಿ ಕನಪ್ಪಾ.

ರಂಗಣ್ಣ : ಸರಿಕನಪ್ಪಾ....

ಬಸವ್ವ : ರಂಗಣ್ಣಾ.... ಹೆಣ್ಣು ನೋಡಿ ಆಯ್ತಲ್ಲಾ......

ರಂಗಣ್ಣ : ಆಯ್ತಲ್ಲಾ.

ಬಸವ್ವ : ಬನ್ನಿ ಕೈಕಾಲು ತೊಳ್ಕೊಳ್ಳಿ...... ಗಂಗಳ ಇಡ್ತೀನಿ.....

ರಂಗಣ್ಣ : ಆಯ್ತುವ್ವಾ

(ಸಂಗೀತ)

ರಂಗಣ್ಣ : ಇದೇನವ್ವಾ ಈಟೊಂದು?

ಬಸವ್ವ : ಕಡ್ಬು ಕಾಯಾಲೂ....ಏನೊಂದಿಪ್ಪತ್ತು ಹಾಕೀನಿ ಅಷ್ಟೇ.... ಅಜ್ಜು ಗಂಡು ತಿನ್ನಪ್ಪಾ ಚನ್ನಾಗೈತಿ ರುಚಿ ನೋಡಿದ್ರೆ...... ಇನ್ನೂ ಕೇಳ್ತೀರಾ ನೀವೆ.

ರಂಗಣ್ಣ : ಆಯ್ತವ್ವಾ..... ಬಲು ಪಸಂದಗೈತಿಕನವ್ವಾ ಬಸವ್ವಾ.......

ಬಸವ್ವ : ಏನೋ ಮಾಡ್ತೀನೀ ನೋಡ್ರಪ್ಪಾ......

ಮಂಗಣ್ಣ : (ಸ್ವಗತ) ಇದೇಸ್ ನಮ್ಮಪ್ಪ ನೀರ್ನಲ್ಲಿಜ್ಜಗಂಡು ತಿನ್ತಾವ್ನೆ.....

ರಂಗಣ್ಣ : (ಮೆಲ್ಲನೆ) ಲೇ ಮೊಗ....... ಒಂದು ಕಡುಬು ತಿಂದು ಸತ್ತುಗಿತ್ತೋಗ್ಬುಟ್ಟಯಿಕನೋ.... ನೋಡು.... ಇಂಗ್ ತಿನ್ನು.

ಮಂಗಣ್ಣ : (ಮೆಲ್ಲನೆ) ಇದೇನು ಅಪ್ಪಾ ಒಂದು ಬೆಳ್ಳು..... ತೋರ್ತವ್ನೆ.... ಓ..... ಒಂದೊಂದು ತಿನ್ನು ಅಂತವ್ನೇ ಅಂತ ಕಾಣ್ತೈತೆ.

ರಂಗಣ್ಣ : ಮಂಗಣ್ಣಾ.... ಇಲ್ ನೋಡು ನನ್ನ ಕೈನ ಬೆರಳಾ.....

ಮಂಗಣ್ಣ : ಇದೇನ್ ನಮ್ಮಪ್ಪ ಎರಡು ಬೆಳ್ಳು ತೋರಿಸ್ತವ್ನೇ ಎರಡೆರಡು ಒಂದೇ ಸಾರಿ ತಿನ್ನು ಅಂತ..... ಆಯ್ತು ನಂಗೇನು ಕಷ್ಟ ರುಚಿಯಾಗೈತಿ ತಿನ್ತಿವ್ನಿ ತಾಳು ಊಂ ಕನಪ್ಪಾ.

ರಂಗಣ್ಣ : (ಮೆಲ್ಲನೆ ಸಿಟ್ಟಿನಿಂದ) ತಲೆ ಕುಣಸ್ತವ್ನೆ.... ಅರ್ಥ ಮಾಡಿ ತಿನ್ನು ಅಂದ್ರ ಎರಡೆರಡು ತಿನ್ನು ಅಂತಾನಲ್ಲಾ.... ಏನು ಬಂದಿದೆ ದಾವು ಇವನಿಗೆ? ಎಲ್ಲಾರಾ ಮದ್ವೆ ಆಗ ಹೆಣ್ಣು ನೋಡಿದ್ರೆ ಗತಿ ಏನು? ಅತ್ತೆ ಬಸವ್ವ ನೋಡಿದ್ರೆ ಗತಿ ಏನು? ಲೇ ಲೋ ಮಗ......

ಮಂಗಣ್ಣ : ಇದೇನು ಅಪ್ಪ ಮೂರು ಬೆಳ್ಳು ತೋರಿಸ್ತಾನೆ ಆಯ್ತು ಮೂರು ಮೂರೊಂದೇ ಸಾರ್‍ಗೆ ತಿಂದು ಎಲ್ಲಾನೂ ಮುಗಿಸ್ಬೇಕೇನೋ...... ಆಯ್ತುಕನಪ್ಪ.....

ರಂಗಣ್ಣ : ಎಲ್ಲಾರ ಬಸವ್ವ ನೋಡಿ ಏನು ನನ್ನ ಅಳಿಯ ಕಿರಾತಕ ಅಂತ ತಿಳ್ಕಂಡು ಹೆಣ್ಣು ಕೊಡದೆ ವೋದ್ರೆ ಗತಿ ಏನಪ್ಪಾ? ಅಯ್ಯೋ ಅಯ್ಯೋ ಏನು ದರಿದ್ರ ಬಂದಿದೆ? ಮೂರು ಮಕ್ಕರಿ ಕಡುಬನ್ನೂ ತಿಂದ್ಬುಟ್ನಲ್ಲಾ...... ಅಯ್ಯೋ.... ಅಯ್ಯೋ..... ಮಂಗಣ್ಣಾ.

ಮಂಗಣ್ಣ : ಓ..... ನಮ್ಮಪ್ಪ ಈ ಕೊನೆ ಕಡುಬ್ನ ನೀರಲ್ಲಿ ಅಜ್ಜಿಕೊಂಡು ತಿನ್ನು ಅಂತಾನೆ ಅಂತ ಕಾಣ್ತೈತೆ, ಆಯ್ತು.... ತಿನ್ತೀನಿ..... ಸರಿಯಾಗಿ ತಿನ್ತೀನಿ.... ಸರಿಯಾಗಿ ತಿನ್ತೀನಪ್ಪಾ ಆ..... ಏಟೊಂದು ರುಚಿಯಾಗದೆ..... ಲೇ ಅಪ್ಪಾ ಇದು ಚನ್ನಾಗದೆ..... ತುಂಬಾ ಚನ್ನಾಗದೆ ಕಣಪ್ಪಾ ಆಗ್ಲೇ ಹೇಳಬಾರದಾಗಿತ್ತೇನಪ್ಪಾ..... ಇನ್ನೂ ಬೇಕು..... ಚನ್ನಾಗೈತೆ.

ರಂಗಣ್ಣ : ಲೇ ಮೊಗ..... ಮಾನ ವೋಗೀತು ನಿಂಗ್ ಬೇಕಾರೆ ಊರಲ್ಲಿ ಹೋಗಿ ಮಾಡಿಸಿ ಹಾಕ್ತೀನಿ ಕಣೋ.....ಸುಮ್ನೆ ಗಮ್ನಿರು.....

ಮಂಗಣ್ಣ : ಕಣ್ಣಾಣೆ ಮಾಡ್ಸಾಕ್ತೀಯಪ್ಪಾ.....

ರಂಗಣ್ಣ : ಆಯ್ತು.... ಕಣ್ಣಾಣೆ ಮಾಡ್ಸಾಕ್ತೀನೋ ಅಪ್ಪಾ.

ಬಸವ್ವ : ತಕ್ಕಳಿ ನೀರು....

ರಂಗಣ್ಣ : ಆಯ್ತವ್ವಾ.

ಬಸವ್ವ : ರಂಗಣ್ಣನವರೇ..... ಏನು ಅಪ್ಪ ಮಗ ಇಬ್ಬರಿಗೂ ಪುಡುಗಿ ಹಿಡಿಸ್ತಾ?

ರಂಗಣ್ಣ : ಹಿಡಿಸದೆ ಬುಡವ್ವಾ.... ಇನ್ನು ತಡವೇ ಇಲ್ಲ ಮದ್ವೆ ಮಾಡಿಯೇ ನಮ್ಮನ್ನ ಕಳುಸ್ಬುಡವ್ವಾ.

ಬಸವ್ವ : ಮೂರು ದಿನಕ್ಕೆ ನರ್ಸಿ ಮದುವೆ ಮಾಡಿ ಕಳಿಸಿಕೊಟ್ಬುತ್ತೀನಿ ಬುಡಪ್ಪಾ ನಿಮ್ಮ ಅಂಗಳಾಪುರಕ್ಕೆ.

(ಮದುವೆ ಓಲಗ)

ರಂಗಣ್ಣ : ಬಾರವ್ವಾ ಮದ್ವೆ ಚೆನ್ನಾಗಿ ಮಾಡಿದಿ ಬುಡವ್ವಾ, ಇನ್ನು ನಮ್ಮನ್ನು ನಮ್ಮೂರ್ರಿಗೆ ಕಳುಹಿಸಿಕೊಟ್ಬುಡವ್ವಾ.

ಬಸವ್ವ : ಆಯ್ತು ಬುಡಪ್ಪಾ....... ಕಳಿಸ್ಕೊಟ್ಬುದ್ತೀನಿ......

(ಸಂಗೀತ)

ಮಂಗಣ್ಣ : (ಸ್ವಗತ) ಅತ್ತೇ ಮನೇಲಿ.... ಅದ್ಯಾನು ಮಾಡಿದ್ದಾನೋ ಚೆನ್ನಾಗಿತ್ತು ತುಥ್ ನನ್ನ....ನೆಪ್ತೀನೇ ಬರೋವಲ್ದಲ್ಲಾ... ಏಟು ಚನ್ನಾಗಿತ್ತು, ಅಪ್ಪಾ ಊರ್ರ್ಗೋದ್ಮೇಲೆ ಮಾಡ್ಸಾಕ್ತಾನಂತೆ..... ನಾಕು ಮಕ್ಕರಿ ತಿಂದ್ಬುಡ್ತೀನಿ.....

ರಂಗಣ್ಣ : (ಸ್ವಗತ) ಅಬ್ಬಾ ಏಟೊಂದು ಸಂತೋಸವಾಯ್ತು ನಂಗೆ, ನನ್ನ ಜೀವಮಾನ ಇದ್ದಂಗೆ ನಿನ್ನ ಮದ್ವೆ ಆಗೋತಲ್ಲಾ ಅದ್ಕಿಂತ ಒಂದು ಸಂತೋಸದ ಸುದ್ದಿ ಬೇಕಾ...... ಮಂಗಣ್ಣಾ..... ಮಂಗಣ್ಣಾ......

(ದುಃಖ ಸೂಚಕ ಸಂಗೀತ)

ಮಂಗಣ್ಣ : ಅಪ್ಪೋ..... ಅಪ್ಪೋ.... ಇದ್ಯಾಕಪ್ಪೋ... ಏನಾತು? ಈಗ ಸಂತೋಸವಾಗಿ ನನ್ನ ಮದ್ವೆ ಮಾಡಿ ಕರ್ಕಂಡು ನಮ್ಮ ಅಂಗ್ಳಾಪುರಕ್ಕೆ ಬಂದೆ.... ಸಂತೋಸವಾಗಿದ್ದೆ.... ಅಪ್ಪಾ....... ಅಪ್ಪಾ.... ಯಾಕೆ ಮಾತಾಡ್ತಿಲ್ಲ.....

ಸರಸಿ : ಅಯ್ಯೋ..... ಉಸ್ರು ನಿಂತೋಗೈತೆ, ಕೈಕಾಲು ತಣ್ಣಗಾಗೋಗೈತೆ ಅಯ್ಯೋ.... ಮಾವಾ.

ಮಂಗಣ್ಣ : ಏನಾತೇ ಅಪ್ಪಗಾ.....?

ಸರಸಿ : ಸತ್ತೋಗ್ಬುಟ್ಟವ್ರೆ.....

ಮಂಗಣ್ಣ : ಅಯ್ಯೋ ಅಪ್ಪಾ....ವೀಟ್ಲಗಾರಿ ಮಾಡಿಸ್ತೀನಿ ಊರಿಗೆ ಬಂದು ಅಂದ್ಯಲ್ಲಾ, ಈಗ್ಲೇ.....ಸಂತ್ತೋಗ್ಬುಟ್ಯಲ್ಲಪ್ಪಾ ಅಪ್ಪಾ..... ಅಪ್ಪಾ......

(ದುಃಖಸೂಚಕ ಸಂಗೀತ)

ಸರಸಿ : ಇನ್ನೆಷ್ಟು ಅತ್ತರೂ ಅಷ್ಟೇ..... ಅಪ್ಪನ್ನ ಮಣ್ಣು ಮಾಡಬೇಕು.... ನಡೀರಿ.

ಮಂಗಣ್ಣ : ಊಂ....ಆತು.... (ದುಃಖ ಸಂಗೀತ)
ದಫನ್ ಮಾಡಿಸ್ತೀನಿ.

* * *

(ಮಳೆ ಶಬ್ದ)

ಸರಸಿ : ಏನ್ರಾ.....ಯಾವತ್ತೂ ಕಾಣೆ ಈವತ್ತು....ಉಳಿಮೇಗೊಂಟ್ರಿ?

ಮಂಗಣ್ಣ : ಏನೇ ಸರಸಿ ಅದು?

ಸರಸಿ : ಎತ್ತು ಕಟ್ಬುಟ್ರಿ, ಬಲಗೋಲ ಎಡಗೋಲಗೊಡ್ಡಿ, ಎಡಗೋಲ ಬಲಗೋಲಗೊಡ್ಡಿ. (ನಗುವಳು)

ಮಂಗಣ್ಣ : ಎಂದೂ ಇಲ್ಲದ ವ್ಯವಸಾಯ ಮಾಡಿದ್ರೆ ಇಂಗೇ ನೋಡು..... ಅಪ್ಸರಿ.....ನಡೀ.....

ಸರಸಿ : ಏನ್ ಅದು?

ಮಂಗಣ್ಣ : ಈವೊತ್ತು ಮಳೆ ಚನ್ನಾಗಿ ಬಿದ್ದೈತೆ. ವೊಲ ಹದವಾಗದೆ, ಎಲ್ರೂ ಏರು ಕಟ್ತಿದ್ರು, ನಾನು ಕಟ್ಬಿವ್ನಿ ಈವೊತ್ತು ಹೊಲಸೆಲ್ಲಾ ಉತ್ತು ಮುಗಿಸ್ಬುಡ್ತೇದು..... ನೀನು.

ಸರಸಿ : ಏನು ಯೇಳು?

ಮಂಗಣ್ಣ : ವೀಟ್ಲುಗಾರಿ ಮಾಡ್ಕಂಡು ಬಾ.

ಸರಸಿ : ಅಂಗಂದ್ರೇನಾ......? ನಂಗ್ ಬರಕಿಲ್ಲಾ.

ಮಂಗಣ್ಣ : ಎಲಾ ಬಡ್ಡಿಕೇ ಬರಕಿಲ್ಲಾ ಅಂದಯಾ? ಗಂಡನ ಮಾತು ಆಡಿದ್ರೆ ನಿಂಗೆ ಅಲಕ್ಷ್ಯನಾ?

ಸರಸಿ : ಇಲ್ಲಾ ಸ್ವಾಮಿ ಬರಕ್ಕಿಲ್ಲಾ.

ಮಂಗಣ್ಣ : ಇಂಗೆ ಅಂಗೇ ಯೇಳಿದ್ರಾಗಕ್ಕಿಲ್ಲ ಎತ್ತಿನ ನೊಗ ತಕ್ಕಂಡು ನಾಲ್ಕು ಬುಟ್ರೆ ಸರೋತದೆ. (ಹೊಡೆವ ಶಬ್ದ)

ಸರಸಿ : ಅಯ್ಯೋ...... ಕಂಡವರ ಮಕ್ಕಳನ್ನು ಇಂಗಾ ವೊಡೆಯೋದು.... ಮೈನಲ್ಲೆಲ್ಲಾ ಎಂಗತೆ..... ಒಳ್ಳೆ...... ಕಡಬೆದ್ದಂಗೆ ಬಾಸುಂಡೆಗಳು ಎದ್ದು ಬುಟ್ವಲ್ಲಾ.

ಮಂಗಣ್ಣ : ಊಂ...... ಅದೇ ಮಾಡ್ಕಂಬಾ....ನಾ ವೋತೀನಿ ವೊಲದ ತಪ್ಕ ಈಗ ನಿನ್ನಿಂದ ನೆಪ್ತಿ ಬಂತು ನೋಡು. ಅದೇ ಅದೇ ಕಡುಬು ಮಾಡ್ಕಂಡು ಬಾ ಚಲೋ ಇಲ್ಲ.

ಸರಸಿ : ಕಡುಬು ಮಾಡದೆ ನಂಗೆ ಬರಕಿಲ್ಲಾ, ಉರ್ನಾಗೆ ನಮ್ಮವ್ವ ಮಾಡಿದ್ಲು. ನಾ ಯಂಗೆ ಮಾಡ್ಲಿ....? ನಂಗ್ ಬರವಂಗ್ ಮಾಡ್ತೀನಿ..... ಒಂಬತ್ತು ಬಿಂದಿಗೆ ನೀರಾಕ್ತೀನಿ.... ಅಚ್ಚೇರಸಿಟ್ಟಾಕಿದ್ರೆಂಗೆ? ಸರಿ....ಚನ್ನಾಗಿ ಕಾಯಿಸ್ತೀನಿ.... ತಕ್ಕಂಡೋಗಿ ಕೊಡ್ತೀನಿ......

(ಸಂಗೀತ)

ಮಂಗಣ್ಣ : ಈವೊತ್ತು ನನ್ನೆಡ್ತಿ ಕಡ್ಬು ಮಾಡ್ಕಂಡು ಬತ್ತವ್ಳೇ, ನಾಕೈದು ಗೆರೆ ವೊಡ್ದಾಯ್ತು..... ಪಗಡ್‌ದಸ್ತಾಗಿ ಹೊಡೆದುಬುಡ್ಬೇಕು ಓ..... ಪುಟ್ಟಿ ವೊತ್ಕಂಡು ಸರಸಿ ಬತ್ತಾ ಅವ್ಳೆ.......

ಸರಸಿ : ಪುಟ್ಟಿ ಇಳಿಸ್ಕ ಬಾ.....

ಮಂಗಣ್ಣ : ಬಂದಿ ತಾಳು.... ಅಲ್ಲಾಕನೆ ಸರ್‍ಸಿ ನಾನು ಏಸೊತ್ತಿಗೆ ಬರಕ್ಕೇಳದ್ದು?

ಸರಸಿ : ಹನ್ನೆಡು ಗಂಟೆಗೆ......

ಮಂಗಣ್ಣ : ಈಗೇಟಾಗೈತೆ ಗಂಟೆ?

ಸರಸಿ : ಮೂರಾಗೈತೆ

ಮಂಗಣ್ಣ : ನಿಮ್ಮಪ್ಪನಾ ವೊಟ್ಟೆ ಹಸಿಕೊಂಡು ಹೊಲ ಉಳವ್ನ?

ಸರಸಿ : ನೀನೇಳಿದಷ್ಟು ಬ್ಯಾಗ ಆಗಬ್ಯಾಕಲ್ಲಾ, ಸೌದೆ ಉರೀಬೇಕಲ್ಲಾ, ಎಲ್ಲಾ ಹಸಿ ಹಣ್ಣು ಮುದ್ದೆ.

ಮಂಗಣ್ಣ : ಪುನಾ ಉಸ್ರೆತ್ತದ್ರೆ ತಕ್ಕತೀನಿ ನೋಡು ಬಾರುಕೋಲು, ಮೈಯೆಲ್ಲಾ ಕಡುಬು ಮಾಡ್ಬುಡ್ತೀನಿ.

ಸರಸಿ : ತಕ್ಕಳಪ್ಪಾ..... ಬಲು ನಿಸೂರಾಗೆವ್ನೆ ಹೈದ, ಕಂಡವ್ರ ಮಕ್ಕಳ ಕರ್ರ್ಕಂದು, ಇಂಗ್ಯೊಡೇದು ನಿಂಗ್ ನ್ಯಾಯವಲ್ಲಾಕನ್ ತಕ್ಕ.

ಮಂಗಣ್ಣ : ಪುನಾ ಹಿಂದಕ್ಕೆ ತಿರಿಕ್ಕಂಡು ಮಾತಾಡ್ತೀಯಾ. (ಹೊಡೆಯುವನು)

ಸರಸಿ : ಅಯ್ಯೋ...... ಅಯ್ಯೋ...... ಬ್ಯಾಡಕನಪ್ಪಾ... ದ್ಯಾವ್ರೆ.... ನಾನು ಸತ್ಯವಾಗಿದ್ರೆ...... ನಾನು ಮಾಡಿದ ಕಡ್ಬು ನೀರಾಗ್ಲಿ.....

ಮಂಗಣ್ಣ : ಇದ್ಯಾನೇ.... ಇಂಗದೆ... ತರಿ ಕೆಳಕ್ಕೆ ಸೇರ್ಕಂಡು ನೀರು ಮೇಲೈತೆ.

ಸರಸಿ : ನೀ ಮಾಡಿದ್ ತಪ್ಪಗೆ..... ನನ್ನ ಇದಕ್ಕಿದ್ದಾಗ ಬಾರಿಸ್ದೆ ನೋಡು. ಅದ್ಕೆ.... ದ್ಯಾವರು ಅಂಗ್ ಮಾಡವ್ನೇ ಹೆಂಡ್ತಿ ಅಂದ್ರೆ...ಪಿರೀತಿಯಿಂದ ನೋಡಬೇಕು. ದನ ದುಬ್ಬಸ್ದಾದ ದುಬ್ಬುಸ್ಬಾರ್ದು ತಿಳೀತಾ?

ಮಂಗಣ್ಣ : ಏನೋ ಕ್ವಾಪದಲ್ಲಿ ಅಂಗ್ ಮಾಡ್ಬುಟ್ಟೆ ತಪ್ಪಾಯ್ತು ಕಣೆ. ಇನ್ನು ಮ್ಯಾಕೆ ನನ್ನಾಣ್ಗೂ ನಿನ್ನಾಣ್ಗೂ ಅಂಗ್ ಮಾಡಕಿಲ್ಲ ಕಾಣೆ. ಅನ್ಯೋನ್ಯವಾಗಿರ್ತೀನಿ, ನಾನು ಗಂಡ ನೀನು ಹೆಂಡ್ತಿ.... ಇನ್ನು ಮ್ಯಾಕೆ ನಾವಿಬ್ರೂ ಹಾಲು-ಜೇನು ಸೇರಿದಂಗಿರೋಣ.

ಸರಸಿ : ಮಂಗಣ್ಣಾ........

ಮಂಗಣ್ಣ : ಸರ್‍ಸೀ.....

(ನಗುವರು, ಸಂಗೀತ)

*

# ಮಾತು ಕಥೆ

ಹೆಂಡತಿ : ಏನ್ರೀ...... ಇದ್ಯಾಕೆ ಈ ಹೊತ್ತು ಇಷ್ಟು ಹೊತ್ತು?

ಗಂಡ : ಕೇಳಬೇಡ್ವೇ, ಹೇಳ್ಬೇಕು ಅಂದ್ರೆ ನನಗೆ ನಾಚಿಕೆ ಆಗುತ್ತೆ.

ಹೆಂಡತಿ : ಅದೇನ್ರೀ ಅಂಥದ್ದು.....?

ಗಂಡ : ಯಾರ ಹಿಂದುಗಡೇನೂ ಹೋಗಿರಲಿಲ್ಲ ಮಾರಾಯ್ತಿ.

ಹೆಂಡತಿ : ಮತ್ತೆ ಅದೇನು ಹೇಳೋದ್ಕೆ ನಾಚಿಕೆ ಅಂತ ನನಗರ್ಥವಾಗ್ತಿಲ್ಲ.

ಗಂಡ : ಅದೊಂದು ಕತೆ ಬಿಡು.

ಹೆಂಡತಿ : ಅದೇನು ಬಿಡಿಸಿ ಹೇಳಿದ್ರಲ್ವೇ ಗೊತ್ತಾಗೋದು.

ಗಂಡ : ಹೇಳ್ತೇನೆ ಏನಾದ್ರೂ ಸ್ವಲ್ಪ ತಣ್ಣಗೆ.........

ಹೆಂಡತಿ : ತಣ್ಣೀರು ಕೊಡ್ಲಾ......?

ಗಂಡ : ಬಿಸಿನೀರು ಕೊಡು.

ಹೆಂಡತಿ : ಕೋಪ ಏಕ್ರೀ?

ಗಂಡ : ತಣ್ಣಗ್ರೋದೇನಾದ್ರೂ ಅಂದ್ರೆ ನಿನಗೆ ನೀರೇನೇ ಜ್ಞಾಪಕ ಬರೋದು.

ಹೆಂಡತಿ : ನಿಂಬೆಹಣ್ಣಿನ.......

ಗಂಡ : ಹಾಗ್ಬಾ..... ದಾರಿಗೇ.

ಹೆಂಡತಿ : ಸುಮ್ನೇ.... ಮಾತು ಆಡ್ತೀರೋ ಹೊರ್ತು ಕಥೆ ಹೇಳಲ್ಲ.

ಮಿತ್ರ : ಏನು ಕಥೆ ಬೇಕು?

ಗಂಡ : ಬಾರಯ್ಯಾ ಈ ಹೊತ್ತಿನ ಮಾತುಕತೆ ಕೇಳಕ್ಕೆ ನೀನು ಬಂದಿದ್ದೀಯೇನು?

ಮಿತ್ರ : ಅದೇನಯ್ಯಾ ಮಾತು - ಕತೆ.....ಎರಡರ ಮಿಶ್ರಣ.

ಗಂಡ : ನಾವು ಮಾತಾಡುವಾಗ್ಱೂ ಕಥಾನಿರೂಪಣೆ ಮಾಡೋದು ಅಷ್ಟೇ.

ಮಿತ್ರ : ಅದೇನು ನಮ್ಗೂ ಸ್ವಲ್ಪ ರುಚಿ ಹತ್ತಿಸಪ್ಪಾ.

ಗಂಡ : ಮೊದಲು ಕೂತ್ಕೋ. ತಣ್ಣಗೆ ನನ್ನ ಹೆಂಡ್ತಿ ಷರಬತ್ತು ಮಾಡಿ ತರ್ತಾಳೆ. ಅದು

ಕುಡಿದ ಮೇಲೆ ಬಾಯಿ ಬಿಡ್ತೀನಿ. ಈಗ ನಾನು ಮಾತಾಡೋ ಸ್ಥಿತಿಲೂ ಇಲ್ಲ. ತುಂಬಾ ಸಾಕಾಗಿ ಹೋಗಿದೆ. ಸ್ವಲ್ಪ ಸುಧಾರಿಸಿಕೊಳ್ಳಬೇಕು.

ಹೆಂಡತಿ : ಈಗ್ಬಂದ್ರಾ....? ನಮಸ್ಕಾರ.

ಗಂಡ : ಆಗ಼್ೇ ಬಂದ ಕಣೇ. ಆತನಿಗೂ....

ಹೆಂಡತಿ : ತರ್ತೇನೆ.... ಯಾಕೆ ನಮ್ಮಿಬ್ಬರಿಗೇ ಅಂತ ತಂದಿದ್ದೆ. ಈಗ ನಿಮ್ಮಿಬ್ರಿಗೆ ಕೊಟ್ರೆ ಆಯ್ತು.. ಕುಡೀರಿ....ತಗೊಳ್ಳಿ.

ಮಿತ್ರ : ನೀವು.....

ಹೆಂಡತಿ : ನಾನು ಈಗ ತರ್ತೀನಿ ನೀವು ತೆಗೆದುಕೊಳ್ಳಿ.

ಗಂಡ : ಬೇಗ ಬರ್ತೀಯಾ ನನ್ನ ಕತೆ ಕೇಳಲಿಕ್ಕೆ.

ಮಿತ್ರ : ಏನು ಅಷ್ಟೊಂದು ಕುತೂಹಲ.

ಗಂಡ : ಏನೋ ಗಾದೆ ಹೇಳೋಲ್ವೇ, ಪರ ಊರು ಪರವಾಟ ಅನ್ನೋದು ನನ್ನ ಪಾಲಿಗೂ ಸತ್ಯವೇ ಆಯ್ತು ಕಣಯ್ಯ.

ಮಿತ್ರ : ಹೊಸ ಊರು ಅಂದ ಮೇಲೆ ಆಗಲೇಬೇಕು. ಇನ್ನೂ ಒಂದು ತಿಂಗಳು ಆಗಿಲ್ಲ ಆಗ್ಲೇ......

ಗಂಡ : ಶುರುವಾಯ್ತು.......

ಮಿತ್ರ : ಹೇಳಪ್ಪಾ......

ಗಂಡ : ಕುಡಿಯಯ್ಯಾ ಹೇಳ್ತೀನಿ.

ಹೆಂಡತಿ : ನಾವು ಕುಡಿತಾ ಇರ್ತೀವಿ ನೀವು ಹೇಳ್ತಾ ಇರಿ. ನೀವು ಮೊದಲು ಕುಡಿದು ಬಿಟ್ರೆ ಹೇಳಲಿಕ್ಕೆ ಸರಿಹೋಗುತ್ತೆ.

ಗಂಡ : ಕುಡೀದೇ ಹೇಳೋದೆ ಇಲ್ಲ ಅಂತ ಆಗ್ಲೇ ಹೇಳಿದ್ನಲ್ಲ.

ಮಿತ್ರ : ಕುಡಿದೇ ಹೇಳಪ್ಪಾ, ಅಷ್ಟರತನಕ ಅದು ಸಸ್ಪೆನ್ಸ್ ಇರಲಿ.

ಹೆಂಡತಿ : ಇವರು ಯಾವಾಗಲೂ ಯಾವುದೇ ವಿಷಯವನ್ನು ಹೇಳಬೇಕಾದ್ರೆ ಅಷ್ಟು ಬೇಗ ಹೇಳೋವ್ರಲ್ಲಾ ಸಸ್ಪೆನ್ಸ್ ಇಟ್ಟು ಕುತೂಹಲ ಕೆರಳಿಸವ್ರೇ......

ಮಿತ್ರ : ಎಷ್ಟೇ ಆಗಲಿ ಲೇಖಕ.

ಹೆಂಡತಿ : ಲೇಖಕರ ಕೈ ಹಿಡಿದ್ರೆ ಇದೇ ನೋಡಿ.

ಗಂಡ : ಏನಾಗೋಯ್ತು?

ಹೆಂಡತಿ : ನನಗೇನೂ ಆಗಲ್ಲ, ನಿಮಗೆ ಆಗಿರೋದ ಹೇಳಿ......

ಗಂಡ : ಹೇಳೋತನ್ಕ ಅದೇನು ಆತರಸೋ ಕುಡಿಯೋ ಅವರೆ ಬಾಯಿಗೆ ಇಟ್ಟುಕೊಂಡವರಾಗೆ ಆಡ್ತೀಯಲ್ಲಾ.

ಹೆಂಡತಿ : ಬರೇ ಮಾತೇ ಆಯ್ತಲ್ಲಾ ಕಥೆ ಹೇಳ್ರೀ.......

ಮಿತ್ರ : ಹೌದಪ್ಪಾ ಕೇಳೋಣ.

ಗಂಡ : ಕೇಳೋದೇನು ಕೇಳಿ ನಗ್ತೀರಿ. ಆಮೇಲೆ ನನ್ನ ಏನಂತೀರೋ?

ಮಿತ್ರ : ಕಥೆಗಾರ ಅಂತೀವಿ.....

ಗಂಡ : ಹಾಗಂದ್ರೆ ಪುಣ್ಯ. ಮಂಕ ಸಾಂಬ್ರಾಣಿ, ಬಕ್ರಾ...., ಹಳ್ಳಿ ಗುಗ್ಗು... ಇನ್ನೂ ಏನೇನಂತೀರೋ.

ಮಿತ್ರ : ನೀ ಹೇಳಿದ ಮೇಲ್ತಾನೇ ಅದು. ಮೊದಲು ಹೇಳು.

ಗಂಡ : ನಿಮ್ಮೂರ್ರಲ್ಲಿ ಬಸ್‌ನಲ್ಲಿ ಪ್ರಯಾಣ ಮಾಡುವುದೇ ಒಂದು ಪ್ರಯಾಸ.

ಮಿತ್ರ : ಹೀಗೆ ಜನಸಂಖ್ಯೆ ಹೆಚ್ತಾ ಇದ್ರೇ ಇನ್ನೇನು?

ಗಂಡ : ಇಳಿಯುವಾಗಿಲ್ಲ, ಹತ್ತುವಾಗಿಲ್ಲಾ..... ನಿಂತು ಪ್ರಯಾಣ ಮಾಡವ್ರ ಪಾಡು ಆ ದೇವರಿಗೇ ಪ್ರೀತಿ. ಮುದುಕರು, ಗರ್ಭಿಣಿಯರು, ಮಕ್ಕಳು, ಪ್ರಾಯದವ್ರೂ ಒದ್ದಾಡಲೇ ಬೇಕು ಓಲಾಡಲೇ ಬೇಕು. Slif Disc ಇದ್ದವರಿಗೆ ಮುಗೀತು. Parmant ಆಗಿ ಮನೇಲಿ ಹಾಸಿಗೆ ಹಿಡೀಬೇಕು.

ಮಿತ್ರ : ಒಂದು ಕಾರು ತೆಗೆದುಕೊಂಡ್ರೆ ಇದರ ಕಷ್ಟವೇ ತಪ್ಪುತ್ತಪ್ಪಾ

ಗಂಡ : ಅದೊಂದೇ ಕಣಯ್ಯಾ ಬಾಕಿ ಇರೋದು ಜೀವನದಲ್ಲಿ, ಎಲ್ಲಾ ಆಸೆಗಳನ್ನೂ ಪೂರೈಸಿಕೊಂಡಿದ್ದೇನೆ. ಕಾರೊಂದು ತೆಗೆದುಕೊಂಡು ಬಿಟ್ರೆ ಆಯ್ತಾ, ಅಲ್ಲಿವರ್ಗೂ ಈ ಕಾಲು ಇಲ್ಲ ಬಾಡಿಗೆ ಕಾರು ಇಲ್ಲ ಬಸ್ಸು....,

ಹೆಂಡತಿ : ಅಂತ ಉಸ್ಸ್ ಅಂತೀರಿ?

ಗಂಡ : ಅನ್ನೋ ಸ್ಥಿತಿ ಆಗಿಬಿಟ್ಟಿದೆ.

ಮಿತ್ರ : ವ್ಯಾಪಾರ..... ಬೇಗ ಬೇಗ ಟ್ರಿಪ್ ಮಾಡಿದ್ರೆ ಸಂಪಾದ್ನೆ ಹೆಚ್ಚಾಗುತ್ತೆ ಅಲ್ವೇ?

ಗಂಡ : ಅವರು ಸಂಪಾದ್ನೆಗೆ ಜನ ಸಾಯಬೇಕೇ? 'ಅದೇನು ಆತ್ರ· ಬೇಗ ಬೇಗ....ಬೇಗ.....ಬೇಗ..... ಬಾಗಿ... ಬಾಗಿ..... ಅಬ್ಬಾ ಇಪ್ಪತ್ತೊಂದನೇ ಶತಮಾನಕ್ಕೆ ಇನ್ನೆಷ್ಟು ಆತುರವಾಗುತ್ತೋ. ಜನ ಬರುಕಿದ್ದೇನು ಸತ್ತೇನು ಸಂಪಾದ್ನೆ ಆದ್ರೆ ಆಯ್ತು.

ಹೆಂಡತಿ : ಪೀಠಿಕೆ ಮುಗಿತಾ?

ಗಂಡ : ಮುಗಿಸಲಾ......

ಮಿತ್ರ : ಕಣೆ ಕೇಳಯ್ಯಾ. ಏನೋ ಹೇಳಿ ಮುಗಿಸು ಅಂದ್ರೆ ಇನ್ನೂ ಪೀಠಿಕೇಲೇ ಇದ್ದೀಯಲ್ಲಾ.

ಹೆಂಡತಿ : ಈ ಕಥೆಗಾರ ಕಥೇನೇ ಹೀಗೆ... ಕಥೆ.... ಸ್ವಾರಸ್ಯಕೂನೇಗೇನೋ, ಮೊದಮೊದಲು ಏನೇನೋ ಬೆಳೆಸಿಕೊಂಡು ಹೋಗಿ ಆಮೇಲೆ ಒಂದು ಅಂತ್ಯ ಮಾಡೋದು.

ಗಂಡ : ಈ ಹೊತ್ತು ನಾನು ಎಡ ಮೊಗ್ಗಲಲ್ಲಿ ಎದ್ದಿದ್ದೇನೋ? ಏನಾಯ್ತು ಅಂತೀಯಾ. ಈ ಹೊತ್ತು ಆಫೀಸಿನಿಂದ ಬೇಗ ಹೊರಟು ಬೇಗ ಬಸ್ ಹಿಡಿದು ನನ್ನ ಹೆಂಡ್ತೀನಾ ಫಿಲಂಗೆ ಕರ್ಕೊಂಡು ಹೋಗಬೇಕು ಅಂತ ಅಪರೂಪಕ್ಕೆ ಯೋಚನೆ ಮಾಡಿದ್ದೆ. ಆದ್ರೆ ಎಲ್ಲಾ ತಲೆಕೆಳಕಾಗೋಯ್ತು ನೀರ್ನಲ್ಲಿ ಹೋಮ ಮಾಡಿದಾಗಾಯ್ತು.

ಮಿತ್ರ : ಯಾಕೆ?

ಗಂಡ : ಈ ಹೊತ್ತು ಕಾಸೂ ಕೇಡು, ತಲೆಯೂ ಬೋಳು ಅನ್ನೋ ಸ್ಥಿತೀನೂ ಆಯ್ತು.

ಮಿತ್ರ : ಏನಾದ್ರೂ ಬಸ್‌ನಲ್ಲಿ ಕಳ್ಕೊಂಡ್ಯಾ.

ಗಂಡ : Pick pocket ಏನೂ ಇಲ್ಲ, ಬಸ್ಗೆ ಹಣ ತೆತ್ತಿದೆ ದಂಡವಾಗಿ.

ಮಿತ್ರ : ಮತ್ತೆ ಬಸ್‌ನವನು ಸುಮ್ನೇ ಕುಳ್ಳರಿಸಿಕೊಂಡು ಬರ್‍ತಾನಾ?

ಗಂಡ : ಏನು ಕುಳ್ಳರಿಸಿಕೊಂಡು ಬಂದ್ರೆ ಹಣ ಕೊಡಬೇಕೇ? ನಿಂತುಕೊಂಡ್ರೂ ನೇತಾಡಿಕೊಂಡು ಬಂದ್ರೂ ಕೊಡಬೇಕು. ಬಸ್ಸಿಗೆ ಹತ್ತಿದ್ರೆ ಸಾಕು ದಂಡ ಕೊಡಬೇಕು.

ಹೆಂಡತಿ : ಮತ್ತೆ ಕೊಡದೇ ಇರೋಕ್ಕೆ ನಮ್ಮ ಮಾವನ ಬಸ್ಸಾ?

ಗಂಡ : ಮಾವನ ಬಸ್ಸಾದ್ರೇನು ಅಳೀನ್ಗೂ ಟಿಕೇಟ್ಟೆ ಬಸ್ಸಿನಲ್ಲಿ.... ಓಹೋ.... ನೀನೆಲ್ಲಿದ್ದೀಯಾ? ಈಗಿನ ಕಾಲ ಅಂಥ Calculative mindನವರು ಜನಗಳು. ಸ್ವಂತ ಸೊಮ್ಮನ್ನೂ ನೋಡಿಲ್ಲ. ಏನೋ ಮಾತಾಡಕ್ಕೋಗಿ ಕಥೇನ Deviation ಮಾಡ್ತಾ ಇದ್ದೀನಲ್ಲಾ... ಹೇಳ್ತೀನಿ ಸ್ವಲ್ಪ ಕ್ಷಮಿಸಿ.

ಹೆಂಡತಿ : ಕ್ಷಮಿಸಲಿಕ್ಕೆ ನೀವೇನು ಅಪರಾಧ ಮಾಡಿದ್ದೀರಿ ಹೇಳಿ.

ಗಂಡ : ಅಂಥ ಅಪರಾಧವಿಲ್ಲ ಅವಿವೇಕತನ ಮಾಡ್ಕೊಂಡೆ ಅಷ್ಟೇ. ನಮ್ಮ ಆಫೀಸಿನಿಂದ ನಮ್ಮ ಮನೆಗೆ ೧೫ ನಂಬರ್ ಎಲ್ಲಾ ಬಸ್ಸು ಹೋಗುತ್ತೆ. ೧೫ಳ ಸಹ ಹೋಗುತ್ತೆ ಅಂತ ಮಿತ್ರರೊಬ್ಬರು ಹೇಳಿದ್ರು. ಅದು ನನ್ನ ತಲೇಲಿತ್ತು. ೧೫ ಎಂಬ ಬಸ್ಸು ನಾನು ಬಸ್ ಸ್ಟಾಂಡಿಗೆ ಹೋದ ತಕ್ಷಣ ಬರ್ ಅಂತ ಬಂದೇ ಬಿಡೋದೇ. ಪರ್ವಾಗಿಲ್ಲ ಈ ಹೊತ್ತು ಬೇಗ ಮನೆ ಸೇರಬಹುದು ಅಂತ ಒಂದುವರೆ ರೂಪಾಯಿ ಕೊಟ್ಟೆ, ಎಲ್ಲಿಗೆ ಅಂತ್ಲೂ ಹೇಳಲಿಲ್ಲ. ಎಲ್ಲಿ ಇಳಿಬೇಕು ಅಂತ ನನಗೇ ಗೊತ್ತಿಲ್ಲ ಅಂತ, ಸೀಟಿ ಊದಿದ. ಟಿಕೆಟ್‌ಗೆ ಉಗುಳು ಹಾಕಿ ಉಗುರಲ್ಲಿ ಚುಚ್ಚಿ 'ಟಪ್' ಅನ್ನಿಸಿ ಕೈಗೆ ಕೊಟ್ಟ. ಅದು ಗಾಳಿಗೇ ಹಾರಿಹೋಯ್ತು.

ಹೆಂಡತಿ : ಸದ್ಯ ಆಮೇಲೇನಾದ್ರೂ ಸಿಕ್ಕಾಕಿಕೊಂಡ್ರೋ?

ಗಂಡ : ಅಯ್ಯೋ ಅದು ಬೆಂಗಳೂರ್ನಾಗಲ್ವೇ. ಎಲ್ಲಾ Private ಬಸ್‌ಗಳು..... ಟಿಕೆಟ್ ಹರಿದುಕೊಟ್ಟ ಮೇಲೆ ಗಾಳಿಗಾರೂ ತೂರಿಬಿಡು, ಜೇಬಿಗಾದ್ರೂ ಬಿಡು, ಅವರು Case ಮಾಡ್ಕೊಲ್ಲ. ಅಂತೂ prompt ಆಗಿ ತೆಗೆದುಕೊಂಡ್ರೆ ಆಯ್ತು. ಬಸ್ಸು ರೊಯ್ ಅಂತ ಹಳ್ಳ - ತಿಟ್ಟಿನ ರಸ್ತೆಯಲ್ಲಿ ಕುಲುಕುತ್ತಾ ಹೊರಟಿತು. ಊರಿನ ಪರಿಚಯ ಅಷ್ಟಿಲ್ಲ, ಆಗಾಗ ಪಕ್ಕದವರನ್ನು ಕೇಳೋದು, ಅಶೋಕ ನಗರ ಉರುಫ್ ಉರುವಾ ಬಂತೇ, ಇನ್ನೂ ಎಷ್ಟು ಸ್ಟಾಪಿನಲ್ಲಿ ಇಳಿಯುವುದು? ಅಂತ ಬಸ್ಸಿನ ಕೆಲವರು ಹೇಳುವವರೂ ಉಂಟು. ಮಾತಾಡದೆ ಹಾಗೇ ಇಳಿದು ಹೋಗುವವರೂ ಉಂಟು. ತುಳು, ಕೊಂಕಣಿಯಲ್ಲಿ ಏನಾದರೂ ಮಾತಾಡಿ ಅರ್ಥವಾಗದ ಹಾಗೆ ಮಾಡಿ ಇಳಿದು ಹೋಗುವವರೂ ಉಂಟು. ಬಸ್ಸು ಅಲ್ಲಲ್ಲಿ ನಿಂತು ಜನರನ್ನು ಇಳಿಸಿ ಹೋಗುತ್ತಿತ್ತು. ಕಂಡಕ್ಟರ್ ವಿಷಲ್ ಹಾಕುತ್ತಾ ದುಮ್ಮಾಲೆ ದುಮ್ಮಾಲೆ... ಜೆಪ್ ಜೆಪ್....... ಐರಾ ಬಲೇ..... ಎಂದು ಹೇಳುತ್ತಾ ಹಣ ವಸೂಲಿ ಮಾಡುತ್ತಾ ಹತ್ತಿ ಇಳಿಸುವ ಶಾಸ್ತ್ರ ಮಾಡುತ್ತಾ ಹೋಗುತ್ತಿತ್ತು, ಎಷ್ಟು ಸಮಯ ಆದರೂ ಎಷ್ಟು ದೂರ ಸಾಗಿದರೂ ಇದೇನು ನಾನು ನಿನ್ನೆ ಕಂಡ ಸ್ಥಳಗಳು ಇಲ್ಲವಲ್ಲ ಅನ್ನಿಸಿತು. ಬಸ್ಸು ಕೆ.ಎಸ್.ಆರ್.ಟಿ.ಸಿಗೆ ಬಂದು ನಿಂತು ಬಿಡ್ತು. ಜನರೆಲ್ಲಾ ಇಳಿದರು. ಮತ್ತೆ ಕೆಲವರು ಹತ್ತಿದರು. ನಾನು ಮುಂದೆ ಹೋಗುತ್ತದೆಂದು ಕುಳಿತೇ ಇದ್ದೆ, ಆದರೆ ಅದು ಬೇರೆ ಕಡೆ ರಸ್ತೆಯಲ್ಲಿ ಮುಖ ಮಾಡಿ ನಿಂತಿತ್ತು. ಬಸ್ ಕಂಡಕ್ಟರ್ ಹೇಳಿದ ಇದು ನೀವು ಇಲ್ಲೇ ಇಳಿಯಬೇಕು ಎಂದ. ಉರುವಾ ಸ್ಟೋರ್‌ಗೆ ಟಿಕೆಟ್ ತೆಗೆದುಕೊಂಡೆ, ಇದು ಅಲ್ಲಿಗೆ ಹೋಗೋಲ್ಲ. ಚಿಲ್ಲರೇನೂ ಕೊಟ್ಟಿಲ್ಲ ಎನ್ನಲು ಆತ ಕೊಡಬೇಕಾದ ಎಂಟಾಣೆ ಕೊಟ್ಟ. ಅಲ್ಲಿಂದ ಶಿವಾ ಅಂತ ಇಳಿದು ಉರುವ ಸ್ಟೋರ್ ಕಡೆ ಹೋಗುವ ಬಸ್ ಹತ್ತಿ ಹೋಗಬೇಕೆಂದು ಆ ಸ್ಟಾಂಡಿನಲ್ಲಿ ನಿಂತೆ. ಅಲ್ಲಿ ಹೋಗುವ ಎಲ್ಲಾ ಬಸ್ಸುಗಳೂ ಆ ಕಡೆನೇ ಹೋಗುತ್ತವೆಂದು ತಿಳಿದು ಯಾವುದೋ ನಂಬರ್‌ಗೆ ಹತ್ತಿದೆ... ಅದು ಹೋಯ್ತು ಹೋಯ್ತು.... ಹಂಪನ ಕಟ್ಟೆಗೆ. ಯಾರನ್ನೋ ಕೇಳಲು ಇದು ಉರುವಾ ಹೋಗೋಲ್ಲ ಅಂದ್ರು, ಇದೇನಪ್ಪಾ ಗ್ರಹಚಾರ ಅಲ್ಲಿಗೆ ೩ ರೂಪಾಯಿನ ಟಿಕೆಟ್ ಆಗಿತ್ತು. ಅಲ್ಲಿ ಇಳಿದೆ ಹಂಪನ ಕಟ್ಟೆಯಿಂದ ಉರುವಾಕ್ಕೆ ಈ ಬಸ್ ಹೋಗುತ್ತದಾ ಎಂದು ಕೇಳಿದೆ. ಹೋಗುತ್ತದೆಂದು ಕಂಡಕ್ಟರ್ ಹೇಳಿದ. ಟಿಕೇಟ್ ತೆಗೆದುಕೊಂಡು ನಿಂತೇ, ಬೆವತೇ, ಹೊರಟದ್ದಾಯಿತು. ಆಗ ನನ್ನನ್ನು ನಾನೇ ಶಪಿಸಿಕೊಳ್ಳದೇ ಇಲ್ಲ. ಎಂಥ ಕೆಲಸ ಆಗಿಹೋಯ್ತು ಈ ಹೊತ್ತು ಅಂತ ಬಸ್‌ನಲ್ಲಿ ಕೆಲವರು ಈ ಸ್ಥಳಕ್ಕೆ ಹೋಗುತ್ತೆ, ಈ ಸ್ಥಳ ಬಂತು ಇಳಿಯಿರಿ ಎಂದು ಹೇಳುವುದುಂಟು, ಕೆಲವು ಮಹಾನುಭಾವರು

ಮತ್ತೆ ಕೆಲವರು ಸೀಟಿ ಊದುತ್ತಾ ಇಳಿದವರು ಇಳಿಯಲೀ ಹತ್ತಿದವರು ಹತ್ತಲಿ ಅಂತ ಹೇಳಿ ಹೋಗುವವರೂ ಉಂಟು. ಅಂಥ ಮಹಾನುಭಾವ ಕಂಡಕ್ಟರ್‌ಗಳೇ ಆ ಹೊತ್ತಿನ ದಿನ ಸಿಗಬೇಕೇ? Guide ಮಾಡೋ ಜನರೂ ಇಲ್ಲ, ಕಂಡಕ್ಟರ್ ಸಹ ಇಲ್ಲ ಅಂದಮೇಲೆ ಹೊಸಬರ ಪಾಡೇನು? ಪರದಾಟವೇ ಪರ ಊರು ಪರದಾಟ ಎಂದಾಗಾಯ್ತು. ಇನ್ನೂ ಉರುವಾ ಸ್ಟೋರ್ಸ್ ಸಿಗದೇ ಹೋದ್ರೆ ಬರೀ ಸುತ್ತಾಟವಾಯ್ತಲ್ಲಾ ಅಂತ ಶಪಿಸಿಕೊಂಡೆ. ಪಕ್ಕದ ಒಬ್ಬರು ಹೆಂಗಸರನ್ನು ಕೇಳಿದೆ. ಉರುವಾ ಇನ್ನು ಎಷ್ಟು ದೂರ ಇದೆ ಎಂದು ಅವರು ಬಸ್ ಮುಂದುವರಿಯುತ್ತಿದ್ದಂತೆ ಇಲ್ಲೇ ಇಳಿಯಬೇಕಾಗಿತ್ತು ಎಂದರು. ನಾನು ಮುಂದಿನ ಸ್ಟಾಪಿನಲ್ಲಿ ಇಳಿದು ಒಂದು ಸ್ಟೇಜ್ ಕಾಲ್ನಡಿಗೆಯಲ್ಲಿ ಸಾಗಿದೆ. ಅಲ್ಲಿ ಒಬ್ಬರನ್ನು ಕೇಳಿ ಉರುವಾ ಸ್ಟೋರ್ಸ್, ಎತ್ತಕಡೆ ಎಂದು? ಅಯ್ಯೋ ಅದು ಮುಂದೆ ಹೋಗಿ ಬಲಕ್ಕೆ ತಿರುಗಬೇಕೆಂದರು. ಇದೇನು ಬಂತಪ್ಪಾ ಗ್ರಹಚಾರ ಎಂದು ಬೆವತೆ, ಕರ್ಚೀಫ್‌ನಲ್ಲಿ ಒರೆಸಿಕೊಂಡೆ. ನಡೆದೇ ಹೋಗೋಣ ಎಂದು ಮನಸ್ಸು ಮಾಡಿದೆ, ಉಸ್ ಎಂದು ಹೊರಟೆ, ಆದರೆ ಅದು ಉರುವಾ ಮಾರ್ಕೆಟ್ ಅಂತೆ. ಮಾರ್ಕೆಟ್ ಇದೆ ಎಂದು ಗೊತ್ತಿದ್ದರೆ ಈ ಅಭಾಸ ಆಗ್ತಿರಲಿಲ್ಲ. ಆಯ್ತು ಅಲ್ಲಿಂದ ಮುಂದೆ ಹೋಗಿ ದಾರಿಯಲ್ಲಿ ಕೇಳುತ್ತಾ ಕೇಳುತ್ತಾ ಉರುವಾ ಸ್ಟೋರ್‌ಗೆ ನಡೆದು ಹೊರಟೆ. ಒಂದುವರೆ ರೂಪಾಯಿಗೆ ೪ ೩/೪ ರೂಪಾಯಿಗಳ ಖರ್ಚು. ಜೊತೆಗೆ ಪ್ರಯಾಣದ ಆಯಾಸ, ಮಾನಸಿಕ ವೇದನೆ ಇದನ್ನು ಏನಂತ ಹೇಳೋಣ.

ಮಿತ್ರ : ಅಂತೂ ಕೊನೆಗೂ ಮನೆ ತಲುಪಿದೆಯಲ್ಲಾ.

ಗಂಡ : ಪ್ರಯೋಜನವೇನುಬಂತು ನನ್ನ ಹೆಂಡ್ತಿ ಸಿನಿಮಾ ಪ್ರೋಗ್ರಾಂ ಕ್ಯಾನ್ಸಲ್

ಮಿತ್ರ : ಹಣ ಮಿಗ್ತಲ್ಲಾ. ಮನೆಯಲ್ಲೇ ಟಿ.ವಿ. ನೋಡಿದ್ರಾಯ್ತು.

ಹೆಂಡತಿ : ಕೊನೆಗೆ ಅದೇ ಗತಿ.

ಗಂಡ : ಇದಕ್ಕೆ ನಗಬೇಕೋ ಅಳಬೇಕೋ.

ಮಿತ್ರ : ನಗುವಾಗೂ ಇಲ್ಲ, ಅಳುವಾಗೂ ಇಲ್ಲ, ಸಮಾಧಾನದ ನಿಟ್ಟುಸಿರು ಬಿಡಬೇಕು ಅಷ್ಟೇ.

ಗಂಡ : ಪರ ಊರು ಪರದಾಟ ಅಂತ ಅದ್ಕೇ ನಮ್ಮ ಹಿರಿಯರು ಹೇಳಿದ್ರು. ಅದು ನನ್ನ ಪಾಲಿಗೂ ಸತ್ಯವಾಯ್ತು ಬಿಡು.

ಮಿತ್ರ : ಇನ್ನೆಷ್ಟು ಜನರ ಪಾಲಗಿದ್ಯೋ ಯಾರಿಗೆ ಗೊತ್ತು?

ಹೆಂಡತಿ : ಅವರವರ ಭಾವಕ್ಕೆ.......

ಗಂಡ : ಅವರವರ ಅನುಭವಕ್ಕೆ......

(ನಗುವರು)



# ವೈಜ್ಞಾನಿಕ ಗದ್ಯ ರೂಪಕ

## ಪರೋಕ್ಷ ದರ್ಶನ

ನಿರೂಪಕ : 'ಮಕ್ಕಳ ಸ್ಕೂಲು ಮನೇಲಲ್ವೇ?' ಎಂದರು ಟಿ.ಪಿ. ಕೈಲಾಸಂ. ಆ ಮಾತೀಗ ನೂರೊಂದು ಅರ್ಥದಲ್ಲಿಯೂ ನಿಜವಾಗುವ ಸಂದರ್ಭ ಈಗ ಬಂದೊದಗಿದೆ. ಇನ್ನು ಶಾಲೆಗೆ ಹೋಗುವ ಮಕ್ಕಳು, ಅಲ್ಲದೆ ಹೋಗದ ಮಕ್ಕಳೂ ಕೂಡ ಮನೆಯಲ್ಲಿ ಪಾಠಗಳನ್ನು ಹೇಳಿಸಿಕೊಳ್ಳಬಹುದು. ಬೋಧಿಸುವವನು ಆಕಾಶದಲ್ಲಿಯ ಆಚಾರ್ಯ. ಹಾಗೆಂದರೆ? ಅಮೇರಿಕಾವು ಹಾರಿಸಿರುವ ಉಪಗ್ರಹದ ಸಹಾಯದಿಂದ ನಾಳೆಯಿಂದ ಟೆಲಿವಿಜನ್ ಕಾರ್ಯಕ್ರಮಗಳು ಪ್ರಸಾರವಾಗಲಿದೆ. ಕರ್ನಾಟಕದ ಬಿಜಾಪುರ, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳ ಹಿಂದುಳಿದ ಹಳ್ಳಿಗಳು ಇದರ ಪ್ರಯೋಜನವನ್ನು ಪಡೆಯಲಿವೆ. ಶಾಲಾ ಮಕ್ಕಳು, ಮಹಿಳೆಯರು, ರೈತರು, ಮಿಕ್ಕೆಲ್ಲಾ ವರ್ಗದವರು ಈ 'ಆಕಾಶದ ಆಚಾರ್ಯ'ನಿಂದ ಬೋಧನೆಯನ್ನು ಹೊಂದಲಿದ್ದಾರೆ. ಆರೋಗ್ಯ, ಕುಟುಂಬ ಯೋಜನೆ, ವ್ಯವಸಾಯ, ಪಶುಪಾಲನೆ, ಸಾಂಸ್ಕೃತಿಕ ಕಾರ್ಯಕ್ರಮಗಳೇ ಮೊದಲಾದುವುಗಳನ್ನು ಟೆಲಿವಿಜನ್‌ನಲ್ಲಿ ನೋಡಬಹುದು. ಈ ಸೌಲಭ್ಯವನ್ನು ಪಡೆಯಲು ಭಾರತ ಅಮೇರಿಕಾದಿಂದ ಉಪಗ್ರಹವನ್ನು ಒಂದು ವರ್ಷದ ಮಟ್ಟಿಗೆ ಎರವಲಾಗಿ ಪಡೆದಿದೆ.

ಧ್ವನಿ ೧ : ಸಂಪರ್ಕ ಸಾಧನಗಳ ಅಭಿವೃದ್ಧಿ ಕ್ಷೇತ್ರದಲ್ಲಿ ಆಗಸ್ಟ್ ಒಂದನೆಯ ದಿನಾಂಕವು ಭಾರತದ ಒಂದು ಐತಿಹಾಸಿಕ ಘಟ್ಟವಾಗಲಿದೆ!

ಧ್ವನಿ ೨ : ಇಷ್ಟು ದಿನಗಳಿಂದ ಬಾನುಲಿಯ ಮಾಧ್ಯಮದಿಂದ ಅನೇಕ ಮಕ್ಕಳು ಹಾಗೂ ಹಿರಿಯರು ಅನೇಕ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಆದರೆ ನಾಳೆಯಿಂದ ಅಮೇರಿಕಾವು ಹಾರಿಸಿರುವ ATS 6 ಎಂಬ ಉಪಗ್ರಹದ ನೆರವಿನಿಂದ ಬೋಧನಾ ಕಾರ್ಯಕ್ರಮಗಳನ್ನು 'ಪರೋಕ್ಷ ದರ್ಶನ'ದಿಂದ ಕಾಣಬಹುದು ಕೇಳಬಹುದು ಎಂದರೆ 'ದೃಶ್ಯ -ವಾಣಿ' ಇವೆರಡರ ಲಾಭವನ್ನು ಪಡೆಯಬಹುದಾಗಿದೆ. ಈ ಲಾಭ ಭಾರತಕ್ಕೆ ಲಭಿಸುವುದು ಒಂದು ವರ್ಷ ಮಾತ್ರ.

ಧ್ವನಿ ೧ : ಇದನ್ನು ನಡೆಸಲಿಕ್ಕೆ ೧೯೬೯ನೇ ಸೆಪ್ಟೆಂಬರ್ ಹದಿನೆಂಟರಂದು ಭಾರತ - ಅಮೇರಿಕಾ ಸಹಿ ಹಾಕಿದವು. ಅಮೇರಿಕಾದ "ನಾಸಾ (NASA) (National Aeronautical & Space Administration) ಸಂಸ್ಥೆಯು ಅಂತರಿಕ್ಷದಲ್ಲಿ ಹಾರುತ್ತಿರುವ ಈ ಉಪಗ್ರಹದ ಸಂಪೂರ್ಣ ಹೊರೆಯನ್ನು ಹೊತ್ತಿದೆ. ಭೂಮಿಯ ಮೇಲೆ ಆಗಬೇಕಾದ ಏರ್ಪಾಡು ಹೊಣೆಗಾರಿಕೆ ಭಾರತ ಸರ್ಕಾರದ್ದು.

ಧ್ವನಿ : ೧೯೭೪ನೇ ೩೦ರಂದು ಅಮೇರಿಕಾದ ಕೇಪ್ ಕೆನಡಿಯಿಂದ ಈ ಉಪಗ್ರಹವು ಹಾರಿಸಲ್ಪಟ್ಟಿತು. ಕೆಲವು ವಾರಗಳಿಂದ ಅದು ಸಮಭಾಜಾದಿನ ಮೇಲ್ಗಡೆಯಲ್ಲಿ ಆಕಾಶದಲ್ಲಿ ನಿಂತಿದೆ.

ಧ್ವನಿ ೧ : ATS -6 ಉಪಗ್ರಹವು ೧೫ ಟನ್ ಭಾರವಾಗಿದ್ದು, ೩೦ ಅಡಿಗಳಷ್ಟು ವ್ಯಾಸದ ದೂರವಾಹಕ ತಂತಿ ಜಾಳಿಗೆಯನ್ನು ಹೊಂದಿದೆ. ಈ ತಂತಿ ಜಾಳಿಗೆಯ ಸಹಾಯದಿಂದ ಉಪಗ್ರಹವು ಭೂಮಿಯ ಮೇಲೆ ತನ್ನ ಶಕ್ತಿಯನ್ನು ಕೇಂದ್ರೀಕರಿಸಲು ಸಮರ್ಥವಾಗಿದೆ. ಇವು ಸಂಜ್ಞೆಗಳನ್ನು ಸ್ವೀಕರಿಸುತ್ತವೆ, ಅಲ್ಲದೆ ಏಕಕಾಲದಲ್ಲಿ ಚಿತ್ರ ಹಾಗೂ ಧ್ವನಿ ತರಂಗಗಳನ್ನು ಪ್ರಸಾರಗೊಳಿಸುವ ಶಕ್ತಿಯನ್ನು ಹೊಂದಿರುತ್ತವೆ.

ಧ್ವನಿ : ರೇಡಿಯೋದಲ್ಲಿ ಧ್ವನಿಗಳ ಪ್ರಸಾರಮಾಲೆ ಪರೋಕ್ಷ ದರ್ಶನದಲ್ಲಿ ಧ್ವನಿ ಮತ್ತು ಚಲಿಸುವ ಚಿತ್ರಗಳೆರಡನ್ನೂ ಒಂದೇ ಸಮಯದಲ್ಲಿ ನೋಡಿ- ಕೇಳುವ ಸಾಧ್ಯತೆ ಇದೆ. ಚಲಿಸುವ ಭಾವಚಿತ್ರಗಳು ಮೊದಲಿಗೆ ವಿದ್ಯುತ್ ಅಲೆಗಳಿಂದ, ವಿದ್ಯುತ್ ಛಾಯಾ ಚಿತ್ರಗಳು ಉತ್ಪಾದನೆಯಾಗಿ ಪರೋಕ್ಷ ದರ್ಶನ ಯಂತ್ರದಲ್ಲಿ ಕಾರ್ಯಕ್ರಮಗಳು ಪ್ರಸಾರವಾಗುತ್ತವೆ.

ಧ್ವನಿ ೧ : 'ಅಂತರಿಕ್ಷದಲ್ಲಿನ ಆಚಾರ್ಯನ' ಬೋಧಕ ಕಾರ್ಯಕ್ರಮಗಳು ಕರ್ನಾಟಕದ ವಿಜಾಪುರ, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳಲ್ಲಿನ ಕೆಲವು ಹಳ್ಳಿಗಳನ್ನು ಒಳಗೊಂಡಿವೆ. ಗುಲ್ಬರ್ಗದ ೧೯೦ ಹಳ್ಳಿಗಳು, ರಾಯಚೂರು ಜಿಲ್ಲೆಯಲ್ಲಿ ಎಪ್ಪತ್ತಾರು, ವಿಜಾಪುರದ ೧೩೪ ಹಳ್ಳಿಗಳು, ಹೀಗೆ ೪೦೦ ಹಳ್ಳಿಗಳು ಈ ಸಾಮೂಹಿಕ ಟೆಲಿವಿಜನ್ ಸೆಟ್ಟುಗಳ ಪ್ರಯೋಜನವನ್ನು ಪಡೆಯಲಿವೆ.

ಧ್ವನಿ ೨ : ಭಾರತದಲ್ಲಿ ಕರ್ನಾಟಕ, ಆಂಧ್ರ, ಮಧ್ಯಪ್ರದೇಶ, ಒರಿಸ್ಸಾ, ರಾಜಾಸ್ಥಾನ ಬಿಹಾರ ಈ ಪ್ರದೇಶಗಳನ್ನು ಈ ಪ್ರಯೋಗಕ್ಕಾಗಿ ಆಯ್ಕೆ ಮಾಡುವಾಗ ಅವುಗಳ ಭೌಗೋಲಿಕ ಸಾಮೀಪ್ಯ, ಭಾಷಾ ಬಾಂಧವ್ಯ, ಸಾಂಸ್ಕೃತಿಕ ಸಾಮ್ಯ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಂಡಿದೆ. ಒಂದೊಂದು ಘಟಕದಲ್ಲಿ ನಾಲ್ಕನೂರರಂತೆ ೨,೦೦೦ ಹಳ್ಳಿಗಳು ಈ ಉಪಗ್ರಹ ಬೋಧಕ ಪರೋಕ್ಷ ದರ್ಶನದ ಪ್ರಯೋಗಕ್ಕೆ ಒಳಗಾಗಿವೆ.

ಧ್ವನಿ ೧ : ಅಹಮದಾಬಾದಿನಲ್ಲಿರುವ ಪ್ರಮುಖ ಟೆಲಿವಿಜನ್ ಕೇಂದ್ರದಿಂದ ಕಾರ್ಯಕ್ರಮಗಳನ್ನು ಉಪಗ್ರಹಕ್ಕೆ ಕಳುಹಿಸಲಾಗುತ್ತೆ. ಅಲ್ಲಿರುವ ೪೬' ವ್ಯಾಸವುಳ್ಳ ತಂತಿಯ ಜಾಳಿಗೆಯ ಸಹಾಯದಿಂದ ಪ್ರಸಾರ ಕೇಂದ್ರವು ಉಪಗ್ರಹಕ್ಕೆ ಕಾರ್ಯಕ್ರಮಗಳನ್ನು ಬಿತ್ತರಿಸಲು, ಹಾಗೂ ಸ್ವೀಕರಿಸಲು ಸಾಮರ್ಥ್ಯವನ್ನು ಪಡೆದಿದೆ. ಇನ್ನೊಂದು ಪ್ರಸಾರ ಕೇಂದ್ರವನ್ನು ದೆಹಲಿಯಲ್ಲಿ ಸ್ಥಾಪಿಸಲಾಗಿದೆ. ಇದು ೩೦' ವ್ಯಾಸವುಳ್ಳ ತಂತಿಯ ಜಾಳಿಗೆಯನ್ನು ಹೊಂದಿರುತ್ತದೆ. ಎಲ್ಲಾ ಪ್ರದೇಶಗಳಿಗೂ ದಿನದ ಅರ್ಧ ಘಂಟೆಯ ಕಾಲದ ಸುದ್ದಿ ಸಮಾಚಾರಗಳನ್ನು ಬಿತ್ತರಿಸಲು ಇದನ್ನು ಉಪಯೋಗಿಸಿಕೊಳ್ಳಲಾಗುತ್ತೆ.

ಧ್ವನಿ ೨ : ಅಹಮದಾಬಾದಿನಲ್ಲಿ ಏನಾದರೂ ತಾಂತ್ರಿಕ ತೊಂದರೆಯಾದಾಗ ದೆಹಲಿ ಕೇಂದ್ರವನ್ನು ಉಪಯೋಗಿಸಲಾಗುತ್ತದೆ. ಈ ಪ್ರಯೋಗಕ್ಕೆ ಗುಜರಾತಿನ ನದಿಯಡಿಯಲ್ಲಿ ಟ್ರಾನ್ಸ್‌ಮಿಟರ್ ಹಾಕಿದ್ದು ಅಮೃತಸರದಲ್ಲಿ ರಿಸೀವರ್ ವ್ಯವಸ್ಥೆಯನ್ನು ಮಾಡಲಾಗಿದೆ.

ಧ್ವನಿ ೧ : ಭಾರತೀಯ ಅಂತರಿಕ್ಷ ಸಂಶೋಧನಾ ಸಂಸ್ಥೆ ಪ್ರಯೋಗಕ್ಕೆ ಸಂಬಂಧಿಸಿದಂತೆ ತಾಂತ್ರಿಕ ಮತ್ತು ಭೌತಿಕ ವಿಷಯಗಳ ಮೇಲ್ವಿಚಾರಣೆ ನೋಡಿಕೊಂಡರೆ, ಕೇಂದ್ರ ಸಮಾಚಾರ ಹಾಗೂ ಪ್ರಸಾರ ಶಾಖೆಯು ಕಾರ್ಯಕ್ರಮದ ಹೊಣೆಯನ್ನು ಹೊತ್ತಿರುತ್ತದೆ.

ಧ್ವನಿ ೨ : ಟೆಲಿವಿಜನ್ ಸೆಟ್‌ಗಳನ್ನು ಅಧಿಕ ಸಂಖ್ಯೆಯ ವಿದ್ಯುತ್ ಸೌಕರ್ಯವಿರುವ ಹಳ್ಳಿಗಳ ಕೇಂದ್ರ ಸ್ಥಳಗಳಲ್ಲಿ ಇರಿಸಲಾಗಿದ್ದು, ಅಲ್ಲಿ ಉಸ್ತುವಾರಿ ಕಾರ್ಯಾಗಾರವನ್ನು ಸ್ಥಾಪಿಸಲಾಗಿದೆ. ಈ ಟೆಲಿವಿಜನ್ ಸೌಕರ್ಯ ಪಡೆಯಲಿರುವ ಹಳ್ಳಿಗಳು ಈ ಉಸ್ತುವಾರಿ ಕೇಂದ್ರದಿಂದ ೪೦ ಕಿಲೋಮೀಟರ್‌ಗಿಂತ ಹೆಚ್ಚು ದೂರದಲ್ಲಿರಬಾರದು. ಸಾರಿಗೆ ಸೌಕರ್ಯ ಇರುವಲ್ಲಿ ೬೦ ಕಿಲೋಮೀಟರಷ್ಟು ದೂರಕ್ಕೆ ಇದರ ಸೌಲಭ್ಯ ದೊರೆಯುತ್ತೆ.

ಧ್ವನಿ ೧ : ಈ ಟಿ.ವಿ. ಸೆಟ್ಟುಗಳನ್ನು ಸಾರ್ವಜನಿಕ ಶಾಲಾ ಕಟ್ಟಡಗಳಲ್ಲಿ, ಪಂಚಾಯಿತಿ ಭವನಗಳಲ್ಲಿ ಇಡಲಾಗಿದೆ. ಹತ್ತು ಅಡಿ ವ್ಯಾಸವುಳ್ಳ ತಂತಿ ಜಾಳಿಗೆಯ ಅಂಟೆನ್ನಾವನ್ನು ಕಟ್ಟಡಗಳ ಮೇಲೆ ಇರಿಸಿರುತ್ತಾರೆ. ಈ ಅಂಟೆನ್ನಾಕ್ಕೆ ಆಕಾಶದಿಂದ ಚಿತ್ರಗಳು ಬಾರದಂತ ಅಡ್ಡಿಯಾಗುವ ಮರಗಳಿರಬಾರದು.

ಧ್ವನಿ ೨ : ನೈರುತ್ಯ ದಿಕ್ಕಿಗೆ ಹೆಚ್ಚಿನ ವಿದ್ಯುತ್ ಕಂಬವು ಎರಡು ನೂರು ಗಜಗಳಿಂದ ಹೆಚ್ಚು ಅಂತರದಲ್ಲಿರಕೂಡದು. ಇದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಹೆಚ್ಚು ಜನಸಂಖ್ಯೆಯುಳ್ಳ ಹಳ್ಳಿಗಳನ್ನು ಆರಿಸಿ, ಹೆಚ್ಚು ಮಂದಿ ಇದರ ಸೌಲಭ್ಯಗಳನ್ನು ಪಡೆಯಲೆಂದು ಯೋಜಿಸಲಾಗಿದೆ.

ಧ್ವನಿ ೧ : ಪ್ರತಿಯೊಂದು ಘಟಕದಲ್ಲಿ ಟಿ.ವಿ. ಸೆಟ್ಟುಗಳ ಉಸ್ತುವಾರಿಗಾಗಿ ನಾಲ್ಕು ಉಪಕೇಂದ್ರಗಳನ್ನು Indian Space Research Organisation ಸ್ಥಾಪಿಸಿದೆ. ಪ್ರತಿ ಕೇಂದ್ರವೂ ೧೦೦ ಸೆಟ್ಟುಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತವೆ.

ಧ್ವನಿ ೨ : ಕರ್ನಾಟಕಕ್ಕೆ ಈ ಪರೋಕ್ಷ ದರ್ಶನ ದೊರೆಯುತ್ತಿರುವ ಬಗ್ಗೆ, ರಾಜ್ಯದ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಜಿ.ವಿ.ಕೆ. ರಾವ್ ಅವರು ಹೀಗೆ ಹೇಳುತ್ತಾರೆ-

(ಧ್ವನಿ)

ಧ್ವನಿ ೧ : ಪ್ರತಿದಿನ ಎರಡು ಹೊತ್ತು ಕಾರ್ಯಕ್ರಮಗಳು ಕನ್ನಡ, ತೆಲುಗು, ಉಡಿಯಾ, ಹಿಂದಿ ಭಾಷೆಗಳಲ್ಲಿ ನಾಲ್ಕು ಘಂಟೆಗಳ ಕಾಲ ಭಾರತವಲ್ಲಿ ಪ್ರಸಾರವಾಗಲಿವೆ.

ಧ್ವನಿ ೨ : ಬೆಳಿಗ್ಗೆ ೧೦ ರಿಂದ ೧೧-೩೦ರವರೆಗೆ ಪ್ರಸಾರವಾಗಲಿರುವ ಟೆಲಿವಿಜನ್ ಕಾರ್ಯಕ್ರಮದಲ್ಲಿ ಕನ್ನಡದಲ್ಲಿ ಶೈಕ್ಷಣಿಕ ಕಾರ್ಯಕ್ರಮ, ಬೆಳಗಿನ ಹತ್ತರಿಂದ ಹತ್ತೂ ಇಪ್ಪತ್ತರವರೆಗೆ, ಐದರಿಂದ ಹನ್ನೆರಡು ವಯಸ್ಸಿನ ಮಕ್ಕಳಿಗಾಗಿ ಸಾಯಂಕಾಲ ೬ ರಿಂದ ೮-೩೦ರವರೆಗೆ ಮಿಕ್ಕ ಕಾರ್ಯಕ್ರಮಗಳು ಪ್ರಸಾರವಾಗುವುವು.

ಧ್ವನಿ ೧ : ಒಂದೇ ಬಗೆಯ ಚಿತ್ರಗಳು ಎರಡು ವಾಹಿನಿಗಳ ಮೂಲಕ ಅಂದರೆ ತೆಲಗು - ಕನ್ನಡ ಭಾಷೆಗಳಲ್ಲಿ ಪ್ರಕ್ಷೇಪಿತವಾಗುವುವು ರಾಷ್ಟ್ರಕ್ಕೆ ಸಂಬಂಧಿಸಿದಂತೆ ಅರ್ಧ ಘಂಟೆ ಕಾಲ ಸುದ್ದಿ ಸಮಾಚಾರ ಹಿಂದಿಯಲ್ಲಿರುತ್ತದೆ. ಪ್ರತಿ ಭಾಷೆಯಲ್ಲಿ ಪ್ರಸಾರವಾಗಲಿರುವ ಕಾರ್ಯಕ್ರಮದಲ್ಲಿ ಸುಮಾರು ಇಪ್ಪತ್ತು ನಿಮಿಷಗಳ ಕಾಲ ಬೋಧಕ ವಿಷಯ, ಮಿಕ್ಕ ಹತ್ತು ನಿಮಿಷಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳ ಪ್ರಸಾರ ನಡೆಯುವುದು.

ಧ್ವನಿ ೨ : ವ್ಯವಸಾಯ, ಪಶುಪಾಲನೆ, ತೋಟಗಾರಿಕೆ, ಮೀನುಗಾರಿಕೆ, ಸಹಕಾರ, ಅರಣ್ಯಾಭಿವೃದ್ಧಿ, ಆರೋಗ್ಯ, ಪೌಷ್ಠಿಕ ಆಹಾರ, ವಿಜ್ಞಾನ, ಕುಟುಂಬಕಲ್ಯಾಣ ಯೋಜನೆ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳನ್ನು ನಾವು ಟೆಲಿವಿಜನ್‌ನಲ್ಲಿ ನೋಡಬಹುದು.

ಧ್ವನಿ ೧ : ಈಗಾಗಲೇ ಅನೇಕ ಕಾರ್ಯಕ್ರಮಗಳನ್ನು ಹೈದ್ರಾಬಾದ್ ಸ್ಟುಡಿಯೋಗಳಲ್ಲಿ ಹಾಗೂ ಕರ್ನಾಟಕದ ಹೊರಾಂಗಣಗಳಲ್ಲಿ ಚಿತ್ರೀಕರಿಸಿ ಸಿದ್ಧಪಡಿಸಿಕೊಂಡಿದ್ದಾರೆ.

ಧ್ವನಿ ೨ : ಮುಂದೆ ಪ್ರಸಾರವಾಗುವ ಕೆಲವು ಕಾರ್ಯಕ್ರಮಗಳ ಪಕ್ಷಿನೋಟವಿಲ್ಲಿದೆ-

ಧ್ವನಿ ೧ : ಮೊದಲಿಗೆ 'ಪುರಂದರ ದರುಶನ' ರೂಪಕದ ಒಂದು ಇಣುಕು ನೋಟ-

(ಧ್ವನಿ)

ಧ್ವನಿ ೨ : ಬೊಮ್ಮನಹಳ್ಳಿ ಕಿಂದರಿ ಜೋಗಿ ರೂಪಕದ ಒಂದು ಭಾಗ-

(ಧ್ವನಿ)

ಧ್ವನಿ ೧ : ಪುಣ್ಯಕೋಟಿ ಕಾರ್ಯಕ್ರಮದ ಮತ್ತೊಂದು ಅಂಶ.

(ಧ್ವನಿ)

ಧ್ವನಿ ೨ : ಈಗ ನೀವು ಸಾಂಸ್ಕೃತಿಕ ಕಾರ್ಯಕ್ರಮಗಳ ಸಂಗೀತವನ್ನು ಕೇಳಿದಿರಿ ಮಾತ್ರ. ಟೆಲಿವಿಜನ್‌ನಲ್ಲಿ ಅವುಗಳ ದೃಶ್ಯವನ್ನೂ ನಟ-ನಟಿಯರ ಅಭಿನಯವನ್ನೂ ನೋಡಲೂಬಹುದು.

ಧ್ವನಿ ೧ : ನಮ್ಮ ಸಮಾಜ ಅಭಿವೃದ್ಧಿಯ ಫಲವನ್ನು ಅನುಭವಿಸಬೇಕಾದರೆ ನೂರಕ್ಕೆ ೮೦ರಷ್ಟು ಭಾಗ ಹಳ್ಳಿಯ ಜನರುಗಳಿಗೆ ನೂತನ ಪದ್ಧತಿಗಳ ಜ್ಞಾನ ತ್ವರಿತವಾಗಿ ಪ್ರಸಾರವಾಗಬೇಕು.

ಧ್ವನಿ ೨ : ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಶೈಕ್ಷಣಿಕವಾಗಿ ಪ್ರಸಾರ ಮಾಧ್ಯಮಕ್ಕೆ ಈ ಪರೋಕ್ಷದರ್ಶನವನ್ನು ಉಪಯೋಗಿಸಿಕೊಳ್ಳಬಹುದೇ? ಪ್ರೇಕ್ಷಕರ ಮನಸ್ಸಿನ ಮೇಲೆ ಯಾವ ರೀತಿ ಪರಿಣಾಮಗಳನ್ನು ಉಂಟುಮಾಡಬಹುದು? ಇವನ್ನು ಅರಿಯುವುದಕ್ಕಾಗಿ ಪ್ರಯೋಗ ಎಂದರೆ ಉಪಗ್ರಹದ ಪ್ರಯೋಗ.

ಧ್ವನಿ ೧ : ಈ ಪ್ರಯೋಗ ಸಫಲವಾದರೆ ತಾತ್ಪೂರ್ತಿಕವಾಗಿರುವ ಈ ಉಪಗ್ರಹ ದೂರದರ್ಶನ ಕಾರ್ಯಕ್ರಮವನ್ನೂ ಶಾಶ್ವತ ಭೂಪ್ರದೇಶಿ! ದೂರದರ್ಶನ ಕಾರ್ಯಕ್ರಮವನ್ನಾಗಿ ಮುಂದುವರಿಸುವ ಆಶಯವಿದೆ ಎಂಬುವನ್ನು ಮುಖ್ಯಮಂತ್ರಿಗಳು ತಮ್ಮ ಸಂದೇಶದ ಮೂಲಕ ವ್ಯಕ್ತಪಡಿಸಿದ್ದಾರೆ-

(ಧ್ವನಿ)

ನಿರೂಪಕ : ನಿಜವಾಗಿಯೂ ಇದು ಹೆಮ್ಮೆಪಡಬಹುದಾದ ಒಂದು ಪ್ರಯೋಗ. ಭವ್ಯ ಭಾರತದ ನಿರ್ಮಾಣಕ್ಕೆ ಈ ಸಂಪರ್ಕ ಸಾಧನ ಅತ್ಯಂತ ಸಹಾಯಕಾರಿ.

*

# ಸಂತೆಯೊಳಗೊಂದು ಮನೆಯ ಮಾಡಿ

ಧ್ವನಿ : "ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ" ಎಂಬುದು ಅಕ್ಕಮಹಾದೇವಿ ನುಡಿದ ನುಡಿಮುತ್ತು. ಹಾಗೆಯೇ ನಗರ ವಾಸದಲ್ಲಿದ್ದು ಅನೇಕ ಕೈಗಾರಿಕೋದ್ಯಮಗಳಿಂದ ಬರುವ ಶಬ್ದ, ಸಾರಿಗೆಯಿಂದ ಆಗುವ ಕಿವಿಮುಚ್ಚುವಷ್ಟು ಶಬ್ದ, ಸಂತೆ, ಮಾರುಕಟ್ಟೆಗಳಲ್ಲಾಗುವ ಜನರ ಗದ್ದಲ, ಧ್ವನಿವರ್ಧಕಗಳಿಂದ ಹೊರಹೊಮ್ಮುವ ಅಬ್ಬರದ ದನಿ..... ಒಂದೇ ಎರಡೇ...... ನೂರಾರು, ಸಾವಿರಾರು. ಈ ಕರ್ಕಶ ಯಾರಿಗೆ ತಾನೇ ಹಿತ ಕೊಟ್ಟೀತು? ಆನಂದ ತಂದೀತು? ಆದರೂ ಜೀವಿಸಬೇಕೆಂದ ಮೇಲೆ ಸ[illegible] ಕೊಳ್ಳಬೇಕು? ಶಬ್ದ ಮಾಲಿನ್ಯ ತಡೆಗಟ್ಟುವ ಉಪಾಯ ಕಂಡುಕೊಳ್ಳಬೇಕ

ಧ್ವನಿ : ಕವಿ ಹೃದಯ ಕಲಕಿದ ಈ ಕೋಗಿಲೆ ದನಿ ಅದೆಷ್ಟು ಇ[illegible]?

(......ಹಾಡು)

ಧ್ವನಿ : ಇದು ಅಮೃತಸೋ[illegible].. ...

(ಹಾಡಿನ ತುಣುಕು)

ಆದರೆ ಇದು........

(ವಿವಿಧ ಶಬ್ದ ಮಾಲಿನ್ಯದ Effects)

ಧ್ವನಿ : ತಲೆ ಚಿಟ್ಟಾಗುವಷ್ಟು ಬೇಸರ! ಕಿವಿ ಮುಚ್ಚುವಷ್ಟು ಅಹಿತಕರ!

ಅದಕ್ಕೆ ಏನೋ ಹಿಂದೆ ಋಷಿ ಮುನಿಗಳು ನಿಶ್ಶಬ್ದ ಸ್ಥಳವನ್ನಾರಿಸಿಕೊಂಡು ಕಾಡು ಬೀಳುತ್ತಿದ್ದರು. ಈ ಕಾಡಿನ ಮರಗಳಿಗೂ ಈ ಶಬ್ದ ತಡೆಯುವ ಶಕ್ತಿ ಇದೆಯಂತೆ ಅದಕ್ಕೇ ಅಲ್ಲಿ ಶಬ್ದವಿಲ್ಲ......

(ಹಾಡು......)

ಧ್ವನಿ : ಸಮತೋಲನವಿಲ್ಲದ ಕೈಗಾರಿಕೆಗಳಿಂದ ಶಬ್ದಮಾಲಿನ್ಯ ಉಂಟಾಗುತ್ತದೆ. ಕಿವಿಯ ತಮ್ಮಟೆಯನ್ನು ಭೇದಿಸುವ ಗದ್ದಲ, ಧ್ವನಿವರ್ಧಕಗಳ ಅಬ್ಬರ. ಶಬ್ದ ಮಾನವನಿಗೆ ಮಾರಕ!

ಧ್ವನಿ : ನಗರ ಜೀವನದಲ್ಲಿ ಸಂಪೂರ್ಣ ಶಬ್ದ ಮಾಲಿನ್ಯ ತಡೆಗಟ್ಟುವುದು ಕಷ್ಟವೇ ಸರಿ. ಕಾರ್ಖಾನೆ, ಜನಸಂದಣಿ, ಮುಂತಾದುವುಗಳ ಶಬ್ದ ಕಿವಿ ಮುಚ್ಚಿಸುವಷ್ಟು ಚಿಟ್ಟು. ಆದರೆ ಇದನ್ನು ಬಿಟ್ಟು ಹಳ್ಳಿಗಳಿಗೆ ಹೋಗಿ ನೆಲೆಸುವುದು ಸಾಧ್ಯವೇ? ಕೈಗಾರಿಕೋದ್ಯಮ ಬೆಳೆಯಬೇಡವೇ? ಬೆಳೆದಷ್ಟು ಇದರ ಆರ್ಭಟ ಹೆಚ್ಚೇ.

ಧ್ವನಿ : ಆದರೆ ಇಷ್ಟು ಮಾತ್ರ ನಿಜ. ಈ ಶಬ್ದ ಮಾಲಿನ್ಯದಿಂದ ಕಿವುಡಾಗುವುದನ್ನು ತಡೆಗಟ್ಟಬಹುದು.

ಧ್ವನಿ : ಶಬ್ದ ಮಾಲಿನ್ಯದಿಂದ ಶಾರೀರಿಕ, ಮಾನಸಿಕ, ಹಾಗೂ ಅಭಿವ್ಯಕ್ತಿ ಸಾಮರ್ಥ್ಯದ ಮೇಲೆ ದುಷ್ಪರಿಣಾಮ ಉಂಟಾಗುವುದು. ಶಾರೀರಿಕ ದುಷ್ಪರಿಣಾಮವೆಂದರೆ ಬೆವರುವುದು, ರಕ್ತದ ಒತ್ತಡ ಹೆಚ್ಚುವುದು, ಗರ್ಭಸ್ಥ ಶಿಶುವಿನ ಮೇಲೆ ಪರಿಣಾಮ ಬೀರುವುದು, ದೇಹದ ಉಷ್ಣ ಹೆಚ್ಚುವುದು, ದೃಷ್ಟಿ ತೊಂದರೆ, ಕಿವಿ ತಮ್ಮಟೆ ತೊಂದರೆಗಳು. ಮಾನಸಿಕ ತೊಂದರೆಗಳೆಂದರೆ ನಿದ್ರೆ ಬಾರದಿರುವುದು, ದಣಿವು, ಶೀಘ್ರವಾಗಿ ಕೆರಳುವುದು. ಅಭಿವ್ಯಕ್ತಿಯ ಮೇಲೆ ಪರಿಣಾಮ, ಕಾರ್ಯದಕ್ಷತೆ ಕಡಿಮೆ ಆಗುವುದು, ಆಲಿಸುವುದರಲ್ಲಿ ದುಷ್ಪರಿಣಾಮ, ಶಬ್ದವನ್ನು ಮಿತಿ ಮೀರಿದ ಪ್ರಮಾಣದಲ್ಲಿ ಕೇಳುವುದರಿಂದ ಅಹಿತ! ಧ್ವನಿವರ್ಧಕ, ಕೈಗಾರಿಕಾ ಉತ್ಪಾದನೆಯಲ್ಲಿ ಈ ತೊಂದರೆ ಉಂಟಾಗುವುವು.

ಧ್ವನಿ : ಆಧುನಿಕ ಕಾಲದಲ್ಲಿ ಶಬ್ದ ಅನಿವಾರ್ಯ ಆದರೆ ಅದರಿಂದ ರಕ್ಷಿಸಿಕೊಳ್ಳಲು ಉಪಾಯಗಳಿವೆ. Ear Mugs, ಪುಫ್ಲರ್ಸ್ ಮುಂತಾದುವುಗಳಿಂದ.

ಧ್ವನಿ : ಈ ರೂಪಕವು ಶಬ್ದ ಮಾಲಿನ್ಯದ ಬಗೆಗೆ ಕೇಂದ್ರೀಕರಿಸಿದೆ. ಅದರಲ್ಲೂ ಕೈಗಾರಿಕೋದ್ಯಮದ ಶಬ್ದ ಮಾಲಿನ್ಯದ ಬಗೆಗೆ ಹೆಚ್ಚು ಒತ್ತುಕೊಟ್ಟಿದೆ. ಸ್ಥಳೀಯ ಧ್ವನಿಮುದ್ರಿಕೆಗಳ ಆಧಾರದ ಮೇಲೆ ಈ ರೂಪಕ ಸಿದ್ಧವಾಗಿದೆ-

೧. ಕರ್ನಾಟಕ ರಾಜ್ಯದ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಾದ ಶ್ರೀ.ಎಂ.ಜೆ. ಸುರೇಂದ್ರ ಕುಮಾರ್ ಅವರು ಶಬ್ದ ಮಾಲಿನ್ಯ ನಿಯಂತ್ರಣದ ಬಗೆಗೆ-

(ಧ್ವನಿ)

೨. ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್‌ನ ಪರಿಸರ ರಕ್ಷಣಾ ವಿಭಾಗದ ಡೆಪ್ಯುಟಿ ಜನರಲ್ ಮ್ಯಾನೇಜರ್ ಡಾ. R.P. ಡಂಬಳ್ ಅವರು ತಮ್ಮ ಕಾರ್ಖಾನೆಯಲ್ಲಿ ಶಬ್ದ ಮಾಲಿನ್ಯ ತಡೆಗಟ್ಟುವುದರ ಬಗೆಗೆ ವಹಿಸಿರುವ ಕಾಳಜಿ-

(ಧ್ವನಿ)

೩. ಇಂಡಿಯನ್ ಇನ್‌ಸ್ಟಿಟ್ಯುಟ್ ಆಫ್ ಏರೋ ಸ್ಪೇಸ್ ಮೆಡಿಸಿನ್‌ನಲ್ಲಿ ಆಡಿಯಾಲಜಿ ವಿಭಾಗದ ಅಸಿಸ್ಟೆಂಟ್ ಪ್ರೊಫೆಸರ್ ಡಾ. ಪ್ರಾಣೇಶರಾವ್-

೪. ಬೆಂಗಳೂರಿನ Nimhans ನ ಸ್ಪೀಚ್ ಪೆಥಾಲಜಿ ವಿಭಾಗದ ಸ್ಪೀಚ್ ಪೆತಾಲಜಿಸ್ಟ್ ಶ್ರೀ ಎಸ್. ಬಸವರಾಜು ಅವರು ಶಬ್ದ ಮಾಲಿನ್ಯದ ಬಗೆಗೆ ನಿರೂಪಿಸುತ್ತಾ-

ಕೈಗಾರಿಕೋದ್ಯಮದಲ್ಲಿ ಶಬ್ದಮಾಲಿನ್ಯ ಹೇಗೆ ಉಂಟಾಗುವುದು, ಅದನ್ನು ತಡೆಗಟ್ಟುವ ಬಗೆ ಹೇಗೆ, ಎಂಬುದಕ್ಕೆ ಬೆಂಗಳೂರಿನ ಹಿಂದೂಸ್ಥಾನ್ ಏರೋನಾಟಿಕ್ಸ್ ಲಿಮಿಟೆಡ್‌ಗೆ ಭೇಟಿ ನೀಡಿದ್ದೆವು.

(Effect)

೬. HALನ ಅಡಿಷನಲ್ ಜನರಲ್ ಮ್ಯಾನೇಜರ್, ಚೇರ್‌ಮನ್ ಸೆಂಟ್ರಲ್ ಸೇಫ್ಟಿ ಕಮಿಟಿಯ ಶ್ರೀ M.V. ಪಾಲ್ ಅಲೆಕ್ಸಾಂಡರ್ ಅವರು ತಮ್ಮ ಫ್ಯಾಕ್ಟರಿಯಲ್ಲಿ ಶಬ್ದಮಾಲಿನ್ಯ ನಿಯಂತ್ರಣ ಹೇಗೆ ಮಾಡುವುದೆಂಬುದರ ಬಗೆಗೆ ಮಾತನಾಡುತ್ತಾ-

೭. ಸೇಫ್ಟಿಕಮಿಟಿಯ ಸದಸ್ಯರು ಹಾಗೂ ಚೀಫ್ ಮ್ಯಾನೇಜರ್ ವರ್ಕ್ಸ್‌ನ ಶ್ರೀ.ಆರ್. ವಿಶ್ವನಾಥ್-

(Effect)

೮. ೧೧೫೦ KVA ಜನರೇಟರ್‌ನಲ್ಲಿ ಕೆಲಸ ಮಾಡುವ ಕೆಲವು ಕಾರ್ಮಿಕರನ್ನು ಮಾತಾಡಿಸೋಣ-

೯. ಶ್ರೀ ಶ್ರೀನಿವಾಸ್

ಇದು ಸೆಂಟ್ರಲ್ ಏರ್ ಕಂಪ್ರೆಸರ್ ಹೌಸ್ ವಿಭಾಗ-

(Effect)

೧೦. ಎಲೆಕ್ಟ್ರೀಷಿಯನ್ ಶ್ರೀ L. ಜಯಣ್ಣ ಅವರನ್ನು ಸಂದರ್ಶಿಸಿದಾಗ-

500 KVA ಜನರೇಟರ್‌ನಲ್ಲಿ ಕೆಲಸ ಮಾಡುವ ಕೆಲವು ಕಾರ್ಮಿಕರ ಅಭಿಪ್ರಾಯಗಳು-

ಗಣಪತಿ ಏನು ಹೇಳುತ್ತಾರೆ ಕೇಳಿ-

೧೧. ಶ್ರೀವೆಂಕಟರಮಣಪ್ಪ-

೧೨. ಶ್ರೀ ರಾಮಮೋಹನ್‌ರವರನ್ನು ಸಂದರ್ಶಿಸಿದಾಗ-

೧೩. ಪವರ್ ಜನರೇಟಿಂಗ್ ಸ್ಟೇಷನ್‌ನಲ್ಲಿ ಕೆಲಸ ಮಾಡುತ್ತಿರುವ ಎಕ್ಸಿಕ್ಯೂಟ್ಯೂ ಇಂಜಿನಿಯರ್ ಶ್ರೀ S.R. ಬಾಬುರಾವ್ ಅವರು ತಮ್ಮ ಕಾರ್ಯನಿರ್ವಹಣೆ ಕುರಿತು-

೧೪. ಪವರ್ ಜನರೇಷನ್ ಅಂಡ್ ಡಿಸ್ಟ್ರಿಬ್ಯೂಷನ್ ವಿಭಾಗದ ಸೀನಿಯರ್ ಮ್ಯಾನೇಜರ್ ಶ್ರೀ B.R. ಕೃಷ್ಣಮೂರ್ತಿಯವರು ತಮ್ಮ ಕೆಲಸದ ಬಗೆಗೆ ಹೇಳುತ್ತಾ-

ಧ್ವನಿ : ಕೆಲಸವನ್ನರಸಿ ಪಟ್ಟಣದತ್ತ ದಾಪುಗಾಲು ಹಾಕುವ ಹಳ್ಳಿಗರಿಗೆ ಹೊಟ್ಟೆಪಟ್ಟಣ ತುಂಬಿಸಿಕೊಂಡರೆ ಸಾಕು, ಯಾವುದಾದರೊಂದು ಕೆಲಸಕ್ಕೆ ಸೇರಿಕೊಂಡರೆ ಸಾಕು, ಎಂಬುವಷ್ಟೇ ಮನೋಭಾವವಿರುತ್ತದೆ. ಆದರೆ ಬಂದು ಕೆಲಸಕ್ಕೆ ಸೇರಿಕೊಂಡು ಕೈಗಾರಿಕಾ ಉದ್ಯಮದ ಶಬ್ದವನ್ನು ಕೇಳಲೇಬೇಕು. ಮೊದಲು ಕೆಲವು ದಿನಗಳು ಏನೂ ಗೊತ್ತಾಗದಿದ್ದರೂ ಆಮೇಲೆ ಬರಬರುತ್ತಾ ಅಹಿತವೆನಿಸುವುದು ಸಹಜವೇ.

ಧ್ವನಿ : ಪಟ್ಟಣ ಪ್ರದೇಶದಲ್ಲಿ ಇದೊಂದೇ ಅಲ್ಲ ಇದರ ಜೊತೆಗೆ ಹತ್ತು ಹಲವಾರು ದನಿಗಳು; ಕಿವಿಗೆ ಕರ್ಕಶವಾಗಿ ಬೇಸರ ತರಿಸುವುದರಲ್ಲಿ ಅಚ್ಚರಿ ಏನಿಲ್ಲ! ಆದರೇನು? ಈ ಶಬ್ದ ಮಾಲಿನ್ಯ ಪಟ್ಟಣ ಪ್ರದೇಶಗಳಲ್ಲಿ ಅನಿವಾರ್ಯ! ಆದರೆ ಮಾನಸಿಕ ನೆಮ್ಮದಿ, ಆರೋಗ್ಯ ಮುಖ್ಯವಲ್ಲವೆ, ಆದಕ್ಕಾಗಿ ಕೆಲವು ಉಪಾಯಗಳನ್ನು ಹುಡುಕಿಕೊಳ್ಳಲೇಬೇಕು.

ಧ್ವನಿ : ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ? ಎಂಬಂತೆ ಸಂತೆಯಲ್ಲಿ ಮನೆಮಾಡುವುದೇ ಮೊದಲು ತಪ್ಪು, ಮಾಡಿದ ಮೇಲೆ ಆ ಶಬ್ದ ಗದ್ದಲಗಳಿಗೆ ಒಗ್ಗಿಕೊಳ್ಳಬೇಕು, ಇಲ್ಲ ಶಬ್ದ ಕೇಳದಂತೆ ಮಾಡಿಕೊಳ್ಳುವ ಉಪಾಯ ಕಂಡುಕೊಳ್ಳಬೇಕು. ಹಾಗೆಯೇ ಪಟ್ಟಣ ವಾಸಕ್ಕೇ ಬರಲಿ, ಕೈಗಾರಿಕೋದ್ಯಮದಲ್ಲಿ ಕೆಲಸಕ್ಕೇ ಸೇರಿಕೊಳ್ಳಲೀ, ಈ ಶಬ್ದ ಮಾಲಿನ್ಯದಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಕೈಕೊಳ್ಳಬೇಕು. ಅದಕ್ಕೆ ಕೈಗಾರಿಕೋದ್ಯಮವೂ ಕಾಳಜಿವಹಿಸುತ್ತಿದೆ. ಅಂತೆಯೇ ಸಾರ್ವಜನಿಕರೂ ಹೆಚ್ಚು ಗದ್ದಲ ಮಾಡುವುದು, ಧ್ವನಿವರ್ಧಕಗಳನ್ನು ಜೋರಾಗಿ ಹಾಕುವುದು, ಜೋರಾಗಿ ಹಾರನ್ ಮಾಡುವುದು ಮುಂತಾದುವುಗಳನ್ನು ಸ್ವಲ್ಪ ಕಡಿಮೆ ಮಾಡಿದರೆ ಪಟ್ಟಣ ಪ್ರದೇಶಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಈ ಶಬ್ದ ಮಾಲಿನ್ಯದಿಂದ ದೂರಾಗಬಹುದು ಅಲ್ಲವೇ?

*

# ವ್ಯಕ್ತಿ ಚಿತ್ರಗಳು

## ಕಾರ್ಮಿಕ ಬಂಧು

ಧ್ವನಿ ೧ : ವಕೀಲರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ಕಾರ್ಮಿಕ ಮುಖಂಡರಾಗಿ, ಮಂತ್ರಿಯಾಗಿ, ರಾಜ್ಯಪಾಲರಾಗಿ, ಉಪರಾಷ್ಟ್ರಪತಿಯಾಗಿ, ರಾಷ್ಟ್ರಪತಿಯಾಗಿ ಹಂತ ಹಂತವಾಗಿ ಗಿರಿಯವರು ಗಿರಿಎತ್ತರ ಬೆಳದವರು. ಭಾರತದ ನಾಲ್ಕನೆಯ ರಾಷ್ಟ್ರಪತಿಯಾಗಿ ೧೯೬೯ರಿಂದ ೧೯೭೪ರವರೆಗೆ ಅವ್ಯಾಹತವಾಗಿ ದುಡಿದ ವ್ಯಕ್ತಿ ವರಾಹಗಿರಿ ವೆಂಕಟಗಿರಿ ಅವರು.

ಧ್ವನಿ ೧ : ೧೯೬೯ರ ಆಗಸ್ಟ್ ೨೪ರಂದು ರಾಷ್ಟ್ರಪತಿಯಾಗಿ ಪ್ರಮಾಣ ವಚನ ಸ್ವೀಕರಿಸುತ್ತಾ,

"ನಾವು ಅನೇಕ ಗುರಿಗಳನ್ನು ಮುಟ್ಟಬೇಕಾಗಿದೆ. ವಿಶಾಲವಾದ ನಮ್ಮ ದೇಶದಲ್ಲಿ ಸಮಸ್ಯೆಗಳಿಗೆ ಕೊರತೆಯೇನಿಲ್ಲ. ದೀರ್ಘ ಕಾಲದ ಹೋರಾಟ ನಮ್ಮಮುಂದಿದೆ ಎಂಬುದನ್ನು ಮರೆಯುವಂತಿಲ್ಲ. ವಿಶ್ವದಲ್ಲೇ ಪ್ರಜಾಪ್ರಭುತ್ವ ದೇಶಗಳಲ್ಲಿ ಭಾರತ ಅತ್ಯಂತ ದೊಡ್ಡ ರಾಷ್ಟ್ರ. ಜನತೆಯ ಸಹಕಾರ, ಸಂಘಟನಾ ಶಕ್ತಿಯಿಂದ ನಮ್ಮ ಗುರಿಯನ್ನು ಮುಟ್ಟೋಣ" ಎಂದು ಘೋಷಿಸಿದರು.

ಧ್ವನಿ ೩ : ೧೮೯೪ರ ಆಗಸ್ಟ್ ಹತ್ತರಂದು ಜನಿಸಿದ ಗಿರಿಯವರು ೧೯೮೦ರ ಜೂನ್ ೨೪ರಂದು ನಮ್ಮನ್ನೆಲ್ಲಾ ಅಗಲಿ ತಮ್ಮ ೮೫ನೇ ವಯಸ್ಸಿನಲ್ಲಿ ಶಾಶ್ವತ ನಿದ್ದೆಗೆಯ್ದರು, ಗಿರಿಯವರು ನಮ್ಮನ್ನು ಬಿಟ್ಟು ತೆರಳಿದರೂ ಅವರ ತತ್ತ್ವ, ಮಾರ್ಗದರ್ಶನ, ಸಾಧನೆಗಳು ನಮ್ಮೆಲ್ಲರ ಮನದಲ್ಲಿ ಸದಾಕಾಲ ಅಚ್ಚೊತ್ತಿ ನಿಲ್ಲುವಂಥವು.

ಧ್ವನಿ ೧ : ರಾಜಕೀಯ ಭಾಷಣಗಳ ಸ್ಫೂರ್ತಿಯಿಂದ, ಗಿರಿಯವರು, ಪ್ರೌಢ ಶಾಲೆಯಲ್ಲಿ, ಚರ್ಚಾ ಕೂಟಗಳಲ್ಲಿ ಭಾಗವಹಿಸಲು ಕಾರಣವಾಯಿತು. ಬಾಲ್ಯದಲ್ಲೆ, ೩೦೦೦ ರಾಜಕೀಯ ನಾಯಕರ ಚರಿತ್ರೆಗಳ ಪುಸ್ತಕಗಳ ಸಂಗ್ರಹಣೆ ಮಾಡಿ, ಗ್ರಂಥ ಭಂಡಾರವನ್ನೇ ಸ್ಥಾಪಿಸಿದರು. ಈ ಪುಸ್ತಕಗಳ ಓದಿನಿಂದ ರಾಜಕೀಯ ರಂಗಕ್ಕೆ ನುಗ್ಗುವ ಹಂಬಲವಾಯಿತು.

ಧ್ವನಿ ೨ : ಜೋಗಯ್ಯ ಪಂತಲು ಅವರ, ಎರಡನೆಯ ಮಗ ಗಿರಿಯವರು ವಿನಯ ಸ್ವಭಾವದವರು. ಆರ್ಥಿಕ ಲಾಭಗಳಿಗಿಂತ, ನೈತಿಕ ವಾತ್ಸಲ್ಯಗಳೇ ಜೀವನದಲ್ಲಿ ಮುಖ್ಯ ಎಂಬ ವಾತಾವರಣದಲ್ಲಿ ಬೆಳೆದವರು. ಬಿ.ಎ. ಪರೀಕ್ಷೆಗೆ ಸಾಹಿತ್ಯ, ಅರ್ಥಶಾಸ್ತ್ರ , ರಾಜಕೀಯ, ವಿಜ್ಞಾನ, ಘಟನಾತ್ಮಕ ಕಾನೂನು, ಅಂತರರಾಷ್ಟ್ರೀಯ ಕಾನೂನು ವಿಷಯಗಳನ್ನು ಐಚ್ಛಿಕವಾಗಿ ತೆಗೆದುಕೊಂಡರು. ಐರ್‌ಲೆಂಡಿನ ರಾಷ್ಟ್ರೀಯ ವಿಶ್ವ ವಿದ್ಯಾಲಯದಲ್ಲಿ ವಕೀಲ ವೃತ್ತಿಯ ವ್ಯಾಸಂಗ ಮಾಡಿದರು.

ಧ್ವನಿ ೧ : ತಾನಾಗಿ ಬಂದ ಸರಕಾರಿ ಹುದ್ದೆಯ ತಿರಸ್ಕಾರ, ಇದಾದ ಐದು ವರ್ಷಗಳ ನಂತರ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಳ್ಳಲು ವಕೀಲ ವೃತ್ತಿಯಿಂದ ನಿವೃತ್ತಿ, ಮಹಾತ್ಮಗಾಂಧಿಯವರ ನಿಕಟವರ್ತಿಗಳಾಗಿ ಅವರ ನಾಯಕತ್ವದಲ್ಲಿ ನಡೆದ ಸತ್ಯಾಗ್ರಹದಲ್ಲಿ ನುಗ್ಗಿ ಜೈಲುವಾಸ ಅನುಭವ. ಆ ಜೈಲಿನಲ್ಲಿ ಕೊಡುತ್ತಿದ್ದ ಆಹಾರದ ಬಗ್ಗೆ ಅಲ್ಲಿ ನಡೆಯುತ್ತಿದ್ದ ಭ್ರಷ್ಟಾಚಾರದ ಬಗ್ಗೆ ಪ್ರತಿಭಟನೆ ಕಾರ್ಯ ಸಾಧನೆ. ೧೯೧೬ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸದಸ್ಯರು 'Jobs for millions' ಯೋಜನೆ ಮಾಡಿ ಅದರ ಬಗ್ಗೆ ಭಾಷಣಗಳು, ವಾರ್ತಾ ಪತ್ರಿಕೆಗಳಲ್ಲಿ ಲೇಖನಗಳ ಸರಮಾಲೆ.

ಧ್ವನಿ ೨ : ಗಿರಿಯವರು, ಮೊದಲು ಪದಾರ್ಪಣೆ ಮಾಡಿದುದು ಕಾರ್ಮಿಕ ಮುಖಂಡರಾಗಿ. ರೈಲ್ವೆ ಕಾರ್ಮಿಕರು ಗಿರಿಯವರನ್ನು, ತಮ್ಮ ಮುಖಂಡರನ್ನಾಗಿ ಆರಿಸಿದರು. ೧೯೨೭ರಿಂದ ೧೯೩೬ರವರೆಗೆ ನಡೆದ ರೈಲ್ವೆ ಮುಷ್ಕರದಲ್ಲಿ ಗಿರಿಯವರ ಯಶಸ್ವಿ ಮುಖಂಡತ್ವ ಹಾಗೂ ಇವರ ಪ್ರತಿಭೆ ನೋಡಿ ನಿಜಾಮರ ಮಂತ್ರಿ ಮಂಡಲದಲ್ಲಿ ಕಾರ್ಮಿಕ ಸಚಿವರಾಗುವಂತೆ ಆಹ್ವಾನ, ಆದರೆ ಗಿರಿಯವರಿಂದ ತಿರಸ್ಕಾರ.

ಧ್ವನಿ ೧ : ಕಾರ್ಮಿಕ ಕ್ಷೇತ್ರದಿಂದ ರಾಜಕೀಯ ಕ್ಷೇತ್ರಕ್ಕೆ ಪಾದಾರ್ಪಣೆ. ೧೯೩೭ರಲ್ಲಿ ಮದ್ರಾಸ್ ಶಾಸನ ಸಭೆಯ ಚುನಾವಣೆಗೆ ನಿಂತು, ಆಗಿನ ಮದ್ರಾಸ್ ಪ್ರಾಂತ್ಯದ ಮುಖ್ಯಮಂತ್ರಿಗಳಾಗಿದ್ದ ಬೊಬ್ಬಿಲಿ ರಾಜರನ್ನೂ ಸೋಲಿಸಿ ಕಾರ್ಮಿಕ ಮಂತ್ರಿಯ ಪಟ್ಟ.

ಧ್ವನಿ ೨ : ರಾಜಾಜಿಯವರ ಮಂತ್ರಿಮಂಡಲದಲ್ಲಿ ಕೈಗಾರಿಕೆ, ಸಹಕಾರ, ವಾಣಿಜ್ಯ, ಮತ್ಸ್ಯೋದ್ಯಮ, ಹರಿಜನೋದ್ಧಾರಗಳಿಗೆ ಸಂಬಂಧಿಸಿದ ಖಾತೆಗಳಲ್ಲಿ ಮಂತ್ರಿ, ಮುಂದೆ ನೆಹರೂ ಮಂತ್ರಿ ಮಂಡಲದಲ್ಲಿ ಕಾರ್ಮಿಕ ಮಂತ್ರಿ ಪದವಿ. ಎರಡೂವರೆ ವರ್ಷಗಳಾದ ಮೇಲೆ ಮಂತ್ರಿ ಪದವಿಗೆ ರಾಜೀನಾಮೆ.

ಧ್ವನಿ ೧ : ಕಾರಣವಾದರೂ ಇಷ್ಟೇ, 'ಬ್ಯಾಂಕ್ ಉದ್ಯೋಗಿಗಳು ಹಾಗೂ ಮಾಲೀಕರುಗಳ ನಡುವೆ, ಉಂಟಾಗಿದ್ದ ವಿವಾದಗಳ ಬಗ್ಗೆ ತೀರ್ಪನ್ನು

ತಿದ್ದುಪಡಿ ಮಾಡಲು, ಕೇಂದ್ರ ಮಂತ್ರಿಮಂಡಲವು ನಿರ್ಣಯ ಮಾಡಿಮುದನ್ನು ಪ್ರತಿಭಟಿಸುವ ಸಲುವಾಗಿ ಸ್ವಾತಂತ್ರ್ಯದ ನಂತರ ಸಿಲೋನ್‌ನಲ್ಲಿ, ಭಾರತದ ಹೈಕಮಿಷನರ್ ಆಗಿ ನೇಮಕ.

ಧ್ವನಿ ೨ : ಮುಂದೆ ಉತ್ತರ ಪ್ರದೇಶ, ಕೇರಳ, ಕರ್ನಾಟಕ ರಾಜ್ಯಪಾಲರಾಗಿ ವಚನ ಸ್ವೀಕಾರ. ಕರ್ನಾಟಕದಲ್ಲಿ 'ನಗರ ನೈರ್ಮಲ್ಯ' ಕಾರ್ಯಕ್ರಮಕ್ಕಾಗಿ ವಿಶೇಷ ಆಸಕ್ತಿ ತೋರಿ ನಗರವನ್ನೂ ಚೊಕ್ಕಟವಾಗಿಡುವಂತೆ ಮಾಡಿದುದನ್ನು ಯಾರೂ ಮರೆಯುವಂತಿಲ್ಲ.

ಧ್ವನಿ ೧ : ೧೯೬೭ರಲ್ಲಿ ಉಪರಾಷ್ಟ್ರಪತಿಯಾಗಿ ಆಯ್ಕೆ. ಡಾ|| ಜಾಕೀರ್ ಹುಸೇನ್ ಅವರು ನಿಧನವಾದ ಮೇಲೆ ಹಂಗಾಮಿ ರಾಷ್ಟ್ರಪತಿ, ಮುಂದೆ ರಾಷ್ಟ್ರಪತಿ ಚುನಾವಣೆ ಕಣಕ್ಕೆ ಆಗಮನ, ಅಲ್ಲಿ ಕಟ್ಟಿಟ್ಟ ಬುತ್ತಿ ಜಯ.

ಧ್ವನಿ ೨ : ೧೯೬೯-೭೪ರವರೆಗೆ ವಾಣಿಜ್ಯ ಬ್ಯಾಂಕುಗಳು, ಇನ್ಷುರೆನ್ಸ್ ಕಂಪನಿಗಳನ್ನು ರಾಷ್ಟ್ರೀಕರಣಗೊಳಿಸಿದರು. ಸಂಪತ್ತು ವರಮಾನ ಕೆಲವೇ ಜನರಲ್ಲಿ ಕೇಂದ್ರೀಕೃತವಾಗುವುದರ ವಿರುದ್ಧ ಸಂವಿಧಾನದಲ್ಲಿ ಬದಲಾವಣೆ ಮಾಡಿದರು.

ಧ್ವನಿ ೧ : ಅನೇಕ ಜನರ ಉದ್ಯೋಗ ಯೋಜನೆಗಳ ಬಗ್ಗೆ ಲೇಖನಗಳನ್ನೂ ಬರೆದರು. ಸಣ್ಣ ಹಿಡಿವಳಿದಾರರು, ಗೃಹ ಕೈಗಾರಿಕೆಗಳು ಇವುಗಳ ಬಗ್ಗೆ ಆಸಕ್ತಿ ತಾಳಿದರು.

ಧ್ವನಿ ೧ : ಗಿರಿಯವರು ಉತ್ತಮ ವಾಗ್ಮಿಗಳು. ಅವರ ವಿಚಾರಧಾರೆ ಅನೇಕ ನಿಟ್ಟುಗಳಲ್ಲಿ ತಮ್ಮದೇ ಧ್ಯೇಯ ತತ್ವಗಳನ್ನೂ ಒಳಗೊಂಡವು. ರಾಷ್ಟ್ರಪತಿಗಳಾಗಿದ್ದಾಗ ಅನೇಕಾವರ್ತಿ ಕರ್ನಾಟಕಕ್ಕೆ ಭೇಟಿ ಇತ್ತು, ತಮ್ಮ ಅಭಿಪ್ರಾಯದ ಲಹರಿ ಹರಿಸಿದ್ದಾರೆ.

ಧ್ವನಿ ೨ : ಮಹಿಳೆಯರ ಬಗ್ಗೆ ಅಭಿಮಾನವನ್ನು ಸೂಚಿಸುತ್ತಾ, ಕೋಟ್ಯಂತರ ಪುರುಷರ ಉದ್ಧಾರಕ್ಕೆ ಮಹಿಳೆಯೇ ಸ್ಫೂರ್ತಿ ದೇವತೆ. ತಾಯಿಗೆ ಮಗುವಿನಿಂದಲೂ ಹತ್ತಿರ ಸಂಬಂಧವಿರುತ್ತದೆ. ೪ ವರ್ಷದ ಮಗುವಿನಿಂದ, ಯುವಕನಾಗುವವರೆಗೆ ಎಲ್ಲಾ ರೀತಿಯಲ್ಲೂ ತರಬೇತಿ ನೀಡಿ ಅವರನ್ನು ದೇಶದ ಭಾವೀ ಪ್ರಜೆಗಳನ್ನಾಗಿ ಮಾಡುವುದರಲ್ಲಿ ಜವಾಬ್ದಾರಿಯನ್ನು ಹೊಂದಿರುತ್ತಾಳೆ. ಮುಂದೆ ಉಪಾಧ್ಯಾಯರು, ನಾಳಿನ ನಿಜವಾದ ಪ್ರಜೆಗಳನ್ನು ಮಾಡಲು ಕಾರಣರಾಗುತ್ತಾರೆ. ಹೀಗಾಗದಿದ್ದಲ್ಲಿ ದೇಶಕ್ಕೆ ಭವಿಷ್ಯವೇ ಇಲ್ಲವಾಗುತ್ತದೆ ಎಂಬುದು ಅವರ ಹೃದ್ಗತ.

ಧ್ವನಿ ೧ : ಯುವಕರಿಗೊಂದು ಸಂದೇಶ ನೀಡುತ್ತಾ 'ಹಳ್ಳಿಯಲ್ಲೇ ಆಗಲೀ, ಪಟ್ಟಣದಲ್ಲೇ ಆಗಲೀ ನಾವು ಯುವಕರಿಗೆ ಪರಂಪರೆಯ ಬಗ್ಗೆ ಎಷ್ಟು ಸಾಧ್ಯವೋ ಅಷ್ಟು

ತಿಳುವಳಿಕೆಯನ್ನು ನೀಡಲು ಪ್ರಯತ್ನ ಪಡಬೇಕು. ಅವರು ಅದನ್ನು ಮುಂದುವರಿಸಿಕೊಂಡು ಹೋದರೆ ಭಾರತ ಅನೇಕ ದೇಶಗಳಲ್ಲಿ ಒಂದು ದೊಡ್ಡ ದೇಶವಾಗುತ್ತದೆ ಎಂದಿದ್ದಾರೆ.

ಧ್ವನಿ ೨ : ಭಾರತದ ಚರಿತ್ರೆಯಲ್ಲಿ ನಾವು ಕಲಿಯಬೇಕಾದುದು ಬಹಳಪಿದೆ, ಅದೇ ಭಾರತೀಯ ಸಂಸ್ಕೃತಿ. ಭಾರತೀಯ ಸಂಸ್ಕೃತಿಯ ಧಾರ್ಮಿಕ ತಾಳ್ಮೆ ಅನುಕಂಪ ಮತ್ತು ಉದಾರ ಮನಸ್ಸಿನ ವಾತಾವರಣದಲ್ಲಿದೆ." ಇದು ಭಾರತದ ಸಂಸ್ಕೃತಿಯ ಬಗ್ಗೆ ಗಿರಿಯವರಿಗಿದ್ದ ಅಭಿಪ್ರಾಯ.

ಧ್ವನಿ ೧ : ಆಯುರ್ವೇದ, ಹೋಮಿಯೋಪತಿ, ಅಲೋಪತಿ, ಸ್ವದೇಶಿ ಔಷಧಗಳನ್ನೂ ಎಲ್ಲಾ ಜನರಿಗೂ ಕೊಟ್ಟು, ಅವರ ಆರೋಗ್ಯವನ್ನೂ ಕಾಪಾಡಬೇಕು. ಪ್ರತಿಯೊಬ್ಬ ರೋಗಿಗೂ ತುರ್ತಾಗಿ ಔಷಧ ದೊರೆತು, ವೈದ್ಯಕೀಯ ಸಹಾಯ ದೊರೆಯುವಂತಾಗಬೇಕು ಎಂಬುದೇ ನಮ್ಮ ಗುರಿ.

ಧ್ವನಿ ೧ : ವೈದ್ಯ ವಿಜ್ಞಾನ ಮುಂದುವರಿಯುವಾಗ ನಾವು ಹಿಂದುಳಿಯಬಾರದು. ಈ ಎಲ್ಲಾ ವಿಧವಾದ ವೈದ್ಯ ಪದ್ಧತಿಗಳ ಔಷಧಗಳ ಉಪಯೋಗವನ್ನು ಪಡೆದುಕೊಳ್ಳಬೇಕು. ನಮ್ಮ ದೇಶದ ಜನರು ಹೆಚ್ಚು ಹಣ ತೆತ್ತು ಔಷಧ ತೆಗೆದುಕೊಳ್ಳಲಾರರು, ಆ ದೃಷ್ಟಿಯಿಂದ ನಮಗೆ ಕಡಿಮೆ ಬೆಲೆಗೆ ದೊರೆಯುವ ಔಷಧಗಳನ್ನೂ ತೆಗೆದುಕೊಂಡು ಖಾಯಿಲೆ ಬಂದ ನಂತರ ಚಿಕಿತ್ಸೆ ಪಡೆಯುವುದಕ್ಕಿಂತ ಖಾಯಿಲೆಯೇ ಬಾರದ ಹಾಗೆ ನೋಡಿಕೊಳ್ಳುವುದು ಉತ್ತಮ" ಎಂಬುದು ಆರೋಗ್ಯದ ಬಗ್ಗೆ ಗಿರಿಯವರು ಕೊಟ್ಟ ಎಚ್ಚರಿಕೆ.

ಧ್ವನಿ ೧ : ಕೈಗಾರಿಕೋದ್ಯಮದಲ್ಲಿ ಕಾರ್ಮಿಕರು ಹೆಚ್ಚಿನ ಪ್ರಾಮುಖ್ಯತೆ ಹೊಂದಿದ್ದಾರೆ. ಪ್ರತಿಯೊಬ್ಬ ಕಾರ್ಮಿಕನೂ ಹಣವನ್ನು ಹಾಕಿದ ಕೈಗಾರಿಕೋದ್ಯಮಿಯ ವಿಚಾರದ ಬಗ್ಗೆ ತಿಳಿದುಕೊಳ್ಳಬೇಕು, ಹಾಗಲ್ಲದಿದ್ದರೆ ಕೈಗಾರಿಕೆಯಲ್ಲಿ ಅಭಿವೃದ್ಧಿ ಸಾಧಿಸಲು ಸಾಧ್ಯವಿಲ್ಲ.

ಧ್ವನಿ ೨ : ನಮ್ಮಲ್ಲಿ ಕೈಗಾರಿಕೆ ಇದೆ. ನಮ್ಮ ಜನರಿಗೆ ಶಕ್ತಿ ಇದೆ, ಬುದ್ಧಿ ಇದೆ, ಅದನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು. ಯಂತ್ರಗಳು ಮತ್ತಿತರ ವಸ್ತುಗಳನ್ನು ತಯಾರುಮಾಡಲು ಮುಂದಾಗಬೇಕು. ಸಾರ್ವಜನಿಕ ಕೈಗಾರಿಕೋದ್ಯಮದಲ್ಲಾಗಲೀ ಖಾಸಗೀ ಕೈಗಾರಿಕೋದ್ಯಮದಲ್ಲಾಗಲೀ ಎಲ್ಲರೂ ಶ್ರಮವಹಿಸಿ ಕೆಲಸ ಮಾಡಬೇಕು. ಹೆಚ್ಚಿಗೆ ಉತ್ಪಾದನೆ ಪಡೆದಂತೆಲ್ಲಾ ಕಾರ್ಮಿಕರೂ ಸಹ ಇದರ ಲಾಭದ ಹಂಚಿಕೆಯಲ್ಲಿ ಭಾಗಿಗಳಾಗಬೇಕು. ಕಾರ್ಮಿಕರನ್ನೂ ಕೈಗಾರಿಕೋದ್ಯಮದಲ್ಲಿ ಸಹಭಾಗಿಗಳಂತೆ ಕಾಣಬೇಕು. ಯಾವುದೇ ಖಾಸಗಿ ಕೈಗಾರಿಕೋದ್ಯಮವೇ ಆಗಲೀ ಸಾರ್ವಜನಿಕ ಕೈಗಾರಿಕೋದ್ಯಮವೇ ಆಗಲೀ ಎಲ್ಲವೂ ದೇಶದ ಕೈಗಾರಿಕೆ ಎಂದು ತಿಳಿಯಬೇಕು" ಎನ್ನುತ್ತಿದ್ದರು.

ಧ್ವನಿ ೨ : ಗಿರಿಯವರು ಸಮಾಜ ಸೇವಕರು, ಕಾರ್ಮಿಕ ಕಲ್ಯಾಣಕ್ಕೆ, ದೀನ ದಲಿತರ, ಹರಿಜನ ಗಿರಿಜನರ ಏಳ್ಗೆಗಾಗಿ ದುಡಿದವರು, ಸ್ವಾತಂತ್ರ್ಯಕ್ಕೆ ಹೋರಾಡಿದವರು ರಾಷ್ಟ್ರಪ್ರೇಮಿಗಳು, ಹಿರಿಯ ರಾಜಕಾರಿಣಿಗಳು. ಅರ್ಧ ಶತಮಾನಕ್ಕೂ ಹೆಚ್ಚು ದೇಶ ಸೇವೆ ಮಾಡಿ 'ಭಾರತ ರತ್ನ'ವಾಗಿ ಮೆರೆದವರು.

ಧ್ವನಿ ೧ : ಗಿರಿಯವರನ್ನು ಎಲ್ಲರೂ ಗುರುತಿಸುವುದು ಅವರು ದುಡಿದ ಕಾರ್ಮಿಕ ರಂಗದಲ್ಲಿ. ಕಾರ್ಮಿಕರು ತಾವಾಗಿ ಗಿರಿಯವರನ್ನೂ ತಮ್ಮ ನಾಯಕರನ್ನಾಗಿ ಆರಿಸಿದರು. ಗಿರಿಯವರು ಕಾರ್ಮಿಕರ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಿದರು, ನ್ಯಾಯ ಒದಗಿಸಿಕೊಟ್ಟರು. ಗಿರಿ 'ಕಾರ್ಮಿಕ ಬಂಧು'ವಾದರು. ಕಾರ್ಮಿಕ ಬಂಧುಗಳ ನಾಯಕ ಗಿರಿ ಇನ್ನಿಲ್ಲ. ಆದರೆ ಅವರ ತತ್ತ್ವ, ಮಾರ್ಗದರ್ಶನಗಳು ಸದಾ ಅಮರವಾಗಿವೆ. ಅವರ ಮಾರ್ಗದರ್ಶನದಂತೆ ನಾವೆಲ್ಲಾ ನಡೆದುಕೊಳ್ಳುವುದು ಒಳಿತಲ್ಲವೇ?

*

# ಪಂಡಿತ ತಾರಾನಾಥ್

ಧ್ವನಿ : ಪಂಡಿತ ತಾರಾನಾಥರು ಬಹುಮುಖ ಪ್ರತಿಭೆಯ ವ್ಯಕ್ತಿ. ಮಹಾಮುತ್ಸದ್ದಿ, ಉತ್ಸಾಹಿ ಸ್ವಾತಂತ್ರ್ಯ ಹೋರಾಟಗಾರ, ಸಮಾಜ ಸುಧಾರಕ, ಕವಿ, ನಾಟಕಕಾರ, ವೈದ್ಯ, ಪತ್ರಕರ್ತ, ದಾರ್ಶನಿಕ ಯೋಗಿ, ಶಿಕ್ಷಣ ತಜ್ಞ, ಹಿಂದುಳಿದ ಜನಾಂಗದವರ ಸುಧಾರಕ, ಸಂಗೀತಜ್ಞ, ರಾಜಕೀಯ ಪಟು, ನಟ, ಹದಿನಾಲ್ಕು ಭಾಷೆಗಳನ್ನು ಬಲ್ಲ ಚತುರ, ಹಿಂದಿ ಹಾಗೂ ಖಾದಿ ಪ್ರಚಾರಕ, ವೈಚಾರಿಕ ಕ್ರಾಂತಿಯ ಹರಿಕಾರ. ಪವಾಡ ಪುರುಷನೆಂಬುದೇ ಹಲವರ ಮತ! ಇಷ್ಟೆಲ್ಲಾ ಪ್ರತಿಭೆಯ ತಾರಾನಾಥರು ನಮ್ಮೊಡನೆ ಇದ್ದಿದ್ದರೆ ಅವರಿಗೆ ನೂರು ವರ್ಷಗಳು ತುಂಬಿರುತ್ತಿದ್ದವು. ಆದರೆ ಈಗ ನಮಗಿರುವುದು ಅವರ ನೆನಪುಗಳು. ಎಂದೆಂದಿಗೂ ಅಚ್ಚಳಿಯದೇ ಉಳಿದಿರುವ ನೆನಪುಗಳು. ಅನೇಕರ ನೆನಪಿನಂಗಳದಲ್ಲಿ ಪಂಡಿತ ತಾರಾನಾಥರು ಅಚ್ಚೊತ್ತಿದ್ದಾರೆ. ಅವರನ್ನು ಹತ್ತಿರ ಕಂಡವರು, ಅವರ ಶಿಷ್ಯತ್ವ ವಹಿಸಿದವರು, ಅವರ ವ್ಯಕ್ತಿತ್ವವನ್ನು ಗುರುತಿಸಿದವರು ಹಲವಾರು ಮಂದಿ.

ಈ ರೂಪಕದಲ್ಲಿ ಕೆಲವರ ನೆನಪನ್ನು ನಿಮಗುಣಬಡಿಸುವೆವು-

ರೂಪಕ: ಪಂಡಿತ ತಾರಾನಾಥ

ನಿಯೋಜಿಸಿ ಪ್ರಸ್ತುತ ಪಡಿಸುವವರು: ಡಾ.ಬಿ.ಎಸ್.ಸ್ವಾಮಿ

* * *

ಧ್ವನಿ : ಇದು ಪಂಡಿತ ತಾರಾನಾಥರು ಬರೆದ ಗೀತೆ-

ಧ್ವನಿ : ಪಂಡಿತ ತಾರಾನಾಥರ ನೆನಪು ಮಾಡಿಕೊಳ್ಳುವ ಮೊದಲು ಅವರ ಸಾಹಿತ್ಯದ ನೆನಪು ಆಗದಿರದು.

'ಧರ್ಮ ಸಂಭವ'ದಲ್ಲಿನ ವೈಚಾರಿಕತೆ-

ಧ್ವನಿ : "ಮತ ಧರ್ಮಗಳು ಜೀವಿಯ ಪ್ರಕೃತಿ ಪರಿಸ್ಥಿತಿಗಳಲ್ಲಿವೆ. ಧರ್ಮದ ಪ್ರೇರಣೆಯೂ ಇವುಗಳಲ್ಲಿಯೇ ಇದೆ. ಅವನ್ನರಿಯದಿದ್ದರೆ ಸಂಸ್ಕರಣ ಸುಧಾರಣೆಗಳಿಗಾಗಿ ಅವಕಾಶವು ದೊರಕದು. ಪ್ರಕೃತಿ ಪರಿಸ್ಥಿತಿಗಳೇ ಮಾನವನನ್ನು ಒಂದು ಯಂತ್ರದಂತೆ ತಿರುಗಿಸುತ್ತವೆ. ಅವನು ಇದಕ್ಕೆ ಅಧೀನನಾಗಿರುವನಾದರೂ

ಅವುಗಳನ್ನು ತಿಳಿದುಕೊಳ್ಳಬಲ್ಲನು ಮತ್ತು ಹಾಗೆ ತಿಳಿದುಕೊಳ್ಳುವುದರಲ್ಲಿಯೇ ಅವನ ಪ್ರಗತಿಯೂ ಇದೆ."

ಧ್ವನಿ : 'ಜಗಳ' ಪುಸ್ತಕದಲ್ಲಿನ ವಿಚಾರಧಾರೆ-

"ಈ ವಿಶಾಲ ಪ್ರಪಂಚದಿಂದ ತನ್ನ ಸುಖಕ್ಕಾಗಿ ಬೇಕಾದ ಗುಣ ವಸ್ತುಗಳನ್ನು ಆ ಹುಟ್ಟುಗುಣವನ್ನು ಅವನು ಸಾಧಿಸದೇ ಹೋದರೆ ಅವನು ತನ್ನ ಮನುಷ್ಯತ್ವವನ್ನೇ ಕಳೆದುಕೊಂಡಂತಾಗುವುದಿಲ್ಲವೇ? ಮನುಷ್ಯತ್ವವನ್ನೇ ಕಳೆದುಕೊಂಡ ಮೇಲೆ ಜೀವಿತದಲ್ಲಿ ಉಳಿಯಿತೇನದು? ಮೊಬ್ಬು, ಮುಸುಕು ಅಲ್ಲದೆ ಇನ್ನೇನು?"

ಧ್ವನಿ : ೧೯೧೨ರಲ್ಲಿ ಬೀದರ್ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ, ಅಲ್ಲಿನ ಮುಖ್ಯೋಪಾಧ್ಯಾಯರಾದ ಜೆ. ಮಂಗಯ್ಯನವರಿಂದ ಯೋಗ ಅಭ್ಯಾಸ ಮಾಡಿದರು. ಆಮೇಲೆ ನೇಪಾಳದ ಯೋಗಿ ಉತ್ತಮದಾಸ ಪರಮಹಂಸ, ರಾಮಕೃಷ್ಣಾಶ್ರಮದ ಯೋಗೀಶ್ವರಾನಂದ ಇವರ ಜೊತೆ ಸಂಗೀತವನ್ನು ಜಿ. ವಾಮನ್‌ರಾವ್ ಅವರಿಂದ ಕಲಿತರು. ಬೀದರ್‌ನಲ್ಲಿ ಜನರು ಪ್ಲೇಗ್‌ನಿಂದ ನರಳುತ್ತಿರುವಾಗ ಅವರ ಶುಶ್ರೂಷೆ ಮಾಡಿ ಜನರ ವಿಶ್ವಾಸ ಪಡೆದರು. ವಿದ್ಯಾ ಇಲಾಖೆಯ ನಿರ್ದೇಶಕರಿಗೆ ಕೊಟ್ಟ ದಿಟ್ಟ ಉತ್ತರದಿಂದ ರಾಯಚೂರು ಪ್ರೌಢಶಾಲೆಗೆ ಅವರಿಗೆ ವರ್ಗಾವಣೆಯಾಯಿತು.

ಧ್ವನಿ : ಅಲ್ಲಿ ಬಿಡುವಿನ ವೇಳೆಯಲ್ಲಿ ಚಿಕಿತ್ಸಾಲಯ ತೆರೆದು ರೋಗಿಗಳ ಸೇವೆ ಮಾಡಿದರು. ನಿಜಾಂ ಹುಟ್ಟು ಹಬ್ಬಕ್ಕೆ ಪ್ರತಿ ವರ್ಷ ಒಂದು ದಿನದ ಸಂಬಳ ಕಾಣಿಕೆ ಕೊಡುವುದರ ಬಗ್ಗೆ ಪ್ರತಿಭಟಿಸಿ ತಮ್ಮ ಕೆಲಸಕ್ಕೆ ರಾಜನಾಮೆ ನೀಡಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮಿಕಿದರು. ಸ್ತ್ರೀ ಸ್ವಾತಂತ್ರ್ಯ, ಹಿಂದುಳಿದ ಜನಾಂಗದವರ ಉದ್ಧಾರ, ಹಾಗೂ ಹಿಂದೂ ಮುಸ್ಲಿಮರ ಭಾವೈಕ್ಯ ಅವರ ಮುಖ್ಯ ಗುರಿಯಾಯಿತು.

ಧ್ವನಿ : ೧೯೨೦ರಲ್ಲಿ 'ಹಮ್‌ದರ್ದ್ ಮದರ್‌ಸಾ' ಶಾಲೆಯನ್ನು ಸ್ಥಾಪಿಸಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದರು. ಹಿಂದುಳಿದ ವರ್ಗದ ಜನರಿಗೆ ಭಜನೆಯಲ್ಲಿ ಭಾಗವಹಿಸಲು ಅವಕಾಶ ಮಾಡಿದರು. ಅವರಿಗೆ ಭಗವದ್ಗೀತೆ ಉಪದೇಶ ಮಾಡಿದಾಗ ಬ್ರಾಹ್ಮಣರು ಪ್ರತಿಭಟಿಸಿದರು. "ಕ್ಷತ್ರಿಯ ಕೃಷ್ಣ, ಕ್ಷತ್ರಿಯ ಅರ್ಜುನನಿಗೆ ಹೇಳಿದುದನ್ನು ಬ್ರಾಹ್ಮಣರು ಓದುವ ಅಧಿಕಾರ ಎಲ್ಲಿ ಬಂತು?" ಎಂದು ಪಂಡಿತ ತಾರಾನಾಥರು ಅವರ ಬಾಯಿ ಮುಚ್ಚಿಸಿದರು. ಮತ ಮಠಗಳ ವಿರುದ್ಧ ಬಂಡಾಯವೆದ್ದರು. ಇವರಿಗೆ ಬೈಬಲ್, ಕುರಾನ್ ಬಗ್ಗೆ ಪಾಂಡಿತ್ಯವಿತ್ತು. ಇದರಿಂದ ಎಲ್ಲಾ ಜನರೂ ಇವರನ್ನು ಆತ್ಮೀಯತೆಯಿಂದ ಕಾಣುತ್ತಿದ್ದರು.

ಧ್ವನಿ : ಇದು ದೀನಬಂಧು ಕಬೀರ್‌ನಲ್ಲಿ ಬರುವ ಒಂದು ತುಣುಕು-

ಧ್ವನಿ : 'ದೀನ ಬಂಧು ಕಬೀರ್' ದಕ್ಷಿಣ ಭಾರತದವರೊಬ್ಬ ಮೊತ್ತ ಮೊದಲಿಗೆ ಬರೆದ ಹಿಂದಿ ನಾಟಕ. ಗಾಂಧೀಜಿಯವರ ಸಮ್ಮುಖದಲ್ಲಿ ಕಬೀರ್ ಪಾತ್ರವನ್ನು ತಾರಾನಾಥರೇ ನಟಿಸಿ ಅವರಿಂದ ಮೆಚ್ಚುಗೆ ಗಳಿಸಿ ಆ ಪುಸ್ತಕಕ್ಕೆ ಮುನ್ನುಡಿಯನ್ನು ಅವರಿಂದಲೇ ಪಡೆದರು. ಇನ್ಸಾಫ್, ಮೋಹನಾಸ್ತ್ರ ಅವರ ಮತ್ತೆರಡು ನಾಟಕಗಳು. 'ಪ್ರಸಿದ್ಧ ರಸೌಷಧಿಗಳು' ವೈದ್ಯಕೀಯಕ್ಕೆ ಸಂಬಂಧಿಸಿದುದು.

ಧ್ವನಿ : ನಿಜಾಮರ ಅಧಿಕಾರಿಷಾಹಿ ಆಡಳಿತವನ್ನು ಉಗ್ರವಾಗಿ ಖಂಡಿಸಿ ಪತ್ರಿಕೆಯಲ್ಲಿ ಬರೆದ ಲೇಖನದಿಂದ ೧೯೨೧ರಲ್ಲಿ ತಾರಾನಾಥರನ್ನು ತುಂಗಭದ್ರೆ ಸಮೀಪದ ಹಳ್ಳಿರಾಂಪುರಕ್ಕೆ ಗಡಿಪಾರು ಮಾಡಲಾಯಿತು. ಆ ಊರಿನ ಕುಲಕರಣಿ ಭೀಮರಾಯರು ಕೊಟ್ಟ ಹೊಲದಲ್ಲಿ "ಪ್ರೇಮಾಯತನ" ಎಂಬ ಆಶ್ರಮವನ್ನು ಕಟ್ಟಿ ಪ್ರೇಮಾ ವಿದ್ಯಾಪೀಠ ಆರಂಭಿಸಿ ಆಯುರ್ವೇದ, ಯೋಗ, ಸಮಾಜ ಶಾಸ್ತ್ರ, ಪತ್ರಿಕೋದ್ಯಮ ಶಿಕ್ಷಣ ನೀಡಿದರು. 'ಪ್ರೇಮಾ ಮೆಡಿಕಲ್ ಸ್ಕೂಲ್' ಎಂಬ ಆಯುರ್ವೇದ ವಿಭಾಗದಿಂದ ಪದವಿ ತರಗತಿಗಳು ಆರಂಭವಾದುವು. ಇವರ ಶಿಷ್ಯರು ತಾರಾನಾಥ ವಿದ್ಯಾಪೀಠವೆಂದು ಬಳ್ಳಾರಿಯಲ್ಲಿ ಆರಂಭಿಸಿದರು. ಆಧ್ಯಾತ್ಮ ವಿಜ್ಞಾನ, ಯೋಗ, ತಂತ್ರ ವಿದ್ಯೆ, ರಸ ಶಾಸ್ತ್ರ, ಮುಂತಾದುವುಗಳಲ್ಲಿ ಪ್ರಕಾಂಡ ಪಂಡಿತರಾಗಿದ್ದ ಇವರ ಬಳಿಗೆ ದೇಶ ವಿದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಬಳ್ಳಾರಿಯಲ್ಲಿ ಕಾಲರಾ ರೋಗಿಗಳ ಆರೈಕೆ ಮಾಡುವ ದೃಷ್ಟಿಯಿಂದ ಅಮೇರಿಕಾದಲ್ಲಿ ನಡೆಯಬೇಕಿದ್ದ ವಿಶ್ವಸಮ್ಮೇಳನದಲ್ಲಿ ಭಾರತದ ಪರವಾಗಿ ಭಾಷಣ ಮಾಡಲು ಬಂದಿದ್ದ ಆಹ್ವಾನವನ್ನು ತಿರಸ್ಕರಿಸಿದರು.

ಧ್ವನಿ : ೧೯೨೪ರಲ್ಲಿ "ಪ್ರೇಮ" ಎಂಬ ಮೊದಲ ಕಾಮಶಾಸ್ತ್ರದ ಪತ್ರಿಕೆಯನ್ನು ಆರಂಭಿಸಿ ೯ ವರ್ಷ ನಡೆಸಿದರು.

ಧ್ವನಿ೨: 'ಮಂಗಳೂರಿನ ರಂಗರಾಯರು- ರಾಜೀವಿಬಾಯಿಯವರ ಮಗನಾಗಿ ೧೮೯೧ರಲ್ಲಿ ಜನಿಸಿದಾತನೇ ತಾರಾನಾಥ. ತಂದೆಯಿಂದ ಸಂಸ್ಕೃತ - ಸಂಗೀತ ಕಲಿತರೆ, ತಾಯಿಯಿಂದ ಧಾರ್ಮಿಕ ಶಿಕ್ಷಣ ಪಡೆದ. ಭಾವ ಎಂ.ಬಿ. ಸುಬ್ಬರಾವ್ ಅವರ ನೆರವಿನಿಂದ ವೈದ್ಯಕೀಯ ಕಾಲೇಜು ವಿದ್ಯಾಭ್ಯಾಸ ಮುಂದುವರಿಸಿದರು. ಕೊನೆಯ ವರ್ಷದ ಪರೀಕ್ಷೆಗೆ ಕೂರದೆ ಅದೇ ಕಾಲೇಜಿನ ಡೊಮಾನ್ಸ್ಟ್ರೇಟರ್ ಆಗಿ ಕೆಲಸಮಾಡಿ ನಿಜಾಂ ಆಸ್ಥಾನದ ಪಂಡಿತ ಹಕೀಮ್ ಹರಿಗೋವಿಂದಜೀ ಅವರಿಂದ ಆಯುರ್ವೇದ, ಯುನಾನಿ ಕಲಿಯಲು ಬಂದು ಕೇಳಿದಾಗ ಅವರು "ಅಲೋಪತಿಯವರಿಗೇಕೆ?" ಎಂದು ಕೇಳಿದರು. ಆದರೂ ಬಿಡದೆ ಪಟ್ಟು ಹಿಡಿಯಲು "ತಬಲಾ ಕಲಿ, ತಬಲಾ ಬಾರಿಸುವ ಬೆರಳು ನಾಡಿ ಮಿಡಿತ ಅರಿಯಬಲ್ಲದು" ಎಂದರು. ಹೈದ್ರಾಬಾದ್ ನಿಜಾಮ್ ಉಸ್ಮಾನ್ ಆಲೀಖಾನರ

ಜೊತೆ ತಬಲ ಕಲಿತ. ಕ್ರಿಕೆಟ್‌ನಲ್ಲೂ ಜೊತೆಯಾದ! ಮೂರು ವೈದ್ಯ ಪದ್ಧತಿಗಳಲ್ಲಿ ಸಿದ್ಧಹಸ್ತನಾದ.

ಧ್ವನಿ : ಅನಾರೋಗ್ಯದ ಕಾರಣ ಬೆಂಗಳೂರಿಗೆ ಬಂದ ತಾರಾನಾಥರು ೧೯೪೨ರ ಅಕ್ಟೋಬರ್ ೩೧ರಂದು ನಿಧನರಾದರು. ೧೯೯೧ ಪಂಡಿತ ತಾರಾನಾಥರ ಜನ್ಮಶತಾಬ್ದಿಯ ವರ್ಷ. ಈ ಸಂದರ್ಭದಲ್ಲಿ ಅವರನ್ನು ನೆನಪಿಸಿಕೊಂಡವರು ಹಲವಾರು ಜನ, ಅವರನ್ನು ತೀರ ಹತ್ತಿರದಲ್ಲಿ ನೋಡಿ ಅವರ ವ್ಯಕ್ತಿತ್ವವನ್ನು ಕಣ್ಣಾರೆ ಕಂಡವರು ಕೆಲವಾರು ಜನ.

ಧ್ವನಿ : ಪಂಡಿತ ತಾರಾನಾಥರಿಗೆ ರಾಜೀವ್ ತಾರಾನಾಥ್, ರಣಬೀರ್ ಇಬ್ಬರು ಗಂಡು ಮಕ್ಕಳು. ರಣಬೀರ್ ೧೯೮೦ರಲ್ಲಿ ನಿಧನರಾದರು. ರಾಜೀವ್ ತಾರಾನಾಥ್ ಪ್ರಸಿದ್ಧ ಸರೋದ್ ವಾದಕ.

ಧ್ವನಿ : ತಂದೆಯನ್ನು ನೆನಪಿಗೆ ತಂದುಕೊಂಡು ರಾಜೀವ್ ತಾರಾನಾಥರು ಹೀಗೆ ಹೇಳುತ್ತಾರೆ-

"ನಮ್ಮ ತಂದೆ ಬದುಕಿನಲ್ಲಿ ಸದಾ ಏನಾದರೂ ಹೊಸ ಅನ್ವೇಷಣೆ ಮಾಡುವವರು. ಈ ಪ್ರಪಂಚದಲ್ಲಿ ಹುಟ್ಟಿದ ಮೇಲೆ ಎಲ್ಲಾ ಸಾಧ್ಯತೆಗಳನ್ನು ಬಳಸಿಕೊಂಡು ಜಗತ್ತಿನ ಉನ್ನತಿಯ ಮೇಲೆ ಪ್ರಭುತ್ವ ಸಾಧಿಸಬೇಕೆಂಬುದು ಅವರ ಛಲ. ಜಗತ್ತೇ ಪ್ರೇಮಮಯವಾಗಬೇಕೆಂಬುದು ಅವರ ಬಯಕೆ. ಲಾಲ್‌ಬಾಗಿಗೆ ಹೋದಾಗ ಪ್ರತಿ ಹೂಗಳ ಬಗ್ಗೆ ಹೇಳುತ್ತಿದ್ದುದನ್ನು ನೋಡಿದರೆ ಸಸ್ಯ ಶಾಸ್ತ್ರದಲ್ಲಿ ಎಷ್ಟೊಂದು ಪಂಡಿತರೆಂಬುದು ವ್ಯಕ್ತವಾಗುತ್ತದೆ. ಅವರು ಸಾಯುವ ಮೊದಲು ಎಲ್ಲಾ ವಿದ್ಯೆಗಳನ್ನು ನನಗೆ ಕಲಿಸಬೇಕೆಂಬ ಆಸೆ ಹೊತ್ತಿದ್ದವರು. ಕ್ರಾಂತಿಕಾರಿ ವ್ಯಕ್ತಿ. ಅಸ್ಪೃಶ್ಯತೆ, ವಿವಾಹ, ಸಂಪ್ರದಾಯ, ವಿಧವಾ ವಿವಾಹಗಳ ಬಗೆಗೆ ಸುಧಾರಕ ದೃಷ್ಟಿ. ಒಮ್ಮೆ ತಂಬೂರ ಶೃತಿ ಮಾಡುವಾಗ ತಾರಾನಾಥರು ಸಪ್ತಸ್ವರಕ್ಕೆ ಏರಿಸಿರುವುದು ಜೀವಮಾನದಲ್ಲೇ ಮರೆಯಲಾಗದ ಅಪೂರ್ವ ಅನುಭವ ಎನ್ನುತ್ತಾರೆ. ಹೋಲಿಸುವುದಾದಲ್ಲಿ ಅವರನ್ನು ಲಿಯೋನಾರ್ಡೋ ಡಾವಿಂಚಿಗೆ ಮಾತ್ರ ಹೋಲಿಸಬಹುದು.

*

# ಅಲ್ಲ - ಅಲ್ಲಮ

ಧ್ವನಿ ೧ : ಮಂಟೇಸ್ವಾಮಿ ಧರೆಗೆ ಇಳಿದು ಬಂದ ದೊಡ್ಡವರು. ಪರಂಜ್ಯೋತಿ ಸ್ವರೂಪದವರು ಎಂಬುದು ಜನಪದರ ಮತ. ಆದುದರಿಂದಲೇ ಆತನ ದರುಶನಕ್ಕೆ ಜಾತಿ-ಮತ ಭೇದವಿಲ್ಲದೆ ಎಲ್ಲಾ ಕೋಮಿನವರೂ ಬಂದು ತಮ್ಮ ಅನನ್ಯ ಭಕ್ತಿಯನ್ನು ತೋರುತ್ತಾರೆ.

ಧ್ವನಿ ೨ : ಹಿಂದೂ ಮುಸ್ಲಿಮರ ಬಾಂಧವ್ಯವನ್ನು ಬೆಸೆಯುವಲ್ಲಿ ಮಂಟೇಸ್ವಾಮಿ ಕಾರಣ ಕರ್ತನಾಗಿದ್ದಾನೆ. ಎಲ್ಲಾ ಕೋಮಿನವರಿಗೂ ಮಾನವ ಧರ್ಮ ಉಪದೇಶಿಸಿ ದೇವ ಮಾನವನೆನಿಸಿದ್ದಾನೆ. ಆದುದರಿಂದಲೇ ಎಲ್ಲರೂ ಆತನನ್ನು ಮರೆಹೋಗುವುದು. ಭಕ್ತರ, ದೀನ ದಲಿತರ ಕಷ್ಟಗಳನ್ನು ನೀಗಿ ಸುಖ ನೀಡುವಲ್ಲಿ ನೆರವಾಗಿದ್ದಾನೆ. ಈತ ಹಿಂದೂಗಳಿಗೆ ಅಲ್ಲಮನಾಗಿ ಕಂಡರೆ ಮುಸ್ಲಿಮರಿಗೆ ಅಲ್ಲನಾಗಿ ಮೆರೆದಿದ್ದಾನೆ.

ಧ್ವನಿ : ಮುಪ್ಪಿನ ಷಡಕ್ಷರಿಗಳು ಹೇಳುವಂತೆ ಅವರವರ ಭಾವಕ್ಕೆ ಅವರವರ ಬಕುತಿಗೆ ಆಯಾ ರೂಪಿನಲ್ಲಿ ಕಾಣುತ್ತಾನೆ ದೇವ. ಹಾಗೆಯೇ ಮಂಟೇಸ್ವಾಮಿಗಳೂ ಸಹ. ಮಹಾಶರಣರಿಗೆ ಎಲ್ಲರೂ ಒಂದೇ ಅಲ್ಲವೇ? ಭೇದ ಎಣಿಸುವವರು ಮನುಷ್ಯರು ಮಾತ್ರ. ದೇವಮಾನವರು ಎಂದಿಗೂ ಹಾಗೆ ಭಾವಿಸುವುದಿಲ್ಲ.

ಧ್ವನಿ : ಅವರ ಶಿಷ್ಯರಾಜ ರಾಚಪ್ಪಾಜಿ, ಸಿದ್ದಪ್ಪಾಜಿಯವರೂ ಅಷ್ಟೇ. ಈ ಮೂವರು ಶರಣರ ಜಾತ್ರೆಗೆ ಯಥೇಚ್ಛ ಸಂಖ್ಯೆಯಲ್ಲಿ ಹಿಂದೂ ಮುಸ್ಲಿಮರು ಮೈತ್ರಿಯಿಂದ ದರುಶನ ಪಡೆದು ಸಂತೋಷವನ್ನು ಹಂಚಿಕೊಳ್ಳುತ್ತಾರೆ.

ಧ್ವನಿ : ಇದು ಬೊಪ್ಪೇಗೌಡನಪುರದಲ್ಲಿರುವ ಮಂಟೇಸ್ವಾಮಿ ಗದ್ದುಗೆ. ಇಲ್ಲಿಗ ನಡೆದುಕೊಳ್ಳುವ ಹಲವಾರು ಮಂದಿ, ಜಾತಿ ಮತ ಭೇದವಿಲ್ಲದೆ ಜ಼ಮು ನೆರೆದಿದ್ದಾರೆ.

(ದೇವಾಲಯದ ಘಂಟೆ)

ಧ್ವನಿ : ಮಂಟೇಸ್ವಾಮಿ ದರುಶನಕ್ಕೆ ಬಂದಿದ್ದ ಮಕ್ಬುಲ್.

ಧ್ವನಿ : ಟಿ. ನರಸೀಪುರ ತಾಲ್ಲೂಕಿನ ನಾಗರಾಜ್ ಎಂಬ ನೀಲಗಾರ ಬಂದ ಉದ್ದೇಶ-

ಧ್ವನಿ : ಮಳವಳ್ಳಿ ತಾಲ್ಲೂಕು ಬೊಪ್ಪೇಗೌಡನಪುರದ ಪುಟ್ಟವೀರಪ್ಪ ತಮ್ಮ ಹಿಂದಿನವರು ಹೇಳಿದುದನ್ನು ಮೆಲುಕು ಹಾಕಿದರು-

ಧ್ವನಿ : ಪಾಳ್ಯದಿಂದ ಬಂದಿದ್ದ ಮತ್ತೊಬ್ಬ ಭಕ್ತೆ ಈತನನ್ನೇ ನಂಬಿದಾಕೆ. ಪುಟ್ಟೀರಮ್ಮನ ದೀನ ದನಿ-

ಧ್ವನಿ : ಮಂಟೇಸ್ವಾಮಿ ಮಠದ ಸ್ವಾಮಿಗಳಾದ ಜ್ಞಾನಾನಂದ ಚನ್ನರಾಜೇ ಅರಸ್ ಅವರು-

ಧ್ವನಿ : ಜನಪದ ಕಲಾವಿದರೊಬ್ಬರ ಅನಿಸಿಕೆ, ಕುಳ್ಳಸಿದ್ದಯ್ಯ-

ಧ್ವನಿ : ಮಂಟೇಸ್ವಾಮಿ ಸಂಪ್ರದಾಯವು ಶೈವ ವೈಷ್ಣವ ಮಹಮದೀಯರ ತ್ರಿವೇಣಿ ಸಂಗಮ. ಇಲ್ಲಿ ಹಿಂದೂ ಮುಸ್ಲಿಮರ ಭಾವೈಕ್ಯ ತುಂಬಿ ತುಳುಕಾಡುವುದು. ಹಬ್ಬ ಹರಿದಿನ ಜಾತ್ರೆ ಉತ್ಸವಗಳಲ್ಲಿ ಹಿಂದೂ-ಮುಸ್ಲಿಮರು ಸ್ನೇಹಿತರಂತೆ ವರ್ತಿಸಿ, ಸಂತೋಷದಿಂದ ಹಾಡಿ ನರ್ತಿಸಿ ತಮ್ಮ ಅನನ್ಯ ಭಕ್ತಿಯನ್ನು ಸೂಚಿಸುತ್ತಾರೆ.

(ತಂಬೂರಿನಾದ)

ಧ್ವನಿ : ಈ ತಂಬೂರಿ ನುಡಿದರೆ ಎಷ್ಟೊಂದು ಹಾಡುಗಳು? ಎಷ್ಟೊಂದು ಕಥೆಗಳು. ಈ ತಂಬೂರಿಯದೇ ಒಂದು ವೈಶಿಷ್ಟ್ಯ. ಇದು ನೀಲಗಾರರು ಉಪಯೋಗಿಸುವ ತಂಬೂರಿ. ನಾಗರ ಹೆಡೆ ಅಥವಾ ಸಿಂಹದ ಹೆಡೆ ಇರುವ ಸುಮಾರು ಎರಡೂವರೆ ಅಡಿ ಉದ್ದದ ಸೊಗಸಾದ ಕೆತ್ತನೆಯ ಕೆಲಸದಿಂದ ಮಾಡಿದೆ.

ಧ್ವನಿ : ತಂಬೂರಿ, ದಾಸ ಪರಂಪರೆಯ ಸಂಕೇತ. ಈ ತಂಬೂರಿ ಮುತ್ತತ್ತಿರಾಯನಿಂದ ಸಿದ್ದಪ್ಪಾಜಿಯವರಿಗೆ ಬಂದಿತೆಂಬ ನಂಬಿಕೆ. ಮುತ್ತತ್ತಿರಾಯ ಆಂಜನೇಯ, ಈತ ಪರಮ ವೈಷ್ಣವ, ಮಂಟೇಸ್ವಾಮಿ ಕಲ್ಯಾಣದ ಕಡೆಯಿಂದ ಬಂದ ಪರಮ ಶೈವ!

(ದೇವಾಲಯದ ಘಂಟಾನಾದ)

ಧ್ವನಿ : ಚಿಟಿಕೆ ಹಿಡಿದು ಇಡೀ ರಾತ್ರಿ ಮಹಾಕಾವ್ಯವನ್ನೇ ಹಾಡುತ್ತಾರೆ ನೀಲಗಾರರು. ಪ್ರಮುಖ ಕಲಾವಿದನ ಎಡ ಕೈಲಿ ತಂಬೂರಿ, ಬಲಕೈಲಿ ಚಿಟಿಕೆ ಮತ್ತಿಬ್ಬರು ದಮ್ಮಡಿ ಹಿಡಿದು, ಹಿಮ್ಮೇಳ ಹಾಡುಗಾರರೂ ಆಗಿರುತ್ತಾರೆ.

ಧ್ವನಿ : ತಲೆಗೆ ಕೆಂಪು ಪೇಟ, ಕಚ್ಚೆ, ನಿಲುವಂಗಿ, ಹೆಗಲ ಮೇಲೆ ಕಾವಿಶಾಲು, ಕೊರಳಲ್ಲಿ ರುದ್ರಾಕ್ಷಿ, ಹಣೆಯಲ್ಲಿ ವಿಭೂತಿ, ಕುಂಕುಮ, ಕಾಲಿಗೆ ತೋಡ, ಬಾರಿಯ, ಕಿವಿಗೆ ಕರ್ಣ ಕುಂಡಲ!

ಧ್ವನಿ : ಮಂಟೇಸ್ವಾಮಿ ಭಕ್ತರು ನೀಲಗಾರರು. ನೀಲಗಾರರೆಲ್ಲಾ ಹಾಡುವುದಿಲ್ಲ. ಹಾಡುವವರು ಮೂರು ಮಣಿಯನ್ನು ಕೊರಳಿಗೆ ಕಟ್ಟಿಕೊಂಡರೆ, ಹಾಡದವರು

ಒಂದೇ ಮಣಿಯನ್ನು ಕಟ್ಟಿಕೊಳ್ಳುತ್ತಾರೆ. ಸೋಮವಾರ ಶುಕ್ರವಾರ ಕ್ಷಾರಣ್ಯ ಮಾಡುತ್ತಾ ಮಂಟೇಸ್ವಾಮಿ ಹಾಡುಗಳನ್ನು ಹಾಡುತ್ತಾರೆ. ಜಾತ್ರೆ ಪಬ್ಬಗಳಲ್ಲಿ ಇಡೀ ರಾತ್ರಿ ಮಂಟೇಸ್ವಾಮಿಯ ಬಗ್ಗೆ ಜಾನಪದ ಮಹಾಕಾವ್ಯವನ್ನೇ ಹಾಡುತ್ತಾರೆ.

ಧ್ವನಿ : ಈ ನೀಲಗಾರರೆಲ್ಲಾ ಗುರುವಿನಿಂದ ದೀಕ್ಷೆ ಪಡೆದು ಕಾವ್ಯ ಕಲಿಯುವರು ದೀಕ್ಷೆಯ ಬಗೆ-

(Interview)

ಧ್ವನಿ : ಮಂಟೇಸ್ವಾಮಿ ಕಥಾ ಸೂತ್ರ ವಿಜಯನಗರ, ಕಾಗಿನೆಲೆ ಸಪಿರಾಯ ಪಟ್ಟಣಗಳ ಮೂಲಕ ಸಾಗಿ ಚನ್ನಪಟ್ಟಣ, ಮಳವಳ್ಳಿ, ಕಾಡಂಕನಹಳ್ಳಿ ಹಾದು ಬೊಪ್ಪೇಗೌಡನಪುರವಲ್ಲಿ ಬಂದು ನಿಲ್ಲುತ್ತದೆ. ಈ ಕಥಾನಿರೂಪಣೆ:

(ಹಾಡು)

ಧ್ವನಿ : ಮಂಟೇಸ್ವಾಮಿ ಕಥೆಯಲ್ಲಿ ಸಿದ್ದಪ್ಪಾಜಿಯ ಕಥೆ ಅತ್ಯಂತ ಪ್ರಮುಖವಾದುದು. ಕಥಾ ತಂತ್ರ, ಪವಾಡ, ನಿರೂಪಣೆ ಇವೆಲ್ಲಾ ದೃಷ್ಟಿಯಿಂದ ಇದು ಕುತೂಹಲಕಾರಿಯಾದುದು. ರಂಜನೀಯವಾದುದು. ಮಂಟೇಸ್ವಾಮಿ, ಶಿಷ್ಯ ಸಿದ್ದಪ್ಪಾಜಿಯನ್ನು ಪಡೆಯಲು ಅನೇಕ ಪವಾಡಗಳನ್ನು ಮಾಡುತ್ತಾನೆ. ಆತನನ್ನು ಸ್ವೀಕರಿಸಿದ ಮೇಲೆ ಆತನಿಂದ ಅನೇಕ ಪವಾಡಗಳನ್ನು ಮಾಡಿಸುತ್ತಾನೆ.

ಧ್ವನಿ : ಈತ ಕಾವ್ಯದಲ್ಲಿ ಶಕ್ತಿ ಸಾಮರ್ಥ್ಯದ ಸಾಕಾರಮೂರ್ತಿ. ಶಾಂತಿ ಸಂಯಮಗಳ ಸೊಬಗಿನ ಶಿಖರವಾಗಿ ಗೋಚರಿಸುತ್ತಾನೆ. ತನಗೂ ಗುರುವಿಗೂ ಕೀರ್ತಿ ಪ್ರತಿಷ್ಠೆ ತರುತ್ತಾನೆ.

ಸಿದ್ದಪ್ಪಾಜಿಯ ಕಥೆಯ ಸ್ವಲ್ಪ ಭಾಗ-

(ಹಾಡು)

ಧ್ವನಿ : ರಾಚಪ್ಪಾಜಿಯನ್ನು ಕಪ್ಪಡಿಗೂ, ಸಿದ್ದಪ್ಪಾಜಿಯನ್ನು ಚಿಕ್ಕಲ್ಲೂರಿಗೂ ಕಳುಹಿಸಿಕೊಡುತ್ತಾರೆ. ಅವರಿಬ್ಬರೂ ಅಲ್ಲಲ್ಲೆಐಕ್ಯವಾದರೆ ಮಂಟೇಸ್ವಾಮಿ ಬೊಪ್ಪೇಗೌಡನ ಪುರದಲ್ಲಿ ಐಕ್ಯವಾಗುತ್ತಾರೆ.

(ಗಂಟಾನಾದ)

ಧ್ವನಿ : ದಕ್ಷಿಣ ಕರ್ನಾಟಕದ ಧಾರ್ಮಿಕ ವೃತ್ತಿಗಾಯಕರಾದ ನೀಲಗಾರರು ಹಾಡುವ ಮಂಟೇಸ್ವಾಮಿ ಕಾವ್ಯದಲ್ಲಿ ಮಂಟೇಸ್ವಾಮಿ, ಸಿದ್ದಪ್ಪಾಜಿ, ರಾಚಪ್ಪಾಜಿ, ದೊಡ್ಡಮ್ಮ ತಾಯಿ ಮುಂತಾದ ಶರಣ ಕಥೆಗಳು ಸಮಾವೇಶಗೊಳ್ಳುತ್ತವೆ. ನೀಲಗಾರರು ನಾಲ್ಕೈದು ಶತಮಾನಗಳಿಂದ ಇವರ ಬಗೆಗೆ ಪದಗಳನ್ನು ಕಾವ್ಯರೂಪದಲ್ಲಿ ಹಾಡುತ್ತಾ ಬಂದಿದ್ದಾರೆ. ಜಾತಿ ಮತ ಭೇದ ಇಲ್ಲದೆ ಅನೇಕರು ಮಂಟೇಸ್ವಾಮಿಯ ಸಂಪ್ರದಾಯಕ್ಕೆ ಸೇರಿದ್ದಾರೆ. ಮೈಸೂರು ಜಿಲ್ಲೆ,

ಮಳವಳ್ಳಿ, ಮಂಡ್ಯ, ಶ್ರೀರಂಗಪಟ್ಟಣ, ಚಾಮರಾಜನಗರ, ನಂಜನಗೂಡು, ಕೊಳ್ಳೇಗಾಲ, ನರಸೀಪುರ ಮುಂತಾದೆಡೆ ಈ ಕಾವ್ಯವನ್ನು ಹಾಡುತ್ತಾರೆ.

ಧ್ವನಿ : ಕರ್ನಾಟಕದ ಜಾನಪದ ಮಹಾಕಾವ್ಯಗಳಾದ ಮಾದೇಶ್ವರ, ಹಾಗೂ ಮಂಟೇಸ್ವಾಮಿ, ಒಂದೊಂದೂ ಒಂದೊಂದು ರೀತಿ ವೈವಿಧ್ಯತೆಯನ್ನು ಬೀರುತ್ತವೆ. ಇವು ಜಾನಪದ ಸಾಹಿತ್ಯದಲ್ಲೇ ಅವಳಿ ಮಹಾಕಾವ್ಯಗಳೆಂದೇ ಪ್ರಸಿದ್ಧಿ.

ಧ್ವನಿ : ನೀಲಗಾರರ ಸಂಪ್ರದಾಯಕ್ಕೆ ಸೇರಿದ ಎರಡು ಮಠಗಳೆಂದರೆ ಮಳವಳ್ಳಿ ಹಾಗೂ ಅದೇ ತಾಲ್ಲೂಕಿನ ಬೊಪ್ಪೇಗೌಡನಪುರ. ನೀಲಗಾರರು ಹೇಳುವಂತೆ ಮಂಟೇಸ್ವಾಮಿ ಕಲ್ಯಾಣದ ಬಸವೇಶ್ವರ, ನೀಲಮ್ಮನವರ ವೃಥ ಪರೀಕ್ಷೆಮಾಡಲು ಬಂದವರು. ಇವರನ್ನು ಪ್ರಭುದೇವರು, ಧರೆಗೆ ದೊಡ್ಡವರು, ಪರಂಜ್ಯೋತಿ ಎಂದು ಕರೆವರು. ಮಂಟೇಸ್ವಾಮಿ ಮಹಿಮೆಯನ್ನು ಪ್ರಚಾರ ಮಾಡುವುದೇ ಇವರ ಉದ್ದೇಶ.

ಧ್ವನಿ : ಇವರ ಪ್ರಕಾರ ಅಲ್ಲಮನೇ ಮಂಟೇಸ್ವಾಮಿ, ಈತ ಕೈಲಾಸದಿಂದ ನೇರವಾಗಿ ಬಂದ ಪರಂಜ್ಯೋತಿ ಸ್ವರೂಪ ಎಂಬ ನಂಬಿಕೆ ನೀಲಗಾರರಿಗೆ.

ಧ್ವನಿ : ಮಂಟೇಸ್ವಾಮಿ ಹಿಂದೂ ಮುಸ್ಲಿಮರನ್ನು ಒಂದಾಗಿ ಕಂಡವರು. ಹಿಂದೂ ಮುಸ್ಲಿಮರು ಮಂಟೇಸ್ವಾಮಿಯನ್ನು ಅಲ್ಲಮ - ಅಲ್ಲನಾಗಿ ಕಂಡವರು ಎಂದ ಮೇಲೆ ಮಾನವರೆಲ್ಲಾ ಒಂದೇ, ದೇವರೆಲ್ಲಾ ಒಂದೇ, ಧರ್ಮವೆಲ್ಲಾ ಒಂದೇ ಅಲ್ಲವೇ?

ನಿರೂಪಕ: ಕಲ್ಯಾಣದಿಂದ ಹೊರಟ ಮಂಟೇಸ್ವಾಮಿಯವರು ಊರೂರುಗಳನ್ನು ಸುತ್ತುತ್ತಾ ಧರ್ಮೋಪದೇಶ ಮಾಡುತ್ತಾ, ಸಮಾಜಸೇವೆ ಸಲ್ಲಿಸುತ್ತಾ, ಜನರ ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬರತೊಡಗಿದರು. ಸಖರಾಯ ಪಟ್ಟಣದಲ್ಲಿ ಕ್ಷತ್ರಿಯ ದೊರೆಗೆ ರಾಜೇಂದ್ರ ವೀರಭದ್ರರೆಂಬ ಮಕ್ಕಳು. ಮಂಟೇಸ್ವಾಮಿಗಳು ದೊರೆಯಲ್ಲಿ ಭಿಕ್ಷೆ ಕೇಳಲು, ಕೊಡದಿರಲು ಬಿಡದೆ ಕಾಡತೊಡಗಿದರು. ಕೊನೆಗೊಂದು ದಿನ ಮಂಟೇಸ್ವಾಮಿಯವರಿಗೆ ವಿಷದ ಕಜ್ಜಾಯ ಬಡಿಸಿದಾಗ, ಅದರಲ್ಲಿ ಎರಡನ್ನು ಜೋಳಿಗೆಗೆ ಹಾಕಿಕೊಂಡು, ದಾರಿಯಲ್ಲಿ ಬರುತ್ತಿದ್ದ ದೊರೆಯ ಮಕ್ಕಳಿಗೇ ಕೊಡಲು ಅವರು ತಿಂದು ಇಹವನ್ನು ತ್ಯಜಿಸಿದರು. ರಾಜನಿಗೆ ವಿಷಯ ತಿಳಿದು ಮಂಟೇಸ್ವಾಮಿಯವರನ್ನು ಕರೆಸಿ ಗೋಳಿಡಲು ಅವರು "ನಿನ್ನ ಮಕ್ಕಳನ್ನು ಬದುಕಿಸುವೆ, ಆದರೆ ಅವರನ್ನು ನನಗೆ ದಾನವಾಗಿ ಕೊಡುವಿರಾದರೆ" ಎನ್ನಲು ರಾಜ ದಂಪತಿಗಳು ಒಪ್ಪಿಗೆ ನೀಡಿದರು: ಇಬ್ಬರಿಗೂ ಭಸ್ಮ ಧರಿಸಿ, ಕಪ್ಪಿಡಲು ಅವರು ಜೀವಂತವಾದರು. ರಾಜೇಂದ್ರಸ್ವಾಮಿ, ವೀರಭದ್ರಸ್ವಾಮಿ ಎಂದು ಹೆಸರಿಟ್ಟು ಅವರ ತಂದೆ - ತಾಯಿಯವರಿಂದ ಭಿಕ್ಷೆ ಪಡೆದು ನಡೆದರು. ವಿಜಯನಗರದಲ್ಲಿ ಹಲವಾರು

ಪವಾಡಗಳನ್ನೆಸಗಿ, ಕಾಗಿನೆಲೆಯಲ್ಲಿ ಸತ್ತ ಮಗು ಬದುಕಿಸಿದರು - ಮಾಚಯ್ಯನೆಂಬವನಿಗೆ ಮಕ್ಕಳ ಫಲವಿತ್ತು, ಕಾಡಂಕನಪಳ್ಳಿಯ ಬೊಪ್ಪೇಗೌಡರು ಮಠವನ್ನು ಮಾಡಲು ಜಾಗವಿತ್ತರು. ರಾಚಪ್ಪಾಜಿ, ಮಾರದಯ್ಯ, ದೊಡ್ಡಮ್ಮಾಜಿ, ಚನ್ನಮ್ಮಾಜಿ, ರಾಜೇಂದ್ರಸ್ವಾಮಿ, ವೀರಭದ್ರಸ್ವಾಮಿ ಮೊದಲಾದ ಶಿಷ್ಯರು, ಭಕ್ತರು ಮಂಟೇಸ್ವಾಮಿ ಅವರ ಸೇವೆಯಲ್ಲಿ ತೊಡಗಿದರು.

ನಿರೂಪಕ : ಮಂಟೇಸ್ವಾಮಿಯವರು ಮುದ್ದೋಜಿ, ಲಿಂಗಮ್ಮನವರ ಮನೆಗೆ ಬಂದು:

ಮಂಟೇ : ಗುರು ಕ್ವಾರಣ್ಯ ಭಿಕ್ಷಾ.... ಯಾರು ತಾಯಿ ಮನೆಯಲ್ಲಿ ಭಿಕ್ಷೆ ನೀಡವ್ವಾ.

ಲಿಂಗಮ್ಮ : ನಾನು ಲಿಂಗಮ್ಮ ಗುರುಗಳೇ, ದವಸ ಧಾನ್ಯಗಳನ್ನು ತಂದಿರುವೆ ಸ್ವೀಕರಿಸಿ.

ಮಂಟೇ : ತಾಯೇ ನನಗೆ ಬೇಕಾದುದು ಇದಲ್ಲ, ಆ ತೇಜಃಪುಂಜ ಮುಖವುಳ್ಳ ನಿಮ್ಮ ಕುವರ.

ಲಿಂಗಮ್ಮ : ಗುರುಗಳೇ ಇದೇನು ನೀವು ಹೇಳುತ್ತಿರುವುದು, ಆ ಕೆಂಪಾಚಾರಿಯನ್ನು ನಿಮಗೆ ಕೊಡುವುದೇ? ನನ್ನ ಹೆತ್ತ ಕರುಳು ಒಪ್ಪುತ್ತಿಲ್ಲ ಗುರುಗಳೇ. (ದುಗುಡದಲ್ಲಿ)

ಮಂಟೇ : ಆಯ್ತು ತಾಯೇ ನಾನಿನ್ನು ಬರುತ್ತೇನೆ.

ನಿರೂಪಕ : ಗುರುಗಳು ಹೋದಮೇಲೆ ಕೆಂಪಾಚಾರಿ ಹುಚ್ಚನಂತೆ ತಿರುಗಾಡಲಾರಂಭಿಸಿದ. ಲಿಂಗಮ್ಮ ಮುದ್ದೋಜಿ ಮಗನನ್ನು ಗುರುಗಳಿಗೆ ಅರ್ಪಿಸಲು ತೀರ್ಮಾನಿಸಿ, ಕೊಟ್ಟರು. ಕೆಂಪಾಚಾರಿ ಗುರುಗಳಿಗೆ ಶರಣಾದ. ಹಿಂದಿನ ಸಂಬಂಧದ ಜ್ಞಾಪಕವಾಗುತ್ತದೆ ಕೆಂಪಾಚಾರಿಗೆ, ಗುರುಗಳು ಶಿಷ್ಯನನ್ನು ಉದ್ದೇಶಿಸಿ-

ಮಂಟೇ : ಮಗೂ ನಮ್ಮ ನಿಜೈಕ್ಯದ ಕಾಲ ಸನ್ನಿಹಿತವಾಗಿದೆ. ಹಲಗೂರು ಪಂಚಾಳಗೇರಿಗೆ ಹೋಗಿ ಹಾರೆ, ಗುದ್ದಲಿ, ಪಿಕಾಸೆಗಳ ದಾನ ತೆಗೆದುಕೊಂಡು ಬಾ. ನನ್ನ ಸಮಾಧಿ ನಿರ್ಮಾಣ ಮಾಡಬೇಕಾಗಿದೆ.

ಸಿದ್ಧ : ಗುರುದೇವಾ, ಆ ಜನರು ದೇವರನ್ನು ಕಂಡವರಲ್ಲ. ದೇವರ ಮಹಿಮೆ ತಿಳಿದವರಲ್ಲ, ಕಬ್ಬಿಣದ ಭಿಕ್ಷೆ ಕೊಡದ ಕಡು ಜೀನರು, ಕುಹಕಿಗಳು, ಪವಾಡ ಮಾಡೆನ್ನುತ್ತಾರೆ.

ಮಂಟೆ : ನೀನು ಧೈರ್ಯವಾಗಿ ಮುಂದುವರಿ, ನಾನು ನಿನ್ನ ಹಿಂದೆ ಇರುವೆ. ನಾವು ಬಂದಿರುವುದೇ ಸಮಾಜ ಸೇವೆಗೆ, ಜನರ ಹಿತಕ್ಕೆ, ಧರ್ಮ ಪ್ರಚಾರಕ್ಕೆ ಎಂಬುದನ್ನು ಮಾತ್ರ ಮರೆಯಬೇಡ.

ಸಿದ್ಧ : ಅಪ್ಪಣೆ ಗುರುದೇವಾ.

ನಿರೂಪ : ಸಿದ್ದಪ್ಪಾಜಿ ಅನೇಕ ಪವಾಡಗಳನ್ನೆಸಗಿ ಅವರಿಂದ ಕಬ್ಬಿಣದ ಭಿಕ್ಷೆ ತಂದೊಪ್ಪಿಸಿ, ಗುರುಗಳ ಸಮಾಧಿ ಮಾಡಲು ನೆರವಾಗುತ್ತಾನೆ. ಗುರುಗಳು ಬೊಪ್ಪೇಗೌಡನ ಪುರದಲ್ಲಿ ಬಯಲಾಗುತ್ತಾರೆ. ✳

# ಸರ್ಪಭೂಷಣ ಶಿವಯೋಗಿಗಳು

ನೋಡಿ ಪರಂಜ್ಯೋತಿಯು ಬಳಗುತ್ತಿದೆ
ರೂಢಿಯೊಳಂತರ್ಮುಖಿಗಳು ಮುಚ್ಚಿದ
ಮೂಢತೆಯೆಂಬುವಯೆಪೆಪೆರೆಮೂರ್ಜ್ಜಜ್ಞಾನಾಂಬಕದಿಂದೆ ॥ ಪಲ್ಲವಿ॥

ಸತ್ತೆನಿಸುತೆ ಜಗದಗಲಕೆ ಪರ್ಬಿದ
ಬತ್ತಿಯ ಕೊನೆಯನೆ ಹಿಡಿದು ಜ್ವಲಿಸುತೆ
ಚಿತ್ತಂದನಿಪಘಿತೋಮುಖಿ ಶಾಂತ ಜ್ವಾಲಾಮಯವಾಗಿ
ಮತ್ತಾನಂದವೆ ತೈಲವದಾಗಿರೆ
ನಿತ್ಯವೈಪ ಕರಣಂಗಳ ವೇಷ್ಟಿಸಿ
ಸುತ್ತಲು ಪರಿಪೂರ್ಣತೆಯದೆಂಬುವಪ್ರಭೆಯನೆ ಪಸರಿಸುತೆ॥

ಧ್ವನಿ : ಹೌದು, ಇದು ನಿಜಗುಣರ 'ಜ್ಯೋತಿ ಬೆಳಗುತಿದೆ ದಿವ್ಯ ಪರಂಜ್ಯೋತಿ ಬೆಳಗುತಿದೆ' ಪದ್ಯದ ಭಾವವನ್ನೇ ಹೋಲುವುದು. ಅವರ ಪದ್ಯದ ಸ್ಫೂರ್ತಿಯಿಂದಲೇ ರಚಿತವಾದುದು ಎಂದರೆ ತಪ್ಪಾಗಲಾರದು. ನಿಜಗುಣರ 'ಕೈವಲ್ಯ ಪದ್ಧತಿ'ಯ ಎರಕವೇ "ಕೈವಲ್ಯ ಕಲ್ಪವಲ್ಲರಿ". ಇಲ್ಲಿನ ಪದ್ಯಗಳು ಅವರ ಅನುಭವ ಸಾರ, ಶಬ್ದ ವೈಖರಿ, ಭಾವ, ರಸ, ಅಲಂಕಾರ, ಛಂದಸ್ಸು, ಪ್ರಾಸ, ಸಂಗೀತ ಬೆರೆತು ಇದು ಅವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿ, ಸಾಹಿತ್ಯಕ್ಕೆ ಅಮರ ಕೊಡುಗೆಯಾಗಿದೆ.

ಧ್ವನಿ : ಅಜ್ಞಾನಿಗಳಿಗೆ ಜ್ಞಾನ ನೀಡಲು ಆಗಾಗ ಮಹಾಪುರುಷರು, ಶರಣರು ಉದಿಸುತ್ತಾರೆ. ಹಾಗೆಯೇ ಸರ್ಪಭೂಷಣ ಶಿವಯೋಗಿಗಳು ಜ್ಞಾನದ ಬೆಳಕನ್ನು ನೀಡಲು ಹುಟ್ಟಿ ಬಂದವರು. 'ಹತ್ತು ಕಟ್ಟುವೊಡೆ ಒಂದು ಮುತ್ತು ಕಟ್ಟು' ಎಂದು ಹಿರಿಯರು ಹೇಳುವಂತೆ ಇವರು ಕನ್ನಡದಲ್ಲೊಂದು, ಸಂಸ್ಕೃತದಲ್ಲೊಂದು ಅಪರೂಪ ಕೃತಿಗಳನ್ನು ರಚಿಸಿ, ಕನ್ನಡ, ಸಂಸ್ಕೃತ ಸಾಹಿತ್ಯ ಲೋಕಕ್ಕೆ ಚಿರಪರಿಚಿತರಾಗಿದ್ದಾರೆ!

ಧ್ವನಿ : ಸರ್ಪಭೂಷಣರು, ಸಂಚಾರಿ ಜ್ಞಾನಭಂಡಾರವಿದ್ದಂತೆ. ಅವರು 'ಕೈವಲ್ಯ ಪದ್ಧತಿ'ಯಲ್ಲಿರುವ ಕ್ಲಿಷ್ಟತೆಯನ್ನು ತಮ್ಮ "ಕೈವಲ್ಯ ಕಲ್ಪವಲ್ಲರಿ"ಯಲ್ಲಿ ತೆಗೆದುಹಾಕಿದ್ದಾರೆ. ನಲವತ್ತಕ್ಕೂ ಹೆಚ್ಚು ರಾಗಗಳನ್ನು ಅಳವಡಿಸಿದ್ದಾರೆ.

ಶಿವಕಾರುಣ್ಯ, ಜೀವ ಸಂಭೋಧನಾ, ನೀತಿಕ್ರಿಯಾಚಾರ, ಯೋಗ ಪ್ರತಿಪಾದನಾ, ಜ್ಞಾನ ಪ್ರತಿಪಾದನ ಸ್ಥಳಗಳೆಂಬ ಐದು ಸ್ಥಳಗಳಲ್ಲಿ ನಿರೂಪಿಸಿದ್ದಾರೆ. ಶಿವಾನುಭವಗಳೇ ೧೭೭ ಪದ್ಯಗಳಾಗಿ ಹೊರಹೊಮ್ಮಿವೆ.

ಧ್ವನಿ : ನಿಜಗುಣರ ಕಲ್ಪವೃಕ್ಷಕ್ಕೆ ಬಳ್ಳಿಯನ್ನು ಹಬ್ಬಿಸಿದ್ದೇನೆ ಎಂದು ಅವರೇ ಒಂದೆಡೆ ಹೇಳಿಕೊಂಡಿದ್ದಾರೆ. ಇದು ಅವರ ಹಿರಿತನಕ್ಕೆ ಸಾಕ್ಷಿಯಾಗಿದೆ. ಜ್ಞಾನ ಶತಕ ಹನ್ನೆರಡು ಅಧ್ಯಾಯಗಳಲ್ಲಿ ೧೨೧ ಪದ್ಯಗಳು, ವಿವಿಧ ಛಂದಸ್ಸುಗಳಿಂದ ಕೂಡಿ ಸಂಸ್ಕೃತದಲ್ಲಿ ರಚಿತವಾದ ಚಿಕ್ಕ ಚೊಕ್ಕ ಕೃತಿ. ಇದು ಉಪನಿಷತ್ತು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳ, ವೇದಾಂತ ತತ್ವಗಳ ಸಾರಸಂಗ್ರಹವಾಗಿದೆ. ಭಕ್ತಿ, ಜ್ಞಾನ, ವೈರಾಗ್ಯಗಳ ಬೋಧಕವಾಗಿದೆ.

ಧ್ವನಿ : ಸರ್ಪಭೂಷಣರ ಕಾಲ ೧೭೯೫ರಿಂದ ೧೮೩೯. ಊರು ಬೆಂಗಳೂರಿನ ಹತ್ತಿರದ ಬಾಣಾವರ. ಮಲ್ಲಿಕಾರ್ಜುನರು - ತಂದೆ. ದೀಕ್ಷಾ ಗುರುಗಳು ಚಾಮುಂಡಿ ಬೆಟ್ಟದ ಗವಿ ಮಠದ ಮಹಾಲಿಂಗ ಸ್ವಾಮಿಗಳ ಶಿಷ್ಯರಾದ ಗುರುಸಿದ್ಧ ಸ್ವಾಮಿಗಳು......

ಧ್ವನಿ : ಅಂದು ಕಾರ್ತಿಕ ಸೋಮವಾರ! ತಿಪ್ಪಶೆಟ್ಟರ ಮಠಕ್ಕೆ ಮಲ್ಲಿಕಾರ್ಜುನಪ್ಪ - ಹೆಂಡತಿ ಚನ್ನಮ್ಮನವರು, ಶಾಂತಪ್ಪ, ಮಲ್ಲಶೆಟ್ಟಪ್ಪ, ಹುಚ್ಚಣ್ಣ ಮತ್ತು ಸಪ್ಪಣ್ಣರೆಂಬ ಐದು ಗಂಡು ಮಕ್ಕಳು ಹಾಗೂ ಮಗಳನ್ನು ಕರೆತಂದು ಗುರುಸಿದ್ಧಸ್ವಾಮಿಗಳಿಗೆ ನಮಸ್ಕರಿಸಿ ಮಲ್ಲಿಕಾರ್ಜುನಪ್ಪನವರು ಎಲ್ಲರ ಪರಿಚಯವನ್ನು ಮಾಡುತ್ತಾ-

ಮಲ್ಲಿಕಾರ್ಜುನ : ಇವನು ಕೊನೆಯ ಮಗ ಸಪ್ಪಣ್ಣ ಬುದ್ಧಿ.

ಗುರುಸಿದ್ಧಸ್ವಾಮಿಗಳು : ಈತನ ಮುಖ ಲಕ್ಷಣವನ್ನು ನೋಡುತ್ತಿದ್ದರೆ ಈತ ಮಹಾಪುರುಷನಾಗುತ್ತಾನೆ ಇವನನ್ನು ಶಾಲೆಗೆ ಸೇರಿಸಿಬಿಡಿ ಮಲ್ಲಿಕಾರ್ಜುನಪ್ಪನವರೇ. ಈತ ತುಂಬಾ ವಿದ್ಯಾವಂತನಾಗುತ್ತಾನೆ, ಜ್ಞಾನಿಯಾಗುತ್ತಾನೆ. ಈಗ ನೀವು ಚಿಕ್ಕಬಾಣಾವರದಲ್ಲೇನು ಮಾಡುತ್ತಿರುವಿರಿ.

ಮಲ್ಲಿ : ವ್ಯವಸಾಯ ಮಾಡುತ್ತಿದ್ದೇನೆ ಬುದ್ಧಿ. ಬಂಜರು ಭೂಮಿ. ಹಾಕಿದ ಖರ್ಚು ಹುಟ್ಟೊಲ್ಲ. ದೊಡ್ಡ ಸಂಸಾರ ತೂಗಿಸಲು ಸ್ವಲ್ಪ ವ್ಯಾಪಾರ ಮಾಡುತ್ತಿದ್ದೇನೆ.

ಗುರು : ನೀವ್ಯಾಕೆ ಬೆಂಗಳೂರಿಗೆ ಬಂದು ವ್ಯಾಪಾರ ಮಾಡಬಾರದು?

ಮಲ್ಲಿ : ಎಲ್ಲ ತಮ್ಮ ಅಪ್ಪಣೆ ಗುರಗಳೇ.

ಧ್ವನಿ : ಮಲ್ಲಿಕಾರ್ಜುನಪ್ಪ ಮತ್ತು ಚೆನ್ನಮ್ಮನವರು ಬೆಂಗಳೂರಿನ ಮಾಮೂಲುಪೇಟೆಯಲ್ಲಿ ಒಂದು ಮನೆ ಮಾಡಿ ಅಡಿಕೆ ವ್ಯಾಪಾರ ಮಾಡುತ್ತಾ, ಜೀವನ ಸಾಗಿಸತೊಡಗಿದರು. ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಸೇರಿಸಿದರು. ತಿಪ್ಪಶೆಟ್ಟರ ಮಠದಲ್ಲಿ ಆಗಾಗ ನಡೆಯುತ್ತಿದ್ದ ಪ್ರವಚನಕ್ಕೆ ತಪ್ಪದೆ ಬರುತ್ತಿದ್ದರು

ಸಂಸಾರ ಸಮೇತರಾಗಿ ದಿನಗಳುರುಳಿದುವು. ಸಪ್ಪಣ್ಣ ದೊಡ್ಡವನಾಗುತ್ತ ಬಂದ. ಇಪ್ಪತ್ತು ವರ್ಷಗಳು ತುಂಬಿದುವು.

ಧ್ವನಿ : ಸಪ್ಪಣ್ಣಪ್ಪ ಗುರುಸಿದ್ಧಸ್ವಾಮಿಗಳಿಗೆ ಮಠದ ಮರಿಯಾಗುತ್ತಾನೆ ಎಂಬ ವಿಷಯವನ್ನು ತಿಳಿದ ಚೆನ್ನಮ್ಮ ಒಂದು ದಿನ ಗಂಡನನ್ನುದ್ದೇಶಿಸಿ-

ಚನ್ನಮ್ಮ : ಏನೂ ಅಂದ್ರೇ ವಿಚಾರ ಗೊತ್ತಾಯಿತೇ?

ಮಲ್ಲಿ : ಏನು ಅದು?

ಚನ್ನಮ್ಮ : ನಿಮ್ಮ ಮಗ ಮಠಕ್ಕೆ ಸ್ವಾಮಿಗಳಾಗುತ್ತೇನೆಂದು ಒಪ್ಪಿದ್ದಾನಂತೆ.

ಮಲ್ಲಿ : ಯಾರ್‍ಯಾರ ಹಣೇಲಿ ಏನೇನು ಬರೆದಿದೆಯೋ ಅದನ್ನ ತಪ್ಪಿಸಿಕೊಳ್ಳಲು ಸಾಧ್ಯವೇ? ಅದು ಹೆತ್ತ ನಿನಗೂ ಕೀರ್ತಿಯಲ್ಲವೇ? ಅದೋ ಆತನೇ ಬರುತ್ತಿದ್ದಾನೆ.

ಚನ್ನಮ್ಮ : ಸಪ್ಪಣ್ಣ.... ನಿಮ್ಮಪ್ಪಾಜಿಯವರು ನಿನಗೆ ಮದುವೆ ಮಾಡಬೇಕೂ ಅಂತಿದ್ದಾರೆ.

ಸರ್ಪ : ಸಂಸಾರ ಜಂಜಾಟ ನಾನು ನೋಡಿದ್ದೆ. ಅದಕ್ಕೇ ನಾನು ಸನ್ಯಾಸಿ ಆಗಲು ಒಪ್ಪಿಗೆ ಕೊಟ್ಟಿದ್ದೇನೆ ಸ್ವಾಮಿಗಳಿಗೆ.

ಚನ್ನಮ್ಮ : ಹಾಗಾದರೆ ಮದುವೆ?

ಸರ್ಪ : ಕನಸು ಅಷ್ಟೇ?

ಧ್ವನಿ : ಸಾವಿರದ ಎಂಟನೂರ ಹದಿನೈದರಂದು ಸರ್ಪಭೂಷಣರು ಆಶ್ರಮವನ್ನು ಸ್ವೀಕರಿಸಿದರು. ನೀಳವಾದ ಮೂಗು, ವಿಶಾಲವಾದ ಹಣೆ, ಕೈಕೊರಳುಗಳಲ್ಲಿ ವಿಭೂತಿ, ರುದ್ರಾಕ್ಷಿ, ಮೈ ಮುಚ್ಚುವ ಕಬನಿ, ಹೆಗಲಮೇಲೆ ಉತ್ತರೀಯ, ಕಿವಿಯಲ್ಲಿ ರುದ್ರಾಕ್ಷಿಯ ಅತ್ತ ಗಡಕುಗಳು, ತಲೆಗೆ ಪೇಟ, ಆಜಾನುಬಾಹು ದೇಹ, ಹಾವುಗೆಯನ್ನು ಮೆಟ್ಟಿ ನಿಂತಿದ್ದರು ಸರ್ಪಭೂಷಣರು. ಒಂದು ದಿನ-

ಸರ್ಪ : ಗುರುದೇವಾ ನಾನು ಕೆಲವು ಪುಣ್ಯಕ್ಷೇತ್ರಗಳನ್ನು ಸುತ್ತಿ ಬರಬೇಕೆಂದಿರುವೆ.

ಗುರು : ಅಗತ್ಯವಾಗಿ ಆಗಲಿ. ಎಷ್ಟು ಹಣಬೇಕೋ ಕೇಳಿ ತೆಗೆದುಕೊಂಡು ಹೋಗು. ಶ್ರೀಶೈಲ, ಕಾಶಿ, ಕೂಡಲಸಂಗಮವೇ ಮೊದಲಾದ ಕ್ಷೇತ್ರಗಳನ್ನು ಸುತ್ತಿ ಬಾ......

ಧ್ವನಿ : ಸರ್ಪಭೂಷಣರು ಗುರುಗಳ ಆಶೀರ್ವಾದ ಪಡೆದು ದೇಶಪರ್ಯಟನೆಗೆ ಹೊರಟರು. ಚಿತ್ರದುರ್ಗದ ಬೃಹನ್ಮಠಕ್ಕೆ ಬಂದು ಕರ್ತೃ ಗದ್ದಿಗೆಯ ದರ್ಶನ ಮಾಡಿ, ಜಗದ್ಗುರು ಮುರುಘಾ ಶಾಂತವೀರ ಸ್ವಾಮಿಗಳವರ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಯ ಚರ್ಚೆಗಳಲ್ಲಿ ಭಾಗವಹಿಸಿದರು. ಅಲ್ಲಿಂದ ಹರಿಹರ, ಹಾವೇರಿ, ಬಂಕಾಪುರ ಮಾರ್ಗವಾಗಿ ಹುಬ್ಬಳ್ಳಿಯ ಮೂರುಸಾವಿರ ಮಠದ ಸ್ವಾಮಿಗಳ ದರ್ಶನ ಪಡೆದು, ಬಾದಾಮಿ, ಬನಶಂಕರಿ,

ಮಹಾಕೂಟ, ಗುತ್ತಿ, ಕೂಡಲ ಸಂಗಮಕ್ಷೇತ್ರಕ್ಕೆ ಬಂದರು. ಕೃಷ್ಣ - ಮಲಪ್ರಭಾ ನದಿಗಳ ಸಂಗಮದಲ್ಲಿದ್ದ ಸಂಗಮೇಶ್ವರ ದೇವಾಲಯವನ್ನು ಸಂದರ್ಶಿಸಿದರು. ಅಲ್ಲಿನ ಹಿತವಾದ ವಾತಾವರಣ "ವೇದಾಂತ ಶಿವಾರತ್ನ ಪ್ರಕಾಶಿಕೆ" ಕೃತಿ ರಚಿಸಲು ಸ್ಫೂರ್ತಿ ನೀಡಿತು.

ಧ್ವನಿ : ಮುಂದೆ ಹಾನಗುಂದ ಮಾರ್ಗವಾಗಿ ಬಾಗಲು ಕೋಟೆಗೆ ಬಂದು ಗುರುಲಿಂಗಸ್ವಾಮಿಗಳನ್ನು ಭೇಟಿ ಮಾಡಿದರು. ಒಂದು ದಿನ ಊರ ಹೊರಗಡೆ ತಿರುಗಾಡುತ್ತಿದ್ದಾಗ ದಾರಿಯಲ್ಲಿ ಒಂದು ಹೆಣ್ಣಿನ ರೋಧನ ಕೇಳಿಸಿತು. ಹತ್ತಿರ ಬಂದು ನೋಡಿದಾಗ ತಿಳಿಯಿತು ಅದು ಆಗ ತಾನೇ ಗಂಡನನ್ನು ಕಳೆದು ಕೊಂಡಾಕೆಯ ಆರ್ತಧ್ವನಿ ಎಂಬುದು. ಆಕೆಯನ್ನುದ್ದೇಶಿಸಿ "ಸ್ವಲ್ಪ ಸಮಾಧಾನ ತಾಳಿಕೊಳ್ಳಮ್ಮ ಸಾವು ಯಾರನ್ನು ಬಿಟ್ಟಿದ್ದಲ್ಲ, ಎಲ್ಲರೂ ಒಂದಲ್ಲ ಒಂದು ದಿನ ಮಣ್ಣಿಗೆ ಹೋಗಬೇಕು" ಎಂದು ಸಮಾಧಾನಿಸಿದರು. ಯಾಳಗಿಯಿಂದ ವಿಜಾಪುರದ ಬಸವಕಲ್ಯಾಣ, ಬಸವನ ಬಾಗೇವಾಡಿ, ಅಲ್ಲಿಂದ ಸೊನ್ನಲಿಗೆಯ ಸಿದ್ಧರಾಮನ ಗದ್ದುಗೆಯ ದರ್ಶನ ಮಾಡಿದರು.

ಧ್ವನಿ : ರಾಯಚೂರು ಮುದಗಲ್ಲು ದಾಟಿ 'ಅಗಸೆ' ಹತ್ತಿರದ ಸುರಪುರಕ್ಕೆ ಬಂದರು. ಅಲ್ಲಿ ಒಂದು ಬಾವಿ ಇತ್ತು, ಅಕ್ಕಪಕ್ಕದಲ್ಲಿ ಹೂವಿನ ಗಿಡಗಳು ಬೆಳೆದಿದ್ದುವು. ಸರ್ಪಭೂಷಣರು ಶಿವಪೂಜೆಗೆ ಇದೇ ಯೋಗ್ಯವಾದ ಸ್ಥಳ ಎಂದು ಸ್ನಾನ ಮಾಡಿ ಪೂಜೆಗೆ ಕುಳಿತರು. ಅಷ್ಟರಲ್ಲಿ ಜೇವಂಗಿ ಕಡೆಯ ವ್ಯಾಪಾರಿಯೊಬ್ಬ ಬಂದು ಗುರುಗಳಿಗೆ ಅಡ್ಡಬಿದ್ದು-

ವ್ಯಾಪಾರಿ : ನಾನು ಜೇವಂಗಿ ಕಡೆಯ ವ್ಯಾಪಾರಿ ಬುದ್ಧಿ, ಹೊಸಪೇಟೆಗೆ ನಮ್ಮ ಸ್ವಂತದವರ ಮನೆಗೆ ಹೋಗುತ್ತಿದ್ದೆ. ತಾವು ಈ ಬಾವಿಯ ಹತ್ತಿರ ಕುಳಿತಿರುವುದನ್ನು ನೋಡಿ ಅಪಚಾರವಾಯಿತಲ್ಲ ಎಂದು ಬಂದೆ.

ಸರ್ಪ : ಏಕೆ?

ವ್ಯಾಪಾರಿ : ಇದು ಹೊಲೆಯರ ಬಾವಿ. ಇಲ್ಲಿ ನೀವು ಸ್ನಾನ ಮಾಡಿದಿರಲ್ಲಾ. ಪಾಪ, ಬೇರೆ ಕಡೆಯಿಂದ ಬಂದವರಿಗೆ ಹೇಗೆ ಗೊತ್ತಾಗಬೇಕು? ತಮ್ಮಂಥ ಶಿವಾಚಾರ್ಯರು ಸುರಪುರಕ್ಕೆ ಹೋಗಬಹುದಿತ್ತು.

ಧ್ವನಿ : ಅಷ್ಟರಲ್ಲಿ ಕಲ್ಯಾಣ ಶೆಟ್ಟಿ ಎಂಬಾತ ಬಂದು ಗುರುಗಳಿಗೆ ನಮಸ್ಕರಿಸಿ ನಿಲ್ಲಲು, ನಡೆದ ವಿಷಯವನ್ನು ವ್ಯಾಪಾರಿ ಕಲ್ಯಾಣ ಶೆಟ್ಟರಲ್ಲಿ ನಿವೇದಿಸಿದ. ಅದಕ್ಕೆ ಆತ-

ಕಲ್ಯಾಣ : ಅದು ಪವಿತ್ರ ಕ್ಷೇತ್ರವೇ?

ವ್ಯಾಪಾರಿ : ಇದೇನು ನೀವು ಹೇಳುವುದು?

ಕಲ್ಯಾಣ : ಗುರುಗಳು ಪಾದ ಇಟ್ಟ ಮೇಲೆ ಜಂಗಮ ಪಾದದ ಮಹತ್ವದಿಂದ ಶ್ರೇಷ್ಠವಾದ ಪಾದೋದಕವಾಯಿತು. ಗಂಗೆಗೆ ಕಟ್ಟಿಲ್ಲ ಎಂದು ಅದಕ್ಕೇ ಹೇಳುವುದು. ನದಿಯ ನೀರು ಯಾರೂ ಮುಟ್ಟದೆಯೇ ಬರುತ್ತದೆಯೇ? ಇದೆಲ್ಲಾ ನಿಮ್ಮ ಹುಚ್ಚು. 'ಚರಸ್ಯ ಪಾದ ತೀರ್ಥೇನ ಲಿಂಗ ಮಜ್ಜನ ಮುಕ್ತಮಂ' ಎಂದು ಆಗಮಗಳೇ ಹೇಳಿವೆ.

ಸರ್ಪ : ಹೌದು ಭಕ್ತರೇ; ಹೊಲೆಯರೂ ಮನುಷ್ಯರೇ. ಅವರು ನೀರನ್ನು ಮುಟ್ಟಿದರೆಂದರೆ ಅದು ಅಶುದ್ಧವಾಗುವುದೆಂಬುದೆಲ್ಲಾ ಸುಳ್ಳು. ದೇವರ ಸೃಷ್ಟಿಯಲ್ಲಿ ಎಲ್ಲಾ ಒಂದೇ!

ಕಲ್ಯಾಣ : ಇದು ಇಂದಿನಿಂದ ಮತ್ತಷ್ಟು ಪವಿತ್ರವಾಯಿತು. ಇದಕ್ಕೆ 'ಸರ್ಪಭೂಷಣ ಬಾವಿ' ಎಂದೇ ಹೆಸರಾಗಲಿ.

ಧ್ವನಿ : ಈ ವಿಷಯ ಸುರಪುರದ ಪ್ರಧಾನ ಮಂತ್ರಿ ಲಿಂಗಣ್ಣನವರಿಗೆ ತಿಳಿದು ಬಂದು ಗುರುಗಳಿಗೆ ನಮಸ್ಕರಿಸಿ, "ಗುರುಗಳೇ ತಾವು ಬಂದ ವಿಷಯ ತಿಳಿದು ತಮ್ಮ ದರ್ಶನಕ್ಕೆಂದು ಬಂದೆ. ತಮ್ಮ ಪಾದಧೂಳಿಯಿಂದ ಈ ಬಾವಿಯನ್ನು ಪಾವನ ಮಾಡಿದ್ದೀರಿ. ತಾವು ನಮ್ಮ ಮನೆಗೆ ಬಂದು ಆತಿಥ್ಯ ಸ್ವೀಕರಿಸಿ ತೆರಳಬೇಕು" ಎಂದು ಕರೆದುಕೊಂಡು ಹೋದರು.

ಧ್ವನಿ : ಅಲ್ಲಿಂದ ಸರ್ಪಭೂಷಣರು ಕೃಷ್ಣಾ ಭೀಮಾ ನದಿಗಳ ಸಂಗಮದಲ್ಲಿದ್ದು, ಚೆನ್ನಬಸವಸ್ವಾಮಿಗಳು ಅನುಷ್ಠಾನ ಮಾಡಿದ ಪವಿತ್ರ ಸ್ಥಳವಾದ 'ನಾರದ ಗಡ್ಡೆ'ಗೆ ಬಂದು ಪೂಜೆಗೆ ನಿರತರಾದರು. ಅಲ್ಲಿದ್ದ ಚರಮೂರ್ತಿಗಳು ಮೊದಲು ಗುಸು ಗುಸು ಮಾಡಿದವರು ಸರ್ಪಭೂಷಣರ ಪೂಜಾ ವಿಧಾನ, ಯೋಗ ಮಗ್ನತೆಗೆ ಬೆರಗಾಗಿ ಎಲ್ಲರೂ ಅಡ್ಡ ಬಿದ್ದು ಕ್ಷಮೆ ಯಾಚಿಸಿದರು.

ಹಾಡು : ಲಿಂಗಪೂಜೆಯ ಮಾಡಿರೋ। ನಿಮ್ಮೊಳ್ ಪ್ರಾಣ
ಲಿಂಗಪೂಜೆಯ ಮಾಡಿರೋ
ಗಂಗೆ ಯಮುನೆಗಳ। ಸಂಗಮದೊಳು ಮಿಂದು
ಶೃಂಗಾರದುಪರಿಯೆ। ರಂಗಮಂಟಪದೊಳು ॥ಪ॥
ವರ ಭಕ್ತಿ ಜಲವ ನೀಡಿ। ಮಜ್ಜನ ಗೆಯ್ದು
ವಿರತಿ ಗಂಧವನೆ ತೀಡಿ
ಕರಣೇಂದ್ರಿಯಗಳೆಂಬ। ಮಿರುಗುವಕ್ಷತೆಯನಿ
ಟ್ಟರಿವೆಂಬ ನಿರ್ಮಲ। ಸರಸ ಪುಷ್ಪವ ಸೂಡಿ ॥೨॥

ಧ್ವನಿ : ಸರ್ಪಭೂಷಣರು ಚಳ್ಳಗುರ್ತಿ, ಜೋಳದ ರಾಶಿ ಗ್ರಾಮವನ್ನು ದಾಟಿ ಬಳ್ಳಾರಿಗೆ ಬರುತ್ತಿರಲು, ಶಿವ ಭಕ್ತರ ಬೀದಿಯಲ್ಲಿ ಗಂಡಹೆಂಡರಿಬ್ಬರು ಜಗಳವಾಡುತ್ತಿದ್ದರು. ಹೆಂಡತಿ ಗಂಡನಿಗೆ ಕೈ ಮಾಡಿದ ವಿಷಯವನ್ನು ಕೇಳಿ ಆಕೆಗೆ ಅನೇಕ ಬುದ್ಧಿ ಮಾತುಗಳನ್ನು ಹೇಳಿ ಸಮಾಧಾನಿಸಿದರು.

ಧ್ವನಿ : ಕೂಡಲೇ ಆಕೆ ಗುರುಗಳಿಗೆ ನಮಸ್ಕರಿಸಿ ಕ್ಷಮಾಪಣೆ ಕೇಳಲು, "ಕ್ಷಮಿಸಬೇಕಾದವ ನಿನ್ನ ಗಂಡ, ಆತನಿಗೆ ನಮಸ್ಕರಿಸಿ, ಕ್ಷಮೆ ಕೇಳಿಕೋ" ಎಂದು ಬುದ್ಧಿವಾದ ಹೇಳಿದರು.

ಧ್ವನಿ : ಹಂಪೆಗೆ ಬಂದು ವಿರೂಪಾಕ್ಷನ ದರ್ಶನಗೈದು ಅಲ್ಲಿ ನಡೆಯುತ್ತಿದ್ದ ದವನದ ಹುಣ್ಣಿಮೆ, ವಿರೂಪಾಕ್ಷನ ರಥೋತ್ಸವ ನೋಡಿ, ಭಕ್ತಿಯಿಂದ ಭಜಿಸಿದರು. ಅಲ್ಲಿನ ಭಕ್ತರನ್ನು ಗಮನಿಸಿದ ಸರ್ಪಭೂಷಣರು -

ಕಾಣರಲ್ಲಾ ಶಿವನ ಕಾಣರಲ್ಲಾ
ಕ್ಷೋಣಿಯ ಸರ್ವ ಕ್ಷೇತ್ರವ ತಿರುಗಿ ಬೆಂದು ಬೆಂಡಾಗಿ ನರರು ॥ಪ॥

ತನುವೆ ಪಂಪಾಕ್ಷೇತ್ರ ತನ್ನ
ಮನವೆ ದೇವಸ್ಥಾನವಲ್ಲ
ಮಿನುಪ ಜೀವವೆ ವಿರೂಪಾಕ್ಷೇಶ।
ನೆನಿಪ ಸಮ್ಯಜ್ಞಾನವ ಮರೆದು ॥೧॥

ಶಿರವೆ ಶ್ರೀಗಿರಿ ಗುರು ಸಿದ್ದೇಶ್ವರ
ನಿರವು ಬ್ರಹ್ಮರಂಧ್ರವೆ ಗುಡಿಯು
ಮೆರೆವ ಜ್ಯೋತಿ ಪ್ರಭೆಯ ಮಲ್ಲೇ
ಶ್ವರನೆಂದೆಂಬುವ ಭಾವವ ಮರೆದು ॥೨॥

ಧ್ವನಿ : ಉರುವಕೊಂಡದಲ್ಲಿ ಕರಿಬಸವಸ್ವಾಮಿಗಳ ಜೊತೆ ಸ್ವಲ್ಪ ಕಾಲ ಕಳೆದು ಶ್ರೀಶೈಲಕ್ಕೆ ಹೊರಟರು. ಅಲ್ಲಿ ಪಾಲಲೋಚನ ಸ್ವಾಮಿಗಳೆಂಬವರು ಶ್ರೀಶೈಲವನ್ನೆಲ್ಲಾ ಸುತ್ತಿಸಿ ಅದರ ಮಹಿಮೆಯನ್ನೆಲ್ಲಾ ಬಣ್ಣಿಸಿದರು. ಪಾತಾಳಗಂಗೆಯಲ್ಲಿ ಮಿಂದು ಶ್ರೀಶೈಲ ಮಲ್ಲಿಕಾರ್ಜುನ ಭ್ರಮರಾಂಬೆಯರ ದರ್ಶನ ಮಾಡಿದರು. ಆಗ ಭಾವನೆ ಉಕ್ಕಿ -

ಹಾಡು : ಶ್ರೀಗಿರಿಯ ಸುಕ್ಷೇತ್ರಕಿಂದು
ಹೋಗಿಯಾತ್ರೆಯ ಮಾಡಿ ಬಂದೆ
ಶ್ರೀಗಿರಿಯು ಶರೀರದೊಳಗುಂಟು। ಓ ಶ್ರೀ ಗುರುಸಿದ್ಧ
ಯೋಗಿ ಜನರಿಗೆ ಮರ್ಮವು ಬೇರುಂಟು. ॥ ಪ ॥

ಪಾತಾಳ ಗಂಗೆಯೊಳು ಮಿಂದು।
ಓತು ಶಿಖರೇಶ್ವರನಿಗೇರಿ
ಜ್ಯೋತಿರ್ಲಿಂಗಕೆ ದೃಷ್ಟಿಯನಿಟ್ಟೆನೊ। ಓ ಗುರುಸಿದ್ಧ
ಜ್ಯೋತಿರ್ಲಿಂಗವು ಕರದೆ ಕಾಣಿಸಿತು ॥ ೧ ॥

ಇಂತು ಶ್ರೀಶೈಲದ ಘನವ
ಭ್ರಾಂತಿಯಳಿದು ತಿರುಗಿ ನೋಡಿ
ಅಂತರಂಗವ ಗುಡಿಯ ಹೊಕ್ಕೆನೊ। ಓ ಶ್ರೀ ಗುರುಸಿದ್ಧ
ಶಾಂತ ಮಲ್ಲನೆ ನೀನೆಯಾಗಿರ್ದೆ ॥ ೨ ॥

ಧ್ವನಿ : ಪಾಲಲೋಚನರನ್ನುದ್ದೇಶಿಸಿ "ನಾನು ನಿಮ್ಮನ್ನು ಬೆಂಗಳೂರಿಗೆ ಕರೆಸಿಕೊಳ್ಳುತ್ತೇನೆ" ಎಂದು ಹೇಳಿ ಕಾಶಿಗೆ ಹೊರಟರು. ಅಲ್ಲಿ ಗಂಗಾನದಿಯಲ್ಲಿ ಸ್ನಾನ ಮಾಡಿ, ವಿಶ್ವನಾಥನ ಪೂಜೆ ಮಾಡಿ, ಕರಿಬಸವ ಸ್ವಾಮಿಗಳ ಜೊತೆ ಉರವಕೊಂಡಕ್ಕೆ ಬಂದು, ಅಲ್ಲಿಂದ ಬೆಂಗಳೂರಿಗೆ ಹಿಂತಿರುಗಿದರು. ದೇಶ ಪರ್ಯಟನೆ ಸರ್ಪಭೂಷಣರಿಗೆ ಸಾಕಷ್ಟು ಅನುಭವ ನೀಡಿ ಕವಿತಾ ರಚನೆಗೆ ಸ್ಫೂರ್ತಿ ನೀಡಿತು!

ಧ್ವನಿ : ೧೮೨೮ನೇ ಇಸವಿಯ ಒಂದು ದಿನ. ಮಠದಲ್ಲಿ ಗುರುಸಿದ್ಧ ಸ್ವಾಮಿಗಳು ಕುಳಿತಿದ್ದರು. ಅಲ್ಲಿಗೆ ಸರ್ಪಭೂಷಣರು ದೇಶ ಪರ್ಯಟನೆ ಮುಗಿಸಿ ಬಂದರು. ತಮ್ಮ ಅನುಭವಗಳನ್ನು ಗುರುಗಳಲ್ಲಿ ಹಂಚಿಕೊಂಡರು.

ಹಾಡು : ತಮ್ಮೊಳಗಿಹ ತೀರ್ಥಕ್ಷೇತ್ರವನರಿಯದೆ
ಸುಮ್ಮನೆ ತಿರುಗುತಿರ್ಪರು ಮೂಢ ಜನರು ॥ ಪ ॥

ಇಡೆಯೆ ಯಮುನೆ ಪಿಂಗಳೆಯ ಗಂಗೆಯ ಬ್ರಹ್ಮ
ನಾಡಿಯೆಂಬುದೆ ಸರಸ್ವತಿಯ ಮೂರೊಂದು
ಗೂಡಿ ಬೆರೆದ ತ್ರಿಕೂಟವೆ ಸಂಗಮವು ಮಿಕ್ಕ
ನಾಡಿಗಳವು ಸರ್ವ ಪುಣ್ಯ ತೀರ್ಥಗಳು ॥ ೧ ॥

ಶಿರವೆ ಶ್ರೀಗಿರಿ ಕರ್ಣವದುವೆ ಗೋಕರ್ಣವು
ಕಂಗಳೆ ಕಾಂಚಿ ಕುಚವೆ ಕುರುಕ್ಷೇತ್ರ
ಉರವೆ ಉಳವೆ ಭವ್ಯ ಭ್ರೂಮಧ್ಯವದು ಕಾಶೀ
ಪುರವು ಕಂಠವೆ ನೀಲಕಂಠವೆನಿಪುದು ॥ ೨ ॥

ಒಳಗಿಂತು ಪರಿವ ತೀರ್ಥದೆ ಮಿಂದು ತ್ರಿಮಲವ
ತೊಳದೀ ಕ್ಷೇತ್ರಗಳನೊಂದೊಂದನೆ ಹೊಕ್ಕು
ಸುಳಿದಲ್ಲಿ ಗುರುಸಿದ್ಧನಹ ನಾದ ಕಳೆ ಬಿಂದು
ಗಳ ಲಿಂಗಪತಿಯೆಂದು ಭಜಿಪುದು ಮರೆದು ॥ ೩ ॥

ಗುರು : ಸರ್ಪಭೂಷಣರೇ ನೀವು ಇನ್ನು ಈ ಮಠದ ಪಟ್ಟಾಧಿಕಾರ ವಹಿಸಿಕೊಳ್ಳಬೇಕು. ನಾನಿನ್ನು ನನ್ನೂರಿಗೆ ತೆರಳಬೇಕು.

ಸರ್ಪ : ನನಗೆ ಮಠದ ಅಧಿಕಾರದ ಆಸೆ ಇಲ್ಲ ಗುರುಗಳೇ. ಆದರೂ ಗುರುಗಳ ಮಾತನ್ನು ಶಿರಸಾವಹಿಸಿ ನಡೆಸಿಕೊಡುತ್ತೇನೆ.

ಧ್ವನಿ : ಗುರುಗಳು ಶಿವೈಕ್ಯರಾದ ಮೇಲೆ ಸರ್ಪಭೂಷಣರು, ಸಾಹಿತ್ಯಾಭ್ಯಾಸ ರಚನೆ, ಶಿವಪೂಜೆಗಳಲ್ಲಿ ನಿರತರಾಗಿ ಅಟ್ಟದ ಮೇಲೆ ಏಕಾಂತವಾಗಿ ಕುಳಿತು, ಸಾಹಿತ್ಯ ಸಾಮ್ರಾಜ್ಯದಲ್ಲಿ ವಿಹರಿಸುತ್ತಾ, ಸರ್ಪಭೂಷಣ ಶಿವಯೋಗಿಗಳಾದರು!

ಧ್ವನಿ : ಅಂದು ಸರ್ಪಭೂಷಣರು ತಂಗಾಳಿ ಸೇವಿಸುತ್ತಾ ಮಠದ ಮುಂದೆ ಅಡ್ಡಾಡುತ್ತಿದ್ದರು. ಕೆಲವು ಮಂದಿ ಭಕ್ತರೂ ಅಲ್ಲಿ ನೆರದಿದ್ದರು. ಅಲ್ಲಿಗೆ ಹೊಲೆಯರ ಕೆಂಪ ಬಂದು ದೂರದಲ್ಲಿ ಗುರುಗಳಿಗೆ ನಮಸ್ಕರಿಸಿದ.

ಭಕ್ತ : ಏಯ್ ಕೆಂಪ, ನಿನಗೆಷ್ಟು ಪೊಗರು. ಗುರುಗಳ ಹತ್ತಿರಕ್ಕೆ ಬಂದು ನಮಸ್ಕಾರ ಮಾಡ್ತಾ ಇದ್ದಿಯಾ?

ಸರ್ಪ : ಕೆಂಪಾ, ಬಾ,..... ಪಾದಮುಟ್ಟಿಯೇ ನಮಸ್ಕರಿಸು.

ಕೆಂಪ : ತೆಪ್ಪಾಯ್ತು ಬುದ್ಧಿ.

ಸರ್ಪ : ನೀನೂ ಮನುಷ್ಯನೇ ಬಾ.... ಗುರುಗಳು ಹೇಳಿದ ಮೇಲೆ ಇಲ್ಲ ಎನ್ನಬಾರದು. ನಡುಗಬೇಡ ಬಾ.... ಭಕ್ತಿಯಿಂದ ಯಾರು ಮುಟ್ಟಿದರೂ ಅರ್ಪಿತ.

ಭಕ್ತ : ತೆಪ್ಪಾಯ್ತು ಬುದ್ಧಿ.....

ಸರ್ಪ : ಇಂದಿನಿಂದ ಮೇಲುಕೀಳೆಂಬ ಭಾವನೆ ಬಿಡಿ, ಒಳ್ಳೆಯದು.

ಹಾಡು : ಬಿಡು ಬಾಹ್ಯದೊಳು ಡಂಭವ। ಮಾನಸದೊಳ
ಗೆಡೆವಿಡದಿರು ಶಂಭುವ
ಒಡಲೊಳು ವಂಚಿಸಿ, ಹೊರಗೆ ನೀ ಕೀರ್ತಿಯ
ಪಡೆದರೆ ಶಿವ ನಿನಗೊಲಿವನೆ ಮರುಳೇ ॥ ಪ ॥

ಧ್ವನಿ : ೧೮೩೯ನೇ ವರ್ಷ! ಗುಡೇಮಾರನಹಳ್ಳಿ ಕೆಂಗೆರೆ ಪಟ್ಟನ ಮಲ್ಲಿಕಾರ್ಜುನಪ್ಪ, ಕೊಟ್ಟ ರುದ್ರಪ್ಪ, ಫಾಲಲೋಚನರೇ ಮೊದಲಾದವರು ಹೊಸಮಠದ ಕಾರ್ಯದಲ್ಲಿ ಮಗ್ನರಾಗಿದ್ದರು. ಅಲ್ಲಿಗೆ ಸರ್ಪಭೂಷಣರು ಬಂದು "ನಾನಿರುವುದು ಇನ್ನೊಂದೇ ವಾರ" ಎಂದು ಸೂಚನೆ ನೀಡಿದರು.

ಧ್ವನಿ : ಸರ್ಪಭೂಷಣರು ತಮ್ಮ ೪೪ನೇ ವಯಸ್ಸಿನಲ್ಲಿ, ಲಿಂಗದಲ್ಲಿ ಬಯಲಾದರು. ಅವರು ನಮ್ಮಿಂದ ಅಗಲಿದರೂ ಅವರ ವ್ಯಕ್ತಿತ್ವ, ಕೃತಿ ಅಮರವಾಗಿ ನಮ್ಮ ಮನದಲ್ಲಿ ಅಚ್ಚೊತ್ತಿ ನಿಂತಿದೆ. ಶರಣ ಕುಲಕ್ಕೆ ಮಹಾ ಶರಣರಾಗಿ, ಕನ್ನಡ ಸಂಸ್ಕೃತ ಕಾವ್ಯಲೋಕಕ್ಕೊಬ್ಬ ಕವಿಯಾಗಿ, ಆಧ್ಯಾತ್ಮ ಲೋಕಕ್ಕೊಬ್ಬ ಮಹಾತತ್ವಜ್ಞಾನಿಯಾಗಿ, ಸಂಗೀತ ಲೋಕಕ್ಕೊಬ್ಬ ವಾಗ್ಗೇಯಕಾರರಾಗಿ ಮೆರೆಯುತ್ತಿದ್ದಾರೆ. ಮನುಷ್ಯನಾಗಿ ಇಷ್ಟೊಂದು ಸಾರ್ಥಕತೆ ಹೊಂದುವುದಕ್ಕಿಂತ ಹೆಚ್ಚೇನು ಬೇಕು?

*

# ನುಡಿಯೋಜ ಮುಳಿಯ ತಿಮ್ಮಪ್ಪಯ್ಯ

ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಈ ಶತಮಾನದ ಸಾಹಿತ್ಯ ಕ್ಷೇತ್ರದ ದಿಗ್ಗಜಗಳಲ್ಲಿ ಒಬ್ಬರು. ಹಳೆಗನ್ನಡ, ನಡುಗನ್ನಡ, ಹೊಸಗನ್ನಡಗಳಲ್ಲಿ ಪ್ರಕಾಂಡ ಪಂಡಿತರು.

ಧ್ವನಿ ೧: ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ವಿಟ್ಲದ ಹತ್ತಿರದ ಅಳಿಕೆ ಗ್ರಾಮದ ಮುಳಿಯದಲ್ಲಿ ೧೮೮೩ರ ಮಾರ್ಚಿ ಮೂರನೇ ತಾರೀಖು ಕೇಶವ ಹಾಗೂ ಮೂಕಾಂಬಿಕೆಯರ ಮಗನಾಗಿ ಜನಿಸಿದರು. ಇವರ ಒಡಹುಟ್ಟಿದವರು ಶಂಕರಭಟ್ಟ, ನಾರಾಯಣಭಟ್ಟ, ರಾಮಭಟ್ಟ ಹಾಗೂ ಗಂಗಮ್ಮ ಎಂಬ ಹೆಣ್ಣು ಮಗಳು ಜನಿಸಿದರು, ತಿಮ್ಮಪ್ಪಯ್ಯ. ಒಂದು ಕಾಲದಲ್ಲಿ ತಿಮ್ಮಪ್ಪಯ್ಯನವರ ಪೂರ್ವಜರು ಶ್ರೀಮಂತಿಕೆಯಿಂದ ಮೆರೆದು ಆಮೇಲೆ ಬಡತನಕ್ಕೀಡಾದರು. ಪ್ರಾಥಮಿಕ ಶಾಲೆಯ ನಾಲ್ಕನೆಯ ತರಗತಿಯನ್ನು ವಿಟ್ಲದಲ್ಲಿ ಓದಿದರು. ಇವರ ಮೊದಲ ಗುರು ವಾಮನ ಮಾಸ್ತರರು. ಕಲ್ಲಜೆ ಸುಬ್ಬರಾಯ ಶಾಸ್ತ್ರಿಗಳಿಂದ ಸಂಸ್ಕೃತ ಕಲಿತರು. ಒಂದೆರಡು ವರ್ಷಗಳು ತಿರುವನಂತ ಪುರದಲ್ಲಿ ಸಂಗೀತ, ಸಂಸ್ಕೃತ ಕಲಿಯಲು ಹೊರಟರು. ಅಲ್ಲಿಂದ ಮೈಸೂರಿಗೆ ಹೋಗಿ ವಾಸುದೇವಾಚಾರ್ಯರಲ್ಲಿ ಸಂಗೀತ ಕಲಿತರು.

ಧ್ವನಿ ೨: ತಿಮ್ಮಪ್ಪಯ್ಯನವರು ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ಸೇರಿದರು. ೧೯೧೩ರಲ್ಲಿ "ಚಂದ್ರಾವಳಿ ವಿಲಾಸ" ಎಂಬ ಹಳೆಗನ್ನಡ ಕೃತಿಯನ್ನು ಪ್ರಕಟಿಸಿದರು. ೧೯೧೫ರಲ್ಲಿ ಕನ್ನಡ ಕೋಗಿಲೆ ಎಂಬ ಮಾಸ ಪತ್ರಿಕೆಯನ್ನು ಆರಂಭಿಸಿದರು. ಹಬ್ಬ ಹರಿದಿನಗಳಲ್ಲಿ ಕಾವ್ಯವಾಚನ ಮಾಡುತ್ತಿದ್ದರು. ತಾಳಮದ್ದಲೆ ಕೂಟದಲ್ಲಿ ಅರ್ಥಧಾರಿಗಳಾಗಿರುತ್ತಿದ್ದರು. ೧೯೧೬ರಲ್ಲಿ ಮಹಾಬಲ ಭಟ್ಟರ ಮಗಳಾದ ದೇವಕಿಯವರೊಡನೆ ವಿವಾಹವಾಯಿತು. ದಾಂಪತ್ಯ ಜೀವನದಲ್ಲಿ ೪ ಗಂಡು, ಎರಡು ಹೆಣ್ಣು ಮಕ್ಕಳಾದರು. ೧೯೧೮ರಲ್ಲಿ ಸೈಂಟ್ ಅಲೋಸಿಯಸ್ ಕಾಲೇಜಿಗೆ ಸೇರಿ ೧೯೪೮ರವರೆಗೆ ಉಪಾಧ್ಯಾಯವೃತ್ತಿ ಮಾಡಿದರು. ಆಂಡಯ್ಯನ ಕಬ್ಬಿಗರ ಕಾವ ಗ್ರಂಥ ಓದಿ ಆಸ್ವಾದಿಸಿ 'ಸೊಬಗಿನ ಬಳ್ಳಿ' ಕೃತಿಯನ್ನು ರಚಿಸಿ ೧೯೩೧ರಲ್ಲಿ ಪ್ರಕಟಿಸಿದರು. ೧೯೩೧ರಲ್ಲಿ ಕಾರವಾರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ೧೯೩೪ರಲ್ಲಿ

‘ಪಶ್ಚಾತ್ತಾಪ’ ಕಾದಂಬರಿಯು ಹೊರಬಂತು. ೧೯೪೧ರಲ್ಲಿ ಲಕ್ಷ್ಮೇಶ್ವರದಲ್ಲಿ ನಡೆದ ಆದಿಕವಿ ಪಂಪನ ಸಹಸ್ರ ಸಂವತ್ಸರಿಕೋತ್ಸವದ ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು. ಮುಳಿಯ ತಿಮ್ಮಪ್ಪಯ್ಯನವರು ಕಾವ್ಯ, ನಾಟಕ, ಕಾದಂಬರಿ, ಅನುವಾದ, ವಿಮರ್ಶೆ, ಸಂಶೋಧನೆ, ಯಕ್ಷಗಾನ ಮುಂತಾದುವುಗಳನ್ನು ೧೯೧೬ರಿಂದ ೧೯೪೮ರವರೆಗೆ ರಚಿಸಿದರು.

ಧ್ವನಿ ೧: ಮುಳಿಯ ತಿಮ್ಮಪ್ಪಯ್ಯನವರು ಕವಿರಾಜಮಾರ್ಗದಿಂದ ಹಿಡಿದು ಮುದ್ದಣ್ಣನವರೆಗೆ ಪ್ರಾಚೀನ ಸಾಹಿತ್ಯವನ್ನೆಲ್ಲಾ ಅರೆದು ಕುಡಿದರು. ಸಂಸ್ಕೃತದಲ್ಲೂ ಅಷ್ಟೇ ಪಾಂಡಿತ್ಯವನ್ನು ಗಳಿಸಿದರು. (ಮುಳಿಯ ತಿಮ್ಮಪ್ಪಯ್ಯನವರು ತಂದೆ, ಮಗ, ಮೊಮ್ಮಗನ ಗುರುಗಳಾಗಿದ್ದವರು. ಎರಡು ತಲೆಮಾರಿಗೂ ಮಿಕ್ಕ ವಿದ್ಯಾರ್ಥಿಗಳಿಗೆ ಗುರುಗಳಾಗಿ ವಿದ್ಯಾದಾನ ನೀಡಿದ್ದಾರೆ. ವಿದ್ಯಾರ್ಥಿಗಳನ್ನು ಬಹುವಚನದಲ್ಲಿ ಕರೆಯುತ್ತಿದ್ದರು. ಇವರ ಪಾಠಗಳೆಂದರೆ ವಿದ್ಯಾರ್ಥಿಗಳಿಗೆ ಅಷ್ಟೇ ಪ್ರಿಯ). ಮಂಗಳೂರಿನಲ್ಲಿ ಪಂಜೆ, ಉಳ್ಳಾಲ, ಶಾಸ್ತ್ರಿ, ಪೈ, ಕಡಂಗೋಡ್ಲು, ಸೇಡಿಯಾಪು, ಕಾರಂತ, ಉಗ್ರಾಣ ಮುಂತಾದವರ ಮಿತ್ರತ್ವವನ್ನು ಪಡೆದರು.

ಧ್ವನಿ ೨: ತಿಮ್ಮಪ್ಪಯ್ಯನವರ ಬಾಳು ಆಳವಾದ ವ್ಯಾಸಂಗ, ಅರ್ವಾಚೀನ ಪ್ರಾಚೀನ ಸಂಸ್ಕೃತಿಗಳ ಫಲ. ಜೀವನದ ನಾನಾ ಅನುಭವಗಳ ಪರಿಪಕ್ವ ಪರಿಣಾಮ. ಸರ್ವರಲ್ಲೂ ಮೈತ್ರೀ ಭಾವ, ಇವುಗಳಿಂದ ಪುನೀತವಾಗಿತ್ತು.

(ಹಾಡು)

ಧ್ವನಿ ೧: ನಾಡೋಜ ಪಂಪ, ಸಮಸ್ತ ಭಾರತ ಸಾರ, ಆದಿಪುರಾಣ ಸಂಗ್ರಹದ ಗದ್ಯಾನುವಾದ, ರಾವುತ ರಂಗಪ್ಪ, ಶಿವರಾಮ ಚರಿತೆ, ತ್ರಿಪುರ ದಹನ, ೧೯೪೫ರಲ್ಲಿ ಯಕ್ಷಗಾನ ಪಾರ್ತಿ ಸುಬ್ಬನ ಬಗ್ಗೆ ವಿಮರ್ಶಾ ಕೃತಿ, ನವನೀತ ರಾಮಾಯಣ, ಕವಿರಾಜ ಮಾರ್ಗದ ವಿಮರ್ಶೆ, ‘ವೀರಬಂಕೆಯ’ ಎಂಬ ಕಾದಂಬರಿ, ಸೂರ್ಯಕಾಂತಿ ಕಲ್ಯಾಣ ಎಂಬ ಯಕ್ಷಗಾನ, ಪ್ರಬೋಧ ಚಂದ್ರೋದಯವನ್ನನುಸರಿಸಿ ‘ಹಗಲಿರುಳು’ ಎಂಬ ನಾಟಕವನ್ನು ಪ್ರಕಾಶಿಸಿದರು. ೧೯೧೭ರಲ್ಲಿ ‘ನಡತೆಯ ನಾಡು’ ಪ್ರಕಟವಾಯಿತು. ಆಮೇಲೆ ‘ಬಡ ಹುಡುಗಿ’ ಎಂಬ ಖಂಡ ಕಾವ್ಯ ಹೊರಬಂತು. ತಿಮ್ಮಪ್ಪಯ್ಯನವರ ಜೀವನ - ಕೃತಿಗಳ ಅಧ್ಯಯನ ನಡೆಸಿ ಮಹಾಪ್ರಬಂಧ ರಚಿಸಿರುವ ಶ್ರೀ ಕೆ. ಸುಬ್ರಹ್ಮಣ್ಯ ಭಟ್ಟರು ಅವರ ಕೃತಿಗಳ ಬಗ್ಗೆ ಏನು ಹೇಳುತ್ತಾರೆ ಕೇಳೋಣ-

ಇದು ‘ಪ್ರೇಮ ಪಾಶ’ ಕಾವ್ಯದಲ್ಲಿ ಬರುವ ಎರಡು ಪದ್ಯಗಳು:

ಮೌನೇಶ್ ಕುಮಾರ್ ಭಾವಣಿ ಇವರ ಧ್ವನಿಯಲ್ಲಿ

ಬೇಡದ ವಿಚಾರಗಳನಿನ್ನುಂ
ಮಾಡಿ ಗಾಳಿಗೆ ಹಿಡಿವುದೇತಕೆ
ಕೂಡೆ ಆ ಕಾಮಿನಿಯ ಗುಟ್ಟನು ತಿಳಿಯಲುಜ್ಜುಗಿಸು
ಗಾಢವಾಗಿಹ ಮನಕೆ 'ಸೈ'ಯೆಂ
ದಾಡಿದೆನು ಗೂಟಕ್ಕೆ ಕಟ್ಟುತ
ನಾಡಿನಲಿ ಮೇಯಲಿಕೆ ಬಿಟ್ಟಾ ದನದವೊಲು ನಡೆದಂ

ಹಗಲು ಹೆಣ್ಣಿನ ನಲ್ಲನಾದಿ
ನಿಗೆ ಸಮಯ ಬಂದಿತ್ತು ಪಶ್ಚಿಮ
ನಗದ ಮೇಲಿಂ ಬಿದ್ದು ಕಡಲಿಗೆ ನೆಲವ ತೊರೆದುದನು
ಮಿಗೆ ತಿಳಿಸುವೆನೆನುತ್ತ ಕಾಲನು
ಬಗೆದು ಕಳುಹಿದ ಪತ್ರವೋ ಎನೆ
ನೆಗೆದನೈ ಹುಣ್ಣಿಮೆಯ ಚಂದ್ರನು ಮೂಡುವೆಟ್ಟದಲಿ

**ಪಶ್ಚಾತ್ತಾಪ ಕಾದಂಬರಿಯಲ್ಲಿ ಅಳಿಕೆ ಗ್ರಾಮದಲ್ಲಿನ ಮುಳಿಯ ಪ್ರದೇಶದ ಬಣ್ಣನೆ ಮಾಡುವ ಪರಿ ಇದು-**

ಮೇಲು ನಾಡಿನ ಬಯಲಲ್ಲೆ ಪಳಗಿದ ಕಣ್ಣಿಗೆ ಈ ಕೆಳನಾಡಿನ ನೋಟವು ಮೊದಮೊದಲು ಕುತೂಹಲದಾಯಕವಾಗಬಹುದು. ಕಡೆಕಡೆಗೆ ಬೇಸರಿಕೆಯನ್ನೊದಗಿಸಬಹುದು. ನೋಟವು ಒಂದಂತದಲ್ಲಿವಿನ್ನೊಂದು ಅದರಿಂದ ಕುತೂಹಲ. ಹತ್ತಬೇಕು, ಇಳಿಯಬೇಕು, ನಿಲುಕಬೇಕು, ನುಸುಳಬೇಕು. ಅದರಿಂದ ಬೇಸರ. ಮೊತ್ತ ಮೊದಲೊಮ್ಮೆ ಕಡಲಿನ ಬಿಡಾರವಾಗಿತ್ತಂತೆ ಈ ನಾಡು ವಜ್ರಾಘಾತಕ್ಕೆ ಹೆದರಿ ಪರ್ವತಗಳ ಪಿಳ್ಳೆ ಮರಿಗಳೆಲ್ಲ ಈ ಕಡಲಿನಲ್ಲೆಡೆಗೊಂಡವು. ಮಲಯಾಚಲದ ಸಾಲೊಂದು ಪೂರ್ವ ದಿಕ್ಕಿನಲ್ಲಿ ರಕ್ಷಣೆಯ ಆಳ್ವೇರಿಯಾಗಿ ನಿಂತು ಇಂದ್ರಾಯುಧದಿಂದ ರೆಕ್ಕೆಯಳಿದು ಅಲ್ಲೆ ಸ್ತಬ್ಧವಾಯಿತು. ಆಮೇಲೆ ಪರಶುರಾಮನಿಂದ ಕಡಲು ಹಿಂಜರಿದಾಗ ಈ ಕ್ಷೇತ್ರದಲ್ಲಿ ದಟ್ಟವಾಗಿ ನೆಲೆಗೊಂಡ ಘಟ್ಟ ಗುಡ್ಡಗಳು, ಕುದುರು ದಿಣ್ಣೆಗಳು ಎಂದರೆ ಅಂದು ಒಳಹೊಕ್ಕ ಮಲಯಾಚಲದ ಪಿಳ್ಳೆಗಳೇ ಬಹುಕಾಲದ ಜಲವಾನದಿಂದ ಚಳಿ ಹಿಡಿದು ರೆಕ್ಕೆಗಳಿದ್ದರೂ ಸ್ತಬ್ಧವಾಗಿವೆ ಎನ್ನಬಹುದು ಪೌರಾಣಿಕರು.

**'ತ್ರಿಪುರದಾಹ'ದ ಗದ್ಯಾನುವಾದದ ವೈಖರಿ ನೋಡಿ: ಓಲಗಸಾಲೆಯ ಒಂದು ಭಾಗ-**

ದಿನಗಳ ಮೇಲೆ ದಿನಗಳು ಹೊರಳುತ್ತಿದ್ದುವು. ಇಂದ್ರಸೇಣಿಕೆಗನುಗುಣವಾಗಿ ಸುರ ಶಿಲ್ಪಿ ವಿಶ್ವಕರ್ಮನ ಜಾಣ್ಮೆ ಮತ್ತು ಕಾರ್ಯರೂಪವೆನಿಸಿ ಅರಳುತ್ತಲೇ ಇತ್ತು. ದೇವದೇವನ ಒಡ್ಡೋಲಗ ಸಾಲೆಯ ಅಕ್ಕಪಕ್ಕಗಳಲ್ಲಿ ಬಗೆಬಗೆಯ ಭವನಗಳು ಅರಳಲಾರಂಭಿಸಿದುವು, ಕಂಡರಿಯದ, ಕೇಳಿ ತಿಳಿಯದ ನಿರ್ಮಿತಿಗಳೆಷ್ಟೆಷ್ಟೋ. ಬಗೆ ಭಾವಿಸದ ಕನಸೂ ಕಾಣಿಸದ

ರೂಪ ರಚನೆಗಳು ಅಷ್ಟಿಷ್ಟಲ್ಲ. ಹಿಂದಿನ ಸಂಸ್ಕೃತಿಯನ್ನೇ ಹೊಸ ಬಗೆಯಲ್ಲೊಸರಿಸುವ ಕುಸುರಿಯ ಹೆಮ್ಮೆಗಳಿಗೆ ಲೆಕ್ಕವಿಲ್ಲ. ಕಲಾ ದೇವತೆಯೇ ನವರತ್ನಗಳೊಳಗಿನಿಂದ ಮೂಡಿ ಮೈದೋರಿದಂತಿರುವ ದಿವ್ಯ ಮೂರ್ತಿಗಳಲ್ಲಲ್ಲಿ. ಹೆಚ್ಚೇನು? ಹಿಂದಿನ ಓಲಗಸಾಲೆ, ಅಂದು ಮುಗಿಲು ಮುಟ್ಟುವ ರಾಜಾಲಯವಾಗಿ ಪರಿಣಮಿಸಿ ತೋರುತ್ತಿತ್ತು.

**ರಾವುತ ರಂಗಪ್ಪ ನಾಟಕದ ಒಂದು ತುಣುಕು ಇದು-**

ರಂಗ : ಯಾರೋ ನೀನು?

ಹೊ.ಹೊ : ನಾನು ಬುದ್ಧಿ.

ರಂಗ : ನಾನು ಎಂದರೆ ಹೆಸರಿಲ್ಲವೆ?

ಹೊ.ಹೊ : ಉಂಟು.

ರಂಗ : ಏನದು?

ಹೊ.ಹೊ : ಹೊಚ್ಚ ಹೊಸಗನ್ನಡ.

ರಂಗ : ಇಂಥ ಹೆಸರೂ ಮನುಷ್ಯರಿಗಿರುವುದೆ?

ಹೊ.ಹೊ : ಹೌದು ಬುದ್ಧಿ, ಹಿರಿಯರಿಂದ ಬಂದ ಹೆಸರಿದು.

ರಂಗ : ಹಾಗೆಂದರೇನು?

ಹೊ.ಹೊ : ನನ್ನ ಹೆಸರು ಗೊತ್ತಾಯಿತಷ್ಟೆ ಹೊಚ್ಚ ಹೊಸಗನ್ನಡವೆಂದು, ನನ್ನಪ್ಪನದು ಹೊಸಗನ್ನಡ, ಅಜ್ಜನದು ಕನ್ನಡವೆಂದು, ಹಾಗೆಯೇ ಹಿಂದೆ ಹಿಂದೆ ಹೋಗುತ್ತಿದೆ ಆ ಹೆಸರುಗಳ ಸಾಲು.

ರಂಗ : ಹೇಗೆ?

ಹೊ.ಹೊ : ಅಜ್ಜನ ಹೆಸರು ಕನ್ನಡವೆಂದಷ್ಟೆ. ಅವನಪ್ಪ ಹಳೆಗನ್ನಡ, ಅವನ ಹಿರಿಯನದು ಹಳೆಯ ಹಳಗನ್ನಡವೆಂದಂತೆ, ಅವನಿಂದತ್ತಣವನದು ಹಚ್ಚ ಹಳೆಯ ಹಳೆಗನ್ನಡವೆನ್ನುತ್ತಾರೆ. ಅವನ ಹಿಂದಿನವನದು ಬೆಳ್ಗನ್ನಡವೆಂದಾಗಿರಬಹುದಂತೆ. ಅವನ ಹಿಂದೆ ಬೆಳ್ಬೆಳುಗನ್ನಡ, ಬೆಚ್ಚಬೆಳ್ಬೆಳುಗನ್ನಡ ಎಂದು ಮೊದಲಾಗಿರ- ಬಹುದೆನ್ನುತ್ತಾರೆ.

ರಂಗ : ಯಾರು?

ಹೊ.ಹೊ : ಹಳಬರು.

ರಂಗ : ಹೋಗಲಿ ಆ ಹಳಬರ ತಂಗಳು ಈ ನಿನ್ನ ಊಹಿರಿಯರೊಳಗೆ, ಈಗ ಯಾರಿದ್ದಾರೆ?

ಹೊ.ಹೊ : ನಮ್ಮಪ್ಪ ಹೊಸಗನ್ನಡ, ನಮ್ಮಮ್ಮ ಹೊಸಗನ್ನಡಿ ಮಾತ್ರ.

ರಂಗ : ಭಲೇ ಇರಲಿ ಹೊಸಗನ್ನಡಿ ಎಂದು ನಿನ್ನಮ್ಮನ ಹೆಸರೆ.

ಹೊ.ಹೊ : ಹೌದು ಬುದ್ಧಿ, ಅವಳಿಂದಲೇ ಈ ಹೊಚ್ಚ ಹೊಸಗನ್ನಡ ತಲೆದೋರಿಮುದು.

ರಂಗ : ಅವಳ ತವರೂರಾವುದು?

ಹೊ.ಹೊ : ಮೇಲೂರು.

ರಂಗ : ಭಲಾ ಬಲ್ಲವನೇ ಸರಿ. ನೋಡು ನಾವೀಗ ಹೊಚ್ಚ ಹೊಸಗನ್ನಡದ ರಾಜ್ಯವನ್ನು ನೆಲೆಗೊಳಿಸಲಿಕ್ಕೇ ಹೊರಟುದು.

ಹೊ.ಹೊ : ಹಾಗಾದರೆ ನೆಲೆಗೊಳ್ಳುವ ರಾಜ್ಯವೆಂದರೆ ನನ್ನದೇ ಬುದ್ಧಿ.

ರಂಗ : (ನಗುತ್ತಾ) ಹುಂ, ಆದರೆ ಹೊಚ್ಚ ಹೊಸಗನ್ನಡವಲ್ಲದೆ ಬೇರೊಂದೂ ಅಲ್ಲಿ ತಲೆದೋರದಂತೆ ನೋಡಿಕೊಳ್ಳಬೇಕು.

ಹೊ.ಹೊ : ಅದು ಹೇಗೆ ಬುದ್ಧಿ?

ರಂಗ : ಅವೆಲ್ಲ ಸತ್ತು ಹೋದ ಹೆಣಗಳು.

ಹೊ.ಹೊ : ಅಲ್ಲ ಬುದ್ಧಿ, ನಮ್ಮಪ್ಪ ಇದ್ದಾನೆ.

ರಂಗ : ಇರಲಿ ಹೊಸಗನ್ನಡವಲ್ಲವೆ? ದೋಷವಿಲ್ಲ.

ಹೊ.ಹೊ : ಅಜ್ಜ ಮೊದಲಾದವರೆಲ್ಲರೂ ಇದ್ದಾರೆ.

ರಂಗ : (ಕೆ[illegible]) ಎಲ್ಲಿದ್ದಾರೆ?

ಹೊ.ಹೊ : ಮನೆಯಲ್ಲಿದ್ದಾರೆ.

ರಂಗ : ಏನು ಅವರಿನ್ನೂ ತಿರುಗಾಡುವಷ್ಟು ಬಲಗೊಂಡಿದ್ದಾರೆಯೇ?

ಹೊ.ಹೊ : ಹೌದು, ಆಗಾಗ ಹೊರಗೂ ಬರುತ್ತಾರೆ. ಆದರೆ ನಮ್ಮಂಥ ಹುಡುಗಾಟದವರಂತೆ ಊರೆಲ್ಲಾ ಅಲೆದಾಡುವುದಿಲ್ಲ, ಅವರಿಲ್ಲದಿರುತ್ತಿದ್ದರೆ ನಮ್ಮ ಮನೆಯೇ ಕಾಡಾಗುತ್ತಿತ್ತು ಬುದ್ಧಿ.

**ಆದಿಕವಿ ಪಂಪನ ಸಹಸ್ರ ಸಾಂವತ್ಸರಿಕೋತ್ಸವದ ಅಧ್ಯಕ್ಷ ಭಾಷಣ ಮಾಡಿದ ಪಂಡಿತ ಮುಳಿಯ ತಿಮ್ಮಪ್ಪಯ್ಯನವರು–**

"ನಮ್ಮ ಕನ್ನಡ ನಾಡಿಗೆ ಸ್ಫೂರ್ತಿ, ಕೀರ್ತಿಗಳನ್ನೊದಗಿಸಿದ ಚತುರಂಗ ಬಲ ಭಯಂಕರನು, ಕವಿತಾ ಗುಣಾರ್ಣವನು ನಾಡೋಜನು. ಆ ಮಹಾ ವಿಭೂತಿ ಪುರುಷನ ಸಹಸ್ರ ವಾರ್ಷಿಕ ಸ್ಮಾರಕೋತ್ಸವವನ್ನು ನೆರವೇರಿಸುವುದಕ್ಕೆ ಹೊಸದೊಂದು ಹುರುಪನ್ನು

ಕನ್ನಡ ನಾಡಿನಲ್ಲಿ ತುಂಬಿಸುವುದಕ್ಕೆ ಸಾಜದ ಪುಲಿಗೆರೆಯ ತಿರುಳ ಕನ್ನಡ ನಾಡಿನಲ್ಲಿ ಈಗ ಕೂಡಿದ್ದೇವೆ. ನಾಡೋಜನ ಭಕ್ತರೊಳಗೆ ನಾನೂ ಒಬ್ಬ ಬಡ ಭಕ್ತನು ಎಂಬಲ್ಲಿ ಸಂದೇಹವಿಲ್ಲ. ಆಮಂತ್ರಣವನ್ನು ಶಿರಸಾವಹಿಸಿದೆನು. ಈ ಸೇವೆಯಲ್ಲಿ ಬತ್ತದೊಡನಿರುವ ಜಳ್ಳನ್ನು ಹಾರಿಸಿಕೊಳ್ಳುವುದೆಂದಷ್ಟೇ ಭಾವಿಸಬೇಡಿರಿ ಜಳ್ಳಿನೊಡನೆ ಇರಬಹುದಾದ ಬತ್ತವನ್ನು ಆರಿಸಿಕೊಳ್ಳುವ ತೊಡಕೂ ಆಗಬಹುದು. ಹೇಗಿದ್ದರೂ ಹಿಂದಣ ಮಮಕಾರದಿಂದಲೇ ನನ್ನ ನ್ಯೂನತೆಗಳನ್ನೆಲ್ಲಾ ಪರಿಹರಿಸಿರೆಂದು ಪ್ರಾರ್ಥಿಸುತ್ತೇನೆ."

ಈ ಅಧ್ಯಕ್ಷ ಪೀಠ ಮುಖ ನೋಡಿ ಮಣೆಹಾಕಿದುದಲ್ಲ, ಹಣ ನೋಡಿ ಕೊಟ್ಟ ಸ್ಥಾನವಲ್ಲ, ಅಧಿಕಾರ ನೋಡಿ ನೀಡಿದ ಗೌರವವಲ್ಲ, ಇದು ಯೋಗ್ಯತೆಗೆ ಸಿಕ್ಕಿದ ಪುರಸ್ಕಾರ! ಮುಳಿಯ ತಿಮ್ಮಪ್ಪಯ್ಯನವರ ಈಗಿರುವ ಮೂರು ಪುತ್ರರನ್ನು ಮಾತನಾಡಿಸಲಾಯಿತು.

ಮೊದಲಿಗೆ ಎಂ. ಮಹಾಬಲ ಭಟ್ಟ:

ಗೋಪಾಲಕೃಷ್ಣ ಭಟ್ಟ:

ಎಂ. ರಾಘವಯ್ಯನವರನ್ನು ಮಾತನಾಡಿಸಿದಾಗ:

ಕಡಂಗೋಡ್ಲು ಶಂಕರ ಭಟ್ಟರ ಹೆಂಡತಿ ಶ್ರೀಮತಿ ಕಮಲಮ್ಮ ಅವರ ಅಭಿಪ್ರಾಯಗಳು:

ಮುಳಿಯ ತಿಮ್ಮಪ್ಪಯ್ಯನವರ ಶಿಷ್ಯ ಶ್ರೀಯುತ ರೋಡ್ರಿಗಸ್ ಅವರ ವಿದ್ಯಾರ್ಥಿ ಜೀವನದ ನೆನಪುಗಳು:

ಧ್ವನಿ ೧ : ತಿಮ್ಮಪ್ಪಯ್ಯನವರದು ಸಾತ್ವಿಕ ಸ್ವಭಾವ, ಮೃದು ಮನಸ್ಸು, ನಗುಮುಖ, ಪ್ರಸನ್ನ ಶಾಂತ ಚಿತ್ತವೃತ್ತಿ, ಗೌರವ ಗಂಭೀರಭಾವ. ವಿದ್ಯಾರ್ಥಿಗಳ ಮೇಲೆ ನಿರ್ಮಲ ಪ್ರೇಮ, ಒಡನಾಡಿಗಳೊಡನೆ ನಯ ವಿನಯ ಸೌಜನ್ಯ ವರ್ತನೆ, ನಿರಹಂಕಾರ, ನಿರ್ವಂಚನೆ, ಸಮಭಾವನೆಗಳ ಸರಳ ಜೀವನದ ಪ್ರತಿರೂಪ.

ಧ್ವನಿ ೨ : ಬಿ.ಎಂ. ಶ್ರೀಕಂಠಯ್ಯನವರು ಇವರ ವಿದ್ವತ್ತಿಗೆ ತಲೆದೂಗಿದರು. "ಮುಳಿಯದ ತಿಮ್ಮಪ್ಪಯ್ಯನವರು ಎಂದೂ ಮುಳಿಯದವರು" ಎಂದು ಹೇಳಿದ್ದರು.

ಧ್ವನಿ ೧ : ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಹೇಳುವಂತೆ ತಿಮ್ಮಪ್ಪಯ್ಯನವರದು ಸರಳ ಸ್ವಭಾವ, ಮಕ್ಕಳ ಮನಸ್ಸಿನಂತೆ ಮೃದು. ಸವ್ಯಸಾಚಿಗಳಂತೆ ಸಂಸ್ಕೃತ ಹಳೆಗನ್ನಡದಲ್ಲಿ ವಿದ್ವಾಂಸರಾಗಿದ್ದರು. ಯಕ್ಷಗಾನ, ದೇಸಿ, ನುಡಿಗಟ್ಟು, ಗಾದೆ, ಸರ್ವಜ್ಞ, ತಾಳಮದ್ದಲೆ, ತುಳುಭಾಷೆ, ದಕ್ಷಿಣ ಕನ್ನಡ ಜಿಲ್ಲೆಯ ಆಚಾರ, ಆಹಾರ, ನಡೆ, ನುಡಿ, ಭಾಷೆ, ಈ ಎಲ್ಲಾ ಅನುಭವಗಳ ರಸಾಯನಜ್ಞ." ತಿಮ್ಮಪ್ಪಯ್ಯನವರು ಶುದ್ಧವಾಗಿ ಮಾತನಾಡುತ್ತಿದ್ದರು. ಅಶುದ್ಧವಾಗಿ ಮಾತನಾಡುವವರನ್ನು ಅವರು ಸಹಿಸುತ್ತಿರಲಿಲ್ಲ. ಇವರದು ಪೂರ್ವಿಕರ ಮಾರ್ಗದ ಶಾಸ್ತ್ರೀಯ ವಿಮರ್ಶಾ ಪದ್ಧತಿ. ಯಕ್ಷಗಾನದ ಮಟ್ಟಿಗೆ ಅವರೇ ಒಂದು ವಿಶ್ವಕೋಶವಾಗಿದ್ದರು.

ಧ್ವನಿ ೨ : ಮುಳಿಯ ತಿಮ್ಮಪ್ಪಯ್ಯನವರ ಬಾಳು ಆಳವಾದ ವ್ಯಾಸಂಗ, ಅರ್ವಾಚೀನ ಪ್ರಾಚೀನ ಸಂಸ್ಕೃತಿಗಳ ಫಲ, ಜೀವನದ ನಾನಾ ಅನುಭವಗಳ ಪರಿಪಕ್ವ ಪರಿಣಾಮ, ಸರ್ವರಲ್ಲಿಯೂ ಮೈತ್ರೀ ಭಾವ ಇವುಗಳಿಂದ ಪುನೀತವಾಗಿತ್ತು.

ಇರುವಷ್ಟು ದಿನ ದೊಡ್ಡವರಾಗಿ ಬಾಳಿದರು. ವಿದ್ವಾಂಸರಾಗಿ ಮನ್ನಣೆ ಪಡೆದರು. ಕವಿಗಳಾಗಿ ಮೆರೆದರು. ಗಮಕಿಗಳಾಗಿ ಜನಮನ ಸೂರೆಗೈದರು. ಸಂಶೋಧಕರಾಗಿ, ವೈಯಾಕರಿಣಿಗಳಾಗಿ ಕೀರ್ತಿ ಗಳಿಸಿದರು. ಅಧ್ಯಾಪಕರಾಗಿ ಗೌರವ ಪಡೆದರು. ಕನ್ನಡ ಸಾಹಿತ್ಯೇತಿಹಾಸದಲ್ಲಿ ಮುಳಿಯ ತಿಮ್ಮಪ್ಪಯ್ಯನವರ ಹೆಸರು ಎಂದೂ ಅಳಿಯದ ಶಾಶ್ವತವಾಗಿ ಉಳಿಯುವ ಹೆಸರು. ನುಡಿಯೋಜ ಮುಳಿಯ ತಿಮ್ಮಪ್ಪಯ್ಯ ಅಭಿನವ ಮುದ್ದಣ ಎಂಬ ಖ್ಯಾತಿಗೆ ಪಾತ್ರರಾದರು.

*

# ಸ್ವಾತಂತ್ರ್ಯ ಹೋರಾಟಗಾರರು

## ಡಾ॥ ಬಾಬು ರಾಜೇಂದ್ರ ಪ್ರಸಾದ್

ಭಾರತ ಮಾತೆ : ನನ್ನ ಬಿಡುಗಡೆಗೆ ಹೋರಾಡಿದ ಧೀರರು ಅನೇಕರು. ಸ್ವಾತಂತ್ರ್ಯ ಹೋರಾಟಗಾರರಲ್ಲಿ ತಮ್ಮ ಅಮೋಘ ಸೇವೆಯಿಂದ ದೇಶ ವಿದೇಶಗಳಲ್ಲಿ ನನ್ನ ಕೀರ್ತಿ ಮೊಳೆಯುವಂತೆ ಮಾಡಿದ ಪ್ರತಿಭಾವಂತರು ಅನೇಕರು. ಅಂಥವರಲ್ಲಿ ತನ್ನ ಚಾಣಾಕ್ಷತೆ, ಪರಿಶ್ರಮ ಸ್ನೇಹ, ಔದಾರ್ಯಗಳಿಂದ ಅಜಾತಶತ್ರು ಎಂದೇ ಹೆಸರಾದ ಬಾಬು ರಾಜೇಂದ್ರ ಪ್ರಸಾದರ ಜೀವನದಿಂದ ಇತರರು ಕಲಿಯಬಹುದಾದ್ದೂ ಬಹಳ. ಅಂಥ ಸ್ಫೂರ್ತಿದಾಯಕ ಕಥೆ ಡಾ॥ರಾಜೇಂದ್ರ ಪ್ರಸಾದರದು. ಆತನ ಕಥೆ ಹೇಳುವೆ...... ನನ್ನ ಕಥೆ ಹೇಳುವೆ.

(ಸಂಗೀತ)

ಬಿಹಾರದ ಸಾರಣ ಜಿಲ್ಲೆಯ ಜೀರಾದೇವಿಯೆಂಬ ಹಳ್ಳಿಯಲ್ಲಿ ಮಹಾದೇವ ಸಹಾಯ್, ಕಮಲೇಶ್ವರಿ ದೇವಿಯರ ಕಿರಿಯ ಪುತ್ರನಾಗಿ ರಾಜೇಂದ್ರ ಪ್ರಸಾದ್ ಜನಿಸಿದ. ಬದುಕಿದ್ದರೆ, ಇಂದು ಅವನು ೧೦೪ ವರ್ಷದವನು ಇರುತ್ತಿದ್ದ. ಕಾಯಸ್ಥ ಮನೆತನ ಈತನದು. ತಂದೆ ಚಿಕ್ಕಂದಿನಲ್ಲಿ ರಾಜೇಂದ್ರನಿಗೆ ಕುದುರೆ ಸವಾರಿ ಕಲಿಸಿದ. ಹನ್ನೆರಡು ವರ್ಷದಲ್ಲೇ ಮದುವೆ ಆಯಿತು, ರಾಜವಂಶಿದೇವಿಯರೊಡನೆ. ಬಿ.ಎ. ಪರೀಕ್ಷೆಯಲ್ಲಿ ಕಲ್ಕತ್ತಾ ವಿಶ್ವವಿದ್ಯಾನಿಲಯಕ್ಕೆ ಪ್ರಪ್ರಥಮನಾಗಿ ಈತ ಉತ್ತೀರ್ಣ ಹೊಂದಿದ!

ನಿರೂಪಕ : ೧೯೦೬ರಲ್ಲಿ ಕಲ್ಕತ್ತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಥಮ ಬಾರಿಗೆ ಸ್ವಯಂ ಸೇವಕನಾಗಿ ಸೇವೆ ಸಲ್ಲಿಸಲು ರಾಜೇಂದ್ರರಿಗೆ ಅವಕಾಶವಾಯಿತು. ಐ.ಸಿ.ಎಸ್. ಮಾಡಬೇಕು ಎಂಬ ಆಸೆ ಇದ್ದರೂ ಎಂ.ಎ.,ಬಿ.ಎಲ್. ಮಾಡಿ ವಕೀಲಿ ವೃತ್ತಿ ಮಾಡುವಂತಾಯಿತು. ಇದಾದ ಮೇಲೆ ಲಾ ಕಾಲೇಜಿನ ಪ್ರೊಫೆಸರ್ ಆದರು.

೧೯೧೭ರಲ್ಲಿ ಚಂಪಾರಣ್ಯಕ್ಕೆ ಗಾಂಧಿ ಬಂದರು. ಆಗ ರಾಜೇಂದ್ರ ಬಾಬು ಗಾಂಧೀಜಿಯ ಸಂಪರ್ಕಕ್ಕೆ ಬಂದು ತಮ್ಮ ಬದುಕನ್ನು ಕಾಂಗ್ರೆಸ್ಸಿಗೆ ಮುಡುಪಾಗಿಡಲು

ನಿರ್ಧರಿಸಿದರು. ಇಡೀ ಕುಟುಂಬವೇ ಇವರ ಸಹಾಯಕ್ಕಾಗಿ ಬಾಯ್ದೆರೆದು ನಿಂತಾಗಲೂ, ರಾಜೇಂದ್ರಬಾಬು ದೇಶ ಸೇವೆಗಾಗಿ ತಮ್ಮ ಜೀವನವನ್ನು ಮೀಸಲಿಟ್ಟರು.

(ಹಿಂದಿ ಸ್ವಾತಂತ್ರ್ಯ ಗೀತೆ)

ಭಾರತಮಾತೆ : ಗಾಂಧಿಯವರು ರಾಜೇಂದ್ರನ ಮನದಲ್ಲಿ ಬಿತ್ತಿದ ಅಸಹಕಾರ ಮಂತ್ರ ಪ್ರಭಾವ ಪೂರ್ಣವಾಗಿತ್ತು. ಅಸಹಕಾರ ನಿರ್ಣಯ ಕಾರ್ಯಗತವಾಗಲು ರಾಜೇಂದ್ರ ವಕೀಲಿ ಕೆಲಸ ಬಿಟ್ಟರು. ಪಾಟ್ನಾ ವಿಶ್ವವಿದ್ಯಾಲಯದ ಸೆನೆಟ್, ಸಿಂಡಿಕೇಟ್ ಸದಸ್ಯ ಸ್ಥಾನಕ್ಕೆ ರಾಜೀನಾಮೆ ನೀಡಿದರು.

ಒಬ್ಬ : ನೀವು ಸೆನೆಟ್ ಸದಸ್ಯತ್ವಕ್ಕೆ ರಾಜೀನಾಮೆ ನೀಡಬಾರದಿತ್ತು.

ರಾ.ಪ್ರಸಾದ್ : ಏಕೆ?

ಒಬ್ಬ : ಏಕೆಂದರೆ ನಿಮ್ಮಂಥ ಶಿಕ್ಷಣ ತಜ್ಞರ ಅವಶ್ಯಕತೆ ಇದೆ ಶಿಕ್ಷಣ ಕ್ಷೇತ್ರಕ್ಕೆ.

ರಾ.ಪ್ರಸಾದ್ : ನಾನು ಇದ್ದು ಮಾಡುವುದಾದರೂ ಏನು? ಮಾತೃಭಾಷೆಯಲ್ಲಿ ಮೆಟ್ರಿಕುಲೇಶನ್‌ವರೆಗಾದರೂ ಮಾಧ್ಯಮ ತರಬೇಕೆಂದು ಬೇಕಾದಷ್ಟು ಪ್ರಯತ್ನಪಟ್ಟೆ. ಆದರೆ ಅದು ಫಲಿಸಲಿಲ್ಲ. ನಾನು ಈ ಸದಸ್ಯತ್ವದಲ್ಲಿದ್ದು ಪ್ರಯೋಜನವೇನು ಹೇಳಿ? ಅದಕ್ಕಾಗಿ ರಾಜೀನಾಮೆ ಇತ್ತೆ.

ಒಬ್ಬ : ಇದರ ಬಗೆಗೆ ಎಷ್ಟೋ ಜನರ ಅಸಮಾಧಾನವಿದೆ.

ರಾ.ಪ್ರಸಾದ್ : ಕಾಲೇಜಿನಲ್ಲಿ ಪ್ರಾಧ್ಯಾಪಕ, ಇಲ್ಲವೆ ಪ್ರಾಚಾರ್ಯ ವೃತ್ತಿ ಮಾಡಿದರಾಯಿತು.

(ಸಂಗೀತ)

ನಿರೂಪಕ : ೧೯೨೦ರಲ್ಲಿ 'ದೇಶ್' ಎಂಬ ಹಿಂದಿ ಪತ್ರಿಕೆಯ ಸಂಪಾದಕರಾಗಿಯೂ ಕೆಲಸ ಮಾಡಿದರು. ಬಿಹಾರದ ಬರಗಾಲದಲ್ಲಿ ಕಷ್ಟಕಾಲದಲ್ಲಿ ಗಾಂಧೀಜಿಯವರೊಡನೆ ಶ್ರಮಿಸಿದರು.

ಖಾದಿ ಪ್ರಚಾರ, ವಿದ್ಯಾಪೀಠದ ಕೆಲಸದ ನಿರ್ವಹಣೆ ಇವರದಾಯಿತು. ಇವರ ಬದುಕೇ ಸ್ವಾತಂತ್ರ್ಯದ ಹೋರಾಟದ ಕಥೆ ಆಯಿತು. ಗಾಂಧೀಜಿ ಅವರ ಬಲಗೈ ಬಂಟನಂತಿದ್ದು ಹಲವು ಭಾರಿ ಜೈಲು ಅನುಭವಿಸಬೇಕಾಯಿತು.

ಭಾರತಮಾತೆ : ರಾಜೇಂದ್ರ ಊರೂರಲ್ಲಿ ಚಳವಳಿಯಲ್ಲಿ ಭಾಗವಯಿಸುತ್ತಿದ್ದ. ಗಡಬಾಕ್ಕೆ ಹೋಗುವಾಗ ಪೊಲೀಸರು ಬಂಧಿಸಿ, ಆರು ತಿಂಗಳು ಜೈಲು ಶಿಕ್ಷೆ ವಿಧಿಸಿದರು. ಅಲ್ಲಿಂದ ಹಜಾರಿಬಾಗ್ ಜೈಲಿಗೆ ಕಳುಹಿಸಲಾಯಿತು. ಅಲ್ಲಿ ಮಿತ್ರರೊಡನೆ ಮಾತಾಡುವುದು, ನೂಲುವುದು ಮಾಡಿ ಕಾಲ

ಕಳೆದರು. ಓದುವ ಅವಕಾಶವಿರಲಿಲ್ಲ. ೧೯೩೩ನೇ ಇಸವಿಯಲ್ಲೊಂದು ದಿನ ಅಣ್ಣ ಮಹೇಂದ್ರ ಪ್ರಸಾದ್ ಜೈಲಿನಲ್ಲಿದ್ದ, ರಾಜೇಂದ್ರನನ್ನು ನೋಡಲು ಬಂದಿದ್ದರು.

ಮಹೇಂದ್ರ : ಹ್ಯಾಗಿದೆಯಪ್ಪಾ ಆರೋಗ್ಯ.

ರಾ.ಪ್ರಸಾದ್ : ಸ್ವಲ್ಪ ಉಬ್ಬಸ ಬಂದಿತ್ತು. ವೈದ್ಯರು ನೋಡಿಕೊಳ್ಳುತ್ತಿದ್ದಾರೆ. ನೀನೇಕೆ ತೊಂದರೆ ತೆಗೆದುಕೊಂಡು ಬಂದೆಯಣ್ಣಾ.

ಮಹೇಂದ್ರ : ಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾನೆ ಎಂಬುದನ್ನು ತಿಳಿದು ಬೇಗ ಬಂದೆ ಕಣೋ. ರಾಂಚಿಗೆ ಹೋಗಿ ಉನ್ನತ ಅಧಿಕಾರಿಗಳನ್ನು ಕಂಡು ನಿನ್ನನ್ನು ಪಾಟ್ನಾ ಜೈಲಿಗೆ ವರ್ಗ ಮಾಡಿಸುತ್ತೇವೆ.

ರಾ.ಪ್ರಸಾದ್ : ಜೈಲು ಯಾವುದಾದರೇನು?

ಮಹೇಂದ್ರ : ನಮಗೆ ನಿನ್ನನ್ನು ನೋಡಿಕೊಳ್ಳಲು ಉತ್ತಮವಾಗುತ್ತದೆ.

ನಿರೂಪಕ : ಪಾಟ್ನಾ ಜೈಲಿಗೆ ವರ್ಗವಾಯಿತು. ಚಿಕಿತ್ಸೆ ಆರಂಭವಾಯಿತು. ಅಲ್ಲಿಗೆ ಅನೇಕ ಕಾಂಗ್ರೆಸ್ಸಿಗರು ಬರುತ್ತಿದ್ದರು. ಸರ್ಕಾರ ಮತ್ತೆ ಬಾಂಕಿ ಪುರದ ಜೈಲಿಗೆ ಕಳುಹಿಸಿತು. ಮತ್ತೆ ಆಸ್ಪತ್ರೆಗೆ ಸೇರಿಸಲಾಯಿತು. ಹದಿನೈದು ತಿಂಗಳ ಶಿಕ್ಷೆ ೧೨ ತಿಂಗಳಿಗೆ ಇಳಿಯಿತು. ರಾಜೇಂದ್ರರ ಸಂಸಾರವನ್ನು ಅಣ್ಣ ಮಹೇಂದ್ರರೇ ತೂಗಿಸುತ್ತಿದ್ದರು. ವಕೀಲಿ ವೃತ್ತಿಯಿಂದ ಬರುತ್ತಿದ್ದ ಸಂಪಾದನೆಯನ್ನು ಕಾಂಗ್ರೆಸ್ ಸಲುವಾಗಿ ಉಪಯೋಗಿಸುತ್ತಿದ್ದರು. ಅಣ್ಣ ತೀರಿಕೊಂಡ ಮೇಲೆ ಸಂಸಾರದ ಪೂರ್ತಿ ಜವಾಬ್ದಾರಿ ಇವರ ಮೇಲೆ ಬಿತ್ತು. ಗಾಂಧಿಯವರು ಇವರನ್ನು ಮುಂಬಯಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರನ್ನಾಗಿ ಮಾಡಿದರು. ನಾಗಪುರದ ಹಿಂದಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದರು. ಬಿಹಾರದ ಕೋಮುವಾರು ಗಲಭೆಯನ್ನು ನಿಲ್ಲಿಸಲು ಅವಿರತ ಶ್ರಮಿಸಿದರು.

ಭಾರತಮಾತೆ : ೧೯೪೨ ಆಗಸ್ಟ್ ಎರಡು ಗಾಂಧೀಜಿ 'ಮಾಡು ಇಲ್ಲವೇ ಮಡಿ' ಎಂದು ಘೋಷಿಸಿದರು. ಇದೇ ಕ್ವಿಟ್ ಇಂಡಿಯಾ ಚಳುವಳಿಗೆ ನಾಂದಿಯಾಯಿತು. ಎಳೆಯ ತರುಣರು ಅಸು ನೀಗಿದ್ದರು. ಹಲವರು ಬಂಧಿತರಾಗಿದ್ದರು. ಚಳುವಳಿ ಉಗ್ರರೂಪ ತಾಳಿತ್ತು. ರಾಜೇಂದ್ರ ಜೈಲಿನಲ್ಲಿ ಪಾಕಿಸ್ತಾನದ ರೂಪೀಕರಣದ ಬಗ್ಗೆ ಪುಸ್ತಕ ಬರೆದ. ಹೆಸರು - ಇಂಡಿಯಾ ಅನ್ ಡಿವೈಡೆಡ್ ಎಂದು......

ಕಮೀಷನರ್ : ಏನು? ಈ ಪುಸ್ತಕವನ್ನು ಪ್ರಕಟಿಸುತ್ತೀರಾ?

ರಾ.ಪ್ರಸಾದ್ : ಸರ್ಕಾರ ಅನುಮತಿ ಕೊಟ್ಟರೆ.

ಕಮಿಷನರ್ : ಅಕ್ಷರ ಸ್ಪಷ್ಟವಾಗಿಲ್ಲ. ಸರಿಯಾಗಿ ನೋಡಬೇಕು. ಟೈಪ್ ಮಾಡಿಸಿಕೊಡಿ ನೋಡೋಣ, ಸರ್ಕಾರದ ಮುಂದಿಡುತ್ತೇವೆ. ಒಪ್ಪಿಗೆಯಾದರೆ ನೀವು ಮನೆಗೆ ತೆಗೆದುಕೊಂಡು ಹೋಗಬಹುದು. ಇಲ್ಲದಿದ್ದರೆ, ಅನುಮತಿಯನ್ನು ಕೊಡಲಾಗದು.

ರಾ.ಪ್ರಸಾದ್ : ಆಯಿತು.

ಭಾರತಮಾತೆ : ೧೯೪೫ರಲ್ಲಿ ರಾಜೇಂದ್ರ ಪ್ರಸಾದರ ಬಿಡುಗಡೆಯಾಯಿತು. ೧೯೪೯ರಲ್ಲಿ ಇಂಡಿಯಾ ಅನ್‌ಡಿವೈಡೆಡ್ ಹೊತ್ತಗೆ ಪ್ರಕಟಿಸಿದರು. ನಂತರ ಮಂತ್ರಿಗಳಾಗಿ ೨೬ ವರ್ಷಗಳು ಕಾಂಗ್ರೆಸ್ ಚಟುವಟಿಕೆಗಳಲ್ಲಿ ಕಾಲ ಕಳೆದರು.

ಯುದ್ಧದ ಪರಿಣಾಮದಿಂದ ದೇಶ ಭೀಕರ ಬರಗಾಲ ಎದುರಿಸಬೇಕಾಯಿತು. ಅಮೇರಿಕಾ ಕೊಟ್ಟ ಅಲ್ಪ ಸಹಾಯ ಸಾಲದೆ ಹೋಯಿತು. ರಾಜೇಂದ್ರರು ಅವಿರತ ಹೋರಾಡಿದರು. ಗಾಂಧೀಜಿಯವರ ಮರಣವಾರ್ತೆ ಕೇಳಿ ಆರೋಗ್ಯ ಕೆಟ್ಟಿದ್ದರೂ ವಾರ್ಧಾದಿಂದ ದೆಹಲಿಗೆ ಬಂದರು. ತಂದೆ, ಅಣ್ಣ ಸತ್ತಾಗಲೂ ಅಷ್ಟು ದುಃಖವಾಗಿರಲಿಲ್ಲ. ಗಾಂಧೀಜಿ ಸತ್ತಾಗ ಬಹಳ ದುಃಖಪಟ್ಟರು.

ನಿರೂಪಕ : ೧೯೫೦ರಲ್ಲಿ ಭಾರತವು ಗಣರಾಜ್ಯವಾಗಿ ರೂಪಗೊಂಡಾಗ ಡಾ॥ರಾಜೇಂದ್ರ ಪ್ರಸಾದ್ ರಾಷ್ಟ್ರಪತಿಯಾಗಿ ಒಮ್ಮತದಿಂದ ಆಯ್ಕೆಯಾದರು. ಭಾರತದ ಪ್ರಥಮ ಪ್ರಜೆ ಎನಿಸಿಕೊಂಡ. ಆಗ ಆತ ನುಡಿದ ನುಡಿ ಮುತ್ತುಗಳಿವು-

ರಾ.ಪ್ರಸಾದ್ : ಶತ ಶತಮಾನಗಳ ದಾಸ್ಯದಲ್ಲಿದ್ದ ಭಾರತ ಗಾಂಧಿಯವರ ಪರಿಶ್ರಮದ ಫಲವಾಗಿ ಇಂದು ಸ್ವತಂತ್ರವಾಗಿ ಪ್ರಪಂಚಕ್ಕೆ ಅತಿ ದೊಡ್ಡ ಪ್ರಜಾಪ್ರಭುತ್ವದ ರಾಷ್ಟ್ರವಾಗಿದೆ. ಈ ದೇಶದ ಇತಿಹಾಸದ ಒಂದು ಅಧ್ಯಾಯ ಇಲ್ಲಿಗೆ ಕೊನೆಗೊಂಡು ಮತ್ತೊಂದು ಇದೀಗ ಆರಂಭವಾಗುತ್ತಲಿದೆ. ಈ ಶುಭ ಸನ್ನಿವೇಶದಲ್ಲಿ ಸ್ವತಂತ್ರರಾದ ನಾವು ನಮ್ಮ ಭವಿಷ್ಯದ ಸರ್ವತೋಮುಖವಾದ ಪ್ರಗತಿಯ ಚಿಂತನೆಯಲ್ಲಿ ಪಾಲುಗೊಳ್ಳುವುದಾಗಿ ಪ್ರತಿಜ್ಞೆ ಮಾಡಿದವರಾಗಿದ್ದೇವೆ.

ಭಾರತಮಾತೆ : ೧೯೩೭ರಲ್ಲಿಯೇ ಮೂಲ ಶಿಕ್ಷಣ ಕುರಿತಂಥ ಗಾಂಧೀಜಿ ರಚಿಸಿದ ಸಮಿತಿಯಲ್ಲಿ ರಾಜೇನ್‌ಬಾಬು ಒಬ್ಬ ಸದಸ್ಯರಾಗಿದ್ದರು. ಆಗಲೇ ಇವರು ದೇಶಕ್ಕೆ ಮಾದರಿಯ ಶಾಲೆಗಳ ಅಗತ್ಯವಿದೆ ಎಂದು ಕಂಡುಕೊಂಡರು. ಸರ್ಕಾರಿ ಅಧಿಕಾರಿಗಳು ಮೇಲಿಂದ ಮೇಲೆ ವರ್ಗಾಯಿಸಲ್ಪಟ್ಟಾಗ ಅವರ

ಮಕ್ಕಳಿಗೆ ಶಿಕ್ಷಣ ಅಭ್ಯಾಸದಲ್ಲಿ ಆಗುವ ತೊಂದರೆಗಳನ್ನು ಮನಗಂಡು, ಕೇಂದ್ರಿಯ ಶಾಲೆಗಳಿಗೆ ಸಂಬಂಧಿಸಿದ ಒಂದು ಯೋಜನೆಯನ್ನು ಸರ್ಕಾರದ ಮುಂದಿಟ್ಟರು. ಇಂದು ಈ ಯೋಜನೆಗಳ ಫಲವಾಗಿಯೇ ಪ್ರತಿ ಜಿಲ್ಲೆಗೊಂದು ಕೇಂದ್ರೀಯ ಶಾಲೆಗಳಿವೆ.

ರಾಜೇನ್ ಬಾಬು ಆದರ್ಶ ಭಾಷಾಪ್ರೇಮಿ ಕೂಡ. ಗೋಕರ್ಣದ ಪಂಡಿತ ಕೈವರಾತರಿಂದ ಅವರು ಕನ್ನಡವನ್ನು ಕಲಿಯಲು ಬಹಳ ಪ್ರಯತ್ನಿಸಿದ್ದು ಕನ್ನಡಿಗರಿಗೆ ಹೆಮ್ಮೆಯ ವಿಷಯವೇ ಸರಿ.

ನಿರೂಪಕ : ಹನ್ನೆರಡು ವರ್ಷ ದೀರ್ಘಕಾಲ ದೇಶದ ರಾಷ್ಟ್ರಪತಿಯಾಗಿ ಅಮೋಘ ಸೇವೆ ಸಲ್ಲಿಸಿ ನಿವೃತ್ತರಾದ ರಾಜೇನ್‌ಬಾಬು ನಿವೃತ್ತಿಯ ನಂತರ ದೇಶದ ಹಿತಚಿಂತನೆಯಲ್ಲಿ ತೊಡಗಿ ೧೯೬೩ ಫೆಬ್ರವರಿ ೨೮ರಂದು ಶ್ವಾಸಕೋಶ ರೋಗದಿಂದ ಅಸ್ವಸ್ಥರಾಗಿ, ರಾತ್ರಿ ೧೦ ಘಂಟೆ ೧೫ ನಿಮಿಷಕ್ಕೆ ಇಹಲೋಕ ಯಾತ್ರೆಯನ್ನು ಮುಗಿಸಿ ಅಮರರಾದರು.



# ಮೋತಿಲಾಲ್ ನೆಹರು

ಭಾರತಮಾತೆ : ಪ್ಯಾರಿಸ್, ಲಂಡನ್, ಯೂರೋಪ್ ಮುಂತಾದ ದೇಶಗಳಿಂದ ಕಾರು, ಕುರ್ಚಿ, ಮೇಜು, ಉಡುಪು, ನಾಜೂಕಾದ ವಸ್ತುಗಳನ್ನು ತರಿಸುತ್ತಿದ್ದ. ಅನೇಕ ಇಂಗ್ಲೀಷ್ ಅಧಿಕಾರಿಗಳನ್ನು ಆಹ್ವಾನಿಸಿ ಭೋಜನ ನೀಡುತ್ತಿದ್ದ. ಪಾಶ್ಚಾತ್ಯ ಸಂಸ್ಕೃತಿಗೆ ಮಾರುಹೋಗಿದ್ದ ಮಗನನ್ನು ಇಂಗ್ಲೆಂಡಿಗೆ ಕಳುಹಿಸಿ ಓದಿಸಿದ. ಮನೆಯಲ್ಲಿ ಇಂಗ್ಲೀಷ್ ಉಪಾಧ್ಯಾಯರನ್ನಿರಿಸಿ ವಿದ್ಯಾಭ್ಯಾಸ ಮಾಡಿಸತೊಡಗಿದ ಮೋತಿಲಾಲ್. ಆದರೆ ಪಂಜಾಬಿನ ಜಲಿಯಾನ್ ವಾಲಾ ಮಹಾಸಭೆಯಲ್ಲಿ ಆದ ನರಹತ್ಯ ನನ್ನ ಪುತ್ರ ಮೋತಿಲಾಲನನ್ನು ಪರಿವರ್ತಿಸಿತು. ಬ್ರಿಟಿಷ್ ಸರ್ಕಾರದ ಮೇಲಿನ ವಿಶ್ವಾಸ ಹೋಗುವಂತಾಯಿತು. ಈಗ ಆತನ ಕಥೆ ಹೇಳುವೆ ನನ್ನ ಕಥೆ ಹೇಳುವೆ-

(ಸಂಗೀತ)

ಭಾರತಮಾತೆ : ೧೮೬೧ರ ಮೇ ೬ರಂದು ಗಂಗಾಧರ ಜೀವರಾಣಿಯರ ಪುತ್ರನಾಗಿ ಮೋತಿಲಾಲ ಜನಿಸಿದ. ಗಂಗಾಧರ ದೆಹಲಿಯ ಪೊಲೀಸ್ ಅಧಿಕಾರಿಯಾಗಿದ್ದು ಆಗ್ರಾಕ್ಕೆ ಬಂದು ತೀರಿಕೊಂಡ. ಮೋತಿಲಾಲ್ ಚಿಕ್ಕ ವಯಸ್ಸಿನಲ್ಲೇ ಪರ್ಷಿಯನ್, ಅರಬ್ಬಿ, ಇಂಗ್ಲೀಷ್ ಕಲಿತ. ಚಿಕ್ಕಂದಿನಿಂದಲೇ ಆಟದಲ್ಲಿ ಆಸಕ್ತಿ. ವಕೀಲ ವೃತ್ತಿಯನ್ನು ಆರಂಭಿಸಿದ. ಒಂದು ಮೊಕದ್ದಮೆಯಲ್ಲೇ ೧,೫೨,೦೦೦ ರೂಪಾಯಿ ಸಂಪಾದನೆ ಮಾಡುತ್ತಿದ್ದ. ಬಾಲ್ಯದಲ್ಲೇ ಮದುವೆ ಆಯಿತು. ಮೊದಲ ಹೆಂಡತಿ ತೀರಿಕೊಂಡ ಮೇಲೆ, ಕಾಶ್ಮೀರದ ಸ್ವರೂಪರಾಣಿಯೊಡನೆ ವಿವಾಹವಾಯಿತು. ೧೮೮೯ರ ನವೆಂಬರ್ ೧೪ರಂದು ಜವಹರಲಾಲ್‌ರ ಜನನವಾಯಿತು.

ನಿರೂಪಕ : ೧೯೦೦ರಲ್ಲಿ ವಿಜಯಲಕ್ಷ್ಮಿ, ೧೯೦೭ರಲ್ಲಿ ಕೃಷ್ಣಾ ಹುಟ್ಟಿದರು. ಅಲಹಾಬಾದಿನಲ್ಲಿ ಕಟ್ಟಿದ ದೊಡ್ಡ ಬಂಗಲೆ ನೋಡಲು ಹಲವು ಜನರು ಬರುತ್ತಿದ್ದರು. ಮೋತಿಲಾಲರು ಪಾಶ್ಚಾತ್ಯರ ಅನುಕರಣೆ ಮಾಡಿದರೆ, ಹೆಂಡತಿ ಸ್ವರೂಪರಾಣಿ ಹಿಂದೂ ಸಂಸ್ಕೃತಿಗೆ ಹೊಂದಿಕೊಂಡಿದ್ದು ಹಬ್ಬ ಹರಿದಿನಗಳನ್ನು ಆಚರಿಸುತ್ತಿದ್ದರು. ನೆಹರುರನ್ನು ಇಂಗ್ಲೆಂಡಿಗೆ

ವಿದ್ಯಾಭ್ಯಾಸಕ್ಕೆ ಕಳುಹಿಸಿದರು. ಆಗ ತಂದೆ ಮಗನಿಗೆ ಪತ್ರ ವ್ಯವಹಾರ ನಡೆಯುತ್ತಿತ್ತು.

ಜವಹರ : ಅಪ್ಪಾ ತಮ್ಮ ಪತ್ರ, ವಾರ್ತಾ ಪತ್ರ ಮುಟ್ಟಿದೆ. ಗೋಖಲೆಯವರು ಅಹಮದಾಬಾದ್‌ಗೆ ಬಂದಾಗ ತಾವು ಮಾಡಿದ ಅಧ್ಯಕ್ಷ ಭಾಷಣದಲ್ಲಿ ಸರ್ಕಾರವನ್ನು ಟೀಕಿಸಿದ್ದು ಸಾಲದು ಎನ್ನಿಸುತ್ತದೆ. ಲಾಲಾಲಜಪತರಾಯರ (ಪಂಜಾಬಿನ ಕೇಸರಿ)ನ್ನು ಬಂಧಿಸಿ ಸಮುದ್ರದಾಚೆ ಮಾಂಡಲೆಗೆ ಕಳುಹಿಸಿದ ಸರ್ಕಾರಕ್ಕೆ ನಾವು ಸಹಕರಿಸಬಹುದೇ? ಈ ಲೇಖನ ಬರೆದವರು ಯಾರೋ ಒಬ್ಬ ವಿಶೇಷ ರಾಜ ಭಕ್ತರೇ ಇರಬೇಕು ಎನ್ನುತ್ತಿದ್ದೆ.

ಮೋತಿಲಾಲ್: ಹುಡುಗರು ಹುಡುಗರಾಗಿಯೇ ಇರಬೇಕು. ಇಂಥ ವಿಷಯಗಳಲ್ಲಿ ಪ್ರತಿಷ್ಠೆ ಮಾಡಬಾರದು.

ನಿರೂಪಕ : ಮೋತಿಲಾಲರು ೧೯೧೦ರಲ್ಲಿ ಸಂಯುಕ್ತ ಪ್ರಾಂತ್ಯದ ಶಾಸನ ಸಭೆಯ ಸ್ಥಾನದ ಚುನಾವಣೆಗೆ ನಿಂತು ಗೆದ್ದರು. ಸಭೆಗೆ ಹೋದಾಗ ಸರ್ಕಾರದ ನೀತಿಗಳನ್ನು ಖಂಡಿಸುತ್ತಿದ್ದರು, ಪ್ರಶ್ನಿಸುತ್ತಿದ್ದರು. ರಾಜಕೀಯ ಸಭೆಗಳಿಗೆ ಸರ್ಕಾರ ಕಳುಹಿಸುವ ಪೊಲೀಸ್ ವರದಿ ಮಾಡುವ ಎಷ್ಟು ಮಂದಿಗೆ ಶೀಘ್ರ - ಲಿಪಿ ಗೊತ್ತಿದೆ? ಎಂದು ಪ್ರಶ್ನಿಸುತ್ತಿದ್ದರು. ಸರ್ಕಾರವನ್ನು ನಿರ್ಭಯವಾಗಿ ಟೀಕಿಸುತ್ತಿದ್ದರು. ಜನರಿಗೆ ಸರ್ಕಾರದ ವಿಷಯವನ್ನು ತಿಳಿಸಲು 'Leader' ಎಂಬ ಪತ್ರಿಕೆ ಆರಂಭಿಸಿ ಮದನಮೋಹನ ಮಾಳವೀಯರನ್ನು ಸಂಪಾದಕರಾಗಿ ನೇಮಿಸಿದರು. ನಿರ್ದೇಶಕರ ಮಂಡಲಿಯ ಮೊದಲ ಅಧ್ಯಕ್ಷರು ಮೋತಿಲಾಲರಾದರು. ಇಂಗ್ಲೆಂಡಿಂದ ನೆಹರು ಬಂದ ಮೇಲೆ ತಂದೆಯ ಜೊತೆ ಸಹಾಯಕ ವಕೀಲರಾದರು. ಮಗ ಉಗ್ರವಾದಿಯಾದರೆ ತಂದೆ ಸೌಮ್ಯವಾದಿ.

ನೆಹರು : ಎಲ್ಲಾ ದೇಶಗಳು ದಾಸ್ಯದಲ್ಲಿರಬಾರದು. ಸ್ವತಂತ್ರವಾಗಿರಬೇಕು ಅಪ್ಪಾಜಿ.

ಮೋತಿಲಾಲ್: ಬ್ರಿಟಿಷರ ಆಶ್ರಯದಲ್ಲಿ ಭಾರತ ಸ್ವಾತಂತ್ರ್ಯವಾಗಿ ಉಳಿಯಬೇಕು ಎಂಬುದು ನನ್ನ ಮತ.

ಭಾರತಮಾತೆ : ಗಾಂಧೀಜಿಯ ಪರಿಚಯದಿಂದ ನೆಹರು ಮನೆತನದ ಚರಿತ್ರೆಯೇ ಬದಲಾಯಿತು. ೧೯೧೯ರಲ್ಲಿ ಗಾಂಧಿ ಅಖಿಲ ಭಾರತ ಚಳವಳಿಯ ನಾಯಕನಾದ. ದೌಲತ್ ಶಾಸನದ ವಿರುದ್ಧ ಪ್ರತಿಭಟನೆ ರೂಪಕೊಟ್ಟ. ಸತ್ಯಾಗ್ರಹ ಮಾಡಿ ಸೆರೆಮನೆಗೆ ಹೋಗುವ ಯೋಜನೆ ಜವಹರನಿಗೆ ಹಿಡಿಸಿತು. ಆದರೆ ಆತನ ತಂದೆಗೆ-

ಮೋತಿಲಾಲ್: ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಸಿದ ನನ್ನ ಮಗ ಜೈಲಿಗೆ ಹೋದರೆ ಅಲ್ಲಿನ ಊಟ ಮಾಡಲಾಗುತ್ತದೆಯೇ? ನೆಲದ ಮೇಲೆ ಮಲಗಲು ಆಗುತ್ತದೆಯೇ? ಇದನ್ನು ಗಾಂಧಿಯವರಲ್ಲಿ ತೋಡಿಕೊಳ್ಳಲೇಬೇಕು. ಅವನನ್ನು ಚಳವಳಿಗೆ ಸೇರಿಸಿಕೊಳ್ಳಬೇಡಿ. ಅವನನ್ನು ಬಿಟ್ಟು ನಾನು ಬದುಕಲಾರೆ. ಅದೂ ಅಲ್ಲದೆ ಅನೇಕ ವರ್ಷಗಳ ಮೇಲೆ ಮಗ ಸೊಸೆ ಮನೆಗೆ ಬಂದಿದ್ದಾರೆ ಎಂದು ಕೇಳಿಕೊಳ್ಳಬೇಕು.

ನಿರೂಪಕ : ವಿಷಯವನ್ನು ಗಾಂಧೀಜಿಯವರಿಗೆ ತಿಳಿಸಿದರು. ಗಾಂಧೀಜಿಯವರು ಜವಹರಲಾಲರಿಗೆ ಹೇಳಿದರು "ಜವಹರಲಾಲ್ ನಿನ್ನ ಮಾತಾ - ಪಿತೃಗಳಿಗೆ ನಿನ್ನ ಮೇಲೆ ಅಪಾರ ಪ್ರೇಮ. ಅವರಿಗೆ ನೀನು ದುಃಖ ಕೊಡಬಾರದು. ಈಗ ತಾನೇ ನೀನು ವಿದೇಶದಿಂದ ಬಂದಿದ್ದೀಯಾ. ಸ್ವಲ್ಪ ನೀನು ಇಲ್ಲಿನ ಪರಿಸ್ಥಿತಿಯನ್ನು ಅರ್ಥಮಾಡಿಕೋ, ಅಭ್ಯಾಸ ಮಾಡು. ದುಡುಕಬೇಡ, ದೇಶಸೇವೆಗೆ ಸಾಕಷ್ಟು ಅವಕಾಶವಿದೆ" ಎಂದು ಹೇಳಿ ಆತನನ್ನು ಒಪ್ಪಿಸಿದರು.

ಭಾರತಮಾತೆ : ಪಂಜಾಬಿನಲ್ಲಿ ಜಲಿಯನ್‌ವಾಲಾ ಮಹಾಸಭೆ ನಡೆಯಿತು. ಸರ್ಕಾರ ಸಭೆ ಸಮಾರಂಭ ನಡೆಸಕೂಡದೆಂದು ಆಜ್ಞೆ ಹೊರಡಿಸಿತು. ಜನರಲ್ ಡೈಯರ್ ಎಂಬ ಅಧಿಕಾರಿ ಶಸ್ತ್ರ ಪಡೆಯೊಡನೆ ಬಂದು ಗುಂಡಿನ ಮಳೆಗೆರೆದ. ರಾಶಿ ರಾಶಿಯಾಗಿ ಹೆಣಗಳು ಉರುಳಿದುವು. ಈ ದುರಂತದ ಬಗೆಗೆ ವಿಚಾರಣೆ ನಡೆಸಲು ಸರ್ಕಾರ ಒಂದು ಸಮಿತಿ ನೇಮಿಸಿತು. ಗಾಂಧೀಜಿ, ಮೋತಿಲಾಲ್, ಚಿತ್ತರಂಜನ್‌ದಾಸ್ ಮೊದಲಾದ ಮಹಾ ನಾಯಕರ ಸಮಿತಿಯನ್ನು ಏರ್ಪಡಿಸಿತು. ಸರ್ಕಾರದ ನಡತೆಯನ್ನು ತೀವ್ರವಾಗಿ ಖಂಡಿಸಿತು. ಈ ದುರಂತದಿಂದ ಮೋತಿಲಾಲರಿಗೆ ಬ್ರಿಟಿಷ್ ಸರ್ಕಾರದ ಮೇಲಿದ್ದ ವಿಶ್ವಾಸ ಸಂಪೂರ್ಣ ಹೋಯಿತು.

ನಿರೂಪಕ : ಮೋತಿಲಾಲರು ಅಮೃತಸರದ ಕಾಂಗ್ರೆಸ್ ಮಹಾ ಅಧಿವೇಶನದ ಅಧ್ಯಕ್ಷರಾಗಿ ಆಯ್ಕೆಯಾದರು.

(ಹಿಂದಿ ದೇಶಭಕ್ತಿ ಗೀತೆ)

ಮೋತಿಲಾಲ್: ಜಲಿಯನ್‌ವಾಲಾಬಾಗಿನ ದುರಂತ ನಿಜವಾಗಿಯೂ ಸರ್ಕಾರದ ಕೆಟ್ಟ ನೀತಿಯನ್ನು ಎತ್ತಿ ತೋರುತ್ತದೆ. ಮರಣದಂಡನೆಗೆ ಗುರಿಯಾದ ಇಬ್ಬರ ಪರ ವಾದಿಸಲು ಸರ್ಕಾರ ಅವಕಾಶ ಕೊಡಲಿಲ್ಲ. ಇದರಿಂದ ನಮಗೆಲ್ಲಾ ಈ ಸರ್ಕಾರದ ಮೇಲಿದ್ದ ವಿಶ್ವಾಸ ಈಗ ನುಚ್ಚು ನೂರಾಗಿದೆ. ಕೋರ್ಟು,

ಕಛೇರಿ, ಶಾಲೆ, ಶಾಸನ ಸಭೆಗಳನ್ನು ಬಹಿಷ್ಕರಿಸಿ ಜನ ಬರಬೇಕು. ಸರ್ಕಾರದೊಡನೆ ಸಹಕರಿಸಬಾರದು. ವಕೀಲರು ವೃತ್ತಿಯನ್ನು ಬಿಡಬೇಕು. ಸ್ವದೇಶಿ ವಸ್ತುಗಳನ್ನು ಉಪಯೋಗಿಸಬೇಕು. ಖಾದಿಯನ್ನು ತೊಡಬೇಕು. ವಿದೇಶಿ ವಸ್ತುಗಳನ್ನು ತ್ಯಜಿಸಬೇಕು.

(ಜನರ ಚಪ್ಪಾಳೆ 'ಆಗಬಹುದು' ಘೋಷಣೆ)

ಭಾರತಮಾತೆ : ಸಾವಿರಾರು ರೂಪಾಯಿ ಸಂಪಾದನೆಯ ವಕೀಲಿ ವೃತ್ತಿ ಬಿಟ್ಟ ನನ್ನ ಪುತ್ರ ನನಗಾಗಿ ಶಾಸನಸಭೆ ಬಿಟ್ಟು ಬಂದ. ಮಗಳನ್ನು ಇಂಗ್ಲೀಷ್ ಶಾಲೆಯಿಂದ ಬಿಡಿಸಿದ. ವಿದೇಶಿ ಉಡುಪು, ಪಾತ್ರೆ ಪದಾರ್ಥ, ಕುರ್ಚಿ, ಮೇಜು ಎಲ್ಲವನ್ನೂ ಹೊರಹಾಕಿದ. ಕೆಲವನ್ನು ದಾನ ಮಾಡಿದ. ಮತ್ತೆ ಕೆಲವನ್ನು ಸುಟ್ಟ. ಕುದುರೆ ಮಾರಿದ. ಸೇವಕರ ಸಂಖ್ಯೆ ಕಡಿಮೆ ಮಾಡಿದ. ಖಾದಿ ತೊಟ್ಟ. ಈತನ ದೃಢ ಸಂಕಲ್ಪ ನನ್ನ ಸೇವೆಗೆ ಪೋಷಕವಾಯಿತು.

ನಿರೂಪಕ : ಮೋತಿಲಾಲರು ಇಟ್ಟ ಹಣ ಖರ್ಚಾಯಿತು. ಸಾಲದ ಜೀವನ ಆರಂಭವಾಯಿತು. ಕಷ್ಟವೆಂದು ಇಬ್ಬರು ಸಾಹುಕಾರರು ಹಣ ಕೊಡಲು ಬಂದಾಗ ನಿರಾಕರಿಸಿದರು. ಒಬ್ಬ ಲಕ್ಷ ರೂಪಾಯಿ ಕೊಡುವೆ, ಕೇಸು ನಡೆಸಿ ಎಂದಾಗ ಮಗಳನ್ನು ಕೇಳಿದರು.

ಏನಮ್ಮಾ ಈ ಕೇಸನ್ನು ತೆಗೆದುಕೊಳ್ಳೋಣವೇ? ಎಂದಾಗ ಆಕೆ ಬೇಡವೆಂದಳು. ಅದರಂತೆಯೇ ನಡೆದುಕೊಂಡರು.

ಭಾರತಮಾತೆ : ಗಾಂಧಿ ನೆಹರೂಗೆ ಹೇಳಿದ. ನೀನು ಕಾಂಗ್ರೆಸ್ ಕಾರ್ಯದರ್ಶಿ ಕೆಲಸ ಮಾಡುತ್ತಿದ್ದೀಯೆ ಸ್ವಲ್ಪ ಸಂಭಾವನೆ ತೆಗೆದುಕೋ ಎಂದು. ಅದಕ್ಕೆ ಮೋತಿಲಾಲ ಒಪ್ಪಲಿಲ್ಲ.

ನಿರೂಪಕ : ಬ್ರಿಟಿಷ್ ಚಕ್ರವರ್ತಿಯ ಕುಮಾರ ಭಾರತಕ್ಕೆ ಬರಲಿದ್ದು ಆತನಿಗೆ ಭವ್ಯ ಸ್ವಾಗತ ಮಾಡಬೇಕೆಂದಿದ್ದಾಗ ಬಹಿಷ್ಕರಿಸಬೇಕೆಂದು ಮೋತಿಲಾಲ್ ನೆಹರು ಪ್ರಚಾರ ಮಾಡಿದರು. ಇಬ್ಬರನ್ನೂ ಬಂಧನದಲ್ಲಿಟ್ಟರು, ಆದರೂ ಅವರು ಜಗ್ಗಲಿಲ್ಲ. ಲಕ್ನೋ ಜೈಲಿಗೆ ಹಾಕಿದರು. ಇವರನ್ನು ಹಿಂಬಾಲಿಸಿ ಸಾವಿರಾರು ಜನ ಸೇರಿದರು ಜೈಲಿಗೆ.

ಭಾರತಮಾತೆ : ಸರ್ಕಾರ ವಿರೋಧಿಸಲು ಶಾಸನಸಭೆ ಸೇರಬೇಕು ಎಂದು ಮೋತಿಲಾಲ್, ದಾಸ್ ಮೊದಲಾದವರು ನಿಶ್ಚಯಿಸಿದರು. ಇದಕ್ಕೆ ಮೋತಿಲಾಲ ಮೊದಲು ಕಾರ್ಯದರ್ಶಿ, ಆಮೇಲೆ ಅಧ್ಯಕ್ಷ. ಕೇಂದ್ರ ಶಾಸನ ಸಭೆಯ ವಿರೋಧ ಪಕ್ಷದ ನಾಯಕನಾದ ಈತನ ನಾಯಕತ್ವದಲ್ಲಿ ಸರ್ಕಾರ ಸೋಲನುಭವಿಸಿತು. ಆದರೆ ವೈಸರಾಯಿ ತಿರಸ್ಕೃತ ಮಸೂದೆಗಳಿಗೆ

ಪುರಸ್ಕಾರ ಕೊಡುವ ಅಧಿಕಾರ ಪಡೆದಿದ್ದ. ವಿರೋಧ ಪಕ್ಷದ ಜಯದಿಂದ ಪ್ರಯೋಜನವಾಗಲಿಲ್ಲ. 'ನಭಾ' ಸಂಸ್ಥಾನದಲ್ಲಿ ಅರಸನ ನಡತೆಯ ವಿರುದ್ಧ ಪ್ರಜೆಗಳು ಸತ್ಯಾಗ್ರಹ ಹೂಡಿದರು. ಇದರಲ್ಲಿ ಜವಹರನನ್ನು ಬೇಡಿ ಹಾಕಿ ಮೆರವಣಿಗೆ ಮಾಡಿ ಎರಡೂವರೆ ವರ್ಷ ಶಿಕ್ಷೆ ವಿಧಿಸಿತು. ಜೈಲಿನಲ್ಲಿ ಜವಹರನ ಆರೋಗ್ಯ ಕೆಟ್ಟಿತು. ತಂದೆ ದುಃಖದಿಂದ ಆತನನ್ನು ರಷ್ಯಾಕ್ಕೆ ಕರೆದುಕೊಂಡು ಹೋದ, ಆತನ ಆರೋಗ್ಯ ಸುಧಾರಿಸುವ ಸಲುವಾಗಿ.

ನಿರೂಪಕ : ೧೯೨೮ರ ಕಲ್ಕತ್ತಾದ ಅಧಿವೇಶನಕ್ಕೆ ಮೋತಿಲಾಲ್ ಅಧ್ಯಕ್ಷರಾದರು. ಮಾರನೇ ವರ್ಷ ಜವಹರ್ ಲಾಹೋರ್‌ನಲ್ಲಿ ಅಧ್ಯಕ್ಷರಾದಾಗ ಕಾಂಗ್ರೆಸ್ ಕಿರೀಟ ತಂದೆಯಿಂದ ಮಗನಿಗೆ ಬಂತು. ತಂದೆಗೆ ಸಂತೋಷವಾಯಿತು. ಮೋತಿಲಾಲ್ ಶಾಸನ ಸಭೆಗೆ ರಾಜಿನಾಮೆ ಕೊಟ್ಟು ದಂಡಿಯಾತ್ರೆಯಲ್ಲಿ ಭಾಗವಹಿಸಿದರು. ಆನಂದ ಭವನವನ್ನು ಕಾಂಗ್ರೆಸ್ಸಿಗೆ ದಾನವಾಗಿ ಕೊಟ್ಟು ತಾವು ಒಂದು ಸಣ್ಣ ಬಂಗಲೆ ಕಟ್ಟಿಕೊಂಡು ವಾಸಮಾಡತೊಡಗಿದರು.

ನಿರೂಪಕ : ೧೯೨೯ರ ಕಾಂಗ್ರೆಸ್ ಭಾರತಕ್ಕೆ ಪೂರ್ಣ ಸ್ವಾತಂತ್ರ್ಯ ಬೇಕೆಂದು ಘೋಷಿಸಿತು. ಆಗ ಮೋತಿಲಾಲರಿಗೆ ೬೯ ವರ್ಷ ವಯಸ್ಸು. ಸ್ವಾತಂತ್ರ್ಯ ಹೋರಾಟದ ಅಗ್ನಿಪ್ರವೇಶ ಮಾಡಬಾರದೆಂದು ಸ್ನೇಹಿತರು ಹೇಳಿದರು. ಅದಕ್ಕೆ ಅವರ ಉತ್ತರ-

ಮೋತಿಲಾಲ್: ನಾನೂ ನನ್ನವರೂ ಗಾಂಧಿಯ ಕಡೆ ಸೇರಿ ಬರಲಿರುವ ಚಳವಳಿಯಲ್ಲಿ ದುಮುಕುವುದರ ಪರಿಣಾಮ ಏನೆಂದು ಸಂಪೂರ್ಣ ಅರ್ಥವಾಗಿದೆ ಎಂದು ನಂಬಿ ಈ ವಯಸ್ಸಿನಲ್ಲಿ ನನ್ನ ದೇಹದ ದೌರ್ಬಲ್ಯ ಇದ್ದೂ, ಸಂಸಾರದ ಹೊಣೆಗಳಿದ್ದೂ, ನಾನು ತೀರ ಅಪಾಯಕ್ಕೆ ಎದೆಯೊಡ್ಡುತ್ತಿದ್ದೇನೆ. ಇದಕ್ಕೆ ಒಂದೇ ಕಾರಣ ಅತಿ ತೀವ್ರ ಪ್ರಯತ್ನ, ಅತ್ಯಂತ ತ್ಯಾಗ ಇವುಗಳಿಗೆ ಸಮಯ ಬಂದಿದೆ ಎನ್ನುವ ದೃಢ ನಂಬಿಕೆ. ನಾಡಿನ ರಣ ಕಹಳೆ ಕೇಳುತ್ತಿದೆ. ನಾನು ಓಗೋಡುತ್ತಿದ್ದೇನೆ.

(ರಣ ಕಹಳೆ ಮೊಳಗುತ್ತಿದೆ)

ಭಾರತಮಾತೆ : ಗಾಂಧೀಜಿ, ಮೋತಿಲಾಲ್, ಜವಹರ್ ಮುಂತಾದವರ ಬಂಧನವಾಯಿತು. ಆಗ ಮೋತಿಲಾಲನ ಆರೋಗ್ಯ ಕೆಟ್ಟಿತು. ಮೋತಿಲಾಲರ ಸೊಸೆ, ಮಗಳು ಕೃಷ್ಣ, ಅಳಿಯ ರಣಜಿತ್ ಜೈಲಿಗೆ ಸೇರಿದುದನ್ನು ನೋಡಿ ಒಂದೆಡೆ ದುಃಖವಾದರೆ ಮತ್ತೊಂದೆಡೆ ಮನೆಯವರೆಲ್ಲಾ ಸ್ವಾತಂತ್ರ್ಯದ ಹೋರಾಟದಲ್ಲಿ ದುಮುಕಿದರಲ್ಲಾ ಎಂಬ ಸಂತೋಷ. ಮೋತಿಲಾಲನ ಕಾಯಿಲೆ ತೀವ್ರವಾಯಿತು. ಜೀವ

ಉಳಿಯುವುದೇ ಕಷ್ಟವೆಂದಾಗ ಎಲ್ಲರ ಬಿಡುಗಡೆಯಾಯಿತು. ಲಕ್ನೋಗೆ ಚಿಕಿತ್ಸೆಗೆ ಕಳುಹಿಸಿದರು. ಅವರ ಬಳಿ ಗಾಂಧಿ ಬಂದಾಗ ಮೋತಿಲಾಲ-

ಮೋತಿಲಾಲ್: ಸ್ವತಂತ್ರ ಭಾರತಿಯ ಚರಣಾರವಿಂದದಲ್ಲಿ ಪ್ರಾಣ ಬಿಡುವ ಭಾಗ್ಯ ನನಗಿಲ್ಲವಾಗಿದೆ. ಆದರೆ ಈ ಸೌಭಾಗ್ಯ ನಿಮಗೆ ಲಭಿಸುವುದೆಂಬ ಪೂರ್ಣ ವಿಶ್ವಾಸ ನನಗಿದೆ. ನನ್ನ ಕರ್ತವ್ಯವನ್ನು ನನ್ನ ಕೈಲಾದಷ್ಟು ಮಾಡಿದ್ದೇನೆ. ನನ್ನ ಸೇವೆಯನ್ನು ದೇಶಕ್ಕೆ ಸಲ್ಲಿಸಿದ್ದೇನೆ. ಇದರಿಂದ ನನಗೆ ಸಂತೋಷ ತಂದಿದೆ.

ಭಾರತಮಾತೆ: ನನ್ನ ಪುತ್ರ ಮೋತಿಲಾಲ ೧೯೩೧ರ ಫೆಬ್ರವರಿ ೬ರಂದು ತನ್ನ ಎಪ್ಪತ್ತನೆಯ ವರ್ಷದಲ್ಲಿ ನನ್ನನ್ನಗಲಿದ!

*

# ಖುದೀರಾಮ್ ಬೋಸ್

ಖುದೀರಾಮ್ : ಪೇಪರ್.... ಪೇಪರ್.... "ಸೋನಾರ್ ಬಾಂಗ್ಲಾ" ಈ ಮೇದಿನೀಫುರದಲ್ಲಿ ನಡೆಯುತ್ತಿರುವ ವಸ್ತು ಪ್ರದರ್ಶನ, ಭಾರತೀಯರನ್ನು ಆಕರ್ಷಿಸಲು, ತಾವು ಮಾಡುತ್ತಿರುವುದು ಒಳ್ಳೆಯ ಕೆಲಸ ಎಂದು ಹೇಳಲು ಇದನ್ನು ನಂಬಬೇಡಿ.... ಇದರ ಬಗೆ...... ಇಲ್ಲಿದೆ. ಪೇಪರ್...... ಕೊಂಡು ಓದಿ......

ಪೋಲಿಸ್ : ಏಯ್..... ಏನೋ ಮಾಡ್ತಿದ್ದೀಯಾ.... ನಿಲ್ಲು..... ಹಿಡಿತೀನಿ ನಿನ್ನ.....

ಖುದೀರಾಮ್ : ನನ್ನನ್ನು ಮುಟ್ಟೀಯೆ ಜೋಕೆ..... ವಾರೆಂಟ್ ಇಲ್ಲದೇ ನನ್ನನ್ನು ಹ್ಯಾಗೆ ಹಿಡೀತಿಯೆ? ಒಂದೇ ಮಾತರಂ.......

(ಜನರು ದನಿಗೂಡಿಸುವರು)

ಭಾರತಮಾತೆ : ಈ ದಿಟ್ಟತನದಲ್ಲಿ ಪೊಲೀಸರನ್ನು ಎದುರಿಸಿದ ನನ್ನ ಪುತ್ರ ಖುದೀರಾಮ್ ಬೋಸ್. ಇಲ್ಲಿವೆ ಅವನ ಕಥೆ. ನನ್ನ ಕಥೆ....! ೧೮೮೯ರ ಡಿಸೆಂಬರ್ ೩ರಂದು ಮೇದಿನೀಪುರದ ಬಹುವೈನೀ ಗ್ರಾಮದಲ್ಲಿ ಜನಿಸಿದ. ತಂದೆ ತ್ರೈಲೋಕ್ಯನಾಥಬಸು. ಈತ ನಾಡಾಜೋಲ್ ರಾಜರ ಊರಿನ ತಹಸಿಲ್ದಾರರಾಗಿದ್ದ. ತಾಯಿ ಲಕ್ಷ್ಮಿಪ್ರಿಯಾ. ಖುದಿರಾಮ್ ಚಿಕ್ಕಂದಿನಲ್ಲೇ ತಂದೆ ತಾಯಿಯರನ್ನು ಕಳೆದುಕೊಂಡ. ಅಕ್ಕ ಅನುರೂಪಾದೇವಿ, ಭಾವ ಅಮೃತಲಾಲ್ ಅವರಿಂದ ಸಾಕಲ್ಪಟ್ಟ. ವಿದ್ಯಾಭ್ಯಾಸದ ಕಡೆ ಆತನಿಗೆ ಅಷ್ಟು ಮಮತೆಯಾಗಲಿಲ್ಲ. ನನ್ನ ಬಗೆಗೆ ಯೋಚಿಸಿ ಇಂಗ್ಲೀಷರನ್ನು ತಾನು ದೊಡ್ಡವನಾದ ಮೇಲೆ ಓಡಿಸಬೇಕೆಂಬ ಸಂಕಲ್ಪ ಮಾಡಿಕೊಂಡೆ. ಒಮ್ಮೆ ದೇವಾಲಯಕ್ಕೆ ಹೋದಾಗ-

ಖುದೀರಾಮ್ : ಯಾಕೆ ಈ ಜನರೆಲ್ಲಾ ನೆಲದ ಮೇಲೆ ಮಲಗಿದ್ದಾರೆ?

ಒಬ್ಬ : ಇವರೆಲ್ಲಾ ಒಂದಲ್ಲ ಒಂದು ರೋಗದಿಂದ ನರಳುತ್ತಿದ್ದಾರೆ. ಹರಕೆ ಹೊತ್ತು ಆಹಾರ ನೀರು ಬಿಟ್ಟು ಮಲಗಿದ್ದಾರೆ. ಅವರ ಕನಸಿನಲ್ಲಿ ದೇವರು ಬಂದು ಕಾಯಿಲೆ ವಾಸಿ ಮಾಡುವ ಭರವಸೆ ನೀಡುತ್ತಾನೆ ಎಂಬುದು ಅವರ ಭರವಸೆ.

ಖುದೀರಾಮ್ : ನನಗೂ ಇಂಥ ದಿನ ಬರಲಿದೆ.

ಒಬ್ಬ : ನಿನಗೇನು ರೋಗವಪ್ಪಾ?

ಖುದೀರಾಮ್ : ದಾಸ್ಯಕ್ಕಿಂತ ಒಂದು ದೊಡ್ಡ ರೋಗ ಬೇಕೇ? ಅದರಿಂದ ದೂರ ಮಾಡಬೇಕು. ಅದಕ್ಕಾಗಿ ನಾನು ಅನ್ನ ಆಹಾರ ನೀರು ಬಿಟ್ಟು ಮಲಗಬೇಕು. ಆ ದೇವರಲ್ಲಿ ಪ್ರಾರ್ಥಿಸಬೇಕು.

(ಒಂದೇ ಮಾತರಂ, ಭಾರತ್ ಮಾತಾಕೀ ಜೈ.....)

(ಬಂಗಾಳಿ ಗೀತೆ)

ಖುದೀರಾಮ್ : ಒಂದೇ ಮಾತರಂ.... ಭಾರತ್ ಮಾತಾಕಿ ಜೈ.... ಘೋಷಣೆಗಳು ಬಂಗಾಳಿ ದೇಶ ಭಕ್ತಿ ಗೀತೆಗಳನ್ನು ಕೇಳುತ್ತಿದ್ದರೆ ನನಗೆ ಮೈಯೆಲ್ಲಾ ಪುಳಕವಾಗುತ್ತದೆ. ರೋಮಾಂಚನವಾಗುತ್ತದೆ.

ನಿರೂಪಕ : ೧೮೫೭ರಲ್ಲಿ ಝಾನ್ಸಿ ಲಕ್ಷ್ಮಿಬಾಯಿ, ಬಿಹಾರದ ಕುವರ ಸಿಂಹ, ದಿಲ್ಲಿಯ ಬಾದ್‌ಶ ಬಹುದ್ದೂರ್‌ಷಹ ಮೊದಲಾದವರು ಸ್ವಾತಂತ್ರ್ಯ ಸಮರದಲ್ಲಿ ಧುಮುಕಿದ್ದರು. ಬಂಕಿಮಚಂದ್ರರೂ ಇದ್ದರು. ಕೆಲವು ಭಾರತದವರೇ ಇಂಗ್ಲೀಷರಿಗೆ ಸಹಾಯ ಮಾಡಿದುದರಿಂದ ಆ ಸಮರದಲ್ಲಿ ಸೋಲಬೇಕಾಯಿತು. ಬಂಕಿಮಚಂದ್ರರ ವಂದೇ ಮಾತರಂ, ಆನಂದ ಮಠ ಕಾದಂಬರಿ ಜನರಿಗೆ ಸ್ಫೂರ್ತಿ ನೀಡಿತು. ಬ್ರಹ್ಮ ಬಾಂಧವ ಉಪಾಧ್ಯಾಯ, ಬಿಪಿನ್‌ಲಾಲ್, ಚಂದ್ರಪಾಲ್ ಮೊದಲಾದವರು ಹೋರಾಟಕ್ಕಿಳಿದರು. ಅನುಶೀಲನ ಸಮಿತಿ, ಜುಗಂತರ್ ಭ್ರಾತೋ ಸಮಿತಿ ವಂದೇ ಮಾತರಂ ಸಂಪ್ರದಾಯ, ಸರ್ಕ್ಯುಲರ್ ವಿರೋಧ ಸಮಿತಿ ಮುಖ್ಯವಾಗಿ ಪಾತ್ರ ವಹಿಸಿದುವು.

ಭಾರತಮಾತೆ : ಬಂಗಾಳದ ವಿಭಜನೆಯಿಂದ ಸತ್ಯಾಗ್ರಹ ಆರಂಭವಾಯಿತು. ಖುದಿರಾಮ್ ಶಸ್ತ್ರಾಸ್ತ್ರ ಉಪಯೋಗವನ್ನು ಕಲಿತ. ಬ್ರಿಟಿಷರು ಒಂದೇ ಮಾತರಂ ಘೋಷಣೆ ರಾಜದ್ರೋಹ ಎಂದು ಘೋಷಿಸಿದರು. ನನ್ನ ಮಕ್ಕಳು ವಿದೇಶಿ ವಸ್ತು ಸುಟ್ಟುಹಾಕಿ, ವಿದೇಶಿ ಶಾಲಾ ಕಾಲೇಜುಗಳಿಗೆ ಹೋಗುವುದನ್ನು ಬಿಟ್ಟರು. ಸ್ವದೇಶಿ ತಾರಕ ಮಂತ್ರವಾಯಿತು. ದೇಶ ಭಕ್ತರಿಗೆ ಹಿಂಸೆ ಹೆಚ್ಚಾಯಿತು.

ನಿರೂಪಕ : ೧೯೦೭ರಲ್ಲಿ ಬಿಪಿನ್ ಚಂದ್ರಪಾಲ್ ವಂದೇ ಮಾತರಂ ಪತ್ರಿಕೆ ಆರಂಭಿಸಿದರು. ಅವರನ್ನು ರಾಜದ್ರೋಹ ಆಪಾದನೆಯ ಮೇಲೆ ನ್ಯಾಯಲಯಕ್ಕೆಳೆದರು. ೧೯೦೭ ಆಗಸ್ಟ್ ೨೬ರಂದು ಮೊಕದ್ದಮೆ ನಡೆಯುತ್ತಿದ್ದಾಗ ಅಲ್ಲಿದ್ದ ತರುಣರಿಗೆ ಲಾಠಿ ಪ್ರಹಾರ ಮಾಡಲಾರಂಭಿಸಿದರು. ಆಗ ಸುಶೀಲ್‌ಕುಮಾರ್ ಸೇನ್-

ಸುಶೀಲ್ : ಯಾಕೆ ಸುಮ್ಮನೆ ನಿಷ್ಕರುಣೆಯಿಂದ ಹೊಡಿತಿದ್ದೀಯಾ?

ಪೋಲಿಸ್ : ತೊಲಗಾಚೆ......

ಸುಶೀಲ್ : ನಾನು ಯಾರೆಂಬುದನ್ನು ತೋರಿಸ್ತೀನಿ......

ಭಾರತಮಾತೆ : ಆತನ ಮೂಗಿನ ಮೇಲೆ ಗುದ್ದಿದ. ಲಾಟಿಯಲ್ಲಿ ಹೊಡೆಯಲು ಅದನ್ನೇ ಕಿತ್ತುಕೊಂಡು ಆತನಿಗೆ ರಕ್ತ ಬರುವ ತನಕ ಹೊಡೆದ. ಮಿಕ್ಕ ಪೊಲೀಸರು ಸುಶೀಲ್‌ಕುಮಾರ್ ಸೇನನನ್ನು ಹಿಡಿದು ನ್ಯಾಯಾಲಯಕ್ಕೆ ಒಯ್ದರು. ಕಿಂಗ್ಸ್‌ಫೋರ್ಡ್ ಎಂಬ ಇಂಗ್ಲೀಷ್ ನ್ಯಾಯಾಧೀಶ ವಿಚಾರಣೆ ನಡೆಸಿದ-

ಕಿಂಗ್ಸ್ : ಏಯ್ ಹುಡುಗ ನೀನು ಶಾಂತಿ ಕಾಪಾಡುವ ಪೊಲೀಸರ ಮೇಲೆ ಕೈಮಾಡಿ ಕಾನೂನು ಭಂಗ ಮಾಡಿದ್ದೀಯೆ.

ಸುಶೀಲ್ : ಶಾಂತವಾಗಿ ನಿಂತವರ ಮೇಲೆ ಪೊಲೀಸ್ ಕೈಮಾಡಿದ್ದು ಸರಿಯೇ?

ಕಿಂಗ್ಸ್ : ಈತನದು ಅಧಿಕ ಪ್ರಸಂಗ. ಈತನಿಗೆ ೧೫ ಚಡಿ ಏಟು ಶಿಕ್ಷೆ ಕೊಡಿ.

(ಏಟು ಬೀಳುವಾಗ ಒಂದೇ ಮಾತರಂ ಎಂದು ಗಟ್ಟಿಯಾಗಿ ಕೂಗಿದ)

ಭಾರತಮಾತೆ : ನನ್ನ ಪುತ್ರನ ಧೈರ್ಯ ಮೆಚ್ಚಿದ ಸುರೇಂದ್ರನಾಥ್ ಬ್ಯಾನರ್ಜಿ ಈತನಿಗೆ ಚಿನ್ನದ ಪದಕ ಕೊಟ್ಟು ಸನ್ಮಾನಿಸಿದರು. ಈತ ಓದುತ್ತಿದ್ದ ನ್ಯಾಷನಲ್ ಕಾಲೇಜಿಗೆ ರಜೆ ಕೊಟ್ಟರು. ನನ್ನ ಮಕ್ಕಳೆಲ್ಲಾ ಕಿಂಗ್ಸ್‌ಫರ್ಡ್‌ನನ್ನು ಕತ್ತರಿಸಿಹಾಕುವ ಮನಸ್ಸು ಮಾಡಿದರು. ಈ ವಿಷಯ ತಿಳಿದ ಬ್ರಿಟಿಷ್ ಸರ್ಕಾರ ಕಿಂಗ್ಸ್‌ಫೋರ್ಡ್‌ನನ್ನು ಮುಜುಪುರಕ್ಕೆ ವರ್ಗಾಯಿಸಿದರು. ೧೯೦೮ರಲ್ಲಿ ಆತನನ್ನು ಕೊಲ್ಲಲು ಕ್ರಾಂತಿಕಾರಿಗಳು ಯೋಚಿಸಿದರು.

ನಾಯಕ : ಕಿಂಗ್ಸ್‌ಫೋರ್ಡ್ ಕೊಲ್ಲುವ ಕೆಲಸ ನಿನ್ನಿಂದ ಸಾಧ್ಯವೇ ಖುದೀರಾಮ್.

ಖುದೀರಾಮ್ : ನಿಮ್ಮ ಆಶೀರ್ವಾದವಿದ್ದರೆ ಸಾಧ್ಯ.

ನಾಯಕ : ಇದು ಜೈಲಿಗೆ ಹೋಗುವಷ್ಟು ಸುಲಭವಲ್ಲ. ಸಿಕ್ಕಿಬಿದ್ದರೆ ಪರಿಣಾಮ ಏನಾಗುತ್ತದೆ ಗೊತ್ತಾ?

ಖುದೀರಾಮ್ : ನೇಣು.... ಅಷ್ಟೇ ತಾನೆ. ನನ್ನ ತಂದೆ-ತಾಯಿ ಎಲ್ಲಾ ಭಾರತಮಾತೆ ಸ್ವಾತಂತ್ರ್ಯ ಸಿಗುವವರೆಗೆ ಮತ್ತೆ ಮತ್ತೆ ಹುಟ್ಟಿ ಬಲಿದಾನ ಮಾಡುವೆ.

ನಾಯಕ : ಸಂತೋಷ. ನಿನ್ನೊಡನೆ ಪ್ರಫುಲ್ಲ ಚಾಕಿ ಕೂಡ ಇರ್ತಾನೆ. ತೆಗೆದುಕೊಳ್ಳಿ ರಿವಲ್ವಾರ್, ಬಾಂಬ್, ಹಣ...... ಹೊರಡಿ......

ಖುದೀರಾಮ್ : ಆಯ್ತು......

ಪ್ರಫುಲ್ಲ : ನಾನು ಬಾಂಬ್ ಎಸೆದ ಕೂಡಲೇ ಓಡಿಹೋಗು. ನನ್ನ ಬಗ್ಗೆ ಯೋಚಿಸಬೇಡ. ಬದುಕಿದರೆ ಗುರುದೇವರ ಪಾದದಡಿಯಲ್ಲಿ ಬಂದು ಬೀಳುವೆ.

ಖುದೀರಾಮ್ : ಆಯ್ತು.... ಎಸೆ...... ಗಾಡಿ ಬಂತು.

(ಬಾಂಬ್ ಸ್ಫೋಟ.... ಚೀತ್ಕಾರ.... ಒಟ್ಟಿಗೆ ಓಡಿದರು. ಏದುಸಿರಿನಿಂದ)

ಖುದೀರಾಮ್ : ಹೊಟ್ಟೆ ಹಸಿವು, ಬಾಯಾರಿಕೆ. ಇಲ್ಲೇ ಒಂದು ಅಂಗಡಿ ಕಾಣ್ತದೆ. ಏನೋ ಕಡ್ಲೆಪುರಿ ಇರುವಂಗಿದೆ ತಿಂದು ಸ್ವಲ್ಪ ನೀರು ಕುಡಿದು ಆಮೇಲೆ ಹೋಗೋಣ.

ಅಂಗಡಿ ಬಾಂಬ್ ಹಾಕಿದ್ರಂತೆ ಯಾರೋ! ಕೆನಡಿ ಪತ್ನಿ, ಪುತ್ರಿ, ಸೇವಕಿ ಸತ್ತರಂತೆ.

ಖುದೀರಾಮ್ : ಏನು ಕಿಂಗ್ಸ್‌ಫೋರ್ಡ್ ಸಾಯಲಿಲ್ಲವೇ?

ಭಾರತಮಾತೆ : ಅಂಗಡಿಯಾತನಿಗೆ ಈತನ ಮೇಲೆ ಅನುಮಾನ ಬಂದು ಪೋಲೀಸರಿಗೆ ಸುಳಿವು ಕೊಟ್ಟ, ಬಹುಮಾನ ಸಿಗುತ್ತದೆಂದು. ಪೋಲೀಸರು ಆತನನ್ನು ಹಿಡಿದರು ನೀರು ಕುಡಿಯುತ್ತಿರುವಾಗಲೇ. ರಿವಾಲ್ವರ್ ಎತ್ತಲು ಅದನ್ನೂ ವಶಪಡಿಸಿಕೊಂಡರು. ಪ್ರಫುಲ್ಲ ಪೋಲೀಸರ ಕೈಗೆ ಸಿಗುತ್ತೇನೆ ಎಂದು ಗೊತ್ತಾದಾಗ, ತನ್ನ ಮೇಲೆ ಗುಂಡು ಹಾರಿಸಿಕೊಂಡು ವೀರ ಸ್ವರ್ಗವನ್ನು ಸೇರಿದ. ಖುದೀರಾಮನನ್ನು ಮುಜಫುರಕ್ಕೆ ಕರೆತಂದರು. ಕಾಳಿದಾಸಬೋಸ್ ಎಂಬ ಹಿರಿಯ ವಕೀಲ ಈತನ ಪರವಾದಿಸಿದ. ಎರಡು ತಿಂಗಳ ಕಾಲ ವಾದ ನಡೆದು ಕೊನೆಗೆ ನನ್ನ ಪುತ್ರನಿಗೆ ಮರಣ ದಂಡನೆ ವಿಧಿಸಿದರು.

ನ್ಯಾಯಾಧೀಶ : ನಿನಗೆ ಮರಣ ದಂಡನೆ ವಿಧಿಸಿದೆ..... ಈ ತೀರ್ಪಿನ ಅರ್ಥ ಗೊತ್ತಿದೆಯೇ?

ಖುದೀರಾಮ್ : ನಿಮಗಿಂತ ಚೆನ್ನಾಗಿ ತಿಳಿದುಕೊಂಡಿರುವೆ.

ನ್ಯಾಯಾಧೀಶ : ನೀನು ಏನಾದರೂ ಹೇಳುವುದಿದೆಯೇ?

ಖುದೀರಾಮ್ : ನಾನು ಬಾಂಬ್ ತಯಾರಿಸುವ ವಿಷಯದಲ್ಲಿ ಸ್ವಲ್ಪ ಹೇಳುವುದಿದೆ.

ನ್ಯಾಯಾಧೀಶ : ಸಾಕು ಮಾಡು...... ಈತನನ್ನು ಕರೆದುಕೊಂಡು ಹೋಗಿ......

ನಿರೂಪಕ : ಮತ್ತೆ ಇದನ್ನು ಕಲ್ಕತ್ತದ ಹೈಕೋರ್ಟ್‌ಗೆ ಅಪೀಲು ಮಾಡಿದರು. ಆ ನ್ಯಾಯಾಲಯವೂ ಮರಣದಂಡನೆ ನೀಡಿತು.

ನ್ಯಾಯಾಧೀಶ : ಏನಾದರೂ ನೀನು ಹೇಳುವುದಿದೆಯೇ?

ಖುದೀರಾಮ್ : ನಾನು ರಜಪೂತ ವೀರಾಂಗನೆಯರಂತೆ ನನ್ನ ದೇಶದ ಸ್ವಾತಂತ್ರ್ಯಕ್ಕೆ ಸಾಯುತ್ತೇನೆ. ಫಾಶಿಯ ಕಂಬ ಏರಲು ನನಗೆ ಎಳ್ಳಷ್ಟೂ ದುಃಖವಿಲ್ಲ. ಆದರೆ ಕಿಂಗ್ಸ್‌ಫೋರ್ಡ್‌ಗೆ ಆತ ಮಾಡಿದ ಅಪರಾಧಕ್ಕೆ ಶಿಕ್ಷೆ ಕೊಡಲು ಸಾಧ್ಯವಾಗಲಿಲ್ಲ ಎಂಬ ಖೇದ ಮಾತ್ರ ಇದೆ.

ಭಾರತಮಾತೆ : ೧೯೦೮ರಲ್ಲಿ ನನ್ನ ಪುತ್ರ ಖುದೀರಾಮ್ ಫಾಶಿ ಬಳಿ ಬಂದಾಗ ಮುಗುಳ್ನಗೆ ಇತ್ತು. ಶಾಂತ ಚಿತ್ತದಿಂದ, ಭಗವದ್ಗೀತೆ ಹಿಡಿದು ಬಂದ. ಕೊನೆಗೊಮ್ಮೆ "ವಂದೇ ಮಾತರಂ" ಎಂದು ಹೇಳಿ ಕುಣಿಕೆಗೆ ತಲೆಯೊಡ್ಡಿದ. ವೀರ ಖುದೀರಾಮ್ ಬೋಸ್ ಇತಿಹಾಸದಲ್ಲಿ ಅಮರನಾದ!

*

# ಬಂಕಿಮಚಂದ್ರ ಚಟರ್ಜಿ

(ಒಂದೇ.... ಮಾತರಂ...... ಹಾಡು.....)

ನಿರೂಪಕ : ಈ ಹಾಡು ಅದೆಷ್ಟು ಬಂಗಾಳದ ರಾಜಕೀಯ ವ್ಯಕ್ತಿಗಳಿಗೆ ಮಾತ್ರವಲ್ಲ ಭಾರತ ದೇಶದ ದೇಶ ಭಕ್ತರ ಮಂತ್ರಘೋಷವಾಯಿತು, ಸ್ಫೂರ್ತಿ ಸಾಹಿತ್ಯವಾಯಿತು. ದೇಶ ಭಕ್ತಿಗೆ ಅಂಕುರವಾಯಿತು. ಇದನ್ನು ಬರೆದ ಕವಿ ಬಂಕಿಮಚಂದ್ರ ಚಟರ್ಜಿ.

(ಹಾಡು ಮುಂದುವರಿದು ಮುಗಿಯುವುದು)

ಯಾವುದೇ ದೇಶ ಬೆಳೆಯಲು ಭಾಷೆ ಮುಖ್ಯ ಎಂಬುದಕ್ಕೆ ಬಂಕಿಮಚಂದ್ರರಿಗಿಂತ ಒಂದು ಉದಾಹರಣೆ ಬೇಕೇ? ಹೊಸ ಜೀವನ, ಭಾವನೆ, ಆಸೆ-ಆಕಾಂಕ್ಷೆಗಳನ್ನು ತುಂಬಲು ಕಾರಣ ತಾಯಿ ಭಾಷೆ. ಬಂಗಾಳಿ ಭಾಷೆಯಲ್ಲಿ ಸಾಹಿತ್ಯ ರಚಿಸಿ ತಮ್ಮ ಜನರು ಎಚ್ಚೆತ್ತು ಕೊಳ್ಳಲು ಕಾರಣನಾದ. ದೇಶಭಕ್ತಿ ಮೂಡಲು ನೆರವಾದ.

(ಸಂಗೀತ)

ಭಾರತಮಾತೆ : ಬಂಗಾಳದ ಕಾಂಟಲಪಾಡಾ ಗ್ರಾಮದಲ್ಲಿ ಬಂಕಿಮಚಂದ್ರ ೧೮೩೮ರಲ್ಲಿ ಜನಿಸಿದ. ತಂದೆ ಯಾದವಚಂದ್ರ ಚಟ್ಟೋಪಾಧ್ಯಾಯ. ಈತ ಡೆಪ್ಯೂಟಿ ಕಲೆಕ್ಟರ್ ಆಗಿ ಮೇದಿನೀಪುರ, ಹಿಜಲಿ ಮುಂತಾದ ಸ್ಥಳಗಳಲ್ಲಿ ಕೆಲಸ ಮಾಡಿದ. ಬಂಕಿಮಚಂದ್ರ ಹಳ್ಳಿಯ ಪಾಠಶಾಲೆಗೆ ಸೇರಿದಾಗ ವರ್ಣಮಾಲೆಯ ಅಕ್ಷರಗಳನ್ನು ಒಂದೇ ದಿನದಲ್ಲಿ ಕಲಿತು ಬಿಟ್ಟನಂತೆ!

ವಿದ್ಯಾರ್ಥಿ ದೆಸೆಯಲ್ಲಿ ಸ್ಕಾಲರ್‌ಷಿಪ್ ಪಡೆದ. ಬಿ.ಎ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ. ೧೮೫೭ರಲ್ಲಿ ಸಿಪಾಯಿ ದಂಗೆಯಾಗಿ ಕಲ್ಕತ್ತ ಅಲ್ಲೋಲ ಕಲ್ಲೋಲವಾಯಿತು-

(ಯುದ್ಧದ ದೃಶ್ಯ)

ಯಾದವಚಂದ್ರ : ಬಂಕಿಮಚಂದ್ರ......

ಬಂಕಿಮಚಂದ್ರ : ಏನಪ್ಪಾ?

ಯಾದವಚಂದ್ರ : ಒಂದು ಒಳ್ಳೆಯ ಸುದ್ದಿ! ನೀನು ಬಿ.ಎ. ಪಾಸಾಗ್ತಿದ್ದಂತೇ ಕೆಲಸ ಮನೆಯ ಬಾಗಿಲಿಗೇ ಕರೆಯಲಿಕ್ಕೆ ಬಂದಿದೆ.

ಬಂಕಿಮಚಂದ್ರ : ಏನಪ್ಪಾ...... ಕೆಲಸ?

ಯಾದವಚಂದ್ರ : ಲೆಫ್ಟಿನೆಂಟ್ ಗೌರ್‍ನರ್, ಡೆಪ್ಯುಟಿ ಕಲೆಕ್ಟರ್ ಕೆಲಸಕ್ಕೆ ಬರಲಿಕ್ಕೆ ಹೇಳಿದ್ದಾರೆ.

ಬಂಕಿಮಚಂದ್ರ : ನಂಗೇನೋ ಆ ನೌಕರಿಯ ನಿರ್ಬಂಧ ಒಗ್ಗುವುದಿಲ್ಲ ಅಪ್ಪಾ. ಜೊತೆಗೆ ನಾನು ಬಿ.ಎಲ್. ಓದಬೇಕು ಅಂತಿದ್ದೀನಿ.

ಯಾದವಚಂದ್ರ : ಕೆಲಸಕ್ಕೆ ಸೇರಿದ ಮೇಲೂ ಓದಬಹುದು ಕಣೋ. ಮೊದಲು ಕೆಲಸ, ಒಳ್ಳೆ ಕೆಲಸ ಸಿಕ್ಕಿರುವಾಗ ಬೇಡ ಅನ್ನಬೇಡ. ಇಪ್ಪತ್ತನೇ ವರ್ಷಕ್ಕೆ ಕೆಲಸ ಸಿಕ್ಕಿದೆ. ಒಪ್ಪಿಕೋ.

ಬಂಕಿಮಚಂದ್ರ : ತಾವು ಹೇಳಿದ ಮೇಲಾಯ್ತು......

ಭಾರತಮಾತೆ : ಬಂಕಿಮ ಸ್ವತಂತ್ರ ಬುದ್ಧಿಯುಳ್ಳವನೂ, ಧೀರನೂ, ನ್ಯಾಯಪರನೂ ಆದುದರಿಂದ ಅಧಿಕಾರದಲ್ಲಿರುವ ಇಂಗ್ಲೀಷಿನವರಿಗೂ ಈತನಿಗೂ ಆಗಾಗ ಮನಸ್ತಾಪ ಆಗುತ್ತಿತ್ತು. ಅವರು ತೋರುತ್ತಿದ್ದ ಪುಂಡಾಟ, ದುರಹಂಕಾರಕ್ಕೆ ಹೆದರದೆ, ದಾಕ್ಷಿಣ್ಯ ತೋರದೆ, ಅವರಿಗೆ ಬುದ್ಧಿ ಕಲಿಸುತ್ತಿದ್ದ. ಅವರಲ್ಲೂ ಕೆಲವು ದೊಡ್ಡ ಮನಸ್ಸಿನವರು ಈತನನ್ನು ಗೌರವಿಸುತ್ತಿದ್ದರು. ಅವನ ಸ್ನೇಹಕ್ಕೆ, ನ್ಯಾಯಕ್ಕೆ ಬೆಲೆಕೊಟ್ಟರು. ಮಿಕ್ಕವರು ಕಿರುಕುಳ ಕೊಟ್ಟರು. ಮೂವತ್ತು ವರ್ಷ ಸೇವೆ ಮಾಡಿ ವಿಶ್ರಾಂತಿ ಬೇಕೆಂದು ಬರೆದುಕೊಂಡ. ಆತನಿಗೆ ೫೩ ವರ್ಷವಾದ್ದರಿಂದ ಸರ್ಕಾರ ಅನುಮತಿ ಕೊಡಲಿಲ್ಲ. ಗ್ರಂಥ ಬರೆಯಲು ಅವಕಾಶಬೇಕೆಂದು ಲೆಫ್ಟಿನೆಂಟ್ ಗವರ್ನರ್ ಆಗಿದ್ದ ಚಾರ್ಲ್ಸ್ ಇಲಿಯಟ್ಟನನ್ನು ಕಂಡು ಕೇಳಿದಾಗ, ಆತ ಸಮ್ಮತಿ ಕೊಟ್ಟ. ನಾಲ್ಕು ನೂರು ರೂಪಾಯಿ ವಿಶ್ರಾಂತಿ ವೇತನ, ಜೊತೆಗೆ ಆತನ ಸೇವೆಯನ್ನು ಶ್ಲಾಘಿಸಿ ಸರ್ಕಾರ ರಾವ್‌ಬಹದ್ದೂರ್, ಸಿ.ಐ.ಇ. ಎಂಬ ಬಿರುದು ಕೊಟ್ಟು ಗೌರವಿಸಿತು.

ನಿರೂಪಕ : ಲೇಖಕನ ಜೀವನ ಕವಿತೆಯಿಂದಲೇ ಆರಂಭವಾಯಿತು. ಕಾಲೇಜು ವಿದ್ಯಾರ್ಥಿಯಿದ್ದಾಗಲೇ ಪತ್ರಿಕೆಗಳಲ್ಲಿ ಬರೆದು ಬಹುಮಾನ ಗಿಟ್ಟಿಸಿಕೊಳ್ಳುತ್ತಿದ್ದ. ಆತನ ಮೊದಲ ಕವಿತೆಯ ಕೆಲವು ಸಾಲುಗಳ ಭಾವ ಇಲ್ಲಿದೆ ಗಂಡ-ಹೆಂಡಿರ ಸಂಭಾಷಣಾ ರೂಪಿನಲ್ಲಿ

ಹೆಂಡತಿ : ಚಂದಿರನಸ್ತಾಚಲದೊಳು ಮುಳುಗುವನೇನೆಲೆ ಕಾಂತ?

ಗಂಡ : ಮುಳುಗವನಸ್ತಾಚಲದೊಳು ನಿನ್ನಯ ಮುಖದಿಂ ಬೆರಗಾಗಿ!

ಹೆಂಡತಿ : ಪ್ರಾಣಕಾಂತನೇ ಹತ್ತು ದಿಸೆಗಳೂ ಬೆಳುಗುತಿವೆ ಏಕೆ?

ಗಂಡ : ನಿನ್ನ ಮುಖದಾ ಬೆಳಕಿನಿಂದಲೇ ಪ್ರಭಾವತಿ.

ಹೆಂಡತಿ : ಕೋಗಿಲೆಗಳು ಕುಹೂ....... ಕುಹೂ.... ಎನ್ನುವುದೇಕೆ?

ಗಂಡ : ನಿನ್ನಯ ಇಂಚರ ಪಡೆವುದಕಲ್ಲದೆ ಮತ್ತೇಕೆ?

ಹೆಂಡತಿ : ಆ ದನಿ ಕೇಳಲು ಏತಕೆ ಪ್ರಾಣವು ತಳಮಳ ಗುಟ್ಟುವುದು?

ಗಂಡ : ನನ್ನೊಳು ನಿರ್ದಯಳಾದುದಕದು ಪ್ರತಿಫಲವು.

ಹೆಂಡತಿ : ಗಾಳಿಯು ಸರುಗಂಪನು ಹೊತ್ತೂ ಸುತ್ತುತಿರುವುದೇಕೆ?

ಗಂಡ : ನಿನ್ನಯ ಮುಖದಾ ತಾವರೆಗಂಪನು ಸಂಪಾದಿಸಲೆಂದು

ಹೆಂಡತಿ : ಗಾಳಿಯು, ಬೆಂಕಿಯು ಒಂದೇ ಎಂಬುದದೆಂತು?

ಗಂಡ : ಗೆಳೆಯರು, ಅವರದ ನೀನರಿಯೆ ಕಾಂತೆ?

ಹೆಂಡತಿ : ಸ್ನೇಹಿತರಾದೊಡೆ ಒಂದೇ ದೇಹವೆ ಗುಣಮಣಿಯೆ?

ಗಂಡ : ಭಾವನೆಯಿಂದಲೆ ಈ ವಿಧ ಭಾವವು - ಭಾವವಿದು.

ಹೆಂಡತಿ : ಆದೊಡೆ ನೀನೂ ನಾನೂ ಒಂದೇ ಏಕಲ್ಲ?

ಗಂಡ : ದೇಹಕ್ಕೆ ಐಕ್ಯವು ಇಲ್ಲದೊಡೇನು - ಒಳಗುಂಟು!

ಭಾರತಮಾತೆ : ಕೆಲಸದ ಒತ್ತಡಗಳಿದ್ದರೂ ಅನಕ ಕೃತಿಗಳನ್ನು ಗದ್ಯ, ಪದ್ಯ, ಪ್ರಬಂಧ, ಕಾದಂಬರಿಗಳ ರೂಪಗಳಲ್ಲಿ ರಚಿಸಿದ. ಅವನ ಕಾಲದಲ್ಲೇ ಅವನ ಕೃತಿಗಳು ಅನೇಕಾವರ್ತಿ ಮರು ಪ್ರಕಟಗೊಂಡುವು. ಮೊದಲ ಹೆಂಡತಿ ತೀರಿಕೊಂಡ ಮೇಲೆ ಹಾಲಿಷಹರ ಗ್ರಾಮದ ಲಕ್ಷ್ಮಿದೇವಿಯನ್ನು ಕೈಹಿಡಿದ. ಮೂರು ಹೆಣ್ಣು ಮಕ್ಕಳಾದುವು.

('ವಂದೇ..... ಮಾತರಂ....' ವಂದೇ.... ಮಾತರಂ ಘೋಷಣೆ)

ಭಾರತಮಾತೆ : ವಂದೇ ಮಾತರಂ ರಣ ಘೋಷವಾಯಿತು. ದೇಶಾಭಿಮಾನಕ್ಕೆ ಸ್ಫೂರ್ತಿ ನೀಡಿತು. ಬಂಗಾಲ ದೇಶಭಕ್ತಿಯ ಬೈಬಲ್ ಆಯಿತು. ಇದನ್ನು ಉಚ್ಚರಿಸುವವರು ಸೆರೆಮನೆಗೆ ಹೋಗುವಂತಾಯಿತು. ಸರ್ಕಾರದ ನಿಷೇದಾಜ್ಞೆ ಮೀರಿದನೆಂದು ೧೯೦೬ರಲ್ಲಿ ಸುರೇಂದ್ರನಾಥ ಬ್ಯಾನರ್ಜಿಯನ್ನು ದಸ್ತಗಿರಿ ಮಾಡಿ ೨೦೦ ರೂಪಾಯಿ ಜುಲ್ಮಾನೆ ಹಾಕಿತು. ಆದರೆ ಈತನ ಕೃತಿಗಳಿಂದ ಅನೇಕ ಬಂಗಾಳಿಗಳ ದೇಶದ ಜನರ ಹೃದಯದಲ್ಲಿ ರಾಷ್ಟ್ರೀಯತೆಯ ಕಿಚ್ಚೆಬ್ಬಿಸಿತು. ಈತನ ಪ್ರಬಂಧಗಳು ರಾಷ್ಟ್ರೀಯ ಸ್ವಾತಂತ್ರ್ಯ ಮತ್ತು ಸಮಾಜವಾದಗಳನ್ನು ಎತ್ತಿ ಹಿಡಿದುವು. ಆನಂದಮಠ ಕಾದಂಬರಿ ರಾಷ್ಟ್ರ ಪ್ರೇಮಕ್ಕೆ, ತ್ಯಾಗ ಬಲಿದಾನಗಳಿಗೆ ಸ್ಫೂರ್ತಿ ನೀಡಿತು!

(ಸಂಗೀತ)

ನಿರೂಪಕ : ದೇಶಾಭಿಮಾನ ಹುಟ್ಟಿಸುವ ಲೇಖನ ಈತನದು. ಭಾರತ ದೇಶದ ಜನರಿಗೆ ಧರ್ಮ ಬಿಟ್ಟರೆ ಅವರ ಹೃದಯದಲ್ಲಿ ಬೇರೇನೂ ಸುಳಿಯುವುದಿಲ್ಲ ಎಂಬುದನ್ನು ತಿಳಿದ ಈತ ಧರ್ಮದ ಮೂಲಕ ದೇಶಾಭಿಮಾನ ಹುಟ್ಟಿಸಲು ಕಾರಣಕರ್ತನಾದ. ತಾಯಿನಾಡನ್ನು ದುರ್ಗಿ, ಲಕ್ಷ್ಮಿ, ಸರಸ್ವತಿಯೆಂದು ಗುರುತಿಸಿ, ತಾಯಿನಾಡಿನ ಚಿಹ್ನೆ ದೇವರೆಂದು ತಿಳಿಸಿದ. ಕಾಳಿ ನಶಿಸುತ್ತಿದ್ದಾಳೆ, ಕಪ್ಪಾಗಿದ್ದಾಳೆ, ಏಕೆಂದರೆ ದೇಶದ ತುಂಬ ತುಂಬಿರುವ ವ್ಯಸನಗಳಿಂದ. ಆಕೆ ನಗ್ನಳಾಗಿದ್ದಾಳೆ ಏಕೆಂದರೆ ಎಲ್ಲಾ ಐಶ್ವರ್ಯವನ್ನು ಕಳೆದುಕೊಂಡಿದ್ದಾಳೆ. ಆಕೆ ಬುರುಡೆಗಳ ಸರಮಾಲೆ ಹಾಕಿಕೊಂಡಿದ್ದಾಳೆ, ಕಾರಣ ದೇಶವೆಲ್ಲಾ ಹೆಣಗಳನ್ನು ಹೂಳುವ ಸ್ಥಳವಾಗಿದೆ. ಆಕೆಯ ಪಾದದಡಿಯಲ್ಲಿ ಶಿವ ಇದ್ದಾನೆ. ಇದು ಭಾರತ ದೇಶದ ಜನರೆಲ್ಲಾ ತಮ್ಮ ಐಶ್ವರ್ಯಗಳನ್ನು ಕಳೆದುಕೊಂಡಿದ್ದಾರೆ ಎಂಬುದನ್ನು ತೋರುತ್ತದೆ. ಇವರ ಬಗ್ಗೆ ಅರಬಿಂದೋ ಘೋಷ್ ಹೇಳುತ್ತಾರೆ-

ಅರಬಿಂದೊ : ಈತ ದೇಶದ ಅಭಿವೃದ್ಧಿಗೆ, ದೇಶ ಕಟ್ಟುವ, ನವ ಭಾರತದ ನಿರ್ಮಾಣಕಾರ. ಋಷಿ!

ನಿರೂಪಕ : ರಾಜಕೀಯ ಚಳುವಳಿಯಲ್ಲಿ, ದೇಶದ ಅಭಿವೃದ್ಧಿಯಲ್ಲಿ ಸ್ವಯಂ ತ್ಯಾಗ ಮನೋಭಾವ ಬೆಳೆಸಲು ಧಾರ್ಮಿಕ ದೇಶ ಭಕ್ತಿಯನ್ನು ಜನರಲ್ಲಿ ತುಂಬಿದ. ಸಂಗೀತ, ಸಂಸ್ಕೃತ, ವಿಜ್ಞಾನ, ಕಲೆ, ಕಾವ್ಯ, ಜೋತಿಷ್ಯ, ಸಮಾಜಶಾಸ್ತ್ರ, ಧರ್ಮದರ್ಶನ, ಚರಿತ್ರೆ, ರಾಜನೀತಿ ಮುಂತಾದ ಶಾಸ್ತ್ರಗಳ ಪರಿಚಯವಿತ್ತು ಆತನಿಗೆ. ಒಂದು ರೀತಿಯಲ್ಲಿ ಹೇಳುವುದಾದರೆ ಈತ ಸಾಹಿತ್ಯ ಕರ್ಮಯೋಗಿ! ತನ್ನ ಆಸೆ, ಆಕಾಂಕ್ಷೆ, ಸೌಂದರ್ಯ ಪ್ರೇಮ, ಭಕ್ತಿ, ಹಿರಿಮೆ, ದೇಶಾಭಿಮಾನ, ವಿದ್ಯೆ, ಬುದ್ಧಿ ಎಲ್ಲವನ್ನೂ ಧಾರಾಳವಾಗಿ ವಂಗ ಭಾಷೆಯಲ್ಲಿ ಅರ್ಪಿಸಿದ. ದೇಶಾದ್ಯಂತ ಭಾವಾಂದೋಲನ ತಂದ!

(ಸಂಗೀತ)

ಭಾರತಮಾತೆ : ಒಮ್ಮೆ ಮಧುಮೇಹ ರೋಗದಿಂದ ನರಳುತ್ತಿದ್ದಾಗ ವೈದ್ಯರು-

ಮಹೇಂದ್ರಚಂದ್ರ: ನೀವು ಔಷಧ ತೊಗೊಳ್ಬೇಕು.

ಬಂಕಿಮಚಂದ್ರ : (ನಗು)

ಮಹೇಂದ್ರಚಂದ್ರ: ಹೀಗಾದರೆ ನೀವು ಆತ್ಮಹತ್ಯೆ ಮಾಡಿಕೊಳ್ಳುತ್ತೀರಿ.

ಬಂಕಿಮಚಂದ್ರ : ಹೇಗೆ?

ಮಹೇಂದ್ರಚಂದ್ರ: ಔಷಧ ತೆಗೆದುಕೊಳ್ಳದಿದ್ದರೆ ಆತ್ಮಹತ್ಯೆ ಮಾಡಿಕೊಂಡಂತೇ!

ಬಂಕಿಮಚಂದ್ರ : ನಾನು ಔಷಧ ತೆಗೆದುಕೊಳ್ಳುತ್ತಿಲ್ಲ ಎಂದು ಹೇಳಿದವರಾರು?

ಮಹೇಂದ್ರಚಂದ್ರ: ಔಷಧ ಎಲ್ಲಿ ಮತ್ತೆ?

ಬಂಕಿಮಚಂದ್ರ : ಅದೋ ನೋಡಿ..... ಆ ಗೀತೆಯ ಪುಸ್ತಕ!

ಅಂತಕಾಲೇಚ ಮಾಮೇವ ಸ್ಮರತ್ ಮುಕ್ತ್ವಾ ಕಳೇಬರಂ
ಯಃ ಪ್ರಯಾತಿ ಸಮದ್ಭಾವಂ ನಾಸ್ತ್ಯತ್ರ ಸಂಶಯಃ

ಮಹೇಂದ್ರಚಂದ್ರ: ನಿಮ್ಮೊಡನೆ ಚರ್ಚೆ ಮಾಡುವುದು ವ್ಯರ್ಥ.... ನಾನಿನ್ನು ಬರ್ತೀನಿ.

ಭಾರತಮಾತೆ : ೧೮೯೪ರಲ್ಲಿ ಬಂಕಿಮ ತನ್ನ ಜೀವನದಲ್ಲಿ ಸಂಜೆ ಆಗುವುದಕ್ಕೆ ಮುಂಚೆಯೇ, ಹೊಸ ಆಕಾಶದಲ್ಲಿ, ಹೊಸ ಉದ್ಯಮ, ಹೊಸ ಕಾರ್ಯಗಳಲ್ಲಿ, ಇನ್ನೂ ಕೈ ಇಟ್ಟ ಪ್ರಾರಂಭದಲ್ಲಿಯೇ, ತನ್ನ ಕುಂದದ ಪ್ರತಿಭಾ ರಶ್ಮಿಯನ್ನೂ ಸಂವರಣ ಮಾಡಿ, ವಂಗ ಸಾಹಿತ್ಯಾಕಾಶದಲ್ಲಿ ಕ್ಷೀಣತರ ಜ್ಯೋತಿರ್ಮಂಡಲದ ಕೈಗೆ ಸಮರ್ಪಿಸಿಕೊಂಡು ಈ ವಂಗ ಶತಮಾನದ ಕಡೆಯ ವರ್ಗವೆಂಬ ಪಶ್ಚಿಮ ದಿಗಂತದಲ್ಲಿ ಅಕಾಲದಲ್ಲಿ ಅಸ್ತಮಿತನಾದನು.

*

# ಸಾನೆ ಗುರೂಜಿ

ಭಾರತಮಾತೆ : ಗಾಂಧೀಜಿ ದಂಡಿ ಸತ್ಯಾಗ್ರಹಕ್ಕೆ ಮುಂದಾದಾಗ ಪಾಂಡುರಂಗ ಸಾನೆ ಶಿಕ್ಷಕ ವೃತ್ತಿಯನ್ನು ತೊರೆದು "ನಾವು ಸ್ವಾತಂತ್ರ್ಯದ ಸೈನಿಕರು, ನಿರ್ಭಯರು, ನಿರಂಕುಶರು, ರಾಕ್ಷಸೀ ಸರ್ಕಾರವನ್ನು ನಾವು ಎಂದೂ ಜೀವಂತ ಉಳಿಸಿಕೊಳ್ಳುವುದಿಲ್ಲ" ಎಂದು ಸಾರಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದ. ದೇಶಕ್ಕಾಗಿ ದೇಹವನ್ನು ಮುಡುಪಾಗಿಟ್ಟು ಮಹಾ ತ್ಯಾಗಿಯಾದ. ಮದುವೆ ಆಗದೆ, ಸಾವಿಗೆ ಅಂಜದೆ ಹೋರಾಟವೆಸಗಿದ ಧೀರ ಸಾಹಸಿಯಾದ. ಬಡ ಬಗ್ಗರು, ಹಿಂದುಳಿದವರಿಗಾಗಿ ಬಾಳನ್ನು ಗಂಧದ ಕೊರಡಿನಂತೆ ತೇಯ್ದು ಮಹಾ ಚೇತನವಾದ! ಈಗ ಆತನ ಕಥೆ ಹೇಳುವೆ ನನ್ನ ಕಥೆ ಹೇಳುವೆ.

(ಸಂಗೀತ)

ನಿರೂಪಕ : ಸಾನೆ ಮನೆತನದ ಸಾದಾಶಿವಸಾನೆ ಯಶೋಧಾಬಾಯಿಯವರ ಮಗನಾಗಿ ಪಾಂಡುರಂಗ ಸಾನೆ ೧೮೯೯ರಲ್ಲಿ ಜನಿಸಿದರು. ಪ್ರೀತಿಗೆ ತಂದೆ ತಾಯಿಯರು ಆತನನ್ನು 'ಶ್ಯಾನು' ಎಂದು ಕರೆದರು. ಸಾದಶಿವಸಾನೆ ಶ್ಯಾನುಭೋಗ ವೃತ್ತಿಯಲ್ಲಿ ಜೀವನ ಸಾಗಿಸುತ್ತಿದ್ದರು. ಇರುವ ಆಸ್ತಿ ಮಾರಿದ ಮೇಲೆ ಜೀವನೋಪಾಯಕ್ಕೆ ರತ್ನಗಿರಿ ಜಿಲ್ಲೆಯ ಪಾಲಗಡಕ್ಕೆ ಬಂದು ಸ್ವಲ್ಪ ಭೂಮಿ ತೆಗೆದುಕೊಂಡು ವ್ಯವಸಾಯ ಮಾಡಿ ಜೀವಿಸುತ್ತಿದ್ದರು.

ಒಮ್ಮೆ ಪುಸ್ತಕ ತೆಗೆದುಕೊಳ್ಳಲು ಹಣ ಇಲ್ಲದಿರಲು ಚಿಕ್ಕಪ್ಪನ ಜೇಬಿನಿಂದ ಒಂದು ರೂಪಾಯಿ ತೆಗೆದುಕೊಂಡರು. ಚಿಕ್ಕಪ್ಪ ಆತನನ್ನು ಹೊಡೆಯಲು ತಾಯಿ "ಆತ ಆ ಕೆಲಸ ಮಾಡೋಲ್ಲ. ತೆಗೆದುಕೊಂಡಿದ್ದರೆ ಹೇಳುತ್ತಿದ್ದ" ಎಂದು ಬಿಡಿಸಿಕೊಳ್ಳಲು ಆತ ತಾನು ಕದ್ದ ವಿಚಾರ ತಿಳಿಸಿದ. ತಾಯಿ ಚೆನ್ನಾಗಿ ಆತನಿಗೆ ಹೊಡೆದು ಉಪವಾಸ ಕೆಡವಿ, ಕಳ್ಳತನ ಕೆಟ್ಟದ್ದೆಂದು ಬುದ್ಧಿವಾದ ಹೇಳಿದಳು.

ಭಾರತಮಾತೆ : ಸಾನೆಯ ತಾಯಿ ರಾಮ ರಕ್ಷಾ ಸ್ತೋತ್ರ ಮಾಡದೆ ಮಲಗುತ್ತಿರಲಿಲ್ಲ. ಒಮ್ಮೆ ಆಕೆಗೆ ಜ್ವರ ಬಂದಾಗ ಸ್ತೋತ್ರ ಮಾಡಲಾಗದೆ ತನ್ನ ಪರವಾಗಿ ಮಗನನ್ನೇ ಮಾಡುವಂತೆ ಹೇಳಿದಳು. ಆತ ನಾನೇಕೆ ನೀನು ಮಾಡುವುದನ್ನು ಮಾಡಬೇಕು ಎಂದ. ಅದಕ್ಕೆ ತಾಯಿ "ಪ್ರತಿಯೊಬ್ಬರೂ

ತಮ್ಮ ಕೆಲಸ ಮಾಡುತ್ತಾರೆ, ಬೇರೆಯವರ ಕೆಲಸ ಮಾಡಿದರೆ ಹೆಚ್ಚು ಸಂತೋಷ ಸಿಗುವುದು" ಎಂದು ಬುದ್ಧಿವಾದ ಹೇಳಿ ಹೆಜ್ಜೆ ಹೆಜ್ಜೆಗೂ ಆತನನ್ನು ಎಚ್ಚರಿಸಿ ಜ್ಞಾನೋದಯಕ್ಕೆ ಕಾರಣಳಾದಳು.

ನಿರೂಪಕ : ಸಾನೆ ಊರ ಹೊರಗೆ ಹನ್ನೆರಡು ಮೈಲು ದೂರದಲ್ಲಿನ ಶಾಲೆಗೆ ಸೇರಬೇಕಾಯಿತು. ವಾರಕ್ಕೊಮ್ಮೆ ಅಲ್ಲಿಂದ ಕಾಲ್ನಡಿಗೆಯಿಂದ ಸ್ವಂತ ಊರಿಗೆ ಬರುತ್ತಿದ್ದ. ತಂದೆ ತಾಯಿಯರಿಗೆ ಓದಿಸಲೂ ಕಷ್ಟ. ಆದರೂ ತಾಯಿ ಮಗನ ಸರ್ವತೋಮುಖ ಅಭಿವೃದ್ಧಿಗಾಗಿ ಹಂಬಲಿಸುತ್ತಿದ್ದಳು. ಆತ ಎಸ್.ಎಸ್.ಎಲ್.ಸಿ ಓದುವಾಗ ತಾಯಿ ತೀರಿಕೊಂಡಳು. ಕಾಲೇಜು ಓದುವಾಗಲೇ ಸಾನೆಗೆ ಸಮಾಜ ಸೇವೆ, ಸ್ವಾತಂತ್ರ್ಯದತ್ತ ಮನಸ್ಸು ಹೊರಳಿತು. ಲಾಲಾಲಜಪತರಾಯ್, ಬಿಪಿನ್ ಚಂದ್ರಪಾಲ್, ಚಿತ್ತರಂಜನ ದಾಸ್ ಹಾಗೂ ಮೋತಿಲಾಲರ ಭಾಷಣದಿಂದ ಸ್ಫೂರ್ತಿಗೊಂಡರು. ೧೯೧೮ರಲ್ಲಿ ಪೂನಾದಲ್ಲಿ ಇನುಫ್ಲುಯೆಂಜಾ ಹರಡಿದಾಗ ಔಷಧ ಕೊಟ್ಟು ಜನಸೇವೆ ಮಾಡಿದರು. ಎಂ.ಎ. ಪದವೀಧರರಾದರು.

(ಮರಾಠಿ ಸ್ವಾತಂತ್ರ್ಯಗೀತೆ)

ಭಾರತಮಾತೆ : ಗಾಂಧೀಜಿಯ ಅಸಹಕಾರ ಚಳುವಳಿ ಸಾನೆಯ ಮನದ ಮೇಲೆ ಹೆಚ್ಚಿನ ಪರಿಣಾಮ ಬೀರಿತು. ಮದುವೆಯಾಗಲು ಒಪ್ಪದೆ ನನ್ನ ಸೇವೆಗೆ ಮುಡುಪಾಗಿಟ್ಟ. ಅಣ್ಣನಿಗೆ ಲಕ್ವ ಹೊಡೆಯಲು, ಬಂದು ಆತನ ಸೇವೆ ಮಾಡಿದ. ತಂದೆ ನಿಧನ ಹೊಂದಿದ ಮೇಲೆ ಮನಸ್ಸು ತತ್ತ್ವಜ್ಞಾನದ ಕಡೆ ವಾಲಿತು. ಖಾದಿ ಹಾಕಲಾರಂಭಿಸಿದ... ಮೇಲು ಕೀಳು, ಬಡವ ಬಲ್ಲಿದ ಎಂಬ ಭೇದಭಾವ ಇರಲಿಲ್ಲ ಎಂಬುದಕ್ಕೆ ಇದೊಂದು ಉದಾಹರಣೆ-

ಒಬ್ಬ : ಏನು ರೂಪಲ್ಯಾಳನ್ನು ಜೊತೆಯಲ್ಲಿ ಕುಳ್ಳರಿಸಿಕೊಂಡು ಊಟ ಮಾಡ್ತಿದ್ದೀಯೇ?

ಸಾನೆಗುರೂಜಿ : ತಪ್ಪೇನು ಅವಳೂ ನನ್ನ ಹಾಗೆ ಮನುಷ್ಯಳಲ್ಲವೆ?

ಒಬ್ಬ : ಮನೆಯ ಕೆಲಸದವಳ ಅಂತಸ್ತೇನು ನಮ್ಮ ಅಂತಸ್ತೇನು? ಅವಳ ಜಾತಿ ಕುಲಗಳೇನು ನಮ್ಮದೇನು?

ಸಾನೆಗುರೂಜಿ : ಆಕೆ ಬಡವಳು. ಬೇರೆ ಜಾತಿಯವಳು, ಆ ತಾನೇ ಆದರೇನು? ಪಂಕ್ತಿಯಲ್ಲಿ ಕುಳಿತು ಊಟ ಮಾಡಿದರೇನಾಗುತ್ತದೆ?

ಒಬ್ಬ : ಇದಕ್ಕೆ ನಾವು ವಿರೋಧಿಸುತ್ತೇವೆ. ನಾವು ಊಟಕ್ಕೆ ಕುಳಿತುಕೊಳ್ಳುವುದಿಲ್ಲ.

ಸಾನೆಗುರೂಜಿ : ಆದರೆ ನಾನು ಅದಕ್ಕೆ ಒಪ್ಪುವುದಿಲ್ಲ ನೀವು ಏನಾದರೂ ಮಾಡಿ.

ಒಬ್ಬ : ಏನು ಮಾಡ್ತಿಯೋ ಮಾಡು. ನಾನು ಎದ್ದುಹೋಗುತ್ತೇನೆ.

ನಿರೂಪಕ : ಮುಂದೆ ಅಮಳನೇರದಲ್ಲಿ 'ಪ್ರತಾಪ್' ಹೈಸ್ಕೂಲಿನಲ್ಲಿ ಶಿಕ್ಷಕರಾದರು. ವಿದ್ಯಾರ್ಥಿ ನಿಲಯದ ಕೆಲಸವನ್ನು ನಿರ್ವಹಿಸಿದರು. ಎಲ್ಲರ ಪ್ರೀತ್ಯಾದರಗಳನ್ನು ಪಡೆದು "ಸಾನೆ ಗುರೂಜಿ" ಆದರು.

ಹುಡುಗರ ಆರೋಗ್ಯ ಕೆಟ್ಟಾಗ ತಾವೇ ಸ್ವತಃ ಅವರ ಶುಶ್ರೂಷೆ ಮಾಡತೊಡಗಿದರು. 'ವಿದ್ಯಾರ್ಥಿ' ಎಂಬ ಪತ್ರಿಕೆ ಆರಂಭಿಸಿದರು. ಅದರಲ್ಲಿ ಉತ್ತಮ ಕಥೆಗಳು ಪ್ರಕಟಗೊಂಡು ಜನಪ್ರಿಯವಾಯಿತು. ಒಮ್ಮೆ ವಿದ್ಯಾರ್ಥಿಯೊಬ್ಬ ವಿದ್ಯಾರ್ಥಿ ನಿಲಯದ ಮುಂದೆ ಮಲವಿಸರ್ಜನೆ ಮಾಡಿದ. ಸಾನೆಯವರೇ ಆ ಮಲವನ್ನು ಎತ್ತಿ ಹೊರಗೆ ಹಾಕಿದರು. ಆತನಿಗೆ ಬುದ್ಧಿವಾದ ಹೇಳಿದರು.

ಸಾನೆಗುರೂಜಿ : ಇನ್ನಾದರೂ ಪರಿಸರ ನೈರ್ಮಲ್ಯ ಕಾಪಾಡಪ್ಪಾ ವಿದ್ಯಾರ್ಥಿ ನಿಲಯ ಚೊಕ್ಕಟವಾಗಿಡುವಂತೆ ಪ್ರಯತ್ನಿಸು.

ವಿದ್ಯಾರ್ಥಿ : ಸಾರ್ ನಾನು ಮಾಡಿದ್ದು ತಪ್ಪಾಯ್ತು ಸಾರ್. ನನ್ನನ್ನು ಕ್ಷಮಿಸಿಬಿಡಿ.

ಸಾನೆಗುರೂಜಿ : ಈಗೇನಾಯ್ತು ಬಿಡಪ್ಪಾ.

ವಿದ್ಯಾರ್ಥಿ : ಏನೋ ಅವಸರವಾಯಿತು, ಈ ಅಚಾತುರ್ಯ ನಡೆದು ಹೋಯಿತು. ಇನ್ನು ಮೇಲೆ ಹಾಗೆ ಮಾಡುವುದಿಲ್ಲ ಸಾನೆಗುರೂಜೀ.

ಸಾನೆಗುರೂಜಿ : ಆಯ್ತು ಬಿಡು ಆಯಿತಲ್ಲ ಈಗ.

ವಿದ್ಯಾರ್ಥಿ : ನೀವು ಹಾಗೆ ಮಾಡಬಾರಗಿತ್ತು. ನನಗೇ ಹೇಳಿದ್ದರೆ ಆ ಮಲ ಎತ್ತಿಹಾಕುವ ಕೆಲಸ ಮಾಡುತ್ತಿದ್ದೆ.

ನಿರೂಪಕ : ಇಂಥ ಹಲವಾರು ಘಟನೆಗಳಿಂದ ವಿದ್ಯಾರ್ಥಿಗಳ ಮನವನ್ನೇ ಪರಿವರ್ತಿಸಿ ಉತ್ತಮ ವರ್ತನೆಯಿಂದ ನಡೆಯುವುದನ್ನು ಕಲಿಸಿದರು, ಸಾನೆ ಗುರೂಜಿ. ೧೯೩೦, ದಂಡಿಯಾತ್ರೆ! ಗಾಂಧಿಯವರ ನೇತೃತ್ವದಲ್ಲಿ! ಅದರಲ್ಲಿ ಸಾನೆ ಗುರೂಜಿಯವರ ಪಾತ್ರವೂ ಹಿರಿದು. ಅವರು ಜನರನ್ನು ಎಚ್ಚರಿಸಲು ಭಾಷಣ ಮಾಡಿದರು.

ಸಾನೆಗುರೂಜಿ : ಈ ದಂಡಿಯಾತ್ರೆ ಅಥವಾ ಉಪ್ಪಿನ ಸತ್ಯಾಗ್ರಹ ಒಂದು ರೀತಿಯಲ್ಲಿ ಹೇಳುವುದಾದರೆ ಕಾನೂನುಭಂಗ ಚಳವಳಿಯ ಆರಂಭ ಅಂತ್ಲೇ ಹೇಳಬೇಕು. ಇದರ ಉದ್ದೇಶ ಉಪ್ಪಿನ ತಯಾರಿಕೆಯಲ್ಲಿ ಬ್ರಿಟೀಷ್ ಸರಕಾರ ಹೊಂದಿದ್ದ ಏಕಸ್ವಾಮ್ಯ. ಇದಕ್ಕಾಗಿ ಗಾಂಧಿಯವರು ತಮ್ಮ ಅನುಯಾಯಿಗಳ ಜೊತೆಯಲ್ಲಿ ಅಹಮದಾಬಾದಿನಿಂದ ೨೪೦ ಮೈಲು ದೂರದಲ್ಲಿ ಸಮುದ್ರದ ದಂಡೆಯಲ್ಲಿರುವ ದಂಡಿಗೆ ಹೋಗಲಿದ್ದಾರೆ. ಇದಕ್ಕಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸೇರಬೇಕು. ಇಂದು ಇಡೀ ಭಾರತದ

ಜನತಾ ಚಳವಳಿ ಆಗಲೇಬೇಕು. ಉಪ್ಪಿನ ಮೇಲಿನ ತೆರಿಗೆ ತೆಗೆದು ಹಾಕಬೇಕು. ಇಲ್ಲದಿದ್ದರೆ ಕಾನೂನಿಗೆ ವಿರುದ್ಧವಾಗಿ ಉಪ್ಪನ್ನು ನಾವೇ ತಯಾರು ಮಾಡಲಿಕ್ಕೆ ಸಿದ್ಧವಾಗಿರಬೇಕು. ಇದಕ್ಕೆ ಮಹಿಳೆಯರು ಪುರುಷರೆಂಬ ಭೇದವಿಲ್ಲದೆ ಎಲ್ಲರೂ ಬಂದು ಸೇರಬೇಕು. ಬ್ರಿಟೀಷರ ವಿರುದ್ಧ ಹೋರಾಡಬೇಕು..

ಜನಗುಂಪು: ಆಯ್ತು ನಾವು ಬರ್ತೀವಿ.... ನಾವೆಲ್ಲಾ ಸೇರ್ತೀವಿ.

(ಚಪ್ಪಾಳೆ)

ನಿರೂಪಕ : ದಂಡಿಯಾತ್ರೆಯಲ್ಲಿ ಮಾಡಿದ ಭಾಷಣದಿಂದ ಸಾನೆಗುರೂಜೀ ಅವರನ್ನು ಪೋಲೀಸರು ಬಂಧಿಸಿ-

ಪೋಲಿಸ್ : ನಿಮಗೆ ಮೂರು ತಿಂಗಳ ಜೈಲುವಾಸ ಬೇಕೋ ೨೦೦ ರೂಪಾಯಿ ದಂಡ ಕೊಡುತ್ತೀರೊ?

ಸಾನೆಗುರೂಜಿ : ಯಾಕೆ?

ಪೋಲಿಸ್ : ನೀವು ಮಾಡಿದ್ದ ದೇಶ ವಿರುದ್ಧದ ಭಾಷಣಕ್ಕೆ.

ಸಾನೆಗುರೂಜಿ : ನಾನು ದಂಡ ಕೊಡುವವನಲ್ಲ.

ಪೋಲಿಸ್ : ಹಾಗಾದರೆ ನಿಮ್ಮನ್ನು 'ಬಿ' ವರ್ಗದ ಜೈಲಿಗೆ ಹಾಕುತ್ತೇವೆ.

ಸಾನೆಗುರೂಜಿ : ಬೇಡ ನನಗೆ 'ಸಿ' ವರ್ಗದ ಜೈಲಿಗೆ ಹಾಕಿ.

ಪೋಲೀಸ್ : ಸರಿ ನಡೆ.

ಭಾರತಮಾತೆ : ಸಾನೆಯನ್ನು ತಿರುಚನಾಪಳ್ಳಿಯ ಜೈಲಿಗೆ ಹಾಕಿದರು. ಅಲ್ಲಿ ತಮಿಳು ಕಲಿತು 'ಕುರುಳ್' ಎಂಬ ಗ್ರಂಥವನ್ನು ಮರಾಠಿಗೆ ಅನುವಾದಿಸಿದರು. ಆಚಾರ್ಯ ಭಾಗವತರ ಪರಿಚಯವಾಯಿತು. ರಾಮಾಚಾಶೇಲಾ, ತೇ ಆಪಲೇಘರ್ ಖರೀ ಸಂಸ್ಕೃತಿ ಮುಂತಾದ ಗ್ರಂಥಗಳನ್ನು ರಚಿಸಿದರು. ನನ್ನ ಮತ್ತೊಬ್ಬ ಪುತ್ರ ಭಗವತ್‌ಸಿಂಗ್‌ನನ್ನು ಗಲ್ಲಿಗೇರಿಸಲು ಘೋಷಿಸಿದುದು ಸಾನೆಗೆ ಬಹಳ ದುಃಖವೆನಿಸಿತು. ಸಭೆ ಸೇರಿ ಪ್ರತಿಭಟಿಸಿದರು.

ಸಾನೆಗುರೂಜಿ : ಮಹಾಜನರೇ, ಭಗತ್‌ಸಿಂಗ್‌ರನ್ನು ಗಲ್ಲಿಗೇರಿಸುತ್ತಿರುವ ಸುದ್ದಿ ಕೇಳಿ ರಕ್ತ ಕುದಿಯುತ್ತಿದೆ, ರೋಷ ಉಕ್ಕುತ್ತಿದೆ. ಸೊಕ್ಕಿದ ಬ್ರಿಟಿಷ್ ಸರಕಾರವನ್ನು ನಾವು ಬಗ್ಗು ಬಡಿಯಲೇಬೇಕು. ಏಳಿ ಎದ್ದೇಳಿ ಮಹಾಜನರೇ..... ಇದಕ್ಕೆ ಪ್ರತಿಭಟನೆ ಮಾಡಲೇಬೇಕು ಎಲ್ಲರೂ ಸಜ್ಜಾಗಬೇಕು.

ಜನರಗುಂಪು : ಸಾನೆ ಗುರೂಜೀಗೆ..... ಜಯವಾಗಲೀ......

ನಿರೂಪಕ : ಗಾಂಧೀಜಿಯವರು ಹೇಳಿದ ಚರಕದಿಂದ ನೂಲುವುದನ್ನು ಸಾನೆ ಹಳ್ಳಿಯಲ್ಲಿ ಪ್ರಚಾರ ಮಾಡಿದರು. ಅಮಳನೇರ ತಾಲ್ಲೂಕಿನ ಡಾಂಗೇರಿಯಲ್ಲಿ ಆಶ್ರಮ ಕಟ್ಟಿ ಮಣ್ಣಿನ ಪಾತ್ರೆಯಲ್ಲಿ ಊಟ ಮಾಡುತ್ತಾ

ಸರಳ ಜೀವನ ಆರಂಭಿಸಿದರು. ಹೆಂಡ ಕುಡಿಯುವುದು ಸರಿಯಲ್ಲ ಎಂದು ಕುಡುಕರಿಗೆ ಬೋಧಿಸಿದರು. ಹಳ್ಳಿಯ ರೈತರನ್ನು ಜಾಗೃತಿಗೊಳಿಸಲು ಆರಂಭಿಸಿದರು. ೧೯೩೨ರಲ್ಲಿ ಗಾಂಧಿಯವರನ್ನು ಬಂಧಿಸಲು ದೇಶದಾದ್ಯಂತ ಚಳವಳಿ! ಸಾನೆ ಅವರು ಬ್ರಿಟಿಷ್ ಸರ್ಕಾರದ ವಿರುದ್ಧ ಭಾಷಣ ಮಾಡಿದ್ದರಿಂದ ಮತ್ತೆ ಜೈಲುವಾಸ, ಅಲ್ಲಿ ಹಿಟ್ಟು ಬೀಸುವ ಕೆಲಸ. ಆಗ ಕವನ ಕಟ್ಟಿ ಹಾಡುತ್ತಿದ್ದರು, ಕಥೆಯನ್ನು ಬರೆಯುತ್ತಿದ್ದರು. ಅಲ್ಲೇ ವಿನೋಭಾ ಅವರು ಗೀತೆಯ ಬಗೆಗೆ ಹೇಳುತ್ತಿದ್ದುದನ್ನು ಬರೆದುಕೊಳ್ಳುತ್ತಿದ್ದರು. ಅಲ್ಲಿಂದ ನಾಸಿಕ್‌ನ ಸೆರೆಮನೆಗೆ ವರ್ಗಾವಣೆ! ಅಲ್ಲಿ "ಶ್ಯಾಮಚಿ ಆಯಿ" ಎಂಬ ಪ್ರಸಿದ್ಧ ಕಾದಂಬರಿ ರಚನೆ ಆಯಿತು. ೧೯೩೪ರಲ್ಲಿ ಹೊರಬಂದು ಮತ್ತೆ ಸತ್ಯಾಗ್ರಹ, ಮತ್ತೆ ಬಂಧನ! ಧುಳೆಯಲ್ಲಿ ಕಲೆ ಎಂದರೇನು ಹಾಗೂ ಜಗತ್ತಿನ ಇತಿಹಾಸ ಪುಸ್ತಕಗಳ ರಚನೆ!

ಭಾರತಮಾತೆ : ೧೯೪೨ರ ಆಗಸ್ಟ್ ೯ರಂದು "ಬ್ರಿಟೀಷರೇ ಭಾರತಬಿಟ್ಟು ತೊಲಗಿ' ಘೋಷಣೆಯಾದಾಗ ಮತ್ತೆ ಸೆರೆಮನೆ, ಬಿಡುಗಡೆ! ಕ್ರಾಂತಿಕಾರಕ ಬರವಣಿಗೆ! ಜನ ಜಾಗೃತಿಯ ಕೆಲಸ! ೧೯೪೩ -೪೫ರವರೆಗೆ ಯರವಾಡಾ ನಾಸಿಕ್ ಸೆರೆಮನೆವಾಸ! ಸಾಹಿತ್ಯರಚನೆ! ಅಧಿಕಾರವಿಲ್ಲದೆ ಜನ ಸೇವೆ ಮಾಡುವುದೇ ಈತನ ಗುರಿಯಾಯಿತು. ಪಂಡರಪುರದಲ್ಲಿನ ದೇವಾಲಯಕ್ಕೆ ಹರಿಜನರ ಪ್ರವೇಶ ಮಾಡಿಸಲು ಸತ್ಯಾಗ್ರಹ! ಕೊನೆಗೆ ಜಯ!

ನಿರೂಪಕ : ೧೯೪೮ರಲ್ಲಿ ಗಾಂಧೀಜಿ ಕೊಲೆಯಾದ ಮೇಲೆ ಬೇಸರಗೊಂಡು ೨೧ ದಿನ ಉಪವಾಸ ಸತ್ಯಾಗ್ರಹಮಾಡಿ ಇಂಥ ಕೃತ್ಯಗಳು ಅಸಹನೀಯವೆಂದರು. ಅಂತರ ಭಾರತೀ ಸಂಸ್ಥೆಯನ್ನು ಸ್ಥಾಪಿಸಿದರು. ಭಾರತದ ಅನೇಕ ಪ್ರಾಂತ್ಯಗಳು ಅಣ್ಣ ತಮ್ಮಂದಿರಂತೆ ಎಲ್ಲರೂ ಸಂಯಮದಿಂದ ನಡೆದುಕೊಳ್ಳಬೇಕು. ಒಂದೇ ಕುಟುಂಬದವರಂತೆ ಒಬ್ಬರು ಇನ್ನೊಬ್ಬರ ಸುಖ ದುಃಖಗಳಲ್ಲಿ ಭಾಗವಹಿಸಬೇಕು. ಇದಕ್ಕೆ ಸಂಯಮ, ದೊಡ್ಡ ಮನಸ್ಸು ಬೇಕು. ಅಹಂಕಾರ ದೂರವಾಗಬೇಕು. ಇದೇ ಈ ಸಂಸ್ಥೆಯ ಗುರಿಯಾಗಿತ್ತು. ಎಲ್ಲಾ ಧರ್ಮಗಳ ವಿಚಾರ ಅಹಂಕಾರದಿಂದ ಧರ್ಮದ ಹೆಸರಿನಲ್ಲಿ ಯುದ್ಧ ಮಾಡುವುದು ಬೇಡವೆಂಬುದು ಅವರ ಮಾತು!

ಭಾರತಮಾತೆ : ನನ್ನ ಪುತ್ರ ಸಾನೆಗೆ ಐವತ್ತು ವರ್ಷದ ಹರೆಯ. ಜೀವನದ ಅರ್ಧ ಭಾಗವನ್ನು ದೀನ ದಲಿತರ, ಬಡಬಗ್ಗರ, ಹಿಂದುಳಿದವರ ಶ್ರೇಯಸ್ಸಿಗೇ ದುಡಿದ.

ಬ್ರಿಟಿಷರ ಬಂಧನದಿಂದ ನನ್ನ ಬಿಡುಗಡೆ ಮಾಡಿಸಿ ಸಂತೋಷದಿಂದ ನಲಿದ. ಬಯಸಿದ ಸ್ವಾತಂತ್ರ್ಯ ಗಳಿಸಿದ! ಬ್ರಿಟೀಷ್ ಸರಕಾರಕ್ಕೆ ಹೆದರದೆ ಕೊನೆತನಕ ಹೋರಾಟ, ಛಲವನ್ನು ಸಾಧಿಸಿದ. ೧೯೫೦ರ ೬ರಂದು ನನ್ನ ಪುತ್ರ ಅಸ್ತಂಗತವಾದ!

# ನರೇಂದ್ರದೇವ

ರೈಲು...... ಬರುವುದು

(ಜನರು "ಲೋಕಮಾನ್ಯ ತಿಲಕರಿಗೇ....." ಜಯವಾಗಲಿ..... ಎಂದು ಘೋಷಣೆ ಮಾಡುತ್ತಾರೆ.... ತಿಲಕರು ಬಂದರು.....)

ನರೇಂದ್ರ : ತಾವು ಈ ರಥದಲ್ಲಿ ಕುಳಿತುಕೊಳ್ಳಬೇಕು.

ತಿಲಕರು : ಇದೇನು ನೀವು ಎಳೆಯಲಿಕ್ಕೆ ಸಿದ್ಧವಾಗಿದ್ದೀರಿ. ಅಲಹಾಬಾದಿನ ವಿದ್ಯಾರ್ಥಿಗಳೇ, ನಿಮ್ಮ ಶಕ್ತಿಯನ್ನು ಬರೇ ಈ ರಥ ಎಳೆಯುವುದಕ್ಕೆ ಉಪಯೋಗಿಸಬೇಡಿ, ಬೇರೆ ಯಾವುದಾದರೂ ಒಳ್ಳೆಯ ಕೆಲಸಕ್ಕೆ ಉಪಯೋಗಿಸಿ ದೇಶ ಸೇವೆಗೆ ಮೀಸಲಾಗಲಿ ನಿಮ್ಮ ಯುವಶಕ್ತಿ.....

ಭಾರತಮಾತೆ : ನನ್ನ ಪುತ್ರ ನರೇಂದ್ರದೇವ ಉತ್ತರಪ್ರದೇಶದ ಸೀತಾಪುರದಲ್ಲಿ ೧೮೮೯ರ ಅಕ್ಟೋಬರ್ ೩೦ರಂದು ಜನಿಸಿದ. ತಂದೆ ಬಲದೇವ ಪ್ರಸಾದ್ ಮುಂದೆ ಫೈಜಾಬಾದ್‌ನಲ್ಲಿ ನೆಲಸಿದರು. ನರೇಂದ್ರ ಚಿಕ್ಕವನಾಗಿದ್ದಾಗಲೇ ರಾಮಾಯಣ, ಮಹಾಭಾರತ, ಭಗವದ್ಗೀತೆ, ವೇದ ಮುಂತಾದುವುಗಳನ್ನು ಆಸಕ್ತಿಯಿಂದ ಓದಿದ್ದ. ವಿದ್ಯಾರ್ಥಿ ದೆಸೆಯಲ್ಲಿ ಚುರುಕಾಗಿದ್ದು ಎಲ್ಲಾ ವಿದ್ಯಾರ್ಥಿಗಳ ಅಚ್ಚುಮೆಚ್ಚಾಗಿದ್ದ. ಈ ಗುಂಪಿನಲ್ಲಿ ನರೇಂದ್ರದೇವನೂ ಇದ್ದ. ಈತನಿಗೆ ಸ್ಫೂರ್ತಿ ನೀಡಿದವರೇ ಲೋಕಮಾನ್ಯ ತಿಲಕರು, ರಾಜಕೀಯಕ್ಕೆ ಧುಮುಕಿದರು! ಇಲ್ಲಿದೇ ಈತನ ಹೋರಾಟ ಜೀವನ! ಸ್ವಾತಂತ್ರ್ಯ ಸಂಗ್ರಾಮದ ಪಾತ್ರ!.... ಆತನ ಕತೆ ಹೇಳುವೆ ನನ್ನ ಕತೆ ಹೇಳುವೆ.

ವಿದ್ವಾಂಸರಾದ ಸ್ವಾಮಿ ರಾಮತೀರ್ಥರು ವೇದಾಂತದ ವಿಷಯವಾಗಿ ಭಾಷಣ ಮಾಡಿದುದು ಈತನ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಅವರ ಕೃತಿಗಳನ್ನೆಲ್ಲಾ ಅಭ್ಯಾಸ ಮಾಡಿದ. ಕಾಲೇಜು ವಿದ್ಯಾಭ್ಯಾಸಕ್ಕೆ ಅಲಹಾಬಾದಿಗೆ ಬಂದ. ೧೯೦೫ನೇ ಇಸವಿ-

ಒಬ್ಬ : ಬಂಗಾಳವನ್ನು ಪೂರ್ವ ಮತ್ತು ಪಶ್ಚಿಮ ಭಾಗಗಳೆಂದು ವಿಂಗಡಿಸಿದ್ದಾರೆ ಬ್ರಿಟಿಷರು.

ನರೇಂದ್ರ : ಇದರ ವಿರುದ್ಧ ಬಂಗಾಳದ ಜನ ದಂಗೆ ಎದ್ದಿದ್ದಾರೆ.

ಒಬ್ಬ : ಒಂದೇ ಮಾತರಂ ಗೀತೆ ಹಾಡಿದುದಕ್ಕೆ ೭೦೦ ಜನ ವಿದ್ಯಾರ್ಥಿಗಳನ್ನು ಶಾಲೆಯಿಂದ ತೆಗೆದು ಹಾಕಿದ್ದಾರೆ ಇದು ನ್ಯಾಯವೇ?

ನರೇಂದ್ರ : ಇದು ದಬ್ಬಾಳಿಕೆಯಲ್ಲದೆ ಮತ್ತೇನು? ಬ್ರಿಟಿಷ್ ಸರಕಾರದ ಮೇಲೆ ಜನರು ಕ್ರೋಧದಿಂದ ಬೆಂಕಿ ಕಾರುತ್ತಿದ್ದಾರೆ. ಅವರಿಗೆ ನಿಜವಾಗಿಯೂ ಸರಿಯಾದ ಬುದ್ಧಿ ಕಲಿಸಬೇಕು.

(ಹಿಂದಿ - ಸ್ವಾತಂತ್ರ್ಯಗೀತೆ)

ನಿರೂಪಕ : ೧೯೦೬ರಲ್ಲಿ ಕಲ್ಕತ್ತಾದ ಅಧಿವೇಶನಕ್ಕೆ ತಿಲಕರು ಅಧ್ಯಕ್ಷರಾಗಬೇಕೆಂದು ಕೆಲವರ ಅಭಿಪ್ರಾಯ, ಮತ್ತೆ ಕೆಲವರು ದಾದಾಬಾಯಿ ನವರೋಜಿ ಆಗಬೇಕೆಂದು. ಕೊನೆಗೆ ತಿಲಕರೆ ಚುನಾವಣೆಗೆ ನಿಲ್ಲದೆ ಹೋದರು. ದಾದಾಬಾಯಿ ನವರೋಜಿಯವರೇ ಅಧ್ಯಕ್ಷರಾದರು. ಗೋಪಾಲಕೃಷ್ಣ ಗೋಖಲೆ ಮಿತವಾದಿಗಳ ನಾಯಕರು, ಸೂರತ್ ಅಧಿವೇಶನದಲ್ಲಿ ಮಾತನಾಡಲು ಬಂದಿದ್ದರು ಆಗ-

(ಗಲಾಟೆ...... ಕುರ್ಚಿಯನ್ನು ಇವರ ಮೇಲೆ ಎಸೆಯತೊಡಗಿದರು ಜನರು.....)

ತಿಲಕ : ನೀವು ನನ್ನ ಮೇಲೆ ಕುರ್ಚಿ ಎಸೆದರೆ ಹೆದರುವುದಿಲ್ಲ. ನನಗೆ ಮಾತನಾಡುವ ಹಕ್ಕಿದೆ. ನನಗೆ ಮಾತನಾಡಲು ಅವಕಾಶ ಕೊಡುವವರೆಗೂ ನಾನು ಕದಲುವುದಿಲ್ಲ. ಇಂಗ್ಲೆಂಡಿನಿಂದ ಬಂದ ವಸ್ತುವನ್ನು ಮುಟ್ಟಬಾರದು, ಶಾಲೆ, ನ್ಯಾಯಾಲಯಗಳನ್ನು ಬಹಿಷ್ಕರಿಸಬೇಕು. ನಮ್ಮ ಹೊಸ ಪಕ್ಷದ ಉದ್ದೇಶ ಸ್ವರಾಜ್ಯ, ಸ್ವದೇಶಿ ಮತ್ತು ರಾಷ್ಟ್ರೀಯ ಶಿಕ್ಷಣ.......

ಭಾ.ಮಾ : ಉಗ್ರ ಮನೋಭಾವದ ತಿಲಕ್ ಮತ್ತು ಅರವಿಂದರ ಪ್ರಭಾವಕ್ಕೆ ನರೇಂದ್ರದೇವ ಒಳಗಾದ. ಅರವಿಂದರು ಪ್ರಕಟಿಸುತ್ತಿದ್ದ 'ವಂದೇಮಾತರಂ', 'ಆರ್ಯ' ಪತ್ರಿಕೆಗಳನ್ನು ತಪ್ಪದೇ ಓದುತ್ತಿದ್ದ. ಎಡಪಕ್ಷ ಎಂದರೆ ಸಮಾಜದ ಕಡೆ ಈತನ ಮನಸ್ಸು ಒಲಿತು.

ನಿರೂಪಕ : ನರೇಂದ್ರದೇವ ಸಂಸ್ಕೃತ ಎಂ.ಎ.ನಲ್ಲಿ ಉತ್ತೀರ್ಣರಾದರು. ಭಾರತೀಯ ಇತಿಹಾಸ, ಸಾಮಾಜಿಕ, ವಿಜ್ಞಾನ, ತತ್ವಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಅಭ್ಯಾಸ ಮಾಡಿದರು. ವಕೀಲ ವೃತ್ತಿಯಲ್ಲಿದ್ದು ರಾಜಕೀಯದಲ್ಲಿ ಭಾಗವಹಿಸಬಹುದೆಂಬ ಉದ್ದೇಶದಿಂದ ನ್ಯಾಯಶಾಸ್ತ್ರ, ವ್ಯಾಸಂಗ ಮಾಡಿದರು. ಪ್ರೇಮಾದೇವಿಯೊಡನೆ ವಿವಾಹವಾಗಿ ಫೈಜಾಬಾದಿನಲ್ಲಿ ವಕೀಲವೃತ್ತಿಯಿಂದ ಸಾಕಷ್ಟು ಹಣ ಸಂಪಾದಿಸಿ ಬಡವಿದ್ಯಾರ್ಥಿಗಳಿಗೆ, ಧಾರ್ಮಿಕ ಕಾರ್ಯಗಳಿಗೆ ಹಣ ಕೊಡತೊಡಗಿದರು. ಸಾಂಸ್ಕೃತಿಕ ಸಂಘ

ಸಂಸ್ಥೆ ಮಾಡಿ, ವಾರಕ್ಕೊಮ್ಮೆ ತಮ್ಮ ಮನೆಯಲ್ಲಿ ಸಭೆ ಏರ್ಪಡಿಸಿ ರಾಜಕೀಯ, ಸಾಮಾಜಿಕ ವಿಷಯಗಳ ಬಗೆಗೆ ಚರ್ಚೆ ನಡೆಸುತ್ತಿದ್ದರು.

ತಿಲಕರು : ಈ ಫೈಜಾಬಾದ್‌ನಲ್ಲಿ ಸ್ಥಾಪಿತವಾಗಿರುವ ಹೋಂರೂಲ್ ಲೀಗ್‌ಶಾಖೆಯ ಕಾರ್ಯದರ್ಶಿಯಾಗಿ, ನರೇಂದ್ರದೇವ ನಾಗರೀಕರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಿದ್ದಾರೆ. ದೇಶದ ಸ್ವಾತಂತ್ರ್ಯಕ್ಕೆ ಬ್ರಿಟಿಷ್ ಸರಕಾರದ ಕಛೇರಿಯಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಕೆಲಸ ಮಾಡುವವರಲ್ಲೂ ಕೆಲಸ ಬಿಟ್ಟು ದೇಶದ ಸ್ವಾತಂತ್ರ್ಯಕ್ಕೆ ಹೋರಾಡಬೇಕು... ದಾಸ್ಯ ಶೃಂಖಲೆಯಿಂದ ಬಿಡುಗಡೆ ಮಾಡಬೇಕು.....

(ಜನರು: ಲೋಕಮಾನ್ಯ ತಿಲಕರಿಗೆ.... ಜಯವಾಗಲಿ..... ಭಾರತ ಮಾತಾಕಿ ಜೈ.....)

ಭಾ.ಮಾ : ನನ್ನ ಪುತ್ರ ಯಥೇಚ್ಛವಾಗಿ ಬರುತ್ತಿದ್ದ ಸಂಪಾದೆಯನ್ನು ಲೆಕ್ಕಿಸದೆ ಬ್ರಿಟೀಷರ ವಿರುದ್ಧ ಹೋರಾಡಲು ಮುಂದಾದ. ೧೯೨೧ರಲ್ಲಿ ಕಾಶಿಯ ವಿದ್ಯಾಪೀಠದ ಅಧಿಕಾರಿಯಾದ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಪ್ರಕಾಶರು ಈತನನ್ನು ಆಚಾರ್ಯ ಎಂದೇ ಕರೆಯುತ್ತಿದ್ದರು. ಇಲ್ಲಿ ಈತ ಪ್ರಾಚಾರ್ಯ ಉಪಕುಲಪತಿಯಾಗಿ ದಕ್ಷ ಆಡಳಿತಗಾರ, ಸಿಪಾಯಿಯಂತಿದ್ದ. ಎರಡು ಸಾರಿ ಲಕ್ನೋ ವಿಶ್ವವಿದ್ಯಾಲಯದ ಉಪಕುಲಪತಿಯಾದ.

ನಿರೂಪಕ : ಈತ ಎಷ್ಟೊಂದು ಕಟ್ಟುನಿಟ್ಟಿನ ವ್ಯಕ್ತಿ ಎಂಬುದಕ್ಕೆ ಇದೊಂದು ಉದಾಹರಣೆ-

ಒಬ್ಬ : ನಮಸ್ಕಾರ ಸಾರ್.....

ನರೇಂದ್ರ : ಯಾರದೂ.... ಬಾರಪ್ಪ..... ಏನು ಬೇಕು?

ಒಬ್ಬ : ನನಗೆ ಸ್ವಲ್ಪ ಅಟೆಂಡೆನ್ಸ್ ಕಡಿಮೆ ಇದೆ ಅಂತ ಮೊದಲು ಒಂದು ಸಾರಿ ಬಂದಿದ್ದೆ.

ನರೇಂದ್ರ : ಆಗಲ್ಲ ಅಂತ ಹೇಳಿ ಕಳುಹಿಸಿದೆನಲ್ಲಾ ಮತ್ತೆ ಯಾಕೆ ಬಂದೆ?

ಒಬ್ಬ : ಈ ಪತ್ರವನ್ನು ರಾಜ್ಯಪಾಲರು ಕೊಟ್ಟಿದ್ದಾರೆ ಸಾರ್.

ನರೇಂದ್ರ : ಕುಲಪತಿಗಳಿಂದ ಪತ್ರ ತಂದ್ರೆ ಸೇರಿಸಿಕೊಳ್ತೀನಿ ಅಂತ ತಿಳ್ಕೊಂಡಿದ್ದೀಯೇನು? ಖಂಡಿತ ಆಗೋಲ್ಲ ಹೊರಟು ಹೋಗು.

ಒಬ್ಬ : ಸಾರ್......

ನಿರೂಪಕ : ಒಮ್ಮೆ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದ ನರೇಂದ್ರ:

ನರೇಂದ್ರ : ನಾವು ವಿಶ್ವ ಸಮಾಜದ ಒಂದು ಅಂಗವಾಗಿರುವುದರಿಂದ ಅಂತರ ರಾಷ್ಟ್ರೀಯ ಅರಿವು ಮತ್ತು ಸ್ನೇಹ ಬೆಳೆಸಿಕೊಳ್ಳಬೇಕು. ಇದಕ್ಕೋಸ್ಕರ ನಾವು ಇತರ ರಾಷ್ಟ್ರಗಳ ಸಂಸ್ಕೃತಿಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಮುಂದೆ ನೀವೇ

ಪ್ರಜೆಗಳಾಗ್ತೀರಿ, ನಾಯಕರಾಗ್ತೀರಿ, ದೇಶವನ್ನು ನಡೆಸಬೇಕಾಗುತ್ತದೆ, ನೀವು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು.

ನಿರೂಪಕ : ೧೯೩೦ರಲ್ಲಿ ಗಾಂಧಿಯವರ ಅಸಹಕಾರ ಚಳುವಳಿಯಲ್ಲಿ ನರೇಂದ್ರದೇವ ದಸ್ತಗಿರಿಯಾಗಿ ಆರೋಗ್ಯ ಕೆಟ್ಟು ಉಬ್ಬಸದಿಂದ ನರಳಿದರು. ಮುಂದೆ ಸಮಾಜವಾದಿ ಚಳವಳಿಯ ನಾಯಕರಾದರು! ೧೯೩೪ರಲ್ಲಿ ಜಯಪ್ರಕಾಶ್ ನಾರಾಯಣರು ಸಮಾಜವಾದಿ ಪಕ್ಷ ಕಟ್ಟಿ ಮೊದಲ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿದರು. ಆಗ ಅವರು.......

ನರೇಂದ್ರ : ಸಮಾಜ ಕಲ್ಯಾಣಕ್ಕೆ ಉದ್ಯಮ ಕೆಲವರ ಕೈನಲ್ಲೆ ಇರಬಾರದು. ಅದು ಸಮಾಜದ ಕೈಲಿರಬೇಕು. ಸಂಪತ್ತನ್ನು ಎಲ್ಲರಿಗೂ ಸಮನಾಗಿ ಹಂಚಬೇಕು. ಉದ್ಯಮಗಳು ಸರ್ಕಾರದ ಆಡಳಿತದಲ್ಲಿರಬೇಕು, ಸಮಾಜದಲ್ಲಿ ವಿವಿಧ ವರ್ಗಗಳ ನಡುವೆ ಸಮಾನತೆ ಇಲ್ಲದೆ ಹೋಗಿದೆ. ಐಶ್ವರ್ಯವಂತರು ಬಡವರು ಎಂಬ ಅಸಮಾನತೆಯನ್ನು ಹೋಗಲಾಡಿಸಬೇಕು. ಜನಸಾಮಾನ್ಯರನ್ನು ಒಂದುಗೂಡಿಸಬೇಕು. ನಮ್ಮ ರಾಷ್ಟ್ರೀಯ ವ್ಯಾಪ್ತಿಯನ್ನು ವಿಶಾಲಗೊಳಿಸಬೇಕು.

ನಿರೂಪಕ : ನರೇಂದ್ರದೇವ ಚಳವಳಿಗೆ ಮಾರ್ಗದರ್ಶಕರಾದರು. ತತ್ತ್ವ ಬೋಧಕರಾದರು. ಉತ್ತರಪ್ರದೇಶದ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಚುನಾಯಿತರಾದರು. ರೈತರ ಸ್ಥಿತಿ ಉತ್ತಮವಾಗಬೇಕು ಎಂದು ೧೯೩೬ರಲ್ಲಿ ಅಖಿಲಭಾರತ ಕಿಸಾನ್ ಸಭೆ ರಚಿಸಿ ಎರಡು ಬಾರಿ ಇದರ ಅಧ್ಯಕ್ಷರಾದರು. ಬಿಹಾರದಲ್ಲಿ ಸೇವೆ ಮಾಡಿದರು. ಬಿಹಾರದ ಭೂಕಂಪದಲ್ಲಿ ಸೇವೆ ಮಾಡಿದರು. ಉಬ್ಬಸದಿಂದ ನರಳುತ್ತಿದ್ದ ಇವರನ್ನು ಸೇವಾಗ್ರಾಮಕ್ಕೆ ಗಾಂಧಿಯವರು ಆಹ್ವಾನಿಸಿದರು. ಅವರಿಗೆ ತೊಂದರೆ ಕೊಡಬೇಕಾಗುತ್ತದೆಂದು ಮೊದಲು ಹೋಗದಿದ್ದರೂ ಎರಡನೇ ಸಾರಿ ಹೋದರು. ೧೯೪೨ರಲ್ಲಿ "ಭಾರತ ಬಿಟ್ಟು ತೊಲಗಿ" ಚಳವಳಿಯಲ್ಲಿ ನರೇಂದ್ರ ಮತ್ತೆ ದಸ್ತಗಿರಿಯಾದರು. ಅಹಮದ್ ನಗರ ಕೋಟೆಯ ಜೈಲಿನಲ್ಲಿ ಸಮಾಜವಾದದ ಕುರಿತು ಅನೇಕ ಲೇಖನಗಳನ್ನು, ಬೌದ್ಧಧರ್ಮ ಕುರಿತು ಹಿಂದಿಯಲ್ಲಿ ಮೇರು ಕೃತಿಯನ್ನು ರಚಿಸಿದರು. ೧೯೪೫ರಲ್ಲಿ ಜೈಲಿನಿಂದ ಬಿಡುಗಡೆಯಾಯಿತು.

ಭಾ.ಮಾ : ಸಮಾಜವಾದ ಪಕ್ಷ ಎರಡು ಸಾರಿ ಸೋತರೂ ಈತ ಪಕ್ಷ ಬಿಡಲಿಲ್ಲ. ಕೊಯಮತ್ತೂರಿಗೆ ಬಂದು ಹವಾಮಾನ ಬದಲಾವಣೆಯಿಂದ ಮೊದಲು ಸ್ವಲ್ಪ ಆರೋಗ್ಯ ಸುಧಾರಿಸಿದರೂ ೧೯೫೬ರ ಫೆಬ್ರವರಿ ೧೯ರಂದು ನನ್ನ ಪುತ್ರ ೬೭ನೇ ವಯಸ್ಸಿನಲ್ಲಿ ದೇಹತ್ಯಾಗ ಮಾಡಿದ.



# ಚಾಪೇಕರ್

ಭಾರತಮಾತೆ : ದೇಶಕ್ಕಾಗಿ ಪ್ರಾಣವನ್ನರ್ಪಿಸಿದವರು ಅನೇಕರು. ಆಳುವವರ ಅಹಂಕಾರ ಮುರಿದವರು, ಅಗ್ನಿಸ್ಪರ್ಶ ಮಾಡಿದವರು ಹಲವರು. ಅವರ ಕ್ರೌರ್ಯ, ದೌರ್ಜನ್ಯಗಳನ್ನು ತುಳಿದು ಅವರಿಗೆ ಬುದ್ಧಿ ಕಲಿಸಿದವರು ಲೆಕ್ಕವಿಲ್ಲದಷ್ಟು ಮಂದಿ. ಕ್ರಾಂತಿಯ ಸೌಧ ಕಟ್ಟಿದವರು ಬೇಕಾದಷ್ಟು ಜನರು. ಅಂಥವರಲ್ಲಿ ಚಾಪೇಕರ್ ಒಬ್ಬ. ಈಗ ಆತನ ಕಥೆ ಹೇಳುವೆ...... ನನ್ನ ಕಥೆ ಹೇಳುವೆ.

ಚಾಪೇಕರ್ : ಪೂನಾ ನಗರದ ೨೭ ವರ್ಷ ವಯಸ್ಸಿನ ಯುವಕನನ್ನು ಗಲ್ಲಿಗೇರಿಸಿದರಂತೆ! ಅಯ್ಯೋ ಪಾಪ, ಯಾಕೋ ಊಟ ಸೇರ್ತಿಲ್ಲ, ನಿದ್ದೆ ಬರ್ತಿಲ್ಲ, ಪತ್ರಿಕೆ ಓದುತ್ತಿದ್ದರೆ ಕಣ್ಣು ಮಂಜಾಗ್ತಾ ಇದೆ. ಕಣ್ಣೀರು ತುಂಬಿ ಪತ್ರಿಕೆಯೆಲ್ಲಾ ಒದ್ದೆಯಾಗ್ತಾ ಇದೆಯಲ್ಲಾ ದೇವಿ... ಈ ಊದುಬತ್ತಿ ತಾನು ಉರಿದು ಸುಟ್ಟು ಬೂದಿಯಾಗುವಂತೆ ನಾನೂ ಬೂದಿಯಾಗಲೇ, ಶಿವಾಜಿಯಂತೆ ಹೋರಾಡಿ ಭಾರತಾಂಬೆಗೆ ಸ್ವರಾಜ್ಯದ ಕಿರೀಟವನ್ನು ಧರಿಸಿ ರಾಜ್ಯಾಭಿಷೇಕ ಮಾಡಬೇಕು ದೇವಿ ನಿನ್ನ ಆಶೀರ್ವಾದವಿರಲವ್ವ.

ದಾಮು ಅಣ್ಣ : ಏನು ಬರೀತಾ ಇದೀಯೋ ದಾಮೋದರಾ?

ಚಾಪೇಕರ್ : ಸ್ವಾತಂತ್ರ್ಯಕ್ಕೆ ಆತ್ಮಾರ್ಪಣೆ ಮಾಡಿಕೊಂಡವನ ಬಗೆಗೆ ಒಂದು ಕವನ ಬರೀತಾ ಇದ್ದೀನಪ್ಪಾ.

ದಾಮು ಅಣ್ಣ : ಅದನ್ನೆಲ್ಲಾ ಈಗ ಬರೀಬೇಡವೋ....ಇವೆಲ್ಲಾ ದೊಡ್ಡವನಾದ ಮೇಲೆ.

ಚಾಪೇಕರ್ : ನಮಗೆ ಆಂಗ್ಲರಿಂದ ಆಗ್ತಿರೋ ಹಿಂಸೆ ಕೇಳಿ ರಕ್ತ ಕುದೀತಾ ಇದೆ ಅಪ್ಪ. ಅನೇಕರು ಈ ಪ್ರಪಂಚದಲ್ಲಿ ಹುಟ್ಟುತ್ತಾರೆ, ಸಾಯ್ತಾರೆ, ಆದ್ರೆ ದೇಶಕ್ಕೆ ಸಾಯುವವರು ಮಹಾಪುರುಷರಾಗ್ತಾರೆ ನೋಡಿ. ಪೂನಾ ನಗರದ ಯುವಕನನ್ನು ಗಲ್ಲಿಗೆ ಹಾಕಿ ಎರಡು ತಿಂಗಳೇ ಆಗಿಲ್ಲ, ಆಗಲೇ ಅವರ ತಮ್ಮಂದಿರಿಬ್ಬರನ್ನು ಗಲ್ಲಿಗೇರಿಸಿದ್ದಾರೆ. ಈ ನಿಟ್ಟಿನಲ್ಲಿ ನಾವು ಕ್ರಾಂತಿ ಕೆಲಸವನ್ನು ಮುಂದುವರಿಸಬೇಡವೇ ನೀವೆ ಹೇಳಿ.

ದಾಮು ಅಣ್ಣ : ಅವೆಲ್ಲಾ ದೊಡ್ಡವನಾದ ಮೇಲೆ, ಈಗೇನ್ಮಾಡ್ತಿಯ ಬಿಡು.

ಭಾರತಮಾತೆ : ಈ ವೀರಾವೇಶದ ಮಾತು ಯಾರದೆಂದು ತಿಳಿಯಿತೇ? ನನ್ನ ವೀರಪುತ್ರ ದಾಮೋದರ ಚಾಪೇಕರ್‌ನದು. ಪೂನಾದ ಹತ್ತಿರದ ಚಿಂಚವರ ಹಳ್ಳಿಯ ತಂದೆ ಹಿರಿಭಾವು, ತಾಯಿ ಲಕ್ಷ್ಮಿಯರ ಮಗನಾಗಿ ೧೮೬೯ರ ಜೂನ್ ೨ನೇ ತಾರೀಕಿನಂದು ಜನಿಸಿದ. ತಂದೆ ಕೀರ್ತನೆ ಮಾಡುತ್ತಾ ಸಂಪಾದನೆ ಮಾಡಿಕೊಂಡು ಕಾಲಕಳೆಯುತ್ತಿದ್ದ. ಆಂಗ್ಲ ಸರ್ಕಾರದ ಗುಲಾಮಗಿರಿಯ ಕೆಲಸ ಬೇಡವೆಂದು ರಾಜಿನಾಮೆ ನೀಡಿದ್ದರು ಹಿರಿಭಾವು.

ನಿರೂಪಕ : ದಾಮೋದರ ಹಾರ್ಮೊನಿಯಂ ವಾದನದಲ್ಲಿ ಪರಿಣತನಾದರೆ ಆತನ ತಮ್ಮಂದಿರಾದ ಬಾಲಕೃಷ್ಣ ಜಲತರಂಗ ಮತ್ತು ಸ್ವರಮಂಡಲ ಹಾಗೂ ವಾಸುದೇವ ತಾಳ ಹಾಕುತ್ತಾ ಕೀರ್ತನ ಮಾಡುತ್ತಿದ್ದರು. ಇದರಿಂದ ದಾಮೋದರನಿಗೆ ಉತ್ತಮ ಕೀರ್ತನೆ ಮಾಡುವುದು ಅಭ್ಯಾಸವಾಯಿತು. ತಂದೆಯೊಡನೆ ಕೀರ್ತನೆ ಮಾಡುತ್ತಾ ಊರೂರು ತಿರುಗುತ್ತಾ ಈಶಭಕ್ತಿ ದೇಶಭಕ್ತಿಯನ್ನು ಮೈಗೂಡಿಸಿಕೊಂಡ.

ಭಾರತಮಾತೆ : ಪೂನಾ ನಗರದ ಪ್ರತಿಯೊಬ್ಬ ವಿಚಾರವಂತ ಯುವಕರೂ ಫಡಕೆ ಚಟುವಟಿಕೆಯಿಂದ ಪ್ರಭಾವಿತರಾಗಿದ್ದರು. ಫಡಕೆ ಹೋರಾಟ, ಬಂಧನ, ಬಲಿದಾನ ಕೇಳಿ ಚಾಪೇಕರನ ಅಂತಃಕರಣ ಕಲಕಿ ಕ್ರಾಂತಿ ಎಬ್ಬಿಸಿ ಹೋರಾಡಬೇಕೆಂಬ ಭಾವನೆ ಉಕ್ಕಿತು. ಇದಕ್ಕೆ ಶರೀರ ಬಲ ಸಂಘಟನೆ ಆಗಬೇಕೆಂದು ನಿರ್ಧರಿಸಿಕೊಂಡ. ವ್ಯಾಯಾಮ, ದಂಡ, ಬೈಠಕ್, ಕುಸ್ತಿ ಮುಂತಾದುವುಗಳನ್ನು ಕಲಿಯಲು ಆರಂಭಿಸಿದ.

ನಿರೂಪಕ : ಚಾಪೇಕರ್ ಸಹೋದರರು ಸೈನ್ಯ ಸೇರಿ ಯುದ್ಧ ತಂತ್ರ ಕಲಿಯಬೇಕೆಂಬ ಬಯಕೆಯಾಯಿತು. ಆದರೆ ಅದು ಫಲಿಸದಿರಲು ಪಿಸ್ತೂಲು ಉಪಯೋಗಿಸುವುದನ್ನು ಕಲಿತರು. ಚಾಪೇಕರ್ ಸಹೋದರರು ಇಟ್ಟಿದ್ದ ಶಸ್ತ್ರಾಸ್ತ್ರಗಳ ಸುಳಿವು ಪೊಲೀಸರಿಗೆ ಗೊತ್ತಾಯಿತು. ಹಲವಾರು ಜನರನ್ನು ಸಂಘಟಿಸಿ ಚಾಪೇಕರ್ ಕ್ಲಬ್, "ಆರ್ಯಧರ್ಮ ಪ್ರತಿಬಂಧ ನಿವಾರಕ ಮಂಡಳಿ" ಎಂಬುದನ್ನು ಸ್ಥಾಪಿಸಿದ ಚಾಪೇಕರರಿಗೆ ತಿಲಕರ ಪರಿಚಯವಾಯಿತು. ಚಾಪೇಕರ ಹಾಗೂ ಅವರ ತಮ್ಮಂದಿರು ಸೇರಿ ವೀರಾವೇಶದಿಂದ ದೇಶಭಕ್ತಿ ಗೀತೆಗಳನ್ನು ಕಟ್ಟಿ ಹಾಡುತ್ತಿದ್ದರು.

(ಹಾಡು ಮರಾಠಿ)

ಭಾರತಮಾತೆ : ಚಾಪೇಕರ್ ಕ್ರಾಂತಿಕಾರಕ ಚಳವಳಿಯನ್ನು ಆರಂಭಿಸಿದ. ಬೊಂಬಾಯಿಯಲ್ಲಿ ವಿಕ್ಟೋರಿಯಾ ಮಹಾರಾಣಿಯ ಒಂದು ದೊಡ್ಡ ಅಮೃತಶಿಲೆಯ ಪ್ರತಿಮೆಗೆ ಟಾರು ಹಾಕಿ ಅವಮಾನಗೊಳಿಸಿದರು. ಪ್ಲೇಗು

ರೋಗವಿದ್ದರೂ ಪರೀಕ್ಷೆಗಳು ನಡೆಯುತ್ತವೆ ಎಂದು ಸಾರಿದರು ಇಂಗ್ಲೀಷರು. ಸರ್ಕಾರವನ್ನು ಎಷ್ಟು ಕೇಳಿಕೊಂಡರೂ ಒಪ್ಪದಿರಲು ಪರೀಕ್ಷಾ ಮಂಟಪಕ್ಕೆ ಬೆಂಕಿ ಹಾಕಿ ಸುಟ್ಟು ಪರೀಕ್ಷೆ ನಡೆಯದಂತೆ ಮಾಡಿದ.

ಒಬ್ಬ : ಪ್ಲೇಗು ಬಂದಿದೆ ಎಂದು ರ್ಯಾಂಡ್ ಎಂಬ ಇಂಗ್ಲೀಷ್ ಅಧಿಕಾರಿ ಮಿಲ್ಟ್ರಿ ಅಧಿಕಾರಿಗಳ ಜೊತೆ ಸೇರಿ ದೊಡ್ಡ ದೊಡ್ಡ ಮನೆಗಳನ್ನು ಸುಡುವುದು, ಕೊಳ್ಳೆ ಹೊಡೆಯುವುದು, ಹೆಂಗಸರ ಮೇಲೆ ಅತ್ಯಾಚಾರ ಮಾಡುವುದು ಮಾಡತೊಡಗಿದ್ದಾನೆ. ತಿಲಕರು, ಜನತೆಯನ್ನು ಈ ದಬ್ಬಾಳಿಕೆಯಿಂದ ಕೊನೆಗೊಳಿಸಬೇಕು ಅಂತ ಸಾರಿದ್ದಾರೆ.

ಚಾಪೇಕರ್ : ಶಸ್ತ್ರಾಸ್ತ್ರಗಳನ್ನು ಹಿಡಿದಾಗಲಿ, ಪ್ಲೇಗಿನಿಂದಾಗಲೀ ನಾವು ಸಾಯೋಣ. ಆದರೆ ಈ ಇಂಗ್ಲೀಷರ ಕೈಯಿಂದ ಸಾಯುವುದು ಬೇಡ ಎಂಬ ಪಣತೊಡಬೇಕು, ನಾವೆಲ್ಲಾ. ಇದಕ್ಕೆ ನಾನು ಮುಂದಾಗುತ್ತೇನೆ.

ಇನ್ನೊಬ್ಬ : ಇದಕ್ಕೆ ಮದ್ದು ಗುಂಡುಗಳನ್ನು ಶೇಖರಿಸಬೇಕು, ಎಲ್ಲರೂ ಒಗ್ಗಟ್ಟಾಗಬೇಕು. ಆ ರ್ಯಾಂಡ್ ಕೊಲೆ ಆಗಲೇಬೇಕು. ಅದಕ್ಕೆ ಚಾಪೇಕರ್ ಮುಖಂಡತ್ವ ವಹಿಸಬೇಕು.

ಚಾಪೇಕರ್ : ಅಗತ್ಯವಾಗಿ.

ನಿರೂಪಕ : ರ್ಯಾಂಡ್ ಪೂನಾ ಹೋಟೆಲಿನಲ್ಲಿ ವಾಸವಾಗಿದ್ದ. ಕುದುರೆ ಸಾರೋಟಿನಲ್ಲಿ ತಿರುಗಾಡುತ್ತಿದ್ದ. ಆತನ್ನು ಕೊಲ್ಲಲು ಪ್ರಯತ್ನ ಸಾಗಿತು. ಹಳೆಯ ಮನೆಯೊಂದರಲ್ಲಿ ಇಲಿಗಳು ಸತ್ತಿವೆ ಎಂಬ ಸುದ್ದಿ ಹರಡಿದ.ಆಗ ರ್ಯಾಂಡ್ ಕೊಲ್ಲುವ ಪ್ರಯತ್ನ ವಿಫಲವಾಯಿತು. ಬ್ರಿಟಿಷ್ ಸೈನಿಕರು ಮಾರುತಿ ಗುಡಿಗೆ ಬರುತ್ತಿದ್ದರು. ಚಾಪೇಕರ್ ಪೂಜಾರಿಯಾಗಿ ಬಂದು ಸೈನಿಕರ ಎರಡು ರೈಫಲ್‌ಗಳನ್ನು ಹಾರಿಸಿದರು.

ಚಾಪೇಕರ್ : ಒಂದೆಡೆ ದೇಶದಲ್ಲಿ ಪ್ಲೇಗು, ಭೂಕಂಪ, ಕ್ಷಾಮ, ಎದುರಿಸುವಾಗ ವಿಕ್ಟೋರಿಯಾ ರಾಣಿಯ ಪಟ್ಟಕ್ಕೇರಿದ ವಜ್ರಮಹೋತ್ಸವ ಆಚರಿಸುತ್ತಿರುವುದು ನಿಜವಾಗ್ಲೂ ದುಃಖದ ಸಂಗತಿ.

ಒಬ್ಬ : ಅದನ್ನು ಪ್ರತಿಭಟಿಸಬೇಕು. ಈಗ ಮತ್ತೊಂದು ವಿಷಯ, ಬಾಲಕೃಷ್ಣ ಆಯರ್ಸ್ಟನ ತಲೆಗೆ ಗುಂಡು ಹಾರಿಸಿದ, ರ್ಯಾಂಡನ್ ಬೆನ್ನಿಗೂ ಗುಂಡು ಹಾರಿಸಿ ಪರಾರಿಯಾಗಿದ್ದಾರೆ.

ಚಾಪೇಕರ್ : ಒಳ್ಳೆ ಸಂತೋಷದ ವಿಷಯವಾಯಿತು.

ಒಬ್ಬ : ಕೊಲೆಗಡುಕನ ಪತ್ತೆ ಹಚ್ಚಿದವರಿಗೆ ಬಹುಮಾನಕೊಡಲಾಗುತ್ತದೆಂದು ಸರ್ಕಾರ ಪ್ರಕಟಿಸಿದೆ.

ನಿರೂಪಕ : ಚಾಪೇಕರರ ಮಿತ್ರ ಗಣೇಶಶಂಕರ ದ್ರವಿಡ್ ಬಹುಮಾನದ ೨೦ ಸಾವಿರ ರೂಪಾಯಿಗಳ ಆಸೆಗೆ ಬಲಿಯಾಗಿ ಚಾಪೇಕರರ ಬಗೆಗೆ, ರಾನಡೆ, ಸಾಠೆ ಮುಂತಾದವರ ಬಗೆಗೆ ಹೇಳಿದ. ಮುಂಬೈನಲ್ಲಿ ಚಾಪೇಕರರ ಬಂಧನವಾಯ್ತು.

ನ್ಯಾಯಾಧೀಶ : ಚಾಪೇಕರ್ ನಿನಗೆ ಮರಣದಂಡನೆ ವಿಧಿಸಲಾಗಿದೆ.

ಚಾಪೇಕರ್ : ಇದಕ್ಕಿಂತ ಹೆಚ್ಚಿನ ಶಿಕ್ಷೆ ಇಲ್ಲವೆ?

ನಿರೂಪಕ : ೧೮೯೮ರ ಏಪ್ರಿಲ್ ೧೮ರಂದು ನೇಣಿಗೆ ಹಾಕುವ ದಿನ ಅದರ ಹಿಂದಿನ ದಿನ ಪೂರ್ಣ ಉಪವಾಸ, ಪ್ರಾರ್ಥನೆ, ಮಂತ್ರ ಪಠಣದಲ್ಲಿ ಕಾಲಕಳೆದ. ರಾತ್ರಿ ಹಿಂದೆಂದೂ ಮಾಡದಷ್ಟು ನಿದ್ದೆ ಮಾಡಿದ. ಗಲ್ಲಿಗೆ ಹಾಕುವ ದಿನ ಅರ್ಧಘಂಟೆ ತಡವಾಗಿ ಬಂದು ನಗುತ್ತಾ ಹೇಳಿದ.

ಚಾಪೇಕರ್ : ಇಂಗ್ಲೀಷರ ಸಮಯಪಾಲನೆ, ನಿಯಮ ಎಲ್ಲಿ ಹೋಯಿತು?

ಬಂಧೀಖಾನೆ ಅಧಿಕಾರಿ : ನಿನ್ನ ಬಂಧು ಬಳಗದವರಿಗೆ ಏನು ಹೇಳ್ತೀಯಾ?

ಚಾಪೇಕರ್ : ನಗುನಗುತ್ತಾ ನೇಣುಗಂಬ ಏರಿದನೆಂದು ಹೇಳಿ.

ಬಂಧೀಖಾನೆ ಅಧಿಕಾರಿ : ಇನ್ನೇನು ಬಯಸುವೆ?

ಚಾಪೇಕರ್ : ನಾನು ಸಾವಿಗಾಗಿ ಕಾಯುತ್ತಿರುವೆ. ಭಗವದ್ಗೀತೆ ಪುಸ್ತಕ ಕೊಡಿ, ನಾರಾಯಣ, ನಾರಾಯಣ ಜಯಗೋಪಾಲ...... ಹರಿ.

ನಿರೂಪಕ : ಗೀತಾ ಶ್ಲೋಕ ಹೇಳುತ್ತಿದ್ದಂತೆ ನೇಣುಗಂಬದ ಮೆಟ್ಟಲು ಏರಿದ. ಪ್ರಾಣಪಕ್ಷಿ ಹಾರಿಹೋಗಿದ್ದರೂ ಭಗವದ್ಗೀತೆ ಪುಸ್ತಕ ಆತನ ಕೈಯಲ್ಲೇ ಇತ್ತು! ಇದಾದ ಕೆಲವು ದಿನಗಳಲ್ಲೇ ಚಾಪೇಕರರ ಇಬ್ಬರು ತಮ್ಮಂದಿರಿಗೂ ಗಲ್ಲುಶಿಕ್ಷೆ ಆಯಿತು. ಮೂವರೂ ದೇಶಕ್ಕಾಗಿ ಬಲಿದಾನವಾದರು!

*

## ಅಶ್ಫಾಕ್‌ಉಲ್ಲಾ

ಭಾರತಮಾತೆ : ಕ್ರಾಂತಿಕಾರಿ ಆಂದೋಲನದಲ್ಲಿ ಭಾಗವಹಿಸಿದವರು ಹಲವಾರು ಭಾರತೀಯರು. ಅಶ್ಫಾಕ್‌ಉಲ್ಲಾ ಅವರಲ್ಲೊಬ್ಬ. ಭಾರತ ಇತಿಹಾಸದಲ್ಲಿ (ಉಲ್ಲೇಖನೀಯ) ಶಾರೀರಿಕ, ಮಾನಸಿಕ, ವೀರ, ಬಲಶಾಲಿ, ಆದರ್ಶ ಕ್ರಾಂತಿವೀರ! ಚಳವಳಿಯಲ್ಲಿ ಕೊನೆಯ ತನಕ ನಿಷ್ಠೆ ತೋರಿಸಿರುವ, ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದವರಲ್ಲಿ ಅಗ್ರಪಂಕ್ತಿಗೆ ಸೇರಿದವ. ಅಪಾಯವರಿತು ಹಿಂಜರಿದಂಥ ಹೇಡಿಯಲ್ಲ. ದೇಶಪ್ರೇಮ, ಸ್ಪಷ್ಟ ಚಿಂತನೆ, ಸಾಹಸ, ದೃಢತೆ, ನಿಷ್ಠೆ, ಆದರ್ಶಗುಣಗಳ ಏಕೀಕೃತ ರೂಪವಾಗಿ ಅಶ್ಫಾರ್ ಚಿರಸ್ಮರಣೀಯ ಮಾನ್ಯ!

ಮಾತೃಸೇವೆ ಇಲ್ಲಿ ಹುಟ್ಟಿದವರೆಲ್ಲರ ಕರ್ತವ್ಯ. ಯಾರೇ ಆಗಲೀ, ಯಾವ ಧರ್ಮಕ್ಕೆ ಸೇರಿದವರೇ ಆಗಲಿ ನಾಡಸೇವೆ ಆದ್ಯಕರ್ತವ್ಯ ಎಂಬುದನ್ನು ಆತ ಮೇಲ್ಪಂಕ್ತಿ ಹಾಕಿ ಹೋದ. ತನ್ನ ರಕ್ತದಿಂದ ಜನರ ಮನಸ್ಸಿನಲ್ಲಿ ಬರೆದು ಹೋದ- ಈಗ ಆತನ ಕಥೆ ಹೇಳುವೆ ನನ್ನ ಕಥೆ ಹೇಳುವೆ.

ನಿರೂಪಕ : ಅಶ್ಫಾಕ್‌ಉಲ್ಲಾಖಾನ್ ಉತ್ತರ ಪ್ರದೇಶದ ಷಹಜಹಾನ್‌ಪುರದ ಷಫೀಕ್‌ಉಲ್ಲಾಖಾನ್ ಅವರ ಮಗನಾಗಿ ಜನಿಸಿದ. ಈತನಿಗೆ ಕ್ರಾಂತಿಕಾರಿ ರಾಮಪ್ರಸಾದನ ಗೆಳೆತನ ದೊರೆಯಿತು. ಮುಂದೆ ಕಾಶಿ, ಕ್ರಾಂತಿಕಾರರ ಪ್ರಮುಖ ಕೇಂದ್ರವಾಯಿತು. Hindustan Republic Association ಎಂಬ ಸಂಘ ರೂಪುಗೊಂಡಿತು. ೧೯೨೫ರಲ್ಲಿ ಕಲ್ಕತ್ತಾದಿಂದ ಲಾಹೋರ್‌ವರೆಗೆ 'ಕ್ರಾಂತಿಕಾರಿ' ಪ್ರಣಾಳಿಕೆ ಹೊರಬಂತು. ಆಗ ರಾಮಪ್ರಸಾದ ನೀಡಿದ ಭಾಷಣ-

ರಾಮಪ್ರಸಾದ : ನಮ್ಮ 'ಕ್ರಾಂತಿಕಾರಿ' ಉದ್ದೇಶ, ಭಾರತದ ಎಲ್ಲಾ ರಾಜ್ಯಗಳು ಸೇರಿ ಒಂದುಗೂಡಬೇಕು! ಪ್ರಾಂತ್ಯಗಳಿಗೆ, ತಮ್ಮ ಒಳ ಆಡಳಿತ ನಡೆಸಿಕೊಳ್ಳುವಷ್ಟು ಅಧಿಕಾರವಿರಬೇಕು. ಒಬ್ಬ ಮನುಷ್ಯ ಇನ್ನೊಬ್ಬನಿಂದ ದುಡಿಸಿಕೊಂಡು ಹಣಪಡೆದು, ಅಧಿಕಾರ ನಡೆಸುವುದು ಹೋಗಬೇಕು. ಇದೇ ನಮ್ಮ ಸಂಘದ ಗುರಿ.

ನಿರೂಪಕ : ಸಂಘ ನಡೆಸಲು ಹಣ ಬೇಕಾದಾಗ ದರೋಡೆ ಮಾಡುವುದು ಅನಿವಾರ್ಯವಾಯಿತು. ಅಶ್ಫಾಕ್ ಸಹೋದರನ ಲೈಸೆನ್ಸ್ ಬಂದೂಕವನ್ನು ತಂದು ಡಕಾಯಿತಿ ಕಾರ್ಯದಲ್ಲಿ ಭಾಗವಹಿಸುತ್ತಿದ್ದ.

ರಾಮಪ್ರಸಾದ : ಸ್ವಾತಂತ್ರ್ಯ ಗಳಿಸುವುದಕ್ಕಾದರೂ ನಮ್ಮ ದೇಶದ ಜನರ ಸುಲಿಗೆ ಮಾಡುವುದು ಸರಿಯಲ್ಲ. ರೈಲು ದರೋಡೆ ಮಾಡಿ ಸಂಪಾದಿಸಬೇಕು. ನಮ್ಮ ಜನರ ಸೇವೆಗೆ ನಾವು ಅವರ ಮೇಲೆ ಕೈಮಾಡುವುದು ಸರಿಯಲ್ಲ. ಕೆಲಸ ಕಷ್ಟವಾದರೂ ಜಾಗರೂಕತೆಯಿಂದ ನಿರ್ವಹಿಸಬೇಕು. ಆಗ ಸರ್ಕಾರಕ್ಕೂ ಕ್ರಾಂತಿಕಾರಿಗಳು ಎಂಬುದು ತಿಳಿಯುತ್ತದೆ.

ಒಬ್ಬ : ಸರಿ ನಿಮ್ಮದು ಒಳ್ಳೆಯ ಆಲೋಚನೆ.

ಅಶ್ಫಾಕ್ : ಇದರಲ್ಲಿ ನಮ್ಮ ಬಲ ಎಷ್ಟು, ಸರ್ಕಾರದ ಬಲ ಎಷ್ಟು ಎಂಬುದನ್ನು ಕುರಿತು ಯೋಚಿಸಬೇಕು. ಡಕಾಯಿತಿಯಿಂದ ದೊರೆತ ಹಣ ಕಡಿಮೆ. ದಿನನಿತ್ಯ ನಡೆಯುವ ಕೆಲಸದಲ್ಲಿ ಅದೂ ಒಂದು ಎಂದು ಪರಿಗಣಿಸುತ್ತದೆ ಸರ್ಕಾರ. ಮಾಮೂಲಿ ಪೊಲೀಸರು ಏನು ಮಾಡುತ್ತಾರೋ ಅಷ್ಟನ್ನೇ ನಾವು ಎದುರಿಸಬೇಕಾಗುತ್ತದೆ. ಸರ್ಕಾರದ ಖಜಾನೆಗೆ ಕೈ ಇಟ್ಟರೆ ಅದರ ಮಾತೇ ಬೇರೆ. ಇಡೀ ಆಡಳಿತ ಯಂತ್ರ ನಮ್ಮನ್ನು ಪತ್ತೆ ಹಚ್ಚುವುದರಲ್ಲಿ ತೊಡಗುತ್ತದೆ, ಆದ್ದರಿಂದ ಈ ಯೋಜನೆ ಕೈಬಿಡುವುದು ಒಳ್ಳೆಯದು.

ರಾಮಪ್ರಸಾದ : ನಮ್ಮ ಮೇಲೆ ಗುಂಡು ಹಾರಿಸಿದಲ್ಲದೆ ನಾವು ಯಾರನ್ನೂ ಕೊಲ್ಲಬಾರದು. ರಕ್ತಪಾತವಿಲ್ಲದೆ ದರೋಡೆ ಕಾರ್ಯ ಮಾಡಬೇಕು.

ನಿರೂಪಕ : ಷಹಜಹಾನ್‌ಪುರದಿಂದ ಲಕ್ನೋಗೆ ಹೋಗುತ್ತಿದ್ದ ರೈಲು ಹತ್ತಿದ ಆಪಾದನೆ, ರಾಮಪ್ರಸಾದ್ ಸ್ಟೇಷನ್ ಮಾಸ್ಟರ್‌ನ ಹಣದ ಚೀಲವನ್ನು, ದರೋಡೆ ಮಾಡಿದ ಚಾಣಾಕ್ಷತನದಿಂದ. ಅದರಲ್ಲಿ ೧೦ಸಾವಿರ ರೂಪಾಯಿ ಇತ್ತು. ಆಗಸ್ಟ್ ೯ ಷಹಜಹಾನ್‌ಪುರದಿಂದ ಲಕ್ನೋವಿಗೆ ಹೊರಟ ರೈಲಿನ ಸರಪಳಿ ಎಳೆದರು ರೈಲು ನಿಂತಿತು.

ಅಶ್ಫಾಕ್ : ಗಾರ್ಡ್, ಡ್ರೈವರ್ ನೀವೇನಾದರೂ ತಲೆ ಎತ್ತಿದರೆ ಗುಂಡಿನೇಟಿಗೆ ಬಲಿಯಾಗಬೇಕಾದೀತು. ನಾವು ಸ್ವಾತಂತ್ರ್ಯಕ್ಕೆ ಹೋರಾಡುವ ಕ್ರಾಂತಿಕಾರರು. ನಿಮ್ಮ ಜೀವನಕ್ಕಾಗಲೀ, ಹಣಕ್ಕಾಗಲೀ, ಮಾನಕ್ಕಾಗಲಿ ನೀವು ಯೋಚಿಸಬೇಕಾಗಿಲ್ಲ. ಆದರೆ ತಲೆಯನ್ನು ಹೊರಗಿಟ್ಟೀರಿ ಜೋಕೆ!

ನಿರೂಪಕ : ಬಂದೂಕದಿಂದ ಸಂದೂಕದ ರಂಧ್ರಗಳನ್ನು ಮಾಡಲು ಹಣದ ಚೀಲ ದೊರೆಯಿತು. ರಾಮಪ್ರಸಾದ್ ಬಿಸ್ಮಿಲ್, ರಾಜೇಂದ್ರ ಲಾಹಿರಿ, ಠಾಕೂರ್ ರೋಶನ್‌ಸಿಂಗ್, ಶಚೀಂದ್ರ - ಬಕ್ಷಿ, ಚಂದ್ರಶೇಖರ

ಅಜಾದ್, ಕೇಶವ ಚಕ್ರವರ್ತಿ, ಬನ್‌ವಾರಿಲಾಲ್, ಮುಕುಂದೀಲಾಲ್, ಮನ್ಮಥನಾಥಗುಪ್ತ, ಅಶ್ಫಾಕ್‌ಉಲ್ಲಾಖಾನ್ ಈ ಹತ್ತು ಕ್ರಾಂತಿವೀರರು ಇದ್ದರು. ಎಷ್ಟೋ ದಿನಗಳು ಸಿಕ್ಕದೆ ೧೯೨೫ರ ಸೆಪ್ಟಂಬರ್ ೨೬ರಂದು ರಾಮಪ್ರಸಾದ್ ಸೆರೆಯಾದ. ಅಶ್ಫಾಕ್ ಪರಾರಿಯಾದ. ಕಾಶಿ, ಅಲ್ಲಿಂದ ಬಿಹಾರಿಗೆ ಹೋದ. ಮಥುರಾ ಜಿಲ್ಲೆಯಲ್ಲಿ ಕೆಲವು ಕಾಲವಿದ್ದ ಉರ್ದುಕವಿ ಅಶ್ಫಾಕ್‌ಉಲ್ಲಾ ಬಂಗಾಳಿ ಭಾಷೆ ಕಲಿತು ಬಂಗಾಳಿಗೀತೆ ಹಾಡತೊಡಗಿದ-

(ಬಂಗಾಳಿ ಹಾಡು)

ಭಾರತಮಾತೆ : ದೆಹಲಿಯಲ್ಲಿ ಅಶ್ಫಾಕ್ ತಮ್ಮೂರಿನ ಪಠಾಣ ಮಿತ್ರನೊಬ್ಬನನ್ನು ಭೇಟಿಯಾದ. ಹಣದಾಸೆಯಿಂದ ಆತ ಪೊಲೀಸರಿಗೆ ಅಶ್ಫಾಕ್ ಬಗೆಗೆ ಸುಳಿವು ನೀಡಿದ. ಪೊಲೀಸರು ಅಶ್ಫಾಕನನ್ನು ಬಂಧಿಸಿ ಮೊಕದ್ದಮೆ ಹೂಡಿದರು. ಆಪಾದಿತನನ್ನು ಪಾರುಮಾಡಲು ಜವಹರಲಾಲ್, ಶ್ರೀಪ್ರಕಾಶ್, ಆಚಾರ್ಯ ನರೇಂದ್ರದೇವ, ಗೋವಿಂದವಲ್ಲಭ ಪಂತ್, ಚಂದ್ರಭಾನುಗುಪ್ತ, ಮುಂತಾದವರಿದ್ದರು. ಇದರ ಅಧ್ಯಕ್ಷರೇ ಮೋತಿಲಾಲ್‌ನೆಹರು. ಅಶ್ಫಾಕ್ ಜೊತೆ ಮತ್ತೊಬ್ಬ ಬಂಧಿತನಾದವ ಶಚೀಂದ್ರಭಕ್ಷ ಇಬ್ಬರಿಗೂ ಧರ್ಮದೇವತೆ ಬಗೆಗೆ ಚರ್ಚೆ ಆಗುತ್ತಿತ್ತು.

ನಿರೂಪಕ : ಕಾಕೋರಿ ರೈಲು ದರೋಡೆಯ ಮೊಕದ್ದಮೆಯಲ್ಲಿ ಶಾಮಪ್ರಸಾದ್, ಅಶ್ಫಾಕ್‌ಉಲ್ಲಾಖಾನ್, ರಾಜೇಂದ್ರ ಲಾಹಿರಿ, ರೋಶನ್ ಸಿಂಗ್‌ರಿಗೆ ಮರಣದಂಡನೆ ವಿಧಿಸಿತು. ದೇಶಾದ್ಯಂತ ಇದರ ವಿರುದ್ಧ ಚಳವಳಿ ನಡೆಯಿತು. 'ಪ್ರೀವಿ ಕೌನ್ಸಿಲ್' ಎಂಬ ನ್ಯಾಯಾಲಯಕ್ಕೂ ಮನವಿ ಹೋಯಿತು. "ಸ್ವಾತಂತ್ರ್ಯಕ್ಕಾಗಿ ಮರಳಿ ಜನ್ಮ ನೀಡು" ನಾವು ಎಂದಾದರೂ ಒಂದು ದಿನ ಬರುತ್ತೇವೆ, ಎಂದು ಧೈರ್ಯದಿಂದ ಮುಂದಾದರು.

ಭಾರತಮಾತೆ : ೧೯೨೭ರ ಡಿಸೆಂಬರ್ ೧೯, ಫೈಜಾಬಾದಿನ ಜೈಲಿನಲ್ಲಿ ಜೈಲಿನಧಿಕಾರಿ ಬರಲು ಅಶ್ಫಾಕ್ "ಎಲ್ಲರೂ ಸಿದ್ಧವೇ" ಎಂದಾಗ 'ಹ್ಞೂಂ' ಎಂದ. ಕುರಾನ್ ಓದಿ ಬಗಲಿಗೆ ಹಾಕಿಕೊಂಡು ನಡೆದ.

ಅಶ್ಫಾಕ್ : ನಮ್ಮನ್ನು ನಾವೇ ಹತ್ತಿಕ್ಕಿಕೊಳ್ಳುತ್ತಿದ್ದೇವೆ. ನಮ್ಮನ್ನು ತುಳಿಯುತ್ತಿದ್ದವರು ಇಂಗ್ಲೀಷರಲ್ಲ, ಜರ್ಮನರಲ್ಲ, ರಷ್ಯನರಲ್ಲ, ಭಾರತೀಯರೇ. ಹೇ ಮಾತೃಭೂಮಿಯೇ ನಿನ್ನ ಸೇವೆಗೆಂದು ನಾನಿದ್ದೇನೆ. ಸೆರೆಗೆ ಹೆದರಲಿಲ್ಲ ಈಗ ನೇಣುಗಂಬಕ್ಕೂ ಹೆದರುವುದಿಲ್ಲ. ಕೈಗೆ ಹಾಕಿದ

ಸಂಕೋಲೆಯಿಂದಲೇ ತಾಳ ಬಾರಿಸುತ್ತಾ ಭಜನೆ ಮಾಡುವೆ. ಜೀವನ ಮರಣಗಳೆಂಬುದು ನಿಜವಲ್ಲ ಎಂದು ಯುದ್ಧದ ನಡುವೆ ಅರ್ಜುನನಿಗೆ ಕೃಷ್ಣ ಹೇಳಿಲ್ಲವೆ? ಅಯ್ಯೋ ಆ ಅರಿವು ಎಲ್ಲಿ ಹೋಯಿತು? ಒಮ್ಮೆ ಹೇಗೂ ಸಾವು ಬರಲಿದೆ. ಅದಕ್ಕೇಕೆ ಹೆದರಬೇಕು? ದೇಶ ಸದಾ ಉಜ್ವಲವಾಗಿ ಸ್ವತಂತ್ರ್ಯವಾಗಿರಲಿ, ನಮ್ಮದೇನು ಮಹಾ? ಸಾವು ಇದ್ದರೇನು? ಇಲ್ಲದಿದ್ದರೇನು?

ರಾಮಪ್ರಸಾದ : ನಾವು ಹಿಂದೂ ಮುಸ್ಲಿಂ ಎಂಬ ಭೇದ ಭಾವವಿಲ್ಲದೇ ಒಂದೇ ಪಾತ್ರೆಯಲ್ಲಿ ಉಂಡೆವು. ನೀನು ನನ್ನ ಮೇಲೆ ಅಚಲವಿಶ್ವಾಸ, ಅಗಾಧ ಪ್ರೀತಿ ಇಟ್ಟಿದ್ದೆ. ಈಗ ನಾವಿಬ್ಬರೂ ನೇಣುಗಂಬವೇರುತ್ತಿದ್ದೇವೆ.

ಅಶ್ಫಾಕ್ : ನನ್ನ ಕೈಗಳು ಮಾನವ ಹತ್ಯೆಯಿಂದ ಮಲಿನವಾಗಿಲ್ಲ. ನಮ್ಮ ಮೇಲೆ ಹೊರಿಸಿರುವ ಆಪಾದನೆ ಸುಳ್ಳು. ದೇವರೆದುರಲ್ಲಿ ನನ್ನ ನ್ಯಾಯ ದೊರೆಯುತ್ತದೆ. "ಲಾ ಇಲಾಹಿ ಇಲ್ ಅಲ್ಲಾ ಮಹಮದ್ ಉರ್ ರಸೂಲ್ ಅಲ್ಲಾ."

ಭಾರತಮಾತೆ : ಅಶ್ಫಾಕನ ಕೊರಳಿಗೆ ನೇಣು ಹಗ್ಗ ಬಿತ್ತು. ವಾರಸಿ, ಹಜರತ್ ಎನಿಸಿಕೊಂಡ. ನನ್ನ ವೀರ ಪುತ್ರ ಇನ್ನಿಲ್ಲವಾದ. ಯಾವನು ತನ್ನ ಭವಿಷ್ಯದ ಭಾಗ್ಯವನ್ನೆಲ್ಲಾ ದೇಶಸೇವೆಗೆಂದು ದಾನ ಮಾಡಿಬಿಟ್ಟನೋ, ಯಾವನು ತನು ಮನ ಧನಗಳನ್ನು ಮಾತೃಸೇವೆಗೆ ಅರ್ಪಣೆ ಮಾಡಿಬಿಟ್ಟನೋ, ಕೊನೆಗೆ ಸ್ವಯಂ ತನ್ನನ್ನು ತಾನೇ ಬಲಿದಾನ ಮಾಡಿಕೊಂಡನೋ, ಅವನು ತನ್ನ ಮಾತೃಭೂಮಿಗಾಗಿ ದೇಹತ್ಯಾಗ ಮಾಡಿದನೋ, ಅವನು ಸ್ವಾತಂತ್ರ್ಯಕ್ಕಾಗಿ ಬಲಿದಾನ ನೀಡಿದ! ಹುತಾತ್ಮರ ಸಾಲಿನಲ್ಲಿ ಸೇರಿಹೋದ!

*

# ಗೇಂದಾಲಾಲ್ ದೀಕ್ಷಿತ್

ಭಾರತಮಾತೆ : ತಮ್ಮ ತಮ್ಮ ತನುವನ್ನು ಸಂತೈಸಿಕೊಳ್ಳಲು ಪ್ರಯತ್ನಿಸುವವರೇ ಹೆಚ್ಚು. ತಮ್ಮ ಹಿತಚಿಂತನೆ ನೋಡುವವರೇ ಹೆಚ್ಚು. ನನ್ನ ಸ್ಥಿತಿಯನ್ನು ನೋಡಿ ಅಯ್ಯೋ ಎಂದವರಿಗೇನೂ ಕಡಿಮೆ ಇಲ್ಲ. ನನ್ನ ಮೇಲೆ ಪ್ರೀತಿ ಇಟ್ಟು ಬಲಿದಾನ ಮಾಡಿದವರಿಗೇನೂ ಕಡಿಮೆ ಇಲ್ಲ. ಅದರಲ್ಲಿ ಗೇಂದಾಲಾಲ್ ಸಹ ಒಬ್ಬ. ಈಗ ಆತನ ಕಥೆ ಹೇಳುವೆ ನನ್ನ ಕಥೆ ಹೇಳುವೇ.

ಆಗ್ರಾ ಜಿಲ್ಲೆಯ ಮಯೀ ಎಂಬ ಗ್ರಾಮದ ಜಮೀನುದಾರ ಕುಟುಂಬದ ಬೋಲಾನಾಥ್ ದೀಕ್ಷಿತ್, ವಿಚಿತ್ರಾ ದೇವಿಯವರ ಮಗನಾಗಿ ಪಂಡಿತ ಗೋವಿಂದಲಾಲ್ ದೀಕ್ಷಿತ್ ೧೮೯೦ರ ನವೆಂಬರ್ ೩೦ರಂದು ಜನಿಸಿದ. ಗೇಂದಾಲಾಲ್‌ಗೆ ಮೂರು ವರ್ಷವಾಗಿದ್ದಾಗಲೇ ಆತನ ತಾಯಿ ತೀರಿಕೊಂಡಳು. ತಂದೆ ಮಗನನ್ನು ಓದಿಸಿದ. ಮೆಟ್ರಿಕ್ ಪರೀಕ್ಷೆಯಲ್ಲಿ ಹೆಚ್ಚು ಅಂಕವನ್ನು ಗಳಿಸಿ ತೇರ್ಗಡೆ ಹೊಂದಿದ. ಓದು ಮುಂದುವರಿಸಲಾಗದೆ ಓಡ್ಯೆಯಾ ಎಂಬಲ್ಲಿ ದಯಾನಂದ ಆಂಗ್ಲೋ ವೇದಿಕ್ ಶಾಲೆಯಲ್ಲಿ ಉಪಾಧ್ಯಾಯನಾಗಿ ಸೇರಿದ.

ನಿರೂಪಕ : ೧೯೦೫ರಲ್ಲಿ ಬಂಗಾಳ ಇಬ್ಭಾಗವಾದಾಗ ಜನರು ರೊಚ್ಚಿಗೆದ್ದರು. ಅಕ್ಟೋಬರ್ ೧೬ನೇ ತಾರೀಖಿನ ದಿನದಂದು ಶೋಕದಿನವೆಂದು ಕರೆದರು. ಅಂಗಡಿ, ಶಾಲೆ, ಕಛೇರಿಗಳನ್ನು ಮುಚ್ಚಿ ಹರತಾಳವಾಚರಿಸಿದರು. ಉಪವಾಸ ಆರಂಭಿಸಿದರು. ರಾಖಿ ಕಟ್ಟಿಕೊಂಡು ರಾಷ್ಟ್ರಗೀತೆ ಹಾಡುತ್ತಾ ಮೆರವಣಿಗೆ ಆರಂಭಿಸಿದರು.

ಭಾರತಮಾತೆ : ನನ್ನ ಪುತ್ರ ಗೇಂದಾಲಾಲನಿಗೆ ಇಂಗ್ಲೀಷರನ್ನು ಹೊಡೆದೋಡಿಸಬೇಕೆಂಬ ರೋಷ ಉಂಟಾಯಿತು. ತಿಲಕ್, ಶಿವಾಜಿಯ ಜೀವನವನ್ನು ಹೇಳಿ ಜನರಿಗೆ ವೀರತ್ವ ತುಂಬುತ್ತಿದ್ದ. ಈ ಭಾಷಣ, ಲೇಖನಗಳು ಗೇಂದಾಲಾಲನಿಗೆ ಶಿವಾಜಿಯ ಬದುಕು ಜೀವನದ ಆದರ್ಶವಾಯಿತು.

ಗೇಂದಾಲಾಲ್: (ಸ್ವಗತ) ಶಿವಾಜಿಯ ಹೆಸರಿನಲ್ಲಿ "ಶಿವಾಜಿ ಸಮಿತಿ" ಮಾಡಿ ಯುವಕನನ್ನು ಸೇರಿಸಿ ದೇಶಪ್ರೇಮವು ಅವರಲ್ಲೆಲ್ಲಾ ಒಡಮೂಡು-ವಂತಾಗಬೇಕು. ಸಾಹುಕಾರರು, ಮೇಲ್ಪಟ್ಟದವರು ಇದಕ್ಕೆ

ನೆರವಾಗುವರು ಎಂಬುದನ್ನು ಸುಳ್ಳಾಗಿಸಿದರು. ಇದಕ್ಕೆ ಸಾಹಸವಂತರೇ ಬೇಕು ಎಂಬುಕೊಳ್ಳಲು ಅವರು ನೆಮ್ಮದಿ ಜೀವನ ಬಯಸಿ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಬೇಕೆಂಬ ಮನೋಭಾವವೇ ಇಲ್ಲದಂತೆ ತೋರಿದರು. ಚಂಬಲ್ ಕಣಿವೆಯ ಡಕಾಯಿತರ ಸಹಾಯ ಪಡೆವರೆ ಹೇಗೆ? ಅವರಿಗೆ ಸರ್ಕಾರದ ಮೇಲೆ ಗೌರವವಿಲ್ಲ, ಪೊಲೀಸರ ಕಂಡರೆ ಭಯ, ಅವರು ಒಳ್ಳೆಯವರಿಲ್ಲದಿರಬಹುದು, ಸಮಾಜದಿಂದ ದೂರ ಇರಬಹುದು, ಅವರ ಶಕ್ತಿಯನ್ನು ಉಪಯೋಗಿಸುವುದು ಒಳ್ಳೆಯದು.

(ಹಿಂದಿ ಸ್ವಾತಂತ್ರ್ಯಗೀತೆ)

ಭಾರತಮಾತೆ : ಗೇಂದಾಲಾಲ್ ವೀರರ ಗುಂಪು ತಯಾರಿಸಿದ. ಪಿಸ್ತೂಲಿನಿಂದ ಗುರಿ ಇಟ್ಟು ಹೊಡೆಯುವುದನ್ನು ಕಲಿತ. ಕಲ್ಕತ್ತಾಕ್ಕೆ ಹೋಗಿ ಬಾಂಬ್ ತಯಾರಿಕೆ ಕಲಿಯಲು ಹೋಗಿ ಹಾಗೆಯೇ ಹಿಂತಿರುಗಿದ. ಶಿವಾಜಿ ಸಮಿತಿ ಶಸ್ತ್ರಾಸ್ತ್ರ ಉಪಯೋಗ, ಧನ ಸಂಗ್ರಹಣೆ, ಲೇಖನಗಳ ಮೂಲಕ ಪ್ರಚಾರ ಮಾಡಲಾರಂಭಿಸಿದ. ಬ್ರಹ್ಮಚಾರಿ ಲಕ್ಷ್ಮಣಾನಂದ್ ಭೀಮಕಾಯದ ಧೈರ್ಯಸ್ಥ ಯುವಕ. ಎಲ್ಲರಿಗೂ ತರಬೇತಿ ಕೊಡುವ ಕೆಲಸ ಮಾಡಿದ. ಗೇಂದಾಲಾಲ್ ಪಂಚಮಸಿಂಗ್ ಎಂಬ ಡಕಾಯಿತನ ಪರಿಚಯ ಮಾಡಿಕೊಂಡ. ದೊಡ್ಡ ದಳವನ್ನೇ ಕಟ್ಟಿದ. ಗ್ವಾಲಿಯರ್‌ನಿಂದ ತಮ್ಮ ಕೆಲಸ ಮಾಡಲು ಆರಂಭಿಸಿದರು. ಆಗಾಗ ಸೈನಿಕದಳದವರೊಂದಿಗೆ ಗುಂಡಿನ ಕಾಳಗ ಆಗುತ್ತಲೇ ಇತ್ತು. ೫೦೦ ಜನರ ಈ ದಳವನ್ನು ಸದೆಬಡಿಯಲು ಸರ್ಕಾರಕ್ಕೆ ಕಷ್ಟವಾಯಿತು. ಇದು "ಮೈನಪುರಿಷಡ್ಯಂತ್ರ" ಎಂದು ಪ್ರಸಿದ್ಧವಾಯಿತು. ಇದರಲ್ಲಿ ಭಾಗವಹಿಸಿದವರು ದೇಶದ್ರೋಹಿಗಳೆಂದು ಸಾರಿ ಬ್ರಿಟಿಷ್ ಸರಕಾರ ಹಿಡಿಯುವ ಪ್ರಯತ್ನ ಮಾಡಿತು.

ನಿರೂಪಕ : ೧೯೧೮ರ ಜನವರಿ ೩೧, ಗ್ವಾಲಿಯರ್‌ನ ಬಂದ್, ಕಾಡಿನಲ್ಲಿ ಗೇಂದಾಲಾಲ್ ಗುಂಪು ಮೂರು ದಿನ ಊಟವಿಲ್ಲದೆ ಹಸಿವೆಯಿಂದ ಕುಳಿತಿತ್ತು.

ಹಿಂದೂಸಿಂಘ್ : ನೀವು ಯೋಚನೆ ಮಾಡಬೇಡಿ. ನಾನು ನಿಮಗೆಲ್ಲಾ ಬಿಸಿ ಪೂರಿ ಮಾಡಿಸಿ ತರ್ತೀನಿ.

ಗೇಂದಾ : ಅಷ್ಟು ಮಾಡಿ ಪುಣ್ಯ ಕಟ್ಕೊಪ್ಪ.... ಎಲ್ಲರಿಗೂ ಕೈಕಾಲೇ ಬರ್ತಿಲ್ಲ.

ಹಿಂದೂ : ಆಯ್ತು ಈಗ್ಲೇ ಹೋಗಿ ತರ್ತೇನೆ.

ನಿರೂಪಕ : ಎಲ್ಲರಿಗೂ ಬಿಸಿ ಪೂರಿ ತಂದು ಕೊಟ್ಟ ಹಿಂದೂಸಿಂಘ್. ಎಲ್ಲರೂ ತಲೆ ಸುತ್ತುತ್ತಿದೆ ಎಂದರು. ಹಿಂದೂಸಿಂಘ್ ಅಲ್ಲಿಂದ ಅಡಿಕಿತ್ತ, ಗೇಂದಾಲಾಲ್ ಆತನನ್ನು ಹಿಂಬಾಲಿಸಿ ಆತನ ಮೇಲೆ ಗುಂಡು

ಹಾರಿಸಿದ. ಅಷ್ಟರಲ್ಲೇ ಪೊಲೀಸರ ಬೂಟಿನ ಶಬ್ದವಾಯಿತು. ೫೦೦ ಮಂದಿ ಸೈನಿಕರು ಗೇಂದಾಲಾಲ್ ಗುಂಪನ್ನು ಸುತ್ತುವರೆದರು. ಗುಂಡಿನ ಕಾಳಗ ಆರಂಭವಾಯಿತು. (ಗುಂಡಿನ ಶಬ್ದ) ಅದರಲ್ಲಿ ಅನೇಕರು ಸತ್ತರು. ಲಕ್ಷಣಾನಂದ ಸತ್ತ. ಗೇಂದಾಲಾಲನನ್ನು ಪೊಲೀಸರು ಹಿಡಿದು ಕಾಲಿಗೆ ಬೇಡಿ ಹಾಕಿ ಗ್ವಾಲಿಯರ್ ಜೈಲಿಗೆ ಹಾಕಿದರು. ಜೈಲಿನಲ್ಲಿ ಆರೋಗ್ಯ ಕೆಟ್ಟು ಕ್ಷಯರೋಗದಿಂದ ನರಳಿದ.

ಭಾರತಮಾತ : ಸೋಮನಾಥ ಎಂಬಾತ ಗೇಂದಾಲಾಲ್ ಜೈಲಿನಲ್ಲಿರುವ ವಿಷಯವನ್ನು ಬ್ರಿಟಿಷ್ ಪೊಲೀಸರಿಗೆ ಸುದ್ದಿ ಕೊಟ್ಟ. ಪಂಚಮಸಿಂಗ್ ಎಂಬಾತನೂ ಶಿಕ್ಷೆಗೆ ಹೆದರಿ ಸಾಕ್ಷಿಯಾಗಿಬಿಟ್ಟ. ಇದರಿಂದ ನನ್ನ ಪುತ್ರ ಗೇಂದಾಲಾಲನನ್ನು ಮೈನಪುರಿ ಜೈಲಿಗೆ ಹಾಕಿದರು. ಆರೋಗ್ಯ ಮತ್ತಷ್ಟು ಕೆಟ್ಟಿತು. ಒಂದು ದಿನ ಆತ ಯೋಚಿಸಿದ.

ಗೇಂದಾಲಾಲ್ : ಈ ಜೈಲಿನಿಂದ ತಪ್ಪಿಸಿಕೊಳ್ಳುವುದೊಂದೇ ನನಗೆ ಉಳಿದಿರುವುದು. ಇಲ್ಲದಿದ್ದರೆ ನಾನು ಇನ್ನೆಷ್ಟು ಕಠಿಣ ಶಿಕ್ಷೆಗಳಿಗೆ ಈಡಾಗಬೇಕೋ......

ಪೋಲೀಸ್ : ಏನು ಈಗಲಾದರೂ ಹೇಳು ನಿನ್ನ ಗುಂಪಿನವರು ಎಲ್ಲಿದ್ದಾರೆ?

ಗೇಂದಾಲಾಲ್ : ಅಯ್ಯೋ..... ಅವರು ಒಂದೇ ಸ್ಥಳದಲ್ಲಿದ್ದಾರೆಂದು ಹೇಳಲು ಬರುವುದಿಲ್ಲ. ಬಂಗಾಳ, ಮುಂಬಯಿ, ಪಂಜಾಬ್, ರಾಜಾಸ್ಥಾನ, ಅಹಮದಾಬಾದಿನಲ್ಲಿ ಸೇರಿಕೊಂಡಿದ್ದಾರೆ.

ಪೋಲೀಸ್ : ಈಗ ನಿನ್ನನ್ನು ಈ ಜೈಲಿನಿಂದ ಬಿಡುಗಡೆ ಮಾಡಿ ಗೃಹ ಬಂಧನಕ್ಕೆ ಹಾಕುತ್ತೇವೆ.

ಗೇಂದಾಲಾಲ್ : ಏನು ಮಾಡುತ್ತಿರೋ ಮಾಡಿ.

ನಿರೂಪಕ : ಗೇಂದಾಲಾಲ್ ಸಾಕ್ಷಿಯೊಬ್ಬನನ್ನು ಹಾರಿಸಿಕೊಂಡು ಮೈನಪುರಿ ಬಿಟ್ಟು ಇನ್ನೊಂದು ಊರಲ್ಲಿ ಸ್ವಂತದವರೊಬ್ಬರ ಮನೆಯಲ್ಲಿದ್ದು ಆಮೇಲೆ ಬೇರೆ ಮನೆ ಮಾಡಿದ. ರಾಮನಾರಾಯಣನೆಂಬ ಆ ಸಾಕ್ಷಿದಾರ ಈತನ ಬಟ್ಟೆಬರೆ ಹಣ ದೋಚಿಕೊಂಡು ಕೋಣೆಗೆ ಬೀಗ ಹಾಕಿ ಓಟಕಿತ್ತ. ಯಾರದೋ ಸಹಾಯದಿಂದ ಗೇಂದಾಲಾಲ್ ಆಗ್ರಾಕ್ಕೆ ಬಂದ. ಅಲ್ಲಿ ಆತನ ಮಿತ್ರರು ಎಲ್ಲಿ ಮಾತನಾಡಿಸಿದರೆ ತಮಗೇನಾಗುತ್ತದೋ ಎಂಬ ಭಯದಿಂದ ದೂರಾದರು. ಬಂಧು ಬಾಂಧವರೇನು ತಂದೆಯೇ ಕುಪಿತರಾದರು. ಊರೂರು ಅಲೆದ. ದೇವಾಲಯದಲ್ಲಿ ವಾಸ ಮಾಡಿದ. ಅರವಟ್ಟಿಗೆಯಲ್ಲಿ ಕೆಲಸ ಮಾಡಿದ. ತನ್ನ ಸ್ನೇಹಿತನೊಬ್ಬನಿಗೆ ತನ್ನ ಬಗೆಗೆ ಪತ್ರ ಬರೆದ. ಆ ಮಿತ್ರ ಆತನ ಹೆಂಡತಿಗೆ ಈ ವಿಷಯವನ್ನು ತಿಳಿಸಿದ. ಹೆಂಡತಿ ಬಂದು ಗಂಡನನ್ನು ನೋಡಿ ಕಣ್ಣೀರು ಹಾಕುತ್ತಾ-

ಗೇಂದಾಲಾಲ್ : ಏಕೆ ಅಳ್ತಿದ್ದಿಯಾ?

ಹೆಂಡತಿ : ನೀವು - ಹೀಗಾಗ್ಬಿಟ್ಟಿದ್ದೀರಿ.... ಮುಂದೆ ನಮಗೇನು ಗತಿ?

ಗೇಂದಾಲಾಲ್ : ಲಕ್ಷಾಂತರ ಬಡವರಿಗೆ ಹಸಿವಿನಿಂದ ಸಾಯುವವರಿಗೆ ಯಾರಿದ್ದಾರೆ, ನೀನೇ ಹೇಳು?

ಹೆಂಡತಿ : ಏನೋ ನನಗೆ ಭಯವಾಗುತ್ತಿದೆ.

ಗೇಂದಾಲಾಲ್ : ದೇಶದ ಕೋಟ್ಯಾಂತರ ಜನರನ್ನು ಕಾಪಾಡುವವರು ಯಾರು ನೀನೇ ಹೇಳು. ಇಡೀ ದೇಶದ ಸ್ಥಿತಿಯನ್ನು ನೋಡು ಸ್ವಾತಂತ್ರ್ಯವಿಲ್ಲದೆ ಹೇಗೆ ನರಳುತ್ತಿದೆ? ದೇಶದ ಸ್ವಾತಂತ್ರ್ಯಕ್ಕೆ ಹೋರಾಡುವವರಾರು? ಹಾಗೇ ನಿನಗೂ, ಅಳಬೇಡ.... ನಾನು ಶತ್ರುಗಳ ಕೈಗೆ ಸಿಕ್ಕದೆ ದೇಶ ಪ್ರೇಮದ ಬೆಂಕಿಯಲ್ಲಿ ಬೆಂದು ಭಸ್ಮವಾಗುತ್ತಿದ್ದೇನೆ. ಅದು ನಿನ್ನ ಅದೃಷ್ಟವಲ್ಲವೇ? ನಾನು ಸಾಯುತ್ತಿದ್ದೇನೆ.

ಹೆಂಡತಿ : ಹಾಗನ್ನಬೇಡಿ.

ಗೇಂದಾಲಾಲ್ : ನನಗೆ ಮೋಕ್ಷ ಬೇಡ. ಸತ್ತರೂ ನನ್ನ ಆತ್ಮ ಈ ನೆಲದಲ್ಲಿ ಹುಟ್ಟಬೇಕು. ನನ್ನ ತಾಯಿ ಸ್ವತಂತ್ರಳಾಗುವವರೆಗೂ ನಾನು ಇಂಗ್ಲೀಷರನ್ನು ಕಾಡುತ್ತಿರಬೇಕು. ಈಗ ನೀನೊಂದು ಕೆಲಸಮಾಡಬೇಕು.

ಹೆಂಡತಿ : ಏನು ಮಾಡಬೇಕು ಹೇಳಿ.

ಗೇಂದಾಲಾಲ್ : ನೀನು ನಿನ್ನೂರಿಗೆ ಹೊರಡು. ನಾನು ಇಲ್ಲಿ (ದೆಹಲಿಯ) ಇರ್ವಿನ್ ಆಸ್ಪತ್ರೆಗೆ ಅನಾಥನೆಂದು ಸೇರಿಕೊಳ್ಳುವೆ.

ಹೆಂಡತಿ : ನಿಮ್ಮ ಸೇವೆಗೆ ನಾನಿರಬೇಡವೇ?

ಗೇಂದಾಲಾಲ್ : ಆಸ್ಪತ್ರೆಯ ವೈದ್ಯಕೀಯ ಸಿಬ್ಬಂದಿ ಇದೆ.... ಈಗ ನೀನು ಇಲ್ಲೇ ಇದ್ದರೆ ಬಹಳ ಕಷ್ಟವಾಗುತ್ತದೆ. ನನ್ನ ಶವ ಸಂಸ್ಕಾರಕ್ಕೂ ಹಣವಿಲ್ಲ.

ಹೆಂಡತಿ : ಎಂಥಾ ಸ್ಥಿತಿಯನ್ನು ತಂದುಕೊಂಡಿರಿ.

ಗೇಂದಾಲಾಲ್ : ನನ್ನನ್ನು ಮರೆತುಬಿಟ್ಟು ನೆಮ್ಮದಿಯಿಂದ ಊರಿಗೆ ಹೊರಟು ಹೋಗು.

ಹೆಂಡತಿ : ನಿಮ್ಮಿಷ್ಟದಂತೆಯೇ ಆಗಲಿ. ನಾನಿನ್ನು ಬರ್ತೀನಿ......

ಭಾರತಮಾತೆ : ಗೇಂದಾಲಾಲನ ಹೆಂಡತಿ ಊರಿಗೆ ಹೊರಟಳು. ೧೯೨೦ರ ಡಿಸೆಂಬರ್ ೨೧ರಂದು ತನ್ನ ಮೂವತ್ತನೇ ವಯಸ್ಸಿನಲ್ಲಿ ಕೊನೆಯುಸಿರನ್ನೆಳೆದ. ಅನಾಥ ದೇಹವೆಂದು ಆಸ್ಪತ್ರೆಯ ಅಧಿಕಾರಿಗಳೇ ಶವಸಂಸ್ಕಾರ ಮಾಡಿದರು. ಇಂಗ್ಲೀಷರ ಜೊತೆ ಹೋರಾಡಿ ಸಾಯಬೇಕೆಂಬುದು ಆತನ ಇಚ್ಛೆಯಾದರೂ ಅನಾಥನಾಗಿ, ರೋಗ ಪೀಡಿತನಾಗಿ ಸಾಯುವ ಸ್ಥಿತಿ ಬಂದುದು ದುರ್ದೈವವೇ ಸರಿ!

*

# ಜತೀಂದ್ರ ಮೋಹನಸೇನ್ ಗುಪ್ತ

ಭಾರತಮಾತೆ : ೧೯೨೧ರಲ್ಲಿ ಗಾಂಧಿಯ ಅಸಹಕಾರ ಚಳವಳಿಯಿಂದ ಶಾಲಾ ಕಾಲೇಜುಗಳು ಮುಚ್ಚಿದುವು. ಅನೇಕ ಜನರು ತಮ್ಮ ಕೆಲಸ ಬಿಟ್ಟು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು. ಅಂಥ ಮಹಾನ್ ಹೋರಾಟಗಾರರಲ್ಲಿ ಜತೀಂದ್ರ ಮೋಹನಸೇನ್ ಗುಪ್ತ ಒಬ್ಬ. ಈಗ ಆತನ ಕಥೆ ಹೇಳುವೆ..... ನನ್ನ ಕಥೆ ಹೇಳುವೆ.

(ಸಂಗೀತ)

ನಿರೂಪಕ : ಮೊಳಕೆ ಒಡೆಯುತ್ತಿರುವ ಜೀವನದ ಹೊಂಗನಸುಗಳಿಗೆ ಬೆಂಕಿ ಹಚ್ಚಿ ಸ್ವಾತಂತ್ರ್ಯದ ಯಜ್ಞಕ್ಕೆ ತನ್ನನ್ನು ಅರ್ಪಿಸಿಕೊಂಡ ಬಂಗಾಲದ ಜತೀಂದ್ರ ಮೋಹನ ಅಂಥ ಯುವಕರಲ್ಲಿ ಒಬ್ಬ. ೧೮೮೫ರ ಫೆಬ್ರವರಿ ೨೨ರಂದು ಬಂಗ್ಲಾದೇಶದ ಚಿತ್ತಗಾಂಗ್ ಜಿಲ್ಲೆಯ ಬರಮಾ ಎಂಬ ಹಳ್ಳಿಯಲ್ಲಿ ಚಿತ್ರಮೋಹನ ಸೇನ್ ಗುಪ್ತ ಹಾಗೂ ವಿನೋದಿನಿ ದೇವಿಯವರ ಪುತ್ರನಾಗಿ ಜನಿಸಿದ ಜತೀಂದ್ರ. ಈತನ ವಿದ್ಯಾಭ್ಯಾಸ ಇಂಗ್ಲೆಂಡಿನಲ್ಲಿ ನಡೆಯುವಾಗ ನೆಲ್ಲಿ ಎಂಬವಳ ಪರಿಚಯವಾಗಿ ವಿವಾಹದೊಡನೆ ೧೯೦೯ರಲ್ಲಿ ಹಿಂತಿರುಗಿದರು.

೧೯೧೧ರಲ್ಲಿ ರಾಜಕೀಯ ಪ್ರವೇಶಿಸಿದರು. ಸಿಲ್ಹೆಟ್ ಟೀ ತೋಟಗಳಿಗೆ ಯೂರೋಪಿನವರೇ ಮಾಲೀಕರಾಗಿದ್ದರು. ಅಲ್ಲಿಗೆ ಭಾರತೀಯರನ್ನು ಕೆಲಸಕ್ಕೆ ಸೇರಿಸಿಕೊಳ್ಳಲು ಮೊದಲು ಆಸೆ, ಆಮಿಷಗಳನ್ನು ತೋರಿಸಿ ಆಮೇಲೆ ಗುಲಾಮರಂತೆ ಕಾಣತೊಡಗಿದರು. ಕಾಂಗ್ರೆಸ್ಸಿನ ಕಾರ್ಯಕರ್ತರು ಸ್ವಾತಂತ್ರ್ಯದ ಬಗೆಗೆ ಹೇಳಿದಾಗ ಅವರೆಲ್ಲಾ ಸ್ವಾತಂತ್ರ್ಯದ ಕನಸು ಕಾಣತೊಡಗಿದರು. ಈಗ ಮಾಲೀಕರು ರೈಲ್ವೆ ಟಿಕೆಟ್ ಕೊಡದಂತೆ ತಡೆದರು. ಆದರೂ ಅವರು ನಡೆದುಕೊಂಡೇ ಹೊರಟರು. ದೋಣಿಯಲ್ಲಿ ಗೋಲಂದೋ ಎಂಬಲ್ಲಿಗೆ ಬಂದರು. ಅಲ್ಲಿಗೂ ಪೊಲೀಸರೊಡನೆ ಬಂದು ಹಿಂತಿರುಗುವಂತೆ ಹಿಂಸಿಸಿದರು. ಅದಕ್ಕೂ ಕೆಲಸಗಾರರು ಒಪ್ಪಲಿಲ್ಲ. ಜಿಲ್ಲಾ ನ್ಯಾಯಾಧೀಶರು ನಿಷೇಧಾಜ್ಞೆ ಹೊರಡಿಸಿ ಅವರನ್ನು ಬಲಾತ್ಕಾರವಾಗಿ ಚಾಂದ್‌ಪುರಕ್ಕೆ ಕಳುಹಿಸಿದರು. ೪ ಸಾವಿರ ಜನ ಗೋಲಂದೋಗೆ ಹೋಗುವ ಹಡಗು ಹತ್ತಲು ಯತ್ನಿಸಿದಾಗ ಮರದ ಸೇತುವೆ ತೆಗೆಸಿಬಿಟ್ಟರು. ಆಗ ಅನೇಕರು ನೀರಲ್ಲಿ ಬಿದ್ದರು. ಅವರನ್ನೆಲ್ಲಾ ರೈಲ್ವೆ ನಿಲ್ದಾಣಕ್ಕೆ ಅಟ್ಟಿದರು.

ಅಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಆಹಾರ ಸರಬರಾಜು ಮಾಡಿದರು. ಸೈನಿಕರು ಅವರನ್ನು ಹೊಡೆದು ಬಡೆದು ಹಿಂಸಿಸಿದರು.

(ಸಂಗೀತ)

ಭಾರತಮಾತೆ : ಈ ಘಟನೆಯಿಂದ ರೈಲ್ವೆ ನೌಕರರು ರೋಷಗೊಂಡು ಮುಷ್ಕರ ಹೂಡಲು ನಿರ್ಧರಿಸಿದರು. ೨೫೦೦ ಜನ ಸೇರಿದರು.

ಜತೀಂದ್ರ : ಕಾರ್ಮಿಕರೇ ನೀವು ಧೃತಿಗೆಡಬೇಡಿ, ಮುಷ್ಕರ ಶಾಂತಿಯುತವಾಗಿ ಸಾಗಲಿ. ಪೊಲೀಸರು ನಮ್ಮ ಹಿಂದೆ ಇದ್ದಾರೆ. ಸ್ವಲ್ಪ ಅವಕಾಶ ಸಿಕ್ಕಿದರೂ ಅವರು ನಿಮ್ಮನ್ನು ವಿನಾ ಕಾರಣ ಕೆರಳಿಸಬಹುದು. ನೀವು ಮಾತ್ರ ಶಾಂತಚಿತ್ತರಾಗಿದ್ದು ಎಲ್ಲಾ ಕಷ್ಟಗಳನ್ನು ಎದುರಿಸಲು ಸಿದ್ಧರಾಗಿರಬೇಕು. ಸೆರೆಮನೆಗೆ ಹೋಗಲು ಸಿದ್ಧವಾಗಿರುವವರು ಮಾತ್ರ ಮೆರವಣಿಗೆಯಲ್ಲಿ ಭಾಗವಹಿಸಿ.

ಜನ : ಎಲ್ಲರೂ ಸಿದ್ಧವಾಗಿರುವೆವು......

ಭಾರತಮಾತೆ : ಎಷ್ಟೋ ಜನರಿಗೆ ಜತೀಂದ್ರ ತನ್ನ ಹಣವನ್ನೇ ಖರ್ಚು ಮಾಡಿದ. ಚರಕಾ ತರಿಸಿ ನೂಲುವುದನ್ನು ಕಲಿಸಿದ. ಆಸ್ತಿಯನ್ನು ಅಡವಿಟ್ಟು ೪೦,೦೦೦ ರೂಪಾಯಿಗಳ ಸಾಲ ಮಾಡಿ ಇವರಿಗೆ ಖರ್ಚು ಮಾಡಿದ. ಮುಷ್ಕರ ಹೂಡಿದ್ದ ನೌಕರರನ್ನು ಮನೆಗಳಿಂದ ಓಡಿಸಿತು ಬ್ರಿಟಿಷ್ ಸರಕಾರ. ಇದರಿಂದ ಬೇಸರವಾದ ಜತೀಂದ್ರ ಸರ್ಕಾರದ ವಿರುದ್ಧ ಮೆರವಣಿಗೆ ನಡೆಸಲು ನಿರ್ಧರಿಸಿದ.

ನಿರೂಪಕ : ೭೦೦೦ ಜನರ ಭಾರಿ ಮೆರವಣಿಗೆ! ಇದ್ದಕ್ಕಿದ್ದಂತೆ ನ್ಯಾಯಾಧೀಶರು, ಪೊಲೀಸು ಅಧಿಕಾರಗಳು, ೫೦ ಜನ ಸೈನಿಕರು ಪ್ರತ್ಯಕ್ಷವಾದರು. ಜತೀಂದ್ರ, ಮಹೀಮ್ ಚಂದ್ರರೇ ಮೊದಲಾದವರನ್ನು ಬಂಧಿಸಿ, ಉಳಿದವರನ್ನು ಸೈನಿಕರ ಸಹಾಯದಿಂದ ಚದುರಿಸುವಂತೆ ನ್ಯಾಯಾಧೀಶರು ಆಜ್ಞಾಪಿಸಿದರು, ಸಾವಿರಾರು ಜನರು ಸೆರೆಮನೆ ಸೇರಿದರು. ಜತೀಂದ್ರರು ನ್ಯಾಯಾಲಯಕ್ಕೆ ಬಂದಾಗ ಹೊರಗೆ ಜನರ ಗದ್ದಲ!

(ಜತೀಂದ್ರ ಮೋಹನ್ ಕೀ.... ಜೈ..... ಒಂದೇ ಮಾತರಂ ಕೂಗು)

ನ್ಯಾಯಾಧೀಶ : ಜತೀಂದ್ರ ನಿಮ್ಮ ಜನರನ್ನು ಸುಮ್ಮನಿರುವಂತೆ ಹೇಳಿ.

ನಿರೂಪಕ : ಜತೀಂದ್ರರು ಕಿಟಕಿಯ ಹತ್ತಿರ ಬರುತ್ತಿದ್ದಂತೆಯೇ ಜನರ ನಿಶ್ಶಬ್ದ! ಎಲ್ಲರಿಗೂ ಇದರಿಂದ ಅಚ್ಚರಿ! ಚಿತ್ತರಂಜನದಾಸರು ಜಾಮೀನು ಕೊಟ್ಟು ಜತೀಂದ್ರರನ್ನೂ ಬಿಡುಗಡೆ ಮಾಡಿಸಿದರು.

(ಸಂಗೀತ)

ಭಾರತಮಾತೆ : ೧೯೨೧ ಸೆಪ್ಟೆಂಬರ್ ೨೪ರಂದು ಜಾಮೀನು ಕೊಟ್ಟದ್ದು ಮುಗಿಯಿತು. ಜನರೆಲ್ಲಾ ಜತೀಂದ್ರನ ಮನೆಯಲ್ಲಿ ಸೇರಿದ್ದಾಗ, ಅವನನ್ನು ಬಂಧಿಸಲು ನ್ಯಾಯಾಧೀಶರ ಆಜ್ಞೆಯನ್ನು ತಂದರು. ಜತೀಂದ್ರನನ್ನು ಕಲ್ಕತ್ತಾ ಸೆರೆಮನೆಗೆ ಕರೆದೊಯ್ದರು. ಇವನ ಜೊತೆಯ ೧೭ ಜನರಿಗೆ ಮೂರು ತಿಂಗಳ ಕಠಿಣ ಶಿಕ್ಷೆ ಆಯಿತು. ಜತೀಂದ್ರನ ಕೆಲಸಗಳನ್ನು ಆತನ ಹೆಂಡತಿ ನೆಲ್ಲಿ ಮುಂದುವರಿಸಿಕೊಂಡು ಬಂದಳು.

ನಿರೂಪಕ : ಜತೀಂದ್ರರು ಚಿಟಗಾಂವ್ ಮೇಯರ್ ಆದರು. ಆಗ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದರು. ಹಿಂದೂ-ಮುಸ್ಲಿಮರ ಸ್ನೇಹಕ್ಕೆ ಶ್ರಮಿಸಿದರು. ೧೯೩೦ರಲ್ಲಿ ಕಾಯಿದೆ ಭಂಗ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆಗೆ ಹೋದರು. ಜತೀಂದ್ರರಿಗೆ ಸತತ ಕೆಲಸದಿಂದ ಅನಾರೋಗ್ಯವಾಯಿತು. ಆದರೂ ೧೯೩೦ರ ಜನವರಿ ೨೬ರಂದು ಭಾರತಾದ್ಯಂತ "ಸ್ವಾತಂತ್ರ್ಯ ದಿನ" ಆಚರಿಸಲು ಸಿದ್ಧರಾಗಿ ಬಂದರು. ಆಗ ಮಾಡಿದ ಭಾಷಣ-

ಜತೀಂದ್ರ : ಬ್ರಿಟಿಷರ ಧ್ವಜಕ್ಕೆ ನಾವು ಅವಮಾನ ಮಾಡ್ತಿಲ್ಲ. ಆದರೆ ಆ ಧ್ವಜವನ್ನು ನಮ್ಮ ದೇಶದಲ್ಲಿ ಹಾರಿಸುವುದು ಅವಮಾನ. ನಮ್ಮ ಕಾರ್ಪೊರೇಷನ್ ಕಟ್ಟಡದ ಮೇಲೆ ನಮ್ಮ ಧ್ವಜವೇ ಹಾರಾಡಬೇಕು.

ಜನರು : ಭಾರತ್ ಮಾತಾಕೀ....... ಜೈ, ಒಂದೇ ಮಾತರಂ.......

ಭಾರತಮಾತೆ : ಆರೋಗ್ಯ ಸುಧಾರಿಸಲು ಸಿಂಗಪುರಕ್ಕೆ ಹಡಗು ಪ್ರಯಾಣ ಮಾಡಿ ಬಂದಾಗ ಈತನಿಗೆ ಆದರದ ಸ್ವಾಗತ ದೊರೆಯಿತು.

ಜತೀಂದ್ರ : ಬರ್ಮಾ ಭಾರತದಿಂದ ಬೇರ್ಪಡಿಸಿದ್ದೇ ಆದರೆ ಸ್ವಾತಂತ್ರ್ಯ ಹೋರಾಟಕ್ಕೆ ಧಕ್ಕೆ ಆಗುತ್ತದೆ. ಸ್ವಾತಂತ್ರ್ಯ ಪಡೆಯಲು ಬರ್ಮೀಯರು ಪ್ರತ್ಯೇಕವಾಗಿ ಬ್ರಿಟಿಷರ ಜೊತೆ ಹೋರಾಡಬೇಕಾಗುತ್ತದೆ. ಆಗ ಸ್ವಾತಂತ್ರ್ಯ ದೊರೆಯುವುದು ಕಷ್ಟ. ಆದ್ದರಿಂದ ಇಂಗ್ಲೀಷರ ಒತ್ತಡಕ್ಕೆ ಮಣಿದು ಭಾರತದಿಂದ ಬೇರ್ಪಡಲು ಒಪ್ಪದಿರಿ.

(ಕರತಾಡನ)

ನಿರೂಪಕ : ಈ ಭಾಷಣವನ್ನು ಸರ್ಕಾರದ ಗುಪ್ತದಳದವರು ಬರೆದುಕೊಂಡು, ಇವರನ್ನು ಬಂಧಿಸಿ ಕಾಲಿಸ್ ಎಂಬ ನ್ಯಾಯಾಧೀಶರ ಮನೆಗೆ ಕರೆದು ತಂದರು.

ನ್ಯಾಯಾಧೀಶ : ಜತೀಂದ್ರರೇ.... ನಾಳೆ ಬೆಳಗ್ಗೆ ಹನ್ನೊಂದು ಗಂಟೆಗೆ ನಿಮ್ಮ ವಿಚಾರಣೆ ಇದೆ. ನೀವು ಜಾಮೀನಿನ ಮೇಲೆ ಬಿಡುಗಡೆಗೆ ಏಕೆ ಒಪ್ಪಿಕೊಳ್ಳಬಾರದು?

ಜತೀಂದ್ರ : ಭಾರತೀಯ ಸತ್ಯಾಗ್ರಹಿಗಳ ವಿಚಾರಣೆ ನಡೆಸಲು ಬ್ರಿಟಿಷ್ ನ್ಯಾಯಾಲಯಗಳಿಗೆ ಅಧಿಕಾರವಿಲ್ಲ. ಜಾಮೀನು ಕೊಟ್ಟು ಬಿಡುಗಡೆ ಹೊಂದಿದರೆ ನಿಮ್ಮ ನ್ಯಾಯಾಲಯಗಳಿಗೆ ಮನ್ನಣೆ ಕೊಟ್ಟಂತೆ. ಆದ್ದರಿಂದ ಇದಕ್ಕೆ ನಾವ್ಯಾರೂ ಒಪ್ಪುವುದಿಲ್ಲ.

ಭಾರತಮಾತೆ : ಸರ್ಕಾರದ ವಿರುದ್ಧ ಪ್ರಚೋದನೆ ಮಾಡಿದನೆಂದು ಹತ್ತು ದಿನಗಳ ಸೆರೆಮನೆ ವಾಸವಾಯಿತು.

ನಿರೂಪಕ : ೧೯೩೦ರ ಮಾರ್ಚಿ ೧೨ರಲ್ಲಿ ಗಾಂಧಿಯವರು ಕಾಯಿದೆ ಭಂಗ ಚಳವಳಿ ಉದ್ಘಾಟಿಸಿದರು. ಸರ್ಕಾರ ಬಹಿಷ್ಕರಿಸಿದ ಪುಸ್ತಕಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಓದುವುದು, ಈ ಕಾರ್ಯಕ್ರಮಕ್ಕೆ ಜತೀಂದ್ರರು ಆರೋಗ್ಯವಿಲ್ಲದಿದ್ದರೂ ಯಾರ ಮಾತನ್ನೂ ಕೇಳದೆ ಚಳವಳಿ ನಡೆಸಿ ಏಪ್ರಿಲ್ ೧೨ರಂದು ಬಂಧಿತರಾದರು.

ಭಾರತಮಾತೆ : ಜಲಿಯನ್ ವಾಲಾಬಾಗ್‌ನಲ್ಲಿ ನಿಷೇದಾಜ್ಞೆ ಉಲ್ಲಂಘಿಸಿದುದಕ್ಕೆ ಒಂದು ವರ್ಷ ಸೆರೆಮನೆಯಾಯಿತು ನನ್ನ ಪುತ್ರ ಜತೀಂದ್ರನಿಗೆ. ಗಾಂಧಿ ಲಾರ್ಡ್ ಇರ್ವಿನ್ ಇಬ್ಬರ ಒಪ್ಪಂದವಾದ ಮೇಲೆ ಜತೀಂದ್ರನ ಬಿಡುಗಡೆಯಾಯಿತು. ಬಿಡುವಿಲ್ಲದ ಕೆಲಸದಿಂದ ನನ್ನ ಪುತ್ರನ ಆರೋಗ್ಯ ಕೆಟ್ಟಿತು. ಮತ್ತೆ ಚಳವಳಿಯಲ್ಲಿ ಬಂಧನ! ೧೯೩೩ರಲ್ಲಿ ಈತನನ್ನು ಕಲ್ಕತ್ತೆಯಿಂದ ರಾಂಚಿಗೆ ಕರೆದೊಯ್ದು ಗೃಹ ಬಂಧನದಲ್ಲಿಟ್ಟರು, ಒಂದೂವರೆ ವರ್ಷ. ೧೯೩೩ರಲ್ಲಿ ರಕ್ತದ ಒತ್ತಡ ಹೆಚ್ಚಾಗಿ ಜುಲೈ ೨೩ರಂದು ಬೆಳಗಿನ ಜಾವ ಈ "ವಂಗ ಕೇಸರಿ", "ದೇಶಪ್ರಿಯ" ಇನ್ನಿಲ್ಲವಾದ!

(ಶೋಕ ಸಂಗೀತ)

*

# ಸುಬ್ರಹ್ಮಣ್ಯ ಭಾರತಿ

ಸುಬ್ರಹ್ಮಣ್ಯ ಭಾರತಿ:

ತಾಯೇ ನಿವೇದಿತಾ-
ಪ್ರೇಮಕ್ಕೆ ಮೀಸಲಾದ ದೇವಾಲಯ ನೀನು
ನನ್ನ ಆತ್ಮದ ಕತ್ತಲೆಯನ್ನು ಚದುರಿಸುವ ಸೂರ್ಯ ನೀನು
ನಮ್ಮ ಬಾಳಿನ ಬೆಂಗಾಳಾಗಿ ಮಳೆ ನೀನು
ನಿಸ್ಸಹಾಯಕರಿಗೂ ದಾರಿ ತಪ್ಪಿದವರಿಗೂ ನೆರವಾಗುವವಳು ನೀನು
ದಿವ್ಯಾನುಗ್ರಹಕ್ಕೆ ನಿವೇದನೆ ನೀನು
ಪರಮ ಸತ್ಯದ ಅಗ್ನಿ ಕಣ ನೀನು
ನಮಸ್ಕರಿಸುವೆನು ನಿನಗೆ.

ನಿರೂಪಕ : ಇದು ಸ್ವಾಮಿ ವಿವೇಕಾನಂದರ ಶಿಷ್ಯೆ ನಿವೇದಿತಾರವರಿಗೇ ತಮಿಳು ಕವಿ ಸುಬ್ರಹ್ಮಣ್ಯ ಭಾರತಿ ಅವರು ಅರ್ಪಿಸಿದ ಕವನ. ಈ ಪದ್ಯ ಬರೆಯಲು ಸ್ಫೂರ್ತಿಯಾದವರೂ ಹೇಗೆ ಬಂತು? ನಿವೇದಿತಾ ಮಹಿಳೆಯರಿಗೆ ಶಿಕ್ಷಣ ಕೊಡುವುದರಲ್ಲಿ ಮೊದಲಿಗರಾಗಿದ್ದರು. ಆಕೆಯನ್ನು ಭಾರತಿ ಕಾಣುವ ಅವಕಾಶ ಬಂದೊದಗಿತು. ಒಮ್ಮೆ -

ಸು.ಭಾರತಿ : (ಸ್ವಗತ) ಆಕೆಯನ್ನು ನೋಡುತ್ತಿದ್ದರೆ ಶಕ್ತಿಮಾತೆಯ ದರ್ಶನವಾಗುವಂತಾಗುತ್ತಿದೆ. ನಮಸ್ಕಾರ ತಾಯಿ.......

ನಿವೇದಿತಾ : ಯಾರು?

ಭಾರತಿ : ನನ್ನ ಹೆಸರು ಸುಬ್ರಹ್ಮಣ್ಯ ಭಾರತಿ; ತಾವು ಇಂಗ್ಲೀಷ್ ಜನಾಂಗಕ್ಕೆ ಸೇರಿದ್ದರೂ ರಾಮಕೃಷ್ಣ ಪರಮಹಂಸರ ಪಂಥದ ಮೊತ್ತ ಮೊದಲ ಸನ್ಯಾಸಿನಿಯೇ ಆಗಿರುವಿರಿ. ತಮ್ಮ ದರ್ಶನ ಭಾಗ್ಯ ಇಂದು ದೊರೆತದ್ದು ನಿಜಕ್ಕೂ ಸಂತೋಷ ತಂದಿದೆ. ನಿಮ್ಮ ಬಗೆಗೆ ಕೇಳಿದ್ದೆ. ಇಂದು ನೋಡುವ ಅವಕಾಶ ದೊರೆಯಿತು. ನಿಮ್ಮೊಡನೆ ಮಾತನಾಡುವುದು ಇನ್ನೂ ಸಂತೋಷ ತಂದಿದೆ.

ನಿವೇದಿತಾ : ನನಗೂ ಅಷ್ಟೇ ನಿನ್ನೊಡನೆ ಮಾತನಾಡಲು ಸಂತೋಷವಾಗುತ್ತದೆ.

ಭಾರತಿ : ನಾನು ಸಾಹಿತ್ಯದಲ್ಲಿ ಅದರಲ್ಲೂ ತಮಿಳು ಕವಿತೆ, ಲೇಖನ ಬರೆಯುವುದರಲ್ಲಿ ಆಸಕ್ತಿ ಹೊಂದಿದ್ದೇನೆ.

ನಿವೇದಿತಾ : ಬಹಳ ಒಳ್ಳೆಯದು.

ಭಾರತಿ : ತಮ್ಮಿಂದ ಆಶೀರ್ವಾದ ಪಡೆಯಲು ಬಂದೆ ತಾಯಿ.

ನಿವೇದಿತಾ : ನಿನ್ನ ಮನಸ್ಸಿನ ಸಂಕೋಚಗಳನ್ನೆಲ್ಲಾ ಕಳಚಿಹಾಕು. ಜಾತಿ, ಕುಲ- ಜನ್ಮ ಮುಂತಾದುವುಗಳ ಬರ್ಬರ ಭೇದ ಭಾವಗಳನ್ನು ಮರೆತು ಬಿಡು. ನಿನ್ನ ಹೃದಯ ಸಿಂಹಾಸನದಲ್ಲಿ ಪ್ರೇಮವನ್ನು ಸ್ಥಾಪಿಸು. ಆಗ ನೀನು ಇತಿಹಾಸದ ಪುಟಗಳಲ್ಲಿ ಅಡಕವಾಗಿರುವ ದಿವ್ಯಮೂರ್ತಿಯೇ ಆಗುವೆ. ನಿನ್ನ ಕಣ್ಣುಗಳ ಅಸಾಧಾರಣ ಲಕ್ಷಣ ಭವಿಷ್ಯದ ಮಹತ್ವವನ್ನೂ ಹೇಳುತ್ತಿದೆ.

ಭಾರತಿ : ತಮ್ಮ ಮುಂದೆ ನಾನು ಏನೂ ಅಲ್ಲ ತಾಯೆ. ನಿಮ್ಮ ಮುದ್ದಿನ ಮಗು ನಾನು.

ನಿವೇದಿತಾ : ನಿನಗೆ ಮದುವೆ ಆಗಿದೆಯೇ?

ಭಾರತಿ : ಆಗಿದೆ ತಾಯೆ, ಒಬ್ಬಳು ಮಗಳೂ ಇದ್ದಾಳೆ.

ನಿವೇದಿತಾ : ಮತ್ತೆ ಅವರನ್ನೇಕೆ ಕರೆತರಲಿಲ್ಲ?

ಭಾರತಿ : ನಮ್ಮ ಪದ್ಧತಿಯಲ್ಲಿ ಹೆಂಡತಿಯನ್ನು ಇಂಥ ಸಭೆಗಳಿಗೆ ಕರೆತರುವಂತಿಲ್ಲ. ಇಷ್ಟರ ಮೇಲೆ ಕಾಂಗ್ರೆಸ್ ವಿಷಯ ಅವಳಿಗೇನು ತಿಳಿಯುತ್ತದೆ?

ನಿವೇದಿತಾ : ಸಮಾಜದ ಅರ್ಧಪಾಲನ್ನೇ ದಾಸ್ಯದಲ್ಲಿಟ್ಟಿರುವೆ, ಇನ್ನರ್ಧ ಪಾಲು ಹೇಗೆ ತಾನೇ ಸ್ವಾತಂತ್ರ್ಯವನ್ನು ಗಳಿಸಬಲ್ಲದು? ಆದದ್ದಾಗಿ ಹೋಯಿತು. ಇನ್ನು ಮುಂದಾದರೂ ನೀನು ಆಕೆಯನ್ನು ಅನ್ಯಥಾ ಭಾವಿಸದೆ, ನಿನ್ನ ಎಡಗೈಯಂತೆ ಹಿಡಿದು, ನಿನ್ನ ಹೃದಯದಲ್ಲಿ ಧರಿಸಿ ದೇವಿಯೆಂದು ಸ್ತೋತ್ರ ಮಾಡು.

ಭಾರತಿ : ಹಾಗೆಯೇ ನಡೆದುಕೊಳ್ಳುವೆ ತಾಯೆ. ತಮ್ಮನ್ನು ನೋಡಿದುದು ನನಗೆ ಶಕ್ತಿಯ ಸಾಕ್ಷಾತ್ಕಾರವಾಯಿತು.

ನಿರೂಪಕ : ಆಕೆ ಆಡಿದ ಮಾತು ಸುಬ್ರಹ್ಮಣ್ಯ ಭಾರತಿಗೆ ಭಾರತದ ಸಾಮಾಜಿಕ ಪುನರುಜ್ಜೀವನದ ಹಾದಿಯನ್ನೇ ತೆರೆಯಿತು. ರಾಜಕೀಯ ಉಗ್ರಪಂಥಕ್ಕೆ ಸೇರುವಂತೆ ಪ್ರೇರೇಪಿಸಿತು! ಭಾರತಮಾತೆಯ ಶೃಂಖಲೆಗಳನ್ನು ಮುರಿದುಹಾಕುವುದರಲ್ಲಿ ನಿರತರಾದವರ ತಂಡವನ್ನು ಸೇರಬೇಕೆಂದು ನಿರ್ಧರಿಸಿದರು. ಶ್ರೀಕೃಷ್ಣ ಅರ್ಜುನನಿಗೆ ವಿಶ್ವರೂಪ ತೋರಿಸಿ ಆತ್ಮ ವಿದ್ಯೆಯನ್ನು ಬೋಧಿಸಿದ ಹಾಗೆ ನಿವೇದಿತಾ ಭಾರತಮಾತೆಯ ದರ್ಶನ ಮಾಡಿಸಿ ಭಾರತಿಯಲ್ಲಿ ರಾಷ್ಟ್ರಪ್ರೇಮ ತುಂಬಿದರು. ಆಕೆಯ ಪದತಲಕ್ಕೆ ತನ್ನ ಪುಸ್ತಕವೊಂದನ್ನು ಅರ್ಪಿಸಿದರು.

(ಸಂಗೀತ)

ಭಾರತಮಾತೆ : ಮದ್ರಾಸು ರಾಜ್ಯದ ತಿರುನಲ್ವೇಲಿ ಜಿಲ್ಲೆಯ ಯಟ್ಟಿಯಾಪುರದ ಚಿನ್ನಸ್ವಾಮಿ ಅಯ್ಯರ್, ಮತ್ತು ಲಕ್ಷ್ಮಿಯವರ ಪುತ್ರನಾಗಿ ೧೧-೧೨-೧೮೮೨ರಲ್ಲಿ ಜನಿಸಿದವನೇ ಸುಬ್ರಹ್ಮಣ್ಯ. ಮುದ್ದಾಗಿ ಆತನನ್ನು ಸುಬ್ಬಯ್ಯ ಎಂದು ಕರೆಯುತ್ತಿದ್ದರು. ಈತ ವ್ಯಾಸಂಗಕ್ಕಿಂತ ಸಾಹಸಗಳಲ್ಲಿ ಹೆಚ್ಚಿನ ಒಲವನ್ನು ತೋರುತ್ತಿದ್ದ. ಚಿಕ್ಕ ವಯಸ್ಸಿನಲ್ಲಿ ತಮಿಳಿನಲ್ಲಿ ಆಶು ಕವಿತೆಯನ್ನು ಕಟ್ಟುತ್ತಿದ್ದ. ಅಲ್ಲಿನ ರಾಜ ಸುಬ್ಬಯ್ಯನ ಅದ್ಭುತ ಪ್ರತಿಭೆಯನ್ನು ಮೆಚ್ಚಿಕೊಂಡಿದ್ದ. ಒಮ್ಮೆ ಭಾರತಿಗೂ ಆತನ ಮಿತ್ರನಿಗೂ ರಾಜನ ಸಮ್ಮುಖದಲ್ಲಿ "ವಿದ್ಯಾಭ್ಯಾಸ"ದ ಬಗೆಗೆ ಚರ್ಚೆ ಆಯಿತು. ಸುಬ್ಬಯ್ಯ-

ಭಾರತಿ : ವಿದ್ಯೆ ಅಂದ್ರೆ ಸುಲಭವಾಗಿ ಸಿಗುವಂಥದ್ದಲ್ಲ. ಒಂದು ಚಿಕ್ಕ ಮಗುವಿನಿಂದಲೂ ನಾವು ಕಲಿಯಬೇಕಾದದ್ದು ಬೇಕಾದಷ್ಟಿದೆ. ಶಾಲೆಯ ಪಾಠದಲ್ಲಿ ಮುಂದಾಗಿದ್ದರೆ ಅಲ್ಲ, ಎಲ್ಲದರಲ್ಲೂ ಮುಂದಾಗಿರಬೇಕು. ಬೇರೆ ಚಟುವಟಿಕೆಗಳಲ್ಲೂ ಭಾಗವಹಿಸಿ ತನ್ನ ಪ್ರತಿಭೆಯನ್ನು ತೋರಿಸಬೇಕು. "ಮಕ್ಕ ಕಾ ಮಕ್ಕಿ. ಇಕ್ಕೂ ಮುಂದೊಂದು ಚುಕ್ಕಿ" ಎಂದಂತಲ್ಲ. ಆಳವಾದ ಅಭ್ಯಾಸ, ವಿದ್ಯಾರ್ಥಿಗಳಿಗೆ ಅಗತ್ಯ.....

ಪಂಡಿತ : ಭೇಷ್..... ಭೇಷ್...... ಹುಡುಗ ಬಹಳ ಚುರುಕಾಗಿದ್ದಾನೆ. ಈತ ನಿಜವಾಗಲೂ ಬುದ್ಧಿವಂತ...... ಈತನನ್ನು ಈ ಹೊತ್ತಿನಿಂದ 'ಭಾರತಿ' ಎಂದು ಕರೆಯಿರಿ.

(ಕೈ ಚಪ್ಪಾಳೆ)

ಭಾರತಮಾತೆ : ಅಂದಿನಿಂದ ಸುಬ್ಬಯ್ಯ ಸುಬ್ರಹ್ಮಣ್ಯ ಭಾರತಿಯಾದ. ತಂದೆ ಸತ್ತ ಮೇಲೆ ತಾಯಿ ತವರಿಗೆ ಹೊರಟಳು. ಸಂಸಾರಹೊತ್ತ ಸುಬ್ರಹ್ಮಣ್ಯ ದಿಕ್ಕು ಕಾಣದಾದಾಗ ಆತನ ಚಿಕ್ಕಮ್ಮ ವಾರಣಾಸಿಯಲ್ಲಿದ್ದವಳಿಗೆ ತಿಳಿದು, ಕುಪ್ಪಮ್ಮಾಳ್ ಈತನನ್ನು ಕರೆಸಿಕೊಂಡಳು. ಆಗಿನ ಕಾಲದಲ್ಲಿ ಅಲ್ಲಿಗೆ ಇವರು ನಡೆದೇ ಹೋದರು. ಅಲ್ಲಿ ಅವನನ್ನು ವಿದ್ಯಾಭ್ಯಾಸ ಮುಂದುವರಿಸುವಂತೆ ಪ್ರೋತ್ಸಾಹಿಸಿದಳು. ಅಲಹಾಬಾದ್ ವಿಶ್ವವಿದ್ಯಾಲಯಕ್ಕೆ ಸೇರಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆಯಾದ. ೧೯೦೪ರಲ್ಲಿ ಉಪಾಧ್ಯಾಯ ವೃತ್ತಿಗೆ ಸೇರಿದ. ಮುಂದೆ ಮದ್ರಾಸಿನಲ್ಲಿ "ಸ್ವದೇಶ ಮಿತ್ರನ್" ಎಂಬ ತಮಿಳು ಪತ್ರಿಕೆಯಲ್ಲಿ ಸಹಾಯಕ ಸಂಪಾದಕನಾಗಿ ಸೇರಿದ. ಈ ಪತ್ರಿಕೆಯ ಸಂಪಾದಕರಾದ ಸುಬ್ರಹ್ಮಣ್ಯ ಅಯ್ಯರ್ ಈತನ ರಾಜಕೀಯ ಜೀವನಕ್ಕೆ ಕಾರಣರಾದರು. ದೇಶಭಕ್ತಿ ಗೀತೆಗಳನ್ನು ಬರೆದ-

(ಹಾಡು)

ನಿರೂಪಕ : ವಿ. ಕೃಷ್ಣಸ್ವಾಮಿ ಅಯ್ಯರ್ ಅವರು ಮದ್ರಾಸಿನ ಪ್ರಮುಖ ನ್ಯಾಯವಾದಿಗಳು. ಗೋಖಲೆಯವರ ಮಿತ್ರರು, ಸೌಮ್ಯವಾದಿಗಳು. ಅಲ್ಲಿಗೆ ಸುಬ್ರಹ್ಮಣ್ಯ ಭಾರತಿಯನ್ನು ನಟೇಶನ್ ಕರೆತಂದ, ಪರಿಚಯಿಸಿದ. ವಂದೇ ಮಾತರಂ, ನಮ್ಮ ಭಾರತನಾಡು ಮುಂತಾದ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡಿದ. ಅದನ್ನು ಕೇಳಿ ಅವರು ಸಂತೋಷಗೊಂಡರು. ಅವರು ನೂರು ರೂಪಾಯಿ ಕೊಟ್ಟು ತಾವೇ ೧೯೦೭ರಲ್ಲಿ ೧೫,೦೦೦ ಪ್ರತಿಗಳನ್ನು ಪ್ರಕಟಿಸಿ ಉಚಿತವಾಗಿ ಹಂಚಿದರು. ಮುಂದೆ ರಾಜಕೀಯ ಸಭೆಗಳಲ್ಲಿ ಸುಬ್ರಹ್ಮಣ್ಯ ಭಾರತಿ ಹಾಡುವವನಾದ.

(ಹಾಡು)

ನಿರೂಪಕ : ಸ್ವಾತಂತ್ರ್ಯ, ದೇಶಭಕ್ತಿ, ಪ್ರಜಾರಾಜ್ಯಗಳ ಕಲ್ಪನೆಗಳನ್ನು ತಮಿಳುನಾಡಿನ ಕೋಟ್ಯಂತರ ಮಂದಿಯ ಮನಸ್ಸಿನಲ್ಲಿ ಹರಡುವುದರಲ್ಲಿ ಈ ಕವನಗಳು ತುಂಬಾ ಯಶಸ್ವಿಯಾದವು. ಸುಬ್ರಹ್ಮಣ್ಯ ಅಯ್ಯರ್‌ರಂಥ ಸೌಮ್ಯ ವ್ಯಕ್ತಿಗಳನ್ನು ಬ್ರಿಟಿಷ್ ಸರಕಾರ ಬಂಧಿಸಿತು. ಪೋಲೀಸಿನವರು ಆತನ ಕೈಯಲ್ಲಿ ಒಂದು ಪತ್ರ ಕೊಡಲು-

ಭಾರತಿ : ಇದು ನನಗಲ್ಲ, ನಾನು ಸಂಪಾದಕನಲ್ಲ. ಅವರ ಕೈಗೇ ಕೊಡಿ.

ಮಿತ್ರ : ಇನ್ನು ಕೆಲವು ದಿನಗಳಲ್ಲೇ ಸಂಪಾದಕರಿಗೆ ಬಂದಂತೆ ಆಜ್ಞೆ ಬರಬಹುದು.

ಭಾರತಿ : ಅದಕ್ಕೆ ಈಗ ಏನು ಮಾಡುವುದು ಅನ್ನೀಯ?

ಮಿತ್ರ : ಪಾಂಡಿಚೇರಿಗೆ ಹೋಗಿ ಸುರಕ್ಷಿತವಾಗಿರುವುದು ಉಚಿತ. ಈಗ ನಿನಗೆ ಆರೋಗ್ಯ ಬೇರೆ ನೆಟ್ಟಗಿಲ್ಲ.

ಭಾರತಿ : ಆದರೆ ಇದು ನಾನು ತಮಿಳಗರಿಗೆ ಮಾಡುವ ಅನ್ಯಾಯವಾಗುತ್ತದೆ. ಬೇಡ. ಓಡಿಹೋದ ಹೇಡಿ ಎನ್ನುತ್ತಾರೆ ಜನರು.

ಮಿತ್ರ : ನೀನು ಹೀಗೆ ಹಠ ಮಾಡುವುದು ಸರಿಯಲ್ಲ. ಹೋಗಲೇಬೇಕು. ವೇಷ ಬದಲಾಯಿಸಿಕೊಂಡು ಇಂದೇ ರೈಲಿಗೆ ಹತ್ತು.... ಇಷ್ಟೆಲ್ಲಾ ಜನರು ಹೇಳಿದ ಮೇಲೆ ಇಲ್ಲ ಎನ್ನಬೇಡ. ಇದರಿಂದ ಅಪಾಯ ಹೆಚ್ಚು.

(ರೈಲು)

ನಿರೂಪಕ : ಅರವಿಂದರು, ಅಯ್ಯರ್, ಶ್ರೀನಿವಾಸಾಚಾರ್ಯರೊಡನೆ ಭಾರತಿ ಸೇರಿ, ವೇದಾಂತ, ಯೋಗಗಳ ಬಗೆಗೆ ಗಂಟಾನುಗಟ್ಟಲೆ ಚರ್ಚಿಸುತ್ತಿದ್ದರು. ಇಲ್ಲಿ ಸುಬ್ರಹ್ಮಣ್ಯ ಭಾರತಿಯಿಂದ "ಪಾಂಚಾಲಿ ಶಪಥಂ" ಎಂಬ ಮಹಾಕಾವ್ಯ ರಚನೆ ಆಯಿತು. ಅರವಿಂದರ ಸಂಪಾದಕತ್ವದ 'ಆರ್ಯ' ಪತ್ರಿಕೆ,

ಸುಬ್ರಹ್ಮಣ್ಯ ಶಿವನ್ ಸಂಪಾದಿಸುತ್ತಿದ್ದ "ಜ್ಞಾನ ಭಾನು" ಪತ್ರಿಕೆಗೆ ಲೇಖನಗಳನ್ನು ಬರೆದು ಕಳುಹಿಸುತ್ತಿದ್ದರು. ಎ.ರಾಮಸ್ವಾಮಿ ಅಯ್ಯಂಗಾರ್ ಈತ ಪತ್ರಿಕೆಗೆ ಲೇಖನ ಬರೆಯಲಿ ಬಿಡಲಿ ನಿವೃತ್ತಿ ವೇತನ ಕಳುಹಿಸುತ್ತಿದ್ದರು. ಕೈನಲ್ಲಿದ್ದ ಹಣವನ್ನು ಯಾರಿಗಾದರೂ ಕೊಟ್ಟುಬಿಡುತ್ತಿದ್ದರು. ಒಮ್ಮೆ ಆತನ ಹೆಂಡತಿ-

ಚಲ್ಲಮ್ಮ : ಏನೂ ಅಂದ್ರೆ ನೀವು ಹೀಗೆ ಬಂದ ಹಣಾನೆಲ್ಲಾ ಅವರಿವರಿಗೆ ಕೊಟ್ಟುಬಿಟ್ರೆ ನಮ್ಮ ಗತಿ?

ಭಾರತಿ : ಪಾಪ, ಏನು ಮಾಡುವುದು. ಆತನಿಗೆ ಬೇಕಾಗಿತ್ತಂತೆ; ಕೊಟ್ಟು ಬಿಟ್ಟೆ....... ಚಲ್ಲಾ.......

ಚಲ್ಲಮ್ಮ : ನೋಡಿ ಆ ಗುಬ್ಬಿಗಳು ಅಕ್ಕಿಯನ್ನೆಲ್ಲಾ ತಿಂದುಬಿಡ್ತಾ ಇವೆ. ನೀವು ಸಂತೋಷವಾಗಿ ನೋಡ್ತಾ ಇದ್ದೀರಲ್ಲಾ.

ಭಾರತಿ : ಆ ಗುಬ್ಬಿಗಳಿಗೆ ಎಷ್ಟು ಸಂತೋಷವಾಗಿದೆ ನೋಡು.

ಚಲ್ಲಮ್ಮ : ಮೂರು ವರ್ಷದಿಂದ ಕಷ್ಟವನ್ನೇ ಅನುಭವಿಸ್ತಾ ಇದ್ದೀರಿ. ಮಗುವಿಗೆ ಔಷಧಕ್ಕೂ ಕಾಸಿಲ್ಲ.

ಭಾರತಿ : ಯಾವುದಕ್ಕೂ ಹೆದರಬಾರದು.

ಚಲ್ಲಮ್ಮ : ಕಾಲಿನ ಆಣಿ ನೋವು ಕೊಡ್ತಿದ್ರೂ, ಬಡತನ ಕಿತ್ತು ತಿಂದ್ರೂ ಹಾಸ್ಯ ಪ್ರವೃತ್ತಿಯಲ್ಲೇ ಇದ್ದು ನೋವನ್ನೂ ಮರೀತಿದ್ದೀರಿ.

(ಶೋಕ ಸಂಗೀತ)

ಭಾರತಮಾತೆ · ಭಾರತಿಗೆ ಬದುಕು ಬೇರೆಯಲ್ಲ, ಕವಿತೆ ಬೇರೆಯಲ್ಲ. ಅವನ ಪಾಲಿಗೆ ಕವಿತೆ ಪ್ರತ್ಯಕ್ಷ ದೇವತೆ!

(ಹಾಡು)

ನಿರೂಪಕ : ಮೊದಲನೇ ವಿಶ್ವಯುದ್ಧ ಮುಗಿದ ಹತ್ತು ದಿನಗಳ ಒಳಗಾಗಿ ಅವನು ಪಾಂಡಿಚೇರಿಯನ್ನು ಬಿಟ್ಟು ತನ್ನ ಹೆಂಡತಿಯ ಊರಾದ ಕಡಾಮಮ್ಮಿಗ್ರೆ ಹೋದ. ಅಲ್ಲಿ ಅವನನ್ನು ಬಂಧಿಸಲಾಯಿತು. ಅಲ್ಲಿನ ನ್ಯಾಯಾಧಿಕಾರಿ ಕಡಲೂರಿನ ಸಬ್ ಜೈಲಿನಲ್ಲಿಡುವಂತೆ ಆಜ್ಞೆ ಮಾಡಿದ. ಅವನ ಜಾಮೀನಿನ ಅರ್ಜಿ ತಿರಸ್ಕೃತವಾಯಿತು, ಖಾಯಿಲೆಯಿಂದ ನಿಶ್ಶಕ್ತನಾಗಿದ್ದ. ಸ್ವದೇಶಿ ಪತ್ರಿಕೆಯ ಎ. ರಂಗಸ್ವಾಮಿ ಅಯ್ಯಂಗಾರ್ ಮಧ್ಯ ಪ್ರವೇಶಿಸಿದರು. ಇನ್ನು ಈ ರೀತಿ ರಾಜಕೀಯ ಕೆಲಸಗಳಿಗೆ ಕೈಹಾಕುವುದಿಲ್ಲ ಎಂಬ ಮುಚ್ಚಳಿಕೆ ಬರೆದುಕೊಟ್ಟರೆ ಬಿಡುವೆ ಎಂದ. ಈತ ಒಪ್ಪಲಿಲ್ಲ. ಇಬ್ಬರಿಗೂ ರಾಜಿ ಮಾಡಿಸಿ ಬಿಡುಗಡೆ ಮಾಡಿಸಿದರು ರಂಗಸ್ವಾಮಿ ಅಯ್ಯಂಗಾರ್.

(ಸಂಗೀತ)

ಭಾರತಮಾತೆ : ಹೆಂಡತಿ ಕೈ ಹಿಡಿದು ಹೋದನೆಂದು ಹಳ್ಳಿಯವರು ಊರಿಂದ ಹೊರಗೆ ಅಟ್ಟಿದರು. ಇಲ್ಲಿಂದ ಮದ್ರಾಸು, ತಮಿಳುನಾಡುಗಳಿಗೆ ಭಾಷಣಕ್ಕೆ ಹೋಗಿ ಬರುತ್ತಿದ್ದ. ೧೯೨೦ರಲ್ಲಿ ಮತ್ತೆ ಸ್ವದೇಶಿ ಮಿತ್ರನ್ ಪತ್ರಿಕೆಗೆ ಸೇರಿದ. ಪಾರ್ಥಸಾರಥಿ ದೇವಾಲಯಕ್ಕೆ ಹಣ್ಣುಕಾಯಿ ಹಿಡಿದು-

ಭಾರತಿ : ಅಣ್ಣಾ ನಿನಗೆ ಹಣ್ಣು ಕಾಯಿ ತಂದಿರುವೆ......

(ಆನೆ ಶಬ್ದ ಸೊಂಡಲಿನಲ್ಲಿ ಹೊಡೆಯುವುದು. ಅಯ್ಯೋ ಎಂಬ ಕೂಗು)

ಭಾರತಮಾತೆ : ಸುಬ್ರಹ್ಮಣ್ಯ ಭಾರತಿ ಜ್ಞಾನ ತಪ್ಪಿ ಬಿದ್ದ. ಮಿತ್ರ ಕುವಲೈ ಕಣ್ಣನ್, ಈ ಸುದ್ದಿ ತಿಳಿದು ಓಡಿ ಬಂದು ತನಗೆ ಆಗುವ ಅಪಾಯವನ್ನೂ ಲೆಕ್ಕಿಸದೆ ಎತ್ತಿ ತಂದು ರಾಯಪೇಟಾದ ಜನರಲ್ ಆಸ್ಪತ್ರೆಗೆ ಸೇರಿಸಿದ. ಸ್ವಲ್ಪ ದಿನಗಳಲ್ಲಿ ಚೇತರಿಸಿಕೊಂಡ. ಆಮೇಲೆ ಆಮಶಂಕೆಯಾಗಿ ತ್ರಾಣ ಕುಗ್ಗಿತು. ಔಷಧ ತೆಗೆದುಕೊಳ್ಳದೆ ಪ್ರಜ್ಞೆತಪ್ಪಿ ಬಿದ್ದ. ೧೯೨೧ ಸೆಪ್ಟೆಂಬರ್ ೧೨ರ ಬೆಳಗಿನ ಜಾವದಲ್ಲಿ ಸುಬ್ರಹ್ಮಣ್ಯ ಭಾರತಿ ಇಹವನ್ನು ತ್ಯಜಿಸಿದ.

ನಿರೂಪಕ : ತಮಿಳುನಾಡಿನ ಕೋಗಿಲೆ ಸುಬ್ರಹ್ಮಣ್ಯ ಭಾರತಿ ಕವನಗಳಿಂದ ದೇಶಭಕ್ತಿಯ ಸ್ಫೂರ್ತಿ ಮೂಡಲು ಕಾರಣನಾದ. ಸ್ವತಃ ತಾನೂ ದೇಶಭಕ್ತನಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಹೆಗಲು ಕೊಟ್ಟ. ಮಹಾ ಕವಿಯಾಗಿ ಮೆರೆದ. ಇಂದಿಗೂ ತಮಿಳುನಾಡಿನ ಜನರ ಮನದಲ್ಲಿ ಅಚ್ಚೊತ್ತಿ ಉಳಿದಿದ್ದಾನೆ. ಆತನ ಕವಿತೆಗಳನ್ನು ಜನರು ಹಾಡಿ ನಲಿಯುತ್ತಿದ್ದಾರೆ.

(ಗೀತೆ)

*

# ರಾಸ ಬಿಹಾರಿ ಬೋಸ್

ಭಾರತಮಾತೆ : ವಿದೇಶಿಯರ ದಬ್ಬಾಳಿಕೆಯ ವಿರುದ್ಧ ಅನೇಕರು ಇಲ್ಲೇ ಇದ್ದು ಹೋರಾಡಿದುದು ಒಂದು ರೀತಿಯಾದರೆ, ಬೇರೆ ದೇಶದಲ್ಲಿದ್ದುಕೊಂಡು ಮಾಡಿದವರು ಹಲವರು. ಅವರಲ್ಲಿ ರಾಸಬಿಹಾರಿ ಬೋಸ್ ಸಹ ಒಬ್ಬ. ಪೂರ್ವ ಏಷ್ಯಾದಲ್ಲೇ "ಭಾರತದ ಸ್ವಾತಂತ್ರ್ಯ ಹೋರಾಟ ಪಿತಾಮಹ" ಎಂದು ಸುಭಾಷ್ ಬಣ್ಣಿಸಿದ ಧೀರ. ಬ್ರಿಟಿಷ್ ವೈಸರಾಯನ ಮೇಲೆ ಬಾಂಬ್ ಎಸೆಯುವ ಧೈರ್ಯ ಮಾಡಿದ ನಾಯಕ. ಜಪಾನಿನಲ್ಲಿದ್ದುಕೊಂಡು ಸ್ವಾತಂತ್ರ್ಯ ಹೋರಾಟ ಮುಂದುವರಿಸಿದ ಧೀರ. ಸಾಹಸ ಕ್ರಾಂತಿಕಾರಿ ಜೀವನ ನಡೆಸಿದ ವೀರ! ಈಗ ಆತನ ಕಥೆ ಹೇಳುವೆ. ನನ್ನ ಕಥೆ ಹೇಳುವೆ.

(ಸಂಗೀತ)

ರಾಸಬಿಹಾರಿ : ಹೂಗ್ಲಿ ಜಿಲ್ಲೆಯ ಭದ್ರೇಶ್ವರದ ಹತ್ತಿರದ ಪರಲವಿಘಟ ಎಂಬ ಹಳ್ಳಿಯಲ್ಲಿ ೧೮೮೬ರಲ್ಲಿ ಜನಿಸಿದ. ಈತನ ವಿದ್ಯಾಭ್ಯಾಸ ಚಂದ್ರ ನಾಗನೂರಲ್ಲಾಯಿತು. ಹುಡುಗನಾಗಿದ್ದಾಗಲೇ ತುಂಟ. ಓದು ತಲೆಗೆ ಹತ್ತಲಿಲ್ಲ. ಯೋಧನಾಗಬೇಕೆಂಬ ಬಯಕೆಯಾಯಿತು. "ಬಂಗಾಳಿಗಳು ದುರ್ಬಲರು ನೀವು ಸೈನ್ಯಕ್ಕೆ ಅರ್ಹರಲ್ಲ" ಎಂದು ಹೇಳಿದರು. ಈ ಅಪಖ್ಯಾತಿ ತಪ್ಪಿಸಬೇಕು, ನಾವು ವೀರರೆಂದು ತೋರಿಸಬೇಕೆಂಬ ದೃಢ ಸಂಕಲ್ಪ ಮಾಡಿದ-

(ಬಂಗಾಳಿ ದೇಶ ಭಕ್ತಿ ಗೀತೆ)

ನಿರೂಪಕ : ಡೆಹರಾಡೂನ್‌ನಲ್ಲಿ ಅತುಲ್‌ಚಂದ್ರಘೋಷ್ ಜೊತೆ ಕೆಲವು ತರುಣರು ಸೇರಿ ಬಾಂಬ್ ತಯಾರಿಸಲು ತೊಡಗಿದರು. ಜಿತೇಂದ್ರ ರಹಸ್ಯ ಸಂಘವೊಂದನ್ನು ಸ್ಥಾಪಿಸಿದ್ದರು. ೧೯೦೬ರಲ್ಲಿ ಈತನ ಭೇಟಿ ಆಯಿತು. ಜಿತೇಂದ್ರನ ರಹಸ್ಯ ಪತ್ರಗಳು ಪೊಲೀಸರಿಗೆ ಸಿಕ್ಕಿ ಈತನ ಹಿಡಿಯಲು ಆಜ್ಞೆ ಹೊರಟಿತು. ನಾಯಕತ್ವವನ್ನು ರಾಸಬಿಹಾರಿಗೆ ವಹಿಸಿ ಜಿತೇಂದ್ರ ಇಂಗ್ಲೆಂಡಿಗೆ ಓದಲು ಹೊರಟ. ನಿವೃತ್ತ ಗೂರ್ಖಾ ಸೈನಾಧಿಕಾರಿಗಳಿಂದ

ರಿವಾಲ್ವರ್ ಕೊಂಡುಕೊಳ್ಳುತ್ತಿದ್ದ. ೧೯೧೧ರಲ್ಲಿ ತಾಯಿ ಹಾಸಿಗೆ ಹಿಡಿದುದನ್ನು ತಿಳಿದು ಚಂದ್ರನಾಗೂರಿಗೆ ಬಂದ. ಅಲ್ಲಿ ಕ್ರಾಂತಿಕಾರಕ ನಾಯಕ ಮೋತಿಲಾಲ್ ರಾಯ್ ಪರಿಚಯವಾಗಿ ಆತನಿಂದ ಅರವಿಂದರ ದರ್ಶನವೂ ಆಯಿತು.

(ಸಂಗೀತ)

ರಾಸಬಿಹಾರಿ : ವಸಂತ ಕುಮಾರ್ ವಿಶ್ವಾಸ್.....

ವಸಂತಕುಮಾರ್ : ಏನು ರಾಸ ಬಿಹಾರಿ ಬೋಸ್ ಅವರೆ.

ರಾಸಬಿಹಾರಿ : ನಾವು ಹೀಗೆ ಕೂತ್ರೆ ಆಗೋಲ್ಲ. ಈಗ ಕಲ್ಕತ್ತೆಯಿಂದ ದೆಹಲಿಗೆ ರಾಜಧಾನಿ ವರ್ಗಾಯಿಸುವುದಿದೆ, ಆಗ ವೈಸರಾಯಿ ಲಾರ್ಡ್ ಹಾರ್ಡಿಂಜ್ ಮೆರವಣಿಗೆ ಅದ್ದೂರಿಯಿಂದ ಆಗುವ ಸಿದ್ಧತೆಯಾಗುತ್ತಿದೆಯಂತೆ. ಆ ಸಂದರ್ಭದಲ್ಲಿ ಆತನಿಗೆ ಬಾಂಬ್ ಹಾಕಬೇಕು. ಅವರಿಗೆ ಮರಣ ಭಯ ಹುಟ್ಟಿಸದಿದ್ದರೆ ಆಗುವುದಿಲ್ಲ. ಅವರು ಇನ್ನೂ ನಮ್ಮನ್ನು ತುಳಿದುಬಿಡುತ್ತಾರೆ. ನಾನು ನೀವು ಈ ಕೆಲಸಕ್ಕೆ ದೆಹಲಿಗೆ ಹೋಗೋಣವೇ?

ವಸಂತಕುಮಾರ್ : ಆಗಲೀ.... ಸಾರ್...... ನಡೆಯಿರಿ ಹೋಗೋಣ.

ನಿರೂಪಕ : ಆನೆಯ ಮೇಲೆ ಅಂಬಾರಿ ಇಟ್ಟು ವೈಸರಾಯ್ ಬರುತ್ತಿರಲು ಇಬ್ಬರೂ ಬಾಂಬ್ ಎಸೆದು ಪರಾರಿಯಾದರು. ಅಂಗರಕ್ಷಕ ಸತ್ತ. ವೈಸ್‌ರಾಯ್‌ಗೆ ತೀವ್ರ ಗಾಯವಾಯಿತು. ಅಂತೂ ಆತ ಉಳಿದುಕೊಂಡ. ಡೆಹರಾಡೂನಿನಲ್ಲಿ ಕಛೇರಿಯವರನ್ನೆಲ್ಲಾ ಸಭೆ ಸೇರಿಸಿ,

ರಾಸಬಿಹಾರಿ : ವೈಸರಾಯರಾದ ಲಾರ್ಡ್ ಹಾರ್ಡಿಂಜ್ ಅವರಿಗೆ ಈ ರೀತಿಯ ಹೀನಕೃತ್ಯ ಮಾಡಬಾರದಿತ್ತು. ಇದು ನಿಜವಾಗಿಯೂ ನಮಗೆಲ್ಲಾ ತುಂಬ ದುಃಖ ತಂದೊದಗಿಸಿದೆ. ನಮ್ಮ ವೈಸರಾಯರಿಗೆ ನಾನೇ ಅನ್ಯಾಯವಾಗಿ ಬಾಂಬ್ ಹಾಕಿ ಕೊಲ್ಲುವುದು ಎಂದರೇನು? ನಾಚಿಗೆ ಕೇಡಿನ ಕೆಲಸ.

ಒಬ್ಬ : ಓ...... ಇವನೆಂಥ ರಾಜಭಕ್ತ?

ನಿರೂಪಕ : ಈತನ ಭಾಷಣದಿಂದ ಪಂಜಾಬ್ ಪೊಲೀಸ್ ಅಧಿಕಾರಿಗಳಿಗೆ ಆನಂದವಾಯಿತು. ಪೊಲೀಸರೊಡನೆ ಸ್ನೇಹ ಬೆಳೆಸಿ ಅವರಿಗೇ ಚಳ್ಳೆ ಹಣ್ಣು ತಿನ್ನಿಸುವ ಚಾಣಾಕ್ಷತನ ಆತನದು!

ಬಾರತಮಾತೆ : ೧೯೧೩ರಲ್ಲಿ ಲಾಹೋರಿನಲ್ಲಿ ಕ್ರಾಂತಿಕಾರರು ಅಸಿಸ್ಟೆಂಟ್ ಕಮಿಷನರ್ ಗೋರ್ಡನ್ ಮೇಲೆ ಬಾಂಬ್ ಎಸೆದು ಕೊಂದರು.

ರಾಸಬಿಹಾರಿ ಜೋಗಿಸ್, ಅವಧ ಬಿಹಾರಿ, ವಸಂತ ವಿಶ್ವಾಸ್ ಅವರನ್ನು ಇದರ ಸಂಬಂಧ ೧೯೧೪ರಲ್ಲಿ ೧೧ ಮಂದಿಯನ್ನು ಗಲ್ಲಿಗೇರಿಸಿದರು. ರಾಸ ಬಿಹಾರಿ ಬೋಸ್ ಅನಾರೋಗ್ಯದ ಕಾರಣ ಕೊಟ್ಟು ದೀರ್ಘಕಾಲ ರಜೆ ಪಡೆದು ಚಂದ್ರನಾಗೂರಿಗೆ ಬಂದ. ಗೆಳೆಯರ ಜೊತೆ ಸೇರಿ ಕಲ್ಕತ್ತಾ ಕಾಲೇಜು ಚೌಕದಲ್ಲಿ ಪೊಲೀಸನೊಬ್ಬನನ್ನು ಕೊಂದ. ಆಗ ಆತನ ಎಡಗೈನ ಮೂರನೇ ಬೆರಳು ಗಾಯವಾಯಿತು. ಗೆಳೆಯರ ಜೊತೆ ಸೇರಿ ವಾರಣಾಸಿ, ದೆಹಲಿ, ಲಾಹೋರ್ ಮುಂತಾದೆಡೆ ಹೋಗಿ ಕ್ರಾಂತಿಕಾರಕ ಶಕ್ತಿಯನ್ನೆಲ್ಲಾ ಒಂದುಗೂಡಿಸುವ ಪ್ರಯತ್ನ ಮಾಡಿದ.

ನಿರೂಪಕ : ೧೯೧೪ರಲ್ಲಿ ದೆಹಲಿಯ ಗೃಹ ಶೋಧನಗಳ ಫಲವಾಗಿ ರಾಸಬಿಹಾರಿ ಬೋಸ್ ಬಂಧನಕ್ಕೂ ಆಜ್ಞೆ ಹೊರಡಿತು. ಆತ ಕೂಡಲೇ ಚಂದ್ರನಾಗೂರಿಗೆ ಓಡಿದ. ಪೊಲೀಸರು ಬಹುಮಾನ ಪ್ರಕಟಿಸಿದರೂ ಆತನ ಶೋಧನೆ ಅಸಾಧ್ಯವಾಯಿತು. ಅವಿತುಕೊಂಡು ಜೀವಿಸುವುದು ತುಂಬಾ ಬೇಜಾರಾಗಿ ಬಂಗಾಳ ಬಿಟ್ಟು ವಾರಣಾಸಿಗೆ ಬಂದು ಒಂದು ವರ್ಷ ಪೊಲೀಸರ ಕಣ್ಣಿಗೆ ಬೀಳದೆ ರಾತ್ರಿ ಹೊತ್ತೇ ರಹಸ್ಯವಾಗಿ ಕಾರ್ಯ ನಡೆಸಿದ. ಉತ್ತರ ಭಾರತದ ನಾನಾ ಪ್ರಾಂತ್ಯಗಳ ಕ್ರಾಂತಿಕಾರರನ್ನು ಸೇರಿಸಿ-

ರಾಸಬಿಹಾರಿ : ಭಾರತೀಯ ಸಿಪಾಯಿಗಳ ಸಹಾಯದಿಂದ ಸಶಸ್ತ್ರ ದಂಗೆಯಿಂದ ನಾವೀಗ ಬ್ರಿಟಿಷರನ್ನು ಎಚ್ಚರಿಸಬೇಕು. ಬಾಂಬು ತಯಾರಿಸುವುದು, ರಿವಾಲ್ವರ್ ಉಪಯೋಗಿಸುವುದನ್ನು ಕಲಿಸುತ್ತೇನೆ. ನೀವೆಲ್ಲಾ ಅದರಲ್ಲಿ ಪರಿಣತರಾಗಬೇಕು. ಸೇತುವೆ ನಾಶ, ಟೆಲಿಗ್ರಾಫ್ ತಂತಿ ಕತ್ತರಿಸುವುದು, ರೈಲ್ವೆ ಕಂಬಿ ಕಿತ್ತೆಸೆಯುವುದು, ದರೋಡೆ, ದ್ರವ್ಯ ದೋಚುವುದು ಇವನ್ನೆಲ್ಲಾ ಕಲಿತುಕೊಳ್ಳಬೇಕು. ರಾಜ ಭಕ್ತಿಯನ್ನು ದೇಶಭಕ್ತಿಯಾಗಿ ಪರಿವರ್ತಿಸಬೇಕು. ಕಾರ್ಯ ಸಾಧನೆಗೆ ನಿಮ್ಮಲ್ಲಿ ಕೆಲವರು ರಾವಲ್ಪಿಂಡಿ, ಪೆಷಾವರ್, ಝೀಲಂ, ಕಪುರ್ತಲಾ, ಫಿರೋಜ್‌ಪುರ, ಮೀರತ್, ಅಂಬಾಲಾಗಳಿಗೆ ಹೋಗಬೇಕು.

ಗುಂಪು : ಆಯ್ತು.... ಆಯ್ತು.....

ರಾಸಬಿಹಾರಿ : ೨೧-೨-೧೯೧೫ನೇ ದಿನ ಪೆಷಾವರ್‌ನಿಂದ ಬಂಗಾಳದವರೆಗೆ ದಂಗೆ ಆರಂಭವಾಗುತ್ತದೆ. ಎಲ್ಲಾ ಕಡೆ ತ್ರಿವರ್ಣ ಧ್ವಜ ಹಾರಿಸಬೇಕು.

ಗುಂಪು : ಅಗತ್ಯವಾಗಿ.... ಆಗಲಿ.......

ನಿರೂಪಕ : ಈ ವಿಷಯವನ್ನು ಕೃಪಾಳುಸಿಂಘ್ ಪೊಲೀಸರಿಗೆ ಸುಳಿವು ಕೊಟ್ಟ. ಪಿಂಗಳೆ, ರಾಸ ಬಿಹಾರಿ ವಾರಣಾಸಿಗೆ ಓಡಿ ಬಂದ್ರು. ಅನೇಕ

ಕ್ರಾಂತಿಕಾರರನ್ನು ಬಂಧಿಸಿದರು. ಪೊಲೀಸರು ರಾಸ ಬಿಹಾರಿಯನ್ನು ಹಿಡಿಯಲು ಪ್ರಯತ್ನಿಸಿದರು. ಆದರೆ ಆತ ಸಿಗಲಿಲ್ಲ. ರಾಸ ಬಿಹಾರಿ ಮಿತ್ರರು-

ಮಿತ್ರ : ರಾಸಬಿಹಾರಿ, ಪೊಲೀಸರು ನಿನಗಾಗಿ ತೀವ್ರ ಶೋಧನೆ ನಡೆಸುತ್ತಿದ್ದಾರೆ. ನೀನು ಇಲ್ಲಿರುವುದು ಕ್ಷೇಮವಲ್ಲ. ಈಗ ಹೇಗಾದರೂ ರವೀಂದ್ರನಾಥ ಠಾಕೂರರು ಜಪಾನಿಗೆ ಹೋಗುತ್ತಿದ್ದಾರೆ. ಅವರ ಪರಿವಾರದವರಲ್ಲೊಬ್ಬನಾಗಿ ವೇಷ ಬದಲಾಯಿಸಿ ಜಪಾನ್ ಸೇರಿ ಬಿಡು.

ರಾಸಬಿಹಾರಿ : ತಾವು ಹೇಳಿದ ಮೇಲೆ ಆಯ್ತು.

ಭಾರತಮಾತೆ : ಪ್ರಿಯನಾಥ್ ಠಾಕೂರ್ ಎಂಬ ಹೆಸರಿಂದ ಜಪಾನ್‌ಗೆ ಹೊರಟ. ಅಲ್ಲಿ ಆಗಾಗ ವೇಷ ಬದಲಾಯಿಸಿ, ಸ್ವರ ಬದಲಾಯಿಸಿ, ಭಾಷೆ ಬದಲಾಯಿಸಿ ಎಂಥವರ ಕಣ್ಣಿಗಾದರೂ ಮಣ್ಣೆರಚುವವನಾದ. ಜಪಾನಿನಿಂದ ಶಸ್ತ್ರಾಸ್ತ್ರ ಕಳಿಸುವ ಪ್ರಯತ್ನಗಳು ವಿಫಲವಾಯಿತು. ಒಮ್ಮೆ ಇಬ್ಬರು ಚೀನಿಯರಿಂದ ಕಳುಹಿಸಿದ ಪಿಸ್ತೂಲು ಮದ್ದುಗುಂಡುಗಳು ಪೊಲೀಸರ ವಶವಾಯಿತು. ೧೯೧೫ರಲ್ಲಿ ೨ ಹಡಗುಗಳಲ್ಲಿ ಕಳುಹಿಸಿದ ಶಸ್ತ್ರಾಸ್ತ್ರಗಳನ್ನು ಮುಟ್ಟುಗೋಲು ಹಾಕಿದರು. ಬ್ರಿಟಿಷರು ಜಪಾನ್ ಸರ್ಕಾರಕ್ಕೆ ಒತ್ತಾಯ ತಂದು ರಾಸ ಬಿಹಾರಿ ಬಂಧಿಸಿ ಒಪ್ಪಿಸಬೇಕೆಂದರು.

ನಿರೂಪಕ : ತೋಷಿಕೋ ಸೋಮಾ ಎಂಬ ರೊಟ್ಟಿ ಅಂಗಡಿಯವ ರಾಸ ಬಿಹಾರಿಯನ್ನು ನೆಲಮಾಳಿಗೆಯಲ್ಲಿಟ್ಟು ರಕ್ಷಿಸಿ, ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಜಪಾನ್ ಪ್ರಜೆ ಮಾಡಲು ಪ್ರಯತ್ನಿಸಿದ. ೧೭ ಸಾರಿ ಮನೆ ಬದಲಾಯಿಸಿದ. ೮ ವರ್ಷಗಳ ಅಜ್ಞಾತವಾಸದಲ್ಲಿ ಬ್ರಿಟಿಷ್ ಗೂಢಾಚಾರ್ಯರ ಕಣ್ಣಿಗೆ ಮಣ್ಣೆರಚಿದ. ಜಪಾನಿ ಭಾಷೆಯಲ್ಲಿ ಭಾರತೀಯ ಧರ್ಮ, ಕಲೆ, ಇತಿಹಾಸ, ಸಂಸ್ಕೃತಿಗಳನ್ನು ರಚಿಸಿದ. ಜಪಾನಿನ ಪ್ರಜೆಯಾಗಿ ಭಾರತಕ್ಕೆ ಹೋರಾಡಿದ. ಇಂಡಿಯನ್ ಇಂಡಿಪೆಂಡೆಂಟ್ಸ್ ಲೀಗ್ ಸ್ಥಾಪಿಸಿ ೧೭ ವರ್ಷ ಭಾರತದ ಬಿಡುಗಡೆಗೆ ಹೋರಾಡಿದ. ಭಾರತ - ಜಪಾನ್ ಬಾಂಧವ್ಯಕ್ಕೆ ಅಸ್ತಿಭಾರ ಹಾಕಿದ. ೧೯೪೨ರಲ್ಲಿ ಷಾಂಘೈನಲ್ಲಿ ಸಭೆ ಸೇರಿ ಭಾಷಣ ಮಾಡಿದ-

ರಾಸಬಿಹಾರಿ : ಜಪಾನಿನ ಮಹಾಪ್ರಧಾನಿ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಭಾರತೀಯರಿಗೆ ಎಲ್ಲಾ ರೀತಿಯ ಸಹಾಯ ನೀಡಲು ಸಿದ್ಧವಾಗಿರುವುದು ಬಹಳ ಸಂತಸದ ಸಂಗತಿ.

ನಿರೂಪಕ : ೧೯೪೩ರಲ್ಲಿ ನೇತಾಜಿ ಸುಭಾಷ್‌ಚಂದ್ರ ಬೋಸರನ್ನು ಬರಮಾಡಿಕೊಂಡು "ಇಂಡಿಯನ್ ಇಂಡಿಪೆಂಡೆಂಟ್ಸ್ ಪಕ್ಷ"ದ ಅಧ್ಯಕ್ಷರನ್ನಾಗಿ ಮಾಡಿದರು. ಆಗ ಸಿಂಗಪುರದಲ್ಲಿ ಮಾಡಿದ ಬಾಷಣ-

ರಾಸಬಿಹಾರಿ : ಯುಗ ಯುಗಗಳ ಭಾರತ ನಡೆಸಿದ ಉತ್ತಮ ಜ್ಞೀವನದ ಸಂಸ್ಕಾರದ ಎಲ್ಲ ಸಲ್ಲಕ್ಷಣಗಳ ಸಂಕೇತ ನನ್ನ ಪ್ರಿಯ ನಾಯಕ ಸುಭಾಷ್‌ಚಂದ್ರಬೋಸ್ ಮಾತೃಭೂಮಿ ಸೇವೆಗೆ ನಾನು ಸಮರ್ಪಣ ಮಾಡಿಕೊಂಡಿರುವ ದೇಹದೊಳಗಿನ ಜೀವವಿರುವವರೆಗೆ ಯೋಧನಂತೆ ಭಾರತ ಮಾತೆಯ ಬಂಧ ವಿಮೋಚನೆಗೆ ದುಡಿಯುವೆ...... ನಮ್ಮ ನಾಯಕನಿಗೆ ಸಂಪೂರ್ಣ ಬೆಂಬಲ ಕೊಡುವೆ.

ಸುಭಾಷ್ : ಪೂರ್ವ ಏಷ್ಯಾದಲ್ಲಿ ಭಾರತದ ಸ್ವಾತಂತ್ರ್ಯ ಚಳುವಳಿಯ ಪಿತಾಮಹರು ಈ ರಾಸಬಿಹಾರಿಗಳು. ಅವರು ನನಗೆ ವಹಿಸಿರುವ ಜವಾಬ್ದಾರಿಯನ್ನು ಸ್ವೀಕರಿಸಿದ್ದೇನೆ.

(ಚಪ್ಪಾಳೆ)

ಭಾರತಮಾತೆ : ೨೧-೧೦-೧೯೪೩ರಲ್ಲಿ ಆಜಾದ್ ಹಿಂದ್ ಸ್ಥಾಪನೆ ಆಯಿತು. ತನ್ನ ೨೮ನೇ ವಯಸ್ಸಿನಲ್ಲಿ ತೋಷಿಕೋಬೋಸ್ ತೀರಿಕೊಂಡಳು ಎರಡು ಮಕ್ಕಳನ್ನು ಬಿಟ್ಟು. ಆಗ ಆಕೆಯ ತಾಯಿ ಕೊಕ್ಕೊಹೌ ಸೋಮಾ! "ನಾನು ಮಕ್ಕಳನ್ನು ನೋಡಿಕೊಳ್ಳುವೆ. ನೀವು ನಿಮ್ಮ ದೇಶಕ್ಕೆ ನಿಮ್ಮ ಶಕ್ತಿಯನ್ನು ಧಾರೆ ಎರೆಯಿರಿ. ನೀವು ನನಗೆ ಮಾತ್ರವಲ್ಲ. ನನ್ನ ಮಕ್ಕಳಿಗೂ ತಂದೆ ತಾಯಿಯರು."

ಕೊಕ್ಕೊಹೌ : ನೀವು ಇನ್ನೊಂದು ಮದುವೆ ಆಗಿ.

ರಾಸಬಿಹಾರಿ : ೮ ವರ್ಷ ಕತ್ತಲು ಜೀವನದಲ್ಲಿ ತೋಷಿಕೋ ನನ್ನನ್ನು ಪುನೀತಳಾಗಿ ಮಾಡಿದ್ದಾಳೆ. ನನಗೆ ದಾಂಪತ್ಯ ಜೀವನ ಸಾಕು.

ಭಾರತಮಾತೆ : ರಾಸ ಬಿಹಾರಿಯನ್ನು ಅವರ ಅತ್ತೆ ಕೊಂಡಾಡಿದರು. ೨೧-೧-೧೯೪೫ರಲ್ಲಿ ರಾಸ ಬಿಹಾರಿ ಇಹವನ್ನು ತ್ಯಜಿಸಿದ. ಆ ಸಮಯದಲ್ಲಿ ವಂದೇ ಮಾತರಂ ಹಾಡನ್ನು ಹಾಡಲಾಯಿತು.

(ಶೋಕ ಸಂಗೀತ)

*

# ೧೮೫೭ರ ಕ್ರಾಂತಿ ಕಿಡಿ

ನಿರೂಪಕ : ಹದಿನೇಳನೇ ಶತಮಾನದಲ್ಲಿ ಭಾರತಕ್ಕೆ ವ್ಯಾಪಾರಕ್ಕೆ ಬಂದ ಇಂಗ್ಲೀಷರು ಮೋಸದಿಂದ ಸಾಮ್ರಾಜ್ಯ ಕಟ್ಟಿ, ಸಿರಿ ಸಂಪತ್ತು ದೋಚಿ ರಾಜ್ಯವಾಳಿದರು. ೧೮೫೭ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯುವಂಥ ವರ್ಷ! ೨೫೦ ವರ್ಷಗಳ ಕಾಲ ದಾಸ್ಯ ಶೃಂಖಲದಿಂದ ಬಿಗಿದ ಬ್ರಿಟಿಷರನ್ನು ಭಾರತದಿಂದೋಡಿಸಲು ಪ್ರಯತ್ನಿಸಿದ ವರ್ಷ! ದೇಶದಾದ್ಯಂತ ಆಂದೋಲನ ರಕ್ತ ಕಾಲುವೆಯನ್ನೂ ಹರಿಸಿದ ವರ್ಷ! ಆದರೆ ಇದಕ್ಕೆ ಹಿಂದೆ ಪ್ರಯತ್ನ ನಡೆದಿಲ್ಲವೆಂದಲ್ಲ. ನಡದೇ ನಡೆದಿತ್ತು. ಆದರೆ ಈ ವರ್ಷ ವಿಶೇಷ ಪರಿಣಾಮವನ್ನು ಬೀರಿತು.....! ಭಾರತದ ಅನೇಕ ಭಾಗಗಳಲ್ಲಿ ನಲವತ್ತಾರು ಬಂಡಾಯಗಳೆದ್ದವು! ಕರ್ನಾಟಕವೂ ಇದಕ್ಕೆ ಹೊರತಲ್ಲ. ಇಲ್ಲಿದೆ ೧೮೫೭ರ ಕ್ರಾಂತಿಯ ಕಿಡಿಯ ಕಥೆ-

(ಸಂಗೀತ)

ಭಾರತಮಾತೆ : ಈಗ ಕಥೆ ಹೇಳುವೆ ನನ್ನ ಕಥೆ ಹೇಳುವೆ. ೧೮೫೭ರ ಕ್ರಾಂತಿಯ ಕಿಡಿಯ ಕಥೆ ಹೇಳುವೆ. ನಾಲ್ಕನೆಯ ಮೈಸೂರು ಯುದ್ಧದ ಅನಂತರ ಶ್ರೀರಂಗಪಟ್ಟಣವು ಬ್ರಿಟಿಷರ ವಶವಾಯಿತು. ಮರಾಠ ಯೋಧ ಧೋಂಡಿಯವಾಘನನ್ನು ಟಿಪ್ಪು ತನ್ನ ಸೇನೆಯ ಪ್ರಮುಖಾಧಿಕಾರಿಯಾಗಿ ನೇಮಿಸಿದ್ದ. ಆತನನ್ನು ಬ್ರಿಟಿಷರು ತೆಗೆದು ಹಾಕಿದರು. ಆತ ಬಿದನೂರಿನಲ್ಲಿ ಸೈನ್ಯ ಕಟ್ಟಿ ಬ್ರಿಟಿಷರೊಡನೆ ಹೋರಾಡಿದ. ಶಿವಮೊಗ್ಗ ಜಿಲ್ಲೆ ಶಿಕಾರಿಪುರದ ಹತ್ತಿರ ಕದನ ಆರಂಭವಾಯಿತು.......

(ಯುದ್ಧದ ದೃಶ್ಯ)

ವಾಘ ಮರಾಠ ರಾಜ್ಯದಲ್ಲಿ ಅಡಗಿಕೊಂಡ. ಇಂಗ್ಲೀಷರ ವಶದಲ್ಲಿದ್ದ ಗಡಿನಾಡನ್ನು ಸಮಯವರಿತು ದಾಳಿ ಮಾಡಲು ಆರಂಭಿಸಿದ. ಈತನನ್ನು ಎದುರಿಸಲು ಕರ್ನಲ್ ವೆಲ್ಲಸ್ಲಿಯೇ ಬರಬೇಕಾಯಿತು ಎಂದ ಮೇಲೆ ಬ್ರಿಟಿಷರು ಈತನನ್ನು ಕಂಡರೆ ಎಷ್ಟು ಹೆದರುತ್ತಿದ್ದರು ಎಂಬುದನ್ನು ನಾನು ಮತ್ತೆ ಹೇಳಬೇಕಾಗಿಲ್ಲ.

ಮಲಪ್ರಭಾ ನದಿಯ ದಂಡೆಯ ಮೇಲೆ ಕರ್ನಲ್ ಯುದ್ಧಮಾಡಿ ವಾಘನ ಕಡೆಯವರನ್ನು ಸದೆಬಡೆದ. ಮತ್ತೆ ವಾಘ ಹೈದ್ರಾಬಾದ್ ರಾಜ್ಯದಲ್ಲಿ ತಪ್ಪಿಸಿಕೊಂಡು ಉಳಿದ. ವೆಲ್ಲಸ್ಲಿ ಶೋಧನೆ ಬಿಡಲಿಲ್ಲ. ಕೋಣಗಲ್ಲು ಎಂಬಲ್ಲಿ ನನ್ನ ಪುತ್ರನನ್ನು ಕೊಚ್ಚಿ ಹಾಕಿಸಿದ!

(ಶೋಕ ಗೀತೆ)

ನಿರೂಪಕ : ೧೭೯೯-೧೮೦೦ರಲ್ಲಿ ನಡೆದ ಕ್ರಾಂತಿಯೆಂದರೆ, ೧೮೨೪ರ ಕಿತ್ತೂರಿನ ಬಂಡಾಯ! ಮೂರನೆಯ ಮರಾಠ ಯುದ್ಧದಲ್ಲಿ, ಮರಾಠರ ವಿರುದ್ಧ ಬ್ರಿಟಿಷರಿಗೆ ಮುಂಬಯಿ ಪ್ರಾಂತ್ಯದ ಅನೇಕ ದೇಸಾಯಿಯವರು ಸಹಾಯ ಮಾಡಿದರು. ಅವರಲ್ಲಿ ಕಿತ್ತೂರ ದೇಸಾಯಿ ಪ್ರಮುಖ. ಇದರಿಂದ ಆತನನ್ನು ಕಿತ್ತೂರ ಸ್ವತಂತ್ರ ರಾಜನಾಗಿ ಮಾಡಿದರು ಬ್ರಿಟಿಷರು.

(ತುತ್ತೂರಿ ಹರ್ಷೋದ್ಗಾರ ಜನರಿಂದ)

"ಕಿತ್ತೂರ ದೇಸಾಯಿಯವರಿಗೆ ಜಯವಾಗಲಿ......
ಕಿತ್ತೂರ ದೇಸಾಯಿಯವರಿಗೆ ಜಯವಾಗಲೀ......."

ದಂಡನಾಯಕ : ಮಹಾರಾಣಿಯವರೇ..... ಇಂಗ್ಲೀಷರ ದೂತನೊಬ್ಬ ಓಲೆಯೊಂದನ್ನು ಕಳುಹಿಸಿದ್ದಾನೆ.

ಚೆನ್ನಮ್ಮ : ಓಲೆಯ ಒಕ್ಕಣೆಯನ್ನು ಓದಿ, ಏನಿದೆ ನೋಡೋಣ.

ದಂಡ : ಶಿವಲಿಂಗರುದ್ರರ ಮರಣದ ಅನಂತರ ರಾಣಿ ಚನ್ನಮ್ಮನವರು ದತ್ತು ಮಗನನ್ನು ರಾಜನನ್ನಾಗಿ ಮಾಡಿದುದರಿಂದ, ಪದ್ಧತಿ ತತ್ವದ ಅನುಸಯ, ಕಿತ್ತೂರು ಸಂಸ್ಥಾನ ಬ್ರಿಟಿಷ್ ರಾಜ್ಯದೊಂದಿಗೆ ವಿಲೀನವಾಗಿದೆ ಎಂದು ಘೋಷಿಸಿದ್ದಾರೆ.

ಚೆನ್ನಮ್ಮ : ಕಿತ್ತೂರನ್ನು ಮುಂಬೈ ಪ್ರಾಂತ್ಯದೊಂದಿಗೆ ವಿಲೀನಗೊಳಿಸಿದುದು ನ್ಯಾಯಬದ್ಧವಲ್ಲ, ಈ ವಿಚಾರದಲ್ಲಿ ಕಂಪನಿ ಸರಕಾರ ನಂಬುಗೆ ದ್ರೋಹ ಮಾಡಿದೆ. ಇದರ ಬಗ್ಗೆ ಅವರೊಡನೆ ಹೋರಾಡೋಣ. ಯುದ್ಧವನ್ನು ಘೋಷಿಸಿ.

(ತುತ್ತೂರಿ.... ಯುದ್ಧದ..... ಸನ್ನಿವೇಶ)

ಭಾರತಮಾತೆ : ಈ ಯುದ್ಧದಲ್ಲಿ ಥ್ಯಾಕರೆ ಹತನಾದ. ಕ್ರಾಂತಿ ಕಿಡಿ ನನ್ನ ಮಗಳು ಚೆನ್ನಮ್ಮ ಸೋತಳು. ಇಂಗ್ಲೀಷಿನವರೊಡನೆ ಹೋರಾಡಿದ ವೀರ ರಮಣಿಯರಲ್ಲೊಬ್ಬಳು ಇನ್ನಿಲ್ಲವಾದಳು.

ನಿರೂಪಕ : ೧೮೫೭ರಲ್ಲಿ ಬ್ರಿಟಿಷರನ್ನು ತೊಲಗಿಸಲು ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸೈನಿಕ ಕ್ರಾಂತಿಗಳು ಕಾರಣವಾದವು.

ರದ್ಧತಿ ತತ್ವದ ಅನುಸಾರವಾಗಿ ಶಿವಾಜಿ ಮನೆತನದ ಸತಾರೆ ಬ್ರಿಟಿಷ್ ವಶವಾಯಿತು. ಮರಾಠ ರಾಜ್ಯದ ಒಂದು ಭಾಗವನ್ನು ಶಿವಾಜಿ ಮನೆತನದವನಿಗೆ ವಹಿಸಿಕೊಟ್ಟ ಲಾರ್ಡ್ ಹೇಸ್ಟಿಂಗ್ಸ್.

ಈತ ಸಂತಾನವಿಲ್ಲದೆ ತೀರಿಕೊಂಡಾಗ ಸತಾರೆ ಮತ್ತೆ ಬ್ರಿಟಿಷರ ಆಳ್ವಿಕೆಗೊಳಗಾಯಿತು.

ಭಾರತಮಾತೆ : ೧೮೧೮ರಲ್ಲಿ ಪೇಶ್ವೆ ಬಾಜಿರಾಯನ ಸೋಲಿನಿಂದ ಝಾನ್ಸಿ ಬ್ರಿಟಿಷರ ವಶವಾಯಿತು. ಹೇಸ್ಟಿಂಗ್ಸ್ ಅಲ್ಲಿಯ ರಾಜನಿಗೇ ಝಾನ್ಸಿಯ ರಾಜ್ಯವನ್ನು ವಹಿಸಿಕೊಟ್ಟ. ಆತನಿಗೆ ಮಕ್ಕಳಾಗದಿರಲು ದತ್ತು ಸ್ವೀಕಾರಕ್ಕೆ ಕಂಪನಿ ಸರ್ಕಾರ ನಕಾರ ಹಾಕಿತು. ಲಕ್ಷ್ಮೀಬಾಯಿಗೆ ವರ್ಷಾಸನ ಕೊಡಲಾಯಿತು. ಆಕೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದಳು. ನನ್ನ ಪುತ್ರಿ ಗಂಡು ವೇಷ ಧರಿಸಿ ಲಕ್ಷ್ಮಿಬಾಯಿ ಕಾದಾಡಿ ಅಸು ನೀಗಿದಳು. ಮತ್ತೆ ಝಾನ್ಸಿ ಬ್ರಿಟಿಷರ ವಶವಾಯಿತು.

(ಯುದ್ಧದ ದೃಶ್ಯ)

ನಿರೂಪಕ : ೧೭೯೯ರಲ್ಲಿ ಸಿಖ್ಖರ ಅತಿ ಸಾಹಸಿ ರಣಜಿತ್ ಸಿಂಘ್ ಲಾಹೋರನ್ನು ರಾಜಧಾನಿಯಾಗಿ ಮಾಡಿಕೊಂಡ. ಸಟ್ಲೆಜ್ ನದಿಯ ಪೂರ್ವ ಭಾಗವನ್ನು ಈತ ವಶಪಡಿಸಿಕೊಳ್ಳಲು ಪ್ರಯತ್ನಿಸಿದಾಗ, ಸಾಧ್ಯವಾಗದೆ ಒಂದು ಒಪ್ಪಂದಕ್ಕೆ ಬಂದ. ನದಿಯ ಪಶ್ಚಿಮ ಭಾಗ ಈತನ ಅಧೀನವೆಂದೂ, ಪೂರ್ವ ಭಾಗ ಬ್ರಿಟಿಷರ ಅಧೀನವೆಂತಲೂ, ಈ ಭಾಗಗಳನ್ನು ಯಾರಾದರೂ ಆಕ್ರಮಿಸಿದರೆ ಇಬ್ಬರೂ ಪರಸ್ಪರ ಸಹಾಯ ಮಾಡಬೇಕೆಂದು ಕರಾರು ಆಯಿತು.

ಭಾರತಮಾತೆ : ಪಂಜಾಬಿನ ದೂಲಪಸಿಂಗ ಪ್ರಾಪ್ತ ವಯಸ್ಸಾಗಿರದ ಕಾರಣ ಆತನ ತಾಯಿ ಬ್ರಿಟಿಷರ ಮೇಲೆ ಎರಗಿ ಸೋತಳು. ಅಯೋಧ್ಯೆ ದುರಾಡಳಿತವಲ್ಲಿದೆ. "ಶಾಂತಿ ಸೌಹಾರ್ದತೆ ನೆಲೆಗೊಳಿಸಿ ಜನಸಾಮಾನ್ಯರ ಸ್ಥಿತಿಯನ್ನು ಸರಿಮಾಡುತ್ತೇವೆಂದು" ಬ್ರಿಟಿಷ್ ಸರಕಾರಕ್ಕೆ ಸೇರಿಸಿಕೊಂಡರು. ತಂಜಾವೂರಿನ ರಾಜಪದವಿ ಕಿತ್ತು ಹಾಕಿತು. ಮುಂಬಿಯ ಪ್ರಾಂತ್ಯದ ೨೦ ಸಾವಿರ ಎಸ್ಟೇಟುಗಳನ್ನು ವಶಪಡಿಸಿಕೊಂಡರು. ಬಂಗಾಲದ ಜಮೀನ್ದಾರರು ಭೂಮಿಯನ್ನು ಕಳೆದುಕೊಂಡರು. ರೈತರಿಗೆ ಕಷ್ಟವಾಯಿತು. ನನ್ನವರಿಗೆ ದೊಡ್ಡ ಕೆಲಸವಿಲ್ಲ. ಪ್ರತಿಭೆಗಳಿಗೆ ಅವಕಾಶ ಕಡಿಮೆ ಇತ್ತು. ಕೈಗಾರಿಕೆಗಳು ಅವನತಿ ಹೊಂದಿದುವು. ಬಂಗಾಳ ೨೦ ವರ್ಷಗಳ ಆಳ್ವಿಕೆಯಲ್ಲಿ ಮರುಭೂಮಿಯಂತಾಯಿತು ವಾಣಿಜ್ಯ ಸಂಪತಿನಲ್ಲಿ, ಇಂಗ್ಲೀಷರು ಸೈನ್ಯದಲ್ಲಿ, ಸಂಬಳದಲ್ಲಿ ತಾರತಮ್ಯ ಮಾಡಿದರು. ನನ್ನ ಪುತ್ರರು

ಸಾಮಾನ್ಯಕ್ಕೆ ಬಿಡಲಿಲ್ಲ. ತಮಗಾದ ತೊಂದರೆ ನಿವಾರಣೆಗೆ ೧೮೫೭ರಲ್ಲಿ ಬ್ರಿಟಿಷ್ ಸರಕಾರವನ್ನು ಬುಡಮೇಲು ಮಾಡಲು ಪ್ರಯತ್ನಿಸಿದರು.

ನಿರೂಪಕ : ೧೮೫೭ರ ಮೇ ೧೧ರಂದು ಮೀರತ್‌ನಲ್ಲಿ ಭಾರತೀಯರು ಬ್ರಿಟಿಷ್ ಅಧಿಕಾರಿಗಳನ್ನು ಕತ್ತರಿಸಿ ಸೆರೆಮನೆಯಿಂದ ದೆಹಲಿಗೆ ಹೊರಟರು. ಅಲ್ಲಿ ಕ್ರಾಂತಿಯಾಗಿ ದೆಹಲಿ ಕ್ರಾಂತಿಕಾರರ ವಶವಾಯಿತು. ಬಹದೂರ ಷಾನನ್ನು ಭಾರತದ ಸಾಮ್ರಾಟನೆಂದು ಘೋಷಿಸಿತು. ಮತ್ತೆ ಮೂರು ವಾರವಾದ ಮೇಲೆ ಇಂಗ್ಲೀಷರು ಕ್ರಾಂತಿಯನ್ನು ಆರಂಭಿಸಿದರು. ಅಯೋಧ್ಯ, ರೋಹಿಲಖಂಡ, ನಸಿರಾಬಾದ್, ನಿಮಖ, ಬೈರಲಿ, ಲಕ್ನೋ, ಬನಾರಸ್, ಕಾನ್ಪುರಗಳಲ್ಲಿ ಕ್ರಾಂತಿ ಹಬ್ಬಿತು. ಲಕ್ನೋದ ರೆಸಿಡೆಂಟ್‌ನ ಬಂಗಲೆಗೆ ಮುತ್ತಿಗೆ ಹಾಕಿದರು. ಆಸ್ಸನ್ ದಾರಿಯಲ್ಲಿ ಕಾಲರಾದಿಂದ ಕಾಲವಾದ. ಹೆನ್ರಿ ಬೆನಾರ್ಡ್ ೨ ತಿಂಗಳು ಕದನ ಮಾಡಿದ. ಯಾರೂ ಸೋಲಲಿಲ್ಲ.

ಭಾರತಮಾತೆ : ಆರ್ಚ್‌ಡೇಲ್ ವಿಲ್ಸನ್ ಮತ್ತು ಜಾನ್ ಸಿಕ್ಸಲನ್ನರು ದೆಹಲಿ ಕಾಶ್ಮೀರದ ಬಾಗಿಲು ತೆರೆದು ದೆಹಲಿ ಮುತ್ತಿದರು. ಆರು ದಿನದ ಕದನದ ನಂತರ ಇಂಗ್ಲೀಷರ ವಶವಾಯಿತು. ಬಹದೂರ್‌ಷಾನನ್ನು ರಂಗೂನಿಗೆ ಗಡೀಪಾರು ಮಾಡಿದರು. ಲಕ್ನೋ ಕಾನ್ಪುರದತ್ತ ಬಂದರು. ನಾನಾಸಾಹೇಬನಿಗೂ ಇಂಗ್ಲೀಷರಿಗೂ ಆದ ಯುದ್ಧದಲ್ಲಿ ಇಂಗ್ಲೀಷರು ಶರಣಾಗತರಾದರು. ಗ್ವಾಲಿಯರ್‌ನಲ್ಲಿ ತ್ಯಾತ್ಯಾಟೋಪಿ ನೇತೃತ್ವದಲ್ಲಿ ೨೦,೦೦೦ ಸೈನಿಕರಿದ್ದರೂ ಯುದ್ಧದಲ್ಲಿ ಜಯಶೀಲರಾಗಲಿಲ್ಲ. ಕೊಲ್ಲಾಪುರ, ಸಾವಂತವಾಡಿ, ನರಗುಂದ ಮುಂತಾದೆಡೆ ಕ್ರಾಂತಿ ಹಬ್ಬಿತು. ಗ್ವಾಲಿಯರ್ ವಶಪಡಿಸಿಕೊಂಡರು. ನನ್ನ ಪುತ್ರ ನಾನಾ ಸಾಹೇಬ ತರಾಯಿ ಪ್ರದೇಶದ ಅಡವಿಗೆ ಹೋದ. ಮತ್ತೊಬ್ಬ ಪುತ್ರ ತಾತ್ಯಾಟೋಪಿ ದಕ್ಷಿಣಕ್ಕೆ ಓಡಿದ. ಇಂಗ್ಲೀಷರು ಈತನ ಬೆನ್ನು ಹತ್ತಿದರು. ಕೆಲವು ದ್ರೋಹಿಗಳು ನನ್ನ ಪುತ್ರನನ್ನು ಹಿಡಿಮುಕೊಟ್ಟು ನೇಣುಗಂಬಕ್ಕೇರಿಸಲು ಕಾರಣರಾದರು.!

(ಶೋಕ ಸಂಗೀತ)

ನಿರೂಪಕ : ೧೮೫೭ರ ಕ್ರಾಂತಿಯ ಕಿಡಿ ದೇಶದಾದ್ಯಂತ ಹರಡಿ ಸ್ವಾತಂತ್ರ್ಯ ಪಡೆಯಲೇಬೇಕು ಎಂಬ ಛಲ ಹುಟ್ಟಿಸಲು ಕಾರಣವಾಯಿತು. ಅದು ಮುಂದುವರಿಯಿತು. ಅದಕ್ಕಾಗಿ ನಾನಾ ಸ್ವಾತಂತ್ರ್ಯ ಹೋರಾಟಗಾರರು ಅಣಿಯಾದರು.

(ಸಂಗೀತದೊಡನೆ ಮುಕ್ತಾಯ)

*

# ಮದನ ಮೋಹನ ಮಾಳವೀಯ

(ಹಿಂದಿ ಸ್ವಾತಂತ್ರ್ಯ ಗೀತೆ)

ನಿರೂಪಕ : ಕಲ್ಕತ್ತದಲ್ಲಿ ಅಖಿಲ ಭಾರತ ಕಾಂಗ್ರೆಸ್‌ನ ದ್ವಿತೀಯ ಅಧಿವೇಶನ; ಅದಕ್ಕೆ ದಾದಾಬಾಯಿ ನವರೋಜಿ ಅವರು ಅಧ್ಯಕ್ಷರು. ಆ ಸಂದರ್ಭದಲ್ಲಿ ಮದನ ಮೋಹನ ಮಾಳವೀಯರ ಭಾಷಣ:

(ಜನರ ಗದ್ದಲ, ಕೈ ಚಪ್ಪಾಳೆಯೊಂದಿಗೆ ಆರಂಭ)

ಮಾಳವೀಯ : ಮಹಾಜನರೇ, ಈ ಕಾಂಗ್ರೆಸ್ಸಿನ ದ್ವಿತೀಯ ಸಮ್ಮೇಳನಕ್ಕೆ ದಾದಾಬಾಯಿ ನವರೋಜಿ ಅವರು ಅಧ್ಯಕ್ಷತೆ ವಹಿಸುತ್ತಿರುವುದು ನಮಗೆಲ್ಲ ಬಹಳ ಸಂತೋಷದ ಸಂಗತಿ. ನಾವು ದೇವರಲ್ಲಿ ಭಕ್ತಿ ಇಡುವಂತೆ ದೇಶದ ಮೇಲೂ ಭಕ್ತಿ ಇಡುವುದು ಅಷ್ಟೇ ಮುಖ್ಯ. ನಾವು ದೇಶಕ್ಕೋಸ್ಕರ ಬದುಕಬೇಕು. ಇತರರಿಗೋಸ್ಕರ ಬದುಕಬೇಕು ಎಂಬುದನ್ನು ಪ್ರತಿಯೊಬ್ಬರೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕಾದ ವಿಷಯ. ಇದು ಪ್ರತಿಯೊಬ್ಬರಿಗೂ ಮನದಟ್ಟಾಗಲಿ. ಇದಕ್ಕಾಗಿ ನಾವು ಇಂದು ಮುಂದಾಗಬೇಕು. ಪರರ ದಾಸ್ಯದಿಂದ ಭಾರತಾಂಬೆಯನ್ನು ವಿಮುಕ್ತಗೊಳಿಸುವ ಭಾರ ನಮ್ಮೆಲ್ಲರ ಮೇಲೆ ಬಿದ್ದದೆ. ಅದ್ಯಕಾಗಿ ನೀವೆಲ್ಲಾ ತನು ಮನ ಧನಗಳನ್ನರ್ಪಿಸಬೇಕು. ಗಾಂಧಿಯವರ ಕನಸನ್ನು ನನಸು ಮಾಡಬೇಕು.... ಭಾರತ ಮಾತಾಕೀ ಜೈ.... ವಂದೇ..... ಮಾತರಂ.....

(ಜನರ ಕರತಾಡನ)

ಭಾರತಮಾತೆ : ಈ ನನ್ನ ನೆಚ್ಚಿನ ಕೆಚ್ಚಿನ ಪುತ್ರ ಮದನ ಮೋಹನ ಮಾಳವೀಯನನ್ನು ನಾನೆಂದೆಂದಿಗೂ ಮರೆಯುವಂತಿಲ್ಲ. ನನ್ನ ಪುತ್ರ ಪುತ್ರಿಯರ ಬಗೆಗೆ ಹೇಳುವುದಾದರೆ ನನಗೆ ತುಂಬಾ ಹೆಮ್ಮೆಯಾಗುತ್ತದೆ. ಆಂಗ್ಲರ ದಬ್ಬಾಳಿಕೆ ನಿಲ್ಲಿಸಲು ಮುಂದಾದವರು ಲಕ್ಷಾಂತರ ಜನರು. ಲೆಕ್ಕವಿಲ್ಲದಷ್ಟು ಜನರು. ಅವರಲ್ಲಿ ಮದನಮೋಹನನೂ ಒಬ್ಬ. ಜನರಿಗೆ ಶಿಕ್ಷಣ ಕೊಟ್ಟು ಅಂಧಕಾರದಲ್ಲಿ ಮುಳುಗಿದ್ದವರಿಗೆ ಬೆಳಕು ತೋರಿಸಿದ ದೀವಿಗೆ! ಇಂಥ

ಸ್ವಾತಂತ್ರ್ಯ ಹೋರಾಟಗಾರ ಉತ್ತರ ಭಾರತದ ಝಾನ್ಸಿ ನಗರದ ಹತ್ತಿರದ ಅಹಿಯಾಪುರ (ಮಾಳವೀಯ)ದಲ್ಲಿ ೧೮೬೧ನೇ ಡಿಸೆಂಬರ್ ೨೫ನೇ ತಾರೀಖು ಪಂಡಿತ ವಜ್ರನಾಥರ ಪುತ್ರನಾಗಿ ಜನಿಸಿದ! ಈಗ ಆತನ ಕಥೆ ಹೇಳುವ ನನ್ನ ಕಥೆ ಹೇಳುವೆ.

(ಸಂಗೀತ)

ನಿರೂಪಕ : ಮಾಳವೀಯನ ತಂದೆ ವಜ್ರನಾಥನಿಗೆ ಕಡು ಬಡತನ! ಪುಟ್ಟ ಮನೆಯೊಂದೇ ಆಸ್ತಿ. ಭಾಗವತ ಕಥಾ ವಾಚನ ವಾಖ್ಯಾನಗಳಿಂದಲೇ ಜೀವನ ಸಾಗಿಸಬೇಕಿತ್ತು. ಮದನ ಮೋಹನ ಜನ್ಮವೆತ್ತಿದಾಗ ಕಂಚಿನ ತಟ್ಟೆ ಬಾರಿಸಿವಾಗ ನೂರಾರು ಜನ ಸೇರಿದರು. ಆದರೆ ಅವರಿಗೆಲ್ಲಾ ಸಿಹಿ ಹಂಚಲೂ ಶಕ್ತಿ ಇಲ್ಲವಾಯಿತು. ಹಾಗೆಯೇ ಅವರೆಲ್ಲರಿಗೂ ಕೈ ಮುಗಿದು ಕಳುಹಿಸಿದ ವಜ್ರನಾಥ. ಶಾಲೆಗೆ ಸೇರಿಸಲು ಬಂದಾಗ ಶ್ರೀಹರಿ ದೇವರು "ಏನಾದರೂ ಶ್ಲೋಕ ಹೇಳಲು ಬರುತ್ತದೆಯೇ?" ಎಂದಾಗ, "ಬರುತ್ತದೆ" ಎಂದು ಹೇಳಿದ. ಗುರುಗಳು ನೀನು ಅಖಂಡ ಕೀರ್ತಿ ತರುತ್ತೀಯೆ ಎಂದು ಹರಸಿದರು ಮಾಳವೀಯನನ್ನು.

(ಸಂಗೀತ)

ಭಾರತಮಾತೆ : ಬಾಲ್ಯದಲ್ಲಿ ಈತನಿಗೆ ಆಟವೆಂದರೆ ಪ್ರಾಣ.... ವ್ಯಾಯಾಮ ಮಾಡುತ್ತಿದ್ದ. ಮಾಳವೀಯ ಇಂಗ್ಲೀಷ್ ಶಾಲೆಗೆ ಸೇರಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದಾಗ, ತಾಯಿ ತನ್ನ ಕೈನ ಚಿನ್ನದ ಬಳೆ ಮಾರಿ ಸೇರಿಸಿದಳು. ಹಳಿಸಿದ ತಂಗಳ ರೊಟ್ಟಿ, ಮಜ್ಜಿಗೆ ನೆನಸಿ ತಿಂದುಕೊಂಡು ಶಾಲೆಗೆ ಸರಿಯಾದ ವೇಳೆಗೆ ಬರುತ್ತಿದ್ದ. ಮನೆ ಕಿರಿದಾಗಿದ್ದೂ ಓದಲು ಸರಿಯಾದ ಸ್ಥಳವಿಲ್ಲದೆ ಗಂಗಾ ಪ್ರಸಾದ್ ಎಂಬ ಮಿತ್ರನ ಮನೆಯಲ್ಲಿ ಓದಿಕೊಳ್ಳುತ್ತಿದ್ದ. ಕೊಳಲು ಸಿತಾರ್ ಬಾರಿಸುವುದನ್ನು ಕಲಿತ.

(ಸಿತಾರ್ ವಾದನ)

ಮೀರಾ, ಸೂರ್‌ದಾಸರ ಹಾಡುಗಳನ್ನು ಕಲಿತ. ೧೮೮೪ರಲ್ಲಿ ಕಲ್ಕತ್ತೆಯಲ್ಲಿ ಬಿ.ಎ. ಮುಗಿಸಿ ಎಂ.ಎ. ಮಾಡುವ ಆಸೆ ಇದ್ದರೂ ಬಡತನದಿಂದ ತಾತ, ತಂದೆಯವರಂತೆ ಭಾಗವತ ಕಥಾ ವಾಚನ ವ್ಯಾಖ್ಯಾನಗಳಿಂದಲೇ ಜೀವನ ಮಾಡಬೇಕೆಂಬ ಮನಸ್ಸು ಮಾಡಿ ಕೊನೆಗೆ ಉಪಾಧ್ಯಾಯ ವೃತ್ತಿಯನ್ನು ಹಿಡಿದ.

ಒಮ್ಮೆ ವಿದ್ವತ್ ಗೋಷ್ಠಿಯ ಅಧ್ಯಕ್ಷ ಪಂಡಿತ ನಂದಾರ್ಯ ಅವರು ಮದನ ಮೋಹನನ ರೂಪ, ವಿದ್ಯೆ, ವಿನಯ, ಗಾಂಭೀರ್ಯ, ವಾಕ್ ಚಾತುರ್ಯಕ್ಕೆ ಬೆರಗಾಗಿ

ತಮ್ಮ ಮಗಳಾದ ಸೌಭಾಗ್ಯವತಿ ಕುಂದನದೇವಿ ಕೊಟ್ಟು ವಿವಾಹ ಮಾಡಿದರು. ಬಡತನವನ್ನು ಸಹಿಸಿಕೊಂಡು ಸಂಸಾರ ಸಾಗಿಸುತ್ತಿದ್ದ ಹೆಂಡತಿಯನ್ನುದ್ದೇಶಿಸಿ ಮಾಳವೀಯ-

ಮಾಳವೀಯ : ಏನು ಕುಂದನಾ.... ಒಂದು ದಿನವಾದ್ರೂ ನಮ್ಮ ಮನೆಯ ಕಷ್ಟ ಜೀವನದ ಬಗ್ಗೆ ಮಾತಾಡಿಲ್ಲ. ನಿಮ್ಮ ತಂದೆ ತಾಯಿಯರಿಗೆ ದೂರಲಿಲ್ಲ. ನಿನ್ನ ಗುಣವನ್ನು ಮೆಚ್ಚಿಕೊಂಡೆ ಬಿಡು.

ಕುಂದನ : ದೂರೇನು ಪ್ರಯೋಜನ? ಅದರಿಂದ ಅವರು ಕಣ್ಣೀರು ಹಾಕಿಕೊಂಡ್ರೆ ಅದರಿಂದ ನನಗಾಗುವ ಸುಖ ಏನು? ನೀವು ನನ್ನ ಭಾಗದ ದೇವರು, ನನಗೆ ಈ ಮನೆಯೇ ಶಾಶ್ವತ. ಇದೇ ಸ್ವರ್ಗಕ್ಕಿಂತ ಹೆಚ್ಚು.

ಭಾರತಮಾತೆ : ನನ್ನ ಪುತ್ರ ೧೪-೧೫ನೇ ವಯಸ್ಸಿನಲ್ಲೇ ಕವಿತೆ ಬರೆಯಲು ತೊಡಗಿದ, ಮಕರಂದ ಎಂಬ ಕಾವ್ಯನಾಮದಿಂದ ಬರೆಯಲಾರಂಭಿಸಿದ. "ರಾಧಿಕಾ ರಾಣಿ" ಈತನ ಮೊದಲ ಕಾವ್ಯ.

ನಿರೂಪಕ : ೧೮೯೨ರಲ್ಲಿ ಅಲಹಾಬಾದಿನ ಕೋರ್ಟಿನಲ್ಲಿ ವಕೀಲರಾದರು. ಅಸತ್ಯ ನಿರರ್ಥಕ ಕೇಸುಗಳನ್ನು ಹಿಡಿಯದೆ ತುಂಬಾ ಪ್ರಸಿದ್ಧರಾದರು. ಕಾಶಿಯಲ್ಲಿ ವಿಶ್ವವಿದ್ಯಾಲಯ ಸ್ಥಾಪಿಸುವ ಆಸೆ ಅವರದಾಗಿತ್ತು. ಭಾರತದ ಕಾಂಗ್ರೆಸ್‌ನ ೨೧ನೇ ಅಧಿವೇಶನ ಕಾಶಿಯಲ್ಲಿ ಗೋಖಲೆಯವರ ಅಧ್ಯಕ್ಷತೆಯಲ್ಲಿ ನಡೆದಾಗ -

ಮಾಳವೀಯ : ಈ ಪರಕೀಯರ ದಾಸ್ಯದಲ್ಲಿರುವುದಕ್ಕೆ ಕಾರಣ ನಮ್ಮ ಅಜ್ಞಾನ. ವಿದ್ಯಾಭ್ಯಾಸ, ಶಿಕ್ಷಣ ಮಟ್ಟ ಕಡಿಮೆ ಇರುವುದರಿಂದ. ಇದಕ್ಕಾಗಿ ಕಾಶಿಯಲ್ಲಿ ಒಂದು ವಿಶ್ವವಿದ್ಯಾನಿಲಯ ಆಗಬೇಕು. ಜನರು ವಿದ್ಯಾವಂತರಾಗಬೇಕು. ಆಗಲೇ ದೇಶಾಭಿಮಾನ ಹೆಚ್ಚುವುದು.

ಸುರೇಂದ್ರನಾಥ ಬ್ಯಾನರ್ಜಿ : ಮಾಳವೀಯ ಅವರು ಹೇಳುವುದು ಸತ್ಯ. ಕಾಶೀ ನಿಜಕ್ಕೂ ಯೋಗ್ಯಸ್ಥಳ. ಯೋಗ್ಯ ಇಂಗ್ಲೀಷ್ ಪ್ರಾಧ್ಯಾಪಕರು ದೊರೆವತನಕ ನಾನು ಉಚಿತವಾಗಿ ಸೇವೆ ಸಲ್ಲಿಸ್ತೀನಿ. ಇದಕ್ಕೆ ಇಲ್ಲಿನ ದೊರೆಯವರು ಜಾಗ ಕೊಡಬೇಕು.

(ಕರತಾಡನ)

ಮಾಳವೀಯ : ಸುರೇಂದ್ರನಾಥ ಬ್ಯಾನರ್ಜಿಯವರಿಂದಲೂ ಈ ಮಾತು ಹೊರಟಿರುವುದು ನಿಜಕ್ಕೂ ಆಶಾದಾಯಕವಾಗಿದೆ, ಇದರ ಹಣ ಸಂಗ್ರಹಣೆಗೆ ನಾನು ಜೋಳಿಗೆ ಹಿಡಿದು ಸಿದ್ಧವಾಗುವೆ.

ಭಾರತಮಾತೆ : ಹೈದ್ರಾಬಾದಿನ ನಿಜಾಮ ಮೊದಲು ಹಣ ಕೊಡಲಿಲ್ಲ. ಅಲ್ಲಿಯೇ ಶವವೊಂದಕ್ಕೆ ಜನರು ಹಣ ಎರಚುತ್ತಾ ಹೋಗುತ್ತಿದ್ದರು. ಅದನ್ನೆಲ್ಲಾ ಮಾಳವೀಯ ಶೇಖರಿಸಿದ. ಜನರಿಗೆ ಆಶ್ಚರ್ಯ. ಈ ವಿಷಯ ತಿಳಿದ ನಿಜಾಮ ಅವರಿಗೆ ಹೇರಳ ದ್ರವ್ಯ ಕೊಟ್ಟ. ಕನ್ಯಾಕುಮಾರಿಯಿಂದ ಪೇಷಾವರ ಬ್ರಹ್ಮದೇಶದವರೆಗೆ ಸಂಚರಿಸಿದ. ದರ್ಭಾಂಗದಲ್ಲಿ ಭಾಗವತ ಪ್ರವಚನ ಮಾಡುತ್ತಿದ್ದಾಗ ಅಲ್ಲಿನ ಮಹಾರಾಜರು ಇವರ ಭಾಷಣ ಕೇಳಿ ಇಪ್ಪತ್ತೈದು ಲಕ್ಷ ದಾನವಿತ್ತ. ೧ ಕೋಟಿ ೩೪ ಲಕ್ಷ ರೂಪಾಯಿ ಸಂಪಾದಿಸಿ "ಭಿಕ್ಷುಕ ಸಾಮ್ರಾಟ್" ಎಂದು ಹೆಸರು ಸಂಪಾದಿಸಿದ. ೧೯೧೬ರಲ್ಲಿ ಗಂಗಾತೀರದಲ್ಲಿ ವಿಶ್ವವಿದ್ಯಾಲಯ ಸ್ಥಾಪಿಸಿದ. ಆಗ ಮಾಡಿದ ಭಾಷಣ-

ಮಾಳವೀಯ : ಧರ್ಮದ ಸಂರಕ್ಷಣೆಗೆ ಏನೆಲ್ಲಾ ಶಿಕ್ಷಣ ಕೊಡಬೇಕೋ ಅದಕ್ಕಾಗಿ ಕಾಶಿ ಹಿಂದೂ ವಿಶ್ವವಿದ್ಯಾಲಯ ತಲೆ ಎತ್ತುತ್ತಿದೆ. ರಾಷ್ಟ್ರದ ಯುವಕರು ಶಿಕ್ಷಣ ಪಡೆಯಲಿ, ಜೊತೆಗೆ ಅನ್ಯ ಧರ್ಮಗಳ ತುಲನಾತ್ಮಕ ಜ್ಞಾನವನ್ನು ಪಡೆಯಲಿ.

ನಿರೂಪಕ : "ಹಿಂದೂಸ್ತಾನ್" ಪತ್ರಿಕೆ ಸಂಪಾದಕರಾದರು. ಶ್ರೀ ಬಾಲಮುಕುಂದ, ಪಂಡಿತ ಪ್ರತಾಪ ನಾರಾಯಣರ ಸ್ನೇಹ ಬೆಳೆಸಿದರು. ಸಣ್ಣ ಪತ್ರಿಕೆಗಳಿಗೆ ಮಾರ್ಗದರ್ಶಕರಾಗಿದ್ದರು. ಒಂದು ಮಹತ್ವದ ಸಂಗತಿ ಎಂದರೆ ಭಾರತಕ್ಕೆ ಸ್ವರಾಜ್ಯ ಕೊಡುವ ಸಂಬಂಧ ೧೯೩೧ರಲ್ಲಿ ದ್ವಿತೀಯ ಚಕ್ರಗೋಷ್ಠಿ ಏರ್ಪಟ್ಟಿತ್ತು. ಬ್ರಿಟನ್ ನಾಯಕರ ಜೊತೆ ಚರ್ಚೆಗೆ ಹಲವು ಭಾರತೀಯರು ಹೋಗುವಾಗ ಮಾಳವೀಯರನ್ನು ಗಾಂಧಿ ಕರೆದೊಯ್ಯಲು ನಿರ್ಧರಿಸಿದರು. ಗಂಗಾ ನೀರು ತೆಗೆದುಕೊಂಡು ಹೊರಟರು. ಅಲ್ಲಿ ಅವರ ಪಾತ್ರ ಚಿರಸ್ಮರಣೀಯ!

ಭಾರತಮಾತೆ : ಅಮೃತಸರದ ಜಲಿಯನ್ ವಾಲಾಬಾಗಿನಲ್ಲಿ ೧೯೧೯ನೇ ಏಪ್ರಿಲ್ ೧೩ರಂದು ನಿಸ್ಸಹಾಯಕರಿಗೆ ಗುಂಡಿಟ್ಟು ಕೊಲ್ಲಲಾಯಿತು. ಮುದುಕರು, ಎಳೆಯರು ಎಂಬ ಭೇಧಭಾವವಿಲ್ಲದೆ ಸರ್ಕಾರದ ಸೈನ್ಯ ಕೊಲೆ ಮಾಡಿತು. ಆಗ ಈತ ಮಾಡಿದ ಭಾಷಣ-

ಮಾಳವೀಯ : ಹಿಂದೂ ಸಂಘಟನೆಗೆ ಏಕತೆಗೆ ಅತಿಯಾಗಿ ಶ್ರಮಿಸಬೇಕು. ಹರಿಜನ ಉದ್ಧಾರವಾಗದೆ ಇದ್ದರೆ ಭಾರತ ದೇಶ ಪ್ರಗತಿ ಕಾಣದು. ಹಿಂದುಳಿದವರು, ಬಾಲವಿಧವೆಯರು, ಅವಿದ್ಯಾವಂತರು ಇವರ

ಉದ್ಧಾರಕ್ಕೆ ಚಿಂತಿಸಬೇಕು. ಭಾರತ ಎಲ್ಲಾ ದೃಷ್ಟಿಯಿಂದ ಬಲಿಷ್ಠವಾಗಬೇಕು.

ಭಾರತಮಾತೆ : ನನ್ನ ಪುತ್ರ ನೂರು ವರ್ಷ ಬಾಳಬೇಕೆಂದು ಬಯಸಿದ್ದ. ಆದರೆ ನವಖಾಲಿಯ ಭೀಕರ ಘಟನೆಗಳು ಆತನ ದೇಹ ಮನಸ್ಸು ಹೃದಯದ ಮೇಲೆ ಆಘಾತ ಉಂಟುಮಾಡಿತು. ೧೯೪೬ನೇ ನವೆಂಬರ್ ೧೨ರಂದು ಇಹವನ್ನು ತ್ಯಜಿಸಿ ಅಮರನಾದ!

ಮಾಳವೀಯ : ಭಾರತ ನಮ್ಮ ಮಾತೃಭೂಮಿ. ಇದು ಪುಣ್ಯಪಾವನ ಭೂಮಿ. ಧರ್ಮದ ಅನುಸಾರವಾಗಿ ಆಚರಣೆ ಇಟ್ಟುಕೊಳ್ಳಿ. ದೇಶಕ್ಕೆ, ಧರ್ಮಕ್ಕೆ ಬದುಕಬೇಕು ಎಂಬುದನ್ನು ಪ್ರತಿಯೊಬ್ಬರೂ ನೆನಪಿಡಿ!

*

# ಜತೀಂದ್ರನಾಥ ಮುಖರ್ಜಿ

(ಜನರ ಗದ್ದಲ.... ಹುಲಿ.... ಹುಲಿ......!...... ಓಡ್ರೀ...... ಓಡ್ರೀ...... ಎಂಬ ಕೂಗು ದೂರದಲ್ಲಿ)

ಜತೀಂದ್ರ : ಹೆದರಬೇಡಿ..... ಹೆದರಬೇಡಿ ತಾಳಿ....... ನಾನು ಬರ್ತೀನಿ......

ಒಬ್ಬ : ಏಯ್ ಬಾರೋ.... ತಿಂದು ಗಿಂದಾಕ್ಬಿಟ್ಟಾದು.....?

ಜತೀಂದ್ರ : ಕೈನಲ್ಲಿ ಚಾಕು ಇದೆ.... ತಾಳ್ರಿ...... ಸೀಳು ಬಿಡ್ತೀನಿ.......

(ಹುಲಿಯೊಡನೆ ಸೆಣಸಾಟ.....)

ಒಬ್ಬ : ಓ..... ಹುಲಿ ಮೇಲೆ ಎರ್‍ಗೇ ಬಿಟ್ಟ...... ಮೈಕೈಯೆಲ್ಲಾ ಪರಿಚಿಬಿಡ್ತು....... ಆದ್ರೂ ಸೆಣಸಾಡ್ತಿದ್ದಾನೆ. ಓ.... ರಕ್ತ...... ಹುಲಿ.... ಬೀಳ್ತು.... ಹಾಕಿದ ಚಾಕು.... ಆ..... ರಕ್ತ ಚಿಲ್ ಅಂತ ಹಾರಿ ನೆಲವೆಲ್ಲಾ ಕೆಂಪಾಯ್ತು. ಹುಲಿ ಸತ್ತು ಹೋಯ್ತು ಬನ್ನಿ...... ಬನ್ನಿ. ಹುಡುಗ ಸುಸ್ತಾಗಿದ್ದಾನೆ. ಓ...... ಕಾಲು ಬರ್‍ತಿಲ್ಲಾ.... ಈತನನ್ನು ಕಲ್ಕತ್ತಾ ಆಸ್ಪತ್ರೆಗೆ ಸೇರಿಸೋಣ ಬನ್ನಿ.... ಎತ್ತುಕೊಳ್ಳಿ.

ಜತೀಂದ್ರ : (ಏದುಸಿರು ಬಿಡುತ್ತಾ) ಏನೂ ಆಗಿಲ್ಲ ಬಿಡ್ರಿ...... ಸ್ವಲ್ಪ ಹೊತ್ತು ಸರಿಹೋಗುತ್ತೆ......

(ಆಸ್ಪತ್ರೆಯ ವಾತಾವರಣ.....)

ಒಬ್ಬ : ಡಾಕ್ಟರ್ ಈತ ಹುಲಿಯೊಂದಿಗೆ ಸೆಣಸಾಡಿ ಗಾಯಗೊಂಡಿದ್ದಾನೆ. ನಡೆಯಲಿಕ್ಕೆ ಆಗ್ತಿಲ್ಲ.... ಸ್ವಲ್ಪ ಔಷಧೋಪಚಾರ ಮಾಡ್ತೀರಾ?

ಡಾ॥ : ನೋಡ್ರೀ ಈತ ಉಳಿಯಬೇಕಾದ್ರೆ ಬಲಗಾಲು ಕತ್ತರಿಸಬೇಕಾಗುತ್ತೆ.

ಜತೀಂದ್ರ : ಸಾಧ್ಯವಿಲ್ಲ; ನಾನು ಅಂಗಹೀನನಾಗಿ ಮಾತ್ರ ಉಳಿಯಲಾರೆ. ಹಾಗೆಯೇ ಹೋರಾಡುತ್ತೇನೆ.

ಭಾರತಮಾತೆ : ದೃಢವಾದ ಮನೋಬಲದಿಂದ ಯುವಕ, ಮರಣಾಂತಿಕ ಗಾಯವನ್ನು ವಾಸಿಮಾಡಿಕೊಂಡ, "ಹುಲಿಯ ಜತೀನ್"- "ಬಾಘಾ ಜತೀನ್" ಈ ಬಂಗಾಳದ ಹುಲಿ ಆಂಗ್ಲರೊಡನೆ ಹೋರಾಡಿ ಅವರ ವಿರುದ್ಧ ಸಿಡಿದೆದ್ದಿತು. ಈಗ ಆ ಜತೀಂದ್ರನಾಥ ಮುಖರ್ಜಿಯ ಕಥೆ ಹೇಳುವೆ ನನ್ನ ಕಥೆ ಹೇಳುವೆ!

(ಸಂಗೀತ)

೧೮೭೯ರ ಡಿಸೆಂಬರ್ ತಿಂಗಳು ಉಮೇಶ್‌ಚಂದ್ರ ಹಾಗೂ ಸರಸ್ವತೀ ದೇವಿಯರ ಮಗನಾಗಿ ಜತೀಂದ್ರ ಜನಿಸಿದ! ಬಾಲ್ಯದಲ್ಲೆ ತಂದೆಯನ್ನು ಕಳೆದುಕೊಂಡ. ತಾಯಿ ರಾಮಾಯಣ, ಮಹಾಭಾರತದ ವೀರರ, ಸಾಹಸಮಯ ಕಥೆಗಳನ್ನು ಹೇಳುತ್ತಿದ್ದಳು. ಕೆಲವು ವರ್ಷಗಳ ಅನಂತರ ಆಕೆಯೂ ತೀರಿಕೊಂಡ ಮೇಲೆ ಸೋದರ ಮಾವ ಹಾಗೂ ಅಕ್ಕ ವಿನೋದಬಾಲಾ ಅವರ ಆಶ್ರಯದಲ್ಲಿ ಬೆಳೆದ. ವ್ಯಾಯಾಮ, ಲಾಟಿ, ಕತ್ತಿವರಸೆ, ಕುದುರೆ ಸವಾರಿ ಮುಂತಾದುವುಗಳಲ್ಲಿ ಪರಿಣತಿ ಪಡೆದ. ಕೋಯಾ, ಕೃಷ್ಣ ನಗರದಲ್ಲಿ ವಿದ್ಯಾಭ್ಯಾಸ ಮಾಡಿದ.

ನಿರೂಪಕ : ಒಮ್ಮೆ ಕಲ್ಕತ್ತಾದ ಗೋರಾ ಬಜಾರಿನಲ್ಲಿ ಒಬ್ಬ ಆಂಗ್ಲ ದೊಣ್ಣೆ ಬೀಸುತ್ತಾ ಸಿಕ್ಕಿದವರಿಗೆ ಹೊಡೆಯುತ್ತಿದ್ದುದನ್ನು ನೋಡಿ ಸಹಿಸದ ಜತೀಂದ್ರ ಆ ಲಾಠಿಯನ್ನೇ ಕಿತ್ತುಕೊಂಡು ಆತನಿಗೆ ಹೊಡೆದ. ಗೋದೈ ನದಿ ಪ್ರವಾಹ ತಡೆಗಟ್ಟಲು ಸರಿಯಾದ ಸೇತುವೆ ಕಟ್ಟಲಿಲ್ಲ ಎಂದು ಗುಂಡು ಹಾರಿಸಿ ೧೦-೧೨ ಜನರನ್ನು ಆಂಗ್ಲರು ಕೊಲೆಗೈದರು. ಇದನ್ನು ಎದುರಿಸಲು ಜತೀಂದ್ರ ಮುಂದಾದ.

ಭಾರತಮಾತೆ : ಮತ್ತೊಮ್ಮೆ ಆರು ಜನ ಆಂಗ್ಲ ತರುಣರು ಇಂಗ್ಲೆಂಡಿನ ರಾಜಕುಮಾರನನ್ನು ನೋಡಲು ಕುಳಿತಿದ್ದ ಕೆಲವು ಮಹಿಳೆಯರನ್ನು ಪೀಡಿಸಲು ಬೂಟಿನ ಕಾಲನ್ನು ಅಲ್ಲಾಡಿಸುತ್ತಾ ಕುಳಿತರು. ಇದನ್ನು ನೋಡಿ ಸಹಿಸಲಾರದ ಜತೀನ್ ಅವರನ್ನೆಲ್ಲಾ ಬೀದಿಗುರುಳಿಸಿದ. ಆಂಗ್ಲರು ಆತನೊಡನೆ ಹೊಡೆದಾಡಲು ಆಗದೆ ಏಟು ತಿಂದು ಮಾಯವಾದರು.

ನಿರೂಪಕ : ಒಮ್ಮೆ ಪ್ರಯಾಣಿಕನೊಬ್ಬ ಮರಣೋನ್ಮುಖನಾಗಿರಲು ನೀರು ತರಲುಹೋದ ಜತೀನ್ ನೀರು ತರುವಾಗ ಸ್ವಲ್ಪ ನೀರು ಆಂಗ್ಲ ಅಧಿಕಾರಿಯೊಬ್ಬನಿಗೆ ಬೀಳಲು ಲಾಟಿಯಿಂದ ಆತನ ಬೆನ್ನಿಗೆ ಹೊಡೆದ. ಜತೀನ್ ರೈಲು ಡಬ್ಬಿಗೆ ಹೋಗಿ ಪ್ರಯಾಣಿಕನಿಗೆ ನೀರು ಕೊಟ್ಟು ಬಂದು, ಲಾಟಿಯನ್ನು ಕಿತ್ತುಕೊಂಡು ಆಂಗ್ಲ ಅಧಿಕಾರಿಯನ್ನು ಥಳಿಸಿದ. ಆ ಅಧಿಕಾರಿಯ ಜೊತೆ ಮೂವರು ಸೇರಿಕೊಂಡರು. ಎಲ್ಲರನ್ನೂ ನೆಲಕ್ಕುರುಳಿಸಿದ. ಜತೀಂದ್ರನಾಥನ ಬಂಧನವಾಯಿತು. ನ್ಯಾಯಾಲಯದಲ್ಲಿ........

ನ್ಯಾಯಾಧೀಶ : "ನೀವು ಭಾರತೀಯನಿಂದ ಹೊಡಿಸಿಕೊಂಡಿರಾ?"

ಆಂಗ್ಲಅಧಿಕಾರಿ: ಹೌದು.

ನ್ಯಾಯಾಧೀಶ : ಒಬ್ಬ ಭಾರತೀಯನ ಕೈಯಿಂದ ಏಟು ತಿಂದು ಸೋತರು ಎಂದರೆ ರಾಷ್ಟ್ರೀಯ ವಾದಿಗಳಿಗೆ ಎಂಥ ಸ್ಫೂರ್ತಿ ಸಿಕ್ಕೀತು! ನಿಜಕ್ಕೂ ಇದು.... ಹೇಡಿತನ ನಿಮ್ಮದು......

ನಿರೂಪಕ : ವಿಚಾರಣೆ ಅಲ್ಲಿಗೇ ಮುಕ್ತಾಯವಾಯಿತು! ಜತೀಂದ್ರ ಕಲ್ಕತ್ತಾದಲ್ಲಿ ಸಾಂಕ್ರಾಮಿಕ ರೋಗಪೀಡಿತರಿಗೆ ಪರಿಹಾರ ನೀಡುವ ಕಾರ್ಯದಲ್ಲಿ

ನೆರವಾದ. ಸ್ವಾಮಿ ವಿವೇಕಾನಂದರ, ಅರವಿಂದರ ಮಾರ್ಗದರ್ಶನ ಪಡೆದ. ಅರವಿಂದರ ಆಶೀರ್ವಾದದಿಂದ ಕ್ರಾಂತಿಕಾರಿ ಜೀವನ ಕೈಗೊಂಡ.

ಭಾರತಮಾತೆ : ವಂದೇ ಮಾತರಂ ಪತ್ರಿಕೆಯಲ್ಲಿ ಲೇಖನ ಬರೆದುದಕ್ಕೆ ಸರ್ಕಾರ ಅರವಿಂದರನ್ನು ಬಂಧಿಸಿ ವಿಚಾರಣೆ ಪ್ರಾರಂಭಿಸಿತು. ನ್ಯಾಯಾಲಯದಲ್ಲಿ ಜನಸಂದಣಿ! ಪಾರ್ಶ್ವವಾಯು ಪೀಡಿತನಾದ ಚಾರು ಅಸು ಬಿಸ್ವಾಸ್ ಎಂಬ ಸರ್ಕಾರಿ ವಕೀಲನಿಗೆ ಗುಂಡಿಕ್ಕಿ ಕೊಂದ. ನ್ಯಾಯಾಲಯದಲ್ಲಿ ಅಲ್ಲೋಲ- ಕಲ್ಲೋಲ! ಚಾರು "ಗಲ್ಲಿಗೇರಿಸಲು ಸ್ವಾಗತವಿದೆ" ಎಂದು ಕ್ರಾಂತಿಕಾರರಿಗೆ ಆಹುತಿಯಾದ! ಇದುವರೆಗೆ ನಡೆದ ದರೋಡೆ, ಕೊಲೆ, ಸುಲಿಗೆಗಳಿಗೆ ಜತೀನ್ ಕಾರಣ ಎಂದು ಅವನನ್ನು ಬಂಧಿಸಿತು. ೧೫ ತಿಂಗಳು ಹಿಂಸೆ ಕೊಟ್ಟರು. ಒಂದು ದಿನ ಪೊಲೀಸ್ ಅಧಿಕಾರಿ-

ಪೋಲಿಸ್ ಅಧಿಕಾರಿ: ಸರ್ಕಾರಕ್ಕೆ ಸಹಾಯ ಮಾಡು. ನಿನಗೆ ಬೇಕಾದ್ದು ಸಿಗುತ್ತೆ...... ಸುಖವಾಗಿರಬಹುದು.

ಜತೀಂದ್ರ : ಸಾಕು..... ಬಾಯಿ.... ಮುಚ್ಚು......

(ಮೇಜು ಗುದ್ದುವನು)

ನಿರೂಪಕ : ೧೯೧೧ರಲ್ಲಿ ಜತೀಂದ್ರನಾಥ ಮುಖರ್ಜಿಯ ಬಿಡುಗಡೆ ಆಯಿತು. ಸರ್ಕಾರಿ ನೌಕರಿಯಿಂದ ವಜಾ ಮಾಡಿದರು. ಲಾರ್ಡ್ ಹಾರ್ಡಿಂಜ್ ಭಾರತದ ವೈಸರಾಯ್ ೧೯೧೨ರ ಡಿಸೆಂಬರ್ ೨೩ರಂದು ಮೆರವಣಿಗೆ ಹೊರಟಾಗ ಅವರ ಮುಖಕ್ಕೆ ಬಾಂಬ್ ಬಿತ್ತು. ಇದಕ್ಕೆ ರಾಸ ಬಿಹಾರಿ ಬೋಸರೇ ಕಾರಣ ಎಂದು ಬ್ರಿಟಿಷ್‌ಸರ್ಕಾರ ತೀರ್ಮಾನಿಸಿತು. ಅವರು ಜಪಾನಿಗೆ ತಪ್ಪಿಸಿಕೊಂಡು ಹೊರಟರು.

ಭಾರತಮಾತೆ : ಇಂದೂಭೂಷಣನೆಂಬ ಜತೀನ್‌ನ ಮಿತ್ರ ಆತ ಕೆಲಸಮಾಡುತ್ತಿದ್ದ ಜಮೀನುದಾರನಿಂದ ೧ ಲಕ್ಷ ರೂಪಾಯಿ ತೆಗೆದುಕೊಂಡು ಪರಾರಿಯಾದ. ಹಣವನ್ನು ಜತೀಂದ್ರನಿಗೆ ಕೊಟ್ಟ. ಆತನನ್ನು ಬಂಧಿಸಿ ಹಿಂಸಿಸಿದರೂ ಗುಟ್ಟು ಬಿಟ್ಟುಕೊಡಲಿಲ್ಲ, ಹಣ ಏನು ಮಾಡಿದನೆಂಬುದನ್ನು. ಈ ಹಣದಿಂದ ಜತೀನ್ ಭಾರತಕ್ಕೆ ಸಹಾಯ ಪಡೆಯಲು ಕೆಲವರನ್ನು ಯೂರೋಪ್, ಅಮೇರಿಕಾಕ್ಕೆ ಕಳುಹಿಸಿದ. ಜತೀನ್ ಕೊನೆ ಕೊನೆಗೆ ವಿದೇಶಿ ಸಹಾಯ ಅವಲಂಬಿಸಿದ. ಅನುಕೂಲವಾದ ಕಡೆ ಬಂದೂಕು ಖರೀದಿ ಮಾಡುತ್ತಿದ್ದ. ಸುಂದರಬನದಲ್ಲಿ ಕ್ರಾಂತಿಕಾರರು ಗುರಿ ಹೊಡೆಯುವ ಶಿಕ್ಷಣ ಪಡೆದರು. ಜತೀನನ ಮತ್ತೊಬ್ಬ ಅನುಯಾಯಿ ಶ್ರೀಸ್ ಮಿತ್ರ ಸುಂಕದ ಕಛೇರಿಯಲ್ಲಿದ್ದ. ಆತ ಆಯುಧಗಳನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕ್ರಾಂತಿಕಾರರಿಗೆ ಕೊಟ್ಟು ಕಣ್ಮರೆಯಾದ!

ನಿರೂಪಕ : ಜತೀಂದ್ರನಾಥ ಮುಖರ್ಜಿಯನ್ನು ಹಿಡಿದುಕೊಟ್ಟವರಿಗೆ ಬಹುಮಾನ ಕೊಡುವುದಾಗಿ ಭಿತ್ತಿ ಪತ್ರದಲ್ಲಿ ಪ್ರಕಟಿಸಿದರು ಬ್ರಿಟಿಷರು. ಜತೀಂದ್ರರು ಬಾಲ್‌ಸೋರ್ ಪಟ್ಟಣದ ಹತ್ತಿರದ ಗೋಪಾಲಡಿಹಾ ಎಂಬ ಜಹಗೀರನ ಮುಖ್ಯ ಸ್ಥಳಕ್ಕೆ ಬಂದರು. ಇಲ್ಲಿ ಚಕ್ರವರ್ತಿ ಎಂಬವರು ಅರಣ್ಯ ಪ್ರದೇಶ ಬಿಟ್ಟು ಕೊಟ್ಟು ಅವರಿರಲು ವ್ಯವಸ್ಥೆ ಮಾಡಿದರು. "ಸಾಧುಬಾಬಾ" ಎಂಬ ಹೆಸರಿಟ್ಟುಕೊಂಡು ಜನಸೇವೆ ಮಾಡಲಾರಂಭಿಸಿದರು. ಅಲ್ಲಿಗೂ ಹುಡುಕಲು ಬಂದರು ಆಂಗ್ಲರು. ಆಗ ಅವರು ಮಣೀಂದ್ರರ ಮನೆಯಲ್ಲಿ ೫೦ ಗಂಟೆಗಳಿದ್ದು ಪೊಲೀಸರಿಗೆ ಸಿಕ್ಕದೆ ಚಳ್ಳೆಹಣ್ಣು ತಿನ್ನಿಸಿದರು.

ಭಾರತಮಾತೆ : ಜತೀಂದ್ರ, ಬುದ್ದು ಬಲಿ ಗಂಗಾ ನದಿ ದಾಟುವಾಗ ಹಳ್ಳಿಜನ ಢಕಾಯಿತರು ಎಂದು ಪೊಲೀಸರಿಗೆ ಸುದ್ದಿ ಮುಟ್ಟಿಸಿದರು. ಜತೀಂದ್ರ ಮದ್ದು ಗುಂಡು ಬೆನ್ನಿಗೆ ಕಟ್ಟಿಕೊಂಡು ಈಜಿ ಒಂದು ಪೊದೆಯ ಹತ್ತಿರ ಅವಿತುಕೊಂಡು ಪೊಲೀಸರು ಬಂದ ಕೂಡಲೇ ಗುಂಡಿನ ಸುರಿಮಳೆಗರೆದ. ಇದರಿಂದ ಹನ್ನೆರಡು ಜನ ಪೋಲೀಸರು ಸತ್ತರು. ಗುಂಡಿನ ಕಾಳಗದಲ್ಲಿ ಕೈ, ಎದೆಯಲ್ಲಿ ರಕ್ತ ಸುರಿಯುತ್ತಿದ್ದರೂ ಚಿತ್ತಪ್ರಿಯನೆಂಬಾತನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಕುಳಿತಲ್ಲೇ ಗುಂಡು ಹಾರಿಸಿದ. ಗುಂಡುಗಳು ಮುಗಿದವು. ಪೋಲೀಸರು ಕ್ರಾಂತಿಕಾರರನ್ನು ಬಂಧಿಸಿದರು. ಕಿಲ್ಬಿ ಎಂಬಾತ ಜತೀನನಿಗೆ ನೀರು ತಂದು ಕುಡಿಸಿದ. ಬಾಲ್‌ಸೋರ್ ಆಸ್ಪತ್ರೆಗೆ ಸೇರಿಸಲು ಹೋಗುವಾಗ ಕಿಲ್ಬಿ ಕೇಳಿದ-

ಕಿಲ್ಬಿ : ಏನಾದರೂ ಹೇಳುವುದಿದೆಯೇ ಜತೀಂದ್ರನಾಥ!

ಜತೀಂದ್ರ : ನನ್ನ ಜೊತೆಯ ತರುಣರಿಗೆ ಬ್ರಿಟಿಷ್ ರಾಜ್ಯದಲ್ಲಿ ಅನ್ಯಾಯವಾಗದಂತೆ ನೋಡಿಕೊಳ್ಳಿ. ಈ ಎಲ್ಲಾದಕ್ಕೂ ನಾನೇ ಹೊಣೆ.

ನಿರೂಪಕ : ಆಸ್ಪತ್ರೆಯಲ್ಲಿಗುಂಡು ತಗೆದು ಹೊಟ್ಟೆಯನ್ನು ಹೊಲಿದರು. ೧೯೧೫ರ ಸೆಪ್ಟೆಂಬರ್ ೧೦ ರಂದು ಆಪರೇಷನ್ ಹೊಲಿಗೆ ಬಿಚ್ಚಿದಾಗ ಶಕ್ತಿ ಕುಂದಿತು. ಹಿರಿಯ ಪೋಲೀಸ್ ಅಧಿಕಾರಿ ಸರ್ ಚಾರ್ಲ್ಸ್ ಟೇಗಾಟ್ ಎಂಬಾತ ಅಂತ್ಯ ಸಮಯದಲ್ಲಿದ್ದು ಕೇಳಿದ-

ಪೋಲೀಸ್ ಅಧಿಕಾರಿ : ಮುಖರ್ಜಿ ನಾನು ನಿಮಗೇನು ಮಾಡಬಲ್ಲೆ?

ಜತೀ : ಏನೂ ಬೇಡಿ. ನಿಮಗೆ ನನ್ನ ಹಾರ್ಧಿಕ ಅಭಿನಂದನೆಗಳು. ಈಗ ಎಲ್ಲಾ ಮುಗಿದಿದೆ. ಗುಡ್‌ಬೈ...ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಕೊನೆಗೊಳ್ಳಲಿ. ಇದೇ ನನ್ನ ಕೊನೆಯ ಆಸೆ! ಈ ಜಗತ್ತಿನಲ್ಲಿಯ ಕ್ಷಣಿಕವಾದ ಬಾಳಿನ ಮಹತ್ತರವಾದ ಗುರಿಗಾಗಿ ಈ ದೇಹವನ್ನು ಸಮರ್ಪಿಸುವ ಅವಕಾಶ ದೊರೆತದ್ದು ನನ್ನ ಭಾಗ್ಯ!

*

# ಎಂ.ಎನ್. ರಾಯ್

ಭಾರತಮಾತೆ : ರಾಷ್ಟ್ರೀಯ ಚಳುವಳಿಯಲ್ಲಿ ಅನೇಕ ದೇಶಭಕ್ತರು ಸ್ವಾತಂತ್ರ್ಯಕ್ಕೆ ಹೋರಾಡಿದರು. ತಮ್ಮ ಜೀವವನ್ನೇ ಮುಡುಪಾಗಿಟ್ಟು ಅಸುನೀಗಿದರು. ಹರಿಕುಮಾರ್ ಚಕ್ರವರ್ತಿ, ಸ್ಯಾಟ್‌ಕೋರಿ ಬ್ಯಾನರ್ಜಿ, ಸೈಲೇಶ್ವರ ಭೋಸ್, ಶ್ಯಾಮ ಸುಂದರ ಅವರೇ ಮೊದಲಾದವರ ಜೊತೆ ಸೇರಿದ ಎಂ.ಎನ್. ರಾಯ್ ಮತ್ತೊಬ್ಬ ಸ್ವಾತಂತ್ರ್ಯ ಹೋರಾಟಗಾರ. ಈಗ ಇವನ ಕಥೆ ಹೇಳುವೆ-

(ಸಂಗೀತ)

ನೈರುತ್ಯ ಬಂಗಾಳದ ಕೇಷೇಪುತ್ ಊರಿನ ದೀನಬಂಧು ಭಟ್ಟಾಚಾರ್ಯ ಹಾಗೂ ವಸಂತಕುಮಾರಿ ಅವರ ಮಗನೇ ನರೇಂದ್ರ ಭಟ್ಟಾಚಾರ್ಯ. ೧೯೦೧ರಲ್ಲಿ ದಕ್ಷಿಣ ಕಲ್ಕತ್ತಾದಲ್ಲಿನ ಶಿವನಾಯನ್ ಸ್ವಾಮಿಯವರ ಆಶ್ರಮದಲ್ಲಿ ಯೋಗ, ದೊಣ್ಣೆವರಸೆ ಹಾಗೂ ಕ್ರಾಂತಿಕಾರಕರಾಜಕೀಯವನ್ನು ಕಲಿತ. ನರೇಂದ್ರನ ಸೋದರ ಮಾವ ಅವಿನಾಶ ಭಟ್ಟಾಚಾರ್ಯರು ಸ್ವಾಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದರು. ಅವರು ನರೇಂದ್ರನಿಗೆ ರಾಜಕೀಯ ಭಾವನೆಗಳನ್ನು ತುಂಬಿದರು.

(ಬಂಗಾಳಿ ಗೀತೆ)

ಭಾರತಮಾತೆ : ೧೯೦೧ರಲ್ಲಿ ಬಂಗಾಳದ ಪ್ರೌಢ ಶಾಲೆಯಲ್ಲಿ ಓದುತ್ತಿದ್ದಾಗ

ನರೇಂದ್ರ : ಸಾರ್.......?

ಉಪಾಧ್ಯಾಯರು : ಓಹೋ...ನೀನೋ..., ಏನಪ್ಪಾ ನರೇಂದ್ರ?

ನರೇಂದ್ರ : (ತೊದಲು ದನಿಯಲ್ಲಿ) ನನ್ನನ್ನು ಮತ್ತು ಹರಿಕುಮಾರ್ ಶೈಲೇಶ್ವರ್ ಇಬ್ಬರನ್ನೂ ಶಾಲೆಯಿಂದ ಹೊರಗೆ ಹಾಕಿದ್ದೀರಿ...ಅದಕ್ಕೆ...

ಉಪಾಧ್ಯಾಯರು : ನಿಮ್ಮಿಬ್ಬರಿಗೂ ಗಿಣಿಗೆ ಹೇಳಿದ ಹಾಗೆ ಹೇಳಿದೆ, ಕೇಳಿದಿರಾ? ಪ್ರೌಢಶಾಲೆಯ ಮೆಟ್ಟಲನ್ನು ನೀವು ಇದೀಗ ತಾನೇ ಹತ್ತಿದ್ದೀರಿ. ಆಗಲೇ ರಾಜಕೀಯ ಭಾಷಣಗಳಿಗೆ ಹೋಗಲು ಶುರು ಮಾಡ್ಬಿಟ್ಟಿದ್ದೀರಿ. ಹದಿನಾಲ್ಕು ವರ್ಷ ತುಂಬಲಿಲ್ಲ, ಆಗ್ಲೇ ರಾಜಕೀಯ. ಮೊದಲು ಶಾಲೆ ಓದಿ ವಿದ್ಯೆ ಕಲಿಯಲು ಹೆಚ್ಚಿನ ಗಮನ ಕೊಡಬೇಕು ಎಂಬ ಪರಿಜ್ಞಾನ

ಬೇಡ್ವೇ? ದೊಡ್ಡವರಾದ ಮೇಲೆ ಅವೆಲ್ಲಾ ಎಂದು, ಸಾರಿ ಸಾರಿ ಹೇಳಿದ್ರೂ ಕೇಳಲಿಲ್ಲ. ನಿಮ್ಮಂಥವ್ರನ್ನು ಶಾಲೆಯಿಂದ ತಗೆದು ಹಾಕದೆ, ಇರಿಸಿಕೊಳ್ಳಲು ಆಗುತ್ತೇನು. ನಡೆ ನಡೆ.

(ಪಥ ಸಂಚಲನ ದೃಶ್ಯ)

ಭಾರತಮಾತೆ : ಸ್ವಾತಂತ್ರ್ಯದ ಬಗೆಗೆ ಒಲವು ಮೂಡಿ, ಮಿತ್ರ ಹರಿಕುಮಾರ್ ಸೈಲೇಶ್ವರ್ ಜೊತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ಮನಸ್ಸು ಮಾಡಿದ.

(ಸಂಗೀತ)

ಭಾರತಮಾತೆ : ಸಂಧ್ಯಾ ಪತ್ರಿಕೆಯ ಸಂಪಾದಕರಾದ ಬ್ರಹ್ಮಬಾಂಧವ ಉಪಾಧ್ಯಾಯರು ಸಂಪಾದಕೀಯದಲ್ಲಿ ಬರೆದ "ನಮಗೆ ಸಂಪೂರ್ಣ ಸ್ವಾತಂತ್ರ್ಯ ಬೇಕು? ಎಂಬುದು ವಿವೇಕಾನಂದರ ಸಂದೇಶ. ಬಂಕಿಮ ಚಂದ್ರರ "ಆನಂದ ಮಠ" ಪುಸ್ತಕ, ಇವೆಲ್ಲಾ ಈತನ ಸಾಕಷ್ಟು ಪ್ರಭಾವ ಬೀರಿದುವು.

(ಬಂಗಾಳಿ ಗೀತೆ)

ಭಾರತಮಾತೆ : ನರೇಂದ್ರ ಜುಗಂತರ್ ಪತ್ರಿಕೆಯಲ್ಲಿ ಭಾರತದ ರಾಜ್ಯಭಾರ ಮಾಡುವವರು ಯಾರು? ಎಂಬ ಲೇಖನ ಬರೆದ-

ನರೇಂದ್ರ : "ಜನರ ಧ್ವನಿ ದೇವರ ಧ್ವನಿ. ದೇಶವನ್ನು ಆಳುವವರನ್ನು ಚುನಾಯಿಸುವವರು ನಾವು" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ. ಅಲ್ಲದೆ -

ನರೇಂದ್ರ : ಬ್ರಿಟಿಷರನ್ನು ಬರೀ ಭಾಷಣಗಳಿಂದಲೇ ಆಗಲೀ ಮನವಿ ಕೊಡುವುದರಿಂದಾಗಲೀ ನಮ್ಮದೇಶದಿಂದ ಬಿಟ್ಟು ಕಳುಹಿಸಲಾಗದು. ಅವರನ್ನು ಬಲವಂತದಿಂದ ಕಳುಹಿಸಬೇಕು.

ಭಾರತಮಾತೆ : ೧೯೦೬ರಲ್ಲಿ ಜತೀನ್ ಮುಖರ್ಜಿಯವರನ್ನು ಭೇಟಿಮಾಡಿ ಅವರ ಅನುಯಾಯಿಯಾದ. ಕ್ರಾಂತಿಕಾರಕ ಚಟುವಟಿಕೆಗಳಲ್ಲಿ ಹಣ ಬೇಕಾದುದರಿಂದ ಒಮ್ಮೆ ಮಧ್ಯರಾತ್ರಿಯ ನಂತರ ರೈಲ್ವೆ ನಿಲ್ದಾಣಕ್ಕೆ ಬಂದು-

(ರೈಲ್ವೆ ನಿಲ್ದಾಣದ ದೃಶ್ಯ. ಕುದುರೆಯ ಮೇಲೆ ಬರುವುದು)

ನರೇಂದ್ರ : ಸ್ಟೇಷನ್ ಮಾಸ್ಟರ್, ಎಲ್ಲಿ ಎಷ್ಟು ಹಣ ಇದೆ? ಇತ್ತ ತಾ.

ಸ್ಟೇ.ಮಾ. : ಇದು ನನ್ನದಲ್ಲ, ಸರ್ಕಾರದ್ದು. ನಾನು ನಿನಗೆ ಹ್ಯಾಗೆ ಕೊಡಲಿ? ಕೊಟ್ಟರೆ ನಾನು ಜೈಲಿಗೆ ಹೋಗಬೇಕಾಗುತ್ತೆ.

ನರೇಂದ್ರ : ಕೊಡ್ತೀಯೋ ಇಲ್ಲ ಸರಿಯಾದ ಶಾಸ್ತಿ ಆಗಬೇಕೋ.

ಸ್ಟೇ.ಮಾ. : ಹಾಗೆಲ್ಲಾ ಮಾಡಿ ನನ್ನ ಕೆಲಸ ಕಳೀಬೇಡಪ್ಪಾ.

ನರೇಂದ್ರ : ಹೂಂ...ಎಷ್ಟಿದೆ? ಇಲ್ಲದಿದ್ದರೆ ಗುಂಡಿನೇಟಿಗೆ ಬಲಿಯಾಗಬೇಕಾದೀತು.

ಸ್ಟೇ.ಮಾ : ಏ....ಏಳು... ನೂರು.....

ನರೇಂದ್ರ : ಕೊಡು ಇಲ್ಲಿ

ಸ್ಟೇ.ಮಾ : ಬೇಡಪ್ಪಾ.

ನರೇಂದ್ರ : ಈತ ಹೀಗೆ ಹೇಳಿದರೆ ಕೊಡುವವನಲ್ಲ, ಕೊಡು ಇಲ್ಲಿ (ಎಂದು ಹಣವನ್ನು ತೆಗೆದುಕೊಂಡ).

ಸ್ಟೇ.ಮಾ : ಅಯ್ಯೋ ಹಣ... ಹಣ...... ದರೋಡೆಕಾರ.... ದರೋಡೆಕಾರ..... (ಕುದುರೆ ಹೋಗುವ ಶಬ್ದ)

ಭಾರತಮಾತೆ : ಸ್ಟೇಷನ್ ಮಾಸ್ಟರ್ ದೂರಿನಂತೆ ನರೇಂದ್ರನ ದಸ್ತಗಿರಿ ಆಯ್ತು. ಪ್ರಥಮ ದರ್ಜೆಯ ನ್ಯಾಯಾಧೀಶರು ಸರಿಯಾದ ಸಾಕ್ಷಿಗಳಿಲ್ಲವೆಂದು ಬಿಡುಗಡೆ ಮಾಡಿದರು. ಅಲ್ಲಿಂದ ಕಲ್ಕತ್ತಾಕ್ಕೆ ಬಂದು ಕೈಬಾಂಬು ತಯಾರಿಕೆ ಕಲಿತ! ಒಮ್ಮೆ ಒಂದು ಸಣ್ಣ ಹುಡುಗಿ ಕತ್ತಿನಲ್ಲಿ ಚಿನ್ನದ ಸರವನ್ನು ಹಾಕಿಕೊಂಡು ಹೋಗುತ್ತಿದ್ದುದು ಈತನ ಕಣ್ಣಿಗೆ ಬಿತ್ತು,

(ಕುದುರೆ... ಶಬ್ದ...... ಆ ಹುಡುಗಿಯ ಕೊರಳಿಗೆ ಕೈಹಾಕಿ ಕಿತ್ತುಕೊಂಡ. ಹುಡುಗಿ "ಅಯ್ಯೋ.... ನನ್ನ ಸರ.... ಸರ" ಎಂದು ಚೀರಿತು. ಹರಿಕುಮಾರ್ ಅವನ್ನು ನೋಡಿ-)

ಹರಿಕುಮಾರ್ : ಏಯ್ ಏನ್ ಮಾಡ್ದೆ?

ನರೇಂದ್ರ : ಮಾಡಿದ್ದೇನು ಅಂದ್ರೆ ಹುಡುಗಿಯ ಕತ್ತಿನ ಸರ ಕಸಿದುಕೊಂಡೆ.

ಹರಿ : ಮಹಾ ಧೀರ ಬಿಡು.

ನರೇಂದ್ರ : ರಾಜಕೀಯ ಚಟುವಟಿಕೆಗಳಿಗೆ ಹಣ ಬೇಡವೇ? ಅದಕ್ಕೇ ಈ ದರೋಡೆ ಮಾಡಿದೆ. ಇದು ಸಮಾಜದ ಒಳಿತಿಗಲ್ಲವೇನೋ? ಅದರಲ್ಲಿ ತಪ್ಪೇನು?

ಹರಿಕುಮಾರ್ : ಆ ಚಿಕ್ಕ ಹುಡುಗಿಯ ಕತ್ತು ನೋವು ಮಾಡಿ ಕಿತ್ತುಕೊಂಡೆಯಲ್ಲಾ ನಿನಗೆ ನಾಚಿಕೆ ಆಗುವುದಿಲ್ಲವೇ? ಈಗ ನಿನ್ನ ಕತ್ತಿನ ಪಟ್ಟಿ ಹಿಡಿಯುವೆ ತಾಳು......

ನರೇಂದ್ರ : ಇದೇನು ಮಾಡಿದೆ...... ಬಿಡು... ಬಿಡು...... (ಗ್ದ ಬಿಗಿತ) ನಾನು ಮಾಡಿದುದು ಸರ್ವಥಾ ತಪ್ಪು! ಇನ್ನು ಮುಂದೆ ಇಂಥ ಕೆಲಸ ಮಾಡೋಲ್ಲ.

ಭಾರತಮಾತೆ : ಮಲಯಾ, ಇಂಡೋನೇಷ್ಯಾ, ಇಂಡೋ ಚೈನಾ, ಜಪಾನ್, ಫಿಲಿಫೈನ್ಸ್, ಕೊರಿಯಾ, ಅಮೇರಿಕಾ, ಚೈನಾ ದೇಶಗಳಿಗೆ ತಿರುಗಿ, ಶಸ್ತ್ರಾಸ್ತ್ರಗಳನ್ನು ಪಡೆಯಲಾರದೆ ೧೯೧೬ರಲ್ಲಿ ಭಾರತಕ್ಕೆ ಹಿಂತಿರುಗಿದ. ಅಷ್ಟರಲ್ಲಿ ಜಾಟನ್ ಮುಖರ್ಜಿ ಅವರು ಪೊಲೀಸರ ಗುಂಡೇಟಿಗೆ ಆಹುತಿಯಾಗಿದ್ದುದನ್ನು ತಿಳಿದು ಬಹಳ ದುಃಖಪಟ್ಟ.

(ಬ್ರಿಡ್ಜ್ ಸಂಗೀತ)

ದಕ್ಷಿಣ ಕಲ್ಕತ್ತಾದ ಕಿದ್ದೇರ್‌ಪುರ್‌ನಲ್ಲಿ ಸಿಗ್ನಲಿಂಗ್ ಮತ್ತು ಟೆಲಿಗ್ರಫಿ, ಗೆರಿಲ್ಲಾ ತಂತ್ರಗಳ ಬಗೆಗೆ ಎರಡು ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದ. ಅಮೇರಿಕಾದಲ್ಲಿ ಮನಬೇಂದ್ರನಾಥ್‌ರಾಯ್ ಎಂಬ ಹೆಸರಿಂದ ಶಸ್ತ್ರಾಸ್ತ್ರ ಪಡೆಯಲು ಶ್ರಮಿಸಿದ. ಅಂದಿನಿಂದ ನರೇಂದ್ರನಾಥ್, ಮನಬೇಂದ್ರನಾಥ್‌ರಾಯ್, ಎಂ.ಎನ್. ರಾಯ್ ಎಂದೇ ಖ್ಯಾತನಾದ. ತನ್ನ ವಿಚಾರಧಾರೆ ಹರಿಸಲು ವಾರ ಪತ್ರಿಕೆಯನ್ನು ಆರಂಭಿಸಿದ. ಹಂಚಿ ಹೋಗಿದ್ದ ಬಂಗಾಳದ ಕ್ರಾಂತಿಕಾರರನ್ನು ಒಟ್ಟುಗೂಡಿಸಿದ.

* * *

ಒಮ್ಮೆ ಮುಸ್ಸೋರಿಯಲ್ಲಿ ತಂಪಾದ ಹವೆಯನ್ನು ಸೇವಿಸುತ್ತಾ ಹೆಂಡತಿಯ ಜೊತೆ ಬರುವಾಗ ಎಡವಿ ೮೦ ಅಡಿ ಆಳದ ಕೊರಕಲಿಗೆ ಬಿದ್ದು ಮೂಳೆ ಮುರಿಯಿತು. ಮೆದುಳಲ್ಲಿ ರಕ್ತ ಪದೇ ಪದೇ ಹೆಪ್ಪುಗಟ್ಟಿ ೧೯೫೪ರ ಜನವರಿ ೨೬ರ ಮುಂಜಾನೆ ಇಹವನ್ನು ತ್ಯಜಿಸಿದ.

(ಶೋಕ ಸಂಗೀತ)

ಎಂ.ಎನ್. ರಾಯ್ ನಮ್ಮೆಲ್ಲರನ್ನೂ ಬಿಟ್ಟು ಅಗಲಿದರೂ ಅವನ ಕ್ರಾಂತಿಕಾರಿ ಕಿಡಿಗಳು ಇನ್ನೂ ಪ್ರಕಾಶಮಾನವಾಗಿ ಉರಿಯುತ್ತಿವೆ. ಅವನ ವಿಚಾರಧಾರೆ ಎಲ್ಲರನ್ನೂ ಎಚ್ಚರಿಸುವಂತೆ ಮಾಡುವ ಕೆಚ್ಚು ಮೂಡಿಸುತ್ತವೆ.

(ಸಂಗೀತ)

ನರೇಂದ್ರ : ಫ್ಯಾಸಿಸ್ಟ್ ಶಕ್ತಿಗಳು ನಾಶವಾಗದೆ ವಿಶ್ವಕ್ಕೆ ಶಾಂತಿ ಸಿಗದು. ಸ್ವಾತಂತ್ರ್ಯ, ಪ್ರಜಾತಂತ್ರ ಉಳಿಯದು. ಅದಕ್ಕೆ ಅದರ ನಾಶಕ್ಕೆ ನಿಂತ ಮಿತ್ರ ರಾಷ್ಟ್ರಗಳನ್ನು ಬೆಂಬಲಿಸಿ ಮಿತ್ರ ರಾಷ್ಟ್ರಗಳು ಗೆದ್ದಲ್ಲಿ, ಭಾರತ ಸ್ವಾತಂತ್ರ್ಯವಾಗುವುದರಲ್ಲಿ ಯಾವ ಅನುಮಾನವೂ ಇಲ್ಲ.

(ಸಂಗೀತ)

ದೊಡ್ಡ ಜಮೀನುದಾರರನ್ನು ಇಲ್ಲದ ಹಾಗೆ ಮಾಡುವುದರಿಂದ ಗ್ರಾಮಾಂತರ ಪ್ರದೇಶಗಳು ಆರ್ಥಿಕವಾಗಿ ಮುಂದುವರಿಯಲು ಸಾಧ್ಯ. ಇಲ್ಲದಿದ್ದರೆ ದೊಡ್ಡ ಜಮೀನುದಾರರು, ಸ್ವಲ್ಪ ಜಮೀನಿರುವವರು ಹಾಗೂ ಇಲ್ಲದವರನ್ನು ತಮ್ಮ ಉನ್ನತಿಗೆ ಉಪಯೋಗಿಸಿಕೊಳ್ಳುತ್ತಾಳೆ.

(ಸಂಗೀತ)

✳

# ಕೌಜಲಗಿ ಹಣಮಂತರಾಯರು

(ದೇವರ ಪೂಜೆ ಮಾಡುವ ಮಂತ್ರ ಪಠಣ, ಘಂಟಾನಾದ)

ನಾರಾಯಣ ಮಾಸ್ತರ್ ಹೆಂಡತಿ : ಏನು ಇಷ್ಟೊಂದು ದುರಂಧುರಿಯಾಗಿ ಪೂಜೆ ಮಾಡ್ತಿದ್ದೀರಿ?

ನಾರಾಯಣ : ದೇವರಲ್ಲಿ ಭಕ್ತಿ ಇಟ್ಟು ಪೂಜೆ ಮಾಡಿದ್ರೆ ಒಳ್ಳೆಯದು. ಆ ಹಣಮನಿಗೆ ಕಾಲು ಬರಲಿ ಅಂತ ಈ ವಿಶೇಷ ಅಭಿಷೇಕ, ಪೂಜೆ!

ಹೆಂಡತಿ : ಒಳ್ಳೆ ವಿಚಿತ್ರ ನಿಮ್ಮದು! ಏನು ಆತನ ಮೇಲೆ ಅಷ್ಟೊಂದು ಪ್ರೀತಿ? ಶಾಲೆಯಲ್ಲಿ ಎಲ್ಲರಿಗೂ ಥಳಿಸಿ 'ಗಡ್ಡದ ಮಾಸ್ತರ್' ಅಂತ್ಲೇ ಪ್ರಸಿದ್ಧಿ ಪಡೆದಿದ್ದೀರಿ. ಆದರೆ ಈ ಹಣಮನಿಗೆ ಒಂದು ದಿನ್ನೂ ಒಂದು ಏಟೂ ಹೊಡೆದಿಲ್ವಂತೆ. ಆತನನ್ನು ಹೊತ್ತುಕೊಂಡು ಹೋಗಿ ಮೆರಿಸ್ತೀರಿ ಅಂತ ಎಲ್ರೂ ಮಾತಾಡ್ಕೊಳ್ತಾರೆ.

ನಾರಾಯಣ : ನಿಜ, ಆತನನ್ನು ಕಂಡ್ರೆ ನನಗೆ ತುಂಬಾ ಪ್ರೀತಿ. ಕೌಜಲಗಿ ಶ್ರೀಪತಿರಾಯರು ನಾರಾಯಣ ಮಾಸ್ತರ್ ಅಂತ ನನ್ನ ನಂಬಿ ಬಿಟ್ಟು ಹೋಗಿದ್ದಾರೆ. ಆತನಿಗೆ ವಿದ್ಯೆ ಕಲಿಸುವುದು, ಆತನ ಮೇಲೆ ಪ್ರೀತಿ, ಅನುಕಂಪ ತೋರುವುದು ನಮ್ಮ ಕರ್ತವ್ಯ ಅಲ್ವೇ? ಎಲ್ಲರಂತಲ್ಲ ಆತ. ಅವನ ಯೋಗ್ಯತೆ ಯಾರಿಗೂ ಗೊತ್ತಿಲ್ಲ. ದೇವರಿಗೆ ಈ ಪೂಜೆಯ ಕಾವು ಹತ್ತಿದ್ರೆ ಕಾಲು ತಾನಾಗಿಯೇ ಗುಣವಾಗ್ಲಿ ಅಂತ ಈ ವಿಶೇಷ ಪೂಜೆ ಮಾಡ್ತಿದ್ದೀನಿ. ಆತನಿಗೆ ದೇವರ ದಯೆಯಿಂದ ಕಾಲುಗಳು ಸ್ವಾಧೀನಕ್ಕೆ ಬರ್ತಾವೆ ಅಂತ ನನ್ನ ನಂಬಿಕೆ.

(ಮಂತ್ರ ಘೋಷಣೆಯೊಂದಿಗೆ ಮುಗಿಯುವುದು)

ಭಾರತಮಾತೆ : ವಿಜಾಪುರ ಜಿಲ್ಲೆಯ ಮುಧೋಳಿನ ಕೌಜಲಗಿ ಶ್ರೀಪತಿರಾಯರು ಯಮುನಾಬಾಯಿಯವರ ವ್ರತ, ಉಪವಾಸ, ಹರಕೆಯಿಂದ ೩೧-೧೨-೧೮೯೦ರಲ್ಲಿ ಹಣಮಂತರಾಯ ಜನಿಸಿದ. ಈಗ ಆತನ ಕಥೆ ಹೇಳುವೆ ನನ್ನ ಕಥೆ ಹೇಳುವೆ.

(ಸಂಗೀತ)

ಭಾರತಮಾತೆ : ಗುರುಗಳ ಕಾರಣ್ಯದಿಂದ ಹಣಮಂತಪ್ಪನಿಗೆ ಕೆಲವು ದಿನಗಳಲ್ಲೇ ಕಾಲುಗಳು ಬಂದವು. ಈತ ಶಾಲೆಯಲ್ಲಿ ಜಾಣನಾಗಿದ್ದ. ಸಿಟ್ಟಿನ ಉಪಾಧ್ಯಾಯರಿಗೂ ಈತನ ಸೌಮ್ಯ ಮಾತುಗಳು ಮೆಚ್ಚುಗೆಯಾಗಿ ಸಿಟ್ಟು ಇಳಿದು ಹೋಗುತ್ತಿತ್ತು.

(ಸಂಗೀತ)

ಹಣಮಂತರಾಯ- ಪರದೇಶಿ ವಸ್ತು ಆಕರ್ಷಕ
ಆದರವು ನಮ್ಮ ದೇಶಕ್ಕೆ ಮಾರಕ
ಪರದೇಶದ ಸಕ್ಕರೆಯ ಸವಿಯದಿರಿ
ಉಡುಪುಗಳನ್ನು ಧರಿಸದಿರಿ
ಕೈಗೊಳ್ಳಿರೆಲ್ಲಾ ಸ್ವದೇಶಿ ವ್ರತವ
ವಿದೇಶಿ ವಸ್ತುಗಳಿಗೆ ಬಹಿಷ್ಕಾರವಿರಲಿ
ಸ್ವದೇಶಿ ವಸ್ತುಗಳಿಗೆ ಆವಿಷ್ಕಾರ ಬರಲಿ.

ಒಬ್ಬ : ಹೌದು ಹಣಮಂತ ನೀನು ಹೇಳೋ ಪದ್ಯ ನೂರಕ್ಕೆ ನೂರು ಸತ್ಯ.

ಹಣಮಂತ : ನಮ್ಮ ದೇಶದಲ್ಲೇ ಅಂಗಿಯ ಗುಂಡಿ, ಬ್ರಷ್, ಲೇಖಣಿ, ಸೀಸದ ಕಡ್ಡಿ ತಯಾರಿಸಬಹುದು. ಅದಿರಲಿ ಈಗ ವಿಷಯ ಗೊತ್ತಾಯಿತೆ?

ಒಬ್ಬ : ಏನು?

ಹಣಮಂತ : ಲೋಕಮಾನ್ಯ ತಿಲಕರನ್ನು ಬಂಧಿಸಿ ಕಠಿಣಶಿಕ್ಷೆಗೆ ಗುರಿಪಡಿಸಿದ್ದಾರಂತೆ, ಇಂಗ್ಲಿಷಿನವರು. ಆ ಸರ್ಕಾರವನ್ನು ನಾವು ನಾಶಮಾಡಲು ಮುಂದಾಗಬೇಕು.

ಒಬ್ಬ : ಹೌದು ರಹಸ್ಯವಾಗಿ ಬಾಂಬು ತಯಾರಿಸಬೇಕು. ಮುಧೋಳದ ಮದ್ದಿನ ಕಾರ್ಖಾನೆಯಲ್ಲಿ ಸ್ವಲ್ಪ ಮದ್ದು ಕದ್ದು ತರೋಣ.

ಒಬ್ಬ : ಅಗತ್ಯವಾಗಿ.

(ಸಂಗೀತ)

ಭಾರತಮಾತೆ : ಹಿರಿಯರ ಆಸೆಯಂತೆ ಹಣಮಂತರಾಯನಿಗೆ ಕೃಷ್ಣಾಬಾಯಿಯೊಡನೆ ವಿವಾಹವಾಯಿತು. ತಂದೆ ತಾಯಿಯನ್ನು ಕಳೆದುಕೊಂಡ ಮೇಲೆ ಮುಂಬಯಿಯಲ್ಲಿ ಎಲ್.ಎಲ್.ಬಿ. ಓದಿದ. ೧೯೧೫ರಲ್ಲಿ ಗಾಂಧೀಜಿಯ ಭಾಷಣ ಕೇಳಿ ಕ್ರಾಂತಿಕಾರ ಮಾತುಗಳು ಹಿಡಿಸದೆ ಆತನೊಡನೆ ಚರ್ಚಿಸಿದ. ೧೯೧೬ರಲ್ಲಿ ವಕೀಲ ವೃತ್ತಿ ಆರಂಭಿಸಿದ. ಸತ್ಯಕ್ಕೆ ಜಯ ದೊರೆಯದಿದ್ದರೆ ಆತನ ಮನಸ್ಸು ಬಹಳ ನೋಯುತ್ತಿತ್ತು. ಒಮ್ಮೆ ಒಂದು ಕೇಸಿನಲ್ಲಿ -

ರಾಮ : ಸ್ವಾಮಿ ಈ ಹಣ ಸ್ವೀಕರಿಸಿ, ಒಳ್ಳೆ ಉಪಕಾರ ಮಾಡಿರಿ.

ಹಣಮಂತ : ನಿರಪರಾಧಿಯೊಬ್ಬನಿಗೆ ಶಿಕ್ಷೆ ಆಗುವುದನ್ನು ನನ್ನಿಂದ ತಪ್ಪಿಸಲಾಗಲಿಲ್ಲ. ಆದ್ದರಿಂದ ನನಗೆ ಹಣ ಕೊಡಬೇಡಿ.

ರಾಮ : ನಮ್ಮ ಹುಡುಗನ ಮರಣ ದಂಡನೆ ತಪ್ಪಿಸಿದ್ರಿ, ಆರು ವರ್ಷ ಕಠಿಣ ಶಿಕ್ಷೆಯಾಯಿತು. ಈ ಉಪಕಾರವನ್ನು ನಾವೆಂದಿಗೂ ಮರೆಯಲಾಗದು ಅದಕ್ಕೋಸ್ಕರ.

ಹಣಮಂತ : ಅವನು ನಿರಪರಾಧಿಯಲ್ಲವೇ!

ರಾಮ : ಕೊಲೆ ಮಾಡಿದವನೇ ಅವನು ಸ್ವಾಮಿ.

ಹಣಮಂತ : ಹ್ಲಾಂ...!

(ಸಂಗೀತ)

ಭಾರತಮಾತೆ : ಹಣಮಂತರಾಯನ ಹೆಂಡತಿ ವಿಷಮಶೀತ ಜ್ವರಕ್ಕೆ ತುತ್ತಾಗಿ ಇಹವನ್ನು ತ್ಯಜಿಸಿದಳು. ಅಕ್ಕ ವಿಧವೆಯಾಗಿ ಐದು ಮಕ್ಕಳೊಂದಿಗೆ ಬಂದಳು. ಹಣಮಂತ ಸಂಸಾರದ ಈ ಚಿಂತೆಯಲ್ಲಿದ್ದ.

ಹಣಮಂತ : ರಾಷ್ಟ್ರನಾಯಕರು, ಯುವಕರು ದೇಶಸೇವೆಗೆ ಮುಂದಾಗಬೇಕೆಂದು ಕರೆ ಕೊಟ್ಟಿದ್ದಾರೆ. ನಾನು ಸೈನ್ಯಕ್ಕೆ ಸೇರಿಯೇ ಬಿಡುವೆ.

(ಸೈನಿಕರ ಮಾರ್ಚ್‌ಫಾಸ್ಟ್ ಎಫೆಕ್ಟ್)

ಭಾರತಮಾತೆ : ಪ್ರಪಂಚದ ಯುದ್ಧವಾಗಿ ಇಂಗ್ಲೆಂಡಿಗೆ ಜಯವಾಯಿತು. ಆಂಗ್ಲರು ಭಾರತಕ್ಕೆ ಸ್ವಾತಂತ್ರ್ಯ ಕೊಡಲಿಲ್ಲ. ಪಂಜಾಬಿನ ಜಲಿಯನ್ ವಾಲಾಬಾಗ್‌ನಲ್ಲಿ ಸಭೆ ಸೇರಿದ್ದ ಜನರಿಗೆ ಆಂಗ್ಲರು ಗುಂಡು ಹಾರಿಸಿದರು. ನೂರಾರು ಜನ ಸತ್ತರು. ಗಾಂಧಿ, ವಿದ್ಯಾರ್ಥಿಗಳು, ವಕೀಲರು, ಸರ್ಕಾರಿ ನೌಕರರು ಸ್ವಾತಂತ್ರ್ಯಕ್ಕೆ ಮುಂದಾಗಬೇಕೆಂದು ಕರೆ ಇತ್ತ. ಹಣಮಂತನಿಗೆ ವಕೀಲ ವೃತ್ತಿಯಿಂದ ಹೆಚ್ಚು ಸಂಪಾದನೆ ಇತ್ತು. ಆದರೂ ಬಿಟ್ಟು ಮುನ್ನುಗ್ಗಿದ. ಆಲೂರು ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಕೆ.ಆರ್. ಕಾರಂತರು, ಕರ್ನಾಡ ಸದಾಶಿವರಾಯರು, ದಿವಾಕರ ರಂಗರಾಯರು, ಹುಕ್ಕೇರಿ ಕರ್ ರಾಮರಾಯರೇ ಮೊದಲಾದವರು ಚಳುವಳಿಗಳಲ್ಲಿ ಮುಂದಾಗಿದ್ದರು.

ಹಣಮಂತ : ಭಾರತ ಸ್ವಾತಂತ್ರ್ಯವಾಗದೆ ನಮ್ಮ ಜನರು ಉನ್ನತಿ ಕಾಣಲು ಸಾಧ್ಯವಿಲ್ಲ. ನಾವೇ ನೂಲು ತೆಗೆದು ಖಾದಿ ತೊಡಬೇಕು. ಮದ್ಯಪಾನ ಬಹಿಷ್ಕರಿಸಬೇಕು.

ಭಾರತಮಾತೆ : ಈ ವಿಚಾರ ತಿಳಿದು ಪೋಲಿಸರು ಈತನನ್ನು ಬಂಧಿಸಿ ರಾಜದ್ರೋಹಿ ಖಟ್ಲೆ ಹಾಕಿ ನ್ಯಾಯಾಲಯಕ್ಕೆ ಗುರಿಪಡಿಸಿದರು.

ನ್ಯಾಯಾಧೀಶ ಹೆಂಡ್‌ರ್ಸನ್: ಮೊದಲು ನಿನ್ನ ಟೋಪಿಯನ್ನು ತಗೆದು ಬಾ. ಪೋಲಿಸರೇ ಆತನನ್ನು ಕರೆದೊಯ್ಯಿರಿ

ಪೋಲಿಸ್ : ಟೋಪಿ ತಗೆದು ಹಾಕಿ ಬಾ...

ಹಣಮಂತ : ಇಲ್ಲ...

ನ್ಯಾಯಾಧೀಶ : ಏನು ನನ್ನ ಆಜ್ಞೆಯನ್ನು ಧಿಕ್ಕರಿಸುವೆಯಾ?

ಹಣಮಂತ : ಧಿಕ್ಕಾರವಲ್ಲ ಇದು ನನ್ನ ಉಡುಪು. ನನ್ನ ಸ್ವಾಭಾವಿಕ ಹಕ್ಕು. ಅದನ್ನು ನಾನು ಕಾಪಾಡಿಕೊಳ್ಳುತ್ತಿದ್ದೇನೆ ಅಷ್ಟೇ?

ನ್ಯಾಯಾಧೀಶ : ನಮ್ಮ ಆಜ್ಞೆ ದಿಕ್ಕರಿಸುದದಕ್ಕೆ ೨೦೦ ರೂಪಾಯಿ ದಂಡ ಕೊಡಬೇಕು. ಹೋಗಿ ನಿನ್ನ ಟೋಪಿಯನ್ನು ಕಳಚಿ ಬಾ. ಮತ್ತೆ ಹಾಗೇ ಬಂದಿರುವೆಯಾ? ಈ ತಪ್ಪಿಗೆ ಇನ್ನೂ ೨೦೦ ರೂಪಾಯಿ ವಿಧಿಸಿರುವೆ.

ಹಣಮಂತ : ನಿಮ್ಮ ಆಜ್ಞೆಯ ಪತ್ರಗಳನ್ನು ಕೊಡಿ. ನಾನು ಅಪೀಲು ಮಾಡುತ್ತೇನೆ.

ಹೆಂಡರ್ಸನ್ : ಟೋಪಿ ಬದಲಿಸಿಕೊಂಡು ಬಂದು ಕೇಳಿಕೋ.

ಹಣಮಂತ : ಅದು ಸಾಧ್ಯವಿಲ್ಲ.

ಭಾರತಮಾತೆ : ಮಹಾತ್ಮಗಾಂಧಿ ಈತನ ಧೈರ್ಯವನ್ನು ಮೆಚ್ಚಿಕೊಂಡ. "ಯಂಗ್ ಇಂಡಿಯಾ" ಪತ್ರಿಕೆಯಲ್ಲಿ ಹಣಮಂತ ಅಪೀಲು ಮಾಡಿದ. ದಂಡದ ಹಣವನ್ನು ಹಿಂದಕ್ಕೆ ಪಡೆಯಬಹುದೆಂದು ತೀರ್ಪು ಬಂತು. ಹೆಂಡರ್ಸನ್ ನ್ಯಾಯಾಧೀಶ ಸೊಲ್ಲಾಪುರ ನ್ಯಾಯಾಲಯಕ್ಕೆ ಕೇಸು ಹಾಕಿದ. ಅಲ್ಲಿ ಹಣಮಂತನಲ್ಲಿ ಒಂದು ವರ್ಷ ಸದ್ವರ್ತನೆಯ ಜಾಮೀನು ಕೊಡಬೇಕು. ಇಲ್ಲವೇ ಒಂದು ವರ್ಷ ಜೈಲು ಅನುಭವಿಸಬೇಕೆಂದು ತೀರ್ಮಾನವಾಯಿತು. ಈತ ಜೈಲಿನ ನರಕವನ್ನೇ ಅನುಭವಿಸಿದ. ಜೈಲಿನ ಅನ್ಯಾಯಗಳ ವಿರುದ್ಧ ಹೋರಾಡಿ ಸುಧಾರಣೆ ತರುವಂತೆ ಮಾಡಿದ. ಬೆಳಗಾವಿಯಲ್ಲಿ ಈತ ಏರ್ಪಡಿಸಿದ್ದ ಖಾದಿ ಗ್ರಾಮೋದ್ಯೋಗಿ ವಸ್ತು ಪ್ರದರ್ಶನವನ್ನು ಗಾಂಧಿ ಮೆಚ್ಚಿಕೊಂಡ. ವಿಜಾಪುರದ ಹತ್ತಿರದ ಗಲಬೆಯಲ್ಲಿ ಖಾದಿ ಕೇಂದ್ರ ಸ್ಥಾಪಿಸಿದ.

ಹಣಮಂತ : ಹಳ್ಳಿಯ ಜನರೇ ಬಿಡುವಿನ ವೇಳೆಯನ್ನು ವ್ಯರ್ಥವಾಗಿ ಕಳೆಯಬೇಡಿ, ರಾಟೆಯಿಂದ ನೂಲಲು ಆರಂಭಿಸಿ. ಅದರಿಂದ ಆದಾಯ ಬರುತ್ತದೆ. ನೀವು ಮಾಡಿದ ರೊಟ್ಟಿಯನ್ನು ನಿಮ್ಮ ಮಕ್ಕಳು ತಿನ್ನುವಂತೆ ನೀವು ನೂತ ನೂಲಿನ ಬಟ್ಟೆಯನ್ನು ನಿಮ್ಮ ಮಕ್ಕಳಿಗೆ ತೊಡಿಸಿ.

ಭಾರತಮಾತೆ : ಹಳ್ಳಿ ಹಳ್ಳಿಗಳಲ್ಲೂ ಈ ವಿಚಾರ ತಿಳಿಸಿ ಖಾದಿ ಹಣಮಂತ ಎಂದೇ ಖ್ಯಾತನಾದ. "ಗ್ರಾಮೋದ್ಯೋಗಿಗಳ ಕೈಪಿಡಿ" ಎನಿಸಿದ್ದ. ೧೯೩೪ರಲ್ಲಿ

ಗಾಂಧಿಯವರು "ಅಖಿಲ ಭಾರತ ಗ್ರಾಮೋದ್ಯೋಗ ಸಂಘದ" ಕರ್ನಾಟಕ ಶಾಖೆಯ ಕಾರ್ಯದರ್ಶಿಯಾಗಿ ಈತನನ್ನು ನೇಮಿಸಿದರು. ಈತನನ್ನು 'ಬಡವರ ಬಂಧು' ಎಂದೇ ಭಾವಿಸಿದ್ದರು ಜನರು. ಸಾಮಾಜಿಕ, ರಾಜಕೀಯ ಚಟುವಟಿಕೆಗಳ ಜೊತೆ, ಮರಾಠಿ, ಕನ್ನಡ ಸಾಹಿತ್ಯದಲ್ಲೂ ಕೃಷಿ ಸಾಗಿಸಿದ. ಈತನದು ವಿನೋದ ಸ್ವಭಾವವಾಗಿತ್ತು ಎಂಬುದಕ್ಕೆ ಆತ ಬರೆದ ಲಲಿತ ಪ್ರಬಂಧಗಳೇ ಸಾಕ್ಷಿ!

ಆತ ತನ್ನ ದಿನಚರಿಯಲ್ಲಿ-

ಹಣಮಂತ : ನಾನು ಯಾವ ಕ್ಷಣಕ್ಕೂ ಮರಣಹೊಂದಬಹುದು. ನಾನು ನೂತನೂಲಿನಿಂದ ಅರಿವೆಯ ನೇಯಿಸಿ ರಾಷ್ಟ್ರ ಧ್ವಜ ತಯಾರು ಮಾಡಬೇಕು ಎಂದು ಬರೆದುಕೊಂಡಿದ್ದ. ಮತ್ತೆ ಮತ್ತೆ ಜೈಲುವಾಸದಿಂದ ಕರುಳ ರೋಗದಿಂದ, ಸಂಧಿವಾತ ರೋಗಗಳು ಬಂದು , ಶಸ್ತ್ರ ಚಿಕಿತ್ಸೆ ಉಪಚಾರದಿಂದಲೂ ಆರೋಗ್ಯ ದೃಢಕಾಯವಾಗಲಿಲ್ಲ. ೧೯೪೫ರ ಜೂನ್ ೧೦ರಂದು ಹಣಮಂತರಾಯನ ಪ್ರಾಣಪಕ್ಷಿ ಹಾರಿ ಹೋಯಿತು.

(ಶೋಕ ಗೀತೆ)

ಗಾಂಧಿ ಈ ಸುದ್ದಿ ತಿಳಿದು-

ಶ್ರೀ ಹಣಮಂತರಾಯರು ಪೃಥ್ವಿಯ ಮೇಲಿನ ಋಣ ತೀರಿಸಿದ್ದಾರೆ. ಅವರ ಮರಣದಿಂದ ಅವರ ಕುಟುಂಬಕ್ಕಾದ ದುಃಖದಲ್ಲಿ ನಾನೂ ಸಹ ಭಾಗಿಯಾಗಿರುವೆ, ಅವರ ಹಿಂದೆ ಇನ್ನು ಯಾರಿರುವರು? ಅವರ ಕೆಲಸವನ್ನು ಯಾರು ಸಾಗಿಸಬಲ್ಲರು ಎಂದು ಬರೆದರು.

✳

# ಜನಾರ್ಧನರಾವ್ ದೇಸಾಯಿ

ನಿರೂಪಕ : ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ವಲಕುಂದಿನ್ನಿಯಲ್ಲಿ ೨೮-೨-೧೮೯೨ರಲ್ಲಿ ಜನಾರ್ಧನರಾವ್ ದೇಸಾಯಿ ಜನ್ಮವೆತ್ತಿದರು. ಸಿಂಧನೂರು, ಗಂಗಾವತಿ, ರಾಯಚೂರು, ಹೈದ್ರಾಬಾದುಗಳಲ್ಲಿ ವಿದ್ಯಾಭ್ಯಾಸವಾಯಿತು. ಕೇಶವ್‌ರಾವ್ ಎಂಬ ವಕೀಲರ ಹತ್ತಿರ ಕೆಲಸ ಮಾಡುತ್ತಾ ಅವರ ಶಿಷ್ಯತ್ವವಹಿಸಿದರು. ಅವರು ರಾಜಕೀಯ ಮುಖಂಡರುಗಳಲ್ಲಿ ಒಬ್ಬರಾಗಿದ್ದರು. ಅವರ ಜೊತೆಯಲ್ಲಿ ಸಭೆಗಳಿಗೆ ಹೋಗುತ್ತಾ ರಾಜಕೀಯ ಪ್ರಭಾವಕ್ಕೊಳಗಾದರು. ವೃತ್ತಿಗೋಸ್ಕರ ಗುಲ್ಬರ್ಗಕ್ಕೆ ಬಂದರು.

(೧೯೨೧-೧೯೨೨ ಗುಲ್ಬರ್ಗದಲ್ಲಿ ಕರಾಳ ಸ್ವರೂಪದ ಹಿಂದು ಮುಸ್ಲಿಮರ ದಂಗೆ-)

(ಜನರ ಗದ್ದಲ ಕೋಲಾಹಲ)

ಜನಾರ್ಧನ : ಮುಸಲ್ಮಾನರು ಹಿಂದು ದೇವಾಲಯಗಳನ್ನು ಕೆಡವುತ್ತಾ ಬರುತ್ತಿದ್ದಾರೆ. ಶರಣ ಬಸವೇಶ್ವರ ದೇವಾಲಯವನ್ನು ಕೆಡವುತ್ತಾರಂತೆ. ಅದು ಆಗದಂತೆ ನೋಡಿಕೊಳ್ಳಬೇಕು. ದೇವಸ್ಥಾನ ಹೊಡೆದುಹಾಕಿ ಧಾರ್ಮಿಕ ಆಚರಣೆಗೆ ಕುಂದು ತರಬೇಡಿ, ಹಿಂದಕ್ಕೆ ಹೊರಡಿ. ನೀವು ಹೀಗೆ ಮುಂದುವರೆದರೆ ನಾವು ಬಿಡುವುದಿಲ್ಲ. ನಮ್ಮ ರಕ್ತ ಕುದಿಯುತ್ತಿದೆ...

(ಮತ್ತೆ ಜನರ ಜಗಳ ಕೂಗಾಟ)

ಒಬ್ಬ : ಸಿ.ಐ.ಡಿ, ಡಿ.ಎಸ್.ಪಿ. ಇಬ್ಬರು ಸತ್ತು ಹೋಗ್ಬಿಟ್ರಂತೆ. ಈ ವಿಷಯವನ್ನು ನಿಜಾಮ ಸರ್ಕಾರ ಮುಚ್ಚಿಡಲು ಪ್ರಯತ್ನಿಸುತ್ತಾ ಇದೆಯಂತೆ.

ಜನಾರ್ಧನ : ಇದನ್ನು ಹಾಗೆಯೇ ಬಿಡಬಾರದು. "ಟೈಮ್ಸ್ ಆಫ್ ಇಂಡಿಯಾ"ದಲ್ಲಿ ಪ್ರಚಾರ ಮಾಡಬೇಕು.

ಪೋಲಿಸ್ : ಈ ದಂಗೆಗೆ ಕಾರಣನಾದವನು ಇವನೇ. ಇವನನ್ನು ಹಿಡಿಯಿರಿ, ಜೈಲಿಗೆ ಕಳುಹಿಸೋಣ.

ಜನಾರ್ಧನ : ಜನಸೇವೆಗೆ ಮಾಡುವ ಕೆಲಸದಲ್ಲಿ ನನ್ನದೇನಾದರೂ ತಪ್ಪಿದ್ದರೆ ನಾನು ಜೈಲಿಗೆ ಹೋಗಲು ಸಿದ್ಧ.

ಕ್ರಾಫರ್ಡ್ : ಈತ ನಿರಪರಾಧಿ. ಇವನನ್ನು ಹೇಗೆ ಜೈಲಿಗೆ ಹಾಕುತ್ತೀರಿ? ಬಿಟ್ಟುಬಿಡಿ ಆತನನ್ನು.

ಭಾರತಮಾತೆ : ಈ ವಿಷಯವನ್ನು ತಿಳಿದ ಗಾಂಧಿ, ಸಯದ್ ಖುರೇಶಿ ಮತ್ತು ರಾವ್ ದೇಸಾಯಿ ಅವರಿಗೆ ನಡೆದ ವಿಷಯ ತಿಳಿಸಿದ. "Gulbarga gone mad" ಎಂದು ಲೇಖನವನ್ನು ಬರೆದು ಪ್ರಕಟಿಸಿದ ಗಾಂಧಿ. ಇದು ಅವನಿಗೆ ಸಮಾಜ ಸೇವಾವೃತ್ತಿಯು ದೃಢವಾಗಿ ಬೇರೂರಲು ಕಾರಣವಾಯಿತು. ೧೯೨೦ರಲ್ಲಿ ಪ್ರಾರಂಭವಾದ ಗಾಂಧಿಯ ಮೊದಲನೆಯ ಅಸಹಕರ ಚಳುವಳಿಯ ಪ್ರಭಾವ ಹೈದರಬಾದ್ ಕನ್ನಡಿಗರ ಮೇಲೆ ಬಹಳವಾಯಿತು. ಪಂಡಿತ ತಾರಾನಾಥನ ಚಟುವಟಿಕೆ ರಾಷ್ಟ್ರೀಯ ಜಾಗೃತಿಯನ್ನುಂಟುಮಾಡಿದವು.

ಮಿತ್ರ : ನೀನು ಕಾಂಗ್ರಸ್ ಸದಸ್ಯನಾಗಿದ್ದೆ. ನೀನು ಕರ್ನಾಟಕದ ಮುಖಂಡನಾಗಿ ನೀನು ಆಗಬೇಕು. ಗುಲ್ಬರ್ಗ, ಬೀದರ್, ರಾಯಚೂರ್ ಜಿಲ್ಲೆಯ ವಕೀಲರು, ಶಿಕ್ಷಕರು, ಮುಖಂಡರನ್ನು ಭೇಟಿಮಾಡಿ ಜಾಗೃತಿಯ ಬಗೆಗೆ ತಿಳಿಸಬೇಕು.

ಜನಾರ್ಧನ : ನೀವೆಲ್ಲ ಹೇಳಿದ ಮೇಲೆ ಇಲ್ಲ ಅಂತ ಹೇಳಲಿಕ್ಕಾಗುವುದಿಲ್ಲ. ನಾನು "ಕರ್ನಾಟಕ ಪರಿಷತ್ತ"ನ್ನು ಸ್ಥಾಪಿಸುವ ಉದ್ದೇಶವನ್ನು ತಿಳಿಸುತ್ತೇನೆ. ಜನರು ನನಗೆ ಉತ್ತೇಜನ ಕೊಡುತ್ತಾರೆ.

ಮಿತ್ರ : ಅದಕ್ಕಾಗಿಯೇ ನಿನ್ನನ್ನೂ ಆಯ್ಕೆ ಮಾಡುವುದು. ಈ ಸಂಘಟನಾ ಕಾರ್ಯ ನಿನ್ನಿಂದಾಗಲಿ.

ಭಾರತಮಾತೆ : ಈ ಸಮಯಕ್ಕೆ "ಒಂದೇ ಮಾತರಂ" ಚಳುವಳಿ ಆರಂಭವಾಯಿತು.

ರಾಷ್ಟ್ರೀಯ ಸಂಸ್ಥೆ ಸ್ಥಾಪಿಸಲು ಮುಸ್ಲಿಮರು ಅದರಲ್ಲಿ ಸೇರಬೇಕೆಂಬ ಕರಾರು ಹಾಕಿತು ಸರ್ಕಾರ. ಇದು ನಮಗೆ ಒಪ್ಪಿಗೆ ಆಗಲಿಲ್ಲ. ಕರ್ನಾಟಕದ ಪರವಾಗಿ ಜನಾರ್ಧನ, ಮಹಾರಾಷ್ಟ್ರದ ಪರವಾಗಿ ಗೋವಿಂದರಾವ್ ನಾನಲ್ ಮತ್ತು ಶ್ರೀನಿವಾಸ ರಾವ್ ಬೋರಿಕರ್, ಆಂಧ್ರದ ಪರವಾಗಿ ರವಿನಾರಾಯಣ ರೆಡ್ಡಿ, ಹೈದ್ರಾಬಾದ್ ಪಟ್ಟಣದ ಪರವಾಗಿ ರಾಮಕೃಷ್ಣ ಎಲ್ಲಾ ಸೇರಿ ಸ್ಟೇಟ್ ಕಾಂಗ್ರೆಸ್ ಉದ್ದೇಶ ಘೋಷಿಸಿ ಸತ್ಯಾಗ್ರಹ ಆರಂಭಿಸಿದರು. ಆಮೇಲೆ ಸ್ವಾಮಿ ರಮಾನಂದ ತೀರ್ಥರು ಪ್ರಾರಂಭಿಸಿದರು.

(ಸ್ವಾತಂತ್ರ್ಯ ಗೀತೆ)

ಪೋಲೀಸ್ : ಏಯ್ ನಡೆ ಸೆರೆಮನೆಗೆ.

ಜನಾರ್ಧನ : ಈಗ ನೀವು ನನ್ನನ್ನು ನಮ್ಮ ಮಿತ್ರರನ್ನು ಎಳೆದುಕೊಂಡು ಹೋಗಿ ಜೈಲಿಗೆ ಹಾಕಬಹುದು. ಆದರೆ ಇದು ಇಲ್ಲಿಗೆ ನಿಲ್ಲುವುದಿಲ್ಲ. ಈ

ಸತ್ಯಾಗ್ರಹ ಮುಂದುವರಿಯಲಿದೆ. ಅದೋ ಸ್ವಾಮಿ ರಮಾನಂದತೀರ್ಥರು ಸಿದ್ಧವಾಗುತ್ತೀದ್ದಾರೆ. ೧೮ ತಂಡಗಳು ಮುಂದೆ ಸಿದ್ಧವಾಗಿವೆ.

ಭಾರತಮಾತೆ : ಬೀದರ್‌ನಲ್ಲಿ ಕರ್ನಾಟಕ ಪರಿಷತ್ತು ಮಾಡಲು ನಿರ್ಧರಿಸಿದ ಜನಾರ್ಧನ. ಆದರೆ ಅಲ್ಲಿಯ ಕನ್ನಡಿಗರು ಒಪ್ಪಲಿಲ್ಲ. ಆದರೂ ಕೀರ್ತನ ಕೇಸರಿ ಜಯರಾಮಾಚಾರ್ಯರ ಸಹಾಯದಿಂದ ೨-೩ ತಿಂಗಳ ಪ್ರಯತ್ನದಿಂದ ಒಪ್ಪಿಸಿ ಜನಾರ್ಧನನನ್ನೇ ಅಧ್ಯಕ್ಷನನ್ನಾಗಿ ಮಾಡಿದರು. ಮುಸ್ಲಿಮರು ಹಿಂದೂ ಜನರನ್ನು ನಾಶ ಮಾಡುವ ಉದ್ದೇಶದಿಂದ ಅಲ್ಲಿಯ ಗುಂಪನ್ನು ಸುಟ್ಟರು. ಇದರಿಂದ ಲಕ್ಷಗಟ್ಟಲೆ ಹಣ ನಷ್ಟವಾಯಿತು. 'ಲಂಕಾ ದಹನವಾದ ಮೇಲೆ ಬೀದರ್ ದಹನವಾಯಿತು' ಎಂದು ಗಾಂಧಿ ಉದ್ಗರಿಸಿದರು. ಕರ್ನಾಟಕ ಪರಿಷತ್ತಿನಲ್ಲಿ ನಾಲ್ಕನೇ ಅಧಿವೇಶನ ರಾಯಚೂರಿನಲ್ಲಿ ನಡೆಯಿತು.

ಜನಾರ್ಧನ : ನಮ್ಮ ಕರ್ನಾಟಕ ಪರಿಷತ್ತಿನ ಐದನೆ ಧಿವೇಶನ ಕಿಕ್ಕೇರಿ ಹಣಮಂತರಾಯರ ಅಧ್ಯಕ್ಷತೆಯಲ್ಲಿ ನೆರವೇರಿ, ಜವಬ್ದಾರಿ ಸರ್ಕಾರದ ಬಗೆಗೆ ಒತ್ತಾಯಿಸಿದರು. ಇಂದು ಈ ಹೈದ್ರಾಬಾದಿನಲ್ಲಿ ನಡೆಯಲಿರುವ ಸ್ಟೇಟ್ ಕಾಂಗ್ರೆಸ್ಸಿನ ಮೊದಲಿನ ಅಧಿವೇಶನಕ್ಕೆ ಸ್ವಾಮಿ ರಮಾನಂದ ತೀರ್ಥರು ಅಧ್ಯಕ್ಷತೆ ವಹಿಸುವುದು ನಮಗೆಲ್ಲಾ ಬಹಳ ಸಂತೋಷ ತಂದಿದೆ.

(ಜನರ ಗದ್ದಲ...ಸಭೆ)

ಸ್ವಾಮಿ ರಮಾನಂದ : ನಿಜವಾಗಲೂ ಈ ಅಧಿವೇಶನದಲ್ಲಿ ಮಾತನಾಡಲು ನನಗೆ ತುಂಬಾ ಸಂತೋಷವಾಗುತ್ತೆ.ಆಂಧ್ರ, ಮಹರಾಷ್ಟ್ರ, ಕರ್ನಾಟಕ ಎಲ್ಲಾ ಕಡೆಗಳಿಂದಲೂ ಮುಖಂಡರು ಬಂದಿದ್ದೀರಿ, ಎರಡು ಲಕ್ಷಕ್ಕೂ ಹೆಚ್ಚು ಸೇರಿರುವ ಪ್ರೇಕ್ಷಕರನ್ನು ನೋಡಿದಾಗ ನಿಜವಾಗಲೂ ನಿಮ್ಮ ದೇಶಾಭಿಮಾನವನ್ನು ಎಷ್ಟೆಂದು ಹೇಳಬೇಕಾಗಿಲ್ಲ. ಎಲ್ಲರೂ ಧೈರ್ಯದಿಂದ ಮುನ್ನುಗ್ಗಬೇಕು. ಹಿಂದೀ ಒಕ್ಕೂಟದಿಂದ ಬೇರ್ಪಡಿಸುವ ಯಾವುದೇ ಪ್ರಯತ್ನವನ್ನು ನಾವು ಎದುರಿಸಬೇಕು. ಇದು ನಿಜವಾಗಿಯೂ ಮಹತ್ವದ ನಿರ್ಣಯ.

(ಗಲಾಟೆ)

ಜನಾರ್ಧನ : ನಿಜಾಮ ಸರ್ಕಾರ ಸಂಸ್ಥಾನ ಕಾಂಗ್ರೆಸ್ಸನ್ನು ಬಗ್ಗು ಬಡಿಯಬೇಕೆಂದು ಪ್ರಮುಖ ಕಾರ್ಯಕರ್ತರನ್ನು ಬಂಧಿಸುತ್ತಿದೆ. ಸಾರ್ವಜನಿಕ ಸಭೆಗಳ ಮೇಲೆ ನಿಬಂಧ ಹಾಕುತ್ತಿದೆ. ಹೈದ್ರಾಬಾದ್ ಸಂಸ್ಥಾನದಲ್ಲಿ ಯಾವ

ಮುದ್ರಣಾಲಯದಲ್ಲಿಯೂ ಸ್ಟೇಟ್ ಕಾಂಗ್ರೆಸ್ಸಿನ ಗೊತ್ತುವಳಿಗಳನ್ನು ಮುದ್ರಿಸಬಾರದೆಂದು ಪ್ರತಿಬಂಧ ಮಾಡಿದೆ. ಮುಸಲ್ಮಾನರ ಚಟುವಟಿಕೆಗಳು ಉಗ್ರ ಸ್ವರೂಪ ತಾಳಿವೆ. ಇದರ ಬಗ್ಗೆ ಸರ್ಕಾರ ಕಣ್ಣು ಮುಚ್ಚಿದೆ. ನಮ್ಮ ಮುಂದಿನ ಕಾರ್ಯಕ್ರಮಗಳನ್ನು ಜೂನ್ ೨೯, ೩೦, ಜುಲೈ ೧ಕ್ಕೆ ಸಭೆಯನ್ನು ಸೊಲ್ಲಾಪುರದಲ್ಲಿ ಸೇರಬೇಕು. ತಮ್ಮ ಕಾರ್ಯವನ್ನು ಎದೆಗುಂದದೆ ನಡೆಸಿಕೊಂಡು ಹೋಗಬೇಕು.

(ಜನರು "ಆಗಬಹುದು...")

ಭಾರತಮಾತೆ : ರಾಜಕೀಯ ರಂಗದಲ್ಲಿ ಧುಮುಕಿದ ಜನಾರ್ಧನ ತನು ಮನ ಧನವನ್ನು ರಾಜಕೀಯ ರಂಗಕ್ಕೆ ಅರ್ಪಿಸಿದ-

(ಸ್ವಾತಂತ್ರ್ಯ ಗೀತೆ)

ಜನಾರ್ಧನ : ಜುಲೈ ತಿಂಗಳ ಕೊನೆಯಲ್ಲಿ ಸ್ಟೇಟ್ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಹೈದ್ರಾಬಾದಿನಲ್ಲಿ ಆಗಸ್ಟ್ ೭ರಂದು 'ಹಿಂದೀ ಒಕ್ಕೂಟ'ದ ದಿನ ಎಂದು ಆಚರಿಸಲಿದೆ. ಸರ್ಕಾರದ ನಿಬಂಧ ಮುರಿಯಲು ನಿಯಮ ಭಂಗ ಮಾಡಿ ಪ್ರಭಾತ್ ಫೇರಿ ಹಾಗೂ ಮೆರವಣಿಗೆಗಳನ್ನು ತೆಗೆಯಲು, ಹರತಾಳ ಮತ್ತು ಸಂಪುಗಳನ್ನು ಹೂಡಬೇಕು.

(ಜನರ ಗದ್ದಲ)

(ರೈಲು ಶಬ್ದ)

ಕಾಶಿನಾಥರಾವ್ : ಏನು ಜಗನ್ನಾಥರಾವ್ ಯಾವ ಕಡೆ?

ಜನಾರ್ಧನ : ಬೀದರನಲ್ಲಿ ಹರತಾಳ ಮಾಡಲು ಹೇಳಿ ಬರ್‍ತಾ ಇದ್ದೀನಿ ಡಾಕ್ಟೇ.

ಕಾಶಿ : ನೀನು ಇದರಲ್ಲಿ ಪ್ರಮುಖ ಪಾತ್ರ ವಹಿಸ್ತಾ ಇದ್ದೀಯ ಅಂತ ಅರೆಸ್ಟ್ ವಾರೆಂಟ್ ಹೊರಡಿಸಿ ಪೋಲಿಸರನ್ನು ಕಳುಹಿಸಿದ್ದಾರಂತೆ. ಬಾ ನಮ್ಮ ಮನೆಯಲ್ಲಿರುವಿಯಂತೆ.

ಜನಾರ್ಧನ : ಆಯ್ತು, ನಡೆಯಿರಿ.

ಭಾರತಮಾತೆ : ಕರ್ನಾಟಕದ ಶಿಬಿರವನ್ನು ಸಂಘಟಿಸಲು ಜನಾರ್ಧನನಿಗೆ ಬಂಧು ಮಾಧವರಾಯ ಬಹಳ ಸಹಾಯ ಮಾಡಿದ. ಹತ್ತು ತಿಂಗಳ ತನಕ ಅನೇಕ ಕಾರ್ಯಕರ್ತರು ಈ ಶಿಬಿರದಲ್ಲಿ ತನು ಮನ ಧನವನ್ನು ಕೊಟ್ಟು ಸೇವೆ ಸಲ್ಲಿಸಿದರು. ಪ್ರತಿಯೊಂದು ಶಿಬಿರದಲ್ಲೂ ಸೈನಿಕ ತರಬೇತಿ ಹೊಂದಿದ ಯುವಕರ ತಂಡವೊಂದಿತ್ತು.

(ಪಥ ಸಂಚಲನ ದೃಶ್ಯ)

ಸಾರ್ವಜನಿಕರಿಂದ ಹಣ ಸಂಗ್ರಹಿಸಿದುದರಿಂದ ಮದ್ದು ಗುಂಡು ಆಹಾರ ಸರಬರಾಜು ನಡೆಯಿತು. ಮೈಸೂರು, ಮದ್ರಾಸು ಸರಕಾರ ಸಹಾಯ ಮಾಡಿದವು. ರಜಾಕಾರರ ಹಾವಳಿ ಹೈದ್ರಾಬಾದಿನಲ್ಲಿ ಅತಿಯಾಯಿತು. ಭಾರತ ಸರಕಾರ ನಿಜಾಮರ ವಿರುದ್ಧ ಆರ್ಥಿಕ ದಿಗ್ಬಂಧನ ಮತ್ತು ಪೋಲಿಸ್ ಕ್ರಮ ಕೈಕೊಂಡು, ನಿಜಾಮ ಸರಕಾರವು ಕುಸಿದು ಬೀಳುವಂತೆ ಮಾಡಿತು. ೧೩-೯-೧೯೪೮ರಂದು ಹೈದ್ರಾಬಾದಿನ ವಿರುದ್ಧ ಪೋಲೀಸ್ ಕ್ರಮವನ್ನು ತಗೆದುಕೊಂಡು ವಿಜಯವನ್ನು ಸಂಪಾದಿಸಿತು. ೧೯೫೨ರವರೆಗೆ ಹೈದ್ರಾಬಾದ್ ಕಾಂಗ್ರಸ್ ಅಧ್ಯಕ್ಷನಾಗಿದ್ದು ೧೯೫೪ರಿಂದ ೧೯೬೦ರವರೆಗೆ ರಾಜ್ಯಸಭೆಯ ಸದಸ್ಯರಾಗಿದ್ದು ೨೦-೩-೧೯೭೫ರಲ್ಲಿ ಚಿತ್ರದುರ್ಗದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದು ಕಣ್ಮರೆಯಾದ. ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಡಿದ ಆತನ ಸೇವೆ ಇನ್ನೂ ನನ್ನ ಕಣ್ಮುಂದೆ ಅಚ್ಚಳಿಯದೆ ಉಳಿದಿದೆ.

*

# ಅಭಿವೃದ್ಧಿ ಪ್ರಚಲಿತ ಸಮಸ್ಯೆಗಳು

## ಗಿರಿಯ ಕೂಗು

ಆಕಾಶವಾಣಿ

(ಶಿರೋನಾಮೆಯ ಸಂಗೀತ ಆರಂಭವಾಗಿ ಸಣ್ಣಗಾಗುವುದು. ಅದರ ಮೇಲೆ ಆರಂಭದ ನಿವೇದನೆ)

ಈಗ ಕೇಳಿ ರೂಪಕ "ಗಿರಿಯ ಕೂಗು"

ಬರೆದು ಪ್ರಸ್ತುತ ಪಡಿಸುವವರು : ಶ್ರೀ ಬಿ.ಎಸ್.ಸ್ವಾಮಿ

ರೂಪಕ "ಗಿರಿಯ ಕೂಗು"

(ಸಂಗೀತ ಸ್ವಲ್ಪ ಏರಿ ಮತ್ತೆ ಲೀನವಾಗುವುದು)

ಧ್ವನಿ ೧ : ವಿಜ್ಞಾನವು ಹೇಳುವಂತೆ ಮನುಷ್ಯನೂ ಸಹ ಒಂದು ಪ್ರಾಣಿ. ಕಾಡಿನಲ್ಲಿ ಮೊದಲು ಕಾಡುಮನುಷ್ಯನಾಗಿ ಯಾವುದೇ ರೀತಿಯಲ್ಲೇ ಆಗಲೀ ಮುಂದುವರೆದಿರಲಿಲ್ಲ. ಎಲೆಗಳಿಂದ ಮೈ ಮುಚಿಚಕೊಂಡು, ಬೆಣಚು ಕಲ್ಲಿನಿಂದ ಬೆಂಕಿ ಮಾಡಿಕೊಂಡು ಬೇಟೆಯಾಡಿ ಹಸಿಯ ಮಾಂಸ, ಗೆಡ್ಡೆ ಗೆಣಸುಗಳನ್ನು ತಿನ್ನುತ್ತಿದ್ದ. ಕಾಲಕ್ರಮವಾಗಿ ವಿಕಾಸ ಹೊಂದಿ ಮನುಷ್ಯನಾದ ಅನಂತರ ಸಂಸ್ಕೃತಿಯ ಪ್ರತೀಕವಾದ.

ಧ್ವನಿ ೨ : ಮಂಗನಾಗಿ ಮರದ ಮೇಲೆ ಸುಳಿದಾಡಿ, ಗೊರಿಲ್ಲವಾಗಿ, ಅನಂತರ ವಿಕಾಸವಾಗಿ ಮನುಷ್ಯನಾದ. ಸಂಸ್ಕೃತಿಯು ಮುಂದುವರಿದಂತೆ ಮನುಷ್ಯ ನಾಗರಿಕನಾಗಿ ಹಳ್ಳಿ, ತಾಲ್ಲೂಕು, ಪಟ್ಟಣಗಳನ್ನು ನಿರ್ಮಿಸಿ ವಾಸವಾಗತೊಡಗಿದ. ಆದರೂ ಇನ್ನೂ ಗಿರಿಯಲ್ಲಿ ಜನರು ವಾಸವಾಗಿಯೇ ಇದ್ದಾರೆ. ಕೆಲವು ಬುಡಕಟ್ಟು, ಗಿರಿಜನರನ್ನು ಪರಿವರ್ತಿಸಿ, ಅವರು ಪಟ್ಟಣದವರೊಡನೆ ಬೆರೆತು ಎಲ್ಲಾ ರಂಗದಲ್ಲೂ ಅವರು ಮುಂದುವರಿಯಬೇಕೆಂಬ ಉದ್ದೇಶದಿಂದ ಸರ್ಕಾರ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಿ ಕೊಡುತ್ತಿದೆ. ಅದನ್ನು ಕೆಲವರು ಉಪಯೋಗಿಸಿಕೊಳ್ಳಲು ಈಗೀಗ ಮುಂದೆ ಬರುತ್ತಿದ್ದಾರೆ ಎಷ್ಟೇ ಆಗಲೀ ಹುಟ್ಟಿದ ಊರು ಕಾಡೇ ಆಗಲೀ ಪೋಡೇ ಆಗಲೀ ಅದೇ ಅವರಿಗೆ ಪ್ರೀತಿ. ಇದು ಸಹಜವೇ.

ಧ್ವನಿ ೧ : ಆದರೆ ಈ ಇಪ್ಪತ್ತನೆಯ ಶತಮಾನದಲ್ಲಿ ದೇಶ ಮುಂದುವರಿದು ನಾಗರೀಕತೆಯು ಮುಗಿಲು ಮುಟ್ಟುತ್ತಿರುವಾಗ, ವಿಜ್ಞಾನ ಮುಂದುವರಿದಿರುವಾಗ ಕಾಡಿನವರೇ ಆಗಲೀ, ನಾಡಿನವರೇ ಆಗಲೀ ಹಿಂದುಳಿಯುವುದು ಸರಿಯಲ್ಲ. 'ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡ' ಅಂದ ಹಾಗೆ ಆಗಬಾರದು. ಕೊಡುವ ಸೌಲಭ್ಯಗಳನ್ನು ಪಡೆದು ನಾಗರೀಕನಾಗಿ ಸುಖ ಜೀವನ ನಡೆಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ.

ಧ್ವನಿ ೨ : ಕಾಡು ಸೋಲಿಗರು, ಜೇನು ಕುರುಬರು, ಕಾಡು ಕುರುಬರು, ಬಂಬಾಣಿಗಳು, ಕೆಲವು ಹರಜನರೂ ಸಹ ಕಾಡಿನಲ್ಲಿ ವಾಸವಾಗಿದ್ದಾರೆ. ಅವರ ಅಭಿವೃದ್ಧಿಗಾಗಿ ಸರ್ಕಾರ ಅನೇಕ ಮುನ್ನೆಜ್ಜೆಗಳನ್ನು ತೆಗೆದುಕೊಂಡಿದೆ.

ಧ್ವನಿ ೧ : ಮಹದೇಶ್ವರನ ಬೆಟ್ಟದಲ್ಲಿ ಹರಿಜನ ಕಾಡು ಕುರುಬರೂ ಅಲ್ಪ ಸಂಖ್ಯೆಯಲ್ಲಿ ಅಲ್ಲಲ್ಲಿ ಇದ್ದಾರೆ. ಆದರೆ ಸೋಲಿಗ ಜನಾಂಗದವರು ಅಲ್ಲಲ್ಲಿ ಪೋಡುಗಳನ್ನು ಮಾಡಿಕೊಂಡು ಜೀವಿಸುತ್ತಿದ್ದಾರೆ. ಅವರ ಜೀವನ ನಿಜಕ್ಕೂ ಚಿಂತಾಜನಕ. ಉಡಲು ಕೆಲವರಿಗೆ ಬಟ್ಟೆಯೇ ಸರಿಯಾಗಿಲ್ಲ. ಅರೆನಗ್ನ ಅವಸ್ಥೆಯಲ್ಲಿ ಹಲವರು. ಬಟ್ಟೆ ಇದ್ದರೂ, ಕೊಳೆಯ ಮಾಸಿದ ಒಂದೇ ಬಟ್ಟೆ. ಇತ್ತೀಚೆಗೆ ಸರಕಾರವು ೨೦,೩೦ ಸಂಸಾರಗಳಿಗೆ ವಸತಿ ಸೌಕರ್ಯ ಮಾಡಿಕೊಟ್ಟಿದೆ. ಎರಡು ಸಾಲಿನಲ್ಲಿ ಹೆಂಚಿನ ಮನೆಯನ್ನು ಕಟ್ಟಿಸಿದೆ. ಎಲ್ಲರೂ ಬಂಧು ಬಳಗದವರೇ. ಕೂಲಿ ಮಾಡಿ ರಾಗಿ, ಅವರೆ, ಹುರುಳಿ, ನವಣೆ ಬೆಳೆಯುತ್ತಾರೆ.

ಧ್ವನಿ ೨ : ಇವರಿಗೆ ಮಾದೇಶ್ವರನ ದೇವಾಲಯ ಮೂರು ಮೈಲಿ ದೂರವಿದೆ ಇವರಿಗೆ ಮನರಂಜನೆ ಇಲ್ಲೇ. ಜಾತ್ರೆ ಪೂಜೆಗಳೇ ಮನರಂಜನೆ. ಇತ್ತೀಚೆಗೆ ದೇವಾಲಯದ ಸುತ್ತಮುತ್ತ ಆಸ್ಪತ್ರೆ ಅಂಗಡಿ, ಹೊಟೇಲ್, ಪಟ್ಟಣದಿಂದ ಬೆಟ್ಟಕ್ಕೆ ಬಸ್ಸಿನ ಸೌಕಯಲ್ಲೆನ್ನಾಗಿರುವುದರಿಂದ ಪಟ್ಟಣದಲ್ಲಿ ದೊರೆಯುವ ಅನೇಕ ಸೌಲಭ್ಯಗಳು ಇಲ್ಲಿ ದೊರೆಯುತ್ತವೆ. ಅದ್ದರಿಂದಲೇ ಈ ಕಾಡು ಸೋಲಿಗರಿಗೆ ಎಲ್ಲಾ ರೀತಿಯ ಸೌಲಭ್ಯಗಳು ದೊರೆಯಲು ಸಾಧ್ಯವಾಗಿದೆ.

ಧ್ವನಿ ೧ : ಮನುಷ್ಯ ಕಾಡಿನವನಾದರೇನು, ನಾಡಿನವನಾದರೇನು? ಮನುಷ್ಯ ಮನುಷ್ಯನೇ ಅಲ್ಲವೇ? ಸಂಸ್ಕೃತಿಯ, ನಾಗರಿಕತೆಯ ಮಟ್ಟದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇರಬಹುದು ಅಷ್ಟೇ. ಆದರೆ ಸೋಲಿಗರು ಇತ್ತೀಚೆಗೆ ಕೆಲವರು ಅದಕ್ಕೆ ಆಶಿಸುತ್ತಿದ್ದಾರೆ. ತಮ್ಮ ಮಕ್ಕಳನ್ನು ವಿದ್ಯಾಭ್ಯಾಸ ಮಾಡಿಸಬೇಕು ಎಂದು ತಮ್ಮ ಮನದಾಸೆಯನ್ನು ತೋಡಿಕೊಳ್ಳುತ್ತಾರೆ. ಪಟ್ಟಣದವರ ತಿಂಡಿಗಳನ್ನು ಬಯಸಿ ಬರುತ್ತಾರೆ.

ಧ್ವನಿ ೨ : ಅನಕ್ಷರಸ್ಥರೂ, ಅವಿದ್ಯಾವಂತರೂ ಆದ ಇವರಿಗೆ ಹೆಚ್ಚಿನ ಶಿಕ್ಷಣ ಅವಶ್ಯ. ಅವರೂ ಮನುಷ್ಯರೇ. ಆಸೆ-ಆಕಾಂಕ್ಷೆ ಉಳ್ಳವರು. ಅವರೂ ನಮ್ಮಂತೆಯೇ

ಎಲ್ಲಾ ರೀತಿಯ ಅಭಿಲಾಷೆ ಹೊಂದಿದ್ದಾರೆ ಅದಕ್ಕಾಗಿಹಾತೊರೆಯುವುದರಲ್ಲಿ ಅನುಮಾನವಿಲ್ಲ. ಗಿರಿಜನರ ಕೂಗು ಎಲ್ಲರಿಗೂ ಮುಟ್ಟಬೇಕು. ಅವರ ಕೂಗಿಗೆ ಸರಕಾರ, ಸಾರ್ವಜನಿಕರು ಅನುಕಂಪ ತೋರಿ ಆ ದುರ್ಬಲ ವರ್ಗದವರನ್ನು, ಅರ್ಥಿಕ ದುಸ್ಥಿತಿಯಲ್ಲಿರುವವರನ್ನು ಮೇಲೆತ್ತುವ ಸಂಕಲ್ಪ ಮಾಡಬೇಕು. ಅವರ ಕೂಗಿಗೆ ಓಗೊಟ್ಟು ಎಲ್ಲಾ ರೀತಿಯಲ್ಲೂ ಪ್ರಯತ್ನ ಮಾಡಬೇಕು ಅದು ಮಾನವೀಯ ಧರ್ಮವಲ್ಲವೇ?

ಧ್ವನಿ ೧ : ಮನುಷ್ಯ ಹೋರಾಡುವುದು ಅನ್ನ ಬಟ್ಟೆ ವಸತಿಗಾಗಿ. ಹಾಗೆ ಅದು ಸಿಕ್ಕಿದರೆ ಅಷ್ಟೇ ಸಾಕು. ಅದಕ್ಕಾಗಿ ಬೆವರು ಸುರಿಸಿ ಕೆಲಸ ಮಾಡಬೇಕು. ಸೋಂಬೇರಿಯಾಗಬಾರದು. ಯಾವನೇ ಆಗಲೀ ಕಾಯಕ ಮಾಡಿ ಊಟ ಮಾಡಿದಾಗಲೇ ಅದು ಜೀರ್ಣವಾಗುವುದು. ನಮ್ಮ ಗಿರಿಜನರು ಅದಕ್ಕೇನೂ ಹೊರತಲ್ಲ. ಚಳಿ, ಮಳೆ, ಗಾಳಿಗಂಜದೆ ದುಡಿಯುವವರು, ಜೀವಿಸುವವರು. ಆದರೆ ನಾವು ಅವರಿಗೆ ದಾರಿದೀಪವಾಗಲೇಬೇಕು. ಆಗ ಅವರಿಗೆ ಮತ್ತಷ್ಟು ಹುಮ್ಮಸ್ಸು ಬಂದು ದುಡಿಯುವರಲ್ಲವೇ?

ಧ್ವನಿ : ಮಾದೇಶ್ವರ ಬೆಟ್ಟಕ್ಕೆ ಜಾತಿ ಮತ ಭೇದವಿಲ್ಲದೆ ಅನೇಕ ಭಕ್ತಾದಿಗಳು ಬಂದು ಮಾದೇಶ್ವರನನ್ನು ನಾನಾ ರೀತಿಯಲ್ಲಿ ಹಾಡಿ ಹೊಗಳುವರು. ಆತನ ಸೇವೆಯನ್ನು ನಾನಾ ರೀತಿಯಲ್ಲಿ ಎಸಗುವರು. ಜನಪದ ಸಾಹಿತ್ಯದಲ್ಲಿ ಮಾದೇಶ್ವರರ ಪಾತ್ರ ಬಹಳ ಮುಖ್ಯವಾದುದು. ಹಳ್ಳಿಯ ಜನರು ತಮ್ಮ ಆಡು ಭಾಷೆಯಲ್ಲಿ ಹಾಡಿ ಆತನನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಅದೋ ಕೇಳಿ ದೂರದಿಂದ ಬರುವ ಇಂಪಾದ ಜನಪದಗೀತೆ, ಕಂಸಾಳೆ, ಬೀಸು ಕಂಸಾಳೆ ನೃತ್ಯ ಗೀತೆಗಳನ್ನು ಹಾಡಿ ದೇವರಲ್ಲಿ ಮೈ ಮರೆಯುತ್ತಾರೆ ಭಕ್ತರು.

ಇದು ಕಂಸಾಳೆ ಗೀತೆ

(ಕಂಸಾಳೆ ಗೀತೆಯ ಜೋರಾಗಿ ಹಾಗೇ ಕಡಿಮೆಯಾಗಿ ನಿಲ್ಲುವುದು)

ಧ್ವನಿ ೩ : ಗಿರಿಜನರ ಕಲ್ಯಾಣ ಕಾರ್ಯಕ್ರಮದಲ್ಲಿ ರಾಜ್ಯದ ಸಮಾಜ ಕಲ್ಯಾಣ ಇಲಾಖೆಯ ಪಾತ್ರವೂ ಹಿರಿದಾಗಿದೆ. ಇಲಾಖೆಯು ಗಿರಿಜನರ ಸರ್ವತೋಮುಖ ಅಭಿವೃದ್ಧಿಗೆ ಸತತ ಪ್ರಯತ್ನ ನಡೆಸುತ್ತಲೇ ಬಂದಿದೆ. ರಾಜ್ಯದ ಸಮಾಜ ಕಲ್ಯಾಣ ಇಲಾಖೆಯ ಜಂಟ ನಿರ್ದೇಶಕರಾದ ಶ್ರೀ ಓ.ಬಿ. ನಾಯಕ್ ಅವರು ತಮ್ಮ ಇಲಾಖೆಯಿಂದೊದಗಿರುವ ಸೌಲಭ್ಯಗಳ ಬಗ್ಗೆ ಏನು ಹೇಳುತ್ತಾರೆ ಕೇಳೋಣ್ವೇ?

(ಸ್ಥಳೀಯ ಧ್ವನಿ ಮುದ್ರಣ)

ಧ್ವನಿ ೩ : ಕೊಳ್ಳೇಗಾಲ ತಾಲ್ಲೂಕಿನ ಬೈಲೂರಿನ ಹತ್ತಿರ 'ಹಾವಿನ ಮೂಲೆ' ಎಂಬುದೊಂದು ಸೋಲಿಗರ ಪೋಡು ಇವರುಗಳ ಅಭಿವೃದ್ಧಿಗಾಗಿ ಹೆಚ್ಚಿನ ಕಾರ್ಯಕ್ರಮಗಳನ್ನು ತೆಗೆದುಕೊಂಡಿದೆ ಸರ್ಕಾರ. ಇದರ ಬಗ್ಗೆ ಮೈಸೂರು ಉಪ ವಿಭಾಗದ ಅಸಿಸ್ಟೆಂಟ್ ಕಮೀಷನರ್ ಶ್ರೀ ಎಲ್.ನಂಜುಂಡರಾವ್ ಅವರು ಏನು ಹೇಳುತ್ತಾರೆ ಕೇಳೋಣ-

(ಸ್ಥಳೀಯ ಧ್ವನಿ ಮುದ್ರಣ)

ಧ್ವನಿ ೩ : ಗಿರಿಜನರ ಅಭಿವೃದ್ಧಿಯ ಬಗ್ಗೆ ಕೊಳ್ಳೇಗಾಲ ತಾಲ್ಲೂಕಿನ ತಾಲ್ಲೂಕು ಅಭಿವೃದ್ಧಿ ಮಂಡಲಿಯ ವತಿಯಿಂದ ಯಾವ ರೀತಿಯ ಕಾರ್ಯಕ್ರಮವನ್ನು ಹಾಕಿಕೊಂಡಿದ್ದಾರೆ ಎಂಬುದನ್ನು ಕೊಳ್ಳೇಗಾಲ ತಾಲ್ಲೂಕಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಾದ ಶ್ರೀ.ಕೆ.ದೇವರಸಯ್ಯ ಅವರು ಏನು ಹೇಳುತ್ತಾರೆ ಕೇಳಿ-

(ಸ್ಥಳೀಯ ಧ್ವನಿ ಮುದ್ರಣ)

ಧ್ವನಿ ೩ : ಕೊಳ್ಳೇಗಾಲ ತಾಲ್ಲೂಕಿನ ಸಮಾಜ ಕಲ್ಯಾಣ ವಿಭಾಗದ ಇನ್‌ಸ್ಪೆಕ್ಟರ್ ಶ್ರೀ ಎಂ. ಲಕ್ಷ್ಮಣ್ ಅವರು ತಮ್ಮ ಕರ್ತವ್ಯದ ಬಗ್ಗೆ ತಿಳಿಸುತ್ತಾ

(ಧ್ವನಿ ಮುದ್ರಣ)

ಧ್ವನಿ ೩ : ಕೊಳ್ಳೇಗಾಲ ತಾಲ್ಲೂಕಿನ ಸಮಾಜ ಶಿಕ್ಷಣ ವ್ಯವಸ್ಥಾಪಕರಾದ ಶ್ರೀ ಕೆ ನಂಜಶೆಟ್ಟಿ ಅವರು ಗಿರಿಜನರಿಗೆ ಯಾವ ರೀತಿ ಶಿಕ್ಷಣ ಒದಗಿಸಲಾಗುತ್ತಿದೆ ಎಂಬುದರ ಬಗ್ಗೆ ಹೀಗೆ ಹೇಳಿದರು

(ಧ್ವನಿ ಮುದ್ರಣ)

ಧ್ವನಿ ೩ : ಮಹಾದೇಶ್ವರ ಬೆಟ್ಟದ ಆರೋಗ್ಯ ಕಾರ್ಯಕರ್ತರಾದ ಶ್ರೀ ಗುರುಸಿದ್ದಪ್ಪ ಅವರು ತಾವು ಯಾವ ರೀತಿ ಗಿರಿಜನರಿಗೆ ಸೇವೆಯನ್ನು ಒದಗಿಸುತ್ತಿದ್ದಾರೆ ಎಂಬುದನ್ನು ಕೇಳೋಣವೆ?

(ಧ್ವನಿ ಮುದ್ರಣ)

ಧ್ವನಿ ೩ : ಮಾದೇಶ್ವರನ ದೇವಾಲಯಕ್ಕೆ ಸುಮಾರು ಮೂರು ಮೈಲಿ ದೂರದ ಬೆಟ್ಟದಲ್ಲಿ ಒಂದು ಪೋಡು ಅದಕ್ಕೆ 'ಹಳೇ ಊರು' 'ಗೊರಸಾಣೆ' ಎಂದೂ ಹೇಳವವರು ಕೆಲವರು. ಇಲ್ಲಿ ಸೋಲಿಗರ ಪೋಡಿನಲ್ಲಿ ಮೂವತ್ತು ಸಂಸಾರಗಳಿವೆ.

ಊರಿನ ಮುಖಂಡ ಶ್ರೀ ವ್ಯಾಳಮಾದ. ಆತನನ್ನು ಭೇಟಿಯಾದಾಗ ಸರಕಾರದಿಂದ ದೊರೆತ ಸೌಲಭ್ಯಗಳು ಹಾಗೂ ಜೀವನದ ಬಗ್ಗೆ ತಿಳಿಸುತ್ತಾ

(ಧ್ವನಿ ಮುದ್ರಣ)

ಧ್ವನಿ ೩ : ಗಿರಿಜನರಲ್ಲೊಬ್ಬನಾದ ಶ್ರೀ ಹೊನ್ನ ಅವರನ್ನು ಮಾತನಾಡಿಸಿದಾಗ

(ಧ್ವನಿ ಮುದ್ರಣ)

ಧ್ವನಿ ೩ : ಶ್ರೀ ದಾಸ ಏನು ಹೇಳುತ್ತಾರೆ ಎಂಬುದನ್ನು ಕೇಳೋಣ.

(ಧ್ವನಿ ಮುದ್ರಣ)

ಧ್ವನಿ : ಶ್ರೀಮತಿ ಭದ್ರಿ ಅವರು ಪಟ್ಟಣದವರಂತೆ ಇರಬೇಕು, ಒಡವೆ ವಸ್ತ್ರ ಧರಿಸಬೇಕು ಎಂಬುದು ಆಸೆ. ಮನೆ ಕೆಲಸದ ಜೊತೆಗೆ ಕೂಲಿ ಕೆಲಸ. ಆಕೆಯನ್ನು ಮಾತನಾಡಿಸಿದಾಗ-

"ನಾವು ಬಸಿರು, ಬಾಣಂತನಗಳನ್ನು ನಾವೇ ಮಾಡಿಕೊಳ್ಳುತ್ತೇವೆ. ಏನಾದರೂ ಖಾಯಿಲೆ ಬಂದರೂ ನಾವೇ ಸ್ವತಃ ಕಾಡು ಮೂಲಿಕೆಗಳಿಂದ ಔಷಧ ಮಾಡಿಕೊಳ್ಳುತ್ತೇವೆ" ಎಂದರು.

(ಧ್ವನಿ ಮುದ್ರಣ)

ಧ್ವನಿ ೩ : ಶ್ರೀಮತಿ ಕಣಸಿದ್ಧಿ ಕುಟುಂಬ ಕಲ್ಯಾಣ ಇಂದು ಎಲ್ಲರಿಗೂ ಗೊತ್ತು ಆದರೆ ಇವರಿಗೆ ಅದಾವುದೂ ಗೊತ್ತಿಲ್ಲ ಮಕ್ಕಳು ಹೆಚ್ಚಿಗೆ ಬೇಡ ಎಂಬುದು ಇವರ ಅಭಿಮತ. ಆದರೆ ಯಾವಾಗಲಾದರೂ ಆರೋಗ್ಯ ಕಾರ್ಯಕರ್ತರು, ಕುಟುಂಬ ಯೋಜನಾ ವಿಭಾಗದವರು ಬಂದು ಮಕ್ಕಳಾಗದಂತೆ ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳಿ ಎಂದು ಕೇಳಿದಾಗ ಅವರು ಒಪ್ಪರು. ಗರ್ಭಿಣಿ ಆಗಲೀ, ಬಾಣಂತಿ ಆಗಲೀ ಎಲ್ಲಾ ಸೇವೆಯನ್ನೂ ವಯಸ್ಸಾದವರೇ ಮಾಡುವರು. ಕಾಡಿನ ಮೂಲಿಕೆ ಬಿದಿರ ಸೊಪ್ಪನ್ನು ಬೇಯಿಸಿ ಅದನ್ನು ಕುಡಿದು ಮಕ್ಕಳಾಗದಂತೆ ಮಾಡಿಕೊಳ್ಳುತ್ತೇವೆ ಎಂದು ಹೇಳುತ್ತಾರೆ.

(ಧ್ವನಿ ಮುದ್ರಣ)

ಧ್ವನಿ ೩ : ಈರಮ್ಮ ಮತ್ತು ಮಾದಯ್ಯ ಹುಟ್ಟು ಸೋಲಿಗರು. ಇವರು ತಮ್ಮ ಪೋಡಿನಿಂದ ಜೀವನ ಸಾಗಿಸಲಿಕ್ಕೋಸ್ಕರ ರಾಮಾಪುರಕ್ಕೆ ಬಂದು ಸೇರಿ ಕೊಂಡಿದ್ದಾರೆ. ಕಾಡಿನಿಂದ ಊರಿಗೆ ಬಂದ ಉದ್ದೇಶವನ್ನು ಅವರೇ ಹೇಳುತ್ತಾರೆ.

(ಧ್ವನಿ ಮುದ್ರಣ)

ಧ್ವನಿ ೩ : ರಾಮಾಪುರದ ಹತ್ತಿರದ ಬೆಟ್ಟದಲ್ಲಿ ವಾಸವಾಗಿರುವ ಲಂಬಾಣಿ ಜನಾಂಗದ ಪೊನ್ನನಾಯಕ್-

(ಧ್ವನಿ ಮುದ್ರಣ)

ಧ್ವನಿ ೧ : ಗಿರಿಜನರ ಅಭಿವೃದ್ಧಿ ಇಲ್ಲ ಎಂಬುದು ಒಂದು ಮುಖವಾದರೆ ಅಭಿವೃದ್ಧಿಗಾಗಿ ಸರಕಾರ ಸ್ವಯಂಸೇವಾ ಸಂಸ್ಥೆಗಳು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ ಎಂಬುದು ಮತ್ತೊಂದು ಮುಖ. ತಲೆತಲಾಂತರದಿಂದ ಬಂದ ಗಿರಿಜನರ ಮನವೊಲಿಸಿ ಕಾಲಕ್ಕೆ ತಕ್ಕಂತೆ ಹೊಂದಿಕೊಳ್ಳುವಂತೆ ಮಾಡಲು ಸಮಯ

ಬೇಕು. ಹಂತ ಹಂತವಾಗಿ ಇವರ ಅಭಿವೃದ್ಧಿ ಸಾಧ್ಯ ಎಂಬುದು ಅವರ ಅಭಿಪ್ರಾಯಗಳಿಂದ ವ್ಯಕ್ತವಾಗುವುದು.

ಧ್ವನಿ ೨ : "Where there is a will three is a way" "ಮನಸ್ಸಿದ್ದಲ್ಲಿ ಮಾದೇವ" ಎಂಬ ಮಾತು ಸತ್ಯ. ಗಿರಿಜನರ ಕೂಗು ಪಟ್ಟಣದವರಕಿವಿ ಮುಟ್ಟಿದೆ. ಅವರ ಅಭಿವೃದ್ಧಿಗೆ ಸರಕಾರ ಅನೇಕ ಕಾರ್ಯಕ್ರಮಗಳನ್ನು ಈಗಾಗಲೇ ಕೈಕೊಂಡಿದೆ. ಮುಂದೆಯೂ ಅವರ ಅಭಿವೃದ್ಧಿಗೆ ಶ್ರಮಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

(ಸಂಗೀತ ಆರಂಭವಾಗುವ ನಂತರ ಮೆಲ್ಲನೆ ಬರುವುದು ಆಗ ಅದರ ಹಿನ್ನೆಲೆಯಲ್ಲಿ ಕೊನೆಯ ನಿವೇದನೆ ಬರುತ್ತದೆ.)

ಇದುವರೆಗೆ "ಗಿರಿಯ ಕೂಗು" ರೂಪಕವನ್ನು ಕೇಳುತ್ತಿದ್ದಿರಿ.

ಈ ರೂಪಕದಲ್ಲಿ ಅಳವಡಿಸಲಾದ ಕಂಸಾಳೆ ಗೀತೆಯನ್ನು ಹಾಡಿದವರು ಮಧುವನಹಳ್ಳಿಯ ಮಹದೇಶ್ವರ ಬೀಸು ಕಂಸಾಳೆ ಸಂಘದ ಕಲಾವಿದರು.

ನಿರೂಪಣೆ : ನೇತ್ರಾವತಿ ಅಭಿರಾಮಮೂರ್ತಿ, ಬಿ.ಎಸ್. ಸ್ವಾಮಿ ಹಾಗೂ ಜಿ.ನೀಲಕಂಠರಾವ್.

ಬರೆದು ಪ್ರಸ್ತುತ ಪಡಿಸಿದವರು : ಶ್ರೀ ಬಿ.ಎಸ್. ಸ್ವಾಮಿ

ಬೆಂಗಳೂರು ನಿಲಯದಲ್ಲಿ ಸಿದ್ಧಪಡಿಸಿದ ಈ ಕಾರ್ಯಕ್ರಮವು ಆಕಾಶವಾಣಿ ಬೆಂಗಳೂರು, ಭದ್ರಾವತಿ,ಧಾರವಾಡ ಹಾಗೂ ಗುಲ್ಬರ್ಗ ನಿಲಯಗಳಿಂದ ಏಕಕಾಲದಲ್ಲಿ ಪ್ರಸಾರವಾಯಿತು.

*

# ಕೊಡ ನೀರಿಗಾಗಿ

(ಮೊದಲ ಆರಂಭವಾದ ನದಿಯ ನೀರಿನ ದನಿ ಮಾತು ಮುಗಿವವರೆಗೂ ಹಿನ್ನೆಲೆಯಲ್ಲಿ ಸಣ್ಣದಾಗಿ ಬರಬೇಕು)

ಧ್ವನಿ ೧ : ಪ್ರಪಂಚದ ಮೂರನೆ ಎರಡು ಭಾಗವನ್ನು ನೀರು ಆಕ್ರಮಿಸಿದೆ ಎಂದ ಮೇಲೆ ನೀರಿನ ಮಹತ್ವ ಎಷ್ಟೆಂದು ಹೇಳಬೇಕಾಗಿಲ್ಲ. ದಿನ ನಿತ್ಯದ ಜೀವನಕ್ಕೆ ನೀರೇ ಆಧಾರ. ಕುಡಿಯಲಿಕ್ಕೆ ನೀರು ಬೇಕು. ನೀರಿನಿಂದಲೇ ವಿದ್ಯುಚ್ಛಕ್ತಿ ಉತ್ಪಾದನೆ ಮಾಡುವುದು. ಮರದ ದಿಮ್ಮಿ ಸಾಗಿಸುವಲ್ಲಿ ನದಿಗಳು ಮುಖ್ಯ ಪಾತ್ರ ವಹಿಸುತ್ತವೆ. ಸಮುದ್ರದ ನೀರು ಆವಿಯಾಗಿ, ಮೋಡವಾಗಿ, ಮಳೆಯಾಗಿ, ಹೊಳೆಯಾಗಿ, ನದಿಯಾಗಿ ಮತ್ತೆ ಸಮುದ್ರವನ್ನೇ ಸೇರುತ್ತದೆ. ಪ್ರಕೃತಿಯ ವರ ನೀರು. ಪಟ್ಟಣಗಳಲ್ಲಂತೂ ನದಿಯ ನೀರು, ಕೆರೆಯ ನೀರು ಶೋಧಿಸಿ ನಲ್ಲಿಯ ಮೂಲಕ ಜನರಿಗೆ ಒದಗಿಸುತ್ತಿರುವುದನ್ನೂ ನಾವು ಕಾಣಬಹುದು. ಆದರೆ ಹಳ್ಳಿಗಳತ್ತ ದೃಷ್ಟಿ ಹರಿಸಿದಾಗ-

ಧ್ವನಿ ೨ : ನಮ್ಮ ದೇಶ ಹಳ್ಳಿಗಳ ದೇಶ. ಶೇಕಡಾ ೮೦ ರಷ್ಟು ಹಳ್ಳಿಗಳು. ಎಷ್ಟೋ ಮನೆಗಳಿಗೆ ಕುಡಿವ ನೀರಿನ ಸೌಲಭ್ಯವಿಲ್ಲ. ಸಾಮಾನ್ಯವಾಗಿ ಕೆರೆ ಕಟ್ಟೆಗಳಿಂದ ನೀರು ತಂದು ಕುಡಿಯಬೇಕು. ಅಲ್ಲೇ ಸ್ನಾನ ಶೌಚಾದಿ ಕಾರ್ಯಗಳನ್ನೂ ಮಾಡಿ ಮುಗಿಸುವವರೂ ಉಂಟು. ಸಾರ್ವಜನಿಕ ಬಾವಿಗಳು ಅಪರೂಪ. ಹಳ್ಳಿಯ ಹೆಂಗಳೆಯರು ಬೆಳಗ್ಗೆದ್ದು ಮಾಡುವ ಕೆಲಸ ನೀರು ತರುವುದು. ಕೊಡ ತೆಗೆದುಕೊಂಡು ಹೋಗಿ ನೀರು ತರಲು ಹೋರಾಟವನ್ನೇ ಮಾಡಲಾರಂಭಿಸುತ್ತಾಳೆ. ನೀರನ್ನು ತಲೆಯ ಮೇಲೊಂದು ಕಂಕಳಲ್ಲೊಂದು ಕೊಡ ಹಿಡಿದು ತರುವುದನ್ನೂ ನಾವು ಸಾಮಾನ್ಯವಾಗಿ ಕಾಣುತ್ತಿದ್ದೇವೆ.

(ರಾಟೆ ಬಾವಿಯ ಶಬ್ದ ಜೊತೆಗೆ ಮಹಿಳೆಯರ ಮಾತಾಡುವ ಹಿನ್ನೆಲೆ ಶಬ್ದ)

ಧ್ವನಿ ೧ : ರಾಟೆ ಬಾವಿಯಲ್ಲಿ ಉದ್ದುದ್ದ ಹಗ್ಗ ಬಿಟ್ಟು ನೀರು ಎಳೆಯುವುದನ್ನು ಕಾಣುತ್ತೇವೆ. ಇಲ್ಲ ನೆಲ ಬಾವಿಯಿಂದ ನಿರಾಯಾಸವಾಗ ನೀರು ಸೇದಿ ಸಂಗ್ರಹಿಸುವುದನ್ನು ಕಾಣುತ್ತೇವೆ. ಕೆಲವು ಹಳ್ಳಿಗಳಲ್ಲಿ ರಾಟೆಯ ಬಾವಿಯ ಹತ್ತಿರವೇ ಆಗಲೀ, ನೆಲ ಬಾವಿಯ ಹತ್ತಿರವೇ ಆಗಲೀ ಎಲ್ಲರೂ ಒಂದೇ

ಸಾರಿ ನೀರು ಎಳೆಯಲಾಗುವುದಿಲ್ಲ. ಸರದಿಯ ಪ್ರಕಾರ ಕ್ಯೂ ನಿಂತಿರುತ್ತಾರೆ. ಆಗ ಇವರೆಲ್ಲಾ ಅವರಿವರ ಮನೆ ಮಾತುಗಳನ್ನು ಆಡಲಿಕ್ಕೆ ಇದೇ ಒಂದು ಚಾವಡಿಯಾಗುತ್ತದೆ.

ಧ್ವನಿ ೨ : ಪ್ರತಿಯೊಬ್ಬರಿಗೂ ತಮ್ಮ ತಮ್ಮ ಕೆಲಸ ಮೊದಲಾಗಬೇಕೆಂಬ ಆಸೆ. ಅದಕ್ಕಾಗಿ ನೂರಾರು ಸಬೂಬು ಹೇಳಿ ತಮ್ಮ ಸರದಿಯನ್ನು ಬೇಗ ಗಿಟ್ಟಿಸುವ ಆಸೆ.

ರಂಗಮ್ಮ : ಬೋರಕ್ಕ ನನಗೊಂದು ಸಟೇಗ್ ಜಾಗ ಕೊಟ್ಟಿಯಾ ಎಂದೆ?

ಬೋರಮ್ಮ : ನಿಂಗ್ಯಾನಾತ್ರ ತಕ್ಕ ನಾನಾರ ವೊಲದ್‌ತಕ್ಕೆ ವೋಗ್ಬೇಕು.

ಕಿಂಪಿ : ನೀನೊಬ್ಬಳೇ ವೋಗಕನ್ ತಕ್ಕ ಬೋರಕ್ಕ, ನಾವು ನಿನ್ನಾಗೇ ಮನಸ್ಸೇ ನಾನೂ ಬಂದು ಬೇಕಾದಟು ವೊತ್ತಾಯ್ತು.

ಬೋರಮ್ಮ : ಯಾಕ್ ಬೇಜಾರ್ ಮಾಡ್ಕಂಡಮಿ ಸುಮ್ನಿರವ್ವಾ ನಿನ್ನ ಕಾದ್ರೇ ಮುಂದೋಗ್ಲಿ.

ರಂಗಮ್ಮ : ಯಾಕಿದ್ಕೆಲ್ಲಾ ಇಂಗಾಡ್ದರಿ ಸಟೀಗ್ ತಕ್ಕಳಿ.

ಕೆಂಪಿ : ನೀನ್ಯಾನ ಮಾರಾಣ್ಯಾ ತಕ್ಕ ರಂಗಮ್ಮ

ರಂಗ : ನೀನು ಮಾರಾಣಿ ಅವ್ವಾ?

ಕೆಂಪಿ : ನಿನ್ನೊಂದ್ಗೆ ನಾ ಯಾಳಕ್ ಬಂದಿದ್ನಾಲ್ಲ ಬಾಯ್ಮುಚ್ಕಂಡ್ ನಿಂತ್ಕ

ಠಂಗ : ನೀನ್ಯಾರು ನನ್ ಕ್ಯಾಳಕ್ಕೆ?

ಕೆಂಪಿ : ಜಗಳಕ್ಕೆ ಕಾಲ್ ಕೆರೀಬ್ಯಾಡ

ರಂಗ : ಕುಕ್ಕ ಬುಡ್ತೀನಿ ನೋಡು ಈ ತಾಮ್ರದ ಬಿಂದ್ಗೇಲೇ

ಕೆಂಪಿ : ಮುಟ್ಟು ನೋಡ್ತಿನಿ ನನ್ನತ್ರೇನೂ ಇಲ್ಲ ಅಂತ ತಿಳ್ಕಂಡಿದ್ದಯಾ?

ಬೋಠಮ್ಮ : ಹೋಗ್ಲಿ ಬುಡವ್ವಾ ಯಾಕೀಗ್ ಕಚ್ಚಾಡ್ದರಿ ಯಾರೋ ಒಬ್ಬರು ಸೇದ್ಕಳಿ.

ರಂಗ : ಏನು ಮಾಡ್ದಯಿ?

ಬೋರಮ್ಮ : ಸಾಕು ನಿಂತ್ಕಳ್ರೀ ಒಬ್ಬೊಬ್ಬರಾಗಿ ತೆಗೊಳೂರಿ.

ರಂಗ : ಬುಡು ಬೋರಕ್ಕ ಅವಳಿಗೆ ಸರಿಯಾಗಿ ಮಾಡ್ಬುಡ್ತೀನಿ.

ಕೆಂಪಿ : ಮಾಡ್ಬುಡ್ತೀಯಾ, ನಮ್ ಕೈ ಬಾಳೆಹಣ್ ತಿನ್ತಾ ಕೂತ್ಕಂಡದಾ?

ಬೋರಮ್ಮ : ನಡೀರಿ ಸಾಕು.

(ಬಿಂದಿಗೆಗಳೊಂದಿಗೆ ಜಗಳವಾಡುವ ಶಬ್ದ)

(ಎಲ್ಲರೂ ಹೊರಡುವರು ಹಕ್ಕಿ ಪಕ್ಷಿ ಪ್ರಾಣಿಗಳ ಜೊತೆಗೇ ನೀರು, ಕೊಳಲಿನ ಸಂಗೀತ ಮಿಶ್ರಿತ ಧ್ವನಿ ಸಂಯೋಜನೆ)

* * *

ಧ್ವನಿ ೧ : ನಾವು ಉಪಯೋಗಿಸುವ ನೀರು ಆರೋಗ್ಯದ ದೃಷ್ಟಿಯಿಂದ ಶುದ್ಧವಾಗಿರಬೇಕು. ಎಷ್ಟೋ ಕೆರೆ-ಕಟ್ಟೆ ನೀರನ್ನೂ ಹಾಗೆಯೇ ಉಪಯೋಗಿಸುವುದರಿಂದ ಕಾಲರ, ಭೇದಿ, ವಾಂತಿ, ಕಾಮಾಲೆ, ಮುಂತಾದ ರೋಗಗಳು ಬರುವುದು.

(ಕೆರೆಯಲ್ಲಿ ನೀರು ತುಂಬುವ ಶಬ್ದ ಜನರ ಗದ್ದಲದೊಂದಿಗೆ)

ಧ್ವನಿ : ಇದು ಹಳ್ಳಿಯ ಕೆರೆ. ಹಳ್ಳಿಯ ಜನರು ಸಾಮಾನ್ಯವಾಗಿ ಅದೇ ಕೆರೆಯಲ್ಲಿ ಬಟ್ಟೆ ಒಗೆಯುತ್ತಾರೆ. ಮಲ ಮೂತ್ರ ವಿಸರ್ಜನೆ ಮಾಡಿ ಶುದ್ಧಿ ಮಾಡಿ ಕೊಳ್ಳುತ್ತಾರೆ. ಇದರಿಂದ ನೀರು ಅಶುದ್ಧವಾಗುತ್ತದೆ. ಇದರಿಂದ ಅನೇಕ ರೋಗಗಳು ಬರುತ್ತವೆ ಎಂಬ ದೃಷ್ಟಿಯಿಂದ ಆರೋಗ್ಯ ಇಲಾಖೆಯವರು ಮುನ್ನೆಚ್ಚರಿಕೆ ಕ್ರಮವಾಗಿ ಕ್ರಿಮಿನಾಶಕ ಹಾಕಲು ಆಗಿಂದಾಗ್ಗೆ ಬರುತ್ತಾರೆ.

(ಆರೋಗ್ಯ ಶಿಕ್ಷಕ ಹಾಗೂ ಆರೋಗ್ಯ ಕಾರ್ಯಕರ್ತ ಇಬ್ಬರೂ ಬರುತ್ತಾರೆ.)

ಬೋರಮ್ಮ : ಏನ್ಬುದ್ದಿ ತಂದಿರಾದ?

ಆರೋಗ್ಯ ಸಂದರ್ಶಕ : ಇದು 'ಬ್ಲೀಚಿಂಗ್ ಪೌಡರ್' ಅಂದ್ರೆ ಚೆಲುವೆ ಪುಡಿ ಅಂತ. ಇದನ್ನೂ ನೀರಿಗೆ ಹಾಕಿದ್ರೆ ರೋಗಾಣುಗಳೆಲ್ಲಾ ಸಾಯುತ್ತಿ ಕಣಮ್ಮ

ಬೋರಮ್ಮ : ಗಬ್ಬು ಅದಾಕ್ಬುಟ್ರೆ, ನೀರು ಕುಡ್ಯಕಾದದ ಬುದ್ಧಿ?

ಆ.ಸಂ : ಅಲ್ಲಮ್ಮ ಒಂದೆರಡು ದಿನ ವಾಸ್ನೆ ಇರಬಹುದು ಆಮೇಲೆ ಸರಿಹೋಗುತ್ತೆ.

ಕೆಂಪಿ : ಬ್ಯಾಡ ಕನ್ನೋಗಿ ನನ್ನೊಡ್ಯಾ.

ಆ.ಸಂ : ನೋಡಮ್ಮ ಈಗೆಲ್ಲಾ ಅಕ್ಕ ಪಕ್ಕದಲ್ಲಿ ಕಾಲ್ರಾ ರೋಗ ಐತೆ. ಇದು ಬರೋದು ನೀರಿನ ಮೂಲಕ. ಇದಕ್ಕೆ ಮುನ್ನೆಚ್ಚರಿಕೆ ಕ್ರಮವಾಗಿ ಹಾಕಲಿಕ್ಕೆ ಬಂದ್ಮೇಲೆ ಇದ್ಕೆ ಅಡ್ಡಿ ಬರಬಾರದು.

ಕೆಂಪು : ಸತ್ತರೆ ಸಾಯ್ತೀವಿ ಬುಡಿ ಮತ್ತಾ.

ಆ.ಸಂದ : ಹಾಗೆಲ್ಲಾ ಅನ್ಬಾರ್ದು ರೋಗ ಬರದಹಾಗೆ ಮನ್ನೆಚ್ಚರಿಕೆ ಕ್ರಮ ಉಚಿತವಾಗಿ ಒದಗಿಸ್ತಾ ಇದ್ದೀವಿ ಯಾಕ್ ಬೇಡ ಅಂತೀರಾ?

ಕೆಂಪಿ : ಅದ್ಕೂ ಇದ್ಕೂ ಸಂಬಂಧ ಏನು ಬುಡಿ ಸ್ವಾಮಿ.

ಆ.ಸಂಪಿ : ನೋಡಮ್ಮ ಬರೇ ಮೂಢ ನಂಬಿಕೆ ಮಾತಾಡ್ಬಾರ್ದು ಕಾಲಕ್ಕೆ ತಕ್ಕಾಗಿ ಬದಲಾಗಬೇಕು.

ಕೆಂಪಿ : ಅದಾಕ್ಬುಟ್ರೆ ವಾಸಣೆ ಕುಡ್ಯಕಾಗಕ್ಕಿಲ್ಲ.

ಆ.ಸಂ : ಎರಡು ದಿನ ಸಹಿಸ್ಕೊಂಡು ಆರೋಗ್ಯವಾಗಿರಬೇಕು ಅಂತಿರೋ, ಇಲ್ಲ ರೋಗಕ್ಕೆ ತುತ್ತಾಗಬೇಕು ಅಂತಿರೋ.

ಬೋರಮ್ಮ : ಸಾಯಕ್ಯಾರ್‍ರಾಗ್ಸೆ ಬುಡಿ ಸ್ವಾಮಿ.

ಆ.ಸಂ : ಇದೇ ನೀರ್‍ನಲ್ಲಿ ಮೈ ತೊಳಿತಾ ಅವ್ರೆ ನೋಡಿ. ಕೆಲವ್ರು ಎಮ್ಮೆ ದನ,ಕುರಿ ಒಂದು ಕಡೆ ತೊಳೀತಾ ಇದ್ದಾರೆ. ಕೆಲವ್ರು ಇದನ್ನೇ ಉಪಯೋಗಿಸಿದ್ರೆ ರೋಗ ಬರ್‍ದೇ ಇನ್ನೇನಾಗುತ್ತೆ.

ಬೋರ : ಆಗ್ಲಿ ಆಕಿ ಸ್ವಾಮಿ.

ಆ ಸಂ : ಹಾಕಪ್ಪ.

* * *

(ನೀರಿನ ಶಬ್ದ ಸೇದು ಮತ್ತೊಂದು ಪಾತ್ರೆಗೆ ಹೊಯ್ಯುವ ದನಿ)

ಧ್ವನಿ ೧ : ಇದು ನೆಲ ಬಾವಿ ಇದರ ಹತ್ತಿರ ಎಷ್ಟೊಂದು ನೀರು ನಿಂತಿದೆ. ಕ್ರಿಮಿ ಕೀಟಗಳೆಷ್ಟಿವೆಯೋ?

ಆ.ಸಂ : ಏನು ಈ ಬಾವಿ ಕಟ್ಟೆ ತುಂಬಾ ನೀರು, ಪಾಚಿ, ಇದರ ಮೇಲೆ ನೀರಿಟ್ಟರೆ ಜಾರುತ್ತದೆ. ನೀವು ಎಳೆದ ನೀರೇ ಮತ್ತೆ ಬಾವಿಗೆ ಹೋಗುತ್ತೆ. ಇಲ್ಲೇ ಪಾತ್ರೆ ತಿಕ್ಕೀರಿ ಕ್ರಿಮಿ ಕಾಟ ಉತ್ಪತ್ತಿಯಾಗಿ ಮತ್ತೆ ಬಾವಿಗೆ ಸೇರುತ್ತಿ ಇದನ್ನು ಕುಡಿದರೆ ರೋಗ ಬರುತ್ತೆಕಣಮ್ಮ ನಾಗಮ್ಮ ಇಲ್ಲ ಬಂದ್ಯಪ್ಪಾ?

ಶಾಂತ : ಅದ್ಕಗೇನು ಮಾಡಿಬೇಕಪ್ಪಾ?

ಆ.ಸಂ : ಸುತ್ತಾ ಚೆನ್ನಾಗಿ ಇಳಿಜಾರದ ಕಟ್ಟೆ ಹಾಕಿದ್ರೆ ನೀರು ಈಚೆ ಬರುತ್ತೆ ಅದನ್ನು ಒಂದು ಕಡೆ ಹೋಗುವಂತೆ ಮಾಡಬೇಕು. ಆಗ ರೋಗಾಣುಗಳು ಬಾವಿಗೆ ಸೇರುವಂತಿಲ್ಲ ನಾನು ಇವರ ಬಗ್ಗೆ ನಿಮ್ಮೆಜಮಾನ್ರಿಗೇಳ್ತೀನಿ.

ಶಾಂತ : ಹೇಳಿ ಸ್ವಾಮಿ ನೀವ್ಯಾಳದೆಲ್ಲಾ ಜಿಟ ಸ್ವಾಮಿ.

ಧ್ವನಿ ೧ : ಎಷ್ಟೋ ಹಳ್ಳಿಯ ಜನರಿಗೆ ತಿಳುವಳಿಕೆ ಇರುವುದಿಲ್ಲ. ಅಂಥವರಿ ಶಿಕ್ಷಣ ಕೊಟ್ಟು ಅದರಿಂದ ಆಗುವ ಪರಿಣಾಮಗಳನ್ನು ಮನಮುಟ್ಟುವಂತೆ ತಿಳಿಸಿದರೆ ಅವರು ಒಪ್ಪಿಯೇ ಒಪ್ಪುತ್ತಾರೆ.

ಧ್ವನಿ ೨ : ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ನೀರಿನ ಸೌಲಭ್ಯ ಚನ್ನಾಗಿದೆ ಎಂದೇ ಹೇಳಬಹುದು. ಅನಾವೃಷ್ಟಿಯ ಪ್ರದೇಶಗಳೆಂದು ರಾಯಚೂರು, ಗುಲ್ಬರ್ಗಾ, ಕೋಲಾರ ಜಿಲ್ಲೆಯ ಕೆಲವು ಪ್ರದೇಶಗಳನ್ನು ಗುರುತಿಸಬಹುದು. ಇಂಥ ಪ್ರದೇಶಗಳಲ್ಲಿ ಸರ್ಕಾರ ಕೊರೆ ಬಾವಿಗಳನ್ನು ಮಾಡಿಸಿ ನೀರಿನ ಸೌಲಭ್ಯ ಒದಗಿಸಲು ಸಹಾಯವಾಗಿದೆ.

ಧ್ವನಿ : ಶುದ್ಧ ನೀರು ಯಾರ ಆರೋಗ್ಯಕ್ಕೆ ಮುಖ್ಯವಲ್ಲ. ಮಕ್ಕಳು, ದೊಡ್ಡವರು ಎಂಬ ಭೇದ ಭಾವವಿಲ್ಲದೆ ಜೀವವಿರುವ ಎಲ್ಲಾ ಪ್ರಾಣಿ, ಪಕ್ಷಿ,

ಮಾನವರಿಗೂ ನೀರೇ ಜೀವನದ ಅಧಾರ. ಹಳ್ಳಿಗಳಲ್ಲಿ ಕೆರೆ ಕಟ್ಟಿ ಬತ್ತಿದಾಗ ಬಾವಿಯ ಜಲ ತಳ ಕಂಡಾಗ ಮಾರು ಮಾರುಗಟ್ಟಲೆ ಹಗ್ಗ ಬಿಟ್ಟು ಕೊಡ ನೀರು ತುಂಬಲೂ ಕಷ್ಟವಾಗುವುದು. ಇಂಥ ಬೇಸಿಗೆಯನ್ನು ಎಷ್ಟೋ ಹಳ್ಳಿಗಳು ಎದುರಿಸಿವೆ.

(ಬಾವಿಯಿಂದ ನೀರೆತ್ತುವ ಪಂಪಿನ ಶಬ್ದ ನೀರು ಸತತವಾಗಿ ಒಂದೆಡೆ ಬೀಳುವುದು)

ಧ್ವನಿ ೧ : ಈಗಾಗಲೇ ಕೆಲವು ಹಳ್ಳಿಗಳಲ್ಲಿ ನೀರೆತ್ತುವ ಪಂಪುಗಳನ್ನು ಇಟ್ಟುಕೊಂಡು ನೀರೆಳೆಯುವ ಭಾರವನ್ನು ಕಡಿಮೆ ಮಾಡಿಕೊಂಡಿದ್ದಾರೆ. ಈ ಸಂದರ್ಭದಲ್ಲಿ ನೀರನ್ನು ಪೋಲು ಮಾಡಬಾರದು. ಬೇಕಾದಷ್ಟನ್ನು ಉಪಯೋಗಿಸಿ ಅದನ್ನು ರಕ್ಷಿಸಿ ಇಟ್ಟುಕೊಳ್ಳಬೇಕು. ಬೇಸಿಗೆಯಲ್ಲಿ ಜಲ ಬತ್ತಿದಾಗ ಕಷ್ಟವನ್ನು ಎದುರಿಸಬೇಕಾಗುತ್ತದೆ.

ಧ್ವನಿ ೨ : ನೀರನ್ನು ಶೇಖರಿಸುವ, ಶುದ್ಧೀಕರಿಸುವ ಸಂರಕ್ಷಿಸುವ ಕೆಲಸ ಸರ್ಕಾರ, ಸಾರ್ವಜನಿಕ ಸ್ವಯಂಸೇವಾ ಸಂಸ್ಥೆಗಳು ವಹಿಸುತ್ತಿವೆ. ಇದರ "ಬಹು ಜನ ಹಿತಾಯ ಬಹುಜನ ಸುಖಾಯ"

ಧ್ವನಿ ೧ : ಅನೇಕ ರೋಗ ರುಜಿನಗಳು ಬರಲು ಅಶುದ್ಧ ನೀರೇ ಕಾರಣ.

ಆ.ಸ : ಏನು ಕೆಂಪಮ್ಮ? ಯಾಕಳ್ತೀಯ?

ಕೆಂ : ತಮ್ಮನ್ನೇ ನೋಡುವ ಅಂತ ಬಂದೆ ಬುದ್ಧಿ...

ಆ.ಸಂ : ಏನು?

(ಕೆಮ್ಮಿನ ಶಬ್ದ)

ಕೆಂ : ಮಗೀಗೆ ತುಂಬಾ ನೆಗಡಿ ಕೆಮ್ಮು ಮಗೀನಕಷ್ಟ ನೋಡಕ್ಕಾಗಕ್ಕಿಲ್ಲ ಒಸಿ ಅಮುಸ್ತಿ ಕೊಡಿ ಬುದ್ಧಿ.

ಆ.ಸಂ : ಯಾಕಮ್ಮಾ?

ಕೆಂಪಿ : ಮೊನ್ನೆವರ್ಗೂ ಸರ್‍ಯಾಗಿದ್ದ ಬುದ್ಧಿ ಮಳೆ ಬಿತ್ತು ನೋಡಿ ಅದರ ನೀರು ಕುಡ್ದ ಇಂಗಾಗೊಯ್ತು.

ಆ.ಸಂ : ನೋಡು ಕೆಂಪಮ್ಮ ಯಾವಾಗ್ಲೂ ಮಳೆ ಬಿದ್ದ ಕೂಡಲೇ ನೀರು ಕುಡಿಬಾರ್ದು ಯಾಕೆ ಅಂದ್ರೆ ವಾತಾವರಣದಲ್ಲಿ ಅನೇಕ ವಿಷಕ್ರಿಮಿಗಳು ಇರುತ್ತೆ. ಅವು ಮಳೆನೀರಿಗೆ ಸೇರ್ತವೆ. ಆರೋಗ್ಯವಾದ ವ್ಯಕ್ತಿ ಆ ಕಲುಷಿತ ನೀರು ಕುಡಿದ್ರೆ ನಾನಾ ರೋಗ ಬರುತ್ತೆ. ಆದ್ದರಿಂದಲೇ ನಾನು ನಿಮ್ಗೆ ಎಷ್ಟೋ ಸರ್ತಿ

ಹೇಳೋದು. ನೀರನ್ನೂ ಬಟ್ಟೆಯಲ್ಲಾದ್ರೂ ಸೋಸಿ ಇಲ್ಲ ಕುದಿಸಿ ಆರಿಸಿ ಕುಡೀರಿ ಅಂತ. ಪಟ್ಟಣಗಳಲ್ಲಿ ವೈಜ್ಞಾನಿಕ ರೀತಿಯಲ್ಲಿ ಮರಳು, ಸುಣ್ಣ ಹಾಕಿ ಶುದ್ಧಿ ಮಾಡಿ ನೀರಿನ ಸೇವನೆ ಮಾಡ್ತಾರೆ. ನೀವು ಭಾವೀಗಾದ್ರೂ ಸುಣ್ಣ ಹಾಕಿದ್ರೆ ಎಷ್ಟೋ ರೋಗಾಣುಗಳು ಸಾಯ್ತವೆ.

ಕೆಂಪಿ : ಆಮೆ, ಮೀನು ಬುಟ್ರೆ?

ಆ.ಸಂ : ಒಳ್ಳೇದೇ.

ಕೆಂಪಿ : ಸುಣ್ಣಕ್ಕೆ ಬೆಲೆ ತೆತ್ತಬೇಕಲ್ಲಾ ಸ್ವಾಮಿ.

ಆ.ಸಂ : ಅದ್ಕೇ ನಾವು ಉಚಿತವಾಗಿ ಚೆಲುವೇ ಪುಡಿ ಹಾಕ್ತೀವಿ. ಎಲ್ಲಾ ಸರಿ ಹೋಗುತ್ತೆ. ನಿನಗೆ ಈ ಹೊತ್ತ ಮಾತ್ರೆ ಕೊಡ್ತೀನಿ ಅದನ್ನು ಕೊಡು ಸರಿಹೋಗುತ್ತೆ.

ಧ್ವನಿ೨ : ಪ್ರತಿಯೊಂದು ಹಳ್ಳಿಯೂ ನೀರಿನ ಸೌಲಭ್ಯವನ್ನು ಪಡೆಯಲೇಬೇಕು ಎಷ್ಟೋ ಗ್ರಾಮಿಣ ಜನರಿಗೆ ಬಾವಿಯನ್ನು ತೆಗೆಸುವಷ್ಟೂ ಜಾಗವಿಲ್ಲ ಅಂಥವರಿಗಾಗಿ ಸರಕಾರ ಕೊರೆ ಬಾವಿಗಳನ್ನು ಒದಗಿಸಲು ಮುಂದಾಗಿದೆ ಶೋಷಣೆಗೊಳಗಾದವರ ಪೋಷಣೆಗೆ ಇದು ಒಳಿತಲ್ಲವೇ?

ಧ್ವನಿ ೧ : ಹೇಳುವುದುಂಟು "ಹೊಟ್ಟೆ ತುಂಬಾ ನೀರು ಕುಡಿದು ತೃಪ್ತಿ ಪಡುತ್ತೇನೆ" ಎಂದು. ಹೌದು ನೀರೂ ಕೂಡ ಎಷ್ಟೋ ಹಸಿವಿನ ಭಾಗವನ್ನು ಇಂಗಿಸುತ್ತದೆ. ಅದಕ್ಕೆ ದಾನ ದಾನಕೆಲ್ಲಾ ನೀರಿನ ದಾನ ಮುಖ್ಯ ಎಂದು ಹೇಳುವುದು. ನಮ್ಮ ಹಿಂದಿನವರಿಂದ ಜಾತ್ರೆ, ಯಾತ್ರೆ ಮಾಡುವವರಿಗೆ 'ಅರೊಟ್ಟಗೆ' ಇಡಿಸಿ ಜನರ ಬಾಯಾರಿಕೆಯನ್ನು ಪರಿಹರಿಸುತ್ತಾ ಬಂದಿರುವುದನ್ನು ನಾವು ಕಾಣುತ್ತಿದ್ದೇವೆ.

ಧ್ವನಿ೨ : ಒಂದು ತೊಟ್ಟು ನೀರಿಗೆ ತೀರ್ಥವಾಗುವ ಶಕ್ತಿ ಇದೆ, ವಿದ್ಯುಚ್ಛಕ್ತಿಯಾಗುವ ಬಲವಿದೆ. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹಡಗನ್ನೊಯ್ಯುವ ಕೆಚ್ಚಿದೆ. ನದ-ನದಿ ಎಂಬ ಹೆಸರಿನಲ್ಲಿ ದೇವತೆಯಾಗಿ ಪೂಜಿಸಿಕೊಳ್ಳುತ್ತಿವೆ. ನೀರನ್ನು ಕಂಡರೇ ನಮ್ಮ ದೇಹ ಶುದ್ಧವಾಗುವುದು. ನದಿಯ ನೀರು ಬೆಟ್ಟ ಗುಡ್ಡಗಳ ಬೇರು ನಾರು, ಲವಣಾಂಶಗಳನ್ನೆಲ್ಲಾ ಹೊತ್ತ ತರುತ್ತದೆ. ಆದುದರಿಂದಲೇ ಇದರಲ್ಲಿ ಆಯುರ್ವೇದ ಔಷಧಗಳು ಬೆರೆತಿವೆ. ಇದನ್ನು ಕುಡಿದರೆ, ಇದರಲ್ಲಿ ಸ್ನಾನ ಮಾಡಿದರೆ ಅನೇಕ ರೋಗಗಳ ಪರಿಹಾರ ಎಂದು ಹೇಳುತ್ತಾರೆ. ಎಲ್ಲರ ಕೊಳೆಯನ್ನು ತೊಳೆದು ಆನಂದವನ್ನು ತರುವುದರಲ್ಲಿ ನೀರಿನ ಪಾತ್ರ ಬಹು ಮುಖ್ಯ. ಹಿಂದೆ ಅನ್ನದ ಋಣ-ನೀರಿನ ಋಣ ಎಲ್ಲೆಲ್ಲಿ ಇರುತ್ತದೆಯೋ ನಮ್ಮ ಋಣಕ್ಕನುಸಾರವಾಗಿ ನೀರನ್ನು ಕುಡಿಯಬೇಕಾಗುತ್ತದೆ.

ಧ್ವನಿ ೧ : ನೀರನ್ನು ಶುದ್ಧಮಾಡಿ ಕುಡಿಯುವುದು ನಮ್ಮ ಕೈಯ್ಯಲ್ಲೇ ಇದೆ. ಜನ ಹಳ್ಳಿಯವರಾದರೇನು? ಪಟ್ಟಣದವರಾದರೇನು? ಎಲ್ಲರೂ ಮನುಷ್ಯರೇ ತಾನೇ? ಕೊಡ ನೀರಾದರೇನು? ಅದು ಶುದ್ಧವಾಗಿರಬೇಕು. ಕೊಡ ನೀರಿಗೆ ಹೋರಾಟ ಇದ್ದದ್ದೇ. ಈ ಕೊಡ ನೀರಿಗೆ ಪರದಾಟ ಬರಬಾರದೆಂದೇ ಸರ್ಕಾರ, ಸಾರ್ವಜನಿಕ ಸೇವಾ ಸಂಘಗಳು ಇದರಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ ಅಲ್ಲವೇ?

*

# ಸಿದ್ಧಿಗಳು

ಧ್ವನಿ : ಭಾರತದಲ್ಲಿದ್ದ ಪೋರ್ಚುಗೀಸರು, ಡಚ್ಚರು, ಅರಬರು, ನೀಗ್ರೋಗಳನ್ನು ಕೊಂಡು ಕೊಂಡು ಗುಲಾಮರಾಗಿ ದುಡಿಸಿಕೊಂಡರು. ಆ ಸಂತತಿಯವರೇ 'ಸಿದ್ಧಿಗಳು'.

ಧ್ವನಿ : ನಮ್ಮ ಈ ರೂಪಕಕ್ಕೆ ನಾವು ಆಯ್ಕೆ ಮಾಡಿಕೊಂಡ ಸ್ಥಳಗಳೆಂದರೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಮಂಟಗೇರಿ ಹಾಗೂ ಚಿಪಗೇರಿ. ಈ ಅರಣ್ಯ ಪ್ರದೇಶದಲ್ಲಿ ನೆಲೆಯಾಗಿರುವ ಇವರನ್ನು ಮಾತನಾಡಿಸಲು, ಹಾಡಿಸಲು ಪೂರ್ವಭಾವಿ ಸಿದ್ಧತೆಯನ್ನು ಮಾಡಿಯೇ ಹೋಗಬೇಕಾಯಿತು. ಅಲ್ಲಿನ ಸ್ಥಳೀಯ ಪರಿಚಯಸ್ಥರಿಂದ ದಿನಾಂಕವನ್ನು ನಿಶ್ಚಯ ಮಾಡಿಯೇ ಹೋದೆವು.

ಧ್ವನಿ : ಅಂದು ಸಿದ್ಧಿಗಳ ಜಾಗಕ್ಕೆ ನಿಶ್ಚಯವಿದ್ದ ದಿನ ಹೋದಾಗ ಬಸ್ಸುಗಳ. ತಡೆ ಹೀಗಾಗಿ ಧ್ವನಿ ಮುದ್ರಣವಾಗುವುದೋ ಇಲ್ಲವೋ ಎಂಬ ಶಂಕೆ - ಆದರೂ ಪ್ರಯತ್ನ ಬಿಡಲಿಲ್ಲ. ಲಾರಿಯ ಮೇಲೆ ಪಯಣ ಸಾಗಿ ಚಿಪಗೇರಿಗೆ ತಲುಪಿದೆವು. ಮಲೆನಾಡ ಈ ಅರಣ್ಯದಲ್ಲಿ ಸಿದ್ದಿಯವರ ಮನೆಗಳು ಗುಡಿಸಲುಗಳು ಹರಡಿಕೊಂಡಿವೆ. ಸ್ಥಳೀಯರು ಪೂರ್ವಭಾವಿಯಾಗಿ ಹೇಳಿದ್ದರೂ ಒಬ್ಬರ ಸುಳಿವಿಲ್ಲ. ಮತ್ತೆ ಅಲ್ಲಿನ ಸಿದ್ಧಿ ಮಕ್ಕಳು ಶಾಲೆಯಿಂದ ಕಳುಹಿಸಿ ಸಿದ್ಧಿ ಮುಖಂಡನಿಂದ ಅವರನ್ನು ಕಲೆಹಾಕುವ ಕೆಲಸ ಸಾಗಿತು. ಧ್ವನಿ ಮುದ್ರಣದ ಸಿದ್ಧತೆ ಮಾಡಿ ಅವರ ದರ್ಶನಕ್ಕೆ ಕಾದೆವು.

ಧ್ವನಿ : ಶಾಂತಾರಾಮ ಸಿದ್ಧಿ ಹಾಗೂ ಹೀಗೂ ಮಾಡಿ ಹತ್ತಾರು ಜನರನ್ನು ಕಲೆಹಾಕಿದಾಗ ಧ್ವನಿಮುದ್ರಣಕ್ಕೆ ಸ್ಫೂರ್ತಿಯಾಯಿತು. ಬಿಗಿಯಾಗ ಮೈಕಟ್ಟು, ಆಫ್ರಿಕಾದವರನ್ನೆ ಹೋಲುವ ರೂಪ ರೇಖೆಗಳು, ಕಪ್ಪು ಬಣ್ಣ, ಗುಂಗುರುಗಟ್ಟಿದ ಒರಟು ಕೂದಲು, ದಪ್ಪತುಟಿ, ಮೊಂಡು ಮೂಗು, ಬುಡಕಟ್ಟಿನ ಜನರಿಗೆ ಸಹಜವಾದ ಮುಗ್ಧತೆ ಮೊಗದಲ್ಲಿ. ಶುದ್ಧಕನ್ನಡದಲ್ಲಿ ನಿರರ್ಗಳವಾಗಿ ಮಾತ್ನಾಡಿದರು. ಕೊಂಕಣಿ, ಮರಾಠಿ, ಉರ್ದುಗಳಲ್ಲೂ ಮಾತ್ನಾಡುತ್ತಿದ್ದರು.

ಧ್ವನಿ : ಅಂತೂ ನಮ್ಮ ರೂಪಕಕ್ಕೆ ಸಂದರ್ಶನವನ್ನು ಆರಂಭಿಸಿಯೇ ಬಿಟ್ಟೆವು. ಗೋಪು ದುರ್ಗಾ ಸಿದ್ಧಿ ಅರವತ್ತೆಂಟು ವರ್ಷಗಳ ಅನುಭವಿ. ಅವರ ಆಚಾರ, ವಿಚಾರ,

ಸಂಸ್ಕೃತಿಗಳ ಬಗೆಗೆ ನಿರರ್ಗಳವಾಗಿ ಮಾತನಾಡಿದರು. ಡುಮಾಮಿ ವಾದ್ಯವನ್ನು ಬಾರಿಸುವುದರಲ್ಲಿ ನಿಸ್ಸೀಮ. ಇದು ಆತನು ಡುಮಾಮಿ ವಾದ್ಯ ಬಾರಿಸುವ ಕಲೆ........

(ಡುಮಾಮಿ.......)

ಧ್ವನಿ : ಸಿದ್ಧಿಯರು ಬಿದುರಿನ ಹೊದಿಕೆಯ ಗೋಡೆಗೆ ಮಣ್ಣಿನ ಲೇಪ ಮಾಡಿ ಹುಲ್ಲಿನ ಸೂರು ಮಾಡಿದ್ದಾರೆ. ಒಂದೇ ಅಂಗಳ ಮೂಲೆಯಲ್ಲಿ ಅಡಿಗೆ ಒಲೆ. ಬಾಗಿಳ ಹೊರಗೆ ಜಗುಲಿ ಕೆಲವು ಮಣ್ಣಿನ ಕುಡಿಕೆಗಳು. ಬಿದುರಿನ ಬುಟ್ಟಿ. ಆದರೆ ಇಂದು ಕೆಲವರು ಸರ್ಕಾರದ ಸಹಾಯದಿಂದ ಹಂಚಿನ ಮನೆಯನ್ನು ಕಂಡುಕೊಂಡಿದ್ದಾರೆ.

ಧ್ವನಿ : ಕೊಲೆ ಮಾಡಿ ಜೀವನ ಸಾಗಿಸುವ ಗೋಪು ಸಿದ್ಧಿ ಮನೆಯ ಬಗ್ಗೆ ಕೇಳಿದಾಗ

(ಇಂಟರ್‌ವ್ಯೂವ್)

ಧ್ವನಿ : ತಮ್ಮ ಹಿಂದಿನ ದಿನಗಳನ್ನು ಮೆಲುಕು ಹಾಕಿದ ಅವರು ಬೇಟೆಯ ಬಗೆಗೆ ಹೀಗೆ ನುಡಿದರು-

ಧ್ವನಿ : ಊಟ ತಿಂಡಿಯ ಬಗೆಗೆ-

ಧ್ವನಿ : ಒಂದೇ ಕುಟುಂಬದಲ್ಲಿ ಮೂರು ಧರ್ಮಗಳ ತ್ರಿವೇಣಿ ಸಂಗಮ ಇರುವುದನ್ನು ಕಾಣಬಹುದು. ಹಿಂದೂ ಮುಸ್ಲಿಮ್, ಕ್ರಿಶ್ಚಿಯನ್‌ರು ಆಫ್ರಿಕದಿಂದ ಬಂದ ಇವರನ್ನು ಕೊಂಡರು. ಆಗ ಅವರು ಆಯಾ ಧರ್ಮ ಸ್ವೀಕರಿಸಿದರು.

ಧ್ವನಿ : ಸಿದ್ಧಿಗಳ ಜೀವನ

ಧ್ವನಿ : ಯಾರಿಗೆ ತಾನೆ ಮನರಂಜನೆ ಬೇಡ. ಆದರೆ ಇವರ ಮನರಂಜನೆ

ಧ್ವನಿ : ಇತ್ತೀಚೆಗೆ ವಿದ್ಯಾಭ್ಯಾಸದತ್ತ ಗಮನ ಹರಿಸುತ್ತಿದ್ದಾರೆ. ಹಿಂದೆ ಹೇಗಿತ್ತು, ಈಗ ಹೇಗೆ ಎಂಬುದನ್ನು ನೆನಪಿಸುತ್ತಾರೆ.

ಧ್ವನಿ : ಸಿದ್ಧಿಯರ ವಿವಾಹ ವಿಧಿ

ಧ್ವನಿ : ಸತ್ತವರಿಗೆ ಸಂಸ್ಕಾರ

ಧ್ವನಿ : ಸಿದ್ಧಿಯವರು ಯುಗಾದಿ, ದೀಪಾವಳಿ, ಗಣೇಶನ ಹಬ್ಬ, ಮೊಹರಂ, ರಂಜಾನ್, ಬಕ್ರೀದ್, ಕ್ರಿಸ್‌ಮಸ್ ಹಬ್ಬಗಳನ್ನು ಒಟ್ಟಾಗಿ ಸೇರಿ ಆಚರಿಸುತ್ತಾರೆ.

ಧ್ವನಿ : ಸಿದ್ಧಿ ಹೆಣ್ಣು ಮಕ್ಕಳ ಪ್ರಮುಖ ಕುಣಿತವೆಂದರೆ ಪುಗುಡಿ ನೃತ್ಯ. ಸಮ ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಎದುರು ಬದರು ನಿಂತು ಕೈಯಲ್ಲಿ ಬರಿದಾದ ಕೊಡ ಹಿಡಿದು ಊದುತ್ತಾ ಹಿಮ್ಮೇಳದ ಹಾಡು ಹಾಗೂ ಗುಮಟೆಯ ತಾಳಕ್ಕೆ ತಕ್ಕಂತೆ ಬಾಗಿ

ಬಳುಕಿ ಕುಣಿಯುತ್ತಾರೆ. ಹಾಡು ಬದಲಾದಾಗ ಹೆಜ್ಜೆ, ನರ್ತನದಗತಿಯೂ ಬದಲಾಗುವುದು. ಇದನ್ನು ಒಂದು ರೀತಿಯ ಕೊಡ ಕುಣಿತ ಎಂದೂ ಕರೆಯಬಹುದು.

(ಹಾಡು)

ಧ್ವನಿ : ಇದು ಮಂಡಿಕೇರಿಯ ಸಿದ್ಧಿಯವರ ವೃಂದದ ಪುಗುಡಿ ನೃತ್ಯ, ಸಂಗೀತ-

ಧ್ವನಿ : ಧ್ವನಿಗೂಡಿಸಿದವರು: ಮಾದೇವಿ ಅಪ್ಪು ಸಿದ್ಧಿ, ಸರಸ್ವತಿ ನಾಗೇಸಿದ್ಧಿ, ಜೋಸ್ಪಿನ್, ಸಂತಾನ್, ಲಕ್ಷ್ಮಿರಾಮಚಂದ್ರ ಸಿದ್ಧಿ, ಸುರೇಖಸಿದ್ಧಿ, ಲಕ್ಷ್ಮೀ ಪುರುಷೋತ್ತಮ ಸಿದ್ಧಿ, ಸರಿತಾಸುರೇಶ್ ಸಿದ್ಧಿ, ಪಾರ್ವತಿ ಹನುಮಂತ ಸಿದ್ಧಿ.

ವಾದ್ಯಸಹಕಾರ : ನಾಗ್ಯಾಕೃಷ್ಣ ಸಿದ್ಧಿ, ಹನುಮಂತ, ಪರಶುರಾಮ ಗಿರಿಗೋಲಿಸಿದ್ದಿ, ಕೃಷ್ಣ ನಾಗ್ಯಸಿದ್ಧಿ. ಗುಮಟೆ, ತಾಳ, ಕೊಳಲು ಡೋಲುಗಳು ಈ ನೃತ್ಯಕ್ಕೆ ಮೆರಗು ನೀಡುವುದು.

ಧ್ವನಿ : ಇದಲ್ಲದೆ ಇವರು ಸುಗ್ಗಿ ಕುಣಿತ ಕೋಲಾಟ ಮುಂತಾದವನ್ನು ಹೆಂಗಸರು ಗಂಡಸರೆಂಬ ಭೇದವಿಲ್ಲದೆ ಹಾಡುವರು.

ಧ್ವನಿ : ಕೃಷ್ಣಾ ಸಿದ್ಧಿ - ಮದುವೆ ವಯಸ್ಸಿನ ಬಗೆಗೆ ತಾಳಿದ ಮನೋಭಾವ.

ಧ್ವನಿ : ಹುಲ್ಯವ್ರ ಮನೆಯ ಸೋಮು ಸಿದ್ಧಿ: ಸಿದ್ಧಿಗಳ ಮದುವೆ ಬಗೆಗೆ ಹೇಳಿದುದು.

ಧ್ವನಿ : ಜಡ್ಡಿಗಡ್ಡಿಯ ದುರ್ಗಾ ಸಿದ್ಧಿ ಜೇನು ಕೀಳುವುದನ್ನು ವಿವರಿಸುವುದಲ್ಲದೆ ಕುಟುಂಬ ಯೋಜನೆಯ ಬಗೆಗೂ ಆಸಕ್ತಿತೋರಿದರು.

ಧ್ವನಿ : ಭುಜಂಗ ಸಿದ್ಧಿ ವಿದ್ಯಾಭ್ಯಾಸ ಆಟಗಳ ಬಗೆಗೆ ತಮ್ಮ ಜನ ಇತ್ತೀಚೆಗೆ ಆಸಕ್ತಿ ತೋರುತ್ತಿರುವುದನ್ನು ವಿವರಿಸಿದರು.

ಧ್ವನಿ : ಇದು ದುರ್ಗಾ ಸಿದ್ಧಿ ನುಡಿಸಿದ ತಬಲಾ ವಾದನ ನಾಟಕದ ಕಲೆಯಲ್ಲೂ ಈತನಿಗೆ ಅಭಿರುಚಿ.

ಧ್ವನಿ : ಉತ್ತರ ಕರ್ನಾಟಕದ ಜನಪ್ರಿಯ ನಾಟಕ ಸಂಗ್ಯಾಬಾಳ್ಯಾವನ್ನು ಉತ್ತರ ಕರ್ನಾಟಕದವರಿಗಿಂತ ಚೆನ್ನಾಗಿ ಆಡುತ್ತಾರೆ. ಈ ಉತ್ತರ ಕನ್ನಡದ ಸಿದ್ದಿಯರು.

ಧ್ವನಿ : ಇದು ಶಾಂತಾರಾಮಸಿದ್ಧಿಯ ಹಾಡಿದ ಭಜನೆ ಗೀತೆ- ಈತ ಬಿ.ಎ. ಓದಿ ಸಮಾಜ ಸೇವೆಯಲ್ಲಿ ತೊಡಗಿರುವುದು ಸ್ತುತ್ಯರ್ಹ.

ಧ್ವನಿ : ಡಮಾಮಿ ಕುಣಿತ ಸಿದ್ದಿಯರ ಮೂಲಕಲೆ. ಯುಗಾದಿ ನವರಾತ್ರಿಯಲಿ ಈ ಕುಣಿತ ಕುಣಿಯುವರು. ಮದುವೆ, ಧಾರ್ಮಿಕ ಆಚರಣೆಗಳಲ್ಲಿ ಹೆಣ್ಣುಮಕ್ಕಳು ಮೈಬಳುಕಿಸುತ್ತಾ ದೇವರು ಮೈಮೇಲೆ ಬಂದಂತೆ ತೂಗಾಡುತ್ತಾ ಹಾಡುವರು. ಇದು ಭುಜಂಗೇಶ ಸಿದ್ಧಿ ಕೃಷ್ಣಾ ಶಾಂತಾರಾಮ ದುರ್ಗಾ ಜಿ. ಸಿದ್ಧಿ, ಸೋಮು,

ದುರ್ಗಾ ಎಸ್. ಸಿದ್ಧಿ ಹಾಗೂ ಮಾದೇವ ಸಿದ್ಧಿಯವರು ದನಿಗೂಡಿಸಿದ ಡುಮಾಮಿ ಹಾಡು.

ಧ್ವನಿ : ದೇವಕಿ ಅಪ್ಪು ಸಿದ್ಧಿ ಮರಿಚಿಕೇಲಿಯಲ್ಲಿನ ಸಿದ್ಧಿಯವರ ಆಶೀರ್ವಾದ ಸಂಸ್ಥೆಯಲ್ಲಿ ಮೇಲ್ವಿಚಾರಕಿ.

ಧ್ವನಿ : ಇದು ಸಾವಿತ್ರಿ ಸಿದ್ಧಿ ಹಾಡಿದ ಭಾವಗೀತೆ (ಆಕೆಯ ಮಾತುಗಳು)

ಧ್ವನಿ : ಬಾಲಕ ಪರಮೇಶ್ವರ ಗೋಪಾಲಸಿದ್ಧಿಯನ್ನು ಮಾತನಾಡಿಸಿದಾಗ

ಧ್ವನಿ : ಸುಬ್ಬಿ ನಿ ಬಂಗಾರಿ ಹಾಗೂ ಲಕ್ಷ್ಮಿಸಿದ್ಧಿ ಅವರು ಪ್ರಸ್ತುತಪಡಿಸಿದ ಪುಗುಡಿ ನೃತ್ಯ.

ಧ್ವನಿ : ಮದುವೆ ಹಾಡನ್ನೂ ಸಿದ್ಧಿಯವರು ಹಾಡುತ್ತಾರೆ. ಇದು ಹವ್ಯಕ ಬ್ರಾಹ್ಮಣರ ಪ್ರಭಾವದಿಂದ ಬಂದಿದೆ ಎಂದು ಕೆಲವರ ಅಭಿಪ್ರಾಯ.

ಧ್ವನಿ : ತತ್ವ ಪದಗಳನ್ನು ಹಾಡುತ್ತಾರೆಂಬುದಕ್ಕೆ ಲಕ್ಷ್ಮೀ, ಗಿರಿಜಾ ಹಾಡಿದ ಈ ತತ್ವಪದ ಉದಾಹರಣೆಯಾಗಿದೆ.

ಧ್ವನಿ : ಸರಸ್ವತಿ ಹಾಗೂ ಲಕ್ಷ್ಮೀಯರಿಂದ ಅರಿಶಿನ ಹಚ್ಚುವ ಹಾಡು-

ಧ್ವನಿ : ಇದು ಕೊಂಕಣಿಯಲ್ಲಿ ಅರಿಸಿನ ಹಚ್ಚುವ ಹಾಡುವ ಪರಿ-

(ಸಾಕ್ಷರತಾ ಹಾಡು)

ಧ್ವನಿ : ಇದು ಲಕ್ಷ್ಮಿ ದನಿಗೂಡಿಸಿದ ಸಾಕ್ಷರತಾ ಹಾಡು. ಹೆಣ್ಣುಮಕ್ಕಳ ವಿದ್ಯಾಭ್ಯಾಸ, ಸಿದ್ಧಿಯರ ಸಂಸ್ಕೃತಿಯ ಬದಲಾವಣೆಯ ಬಗೆಗೆ ಹೇಳುತ್ತಾರೆ.

ಧ್ವನಿ : ಸುಬ್ಬಿಯ ಮಾತುಗಳು

ಧ್ವನಿ : ಇದು ಬೆಂಜಮಿನ್ ಸಿದ್ಧಿ ಹಾಡಿದ ಗೀತೆ - (ಈತ ಕುಡುಕ ತಂದೆಯಿಂದ ಓದಲಾಗಲಿಲ್ಲ ಎನ್ನುತ್ತಾನೆ.)

ಧ್ವನಿ : ಇದೆಲ್ಲಾ ಹಳೆಯ ಕಾಲದ ಇಂದಿನ ಮಾತಾಯಿತು. ಹಳೆಯ ಕಾಲ ಹೋಯಿತು. ಹೊಸ ಕಾಲಕ್ಕೆ ಬರಬರುತ್ತಾ ಹೊಂದಿಕೊಳ್ಳುತ್ತಿದ್ದಾರೆ. ಸಿದ್ಧಿಜನಾಂಗದವರು. ಸಾಹಿತ್ಯ, ಸಂಗೀತ, ನೃತ್ಯ ನಾಟಕ ಎಲ್ಲಾ ಕಲೆಗಳಲ್ಲೂ ಇವರು ಮುಂದಿದ್ದಾರೆ. ನಡೆ-ನುಡಿ ಆಚಾರ - ವಿಚಾರ, ಉಡುಪು, ಆಹಾರ ಎಲ್ಲಾ ಇಂದಿನ ಕಾಲಕ್ಕೆ ಬದಲಾಗಿದೆ.

ಧ್ವನಿ : ಇವರಲ್ಲೂ ಎಷ್ಟೋ ಜನ ವಿದ್ಯಾವಂತರಾಗಿದ್ದಾರೆ. ಆಗಬೇಕೆಂಬ ತಮ್ಮ ಬಯಕೆಯನ್ನು ತೋಡಿಕೊಳ್ಳುತ್ತಾರೆ. ಸರ್ಕಾರವೂ ಇವರ ಅಭಿವೃದ್ಧಿಗೆ ಸಹಾಯ ಮಾಡುತ್ತಾ ಇದೆ. ಇದರಿಂದ ಸ್ಫೂರ್ತಿಗೊಂಡು ಹಲವರು ವಿದ್ಯಾವಂತರಾಗಿ

ಸಣ್ಣಪುಟ್ಟ ಕೆಲಸಗಳಿಗೂ ಹೋಗುತ್ತಿದ್ದಾರೆ. ಬುಡಕಟ್ಟು ಜನಾಂಗದವರಾದ ಇವರು ಇನ್ನೂ ಕೆಲವು ಹಳೆಯ ಆಚಾರವಿಚಾರಗಳನ್ನು ಉಳಿಸಿಕೊಂಡು ಬಂದಿದ್ದಾರೆ.

ಧ್ವನಿ : ಸ್ವಯಂ ಸೇವಾ ಸಂಸ್ಥೆಗಳು, ಸರ್ಕಾರ, ಸಮಾಜ ಇವರ ಬಗ್ಗೆ ತೋರಿರುವ ಕಾಳಜಿಯಿಂದ ಈ ಬುಡಕಟ್ಟು ಜನಾಂಗ ನವನಾಗರೀಕತೆಯ ಮೆಟ್ಟಲು ಹತ್ತಿ ನಗರ ಸಂಸ್ಕೃತಿಗೆ ಹೊಂದಿಕೊಳ್ಳುತ್ತಿರುವುದು ನಿಜಕ್ಕೂ ಪ್ರಗತಿಯ ಸಂಕೇತವಲ್ಲವೇ?

*

# ಜ್ಞಾನದೆಡೆಗೆ

(ಹಾಡು)

ಧ್ವನಿ ೧: ಅನಕ್ಷರತೆಯಿಂದ ಅಕ್ಷರತೆಯೆಡೆಗೆ, ಅಜ್ಞಾನದಿಂದ ಜ್ಞಾನದೆಡೆಗೆ, ದುಃಖದಿಂದ ಸಂತೋಷದೆಡೆಗೆ, ಅಶಾಂತಿಯಿಂದ ಶಾಂತಿ ಎಡೆಗೆ ಹೋಗಬೇಕೆಂಬುದು ಪ್ರತಿಯೊಬ್ಬರ ಆಸೆ-ಆಕಾಂಕ್ಷೆ, ಇಷ್ಟೆಲ್ಲಾ ಆದರೆ ದೇಶ ಶಾಂತಿಯ ಎಡೆಗೆ.

ಧ್ವನಿ ೨: ಸರ್ವ ಜನರು ಸುಖವಾಗಿರಬೇಕಾದರೆ, ದೇಶ ಕಲ್ಯಾಣವಾಗಬೇಕಾದರೆ, ಸಂಪೂರ್ಣ ಸಾಕ್ಷರತೆ ಅತ್ಯವಶ್ಯಕ. ಒಂದು ಕಾಲವಿತ್ತು, ವಯಸ್ಕರ ಶಿಕ್ಷಣ ಎಂದು ಆದರೆ ಈಗ ಆ ಚಿತ್ರದ ಬದಲಾವಣೆಯಾಗಿದೆ. ಇಂದು ಸರ್ವರ ಶಿಕ್ಷಣ. ೯-೩೫ ವರ್ಷ ವಯಸ್ಸಿನವರಿಗೆ ಅಕ್ಷರ ಜ್ಞಾನ ನೀಡುವುದು. ೮ನೇ ಪಂಚವಾರ್ಷಿಕ ಯೋಜನೆಗೆ ಈ ವಯಸ್ಸಿನವರಿಗೆಲ್ಲಾ ಅಕ್ಷರ ಜ್ಞಾನ ನೀಡುವುದು. ಅದಕ್ಕಾಗಿ ಹತ್ತು ಹಲವಾರು ಕಾರ್ಯಕ್ರಮಗಳು. ಅಂದರೆ ವಯಸ್ಕರಿಗೆ ಇಲ್ಲವೆಂದಲ್ಲ ಮುಂದೆ ಬಂದರೆ ಎಲ್ಲರಿಗೂ ಸ್ವಾಗತ.

ಧ್ವನಿ ೧: ಕೇರಳದ ಎರ್ನಾಕುಲಂ ಜಿಲ್ಲೆ ಅಲ್ಲಿ ನಡೆದ ಸಾರ್ವಜನಿಕ ಆಂದೋಳನದ ಮೂಲಕ ಸಾಕ್ಷರತೆ ಸಾಧನೆ ಮಾಡುವ ಪ್ರಯತ್ನದಿಂದ ಯಶಸ್ಸು ಗಳಿಸಿತು. ಇದು ಎಲ್ಲಾ ಕಡೆಯೂ ಈಗ ಹಮ್ಮಿಕೊಳ್ಳುವ ಪ್ರಯತ್ನಗಳು ಸಾಗುತ್ತಾ ಬರುತ್ತಿವೆ ಇದಕ್ಕೆ ಕರ್ನಾಟಕವೂ ಹೊರತಲ್ಲ.

ಧ್ವನಿ ೨: ತನ್ನ ಹೆಸರನ್ನು ಬರೆದರೆ ಸಾರ್ಥಕ ಎಂಬ ಹೆಜ್ಜೆ ಹಿಂದಾಯಿತು. ಇಂದು ಸರ್ವರೂ ಓದು ಬರೆಹ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳಲ್ಲೂ ಭಾಗವಹಿಸಬೇಕು, ಸರ್ವ ರೀತಿಯಲ್ಲೂ ಜ್ಞಾನ ಪಡೆಯಬೇಕೆಂಬುದು ಉದ್ದೇಶವಾಗಿದೆ. ಅನಕ್ಷರಸ್ಥರಿಗೆಲ್ಲಾ ಅಕ್ಷರ ಜ್ಞಾನ, ದೇಶದ ಆಗು ಹೋಗುಗಳ ಅರಿವು ಮಾಡುವ ಭರವಸೆ. ಇದಕ್ಕೆ ಸರ್ಕಾರ, ಸ್ವಯಂಸೇವಾ ಸಂಸ್ಥೆಗಳ, ಸಾರ್ವಜನಿಕರ ಪಾತ್ರ ಅತ್ಯವಶ್ಯ. ಅದಕ್ಕಾಗಿ ಅನಕ್ಷರತೆಯ ನಿರ್ಮೂಲನಾ ಕಾರ್ಯಕ್ರಮದ ಅಂಗವಾಗಿ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಹಮ್ಮಿಕೊಳ್ಳಲಾಗಿವೆ.

ಧ್ವನಿ ೧: ಚೋಳೇನಹಳ್ಳಿಯಲ್ಲಿ ಸಾಕ್ಷರತಾ ಜಾಥಾ ಪ್ರತ್ಯಕ್ಷ ದರ್ಶನ ಈ ಜಾದೂ ಮಾಡಿದ ಕೃಷ್ಣಪ್ಪನವರು-

ಧ್ವನಿ ೨: ಈ ಅಕ್ಷರ ಜ್ಞಾನ ಜಾಥಾದಲ್ಲಿ ಈ ನಾಟಕ ಮಾಧ್ಯಮ ಎಷ್ಟೊಂದು ಪರಿಣಾಮಕಾರಿ?

(ಜಾತ)

(ಕೋಲಾಟ)

ಧ್ವನಿ ೧: ಈ ಕೋಲಾಟದ ಹಾಡಿಂದಲೂ ಪ್ರಭಾವಿತರು ಹಲವು ಹಳ್ಳಿಗರು. ಅಕ್ಷರ ಜ್ಞಾನವಿಲ್ಲದ ಈತನ ಅನಿಸಿಕೆ

ಧ್ವನಿ ೨: ಕಲಿತ ವೆಂಕಟಪ್ಪ ಏನನ್ನುತ್ತಾರೆ?

ಧ್ವನಿ ೧: ಸ್ವಯಂ ಸೇವಕ ರಾಮೇಗೌಡರ ಅನುಭವ

ಧ್ವನಿ ೨: ರಾಮೇಗೌಡರಿಂದ ಕಲಿತ ಚನ್ನಮ್ಮ

ಧ್ವನಿ ೧: ತುಮಕೂರಿನ ಜಿಲ್ಲಾಧಿಕಾರಿಗಳಾದ ಭಾಸ್ಕರ್ ಅವರು ಜಿಲ್ಲೆಯ ಪ್ರಗತಿಯ ಹೆಜ್ಜೆಗಳನ್ನು ವಿವರಿಸಿದರು.

ಧ್ವನಿ ೨: ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿಗಳು, ಸಾಕ್ಷರಮಿತ್ರ ಜಂಟಿ ಕಾರ್ಯದರ್ಶಿಗಳಾದ ರಾಮಚಂದ್ರ ಅವರು ಜಿಲ್ಲೆಯ ಸಮೀಕ್ಷೆ ನೀಡುತ್ತಾ-

ಧ್ವನಿ ೧: ಭಾರತ ಜ್ಞಾನ ವಿಜ್ಞಾನ ಸಮಿತಿ, ಸಾಕ್ಷರ ಮಿತ್ರ ಕಾರ್ಯದರ್ಶಿಗಳಾದ ಸಿ. ಯತಿರಾಜು ಅವರು ನೀಡಿದ ವಿವರಣೆ-

ಧ್ವನಿ ೨: ಸಾಕ್ಷರಮಿತ್ರ ತಾಲ್ಲೂಕು ಸಂಯೋಜಕರಾದ ಎಡೆಯೂರಪ್ಪ-

ಧ್ವನಿ ೧: ಜಿಲ್ಲಾ ತರಬೇತಿ ಸಂಯೋಜಕ ಹಾಗೂ ಸಂಪನ್ಮೂಲ ವ್ಯಕ್ತಿ ನವೀದ್ ಅಹಮದ್ ಖಾನ್ ತರಬೇತಿಯ ಬಗೆಗೆ-

(ಹಾಡು)

ಧ್ವನಿ ೨: ಇಷ್ಟೆಲ್ಲಾ ತಮಕೂರು ಜಿಲ್ಲೆಯ ಪ್ರಗತಿಯಾದರೆ, ಧಾರವಾಡ ಜಿಲ್ಲೆಯದು- ಇಲ್ಲಿದೆ ಒಂದು ಇಣುಕು-

ಧ್ವನಿ ೧: V.G. ಪೀರ್‌ಜಾದೆ ಸಾಕ್ಷರತಾ ಆಂದೋಳನದಲ್ಲಿ ಭಾಗವಹಿಸಿ ಐವತ್ತು ಜನರಿಗೆ ಕಲಿಸಿದ್ದಾರೆ ಅವರು ಕಲಿಸಿದ ಬಗೆ-

ಧ್ವನಿ ೨: ನವ ಸಾಕ್ಷರ ಫಲಾನುಭವಿ; ಬೀಳಗಿಯ ಅಬ್ದುಲ್‌ಸಾಬ್ ಮಹಮದ್ ಸಾಬ್ ಗುಡಾಕ್.

ಧ್ವನಿ ೧: ಸ್ವಯಂ ಸೇವಕಿ ವಿಜಯಲಕ್ಷ್ಮಿ ಸಜ್ಜನ ಅವರು ಕಲಿಸಿದ ರೀತಿ-

ಧ್ವನಿ ೨: ಬಬಲೇಶ್ವರದ ಮಂಡಲ ಪಂಚಾಯಿತಿ ಪ್ರಧಾನರಾದ ಬಾಳಾ ಸಾಹೇಬ ಗೌಡರ ದುಡಿತ ಮಿಡಿತ-

(ಹಾಡು)

ಧ್ವನಿ ೧: ಮಂಡ್ಯಜಿಲ್ಲೆ ರಾಜ್ಯದಲ್ಲಿ ಸಾಕ್ಷರತಾ ಮಟ್ಟವನ್ನು ಗಮನಿಸಿದಾಗ ೧೭ನೇ ಸ್ಥಾನದಲ್ಲಿದೆ. ಶೇಕಡಾ ೭೦ರಷ್ಟು ಅನಕ್ಷರತೆ ಇದೆ. ಈ ಬಗ್ಗೆ ಮಂಡ್ಯ ಜಿಲ್ಲಾ ಪರಿಷತ್ತಿನ ಮುಖ್ಯಕಾರ್ಯದರ್ಶಿಗಳಾದ ಸಾಕ್ಷರಜ್ಯೋತಿ ನಿರ್ವಾಹಕ ಅಧ್ಯಕ್ಷರಾದ ಬಿ.ಎಂ. ವಿಜಯಭಾಸ್ಕರ ಅವರೇ ಹೇಳುವಂತೆ-

ಧ್ವನಿ ೨: ನಾಲ್ಕು ಲಕ್ಷ ಅನಕ್ಷರಸ್ಥರ ಮನೆ ಮನೆಗೆ ಹೋಗಿ ನಡೆಸಿದ ಆಂದೋಲನದ ಬಗೆಗೆ ಜಿಲ್ಲಾ ವಯಸ್ಕರ ಶಿಕ್ಷಣಾಧಿಕಾರಿಗಳು ಹಾಗೂ ಸಾಕ್ಷರ ಯೋಜನೆ ಕಾರ್ಯಾಲಯದ ಸಂಯೋಜಕರಾದ ಸಿ.ವಿ. ತಿರುಮಲರಾವ್

ಧ್ವನಿ ೧: ಫಲಾನುಭವಿ ರಾಣಿಯನ್ನು ಮಾತಾಡಿಸೋಣ

(ಹಾಡು)

ಧ್ವನಿ ೨: ಇದು ಶಿವಮೊಗ್ಗ ಜಿಲ್ಲಾ ಚಿತ್ರಣ-

ಭರತಲಾಲ್ ಮೀನಾ ಅಕ್ಷರ ತುಂಗಾ ಕಾರ್ಯಾಧ್ಯಕ್ಷರು ಹಾಗೂ ಜಿಲ್ಲಾ ಪರಿಷತ್ ಕಾರ್ಯದರ್ಶಿಗಳು ಜಿಲ್ಲೆಯ ಕಾರ್ಯ ಚಟುವಟಿಕೆಗಳ ಬಗೆಗೆ ತಿಳಿಸುವರು.

ಧ್ವನಿ ೧: ಕಲಿಕಾ ಕೇಂದ್ರಕ್ಕೆ ಭೇಟಿ

(ಹಾಡು)

ಧ್ವನಿ ೨: ರಾಯಚೂರು ಜಿಲ್ಲಾ ಸಾಕ್ಷರತಾ ಸಂಗ್ರಾಮ ಸಮಿತಿಯ ಕಾರ್ಯದರ್ಶಿಗಳಾದ Y.J. ರಾಜೇಂದ್ರ ಅವರು ಜಿಲ್ಲೆಯ ಪ್ರಗತಿಯನ್ನುದ್ದೇಶಿಸಿ ಹೇಳಿದುದು-

(ಹಾಡು)

ಧ್ವನಿ ೧: ಇನ್ನು ಮಂಗಳೂರತ್ತ ಸ್ವಲ್ಪ ದೃಷ್ಟಿ ಹರಿಸೋಣ. ಸಾಕ್ಷರತಾ ಆಂದೋಲನದ ಬಗೆಗೆ ನುಡಿದ ಕಮಲಾಕರ ಹಾಲಂಬಿಯವರು

ಧ್ವನಿ ೨: ಸಾಕ್ಷರತಾ ಆಂದೋಳನಕ್ಕೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಬಳಸಿದ I.K. ಬೋಳ್ವಾರ್.

ಧ್ವನಿ ೧: ನವಸಾಕ್ಷರರಾದ ಹುಸೇನ್ ಅವರ ಅನಿಸಿಕೆ.

ಧ್ವನಿ ೧: ನಾಗಲಕ್ಷ್ಮಿ

ಧ್ವನಿ ೨: ಇಷ್ಟೆಲ್ಲಾ ಕೇಳಿದುದು ಕರ್ನಾಟಕದ ಕೆಲವು ಜಿಲ್ಲೆಗಳ ಪಕ್ಷಿನೋಟ ಮಾತ್ರ. ಸಮಗ್ರ ಕರ್ನಾಟಕದ ಪ್ರಗತಿಯ ಬಗೆಗೆ ಕರ್ನಾಟಕ ರಾಜ್ಯದ ಸಮೂಹ ಶಿಕ್ಷಣದ ನಿರ್ದೇಶಕರಾದ ವಿ. ಮಂಜುಳಾ ಅವರು ಏನು ಹೇಳುತ್ತಾರೆ?-

ಧ್ವನಿ ೧: ಕಲಿತ ವಿದ್ಯೆ ದಾನ ಮಾಡುವುದು ಎಲ್ಲಾ ದಾನಗಳಿಗಿಂತ ಶ್ರೇಷ್ಠ. ಒಬ್ಬ ತಾಯಿ ವಿದ್ಯಾವಂತಳಾದರೆ ಮನೆಯವರೆಲ್ಲಾ ವಿದ್ಯಾವಂತರಾದಂತೆ. ಸ್ವಯಂ

ಪ್ರೇರಿತರಾಗಿ ಬಂದು ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಬೇಕು. ಪ್ರತಿಯೊಬ್ಬ ವಿದ್ಯಾವಂತನೂ ಅದು ಆತನಿಗೆ ಆತ್ಮ ಸಂತೋಷವಾಗುವುದಲ್ಲದೆ,. ದೇಶ ಕಲ್ಯಾಣವಾಗುವುದರಲ್ಲಿ ಯಾವ ಅನುಮಾನವೂ ಇಲ್ಲ.

ಧ್ವನಿ ೨: ಎಣ್ಣೆ ಜ್ಯೋತಿಗಿಂತ ಜ್ಞಾನಜ್ಯೋತಿ ಬಹಳ ಪ್ರಕಾಶಮಾನವಾದುದು. ಎಲ್ಲಾ ದಾಸೋಹಕ್ಕಿಂತ ಜ್ಞಾನ ದಾಸೋಹ ಮಹಾದಾಸೋಹ. ಅಜ್ಞಾನದಿಂದ ಜ್ಞಾನದೆಡೆಗೆ ಹೋಗುವುದೇ ಒಂದು ಪ್ರಗತಿಯ ಸಂಕೇತ ಅಲ್ಲವೆ?

*

# ನೆಲೆ

ಹೆಂಡ್ತಿ : ಏನ್ರೀ.........

ಗಂಡ : ಏನು?

ಹೆಂಡ್ತಿ : ಏನಿಲ್ಲ..........

ಗಂಡ : ಏನೂ ಇಲ್ಲದ ಮೇಲೆ ಏನು ನಿನ್ನ ರಾಗ?

ಹೆಂಡ್ತಿ : ಈ ಹಳ್ಳೀಲಿ ಇನ್ನೂ ಎಷ್ಟು ದಿನ ಕೊಳೀಬೇಕು ಅಂತೀರಿ?

ಗಂಡ : ಅಂದ್ರೆ......?

ಹೆಂಡ್ತಿ : ಪಟ್ಟಣಕ್ಕೆ.........

ಗಂಡ : ಯಾಕೆ ಸುಮ್ನೆ ಒದ್ದಾಡ್ತೀಯೆ. ಪಟ್ಟಣ ಅಂತ ಎಷ್ಟೋ ಜನ ಪಟ್ಟಣದ ವಾಸ ಸಾಕಪ್ಪ ಅಂತ ಹಳ್ಳಿಗೆ ಹಿಂತಿರ್ಗ್ಗೋ ಕಾಲ ಬಂತು. ನೀನಿನ್ನೂ ಹಳೇ ಕಾಲದಲ್ಲೇ ಇದ್ದೀಯ ಬಿಡೆ. ಇಲ್ಲಿ ನಿನಗೇನು ಕಡಿಮೆ ಇದೆ?

ಹೆಂಡ್ತಿ : ಹಳ್ಳಿ ಹಳ್ಳಿಯೇ, ಪಟ್ಟಣ ಪಟ್ಟಣವೇ.

ಗಂಡ : ಅದ್ನಿಜ...... ಆದ್ರೆ ಅಲ್ಲಿಗೋದ ಮೇಲೆ ಮರಳಿ ಹಳ್ಳೀಗೆ ಬರಬೇಕು ಅಂತೀಯ ಕಣೆ.

ಹೆಂಡ್ತಿ : ಹಾಗೇನಿಲ್ಲ.

ಗಂಡ : ನಿಮ್ಮಂಥ ಚಪಲದವರಿಂದಲೇ ಪಟ್ಟಣದ ಸ್ಥಿತಿ ಹೀಗಾಯ್ತು.

ಹೆಂಡ್ತಿ : ಹಳ್ಳಿಯವರು ಸೇರಿ ಸೇರಿ ತಾನೇ ಪಟ್ಟಣ ಆದದ್ದು.

ಗಂಡ : ಇಲ್ಲ ಅಂದವ್ರ್ಯಾರು? ಅದಕ್ಕೂ ಒಂದು ಮಿತಿ ಬೇಡ್ವೇ? ಪಟ್ಟಣ ಬೆಳೆದಷ್ಟು ಅನಾಹುತಗಳು ಹೆಚ್ಚು.

ಹೆಂಡ್ತಿ : ಅದು ನಿಮ್ಮ ಹುಚ್ಚು.

ಗಂಡ : ನೀನು ಪಟ್ಟಣ ಬಯಸ್ತಾ ಇರೋದು ನೋಡಿದ್ರೆ ಹುಚ್ಚಲ್ದೇ ಇನ್ನೇನು. ಪಟ್ಟಣದ ವಾಸ ಏನು ಅಂತ ಗೊತ್ತೇನು?

ಹೆಂಡ್ತಿ : ಕರ್ಕೊಂಡೋಗ್ದೇ ಹೋದ್ರೆ ಹ್ಯಾಗೆ ಗೊತ್ತಾಗಬೇಕು?

ಗಂಡ : ಗೊತ್ತು ಪಡಿಸ್ತೀನಿ.

ಧ್ವನಿ೧ : ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವಿರಿ
ಕಣ್ಣು ಕಾಣದ ಗಾವಿಲರೆ

ಎಂದ ಮಾತು ಇಂದು-

"ಹಳ್ಳಿ ಹಳ್ಳಿ ಎಂದು ಬೀಳುಗಳೆವಿರಿ
ಕಣ್ಣುಕಾಣದ ಗಾವಿಲರೆ"

ಎಂದಂತಾಗಿದೆ.

ಧ್ವನಿ ೨: ಭಾರತದಲ್ಲಿ ಒಂದು ಅಂದಾಜಿನ ಪ್ರಕಾರ ಸುಮಾರು ೭ ಲಕ್ಷ ಹಳ್ಳಿಗಳಿವೆ. ಅನೇಕ ಹಳ್ಳಿಗಳು ಇಂದು ಆಧುನೀಕರಣ, ನಗರೀಕರಣಗಳಿಗೆ ಒಳಪಟ್ಟು ಅವುಗಳ ವ್ಯವಸ್ಥೆಯೇ ಬದಲಾಗಿದೆ. ಅನುಕರಣೆಯಂತೂ ಗ್ರಾಮೀಣ ಸಮಾಜದಲ್ಲಿ ಮೇರೆ ಮೀರಿದ್ದು, ಇನ್ನು ಯಾವ ಹಂತ ತಲುಪುವುವೋ ಯಾರು ಬಲ್ಲರು?

ಧ್ವನಿ ೧: ಅಂದ ಮೇಲೆ ಹಳ್ಳಿ ಇಂದು ತುಂಬಾ ಹಿಂದುಳಿದಿಲ್ಲ, ಪ್ರಗತಿಯ ಮುನ್ನೆಜ್ಜೆ ಇಡುತ್ತಿದೆ. ಇಂದಿನ ಹಳ್ಳಿಗಳ ಚಿತ್ರಣವೇ ಬದಲಾಗುತ್ತಿದೆ. ಹಿಂದೆ ಒಬ್ಬ ಮುಖಂಡನಿದ್ದು ಆತನ ನಿರ್ದೇಶನದಲ್ಲಿ ಕೆಲಸ ಕಾರ್ಯಗಳು ಆಗುತ್ತಿದ್ದವು. ಆತ ಹೇಳಿದಂತೆ ಮಿಕ್ಕವರು ಕೇಳುತ್ತಿದ್ದರು. ಈಗ ಮರಿ ಮುಖಂಡರುಗಳು ಹೆಚ್ಚು. ಚುನಾವಣೆ ಬಂತೆಂದರೆ ಚುರುಕಾಗುವರು. ಆಗಾಗ ಘರ್ಷಣೆಗಳೂ ನಡೆಯುವುವು. ಹಬ್ಬ ಹರಿದಿನ, ಜಾತ್ರೆ, ನಾಡ ಹಬ್ಬ, ಗ್ರಾಮ ದೇವತೆಯ ಹಬ್ಬಗಳು ಕಡಿಮೆಯಾಗುತ್ತಾ ಬರುತ್ತಿವೆ. ಜನಪದ ಕಲಾವಿದರನ್ನು ಮೂಲೆ ಪಾಲು ಮಾಡಿದ್ದಾರೆ. ಟಿ.ವಿ., ವೀಡಿಯೋ ಪ್ರಭಾವದಿಂದ ಬೀದಿನಾಟಕ, ಯಕ್ಷಗಾನಗಳು ಅಲ್ಲಿಗೆ ಸೀಮಿತವಾಗಿದ್ದು ಮರೆಯಾಗುತ್ತಿವೆ. ಅವಿಭಕ್ತ ಕುಟುಂಬಗಳು ವಿರಳವಾಗುತ್ತಿವೆ.

ಧ್ವನಿ ೨: ರೈತನ ಪಾಡು ಹೇಳತೀರದು. ಮಳೆ ಬಿದ್ದರೆ ಉಂಟು ಇಲ್ಲದಿದ್ದರೆ ಬಲು ಪಾಡು ಬೀಳಬೇಕಾಗುವುದು. ಇದರ ಜೊತೆಗೆ ಬೆವರು ಸುರಿಸಿ ದುಡಿವ ಮಣ್ಣಿನ ಮಕ್ಕಳ ಅಭಾವ, ವ್ಯವಸಾಯದಲ್ಲಿ ಜನರಲ್ಲಿ ಅನಾಸಕ್ತಿ, ರೈತರಿಗೆ ಖರ್ಚು ಹೆಚ್ಚು, ಆದಾಯ ಕಡಿಮೆ. ಹೊಸ ತಳಿಗಳು, ಜಾನುವಾರುಗಳು ಹೆಚ್ಚಿ ನಾಡ ದನಗಳು ಕಡಿಮೆಯಾಗುತ್ತಿವೆ. ಗೋಮಾಳಗಳು ವ್ಯವಸಾಯ ಭೂಮಿ ಆಗಿ ದನ - ಕುರಿಗಳಿಗೆ ಮೇವಿಲ್ಲದಂತಾಗಿದೆ. ಎಲ್ಲಕ್ಕೂ ಸರ್ಕಾರವನ್ನೇ

ಆಶ್ರಯಿಸುವುದರಲ್ಲಿದ್ದಾರೆ. ರಸ್ತೆ, ಗ್ರಾಮ ನೈರ್ಮಲ್ಯಗಳಿಗೆ ಒಗ್ಗಟ್ಟಾಗಿ ಮುಂದೆ ಬರುತ್ತಿಲ್ಲ. ಜನರು ಅಲಸ್ಯ ತಾಳುತ್ತಿದ್ದಾರೆ. ಸಮಾಜ ನಿಂತ ನೀರಲ್ಲ. ಸದಾ ಪರಿವರ್ತನಾಶೀಲವಾದುದು. ಆದರೆ ಈ ಪರಿವರ್ತನ ಪರಸ್ಪರರನ್ನು ಪರಕೀಯರಂತೆ ಮಾಡುತ್ತದೆ.

ಧ್ವನಿ ೧: ಹಳ್ಳಿಯಲ್ಲಿ ಏನುಂಟು, ಏನಿಲ್ಲ? ಕೆರೆ ಕುಂಟೆಗಳ ಅಶುದ್ಧ ನೀರು ಕುಡಿಯುವ ಕಾಲವು ಇಲ್ಲವಾಗಿದೆ. ಸುರಕ್ಷಿತ ನೀರು ಆರೋಗ್ಯಕ್ಕೆ ಒಳ್ಳೆಯದೆಂದು ಮನಗಂಡ ಜನ ಬೋರ್‌ವೆಲ್ ನೀರು, ಸುರಕ್ಷಿತ ನೀರನ್ನು ಸೇವಿಸುತ್ತಿದ್ದಾರೆ.

ಧ್ವನಿ ೨: ಹಳ್ಳಿಯ ಜನಪದ ಕಲಾವಿದರು ತಮ್ಮ ಜನಪದ ಗೀತೆಗಳನ್ನು ಪಟ್ಟಣದ ಡಿಸ್ಕೋ ಸಂಗೀತ, ಪಾಶ್ಚಾತ್ಯ ಸಂಗೀತ, ಕ್ಯಾಸೆಟ್, ರಿಕಾರ್ಡರ್, ವಿಡಿಯೋ, ಟೆಲಿವಿಷನ್ ರೇಡಿಯೋಗಳಲ್ಲಿ ತಮ್ಮ ಜನಪದ ಗೀತೆಯನ್ನು ಹಾಡಿ, ಕೇಳುವ ಸ್ಥಿತಿಯಾಗಿದೆ.

(ಜನಪದ ಹಾಡು)

ಧ್ವನಿ ೧: ಹಳ್ಳಿಯ ಸಂಸ್ಕೃತಿ ಪಟ್ಟಣಕ್ಕೆ, ಪಟ್ಟಣದ ಸಂಸ್ಕೃತಿ ಹಳ್ಳಿಗೆ. ಕಳ್ಳಿಯ ಗಿಡ, ಬೇಲಿಯ ಗಿಡಗಳು, ಕಾಡು ಗಿಡಗಳು ಪಟ್ಟಣದವರ ಮನೆ ಮುಂದಗಡೆ ಹೊಸ ಥರ ಸಿಮೆಂಟ್ ಮನೆಯ ಮೇಲೆ ಹೆಂಚು ಹಾಕುವ ಚಪಲ, ಹಳ್ಳಿಯ ಜನಪದ ಗೀತೆಯನ್ನು ಪಟ್ಟಣದವರು ಸವಿದರೂ ಹಳ್ಳಿಯವರು ಪಟ್ಟಣದವರ ಸಂಗೀತವನ್ನು ಅಚ್ಚರಿಯಿಂದ ಕೇಳಿ ಆನಂದ ಪಡುತ್ತಾರೆ. 'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ' ಎಂದು ಹೇಳುತ್ತಿದ್ದ ಕಾಲವಿತ್ತು ಹಾಗಾಗಿದೆ ಇಂದು.

(ಪಾಶ್ಚಾತ್ಯ ಸಂಗೀತ)

ಇದು ಹಳೆಯ ಗೀತೆಗೆ ಮೇಳೈಸುವ ಹೊಸ ಕಾಲದ ಹಾಡು.

ಧ್ವನಿ ೨: ಫಾರಿನ್‌ನಲ್ಲಿ ಪ್ಯಾಂಟು ಷರ್ಟ್ ಹಾಕಿಕೊಂಡೇ ಕೂಲಿಯವರು ಕೆಲಸ ಮಾಡುವಂತೆ ಇಂದಿನ ಹಳ್ಳಿಯ ಜನರೇನೂ ಕಡಿಮೆ ಇಲ್ಲ. ಇಂದಿನ ಹಳ್ಳಿಯ ಚಿತ್ರಣವೇ ಬದಲಾಗಿದೆ. ದೇಶವೇನು ಪರದೇಶದವರ ಪ್ರಭಾವ ಮುಕ್ತಿ ಹಳ್ಳಿಗರ ಮೇಲೆ ಅಚ್ಚೊತ್ತಿದೆ. ಹಿಂದೆ ಒಳ್ಳೆಯ ಬಟ್ಟೆಗಳು ಶ್ರೀಮಂತರ ಉಡುಪಾಗಿತ್ತು. ಆದರೆ ಇಂದು ಎಲ್ಲಾ ವರ್ಗದವರು ಇದರ ಸುಖವನ್ನು ಅನುಭವಿಸುತ್ತಿದ್ದಾರೆ. 'ಕಾಸಿದ್ದರೆ ಕೈಲಾಸ' ಎಂಬ ಮಾತು ಹಳ್ಳಿಗರ ಭಾಗಕ್ಕೂ ನಿಜವೇ.

ಧ್ವನಿ ೧: ಭತ್ತ ಕುಟ್ಟುವಂತಿಲ್ಲ, ರಾಗಿ ಬೀಸುವಂತಿಲ್ಲ, ಬಟ್ಟೆ ಒಗೆವಂತಿಲ್ಲ, ನೀರು ಸೇದುವಂತಿಲ್ಲ, ಎಲ್ಲಾ ಯಂತ್ರಗಳೇ ನಿರ್ವಹಿಸುವುವು. ಹೀಗಾಗಿ ವ್ಯಾಯಾಮ,

ಯೋಗ, ವಾಕಿಂಗ್, ಎಲ್ಲವೂ ಜೀವನದ ಒಂದು ಅಂಗವಾಗಿದೆ ಹಳ್ಳಿಯಲ್ಲೂ ಸಹ.

ಧ್ವನಿ ೨: ಹಳ್ಳಿಯಲ್ಲಿ ಕಾಲ ಕಳೆಯುವುದು ಹೇಗಪ್ಪಾ ಎಂಬ ಕಾಲವೊಂದಿತ್ತು. ಆದರೆ ಇಂದು ಆ ವಾತಾವರಣವಿಲ್ಲ. ಓದಬಹುದು, ಬರೆಯಬಹುದು, ರೇಡಿಯೋ ಕೇಳಿ, ಟೆಲಿವಿಷನ್ ನೋಡಿ ಬೇಸರ ಕಳೆಯಬಹುದು, ನೆಮ್ಮದಿಯಿಂದ ಕಣ್ತುಂಬ ನಿದ್ದೆ ಮಾಡಬಹುದು. ಮಾನವನಿಗೆ ನಿಜವಾದ ಸುಖ ಇದಲ್ಲದೆ ಮತ್ತೇನು?

ಧ್ವನಿ ೨: ಶುದ್ಧ ಗಾಳಿಗಂತೂ ಬರವಿಲ್ಲ ಬಿಡಿ. ಮಕ್ಕಳ ಆರೋಗ್ಯಕ್ಕೆ ಗಮನ ವಹಿಸಿ ಆರೋಗ್ಯ ಕಾರ್ಯಕರ್ತರು ವೈದ್ಯರ ಸಲಹೆಯ ಮೇರೆಗೆ ಚುಚ್ಚು ಮದ್ದುಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಮಕ್ಕಳು ವಿದ್ಯಾವಂತರಾಗಬೇಕೆಂಬ ಆಸೆಯಿಂದ ತಂದೆ-ತಾಯಿಂದಿರು ಶಾಲೆಗೆ ಕಳುಹಿಸುತ್ತಿದ್ದಾರೆ. ಅಕ್ಷರ ಜ್ಞಾನ ಪಡೆಯಬೇಕೆಂದು ವಯಸ್ಕರೂ ವಯಸ್ಕರ ಶಿಕ್ಷಣ ಶಾಲೆಗೆ ಹೋಗಿ ಓದಿ ಬರೆಯುವುದನ್ನು ಕಲಿಯುತ್ತಿದ್ದಾರೆ.

ಧ್ವನಿ ೧: ಇಂದಿನ ಅನೇಕ ಹಳ್ಳಿಗಳಲ್ಲಿ ರಸ್ತೆ, ಸಾರಿಗೆ, ವಿದ್ಯುತ್, ಮನರಂಜನೆ, ಆಸ್ಪತ್ರೆ, ಅಂಗಡಿ ಮುಂಗಟ್ಟುಗಳು, ತರಕಾರಿ ಹಣ್ಣುಗಳಿಗೇನೂ ಕೊರತೆ ಇಲ್ಲ. ಹಣ ಒಂದಿದ್ದರೆ ಎಲ್ಲವೂ ದೊರೆಯುವುವು. ಚಿಕ್ಕ ಹಳ್ಳಿಯಲ್ಲಿ ಕೆಲವಲ್ಲದಿದ್ದರೂ ಅಕ್ಕಪಕ್ಕದ ಹಳ್ಳಿಯಲ್ಲಿ ದೊರೆಯುವುವು. ಪಟ್ಟಣಗಳ ಒಂದು ಬಡಾವಣೆಯಿಂದ ಮತ್ತೊಂದು ಬಡಾವಣೆಗೆ ಹೋಗುವಷ್ಟೇ ದೂರ ಒಂದು ಹಳ್ಳಿಗೂ ಮತ್ತೊಂದು ಹಳ್ಳಿಗೂ.

ಧ್ವನಿ ೨: ಹಿಂದೆ ಬರಿಗಾಲಿನಲ್ಲೇ ನಡಿಗೆಯಿಂದ ಹಳ್ಳಿಯಿಂದ ಹಳ್ಳಿಗೆ ಹೋಗಬೇಕಾಗಿತ್ತು. ಇಂದು ಸೈಕಲ್, ಕಾರು, ಬಸ್ಸು, ಸ್ಕೂಟರ್, ಸೈಕಲ್ ಮೋಟಾರ್, ಎಷ್ಟೊಂದು ಸೌಕರ್ಯಗಳಿವೆ.

ಧ್ವನಿ ೧: ಟೆಲಿವಿಷನ್, ರೇಡಿಯೋ, ಫ್ರಿಜ್, ಸೋಫಾ, ಡೈನಿಂಗ್ ಟೇಬಲ್, ಬೀರು ಮುಂತಾದುವುಗಳು ಸಾಮಾನ್ಯ ಜನರ ಅಗತ್ಯ ವಸ್ತುಗಳಾಗಿವೆ. ಹಳ್ಳಿಗಳಲ್ಲೂ ಸಹ.

ಧ್ವನಿ ೨: ಕೆಟ್ಟು ಪಟ್ಟಣ ಸೇರು ಅಂತ ಹೇಳುವ ಕಾಲವೊಂದಿತ್ತು. ಈಗ ಕೆಟ್ಟು ಹಳ್ಳಿ ಸೇರು ಎಂಬ ದಿನವಾಗಿದೆ.

ಪಟ್ಟಣದ ಶಬ್ದ ಮಾಲಿನ್ಯ, ವಾಯು ಮಾಲಿನ್ಯ, ಆ ಟ್ರಾಫಿಕ್ ಗಲಾಟೆಯಿಂದ ಜೀವನವೇ ಸಾಕಪ್ಪಾ, ರಿಟೈರ್ ಆಗುವುದು ಯಾವಾಗ? ಎಂದು ಕಾಲಹಾಕಿ, ಬಂದ ಹಣದಲ್ಲಿ ಗದ್ದೆ, ಹೊಲ, ತೋಟ, ಮನೆ ಖರೀದಿಸಿ ಶಾಂತಿ ಜೀವನ ಸಾಗಿಸಬೇಕೆಂಬ ಮನೋಭಾವ ಉಂಟಾಗುವುದು ಸಹಜ. ಅಂಥವರು ಪಟ್ಟಣದಿಂದ ಹಳ್ಳಿಗೆ ಬಂದು ನೆಲೆಯಾಗುವರು.

ಧ್ವನಿ ೧: ಹೊಟ್ಟೆಯ ಪಟ್ಟಣ ತುಂಬಿಸಿಕೊಳ್ಳಲು ಪಟ್ಟಣ ಸೇರುವುದು ಒಂದು ವರ್ಗ. ಮತ್ತೊಂದು ಯುವ ಪೀಳಿಗೆ ಆಕರ್ಷಣೆಗೆ ಒಳಗಾಗಿ ಅಲ್ಲಿ ವಾಸವಾಗಬೇಕೆಂಬ ಚಪಲ. ಇನ್ನೊಂದು ವರ್ಗ ಕೆಲಸಕ್ಕಾಗಿ ಹೋಗಿ ಕೊನೆಗೆ ಅಲ್ಲೇ ನೆಲೆಸುವುದು. ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದ ಜನ ಪಟ್ಟಣ ಸೇರುವ ವೈಖರಿ, ಹುಟ್ಟೂರನ್ನು ಮರೆತು ಪರ ಊರಾದ ಪಟ್ಟಣದಲ್ಲೇ ವಾಸವಾಗುವವರ ಸಂಖ್ಯೆ ಹೆಚ್ಚು. ಆದರೆ ಪಟ್ಟಣದಿಂದ ಮರಳಿ ಹಳ್ಳಿಗೆ ಬರುವುದು ಬಹಳ ಅಪರೂಪ. ಮರಳು ಕಾಡಿನ ಓಯಸಿಸ್ ರೀತಿ ಅಲ್ಲೊಂದು ಇಲ್ಲೊಂದು. ಇದಕ್ಕಾಗಿ ಗುಲಬರ್ಗಾ, ಬೀದರ್, ರಾಯಚೂರು ಜಿಲ್ಲೆಗಳಿಗೆ ತಿರುಗಾಟ. ಅನ್ವೇಷಣೆ. ಸಿಕ್ಕಿದ ಕೆಲವರ ಸಂದರ್ಶನ.

ವಿಶಾಲವಾದ ನೀಲಿ ಆಗಸ, ಸುತ್ತ ಕಣ್ತುಂಬುವ ಹಸಿರು, ಬೆಟ್ಟಗುಡ್ಡ, ನದಿಯನ್ನೊಳಗೊಂಡ ಪ್ರಕೃತಿ ಸೌಂದರ್ಯದ ಗಣಿ ಈ ಹಳ್ಳಿ.

ಧ್ವನಿ ೨: ಪಟ್ಟಣದಿಂದ ಹಳ್ಳಿಗೆ, ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಹೋಗುವುದು ಸರ್ವೇ ಸಾಮಾನ್ಯ. ನಿವೃತ್ತರಾದ ಮೇಲೆ ತಮ್ಮ ಹುಟ್ಟೂರಿಗೆ ಬರುವವರೂ ಉಂಟು. ಆದರೆ ಇಂಥವರ ಸಂಖ್ಯೆ ಅಪರೂಪ. ಪಟ್ಟಣದಲ್ಲಿ ಬೇಸತ್ತ ಜೀವಕ್ಕೆ ಹಳ್ಳಿಯೇ ಸ್ವರ್ಗ ತಾಣವಲ್ಲವೇ? ರಾಮಚಂದ್ರ ಗೋಪಾಲ್ ಜೋಗ್ ಸೊನ್ನ ಗ್ರಾಮಕ್ಕೆ ಬಂದ ಬಗೆ-

- ಸಂದರ್ಶನ -

ರಿಟೈರ್ ಆದ ಮೇಲೆ ತಮ್ಮ ಜೀವನವನ್ನು ಅಹ್ಮದಾಬಾದ್‌ನಲ್ಲಿ ಕಳೆಯದೇ ಸೊನ್ನಕ್ಕೆ ಯಾಕ ಬಂದ್ರಿ? ಯಾಕಂದ್ರ, ಅಲ್ಲಿ ನಮ್ಮ ರೈತ ಏನಿರ್ದಾನ, ಅಂವ ನನಗ ಬಾ ಅಂತ ಹೇಳ್ದ. ನಾ ಕೇಳ್ದೆ "ನಾ ಯಾಕ ಬರ್ಲೆಪಾ?" "ನಿಮ್ಮ ಹೊಲಾ ಅದ, ಮನೀ ಅದ ಬರ್ರಿ ಅಂತ ಹೇಳ್ದ. ನಾ ಅಂದೆ ಅಂದ್ರ ನೀ ಹೊಲ ಬಿಡ್ತೀನಿ ಅಂದಂಗ ಆಯ್ತುಲಾ? ಅಂದೆ. 'ಹೌದು ಬಿಡ್ಲಿಕ್ಕೆ ನಾ ಕೇಳ್ತೀನಿ' ಅಂತ ಹೇಳ್ದ. 'ಹಂಗಾರ, ಈಗ ಹೀಂಗ ಬ್ಯಾಡಾ, ಇನ್ನೊಂದು ಆರು ತಿಂಗಳು, ವರ್ಷ ಹೋಗ್ಲಿ ನಾ ಇನ್ನೊಮ್ಮೆ ಬರ್ತೀನಿ. ಅವತ್ತು ಜ್ವರ, ನೀ ಇದ ಕೇಳಿದ್ರ ನಾ ವಿಚಾರ ಮಾಡ್ತೀನಿ. ಇಲ್ಲಕ್ಕ, ಮಾಡೂದಿಲ್ಲಪಾ ಅಂತ ಹೇಳ್ದೆ. ಮುಂದ ಆರು ತಿಂಗಳೀಗಿ, ಸೀತ್ನಿ ತಿನ್ಲಿಕ್ಕೆ ಅಂತ ಹೋದೆ. ಆವಾಗ, ಆ ಹೊಲಾ, ಒಬ್ಬಗ ಹಚ್ಚಿದ್ದಿಲ್ಲ. ಇಬ್ರು - ಮೂರು ಮಂದೀಗಿ ಇತ್ತರು. ಆ ಮೂರೂ ಮಂದಿ ಅವತ್ತ ಭೆಟ್ಟಿಯಾದ್ರು. ನಾವು ಬಿಡುಗಡೆ ಮಾಡ್ಲಿಕ್ಕೆ ತಯಾರಿದ್ದೀವಿ ನೀವು ಬರ್ರಿ ಅಂತ ಹೇಳಿದ್ರು.

ಹಾಡು.........

ಇರೋ ಇಲ್ಲಿದೆ ಮರಳಿ ಹಳ್ಳಿಗೆ
ಬಂದ ನೈಜ ಕಥೆಗಳ ಹೋಳಿಗೆ
ಇದುವೆ ಅವರ ಸಿಹಿ ಬಾಳಿಗೇ                    ॥ ಪಲ್ಲವಿ ॥

ವೃತ್ತಿಯಿಂದ ನಿವೃತ್ತರಾಗಿ,
ಪಟ್ಟಣವ ಬಯಸಿ ನೆಲೆಸದೆ
ಹಳ್ಳಿಗಳನರಸಿ ಬಂದವರಿವರು ॥ ೧ ॥

೧೯೭೨ಕ್ಕೆ, ಸೊನ್ನಕ್ಕ ಬಂದೆ. ಅಲ್ಲಿಂದ ಇಲ್ಲಿ ಎಸ್ಟ್ಯಾಬ್ಲಿಷ್ ಆದೆ.

- ಪಟ್ಟಣಕ್ಕೂ ಹಳ್ಳಿಗೂ ಏನು ವ್ಯತ್ಯಾಸ ಕಾಣ್ತಾ ಇದೆ ನಿಮಗೆ? ನಿಮಗೆ ಶಾಂತಿ ಸಿಗ್ತಾ ಇದೆಯೋ ಹ್ಯಾಗೆ ಅಂತ?
- ಇಲ್ಲಿ ಶಾಂತಿ ಸಿಗ್ತದ.
- ಎಲ್ಲಾ ಸೌಲಭ್ಯಗಳು ಇವೆಯೇ ನಿಮಗಿಲ್ಲಿ?
- ಎಲ್ಲಾ ಸೌಲಭ್ಯಗಳನ್ನು ಮಾಡಿಕೊಂಡೀವಿ ಈಗ.
- ಏನೇನು ಮಾಡ್ಕೊಂಡೀರಿ?
- ಜಿರಾಯ್ತಿ ಇತ್ತು ಅದು ತೋಟ ಮಾಡ್ಕೊಂಡೆ. ತಮ್ಮ ತಮ್ಮಂದೊಂದು ಹೊಲಾ ಇಳಿ ಇತ್ತು. ಅದೂ ಬಿಡುಗಡೆ ಆಯ್ತು. ಎಲ್ಲಾ ಕೂಡಿ ಒಂದು ನೂರು ಎಕರೆ ಭೂಮಿ ಆಗ್ತರ. ಅದೆಲ್ಲಾ ನೋಡೂದೆಸೆಯಿಂದ, ಆಯ್ತ ಇಂವ ಬಂದೇ ಬಂದಾನ, ನೋಡ್ತಿರ್ತಾನ.
- ಈಗ ನಾನ್ ಹೇಳೋದು, ಅನೇಕ ಜನ ರಿಟೈರ್ ಆದ ಮೇಲೆ ಪಟ್ಟಣ ವಾಸನೇ ಬಯಸ್ತಾರ. ಅಲ್ಲೇ ಮನೆ ಮಾಡಿ, ಅಲ್ಲೇ ತಮ್ಮ ನೆಲೆಯನ್ನು ಮಾಡ್ಕೊಳ್ಳತಾರೆ. ಆದ್ರೆ ನೀವು ಯಾಕ ಆ ರೀತಿ ಮಾಡ್ಲಿಲ್ಲ?
- ನಾ ಪಟ್ಟಣದಾಗ ಇದ್ದಾಗ, ನನಗ ಕೆಲವರು ಕೇಳಿದ್ರು. ಪ್ಲಾಟ ತಗೋ, ಇದು ತಗೋ, ಅದು ತಗೋ, ಅಂತೇಳಿ. ನಾ ಅವರಿಗೆ ಹೇಳ್ದೆ, ಪ್ಲಾಟ್ ತಗೊಂಡು, ಈಗ ನನಗ ಹೊಲ ಮನಿ ಅವ. ಅದೆಲ್ಲಾ ಬಿಟ್ಟು ನಾ ಇಲ್ಲೀಗ ಬಂದೀನಿ, ಇಲ್ಲೀನೂ ಒಂದು ಹೊಲಾ, ಮನಿ ಮಾಡ್ದಂಗ ಅಂತ ಹೇಳ್ದೆ. ಅಂದ್ರ ಐ ಮೆ ಕಮ್ ಇನ್ ದಿ ಪ್ರೊಗ್ರೆಸ್ ಅಫ್ ಮೈ ಸನ್ಸ್ ಡ್ಯೂ ಟು ದಿಸ್ ಪ್ರಾಪರ್ಟಿ. ಅಂವಗ ಎಲ್ಲಾರ ಹೋಗೂದಾಗ, ಮತ್ತ ಇದೊಂದು ಪ್ರಪರ್ಟಿ ಅದ ಅಂತೇಳಿ, ತ್ರಾಸ ಆಗ್ತದ. ಅದಕ್ಕ ಅದು ಬ್ಯಾಡೇ ಬ್ಯಾಡ ಅಂತೆ ಹೇಳ್ದೆ. ನಾ ಅಂದೆ, ಒಂದು ಪ್ಲಾಟ್ ತಗೊಂಡ ಮ್ಯಾಲೆ, ಅದರ ಮ್ಯಾಗ ಒಂದು ಗುಡಿಸಲರ ಹಾಕಬೇಕು ಅಂತ ಅನಸ್ತದ. ಇನ್‌ವೆಸ್ಟ ಮಾಡ್ಬೇಕಾಗ್ತದ. ಅದೇ ಇನ್‌ವೆಸ್ಟ್, ಐ ಇನ್‌ವೆಸ್ಟ್ ಇನ್ ಮೈ ಸನ್ಸ್ ಅಂಡ್ ಡಾಟರ್ಸ್ ಐ ಮೆ ಎಜುಕೇಟ್ ದೆಮ್ ಅಂಡ್ ದೆ ವಿಲ್ ಬಿ ಹ್ಯಾಪಿ, ಮೇಲಾಗಿ ಐ ಕ್ಯಾನ್‌ನಾಟ್ ಅರ್ನ್ ಬೈ ಬ್ಯಾಡ್ ಮೀನ್ಸ್ ಅಂಡ್ ಸೋ ಐ ಆಮ್ ಟು ಸ್ಯಾಟಿಸಿಫೈ ಮೈಸೆಲ್ಫ್ ವಿತ್ ಇನ್ ಮೈ ರೀಚ್. ಈ ದೃಷ್ಟಿಯಿಂದ ನಾ ಅಲ್ಲಿ ಕಾಲ

ಕಳದೆ. ಆಗ್ರಿಕಲ್ಚರ್ ಎಂ.ಎಸ್. ಓದಿ, ಅಹ್ಮದಾಬಾದಿನಲ್ಲಿ ಜನಿಸಿ, ಕನ್ನಡವನ್ನು ಸೊನ್ನ ಗ್ರಾಮಕ್ಕೆ ಬಂದು ಕಲಿತು, ವ್ಯವಸಾಯವನ್ನೇ ವೃತ್ತಿಯನ್ನಾಗಿ ಆರಿಸಿಕೊಂಡು ಸಂತಸದಿಂದಿರುವ ತರುಣ, ಧನಂಜಯ ರಾಮಚಂದ್ರ ಜೋಗ್ ಹಳ್ಳಿಯನ್ನು ಬಯಸಿ ಬಂದಾತ.

ಹಾಡು.........
ಇದೋ ಇಲ್ಲಿದೆ ಮರಳಿ ಹಳ್ಳಿಗೆ
ಬಂದ ನೈಜ ಕಥೆಗಳ ಹೋಳಿಗೆ
ಇದುವೆ ಅವರ ಸಿಹಿ ಬಾಳಿಗೆ

ಪಟ್ಟಣದಿ ಬೆಳೆದು ಸ್ವಯಂ ಉದ್ಯೋಗ ಬಯಸಿ
ಹಳ್ಳಿಯನೇ ಅರಸಿ ಕೃಷಿ ಆರಂಭಿಸಿ
ಸೊನ್ನ ಗ್ರಾಮದಿ ನೆಲೆಸಿದ ಯುವಕನಿವನು
ಇದೋ ಇಲ್ಲಿದೆ...........

- ನೀವೇನು ಕೆಲಸಕ್ಕ ಹೋಗಲಿಲ್ಲವಾ?
- ನನ್ನ ಇಂಟೆನ್‌ಷನ್ ಅಗ್ರಿಕಲ್ಚರ್ ಮಾಡ್ಬೇಕು ಅಂತಿತ್ತು. ಅದಕ್ಕ ನಾ ಆಫ್ಟರ್ ಅಗ್ರಿಕಲ್ಚರ್ ಗ್ರಾಜುಯೇಷನ್, ನಾ ಇಲ್ಲಿ ಬಂದು ಬಿಟ್ಟೆ.
- ಎಲ್ಲರೂ ಕೂಡ ಕೆಲಸ ಸಿಕ್ಕಿದ್ರೆ ಸಾಕು, ಸರ್ಕಾರಿ ಕೆಲಸ ಅಂತ ಹೇಳ್ತಾರೆ. ಆದ್ರೆ ನೀವು ಅದಕ್ಕೆ ಪ್ರಯತ್ನ ಪಡಲೇ ಇಲ್ಲ.
- ಎಂಎಸ್.ಸಿ. ಅಗ್ರಿಕಲ್ಚರ್ ಆದಮೇಲೆ ನನಗೆ ಲೆಕ್ಚರ್‌ಶಿಪ್ ಆಫರ್ ಮಾಡಿದ್ರು ನಮ್ಮ ಯೂನಿವರ್ಸಿಟಿಯಲ್ಲಿ. ಆದ್ರೂ ನಾ ರೆಫ್ಯೂಸ್ ಮಾಡ್ದೆ.
- ಈಗ ನೀವು ವ್ಯವಸಾಯ ಮಾಡಿದ್ರಲ್ಲಾ, ಈಗ ಅಷ್ಟು ದಿವಸದಿಂದ ಮಾಡ್ತಾ ಇದ್ದೀರಿ.
- ಹೌದ್ರಿ, ೧೯೭೭ನೇ ಇಸ್ವಿಯಿಂದ ಮಾಡ್ತಾ ಇದ್ದೀನಿ.
- ಏನಾದ್ರೂ ನಿಮಗೆ ಸಂಬಳದಲ್ಲಿ ಬರುವಷ್ಟು ಉತ್ಪತ್ತಿ ಬರ್ತದೋ?
- ಅಂಪ್ರ ಮೊದಲು ಬರ್ತಿದ್ದಿಲ್ಲಾ. ಆದ್ರೂ ಈಗ ಸ್ವಲ್ಪ ಇಂಪ್ರೂವ್‌ಮೆಂಟ್ ಆಗ್ಯದ.
- ಏನೂ ಯೋಚನೆಯಿಲ್ಲ.
- ಇಲ್ಲ, ಏನೂ ಯೋಚನೆಯಿಲ್ಲ.
- ನೀವು ಅಗ್ರಿಕಲ್ಚರ್‌ನಲ್ಲೇ ಓದಿ ವಿದ್ಯಾವಂತರಾಗಿ, ಅದನ್ನೇ ನಿಜವಾಗ್ಲೂ ಪ್ರಾಕ್ಟಿಕಲ್ ಲೈಫ್‌ನಲ್ಲಿ ಮಾಡ್ಕೊಂಡು ಹೋಗೋದ್ರಿಂದ ನಿಮಗೆ ಹೆಚ್ಚಿಗೆ ಯಾವ ರೀತಿ ಬೆಳೆಯಬೇಕು ಅನ್ನೋದು ಗೊತ್ತಿದೆಯಲ್ಲಾ.
- ಹೂಂ.

- ನೀವು ಈ ಸೊನ್ನಕ್ಕ ಬಂದಾಗ ಏನ ಅನಿಸ್ತು ನಿಮಗೆ? ಮೊದಲು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನಿಮ್ಮ ತಂದೆಯವರ ಜೊತೆ ಇದ್ದು, ವಿದ್ಯಾಭ್ಯಾಸ ಮಾಡ್ಕಂಡು ಬಂದ್ರಿ. ಅಷ್ಟು ಬೇಗನೆ ಒಗ್ಗಿ ಬಿಡ್ತಾ?.
- ಅಂದ್ರ ಮೊದಲು ಸ್ವಲ್ಪ ಅಡ್ಜಸ್ಟ್ ಆಗ್ಲಿಕ್ಕೆ ತ್ರಾಸ ಆಯ್ತರಿ.
- ಯಾಕೆ?
- ಬಿಕಾಸ್ ಸಿಟಿ ಲೈಫ್ ಬಿಟ್ಟು ಮತ್ತ ಹಳ್ಳಿಯಲ್ಲಿ ಅಂದ್ರ, ದಿಸ್‌ಈಸ್ ದಿ ಫಸ್ಟ್ ವಿಲೇಜ್ ಐ ಹ್ಯಾಡ್ ಎವರ್ ಸೀನ್.
- ಇದು ಮೊದಲನೇ ಊರಾದ್ರು ಕೂಡ, ನೀವು ಹುಟ್ಟಿದ್ದೇ ಬೇರೆ ಊರ್ನಲ್ಲಿ.
- ನಾ ಹುಟ್ಟಿದ್ದು ಅಹಮದ್ ನಗರ ಜಿಲ್ಲೆಯಲ್ಲಿ. ಕನ್ನಡ ಭಾಷಾ ನನಗ ಮೊದಲು ಬರ್ತಿದ್ದಿಲ್ಲಾ.
- ಯಾಕೆ ನಿಮ್ಮ ತಂದೆ ತಾಯಿಗಳು ಕನ್ನಡ ಭಾಷೆ ಕಲ್ತಿರಲಿಲ್ಲವಾ?
- ಮನೆಯಲ್ಲಿ ಮರಾಠಿ ಮಾತಾಡ್ತಿದ್ವಿ. ಎಂಎಸ್.ಸಿ. ಅಗ್ರಿಕಲ್ಚರ್ ಆದ ಮೇಲೆ ನಾ ಇಲ್ಲಿಗೆ ಬಂದೆ. ಬಂದ ಮೇಲೆ ನಾ ಇಲ್ಲಿ ಕನ್ನಡ ಕಲಿತೆ.
- ಭಾಷೆ ಕಲ್ತುಕೊಳ್ಳಬೇಕಾಗಿತ್ತು. ಮತ್ತು ಅಲ್ಲಿ ನಿಮಗೆ ಬಹಳ ಮನೋರಂಜನೆ ಸಿಗ್ತಿತ್ತು.
- ಹೌದು.
- ಹಳ್ಳಿಯಲ್ಲಿ ನ್ಯೂಸ್ ಪೇಪರ್ಸ್, ರೇಡಿಯೋ, ಟ್ರಾನ್ಸಿಸ್ಟರ್ ಮತ್ತು ಬೇಕಾದಾಗ ನಾವು ಪಿಕ್ಚರ್‌ಗೆ ಹೋಗಬಹುದು ಜೇವರ್ಗಿಯಲ್ಲಿ, ಗುಲಬರ್ಗಾಕ್ಕೆ.
- ಅಲ್ಲಿಗೆ ಬರ್ತೀರಿ. ನಿಮ್ಮ ವ್ಯವಸಾಯ ಮತ್ತು ವ್ಯಾಪಾರ ಮಾಡ್ಲಿಕ್ಕೆ ಆಗಾಗ ಪಟ್ಟಣಗಳಿಗೆ ಬರ್ಬೇಕಲ್ಲಾ. ಆ ಸಂದರ್ಭದಲ್ಲಿ ನೀವು ಮನೋರಂಜನೆಯನ್ನು ಕೂಡಾ ಮಾಡ್ಕೋತಿರಿ.
- ಹೌದು.
- ಆಮೇಲೆ, ಪಟ್ಟಣದಲ್ಲಿ ನಿಮಗೆ ಯಾವ ರೀತಿ ಅನುಭವ ಆಯ್ತು? ಹಳ್ಳೀಲಿ ನಿಮಗೆ ಯಾವ ರೀತಿ ಅನುಭವ ಆಯ್ತು, ಸ್ವಲ್ಪ ತಿಳಿಸ್ತೀರಾ?.
- ಪಟ್ಟಣದಲ್ಲಿ ಯಾಸ್ ಫಾರ್ ಯಾಸ್ ಪೀಪಲ್ ಆರ್ ಕನ್ಸರ್ನ್ಡ್ ದೆ ಆರ್ ನಾಟ್ ಸೋ ಕೋ ಅಪರೇಟ್ಯು. ಹಳ್ಳಿಯಲ್ಲಿ ಸಹಕಾರ ನಮಗೆ ಸಿಗ್ತದ. ಪ್ರತಿಯೊಂದು ಮಾತಿನಲ್ಲಿ? ಹಳ್ಳಿಯರಲ್ಲಿ ಎಷ್ಟು ಸಹಕಾರ ಹೆಚ್ಚಿರ್ತದೆ, ಮತ್ತು ಒಳ್ಳೆಯ ಆಹಾರ ಒಳ್ಳೆಯ ಹಾಲು ಇಲ್ಲಿ ಸಿಗುತ್ತದೆ. ಸಿಟಿಯಲ್ಲಿ ಅಡಲ್ಟೇಟೆಡ್ ಮತ್ತು ಇನ್‌ಫೀರಿಯರ್ ಕ್ವಾಲಿಟಿದ್ದು ಸಿಗ್ತದೆ.
- ಈ ದೃಷ್ಟಿಯಿಂದ, ಎಲ್ಲ ತರಕಾರಿ ಮತ್ತು ಹಣ್ಣುಗಳು, ಸೊಪ್ಪು, ಇವನ್ನ ನೀವು ಬೆಳೀತೀರಿ, ನೀವು ಸಾಕಷ್ಟು ತಿಂದು, ಅದನ್ನು ವ್ಯಾಪಾರ ಮಾಡಿ, ಅದರಿಂದ

ಸಂಪಾದನೆಯನ್ನೂ ಮಾಡ್ತೀರಿ. ಆ ದೃಷ್ಟಿಯಿಂದ ನಿಮಗೆ ಯಾವುದೂ ತೊಂದರೆ ಇಲ್ಲ ಅಲ್ಲಾ?

- ಯಾವುದೂ ತೊಂದರೆ ಇಲ್ಲ. ಅದ್ರೆ ಎಜುಕೇಟೆಡ್ ಲೈಫ್ ಇಲ್ಲಿ ಬರ್ಬೇಕು. ಎಜುಕೇಟೆಡ್ ಪೀಪಲ್ ಹಳ್ಳಿಯಲ್ಲಿ ಬಂದು, ಹಳ್ಳೀ ಉದ್ಧಾರ ಮಾಡ್ಬೇಕು ಅಂತ ನನ್ನ ಅಭಿಪ್ರಾಯ.

ಧ್ವನಿ ೧: ನಿಲೋಗಿ ೬೦೦ ಮನೆಗಳುಳ್ಳ ಒಂದು ಸಣ್ಣ ಹಳ್ಳಿ. ಊರಲ್ಲಿ ಹನುಮಂತ, ಬಸವಣ್ಣ, ಮಲ್ಲಯ್ಯನ ದೇವಸ್ಥಾನಗಳು ಹಳ್ಳಿಗರ ಧಾರ್ಮಿಕ ಕುರುಹಾಗಿವೆ. ಹೈಸ್ಕೂಲು, ಮಿಡಲ್‌ಸ್ಕೂಲು, ಆಸ್ಪತ್ರೆ, ದನದ ಆಸ್ಪತ್ರೆ, ಪೋಲೀಸ್ ಠಾಣೆ, ಬ್ಯಾಂಕ್, ವಿದ್ಯುತ್, ಮುಂತಾದ ಸೌಲಭ್ಯಗಳನ್ನೊಳಗೊಂಡ ಹಳ್ಳಿ. ವ್ಯಾಪಾರ, ವ್ಯವಸಾಯ ಜನರ ವೃತ್ತಿ. ಶಾಸಕ ವೃತ್ತಿಯಿಂದ ನಿವೃತ್ತರಾದರೂ ಬೆಂಗಳೂರು ನಗರವನ್ನು ಸೇರದೆ, ಹಳ್ಳಿಯಲ್ಲಿ ಉಳಿದು ಸೇವೆ ಮಾಡುವ ಮನೋಭಾವದಿಂದ ನಿಲೋಗಿಯಲ್ಲಿ ಉಳಿದುಕೊಂಡಿರುವ ನೀಲಕಂಠಪ್ಪ ಶರಣಪ್ಪ ದೇವರಮನಿ ಅವರು ಹಳ್ಳಿಯಲ್ಲೇ ನೆಲೆಯಾದುದರ ಗುಟ್ಟಾದರೂ ಏನು?

ಹಾಡು..........
ಇದೋ ಇಲ್ಲಿದೆ ಮರಳಿ ಹಳ್ಳಿಗೆ
ಬಂದ ನೈಜ ಕಥೆಗಳ ಹೋಳಿಗೆ
ಇದುವೇ ಅವರ ಸಿಹಿ ಬಾಳಿಗೆ

ಶಾಸಕರಾಗಿ ಸೇವೆಗೈದು ಪಟ್ಟಣವ ಬಯಸದೇ
ಹಳ್ಳಿಯಲೇ ನೆಲೆಸಿ ತೃಪ್ತಿ ಕಂಡವರಿವರು
ಇದೋ ಇಲ್ಲಿದೆ........

- ಸಂದರ್ಶನ -

- ಈಗ ತಾವು ಎಂ.ಎಲ್.ಎ. ಆದಮೇಲೆ, ಬೆಂಗಳೂರಿನಂಥ ಪರಿಸರ ನಿಮಗೆ ಆಕರ್ಷಣೆ ಆಗಲಿಲ್ಲವೇ? ಅಲ್ಲಿ ಹೋಗಿ ನೆಲಸಬೇಕು ಅಂಥಕ್ಕಂಥ ಮನಸ್ಸು ಆಗಲಿಲ್ಲವೇ?

- ನಮಗ ಅಲ್ಲಿ ಹೋಗಿ ನೆಲಸಬೇಕು ಅನ್ನ ವಿಚಾರ ಬರ್ಲಿಲ್ಲ.

- ಯಾವ ದೃಷ್ಟಿಯಿಂದ?

- ಯಾಕಂದ್ರೆ ನಾವು ಹಳ್ಳಿಯೊಳಗ ಹುಟ್ಟಿದಂಥವರು, ಹಳ್ಳಿಯ ಸೇವೆ ಮಾಡ್ತೀನಿ ಅಂತೇಳಿ ಜನರ ಮತ ತೊಗೊಂಡು ನಾವು ಹೋಗಿ, ಪಟ್ಟಣದೊಳಗ ಎಲ್ಲೋ ಮನೀ ತಗೊಂಡು ಇರದು ನಮಗ್ ಇಚ್ಛಾ ಆಗಲಿಲ್ಲ. ಹಳ್ಳಿಯೊಳಗ ಜನ ನನಗ

ಮತಾ ಕೊಟ್ಟು ಕಳಿಸ್ಯಾರ ಅಂದಮ್ಯಾಲೆ, ನಾವು ಹಳ್ಳಿಯೊಳಗ ಇದ್ದೇ ಜನರ ಸೇವಾ ಮಾಡ್ಬೇಕು. ಈ ಹಳ್ಳಿ ಸುಧಾರಿಸಬೇಕು ಅನ್ನೋ ದೃಷ್ಟಿಯಿಂದ, ನಾವು ಹಳ್ಳಿಯೊಳಗೇ ಉಳ್ಕೊಂಡೀವಿ.

- ಈಗ ನೀವೇನೋ ಮಾಡಿಲ್ಲ. ಅದ್ರೆ ನಿಮ್ಮ ಹೆಂಡ್ತಿ, ಮಕ್ಕಳು ಇವರಾದ್ರೂ ಕೂಡ, ನಾವು ಬೆಂಗಳೂರಲ್ಲೇ ವಾಸ ಮಾಡ್ಬೇಕು, ದೊಡ್ಡ ಪಟ್ಟಣಕ್ಕೆ ಹೋಗ್ಬೇಕು ಎಂಬ ಆಸೆಯನ್ನು ವ್ಯಕ್ತಪಡಿಸಲಿಲ್ವೇ ಆ ಸಮಯದಲ್ಲಿ?

- ಇಲ್ಲ, ಹಳ್ಳಿಯೊಳಗೆ ಎಲ್ಲಾ ರೀತಿಯಿಂದನೂ, ಸರ್ಕಾರ ಏನು ಅನುಕೂಲ ಮಾಡಿ ಕೊಟ್ಟದ, ಪಟ್ಟಣಕ್ಕ ಹೋಗಬೇಕು ಅನ್ನತಕ್ಕಂಥ ವಿಚಾರ ಬರಂಗಿಲ್ಲ. ಅದೊಂದು ಸುಮ್ಮನ ನಮ್ಮ ಜನರ ಹವ್ಯಾಸ. ಹಳ್ಳಿಯೊಳಗೆ ಈಗೆಲ್ಲಾ ವಾಸಕ್ಕ ಸೌಕರ್ಯ ಅದ. ಟೆಲಿಫೋನ್ ಅದ. ಪೋಸ್ಟ್ ಆಫೀಸ ಅದ. ಹೈಸ್ಕೂಲ್ ಅದ. ಶಿಕ್ಷಣ ಸೌಕರ್ಯ ಅದ. ಇದೆಲ್ಲಾ ರೀತಿಯಿಂದ ಅನುಕೂಲ ಇದ್ದು, ಪಟ್ಟಣದಾಗ ಇರಬೇಕು ಅಂತ ನಮಗೇನೂ ಅನಿಸಿಲ್ಲ. ನಮ್ಮ ಹೆಂಡ್ರು ಮಕ್ಕಿಗೂ ಅನಿಸಿಲ್ಲ.

- ಮನೋರಂಜನೆ ದೃಷ್ಟಿಯಿಂದ?

- ಮನೋರಂಜನೆ ದೃಷ್ಟಿಯಿಂದನೂ, ನಮ್ಮ ಹಳ್ಳಿಯೊಳಗ ಹಿಂದಿನ ಸಂಪ್ರದಾಯದ ಪ್ರಕಾರ ಏನಾದರೂ ಆಗ್ತಾವ. ಅಂಥಾವನ್ನ ಏನಾರ ಅದ್ರ ಪಟ್ಟಣದಾಗ, ಒಂದ್ಸಾರಿ ಹೋಗ್ಬಹುದು, ಬರ್ಬಹುದು. ಅಷ್ಟೇ ಹೊರತಾಗಿ, ಅಲ್ಲಿ ವಾಸವಾಗಿದ್ದು, ಆ ಪಟ್ಟಣ ಜೀವನ ಮಾಡ್ಕೊಂಡು ಹೋಗಬೇಕಂತ ನಮ್ಮ ಹೆಂಡ್ರು ಮಕ್ಕಳೂ ವಿಚಾರ ಮಾಡಿಲ್ಲ. ನಾವೂ ವಿಚಾರ ಮಾಡಿಲ್ಲ.

- ಇಲ್ಲಿ ಟೆಲಿವಿಷನ್ನು, ರೇಡಿಯೋ ಅವು ಕೂಡ ಮನೋರಂಜನೆ ಒದಗಸ್ತಾವಲ್ಲಾ? ಅದನ್ನೇನಾದರೂ ಇಟ್ಟೇದಿರಾ ತಾವು?.

- ಹಾಂ. ಇಟ್ಟೇದ್ದೇವಲ್ಲಾ. ಇಲ್ಲೀ ನೋಡ್ರಿ ಮನಸ್ಸಿಗ ಸಮಾಧಾನ, ಶಾಂತಿ ಸಿಗ್ತದ. ಇಲ್ಲಿ ಮನುಷ್ಯಾ ಒಂದು ಧಾರ್ಮಿಕ ಮನೋಭಾವದಿಂದ, ಆಚಾರದಿಂದ ಇರ್ಲಿಕ್ಕ ಆಗ್ತದ. ಮತ್ತು ಇಲ್ಲಿ ಒಳ್ಳೆಯ ಆಹಾರ ಸಿಗ್ತದ. ಹಳ್ಳಿಗಳನ್ನು ಸುಧಾರಿಸಲಿಕ್ಕೆ ಈಗಿನ ಯುವಕರು ಪ್ರಯತ್ನ ಮಾಡೋದು ಬಹಳ ಮುಖ್ಯ. ಯಾಕಂದ್ರ ಈ ದೇಶ ಹಳ್ಳಿಗಳ ದೇಶ. ಈ ಹಳ್ಳಿಗಳ ಜನ ಮುಂದಕ್ಕ ಬರಲಾರದೇ ಮಹಾನ್ ರಾಷ್ಟ್ರ ಅಗ್ಲಿಕ್ಕೆ ಸಾಧ್ಯ ಇಲ್ಲ.

ಅಂದ್ರೆ ನೀವು ಹೇಳೋದು, ರಿಟೈರ್ ಆದಮೇಲೂ ಕೂಡ ತಮ್ಮ ಸೇವೆಯನ್ನ ಮೀಸಲಾಗಿಡ್ಲಿ ಅಂತೇಳಿ.

ಧ್ವನಿ ೧: ರೇಡಿಯೋ, ಟೇಲಿವಿಷನ್, ಫೋನ್ ಮುಂತಾದ ಸಾಲಭ್ಯಗಳಿಗೇನೂ ಕಡಿಮೆ ಇಲ್ಲದ ಊರು, ಯಾವ ಪಟ್ಟಣಕ್ಕೇನೂ ಕಡಿಮೆ ಇಲ್ಲ. ಜನರ ಮನರಂಜನೆಗೆ ಈ ಹಾಡುಗಳು, ಬಸ್ಸುಕಾರು ಅಗಾಗ ಶಬ್ದ ಮಾಡಿದರೂ ಪಟ್ಟಣದಷ್ಟು ಶಬ್ದ ಮಾಲಿನ್ಯವಿಲ್ಲ. ಪರಿಸರ ನೈರ್ಮಲ್ಯ ಆರೋಗ್ಯಕ್ಕೆ ನಾಂದಿ.

ಇಂಥ ಹಳ್ಳಿಗಳನ್ನು ಬಯಸದವರಾರು? ಈ ತಂಗಾಳಿ, ಎಷ್ಟೊಂದು ಹಿತ. ವಾತಾವರಣ ಎಷ್ಟೊಂದು ಪರಿಶುದ್ಧ. ಪಕ್ಕಿಗಳ ಇಂಪಾದ ಗಾನ, ದನಕರುಗಳ ಅಂಬಾ ಎಂಬ ಕೂಗಾಟ, ಕುರಿಕೋಳಿ ಅಕಳುಗಳ ಇಂಪಾದ ದನಿ.

ಹಾಡು: ತತ್ವಪದ...

ಧ್ವನಿ ೨: ಪಟ್ಟಣದಿಂದ ಹಳ್ಳಿಗೆ ಬರುವವರು ಬರೇ ಸಾಹುಕಾರರು, ಸರ್ಕಾರಿ ಕೆಲಸಗಳಲ್ಲಿದ್ದು ನಿವೃತ್ತರಾದವರೇ ಅಲ್ಲ, ಸಾಮಾನ್ಯ ಕೂಲಿ ಕೆಲಸಗಾರರೂ ಉಂಟು.

ಧ್ವನಿ ೧: ಗುಲಬರ್ಗಾಕ್ಕೆ ೨೫ ಕಿಲೋಮೀಟರ್ ದೂರಕ್ಕೆ ಕಡಗಂಚಿ ಎಂಬ ಗ್ರಾಮವಿದೆ. ಇಲ್ಲಿ ಸುಮಾರು ೭,೦೦೦ ಜನಸಂಖ್ಯೆ ಇದ್ದು, ಸುಮಾರು ಸಾವಿರ ಮನೆಗಳುಳ್ಳ ಊರು ಇದು. ಊರ ಹೊರಗೊಂದು ಶಾಂತಲಿಂಗೇಶ್ವರ ದೇವಸ್ಥಾನ. ಇಲ್ಲಿ ೫೦ರಷ್ಟು ವಿದ್ಯಾವಂತರಿರುವರು. ಇಲ್ಲಿನ ಜನರ ಮುಖ್ಯ ಕಸುಬು ವ್ಯವಸಾಯ. ಯುವಜನ ಸಂಘ, ಮಹಿಳಾ ಮಂಡಲ, ಪ್ರೌಢ ಶಾಲೆ, ಬ್ಯಾಂಕ್, ಪೋಸ್ಟ ಆಫೀಸು, ಮುಂತಾದವುಗಳನ್ನು ಒಳಗೊಂಡಿದ್ದು, ಪ್ರಗತಿಯ ಪಥದಲ್ಲಿ ಇದೆ ಈ ಕಡಗಂಚಿ

- ತತ್ವಪದ -

ಹಕ್ಕಿಗಳ ಶಬ್ದ, ಈ ಪ್ರಶಾಂತವಾದ ವಾತಾವರಣ. ಇದು ಮಳೆ ಆಧರಿಸಿದ ಬೆಳೆ. ಎಷ್ಟೋಸಾರಿ ಮಳೆಗಾಣದೇ ಕ್ಷಾಮ ಪೀಡಿತ ಪ್ರದೇಶ. ರೈತ ಕಾರ್ಮಿಕರು ಪಾಡು ಪಟ್ಟದ್ದು ಹೇಳತೀರದು. ಹೊಟ್ಟೆಯ ಪಾಡಿಗೆ ಕೆಟ್ಟು ಪಟ್ಟಣ ಸೇರಲೇ ಬೇಕು. ಕೂಲಿಯನ್ನಾದರು ಮಾಡಿ ಜೀವಿಸಲಿಕ್ಕೆ. ಅಂಥ ಪರಿಸ್ಥಿತಿ ಮಲ್ಲಿಕಾರ್ಜುನ ಧನ್ನಿಗೂ ತಟ್ಟಿತು.

ಹಾಡು...
ಇದೋ ಇಲ್ಲಿದೆ ಮರಳಿ ಹಳ್ಳಿಗೆ
ಬಂದ ನೈಜ ಕಥೆಗಳ ಹೋಳಿಗೆ
ಇದುವೇ ಅವರ ಸಿಹಿ ಬಾಳಿಗೆ

ಕೂಲಿ ನಾಲಿ ಕಾಣದೇ
ಪಟ್ಟಣಕ್ಕೆ ಪಯಣ ಬೆಳೆಸಿ
ಬವಣೆ ಪಟ್ಟು ಕಂಗೆಟ್ಟು
ಬಂದ ಕೃಷಿ ಕಾರ್ಮಿಕರು

- ನಿಮ್ಮ ಹೆಸರೇನಪ್ಪಾ?
- ಮಲ್ಲಿಕಾರ್ಜುನ
- ಈ ಕಡಗಂಚಿ ಗ್ರಾಮವಾ ನೀಮ್ದು?
- ಹೌದ್ರಿ.
- ನಾನು ಕೇಳ್ದೆ ನೀವು ಕೆಲವು ದಿವಸಗಳ ಹಿಂದೆ ಬೊಂಬಾಯಿಗೆ ಹೋಗಿ ಜೀವನವನ್ನು ಮಾಡಿದ್ರಂತೆ
- ಹೌದ್ರಿ.
- ಏನ ಕಾರಣ? ಊರನ್ಯಾಕೆ ಬಿಟ್ರಿ ನೀವು?
- ಊರನ್ಯಾಗ ಇಲ್ಲಿ ಸರೀಗಿ ಕೆಲಸಾ ಹತ್ತಲಿಲ್ಲರಿ. ಅದಕ್ಕ ಹೋಗಿದ್ವಿ. ಮತ್ತ ಕೆಲಸಾ ಹತ್ತತಂದ್ರ ಆ ಕಡಿ ಹೋಗದಿಲ್ಲ.
- ಈಗ ನಾನೇಳದು, ಬೊಂಬಾಯಿಗೆ ಹೋಗಿದ್ರಲ್ಲಾ, ಅಲ್ಲಿ ಜೀವನ ಹೇಗಿತ್ತು ನಿಮಗೆ ಏನು, ಸ್ವಲ್ಪ ವಿವರಿಸ್ತೀರಾ?
- ಅಂದ್ರ ಅಲ್ಲಿ ಜರಾ ನೀರಿನದು ತ್ರಾಸ ಅದರಿ. ಆಯ್ತು ಕಟ್ಟಿಗಿ ಕುಳ್ಳಿನದೂ ತ್ರಾಸ ಇರ್ತದರಿ. ಸುಮ್ನ ಇಷ್ಟು ದುಡ್ಡಿಗಾಗಿ ಹೋಗದ್ರಿ, ಅದಿಷ್ಟು ಕೆಲಸಾ ಮಾಡ್ಕಳ್ಳದು, ೫ ತಿಂಗಳ ಮಾಡ್ಕೋಳ್ಳದು, ಮತ್ತ ಬರದು.
- ಈಗ ಅಲ್ಲಿ ನಿಮಗೆ ಮನೆ ಹ್ಯಾಗೆ?
- ಮನೀ ಅಂದ್ರ ಸುತ್ತ ಇಷ್ಟು ಇಟ್ಟಂಗಿ ಏರಸದು. ಇಟ್ಟಂಗಿ ಏರಸಕೆ, ಮ್ಯಾಲೆ ಒಂದೀಟು ಚಟಾಯಿ ಮ್ಯಾಲೆ ಒಕಾಟದ್ರಿ ಅದರಾಗೇ ಇರದು.
- ಇಲ್ಲಿ ಸ್ವಂತ ಮನೆ ಇದೆಯಾ?
- ಹಾಂ ಇಲ್ಲಿ ಸ್ವಂತ ಮನೀ ಅದ.
- ಮಕ್ಕಳಗಳನ್ನೆಲ್ಲಾ ಬೊಂಬಾಯಿಗೆ ಹೋಗಿದ್ರಲ್ಲಾ ಅವ್ರನ್ನ ಓದ್ಸದು ಹ್ಯಾಗೆ? ಸ್ಕೂಲಿಗೆ ಸೇರಿಸ್ತಿದ್ರಾ? ಅವರನ್ನೂ ಕರ್‍ಕೊಂಡು ಹೋಗ್ತಿದ್ರೋ ಅಥವಾ ಇಲ್ಲೇ ಇರಿಸಿ ಬಿಟ್ಟು ಹೋಗಿದ್ರೋ ಹ್ಯಾಗೆ?
- ಅವರೀಗಿ ಇಲ್ಲೇ ಇಟ್ಟು ಹೋಗಿದ್ವಿ. ಒಬ್ಬ ಹುಡುಗ ೫ನೇ ಹನರಿ. ಎರಡು ಹೆಣ್ಮಕ್ಕಳೀಗಿ ತಗೊಂಡು ಹೊಲಕ್ಕ ಹೋಗ್ತಾಳ್ರಿ ಹುಡುಗ ಇದ್ರ ಸಾಲೀಗಿ ಹೋಗ್ತಾನ್ರಿ.
- ಮತ್ತ ಅವರಿಗೆ ಊಟ - ಗೀಟ ಹಾಕವ್ರು ಯಾರು?
- ತಾಯಿ ಹಳ ಅಲ್ರೀ.

- ನೀವು ಒಬ್ರೇ ಹೋಗಿದ್ರಾ?
- ಹೌದ್ರಿ.
- ಈ ಹಳ್ಳಿಯ ಜೀವನ ಸುಖವೋ ಅಥವಾ ಪಟ್ಟಣದ ಜೀವನ ಸುಖವೋ?
- ಅಂದ್ರ, ಹಳ್ಳೀ ಜೀವನ ಸುಖ ಅದರಿ.
- ಯಾವ ದೃಷ್ಟಿಯಿಂದ? ಹ್ಯಾಗೆ?
- ಅಂದ್ರ ನೀರಿಂದ ಆರೋಗ್ಯ ಸರಿಯಾಗಿರ್ತದ. ಆಯ್ತು, ವಾತಾವರಣನೂ ಇದೇ ಹಳ್ಳೀದೇ ಸರಿಯಾಗಿದೆ.
- ಅಂದ್ರೆ ನೀವು ಹೋದ ಉದ್ದೇಶ, ಸಂಪಾದನೆ ಮಾಡೋ ದೃಷ್ಟಿಯಿಂದಲಾ? ಇಲ್ಲಿ ಕೂಲಿಗಳು ಸಿಗದಿಲ್ಲಾ ಅಂತಲೋ?
- ಹಾಂ ಇಲ್ಲಿ ಒಂಜರಾ ಕಮ್ಮ ಹತ್ತದರಿ ಸರ್, ಹಳ್ಳ್ಯಾಗ.
- ಹಾಂ ಹಾಂ. ಅಲ್ಲಿ ಸ್ವಲ್ಪ ಹೆಚ್ಚಿಗೆ ಸಿಗ್ತದ.
- ಹಾಂ ಹೆಚ್ಚ ಸಿಗ್ತದರಿ.
- ಈಗ ನೀವು ಹೆಚ್ಚಿಗೆ ಸಿಗ್ತದ ಅಂತ, ನಿಮ್ಮ ಸಂಸಾರವನ್ನು ಇಲ್ಲೇ ಬಿಟ್ಟು ಹೋಗಿ, ಅಲ್ಲೂ ನೀವು ಸಂಸಾರ ಮಾಡ್ಬೇಕು. ಅಲ್ಲೊಂದು ಜೀವನ ಮಾಡ್ಬೇಕು. ಆಗ ದುಡ್ಡು ಸಾಕಾಗುತ್ತೋ?
- ಅಷ್ಟೇ ಇದಕ ಒಂಜಾರ ಹೆಚ್ಚ ಆತದರಿ
- ಅಲ್ಲಿ ಏನ್ ಕೆಲಸಾ ಮಾಡ್ತಿದ್ರಿ?
- ಅಲ್ಲಿ ಇದೇ ಇಟ್ಟಂಗಿ ಕೆಲಸಾ ಮಾಡ್ತೀವಿ.
- ಇಲ್ಲಿ ಎಷ್ಟು ಸಿಗುತ್ತೆ ನೀವು ಕೂಲಿ ಮಾಡಿದ್ರೆ?
- ಇಲ್ಲೇನು ಸೋಳಾ ಇಲ್ಲಾ ಅಠ್ರಾ ಇಲ್ಲಾ ಲಾಸ್ಟ ಇಪ್ಪತ್ತು ರೂಪಾಯಿರಿ.
- ಇಪ್ಪತ್ತಕ್ಕಿಂತ ಹೆಚ್ಚ ಸಿಗತ್ತೋ ಅಲ್ಲಿ?
- ಹಾಂ ಹೆಚ್ಚು ಸಿಗ್ತದರಿ.
- ಆ ದೃಷ್ಟಿಯಿಂದ ಹೋಗ್ತಿದ್ರೋ?
- ಹಾಂ.
- ಈಗ ನೀವು ಹ್ಯಾಗೆ ಮನಸ್ಸು ಮಾಡಿದೀರಿ? ಈಗ ನೀವು ಮತ್ತೆ ಬೊಂಬಾಯಿಗೆ ಹೋಗಿ ಅಲ್ಲೇ ಜೀವನ ಮಾಡ್ಬೇಕು ಅಂತೀರೋ ಅಥವಾ ಇಲ್ಲೇ ಇದ್ದು, ನೀವು ಜೀವನ ಮಾಡ್ಬೇಕೂಂತಿರೋ?
- ಅಂದ್ರ ಇಲ್ಲೇ ಇರ್ತೀವಿ.

ಧ್ವನಿ ೧: ಶಿವಕಾಂತಾಬಾಯಿ ಜೋಗಾ, ಗಂಡನ ಜೊತೆಯಲ್ಲಿ ಬೊಂಬಾಯಿಗೆ ಹೋಗಿ ಬಂದಾಕೆ-

- ಸಂದರ್ಶನ -

- ನೀವೂ ಕೂಡ ಈ ಜೀವನೋಪಾಯಕ್ಕೆ ಪಟ್ಟಣಕ್ಕೆ ಅಂದ್ರೆ ಬೊಂಬಾಯಿ ಪತ್ರಕ್ಕೆ ಹೋಗಿದ್ರಂತಲ್ಲಾ, ನಿಜವೇ?
- ಹಾಂ. ಹೋಗಿದ್ದೇವರಿ.
- ಎಷ್ಟು ದಿವಸ ಆಯ್ತು?
- ನಾವು ಹೋಗಿ ೬ ತಿಂಗಳಾಯ್ತರಿ.
- ಅಲ್ಲಿಂದ ಯಾಕೆ ಪುನಃ ಬಂದುಬಿಟ್ರಲ್ಲಾ ಹಿಂದಕ್ಕೆ?
- ಅಲ್ಲಿ ಮಳೀ-ಛಳಿ ಅದರಿ. ಅದಕ್ಕ, ಕಟ್ಟೀಗಿದ ಪರೇಶಾನ್ ಭಾಳ ಅದರಿ. ರಾಸನ್ ಭಾಳ ಪಿರ್‍ಯಾ ಅದರಿ.  ಅದಕ್ಕ ಬಂದು ಬಿಟ್ಟೀದೇವು ಇಲ್ಲೀಗಿ.
- ಈಗ ನೀವು ನಿಮ್ಮ ಮಕ್ಕಳನ್ನು ಓದ್ಸಬೇಕು. ಬರ್ಸಬೇಕು ಅಂದ್ರೆ ಅಲ್ಲೇನು ಮಾಡ್ತಿದ್ರಿ?
- ಅಲ್ಲೇನು ಗುಡ್ಡದಾಗ ಅದಾ. ಅಲ್ಲೇನು ಓದ್ಸದು, ಬರ್ಸದು ಆಗ್ಬೇಕ್ರೀ?
- ಹಾಂ. ಆ ದೃಷ್ಟಿಯಿಂದ ಇಲ್ಲಿಗೆ ಬಂದು ಬಿಟ್ರೋ?
- ಇಲ್ಲಿ ಬಂದ್‌ಬಿಟ್ಟೀದೇವ್‌ರಿ.
- ಅಲ್ಲಿ ಏನ್ ಮಾಡ್ಕೋಂಡಿದ್ರಿ? ವಾಸಕ್ಕೆ ಮನೆ ಹ್ಯಾಗಿತ್ತು ಅಲ್ಲಿ? ಬಾಡಿಗೆ ಹ್ಯಾಗಿತ್ತು ಅಲ್ಲಿ ಏನ್ಕತೆ?
- ಅಲ್ಲಿ ಕಿರಾಯಿ ಭಾಳ ಇರ್ತದಂತ, ಅವರು ಗುಡ್ಡದಾಗ ಚಟಾಯಿ ಕುಡ್ತಾರಿ, ಚಟಾಯಿ ತಗೊಂಡು ಹಾಕ್ಕೊಂಡು ಇರದ್ರಿ.
- ಹಾಂ.
- ಭಾಳ ಪರೇಶಾನಿ ಇರ್ತದಂತೇಳಿ ಹಾಕ್ಕೋಳ್ಳದ್ರಿ.
- ಅಲ್ಲಿ ನಿಮ್ಮ ಆರೋಗ್ಯ ಚೆನ್ನಾಗಿತ್ತೋ?
- ಹೈರಾಣರಿ ಅಲ್ಲಿ. ಇಲ್ಲಿ ಜರಾ ಚೆನ್ನಾಗಿರ್ತದ ಅನದರಿ.
- ಅಲ್ಲಿ ಏನ್ ಕೆಲಸಾ ಮಾಡ್ತಿದ್ರಿ ಅಮ್ಮಾ ನೀವು?
- ದಾಂಬರ್ ಧಂಧೀ ಮಾಡ್ತೀವ್ರಿ ಕಂಪನ್ಯಾಗ.
- ಅದು ಕಂಪನಿ ಇತ್ತಲ್ಲಾ ಅಲ್ಲಿ ನೀವ್ಯಾಕೆ ಅಲ್ಲೇ ಪರಮನೆಂಟ್ ಆಗಿ ಇದ್ಬಿಟ್ಟು, ಯಾವುದಾದ್ರೂ ಒಂದು ಮನೆ ತಗೊಂಡು, ಅಲ್ಲೇ ಸುಖವಾಗಿ ಜೀವನ ಮಾಡ್ಬಹುದಾಗಿತ್ತಲ್ಲಾ?

- ಗುಡ್ಡದಾಗ ಇರ್ತದರಿ. ತೋಲ್ ಅದು ಗುಡ್ಡಾ ಇರ್ತದರಿ. ಗುಡ್ಡದಾಗ ಅದು ಮಿಶನ್ ಒಂದು ಹಚ್ಚಾರ್ರಿ. ಊರ ದೂರ ಇರ್ತಾವ್ರಿ. ನಾವು ಬರೇ ಗುಡ್ಡದಾಗೇ ಇರದು ನೋಡ್ರಿ.
- ಹೂಂ. ಅಂದ್ರೆ ಕಷ್ಟಾ ಅಂತಲೋ?
- ಹೂಂರಿ. ಭಾಳ ಹೈರಾಣ ಇರ್ತದರಿ ಅಲ್ಲಿ.
- ಅಲ್ಲೇನು ಕೆಲಸಾ ನಿಮಗೆ ಪರಮನೆಂಟ್ ಆಗಿ ಕೊಡೋದಿಲ್ವೋ?
- ಇಲ್ರಿ. ಅಲ್ಲಿ ಕುಡಲ್ಲರಿ.
- ಬರೀ ಕೂಲಿ.
- ಬರೀ ಕೂಲಿರಿ.
- ಎಷ್ಟು ಕೊಡ್ತಿದ್ರಮ್ಮಾ ಅಲ್ಲಿ?
- ಹೆಣ್ಮಕ್ಕಳಿಗಿ ಪಂದ್ರಾ ರೂಪಾಯಿ ಅದರಿ.
- ಇಲ್ಲಿ ಎಷ್ಟು ಸಿಗುತ್ತಮ್ಮಾ ನಿಮಗೆ ಕೂಲಿ?
- ಇಲ್ಲಿ ಏಳು - ಎಂಟು ಅದರಿ.
- ಹಾಂ. ಮತ್ತೆ ನೀವು ಯಾಕೆ ಅಷ್ಟು ದೂರ ಹೋಗ್ಬೇಕಾಗಿತ್ತು?
- ಇಲ್ಲಿ ಹೊಟ್ಟೀ ಪರೇಶಾನ್ ಆಲಾರ್ದ ಒಟ್ಟೀಗಿ ಅಲ್ಲಿ ಹೋಗದ್ರಿ.
- ಅಂದ್ರೆ ಇಲ್ಲಿ ಕೂಲಿ ಸಿಗ್ತಿರಲಿಲ್ವೋ?
- ಕಮ್ಮೀರಿ ಇಲ್ಲಿ. ಅಲ್ಲಿ ಜರಾ ಹೆಚ್ಚಿಗಿ ಸಿಗ್ತದ ಅಂಬದು, ಹೋಗದು.
- ಈಗ ನಿಮಗೆ ಏನ್ ಅನಿಸ್ತು? ಪಟ್ಟಣದ ಜೀವನ ಸುಖ ಅನ್ನಿಸ್ತೋ? ಅಥವಾ ಹಳ್ಳೀ ಜೀವನಾ ಸುಖ ಅನ್ನಿಸ್ತೋ?
- ಇಲ್ಲಿ ಸುಖಾ ಅನ್ನಿಸ್ತದರಿ. ಅಲ್ಲಿ ತೋಲ್ ತರಾಸ್ ಅನಸ್ತದ್ರಿ.
- ಹಳ್ಳೀ ಜೀವನಾನೇ ಸುಖಾ ಅಂತೀರಾ ನೀವು?
- ಹಳ್ಳೀ ಜೀವನಾನೇ ಸುಖಾ ನೋಡ್ರಿ.
- ಪುನಃ ಹೋಗ್ಬೇಕು ಅಂತ ಮನಸ್ಸ ಮಾಡಿರೋ ಇಲ್ಲಾ ಹೋಗ್ಬೇಕು ಅಂತ ಮನಸ್ಸ ಮಾಡೀರೋ?
- ಬೆಳೀ, ಮಳಿ, ಛಲೋ ಇತ್ತಂದ್ರ, ಇಲ್ಲೇ ಇರ್ಬೇಕು ಅನದ್ರಿ. ಇಲ್ಲಂದ್ರ, ಹೋಗ್ಬೇಕು ಅನಸ್ತದ್ರಿ. ಕಷ್ಟ ಮಾಡಲಾರದೇ ಹೊಟ್ಟೀ ತುಂಬಲ ಅಲ್ರೀ ನಮಗ.
- ಹಾಂ ಅದಕ್ಕೋಸ್ಕರವಾಗಿ.

ಧ್ವನಿ ೨: ಇವರೆಲ್ಲರಿಗೂ ಕೆಲಸ ಸಿಕ್ಕಿದರೆ ಪಟ್ಟಣದ ಬಯಕೆ ಪಡುವವರಲ್ಲ. ಅವರ ಹಳ್ಳಿಯೇ ಅವರಿಗೆ ಪ್ರಿಯವಂತೆ.

ಸುರಪುರದ ಅರಸು ಮನೆತನದ ರಾಜಾ ವೆಂಕಟಪ್ಪ ನಾಯಕನ ವಂಶಸ್ಥರು ಸುರಪುರ ಪಟ್ಟಣದ ಅರಮನೆ ಬಿಟ್ಟು ಬೆಟ್ಟ ಗುಡ್ಡಗಳ ನಡುವಿನ ಕಾಲದಲ್ಲಿ ಮನೆ ಮಾಡಿಕೊಂಡು ಅಲ್ಲಿನ ಹಳ್ಳಿಗಳಲ್ಲಿ ವಾಸವಾಗತೊಡಗಿದ್ದಾರೆ.

ರಾಜಾ ಪಿಡ್ಡ ನಾಯಕರು ಮಾಜಿ ಶಾಸಕರು. ಅವರು ವಾಸಿಸುವ ಸ್ಥಳ ಸಿದ್ದಾಪುರ. ಅವರ ಮಗ ರಾಜಾ ವೆಂಕಟಪ್ಪ ನಾಯಕ ಭೈರಮಡ್ಡಿಯಲ್ಲಿ ವಾಸ. ೮೦ ವರ್ಷದ ರಾಜಾ ವೆಂಕಟಪ್ಪ ನಾಯಕ ಪಿಡ್ಡ ನಾಯಕ್ಕ ಅಣ್ಣ, ಬ್ಯಾರಿಸ್ಟರಾಗಿ ಕೆಲಸ ಮಾಡಿ ಈಗ ಸಿದ್ದನ ತೋಟವನ್ನು ತಮ್ಮ ಊರನ್ನಾಗಿ ಆಯ್ಕೆ ಮಾಡಿ ಕೊಂಡಿದ್ದಾರೆ.

- ಸಂಗೀತ -

ಧ್ವನಿ ೧: ಎಪ್ಪತ್ತು ಸಂವತ್ಸರಗಳನ್ನು ಕಂಡ ಪಿಡ್ಡ ನಾಯಕರು ಈ ಸುಂದರ ಪ್ರಕೃತಿ ತಾಣವನ್ನು ಆಯ್ಕೆ ಮಾಡಿಕೊಂಡಿರುವುದು ನಿಜಕ್ಕೂ ಅಚ್ಚರಿ ತಾರದೇ ಇರದು. ಬೆಟ್ಟದ ಮೇಲೊಂದು ಮನೆ, ಹಿತವಾದ ಗಾಳಿ, ಕಣ್ತುಂಬುವ ಹಸಿರು, ಇಲ್ಲಾಡುವ ಉಸಿರು ಎಷ್ಟೊಂದು ಹಿತ.

ಹಾಡು........
ಅರಮನೆಯ ಅಂಗಳದಿ
ಅರಸಾಗಿ ಬೆಳೆದ
ರಾಜವಂಶಜರಿವರು
ಅರಸಿ ಬಂದುದು ಹಳ್ಳಿಗೆ......
ಇದೋ ಇಲ್ಲಿದೆ, ಮರಳಿ ಹಳ್ಳಿಗೆ........

- ಸಂದರ್ಶನ -

- ತಾವು ಈ ಸುರಪುರ ತಾಲೂಕಿನಿಂದ ಈ ಬೆಟ್ಟ ಪ್ರದೇಶಗಳಲ್ಲಿ ಬಂದು ಮನೆಯನ್ನು ಕಟ್ಟಿಕೊಂಡು ಇಲ್ಲಿ ವಾಸವಾಗ್ಲಿಕ್ಕೆ ಕಾರಣ ಏನು?
- ನೋಡ್ರಿ, ನಾನು ಹೈಲಿ ಸ್ಯಾಟಿಸಫೈಡ್ ಸೋ ಎವ್ವೆರಿ ಥಿಂಗ್ ಈಸ್ ಸ್ಯಾಟಿಸಿಫೈಡ್ ಸೋ ಆಲ್‌ಸೋ ಐ ವಾಂಟೆಡ್ ಟು ಲೀಡ್ ಎ ವೆರಿ ಪೀಸಫುಲ್ ಅಂಡ್ ಕಾಮ್ ಲೈಫ್.
- ತಾವೂ ಕೂಡ ಎಕ್ಸ್ ಎಂ.ಎಲ್.ಎ. ಆಗಿದ್ರಿ ಅಲ್ವೇ?
- ಎಸ್.
- ಅದ್ರೆ, ಎಷ್ಟೋ ಜನ ಎಂ.ಎಲ್.ಎ.ಗಳಾದವರು ಅಥವಾ ಎಂ.ಪಿ. ಆದವರು ಅಥವಾ ಮಿನಿಸ್ಟರ್ ಆದವರು ಸಾಮಾನ್ಯವಾಗಿ ಪಟ್ಟಣಗಳಲ್ಲೇ ವಾಸವಾಗಿರೋದು ಸಹಜ. ಆದ್ರೆ ತಾವು ಆಗಲೂ ಕೂಡ ಇಲ್ಲೇ ಇದ್ರೋ?
- ಆಗನೂ ಇಲ್ಲೇ ಇದ್ದೆ. ಈಗಾದ್ರೂ ಇಲ್ಲೇ ಇದ್ದೀನಿ. ಹೋಗ್ತಾ ಬರ್ತಾ ಫಾರ್ಮ ಸರಿಯಾಗದ. ಹಾರ್ಡ್ಲಿ ಒನ್ ಫರ್ಲಾಂಗ್ ಫ್ರಂ ಶೋರಾಪುರ. ಅಲ್ಲಿಂದ ನಮ್ಮ

ಫಾರ್ಮ್ ಸುರು ಆಗ್ತವ. ಅಲ್ಲಿ ಒಕ್ಕಲುತನನೂ ನಡೀತದ. ಯಾವದಾದ್ರೂ ಒಂದು ವಾಸ ಬೇಕಲ್ಲಾ, ಆ ದೃಷ್ಟಿಯಿಂದ ಪರ್ಮನೆಂಟಾಗಿ ಸಿಮೆಂಟದು ನನ್ನ ಕೈಲಾದಷ್ಟು ಕಟ್ಟೇನಿ. ಇದಕ್ಕೇನಪಾ, ಎಲ್ಲಾರೂ ಮಠ ಅಂತಾರ. ಪೂಜಾ ಮಾಡದಸಿಂದ, ಆಸನ ಹಾಕಸಿಂದ ಐ ಹ್ಯಾವ್‌ಗಾಟ್ ಮೈ ಒನ್.

- ಇಲ್ಲಿ ತಾವು ಯಾವ ರೀತಿಯಾಗಿ ತಮ್ಮ ಕಾಲವನ್ನು ಕಳೀತೀರಿ? ತಮ್ಮ ಹಾಬೀ ಏನಿಲ್ಲಿ?
- ಹಾಬೀ ಅಂದ್ರ, ಮುಂಜಾನೆ, ನಸುಕಿನೊಳಗ ಎದ್ದು ಆಧ್ಯಾತ್ಮಿಕದ ಬಗ್ಗೆ ಓದುತೀನಿ. ಐ ಹ್ಯಾವ್ ಗಾಟ್ ಆಲ್ ದಿ ಬುಕ್ಸ್ ಬಿಕಾಸ್ ಮೈಂಡ್ ಶುಡ್ ನಾಟ್ ಬಿ ಫಿಲ್ಡ್ ವಿಥ್ ಟ್ರೈಫಲ್ಸ್ ಆಫ್ಟರ್ ಐ ಫಿನಿಷ್ ಮೈ ಆಧ್ಯಾತ್ಮ ಬುಕ್ಸ್, ಅಂಡ್ ದೆನ್ ಐ ಟೇಕ್ ಅಪ್ ಜನರಲ್ ಬುಕ್ಸ್ ಸೋ ಮೋಸ್ಟ್ ಆಫ್ ದಿ ಟೈಮ್ ಈಸ್ ಸ್ಪೆಂಟ್ ಇನ್ ರೀಡಿಂಗ್. ಐ ಹ್ಯಾವ್ ಗಾಟ್ ಮೈ ತಬಲಾ, ದಿ ಪ್ರ್ಯಾಕ್ಟೀಸ್ ಈಸ್ ಆಲ್‌ಮೋಸ್ಟ್. ನೋ, ಐ ಆ್ಯಮ್ ಎ ಡೆಸೈಪಲ್ ಆಫ್ ದಾವೂದ್. ಐ ಬಿಕೇಮ್ ಹಿಸ್ ಡಿಸೈಪಲ್ ಇನ್ ನೈನ್‌ಟೀನ್ ಫಾರ್ಟಿಫೈ. ಐ ಹ್ಯಾವ್‌ಗಾಟ್ ಗ್ರೇಟ್ ಇಂಟರೆಸ್ಟ್ ಇನ್ ಮ್ಯೂಸಿಕ್.
- ಆಮೇಲೆ ಇನ್ನೇನು ತಮ್ಮ ಹಾಬಿ?
- ವೆಲ್ ಮೈ ಲೈಫ್ ಹ್ಯಾಸ್ ಬೀನ್ ಸ್ಪೆಂಟ್ ಇನ್ ಷೂಟಿಂಗ್. ಐ ಹ್ಯಾವ್ ಷಾಟ್ ಎ ನಂಬರ್ ಆಫ್ ಪ್ಯಾಂತರ್ಸ್.
- ಯಾಕಂದ್ರೆ ತಾವೂ ಕೂಡಾ ಒಂದು ರಾಜವಂಶದಿಂದ ಬಂದಿರತಕ್ಕಂಥವರು ಅಲ್ವೇ?
- ಆಫ್‌ಕೋರ್ಸ್, ಬಟ್ ಸಾರ್ಟ್ ಆಫ್ ರಾಜಾಸ್ ವಿ ಆರ್? ವೆರಿ ಫ್ಯು ನೋ, ಮೈ ಫಾದರ್, ಗ್ರ್ಯಾಂಡ್ ಫಾದರ್ ದೆ ಹ್ಯಾವ್ ಆಲ್ ಡಿಸ್ಟ್ರಿಬ್ಯುಟೇಡ್ ಲ್ಯಾಂಡ್ಸ್ ಇನ್ ಫೋರ್ ತಾಲೂಕಾಸ್ ಜೇವರ್ಗಿ, ಷಹಪುರ, ಸುರಪುರ ಅಂಡ್ ದೇವದುರ್ಗ. ಸೋ ದೆ ಹ್ಯಾವ್ ಡಿಸ್ಟ್ರಿಬ್ಯೂಟೆಡ್ ಎವ್ವೆರಿ ಥಿಂಗ್.
- ಮತ್ತೆ ಇವಾಗ ನೀವು ಯಾವ ರೀತಿಯಾಗಿ ಜೀವನ ಮಾಡ್ತೀರೋದು ಇಲ್ಲಿ?
- ಸೋ, ಜೀವನ ಹೆಂಗ ಅಂತ ಅಂದ್ರ, ಮಂದೀದು ಒಂದು ಪ್ರೇಮ ಅದ.
- ಅದು ಮುಖ್ಯ, ಜನಪ್ರೇಮ.
- ಅದೇ ನನ್ನ ಜೀವನ.
- ಪಟ್ಟಣದಿಂದ ದೂರವಾದಾಗ, ನಿಮಗೆ ಬೇಕಾದ ಸೌಲಭ್ಯಗಳು, ಸೌಕರ್ಯಗಳು ಒಂದು ಯಾವ ಊರಿಗಾದ್ರೂ ಹೋಗ್ಬೇಕಾಯ್ತು ಅಥವಾ ಏನಾದ್ರೂ ಒಂದು ಸಾಮಾನು ಬೇಕಾಯ್ತು ಅದು ತರಿಸಬೇಕಾದ್ರೆ ಬಹಳ ಕಷ್ಟವಲ್ಲವೇ?
- ದಟ್ ಐ ವಿಲ್ ಟೇಕ್ ಅಪ್ ಎ ಎಂಟರ್‌ಟೈನ್‌ಮೆಂಟ್.

- ಆಹಾ, ತಮಗೀವಾಗ ಎಷ್ಟು ವರ್ಷ?
- ಐ ವಾಸ್ ಬಾರ್ನ್ ಇನ್ ೧೯೧೬. ನಿಯರ್‌ಲಿ ೭೩ ಖತಂ ಆಯ್ತು.
- ಇಷ್ಟು ವಯಸ್ಸಲ್ಲಿ ನಿಮಗೆ, ಇನ್ನೂ ಕೂಡ ನೀವು ಹೊರಗಡೆ ತಿರುಗಾಡಕ್ಕಂಡು ಬರ್‍ತೀರೋ?
- ಹಾಂ. ಇನ್ನಾದ್ರೂ ಹೋಗ್ತೀವಿ. ಯಾವಾಗಾದ್ರೂ.
- ಜನಸಾಮಾನ್ಯರ ಕೆಲಸಗಳಿಗೆ, ಜನಸಾಮಾನ್ಯರು ಬರ್‍ತಾರೇ ನಿಮ್ಮ ಹತ್ತಿರ?
- ದಟ್ ಈಸ್ ಮೈ ಫಸ್ಟ್ ಪರ್‌ಫಾರ್ಮೆನ್ಸ್ ಸೋ ಲಾಂಗ್ ದೇ ವಾಂಟ್ ಮಿ, ಐ ಆ್ಯಮ್ ಹೇರ್ ಟು ಸರ್ವ್ ದೆಮ್.

ಧ್ವನಿ ೨: ನಾವಿರುವುದೇ ಹಳ್ಳಿಯಾಗುತ್ತದೆ. ಕಾಡಾದರೇನು? ಉರಾದಾರೇನು? ಎಂಬುದು, ರಾಜಾ ವೆಂಕಟಪ್ಪನವರ ದಿಟ್ಟ ನಿಲುವು.

- ಸಂದರ್ಶನ -

- ಇಲ್ಲೆಲ್ಲ ಹೊಲ ಪಲ ಎಲ್ಲ ಅವ. ಇಲ್ಲೆಲ್ಲ ಒಕ್ಕಲುತನ ಮಾಡ್ಕ್ಯಂತ, ಇಲ್ಲೆ ಹೊಲಸ ಎಲ್ಲಾ ನೋಡ್ಕ್ಯಂತ, ಗದ್ದೀ, ಹೊಲ, ತೋಟ ಇದೆಲ್ಲಾ ಮಾಡ್ಕ್ಯಂತ ನಾವು ಮೊದಲಿನಿಂದ ಇಲ್ಲೇ ಓೀವಿ. ನಮಗೆಲ್ಲಾ ಇಲ್ಲೇ ರಾಟಿ ಛಲೋ ಬಿದ್ದವ. ಇದ್ರ ಸಲುವಾಗಿ ನಾವೆಲ್ಲಾ ಇಲ್ಲೇ ಇರ್‍ತೀವಿ.
- ಹೂಂ. ಅಂದ್ರೆ ನಿಮ್ದು ಊರು ಇದೇ ಆಗೋಯ್ತು ಈಗ.
- ಹಾಂ. ಊರು ಇದೇ ಇದ್ದಂಗ, ಇಲ್ಲೇ ಇರಮು, ಮತ್ತ ಊರಾಗ ಹೋಕ್ಕಿರ್‍ತೀವಿ ಯಾವಾಗನ ಕೆಲಸ ಇದ್ದಾಗ. ಆಯ್ತ, ಒಂದಿವಸ ಎರಡು ದಿವಸ ಅಲ್ಲಿರಮು, ಮತ್ತೀಕಡೆ ಬಂದ್‌ಬಿಡದು.
- ಅಂದ್ರೆ ಇಲ್ಲಿ ನಿಮಗೆ ಅಂಗಡಿಗೆ ಹೋಗ್ಬೇಕಾಗಲಿ, ಒಂದು ಮುಂಗಟ್ಟಿಗೆ ಹೋಗ್ಬೇಕಾಗಲೀ ಒಂದು ಮನರಂಜನೆ ಅಂತ ಸಿನಿಮಾಕ್ಕೆ ಹೋಗ್ಬೇಕಾಗಲಿ, ಭಾಳ ತೊಂದರೆಯಾಗತ್ತಲ್ಲಾ, ಯಾವ ಸೌಕರ್ಯವೂ ಇಲ್ವಲ್ಲ.
- ಆ ಸೌಕರ್ಯ ಇರಲಿಕ್ಕನೂ, ಹೋಗಕೇಸಿ ಬರ್‍ತೀವಿ, ಎಲ್ಲಾ ಓಷ್ಟು ಮನರಂಜನೆ ಅಂತ ಅಂದು, ಅಲ್ಲಿ ಹೋಗದಕ್ಕ ಊರೊಳಗ ಇರೋದಕ್ಕನೂ ಇಲ್ಲಿ ನಮಗ್ ಭಾಳ ಮನಸ್ಸ ಬರ್‍ತದ, ಹಳ್ಳಿಯೊಳಗ.
- ಅಂದ್ರೆ ಏನು ಇಟ್ಕೊಂಡಿದೀರಾ ಇಲ್ಲೆಲ್ಲಾ, ಮನರಂಜನೆ ಮಾಡ್ಕೊಳ್ಳಲ್ಲಿಕ್ಕೆ?
- ಟಿ.ವಿ. ಅದ, ಫೋನ್ ಅದ, ಈಗೆಲ್ಲಾ ಯಾರ ಸಂಗಾಟಂದ್ರ ಅವರ ಸಂಗಾಟ ಕಾಂಟೆಕ್ಟ್ ಮಾಡಿ ಮಾತಾಡ್ಬಹುದು, ಇಲ್ಲೇ ಫೋನ್‌ನೊಳಗ.
- ಹಳ್ಳಿಯ ವಾಸ ಸರೀ ಅಂತೀರೋ? ಅಥವಾ ಪಟ್ಟಣದ ವಾಸ ಸರಿ ಅಂತೀರೋ?

- ಈ ಪಟ್ಟಣದಕ್ಕಿನಾ ಈ ಹಳ್ಳೀನೇ ಭಾಳ ಉತ್ತಮ. ಯಾಕಂದ್ರ ಕಿರಿಕಿರಿ ಹೆಚ್ಚ ಇರದಿಲ್ಲಾ ಖರ್ಚನೂ ಭಾಳ ಇರದಿಲ್ಲ. ಅಲ್ಲಿ ಪಟ್ಟಣದೊಳಗ ಖರ್ಚು ಹೆಚ್ಚು. ಇಲ್ಲಿ ಅದ್ರ ಖರ್ಚು ಕಮ್ಮಿ ಎಲ್ಲಾ ಓಪ್ಪು ಭಾಳ ಸೌಕರ್ಯ ಇರ್ತದ ಇಲ್ಲಿ. ಆರೋಗ್ಯ ರೀತಿಲೇನೂ ಛಲೋ. ಮನುಷ್ಯಾ ಆರೋಗ್ಯದಿಂದ ಇರ್ತಾನ, ಇಲ್ಲ್ಯಾದ್ರ.
- ಈಗ, ಇಂಥ ಪ್ರದೇಶದಲ್ಲಿ ನೀವು ವಾಸವಾಗಿದೀರಲ್ಲಾ, ನಿಮ್ಮ ಮಕ್ಕಳಿಗೆ, ವಿದ್ಯಾಭ್ಯಾಸಕ್ಕೆ ಎಲ್ಲ ತುಂಬ ತೊಂದರೆ ಆಗಲ್ವೇ? ನಿಮಗೆ ಇಲ್ಲಿಂದ ಹೋಗ್ಬೇಕಾದ್ರೆ ಬಸ್ಸು, ಗಿಸ್ಸು, ತೊಂದರೆ ಅಲ್ವಾ?
- ಇಲ್ಲಾ. ಊರಾಗ ಇರದಕ್ಕಿನಾ, ಈ ಅಡವಿಯೊಳಗ ಇರೋದ್ರಿಂದ ಮನುಷ್ಯಾಗ ಭಾಳ ನೆಮ್ಮದಿ ಅದ. ಇದೇ ಭಾಳ ಛಲೋ ಇಲ್ಲಿರದು. ಈ ಹುಡುಗ್ರರಿಗನೂ ಎಲ್ಲಾ, ಸಾಲಿಗೂ ಕಳಿಸ್ತೀವಿ.
- ಯಾವ ರೀತಿ ಕಳಿಸ್ತೀರಿ?
- ರಿಕ್ಷಾ ಮಾಡ್ತೀವಿ. ರಿಕ್ಷಾದೊಳಗೆ ಕಳಿಸ್ತೀವಿ. ಮತ್ತು ಸಂಜೀ ಟೈಮಿಗೆ ಹುಡುಗ್ರು ಬರ್ತಾವ ಇಲ್ಲೇ. ಇಲ್ಲೀ ಗಾಳೀಲೆ ಹುಡುಗ್ರು ಛಲೋ ಇರ್ತಾರ ಇಲ್ಲಿ.
- ನಿರ್ಜನವಾದ ಪ್ರದೇಶ, ಬೆಟ್ಟ, ಗುಡ್ಡ, ಇಷ್ಟೊಂದು ಈಗಲೇ ಇದೆ. ಹಿಂದೆ ಹ್ಯಾಗಿತ್ತು ಇದು ಮತ್ತು ನಿಮಗಿಲ್ಲಿ ಪ್ರಾಣಿಗಳ ಭಯ ಇಲ್ವಾ? ಯಾವ್ಯಾವ ಪ್ರಾಣಿ ಇರ್ತಾವೆ ಇಲ್ಲಿ?
- ಪ್ರಾಣಿಗಳೆಲ್ಲಾ ಹೆಚ್ಚು ಇದ್ವು; ೧೫-೨೦ ವರ್ಷಗಳ ಹಿಂದೆ. ಈ ದಾರೀ ಮೇಲೆ ಯಾರೂ ತಿರಗ್ತಿದ್ದಿಲ್ಲಾ.
- ಏನೇನು ಪ್ರಾಣಿ ಇದ್ವು ಆಗ?
- ಆಗಿನ ಕಾಲಕ್ಕೆ ಚಿರತೆಗಳು ಹೆಚ್ಚು ಇದ್ವು. ನರಿ ತ್ವಾಳ ಇಂಥಾವಂತೂ ದುಷ್ಟ ಮೃಗ ಹೆಚ್ಚಿಲ್ಲಿ. ಅಂಥಾದ್ರೊಳಗೆ ಸಹಿತ ನಾವಿಲ್ಲಿ ಬ್ಯಾಟಿ ಆಡ್ತಿದ್ವಿ. ನಂಬಲ್ಲಿ ಬಂದೂಕುಗಳನೂ ಆವ.
- ಇಷ್ಟೆಲ್ಲಾ ಇದ್ಕಂಡು ನೀವಿಲ್ಲಿ ಮನೆ ಮಾಡ್ಕೊಂಡ್ರಲ್ಲಾ ಯಾಕೆ?.
- ಮತ್ತ ಬ್ಯಾಟಿದೊಂದು ಶೋಕಿ ಅಲ್ಲಾ ಅವಾಗ, ರಾಜ ಮನೆತನದವರಿಗೆ ಬ್ಯಾಟೀದೊಂದು ಹುಚ್ಚು ಹೆಚ್ಚು. ಅದಕ್ಕ ಸಲೀಂದ, ಬ್ಯಾಟಿ ಅದಕ್ಕೂ ಸೌಕರ್ಯ ಇರ್ತದ ಅಂತ ಬ್ಯಾಟಿ ಅಡ್ಕಂತ ಇಲ್ಲಿ ಬಂದ್ವಿ.
- ಇಂಥಾ ಕಾಡನ್ನೇ ನೀವು ಊರ ಮಾಡ್ಕೊಂಡ್ರಲ್ಲಾ.
- ಕಾಡಂಬದು ನಮಗ ಈಗ ಪಟ್ಟಣಕ್ಕಿನ ಛಲೋ ಆಗ್ಯದ. ಈಗ ನಮಗ ಕಾಡಾದರೇನು, ಊರಾದರೇನು, ನಾವೆಲ್ಲಿ ಇರ್ತಿವೋ ಅದೇ ನಮಗೊಂದು ಊರು ಇದೆ.

ಹಾಡು..........
ಇದೋ ಇಲ್ಲಿದೆ ಮರಳಿ ಹಳ್ಳಿಗೆ
ಬಂದ ನೈಜ ಕಥೆಗಳ ಹೋಳಿಗೆ
ಇದುವೇ ಅವರ ಸಿಹಿ ಬಾಳಿಗೆ

ಅಧ್ಯಾತ್ಮ ಜೀವಿಗಳ
ಆಸೆಗಳ ಪೂರೈಸಲು
ವಕೀಲ ವೃತ್ತಿ ತ್ಯಜಿಸಿ
ಅರಸಿ ಬಂದಿಹರ ಈ
ಮರೀ ದೇವರ ಗುಡ್ಡಕೆ

ಇದೋ ಇಲ್ಲಿದೆ........

ಧ್ವನಿ ೧: ದಿಟ್ಟ ನಿರ್ಧಾರದ ಶಂಕರ ಮೂಗಿ ಇವರು ಹೇಳಿದ್ದಾದರೂ ಏನು?.

- ಸಂದರ್ಶನ -

- ಈ ಹಳ್ಳಿಯ ಜೀವನ ನಿಮ್ಮ ಪಟ್ಟಣದ ಜೀವನಕ್ಕೆ ಸರಿದೂಗ್ತದೋ ಹ್ಯಾಗೆ?
- ಅದು ನಮ್ಮ ಹೊಂದಾಣಿಕೆ ಮೇಲೆ, ತಿಳುವಳಿಕೆ ಮೇಲೇ ಇದೆ. ಈಗ ನೋಡಿ, ಬೆಂಗಳೂರು, ಬಾಂಬೆ, ದಿಲ್ಲಿ ಇಂಥ ದೊಡ್ಡ ದೊಡ್ಡ ಊರುಗಳಲ್ಲಿಯೇ ಸೊಲ್ಲಾಪುರ....... ಇದಕ್ಕೂ ಮೊದಲು ಶಿಕ್ಷಣ ಪ್ರಾರಂಭವಾದದ್ದೇ ದೊಡ್ಡ ಶಹರಗಳಲ್ಲಿ ನಾವೇನೋ ಹಳ್ಳಿಯಲ್ಲಿ ಹುಟ್ಟಿದವರು. ಆದರೆ ನಮ್ಮ ಶಿಕ್ಷಣ........
- ತಮ್ಮ ಊರು ಯಾವುದು?
- ಬೈಲ ಹೊಂಗಲ ಕಿತ್ತೂರು ನಾಡಿನವರು ನಾವು.
- ಅಂದ್ರೆ ತಾವು ಮೊದಲು ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದವರು. ಆದ್ದರಿಂದ ನಿಮಗೆ ಹಳ್ಳಿಯ ವಾತಾವರಣ ಚೆನ್ನಾಗಿ ಹಿಡಿಸಿದೆ.
- ಹಾಗೇನಿಲ್ಲ. ಹಳ್ಳಿಯಲ್ಲಿ ಹುಟ್ಟಿ ಬೆಳೆದರೂ, ನಾವು ಇನ್ನೂ ನಮ್ಮ ವಯಸ್ಸಿಗೆ ಬರುವ ಪೂರ್ವದಲ್ಲೇ ನಮ್ಮ ಶಿಕ್ಷಣಕ್ಕೆ ದೊಡ್ಡ ಶಹರುಗಳಿಗೆ ಬಂದವರು. ಶಹರದ ಸುಖ ಜೀವನ, ಹೊಸ ನಾಗರೀಕತೆಯಲ್ಲಿಯೇ ಬೆಳೆದವರು.
- ಆ ನಾಗರೀಕತೆಯನ್ನು ಇಲ್ಲಿ ಕಂಡ್ರೋ?
- ನಮಗ ಇಲ್ಲಿರುವ ಅನುಕೂಲಗಳು, ಎಲ್ಲಾ ಅನುಕೂಲಗಳು ಇವೆ. ಆಧುನಿಕ ಎಲ್ಲಾ ಅನುಕೂಲಗಳು, ಕಾರಿದೆ, ಫೋನಿದೆ, ಫ್ರಿಜ್ ಇದೆ ಇದೆಲ್ಲಾ ಏನಂದ್ರೆ.......
- ಟೆಲಿವಿಷನ್ ಇಟ್ಟೇದಿರಿ, ರೇಡಿಯೋ ಇಟ್ಟಿದಿರಿ.
- ಎಲ್ಲಾ ಅನುಕೂಲತೆಗಳನ್ನು ಇಲ್ಲಿ ಹಳ್ಳಿಯಲ್ಲಿ ಮಾಡ್ಕೊಳ್ಳವ್ರಿಗೆ ಅನುಕೂಲ ಇದೆ. ಆದ್ರೆ ಇವೆಲ್ಲಾ ಇದ್ದುನೂ ಇದಕ್ಕಿಂತಲೂ ವಿಶಿಷ್ಟವಾದ ಕೆಲವು ಅನುಕೂಲತೆಗಳು ಇಲ್ಲಿ ಇದ್ದಾವ.

- ಏನದು?
- ಒಳ್ಳೆಯ ನೀರು, ಹವೆ ಮತ್ತು ಪ್ರಶಾಂತ ವಾತಾವರಣ. ನಮ್ಮ ಸುತ್ತ ಬೆಳೆದಿರುವ ವನಶ್ರೀ, ದಿನವೂ ನೋಡತಕ್ಕಂಥಾ ಹೂಗಳು, ಆ ಹೂಗಳ ಒಂದು ಸೌಂದರ್ಯ, ಸೂಸುವ ಗಾಳಿ, ಸೀಸನ್‌ಗೆ ಆಗುವಂಥ ಹಣ್ಣುಗಳು, ಇವುಗಳನ್ನು ನೋಡಿ ನೋಡಿ ನಮಗೆ ಒಂದು ಏನಾಗಿ ಬಿಟ್ಟಿದೆ, ಪ್ರತಿಯೊಂದು ಗಿಡದ ಜೊತೆನೂ ನಮ್ಮ ಸ್ನೇಹ ಬೆಳೆದು ಬಿಟ್ಟಿದೆ.
- ಈಗ ನೀವು ಈ ಕೆಲಸವನ್ನು ಬಿಟ್ಟ ಮೇಲೆ, ವೃತ್ತಿ ಏನು ಮಾಡ್ಕೊಂಡಿದೀರಿ? ಹ್ಯಾಗೆ ಜೀವನ ಮಾಡ್ತೀರಿ, ಹ್ಯಾಗೆ ಕಾಲ ಕಳೀತಿರಿ?
- ಹಿಂದ ನಾವೇನು ಒಂದು ವೃತ್ತಿ ಮಾಡ್ಕೊಂಡು ನಮಗೇನೂ ಆಸರೆ ಮಾಡ್ಕೊಂಡೀವೋ ಅಷ್ಟೇ. ಈಗ ನಮ್ಮದು ಪ್ರವೃತ್ತಿ ಮಾರ್ಗ ಅಲ್ಲ, ನಿವೃತ್ತಿ ಮಾರ್ಗ. ನಾವು ಇದ್ದದ್ದರಲ್ಲಿ ಸಮಾಧಾನ ಪಟ್ಟುಕೊಳ್ಳಬೇಕು. ಇದ್ದಷ್ಟರಲ್ಲೇ ನಡೆಸಬೇಕು ಅನ್ನುವಂಥ ಒಂದು ಮನಸ್ಸನ್ನು ನಾವು ತಯಾರು ಮಾಡ್ಕೊಂಡಿದೀವಿ. ಅದರಂತೆ ಇಲ್ಲಿ ಕೂತಾಗ ಬರೆದೆ. ಇಲ್ಲಿ ಒಂದು ನಾನು ಬರೆದಂಥ ಪುಸ್ತಕಕ್ಕೆ 'ಎನ್ ಇಂಡಿಯನ್ ಪೋಯಟ್ ಇನ್ ೨೫ ಸೋವಿಯತ್ ಪೋಯಟ್ಸ್' ಅನ್ನುವಂಥ ಗ್ರಂಥಕ್ಕೆ ಸೋವಿಯತ್ ಅವಾರ್ಡ್ ಬಂದಿತ್ತು. ಏನಾದ್ರೂ ಬರೆಯೋದು, ಓದೋದು, ಬೇಕಾದಷ್ಟು ದೊಡ್ಡ ಲೈಬ್ರರಿ ಇದೆ ನಮಗೆ. ಇವು ಸಾಧಾರಣ ಹಳ್ಳಿಗಳಲ್ಲಿ ಅಲ್ಲ ದೊಡ್ಡ ಶಹರುಗಳಲ್ಲಿ ಕೂಡ ಇಂಥ ದೊಡ್ಡ ಲೈಬ್ರರಿ ಇರೋದಿಲ್ಲ.
- ಹೌದು.
- ಆ ಲೈಬ್ರರಿದೂ ನಮಗೆ ಅನುಕೂಲ ಇದೆ.
- ಮತ್ತು ವ್ಯವಸಾಯವನ್ನೂ ಮುಂದುವರಿಸಿಕೊಂಡು ಹೋಗ್ತಿವಿರಿ ಇಲ್ಲಿದ್ಕೊಂಡು ಅಂತ ಹೇಳಿದ್ರಲ್ಲಾ?
- ಹಾಂ. ನಾನು ಒಕ್ಕಲಿಗ ನನ್ನ ವೃತ್ತಿ ವ್ಯವಸಾಯ, ವಕಾಲತ್ತಾಗಲಿ ನನಗಿರುವ ಅಭಿರುಚಿಯ ಮೆಡಿಸನ್‌ನಲ್ಲೇಯಾಗಲೀ......
- ತಾವು ಔಷಧಿಯನ್ನೂ ಕೊಡ್ತೀರಿ.
- ಹೋಮಿಯೋಪಥಿಕ್ ಕೌನ್ಸಿಲ್‌ರ ಛೇರಮನ್‌ನೂ ಆಗಿದ್ದೆ ನಾನು. ಅದು ನನ್ನ ವ್ಯವಸಾಯ ಅಲ್ಲ. ಆದ್ರೆ ಅದೊಂದು ನನ್ನ ಜೀವನದ ಒಂದು ಒಳ್ಳೆಯ ನಂಬಿದಂಥ, ಒಂದು ಶ್ರದ್ಧೆಯಂತಹ ಅಭ್ಯಾಸ ಅಂತ ನಾನು ಇಟ್ಕೊಂಡಿದೀನಿ.
- ಜನರು ಪಟ್ಟಣಕ್ಕೆ ಕೆಲಸಕ್ಕೆ ಹೋಗ್ತಾ ಇದಾರೆ ನಮ್ಮ ಯುವ ಜನಾಂಗ. ಇದಕ್ಕೆ ಏನು ಮಾಡಿದ್ರೆ ಅವರು ಹಳ್ಳಿಯಲ್ಲೇ ಇದ್ದು ಇಲ್ಲೇ ಸುಖವಾಗಿ ಇರಬಹುದು ಅಂತ ನಿಮ್ಮನಿಸಿಕೆ.

- ಇದು ಭಾರತಕ್ಕೆ ಇಂದಿಲ್ಲ ನಾಳೆ ಬಿಡಿಸಲೇ ಬೇಕಾದಂಥ ಪ್ರಶ್ನೆ. ಈಗ ಅರ್ಬನೈಸೇಷನ್ ಅಂತ ಹೇಳ್ತೀವಿ ನಾವು. ಈ ಅರ್ಬನೈಸೇಷನ್ ಸಿಟಿ ಒಳಗ ಬೆಳೀತಾ ಇದೆ. ೨೦೦೦ದ ವರ್ಷಕ್ಕೆ, ಸಾಧಾರಣ ಮೋರ್ ದ್ಯಾನ್ ೪೦ ಪರ್‌ಸೆಂಟ್ ಅರ್ಬನೈಸೇಷನ್ ಆಗುತ್ತೆ ಅಂತ ಜನರು ಅಂದಾಜು ಮಾಡಿದ್ದಾರೆ. ಈ ರೀತಿ ಹೋದರೆ ಹಳ್ಳಿಗಳೆಲ್ಲ ಬಹಳಷ್ಟು ತೊಂದರೆಗೀಡಾಗುತ್ತವೆ ಮತ್ತು ಪ್ರತಿ ವರ್ಷಕ್ಕೂ ಪಟ್ಟಣಗಳ ಮೇಲೆ ಒತ್ತಡ ಹೆಚ್ಚಾಗಿ ಇದು ಸುಖ ಜೀವನಕ್ಕೆ ನಾಂದಿಯಾಗಲಾರದು. ಗಾಂಧೀಜಿಯವರು ಹೇಳಿದ್ರು 'ಗೋ ಬ್ಯಾಕ್ ಟು ವಿಲೇಜಸ್' ಅಂತ.
- ಹೌದು.
- ಆದ್ರೆ ಇವತ್ತು ಜನರೆಲ್ಲರೂ ಗೋ ಟು ದೆಲ್ಲಿ, ಹಳ್ಳಿಗೆ ಹೋಗ್‌ಬ್ಯಾಡ್ರಿ, ದಿಲ್ಲಿ ಅಂತಾರೆ. ಯುವಕರಿಗೇನಾಗಿದೆ ನಾಗರೀಕತೆಯ ಅನೇಕ ಅನುಕೂಲತೆಗಳು, ಅಲ್ಲಿ ಇರತಕ್ಕಂಥ ಅಪರ್ಚುನಿಟೀಸ್ ಈ ಹಳ್ಳಿಗಳಲ್ಲಿ ಸಿಗಲಾರದು. ಈಗ ನೋಡಿ ಹಳ್ಳಿಗಳಲ್ಲಿ ನಾವು ಇದ್ದುಕೊಂಡು, ನಮಗೀಗ ಎಷ್ಟೋ ಈಗ ಲೈಬ್ರರಿ, ಇದ್ದ ಲೈಬ್ರರಿ ಕೂಡ ಓದ್ಲಿಕ್ಕೆ ಸಾಲದು. ಪುಸ್ತಕಗಳನ್ನು ಕೊಂಡೇ ನಾವು ಓದ್ತೀವಿ ಅನ್ನುವಂಥಾ ಸಾಹಸ, ಈಗಿನ ಕಾಲದಲ್ಲಿ ಮೂಡುವುದು ಕಷ್ಟ. ಅವೇನೂ ನಮಗೆ ಬೇಕಾಗುವಂಥ ಅನುಕೂಲತೆಗಳನ್ನು ನಾವು ಒಬ್ಬರು ಮಾಡಿಕೊಂಡ ಕೂಡ್ಲೇ, ಹಳ್ಳಿಯಲ್ಲಿ ಎಲ್ಲಾರೂ ಹಾಗೇ ಇದಾರೆ ಅಂತ ಹೇಳಿಕ್ಕಾಗಲಾರದು. ಹಳ್ಳೀ ಜೀವನದಲ್ಲಿ ಅನೇಕ ಕೊರತೆಗಳಿವೆ, ಅನೇಕ ತೊಂದರೆಗಳಿವೆ. ಇಲ್ಲಿನ ಬರೇ ಹವೆ ಕುಡಿದು ಇರಲಿಕ್ಕಾಗದು. ಬರೇ ನೀರು ಕುಡಿದಿರ್ಲಿಕ್ಕಾಗದು. ಇವೆಲ್ಲ ಜೀವನದ ಆಸೆ ಆಕಾಂಕ್ಷೆಗಳನ್ನು ಪೂರೈಸಲಿಕ್ಕೆ..... ಇಲ್ಲಿ ನೋಡಿ, ಇಲ್ಲಿ ಕೆಲಸ ಮಾಡುವವರು, ಹೈದರಾಬಾದಕ್ಕೋ, ಮುಂಬೈಗೋ, ಪುಣೆಗೋ, ಸೊಲ್ಲಾಪುರಕ್ಕೋ ಸಮೀಪದ ಶಹರುಗಳಿಗೆ ಓಡಿ ಹೋಗ್ತಾರ. ಇಲ್ಲಿ ಕೆಲಸ ಮಾಡವ್ರು ಯಾರೂ ಸಿಗುದಿಲ್ಲ. ಹೀಗಾಗಿ ಒಕ್ಕಲುತನವು ಒಂದು ಲಾಭದಾಯಕವಾದ, ಎಂದೂ ಅದಿರ್ಲಿಲ್ಲಾ, ಈಗಂತೂ ಇಲ್ವೇ ಇಲ್ಲ. ಈಗ ಒಕ್ಕಲುತನವೇ ಬಹಳ ಕಷ್ಟವಾಗಿ ಹೋಗ್ಬಿಟ್ಟದೆ. ಹಳ್ಳಿಗಳ ಸುಧಾರಣೆ ಆಗಲಾರದು ಹಳ್ಳಿಗಳು ಬೆಳೆಯದೇ. ಇಂಡಿಯಾ ಲೀವ್ಸ್ ಇನ್ ವಿಲೇಜಸ್ ಅಂತ ಹೇಳ್ತಾರೆ. ಅದ್ರೆ ಈ ಹಳ್ಳಿಗಳ ದಾರುಣ ಸ್ಥಿತಿ ದಿನದಿನಕ್ಕೂ ಬೆಳೀತಾ ಹೊರಟಿದೆ. ನೀವು ಆಧುನಿಕ ಸವಲತ್ತುಗಳನ್ನು ಪಡ್ಕೋಂತ ಹೋದ್ರೂ ಕೂಡಾ ಅದ್ರ ಈ ಬಿಡುಗಡೆಯ ಅವಸ್ಥೆಯಲ್ಲಿ ಕಾಣ್ತಾ ಇಲ್ಲ. ಹಳ್ಳಿಗಳಲ್ಲಿಯೇ ಅವರಿಗೆ ಕೈಗಾರಿಕೆಗಳು, ಇಂಡಸ್ಟ್ರೀಗಳು ಅಲ್ಲೇ ಅವರಿಗೆ ಅಪರ್ಚುನಿಟೀಸ್ ಟು ಮೇಕ್ ದಿಸ್ ಲಿವಿಂಗ್ ಮಾಡ್ಕೊಡಬೇಕು ಸರ್ಕಾರ. ಸರ್ಕಾರ ಒಂದೇ ಮಾಡಿದ್ರೆ ಸಾಲದು.
- ಜೊತೆಗೆ ತಮ್ಮ ಸ್ವಯಂ ಪ್ರಯತ್ನಸೂ ಮಾಡ್ಬೇಕು.

- ಮತ್ತು ಕಲಿತಂಥ ಜನರೂ ಕೂಡ ಆದಷ್ಟು ನಾವು ಹಳ್ಳೀಗೆ ಹೋಗ್ಬೇಕು ಅನ್ನೋದನ್ನ ಮನಸ್ಸಿನ ಸಿದ್ಧತೆಯನ್ನ ಮಾಡ್ಕೋಬೇಕು. ಆದರೆ ಅದೊಂದು ವಾಲೆಂಟರಿ ಆಗಿ ಮಾಡ್ಬೇಕಾದದ್ದೇ ಹೊರತು, ಅದು ಒತ್ತಾಯಪೂರ್ವಕ ಮಾಡ್ಲಿಕ್ಕೆ ಬರಲ್ಲ. ಹಳ್ಳಿಗಳ ಉದ್ಧಾರವಾಗದೇ ಹಳ್ಳಿಗರ ಉದ್ಧಾರವಾಗಲಾರದು. ಹಳ್ಳಿಗಳ ಉದ್ಧಾರವೇ ಭಾರತದ ಉದ್ಧಾರ.
- ಹೌದು.
- ಹಳ್ಳಿಗಳಿಗೆ ಸುಶಿಕ್ಷಿತರಾದವರು ಮರಳಿ ಬರಬೇಕು, ಬಂದು ತಮ್ಮ ಅನುಭವವನ್ನು ಇವರಿಗೆ ಹಂಚಿ ಕೊಡಬೇಕು. ಅದ್ರಿಂದ ಹಳ್ಳಿಗರಲ್ಲಿ ಒಂದು ವಾತಾವರಣ ಬೆಳೀತದೆ. ನೋಡಿ, ಹಳ್ಳಿಯಲ್ಲಿ ಇಂಥಿಂಥವರು ಇಲ್ಲಿ ಬಂದಿರ್ತಾರೆ ಅವರ ಜೊತೆಯಲ್ಲಿನ ಆಚಾರ ವಿಚಾರ ಆದಾಗ ಪ್ರಧಾನಗಳಿಂದ, ಕೊಡು ಕೊಳೆಗಳಿಂದ ಹಳ್ಳಿ ಸುಧಾರಣೆ ಆಗಲು ಸಾಧ್ಯವಿದೆ. ಇಲ್ಲದಿದ್ರೆ ಹಳ್ಳಿಗಳನ್ನು ಸುಧಾರಣೆ ಮಾಡುವ ಅವಕಾಶವನ್ನು ನಾವು ಕಳ್ಕೊಂಡು ಬಿಟ್ರೆ ನಮ್ಮ ಭಾರತದ ಏಳ್ಗೆ ಆಗಲಾರದು ಅನ್ನತಕ್ಕಂಥ ನಿರ್ಧಾರ, ನಂಬಿಗೆ ನನಗಿದೆ.

ಧ್ವನಿ ೨: ಅವರ ಹೆಂಡತಿ ಲಲ್ಲೇಶ್ವರ ಮೂಗಿಯವರು ತಮ್ಮ ಉದ್ದೇಶಗಳನ್ನು ಹೀಗೆ ಎತ್ತಿ ಹಿಡಿದರು.

- ಸಂದರ್ಶನ -

- ತಾವು ಲೇಖಕರಾಗಿ ಮತ್ತು ಆಧ್ಯಾತ್ಮ ಜೀವಿಯಾಗಿ ಇಲ್ಲಿ ಕಾಲ ಕಳೆಯುವುದು ತುಂಬಾ ಚೆನ್ನಾಗಿರ್ತದೆ. ಆ ದೃಷ್ಟಿಯಿಂದ ಈ ಸ್ಥಳವನ್ನು ಆಯ್ಕೆ ಮಾಡ್ಕೊಂಡ್ರಿ ಅಂತ ಕಾಣತ್ತೆ ಅಲ್ವೆ?
- ಹೌದ್ರಿ. ನಿಜವಾದ ಮಾತದು. ಇಲ್ಲಿ ಪ್ರಶಾಂತವಾದ ವಾತಾವರಣ ನೋಡ್ರಿ ಇಲ್ಲಿ ಸದ್ದಿಲ್ಲ, ಗದ್ದಲಿಲ್ಲ, ಯಾರ ಗೊಡವೆ ಇಲ್ಲ.
- ಸ್ಥಳವನ್ನೇನೋ ತಾವು ಮತ್ತು ತಮ್ಮ ತಾಯಿಯವರು ಆಯ್ಕೆ ಮಾಡ್ಕೊಂಡ್ರಿ. ಆದರೆ ಇದಕ್ಕೆ ತಮ್ಮ ಪತಿಯವರು ಮತ್ತು ಮಕ್ಕಳುಗಳು ಇದಕ್ಕೆ ಮನಸ್ಸು ಕೊಟ್ರೋ? ಒಪ್ಗೊಂಡ್ರೊ ಅವರೂ ಬರದಕ್ಕೆ ಇಲ್ಲಿಗೆ?
- ಅವರು ಒಪ್ಕೊಂಡಿದ್ದೇ ಭಾಳ ದೊಡ್ಡದು. ನಾವೇನೂ ಅಧ್ಯಾತ್ಮಿಕ ಜೀವಿಗಳು. ನನ್ನ ತಾಯಿಯವರಾಗಲೀ, ನಾನಾಗಲೀ, ಅಧ್ಯಾತ್ಮಿಕವನ್ನು ಬಯಸಿ ಬಂದವರು. ಅಧ್ಯಾತ್ಮಿಕಕ್ಕಾಗಿ ಹಗಲಿರುಳು ಪರಿತಪಿಸಿದವರು. ಅದಕ್ಕಾಗಿ ಇದ್ದವರು ನಾವು. ಆದ್ರ ಅವು ನಮಗಾಗಿ, ನಮ್ಮ ಸಾಧನೆಗಾಗಿ, ನಮ್ಮ ಸಿದ್ಧಿಯ ಜೀವನಕ್ಕಾಗಿ, ತಮ್ಮ ತ್ಯಾಗ ಮಾಡಿಕೊಂಡು, ದೊಡ್ಡ ಅಡ್ವೋಕೇಟ್ ಆಗಿ, ಅದನ್ನೆಲ್ಲಾ ತ್ಯಾಗ ಮಾಡ್ಕೊಂಡು

ಇಲ್ಲಿಗೆ ಬರಬೇಕಾದ್ರ, ಅದು ಸಾಮಾನ್ಯ ಮಾತಲ್ಲ. ಅದು ಬಹಳ ದೊಡ್ಡ ತ್ಯಾಗ ಅವರದು.

- ಅದು ಎರಡನೆಯದಾಯ್ತು.
- ಅದರಂತೆ ಮಕ್ಕಳೂ ಕೂಡ.
- ಮಕ್ಕಳುಗಳು ಈಗಿನ ಕಾಲದಲ್ಲಿ ಪಟ್ಟಣದ ವಾಸವನ್ನು ಬಿಟ್ಟು ಇಂಥ ಹಳ್ಳಿಯ ವಾತಾವರಣಕ್ಕೆ ಬರ್ಬೇಕಾದ್ರೆ ಅವರ ಮನಸ್ಸಿಗೆ ಏನನಿಸ್ತು? ಅವರ ಪ್ರತಿಕ್ರಿಯೆ ಏನಿತ್ತು ಆವಾಗ?
- ಅವರ ಪ್ರತಿಕ್ರಿಯೆ, ಏನೂ ಮಾಡ್ಲಿಲ್ಲ ಪಾಪ. ನಿಜವಾಗಿ ನೋಡಿದ್ರೆ ನಮ್ಮ ತಂದೆ ತಾಯಿಗಳೂ ನಮ್ಮ ಅಜ್ಜಿಯರು ಶರಣರ ಸ್ಥಾನಕ್ಕೆ ಹೊರಟಾರ ಅಂತ ತಿಳಕ್ಕೊಂಡು, ತಾವೂ ಕೂಡ ನಮಗಾಗಿ ಸಂತೋಷದಿಂದ ಒಪ್ಗೊಂಡು ಬಂದ್ರು. ಮತ್ತ ಇಲ್ಲೀ ವಾತಾವರಣಕ್ಕೆಲ್ಲ ಒಗ್ಗಿಕೊಂಡರು.

ಧ್ವನಿ ೧: ಅವರ ಮಗಳು, ಚೇತನಾ ಮೂಗಿ,

- ಸಂದರ್ಶನ -

- ಪಟ್ಟಣದಲ್ಲಿದ್ದೆ, ಆವಾಗ ಬೆಂಗಳೂರಿನಲ್ಲಿ ಮತ್ತು ಸೊಲ್ಲಾಪೂರದಲ್ಲಿ. ಆ ವಾತಾವರಣದಲ್ಲಿ ಬೆಳೆದಂಥ ಹುಡುಗಿ ಇಲ್ಲಿ ಏನನಿಸ್ತು? ಈ ಹಳ್ಳಿಗೆ ಬಂದು ನೆಲೆಸ್ಲಿಕ್ಕೆ ಬೇಜಾರನಿಸ್ತೋ ಅಥವಾ ಸಂತೋಷದಿಂದ ನಾನು ಬರ್ತೀನಿ ಅಂತ ಒಪ್ಗೊಂಡಿಯೋ ನೀನು?
- ನಾನು ಸಂತೋಷದಿಂದ ಬರುವುದಕ್ಕೆ ಒಪ್ಗೊಂಡೆ.
- ಹೂಂ, ಆಮೇಲೆ ನೀನು ಇಲ್ಲಿಗೆ ಬಂದಾಗ, ಏನು ಸೌಲಭ್ಯಗಳು ಯಾವ ರೀತಿ ಪಟ್ಟಣದಲ್ಲಿ ಸಿಕ್ತೋ, ಆ ಸೌಲಭ್ಯಗಳೆಲ್ಲ ನಿನಗೆ ಇಲ್ಲಿ ದೊರಕ್ತೋ?
- ಇಲ್ಲೇನೂ ಅಷ್ಟು ಸೌಲಭ್ಯಗಳು ದೊರಕ್ಲಿಲ್ಲ. ಶಾಲೆಗೆ ಹೋಗಲು ರಿಕ್ಷಾ ಒಂದೊಂದು ಬರುತ್ತದೆ, ಒಂದೊಂದು ಸಲ ತಡವಾಗಿ ಹೋಗಲು ಅನಾನುಕೂಲತೆಗಳು ತುಂಬಾ ಇವೆ.
- ಆ ದೃಷ್ಟಿಯಿಂದ ನಾನು ಹೇಳೋದು, ಪಟ್ಟಣದಲ್ಲೇ ಇದ್ದಿದ್ರೆ ಚೆನ್ನಾಗಿತ್ತಲ್ವಾ?
- ಅದ್ರೂನೂ ಈ ಹಳ್ಳಿ ತುಂಬಾ ಇಷ್ಟವಾಗಿದೆ.
- ಯಾವ ದೃಷ್ಟಿಯಿಂದ?
- ಇಲ್ಲಿಯ ಸೌಂದರ್ಯ, ಸುತ್ತ ಮುತ್ತಲ ಕೆರೆ ಇರೋದು, ನಿರ್ಮಲವಾದ ಇಲ್ಲಿಯ ಗಾಳಿ, ವಾತಾವರಣ ನನಗೆ ತುಂಬಾ ಇಷ್ಟ.
- ಓದದಕ್ಕೂ ಕೂಡ ಇಲ್ಲಿಯ ವಾತಾವರಣ ಬಹಳ ಚೆನ್ನಾಗಿರತ್ತಲ್ವಾ?

- ಹೌದು.

ಧ್ವನಿ ೨: ಇವು, ಮರಳಿ ಹಳ್ಳಿಗೆ ಬಂದ ಕಥೆಗಳು.

ಧ್ವನಿ ೧: ಇವರೆಲ್ಲಾ ನಿಂತ ನೆಲೆಯಲ್ಲಿ ಸುಖ ಕಂಡವರು. ಬದುಕಿನ ಬಯಕೆಯನ್ನು ಪೂರೈಸಲು ತಾಣಗಳನ್ನರಸಿ ಬಂದ ಜೀವಿಗಳು, ಸುಖದ ಸುಪ್ಪತ್ತಿಗೆಯನ್ನಪ್ಪಲು ಒಪ್ಪಿ ಬಂದ ಜೀವಿಗಳು.

ಧ್ವನಿ ೨: ಯೌವನದ ಹೊಸ್ತಿಲಲ್ಲಿ ಪಟ್ಟಣದ ಆಕರ್ಷಣೆ ಆಗುವುದು ಸಹಜವೇ. ಆದರೆ ಅಲ್ಲೇ ಕಾಲ ಕಳೆದು ಅಲ್ಲಿನ ನೀರು, ವಿದ್ಯುತ್, ಸಾರಿಗೆ, ಒಂದೊಂದರ ಅಭಾವವನ್ನು ಕಂಡಾಗ ಜೀವನವೇ ರೋಸಿ ಹೋಗಿ ಒಂದು ಪ್ರಶಾಂತವಾದ ವಾತಾವರಣದಲ್ಲಿ ನೆಲೆಯಾದರೆ ಸಾಕಪ್ಪ ಎನ್ನಿಸುತ್ತದೆ.

ಧ್ವನಿ ೧: ಹಳ್ಳಿಗಳಿಗೆ ಪತ್ರಿಕೆ ಬರುತ್ತದೆ, ಜನರು ಓದಿ ವ್ಯವಹಾರ ಜ್ಞಾನಸ್ಥರಾಗಿದ್ದಾರೆ. ರೇಡಿಯೋ, ಟೆಲಿವಿಷನ್‌ಗಳಿಂದ ಇತ್ತೀಚಿನ ಪೀಳಿಗೆಗಳು ಬುದ್ಧಿವಂತರಾಗಿದ್ದಾರೆ. 'ಹಳ್ಳಿ ಗಮಾರ್' ಎಂಬ ಮಾತು ಎಷ್ಟೋ ವರ್ಷಗಳ ಹಿಂದಿನ ಮಾತಾಯಿತು.

ಧ್ವನಿ ೨: ಗಾಳಿ ಬೆಳಕುಗಳ ಅಭಾವವಿಲ್ಲದ ಮನೆ, ಆರ್.ಸಿ.ಸಿ. ಮನೆ, ಸೌದೆ ಊದಿ ಅಡುಗೆ ಮಾಡುವಂತ ಗೋಬರ್ ಗ್ಯಾಸ್, ಗ್ಯಾಸ್, ವಿದ್ಯುಚ್ಛಕ್ತಿ, ಸೀಮೆ ಎಣ್ಣೆಯ ಒಲೆಗಳಿಂದ ಅಡುಗೆ ಊಟ, ಹಣವಿರುವವರು ಪಟ್ಟಣದವರಿಗೇನೂ ಕಡಿಮೆ ಇಲ್ಲ ಎಂಬ ತುಂಬುಜೀವನ. ಹಳ್ಳಿಯವರೂ ಮನುಷ್ಯರೇ. ಅವರೂ ಪಟ್ಟಣದವರಂತೆ ಆಸೆ ಆಕಾಂಕ್ಷೆಗಳನ್ನು ಹೊಂದಿರುವವರು. ಆದರೆ ಆರ್ಥಿಕ ಮುಗ್ಗಟ್ಟಿನಿಂದ ಎಲ್ಲಾ ಸೌಲಭ್ಯ ಸುಖಗಳನ್ನು ಪಡಲು ಆಗುತ್ತಿಲ್ಲ. ಆದರೂ ಇವಕ್ಕೆ ಪ್ರಯತ್ನ ಪ್ರತಿಯೊಬ್ಬರಲ್ಲೂ ಸಾಗುತ್ತಿರುತ್ತದೆ.

ಧ್ವನಿ ೧: ಮನುಷ್ಯ ಹುಟ್ಟಿದ ಮೇಲೆ ಆತನಿಗೆ ಒಂದು ನೆಲೆ ಬೇಕು, ಆಗಲೇ ಆತನಿಗೆ ಬೆಲೆ. ಇದಕ್ಕಾಗಿ ಶ್ರಮಿಸುತ್ತಾನೆ. ಆದರೂ ಕೊನೆಗೊಂದು ನೆಲೆಯಲ್ಲಿ ಜೀವಿಸುತ್ತಾನೆ. ಅದುಪಟ್ಟಣವೇ ಇರಬಹುದು, ಇಲ್ಲ ಹಳ್ಳಿಯೇ ಇರಬಹುದು, ಗುಡಿಸಲೇ ಇರಬಹುದು, ಭವ್ಯ ಬಂಗಲೇ ಇರಬಹುದು, ಶಾಂತಿ, ನೆಮ್ಮದಿ, ಸಂತೋಷ ತರುವ ತಾಣಕ್ಕಾಗಿ ಹೋರಾಟ. ಕೊನೆಗೊಂದು ನೆಲೆಯಲ್ಲಿ ನೆಲೆಯಾಗುತ್ತಾನೆ.

ಧ್ವನಿ ೨: ಮನುಷ್ಯ ಹುಟ್ಟುವುದೆಲ್ಲೋ, ಬೆಳೆಯುವುದೆಲ್ಲೋ, ಕೊನೆಗೆ ನೆಲೆಗೊಳ್ಳುವುದೆಲ್ಲೋ? ಅದು ಹಳ್ಳಿಯೋ ಪಟ್ಟಣವೋ ಇರುವುದು. ಹಳ್ಳಿಯವರು ಪಟ್ಟಣಕ್ಕೆ ಬಂದು ನೆಲೆಸುವುದು ಪಟ್ಟಣದವರು ಹಳ್ಳಿಯಲ್ಲಿ ಬಂದು ನೆಲೆಸುವುದು. ಶಾಂತಿ, ನೆಮ್ಮದಿ ಆನಂದ ನಾವು ನಿಂತ ನೆಲೆಯ ಮೇಲೆ ಅವಲಂಬಿಸಿರುತ್ತದೆ.

ಧ್ವನಿ ೧: ದುಃಖ ದುಮ್ಮಾನಗಳಿಂದ ದೂರಾಗಲು ಅರಸಿದ ಹಳ್ಳಿಗಳು ಭುವಿಯಲ್ಲಿ ಕಂಡ ಸ್ವರ್ಗೀಯ ತಾಣಗಳು. ಗಾಳಿ ಬೆಳಕಿಗಾಗಿ, ಶಾಂತಿ ನೆಮ್ಮದಿಗಾಗಿ ಅರಸಿದ ಸ್ಥಳಗಳು ಇವು. ಅಲ್ಲಲ್ಲಿ ಕಾಣಸಿಗುವ ಸುಗಂಧ ಪುಷ್ಪಗಳು. ಹುಡುಕುತ್ತಾ ಹೋದಾಗ ಈ ಸಂಖ್ಯೆಯ ಸಂಕಲನ. ಹಳ್ಳಿಯಾದರೇನು ಎಂಬ ಮನೋಭಾವ ಬರಬೇಕಾದರೆ ಅಷ್ಟೊಂದು ಸುಲಭವಲ್ಲ. ಅದಕ್ಕೆ ದೃಢ ಸಂಕಲ್ಪ ಬೇಕು, ಅಂತಿಮ ತೀರ್ಮಾನ ಬೇಕು. ಹಳ್ಳಿಯಾದರೇನು ಶಿವಾ ಪಟ್ಟಣವಾದರೇನು ಶಿವಾ ಎಂಬ ಮಾತಲ್ಲ. ಹಳ್ಳಿಯ ಸುಖ ಹಳ್ಳಿಯಲ್ಲೇ ಅನುಭವಿಸಿದ ಮೇಲೆ ಗೊತ್ತಾಗುವುದು.

ಧ್ವನಿ ೨: ಹಳೆಯ ಕಾಲದ ನೇಗಿಲಿಂದ ಉಳುವ ಸ್ಥಿತಿ ಇಲ್ಲ, ಉಳಲು ಮಿಷನ್, ವ್ಯವಸಾಯದಲ್ಲಿ ಅದೆಷ್ಟು ಬದಲಾವಣೆಗಳು, ಹೈಬ್ರಿಡ್ ತಳಿಗಳು.

ಧ್ವನಿ ೧: ಜನರು ಹಿಂದಿನಷ್ಟು ದಡ್ಡರಲ್ಲ ಬಹಳ ಚುರುಕು, ವ್ಯವಹಾರ ಜ್ಞಾನಿಗಳು; ಬುದ್ಧಿವಂತರು. ಹಳೆಯ ಕಂದಾಚಾರಗಳಿಗೆ ದೂರಾಗುತ್ತಾ ಹೊಸ ಕಾಲಕ್ಕೆ ಹೊಂದಿಕೊಂಡು ಆಚಾರ, ವಿಚಾರ, ಸಂಸ್ಕೃತಿಗಳಿಗೆ ಹೊಂದಿಕೊಳ್ಳುತ್ತಿದ್ದಾರೆ ಎಂದ ಮೇಲೆ ಯಾವ ಪಟ್ಟಣಿಗರಿಗೇನೂ ಕಡಿಮೆ ಇಲ್ಲ. ನಾವೂ ಎಲ್ಲರ ಸಮನಾಗಿ ಬಾಳಬೇಕೆಂಬ ಮನೋಭಾವ ಬೆಳೆದು ಬಂದಿದೆ. ಈಗ ಎಲ್ಲರೂ ಮುಂದುವರಿದವರೆ. ಆದರೆ ಆರ್ಥಿಕವಾಗಿ ಹಿಂದುಳಿದವರು, ಮುಂದುವರಿದವರು ಎಂಬ ಎರಡೇ ವರ್ಗಗಳು.

ಧ್ವನಿ ೨: ವಿದ್ಯೆ ಎಲ್ಲರ ಸೊತ್ತಾಗಿದೆ. ಜೀತ ಪದ್ಧತಿ ತೊಡೆದು ಹೋಗಿದೆ. ಎಲ್ಲರೂ ಸ್ವತಂತ್ರರೆ. ಗಂಡು - ಹೆಣ್ಣೆಂಬ ಭೇದವಿಲ್ಲದೆ ದುಡಿಯುತ್ತಿದ್ದಾರೆ. ಹೆಣ್ಣು ಮಡಿಕೆ ತಳ ಕಾಯಿಸುವ ಹೆಣ್ಣೆಂಬ ಕಾಲ ಬಹಳ ದೂರವಾಗಿದೆ. ಸಮಾನತೆ ಎದ್ದು ತೋರುತ್ತದೆ.

ಧ್ವನಿ ೧: ಫೋನುಗಳ ಸೌಲಭ್ಯದಿಂದ ದೂರಕ್ಕೆ ಕುಂತಲ್ಲೇ ಮಾತಾಡಬಹುದು ಹಳ್ಳಿಯಿಂದ.

ಧ್ವನಿ ೨: ಪಟ್ಟಣ ಬೆಳೆದಷ್ಟೂ ಅನಾಹುತಗಳೇ ಹೆಚ್ಚು. ಅದು ವಿಸ್ತಾರವಾಗಿ ಬೆಳೆಯಲಿ, ವಿಶಾಲವಾಗಿ ಬೆಳೆಯಲಿ, ಕೊಳಚೆ ಪ್ರದೇಶಗಳ ನಿರ್ಮಾಣ, ಅಧಿಕ ಸಂಚಾರ, ಅಪಘಾತಗಳು, ಅನಾರೋಗ್ಯ, ಅನೈರ್ಮಲ್ಯ ಹೆಚ್ಚಾಗಿ ಶಾಂತ ಜೀವನ ಸಾಗಿಸುವುದು ದುರ್ಲಭವಾಗುತ್ತದೆ. ಇದನ್ನರಿತವರು ಇಲ್ಲದೇ ಇಲ್ಲ. ಆದರೆ ಅರಿತು ಹಳ್ಳಿಯನ್ನು ಬಯಸುವವರ ಸಂಖ್ಯೆ ಎಷ್ಟು?

ಧ್ವನಿ ೧: ಇದರಲ್ಲಿ ಸರ್ಕಾರದ ಪಾತ್ರವೂ ಇಲ್ಲದೇ ಇಲ್ಲ. ಹೆಚ್ಚು ಹೆಚ್ಚು ಕೈಗಾರಿಕೆಗಳನ್ನು ಹಳ್ಳಿಗಳತ್ತ ಕೇಂದ್ರೀಕರಿಸಿದರೆ ಈ ವಲಸೆ ಹೋಗುವುದನ್ನು ಖಂಡಿತಾ ತಪ್ಪಿಸಬಹುದು.

ಧ್ವನಿ ೨: ವಲಸೆಯಿಂದ ಜನಸಂಖ್ಯೆ ದಟ್ಟವಾಗಿ ಈ ಶತಮಾನದ ಅಂತ್ಯದೊಳಗೆ ದೊಡ್ಡ ನಗರಗಳ ಪಟ್ಟಿಯಲ್ಲಿ ಬೆಂಗಳೂರು ೨೭ನೇ ಸ್ಥಾನ ತಲುಪಲಿದೆ. ವಿಶ್ವದ ದೊಡ್ಡ ನಗರಗಳ ಪೈಕಿ ಈಗ ಬೆಂಗಳೂರು ೪೦ನೆಯ ಸ್ಥಾನವನ್ನು ಹೊಂದಿದೆ. ರಾಷ್ಟ್ರದಲ್ಲಿ ೫ನೆಯ ಸ್ಥಾನವನ್ನು ಪಡೆದಿದೆ. ಯಾವುದೇ ನಗರ ಅಂಕೆ ತಪ್ಪಿ ಮುಂದುವರಿದರೆ ಅದರಿಂದ ಉದ್ಭವಿಸುವ ಸಮಸ್ಯೆ ಅದಷ್ಟೇ ಸ್ಥಳಕ್ಕೆ ಸೀಮಿತವಲ್ಲ. ಇದು ದೇಶದ ಜನರ ಸಾಮಾಜಿಕ, ಆರ್ಥಿಕ ರಂಗದ ಮೇಲೆ ದುಷ್ಪರಿಣಾಮ ಬೀರುವುದು ಸಹಜ. ಅವಶ್ಯವಾದ ಸವಲತ್ತುಗಳನ್ನು ನುಂಗಿ ರಾಜ್ಯದ ಅಭಿವೃದ್ಧಿಗೆ ತೊಡಕಾಗುತ್ತದೆ.

ಧ್ವನಿ ೧: ಹಳ್ಳಿಯಿಂದ ಪಟ್ಟಣಕ್ಕೆ ಜನ ವಲಸೆ ಹೋಗುವುದರಿಂದ ನಗರ ವೇಗವಾಗಿ ಬೆಳೆಯುವುದು ಇದಕ್ಕೆ ಕಡಿವಾಣ ಬೀಳದಿದ್ದರೆ ಮುಂದೆ ಜನದಟ್ಟಣೆಯ ಸ್ಫೋಟವಾಗುವುದು. ನಗರದ ಆಕರ್ಷಣೆ ಒಂದು ಇತಿಮಿತಿಯಲ್ಲಿಡಲು ಪಟ್ಟಣ ಮತ್ತು ಗ್ರಾಮೀಣ ಪ್ರದೇಶಗಳಲ್ಲೇ ಉದ್ಯೋಗಾವಕಾಶ, ಆರೋಗ್ಯ ಸೌಲಭ್ಯಗಳು, ಶಿಕ್ಷಣ ಒದಗಿಸುವ ಕಾರ್ಯ ಇನ್ನೂ ಹೆಚ್ಚು ಹೆಚ್ಚಾಗಬೇಕು. ಇದು ತಪ್ಪಿ ಜನರು ನೆಮ್ಮದಿಯಿಂದ ಉಸಿರಾಡಲು ಹಳ್ಳಿಗಳನ್ನು ಆಶ್ರಯಿಸಬೇಕು.

ಧ್ವನಿ ೨: ಹಳ್ಳಿಯಿಂದ ಪಟ್ಟಣಕ್ಕೆ ಹೋಗಿ ಬವಣೆ ಪಡುವುದಕ್ಕಿಂತ ಹಳ್ಳಿಯಲ್ಲಿದ್ದುಕೊಂಡೇ ವ್ಯವಸಾಯ, ವ್ಯಾಪಾರ, ಸಣ್ಣ ಕೈಗಾರಿಕೆಗಳಲ್ಲಿ ತೊಡಗಿ ಸ್ವಯಂ ಉದ್ಯೋಗ ಮಾಡುತ್ತಾ ಶಾಂತಿ ಜೀವನ ನಡೆಸುವುದು ಒಳಿತಲ್ಲವೇ?

ಧ್ವನಿ ೧: ಮನುಷ್ಯ ಉಂಡ ಅನ್ನಕ್ಕೆ, ಸೇವಿಸಿದ ಗಾಳಿಗೆ, ದಾರಿಕಂಡ ಬೆಳಕಿಗೆ, ಕುಡಿದ ನೀರಿಗೆ, ಋಣಿಯಾಗಿರುವಂತೆ ನಿಂತ ನೆಲೆಗೂ ಋಣಿಯಾಗಲೇ ಬೇಕಲ್ಲವೇ?

ಧ್ವನಿ ೨: ಈ ಹಳ್ಳಿಗಳು ಕಲೆಯ ಬಲೆಯಾಗದೆ, ಕಲಿತ ಶಾಲೆಗಳಾಗಿವೆ, ಗುಡಿ ಕೈಗಾರಿಕೆಯ ಆಗರವಾಗಿವೆ, ಶಾಂತಿ ನೆಮ್ಮದಿಯ ತಾಣಗಳಾಗಿವೆ ಎಂದ ಮೇಲೆ ಮನುಷ್ಯನಿಗೆ ಇದಕ್ಕಿಂತ ಹೆಚ್ಚೇನು ಬೇಕು? ಪಟ್ಟಣದ ಸಂಪೂರ್ಣ ಅಚ್ಚು ಹಳ್ಳಿಯಲ್ಲಿರುವಾಗ ಪಟ್ಟಣವಾದರೇನು? ಹಳ್ಳಿಯಾದರೇನು? ನೆಮ್ಮದಿಯ ಜೀವನಕ್ಕೆ ಪಟ್ಟಣಕ್ಕಿಂತ ಹಳ್ಳಿಯೇ ಮೇಲಲ್ಲವೇ?

ಗಂಡ : ಯಾಕೆ ಮೂಕಾದೆ?

ಹೆಂಡ್ತಿ : ಏನುಹೇಳಬೇಕು ಅಂತ್ಲೇ ಬಾಯಿ ಬರ್ದು.

ಗಂಡ : ಪಟ್ಟಣ ಸೇರಲೇ ಬೇಕು ಅಂತೀಯಾ?

ಹೆಂಡ್ತಿ : ಕೆಲವರ ಅನುಭವಗಳನ್ನು ಕೇಳಿದ ಮೇಲೆ

ಗಂಡ : ಪಟ್ಟಣ ಬೇಡ ಅನ್ತೀಯೇನು?

ಹೆಂಡ್ತಿ : ಪಟ್ಟಣಕ್ಕೋಗಿ ಪಾಡು ಪಟ್ಟು ಮರಳಿ ಹಳ್ಳಿಗೆ ಬರದರ ಬದ್ಲು ಹಳ್ಳಿಯಲ್ಲೇ ನೆಲೆಯಾಗಿರಬೇಕು ಅಂತ ಮನಸ್ಸು ಮಾಡಿವ್ನಿ.

ಗಂಡ : ಭಲೇ, ಒಳ್ಳೇ ನಿರ್ಧಾರ. ನಿನ್ನಂಥ್ನ ನಿರ್ಧಾರ ಭಾರತದ ಎಲ್ಲಾ ಜನರು ಮಾಡಬೇಕಾಗಿದೆ. ಪಟ್ಟಣಕ್ಕೆ ಹೋಗುವ ನಿರ್ಧಾರವನ್ನು ಕೈಬಿಡಬೇಕು, ಇಲ್ಲ ಅನಿವಾರ್ಯವಾಗಿ ಕೆಲಸಕ್ಕೆ ಸೇರಿದವರು ಮತ್ತೆ ಹಿಂತಿರುಗುವ ದೊಡ್ಡ ಮನಸ್ಸು ಮಾಡಬೇಕು. ಮರಳಿ ಹಳ್ಳಿಗೆ ಬರುವವರು ಹೆಚ್ಚಾದಾಗ ಹಳ್ಳಿಗಳ ಉದ್ಧಾರ, ಭಾರತದ ಕಲ್ಯಾಣ.

ಹೆಂಡ್ತಿ : ಹೌದು.



## ಗಿರಿಯ ನಿನಾದ

ರೂಪ : ಏನ್ರೀ...... ನಿಮ್ಮನ್ನ ಕೂಗ್ತಾ ಇರೋದು.

ರಾಜ : ಅದೇನೆ ರೂಪ ನಿನ್ನ ರಾಗ........?

ರೂಪ : ನಿಮ್ಮನ್ನು ಕಟ್ಟಿಕೊಂಡು ರಾಗ ಹಾಡಿದಾಗೇ......

ರಾಜ : ನೀನು ರಾಗ ಹಾಡಿಬಿಟ್ರೆ.... ಮುಗಿದ್ಹೋಯ್ತು.......

ರೂಪ : ಮದ್ವೆ ಆದಾಗ ಸಂಗೀತ ಗೊತ್ತಾ ಅಂತ ಕೇಳಿ ಆಮೇಲೆ ಮದ್ವೆ ಆಗ್ಬೇಕಾಗಿತ್ತು, ಒಳ್ಳೇ ಸಂಗೀತಗಾರಳನ್ನೇ, ಆಗಿದ್ರೆ..... ಮೂರು ಹೊತ್ತು ನೀವು ತಾಳ ಹಾಕ್ತಾ, ಕಿವಿ ಬಿಟ್ಕೊಂಡು ಕೇಳಬಹುದಾಗಿತ್ತು.

ರಘು : ಏನು ರಾಗ, ತಾಳ, ಲಯ....... ಮಾತು..... ಕತೆ....... ಚರ್ಚೆ.

ರಾಜ : ಬಾರಯ್ಯ ರಘು ನಾನೇನೋ ಸುಮ್ನೇ ಏನು ರೀ ರೀ...... ಅಂತ ರಾಗ ತೆಗೆತೀಯಾ ಅಂದ್ರೆ ಕೋಪ ಮಾಡಿಕೊಂಡು.....

ರಘು : ಗಂಡ ಹೆಂಡ್ರ ಕೋಪ........

ರಾಜ : ಮುಂದಕ್ಕೆ ಗೊತ್ತಯ್ಯ.

ರಘು : ಅದಕ್ಕೇ ಅಲ್ಲಿಗೆ ನಿಲ್ಲಿಸಿದೆ.

ರೂಪ : ಇವರಿಗೆ ಒಂದು ಮಾತಾಡಿದ್ರೆ ಹೆಚ್ಚು, ಒಂದು ಮಾತು ಆಡಿದ್ರೆ ಕಡಿಮೆ, ಈಗ ನನ್ನ ಕುಕ್ತಾ ಇದ್ದಾರೆ...... ಸಂಗೀತ ಕಲ್ತಿಲ್ಲಾ ಅಂತ.......

ರಾಜ : ನೋಡಯ್ಯಾ ರಘು....... ಯಾವುದಕ್ಕಾವ್ದೋ ಅಸಂಬದ್ಧ ಮಾತು ಆಡ್ತಾಳೆ.

ರೂಪ : ನಮಗೂ ಸಾಕಾಗಿ ಹೋಗಿದೆ ನಾಲ್ಕು ಗೋಡೆ ಮಧ್ಯೆ ಇದ್ದೂ....

ರಾಜ : ಯಾಕೆ ರೇಡಿಯೋ ಇಲ್ವಾ, ಟೆಲಿವಿಷನ್ ಇಲ್ವಾ...... ಯಾವ ಸಂಗೀತ ಬೇಕು, ಯಾವ ನೃತ್ಯ ಬೇಕು ಕಣ್ತುಂಬ ನೋಡಬಹುದಲ್ಲಾ..... ಅದು ಬೇಡ ಅಂದ್ರೆ ಸಿನಿಮಾ ಇದ್ಯಲ್ಲಾ.

ರೂಪ : ಆಹಾ....... ನೋಡಿ ನೋಡಿ ಸಾಕಾಗಿದೆ, ಕಿವಿ ತೂತಾಗಿದೆ. ಕಣ್ಣು ಉರಿಯಾಗಿದೆ.

ರಘು : ಈ ಬ್ರೇಕ್ ಡ್ಯಾನ್ಸ್...... ಕಥಕ್ಕಳಿ, ಭರತನಾಟ್ಯ, ಹಿಂದೂಸ್ತಾನಿ....., ಕರ್ನಾಟಕ ಸಂಗೀತ ಮುಂತಾದುವುಗಳನ್ನು ನೋಡ್ತಾ, ಕೇಳ್ತಾ ಇದ್ದೀರಲ್ಲಾ.

ರೂಪ : ರಘು ಅವರೇ ನನಗೆ ಶಾಂತವಾದ ವಾತಾವರಣದಲ್ಲಿ ಅಚ್ಚ ಹಸಿರ ಪ್ರಕೃತಿ ಸೌಂದರ್ಯದ ನಡುವೆ, ಹರಿವ ನದಿ, ಉಕ್ಕುವ ಸಮುದ್ರ, ಇದರ ನಡುವೆ ನಾಲ್ಕು ದಿನ ಕಾಲ ಹಾಕಬೇಕು ಅನ್ನಿಸ್ಬಿಟ್ಟಿದೆ.

ರಘು : ರಾಜು ಏನಾದ್ರೂ ಒಂದು ಎಲ್.ಓ.ಸಿ. ಹಾಕಿ ಕರ್ಕಂಡೋಗಪ್ಪಾ.....

ರಾಜ : ನೀನು ಬರ್ತೀಯೇನು?

ರಘು : ಯಾಕೆ?

ರೂಪ : ನೀವು Guide ಇದ್ದ ಹಾಗೇ..... ಪ್ರತಿಯೊಂದನ್ನು ಚೆನ್ನಾಗಿ Explain ಮಾಡ್ತೀರಿ, ನೀವು ಇಲ್ಲದೇ ಹೋದ್ರೆ ಏನು ಪ್ರಯೋಜನ?

ರಘು : ಆಯ್ತು ನಾನೂ ಬರ್ತೀನಿ.... ಬಿಡಿ..... ಈಗ ಎಲ್ಲಿಗೆ ಹೋಗಬೇಕು ಅಂತ ಮನಸ್ಸು ಮಾಡಿದ್ದೀರಿ ಹೇಳಿ.

ರೂಪ : ಅದನ್ನೂ ನೀವೇ Sugest ಮಾಡಬೇಕು.

ರಘು : ಅದು ನನ್ನ ತಲೆ ಮೇಲೆ ಚಿತ್ರಾ, ಬಿಳಿಗಿರಿರಂಗನ ಬೆಟ್ಟ, ಮಾದೇಶ್ವರನ ಬೆಟ್ಟ, ಕಾರಾವಾರ ಜಿಲ್ಲೆ, ಉತ್ತರ ಕರ್ನಾಟಕ, ಶಿವಮೊಗ್ಗ..... ಹೀಗೆ ಹತ್ತು ಹಲವಾರು ಬೆಟ್ಟಗುಡ್ಡಗಳ ಪ್ರದೇಶ...... ಅಲ್ಲಿ ಬರೀ ಪ್ರಕೃತಿ ಸೌಂದರ್ಯವಷ್ಟೇ ಅಲ್ಲ, ಅಲ್ಲಿನ ಜನರ ಇಂಪಾದ ಸಂಗೀತ ನೃತ್ಯವನ್ನು ನೋಡಿ ಆನಂದಿಸಬಹುದು.

ರೂಪ : ಒಳ್ಳೆ Suggession. ನಮಗೂ ಪಟ್ಟಣದ ವಾತಾವರಣ, ಸಂಗೀತ, ನೃತ್ಯ, ಗಲಾಟೆ ಕೇಳಿ ನೋಡಿ ಕಿವಿಗೆ ಚಿಟ್ಟಾಗಿದೆ. ಹೊಸದಾಗಿದ್ರೆ...... ಹಿತವಾಗಿದ್ರೆ..... ಕೇಳಿ ನೋಡಿಕೊಂಡು ಬರಬಹುದು.

ರಾಜ : Approved.........

(ಸಂಗೀತ)

(ಹಕ್ಕಿಗಳ ಇನಿದನಿ..... ಕಾಡು ಪ್ರಾಣಿಗಳ ದನಿ.....)

(ದೇವಾಲಯದ ಘಂಟಾನಾದ)

ರಘು : ಬೆಳಿಗಿರಿರಂಗನ ಬೆಟ್ಟ ಹ್ಯಾಗಿದೆ?

ರೂಪ : ಅಬ್ಬಾ ಎಂಥೆಂಥ ಕಾಡುಪ್ರಾಣಿಗಳು ಆನೆ, ಜಿಂಕೆ, ಕಾಡುಕೋಣ...... ಸುಳ್ದಾಡ್ತಾ ಇವೆ. ಎಂಥ ನಿಶ್ಯಬ್ದವಾದ ಸ್ಥಳದಲ್ಲಿ ರಂಗಸ್ವಾಮಿ ನೆಲೆಸಿದ್ದಾನೆ.

ರಾಜ : ಏನು ದೂರದಿಂದ ಹಾಡು ಕೇಳ್ತಿದೆ......

ರಘು : ಈ ಹೊತ್ತು ಶಿವರಾತ್ರಿ ಹಬ್ಬವಲ್ವೇ? 'ರೊಟ್ಟಿಪರ' ಮಾಡ್ತಿದ್ದಾರೆ ಸೋಲಿಗರು..... ಇಲ್ಲಿನ ಕಾಡು ಜನರು. ಅವರ ಇನಿದನಿ-

ರೂಪ : ಸ್ವಲ್ಪ ಹತ್ತಿರ ಹೋಗಿ ನೋಡೋಣ ಕೇಳೋಣ-

ರಘು : ಆಯ್ತು...... ದೊಡ್ಡ ದೊಡ್ಡ ಮರದ ತುಂಡು ಹಾಕಿ ಕೊಂಡ ಮಾಡ್ತಿದ್ದಾರೆ. ಆ ಕೆಂಡದಲ್ಲಿ ರೊಟ್ಟಿ ಬಡಿದು ಬಡಿದು ಹಾಕಿ ಸುಡ್ತಾ ಸುತ್ತಾ ಹಾಡ್ತಾ ನಿಂತಿದ್ದಾರೆ. ನೋಡಿ-

(ಹಾಡು)

ರಾಜ : ಆ ಕಡೆ ಬನ್ನಿ...... ಅಲ್ಲೊಬ್ಬಾಕೆ ಹಾಡ್ತಾ ಇದ್ದಾರೆ.....

ರೂಪ : ಯಾರು ಈಕೆ?

ಶ್ರೀಕಂಠ : ಹೆರಕನ ಗದ್ದೆ ಸಿದ್ದಮ್ಮ ಅಂತ..... ಜಡೆಸ್ವಾಮಿ ಮಾದೇಶ್ವರ, ರಂಗಸ್ವಾಮಿ, ಸಂಪಿಗೆದೇವರುಗಳ ಬಗ್ಗೆ ಹಾಡ್ತಾಳೆ.

(ಹಾಡು)

ಶ್ರೀಕಂಠ : ಶಿವನಂಜೇಗೌಡ ಹಾಗೂ ಸಂಗಡಿಗರು ಓಲಗದ ಹಾಡು ಹಾಡ್ತಾರೆ ಕೇಳೋಣ ಬನ್ನಿ...... ಹಾಡಿ...... ಹಾಡಿ......

(ಹಾಡು)

ಶ್ರೀಕಂಠ : ಶಿವನೇಗೌಡರೇ ಕಗ್ಗದ ಹಾಡು ಕಲ್ತಿದ್ದೀರಲ್ಲಾ ಅದನ್ನು ಸ್ವಲ್ಪ ಹಾಡ್ತೀರಾ?

(ಹಾಡು)

ರೂಪ : ಇನ್ನ್ಯಾವುದಾದ್ರೂ ಹಾಡು ಹಾಡ್ತಾರಾ?

ಶ್ರೀಕಂಠ : ದೊಡ್ಡ ಸಂಪಿಗೆ ದೇವರು, ಜಡೆಸ್ವಾಮಿ, ಮಾದೇಶ್ವರನ ಬಗೆಗೆ ಹಾಡ್ತೀರಲ್ಲಾ ಅದೂ ಒಂದು ಸ್ವಲ್ಪ ಹಾಡಿ.

(ಹಾಡು)

ರೂಪ : ಮುಂದಿನ ಸ್ಥಳ!

ರಾಜ : ಇಷ್ಟು ದೂರ ಬಂದಿದ್ದೇವೆ ಹೆಗ್ಗಡ ದೇವನ ಕೋಟೆಯ ಕಡೆ ಹೋಗೋಣ.

ರೂಪ : ಅಂತೂ ನಮ್ಮನ್ನ ಕಾಡು ಬೀಳೀಸ್ತೀರಿ

ರಾಜ : ನೀನೇ ಬಯಸಿ ಬಂದದ್ದು, ಅದ್ಕೆ ನಾವೇನು ಮಾಡೋಕ್ಕಾಗುತ್ತೆ?

ರಘು : ಬನ್ನಿ..... ಬನ್ನಿ..... ಹೋಗೋಣ........

(ದೂರದಿಂದ ಹಾಡು)

ರಾಜ : ಇಲ್ಲೂ ದನಿ ತಪ್ಪಿದ್ದಲ್ಲ........

ರೂಪ : ದನಿಮಲ್ರೀ...... ಸಂಗೀತ........

ರಘು : ಕಾಡಿನ ಜೇನು ಕುರುಬರ ಸಂಗೀತ...... ಬನ್ನಿ ಹತ್ತಿರ ಹೋಗಿ ಕೇಳ್ಳೋಣ.

ರೂಪ : ಯಾರಿವ್ರು.......?

ದನಿ : ಮಹಾದೇವಮ್ಮ ಮತ್ತು ಸಂಗಡಿಗರು.

(ಹಾಡು)

ರಘು : ರಾಜು.... ಮುಂದಕ್ಕೆ........

ರಾಜು : ಶಿವಮೊಗ್ಗ ಜಿಲ್ಲೆ ಕಡೆ ಹೋಗೋಣ.

ರೂಪ : ಆಯ್ತು.

(ಹಾಡು)

ಧ್ವನಿ : ಬನ್ನಿ ಸ್ವಾಮಿ ಬನ್ನಿ.... ನಮ್ಮ ಕುಗ್ಗೆ ಗ್ರಾಮಕ್ಕೆ ಬಂದದ್ದು ಸಂತೋಷವಾಯ್ತು..... ನೋಡಿ ಬರ್‍ತಿದ್ದಾಗ್ಲೇ.... ದೀವರ ಹಾಡು ಆರಂಭವಾಗಿದೆ.

ರಾಜ : ಯಾರು ಹಾಡ್ತಿರೋವ್ರು?

ಧ್ವನಿ : ಗೌರಮ್ಮ ಹಾಗೂ ಸಂಗಡಿಗರು

(ಹಾಡು)

ರೂಪ : Next ಏನು?

ರಘು : ಮಂಗಳೂರು ಕಡೆ ಹೋಗೋಣ್ವೇನು?

ರೂಪ : ನೀವು ಎಲ್ಲಿ ಕರ್‍ಕೊಂಡೋದ್ರೂ ರೆಡಿ......

ರಾಜ : ಸರಿ ನಡೀರಿ..... (ಸಮುದ್ರದ Effect)

(ಹಾಡು ಕುಣಿತ)

ರೂಪ : ಈ ಸಮುದ್ರ ನೋಡ್ತಾ ನೋಡ್ತಾ ಹಾಗೇ ಮೈಮರೆವಂಗಾಗ್ತದೆ ದೂರದಲ್ಲಿ ಏನೋ...... ಹಾಡು ಕುಣಿತ.......

ರಘು : ಆಯ್ತು ನಡೆಯಿರಿ ನೋಡೋಣ...... ಇದು ಯಾವ ಊರ್‍ರೀ.....

ಧ್ವನಿ : ಬಂಟವಾಳ ತಾಲ್ಲೂಕಿನ ಬಂಟವಾಳ ಮೂಡ.

ರೂಪ : ಇದೇನಿದು ಇಲ್ಲೂ ಕುಣಿತ ಹಾಡು......

ಧ್ವನಿ : ಮಾದಿರ ಕುಣಿತ ಅಂತಾರೆ ಆಟ ಕಳಂಜಿ ಅಂತಾರೆ ಚತ್ರಿ ಹಿಡ್ಕೊಂಡು ತೆಂಗಿನಗರಿಗಳನ್ನು ಮೈನಲ್ಲಿ ಕಟ್ಟಿಕೊಂಡು, ಕಿರೀಟ ಹಾಕಿಕೊಂಡು, ನಲಿಕೆಯವರು ಕುಣಿತಾ ಇದ್ದಾರೆ. ಎಂಕ ನಲಿಕೆಯವರಿಂದ - ಇದರಲ್ಲಿ ಪಾಡ್ದನಗಳನ್ನು ಹಾಡುವುದು ವಾಡಿಕೆ.

ರೂಪ : ಇದ್ಯಾವ ಭಾಷೆ?

ಧ್ವನಿ : ತುಳು.

(ಹಾಡು ಕುಣಿತ)

ರೂಪ : ಕಾರವಾರವೂ ತುಂಬಾ ಚೆನ್ನಾಗಿದೆಯಂತೆ.

ರಘು : ಸಿನೆಮಾಗಳಲ್ಲೂ ನೋಡಿದ್ದೀರಲ್ಲಾ.

ರಾಜ : ಇಷ್ಟು ದೂರ ಬಂದಿದ್ದೇವೆ. ಸಿನೆಮಾದಲ್ಲಿ ನೋಡಿದ್ರಾಯ್ತೇ? ನಿಜವಾಗಿಯೇ ನೋಡಿಬಿಡೋಣ......

ಶ್ರೀಕಂಠ: ಹೊನ್ನಾವರ ತಾಲ್ಲೂಕಿನಲ್ಲಿನ ಅಪ್ಪಿಗೆರೆ ಗಣತಿ ಮತ್ತು ತಂಡದವರು ಹಾಲಕ್ಕಿ ಜನಾಂಗದವರು ಮಳೆರಾಯನ ಹಾಡನ್ನು ಹಾಡ್ತಾರೆ. ಇದಕ್ಕೆ ತಾರ್ಲೆ-ಬಾರ್ಲೆ ಅಂತಾರೆ. ಅದನ್ನು ನೋಡಲಿಕ್ಕೆ ಎರಡು ಕಣ್ಣಿದ್ದರೂ ಸಾಲದು.

ರಾಜ : ಕೇಳಲಿಕ್ಕೆ ಎರಡು ಕಿವಿ ಇದ್ದರೂ ಸಾಲದು

ರೂಪ : ಹಾಡು ಅಂತಿದ್ರಲ್ಲಾ.... ನಡೀರಿ.....

ರಾಜ : ಆಯ್ತು ಮಹಾರಾಯ್ತಿ......

(ಹಾಡು ಕುಣಿತ)

ರಘು : ಇಲ್ಲಿನ ಇನ್ನೊಂದು ವಿಚಿತ್ರ ಜನಾಂಗ ಇದೆ. ಸಿದ್ದಿಯವರು ಅಂತ. ಸುಮಾರು ೫೦೦ ವರ್ಷಗಳ ಹಿಂದೆ ಭಾರತದಲ್ಲಿನ ಪೋರ್ಚುಗೀಸರು, ಡಚ್ಚರು ಮತ್ತು ಅರಬರು ನಿಗ್ರೋಗಳನ್ನು ಕೊಂಡುಕೊಂಡು ಗುಲಾಮರನ್ನಾಗಿ ಮಾಡಿಕೊಂಡರು. ಅವರೇ ಸಿದ್ದಿಯರು. ಹೆಣ್ಣು ಮಕ್ಕಳು ಎದುರು ಬದರು ನಿಂತು ಖಾಲಿ ಕೊಡ ಹಿಡಿದು ಊದುತ್ತಾ ಕೊಳಲಿನ ಗಾನ, ತಮಟೆ ತಾಳಕ್ಕೆ ಬಾಗಿ ಬಳುಕಿ ಕುಣೀತಾರೆ. ಹಾಡು ಬದಲಾದಾಗ ಹೆಜ್ಜೆಯ ನರ್ತನದ ಗತಿಯೂ ಬದಲಾಗುತ್ತೆ. ಇದಕ್ಕೆ ಪುಗುದೆ ನೃತ್ಯ ಅನ್ತಾರೆ. ಗಣೇಶನ ಹಬ್ಬದಲ್ಲಿ ಈ ನೃತ್ಯ ಮಾಡ್ತಾರೆ.

ಶ್ರೀಕಂಠ: ಬಾಬು ಗ್ರಿರಿಗೋಳ್ ಸಿದ್ದಿಯವರೇ ನಮ್ಮ ರೂಪ ಅವರು ನಿಮ್ಮ ಅಪರೂಪದ ನೃತ್ಯ ನೋಡಲಿಕ್ಕೆ ಬಂದವ್ರೆ ಸ್ವಲ್ಪ ಆಡಿ-ಹಾಡಿ ತೋರಿಸ್ಯಪ್ಪಾ.......

(ಹಾಡು ನೃತ್ಯ)

ರೂಪ : ಚೆನ್ನಾಗಿದೆ........

ಶ್ರೀಕಂಠ: ಇನ್ನೊಂದು ಅಂಕೋಲಾ ತಾಲ್ಲೂಕಿನ ಸಿಡಿಕುಳಿ ಗ್ರಾಮ ಅಂತಿದೆ. ಮೀನುಗಾರ ಜನಾಂಗದವರು ಗಣೇಶ ಚತುರ್ಥಿ ಸಂದರ್ಭದಲ್ಲಿ ಮರಾಠಿ ಭಾಷೆಯಲ್ಲಿ ಮಾಂಡ್ ಎಂಬ ಹಾಡುಗಾರಿಕೆ ಮಾಡ್ತಾರೆ. ಯಶೋಧಾ ಹಾಗೂ ಸಂಗಡಿಗರಿಂದ ಕೇಳಿಕೊಂಡು ಹೋಗೋಣ.

ರೂಪ : ಬೇಡ ಅಂತಾರಾ......

ರಾಜ : ಇಲ್ಲ ಬೇಕು ಅಂತೀನಿ.......

(ಹಾಡು)

ರೂಪ : ಇದೇನು ಆ ಕಡೆ ಏನೋ...... ಗದ್ದಲ ನಡೀತಾ ಇದೆ.

ಧ್ವನಿ : ಈ ಹೊತ್ತು ಸಮ್ಮೂರ್ರಾಗೆ ಸಾಂಸ್ಕೃತಿಕ ಕಾರ್ಯಕ್ರಮ ಆಗ್ತಾ ಇದೆ. ರಾಯಚೂರಿನ ದೇವದುರ್ಗ ತಾಲ್ಲೂಕಿನ ಬಂಡೇ ದುರ್ಗದ ಸೂರಾನಾಯ್ಕ ಹಾಗೂ ಸಂಗಡಿಗರಿಂದ ಲಂಬಾಣಿ ನೃತ್ಯ ಏರ್ಪಡಿಸಿದ್ದಾರೆ. ಅದನ್ನೂ ನೋಡ್ಕಂಡು ಹೋಗಿ.......

ರಾಜ : ಅದನ್ನೂ ನೋಡ್ತೀರೇನು? ಕೇಳ್ತೀರೇನು?

ರೂಪ : ನೀವು ಹೇಳಿದ ಮೇಲೆ ಇಲ್ಲ ಅನ್ನುವ ಹಾಗೇ ಇಲ್ಲ.

(ಹಾಡು)

ರಾಜ : ಅಂತೂ ಬೆಟ್ಟಗುಡ್ಡ ಸುತ್ತಿಸಿ..... ಹಾಡು ನೃತ್ಯ ಕೇಳ್ಸಿ ನೋಡ್ಸಿ......

ರಘು : ಸುಸ್ತು ಮಾಡ್ಬಿಟ್ರೆ ಅಲ್ಲಾ.......

ರೂಪ : ಇಲ್ಲಾ ಒಂದು ರೀತಿಯಲ್ಲಿ ಉಲ್ಲಾಸವಾಯ್ತು, ಕಣ್ಣಿಗೆ ತಂಪಾಯ್ತು, ಕಿವಿಗಿಂಪಾಯ್ತು, ಮನಸ್ಸಿಗಾನಂದವಾಯ್ತು!

ರಾಜ : ಮತ್ತೆ........

ರೂಪ : ನಾಲ್ಕು ಗೋಡೆ ಮಧ್ಯೆ......

ರಘು : ಬೇಜಾರಾದಾಗ ಹೀಗೆ.... ಪ್ರಕೃತಿ ಸೌಂದರ್ಯದ.... ನಡುವೆ ಸಂತೋಷವಾಗಿ ಕಾಲ ಕಳೀಬಹುದು. ಗಿರಿಯ ನಿನಾದವನ್ನು ಕೇಳಿ ಬೇಜಾರು ಕಳೆದುಕೊಂಡು ಆತ್ಮೋಲ್ಲಾಸ ಪಡೆಯಬಹುದು.

ರೂಪ : ಸರಿಯಾಗಿ ಹೇಳಿದ್ರಿ......

*

# ಪರಿವರ್ತನೆ

(ಹಾಡು)

ಧ್ವನಿ ೧: ಸೋಲಿಗರು ಮೈಸೂರು ಜಿಲ್ಲೆಯ ಬಿಳಿಗಿರಿರಂಗನ ಬೆಟ್ಟದ ಮೂಲನಿವಾಸಿಗಳು. ಇವರು ಮಾದೇಶ್ವರ ಬೆಟ್ಟ, ಬೈಲೂರು, ಬೂದಿ ಪಡಗ, ಗುಂಡಲ್ ಬುರುಡ, ಮುಂತಾದುವುಗಳೆಡೆ "ಪೋಡು" ಕಟ್ಟಿಕೊಂಡು ಜೀವಿಸುತ್ತಿದ್ದಾರೆ. ಆದರೆ ಇತ್ತೀಚೆಗೆ ಸರ್ಕಾರ ಕಟ್ಟಿಕೊಟ್ಟ ಗೃಹಗಳಲ್ಲೂ ಹಲವಾರು ಜನರು ವಾಸಿಸುತ್ತಿದ್ದಾರೆ.

ಧ್ವನಿ ೨: ಜೇನು ಅಳಿದು, ಗೆಡ್ಡೆ-ಗೆಣಸು ಸೊಪ್ಪು ಸದೆ ತಿಂದು ಮುತ್ತಗದೆಲೆಯಿಂದ ಮೈ ಮುಚ್ಚಿಕೊಳ್ಳುತ್ತಿದ್ದವರು, ಇಂದು ಅನ್ನ, ಸಾರು, ಹಿಟ್ಟು, ರೊಟ್ಟಿಗಳನ್ನು ತಿಂದು ನಾವು ಉಡುವ ಉಡುಪುಗಳನ್ನು ಉಟ್ಟು ನವ ನಾಗರೀಕತೆಗೆ ಹತ್ತಿರುವಾಗುತ್ತಾ ಪಟ್ಟಣದವರಾಗುತ್ತಿದ್ದಾರೆ. ಹಳೆಯ ಸಂಸ್ಕೃತಿಯನ್ನು ದೂರ ಮಾಡುತ್ತಿದ್ದಾರೆ; ಪಟ್ಟಣದ ಸಂಸ್ಕೃತಿಗೆ ಓಲುತ್ತಿದ್ದಾರೆ. ಇದು ಒಂದು ರೀತಿಯಲ್ಲಿ ಹೇಳುವುದಾದರೆ ಪರಿವರ್ತನೆಯ ಹಾದಿಯೇ.

ಧ್ವನಿ ೧: ಹಬ್ಬ ಹರಿದಿನ, ಜಾತ್ರೆಗಳಲ್ಲಿ, ನಡೆ ನುಡಿಗಳಲ್ಲಿ, ಮಾತುಕತೆಗಳಲ್ಲಿ, ಹುಟ್ಟು ಸಾವುಗಳ ಸಂಸ್ಕಾರದಲ್ಲಿ, ಮದುವೆ - ಮೈನೆರವ ಸಂದರ್ಭದಲ್ಲಿ, ಹಾಡು - ಹಸೆಗಳಲ್ಲಿ ಚಿನ್ನ ಬಣ್ಣ, ಉಡುಗೆ ತೊಡಿಗೆಗಳಲ್ಲಿ, ಆಚಾರ ವಿಚಾರಗಳಲ್ಲಿ, ಓದು ಬರಹದಲ್ಲಿ, ಮನೆಮಠಗಳಲ್ಲಿ, ಆರೋಗ್ಯ ವಿಚಾರಗಳಲ್ಲಿ ಆರಂಭ ಕೈಗಾರಿಕೆಗಳಲ್ಲಿ ಹೊಸತನವನ್ನು ಬಯಸಿದ್ದಾರೆ, ಬಳಸಿದ್ದಾರೆ.

ಧ್ವನಿ ೨: ಹಳೆಯ ಮೂಢನಂಬಿಕೆಗಳು ಮೂಲೆ ಪಾಲಾಗುತ್ತಿವೆ,ಹೊಸ ಅಲೆಯ ಸೆಲೆಯತ್ತ ಒಲವು ತೋರುತ್ತಿದ್ದಾರೆ, ಎಲ್ಲರಂತೆ ತಾವೂ ಬಾಳಬೇಕೆಂಬ ಆಸೆ ಆಕಾಂಕ್ಷೆಗಳನ್ನು ತುಂಬಿಕೊಂಡಿದ್ದಾರೆ.

ಧ್ವನಿ ೧: ವಿಚಿತ್ರವಾಗಿ ಉಚ್ಚರಿಸುತ್ತಿದ್ದ ಇವರು ಇಂದು ಹಳ್ಳಿ, ಪಟ್ಟಣಗಳ ಭಾಷೆಗಳಿಗೆ ಹತ್ತಿರವಾಗಿದ್ದಾರೆ. ದೈವ ಭಕ್ತಿ, ಕರ್ಮ ಶ್ರದ್ಧೆಯನ್ನು ಅಪಾರವಾಗಿ ತುಂಬಿಕೊಂಡಿದ್ದಾರೆ.

ಧ್ವನಿ ೨: ಸಾಮಾಜಿಕ ಸೌಲಭ್ಯಗಳು, ಆರ್ಥಿಕ ನೆರವುಗಳನ್ನು ಸರ್ಕಾರ; ಸ್ವಯಂ ಸೇವಾ ಸಂಸ್ಥೆಗಳಿಂದ ಪಡೆಯುತ್ತಿದ್ದಾರೆ. ಸೋಲಿಗರ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ. ಬ್ಯಾಂಕುಗಳಲ್ಲಿ ನೆರವು ಪಡೆದು ಸ್ವಯಂ ಉದ್ಯೋಗದೆಡೆಗೂ ಒಲವು ತೋರುತ್ತಿದ್ದಾರೆ.

ಧ್ವನಿ ೧: ನಾಗರೀಕ ಪ್ರಪಂಚದಿಂದ ದೂರವಿದ್ದ ಪರಿಶಿಷ್ಟ ಬುಡಕಟ್ಟಿನ ಈ ಕಾಡು ಸೋಲಿಗರು ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಇದ್ದರೂ, ಅದನ್ನು ಉಳಿಸಿಕೊಂಡು ಬರುವುದರ ಜೊತೆಗೆ ಹಂತ ಹಂತವಾಗಿ ಬದಲಾಗುವ ಪ್ರಯತ್ನದಲ್ಲಿರುವುದು ಒಂದು ರೀತಿಯ ಶುಭಸಂಕೇತವೇ ಸರಿ!

ಧ್ವನಿ : ಸಿದ್ಧಮರಿ ಮಾದೇಶ್ವರ ಬೆಟ್ಟದ ಆಣೆ ಹೊಲದ ಸೋಲಿಗರ ಅಭಿವೃದ್ಧಿ ಸಂಘದ ಅಧ್ಯಕ್ಷರು.

ಧ್ವನಿ : ಕಾರಯ್ಯನ ವಂಶಸ್ಥರೆನ್ನುವ ಈರೇಗೌಡರು ಸೋಲಿಗರ ಸಂಘದ ಕಾರ್ಯದರ್ಶಿಗಳು. ಅಂದಿನ ದಿನದ ಮೆಲುಕು ಹಾಕುವವರು; ಇಂದಿನ ಸ್ಥಿತಿಯನ್ನು ಅರಿತವರು.

ಧ್ವನಿ : ಮದುವೆ ಅಂದು-

ಇಂದು-

ಧ್ವನಿ : ಕುಟುಂಬ ಯೋಜನೆಯ ಬಗೆಗಿನ ಭಾವನೆಗಳು:-

ಮಾಸ್ತಮ್ಮನ ಅನಿಸಿಕೆ-

ಹಿಂದಿನ ಕಾಲದ ಜಾತ್ರೆಯ ನೆನಪು-

ದೇಶ ಪರ್ಯಟನೆ-

ಆರೋಗ್ಯ -

ಗಾಂಧಿ ನೋಡಿದ ಕಣ್ಣು-

ಹಬ್ಬ ಅಂದು-

ಇಂದು-

ನಾಮಕರಣ-

ಮೈನೆರೆದಾಗ-

ಸತ್ತಾಗಿನ ಸಂಸ್ಕಾರ - ಅಂದು-

ಇಂದು-

ಧ್ವನಿ : ಕರ್ನಾಟಕ ಭೂಸೇನಾ ನಿಗಮದವರಿಂದ ನಿರ್ಮಿತವಾದ ಗಿರಿಜನ ಆಶ್ರಮ ಪಾಠಶಾಲೆಯಲ್ಲಿ ಸೋಲಿಗರ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

(ಹಾಡು)

ಧ್ವನಿ : ಮಾದೇವಿ.

ಧ್ವನಿ : ಅಲ್ಲಿನ ಉಪಾಧ್ಯಾಯ ರಾಜು ಅವರು ವ್ಯವಸ್ಥೆಯ ಬಗೆಗೆ ಹೇಳುತ್ತಾ-

(ಹಾಡು)

ಧ್ವನಿ : ದುಂಡಮ್ಮ(ಅಡಿಗೆಯ ಕೆಲಸ ಮಾಡುತ್ತಾ ಇರುವಾಕೆ), ಆಕೆಯ ಭಾವನೆಗಳು-

ಧ್ವನಿ : ಜೇನುಸಾಕಾಣಿಕೆ ತರಬೇತಿ, ಗಂಧದಕಡ್ಡಿ ತಯಾರಿಕೆಯ ಬಗ್ಗೆ ಶಿವಣ್ಣ ಮಾತಾಡಿ-

ಧ್ವನಿ : ಗೊರಸಾಣೆಯ ಸೋಲಿಗರ ಅಭಿವೃದ್ಧಿ ಮಂಡಲಿ ಕಾರ್ಯದರ್ಶಿ ಈರಣ್ಣ, ಅಭಿವೃದ್ಧಿಯ ಬಗ್ಗೆ ಮಾಡಿಕೊಂಡ ಮನವಿ

ಧ್ವನಿ : ಎಸ್.ಎ.ಎಸ್.ಸಿ ವರೆಗೆ ಓದಿದ ಯುವಕ ಸದ್ಯಕ್ಕೆ ಕೂಲಿ ಜೀವನ ಸಾಗಿಸುತ್ತಿದ್ದಾನೆ. ಸರ್ಕಾರಿ ಕೆಲಸಕ್ಕೆ ಹೋಗಲು ಒಲವಿಲ್ಲ, ಸ್ವಯಂ ಉದ್ಯೋಗ ಮಾಡಿ ಜೀವಿಸುವ ಛಲ-

ಧ್ವನಿ : ಬೆಳಗಿರಿ ರಂಗನ ಬೆಟ್ಟದ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ ಗೌರವ ಕಾರ್ಯದರ್ಶಿ ಡಾ. ಸುದರ್ಶನ ಅವರು ತಮ್ಮ ಜೀವನವನ್ನೇ ಕಾಡು ಸೋಲಿಗರ ಅಭಿವೃದ್ಧಿಗೆ; ಕಲ್ಯಾಣಕ್ಕೆ ಮೀಸಲಾಗಿಟ್ಟಿರುವರು-

ಧ್ವನಿ : ಶಿವನೇ ಗೌಡರು ಬೆಳಗಿರಿ ರಂಗನ ಬೆಟ್ಟದಲ್ಲಿನ ಸೋಲಿಗರು. ಇವರ ಭಾಷೆ ಮಾದೇಶ್ವರನ ಬೆಟ್ಟದ ಸೋಲಿಗರಿಗಿಂತ ಭಿನ್ನ. ಅಂದಿನ ದಿನವನ್ನು ಜ್ಞಾಪಿಸಿಕೊಂಡಾಗ-

ಈಗಿನ ಜೀವನ-

ಮನೆ-

ಮದುವೆ-

(ಹಾಡು)

ರೊಟ್ಟಿ ಪರ್ವದ ಹಬ್ಬ-

ಓದು-ಬರೆಹ.

ಧ್ವನಿ : ಆಸ್ಪತ್ರೆಗೆ ಹೊರರೋಗಿಯಾಗಿ ಬಂದಿದ್ದ ಮುಕ್ತಮ್ಮ-

ಧ್ವನಿ : ಹೆರಿಗೆಯನ್ನು ಮಾಡಿಸುವ ಸೋಲಿಗರ ದಾಯಿ ಸಿದ್ದಮ್ಮ

ಧ್ವನಿ : ಅವರ ಮಾತುಕತೆ, ನಡೆ-ನುಡಿ, ಆಚಾರ-ವಿಚಾರ, ಉಡುಗೆ-ತೊಡಿಗೆಗಳ ಬಗೆಗೆ ಕೇಳಿದ ಮೇಲೆ ಯಾರಿಗಾದರೂ ಅನ್ನಿಸದಿರದು ಅವರೇನು ಕಾಡು ಮನುಷ್ಯರಲ್ಲ ಎಂದು. ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಗೆ ಇತ್ತೀಚಿನ

ಪೀಳಿಗೆ ಹಂತಹಂತವಾಗಿ ಇಳಿದಿದ್ದಾರೆ, ರೂಢಿಸಿಕೊಳ್ಳುತ್ತಿದ್ದಾರೆ. ಅವರೂ ಎಲ್ಲರಂತೆ ಮನುಷ್ಯರಲ್ಲವೆ? ಆಸೆ ಆಕಾಂಕ್ಷೆಗಳಿಲ್ಲವೇ? ಎಲ್ಲರಂತೆ ಬಾಳಿ ಬದುಕಬೇಕೆಂಬ ಹಂಬಲವನ್ನು ತುಂಬಿಕೊಂಡಿಲ್ಲವೇ?

ಧ್ವನಿ ೨: ಯಾರೂ ಹುಟ್ಟುತ್ತಲೇ ಕಲಿತುಕೊಂಡು ಬರುವುದಿಲ್ಲ. ತಮ್ಮ ಸುತ್ತ ಮುತ್ತಣ ಪರಿಸರವನ್ನು ಗಮನಿಸಿ ಎಲ್ಲವನ್ನು ಮಗುವು ಕಲಿಯುತ್ತದೆ. ಹಾಗೆಯೇ ಕಾಡು ಸೋಲಿಗರೂ ಸಹ ಸರ್ಕಾರ, ಸಾರ್ವಜನಿಕರು, ಸ್ವಯಂ ಸೇವಾ ಸಂಸ್ಥೆಗಳು ಅವರ ಮೇಲೆ ಅನುಕಂಪ ತೋರಿದರೆ ನಾಡಿನವರ ಜೊತೆಯಲ್ಲಿ ಕಾಡಿನವರೂ ಬೆರೆಯುತ್ತಾರೆ. ಒಂದಾಗಿ ಚಂದಾಗಿ ನಡೆದುಕೊಳ್ಳುತ್ತಾರೆ. ಹೇಳುವುದುಂಟು ಸಾಹಿತ್ಯ ನಿಂತ ನೀರಲ್ಲ ಹರಿವ ನೀರು ಎಂಬಂತೆ ಸಂಸ್ಕೃತಿಯೂ ಅಷ್ಟೇ, ಕಾಲಕಾಲಕ್ಕೆ ಬದಲಾವಣೆಯಾಗುವುದು. ಸಹಜವೇ! ಹಾಗೆಯೇ ಕಾಡು ಸೋಲಿಗರ ಜೀವನದಲ್ಲೂ. ಕಾಡೆಲ್ಲಾ ನಾಡಾಗಿವೆ. ಕಾಡ ಸಂಸ್ಕೃತಿ ನಾಡ ಸಂಸ್ಕೃತಿಯಾಗಿದೆ, ಈ ಪರಿವರ್ತನೆ ಸ್ವಾಗತಾರ್ಹವಲ್ಲವೇ?

*

# ನಾವೇನು ಕಡಿಮೆ?

ರಾಧಾ : ಏನು ಜಯಾ ತುಂಬಾ ಯೋಚನೆ ಮಾಡ್ತಾ ಕೂತು ಬಿಟ್ಯಲ್ಲಾ......

ಜಯ : ಇನ್ನೇನಿದೆ ಬಿಡು ರಾಧಾ ನನ್ನ ಜೀವನದಲ್ಲಿ.

ರಾಧಾ : ಅಂಥದ್ದೇನು ಆಯಿತು.

ಜಯ : ನನ್ನ ಮಗನಿಗೆ ಆಕ್ಸಿಡೆಂಟ್‌ನಲ್ಲಿ ಒಂದು ಕಾಲು ಐಬಾಗಿ ಹೋಯ್ತಲ್ಲೇ.... ಅವನದೇ ಚಿಂತೆ..... ಅವನ ಮುಂದಿನ ಭವಿಷ್ಯ ಏನು ಎಂಬುದೇ..... ಆಕಾಶ ತಲೆಮೇಲೆ ಕಳಚಿ ಬಿದ್ದ ಹಾಗಿದೆ.

ರಾಧ : ಏನೋ ಆಗಿ ಹೋಯ್ತು, ಆಗಿ ಹೋದದ್ದನ್ನ ಆಗದೇ ಇರೋ ಹಾಗೆ ಮಾಡಲಿಕ್ಕಾಗುತ್ತೇ.....? ಖಂಡಿತ ಇಲ್ಲ. ಕಾಲು ಸ್ವಲ್ಪ ಊನವಾದರೇನಾಯ್ತು? ಅವನಿಗೆ ಒಳ್ಳೇ ವಿದ್ಯೆ ಕೊಡಿಸು, ಬುದ್ಧಿವಂತನಾಗಿ ಮಾಡಿಸು. ಆಗ ಅವನು ಯಾರಿಗಿಂತ ಏನೂ ಕಡಿಮೆ ಆಗೋಲ್ಲ.

ಜಯ : ಹುಡುಗರು ಆಡ್ಕೊತಾರೆ, ಅವರೆಲ್ಲಾ ಚೆನ್ನಾಗಿ ತಿರುಗಾಡುವಾಗ ನಾನು ಹೀಗಾದ್ನಲ್ಲ ಅಂತ ತುಂಬಾ ಮನಸ್ಸಿಗೆ ಹಚ್ಕೊಂಡಿದ್ದಾನೆ.

ರಾಧ : ಜೊತೆಗೆ ನೀನು ಹಚ್ಕೊಂಡಿದ್ದೀಯಾ. ನೀನು ಮೊದಲು ಧೈರ್ಯ ತಾಳಿಕೊಂಡು ಆಮೇಲೆ ಅವನಿಗೆ ಸಮಾಧಾನ ಮಾಡಬೇಕಾದ್ದು ನಿನ್ನ ಕರ್ತವ್ಯ.

ಜಯ : ನೀನೇನೋ ಹಾಗಂತಿಯಾ ಆದ್ರೆ.......

ರಾಧ : ಆದ್ರೆ...... ಇಂಥ ಅಪಘಾತ ಎಷ್ಟು ಜನಕ್ಕಾಗಿಲ್ಲ? ಅವರೆಲ್ಲಾ ಹೇಗಿದ್ದಾರೆ? ಏನ್ಮಾಡ್ತಾರೆ ಬಾ ನನ್ನ ಜೊತೆ-

ಧ್ವನಿ ೧: ಒಂದು ಕಾಲವಿತ್ತು ಒಂದು ಕಾಲಿಲ್ಲದ ಮಗು ಹುಟ್ಟಿದರೆ, ಒಂದು ಕಣ್ಣು ಅಥವಾ ಎರಡು ಕಣ್ಣಿಲ್ಲದ ಮಗು ಹುಟ್ಟಿದರೆ ಅವರು ಸಮಾಜಕ್ಕೆ ಭಾರ, ಭಿಕ್ಷೆ ಮಾಡಿ ಜೀವಿಸಬೇಕು ಎಂಬ ಮನೋಭಾವವಿತ್ತು.

ಧ್ವನಿ ೨: ಆದರೆ ಇಂದು-

ಧ್ವನಿ ೨: 'ಆದದ್ದೆಲ್ಲಾ ಒಳಿತೇ ಆಯಿತೆನ್ನುವ' ಇವರದು ಕವಿ ಹೃದಯ-

ಧ್ವನಿ ೧: ಒಂದು ಕಾಲಿಲ್ಲದ ಸಾ... ರಘುನಾಥ ಉಪಾಧ್ಯಾಯ ವೃತ್ತಿ ಮಾಡಿ ಜೀವಿಸುತ್ತಿದ್ದಾರೆ.

ಧ್ವನಿ ೧: ಪ್ರಪಂಚ ನೋಡದೇ ಹುಟ್ಟಿದ ರಾಮು ಅವರ ಹಾಡಿನ ಇನಿದನಿ-

ಧ್ವನಿ ೨: ಕಣ್ಣಿಲ್ಲದಿದ್ದರೇನು? ಹೊರ ಪ್ರಪಂಚವನ್ನು ಕಾಣದಿದ್ದರೇನು? ಒಳಕಣ್ಣು ಚೆನ್ನಾಗಿದೆ-

ಧ್ವನಿ ೧: ಕರ್ನಾಟಕ ವಿಭಾಗದ National Association for the Blindನಲ್ಲಿ ತಾಂತ್ರಿಕ ತರಬೇತಿಯಲ್ಲಿದ್ದಾನೆ, ಫಿಟ್ಟರ್ಸ್ ಟ್ರೈನಿಂಗ್ ಪಡೆದು, ಉದ್ಯೋಗಕ್ಕೆ ಹೋಗಿ ತನ್ನ ಕಾಲಮೇಲೆ ತಾನು ನಿಲ್ಲುವುದಲ್ಲದೆ ತಂದೆ ತಾಯಿಗಳ ಸಾಕುವಾಸೆ ಈತನಿಗೆ-

ಧ್ವನಿ ೨: Ther National Association for the Blind, Technical Training Instituiteನ ನಿರ್ದೇಶಕರಾದ ಕೆ.ಎಸ್. ರಾಮಸ್ವಾಮಿಯವರು ಈ ತಾಂತ್ರಿಕ ತರಬೇತಿಯ ಉದ್ದೇಶವನ್ನು ತಿಳಿಸಿದರು.

ಧ್ವನಿ ೧: ಶಾಹುಲ್ ಹಮೀದ್-

ಧ್ವನಿ ೨: ಹನುಮಂತೇಗೌಡ ಕ್ರೀಡಾ ಪಟು-

ಧ್ವನಿ ೧: ಈಜನ್ನು ರೂಢಿಸಿಕೊಂಡಿರುವ ಶಿವಪುತ್ರ-

ಧ್ವನಿ ೨: ಕಿವುಡರು, ಮೂಗರು, ಅಂಧರು, ಅಂಗ ವಿಕಲರುಗಳ ಅಭಿವೃದ್ಧಿಗಾಗಿ ಅಂಗವಿಕಲರ ವೃತ್ತಿ ಪುನರ್ ವಸತಿ ಕೇಂದ್ರ ಬೆಂಗಳೂರಿನ ಹೊಸೂರಿನ ರಸ್ತೆಯಲ್ಲಿದೆ. ವ್ಯವಸಾಯಕ ವೃತ್ತಿ ಮತ್ತು ತರಬೇತಿ ಕೇಂದ್ರ ಬೆಂಗಳೂರು ಶಾಖೆ, ಭಾರತ ಸರ್ಕಾರದ ಕಾರ್ಮಿಕ ಸಚಿವಾಲಯ ಮತ್ತು ತರಬೇತಿ ಮಹಾ ನಿರ್ದೇಶನಾಲಯದ ಸಂಯುಕ್ತ ಆಶ್ರಯದಲ್ಲಿ ಸ್ಥಾಪಿತವಾಗಿದೆ. ಭಾರತದಲ್ಲಿನ ಹನ್ನೊಂದನೇ ಕೇಂದ್ರ ಇದು.

ಧ್ವನಿ ೧: ಇದರ ಉದ್ದೇಶಗಳ ಬಗೆ ಅಲ್ಲಿನ Instructor ಯೂಸಫ್-

ಧ್ವನಿ ೨: ಅಂಗವಿಕಲರವೃತ್ತಿ ಪುನರ್ ವಸತಿ ಕೇಂದ್ರದ ಸುರೇಶ್ ಅಂಧ ವಿದ್ಯಾರ್ಥಿ. ಇಲ್ಲಿ ತರಬೇತಿ ಪಡೆಯಲು ಬಂದಾತ, ಇದು ಆತ ಹಾಡಿದ ಜನಪದ ಗೀತೆ-

ಧ್ವನಿ : ಎನ್. ಗಂಗಾಧರ್ ಮತ್ತೊಬ್ಬ ಅಂಧ- ಇಲ್ಲಿಗೆ ತರಬೇತಿಗಾಗಿ ಬಂದಾತ- "ಛಲಬೇಕು ಶರಣರಿಗೆ......" ಎಂದು ಬಸವಣ್ಣನವರು ಹೇಳುವಂತೆ-

ಧ್ವನಿ : ಟೈಲರಿಂಗ್ ಕಲಿತು ಸ್ವಂತ ಜೀವಿಸುವ ಉದ್ದೇಶ ರತ್ನಾ ಅವರದು. ಅಂಗವಿಕಲರಾದರೂ ದುಡಿವಾಸೆ-

ಧ್ವನಿ : ಡಿ.ಕೆ. ರೂಪಕಲಾ-

ಧ್ವನಿ : ಮಂಜು...........

ಧ್ವನಿ : ಉಷಾ ವಿಧವೆ, ಒಂದು ಮಗುವಿದೆ, ಭಿಕ್ಷೆ ಮಾಡಿ ಜೀವಿಸುತ್ತಿದ್ದಾಗ ಸಿಸ್ಟರ್ ಒಬ್ಬರ ಬೆಂಬಲದಿಂದ ಇಲ್ಲಿ ಒಂದು ಟೈಲರಿಂಗ್ ಕಲಿತು ತನ್ನ ಮಗುವನ್ನು ಸಾಕಿ ಮುಂದುವರಿಸುವಾಸೆಯನ್ನಿಟ್ಟುಕೊಂಡಾಕೆ-

ಧ್ವನಿ : ಒಂದು ಕಾಲು ಕಳೆದುಕೊಂಡಿರುವ ಬೆಳಗಿರಿರಂಗನ ಬೆಟ್ಟದ ಮುತ್ತುಗಗದ್ದೆ ಪೋಡಿನ ಕುಂಟೆಗೌಡ ಅಲ್ಲಿನ ವಿವೇಕಾನಂದ ಕಲ್ಯಾಣ ಕೇಂದ್ರದಲ್ಲಿ ಅಗರಬತ್ತಿ ತಯಾರಿಕೆಯನ್ನು ಕಲಿತು, ಸ್ವಂತ ಜೀವನ ಸಾಗಿಸುವಾಸೆಯಿಂದ ಬಂದು ಸೇರಿದ್ದಾನೆ. ಆತನ ಅನಿಸಿಕೆಗಳು-

ಧ್ವನಿ : ಪೋಲಿಯೋ ಆಗಿ ಎರಡೂ ಕಾಲನ್ನು ಕಳೆದುಕೊಂಡು ಹೆಳವನಾದ ವೆಂಕಟೇಶ್ S.S.L.C. ಓದಿದ್ದಾನೆ. ಲಾಟರಿ ಟಿಕೆಟ್ ಮಾರಿ ಜೀವಿಸುತ್ತಿದ್ದಾನೆ. ಆತನ ಅನಿಸಿಕೆಗಳು-

ಧ್ವನಿ : ಇದು ಅಂಗವಿಲಕರ ವಿಶೇಷ ಉದ್ಯೋಗ ವಿನಿಮಯ ಕೇಂದ್ರ, ಬೆಂಗಳೂರು ಜಿಲ್ಲೆಗೆ ಸೀಮಿತವಾದ ಈ ಕೇಂದ್ರದ ಉದ್ದೇಶವನ್ನು ಅಲ್ಲಿನ ಸಹಾಯಕ ನಿರ್ದೇಶಕರಾದ ಎ.ವಿ. ಬಸವರಾಜ್ ಅವರು ನಿರೂಪಿಸುತ್ತಾರೆ-

ಧ್ವನಿ : ವಿ. ಮಹೇಶ್‌ಕುಮಾರ್ ಒಂದು ಕೈ ಸೊಟ್ಟಾಗಿದೆ. ಸುಮ್ಮನೆ ಕುಳಿತು ಕಾಲ ಕಳೆಯಲಾರೆ ಏನಾದರೂ ಕೆಲಸ ಮಾಡಬೇಕು, ಎಲ್ಲಿಗಾದರೂ ಸೇರಿಕೊಳ್ಳಬೇಕೆಂದು ಈ ಉದ್ಯೋಗ ವಿನಿಮಯ ಕೇಂದ್ರಕ್ಕೆ ತನ್ನ ಹೆಸರನ್ನು ನೊಂದಾಯಿಸಲು ಬಂದಾತ. ಆತನ ಆಸೆ ಆಕಾಂಕ್ಷೆಗಳು-

ಧ್ವನಿ : ಹತ್ತು ಹಲವಾರು ಅಂಗವಿಕಲರ ಕಂಡು ಮಾತಾಡಿಸಿದಾಗ ಅರಿವಾದುದು ಅವರು ಯಾರಿಗಿಂತ ಕಡಿಮೆ ಇಲ್ಲ, ಯಾರಿಗೇನೂ ಕಡಿಮೆ ಇಲ್ಲ ಎಂಬುದು. ಓದು ಬರೆಹದಲ್ಲಿ, ಕೆಲಸದಲ್ಲಿ ಹುಮ್ಮಸ್ಸಿನ ಹೆಜ್ಜೆ ಇಡುವವರೇ. ಅಂಗವಿಕಲರೆಂಬ ಅನುಕಂಪ, ಪ್ರೋತ್ಸಾಹ ಸಮಾಜದಿಂದ ಬಯಸುತ್ತಾರೆ. ಅದಿಲ್ಲದೆ ಮುಂದುವರಿಯಲು ಸಾಧ್ಯವಿಲ್ಲವೆಂಬುದು ಅವರ ಅನಿಸಿಕೆ, ನಂಬಿಕೆ.

ಧ್ವನಿ : ರಾಜ್ಯದ ಅಂಗವಿಕಲರಿಗೆ ಮೀಸಲಾಗಿರುವ ಹದಿನಾರು ಕೋಟಿ ರೂಪಾಯಿಗಳಲ್ಲಿ ೧೪ ಕೋಟಿ ಮಾಶಾಸನಕ್ಕೆ ಹೋಗುತ್ತದೆ. ಅಂಗವಿಕಲರ ಪುನರ್‌ವಸತಿ ಕೇಂದ್ರಗಳ ಸ್ಥಾಪನೆಗೆಂದು ಕೇಂದ್ರ ಸರ್ಕಾರ ೧೧ ಜಿಲ್ಲೆಗಳನ್ನು ಆಯ್ಕೆ ಮಾಡಿದ್ದು ಕರ್ನಾಟಕದ ಮೈಸೂರು ಜಿಲ್ಲೆ ಅದರಲ್ಲಿ ಸೇರಿದೆ. ಕೊಡಗು ಜಿಲ್ಲೆ ಬಿಟ್ಟರೆ ಉಳಿದೆಲ್ಲಾ ಜಿಲ್ಲೆಗಳಲ್ಲೂ ಅಂಗವಿಕಲರ ಶಾಲೆಗಳಿವೆ. ರಾಜ್ಯದಾದ್ಯಂತ ೨೪ ದೈಹಿಕ ಅಂಗವಿಕಲರ ಶಾಲೆಗಳಿವೆ. ಎಲ್ಲಾ ವೈದ್ಯಕೀಯ ಕಾಲೇಜುಗಳೂ ಕೃತಕ ಜೋಡಣಾ ಕೇಂದ್ರಗಳನ್ನು ಹೊಂದಿವೆ.

ಧ್ವನಿ : ಕರ್ನಾಟಕದಲ್ಲಿ ಸುಮಾರು ೬೦,೦೦೦ ಅಂಧರಿದ್ದಾರೆ. ಕೆಲವರು ಹುಟ್ಟು ಅಂಧರಾದರೆ ಕೆಲವರು 'A' ಜೀವಸತ್ವ ಕೊರತೆಯಿಂದಾದರೆ ಪೋಲಿಯೋ,

ಅಪಘಾತಗಳಿಂದ ಅಂಗವಿಕಲತೆ ಆದವರು ಹಲವಾರು ಜನ. ಹಾಗೆಯೇ ಹುಟ್ಟು ಕಿವುಡು ಮೂಗರೂ ಇದ್ದಾರೆ. ಇವರೆಲ್ಲರ ಅಭಿವೃದ್ಧಿ, ಕಲ್ಯಾಣ ದೇಶದ ಕಲ್ಯಾಣ. ಅವರಿಗೆ ಸರಿಯಾದ ತಿಳುವಳಿಕೆ, ವಿದ್ಯೆ, ಮಾರ್ಗದರ್ಶನ ಮಾಡುವುದು ಸರ್ಕಾರ, ಸಮಾಜ ಹಾಗೂ ಸ್ವಯಂಸೇವಾ ಸಂಸ್ಥೆಗಳ ಮೇಲಿದೆ.

ಧ್ವನಿ : ದೇಹದ ಯಾವುದಾದರೂ ಅಂಗ ವಿಕಲವಾಗಿರಬಹುದು ಆದರೆ ಅಂಗವಿರುವವರಿಗೆ ನಾವೇನು ಕಡಿಮೆ? ನಾವು ಅವರಂತೆ ಉದ್ಯೋಗ ಮಾಡುತ್ತೇವೆ. ಸಮಾಜದಲ್ಲಿ ಸುಖ-ಶಾಂತಿ ನೆಮ್ಮದಿಯಿಂದ ಜೀವಿಸುತ್ತೇವೆ ಎಂಬ ಸವಾಲು ಅವರದು ಎಂದ ಮೇಲೆ ಇವರು ಯಾರಿಗೇನು ಕಡಿಮೆ?

ರಾಧ : ಈಗ್ಲಾದ್ರೂ ಅರ್ಥವಾಯ್ತಾ?

ಜಯ : ಆಯ್ತು ರಾಧಾ..... ಆಯ್ತು..... ನಾನೇನೋ ನನ್ನೊಬ್ಬಳ ಜೀವನವೇ ಗಾಡಾಂಧಕಾರ ಅಂತ ತಿಳ್ಕೊಂಡಿದ್ದೆ ಆದ್ರೆ.... ನನ್ನ ಮಗನಂಥವರು ಅನೇಕ ಜನ. ನನ್ನಂಥ ತಾಯಂದಿರು ಹಲವಾರು ಜನ.

ರಾಧ : ಅದಕ್ಕೆ ನಾನು ಹೇಳಿದ್ದು ಈ ಪ್ರಪಂಚದಲ್ಲಿ ಹುಟ್ಟಿದ ಮೇಲೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತೆ ಅಂಥದ್ದರಲ್ಲಿ ಅಂಗವಿಕಲತೆಯೂ ಒಂದು. ಬೇರೆಯವರನ್ನು ನೋಡಿ ನಾವೂ ಕೂಡ ಸಮಾಧಾನ ಪಟ್ಟುಕೊಂಡು ಜೀವನದಲ್ಲಿ ಎಂಥ ಕಷ್ಟಬಂದರೂ ಎದುರಿಸಬೇಕು ಅಂತ.

ಜಯ : ಎಂಥೆಂಥ ಅಂಗವಿಕಲರು ಎಂಥೆಂಥ ಸಾಹಸ ಜೀವನ ಮಾಡ್ತಾರೆ, ಸಮಾಜದಲ್ಲಿ ತಮ್ಮ ಸ್ಥಾನವನ್ನು ಚೆನ್ನಾಗಿರುವವರಿಗಿಂತಲೂ ಒಂದು ರೀತಿ ಹೆಚ್ಚಿಗೆ ಇಟ್ಟುಕೊಂಡು ಅವರೆಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವ ಹಾಗೆ ಮಾಡಿದ್ದಾರೆ.

ರಾಧ : ನೋಡಮ್ಮಾ ಇದೀಗ ಒಪ್ಪುವಂಥ ಮಾತು.

ಜಯ : ನೀನು ಹೇಳಿದ ಹಾಗೆ ನನ್ನ ಮಗನನ್ನೂ ವಿದ್ಯಾವಂತನಾಗಿ ಮಾಡಿ ಎಲ್ಲರಂತೆ ಸಮಾಜದಲ್ಲಿ ಬಾಳುವಂತೆ ಮಾಡ್ತೇನೆ. ನನ್ನ ಮನದಲ್ಲಿರೋ ಅಂಧಕಾರವನ್ನು ಅಳಿಸಿಹಾಕಿ ಅವನ ಮನದಲ್ಲೂ ಸ್ಫೂರ್ತಿ ತುಂಬಲು ನೆರವಾಗ್ತೀನಿ.

ರಾಧ : ಇದು ಸರಿಯಾದ ನಿರ್ಧಾರ.

*

# ರೂಪಕ

## ಮುನ್ನಡೆಯತ್ತ

(ಹಾಡು)

ಧ್ವನಿ : ಒಂದು ಕಾಲದಲ್ಲಿ ಕಾಡಿನಲ್ಲಿ ವಾಸವಾಗಿದ್ದು ನಾಡ ಜನರ ಸಂಪರ್ಕವನ್ನೇ ಬಯಸದ ಆದಿವಾಸಿ ಸೋಲಿಗರು ತಮ್ಮದೇ ಆದ ರೀತಿಯಲ್ಲಿ ಜೀವನ ಸಾಗಿಸುತ್ತಿದ್ದರು. ಆಚಾರ-ವಿಚಾರ, ನಡೆ-ನುಡಿಗಳಲ್ಲಿ ತಮ್ಮದೇ ಆದ ಒಂದು ವೈಶಿಷ್ಟ್ಯವನ್ನು ಬೆಳೆಸಿಕೊಂಡಿದ್ದರು.

ಧ್ವನಿ : ಆದರೆ ಇಂದು-

ಧ್ವನಿ : ಮೈಸೂರು ಜಿಲ್ಲೆಯ ಬಿಳಿಗಿರಿ ರಂಗನ ಬೆಟ್ಟದ ಮೂಲ ನಿವಾಸಿಗಳಾದ ಇವರು ಇಂದು ಮಾದೇಶ್ವರನ ಬೆಟ್ಟ, ಬೈಲೂರು, ದೇವರಳ್ಳಿ, ಸೀಗೆಬೆಟ್ಟ ಹೀಗೆ ಹಲವಾರೆಡೆ ಹರಡಿಕೊಂಡ್ದಾರೆ. ಕಾಡು ಜೀವನದಿಂದ ಪಟ್ಟಣ ಜೀವನದತ್ತ ದಾಪುಗಾಲು ಹಾಕುತ್ತಿದ್ದಾರೆ. ಹೊಸ ಸಂಸ್ಕೃತಿಗೆ ಹೊಂದಿಕೊಳ್ಳುತ್ತಿದ್ದಾರೆ.

ಧ್ವನಿ : ಪಟ್ಟಣದ ಆಚಾರ-ವಿಚಾರ, ನಡೆ-ನುಡಿ, ಉಡುಗೆ-ತೊಡುಗೆ, ಆರೋಗ್ಯ, ಶಿಕ್ಷಣ, ಉದ್ಯೋಗ, ಮುಂತಾದವುಗಳಲ್ಲಿ ಆಸಕ್ತಿ ತೋರುತ್ತಿದ್ದಾರೆ. ಎಲ್ಲರಂತೆ ತಾವು ಬಾಳಿ-ಬದುಕಬೇಕೆಂಬ ಬಯಕೆಯನ್ನು ತುಂಬಿಕೊಂಡಿದ್ದಾರೆ. ಲವಲವಿಕೆ ತೋರುತ್ತಿದ್ದಾರೆ.

ಧ್ವನಿ : ಇವರ ಅಭಿವೃದ್ಧಿಗೆ ಸರಕಾರ, ಸ್ವಯಂಸೇವಾ ಸಂಸ್ಥೆಗಳು ಮುಂದಾಗುತ್ತಿವೆ.

ಧ್ವನಿ : ಅಂಥಹದೊಂದು ಸ್ವಯಂ ಸೇವಾ ಸಂಸ್ಥೆ "ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ".

(ಹಾಡು)

ಧ್ವನಿ ೧: ಇದು ಬಿಳಿಗಿರಿರಂಗನ ಬೆಟ್ಟದಲ್ಲಿ ಸ್ಥಾಪಿತವಾಗಿರುವ ವಿವೇಕಾನಂದ ಗಿರಿಜನ ಕಲ್ಯಾಣಕೇಂದ್ರ.

(ಹಾಡು)

ಧ್ವನಿ ೨: ಅಲ್ಲಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ದನಿಗೂಡಿಸಿದ ಹಾಡು-

ಧ್ವನಿ ೧: ಇಲ್ಲಿನ ಗೌರವ ಕಾರ್ಯದರ್ಶಿ ಡಾ. ಸುದರ್ಶನ್ ಅವರು ಸ್ವಯಂ ಸೇವಾ ಸಂಸ್ಥೆಯೊಂದನ್ನು ಸ್ಥಾಪಿಸಿ ಜನಸೇವೆ ಮಾಡಲು ತಮಗೆ ಸ್ಫೂರ್ತಿ ಹೇಗೆ ಬಂತು ಎಂಬುದನ್ನು ವಿವರಿಸುತ್ತಾ-

ಧ್ವನಿ ೨: ಇವರಾದರೂ ಸೋಲಿಗರನ್ನು ಪರಿವರ್ತಿಸಿದ ಬಗೆ-

ಧ್ವನಿ ೧: ಕೇಂದ್ರದ ಕಾರ್ಯ ಚಟುವಟಿಕೆಗಳನ್ನು ತಿಳಿಸುತ್ತಾ-

ಧ್ವನಿ ೧: ಇದು ಈ ಕಲ್ಯಾಣ ಕೇಂದ್ರದ ಆಸ್ಪತ್ರೆಯ ವಿಭಾಗ. ಇಲ್ಲಿನ ಕೆಲವು ಹೊರ ರೋಗಿಗಳನ್ನು ಕಂಡು ಮಾತನಾಡಿಸಿದಾಗ-

ಧ್ವನಿ ೨: ಮುತ್ತಮ್ಮನ ಹಿಂದಿನ-ಇಂದಿನ ಅನುಭವಗಳು

ಧ್ವನಿ ೧: ಓದು ಬಲ್ಲ-ಚಿಕ್ಕ ಚೆನ್ನನಿಗೆ ಆಸ್ಪತ್ರೆಯಲ್ಲಿ ಜನಸೇವೆ ಮಾಡುವ ಆಸೆ.

ಧ್ವನಿ ೨: ಹೆರಕನ ಗದ್ದೆ ಸಿದ್ದಮ್ಮ ಹೆರಿಗೆ ಮಾಡಿಸುವ ದಾಯಿ ವೈದ್ಯರಿಂದ ತರಬೇತಿ ಪಡೆದು ಸೋಲಿಗರ ಪೋಡುಗಳಲ್ಲಿ ಹೆರಿಗೆ ಮಾಡಿಸುವಾಕೆ, ಆಕೆಯ ಅನುಭವಗಳು-

ಧ್ವನಿ ೧: ಸೋಲಿಗರ ಸಂಸ್ಕೃತಿ ಆಗ-ಈಗ ಡಾ. ಸುದರ್ಶನ್‌ರವರ ಅನುಭವಗಳು-

ಧ್ವನಿ ೨: ಸೋಲಿಗರ ಅಭಿವೃದ್ಧಿ ಕಾರ್ಯಕ್ರಮಗಳು.

ಧ್ವನಿ ೧: ಕುಟುಂಬ ಯೋಜನೆಯಲ್ಲೂ ಇಂದಿನ ಸೋಲಿಗರು ಮುನ್ಹೆಜ್ಜೆ ಇಟ್ಟಿದ್ದಾರೆ, ಪಾಲಿಸುತ್ತಿದ್ದಾರೆ. ಅದರ ಬಗೆಗೆ ವೈದ್ಯರ ಅನುಭವ-

ಧ್ವನಿ ೨: ಡಾ. ಸುದರ್ಶನ್‌ರವರು ಮುಂದಿನ ಯೋಜನೆಗಳ ಬಗ್ಗೆ (ವಿವರಿಸುತ್ತಾ) ದನಿಗೂಡಿಸಿದ ಬಗೆ-

ಧ್ವನಿ ೧: ಡಾ. ಸೋಮಸುಂದರಂ ಕೇಂದ್ರದ ಸಂಯೋಜನಾಧಿಕಾರಿ, ಹಾಗೂ ಗೌರವ ಕೋಶಾಧಿಕಾರಿ, ಇವರು ಸರ್ಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ ತಮ್ಮ ಸೇವೆಯನ್ನು ಈ ಸೋಲಿಗರ ಅಭಿವೃದ್ಧಿಗಾಗಿ ಮೀಸಲಿಟ್ಟವರು. ಇವರು ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತಾಂತ್ರಿಕ ತರಬೇತಿ ಕೇಂದ್ರದ ಕಡೆ ಗಮನವಹಿಸಿದ್ದಾರೆ. ಈ ಕೆಲಸಗಳಿಗೆ ಸ್ಫೂರ್ತಿ-

ಧ್ವನಿ ೨: ಆದಿವಾಸಿ ಸೋಲಿಗರ ಬಗೆಗೆ ಪುಸ್ತಕವನ್ನೇ ಬರೆದ ಇವರ ಅನುಭವಗಳು-

ಧ್ವನಿ ೧: ಈ ಕೇಂದ್ರ, ಅನೇಕ ಜನರಿಗೆ ವೃತ್ತಿ ತರಬೇತಿಯನ್ನು ವಿವಿಧ ರೀತಿಯಲ್ಲಿ ನೀಡುತ್ತಿದೆ. ಇದು ಸೋಲಿಗರಿಗೆ ಶಿಕ್ಷಣ ನೀಡುವುದಲ್ಲದೆ ಆರ್ಥಿಕವಾಗಿಯೂ ಮುಂದುವರಿಯಲು ನೆರವಾಗಿದೆ. ಸ್ವಯಂ ಉದ್ಯೋಗ ಒದಗಿಸುವಲ್ಲಿ ಸಹಾಯಕವಾಗಿದೆ.

ಧ್ವನಿ : ಒಂದೊಂದು ವಿಭಾಗಕ್ಕೂ ಭೇಟಿ ನೀಡಿದಾಗ ಅವರು ತಮ್ಮ ಅನಿಸಿಕೆಗಳನ್ನು ನುಡಿದಿದ್ದಾರೆ-

ಧ್ವನಿ ೧: ಹೊಸಪೋಡಿನ ಶಿವನೇಗೌಡರು ಈ ಕೇಂದ್ರದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ-

ಧ್ವನಿ ೨: ಜೇನು ತರಬೇತಿ ನೀಡುವ ಸಿ.ಎಸ್. ಕೃಷ್ಣಮೂರ್ತಿ-

ಧ್ವನಿ ೨: ರಾಮು, ಮೇಣದ ಬತ್ತಿ ತಯಾರಿಕೆಯನ್ನು ಕಲಿಯಲು ಬಂದಾತ ರಾಮು-

(Effect ಮಗ್ಗ)

ಧ್ವನಿ ೧: ಮಗ್ಗದ ಕೆಲಸ ಮಾಡಿ, ಮುಂದೆ ತಾನೇ ಸ್ವಯಂ ಉದ್ಯೋಗ ಮಾಡಿ ಜೀವಿಸುವಾಸೆ ಎಸ್. ನಂಜನಿಗೆ-

ಧ್ವನಿ ೨: ವೃತ್ತಿಪರ ಶಿಕ್ಷಣ ವಿಭಾಗದ ಮೇಲ್ವಿಚಾರಕ ಮಹಾದೇವ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾ-

(Effect ಹೊಲಿಗೆ ಯಂತ್ರ)

ಧ್ವನಿ ೧: ಹೊಲಿಗೆ ತರಬೇತಿ ಪಡೆಯುತ್ತಿರುವ ಜಡೆಯಪ್ಪ-

(ಮರಗೆಲಸದ Effect)

ಧ್ವನಿ ೨: ಮರಗೆಲಸದ ಕಾಯಕವನ್ನು ಆರಿಸಿಕೊಂಡ ಮಾದೇವ-

(Effect ಸ್ವೆಟರ್ ಮಿಷಿನ್)

ಧ್ವನಿ ೧: ಗಾಯಿತ್ರಿ ಸ್ವೆಟರ್ ಹೆಣಿಕೆಯ ತರಬೇತಿಯಲ್ಲಿದ್ದಾಳೆ.

ಧ್ವನಿ ೨: ಇದು ಮಾದೇವಿ, ರಂಗಮ್ಮ ವಿಧಿಯಮ್ಮ ಕೆಲಸದ ಆಯಾಸ ಮರೆಯಲು ಹಾಡುತ್ತಿದ್ದ ಗೀತೆ-

(ಹಾಡು)

ಧ್ವನಿ ೧: ಹೆಣಿಕೆ ಕಸೂತಿಯನ್ನು ಕಲಿಸುವ ಶಾಂತಲಾ ಏನನ್ನುತ್ತಾರೆ?

ಧ್ವನಿ ೨: ಬೇಕರಿ ತರಬೇತಿ ಪಡೆಯುತ್ತಿರುವ ನಂಜ-

ಧ್ವನಿ ೧: ಕಾಲು ಹುಣ್ಣಾಗಿ ಆಸ್ಪತ್ರೆಯಲ್ಲಿ ಒಂದು ಕಾಲನ್ನು ಕತ್ತರಿಸಿ ಹಾಕಬೇಕಾಯಿತು ಕುಂಬೇಗೌಡರಿಗೆ. ಆದರೂ ಇಲ್ಲಿ ಅಗರಬತ್ತಿ ತಯಾರಿಕೆ ಕೆಲಸದಲ್ಲಿ ನಿರತರಾಗಿದ್ದಾರೆ.

ಧ್ವನಿ : ಇವೆಲ್ಲಾ ಹತ್ತು ಹಲವಾರು ಜನರ ಅಭಿವೃದ್ಧಿ ಕಾರ್ಯಕ್ರಮ. ವೃತ್ತಿಪರ ಶಿಕ್ಷಣದಲ್ಲಿ ಅವರು ತೋರುತ್ತಿರುವ ಆಸಕ್ತಿ.

(ಶಿವನೇಗೌಡರ ಮಾತು)

ಧ್ವನಿ : ಹಳೆಯ ಸೋಲಿಗ ಜನಾಂಗದವರು ಅಭಿಪ್ರಾಯ ಪಡುವಂತೆ ಇಂದಿನ ಯುವ ಪೀಳಿಗೆ ಹೊಸತನವನ್ನು ಬಯಸುತ್ತಾರೆ. ಆಟಪಾಠಗಳಲ್ಲಿ, ಉಡುಗೆ, ತೊಡಿಗೆಗಳಲ್ಲಿ, ಕೆಲಸ - ಕಾರ್ಯಗಳಲ್ಲಿ ಪ್ರತಿಯೊಂದರಲ್ಲೂ.

ಧ್ವನಿ : ಡಾ. ಸುದರ್ಶನ್‌ರವರೇ ಹೇಳುವಂತೆ "ಒಂದು ಕಾಲವಿತ್ತು. ಸೋಲಿಗರನ್ನು ಪಟ್ಟಣ ಜೀವನಕ್ಕೆಳೆಯಲು, ಅವರ ಜೀವನ ಮಟ್ಟವನ್ನು ಸುಧಾರಿಸಲು, ಬಹಳ ಕಷ್ಟಪಡಬೇಕಾಯಿತು ಎಂದು. ಈಗ ಆಸ್ಪತ್ರೆ, ಶಿಕ್ಷಣ, ತಾಂತ್ರಿಕ ಶಿಕ್ಷಣ ಇವು ಅವರ ಪಾಲಿಗೆ ವರದಾನವಾಗಿದೆ. ಎಲ್ಲರೂ ಬೆಲ್ಲಕ್ಕೆ ಜೇನು ಒಂದು ಕಾಲ ಮುತ್ತುವಂತೆ ಮುತ್ತುತ್ತಿದ್ದಾರೆ. ಒಂದು ಕಾಲ ಬರಬಹುದು. ಶಾಲೆಗೆ ಸೀಟಿಲ್ಲ, ಕಾಯಬೇಕು ಎಂದು"

ಧ್ವನಿ : ಸೋಲಿಗರಲ್ಲೂ ಈ ಎಲ್ಲದರ ದಾಹ ಹೆಚ್ಚುವ ಕಾಲ ಬರಲು ದೂರವಿಲ್ಲ ಎಲ್ಲರೂ ಎಲ್ಲದರಲ್ಲೂ ಮುಂದಿದ್ದಾರೆ. ಮುಂದೆ ಬರಬೇಕೆಂಬ ಆಸೆ ಇಟ್ಟು ಕೊಂಡಿದ್ದಾರೆ. ಮಾನವರಾದ ಎಲ್ಲರಿಗೂ ಇದು ಸಹಜವಲ್ಲವೇ? ಹೌದು ಎಲ್ಲರೂ ತಮ್ಮ ಜೀವನವನ್ನು ಸುಂದರವಾಗಿ ರೂಪಿಸಿಕೊಳ್ಳಲು ಮುನ್ನೆಜ್ಜೆ ಇಡಲೇಬೇಕು ಅಲ್ಲವೇ?

*

# ಕೈಗೂಡಿದ ಕನಸುಗಳು

ಹೆಂಡತಿ : ಏನ್ರೀ........?

ಗಂಡ : ಏನೇ ಅದು?

ಹೆಂಡತಿ : ನನಗೂ ಮನೆಯಲ್ಲಿ ಕೂತು ಕೂತು ಬೇಸರ.

ಗಂಡ : ಏನಾದ್ರೂ ಕೆಲಸಕ್ಕೆ ಸೇರ್ತೀಯಾ?

ಹೆಂಡತಿ : ಕೆಲಸ ಯಾರು ಕೊಡ್ತಾರ್ರೀ.....?

ಗಂಡ : ಮತ್ತೆ?

ಹೆಂಡತಿ : ನಾನೇ ಏನಾದ್ರೂ ಒಂದು ಸ್ವಯಂ ಉದ್ಯೋಗ ಮಾಡಬೇಕು ಅಂತಿದ್ದೀನಿ.....

ಗಂಡ : ಅವೆಲ್ಲಾ ಅಷ್ಟು ಸುಲಭ ಅಂತ ತಿಳ್ಕೊಂಡ್ಯೇನು?

ಹೆಂಡತಿ : ಕಷ್ಟ ಪಡದೆ ಸುಖ ಸಿಗುತ್ತಾ? ಕೈ ಕೆಸರಾದ್ರಲ್ವೇ ಬಾಯಿ ಮೊಸರು.

ಗಂಡ : ನೀನು ಏನು ಮಾಡ್ತೀಯೇ?

ಹೆಂಡತಿ : ಅಲ್ರೀ ಮಾಡ್ತೀನಿ ಅಂದ್ರೆಷ್ಟು ಕೆಲಸಗಳಿಲ್ಲ? ಅನೇಕ ಸ್ವಯಂ ಸೇವಾ ಸಂಸ್ಥೆಗಳಿವೆ. ಅವು ಮಹಿಳೆಯರ ಉದ್ಯಮದ ಬಗ್ಗೆ ತರಬೇತಿ ಕೊಡ್ತಾರೆ. ಏನು ಮಾಡಬಹುದು? ಸಾಲ ಯಾವರೀತಿ ತೆಗೆದುಕೊಳ್ಳಬೇಕು? ಎಲ್ಲವನ್ನೂ ಮಾಹಿತಿ ಮಾಡಿಕೊಡ್ತಾರೆ, ತರಬೇತಿ ಕೊಡ್ತಾರೆ. ಇದರಿಂದ ಎಷ್ಟು ಜನ ಉಪಯೋಗ ಪಡೆದುಕೊಂಡಿದ್ದಾರೆ ಗೊತ್ತೇ? ನನ್ನ ಜೊತೆ ಬನ್ನಿ ನಿಮಗೆ ಎಲ್ಲವನ್ನೂ ಮಾಹಿತಿ ಮಾಡ್ಕೊಡ್ತೀನಿ ಆಮೇಲೆ ಬೇಕಾದ್ರೆ ನೀವೇ ಹೇಳುವಿರಿ ಸುಲಭವೋ ಕಷ್ಟವೋ. ಅದು ನನ್ನಕೈಲಿ ಆಗುತ್ತೋ ಇಲ್ವೋ ಎಂಬುದನ್ನು.

ನವೀನ್ : ನಾನೇ ಮಾಡಿ ಯಶಸ್ವಿಯಾಗಿದ್ದು, ನಿಮ್ಮ ಕೈಲಿ ಯಾಕೆ ಆಗೋಲ್ಲ ಆಗೇ ಆಗುತ್ತೆ ನಾನು ಬೇಕಾದ್ರೆ ಮಾಹಿತಿ ಮಾಡ್ತೀನಿ ತಾಳಿ........

ಗಂಡ : ಮಾಡಯ್ಯ...... ಮಾಡು...... ನವೀನ್.

ನವೀನ್ : ರವಿ, ನಿಜವಾಗ್ಲೂ ರಾಷ್ಟ್ರದ ಅರ್ಥ ವ್ಯವಸ್ಥೆಯಲ್ಲಿ ಸಣ್ಣ ಕೈಗಾರಿಕೆಗಳ ಪಾತ್ರ ಬಹಳ ದೊಡ್ಡದು. ದೇಶದ ಔದ್ಯಮಿಕ ಉತ್ಪನ್ನದ ಒಟ್ಟು ಮೌಲ್ಯದ ಶೇಕಡಾ

೩೮ರಷ್ಟು ಭಾಗ ರಫ್ತು ಗಳಿಕೆಯಲ್ಲಿ ಶೇಕಡ ೪೦ರಷ್ಟು ಈ ಸಣ್ಣ ಕೈಗಾರಿಕೆಗಳಿಂದಲೇ ಬರುತ್ತೆ.

ಗಂಡ : ಹೊಸ ಆರ್ಥಿಕ ಕ್ರಮಗಳಲ್ಲಿ ಇವುಗಳಿಗೆ ತಕ್ಕ ಸ್ಥಾನಮಾನ ನೀಡಲೆಂದು ಸರಕಾರ ಸಣ್ಣ ಕೈಗಾರಿಕಾ ವಲಯದ ವಿಕಾಸಕ್ಕೆ ಚಾಲನೆ ನೀಡುವ ಪ್ರತ್ಯೇಕ ಕ್ರಮಗಳನ್ನು ಪ್ರಕಟಿಸಿದೆ.

ಹೆಂಡತಿ: ಏನು ಹೇಳಿ ನವೀನ್. ಇವರೂ ಸ್ವಲ್ಪ ಅರ್ಥ ಮಾಡಿಕೊಳ್ಳಲಿ.

ನವೀನ್: ಅವನಿಗೇನು ಗೊತ್ತಿಲ್ಲ ಅಂತೀರಾ?.......

ಹೆಂಡತಿ: ವ್ಯವಹಾರದ ದೃಷ್ಟಿಯಿಂದ ಸ್ವಲ್ಪ ಹಾಗೇ.

ಗಂಡ : ಹೇಳಪ್ಪಾ

ನವೀನ್: ಅವನೇನೂ ತಿಳ್ಕೊಂಡಿಲ್ಲ ಅಂತ ಭಾವಿಸಬೇಡ. ಅವನೂ ಹೇಳ್ತಾನೆ ತಾಳು ಸ್ವಲ್ಪ. ಸಣ್ಣ ಕೈಗಾರಿಕೆ ಘಟಕಗಳು ಕೇಂದ್ರ ಸರ್ಕಾರದಿಂದ ಲೈಸನ್ಸ್ ಅನುಮತಿ ಪಡೆಯಬೇಕಾಗಿಲ್ಲ. ಹೂಡುವ ಬಂಡವಾಳದ ಮಿತಿಯನ್ನು ಎರಡು ಲಕ್ಷದಿಂದ ಐದು ಲಕ್ಷ ರೂಪಾಯಿಗಳಿಗೆ ಹೆಚ್ಚಿಸಲಾಗುವುದು. ತಾಂತ್ರಿಕ ಪರಿಣತಿ ಒದಗಿಸಲು, ರಫ್ತು ವ್ಯಾಪಾರ ಹೆಚ್ಚಿಸಲು ಭಾರತ ಸಣ್ಣ ಕೈಗಾರಿಕಾ ಅಭಿವೃದ್ಧಿ ಸಂಸ್ಥೆ, ತಂತ್ರಜ್ಞಾನ ಅಭಿವೃದ್ಧಿ ಘಟಕ ಹಾಗೂ ರಫ್ತು ಅಭಿವೃದ್ಧಿ ಘಟಕಗಳನ್ನು ಸ್ಥಾಪಿಸಲಿದೆ. ಇವು ದೇಶ ವಿದೇಶಗಳಲ್ಲಿನ ಇಂಥ ಸಂಸ್ಥೆಗಳೊಡನೆ ಸಮಾಲೋಚನೆ ನಡೆಸಲಿದೆ.

ಗಂಡ : ಪುಟ್ಟ ಕೈಗಾರಿಕಾ ಘಟಕಗಳಿಗೆ ಪ್ರತ್ಯೇಕ ಉತ್ತೇಜನ ನೀಡಲಾಗುವುದು.ದೇಶ ವಿದೇಶಗಲ್ಲಿ ಉತ್ಪನ್ನಗಳಿಗೆ ವ್ಯಾಪಕ ಮಾರುಕಟ್ಟೆ ದೊರೆಯುವಂತಾಗಲು ಕೈ ಮಗ್ಗ ಮತ್ತು ಕರಕುಶಲ ವಸ್ತು ವಲಯ ಹಾಗೂ ಕೃಷಿ ಮತ್ತು ಆಹಾರ ವಸ್ತುಗಳ ಸಂಸ್ಕರಣ ಘಟಕಗಳಿಗೆ ವಿಶೇಷ ಗಮನ ನೀಡಲಾಗುವುದು.

ಹೆಂಡತಿ: ಥಿಯರಿ ಸಾಕು ಪ್ರಾಕ್ಟಿಕಲ್ ಕಡೆ ನೋಡೋಣ.... ಬನ್ನಿ.......

ಧ್ವನಿ : ಕೋರಮಂಗಲದಲ್ಲಿರುವ ಇನ್‌ಸ್ಟಿಟ್ಯೂಟ್ ಫಾರ್ ಯೂತ್ ಅಂಡ್ ಡೆವಲಪ್‌ಮೆಂಟ್ ಒಂದು ಸ್ವಯಂ ಸೇವಾ ಸಂಸ್ಥೆ. ಇವರು ಮಹಿಳೆಯರು ತಮ್ಮ ಕಾಲಮೇಲೆ ತಾವು ನಿಲ್ಲುವಂತೆ ಸಣ್ಣ ಕೈಗಾರಿಕೋದ್ಯಮ ಸ್ಥಾಪಿಸಲು ಬೇಕಾದ ತರಬೇತಿಯನ್ನು ನೀಡಲಿದ್ದಾರೆ. ಅಲ್ಲಿನ ಮುಖ್ಯಸ್ಥರಾದ ಚಂದ್ರಾ ನಿರಂಜನ್ ಅವರು ಇದರ ಧ್ಯೇಯೋದ್ದೇಶಗಳನ್ನು ಹೇಳ್ತಾರೆ.

ಧ್ವನಿ : ತರಬೇತಿಗೆ ಬಂದ ಗೀತಾ ಪ್ರಕಾಶ್‌ಗೆ ಬ್ಯೂಟಿ ಪಾರ್ಲರ್ ಮಾಡಬೇಕೆಂಬ ಉದ್ದೇಶ.

ಧ್ವನಿ : ಲಲಿತಾ ಚನ್ನಪಟ್ಟಣ ಬೊಂಬೆ ತಯಾರಿಕೆಗೆ ೧ ತಿಂಗಳು ತರಬೇತಿ ಪಡೆದಿದ್ದಾರೆ.

ಧ್ವನಿ : ಕಲಾ ದಿವಾಕರ್ ಅವರಿಗೆ ಉಡುಪು ಉದ್ಯಮದಲ್ಲಿ ಆಸಕ್ತಿ-

ಧ್ವನಿ : ರುಕ್ಮಿಣಿ ರಂಗನಾಥ್-

(Music)

ಧ್ವನಿ : ರೇಷ್ಮೆ ಉಡುಪು ಹಾಗೂ ಚರ್ಮದ ಸೂಟ್‌ಕೇಸ್ ಮುಂತಾದುವುಗಳನ್ನು ಮನೆಯಲ್ಲೇ ಮಾಡಿಸುತ್ತಾರೆ ನಳಿನಿ ಪದ್ಮನಾಭನ್. ಪರದೇಶಗಳಲ್ಲಿ ವ್ಯವಹಾರ ಮಾಡುವ ಬಯಕೆ ಇವರದು.

ಧ್ವನಿ : ವಿಧವೆಯಾದ ಮೇಲೆ ಉಲ್ಲನ್ ಉಡುಪುಗಳ ಉದ್ಯಮ ಸ್ಥಾಪಿಸಿ ತಮ್ಮ ಕಾಲ ಮೇಲೆ ತಾವೇ ನಿಂತು ಎರಡು ಮಕ್ಕಳನ್ನು ಸಾಕುತ್ತಿದ್ದಾರೆ. ಜಯಶ್ರೀ ಕುಲಕರಣಿ ಅವರ ಅನಿಸಿಕೆಗಳು.

ಧ್ವನಿ : ಉಲ್ಲನ್ ಉದ್ಯಮದಲ್ಲಿ ಕೆಲಸ ಮಾಡುತ್ತಿರುವ ಗೀತಾ-

ಧ್ವನಿ : ಇದೇ ಉದ್ಯಮದಲ್ಲಿ ಭಾಗಿಯಾಗಿರುವ ಜಯಶ್ರೀ ಅಮೃತೆ-

ಧ್ವನಿ : ಮಹಿಳಾ ಉಡುಪುಗಳ ಉದ್ಯಮದಲ್ಲಿ ತೊಡಗಿರುವ ಗೀತಾರಾವ್-

ಧ್ವನಿ : ಇಲ್ಲಿ ಕೆಲಸ ಮಾಡುವ ರಘು ಅವರು-

ಧ್ವನಿ : ಕಾಡುಗೊಂಡನ ಹಳ್ಳಿಯಲ್ಲಿ ಲಿಡ್ಕರ್ ಸಂಸ್ಥೆಯವರು ಚರ್ಮೋದ್ಯಮಕ್ಕೆ ನೆರವು ನೀಡಲು ಕೆಲಸಗಾರರಿಗೆ ಮನೆ ಕಟ್ಟಿಸಿಕೊಟ್ಟಿದ್ದಾರೆ. ಅವರು ಮಹಿಳೆ ಹಾಗೂ ಪುರುಷರ ಚಪ್ಪಲಿ, ಬೂಟುಗಳನ್ನು ಸಿದ್ಧಪಡಿಸುತ್ತಾರೆ.

ಧ್ವನಿ : ಮೋತಿಲಾಲ್ ಹೆಂಗಸರ ಚಪ್ಪಲಿಗಳನ್ನು ಸಿದ್ಧಪಡಿಸುತ್ತಾರೆ. ಅವರ ಕಾರ್ಯ ಚಟುವಟಿಕೆಗಳು.

ಧ್ವನಿ : ಲೋಕನಾಥ್-

ಧ್ವನಿ : ನಂಜಪ್ಪನವರು ಏನು ಹೇಳುತ್ತಾರೆ?

ಧ್ವನಿ : ಮುತ್ತುರಾಜ್ ಅವರ ಅನುಭವಗಳು-

ಧ್ವನಿ : ಗೌರಿ ಸ್ವಾಮಿಯವರು ಗ್ಯಾಸ್ ಸ್ಟೌವ್ ಮಾಡುವ ಸಣ್ಣ ಕೈಗಾರಿಕೆಯಲ್ಲಿ ನಿರತರಾಗಿದ್ದಾರೆ.

ಧ್ವನಿ : ಉಮಾ ರೆಡ್ಡಿಯವರು ಸರ್ಕಾರಿ ಹುದ್ದೆಗೆ ಹೋಗದೆ ಎಲೆಕ್ಟ್ರಾನಿಕ್ ಸಾಮಗ್ರಿಗಳ ತಯಾರಿಕೆಯಲ್ಲಿ ತೊಡಗಿದ್ದಾರೆ.

ಧ್ವನಿ : ವತ್ಸಲಾ ಪ್ರಭು ಅವರು ಪ್ಲಾಸ್ಟಿಕ್ ದಾರದ ಉದ್ಯಮ ನಡೆಸಿ ಪ್ರಗತಿಯ ಪಥದಲ್ಲಿದ್ದಾರೆ.

ಧ್ವನಿ : ಮಧುರಾ ಛತ್ರಪತಿಯವರು ಆಹಾರ ಪದಾರ್ಥ ಸಂಸ್ಕರಣ ಉದ್ಯಮ ನಡೆಸುತ್ತಾ ಪರದೇಶಕ್ಕೂ ರಫ್ತು ಮಾಡುತ್ತಿದ್ದಾರೆ ಅವರ ಅನುಭವಗಳು-

ಧ್ವನಿ : ಕರ್ನಾಟಕ ಸಣ್ಣಕೈಗಾರಿಕೆಗಳ ಸಂಘದ ಅಧ್ಯಕ್ಷರಾದ ಶ್ರೀ ಡಿ.ಎನ್. ಗಂಗಾಧರ್ ಅವರು KASSIA ಸಂಸ್ಥೆ ಹೇಗೆ ನೆರವಾಗಿದೆ ಎಂದು ತಿಳಿಸುತ್ತಾ-

ಧ್ವನಿ : ಇಲ್ಲಿನ ಕೆಲಸಗಾರರಾದ ಸರದಾರ್ ಹಾಗೂ ಶೈಲಜ ಅವರನ್ನು ಮಾತನಾಡಿಸಿದಾಗ-

ಧ್ವನಿ : DMM ಊದುಬತ್ತಿ ಉದ್ಯಮದ ನಿರ್ವಾಹಕರಾದ ಆರ್.ಬಿ. ನಂಜುಂಡಪ್ಪ ಅವರು ತಮ್ಮ ಉದ್ಯಮದ ಬಗೆಗೆ ಹೇಳುತ್ತಾ-

ಧ್ವನಿ : ಮನೆಯಲ್ಲೇ ಸಣ್ಣ ಉದ್ಯಮ ಮಾಡುತ್ತಿರುವ ಅನುರಾಧಾ ಗುಡಿ-

ನವೀನ್: ಇಷ್ಟೆಲ್ಲಾ ಕೇಳಿದ ಮೇಲೆ ಏನನ್ನಿಸಿತು? ರವಿ.

ಗಂಡ : ಅನ್ನಿಸುವುದೇನು ಎಲ್ಲರ ಕನಸುಗಳೂ ಕೈಗೂಡಿವೆ ಕೈಗೂಡುತ್ತಿವೆ. ಎನ್ನಿಸಿತು.

ಹೆಂಡತಿ: ಇನ್ನು ನನ್ನದೇಕೆ ಆಗಬಾರದು?

ನವೀನ್: ಖಂಡಿತ ಆಗುತ್ತೆ.

ಹೆಂಡತಿ: ಮಾಡಿ ತೋರಿಸ್ತೀನಿ ನೋಡ್ತಾ ಇರಿ, ಅವರೆಲ್ಲರ ಕನಸುಗಳೂ ಕೈಗೂಡಿವೆ ಎಂದರೆ ನನ್ನ ಕನಸೇಕೆ ಕೈಗೂಡಬಾರದು?

ಗಂಡ : ನವೀನ್ ಹೇಳಿದ್ನಲ್ಲಾ..... ಆಗುತ್ತೆ ಅಂತ....... ಇನ್ನೊಂದು ಸ್ವಲ್ಪ ಮಾಹಿತಿ ಮಾಡಿಕೊಡಪ್ಪಾ.......

ನವೀನ್: ಸಣ್ಣ ಕೈಗಾರಿಕೆಗಳಿಗೆ ಗುಣಮಟ್ಟದ ಬಗ್ಗೆ ಸಲಹೆ ನೀಡಲು ಮತ್ತು ಅವುಗಳಿಗೆ ಸಾಮಾನ್ಯ ಪರೀಕ್ಷಾ ಸೌಲಭ್ಯಗಳನ್ನು ಸ್ಥಾಪಿಸಲು ಮುಂದುಬರುವಂತೆ ದೇಶದಲ್ಲಿನ ಔದ್ಯಮಿಕ ಸಂಘ ಸಂಸ್ಥೆಗಳಿಗೆ ಉತ್ತೇಜನ ನೀಡಲಾಗುವುದು. ದೇಶದಲ್ಲೆಲ್ಲಾ ತಾಂತ್ರಿಕ ಮಾಹಿತಿ ಕೇಂದ್ರಗಳನ್ನು ತೆರೆಯಲಾಗುವುದು. ಪ್ರಥಮ ಪೀಳಿಗೆಯ ಉದ್ಯಮಿಗಳಿಗೆ ನೆರವು ನೀಡಲು 'ಉದ್ಯಮ ಶೀಲತೆ ಅಭಿವೃದ್ಧಿ ಕಾರ್ಯಕ್ರಮ'ಗಳಲ್ಲಿ ಔದ್ಯಮಿಕ ಸಂಘ ಸಂಸ್ಥೆಗಳು ಪಾಲುಗೊಳ್ಳುವಂತೆ ನೋಡಿಕೊಳ್ಳಲಾಗುವುದು.

ಗಂಡ : ನವೀಕರಣ ಮತ್ತು ತಂತ್ರಜ್ಞಾನದ ಇತ್ತೀಚಿನ ಸುಧಾರಣೆಗಳನ್ನು ಅಳವಡಿಸಿಕೊಳ್ಳುವುದು ಮತ್ತು ಬಂಡವಾಳ ಮಾರುಕಟ್ಟೆಗೆ ಪ್ರದೇಶ ಪಡೆಯುವುದು, ಸಣ್ಣ ಪ್ರಮಾಣದ ಕೈಗಾರಿಕೆಗೆ ಸಾಧ್ಯವಾಗುವಂತೆ ವಿದೇಶಿ ಪಾಲುಗಾರಿಕೆಯೂ ಸೇರಿ ಒಟ್ಟು ಶೇರು ಹಣದ ಶೇಕಡ ೨೪ರಷ್ಟು ಭಾಗ ಮೀರಿದ ಇಕ್ವಿಟಿ ಪಾಲುಗಾರಿಕೆಯನ್ನು ಈ ವಲಯದಲ್ಲಿ ಹೊಂದಲು ಇತರ ಔದ್ಯಮಿಕ ಘಟಕಗಳಿಗೆ ಅನುಮತಿ ನೀಡಲಾಗುವುದು.

ನವೀನ್: ಸಾಲ ಸೌಲಭ್ಯಕ್ಕೆ ಕೈಗೊಳ್ಳಬೇಕಾದ ಕ್ರಮ ಸೂಚಿಸಲು ಭಾರತದ ರಿಸರ್ವ್ ಬ್ಯಾಂಕಿನ ಡೆಪ್ಯುಟಿ ಗವರ್ನರ್ ಅವರ ಅಧ್ಯಕ್ಷತೆಯಲ್ಲಿ ಒಂದು ಉಚ್ಚ ಮಟ್ಟದ

ಸಮಿತಿಯನ್ನು ರಚಿಸಲಾಗಿದೆ. ಸಣ್ಣ ಪ್ರಮಾಣದ ಕಾರ್ಯಾದರ್ಶಿಯವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲಾದ ರಫ್ತು ಉತ್ತೇಜನಾ ಸ್ಥಾಯಿ ಸಮಿತಿಯು ಸಣ್ಣ ಕೈಗಾರಿಕೋದ್ಯಮಿಗಳ ರಫ್ತು ಸಮಸ್ಯೆಗಳ ಬಗ್ಗೆ ವಿಚಾರಿಸಲಾಗುವುದು.

ಗಂಡ : ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆಂದು ಒಂದು ಸಮಗ್ರ ಮೂಲ ಸೌಲಭ್ಯ ಅಭಿವೃದ್ಧಿ ಯೋಜನೆಯನ್ನು ರೂಪಿಸಲಾಗಿದೆ. ಸಣ್ಣ ಕೈಗಾರಿಕಾ ಘಟಕಗಳು ಸಲ್ಲಿಸುವ ಬಿಲ್‌ಗಳ ಹಣವನ್ನು ಬೇಗ ಪಾವತಿ ಮಾಡಲು ಸರಕಾರ ಹೊಸ ಕಾನೂನು ರಚಿಸಲಿದೆ. ಸಣ್ಣ ಕೈಗಾರಿಕೆಗಳ ಆಧುನಿಕಗೊಳಿಸಲು ತಂತ್ರಜ್ಞಾನವನ್ನು ಮೇಲ್ದರ್ಜೆಗೆ ಏರಿಸಲು ದೇಶದ ವಿವಿಧ ಕಡೆ ಟೂಲ್‌ರೂಮ್‌ಗಳನ್ನೂ ಮತ್ತು ಸಂಸ್ಕರಣ - ಉತ್ಪನ್ನ ವಿಕಾಸ ಕೇಂದ್ರಗಳನ್ನು ಸ್ಥಾಪಿಸಲಾಗುವುದು. ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗ ಅವಕಾಶ ಒದಗಿಸಲು ಯೋಜನಾ ಆಯೋಗದ ಉಪಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಒಂದು ಉಚ್ಚ ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

ಹೆಂಡತಿ : ಅಂತೂ ಸಾಕಷ್ಟು ಮಾಹಿತಿ ಇಬ್ಬರೂ ತಿಳ್ಕೊಂಡಿದ್ದೀರಿ ನೀವು ಬರೇ ಥಿಯರಿ- ನಾನು ಪ್ರಾಕ್ಟಿಕಲ್ ಆಗಿ ಮಾಡಿ ತೋರಿಸ್ತೀನಿ.

ನವೀನ್ : ಈಗಿನ ಕಾಲದಲ್ಲಿ ಮಹಿಳೆಯರು ಪುರುಷರಿಗಿಂತ ಯಾವುದರಲ್ಲೂ ಕಮ್ಮಿ ಇಲ್ಲ ಅಂತ ಕೇಳ್ತಿದ್ದೆ. ಈಗ ನೋಡಿದ ಹಾಗಾಯ್ತು.

ಹೆಂಡತಿ : ಬರೇ ಮಹಿಳೆಯರೇ ಅಲ್ಲ ಅನೇಕ ಸೋಂಬೇರಿಗಳು ಪುರುಷರಲ್ಲೂ ಇದ್ದಾರೆ. ಅವರಿಗೂ ಈ ಕೈಗಾರಿಕಾ ನೀತಿ ಬಹಳ ಉಪಯುಕ್ತವಾಗಿದೆ ಅಷ್ಟೇ?

ಗಂಡ : ಖಂಡಿತ.

*

# ಹಸಿರು ನಕ್ಕಾಗ

**ವನಮಹೋತ್ಸವ**

ಹೆಣ್ಣು : ಹೌದು ಹಸುರಿನ ಬಸುರಿಂದಲೇ ನಮ್ಮ ಜೀವನ ನಿಂತಿದೆ. ಇಳೆಗೆ ಮಳೆ, ಬೆಳೆ, ಹೂವು, ಕಾಯಿ, ಹಣ್ಣು, ಎಲೆ, ಏನೆಲ್ಲಾ.....! ಹಸಿರು ನಕ್ಕಾಗ ನಮ್ಮ ಉಸಿರು!

ಗಂಡು : ಏನೇ ನಿನ್ನಷ್ಟಕ್ಕೆ ನೀನೇ ಮಾತಾಡ್ಕೊಳ್ತಿದ್ದೀಯೆ?

ಹೆಣ್ಣು : ಈ ಹೊತ್ತು "ವನಮಹೋತ್ಸವ". ಈ ಸಂದರ್ಭದಲ್ಲಿ ಹಾಡಿದ ಹಾಡು ಕೇಳಿ ನಿಜ ಅನ್ನಿಸಿತು.

ಗಂಡು : ವನಮಹೋತ್ಸವ ಅಂದಾಗ ಹಾಡು ಹಾಡಿ ಒಂದೆರಡು ಗಿಡ ನೆಟ್ಟು ಆಮೇಲೆ ಸುಮ್ಮನಾಗ್ಬಿಡ್ತೀವಿ ನಾವು. ಆದ್ರೆ ಈ ಕಾರ್ಯ ಸದಾ ಆಗಬೇಕು. ಮನೆ ಮನೆಗಳ ಮುಂದೆ ಎರಡೆರಡು ಗಿಡಗಳನ್ನು ಹಾಕಿ ಅದನ್ನು ಸಾಕಿ ದೊಡ್ಡದನ್ನು ಮಾಡ್ತಾ ಬಂದ್ರೆ ಎಷ್ಟೋ ವಾಸಿ!

ಹೆಣ್ಣು : ನೀವು ಹೇಳೋದು ನಿಜ. ನಮ್ಮ ಜನ ಬರೇ ಆಚರಣೆಯನ್ನು ಭಾಷಣದಲ್ಲೇ ಮುಗಿಸಿ ಆಮೇಲೆ ಮರೆತು ಬಿಡ್ತಾರೆ. ಅದು ಜ್ಞಾಪಕಕ್ಕೆ ಬರಲೀ ಅಂತ್ಲೇ ಅಲ್ವೇ ವರ್ಷಕ್ಕೊಂದು ಸಾರಿ ಈ ವನಮಹೋತ್ಸವ ಆಚರಿಸೋದು.

ಗಂಡು : ಉದ್ದೇಶ ಒಳ್ಳೆಯದು. ಅದು ಕಾರ್ಯರೂಪಕ್ಕೆ ಬರಬೇಕು. ನಮ್ಮ ಮಕ್ಕಳು ಮರಿಗಳಿಗೆ ಗಿಡ, ಮರ ಬೆಳೆಸುವ ಪ್ರಜ್ಞೆಯನ್ನು ಬೆಳೆಸಬೇಕು.

ಹೆಣ್ಣು : ಇತ್ತೀಚೆಗಂತೂ ಬಿಡಿ ಇದಕ್ಕಾಗಿ ಅರಣ್ಯ ಇಲಾಖೆ ಕೋಟ್ಯಂತರ ರೂಪಾಯಿ ಹಣವನ್ನು ಖರ್ಚು ಮಾಡ್ತಾ ಇದೆ. ಗಿಡಗಳನ್ನು ಒದಗಿಸೋದು, ಜನರಿಗೆ ರಸ್ತೆಯಲ್ಲಿ ಸಾಲು ಮರಗಳನ್ನು ನೆಡಿಸುವುದು ಇದನ್ನು ನೋಡಿದ್ರೆ ಅಶೋಕನ ಕಾಲ ನಮಗೆ ಜ್ಞಾಪಕ ಬರುತ್ತೆ. ಆಗಿನ ಕಾಲದಲ್ಲೂ ಸಾಲು ಮರ ನೆಡುವ ರೂಢಿ ಇತ್ತು. ಪ್ರಯಾಣ ಮಾಡುವವರಿಗೆ ತಂಪು, ಮಳೆ ತರಲಿಕ್ಕೆ ಬಹಳ ಮುಖ್ಯವಾದದ್ದು ಎಂಬ ಪ್ರಜ್ಞೆ ಇತ್ತು. ಹಾಗೆಯೇ ಈಗ್ಲೂ ಸಹ ಗಿಡ, ಮರವಾಗಲು ಸಾಕಷ್ಟು ಕಾಳಜಿ ವಹಿಸಿ, ಆಡು, ದನ, ಕುರಿಗಳು ಮೇಯ್ದು ನಾಶವಾಗದಿರಲಿ ಎಂದು ರಕ್ಷಣೆಗೆ ಅದರ ಸುತ್ತ ಮರದ ಕಟ್ಟುಗಳಿಂದ ಬೇಲು

ಹಾಕಿ ಆಗಾಗ ನೀರು ಹಾಕಿ, ಗೊಬ್ಬರ ನೀಡಿ ಬೆಳೆಸುವ ಕಾರ್ಯ ಹಳ್ಳಿ, ಪಟ್ಟಣಗಳಲ್ಲಿ ನಿರಂತರವಾಗಿ ಸಾಗುತ್ತಿದೆ.

ಗಂಡ : ಸರಕಾರ ಹೀಗೆ ಮಾಡಿದರೆ ಸಾರ್ವಜನಿಕರ ಅಲಕ್ಷ್ಯ ಹೀಗೂ ಇರುತ್ತದೆ. ಸುತ್ತಮುತ್ತಣ ಕಸವನ್ನೆಲ್ಲಾ ಗಿಡದ ಪಕ್ಕಕ್ಕೆ ಒತ್ತರಿಸುವುದು, ಬೀಡಿ ಸಿಗರೇಟು ಸೇದುವ ಮಹಾಶಯರು ಸೇದು ಎಸೆದಾಗ ತರಗೆಲೆ, ಕಾಗದ, ಕಸಕಡ್ಡಿಗಳು ಹತ್ತಿಕೊಂಡು ಉರಿದಾಗ ಚಿಗುರೊಡೆಯುವ ಗಿಡ ನಾಶ! ಇದೆಂಥ ಕೃತ್ಯ! ಗಿಡ ಬೆಳೆಸುವ ಪ್ರಜ್ಞೆಗೆ ಆಘಾತ!

ಹೆಣ್ಣು : ಈ ಸಂದರ್ಭದಲ್ಲಿ ಇನ್ನೊಂದು ಜ್ಞಾಪಕಕ್ಕೆ ಬರುತ್ತದೆ. ಹೈದರಾಲಿ ತಪ್ಪು ಮಾಡಿದವರಿಗೆ ಕೊಡುತ್ತಿದ್ದ ಶಿಕ್ಷೆ ಎಂದರೆ ಆತ ಎರಡು ಗಿಡಗಳನ್ನು ಹಾಕಿ ಮರವಾಗಿ ಮಾಡಬೇಕು. ಇದು ಎಂಥ ಶಿಕ್ಷೆ? ನಿಜವಾಗಿಯೂ ಒಳ್ಳೆಯ ಶಿಕ್ಷೆ.

ಗಂಡು : ಮನುಷ್ಯನಿಗೆ ಸೌದೆ ಬೇಕೂ ಆಗ ಮರ ತರಿಯುತ್ತಾನೆ. ಆಡು, ಕುರಿ ಮೇಯಿಸಲು ಕೊಂಬೆ ರೆಂಬೆಗಳನ್ನು ಕತ್ತರಿಸಿ ಹಾಕುತ್ತಾನೆ. ಮನೆ ಕಟ್ಟಲು ಮರ ಮುಟ್ಟು ಸಾಮಾನುಗಳಿಗೆ ಮರ ಕಡಿಯುತ್ತಾನೆ ಇದು ಅನಿವಾರ್ಯ. ಆದರೆ ಆ ಸ್ಥಳ ತುಂಬುವ ಮತ್ತೊಂದು ಗಿಡ ಬೆಳೆಸುತ್ತಾ ಹೋದರಲ್ಲವೇ ಮುಂದೆ ಸಿಗುವುದು? ಕಾಡೆಲ್ಲಾ ನಾಡಾಗಿವೆ! ಕೆಲವು ಮರಗಳು ಅಪರೂಪವಾಗಿ ಸಿಗುವುದೇ ಇಲ್ಲವಾದರೆ ತೇಗು, ಬೀಟೆ, ಗಂಧ ಮುಂತಾದುವು ಅಪರೂಪವಾಗುತ್ತಿವೆ. ಕಾರಣ ಮನುಷ್ಯ ಇವುಗಳನ್ನು ಕದ್ದಾದರೂ ತಂದು ಹಣ ಸಂಪಾದಿಸಿಕೊಳ್ಳುತ್ತಾರೆಯೇ ಹೊರತು ಅವುಗಳನ್ನು ಬೆಳೆಯಲು ಹೋಗುವುದಿಲ್ಲ. ಹೀಗಾದರೆ ಹೇಗೆ? ಆದ್ದರಿಂದಲೇ ಸರ್ಕಾರ ಗಂಧದ ಮರವನ್ನು ಸರ್ಕಾರದ ಸೊತ್ತಾಗಿ ಮಾಡಿದೆ. ಸರಕಾರದ ಅನುಮತಿಯಿಲ್ಲದೆ ತೇಗು, ಬೀಟೆ ಮುಂತಾದ ಮರಗಳನ್ನು ಕಡಿಯುವಂತಿಲ್ಲ, ಇಲ್ಲವಾದರೆ ಇವು ಅಪರೂಪವಾಗಿ ಪಳಯುಳಿಕೆಗಳಾಗುತ್ತವೆ.

ಹೆಣ್ಣು : ಹಿಂದೆ ಮರಗಿಡಗಳನ್ನು ಪ್ರಕೃತಿದೇವಿ, ದೇವರು ಎಂದು ಪೂಜಿಸುತ್ತಿದ್ದರು. ಅವುಗಳಲ್ಲಿ ದೈವತ್ವವನ್ನು ಕಾಣುತ್ತಿದ್ದರು. ಈಗಲೂ ಅರಳಿ,ಬನ್ನಿ, ಬಿಲ್ವ,ಬೇವು, ಅತ್ತಿ ಮುಂತಾದ ಮರಗಳನ್ನು ಪೂಜಿಸುವುದುಂಟು ಎಂದ ಮೇಲೆ ಹಿಂದಿನಿಂದಲೂ ಈ ಮರಗಿಡಗಳಲ್ಲೂ ದೈವತ್ವವನ್ನು ಕಂಡಿದ್ದಾರೆ.

ಗಂಡು : ಪ್ರಕೃತಿಯ ವಿಕೋಪಕ್ಕೆ, ಮಳೆ, ಬಿರುಗಾಳಿ, ಬಿಸಿಲು, ಬೆಳೆಗಳಿಗೆ ಎಷ್ಟೋ ನಶಿಸಿಹೋಗುವುವು. ಇದರ ಜೊತೆಗೆ ಮನುಷ್ಯರು ಅಷ್ಟು ನಾಶ ಮಾಡುವರು. ಹೀಗಾಗಿ ಬೆಟ್ಟಗಳಲ್ಲಿ ಮರಗಿಡಗಳ ಬದಲು ಬರೆ ಬಂಡೆಗಳಿವೆ! ಇನ್ನು ಕಾದ ಬಂಡೆಗಳ ಮೇಲೆ ಬೀಸಿ ಬರುವ ಗಾಳಿ ಹೇಗಿರಬೇಕು?

ಹೆಣ್ಣು : ಇತ್ತೀಚೆಗಂತೂ ಮನೆಯ ಮುಂದೆ ಬೆಳೆಯುವ ಮರಗಳ ಫಲವನ್ನು ಮನೆಯ ಮಾಲೀಕನೇ ಅನುಭೋಗಿಸಬಹುದೆಂಬ ಕಾನೂನು ಇರುವುದರಿಂದ ಅದರ ಸ್ಫೂರ್ತಿಯಿಂದಲಾದರೂ ಗಿಡಮರಗಳನ್ನು ನಮ್ಮ ಜನ ಬೆಳೆಯುವಂತಾಗಲಿ.

ಗಂಡು : ಈಗ ನಾವು ಹಳೆಯ ಕಾವ್ಯಗಳಲ್ಲಿ ಮಾತ್ರ ಕಾಡಿನ ವರ್ಣನೆ ಓದಬಹುದಾಗಿದೆ. ದಟ್ಟ ಅರಣ್ಯ ಅಪರೂಪವಾಗಿದೆ. ಹಿಂದಿನಿಂದಲೂ ಕಾಡು ಬೆಳೆಸಿಕೊಂಡು ಬಂದು ಜನ ಜೀವನಕ್ಕೆ ಬೇಕಾದ ಕಟ್ಟಿಗೆ, ಬೇಲಿ ಮುಳ್ಳು, ಕೃಷಿ ಸಾಮಾನುಗಳು, ಔಷಧ ಮುಂತಾದವುಗಳ ಪೂರೈಕೆಗೆ ಅವಲಂಬಿಸಿದ್ದರು.

ಹೆಣ್ಣು : ಆದ್ರೆ ಭಾರತ ನೂರಕ್ಕೆ ಎಂಬತ್ತರಷ್ಟು ಹಳ್ಳಿಯ ದೇಶವಾಗಿದ್ದು, ಕೃಷಿ ಮುಖ್ಯವಾದ ಕಸುಬು. ಜನ, ಧನ, ಕುರಿ, ಆಡು, ಇವುಗಳೆಲ್ಲಾ ಹೆಚ್ಚಾದಂತೆ ಬೇಡಿಕೆಗಳನ್ನು ಪೂರೈಸಲು ಗ್ರಾಮಗಳ ಸುತ್ತ ಇದ್ದ ಗಿಡ ಮರಗಳನ್ನು ಕಡಿಯಲು ಆರಂಭಿಸಿದರು ಜನರು. ಆಗ ವನ ಸಂಪತ್ತು ಕಡಿಮೆ ಆಯ್ತಾಬಂತು. ಆಗ ಜೀವನಕ್ಕೆ ಪಟ್ಟಣದತ್ತ ಜನರು ವಲಸೆ ಹೋಗಲು ಆರಂಭಿಸಿದರು.

ಗಂಡು : ತಮ್ಮೂರ ಕಾಡು ಮುಗಿದ ಮೇಲೆ ಹತ್ತಿರದ ಊರಿನ ಕಾಡನ್ನು ಕದ್ದು ಗಿಡಮರಗಳನ್ನು ಕತ್ತರಿಸಿ ತರುವ ಸ್ಥಿತಿಯಾಯಿತು. ಮರಗಿಡಗಳು ಮಳೆ ಬಾರಲು ಭೂಮಿಯ ಭದ್ರತೆಗೆ ಅಂದರೆ ರಭಸದ ಮಳೆ ಬಂದಾಗ ಕೊರೆಯುವಿಕೆ ಉಂಟಾಗದಿರಲು ಅತ್ಯವಶ್ಯಕ. ಸೌದೆ, ಮನೆಕಟ್ಟಲು ಹೊಲಗದ್ದೆಗಳಿಗೆ ಹಸಿರು ಸೊಪ್ಪಿನ ಗೊಬ್ಬರ, ಪ್ರಾಣಿ ಪಕ್ಷಿಗಳಿಗೆ ಆಸರೆ, ಮನುಷ್ಯ, ಪ್ರಾಣಿಪಕ್ಷಿಗಳಿಗೆ ಶುದ್ಧವಾದ ಗಾಳಿನೀಡಲಿಕ್ಕೆ, ಗಿಡಮೂಲಿಕೆ, ಹಣ್ಣು ಹಂಪಲು, ಒಂದೇ ಎರಡೇ, ಹಲವಾರು ಉಪಯೋಗಗಳು ಮರ ಗಿಡಗಳಿಂದ! ಇಷ್ಟಾದರೂ ಗಿಡಮರಗಳನ್ನು ಬೆಳೆಸದೆ ಸೋಂಬೇರಿಯಾಗಿ ಕುಳಿತರೆ ಏನು ಪ್ರಯೋಜನ? ಗಾದೆ, ಏನೋ ಹೇಳೋಲ್ವೇ "ಕೂತು ಉಣ್ಣುವನಿಗೆ ಕುಡಿಕೆ ಹೊನ್ನಿದ್ರು ಸಾಲದು" ಅಂತ! ಹೀಗಾದರೆ ಮರುಭೂಮಿಯಂತಾಗುವುವು ಬಯಲು ಸೀಮೆಗಳು, ಮಲ ಸೀಮೆಗಳು.

ಹೆಣ್ಣು : ಮನುಷ್ಯನ ಮೂಲಭೂತ ಅವಶ್ಯಕತೆಗಳೆಂದರೆ ಅನ್ನ, ಬಟ್ಟೆ, ವಸತಿ, ಜನಸಂಖ್ಯೆ ಹೆಚ್ಚಾದಂತೆ ಆಹಾರ, ವಸತಿ.... ಇದೆಲ್ಲಾ ಹೆಚ್ಚಾಗಿ ಬೇಕಾಗುತ್ತದೆ. ಆಗ ಕಾಡು ಕಡಿದು ಕೃಷಿ ಭೂಮಿಯನ್ನು ಮಾಡಿಕೊಳ್ಳುತ್ತಾನೆ ಮನುಷ್ಯ. ಆಮೇಲೆ ಬಿದ್ದ ರಭಸದ ಮಳೆಯಿಂದ ಭೂಮಿಯ ಫಲವತ್ತಾದ ಕಣಗಳು ಕೊಚ್ಚಿಕೊಂಡು ಹೋಗಿ ಕೆರೆ, ಸರೋವರ ಜಲಾಶಯಗಳನ್ನು ತುಂಬಿಕೊಂಡಿತು. ಇದರಿಂದ ಅವುಗಳು ನೀರಿನ ಸಂಗ್ರಹಣ ಶಕ್ತಿಯನ್ನು ಕಳೆದುಕೊಂಡುವು. ಇದರಿಂದ ಹೊಲಗದ್ದೆಗಳಲ್ಲಿ ಫಸಲು ಕಡಿಮೆ ಆಯಿತು. ಗಿಡ ಮರಗಳಿಲ್ಲದೆ ಮಳೆಯ ಪ್ರಮಾಣ ಕಡಿಮೆ ಆಯಿತು!

ಗಂಡು : ನಿಸರ್ಗದ ಈ ಬದಲಾವಣೆ, ಪರಿಸ್ಥಿತಿಯನ್ನು ಕಂಡ ಆಗಿನ ಆಹಾರ ಮತ್ತು ಕೃಷಿ ಖಾತೆಯ ಮಂತ್ರಿಗಳಾದ ಕೆ.ಎಂ. ಮುನಷಿ ಅವರು ವನ ಮಹೋತ್ಸವ ಕಾರ್ಯಕ್ರಮವನ್ನು ೧೯೫೦ರಲ್ಲಿ ಜಾರಿಗೆ ತಂದರು. ಇದೊಂದು ರೀತಿಯಲ್ಲಿ ನಾಡ ಹಬ್ಬವೆಂದೇ ಹೇಳಬಹುದು. ಈ ಸಂದರ್ಭದಲ್ಲಿ ಗಿಡ ಮರಗಳನ್ನು ಬೆಳೆಯುವ ಅರಿವು ಮೂಡಿಸುವುದು. ಇದರಿಂದಾಗುವ ಉಪಯೋಗಗಳನ್ನು ಪ್ರತ್ಯಕ್ಷ, ಅಪ್ರತ್ಯಕವಾಗಿ ಆಗುವುದನ್ನು ತಿಳಿಸಿ ಮನವರಿಕೆ ಮಾಡುವುದು. ಮೊದಲನೆಯದಾಗಿ ಗಿಡ ಮರ ಬೆಳೆಸುವುದು, ಆಮೇಲೆ ಅವುಗಳನ್ನು ರಕ್ಷಿಸುವುದು. ಹೊಲಗಳ ಬದುವಿನಲ್ಲಿ, ಕೆರೆಯ ದಂಡೆಯಲ್ಲಿ, ನಾಲೆಯ ಅಂಚಿನಲ್ಲಿ, ಶಾಲಾ ಆವರಣದಲ್ಲಿ ಬೆಳೆಸಬೇಕು. ನಿಜವಾಗಿ ಇದು ಅರಣ್ಯ ಇಲಾಖೆಯವರ ಸಮಾರಂಭ ಕಾರ್ಯಕ್ರಮವಾಗಬಾರದು. ಇದಕ್ಕೆ ಜನರ ಸಹಕಾರ, ಜೊತೆಗೆ ಅವರದೇ ಕಾರ್ಯಕ್ರಮ ಎಂದಾಗ ಈ ಕಾರ್ಯಕ್ರಮ ಯಶಸ್ವಿಯಾಗುವುದು.

ಹೆಣ್ಣು : ಇದರ ಜೊತೆಗೆ ಸಾರ್ವಜನಿಕ, ಸ್ವಯಂಸೇವಾ ಸಂಸ್ಥೆಗಳು ಪಾತ್ರವಹಿಸಿದರೆ ಈ ಕಾರ್ಯಕ್ರಮದ ಯಶಸ್ಸು. ಇದಲ್ಲದೆ ಶಾಲಾ ಮಕ್ಕಳಲ್ಲಿ ಈ ಮರಗಿಡ ಬೆಳೆಯುವ ಪ್ರಜ್ಞೆಯನ್ನು ಬೆಳೆಸಬೇಕು.

ಗಂಡು : ಗುಲ್ಬರ್ಗ ಜಿಲ್ಲೆಯಲ್ಲಿ ಈ ವನಮಹೋತ್ಸವ ಸಂದರ್ಭದಲ್ಲಿ ಯಾವ ರೀತಿಯ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ ಎಂಬುದನ್ನು ಗುಲ್ಬರ್ಗಾ ಜಿಲ್ಲಾ ಉಪಅರಣ್ಯ ಸಂರಕ್ಷಣಾಧಿಕಾರಿಗಳಾದ ಸಿ.ಎಸ್. ರಾಜು ಅವರು ಏನು ಹೇಳುತ್ತಾರೆ ಕೇಳೋಣ - (Voice)

ಹೆಣ್ಣು : ಸಾಮಾಜಿಕ ಅರಣ್ಯ ಮತ್ತು ಜೀವಪರಿಸರ ಸಮತೋಲನ ಕುರಿತು ಯಾದ್‌ಗಿರ್‌ನ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಗಳಾದ ಶಿವಪ್ರಸಾದ ಬೆಳವಲ್ ಅವರು ಏನು ಹೇಳುತ್ತಾರೆ ಕೇಳೋಣ.-

ಗಂಡು : ಮನೆಯ ಮುಂದೆ ತೋಟವನ್ನು ಮಾಡಿ ಗಿಡಮರಗಳನ್ನು ಬೆಳೆಸುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು. ಪ್ರತಿಯೊಂದು ಮನೆಯವರೂ ತಮ್ಮ ಮನೆಯ ಮುಂದೆ ಎರಡು ಗಿಡಗಳನ್ನು ಬೆಳೆದು ಆದರ್ಶರಾಗಬೇಕು. ಮಕ್ಕಳಲ್ಲಿ ಗಿಡ ಮರ ಬೆಳೆಸುವ ಆಸಕ್ತಿಯನ್ನು ಕೆರಳಿಸಬೇಕು. ಸ್ವಯಂ ಸೇವಾ ಸಂಸ್ಥೆಗಳು ಇದರಲ್ಲಿ ಆಸಕ್ತಿವಹಿಸಬೇಕು. ಮನೆಯ ಮುಂದಿನ ಗಿಡ ಮರಗಳು ಎಷ್ಟೊಂದು ಸೊಗಸು? ಜನರಲ್ಲಿ ಜಾಗ್ರತೆ ಮೂಡಿಸುವ ಉದ್ದೇಶದಿಂದಲೇ ಜುಲೈ ಮೊದಲನೇ ವಾರ ಈ 'ವನಮಹೋತ್ಸವ' ಆಚರಣೆ.

ಹೆಣ್ಣು : ಹೌದು, ಮನೆಯ ಮುಂದಿನ ಹಸಿರು ಪಸರಿಸಿದಾಗ ಎಷ್ಟೊಂದು ಸೊಗಸು! ಹಸಿರು ನಕ್ಕಾಗ ಜೀವಕೋಟಿಯ ಉಸಿರಾಟ! ನಗುವಿನ ಹೊನಲು! ಒಂದು ಮರ ಕಡಿಯುವ ಮೊದಲು ಹತ್ತು ಸಸಿ ನೆಡಲು ಮರೆಯಬೇಡಿ. ಗಿಡ ಮರಗಳನ್ನು ಬೆಳೆಸಿರಿ, ವನ್ಯ ಸಂಪತ್ತು ಉಳಿಸಿರಿ ಎಂಬ ಘೋಷಣೆಗಳು ಘೋಷಣೆಗಳಾಗಿಯೂ ಉಳಿಯದೇ ನಿಜ ಜೀವನದಲ್ಲಿ ಕಾರ್ಯರೂಪಕ್ಕೆ ಬರಲೆಂದು ಹಾರೈಸೋಣ.



# ಐತಿಹಾಸಿಕ ಬೀದರ್

ಧ್ವನಿ : ಬೀದರ್ ಇತಿಹಾಸದ ಗತವೈಭವ ಸಾರುವ ಕರ್ನಾಟಕ ರಾಜ್ಯದ ಚಿಕ್ಕ ಚೊಕ್ಕ ಜಿಲ್ಲೆ ಬೀದರಿನ ಹವೆ ತಂಪು! ಹೊರಸೂಸುವ ಗಾಳಿ ಕಂಪು! ಕುಡಿವ ನೀರು ಸಿಹಿ! ಬೆಟ್ಟಗುಡ್ಡಗಳು ಹಸಿರುದುಂಬಿದ ಪ್ರಕೃತಿ ಸೌಂದರ್ಯದ ತಾಣ! ಕಣ್ಮನಗಳಿಗೆ ಸೊಂಪು! ಈ ಜಿಲ್ಲೆಗೆ ಶತಮಾನದ ಉಜ್ವಲ, ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಪರಂಪರೆ ಇದೆ.

ಧ್ವನಿ : ಮೌರ್ಯ, ಶಾತವಾಹನ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಾಕತೀಯ, ಖಿಲ್ಜಿ, ಬಹಮನಿ, ಮೊಘಲ್ ಹಾಗೂ ಹೈದ್ರಾಬಾದ್ ನಿಜಾಮರ ಆಡಳಿತಕ್ಕೊಳಪಟ್ಟ ಈ ಜಿಲ್ಲೆ ವಿಭಿನ್ನ ಜನಾಂಗಗಳ ಧರ್ಮ, ಕಲೆ, ಸಾಹಿತ್ಯ, ಸಂಸ್ಕೃತಿಗಳ ಆಗರವೇ ಇದಾಗಿದೆ. ಹನ್ನೆರಡನೆಯ ಶತಮಾನದ ಶರಣರ ಪುಣ್ಯ ತಾಣ, ಕ್ರಾಂತಿ ಭೂಮಿಯು ಇದಾಗಿದೆ.

ಧ್ವನಿ : ಬೀದರ್ ನಗರಕ್ಕೆ ಅನೇಕ ಹೆಸರುಗಳಿದ್ದು ಮಹಾಭಾರತ, ಹರಿವಂಶ, ಭಾಗವತ ಪುರಾಣಗಳು, ಹಾಗೂ ಕಾಳಿದಾಸನ ನಾಟಕಗಳಲ್ಲಿ ವ್ಯಕ್ತವಾಗುವುದು. ಮಹಾಭಾರತದ ಕಾಲದಲ್ಲಿ ಇದು ವಿದುರ ನಗರವೆಂದು ಪ್ರಸಿದ್ಧಿಯಾಗಿತ್ತಂತೆ. ನಳದಮಯಂತಿಯರ ಪ್ರಣಯದ ಉದ್ಯಾನವನವೂ ಇದಾಗಿತ್ತಂತೆ. ರಾಜಾ ಭೀಮಸೇನನ ರಾಜಧಾನಿಯಾಗಿತ್ತಂತೆ! ಇದಕ್ಕೆ ವಿದುರನಗರ, ವಿದರ್ಭ, ಮಣಿಚೂಲ ಪರ್ವತ, ಮುಂತಾದ ಹೆಸರಿದ್ದು, ಮುಸ್ಲಿಮರ ಆಳ್ವಿಕೆಯ ಕಾಲಕ್ಕೆ **ಅಹಮದಾಬಾದ ಬೀದರ್** ಹಾಗೂ **ಮಹಮ್ಮದಾಬಾದ್** ಬೀದರ ಆಗಿ ಮಾರ್ಪಾಟು ಹೊಂದಿತಂತೆ- ಬೀದರ್ ಎಂದು.

ಧ್ವನಿ : ಐದನೆಯ ಶತಮಾನದಿಂದ ೧೪ನೇ ಶತಮಾನದವರೆಗೆ ಬೀದರ್ ಕನ್ನಡ ಅರಸರ ಆಳ್ವಿಕೆಯಲ್ಲಿದ್ದು, ರಾಷ್ಟ್ರಕೂಟ ವಂಶದ ರಾಜರೂ ಈ ನಾಡನ್ನಾಳಿದರು. ೧೦ನೆಯ ಶತಮಾನದಲ್ಲಿ ಕಲ್ಯಾಣದ ಚಾಳುಕ್ಯ ವಂಶದ ರಾಜರು ಕಲ್ಯಾಣ ರಾಜ್ಯಕ್ಕೆ ಸೇರಿಸಿದರು. ಬಿಜ್ಜಳನ ಕಾಲದಲ್ಲಿ ಬಸವಣ್ಣ ಮುಖ್ಯಮಂತ್ರಿಯಾಗಿ, ಶರಣನಾಗಿ ಮೆರೆದ ಅನೇಕ ಶರಣರು ಚಂಸಾಡಿದರು. ಕುಂಬಾರ ಗುಂಡಯ್ಯ, ನರ್ತಿಸಿದ ಊರು ಭಾಲ್ಕಿ!

ಧ್ವನಿ : ಪಶ್ಚಿಮ ಚಾಳುಕ್ಯ ದೊರೆಗಳ ಕಾಲದಲ್ಲಿ ಬೀದರ್ ಅತ್ಯಂತ ವೈಭವದ ಸ್ಥಿತಿಯಲ್ಲಿತ್ತು. ಮನುಸ್ಮೃತಿಗೆ ವ್ಯಾಖ್ಯಾನ ಬರೆದ ಮಿತಾಕ್ಷರ, ಧರ್ಮ ಸೂತ್ರದ ನಿರ್ಮಾಪಕ ವಿಜ್ಞಾನೇಶ್ವರ, ಮಹಾಕವಿ ಬಿಲ್ಹಣ ಮೊದಲಾದವರುದಿಸಿದ ತಾಣ ಈ ಬೀದರ್.

ಧ್ವನಿ : ಕಲ್ಯಾಣದ ಅರಸರ ಆಳಿಕೆ ಕೊನೆಗೊಂಡ ಮೇಲೆ **ದೌಲತಾಬಾದ್ ಯಾದವ** ಮನೆತನದ ಅರಸರು ಬೀದರ್ ನಗರವನ್ನು ತಮ್ಮ ಕೈವಶ ಮಾಡಿಕೊಂಡರು. ಆಮೇಲೆ ವರಂಗಲ್ಲಿನ ಪ್ರಸಿದ್ಧ ಕಾಕತೀಯ ಮನೆತನದ ದೊರೆಗಳು ಗೆದ್ದುಕೊಂಡು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಶಾತವಾಹನರು, ಚಾಳುಕ್ಯರು, ಯಾದವರು, ಕಾಕತೀಯರು ಆಳುವಾಗ ಹಿಂದೂ ಸಂಸ್ಕೃತಿ ಮೆರೆಯಿತು. ಕಾಕತೀಯರು ಅಡಿಗಲ್ಲಿಟ್ಟ ಬೀದರ್ ಕೋಟೆ ಇಂದಿಗೂ ಅಚ್ಚಳಿಯದೆ ಉಳಿದಿದೆ. ೧೪ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಮುಸ್ಲಿಮರು ಬೀದರ್ ರಾಜ್ಯವಾಳಿದರು.

ನೋಡಿ, ನೋಡಿ, ಇದು ನನ್ನ ಗತವೈಭ! ರಾಜಾಧಿರಾಜರು ಆಳಿ ಬಾಳಿದ ಈ ಅರಮನೆ, ಕೋಟೆ ಹೇಗಿದ್ದಿರಬಹುದೆಂದು ನೀವೇ ಊಹಿಸಿಕೊಳ್ಳಿ. ಐದುನೂರು ವರುಷಗಳಲ್ಲಿ ನನ್ನ ಸ್ಥಿತಿ ಹೀಗಾಗಿದೆ! ಈ ಕೋಟೆ, ಈ ಅರಮನೆ, ಇಲ್ಲಿನ ವೈಭವ ಕಂಡುಂಡ ಜನರೇ ಧನ್ಯರು! ಆದರೆ ನೀವು ಇಂದು ಅದರ ಕುರುಹನ್ನಾದರೂ ಕಾಣುವ ಸ್ಥಿತಿಯಲ್ಲಿದೆ!

ಇದರ ಬಗೆಗೆ ಒಬ್ಬೊಬ್ಬರ ಬಣ್ಣನೆ ಒಂದೊಂದು ರೀತಿ! ಇದೋ ಕೇಳಿ ಈಗ-

ಈ ಐತಿಹಾಸಿಕ ಬೀದರ್ ಮನ್ಸೂರ್ ಪರ್ವತದಲ್ಲಿದೆ. ಇದಕ್ಕೆ ಎರಡು ಸಾವಿರ ವರ್ಷಗಳ ಇತಿಹಾಸವಿದೆ. ರಾಜಾ ಭೀಮ್‌ಸೇನ ಇದ್ದ ನಗರ ಇದು. ನಳದಮಯಂತಿಯರು ವಿಹರಿಸಿದ ಈ ನಾಡು ಸಾಕಷ್ಟು ವಿಲಾಸಭರಿತವಾಗಿದೆ. ಅನಂತರ ಚಾಲುಕ್ಯರ ಕಲ್ಯಾಣ ೧೪೨೦ರಲ್ಲಿ ಅಹಮದ್‌ಷಾ ಬಹಮನಿ ರಾಜ್ಯ ಸ್ಥಾಪಿಸಿದ. ಈತ ಮೊದಲ ಬಾದ್‌ಷಾ ಆದ. ಈ ಬೀದರ್ ಕೋಟೆ ತುಂಬಾ ಸುಂದರವಾಗಿದೆ. ೫ ಕಿಲೋಮೀಟರ್ ವಿಸ್ತೀರ್ಣವಿದೆ. ಒಳಗೆ ಮದ್ದು ಗುಂಡಿನ ಕೋಟೆ ಇದೆ. ಇಲ್ಲಿ ಎತ್ತರದ ಮಹಲುಗಳಿವೆ. ಈ ಕೋಟೆ ನಾಲ್ಕು ಪರ್ವತಗಳ ಮಧ್ಯದಲ್ಲಿ ಇದೆ.

ಈಗ ಮೊದಲನೇ ಬಾಗಿಲು ನೋಡುತ್ತೀರಿ, ಇಲ್ಲಿ **ಷರ್ಜಾ ಬಾಗಿಲು** ಇದೆ. ಗೋಳಾಕೃತಿಯ ಗೋಪುರ ಇದೆ. ಒಳಗೆ ಹೋದಂತೆ **ದಿವಾನೆ ಖಾಸ್, ದಿವಾನೆ ಆಮ್**, ಕಾಣುತ್ತೆ. ೧೪೨೦ರಲ್ಲಿ ಬಹಮನಿ **ಅಹಮದ್ ಷಾ** ಇದನ್ನು ಕಟ್ಟಿಸಿದ. **ಹುಮಾಯುನ್ ಷಾ ಜಾಲಿಮ್** ಕಟ್ಟಿಸಿದ **ತರ್ಕಷ್ ಮಹಲ್** ಸಹ ಕಾಣಲಿಕ್ಕೆ ಸಿಗುತ್ತೆ. ಇದು **ಅಲ್ಲಾವುದ್ದೀನ್ ಹಸನ್‌**ನ ಬಹಮನಿಯ ಗಗನ ಮಹಲ್, ಇದರ ಹತ್ತಿರ ೧೬ ಕಮಾನುಗಳ ಮಸೀದಿ ಇದೆ. ಇದಕ್ಕೆ ೫೮ ಗೋಪುರಗಳಿವೆ. ಇಲ್ಲಿ

೧೦,೦೦೦ ಜನರು ಪ್ರಾರ್ಥನೆ ಮಾಡುತ್ತಿದ್ದರು. ೧೦ ಸಾವಿರ ಜನರಿಗೂ ನಮಾಜ್ ಮಾಡುವವರ ಧ್ವನಿ ಈಗಿನ ಕೂಗುಮಾರಿಯಿಂದ ಧ್ವನಿ ಕೇಳಿ ಬರುವಂತೆ ಎಲ್ಲರಿಗೂ ಮುಟ್ಟುತ್ತಿತ್ತು! ಅದೇ ನೋಡಿ ಅದು **ನಗೇನ ಮಹಲ್**, ಅದು **ರಂಗೀನ ಮಹಲ್**, ಅದು **ಅಲಿಬರಿಷಾ!**

೧೫೪೨ರಲ್ಲಿ ಬಹಮನಿ ರಾಜ್ಯ ೫ ಭಾಗಗಳಾಗಿ ವಿಭಜನೆಯಾಯಿತು. ಬೀದರ್‌ನಲ್ಲಿ **ಬರೀಷಾಹಿ**, ಹೈದ್ರಾಬಾದಿನಲ್ಲಿ **ಕುತುಬ್ ಷಾಹಿ**, ಬಿಜಾಪುರದಲ್ಲಿ **ಆದಿಲ್ ಷಾಹಿ**, ಅಹಮದ್ ನಗರದಲ್ಲಿ **ನಿಜಾಮ್‌ಷಾಹಿ**, ಬಿರಾರ್‌ನಲ್ಲಿ **ಹಿಮಾಮ್ ಷಾಹಿ**, ಅವರ ಆಡಳಿತವಾಯಿತು. ಬೀದರ್‌ನ ೩ ಕಿಲೋಮೀಟರ್ ದೂರದಲ್ಲಿ ಸಾಕಷ್ಟು ಗೊಮ್ಮಟಗಳಿವೆ. ಸುಲ್ತಾನ್ ಅಹಮದ್‌ಷಾನ ಬಹಮನಿಷಾನ ಗುಮ್ಮಟವನ್ನು ಚೀನಿ ಹೆಂಚಿನಲ್ಲಿ ಕಟ್ಟಿದ್ದಾರೆ. ಈ ಕಟ್ಟಡದಲ್ಲಿ ಇರಾನಿ ಕಮಾನುಗಳಿವೆ. **ಅಲಿಬರಿಕ್‌**ನಲ್ಲಿ ಮುಖ್ಯವಾದ ಕಟ್ಟಡವಿದೆ. ರಂಗೀನ್ ಮಹಲ್ ಕಟ್ಟಡವು ಹೆಂಚು, ಕಮಾನುಗಳು, ಗೋಡೆಗಳಲ್ಲಿ ಹೂ ಬಳ್ಳಿ ಆಕೃತಿಗಳು, ಸುಂದರವಾಗಿ ರಚಿಸಲ್ಪಟ್ಟಿವೆ. ಇಲ್ಲಿಗೆ ೩ ಕಿಲೋಮೀಟರ್ ದೂರದಲ್ಲಿ **ಬರಿಷಾಹಿ ಗುಮ್ಮಜ್** ಇದೆ. ಅಲ್ಲಿ ೧೩ ಭಾಷೆಗಳ ಬರವಣಿಗೆ ಇದೆ. **ಅಲಿಬರೀದ್, ಅಮೀರ್ ಬರೀದ್, ಕಾಸಿಂಬರೀದ್**, ಚಾನ್ ಸುಲ್ತಾನ, **ಖಾರಿಜಾಬರಿ** ಮುಂತಾದ ಗೋರಿಗಳು ಉತ್ತಮ ಸ್ಥಿತಿಯಲ್ಲಿವೆ.

ಇಲ್ಲಿ ಮತ್ತೊಂದು ಮುಖ್ಯವಾದುದು ಮದರ್‌ಸಾ ಮಹಮದ್ ಗವಾನ್. ೧೪೭೨ರಲ್ಲಿ ಖಾಜಾನಾದುದ್ದೀನ್ ಮಹಮದ್ ಗವಾನ್ ಇರಾನ್‌ನಿಂದ ಬಂದು ತನ್ನ ವಿದ್ವತ್ತು, ಪ್ರತಿಭೆಯಿಂದ ರಾಜನ ಹತ್ತಿರವಾದ. ಹೆಜಾಸ್, ಖೊರಾಸಾವ್ ತುಷ್ಕನ್, ಅರಬ್ಬೀ ದೇಶದ ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರು. ಅವರಿಗೆ ಊಟದ ವ್ಯವಸ್ಥೆ ಇತ್ತು. ಈಗ ಈ ಕಟ್ಟಡವಿದೆ. ವಿಶ್ವವಿದ್ಯಾಲಯ ಇಲ್ಲ. ಇದಲ್ಲದೆ **ಚಾಬಾರ** ಕಾಲಿ ಮಸೀದ್, ಹಬ್‌ಸೀ ಕೋಟೆ, ಮುಂತಾದ ೧೮ ಸ್ಮಾರಕಗಳಿವೆ. ಚೀನೀ ಮಹಲ್ **ಮಜೀದ್‌ಎ ಸೋಲಾ ಸತೂನ್**, ಗಗನ್ ಮಹಲ್, ತರ್ಕಷ್ ಮಹೆಲ್, ರಂಗೀನ್ ಮಹೆಲ್, ಮದ್ದು ಗುಂಡಿನ ಕೋಟೆ, ಷಾಹಿಹಮಾಮ್, ನಗೀನಾ ಮಹಲ್, ಹಳೇ ಜೈಲು, ಕಾಲಾಬುರುಜ್, ಮಾಂಡೇ ಬುರಜ್ ಈ ರೀತಿ ೧೭ ಬಾಗಿಲುಗಳು ಈ ಬೀದರ್ ಕೋಟೆಯಲ್ಲಿ ಸಿಗುತ್ತವೆ. ಈಗ ಇವೆಲ್ಲಾ ನಶಿಸಿ ಹೋಗಿ, ೩,೪ ಮಾತ್ರ ದೊರೆಯುತ್ತವೆ. ಕೋಟೆಯ ಸುತ್ತಿನ ಕಂದಕ ನೋಡಿದ್ರೆ ಆಗಿನ ಕಾಲದಲ್ಲಿ ಎಂಥ ಉತ್ಕೃಷ್ಟ ಸ್ಥಿತಿಯಲ್ಲಿತ್ತು ಎಂಬುದು ವ್ಯಕ್ತವಾಗುವುದು.

ದಿವಾನೆ ಖಾಜ್, ದಿವಾನೆ ಆಮ್ ಸಾಮಾನ್ಯರ ವೇದಿಕೆಗಳು. ಕೋಟೆಗಳಲ್ಲಿ ಆಮೇಲೆ ಕೆಲವು ಬದಲಾದಣೆಗಳೂ ಆಗಿವೆ. ಇಲ್ಲಿ ಜನರು ಕೂಡಲು ಸ್ಥಳ ಮಾಡಿದ್ದರು. ಅಲ್ಲಿ ಚರ್ಚೆ, ನ್ಯಾಯ ವಿಚಾರಣೆ ನಡೆಯುತ್ತಿತ್ತು. ದಿವಾನ್ ಖಾಜ್ ಮಂತ್ರಿಗಳ ಸಮಾಲೋಚನೆಯ ಸ್ಥಳ. ಅಲ್ಲಿ ಆಡಳಿತದ ವಿಚಾರದ ಚರ್ಚೆಯನ್ನು ರಾಜನೊಡನೆ

ಮಾಡುತ್ತಿದ್ದರು. ತರ್ಕಷ್ ಮಹಲ್ ಬಾದ್‌ಷಾನ ಕೆಲವು ಕೊಠಡಿಗಳು ಕಂಡು ಬರುತ್ತವೆ. ಅದು ವಿಶ್ರಾಂತಿಗೃಹ, ಜೊತೆಗೆ ತನ್ನ ಆಪ್ತರೊಡನೆ ಸಮಾಲೋಚನಾ ಸ್ಥಳವಾಗಿತ್ತು. **ಸೋಲಾಸತೂನ್** ಮತ್ತು **ತರ್ಕಷಮಹಲ್** ಪಕ್ಕದಲ್ಲಿ ನೀರಿನ ಟ್ಯಾಂಕ್ ಇದ್ದು ಅರಮನೆಗೆಲ್ಲಾ ಒದಗಿಸುತ್ತಿದ್ದರು.

ಈ ವಸ್ತು ಸಂಗ್ರಹಾಲಯದ ಕಟ್ಟಡ ೫೦೦ ವರ್ಷಗಳ ಹಿಂದಿನದು. ಬಾದ್‌ಷಹರ ಪ್ರಮುಖ ಕಟ್ಟಡಗಳಲ್ಲಿ ಒಂದಾಗಿತ್ತು. ನಾರಾಯಣಪುರ, ಗೊಟ್ಟಂಗೊಟ್ಟ, ಖಾನ್‌ಪುರ್, ಬಸವ ಕಲ್ಯಾಣ, ಹುಮ್ನಾಬಾದ್‌ಗಳಲ್ಲಿದ್ದ ಶಿಲ್ಪವನ್ನು ಇಲ್ಲಿ ಸಂಗ್ರಹಿಸಲಾಗಿದೆ. ಈ ಷೋಕೇಸ್‌ನಲ್ಲಿರುವ ಮೂರ್ತಿ ದ್ವಾರಪಾಲಕ, ಇದು ತಪಸ್ಸು ಮಾಡುತ್ತಿರುವ ಮೂರ್ತಿ. ಇಲ್ಲಿ ನೋಡಿ ಮನುಷ್ಯನ ಎದೆಯ ಮೇಲೆ ಖಡ್ಗ ಪ್ರಹಾರ, ಕಾಲಿನಲ್ಲಿ ತುಳಿತ.ಇದು ಮಹಾದೇವನ ಮೂತಿ. ಇದು ಶಿವನ ಶಿಲ್ಪ. ಕಾಕತೀಯರ ಕಾಲದ ೧೦-೧೧ನೇ ಶತಮಾನದ ಮೂರ್ತಿ. ಇದು ಒರಂಗಲ್ಲಿನಲ್ಲಿ ದೊರೆತ ದುರ್ಗಾ ಮಾತೆ. ಕೆಲವು ಇಲ್ಲಿ ದೊರೆತವಾದರೆ ಮತ್ತೆ ಕೆಲವು ಹೊರಗಿನಿಂದ ತಂದಿಟ್ಟವು. ದತ್ತಾತ್ರೇಯ, ಬ್ರಹ್ಮ ವಿಷ್ಣು, ಮುಂತಾದುವುಗಳಿವೆ. ಪಾರ್ಸಿ, ಅರೇಬಿ ಲಿಪಿಗಳಲ್ಲಿ ಕೆತ್ತನೆ ಕೆಲಸ! ೧೦೮೮ರ ಔರಂಗ್‌ಜೇಬ್ ಕಾಲದ ಹಿಸ್ರಿ, ೧೪ನೇ ಶತಮಾನದ ಕಲೆ ಷೋಕೇಸಿನಲ್ಲಿದೆ. ಇಲ್ಲಿ ನೋಡಿ ಕತ್ತಿ, ಕುದುರೆ ಲಗಾಮ, ಸಿಡಿಮದ್ದು, ೫೦,೬೦ ಕಿಲೋ ತೂಕದ ಬೀಗಗಳು, ೧೦,೧೨,೧೫ ಅಡಿಯ ಬಂದೂಕಗಳಿವೆ. ಈ ಕಬ್ಬಿಣದ ಗುಂಡುಗಳನ್ನು ವೈರಿಗಳ ಮೇಲೆ ಹಾರಿಸಿದಾಗ ಸಿಡಿದು ಸ್ಫೋಟಗೊಳ್ಳುತ್ತಿತ್ತಂತೆ. ಚಿಕ್ಕ ತೋಪಿಗಳೂ ಇಲ್ಲಿವೆ. ಆಗಿನ ಕಾಲದಲ್ಲಿ ಬೀದರ್ ರಕ್ಷಣೆಗೆ ಎಂಥೆಂಥ ಯುದ್ಧದ ಸಾಮಗ್ರಿಗಳಿದ್ದುವು ಎಂಬುದಕ್ಕೆ ಇವು ಉದಾಹರಣೆಗಳಾಗಿವೆ.

ಬನ್ನಿ..... ನನ್ನ ದರುಶನಕೆ. ಶುಕ್ರಾಚಾರ್ಯರು ಪೂಜಿಸಿದ ಜ್ಯೋತಿರ್ಲಿಂಗಗಳಲ್ಲಿ ಒಂದು. ನಾನು ಅಲ್ಲಿ ಕಾಣುತ್ತಿದೆಯಲ್ಲಾ ಆ ಹೊಂಡದಲ್ಲಿ ಸ್ನಾನ ಮಾಡಿ ಪಾಪ ಪರಿಹರಿಸಿಕೊಳ್ಳುವುದೆಂಬುದು ಜನರ ನಂಬುಗೆ ಅಂದಿನಿಂದ ನನ್ನ ಕ್ಷೇತ್ರಕ್ಕೆ ಹೆಸರು ಪಾಪನಾಶಿನಿ ಎಂದಾಯ್ತು-

ನನ್ನ ಭಕ್ತ ಏನು ಹೇಳುತ್ತಾನೆ ಕೇಳಿ-

ಬಸವ ಕಲ್ಯಾಣ ತಾಲ್ಲೂಕಿನ ರಾಜೇಶ್ವರದಲ್ಲಿ ಮಲ್ಲಿಕಾರ್ಜುನ ದೇವಾಲಯ, ರಾಮ ಲಿಂಗೇಶ್ವರ ದೇವಾಲಯ, ಪ್ರಭುದೇವರ ಗವಿ, ಹನುಮಾನ ದೇವಾಲಯಗಳು ಆಕರ್ಶಕವಾಗಿವೆ. ಇಲ್ಲಿ ಕೆಲವು ಶರಣರೂ ಸಹ ಇದ್ದರಂತೆ.

ಈ ದನಿ ಬೀದರ್ ದರ್ಗಾದಿಂದ ಹೊರಹೊಮ್ಮುತ್ತಿದೆ-

ಇದೇನಿದು ಅಚ್ಚರಿ ಹಿಂದುಗಳು ಬಂದು ನಮಸ್ಕರಿಸಿ ತಮ್ಮ ಭಕ್ತಿಯನ್ನು ಸಲ್ಲಿಸುತ್ತಿದ್ದಾರೆ? ಇವರನ್ನು ಮಾತಾನಾಡಿಸೋಣವೇ-

ಬೀದರ್ ಜಿಲ್ಲೆಯ ಇನ್ನಿತರ ಸ್ಮಾರಕಗಳ ಪರಿಚಯ:-

ಬನ್ನಿ ಬನ್ನಿ....... ನೋಡಿದಿರಲ್ಲಾ ಜನಗಳು ಹೇಗೆ ಬರ್‍ತಿದ್ದಾರೆ. ಹಿಂದೂ, ಮುಸ್ಲಿಮ್, ಕ್ರೈಸ್ತ, ಸಿಕ್, ಮಾರವಾಡಿ ಎಂಬ ಭೇದಭಾವವಿಲ್ಲದೆ ಎಲ್ಲರೂ ಬಂದು ನನ್ನ ಸೇವೆಯಲ್ಲಿ ನಿರತರಾಗುತ್ತಿದ್ದಾರೆ. ಈ ನನ್ನ **ಹಜರತ್ ಮುಲ್ತಾನಿ ಬಾದ್ ಷಹಾಸಾಹಬ್ ರಹಮ್‌ತುಲ್ಲಾ ದರ್ಗಾ**ಕ್ಕೆ ನನ್ನ ಬಗೆಗೆ ಈ ದರ್ಗಾದ ಪೂಜಾರಿಯೇ ಏನೋ ಹೇಳು ಬಯಸುತ್ತಾರೆ ಕೇಳಿ-

**ಹಜರತ್ ಮುಲ್ತಾನಿ ಬಾದ್‌ಷಹಾ ಸಾಹಬ್ ರಹಮತುಲ್ಲಾ** ಪ್ರಸಿದ್ಧ ಪುರುಷರು. ಇವರ ತಂದೆ ಮುಲ್ತಾನ್‌ನಿಂದ ಬಂದವರು. **ಹಜರತ್ ಮುಲ್ತಾನಿ ಬಾದ್‌ಷಹಾ ಸಾಹಬ್ ರಹಮತುಲ್ಲಾ** ಬೀದರ್‌ನಲ್ಲಿ ಜನಿಸಿದರು. ಇವರು ತಾಯಿಯ ಗರ್ಭದಲ್ಲಿದ್ದಾಗಲೇ ಪವಾಡವೆಸಗಿದವರಂತೆ. ಹಿಂದೂ, ಮುಸ್ಲಿಮ್, ಸಿಕ್ ಮುಂತಾದ ಜನರು ಭಯಭಕ್ತಿಯಿಂದ ಇವರಿಗೆ ನಡೆದುಕೊಳ್ಳುತ್ತಾರೆ. ಭಕ್ತಾದಿಗಳು ಅರಿಕೆ ಮಾಡಿಕೊಂಡಿದ್ದು ಈಡೇರುತ್ತದೆ ಎಂಬ ಪ್ರತೀತಿ. ತಮ್ಮ ಮನದ ಅಭೀಷ್ಠೆ ಈಡೇರಿದ ಮೇಲೆ ಅವರು ಬಂದು ತಮ್ಮ ಹರಕೆಗಳನ್ನು ಸಲ್ಲಿಸುತ್ತಾರೆ. ಹಜರತ್ ಮುಲ್ತಾನಿ ಬಾದ್‌ಷಹಾ ಸಾಹೆಬ್ ರಹಮತುಲ್ಲಾ ಅವರ ತಂದೆಗೆ ಮೊದಲು ಮಕ್ಕಳಿರಲಿಲ್ಲ. ಆಗ ಅವರು ದೇವರಲ್ಲಿ ಪ್ರಾರ್ಥನೆ ಮಾಡಿದರು. **ಹಜರತ್ ಪಿರಾನೇ ದಿರ್‌ಗೌಸ್ ಆಜಂದಸ್ತಿಗೀರ್** ಇವರ ಕನಸಿನಲ್ಲಿ ಬಂದು ಒಂದು 'ಮುತ್ತನ್ನು ಕಾಗದದಲ್ಲಿ ಕಟ್ಟಿ ಕೊಟ್ಟರು. ಅದನ್ನು ಬಿಡಿಸಿ ನೋಡಿದಾಗ ಅದು ತುಂಬಾ ಹೊಳೆಯುತ್ತಿತ್ತು. ಇದನ್ನು ಬೆಳಗ್ಗೆ ಹೆಂಡತಿಯಲ್ಲಿ ತಿಳಿಸಿದಾಗ ಆಕೆ ಗರ್ಭವತಿಯಾಗಿರುವುದನ್ನು ತಿಳಿಸುತ್ತಾಳೆ. ಎರಡನೇ ಹೆಂಡತಿಯನ್ನು ವಿಚಾರ ಮಾಡುತ್ತಾರೆ. "ನಿಮ್ಮ ಹೊಟ್ಟೆಯಲ್ಲಿ ಯಾರಿದ್ದಾರೆ ಗೊತ್ತಾ? ಒಬ್ಬ ಮಹಾಪುರುಷ ಉದಯಿಸುತ್ತಿದ್ದಾನೆ." ಎಂದು ತಿಳಿಸುತ್ತಾರೆ. ಮುಂದೆ ಇವರು ಮಾಡಿದ ಪವಾಡಗಳು ಜನರನ್ನು ಚಕಿತಗೊಳಿಸಿವೆ!

ಬೀದರ್ ಜಿಲ್ಲೆಯ ಸ್ಮಾರಕಗಳು ಹೇಳಿದ ಕಥೆಯನ್ನು ನೀವೆಲ್ಲಾ ಇದುವರೆಗೆ ಕೇಳಿದಿರಲ್ಲಾ! ಹಿಂದಿನ ನಮ್ಮ ವೈಭವ, ಈಗಿನ ನಮ್ಮ ಸ್ಥಿತಿ ಹೇಗಿದ್ದದು ಹೇಗಾಯಿತು ಎಂಬುದರ ಪರಿಚಯವಾಯಿತಲ್ಲಾ!

ಮೆಣಸು ಮುಗ್ಗಿದರೂ ಜೋಳಕ್ಕೇನೂ ಕಡಿಮೆ ಇಲ್ಲ ಅಲ್ಲವೇ?

ನನ್ನನ್ನು 'ನರಸಿಂಹ ಝರಾ' ಅಂತ ಕರೀತಾರೆ. ನನ್ನ ಬಗೆಗೆ ಈ ನನ್ನ ಪೂಜಾರಿಯೇ ವಿವರಣೆ ನೀಡಲಿದ್ದಾನೆ-

ಧ್ವನಿ : ಬನ್ನಿ ಬನ್ನಿ ನನ್ನನ್ನು ನೋಡಲಿಕ್ಕೆ ಬಂದ್ರಲ್ಲಾ. ನನ್ನ ಭವ್ಯತೆಯನ್ನು ನೋಡಿ ಆನಂದ ಪಡಿ. ಆದರೇನು? ಪ್ರಕೃತಿಯ ವಿಕೋಪಕ್ಕೆ ಸಿಲುಕಿದ ನಾನು ಈ ರೀತಿ ಭಿನ್ನವಾಗಿ ನಿಂತಿದ್ದೇನೆ. ನನ್ನ ಸೃಷ್ಟಿಗೆ ಕಾರಣಕರ್ತ ಮಹಮದ್ ಗವಾನ್. ಗವಾನ್ ಮದರ್ ಸಾ ಎಂದೆ ಕರೆವರು ನನ್ನನ್ನು. ಇದರ ಬಗೆ ಇತಿಹಾಸ ತಜ್ಞರು ಏನು ಹೇಳಿದ್ದಾರೆ ಎಂಬುದನ್ನು ಸಂಗ್ರಹಿಸಿ ಹೇಳುತ್ತಾರೆ ಕೇಳಿ-

(Voice L.R. ಕುಲಕರಣಿ)

(ಸಿಕ್ಖರ ಭಜನೆ)

ಇದು ನಾನಕ್ ಝೀರಾ

ಗ್ರಂಥ ಸಾಹಿಬ್ ಪಠಣ-

ಇದು ದಸಮ್ ಗುರು ಗ್ರಂಥ ಸಾಹೆಬ್ ಗ್ರಂಥ ಪಠಣ!

ಓ ನನ್ನನ್ನು ನೋಡ್ಲಿಕ್ಕೆ ಬಂದ್ರಾ...... ನನ್ನನ್ನು ನಾನಕ್ ಝೀರಾ ಅಂತಾರೆ ಬನ್ನಿ..... ಬನ್ನಿ..... ನೋಡಿ, ಇಲ್ಲಿ ಹರಿಯುವ ಝರಿ..... ಇದೇ! ಇಲ್ಲಿಗೆ ಗುರು ನಾನಕರು ಬಂದು ಕೆಲವು ಕಾಲ ಇದ್ದರು. ತಮ್ಮ ತಪಸ್ಸಿನ ಶಕ್ತಿಯಿಂದ ಈ ಝರಿ ಉದ್ಭವವಾಯಿತು.

*

# ದುಶ್ಚಟ

## ಧೂಮಲೀಲೆ

(ಮೊದಲ ನಿವೇದನೆ)

ಆಕಾಶವಾಣಿ

(ಶಿರೋನಾಮೇ ಸಂಗೀತ ಆರಂಭವಾಗಿ ಸಣ್ಣದಾಗುವುದು. ಅದರ ಮೇಲೆ ಆರಂಭದ ನಿವೇದನೆ)

ಈಗ ಕೇಳಿ ರೂಪಕ 'ಧೂಮಲೀಲೆ"

ಬರೆದು ಪ್ರಸ್ತುತಪಡಿಸುವವರು ಶ್ರೀ ಬಿ.ಎಸ್.ಸ್ವಾಮಿ. ಕೇಳಿ ರೂಪಕ "ಧೂಮಲೀಲೆ"

(ಸಂಗೀತ ಸ್ವಲ್ಪ ಹೆಚ್ಚಾಗಿ ನಂತರ ಪೂರ್ತಿ ಕಡಿಮೆ ಆಗುವುದು)

ಹೆಂಡತಿ : ಇದೇನ್ರೀ ನೀವ್ ಹೀಗ್ ಹಾಡ್ ಕೇಳ್ತಾ ಮಾಡ್ತಾ ಇರೋದು?

ಗಂಡ : ಕಾಣ್ತಾ ಇಲ್ವೇ?

ಹೆಂಡತಿ : ಕಂಡದ್ದಕ್ಕೇ ಹೇಳ್ತಾ ಇರೋದು.

ಗಂಡ : ಏನೋ ಓದಿ ಬರದು ಬೇಜಾರಾಯ್ತು ಹಾಗೇ ಒಂದು ಸಿಗರೇಟ್ ಹಚ್ಚಿದೆ.

ಹೆಂಡತಿ : ಅದರಲ್ಲೂ ನಿಮ್ಮದೊಂದು ಕಲೆ. ಸುರಳಿ ಸುರಳಿಯಾಗಿ ಹೊಗೆ ಬಿಡ್ತಾ "ಧೂಮಲೀಲೆ" ಮಾಡ್ತಾ ಇದ್ದೀರಿ. ಇದೇನು ಒಳ್ಳೇದು ಅಂತ ತಿಳ್ಕೋಬೇಡಿ.

ಗಂಡ : ಯಾವಾಗ್ನಿಂದ ಡಾಕ್ಟರ್ ಬೇರೇ ಆಗ್ಬಿಟ್ಟೆ?

ಹೆಂಡತಿ : ಹೆಂಡ್ತಿ ಹೇಳೋ ಮಾತ್ನೇ ನೀವ್ ಕೇಳ್ತಾ ಇಲ್ಲಾ... ಇನ್ನು...

ಗಂಡ : ನೋಡು ಹೆಂಡ್ತಿ ಹೇಳೋದ್ಕೂ ಬೇರೆ ಡಾಕ್ಟರ್ ಹೇಳೋದ್ಕೂ ಬಹಳ ವ್ಯತ್ಯಾಸವಿದೆ ಕಣೆ.

ಹೆಂಡತಿ : ಅವರೇನಾದ್ರೂ ಆರೋಗ್ಯ ಕೆಡುತ್ತೆ ಅಂತ ಹೇಳಿದ್ರೆ ಬಿಟ್ಬೇ ಬಿಡ್ತೀರ್ರಿ ಅಲ್ಲಾ.

ಗಂಡ : ನನ್ನ ಫ್ರೆಂಡೇ ಡಾಕ್ಟ್ರು. ಆತ ಎಷ್ಟೋ ಸಾರಿ ಹೇಳಿದ್ದಾನೆ 'ಏನಯ್ಯ ಇಷ್ಟೊಂದು ದುಬಾರಿ ಆದ್ರೂ ಸಿಗರೇಟ್ ಸೇದ್ತಾ ಇದ್ದೀಯಲ್ಲಾ, ಎಷ್ಟು ಬೆಲೆ ಹೆಚ್ಚಿಸಿದ್ರೂ

ಅಷ್ಟು ಹೆಚ್ಚಾಗಿ ಹಚ್ತಾ ಇದ್ದೀಯಲ್ಲಾ ಅಂತಾನೆ.' ನಾನೇಸ್ ಮಾಡ್ಲಯ್ಯ 'ಬಿಟ್ಟನೆಂದರೆ ಬಿಡದೀ ಮಾಯೆ' ಅಂದ ಹಾಗಾಗಿದೆ ಅಂತೀನಿ.

ಹೆಂಡತಿ : ಮನುಷ್ಯ ಮನಸ್ಸು ಮಾಡಿದ್ರೆ ಅದ್ಯಾವ್ ಮಹಾ ದೊಡ್ಡದು ಬಿಡ್ರಿ. ಅದಿರ್‍ಲಿ ಈ ಚಟ ನಿಮಗ್ ಹ್ಯಾಗೆ ಬಂತೋ.

ಗಂಡ : ಹೀಗೆ ಕಾಲೇಜು ದಿನಗಳಲ್ಲಿ ಕುತೂಹಲಕ್ಕೆ ಸ್ನೇಹಿತರ ಜೊತೆ ಸೇರಿ ಆರಂಭ ಮಾಡಿ ಅದು ಕಂಟಿನೂ ಆಯ್ತು. ಈಗ ಬಿಡಬೇಕೂ ಅಂದ್ರೂ ಆಗ್ತಾ ಇಲ್ಲ.

ಹೆಂಡತಿ : ಏನೇ ಆಗಲೀ ಅದು ಕೆಟ್ಟದ್ದು ಬಿಡ್ರೀ, ಬಾಯಿ ಬಿಟ್ರೇ ವಾಸನೆ ತಡ್ಯೋಕ್ಕಾಗೋಲ್ಲ.

ಗಂಡ : ನನ್ನಂಥವ್ರೆಷ್ಟು ಜನ ಇದ್ದಾರೋ ಯಾರಿಗೆ ಗೊತ್ತು?

ಹೆಂಡತಿ : ಅಂತೂ ನೋಡಲಿಕ್ಕೆ ಹೊರಟಾಗಿದೆ.

ಗಂಡ : ನೋಡ್ಯಕ್ಕೆ ಕರ್‍ಕಂಡು ಹೋಗ್ತಿದ್ದೀನಿ ಯಾರ್‍ಯಾರ ಕಥೆ ಏನೇನು ಎಂಬುದನ್ನು ನೋಡುವ್ಯಂತೆ ಬಾ.

ಹೆಂಡತಿ : ಸರಿ ದಿನಾ ನೋಡಿಲ್ವೇ?

ಗಂಡ : ನೋಡೋದ್ಕು ಅವರ ಬಾಯಿಗಳಿಂದ ಅವರ ಕಥೆ ಕೇಳದ್ರೆ ಇದರ ಸ್ವಾರಸ್ಯ ಗೊತ್ತಾಗುತ್ತೆ.

ಹೆಂಡತಿ : ಏನು ತೋರ್‍ತೀರೋ, ಕೇಳಿಸ್ತೀರೋ ತೋರಿಸಿ, ಕೇಳಿಸಿ ಕಣ್ಣಿಂದ ನೋಡಿ ಕಿವಿಯಿಂದ ಕೇಳ್ತೇನೆ.

(ಕಾರು ಹೋಗುವುದು ನಂತರ ನಿಲ್ಲುವುದು.)

ನಿರೂಪಣೆ: ಪ್ರತಿ ವರ್ಷದಂತೆ ಈ ವರ್ಷವೂ ಸಹ ಏಪ್ರಿಲ್ ೭ನೇ ತಾರೀಖು ವಿಶ್ವ ಆರೋಗ್ಯದ ದಿನವನ್ನು ಆಚರಿಸಲಾಗುತ್ತದೆ. ಈ ವರ್ಷದ ಘೋಷಣೆ "ಧೂಮಪಾನ ಅಥವಾ ಆರೋಗ್ಯ ಆಯ್ಕೆ ನಿಮ್ಮ ಕೈಲಿದೆ" ಇದು ಒಳ್ಳೆಯ ಸಲಹೆಯೇ. ಹಳ್ಳಿಯ ರೈತರು, ಕಾರ್ಖಾನೆಯ ಕಾರ್ಮಿಕರು, ಕಛೇರಿಯಲ್ಲಿ ಕೆಲಸ ಮಾಡುವವರು, ವಿದ್ಯಾರ್ಥಿಗಳು, ಯುವಕರು, ಮುಂತಾದವರಲ್ಲಿ ಅನೇಕರು ಈ ಧೂಮಪಾನದ ಚಟಕ್ಕೆ ಬಿದ್ದು ಅದೊಂದು ವಿನೋದ, ಖುಷಿ ಕೊಡುತ್ತದೆ, ಬೇಜಾರಿಗೆ ಮದ್ದು ಎಂದು ತಿಳಿದುಕೊಂಡು ಸಹವಾಸ ದೋಷದಿಂದ ಕಲಿತು ಬಿಡುತ್ತಾರೆ. ಆದರೆ ಅದನ್ನು ಬಿಡುವುದೂ ಮುಂದೆ ತೊಂದರೆಯಾಗುತ್ತದೆ. ವಾರ್ತಾ ಪತ್ರಿಕೆಯಲ್ಲಿ, ಬಾನುಲಿ, ಟೆಲಿವಿಷನ್ ನಲ್ಲಿ ಧೂಮಪಾನದಿಂದ ಅನೇಕ ರೋಗಗಳು ಬರುತ್ತವೆ ಎಂದು ಸಲಹೆ ಕೊಡುತ್ತಾ ಬರುತ್ತಿದ್ದರೂ ಈ ಧೂಮಪಾನದ ಚಟ ಅಂಟಿಕೊಂಡು ಬಿಡದೆ ಅನೇಕರನ್ನು ಕಾಡಿಸುತ್ತದೆ. ಮನಸ್ಸು ಮಾಡಿದರೆ ಈ ದುಶ್ಚಟವನ್ನು

ಬಿಡಬಹುದು. ಮನುಷ್ಯನ ಪ್ರಯತ್ನಕ್ಕಿಂತ, ದೃಢ ಸಂಕಲ್ಪಕ್ಕಿಂತ ಬೇರೊಂದಿಯೇ? ಹೊಗೆಯಿದ್ದಲ್ಲಿ ಬೆಂಕಿ ಇದೆ ಎಂಬ ಗಾದೆಯಂತೆ ಧೂಮಪಾನ ಮಾಡುವವರಿಗೆ ಅನೇಕ ಅಪಘಾತಗಳಾಗುವುದರಲ್ಲಿ ಅಚ್ಚರಿ ಇಲ್ಲ.

ನಿರೂಪಣೆ: ದೊಡ್ಡವರು ಸ್ಟೈಲಾಗಿ ಬೀಡಿ ಸಿಗರೇಟು ಹಿಡಿದು ಸೇದುವುದನ್ನು ಸಣ್ಣವರು ನೋಡುತ್ತಾರೆ. ಊಟ ತಿಂಡಿ ಮಾಡಿದಂತೆ ಅದನ್ನು ಏಕೆ ಅನುಸರಿಸಬಾರದು? ಎಂದು ಅನಿಸುತ್ತದೆ. ತಾವು ಮಾತ್ರ ಸೇದುತ್ತಾರೆ, ನಮ್ಮನ್ನು ಮಾತ್ರ ಬೇಡ ಅಂತಾರಲ್ಲಾ ಏಕೆ? ಅದರಲ್ಲೇನಿದೆ ಒಳಗುಟ್ಟು? ಎಂಬ ಅನುಮಾನ ಕಾಡಿಸಿ, ತಾವೂ ಒಂದು ದಿನ ಕಾಣದ ಹಾಗೆ ಸೇದುಬಿಡಲೇ ಬೇಕು ಎಂದು ತೀರ್ಮಾನಿಸುತ್ತಾರೆ ಹಾಗೆಯೇ ಮಾಡುತ್ತಾರೆ. ಒಂದಲ್ಲ ಒಂದು ದಿನ ದೊಡ್ಡವರ ಎದುರು ಸೇದುವ ದಾರ್ಷ್ಟ್ಯ ಬರುತ್ತದೆ. ತಂದೆ-ತಾಯಿಯರನ್ನು ಬಿಟ್ಟು ಹೊರಗಡೆ ಕಾಲೇಜಿಗೆ ಹೋದಾಗ ವಿದ್ಯಾರ್ಥಿಗಳಿಗೆ ಒಳ್ಳೆಯ ಸಮಯ ಈ ಸಿಗರೇಟು, ಚುಟ್ಟಾ, ಬೀಡಿ ಸೇದುವ ಅಭ್ಯಾಸವನ್ನು ಆರಂಭಿಸುತ್ತಾರೆ.

ಕಾಲೇಜು ವಿದ್ಯಾರ್ಥಿ ಮಹೇಂದ್ರ ಕುಮಾರ್-ಈ ಸಿಗರೇಟು ಸೇದುವ ಅಭ್ಯಾಸವನ್ನು ಏನಾದ್ರೂ ತಾವು ಇಟ್ಕೊಂಡಿದ್ದೀರಾ ಹ್ಯಾಗೆ?

ಇದೆ.

ಎಷ್ಟು ವರ್ಷವಾಯ್ತು ಇದನ್ನು ಕಲಿತು?

ಸುಮಾರು ಎರಡು ವರ್ಷದಿಂದ ಇದೆ.

ಈ ಚಟ ನಿಮಗೆ ಯಾವ ರೀತಿ ಬಂತು

ನನಗೆ ಮೊದಲು ಸೇದುವವರನ್ನು ಕಂಡ್ರೆ ಕೋಪಾನೇ ಬರ್‍ತಿತ್ತು. ಆಮೇಲೆ ನನ್ನ ಮನಸ್ಸಿನಲ್ಲೇ ಏನೋ ಬೇಜಾರಾಗಿ ನನ್ನ ಫ್ರೆಂಡ್ ಹತ್ತಿರ ಹೇಳಿಕೊಂಡೆ, ಒಂದು ಥರ ಬೇಜಾರಾಗಿದೆ ಏನ್ ಮಾಡೋದು? ಅಂತ. ಅವರು ನಮ್ಮ ಫ್ರೆಂಡ್ ಎಲ್ಲಾ ಸಿಗರೇಟ್ ಸೇದ್ತಿದ್ರು. ಆವಾಗ ನಾನು ಬೇಜಾರಾಗಿದ್ದನ್ನ ನೋಡ್ಬುಟ್ಟು ಅವರು ಕೊಟ್ರು ನನ್ನ ಕೈಗೆ ಸಿಗರೇಟ್ ಸೇದು ಅಂತ. ಆವಾಗ ನಾನು ಸೇದ್‌ದಾಗ ಏನೋ ಒಂದು ತರ satisifation ಸಿಕ್ತು. ಆವಾಗ್ನಿಂದ, ಮಾರ್‍ನೇ ದಿನಾನೂ ಅವರ್ ಜೊತೇನೇ ಇರಕ್ಕೆ ನೋಡ್ದೆ ಅವರೇ ಸಿಗರೇಟ್ ತೆಗೆದುಕೊಡವ್ರು. ಅದನ್ನು ರೋಡ್‌ನಲ್ಲಿ ಸೇದುತಾ ಇರ್‍ಲಿಲ್ಲ, ಪಾರ್ಕ್‌ನಲ್ಲಿ ಆ ಕಡೆ ಯಾರೂ ಕಾಣದ ಹಾಗೇ ಸೇದುತ್ತಾ ಇದ್ದೆ. ತಂದೆಗೆ ಕಾಣದ ಹಾಗೆ.

ನಿಮ್ಮ ತಂದೆ-ತಾಯಿ ಕಂಡ್ರೆ ಹೊದರಿಕೆ ಆಗ್ತಿತ್ತಾ ನಿಮ್ಗೆ?

ಈವಾಗ್ಲೂ ಸಹ ಹೆದರ್‍ತೇನೆ, ಆಮೇಲೆ ಕಂಪ್ನಿ ಸಿಕ್ದೇ ಹೋದಾಗ ಇಷ್ಟ ಬಂದಾಗ ನಾನೇ ಸೇದುತ್ತಾ ಇದ್ದೆ. ನಾವು ಓದ್ತಾ ಇರ್‍ತೀವಿ, ಆ ಟೈಮಿಗೆ ಸ್ವಲ್ಪ ಬೋರಾಗುತ್ತೆ

ನಮಗೆ. ಆ ಟೈಮಲ್ಲಿ ಒಂದು ಸಿಗರೇಟ್ ಸೇದ್ರು ಅಂದ್ರೆ ಏನೋ ಒಂದುಥರ ಸ್ಫೂರ್ತಿ ಬಂದಾಗೆ ಆಗ್ತಿತ್ತು.

ಹೆಚ್ಚಿಗೆ ಓದಬಹುದೋ?

ಓದಬಹುದು.

ನಿದ್ದೆ ಬರೋದಿಲ್ವೋ?

ನಿದ್ರೆ ಬರೋದಿಲ್ಲ.

ಊಟ ಆದ್ಮೇಲೆ ಎಲೆ ಅಡಿಕೆ ಹಾಕಿಕೊಳ್ತೀವಿ, ಆ ಟೈಮಲ್ಲಿ ಸಿಗರೇಟ್ ಸೇದ್ರು ಅಂದ್ರೆ ಏನೋ ಒಂದು ಥರ, ತುಂಬಾ ನಿದ್ದೆ ಬರೋ ಥರ, ಒಳ್ಳೇ ಸ್ಫೂರ್ತಿ ಕೊಡುತ್ತೆ.

ಬೀಡಿ ಸೇದೋದು ಒಳ್ಳೇದಲ್ಲ ಕೆಟ್ಟದ್ದು, ನಾವೇನೋ ಸೇದೋವ ಕಲ್ತೋ, ನೀವು ಕಲೀಬೇಡಿ ಅಂತ ಬೇರೆಯವರಿಗೆ ಹೇಳ್ತೀರಾ? ಇದು ನಿಮ್ಮ ಅಭಿಪ್ರಾಯ ಅಲ್ವೇ?

ಹೌದು.

ಮತ್ತೊಬ್ಬ ವಿದ್ಯಾರ್ಥಿ ಶ್ರೀ ಪುಟ್ಟಸ್ವಾಮಿ ಅವರನ್ನು ಮಾತನಾಡಿಸಿದಾಗ-

ನಿಮ್ಗೂ ಈ ಬೀಡಿ, ಸಿಗರೇಟ್ ಸೇದೋ ಅಭ್ಯಾಸ ಇದ್ಯಾ?

ಅಭ್ಯಾಸ ಇತ್ತು, ಈವಾಗ ಬಿಟ್ಟುಬಿಟ್ಟಿದ್ದೀನಿ ಈ ಅಭ್ಯಾಸವನ್ನು.

ಎಷ್ಟು ದಿನವಾಯ್ತು ನೀವು ಬಿಟ್ಟು?

ನಾನು ಬಿಟ್ಟು ಸುಮಾರು ನಾಲ್ಕೈದು ತಿಂಗಳಾಯ್ತು.

ಯಾಕ್ ಬಿಟ್ರಿ?

ನನಗೆ ಯಾರೋ ಡಾಕ್ಟರ್ ಹೇಳಿದ್ರು, ಅದರಿಂದ ನೋವಾಗುತ್ತೆ ಅಂತ ಕಂಡು ಬಂತು. ಆದ್ರೆ ಅಪ್ಪ, ಅಮ್ಮಹೇಳಿದ್ರೆ ಫ್ರೆಂಡ್ ಹೇಳಿದ್ರೆ ಬಿಡಲಿಕ್ಕಾಗೋಲ್ಲ. ಸಾಮಾನ್ಯವಾಗಿ ಪ್ರಾಪಂಚಿಕವಾಗಿ ಯಾವುದೋ ಒಂದು ಉತ್ತಮವಾದ ವ್ಯಕ್ತಿ ಅನ್ನಿಸಿಕೊಳ್ಳುವವರು, ಅದಕ್ಕೆ ಸಂಬಂಧ ಪಟ್ಟವರು ಹೇಳಿದಾಗ ಆ ಅಭ್ಯಾಸವನ್ನು ಬಿಡಬೇಕು ಅನ್ನೋದು ಒಬ್ಬ ಮನುಷ್ಯನಿಗೆ ತನ್ನ ಜೀವನವನ್ನು ಸರಿಪಡಿಸಿಕೊಳ್ಳಬೇಕು ಅನ್ನೋ ಸಂದರ್ಭದಲ್ಲಿ ಪರಿಣಾಮ ಬೀರುತ್ತೆ. ಮೊದಲು ಸಣ್ಣವನಾಗಿದ್ದಾಗ ಈ ಸಿಗರೇಟನ್ನು ಏನೋ ಸೇದಬೇಕು ಅಂತ ಬೇರೆಯವರು ಹೇಳ್ತಿದ್ರು. ಆವಾಗ ನನಗೆ ಇದೇನು ಇದನ್ನು ಸೇದ್ತಾರಲ್ಲಾ ಸುಮ್ನೆ ಎಳೆದು ಹೊಗೆ ಬಿಡೋದ್ರಲ್ಲಿ ಏನು ಪ್ರಯೋಜನವಿದೆ ಅಂತ ಹೇಳ್ಬಿಟ್ಟು ಅದನ್ನು ಟೀಕೆ ಮಾಡ್ತಾ ಇದ್ದೆ. ಅದಕ್ನನ್ನ ಸಣ್ಣ ಹುಡುಗ್ರು ಏನ್ಮಾಡ್ತಿದ್ರು, ಬೊಂಬು ಇದೆ ನೋಡಿ ಅರಳೀ ಕಟ್ಟೀದು ಅದನ್ನು ಕಚ್ಚಿಸ್ಕೊಂಡೆಲ್ಲಾ ಸೇದಿಸ್ತಿದ್ರು.

ಅದನ್ನು ನೋಡಿದಾಗ ನಾವು ಸ್ಟೈಲಾಗಿ ಸೇದಬೇಕಲ್ಲಾ ಅನ್ನೋ ಕುತೂಹಲಬಂತೇ?

ಕುತೂಹಲ ಬರುತ್ತೆ, ಆದ್ರೆ ನಾನೂ Gradual ಆಗಿ ಬುದ್ಧಿವಂತನಾಗ್ತಾ ಬತ್ತಾ ಇದ್ದಹಾಗೆ ಈ ಸಿಗರೇಟನ್ನೇ ಸ್ವತಃವಾಗಿ ಸೇದಬೇಕಲ್ಲಾ ಅಂತ ಫ್ರೆಂಡ್ಸ್‌ಗಳ ಜೊತೆ ಇರಬೇಕಾದ್ರೆ, ಸಾಮಾನ್ಯವಾಗಿ ಈ ಅಭ್ಯಾಸಗಳೆಲ್ಲಾ ಬರಬೇಕಾದ್ರೆ ಗೆಳೆಯರು ಇನ್ನಾವುದಾದ್ರೂ ಗುಂಪ್ನಿಂದ ಬರೋಕ್ಕೆ ಸಾಧ್ಯ, Individual ಆಗೆ ಯಾರಿಗೂ ಬರೋದಿಲ್ಲ. ಆಗ ಗೆಳೆಯರು ಎಲ್ಲಾ ಸೇದ್ತಾ ಇರಬೇಕಾದ್ರೆ ಒಂದು ರೀತಿ ಮಜಾ, ನಾವೂ ನೋಡೋಣ ಅಂತ ಅನುಭವದ ಮೇಲೆ ಸೇದ್ದು.

ಅದರಿಂದ ಏನು ಸ್ಫೂರ್ತಿ ಬಂತಾ?

ಸ್ಯಾಟಸಿಫ್ಯಾಕ್ಷನ್ ಸಿಕ್ದಾಗಾಯ್ತು. ಫಸ್ಟ್ ಕಾಲೇಜು ಮೆಟ್ಟಿಲು ಹತ್ತಿದ ಮೇಲೆ ಜಾಸ್ತಿ ಸ್ವಲ್ಪ ಶುರುವಾಯ್ತು.

ಅದಕ್ಕೂ ಮೊದಲೆ ಸ್ವಲ್ಪ ಹೆದರಿಕೆ ಇತ್ತಾ?

ಹೌದು.

ತಂದೆ ತಾಯಿಗಳನ್ನು ನೋಡಿದಾಗ ಈಗ್ಲೂ ಸ್ವಲ್ಪ ಹೆದರ್ಕೆ ಆಗುತ್ತೆ. ಆದ್ರೂ ಸ್ವಲ್ಪ ಅಡಲ್ಟ್ ಸ್ಟೇಜ್ ಇರೋದ್ರಿಂದ ಕಂಡ್ರೂನೂ ಏನು ಪರ್ವಾಗಿಲ್ವಲ್ಲಾ ಅನ್ನೋದು ಒಂದು ರೀತಿ ಬುದ್ದೀನು ಸಹ ಬಂದು ಬಿಡುತ್ತೆ ಅಂತ ನನ್ನ ಅಭಿಪ್ರಾಯ.

ಈಗ ನಿಮ್ಮ ಅಕ್ಕ ಪಕ್ಕದವರು ಸ್ನೇಹಿತ್ರಿಂದ ಕಲ್ತ್ರಿ, ಈಗ ನಿಮ್ಮ ಸ್ನೇಹಿತ್ರು ಕೆಲವರು ಸೇದ್‌ದೇ ಇರುವವರು ಇರ್ತಾರೆ ಅಂತವರಿಗೆ ನೀವು ತಮ್ಮ ಬುದ್ದಿವಾದ ಹೇಳ್ತೀರಿ?

ನಾವು ಅವರಿಗೆ ಇದೆಲ್ಲಾ ಸೇದೋದು ಬೇಡವಪ್ಪಾ, ಸೇದೋದು ಏನೂ ಉತ್ತಮವಲ್ಲ, ಆರೋಗ್ಯ ದೃಷ್ಟಿಯಿಂದ ಲಾಭವಿಲ್ಲ, ಹಣಾನೂ ಹಾಳಾಗುತ್ತೆ, ಆರೋಗ್ಯಾನೂ ಹಾಳಾಗುತ್ತೆ, ಆದ್ದರಿಂದ ಅಂತಾದೇನು ಬೇಕಾಗಿಲ್ಲ ಅಂತ ನಾವು ಹೇಳಬೇಕಾದ್ದು ನಮ್ಮ ಕರ್ತವ್ಯ. ನಾವೇನೋ ಕಲ್ತೋ ನೀವೇನು ಕಲೀಬೇಡಿ ಅಂತ ಹೇಳ್ತೀವಿ. ನಾನೂ ಇತ್ತೀಚೆಗೆ ಬಿಟ್ಬೇ ಬಿಟ್ಟಿದ್ದೀನಿ ಅಂದ್ರೂ ತಪ್ಪಾಗಲಾರದು ಬಿಟ್ಟುಬಿಟ್ಟಿದ್ದೀನಿ.

ಈಗ ಯಾರಾದ್ರೂ ಸಿಗರೇಟು ಸೇದುವಾಗ ನಾನು ಸೇದಬೇಕು ಅನ್ನಿ ಸೊಲ್ವೇ?

ಈವಾಗ ಏನೂ ಅನ್ಸಲ್ಲ. ಈವಾಗ ಸಿಗರೇಟ್ ಸೇದ್‌ತಾ ಇದ್ರೆ ಯಾರಾದ್ರೂ, ಈಗ ನಾನೂ ಸೇದು, ಅದರ ಪರಿಣಾಮ ಏನು ಅನ್ನೋದನ್ನ ಅರಿತಿರೋದ್ರಿಂದ ಯಾಕಾದ್ರೂ ಸಿಗರೇಟ್ ಸೇದತ್ತಾನೆ ಈ ವ್ಯಕ್ತಿ ಅನ್ನುವಂತೆ ಒಂದು ರೀತಿ ಸಿಟ್ಟು ಬರುತ್ತೆ. ಆಗ್ಲೂ ಯಾರಾದ್ರೂ ಮೊದಲು ಸೇದುತ್ತಿದ್ದುದು ಗೊತ್ತಿರೋದ್ರಿಂದ, ಸಿಗರೇಟ್ ತೆಗೆದುಕೋ ಎಂದಾಗ 'ಛೆ ಈ ಹುಡುಗನ ಜೊತೆ ಬಂದದ್ದರಿಂದ ತಾನೇ ಸಿಗರೇಟ್ ತಗೋ ಅಂತ ಮತ್ತೆ ಫೋರ್ಸ್ ಮಾಡ್ತಾನೆ, ಮತ್ ಕಲೀಬೇಕಾಗಬಹುದಲ್ಲ, ಇವನಿಗೇ ಬಿಡಿಸಬೇಕಲ್ಲಾ ಅನ್ನೋ ಪರಿಣಾಮ ನನ್ನ ಮೇಲೆ ಆಗುತ್ತೆ.

ಧ್ವನಿ : ಉಪಾಧ್ಯಾಯರು ಮಕ್ಕಳಿಗೆ ಬುದ್ಧಿ ಹೇಳಿ ತಿದ್ದುವುದು ಅವರ ಆದ್ಯ ಕರ್ತವ್ಯ. ಕೆಲವು ಉಪಾಧ್ಯಾಯರು ಹುಡುಗರ ಹತ್ತಿರವೇ ಬೀಡಿ, ಸಿಗರೇಟು ತರಿಸುವುದು, ಅವರೆದುರಿಗೆ ಸೇದುವುದನ್ನು ಮಾಡುತ್ತಾರೆ. ಆದರ್ಶವಾಗಿ ಬುದ್ಧಿ ಹೇಳುವವರು ಅವರೇ ಸೇದಿದರೆ ವಿದ್ಯಾರ್ಥಿಗಳು ಅದನ್ನು ಅನುಸರಿಸುವುದಿಲ್ಲವೇ? ಉಪಾಧ್ಯಾಯರಾದ ಶ್ರೀ ಸಿ. ಎನ್. ಚನ್ನವೀರಯ್ಯ ಅವರನ್ನು ಮಾತನಾಡಿಸಿದಾಗ- ಈ ಧೂಮಪಾನ ಮಾಡೋದ್ರಿಂದ ಏನು ಕೆಡಕು ಎಂಬುದನ್ನು ತಮ್ಮ ಅನುಭವದಿಂದ ತಿಳಿಸಿಕೊಡ್ತೀರಾ?

ನಾನು ಹೇಳೋದಾದ್ರೆ ಈ ಧೂಮಪಾನದಿಂದ ಸಾಮಾನ್ಯವಾಗಿ ಆರೋಗ್ಯ ಕೆಡುತ್ತೆ ಅಂತ, ಒಂದು ಶ್ವಾಸಕೋಶದ ಖಾಯಿಲೆ ಬಂದು ಆರೋಗ್ಯ ಕೆಟ್ಟುಹೋಗುತ್ತೆ ಅಂತ ನನ್ನ ಅಭಿಪ್ರಾಯ.

ಏನಾದ್ರೂ ಸ್ಫೂರ್ತಿ ಬರುತ್ಯಾ? ಲೇಖಕರಾಗೂ ಇದ್ದೀರಿ.

ಅನೇಕ ಲೇಖಕರುಗಳು ಕಲಾವಿದರುಗಳು ಅವರೆಲ್ಲಾ ಹೇಳ್ತಾರೆ ಯಾತಕ್ಕೋಸ್ಕರ ಈ ಬೀಡಿ, ಸಿಗರೇಟ್ ಸೇದಬೇಕು, ಈ ಚಟ ಏಕೆ ಬೆಳೆಸ್ಕೊಂಡು ಬರಬೇಕು?

ಸಾಮಾನ್ಯವಾಗಿ ಇದು ಮನುಷ್ಯನ ಪ್ರವೃತ್ತಿ ಅಂತ ಕಾಣಿಸುತ್ತೆ. ಅದರಿಂದ ಆ ಭಾವನೆ ಬರುತ್ತೆ ಅಂತ ಕಾಣ್ತಾ ಇಲ್ಲ ನನಗೆ.

ಸಾಹಿತ್ಯ ಬರೆಯುವಾಗ ಈ ಬೀಡಿ ಸಿಗರೇಟು ಏನೊ ಸ್ಫೂರ್ತಿ ಕೊಡಲಿಲ್ವೇ?

ಏನೋ ಒಂದೊಂದು ಸಾರಿ ಹಾಗನ್ನುತ್ತೆ. ಏನೋ ಒಂದೊಂದು ಸಾರಿ ಬೇಸರವಾದಾಗ, ಈ ಪೆನ್ನು ಮುಂದುವರಿಯದಿದ್ದಾಗ, ಒಂದು ಹಚ್ಕೋಣ ಅನ್ನುತ್ತೆ.

ಅಂದ್ರೆ ಈ ಚಟ ಯಾವಾಗ್ನಿಂದ ಹ್ಯಾಗೆ ಬಂತು ಅಂತೀರಿ?

ಹಳ್ಳಿಯ ಪರಿಸರ ಇರುತ್ತಲ್ಲ ಅದಕ್ಕೆ ಹೊಂದಿಕೊಂಡು ಈ ಚಟ ಬಂತು ಅಂತ ಕಾಣಿಸುತ್ತೆ.

ಈಗ ಬಿಡಬೇಕು ಅನ್ನಿಸ್ತದಾ ಹ್ಯಾಗೆ?

ಬಹಳ ಪ್ರಯತ್ನ ಪಟ್ಟೆ, ಕಷ್ಟ, ಆಗಲಿಲ್ಲ.

ದೊಡ್ಡವರು, ನಮ್ಮ ಶ್ರೀಮತಿಯುವರೂ ಸಹ ಹೇಳಿದ್ರು.

ಮಕ್ಕಳೂ ಸಹ ಹೇಳ್ತಾರೆ, ಸಿಗರೇಟು ಸೇದೋದು ಒಳ್ಳೇದಲ್ಲ. ನಾನೂ ಪ್ರಯತ್ನ ಪಟ್ಟೆ, ಆದ್ರೆ ಸಾಧ್ಯ ಆಗಲಿಲ್ಲ.

ನಿಮ್ಮ ತಂದೆಯವರು ಸಿಗರೇಟ್ ಸೇದ್ತಾ ಇದ್ರಾ?

ಹೌದು ಸೇದ್ತಾ ಇದ್ರು.

ನಿಮ್ಮ ಮಕ್ಕಳಿಗೇನಾದ್ರೂ ಈ ಚಟ ಇದ್ಯೇ?

ಇಲ್ಲ ಇಲ್ವೇ ಇಲ್ಲ.

ಜೀವನದಲ್ಲಿ ಬೇಜಾರಾಗಿದ್ದಾಗ, ಜಿಗುಪ್ಸೆಯಾಗಿದ್ದಾಗ ಬೀಡಿ ಸೇದಬೇಕು ಅಂತಾರೆ ನಿಜವೇ?

ನಿಜ ಅನ್ಸುತ್ತೆ. ಸ್ವಲ್ಪ ಬೇಜಾರಾದಾಗ ಒಂದು ಸ್ವಲ್ಪ ಧೂಮಪಾನ ಮಾಡುವುದು ಸ್ವಲ್ಪ ಹಿತ ಅನ್ನಿಸುತ್ತೆ.

ಇನ್ನೂ ಕೆಲವರು ಹೇಳ್ತಾರೆ ಚಳಿಗಾಲದಲ್ಲಿ ಸಿಗರೇಟ್ ಸೇದೋದ್ರಿಂದ ಬೆಚ್ಚಗಾಗುತ್ತೆ ಅಂತ ಹೇಳ್ತಾರೆ ಅದು ನಿಜವೇ?

ಏನೋ ಒಂದು ಥರ ಆಹ್ಲಾದಕರವಾಗಿರುತ್ತೆ ಅಷ್ಟೆ ಬೆಚ್ಚಗೇನೂ ಇರೋಲ್ಲ.

ಬೀಡಿ ಸಿಗರೇಟ್ ಸೇದೋವ್ರು ಕೆಲವರು, ಸೇದದೇ ಇರುವವರು ಕೆಲವರು. ನಾವು ಒಂದು ಸಿನಿಮಾ ಥಿಯೇಟರ್‌ಗೆ ಹೋಗ್ತೀವಿ, ಒಂದು ಬಸ್ಸಿನಲ್ಲಿ ಹೋಗ್ತೀವಿ ಪಕ್ಕದಲ್ಲಿರುವವರಿಗೆ ಬೀಡಿ ಬೇಕಾಗೋಲ್ಲ ನಾವು ಸೇದಬೇಕು ಅನ್ನಿಸ್ತಿರ್ತದೆ ಆ ಸಂದರ್ಭದಲ್ಲಿ ಹ್ಯಾಗಿರಬೇಕು ನಾವು?

ನಾವು ಬಹಳ ಎಚ್ಚರಿಕೆಯಿಂದ ನೋಡ್ಬೇಕಾಗುತ್ತೆ. ಸಾಮಾನ್ಯವಾಗಿ ನಾವು ಸೇದುವಾಗ ಬೇರೆಯವರಿಗೆ ತೊಂದರೆ ಕೊಡಬಾರದು. ಅಂಥ ಸಮಯದಲ್ಲಿ ಸೇದಬೇಕು ಅಂದಾಗ ಸ್ಥಳ ಬಿಟ್ಟು ಹೊರ ಹೋಗುವುದು ಉತ್ತಮ, ತೊಂದರೆ ಆಗಬಾರದು ಬೇರೆಯವರಿಗೆ. ಉಪಾಧ್ಯಾಯರು, ದೊಡ್ಡವರು, ವೈದ್ಯರು ಇವರು ಮೂರು ಜನರೂ ಒಂದು ಮಾತೇಳಿದ್ರೆ ಅದು ವೇದವಾಕ್ಯ ಇದ್ದ ಹಾಗೆ, ಅವರ ಮಾತ್ ಕೇಳ್ತಾರೆ. ಈಗ ಸಣ್ಣ ಸಣ್ಣ ಹುಡುಗ್ರೂ ಸೇದ್ತಾರೆ. ಈ ಸಂದರ್ಭದಲ್ಲಿ ನೀವೇನೋ ಬೀಡಿ ಸೇದೋದು ಕಲಿತುಬಿಟ್ರೆ. ಆ ಹುಡುಗರಿಗೆ ಯಾವ ರೀತಿ ನೀವು ಅವರ ಎದುರಿಗೆ ಸೇದುವುದು, ಅವರತ್ತಿರ ಬೀಡಿ ತರಿಸುವುದು ಸರಿಯೇ?

ಈ ಬಗ್ಗೆ ನಾನು ಸ್ವಲ್ಪ ನಾಚಿಕೆ ಇಟ್ಟುಕೊಂಡು ಹೇಳಬೇಕಾಗುತ್ತೆ. ಅದನ್ನ ಉಪಾಧ್ಯಾಯನಾದವನು ಮಕ್ಕಳಿಂದ ತರಿಸುವುದು ತಪ್ಪು, ಕೆಟ್ಟ ಅಭ್ಯಾಸ ಅದು. ಈತನ ಯೋಗ್ಯತೆ ಕೂಡ ಹುಡುಗರ ಮುಂದೆ ಕಡಿಮೆ ಆಗೋಗುತ್ತೆ, ಚಿಕ್ಕವನಾಗ್ಬುಡ್ತಾನೆ. ಆ ಕೆಲಸ ಮಾತ್ರ ಮಾಡಬಾರದು.

ಆ ಸಂದರ್ಭದಲ್ಲಿ ಯಾವ ರೀತಿ ವರ್ತಿಸಬೇಕು ಅಂತೀರಿ?

ಸ್ವಂತ ಜವಾಬ್ದಾರಿಕೆ ಇಟ್ಟುಕೊಂಡು ಮಾಡಬೇಕೆ ವಿನಃ ಅವರ ಮುಂದೆ ಧೂಮಪಾನ ಮಾಡುವುದು ತಪ್ಪು. ಉಪಾಧ್ಯಾಯನ ಅನುಕರಣೆ ಮಾಡ್ತಾರೆ. ಅವನು ಉಪಾಧ್ಯಾಯನಾಗಿ ಇರೋದಕ್ಕೆ ಲಾಯಕ್ಕಲ್ಲ ಅನ್ನಿಸುತ್ತೆ ನನಗೆ.

ದಿವಸ ದಿವಸ ಬೆಲೆ ಹೆಚ್ತಿದ್ರೂ ಈ ಹಚ್ಚೋದ್ ಬಿಡಕ್ಕೆ ಮಾತ್ರ ಮನಸ್ಸು ಬರೋಲ್ಲ ಅಲ್ವಾ.

ಓ, ಅದನ್ನು ಯೋಚನೆ ಮಾಡೋಕ್ಕಾಗೋಲ್ಲ. ಮೊದಲು ಜಾಸ್ತಿ ಆದಾಗ ಬೇಡ ಅನ್ನಿಸುತ್ತೆ. ಅದರ ಕಡೇ ನಮಗೆ ಗಮನವೇ ಕೊಡೋಲ್ಲಪ್ಪ.

ವೈದ್ಯರು ಹೇಳುವಾಗೆ ಏನೋ ರಕ್ತ ಇರುವಾಗ ಎಲ್ಲಾ ತಡ್ಕಂಡೋಗುತ್ತೆ ಆಮೇಲೆ ರೋಗ ಬರುತ್ತೆ. ಆ ದೃಷ್ಟಿಯಿಂದ ಕಮ್ಮಿ ಮಾಡ್ಕೊಳ್ಳೋಣ ಹಂತ ಹಂತವಾಗಿ ಆಮೇಲೆ ಅದನ್ನು ಮರೆಯಲಿಕ್ಕಾಗೋಲ್ವೇ ಅಂತ ಹೇಳಬೇಕು ಅಲ್ವೇ?

ಅದು ಸರೀನೇ ಆದ್ರೆ. ದುಶ್ಚಟಗಳಿಗೆ ಒಂದು ಸಾರಿ ದಾಸನಾಗಿಬಿಟ್ರೆ, ಎಲ್ಲೋ ಕೆಲವು ಜನ ಬಿಟ್ಟಿದ್ದಾರೆ ಕೆಲವು ಸ್ನೇಹಿತ್ರು. ಆದ್ರೆ ದಾಸರಾಗಿ ಬಿಟ್ಟೋರ ಮೇಲೆ ಅಷ್ಟು ಸುಲಭವಾಗಿ ಬಿಡಕ್ಕಾಗೋಲ್ಲ ಇದು ಸ್ವಾಮಿ ನನ್ನ ಅಭಿಪ್ರಾಯ.

ಅಂದ್ರೆ ಬಿಡೋಕೆ ಪ್ರಯತ್ನ ಮಾಡಬೇಕು.

ಧ್ವನಿ : ಅಂತೆಯೇ ಕಾರ್ಮಿಕನೇ ಆಗಲೀ ಕಛೇರಿಯಲ್ಲಿ ಕೆಲಸ ಮಾಡುವವನೇ ಆಗಲೀ ಬೇಸರವಾದಾಗ ವಿಶ್ರಾಂತಿಯನ್ನು ತೆಗೆದುಕೊಳ್ಳುವ ಬದಲು ಒಂದು ಬೀಡಿಯೋ ಸಿಗರೇಟೋ ಹಚ್ಚಿ ಕುಳಿತುಕೊಳ್ಳುತ್ತಾನೆ. ಈ ಅಭ್ಯಾಸ ಮುಂದುವರಿಯುತ್ತದೆ. ಇದರಿಂದ ದೇಹಕ್ಕೆ ಎಷ್ಟೊಂದು ಹಾನಿ ಎಂಬುದನ್ನು ಕೇಳಿ ಓದಿ ತಿಳಿದಿದ್ದರೂ ಚಟವನ್ನು ಬೆಳೆಸಿಕೊಂಡು ಹೋಗುತ್ತಾನೆ. ಅಂಥ ಕಾರ್ಮಿಕನೊಬ್ಬನನ್ನು ಪ್ರಶ್ನಿಸಿದಾಗ, ಕಾರ್ಮಿಕ ಎಸ್. ಶ್ರೀನಿವಾಸ್ ಅವರನ್ನು ಸಂದರ್ಶಿಸಿದಾಗ-

ತಾವೂ ಕೂಡ ಈಧೂಮಪಾನದ ಚಟವನ್ನು ಅಂಟಿಸಿಕೊಂಡಿದ್ದೀರಿ ಅಂತ ತಿಳಿದೆ ಹೌದು

ಇದು ಎಷ್ಟು ವರ್ಷಗಳಿಂದ ಬಂತು ನಿಮಗೆ?

ನಾನು ಏಳನೇ ತರಗತಿಯಲ್ಲಿ ಓದ್ತಾ ಇರಬೇಕಾದ್ರೆ ಈ ಧೂಮಪಾನ ಮೊದಲನೇ ಬಾರಿ ಮಾಡಿದ್ದೆ ಅಂತ ನನ್ನ ನಂಬಿಕೆ.

ನಿಮ್ಮ ತಂದೆ ಅಥವಾ ಇನ್ನಾರಾದ್ರೂ ಸೇದ್ತಾ ಇದ್ರೋ ಅಥವಾ ಮಿತ್ರರಿಂದ ಕಲಿತ್ರೋ.

ನಮ್ಮ ತಂದೆ ಈ ಅಭ್ಯಾಸ ಏನೂ ಇಟ್ಕೊಂಡಿಲ್ಲ. ನೀವು ಹೇಳಿದ ಹಾಗೆ ಮಿತ್ರರಿಂದ ನಾನು ಈ ಚಟಾನ ಕಲಿತುಕೊಂಡೆ ಅಂತ ಹೇಳ್ತೀನಿ.

ನೀವು ಏಳನೇ ಕ್ಲಾಸು ಓದುತ್ತಿದ್ದಾಗ ಹಣ ಸಿಕ್ತಿತ್ತೋ?

ಕೆಲವು ಸ್ನೇಹಿತ್ರು ಇದ್ರು. ಅವರಿಗೆ ಈ ಅಭ್ಯಾಸವೆಲ್ಲಾ ಇತ್ತು. ಮೊದ ಮೊದಲು ಏನು ಮಾಡಿದ್ರು ನನ್ನನ್ನೇ ಅವರ ದಾರಿಗೆ ಎಳೆದುಕೊಳ್ಳಲಿಕ್ಕೋಸ್ಕರ ಅವರೇ ನನಗೆ ಫ್ರೀಯಾಗಿ ಸಿಗರೇಟ್ ತಂದು ಕೊಟ್ಟು ನನಗೆ ಅಭ್ಯಾಸ ಮಾಡಿಸಿದ್ರು. ಮೊಧ ಮೊದಲು ನನಗೆ ದುಡ್ಡಿನ ತೊಂದರೆ ಏನೂ ಆಗಲಿಲ್ಲ ಸಿಗರೇಟ್ ಸೇದಲಿಕ್ಕೆ.

ಮೊದ ಮೊದಲು ಸಿಗರೇಟ್ ಸೇದ್ದಾಗ ಏನನ್ನಿಸ್ತು, ಚಂದಾ ಅನ್ನಿಸ್ತೋ, ಸ್ಫೂರ್ತಿ ಬಂತೋ ಏನಾಯ್ತು?

ನನಗೇನೂ ಅನ್ನಿಸಲಿಲ್ಲ.

ಸಂತೋಷ ಕೊಡ್ತೋ?

ಆಗ ಏನೂ ಸಂತೋಷ ಕೊಡಲಿಲ್ಲ. ನಿಜವಾಗಲೂ ಹೇಳ್‌ಬೇಕಾದ್ರೆ ಕೆಮ್ಮುಬಂತು ನನಗೆ.

ಮತ್ಯಾಕೆ ಮುಂದುವರಿಸಿದ್ರಿ?

ಅದನ್ನ ಸದ್ಯಕ್ಕೆ ಮುಂದುವರಿಸಲಿಲ್ಲ. ಬಹಳ ದಿವಸ ನಾನು ಅದರ ಬಗ್ಗೆ ಗಮನ ಕೊಡಲಿಲ್ಲ. ಅನಂತರ ಕಾಲೇಜಿಗೆ ಹೋದ ಮೇಲೆ ಅದರ ಅಭ್ಯಾಸವನ್ನು ಮತ್ತೆ ಶುರು ಮಾಡ್ಕೊಂಡೆ ಮಿತ್ರರಿಂದ. ಆಗ ಅದರ ಬಗ್ಗೆ ನನಗೆ ಸ್ವಲ್ಪ ಅನುಭವ ಆಯ್ತು. ಅದನ್ನ ಸೇದಿದ್ರಿಂದ ಮನಸ್ಸಿಗೆ ಸ್ವಲ್ಪ ಆನಂದ ಆಗ್ತಾ ಇತ್ತು, ಉಲ್ಲಾಸ ಸಿಕ್ತಾ ಇತ್ತು. ಆಗ್ಲಿಂದ್ಲೂ ನಾನು ಈ ಅಭ್ಯಾಸ ಇಟ್ಕೊಂಡೆ ಬಂದಿದ್ದೇನೆ. ನಾನು ಹೇಳೋದಾದ್ರೆ ಸಿಗರೇಟ್ ಸೇದೋದು ವಿಶ್ರಾಂತಿ ಸಮಯದಲ್ಲಿ ಬಿಟ್ಟು ಬೇರೆ ಯಾವ ಸಮಯದಲ್ಲಿ ತೆಗೆದು ಕೊಳ್ಳುವುದಿಲ್ಲ. ಏಕೆ ಅಂದ್ರೆ ನಾವು ಬೆಳಗಿನಿಂದ ಸಂಜೆಯವರೆಗೂ ದುಡೀತೀವಿ, ಆಗ ಮಧ್ಯೆ ಮಧ್ಯೆ ಒಂದು ಸಿಗರೇಟ್ ಸೇದಿದ್ರೆ ತೊಂದರೆ ಆಗುತ್ತೆ ಅಂತ ನನ್ನ ನಂಬಿಕೆ. ಒಂದೇ ಒಂದು ಸಿಗರೇಟ್ ತೆಗೆದುಕೊಂಡು ನಾನು ಸೇದುತ್ತೇನೆ. ರಜಾ ದಿನದಲ್ಲಿ ಸ್ವಲ್ಪ ಜಾಸ್ತಿ ಆಗುತ್ತೆ. ಯಾವಾಗಲೂ ವಿಶ್ರಾಂತಿ ಇರ್ತೀನಿ ಆಗ ಜಾಸ್ತಿ ಆಗುತ್ತೆ.

ಮದ್ವೆ ಆಗಿ ಸಂಸಾರ ತಾಪತ್ರಯ ಹೆಚ್ಚಾದ ಮೇಲೆ ನಿಮ್ಮ ಜೀವನ ಮಾಡಲು ಕಷ್ಟವಾದಾಗ ಆಟೋಮ್ಯಾಟಿಕ್ ಆಗಿ ಬಿಡಬೇಕಾಗುತ್ತೆ ಅಲ್ವೆ?

ಆವಾಗ ಬಿಡಿ ನಮ್ಮ ಹೆಂಡ್ತಿ ಹೇಳಿಯೇ ಹೇಳ್ತಾರೆ, ನಿಮಗೆ ಬರೋ ವರಮಾನದಲ್ಲಿ ಸಿಗರೇಟ್ ಯಾಕೆ ಸೇದ್ತೀರಿ ಅಂತಾ ಹೇಳ್ತಾರೆ, ಆಮ್ಯಾಲೆ ಆಟೋಮ್ಯಾಟಿಕ್ ಆಗಿ ಬಿಡಬೇಕಾಗುತ್ತೆ.

ಧ್ವನಿ : ಸಿಗರೇಟ್ ಸೇದಿ ರೋಗಿಯಾದ ಶ್ರೀ ರಾಮಯ್ಯ.

ಏನು ಈ ಆಸ್ಪತ್ರೆಗೆ ಸೇರಿದ್ದೀರಲ್ಲಾ?

ಎದೆ ಹುಣ್ಣಾಗಿತ್ತು ಹೆಚ್ಚಿಗೆ ಸಿಗರೇಟ್ ಸೇದ್ತಾ ಇದ್ದೆ.

ಎದೆ ನೋವಾಯ್ತು ಅದ್ಕೆ ಬಂದೋ?

ಶ್ವಾಸಕೋಶಕ್ಕೆ ಸಂಬಂಧಪಟ್ಟ ರೋಗ.

ಯಾವಾಗ ನೀವು ಸಿಗರೇಟ್ ಸೇದೋದು ಕಲಿತ್ರಿ?

೨೦ ವರ್ಷವಾಗಿತ್ತು.

ಯಾಕೆ ಸೇದ್ತೀರಿ?

ಅದು ಒಂದು ಸಹವಾಸದಿಂದ.

ಡಾಕ್ಟರ್ ಹೇಳಿದ್ರು ಸಿಗರೇಟ್ ಸೇದಬೇಡ ಅಂತ ಈಗೇನು ಮಾಡಿದ್ರಿ?

ಬಿಟ್ಬಿ ಬಿಟ್ಟೆ

ಈಗ ನಾನು ಹೇಳೋದು ನೀವು ಆಗಲಿಂದಲೇ ಬೀಡಿ ಸೇದ್‌ದೇ ಇದ್ರೆ ಈ ರೋಗವೂ ಬರ್ತಿರ್ಲಿಲ್ಲಾ, ಆರೋಗ್ಯವಾಗಿರಬಹುದಾಗಿತ್ತು. ಈ ಆಸ್ಪತ್ರೆಗೆ ಸೇರೋ ಗೋಜೇ ಇರಲಿಲ್ಲ ಅಲ್ವೇ?

ಹೌದು.

ಧ್ವನಿ : ಭೂಮಿಯನ್ನು ಉತ್ತು ಬಿತ್ತು ಮಣ್ಣಗೆದು, ನೀರೆತ್ತಿ, ಕಳೆ ತೆಗೆದು ಭೂಮಿಗೈಮೆ ಗೈವ ರೈತನಿಗೆ ಬೇಜಾರಾಗುತ್ತದೆ. ಆಗ ಒಂದು ಬೀಡಿಯನ್ನೋ, ಸಿಗರೇಟನ್ನೋ ಸೇದುವುದು ರೂಢಿ. ಕಷ್ಟವೆಲ್ಲಾ ಮರೆತು ಮತ್ತೆ ಸ್ಫೂರ್ತಿ ಬರುತ್ತದೆ ಎಂಬುದು ಕೆಲವು ರೈತರ ಭಾವನೆ. ಆದರೆ ಅದರಿಂದ ಆತಂಕಗಳು ಎಷ್ಟು ಎಂಬುದನ್ನು ಯಾರು ಬಲ್ಲರು ಪಾಪ?

ಧ್ವನಿ : ತುಮಕೂರು ಜಿಲ್ಲಾ ಆರೋಗ್ಯ ಶಿಕ್ಷಣಾಧಿಕಾರಿಗಳಾದ ಶ್ರೀ ಬಿ. ಶ್ರೀಕಂಠಾಚಾರ್ ಅವರು-

ನಮ್ಮ ಪ್ರಾಥಮಿಕ ಆರೋಗ್ಯ ಕೇಂದ್ರಗಳ ನಮ್ಮ ಆರೋಗ್ಯ ಕರ್ಾಕರ್ತರು ಈ ಸಿಗರೇಟ್ ಸೇದುವುದು ಬೇಡಿ ಎಂಬುದನ್ನು ಹೇಳ್ತಾರೆ. ಅವರು ಗ್ರಾಮಾಂತರ ಪ್ರದೇಶಗಳಿಗೆ ಹೋದಾಗ ಜನರಿಗೆ ಈ ಧೂಮಪಾನದಿಂದ ಆಗತಕ್ಕಂಥ ದುಷ್ಪರಿಣಾಮಗಳ ಬಗ್ಗೆ ಅವರಿಗೆ ತಿಳುವಳಿಕೆ ಮಾಡಿಕೊಟ್ಟು, ಈ ಧೂಮಪಾನ ಮಾಡಬಾರದು ಅಂತ ನಾವು ನಮ್ಮ ಆರೋಗ್ಯ ಕಾರ್ಯಕರ್ತರಿಗೆ ತಿಳುವಳಿಕೆ ಕೊಟ್ಟಿದ್ದೇವೆ. ಅದಕ್ಕಾಗಿ ಸಾರ್ವಜನಿಕ ಸಭೆಗಳು, ಗುಂಪು ಚರ್ಚೆಗಳು ಇದನ್ನೆಲ್ಲಾ ನಡೆಸಿ ಜನರಿಗೆ ಮನದಟ್ಟು ಮಾಡಿ ಕೊಡಬೇಕು ಅಂತ್ಹೇಳಿದ್ದೇವೆ.

ಧ್ವನಿ : ಯಾರೇ ಹೇಳಲಿ ಯಾವುದಾದರೂ ಚಟವನ್ನು ಬಿಡುವುದು ಬಹಳ ಕಷ್ಟ. ಆದರೆ ಒಬ್ಬರ ತೂಕದ ಮಾತಿನಿಂದ ಯಾವ ಚಟವನ್ನಾದರೂ ಬಿಡುತ್ತಾನೆ, ಆ ಶಕ್ತಿ ಇರುವುದು ವೈದ್ಯರಲ್ಲಿ. ಅವರು ಹೇಳಿದರೆ ಆಯಿತು ಬಿಡಿ ವೇದವಾಕ್ಯ ಇದ್ದಂತೆ. ರೋಗ ಬರುತ್ತದೆ, ಪ್ರಾಣಾಪಾಯವಾಗುತ್ತದೆ ಎಂಬ ಮಾತನ್ನು ಹೇಳಿದಾಗ ಯಾರಾದರೂ ಹೇಗಾದರೂ ಮಾಡಿ ಮರೆಯುತ್ತಾರೆ. ಧೂಮಪಾನದ ವಿಷಯದಲ್ಲೂ ಅಷ್ಟೇ. ಕ್ಯಾತ್ಸಂದ್ರ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಾದ ಡಾ॥ ಏಕಾಂತಪ್ಪ ಅವರನ್ನು ಸಂದರ್ಶಿಸಿದಾಗ-

ಈ ಬೀಡಿ ಸಿಗರೇಟನ್ನು ಸೇದೋದ್ರಿಂದ ಏನೇನು ರೋಗ ಬರುತ್ತೆ ಡಾಕ್ಟರೆ?

ಶ್ವಾಸಕೋಶದ ಖಾಯಿಲೆ ಬರುತ್ತೆ, ರಕ್ತ ಒತ್ತಡದ ಖಾಯಿಲೆ, ಹೃದಯದ ಖಾಯಿಲೆ ಬರುತ್ತೆ, ಹೊಟ್ಟೇ ನೋವು ಬರ್ಗರ್ಸ್ ಐಸೀನ್ ಬರ್ತದೆ, ಕ್ಯಾನ್ಸರ್ ಬರುತ್ತೆ.

ಇದು ಎಷ್ಟ ದಿವಸ ಸೇದ್ರೆ ಬರುತ್ತೇ?

ಇದು ೧೫ರಿಂದ ೨೦ವರ್ಷದವರೆಗೂನೂ ದಿವಸಾ ೧೦-೨೦ ಬೀಡಿಯವರೆಗೆ ಸೇದಿದ್ರೆ ಅಂತ ಮನುಷ್ಯನಿಗೆ ಈ ಥರ ಖಾಯಿಲೆ ಬರೋದುಂಟು.

ಎಷ್ಟೋ ಜನ ವೈದ್ಯರು ರೋಗಿಗಳ ಎದುರಿಗೇ ಸಿಗರೇಟ್ ಸೇಮುತ್ತಾರೆ. ಆದ್ದರಿಂದ ನಾವು ಯಾಕೆ ಸೇದಬಾರದು ಅನ್ನಿಸುತ್ತೆ. ಆ ದೃಷ್ಟಿಯಿಂದ ಡಾಕ್ಟರ್ಯಾವರೀತಿ ಇರಬೇಕು ಅಂತ ಹೇಳ್ತೀರಾ?

ಅದು ಅವರವರ ಅಭ್ಯಾಸದ ಮೇಲೆ ಹೋಗುತ್ತೆ. ಸಾಮಾನ್ಯವಾಗಿ ನಾನು ಸೇದೋದಿಲ್ಲ. ಆದರೆ ಅನೇಕ ಸ್ನೇಹಿತರು ಸೇದ್ತಾ ಇದ್ದಾರೆ. ಆದರೆ ನಾವು ಅವರಿಗೆ ಬದ್ಧಿವಾದ ಹೇಳ್ತೀವಿ, ಆದ್ರೆ ನಾವು ಅನುಸರಿಸೋಲ್ಲ. ಅವರವರು ತಿಳ್ಕೊಂಡು ಮಾಡಿದ್ರೆ ಒಳ್ಳೇದು. ಸಾಮಾನ್ಯವಾಗಿ ಬೀಡಿ; ಸಿಗರೇಟನ್ನು ರೋಗಿಗಳ ಎದುರಿಗೆ ಸೇದುವುದರ ಬದಲು ಒಂದು ಪ್ರೈವೇಟ್ರೂಮಿನಲ್ಲಿ ಸೇದೋದು ಒಂದು ತರಹ ಒಳ್ಳೇದು.

ಧ್ವನಿ : ಬೆಂಗಳೂರು ಎಲ್. ಎಫ್.ಡಿಸ್ಪೆನ್ಸರಿಯ ವೈದ್ಯಾಧಿಕಾರಿಗಳಾದ ಶ್ರೀ ಹೆಚ್. ವಿ.ವೀರಭದ್ರಯ್ಯ-

ಈ ಸಿಗರೇಟ್ ಪಾಶ್ಚಾತ್ಯ ದೇಶದಿಂದ ಬಂತು ಅಂತ ಹೇಳ್ತಾರೆ. ಆದ್ರೆ ಮೊದಲು ನಮ್ಮ ದೇಶದಲ್ಲಿ ಹೆಂಗಸರು ಸೇದ್ತಿರಲಿಲ್ಲ ಅಂತ ಕಾಣುತ್ತೆ.

ಆದ್ರೆ ನಿಮ್ಮ ಅನಭವದಲ್ಲಿ ನಮ್ಮ ದೇಶದಲ್ಲಿ ಈ ಬೀಡಿ ಸಿಗರೇಟುಗಳನ್ನು ಸೇದಿ ರೋಗದಿಂದ ನರಳಿ ಬಂದಂಥವರು ಏನಾದ್ರೂ ಉಂಟೇ?

ಹೈಸ್ಕೂಲಿನವರು, ಕಾಲೇಜಿನವರು, ದೊಡ್ಡವರು ಎಲ್ಲರೂ ಸೇದ್ತಾ ಇದ್ದಾರೆ. ೯೦ಭಾಗ ಸಿಗರೇಟ್ ಸೇವ್ತಾ ಇದ್ದಾರೆ ಮಹಿಳೆಯರು ೧೫-೨೦ ಭಾಗ ಇದ್ದಾರೆ.

ಗರ್ಭಿಣಿ ಸ್ತ್ರೀಯರಿಗೂ ಇದು ಒಳ್ಳೆಯದಲ್ಲ ಅನ್ತೀರಾ?

ಗರ್ಭಸ್ರಾವ, ಮಗು ಒಳಗಡೆ ಸಾಯಬಹುದು. ತಾಯಿಗೂ ಹಾನಿ. ಅನೇಕ ರೋಗಗಳಿಗೆ ಕಾರಣವಾಗುತ್ತೆ. ಇನ್ನು ಕೆಲವರು ಹೊಸದಾಗಿ ಮದುವೆ ಆಗುತ್ತಾರೆ, ನಮಗೆ ಅಂಥ Desire ಇಲ್ಲ sex ಮೇಲೆ ಆ ಶಕ್ತಿ ಕಡಿಮೆ ಆಗುತ್ತೆ. ೧೫-೨೦ ಸಿಗರೇಟ್ ಸೇದಿದರೆ ಅವನ್ನ smoker ಅಂತ ಕರೀತೀರಿ ೨೦-೪೦, ೫೦-೬೦ ಸೇದಿದರೆ ಅವನ್ನ Chain smoker ಅಂತೀವಿ. ಅದು ಇಂಥವರಿಗೆ ಪರಿಣಾಮ ಬೀರುತ್ತೆ, sex ಮೇಲೆ Desire ಕಡಿಮೆ ಆಗುತ್ತೆ ಬೇರೆ ಅಂಗಾಂಗಗಳಿಗೂ ಹಾನಿ ಉಂಟು ಮಾಡುತ್ತದೆ.

ನಿರೂಪಣೆ : ಆರೋಗ್ಯ ಕಾರ್ಯಕ್ರಮಗಳ ಸೇವೆಯಲ್ಲಿ ಅನೇಕ ಸ್ವಯಂಸೇವಾ ಸಂಸ್ಥೆಗಳು, ಸಾರ್ವಜನಿಕ ಸಂಸ್ಥೆಗಳು, ಯುವ ಮಂಡಲಿಗಳು, ಮಹಿಳಾ ಮಂಡಲಿಗಳು ತಮ್ಮ ಪಾತ್ರವನ್ನು ಒಂದಲ್ಲ ಒಂದು ವಿಧದಲ್ಲಿ ಅನುಸರಿಸುತ್ತಲೇ ಬಂದಿವೆ. ಹಾಗೇ ಈ ಧೂಮಪಾನದಿಂದಾಗುವ ದುಷ್ಪರಿಣಾಮಗಳನ್ನು ತಿಳಿಯದ ಜನರಿಗೆ ತಿಳಿಯ ಹೇಳಬೇಕು. ಹಳ್ಳಿಯ ಜನರಿಗೆ ಶಿಕ್ಷಣ ನೀಡಬೇಕು. ಆಗ ಜನರು ಧೂಮಪಾನದಿಂದಾಗುವ ದುಷ್ಪರಿಣಾಮಗಳನ್ನು ತಿಳಿದು ಅದರಿಂದ ದೂರ ಇರಲು ಸಾಧ್ಯವಾಗುತ್ತದೆ. ವೈದ್ಯರು,ಉಪಾಧ್ಯಾಯರು, ದೊಡ್ಡವರು, ಸ್ವಯಂಸೇವಾ ಸಂಸ್ಥೆಗಳು, ಸಾರ್ವಜನಿಕ ಸಂಘ ಸಂಸ್ಥೆಗಳು ಈ ಕಾರ್ಯದಲ್ಲಿ ಮುಂದಾದರೆ ವಿಶ್ವ ಆರೋಗ್ಯ ದಿನದ ಆಚರಣೆಯು ಸಫಲವಾಗುತ್ತದೆ.

ಅನೇಕ ಅನುಭವಸ್ಥರು ಧೂಮಪಾನ ಕೆಟ್ಟದು ಎಂದು ಚಿಕ್ಕವರಿಗೆ ಬುದ್ಧಿವಾದ ಹೇಳುವುದು ಸಹಜ. ಅವರು ತಮ್ಮ ಜೀವನದಲ್ಲಿ ಅನುಭವಿಸಿ, ನರಳಿ ಸಂಕಟಪಟ್ಟು, ಅನೇಕ ರೋಗ ರುಜಿನಗಳಿಗೆ ಗುರಿಯಾಗಿ, ಧೂಮಪಾನ ಅಭ್ಯಾಸ ಮಾಡಲು ಶುರು ಮಾಡಿದವರಿಗೆ ಕಿವಿ ಮಾತು ಹೇಳುವುದರಲ್ಲಿ ಅರ್ಥವಿದೆ ಎಂದು ಹೇಳಬಹುದು. ನಾವು ಜೀವನದಲ್ಲಿ ಅನುಭವಿಸಿದೆವು, ನೀವು ಅದನ್ನು ಅನುಭವಿಸಬೇಡಿ, ಕಷ್ಟಕ್ಕೆ ಸಿಕ್ಕಿಹಾಕಿಕೊಳ್ಳಬೇಡಿ, ಎಂದು ಹೇಳುತ್ತಾರೆ. ಅವರನ್ನು ನೋಡಿದಾಗ ನಾವು ಬುದ್ಧಿ ಕಲಿತುಕೊಳ್ಳಬಹುದು. ಧೂಮಪಾನ ಲೀಲೆಯಲ್ಲ, ಆದೊಂದು ಮೋಜಲ್ಲ. ಅದರಿಂದ ಆರೋಗ್ಯಕ್ಕೆ ಹಾನಿಯೇ ಹೊರತು ಲಾಭವಲ್ಲ. "ಕಾಸು ಕೊಟ್ಟಾಯಿತು ಹೊಗೆಸೊಪ್ಪು ಸುಟ್ಟಾಯಿತು" ಎಂಬ ಗಾದೆ ನಮ್ಮಲ್ಲಿ ಬಳಕೆಯಲ್ಲಿದೆ. ಕೊನೆಗೆ ಎಲ್ಲರಿಗೂ ಆಗುವುದೇ ಇದು "ಕಾಸು ಕೇಡು, ಆರೋಗ್ಯವೂ ಹಾಳು" ಇದು ಯಾರಿಗೆ ಬೇಕು? ಭಾಗ್ಯ ಭಾಗ್ಯಕೆಲ್ಲಾ ಆರೋಗ್ಯಭಾಗ್ಯ ಮುಖ್ಯವಲ್ಲವೇ? ಮಾನವನ ಆರೋಗ್ಯ ಕೆಡಲು ಧೂಮಪಾನವೂ ಒಂದು. ಇದರಿಂದ ದೂರ ಇರುವುದು ಲೇಸು. ದೂಮಪಾನ ಧೂಮಲೀಲೆಯಲ್ಲ. ಮನುಷ್ಯನ ಆರೋಗ್ಯದ ಧಮನಕಾರಿ. ಆದುದರಿಂದ ಕಲಿತವರು ಇದರಿಂದ ದೂರ ಇರುವುದು ಒಳಿತಲ್ಲವೇ?

ಗಂಡ : ನೋಡ್ದೇನೇ?

ಹೆಂಡತಿ : ನೋಡ್ದೆ.

ಗಂಡ : ಕೇಳ್ದೇನೇ?

ಹೆಂಡತಿ : ಕೇಳಾಯ್ತಲ್ಲ.

ಗಂಡ : ಈಗ ನೀನು ನೋಡಿದ್ದು ಕೇಳಿದ್ದು ಅಲ್ಪ, ಇಂಥ ಎಷ್ಟು ಕಥೆಗಳಿವೆಯೊ?ಯಾರ್ ಯಾರ್‌ಗೆ ಚಟ ಯಾವ ಯಾವ ರೀತಿ ಆರಂಭವಾಯ್ತು, ಯಾವ ಯಾವ ರೀತಿ ಬಿಡುಗಡೆ ಆಯ್ತು ಅನ್ನೊದ್

ಕೇಳ್ಲಿಲ್ಲಾ... ನೋಡ್ತಾ ಕೇಳ್ತಾ, ಹೋಗ್ತಿದ್ರೆ ಈ ಕಥೆ ಈ ಹೊತ್ತಿಗೆ ಮುಗಿಯೋಲ್ಲ ಕಣೆ.

ಹೆಂಡತಿ : ಸಾಕು ಇಷ್ಟು ಕಥೆ ಕೇಳಿಯೇ ನೀವು ಪರಿವರ್ತನೆ ಹೊಂದಬಹುದಲ್ಲಾ.

ಗಂಡ : ಹೌದು ನನಗೂ ಈಗ ಅನ್ನಿಸ್ತಾ ಇವೆ, ಹೇಗಾದ್ರೂ ಮಾಡಿ ಬಿಟ್ಟುಬಿಡುಬೇಕು ಅಂತ.

ಹೆಂಡತಿ : ಇನ್ನೂ ಅಡ್ಡಗೋಡೆ ಮೇಲೆ ದೀಪ ಇಡ್ತಾ ಇದ್ದೀರಿ, ಹ್ಞೂಂ ಖಂಡಿತ ಬಿಡ್ತೀನಿ ಅಂತ promise ಮಾಡಿ.

ಗಂಡ : ಏನಾದ್ರೂ ಆಗ್಩ಿ ತಲೇ ಮೇಲೆ ತಲೆ ಹೋಗಲೀ ಈ ಹೊತ್ತೊಂದು ದಿನ ಎಷ್ಟು ಬೇಕೋ ಅಷ್ಟು ಸೇದುಬಿಟ್ಟು ಬಿಡ್ತೇನೆ.

ಹೆಂಡತಿ : ಈಗ್ಲಿಂದ ಅಂತ ಹೇಳಲಿಕ್ಕಾಗೋಲ್ವೆ? ಈ ಹೊತ್ತು ಇನ್ನು ಜೀವನವಿಡೀ ಸೇದುವಷ್ಟನ್ನು ಸೇದು ಬೀಸಾಡಲಿಕ್ಕಾಗುತ್ಯೇ? ಪುಚ್ಚು... ಆಗಲೀ...

ಗಂಡ : ನಾಳೆಯಿಂದ ಸಿಗರೇಟ್ ದುಡ್ಡಿಗೆ ಹಣ್ಣು ಹಂಪಲು ತೆಗೆದುಕೊಳ್ತೇನೆ Okay.

ಹೆಂಡತಿ : ಸದ್ಯ ಈಗ್ಲಾದ್ರೂ ಒಂದು ದಾರಿಗೆ ಬಂದ್ರಲ್ಲಾ 'ಧೂಮಲೀಲೆ' ಈ ಹೊತ್ತಿಗೆ ಮುಗಿಯುತ್ತೆ.

ಗಂಡ : ಹೌದು.

ನಿರೂಪಣೆ: ಶ್ರೀ ಬಿ.ಎಸ್.ಸ್ವಾಮಿ ಹಾಗೂ ಶ್ರೀಮತಿ ಆರ್.ಕೆ.ಸೀತಮ್ಮ.

ಬರೆದು ಪ್ರಸ್ತುತ ಪಡಿಸಿದವರು : ಶ್ರೀ ಬಿ.ಎಸ್. ಸ್ವಾಮಿ.

ಬೆಂಗಳೂರು ನಿಲಯದಲ್ಲಿ ಸಿದ್ಧಪಡಿಸಿದ ಈ ಕಾರ್ಯಕ್ರಮವು ಆಕಾಶವಾಣಿ ಬೆಂಗಳೂರು, ಭದ್ರಾವತಿ ಹಾಗೂ ಮೈಸೂರು ನಿಲಯಗಳಿಂದ ಏಕ ಕಾಲದಲ್ಲಿ ಪ್ರಸಾರವಾಯಿತು.

* * *

✳

# ಮೀನು ಹೆಜ್ಜೆ

(ಬಾಗಿಲು ತೆಗೆಯುವ ಶಬ್ದ)

ಬಾಸ್ : Yes ...ಯಾರದು?

ಕ್ಷೇಮೇಂದ್ರ : ನಾನು ಸಾರ್... ಕ್ಷೇಮೇಂದ್ರ,,,

ಬಾಸ್ : ಓ ಬನ್ನಿ... ಕುಳಿತುಕೊಳ್ಳಿ... ಇಂದಿನ ಅನ್ವೇಷಣೆಯಲ್ಲಿ ಏನಾದರೂ ಪ್ರಗತಿ ಇದೆಯೇ?

ಕ್ಷೇಮೇಂದ್ರ : ಹೋದ ಮೇಲೆ ಪ್ರಗತಿಯೇ ಹೊರತು, ಅಧೋಗತಿ ಇಲ್ಲವೇ ಇಲ್ಲ ಸಾರ್.

ಬಾಸ್ : ಭೇಷ್...!

ಕ್ಷೇಮೇಂದ್ರ : ನಿನ್ನೆ ...ಹೀಗೆ ಬಸ್‌ನಲ್ಲಿ ಹೋಗುವಾಗ...

(ಬಸ್ ಕಂಡಕ್ಟರ್ ಟಿಕಿಟ್-ಟಿಕಿಟ್ ಎನ್ನುವುದು, ಜನರ ಗದ್ದಲ)

ಬಜ್ಜಣ : ಬನ್ನಿ...ಬನ್ನಿ...ಕುಳಿತುಕೊಳ್ಳಿ...

ಕ್ಷೇಮೇಂದ್ರ : ಥ್ಯಾಂಕ್ಸ್...

ಬಜ್ಜಣ : ಥ್ಯಾಂಕ್ಸೇನ್ಬಂತು ಕೂತುಕೊಳ್ಳಿ, ಎಷ್ಟು ದೂರ ಹೋಗೋಕ್ಕೆ? ಅಂದ ಹಾಗೆ ತಾವು?

ಕ್ಷೇಮೇಂದ್ರ : ಕಟ್ಟಿಗೇ ಹಳ್ಳಿಗೆ ಹೋಗಬೇಕು ಅಂತ ಹೊರಟಿದ್ದೀನಿ.

ಬಜ್ಜಣ : ನನ್ದೂ ಅದೇ ಊರು.

ಕ್ಷೇಮೇಂದ್ರ : ತಮ್ಮ ಪರಿಚಯ:

ಬಜ್ಜಣ : ಬಜ್ಜಣ ಅಂತ...ಹೀಗೆ ಅಲ್ಲಿ ಇಲ್ಲಿ ತಿರುಗಾಡುವುದು ನನ್ನ ಪ್ರವೃತ್ತಿ...ತಮ್ಮ ಪರಿಚಯವಾಗ್ಲಿಲ್ಲ...(ನಗು)

ಕ್ಷೇಮೇಂದ್ರ : ನನ್ನ ಹೆಸರು ಕ್ಷೇಮೇಂದ್ರ ಅಂತ...

ಬಜ್ಜಣ : ಅಂತೂ ನಿನ್ನನ್ನು ಯಾರೂ ಕ್ಷೇಮವೇ ಅಂತ ಕೇಳುವಂತಿಲ್ಲ ಹೆಸರಿಂದ್ಲೆ ನೀವು ಕ್ಷೇಮ ಬಿಡಿ.

ಕ್ಷೇಮೇಂದ್ರ : ಅಂತೂ ಪರ್ವಾಗಿಲ್ಲ ನೀವು ಹಾಸ್ಯ ಪ್ರವೃತ್ತಿಯವರು.

ಬಜ್ಜಣ : ಜೀವನದಲ್ಲಿನ್ನೇನಿದೆ ಸ್ವಾಮಿ...ನಕ್ಕು ನಲಿದು ಹಾಗೇ ಒಂದು ದಿನ ಹೋಗೋದಲ್ವೇ?

ಕ್ಷೇಮೇಂದ್ರ : ಅದು ನಿಜ ಅನ್ನಿ...

ಬಜ್ಜಣ : ನಿಜ ಅನ್ನೋದೇನ್ಬಂತು ನಿಜ್ವೇ, ಏನು ಕೆಲಸ?

ಕ್ಷೇಮೇಂದ್ರ : ನಾನು ಹೀಗೆ ನಿಮ್ಮ ಹಾಗೆ ವ್ಯವಸಾಯಗಾರ ಬಿಡಿ.

ಬಜ್ಜಣ : ವ್ಯವಸಾಯನೇಕೆ ಸ್ವಾಮಿ ನೀವು ನಂಬಿಕೊಂಡ್ರಿ?

ಕ್ಷೇಮೇಂದ್ರ : ಹಾಗಂದ್ರೆ ಹ್ಯಾಗೆ ಹೇಳಿ...ಎಲ್ಲರೂ ಸರ್ಕಾರಿ ನೌಕರೀನೆ ಕೇಳಿದ್ರೆ ಎಲ್ಲಿ ಸಿಗುತ್ತೆ?

ಬಜ್ಜಣ : ಅದು ಸರಿ ಅನ್ನಿ...ಆದ್ರೆ ಈ ವಿಷಯ ಯಾಕೆ ಹೇಳಲಿಕ್ಕೆ ಬಂದೇ ಅಂತೀರೋ...

ಕ್ಷೇಮೇಂದ್ರ : ವ್ಯವಸಾಯದಲ್ಲಿ ಲಾಭವಿಲ್ಲ ಅಂತ...

ಬಜ್ಜಣ : ನಷ್ಟ ಕಟ್ಟಿಟ್ಟ ಬುತ್ತಿ ಸ್ವಾಮಿ...ಹಾಕಿದ್ದೂ ದುಡ್ಡು ಬರೋಲ್ಲ.ಮಳೆ ಆಗಾಗ ಕೈ ಕೊಡುತ್ತೆ.

ಕ್ಷೇಮೇಂದ್ರ : ಒಂದು ಬಾವಿನೂ ತೋಡಿಸ್ಕೊ ಬೇಕು.

ಬಜ್ಜಣ : ಮಳೆ ಬಂದ್ರಲ್ವೇ ಸ್ವಾಮಿ ನೀರಿನ ಸೆಲೆ ಉಕ್ಕೋದು...

ಕ್ಷೇಮೇಂದ್ರ : ಅದು ನಿಜ ಅನ್ನಿ...

ಬಜ್ಜಣ : ಅಲ್ಲ ನಾನು ಯಾಕೆ ಹೀಗೆ ಹೇಳಲಿಕ್ಕೆ ಬಂದೆ ಅಂದ್ರೆ...

ಕ್ಷೇಮೇಂದ್ರ : ಸತ್ಯವಾಗಿ ಹೇಳಿದ್ರಿ ಬಿಡಿ. ಬಸ್ ನಿಲ್ತಾ ಇದೆ ಇಳಿಯೋಣ ಬನ್ನಿ.

(ಬಸ್ ನಿಲ್ಲುವುದು)

ಕ್ಷೇಮೇಂದ್ರ : ಅಂದ ಹಾಗೇ ತಮಗೆ ಎಷ್ಟಿದೆಯೋ ಜಮೀನು...?

ಬಜ್ಜಣ : ಇದೆ...ಇದೆ...ದಂಡಿಯಾಗಿದೆ.

ಕ್ಷೇಮೇಂದ್ರ : ಅದಕ್ಕೆ ಲೆಕ್ಕಇಲ್ವೇ? ಲೆಕ್ಕವಿಲ್ಲದ ಶೆಟ್ಟಿ ಒಕ್ಕಲು ಹೋದ ಅಂತ ನಮ್ಮ ಹಿರೀರು ಗಾದೆ ಹೇಳ್ತಾರೇ

ಬಜ್ಜಣ : ಅಯ್ಯೋ ೧೫೦ ಏಕ್ರೆ ಇದೆ...ಅದ್ಯಾವ ಮಹಾ...?

ಕ್ಷೇಮೇಂದ್ರ : ಒಳ್ಳೆ Land Lord ಬಿಡಿ...

ಬಜ್ಜಣ : Land ಇದ್ದೂ ಇಲ್ಲ, Lord ಅಂತೂ ಅಲ್ವೇ ಅಲ್ಲಾ ಬಿಡಿ.

ಕ್ಷೇಮೇಂದ್ರ : ಯಾಕೆ ಹೀಗಂತೀರಿ?

ಬಜ್ಜಣ : ನೋಡಿ ಇದೇ ನಮ್ಮೂರು ನೋಡಿ, ಇಲ್ಲಿ ಕಾಣುತ್ತಲ್ಲಾ ಈ ಪ್ಲಾಟೆಲ್ಲಾ ನನ್ನದೇ...

ಕ್ಷೇಮೇಂದ್ರ : ಏನು...ಸ್ವಲ್ಪ ಭಾಗ ಬೆಳೆ ಬೆಳೆದಿದ್ದೀರಿ...

ಬಜ್ಜಣ : ಅದೊಂದು ಕಥೆ ಬಿಡಿ...

ಕ್ಷೇಮೇಂದ್ರ : ಇದ್ಕೂ ಕಥೆಗೂ ಏನು ಸಂಬಂಧ?

ಬಜ್ಜಣ : ನಮ್ಮ ಗದ್ದೆ ತೋರಿಸ್ತೀನಿ...ಕಣ್ ಮಟಾರೆ ನೋಡಿವ್ರಿ...

ಕ್ಷೇಮೇಂದ್ರ : ಅಗತ್ಯವಾಗಿ...

(ಹಕ್ಕಿಗಳ ಕಲರವ ನೀರಿನ ಶಬ್ದ...ಗದ್ದೆಯಲ್ಲಿ ಕೆಲಸಗಾರರ ಮಾತು ಕಥೆಗಳು...)

ಬಜ್ಜಣ : ಒಳ್ಳೇ ಫಲವತ್ತಾದ ಭೂಮಿ

ಕ್ಷೇಮೇಂದ್ರ : ನೀರಿನ ಸೌಕರ್ಯ...!

ಬಜ್ಜಣ : ಅಷ್ಟಾಗಿಲ್ಲ ಸ್ವಾಮಿ ನಾನು ಈ ವಿಷಯ ಯಾಕೆ ಹೇಳಲಿಕ್ಕೆ ಬಂದೆ ಅಂತೀರೋ...

ಕ್ಷೇಮೇಂದ್ರ : ನನಗೇನು ಗೊತ್ತಾಗಬೇಕು?

ಬಜ್ಜಣ : ಗೊತ್ತು ಮಾಡೋದ್ಕೆ ಸ್ವಾಮಿ...ಕರ್ತೆಂದ್ದು ನೋಡಿ ಈ ಭೂಮಿನ ...ಮೂರು ಭಾಗ ಮಾಡಿಕೊಂಡಿದ್ದೀನಿ.

ಕ್ಷೇಮೇಂದ್ರ : ಯಾಕೆ?

ಬಜ್ಜಣ : ಅಲ್ಲಾ ಸ್ವಾಮಿ ...ಯಾರಾದ್ರೂ ಇಷ್ಟೊಂದು ಭೂಮಿಗೂ ಬೆಳೆ ಬೆಳೆದ್ರೆ ...ಗತಿ ಏನು? ವ್ಯವಸಾಯಕ್ಕೆ ಹಣ ತರೋದಕ್ಕಾದ್ರೂ ಆಗುತ್ಯೇ?

ಕ್ಷೇಮೇಂದ್ರ : ಹಣ ಹಾಕೋದು, ವ್ಯವಸಾಯದಲ್ಲಿ ಬಂದೋದ್ರಲ್ಲಿ ಸಾಲ ಮಾಡಿದ್ದನ್ನು ತೀರ್ಸೋದು.

ಬಜ್ಜಣ : ನಾನು ಹೀಗೆ ಮಾಡಿರೋದು ಯಾಕೆ ಅಂತಿರೋ?

ಕ್ಷೇಮೇಂದ್ರ : ಯಾಕೆ ಅಂತ ಹಾಗನ್ನಿ...

ಬಜ್ಜಣ : ನಾನು ವ್ಯವಸಾಯ ಪೂರ್ತಿ ಮಾಡಿಬಿಟ್ರೆ ಈ ಹಳ್ಳಿ ಜನರ ಕಣ್ಣು ಬಿದ್ದು ಬಿಡುತ್ತೆ ಜೊತೆಗೆ Agricultural income taxನವರ ಕಣ್ಣು ಬೀಳುತ್ತೆ. ಆಳು ಕಾಳಿಗೆ ಕೊಡೋಣ್ವೇ? ಅವರಿವರ ಬಾಯಿಗೆ ಹಾಕೋಣ್ವೇ? ನಾವೇ ಸುಖ ಪಡೋಣ್ವೇ? ಹೇಳಿ ಕೈ ಗುದ್ದಿಕೊಂಡು ಕೈ ನೋವೇಕೆ ಮಾಡ್ಕೊಳ್ಳೋಣ.

ಕ್ಷೇಮೇಂದ್ರ : ಏನು ಒಂದು ಥರ ವಿಚಿತ್ರವಾಗಿದೆಯಲ್ಲ ನಿಮ್ಮ ಮಾತು.

ಬಜ್ಜಣ : ಈ ಮಾತನ್ನ ನಾನು ಯಾಕೆ ಹೇಳಲಿಕ್ಕೆ ಬಂದೇ ಅಂತೀರೋ?

ಕ್ಷೇಮೇಂದ್ರ : ಏಕೆ?

ಬಜ್ಜಣ : ಅಷ್ಟೂ ತಿಳಿದೇ ಸ್ವಾಮಿ, ನೀವೂ ಜಮೀನುದಾರರು.

ಕ್ಷೇಮೇಂದ್ರ : ಅಯ್ಯೋ ಬಿಡಿ ನಮಗೆಲ್ಲಾ ಎಷ್ಟಿದೆ? ಆನೆ ಮುಂದೆ ಒಂದು ಸೊಳ್ಳೆ ನಾವು. ನಿಮ್ಮ ಭೂಮಿ ಮುಂದೆ ನಾವು ಜಮೀನ್ದಾರರಲ್ಲ ಸ್ವಾಮಿ ಏನೋ ಸ್ವಲ್ಪ ಇದೆ.

ಬಜ್ಜಣ : ಈ ಟೆನೆನ್ಸಿ ಆಕ್ಟ್ ಪ್ರಕಾರ... ನಮಗಿಷ್ಟು ಎಕರೆ ಜಮೀನು ಇಟ್ಟುಕೊಳ್ಳಲಿ ಕಾಣಯ್ಯ ಇಷ್ಟು ಎಕರೆ ಇರಬೇಕು ಅಂತ.... ಬೇರೆಯವರಿಗೆ ಕೊಟ್ರೆ ಉಳುವವನೇ ಒಡಯನಾಗ್ತಾನೆ.

ಕ್ಷೇಮೇಂದ್ರ : ಮತ್ಹ್ಯಾಗೆ ನಿಮಗಿಷ್ಟಿದೆ? ಸರ್ಕಾರ ವಶಪಡಿಸಿಸ್ಕೊಳ್ಳಿಲ್ವೇ ಸ್ವಾಮಿ.

ಬಜ್ಜಣ : ನಾನೇನು ಅಷ್ಟು ದಡ್ಡನೇ ಸ್ವಾಮಿ.

ಕ್ಷೇಮೇಂದ್ರ : ಅವರು ಚಾಪೆ ಕೆಳಗೆ ತೂರಿದ್ರೆ ನೀವು ರಂಗೋಲೆ ಕೆಳಗೆ ತೂರೋ ಜನಗಳು ಅಂತ ಕಾಣುತ್ತೆ.

ಬಜ್ಜಣ : ಸರಿಯಾಗಿ ಹೇಳಿದ್ರೆ ಸರಕಾರದ ಕಣ್ಣಿಗೆ ಮಣ್ಣು ಎರಚುವವರು ನಾನಾ ಜನರಿದ್ದಾರೆ ಸ್ವಾಮಿ, ನಾನೊಬ್ಬನೇ ಅಲ್ಲ. ಅವರೊಂದಿಗೆ Rules ಮಾಡಿದ್ರೆ ನಾವು ಅದನ್ನು ತಪ್ಪಿಸಿಕೊಳ್ಳೋದ್ಕೆ... ಇನ್ನೊಂದು Plan ಮಾಡ್ತೀವಿ.

ಕ್ಷೇಮೇಂದ್ರ : ಅದೇನು ಪ್ಲಾನು?

ಬಜ್ಜಣ : ಈಗ ಸರ್ಕಾರದವರು ಹೇಳಿರೋದು ಏನಪ್ಪಾ ಅಂದ್ರೆ ಇಷ್ಟು ಎಕ್ರೆ ಜಮೀನು ಮಾತ್ರ ಸಾಗುವಳಿ ಮಾಡಬೇಕು ಅಂತ, ಆದ್ರೆ ...ಎಕರೆ ಇರಬೇಕು ಅಂತ, ಅಥವಾ...ಎಕರೆ ಇರಬಾರದು ಅಂತ ಹೇಳಿಲ್ಲ ನೋಡಿ. ಅದಕ್ಕೆ ನಾನೇನು ಮಾಡಿವ್ನಿ ಅಂದ್ರೆ ....ನಾನೇನು ಹೆಚ್ಚಿಗೆ ಜಮೀನು ಇರೋರೆಲ್ಲಾ ಒಂದು ಕೆಲಸ ಮಾಡ್ತಾರೆ. ನೋಡಿ ನಾನು ಮೂರು ಭಾಗ ಮಾಡ್ತೀನಿ. ಒಂದು ವರ್ಷ ೪೦-೫೦ ಎಕ್ರಗೆ ಜೋಳ ಬಿತ್ತುತ್ತೇನೆ. ಸುಮಾರು ೩೦೦ ಚೀಲ ಜೋಳ ಆಗುತ್ತೆ ನಮ್ಮ ಸಂಸಾರಕ್ಕೂ ಸಾಕಾಗುತ್ತೆ. ಮಿಕ್ಕದ್ದನ್ನು ಮಾರ್ತೀನಿ ಖರ್ಚಿಗೆ ಆಗುತ್ತೆ. ಈ ವಿಷಯ ಯಾಕೆ ಹೇಳಲಿಕ್ಕೆ ಬಂದೆ ಅಂದ್ರೆ.....

ಕ್ಷೇಮೇಂದ್ರ : ಈಗ ರ್ಥವಾಯ್ತು ಬಿಡಿ.

ಬಜ್ಜಣ : ಇನ್ನು ಹೇಳೋದಿದೆ ತಾಳಿ...

ಆದ್ದರಿಂದ ನಾನು ವರ್ಷಕ್ಕೊಂದು ಸಾರಿ... ಈ ಮೂರು ಭಾಗ ಮಾಡಿದ್ದೀನಲ್ಲಾ ಆ ಪ್ಲಾಟುಗಳಲ್ಲಿ ಒಂದೊಂದು ಪ್ಲಾಟಿನಲ್ಲಿ ಒಂದೊಂದು ವರ್ಷ ಮಾಡ್ತೀನಿ...ನನ್ನ ಭೂಮಿ ಮಟ್ಟಗೋಲು ಹಾಕೋ ಮರಿ ಯಾರು ಬರ್ತಾರೆ ಹೇಳಿ?

ಕ್ಷೇಮೇಂದ್ರ : ಅಂದ ಹಾಗೆ ತಮ್ಮ ಜಮೀನು ಬಗ್ಗೆ..... ಯಾರೂ ಬಂದು ಚೆಕ್ ಮಾಡಿಲ್ವೇ?

ಬಜ್ಜಣ : ಬರ್ದೇ ಇರ್ತಾರ್ಯೇ, ನೋಡಿ ಸ್ವಾಮಿ ನಾನು ಮಾಡಿರೋದು ಇಷ್ಟು. ನಿಮ್ಮ ರೂಲ್ಸ್ ಪ್ರಕಾರ ಅಷ್ಟೇ ಸಾಗುವಳಿ ಅಂತ ಹೇಳಿದ್ರೆ ಬಾಯಿ ಮುಚ್ಕೊಂಡು ಹೋಗ್ಬಿಡ್ತಾರೆ. ಇಲ್ಲದೇ ಹೋದ್ರೆ ಅವರ ಬಾಯಿ ತೊಡಿಬೇಕು. ಸರ್ಕಾರದ ಕಣ್ಣಿಗೆ ಬಿದ್ರೆ ನಮ್ಮ ಹಿಂದಿನವರ ತಲೆ ತಲಾಂತರದ ಆಸ್ತಿ ಹೊರಟು ಹೋಗುತ್ತೆ, ಹೀಗೆ ಉಳಿಸಿಕೊಂಡು ಬಂದಿದ್ದೀನಿ, ತಾವೂ ಆ ಥರ...

ಕ್ಷೇಮೇಂದ್ರ : ಒಳ್ಳೆ ಉಪಾಯ ಹೇಳಿದ್ರಿ...ನನ್ನೂ ನಿಮ್ಮ ಹಾಗೆ ಇದೆ. ಆದ್ರೆ ಎಲ್ಲಾನೂ ಮಾಡಲಿಕ್ಕೋಗಿ ಸಿಕ್ಕಿ ಹಾಕಿಕೊಂಡು ಸರ್ಕಾರಕ್ಕೆ ಕೊಟ್ಬಿಟ್ಟೆ. ಈ ಜ್ಞಾನ್ತ ಗೊತ್ತಿದ್ರೆ ನಾನು ನನ್ನ ಜಮೀನು ಉಳಿಸಿಕೊಳ್ಳಬಹುದಾಗಿತ್ತು. ಸ್ವಾಮಿ ಹ್ಯಾಗಾದ್ರೂ ಆಗ್ಲಿ...ಭೂಮಿ ಇದ್ದೂ ಬೆಳೆ ಇಲ್ಲ. ಕೈಗೆ ಬಂದ ತುತ್ತು ಬಾಯಿಗಿಲ್ಲ ಅಂದ ಹಾಗಾಯ್ತು!

ಬಜ್ಜಣ : ಇನ್ನು ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲ ಏನು? ಮುಂದೆ ಆಸ್ತಿ ಮಾಡಬೇಕು ಅಂದ್ರೆ ಹೀಗೆ ಮಾಡಿ. ನಾನು ಈ ಮಾತನ್ನು ಏಕೆ ಹೇಳಲಿಕ್ಕೆ ಬಂದೆ ಅಂದ್ರೆ...ಸರ್ಕಾರ ಹೀಗ್ ಮಾಡಿದ್ರೆ ಎಷ್ಟೇ ಬೆಳೆ ಬೆಳೆಯೋದನ್ನ ನಿಲ್ಲಿಸಿದ ಹಾಗೆ ಮಾಡ್ದಾಗಾಗುತ್ತಲ್ಲ ಅಂತ ...ಮಾಡ್ಲಿ ಬಿಡಿ ಸ್ವಾಮಿ...ಆಳುಗಳಿಗೆ ಕೆಲಸವಿಲ್ಲ, ದೇಶಕ್ಕೆ ಧಾನ್ಯ ಇಲ್ಲ, ನಮಗೆ ಹಣವಿಲ್ಲ, ಹೀಗಾಗುತ್ತೆ.

ಕ್ಷೇಮೇಂದ್ರ : ಅಂತೂ ಫಲವತ್ತಾದ ಭೂಮಿ...ನೀವು ಹೇಳಿದ ಹಾಗೆ...ಬೆಳೆಯೋ ಋಣವಿಲ್ಲ...ಹಣವಿದ್ದವನ ಮನೆಗೋದ್ರೂ ಋಣವಿದ್ದಷ್ಟೇ ಅಂತ!

ಬಜ್ಜಣ : ಹ್ಞೂಂ... ಇನ್ನು ಈ ಮಾತೇಕೆ ಬಿಡಿ! ಸತ್ತ ಕೂಸಿನ ಕಣ್ಣು ಬಟ್ಲು ಇದ್ದಹಂಗೆ ಅಂತ ಹೇಳ್ತಾರಲ್ಲಾ ಹಾಗಾಯ್ತು! ಗತವೈಭವ ನೆನಸ್ಕಂಡಗಾಗುತ್ತೆ... ನೋಡಿ ಈ ಮಾತು ನಾನು ಯಾಕೆ ಹೇಳಲಿಕ್ಕೆ ಬಂದೆ ಅಂದ್ರೆ, ಕಾನೂನು ಮಾಡವ್ರು ತಮ್ಮ ಹಿತಕ್ಕೆ ಕೆಲವು ಬದಲಾವಣೆ ಮಾಡ್ಕೊಳ್ತಾರೆ. ಅದು ಕೆಲವರಿಗೆ ಉಪಯೋಗವೂ ಆಗುತ್ತೆ, ಕೆಲವರಿಗೆ ನಷ್ಟವೂ ಆಗುತ್ತೆ, ಯಾವುದಕ್ಕೂ ಸ್ವಲ್ಪ ಬ್ರೇನ್ ಉಪಯೋಗಿಸಬೇಕು.

ಕ್ಷೇಮೇಂದ್ರ : ನಿಮ್ಮ ಬ್ರೇನು ಸಾಮಾನ್ಯವೇನಲ್ಲ ಬಿಡಿ...ಅಸಾಧ್ಯ...ಅಸಾಧ್ಯ...

ಬಜ್ಜಣ : ಯಾಕೆ ಸ್ವಾಮಿ ಅಸಾಧ್ಯ ಎಲ್ಲಾ ಸಾಧ್ಯ ನಡ್ರೀ.... ನಮ್ಮೂರಿಗೆ ಬಂದಿದ್ದೀರಿ. ಅಂದ ಹಾಗೆ ಇಲ್ಲಿ ಯಾರನ್ನ ನೋಡಕ್ಕೆ ಬಂದ್ರಿ.

ಕ್ಷೇಮೇಂದ್ರ : ಇಲ್ಲಿ....ಇ...ಲ್ಲಿ... Village Accountant ನೋಡಬೇಕಿತ್ತು.

ಬಜ್ಜಣ : ಅವರ ಹತ್ತಿರ ಏನು ಕೆಲಸ...?

ಕ್ಷೇಮೇಂದ್ರ : ಒಂದು ಹುಡುಗಿ ನೋಡಬೇಕಾಗಿತ್ತು ನಮ್ಮ ಮಗನಿಗೆ...

ಬಜ್ಜಣ : ಕೆಲಸ...?

ಕ್ಷೇಮೇಂದ್ರ : ವ್ಯವಸಾಯ...

ಬಜ್ಜಣ : ಆಯ್ತು, ಅಲ್ಲಿಗೋಗೋದ್ಕೂ ಮೊದ್ಲೇ ನಮ್ಮ ಮನೆಯಲ್ಲಿ ಸ್ವಲ್ಪ ಆತಿಥ್ಯ ಸ್ವೀಕರಿಸಿ...

ಕ್ಷೇಮೇಂದ್ರ : ಹೋಗಬೇಕು ಅಂತ್ಲಾ?

ಬಜ್ಜಣ : ಹೌದು ಸ್ವಾಮಿ....

ಕ್ಷೇಮೇಂದ್ರ : ತಾವು ಹೇಳಿದ ಮೇಲಾಯ್ತು...

(ಸಂಗೀತ)

ಕ್ಷೇಮೇಂದ್ರ : ಊಟ ಮುಗಿಸಿ ಮತ್ತೆ ಬಸ್ ಹತ್ತಿ ಬಂದೆ. ಇದು ನನ್ನ ಈ ವರದಿ...

ಬಾಸ್ : ಪರವಾಗಿಲ್ಲ ಒಂದು ಒಳ್ಳೆಯ ಸಮಸ್ಯೆಯನ್ನೆ ಮುಂದಿಟ್ರೆ ಅನ್ನೋದ್ಕಿಂತ ಸರ್ಕಾರದ ಮುಂದಿಟ್ರೆ.

ಕ್ಷೇಮೇಂದ್ರ : ಅದನ್ನು ಸರಿಪಡಿಸುವುದು ಕಾನೂನು ಸಲಹೆಗಾರರ ಕೈಲಿದೆ...! ನಿಮ್ಮ ಕೈಲಿದೆ.

ಬಾಸ್ : ಮುಂದೆ ...ಇದನ್ನು ಸೂಕ್ತ ರೀತಿಯಲ್ಲಿ ವಿಚಾರಣೆ ಮಾಡಿ. ತಪ್ಪಿತಸ್ಥರನ್ನೂ ಕಾನೂನಿನ ಪ್ರಕಾರ ಏನು ಮಾಡಬೇಕೋ ಮಾಡೋಣ.

ಕ್ಷೇಮೇಂದ್ರ : ನಾಳೆ...

ಬಾಸ್ : ಇಲ್ಲಿನ ಗುಜ್ಜಾರ್ ಅಂಗಡಿ ಮತ್ತು ನಿಗಾ ಇಡ್ರಿ.

ಕ್ಷೇಮೇಂದ್ರ : ಎಸ್ ಸಾರ್.

* * *

## ದೃಶ್ಯ ೨

ಕ್ಷೇಮೇಂದ್ರ : (ಫೋನ್ ಮಾಡುತ್ತಾ) ಹಲೋ...ಹಲೋ...

ಗುಜ್ಜಾರ್ : ಯಾರು?

ಕ್ಷೇಮೇಂದ್ರ : ನಾನ್ರೀ...ಕ್ಷೇಮೇಂದ್ರ.

ಗುಜ್ಜಾರ್ : ಏನು ಬೇಕಾಗಿತ್ತು ಸ್ವಾಮಿ?

ಕ್ಷೇಮೇಂದ್ರ : ಸಕ್ಕರೆ ಬೇಕಾಗಿತ್ತು.

ಗುಜ್ಜಾರ್ : ಎಷ್ಟು ಸ್ವಾಮಿ?

ಕ್ಷೇಮೇಂದ್ರ : ಒಂದು ಹತ್ತು ಮೂಟೆ.

ಗುಜ್ಜಾರ್ : ಏನು ನೀವು ಚಿಲ್ರೆ ವ್ಯಾಪಾರಿಗಳೋ...ಇಲ್ಲ ಹೋಲ್ ಸೇಲ್ ವ್ಯಾಪಾರಿಗಳೋ?

ಕ್ಷೇಮೇಂದ್ರ : ಚಿಲ್ರೇ ಸ್ವಾಮಿ.

ಗುಜ್ಜಾರ್ : ಅಷ್ಟಿಟ್ಟಿಲ್ಲ ಸ್ವಾಮಿ.

ಕ್ಷೇಮೇಂದ್ರ : ಅಂದ್ರೆ ಎಷ್ಟು ಸಿಕ್ಕಬಹುದು?

ಗುಜ್ಜಾರ್ : ಒಂದು ಇಲ್ಲ ಎರಡು ಕೊಡಬಹುದು.

ಕ್ಷೇಮೇಂದ್ರ : ಬೆಲೆ...

ಗುಜ್ಜಾರ್ : ಮಾಮೂಲಿ... ರೇಟೇನು ಕೇಳ್ತೀರಿ? ೯೦೦ ಕ್ವಿಂಟಾಲ್‌ಗೆ.

ಕ್ಷೇಮೇಂದ್ರ : ಸರ್ಕಾರಿ ಬೆಲೆ ೬೦೦ ಇದೆ.

ಗುಜ್ಜಾರ್ : ಅಲ್ಲೇ ತಗೊಳ್ಳಿ ಸ್ವಾಮಿ ಫೇರ್ ಪ್ರೈಸ್ ಶಾಪ್‌ನಲ್ಲಿ.

ಕ್ಷೇಮೇಂದ್ರ : ಅಲ್ಲಿ ಕೊಡ್ತಿದ್ರೆ ನಿಮ್ಮನ್ನ ಯಾಕೆ ಕೇಳ್ತಿದ್ದೋ ಸ್ವಾಮಿ.

ಗುಜ್ಜಾರ್ : ಬೇಕೋ ಬೇಡ್ವೋ ಹೇಳಿ ಸ್ವಾಮಿ. ನಮಗೆ ನಿಮ್ಮಂಥವ್ರು ಸಾವಿರಾರು ಗಿರಾಕಿ.

ಕ್ಷೇಮೇಂದ್ರ : ಆಯ್ತು ಸ್ವಲ್ಪ ಹೆಚ್ಚು ಕಡಿಮೆ ಮಾಡೋಣ.

ಗುಜ್ಜಾರ್ : ಬನ್ನಿ ಬನ್ನಿ ಇಲ್ಲೆ ನನಗೆ ನಿಮ್ಮೊಂದಿಗೆ ಮಾತಾಡೋಕ್ಕೆ ಟೈಮಿಲ್ಲ.

ಕ್ಷೇಮೇಂದ್ರ : ೯೦೦ ಆದ್ರೆ ೧೦ ಕೊಡೋದಕ್ಕಾಗುತ್ತದೇ?

ಗುಜ್ಜಾರ್ : ಹಣ ತಗೆದುಕೊಂಡು ಬನ್ನಿ ಸ್ವಾಮಿ, ಬರೇ ಫೋನ್‌ನಲ್ಲೇ ವ್ಯಾಪಾರ ಮಾಡುಬಿಡಬೇಡಿ.

ಕ್ಷೇಮೇಂದ್ರ : ಬೇಜಾರು ಮಾಡಿಕೊಳ್ಳಬಾರದು. ಗಿರಾಕಿಗಳ ಜೊತೆ ಸ್ವಲ್ಪ ನಗುನಗುತ್ತಾ ಮಾತಾಡಿ ಸ್ವಾಮಿ.

ಗುಜ್ಜಾರ್ : ಮತ್ತೆ ಈಗ ಅಳ್ತಾ ಮಾತಾಡಿದ್ನಾ ಬನ್ನಿ. (ಫೋನ್ ಇಡುವನು) ಇವನ ಪುರಾಣಕ್ಕೆ ಉತ್ತರ ಕೊಟ್ಟುಕೊಂಡು ನಾನು ಕೂತ್ಕೊಳ್ಬೇಕು.

ಬಜ್ಜಣ : (ಫೋನ್ ಮಾಡಿ) ಇದು ಗುಜ್ಜಾರ್ ಅವರ ಅಂಗಡಿಯೇನು?

ಗುಜ್ಜಾರ್ : ಹೌದು ಸ್ವಾಮಿ ಏನು ಬೇಕಾಗಿತ್ತು ಸ್ವಾಮಿ ತಮಗೆ?

ಬಜ್ಜಣ : ನನಗೇನು ಬೇಕಾಗಿಲ್ಲ.

ಗುಜ್ಜಾರ್ : ಬೇಕಿಲ್ಲದ ಮೇಲೆ ಫೋನ್ ಯಾಕೋ.

ಬಜ್ಜಣ : ನಿಮ್ಮ ಬಗ್ಗೆ.

ಗುಜ್ಜಾರ್ : ಏನು...?

ಬಜ್ಜಣ : ಕಂಪ್ಲೇಂಟ್.

ಗುಜ್ಜಾರ್ : ಏನದು?

ಬಜ್ಜಣ : ನೀವು ಸಕ್ಕರೆ ಇದ್ದರೂ ಇಲ್ಲ ಅಂತೀರಂತೆ ಜನರಿಗೆ

ಗುಜ್ಜಾರ್ : ಇಲ್ಲದೆ ಹೋದ್ರೂ ಇದೇ ಅಂತೆ ಹೇಳಬೇಕೇ?

ಬಜ್ಜಣ : ಅಲ್ಲಾ ಸ್ವಾಮಿ ನಿಮ್ಮ ಹತ್ತಿರ ಇದೆ ಎಲ್ಲವನ್ನೂ ಸ್ಟಾಕ್ ಮಾಡಿಬಿಟ್ಟಿದ್ದಾರೆ ಅಂತ ಹೇಳ್ತಾರೆ ಜನಗಳು.

ಗುಜ್ಜಾರ್ : ತಾವು ಯಾರು ಸ್ವಾಮಿ?

ಬಜ್ಜಣ : ನಾನು ಆರೋಗ್ಯ ಪೂರೈಕೆ ವಿಭಾಗ ಅಧಿಕಾರಿ.

ಗುಜ್ಜಾರ್ : ಏನು ಸಾರ್ ತಾವೂ... ಇದನ್ನು ನಂಬ್ತೀರಾ?

ಬಜ್ಜಣ : ನಂಬ್ಲೇಬೇಕು, ಜನರ ದೂರು ಬಂದ ಮೇಲೆ...

ಗುಜ್ಜಾರ್ : ಇದರ ಬಗ್ಗೆ ...ತಮ್ಮನ್ನು ...ಖುದ್ದ ಭೇಟಿ ಮಾಡ್ತೀನಿ ಸಾರ್.

ಬಜ್ಜಣ : ನನ್ನನ್ನೇಕ್ರಿ ಖುದ್ ಭೇಟಿ ಮಾಡ್ತೀರಿ... ಬೇಕಾದ್ರೆ ನಾನೇ ಬರ್ತೀನಿ.

ಗುಜ್ಜಾರ್ : ದಯವಿಟ್ಟು ತೊಂದ್ರೆ ತೆಗೆದುಕೊಳ್ಳಬೇಡಿ ಸಾರ್ ನಾನೇ ಬರ್ತೀನಿ.

ಬಜ್ಜಣ : ಬರ್ತೀನಿ ಅನ್ನೋದರ ಅರ್ಥ?

ಗುಜ್ಜಾರ್ : ಹಾಗೇನಿಲ್ಲ ಸಾರ್ ಎಲ್ಲಾನೂ ತಮಗೆ ಎಕ್ಸ್‌ಪ್ಲೇನ್ ಮಾಡ್ತೀನಿ.

ಬಜ್ಜಣ : ನಾನೇನು ಲಂಚ ತೆಗೆದುಕೊಂಡು ಬಿಟ್ಟುಬಿಡ್ತೀನಿ ಅಂತ್ಲೇನು?

ಗುಜ್ಜಾರ್ : ಹಾಗಂದ್ನೆ ಸಾರ್...ನಾನು ಯಾಕೆ ಹೀಗೆ ಹೇಳಲಿಕ್ಕೆ ಬಂದೆ ಅಂದ್ರೆ.

ಬಜ್ಜಣ : ಹಾಗೆ ಮಾಡ್ತಾ ಇದ್ದೀನಿ...

ಗುಜ್ಜಾರ್ : ಹಾಗೆನ್ನಿಲ್ಲ ಸಾರ್, ಹಾಗೇನಿಲ್ಲ ಸಾರ್.

ಬಜ್ಜಣ : ನೋಡ್ರಿ ನೀವು ಜನರಿಗೆ ಸರಿಯಾಗಿ ಸರಬರಾಜು ಮಾಡದೇ ಹೋದ್ರೆ ನೀವು ಆಮೇಲೆ ಕಾನೂನು ಎದುರಿಸಬೇಕಾಗುತ್ತೆ, ಮಾರ್ಚ್ ತಿಂಗಳು ಬಂತು ಬಡ್ಜೆಟ್ ನಲ್ಲಿ ಬೆಲೆ ಏರಿಸಬಹುದು, ಟಾಕ್ಸ್ ಹೆಚ್ಚಿಸಬಹುದು ಅಂತಾಲ್ಲಾ...?

ಗುಜ್ಜಾರ್ : ಹಾಗೇನಿಲ್ಲ ಸಾರ್... ನಾನು ಯಾಕೆ ಹೀಗೆ ಹೇಳಲಿಕ್ಕೆ ಬಂದೆ ಅಂದ್ರೆ.

ಬಜ್ಜಣ : ಗೊತ್ತಾಯ್ತು ಬಿಡ್ರಿ...ನಿಮ್ಮ ಮಾತಿನಲ್ಲೇ ನೀವು ತಪ್ಪಿತಸ್ಥ ಅಂತ.

ಗುಜ್ಜಾರ್ : ಗುಬ್ಬಿ ಮೇಲೆ ಬ್ರಾಹ್ಮಾಸ್ತ್ರವೇ ಸಾರ್?

ಬಜ್ಜಣ : ಒಂದೇ ಸ್ಯಾರಿ ಕಷ್ಟ ಪಡದೆ ಸಂಪಾದ್ನೆ ಮಾಡಬಹುದು ಅಂತ್ಲಾ?

ಗುಜ್ಜಾರ್ : ತಾವು ನನ್ನನ್ನು ತಪ್ಪು ತಿಳಿದುಕೊಂಡಿದ್ದೀರಿ ಸಾರ್, ನೀವು ಯಾವಾಗಲಾದ್ರೂ ಬಂದು ನಮ್ಮ ಅಂಗಡಿ ಚೆಕ್ ಮಾಡಬಹುದು ಸಾರ್.

ಬಜ್ಜಣ : ಧೈರ್ಯವಾಗಿ ಹೇಳ್ತಿದ್ದೀರಾ?

ಗುಜ್ಜಾರ್ : ಬನ್ನಿ ಸಾರ್...

ಬಜ್ಜಣ : ಆಯ್ತು...

ಗುಜ್ಜಾರ್ : ಯಾವ ಹೊತ್ತು ಬರ್ತೀರಿ ಸಾರ್?

ಬಜ್ಜಣ : ನನ್ನ ಮನಸ್ಸು ಬಂದ ದಿನ. (ಫೋನ್ ಇಡುವ ಶಬ್ದ)

ಗುಜ್ಜಾರ್ : ಒಳ್ಳೆ ಪ್ರಾರಾಬ್ದ. ಬರ್ಲಿ...ಮಗ ಏನು ಮಾಡ್ತಾನೆ ಏನು ಹಿಡೀತಾನೇ ನೋಡ್ತೀನಿ.

ಕ್ಷೇಮೇಂದ್ರ : ನಾನೇ ಆಹೊತ್ತು ಫೋನ್ ಮಾಡಿದ್ನಲ್ಲ...

ಗುಜ್ಜಾರ್ : ಕೂತ್ಕೊಳ್ಳಿ ಸಾರ್. ಏನ್ಸಾರ್ ನೀವು ಫೋನ್‌ನಲ್ಲಿ ಅಷ್ಟೊಂದು ಜೋರಾಗಿ.

ಕ್ಷೇಮೇಂದ್ರ : ನಾನೇ... ಇದ್ಕೇನು ನೀವು ಹೇಳ್ತಿರೋದು?

ಗುಜ್ಜಾರ್ : ತಾವು ...ಆಹಾ...ರ ಪೂರೈಕೆ ವಿಭಾಗದವರಲ್ವೇ?

ಕ್ಷೇಮೇಂದ್ರ : ಯಾರು ಸ್ವಾಮಿ ಹೇಳಿದವ್ರು? ನಾನು ಕ್ಷೇಮೇಂದ್ರ ಅಂತ.

ಗುಜ್ಜಾರ್ : ಓಹೋ ನೀವ್ಹೋ... ನಾನು ಅವರೇನೋ ಅಂತಿದ್ದೆ. ಈ ಮಾತು ಯಾಕೆ ಹೇಳಲಿಕ್ಕೆ ಬಂದೆ ಅಂತಿರೋ?

ಕ್ಷೇಮೇಂದ್ರ : ಯಾರೋ ಆಹಾರ ಪೂರೈಕೆ ಇಲಾಖೆಯವರಿರಬೇಕು. ಸರಿಯಾಗಿ ಹೇಳಿದ್ರಿ...

ಗುಜ್ಜಾರ್ : ಸರಿಯಾಗಿ ಹೇಳಿದ್ರಿ........

ಕ್ಷೇಮೇಂದ್ರ : ಅಲ್ಲಾ ಸ್ವಾಮಿ, ನೀವು ಹೆದರಬೇಕಾಗಿಲ್ಲ. ನಾನು ವ್ಯಪಾರಿ , ಸಕ್ಕರೆ ಕೇಳಿದ್ನಲ್ಲ ಹತ್ತು ಮೂಟೆ...

ಗುಜ್ಜಾರ್ : ಎಲ್ಲಿದೆ ಸ್ವಾಮಿ ಅಷ್ಟು. ನೋಡಿ ಎಲ್ಲಾ ಸ್ಟಾಕ್ ಮಾಡ್ಬಿಟ್ಟಿದ್ದಾರೆ ಮಾರ್ಚ್ ಬಡ್ಜೆಟ್ ನೋಡ್ಕೊಂಡು ಎಲ್ಲಾ ರಿಲೀಜ್ ಮಾಡ್ತಾರೆ ನೋಡಿ.

ಕ್ಷೇಮೇಂದ್ರ : ಇದನ್ನೇ ಹೆಚ್ಚಿಸ್ತಾರೆ ಅಂತ ರೂಮರ್ ಬಂದಿರಬೇಕು.

ಗುಜ್ಜಾರ್ : ಆದ್ರೂ ಆಗಬಹುದು ಯಾರಿಗೆ ಗೊತ್ತು?

ಕ್ಷೇಮೇಂದ್ರ : ಈಗ ನನಗೇನು ಮಾಡ್ತೀರಿ ಸ್ವಾಮಿ ನೀವು...

ಗುಜ್ಜಾರ್ : ನಿಮ್ಮ ರೇಟಿಗೆ... ೧ ಮೂಟೆ...

ಕ್ಷೇಮೇಂದ್ರ : ಸಾಲದು ಸ್ವಾಮಿ ಏನೇನು ಸಾಲದು. ನಾನು ಒಂದು ರೀತೀಲಿ ಹೇಳೋದಾದ್ರೆ ಹೋಲ್‌ಸೇಲ್ ವ್ಯಾಪಾರಿನೇ ನೋಡಿ. ಬೆಲೆ ಸ್ವಲ್ಪ ಹೆಚ್ಚು ಕಡಿಮೆ ಆದ್ರೂ ಅಡ್ಡಿ ಇಲ್ಲ, ನನಗೆ ಹತ್ತನ್ನೆರಡು ಮೂಟೆ.

ಗುಜ್ಜಾರ್ : ನೋಡಿ ಸ್ವಾಮಿ ನಾನು ಯಾರ ಹತ್ತಿರವಾದ್ರೂ ತರಿಸಬೇಕು ೧೦೦೦ ಕೊಡ್ತೀರೋ?

ಕ್ಷೇಮೇಂದ್ರ : ಆಯ್ತು ಸ್ವಾಮಿ ಇನ್ನೇನು ಮಾಡೋದು. ಇದನ್ನು ಬಳಕೆದಾರರ ತಲೆ ಮೇಲೆ ಹಾಕೋದು ಕೊಡ್ರಪ್ಪ.

ಗುಜ್ಜಾರ್ : ಏಯ್ ಡಿಂಗ್ರಿ ಳ...ಅದೇ.....(ಪಿಸುಗುಟ್ಟುತ್ತಾ)ಪಟೇಲ್ ಅಂಗಡೀಲಿ ೧೨ ಮೂಟೆ ಸಕ್ಕರೆ ತಂದುಬಿಡು ಟೆಂಪೋದಲ್ಲಿ...ಕೂತುಕೊಳ್ಳಿ ಏನೋ ಕಾಫಿನೊ...ಜ್ಯೂಸೋ...

ಕ್ಷೇಮೇಂದ್ರ : ಯಾವುದಾದ್ರೂ ನಡೀತದೆ.

ಗುಜ್ಜಾರ್ : ಡಿಂಗ್ರಿ ಳ ಎರಡು ಆರೆಂಜ್ ಜ್ಯೂಸ್ ತಂದುಕೊಟ್ಟು ಹೋಗು.

ಡಿಂಗ್ರಿ : ಆಯ್ತು ಸ್ವಾಮಿ ...ತಗೊಳ್ಳಿ.

ಗುಜ್ಜಾರ್ : ಕುಡೀರಿ...ಕುಡೀರಿ... ಬೇಗ ಬಂದು ಬಿಡಯ್ಯ. ( ಒಂದು ಜೀಪಿನ ಶಬ್ದ ನಿಂತಿದ್ದು) ನೀವು ಹ್ಯಾಗೆ ಕೊಡ್ತಿದ್ದೀರಿ...

ಕ್ಷೇಮೇಂದ್ರ : ಈಗ ನಿಮ್ಮ ಹತ್ತಿರ ತೆಗೆದುಕೊಂಡು ಹೋದ ಮೇಲೆ ಸ್ವಲ್ಪ ಲಾಭ ಇಟ್ಟು ಮಾರಬೇಕು ನೋಡಿ.

ಗುಜ್ಜಾರ್ : ಈಗ ಡಿಮಾಂಡ್ ಜೋರಿದೆ.

ಕ್ಷೇಮೇಂದ್ರ : ನಿಮ್ಮಂಥವರು ಸ್ವಾಮಿ ಕರೋರ್ ಪತಿಗಳಾಗ್ತೀರಿ.

ಗುಜ್ಜಾರ್ : ನಾವಲ್ಲ ಸ್ವಾಮಿ ಇಟ್ಟಿರೋವ್ರು ನಾವು ಆ ಕೈಗೆ ಸ್ವಲ್ಪ ಲಾಭ ಇಡ್ತೀವಿ ಅಷ್ಟೇ....

ಕ್ಷೇಮೇಂದ್ರ : ಏನೂ ಇನ್ನೂ ಬರಲೇ ಇಲ್ಲ....

ಗುಜ್ಜಾರ್ : ಬರಬಹುದು, ಎಲ್ಲಾ ಹಾಕಿಕೊಂಡು ಬರಬೇಕಲ್ಲಾ. ತಮಗೆ ಇನ್ನೇನಾದರು ಕೆಲಸ ಇದ್ದರೆ ತೀರಿಸಿಕೊಂಡು ಬನ್ನಿ.

ಕ್ಷೇಮೇಂದ್ರ : ಪರ್ವಾಗಿಲ್ಲ ಕೂತಿರ್ತೀನಿ.

ಗುಜ್ಜಾರ್ : ಈ ಪ್ರಾರಬ್ಧ.... ಏನು ಮಾಡ್ತಾನಿಂತಿದ್ನೋ... ಏಯ್ ಮಂಕು ಸಾಂಬ್ರಾಣಿ ಎಷ್ಟು ಹೊತ್ತೋ ಬರೋದು? ಬಂದೆ ಸಾರ್.

ಕ್ಷೇಮೇಂದ್ರ : ಯಾಕೆ ಬಯ್ತೀರಿ ಬಿಡಿ.

ಗುಜ್ಜಾರ್ : ಎಲ್ಲಿ...?

ಡಿಂಗ್ರಿ : ಸ್ವಾಮಿ...ಸ್ವಲ್ಪ ಬನ್ನಿ ಈ ಕಡೆ.

ಗುಜ್ಜಾರ್ : ಏನೋ?

ಡಿಂಗ್ರಿ : ಜೀಪ್ ಬಂದು, ನಿಮ್ಮ ಕರ್ಕೊಂಡು ಬಾ ಅಂತ ಕಳಿಸಿದ್ರು.... ಅವರು ಆಹಾರ ಇಲಾಖೆಯವರಂತೆ.

ಗುಜ್ಜಾರ್ : ಶನಿ...ಶನಿ...ಬೇಗ ಹಾಕಿಕೊಂಡು ಬರಬೇಕಾಗಿತ್ತು, ಆಮೇಲೆ ನಮ್ದಲ್ಲ ಅಂತ ಹೇಳಬಹುದಾಗಿತ್ತು.

ಡಿಂಗ್ರಿ : ಪೋಲಿಸನವ್ರು ಬೇರೆ ಇದ್ರು.

ಗುಜ್ಜಾರ್ : ಸ್ವಾಮಿ...ಕ್ಷೇಮೇಂದ್ರ ಅವರೇ ಸಕ್ಕರೆ ಇಲ್ವಂತೆ ಸ್ವಾಮಿ.

ಕ್ಷೇಮೇಂದ್ರ : ಯಾಕೆ ಸ್ವಾಮಿ ಏನಾಯ್ತು?

ಗುಜ್ಜಾರ್ : ಏನಿಲ್ಲ ಅಂದುಬಿಟ್ರಂತೆ. ನಾನು ಆಗ್ಲೇ ಹೇಳಲಿಲ್ವೇ? ಹೋಗಿ ಬನ್ನಿ ಸ್ವಾಮಿ...

ಕ್ಷೇಮೇಂದ್ರ : ಬರ್ತೀನಿ ಸ್ವಾಮಿ.

(ಜೀಪ್ ಹೊರಡುವ ಶಬ್ದ ನಿಲ್ಲುವುದು.)

ಕ್ಷೇಮೇಂದ್ರ : ಹಲೋ ಸಾರ್.

ಬಜ್ಜಣ : ಯಾರು?

ಕ್ಷೇಮೇಂದ್ರ : ನಾನು ಸಾರ್ ಕ್ಷೇಮೇಂದ್ರ.

ಬಜ್ಜಣ : ಹೋದ ಕೆಲಸ ಏನಾಯ್ತು? ಜಯವೋ, ಅಪಜಯವೋ.

ಕ್ಷೇಮೇಂದ್ರ : ನಮ್ಮ ಶಬ್ದ ಭಂಡಾರದಲ್ಲಿ ಜಯವೇ ಹೊರತು ಅಪಜಯವಲ್ಲ ಬಾಸ್.

ಬಜ್ಜಣ : ನನಗೆ ಗೊತ್ತು ನೀವು ಹೋದ ಕೆಲಸದಲ್ಲಿ ಜಯಶೀಲರಾಗ್ತೀರಿ ಅಂತ.

ಕ್ಷೇಮೇಂದ್ರ : ಗುಜ್ಜಾರ್ ಮೇಲೆ ಈಗ ಕೇಸು ಹಾಕಿದ್ದೀನಿ. ನಾನೀಗ ಬರ್ತಾ ಇದ್ದೇನೆ ಸಾರ್.

ಬಜ್ಜಣ : ಬನ್ನಿ....ಬನ್ನಿ...

(ಜೀಪ್ ಶಬ್ದ ಬಂದು ನಿಲ್ಲುವುದು)

ಕ್ಷೇಮೇಂದ್ರ : ಮೇ ಐ ಕಮ್ ಇನ್ ಪ್ಲೀಸ್.

ಬಜ್ಜಣ : ಯಸ್...ಕಮ್ ಇನ್.. ಕಂಗ್ರ್ಯಾಜುಲೇಷನ್ಸ್ ಮಿ. ಕ್ಷೇಮೇಂದ್ರ. ನೀವು ಯಾವ ರೀತಿ ಟ್ಯಾಕಲ್ ಮಾಡಿದಿರಿ ಅನ್ನೋದು ಕೇಳಿ ನನಗೆ ತುಂಬಾ ಸಂತೋಷ ಆಯ್ತು. ಎಲ್ಲರೂ ನಿಮ್ಮ ಹಾಗೇ ಮಾಡಿದ್ರೆ ಇಂಥ ಮೋಸವಾಗುವುದನ್ನು ಸಮಾಜದಿಂದ ದೂರ ಮಾಡಬಹುದು. ಅಂದ ಹಾಗೆ ಎಷ್ಟಿತ್ತು ಗೋಡಾನ್‌ನಲ್ಲಿ?

ಕ್ಷೇಮೇಂದ್ರ : ಸಾವಿರಾರು ಮೂಟೆಗಳು. ನಾನು ಆತನ ಅಂಗಡಿಯಲ್ಲಿ ಕುಳಿತು ವಾಚ್ ಮಾಡಿದೆ, ಹೆಚ್ಚಿಗೆ ಹಣ ಕೊಡ್ತೀನಿ ಅಂದವರಿಗೆ ಮಾತ್ರ ಕೂತ್ಕೊಳ್ಳಿ ಹೇಳಿ ಕಳಿಸ್ತೀನಿ ನೋಡೋಣ ಅಂತಾನೆ. ಮಿಕ್ಕ ಸಣ್ಣ ಪುಟ್ಟವರಿಗೆ ಕೇರ್ ಮಾಡೋಲ್ಲ. ಇಲ್ಲಾರೀ ಅಂತ ಖಡಾ ಖಂಡಿತವಾಗಿ ಕಡ್ಡಿ ಎರಡು ತುಂಡಾಗುವಂತೆ ಮಾತಾಡ್ತಾನೆ. ಈ ಹೊತ್ತಂತು ಬೆವರು ನೀರು ಇಳಿದು ಹೋಯ್ತು. ಸಾರ್, ಸಾರ್ ಎಂದು ನೋಟಿನ ಕಂತೆಗಳನ್ನೇ ತೋರಿಸಿದ. ನಾನು ಲಂಚಕ್ಕೆ ಕೈಯೊಡ್ಡಲಿಕ್ಕೆ ಬರಲಿಲ್ಲ. ಜನರಿಗಾಗೋ ಅನ್ಯಾಯ ತಡೀಲಿಕ್ಕೆ ಬಂದೆ ಅಂದೆ. ಅಲ್ಲಿದ್ದ ಜನಗಳು ಒಳ್ಳೆ ಕೆಲಸ ಮಾಡಿದ್ರಿ ಸ್ವಾಮಿ ಎಂದು ಖುಷಿ ಪಟ್ರು. ಪಾಪಿ ಎಷ್ಟು ಜನರ ರಕ್ತ ಹೀರಿ ಹೀರಿ ಇನ್ನು ಮನೆ ಮೇಲೆ ಮನೆ ಕಟ್ಟಿಸಬೇಕು ಅನ್ನೋ ಆಸೆ ಇಟ್ಕೊಂಡಿದಾನೋ ಅಂತ ಶಪಿಸ್ಕೊಳ್ತಿದ್ರು.

ಬಜ್ಜಣ : ಒಳ್ಳೆ ಕೆಲಸ ಮಾಡಿದ್ರಿ.. ಮುಂದೆ...

ಕ್ಷೇಮೇಂದ್ರ : ಈ ಕಲಬೆರಕೆ ಮಾಡಿ ಜನರ ಕಣ್ಣಿಗೆ ಕೆಲವು ವ್ಯಾಪಾರಿಗಳು ಮಣ್ಣೆರಚ್ತಾ ಇದ್ದಾರೆ, ಅವರ ಮೇಲೆ ಸ್ವಲ್ಪ ನಿಗಾ ಇಡಬೇಕು ಅಂತಿದ್ದೀನಿ ಬಾಸ್.

ಬಜ್ಜಣ : ಯಸ್...ಗೋ ಅಹೆಡ್.

ಕ್ಷೇಮೇಂದ್ರ : ಯಸ್ ಪ್ಲೀಜ್.

(ಸಸ್ ಪೆನ್ಸ್ ಮ್ಯೂಸಿಕ್)

## ದೃಶ್ಯ ೩

ಕ್ಷೇಮೇಂದ್ರ : ನಮಸ್ಕಾರ.

ರಾ : ನಮಸ್ಕಾರ ತಾವು ಯಾರು ಗೊತ್ತಾಗಲಿಲ್ಲ.

ಕ್ಷೇಮೇಂದ್ರ : ನನ್ನ ಹೆಸರು ಕ್ಷೇಮೇಂದ್ರ ಅಂತ.

ರಾ : ಏನು ಕೆಲಸ ಮಾಡ್ತೀರ?

ಕ್ಷೇಮೇಂದ್ರ : ಬಿಸಿನೆಸ್.

ರಾ : ಅಂದ ಹಾಗೆ ಏನು ಬಿಸಿನೆಸ್ ಸ್ವಾಮಿ?

ಕ್ಷೇಮೇಂದ್ರ : ಅಕ್ಕಿ ಗಿರಣಿ ಇಟ್ಟಿದ್ದೀನಿ.

ರಾ : ಹ್ಯಾಗಿದೆ ಅಕ್ಕಿ ವ್ಯಾಪಾರ?

ಕ್ಷೇಮೇಂದ್ರ : ಏನೋ ನಡೀತದೆ ಸ್ವಾಮಿ.

ರಾ : ಹಾಗಂದ್ರೇನು? ಯಾಕೆ ಒಂದು ಥರಾ ರಾಗ ಎಳೀತೀರಿ.

ಕ್ಷೇಮೇಂದ್ರ : ಲಾಭ ಒಂದೊಂದು ಸಾರಿಗೆ ಒಂದೊಂದು ರೀತಿ. ಕೆಲವು ಜನರು ಬತ್ತಕ್ಕೆ ಜೊಳ್ಳು ಸೇರಿಸ್ತಾರೆ. ಕಲ್ಲು ಮಣ್ಣು ಹಾಕ್ತಾರೆ. ಅವೆಲ್ಲ ಹೋದ ಮೇಲೆ

ತೂಕದಲ್ಲಿ ಕಮ್ಮಿ ಬಂದು ಬಿಡ್ತದೆ, ಅಕ್ಕಿ ಆಗುವಾಗ ಲಾಸ್ ತಾನೇ... ಅದ್ಕೆ ವ್ಯಾಪಾರ ಅಂದ್ರೆ ಒಂದು ರೀತಿ ಅಲರ್ಜಿ ಆಗ್ಬಿಟ್ಟಿದೆ.

ರಾ : ಅಲ್ಲಾ ಸ್ವಾಮಿ ಅವರಿಗೇ ಅಷ್ಟು ತಲೆ ಇದೆ ಅಂದ್ರೆ ನಿಮಗೆಷ್ಟಿರಬೇಕು? ಬೆಲೆ ಕಡಿಮೆ ಮಾಡಬೇಕು.

ಕ್ಷೇಮೇಂದ್ರ : ಒಪ್ಪಬೇಕಲ್ಲಾ... ಅವರು....

ರಾ : ಇನ್ನೊಂದು ಮಾಡಿ ನಾನು ಯಾಕೀ ಮಾತೇಳಲಿಕ್ಕೆ ಬಂದೆ ಅಂದ್ರೆ ನಿಮ್ಮ ಲಾಭಕ್ಕೆ ... ತಪ್ಪೇನು ತಿಳ್ಕೊಳ್ಳಲ್ಲ ತಾನೇ....

ಕ್ಷೇಮೇಂದ್ರ : ಹೇಳಿ ಸ್ವಾಮಿ...

ರಾ : ಸ್ವಲ್ಪ ಅಕ್ಕಿಗೆ ಕಲ್ಲು ಬೆರಸಿ ಮಾರಿದ್ರಾಯ್ತು.

ಕ್ಷೇಮೇಂದ್ರ : ಜನಗಳು ಕಂಡ್ರೆ ಸುಮ್ನೆ ಬಿಡ್ತಾರ್ಯೇ?

ರಾ : ಅಕ್ಕಿಯಂತಿರುವ ಕಲ್ಲು ಬೆರಸಿ...ತೂಕ ಹೆಚ್ಚುತ್ತೆ. ನಿಮ್ಮ ಲಾಸ್ ತುಂಬಿ ಹೋಗಿ ಲಾಭಾನೂ ಬರುತ್ತೆ. ಅದನ್ನು ನೋಡಿದ್ರೆ ಕಲ್ಲು ಬೆರಿಸಿದ್ದಾರೆ ಅಂತ ತಿಳಿಯೋದೇ ಕಷ್ಟವಾಗುತ್ತೆ. ಅಕ್ಕಿ ರೀತಿಯೇ ಇರುತ್ತೆ.

ಕ್ಷೇಮೇಂದ್ರ : ನಾವು ಅದನ್ನ ಮಾಡಲಿಕ್ಕೆ..... ಇಷ್ಟ ಪಡೋಲ್ಲಾರೀ....

ರಾ : ನಿಮಗೆ ವ್ಯಾಪಾರ ಮನೋಭಾವವಿಲ್ಲ ಅಂತ ಕಾಣ್ಸುತ್ತೆ.

ಕ್ಷೇಮೇಂದ್ರ : ಅಲ್ಲಾ ಸ್ವಾಮಿ ಅಂಥ ಕಲ್ಲು ಎಲ್ಲಿ ಹುಡುಕಿಕೊಂಡು ಹೋಗೋದು?

ರಾ : ಅದ್ಕೂ ಹಣ ಕೊಟ್ರೆ ಮೂಟೆಗಟ್ಲೆ ಬೇಕೇ, ಕೊಡಿಸ್ತೀನಿ ನಾನೇ, ಬೇಕಾದ್ರೆ ತಗೆದುಕೊಳ್ಳಿ ಸ್ವಾಮಿ.

ಕ್ಷೇಮೇಂದ್ರ : ಅದನ್ನು ಮಾಡಿ ಮಾರ್ತಾರಾ?

ರಾ : ಇಷ್ಟಾ ನೀವು ಬಲ್ಲದ್ದು...?

ಕ್ಷೇಮೇಂದ್ರ : ನನಗೇನೋ ತಿಳೀದು ಸ್ವಾಮಿ. ಅಂದ ಹಾಗೇ ಒಂದು ಮೂಟೆಗೆ ಎಷ್ಟು?

ರಾ : ನೂರು. ಒಂದು ಮೂಟೆಗೆ ೭೦೦ ರೂಪಾಯಿ ಅಕ್ಕಿ ಆದ್ರೂ ೬೦೦ ರೂಪಾಯಿ ಲಾಭ, ಯಾರನ್ನೂ ಕೆಡ್ಸುತ್ತೆ ಸ್ವಾಮಿ?

ಕ್ಷೇಮೇಂದ್ರ : ಅದೇ, ನೀವು ಹೇಳಿದ ಹಾಗೆ ನಾವು ಹೀಗೆ ಸ್ವಲ್ಪ ಲಾಭನೂ ಪಡೆದುಕೊಳ್ಳಬಹುದು. ಆ ಫ್ಯಾಕ್ಟರಿ ಎಲ್ಲಿದೆ?

ರಾ : ಬೇಕಾದಷ್ಟಿವೆ. ನೀವು ಹೂಂ ಅನ್ನಿ ನಿಮ್ಮ ಗಿರಣಿಗೆ ನಾನು ಕಳುಹಿಸಿಕೊಡ್ತೀನಿ.

ಕ್ಷೇಮೇಂದ್ರ : ಅಡ್ವಾನ್ಸ್ ಕೊಡಬೇಕಾ?

ರಾ : ಮಾಲು ತಂದು ಹಾಕಿ ತೆಗೆದುಕೊಂಡ್ಹೋಗ್ತೀನಿ.

ಕ್ಷೇಮೇಂದ್ರ : ನೀವು ಏನು ಮಾಡ್ತೀರಿ?

ರಾ : ಇದೇ ಏಜೆಂಟ್ ಕೆಲಸ. ಏನೋ ಹೊಟ್ಟೆ ಪಾಡಿಗೆ.

ಕ್ಷೇಮೇಂದ್ರ : ಬರೇ ಇದೊಂದೇನೇ.

ರಾ : ಯಾವುದು ಸಿಕ್ಕುತ್ತೊ... ಅವೆಲ್ಲಾ ನಾನು ಬರ್ತೀನಿ. ನಿಮ್ಮ ಗಿರಣಿ ವಿಳಾಸ ಕೊಡ್ತೀರಾ?

ಕ್ಷೇಮೇಂದ್ರ : ತಗೊಳ್ಳಿ ಇಲ್ಲಿ ಬರಿದಿದ್ದೀನಿ.

ರಾ : ನಾಳೆ ಬೆಳಗ್ಗೆ ಹತ್ತು ಗಂಟೆಗೆ ಮಾಲು ಬಂದು ಬಿಡುತ್ತೆ. ನಮ್ಮ ಆಳಿನ ಕೈಲಿ ಹಣ ಕಳಿಸಿದ್ರಾಯ್ತು.

ಕ್ಷೇಮೇಂದ್ರ : ಆಯ್ತು.

ಜ : ಓ...ಬನ್ನಿ...ಬನ್ನಿ... ಕ್ಷೇಮೇಂದ್ರ ಅವರೇ.

ಕ್ಷೇಮೇಂದ್ರ : ಏನು ವ್ಯಾಪಾರ ಜೋರು ಅಂತ ಕಾಣುತ್ತೆ.

ಜ : ಏನು ಜೋರೋ ಏನು ಕಮ್ಮೀನೋ ಬನ್ನಿ ಅಂತೂ ಬಹಳ ಅಪರೂಪಕ್ಕೆ ಸಿಕ್ಕಿದ್ರಿ... ಕುಳಿತುಕೊಳ್ಳಿ, ನಮ್ಮಂಥವರಿಗೆ ಕಾಲವಿಲ್ಲ ಬಿಡಿ.

ಕ್ಷೇಮೇಂದ್ರ : ಯಾಕೆ ಸಂಪಾದ್ನೆ ಕಡಿಮೆ ಅಂತ್ಲೋ.

ಜ : ಹೌದು ಸ್ವಾಮಿ. ನಮ್ಮಂಥವರಿಗೆ ಹಾಗೇ. ಸಂಪಾದ್ನೇನೂ ಬೇರೆಯವರಿಗೇ.

ಕ್ಷೇಮೇಂದ್ರ : ಹಾಗಂದ್ರೆ?

ಜ : ಈಗಿನ ಕಾಲದಲ್ಲಿ ನ್ಯಾಯ ನಿಷ್ಠೆಗೆಲ್ಲಿ ಕಾಲ ಬಿಡಿ? ಎಲ್ಲಾ ದಗಲುಬಾಜಿಯವರಿಗೇ, ಮೋಸಗಾರರಿಗೆ, ಅನ್ಯಾಯಗಾರರಿಗೆ.

ಕ್ಷೇಮೇಂದ್ರ : ಅದು ಎಲ್ಲಾ ಕಾಲದಲ್ಲೂ ಇತ್ತು ಬಿಡು.

ಜ : ಆದ್ರೆ ಈ ರೀತಿಯಾಗಿ ಸಂಪಾದ್ನೆ ಮಾಡುವವರನ್ನು ನಾನು ಕಾಣೆ ಸ್ವಾಮಿ.

ಕ್ಷೇಮೇಂದ್ರ : ವ್ಯಾಪಾರ ಅಂದ್ರೆ ಅದು ಇದ್ದದ್ದೇ.

ಜ : ಅಲ್ಲಾ ನೀವು ಆಹಾರ ಇಲಾಖೆಯಲ್ಲಿ ಕೆಲಸ ಮಾಡ್ತೀರಪ್ಪಾ ನಿಮ್ಮ ಕಣ್ಣಿಗೆ ಇವೆಲ್ಲಾ ಭೀಳಲೇ ಇಲ್ವೇ?

ಕ್ಷೇಮೇಂದ್ರ : ಯಾವುದು?

ಜ : ಜನಗಳ ಕಣ್ಣಿಗೆ ಮಣ್ಣೆರಚುವ ಕೆಲಸ?

ಕ್ಷೇಮೇಂದ್ರ : ಏನು ಹೇಳಿದ್ರಲ್ವೇ ನಾವು ಕಂಡು ಹಿಡಿಯುವುದು.

ಜ : ಎಲ್ಲಾ ಬರೀ ಕಲಬೆರಕೆಯಿಂದ ಸಂಪಾದ್ನೆ ಮಾಡೋವ್ರೇ ಹೆಚ್ಚು.

ಕ್ಷೇಮೇಂದ್ರ : ಅದು ಇದ್ದದ್ದೇ ಬಿಡಿ.

ಜ : ಮೊನ್ನೆ ಬೆಣ್ಣೆ ತೆಗೊಂಡು, ಕಾಯಿಸಿದ್ರೆ ಒಂದು ಕೆ.ಜಿ.ಗೆ ಒಂದು ಕಪ್ಪು ತುಪ್ಪ ಆಯ್ತು. ಬರೇ ಮೈದಾ ಬೆರೆಸಿ ಕೊಟ್ಟು ಹೋದ. ಸುಲಭವಾಗಿ ಸಂಪಾದ್ನೆ ಮಾಡೋ ವಿಧಾನ, ಇದು ದುರಾಸೆಯ ಪ್ರತೀಕವಲ್ದೇ ಮತ್ತಿನ್ನೇನು ಹೇಳಿ.

ಕ್ಷೇಮೇಂದ್ರ : ಈಗ ಯಾವುದೇ ತಗೆದುಕೊಂಡ್ರೂ ಯಾವುದು ಸರಿ, ಯಾವುದು ಸರಿಯಲ್ಲ ಅನ್ನೋದು ಹೇಳೋದೆ ಕಷ್ಟ. ನೀವು ಬೆಣ್ಣೆಗೋಗ್ತೀರಿ ಕಾಫಿಪುಡಿಗೆ... ಹುಣಸೇ ಬೀಜ ಬೆರೆಸಿ ಕೊಡ್ತಾರೆ. ಎಷ್ಟು ಕಾಫಿ ಪುಡಿ ಹಾಕಿದ್ರೂ ಕಾಫಿ ರುಚೀನೇ ಇಲ್ಲ.

ಜ : ತೂಕ ಹೆಚ್ಚಲಿ ಅಂತ ಸಕ್ಕರೆಗೆ ಕಬ್ಬಿಣದ ಚೂರು ಬೆರೆಸ್ತಾರೆ, ಅಕ್ಕಿಗೆ ಕಲ್ಲು ಬೆರೆಸ್ತಾರೆ. ಉಣ್ಣೋ ಅನ್ನಕ್ಕೆ ಕಲ್ಲು ಬೆರೆಸ್ತಾರಲ್ಲ ಸ್ವಾಮಿ. ಕಲ್ಲು ಹೊಡೆಯೋ ಒಂದು ಕಾರ್ಖಾನೆ. ಕಲ್ಲು ನುಚ್ಚು ಮಾಡೋಕೆ ಒಂದು ಮಿಷನ್ ಇದನ್ನು ಹೇಳಿದ್ರೆ ನೀವು ನಂಬ್ತೀರಾ?

ಕ್ಷೇಮೇಂದ್ರ : ಹೇಳಿ ಸ್ವಾಮಿ ಎಲ್ಲಿ ಅಂತ ಅದನ್ನು ಕಂಡುಹಿಡಿಯೋಣ.

ಜ : ನಾವು ವ್ಯಾಪಾರಗಾರರಾಗಿ ಹೇಳಬಾರದು ಅಂದ್ರೆ, ಈ ರೀತಿ ಅನ್ಯಾಯ ಮಾಡಿ ಜನರನ್ನು ವಂಚಿಸ್ತಾ ಇರೋದ್ನ ನೋಡಿದ್ರೆ ನನಗೆ ತುಂಬಾ ವ್ಯಥೆ ಆಗುತ್ತೆ, ನಿಜವಾಗ಼್ೂ ತಲೆ ತಗ್ಗಿಸೋ ಕೆಲಸ. ನಾನ್ಯಾಕಿದನ್ನು ಹೇಳಲಿಕ್ಕೆ ಬಂದೆ ಅಂತೀರೋ...

ಕ್ಷೇಮೇಂದ್ರ : ಇಂಥ ಜನಗಳಿರೋದ್ಕೇ...

ಜ : ಸರಿಯಾಗೇಳಿದ್ರಿ. ಅಲ್ಲಾ ಸ್ವಾಮಿ ಅದೂ ಹೋಗ್ಲಿ ಅಂದ್ರೆ ಔಷಧದಲ್ಲಿ ಕಲಬೆರಕೆ. ಜೀವ ಉಳಿಸಿ ಪುಣ್ಯ ಕಟ್ಟಿಕೊಳ್ಳಿ ಅನ್ನೋ ಕಾಲ ಹೋರಟು ಹೋಯ್ತು. ಜೀವ ಕೊಂದು ಸಂತೋಷ ಪಡು ಅಂದಹಾಗಾಯ್ತು. ಹಣದಾಸೆಗೆ ಹೀಗೆ ಮಾಡಿ ಎಷ್ಟೋ ಪ್ರಾಣ ಹೋಗಿರೋ ಸಂದರ್ಭನೂ ಉಂಟು.

ಕ್ಷೇಮೇಂದ್ರ : ನೀವು ಯಾಕೀಗೇಳಲಿಕ್ಕೆ ಬಂದ್ರಿ ಅಂದ್ರೆ, ನೋಡಿ ನೋಡಿ.

ಜ : ಅಲ್ಲಾ ಸ್ವಾಮಿ ನಾವು ನಮ್ಮ ಮಕ್ಕಳು ಸುಖವಾಗಿರಬೇಕು. ಸಂತೋಷವಾಗಿರಬೇಕು ಅಂದ್ರೆ ಈ ರೀತಿ ಅನ್ಯಾಯದಿಂದ ಸಂಪಾದ್ನೆ ಮಾಡೋದು ಬ್ಯಾಡ, ಅಬ್ಬಬ್ಬ ಹಾಲಿಗೆ ಕಲಬೆರಕೆ, ಸೀಗೆಪುಡಿ ಕಲಬೆರಕೆ, ಎಣ್ಣೆಗೆ ಕಲಬೆರಕೆ, ಒಂದೇ ಎರಡೇ, ಲೆಕ್ಕ ಹಾಕ್ತಾ ಹೋಗ್ತಿದ್ರೆ ಯಾವುದಕ್ಕೆ ಇಲ್ಲ ಅಂತ ಹೇಳೋದೆ ಕಷ್ಟವಾಗುತ್ತೆ. ನಾನು ಈ ವಿಷಯವನ್ನೆಲ್ಲಾ ಯಾಕೆ ಹೇಳಲಿಕ್ಕೆ ಬಂದೆ ಅಂತೀರೋ?

ಕ್ಷೇಮೇಂದ್ರ : ಅವರನ್ನು ಕಂಡು ಹಿಡಿದು ಬುದ್ಧಿ ಕಲಿಸಿ ಅಂತಲ್ವೇ?

ಜ : ಸರಿಯಾಗಿ ಹೇಳಿದ್ರಿ.

ಕ್ಷೇಮೇಂದ್ರ : ಅಂದ ಹಾಗೆ ಆ ಕಲ್ಲುಬೆರಕೆ ಮಾಡೋ ಕಾರ್ಖಾನೆ ಎಲ್ಲಿದೆ?

ಜ : ಅದು ಕಾರ್ಖಾನೆಯಲ್ಲಿ ಒಂದೆರಡು ಮಿಷನ್ ಇಟ್ಕೊಂಡಿದ್ದಾರೆ. ನೆಲಮಾಳಿಗೆಯಲ್ಲಿ ಗೌಪ್ಯವಾಗಿ. ಅಲ್ಲಿನ ಕೆಲಸಗಾರ ನನಗೆ ಒಂದು ದಿನ ಹೇಳಿದ. ಅಯ್ಯೋ ಈ ರೀತಿ ಸಂಪಾದ್ನೆ ಮಾಡಿ ಜೀವ್ಸೋ ಜನಗಳೂ ಉಂಟೇ ಅನ್ನಿಸ್ತು. ಇದೇ ರಸ್ತೆಯಲ್ಲಿ ಬಲಕ್ಕೆ ತಿರುಗಿದ್ರೆ ಒಂದು ಮನೆ, ಅದು ಮೊದಲ್ನದೇ... ಇನ್ನು ಮುಂದಿನ ಕ್ರಮ ನಿಮಗೆ ಬಿಟ್ಟದ್ದು.

ಕ್ಷೇಮೇಂದ್ರ : ಇಂಥ ಸುಳಿವು ಸಿಕ್ಕಬೇಕು ನಮಗೆ. ಆಗ ಏನಾದ್ರೂ ಕ್ರಮ ಕೈಗೊಳ್ಳಲಿಕ್ಕೆ ಸಾಧ್ಯ. ಹಾಗಾದ್ರೆ ನಾನು ಬರ್ತೀನಿ.

ಜ : ಈಗ ಬಂದಿದ್ದೀರಿ. ಕಲಬೆರಕೆ ಇಲ್ಲದ ಕಾಫಿ...

ಕ್ಷೇಮೇಂದ್ರ : ಈಗ್ತಾನೆ ಹೇಳಿದ್ರಿ ಹಾಲು, ಸಕ್ಕರೆ, ಕಾಫಿ ಪುಡಿ, ಮೂರು ಅಂತ ಹೇಗೆ ನಂಬೋದು?

ಜ : ಹಸುವಿನ ಹಾಲು, ಸಕ್ಕರೆ ಚೆನ್ನಾಗಿ ಸೋಸಿದ್ದೇವೆ, ಕಾಫಿಬೀಜ ತರಿಸಿ ಹುರಿಸಿ ಪುಡಿ ಮಾಡಿದ್ದೊ, ಇದರ ಬಗ್ಗೆ ಅನುಮಾನವೇ ಇಲ್ಲ.

ಕ್ಷೇಮೇಂದ್ರ : ನಿಮ್ಮಹಾಗೆಲ್ರೂ ಬುದ್ಧಿ ಉಪಯೋಗಿಸಿದ್ರೆ? ಕಲಬೆರಕೆ ಮಾಡುವವರಿಗೆ ಅವಕಾಶವೇ ಇಲ್ಲ.

ಜ : ಆಗ ಅದು ಬಿಟ್ಟು ಇನ್ನೊಂದು ಮಾಡ್ತಾರೆ ಬಿಡಿ.

ಕ್ಷೇಮೇಂದ್ರ : ಆಯ್ತು ಕೊಡಿಯಪ್ಪ. (ಕಾಫಿ ಕುಡಿಯುತ್ತಾ) ಅಂತೂ ಕಲಬೆರಕೆ ಇಲ್ಲದುದರಿಂದ ಕಾಫಿ ಎಷ್ಟೊಂದು ಚೆನ್ನಾಗಿದೆ, ಕಾಫಿ ಕುಡಿಯೋಕ್ಕೆ ನಿಮ್ಮ ಮನೇಗೇ ಬರಬೇಕು.

ಜ : ಅಗತ್ಯವಾಗಿ ಬನ್ನಿ ಸ್ವಾಮಿ.

ಕ್ಷೇಮೇಂದ್ರ : ಅಂದ ಹಾಗೆ ಆ ವ್ಯಕ್ತಿಯ ಹೆಸರು?

ಜ : ರಾಜಣ್ಣ?

ಕ್ಷೇಮೇಂದ್ರ : ಈ ಕೆಲಸ ಮಾಡಿದ್ರೆ ರಾಜಣ್ಣನಾಗಿದ್ದೆ ಇನ್ನೇನಾಗಿರ್ತಾನೆ?

ಜ : ಆದ್ರೆ ಈ ಜಾಣತನ ಎಷ್ಟು ದಿನ ಸ್ವಾಮಿ? ನಾನ್ಯಾಕೆ ಹೀಗೆ ಹೇಳಲಿಕ್ಕೆ ಬಂದೆ ಅಂತಿರೋ, ಹಾಲು ಕುಡಿದ ಮಕ್ಕಳೇ ಬದುಕುವುದು ಕಷ್ಟ ಇನ್ನೂ......

ಕ್ಷೇಮೇಂದ್ರ : ವಿಷ ಕುಡಿದ ಮಕ್ಕಳು ಬದುಕುತ್ತಾವೆಯೇ?

ಜ : ಅದು ಸರಿ ಅನ್ನಿ. ಆದ್ರೆ ಈ ವಿಷಯ ನಾನು ಹೇಳಿದೆ ಅಂತ ಹೇಳಬೇಡಿ ಸ್ವಾಮಿ. ನಾನು ಯಾಕೆ ಹೀಗೆ ಹೇಳಲಿಕ್ಕೆ ಬಂದೆ ಅಂದ್ರೆ ನಾವೂ ವ್ಯಾಪಾರಿಗಳು... ತಡೀಲಾರ್ದೆ ಹೇಳ್ದೆ ಜನಕ್ಕಾಗೋ ಅನ್ಯಾಯ ನೋಡಲಾರದೆ.

ಕ್ಷೇಮೇಂದ್ರ : ಆಯ್ತು ನಾವಿನ್ನು ಬರ್ತೀನಿ. ಈ ವಿಚಾರದ ಬಗ್ಗೆ ನಾಳೆ ಪೇಪರ್ ನೋಡ್ತಿರಿ...

ಜ : ವಿಶ್ ಯೂ ಆಲ್ ದಿ ಸಕ್ಸೆಸ್.

(ಸಂಗೀತ)

(ಜೀಪ್ ರಾಜಣ್ಣನ ಮನೆಗೆ ಬರುವುದು)

ಕ್ಷೇಮೇಂದ್ರ : ರಾಜಣ್ಣನವರೇ ನಿಮ್ಮ ಕಲ್ಲಿನ ನುಚ್ಚಿನ ಚೀಲ ಬಂದು ತಲುಪಿತು.

ರಾ : ಕ... ಕಲ್ಲಿನ... ಮೂಟೆ... ಇದೇನು ಸ್ವಾಮಿ ಹೇಳೋದು ನನಗೆ ಅದೊಂದೂ ಗೊತ್ತಿಲ್ಲ. ನನಗೂ ಅದ್ಕೂ ಸಂಬಂಧವಿಲ್ಲ.

ಕ್ಷೇಮೇಂದ್ರ : ನಿಮ್ಮ ಆಳು ನಮಗೆ ಎಲ್ಲಾ ವಿಷಯವನ್ನೂ ತಿಳಿಸಿದ್ದಾನೆ. ನೀವು ಏಜೆಂಟರಲ್ಲ. ಕಲ್ಲಿನ ನುಚ್ಚು ಮಾಡಿ ವ್ಯಾಪಾರ ಮಾಡಿ ಜನರ ಅನ್ನಕ್ಕೆ ಕಲ್ಲು ಬೆರೆಸಲು ಕಾರಣಕರ್ತರು, ನಡೀರಿ ನಿಮ್ಮ ಫ್ಯಾಕ್ಟರಿಗೆ.

ರಾ : ಹಾಗಂದ್ರೇನು ಸ್ವಾಮಿ ನನ್ನ... ಫ್ಯಾಕ್ಟರಿ ಎಲ್ಲಿದೆ?

ಕ್ಷೇಮೇಂದ್ರ : ಗೊತ್ತಿಲ್ಲ. ನಿಮ್ಮ ಮನೆಯ ನೆಲಮಾಳಿಗೆಯಲ್ಲಿ ಇಲ್ಲವೇನು?

ರಾ : ಸಾರ್... ಸ್ವಲ್ಪ ಈ ಕಡೆ ಬರ್ತೀರಾ?

ಕ್ಷೇಮೇಂದ್ರ : ನಾನು ಗುಟ್ಟಾಗಿ ಮಾತಾಡೋಕ್ಕೆ ಬರೋವ್ನಲ್ಲ ಜೋರಾಗೇ ಮಾತಾಡ್ರೀ.

ರಾ : ಎಲ್ಲರೆದುರಿಗೂ...

ಕ್ಷೇಮೇಂದ್ರ : ಲಂಚ ಕೊಡ್ತೀನಿ... ಹೊರಟು ಹೋಗಿ ಅಂತ್ಲಾ?

ರಾ : ಬೇಜಾರು ಮಾಡಕೊಳ್ಳಬೇಡಿ ಸಾರ್.

ಕ್ಷೇಮೇಂದ್ರ : ಬೇಜಾರೇನು ಬಂತು ನೀವು ಮಾಡೋ ಕೆಲ್ಸಕ್ಕೆ ಸಾವಿರ ರೂಪಾಯಿ ಜುಲ್ಮಾನೆ ಆಗುತ್ತೆ.

ರಾ : ಸಾರ್...

ಕ್ಷೇಮೇಂದ್ರ : ಅಷ್ಟೇ ಅಲ್ಲ... ನಿಮ್ಮ ಅಂಗಡಿ ಮುಟ್ಟುಗೋಲು ಆಗುತ್ತೆ.

ರಾ : ಸಾರ್...

ಕ್ಷೇಮೇಂದ್ರ : ಅಷ್ಟೇ ಅಲ್ಲ ಜೈಲುವಾಸ ಮೂರು ತಿಂಗಳು.

ರಾ : ಕ್ಷಮಿಸಿ ಸಾರ್.

ಕ್ಷೇಮೇಂದ್ರ : ನಡೀರಿ ಮೊದ್ಲು ನಿಮ್ಮ ನೆಲಮಾಳಿಗೆ ಫ್ಯಾಕ್ಟರಿ ತೋರಿಸ್ರಿ.

ರಾ : ಸಾರ್.

ಕ್ಷೇಮೇಂದ್ರ : ಪೋಲೀಸ್‌ನವ್ರೆ ಅಂಗಡಿಗೆ ಸೀಲ್ ಮಾಡಿ ಈತನನ್ನು ಪೋಲೀಸ್ ಕಸ್ಟಡಿಗೆ ತೆಗೆದುಕೊಳ್ಳಿ, ಮುಂದಿನ ಕ್ರಮ ಆಮೇಲೆ ನೋಡೋಣ.

ರಾ : ಸಾರ್...ಇಷ್ಟು ಬೇಡಿಕೊಂಡ್ರೂ ಶರಣಾಗತನಾದ್ರೂ ಕರುಣೆ ತೋರ್‍ತಾ ಇಲ್ವಲ್ಲ ನೀವು.

ಕ್ಷೇಮೇಂದ್ರ : ನಿಮ್ಮಂಥವರಿಗೆ ಕರುಣೆ? ನಮಗೆ ಪಾಪ ಬರುತ್ತೆ. ಸಮಾಜದ ಘಾತುಕರಾಗಿ ಜನರ ಹಲ್ಲು ಮುರಿದು ನೀವು ಸುಖಪಡುವವರಿಗೆ ಮಾಫಿಯೇ, ಇಲ್ಲ ಇಲ್ಲ, ಖಂಡಿತ ಇಲ್ಲ, ನಡೇರಿ.

ರಾ : ಫೈನಾದ್ರೂ ಹಾಕಿ. ಅಂಗಡಿ ಸೀಲ್ ಮಾಡಿಸಬೇಡಿ. ಪೋಲಿಸಿಗೊಪ್ಪಿಸಬೇಡಿ.

ಕ್ಷೇಮೇಂದ್ರ : ಅದು ಸಾಧ್ಯವಿಲ್ಲ ಹೂಂ...

ರಾ : ಅಯ್ಯೋ... ಎಂಥ ಕೆಲ್ಸ ಆಯ್ತು... ಸಾರ್ ಸಾರ್ ಬೇಡ ಪೋಲೀಸ್ರೆ ಬೇಡಿ. ನನ್ನ ಬಿಟ್ಟು ಬಿಡಿ.

(ಜೀಪಿನಲ್ಲಿ ಹೊರಡುವರು)

ಕ್ಷೇಮೇಂದ್ರ : ತಾವು ಹೇಳಿದ ಕೆಲಸ ಆಯ್ತು ಸಾರ್. ನಮ್ಮ ಗುರುತಿನವರು ಕೊಟ್ಟ ಸುಳಿವಿನ ಮೇಲೆ ಈ ಅನ್ವೇಷಣೆ ಸುಲಭವಾಗಿ ಆಯ್ತು.

ಬಾಸ್ : ವೆರಿ ಗುಡ್.

ಕ್ಷೇಮೇಂದ್ರ : ಕಲ್ಲು ನುಚ್ಚು ಮಾಡುವ ಫ್ಯಾಕ್ಟರಿಗೆ ಬೀಗ ಮುದ್ರೆಯಾಯ್ತು, ಕೇಸ್ ದಾಖಲೆ ಮಾಡಿಕೊಂಡು ಆತನನ್ನು ಪೊಲೀಸ್ ಕಸ್ಟಡಿಗೆ ಒಪ್ಪಿಸಿದ್ದೀನಿ.

ಬಾಸ್ : ಸಮಾಜ ದ್ರೋಹಿಗಳು... ಇಂಥವರ ಸದೆ ಬಡಿಯುವುದು ತುಂಬಾ ಅವಶ್ಯ. ಒಳ್ಳೆ ಕೆಲಸ ಮಾಡಿದ್ರಿ. ಪತ್ತೆ ಹಚ್ಚುವ ಕಾರ್ಯದಲ್ಲಿ ಬಳಲಿದ್ದೀರಿ ತೆಗೊಳ್ಳಿ ಲಿಂಬೆ ಜ್ಯೂಸ್.

ಕ್ಷೇಮೇಂದ್ರ : ಥ್ಯಾಂಕ್ಯೂ ಸರ್.

* * *

## ದೃಶ್ಯ ೪

ಜ : ಏನು ಈವಾಗ ಬಂದ್ರೇನಪ್ಪಾ? ಕ್ಷೇಮೇಂದ್ರ.

ಕ್ಷೇಮೇಂದ್ರ : ಹೌದು ಬೆಟ್ಟಪ್ಪ.

ಜ : ಹೂಂ ಕೂತ್ಕೋ ಎಲ್ಲಾ ಆರೋಗ್ಯ ತಾನೇ.

ಕ್ಷೇಮೇಂದ್ರ : ಹೂಂ.

ಜ : ನಿಮ್ಮದೇ ಸರಿ ಬಿಡಪ್ಪ ಅರಸನ ಅಂಕೆ ಇಲ್ಲ, ದೆವ್ವದ ಕಾಟವಿಲ್ಲ, ಅಂದ ಹಾಗೆ ತಿಂಗಳಾಯ್ತು ಅಂದ್ರೆ ಎಣಿಸ್ಕೊಳ್ತಿದ್ದೀರಿ. ನಮ್ಮ ಹಳ್ಳೀಲಿ ವ್ಯವಸಾಯ ವ್ಯವಹಾರ ಎಲ್ಲಾ ಕಷ್ಟ.

ಕ್ಷೇಮೇಂದ್ರ : ನಮ್ಮದೊಂದು ಥರ ಕೆಲಸ, ನಮಗೊಂದು ಥರ ಕಷ್ಟ. ನಿಮದೊಂದು ಥರ ಕಷ್ಟ. ಎಲ್ಲರಿಗೂ ಒಂದಲ್ಲ ಒಂದು ಥರ ಕಷ್ಟ ಇದ್ದದ್ದೇ.

ಜ : ಅದ್ನಿಜಾ ಅನ್ನು.

ಕ್ಷೇಮೇಂದ್ರ : ಆಳು ಕಾಳುಗಳಿಗೆ ತೊಂದ್ರೆ ಇರಬೇಕು.

ಜ : ಇರುವವರಿಗೆ ಇದೆ, ಇಲ್ಲದವರಿಗೆ ಇಲ್ಲ.

ಕ್ಷೇಮೇಂದ್ರ : ಹಾಗಂದ್ರೆ ಈಗ...

ಜ : ಜೀತ ಪದ್ಧತಿ ಹೋಯ್ತು ಅಂತ್ಲ?

ಕ್ಷೇಮೇಂದ್ರ : ಯಾಕೆ ಇನ್ನೂ ಇದ್ಯಾ?

ಜ : ಇಲ್ಲದೆ ಏನು?

ಕ್ಷೇಮೇಂದ್ರ : ಹ್ಯಾಗೆ?

ಜ : ಅವೆಲ್ಲಾ ಹಳೇ ಮಾತಾಯ್ತು ಬಿಡು ಕ್ಷೇಮೇಂದ್ರ.

ಕ್ಷೇಮೇಂದ್ರ : ನಿಮ್ಮ ಊರಿಗೆ ಲೇಬರ್ ಇನ್ಸಪೆಕ್ಟರ್ ಬರಲ್ವಾ, ಇದರ ತನಿಖೆ ಮಾಡಲಿಕ್ಕೆ?

ಜ : ಬಂದ್ರಿದ್ರಪ್ಪಾ.

ಕ್ಷೇಮೇಂದ್ರ : ಏನಾಯ್ತು? ಕಾನೂನು ಪಾಲಿಸದವರಿಗೆ ಶಿಕ್ಷೆ ಆಗಲಿಲ್ವೆ?

ಜ : ಈ ಹಳ್ಳಿಲೇನು ಎಷ್ಟೋ ಹಳ್ಳಿಗಳಲ್ಲಿ ಹೀಗೆ ಆಗೋದು ಒಂದು ದಿನ ಹೀಗಾಯ್ತು.

(ಫ್ಲ್ಯಾಷ್ ಬ್ಯಾಕ್)

ಇನ್‌ಸ್ಪೆಕ್ಟರ್ : ಏನ್ರಿ ಚೆಲ್ಲಪ್ಪನವರೇನು ನೀವು.

ಚೆಲ್ಲಪ್ಪ : ಹೌದ್ರೀ

ಇನ್‌ಸ್ಪೆಕ್ಟರ್ : ನಾನು ಲೇಬರ್ ಇನ್ಸ್‌ಪೆಕ್ಟರ್.

ಚೆಲ್ಲಪ್ಪ : ಬನ್ನಿ ಕುಳಿತುಕೊಳ್ಳಿ ಬಿಸಿಲಿನಲ್ಲಿ ಬಂದಿದ್ದೀರಿ, ಬ್ಯಾಲದ ಹಣ್ಣಿನ ಪಾನಕ ಮಾಡೊಣ್ವೇ, ಮಜ್ಜಿಗೆ ಕುಡಿತೀರೋ.

ಇನ್‌ಸ್ಪೆಕ್ಟರ್ : ನಾನು ಕುಡಿಯಕ್ಕಲ್ರೀ ಬಂದಿರೋದು.

ಚೆಲ್ಲಪ್ಪ : ಹೇಳಿ ಸಾರ್.

ಇನ್‌ಸ್ಪೆಕ್ಟರ್ : ನೀವು ಕಾನೂನು ಮರಿತಿದ್ದೀರಿ ಅದನ್ನು ತನಿಕೆ ಮಾಡಲು ಬಂದಿದ್ದೀನಿ.
ಚೆಲ್ಲಪ್ಪ : ಮಾಡಿ ಸಾರ್ ಬೇಡಿ ಅಂದವರಾರು?
ಇನ್‌ಸ್ಪೆಕ್ಟರ್ : ನೀವು ಜೀತದ ಆಳು ಇಟ್ಕೊಂಡಿದ್ದೀರಂತೆ.
ಚೆಲ್ಲಪ್ಪ : ತಮಗ್ಯಾರು ತಿಳಿಸಿದ್ರು ಹೇಳಿ.
ಇನ್‌ಸ್ಪೆಕ್ಟರ್ : ಹೀಗೆ ದೂರು ಬಂದಿದೆ.
ಚೆಲ್ಲಪ್ಪ : ವಿಚಾರಣೆ ಮಾಡಿ ಬ್ಯಾಡ ಅಂದವರ್‍ಯಾರು?
ಇನ್‌ಸ್ಪೆಕ್ಟರ್ : ನಡೀರಿ. ನಿಮ್ಮ ಹೊಲದ ಕಡೆಗೆ.
ಚೆಲ್ಲಪ್ಪ : ನಡೀರಿ.
ಇನ್‌ಸ್ಪೆಕ್ಟರ್ : ಮತ್ತೊಂದು ವಿಷಯ ಕೇಳಿದ್ದೀನಿ ಅದಾದ್ರೂ ನಿಜವೇ.
ಚೆಲ್ಲಪ್ಪ : ಏನು ಹೇಳಿ ಸಾರ್.
ಇನ್‌ಸ್ಪೆಕ್ಟರ್ : ನೀವು ಆಳುಗಳಿಗೆ ಸಮವಾದ ವೇತನ ಕೊಡ್ತಾ ಇಲ್ವಂತೆ. ಗಂಡು ಆಳಿಗೆ ಒಂದು, ಹೆಣ್ಣು ಆಳಿಗೆ ಒಂದು, ಕೊಡ್ತೀರಿ ಅಂತ್ಲೂ ತಿಳಿದು ಬಂತು.
ಚೆಲ್ಲಪ್ಪ : ಕೇಳಿ ಸ್ವಾಮಿ ಹ್ಯಾಗಾದ್ರೂ ಬಂದಿದ್ದೀರಿ. ತನಿಖೆ ನಡೆಸಿ ನನ್ನದೇನೂ ಅಭ್ಯಂತರವಿಲ್ಲ.

(ಹೊಲ ಗದ್ದೆಗಳ ವಾತಾವರಣ)

ಇನ್‌ಸ್ಪೆಕ್ಟರ್ : ಏನಪ್ಪಾ...
ಆಳು : ಏನು ಬುದ್ದೀ...
ಇನ್‌ಸ್ಪೆಕ್ಟರ್ : ನೀನು... ಚೆಲ್ಲಪ್ಪನವರ ಮನೆಯಲ್ಲಿ ಜೀತಕ್ಕಿದ್ದೀಯಂತೆ...
ಆಳು : ಯಾರು ಸ್ವಾಮಿ ಹೇಳಿದವ್ರು?
ಇನ್‌ಸ್ಪೆಕ್ಟರ್ : ಜನರು.
ಆಳು : ಇಲ್ಲ ಸ್ವಾಮಿ. ದಿನಗೂಲಿ ಕೊಡ್ತಾರೆ, ಕೆಲಸಕ್ಕೆ ಬಂದಿದ್ದೀವಿ.
ಇನ್‌ಸ್ಪೆಕ್ಟರ್ : ಸುಳ್ಳು.
ಆಳು : ನಿಜ ಹೇಳಿದ್ರೂ ಸುಳ್ಳು ಅಂದ್ರೆ ನಾವೇನು ಹೇಳೋಣ ಸ್ವಾಮಿಯವರೇ.
ಇನ್‌ಸ್ಪೆಕ್ಟರ್ : ಎಷ್ಟು ಕೊಡ್ತಿದ್ದಾರೆ ಕೂಲಿ?
ಆಳು : ಹದಿನೈದು ರೂಪಾಯಿ.
ಇನ್‌ಸ್ಪೆಕ್ಟರ್ : ನಿನಗೆಷ್ಟು ಕೊಡ್ತಾರಮ್ಮಾ?
ಆಳು : ನಂಗೂ ಅಷ್ಟೇ ಕೊಡ್ತಾವ್ರೇ ಅದ್ಯಾಕ ಸ್ವಾಮಿ ಅಂಗ್ ಕೇಳ್ದರಿ.
ಇನ್‌ಸ್ಪೆಕ್ಟರ್ : ಕಮ್ಮಿ ಕೊಡ್ತಾರೆ ಅಂತಾರೆ.

ಆಳು : ಅದ್ಯಾನೋ ಗಾದೆ ಹೇಳ್ತಾರಲ್ಲಾ ಅಂಗಾಯ್ತು. ಇದ್ದದ್ದನ್ನು ಇದ್ದಾ ಗೇಳಿದ್ರೆ ಎದ್ದು ಬಂದು ಎದೆಗೊದ್ದ ಅಂದಹಾಗಾತು.

ಇನ್‌ಸ್ಪೆಕ್ಟರ್ : ಏನೋ ಎಲ್ಲಾ ಮುಚ್ಚಿಡ್ತೀರಿ.

ಚೆಲ್ಲಪ್ಪ : ಕೇಳಿದ್ರಾ ಸ್ವಾಮಿ:

ಇನ್‌ಸ್ಪೆಕ್ಟರ್ : ನೋಡಿ ಸ್ವಾಮಿ ನಮಗೆ ವಿಷಯ ಗೊತ್ತಾಯ್ತು ತನಿಖೆಗೆ ಬಂದಿದ್ದೋ.

ಚೆಲ್ಲಪ್ಪ : ಆಯ್ತಲ್ಲಾ.

ಇನ್‌ಸ್ಪೆಕ್ಟರ್ : ಒಳ್ಳೇದು.

ಚೆಲ್ಲಪ್ಪ : ಹೋಗಿ ಬನ್ನಿ ಸ್ವಾಮಿ ನಮಸ್ಕಾರ.

(ಸಂಗೀತ)

ಜ : ನೋಡಿದ್ಯಪ್ಪಾ ಹೀಗಾಯ್ತು ಆಗೋದೇ ಹೀಗೆ.

ಕ್ಷೇಮೇಂದ್ರ : ಅಂದ್ರೇ.

ಜ : ಅರ್ಥವಾಗಲಿಲ್ವೇ? ಪಾಪ ಆ ಜನರನ್ನು ಅಷ್ಟೊಂದು ಹೆದರಿಸಿ ಇಟ್ಕೊಂಡಿರ್ತಾರೆ ಹಳ್ಳಿಯಲ್ಲಿ. ಅವರಿಗೆ ಹೇಳಿರ್ತಾರೆ ಯಾರೇ ಬಂದು ಕೇಳಿದ್ರೂ ನಾನು ಕೂಲಿಗೆ ಬಂದಿದ್ದೀನಿ ಅಂತ ಹೇಳಬೇಕು. ಕೂಲಿ ಎಷ್ಟು ಅಂದ್ರೆ ೧೫ ರೂಪಾಯಿ ಅಂತ ಹೇಳಬೇಕು. ಇವೆಲ್ಲಾ ಮೊದಲೇ ನಾಟಕದ ಪ್ರ್ಯಾಕ್ಟೀಸ್ ಇದ್ದಹಾಗೆ ಆಗ್ಬಿಟ್ಟಿದೆ.

ಕ್ಷೇಮೇಂದ್ರ : ಸರ್ಕಾರದ ಕಾನೂನಿನ ಕಣ್ಣಿಗೆ ಖಾರದ ಪುಡಿ ಎರಚಿದಂಗಾಯ್ತು.

ಜ : ಅವರಿಗೂ ದರ್ದಾಗಿರುತ್ತೆ, ೨ ಸಾವಿರನೋ, ಒಂದೂವರೆ ಸಾವಿರನೋ ಕೊಟ್ಟಿರ್ತಾರೆ, ಅದನ್ನು ಕೊಟ್ಟು ತೀರಿಸುವವರಗೆ ಜೀತ ಗೆಯ್ತಿರಬೇಕು.

ಕ್ಷೇಮೇಂದ್ರ : ನಿಜವಾಗ಼್ೂ ಇದು ಅಮಾನುಷ ಕೃತ್ಯ ಅಷ್ಟೇ.

ಜ : ಕೆಲಸ ಆಗಬೇಕಲ್ಲಾ. ಕ್ಷೇಮೇಂದ್ರ ನಾನು ಯಾಕೆ ಹೀಗ್ ಹೇಳಲಿಕ್ಕ ಬಂದೆ ಅಂದ್ರೆ ಸರಕಾರ ಒಂದು ರೀತಿ ಮಾಡಿದರೆ, ಅದನ್ನು ಮತ್ತೊಂದು ರೀತಿ ಮರೆ ಮಾಡ್ತಾರೆ ಅನೋದು ಗೊತ್ತಾಯ್ತಾ?

ಕ್ಷೇಮೇಂದ್ರ : ಪಾಪ ಆ ಮುಗ್ಧ ಜನರನ್ನು ಹೆದರಿಸಿ ಇಟ್ಕೊಂಡಿರ್ತಾರೆ ಊರಿನ ಧನಿಕರು, ಆ ಬಡಪಾಯಿಗಳು ಹೀಗೆ ದುಡಿದು ಸಾಯಬೇಕಲ್ಲಾ.

ಜ : ಒಟ್ಟಿನಲ್ಲಿ ನಾವು ಸುಖ ಪಟ್ಟಾಯ್ತು, ನಮ್ಮ ಸುಖಕ್ಕೆ ಬೇರೆ ಯಾರು ಕಷ್ಟ ಪಟ್ರೆ ನಮಗೇನು? ಅನ್ನೋ ಮನೋಭಾವ. ಈ ಮಾತು ಯಾಕೆ ಹೇಳಲಿಕ್ಕೆ ಬಂದೆ ಅಂದ್ರೆ ದಿನನಿತ್ಯ ಕಣ್ಣ ಮಟಾರ ನೋಡ್ತಾನೆ ಇರೋದ್ರಿಂದ, ಇನ್ನೊಂದು ವಿಷಯ.

ಕ್ಷೇಮೇಂದ್ರ : ಏನು ಹೇಳಿ.

ಜ : ಬಾಲಕಾರ್ಮಿಕರ ಸಮಸ್ಯೆಯೇನು ಬಗೆ ಹರಿದಿದ್ಯೇನು? ನಮ್ಮದೇಶದಲ್ಲಿ ಎಷ್ಟೊಂದು ಬಾಲ ಕಾರ್ಮಿಕರಿದ್ದಾರೆ. ಅಂಗಡಿಯಲ್ಲಿ, ಹೋಟೇಲ್‌ನಲ್ಲಿ, ವರ್ಕ್‌ಶಾಪ್‌ನಲ್ಲಿ, ಬೀಡಿ ಕಟ್ಟೋ ಕೆಲಸದಲ್ಲಿ, ಹೀಗೆ ನಾನಾ ರಂಗದಲ್ಲಿ ಕೆಲಸ ಮಾಡ್ತಾ ಇರೋದನ್ನು ಕಂಡಿಲ್ವೇ? ಹದಿನೆಂಟು ವರ್ಷಕ್ಕಿಂತ ಕಮ್ಮಿ ಇರೋ ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳಬಾರದು, ಸರಿಯಾದ ವಯಸ್ಸಿಗೆ ಸೇರಿದವರಿಗೆ ಸರಿಯಾದ ವೇತನ ಕೊಡಬೇಕು ಅನ್ನೋದು ಗೊತ್ತಿಲ್ವೇ? ಆದ್ರೂ ಎಷ್ಟು ಜನ ಈ ಕಾನೂನು ಪರಿಪಾಲಿಸ್ತಾ ಇದ್ದಾರೆ?

ಕ್ಷೇಮೇಂದ್ರ : ನಿಜವಾಗ಼್ೂ ಅಸಮಾಧಾನದ ವಿಷಯ, ಪಾಪ ಆ ಓದಿ ಬರೆದು ಬೆಳೆಯುವ ವಯಸ್ಸಿನಲ್ಲಿ ಕೆಲಸದಲ್ಲಿ ನುರುಕು ಹೋಗ್ತಾರಲ್ಲಾ. ಮನೆ ಕೆಲಸ ಮಾಡಿಸಿಕೊಂಡು ಬಟ್ಟೆ ಒಗೆಸಿ ಪಾತ್ರೆ ತಿಕ್ಕಿಸಿಕೊಂಡು ಸುಖಜೀವನ ನಡೆಸ್ತಾರೆ, ಆ ಕಂದಮ್ಮಗಳು ಎಷ್ಟು ಕಷ್ಟಪಡ್ತಾರೆ?

ಜ : ಕಾನೂನು ಮಾಡಿರೋದು ನಿಜವಾಗ್ಲೂ ಎಲ್ಲರ ಒಳ್ಳೆಯದಕ್ಕೆ. ಆದ್ರೆ ಅದನ್ನು ಬೇಕಾದ ಕಡೆ ತಿರುಗಿಸಿಕೊಂಡ್ರೆ ಏನು ಮಾಡ್ತೀರಿ?

ಕ್ಷೇಮೇಂದ್ರ : ಅದಕ್ಕೆ ನಿಜವಾಗಿ ಅನುಭವಿಸ್ತಾ ಇರುವವರು ನಿಜ ಹೇಳಬೇಕು.

ಜ : ಹೇಳಿದ್ರೆ ಹಳ್ಳಿಯಲ್ಲಿ ಅವರು ಇರೋದೇ ಕಷ್ಟವಾಗುತ್ತೆ. ನಾನು ಯಾಕೆ ಈ ವಿಷಯ ಹೇಳಲಿಕ್ಕೆ ಬಂದೆ ಅಂತೀಯೋ ಎಲ್ಲಾನೂ ನಾವು ತೂಕ ಮಾಡಿ, ನ್ಯಾಯವಾಗಿ ನಡೀಬೇಕು ಎಂಬ ಮನೋಭಾವ ಬೆಳೀಬೇಕು. ಕಾನೂನ್ಗಿಂತ ಇದು ಮುಖ್ಯ, ಅಂದ್ರೆ ಕಾನೂನು ಬ್ಯಾಡ ಅಂತ ನಾನು ಹೇಳೋಲ್ಲ? ಕಾನೂನು ಪರಿಪಾಲಿಸಬೇಕು ಜನರು.

ಕ್ಷೇಮೇಂದ್ರ : ಅದು ನಿಜ ಅನ್ನಿ.

ಜ : ಅಯ್ಯೋ ಈ ಕಡೆ ಹೇಳ್ತಾ ಹೋದ್ರೆ ಒಂದು ರೀತಿಯಲ್ಲಿ ಮುಗಿಯದ ಕಥೆ ಇದ್ದಂತೆ. ಏಳು ಏಳು ಜಳಕಾ ಮಾಡು, ಈ ಹೊತ್ತು ನಾನು ಹಿಂಗೇ ಒಂದೀಟು ಹೋಗಿ ಬರ್ತೀನಿ. ಗದ್ದೆತಾವ ನನ್ನ ಹುಟ್ಟಿದ ಹಬ್ಬ ಸಿಹಿ ಊಟ ನಿನಗೆ ಕಾದಿದೆ.

ಕ್ಷೇಮೇಂದ್ರ : ಛೇ... ಛೇ... ನೀವ್ಯಾಕೆ ಇಂಥ ಮಾತಾಡ್ತೀರಿ ಬಿಡ್ತೂ ಅನ್ನಿ.

ಜ : ಆಯ್ತು ಹೋಗಿ ಬಾರಪ್ಪಾ.

(ಫ್ಲ್ಯಾಷ್ ಬ್ಯಾಕ್ ಮ್ಯೂಸಿಕ್)

ಕ್ಷೇಮೇಂದ್ರ : ಹೀಗಾಯ್ತು ನೋಡಿ. ಜನರು ಯಾವ ರೀತಿಯಾಗಿ ಕಾನೂನನ್ನು ಮುರೀತಾರೆ ಬೆದರಿಗೆ ಹಾಕಿ, ಲಂಚ ಕೊಟ್ಟು ತಪ್ಪಿಸಿಕೊಳ್ತಾರೆ ಅಂತ.

ಬಾ : ಅದು ಹೇಗೆ ತಪ್ಪಿಸಿಕೊಳ್ತಾರೆ? ಜೀತಪದ್ಧತಿ ಪಾಲಿಸೋ ಜನರಿಗೆ ಶಿಕ್ಷೆ ಕಾದಿದೆ.

ಕ್ಷೇಮೇಂದ್ರ : ನಿಜವಾಗ್ಲೂ ಹೌದು ಸರ್, ಒಂದ್ನಾಲ್ಕು ಸಾಕ್ಷಿ ಸಿಗುವ ಹಾಗೆ ಹಳ್ಳಿ ಜನರಿಗೆ ಹೇಳಿಟ್ಟಿದ್ದೀನೀ. ಕೇಸು ದಾಖಲು ಮಾಡಿಡೋಣ.

ಬಾಸ್ : ಕರೆಕ್ಟ್, ಮೇಲು ವರ್ಗದವರು ಶ್ರೀಮಂತರು, ಬಡವರನ್ನು ಶೋಷಣೆ ಮಾಡ್ತಾ ಬರ್ತಿದ್ದಾರೆ, ಇದು ತಪ್ಪಬೇಕು. ಅದಕ್ಕೆ ಕಾನೂನಿನ ನೆರವು ಕೊಡುವುದು ನಮ್ಮ ಕರ್ತವ್ಯ. ಗೋ ಅ ಹೆಡ್, ಈ ಶೋಷಣೆ ನಿಲ್ಲುವಂತೆ ಮಾಡುವುದು ನಮ್ಮ ಕರ್ತವ್ಯ ಕ್ಷೇಮೇಂದ್ರ.

ಕ್ಷೇಮೇಂದ್ರ : ಯಸ್ ಸರ್.

* * *

## ದೃಶ್ಯ ೫

ಕ್ಷೇಮೇಂದ್ರ : ನಿಲ್ಲಿಸ್ರಿ... ಲಾರಿ...

(ಲಾರಿ ನಿಲ್ಲಿಸುವುದು)

ಏನಿದು?

ಡ್ರೈವರ್ : ಇದೋ ನೋಡಿ ಸ್ವಾಮಿ... ಈ ಕಾಗದನಾ... ವಾಸ್ನೆ ನೋಡಿದ್ರೆ ಗೊತ್ತಾಗ್ತಾ ಇಲ್ವೇ, ಮೀನು ಅನ್ನೋದು ಗೊತಾಗ್ತದೆ. ಎಂಥದ್ದು ಅನ್ನುವುದು ಮುಖ್ಯ Dry fish for food,

ಕ್ಷೇಮೇಂದ್ರ : ಎಷ್ಟಿವೆ ಮೂಟೆಗಳು?

ಡ್ರೈವರ್ : ೨೭೫ ಮೂಟೆಗಳು...

ಕ್ಷೇಮೇಂದ್ರ : ಎಲ್ಲಿ ಒಂದು ಮೂಟೆ ತೆಗೆ ನೋಡೋಣ.

ಡ್ರೈವರ್ : ನೋಡಿ... ಕೋಳಿಗಳಿಗೆ ಒಣಗಿದ ಮೀನಿನ ಆಹಾರ.

ಕ್ಷೇಮೇಂದ್ರ : ಇದು... ಕೋಳಿಗಳಿಗೆ ಒಣಗಿದ ಮೀನಿನ ಆಹಾರ.

ಡ್ರೈವರ್ : ಇಲ್ಲ ಸ್ವಾಮಿ... ಮನುಷ್ಯರದು ಅಂತ ಹೇಳವ್ರೆ, ಏನ್ರೀ ನಮಗೆ ಹೇಳಿಕೊಡಲಕ್ಕೆ ಬತ್ತೀರಿ. ಇಂಥ ಮಾಲುಗಳನ್ನೆಷ್ಟು ನೋಡಿಲ್ಲ.

ಕ್ಷೇಮೇಂದ್ರ : ಬೇಕಾದ್ರೆ... ಆಹಾರ ಇಲಾಖೆಯವರಿಗೆ ತೋರಿಸಿ ಬಿಡೋಣ... ಸುಮ್ನೇ ಯಾಕೆ ಸುಳ್ಳು ಹೇಳ್ತೀರಿ? ಪಾಪ ನಿಮ್ಮದೇನು ನಿಮ್ಮ Owner ಮಾಡಿರುವ ಕುತಂತ್ರ... ಎಲ್ಲಿಂದ ಬರ್ತಿದ್ದೀರಿ?

ಡ್ರೈವರ್ : ಬೊಂಬಾಯಿನಿಂದ.

ಕ್ಷೇಮೇಂದ್ರ : ಎಲ್ಲಿಗೆ?

ಡ್ರೈವರ್ : ರಾಯಚೂರಿಗೆ...

ಕ್ಷೇಮೇಂದ್ರ : sales Bill ಎಲ್ಲಿ?

ಡ್ರೈವರ್ : ಇಲ್ಲ ಸ್ವಾಮಿ.

ಕ್ಷೇಮೇಂದ್ರ : ಈಗ ನೀವು Rules ಪ್ರಕಾರ... ೫೦, ೦೦೦ ರೂಪಾಯಿಸ ಮಾಲಿಗೆ ೬,೫೦೦ ರೂಪಾಯಿ (penalty) ದಂಡ ಕಟ್ಟಬೇಕಾಗುತ್ತೆ.

ಡ್ರೈವರ್ : ನನ್ನ ಹತ್ತಿರ ದುಡ್ಡಿಲ್ಲ ಸ್ವಾಮಿ.

ಕ್ಷೇಮೇಂದ್ರ : ಇಲ್ಲದೇ ಹೊದ್ರೆ ಲಾರಿ...seize ಮಾಡ್ತೀನಿ...ಹೂಂ ನಿನ್ನ ಸಾಹುಕಾರ್‌ನಿಗೆ ಫೋನು ಮಾಡು, ಇಲ್ಲ ರಾಯಚೂರ್ ಪಾರ್ಟಿಗೆ ಮಾಡಿ ತಿಳಿದುಕೊಂಡು ಬಾ...

ಡ್ರೈವರ್ : ಆಯ್ತು ಸ್ವಾಮಿ.

ಕ್ಷೇಮೇಂದ್ರ : ಎಂಥ ಮೋಸದ ಕೆಲಸ ಮಾಡ್ತಾರೆ... ವ್ಯಾಪಾರ ಮಾಡಿ ಲಾಭ ತಡೀಬೇಕು. ನ್ಯಾಯವಾಗಿ ಸರ್ಕಾರಕ್ಕೆ ಕಟ್ಟಬೇಕಾದ Tax ಕಟ್ಟಲಿಕ್ಕೆ ಮಾತ್ರ ಆಗೋಲ್ಲ, ದೇಶವಲ್ಲಿ ಹೀಗೆ ಮೋಸ ಮಾಡ್ತಾ ಹೋದ್ರೆ ಹ್ಯಾಗೇ, ಇಂಥವರನ್ನು ಬಗ್ಗು ಬಡಿಯಲೇ ಬೇಕು.

ಡ್ರೈವರ್ : ಸ್ವಾಮಿ ಫೋನ್ ಮಾಡಿದ್ದೆ. ನಮ್ಮ woner ರಾಯಚೂರಿನವರಿಗೆ ಕೇಳು ಅಂದ್ರು. ಅದರಂತೆ ರಾಯಚೂರಿನವರಿಗೆ ಫೋನ್ ಮಾಡಿದೆ, ಅವರು ನನಗೆ ಪೂರ್ತಿ ಬೇಡ, ನಾನ್ಯಾಕೆ ಅಷ್ಟು ದಂಡ ತೆತ್ತು ತೆಗೆದುಕೊಳ್ಳಲಿ ಅಂತಾರೆ. ನಮ್ಮ ಸಾಹುಕಾರರು ನಾನು ಲಾರಿ ಬಾಡಿಗೆ ಕೊಡಲಿಕ್ಕಾಗಿಲ್ಲ, ದಂಡ ಎಷ್ಟು ಅಷ್ಟು ಬೆಲೆಯ ಮೂಟೆಗಳನ್ನು ಇಳಿಸಿಕೊಳ್ಳಿ ಅಂತೇಳು ಅಂತಾರೆ.

ಕ್ಷೇಮೇಂದ್ರ : ನಿನ್ನ ಮೂಟೆಗಳನ್ನು ಇಳಿಸಿ ಆಫೀಸಿನಲ್ಲಿ ಈ ವಾಸನೆ ಕುಡಿಯಬೇಕೇನು ಜನ? ಇವನೆಲ್ಲಾ ಹಾಕಲು ಒಂದು ಗೋಡೌನ್ ಕಟ್ಟಿಸಬೇಕೋ ನಾವು.

ಡ್ರೈವರ್ : ಏನೋ ಸ್ವಾಮಿ... ನಾನು ಲಾರಿ ಬಾಡಿಗೆಗೆ ಬಂದೆ.

ಕ್ಷೇಮೇಂದ್ರ : ನೀನು ಬರುವಾಗ ಪಕ್ಕಾ ಮಾಡಿಕೊಂಡು ಬರಬೇಕು, ಇಲ್ಲದೇ ಹೋದ್ರೆ ನೀನು ಸಿಕ್ಕಿಕೊಳ್ಳಬೇಕಾಗುತ್ತೆ ಎಂಬುದು ಗೊತ್ತಿಲ್ಲವೇನು? ನಿನಗೆ ಮೊದಲೇ ಇವೆಲ್ಲಾ ಗೊತ್ತಿರಬೇಕು, ಜ್ಞಾಪಕ ಇರಬೇಕು.

ಡ್ರೈವರ್ : ಒಳಗೆಲ್ಲಾ ಏನಿದೆ ಅಂತ ಯಾಕೆ ನೋಡ್ಲಿ ಸ್ವಾಮೀ.

ಕ್ಷೇಮೇಂದ್ರ : ಈಗ ಚೆಕಿಂಗ್ ಬಂದಾಗ.

ಡ್ರೈವರ್ : ಈಗರ್ಥವಾಯ್ತು ಇನ್ನು ಮುಂದೆ ಹಾಗೆ ಮಾಡೋಲ್ಲ. ಸ್ವಾಮಿ... ತಪ್ಪಾಯ್ತು.

ಕ್ಷೇಮೇಂದ್ರ : ಈಗ ಏನು ಮಾಡ್ತೀಯೆ?

ಡ್ರೈವರ್ : ಈಗ ನೀವು ಏನು ಮಾಡ್ತೀರೋ ಮಾಡಿ ಸ್ವಾಮಿ.

ಕ್ಷೇಮೇಂದ್ರ : ಲಾರಿ sieze ಮಾಡಿದ್ದಾರೆ ಅಂತೇಳು... ನಿನ್ನ owner ಏನು ಹೇಳ್ತಾರೆ ಮತ್ತೆ ಕೇಳಿ ನೋಡು... ಇದಕ್ಕೆ sales bill ಕೊಡಬೇಕು. ಅದನ್ನು ಕೊಟ್ಟಿಲ್ಲ. ಸರ್ಕಾರಕ್ಕೆ ಕಟ್ಟುವ Tax ಕಟ್ಟಬೇಕಾಗುತ್ತ ಅಂತ ಇವೆಲ್ಲಾ ಮೋಸವೇನು? ಜನರೆಲ್ಲಾ ಹೀಗೆ ಮಾಡಿದ್ರೆ ದೇಶಕ್ಕೆ tax ಬರೋದು ಹ್ಯಾಗೆ? ನಮ್ಮ Department ಯಾಕಿರಬೇಕು? tax ತಪ್ಪಿಸಿಕೊಳ್ಳೋದ್ಕೆಲ್ಲಾ ಹೀಗೆ ಮಾಡಬೇಕು?

ಡ್ರೈವರ್ : ಆಯ್ತು ಸ್ವಾಮಿ ಮತ್ತೆ ವಿಚಾರ ಮಾಡಿ ನೋಡ್ತೀನಿ.

ಕ್ಷೇಮೇಂದ್ರ : (ಸ್ವಗತ) ವಿಷಯವನ್ನು Deputy comissinorಗೆ ತಿಳಿಸುವುದು ಉತ್ತಮ.

(ಫೋನ್ ಮಾಡುವ ಶಬ್ದ)

ಕ್ಷೇಮೇಂದ್ರ : ಹಲೋ...

ಕ್ಷೇಮೇಂದ್ರ : ನಾನು ಸಾರ್ ಕ್ಷೇಮೇಂದ್ರ.

ಬಾಸ್ : ಏನ್ರಿ Mr ಕ್ಷೇಮೇಂದ್ರ.

ಕ್ಷೇಮೇಂದ್ರ : ನಾನು ಚೆಕ್ ಪೋಸ್ಟ್‌ನಲ್ಲಿ ಒಂದು ಲಾರಿ ಹಿಡಿದಿದ್ದೇನೆ ಸಾರ್. ಅದರಲ್ಲಿ ೨೭೫ ಮೂಟೆ ಒಣಗಿದ ಮೀನು ಆಹಾರದ್ದು ಇತ್ತು. ಆದ್ರೆ sales biil ನಲ್ಲಿ ಮನುಷ್ಯರು ತಿನ್ನಾ ಒಣಗಿದ ಮೀನಿದೆ ಅಂತ ಬರೆದಿದ್ದಾನೆ. ಆದ್ರೆ ಅದು ೫೦,೦೦೦ ರೂಪಾಯಿನ ಮಾಲು ಸಾರ್. ೬,೫೦೦ ರೂಪಾಯಿ ಪೆನಾಲ್ಟಿ ಹೇಳಿದ್ದೇನೆ ಬತ್ತಾ ಇಲ್ಲ, owner ಒಪ್ತಾ ಇಲ್ಲ, ಹಾಗೂ ತರಿಸಿರೋ ಪಾರ್ಟಿನೂ ಒಪ್ತಾ ಇಲ್ಲ. ನಿಮ್ಮ ದಂಡದಷ್ಟು ಹಣಕ್ಕೂ ಮೂಟೆ ಇಳಿಸಿಕೊಳ್ಳಿ ಅಂತಾನೆ.

ಬಾಸ್ : ಈಗ ಅದನ್ನು ಹಿಡಿದು ನಮ್ಮಲ್ಲಿಡುವಂತಿಲ್ಲ, ವಾಸನೆ ಬೇರೆ, ಈಗ ನೀವು ಒಂದು ಕೆಲಸ ಮಾಡಿ.

ಕ್ಷೇಮೇಂದ್ರ : ಏನು ಹೇಳಿ ಸಾರ್.

ಬಾಸ್ : ಇದನ್ನು ವಾಣಿಜ್ಯ ತೆರಿಗೆ ಅಧಿಕಾರಿ ಗುಪ್ತ ವಾರ್ತೆ ರಾಯಚೂರು ವಿಭಾಗಕ್ಕೆ ನೀವು ತಿಳಿಸಿಬಿಟ್ಟು ಲಾರಿ ಬಿಟ್ಟು ಬಿಡಿ. ಅವರು ಮುಂದಿನ ಕ್ರಮ ತೆಗೆದುಕೊಳ್ತಾರೆ. ಅವರು ಅದನ್ನು ಕರ ನಿರ್ಧಾರಣಾಧಿಕಾರಿಯವರಿಗೆ ತಿಳಿಸ್ತಾರೆ, ಆಗ ಅವರು ಎಷ್ಟು tax ಕೊಡಬೇಕು ಫಿಕ್ಸ್ ಮಾಡ್ತಾರೆ, ಆಮೇಲೆ ಆತ ಕಟ್ತಾನೆ. ನಾನ್ಯಾಕೆ ಅದನ್ನು ಇಲ್ಲಿ ಇಟ್ಟುಕೊಂಡು ಅದನ್ನು Action ಮಾಡ್ಲಿ. ವ್ಯಾಪಾರಿಗಳಾರೂ ಬರದೇ ಹೋದ್ರೆ ಕಷ್ಟ, ಇಲ್ಲ ಆ ವ್ಯಾಪಾರನೂ ಇಲ್ಲ, ನಾನಾ ತೊಂದರೆಗಳಿಗೆ ಆಹ್ವಾನ ಮಾಡಿಕೊಳ್ಳಬೇಕು.

ಕ್ಷೇಮೇಂದ್ರ : ನಿಜ ಸಾರ್... ಇದನ್ನು ರಾಯಚೂರು ಹತ್ತಿರಕ್ಕೆ ಕಳುಹಿಸಿ ಅಲ್ಲಿ ಸರಿಯಾದ Action ತೆಗೆದುಕೊಳ್ಳುವುದು ಉತ್ತಮ. ಎಷ್ಟೇ ಆಗಲೀ ತಾವು ಅನುಭವಸ್ಥರು. ಅದರ ಸಾಧಕ ಬಾಧಕಗಳನ್ನು ತಿಳಿದವರು. ಆದ್ದರಿಂದಲೇ ತಮಗೆ ಫೋನ್ ಮಾಡಿದೆ.

ಬಾಸ್ : ಆಯ್ತು ಅಷ್ಟು ಮಾಡಿ ಏನಾಯ್ತು ಎಂಬುದನ್ನು ಆಮೇಲೆ ಬಂದು ತಿಳಿಸಿ, ಯಾಕೆ ಅಂಪ್ರೆ ಅದನ್ನು certify ಮಾಡೋಕೆ Food inspector ಗೆ ಬೇರೆ ತಿಳಿಸಿ confirm ಮಾಡಬೇಕು. ಅಷ್ಟೆಲ್ಲಾ complications ಯಾಕೆ?

ಕ್ಷೇಮೇಂದ್ರ : Yes sir...

(ಫೋನ್ ಇಡುವ ಶಬ್ದ)

ಕ್ಷೇಮೇಂದ್ರ : ಏನಪ್ಪಾ ಏನಾಯ್ತು?

ಡ್ರೈವರ್ : ಯಾರೂ ಒಪ್ತಾ ಇಲ್ಲ ಸ್ವಾಮಿ...

ಕ್ಷೇಮೇಂದ್ರ : ಈಗ ಈ ನೋಟೀಸ್ ತೆಗೆದುಕೋ... ಇದಕ್ಕೆ tax ಆಗುತ್ತೆ. ರಾಯಚೂರಿನಲ್ಲಿ C.T.O Intelliggence ಏನು ಮಾಡಬೇಕು ಅಂತ ನಮಗೆ ಹೇಳ್ತಾರೆ. ಆಮೇಲೆ ಕರ ನಿರ್ಧಾರಣಾಧಿಕಾರಿ ಎಷ್ಟು tax ಕಟ್ಟಬೇಕು ಅಂತ ಹೇಳ್ತಾರೆ. ಆಮೇಲೆ ಕಟ್ಟುವೆಯಂತೆ.

ಡ್ರೈವರ್ : ಆಯ್ತು ಸಾರ್.

(ಲಾರಿ ಹೊರಡುವುದು)

ಕ್ಷೇಮೇಂದ್ರ : ನಮಸ್ಕಾರ ಸಾರ್.

ಬಾಸ್ : ಓ... ಬನ್ನಿ ಕ್ಷೇಮೇಂದ್ರ. ಏನಾಯ್ತು ಈ ಹೊತ್ತು ಫೋನ್ ಮಾಡಿದ್ದದು?

ಕ್ಷೇಮೇಂದ್ರ : ಅವರು ಒಪ್ಪಲಿಲ್ಲ ಸಾರ್. ತಮ್ಮ ನಿರ್ದೇಶನದಂತೆ ರಾಯಚೂರು C.T.O Intelliggenceಗೆ ಫೋನ್ ಮಾಡಿ ವ್ಯಾಪಾರಿ... ತೆರಿಗೆಯ ವಸ್ತುವನ್ನು ಕಳುಹಿಸಿದ್ದಾರೆ, ಆದರೆ ಮನುಷ್ಯರು ತಿನ್ನುವ ಒಣ ಮೀನು ಅಂತ ಸುಳ್ಳು ಹೇಳಿ Tax ತಪ್ಪಿಸಿಕೊಳ್ಳಲಿಕ್ಕೆ ಮಾಡ್ತಿದ್ದಾರೆ. ಅದನ್ನು ಸೂಕ್ತ ರೀತಿಯಲ್ಲಿ ತನಿಖೆ ನಡೆಸಿ, ಆ ವಸ್ತುವಿನ ಮೇಲೆ tax ಮತ್ತು ದಂಡ ಎಷ್ಟು ಹಾಕಬೇಕು ಅನ್ನುವುದನ್ನು ಕರನಿರ್ಧಾರಣಾಧಿಕಾರಿಗಳು ನಿರ್ಧಾರ ಮಾಡಿ ಹಾಕಬೇಕು ಅಂತ ತಿಳಿಸಿದ್ದೇನೆ.

ಬಾಸ್ : ಒಳ್ಳೆ ಕೆಲಸ ಮಾಡಿದ್ರಿ... ಕ್ಷೇಮೇಂದ್ರ ವ್ಯಾಪಾರಿಗಳು ಅಷ್ಟೊಂದು ದಡ್ಡರಲ್ಲ, ಇಂಥ ವ್ಯಾಪಾರಿಗಳಲ್ಲಿ ಪಳಗಿದವರು ಸರ್ಕಾರಕ್ಕೆ ಮೋಸ

ಮಾಡುವುದನ್ನು ಸುಲಭವಾಗಿ ಕಲ್ತಿದ್ದಾರೆ. ಆವರಿಗೆ ಗೊತ್ತು ರಾಯಚೂರಿನಲ್ಲಿ ಅಥವಾ... ಗುಲ್ಬರ್ಗದಲ್ಲಿ ಈ ಒಣ ಮೀನಿನ ವ್ಯಾಪಾರ ಆಗೋದಿಲ್ಲ ಅಂತ. ನಾವು ಹೀಡಿದುಕೊಂಡ್ರು ಜಾಗ ಇಲ್ಲ. ಜಾಗ ಇದ್ರೂ ಅದರ ವಾಸನೆ... ಅದನ್ನು ಇಟ್ಟುಕೊಳ್ಳುವುದಿಲ್ಲ, ಇಟ್ಟುಕೊಂಡ್ರು ಅದನ್ನು ೧೦ ದಿನಗಳಲ್ಲಿ Action ಮಾಡಬೇಕು, ಮಾಡದೇ ಹೋದ್ರೆ... ಆಗದೆ ಹೋದ್ರೆ ಏನು ಮಾಡೋದು? ಎಲ್ಲವನ್ನು ಎಸೆಯಬೇಕಾಗುತ್ತದೆ. ಲಾರಿ ಹಿಡಿದುಕೊಂಡ್ರೂ... ಹೆಚ್ಚಿಗೆ ದಿನವಾದ್ರೆ... ಅದಕ್ಕೆ ೨% ನಂತೆ ಬಾಡಿಗೆ ಕೊಡಬೇಕಾಗುತ್ತೆ. ಆದ್ದರಿಂದ ಬಿಟ್ಟು ಬಿಡ್ತಾರೆ ಎಂಬ ಎಂಬ ಖಾತ್ರಿಯಿಂದಲೇ ಬೇಡ ಮೂಟೇನೇ ಇಳಿಸಿಕೊಳ್ಳಿ ಅಂತಾರೆ ಅವರು ಅದಕ್ಕೆಲ್ಲಾ ಹೆದ್ರದಿಲ್ಲಪ್ಪಾ. ಅವರು ಮಾನಾಪಮಾನ ಎಲ್ಲವನ್ನು ಭದ್ರವಾಗಿ ವಾಣಿಜ್ಯ ತೆರಿಗೆ ಅಧಿಕಾರಿ ಗುಪ್ತದಳದವರು check ಮಾಡಿ ದಂಡ ಹಾಕಿ ಕಳುಹಿಸ್ತಾರೆ, ಆಮೇಲೆ ಕರ ನಿರ್ಧಾರಣಾಧಿಕಾರಿ Tax ಎಷ್ಟು ಹಾಕಬೇಕೋ ಅಷ್ಟು ಹಾಕ್ತಾರೆ. ಆತ ಇಲ್ಲಿ ತಪ್ಪಿಸಿಕೊಂಡು ಹೋಗುಬಹುದು, ಆದ್ರೆ ಅಲ್ಲಿ ತಪ್ಪಿಸಿಕೊಳ್ಳಲಿಕ್ಕಾಗೋಲ್ಲ.

ಕ್ಷೇಮೇಂದ್ರ : ಆದ್ರೆ ನಮಗೆ Dupe ಮಾಡ್ತಾರೆ,

ಬಾಸ್ : ಡ್ಯೂಪ್ ಏನು, ಎಂದೂ ಮೋಸ ಮಾಡಲಿಕ್ಕಾಗದು ಎಲ್ಲೋ ಒಂದು ದಿನ ಕಣ್ಣು ಮರೆಸಿ ಮಾಡಬಹುದು. ನಾವುಗಳು ಸರಿಯಾಗಿ ಕಾನೂನು ಪ್ರಕಾರ ಮಾಡಿದ್ರೆ ಆತನಿಗೆ ತುಂಬಾ ಕಷ್ಟವಾಗುತ್ತೆ. ಹತ್ತು ದಿನ ಕದ್ದವನು ಒಂದು ದಿನ ಸಿಗೋಲ್ವೆ? ಮೊದಲು ಪೋಸ್ಟನಲ್ಲಿ ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿಯ ಕೈಯಿಂದ, ಶೋಧನಾ ಠಾಣೆಯಿಂದ ಜಾರಿಕೊಂಡು ಹೋದ್ರೆ ಗೆದ್ದೆ ಅಂತ್ಲೇನು ಅಲ್ಲ. ಇದು ಮೊದಲನೇ ಹಂತ. ಎರಡನೆ ಹಂತ ಗುಪ್ತವಾರ್ತೆಯ ವಾಣಿಜ್ಯ ತೆರಿಗೆ ಅಧಿಕಾರಿಯ ಕಣ್ಣುತಪ್ಪಿಸಬೇಕು. ಆಮೇಲೆ ಕರ ನಿರ್ಧಾರಣಾಧಿಕಾರಿಯ ಕಣ್ಣು ತಪ್ಪಿಸಬೇಕು. ಎಲ್ಲಾಗುತ್ತೆ? ಒಂದು ಜಾಗದಲ್ಲಿ ನ್ಯಾಯವಾಗಿ Tax ಮತ್ತು ದಂಡ ಕೊಟ್ರೆ ಸರಿ, ಇಲ್ಲದೇ ಹೋದ್ರೆ ದಂಡ ಹೆಚ್ಚು ವಿಧಿಸಲಾಗುತ್ತೆ.

ಕ್ಷೇಮೇಂದ್ರ : ಸಿಕ್ಕಿದಾಗ ತುಂಬಾ ಅನಿವಾರ್ಯ ಅಂದಾಗ ಕೆಡುವುದು, ಇಲ್ಲದಿದ್ದರೆ ಏನೋ ಅಷ್ಟು ಇಷ್ಟು ಕೊಟ್ಟು ಹೊರಟೋದ್ರಾಯ್ತು ಎಂಬ ಮನೋಭಾವವನ್ನೇ ಬೆಳಸಿಕೊಂಡಿರ್ತಾರೆ.

ಬಾಸ್ : ಅದಕ್ಕೆ ನಾವು ಕೈಯೊಡ್ಡಬಾರದು, ಆಗ ಎಲ್ಲಿ ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯ ದೇಶಕ್ಕೆ Tax ಬರುತ್ತೆ ದೇಶ ಆರ್ಥಿಕವಾಗಿ ಹಿಂದುಳಿಯುವುದೂ ಇಲ್ಲ.

ಕ್ಷೇಮೇಂದ್ರ : ತಾವು ಹೇಳೋದು ನೂರಕ್ಕೆ ನೂರು ಪಾಲು ಸತ್ಯ ಸಾರ್. ನಾವು ಪ್ರಾಮಾಣಿಕವಾಗಿ ಕೆಲಸ ಮಾಡಬೇಕು, ಆಗ ಅಂಥ ಕಳ್ಳಬಂಧಿಯರನ್ನು ಹಿಡಿದು ದೇಶಕ್ಕೆ ಬರೋ Tax ವಸೂಲು ಮಾಡಬಹುದು.

ಬಾಸ್ : Exactly. ಮುಂದಿನ ಅನ್ವೇಷಣೆ.

ಕ್ಷೇಮೇಂದ್ರ : ಮನರಂಜನಾ ತೆರಿಗೆಯ ಬಗೆಗೆ ಸ್ವಲ್ಪ ನಿಗಾ ಇರಬೇಕೆಂತಲೇ ಸಾರ್.

ಬಾಸ್ : Yes proceed...

ಕ್ಷೇಮೇಂದ್ರ : Okay sir.

* * *

## ದೃಶ್ಯ ೬

ಕ್ಷೇಮೇಂದ್ರ : ಓ... ಸುಬ್ಬು... ಅಲ್ವಾ...?

ಸುಬ್ಬು : ಯಾಕೆ ಅನುಮಾನ್ವೇ ಕ್ಷೇಮೇಂದ್ರಾ?

ಕ್ಷೇಮೇಂದ್ರ : ಎಷ್ಟು ದಿನಗಳಾಯ್ತು ನೋಡಿ... ಕಾಲೇಜಿನಲ್ಲಿ ಓದುವಾಗ ನೋಡಿದ್ದು ಆಮೇಲೆ ಭೇಟೀನೇ ಇಲ್ಲ.

ಸುಬ್ಬು : ಎಲ್ಲಾ ಅಷ್ಟೇ ಕಣಯ್ಯಾ... ಓದು ಆದ ಮೇಲೆ ಯಾರು ಯಾರು ಎಲ್ಲಿ ಎಲ್ಲೋ ಜೀವನೋಪಾಯಕ್ಕೆ ಹೋಗಬೇಕಲ್ಲಾ... ಹೊಟ್ಟೆ ಪಟ್ಟಣ ಕೇಳಬೇಕಲ್ಲಪ್ಪಾ.

ಕ್ಷೇಮೇಂದ್ರ : ಅಂದ ಹಾಗೆ ನೀನು...

ಸುಬ್ಬು : ನಾನು... ಏನೋ... ಒಂದು ಸಿನೇಮಾ ಥಿಯೇಟರ್ ಮಾಡಿಕೊಂಡು, ಸ್ವಂತ ಉದ್ಯೋಗ ಹಿಡಿದಪ್ಪಿಯಪ್ಪಾ.

ಕ್ಷೇಮೇಂದ್ರ : ಚಲೋ ಆಯ್ತು ಬಿಡು, ನಿನಗಿಂತ ಸುಖಿ ಯಾರೂ ಇಲ್ಲ.

ಸುಬ್ಬು : ಸಿನಿಮಾ ಥಿಯೇಟರ್ ಓನರ್ ಅಂದ್ರೆ ಸಾಮಾನ್ಯವೇ? ಲಕ್ಷ್ಮೀಪುತ್ರ ಇದ್ದ ಹಾಗೆ.

ಸುಬ್ಬು : ಅಲ್ಲಿರೋ ಕಷ್ಟ ನಿನಗೇನು ಗೊತ್ತು ಬಿಡಯ್ಯಾ, ಅದ್ಕೇ ಇತ್ತೀಚೆಗೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಿನೀಮಾ ಥಿಯೇಟರ್ ಹೊಡೆದು ಹಾಕಿ complex ಮಾಡ್ತಿದ್ದಾರೆ.

ಕ್ಷೇಮೇಂದ್ರ : ಯಾಕೋ?

ಸುಬ್ಬು : ನಿನಗೆ ಗೊತ್ತಿಲ್ಲ ಬಿಡು ದೂರದ ಬೆಟ್ಟ ನುಣ್ಣಗೆ ಅಂತ ತಿಳ್ಕೊಂಡಿರ್ತೀರಪ್ಪಾ ನೀವು.

ಕ್ಷೇಮೇಂದ್ರ : ಅಂತ ಕಷ್ಟ ಏನಪ್ಪಾ ನಿಮಗೆ?

ಸುಬ್ಬು : ಅದರಲ್ಲೂ ನಮ್ಮಂಥವರಿಗೆ ಬಲು ಕಷ್ಟ ಬಿಡಪ್ಪಾ. ನ್ಯಾಯ ನಿಷ್ಠೆ ಅಂತ, Rules Regulations ಅಂತ fallow ಮಾಡ್ಕೊಂಡು ಹೋಗ್ತಿದ್ರೆ ಎಲ್ಲಾಗುತ್ತೆ ದುಡ್ಡು? ಅದನ್ನ Maintain ಮಾಡಲಿಕ್ಕಾಗೋಲ್ಲ ಕಣಯ್ಯ. ಅದ್ಕೇ ಯಾರಿಗೆ ಬೇಕು ಈ Owner ship ಅನ್ನಿಸಿ ಬಿಡುತ್ತೆ.

ಕ್ಷೇಮೇಂದ್ರ : ನೀನು Educated ಆಗಿದ್ದೂ ಹೇಳ್ತೀಯಲ್ಲಾ ಕಾನೂನು, ಕಾನೂನು ಸಂಪಾದನೆಯನ್ನು ಪ್ರತಿಯೊಬ್ಬರೂ ಮಾಡಲೆಬೇಕು.

ಸುಬ್ಬು : ಹಾಗೆ ಮಾಡಿಕೊಂಡ್ಹೋದ್ರೆ... ಆತನಿಗೆ ಲಾಭ ಎಲ್ಲಿ ಬರುತ್ತೇ? ಮನೆ ಮೇಲೆ ಮನೆ ಕಟ್ಟಲಿಕ್ಕೆಲ್ಲಾಗುತ್ತಾ? ಕಾರು, ಬಂಗ್ಲೆ, ಭವ್ಯ ಜೀವನ ನಡಿಸಲಿಕ್ಕೆಲ್ಲಾಗುತ್ತಾ? ಅರಳಿ ಎಲ್ಲಾ Rules ಮುರೀತಾರೆ...

ಕ್ಷೇಮೇಂದ್ರ : ಅಂದ್ರೆ... ಮನರಂಜನಾ ತೆರಿಗೆ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡ್ತಾರೆ ಅನ್ನು...

ಸುಬ್ಬು : ಗೊತ್ತಿದ್ದೂ ಕೇಳ್ತಿಯಲ್ಲಾ... ನಾನು ಯಾಕೆ ಈ ಮಾತನ್ನು ಹೇಳಲಿಕ್ಕೆ ಬಂದೇ ಅಂತೀಯೋ...

ಕ್ಷೇಮೇಂದ್ರ : ಆ ರೀತಿ ಪ್ರಯತ್ನ ಮಾಡಿ ಸಾಹುಕಾರರಾಗಿರುವವರನ್ನು ನೋಡಿದ ಮೇಲೆ.

ಸುಬ್ಬು : Exactly.

ಕ್ಷೇಮೇಂದ್ರ : ಏನು ಸ್ವಲ್ಪ ನನಗೂ ಹೇಳಲಿಕ್ಕಾಗೋಲ್ವೇ?

ಸುಬ್ಬು : ಯಾಕೆ ನೀನು ಸಿನಿಮಾ ಥಿಯೇಟರ್ ಇಡಬೇಕು ಅಂತಿದ್ದಿಯೋ...?

ಕ್ಷೇಮೇಂದ್ರ : ಅಯ್ಯೋ ನಮ್ಮಂಥ ಬಡವರಿಗೆಲ್ಲಿ ಸಾಧ್ಯ ಬಿಡಪ್ಪಾ.

ಸುಬ್ಬು : ಇಲ್ಲ; ಸಿನಿಮಾ ತೆಗಿಬೇಕು ಅಂತಿದ್ದಿಯೋ...

ಕ್ಷೇಮೇಂದ್ರ : ಏನೋ ಗಾದೆ ಹೇಳ್ತಾರಲ್ಲಾ ಹಾಗಾಯ್ತು ಬಿಡಪ್ಪಾ... ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು ಅಂದ ಹಾಗಾಗುತ್ತೆ. ನಾನು ಸಿನೇಮಾ ತೆಗೆಯೋದೇ? ಸಿನೇಮಾ ತೆಗೆಯುವವನಿಗೆ ಎಲ್ಲಿ ಬರುತ್ತೆ ಹಣ? ಎಲ್ಲರಿಗೂ ಹಣ ಕೊಟ್ಟು ಆಮೇಲೆ ಜಪತಪಿಸಬೇಕಾಗುತ್ತೆ ಅಂತಾರೆ...

ಸುಬ್ಬು : ಸರಿಯಾಗಿ ಗ್ರಹಿಸಿದ್ದೀಯೆ ಬಿಡು. ಎಷ್ಟೋ ಜನ ನಿರ್ಮಾಪಕರು ಸಿನೇಮಾ ನಡೆಸ್ತಾರೆ ಥಿಯೇಟರ್ ಬಾಡಿಗೆ ಕೊಟ್ಟು. ಕೆಲವರು prestigeಗೋಸ್ಕರ ಒಂದು ವಾರ ನಡಿಸ್ತೀನಿ ಅಂತೇಳಿ...ಥಿಯೇಟರ್ ಬಾಡಿಗೆ ಕೊಡಲಾರದೆ Film ಡಬ್ಬ ತೆಗೆದುಕೊಂಡು ಹೋಗ್ತಾರ್‍ರು... ಅಂಥವ್ರನ್ನೆಲ್ಲಾ ನೋಡಿದ್ದೀನಪ್ಪಾ.

ಕ್ಷೇಮೇಂದ್ರ : ಅಲ್ಲಾ ಒಂದೊಂದು ಸಿನೆಮಾ ಬೇಕಾದಷ್ಟೂ ದಿನಗಳು ನಡೆದ್ರೂ...ಲಾಭ ನೋಡಿದ್ರೆ ಅಷ್ಟೇ ಅಂತಾ ಹೇಳ್ತಾರೆ producers...

ಸುಬ್ಬು : ಅದೆಲ್ಲಾ ಒಂದು ದೊಡ್ಡ ಕಥೆ ಬಿಡಪ್ಪಾ... ಅದು ನಾನಾ ಜನರ ಪಾಲಾಗುತ್ತೇ Distributor, ನಿಜವಾಗಿ ಹೇಳಬೇಕು ಅಂದ್ರೆ Theatre owner, ಇವರ್ಗಲ್ಲಾ ಮೋಸ ಮಾಡ್ತಾರೆ. ಕೊನೆಗೆ ಅನುಭವಿಸುವವ producer. ನಾನು ಯಾಕೆ ಈ ಮಾತು ಹೇಳಲಿಕ್ಕೆ ಬಂದ ಅಂದ್ರೆ ದಿನನಿತ್ಯ ನೋಡ್ತಿರೋದ್ರಿಂದ, ಜನ ಮೋಸ ಮಾಡ್ತಿರೋದ್ರಿಂದ.

ಕ್ಷೇಮೇಂದ್ರ : ಟಿಕೆಟ್ ಕೊಡ್ತಾರಲ್ಲಾ... ಅವನ್ನೂ ಹ್ಯಾಗೆ ಮೋಸ ಮಾಡ್ತಾರೆ?

ಸುಬ್ಬು : ಸರಿಯಾದ ಟಿಕೆಟ್ ಕೊಡ್ತೀರಾ...?

ಕ್ಷೇಮೇಂದ್ರ : House full ಅಂತ ಬೋರ್ಡ್ ಇರ್ತಾದೆ.

ಸುಬ್ಬು : ಅದೆಲ್ಲಾ ಒಂದೊಂದು ರೀತಿ Dupe ಬಿಡು. ಒಂದು ರೀತಿಯಲ್ಲಿ ಹೇಳೋದಾದ್ರೆ, Stunt, Tickets Block Market ಮಾಡೋದಕ್ಕೆ.

ಕ್ಷೇಮೇಂದ್ರ : ಬ್ಲಾಕ್...

ಸುಬ್ಬು : ಅದ್ಕೇ... ಅಪ್ಪಾ... ಅನೇಕ ನಾಟಕಗಳು ಮೋಸ! ಮನರಂಜನೆ ತೆರಿಗೆ ತಪ್ಪಿಸಿಕೊಳ್ಳಲಿಕ್ಕೆ.

ಕ್ಷೇಮೇಂದ್ರ : ಈಗ ಅದನ್ನು ಅಂದ್ರೆ Tickets ಗಳನ್ನು ಮನರಂಜನಾ ತೆರಿಗೆ ಇಲಾಖೆಯಿಂದ ಸೀಲ್ ಹಾಕಿಸಿ ಆಮೇಲೆ ತಾನೇ ಕೊಡಬೇಕು. ಜನಗಳಿಗೆ ಅದು ಹ್ಯಾಗೆ ಮೋಸ ಮಾಡಲಿಕ್ಕೆ ಸಾಧ್ಯ ಸರಕಾರಕ್ಕೆ?

ಸುಬ್ಬು : ಅದೇ ನಿನಗೆ ಗೊತ್ತಿರೋದು. ನಾನು ಯಾಕೆ ಈ ಮಾತು ಹೇಳಲಿಕ್ಕೆ ಬಂದೆ ಅಂದ್ರೆ...

ಕ್ಷೇಮೇಂದ್ರ : ಜನಗಳು... ಅವರ ಕಣ್ಣಿಗೆ ಮಣ್ಣೆರಚುವ ಕೆಲಸ ಮಾಡೋದಕ್ಕೆ...

ಸುಬ್ಬು : ಇದಕ್ಕೆ ನ್ಯಾಯವಾಗಿ ಆಯಾ ವಿಭಾಗದ ಮನರಂಜನಾ ತೆರಿಗೆ ಇಲಾಖೆಯಿಂದ ಟಿಕೆಟ್‌ಗಳ ಮೇಲೆ Seal ಆಗಬೇಕು. ಅದೂ ಅವರದೇ ಆದ ಇಂಕ್ ಇರುತ್ತೆ. ಬೇರೆ ಕಡೆ ಸಿಗೋಲ್ಲ. ಮೂರು ಕಡೆ ಆ ಸೀಲ್ ಆಗಬೇಕು. ಆಗ ಬೇರ ಟಿಕೆಟ್‌ಗೆ ತಮ್ಮ ಸೀಲ್ ಹಾಕಿಯೂ ಟಿಕೆಟ್ ಮಾಟೋರಾರದು ಇದಕ್ಕೆ Parellel Ticket ಅಂತಾರೆ.

ಕ್ಷೇಮೇಂದ್ರ : ಸಿಕ್ಕಿ ಹಾಕಿ ಕೊಂಡ್ರೆ ಮನರಂಜನಾ ತೆರಿಗೆ ಅಧಿಕಾರಿ ಕೈಗೆ.

ಸುಬ್ಬು : ಅಯ್ಯೋ ಅವರೊಬ್ಬರೇ ಏನು ಕಾರ್ಪೊರೇಷನ್‌ನವರು ಬರಬಹುದು, ತಹಸಿಲ್‌ದಾರರು ಬರಬಹುದು, ಸಬ್‌ಇನ್‌ಸ್ಪೆಕ್ಟರ್ ಬರಬಹುದು, Commercial Tax officer ಸಹಾಯಕ ವಾಣಿಜ್ಯ ತೆರಿಗೆ ಅಧಿಕಾರಿ ಚಲಿಸುವ ದಳ ಬರಬಹುದು, ಇವರ ಕಣ್ಣನ್ನೆಲ್ಲಾ ತಪ್ಪಿಸಬೇಕಾಗುತ್ತೆ. ಆಗ ನಾನಾ ಉಪಾಯಗಳನ್ನು ಹುಡುಕ್ತಾರಪ್ಪಾ.

ಕ್ಷೇಮೇಂದ್ರ : ಈಗ ಟಿಕೆಟ್‌ಗಳನ್ನು ಒಂದು ಷೋಗಪ್ಪಾ, ಅಷ್ಟಕ್ಕೇ ಸೀಲ್ ಹಾಕಿಸಿಕೊಂಡು ಬರಬೇಕಲ್ಲಾ.

ಸುಬ್ಬು : ಹಾಗೇನಿಲ್ಲ; ಅದಕ್ಕೇಪ್ಪಾ ಈ ಆಟ ನಾವು Deposit ಇತ್ತಿಲ್ಲೇ ಅಷ್ಟು Ticket Seal ಹಾಕಿಸಿಕೊಂಡು ಬರಬಹುದು. ಪುನಾ ಹೋಗುವ ಹಾಗಿಲ್ಲ. ಒಂದು ಲಕ್ಷ್ಮಣರಾಯನ Ticket Seal ಹಾಕಿಸಬೇಕಾದ್ರೆ ೭೫ ಸಾವಿರ Deposit ಇಡಬೇಕು. NSC ಕೊಡಬೇಕು, ಇಲ್ಲ Bank guarantee ಕೊಡಬೇಕಾಗುತ್ತೆ. ಅದ್ನೆಲ್ಲಾ ಯಾರು ಮಾಡಲಿಕ್ಕೆ ಹೋಗ್ತಾರೆ, ನಾನು ಯಾಕೆ ಈ ಮಾತು ಹೇಳಲಿಕ್ಕೆ ಬಂದ ಅಂದ್ರೆ Advance ಹಣ ಕಟ್ಟಿ ಸರಿಯಾದ Tax ಕಟ್ಟಿ ಬಿಟ್ರೆ ಸರ್ಕಾರಕ್ಕೆ ಬೇಕಾದಷ್ಟು ಟ್ಯಾಕ್ಸ್ ಬಂದು ಬಿಡುತ್ತೆ. ಆದ್ರೆ ಇದರಲ್ಲಿ ರೋಲ್ ಮಾಡಿ ಸಾಹುಕಾರರಾಗ್ತಾರೆ... ಗಾದೇ ಹೇಳೋಲ್ವೇ ಕಾಯುವವ ಹೆಚ್ಚೋ ಕಳುವವ ಹೆಚ್ಚೋ ಅಂತ, ಹಾಗೆ ನಾನಾ ದಾರಿಯನ್ನು ಕಂಡುಕೊಂಡಿರ್ತಾರೆ. ಇದರ ಬಗ್ಗೆ ಹೇಳಿದ್ರೆ ಅದೇ ಒಂದು ದೊಡ್ಡ ಕಥೆಯಾಗುತ್ತೆ, ಅದು ಹೇಳಿ ನಿನಗೇನು ಪ್ರಯೋಜನ ಅಂತ.

ಕ್ಷೇಮೇಂದ್ರ : ಪ್ರಯೋಜನವಿದೆ ಹೇಳಯ್ಯಾ ನಿನ್ನಂಥ ಪ್ರಾಮಾಣಿಕರು ಎಷ್ಟು ಜನ ಇರ್ತಾರೆ?

ಸುಬ್ಬು : ಅಂದಹಾಗೆ... ನೀನು... ಏನು ಕೆಲಸ ಮಾಡ್ತಿದ್ದೀಯಪ್ಪಾ?

ಕ್ಷೇಮೇಂದ್ರ : A C T O

ಸುಬ್ಬು : ಎಲಾ ನಿನ್ನ ಮೊದ್ಲೇ ಹೇಳಬಾರದಾ ಏನು ಅಂತಾ? ಎಲ್ಲಾ ಹೇಳಿ ಬಿಟ್ನಲ್ಲಾ. ನನಗೇನು ಭಯವಿಲ್ಲ ಬಿಡು. ಮೋಸ ಮಾಡುವವರಿಗೆ... ನಿಮ್ಮಂಥವರು ಈ ಜಾಲಗಳನ್ನೆಲ್ಲಾ ತಿಳಿದಿರಬೇಕು ಬಿಡು. ಈಗಾಗ್ಲೇ ಇಂಥ ಮೋಸದ ಪ್ರಕರಣಗಳನ್ನು ಎಷ್ಟು ನೋಡಿಲ್ಲಾ. ನಾನು ಹೇಳೋದು ಅಂದ್ರೆ ಆರು ಹೆತ್ತವಳಿಗೆ ಮೂರು ಹೆತ್ತವಳು ಬಟ್ಟು ಇಡಲಿಕ್ಕೆ ಬಂದಳು ಅಂದ ಹಾಗಾಗುತ್ತೆ ಅಷ್ಟೆ.

ಕ್ಷೇಮೇಂದ್ರ : ಹಾಗೇನಿಲ್ಲಪ್ಪಾ. ಹೊಸ ಹೊಸ ವಿಷಯಗಳನ್ನು ಅನುಭವಗಳಿಂದ ತಿಳಿದುಕೊಂಡ್ರೆ ಒಳ್ಳೆಯದು.

ಸುಬ್ಬು : ಖಂಡಿತ...

ಕ್ಷೇಮೇಂದ್ರ : ಅದಕ್ಕೇ ಆಯಾ ಕ್ಷೇತ್ರದಲ್ಲಿ ನಡೆಯುವ ವಿಚಾರಗಳನ್ನು ತಿಳಿದುಕೊಳ್ಳುವುದು ಉತ್ತಮ!

ಸುಬ್ಬು : ನನಗೇನೂ ಭಯವಿಲ್ಲ, ನಾನು ಆ ರೀತಿ ಕೆಲಸ ಮಾಡಿಸಲಿಕ್ಕೆ ಹೋಗೋಲ್ಲ. ಬಂದಷ್ಟು ಲಾಭ ಸಾಕು ಎಷ್ಟು ಅಂತ ಸಂಪಾದ್ನೆ ಮಾಡ್ತೀಯಪ್ಪಾ, ಸಾಯುವಾಗ ನಾವೇನು ಹೊತ್ತುಕೊಂಡು ಹೋಗೋದು-

ಸುಬ್ಬು : ತಾಲ್ಲೂಕುಗಳಲ್ಲಿ ಟೂರಿಂಗ್ ಟೆಂಟ್‌ಗಳಲ್ಲಿ ಮೂರು ಷೋ ಮಾಡಿದ್ರೂ ಎರಡು ಷೋ ಮಾಡಿದ್ದು ಅಂತ ಲೆಕ್ಕ ತೋರಿಸಿ ಮೋಸ ಮಾಡ್ತಾರೆ. ಹಿಂದಿ, ಇಂಗ್ಲೀಷ್, ಬೇರೆ ಭಾಷೆ ಚಿತ್ರ ತೋರಿಸಿದ್ರೂ ಕನ್ನಡ ಅಂತ ಲೆಕ್ಕದಲ್ಲಿ ತೋರಿಸ್ತಾರೆ, ಯಾಕೆ ಅಂದ್ರೆ ಅದಕ್ಕೆ ೫೦% Tax Free ಇರುತ್ತೆ. ಇವೆಲ್ಲಾ ನಿನ್ನ ಅನುಭವಕ್ಕೆ ಬಂದಿರಬಹುದು. ನಾನು ಯಾಕೆ ಹೇಳಲಿಕ್ಕೆ ಬಂದೆ ಅಂದ್ರೆ ಇಂಥ ವಿಷಯಗಳನ್ನು ಕೇಳಿ ನೋಡಿ ಬೇಜಾರಾಗಿ ಹೋಗಿದೆ.

ಕ್ಷೇಮೇಂದ್ರ : ನಿನ್ನಂಥವ್ರು ಎಷ್ಟು ಜನರು ಬಿಡಯ್ಯಾ.

ಸುಬ್ಬು : ಏನೇ ಅಗ್ಲೀ ಅಂಥವರ ಸದೆ ಬಡೆಯಲ್ಲೇ ಬೇಕು ಬಿಡು. ನಿನಗೆ ಹೇಳಿದ್ದು ಒಂದು ರೀತಿಯಲ್ಲಿ ಸಂತೋಷವೇ ಆಯ್ತು Investigation ಮಾಡ್ರಿ...

ಕ್ಷೇಮೇಂದ್ರ : ಮಾಡ್ಲೇ ಬೇಕು... ನಾವು ಇರೋದೇ ಅದ್ಕೇ ತಾನೇ.

ಸುಬ್ಬು : ನಿನ್ನ ಅನುಭವ ಹೇಳು ಸ್ವಲ್ಪ.

ಕ್ಷೇಮೇಂದ್ರ : ಹೇಳ್ತೀನಿ ಕೇಳು, ಈಗ್ತಾನೆ ಒಂದು Surprise visit ಕೊಟ್ಟು ಬರ್ತಿದ್ದೀನಿ.

(Flash back music)

(ಸಿನೆಮಾ ಥಿಯೇಟರ್ ಜನರ ಗದ್ದಲ)

(ಜೀಪ್ ಬಂದು ನಿಲ್ಲುವ ಶಬ್ದ)

ಮ್ಯಾನೇಜರ್ : ಓ... ಬನ್ನಿ ಸಾರ್... ಬನ್ನಿ...

ಕ್ಷೇಮೇಂದ್ರ : Gate keeper ಎಷ್ಟೋ ಜನರಿಗೆ ಟಿಕಟ್ ಕೊಡದೇ ಹಾಗೇ ಜನರನ್ನು ಥಿಯೇಟರ್ ಒಳಗೆ ಬಿಟ್ಟಿದ್ದಾರಲ್ರೀ... ಇದೆಲ್ಲಾ ನೀವೇ ಹೇಳಿ ಮಾಡಿಸ್ತಿರೋದು ಅನ್ನೊದು ಖಾತ್ರಿಯಾಗುತ್ತೆ.

ಮ್ಯಾನೇಜರ್ : ಇಲ್ಲ ಸಾರ್.

ಕ್ಷೇಮೇಂದ್ರ : ಪಾಪ ಆ ಮುಗ್ಧ ಜನರು ಹಳ್ಳಿಯವರು ಸಿನಮಾ ನೋಡಬೇಕು ಅನ್ನೋ ಆತ್ರದಲ್ಲಿ ಹೊರಟು ಬಿಡ್ತಾರೆ. ಅದನ್ನು ತೆಗೆದುಕೊಳ್ಳದೇ ಫೈನಾಗುತ್ತೆ ಅನ್ನೋದು ಗೊತ್ತಿಲ್ಲದೆ. ಈ ಹೊತ್ತು ಕಣ್ಣು ಕಣ್ಣು ಬಾಯಿ ಬಾಯಿ ಬಿಡ್ತಿದ್ದರು. ನಮಗೆ ಗೊತ್ತಿಲ್ಲ ಸ್ವಾಮಿ, ಟಿಕೆಟ್ ಕೊಟ್ಟು ನಡೆ ಅಂದ್ರು ಒಳಗೆ ಬಂದೋ ಅಂದ್ರು. ನಾನು ಅವರಿಗೆ ತಿಳಿಯ ಹೇಳಬೇಕಾಯ್ತು. ಅರ್ಧ ಟಿಕೆಟ್ ಇಲ್ಲದೆ ಒಳಗೆ ಹೋಗಬಾರದು ಅಂತ.

ಮ್ಯಾನೇಜರ್ : ಅದು ಗೇಟ್ ಕೀಪರ್‌ದೇ ಇರಬೇಕು ಸಾರ್. ನಮ್ಮ ಗಮನಕ್ಕೆ ಬಂದಿಲ್ಲ.

ಕ್ಷೇಮೇಂದ್ರ : ನೀವು ನೋಡಬೇಕು. ಅದನ್ನೇ ಮತ್ತೆ Resale ಮಾಡಬಹುದು ಅಂತ್ಲಾ?

ಮ್ಯಾನೇಜರ್ : ಆಯ್ತು ಸಾರ್ ಇನ್ನು ಮೇಲೆ ನೋಡ್ತೀವಿ.

ಕ್ಷೇಮೇಂದ್ರ : ನಡೀರಿ... ಅಲ್ರೀ... ನಾವು ಬರ್ತೀವಿ ಅಂತ್ಲೇ ಹೊರಗಡೆ ಗೇಟ್ ಹಾಕಿಸ್ತೀರಾ ಹ್ಯಾಗೆ?

ಮ್ಯಾನೇಜರ್ : ಯಾಕ್ ಸಾರ್... ಸ್ವಲ್ಪ ಗಲಾಟೆ ಆಗುತ್ತೆ, ಜನಗಳು ನುಗ್ತಾರೆ ಅಂತ ಅಷ್ಟೇ.

ಕ್ಷೇಮೇಂದ್ರ : Daily collecion Report ಎಲ್ಲಿ?

ಮ್ಯಾನೇಜರ್ : ಇನ್ನೂ... ಮಾಡಿಲ್ಲ ಸಾರ್.

ಕ್ಷೇಮೇಂದ್ರ : ಏನ್ರೀ ಮಾತಾಡ್ತಿದ್ದೀರಿ? ಸಿನಿಮಾ ಶುರುವಾಗಿ ಒಂದು ಘಂಟೆಯಾಗಿದೆ. ಅದು ಹ್ಯಾಗ್ರೀ? ಬುಕಿಂಗ್ ಅಂತೂ ಇಲ್ಲ.

ಮ್ಯಾನೇಜರ್ : ಬಂದ್ರೂ ಬರಬಹುದು ಅಂತ.

ಕ್ಷೇಮೇಂದ್ರ : ಏನು ಸುಳ್ಳು ಹೇಳ್ತೀರಿ, ಈಗ ಥಿಯೇಟರ್ ಒಳಗೆ ನೋಡಿ ಬಂದಿದ್ದೀವಿ... House full ಇದೆ...House full Board ಯಾಕೆ ಹಾಕಿಲ್ಲ, ಬರೇ ಬೀಗ ಮಾತ್ರ ಹಾಕ್ಬಿಟ್ರಲ್ಲಾ? ನೀವು ಹೀಗೆಲ್ಲಾ ಮಾಡೋದು ಕಾನೂನಿಗೆ ವಿರೋಧ ಅನ್ನೋದು ಗೊತ್ತಿದೆ ತಾನೆ? ಹೀಗೆಲ್ಲಾ ಮಾಡಿದ್ರೆ penalty ಆಗುತ್ತೆ ಗೊತ್ತಿದೆಯಾ? ಈ ರೀತಿ ನೀವು ಎಷ್ಟು ವರ್ಷಗಳಿಂದ ಮಾಡ್ತಿದ್ದೀರಿ...?

ಮ್ಯಾನೇಜರ್ : ಇದೇನು ಸಾರ್ ಹೀಗಂತೀರಿ? ಈ ಹೊತ್ತೇನೋ ಸ್ವಲ್ಪ ಹೀಗಾಗೋಯ್ತು...

ಕ್ಷೇಮೇಂದ್ರ : Issue ಮಾಡಿರೋ ಟಿಕೆಟ್‌ನ counterfile ಇದೆಯಾ?

ಮ್ಯಾನೇಜರ್ : ಅವೆಲ್ಲಾ ಇದೇ ಸಾರ್...

ಕ್ಷೇಮೇಂದ್ರ : ಇದ್ರೇನ್ರೀ ಪ್ರಯೋಜ್ನ? ನೀವು ಬರೆದಿರೋ DC.R ಗೂ ಅದ್ಕೂ ಟ್ಯಾಲಿ ಆಗಬೇಕು, ಬರ್ದೇ ಇಲ್ಲ ಅಂದ ಮೇಲೆ ಹ್ಯಾಗೆ? ಎಲ್ಲಾ ಟಿಕೆಟ್ ಪುಸ್ತಕದ ಮೊದಲನೇ ಟಿಕೆಟ್ ಕೊನೆ ಟಿಕೆಟ್‌ಗೆ Issuig Authority entertinment officer ಸೈನ್ ಹಾಕಿದ್ದಾರ್ಯೇ?

ಮ್ಯಾನೇಜರ್ : ಹಾಕ್ದೇ ತರ್ತೀವಾ ಸಾರ್?

ಕ್ಷೇಮೇಂದ್ರ : ನೋಡ್ರಿ ನೀವು ಹೀಗೆಲ್ಲಾ ಮೋಸ ಮಾಡಿದ್ರೆ ೨೦೦೦ ರೂಪಾಯಿ ಪೆನಾಲ್ಟಿ ಕಟ್ಟಬೇಕಾಗುತ್ತೆ.

ಮ್ಯಾನೇಜರ್ : ವಾರಕ್ಕೆರಡು ಸಾರಿಯಾದ್ರೂ ಇನ್‌ಸ್ಪೆಕ್ಷನ್ ಮಾಡ್ತೀ ಮಾಡ್ತಾರೆ ಅಂದ ಮೇಲೆ... ನಾವು ಹಾಗೆಲ್ಲಾ ಮಾಡೋಲ್ಲ ಸಾರ್. ಈ ಹೊತ್ತೇನೋ ಹೀಗಾಗೋಯ್ತು!

ಕ್ಷೇಮೇಂದ್ರ : ಸ್ವಾಮಿ ಎಲ್ರೂ ಹೇಳೋದು ಹಾಗೇನೇ, ಆದ್ರೆ ಸರಿ ಅಂತ ಛೇಷ್‌ಗಿರಿ ಪಡೆದಿರುವವರು ಬೇರೆ.

ಮ್ಯಾನೇಜರ್ : ಶಾಂತಾ ಎರಡು ಹಾಲು ತೆಗೆದುಕೊಂಡು ಬಾರೋ.

ಕ್ಷೇಮೇಂದ್ರ : ಏನು ಜೇಡ್ರಿ... ಈಗ House full ಇದೆ. ಆದ್ರೆ ಇಲ್ಲಿ ನೀವು ಹರಿದಿರೋ ಟಿಕೆಟ್ ಅರ್ಧ ಮಾತ್ರ. ಆದ್ದರಿಂದ ೨೦೦೦ ರೂಪಾಯಿ ಫೈನ್ ಆಗಿದೆ.

ಮ್ಯಾನೇಜರ್ : ಏನೋ ಇದೊಂದು ಸಾರಿ ನೋಡಿ ಸಾರ್ ಮುಂದೆ ಹೀಗ್ ಮಾಡೋಲ್ಲ.

ಕ್ಷೇಮೇಂದ್ರ : ಆಗೋದಿಲ್ಲ... ಆಕೋ ಬರ್‍ದಿದ್ದೀನಿ... Report ಮತ್ತು ಫೈನ್... ಎಲ್ಲಾ ತೆಗೊಳ್ಳಿ... ಕಟ್ರಿ...

ಮ್ಯಾನೇಜರ್ : ನೋಡಿ ಸಾರ್ ಇಷ್ಟೊಂದು...

ಕ್ಷೇಮೇಂದ್ರ : ಬೇಕಾದಷ್ಟು ಮೋಸ ಮಾಡ್ತೀರಿ ಸರಕಾರಕ್ಕೆ ಇದೇನು ಮಹಾ ನಾನು ಬರ್‍ತೀನಿ...

ಮ್ಯಾನೇಜರ್ : ಸಾರ್ ಹಾಲು...

ಕ್ಷೇಮೇಂದ್ರ : ಸದ್ಯ ಸರ್ಕಾರಕ್ಕೆ Entertainment Tax ಕಟ್ಟಿ ಅದೇ ನನಗೆ ಹಾಲು ಕುಡಿದ್ಹಾಗೆ.

(ಜೀಪ್ ಹೊರಡುವುದು)

ಕ್ಷೇಮೇಂದ್ರ : ಹೀಗೆ ಹೇಳ್ತಾ ಹೋಗ್ತಿದ್ರೆ ಇವರ ಕಥೆ ಮುಗಿಯೋಲ್ಲ. ದಿನಕ್ಕೊಂದೊಂದು ಅನುಭವ!

ಸುಬ್ಬು : ನಮ್ಮ ಜನ ಅದೆಂದಿಗೆ ನ್ಯಾಯ ನಿಷ್ಠೆ ಕಲಿತುಕೊಳ್ತಾರೋ ದೇವರಿಗೆ ಗೊತ್ತು.

ಕ್ಷೇಮೇಂದ್ರ : ಆಸೆ... ದುಡ್ಡಿನ ಆಸೆ.

ಸುಬ್ಬು : ಇನ್ನು ಕೆಲವರು ಇನ್ಸ್‌ಪೆಕ್ಷನ್‌ಗೆ ಬಂದವರ ಕೈಗೆ ಸ್ವಲ್ಪ ಹಾಕಿ ಲೀಲಾಜಾಲವಾಗಿ ಈ ಕೆಲ್ಸ ಮಾಡಿಕೊಂಡು ಹೋಗ್ತಿರ್ತಾರೆ.

ಕ್ಷೇಮೇಂದ್ರ : ಅಧಿಕಾರಿಗಳೂ ಸಹ ಕೈ ಚಾಚದೆ ನಿಷ್ಠೆಯಾಗಿ ಮಾಡಬೇಕು. ಇದೂ ಎರಡು ಕಡೆಯಲ್ಲೂ ಸರಿಯಾಗಿದ್ದಾಗಲೇ ಇಂಥ ಅನ್ಯಾಯ ನಿಲ್ಲೋದು. ನಾನಿನ್ನೂ ಬರ್‍ತೀನಪ್ಪಾ. ಅದೇ ಈ ಹೊತ್ತಿನ Raport ಕೊಡಬೇಕು ಸಾಹೇಬ್ರಿಗೆ.

ಸುಬ್ಬು : ಅಪರೂಪಕ್ಕೆ ಸಿಕ್ಕಿದ್ದೀಯೆ... ಸ್ವಲ್ಪ ಹೋಟೇಲಿಗೆ ಹೋಗಿ ಹೋಗೋಣ.

ಕ್ಷೇಮೇಂದ್ರ : ಇಲ್ಲ ಟೈಮಾಗುತ್ತೆ.

ಸುಬ್ಬು : ನನ್ನ ಥಿಯೇಟರ್‌ಗೆ ಬಂದಾಗ ಏನೂ Favour ಮಾಡಬೇಡಪ್ಪಾ ನಾನು ಆ ಕೆಲ್ಸ ಮಾಡೋಲ್ಲ.

ಕ್ಷೇಮೇಂದ್ರ : ಹಾಗೆ ಮಾಡಿದ್ರೆ ನಾನು ಆ ಕೆಲ್ಸ ಮಾಡೋಲ್ಲ.

(ಜೀಪ್ ಹೊರಡುವುದು)

ಬಾಸ್ : ಓ... ಕ್ಷೇಮೇಂದ್ರ... ಬನ್ನೀ.

ಕ್ಷೇಮೇಂದ್ರ : ಈ ಹೊತ್ತು ಒಂದು ಸಿನೆಮಾ ಥಿಯೇಟರ್‌ಗೆ ಹೋಗಿದ್ದೆ ಸಾರ್. ಅಲ್ಲಿ ಅನೇಕ ಅಚಾತುರ್ಯಗಳು ನಡೆದು ಹೋಗಿದ್ವು. ಟಿಕೆಟ್ ಹಿಂದಿರೋದೇ ಒಂದಷ್ಟು ಆದ್ರೆ ಒಳಗೆ ಇರೋ ಜನರೇ ಬೇರೆ ಸಂಖ್ಯೆ. ಎಲ್ಲಾ Duplicate ಟಿಕೆಟ್ Issue ಮಾಡಿದ್ದಾರೆ. ಗೇಟ್‌ನವನು ಹರಿದ ಟಿಕೆಟ್ ವಶ ಮಾಡಿಕೊಂಡು ನೋಡಿದ್ರೆ, ಅವನ ಹತ್ತಿರ ಹರಿದ ಟಿಕೆಟ್ಟೇ ಬೇರೆ. ಅಲ್ಲಿದ್ದ ಜನಗಳ ಸಂಖ್ಯೆಯೇ ಬೇರೇ. ಸಿನೆಮಾ ನಡೆದು ಒಂದು ಘಂಟೆ ಆಗಿದ್ರೂ Daily collection Reports ಇಲ್ಲ. ಹೀಗಾಗಿ ೨೦೦೦ ರೂಪಾಯಿ ದಂಡ ಹಾಕಿ ಬಂದೆ ಸಾರ್.

ಬಾಸ್ : ಬಹಳ ಒಳ್ಳೆ ಕೆಲಸ ಮಾಡಿದ್ರಿ. ಜನಗಳು ಜಾಗೃತಿ ಹೊಂದಬೇಕು. ಟಿಕೆಟ್ ಹರಿದುಕೊಡು ಅಂತ Gate Keeper ಕೇಳಿ ಸಿನೆಮಾ ಮುಗಿಯುವವರೆಗೂ ಇಟ್ಟುಕೊಳ್ಳಬೇಕು. ಆಗ ಇಂಥ ಸ್ವಲ್ಪ ಭ್ರಷ್ಟಾಚಾರ ತಡೆಯಬಹುದು. ಅಲ್ದೆ ನಿಮ್ಮಿಂದ ಆಗಾಗ Inspection, surprise visit ನಿಂದ, ಅನೇಕ ಹೊಸ ವಿಷಯಗಳು ಹೊರಬರಬೇಕು. ಆಗ ಅವರು ಸ್ವಲ್ಪ ಎಚ್ಚೆತ್ತುಕೊಳ್ತಾರೆ, ತೆರಿಗೆ ಸರ್ಕಾರಕ್ಕೆ ಸರಿಯಾಗಿ ಬರುತ್ತೆ.

ಕ್ಷೇಮೇಂದ್ರ : Yes sir.

ಬಾಸ್ : ಹೀಗೆ ನಿಮ್ಮ ಅನ್ವೇಷಣೆಗಳು ಫಲಪ್ರದವಾಗಲಿ go ahead.

ಕ್ಷೇಮೇಂದ್ರ : Yes please.

ಬಾಸ್ : ಹೂಂ ಭೇಷ್ ಮುಂದಿನ ವಾರ ಎಲ್ಲಿಗೆ ನಿಮ್ಮ ಅನ್ವೇಷಣೆ.

ಕ್ಷೇಮೇಂದ್ರ : ಹೂಂ... ಆ... ಅಲ್ಲಿ... ತಿಳೀತಲ್ಲ ಸಾರ್.

(ಏನೋ ಗುಟ್ಟು ಹೇಳುವ ತರಹ)...

ಬಾಸ್ : ಇವನೂ ನಗುತ್ತ... ಹಾದು... ಗುಟ್ಟಾಗಿರಲಿ... ಹುಷಾರ್...

* * *

## ದೃಶ್ಯ ೭

ಬಾಸ್ : ಓ ಕ್ಷೇಮೇಂದ್ರ... ಬನ್ರೀ... ಬನ್ರೀ... ಏನು ಈಗ ಬರ್‍ತಾ ಇದ್ದೀರಾ?

ಕ್ಷೇಮೇಂದ್ರ : ಹೌದು ಸಾರ್.

ಬಾಸ್ : ಕೂತುಕೊಳ್ಳಿ... ಅಂದ ಹಾಗೆ ಈ ಹೊತ್ತಿನ ನಿಮ್ಮ ಅನ್ವೇಷಣೆ?

ಕ್ಷೇಮೇಂದ್ರ : ಅದು ಇದ್ದುದ್ದೇ ಬಿಡಿ ಸಾರ್.

ಬಾಸ್ : ಈ ದಿನದ ಸ್ವಾರಸ್ಯ ಏನು ಹೇಳಿ, ಜನರೆಲ್ಲಾ ಬಸ್ಸಿಗೆ ಟಿಕೆಟ್ ತೆಗೆದುಕೊಂಡು ಇರ್ತಾರೋ... ಮೋಸ ಮಾಡ್ತಾರೋ.

ಕ್ಷೇಮೇಂದ್ರ : ಜನರು, ಕಂಡಕ್ಟರ್ ಎಲ್ರೂ... ಮಾಡ್ತಾರೆ ಸಾರ್.

ಬಾಸ್ : ಹ್ಯಾಗೆ ಸ್ವಲ್ಪ ಹೇಳಿ.

ಕ್ಷೇಮೇಂದ್ರ : ಎಲ್ಲರೂ ಹೀಗ್ ಮಾಡ್ತಿದ್ರೆ ನಮಗೆ ಲಾಸ್ ಅಷ್ಟೇ pfofit ಎಲ್ಲಿ ಬರ್ತದೆ ಹೇಳಿ.

ಬಾಸ್ : ಎಷ್ಟು ಬಸ್‌ಗಳ ಚೆಕಿಂಗ್ ಮಾಡಿದ್ರಿ?

ಕ್ಷೇಮೇಂದ್ರ : ಒಂದು ಇಪ್ಪತ್ತು ಮಾಡಿರಬಹುದು ಸಾರ್, ಅದರಲ್ಲಿ ಒಂದಲ್ಲ ಒಂದು ಹೊಸ ಕಥೆ ಇದ್ದೇ ಇರುತ್ತೆ, ಈಗ ಅಂಥದ್ದು ಒಂದೆರಡು ಸನ್ನಿವೇಶ ತಮಗೆ ಹೇಳ್ತೀನಿ ಕೇಳಿ.

ಬಾಸ್ : ಹೇಳಿ ಹೇಳಿ.

ಕ್ಷೇಮೇಂದ್ರ : ಆಕಡೆ ಒಂದು ಬಸ್ಸು ಬರ್ತಿತ್ತು, ನಮ್ಮ ಜೀಪ್ ನಿಲ್ಲಿಸಿ ಬಸ್ ನಿಲ್ಲಿಸಿದ್ವು ಆಗ.

(ಬಸ್ ಬರುತ್ತಿದೆ. ಚೆಕಿಂಗ್ ಇನ್‌ಸ್ಪೆಕ್ಟರ್ ಬಸ್ ನಿಲ್ಲಿಸುವನು, ಬಸ್ ನಿಲ್ಲವುದು.)

ಕ್ಷೇಮೇಂದ್ರ : ಎಲ್ಲಿ ಟಿಕೆಟ್‌ಗಳನ್ನು ಕೊಡ್ರಿ... ಕಂಡಕ್ಟರ್.

ಕಂಡಕ್ಟರ್ : ತಗೊಳ್ಳಿ ಸಾರ್.

ಕ್ಷೇಮೇಂದ್ರ : ಟಿಕೇಟ್... ಎಲ್ರೀ ತೆಗೆದುಕೊಂಡಿದ್ದೀರಾ?

ಒಬ್ಬ : ತೆಗೆದುಕೊಂಡಿದ್ದೀವಿ ನೋಡಿ ಸಾರ್.

ಕ್ಷೇಮೇಂದ್ರ : ಈ ನಂಬರ್‌ಗೂ ಈ ನಂಬರ್‌ಗೂ ಟ್ಯಾಲಿ ಆಗ್ತಿಲ್ವಲ್ಲ, ಬೇರೆ ಹಳೆ ಟಿಕೆಟ್ ಅಲ್ಲಾರೀ ಕಂಡಕ್ಟರ್...

ಕಂಡಕ್ಟರ್ : ಅವರು ಯಾವುದೋ ಬೇರೆ ತೋರಿಸ್ತಾ ಇರಬಹುದು ಸಾರ್...

ಕ್ಷೇಮೇಂದ್ರ : ಏನಪ್ಪಾ ಇದಲ್ವಲ್ಲಾ ಬೇರೆ ಇದ್ಯಾ ಮೇಲೆ?

ಒಬ್ಬ : ಇಲ್ಲ ಸ್ವಾಮಿ ಅವರು ಕೊಟ್ಟಿದ್ದೇ ಅದು.

ಕ್ಷೇಮೇಂದ್ರ : ಐವತ್ತು ರೂಪಾಯಿ ದಂಡ ತೆರ ಬೇಕಾಗುತ್ತೆ.

ಒಬ್ಬ : ಅಲ್ಲಾ ಸ್ವಾಮಿ ಅವರ ಕೊಟ್ಟ ತಪ್ಪಿಗೆ...

ಕ್ಷೇಮೇಂದ್ರ : ಅವರು ಟಿಕೆಟ್ ಬುಕ್‌ನಿಂದ ಹರಿದು ಕೊಟ್ರಾ?

ಒಬ್ಬ : ಅದೇನೋ ಸ್ವಾಮಿ ಅವರು ಕೋಟ್ರು ನಾನು ಈಸಿಕೊಂಡೇ.

ಕ್ಷೇಮೇಂದ್ರ : ಹೊಸ ಟಿಕೇಟ್ ಹರಿದುಕೊಡು ಅಂತ ಕೇಳಬೇಕು, ನೋಡಬೇಕು.

ಒಬ್ಬ : ಹಳ್ಳಿ ಜನ ನಮಗೇನು ಗೊತ್ತಾಗಬೇಕು ಸ್ವಾಮಿ.

ಕ್ಷೇಮೇಂದ್ರ : ಅದ್ಕೇ ಈ ಪೊತ್ತು ಫೈನು ಕೊಟ್ರೆ ಮುಂದೆ ಸರಿಹೋಗುತ್ತೆ. ಸರಿಯಾದ ಟಿಕೆಟ್ ಕೊಡದೇ ಪೋದ್ರೂ ಅಪರಾಧ, ತೆಗೆದುಕೊಳ್ಳದೇ ಹೋದ್ರೂ ಅಪರಾಧ.

ಒಬ್ಬ : ಮುಂದೆ ಜ್ವಾಪಾನವಾಗಿರ್ತೀನಿ ಸ್ವಾಮಿ.

ಕ್ಷೇಮೇಂದ್ರ : ಕಂಡಕ್ಟರ್ ಇದು ನಿಮಗೆ ಮೊದಲನೇ ಸಾರಿಯಲ್ಲ ಗೊತ್ತಿದೆಯೇನು?

ಕಂಡಕ್ಟರ್ : ಸಾರ್... ಸಾ... ರ್...

ಕ್ಷೇಮೇಂದ್ರ : ಮಾತ್ಯಾಕೆ ನುಂಗ್ತೀರಿ ಮಾಡಿದ್ದು ತಪ್ಪು ಈಗ್ಲೇ ಎರಡು ಸಾರಿ ನಿಮಗೆ caution ಕೊಟ್ಟಿದ್ದೀನಿ ಫೈನ್ ಹಾಕಿದ್ದೀನಿ, ಒಂದು ಸಾರಿ ಕೆಲಸದಿಂದ ವಜಾ ಮಾಡ್ತಿದ್ದೀನಿ. ಈ ಸಾರಿ ಕೆಲಸ ಕಳೆದುಕೋಳ್ತೀರಿ ನೋಡಿ ಹೆಂಡ್ತಿ ಮಕ್ಕಳು ಬಾಯಿಗೆ ಮಣ್ಣು ಹಾಕಬೇಕುಗುತ್ತೆ.

ಕಂಡಕ್ಟರ್ : ಇನ್ನ ಮೇಲೆ ಹೀಗೆ ಮಾಡೋಲ್ಲ ಸಾರ್.

ಕ್ಷೇಮೇಂದ್ರ : ಏನಪ್ಪಾ ಟಿಕೆಟ್ ಎಲ್ಲಿ?

ಹೆಂಗಸು : ಟಿಕೆಟ್ ಕೊಟ್ಟಿಲ್ಲ ಸ್ವಾಮಿ.

ಕ್ಷೇಮೇಂದ್ರ : ಹಣ ಕೊಟ್ಟಿದ್ದೀಯೇನು?

ಹೆಂಗಸು : ಕೊಟ್ಟೆ ಸ್ವಾಮಿ.

ಕ್ಷೇಮೇಂದ್ರ : ಯಾಕ್ರೀ ಕಂಡಕ್ಟರ್ ಕೊಟ್ಟಿಲ್ಲ ಟಿಕೆಟ್.

ಕಂಡಕ್ಟರ್ : ಆಕೆ ತೆಗೆದುಕೊಂಡಿಲ್ಲ ಬಿಡಿಸಾರ್.

ಹೆಂಗಸು : ಏಯ್ ಕಂಡಕ್ಟರಪ್ಪ ಒಂದು ರೂಪಾಯಿ ಮೂರು ಪಾವಲಿಕೊಟ್ಟಿನ್ನಿ ಜ್ಞಾಪಕ ಇಲ್ವಾ? ಟಿಕೇಟ್ ಕೋಡು ಅಂದ್ರೆ ಪರ್ವಾಗಿಲ್ಲ ನಡ್ಯಮ್ಮ ಅಂದ್ಯಲ್ಲ. ಏನು ಸುಳ್ಳೇಳ್ತೀಯಪ್ಪಾ?

ಕಂಡಕ್ಟರ್ : ಸುಳ್ಳು ಹೇಳ್ಬೇಡ ಕೂತ್ಕೋ...

ಕ್ಷೇಮೇಂದ್ರ : ಏನಮ್ಮಾ ನೀನು ಯಾವ ಊರಿಗೆ?

ಕಂಡಕ್ಟರ್ : ಚಿಂಚೋಳಿಗೆ ಸ್ವಾಮಿ.

ಕ್ಷೇಮೇಂದ್ರ : ಕಂಡಕ್ಟರ್ ಚಿಂಚೋಳಿಗೆಷ್ಟು ಬಸ್ ಚಾರ್ಜು ಇಲ್ಲಿಂದ?

ಕಂಡಕ್ಟರ್ : ಐದು ರೂಪಾಯಿ ಸಾರ್.

ಕ್ಷೇಮೇಂದ್ರ : ಏನಮ್ಮಾ ಇಲ್ಲಿಂದ ಬಸ್ ಚಾರ್ಜು ಐದು ರೂಪಾಯಿಯಲ್ಲ ನೀನು ಹ್ಯಾಗೆ ಮೂರು ರೂಪಾಯಿ ಕೊಟ್ಟೆ.

ಹೆಂಗಸು : ನನ್ನತವ ಇದ್ದದ್ದೂ ಅಷ್ಟೇ ಸ್ವಾಮಿ ಕೊಟ್ಟೆ, ಅದ್ಕೇ ಅವರು ಟಿಕೆಟ್ ಕೊಡ್ನಿಲ್ಲ. ನಡೆ... ನಡೆ ಅಂದ್ರು ನಾನು ಹತ್ತುಕೊಂಡೆ.

ಕ್ಷೇಮೇಂದ್ರ : ನಿಜವೇನ್ರೀ ಕಂಡಕ್ಟರ್.

ಹೆಂಗಸು : ಎಷ್ಟು ರೀತಿ ಮೋಸ. ಮಾಡ್ತೀರ್ರೀ... ಸಾರಿಗೆ ಸಂಸ್ಥೆಗೆ.

ಕ್ಷೇಮೇಂದ್ರ : ನಿನ್ನದೆಲ್ಲಮ್ಮ ಟಿಕೆಟ್?

ಹೆಂಗಸು : ಕೊಟ್ಟಿಲ್ಲ ಸ್ವಾಮಿ.

ಕ್ಷೇಮೇಂದ್ರ : ನೀನು ತೆಗೆದುಕೊಳ್ಳಲಿಲ್ವೋ ಅವರು ಕೊಡಲಿಲ್ವೋ.

ಹೆಂಗಸು : ನನ್ನ ಹತ್ತಿರ ಬರಲೇ ಇಲ್ಲ ಸ್ವಾಮಿ.

ಕಂಡಕ್ಟರ್ : ನೋಡಿ ಸಾರ್ ನಾನು ಟಿಕೇಟ್ ಯಾರು ತೆಗೆದುಕೊಂಡಿಲ್ಲ, ತೆಗೆದುಕೊಳ್ಳಿ ಅಂತ ಹತ್ತು ಸಾರಿ ಕೂಗಿದ್ದೀನಿ. ಈಕೆ ಮಾತಾಡ್ಲೇ ಇಲ್ಲ, ರಷ್‌ನಲ್ಲಿ ಯಾರು ಕೊಟ್ರು ಯಾರು ಕೋಡಲಿಲ್ಲ ಅನ್ನೋದೆ ಗೊತ್ತಾಗಲಿಲ್ಲ. ಈಕೆ ತೆಗದುಕೊಳ್ಳದೆ ಹಾಗೇ ಇಳಿದು ಹೋಗೋಣ ಅಂತ ಮಾಡಿದ್ದಾಳೆ.

ಕ್ಷೇಮೇಂದ್ರ : ಏನಮ್ಮ ಟಿಕೆಟ್ ತೆಗೆದುಕೊಳ್ಳದೇ ಪ್ರಯಾಣ ಮಾಡೋದು ಅಪರಾಧ ಅಂತ ಗೊತ್ತಿಲ್ವೇ?

ಹೆಂಗಸು : ಗೊತ್ತಿದೆ ಸ್ವಾಮಿ.

ಕ್ಷೇಮೇಂದ್ರ : ಟಿಕೆಟ್ ತೆಗೆದುಕೊಳ್ಳದೆ ಪ್ರಯಾಣ ಮಾಡಿದ್ರೆ ೫೦ ರೂಪಾಯಿ ದಂಡ ಅನ್ನೋದು ಗೊತ್ತಿದ್ಯಾ?

ಹೆಂಗಸು : ಇಲ್ಲ ಸ್ವಾಮಿ.

ಕ್ಷೇಮೇಂದ್ರ : ಈ ಹೊತ್ತು ಹಾಕ್ತಾ ಇದ್ದೀನಿ, ಎಲ್ಲಿ ಐವತ್ತು ರೂಪಾಯಿ ದಂಡ ಕೊಡು.

ಹೆಂಗಸು : ನನ್ನ ಹತ್ತಿರವಿಲ್ಲ ಸ್ವಾಮಿ?

ಕ್ಷೇಮೇಂದ್ರ : ಇಲ್ಲದೇ ಹೋದ್ರೆ ಪೋಲೀಸ್ ಸ್ಟೇಷನ್‌ಗೆ ಬರಬೇಕಾಗುತ್ತೆ.

ಹೆಂಗಸು : ಅಂಗ್ ಮಾಡಬ್ಯಾಡಿ ಸ್ವಾಮಿ.

ಕ್ಷೇಮೇಂದ್ರ : ಬಿಟ್ಟು ಬಿಡು ಅಂತೀಯಾ?

ಒಬ್ಬ : ಸ್ವಲ್ಪ ನಿನ್ನ ಟಿಕೆಟ್ ಕೊಡು. (ಮೆಲ್ಲನೆ)

ಇನ್ನೊಬ್ಬ : ತೆಗೋ...

ಕ್ಷೇಮೇಂದ್ರ : ಏನಪ್ಪಾ... ಟಿಕೆಟ್ ತೆಗೆದುಕೊಳ್ಳದೆ ಈ ಕೆಲಸ ಮಾಡ್ತೀಯಾ? ಏನ್ರೀ ನೀವು ಹೀಗೆ ಬೇರೆಯವರಿಗೆ ಕೊಡಬಹುದೇ?

ಒಬ್ಬ : ಇಲ್ಲ ಸಾರ್.

ಕ್ಷೇಮೇಂದ್ರ : ಹಾಗಾದ್ರೆ ನಿಮ್ಮ ಟಿಕೆಟ್ ಎಲ್ಲಿ ತೋರ್ಸ್ರೀ...

ಒಬ್ಬ : ಏನೋ ಕೇಳಿದ ಕೊಟ್ಟೆ ಸಾರ್.

ಕ್ಷೇಮೇಂದ್ರ : ಏನೋ ಕೇಳಿದ ಕೊಟ್ಟುಬುಟ್ಟೆ. ಏನು ವಂಚನೆ ಮಾಡ್ತೀರಿ..? ನಮ್ಮ ಕಣ್ಣೆದುರಿಗೇ ಹೀಗೆ ಮೋಸ ಮಾಡ್ತೀರಲ್ಲಾ. ಇನ್ನು ಯಾರೂ ಕೇಳದೆ ಹೋದ್ರೆ ಹ್ಯಾಗೆ?

ಒಬ್ಬ : ನಿದ್ದೆ ಮಾಡ್ತಿದ್ದೆ. ಟಿಕೆಟ್ ತೆಗೆದುಕೊಳ್ಳೋದು ಮರ್‍ತಿದ್ದೆ ಸಾರ್.

ಕ್ಷೇಮೇಂದ್ರ : ಅಂತೂ ನಿಜದ ತಲೆಹೊಡೆದಂತೆ ಮಾತಾಡ್ತೀರಿ... ಫೈನ್ ತೆಗೀರಿ.

ಒಬ್ಬ : ಇನ್ನು ಮೇಲೆ ಈ ರೀತಿ ಮಾಡೋಲ್ಲ ಕ್ಷಮಿಸಿ ಸಾರ್.

ಕ್ಷೇಮೇಂದ್ರ : ಕ್ಷಮಿಸೋದೇನು ಬಂತು. ಈ ಸಾರಿ ಫೈನ್ ಕೊಡ್ರಿ, ಆಮೇಲೆ ನಿಮಗೆ ಬುದ್ಧಿ ತಾನಾಗಿಯೇ ಬರುತ್ತೆ.

ಕಂಡಕ್ಟರ್ : ಹೀಗೆ ಸಾರ್... ಪ್ರತಿಯೊಬ್ಬರ ಹತ್ತಿರ ಹೋಗಿ ಕೇಳಿದ್ರೂ ಟಿಕೆಟ್ ಟಿಕೆಟ್ ಅಂದ್ರೂ, ಆಯ್ತು ಆಯ್ತು ಅಂತ ತಲೆ ಕುಣಿಸ್ತಾ ಕಡ್ಲೇ ಕಾಯಿ ತಿನ್ತಾ ಕೂತಿರ್ತಾರೆ.

ಕ್ಷೇಮೇಂದ್ರ : ಎರಡೂ ದದ್ದು ಹೊರಕ್ಕೆ ಹಾಕು ಅಂದ ಹಾಗೆ ನೀವು ಮಹಾ ಸಾಚಾ ಅನ್ನೋದ ಸಾಬೀತು ಮಾಡಿದ್ರೆಲ್ಲಾ ಬಿಡ್ರಿ ಸಾಕು. ಇಷ್ಟೆಲ್ಲಾ ಟಿಕೆಟ್ ತೆಗೆದುಕೊಳ್ಳದೇ ಇರೋದಕ್ಕೆ ಕಾರಣ ನೀವೇ.

ಕಂಡಕ್ಟರ್ : ಹ್ಯಾಗೆ ಸಾರ್?

ಕ್ಷೇಮೇಂದ್ರ : ಜನರಿಗೆ ಗೊತ್ತು ಗುಂಪಿನಲ್ಲಿ ಗೋವಿಂದ ಅನ್ನಿಸಿಬಿಡಬಹುದು ಅಂತ, ಅದ್ಕೇ ನೀವು ಬಸ್ಸಿಗೆ ಹತ್ತಿಸುವಾಗಲೇ ಟಿಕೆಟ್ ಎಲ್ಲಾ ಕೊಟ್ಟು ಚೆಕ್ ಮಾಡಿ ಹೊರಬಂದ್ರೆ ನೀವ್ಯಾಕೆ ಅಪರಾಧಿ ಆಗ್ತಿದ್ರಿ...?

ಕಂಡಕ್ಟರ್ : ಸರಿಯಾದ ವೇಳೆಗೆ ಹೋಗಬೇಕಲ್ಲ. ಬಸ್ಸಿನಲ್ಲೇ ಕೊಟ್ಟು ಬಿಡೋಣ ಅಂತ ಮಾಡ್ದೇ ಸಾರ್.

ಕ್ಷೇಮೇಂದ್ರ : ಹೋಗ್ಲಿ ನಿಮ್ಮ ಸ್ಟೇಜ್‌ನಲ್ಲಾದ್ರೂ ನಿಲ್ಲಿಸಿ ಚೆಕ್ ಮಾಡಿದ್ರೇನ್ರೀ?

ಕಂಡಕ್ಟರ್ : ಅದು... ಅದು...

ಕ್ಷೇಮೇಂದ್ರ : ಸುಮ್ಮನೆ ಮಾತಾಡಬೇಡ್ರಿ ನಿಲ್ರಿ, ಮಹಾ ನೀತಿವಂತರಂತೆ ಮಾತಾಡ್ತಾರೆ. ನಿಮಗೆ Capactiy ಇರೋದು ೪೫-೫೦ ಸೀಟುಗಳು, ನೀವು

ಹಾಕಿರೋದು ನೂರಕ್ಕೂ ಹೆಚ್ಚು ಏನ್ರೀ. ಬಸ್ ಯಾತಕ್ಕೆ ಆಗಬೇಕು? ಟಾಪಿನ ಮೇಲೂ ಕೂರ್ಸಿದ್ದೀರಿ. ನಿಂತುಕೊಳ್ಳಲಿಕ್ಕೂ ಆಗೋಲ್ಲ, ಒಳಗೆ ಜನರು ಉಸಿರಾಡದೆ ಸಾಯಬೇಕು ಅಂತ ಮಾಡಿದ್ದೀರೋ ಹ್ಯಾಗೆ? ಬಸ್ ಅಪಾಯ ತಪ್ಪಿದರೆ ಯಾರು ಹೊಣೆ? ಸಮ್ಮನೇ ಹೇಳಿದ್ದಾರೇನ್ರೀ ಬಸ್ಸಿನಲ್ಲಿ ಇಷ್ಟು ಸಿಟಿಂಗ್ ಇಷ್ಟು ಸ್ಟ್ಯಾಂಡಿಗ್ ಅಂತ. ಅರ್ಧಕ್ಕಿಂತ ಹೆಚ್ಚಿಗೆ ಜನರಿಗೆ ಟಿಕೇಟ್ ಕೊಟ್ಟಿಲ್ಲ ಎಲ್ಲಾ ನಿಮ್ಮ ಕಿಸೆಗೆ.

ಒಬ್ಬ : ಅಲ್ಲಾ ಸ್ವಾಮಿ... ಎಷ್ಟೋ ಜನರು ಬಾಗಿಲಲ್ಲೇ ನಿಂತು ಟಿಕೆಟ್ ತೆಗೆದುಕೊಳ್ಳದೆ ಇಳಿದು ಹೊರಟೋಗಿದ್ದಾರೆ, ಆದ್ರೆ ನನಗೆ ಮಾತ್ರ.

ಕ್ಷೇಮೇಂದ್ರ : ಹಾಗಾದ್ರೆ ನೀವು ಹಾಗೇ ಹೋಗಬೇಕಾಗಿತ್ತು ಅಂತ್ಲಾ?

ಒಬ್ಬ : ತಪ್ಪು ಕಂಡಕ್ಟರ್‌ದು ನನ್ನದ್ಯಾಗೆ ಹೇಳಿ ಸ್ವಾಮಿ.

ಕ್ಷೇಮೇಂದ್ರ : ನೋಡ್ರಿ... ಬರೆದು ಕೊಟ್ಟಿದ್ದೀನಿ ಫೈನು ೫೦ ರೂಪಾಯಿ ಇದ್ರೆ ಕೊಡಿ... ಇಲ್ಲದೇ ಹೋದ್ರೆ... ನಡೀರಿ ಪೋಲೀಸ್ ಸ್ಟೆಷನ್‌ಗೆ.

ಒಬ್ಬ : ಏನೋ ಯಾವದೋ ತಪ್ಪಿಗೆ ನಮಗೆ ಫೈನು, ಎರಡು ರೂಪಾಯಿಗೆ ಐವತ್ತು ರೂಪಾಯಿ.

ಕ್ಷೇಮೇಂದ್ರ : ಹೀಗೆ ನಿಮ್ಮಂಥವರು ಸಾರಿಗೆ ಸಂಸ್ಥೆಗೆ ಮೋಸ ಮಾಡ್ತಾ ಹೋಗ್ತಿದ್ದರೆ ಸಾರಿಗೆ ಸಂಸ್ಥೆಗೆ ಲಾಸ್ ಆಗದೇ profit ಆಗುತ್ತಾ?

ಒಬ್ಬ : ಇದೊಂದೇ ಅಲ್ಲಾ ಸ್ವಾಮಿ ಇನ್ನೂ ನಾನಾ ದಾರಿಗಳಿವೆ, ಇದೊಂದರಲ್ಲಿ ಮುಳುಗಿ ಹೋಗಲ್ಲ. ಟೈರು, ಟ್ಯೂಬು... Spare parts ಎಲ್ಲವನ್ನೂ ಮಾರಿ ಕೊಳ್ತಾರೆಯಂತೆ. ಪ್ರತಿಯೊಂದರಲ್ಲೂ ಕಮಿಷನ್ ಹೊಡಿತಾರಂತೆ, ಆದ್ರಿಂದ ಲಾಸ್ ಅಷ್ಟೇ. ಈ ರೀತಿ ಟಿಕೆಟ್ ಮೋಸ ಮಾಡೋದ್ರಿಂದ ಅದಷ್ಟು ಲಾಸ್ ಆಗೋಲ್ಲ.

ಕ್ಷೇಮೇಂದ್ರ : ಒಟ್ಟಿನಲ್ಲಿ ಲಾಸಿನ ಜೊತೆಗೆ ಈ ಲಾಸು ಸೇರಿದ್ರೆ ಪೂರ್ತಿ ದಿವಾಳಿ ಎಬ್ಬಬೇಕು ಅಲ್ವಾ? ಅದ್ಕೆ ನೋಡ್ರಿ.

ಕ್ಷೇಮೇಂದ್ರ : ಬಸ್ಸಿನಲ್ಲಿ ಬರೆದಿರುವುದು ನೋಡೇ ಇಲ್ವಾ? ಟಿಕೆಟ್ ಇಲ್ಲದೆ ಪ್ರಯಾಣ ಮಾಡಬಾರದು ಅಂತ.

ಕಂಡಕ್ಟರ್ : ಸಾರ್........

ಕ್ಷೇಮೇಂದ್ರ : ಈ ಸ್ಕಾರಿ ನಿಮ್ಮನ್ನು ಸಸ್ಪೆಂಡ್ ಮಾಡಿಸ್ತೀನಿ ಬಿಡಿ.

ಕಂಡಕ್ಟರ್ : ಸಾರ್... ನಿಮಗೆ...

ಕ್ಷೇಮೇಂದ್ರ : ಲಂಚ ಕೊಡ್ತೀರಾ? ಇದು ಇನ್ನೂ ದೊಡ್ಡ ಅಪರಾಧ. ನಿಮಗೆ ಗ್ರಹಚಾರ ವಕ್ಕರಿಸಿದೆ.

ಕಂಡಕ್ಟರ್ : ಹಾಗನ್ಬೇಡಿ ಸಾರ್, ಬಡವನ ಹೊಟ್ಟೇ ಹೊಡೀಬೇಡಿ.

ಕ್ಷೇಮೇಂದ್ರ : ಬಡವರ ಹೊಟ್ಟೆ ಹೊಡೆದು ಹೊಟ್ಟೆ ಹೊರೆಯಲಿಕ್ಕೋಗಿ ಸಾರಿಗೆ ಸಂಸ್ಥೆಗೆ ದ್ರೋಹ ಮಾಡ್ತಿದ್ದೀರಿ.

ಕಂಡಕ್ಟರ್ : ಏನೋ ಇದೊಂದು ಸಾರಿ ಕ್ಷಮಿಸಿ ಸಾರ್. ಇನ್ನೂ ನಾನು ಹಾಗೇ ಮಾಡೋಲ್ಲ.

ಕ್ಷೇಮೇಂದ್ರ : ನನಗೆ ಹೇಳಲೇ ಬೇಡಿ ಇದು ಮೂರನೇ ಸಾರಿ, ನಾನು ನಿಮ್ಮನ್ನು ಕ್ಷಮಿಸಿದ್ದೀನಿ ಎರಡು ಸಾರಿ, ಬಸ್ ಹೋಗ್ಲಿ ರೈಟ್ ಕೊಡಿ... ತೆಗೊಳ್ಳಿ ಈ ನೋಟೀಸ್.

(ಜೀಪ್‌ಹೊರಡುವುದು. ಕಂಡಕ್ಟರ್ ರೈಟ್ ಎಂದ. ಬಸ್ ಹೊರಡುವುದು)

(ಆ ಕಡೆಯಿಂದ ಒಂದು ಬಸ್ ಬರಲು ಈ ಬಸ್ಸಿನವ ನಿಲ್ಲಿಸಿ.)

ಡ್ರೈವರ್ : ಚೆಕಿಂಗ್ ಇದೆ, ಈಗ್ಲೇ ಸರಿ ಮಾಡಿಕೊಂಡು ಹೋಗಿ, ನಮ್ಮವ ಚೀಟಿ ತೆಗೆದುಕೊಂಡವ್ನೇ ಇನ್ಸ್‌ಸ್ಪೆಕ್ಟರ್ ಬಹಳ ಸ್ಟ್ರಿಕ್ಟ್... ಹಣಾನೂ ತೆಗೆದುಕೊಳ್ಳೋರಲ್ಲ.

ಡ್ರೈವರ್ : (ಮತ್ತೊಬ್ಬ) ಏಯ್ ಶಾಮಣ್ಣ ಚೆಕ್ಕಿಂಗ್ ಇದೆಯಂತೆ ಎಲ್ಲರಿಗೂ ಟಿಕೆಟ್ ಕೊಟ್ಟಿದ್ದೀಯಾ? ಹೆಚ್ಚಾಗಿದೆ, ಇಲ್ಲೇ ಇಳಿಸಿಬಿಡು, ಆಮೇಲೆ ಸಿಕ್ಕಿಹಾಕಿಕೊಂಡು ದಂಡ ತೆರಬೇಕಾದೀತು.

ಕಂಡಕ್ಟರ್ : ಇಲ್ಲಾ ಇಳೀರಿ, ಚೆಕಿಂಗ್ ಇದೆಯಂತೆ ಮುಂದೆ ಬನ್ನಿ ಹತ್ತಿಸಿಕೊಳ್ತೀನಿ... ಯಾರ್‍ಯಾರು ಟಿಕೆಟ್ ತೆಗೆದುಕೊಂಡಿಲ್ಲ ತೆಗೆದುಕೊಂಡು ಬಿಡಿ, ಮುಂದೆ ಚೆಕಿಂಗ್ ಇದೆ, ಆಮೇಲೆ ಸಿಕ್ಕಿಕೊಂಡು ದಂಡ ತೆರಬೇಕಾಗುತ್ತೆ ಟಿಕೆಟ್... ಟಿಕೆಟ್ ಎಲ್ರೂ ಸ್ವಲ್ಪ ಟಿಕೆಟ್ ತೋರ್‍ಸ್ರಪ್ಪ.

ಒಬ್ಬ : ಯಾಕ್ ಸ್ವಾಮಿ, ನೀವು ಕೊಟ್ಟ ಟಿಕೆಟ್ ನಿಮಗೇ ಅನುಮಾನ್ವೇ? ಮತ್ತೆ ಹಳೇ ಟಿಕೆಟ್ ಯಾಕೆ ಕೊಟ್ರಿ?

ಕಂಡಕ್ಟರ್ : ಸಾಕು ಸುಮ್ನೆ ಕೂತ್ಕಳಯ್ಯ... ತಲಹರಟೆ ಮಾಡಬೇಡ.

ಒಬ್ಬ : ಗೊತ್ತು ಬಿಡಿ ಸ್ವಾಮಿ, ನಾವೇ ನೋಡ್ತಿದ್ವು, ಇಳಿಯುವಾಗ ನಾಲ್ಕಾರು ಜನರ ಹತ್ತಿರ ಟಿಕೆಟ್ ಈಸ್ಕೊಂಡ್ರಿ, ಅದ್ನೇ ಕೊಟ್ಟಿದ್ದೀರಿ. ಈಗ ಚಕಿಂಗ್ ಇದೆ ಸಿಕ್ಕಿಹಾಕಿಕೊಳ್ತೀನಿ ಅಂತ ಈಗ ಟಿಕೆಟ್ ತೋರ್‍ಸಿ ಅಂತಾರೆ, ಅದ್ಕೆ ಈಗ ನಮ್ಮನ್ನು ಕೇಳ್ತಾ ಇದ್ದೀರಿ. ನಾವು ಸಿಕ್ಕಿ ಹಾಕಿಕೊಂಡ್ರೆ ನಮ್ಮ ಗತಿ ಏನು? ದಂಡ ತೆರಬೇಕು ಇಲ್ಲ.

ಕಂಡಕ್ಟರ್ : ಸ್ವಲ್ಪ ಸುಮ್ನಿರ್‍ತೀಯೋ ಏನು...? ಪೋಲೀಸ್ ಸ್ಟೇಷನ್ ಕಾಣಬೇಕೋ ಅದ್ಕೇ ಈಗ ಕೇಳ್ತಾ ಇರೋದು.

(ಬಸ್ಸು ಹೊರಡುವುದು. ಕ್ಷೇಮೇಂದ್ರ ನಿಲ್ಲಿಸುವನು)

ಕ್ಷೇಮೇಂದ್ರ : ನಿಲ್ಲಿಸ್ರಿ ಬಸ್ಸು... ಏನ್ರೀ... ಸೀಟೆಲ್ಲಾ ಸರಿಯಾಗಿದ್ಯಾ?

ಕಂಡಕ್ಟರ್ : ಸರಿಯಾಗಿದೆ ಸಾರ್.

ಕ್ಷೇಮೇಂದ್ರ : ಎಲ್ಲರಿಗೂ ಟಿಕೆಟ್ ಕೊಟ್ಟಿದ್ದೀರಾ?

ಕಂಡಕ್ಟರ್ : ಕೊಟ್ಟಿದ್ದೀನಿ... ಚೆಕ್ ಮಾಡಿ ಸಾರ್ ಬೇಕಾದ್ರೆ.

ಕ್ಷೇಮೇಂದ್ರ : ನಾವಿಲ್ಲಿದ್ದೀವಿ ಅಂತ ಯಾರಾದ್ರೂ ಹೇಳಿದ್ರಾ ನಿಮ್ಮ ಮಿತ್ರ ಬಸ್‌ನವರು.

ಕಂಡಕ್ಟರ್ : ಏನಿಲ್ಲ ಸಾರ್, ನಾವು ಆ ರೀತಿ ಮಾಡೋದೇ ಇಲ್ಲ...

ಕ್ಷೇಮೇಂದ್ರ : ಗೊತ್ತಾಗುತ್ತೆ... ಗೊತ್ತಾಗುತ್ತೆ... ಎಲ್ಲಪ್ಪಾ... ಟಿಕೆಟ್ಟು...

ಕಂಡಕ್ಟರ್ : ನೋಡಿದ್ರಾ ಸರ್.

ಕ್ಷೇಮೇಂದ್ರ : ಆಯ್ತು ನಡೀರಿ.

(ಬಸ್ ಹೊರಡುವುದು)

ಕ್ಷೇಮೇಂದ್ರ : ಈ ಹೊತ್ತು ಒಂದು ಬಸ್ಸಿನ ಚೆಕಿಂಗ್ ಮಾಡಿವಾಗ ಅನೇಕ ಜನರಿಗೆ ಟಿಕೆಟ್ ಕೊಡ್ದೇ ಹೋದದ್ದು, ಜನರು ತೆಗೆಮುಕೊಳ್ಳದೇ ಹೋಪದ್ದು ಕಂಡು ಬಂತು. ಆದ್ರೆ ಮತ್ತೆ ಬರೋ ಬಸ್‌ನಲ್ಲಿ ಎಲ್ಲಾ ಸರಿಯಾಗಿರ್ತಿತ್ತು.

ಬಾಸ್ : ಇದಕ್ಕೆ ಕಾರಣ?

ಕ್ಷೇಮೇಂದ್ರ : ಆತನು ಸಾಚಾ ಏನೂ ಅಲ್ಲ ಸಾರ್, ಚೆಕಿಂಗ್ ಆದ ಬಸ್ಸಿನವ ಆತನಿಗೆ ತಿಳಿಸಿ ಬಿಡ್ತಾನೆ. ಅಲ್ಲೇ ಸರಿ ಮಾಡಿಕೊಂಡು ಬಂದು ಬಿಡ್ತಾರೆ.

ಬಾಸ್ : ಅದಕ್ಕೆ ನೀವು...

ಕ್ಷೇಮೇಂದ್ರ : ನಾವು ಬೇರೆ ಬೇರೆ ಕಡೆ ನಿಂತು ಪ್ರಯತ್ನ ಮಾಡ್ತೀವಿ.

ಬಾಸ್ : ಏನೋ ಗಾದೆ ಹೇಳ್ತಾರಲ್ಲಾ ಕಾಯುವವ ಹೆಚ್ಚೋ ಕಳುವವ ಹೆಚ್ಚೋ... ಹಾಗೇ... ನೀವು ಒಂದು ರೀತಿ ಕಂಡು ಹಿಡಿತೀರಿ. ಅವ್ರು ಒಂದು ರೀತಿ ತಪ್ಪಿಸಿಕೊಳ್ತಾರೆ.

ಕ್ಷೇಮೇಂದ್ರ : ಏನೋ ಆಗಲೀ ಸಾರ್, ನಮ್ಮವರ ಭ್ರಷ್ಟಾಚಾರ ನಿಲ್ಲಬೇಕು. ಆಗ ಜನಗಳು. ನ್ಯಾಯವಾಗಿ ಟಿಕೆಟ್ ತೆಗೆದುಕೊಳ್ತಾರೆ ಹಣದಾಸೆಗೆ. ಇವ್ರೇ ಕಮ್ಮಿ ಹಣ ತೆಗೆದುಕೊಂಡು ಟಿಕೆಟ್ ಕೊಡದೇ ಕಿಸೆಗೆ ಹಣ ಬಿಡ್ತಾರೆ. ಹಳೇ ಟಿಕೆಟ್ ಇಳಿಯುವವರ ಹತ್ತಿರ ಈಸಿಕೊಂಡು ಅದ್ನೇ ಹೊಸ ಟಿಕೆಟ್ ಅಂತ ಕೊಡ್ತಾರೆ.

ಬಾಸ್ : ನಾಲ್ಕು ಜನರನ್ನು ಕೆಲಸದಿಂದ ತೆಗೆದುಹಾಕಿದ್ರೆ ಎಲ್ರೂ ಸರಿ ಹೋಗುತ್ತಾರೆ. ಬಿಗಿ ಇರಲಿ.

ಕ್ಷೇಮೇಂದ್ರ : ಈ ಸಾರಿ ಒಬ್ಬ ಬಸ್ಸಿನ ಕಂಡಕ್ಟರ್‌ನನ್ನು ಡಿಸ್‌ಮಿಸ್ ಮಾಡಬಹುದು ಸಾರ್ ಆತನಿಗೆ ನೋಟೀಸ್ ಕೊಟ್ಟು ಬಂದಿದ್ದೀನಿ.

ಬಾಸ್ : ಮೊದಲನೇ ಸಾರೀನಾ ಇದು.

ಕ್ಷೇಮೇಂದ್ರ : ಇಲ್ಲ ಸಾರ್ ಆತ ಈ ರೀತಿ ಮಾಡ್ತಾ ಇರೋದು ಮೂರನೇ ಸಾರಿ ನೋಡಿದೆ. ಈತ Continue ಮಾಡೋದನ್ನ ನೋಡಿ ಈ ಸಾರಿ warning ಕೊಟ್ಟೆ, ದಂಡ ಹಾಕಿದೆ, ಈಗ ಆತನನ್ನು ಕೆಲಸದಿಂದ ತೆಗದು ಹಾಕುವುದು ಲೇಸು ಸಾರ್, ಅದು ತಮಗೆ ಬಿಟ್ಟಿದ್ದು.

ಬಾಸ್ : ಒಳ್ಳೆ ಕೆಲಸ ಮಾಡಿದ್ರಿ. ನಾನು ಆತನ ಬಗ್ಗೆ Action ತೆಗೆದುಕೊಳ್ತೀನಿ ಯೋಚನೆ ಮಾಡಿ.

ಕ್ಷೇಮೇಂದ್ರ : yes sir...

* * *

## ದೃಶ್ಯ ೮

(ಜೀಪ್ ಬಂದು ನಿಲ್ಲುವುದು. ಗದ್ದೆಯ ವಾತಾವರಣ)

ಕ್ಷೇಮೇಂದ್ರ : ಏನಪ್ಪಾ... ಬೆಳೆ ಹ್ಯಾಗಿದೆ?

ಸಂಜೀವಪ್ಪ : ಇದೋ ನೋಡಿ ಸ್ವಾಮಿ ಹೀಗಿದೆ...ಏನು ಹಾಳು ರೋಗ ಬಂದುಬುಟ್ಟಿದೆ...ಏನು ಔಸದ ಹಾಕಿದ್ರೂ ಇಂಗೇ ಅದೇ...

ಕ್ಷೇಮೇಂದ್ರ : ನಿಮ್ಮ ಹೆಸರು?

ಸಂಜೀವಪ್ಪ : ಸಂಜೀವಪ್ಪ.

ಕ್ಷೇಮೇಂದ್ರ : ಏನೋ ಔಷಧ ಸರಿ ಇಲ್ವೋ?

ಸಂಜೀವಪ್ಪ : ನೀವೇನು ವ್ಯವಸಾಯ ಇಲಾಖೆಯವ್ರಾ ಸ್ವಾಮಿ?

ಕ್ಷೇಮೇಂದ್ರ : ಅಲ್ಲಪ್ಪಾ...

ಸಂಜೀವಪ್ಪ : ಮತ್ತ ನಿಮಗೇನು ಗೊತ್ತಾತದೆ ಬುಡಿ. ಅವ್ರೇ ಅದಾಕಿ, ಇದಾಕಿ ಅಂತಾರೆ, ನಾವು ಅದಾಕುದ್ರೂ ಏನೂ ಆಗಲ್ವಲ್ಲ ಏನು ಮಾಡದು? ಇನ್ನೂ ನೀವು ಏನೇಳ್ತೀರಿ?

ಕ್ಷೇಮೇಂದ್ರ : ಅದೇ ಏನು ಅಂತ ತಿಳ್ಕಳೋವ ಅಂತ.

ಸಂಜೀವಪ್ಪ : ಅಯ್ಯೋ ನಮ್ಮೂರ ಕಥೆ ಯೇಳಿದ್ರೆ ರಾಮಾಯಣ ಬಿಡಿ. ರಾಮಾಯಣಕ್ಕೆ ಒಂದು ಕೊನೆಯಾದ್ರೂ ಇದೆ. ಇದಕ್ಕೆ ಇಲ್ಲ. ಜನಗಳಾಗ ಅದೇನು ಮೋಸವೋ ನಾ ಕಾಣೆ, ದುಡ್ಡೇ ಹೆಚ್ಚಾಗೋಯ್ತು ಮನುಷ್ಯನಿಗೆ, ಒಂದು ನಿಯತ್ತಿಲ್ಲದಾಗಾಯ್ತು.

ಕ್ಷೇಮೇಂದ್ರ : ಏನಾಯ್ತು ಹೇಳಬಾರದೇ ಸಂಜೀವಪ್ಪನವರೇ?

ಸಂಜೀವಪ್ಪ : ಅಯ್ಯೋ ನಾ ಹೇಳದು ಸುಂಕದವನ ಮುಂದೆ ಸುಖ ದುಃಖ ಹೇಳ್ಕಂಡಂಗಾತದೆ ಅಷ್ಟೇ ನಿಮ್ಮ ಹತ್ತಿರ ಹೇಳೋದು. ಅಂದ ಹಾಗೆ ತಮ್ಮ ಪರಿಚಯ ಆಗ್ನಿಲ್ವಲ್ಲ ಸ್ವಾಮಿ.

ಕ್ಷೇಮೇಂದ್ರ : ನನ್ನ ಹೆಸರು ಕ್ಷೇಮೇಂದ್ರ ಅಂತ. ಇಲ್ಲೇ ಬಂದಿದ್ದೇ, ಹಾಗೆ ನಿಮ್ಮ ಗದ್ದೆ ನೋಡಿದ್ನಲ್ಲ, ಯಾಕೆ ಹೀಗಾಗಿದೆ. ನೀವು ಯೋಚನೆ ಮಾಡ್ತಾ ನಿಂತಿದ್ರಲ್ಲಾ ಅದ್ಕೆ ಮಾತಾಡಿಸ್ದೆ.

ಸಂಜೀವಪ್ಪ : ಏನೋ ಗಾದೆ ಹೇಳ್ತಾರಲ್ಲ ಹಾಗೆ ಕಾಸೂ ಕೇಡು, ತಲೆಯೂ ಜೋಳು ಅಂತ ಹಾಗೆ. ಕಾಸು ಖರ್ಚು ಮಾಡಿಯೂ ವ್ಯವಸಾಯ ಹೀಗಾಯ್ತಲ್ಲ ಅಂತ ವ್ಯಸನವಾಯ್ತುದೆ ಸ್ವಾಮಿ. ನಾನ್ಯಾಕೀ ಮಾತೇಳಲಿಕ್ಕೆ ಬಂದೆ ಅಂದ್ರೆ ಜನಗಳಲ್ಲಿ ನೀತಿ ನಿಯಮ ಅನ್ನೋದೆ ಇಲ್ಲದಾಗಾಯ್ತಲ್ಲ. ಕಾಸು ಸಂಪಾದ್ನೆ ಮಾಡಕ್ಕೆ ಏನೇನು ಮಾಡ್ತಾರೆ?

ಕ್ಷೇಮೇಂದ್ರ : ಏನು ಮಾಡ್ತಾರೆ?

ಸಂಜೀವಪ್ಪ : ಹೀಗೆ ಪತ್ತೆ ಮಾಡಿದ್ದು ಅನ್ನಿ. ನೋಡಿ ಸ್ವಾಮಿ ಮನುಷ್ಯ ಮೋಸ ಮಾಡಿ ಎಷ್ಟು ದಿನ ಇರಕ್ಕಾಗ್ತದೆ? ಒಂದಲ್ಲ ಒಂದು ದಿನ ಸಿಕ್ಕಿ ಹಾಕಿಕೊಳ್ತಾನೆ. ಹಾಗೆಯೇ ಆಯ್ತು ಅನ್ನಿ...

ಕ್ಷೇಮೇಂದ್ರ : ಏನಾಯ್ತು ಹೇಳ್ರಲ್ಲಾ...

ಸಂಜೀವಪ್ಪ : ಅದೇ ಸ್ವಾಮಿ ಈ ಕೀಟನಾಶಕ ಔಷಧ ಅಂತ ಕೊಟ್ಟನಲ್ಲಾ ಅದು ಕಂಪ್ನೀಲಿ ತಯಾರು ಮಾಡದ್ದಲ್ವಂತೆ. ಅದನ್ನೆಲ್ಲಾ ಡಬ್ಬದ ಹಿಂದೆ ಸಣ್ಣ ತೂತ ಮಾಡಿ ಎಳಕೊಂಡು ಸ್ವಲ್ಪ ಹಾಕಿ ಏನೋ ಕಲಬೆರಕೆ ಮಾಡಿ ಕೊಡ್ತಾರೆ. ಅದು ಯಾರಿಗೆ ಗೊತ್ತಾಗಬೇಕು. ನಮ್ಮಂಥ ಹಳ್ಳಿ ರೈತರಿಗೆ ಆದ್ರೆ, ಬುದ್ಧಿವಂತರೂ ಇರ್ತಾರೆ ಬುಡಿ, ಅದನ್ನು ಪತ್ತೆ ಮಾಡ್ಬುಟ್ರು.

ಕ್ಷೇಮೇಂದ್ರ : ಹ್ಞಾಂ ಹೀಗೂ ಮಾಡೋದುಂಟಾ?

ಸಂಜೀವಪ್ಪ : ಅಯ್ಯೋ ಇದೇ ಏನು, ಇನ್ನು ಏನೇನೋ ಮಾಡ್ತಾರೆ ಬಿಡಿ. ನಾನು ಯಾಕೀ ಮಾತು ಹೇಳಲಿಕ್ಕೆ ಬಂದ್ರೇ ಹೈಬ್ರಿಡ್ಡು ಅಂತ ಎಂತದೋ ತೆಂಗಿನ ಸಸಿ ಕೊಡೋದು ಅದು ಬೆಳೆದು ಕಾಯಿ ಬಿಟ್ಟು ಬರೋತನ್ಕ ಏಳೆಂಟು ವರ್ಷ ಬೇಕು. ಅಲ್ಲಿಯವರೆಗೆ ಮಾರ್ದವ ಎಲ್ಲಿರ್ತಾನೆ? ಏನು ಕೇಳ್ತೀರಿ?

ಕ್ಷೇಮೇಂದ್ರ : ಅಂತೂ ಈಗ ನೀವು ಹಾಕಿದ ಕ್ರಿಮಿನಾಶಕ.

ಸಂಜೀವಪ್ಪ : ಹೇಳಿದ್ನಲ್ಲಾ... ಹೊಳೀಗೆ ಹುಣಸೇ ಹಣ್ಣು ತೇದಂಗಾತು.

ಕ್ಷೇಮೇಂದ್ರ : ಅದರಲ್ಲಿ ಸೀಲ್ ಇರುತ್ತೆ. ಅದನ್ನು ನೋಡ್ಕೊಳ್ಳಲಿಲ್ವೇ?

ಸಂಜೀವಪ್ಪ : ಅಯ್ಯೋ ಅವರೇ ಯಾವುದೋ ಒಂದು ಸೀಡ್ ಹಾಕಿ ಕೊಟ್ಬುಡ್ತಾರಂತೆ ನಮಗೆಂಗೆ ಗೊತ್ತಾಗಬೇಕು?

ಕ್ಷೇಮೇಂದ್ರ : ಬೀಜಗಳಾದ್ರೂ ಚನ್ನಾಗಿ ಸಿಕ್ತಾವೋ?

ಸಂಜೀವಪ್ಪ : ಅದರ ಮಾತ್ಯಾಕೇಳ್ತೀರಿ ಬಿಡಿ. ಒಂದೊಂದು ಸಾರಿಗೊಂದೊಂದುಥರ... ಅದು ಗೊತ್ತಾಗದು ಬೆಳೆ ಬಂದಾಗೇ ಅಲ್ವೇ?

ಕ್ಷೇಮೇಂದ್ರ : ಹೀಗಾದ್ರೆ ನಂಬೋದು ಹ್ಯಾಗೆ?

ಸಂಜೀವಪ್ಪ : ಈ ಕಾಲದಲ್ಲಿ ಯಾವುದನ್ನು ನಂಬಲಾಗಲ್ಲ ಸ್ವಾಮಿ. ನಾನು ಯಾಕೀ ಮಾತು ಹೇಳಲಿಕ್ಕೆ ಬಂದೆ ಅಂದ್ರೆ ಮೋಸ... ಮೋಸ...ಬರೇ... ಮೋಸ... ನಾವು ಹ್ಯಾಗೇ ನಂಬಬೇಕೋ? ಹ್ಯಾಗೆ ವ್ಯವಸಾಯ ಮಾಡಬೇಕೋ ಅನ್ನಿಸುತ್ತೆ. ಹಿಂದಿನ ಕಾಲದಲ್ಲಿ ಇವೆಲ್ಲಾ ಇರ್ಲ್ನೇ ಇಲ್ಲ, ನಮ್ಮ ಜನ ಸಮೃದ್ಧವಾಗಿ ಬೆಳೀತಿದ್ರು ಈಗ ನವ ನೂತನ ಬಂದು ಏನೇನೋ ಕಂಡು ಹಿಡಿದು ನಮ್ಮ ಕಣ್ಣಿಗೆ ಮಣ್ಣು ಎರಚುವ ಕೆಲಸ ಮಾಡಲಿಕ್ಕೆ ಶುರು ಮಾಡಿಬಿಟ್ಟಿದ್ದಾರೆ. ಕೆಲವು ಪೌಡರ್ ಹಾಕಿದ್ರೆ ಹುಳುಗಳು ಸಾಯ್ತಾವೆ ಅಂತ ಕೊಡ್ತಾರೆ. ಅದೆಂತಾ ಪೌಡರ್ ಕೊಡ್ತಾರೋ ಆ ದ್ಯಾವರ್ಗೆ ಗೊತ್ತು. ಅದರಿಂದ ಏನೇನೂ ಆಗಲ್ಲ. ಎಲ್ಲಾ ಮೋಸವಂತೆ ಅದ್ಕೇ... ಹೆಚ್ಚಿಗೆ ಬೆಳ್ಯೋದು ಬ್ಯಾಡ. ಏನೇನೋ ಗೊಬ್ಬರ ಗೋಡಂತೆ, ಯಾರಿಗೆ ಗೊತ್ತು? ಮೋಸ ಮಾಡಿದ್ರೆ, ಸುಮ್ಮನೆ ನಮ್ಮ ಕಿಸೆಲಿರೋ ಹಣ ಕೇಡು.

ಕ್ಷೇಮೇಂದ್ರ : ಇದಕ್ಕೆ... ಏನು ಮಾಡಬೇಕು ಅಂತೀರಿ?

ಸಂಜೀವಪ್ಪ : ಏನೋ ವ್ಯವಸಾಯದ ಇಲಾಖೆಯವ್ರೇ ಏನಾದ್ರೂ ಮಾಡಿದ್ರೆ... ನಾವು ಸ್ವಲ್ಪ ಬದಿಕೊಳ್ಳಬಹುದು. ಇಲ್ಲದೆ ಹೋದ್ರೆ ನಾವು ಕಷ್ಟಪಟ್ಟು ಸಂಪಾದ್ನೆ ಮಾಡಿದ್ದೂ, ಬೆವರು ನೀರು ಸುರಿಸುದ್ದು ಎಲ್ಲಾ ಮೋಸವಾಯ್ತದೆ ಸ್ವಾಮಿ.

ಕ್ಷೇಮೇಂದ್ರ : ಇದನ್ನು ತಿಳಿದವ್ರಲ್ಲಿ ವಿಚಾರಿಸಿ ಮಾಡಬೇಕು.

ಸಂಜೀವಪ್ಪ : ರೇಡಿಯೋದಾಗೆ ಹೇಳ್ತಾನೇ ಇರ್ತಾರೆ. ಅಲ್ಲೋಗಿ ಕೇಳ್ದುವು. ಮಣ್ಣಿನ ಪರೀಕ್ಷೆ ಮಾಡಿ. ಯೇನು ಹಾಕಬೇಕು ಅಂತ ವ್ಯವಸಾಯ ಇಲಾಖೆಗೆ ಕಳಿಸಿ ಕೊಟ್ರು: ಆಮೇಲೆ ಅವರು ಎಲ್ಲಾ ಟೆಸ್ಟ್ ಮಾಡಿ ಏನೇನಾಕಬೇಕು ಅಂತ ಹೇಳಿದ್ರು. ಆದ್ರೆ ವ್ಯಾಪಾರಗಾರರು ಮೋಸ ಮಾಡಿದ್ರೆ.

ಕ್ಷೇಮೇಂದ್ರ : ಅದನ್ನು ಸಂಬಂಧ ಪಟ್ಟವರಿಗೆ ತಿಳಿಸಿದ್ರೆ ಅವರಿಗೆ ಸರಿಯಾದ ಶಿಕ್ಷೆ ಆಗುತ್ತೆ.

ಸಂಜೀವಪ್ಪ : ಯಾರು ಅಂತ ನಮಗೇನು ಗೊತ್ತಾಗಬೇಕು ಬುಡಿ. ನಿಯತ್ತಿಲ್ಲದ ಜನ. ಚನ್ನಾಗಿರೋ ಬೀಜ ಅಂತ ಕೊಡ್ತಾರೆ, ಆದ್ರೆ ಅದರ ಪುಳಾಕು ತೆನೆ ಬಂದಾಗ ಗೊತ್ತಾತದೆ. ಅಳೀನು ಕುರುಡು ಬೆಳಗಾದ ಮೇಲೆ ಅಂತಾರಲ್ಲ ಅಂಗಾತು ಬಿಡಿ. ನಾನ್ಯಾಕೀ ಮಾತೇಳ್ಲಿಕ್ಕೆ ಬಂದೆ ಅಂದ್ರೆ ನಮಗೆ ಅಷ್ಟು ಬೇಸರವಾಗದೆ ಸ್ವಾಮಿ.

ಕ್ಷೇಮೇಂದ್ರ : ಬೇಸ್ರ ಮಾಡ್ಕೊಳ್ಬಾರ್ದು.

ಸಂಜೀವಪ್ಪ : ಅಲ್ಲಾ ಸ್ವಾಮಿ ವ್ಯವಸಾಯದಲ್ಲಿ ಎಷ್ಟು ಕಷ್ಟ ನಷ್ಟ ಅನುಭವಿಸಬೇಕು ನಾವು... ಮೊದ್ಲೇ ನಷ್ಟದ ವ್ಯವಹಾರ, ಅದರ ಮೇಲೆ ಈ ಮೋಸಕ್ಕೆ ಹಣ ಹೋದ್ರೂ ಹೋಗಲಿ, ವ್ಯವಸಾಯವೆಲ್ಲಾ ಹೊರಟು ಹೋದ್ರೆ

ಏನು ಬದುಕೋದು ಸ್ವಾಮಿ? ಅದ್ಕೇ ಏನೂ ಹಾಕದೇ ಬೇಡ, ಇವತ್ತಿನ ಹೊಸ ರಾಸಾಯನಿಕ ಗೊಬ್ಬರ, ಔಷಧಗಳು ಅನ್ನಿಸುತ್ತದೆ. ಆದ್ರೆ ಎಷ್ಟು ಜನಕ್ಕೆ ದನಕರು ಅವೆ ಹೇಳಿ? ಗೊಬ್ಬರಕ್ಕೆ ಅದೊಂದು ಕಸ್ಟ. ಎಲ್ರೂ ಈಗ ಈ ಹೊಸಗೊಬ್ಬರಗಳನ್ನೇ ನಂಬ್ಕಳ್ಬೇಕು.

ಕ್ಷೇಮೇಂದ್ರ : ಆಯ್ತು ನಿಮ್ಮ ಊರಿನ ಈ ವ್ಯಾಪಾರಿಗೆ ತರಾಟೆ ತೆಗೆದುಕೊಳ್ಳಲಿಲ್ವೇ?

ಸಂಜೀವಪ್ಪ : ಹತ್ತು ದಿನ ಕದ್ದ ಕಳ್ಳ ಒಂದು ದಿನ ಸಿಕ್ಕಿ ಹಾಕಿಕೊಳ್ಳೋದಿಲ್ವೇ? ಸಿಕ್ಕಿ ಹಾಕಿಕೊಂಡು ಒಂದು ಸಾರಿ ಫೈನ್ ಹಾಕಿದ್ರೂ ಆಮೇಲೆ ಅವನ ಅಂಗಡಿ ಲೈಸನ್ಸನ್ನೇ ತೆಗೆದಾಕ್ಬುಟ್ರು.

ಕ್ಷೇಮೇಂದ್ರ : ಆ ರೀತಿ ಮಾಡವ್ನು ಒಂದು ದಿನವಲ್ಲ ಒಂದು ದಿನ ಸಿಕ್ಕಿ ಹಾಕಿಕೊಳ್ಳಲೇಬೇಕು. ಇದನ್ನೆಲ್ಲಾ ಕಂಡು ಹಿಡಿದು ಆತನಿಗೆ ಲೈಸನ್ಸ್ ಇಲ್ಲದಂತೆ ಮಾಡಿದವನೇ ನಾನು.

ಸಂಜೀವಪ್ಪ : ಆ ಎಂಥ ಕೆಲ್ಸ ಮಾಡಿದ್ರಿ...? ನಿಮ್ಮಂಥವ್ರಿಂದ ನಮ್ಮ ಬೆಳೆ ಅಭಿವೃದ್ಧಿ ಹೊಂದಬೇಕು ಬಿಡಿ.

ಕ್ಷೇಮೇಂದ್ರ : ನೋಡು ಸಂಜೀವಪ್ಪ ಈ ರೀತಿಯ ಜನ ಎಲ್ಲಾ ಕಾಲದಲ್ಲೂ ಇದ್ದವರೇ ಅಂಥವರನ್ನು ಆಗಾಗ ಸದೆ ಬಡಿಯುತ್ತಲೇ ಇರಬೇಕು.

ಸಂಜೀವಪ್ಪ : ಒಳ್ಳೆ ಕೆಲಸ ಮಾಡಿದ್ರಿ ಬಿಡಿ... ಬೇಷ್ ನನ್ನಪ್ಪ ನೀವು ನೂರು ವರ್ಷ ಬಾಳ್ರೀ ಆಶ್ಚರ್ಯ ಆಶ್ಚರ್ಯ.

ಕ್ಷೇಮೇಂದ್ರ : ಅಯ್ಯೋ ನನ್ನ ಕೆಲಸ ನಾನು ಮಾಡಿದೆ. ಸರ್ಕಾರದವರು ನೇಮಿಸಿರೋದ್ಕೇ. ಇದಕ್ಕೆ ಈ ಕೆಲಸ ಮಾಡಿದ್ರಲ್ಲಿ ಆಶ್ಚರ್ಯ... ಏನು ಬಂತು?

ಸಂಜೀವಪ್ಪ : ಆಯ್ಯೋ ಎಷ್ಟೋ ಜನ ಅಷ್ಟು ಇಷ್ಟು ಹಣ ಕೊಟ್ಬುಟ್ರೆ ಈಸಿಕೊಂಡು ಹಾಗೇ ಬಟ್ಬು ಬುಟ್ಬು ಹೋಗ್ತಾರೆ. ಅಂಗೂ ಆಗದೆ ಸ್ವಾಮಿ ಆದ್ರೆ ಯಾವುದಕ್ಕೂ ನಿಮ್ಮಂಥವರು ಬೇಕು.

ಕ್ಷೇಮೇಂದ್ರ : ನನಗೂ ಕೊಡಲಿಕ್ಕೆ ಬಂದ ಆದ್ರೆ...

ಸಂಜೀವಪ್ಪ : ನಿಮ್ಮಂಥವ್ರಲ್ಲಿ ಒಪ್ತೀರಿ ಬಿಡಿ. ನಿಮ್ಮಂಥವ್ರೆಷ್ಟು ಜನ ಸ್ವಾಮಿ? ಬೆರಳೆಣಿಸುವಷ್ಟು. ಏನೋ ಸ್ವಾಮಿ ನಿಮ್ಮನ್ನು ಗಮನಿಸಲಿಲ್ಲ ಕ್ಷಮಿಸಿ.

ಕ್ಷೇಮೇಂದ್ರ : ನನಗೆ ನಿಮ್ಮ ಮನಸ್ಸಿನ ದುಃಖ ಅರ್ಥವಾಗಿದೆ ಸಂಜೀವಪ್ಪನವರೇ. ಈಗ್ಲಾದ್ರೂ ಸರಿಹೋಯ್ತೋ ಅಂತ ಕೇಳಲಿಕ್ಕೆ ಬಂದೆ.

ಸಂಜೀವಪ್ಪ : ಈಗ ಹಾಕಿದ ಔಷಧ ಸ್ವಲ್ಪ ಕೆಲಸ ಮಾಡಿದೆ ಸ್ವಾಮಿ, ಅದ್ನೇ ನೋಡ್ತಾ ಇದ್ದೆ.

ಕ್ಷೇಮೇಂದ್ರ : ಒಳ್ಳೇದು ನಾನು ಬರ್ತೀನಿ.

ಸಂಜೀವಪ್ಪ : ಸ್ವಾಮಿ... ನಾನ್ಯಾಕೇ ಕೇಳ್ಲಿಕ್ಕೆ ಬಂದ್ರೆ ಅಂದ್ರೆ.. ನನಗೆ ಬೇಸರವಾಗೋಗಿತ್ತು. ನನ್ನಂತೇ ನಮ್ಮೂರಾಗೆ ಎಷ್ಟೋ ಜನ ಈ ರೀತಿ ಕಸ್ಟ ಅನುಭವಿಸ್ತಿದ್ರು.

ಅದಕ್ಕೆ ಹೇಳ್ದೆ... ಸ್ವಾಮಿ... ನಮ್ಮ ಮನೆಯಲ್ಲಿ ಈ ಹೊತ್ತು ಊಟ ಮಾಡ್ಕೊಂಡೋಗ್ಬೇಕು ನಡೀರಿ.

ಕ್ಷೇಮೇಂದ್ರ : ಇಲ್ಲ ಸಂಜೀವಪ್ಪನವರೇ ನಾನು ಬರ್ತೇನೆ. ಇನ್ನು ಯಾವಾಗಲಾದ್ರೂ ಬಂದ್ರಾಯ್ತು.

ಸಂಜೀವಪ್ಪ : ಏನೋ ನಾನು ಕರೀತಾ ಇರೋದು ಪ್ರೀತಿಯಿಂದ ಸ್ವಾಮಿ...

ಕ್ಷೇಮೇಂದ್ರ : ಇಲ್ಲ ನಾನು ಅರ್ಜೆಂಟ್ ಯಾವುದೋ ಕೆಲಸದ ಮೇಲೆ ಹೋಗಬೇಕು.

ಸಂಜೀವಪ್ಪ : ಒಳ್ಳೇದು ಸ್ವಾಮಿ ನಮಸ್ಕಾರ. ನಿಮ್ಮಂಥವ್ರು ಆಗಾಗ ಬಂದು ಈ ರೀತಿ ಆಗೋ ಅನಾಹುತಗಳನ್ನು ತಪ್ಪಿಸಬೇಕು.

ಕ್ಷೇಮೇಂದ್ರ : ಆಯ್ತು ನೀವು ಯಾವಾಗ Complaiant ಕಳಿಸ್ತೀರೋ ಆಗ ನಾವು ಬಂದೇ ಬಿಡ್ತೀವಿ...ನಿಮ್ಮ ಕಷ್ಟದಲ್ಲಿ ಭಾಗಿಗಳಾಗ್ತೀವಿ.

ಸಂಜೀವಪ್ಪ : ಒಳ್ಳೇದು ಸ್ವಾಮಿ.

(ಜೀಪ್ ಹೊರಡುವುದು)

ಕ್ಷೇಮೇಂದ್ರ : ಮೇ ಐ ಕಮ್ ಇನ್ ಸಾರ್.

ಬಾಸ್ : ಎಸ್.

ಕ್ಷೇಮೇಂದ್ರ : Good Morning Sir.

ಬಾಸ್ : ಏನು ಸುದ್ದಿ...

ಕ್ಷೇಮೇಂದ್ರ : ಅದೇ ಶೆಟ್ಟಳ್ಳಿಗೆ ಹೋಗಿದ್ದೆ? ರೈತರ ಕೆಲವು ಸಮಸ್ಯೆಗಳ ಪತ್ತೆ ಮಾಡಿದೆ.

ಬಾಸ್ : ಏನು ಸ್ವಾರಸ್ಯ?

ಕ್ಷೇಮೇಂದ್ರ : ಬೀಜಗಳಲ್ಲಿ ಮೋಸ, ಕೀಟನಾಶಕ ಔಷಧಗಳ ನಕಲು ಡಬ್ಬಗಳ ಮಾರಾಟ.

ಬಾಸ್ : ಪಾರ್ಟಿ ಸಿಕ್ಕಿ ಬಿದ್ನೇ...

ಕ್ಷೇಮೇಂದ್ರ : ಲೈಸೆನ್ಸ್ ಕ್ಯಾನ್ಸಲ್ ಮಾಡ್ದೇ... ಆ ಊರಿನ ಜನಗಳಿಗೆ ಸಂತೋಷವೋ ಸಂತೋಷ!

ಬಾಸ್ : ಬಹಳ ಒಳ್ಳೆಯ ಕೆಲಸ ಮಾಡಿದೆ. ಮುಂದಿನ ಅನ್ವೇಷಣೆಗೆ ಜಯವಾಗಲಿ.

ಕ್ಷೇಮೇಂದ್ರ : ಎಲ್ಲಾ ತಮ್ಮಂಥ ದೊಡ್ಡವರ ಆಶೀರ್ವಾದ ಸಾರ್.

* * *

# ಕತ್ತಲು - ಬೆಳಕು

## ದೃಶ್ಯ-೧

(ಎತ್ತಿನ ಗಾಡಿ ಸಿದ್ಧೇಶ್ವರ ಬೆಟ್ಟದ ಕಡೆ ಹೋಗುತ್ತಿದೆ.)

(ದೇವಾಲಯದಲ್ಲಿ ಗಂಟಾನಾದ, ಪೂಜೆ ಆದ ಮೇಲೆ,)

ಕರಿಯ : ಕಾಳಿ... ಕಾಳಿ... ಇಂಗ್ ನಾಚ್ಕಂಡ್ರ್ಯಂಗೆ? ಮದ್ವ್ಯಾಗಿ ಎಂಟೊಂಬತ್ತು ದಿನ್ವಾಯ್ತು... ಇನ್ನೂ ಮದ್ವ ಎಣ್ಣು ಅಂತ ತಿಳ್ಕಂಡಿದ್ದಯಾ ಎಂಗೆ? ಅಯ್ ಬಾ ಅಂದ್ರ ಬರಬ್ಯಾಕು. ದ್ಯಾವ್ರಪೂಜ್ಯಲ್ಲಾ ಆಯ್ತಲ್ಲ.

ಕಾಳಮ್ಮ : ಈಗ್ಲೇ ಬರ್ಬಾರ್ದು...?

ಕರಿಯ : ಬಂದಿರದೇ ಗಂಡನ್‌ಕುಟ್ಟ ತಿರ್‍ಗಾಡಕ್ಕೆ ಬರಕಿಲ್ಲ ಅಂದ್ರ್ಯಾಗೆ?

ಕಾಳಮ್ಮ : ಜನ್ಗಳು ನಗಸಾರೆ ಮಾಡ್ತಾರೆ ಆಮ್ಯಾಕೆ ಅಷ್ಟೇ...

ಕರಿಯ : ನಾಚ್ಕ ಅನ್ನಾದ ಊರಾಚಗ್ ಬಿಟ್ಟುಬಟ್ ಬಾ ನೋಡುವ್ವೆ ಬೆಟ್ಟನೆಲ್ಲಾ ತೋರಿಸ್ತೀನಿ. ಭೀಮನ ಕೊಳ, ಭೀಮನಜಾರ ಪಾತಾಳ ಗಂಗಾ... ಆಡಾಣಮ್ಮನ ದ್ಯಾವಸ್ಥಾನ ಎಲ್ಲಾನೂ ನೋಡ್ಕಂಡು ಬರುವು ಬಾ ಅಂದ್ರ... ಬರಬ್ಯಾಕು.

ಕಾಳಮ್ಮ : ಅಂಗರ್ ನಮ್ಮವ್ವ ಕ್ಯಾಳ್ಕಂಡು ಬತ್ತೀವ್ನಿ ತಾಳು.

ಕರಿಯ : ಮದ್ವೆ ಆದ್ಮ್ಯಾಕೆ ಗಂಡನ್ ಮಾತು ಕ್ಯಾಳದು, ನಾ ಯಾಳ್ತಾ ಇವ್ನಿ... ಬಾ ಮತ್ತೆ.

ಕಾಳಿ : ಹ್ಲಾಂ... ಹೊಯ್ತು ಕೈಯಿ... ಬುಡು... ಬುಡು.

ಕರಿಯ : ಕೈ ಯಾನ ಕೊಸರ್ಕಳ್ಳದು ಬಾ ಅಂದ್ರ ಬರಬ್ಯಾಕು.

ಕಾಳಿ : ಬತ್ತಿವ್ನಿ ಬುಡು... ಯಾರಾರು ನೋಡ್ಬುಟ್ಟಾರು...

ಕರಿಯ : ಮಂಕ್ ಸಾಂಬ್ರಾಣಿ ಸುಮ್ನಿರು ಅದ್ಯಾಕೆದ್ರುದಯಿ, ನಿನ್ನ ಕೈಯಿಡಿದು ಎಂಟು ದಿನವೇ ಆಯ್ತಲ್ಲ ಈಗಿಡಿದ್ರ್ಯಾನಾಯ್ತು?

ಕಾಳಿ : ಹೊಸಗ್ಯಾಗ ಗಂಟ ದೂರ್‍ವಾಗಿರಬ್ಯಾಕಂತೆ...

ಕರಿಯ : ಸಾಕು ಬುಡು ನಿನ್ನ ದಿಮಾಕು ಬಾ... ನಾ ಮುಂದ್ ಮುಂದ್ ವೊಯ್ತಿವ್ನಿ, ನೀನು ಇಂದ್ ಇಂದ್ ಬಾ...

ಕಾಳಿ : ಸsರಿ... ನಡೀ...

ಕರಿಯ : ಎಂಗೈತೆ ಬೆಟ್ಟ...?

ಕಾಳಿ : ನಾ ಕಾಣದ್ ಬೆಟ್ಟನಾ...?

ಕರಿಯ : ನೀ ಒಬ್ಬಳೇ ನೋಡಿರಬೈದು, ಈವತ್ತು ನನ್ನ ಜೊತ್ಯೆಗೆ ಬತ್ತಾ ಇದ್ದಯಿ, ಗಂಡನ್ ಜೊತೆ ಈ ವನ ಇಹಾರ ಎಂಗೈತಿ?

ಕಾಳಿ : ತಣ್ಣಗೈತೆ...

ಕರಿಯ : ನೋಡು ಎಂಗ್ ಕಾಣ್ತೈತಿ ನಮ್ಮೂರು.

ಕಾಳಿ : ಇಟೀಟೆ ಕಾಣ್ತಾವೆ ಮನ್ಗೆಳು, ಗಿಡ್‌ಗಳ್ ನೋಡು ಏಟು ಚಿಕ್ಕದಾಗಿ ಕಾಣ್ತೈತಿ... ಮನಸರು ಬತ್ತಾ ಇದ್ರೆ ಒಳ್ಳೆ ಇರವೆ ಸಾಲ್ನಾಗೆ ಕಾಣ್ತೈತಿ ಅಲ್ವಾ?

ಕರಿಯ : ಇಲ್ಲ ನಿಂಗ್ ಎತ್ತರಕ್ ಕಾಣ್ತೈತಿ... ಅಯ್ ಪೆಕ್ರು ಮೂದೇವಿ ಹೋಗು ಈಗ ಬೆಟ್ಟದ ಕೆಳಗೆರದ್ನೆಲ್ಲಾ ನೀ ಆಗ್ಲೇ ನೋಡಿದ್ದಯಿ. ಈಗ ಬೆಟ್ಟದ ಮ್ಯಾಕಿರದು ನೋಡುವ್ಯಂತೆ ಅಲ್ವಾ...

ಕಾಳಿ : ಅವ್ಯಾನ್ ನಾ ನೋಡ್ದೇ ವಾದ್ದತಕ್ಕೋ...

ಕರಿಯ : ನೋಡಿರ್‍ಳೋದು ಇಸಯ ಗೊತ್ತಾ... ಯಾಳ್ದಾಯಾ?

ಕಾಳಿ : ಅದ್ಯಾನ ಯಾಳು ಮತ್ತ.

ಕರಿಯ : ಇದು ದ್ವಾಪರಾಯುಗಕಿಂತಲೂ ಇಂದ್ನಿಂದ ಇದ್ದದಂತೆ ಗೊತ್ತಾ? ಪಾಂಡವರು ವನವಾಸ ಮಾಡ್ದಾಗ ಇಲ್ಲೂ ಬಂದಿದ್ರಂತೆ. ಇದೋ ನೋಡು ಇಲ್ಲಿ ಕುದ್ರಕಲ್ಲು.

ಕಾಳಿ : ಕುದರೆ ಇದ್ದಂಗೆ ಐತೆ, ಕತ್ತಿಲ್ವಲ್ಲಾ...

ಕರಿಯ : ಯೇಳ್ತೀವ್ನಿ ಕೇಳು, ಕುಂತಿ ಒಂದು ಜಿನ ವಸಿ ಉಳ್ಳಿ ಆರಾಕಿದ್ಲಂತ, ಒಂದು ಕುದ್ರ ಬಂದು ತಿನ್ತಿತ್ತಂತೆ. ಅರ್ಜುನ ಅದಕ್ಕೆ ಬಾಣ ವೊಡದ್ನಂತೆ. ಅದರ ಸಿರ ವೋಗಿ ತಾಳ್ವಾಡಿ ತಲಮಲಲಿ ಬಿದ್ದು ಬಿಡ್ತಂತೆ ಅದ್ಕೇ ಕುದುರೆ ಕಲ್ಲು ಅಂತ ಯಾಳ್ತವ್ರೆ. ಇದು ಭೀಮನ ಕೊಳ. ಒಂದು ಜಿನ ಭೀಮನಿಗೆ ಬಾಯಾರ್‍ಕ್ಯಾಯ್ತಂತೆ. ನೀರೆಲ್ಲೂ ಸಿಕ್ಕಲಿಲ್ವಂತೆ. ಮಂಡಿಯೂರಿ ಗದೆ ಚುಚ್ಚುದ್ನಂತೆ. ನೀರು 'ಜಿಲ್' ಅಂತ ಬಂದ್ಬುಡ್ತಂತೆ. ಇಲ್ಯಾವಾಗ್ಲೂ ನೀರು ಬತ್ತೋಗಲ್ವಂತೆ. ಇದಕ್ಕೆ ಭೀಮನಕೊಳ ಅಂತ ಹೆಸರು ಬಂತು.

ಕಾಳಿ : ಈ ಹಕ್ಕಿ ಸಬ್ದ ಬುಟ್ರೆ, ಗಾಳಿ ಸಬ್ದ ಬುಟ್ರೆ, ಏನೇನೂ ಸಬ್ದಿಲ್ಲ. ಎಷ್ಟೊಂದು ಸಾಂತವಾಗೈತಿ. ಇಲ್ಲೇ ಕೂತ್ಕಂಬುಡ್ಲಾ ಅನ್ನಸ್ತೈತೆ.

ಕರಿಯ : ಮತ್ತ್, ಬರಕಿಲ್ಲ ಅನ್ತಿದ್ದೆ.

ಕಾಳಿ : ನೀ ಕತೆ ಏಳದು, ನೋಡ ಸ್ಥಳಗಳನ್ನು ತೋರಸದ್ ನೋಡಿದ್ರೆ ಈವತ್ತೆಲ್ಲಾ ಇಲ್ಲೇ ಕಾಲ ಕಳದ್ ಬುಡನ್ಯಾ ಅನ್ನಸ್ತೈತಿ.

ಕರಿಯ : ಅಲ್ ಕಾಣದೇ ಭೀಮನ ಅಜಾರ. ಅಲ್ಲೊಂದು ಸೊಳ್ಳಿಕ್ಕಿದ್ನಂತೆ. ನೋಡು ಆ ಬಂಡೆಲೇ ಕೊರ್‍ದಿರದಾ, ಬ್ಯಾಸಿಗೆ ಕಾಲಕ್ಕೆ ಏಟೊಂದು ಚನ್ನಾಗಿ ನಿದ್ರ ಬತ್ತೈತೆ ಇಲ್ಲಿ ಗೊತ್ತಾ...? ಸೌದೆ ತರಕ್ಕೆ ಬತ್ತಿದಾಗ ಬಿಸ್ಲಾಯ್ತು ಅಂದ್ರ ಇಲ್ಲೊಸಿ ವೊತ್ತು ಕೂತ್ಕಂಡು ಹಲ್ಬೆ ವೊಡಕೊಂಡು ಬತ್ತಿದು ಗೊತ್ತಾ?

ಕಾಳಿ : ಅಲ್ ಕಾಣುತ್ತಲ್ಲಾ ಅದ್ಯಾನಾ?

ಕರಿಯ : ಅದು ಪುಸ್ತಕದ ಕಲ್ಲಂತ, ಧರ್ಮರಾಯ ಓತ್ತಿದ್ನಂತೆ. ಅದರ ಪಕ್ಕದಾಗೆ ಒಂದು ಕಲ್ ಸಿಕ್ಕಸವ್ರ ನೋಡು ಅಲ್ಲೊಂದು ಗುಹೆ ಇತ್ತಂತೆ. ಅದರದೊಂದು ಕತ್ಯೇ.

ಕಾಳಿ : ಅದ್ಯಾನ ವೊಸಿ ಯೇಳು.

ಕರಿಯ : ಇಲ್ಲಿ ರುಸಿಗಳು ತಪಸ್ಸು ಮಾಡ್ತಿದ್ರು. ಒಂದು ಸಾರಿ ಕುರಿ ಆ ಗುಹೆ ಒಳಕೊಯ್ತಂತೆ. ಕುರಿ ವೋಯ್ತಲ್ಲಾ ಅಂತ ಕುರಿ ಕಾಯವ್ನೂ ವೋದ್ನಂತೆ. ರುಸಿಗಳ ಕಂಡ. ಅವರು ವೂರಿಗೋವ ಮ್ಯಾಕೆ ಯಾರ್ಗೂ ಯಾಳ್ಬೇಡ, ಯೇಳಿದ್ರೆ ನಿನಗೆ ಒಳ್ಳೇದಾಗಕಿಲ್ಲ. ಈಗ ಗಂದ ಎರುಚ್ತೀನಿ, ಇದು ಜಿನಾ 'ಗಮ್' ಅನ್ತಿರ್‍ತೈತೆ. ನೀ ಬಾಯ್ಬುಟ್ರೆ ಇದೇ ಗುಳ್ಳೆಯಾಗಿ ಸಾಯ್ತಿಯಾ ಅಂದ್ರಂತೆ. ವಿದ್ಯೆ ಗೊತ್ತಿಲ್ಲದವನಿಗೆ ಶಾಸ್ತ್ರದ ಕಟ್ಟುಕೊಟ್ಟು ಇದನ್ನು ಜನಗಳಿಗ್ಯಾಳ್ಕಂಡು ಇರು ಅಂದ್ರಂತೆ. ಅವ ಒಂದು ಜಿನ ಎಡ್ತಿಯೊಂದಿಗೆ ಬಾಯ್ಬುಟ್ಬುಟ್ಟ. ಸರಿ ಸತ್ತುವೋದ ಅನ್ನು.

ಕಾಳಿ : ಕುಂತಿ ಅಣಕಲ್ಲು ಆಡ್ತಿದ್ದಳಂತಲ್ಲಾ ಅದು ತೋರ್‍ಸು-

ಕರಿಯ : ನಡ-ನೋಡಲ್ಲಿ ಅವೇ ಕುಂತಿ ಆಡ್ತಿದ್ದ ಅಣ್ಕಲ್ಲುಗಳು.

ಕಾಳಿ : 'ಸಿದ್ದಪ್ಪ' ಎಲ್ಲಿಂದ ಬಂದ?

ಕರಿಯ : ಉಜ್ಜನಿ ಕಡೆಯಿಂದ ಬಂದ ಅಂತ ಯೋಳ್ತವ್ರೇ. ಅವನ ಮೈಮೆ ಬಲ್ಲವ್ರ್ಯಾರು, ಯೋಳು ಮತ್ತ.

ಕಾಳಿ : ನೀ ಯಾಳ್ದಲ್ಲಾ ಅವೆಲ್ಲಾ ನಿಜ್ವಾ?

ಕರಿಯ : ನಮ್ಮ ಜನಗಳ್ಯಾಳ ಕತೆಗಳು, ಇದ್ಯಾಕ ಸಾಕಾಯ್ತಾ, ಕೂತ್ಕಂಡೇ.

ಕಾಳಿ : ಬಿಸಲು ಏರ್‍ಬುಡ್ತು... ಬೆವರು ಕಿತ್ಕೊಂಡದೆ ವಸಿ...

ಕರಿಯ : ಒರಸ್ಕೊಡ್ಲಾ... ತಾಳು...

ಕಾಳಿ : ಬ್ಯಾಡ ನನ್ನ ಸೀರೆ ಸೆರ್‍ಗಿರದ್ಯಾಕ?

ಕರಿಯ : ಆ... ಏನ್ ಕೆಂಪಗಾಗ್ಬುಟ್ಟೆ ಬಿಸಿಲ್ಗೂ ಅದ್ಕೂವೆ... ಒಳ್ಳೆ ಕೆಂಚ್ ಪರಂಗಿ ಯವ್ರಂಗಿದ್ದಯಿ ಕಣಮ್ಮಿ ಇಂಗೇ ಕುಂತಿದ್ರೆ...

ಕಾಳಿ : ಕುಂತಿದ್ರೆ...

ಕರಿಯ : ನೋಡ್ತಿದ್ರೆ...

ಕಾಳಿ : ನೋಡ್ತಿದ್ರೆ........

ಕರಿಯ : ನೋಡ್ತಾನೇ ಕೂತ್ಕಳ್ಲಾ ಅನ್ನಿಸ್ತೈತೆ.

ಕಾಳಿ : ನೋಡ್ಕಂಡು ಕೂತ್ಕೋಬ್ಯಾಡ ಅಂದವ್ರ್ಯಾರು? ನನ್ನ ಮೊಕದಲ್ಲಿ ಗೊಂಬ್ ಕುಣಿತೈತಾ...?

ಕರಿಯ : ಏನೋ ಒಂದು ಮೋಡಿ ಐತೆ. ಅದ್ಸರಿ ಕಾಳಿ... ನೀನು ಈ ಪಾಟಿ ಕೆಂಪ್ಗಿದ್ರೂ ಕಾಳಿ ಅಂತ್ಯಾಕ್ ಕರದ್ರು ನಿಮ್ಮ ಅಪ್ಪ. ಅವರ್‍ಗ್ಯಾನಾದ್ರೂ ಬುದ್ದಿ ಗಿದ್ದಿ ಇದ್ಯಾ ಎಂಗೆ? ನಾನಾಗಿದ್ರೆ ಕೆಂಪಿ ಅಂತ ಕರೀತಿದ್ದೆ.

ಕಾಳಿ : ಈಗ್ಲೂ ಕರಿಬ್ಯಾಡ ಅಂದವ್ರ್ಯಾರು?

ಕರಿಯ : ಕೆಂಪೀ...

ಕಾಳಿ : ಅಯ್ಯೋ ಬುಡು ಬುಡು.

ಈರಪ್ಪ : ಕಾಳೀ... ಕಾಳೀ...

ಕಾಳಿ : ಬಂದ್ನಪ್ಪೋ... ಬುಡು ಬುಡು... ಬಂದ್ನಪ್ಪೋ... ಬಂದಿ, ಇಲ್ಲೇ ಇವ್ನಿ...

ಕರಿಯ : ಮೆಲ್ಗೋಡು, ಬಿದ್‌ಗಿದ್ಬುಟ್ಟಯಿ.

ಈರಪ್ಪ : ಏನ್ ಮದ್ವೆ ಆಗಿ ಏಟೊಂಬತ್ ಜಿನ ತುಂಬಿಲ್ಲ ಆಗ್ಲೆ ಇಂಗ್ ತಿರುಗಾಡಿದ್ರ್ಯಾಂಗಮ್ಮಣ್ಣಿ? ಜನಗಳು ಆಡ್ಕಳಾಕಿಲ್ವಾ? ಎಂಗ್ಯ ಸಮಾಸಾರ?

ಕಾಳಿ : ಮಾಮ ಬೆಟ್ಟನೆಲ್ಲಾ ತೋರಿಸ್ತೀನಿ ಅಂತ ಕರೆದ. ಬ್ಯಾಡ ಅಂದ್ರು, ನನ್ನೆಡ್ತಿಯಲ್ವಾ, ಬಾ ಅಂತ ಕರ್‍ಕಂಡೋಂಟೋದ, ನಾಯಾನ್ ಮಾಡ್ಲಪ್ಪಾ?

ಈರಪ್ಪ : ಸರಿ ಬ್ಯಾಗ ನಡೀರಿ ಊರ್‍ಗೋಗಮು... ಪರ್ವಾಗಿಲ್ಲ... ಬಾಪ್ಪಾ ನಾಚಿಕೊಂಡ್ಯಾಕೇ ಅಲ್ಲೇ ನಿಂತ್ಕಂಡೆ... ಬಾ...ಬಾ.....

ಕರಿಯ : ಬಂದೆ ಮಾವೈ...

(ಗಾಡಿ ಊರತ್ತ ಹೊರಡುವುದು.)

* * *

## ದೃಶ್ಯ-೨

ಕಾಳಿ : ಅಯ್ಯೋ ಕಳ್ಳ... ಕಳ್ಳ...

ಕರಿಯ : ಹುಷ್, ನಾನು ಕಾಳಿ... ಕರಿಯ...

ಕಾಳಿ : ಈಟೊತ್ನಾಗೆ, ನೀನು, ಹಿತ್ಲ ಗೋಡೆ ಮ್ಯಾಕ್ಯೇಕ್ ಬಂದೆ?

ಕರಿಯ : ನಿನ್ನ ನೋಡಕೆ...

ಕಾಳಿ : ಈ ಕತ್ತಲ್ನಾಗೆ ನೋಡ್ಬ್ಯಾಗಿತ್ತಾ?

ಕರಿಯ : ಚಂದ್ರನ ಬೆಳದಿಂಗಳಯ್ತೆ... ಇದಕ್ಕಿಂತ ಒಂದು ಗಳಿಗೆ ಬ್ಯಾಕಾ?

ಕಾಳಿ : ಯಾರಾದ್ರೂ ನೋಡಿದ್ರೆ?

ಕರಿಯ : ತೆಪ್ಪೇನು?

ಕಾಳಿ : ಯಾವುದೋ ಗಂಡಸೊಂದಿಗೆ ಮಾತಾಡ್ತಿದ್ಳು ಅಂತ ಪುಕಾರುಟ್ಟುಸ್ಬುಟ್ರೆ ಜನ್ಗಳು. ಅಪ್ಪ ಒಳಗವ್ರೆ. ಎಲ್ಲಾರ ಕೇಳಿಸ್ಕಂಡು ಬಂದುಬುಟ್ರೆ?

ಕರಿಯ : ಏನಾಯ್ತದೆ?

ಕಾಳಿ : ಪ್ರೇಮಾನಾ ಅದಕೆ ಕುಲ್ದ ಅಂತವ್ರೇ... ಏನಾಗ್ಯೆತೆ ಅನ್ನೋದೇ ಗೊತ್ತಾಗಕಿಲ್ಲ.

ಕರಿಯ : ಆದದ್ದಾಗ್ಲಿ ಬುಡ್ಡು.

ಕಾಳಿ : ಅದಿರ್ಲಿ ಈಟೊಂದು ದೊಡ್ಡ ಗೋಡೇನ ಅಂದೆಂಗತ್‌ದೆ?

ಕರಿಯ : ಇದ್ಯಾನು ಮಹಾ ಬುಡು. ತೆಂಗಿನಮರ ಅತ್ತವನ್ಗೆ. ಈಗಂದಮ್ಯಾಕೆ ಮತ್ತೊಂದು ನೆಪ್ತಿ ಬರ್ತೇತೆ.

ಕಾಳಿ : ಏನದು?

ಕರಿಯ : ಹೊಸದಾಗಿ ಮದ್ವೆಯಾಗಿದ್ನಂತೆ ತೊಳಸೀದಾಸ. ಎಡ್ತಿ ನೋಡ ಬೇಕು ಅನ್ನಿಸ್ಬುಡ್ತಂತೆ. ಆಗ ಗಂಗಾನದಿ ಪ್ರವಾಹ ಉಕ್ಕ್‌ಬತ್ತಿದ್ರೂ ಅಂಜ್ಕೊಳ್ದೆ ಈಜಿ ಬಂದ್ನಂತೆ. ರಾತ್ರಿ ಕತ್ಲೆ. ಎಲ್ರೂ ನಿದ್ದ ಮಾಡ್ತ ಅವ್ರೆ. ಮಾಡಿಮ್ಯಾಗೆ ಹೆಡ್ತಿ ಮಲಗಿದ್ಲು. ತೊಳಸೀದಾಸ ಎಂಗ ಅತ್ತದು ಅಂತ ನೋಡ್ತಿದ್ದ. ಏನೋ ಹಗ್ಗದಂಗೆ ನ್ಯಾತಾಡ್ತಿತ್ತು. ಹಗ್ಗವೇ ಇರಬೇಕು ಅಂತ ಇಡ್ಕಂಡು ಹತ್ತಿ ವೊಂಟ್ಹೋದ. ಬಾಗಲು ತಟ್ಟಿದ. ಎಡ್ತಿ ಬಾಗಲು ತಗ್ದು ನೋಡುದ್ಲು. ಯಾಕೀಟೋತ್ಲೆ? ಅಂದ್ಲು. ನಿನ್ನ ನೋಡಬೇಕು ಅನ್ನಸ್ತು ಬಂದ್ಬುಟ್ಟೆ ಅಂತ ನಡದ್ದೆಲ್ಲಾ ಏಳ್ದ. ಮ್ಯಾಲಕ್ಕೆ ಯಾಗೆ ಬಂದ್ರಿ ಅಂದ್ಲಂತೆ, ಒಂದಗ್ಗ ಇತ್ತು ಅಂದ್ನಂತೆ. ಬಂದು ನೋಡ್ತವ್ರೆ, ಹೊಳ್ಳೆ ಹಾವು. ಕಿಟ್ಟನೆ ಕೀರ್ಬುಟ್ಲಂತೆ. ಆಗ್ಲೆ ಗೊತ್ತಾದ್ದು ತೊಳಸೀದಾಸನಿಗೆ ಅದು ಹಗ್ಗವಲ್ಲ ಹಾವು ಅಂತ. ಹೆಂಡ್ತಿ ನೋಡ್ಬ್ಯಾಕು ಅಂದ್ರೆ ಏನೂ ಗೊತ್ತಾಗಕಿಲ್ಲ. ಹೊತ್ತು, ಗೊತ್ತು, ಮಾನ,

ಅವಮಾನ, ಅವರು ನೋಡ್ತಾರಾ, ಇವರು ನೋಡ್ತಾರಾ ಅನ್ನೋದು ಗ್ಯಾನ್ವೇ ಇರಾಕಿಲ್ಲ.

ಕಾಳಿ : ಆಗ ಅವ್ಯಾನ್ಯಾಲ್ದಾ ಗೊತ್ತಾ. ನೀನು ನನ್ನ ಮ್ಯಾಗಳ ಪ್ರೀತೀನ ವ್ಯಾವರ ಮೇಲಿಟ್ಟಿದ್ರೆ ಏಟೊಂದು ಚೆನ್ನಾಗಿರ್ತಿತ್ತು ಅಂತ. ಆಗ ಆತನಿಗೆ ವೈರಾಗ್ಯ ಬನ್ನುಡ್ತದೆ ಅಲ್ವಾ?

ಕರಿಯ : ಈಗ ನನ್ಗೂ ಅದೇ ವೈರಾಗ್ಯ ಬಂದುಬುಡ್ಲಿ ಅನ್ತ ಹೇಳಿಕಳುಹಿಸ್ತೀಯಾ ಎಂಗೆ?

ಕಾಳಿ : ನೀನಂತ ಸರಣನಾ... ನಾ ಏಳ್ಬುಟ್ರೆ ವೊಂಟೋಯ್ತೀಯಾ?

ಕರಿಯ : ಓಂಟೋಯ್ತೀನಿ ನೀನು ಒಬ್ಬಳೆ ಇದ್ದಯಾ?

ಕಾಳಿ : ಅದ್ಯಲ್ಲಾ ಬ್ಯಾಡಪ್ಪ ಸದ್ಯ. ಈಗ ಆಸಾಡ ಅನ್ನದು ಗೊತ್ತಾ?

ಕರಿಯ : ಆಸಾಡವಾದ್ರ್ಯಾನು? ಹೆಡ್ತಿ ಮೊಕ ನೋಡ್ಬ್ಯಾಡ ಅಂದವ್ರ್ಯಾರು ಹೇಳು?

ಕಾಳಿ : ಅತ್ತೆ ಮನೆಗೆ ಬರ್ಬಾರ್ದು?

ಕರಿಯ : ಯಾಕೋ?

ಕಾಳಿ : ಒಂದೇ ವಸಲ್ದಾಟಬಾರ್ದಂತೆ.

ಕರಿಯ : ಅದ್ಕೇನೀಗ, ಹೊಸಲ್ ದಾಟ್ನೇ ಇಲ್ವಲ್ಲ. ಇತ್ತಲತವ ತಾನೇ ನಾನಿವ್ನಿ.

ಕಾಳಿ : ಮಾವನ ಮನ್ಯಾಗೆ ಬರ್ಬಾರ್ದು...

ಕರಿಯ : ಇನ್ಯಾನು ಸಬೂಬು ಏಳ್ದಯಿ ಏಳು, ಇದ್ನೆಲ್ಲಾ ಯಾಕಾರು ಮಾಡದ್ರೋ ಬುದ್‌ಗೆಟ್ ಜನ್ಗಳು, ವೊಸ್ದಾಗಿ ಮದ್ವಾ ಆದ ಗಂಡ ಎಂಡ್ರು ಸಾಯಲಿ ಅಂತ.

ಕಾಳಿ : ಒಂದು ತಿಂಗಳು ನನ್ನ ಬುಟ್ಬು ಇರ್ತ್ನಾರ್ಯಾ?

ಕರಿಯ : ಒಂದು ನಿಮಸನೂ ಬುಟ್ಟೆ ಇರ್ನಾರಿ.

ಕಾಳಿ : ಯಾನೋ ಗಾದೆ ಹೇಳ್ತಾರಲ್ಲಾ ಅಂಗೆ... ಹೊಸದ್ರಲ್ಲಿ ಗೋಣಿ ಎತ್ತಿ ಎತ್ತಿ ವೊಗದ್ನಂತೆ. ಆಗೆ... ಏಟು ದಿನ ಇರ್ತೈತೆ...

ಕರಿಯ : ನಿನ್ನ ಕಂಡ್ರೆ ಪರಾಣ ಬುಟ್ಕಳ್ಳದು ನಿಂಗೊತ್ತಿಲ್ವಾ ಕಾಳಿ...

ಕಾಳಿ : ಗೊತ್ತೈತೆ, ಆದ್ರೆ ಅದು ಏಟು ದಿನ ಅಂತ?

ಕರಿಯ : ನಾನು ನೀನು ಈ ಭೂಮಿ ಮ್ಯಾಗೆ ಇರತನ್ಕ.

ಕಾಳಿ : ಷ್... ಅಂಗ್ಯಲ್ಲಾ ಆಡ್ಬಾರ್ದು. ಇನ್ನೂ ವೊಸ್ಸಾಗಿಲ್ಲ ಆಮ್ಯಾಕೆ ಏನಾರ ಎಚ್ಚು ಕಮ್ಮಿ ಆದ್ರೆ... ನಾನು ಈ ಊರ್ನಾಗೆ ಮೊಕ ವೊತ್ಕಂಡು ಇರಾದ್ಯಾಗೆ ಯೋಳಿ ಮತ್ತೆ?

ಕರಿಯ : ಅದ್ಕೆ ಬ್ಯಾಗನೆ ಮಾಡಿ ಅಂದ್ರ ನಿಮ್ಮ ಅಪ್ಪ ದೀಪಾವಳಿಗೆ ಅಂತ ರಾಗ ಎಳದ್ಬುಟ್ರು.

ಕಾಳಿ : ಆಗ್ಲಿ... ಏನು ಆತುರ? ಸ್ವಲ್ಪ ಸಮಾಧಾನ ಮಾಡ್ಕಳ್ಳಿ.

ವೀರಪ್ಪ : (ಸ್ವಗತ) ಇದೇನು ಈಟೊತ್ತಾದ್ರೂ ಇತ್ಲಿಂದ ಕಾಳಿ ಬರ್ನೇ ಇಲ್ಲ... ಕಾಳಿ.. ಕಾಳಿ...

ಕರಿಯ : ಅಪ್ಪಾ ಕೂಗ್ತಾ ಅವ್ನೆ... ನಾನು ವೋಯ್ತೀನಿ ಬುಡು.

ಕರಿಯ : ಬುಡಾಕಿಲ್ಲ...

ಕಾಳಿ : ಆಮ್ಯಾಕೆ ಅವಮಾನ ಪಡಬ್ಯಾಕಾದ್ದು... ಬ್ಯಾಡ ಇಲ್ಲಿಂದ ಬ್ಯಾಗ್ ಬ್ಯಾಗ್ನ ವೊಂಟೋಗು.

ಕರಿಯ : ಇನ್ನೊಂಜಿನ ಬರ್ತೀವ್ನಿ...

ಕಾಳಿ : ... ಸರಿ...

* * *

ವೀರಪ್ಪ : ಇದ್ಯಾನ ಕಾಳಿ... ಈಟೊದ್ಗಂಟ ಯಾನ್ಮಾಡ್ತಿದ್ದೆ ಇತ್ಲಸಾಗೆ?

ಕಾಳಿ : ನಾ ಯಾನ್ ಮಾಡ್ತಿದ್ದೆ. ದನ್ಗಳ್ಗ ವೊಸಿ ವುಲ್ಲಾಕಿ, ಚರಿಣ್ಗೆನೆಲ್ಲಾ ಗುಡ್ಸಿ, ದನ್ಗಳು ವಸಿ ತೊಪ್ಪ ಇಕ್ಕಿದ್ದೋ ಎಲ್ಲಾನೂ ಎತ್ತಾಕ್ತಿದ್ದೆ.

ವೀರಪ್ಪ : ಆಟೇತಾನೇ... ಇದ್ಯಾನ ಅಂತ ನಂಗ್ ಗಾಬ್ರಿ ಆಗೋಗಿತ್ತು. ಇನ್ನೊಂದು ಇಸ್ಯ ಯಾಳ್ಬೇಕು ಅಂತಿದ್ದಿ ಕಣಮ್ಮಿ...

ಕಾಳಿ : ಯಾನಪ್ಪಾ.

ವೀರಪ್ಪ : ನೀನೂ ಎಂಗಾರೂ ಮಾದಪ್ಪನ ಜಾತ್ರೆ ನೋಡಿಲ್ಲ ಅಲ್ವಾ?

ಕಾಳಿ : ಅದೆಲ್ ನೋಡಿದ್ದನಪ್ಪಾ...?

ವೀರಪ್ಪ : ಅದ್ಕೇ ನೀನು ನಿನ್ನ ಗಂಡ ಕರಿಯ ಇಬ್ರೂ ವೋಗಿದ್ಬಂದಾರ್ಯಾ?

ಕಾಳಿ : ಆಗ್ಲಿ ಕನಪ್ಪಾ...

ವೀರಪ್ಪ : ವೊಸಿ ಮೊಸಲು ಬುತ್ತಿ ಕಟ್ಬುಡು, ವಸಿ ಚಕ್ಕಲಿ, ಕೋಡ್ಬಳೆ ನಿಪ್ಪಿಟ್ಟು ಮಾಡ್ಕ... ವಸಿ ಕಜ್ಜಾಯ ಸುಟ್ಕೋ... ವಾಗಿದ್ದು ಬರೂರಿ... ಈಗ್ಯಾನ ಬಸ್ಸು, ನಮ್ಮ ಕಾಲದಂಗೆ ಕಾಲ್ನಡ್ಗಲೋಗಬ್ಯಾಕಾ ವೋಗಿದ್ದು ಆ ನಮ್ಮಪ್ಪನ ಸ್ಯಾವೆ ಮಾಡ್ಕಂಬನ್ಬುಡಿ.

ಕಾಳಿ : ಆಗ್ಲಿ ಕಣಪ್ಪಾ... ಇಸ್ಯ ಅವ್ರಗೂ ಯಾಳಿದ್ದರ್ಯಪ್ಪಾ?

ವೀರಪ್ಪ : ಈಗ ಯಾಳಿ ಕಳಸಿವ್ನಿ ಅವ್ರಮನ್‌ಗಾ...

ಕಾಳಿ : ಅವ್ರು ಬಂದೇ ಬರ್ತವ್ರೆ.

ವೀರಪ್ಪ : ಸರಿ ಹೋಗಿ ಇಟ್ಟ ಉಣ್ಕೋ ನಡಿ...

ಕಾಳಿ : ಬನ್ನಪ್ಪಾ ನಿಮ್ಗ ಇಕ್ಕುಬುಟ್ಟು ನಾ ಮಾಡ್ತೀವ್ನಿ...

ಈರಪ್ಪ : ಯಾನ್ ಮಾಡಿದ್ದಯಿ ಕೂಸು?

ಕಾಳಿ : ವನ್ಗೊನಸೊಪ್ಪಿನ ಉಪ್ಪೇಸ್ರು ಇಟ್ವು, ಕಾರ ಅರ್ದಿಟ್ಟಿವ್ನಿ ಕಣಪ್ಪಾ...

ವೀರಪ್ಪ : ಸರಿಕಣವ್ವಾ ಕೈಕಾಲ ತೊಳ್ಕಂಡು ಬಂದ್ಬುಡ್ತೀನಿ.

ಕಾಳಿ : ಸೋಮವಾರ ಮಾದಪ್ಪನ ಬೆಟ್ಟ... ಪರಸ ಜರಗೋದ್ ನೋಡಿದ್ದಿ, ಈವತ್ತು ನಾನು ಆ ಬೆಟ್ಟ ನೋಡ ಜಿನವೂ ಬಂದುಬುಡ್ತು ಮಾದೇಶ್ವರನ ಬೆಟ್ಟ...!

ಕರಿಯನ ಕುಟ್ಟ

(ಕಂಸಾಳೆ ಧ್ವನಿಯ ಸಂಗೀತ)

* * *

## ದೃಶ್ಯ-೩

ಚಂದ್ರಪ್ಪ : ಏನ್ ಕರಿಯಣ್ಣ ಮದ್ವೆ ಆಯ್ತು...!

ಕರಿಯ : ಯಾಕ್ ಬಂದಿರ್‍ನಿಲ್ವಾ ನೀನು ನನ್ನ ಮದೂಗೆ...

ಚಂದ್ರಪ್ಪ : ಇನ್ನೂ ಹೊಸ್ನಾಗ್ನಿಲ್ವಾ?

ಕರಿಯ : ಯಾನೋ ದೀವಳಗ್ ಮಾಡಬೇಕು ಅಂತವ್ರೆ... ಅದ್ಯಾಕ್ ಅದೊಂದುಳಿಸ್ಕಂಡಿದ್ದರೋ ನಾಕಾಣ್ಣಪ್ಪ.

ಚಂದ್ರಪ್ಪ : ನಮ್ಮಿಂದ್ನವ್ರು ಮಾಡಿರುವುದರಲ್ಲಿ ಗುಟ್ಟೈತಿ ಕಣ್ಲಾ...

ಕರಿಯ : ಏನ್ ಗುಟ್ಟಪ್ಪಾ ಅದು...? ಆಸಾಡ ಕಳ್ದಾಯ್ತು... ಒಂದು ತಿಂಗಳು.

ಚಂದ್ರಪ್ಪ : ನೋಡು ಕರಿಯಣ್ಣ ಯಾವ್ದಾ ದೂರವಾಗಿದ್ರೆ ಪಿರೀತಿ. ಹತ್ತಿರವಾಗಿದ್ರೆ ಆಗಾಕಿಲ್ಲ ಕಣ್ಲಾ...

ಕರಿಯ : ಆಸೆ, ಪ್ರೀತಿ ಬೆಳ್ಯಾಕೆ ಈಟೊಂದು ದಿನ ಬ್ಯಾಕಾ?

ಚಂದ್ರಪ್ಪ : ನಾನೇಳ್ತೀನಿ, ವರ್ಸಾನಗಟ್ಲೇನೆ ಬೇಕು ಅನ್ತಿವ್ನಿ.

ಕರಿಯ : ಯಾಕೋ ಕನಸ್ ಕಾಣಾಕಾ?

ಚಂದ್ರಪ್ಪ : ನೀನು ನನ್ನ ಸಿನೇಹಿತ ಅಂತೇಳ್ತಿವ್ನಿ ಕೇಳು. ನಾನು ಮದ್ವೆ ಆದಮ್ಯಾಕೆ ಬ್ಯಾಗ್ನೆ ವಸ್ಗೇನೂ ಮಾಡ್ಬುಟ್ಟು ನನ್ನೆಂಡ್ತಿನ ನನ್ನ ಮನೆಗೆ ಕಳಿಸ್ಬುಡಿ ಅಂದಿ, ಯಾಕಾ ಅಂದ್ರ ನಂಗೆ ಯಾರು ಯಾಜಮಾನಿರ್‍ನಿಲ್ಲ ಮನ್ಯಾಗಾ. ಮನೆ ನಡಿಸ್ಕಂಡೋಗ್ಬೇಕಾಗಿತ್ತು.

ಕರಿಯ : ಸರಿ ಮತ್ತೆ...

ಚಂದ್ರಪ್ಪ : ಅದ್ಕೇ ಆಮ್ಯಾಕೆ ಅನುಬೋಗಿಸ್ಬಾಕಾಯ್ತು. ನಾನು ಅವಳತ್ರ ಅಡ್ಗ ಮಾಡಸ್ಕಂಡು ಉಣ್ಣೋ ಪುಣ್ಯ ತರ್‍ನಿಲ್ಲಾ.

ಕರಿಯ : ಮತ್ತಿನ್ನೇನು?

ಚಂದ್ರಪ್ಪ : ಅವಳಿಗೇ ಮಾಡಾಕಿ ಗೈಮೆಗೋಗಾ ಸ್ಥಿತಿಯಾಯ್ತು.

ಕರಿಯ : ಯಾಕ್ಲಾ?

ಚಂದ್ರಪ್ಪ : ಯಾಕಾ ಅಂದಯಾ, ಯೇಳ್ತಿವ್ನಿ ಕ್ಯಾಳು. ಮದ್ವೆ ಆದ್ಮ್ಯಾಕೆ ಏಟೋತ್ಕೆ ಎಡ್ತಿ ಕರ್‍ಕಂಡು ಮನ್ಯಾಗ್ ಬರ್‍ಲಿ ಅನಿಸ್ತಿರ್‍ತೈತೆ. ಅದು ಎಲ್ಲಾ ಗಂಡಸ್ರೂಗೂ, ಎಂಗಸ್ರೂಗೂ ಆಗದೆ. ಗಂಡನ್ ಬುಟ್ ಎಡ್ತಿ ಇರಕ್ಕಿಲ್ಲ. ಎಡ್ತಿ ಬಟ್ಬುಟ್ ಗಂಡಿರಕಿಲ್ಲ.

ಕರಿಯ : ಅದೇ ನಾ ಯಾಳದು.

ಚಂದ್ರಪ್ಪ : ಅದರ ಪಲವೇ ನಾನೀಗ ಅನುಬೋಗಿಸ್ತಾ ಇರದು.

ಕರಿಯ : ನಿಂಗ್ಯಾನಾಗ್ಯೆತಿ ಅಂತ ಕಷ್ಟ.

ಚಂದ್ರಪ್ಪ : ಹೊಸ್ನಾದ ಒಂದು ತಿಂಗಳಿಗೆ ವಾಂತಿ... ಸುಸ್ತು, ಸುಂಟ್ರಕಂಡು ಬಿದ್ದಳವಳು. ಯರ್‍ಯಾಗ್ಯಾರೂ ಇಲ್ಲ. ನಾನೇ ಕೆಲಸ ಮಾಡಬ್ಯಾಕಾಗ ಸ್ತಿತಿ ಬಂತು. ಎಡ್ತಿ ಬಂದ್ಮ್ಲ ಅಂತ ನಾನು ಸುಕ್ವಾಗಿದ್ದಿ ಅಂತ ಏಳ್ಬೇಕಾದ್ರೆ ಒಂದೇ ಒಂದು ತಿಂಗಳು. ಆಮ್ಯಾಕೆ ಶುರುವಾಯ್ತು ನೋಡು, ಸಂಸಾರ ಸಾಗರ... ಅಂತ ಇತ್ಲಾಗೇ ಕೆಲ್ಸ ಮಾಡಾಕೂ ವೋಗುವಾಗಿಲ್ಲ. ಅತ್ತ ವಾಗ್ದೆವೋದ್ರೆ ಜೀವನ ಮಾಡೋದು ಕಷ್ಟ. ಇಂಗಾಗಿ ಅಕ್ಕ ಪಕ್ಕದವರಿಗೇಳ್ಕಂಡು ಪಾಡು ಪಡಸ್ತಿತಿ ಬಂತು. ಅವಳಿಗೂ ಅವರಿವರಿಲ್ಲ. ಮಾಡವ್ರೂ ದಿಕ್ಕಿಲ್ಲ. ಇಂಗಾಗಿ ನನ್ನ ಪಜೀತಿ ನೆನ್ಸಕಂಡ್ರೆ ಬಾಳ ದುಕ್ವಾಯ್ತದೆ.

ಕರಿಯ : ಅಂಗಾರೆ ನಾಯಾಳಾದು ಏಟು ದಿನ್ವಾದ್ರೂ ಆಗದ್ ತಾನೇ ಬಸ್ರಾಗದ್ ತಪ್ಪಸ್ಕಳಕ್ಕಾಯ್ತದಾ?

ಚಂದ್ರಪ್ಪ : ಮದ್ವ್ಯಾಗಿ ವಸಿ ದಿನ್ವಾದ್ರೂ ಹಕ್ಕಿಗಳಂಗೆ ಹಾಯಾಗಿ ಹಾರಾಡ್ಕಂಡಿರ್‍ಬಾರ್‍ದಾ?

ಕರಿಯ : ಜೀವನ್ದಾಗೆ ಯಾರ್‍ತಾನೆ ಸುಕವಾಗಿರ್‍ಬಾರ್‍ದು ಅಂತವ್ರೆ?

ಚಂದ್ರಪ್ಪ : ಅದ್ಕೇ ನಾ ಯಾಳದು ನಿಂಗೆ.

ಕರಿಯ : ಏನಂತೀಯಾ?

ಚಂದ್ರಪ್ಪ : ನಿಮ್ಮ ಮಾವನ ಮನೆಯವರು ಈಗ್ಲೇ ಹೊಸ್ಗೆ ಮಾಡ್ತೀನಿ ಅಂದ್ರು ಬ್ಯಾಡ ಅನ್ನು ...ಮುಂದಿನ ವರ್ಸಕ್ಕೆ ಮಾಡ್ಕತೀನಿ ಅಂತನ್ನು. ಸುಮ್ನೆ ಅತ್ತೆ ಮನ್ಗೋಗಿ ದಿನಕ್ಕೊಂದಬ್ಬ ಮಾಡಿಸ್ಕಂಡು ಉಣ್ಕಂಡು ಎಡ್ತಿನ ಮಾತಾಡಿಸ್ಕಂಡು ಬರ್‍ತಿರು. ಅಗ ಅದರ ಸ್ವಾರಸ್ಯವೇ ಒಂದು ತರವಾಗಿರ್‍ತೈತೆ.

ಕರಿಯ : ಒಳ್ಳೆ ಮಾತ್ನೇ ಏಳ್ದಿ ಕಣಯ್ಯ.

ಚಂದ್ರಪ್ಪ: ಮೊದ್ಲೆಲ್ಲಾ ನಮ್ಮ ಹಿರಿಕ್ರು ಒಂದೊಂದ್ನೂ ತಡಮಾಡ್ತಿದ್ರೂ, ಯಾಕ ಅಂದಯಾ, ಅದು ನಮ್ಮ ಸುಕಕ್ಕೆ... ಗಂಡ ಹೆಂಡ್ರು... ಪ್ರೀತ್ಯಾಗಿ ನಾಕಾರು ಜಿನ ಮಕ್ಕಳು ಮರಿ ಜೊಂಜಾಟ್ವಿಲ್ದೇ ಸುಕವಾಗಿರ್ಲಿ ಅಂತ.

ಕರಿಯ : ಮದ್ವೆ ಆದ್ಯಾಕ್ ಸರಿ... ಹೊಸ್ಮದ್ಮೇಕೆ ಎಂಗೆ ಅಂತಿವ್ನಿ ಈಗ ಮಕ್ಕಳಾಗ್ಯೇ ಆಗ್ತಾವಲ್ಲಾ ......

ಚಂದ್ರಪ್ಪ: ನನ್ನನುಬವ್ದಾಗೆ ಯೋಳದಾದ್ರೆ ಮೊದಲ್ನೆ ಮಗ ಈಗ್ಲೆ ಬ್ಯಾಡ ಅಂತ.

ಕರಿಯ : ನಮ್ಗೂ ಮೊಗ ಬ್ಯಾಡ ಅಂತಿನಿ ಕಣಪ್ಪಾ, ಆಗೋದ್ರ್ಯಾಗ್ಯಪ್ಪಾ.

ಕೊಟ್ರಪ್ಪ: ಏನು ಚಂದ್ರಪ್ಪ ಕರಿಯಪ್ಪ ಸೇರ್ಬುಟ್ಟಿದ್ದರಿ?

ಚಂದ್ರಪ್ಪ: ಬನ್ನಿ ಕೊಟ್ರಪ್ಪನವ್ರೇ...

ಕರಿಯ : ಯಾಕ್ ಕರೀತೀಯಯ್ಯಾ ಕೊಟ್ರಪ್ಪನ್ನ...

ಕೊಟ್ರಪ್ಪ: ಕರಿದ್ರೇನಾಯ್ತು? ನಾ ಬಂದ್ರೇನಾಯ್ತು?

ಕರಿಯ : ಈಗ ಮದ್ವೆ ಆಗಿವ್ನಿ... ಸ್ವಾಮಿ ನಾನು...

ಚಂದ್ರಪ್ಪ: ಆಯ್ತು ಎಲ್ರೂ ಬುದ್ಧಿ ಯಾಳವ್ರೆ.

ಕರಿಯ : ನಂಗ್ಯಾನೇಳ್ದಾರು?

ಚಂದ್ರಪ್ಪ: ಅವರ್ಯಾನಪ್ಪಾ ಎಲ್ಲರ್ಗೂ ಏನಾರ ಬುದ್ಧಿಯಾಳ್ತನೇ ಇರ್ತವ್ರೆ.. ಅವರು ಆರೋಗ್ಯ ಕಾರ್ಯಕರ್ತರಲ್ಲವೇ?

ಕೊಟ್ರಪ್ಪ: ಏನು ಚಂದ್ರಪ್ಪ ಹ್ಯಾಗಿದ್ದೀರಿ?

ಚಂದ್ರಪ್ಪ: ಚೆನ್ನಾಗಿವ್ನಿ ಸ್ವಾಮಿ.

ಕೊಟ್ರಪ್ಪ: ಮದ್ವೆ ಗಂಡೇನನ್ತದೆ?

ಚಂದ್ರಪ್ಪ: ಮದ್ವೆ ಆದ್ಯಾಕ್ ಮುಂದಿನ್ದ ಯೋಚಿಸ್ತದೆ.

ಕೊಟ್ರಪ್ಪ: ಆತ್ರ ಬೀಳ್ಬ್ಯಾಡಪ್ಪ... ಮರಿ...

ಚಂದ್ರಪ್ಪ: ಅದನ್ನೇ ನಾ ಯಾಳ್ತಾ ಇದ್ದೆ ಆಟೊತ್ನಿಂದ...

ಕೊಟ್ರಪ್ಪ: ಮೊದಲ್ನೇದು ಈಗ್ಲೇ ಬೇಡ ಕರಿಯಪ್ಪಾ...

ಕರಿಯ : ಆಗೋದ್ರೇನ್ಮಾಡದು?

ಕೊಟ್ರಪ್ಪ: ಸ್ವಲ್ಪ ಸಂಯಮದಿಂದ ಇರ್ಬೇಕಪ್ಪಾ.

ಕರಿಯ : ಅದು ಒಳ್ಳೆ ಸರಿ ನೀವ್ಯಾಳಾದ. ದ್ಯಾವ್ರು ಕೊಟ್ರೆ ಬ್ಯಾಡ ಅನ್ನದಾ.

ಕೊಟ್ರಪ್ಪ: ಇಲ್ಲ ಬೇಗನೆ ಮಕ್ಕಳಾಗಿ ಕಷ್ಟಕ್ಕೆ ಗುರಿಯಾಗಬೇಕ?

ಕರಿಯ : ಮೊದಲ್ನೇ ಮೊಗ ಬ್ಯಾಗ್ನಾಗ್ಲಿ ಬುಡಿ.

ಕೊಟ್ರಪ್ಪ: ನೀವು ಗಂಡ-ಹೆಂಡ್ತಿ ಸುಖವಾಗಿ ಒಂದೆರಡು ವರ್ಷ ಇರೋದು ಬೇಡಾ ಅನ್ತೀರೋ?

ಕರಿಯ : ಮದ್ವೆಯಾಗಿ ಹೊಸಗೆಯಾಗಿ ಮಗ ಬ್ಯಾಗ್ನಾಗ್ನಿಲ್ಲ ಅಂದ್ರ ನಮ್ಮಳ್ಳೀಲಿ ಜನ ನನ್ನ ಷಂಡ ಅಂತವ್ರೇ. ನನ್ನ ಹೆಡ್ತೀನಾ ಬಂಜೆ ಅಂತ ಕರೀತವ್ರೆ.

ಚಂದ್ರಪ್ಪ: ನಾನು ಹಾಗನ್ನಂಡೆ ಈಗ ಈಟೊಂದು ಕಷ್ಟಪಡ್ತಿವ್ನಿ.

ಕೊಟ್ರಪ್ಪ: ಹೊಸ್ಗೆ ಆದ್ಮ್ಯಾಕೆ ಯೋಸ್ನೆ ಮಾಡಿ.

ಕರಿಯ : ಮದ್ವೆ ವಾಲಗ ಊದ್ನೇ ಇಲ್ಲಾ ಆಗ್ಲೇ ಇವರ ಉಪದೇಸ...

ಕೊಟ್ರಪ್ಪ: ನಾನು ಬರ್ತಿನಿ... ನಿಮಗೇನು ಸಲಹೆ ಬೇಕಾದ್ರೂ ಆಸ್ಪತ್ರೆಗೆ ಬಂದು ಕೇಳಿ, ನಾನು ನನ್ನ ಕೈಲಾದ ಸಹಾಯ ಮಾಡ್ತೀನಿ.

ಚಂದ್ರಪ್ಪ: ಆಗ್ಲಿ ಬನ್ನಿ.

* * *

## ದೃಶ್ಯ-೪

ಸರಸಮ್ಮ: ನಿಂಗಮ್ಮ... ನೋಡ್ದಾ ಕಾಳಿನಾ.

ನಿಂಗಮ್ಮ: ಗೊಡ್ಡಿ ಮೊಕ್ದ ಯಾಸುಕ್ಕೆ ನೋಡಕ್ಕೋಗ್ಲಿ? ಸರಸಮ್ಮ

ಸರಸಮ್ಮ: ಅವಳ್ನೇ ಯಾಕೆ ಗೊಡ್ಡಿ ಅನ್ಬೇಕು?

ನಿಂಗಮ್ಮ: ಅಂಗಾರೆ ಗಂಡನೇ- ಐಬು ಅಂದಯಾ.

ಸರಸಮ್ಮ: ಇರಬೈದು.

ನಿಂಗಮ್ಮ: ಈಗ್ಯಾವ ವಯಸ್ಸಾಗೈತೆ ಬುಡು. ಮದುವೆಯಾಗಿ ಎರಡು ವರ್ಷ ತಾನೇ ಆಗೀರದು.

ಸರಸಮ್ಮ: ನನ್ನ ಮಗನ್ಗೆ ವರ್ಸಕ್ಕೆ ಆಗಿರ್ನಿಲ್ವಾ? ನನ್ನ ಮಗಳಗಾಗಿರ್ನಿಲ್ವಾ?

ನಿಂಗಮ್ಮ: ಇರಬೈದು... ಯಾರ್ಯಾರ ದ್ಯಾಹದ ಪರಿಸ್ತಿತಿ ಹಾಗ್ಯಾಗಿರ್ತದೋ!

ಸರಸಮ್ಮ: ನೀ ಏನಾರಾ ಯಾಳು ನಿಂಗಮ್ಮ ಮೊದಲ್ನೇ ಮೊಗ ಬ್ಯಾಗ್ನಾಗ್ಬುಡ್ಬೇಕು.

ನಿಂಗಮ್ಮ: ಇಲ್ದೇವಾದ್ರೆ ಗಂಡು, ಇಲ್ಲ ಎಣ್ಣ್ಗೆ ವಚ್ಚೆ ಕಟ್ತೇರಿ. ಬತ್ತೀನಿ ಇನ್ನವೆ ಬೇಕಾದಷ್ಟು ಕೆಲಸ ಬಿದ್ದೈತೆ.

* * *

(ರೇಡಿಯೋ ಹಾಕುವಳು. "ಬಂಜೆ ಬಾಗಿಲ ಮುಂದೆ ಅಂಡೂರ ಗಿಡ ಹುಟ್ಟಿ" ಹಾಡು ಬರುವದು. ಆಫ್ ಮಾಡುತ್ತಾಳೆ ಅಷ್ಟರಲ್ಲಿ)

ಕರಿಯ : ಹ್ಯಾಕೀಟು ಕೂಗುದ್ರೂ ಮಾತಾಡ್ದೆ ಇದ್ದಯಿ.

ಕಾಳಿ : ನಾ ಯಾಸ್ ಮಾತಾಡಾಗಿದ್ದನು... ಊರವ್ರೆ ಎಲ್ಲಾ ಮಾತಾಡ್ತಾ ಅವ್ರೆ.

ಕರಿಯ : ಏನಂತ?

ಕಾಳಿ : ಗೊಡ್ಡಿ ಅಂತ.

ಕರಿಯ : ನಮ್ಮ್ಯಾವ ಕಾಲ ದಿನವಾಗಿದ್ದದಂತ?

ಕಾಳಿ : ಅದ್ಯಾರ್ ಕೇಳ್ತಾರೆ? ಮದ್ವೆ ಆಗಿ ಏಳು ವರ್ಸ ಆಯ್ತು. ಇನ್ನೂ ಮಕ್ಕಳಾಗ್ನಿಲ್ಲ... ಬಂಜೆಯೇನೋ ಅಂತವ್ರೇ....

ಕರಿಯ : ಅಂದ್ರ ಅಂದಕಳ್ಳಿ ಬುಡು. ನಮ್ಮ ಸಂಸಾರ ನಮ್ಗೆ. ನಮಗೆ ಬೇಕಾದಾಗ ನಮಗೆ ಮಕ್ಕಳ ಮಾಡ್ಕಂಡ್ರಾಯ್ತು.

ಕಾಳಿ : ಗಂಡಿಸ್ನಾನೂ ಅನ್ನಕ್ಕಿಲ್ಲ. ಒಂದು ಹೆಂಗ್ಸು ಗೊಡ್ಡಿ ಅನ್ನಸ್ಕಂಡು ಯಾಗ್ ಭೂಮಿಮ್ಯಾಕೆ ಜನ್ಮ ಮಡ್ಗದು ಯಾಳ್‌ಮತ್ತೆ.

ಕರಿಯ : ಈಗ್ಯಾರು ನಿನ್ನಂದವ್ರು.

ಕಾಳಿ : ಇನ್ಯಾರು. ಅಕ್ಕಪಕ್ಕದ ಸರಸಮ್ಮ ನಿಂಗಮ್ಮ.

ಕರಿಯ : ಆ ಚಂಡಾಲಿರ್ಗೆ ಇನ್ಯಾನ್ ಕೆಲ್ಸ? ತಿಂದದ್ದು ಅರ್‍ಗಕಿಲ್ಲ ಅಂತ ಕಾಣ್ಸೈತೆ. ಅವ್ಕೆಲ್ಲಾ ಕಿವಿ ಕೊಡ್ಬಾರ್‍ದೂ ಬುಡು... ಮದ್ವೆ ಆಗಿ ನಾವು ಸಂತೋಷವಾಗಿರ್‍ಬೇಕು. ಅಂತ್ಯಾನೋ ಪಲಾನ್ ಮಾಡ್ಕಂಡಿದ್ರೆ ಕಣ್ಣೀರಾಕಸ್ತಾರು ಆ ರಾಕಸಿರು. ಅದ್ಯಾಕ್ ಅತ್ತಯಾ ತಗಿ...

ಕಾಳಿ : ಅಳ್ದೇ ನಗಕಾಯ್ತದಾ? ನೀವೇ ವಸಿ ಯೋಸ್ನೆ ಮಾಡ್ ನೋಡಿ.

ಕರಿಯ : ಅಯ್ ಬಾಮ್ಮೀ... ಈಗನ್ ಕಾಲ್ದಾಗೆ ಮಕ್ಕಳಾಗದ್ ಒಂದು

ದೊಡ್ಡ ಪವಾಡ್ವಾ? ಮದ್ವೆ ಆದವರ್ಗೆಲ್ಲಾ ಆಗ್ಯೇ ಆಯ್ತದೆ. ಹಿಂದಿನ ಕಾಲದಂಗ ದೇವರು ದಿಂಡ್ರುನ ಕೇಳ್ಬೇಕಾ? ಅಸ್ವತ್ತಕಟ್ಟೆ ಸುತ್ತಬ್ಯಾಕಾ? ನಾಗರಕಲ್ಲು ಸೃಷ್ಣ ಮಾಡ್ಬೇಕಾ? ಯೋಳು.

ಕಾಳಿ : ಯಾಂಗ್ ಗೊತ್ತು. ನಮ್ಗೂ ಆಗ್ದವೊದ್ರೆ ಅಂಗೇ ಮಾಚ್ಬೇಕಾಗ್ ಬಂದದೋ ಏನೋ. ಯಾವ್ ಎಣ್ಣು ತಾನೇ ಬ್ಯಾಗ್ನೆ ತಾಯಿ ಆಗಾಕೆ ಬಯ್ಸಕ್ಕಿಲ್ಲ.

ಕರಿಯ : ಅದ್ಕೇ ಯೋಳೋದು ನಿನ್ನ ಅಳ್ಳಿ ಗುಗ್ಗು ಅಂತ. ತಿಳಿದವ್ರು ಯಾಳ್ದಂಗೆ ಕ್ಯಾಳಿದ್ರೆ ಉತ್ತಾತ್ರದ್ಯೆ... ಸ್ವಲ್ಪ ನಿಧಾನ್ವಾಗಿ ಮಕ್ಕಳಾದ್ರ ನಮ್ಗೂ ಒಳ್ಳೇದು ಅಂತ ಯೋಳುದ್ರು ಅದ್ಕೇ... ನೋಡಮು ಅಂತಿದ್ರೆ ನೀನು "ಸೊರ್" ಅಂತ ತಗೀತಿದ್ದೆ...

ಕಾಳಿ : ನಂಗೂ ಬ್ಯಾಗ್ಯಾನು ಮಕ್ಕಳು ಬೇಕಿಲ್ಲ. ಈ ಜನಗಳು ಆಡ್ಕತಿದ್ರೆ ನಸ್ಗೆ ಕತ್ತಿಲಿ ತಿವ್ದಂಗಾಯ್ತಯ್ತೆ.

ಕರಿಯ : ಈ ಅಂಡೇ ಬಾಯ್ನಾದ್ರೂ ಮುಚ್ಚುಬೈದು. ಈ ಬಂಡರ ಬಾಯಿ ಮುಚ್ಚಿಸಕ್ಕಾಯ್ತದಾ? ನಡಿ ನಡಿ... ಇಟ್ಟುಣ್ಣವಾ...

ಕಾಳಿ : ನಂಗೆ ಈವತ್ತು ಬ್ಯಾಡಾ ಅನ್ನಸ್ತೈತೆ.

ಕರಿಯ : ನಾಳೆಕ್ಕಾರು ಉಣ್ಣದ್ ತಪ್ಪೋದ್‌ದಾ... ಬದ್ಕೈ... ಅಂದ್ರ... ಬರ್ಬೇಕು.

ಕರಿಯ : ಚಿತ್ಕವ್ರೆ ಬ್ಯಾಳೆ ಬದ್ನಕಾಯನ್ ಉದಕ ಬೋ ಪಸಂದಾಗಿತ್ತು. ಬಿಸಿ ಬಿಸಿ ಇಟ್ಟು, ಬೆಣ್ಣೆ... ಇದ್ದದ್ಕೂ ಅದ್ಕೂ ಒಳ್ಳಿ ಗಡದ್ದಾಗುಂಡ್ಬುಟ್ಟೆ. ನಿಂಗ್ಯಾನು ರುಸೀನೇ ತೋರ್‍ನಿಲ್ವಾಸೋ... ನಿಂಗ್ ಆಳದೇ ಆಯ್ತು, ನಿಂಗ್ ಬೇಜಾರಾಗಿದ್ರ ನಿಮ್ಮಪ್ಪನ ಮನಗ್ ನಾಕ್ದಿನ ವೋಗಿದ್ ಬತ್ತೀಯಾ ಯೆಂಗ್ಗೆ?

ಕಾಳಿ : ಯಾನೂ ಬ್ಯಾಡಿ...

ಕರಿಯ : ವಾಗ್ಲಿ ಈವತ್ತು ನಾಟ್ಕವಂತ ವೋಗಮಾ... ಕೊಳ್ಳೆಗಾಲದಲ್ಲಿ...

ಕಾಳಿ : ನಂಗ್ಯಾನೂ ಬ್ಯಾಡ ಅನ್ನಿಸ್ತೈತೆ.

ಕರಿಯ : ವಾಗ್ಲಿ ಕಳೆ ಕೀಳಕ್ಕಾರ ಬಂದಯಾ ನಾಳಾಕಾ?

ಕಾಳಿ : ನಾಳಕ್ತಾನಾ... ಬತ್ತೀನಿ.

ಕರಿಯ : ಇದೇನು ಕರಾ ಕೂಗ್ತೈತೆ...... ಹಸ, ಎಮ್ಮೆ ಕರ್‍ದ್ನು ಎಂಗೆ?

ಕಾಳಿ : ಇಲ್ಲ... ಯಾನ್ಯಾನೋ ಯೋಸ್ನೇಲಿ ಕರ್‍ಯಾದ್ನೆ ಮರುತ್ತುಬುಟ್ಟೆ ಕರೀತಿವ್ನಿ.

ಕರಿಯ : ಇಲ್ಲ ನಾನೇ ಕರ್‍ಕಂಬತ್ತೀನಿ... ತಾಳು...

ಕಾಳಿ : ಯಾನು ಬ್ಯಾಡಿ... ನಾ ಕರೀತೀನಿ...

* * *

ಕರಿಯ : ಆ ಹಸಿನ ಕರೀಗ್ ಒಂದು ಮೊಲ ಪೂರ್ತಿ ಬುಡು. ಅದೂ ವೋರ್‍ಗರ. ಮುಡುಕ್ತರ ಜಾತ್ರೆಗೆ ವೊಡಿದ್ರೆ ದುಡ್ಡಾಗ್ತದ.

ಕಾಳಿ : ಆಗ್ಲಿ...

ಕರಿಯ : ನಾಳಾಕ ಸಂಕ್ರಾಂತಿ ಹಬ್ಬ. ದನ್ಗಳ್ಗೆಲ್ಲಾ ಗುನ್ನಂಟಪ್ಪ ತರ್‍ಸಿದ್ದಯಾ?

ಕಾಳಿ : ಹ್ಞೂಂ... ಕೆಮ್ಮಣ್ಣು ತಗ್ದಿಟ್ಟಿವ್ನಿ...

ಕರಿಯ : ಈಗಿನ ಕಾಲದಲ್ಯಾರ್ ಕೆಮ್ಮಣ್ಣಾರ್ದರು. ಬಣ್ಣ ತಂದು ಆಮ್ಯಾಕೆ ಗುನ್ನಂಪಟ್ಟ ಆಕ್ಬೇಕು.

ಕಾಳಿ : ಸರಿ ನಾಳಾಕಾ ತಂದ್ರಾಯ್ತು.

ಕರಿಯ : ನಾಳಕ ಎತ್ತುಗಳ ಸುಂಗಾರ ಮಾಡಕೆ ಹೂವು ಎಲ್ಲಾನು ಅಣಿ ಮಾಡ್ಕೋ.

ಕಾಳಿ : ಆಗ್ಲಿ... ನಾನು ಆಲ್ಕರ್ಕಂಬತ್ತೀವ್ನಿ.

ಕರಿಯ : (ಸ್ವಗತ) ಕಾಳಿ ಅದೇಟು ಒಳ್ಳಿ ವುಡ್ಗಿ? ತನ್ಕೆಲ್ಸ ಮಾಡ್ಕಂಡು ಮನ ನೋಡ್ಕಂಡಿದ್ರು ಜನ್ಗಳು ಸಂವ್ಕಿರಕ್ಕಿಲ್ಲ. ಮನ ಮುರ್ಯೋ ಕೆಲ್ಸ ಮಾಡ್ತವ್ರೆ. ಇಲ್ಲದ್ನೆಲ್ಲಾ ಉತ್ಪತ್ತಿ ಮಾಡ್ತಾರೆ, ಈ ಪರಪಂಚದಾಗೆ ಅದ್ಯಂಗ್ ಬದುಕ್ ಬ್ಯಾಕೋ ಆ ದ್ಯಾವ್ರಗೆ ಗೊತ್ತು.

ಕಾಳಿ : ಹಾಲು ಕಾಯಸ್ಕಬಂದಿವ್ನಿ... ತಕ್ಕಳಿ..

ಕರಿಯ : ನೀವೊಸಿ ಕುಡಿ...

ಕಾಳಿ : ನಂಗ್. ಬ್ಯಾಡೀ... ನೀವ್ಕುಡಿರಿ.

ಕರಿಯ : ನೀ ಕುಡಿದಿದ್ಮ್ಯಾಯಾಕೆ ನಾ ಕುಡ್ಯಕಿಲ್ಲ.

ಕಾಳಿ : ಕುಡಿತೀನಿ, ಕುಡೀರಿ...

ಕರಿಯ : ನಿಜವಾಗ್ಯಾಳು ಕಾಳಿ ಈಗ ನಿಂಗ್ ಮೊದಲ್ನೆ ಮಗ ಈಗ್ಲೇ ಬೇಕು ಅನ್ನಿಸ್ತೈತಾ?

ಕಾಳಿ : ಇಲ್ಲ...

ಕರಿಯ : ಇನ್ನೂ ಏಟು ವರ್ಷ ಬ್ಯಾಡ?

ಕಾಳಿ : ಅಕ್ಕಪಕ್ಕದವರ ಪಾಡು ಪರ್ದಾಟ ನೋಡ್ತಿದ್ರೆ ಇನ್ನೆರಡು ವರ್ಸ ಬ್ಯಾಡ ಇಂಗೇ ಈ ಹೊತ್ತು ಸಿದ್ದಪ್ಪನ ಬೆಟ್ಟ, ನಾಳಾಕ್ ಮಾದಪ್ಪನ ಬೆಟ್ಟ, ನಾಳಿದ್ದು ರೇವಣಸಿದ್ದಪ್ಪನ ಬೆಟ್ಟ ಅಂತ ಸುತ್ತಾಡ್ಕಂಡು, ಬುತ್ತಿ ಉಣ್ಕಂಡು,ತಿಂಡಿ ತಿನ್ಕಂಡು, ಬೇಕಾದ ಸೀರೆ ಉಟ್ಕಂಡು, ಜಾತ್ರೆ ಸಿನಿಮಾ ನೋಡ್ಕಂಡು, ಆಮ್ಯಾಕೆ ಈ ಮಕ್ಕಳ ಜೊಂಜಾಟಕ್ಕೆ ಸಿಕ್ಕಳಮು ಅನ್ನಿಸ್ತೈತೆ.

ಕರಿಯ : ನನ್ನ ಸ್ನೇಯ್ತ ಚಂದ್ರಪ್ಪನ ಪಾಡು ಕೇಳಿ ನಾನು ಈ ನಿರ್ಧಾರಕ್ಕೆ ಬಂದಿವ್ನಿ. ನೀನು ಒಪ್ಪದು ಒಳ್ಳೆ ಇಚಾರವೇ, ಕುಡಿ ಕುಡಿ ಹಾಲು, ಆರೋಗತ್ತೆ.

ಕಾಳಿ : ಆಕಾಶದ ಮ್ಯಾಕೆ ಹಾರೋಗಲ್ವಲ್ಲ.

(ಇಬ್ಬರು ನಗುವರು)

* * *

## ದೃಶ್ಯ-೫

ಕರಿಯ : ಇದ್ಯಾನ ಕಾಳಿ ನೀ ಮಾಡ ಕೆಲ್ಸ?

ಕಾಳಿ : ಯಾನು ಇಲ್ಲ...

ಕರಿಯ : ಈಬೂತಿ ತಿಂದಾಗಾಯ್ತು...

ಕಾಳಿ : ಈಬೂತ್ತು ಇಲ್ಲ, ಯಾನೂ ಇಲ್ಲ, ಬುತ್ತಿ ಕಟ್ಟಿವ್ನಿ ಬಾ... ಕವಕ್ಕೆ ಉಣ್ಕಳೂವೆ.

ಕರಿಯ : ಬಂದೆ ನಡಿ... ಇಕ್ಕು ಮಡಗಿರು...

(ವಾಂತಿಯ ಶಬ್ದ ಕೇಳುವುದು)

ಇದ್ಯಾಕಾ...? ತಿನ್ನಬಾರದ್ನಲ್ಲಾ ತಿಂದ್ರೆ ಇನ್ನಾನಾದದು ಯಾಳು ಮಂತ್ಯೆ.

ಕಾಳಿ : ನಾನೇನ್ ತಿಂದಿ ಈಗ? ಅದರ ಇಸಯಾನೇ ಬೇರೆ...

ಕರಿಯ : ಆಂಗದ್ರ್ಯಾನಮ್ಮಿ..?

ಕಾಳಿ : ನಿಂಗೊಬ್ಬಳ ಅಮ್ಮಿ ಬರ್ತಾಳೆ.

ಕರಿಯ : ಅ್ಹಂ... ... ಅಂಗ್ಯ... ನಂಗಮ್ಮಿ ಬ್ಯಾಡ...

ಕಾಳಿ : ನಿಂಗಣ್ಣಯ್ಯನೇ ಆಗಬೇಕ್ಯಾನೋ?

ಕರಿಯ : ಮೊದಲ್ನೇ ಮಗಾ ಗಂಡಾಗ್ದೇವಾದ್ರೆ ಯಾನ್ ಪರೋಯಜ್ನ?

ಕಾಳಿ : ಮೊದ್ಲದೆಣ್ಣಾದ್ರೆ ಅದೃಸ್ಟವಂತೆ ಕ್ಯಾಳಿದ್ದಯಾ?

ಕರಿಯ : ಯಾನಾರಾ ಆಗ್ಲಿ... ಗಂಡಾಯ್ತು ಅಂದ್ರೆ ನನಗ್ ಸಂತೋಸ. ಎಣ್ಣು ಎಣ್ಣೇ, ಗಂಡು ಗಂಡೇ... ವಂಸ ಬೆಳ್ಗವನಲ್ವಾ ಅವ್ನ?

ಕಾಳಿ : ಈಗ ಎಣ್ಣಾದ್ರೇನಾ? ಗಂಡಾದ್ರೇನಾ? ಇದು ಮೊದಲ್ನೆ ಮಗ ತಾನೇ... ಇನ್ನೊಂದಾಗಕಿಲ್ವಾ? ವೊಟ್ಟವೊಳ್ಗಿರಾದ ನಾವು ಕಂಡಿದ್ದವಾ?

ಕರಿಯ : ಅಂತೂ ಏಡು ಮೂರು ವರ್ಸಗಳಿಂದ ಹಕ್ಕಿಗಳ ಕಂಡಾಗ ವಾರ್ಕಂಡಿದ್ವು ಇನ್ನು ಸುರುವಾಯ್ತು ಸಂಸಾರ ಸಾಗರ.

ಕಾಳಿ : ಯಾನಿಲ್ಲ ಸಂಸಾರ ಸಾಗರವೇನಿಲ್ಲ, ಸುಖ ಸಾಗರ ನಾವು ಎಂಗೆಂಗ್ ಬಾಳ್ಬ್ಯಾಕು ಅಂತ ತಿಳ್ಕಂಡು ನಡೀಲಿಲ್ವಾ? ಏಡು ಮೂರು ವರ್ಸ ಮಕ್ಕಳ ಜೊಂಜಾಟವಿಲ್ದೇ ಕಾಲ ಕಳೀನಿಲ್ವಾ?

ಕರಿಯ : ಅದೂ ನಿಜ್ವೇ ಅನ್ನು... ಅಮ್ಮಿ.. ಯಾರೋ ಬಂದ್ರು... ಅಂತ ಕಾಣ್ತೈತಿ ಬಾಗಿಲ್ ತೆಗೆ ವೋಗು.

ನಾರಾಯಣಮ್ಮ : ನಾನು ನಾರಾಯಣಮ್ಮ ಅಂತ ಆರೋಗ್ಯ ಸಂದರ್ಶಕಿ.

ಕಾಳಿ : ಯಾನ್ ಬಂದ್ರಿ?

ನಾರಾಯಣಮ್ಮ : ಗರ್ಭಿಣಿ ಬಾಣಂತಿಯರ ವಿಚಾರ ಮಾಡಿಕೊಂಡೋಗೋಣ ಅಂತ ಬಂದಿವ್ನಿ ನೀವೇನಾದ್ರೂ...

ಕಾಳಿ : ಹ್ಹೂಂ...

ನಾರಾಯಣಮ್ಮ : ಎಷ್ಟು ತಿಂಗಳು?

ಕಾಳಿ : ನೀರಾಕ್ಕಂಡು ಏಡು ತಿಂಗಳಾಯ್ತು... ಇಪರೀತ ವಾಂತಿ.

ನಾರಾಯಣಮ್ಮ : ಅದಕ್ ಔಷಧ ಕೊಡೋಣ... ಇನ್ಮೇಲಿ ನೀವು ಆಸ್ಪತ್ರೆಗೆ ಬಂದು ಆಗಾಗ್ಗೆ ತೋರಿಸ್ಕಂಡೋಗಿ, ಹೆರಿಗೇನೂ ಆಸ್ಪತ್ರೇಲಿ ಮಾಡಿಸ್ಕೊಳ್ಳಿ ತೊಂದ್ರೆ ಆಗಕಿಲ್ಲ. ಮನೇಲಿ ಹೆರಿಗೆ ಮಾಡಿಸೋದು ಒಳ್ಳೆದಲ್ಲ. ಸೌಲಭ್ಯ ಇದ್ದಾಗ ಉಪಯೋಗಿಸಿಕೊಳ್ಳಿ.

ಕಾಳಿ : ಆಗ್ಲಿ ಕನವ್ವಾ... ಅತ್ತರದಾಗೇ ಆಸ್ಪತ್ರೆ ಇಟ್ಕಂಡು ಬರಲ್ಲಾ ಅನ್ನಕ್ಕಾಯ್ತದಾ?

ನಾರಾಯಣಮ್ಮ : ನಿನ್ನಾಗಿರಬೇಕವ್ವಾ ಎಷ್ಟೋ ಜನ ನಿಮ್ಮೂರನಾಗೇ ನೋಡಿವ್ನಿ ನಾಚಿಕೊಳಾರೆ ಬರಾಕೇ ಇಲ್ಲ. ನಾಟಿ ಔಷದ ಮಾಡ್ಕಳ್ಳೋದು ಯೇನೇನೋ ಮಾಡ್ತಿರ್ತಾರೆ.

ಕಾಳಿ : ಬನ್ನ್ಯವ್ವಾ ವಸಿ ಕಾಪಿ ಕುಡ್ಯೂರಿ.

ನಾರಾಯಣಮ್ಮ : ಇಲ್ಲವ್ವ ಕಾಳವ್ವ ನೀ ಕಾಪೀ ಕೊಟ್ಟದ್ಕಿಂತಾ ಹೆಚ್ಚಾಯ್ತು ಸಾಕಷ್ಟು ತಿಳವಳಿಕೆ ಇದೆಯೆಲ್ಲಾ ಸಂತೋಷ. ಒಳ್ಳೇ ಆಹಾರ ತಿನ್ನು. ಈ ಸಮಯದಲ್ಲಿ ಯಾವ ರೀತಿ ನೀನು ಇರ್ತೀಯೋ ಆ ರೀತಿಯ ಮಗು ಮುಂದೆ ಹುಟ್ಟುತ್ತೆ. ನಾನು ಬರ್ತೀನಿ ಇನ್ನು ಎಷ್ಟೋ ಮನೆಗಳನ್ನ ನೋಡಬೇಕು.

ಕಾಳಿ : ಆಗಾಗ್ಗೆ ಬತ್ತಾ ಇರ್ರವ್ವಾ.

ನಾರಾಯಣಮ್ಮ : ಆಗ್ಲಿ...

ಕರಿಯ : ಅದಾರಾ?

ಕಾಳಿ : ನಾರಾಯಣಮ್ಮನವರು ಅದೇ...

ಕರಿಯ : ಗೊತ್ತಾಯ್ತು ಬುಡು ಆಸ್ಪತ್ರೇರು.

ಕಾಳಿ : ಹ್ಞೂಂ...

ಕರಿಯ : ಈಗ್ಯಾನಾಗ್ಬಾಕಾಗಿತ್ತಂತ?

ಕಾಳಿ : ಆಸ್ಪತ್ರಕ್ಕ ಬರ್ತಾ ಇರಿ ಅಂದ್ರು.

ಕರಿಯ : ಏಳಿಂಗಳಿಗೆಸಿ ವಂತ ಮಾಡಿಸ್ಕಂಡು ನಿಮ್ಮಪ್ಪನ ಮನೆಗೋಗಾಕಿಲ್ವಾ?

ಕಾಳಿ : ಅಲ್ಲಿಗಂಟ ತೋರಸ್ಬ್ಯಾನಾಯ್ತು?

ಕರಿಯ : ತೋರ್ಸದು ಒಳ್ಳದೇ ನಾನ್ಯಾನ್ ಬ್ಯಾಡಾ ಅಂದ್ನಾ?

ಕಾಳಿ : ನಮ್ಮ ವೊಲದ ಗಿಡ್ದಲ್ಲಿ ಮಾವಿನ್ಕಾಯ್ಬುಟ್ಟಿದ್ದವಾ?

ಕರಿಯ : ಯಾಕ್... ಉಪ್ಪಿನಕಾಯಾಕಾಕ...?

ಕಾಳಿ : ವಸಿ ತಿನ್ನಬ್ಯಾಕು, ಉಪ್ಪಿನ್ಕಾಯ್ನು ಆಕ್ಬೇಕು.

ಕರಿಯ : ಬಸ್ರಿ ಬವ್ಕೆ ಇನ್ಯಾನ್ನಾಕು ಕ್ಯಾಳು ಕೆಮ್ಮಣ್ಣು, ಉತ್ತಿನ ಮಣ್ಣು ಬೇಕಾ?

ಕಾಳಿ : ಹ್ಞೂಂ...

ಕರಿಯ : ನಂಗೊತ್ತು ನೀನು ಅದ್ನೆಲ್ಲಾ ಕ್ಯಾಳ್ತಿದ್ದೆ ಅಂತ.

ಕಾಳಿ : ನಿಮ್ಗ್ಯಾನ್ ಗೊತ್ತಾಗ್ಬ್ಯಾಕು?

ಕರಿಯ : ಗಂಡಸ್ರು ಬಸ್ರಾಗ್ತಿದ್ರೆ... ಪರಪಂಚ ನಡೀತಿರ್‍ನಿಲ್ಲಾ... ಇನ್ಯಾಕ್ ಬುಡು. ಈಗ ವಾಂತಿ ಆಯ್ತಿತ್ತಲ್ಲಾ ವಸಿ ಅವುಸ್ದಿ ಕ್ಯಾಳ್ಬಾಕಾಗಿತ್ತು. (ವಾಂತಿ) ಮತ್ ಸುರ್‍ವಾಯ್ತು? ...ಅದರ್ ಸುಕ ಕಸ್ಟ ನಮ್ಗ್ಯಾನ್ ಗೊತ್ತಾಗ್ಬ್ಯಾಕು?

ಕಾಳಿ : ನಂಗಾಕೋ ಸಂಕಟ ಸುಸ್ತಾಯ್ತದೆ... ನೀವು ವಾಗಿ ಮಲಕಾ ವೋಗಿ... ನಾನು ವಸಿ ಮಲಕತ್ನಿ...

ಕರಿಯ : ನೆಲದ ಮ್ಯಾಕೆ ಯಾಕೆ ಬಿದ್ಗಂಡಯಿ ತಾಳು ಮಂಜಲ್ಗೆ ತತ್ತೀವ್ನಿ...

ಕಾಳಿ : ಒಂದು ಕಾಗಜ ಆಕ್ಸಿ ನಮ್ಮ ಅವ್ವಗೆ... ವಸಿ ಅಂಗೇ ಬಂದಿದ್ದೋಗ್ಬ್ಯಾಕು ಅಂತ.

ಕರಿಯ : ನಾನೇ ಒಂದಜ್ಜ ವೋಗಿದ್ಬನ್ಸುಬುಡ್ಲ್ಯಾ?

ಕಾಳಿ : ಗಾಬ್ರ್ಯಾದರೂ, ಯಾನೂ ಬ್ಯಾಡಿ...

ಕರಿಯ : ಸರಿ ನೀಯಾಳ್ದಾಗೇ ನಾಳಾಕೆ ಕಾಗ್ಜ ಆಕಿಸ್ಬುಡ್ತೀವ್ನಿ ಬುಡು, ನೀ ಮಲಿಕಾ...

* * *

(ಜೋಜೋ... ಜೋಗುಳ ಹಾಡುತ್ತಾ)

ಕಾಳಿ : ಅಂತೂ ನಿಮ್ಮಾಟಾನೇ ಮಿರ್‍ಬುಡ್ತು...

ಕರಿಯ : ಕರಿಯನ ಮಾತು ಅಂದ್ರೆ... ಕಡ್ಡಿ ಮುರದೇಡು ತುಂಡನಾಗೇ.... ಅನ್ನದ್ ಈಗ್ಲಾದ್ರೂ ಗೊತ್ತಾಯ್ತಲ್ಲ.

ಕಾಳಿ : ಎಂಗವ್ನೇ... ತುಂಟಾ?... ತೇಟ್ ನಿಮ್ಮಾಗೇ... ಕಣ್ಣು, ಮೂಗು, ಬಾಯಿ ಗಲ್ಲಾ ಎಲ್ಲ...

ಕರಿಯ : ಕಾಳಿ...

ಕಾಳಿ : ಪ್ರೇಮ ಸಲ್ಲಾಪ ಸಾಕು... ನಾನೀಗ...

ಕರಿಯ : ಬಾಣ್ತಿ ಅಂತ ಗೊತ್ತು ಅದ್ಕೇ ನಿಂಗೀ ಗತ್ತು.

ಕಾಳಿ : ಈಗಿನ ಪ್ರೇಮ ಸಲ್ಲಾಪ ನಮ್ಮ ಆರೋಗ್ಯಕ್ಕೆ ಕುತ್ತು.

ಕರಿಯ : ಅದ್ ನಂಗೊತ್ತು...

ಕಾಳಿ : ಈ ಮುತ್ತಿಕ್ಬೇಕಾದ್ದು ಅವನ್ಗೇ... ಹೆಸರಿಲ್ಲದ ಮರಿದೇವರ್‍ಗೆ.

ಕರಿಯ : ಹೌದಲ್ವಾ? ಮರ್ತೇ ಬುಟ್ಟಿದ್ದೆ.. ಹೆಸ್ರಾಕಿಲ್ಲ ನನ್ನ ಮಗನಿಗೆ ಕರಿಸ್ತೀವ್ನಿ...

ಕಾಳಿ : ಯಾನಂತ?

ಕರಿಯ : ಈರಪ್ಪದೇವರು ಅಂತ. ಅದ್ಸರಿ ಈಗ ನಿಂಗೇಟು ದಿನ ರಜ?

ಕಾಳಿ : ಆರು ತಿಂಗಳು... ಈ ಕತ್ಲೇ ಕ್ವಾಣ್ಯಾಗೆ ನಿಮ್ಗೇಟು ದಿನ ಗೊತ್ತಾ? ಮೂರು ವರ್ಸ

ಕರಿಯ : ಅಂಗಾ...? ಅಲ್ಲಿಗಂಟಾ?

ಕಾಳಿ : ಈರಪ್ಪದೇವ್ರಾಡಿಸ್ಕಂಡಿರದು...

ಕರಿಯ : ಕಾಳೀ... ಕಾಳೀ... ನಿಂತ್ಕ... ನಿಂತ್ಕ... ಕಾಳೀ... ಕಾಳೀ...

* * *

ಕಾಳಿ : ಯಾನೀಗ್ ಕೂಕ್ಕತಿದ್ದರಿ?

ಕರಿಯ : ಯಾನಿಲ್ಲ ಕನ್ಸು ಆಮ್ಯಾಕೇಳ್ತಿವ್ನಿ... ಈಗ ನೀನು ಸುದಾರಸ್ಕೋ...

ಕಾಳಿ : ಕೆಟ್ಟ ಕನಸ್ಯಾನಿಲ್ಲವಲ್ಲಾ...?

ಕರಿಯ : ಬೆಳಗಿನ ಕನಸು... ನಿಜವಾದ ಕನಸು... ಒಳ್ಳೇ ಕನಸೇ...

ಕಾಳಿ : ನೀವು ತಂದ್ಯಾಗಿದ್ರಾ?

ಕರಿಯ : ಇಲ್ಲ ನೀನು ತಾಯಾಗಿದ್ದೆ.

(ಇಬ್ಬರು ನಗುವರು)

* * *

## ದೃಶ್ಯ-೬

ಅಮಾಸಯ್ಯ : ಗದ್ದ ಕಡಾಕೋಬೇಕು ಇಟ್ಟಾಯ್ತಾ ಎಂಗೆ? ನಿನ್ನ ಕೇಳ್ತಾ ಇರೋದು ಉತ್ತರಾಜಿ...

ಉತ್ತರಾಜಿ : ಅದ್ಕೇ ಈಗ ಉತ್ತರ ಸಿದ್ದವಾಗೈತೆ, ಇನ್ನೂ ಆಗಿಲ್ಲ ಅಂತ.

ಅಮಾಸಯ್ಯ : ನಿಂಗ್ ತಲೆ ನೆಟ್ಟಗದ್ಯೋ ಎಂಗೆ?

ಉತ್ತರಾಜಿ : ಕೆಟ್ಟೋಗಿ ಏಟೋ ದಿನ್ವಾಯ್ತು?

ಅಮಾಸಯ್ಯ : ಯಾಕೋ?

ಉತ್ತರಾಜಿ : ಹುಚ್ಚಾರಾಸ್ಪತ್ರೆಗೆ ಸೇರ್ಕಳ್ಳಕಾ...?

ಅಮಾಸಯ್ಯ : ನಿನ್ನಾಗಿರಾ ಅರೆಯೇನೋ?

ಉತ್ತರಾಜಿ : ಒಂದು ಕೊಂಯ್ ಅಂದ್ರೆ, ಒಂದು ಪಿಂಯ್ ಅನ್ನೈತೆ. ನೀ ಬಂದು ಗದ್ದಗೋಗ್ಯಾಕು ಅಂತ ತಣ್ಣಾಗ ನೋಡ್ತ ಇರ್ತೀಯಾ? ನಾಯಂಗ್ ಉತ್ತರ

ಕೂಡ್ಲಿ, ಯಾರನ್ ಸವರ್ಸಲಿ ಹೇಳು ಮಂತ. ಆ ದ್ಯಾವರು ನನ್ನ ಹಣಾಲ್ಯಾನು ಬರೆದ್ನೋ ಯಾನೋ. (ಅಳುವಳು)

ಅಮಾಸಯ್ಯ : ಮಾತೆತಿದ್ರ್ ಬಾಯಿ ಕುಟ್ಬಡ್ತೀಯಾ, ನೀ ಯಾನ್ ಮನುಸಳೋ ಮರವೋ...

ಉತ್ತರಾಜಿ : ಮರ ಮನೆ ಸಂಸಾರವನ್ನೆಲ್ಲಾ ಒಬ್ಳೇ ತೂಗಿಸ್ಕಂಡೋಗ್ಬ್ಯಾಡ್ವಾ?

ಅಮಾಸಯ್ಯ : ಬುಡು ಬುಡು, ತಲೇನ್ ಈ ಪಾಟಿ ಕೆಡ್ರಕಂಡಿದ್ದೀಯಲ್ಲಾ ಕೆಕ್ಕಳಕ್ಕಾಗ್ದ?

ಉತ್ತರಾಜಿ : ಇದ್ಕೇ ಈ ಪಾಟಿ ದಂಡ್ ಕಟ್ತೀವ್ರಿ, ಇನ್ನು ಸಿಸ್ತು ಸಿಂಗಾರ ಮಾಡ್ಕಂಡು ವಾಲಾಡಕಾಯ್ತದಾ ತಕ್ಕಳಿ.

ಅಮಾಸಯ್ಯ : ನೀ ಇಕ್ಕ ಊಟದಲ್ಲೂ ಸೇರ್ಕಂಡ್ರ ಗತಿ?

ಉತ್ತರಾಜಿ : ಬೋರಾ ದೇವ್ರ ಪಾದ್ವೇಗತಿ.

ಅಮಾಸಯ್ಯ : ಈಗ ನನ್ನ ಗತಿ ಯೇಳು.

ಉತ್ತರಾಜಿ : ನಿಮ್ಗೂ ಅಷ್ಟೇ ಅವನು ಮಾಡ್ದಾಗೇ...

ಅಮಾಸಯ್ಯ : ಯಾಕ್ ಉತ್ತರಾಜೀ ನಿಂಗೂಟೆಜ್ಜಾಯ್ತಾ ಎಂಗೆ?

ಉತ್ತರಾಜಿ : ನಿಮಗ್ ಕಮ್ಮಿಯಾಗದ ಅದ್ಕೇ ಬಂದ್ರ್ಯಾ?

ಅಮಾಸಯ್ಯ : ನಿನ್ನೂಟವೂ ಬ್ಯಾಡ ಯಾನು ಬ್ಯಾಡ ಬುಡು ವೋಯ್ತೀಸ್ರಿ...

ಉತ್ತರಾಜಿ : ಪೊಟ್ಲ್‌ಗಾಕು ಕಾಸು...ನಮಗೆಲ್ಲಾ ಆಮ್ಯಾಕೆ ಮುಕ್ಕುನ್ರಿ ಮಣ್ಣು-ಒಂದು ಸಡೀಗ್ ತಾಳಿ ಆಯ್ತು, ಬಾಳೆ ಬೇಯ್ಬ್ಯಾಡ್ವ? ಒಳ್ಳಿ ಕುದ್ಯ ಅವ್ರ ಬಾಯ್ಗಾಕಾಳಾಗೇ ಮಾತಾಡ್ತಿದ್ದರಿ.

ಅಮಾಸಯ್ಯ : ಬೇಯ್ಸಕಂಡು ತಿನ್ನು ನೀನೇ...

ಉತ್ತರಾಜಿ : ಅದ್ಯಾನು ಮಾತು ಅಂತಾಡ್ದರಿ, ವಸಿ ಹಜಾರದಲ್ಲಿ ಸ್ವಲ್ಪ ಆರಾಮ ತಕ್ಕಳಿ.

ಅಮಾಸಯ್ಯ : ತುಥ್ ನಿನ್ನ ತಲೆ ಮ್ಯಾಲೆ ಗೂಗ್ ಕೂತ್ಕಳಾ...

ಕರಿಯ : ಅಮಾಸಯ್ಯ... ಅಮಾಸಯ್ಯ... ನಾನು...

ಅಮಾಸಯ್ಯ : ನಾನು ನಿನ್ಗಲ್ಲ ಕರಿಯಣ್ಣ ಅಂದದ್ದು, ನನ್ನ ಹೆಂಡ್ರಗೆ.

ಕರಿಯ : ಯಾಕೋ?

ಅಮಾಸಯ್ಯ : ಗೋಳು ಇದ್ದೇ ಇದ್ಯಲ್ಲಪ್ಪಾ... ಸಂಸಾರ ಅಂದಮ್ಯಾಕೆ.

ಕರಿಯ : ಅದರ ಕತೆ ಅಂಗಿರ್ಲಿ ಬುಡು, ನಂಗ್ ಗಂಡಾಯ್ತು ಕಣಯ್ಯಾ.

ಅಮಾಸಯ್ಯ : ಬೋ ಸಂತೋಸ್ವಪ್ಪಾ... ನೋಡು ಅಂಗನ್ಬುಟ್ಟ ಸುಮ್ಕಿದ್ರ ನಾವು ಕ್ಯಾಳಕಿಲ್ಲ, ಸಕ್ಕರ ಬಾಳಹಣ್ಣು ಕೊಡಬೇಕು ಕಣಪ್ಪಾ...

ಕರಿಯ : ಅದ್ಯಾನಾ ಬುಡು... ಕೊಡತೀನಿ...

ಅಮಾಸಯ್ಯ : ಅಂತೂ ಮೊದಲ್ನೇ ಮಗ ಜಯ ಜಯ ಅಂತ ಗಂಡೇ ಆಗವ್ನೆ... ಒಳ್ಳೀ... ಲೋಕಾನೇ ಆಳ್ತಾನಾ ಕಣ್ ಬುಡು ಕರಿಯಣ್ಣ.

ಕರಿಯ : ನಿಂಗೇನು ಕಮ್ಮಿಯಾಗಿರದು?

ಅಮಾಸಯ್ಯ : ನನಗೇನು ಕಮ್ಮಿ? ಅದ್ಕೇ ಈಗ ಈ ಪಡಬಾರದ ಪಾಡು ಪಡ್ತಾ ಇರಾದು, ನಿನ್ನ ವಯಸ್ನ ನಂಗೆ ಏಡು ಮಕ್ಕಳಾಗೋಯ್ತು.

ಕರಿಯ : ಅದ್ಯಾರ್ತಪ್ಪು?

ಅಮಾಸಯ್ಯ : ನಂದು.

ಕರಿಯ : ನಿನ್ನ ಹೆಸರಿಗೆ ತಕ್ಕಾಗೇ ಅಮಾಸ ಕತ್ಲು ಕವ್ಕಂಡಿತ್ತು ಅಂತ ಕಾಣ್ತೈತೆ, ಮಾಡಿದ್ದುಣ್ಣೋ ಮಾರಾಯ.

ಅಮಾಸಯ್ಯ : ನಾವೇನೋ ಕೆಟ್ಟೋ, ನೀ ಜೋಪಾನವಪ್ಪಾ... ನೀ ಯಾನಾ ಜ್ವಾಪಾನ್ವಾಗೇ ಇದ್ದಯಿ ಮದ್ವ್ಯಾಗಿ ಏಡು ಮೂರು ವರ್ಸವಾದ್ಮ್ಯಾಕೆ ಮಗ ಆಗೈತಿ. ನೀ ಪುಣ್ವಂತ ಕಣ್ಬುಡಪ್ಪ. ಮುಂದಾದ್ರೂ ನಮ್ಮಂಗಾಗ್ಬ್ಯಾಡಪ್ಪಾ ಕೆಟ್ಟಮ್ಯಾಕೆ ಬುದ್ದಿ ಬಂತು ಅಟ್ಟಮ್ಯಾಕೆ ಒಲೆ ಉರೀತು ಅಂದಾಗಾಗ್ಬಾರ್ದು.

ಕರಿಯ : ನಿಮ್ಮಂತವ್ರನ್ನ ನೋಡಿದ್ಮ್ಯಾಕೆ ನಾವು ಎಚ್ಚರಿಕ್ಯಾಗೇ ಇರಬ್ಯಾಕು. ಅಂದಾಗೆ ಅಮಾಸಯ್ಯ ನಾಳಾಕ ನನ್ನ ಮಗನ ಹೆಸರು ಮಡಗ್ತೀವಿ. ಎಲ್ಲಾ ಬನ್ಬುಡ್ಬೇಕಪ್ಪಾ...

ಅಮಾಸಯ್ಯ : ಆಗ್ಲಿ ಕನಪ್ಪಾ...

ಕರಿಯ : ಅಂಗರ್ ನಾ ಬರನಾ?

ಅಮಾಸಯ್ಯ : ವಸಿ ಮಜ್ಜಗ ಕುಡ್ಕಂಡೋಗು...

ಕರಿಯ : ಬ್ಯಾಡ ಕಣಯ್ಯಾ ನಂಗ್ ಇನ್ನೂ ಊರ್ನಾಗಿ ನೆಂಟ್ರಗೆಲ್ಲಾ ಯಾಳಕೋಬೇಕು.

ಅಮಾಸಯ್ಯ : ಯಾನೋಪ ನಾವು ಬಡ್ವರು... ನಿಂಗೂಟ ಮಾಡಾಕಾಕಾಗ್ನಿಲ್ಲ ಈಗ ನಂಗೆ ಒದ್ದೆ ಬಟ್ಟೆಯ ಕಂಡು ವೊಂಟಿದ್ದಿ, ನಿನ್ನ ಸದ್ದುಕ್ಯಾಳಿ ಉಳ್ಕಂಡಿ.

ಕರಿಯ : ಅದ್ಯಾನ ಬುಡು ಬುಡು ನಾಯಾನು ತಿಳ್ಕಳಾದೂ ಇಲ್ಲ ಗಿಳ್ಕಳಾದೂ ಇಲ್ಲ ನಾ ಬತ್ತೀವ್ನಿ...

ಅಮಾಸಯ್ಯ : ಹ್ಞೂಂ...

ಉತ್ತರಾಜಿ : ಊಕರ್ಸ್ ಬ್ಯಾಡಿ ಬನ್ನಿ... ಆಯ್ತು.

ಅಮಾಸಯ್ಯ : ಅವನ್ನೂ ಕರೇಬೋದಾಗಿತ್ತು.

ಉತ್ತರಾಜಿ : ಬಗ್ ಬಗೆ ಮಾಡಿದ್ನ್ಯಲ್ಲಾ ಅದ್ಕಾ?

ಅಮಾಸಯ್ಯ : ನಾ ಬ್ಯಾಡ ಅಂದ್ನಾ?

ಉತ್ತರಾಜಿ : ಜಳ್ಳಿಗಿಲ್ಲದೇವಾಮ್ರೊ ತೋಡಿಕ್ಕು ಬಡ್ಡಿ ಅಂದ್ನಂತೆ ನಿಮ್ಮಂತವ್ನು...

ಅಮಾಸಯ್ಯ : ನಾ ಯೇನ್ ಮಾಡ್ಲಿ ಯೋಳು... ವಾದ ವರ್ಸ ಮಳ ಬೆಳವೋಯ್ತು ಸಾಲ ಮಾಡಿ ಬಡ್ಡೀನೇ ತೀರ್ಸನ್ಯೋ, ನಿಮ್ನೇ ಸಾಕನ್ಯೋ.

ಉತ್ತರಾಜಿ : ಅದ್ಕೇ ಈಗೆಲ್ಲಾ ಅನುಬೋಗಿಸ್ತಾ ಇವ್ಯಲ್ಲಾ......

ಅಮಾಸಯ್ಯ : ಮಿಂಚು ಹೋದ ಕಾರ್ಯ.

ಉತ್ತರಾಜಿ : ಇನ್ನೂ ಚಿಂತಿಸಿ ಪಲವಿಲ್ಲ ನಡೀರಿ... ಊಟಕ್ಕೆ.

ಅಮಾಸಯ್ಯ : ಆಯ್ತು.

* * *

ನಾರಾಯಣಮ್ಮ : ಯಾರು ಮನೇಲಿ...?

ಉತ್ತರಾಜಿ : ಮನಲ್ಯಾರ ಅಂತ ಕ್ಯಾಳ್ತೀಯಲ್ಲಾ ತಾಯಿ ಯಾಕ್ ಕಾಣಕಿಲ್ವಾ ಮನೇಲಿರೋ ದಂಡಿ ಜನ ಸದ್ದು ಕೇಳಕಿಲ್ವಾ? ಏನಾಗ್ ಬೇಕಾಗಿತ್ತವ್ವಾ?

ನಾರಾಯಣಮ್ಮ : ನಾನು ನಾರಾಯಣಮ್ಮ

ಉತ್ತರಾಜಿ : ನಾನು ಉತ್ತರಾಜಮ್ಮ

ನಾರಾಯಣಮ್ಮ : ನಾನು ಆರೋಗ್ಯ ಸಂದರ್ಶಕಿ

ಉತ್ತರಾಜಿ : ನಾನು ಒಬ್ಬ ಮನ್ಸ. ದರ್ಗೊಗ್ರೆಯಾದ ಮನುಸಳು.

ನಾರಾಯಣಮ್ಮ : ಯಾಕವ್ವಾ ಈಟೊಂದು ಬೇಜಾರಾಗೋಗಿದ್ದೀರಿ?

ಉತ್ತರಾಜಿ : ನಮ್ಮಂತವ್ರು ಭೂಮಿ ಮ್ಯಾಕೆ ಜಲುಮಸ್ಬಾರ್ದು ಕಣವ್ವಾ.

ನಾರಾಯಣಮ್ಮ : ಯಾಕೋ...?

ಉತ್ತರಾಜಿ : ಭೂಮಿಗೆ ಭಾರ ಅಷ್ಟೇಕನವ್ವಾ. ನಾವು ಯಾನು ಸಾದಿಸ್ನಿಲ್ಲ. ಮಕ್ಕಳೆತ್ತು ಕಣ್ಣೀರಾಕ್ತಾ ಇವ್ನಿ, ಅಷ್ಟೇ.

ನಾರಾಯಣಮ್ಮ : ನಾವು ನಿಮ್ಮಂತವ್ರ ಆರೋಗ್ಯ ನೋಡಾಕೆ ಬಂದಿರೋದು.

ಉತ್ತರಾಜಿ : ನಮ್ಮ ಸರೀರದ ಆರೋಗ್ಯ ಸರೋದ್ರೂ, ಮನಸ್ಸಿನ ಆರೋಗ್ಯ ಸರಿಯಾಗಬೇಕಲ್ಲವ್ವಾ.

ನಾರಾಯಣಮ್ಮ : ಎಷ್ಟು ಜನ ಮಕ್ಕಳು?

ಉತ್ತರಾಜಿ : ಇನ್ನು ಹೆಚ್ಚಾದ್ರ ಕಮ್ಮಿ ಮಾಡ್ಕಳ್ಳಕಾದದಾ?

ನಾರಾಯಣಮ್ಮ : ಮುಂದಾಗೋದ್ನಾದ್ರೂ ತಪ್ಪಿಸ್ಕಬೋದಲ್ವಾ?

ಉತ್ತರಾಜಿ : ಅವೆಕಣವ್ವಾ ಎರಡು.

ನಾರಾಯಣಮ್ಮ : ಗಾಣದ ಎತ್ತಿನಾಗ್ ದುಡೀತಾ ಮಕ್ಕಳನ್ನು ವರ್ಸಕ್ಕೊಂದಂದು ಪಡಿತಾ ಇದ್ರೆ ನಿಮ್ಮ ಆರೋಗ್ಯ ಎಂಗ್ ತಾನೇ ನೆಟ್ಕಿರ್ತದೆ ಯೋಳಿ ರಕ್ತವೇ ಇಲ್ಲ ಮೈಸಲ್ಲಿ. ನೀವು ಆಸ್ಪತ್ರೆಗೆ ಬನ್ನಿ ಮಾತ್ರೆ ಕೊಡಿಸ್ತೀನಿ... ಒಂದು ಮಗಿಗೂ ಇನ್ನೊಂದು ಮಗಿಗೂ ಮೂರು ವರ್ಸವಾದ್ರೂ ಅಂತ್ರ ಬ್ಯಾಡ್ವವ್ವಾ?

ಉತ್ತರಾಜಿ : ಯಾನೋ ಆಗೋಯ್ತು.

ನಾರಾಯಣಮ್ಮ : ಮುಂದಾರೂ ಜ್ವಾಪಾನ ಬತ್ತೀನಿ..., ಆಸ್ಪತ್ರೆಗೆ ಬನ್ನಿ, ನನ್ನ ಕೈಲಾದ ಸಹಾಯ ಮಾಡ್ತೀನಿ.

ಉತ್ತರಾಜಿ : (ಮನಸ್ಸು ನುಡಿಯುವುದು) ನಾಯಾನ್ ಆ ದ್ಯಾವ್ರನ್ ಬ್ಯಾಡಿಕೊಂಡ್ನಾ? ಈಟೊಂದು ಬ್ಯಾಗ ಮಕ್ಕಳು ಕೊಡು ಅಂತ. ಆದ್ಯಾನ್ ಮಾಡ್ಲಿ? ನಂಗೂ ಬ್ಯಾಗ್ ಬ್ಯಾಗ ಏಡು ಮಕ್ಕಳು ಅಂತರ ವಿಲ್ದೆ ಆಗೋಯ್ತು. ಈಗ ಸದ್ಯಕ್ಕಂತೂ ಬ್ಯಾಡ... ಏನು ಮಾಡ್ಲಿ? ಮುಂದಾದ್ರೂ ನಾರಾಯಣಮ್ಮ ಹೇಳಿದಾಗೆ ಕೇಳೋದು ಒಳ್ಳೇದು.

* * *

## ದೃಶ್ಯ-೭

ಕಾಳಿ : ಯಾನೀಗ್ ಬಂದ್ರ್ಯಾ ಮೈಸೂರ್ನಿಂದ?

ಕರಿಯಪ್ಪ : ಊಂ...

ಕಾಳಿ : ಯಾನ್ಯಾನ್ ತಂದ್ರಿ?

ಕರಿಯಪ್ಪ : ಇನ್ಯಾನ ನಿನ್ನ ಮೊಗಿಗ್ ಚೊಗ ತಂದಿವ್ನಿ, ಕುಲಾಬಿ, ಕಾಲುಚೀಲ ತಂದಿವ್ನಿ, ಮೊಗರು ಬದ್ನೆಕಾಯಿ, ಮೈಸೂರು ಚಿಗ್ರಲೆ ತಂದಿವ್ನಿ... ಆಟ ಆಡಕ ಮಗನಿಗೇ ಗೊಂಬಗಳ್ ತಂದಿವ್ನಿ.

ಕಾಳಿ : ಯಾನೋ ಮೈಸೂರ್ನೇ ವೊತ್ಕಂಬಂದಂಗ್ ಕಾಣ್ತೈತೆ...

ಕರಿಯಪ್ಪ : ಮೊದಲನೇ ಮಗನ ನಾಮಕರಣ ಮಾಡಬೇಕು! ಅಂದ್ರ್ ಸಾಮಾನ್ಯವಾ ಯಾಳಿ ಮತ್ತೆ.

ಕಾಳಿ : ಯಿಂಗ್ ದರ್ಬಾರು ಮಾಡ್ಬುಟ್ರೆ ಮಕ್ಕಳ ಕೈಗೆ ಚಿಪ್ಪು ಕೊಡಬ್ಯಾಕಾಯ್ತದೆ. ವಸಿ ಇದ್ತ ಕಲೀರಿ.

ಕರಿಯಪ್ಪ : ಅನ್ನದಾನ ಮಾಡಬ್ಯಾಕು ಕಣಾ ಆಗ್ಲೇ ಸಾಂತಿ... ನನ್ನ ಮಗನ್ನ ಎಲ್ಲರೂ ಹರಸಿ ಹಾರೈಸಿದ್ರೆ, ಅದೇ ಅವನಿಗೆ ಐಸ್ವರ್ಯ ಆಯ್ತದ. ಆಯ್ಸು ಪೆಚ್ತೈತೆ.

ಕಾಳಿ : ಇದ್ಯಾನಾ ಮೈಸೂರಿಂದ ಬಂದು ಸುಮ್ನೆ ಮಾತ್ನೆ ಆಡ್ತಾ ಕೂತ್ಕಂಡ್ರ್ಯಾ ಎಂಗೆ?

ಕರಿಯಪ್ಪ : ನೆನ್ನಯೇ ಎಲ್ಲರ್ನೂ ಕರೆದು ಮುಗಿಸ್ಬುಟ್ಟೆ, ಇನ್ಯಾನ...?

ಕಾಳಿ : ಬರವರ್ಗ ಅಡ್ಗೂಟ ಅಣಿ ಮಾಡ್ಸಲ್ವಾ?

ಕರಿಯಪ್ಪ : ಪಕ್ಕದ ಮನೆ ಸಂಬಕ್ಕ, ಚೌಡಕ್ಕ, ಸುಬ್ಬಕ್ಕ ಎಲ್ಲರ್ನೂ ಕರ್ದಾಯ್ತು ಬತ್ತಾವ್ರೆ... ಮಾಡ್ತಾವ್ರೇ...

ಕಾಳಿ : ಎಲ್ಲರಿಗೂ ಕೊಟ್ಬು ತಡ್ದು ಇಟ್ಕಂಡಿದ್ಸರಿ. ಬಂದು ಎಲ್ಲಾನೂ ಮಾಡ್ತಾ ಅವ್ರೆ. ಸ್ಯಾನೆ ತೀಟಿ ಅವರಿಗೆ.

ಕರಿಯಪ್ಪ : ಅಕ್ಕ ಪಕ್ಕ ಅಂತ ಅಟೂ ಮಾಡ್ದೆವೋದ್ರೆ ಏನು ಸುಖ ಬುಡು, ಪಟ್ಟಣದವರಾಗೆ. ಅಡ್ಗ ಮಾಡಕೂ ನಾವು ಕರಿಸ್ಬೇಕಾ?

ಕಾಳಿ : ಸದ್ಯ ಅದ್ನೂ ಕಟ್ಕಂಡ್ರೆ ನಾವು ಚನ್ನಾಗಿ ಉದ್ದಾರಾಯ್ತೀವಿ ಬುಡಿ.

ಕರಿಯಪ್ಪ : ಸರಿ ಎಲ್ಲರಿಗೂ ಯಾಳ್ಬರ್ತೀನಿ. ಸಿಯ್ ಏನ್ಮಾಡವಾ?

ಕಾಳಿ : ಒಬ್ಬಟ್ಟು ಪಾಯ್ಸ ಮಾಡಿಸ್ಬುಡವು.

ಕರಿಯ : ಸರಿ ನಿನ್ನಿಷ್ಟ ಒಪ್ಪದಾಗೇ ಆಗ್ಲಿ ಬುಡು, ನಾ ಬತ್ತೀವ್ನಿ...

ಕಾಳಿ : ಹ್ಞೂಂ...

* * *

ಉತ್ತರಾಜಿ : ಇದ್ಯಾಕಂಗ್ ನೋಡ್ದಯಿ, ನಾನು ಉತ್ತರಾಜೀ ಗೊತ್ತಾಗ್ನಿಲ್ವಾ?

ಕಾಳಮ್ಮ : ಬಾ... ಬಾ... ಉತ್ತರಾಜೀ...

ಉತ್ತರಾಜೀ : ಗಂಡೆತ್ತಿ ಅಂತ ಧರೆಮ್ಯಾಗ್ ಕಣ್ಣ ಬುಟ್ಟಯಾ ಎಂಗೆ?

ಕಾಳಮ್ಮ : ಛೇ... ಛೇ... ಇದ್ಯಾನ್ ಮಾತು ಅಂತಾಡ್ದಯಿ... ನಿಜವಾಗ್ಲೂ ನಿನ್ನನ್ನು ಕಂಡಿಡ್ಯಕೇ ಆಗ್ನಿಲ್ಲ; ಏನು ಸುಮಾರು ಇಂಗಿದ್ದಯಲ್ಲಾ? ಹೊಟ್ಟೆಗೆ ಏನಾರ ಉಂಡಯಾ ಎಂಗೆ?

ಉತ್ತರಾಜೀ : ಇಲ್ಲ ಹಸ್ಸಕಂಡಿವ್ನಿ.

ಕಾಳಮ್ಮ : ನಿನ್ನ ನೋಡಾಕೇ ಆಗಕಿಲ್ವಲ್ಲಾ...

ನಾರಾಯಣಮ್ಮ : ನೋಡಕ್ಯಾಗಾಯ್ತದೆ ಬುಡು ಕಾಳವ್ವ.

ಕಾಳಮ್ಮ : ಬನ್ನಿ ನಾರಾಯಣಮ್ಮನವ್ರೇ...

ನಾರಾಯಣಮ್ಮ : ಇದ್ಕೆಲ್ಲಾ ಕಾರಣ ಏನು ಗೊತ್ತಾ ಕಾಳವ್ವ?

ಕಾಳವ್ವ : ಏನು ನಾರಾಯಣಮ್ಮನವ್ರೇ...?

ನಾರಾಯಣಮ್ಮ : ಹೇಳಿದ್ ಮಾತ್ ಕೇಳಾದ್ರ್ಯಲ್ವಾ?

ಕಾಳಮ್ಮ : ನಿಮ್ಮ ಮಾತ್ಯಾಳ್ಳಿಲ್ವಾ?

ನಾರಾಯಣಮ್ಮ : ಪಾಪ ಆಕೆಯೇನು ನಾ ಯೋಳಿದ್ದಕ್ಕೆಲ್ಲಾ ಊಂಗುಟ್ಟತ್ಲೇ ಇದ್ಲು. ಅವಳ ಗಂಡ ಸ್ವಲ್ಪ ದುಡುಕ್ಬುಟ್ಟ... ಅಷ್ಟೇ.

ಕಾಳಮ್ಮ : ಇದ್ಯಾನ್ ನೀವೇಳದ್ ನಂಗೊತ್ತೇ ಆಗಕಿಲ್ಲ.

ನಾರಾಯಣಮ್ಮ : ನಾನು ಯಾಳಿದ್ದು ಮೊದಲು ಮಗ ಆದಮ್ಯಾಕೆ ಒಂದು ಮೂರು ವರ್ಸವಾದ್ರೂ ಮಕ್ಕಳು ಬ್ಯಾಡ ಅಂತ, ಕೇಳ್ಳಿಲ್ಲ. ಮುಂದಿನ ವರ್ಸಕ್ಕೇ ಮತ್ತೊಂದು ಮೊಗ ಆಯ್ತು.

ಕಾಳಮ್ಮ : ಏಡೇ ಮಕ್ಕಳು ತಾನೇ...

ನಾರಾಯಣಮ್ಮ : ಕಾಳವ್ವಾ ಒಂದು ಮೊಗ ಆಗಬೇಕಾದ್ರೆ ತಾಯಿಗೆ ಎಷ್ಟು ರಕ್ತ ಇರಬೇಕು? ಆ ಮೊಗ ಹೊಟ್ಟೆವೊಳ್ಗೆ ಬೆಳೆದು ಹೆರಿಗೆಯಾಗುವವರ್ಗೆ ಎಷ್ಟು ರಕ್ತ ಬೇಕು? ವರ್ಸ ವರ್ಸ ಮಕ್ಕಳಾಯ್ತಿದ್ರೆ ಆ ರಕ್ತ ತುಂಬೋದ್ಯಾಗೆ? ನೋಡಾಕೇ ಚೆನ್ನಾಗಿರದ್ಯಾಗೆ? ಅದ್ಕೇ ಅಂಗ್ ಕಾಣ್ತವ್ಳೆ ಅಷ್ಟೇ. ಇನ್ಯಾನ ಅವಳ್ಳ್ಯಾನ್ ತಿನ್ನಕ್ಕಿಲ್ವಾ, ಉಟ್ಕಳಕಿಲ್ವಾ? ಚನ್ನಾಗೇ ಅವ್ರೆ. ಆದ್ರೆ ದೇಹಕ್ಕೆ ರಕ್ತ ತುಂಬೋದು ಹ್ಯಾಗೆ?

ಉತ್ತರಾಜಿ : ನಿಜ ನಾರಾಯಣವ್ವಾ ನೀವ್ಯಾಳಿದ್ದು ದಿಟ.

ನಾರಾಯಣಮ್ಮ : ಅದೋ ನೋಡಿ ಶುರು ಮಾಡಿದ್ವು... ಇವರನ್ನೆಲ್ಲಾ ಸುಧಾರಿಸ ಬೇಕಾದ್ರೆ ಸಾಮಾನ್ಯವೇ? ಕಷ್ಟ ತಾನೇ? ಆರೋಗ್ಯವಾದರು ಗೆಲುವಾಗಿರು ಅಂದ್ರೆ ಹ್ಯಾಗಿರ್ತಾಳೆ ಹೇಳು ಕಾಳವ್ವ.

ಕರಿಯಪ್ಪ : ನಮಸ್ಕಾರ ನಾರಾಯಣವ್ವಾ ನೀವ್ ಬಂದದ್ ತುಂಬಾ ಸಂತೋಷ. ನೀವು ಮಾಡಿದುಪಕಾರವನ್ನು ಸದಾ ನೆನ್ನತೀನಿ.

ನಾರಾಯಣಮ್ಮ : ಯಾಕೋ?

ಕರಿಯಪ್ಪ : ಸುಕಮೊಕವಾಗಿ ಹೆರಿಗೆ ಆಗೋ ಹಾಗೆ ಮಾಡಿದ್ರಿ. ನಮಗೆ ಆಗಾಗ್ಗೆ ಎಚ್ಚರಿಕೆ ಯೇಳ್ತಿದ್ರಿ ಅದ್ಕೇ...

ನಾರಾಯಣಮ್ಮ : ಏನೋ ನಿಮ್ಮಂಥವರು ಕೇಳಿದ್ರಿ ಕೇಳಿದ್ರೆ ಪರ್ವಾಗಿಲ್ಲ. ಈಗ ನೋಡಿ ನಿಮ್ಮ ಅಮಾಸಯ್ಯನ ಹೆಂಡ್ತೀನಾ? ಆಕೆ ಪಾಪ ಒಪ್ಪಿದರೂ ಗಂಡ ನಡೀಗೊಡ್ಡವೋದ. ಅದೋ, ಹಾಗಂತಿದ್ದಾಗೆ ಅಮಾಸಯ್ಯ ಹಾಜರ್.

ಅಮಾಸಯ್ಯ : ಹೌದವ್ವಾ. ನಾನು ಮಾಡಿದ ಅವಿವೇಕಕ್ಕೆ ಈಗ ನಾನೇ ಸಪಿಸ್ಕತಿವ್ನಿ.

ನಾರಾಯಣಮ್ಮ : ಹೋಗ್ಲಿ ಮುಂದುಕ್ಕಾದ್ರೂ ಜ್ವಾಪಾನ?

ಅಮಾಸಯ್ಯ : ಬುಡ್ಯವ್ವಾ ಈಗ್ಲೇ ರೋಸೋಗಿದೆ ಮಕ್ಕಳೇ ಬ್ಯಾಡ ಅಂತ.

ನಾರಾಯಣಮ್ಮ : ಹಾಗಿದ್ರೆ ಕುಟುಂಬ ಯೋಜನೆ ಅನುಸರಿಸ್ತೀರಾ ಹ್ಯಾಗೆ?

ಅಮಾಸಯ್ಯ : ಯೋಸ್ನೆ ಮಾಡಿವ್ನಿ ಕನವ್ವಾ...

ಉತ್ತರಾಜಿ : ಬನ್ನಿ ಬನ್ನಿ ಮೊಗ ನೋಡವಾ?

ನಾರಾಯಣಮ್ಮ : ನಡೀರಿ.

ಉತ್ತರಾಜಿ : ತುಂಬಾ ಚೆನ್ನಾಗವ್ನೆ ಮೊಗ... ಏನೊಳ್ಳೆ ಗಂಬೀರವಾಗಿ ಮಲ್ಗವ್ನೆ ತೊಟ್ಟಲಲ್ಲಿ.

ನಾರಾಯಣಮ್ಮ : ಮೊಗ ಆರೋಗ್ಯವಾಗಿ ಚೆನ್ನಾಗಿದೆ.

ಉತ್ತರಾಜಿ : ತಗೋ...

ಕಾಳಿ : ಇದ್ಯಲ್ಲಾ ಯಾಕವ್ವಾ?

ಉತ್ತರಾಜಿ : ಬರೀ ಕೈಲಿ ಮೊಗ ನೋಡಕ್ಕಾಯ್ತದ. ಸಕ್ಕರೆ ಬಾಯಿಗ್ಗಿಟ್ಟು, ಕೈಗೇನಾದ್ರೂ ಲಂಚಕೊಟ್ಟು, ಆಮ್ಯಾಕೆ ಅವನ ದರಸ್ನ ಮಾಡಬ್ಯಾಕು ಕನವ್ವಾ.

ಕಾಳಿ : ಸಾಲ ಹೊರಸ್ತೀರಿ...

ನಾರಾಯಣಮ್ಮ : ಮುಯ್ಯಿಗೆ ಮುಯ್ಯಿ ಇದ್ದೇ ಇದೆ ಬುಡಿ.

ಕಾಳಿ : ಒಳ್ಳೆ ಮನಸ್ಸಿನಿಂದ ಹರಸದ್ರಾಯ್ತು. ಇದ್ಯಲ್ಲಾ ಯಾಕಾ ಯೋಳಿ?

ನಾರಾಯಣಮ್ಮ : ಕೊಟ್ಟ ಫಲನಾ ಒಲ್ಲಿ ಅನ್ಬಾರ್ದು ಕನವ್ವಾ. ಈಸ್ಕಬೇಕು. ಸಂತೋಸದಿಂದ ಅವರ ಕೈಲಾದ್ದ ಕೊಟ್ರೆ ತಪ್ಪೇನಿಲ್ಲ.

ಕರಿಯ : ಎಲ್ಲಾ ಕೂತ್ಕಳೀ ಇನ್ನೇನು ಇನ್ನೊಂದು ಸ್ವಲ್ಪ ಹೊತ್ತು ಊಟ ಆಗೋಗುತ್ತೆ.

* * *

ನಾರಾಯಣಮ್ಮ : ಊಟ ಬಹಳ ಚೆನ್ನಾಗಿತ್ತು ಕರಿಯಣ್ಣನವ್ರೇ...

ಕರಿಯ : ಏನೋ ತಾಯಿ ಬಡವನ ಮನೇದು... ತಾಂಬೂಲ ತಕ್ಕಳಿ...

ನಾರಾಯಣಮ್ಮ : ಆಗ್ಲಿ... ನಾ ಬರ್ಲಾ ಕಾಳವ್ವ...

ಕಾಳಿ : ವಸಿ ಕುಂತ್ಕಳಿ... ಮಾತಾಡುರಿ...

ನಾರಾಯಣಮ್ಮ : ಇನ್ನ್ಯಾನ ನಾನು ಬಂದು ಎಷ್ಟು ಹೊತ್ತಾಯ್ತು. ಇನ್ನೂ ಕೆಲಸಕ್ಕೆ ಬ್ಯಾರೆ ಹೋಗಬೇಕು. ಒಂದು ಮಾತು ಜ್ಞಾಪಕ ಇಟ್ಕೋ ಕಾಳವ್ವ.

ಕಾಳಿ : ಏನು ನಾರಾಯಣವ್ವ?

ನಾರಾಯಣಮ್ಮ : ಇನ್ನೂ ಮೂರು ವರ್ಸ ಗಂಟವ ಮಕ್ಕಳು ಬ್ಯಾಡ. ಇವನ್ನೇ ಚೆನ್ನಾಗಿ ಲಾಲನೆ ಪಾಲನೆ ಪೋಷಣೆ ಮಾಡು. ನಿನ್ನ ಆರೋಗ್ಯಾನೂ ಚೆನ್ನಾಗಿರುತ್ತೆ ಮಗೂನೂ ಚೆನ್ನಾಗಿ ಕಾಪಾಡಬಹುದು. ನಿನ್ನ ಗಂಡನಿಗೂ ಸಂಸಾರದಲ್ಲಿ ನೆಮ್ಮದಿ ಇರುತ್ತೆ.

ಕಾಳಿ : ಬಂಜೆ ಬಂಜೆ 'ಅನ್ನ' ಪದ ಜನಗಳ ಬಾಯ್ನಿಂದ ಬರೋದು ತಪ್ತಲ್ಲ ಅಷ್ಟು ಸಾಕು. ಮಕ್ಕಳು ಈಗ್ಲೇ ಯಾರಗ್ ಬೇಕ್ ನಾರಾಯಣವ್ವಾ ಇನ್ನೂ ನಾಕೊರ್ಸ ನಮ್ಗೆ ಬ್ಯಾಡಿ.

ನಾರಾಯಣಮ್ಮ : ನೀಂಗೇನಾರೂ ಅನುಮಾನ ಬಂದ್ರೆ ಕ್ಯಾಳು ನಾನು ನನ್ನ ಕೈಲಾದ ಸಹಾಯ ಮಾಡ್ತೀನಿ. ಅಸ್ಪತ್ರೆಗೆ ಬಂದ್ರೆ ಡಾಕ್ಟರಲ್ಲಿ ತೋರಿಸಿ ಇಲ್ಲ ವಂಕಿ ಹಾಕ್ಲೊ ಅಥವಾ ಇನ್ನ್ಯಾವ್ದಾದ್ರೂ ವಿಧಾನ ಅನುಸರಿಸುವ್ಯಂತೆ.

ಕಾಳಿ : ಅಗ್ಲಿ ಕನವ್ವಾ.

(ಒಲಗದ ಶಬ್ದ)

*   *   *

## ದೃಶ್ಯ-೮

ಅಮಾಸಯ್ಯ : ಏನು ಮನ್ಯಾಗೆ ಈ ಪಾಟಿ ಕಸ? ಉತ್ತರಾಜಿ...

ಉತ್ತರಾಜಿ : ಆ ಪಾಟಿ ಅಂಡತವ್ರೆ ಅದ್ಕೇ...

ಅಮಾಸಯ್ಯ : ಅದ್ಕೇ ಗುಡಸ್ಬ್ಯಾಡಾ ಅಂತೇಳಿದ್ದಾರಾ ಯಾನಾ?

ಉತ್ತರಾಜಿ : ನಂಗೀರದು ಎರಡೇ ಕೈ.

ಅಮಾಸಯ್ಯ : ಕಸ ಗುಡಿಸಕ್ಕೆ ಒಂದೇ ಕೈ ಸಾಕು ಎರಡು ಇದ್ದರೆ ಇನ್ನೂ ಚೆನ್ನಾಗಿ ಗುಡಿಸ್ಬೋದಲ್ಲಾ?

ಉತ್ತರಾಜಿ : ನನ್ನ ಕಷ್ಟ ನಿಮಗರ್ತವೇ ಆಗಲ್ಲಾ ಎಂಗೆ?

ಅಮಾಸಯ್ಯ : ಆ ಕೂಸ್ನೋಡು ಗೊಣ್ಣೆ ಹ್ಯಾಗೆ ಸುರಿಸ್ಕಂಡು ಕೂತದಾ? ಮೈ ಕೈಗೆಲ್ಲಾ ದೂಳಂಟಿಸ್ಕಂಡ್ಬು. ಅದ್ಕೊಸಿ ಗೊಣ್ಣೆ ಸೀಟಿ ಸ್ನಾನ ಮಾಡಿಸಿ ಬಟ್ಟೆ ಒಗದು ಆಕಕ್ಕಾಗಕಿಲ್ವಾ? ಮಕ್ಕಳಿಗೆ ರೋಗ ರುಜ್ನ ಬಂದ್ರ್ಯಾಗೆ?

ಉತ್ತರಾಜಿ : ನನ್ನ ಕೈಲಾಗಕಿಲ್ಲ ಒಂದಾಳಿರ್ಸಿ.

ಅಮಾಸಯ್ಯ : ನಾನೇ ಬ್ಯಾರವರ ಹತ್ತಿರ ಕೂಲಿ ಸಾಲ ಮಾಡಲಿಕ್ಕೋಗವ್ನು ನಾನೆಂಗೆ ಆಳಿಸ್ಕಳದ್ದು?

ಉತ್ತರಾಜಿ : ಮತ್ತದ್ಕೇ ಸುಮ್ಕೆಗಮ್ನಿರಿ ಅನ್ನಾದು? ನಿನ್ನ ಕಷ್ಟ ಏನು ಸುಕ ಏನು ಅಂತ ಕೇಳ್ಬ್ಯಾಡಿ, ಆ ಕೆಲ್ಸಾಗಿಲ್ಲ ಈ ಕೆಲ್ಸಾ ನಿಂಗೆಷ್ಟು ಕೈ ನಿಂಗೆಷ್ಟು ಬಾಯಿ ಅಂತ ಬೈತಿರಿ.

ಅಮಾಸಯ್ಯ : ನಿನ್ನ ಸುಕಕ್ಕೇನು ನಾನು ಕಡಿಮೆ ಮಾಡಿರಾದು?

ಉತ್ತರಾಜಿ : ಈ ಏಡು ಮಕ್ಕಳು ಸಾಲದಾ?

ಅಮಾಸಯ್ಯ : ನಮ್ಮ ಹಿಂದಿನವರು ಹತ್ತು ಹನ್ನೆರಡು ಮಕ್ಕಳೆತ್ತು ಮನೆಕೆಲ್ಸ ಎಂಗೆ ನಿಬಾಯಿಸ್ಕಂಡೋಯ್ತಿದ್ರು?

ಉತ್ತರಾಜಿ : ಅವ್ರೆಲ್ಲಾ ವರ್ಸಕ್ಕೊಂದಂದು ಮಕ್ಕಳು ಮಾಡ್ಕತಿರ್ನಿಲ್ಲ ತಿಳ್ಕಳಿ ಸಂಯಮವಾಗಿ ಇರ್ತಿದ್ರು. ಮೂರು ನಾಕು ವರ್ಸದ ಮ್ಯಾಕೆ ಮಕ್ಕಳು ಪಡೀತಿದ್ರು, ಅಂಗೇ ಅವ್ರು ನೋಡ್ಕತಿದ್ರು. ಮನ್ಯಾಗೆ ದಂಡಿಯಾಗಿ ಜನಿರ್ತಿದ್ರು, ಒಬ್ಬೊಬ್ಬರೂ ಒಂದೊಂದು ಕೆಲಸ ಮಾಡ್ಕತಿದ್ರು, ಚನ್ನಾಗಿ ತಿನ್ತಿದ್ರು, ಆರಗಸ್ಕತಿದ್ರು, ನಮ್ಮದಾಗಕಿಲ್ಲ. ಒಂಟರಗಾಳಿ ಸುಂಟರ ಗಾಳಿಯಾಗಿವ್ನಿ, ಮನ್ಯಾಗೆ ಎಲ್ಲಾ ಕೆಲ್ಸನೂ ಮಾಡ್ಕಂಡೋಗಕ್ಕೆ ಎಲ್ಲಾಯ್ತದೆ ಯೋಳಿ ಮಂತ.

ಅಮಾಸಯ್ಯ : ಬೋ ಅನುಭವದ ಮಾತಾಡ್ತಿದ್ದಯಿ ಬುಡು. ನಿಂಗೇನೇಳಕಾಯ್ತದೆ, ಎಲ್ಲಾ ನಂದೇ ತಪ್ಪು ಅನ್ತೀಯಾ ಅನ್ನು.

ಉತ್ತರಾಜಿ : ಇದ್ದದಿದ್ದಂಗೇಳದ್ರೆ ಎದ್ದು ಬಂದು ಎದೆಗೊದ್ದಗಾಯ್ತು, ಅಷ್ಟೇ.

ಅಮಾಸಯ್ಯ : ಅನ್ನು... ಅನ್ನು...

ಉತ್ತರಾಜಿ : ನನ್ನ ಮೈನಾಗಿ ರಗತಾ ಇಲ್ಲ ಸಂಕಟ ಸುಸ್ತಾಯ್ತದೆ. ಯಂಗೋ ಕೆಲಸ ಕಾರ್ಯ ನಿಬಾಯಿಸ್ಕೊಂಡೋಯ್ತಾ ಇವ್ನಿ.

ಅಮಾಸಯ್ಯ : ನಾನಿಲ್ಲ ಅಂತ ಯೋಳಿದ್ನಾ. ಅದರ ಜೊತೆಗ್ ಇದ್ನೂ ಸಟಿಗೆ ಅಂದಿ.

ಉತ್ತರಾಜಿ : ನಾನ್ಯಾನು ಈ ಭೂಮಿ ಮಾಕಿರದ್ ಬ್ಯಾಡ ಅಂತೀರೋ ಎಂಗೆ?

ಅಮಾಸಯ್ಯ : ಸುರುವಾಯ್ತು ಕಪಿಲಾ ಕಾವೇರಿ ಹರಿಸ್ಬ್ಯಾಡ ಬುಡು. ಬುದ್ದಿಯೋಳ ನಂಗೆ ಮೊದಲ್ ಬುದ್ದಿ ಇಲ್ಲ. ವೋಗ್ಲಿ ಆಸ್ಪತ್ರ್ಯಾಗೆ ವೋಗಿ ವೊಸಿ ತೋರಿಸು.

ಉತ್ತರಾಜಿ : ತೋರಕ್ಕೂ ಟೇಮಿಲ್ವಲ್ಲ ಯಾನೇಳ್ಲಿ? ಅದು ನನ್ನ ಕರ್ಮ.

ಅಮಾಸಯ್ಯ : ಈಗ ನಿನ್ನ ಪುರಾಣ ಎಲ್ಲಾ ಮುಗೀತಾ ಎಂಗೆ. ಒಂದು ಗಳಿಗೆ ಕಣ್ಮುಚ್ಚಕ್ಕಾರೂ ಅವಕಾಸ ಮಾಡ್ಕೊಟ್ಟಯ ಎಂಗೆ?

ಉತ್ತರಾಜಿ : ನಾನೇನ್ ನಿಮ್ಮನ್ ತಡ್ಕಂಡಿದ್ದನಾ? ವೋಗಿ ಆರಾಮವಾಗಿ ಮಲಗಿ ವೋಗಿ. ನೀವು ಮದ್ಯಾಸ್ಟೊತ್ತು ಮಲಗಿ ಆರಾಮ ತಕ್ಕಳವು, ನಮ್ಗ ರಾತ್ರಿಗೂ ಇಲ್ಲ.

ಅಮಾಸಯ್ಯ : ಎತ್ತಗಾರೂ ವೋಟೋಗ್ಲೋ ಎಂಗೆ?

ಉತ್ತರಾಜಿ : ಏಡು ಮಕ್ಕಳ ಸಂಸಾರಕ್ಕೆ ಇಂಗ್ ಬೇಜಾರು ಮಾಡ್ಕಂಡ್ರ್ಯಾಗೆ? ಇನ್ನೂ ಏನೇನಾಗ್ಬೇಕೋ?

ಅಮಾಸಯ್ಯ : ಆಗ್ಲಿ ತಕ್ಕ... ... ...

ಕರಿಯಣ್ಣ : ಅಮಾಸಯ್ಯ... ಅಮಾಸಯ್ಯ.

ಅಮಾಸಯ್ಯ : ಯಾರು ಕರಿಯಯಣ್ಣಾ, ಬಾಯ್ಯ... ಏನ್ ಸಮಾಸಾರ?

ಕರಿಯಣ್ಣ : ಈಗ ನಮ್ಮೂರ್ನ ಕೆಲವರು ಸೇರ್ಕಂಡು ಮೈಸೂರು, ಬೆಂಗಳೂರು, ಮದ್ರಾಸು ನೋಡ್ಕಂಬರವು ಅಂತ ಯೋಸ್ನೆ ಮಾಡೀವಿ.

ಅಮಾಸಯ್ಯ : ನಾ ಯಾನ ಬರ್ಬೋದು?

ಕರಿಯಣ್ಣ : ಮನೆಯವ್ರು ನೋಡದ್ಯಾವಾಗ?

ಅಮಾಸಯ್ಯ : ಈ ಮಕ್ಕಳ ಕಟ್ಕಂಡು ನೋಡ್ದಾಗೇ, ಒಂದು ಕುಂಯ್ ಅಂದ್ರೆ ಒಂದು ಪೀಂಯ್ ಅಂತ ಸುರು ಮಾಡ್ತವೆ. ಅವುಗಳ ಕಟ್ಕಂಡು ನಾವು ಟೋರ್ ವೋಗವಾಗಿದ್ದವಾ ತಕ್ಕ ಕರಿಯಣ್ಣ. ನೀನಾರ ಪುಣ್ವಂತ ಒಂದೇ ಮಗ ಆದ್ಮೂ ಮೂರು ವರ್ಸವಾಯ್ತು. ಎಂಗೋ ಗಂಡ ಎಂಡ್ತ್ರು ವೋಗ್ಬೋದು ನಾವೋಗದ್ಯಾಳು? ಆಮ್ಯಾಕೆ ಬಂದು ಜನ್ಗಳ್ಗೆಲ್ಲಾ ತೊಂದ್ರೆ ಕೊಟ್ಬಾಗಾಗಕ್ಕಿಲ್ವ?

ಉತ್ತರಾಜಿ : ಅಂಗನ್ಬುಟ್ಟು ನಾವು ಮನ್ಯಾಗೇ ಸಾಯಬೇಕಾ?

ಅಮಾಸಯ್ಯ : ಇಲ್ಲ ಹೋಗೇ, ಸಾಯಿ ಬ್ಯಾಡ ಅಂದವ್ರ್ಯಾರು?

ಉತ್ತರಾಜಿ : ಇಟ್ಟು ಬೇಯ್ಸದು, ಗೇಮೆ ಗೇಯದು, ಮಕ್ಕಳು ಪಡೆಯೋದು ಇಷ್ಟೇ ಕೆಲ್ಸ ಸಾಕು ಅಲ್ವಾ?

ಅಮಾಸಯ್ಯ : ಇರಾ ತೊಂದ್ರಿ ಯೇಳ್ದಿ ಇನ್ಮ್ಯಾಕೆ ನಿನ್ನಿಷ್ಟ.

ಉತ್ತರಾಜಿ : ಇಲ್ಲ, ನೀವೊಬ್ರೇ ವೋಗಿ...

ಅಮಾಸಯ್ಯ : ಇಲ್ಲ, ನಾನೇ ಮನೇಲಿರ್ತೀವ್ನಿ ನೀವೇ ವೋಗ್ಬನ್ನಿ

ಕರಿಯಣ್ಣ : ಇದ್ಯಾನ ಮಾತು ಅಂತಾಡ್ದಯಿ ಬುಡು ಅಮಾಸಯ್ಯ.

ಅಮಾಸಯ್ಯ : ನಮ್ಮಮನೆ ಇಸಯ ಗೂತ್ತಾಕ್ಕಿಲ್ಲ ಈ ಮಕ್ಕಳ ತಡ್ಯಕ್ಕಾಯ್ತದ, ಮನ್ಯಾಗೇ ಆಗಕಿಲ್ಲ, ಇನ್ನು ಟೂರ್‌ನಾಗೆ ಆಯ್ತದಾ ಯೋಳು.

ಕರಿಯಣ್ಣ : ಹೆಂಗಸ್ರು ಅದನ್ನು ಮಾಡ್ತಾರಪ್ಪಾ.

ಅಮಾಸಯ್ಯ : ನನ್ನ ತಲೆ ಮ್ಯಾಕೂ ಕಟ್ತಾರೆ.

ಕರಿಯಣ್ಣ : ಅಪ್ಪಾ ಅನ್ನಸ್ಕಳ್ಳವ, ಅಷ್ಟೂ ಮಾಡ್ದೆ ವೋದ್ರೆ, ಎಂಗೆ ಯೋಳು ಮತ್ತೆ.

ಉತ್ತರಾಜಿ : ಅದೇ ತಾನೇ ಬತ್ತೀವಿ ಬುಡು ಕರಿಯಣ್ಣ.

ಅಮಾಸಯ್ಯ : ನನ್ನ ಜೊತ್ಯಾಗೆ ಮದ್ವೆ ಆದ, ಏನು ಕುಸಿಯಾಗವ್ನೇ ನೋಡು, ನಾನು ನೀನು ನೋಡು, ಏಟೊಂದು ಚಿಂತೆ ಮಾಡ್ಬೇಕಾಗೈತೆ? ಒಂದೂರ್ಗಾ, ಕೇರಿಗ್ಯಾ, ಒಂದು ಜಾತ್ರೆಗ್ಯಾ ವೋಗಕ್ಯಾಯ್ತದಾ? ಉತ್ತರಾಜಿ.

ಉತ್ತರಾಜಿ : ಅದ್ಕೇ ನೀವು ಮೊದ್ಲೇ ಯೋಚನೆ ಮಾಡ್ಕಬೇಕಾಗಿತ್ತು.

ಕರಿಯಣ್ಣ : ಏಡು ಮಕಳಿಗೇ ಇಂಗಾಡ್ತಿದ್ದರ್‍ಯಲ್ಲಾ ಎಂಗೆ ಅಂತ?

ಅಮಾಸಯ್ಯ : ನಮ್ಮನೇಲಿ ಎರಡು ದಿನವಿದ್ರೆ ಆ ಸುಕ ಗೊತಾಯ್ತದೆ, ನೀ ಪುಣ್ಯವಂತ ಕಣಯ್ಯ.

ಕರಿಯಣ್ಣ : ಯಾಗೆ ಅಂತೀಯಾ?

ಅಮಾಸಯ್ಯ : ಮೂರು ವರ್ಸವಾದ್ರೂ ಮಕ್ಕಳಿಲ್ಲ.

ಕರಿಯಣ್ಣ : ಯಾಕ್ ನಿನ್ನಾಗೆ ಕಸ್ಟ ಪಡಲಿ ಳಂತ್ಲಾ?

ಅಮಾಸಯ್ಯ : ಬ್ಯಾಡಪ್ಪಾ ಬ್ಯಾಡ ಯಾವ ಹಗೇಗೂ ಬ್ಯಾಡ ಈ ಕಸ್ಟ.

ಅಮಾಸಯ್ಯ : ಮಕ್ಕಳಿರಬಹುದು ಆದ್ರೆ ಒಂದು ಮೊಗ. ಬುದ್ದಿ ತಿಳ್ಕಂಡು ಮಾತುಕತೆ ಆಡ್ಕಂಡು, ತಿರ್ಗಾಡ್ಕಂಡು ಇರವವರೆಗೆ, ಮಕ್ಕಳಿರಬಾರದು ಕಣಯ್ಯ, ನೋಡಿ ನನ್ನೆಡ್ತಿ ಪಾಡ್ನು ನೋಡಕ್ಯಾಗಕಿಲ್ಲ, ದಿನದಿನಕ್ಕೆ ಸವೀತಾ ಬತ್ತಾ ಅವ್ಳೆ, ಕಣ್ಣೀರ್ನಾಗೆ ಕೈ ತೊಳೀತಾ ಅವ್ಳೆ. ಈ ದಿಷ್ಟಿಯಿಂದ ನಿಂಗ ಇನ್ನು ಮೂರು ವರ್ಸ ಮಕ್ಕಳು ಬ್ಯಾಡ ಅಂತಿವ್ನಿ.

ಕರಿಯಣ್ಣ : ನಾನು ಅದೇ ಯೋಸ್ನೆ ಮಾಡಿವ್ನಿ.

ಅಮಾಸಯ್ಯ : ಅದೇ ಆ ಹೊತ್ತು ನಾರಾಯಣಮ್ಮನವರೂ ಏಳ್ತಿದ್ರಂತೆ ಒಂದು ಮಗೀಗೂ ಕನಿಷ್ಟಪಕ್ಷ ಮೂರು ವರ್ಸವಾದ್ರೂ ಅಂತರ ಇರಬೇಕು ಅಂತ.

ಕರಿಯಣ್ಣ : ಮಕ್ಕಳು ನಗ್ ನಗ್ತಾ ಇರ್ಬೇಕಾದ್ರೆ, ತಾಯಿ ಗೆಲುವಾಗಿರಬೇಕಾದ್ರೆ, ಸಂಸಾರ ಸುಕಸಾಗರವಾಗಬೇಕಾದ್ರೆ ಅಂತರ ಬೇಕೇ ಬೇಕು ಅಂತ ನನ್ಗೂ ಅನುಭವಕ್ಕೆ ಬಂದೈತೆ. ಅದ್ಕೇ ನಾನು ಅವ್ಳೇಳ್ದಾಗೇ ನಡ್ಕಂಡೋಯ್ತಾ ಇವ್ನಿ.

ಅಮಾಸಯ್ಯ : ಬೋ ಜಾಣ ಕಣಯ್ಯ.

ಕರಿಯಣ್ಣ : ಈಗ ಟೋರ್‌ಗೋಗಾದು ಏನಾಯ್ತು?

ಅಮಾಸಯ್ಯ : ಏನೇಳ್ತಾಯಿ?

ಉತ್ತರಾಜಿ : ಸದ್ಯಕ್ಬ್ಯಾಡಿ... ಮುಂದಿನ ವರ್ಸ ನೋಡಮು.

ಅಮಾಸಯ್ಯ : ಇದೇ ಇಷ್ಟು ವದ್ದಾಡ್ಸುಟ್ಟ್ಯಾ? ಅಯ್ಯೋ ಹುಚ್ಚಿ ಹೋಗು.

* * *

## ದೃಶ್ಯ-೯

ಕಾಳಿ : ಈ ಸಾರಿ ಒಂದು ಹೆಣ್ಣಾಗಿದ್ರೆ ಚೆನ್ನಾಗಿರ್ತಿತ್ತು.

ಕರಿಯ : ಈಗ ಗಂಡಾದ್ರೇನು ನಷ್ಟವಾಯ್ತು ಬುಡು, ಕೀರ್ತಿಗಾಗಿತ್ತು, ಆರತಿಗ್ ಆಗ್ತ್ಯಾಕಿತ್ತಾ?

ಕಾಳಿ : ಊಂ. ನಾಕು ಗಂಡಾದ್ಮೇಕೆ ಆರತಿ ಹಿಡ್ಯಕ್ ಒಂದೆಣ್ಣು ಬೇಕು ಅಂತಿದ್ರು ನಮ್ಮಿಂದ್ನವ್ರು.

ಕರಿಯ : ನಿಂಗೊದುಚ್ಚು ಬುಡು. ಒಂದು ಗಂಡು ಗಂಡಲ್ಲ, ಒಂದು ಕಣ್ಣು ಕಣ್ಣಲ್ಲ ಅಂತವ್ರೆ. ಅಂಗಸ್ಬುಟ್ಟು ನಾಲ್ಕು ಗಂಡು ಬ್ಯಾಕಾ ಎಂಗೆ?

ಕಾಳಿ : ಮನಸ್ನಾಸೆ ಅಷ್ಟೇ.

ಕರಿಯ : ಸೊಸೆರ್ ತಕ್ಕಂಬಾ, ಅವುನ್ನೇ ಹೆಣ್ಣುಮಕ್ಕಳು ಅಂತ ತಿಳ್ಕೋ.

ಕಾಳಿ : ಅಷ್ಟೇ.

ಕರಿಯ : ಸಧ್ಯ ಇನ್ನೂ ಬ್ಯಾಕು ಅನ್ನಿಲ್ವಲ್ಲಾ...

ಕಾಳಿ : ಬ್ಯಾಡಪ್ಪ ಸಧ್ಯ. ಈ ಸಾರಿ ಆಪ್ಲೇಸನ್ ಮಾಡಿಸ್ಕಂಬುಡ್ತೀನಿ.

ಕರಿಯ : ದ್ಯಾವ್ರೊಳ್ಳಿ ಬುದ್ಧಿ ಕೊಟ್ನಲ್ಲಾ, ಅಸ್ಟಕ್ ಸಂತೋಷ. ನಾನು ಯೋಳಿದ್ದಿ ನಮ್ಮೂರ ಎಗ್‌ಡಾಗಟ್ರಿಗೆ, ಮುಂದಿನವಾರ ಈ ಆಪ್ಲೇಸನ್ ಸಿಬರ ಮಾಡ್ತರಂತ ಆಗ್ಲೇ ಮಾಡಿಸ್ಕಂಬುಡು.

ಕಾಳಿ : ಆಗೇ ಆಗ್ಲಿ ಬುಡು.

ಕಾಳಿ : ಬ್ಯಾಗ್ ಬನ್ಬುಡಿ.

ಕರಿಯ : ಹ್ಞೂಂ ನಡೀರಿ ಒಳಕೇ. ಲೇ... ಚೌಡಕ್ಕ ಬಂದವ್ರ ನೋಡು... ನಡೀರಿ ಒಳಕೇ...

ಚೌಡಮ್ಮ: ಆಗ್ಲಿ, ಚನ್ನಾಗಿದ್ದೀರ್ರವ್ವಾ ಮೊಗು-ಬಾಣ್ತಿ.

ಕಾಳಿ : ಹೂಂ... ಬನ್ನಿ.

ಚೌಡಮ್ಮ: ಪುಣ್ವಂತ ಕಣ್ ಬುಡು, ಏಡೂ ಗಂಡೇ ಆದ್ವು.

ಕಾಳಿ : ನಂಗ್ಯಾನೋ ಎಣ್ಣಾಗಿದ್ರೆ ಚೆನ್ನಾಗಿರ್ತಿತ್ತು ಅಂತ. ಇದೀಗ್‌ತಾನ್ ಮಾತಾಡದ್ವು. ನಾವು ನಮ್ಮ ಮನ್ಯವ್ರು.

ಚೌಡಮ್ಮ : ಅದಂಗೇ ಕಣ್ಬುಡು. ಅದಿಲ್ದವ್ರಿಗಿದು ಇದಿಲ್ಲದವರ್ಗದು... ಯಾಸೂ ಇಲ್ದವ್ರಗೆ ಯಾವ್ದಾದ್ರೂ ಒಂದು ಸಾಕು ಅಂತ. ಈಗ ನನ್ನೇ ತಕ್ಕೋ ಏಟೋಂದು ದೇವ್ರು ಮಾಡ್ದಿ ದಿಂಡ್ರು ಮಾಡ್ದಿ, ಏನಾರ ಆಯ್ತಾ? ನಾಗರಕಲ್ಲ ಪ್ರತಿಷ್ಠನೂ ಮಾಡಿಸ್ದಿ.

ಕಾಳಿ : ಚೌಡಕ್ಕ, ನಿಂಗ್ ಮದ್ವೆ ಆಗಿ ನಾಕೈದು ವರ್ಸವಾಯ್ತು ಅಷ್ಟೇ... ನೋಡು ಈಗ ನನ್ನ ಮಾತು ಕ್ಯಾಳು. ಆಸ್ಪತ್ರ್ಯಾಗೆ ವಸಿ ತೋರ್ಸು. ನಮ್ಮ ಆಸ್ಪತ್ರೆ ನಾರಾಯಣಮ್ಮನ್ನ ಕ್ಯಾಳು. ಅವ್ರು ದಾಗಟ್ಟತ್ರ ಕರ್ಕಂಡೋಯ್ತಾರೆ, ಆಗ ಮಕ್ಕಳಾಗೇ ಆಗ್ತವೆ.

ನಾರಾಯಣಮ್ಮ : ಕಾಳವ್ವಾ...

ಕಾಳಿ : ಬನ್ನಿ... ನಾರಾಯಣವ್ವಾ.

ನಾರಾಯಣಮ್ಮ : ನಿನ್ಯಾನ ಆಸ್ಪತ್ರ್ಯಾಗೆ ಒಂದು ಹೆರಿಗೆ ಮಾಡಿಸ್ಕೊಂಡು ಆಪರೇಷನ್ನು ಮಾಡಿಸ್ಕಬೇಕು ಅಂತಿದ್ದೆ... ಇದ್ಯಾಕ ಮನೇಲಿ ಹೆರಿಗೆ ಮಾಡಿಸ್ಕಂಡೆ.

ಕಾಳಿ : ಏನೋ ಕಣವ್ವಾ ಸುಕಮೊಕವಾಗಿ ಮನ್ಯಾಗಿ ಹೆರ್ಯಾಗೋಯ್ತು ಬರ್ಪಾಕು ಅಂತಿದ್ದೆ. ಹೊಟ್ಟೆ ನೋವು ಕಾಣಸ್ಕಂಡು ಒಂದು ಸ್ವಲ್ಪೊತ್ಗೇ ಹೆರ್ಯಾಗೋತ್ತು. ನರ್ಸಮ್ಮ ಚಲ್ವಮ್ಮ ಬತ್ತಿದ್ದಲ್ಲಾ ಆಗ್ಯಾಗ್ಗೆ ನೋಡ್ಕ್ಯಂಡೋಗಕ್ಕೆ ಅವ್ರೇ ಮನ್ಯಾಗೆ ಮಾಡಿಸ್ಬುಟ್ರು.

ನಾರಾಯಣಮ್ಮ : ಏನೋ ಒಟ್ನಲ್ಲಿ ಸುಖವಾಗಿ ಆಯ್ತಲ್ಲ ಅಷ್ಟೇ ಸಾಕು.

ಕಾಳಿ : ಈ ವಾರ ಸಿಬಿರ ಮಾಡ್ತರಂತಲ್ಲಾ ಆಗ್ಲೇ ಆಪ್ಲೇಸನ್ ಮಾಡಿಸ್ಕಂಬುಡ್ತೀನಿ ಕನವ್ವಾ.

ನಾರಾಯಣಮ್ಮ : ಮಕ್ಕಳು ಸಾಕಾ? ಎಣ್ಣು ಬ್ಯಾಡ್ವಾ.

ಕಾಳಿ : ಅದೂ ಗಂಡಾದ್ರೇನು ಮಾಡ್ಲಿ? ಆಸೆಯೇನೋ ಅದೆ, ಬ್ಯಾಡ ಕನವ್ವಾ ನಮ್ಮ ಆದಾರಕ್ಕೂ... ಎಡು ಮಕ್ಕಳಿಗೆ ಆ ದ್ಯಾವ್ರು ಗಟ್ಟಾಯ್ಸ ಕೊಟ್ಟು ಕಾಪಾಡ್ಬುಟ್ರ ಸಾಕು.

ನಾರಾಯಣಮ್ಮ : ಒಳ್ಳೆ ನಿರ್ಧಾರ ನಿನ್ನದು.

ಕಾಳಿ : ನಂದ್ಯಾನವ್ವಾ ನಮ್ಮ ಯಜಮಾನರದ್ದೂ ಅಷ್ಟೇ.

ನಾರಾಯಣಮ್ಮ : ಗಂಡ-ಹೆಂಡ್ರು ಇಂಗಿರದು ಬಲು ಅಪರೂಪ... ಸ್ವಯಂ ಪ್ರೇರಿತರಾಗಿ ಬಂದು ಕುಟುಂಬ ಯೋಜನಾ ಆಪರೇಷನ್ ಮಾಡಿಸ್ಕೊಳ್ತೀನಿ ಅಂತ ಅಂದ್ಯಲ್ಲಾ ನಂಗ್ ಸಂತೋಷವಾಯ್ತು. ಇಬ್ಬರ್ನೂ ಒಳ್ಳೇ ಚೆನ್ನಾಗಿ ಸಾಕಿ ಪೌಷ್ಟಿಕ ಆಹಾರ ಕೊಟ್ಟು ಸಾಕಿ, ವಿದ್ಯಾಭ್ಯಾಸ ಕೊಡ್ಸಿ, ಒಳ್ಳೇ ಮಕ್ಕಳನ್ನ ಬೆಳಸಿ.

ಕಾಳಿ : ಅದ್ಕೇ ಕನವ್ವಾ ನಾವು ಈ ಮನುಸು ಮಾಡ್ಪುಟ್ವಿ.

ನಾರಾಯಣಮ್ಮ : ಇವರು ಯಾರು?

ಕಾಳಿ : ಚೌಡಮ್ಮ ಅಂತ ನಮ್ಮ ಪಕ್ಕದ ಮನ್ಯವ್ರೇ ನಂಗೆ ಬ್ಯಾಕಾದವ್ರು.

ನಾರಾಯಣಮ್ಮ : ನಿಮಗೆಷ್ಟು ಜನ ಮಕ್ಕಳು?

ಚೌಡಮ್ಮ : ಆ ಪುಣ್ಯ ತಂದಿಲ್ಲ ಕನವ್ವಾ ಯಾವ ಜನ್ಮದ ಪಾಪದ ಫಲವೋ ಯಾನೋ ಮಕ್ಕಳೇ ಇಲ್ಲ ಮದ್ವೆ ಆಗಿ ಐದು ವರ್ಸವಾದ್ರೂ.

ನಾರಾಯಣಮ್ಮ : ಇಷ್ಟೇ ತಾನೇ ನೀವು ಆಸ್ಪತ್ರೆಗೆ ಬಂದು ಪರೀಕ್ಷೆ ಮಾಡಿಸ್ಕೊಳ್ಳಿ. ನಿಮ್ಮ ಯಜಮಾನ್ರಿಗೂ ಹೇಳಿ ಕಳುಹಿಸಿ ನಾವು ಆಸ್ಪತ್ರೆಯಲ್ಲಿ ಹೇಳಿ ಡಾಕ್ಟರ್ ನಿಮಗೆ ಟೆಸ್ಟ್ ಮಾಡಿ ಮಕ್ಕಳು ಆಗುತ್ತವೆ ಆಗೋಲ್ಲ ಅನ್ನುವುದನ್ನು ಹೇಳ್ತಾರೆ. ಹಿಂದಿನ ಕಾಲದ ಮೂಢ ನಂಬಿಕೆ ಬೇಡವ್ವಾ ತಾಯಿ.

ಚೌಡಮ್ಮ : ಐದು ವರ್ಸವಾಗ್ ಬ್ಯಾಕವ್ವಾ?

ನಾರಾಯಣಮ್ಮ : ಯೇನೋ ದೋಷ ಇರಬೇಕು. ನೀವು ಪರೀಕ್ಷೆ ಮಾಡಿಸ್ಕೊಂಡು ಡಿ..ಅಂಡ್‌ಸಿ.ಆಪರೇಷನ್ ಮಾಡಿಸ್ಕೊಳ್ಳಿ ಸರಿಹೋದ್ರೆ ಸರಿ ಇಲ್ಲದೆ ಹೋದರೆ ನಿಮ್ಮ ಯಜಮಾನ್ರನ್ನೂ ತೋರಿಸ್ಕೊಳ್ಳಿ ಅಂತ ಹೇಳಿ. ಆಮೇಲೆ ನೋಡಿ ಮಕ್ಕಳಾಗ್ತಾವೋ ಇಲ್ಲವೋ ಅಂತ.

ಚೌಡಮ್ಮ : ಏನೋ ಅಷ್ಟಾದ್ರೆ ನಮ್ಗೆಲ್ಲಾ ಸಂತೋಸ ಕನವ್ವಾ. ದ್ಯಾವರ ಕಂಡಂಗ್ ಬಂದು ಏನೋ ಒಂದೆರಡು ಒಳ್ಳೆ ಮಾತಾಡಿದ್ರಿ. ಯಾರಾ ಕೈಗುಣ ಎಂಗೈತೋ ಬಲ್ಲವ್ರ್ಯಾರು ಆಗ್ಲಿ ಕನವ್ವಾ ಯಾವತ್ತು ಬರವಾ.

ನಾರಾಯಣಮ್ಮ : ಯಾವತ್ತೇನು? ಈವತ್ತೇ ಬಂದ್ಬುಡಿ, ನಾಳೆ ಅನ್ನೋದು ಹಾಳು ಅನ್ನೋದು ಗೊತ್ತಿಲ್ವೆ?

ಚೌಡಮ್ಮ : ಆಗ್ಲಿ ಕನವ್ವಾ...

ನಾರಾಯಣಮ್ಮ : ಮಗ ಚೆನ್ನಾಗಿದ್ದಾನೆ ಎಲ್ಲಾ ಅವ್ರಪ್ಪನಾಗೆ ಇದ್ದಾನೆ.

ಕಾಳಿ : ಹೌದು ಕನವ್ವಾ. ಏನೋ ನಮ್ಮ ಚೌಡಕ್ಕನಿಗೆ ಒಂದು ವಂಸವ ಕುಡಿ ಆಗುವಂಗಾ ಮಾಡ್ರವ್ವಾ.

ನಾರಾಯಣಮ್ಮ : ನಮ್ಮ ಕೈಲಾದಷ್ಟು ಸಹಾಯ ಮಾಡ್ತೀನಿ ಕನವ್ವಾ.

ಕಾಳಿ : ತಕ್ಕಳಿ ಸಕ್ರ ಬಾಳ ಹಣ್ಣು...

ನಾರಾಯಣಮ್ಮ : ಆಗ್ಲಿ... ಎಲ್ಲಾ ಆರೋಗ್ಯ ತಾನಾಗಿ ಏನಾದ್ರೂ ಅನುಮಾನ ಇದ್ರೆ ಹೇಳಿ ನೋಡೋಣ.

ಕಾಳಿ : ಯಾನೂ ಇಲ್ಲ ಕನವ್ವ ಆರೋಗ್ಯವಾಗೀವ್ನಿ ಯಾನಾರೂ ವತ್ಯಾಸ ಕಂಡ್ರೆ ಬಂದು ಯೇಳ್ತೀವ್ನಿ. ಚೌಡಕ್ಕನ ಕರ್ಕಂಡೋಗವ್ವಾ.

ನಾರಾಯಣಮ್ಮ : ಬನ್ನಿ ಚೌಡಕ್ಕ...

ಚೌಡಮ್ಮ : ಆಗ್ಲಿ ನಡೀರವ್ವಾ...

* * *

ಕಾಳಿ : ಯಾನೀಗ್ ಬಂದ್ರಾ ವೊಲ್ದಿಂದ.

ಕರಿಯ : ಹೂಂ ಕನಮ್ಮಿ ಚೌಡಮ್ ಯಾಕಾಗಿದ್ದಾಳು?

ಕಾಳಿ : ಯೋಶ್ನೀ ಮಕ್ಳಾಗ್ನಿಲ್ಲ ಅಂತ ಅಷ್ಟೇ. ಅವಳ್ಗಾನು ಕಮ್ಮಿಯಾಗಿರದು?

ಕರಿಯ : ನಾನು ಅವಳ ಗಂಡನ್ಗೇಳ್ದೆ ವಸಿ ಆಸ್ಪತ್ರ್ಯಾಗೆ ತೋರ್ಸ್ಲು ಅಂತ. ವೋಡ ಮೂದೇವೆ ಈಸ್ವರನ ಬಳಿ ಕ್ಯಾಳ್ಕಂಬಂದಿಲ್ಲ; ಇನ್ನು ದಾಗಟ್ರು ಮಾಡ್ಸುಟ್ಟರಾ ಬುಡು ಅಂತ.

ಕಾಳಿ : ಎಡ್ತಿ ತದ್ವಿರುದ್ದ ಆಗ್ಲಿ ಅಂತ ಒಪ್ಪಕಂಡು ಈವೊತ್ತುಗೋದ್ಲು ದಾಗಟ್ರಿಗೆ ತೋರ್ಸಕ್ಕೆ.

ಕರಿಯ : ಏಟೇ ಆದ್ರೂ ಎಣ್ಣಿಂಗ್ಸು ಮಕ್ಕಳು ಬ್ಯಾಕು ಅನ್ನ ಆಸೆ ಅವಳ್ದು.ಯಾನೋ ಕಾಳಿ ಈ ಪರಪಂಚದಾಗ್ ಒಬ್ಬೊಬ್ಬರಿಗೊಂದೊಂದು ಐಬು ಮಕ್ಕಳಿಲ್ಲವವರ್ಗ ಇಲ್ವಲ್ಲ ಅನ್ಯಾ ಚಿಂತ ಆದವರ್ಗಾ ಯಾಕಪ್ಪಾ ಈಟೊಂದಾಯ್ತು ಇವರನ್ನ ಸಾಕಾದ್ಯಾಗಪ್ಪಾ ಅನ್ನಾ ಚಿಂತ. ಮತ್ತ ಕೆಲವರ್ಗ ವರುಸಕ್ಕೊಂದೊಂದು ಮೊಗ ಅಂದಾಗ ನಾವೇ ವುಣ್ವಂತ್ರು ಕಣ್ಬುಡು ಕಾಳಿ.

ಕಾಳಿ : ಯಂಗೆ?

ಕರಿಯ : ಎಂಗೋ ಏಡು ಮಕ್ಕಳಾದ್ಮು ಆಪ್ಲೇಸನ್ ಮಾಡಿಸ್ಬುಟ್ರಾ ಸಾಕು. ಮೊದಲ್ನೇ ಮೊಗಾನು ತಡ್ದು ಹಡದ್ದು ಆಯ್ತು. ಏಡನೇ ಮೊಗ ಒಂದ ಮೂರು ನಾಕು ವರ್ಸ ಅಂತರಾನೂ ಇಟ್ಕಂಡದ್ದೂ ಆಯ್ತು. ಈ ಮಕ್ಕಳಿಗೆ ಒಳ್ಳೆ ಆರೋಗ್ಯ ಕೊಟ್ಟು ಆದ್ಯಾವು ಕಾಪಾಡಿದ್ರೆ ಸಾಕಪ್ಪ ಇನ್ನು ಮಕ್ಕಳೂ ಬ್ಯಾಡ ಮರ್ರ್ಯೂ ಬ್ಯಾಡ ನಂಗೆ.

ಕಾಳಿ : ನಾನೂ ಅದ್ಕೇ ದ್ಯಾವ್ರಲ್ಲಿ ಬ್ಯಾಡ್ಕಳ್ಳದು.

ಕರಿಯ : ಅಂತೂ ಒಳ್ಳೇ ಕೆಲಸ ಮಾಡ್ದೆ. ಚೌಡಕ್ಕನಿಗೆ ಒಂದು ಮೊಗ ಆಗುವಾಗೆ ದಾಗಟ್ರಗ್ ತೋರ್ಸಕ್ಕೆ ಒಪ್ಪಿಸ್ದೆ.

ಕಾಳಿ : ಅಕ್ಕ ಪಕ್ಕ ಅಂತ ಅಷ್ಟೂ ಮಾಡ್ದೇವಾದ್ರೆ ಎಂಗೆ ಯೋಳಿ ಮತ್ತೆ.

ಕರಿಯ : ಈಗ ನಿಂಗೇನ್ಬೇಕು ಬಿಸ್ನೀರಿಡ್ಲ್ಯಾ?

ಕಾಳಿ : ಇನ್ನೂ ವಸಿ ವೊತ್ತಾದಮ್ಯಾಕೆ ವೂಲ ಕಸ್ಲುವ್ರಿ... ಈಗ ತಾನೆ ಗದ್ದೆಯಿಂದ ಬಂದಿದ್ದೀರ ವಸಿ ಸುದಾರಿಸ್ಕಳ್ಳಿ.

ಕರಿಯ : ನಂಗ್ಯಾನೂ ಆಗಿಲ್ಲ, ನಿಂಗ್ಯಾನು ಬ್ಯಾಕು ಕ್ಯಾಳು ಮಾಡ್ತೀವ್ನಿ.

ಕಾಳಿ : ನಂಗೆ ಬಿಸ್ನೀರು ಇಟ್ಟುಬಿಡಿ ಸಾಕು.

ಕರಿಯ : ಆಗ್ಲಿ...

* * *

## ದೃಶ್ಯ-೧೦

ಚಾಮಯ್ಯ: ಸಿವ್ನೇ ಸ್ವಾಮಿ ಮಾದಪ್ಪ ನಿನ್ನ ಪಾದ್ವೇ ಗತ್ಯಪ್ಪ.

ದುರ್ಗಿ : ಯಾಕೋ?

ಚಾಮಯ್ಯ: ಈ ಸಂಸಾರದ ಕ್ವಾಟ್ಲೆ ಸಾಕಾಗೋಯ್ತು.

ದುರ್ಗಿ : ತಂದಾಕ ನಿಮ್ಗೇ ಇಂಗಾಗ್ಬಾಕಾದ್ರೆ ಎಲ್ಲರ್ರೂ ಸವರ್ಕ್ಯಂಡೋಗ ನಂಗೇಟು ಆಗಿರ್‍ಬೈದು?

ಚಾಮಯ್ಯ: ಆಗಿಲ್ಲ ಅಂತ ಯೋಳಿದ್ನಾ?

ದುರ್ಗಿ : ಆಗೋಗಿರದ್ನಾ... ಆಗ್ದೇ ಇರಕ್ಕ ಮಾಡಕ್ಕಾಯ್ತದಾ?

ಚಾಮಯ್ಯ: ಕೆರೆಗೋ ಬಾವ್ಗೋ ತಳ್ಳಬ್ಯಾಕು ಅಷ್ಟೇ.

ದುರ್ಗಿ : ಅವ್ಯಾನ್ ವುಟ್ಟಬ್ಯಾಕು ಅಂತಿದ್ನಾ? ತೆಪ್ಪು ನಮ್ಮದಲ್ವಾ? ನಾವು ಅವರನ್ನ ಪಡದ್ ಮ್ಯಾಕೇ ಸಾಕಾದ್ ನಮ್ಮ ಧರ್ಮವಲ್ವಾ?

ಚಾಮಯ್ಯ: ಇಲ್ಲ ಅಂತ ಯಾರ್ ಯಾಳ್ತಾವ್ರೆ?

ದುರ್ಗಿ : ಐದು ಮಕ್ಕಳಿಗೇ ಇಂಗಂತಿವ್ಯಲ್ಲ ನಮ್ಮಿಂದ್ನವ್ರು ಹತ್ತು ಇಪ್ಪತ್ತು ಹೆರ್ತಿದ್ರಲ್ಲಾ ಎಂಗಿರ್ತಿದ್ರೋ, ಎಂಗ್ ಸಾಕ್ತಿದ್ರೋ ಅನ್ನಿಸ್ತೈತೆ.

ಚಾಮಯ್ಯ: ಅವ್ರು ಅಷ್ಟು ಗಟ್ಟಿ ಮುಟ್ಟವಾಗೂ ಇರ್ತಿದ್ರು. ಆಸ್ತೀನೂ ಇಟ್ಟರ್ತಿದ್ರು ಬಡ್ತನವಿರ್ಲಿಲ್ಲ ಸಾಕಿದ್ರು. ನಮಗೆ ಉಣ್ಣಕ್ಕೆ ಇಲ್ಲ ಇನ್ನು ಹಾಲು ಮೊಸ್ರು ತುಪ್ಪ ತರಕಾರಿ ತಿನ್ನದೆಲ್ಲಿ? ತಿಂದ್ರು ತಾನೇ ಸಕುತಿ ಎಲ್ಲಿ ಬರ್ತೈತೆ? ಹಿಂದನ ಕಾಲದಷ್ಟು ಸತ್ವೇ ಇಲ್ಲ ಈ ಆಹಾರ ಪದಾರ್ಥಗಳಲ್ಲೂ ಅಂತವ್ರೆ.

ದುರ್ಗಿ : ಎಲ್ಲಾ ಕಾಲಕ್ಕೆ ತಕ್ಕಾಗಾಯ್ತೈತೆ. ಮುಂದಿನ ತಿಂಗಳು ನನ್ನ ತಂಗಿ ಮದ್ವೆಂತೆ.

ಚಾಮಯ್ಯ: ಇನ್ನು ಮುಯ್ಯಿ ಹೊಸ್ಯಬೇಕು? ಎಲ್ಲಿ ತರ್‍ಲ್ಯೋ ಏನ್ ಮಾಡ್ಲೋ ವೋಗು. ವೋದ್‌ಸಾರಿ ಮಾಡಿರಾ ಸಾಲದ ಬಡ್ಡೀನೇ ತೀರಿಸ್ನಿಲ್ಲ ಇನ್ನೂ ಈ ವರ್ಸ ಸಾಲ ಯಾರ್ ಕೊಡ್ತವ್ರೆ. ಮನೇಲಿ ಯಾವ್ದಾದ್ರೂ ಒಂದು ಬೆಳ್ಳಿ ಗಳಾಸಿವ್ರೆ ಮಡ್ಗುಬುಡು.

ದುರ್ಗಿ : ಅದೇ ನಾನೂ ಯೋಸ್ನೆ ಮಾಡ್ಕಂಡಿದ್ದೆ.

ಚಾಮಯ್ಯ: ಇನ್ನು ಬಸ್‌ಗೋಗಕ್ಕೆ ದುಡ್ಡುಗ್ಯಾಳು?

ದುರ್ಗಿ : ಎಂಗೋ ಆಯ್ತದೆ ಬುಡಿ. ಮೂರು ಕೊಳಗ ರಾಗಿ ಮಾರ್ಬುಟ್ಟೋಗದು. ಇನ್ಯಾನ್ ಮಾಡದು ಐಕಳಿಗೆ ಬಟ್ಟಿಲ್ಲ ಸರ್ಯಾಗಿ ನಂಗೂ ಒಂದು ಅಚ್ಚುಕಟ್ಟಾಗಿ ಸೀರಿಲ್ಲ.

ಚಾಮಯ್ಯ: ಇನ್ನೊಂದು ಖಂಡಗ ಮಾರ್ಬುಟ್ಟು ಸೋಕಿ ಮಾಡಿ.

ದುರ್ಗಿ : ಮತ್ತ ಮೈ ಬುಟ್ಕಂಡಿರಕ್ಕಾಯ್ತದ, ಮೈ ಮುಚ್ಚಕ್ಕ ಪಾವ್ಡ ಬ್ಯಾಡ್ವಾ?

ಚಾಮಯ್ಯ: ವೈ ಮುಚ್ಚಕ್ಕ ಬಟ್‌ಬ್ಯಾಕು ವೊಟ್ಟ ತುಂಬಕ್ಕ ಹಿಟ್‌ಬ್ಯಾಕು. ಸೋಕಿ ಮಾಡಕ ದುಡ್ ಬ್ಯಾಕು? ಇವ್ನೆಲ್ಲಾ ಎಲ್ಲಿ ತರೋವ ಎಲ್ಲಕ್ಕೂ ರಾಗಿ ಮಾರ್ಬುಟ್ರೆ ಹೊಟ್ಯಾನ್ ಮಾಡ್ದರಿ?

ದುರ್ಗಿ : ಸಾಲ ಕೊಡಲ್ಲಾ ಯಾರೂ ಅಂತಿದ್ದಯ ಇನ್ಯಾನ್ ಮಾಡ್ ಬ್ಯಾಕು ಯಾಳು?

ಚಾಮಯ್ಯ: ಮುಂದಕ್ಯಾನ್ಮಾಡದು ಯಾಳು?

ದುರ್ಗಿ : ಆದಂಗಾಯ್ತದೆ. ಕಾರು ಬತ್ತ ಆಕಿದ್ದರೆಲ್ಲಾ ಬತ್ತದೆ ಎಂಗೋ ಆಯ್ತದೆ.

ಚಾಮಯ್ಯ: ಸರಿ ನಿಮ್ಮಿಷ್ಟ ಒಪ್ದಂಗೆ ಮಾಡಿ.

ದುರ್ಗಿ : ಇದ್ಕೇ ಈಟೊಂದಾಯ್ತು ಈಗ ಮತ್ತೆ ನಂಗೆ ಒಂದು ತಿಂಗಳಾಗಿರ್ತೈದು.

ಚಾಮಯ್ಯ: ಸರೋಯ್ತು ಬುಡು ದರಿದ್ರಕ್ಕೆ ಮಕ್ಕಳು ಎಚ್ಚಂತೆ.

ದುರ್ಗಿ : ಅದ್ಕೇ ಈಗೊಂದು ಯೋಸ್ನೆ ಮಾಡಿವ್ನಿ.

ಚಾಮಯ್ಯ: ಯಾನ ಅದು?

ದುರ್ಗಿ : ನಿನ್ನೆ ಜಿನ ಮಂಗಳವ್ವ ಬಂದಿದ್ರು?

ಚಾಮಯ್ಯ: ಯಾವ್ ಮಂಗಳವ್ವಾ?

ದುರ್ಗಿ : ಅದೇ ಆಸ್ಪತ್ರೇವು.

ಚಾಮಯ್ಯ: ಏನಂದ್ರು?

ದುರ್ಗಿ : ಈಟೊಂದು ಮಕ್ಕಳು ಮತ್ತೆ ಬಸುರಿ ಆಗಿವ್ನಿ ಅಂತಿಯಲ್ಲಾ ಇದ್ಯಾನವ್ವಾ ನೋಡೋಕೆ ಅಂಚಿ ಕಡ್ಡಿ ಕಂಡಂಗಿದ್ದಿಯಿ ಮೈನಾಗ್ ವಸಿರಗುತವಿಲ್ಲ ಇಂಗೇ ಮಕ್ಕಳನ್ನು ಹಡೀತಾ ವೊಯ್ತಿದ್ರೆ ನಿನ್ನ ಆರೋಗ್ಯಯೇನ? ನಿನ್ನ ಸಂಸಾರದ ಗತಿಯೇನಾ ಅಂದ್ಲು? ಯಾನ್ ಮಾಡದವ್ವಾ ಅಂದಿ ನನ್ನ ಮಾತ್ ಕ್ಯಾಳಿ ಗರ್ಭ ಇಳಿಸ್ಕಂಬುಡಿ ಅಂದ್ಲು.

ಚಾಮಯ್ಯ: ಇದ್ಯಾನ ನೀ ಆಡ ಮಾತು? ವೊಟ್ಟೇವೊಳ್ಗಿರಾ ಮೊಗ ಸಾಯ್ಸಿ ಇನ್ಯಾವ ಪಾಪಕ್ಕೆ ಗುರಿಯಾಗ್ ಬ್ಯಾಕು ನಾವು.

ದುರ್ಗಿ : ನಾನೂ ಅದೇ ಯೋಳ್ದಿ. ಒಂದು ತಿಂಗಳಿಗೇ ಮೊಗಕ್ಕೆ ಜೀವ ಬಂದಿರ್ತದಾ? ಯಾನೂ ಇಲ್ಲ ಯಾವ ಪಾಪಾನೂ ಆಗಾಕಿಲ್ಲ ಅಂದ್ಲು.

ಚಾಮಯ್ಯ: ಯಾನಮ್ಮಿ ನೀಯಾಳ ಮಾತು ಗರ್ಭ ಇಳಿಸಕೊಳ್ಳೋದು ಮೈಗೊಳ್ಳೇದಲ್ಲಾ ಮೊದ್ಲೇ ನೀ ಯಂಗಿದ್ದಿಯಿ.

ದುರ್ಗಿ : ಅದ್ನೂ ಯಾಳ್ದಿ, ಅವ್ಳಂದ್ಲು ಮತ್ತುತ್ತ ಗರ್ಭ ಇಳಿಸ್ಕಂಡ್ರ ಆರೋಗ್ಯಕ್ಕೆ ಕೆಟ್ಟದು. ಈಗ ಯಾನೂ ಇಲ್ಲ. ಇಳಿಸ್ಕಂಬುಟ್ಟು ಆಪ್ಲೇಸನ್ ಮಾಡಿಸ್ಕಂಬುಡು ಅಂದ್ರು.

ಚಾಮಯ್ಯ: ಅದ್ಕ ನೀ ವೊಪ್ಕಂಡ್ಯಾ ಎಂಗೆ?

ದುರ್ಗಿ : ಇನ್ನ್ಯಾನ ಸಾಲ್ದಾ ಆಗಿರಾ ಮಕ್ಕಳು?

ಚಾಮಯ್ಯ: ತಳ್ಳು ತಳ್ಳಮ್ಮಿ ವುಪ್ಪಸ್ದವ್ನು ಹುಲ್ಲು ನೀರು ಕೊಡ್ನಾ?

ದುರ್ಗಿ : ಕೊನ್ಗ ಹುಲ್ಲು ನೀರೇ ಗತಿ ಅನ್ನ ಕೊಡಕಾಗಾಕಿಲ್ಲ.

ಚಾಮಯ್ಯ: ನಮ್ಮಿಂದ್ನವ್ರೆಲ್ಲಾ ಸಾಕ್ನೇ ಇಲ್ಲ. ಕೊಡವ್ನೂ ಅವ್ನೇ ಸಾಕವ್ನೂ ಅವ್ನೇ ಅದಕ್ ಯಾಕ್ ಯೋಸ್ನೆ ಮಾಡಬೇಕು. ನಾಕು ಜಿನ ಕಷ್ಟ ನಾಕ್ ಜಿನ ಸುಕ ಅಷ್ಟೆ.

ಕರಿಯ : ಚಾಮಣ್ಣಾ... ಚಾಮಣ್ಣಾ...

ಚಾಮಯ್ಯ: ಬಾ ಕರಿಯಣ್ಣ ಯಾನ್ ಬಂದ್ಯಪ್ಪಾ?

ಕರಿಯ : ಇದ್ಯಾಕ್ ಒಂದ್ ತರಾ ಇದ್ದಿಯಿ?

ಚಾಮಯ್ಯ: ಯಾನಿಲ್ಲ. ಇದ್ದೇ ಇದ್ಯಲ್ಲಪ್ಪಾ... ಸಂಸಾರ ಅಂದ್ಮ್ಯಾಕೆ ಕಸ್ಟ ಸುಕ.

ಕರಿಯ : ಅದಿದ್ದದೇ ಬುಡು ಅದಿರ್ಲಿ ಈಗ ಒಂದು ಹಸ ತಕ್ಕಬ್ಯಾಕಲ್ಲಾ ಚಾಮಣ್ಣಾ.

ಚಾಮಯ್ಯ: ಯಾಕೀಗ ಕರ್‍ಯಾ ಹಸ ಇಲ್ವಾ?

ಕರಿಯ : ನನ್ನೆಡ್ತಿ ಎತ್ತವ್ಳೆ ಹಾಲು ಬ್ಯಾಕು.

ಚಾಮಯ್ಯ: ಏಟ್ನೇ ಮೊಗ?

ಕರಿಯ : ಏಡ್ನೇದು

ಚಾಮಯ್ಯ: ಏಡೂ ಎಂತವು?

ಕರಿಯ : ಏಡೂ ಗಂಡೇ?

ಚಾಮಯ್ಯ: ಪುಣ್ವಂತ ಕಣ್ಬುಡು ನಂಗೆ ಸಾಲಗೆ ಐದು ಎಣ್ಣೇ ಆಗ್ಬ್ಯಾಕಾ? ಪುನಃ ನನ್ನೆಂಡ್ರು ಈ ಸಾರಿಯಾರೂ ಗಂಡಾದ್ರೆ ಸಾಕಪ್ಪಾ ಅಂತಿದ್ರೆ ಅದ್ಯಾವಳೋ ಯಾಳ್ಬುಟ್ಟು ಅಂತ ಗರ್ಭ ಇಳಿಕಸ್ಕಂಬುಡ್ತೀನಿ ಅಂತವ್ಳೆ ಇದ್ಯಾವ ಇಚಾರ್ವಪ್ಪ.

ಕರಿಯ : ಅದೂ ಎಣ್ಣಾದ್ರ್ಯಾನು ಮಾಡ್ಡಯಪ್ಪ.

ದುರ್ಗಿ : ತಕ್ಕಳಿ ಮಜ್ಜಿಗೇನಾ...

ಕರಿಯ : ಯಾಕಿದ್ಯಲ್ಲಾ...

ಚಾಮಯ್ಯ: ಯಾನೋ ಅಪ್ಪ ತುಪ್ಪ ಅನ್ನ ಇಕ್ಕಕ್ಕಾಗ್ದೇ ವೋದ್ರು ಹೊಟ್ಟೆ ತಣ್ಣಗ್ ಮಾಡಾ ಒಂದು ಗಳಾಸ್ ಮಜ್ಜಗೇನೂ ಬರಾ ಮಾಡಿಲ್ಲ ಆದ್ಯಾವ್ರು.

ಕರಿಯ : ಎಲ್ರ ಮನೆ ದ್ವಾಸೇನೂ ತೂತು ಇದ್ದದ್ದೇ ಕಣ್ ಬುಡು.

ಚಾಮಯ್ಯ: ಆದ್ರಾಗ್ಲಿ ಹೋದ್ರೋಗ್ಲಿ ಬುಡು.

ಕರಿಯ : ಅಂತೂ ಸಂಸಾರ ಬೆಳಸ್ಕಂಡೋದಯಾ?

ಚಾಮಯ್ಯ: ನಮ್ಮ ಕೈಲೇನಿದ್ದು ಕರಿಯಣ್ಣ?

ಕರಿಯ : ಹಿಂದಿನ ಕಾಲ್ದಲ್ಲೇನೋ ಇರ್ನಿಲ್ಲ ಅಂದ್ರೂ ಈಗ್ಯಾನಾ ಚಾಮಣ್ಣ ಆಸ್ಪತ್ರ್ಯಾಗೋದ್ರೆ ಎಲ್ಲಾ ಆಗ್ತೈತೆ.

ಚಾಮಯ್ಯ: ಯಾನ ಆಗದು?

ಕರಿಯ : ಮಕ್ಕಳು ಹೆಚ್ಚಾದವ್ರು ಕಮ್ಮಿ ಮಾಡ್ಕಬೋದು. ಈಗ ಬ್ಯಾಡ ಅಂದ್ರೆ ಇನ್ನೊನಿ ಜಿನಕ್ಕೆ ಮಾಡ್ಕಬೋದು. ಮಕ್ಕಳಾಗದವ್ರಿಗೆ ಮಕ್ಕಳಾಗುವಾಗ್ ಮಾಡ ಬೋದು. ಈಗ ನೋಡು ನನ್ನೆಡ್ತಿ ಮಾತ್ ಕ್ಯಾಳಿಕೊಂಡು ಚೌಡಕ್ಕ ಆಸ್ಪತ್ರ್ಯಾಗ್ ಹೋಗಿದ್ಲು ಪರೀಕ್ಷೆ ಮಾಡಿ ಕಳಿಸಿದ್ರು. ಈಗ ಏಡು ತಿಂಗಳಂತೆ ಕಣಯ್ಯಾ. ಅಂಗೆ ನಿಂಗ್ ಸೌಕರ್ಯ ಇದ್ದಾಗ ಅದ್ಯಾಕಪ್ಪ ಸಾಕ್ಮಾಡ್ಕಂಡು ಸುಕ್ವಾಗಿರ್ದೆ ಇಂಗ ತಾಪತ್ರಯ ಪಡಬ್ಯಾಕು. ಸಾಲದ ಮ್ಯಾಕ್ ಸಾಲ ಬ್ಯಾರೆ! ನಂದೆಲ್ಲ ಕೊಟ್ಟ್ಯಾ?

ಚಾಮಯ್ಯ: ಈ ಸಾರಿ ಕಾರ್‌ಬತ್ತ ಮಾರ್ರುಬುಟ್ಟು ಕೊಟ್ಟೇನು ತಕ್ಕಪ್ಪ ಮಜ್ಗ ತಕ್ಕ.

ಕರೆಯ : ಇಲ್ಲ ನೀರು ಕುಡಿಸು.

ಚಾಮಯ್ಯ: ದುರ್ಗಿ ವಸಿ ನೀರ್ ತಂದು ಕೊಡು.

ಕರಿಯ : ಈಗ ನೀರ್ ಬ್ಯಾಕಿಲ್ಲ ಕನಯ್ಯಾ ನಾಕೊಟ್ಟ ದುಡ್ಡಿಗೆ ನೀರು ಕುಡಿಸು ಅಂದಿ ಅಷ್ಟೇ.

ಚಾಮಯ್ಯ: ಮೋಸ ಮಾಡಾಕಿಲ್ಲ ಕನ್ ತಕ್ಕಳಪ್ಪಾ ವೊಂದು ಮಾತೇಳ್ತೀವ್ನಿ ಕರಿಯಣ್ಣ.

ಕರಿಯ : ಯಾವದು?

ಚಾಮಯ್ಯ: ಈಗ ನಿಂಗೇಡು ಮಕ್ಕಳಲ್ವಾ ಎಣ್ಣು ಬ್ಯಾಕು ಅನ್ನಾ ಆಸೆ ಇಲ್ವಾ?

ಕರಿಯ : ಇಲ್ಲಪ್ಪಾ ಈ ಸಾರಿ ಆಪ್ಲೇಸನ್ ಮಾಡಿಸ್ಬುಡ್ತೀವ್ನಿ ನನ್ನಂಡ್ತಿಗೇ.

ಚಾಮಯ್ಯ: ಏಡೇ ಸಾಕಾ?

ಕರಿಯ : ಅಮೇಡಕ್ಕಾ ಸಧ್ಯ ದ್ಯಾವ್ರು ಆಯಸು ಆರೋಗ್ಯ ಕೊಡ್ಲಾಪ್ಪಾ ಸಾಕು.

ಚಾಮಯ್ಯ: ಇಂಗಂತಾನ ಅಂತ ಕ್ಯಾಳಬ್ಯಾಡ, ಯಾರೇ ಆಗ್ಲಿ ಏಡು ಮಕ್ಕಳಲ್ಲಿ ಒಂದು ಬುಟ್ಹೋಯ್ತಪ್ಪಾ ಆಗ ಯಾನ್ಮಾಡದು ಆಪ್ಲೇಸನ್ ಮಾಡಿಸ್ ಬುಟ್ರಾ?

ಕರಿಯ : ಪುನಃ ಗಂಡಸ್ರಗಾದ್ರ, ಮಾಡ್ಬೇದಂತ ಮರು ಆಪ್ಲೇಸನ್, ಅಮ್ಯಾಕೆ ಮಕ್ಕಳಾಗ್ತವಂತೆ.

ಚಾಮಯ್ಯ: ಅಂಗಾರ ಗಂಡಸ್ರೇ ಮಾಡಿಸ್ಕಬ್ಯಾಕು, ನೀನೇ ಮಾಡಿಸ್ಕೋ ನಿನ್ನೆಡ್ತಿಗೆ ಬ್ಯಾಡ.

ಕರಿಯ : ಆಗೇ ಆಗ್ಲಿ ಬುಡು ನಮ್ಮ ಆಪ್ಲೇಸನ್ ಇನ್ನೂ ಸುಲಭ. ಅವ್ರೊತ್ತೇ ತಿರ್ಗಾಡ್ ಬೈದಂತ. ಈಗ ನೀನು ಯಾಕ್ ಮನಸ್ಸು ಮಾಡ್ಡಾ..ರ?

ಚಾಮಯ್ಯ: ಯಾಕೋ ವೊಗ್ಗಕ್ಕಿಲ್ಲ ಕನಯ್ಯಾ.

ಕರಿಯ : ಎಲ್ಲಾ ಸರೋಯ್ತದೆ ಬಾ... ಈ ಸಾರಿ ಸಿಬಿರದಾಗೆ ಮಾಡಿಸ್ಬುಡಾವ.

ಚಾಮಯ್ಯ: ನಂಗ್ಯಾನ ದಂಡಿಯಾಗಾಗವಲ್ಲಾ ಮಕ್ಕಳು?

ಕರಿಯ : ಇನ್ನಾಗಕ್ಕಿಲ್ವ ಮಕ್ಕಳು ಇನ್ನೂ ಆಯ್ತದೆ ಕನಯ್ಯಾ, ಆ ಮ್ಯಾಕೆ ಇನ್ನೂ ಕಸ್ಟ ಪಡಬೇಕಾಯ್ತದ.

ಚಾಮಯ್ಯ: ನೋಡಮು.

ಕರಿಯ : ನೋಡೋದಲ್ಲಾ ಬಂದ್ಬುಡು ಹಸ ತರಕ್ಕೋಗವಾ...

ಚಾಮಯ್ಯ: ಹತ್ತು ಗಂಟೆ ಮ್ಯಾಕ್ ಬಂದ್ಬುಡ್ತಿವ್ನಿ ನಡಿ...

ಕರಿಯ : ಆಗ್ಲಿ.

## ದೃಶ್ಯ-೧೧

ಚಾಮಯ್ಯ: ಇದ್ಯಾನ್ ದುರ್ಗಿ ಇಂಗ್ ಕೂತುಬುಟ್ಟೆ?

ದುರ್ಗಿ : ದುರ್ಗಿಯಾಗಿ ಮೆರೆಯೋ ಕಾಲ ವೊಂಟೋಯ್ತು.

ಚಾಮಯ್ಯ: ಅದ್ಕೇ ಯಾಳಾದು ಮಕ್ಕಳು ಮರಿ ಆದ್ಮ್ಯಾಕೆ ಅವರ ಮದ್ವ ವಾಯ್ತಾರೆ ಅಂತ ನಮ್ಮ ತಾತ ಯಾಳ್ತಿದ್ರು ಅದು ಈಗ ನಿಜ ಅನ್ನಿಸ್ತೈತೆ.

ದುರ್ಗಿ : ಎಲ್ಲಾ ಅನುಭವದ್ ಮ್ಯಾಕೆ ಯೇಳ್ತವ್ರೆ.

ಚಾಮಯ್ಯ: ಇನ್ ದುಕ್ಕ ಪಟ್ರ ಬ್ಯಾರೆ ಆಯ್ತದಾ?

ದುರ್ಗಿ : ಅದಲ್ಲ ಇಸಯ ಈವೊತ್ತು ನಮ್ಮ ಮನ್ಯಾಗೆ ಚೌಡಮ್ಮ ಬಂದಿದ್ಳು. ಆ ಮಕ್ಕಳ್ ಕೈಗೆ ಒಂದು ಬಿಸ್ಕತ್ತಿನ ಪೊಟ್ನಾ ತಂದು ಕೊಟ್ಲು.

ಚಾಮಯ್ಯ: ಒಳ್ಳೆ ಹಬ್ಬವೇ ಆಯ್ತಲ್ಲ ನಿನ್ನ ಮಕ್ಕಳಿಗೆ.

ದುರ್ಗಿ : ಆದ್ರ ಅವಳಿಗೆ ಒಂದು ಕಪ್ ಕಾಪಿ ಕೊಡಕಾ ಆಗ್ಲಿಲ್ಲ.

ಚಾಮಯ್ಯ: ನಾ ಕೊಡ್ಬೇಡಾ ಅಂತ ಯೇಳಿದ್ನಾ?

ದುರ್ಗಿ : ಮಾತಾಡದ್ರ ಮತ್ತ ದುರ್ಗಿಯಾಗ್‌ಬೇಕ್ ಆದ್ರ ದುರ್ಗಿಯಾಗಾಸಕ್ತಿ ನನ್ನ ಕೈಲಿಲ್ಲ. ಏನ್ಮಾಡ್ಲಿ? ಮನಾಲಿ ಯಾನರ ಇದ್ರಲ್ವಾ ಕೊಡದು. ಬರಿ ಕುಂಕುಮ

ಇಡ್ಯಮು ಅಂದ್ರು ಇಲ್ಲ ನಮ್ಮದೂ ಒಂದು ಬಾಳು ತಕ್ಕಳಿ ಸಾವಿರದು ದರ್ಗೆ ವೊರ.

ಚಾಮಯ್ಯ: ಮನಗ್ ಬತ್ತಿದ್ದಾಗ್ಗೆ ಸುರುವಾಯ್ತೋ ನಿನ್ನ ಗೋಳಿನ ಕತ್ಗೊಳು?

ದುರ್ಗಿ : ಇದ್ದದ್ದ ಇದ್ದ ಹಾಗ ಹೇಳ್ದೆ ಅಷ್ಟೇ.

ಚಾಮಯ್ಯ: ನಾನೇನು ಇರುವಾಗ ದರ್ಬಾರು ಮಾಡ್ನಿಲ್ವಾ?

ದುರ್ಗಿ : ನಾನಿಲ್ಲಾ ಅಂದ್ನಾ?

ಚಾಮಯ್ಯ: ಹೋಗ್ಲಿ ಅಯ್ಕಳು ಏನ್ಮಾಡ್ತಾವು?

ದುರ್ಗಿ : ಎಲ್ಲಾ ಕಚ್ಚಾಡ್ಕಂಡು ಈಗ್ತಾನೆ ಬಿದ್ಕಂಡೋ ಅವರ್ನೆಲ್ಲಾ ಸರೋಗ್ಸ ಗಂಟ ನನ್ನ ನಡ ಚಳ್ಕು ಬಂದುಬಿಡ್ತು. ಅವ್ತಾನೆ ಏನ್ಮಾಡ್ತಾವು ಚಿಕ್ಕಪುಟ್ಟ ವಯಸ್ಸು. ತಿನ್ನ ಉಣ್ಣ ಬಾಯ್ಗಳು ಕೇಳಿದ್ರೆ ತೆಪ್ಪಾ. ಅಕ್ಕಪಕ್ಕದವು ತಿನ್ನುವಾಗ ನಾವು ತಿನ್ಬೇಕು ಅನ್ಸಲ್ವಾ? ಗೆಣಸು ತಕ್ಕೋಡು ಅಂತ ಹಟ ಹಿಡಿದ್ರು. ಕಾಸುಕೊಟ್ಟು ತಕ್ಕೋಡಮು ಅಂದ್ರ ಕೈಲಿ ಇರಬೇಕಲ್ಲಾ, ಈ ವರ್ಸ ಯಾಗೋ ವಸಿ ಬೆಳ್ಯಾದ್ರೂ ಆದಿದ್ರೆ ವಸಿ ಬತ್ತನಾರ ಇಕ್ಕುಬುಟ್ಟು ತಕ್ಕಬೋದಾಗಿತ್ತು. ಇನ್ನು ವರ್ಸಕ್ಕೊಂದು ಉಗಾದಿ ಬರಾದು. ಮಕ್ಕಳಿಗೆ ಚೊಗ ವೊಲಸಾದು ಯಾನೋ ನಂಗೊಂದು ಗೊತ್ತಾಗಕ್ಕಿಲ್ಲ.

ಚಾಮಯ್ಯ: ಚೊಗ ಇಲ್ದೆವಾದ್ರೆ ಉಗಾದಿ ಆಗಾಕಿಲ್ವಾ?

ದುರ್ಗಿ : ನಾಳಾಕ ಕರಿಯಣ್ಣನ ಮಗನಿಗೆ ನಾಮಕರಣ ನಾವೋಗಾಕ್ಕಿಲ್ಲ.

ಚಾಮಯ್ಯ: ನೀ ವಾಗ್ಗೆವೋದ್ರೆ ಅವರ ಮನೆ ನಾಮಕರಣ ಉಳ್ಕತಾನಾ?

ದುರ್ಗಿ : ಉಳ್ಕತ್ತ ಅಂತ ಯಾರ್ಯಾಳದ್ರು?

ಚಾಮಯ್ಯ: ನೀ ಯಾಳದ್ದು ನೋಡಿದ್ರೆ ಅಂಗೇ ಕಾಣ್ಸೈತೆ.

ದುರ್ಗ : ವೋದ್ರೆ ಏನಾರ ಮುಯ್ಯಿ ವೊಸ್ಯಬೇಕು ಕೈಗೆ ಐದು ರೂಪಾಯಿನಾರಾ ಕೊಡಬ್ಯಾಡ್ವಾ?

ಚಾಮಯ್ಯ: ಹೋಗ್ದೇ ವೋದ್ರೆ ಆಯ್ತು.

ದುರ್ಗಿ : ... ಅಷ್ಟೇ...

* * *

ದುರ್ಗಿ : ಪಾಪ ಎಲ್ಲಾ ಹುಡುಗ್ರು ಏಟು ತಿಂದು ಅಂಗೇ ಬರಿವೊಟ್ಯಾ ಮಲಕಂಡೋ. ಪಾಪ ಅವೇನು ಹುಟ್ಟಬೇಕು ಅಂತಿದ್ವಾ? ನಾವು ಮಾಡಿದ ತೆಪ್ಪಗೆ ಅವು ನೋಯ್‌ಬೇಕಾಗ್ ಬಂತಲ್ಲಾ. ನಾವು ಅವಿವೇಕಿಗಳು ಯಾವಾಸ್ತಿ ಉಣ್ಣಕ್ಕೆ ಬ್ಯಾಕಿತ್ತು ಈ ಪಾಟಿ ಮಕ್ಕಳು. ಹಂದಿಯಾಗಿ ಹತ್ತೆರಕ್ಕಿಂತ ನಂದ್ಯಾಗಿ ಒಂದು

ಹೆತ್ತಿದ್ರೆ ಏಟೋ ಚೆನ್ನಾಗಿರ್ತಿತ್ತು. ತಳ ಕಂಡ ವೊಟ್ಟೆ ಬಿಟ್ಕೊಂಡು ಮಲಗೂ ಮಕ್ಕಳನ್ನ ನೋಡ್ತಿದ್ರೆ ಕರುಳು ಚುರುಕ್ ಅನ್ನಿಸ್ತೈತ. ಪಾಪ ಚಳಿಗೆ ಒಂದು ಕಂಬಳಿ ಇಲ್ಲ ತೆಳುವಾದ ಹರಕಲು ಸೀರೆ ವೊಸ್ಸಿವ್ನಿ. ಚಿನ್ನ ಬ್ಯಾಡ ಬಣ್ಣ ಬ್ಯಾಡ, ಹೊಟ್ಟೆಗೆ ಒಂದು ತುತ್ತು ಅನ್ನ, ಮೈಗೊಂದು ಪಾವಡ ಕೊಡಕ್ಕೆ ನಮಗ ಗತಿ ಇಲ್ಲದ ಮ್ಯಾಕೆ ಮಕ್ಕಳ್ಯಾಕೆ ಬೇಕು? ನಿಜವಾಗ್ಲೂ ನಾವು ಪಾಪಿಗಳು, ಸಾಕಪ್ಪಾ ಸಾಕು ಈ ಅತಿ ಮಕ್ಕಳು ಸಾಕು.

ಚೌಡಮ್ಮ : ದುರ್ಗವ್ವಾ ದುರ್ಗವ್ವಾ...

ದುರ್ಗಿ : ಬಾ ಚೌಡಮ್ಮ

ಚೌಡಮ್ಮ : ಏನು ಕಣ್ಣಲ್ಲಿ ನೀರು?

ದುರ್ಗಿ : ಕಣ್ಣಲ್ಲಿ ನೀರು ಬರ್ದೆ ಇರದ್ಯಾಗವ್ವಾ? ಅದಿದ್ದದೇ ಬಿಡು ಏನ್ಸಂದ್ಯವ್ವಾ?

ಚೌಡಮ್ಮ : ಯಾಕ್ ದುರ್ಗವ್ವಾ?

ದುರ್ಗಿ : ದಿನಾ ಸಾಯವ್ರಿಗೆ ಅಳವ್ರ್ಯಾರು ಅಂದಾಗೆ.

ಚೌಡಮ್ಮ : ಅಂದ್ರೆ...

ದುರ್ಗಿ : ಈ ವರ್ಸದಂತೆ ವರ್ಸ ನಾ ಕಾಣೆರ್ನಿಲ್ಲ ಕಣಕ್ಕ ಅಕ್ಷತೆ ಕಾಳಿಕ್ಕತೀನಿ ಅಂದ್ರು ಮೂರು ಕಾಳು ಬೆಳೆನಿಲ್ಲ ಸಾಲ ಮಾಡಿ ಮಾಡಿ ಸಾಕಾಗೋಯ್ತು. ಸಾಲದವ್ರತ್ರ ಮಾತು ಕೇಳಿ ಕಿವಿ ಮುಚ್ಚಿಹೋಯ್ತು ಕನವ್ವಾ.

ಚೌಡಮ್ಮ : ಮುಂದಿನ ವರ್ಸ ಕೊಡುವೆ ನಾನು ಒಂದೆರಡು ಪಲ್ಲ ಬತ್ತ ಕೊಡ್ತಿವ್ನಿ ಈಸ್ಕವ್ವಾ...

ದುರ್ಗಿ : ಅಷ್ಟು ಮಾಡಿದ್ರೆ ನಿಂಗೆ ಬಾಳ ಪುಣ್ಯ ಬರುತ್ತೆ ಕನ ಚೌಡಕ್ಕ.

ಚೌಡಮ್ಮ : ನಂಗೂ ದ್ಯಾವ್ರು ಒಂದು ಕುಡಿ ಕೊಡ್ತಾ ಅವ್ನೇ ಅದ್ಕೂ ಒಳ್ಳೇದಾಗ್ಲಿ ಅಂತ ನಿನ್ನಂತ ಬಡವರಿಗೆ ಕೊಡಕ ಮನಸು ಮಾಡಿವ್ನಿ. ಈ ಮಕ್ಕಳ ಸ್ಥಿತಿ ನೋಡಾಕಾಗಾಕಿಲ್ಲ ಕನವ್ವಾ.

ದುರ್ಗಿ : ಚೌಡವ್ವ ನೀನು ಬರೀ ಅಕ್ಕ ಪಕ್ಕದವಳಲ್ಲ, ನನ್ನ ಬಾಗಕ್ಕೆ ದೇವ್ರು. ಇಂಗ್ ಮನಸ್ ಮಾಡಿ ಇಷ್ಟು ಬತ್ತ ಕೊಡ್ತೀನಿ ಅಂತೀಯಲ್ಲ ನಿನ್ನ ಗಂಡ ಯಾನೂ ಅನ್ನಾಕಿಲ್ವಾ?

ಚೌಡಮ್ಮ : ಕಸ್ಟ ಪಡೋ ಅಕ್ಕ ಪಕ್ಕದವ್ರ ನೋಡ್ಕಂಡು ನಾವು ಕಣಜದಲ್ಲಿ ತುಂಬ್ಕಂಡಿರಾದು ಸರಿಯವ್ವಾ? ಸಂಪಾದ್ನ ಮಾಡಬ್ಯಾಕು ಎಲ್ಲಾನೂ ಮಾಡಿದ್ರಲ್ಲಿ ಸ್ವಲ್ಪ ದಾನಾನೂ ಮಾಡಬ್ಯಾಕು, ಎಲ್ಲಾನೂ ಇಟ್ಕಂಡು ಉಣ್ಣಕ್ಕಾದಾದವ್ವ ಯಾನೋ ಕಷ್ಟ ಮನಸ್ಸಗೆ ಬರ್ದೆ ಮರಕ್ಕೆ ಬರುತ್ತಾ. ನಾಳಾಕ ನಿನ್ನ ಗಂಡನ್ನ ಕಳೀಸು ಕಳ್ಸಕೊಡ್ತೀನಿ.

ದುರ್ಗಿ : ಯಾನೋ ಈ ವರ್ಸ ಬೆಳೆ ಆಗ್ಬೋದು ಅಂತವ್ರೇ ಬಂದೇಟ್ಗೆ ಕೊಟ್ಬಿ ನಿನ್ನ ಋಣ ತೀರಿಸ್ಕತೀನಿ ಕನವ್ವಾ.

ಚೌಡಮ್ಮ : ಮೊದಲು ನಿನ್ನ ಮಕ್ಕಳ ಹೊಟ್ಟೆಗೆ ಏನಾರ ವಸಿ ಗಂಜಿ ಅನ್ನ ಮಾಡಾಕು ಆಮ್ಯಾಕೆ ತೀರ್ಸ ಮಾತು.

ದುರ್ಗಿ : ಆಗ್ಲಿ ಕನವ್ವಾ.

ಚೌಡಮ್ಮ : ದುರ್ಗವ್ವಾ ಈಗ ನಂಗೆ ಏಳು ತಿಂಗಳು ತುಂಬುತ್ತದೆ. ಮುಂದಿನ ತಿಂಗಳು ಸ್ರೀಮಂತ ಇಟ್ಕಂಡಿನಿ ಎಲ್ಲಾ ಬರಬ್ಯಾಕು ನಿಂತ್ಕಂಡು ವಸಿ ಕೆಲಸ ಮಾಡಬೇಕು.

ದುರ್ಗಿ : ಆಗ್ಲಿ ಆತು ಅಕ್ಕ ಪಕ್ಕದವರಿಗೆ ಅಸ್ಟೂ ಮಾಡ್ಲೆವೋದ್ರೆ ಎಂಗೆ?

ಚೌಡಮ್ಮ : ನಾ ಬರಲ್ಯಾ?

ದುರ್ಗಿ : ಬಸ್ರೆಂಗ್ಸು ಮನಸ್ಗಂದೇ ಏನಾರಾ ಬವಕೆ ತಿಂಡಿ ಮಾಡ್ಕೋಡವಾ ಅಂದ್ರೂ ಆಗ್ನಿಲ್ಲ ಆ ದ್ಯಾವ್ರು ಯಾಕೀ ಸ್ಥಿತಿ ತಂದ್ನೋ?

ಚೌಡಮ್ಮ : ಆ ಕಾಲ ಬಂದಾಗ ಮಾಡಿಕೊಡವೆ ಬುಡು. ನಿನ್ನಮನೇಲಿ ಹಿಂದ ಎಷ್ಟು ದಿನ ತಿಂದಿಲ್ಲ ಬುಡು ನಾ ಬರ್ತೀವ್ನಿ.

ದುರ್ಗಿ : ಆಗ್ಲಿ...

* * *

ಚಾಮಯ್ಯ: ದುರ್ಗಿ ಯಾರು ಬಂದಿದ್ದವ್ರು?

ದುರ್ಗಿ : ಚೌಡಕ್ಕ.

ಚಾಮಯ್ಯ: ಏನಂತೆ?

ದುರ್ಗಿ : ಸೀಮಂತವಂತೆ ಇನ್ನೊಸಿ ಜನಕ್ಕೆ ಯಾಳ್ಬುಟ್ಬು ವೋದ್ಲು, ಅಂಗೇ ಏಡು ಪಲ್ಲ ಬತ್ತ ಕೊಡ್ತೀವ್ನಿ ಅಂದವ್ಳೇ ಈಸ್ಕಂಬ್ಬನ್ನಿ.

ಚಾಮಯ್ಯ: ಪಾಪ ಏಟೊಳ್ಳೆಯವಳು ಚೌಡಕ್ಕ.

ದುರ್ಗಿ : ಬತ್ತದ ಬೆಳೆ ಆದ್ಯಾಕ್ ಕೊಡಿ ಅಂದ್ಲು.

ಚಾಮಯ್ಯ: ದೇವ್ರು ಅಂತವಳಿಗೆ ಒಂದು ಗಂಡು ಮೊಗ ಕೊಡಬೇಕು.

ದುರ್ಗಿ : ಕಸ್ಟ ಕಾಲದಾಗೆ ದ್ಯಾವ್ರು ಯಾರ್ನಾರಾ ತೋರಿಸ್ತಾನೆ ಅಂಗೆ ಚೌಡಕ್ಕ ನಮ್ಮ ಪಾಲಿಗೆ ಬಂದ್ಲು.

ಚಾಮಯ್ಯ: ಗಂಡನೂ ಅಷ್ಟೇ ದಾನ ದರ್ಮ ಮಾಡದ್ರಲ್ಲಿ ಎತ್ತಿದ ಕೈ. ಯಂಗೋ ಯೋಸ್ನೆ ಮಾಡ್ತಿದ್ದೆ ಕೊರಗ್ತಿದ್ದೆ ಈಗ ಪರಿಹಾರವಾಯ್ತಲ್ಲ ನಿನ್ನ ಕಷ್ಟ.

ದುರ್ಗಿ : ಹೌದು.

* * *

## ದೃಶ್ಯ-೧೨

(ವಾದ್ಯ-ಓಲಗ)

ಕರಿಯ : ಅಂತೂ ಎಲ್ಲಾ ಬಂದಾಗಾಯ್ತು.

ಚಾಮಯ್ಯ: ನಿನ್ನ ಮನೆ ಅಡ್ಗೂಟಕ್ಕೆ ಯಾರ್ ತಪ್ಪಿಸ್ಕತಾರಪ್ಪಾಯೇಳು.

ಕರಿಯ : ನೀವು ನಾಮಕರಣಕ್ಕೆ ಬರ್ನಿಲ್ಲ ಬರಿ ಊಟಕ್ಕೆ ಬಂದಿವ್ರಿ.

ಚಾಮಯ್ಯ: ನಾಮಕರಣದ ನೆಪದಲ್ಲಿ ಊಟ ತಾನೆ ಮುಕ್ಯ.

ಚೌಡಮ್ಮ : ಅದ್ಯಾನೋ ಜಿಟ ಇನ್ನು ನಮ್ಮ ಮನ್ಯಾಗು ಒಂದೂಟ ಸಿಕ್ಕೈತೆ ಚಾಮಯ್ಯನವ್ರೇ.

ಚಾಮಯ್ಯ: ಆಗ್ಲೇ ಯೇಳಿದ್ನು ನಮ್ಮ ಮನೇವ್ವು, ನಿಮ್ಮ ಮನೇ ಸೀಮಂತದೂಟ ಬುಟ್ಟನವ್ವಾ.

ಕಾಳ : ಅಂತೂ ಒಂದಾದಮೇಲೊಂದೂಟ ಸಿಕ್ಕೈತೆ ನಿಮ್ಗೆ

ಚೌಡಮ್ಮ : ನಮಗೇನು ನಿಮ್ಗು ಸಿಗುತ್ತಲ್ಲ ತಾಯಿ.

ದುರ್ಗಿ : ಅದ್ಸರಿ ಮೊಗೀಗ ಏನವ್ವಾ ಎಸ್ರಿಡಿಸಿದ್ರಿ.

ಕಾಳಿ : ಸೂರಪ್ಪ ಅಂತ.

ದುರ್ಗಿ : ಮೊದಲ್ನೇವಾ ಈರಪ್ಪ ಈತ ಸೂರಪ್ಪಾ. ಅಂತೂ ಇಬ್ರೂ ಸೂರ್‍ರೇ ಬುಡವ್ವಾ.

ಚಾಮಯ್ಯ: ಅಂತೂ ಇಂಗೇ ನಡೀತಾ ಇರ್‍ಲಿ... ವರ್ಸ ವರ್ಸ.

ಕರಿಯ : ಏನು?

ಚಾಮಯ್ಯ: ಊಟದ ಸಮಾರಂಭ...

ಕರಿಯ : ನಾವು ವರಸಕ್ಕೊಂದೊಂದು ಸಮಾರಂಭ ಯಾವಾಗ್ಲೂ ಮಾಡವ್ರಲ್ಲಾ ಮೊದಲ್ನೇ ಮೊಗನದು ಈಗ ನಾಕೊರಸದಲ್ಲಿ ತಾನೇ ಆಯ್ತು.

ಚಾಮಯ್ಯ: ಆಗಾರೆ ಇನ್ನು ನಾವು ನಾಕೊರ್ಸ ಕಾಯ್ಕೊಂಡಿರಬ್ಯಾಕಾ?

ಕರಿಯ : ಹುಟ್ಟಿದ ಹಬ್ಬ ಅಂತ ಕಾಯ್ಬೋದು.

ಚಾಮಯ್ಯ: ಯಾಕಪ್ಪಾ ಎಡು ಗಂಡಾಯ್ತು ಇನ್ನು ಹೆಣ್ಣು ಬ್ಯಾಡ್ವಾ?

ಕರಿಯ : ಹೆಣ್ಣು ಬೇಕು ಅಂತ ಅದೂ ಗಂಡೇ ಆದ್ರೆ.

ಚಾಮಯ್ಯ: ಇನ್ನೊಂದಾಯ್ತದೆ.

ಕರಿಯ : ಇನ್ನೊಂದಾಯ್ತದೆ, ಮತ್ತೊಂದಾಯ್ತದೆ ಅಂತ ಮಕ್ಕಳು ಹೆತ್ಕೊಂಡೋಗದಾ ಎಂಗೆ?

ಚಾಮಯ್ಯ: ಆಗ್ಲಿ ಬುಡಿ ನಿಂಗ್ಯಾನ್ ಕಮ್ಮಿಯಾಗಿರದು?

ಕರಿಯ : ಚಾಮಣ್ಣ ನಾವು ವರ್ಸಕ್ಕೊಂದೊಂದು ಮಾಡಿಕೊಂಡಿದ್ರೆ ನಾವಿಂಗಿರ್ತಿವಾ ಜಿಟ್ವಾಗೂ ಇಲ್ಲ.

ಚಾಮಯ್ಯ: ನೀನೊಂತರ ಮನಸ ಕಣ್ಬುಡಪ್ಪಾ... ಎಲ್ಲಾ ಸಿಸ್ತು.

ಕರಿಯ : ಅಂಗಿಲ್ದೇ ನಿನ್ನಾಗೆ ಐದು ಆರು ಆದ್ರೆ ಗತಿ?

ಚಾಮಯ್ಯ: ಪಡ್ತಾ ಇವ್ನಲ್ಲಪ್ಪಾ ಪಾಡ್ನಾ?

ಕರಿಯ : ಅಂಗಾರೂ ಮಕ್ಕಳು ಆಗುತ್ತಲೇ ಇವೆ.

ಚಾಮಯ್ಯ: ಏನ್ಮಾಡ್ತಾದು?

ಕರಿಯ : ನಿಲ್ಲಿಸ್ಕಬ್ಯಾಕು!

ಚಾಮಯ್ಯ: ಆಗ್ಲಿ ತಕ್ಕಪ್ಪ.

ಕರಿಯ : ನಾನು ನನ್ನೆಡ್ತಿ ಮನಸ್ಸು ಮಾಡ್ಬುಟ್ಟಿವ್ನಿ

ಚಾಮಯ್ಯ: ಏನಂತ?

ಕರಿಯ : ಮಕ್ಕಳು ಸಾಕು ನಾನೋ ಇಲ್ಲ ಅವಳೋ ಇಬ್ಬರೊಳಗೆ ಒಬ್ಬರು ಆಪ್ಲೇಸನ್ ಮಾಡಿಸ್ಕಬ್ಯಕು ಅಂತ.

ಚಾಮಯ್ಯ: ನಮ್ಮದು ಮೀರಿ ಹೋಯ್ತು.

ಕರಿಯ : ಇನ್ನೂ ಆಗ್ತಾ ಅದ್ಯಲ್ಲಾ! ಅದ್ನಾದ್ರೂ ತಪ್ಪಿಸಿದ್ರೆ ಎಷ್ಟೋ ಬಾರ ಕಮ್ಮಿ ಆಗಾಕಿಲ್ವಾ?

ಚಾಮಯ್ಯ: ಇಲ್ಲ ಅಂದವ್ರ್ಯಾರು?

ಕರಿಯ : ಮೊದ್ಲು ನೀನು ಆಪರೇಸನ್ ಮಾಡಿಸ್ಕೋ. ತಡವಾದ್ರೂ ಮುಂದಕ ಮಕ್ಕಳ ತಪ್ಪಿಸಿದಾಗಾಯ್ತದೆ. ಸೌಕರ್ಯ ಆದ್ದಾಗ ಉಪಯೋಗಿಸ್ಕಂಡು ಜೀವನ ಮಾಡಬ್ಯಾಕಪ್ಪಾ.

ಚಾಮಯ್ಯ: ಆಗ್ಲಪ್ಪಾ...

ಕರಿಯ : ನೋಡು ನಾವೆಲ್ಲಾ ಯೋಳಿ ಕಳಿಸ್ಲು, ಚೌಡಕ್ಕನ್ನ ಆಸ್ಪತ್ರ್ಯಾಗೆ ಅವಳ ಗಂಡ ನಾಚ್ಕಂಡಿದ್ದಾ ದಾಗಟ್ಟತ್ರ ತೋರ್ಸಿ ಏನಾರಾ ಐಬಿದ್ರೆ ಸರಿ ಮಾಡ್ಕಂಡು ಮಕ್ಕಳು ಪಡ್ಕಂಡ್ರ ತೆಪ್ಪೇನಾ? ಈಗ ಸ್ರೀಮಂತದ ಊಟ ಸಿಕ್ತಿತ್ತಾ ನಿಂಗ.

ಚಾಮಯ್ಯ: ಅದೂ ನಿಜಾ ಅನ್ನು.

(ಎಲ್ಲರೂ ನಗುವರು)

ಕಾಳಿ : ಇದ್ಯಾನಾ ಎಲ್ಲಾ ಬರೀ ಮಾತೇ ಆಯ್ತಲ್ಲಾ ಎಲ್ರೂ ಊಟ ಮಾಡಾಕಿಲ್ವಾ?

ಕರಿಯ : ಬಂದಿರಾದೇ ಊಟಕ್ಕೆ ಬ್ಯಾಡಾ ಅಂತಾರಾ? ನೀ ಇಕ್ಕದೇ ಹೋದ್ರೆ ಅವ್ರೇ ಬಂದು ತಿಂದ್ಬುಡ್ತಾರಾ.

ಚೌಡಮ್ಮ: ಅದೂ ಜಿಟ ಅನ್ನು.

(ಎಲ್ಲರೂ ನಗುವರು)

* * *

(ಜೋಗುಳ ಸಾದು)

ನಾರಾಯಣಮ್ಮ : ಅಂತೂ ಎಲ್ಲಾ ಜನರೂ ಇಲ್ಲಿ ಸೇರಿದ್ದೀರಿ.

ಕರಿಯ : ನಿಮ್ಮ ಪ್ರಚಾರಕ್ಕೆ ಒಳ್ಳೇ ಸಮಯ ಬನ್ನಿ ನಾರಾಯಣವ್ವ.

ನಾರಾಯಣಮ್ಮ : ಹೋದ್ಯಾ ಪಿಶಾಚಿ ಅಂದ್ರೆ ಬಂದ್ಯಾ ಪಿಶಾಚಿ ಗವಾಕ್ಷಿಲೀ ಅಂದಾಗೆ ನಾವು.

ಚೌಡಮ್ಮ : ನಮ್ಮ ಸುಕಕ್ಕ ಮೂರೊಳ್ಳೆ ಮಾತಾಡಿದ್ರ ತೆಪ್ಪೆಸಾ ಬುಡಿ.

ನಾರಾಯಣಮ್ಮ : ಇದುವರ್ಗೂ ಚಾಚೂ ತಪ್ಪದೇ ನಾ ಹೇಳಿದ ಹಾಗೆ ಕೇಳಿಕೊಂಡು ಬಂದಿರುವವರ ಅಂದ್ರೆ ಕಾಳವ್ವ.

ಚೌಡಮ್ಮ : ಮುಂದೇನು ಮಾಡ್ತಾರೋ?

ನಾರಾಯಣಮ್ಮ : ಮುಂದೇನು ಮಾಡುವ ಪ್ರಶ್ನೆಯೇ ಇಲ್ಲ ಇನ್ನು ಉಳಿದಿರೋದೊಂದೇ ದಾರಿ ಆಪರೇಶನ್.

ಚೌಡಮ್ಮ : ಎರಡು ಗಂಡಾಗಿದೆ ಹೆಣ್ಣು ಬ್ಯಾಡ್ವೇ?

ಕಾಳಿ : ಬ್ಯಾಡಿಪ್ಪಾ ಸದ್ಯ ಈ ಸಾರಿದಾಗಿದ್ರೆ ಚನ್ನಾಗಿತ್ತು ಅವೆಲ್ಲಾ ನಮ್ಮ ಕೈಲಯ್ತಾ?

ನಾರಾಯಣಮ್ಮ : ನನಗೆ ಗೊತ್ತಿತ್ತು. ಅವರು ತುಂಬಾ ಜಾಣರು. ಮೊದಲನೇಮೊಗ ತಡವಾಗಿ ಆಯ್ತು ಎರಡನೆಯದರ ಅಂತರ ಇಟ್ಕಂಡು ಮೂರನೆಯದು ಬೇಡವೇ ಬೇಡ ಅಂತಾರೆ. ನಮ್ಮ ಘೋಷಣೆಯನ್ನೆಲ್ಲಾ ಅನುಸರಿಸಿಕೊಂಡು ಬಂದಿದ್ದಾರೆ. ಈಗ ಘೋಷಣೆಯ ಕೊನೆಯ ಘಟ್ಟವನ್ನು ತಲುಪಿ ಅದನ್ನೂ ಒಪ್ಪಿ ಮೂರನೆಯದನ್ನು ಸ್ವಾಗತಿಸದೆ ಎರಡನೆಯದನ್ನೆ ಕೊನೆ ಮಾಡಿಕೊಳ್ಳುತ್ತಾರೆ.

ಕಾಳಿ : ಹೌದವ್ವ.

ನಾರಾಯಣಮ್ಮ : ಆದ್ರೆ ನಮ್ಮ ದುರ್ಗವ್ವೆಯದು ಏನು ಒಂದು ತಾಬಂದಿಗೆ ಬರ್ನಿಲ್ವಲ್ಲಾ, ಸಂಖ್ಯೆ ಬೆಳಕಂಡು ಹೋಗ್ತಾ ಇದೆ.

ದುರ್ಗಿ : ನಾನೂ ಮನಸ್ಸು ಮಾಡಿವ್ನಿ...

ನಾರಾಯಣಮ್ಮ : ಅಂದ್ರೆ ಈ ಸಾರಿ ಹೆರಿಗೆ ಆದ ಮ್ಯಾಲೆ?

ದುರ್ಗಿ : ಹೆರಿಗೇನೂ ಬ್ಯಾಡ ಯಾನೂ ಬ್ಯಾಡಾಕನವ್ವಾ. ಈ ಸಾರಿ ಗರ್ಭ ಇಳಿಸ್ಕಂಡು ಆಪರೇಸನ್ ಮಾಡಿಸ್ಕತೀನಿ.

ನಾರಾಯಣಮ್ಮ : ಒಳ್ಳೇ ಜಾಣತನವೇ. ನೀವೇನು ಚೌಡಕ್ಕನವ್ರೇ ನಿಮ್ಮ ಆರೋಗ್ಯ ಹಾಗಿದೆ ಆಸ್ಪತ್ರೆಗೆ ಬಂದು ಆಗಾಗ ತೋರಿಸ್ತಾ ಇದ್ದೀರಾ?

ಚೌಡಮ್ಮ : ಹೌದವ್ವ... ತೋರಿಸ್ತಾ ಇವ್ನಿ.

ನಾರಾಯಣಮ್ಮ : ಹೆರಿಗೇನೂ ಆಸ್ಪತ್ರೇಲೇ ಮಾಡಿಸ್ಕಳ್ಳವ್ವಾ.

ಚೌಡಮ್ಮ : ಆಗ್ಲಿ ಕನವ್ವಾ.

ನಾರಾಯಣಮ್ಮ : ಅನುಮಾನ, ನಾಚಿಕೆ ಪಟ್ಟತಿದ್ಯಲ್ಲಾ ನೋಡ್ದಾ ಈಗ ನೀನು ದಾಗಟ್ರಗೆ ತೋರಿಸ್ತಾವಾಗಿದ್ರೆ ಮಕ್ಕಳಾಗ್ತಿದ್ವಾ.

ಚೌಡಮ್ಮ : ಕಂಡಿತಾ ಇಲ್ಲ ಕನವ್ವಾ ಎಲ್ಲಾ ನಿಮ್ಮ ಉಪಕಾರ ನಾ ಸಾಯಾಗಂಟ ನಿಮ್ಮ ಮರ್ಯ್ಯಾಕಿಲ್ಲ.

ನಾರಾಯಣಮ್ಮ : ನಾನೇನು ದಾರಿ ತೋರಿಸ್ದೆ ಆದ್ರ ಡಾಕ್ಟರ್ ಮಾಡಿದ್ರು ಅವರಿಗೆ ನಿನ್ನ ಕೃತಜ್ಞತೆ ಸಲ್ಲಬೇಕು.

ಚೌಡಮ್ಮ : ಎಲ್ಲರನ್ನೂ ನೆನಸ್ಕತೀನಿ ಕನವ್ವಾ ಅಂದಾಗ ನನ್ನ ಸೀಮಂತ ಮುಂದಿನ ವಾರ ಬಂದುಬುಡಬ್ಯಾಕು.

ನಾರಾಯಣಮ್ಮ : ಓ ಅಗತ್ಯವಾಗಿ. ನೋಡಿ ಪ್ರತಿಯೊಬ್ಬರೂ ಸ್ವಲ್ಪ ಹೇಳಿದ ಮಾತು ಕೇಳಿದ್ರೆ ಅವರವರ ಸಂಸಾರವನ್ನು ಸುಖ ಸಾಗರವಾಗಿ ಮಾಡ್ಕಳ್ಳಬಹುದು. ಕೇಳ್ದೆ ಹೋದ್ರೆ ಅನುಬೋಗಿಸಬೇಕಾಗ್ತದೆ.

ಕಾಳಿ : ಹೌದವ್ವ ನೀವೇಳ್ಳೋದು ಜಿಟ.

ಕರಿಯ : ಪ್ರಚಾರ ಮುಗೀತವ್ವಾ ನಾರಾಯಣವ್ವಾ.

ನಾರಾಯಣಮ್ಮ : ಮುಗೀತು. ಎಲ್ಲರೂ ಒಪ್ಪಿಕೊಂಡವ್ರೆ, ನಿಮ್ಮ ಹೆಂಗಸರಿಗೆ ಆಪರೇಷನ್ನ ಮಾಡಿಸ್ತೀರೋ ನೀವೇ ಮಾಡಿಸ್ಕೋತೀರೋ?

ಕರಿಯ : ನಾನೇ ಮಾಡಿಸ್ಕತೀನಿ ಬುಡಿ.

ನಾರಾಯಣಮ್ಮ : ಹಾಗಿರಬೇಕು, ಜನರು ಹೀಗೆ ಮುಂದು ಬಂದರೆ ನಮ್ಮ ಘೋಷಣೆ ಸಾರ್ಥಕ. ದುರ್ಗವ್ವ ಕುಟುಂಬ ಯೋಜನಾ ಆಪರೇಷನ್ ನೀವೇ ಮಾಡಿಸ್ಕಂತೀರೋ ನಿಮ್ಮ ಯಜಮಾನ್ರೋ?

ದುರ್ಗಿ : ನಾನೇ ಅಪರೇಸನ್ ಮಾಡಿಸ್ಕತೀನಿ.

ನಾರಾಯಣಮ್ಮ : ಜ್ವಪಾನ ಚೌಡವ್ವ ಈ ಮೊಗ ಆದ್ಮೇಕೆ ವಂಕಿ ಹಾಕಿಸ್ಕೋ ನಾಲ್ಕೈದು ವರ್ಸ ಮಕ್ಕಳು ಬ್ಯಾಡ.

ಚೌಡಮ್ಮ : ಬ್ಯಾಡ ಕನವ್ವಾ ಹೆರ್ಗೆ ಆದ್ಮ್ಯಾಲೆ ಬಂದು ಕಾಣ್ತೇನಿ.

ಕಾಳಿ : ಒಂದನೆಯದನ್ನ ತಡಮಾಡಿ.

ಚೌಡಮ್ಮ : ಎರಡನೆಯದಕ್ಕೆ ಅಂತರವಿಡಿ.

ದುರ್ಗಿ : ಮೂರನೆಯದು ಬೇಡವೇ ಬೇಡ.

ನಾರಾಯಣಮ್ಮ : ಹೌದು.

(ಮೂವರೂ ನಗುವರು)

* * *

# "ಆಶಾ ಜೀವನ"

## ದೃಶ್ಯ-೧

ಪಾತ್ರ ವರ್ಗ:

೧. ಕುಮುದಾ, ೨. ಪಾರ್ವತಮ್ಮ

ಕುಮುದಾ : ಮನೆಯಲ್ಲಿ ಯಾರು? ಬರಬಹುದೇ? ನಾನು ಕುಮುದಾ...

ಪಾರ್ವತಮ್ಮ: ಬನ್ನಿ... ಬನ್ನಿ ಕುಮುದಾ ಅವ್ರೆ...

ಕುಮುದಾ : ನಮಸ್ಕಾರ.

ಪಾರ್ವತಮ್ಮ: ನಮಸ್ಕಾರ, ಕುಳಿತುಕೊಳ್ಳಿ.

ಕುಮುದಾ : ಅಂದ ಹಾಗೆ, ನಿಮ್ಮ ತಾಯಿಯವರು ಇದ್ದಾರಾ ಒಳಗಡೆ...

ಪಾರ್ವತಮ್ಮ: ನಮ್ಮ ತಾಯೀನಾ? ನಾನು-ನಮ್ಮ ತಾಯಿ ಜೊತೆಯಲ್ಲಿಲ್ಲ... ನನ್ಗೆ ಮದ್ವೆ ಆಗಿದೆ... ಈಗ ನಾನು ಗಂಡನ ಮನೆಯಲ್ಲಿದ್ದೇನೆ. ನಿಮಗೆ ಈಗ ಏನು ಬೇಕು ಹೇಳಿ?

ಕುಮುದಾ : ತಮ್ಮ ಹೆಸರನ್ನೇ ಕೇಳಲಿಲ್ಲ.

ಪಾರ್ವತಮ್ಮ: ನೀವು ಕೇಳಲಿಲ್ಲ, ನಾನು ಹೇಳಲಿಲ್ಲ. ಈಗ ಕೇಳಿದ್ದೀರಿ, ಹೇಳ್ತೀನಿ ಕೇಳಿ. ನನ್ನ ಹೆಸರು, ನಮ್ಮ ತಂದೆ-ತಾಯಿಯವರು ಪ್ರೀತಿಯಾಗಿಟ್ಟ ಹೆಸರು ಸಾಕ್ಷಾತ್ ಪರಮೇಶ್ವರನ ಹೆಂಡತಿ ಹೆಸ್ರೇ.

ಕುಮುದಾ : ಒಳ್ಳೆಯದು ಪಾರ್ವತಮ್ಮನವರೇ. ಒಳ್ಳೇ ಚೆನ್ನಾಗಿರೋ ಹೆಸರನ್ನೇ ಇಟ್ಟಿದ್ದಾರೆ, ನಿಮ್ಮ ತಂದೆ-ತಾಯಿ.

ಪಾರ್ವತಮ್ಮ: ಏನೋ ಹೇಳ್ತಾರಲ್ಲ ಹೆಸರು ಚಂದ ಮುಸುಡಿ ಕೋಡಂಗಿ ಅಂದ ಹಾಗೆ?

ಕುಮುದಾ : ಹಾಗೇನಲ್ಲ. ಒಳ್ಳೇ ತಿದ್ದಿದ ಗೌರಿ ಇದ್ದಹಾಗೇ ಇದ್ದೀರಿ. ಯಾರೂ ಕಳಪೆ ಮಾಡೋವಾಗಿಲ್ಲ. ಈಗ ಮದ್ವೆ ಆಗಿರುವಂತೆ ಕಾಣುತ್ತೆ. ತುಂಬಾ ಚಿಕ್ಕವರಾಗಿದ್ದೀರಿ.

ಪಾರ್ವತಮ್ಮ: ಹೌದು... ಅದಿರಲಿ ನೀವ್ಯಾರು? ನಿಮಗೆ ನನ್ನಿಂದ ಏನಾಗಬೇಕು ಹೇಳಿ? ಅದ್ನೇ ಹೇಳಲಿಲ್ವಲ್ಲಾ.

ಕುಮುದಾ : ನಾನು ಕುಮುದಾ ಅಂತ ಹೇಳ್ದೆ. ಆದ್ರೆ ಮೊದಲನೇ ಸಾರಿ ಹೇಳಿದ ಹೆಸರು ಮರೆತುಹೋಯ್ತು ಅಂತ ಕಾಣುತ್ತೆ. ಪರ್ವಾಗಿಲ್ಲ ಮತ್ತೆ ಹೇಳ್ತೀನಿ, ಕೇಳಿ... ನನ್ನ ಹೆಸರು ಕುಮುದಾ ಅಂತಾ. ಇನ್ನು ನನ್ನಿಂದ ಏನಾಗಬೇಕು ಅಂತ ಕೇಳಿದ್ದೀರಲ್ವಾ, ನಿಮ್ಮ ಜೊತೆ ನಾನು "ಅತಿ ಮಕ್ಕಳಿಂದಾಗುವ ಸಮಸ್ಯೆಗಳ" ಬಗ್ಗೆ ಮಾತಾಡಬೇಕು ಅಂತ ಇದ್ದೀನಿ, ಅದಕ್ಕೆ ಬಂದಿದ್ದೀನಿ.

ಪಾರ್ವತಮ್ಮ: (ನಗುತ್ತಾ) ಮಕ್ಕಳು?

ಕುಮುದಾ : ಹೌದು ಏಕೆ ನಗ್ತಾ ಇದ್ದೀರಿ?

ಪಾರ್ವತಮ್ಮ: ನನಗೆ ಮಕ್ಕಳೇ ಇಲ್ಲ.

ಕುಮುದಾ : ಮನೆಯಲ್ಲಿ ಬೇಕಾದಷ್ಟು ಮಕ್ಕಳಿವೆ.

ಪಾರ್ವತಮ್ಮ: ಏನು ಮಾಡೋದು, ಸಾಕಷ್ಟು ಕೋಣೆಗಳಿಲ್ಲ. ನಿಮ್ಮ ಮನೆ ತುಂಬಾ ಚನ್ನಾಗಿದೆ. ಆದರೆ ಎಷ್ಟೊಂದು ಮಕ್ಕಳು? ಏನು ನಿಮ್ಮ ಮನೆ ಅಷ್ಟೊಂದು ದೊಡ್ಡದಲ್ಲ. ನೀವು ಇನ್ನೂ ಮಕ್ಕಳನ್ನು ಹಡೆಯುವ ಯೋಜನೆ ಇದ್ಯಾ?

ಕುಮುದಾ : ಇಲ್ಲ. ಖಂಡಿತ ಇಲ್ಲ.

ಪಾರ್ವತಮ್ಮ: ಒಳ್ಳೇ ತೀರ್ಮಾನ, ಕುಟುಂಬ ಯೋಜನೆಯ ಬಗ್ಗೆ ಏನು ತಿಳಿದುಕೊಂಡಿದ್ದೀರಿ? ನಾನು ನಿಮಗೆ ಒಳ್ಳೇ ಬುದ್ಧಿವಾದ ಹೇಳಬೇಕು ಅಂತಿದ್ದೀನಿ. ನೀವು ಕುಟುಂಬ ಯೋಜನಾ ಕೇಂದ್ರಕ್ಕೆ ಯಾಕೆ ಹೋಗಬಾರದು? ಅವರು ನಿಮಗೆ ಒಳ್ಳೆಯ ಕುಟುಂಬಯೋಜನಾ ವಿಧಾನವನ್ನು ತಿಳಿಸ್ತಾರೆ.

ಕುಮುದಾ : ನೀವು ಹೋಗಿದ್ರಾ?

ಪಾರ್ವತಮ್ಮ: ಹೌದು...

ಕುಮುದಾ : ಹಾಗಾದ್ರೆ ನೀವು ಈ ವಿಚಾರವನ್ನು ನಿಮ್ಮ ಸ್ನೇಹಿತೆಯರಿಗೂ ತಿಳಿಸಬಹುದಲ್ಲ.

ಪಾರ್ವತಮ್ಮ: ಹಾಗಾ?

ಕುಮುದಾ : ಹೌದು, ಈ ವಿಚಾರ ಒಬ್ಬರಿಂದೊಬ್ಬರಿಗೆ ಹರಡಬೇಕು. ಸುಖಜೀವನ ನಡೆಸಲು ಕಮ್ಮಿ ಮಕ್ಕಳು ಇರಬೇಕು ಅಂತ ಮನದಟ್ಟು ಮಾಡಬೇಕು. ಜೀವನದಲ್ಲಿ ಆಸೆಯನ್ನು ತುಂಬಬೇಕು. ಜೀವನದಲ್ಲಿ ಬೇಸರ ಹೊಂದಬಾರದು. ಸುಖವಾಗಿರಬೇಕಾದ್ರೆ ಚಿಕ್ಕ ಸಂಸಾರದ ಅರಿವು ಪ್ರತಿಯೊಬ್ಬ ದಂಪತಿಯಲ್ಲೂ ಮೂಡಿ ಬರಬೇಕು, ಏನಂತೀರಿ ಪಾರ್ವತಮ್ಮ?

ಪಾರ್ವತಮ್ಮ: ಹೌದು ಹಾಗೇ ಅನ್ನಿಸುತ್ತೆ. ಯಾರಿಗೆ ತಾನೇ ದಿನಾ ಅಳ್ತಾ ಜೀವನ ಸಾಗಿಸಬೇಕು ಅನ್ನಿರ್ತದೆ.

ಕುಮುದಾ : ನಾನೇ ಕುಂಟುಂಬ ಯೋಜನೆಯ ಬಗ್ಗೆ ತಿಳಿಸಬೇಕು ಅಂತ ಬಂದ್ರೆ, ನನಗೇ ನೀವು ಬುದ್ಧಿ ಕಲಿಸುವಷ್ಟು ಜಾಣೆ ಅನ್ನೊದು ಈಗ ಗೊತ್ತಾಯ್ತು.

ಪಾರ್ವತಮ್ಮ: ನನಗೂ ಹೀಗೆ ಅತಿ ಮಕ್ಕಳಾದ ಮೇಲೆ ಬುದ್ಧಿ ಬಂದಿದೆ. “ಕೆಟ್ಟ ಮೇಲೆ ಬುದ್ಧಿ ಬಂತು ಅಂತ ಹೇಳ್ತಾರಲ್ಲಾ ಹಾಗೇ.”

ಕುಮುದಾ : ಹಾಗೇನಿಲ್ಲ. ನೀವು ಈಗ್ಲೂ ಮನಸ್ಸು ಮಾಡದೇ ಹೋಗಿದ್ರೆ ಇನ್ನೂ ಮಕ್ಕಳಾಗುವ ಸಾಧ್ಯತೆ ಇರ್ತಿತ್ತು. ನಿಮ್ಮ ಜೀವನದಲ್ಲಿ ಇನ್ನೂ ದುಃಖ ಪಡಬೇಕಾಗ್ತಿತ್ತು. ಅದರಿಂದ ಈಗ ದೂರವಾಗೋ ಮನಸ್ಸು ಬಂದಿದೆ. ಇದು ಒಳ್ಳೇ ಶುಭ ಸೂಚನೇನೆ.

ಪಾರ್ವತಮ್ಮ: ಕಷ್ಟಪಟ್ಟ ಮೇಲೆ ತಾನೇ ಬುದ್ಧಿ ಬರೋದು.

ಕುಮುದಾ : ಎಷ್ಟೋ ಜನ ತುಂಬಾ ಕಷ್ಟ ಬರುವವರೆಗೂ ಅರ್ಥ ಮಾಡ್ಕೊಳ್ಳಿಲ್ಲ. ಮಾಡ್ಕೊಂಡ್ರೂ ಕುಟುಂಬ ಯೋಜನೆ ಅನುಸರಿಸ್ತೀನಿ ಅನ್ನೋಲ್ಲ. ಮೂಢನಂಬಿಕೆ, ಹೆದರಿಕೆ ಏನೇನೋ! ಅದರಲ್ಲಿ ನಿಮ್ಮದು ಧೈರ್ಯ, ಒಳ್ಳೇ ತೀರ್ಮಾನ.

ಪಾರ್ವತಮ್ಮ: ತಮ್ಮಂಥವ್ರು ಹೇಳಿದ ಮೇಲೆ, ನಾವೂ ಅರಿತ ಮೇಲೆ ನಮ್ಮ ಭವಿಷ್ಯ ನಾವು ರೂಪಿಸಿಕೊಳ್ಳಬೇಡ್ವೇ?

ಕುಮುದಾ : ಖಂಡಿತ. ನಿಮ್ಮ ಜೊತೆಗೆ ನಿಮ್ಮ ಅಕ್ಕಪಕ್ಕ, ಸ್ನೇಹಿತೆಯರು, ಬೀದಿಯವರು, ಊರವರು, ದೇಶ ಎಲ್ಲಾ ಅನುಸರಿಸಿದ್ರೆ ನಮ್ಮದು ರಾಮರಾಜ್ಯವಾಗೋದ್ರಲ್ಲಿ ಅನುಮಾನವಿಲ್ಲ. ಅದಕ್ಕಾಗಿ ಪ್ರತಿಯೊಬ್ಬರೂ ಪ್ರಯತ್ನಿಸಬೇಕು, ಸಾಧಿಸಬೇಕು.

ಪಾರ್ವತಮ್ಮ: ಅಗತ್ಯಾವಾಗಿ...

ಕುಮುದಾ : ಒಳ್ಳೇದಾಯ್ತು... ನಾನು ಬರ್ತೀನಮ್ಮ

ಪಾರ್ವತಮ್ಮ: ಹಾಗೇ ಹೊರಡುವುದು ಅಂದ್ರೇನು? ಕಾಫಿ ಕುಡಿದು ಕುಂಕುಮ ಇಟ್ಕೊಂಡು ಹೊರಡಿ.

ಕುಮುದಾ : ಆಗ್ಲಮ್ಮ...

(ಹೊರಡುವಳು)

## ದೃಶ್ಯ-೨

**ಪಾತ್ರ ವರ್ಗ:**

೧. ಪ್ರೇಮ, ೨. ಅಜ್ಜಿ, ೩. ರಾಜಣ್ಣ

ಅಜ್ಜಿ : ಪ್ರೇಮಾ... ಪ್ರೇಮಾ... ಏನ್ಮಾಡ್ತಾ ಇದ್ದೀಯಮ್ಮಾ? ಎಷ್ಟೋಸಾರಿ ಕೂಗಬೇಕು? ಊಂ ಅನ್ನೋಕ್ಕೂ ಆಗೋಲ್ವೇ? ಅದೇನ್ ಅಂಥದ್ದು ಗಾಢವಾಗಿ ಓದ್ತಾ ಕುಳ್ತಿದ್ದಿಯಲ್ಲಾ. ಅದೇನು ಅಂಥ ಸ್ವಾರಸ್ಯವಾದ ಕಥೆ?

ಪ್ರೇಮ : ಸುಮ್ನಿರಜ್ಜಿ... ಏನೋ ಓದ್ತಾ ಇದ್ದೀನಿ. ನನ್ನನ್ನು ಡಿಸ್ಟರ್ಬ್ ಮಾಡಬೇಡ.

ಅಜ್ಜಿ : ಅಂಥದ್ದೇನು? ಅಂಥ ಕೇಳ್ತಾ ಇರೋದು.

ಪ್ರೇಮ : ನಿನಗೇ ಹೇಳಿ ಪ್ರಯೋಜನವೇನು?

ಅಜ್ಜಿ : ನನಗೆ ಪ್ರಯೋಜನವಿಲ್ಲದ ವಿಷಯವೇ. ಏನೇ ಅದು?

ಪ್ರೇಮ : ಕುಟುಂಬ ಯೋಜನಾ ಶಿಕ್ಷಣ.

ರಾಜಣ್ಣ : ಏನಮ್ಮ ಕುಟುಂಬ ಯೋಜನಾ ಶಿಕ್ಷಣ? ಯಾರಿಗೆ?

ಪ್ರೇಮ : ಯಾರಿಗೆ ಅಂದ್ರೇನಪ್ಪಾ... ನಮ್ಮಂಥವರಿಗೆ.

ರಾಜಣ್ಣ : ನಿಮ್ಮಂಥವ್ರಿಗೀಗ್ಲೆ ಯಾಕಮ್ಮಾ ಆ ವಿಚಾರಗಳು?

ಪ್ರೇಮ : ಇದೇನಪ್ಪಾ ನೀವು ಹೇಳೋದು.

ರಾಜಣ್ಣ : ನಿಮ್ಮಜ್ಜಿ ಹೇಳೋದ್ನ ನಾನು ಹೇಳ್ದೆಯಮ್ಮಾ ಅಷ್ಟೇ.

ಅಜ್ಜಿ : ಅದೇ ನಾನೂ ಹೇಳೋದು. ಮದ್ವೆಇಲ್ಲದವಳಿಗೆ ಕುಟುಂಬ ಯೋಜನೆಯಂತೆ ಅದೇನು ಬಂತಪ್ಪಾ ಕಾಲಾ?

ಪ್ರೇಮ : ಮದ್ವೆ ಆಗದೇ ಇರೋದೇ ಒಂದು ರೀತೀಲಿ ಕುಟುಂಬ ಯೋಜನಾ ಅನುಸರಿಸಿದಂತೆ ಅಲ್ವೇ ಅಜ್ಜಿ.

ಅಜ್ಜಿ : ಹಾಗಂದ್ರೆ...?

ಪ್ರೇಮ : ಬಾಯಿ ಬಿಡಬೇಡ... ಮದುವೆ ಆಗದೇ ಹೋದ್ರೆ ಮದ್ವೆ ವಯಸ್ಸನ್ನು ಮುಂದೂಡಿದಂತೆ. ದೇಶಕ್ಕೆ ಜನಸಂಖ್ಯೆ ಕಡಿಮೆ ಆದಂತಾಯ್ತು ಅಲ್ವಾ? ಆ ದೃಷ್ಟಿಯಿಂದ ನಾವು ಕುಟುಂಬ ಯೋಜನಾ ವಿಧಾನವನ್ನು ಅನುಸರಿಸಿದಂತೆಯಲ್ವೇ?

ಅಜ್ಜಿ : ಕುಟುಂಬ ಯೋಜನೆ, ಅದಕ್ಕೆ ನೀನು ತುಂಬಾ ಚಿಕ್ಕವಳಮ್ಮ...

ಪ್ರೇಮ : ಏನಜ್ಜಿ ಈ ಹೊತ್ತಿನ ಚಿಕ್ಕವರೇ ನಾಳೆ ದೊಡ್ಡವರು. ನೀನು ಒಂದು ದಿನ ನನ್ನ ಹಾಗೇ ಇದ್ದೇ. ಈಗ ಅಜ್ಜಿ ಆಗಿದ್ದೀಯೆ ಅಷ್ಟೇ.

ಅಜ್ಜಿ : ಹೌದಮ್ಮ

ಪ್ರೇಮ : ಹಾಗೇ ನಾನು ಈ ಹೊತ್ತು ಚಿಕ್ಕವಳು. ನಾಳೆ ಮದುವೆ ಆಗೋವಳು. ಸಂಸಾರ ಮಾಡೋವಳು. ನಮ್ಮ ಸಂಸಾರ ಮುಂದೆ ಹ್ಯಾಗಿರಬೇಕು? ಎಷ್ಟು ಜನ ಮಕ್ಕಳಿರಬೇಕು ಎಂಬುದನ್ನೆಲ್ಲಾ ನಾನು ಈಗ್ಲೇ ನಿರ್ಧರಿಸಿಕೊಳ್ಳುವುದು ಉತ್ತಮ. ಆ ದೃಷ್ಟಿಯಿಂದ ಜನಸಂಖ್ಯಾ ಶಿಕ್ಷಣ, ಕುಟುಂಬ ನಿಯಂತ್ರಣ, ದೇಶದ ಆರ್ಥಿಕ ಪರಿಸ್ಥಿತಿ, ಅದರಲ್ಲಿ ನಮ್ಮ ಪಾತ್ರ, ಇವುಗಳನ್ನೆಲ್ಲಾ ನೋಡಿಕೊಳ್ಳಬೇಕಾಗಿದೆ. ಮುಂದಿನ ಜೀವನಕ್ಕೆ ಇದು ಶಿಕ್ಷಣ ಸಾಹಿತ್ಯ. ಮೊದಲು ಇದನ್ನೆಲ್ಲಾ ಓದಿ ತಿಳಿದುಕೊಳ್ಳೋದು ಆಮೇಲೆ ನಿಜ ಜೀವನದಲ್ಲಿ ಅರಿತು ನಡೆಯುವುದು ಅಷ್ಟೇ. ಇದರಲ್ಲಿ ತಪ್ಪೇನು, ವಯಸ್ಸೇನು ಬಂತು ಅಜ್ಜಿ?

ಅಜ್ಜಿ : ನೋಡ್ದ್ಯಾ ರಾಜ... ನಿನ್ನ ಮಗಳು ಎಷ್ಟು ಮುಂದುವರಿದಿದ್ದಾಳೆ.

ರಾಜಣ್ಣ : ಈಗಿನ ಕಾಲದ ಹುಡುಗೀರನ್ನ ಕೇಳಬೇಕಮ್ಮಾ.

ಅಜ್ಜಿ : ಆದ್ರೂ... ನಮ್ಮ ಕಾಲದಲ್ಲಿ...

ಪ್ರೇಮ : ಶುರು ಮಾಡಿದ್ಲು.

ಅಜ್ಜಿ : ಹೌದಮ್ಮ... ಇವೆಲ್ಲಾ...

ಪ್ರೇಮ : ಇರಲಿಲ್ಲ. ಬಾಲ್ಯ ವಿವಾಹವೇ ಮಾಡಿಬಿಟ್ಟಿದ್ರು. ನೀವು ಮದುವೇನೇ ಆದ್ರಿ, ಆದ್ರೆ ನಾವು ಬಾಲ್ಯ ವಿವಾಹದ ಅನಾಹುತಗಳ ಬಗ್ಗೆ ಓದಿಕೊಂಡ್ರೆ ತಪ್ಪೇ?

ಅಜ್ಜಿ : ಅದೇನೋ ನಿಜ ಅನ್ನು-ಮದುವೆ ಅಂದ್ರೇನು? ಗಂಡ ಅಂದ್ರೇನು? ಯಾವುದೂ ಗೊತ್ತಿರಲಿಲ್ಲ. ಎಂಟು ವರ್ಷಕ್ಕೇ ಮದುವೆ ಮಾಡಿದ್ರು ಅನ್ನು-ಅದನ್ನು ಲೆಕ್ಕ ಹಾಕಿಕೊಂಡ್ರೆ.

ಪ್ರೇಮ : ನಿನ್ನದೇನು ಮಹಾ ಅನ್ನು...

ಅಜ್ಜಿ : ನನಗೆ ಲೇಟಾಯ್ತು ಬಿಡು.

ಪ್ರೇಮ : ಏನಜ್ಜಿ ನಾನೇಳೋದು, ಚಿಕ್ಕವರೇ ಆಗಲೀ ದೊಡ್ಡವರೇ ಆಗಲೀ ಕುಟುಂಬ, ಕುಟುಂಬ ಯೋಜನೆ, ದೇಶದ ಬಗ್ಗೆ ಸ್ವಲ್ಪ ತಿಳಿದುಕೊಳ್ಳಬೇಕು. ಸ್ವಲ್ಪ ಚಿಂತೆ ಮಾಡಬೇಕು. ಅದರ ಬಗ್ಗೆ ಹೆಚ್ಚಿಗೆ ಚಿಕ್ಕವರೇ ತಿಳಿದುಕೊಳ್ಳಬೇಕು, ಅದೇ ಕುಟುಂಬ ಕಲ್ಯಾಣ ಯೋಜನಾ ಶಿಕ್ಷಣ. ಅದಕ್ಕೇ ಕುಟುಂಬ ಯೋಜನಾ ಪ್ರಚಾರ ಸಾಹಿತ್ಯ ಮುಖ್ಯ. ದೇಶದ ಬಗ್ಗೆ ಅರಿವು ನೀಡೋ ಶಿಕ್ಷಣ ಅತಿ ಮುಖ್ಯ ಅಜ್ಜಿ.

ರಾಜಣ್ಣ : ಹೌದಮ್ಮ.

ಅಜ್ಜಿ : ಅದು ಸರಿ ಅನ್ನು.

ಪ್ರೇಮ : ಅಂತೂ ಅಜ್ಜಿ ಈಗ್ಲಾದ್ರೂ ಒಪ್ಪಿದ್ರಲ್ಲಾ ಅಷ್ಟಕ್ಕೇ ನನಗೆ ಸಂತೋಷ.

ರಾಜಣ್ಣ : ಬರೇ ಒಪ್ಪಿದ್ರಲ್ಲಾ. ನಿಮ್ಮಂಥ ಮದ್ವೆ ಆಗದವರಿಗೆ ಈ ಮದುವೆ ವಯಸ್ಸನ್ನು ಮುಂದೂಡುವುದರ ಬಗ್ಗೆ ತಿಳುವಳಿಕೆ ಹೇಳಬೇಕು. ಹಿರಿಯರ ಮಾತು ಅಂದ್ರೆ ನಮ್ಮ ದೇಶದಲ್ಲಿ ವೇದವಾಕ್ಯ ಇದ್ದಹಾಗೆ. ಅವರ ಮಾತನ್ನು ಎತ್ತಿ ಹಾಕುವುದಿಲ್ಲ. ಆದ್ದರಿಂದ ನಿಮ್ಮ ಅಜ್ಜಿ ಈ ಕಾರ್ಯವನ್ನು ನೆರವೇರಿಸಿಕೊಂಡು ಹೋಗಬೇಕು.

ಅಜ್ಜಿ : ನೋಡೋ ರಾಜು, ನಮ್ಮ ಕಾಲದಲ್ಲಿ ಮಾಡ್ತಿದ್ದ ಮದ್ವೆ ನೋಡ್ಕೊಂಡ್ರೆ ನಮ್ಮ ಜನ ಎಷ್ಟು ಮೂಢರು ಇದ್ದರು ಅಂತ ಅನ್ನಿಸುತ್ತೆ. ಈಗ ನಾನೇನೋ ಯಾರು ಕೇಳಿದ್ರೂ ಹೆಣ್ಣು ಮಕ್ಕಳಿಗೆ ಮದ್ವೆ ಮಾಡಬೇಕು ಅಂದ್ರೆ ಇಪ್ಪತ್ತೊಂದರ ಮೇಲೆ ಆಗಿರಬೇಕು ಅಂತ್ಲೇ ಘಂಟಾಘೋಷವಾಗಿ ಹೇಳ್ತೀನಿ.

ರಾಜಣ್ಣ : ಎಲ್ಲಾ ರೀತೀಲೂ, ಹೆಣ್ಣು ಜವಾಬ್ದಾರಿ ಅರಿತ ಮೇಲೆ ಮದ್ವೆ ಮಾಡಿದ್ರೇ ಒಳ್ಳೇದು. ಗಂಡ ಅಂದ್ರೆ ಗೊತ್ತಿರೋಲ್ಲ, ಸಂಸಾರ ಅಂದ್ರೇನು ಅಂತ ಗೊತ್ತಿರೋಲ್ಲ. ಸುಮ್ನೆ ಮದ್ವೆ ಮಾಡಿ ಅವರು ಪಡೋ ಪಾಡನ್ನು ನೋಡಲಿಕ್ಕಾಗೋಲ್ಲ.

ಅಜ್ಜಿ : ಹೌದಪ್ಪ... ಅದಕ್ಕೆ ನನ್ನನ್ನೇ ಉದಾಹರಣೆಯಾಗಿ ತೆಗೆದುಕೋ.

ಪ್ರೇಮ : ಈಗ್ಲಾದ್ರೂ ಸ್ವಲ್ಪ ಓದಬೋದೇ ಅಜ್ಜಿ, ನನ್ನ ಕುಟುಂಬ ಯೋಜನಾ ಸಾಹಿತ್ಯವನ್ನು.

ಅಜ್ಜಿ : ಅಗತ್ಯವಾಗಿ ಓದಮ್ಮಾ. ನಿನ್ನನ್ನು ಡಿಸ್ಟರ್ಬ್ ಮಾಡೋದೇ ಇಲ್ಲ.

ಪ್ರೇಮ : ಓ.ಕೆ.

* * *

## ದೃಶ್ಯ-೩

**ಪಾತ್ರ ವರ್ಗ :**

೧. ಜಯ, ೨. ಮಂಗಳ, ೩. ವೀರಭದ್ರಪ್ಪ

ಜಯ : ಅಂತೂ ಎಷ್ಟೋ ದಿನಗಳ ಮೇಲೆ ಬಂದ್ಯಲ್ಲಾ ಮಂಗಳಾ ಬಾ...

ಮಂಗಳ : ನಾಳೆ ಗೌರಿಹಬ್ಬ. ಕುಂಕುಮ, ಬಾಗಿನ ತೆಗೆದುಕೊಂಡು ಹೋಗುವೆಯಂತೆ ಬಾರಮ್ಮಾ.

ಜಯ : ಅದ್ಕೇನಂತೆ ಬರ್ತೀನಮ್ಮಾ. ನೀನೂ ಬರಬೇಕಮ್ಮಾ, ನಾನು ಮನೆಗೆ ಬಂದು ಹೇಳಿದೆ. ನೀನು ಇಲ್ಲೇ ಹೇಳಿಬಿಟ್ಟೆ ಅಂತ ಬೇಜಾರು ಮಾಡಿಕೊಳ್ಳಬೇಡ.

ನಾನು ಬರ್ತೀನಿ ನಾಳೆಗೆ. ಈ ಹೊತ್ತು ಸಾಯಂಕಾಲನೇ ಬರಬೇಕು ಅನ್ತಿದ್ದೆ, ಆದ್ರೆ ನೀನು ಈಗಲೇ ಹಾಜರ್. ಅಂತೂ ಬೆಂಗಳೂರಿಗೆ ಬಂದು ಒಂದು ವರ್ಷವಾಯ್ತಲ್ಲ.

ಮಂಗಳ : ಅದೇ ಹೋದ ಮಂಗಳ ಗೌರಿಹಬ್ಬಕ್ಕೆ ನಿನ್ನ ಮನೆಗೆ ಬಂದಿದ್ದುದು.

ಜಯ : ಏನು ನಿಮ್ಮ ಯಜಮಾನ್ರ ಫ್ಯಾಕ್ಟರಿ ಕೆಲಸ ಆರಾಮವಾಗಿದ್ಯಾ?

ಮಂಗಳ : ಆರಾಮ ಏನು ಬಂತು. ರಾಮ ರಾಮ ಅಂತ ಕೆಲಸ ಮಾಡ್ತಾ ಇರೋದು.

ಜಯ : ಏನು ತುಂಬಾ ಬಡವಾಗ್ಬಿಟ್ಟಿದ್ದೀಯೆ?

ಮಂಗಳ : ನಾನೇನು ಬಡವಳಲ್ಲದೆ ಸಾಹುಕಾರಳೇನಮ್ಮ

ಜಯ : ದುಡ್ಡಿನಲ್ಲಿ ಎಲ್ಲರೂ ಬಡವರೇ. ಆದ್ರೆ ದೇಹದ ಬೆಳವಣಿಗೆಯಲ್ಲೂ... ಆರೋಗ್ಯದಲ್ಲೂ.

ಮಂಗಳ : ಇನ್ನೇನು ನನಗೂ ವರ್ಷಕ್ಕೊಂದೊಂದು ಮಗು ಆಗ್ತಾ ಇದ್ರೆ ಆರೋಗ್ಯ ಇನ್ನೂ ಎಷ್ಟರ ಮಟ್ಟಿಗೆ ಇರಬೇಕು ಹೇಳು ಮತ್ತೆ.

ಜಯ : ಅಲ್ಲಮ್ಮಾ ಈ ಕಾಲದಲ್ಲಿ ಈ ಮಾತು ಹೇಳಬಹುದಾ?

ಮಂಗಳ : ಇರೋ ವಿಚಾರ ಹೇಳ್ದೆ, ತಪ್ಪೇ?

ಜಯ : ನೀನು ಇರೋ ವಿಚಾರವನ್ನು ಹೇಳಿದೆ. ಆದ್ರೆ... ಈಗಿರೋ ಮಕ್ಕಳು ಸಾಲದು ಅಂತ ಸಾಲಾಗಿ ಮಕ್ಕಳನ್ನು ವರ್ಷಕ್ಕೊಂದರಂತೆ ಪಡೀತಾ ಇದ್ದೀಯಾ ಹ್ಯಾಗೆ?

ಮಂಗಳ : ಒಂದು ರೀತಿಯಲ್ಲಿ ಹಾಗೇ ಆಗಿದೆ.

ಜಯ : ಮಂಗಳ ನಮ್ಮ ಯಜಮಾನ್ರಿಗೂ ಫ್ಯಾಕ್ಟರಿಯಲ್ಲೇ ಕೆಲಸ. ನಿಮ್ಮ ಯಜಮಾನ್ರಷ್ಟೇ ಸಂಬಳ. ನನ್ನದು ನಿನ್ನದು ಒಂದೇ ವಯಸ್ಸು. ಇಬ್ಬರ ಮದುವೆ ಆದದ್ದೂ ಒಂದೇ ವರ್ಷದಲ್ಲಿ.

ಮಂಗಳ : ಇಲ್ಲ ಅಂತ ಹೇಳಿದ್ನೇ.

ಜಯ : ನನಗೆ ಎರಡೇ ಮಕ್ಕಳು.

ಮಂಗಳ : ನನಗೆ ನಾಲ್ಕು...

ಜಯ : ಅದೇ ಯಾಕೆ ಅಂದೆ? ನನ್ನ ಒಂದನೇ ಮಗೂಗೆ ಐದು ವರ್ಷ. ಮೂರು ತಿಂಗಳದ ಈಗತಾನೆ.

ಮಂಗಳ : ಆದ್ರೆ, ನನ್ನ ಭಾಗಕ್ಕೆ ಹಾಗಲ್ಲಾ ವರ್ಷಕ್ಕೆ ಒಂದೊಂದು.

ಜಯ : ಅಂತರವಿಲ್ಲದ ಮಕ್ಕಳ ಹಡೆದು ನೀನು ಈ ರೀತಿ ಅಂತರಾಟಕ್ಕೆ ಸಿಕ್ಕಿಕೊಂಡು ಹೋಗಿದ್ದೀಯೆ? ಮಕ್ಕಳು ತಾನೇ ಏನು ನ್ಯಾಯವಾಗಿವೆಯೇ?

ಮಂಗಳ : ಒಂದಕ್ಕಿಂತ ಒಂದು ಪೀಚು, ಒಂದಲ್ಲ ಒಂದು ರೋಗ.

ಜಯ : ಅವುಗಳನ್ನು ನೋಡಕ್ಕಾಗುತ್ತಾ?

ಮಂಗಳ : ಆಹಾರವನ್ನಾದ್ರೂ ಕೊಡಲಿಕ್ಕಾಗುತ್ತಾ ಅಂತ ಕೇಳು.

ಜಯ : ಕಷ್ಟಾನೇ... ಆರ್ಥಿಕವಾಗಿ... ಸರಿಯಾದ ಬಟ್ಟೆ, ಆಹಾರ, ವಸತಿ, ವಿದ್ಯಾಭ್ಯಾಸ ಒದಗಿಸದೇ ಹೋದ್ರೆ ಏನು ಪ್ರಯೋಜನ?

ಮಂಗಳ : ಪ್ರಯೋಜನವಿಲ್ಲ ಅಂತ್ಲೇ ಹೇಳೋದು. ಈ ಮಕ್ಕಳು ಹಡೀತಿವಲ್ಲಾ ಅದನ್ನು ಬೇಕು ಅಂತ ಹಡೀತಿಲ್ಲ. ಅನಿವಾರ್ಯವಾಗಿ ಆಗ್ತಾ ಇದೆ. ಯಾವ ದೇವರನ್ನೂ ಕೇಳಿಲ್ಲ, ನಾಗರ ಪ್ರತಿಷ್ಠೇನೂ ಮಾಡಿಸಿಲ್ಲ ನೋಡಮ್ಮಾ.

ಜಯ : ಮಕ್ಕಳು ಅಪೇಕ್ಷಿತವಾಗಿರಬೇಕು ವಿನಃ ಅನಿರೀಕ್ಷಿತವಾಗಬಾರದು. ಇದು ತಂದೆ-ತಾಯಿಯರ ಜವಾಬ್ದಾರಿ ಪ್ರಶ್ನೆ. ಮಕ್ಕಳ ಪಡೀತಾನೇ ಇದ್ರೆ 'ಕಾಮಜರು' ಅಂತ ಹೇಳ್ತಾರೆ. ವಂಶ ಬೆಳೆಯಕ್ಕೆ ಒಂದು ಕುಡಿ ಸಾಲದೇ?

ಮಂಗಳ : ಹೌದಮ್ಮ.

ಜಯ : ಹೋಗ್ಲಿ ನಿನ್ನ ಆರೋಗ್ಯ ಈ ಮಕ್ಕಳ ಆರೋಗ್ಯ ಸರಿಯಾಗಿ ಇರ್ಬೇಕಾದ್ರೆ ಮಕ್ಕಳಲ್ಲಿ ಅಂತರ ಇಲ್ಲದೇ ಹೋದ್ರೆ ಏನು ಪ್ರಯೋಜನ? ಇದನ್ನು ಗಂಡಸರೂ ಅರ್ಥಮಾಡಿಕೊಳ್ಳಬೇಕಮ್ಮಾ.

ಮಂಗಳ : ಏನು ಮಾಡೋದು?

ಜಯ : ನನಗೂ ಮಕ್ಕಳು ಅಂದ್ರೆ ಆಸೆ. ಆದ್ರೆ ದಂಪತಿಗಳಿಗೆ ಮಕ್ಕಳು ಎಷ್ಟು ಬೇಕು ಅಷ್ಟು ಇದ್ದರೇ ಶೋಭಾಯಮಾನ. ಅಂತರ ಇದ್ದರೇ ಚೆಂದ.

ಮಂಗಳ : ಅದಕ್ಕೆ ನನ್ನ ಸಂಸಾರವೇ ಒಂದು ಉದಾಹರಣೆ. ಒಂದು ಕಂಯ್ ಅಂದ್ರೆ ಒಂದು ಪಿಂಯ್ ಅನ್ನುತ್ತೆ-ಅವುಗಳನ್ನು ಸುಧಾರಿಸೋದು ಸಂಸಾರ ನಿಭಾಯಿಸೋದು ಎರಡೂ ನನಗೆ ತುಂಬಾ ಕಷ್ಟ ತಂದೊಡ್ಡಿದೆ ಕಣಮ್ಮಾ.

ಜಯ : ಜನನ ನಿಯಂತ್ರಣದ ವಿಧಾನಗಳು ಬಹಳ ಮುಖ್ಯ. ಪ್ರತಿ ದಂಪತಿಗಳಿಗೂ ಇವು ಅವಶ್ಯ ಬೇಕು. ನಮಗೇನೋ ಹಚ್ಚಿಗೆ ಮಕ್ಕಳು ಬೇಕಿಲ್ಲ. ಆರ್ಥಿಕವಾಗಿ ನಾವು ಮುಂದುವರಿದಿಲ್ಲ. ನಾವು ಆಗಾಗ ಪರೀಕ್ಷೆ ಮಾಡಿಸಿಕೊಳ್ಳಬೇಕು. ಇದಕ್ಕೆ ಹೆದರಬೇಕಾಗಿಲ್ಲ. ಅಂತರವಿರಲು ಕುಟುಂಬ ಯೋಜನಾ ಸಾಧನ ಸಲಕರಣೆಗಳನ್ನು ಬಳಸುವುದು ಉತ್ತಮ.

ಮಂಗಳ : ಹೌದು...

ಜಯ : ನೀನು ಕುಟುಂಬ ಯೋಜನಾ ಕೇಂದ್ರಕ್ಕೆ ಭೇಟಿ ಕೊಡುವುದು ಉತ್ತಮ.

ಮಂಗಳ : ಆಯ್ತು ಈ ಸಾರಿ ನಾನು ವಂಕಿ ಹಾಕಿಸಿಕೊಳ್ತೀನಮ್ಮ.

ಜಯ : ದೇವರು ನಿನಗೆ ಒಳ್ಳೇ ಬುದ್ಧಿ ಕೊಟ್ನಲ್ಲ, ಅಷ್ಟಕ್ಕೇ ನನಗೆ ಸಂತೋಷ.

ವೀರಭದ್ರಪ್ಪ : ಯಾರು ಬಂದಿದ್ದವರು?

ಜಯ : ಮಂಗಳಾ.

ವೀರಭದ್ರಪ್ಪ : ಏನು ಆಕೆ ಇಷ್ಟೊಂದು ವೀಕ್... ಆಗ್ಬಿಟ್ಟಿದ್ದಾಳೆ.

ಜಯ : ವರ್ಷಕ್ಕೊಂದೊಂದು ಸೃಷ್ಟಿಯಾಗ್ತಿದ್ದರೆ ಇನ್ನೇನಾಗುತ್ತೆ?

ವೀರಭದ್ರಪ್ಪ : ಬುದ್ಧಿವಾದ ಹೇಳಿ ಕಳುಹಿಸಬೇಕಾಗಿತ್ತು.

ಜಯ : ಬಿಡ್ತೀನಾ?

ವೀರಭದ್ರಪ್ಪ : ಒಪ್ಪಿಗೆ ನೀಡಿದ್ರಾ?

ಜಯ : ಒಪ್ಪಿಸದೇ ನಾನು ಬಿಡ್ತೀನಾ?

ವೀರಭದ್ರಪ್ಪ : ಒಳ್ಳೇದು ಮಾಡ್ದೆ ಬಿಡು. "ನಿಮ್ಮ ಕುಟುಂಬವನ್ನು ನಿಯೋಜಿಸಿಕೊಳ್ಳಲು ಹತ್ತಿರದ ಕುಟಂಬ ಯೋಜನಾ ಕೇಂದ್ರಕ್ಕೆ ಭೇಟಿ ಕೊಡಿ..."

ಜಯ : "ಏನು ಪ್ರಚಾರದ ಎತ್ತರ ಧ್ವನಿ...?"

ವೀರಭದ್ರಪ್ಪ : ನೀನು ಹೇಳಿರುವುದನ್ನು ನಾನು ಹೇಳಿದೆ ಅಷ್ಟೆ.

ಜಯ : ಅಂತೂ ಚೆನ್ನಾಗಿ ನಾಟಕ ಆಡ್ತೀರಿ.

ವೀರಭದ್ರಪ್ಪ : ನಾಟಕ ಆಯ್ತು. ಇನ್ನು ಏನಾದ್ರೂ ಬಾಯಿಗೆ.

ಜಯ : ಕಾಫಿ ರೆಡಿ...

* * *

## ದೃಶ್ಯ-೪

**ಪಾತ್ರ ವರ್ಗ :**

೧. ಶಾಂತಮ್ಮ, ೨. ಚೆನ್ನಕ್ಕ, ೩. ಸುಂದರಪ್ಪ

ಶಾಂತಮ್ಮ : ಏನು ಚೆನ್ನಕ್ಕ ಈ ಹೊತ್ತು ಏನೋ ಒಂದು ಥರವಾದ ಯೋಚನೆಯಲ್ಲಿರುವಂಗಿದ್ಯಲ್ಲ.

ಚೆನ್ನಕ್ಕ : ನನ್ನ ಚಂದಕ್ಕೊಸಿ ಬೆಂಕಿ ಹಾಕುದ್ರು ಬುಡು ಶಾಂತವ್ವ.

ಶಾಂತಮ್ಮ : ಯಾಕವ್ವಾ ನಿನಗೇನು ಕಮ್ಮಿಯಾಗಿರದು?

ಚೆನ್ನಕ್ಕ : ಕಮ್ಮಿಯಾಗ್ದೇ ಮಾತಾಡ್ತೀನಾ?

ಶಾಂತಮ್ಮ : ಅದನ್ನೇ ನಾನು ಕೇಳ್ತಾ ಇರೋದು. ನಿನಗೆ ಕಮ್ಮಿಯಾಗಿರೋದೇನು? ಅಂತ.

ಚೆನ್ನಕ್ಕ : ನಿನ್ನಲ್ಲಿ ಮುಚ್ಚಿಟ್ಕಳ್ಳದೇನು ಬಂತು, ನಮ್ಮ 'ಗಂಗಿ' ದೇ ನನಗೆ ಯೋಸ್ನೆ...

ಶಾಂತಮ್ಮ : ಗಂಗಿದೇನು?

ಚೆನ್ನಕ್ಕ : ಈ ಹೊತ್ತಿದ್ದವ್ರು ನಾಳಕಿರಕಿಲ್ಲ. ಯಾರ್ದ್ಯಾನು ಸಾಸ್ವತ. ನಂದೂ ಅಷ್ಟೇ, ನಾನ್ಯಾವೊತ್ತಿಗೆ ಕಣ್ಣುಚ್ಚಕತೀನೋ?

ಶಾಂತಮ್ಮ : ಬುಡ್ತು ಅಸ್ನು. ನಿನಗ್ಯಾವ ಕಾಲ ಜಿನ ಆಗೈತೆ ತಕ್ಕೋ.

ಚೆನ್ನಕ್ಕ : ಯಾರ್ದೂ ತಿರವಿಲ್ಲ ಬುಡವ್ವಾ...

ಶಾಂತಮ್ಮ : ಅದ್ಸರಿ ಈಗ್ಯಾಕ ಆ ಮಾತು?

ಚೆನ್ನಕ್ಕ : ನನ್ನ ಗಂಗೀಗೆ ಮದ್ವೆ ಮಾಡ್ಬುಟ್ರೆ ಸಾಕವ್ವಾ. ನನ್ನ ಜಲ್ಮ ಸಾರ್ಥಕವಾದಂಗೆ.

ಶಾಂತಮ್ಮ : ನಿನ್ನ ಮಗಳ ಮದ್ವೆ ಮಾಡ್ಕಳ್ಳವರಿಗೆ ಅಪರವೇ ಬುಡು.

ಚೆನ್ನಕ್ಕ : ಅಂತ ಗಂಡು...

ಶಾಂತಮ್ಮ : ಉಂ ನಿಂಗೆಂಗಿರಬ್ಯಾಕು?

ಚೆನ್ನಕ್ಕ : ಇದ್ಯಾನ ಸಾಂತವ್ವ ನೀಯಾಳದು. ಈಗಿನ ಕಾಲ್ದಾಗೆ ನನ್ನ ಮಗಳ ಮದ್ವೆ ಮಾಡಬ್ಯಾಕಾರೆ ವಸಿ ಪಾದಿರಬ್ಯಾಡ್ವಾ? ಇವಳು ಶಾಲಾ ಕಲ್ತವ್ಳಲ್ಲವ್ವಾ.

ಶಾಂತಮ್ಮ : ಒಂದುಡ್ಗ ಅವ್ನೆ. ನಿಂಗ್ಯಾನಸ್ನಸ್ತೈತೆಯೋಳು.

ಚೆನ್ನಕ್ಕ : ಹುಡುಗ ಯಾರು ಅಂತ್ಲೇ ಯೇಳ್ಳಿಲ್ಲ ನಾ ಎಂಗೇಳ್ಲಿ?

ಶಾಂತಮ್ಮ : ಅದೇ ಚನ್ನಕ್ಕ ನಮ್ಮ ಲಿಂಗಪ್ಪನ ಮಗನು ಚಂದ್ರು... ಅದ್ಯಾನೋ ಕಾಲೇಜೋತ್ತಾ ಇದ್ದಾನಂತ ಕಣಾವ್ವ.

ಸುಂದರಪ್ಪ : ಏನು ಶಾಂತ ಅತ್ತೆ ಚೆನ್ನಕ್ಕ ಇಬ್ಬರೂ ಯಾವುದೋ ಗಾಢವಾದ ವಿಚಾರದಲ್ಲಿ ಮಗ್ನರಾಗಿರುವಂತೆ ಕಾಣುತ್ತಲ್ಲ.

ಶಾಂತಮ್ಮ : ಚನ್ನಕ್ಕನ ಮಗಳು 'ಗಂಗಿ' ಮದ್ವೆ.

ಸುಂದರಪ್ಪ : 'ಗಂಗಿ'ಗೆ... ಮದ್ವೆ.

ಚೆನ್ನಕ್ಕ : ಯಾಕೆ ಆಶ್ಚರ್ಯವಾಗಿ ಕೇಳ್ತಾ ಇದ್ದೀಯಲ್ಲಾ, ಅವಳಿಗೆ ಮದ್ವೆ ಮಾಡಬೇಡವೇನು?

ಸುಂದರಪ್ಪ : ಬ್ಯಾಡ ಅಂದವ್ರ್ಯಾರು?

ಚೆನ್ನಕ್ಕ : ನೀನು ಹಾಗೇ ಮಾತಾಡಿದಾಗಾಯ್ತು.

ಸುಂದರಪ್ಪ : ಅಂದಹಾಗೆ ಗಂಗಿಗೆ ಎಷ್ಟು ವರ್ಷ?

ಚೆನ್ನಕ್ಕ : ಏನು ಲಾಯರ್ ಪಾಯಿಂಟ್ ಆಕ್ತೀಯಾ?

ಸುಂದರಪ್ಪ : ನಾನು ಲಾಯರ್ಆದದ್ಕೇ ಹೇಳಿದ್ದು. ಲಾಯರೇನು ಎಷ್ಟೋ ಜನ ಈ ವಿಚಾರ ತಿಳ್ಕಂಡವ್ರೆ ಕಣತ್ತೆ.

ಚೆನ್ನಕ್ಕ : ಅಲ್ಲ ಕಣೋ ಸುಂದ್ರ ಅವಳಿಗೆ ಹದಿಮೂರು ವರ್ಸ, ನೆರದಿದ್ದಾಳೆ. ಮದ್ವೆ ಮಾಡಬ್ಯಾಡ ಅಂತೀಯಲ್ಲಾ ಇದೇನು?

ಸುಂದರಪ್ಪ : ಅಲ್ಲೇ ನೀಸ್ ತಪ್ಪು ಮಾಡ್ತಾ ಇರೋದು ಅಂತ ನಾನು ಹೇಳ್ತಾ ಇರೋದು.

ಚೆನ್ನಕ್ಕ : ನನ್ನ ಮಗಳಿಗೆ ನಾನು ಮದ್ವೆ ಮಾಡೋದ್ರಲ್ಲಿ ತಪ್ಪೇನು?

ಸುಂದರಪ್ಪ : ಹೌದು... ಬಾಲ್ಯ ವಿವಾಹ ಮಾಡ್ತಾ ಇರೋದು ಒಂದು ಅಪರಾಧ.

ಚೆನ್ನಕ್ಕ : ಒಳ್ಳೆ ಚನ್ನಾಕಾಯ್ತೆ ಕಣ್‌ಬುಡು. ಅದ್ಯಾರಪ್ಪಾ ಮಾಡ್‌ಬ್ಯಾಡ ಅಂದವ್ರು. ನಾವೆಲ್ಲಾ ಆಗ್ನೇ ಇಲ್ಲ. ಸಂಸಾರ ಮಾಡ್ನೇ ಇಲ್ಲ, ನಮ್ಮ ಅಪ್ಪ-ಅವ್ವ ಎಲ್ಲಾ ಬುದ್ದಿ ಇಲ್ದೇ ಮಾಡಿದ್ರು. ಈಗ ಇದ್ಯೇನು ಪುರಾಣ ಏಳಕ್ಕೆ ಬಂದ್ಬುಟ್ಟೆ. ನಮ್ಮ ಕಾಲ್ದಾಗೆ ತೊಟ್ಲಲ್ಲೇ ಮದ್ವೆ ಮಾಡ್ತಿದ್ರು. ಈಗ ಅದೇನು ಹೇಳಕ್ಕೆ ಬಂದ್ಬುಟ್ಟೆ.

ಸುಂದರಪ್ಪ : ಅದ್ನೇ ಅವಿವೇಕ ಅಂತ ಹೇಳೋದು. ಸಮಾಜಘಾತಕರೆಂದು ಹೇಳೋದು.

ಚೆನ್ನಕ್ಕ : ನೆನ್ನೆ ಮೊನ್ನೆ ವುಡ್ಗ ನಂಗೆ ಬುದ್ಧಿ ಏಳಕ್ಬಂದ್ಬುಟ್ಟೆ, ಸಾಕು ಸುಮ್ಕಿರು.

ಸುಂದರಪ್ಪ : ನೋಡತ್ತೆ ಈಗ ಕಾನೂನೇ ಇದೇ.

ಚೆನ್ನಕ್ಕ : ಏನು ಕಾನೂನು?

ಸುಂದರಪ್ಪ : ಹೆಣ್ಣನ್ನು ೧೮ ವರ್ಷಕ್ಕೆ ಮುಂಚೆ, ಗಂಡನ್ನು ೨೧ ವರ್ಷಕ್ಕೆ ಮುಂಚೆ ಮದ್ವೆ ಮಾಡಬಾರದು ಅಂತ.

ಚೆನ್ನಕ್ಕ : ಇದು ಯಾವಾಗ ಬಂತೋ?

ಸುಂದರಪ್ಪ : ಇದು ೧೯೨೯ರಲ್ಲೇ, 'ಶಾರದಾ ಕಾನೂನು' ಅಂತ ಬಂತು. ಇದರ ರೀತಿ ಹೆಣ್ಣು ೧೮, ಗಂಡೂ ೨೧ ವರ್ಷದ ಒಳಗಿದ್ದರೆ ಅವರುಗಳನ್ನು ಮಗು ಅಂತ್ಲೇ ಪರಿಗಣಿಸಬೇಕು ಅಂತ.

ಚೆನ್ನಕ್ಕ : ಚೆನ್ನಕ್ಕನ ಕಾನೂನಲ್ಲ ಬುಡು.

ಸುಂದರಪ್ಪ : ಅದ್ನಿಜ... ಇದು ಸರಕಾರಿ ಕಾನೂನು.

ಚೆನ್ನಕ್ಕ : ಸಾಕು ಸುಮ್ಕಿರೋ... ವಸಿ ಕಲ್ತಿ ಅಂತ ಇಂಗೂ ಮಾತಾಡಬ್ಯಾಡ. ನಂಗಿವರ ಬಗ್ಗೆ ಏನೂ ಗೊತ್ತಿಲ್ಲ.

ಸುಂದರಪ್ಪ : ನೋಡತ್ತೆ ೧೮೯೪ರಲ್ಲೇ ಈ ಬಾಲ್ಯ ವಿವಾಹ ನಿಷೇಧ ಕಾನೂನು ಮೈಸೂರು ರಾಜ್ಯದಲ್ಲಿ ಮೊದಲೇ ಜಾರೀಲಿತ್ತು.

ಚೆನ್ನಕ್ಕ : ಸರಿಯಪ್ಪಾ... ಇದು ನಮ್ಮಳ್ಳಿಗೂ...

ಸುಂದರಪ್ಪ : ಹಳ್ಳೀಗೂ ಒಂದೇ ಡಿಳ್ಳಿಗೂ ಒಂದೇ ಕಾನೂನು.

ಶಾಂತಮ್ಮ : ಆಗೊಂದು ಪಕ್ಸ ಮದ್ವ ಮಾಡ್ಬುಟ್ರಪ್ಪ ಆವಾಗ?

ಸುಂದರಪ್ಪ : ನೋಡಿ ಶಾಂತಕ್ಕ, ಕಾನೂನು ಪ್ರಕಾರ ೧೫ ದಿನ ಸೆರೆವಾಸ ಹಾಗೂ ದಂಡಕ್ಕೆ ಗುರಿಯಾಗ್ತಾನೆ. ಹುಡುಗ ೨೧ ವರ್ಷಗಳ ಮೇಲೆ ಮದ್ವೆ ಮಾಡ್ಕೋಬೇಕು. ಬಾಲ್ಯ ವಿವಾಹ ಮಾಡಿಕೊಂಡ್ರೆ ಮೂರು ತಿಂಗಳ ಸೆರೆವಾಸ ಹಾಗೂ ದಂಡಕ್ಕೆ ಗುರಿಯಾಗುವನು. ಯಾರಾದರೂ ಬಾಲ್ಯ ವಿವಾಹ ಮಾಡಿಸಿದರೆ ಅಂಥವನು ೩ ತಿಂಗಳ ಸೆರೆವಾಸ ಹಾಗೂ ದಂಡಕ್ಕೆ ಗುರಿಯಾಗುವನು. ೧೮ ವರ್ಷದ ಕೆಳಗಿನ ಹೆಣ್ಣು-ಗಂಡು ಮದುವೆ ಆದರೆ ಮದ್ವೆಗೆ ಸಹಾಯ ಮಾಡಿ, ಅನುಮತಿ ನೀಡಿದ ತಂದೆ ಅಥವಾ ಪಾಲಕರಿಗೆ ೩ ತಿಂಗಳ ಸೆರೆವಾಸ ಹಾಗೂ ದಂಡವಾಗುತ್ತೆ. ಆದರೆ ಸ್ತ್ರೀಗೆ ಸೆರೆವಾಸದ ಬದಲು ದಂಡ ವಿಧಿಸ್ತಾರೆ.

ಶಾಂತಮ್ಮ : ಸರ್ಕಾರಕ್ಕೆ ಹ್ಯಾಗೆ ಗೊತ್ತಾಗುತ್ತೆ ಇದು? ಮದುವೆ ಹ್ಯಾಗೆ ನಿಂತುಹೋಗುತ್ತೆ?

ಸುಂದರಪ್ಪ : ದೂರನ್ನು ಯಾರಾದರೂ ನ್ಯಾಯಾಲಯಕ್ಕೆ ಕೊಟ್ಟರೆ, ಖಚಿತವಾದರೆ, ಆ ವ್ಯಕ್ತಿಯ ವಿರುದ್ಧ ಮದುವೆ ಮಾಡದಂತೆ ತಡೆಯಾಜ್ಞೆ ನೀಡಬಹುದು. ಆದರೆ ತಿಳುವಳಿಕೆ ನೋಟೀಸು ಆತನಿಗೆ ಮೊದಲೇ ಜಾರಿಯಾಗಿರಬೇಕು. ಆತ ತಡೆಯಾಜ್ಞೆ ನೀಡಿದ್ದರೂ ಉಲ್ಲಂಘಿಸಿದರೆ ೩ ತಿಂಗಳ ಸೆರೆವಾಸ ೧೦೦೦ ರೂಪಾಯಿಗಳ ದಂಡ ತೆರಬೇಕಾಗುತ್ತದೆ.

ಚೆನ್ನಕ್ಕ : ಎಷ್ಟೇ ಆಗಲಿ ನೀನು ಲಾಯರು, ನೀನು ಯಾವುದಕ್ಕೂ ಕಾನೂನು ಕಟ್ಲೆ... ಹೇಳ್ತಾನೇ ಇರ್ತೀಯೆ. ಇನ್ನೇನಿದೆ ಹೇಳ್ಬಿಡಪ್ಪಾ.

ಸುಂದರಪ್ಪ : ಈ ಮದ್ವೆ ಮಾಡಿದ ಪುರೋಹಿತರು ಸಹ ಮೂರು ತಿಂಗಳ ಸೆರೆಮನೆ ವಾಸಕ್ಕೆ ಹೋಗಬೇಕಾಗುತ್ತೆ.

ಶಾಂತಮ್ಮ : ಅಂತೂ ಹೀಗೆ ಮದ್ವೆ ಮಾಡೋದ್ರಿಂದ ಹೆಣ್ಣು-ಗಂಡು, ಮದ್ವೆ ಮಾಡಿದ ತಂದೆ-ತಾಯಿ, ಪುರೋಹಿತರು ಎಲ್ಲರೂ ಕಬ್ಬಿಣದ ಸರಳನ್ನ ಎಣಿಸಬೇಕು, ರೂಪಾಯಿನ ನೋಟು ಎಣಿಸಿ ದಂಡ ತೆರಬೇಕು.

ಸುಂದರಪ್ಪ : ಅದ್ಕೇ ಹೇಳಿದ್ದು ನಾನು ಇರೋ ವಿಚಾರವನ್ನ. ಏನೋ ಗಂಗಿ ಮದ್ವೆ ಅಂತ ಮತಾಡೋದು ನನ್ನ ಕಿವಿಗೆ ಬಿತ್ತು. ಅದ್ಕೇ ಇದೆಲ್ಲಾ ವಿಚಾರವನ್ನು ಕೂಲಂಕುಷವಾಗಿ ಹೇಳಲಿಕ್ಕೆ ಬಂದೆ.

ಶಾಂತಮ್ಮ : ಒಳ್ಳೇದೇ ಆಯ್ತು ಬುಡು. ನಮಗೂ ಈ ವಿಸಯವೆಲ್ಲಾ ಗೊತ್ತಾತ್ತು. ನಾನೂ ಈಗ ಅದೇ ಏಳ್ತಿದ್ದೆ ಗಂಗಿಗ್ಯಾವ ವಯಸ್ಸು ಅಂತ. ಅದ್ಯಾಕೆ ಯೋಸ್ನೆ ಮಾಡ್ತೀಯಾ ಅಂತ ಚೆನ್ನಕ್ಕ.

ಚೆನ್ನಕ್ಕ : ಏನೋ ಅಪ್ಪಾ... ಬ್ಯಾಗ್ ಮದ್ವೆ ಮಾಡಿ ನಮ್ಮ ಬಾರ ಕಳ್ಕಳವ, ಕಣ್ಮುಚ್ಚಕ್ಕೂ ಮೊದ್ಲೆ ಅವಳ ತಲೆಮ್ಯಾಗೆ ನಾಕಕ್ಸತೆ ಕಾಳು ಹಾಕಿ ಕಣ್ತುಂಬ ಅವಳ ಮದ್ವೆ ನೋಡ್ಕಳವು ಅಂತಿದ್ದಿ ಅಷ್ಟೆ.

ಸುಂದರಪ್ಪ : ನೀವ್ಯಾನೋ ಹಾಗ್ಮಾಡ್ತೀರಿ? ಇದರಿಂದ ಎಷ್ಟು ಅನಾಹುತ ಗೊತ್ತಾ? ಏನೂ ಗೊತ್ತಾಗದ ಮಕ್ಕಳಿಗೆ ಮದ್ವೆ ಅಂದ್ರೇನು, ಗಂಡ ಅಂದ್ರೇನು ಗೊತ್ತಿರಕ್ಕಿಲ್ಲ. ಆಗ್ಲೇ ಮಕ್ಕಳು ಸಂಸಾರ ಜಂಜಾಟ, ಜೊತೆಗೆ ಅನಾರೋಗ್ಯ. ಇವೆಲ್ಲಾ ಯೋಸ್ನೆ ಮಾಡಿದ್ಯಾ ಎಂಗೆ ಅತ್ತೆ?

ಶಾಂತಮ್ಮ : ಹೌದು, ಅದೇನೋ ನಿಜ ಅಸ್ನು ಸುಂದರಣ್ಣ. ನಮ್ಮ ಪಕ್ಕದ ಮನೆ ನಾಗಕ್ಕನ ಮಗಳದ್ದೂ ಹಾಗೇ...

ಸುಂದರಪ್ಪ : ಗೊತ್ತಿದ್ದೂ ಹೀಗ್ಮಾಡ್ತೀರಲ್ಲಾ...

ಶಾಂತಮ್ಮ : ಅದ್ಕೇ ನಿಮ್ಮತ್ತೆಗೆ ಒಸಿ ಬುದ್ಧಿ ಯೋಳ್ತಿದ್ದೆ.

ಸುಂದರಪ್ಪ : ಒಳ್ಳೇದು ಮಾಡಿದ್ರಿ ಬಿಡಿ. ಏನತ್ತೆ? ಗಂಗಿ ಮದ್ವೆ...

ಚೆನ್ನಕ್ಕ : ನೀನು ಹೇಳ್ದಾಗ... ವರ ಕರ್‍ಕಂಡು ಬಂದಾಗ.

ಸುಂದರಪ್ಪ : ಈಗ್ಲೇ... ಕರೆತರುವುದು ಅಂತ್ಲಾ?

ಚೆನ್ನಕ್ಕ : ನಾನು ಹೇಳಿದ್ರೆ ನೀನು ಕರತರ್ತೀಯಾ? ನೀನು ಕರೆತಂದ ಮೇಲೆ...

ಸುಂದರಪ್ಪ : ಅವಳಿಗೆ ಇಪ್ಪತ್ತಾಗಲಿ...

ಚೆನ್ನಕ್ಕ : ಆಗ್ಲಿ ಬಿಡು...

ಶಾಂತಮ್ಮ : ಸದ್ಯ ದೇವರು ನಿನಗೆ ಒಳ್ಳೆ ಬುದ್ಧಿ ಕೊಟ್ನಲ್ಲಾ... ಸಂತೋಸವಾಯ್ತು ಬುಡು ಚೆನ್ನಕ್ಕ.

ಚೆನ್ನಕ್ಕ : ಅಷ್ಟೊತ್ತಿಂದ್ಲೂ ಮಾತೇ ಆಯ್ತು ಬಾ ಬಾ. ಸ್ಯಾವಿಗೆ ಒತ್ತಿವ್ನಿ, ಪಾಯಸ ಮಾಡಿವ್ನಿ, ತಿಂದು ಹೋದ್ರಾಯ್ತು...

ಶಾಂತಮ್ಮ : ಸರಿ ನಡ್ಯಪ್ಪಾ ಸುಂದ್ರು...

(ಸಂಗೀತ)

* * *

## ದೃಶ್ಯ-೫

**ಪಾತ್ರ ವರ್ಗ :**

೧. ಡಾಕ್ಟರ್, ೨. ಮಂಜಮ್ಮ ೩. ಲಕ್ಷ್ಮಿ

ಡಾಕ್ಟರ್ : ಯಾಕಮ್ಮಾ ಅಳ್ತೀಯಾ?

ಮಂಜಮ್ಮ : ಡಾಕ್ಟ್ರೇ... ನಿನ್ನೆ ತಾನೇ ನನ್ನ ಮೊಗ ಚನ್ನಾಗಿ ಆಟ ಆಡ್ತಿತ್ತು, ಕುಣೀತಿತ್ತು. ಈ ಹೊತ್ತು... ಈ ಹೊತ್ತು...?

ಡಾಕ್ಟರ್ : ಏನಾಯ್ತಮ್ಮಾ?

ಮಂಜಮ್ಮ : ನೋಡಿ ಡಾಕ್ಟ್ರೇ... ಕಾಲು... ಇದ್ದಕ್ಕಿದ್ದ ಹಾಗೆ ಸ್ವಾದೀನ ತಪ್ಪೋಯ್ತು.

ಡಾಕ್ಟರ್ : ಹತ್ತಿರಕ್ಕೆ ಕರಕೊಂಡು ಬಾರಮ್ಮಾ ನೋಡ್ತೀನಿ.

ಮಂಜಮ್ಮ : ಹ್ಯಾಗಾದ್ರೂ ಮಾಡಿ ನನ್ನ ಮಗುವಿಗೆ ಕಾಲು ಚೆನ್ನಾಗಿ ಬರುವಂತೆ ಮಾಡಿ ಡಾಕ್ಟ್ರೇ...

ಡಾಕ್ಟರ್ : ಪ್ರಯತ್ನ ಮಾಡೋಣಮ್ಮ...

ಲಕ್ಷ್ಮಿ : ಸಾರ್...

ಡಾಕ್ಟರ್ : ಸ್ವಲ್ಪ ತಾಳಮ್ಮ ಇಲ್ಲಿ ಮಗು ನೋಡ್ತಾ ಇರೋದು ಗೊತ್ತಾಗಕ್ಕಿಲ್ವೇ ನಿಮಗೆ?

ಲಕ್ಷ್ಮಿ : ಮಗೂಗೆ ಹೊಟ್ಟೆ ಹಸಿದುಬಿಟ್ಟಿದೆ. ಕೈ ಬಿಡ್ತಾ ಇಲ್ಲ. ಬೇಗ ಟ್ರಿಪ್ಪಲ್ ಆಂಟಿಜನ್ ಕೊಟ್ಟುಬಿಡಿ ಡಾಕ್ಟ್ರೇ... ಬೇಗ ಮನೆಗೆ ಹೋಗಬೇಕು.

ಡಾಕ್ಟರ್ : ಸ್ವಲ್ಪ... ಆ ಕಡೆ ಕೂತ್ಕೊಳ್ಳಮ್ಮ- ಏನಮ್ಮಾ ನಿಮ್ಮ ಮಗುವಿನ ಹೆಸರು.

ಮಂಜಮ್ಮ : ನನ್ನ ಮಗುವಿನ ಹೆಸರು ಮೂರ್ತಿ ಅಂತ.

ಡಾಕ್ಟರ್ : ಮಗುವಿಗೆ ಎಷ್ಟು ವಯಸ್ಸು?

ಮಂಜಮ್ಮ : ಮೂರು...

ಡಾಕ್ಟರ್ : ಏನಾದ್ರೂ ಮಗುವಿಗೆ ಹಿಂದೆ ಟ್ರಿಪ್ಪಲ್ ಆಂಟಿಜನ್ ಪೋಲಿಯೋ ಡ್ರಾಪ್ಸ್ ಕೊಡಿಸಿದ್ದೀರಮ್ಮಾ.

ಮಂಜಮ್ಮ : ಇಲ್ಲ ಡಾಕ್ಟ್ರೇ...

ಡಾಕ್ಟರ್ : ಮಗುವಿಗೆ ಅದನ್ನು ಕೊಡಿಸದೇಹೋದದ್ಕೇ ಹೀಗಾಗಿದೆ... ಇದು ಪೋಲಿಯೋ... ಕಣಮ್ಮ... ನೋಡೋಣ... ಔಷಧೋಪಚಾರ ಮಾಡೋಣ. ಬಾರಮ್ಮಾ... ಲಕ್ಷ್ಮಮ್ಮ

ಲಕ್ಷ್ಮಿ : ಬಂದೆ ಡಾಕ್ಟ್ರೇ...

ಡಾಕ್ಟರ್ : ಏನಮ್ಮಾ...?

ಲಕ್ಷ್ಮಿ : ಅದೇ ಡಾಕ್ಟ್ರೇ ಮಗೂಗೇ ಚುಚ್ಚುಮದ್ದು ಕೊಡಿಸಬೇಕು ಅಂತ ಬಂದೆ.

ಡಾಕ್ಟರ್ : ಮಗೂಗೆ ಎಷ್ಟು ವಯಸ್ಸು?

ಲಕ್ಷ್ಮಿ : ಒಂದೂವರೆ ವರ್ಷ.

ಡಾಕ್ಟರ್ : ಅಷ್ಟು ದಿನಗಳಿಂದಲೂ ಯಾಕಮ್ಮಾ ಬರ್ಲಿಲ್ಲ.

ಲಕ್ಷ್ಮಿ : ಏನೋ ನಮಗೆ ಇವೆಲ್ಲಾ ಗೊತ್ತಿರ್ಲಿಲ್ಲ ಸಾರ್.

ಡಾಕ್ಟರ್ : ಮತ್ತೆ ಈಗ ಹ್ಯಾಗೆ ಗೊತ್ತಾಯ್ತು?

ಲಕ್ಷ್ಮಿ : ನಮ್ಮ ಪಕ್ಕದ ಮನೆ ಮಗುವಿಗೆ ಆಗಾಗ ಬರೋ ಗಂಟಲ ನೋವು ನೋಡಿ ಸಾಕಾಯ್ತು. ಅದು ಸತ್ತೇ ಹೋಯ್ತು ಡಾಕ್ಟ್ರೇ. ಆಗ ಡಾಕ್ಟು

ಡಿ.ಪಿ.ಟಿ.ಚುಚ್ಚುಮದ್ದು ಕೊಡ್ಸಿದ್ರೆ ಹೀಗಾಗ್ತಿರಲಿಲ್ಲ ಅಂತ ಹೇಳಿದ್ರು. ಅದಕ್ಕೆ ನಾವು ನಮ್ಮ ಮಗೂಗೆ ಮುಂಜಾಗರೂಕತೆಯಾಗಿ ಚುಚ್ಚುಮದ್ದಾಕ್ಸೋದು ಉತ್ತಮ ಅಂತ ಬಂದೆ, ಡಾಕ್ಟ್ರೇ....

ಡಾಕ್ಟರ್ : ಕೇಳಿದ್ರಾ ಮಂಜಮ್ಮಾ?

ಮಂಜಮ್ಮ : ನಮಗೂ ಹಿಂದೆ ಗೊತ್ತಿದ್ರೆ ಬಿಡ್ತಿದ್ವಾ ಡಾಕ್ಟ್ರೇ... ಆದ್ರೆ ಮಿಂಚಿಹೋಯಿತು.

ಡಾಕ್ಟರ್ : ಚಿಂತಿಸಬೇಡಿ... ಪ್ರಯತ್ನ ಮಾಡೋಣ. ನೋಡಿದ್ರಾ ಲಕ್ಷ್ಮಿಯವರೇ, ನೀವು ಹೇಳಿದ್ರಿ ನಿಮ್ಮ ಮನೆ ಪಕ್ಕದ ಮಗು "ಗಂಟಲು ಮಾರಿ" ಯಿಂದ ಸಾಯಿತು ಅಂತ. ಆದ್ರೆ ಈ ಮಗು ಕಾಲು ನೋಡಿ ಇದಕ್ಕೆ ಪೋಲಿಯೋ ತಗಲಿದೆ. ಇವರು ಆಗಲೇ ಮಗುವಿಗೆ ಪೋಲಿಯೋ ಕೊಡ್ಸಿದ್ದಿದ್ರೆ ಮಗುವಿಗೆ ಈ ರೀತಿ ರೋಗ ಬರ್ತಿರಲಿಲ್ಲ.

ಲಕ್ಷ್ಮಿ : ಅದಕ್ಕೇ ಡಾಕ್ಟ್ರೇ ನಾವು ಬಂದೋ... ಡಿ.ಪಿ.ಟಿ ಅಂದ್ರಲ್ಲಾ ಹಾಗಂದ್ರೇನು ಡಾಕ್ಟ್ರೇ...?

ಡಾಕ್ಟರ್ : ಗಂಟಲು ಬೇನೆ, ಧನುರ್ವಾಯು, ನಾಯಿಕೆಮ್ಮು ರೋಗಗಳು ಬಾರದಂತೆ ಅದರ ವಿರುದ್ಧ ನೀಡುವ ಚುಚ್ಚುಮದ್ದು. ಇದಕ್ಕೆ ಇಂಗ್ಲೀಷಿನಲ್ಲಿ D.P.T ಅಂತ ಹೇಳ್ತಾರೆ. Deptheria, pertusis, Tetanus ಅಂತ ಹೇಳ್ತಾರೆ. ಇದಕ್ಕೆ ತ್ರಿರೋಗ ನಿರೋಧಕ ಚುಚ್ಚು ಮದ್ದು ಅಂತ ಹೇಳ್ತಾರೆ.

ಲಕ್ಷ್ಮಿ : ಇವುಗಳನ್ನು ಮಕ್ಕಳಿಗೆ ಯಾವಾಗ ಕೊಡಿಸಬೇಕು ಡಾಕ್ಟ್ರೇ...?

ಡಾಕ್ಟರ್ : ಮಕ್ಕಳು ಆರೋಗ್ಯವಾಗಿರಬೇಕಾದ್ರೆ ಮೊದಲೇ ಹೇಳಿದ್ನಲ್ಲಾ ಆ ರೋಗಗಳಿಂದ ದೂರ ಇರಲು ಡಿ.ಪಿ.ಟಿ ಪೋಲಿಯೋ ಡ್ರಾಪ್ಸ್ ಇವನ್ನೆಲ್ಲಾ ಕೊಡಿಸಬೇಕಾಗುತ್ತೆ.

ಲಕ್ಷ್ಮಿ : ಸರಿ ಡಾಕ್ಟ್ರೇ. ತಾವು ಯಾವ ರೀತಿ ಹೇಳ್ತೀರಿ, ಆ ರೀತಿ ಕೊಡಿಸ್ತೀವಿ.

ಡಾಕ್ಟರ್ : ನೋಡಿ ಈ ರೋಗ ಬಂದ ಮೇಲೆ ಔಷಧ ಕೊಟ್ಟು ಚಿಕಿತ್ಸೆ ಮಾಡೋದ್ಕಿಂತ ರೋಗಗಳ ಪ್ರತಿರೋಧಕ ಕ್ರಮ ಒಳ್ಳೆಯದು.

ಲಕ್ಷ್ಮಿ : ಈ ಗಂಟಲು ಬೇನೆ ಅಂದ್ರಲ್ಲಾ ಅದು ಹ್ಯಾಗೆ ಬರುತ್ತೆ?

ಡಾಕ್ಟರ್ : ಇದು ಒಂದು ರೀತಿ ಅಣುವಿನಿಂದ ಬರತಕ್ಕದ್ದು. ಈ ರೋಗದ ಲಕ್ಷಣ ಅಂದ್ರೆ ಪ್ರಾರಂಭದಲ್ಲಿ ಜ್ವರ, ಗಂಟಲು ನೋವು ಉಂಟಾಗುತ್ತೆ. ರೋಗದ ಬಗ್ಗೆ ಗಮನವಹಿಸಿ ಚಿಕಿತ್ಸೆ ಪಡೆಯದಿದ್ದರೆ ಸಾವೂ ಸಂಭವಿಸಬಹುದು.

ಲಕ್ಷ್ಮಿ : ನಾಯಿಕೆಮ್ಮು ಅಂದ್ರಲ್ಲಾ ಅದರ ಬಗ್ಗೆ ಸ್ವಲ್ಪ ತಿಳಿಸಿ ಡಾಕ್ಟ್ರೇ.

ಡಾಕ್ಟರ್ : ಇದು partusis ಎಂಬ ಸೂಕ್ಷ್ಮಾಣುಗಳಿಂದ ಬರುತ್ತೆ. ಯಾವ ವಯಸ್ಸಿನಲ್ಲಾದ್ರೂ ನಾಯಿಕೆಮ್ಮು ಬರಬಹುದು. ಸಾಮಾನ್ಯವಾಗಿ ೬

ತಿಂಗಳಿಂದ ೫ ವರ್ಷಗಳ ಮಕ್ಕಳು ಇದಕ್ಕೆ ಸುಲಭವಾಗಿ ತುತ್ತಾಗ್ತಾರೆ. ಆರಂಭದಲ್ಲಿ ನೆಗಡಿ ಕೆಮ್ಮು ಮೊದಲು ರಾತ್ರಿ ಶುರುವಾಗಿ ನಂತರ ಎಡೆಬಿಡದೆ ಬರುತ್ತದೆ. ಮಗು ಕೆಮ್ಮಿದಾಗ ಕಣ್ಣು ಮುಖ ಎಲ್ಲಾ ಕೆಂಪಾಗಿ, ಕೆಮ್ಮಿನ ಮಧ್ಯೆ ಮಗು ದೀರ್ಘ ಉಸಿರು ಎಳೆದುಕೊಳ್ಳುತ್ತದೆ. ಇದು ಒಮ್ಮೆ ಬಂದರೆ ಇದು ವಾಸಿಯಾಗಲು ಮೂರು ತಿಂಗಳೇ ಬೇಕಾಗುವುದು. ಇದರಿಂದ ಮಗು ಆರೋಗ್ಯ ಕ್ಷೀಣಿಸುತ್ತದೆ. ಬೇರೆ ರೋಗಗಳೂ ಬರುವ ಸಂಭವ ಉಂಟು. ಶ್ವಾಸಕೋಶಕ್ಕೆ ಸಂಬಂಧಿಸಿದ ರೋಗ ಬರುತ್ತದೆ.

ಲಕ್ಷ್ಮಿ : ಧನುರ್ವಾಯು ಅಂದ್ರಲ್ಲಾ ಆ ರೋಗದ ಬಗ್ಗೆ ಸ್ವಲ್ಪ ಹೇಳಿ ಡಾಕ್ಟ್ರೇ.

ಡಾಕ್ಟರ್ : ಇದು ಮಣ್ಣಿನಲ್ಲಿರುವ ಟೆಟನಸ್ ಎಂಬ ಕ್ರಿಮಿಗಳಿಂದ ಬರುತ್ತದೆ. ಗಾಯ ಅಥವಾ ಚರ್ಮದ ಬಿರುಕಿನ ಮೂಲಕ ದೇಹವನ್ನು ಪ್ರವೇಶಿಸಿ ಈ ರೋಗವನ್ನು ತರುತ್ತೆ. ಮಕ್ಕಳ ಹೊಕ್ಕಳ ಬಳ್ಳಿಯನ್ನು ಸ್ವಚ್ಛವಾದ ಸಲಕರಣೆಯಿಂದ ಕತ್ತರಿಸಬೇಕು. ಇಲ್ಲದಿದ್ದರೆ ಈ ಕ್ರಿಮಿಗಳು ದೇಹದ ನರಗಳ ಮೇಲೆ ಪರಿಣಾಮ ಬೀರುತ್ತವೆ. ಮಾಂಸಖಂಡ ಬಿಗಿಯುತ್ತದೆ. ಕೈ ಕಾಲು ಒದರುವುದು. ಈ ರೋಗವನ್ನು ಮೊದಲೇ ಗುರುತಿಸಿ ಚಿಕಿತ್ಸೆ ಕೊಡಿಸದಿದ್ದರೆ ಮಗು ಮರಣ ಹೊಂದುವುದು.

ಲಕ್ಷ್ಮಿ : ಈ ಮಗುವಿಗೆ ಪೋಲಿಯೋ ಅಂತೀರಲ್ಲಾ. ಇದು ಹ್ಯಾಗೆ ಬಂತು ಡಾಕ್ಟ್ರೆ?

ಡಾಕ್ಟರ್ : ಇದು ಪೋಲಿಯೋ ವೈರಸ್‌ನಿಂದ ಬರತಕ್ಕದ್ದು. ಇದರಿಂದ ಪಾರ್ಶ್ವವಾಯು ಉಂಟಾಗುತ್ತದೆ. ಮಗುವಿಗೆ ಜ್ವರ, ಮಾಂಸ ಖಂಡಗಳ ನೋವು, ಕಾಲುಗಳಿಗೇ ವಿಶೇಷವಾಗಿ ಪಾರ್ಶ್ವವಾಯು ಬರುತ್ತದೆ. ಇದು ಮೆದುಳು ಜ್ವರವನ್ನೂ ತಂದು ಪ್ರಾಣಕ್ಕೇ ಅಪಾಯವಾಗುತ್ತದೆ.

ಲಕ್ಷ್ಮಿ : ಈ ರೋಗಕ್ಕೆ ಚುಚ್ಚುಮದ್ದನ್ನು ಮೊದಲೇ ಕೊಡಿಸಬೇಕು ಅಂದ್ರಿ, ಅವುಗಳನ್ನ ಯಾವ ಯಾವಾಗ ಕೊಡಬೇಕು ಡಾಕ್ಟ್ರೇ?

ಡಾಕ್ಟರ್ : ಹೇಳ್ತೀನಿ ಕೇಳಿ. ಮಗುವಿಗೆ ಮೂರು ತಿಂಗಳಿಗೇ ಈ ಚುಚ್ಚು ಮದ್ದುಗಳನ್ನು ಕೊಡಲು ಪ್ರಾರಂಭ ಮಾಡಿ ಒಂದು ಒಂದೂವರೆ ತಿಂಗಳ ಅಂತರದಲ್ಲಿ ೩ ಸಾರಿ ಈ ತ್ರಿರೋಗ ನಿರೋಧಕ ಚುಚ್ಚುಮದ್ದನ್ನು ಕೊಡಿಸಬೇಕು. ಪೋಲಿಯೋ ತೊಟ್ಟುಗಳನ್ನು ಬಾಯಿಯ ಮೂಲಕ ಕೊಡಿಸಬೇಕು. ಇದಾದ ಮೇಲೆ ಒಂದು ಒಂದೂವರೆ ವರ್ಷದ ಮಗುವಿಗೆ ಬೂಸ್ಟರ್ ಡೋಸ್ ಕೊಡಿಸಬೇಕು. ಧನುರ್ವಾಯು ಹಾಗೂ ಗಂಟಲು ಬೇನೆ ವಿರುದ್ಧ ಡಿ.ಟಿ ಚುಚ್ಚುಮದ್ದನ್ನು ಕೊಡಿಸಬೇಕು. ಶಾಲೆಗೆ ಹೋಗುವಾಗ ೫-೬ ವರ್ಷಗಳಲ್ಲೂ ಡಿ.ಟಿ.ಕೊಡಿಸಬೇಕು.

ಲಕ್ಷ್ಮಿ : ಮಗುವಿಗೆ ಈ ಚುಚ್ಚು ಮದ್ದು ಕೊಡಿಸುವಾಗ ಮಗು ಆರೋಗ್ಯವಾಗಿರಬೇಕೇ?

ಡಾಕ್ಟರ್ : ಚುಚ್ಚುಮದ್ದು ಕೊಡಿಸುವ ಮಗುವಿಗೆ ಭೇದಿ ಆಗ್ತಿರಬಾರದು. ಪೋಲಿಯೋ ಹಾಕುವಾಗ ಪೋಲಿಯೋ ಕೊಡುವ ಮುಂಚೆ, ಕುಡಿಸಿದ ಮೇಲೆ ೨ ಘಂಟೆ ಕಾಲ ತಾಯಿಯ ಎದೆಹಾಲು ಕುಡಿಸಬಾರದು. ಏಕೆ ಅಂದ್ರೆ ಹಾಲಿನಲ್ಲಿ ಪ್ರತಿರೋಧಕ ತಡೆಗಟ್ಟುವ ಕೆಲವು Antibodies ಇರುವುದರಿಂದ ಪ್ರತಿರೋಧಕ ಸರಿಯಾಗುವುದಿಲ್ಲ.

ಲಕ್ಷ್ಮಿ : ಡಾಕ್ಟ್ರೇ... ನನಗೆ ಇವುಗಳ ಬಗ್ಗೆ ಏನೇನೂ ಗೊತ್ತಿರಲಿಲ್ಲ. ಎಲ್ಲವನ್ನೂ ಚನ್ನಾಗಿ ತಿಳಿಸಿಕೊಟ್ರಿ. ಈಗ ನಮ್ಮ ಮಗುವಿಗೆ ಈ ಚುಚ್ಚು ಮದ್ದುಗಳನ್ನು ಕೊಡಿಸ್ಬೇಕು ಅಂತ್ಲೇ ಬಂದಿದ್ದೀನಿ.

ಡಾಕ್ಟರ್ : ನಾವಿರೋದೇ ಅದ್ಕಲ್ವೇನಮ್ಮಾ...

ಲಕ್ಷ್ಮಿ : ಇವ್ನೆಲ್ಲಾ ಕೊಡಿಸಿದ್ರೆ ಮಗುವಿಗೆ ಮುಂದೆ ರೋಗಗಳೊಂದೂ ಬರೋದಿಲ್ವಾ ಡಾಕ್ಟ್ರೇ...

ಡಾಕ್ಟರ್ : ಬರಬಾರದು ಅಂತ್ಲೇ ಅಲ್ವಮ್ಮಾ ನಾವು ಇವನ್ನೆಲ್ಲಾ ಮುಂಜಾಗ್ರತೆಯಾಗಿ ಕೊಡ್ತಿರೋದು.

ಲಕ್ಷ್ಮಿ : ಕೊಡೀ ಡಾಕ್ಟ್ರೇ...

ಮಂಜಮ್ಮ : ನನ್ನ ಮಗುವಿಗೆ ಹೇಗಾದ್ರೂ ಮಾಡಿ ಕಾಲು ಬರುವ ಹಾಗೆ ಮಾಡಿ ಡಾಕ್ಟ್ರೇ.

ಡಾಕ್ಟರ್ : ಮೊದ್ಲೇ ಇಷ್ಟೇಲ್ಲಾ ಮುತುರ್ವರ್ಜಿ ವಹಿಸಿದ್ದರೆ ಇಷ್ಟೊಂದು ಅನಾಹುತಕ್ಕೆ ಕಾರಣವೇ ಇರ್ತಿರಲಿಲ್ಲ.

ಮಂಜಮ್ಮ : ಏನ್ಮಾಡದು ಡಾಕ್ಟ್ರೇ... ಗೊತ್ತಿರಲಿಲ್ಲ ಆಗ...

ಡಾಕ್ಟರ್ : ಇನ್ನು ಮುಂದಿನ ಮಕ್ಕಳಿಗಾದ್ರೂ ಇವ್ನೆಲ್ಲಾ ಮೊದಲು ಕೊಡಿಸಮ್ಮ.

ಮಂಜಮ್ಮ : ಕೊಡಿಸ್ತೀನಿ ಡಾಕ್ಟ್ರೇ... ಅಗತ್ಯವಾಗಿ ಕೊಡಿಸ್ತೀನಿ. ಆದ್ರೆ ನನ್ನ ಈ ಮಗನ ಜೀವನವನ್ನು ಆಶಾದಾಯಕವಾಗಿ ಮಾಡಿ.

ಡಾಕ್ಟರ್ : ಆಗ್ಲಿ ಕರ್ಕೊಂಡು ಬನ್ನಿ... ಆದಷ್ಟು ಪ್ರಯತ್ನ ಮಾಡ್ತೀನಿ.

ಮಂಜಮ್ಮ : ಆಗ್ಲಿ ಡಾಕ್ಟ್ರೇ...

* * *

## ದೃಶ್ಯ-೬

**ಪಾತ್ರ ವರ್ಗ:**

೧. ಸದಾನಂದ, ೨. ಮೀನಾ, ೩. ಸೀತ

ಸದಾನಂದ : ಮೀನಾ... ಯಾಕೆ ಹೀಗೆ ತಲೆ ಮೇಲೆ ಕೈ ಹೊತ್ತಿಕೊಂಡು ಕುಳಿತುಕೊಂಡಿದ್ದೀಯಾ?

ಮೀನ : ನನಗೆ ಮಗುವಿನದೇ ಯೋಚನೇ ರೀ... ಏನ್ಮಾಡೋದು. ನಿನ್ನೆಯಿಂದ ಒಂದು ಚೂರೂ ನಿದ್ದೆ ಇಲ್ಲ. ಜ್ವರ ಸ್ವಲ್ಪ ಹೆಚ್ಚಿದೆ.

ಸದಾನಂದ : ಇತ್ತೀಚೆಗಂತೂ ಈ ಮಿದುಳು ಜ್ವರ ಬೇರೆ ಎಲ್ಲಾ ಕಡೆ ಹರಡಿದೆಯಂತೆ.

ಮೀನ : ಸದ್ಯ ಅದನ್ಯಾಕೆ ನಮ್ಮ ಮಗುವಿಗೆ ತರ್ತೀರಿ?

ಸದಾನಂದ : ಏನ್ಮಾಡ್ತೋದು ರೋಗ ಬರೋದು ಯಾವುದು ಅಂತ ತಿಳಿಯೋವರ್ಗೆ. ಹಾಗೇ...ಮಲೇರಿಯಕ್ಕೂ ಜ್ವರ ಬರುತ್ತೆ, ವಿಷಮ ಶೀತ ಜ್ವರಕ್ಕೂ ಜ್ವರ ಬರುತ್ತೆ, ಡಾಕ್ಟರ್ ಹತ್ತಿರ ಹೋಗಿ ಪರೀಕ್ಷೆ ಮಾಡಿಸಿದ್ದೀಯಾ ಹ್ಯಾಗೆ?

ಮೀನ : ಇಲ್ಲ.

ಸದಾನಂದ : ಅದೇ ನೀನು ತಪ್ಪು ಮಾಡಿದ್ದು.

ಮೀನ : ನಿನ್ನೆ ಸ್ವಲ್ಪ ಇತ್ತು. ಈಹೊತ್ತು ಸ್ವಲ್ಪ ಹೆಚ್ಚಾಗಿದೆ. ಆಸ್ಪತ್ರೆಗೆ ಹೋಗಬೇಕು ಅನ್ನುವುದರೊಳಗೆ ಹೀಗಾಯ್ತು ಏನ್ಮಾಡದು?

ಸದಾನಂದ : ಈಗ್ಲೂ ತೊಂದರೆ ಏನಿಲ್ಲ ಡಾಕ್ಟರ್‌ಗೆ ತೋರಿಸಿ ಔಷಧ ಕೊಡಿಸಿದ್ರೆ ಎಲ್ಲಾ ಸರಿಹೋಗುತ್ತೆ.

ಮೀನ : ಈಗ್ಲೇ ಹೋಗೋಣ.

ಸದಾನಂದ : ನಡೆ... ಮಗು ಕರ್‍ಕೋ.

ಮೀನ : ಸರಿ.

ಸದಾನಂದ : ಏನೋ ಮಕ್ಕಳನ್ನು ಒಂದು ವರ್ಷದವರೆಗೆ ಸರಿಯಾಗಿ ನೋಡ್ಕೊಳ್ಬೇಕು. ಇಲ್ಲದೇ ಹೋದ್ರೆ ಸಾಯುವ ಸಂದರ್ಭವೂ ಉಂಟು.

ಮೀನ : ಇದೇನು ನೀವು ಹೇಳ್ತಿರೋದು ಬಿಡ್ತು ಅನ್ನಿ.

ಸದಾನಂದ : ಹೌದು ಕಣೆ ನಾವು ಎಲ್ಲಾ ವಿಧದಲ್ಲೂ ಎಚ್ಚರಿಕೆವಹಿಸದೆ ಹೋದ್ರೆ ಶಿಶುಗಳು ಮರಣ ಹೊಂದುವುದಿಲ್ಲ ಅಂತ ಹೇಳ್ತೀಯಾ?

ಮೀನ : ನೀವು ಈ ಸಂದರ್ಭವಲ್ಲಿ ಅದೇನು ಅಂತ ಮಾತಾಡ್ತೀರಿ ನಡೀರಿ. ಈಗ ಯಾವ ಡಾಕ್ಟರ್‌ಗೆ ತೋರಿಸ್ತೀರಿ?

ಸದಾನಂದ : ಮಕ್ಕಳ ತಜ್ಞರಾದ ಸೀತಾ ಅವರ ಹತ್ತಿರ ಹೋಗೋಣ... ಚನ್ನಾಗಿ ನೋಡ್ತಾರೆ.

ಮೀನ : ಸರಿ ನಡೆಯಿರಿ.

* * *

ಸದಾನಂದ : ನಮಸ್ಕಾರ ಡಾಕ್ಟ್ರೇ.

ಸೀತ : ಏನು ಸದಾನಂದ ಅವ್ರೇ... ಇಲ್ಲಿ.

ಸದಾನಂದ : ನಮ್ಮ ಮಗನಿಗೆ ಸ್ವಲ್ಪ ಜ್ವರ. ಅದ್ಕೇ ತೋರಿಸೋಣ ಅಂತ ಬಂದ್ವು ಡಾಕ್ಟ್ರೇ...

ಸೀತ : ಬನ್ನಿ... ಬನ್ನಿ... ಬನ್ನಿ ಕುಳಿತ್ಕೊಳ್ಳಿ.

ಸದಾನಂದ : ಈಕೆ ನನ್ನ ಹೆಂಡತಿ. ಇದು ಮಗು.

ಸೀತ : ಕೂತ್ಕೊಳ್ಳಮ್ಮ... ಮಗು ಕರ್ಕೊಂಡು ಬನ್ನಿ, ಯಾಕೆ ಅಳ್ತೀರಾ, ಏನೂ ಯೋಚನೆ ಮಾಡಬೇಡಿ, ಸುಮ್ಮನಿರಿ. ಜ್ವರಕ್ಕೆಲ್ಲಾ ಹೆದರಿದ್ರೆ ಹ್ಯಾಗೆ? ಹಿಂದೆ ನಮ್ಮ ದೇಶದಲ್ಲಿ ಶಿಶುಮರಣ ಸಂಖ್ಯೆ ತುಂಬಾ ಹೆಚ್ಚಾಗಿತ್ತು. ೧೯೬೦ರಲ್ಲಿ ಸಾವಿರಕ್ಕೆ ೧೨೯ ಇತ್ತು, ಈಗ ಅದು ೮೯ಕ್ಕೆ ಇಳಿದಿದೆ. ಅಂದಮೇಲೆ ಕೇಳಬೇಕೆ? ಎಷ್ಟೊಂದು ಸೌಲಭ್ಯ ಒದಗಿಸಿದ್ದೀವಿ. ಟಿ.ಬಿ.ಗೆ ಗಂಟಲು ಬೇನೆ, ನಾಯಿ ಕೆಮ್ಮು ಧನುರ್ವಾಯು, ಪೋಲಿಯೋ, ವಿಷಮಶೀತಜ್ವರು, ದಡಾರ ಮುಂತಾದವುಗಳಿಗೆ ಮುಂಜಾಗ್ರತಾ ಕಾರ್ಯಕ್ರಮವಾಗಿ ಚುಚ್ಚುಮದ್ದುಗಳನ್ನು ಒದಗಿಸಿದ್ದೀವಿ. ಇದರಿಂದ ಎಷ್ಟೋ ಮಕ್ಕಳು ಒಂದು ವರ್ಷದಲ್ಲಿ ಸಾಯುವುದು ತಪ್ಪಿದೆ. ಒಂದು ವರ್ಷ ಮಕ್ಕಳನ್ನು ಚೆನ್ನಾಗಿ ನೋಡ್ಕೊಂಡು, ಆರೋಗ್ಯವಾಗಿರುವಂತೆ ಮಾಡ್ಬಿಟ್ರೆ ಯಾವ ಯೋಚನೇನೂ ಇಲ್ಲ.

ಮೀನ : ಸಾಮಾನ್ಯವಾಗಿ ಐದು ವರ್ಷ ಅಂತ ಹೇಳ್ತಾರಲ್ಲಾ ಡಾಕ್ಟ್ರೇ ಕೆಲವರು.

ಸೀತ : ಒಂದು ವರ್ಷದೊಳಗಿನ ಹೆಚ್ಚು ಮಕ್ಕಳು ಸಾವಿಗೆ ತುತ್ತಾಗ್ತಿದ್ವು. ಇದಕ್ಕೆ Infant Mortailty 'ಶಿಶು ಮರಣ' ಅಂತ ಹೇಳ್ತಾರೆ. ಒಂದು ವರ್ಷದ ಅವಧಿಯಲ್ಲಿ ಒಂದು ಸಾವಿರ ಶಿಶುಗಳಲ್ಲಿ ಅದೇ ವರ್ಷ ಸತ್ತ ಶಿಶುಗಳ ಸಂಖ್ಯೆಯನ್ನು ಶಿಶುಗಳ ಮರಣ ಪ್ರಮಾಣ ಎಂದು ಹೇಳ್ತಾರಮ್ಮಾ.

ಮೀನ : ಈ ಶಿಶು ಮರಣಕ್ಕೆ ಕಾರಣ ಏನು ಡಾಕ್ಟ್ರೇ?

ಸೀತ : ನೋಡಿ ನಗರಕ್ಕಿಂತ ಹಳ್ಳಿಗಳಲ್ಲಿ ಈ ಪ್ರಮಾಣ ಹೆಚ್ಚಾಗಿತ್ತು. ೧೯೭೦ರಲ್ಲಿ ನಗರಗಳಲ್ಲಿ ೬೦ ಭಾಗ ಇತ್ತು. ಹಳ್ಳಿಗಳಲ್ಲಿ ಶೇಕಡಾ ೧೩೬ ಇತ್ತು. ಇದಕ್ಕೆಲ್ಲಾ ಕಾರಣ ಬಾಲ್ಯ ವಿವಾಹ. ಪದೇ ಪದೇ ಗರ್ಭಿಣಿ ಆಗುವುದರಿಂದ, ಮಕ್ಕಳ ಮಧ್ಯೆ ಅಂತರ ಇಲ್ಲದೇ ಇರೋದು ಒಂದು ಕಾರಣ. ಕನಿಷ್ಟ ಪಕ್ಷ ೩-೪ ವರ್ಷಗಳಾದ್ರೂ ಅಂತರ ಇದ್ದರೆ ಆರೋಗ್ಯವಂತ ಮಗುವನ್ನು ಹಡೆಯಬಹುದು. ಗರ್ಭಿಣಿ ಆದ ದಿನದಿಂದ ವೈದ್ಯರಲ್ಲಿ ತೋರಿಸಿ ಸೂಕ್ತ ಸಲಹೆ ಸೂಚನೆ ತೆಗೆದುಕೊಳ್ಳದೇ ಇರೋದು ಒಂದು ಕಾರಣ. ಹಳ್ಳಿಗಳಲ್ಲಿ ಮನೆಯಲ್ಲೇ ಹೆರಿಗೆ ಮಾಡಿಸೋದು, ಹೆರಿಗೆ ಆದ ಮೇಲೆ ಬಾಣಂತಿ ಕಡೆ ಗಮನವಹಿಸದೆ ಇರುವುದು, ಆಕೆಯ ಆಹಾರದ ಕಟ್ಟುನಿಟ್ಟು, ಕತ್ತಲು ಕೋಣೆಯಲ್ಲಿಡುವುದು. ಇದು ಮಗುವಿನ

ಆರೋಗ್ಯದ ಮೇಲೆ ಪರಿಣಾಮ ಬೀರುತ್ತೆ.

ಮೀನ : ಹಳ್ಳಿಗಳಲ್ಲಿ ಈಗ್ಲೂ ಹಾಗೇ ಮಾಡ್ತಾರೆ ಡಾಕ್ಟ್ರೇ.

ಸೀತ : ಅದಕ್ಕೇ ಹೇಳಿದ್ದು. ಐದನೇ ಮಗುವಿನ ನಂತರ ಹುಟ್ಟಿದ ಮಕ್ಕಳು ಉಳಿಯುವ ಸಂಭವ ಕಡಿಮೆ.

ಸದಾನಂದ : ಅದಕ್ಕೇ ತಾನೇ ಕುಟುಂಬ ಯೋಜನೆ ತಂದಿರೋದು ಡಾಕ್ಟ್ರೇ...

ಸೀತ : ಅದು ಖಂಡಿತ ಒಳ್ಳೇದು ಸದಾನಂದ್.

ಸದಾನಂದ : ಆರ್ಥಿಕ ಕಾರಣದಿಂದ ಎಷ್ಟೋ ಜನ ಪೌಷ್ಟಿಕ ಆಹಾರ ಕೊಡೋಲ್ಲ, ತಾಯಿಯ ಎದೆ ಹಾಲು ಇಲ್ಲದಾಗ ಅದರಿಂದಲೂ ಮರಣ ಉಂಟಾಗುತ್ತೆ ಅಂತ ಕಾಣುತ್ತೆ.

ಸೀತ : ಹೌದು, ತಾಯಿಗೆ ಮಕ್ಕಳ ಸ್ವಚ್ಛತೆ, ಅವರ ಆರೋಗ್ಯ, ಮಗುವನ್ನು ಹ್ಯಾಗೆ ಕಾಪಾಡಬೇಕು ಎಂಬುದರ ಬಗ್ಗೆ ಶಿಕ್ಷಣ ಅವಶ್ಯಕ. ಎಷ್ಟೋ ಜನ ಹಳ್ಳಿಗಳಲ್ಲಿ ತೊಟ್ಟಿಲನ್ನು ಗಟ್ಟಿಯಾದ ಬಟ್ಟೆಯಲ್ಲಿ ಸುತ್ತಿ, ಗಾಳಿ ಬರದಂತೆ ಮಾಡಿ ಮಕ್ಕಳು ಸಾಯಲು ಕಾರಣರಾಗುತ್ತಾರೆ. ಕೆಲವು ವೇಳೆ ಉಡುಪು ಸಹ ಮರಣಕ್ಕೆ ಕಾರಣವಾಗುತ್ತದೆ. ಹೀಗೆ ಒಂದೇ ಎರಡೇ ಹೇಳ್ತಾ ಹೋದ್ರೆ ಬೇಕಾದಷ್ಟಿರ್ತವೆ ಶಿಶು ಮರಣಕ್ಕೆ.

ಮೀನ : ಶಿಶುಮರಣಕ್ಕೆ ಕಾರಣವನ್ನೇನೋ ಹೇಳ್ಬಿಟ್ರಿ. ಆದ್ರೆ ಇದನ್ನು ತಡೆಗಟ್ಟಲಾಗೋದಿಲ್ವೆ ಡಾಕ್ಟ್ರೇ?

ಸೀತ : ತಡೆಗಟ್ಟಬಹುದು. ಹಾಗೇ ಮಾಡಿದ್ದರಿಂದ್ಲೇ ಅಲ್ವೇ ಈಗ ಶಿಶುಮರಣ ಸಂಖ್ಯೆ ತುಂಬಾ ಇಳಿಮುಖವಾಗಿರೋದು. ಜನನ-ಮರಣ ದಾಖಲೆ ಮಾಡಿಸುವುದು ಉತ್ತಮ. ಇಲ್ಲದೇ ಹೋದ್ರೆ ಯಾವ ಖಾಯಿಲೆಯಿಂದ ಎಷ್ಟು ಮಕ್ಕಳು ಹ್ಯಾಗೆ ಸತ್ತವು ಎಂಬುದನ್ನು ತಿಳಿದು ಮುಂದೆ ಏನು ಮಾಡಬೇಕು ಎಂಬುದಕ್ಕೆ ಸಹಾಯವಾಗ್ತದೆ. ಸೂಲಗಿತ್ತಿಯರಿಗೆ ಹೆರಿಗೆ ಮಾಡಿಸಲು ಸೂಕ್ತ ಶಿಕ್ಷಣವನ್ನು ಕೊಡಬೇಕು. ಬಾಲ್ಯ ವಿವಾಹ ಮಾಡಬಾರದು. ಸರ್ಕಾರಿ ಸಿಬ್ಬಂದಿ ಸೇವೆಗಳನ್ನು ಉಪಯೋಗಿಸಿಕೊಳ್ಳಬೇಕು. ಆದಷ್ಟು ಹೆರಿಗೆಗಳನ್ನು ಆಸ್ಪತ್ರೆಯಲ್ಲಿ ಮಾಡಿಸುವುದು ಉತ್ತಮ. ಗರ್ಭಿಣಿ, ಬಾಣಂತಿಯರು ಆಸ್ಪತ್ರೆಯ ಸೇವೆಯನ್ನು ಪಡೆದುಕೊಳ್ಳುವುದು ಒಳಿತು. ಚುಚ್ಚುಮದ್ದು, ಕಬ್ಬಿಣಾಂಶ ಮಾತ್ರೆಗಳನ್ನು ರಕ್ತಹೀನ ಮಕ್ಕಳು, ಬಾಣಂತಿಯರು ತೆಗೆದುಕೊಳ್ಳಬೇಕು, ಕುಟುಂಬ ಯೋಜನೆ ಅನುಸರಿಸಬೇಕು. ಹೀಗಾದ್ರೆ ಶಿಶುಗಳ ಮರಣವಾಗುವುದನ್ನು ಸುಲಭವಾಗಿ ತಪ್ಪಿಸಬಹುದು.

ಸದಾನಂದ : ಹೌದು ಡಾಕ್ಟ್ರೇ...

ಸೀತ : ಬರೀ ಭಾಷಣಾನೇ ಬಿಗೀತಾ ಕೂತುಬಿಟ್ಟೆ, ಮಗುವಿಗೆ ಔಷಧ ಕೊಟ್ಟಿದ್ದೀನಿ ತಾಳಿ. ರಕ್ತದ ಪರೀಕ್ಷೆ ಆಯ್ತು. ಏನಿಲ್ಲ, ಇದು ಮಲೇರಿಯವೂ ಅಲ್ಲ, ಮಿದುಳು ಜ್ವರಾನೂ ಅಲ್ಲ, ಸಾಮಾನ್ಯಜ್ವರ. ಇದಕ್ಕೆ ಯೋಚಿಸಬೇಕಾಗಿಲ್ಲ. ಈಗ ಔಷಧ ಕೊಡ್ತೀನಿ ತೆಗೆದುಕೊಳ್ಳಮ್ಮ. ಒಂದು ಇಂಜಕ್ಷನ್ ಸಹ ಕೊಡ್ತೀನಿ. ಮೂರು ಹೊತ್ತು ಈ ಔಷಧ ಮಾತ್ರೆ ಕೊಡಿ, ಹಾಲು ಕೊಡಿ, ಬಿಸಿ ಮಾಡಿ, ಏನೂ ಯೋಚನೆ ಮಾಡಬೇಕಾಗಿಲ್ಲ.

ಮೀನ : ನಾನು ತುಂಬಾ ಗಾಬರಿ ಆಗಿದ್ದೆ. ಇದೇನು ಈಗ ಮಿದುಳು ಜ್ವರ ಬೇರೆ ಬಂದುಬಿಟ್ಟಿದ್ಯಂತೆ, ಅದು ಬಂದ್ರೆ ಮಕ್ಕಳು ಬದುಕಲ್ವಂತೆ. ಅದ್ಕೇ ಬೇಗ ಓಡಿ ಬಂದೆ.

ಸೀತ : ಒಳ್ಳೇದೇ ಮಾಡಿದ್ರಿ. ಯಾವಾಗಲೂ ಮುಂಜಾಗ್ರತೆಯಾಗಿರೋದು ಒಳ್ಳೇದು.

ಮೀನ : ಅಂತೂ ಮಕ್ಕಳ ಮರಣಕ್ಕೆ ಕಾರಣ ಏನು ಎಂಬುದನ್ನು ಚೆನ್ನಾಗಿ ತಿಳಿಸಿದ್ರಿ ಡಾಕ್ಟ್ರೇ.

ಸೀತ : ಯಾವಾಗ ನನ್ನಿಂದ ಏನು ಬೇಕಾದ್ರೂ ಸಹಾಯ ಕೇಳಿ. ನನ್ನ ಕೈಲಾದ ಸೇವೆ ಮಾಡಲಿಕ್ಕೆ ಸಿದ್ಧ.

ಸದಾನಂದ : ನಾವು ಬರ್ತೀವಿ ಡಾಕ್ಟ್ರೇ...

ಮೀನ : ಡಾಕ್ಟ್ರೇ ಮುಂದಿನ ವಾರಕ್ಕೆ ನಮ್ಮ ಮಗು ಹುಟ್ಟಿ ಒಂದು ವರ್ಷವಾಗುತ್ತೆ.

ಸೀತ : ಒಳ್ಳೇದು, ಬರ್ತ್‌ಡೇ ಮಾಡಿ, ನಾನೂ ಬರ್ತೀನಿ.

ಮೀನ : ಅಗತ್ಯವಾಗಿ, ಬರ್ಲೇ ಬೇಕು ಡಾಕ್ಟ್ರೇ...

ಸದಾನಂದ : ಮಗು ಆರೋಗ್ಯವಾದ್ರೆ ಸಾಕು ಡಾಕ್ಟ್ರೇ... ನಿಮ್ಮನ್ನ ನಾನೇ ಬಂದು ಕರೆದುಕೊಂಡೋಗ್ತೀನಿ.

ಸೀತ : ನೀವು ಹೇಳಿದ್ರೆ ಸಾಕು, ನಾನೇ ಬರ್ತೀನಿ.

ಮೀನ : ಖಂಡಿತ ಹೇಳ್ತೀನಿ ಡಾಕ್ಟ್ರೇ... ತಾವು ಬರ್ಲೇಬೇಕು... ಬರ್ತಿವಿ ಡಾಕ್ಟ್ರೇ...

ಸೀತ : ಬನ್ನಿ...

ಮೀನ : ನಮಸ್ಕಾರ ಡಾಕ್ಟ್ರೇ...

* * *

## ದೃಶ್ಯ-೨

**ಪಾತ್ರ ವರ್ಗ:**

೧. ಸುಜಾತ, ೨. ರಮ, ೩. ರಾಜು

ಸುಜಾತ : ಏನ್ಮಾಡ್ತಿದ್ದೀಯಾ ರಮಾ?

ರಮ : ಕೂಸು ಹುಟ್ಟೋದಕ್ಕೂ ಮುಂಚೆ ಕುಲಾವಿ ಹೊಲದ್ರು ಅಂತಾರಲ್ಲಾ ಆ ಕೆಲಸ ಮಾಡ್ತಾ ಇದ್ದೀನಿ. ಬಾರೆ ಸುಜಾತ.

ಸುಜಾತ : ಇನ್ನೆರಡು ದಿನಗಳು ತಡ್ಕೊಂಡಿರ್ಲಾರ್ಯಾ?

ರಮ : ಏನಾಗುತ್ತೋ ಎಂತಾಗುತ್ತೋ?

ಸುಜಾತ : ಈಗಿನ ಕಾಲದಲ್ಲಿ ಅದರಲ್ಲೂ ವಿಜ್ಞಾನ ಮುಂದುವರಿದ ಈ ದಿನಗಳಲ್ಲಿ ಹೆದ್ರಕೇನಾ? ಡಾಕ್ಟರ್ ಇದ್ದಾರೆ. ಸುಖವಾಗಿ ಹೆರಿಗೆ ಮಾಡಿಸ್ತಾರೆ. ಯಾಕೆ ಕೆಟ್ಟದನ್ನು ಆಲೋಚನೆ ಮಾಡ್ತೀಯಾ? ಒಳ್ಳೆಯದನ್ನು ಸ್ವಲ್ಪ ಯೋಚನೆ ಮಾಡು.

ರಮ : ಅದ್ಕಾಗೇ ಈ ಕುಲಾವಿ ಹೆಣೆತಾ ಇದ್ದೀನಿ.

ಸುಜಾತ : ಒಳ್ಳೆಯದಮ್ಮ ಯಾವಾಗ್ಲೂ ಮುಂದಾಗಿ ಎಲ್ಲವನ್ನೂ ಸಿದ್ಧ ಮಾಡಿಕೊಳ್ಳಬೇಕು. ಈಗ ಚಳಿಗಾಲ, ಮಗುವಿಗೆ ಬೆಚ್ಚನೆ ಉಡುಪಿರಬೇಕು. ಹಾಗಾದ್ರೆ ತಾನೇ ಅದು ಬೆಚ್ಚಗಿದ್ದು ಆರಾಮವಾಗಿರಲಿಕ್ಕೆ ಸಾಧ್ಯ. ಈಗ ಇದರ ಜೊತೆಗೆ ಒಂದು ಸ್ವೆಟರ್ ಹಾಕು. ಕಾಲು ಚೀಲಗಳನ್ನೂ ಬೇಕಾದ್ರೆ ಹಾಕು. ಏನೂ ಆಗೋಲ್ಲ ಹಾಕು, ಹುಟ್ಟೋ ಮಗು ಹೆಣ್ಣಾದ್ರೂ ಆಗುತ್ತೆ, ಗಂಡಾದ್ರೂ ಆಗುತ್ತೆ.

ರಮ : ಅದೇನೋ ನಿಜ.

ಸುಜಾತ : ನಿನಗೇನು ಗಂಡು ಬೇಕು ಅಂತ ಆಸೇನೋ ಹೆಣ್ಣು ಬೇಕು ಅಂತ ಆಸೇನೋ?

ರಮ : ಚೊಚ್ಚಲಮಗು ಗಂಡಾದ್ರೆ ಒಳ್ಳೇದು ಅಂತ, ದೇವ್ರು ಏನು ಮಾಡ್ತಾನೋ ಯಾರಿಗೆ ಗೊತ್ತು?

ಸುಜಾತ : ನೋಡು ಮೊದ್ಲು ಹೆಣ್ಣಾದ್ರೇ ಒಳ್ಳೇದು ಅಂತ ನಮ್ಮ ಹಿರಿಯರು ಹೇಳ್ತಾರೆ. ಈಗಿನ ಕಾಲದಲ್ಲಿ ಗಂಡಾದ್ರೇನು? ಹೆಣ್ಣಾದ್ರೇನು ಸಾಕಬೇಡ್ವೇ? ಸಲಹ ಬೇಡ್ವೇ? ವಿದ್ಯಾಭ್ಯಾಸ ಕೊಡಿಸಬೇಡ್ವೇ? ಮದ್ವೆ ಮಾಡಬೇಡ್ವೇ? ಹೆಣ್ಣಾದ್ರೇ ಒಳ್ಳೇದು ಬಿಡು... ನಮ್ಮ ಕಷ್ಟ ಸುಖಕ್ಕೆ ಭಾಗಿ ಆಗ್ತಾಳೆ. ಗಂಡು ಹ್ಯಾಗೇಳ್ತೀಯಾ? ಬರೋ ಸೊಸೆ ಹ್ಯಾಗಿರ್ತಾಳೋ? ಅದ್ಕೆ ಅಲ್ವೇ, ಆಗಿನ ಕಾಲದಲ್ಲಿ ಸಂಚಿ ಹೊನ್ನಮ್ಮ 'ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವಿರಿ ಕಣ್ಣು ಕಾಣದ ಗಾವಿಲರೆ' ಅಂತ ಹೇಳಿರೋದು. ಹ್ಯಾಗೋ ಸುಖ ಮೊಕವಾಗಿ ಹೆರಿಗೆ ಆದ್ರೆ ಸಾಕು.

ರಮ : ಅದೇ ಸುಜಾತ ನಾನು ಕೇಳ್ತಾ ಇರೋದು.

ಸುಜಾತ : ನೋಡೆ ಮೊದಲನೇ ಮಗು ಯಾವುದೇ ಆಗಿರಲಿ ತಂದೆ-ತಾಯಿಯರಿಗೆ ಸಂತೋಷ ಕೊಡುತ್ತೆ. ಅದಕ್ಕೇ ಹುಟ್ಟಿದ ಮಗುವಿಗೆ ಬೇಕಾದ ಎಲ್ಲಾ ವಸ್ತುಗಳನ್ನೂ ಮೊದ್ಲೇ ಅಣಿ ಮಾಡ್ಕೊಳ್ಳೋದು ಉತ್ತಮ. ಒಳ್ಳೆಯ ರಕ್ಷಣೆಯಿಂದ ಅದನ್ನು ಕಾಪಾಡುವುದು ತಾಯಿಯಾದವಳ ಮುಖ್ಯ ಕರ್ತವ್ಯ

ಹಾಗೂ ಮಗುವಿನ ಸುತ್ತಮುತ್ತಣ ವಾತಾವರಣವನ್ನು ಶುಭ್ರ ಹಾಗೂ ಆರೋಗ್ಯವಾಗಿರುವಂತ ನೋಡಿಕೊಳ್ಳಬೇಕು.

ರಮ : ಏನೇನೋ ಮುಂದೋಗ್ತೀಯಾ?

ಸುಜಾತ : ಇವ್ಯೆಲ್ಲಾ ನಾವು ಮಾಡಿದ್ವಮ್ಮ. ನಮ್ಮ ಹಿರಿಯರು ಹಾಗೂ ಅನುಭವಸ್ಥರು ಹೇಳಿದ್ದು. ನಾವು ಅನುಸರಿಸಿದ ಹಾಗೇ ನೀನೂ ಮಾಡಿದ್ರೆ ನಿನ್ಗೂ ಒಳ್ಳೇದಾಗುತ್ತೆ ಅಂತ ಹೇಳ್ದೆ.

ರಮ : ಅಂದ ಹಾಗೆ ನೀನು ಏನೇನು ಮಾಡ್ದೆ?

ಸುಜಾತ : ನಿನ್ಗೆ ಮಗುವಾಗ್ಲಿ ಆಮೇಲೆ ನಾನೇ ಬಂದು ಖುದ್ದು ಏನೇನು ಮಾಡಬೇಕು? ಹ್ಯಾಗೆ ಹ್ಯಾಗೆ ಮಾಡಬೇಕು ಎಂಬುದನ್ನು ಹೇಳ್ಕೊಡ್ತೀನಿ ಓ.ಕೆ.

ರಮ : ಓ.ಕೆ... ಈಗ ಸ್ವಲ್ಪ ಮೈಸೂರು ಪಾಕ್, ವಡೆ ಮಾಡಿದ್ದೀನಿ ತಿಂದು ಹೋಗಬೇಕು.

ಸುಜಾತ : ಬಸುರಿ ಬಯಕೆ ನಾವು ಮಾಡಿ ನಿನ್ನನ್ನು ಕರೀಬೇಕು. ಅಂಥವ್ರಲ್ಲಿ ನೀನೇ ನನಗೆ ಕೊಡ್ತೀಯೋ ಕೊಡು. ನಾಳೇನಾದ್ರೂ ನಾನು ಏನಾದ್ರೂ ಮಾಡಿಕೊಂಡು ಬಂದು ಕೊಡ್ತೀನಿ. ಅಂತೂ ಒಳ್ಳೇ ಪೌಷ್ಟಿಕ ಆಹಾರ ತೆಗೆದುಕೊಳ್ತಿದ್ದೀಯಾ? ಡಾಕ್ಟರ್‌ಗೆ ಆಗಾಗ್ಗೆ ತೋರಿಸ್ತೀಯಾ ತಾನೇ?

ರಮ : ಓ... ತೋರಿಸ್ತಾ ಇದ್ದೀನಿ. ಧನುರ್ವಾಯು ಚುಚ್ಚುಮದ್ದು ತೆಗೆದುಕೊಂಡೆ. ಕಬ್ಬಿಣದ ಮಾತ್ರೆ, ಫೋಲಿಕ್ ಆಸಿಡ್ ಮಾತ್ರೇನೂ ಕೊಟ್ರು. ಜೊತೆಗೆ ಯಾವ ಯಾವ ರೀತಿ ಆಹಾರ ತಗೆದುಕೊಳ್ಳಬೇಕು ಅದನ್ನೂ ಹೇಳಿದ್ದಾರೆ. ಅದರಂತ್ಲೇ ನಡ್ಕೊಳ್ತಿದ್ದೀನಿ.

ಸುಜಾತ : ನೀನು ವಿದ್ಯಾವಂತೆ. ನಿನಗೆ ಹೇಳಿಕೊಡಬೇಕೇ? ನಾನಿನ್ನು ಬರ್ತೀನಮ್ಮ...

ರಮ : ತಿಂಡಿ ತಂದೆ ತಾಳೇ...

* * *

ರಾಜು : ಏನೇ ರಮ ಯಾರು ಬಂದಿದ್ದವರು?

ರಮ : ನಮ್ಮ ಫ್ರೆಂಡು ರೀ ಸುಜಾತ.

ರಾಜು : ಏನು ಬಲು ಜೋರಾಗಿತ್ತು ಮಾತುಕತೆ.

ರಮ : ಮುಂದಿನ ನಿಮ್ಮ ಭಾವಿ... ಕುಮಾರನೋ, ಕುಮಾರಿಗೋ ಯಾವ ರೀತಿ ರಕ್ಷಣೆ ಮಾಡಬೇಕು ಎಂಬುದರ ಬಗ್ಗೆ.

ರಾಜು : ಏನು ಮಾಡಬೇಕಂತೆ?

ರಮ : ಅದೆಲ್ಲಾ ಹೆರಿಗೆ ಆದ್ಮೇಲೆ ಹೇಳ್ತಾಳಂತೆ.

ರಾಜು : ಸರಿ... ಬಿಡು. ಮಗುವಿನ ರಕ್ಷಣೆ ಮಾಡೋದ್ನೂ ಕಲಿತುಕೊಂಡು ಬರ್ಬೇಕೇನೇ?

ರಮ : ಹೌದ್ರೀ... ಕಲಿತುಕೊಂಡು ಬರಬೇಕ್ರೀ... ನಮಗೇನು ಗೊತ್ತಿದೆ ಮಗು ಅಂದ್ರೇನು? ಅದನ್ನು ಹ್ಯಾಗೆ ಸಾಕಬೇಕು, ಸಲಹಬೇಕು ಅನ್ನೋದು ನಮಗಿಂತ ಅನುಭವಸ್ಥರಿಗೆ ಚೆನ್ನಾಗಿ ಗೊತ್ತಿರುತ್ತೆ.

ರಾಜು : ನೋಡೇ ನಾನೇ ಹೇಳ್ತೀನಿ ಕೇಳೇ. ಅದ್ಕೇ ಕಣೇ ಈ ಹಾಸಿಗೆ ಹೊಲಿಸಿರುವುದು. ಮಗುವಿಗೆ ಕೈಕಾಲು ಆಡಿಸುವಂತೆ ಆರಾಮವಾಗಿ ವಿಶ್ರಾಂತಿ ತೆಗೆದುಕೊಳ್ಳಲಿಕ್ಕೆ ಇರುವಂತೆ ಮಾಡಬೇಕು ಮಗೂಗೆ.

ರಮ : ಬಡವರಾದ್ರೇ...

ರಾಜು : ಚಾಪೆಯನ್ನು ಉಪಯೋಗಿಸಬಹುದು. ಅದರ ಮೇಲೆ ಕೆಲವು ಹರಕು ಬಟ್ಟೆಗಳನ್ನು ಹಾಸಬಹುದು. ಅದನ್ನೂ ಹೇಳಿಕೊಡಬೇಕೇನೇ? ಅವರವರ ಬಡ್ಜೆಟ್‌ಗೆ ಅನುಕೂಲವಾಗುವಂತೆ ಮಾಡಬೇಕು.

ರಮ : ಮುಂದುವರಿಸೀ- ಅನುಭವಸ್ಥರೇ...

ರಾಜು : ಮಗು ಸ್ವಲ್ಪ ದೊಡ್ಡದಾಗಿ ಬೆಳೆಯುವ ಮುಂಚೆ ಹೆಚ್ಚಿನ ಹಣದ ಹಾಸಿಗೆ ಬೇಕಿಲ್ಲ. ಮಗುವಿನ ಎರಡು ಕಡೆ ಎತ್ತರ ಮಾಡಿ ಮಧ್ಯೆ ಮಲಗಿಸಿದರೆ ಮಗು ಉರುಳಾಡಿ ಬೀಳುವುದಿಲ್ಲ. ನೋಣ, ಸೊಳ್ಳೆಗಳಿಂದ ರಕ್ಷಿಸಬೇಕು. ಸೊಳ್ಳೆ ಪರದ ಕಟ್ಟಬೇಕು. ಇವೇ ಮಗುವಿಗೆ ರೋಗ ತರುವುದು. ಬಟ್ಟೆಗಳೆಲ್ಲಾ ಶುಭ್ರವಾಗಿರಬೇಕು. ಹಾಸಿಗೆ ಮೇಲೆ ರಬ್ಬರ್ ಶೀಟ್ ಹಾಕಬಹುದು. ಅಂದ್ರೆ ವಾತಾವರಣಕ್ಕೆ ತಕ್ಕಂತೆ ಅದಕ್ಕೆ ಹೊದಿಕೆ ಹೊದಿಸಬೇಕು. ಬೇಸಿಗೆ ಕಾಲದಲ್ಲಿ ತೆಳುವಾದ ಬಟ್ಟೆ ಸಾಕು, ಚಳಿಗಾಲದಲ್ಲಿ ಉಣ್ಣೆ ಬಟ್ಟೆ ಹೊಲಿಸುವುದು ಕ್ಷೇಮಕರ.

ರಮ : ಆಮೇಲೆ...

ರಾಜು : ನೋಡೇ... ಮುಖ್ಯವಾಗಿ ಮಗುವಿಗೆ ಬಟ್ಟೆ ಹಾಕಲು, ತೆಗೆಯಲು ಸುಲಭವಾಗಿರುವಂತೆ ಹೊಲಿಸಬೇಕು. ಇನ್ನೂ ಏನೇನೋ ಇದೆ.

ರಮ : ಏನ್ರೀ... ಯಾಕೇ ಹೊಟ್ಟೆ ನೋವಾಗ್ತಾ ಇದೆ.

ರಾಜು : ಹಾಗಾದ್ರೆ ಈಗ್ಲೇ ಆಸ್ಪತ್ರೆಗೆ ಸೇರಿಸ್ಬೇಕು. ಕರೆದುಕೊಂಡೋಗ್ತೀನಿ.

(ಸಂಗೀತ)

* * *

ಸುಜಾತ : ಏನಮ್ಮಾ ಗಂಡು ಮಗುವಂತೆ, ಪುಣ್ಯವಂತೆ. ಮೊದಮೊದ್ಲೇ ಜಯ ಜಯ ಅಂತ ಗಂಡಾಯ್ತು ಪರ್ವಾಗಿಲ್ಲ. ಜೋಪಾನವಾಗಿ ನೋಡ್ಕೋಮ್ಮಾ. ನಾನಾಗ್ಲೇ ಹೇಳಿದ್ನಲ್ಲಾ ಆಮೇಲೆ ಹೇಳ್ತೀನಿ ಮಗುವನ್ನು ಹ್ಯಾಗೆ ನೋಡ್ಕೋಬೇಕು ಅಂತ.

ರಮ : ಹೇಳೀ... ನಮ್ಮ ಯಜಮಾನ್ರೂ ಹೇಳಿದ್ರು ಸ್ವಲ್ಪ.

ಸುಜಾತ : ಗಂಡಸರು ಅವರೆಲ್ಲಾ, ಬರೇ ಥಿಯರಿಯನ್ನು ಹೇಳ್ತಾರೆ. ನಮ್ಮದು ಪ್ರಾಕ್ಟಿಕಲ್ ಅನುಭವ. ಮಗುವಿಗೆ ಒಂದು ನ್ಯಾಪ್‌ಕಿನ್ ಹಾಕು ಕತ್ತಿಗೆ, ಅದು ತ್ರಿಕೋಣಾಕಾರವಾಗಿರಲಿ, ಚೌಕಾಕಾರವಾಗಿರಲಿ, ಅದನ್ನು ತೊಡಿಸು. ಜೊಲ್ಲು ಸುರಿದರೆ ಅದನ್ನು ತೆಗೆದು ಒಗೆಯೋಕ್ಕೆ ಹಾಕು. ಮಲಮೂತ್ರದ ಬಟ್ಟೆಯನ್ನು ತುಂಬಾ ಕ್ಲೀನಾಗಿ ತೊಳೀಬೇಕು, ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಬೇಕು. ನಿಮ್ಮ ತಾಯಿಗೆ ಹೇಳು ಮಗುವಿನ ಬಟ್ಟೇನಾ ಮನೆಯವರ ಬಟ್ಟೆ ಜೊತೆ ಒಗೆಯಬಾರದು, ನೋಡು ಮಗುವಿಗೆ ಸ್ನಾನ ಮಾಡಿಸುವಾಗ ಸಾಬೂನು ಹಾಕಬೇಡ. ಅದರಲ್ಲಿ ಕಾಸ್ಟಿಕ್ ಅಂಶವಿದೆ. ಸೂಕ್ಷ್ಮವಾದ ಚರ್ಮಕ್ಕೆ ನೋವುಂಟಾಗುತ್ತೆ. ಕಡ್ಲೆಹಿಟ್ಟಿನಲ್ಲೇ ಸ್ನಾನ ಮಾಡಿಸು. ಎಣ್ಣೆ ಸ್ನಾನ ವಾರಕ್ಕೊಮ್ಮೆ ಮಾಡಿಸು. ಎದೆ ಹಾಲು ಮಾತ್ರ ತಪ್ಪಿಸಬೇಡ. ಮಗು ಬೆಳೆಯಲಿಕ್ಕೆ ಅದೇ ಮುಖ್ಯ. ಆಮೇಲೆ ಬಿ.ಸಿ.ಜಿ., ತ್ರಿರೋಗ ನಿರೋಧಕ ಚುಚ್ಚುಮದ್ದುಗಳು ಅವನ್ನೆಲ್ಲಾ ಹಾಕಿಸು, ರೋಗ ಬಾರದಂತೆ ಮಗುವನ್ನು ರಕ್ಷಿಸು.

ರಮ : ಆಗ್ಲಮ್ಮಾ.

ಸುಜಾತ : ಆಮೇಲೆ ಇನ್ನೊಂದು ಜ್ಞಾಪಕ ಇರಲಿ. ಮಕ್ಕಳು ಅಳುವಾಗ ಬರೇ ದೃಷ್ಟಿ ತೆಗೆಯೋದು, ರತನೀರು ಮಾಡೋದು ಮಾಡ್ತಾ ಕೂರಬೇಡ. ಮೂಢನಂಬಿಕೆಗೆಲ್ಲಾ ಬೆಲೆ ಕೊಟ್ಟು ಅದಕ್ಕೆ ಹೊಟ್ಟೇ ಹಸಿಯುತ್ತೋ, ಏನಾದ್ರೂ ಆರೋಗ್ಯದ ತೊಂದ್ರೆಯೋ, ನೋಡಿ ಡಾಕ್ಟರಲ್ಲಿ ತೋರಿಸು.

ರಮ : ಪಕ್ಕದಲ್ಲೇ ನೀನಿದ್ದೀಯಲ್ಲಾ ನನ್ಗೇನಮ್ಮಾ.

ಸುಜಾತ : ನಿನಗೇನು ತೊಂದ್ರೆ ಬಂದ್ರೂ ಹೇಳಿಕಳಿಸು. ನಾನು ನಿನಗೆ ನನ್ನ ಕೈಲಾದ ಸಹಾಯ ಮಾಡ್ತೀನಮ್ಮಾ. ನೀರು ಹೊಯ್ಯುವಾಗಲೂ ಅಷ್ಟೇ ಅದರ ಕತ್ತು ನಿಂತಿರೋಲ್ಲ. ಜೋಪಾನವಾಗಿ ಸ್ನಾನ ಮಾಡಿಸಬೇಕು, ಸ್ನಾನ ಮಾಡುವಾಗ ನನ್ನ ಕರೆ, ನಾನು ಮಾಡಿಸ್ತೀನಿ.

ರಮ : ಆಗ್಩ಿ.

ಸುಜಾತ : ಸ್ವಲ್ಪ ದಿವಸ ಎದೆ ಹಾಲು ಕೊಡು. ಮಗು ಸ್ವಲ್ಪ ದೊಡ್ಡದಾಗಿ ಬೆಳೆದ ಮೇಲೆ ಸ್ವಲ್ಪ ನೀರು ಬೆರೆಸಿ ಹಸುವಿನ ಹಾಲು ಕೊಡಬಹುದು. ನೋಡೇ ಮಗೂಗೆ ಒಂದು ವರ್ಷ ಆಗೋವರೆಗೆ ಅದರ ರಕ್ಷಣೆ ಬಹಳ ಮುಖ್ಯ. ಆಮೇಲೆ ಐದು ವರ್ಷ ನೋಡಿಕೊಂಡ್ರೆ ಮಗುವನ್ನು ರಕ್ಷಿಸಿದಾಗೆ.

ರಮ : ಏನೋ ನೀನು ಹೇಳಿದಾಗೇ ಕೇಳ್ತೀನಮ್ಮಾ ಆಯ್ತಾ...

ಸುಜಾತ : ಮಕ್ಕಳನ್ನು ಹೆರುವುದು ಮುಖ್ಯವಲ್ಲ. ಅವುಗಳ ರಕ್ಷಣೆ ಅತ್ಯವಶ್ಯಕ.

ರಮ : ಹೌದಮ್ಮಾ...

* * *

## ದೃಶ್ಯ-೮

**ಪಾತ್ರ ವರ್ಗ:**

೧. ಪಂಕಜ, ೨. ಸರೋಜ, ೩. ಶಂಕರ

ಪಂಕಜ : ಸರೋಜ ನಿನ್ನ ಮನೆ ನಗ್ತಿದ್ರೆ, ನಿನ್ನ ಮಕ್ಕಳ ನಗು ನಗೋ ಮುಖ ನೋಡಿದ್ರೆ ನನಗೆ ನಿಜವಾಗ್ಲೂ ತುಂಬಾ ಸಂತೋಷವಾಗುತ್ತಮ್ಮ. ನಮ್ಮವ್ರೂ ಇವೆ ಸರಪೇತ್ಲ ನಾರಾಯಣರಿದ್ದಾಗೆ. ಒಂದು ನಗು ಮುಖವಿಲ್ಲ. ಎಷ್ಟು ಹೊತ್ಲೂ ವರ್ರ್‍ೋ ಅಂತ ಅರಚಿಕೊಂಡು, ಕಚ್ಚಾಡ್ಕೊಂಡು ಇರೋದ್ ನೋಡಿದ್ರೆ ಮನೆಯಿಂದ ಆಚೆಗೆ ಹೊರಟ್ಹೋಗ್ಲಾ ಅನ್ನಿಸ್ಬಿಡುತ್ತೆ, ಅದ್ಕೇನಮ್ಮ ಒಂದು ನಿಮಿಷ ನಿಮ್ಮ ಮನೇಲಾದ್ರೂ ಕಾಲಾ ಹಾಕ್ಕೊಂಡು ಇರೋಣ ಅಂತ ಬಂದೆ. ಈ ಹೊತ್ತು ಭಾನುವಾರ ಬೇರೆ. ಸ್ಕೂಲಿದ್ರೆ ಹ್ಯಾಗೋ ಬೆಳಗಿನ ಹೊತ್ತು ಸ್ವಲ್ಪ ಕೆಲಸ ಮಾಡಿ ಆರಾಮ ತೆಗೊಳ್ಳಬಹುದು. ಆದ್ರೆ... ಈ ಹೊತ್ತು ಅವರ ದಂಡು... ನೋಡೋಕ್ಕಾಗೋಲ್ಲಮ್ಮ. ನೋಡೇ ಹಣ ಇದೆ ಆದ್ರೆ ಆರೋಗ್ಯ ಇಲ್ಲವಲ್ಲೇ?

ಸರೋಜ : ನಮಗೆ ನಿಮ್ಮಷ್ಟು ಐಶ್ವರ್ಯ ಇದ್ದಿದ್ರೆ ಅದರ ಕಥೇನೇ ಬೇರೆ ಆಗ್ತಿತ್ತು. ಏನೋ ಇರೋದ್ರಲ್ಲೇ ಸ್ವಲ್ಪ ಮಕ್ಕಳ ಆರೋಗ್ಯ ನೋಡ್ಕೊಳ್ತಿದ್ದೀನಿ. ನೋಡು ಹೋಂ ಸೈನ್ಸ್ ಮಾಡಿದ್ದು ಸ್ವಲ್ಪ ಗೃಹಿಣಿ ಜೀವನದಲ್ಲಿ ಉಪಯೋಗಕ್ಕೆ ಬಂತು. ಇರೋದ್ರಲ್ಲೇ ಪೌಷ್ಟಿಕ ಆಹಾರ ಹ್ಯಾಗೆ ತಯಾರು ಮಾಡೋದು, ಮಕ್ಕಳನ್ನ ಹ್ಯಾಗೆ ಕಾಪಾಡೋದು ಅನ್ನೋದನ್ನ ತಿಳಿಕೊಂಡಿದ್ದರ ಫಲವೇ ಈಗ ನೀನು ನೋಡ್ತಿರೋ ನನ್ನ ಮಕ್ಕಳು.

ಪಂಕಜ : ನಿನ್ನ ಪೌಷ್ಟಿಕ ಆಹಾರದ ಗುಟ್ಟನ್ನೇ ಸ್ವಲ್ಪ ನನಗೂ ತಿಳಿಸಬಾರ್ದೇನೇ? ನೋಡೇ ಎಷ್ಟೇ ಹೇಳಿದ್ರೂ ತರಕಾರಿ ತಿನ್ನೋಲ್ಲ, ಹಣ್ಣು ತಂದಿಡ್ತೀನಿ ತಿನ್ನೊಲ್ಲ. ಇನ್ನು ಬೆಳೆ ಬೆಳೆ ಅಂದ್ರೆ ಏನು ಬೆಳೀತಾವೆ ಹೇಳು.

ಸರೋಜ : ನೋಡೇ ಮಕ್ಕಳು ಬೆಳೆಯಬೇಕಾದ್ರೆ, ಸರಿಯಾಗಿ ಆರೋಗ್ಯವಾಗಿರಬೇಕಾದ್ರೆ ಪೌಷ್ಟಿಕ ಆಹಾರ ಮುಖ್ಯ. ಎಲ್ಲಾ ಅನ್ನಾಂಗಗಳು ಇರಬೇಕು. ಸಮತೋಲನ ಆಹಾರ ತೆಗೆದುಕೊಂಡ್ರೆ ಮಕ್ಕಳು ಚನ್ನಾಗಿ ಬೆಳೀತಾವೆ.

ಪಂಕಜ : ಏನು ಅನ್ನಾಂಗಗಳು ಅವು?

ಸರೋಜ : ಏನು ಅಂದ್ರೆ ಎ,ಬಿ,ಸಿ,ಡಿ,ಇ,ಕೆ ಮುಂತಾದ ಅನ್ನಾಂಗಗಳು ಇರುತ್ತವೆ.

ಪಂಕಜ : 'ಎ' ಅನ್ನಾಂಗ ಸಿಕ್ಕಬೇಕಾದರೆ ಏನೇನು ಆಹಾರ ಪದಾರ್ಥ ತೆಗೆದುಕೊಳ್ಳಬೇಕು?

ಸರೋಜ : ನುಗ್ಗೆ ಸೊಪ್ಪು, ಕ್ಯಾರೇಟ್, ಪರಂಗಿ ಹಣ್ಣು, ಹಾಲು, ಮೊಟ್ಟೆ, ಮೀನು, ಮಾಂಸ, ಹಸಿರು ತರಕಾರಿಗಳನ್ನು ತೆಗೆದುಕೊಳ್ಳಬೇಕು.

ಪಂಕಜ : ಈ ಆಹಾರ ಸತ್ವದ ಕೊರತೆಯಿದ್ದರೆ ಏನಾಗುತ್ತೆ?

ಸರೋಜ : ಮಕ್ಕಳಲ್ಲಿ ರಾತ್ರಿ ಅಂಧತ್ವ, ದೃಷ್ಟಿನಾಶ, ಉಂಟಾಗುತ್ತೆ. ಆದ್ದರಿಂದ ಈ ರೀತಿಯ ಆಹಾರ ಪದಾರ್ಥ ತಿನ್ನೋದು ಉತ್ತಮ. ಶ್ವಾಸಕೋಶ, ಚರ್ಮದ ರೋಗಗಳಿಗೆ ಗುರಿಯಾಗುವರು. ೪೦,೦೦೦ಕ್ಕೂ ಹೆಚ್ಚು ಮಕ್ಕಳು ಈ ಜೀವಸತ್ವದ ಕೊರತೆಯಿಂದ ಅಂಧರಾಗ್ತಿದ್ದಾರೆ.

ಪಂಕಜ : 'ಬಿ' ಜೀವಸತ್ವ ಯಾವ ರೀತಿಯ ಆಹಾರ ಪದಾರ್ಥಗಳನ್ನು ತಿಂದ್ರೆ ಸಿಗುತ್ತೆ? ಅದರ ಕೊರತೆಯಿಂದ ಯಾವ ಖಾಯಿಲೆಗಳು ಬರುತ್ತೆ ಅಂತೀಯೇ?

ಸರೋಜ : ನೋಡೇ 'ಬಿ' ಜೀವಸತ್ವ ಜೀವಕಣದ ರಾಸಾಯಿನಿಕ ಕ್ರಿಯೆಗೆ ಹಾಗೂ ರಕ್ತಕಣಗಳ ಅಗತ್ಯವಾಗಿದೆ. ಹಾಲಿನಲ್ಲಿ ಈ ಜೀವಸತ್ವ ಹೆಚ್ಚಾಗಿ ಇರುತ್ತೆ. ಅದರಲ್ಲೂ ಎದೆ ಹಾಲಿನಲ್ಲಿ, ಹಸುವಿನ ಹಾಲಿನಲ್ಲಿ ಹೆಚ್ಚಾಗಿರುತ್ತದೆ. ಪದೇ ಪದೇ 'ವಾಂತಿ ಭೇದಿ' ಇರುವ ಮಕ್ಕಳಲ್ಲಿ ಈ ಜೀವಸತ್ವದ ಕೊರತೆಯನ್ನು ಕಾಣಬಹುದು. 'ಬಿ' ಅನ್ನಾಂಗದ ಕೊರತೆಯಿಂದ ಬೇರೆ ಬೇರೆ ರೋಗ ಬರುತ್ತೆ. $B_2$ ಕಡಿಮೆ ಆದ್ರೆ ಬಾಯಿಹುಣ್ಣು ಬರುತ್ತೆ. $B_6$, $B_{12}$ ಗಳ ಕೊರತೆಯಿಂದ ರಕ್ತಹೀನತೆ ಉಂಟಾಗುತ್ತದೆ. ಈ ಜೀವಸತ್ವದ ಕೊರೆತೆ ನೀಗಿಸಲು ಹಸಿರು ತರಕಾರಿ, ಮೊಟ್ಟೆ, ಹಾಲು ಸೇವಿಸುವುದು ಉತ್ತಮ.

ಪಂಕಜ : 'ಸಿ' ಜೀವಸತ್ವದ ಬಗ್ಗೆ ಸ್ವಲ್ಪ ಹೇಳೇ.

ಸರೋಜ : 'ಸ್ಕರ್ವಿ' ರೋಗಕ್ಕೆ ತುತ್ತಾಗುತ್ತೆ ಮಗು, ಈ ಜೀವಸತ್ವ ಕಡಿಮೆ ಆದ್ರೆ ಸುಮಾರು ೬-೧೮ ತಿಂಗಳ ಒಳಗಿನ ಮಕ್ಕಳು ಈ ಖಾಯಿಲೆಗೆ ಗುರಿಯಾಗುತ್ತಾರೆ. ಎದೆ ಹಾಲನ್ನು ಸೇವಿಸುವ ಮಕ್ಕಳಲ್ಲಿ ಈ ಜೀವಸತ್ವದ ಕೊರತೆ ಇರುವುದಿಲ್ಲ.

ಪಂಕಜ : 'ಸ್ಕರ್ವಿ' ರೋಗವೆಂದರೇನು?

ಸರೋಜ : ಚರ್ಮ, ವಸಡು, ಎಲುಬು ಇವುಗಳ ಸುತ್ತಮುತ್ತ ರಕ್ತಸ್ರಾವ ಉಂಟಾಗುತ್ತದೆ. ರಕ್ತಹೀನತೆ, ಮಗು ವಿಪರೀತ ಹಠಮಾಡುವುದು, ಸರಿಯಾಗಿ ಆಹಾರವನ್ನು ಸೇವಿಸದೆ ಇರೋದು ಈ ಖಾಯಿಲೆಯ ಲಕ್ಷಣಗಳು. ಮಗು ಕೈಕಾಲು ಆಡಿಸಿದಾಗ ವಿಪರೀತ ನೋವಿನಿಂದ ಅಳುತ್ತೆ.

ಪಂಕಜ : ಒಳ್ಳೇ ಡಾಕ್ಟರ್ ಮಾತಾಡ್ದಾಗೇ ಮಾತಾಡ್ತೀಯಲ್ಲೇ?

ಸರೋಜ : ಅಮೆರಿಕಾ ಮುಂತಾದ ಪರದೇಶಗಳಲ್ಲಿ ನೋಡೇ ಮಗು ಆಗುವುದಕ್ಕೆ ಮುಂಚೇನೇ ಪ್ರತಿಯೊಬ್ಬ ತಂದೆ-ತಾಯಿಯರೂ ಈ ಮಗು, ಮಗುವಿನ ಆರೋಗ್ಯ, ಗರ್ಭಿಣಿಯರ ಆರೈಕೆ, ಬಾಣಂತಿಯರ ಆರೈಕೆ ಎಲ್ಲವನ್ನೂ

ಕಂಪಲ್ಸರಿಯಾಗಿ ಶಿಕ್ಷಣ ತೆಗೆದುಕೊಳ್ಳಬೇಕಂತೆ. ಆವಾಗ ನಮ್ಮ ಹಾಗೂ ಮಕ್ಕಳ ಆರೋಗ್ಯ ಕಾಪಾಡಿಕೊಳ್ಳಲಿಕ್ಕೆ ಉತ್ತಮವಾಗುತ್ತೆ ಅಂತ ಮಾಡ್ತಾರೆ ಕಣೆ. ಆದ್ರೆ ನಾವು ಓದಿ ಇಷ್ಟು ತಿಳಿದುಕೊಂಡು ನಮ್ಮ ಮಕ್ಕಳ ಭವಿಷ್ಯಾನ ರೂಪಿಸ್ದೇ ಹೋದ್ರೆ ಹ್ಯಾಗೆ?

ಪಂಕಜ : ಹೌದಮ್ಮ ನೀನು ಹೇಳೋದು ಸರಿನೇ. ಅಂದ ಹಾಗೆ 'ಸಿ' ಜೀವಸತ್ವವು ಯಾವ ಆಹಾರ ಪದಾರ್ಥಗಳಲ್ಲಿ ಸಿಗುತ್ತೆ.

ಸರೋಜ : ಕಿತ್ತಳೆ, ಲಿಂಬೆ, ನೆಲ್ಲಿಕಾಯಿ ಇಂಥವನ್ನು ಉಪಯೋಗಿಸ್ತಾ ಬಂದ್ರೆ ಈ ರೋಗ ಬರೋಲ್ಲ.

ಪಂಕಜ : 'ಡಿ' ಅನ್ನಾಂಗದ ಕೊರತೆಯಿಂದ ಏನು ಬರುತ್ತೆ?

ಸರೋಜ : 'ಡಿ' ಅನ್ನಾಂಗದ ಕೊರತೆಯಿಂದ 'ರಿಕೆಟ್ಸ್' ಎಂಬ ರೋಗ ಬರುತ್ತೆ. ಅಂದ್ರೆ ಮಗುವಿನ ದೈಹಿಕ ಬೆಳವಣಿಗೆ ಕುಂಠಿತವಾಗುತ್ತದೆ. ಮೂಳೆಗಳ ಬೆಳವಣಿಗೆಗೆ ತಡೆಯುಂಟಾಗುತ್ತದೆ. ಸೂರ್ಯನ ರಶ್ಮಿಯಿಂದ ಈ ಜೀವಸತ್ವದ ಕೊರತೆಯನ್ನು ತುಂಬಬಹುದು.

ಪಂಕಜ : 'ಈ' ಜೀವಸತ್ವದ ಕೊರತೆಯಿಂದ ಏನು ಖಾಯಿಲೆ ಬರುತ್ತೆ?

ಸರೋಜ : ಬಂಜೆತನ ಉಂಟಾಗುತ್ತದೆ.

ಪಂಕಜ : ಅದಕ್ಕೇನು ಆಹಾರ ತೆಗೆದುಕೊಳ್ಳಬೇಕೇ?

ಸರೋಜ : ಮೊಳೆತ ಧಾನ್ಯಗಳನ್ನು ತೆಗೆದುಕೊಳ್ಳುವುದು ಕ್ಷೇಮಕರ.

ಪಂಕಜ : ಅಲ್ಲಾ ಕಣೆ ಸರೋಜ ಇಷ್ಟೆಲ್ಲಾ ಲೆಕ್ಚರ್ ಮಾಡ್ತೈಲ್ಲಾ? ಇವೆಲ್ಲಾ ನಿಮ್ಮಂಥ ಸಾಹುಕಾರರಿಗೇ ಅಂತ ಕಾಣುತ್ತೆ.

ಸರೋಜ : ನೋಡೇ ಯಾವುದೇ ಆಗಲಿ ಬಡವರಿಗೆ, ಸಾಹುಕಾರರಿಗೆ ಅಂತಲ್ಲ. ನೋಡು ಆಹಾರಸತ್ವದ ಕೊರತೆಯಿಂದ ಮಕ್ಕಳು ನರಳುವುದಕ್ಕಿಂತ ಆಮೇಲೆ ಆಸ್ಪತ್ರೆ, ವೈದ್ಯರು ಅಂತ ತಿರುಗೋದ್ಕಿಂತ ಆರೋಗ್ಯವಾಗಿದ್ರೆ ಉತ್ತಮ ಅಲ್ವೇ? ನೋಡು ಹೆಚ್ಚಿಗೆ ಬೆಲೆಬಾಳುವ ಹಣ್ಣುಗಳಿಂದಲೇ, ತರಕಾರಿಗಳಿಂದ್ಲೇ ಜೀವಸತ್ವ ಸಿಗುತ್ತೆ ಅಂತ ತಿಳಿಯಬಾರದು. ಸೇಬಿನ ಹಣ್ಣಿಗಿಂತ ಸೀಬೆಹಣ್ಣಿನಲ್ಲಿ 'ಜೀವ ಸತ್ವ' ಹೆಚ್ಚಾಗಿರುತ್ತೆ. ಕಡಿಮೆ ಬೆಲೆ ಸೊಪ್ಪು, ದ್ವಿದಳ ಧಾನ್ಯ, ಹಸುವಿನ ಹಾಲು ಇವನ್ನೆಲ್ಲಾ ಉಪಯೋಗಿಸಬಹುದು ಕಣೇ. 'ಮನಸ್ಸಿದ್ದಲ್ಲಿ ಮಾದೇವ' ಅಂತ.

ಪಂಕಜ : ಇಷ್ಟೆಲ್ಲಾ ಹೇಳ್ದೆ. ನಾನು ಹ್ಯಾಗೆ ಮಾಡ್ಲಿ ಹೇಳು, ನನ್ನ ಮಕ್ಕಳು ನಿನ್ನ ಮಕ್ಕಳ ಹಾಗೆ ಇರುವಾಗೆ ಮಾಡಲಿಕ್ಕೆ.

ಶಂಕರ : ನಮ್ಮ ಮಕ್ಕಳ ಹಾಗೆ ನಿಮ್ಮ ಮಕ್ಕಳು ಇರೋಕ್ಕೆ ಎಲ್ಲಿ ಸಾಧ್ಯ ಹೇಳಿ, ಪಂಕಜ ಅವ್ರೇ.

ಪಂಕಜ : ಓ ಬನ್ನಿ ಮಿಸ್ಟರ್ ಶಂಕರ್. ರೂಪಿನಲ್ಲಲ್ಲ ಮಿಸ್ಟರ್ ಶಂಕರ್. ದೇಹದ ಬೆಳವಣಿಗೇಲಿ.

ಶಂಕರ : ಅದಕ್ಕೆ ಇಷ್ಟೊಂದು ತಲೆಕೆಡಿಸಿಕೊಂಡಿದ್ದೀರಾ?

ಪಂಕಜ : ಅದ್ಕೇ ಈಗ ನಿಮ್ಮ ಹೆಂಗಸ್ರು ತಲೆ ತುಂಬಿದ್ದಾರೆ.

ಶಂಕರ : ಏನಂತ ತುಂಬಿದ್ರು?

ಪಂಕಜ : ಜೀವಸತ್ವ, ಸಮತೋಲನ ಆಹಾರ, ಪೌಷ್ಟಿಕ ಆಹಾರ...

ಶಂಕರ : ಬರೇ ಓದಿರೋ ಪುಸ್ತಕದ ಬದನೆಕಾಯೋ, ನಿಜ ಜೀವನದಲ್ಲಿ ಮಾಡೋದೋ?

ಪಂಕಜ : ನಿಜಜೀವನದಲ್ಲಿ ಮಾಡಬೇಕಾದದ್ದೇ.

ಶಂಕರ : ಸರಿ ಇನ್ನು ಅದ್ಯಾಕೆ ಯೋಚನೆ?

ಪಂಕಜ : ಅದು ಎಷ್ಟರಮಟ್ಟಿಗೆ ಸಾಧ್ಯ ಅಂತ ಯೋಚನೆ ಮಾಡ್ತಿದ್ದೇನೆ.

ಶಂಕರ : ಯೋಚನೆ, ಯೋಚನೆ ಎಲ್ಲವನ್ನೂ ಮರೆತು ಕಾರ್ಯತಃ ಮಾಡೋದು ಕಲೀಬೇಕು. ಆಗ ಸರಿಹೋಗುತ್ತೆ.

ಪಂಕಜ : ಆಗ್ಲಿ ಸಾರ್.

ಶಂಕರ : ಸರೋಜಾ, ಬರೇ ಬಾಯಿನಲ್ಲೇ ಪೌಷ್ಟಿಕ ಆಹಾರದ ಬಗ್ಗೆ ಸಮತೋಲನದ ಬಗ್ಗೆ ಥಿಯರಿ ಹೇಳ್ದ್ಬೋ ಅಥವಾ ಪ್ರಾಕ್ಟಿಕಲ್ ಆಗೇನಾದ್ರೂ ಮಾಡಿ ಸ್ಯಾಂಪಲ್ ತೋರಿಸ್ತೀಯೋ ಹ್ಯಾಗೆ?

ಸರೋಜ : ಅದು ಇದ್ದೇ ಇರುತ್ತೆ ಬಿಡಿ. ಸ್ಯಾಂಪಲ್‌ಗೆ ಮಾಡಿದ್ದೀನಿ ಸ್ವಲ್ಪ ತಿಂಡಿ.

ಶಂಕರ : ಅದು ಪಂಕಜಾ ಅವರಿಗೋ, ನಮಗೂ ಉಂಟೋ ಅದರಲ್ಲಿ ಭಾಗ.

ಸರೋಜ : ನಿಮಗೇ ಮಾಡಿರೋದು, ಅದರಲ್ಲಿ ಅವರಿಗೂ ಕೊಡ್ತಿದ್ದೇನೆ. ಅವರ್ಗೆ ಅಂತ ಮಾಡ್ಲಿಲ್ಲ. ನಮ್ಮ ಮನೆಗಾಗಿ ಮಾಡಿದ್ದು ಅದರ ಪಾಲು ಬಂದ ಅತಿಥಿಗಳಿಗೂ ನೈವೇದ್ಯ.

ಶಂಕರ : ಬರೇ ನೈವೇದ್ಯ ತೆಗೆದುಕೊಳ್ಳಬೇಕೋ ಬಾಯಿನಲ್ಲಿ ಹಾಕ್ಕೊಳ್ಳಬೇಕೋ?

ಸರೋಜ : ನೀವು ದೇವರಾಗಿದ್ದರೆ ಹಾಗಾಗ್ತಿತ್ತು. ನಮಗೂ ಲಾಭ ಆಗ್ತಿತ್ತು. ಆದ್ರೆ ನಾವೆಲ್ಲಾ ಮನುಷ್ಯರಲ್ಲವೇ? ನಾವೆಲ್ಲಾ ಮಾಡೋದು ಈ ಹೊಟ್ಟೆಗಾಗಿ ತಾನೇ?

ಪಂಕಜ : ಹೌದು...

ಸರೋಜ : ಬನ್ನಿ... ಬನ್ನಿ... ತಿಂಡಿಗೇ...

ಶಂಕರ : ಓಕೆ.

* * *

## ದೃಶ್ಯ-೯

**ಪಾತ್ರ ವರ್ಗ:**

೧. ಡಾಕ್ಟರ್, ೨. ರಂಗಮ್ಮ

ಡಾಕ್ಟರ್ : ಬನ್ನಿ ರಂಗಮ್ಮನವರೇ...

ರಂಗಮ್ಮ : ನಮ್ಮ ಮಗು ತೋರಿಸಬೇಕು ಅಂತ ಬಂದೆ ಡಾಕ್ಟ್ರೇ...

ಡಾಕ್ಟರ್ : ಇದು ಎಷ್ಟನೇ ಮಗುವಮ್ಮ?

ರಂಗಮ್ಮ : ನಾಲ್ಕನೇದು...

ಡಾಕ್ಟರ್ : ಗರ್ಭಿಣಿ ಆದಾಗ ಆಸ್ಪತ್ರೇಗೇನಾದ್ರೂ ಬಂದು ತೋರಿಸ್ತಿದ್ರೋ ಹ್ಯಾಗೆ?

ರಂಗಮ್ಮ : ಇಲ್ಲ.

ಡಾಕ್ಟರ್ : ನೀವು ಬಹಳ ತಪ್ಪು ಮಾಡಿಬಿಟ್ರಿ.

ರಂಗಮ್ಮ : ನಮ್ಮ ಹಳ್ಳಿಯಾಗೆ ತೋರಿಸ್ಕಳದಿಲ್ಲ.

ಡಾಕ್ಟರ್ : ಈಗ ಬಂದ್ರಿ ಮಗು ತೋರಿಸಕ್ಕೆ?

ರಂಗಮ್ಮ : ಅದ್ಕೂ ಇದ್ಕೂ ಸಂಬಂಧ ಏನು ಡಾಕ್ಟ್ರೇ?

ಡಾಕ್ಟರ್ : ನಿಮ್ಮ ಮಗೂಗೆ ರಕ್ತಹೀನತೆಯಾಗಿದೆ. ಅದ್ಕೇ ಬಂದಿದ್ದೀರಿ. ಅಲ್ಲಾ, ನಿಮಗೆ ಖಾಯಿಲೆ ಬಂದಾಗ ಡಾಕ್ಟರ್ ಹತ್ತಿರ ಬರ್ತೀರೋ ಹೊರ್ತು ಅದ್ಕೂ ಮೊದ್ಲು ಬರೋಲ್ಲ.

ರಂಗಮ್ಮ : ಮತ್ತೆ ರೋಗ ಇಲ್ಲದೇ ಹೋದ್ರೂ ಬರ್ತಾರಾ ಹೇಳಿ ಮತ್ತೆ.

ಡಾಕ್ಟರ್ : ಗರ್ಭಿಣಿಯಲ್ಲೇ ಬಂದಿದ್ರೆ ನಿಮ್ಮ ಹೊಟ್ಟೆ ಒಳಗಿನ ಮಗು ಚೆನ್ನಾಗಿ ಬೆಳೆಯಲು ಸರಿಯಾದ ಆಹಾರ ತೆಗೆದುಕೊಳ್ಳಿ ಅಂತ ಹೇಳ್ತಿದ್ವು. ಕಬ್ಬಿಣದ ಮಾತ್ರೆಗಳು, ಫೋಲಿಕ್ ಆಸಿಡ್ ಮಾತ್ರೆಗಳನ್ನು ಕೊಡ್ತಿದ್ವು. ಚುಚ್ಚುಮದ್ದು ನೀಡುತಿದ್ವಿ. ಆಗ ನಿಮಗೂ ಹೊಟ್ಟೆ ಒಳಗೆ ಬೆಳೆಯುವ ಮಗುವಿಗೂ ಚೆನ್ನಾಗಿರ್ತಿತ್ತು. ಆಗ ಈ ರೀತಿ ರಕ್ತಹೀನತೆ ಬರ್ತಿರಲಿಲ್ಲ.

ರಂಗಮ್ಮ : ನಮಗೆ ಅದ್ಯಲ್ಲಾ ಎಂಗೆ ಗೊತ್ತಾಗ್ಬೇಕು ಯೋಳಿ?

ಡಾಕ್ಟರ್ : ನಿಮ್ಮ ಮನೆಗೆ ಯಾವ ಆರೋಗ್ಯ ಕಾರ್ಯಕರ್ತೇನೂ ಬರ್ತ್ತಿಲ್ಲಾ?

ರಂಗಮ್ಮ : ಬರ್ತಿದ್ರು. ಅವರು ಪೇಳಿದ್ನ ಗಮನವಹಿಸಲಿಲ್ಲ.

ಡಾಕ್ಟರ್ : ಅದೇ ನೀವು ತಪ್ಪು ಮಾಡಿದ್ದು ರಂಗಮ್ಮ. ಬನ್ನಿ ಕೂತ್ಕೊಳ್ಳಿ. ನೋಡಿ ಮಗುವಿನ ಕಣ್ಣು... ರಕ್ತ ಇದ್ಯೇ ನೋಡಿ. ಮೈ ಕೈ ಹ್ಯಾಗೆ ಆಗಿದೆ, ರಕ್ತವೇ ಇಲ್ಲ. ರಕ್ತಹೀನತೆಯಿಂದ ಮಗು ನರಳ್ತಾ ಇದೆ. ಇದ್ರಿಂದ ಎಷ್ಟೋ ರೋಗಗಳು ಬರ್ತಾವೆ. ನಿಮ್ಮದೊಂದೇ ಅಂತ ಅಲ್ಲ. ನಮ್ಮ ದೇಶದಲ್ಲಿ ೧೦೦ಕ್ಕೆ ೫೦

ಮಂದಿ ಮಕ್ಕಳು ಅದರಲ್ಲೂ ಶಾಲೆಗೆ ಹೋಗುವ ಮಕ್ಕಳಲ್ಲಿ ರಕ್ತಹೀನತೆ ಹೆಚ್ಚು ಕಂಡು ಬರುತ್ತೆ.

ರಂಗಮ್ಮ : ಇದ್ಕೇನು ಕಾರಣ ಡಾಕ್ಟ್ರೇ?

ಡಾಕ್ಟರ್ : ನಾವು ಸೇವಿಸುವ ಆಹಾರದಲ್ಲಿ ಖನಿಜಾಂಶ, ಕಬ್ಬಿಣಾಂಶದ ಕೊರತೆ, ಫೋಲಿಕ್ ಆಸಿಡ್, $B_{12}$ ಕೊರತೆ, ಮತ್ತೆ ಮಗುವಿನ ಹೊಟ್ಟೆಯಲ್ಲಿ ಕೊಕ್ಕೆ ಹುಳು ಇದ್ದಾಗ್ಲೂ ಹೀಗಾಗುತ್ತೆ. ರಕ್ತಸ್ರಾವ ಆಗ್ತಿದ್ರೂ ಆಗುತ್ತೆ. ಎಲುಬಿನಲ್ಲಿ ಕೆಂಪು ರಕ್ತ ಕಣಗಳು ಉತ್ಪತ್ತಿ ಆಗದೆ ಇರುವುದೂ ಒಂದು ಕಾರಣ. ನೋಡಮ್ಮಾ ಪ್ರತಿದಿನ ಮಗುವಿಗೆ ೫೦ರಿಂದ ೧೫೫ ಮಿಲಿಗ್ರಾಂನಷ್ಟು ಖನಿಜಾಂಶ, ಕಬ್ಬಿಣದ ಅವಶ್ಯಕತೆ ಇದೆ.

ರಂಗಮ್ಮ : ಇವೆಲ್ಲಾ ಏನು ತಕ್ಕಂಡ್ರೆ ಸಿಕ್ಕುತ್ತೆ ಡಾಕ್ಟ್ರೇ?

ಡಾಕ್ಟರ್ : ಇವು ನೋಡಮ್ಮಾ ಮೊಟ್ಟೆ, ಮಾಂಸ, ಮೀನು, ಧಾನ್ಯ, ಹಸಿರು ತರಕಾರಿಗಳಲ್ಲಿ ದೊರೆಯುತ್ತೆ. ತಾಯಿ ಎದೆ ಹಾಲಿನಲ್ಲಿ, ಹಸುವಿನ ಹಾಲಿನಲ್ಲಿ ಖನಿಜಾಂಶ, ಕಬ್ಬಿಣಾಂಶ ಕಡಿಮೆ ಇರುತ್ತೆ. ಮೊದಲು ಮೂರು ತಿಂಗಳು ದೇಹದಲ್ಲೇ ಶೇಖರವಾಗಿರುವ ಖನಿಜಾಂಶ, ಕಬ್ಬಿಣಾಂಶ ಉಪಯೋಗಿಸಿಕೊಳ್ಳುತ್ತದೆ ಮಗು. ಅನಂತರ ಈ ಅಂಶಗಳಿರುವ ಆಹಾರವನ್ನು ಕೊಡಬೇಕು. ರಾಗಿಸರಿ, ಅಕ್ಕಿ ಗಂಜಿ ಕೊಡಬಹುದು.

ರಂಗಮ್ಮ : ಈ ರೋಗದ ಲಕ್ಷಣ ಏನು ಡಾಕ್ಟ್ರೇ?

ಡಾಕ್ಟರ್ : ಇದು ರೋಗವಲ್ಲ. ರಕ್ತಹೀನತೆಯಿಂದ ಅನೇಕ ರೋಗಗಳು ಬರುತ್ತವೆ. ಈ ರಕ್ತಹೀನತೆ ಲಕ್ಷಣ ನಿಮ್ಮ ಮಗುವಿನಲ್ಲಿ ಇದೆಯೇ ನೋಡಿ. ಬಿಳುಚಿಕೊಂಡಿದ್ರೆ ಬೆಳವಣಿಗೆ ಸಾಲದು ಅಂತ, ಶ್ವಾಸಕೋಶ ರೋಗಗಳೂ ಇರುತ್ತವೆ. ಆದ್ದರಿಂದ ಖನಿಜಾಂಶದ ಔಷಧ ಕೊಡಿಸಬೇಕು ಮಕ್ಕಳಿಗೆ. ಮಕ್ಕಳು ಬರಿಗಾಲಿನಲ್ಲಿ ನಡೆಯುವಾಗ ಈ ಕೊಕ್ಕೆಹುಳುಗಳು ಚರ್ಮದ ಮೂಲಕ ರಕ್ತಕ್ಕೆ ಸೇರುತ್ತವೆ. ರಕ್ತವನ್ನು ಹೀರಿಬಿಡುತ್ತವೆ.

ರಂಗಮ್ಮ : ಮಗು ಬೇರೆಯವರ ಹತ್ತಿರ ಆಟ ಆಡೋಲ್ಲ. ಊಟ ಸರಿಯಾಗಿ ಮಾಡೋಲ್ಲ, ಕೈಕಾಲು ಊದಿಕೊಳ್ಳುತ್ತವೆ, ಕೆನ್ನೆ ನೋಡಿ ಡಾಕ್ಟ್ರೇ...

ಡಾಕ್ಟರ್ : ಅದೇ ಕಣಮ್ಮಾ ರಕ್ತಹೀನತೆ ಲಕ್ಷಣಗಳು. ಈಗ್ಲಾದ್ರೂ ಕರ್‍ಕೊಂಡು ಬಂದ್ಯಲ್ಲಾ. ಇದು ಹೆಚ್ಚಾದ್ರೆ ಮಗು ಸಾವನ್ನೂ ಸಹ ಅಪ್ಪಬಹುದು, ತಿಳ್ಕೊಳ್ಳಿ. ಬೇಗ ಇದಕ್ಕೆ ಚಿಕಿತ್ಸೆ ನೀಡಬೇಕು.

ರಂಗಮ್ಮ : ಇದ್ಕೇನು ಮಾಡಬೇಕು ಡಾಕ್ಟ್ರೇ?

ಡಾಕ್ಟರ್ : ಮಕ್ಕಳಿಗೆ ಕೊಕ್ಕೆ ಹುಳುವಿನ ನಿರ್ಮೂಲನ ಮಾಡುವ ಔಷಧ ಕೊಡಿಸಬೇಕು. ಕಬ್ಬಿಣದ ಮಾತ್ರೆ ಕೊಡಬೇಕು. ಚಪ್ಪಲಿ ಹಾಕಿಕೊಂಡು ತಿರುಗಾಡುವುದು

ಮುಖ್ಯ. ಇನ್ನೊಂದು ಅನ್ನಾಂಗದ ಕೊರತೆಯಿಂದಲೂ ಹೀಗಾಗುತ್ತೆ. ತಾಯಿ ಹಾಲು, ಹಸುವಿನಹಾಲು ಕುಡಿಸಬೇಕು. ಫೋಲಿಕ್ ಆಸಿಡ್ ಮಾತ್ರೆ ಕೊಡಿಸಬೇಕು. ಅನ್ನಾಂಗದ ಕೊರತೆ ಇದ್ದರೆ ಸದಾ ವಾಂತಿ, ಭೇದಿ ಇದ್ದು ರಕ್ತ ಹೀನತೆ ಕಾಣಿಸಿಕೊಳ್ಳುತ್ತದೆ.

ರಂಗಮ್ಮ : ಭೇದಿ ಹಸರಿಗೆ ಹೋಗುತ್ತೆ ಡಾಕ್ಟ್ರೇ.

ಡಾಕ್ಟರ್ : ಅದಕ್ಕೆ ಔಷಧ ಕೊಡೋಣ! ಪೌಷ್ಟಿಕಾಂಶದ ಕೊರತೆಯಿಂದ ಈ ರಕ್ತಹೀನತೆ ಉಂಟಾಗುತ್ತಮ್ಮ, ಸಸಾರಜನಕ, ಖನಿಜಾಂಶ, ಕಬ್ಬಿಣಾಂಶದ ಔಷಧ, ಆಹಾರ ಕೊಟ್ಟು ಈ ರಕ್ತಹೀನತೇನಾ ನಿವಾರಿಸಬೇಕಾಗುತ್ತೆ.

ರಂಗಮ್ಮ : ಒಟ್ಟಿನಲ್ಲಿ ಮಕ್ಕಳಿಗೆ ಮೊದಲಿನಿಂದ ಕೊನೆಯವರೆಗೆ ಸರಿಯಾದ ಆಹಾರವನ್ನು ಕೊಟ್ಟಿದ್ರೆ ನಮ್ಮ ಮಗೂಗೆ ಈ ರಕ್ತ ಹೀನತೆ ಬರ್ತಿರ್ಲಿಲ್ಲ ಕಣವ್ವಾ. ಆಗ್ಲೂ ನನ್ನ ಗಂಡ ವಸಿ ತ್ಹೋರಿಸ್ಕೋ ಡಾಕ್ಟರಲ್ಲಿ ಅಂತಿದ್ರು. ನಾನು ಬಸ್ರಿ ಆಗಿದ್ದಾಗ ಗಮನ ವ್ಹಹಿಸ್ಲಿಲ್ಲ ಕಣವ್ವಾ.

ಡಾಕ್ಟರ್ : ಮಿಂಚಿಹೋದ ಕಾರ್ಯ ಅದು. ಈಗ ಮಾಡುವುದನ್ನು ಮಾಡಬೇಕು ಅಷ್ಟೇ. ಈಗ್ಲಾದ್ರೂ ಬಂದ್ಯಲ್ಲಾ.

ರಂಗಮ್ಮ : ಮಗೂನ ಪ್ರಾಣಕ್ಕೇನೂ ಅಪಾಯ ಇಲ್ಲತಾನವ್ವಾ?

ಡಾಕ್ಟರ್ : ಇನ್ನೊಂದು ಸ್ವಲ್ಪ ದಿವಸ ಆಗಿದ್ರೆ ಕಷ್ಟವೇ ಆಗ್ತಿತ್ತು. ಈಗ ಮಗೂನ ಆರೋಗ್ಯ ಮಾಡಬಹುದು. ಮೊದಲಿಂದ ಸ್ವಲ್ಪ ಗಮನವಹಿಸಿದ್ರೆ ಇಷ್ಟ್ಯಾಕೆ ನೀವು ಪಡಬೇಕಾಗಿತ್ತು. ನಿಮ್ಮ ಮಗು ಕಷ್ಟಪಡಬೇಕಾಗಿತ್ತು ಅಲ್ವೇ?

ರಂಗಮ್ಮ : ನೀವ್ಯಾಳೋದು ದಿಟ ಕಣವ್ವಾ.

ಡಾಕ್ಟರ್ : ಹೋಗ್ಲಿ ಬಿಡು, ಯೋಚನೆ ಮಾಡಬೇಡ. ಮಗುವನ್ನು ಆರೋಗ್ಯ ಮಾಡೋಣ. ನೋಡು ರಂಗಮ್ಮ ನಾಲ್ಕು ಮಕ್ಕಳೂ ಹೆಚ್ಚೇ. ಮಕ್ಕಳು ಹೆಚ್ಚಾಗ್ತಾ ಹೆಚ್ಚಾಗ್ತಾ ಇದ್ರೆ ಹುಟ್ಟುವ ಮಕ್ಕಳೂ ಪೌಷ್ಟಿಕವಾಗಿರೋಲ್ಲ. ಜೊತೆಗೆ ಗರ್ಭಿಣಿಯಲ್ಲಿ ಅಲಕ್ಷ್ಯ ಮಾಡಿಬಿಟ್ರೆ ಇದ್ದದ್ದೂ ಕೇಳಬೇಡ! ಹಾಗಾಗಿದೆ ಈ ಸಾರಿ...

ರಂಗಮ್ಮ : ನಾನು ಕೂಡ... ಯೋಸ್ನೆ ಮಾಡಿವ್ನಿ.

ಡಾಕ್ಟರ್ : ಏನು?

ರಂಗಮ್ಮ : ಅದೇನೋ ಈಗ ಹೊಸದಾಗಿ ಆಪ್ಲೇಸನ್ ಸುಲಭವಾಗಿ ಮಾಡ್ತೀರಂತೆ.

ಡಾಕ್ಟರ್ : ಲ್ಯಾಪ್ರಸ್ಕೋಪಿಕ್ ಆಪರೇಷನ್ ಅಂತ. ಸುಲಭವಾದ್ದು. ಮಾಡಿಸ್ಕೋ ಒಳ್ಳೇದು. ದೇವರು ನಿನಗೆ ಒಳ್ಳೇ ಬುದ್ಧಿ ಕೊಟ್ಟನಲ್ಲಾ.

ರಂಗಮ್ಮ : ಏನೋ ಗಾದೆ ಹೇಳ್ತಾರಲ್ಲಾ ಅಂಗಾಯ್ತು. ಕೆಟ್ಟ ಮ್ಯಾಕೆ ಬುದ್ದಿ ಬಂತು ಅಂತ.

ಡಾಕ್ಟರ್ : ಈಗ್ಲೂ ತಡವಿಲ್ಲ. ಈಗ್ಲೂ ಯೋಚನೆ ಮಾಡಹೋಗಿದ್ದಿದ್ರೆ ಮುಂದೆ ಎಷ್ಟು ಮಕ್ಕಳು ಆಗ್ತಿದ್ವೋ.

ರಂಗಮ್ಮ : ಇಂತದ್ದು ಮಾತ್ರ ಬ್ಯಾಡವ್ವಾ.

ಡಾಕ್ಟರ್ : ಒಳ್ಳೇದು. ಈಗ ಈ ಮಗುವನ್ನು ಸರಿ ಮಾಡ್ತೀನಿ. ಈ ಸಾರಿ ಶಿಬಿರದಲ್ಲಿ ಆಪರೇಷನ್ನು ಮಾಡಿಸ್ಕೋ.

ರಂಗಮ್ಮ : ಆಗ್ಲವ್ವಾ...

* * *

## ದೃಶ್ಯ-೧೦

**ಪಾತ್ರ ವರ್ಗ:**

೧. ಸರೋಜ, ೨. ತಾರ, ೩. ಸ್ವಾಮಿ

ತಾರ : ನೀನೇನೇ ಅನ್ನು ಸರೋಜ ನಮ್ಮ ಜೀವನ ಜೀವನವಲ್ಲ.

ಸರೋಜ : ಮತ್ತೇನು ಅಂತೀಯಾ ತಾರಾ?

ತಾರ : ಏನೋ ಒಂದು ರೀತಿ Manatonous, ದೇವರು ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣವನ್ನು ಇಟ್ಟಿದ್ದಾನೆ ಕಣಮ್ಮ

ಸರೋಜ : ಎಲ್ಲರಿಗೂ ಬೆಣ್ಣೇನೆ ಹಾಕ್ತಾ ಹೋದ್ರೆ ಸುಣ್ಣದ ಗತಿ ಏನಾಗಬೇಕು?

ತಾರ : ಸರೋಜ ದೇವರು ನಿನ್ಗೆ ಎಲ್ಲಾ ಭಾಗದಲ್ಲೂ ಚನ್ನಾಗಿಟ್ಟಿದ್ದಾನೆ. ನೀನೇನಂದ್ರೂ ತಡೆಯುತ್ತೆ.

ಸರೋಜ : ಹೌದು ಕಣ್ಣು, ಕಿವಿ, ಮೂಗು, ಬಾಯಿ ಎಲ್ಲಾ ಸರಿಯಾಗಿದೆ ಅಷ್ಟೇ... ಇನ್ನು ಕಾಸು ದುಡ್ಡಿನಲ್ಲೇನೂ ಕೇಳಬೇಡ.

ತಾರ : ನನ್ಗೇ ಯಾವುದರಲ್ಲೂ ಇಲ್ವಲ್ಲ. ದೇವರು ನಿನ್ಗೆ ಅಂಗಾಂಗಗಳನ್ನಾದರೂ ಅಚ್ಚುಗಟ್ಟಾಗಿ ಕೊಟ್ಟಿದ್ದಾನೆ ಆದ್ರೆ ನನಗೆ...

ಸರೋಜ : ಏನ್ಮಾಡೋದು, ಎಲ್ಲಾ ಆ ದೇವರು ಮಾಡಿದ್ದು...

ಸ್ವಾಮಿ : ದೇವರೇನೇ ಮಾಡಿದ್ದು?

ಸರೋಜ : ತಾರಾ ಬಂದಿದ್ದಾಳ್ರೀ...

ಸ್ವಾಮಿ : ಓಹ್ ಅದಾ... ನೋಡು ಸರೋಜ ಅದಕ್ಕಾಗಿ ಈಗ ಯೋಚನೆ ಮಾಡಬೇಕಾಗಿಲ್ಲ. ಎಲ್ಲರಂತೆ ಅವರೂ ಕೂಡ ಸರಿಸಮಾನರು. ಏನೋ ಸ್ವಲ್ಪ ಅಂಗವಿಕಲತೆ ಆಯ್ತು ಅಂದ್ರೆ ಅವ್ರು ಸಮಾಜದಿಂದ ದೂರ ಇರಬೇಕೇ?

ಸ್ವಾಮಿ : ನೋಡಿ ತಾರಾ ಅವ್ರೆ. ಅದಕ್ಕೆ ಈ ವರ್ಷವನ್ನು 'ಅಂಗವಿಕಲರ ವರ್ಷ' ಅಂತ ವಿಶ್ವ ಆರೋಗ್ಯ ಸಂಸ್ಥೆಯವರು ಸಾರಿದ್ದಾರೆ. ಅಂಗ ವಿಕಲರನ್ನೂ ಸಹಾ ಪ್ರತಿಯೊಬ್ಬರೂ ಒಂದೇ ಸಮನಾಗಿ ಕಾಣಬೇಕು, ಎಲ್ಲಾ ಸವಲತ್ತುಗಳು ಅವರಿಗೂ ದೊರಕಬೇಕು ಎಂಬುವುದೇ ಉದ್ದೇಶ.

ಸರೋಜ : ಏನ್ರೀ ಈ ವರ್ಷ ಆಚರಿಸ್ಬಿಟ್ರೆ ಆಯ್ತೇ. ಇನ್ನೇನು ಇನ್ನೂ ಕೆಲವು ದಿನಗಳಾಯ್ತು ಅಂದ್ರೆ ಡಿಸೆಂಬರ್ ಮುಗಿಯುತ್ತೆ, ಜನವರಿ ಬರುತ್ತೆ.

ಸ್ವಾಮಿ : ನೋಡೇ ಯಾವುದೇ ಆಚರಣೆ ನೆಪ ಮಾತ್ರ. ಆದರೆ ಅದನ್ನು ನಾವು ಕಾರ್ಯತಃ ಮಾಡುವುದು ನಿರಂತರವಾಗಿರುತ್ತೆ. ಈ ವರ್ಷಾ ಅಂತ್ಲೇ ಅಲ್ಲಾ ಯಾವಾಗಲೂ ಅಂಗವಿಕಲರು ಜನ್ಮ ತಾಳ್ತಾನೇ ಇರ್‍ತಾರೆ. ಸಮಸ್ಯೆ ಇದ್ದೇ ಇರುತ್ತೆ. ಅದನ್ನು ಆಗಾಗ ಪರಿಹರಿಸ್ತಾನೇ ಇರಬೇಕು.

ತಾರ : ಅದನ್ನು ಜನಗಳು ಅರಿತುಕೊಳ್ಳಬೇಕಲ್ಲಾ.

ಸ್ವಾಮಿ : ಅರಿತುಕೊಳ್ಳಬೇಕು. ಅವರ ಬಗ್ಗೆ ಅನುಕಂಪಾನೂ ತೋರಬೇಕು. ಅವರೂ ಎಲ್ಲರಂತೆ ಮನುಷ್ಯರು ಅಂತ ಭಾವಿಸಬೇಕು. ಅವರ ಮನಸ್ಸನ್ನು ನೋಯಿಸದಂತೆ ನಡ್ಕೊಳ್ಬೇಕು. ಅಂಧರೂ ಓದ್ತಾರೆ, ಅರ್ಥ ಮಾಡ್ಕೊಳ್ತಾರೆ. ಕಿವುಡರು ಕಿವಿಗೆ ಮಿಷನ್ ಹಾಕಿಕೊಂಡು ಕೇಳ್ತಾರೆ. ಕೈಕಾಲು ಹೋದವರು ಕೃತಕ ಕೈಕಾಲು ಹಾಕಿಕೊಂಡು ಕೆಲಸ ಮಾಡ್ತಾರೆ, ತಿರುಗಾಡ್ತಾರೆ. ಎಷ್ಟೋ ಜನ ಏನೇನೋ ಕೆಲಸ ಮಾಡಿ ಸಮಾಜದಲ್ಲಿ ನಮ್ಮಂತೆ ಸರಿಸಮಾನರಾಗಿ ಬಾಳ್ತಾ ಇದ್ದಾರೆ. ಆದ್ರೆ ಅಂಗವಿಕಲತೆ ಎಂಬುದೊಂದು, ಆದವರ ಮನಸ್ಸಿಗೆ ಹಿಂಸೆ ಆಗುತ್ತದೆ ಅಷ್ಟೇ. ಅದರಿಂದ ಮೊದಲು ನೀವು ದೂರವಾಗಬೇಕು. ನಿಮಗೇನು ಮಹಾ ಅಂಥದ್ದು ಆಗಿರೋದು. ನೀವು ಯೋಚನೆ ಮಾಡಬೇಕಾಗಿಲ್ಲ.

ಸರೋಜ : ಒಂದು ಕಣ್ಣು ಸ್ವಲ್ಪ... ಅಷ್ಟು ತಾನೇ, ಬಿಡೆ.

ತಾರ : ನೀನೇನೋ ನನ್ನ ಆಪ್ತ ಸ್ನೇಹಿತೆ. ಇದು ಮಾಹಾ ಅನ್ನೀಯಾ ಆದ್ರೆ ಕೆಲವರು 'ಹೆಣ್ಣು ಚಂದ ಕಣ್ಣು ಕುರುಡು' ಅಂತ ಹೀನಾಯವಾಗಿ ಮಾತಾಡ್ತಾರೆ. ಅದನ್ನ ಕೇಳ್ದಾಗ್ಲೆಲ್ಲಾ ನನಗೆ ತುಂಬಾ ಬೇಜಾರಾಗ್ಬುಡುತ್ತೆ. ಒಂದೊಂದು ಸಾರಿ ಆತ್ಮಹತ್ಯೆ ಮಾಡಿಕೊಂಡು ಬಿಡ್ಲಾ ಅನ್ನುವಷ್ಟು ಬೇಜಾರಾಗುತ್ತೆ.

ಸರೋಜ : ಅದಕ್ಕೆಲ್ಲಾ ಬೇಜಾರು ಮಾಡ್ಕೊಂಡ್ರಾಗುತ್ತಾ ಬಿಡು. ಅಂದವರು ಅಂದ್ಕೊಳ್ಳಿ.

ಸ್ವಾಮಿ : ನೋಡಿ ತಾರಾ ಅವ್ರೆ. ಪ್ರಪಂಚದಲ್ಲಿ ಆಸೆ ಅನ್ನೋದು ಪ್ರತಿಯೊಬ್ಬರಲ್ಲೂ ತುಂಬಿತುಳುಕಾಡುತ್ತೆ. ಆದ್ರೆ ನಡೀಬೇಕಲ್ಲಾ. ನನ್ಗೂ ಬೇರೆಯವರನ್ನು ನೋಡಿದಾಗ ನಾನೂ ಅವರ ಹಾಗೆ ಇದ್ದಿದ್ದರೆ ಅನ್ಸುತ್ತೆ. ಹೊಸ ಕಾರು,

ಬಂಗ್ಲೇ ನೋಡ್ದಾಗ ನನಗೂ ಹಾಗಿದ್ದಿದ್ದರೆ ಅನ್ಸುತ್ತೆ. ಅಂಗಡಿ ಮುಂದೆ ಬಟ್ಟೆಗಳನ್ನು ನೋಡ್ತಾ ಇದ್ರೆ...

ಸರೋಜ : ಗಂಡಸರಿಗೇ ಅಷ್ಟೆಂದ ಮೇಲೆ ಹೆಂಗಸರಾದ ನಮಗೆ ಆ ಸೀರೆ ತೆಗೆದುಕೊಂಡು ಬಿಡ್ಲಾ, ಇದನ್ನ ತೆಗೆದುಕೊಂಡು ಬಿಡ್ಲಾ ಅನ್ನಿಸುತ್ತೆ. ಒಡವೆ ಅಂಗಡಿ ಮುಂದೆ ಹೋಗ್ತಿದ್ದರೆ ದ್ಯಾವ್ರು ಇದ್ನೆಲ್ಲಾ ಬರೇ ಸಾಹುಕಾರರಿಗೇ, ಕೆಲವೇ ಜನಕ್ಕೇ ಏನೋ ಅನ್ನಿಸುತ್ತೆ.

ತಾರ : ಹೌದಮ್ಮ ಹಣ್ಣಿನ ಅಂಗಡಿ ಮುಂದೆ ನೋಡಿದಾಗ ಇವನ್ನೆಲ್ಲಾ ದೇವರು ಯಾರಿಗಾಗಿ ಇಟ್ಟಿದ್ದಾನೋ ಅನ್ನಿಸುತ್ತೆ, ಎಷ್ಟೋ ತರಕಾರಿ ಬೆಳೆದು ಮಾರುಕಟ್ಟೆಯಲ್ಲಿ ಇಟ್ಟಿರುತ್ತೆ. ಅದರಲ್ಲಿ ಒಂದು ದಿನಕ್ಕೊಂದು ತಿನ್ನೋ ಭಾಗ್ಯ ಇರೋಲ್ಲ ನಮ್ಮಂಥವರಿಗೆ. ಇನ್ನೂ ನೀನು ಏನೇನೋ ದೊಡ್ಡ ವಿಷಯ ಹೇಳ್ತೀಯಾ? ಅವೆಲ್ಲಾ ನಡೆಯುತ್ತೇನಮ್ಮಾ?

ಸ್ವಾಮಿ : ನಡೀದೇ ಏನು? ನಿಮಗೆ ಈಗ ಕಮ್ಮಿ ಆಗಿರೋದೇನು?

ತಾರ : ಸ್ವಾಮಿಯವ್ರೇ ಅಂಗವಿಕಲತೆ ದೇಹಕ್ಕಾದ್ರೆ, ಸಂಸಾರದ ತಾಪತ್ರಯಗಳು ಬೇರೆ...

ಸ್ವಾಮಿ : ನಿಮ್ಗೂ...

ತಾರ : ಇದೇನು ನೀವು ಕೇಳ್ತಿರೋದು... ನನ್ಗೂ ನಾಲ್ಕು ಮಕ್ಕಳು... ಅಂದ ಮೇಲೆ ಕೇಳಬೇಕೇ?

ಸ್ವಾಮಿ : ನಮ್ಮದೂ ನಿಮ್ಮದೂ ಒಂದೇ ಸ್ಥಿತಿ ಬಿಡಿ. ನೀವು ಹೇಳೋದು ಒಂದು ರೀತೀಲಿ ಸರಿ ಅನ್ನಿಸುತ್ತೆ. ಅದ್ಕೇ ನೀವು ಹೇಳಿದ್ದೂ, ನಾವು ಹೇಳಿದ್ದೂ ಯಾವುದೂ ಸಫಲವಾಗ್ತಾ ಇಲ್ಲ. ಆಸೆ ಇದೆ. ಆದ್ರೆ ಅದನ್ನೆಲ್ಲಾ ಪುರೈಸಿಕೊಳ್ಳಲಿಕ್ಕಾಗೋಲ್ಲ.

ಸರೋಜ : ಅದ್ಕೇ ನೋಡಿ ಬರೇ ಬಾಯಿ ನೀರು ಕುಡಿದುಕೊಳ್ಳಬೇಕು.

ಸ್ವಾಮಿ : ಎಲ್ರೂ ಎಲ್ಲವೂ ಬೇಕು ಅಂದ್ರೆ ಹ್ಯಾಗೆ ಆಗುತ್ತೆ. ಪ್ರಪಂಚದಲ್ಲಿರೋದೆಲ್ಲಾ ನನಗೆ ಬೇಕು ಅಂದ್ರೆ ಆಗುತ್ಯೇ? ಹಿಂದೆ ರಾಜರುಗಳು ಎಂಥ ಅಪರೂಪದ ವಸ್ತು ಇದ್ರೂ ಆತನದೇ ಆಗ್ತಿತ್ತಂತೆ. ಹಾಗಾಗೂತ್ತಾ ನಮಗೆ ಹೇಳಿ ಮತ್ತೆ.

ತಾರ : ಅಷ್ಟೆಲ್ಲಾ ಬ್ಯಾಡಿ ಸ್ವಾಮಿಯವ್ರೇ. ಯಾವುದಾದ್ರೂ ಕೆಲವು ಬ್ಯಾಡ್ವೇ? ಊಟ, ತಿಂಡಿ, ಬಟ್ಟೆ, ನೋಟ... ಇಷ್ಟಾದ್ರೂ...

ಸ್ವಾಮಿ : ಅದಕ್ಕೋಸ್ಕರ ಶ್ರಮಪಡಬೇಕು, ಗಳಿಸಬೇಕು. ಜೊತೆಗೆ ಉಳಿಸಬೇಕು. ಅದರಿಂದ ಜೀವನ ಸುಖವನ್ನು ಪಡೆಯಬೇಕು.

ತಾರ : ಆದ್ರೆ ನಮ್ಮಂಥವ್ರು ಏನು ಮಾಡೋದು?

ಸರೋಜ : ಈಗ ನಾವು ಏನೂ ಮಾಡೋಕ್ಕಾಗೋಲ್ಲ. ಆಗ್ಲೇ ನಾವು ಎಚ್ಚೆತ್ತಿಕೊಂಡಿದ್ದಿದ್ದರೆ ಇವೆಲ್ಲಾ ಸುಖದ ಕನಸನ್ನು ನನಸು ಮಾಡಿಕೊಳ್ಳಬಹುದಾಗಿತ್ತು. ಆದ್ರೆ ಇಬ್ರೂ ನಾಲ್ಕು ಮಕ್ಕಳನ್ನು ಹಡದದ್ದೇ ಮೊದಲ ತಪ್ಪು.

ತಾರ : ಈಗ ಆ ತಪ್ಪನ್ನು 'ಸರಿ' ಅಂತ ಮಾಡಿಕೊಳ್ಳಲಿಕ್ಕಾಗೋಲ್ಲ.

ಸ್ವಾಮಿ : ಆದ್ರೂ ಮುಂದಾದ್ರೂ ಎಚ್ಚೆತ್ಕೊಂಡಿರಬಹುದು. ನಮ್ಮ ಆಸೆಗಳೆಲ್ಲಾ ಪೂರೈಸಬೇಕಾದ್ರೆ ಒಂದೆರಡು ಮಕ್ಕಳಿದ್ರೆ ಆಗ್ತಿತ್ತು. ಈಗ ಅದ್ಕೇ ಬರೇ ಬಾಯಿ ನೀರು ಕುಡಿಯೋ ಸ್ಥಿತಿಯಾಗಿದೆ. ಈಗ ನೀವೇ ಆಗ್ಲಿ, ನಾವೇ ಆಗ್ಲಿ...

ಸರೋಜ : ಮಕ್ಕಳು ಆಗೋದು ಸಾಕು ಅಂತ...

ತಾರ : ಮನಸ್ಸು ಮಾಡಬೇಕು.

ಸ್ವಾಮಿ : ಅಲ್ಲಾ ತೀರ್ಮಾನಕ್ಕೆ ಬರಬೇಕು. ಶಾಶ್ವತವಾಗಿ ಮಕ್ಕಳು ಆಗದ ಹಾಗೇ ನೋಡ್ಕೊಳ್ಳಬೇಕು.

ಸರೋಜ : ಆಪರೇಷನ್ ಮಾಡಿಸಿಕೊಳ್ಳಬೇಕು ಅಂತ್ಲೇ ಹೇಳಿ.

ಸ್ವಾಮಿ : ಅಂತೂ ಒಟ್ಟಿನಲ್ಲಿ ಕಾಲಕ್ಕೆ ತಕ್ಕಹಾಗೆ ನಡ್ಕೊಳ್ಬೇಕು.

ತಾರ : ಏನೋ ಈಗ ಒಂದು ತರ ಸಮಾಧಾನವಾಯ್ತು. ಸ್ವಾಮಿಯವರ ಮಾತುಗಳನ್ನು ಕೇಳಿ.

ಸರೋಜ : ಅಷ್ಟಲ್ದೇ... ಇನ್ನೇನು ತಾರಾ?

ತಾರ : ಇನ್ನೊಂದು ಸರೋಜ, ಈಗ ಮತ್ತೊಂದು ಸಮಾಧಾನ ಅಂದ್ರೆ ನನಗೆ ಅಂಗವಿಕಲ ಮಕ್ಕಳಾಗಲಿಲ್ಲ. ಎಲ್ಲಿ ನನ್ನ ಹಾಗೆ ಮಕ್ಕಳು ಆಗ್ತಾರೋ ಅಂತಿದ್ದೆ. ಆದ್ರೆ, ದೇವರು ಅವರನ್ನು ಚನ್ನಾಗಿ ಇಟ್ಟಿದ್ದಾನೆ.

ಸ್ವಾಮಿ : ನೋಡಿ ಅಂಗವಿಕಲತೆ ಏನೋ ಕಾರಣದಿಂದ ಆಗಬಹುದು. ಆದ್ರೆ ಅದು ವಂಶ ಪಾರಂಪರ್ಯವೇನಲ್ಲ. ಮಕ್ಕಳು ಹಾಗೇ ಆಗ್ತಾರೇ ಎಂಬ ಹೆದರ್ಕೇನೂ ಪಡಬೇಕಾಗಿಲ್ಲ. ನಿಮ್ಮ ಮಕ್ಕಳೇ ಇದಕ್ಕೆ ಉದಾಹರಣೆ ಅಲ್ವೇ?

ತಾರ : ಖಂಡಿತ.

ಸ್ವಾಮಿ : ಹೋಗ್ಲಿ ನಿಮ್ಮ ಯಜಮಾನ್ರು ಹ್ಯಾಗಿದ್ದಾರೆ?

ತಾರ : ಚನ್ನಾಗಿದ್ದಾರೆ. ಅವರು ನಿಜವಾಗ್ಲೂ ನನ್ನನ್ನ ಒಂದು ದಿನ ಹೀಗೆ ಅಂತ ಅನ್ನಿಲ್ಲ. ಚನ್ನಾಗಿ ನೋಡ್ಕೊಂಡಿದ್ದಾರೆ. ನನ್ನನ್ನ ಕಂಡ್ರೆ...

ಸರೋಜ : ತುಂಬಾ ಪ್ರೀತಿಯಾಗಿದ್ದಾರೆ ಅಂತೇಳು.

ತಾರ : ಹೌದಮ್ಮ ಖಂಡಿತ. ನಾನು ಸದಾ ಅವರಿಗೆ ಋಣಿಯಾಗಿದ್ದೀನಿ.

ಸ್ವಾಮಿ : ಸಮಾಜ ಆಡಿಕೊಳ್ಳುತ್ತೆ ಅಂತೀರಿ, ನಿಮ್ಮ ಗಂಡ ನಿಮ್ಮನ್ನ ಅಷ್ಟು ಚನ್ನಾಗಿ ನೋಡ್ಕೊಳ್ತಿದ್ದಾರೆ ಅಂತೀರಿ. ಇನ್ನು ನಿಮಗೇನು ಕಷ್ಟ? ಸುಖವಾಗಿರಿ. ಅವರಿವರ ಮಾತಿಗೆ ಕಿವಿ ಕಿವುಡು ಮಾಡ್ಕೊಳ್ಳಿ. ನಿಮ್ಮ ಯಜಮಾನ್ರನ್ನ ಒಂದು ದಿನ ಕರ್ಕೊಂಡು ಬನ್ನಿ ನಮ್ಮ ಮನೆಗೆ.

ತಾರ : ನೀವು ದಂಪತಿಗಳು ಈ ಭಾನುವಾರ ಬನ್ನಿ. ಆಮೇಲೆ ನಾವು ಬರ್ತೀವಿ.

ಸರೋಜ : ಬರೇ ದಂಪತಿಗಳೇ ಸಾಕೇ?

ತಾರ : ಮಕ್ಕಳನ್ನೂ ಸಹ ಕರ್ಕೊಂಡು ಬನ್ನಿ ಅದನ್ನೂ ಹೇಳಬೇಕೇ?

ಸ್ವಾಮಿ : ಸರಿಯಮ್ಮ ಬರ್ತೀವಿ.

ಸರೋಜ : ಕುಂಕುಮ ಇಟ್ಕೋ.......

* * *

## ದೃಶ್ಯ-೧೧

**ಪಾತ್ರ ವರ್ಗ:**

೧. ಗೀತಾ, ೨. ಶಾರದ, ೩. ಭೂಪೇಶ

ಗೀತಾ : ಏನೇ ಶಾರದಾ. ನಿನ್ನನ್ನು ನೋಡಿ ನಾನು ಸುಮಾರು ತಿಂಗಳೇ ಆಯ್ತು ಅಲ್ವೇ?

ಶಾರದ : ಹೌದು...

ಗೀತಾ : ಹೌದು ಅಂತೀಯೋ ಹೊರ್ತು ಬರ್ಲಿಲ್ಲ.

ಶಾರದ : ನೀನೇ ಬರಬೇಕಾಗಿತ್ತು.

ಗೀತಾ : ನಾನು ಹ್ಯಾಗೇ ಬರಲಿ ಹೇಳು?

ಗೀತಾ : ಅಂದ್ರೆ...?

ಶಾರದ : ಅಂದ್ರೆ, ನಾನು ಹೆಣ್ಣು ಮಗು ಹೆತ್ತು ಈಗ ಸ್ವಲ್ಪ ದಿನಗಳಾಯ್ತು. ಈಗ್ತಾನೇ ಆರಾಮವಾಗಿದ್ದೀನಿ.

ಗೀತಾ : ನೀನು ಹೆಣ್ಣು ಮಗುವಿಗೆ ಜನ್ಮ ಕೊಡೊದ್ರಲ್ಲಿ ಕಾಣ್ಲಿಲ್ಲ, ನಾನು ಗಂಡು ಮಗುವಿಗೆ ಜನ್ಮ ಕೊಟ್ಟು ಕಾಣ್ಲಿಲ್ಲ ಅಷ್ಟೇ.

ಶಾರದ : ಸರಿ ಎರಡೂ ಒಂದೇ ತರದ ಕೇಸುಗಳಾದ್ವು ಬಿಡು ಗೀತಾ. ಆದ್ರೂ ನಿನ್ನನ್ನು ನೋಡಿದ್ರೆ ನನಗೆ ಸಂತೋಷವಾಯ್ತು ಬಿಡು. ನಿನಗೆ ನಿಮ್ಮ ತಾಯಿ ಚನ್ನಾಗಿ ಬಾಣಂತನ ಮಾಡಿರುವ ಹಾಗೆ ಕಾಣುತ್ತೆ. ಮಗೂನೂ ಅಷ್ಟೇ ಚನ್ನಾಗಿ ಸಾಕಿದ್ದೀಯೆ. ಇದರ ಗುಟ್ಟೇನೇ? ನಮ್ಗೂ ಸ್ವಲ್ಪ ಹೇಳಬಾರದೇನೇ?

ಗೀತಾ : ಇದರಲ್ಲಿ ಗುಟ್ಟೇನು ಬಂತು? ರಟ್ಟು ಮಾಡ್ಲಾ ಹೇಳು.

ಶಾರದ : ನಾನೂ ಇದ್ದೀನಿ ನೋಡು. ನನ್ನ ಮಗೂನೂ ನೋಡು ಹ್ಯಾಗಿದೆ?

ಗೀತಾ : ಕಾರಣ, ಏನು ಅಂತ ಹೇಳಲಿ. ನಾನು ಈಗ ಮೂರು ನಾಲ್ಕು ತಿಂಗಳಿಂದಲೂ ಮಗೂಗೆ ಚೆನ್ನಾಗಿ ಎದೆ ಹಾಲು ಕೊಡ್ತಾ ಇದ್ದೀನಿ. ಹಸುವಿನ ಹಾಲಾಗ್ಲೀ ಬೇರೆ ಗಟ್ಟಿ ಆಹಾರ ಪದಾರ್ಥವಾಗಲೀ ಕೊಡ್ತಾ ಇಲ್ಲಮ್ಮ ಅಷ್ಟೇ.

ಶಾರದ : ನೀನು ಪುಣ್ಯವಂತೆ ಕಣೆ, ನನಗೆ ಮಗುವಿಗೆ ಸಾಲುವಷ್ಟು ಹಾಲೇ ಬರಲಿಲ್ಲ. ನಮ್ಮ ಪಕ್ಕದ ಮನೆಯವರು, ನೀನೂ ನೋಡ್ಲಿಕ್ಕೆ ಹೀಗಿದ್ದೀಯಾ, ಯಾಕೆ ಮಗುವಿಗೆ ಹಾಲು ಕೊಡ್ತೀಯಾ ನಿಲ್ಲಿಸ್ಬಿಡು. ನಿನ್ನ ಆರೋಗ್ಯ ಕೆಟ್ಟುಹೋಗುತ್ತೆ ಅಂದ್ರು. ನಾನೂ ಬಿಟ್ಟು ಬಿಟ್ಟೆ. ಎರಡು ತಿಂಗಳು ಕೊಟ್ಟೆ, ಅಷ್ಟೇನಮ್ಮಾ.

ಗೀತಾ : ಅದೇ ನೀನು ತಪ್ಪು ಮಾಡಿದ್ದು. ನೋಡೇ ದೇವರ ಸೃಷ್ಟಿಯಲ್ಲಿ ಎದೆ ಹಾಲು ನಿಜವಾಗಲೂ ಅಮೃತ ಮಗುವಿಗೆ. ಎದೆ ಹಾಲು ಕೊಟ್ಟಷ್ಟೂ ತಾಯಿಗೆ ಒಂದು ರೀತಿ ತೃಪ್ತಿ, ಮಗುವಿಗೂ ತೃಪ್ತಿ. ಮಗು ಚನ್ನಾಗಿ ಬೆಳೆಯಲಿಕ್ಕೂ ತಾಯಿ ಹಾಲೇ ಕಾರಣ ಅಂತಾರಲ್ಲ. ಅದ್ಕೇ ನಾನು ಹಾಲು ಕೊಟ್ನಮ್ಮ...

ಶಾರದ : ಎಷ್ಟೆಷ್ಟೋ ಜನ ಏನೇನೋ ಹೇಳ್ತಾರಲ್ಲ ಗೀತಾ.

ಗೀತಾ : ಏನು ಹೇಳ್ತಾರೆ?

ಶಾರದ : ಏನೋ ಪರ್ಸನಾಲಿಟಿ ಕೆಟ್ಟು ಹೋಗುತ್ತೆ ಅಂತಾರಲ್ಲೇ.

ಗೀತಾ : ಅದೆಲ್ಲಾ ಸುಳ್ಳು ಅಂತ ನನ್ನ ಅನುಭವ, ಏಕೆ ಅಂದ್ರೆ ತಾಯಿಯ ಹಾಲನ್ನು ಮಗುವಿಗೆ ಕುಡಿಸಿದಾಗೆಲ್ಲಾ ಅದರಿಂದ ತಾಯಿ-ಮಕ್ಕಳಿಗೆ ಆನಂದ ಉಂಟಾಗುತ್ತೆ. ಆರೋಗ್ಯ ಚನ್ನಾಗುತ್ತೆ.

ಶಾರದ : ಹೌದಾ?

ಭೂಪೇಶ : ಹೌದಾ ಅನ್ನೋದೇನು... ಹೌದೇ ಹೌದು. ತಾಯಿ ಹಾಲು ಮಗುವಿಗೆ, ಮಗುವಿನ ಆರೋಗ್ಯಕ್ಕೆ ಬಹಳ ಮುಖ್ಯ.

ಶಾರದ : ಸರಿ ಡಾಕ್ಟರ್, ಹೆಂಡತಿ ಮಾತಾಯ್ತು ಇನ್ನು ಡಾಕ್ಟರ್ ಸಾಹೇಬರ್ದು.

ಭೂಪೇಶ : ಏನು ಶಾರದಾ ಅವರೆ, ಇದಕ್ಕೆ ಡಾಕ್ಟರ್ ಮಾತೇ ಬೇಕೇ? ಇದೆಲ್ಲಾ ಹೆಂಗಸರಿಗೆ ಗೊತ್ತಿರೋದೇ.

ಗೀತಾ : ಅದಕ್ಕೇ, ನಾನು ನನಗೆ ಗೊತ್ತಿರೋದನ್ನ ಹೇಳ್ತಾ ಇದ್ದೆ.

ಭೂಪೇಶ : ನಿನ್ಗೇನು ಮಹಾ... ನಿನ್ಗೂ ಮೊದಲನೇ ಮಗು ತಾನೇ...

ಗೀತಾ : ಅದ್ಕೇ, ನಾನು ಅನುಭವಸ್ಥರು, ತಮ್ಮಂಥ ಡಾಕ್ಟರ್ ಸಲಹೆ ಮೇರೆಗೆ ನಡ್ಕೊಂಡೇ. ಅದ್ಕೇ ನನ್ನ ಆರೋಗ್ಯ ಹೀಗಿದೆ ಅಂತಾ ಹೇಳ್ತಾ ಇದ್ದೇ ಅಷ್ಟೇ. ನನ್ನ ಅನುಭವ ಅಂತಾ ನಾನು ಹೇಳಲಿಲ್ಲ. ತಮ್ಮಂಥ ಡಾಕ್ಟರ್ ಹೇಳಬೇಕು.

ಭೂಪೇಶ : ಅದ್ಕೇ ಹೇಳ್ತಾ ಇರೋದು.

ಶಾರದ : ನೀವು ಹೇಳಿದ ಮೇಲೆ ಅದು ಅಥೆಂಟಿಕ್ ಬಿಡಿ. ಅಂದ್ರೆ ಮಗುವಿಗೆ ಹಾಲನ್ನು ಎಷ್ಟು ದಿವಸ ಕೊಡಬೇಕು ಅಂತೀರಿ?

ಭೂಪೇಶ : ಒಂದೂವರೆ ಎರಡು ವರ್ಷಗಳವರೆಗೂ ಕೊಡಬಹುದು. ಮಗು ತಾಯಿ ಹಾಲು ಎಷ್ಟು ಕುಡಿಯುತ್ತೋ ಅಷ್ಟು ದಷ್ಟಪುಷ್ಟವಾಗಿ ಬೆಳೆಯುತ್ತೆ. ಆರೋಗ್ಯವಾಗಿ ಗೆಲು ಗೆಲುವಾಗಿರುತ್ತೆ. ನೋಡಿ ಶಾರದಾ ಅವ್ರೆ ತಾಯಿ ಎದೆ ಹಾಲಿಗೆ ರೋಗ ನಿರೋಧಕ ಶಕ್ತಿ ಇರುತ್ತೆ. ಆದ್ದರಿಂದ ಬೇರೆ ಹಾಲಿಗಿಂತಲೂ ತಾಯಿ ಎದೆ ಹಾಲು ಬಹಳ ಪೌಷ್ಟಿಕವಾದುದು ಆಂತ ಹೇಳೋದು. ಅದ್ರಲ್ಲಿ ಎಲ್ಲಾ ರೀತಿಯ ಜೀವಸತ್ವವೂ ಇದ್ದು ಮಗುವಿನ ಸಂಪೂರ್ಣ ಬೆಳವಣಿಗೆಗೆ ಸಹಾಯವಾಗುತ್ತೆ.

ಗೀತಾ : ಬೇರೆ ದೇಶದಲ್ಲಿ ಮಗುವಿಗೆ ಬೇಗ ಹಾಲು ಬಿಡಿಸಿ-ಹಸುವಿನ ಹಾಲೋ ಅಥವಾ ಬೇರೆ ರೀತಿಯ ಬೇಬಿ ಫುಡ್ ಕೊಡ್ತಾರಂತೆ. ಹಾಗಾದ್ರೆ ಅವ್ರೂ ಚನ್ನಾಗಿ ಬೆಳ್ಯೊಲ್ಲ ಅಂತೀರಾ?

ಭೂಪೇಶ : ಯಾವ ದೇಶವೇ ಆಗಲೀ, ಮಕ್ಕಳು ಮಕ್ಕಳೇ, ತಾಯಿ ತಾಯಿಯೇ. ಮಗು ಬೆಳೆಯಬೇಕಾದ್ರೆ ತಾಯಿ ಹಾಲು ಮಗೂಗೆ ಬೇಕೇ ಬೇಕು. ಅವ್ರಿವ್ರು ಹೇಳಿದ್ರು ಅಂತ ಕೆಲವರು ಮಗುವಿಗೆ ಚಿಕ್ಕ ವಯಸ್ಸಿನಲ್ಲೇ ಗಟ್ಟಿ ಆಹಾರ ಕೊಡಲಿಕ್ಕೆ ಶುರು ಮಾಡ್ತಾರೆ. ಆದು ಸರಿಯಲ್ಲ. ಇದರಿಂದ ಮಗುವಿನ ರಕ್ಷಣೆಗಿಂತ ಮಗುವಿಗೆ ಅಂಟು ರೋಗಾಣುಗಳು ಸೇರಿ ರೋಗಕ್ಕೆ ಎಡೆಮಾಡಿಕೊಡುತ್ತದೆ ಅಂತ ಸಂಶೋಧನೆಗಳಿಂದ ತಿಳಿದು ಬಂದಿದೆ.

ಗೀತಾ : ಸಂಶೋಧನೆ ಏನು ಬಂತು. ದಿನ ನಿತ್ಯ ನಾವು ನೋಡ್ತಾನೇ ಇಲ್ವೇ?

ಭೂಪೇಶ : ಅದನ್ನ, ನೋಡಿದ್ದನ್ನ ಖಚಿತಪಡಿಸಿ ವಿಜ್ಞಾನಿಗಳು ಒಂದು ನಿರ್ಧಾರಕ್ಕೆ ಬಂದಿದ್ದಾರೆ, ಅದೇ ಸಂಶೋಧನೆ ಅಷ್ಟೆ.

ಗೀತಾ : ಏನು ಸುತ್ತಿ ಬಳಸಿ ಅದೇ ನೀವು ಹೇಳಿದ್ರಿ. ನಾನು ಅದೇ ಹೇಳ್ದೆ ಅಷ್ಟೆ. ಒಟ್ಟಿನಲ್ಲಿ ತಾಯಿ ಮಗುವಿಗೆ ಎದೆ ಹಾಲು ಕೊಡಬೇಕು ಅನ್ನೋದು ನಿಮ್ಮ ನಿರ್ಧಾರ ಅಲ್ವೇ?

ಭೂಪೇಶ : ನನ್ನದಲ್ಲ. ತಜ್ಞರು, ಅನುಭವಸ್ಥರ ನಿರ್ಧಾರ; ಅದನ್ನು ಹೇಳ್ದೆ... ಅದು ನಿಜ ತಾನೇ.

ಗೀತಾ : ಅದು ನಿಜಾ ಅನ್ನಿ...

ಭೂಪೇಶ : ಮಗೂನ ಮಾತೇ ಆಯ್ತು. ಈಗ ಶಾರದ ಅವರಿಗೆ ತಿಂಡಿ ಕಾಫಿ ಕೊಡ್ತೀಯೋ ಹ್ಯಾಗೆ.

ಗೀತಾ : ಎಲ್ಲಾ ರೆಡೀನೇ ಇದೆ. ಕೊಡ್ತೀನಿ.

* * *



# ಕಥಾ ರೂಪಾಂತರ

## ಬಿಡುಗಡೆ

(ಆಫೀಸಿನ ವಾತಾವರಣ)

ಅಧಿಕಾರಿ : ನೋಡಿ ಮಿಸ್.

ಸುಶೀಲ : ಸಾರ್...

ಅಧಿಕಾರಿ : ಒಂದೇ ಒಂದು ನಿಮಿಷ...ಸಧ್ಯ ನೀವಿನ್ನು ಹೋಗಿಲ್ವಲ್ಲಾ.

ಸುಶೀಲ : ಏನಾಗ್ಬೇಕಿತ್ತು ಹೇಳಿ ಸಾರ್.

ಅಧಿಕಾರಿ : ಇಂದಿನ ವಿನಿಮಯ ಧಾರಣೆಯಲ್ಲಿ ಈ ಪೌಂಡುಗಳನ್ನು ಡಾಲರ್‌ಗಳಿಗೆ ಪರಿವರ್ತಿಸಿ ಕೊಡ್ತೀರಾ?... ಒಂದು ಎರಡು ನಿಮಿಷದ ಕೆಲಸ.

ಸುಶೀಲ : ಆಯ್ತು ಸಾರ್... (ಯಂತ್ರದ ಶಬ್ದ)ತಗೆದುಕೊಳ್ಳಿ ಸಾರ್.

ಅಧಿಕಾರಿ : ಥ್ಯಾಂಕ್ಸ್.

ಸುಶೀಲ : ನೋ ಮೆನ್‌ಷನ್ ಸಾರ್.

ಅಧಿಕಾರಿ : ಅಂ...ನಿಮ್ಮ ಹೆಸರು?

ಸುಶೀಲ : ಸುಶೀಲ ಶರ್ಮ...

ಅಧಿಕಾರಿ : ನೀವು ಹೊಸಬರೇನು ಇಲ್ಲಿಗೆ...ಇಲ್ಲಿ ಬೇರೆ ಯಾರೂ ಇಲ್ಲ ಅಂತ ಕಾಣುತ್ತೆ.

ಸುಶೀಲ : ಹೌದು...ನಾನು ಬಂದು ಮೂರು ತಿಂಗಳಾಯ್ತು ಅಷ್ಟೇ.... ಆದರೆ...

ಅಧಿಕಾರಿ : ಆದರೆ...

ಸುಶೀಲ : ಇನ್ನೂ ಕೆಲಸ ಖಾಯಂ ಆಗಿಲ್ಲ...

ಅಧಿಕಾರಿ : ಐಸೀ... ಥ್ಯಾಂಕ್ಸ್...

ಸುಶೀಲ : (ನಿಟ್ಟುಸಿರು ಬಿಡುತ್ತ) ಇದು ನಿರೀಕ್ಷಿತ ಉತ್ತರವೇ, ತನ್ನ ಕೋಣೆಗೆ ತೆರಳಿದ ಅಧಿಕಾರಿ ಪುನಃ ತನ್ನ ನೆನಪಾದರೂ ಅದೇ ಪ್ರಶ್ನೆಯನ್ನು ಕೇಳಬಹುದು, ಇವಳಿಗಿಂತ ಚನ್ನಾದ ಹುಡುಗಿ ಯಾರೂ ಸಿಗಲಿಲ್ಲವೇ ಎಂದು, ಹೂಂ... ಆಯ್ತು...ಇನ್ನು ಮನೆಗಾದರೂ ಹೋಗೋಣ.

(ಬಸ್ಸಿನ ನಿಲ್ದಾಣಕ್ಕೆ ಬರುವಳು)

ಮಾಪುಸ್‌ಕರ್ : ಇದೇನು ...ಹಾಗೇಕೆ ನೋಡ್ತಿದ್ದೀಯೆ? ಹತ್ತಿರ ನಿಂತವರ ಗುರುತೂ ಸಿಗೋದಿಲ್ವೇನು?

ಸುಶೀಲ : ಓ...ನೀವಾ...? ಏಳು ಮಾಳಿಗೆಯ ಆ ಭವ್ಯ ಕಟ್ಟಡವನ್ನು ದೂರದಿಂದ ನೋಡುವುದರಲ್ಲೂ ಸುಖ, ಆ ಕಟ್ಟಡದ ಭವ್ಯತೆಗೂ ನನಗೂ ಅತ್ಯಂತ ಆತ್ಮಿಯ ಸಂಬಂಧ. ನಾನೂ ನಿಮ್ಮನ್ನೇ ನೋಡುತಿದ್ದೆ.

ಮಾಪುಸ್‌ಕರ್ : ನನ್ನನ್ನೇ ...ಈ ಬೀದಿಯಲ್ಲೋ ಅಥವಾ ಆಫೀಸಿನ ಕಟ್ಟಡದ ತುದಿಯಲ್ಲೋ?

ಸುಶೀಲ : ಕಟ್ಟಡದ ತುದಿಯಲ್ಲಲ್ಲ..ಕಟ್ಟಡದಲ್ಲೇ...ತುಂಬಾ ದಿನಗಳಿಂದ ನೋಡಿಯೇ ಇಲ್ಲ.

ಮಾಪುಸ್‌ಕರ್ : ನಿವೃತ್ತ ದಾರಿಯನ್ನು ನೋಡುತ್ತಿರುವ, ಸುಕ್ಕು ಕಟ್ಟಿದ ಮುಖ, ನರೆತ ಕೂದಲು, ಕೃತಕ ಹಲ್ಲುಗಳ ಬಾಯಿ... ಅಸಹ್ಯವೆನಿಸುವ ಬಟ್ಟೆಬರೆಯ ವಿನಾಯಕ ಮಾಪುಸ್‌ಕರ್ ನೋಡುತ್ತಿದ್ದೇನೆ ಅಂದ್ರೆ...ನನ್ನನ್ನೂ ಕೂಡ ನೋಡ್ತಾರೆ ಅಂದ ಹಾಗಾಯ್ತು. ಹೂಂ.... ಬಸ್ಸು ಬರುವಂತಿಲ್ಲ ಬಾ... ಸುಶೀಲಾ ನಡೆದೇ ಹೋಗೋಣ. ಅದಕ್ಕೆ ಹತ್ತು ಪೈಸೆ ದಂಡ.

ಸುಶೀಲ : ಆಯ್ತು ನಡೆದೇ ಹೋಗೋಣ.

ಮಾಪುಸ್‌ಕರ್ : ಇಪ್ಪತ್ತೈದು ವರ್ಷಗಳಿಂದ ತುಳಿದ ದಾರಿ, ಮುದುಕನಾದೆನಮ್ಮ ಮೆಲ್ಲಗೆ ನಡೆಯೋಣ ಅದೂ ಮುದುಕಾಗಿದೆ ನನ್ನಂತೆಯೇ...ನಿನ್ನಷ್ಟು ಜೋರಾಗಿ ನಡೆಯುವ ತ್ರಾಣ ನನಗಿಲ್ಲಮ್ಮ

ಸುಶೀಲ : ಓಡೋ ಮನಸ್ಸು ನನಗೂ ಇಲ್ಲ...ಮೆಲ್ಲಗೇ ಹೋಗೋಣ. ಸ್ವಲ್ಪ ನಿಲ್ಲಿ..... ಸ್ವಲ್ಪ ಕಡಲೇಕಾಯಿ ತಗೆದುಕೊಳ್ತೀನಿ.

ಮಾಪುಸ್‌ಕರ್ : ತಗೆದುಕೊಳ್ಳವ್ವ...

ಸುಶೀಲ : ಎರಡು ಪ್ಯಾಕೆಟ್ ಕಡಲೆಕಾಯಿ ಕೊಡಪ್ಪ...ತೆಗೊಳ್ಳಿ ಮಾಪುಸಕರ್ ನಿಮಗೊಂದು ಪ್ಯಾಕೆಟ್.

ಮಾಪುಸ್‌ಕರ್ : ಏಕೆ ಚೀಲದಲ್ಲಿ ತುರುಕಿಬಿಟ್ಟೆ...ತಿನ್ನೋದಿಲ್ವೇ? ಹಂಚಿಕೊಂಡು ಇಬ್ಬರೂ ತಿನ್ನಬೇಕು.

ಸುಶೀಲ : ಹೌದು ಹಂಚಿಕೊಂಡು ತಿಂದ್ರೇನೇ ಸುಖ.

ಮಾಪುಸ್‌ಕರ್ : ಆತ ನೀನು ತರುವ ಕಡ್ಲೇಕಾಯಿಗಾಗಿಯೇ ಕಾಯುತ್ತಿರುತ್ತಾನೇ ಅಲ್ಲವೇ ನಿನ್ನ ಮನೋಹರ?

ಸುಶೀಲ : ಹೌದು ಮಾಪುಸ್‌ಕರ್.... ಅವರು ಕಾಯ್ತಿರ್ತಾರೆ. ತನ್ನ ಮುದ್ದಿನ ಸುಶೀ ಯಾವಾಗ ಬರ್ತಾಳೆಂದು ದಾರಿ ನೋಡ್ತಿರ್ತಾರೆ.

ಮಾಪುಸ್‌ಕರ್ : ಮನೋಹರ ಎಷ್ಟು ಚಂದವಾದ ಹೆಸರು? ನನ್ನ ಮೊಮ್ಮಗನ ಹೆಸರೇ...ನನ್ನ ಮೊಮ್ಮಗನಿಗೂ ಅಷ್ಟೇ, ಕಡ್ಲೇಕಾಯಿ ಅಂದ್ರೆ ಬಹಳ ಇಷ್ಟ. ಈಗ ನಾನು ನೀನು ಕೊಟ್ಟಿದ್ದನ್ನು ತಿಂದುಬಿಡ್ತೀನಿ ಆದರೆ ಮನೆಗೆ ಸೇರುವಾಗ ಇನ್ನೊಂದು ಕಟ್ಟು ಒಯ್ಯಲೇಬೇಕು. ಅವನು ನನ್ನ ಬೆನ್ನ ಮೇಲೇರಿ ನನ್ನ ಕಿಸೆಯಿಂದ ಅದನ್ನು ಎಳೆಯಲೇ ಬೇಕು. ಆಮೇಲೇ ಅವನೊಡನೆ ಆಟ. ಅವನ ಆಟಕ್ಕಾಗಿ ನಾನು ಮಂಗನಾಗಬೇಕು, ಕುದುರೆಯಾಗಬೇಕು, ಹುಲಿಯಾಗಬೇಕು. ನಕ್ಕು... ನಕ್ಕು... ಕಣ್ಣೀರು ಬರುವ ತನಕ ನಕ್ಕೂ ಆಮೇಲೆ ನನ್ನ ಮುದ್ದು ಸೊಸೆ ಊಟಕ್ಕೆ ಕರೆಯುವಾಗ...... (ಕಾರು ಸಡನ್ ಆಗಿ ಬ್ರೇಕ್ ಹಾಕಿತು)

ಕಾರಿನವ : ಏ ಕಾಕಾ...ಸ್ಮಶಾನ ಹತ್ತಿರ ಇದೆಯೇನು?

ಮಾಪುಸ್‌ಕರ್ : ನನಗೆ ಸೋನಾಪುರ ನೆನಪು ಹುಟ್ಟಿಸುತ್ತಾನೆ, ನನ್ನ ಮಗ ಕೇಳಿದ್ರೆ....ಆ ಕಾರಿನವನನ್ನು ಸಿಗಿದು ಹಾಕ್ಬಿಡ್ತಿದ್ದ.

ಸುಶೀಲ : ಹೋಗ್ಲಿ ಬಿಡಿ ಕಾರು ಓಡಿಸುವವರ ರೀತೀನೇ ಹಾಗೆ.

ಮಾಪುಸ್‌ಕರ್ : ಆದ್ರೆ ನನ್ನ ಮಗನಿಗೆ ಇಂಥದ್ನೆಲ್ಲಾ ಸಹಿಸೋಕ್ಕಾಗೋಲ್ಲ ಚಿಕ್ಕಂದಿನಿಂದಲೂ ಅಷ್ಟೇ...ತನ್ನ ತಂದೆ ಅವಮಾನ ಯಾರಿಂದದಾದ್ರೂ ಅವರ ಮುಖಕ್ಕೆ ಒದೆಯಲು ಸಿದ್ಧ. ನನಗೆ ನೋವಾದ್ರ ಅವನಿಗೂ ನೋವು. ನನಗೆ ಖಾಯಿಲೆ ಆದ್ರೆ ಅವನಿಗೂ ತಲೆಸಿಡಿತ. ನಾನು ದುಡಿಯುವುದನ್ನು ಕಂಡು ಬೇಸರ, ಸಿಟ್ಟು ಯಾಕೆ ಈ ವಯಸ್ಸಿನಲ್ಲಿ ದುಡೀತೀರಿ? ಸಾಕಷ್ಟು ಸಂಪಾದಿಸಿ ತರ್ತೀನಿ. ಗೋವಾದಲ್ಲಿ ಹೇಗೋ ನಿಮ್ಮ ಸ್ವಂತ ಮನೆ ಇದೆ ಸುಖವಾಗಿರಿ ಅನ್ತಾನೆ. ಆದರೆ ದುಡಿಯಲು ಕಲಿತಿರುವ ಈ ಜೀವ ಸುಮ್ಮನೆ ಕುಳಿತಿರುತ್ತಾ? ಬಿಡುಗಡೆಯ ದಿನಾ ಬರೋತನ್ಕ ದುಡಿಯಲೇ ಬೇಕು. ನನ್ನ ಮಗನಿಗಾಗಿ... ಸೊಸೆಗಾಗಿ... ಮೊಮ್ಮಗ... ಅವನ ಹೆಸರು ಮನೋಹರ.... ಮನೋಹರನಿಗಾಗಿ...

ಸುಶೀಲ : (ನಗುತ್ತಾ) ಮನೋಹರನಿಗಾಗಿ.

ಮಾಪುಸ್‌ಕರ್ : ಹಾ...ನೋಡು...ಆ ಹೆಸರು ಪುನಃ ಪುನಃ ಕೇಳಿದಾಗ ನಿನ್ನ ಮುಖ ಹೇಗೆ ಅರಳುತ್ತೆ? ಈಗಿನ ಹುಡುಗ ಹುಡುಗಿಯರೇ ಹಾಗೆ ಹಾಗೇ...ಪ್ರೀತಿ ಅಲ್ವೇ?

ಸುಶೀಲ : ಹೌದು ಮಾಪುಸಕರ್...ಪ್ರೀತಿ...

ಮಾಪುಸ್‌ಕರ್ : ನಿನ್ನ ಕೆಲಸ ಖಾಯಂ ಆದೊಡನೆ ನಿಮ್ಮಿಬ್ಬರ ಲಗ್ನವಾಗುತ್ತೆ.

ಸುಶೀಲ : ಹೌದು...

ಮಾಪುಸ್‌ಕರ್ : ಯಾಕೆ ಅವಸರ ಸಲ್ಪ ಕಬ್ಬಿನ ರಸ ಕುಡಿಯೋಣ.

ಸುಶೀಲ : ಆಯ್ತು ಕುಡಿಯೋಣ.

ಮಾಪುಸ್‌ಕರ್ : ನಿನ್ನ ಮನೋಹರ ತಡವಾಯ್ತು ಅಂತ ಕೋಪಿಸಿಕೊಳ್ಳುವುದಿಲ್ಲವೇ?

ಸುಶೀಲ : ಅವರಿಗೆ ಕೋಪ ಅಂದ್ರೇನು ಅಂತ್ಲೇ ಗೊತ್ತಿಲ್ಲ.

ಮಾಪುಸ್‌ಕರ್ : ಬಹಳ ಶಾಂತ ಸ್ವಭಾವವಿರಬೇಕು. ನನಗೆ ಗೊತ್ತು ನನ್ನ ಮಗನ ಹಾಗೇ...ಆದ್ರೆ ನನ್ನ ಮಗ ತಂದೆ ಅವಮಾನ ಮಾತ್ರ ಸಹಿಸಲಾರ.

ಸುಶೀಲ : ಇವರೂ ಹಾಗೆ ನನಗೆ ನೋವಾಗೋದನ್ನ ಸಹಿಸಲಾರರು. ಆಫೀಸಿನಲ್ಲಿ ಬೇಸರ ಆಯ್ತು ಅಂದ್ರೆ ಕೆಲಸ ಬಿಟ್ಟುಬಿಡು ಅನ್ತಾರೆ. ಹತ್ತು ನಿಮಿಷ ತಡವಾದ್ರೆ ದಾರೀಲಿ ಏನಾಯ್ತೊ ಅಂತ ತಳಮಳಪಡ್ತಾರೆ. ಆದರೆ ಏನಾದ್ರೂ ನಾನು ಮನೆ ಸೇರುವ ಮೊದಲು ಅವರನ್ನು ನೋಡದೇ ಹೋಗೋದಿಲ್ಲ ಅಂತ ಅವರಿಗೆ ಖಂಡಿತ ಗೊತ್ತು. ಹೀಗಿರೋದ್ರಿಂದ ಎಷ್ಟು ಬೇಸರ ಆಗಿದ್ದರೂ ನನ್ನನ್ನು ಕಂಡೊಡನೆ ನನ್ನ ಮುಖ ನೋಡಿದೊಡನೆಯೇ ಅದು ಮಾಯವಾಗ್ಬಿಡ್ತದೆ. ನನ್ನನ್ನು ನೋಡಿದೊಡನೆ ಅವರಿಗೆ ಸಂತೋಷದ ನಗು.

ಮಾಪುಸ್‌ಕರ್ : ಗೊತ್ತು ಮಗು... ಗೊತ್ತು. ನೋಡು ಸುಶೀಲಾ...ನಿನ್ನ ಮನೋಹರನಿಗೆ ಹೇಳು, ನಾನೇನು ಇದೇ ಮೊದಲನೆ ಸಲವಲ್ಲ ನಿನಗ ಹೇಳ್ತಿರೋದು ನೀವಿಬ್ಬರೂ ನಮ್ಮಲ್ಲಿಗೊಮ್ಮೆ ಬರಬೇಕು. ನನ್ನ ಮಗನನ್ನು ಸೊಸೆಯನ್ನು ನೋಡಬೇಕು. ಮದುವೆ ಆದ ಮೇಲೆ ಗೋವಾ ಮನೆಯಲ್ಲಿ ಸ್ವಲ್ಪ ದಿನ ಇರಬೇಕು, ನಿನಗೆ ಯಾವ ರೀತಿ ಸಹಾಯ ಬೇಕೋ ಹೇಳು ಬೇರೆ ಮನೇನಾ, ಒಳ್ಳೇ ಕೆಲಸಾನೇ...? ನಿಮ್ಮ ಭವಿಷ್ಯವೇ ನನ್ನ ಮಗನ ಕೈಲಿದೆ ಅಂತ ತಿಳಿ...ಅವನು ಅಂತಾ ಉದಾರಿನವ್ನ. ನಿಮಗೆ ಬೇಕಾದ ಸಹಾಯ ಮಾಡ್ತಾನೆ. (ಕಾರುಗಳ ವೇಗದ ದನಿ) ನಾಳಿದ್ದು ಭಾನುವಾರ ಎಲ್ಲಿಗೆ ಸುಶೀಲಾ? ಮೊನ್ನೆ ವಿಹಾರ್ ಲೇಕ್ಸ್‌ಗೆ ಹೋಗಿದ್ದರಲ್ಲಾ ನಾಡಿದ್ದು ಎಲ್ಲಗೆ ಎಂದೆ?

ಸುಶೀಲ : ಎಲಿಫೆಂಟಾ.

ಮಾಪುಸ್‌ಕರ್ : ಒಳ್ಳೇದು ಹೋಗಿ ಬನ್ನಿ, ಸಾಕಷ್ಟು ತಿರುಗಬೇಕು. ಆಮೇಲೆ ಮಕ್ಕಳಾದ ಮೇಲೆ ತಿರುಗಲಿಕ್ಕೆ ಅಷ್ಟು ಅವಕಾಶ ಇರೋಲ್ಲ.

ಸುಶೀಲ : ಹಾಗಲ್ಲ ಮಾಪುಸಕರ್,ನಮಗೆ ಸರಿಯಾಗಿ ಮಾತನಾಡಲಿಕ್ಕೆ ಸಿಗೋದು ಭಾನುವಾರ ಒಂದೇ. ಆವೊತ್ತು ಮಾತ್ರ ಚರ್ಚೆ ಮಾಡಲಿಕ್ಕೆ ಅವಕಾಶ. ನಮ್ಮ ದಾಂಪತ್ಯ ಹೇಗಿರಬೇಕು, ನಮ್ಮ ಸಂಸಾರ ಜೀವನ ಹೇಗೆ ಸಾಗಬೇಕು? ನಮ್ಮ ಮನೆ ಎಂಥದಿರಬೇಕು ಹಾಗೇ ಯೋಚಿಸಿ, ಮಾತನಾಡಿ, ಚರ್ಚಿಸಿ ನಾವಿಬ್ಬರೇ ನಕ್ಕು ನಕ್ಕು ಕನಸು ಕಂಡು....

ಮಾಪುಸ್‌ಕರ್ : ಗೊತ್ತು ಮಗೂ...ಗೊತ್ತು ನಾನಿನ್ನು ಬರಲೇ...?

ಸುಶೀಲ : ಈ ಕಿತ್ತಲೆ ಹಣ್ಣು ತಗೆದುಕೊಳ್ಳಿ ನಿಮ್ಮ ಮನೋಹರನಿಗೆ ಕೊಡಿ.

ಮಾಪುಸ್‌ಕರ್ : ಆಯ್ತಮ್ಮಾ......

(ರೇಲ್ವೆನಲ್ಲಿ ಹೋಗುತ್ತಿದ್ದಾಗ)

ಸುಶೀಲ : ನಾನು ಬಳಿ ಇರುವಾಗ ಏನು ಹೆದರಿಕೆ? ಎನ್ನುವಂತೆ ಆತನ ತೋಳುಗಳು ತನ್ನನ್ನು ಬಳಸಿವೆ. ನನ್ನ ತಲೆ ಆತನ ವಿಶಾಲ ಎದೆಯ ಮೇಲೆ ಮಲಗಿದೆ. ತನ್ನ ಕುರುಳುಗಳನ್ನು ನೇವರಿಸುವ ಆತನ ಕೈ ನನ್ನ ಮುಖದ ಮೇಲೆ ಆಡುತ್ತಿದೆ. ಎದೆಯ ಬಳಸಿದ ಕೈ ಹಿಡಿತ ಬಿಗಿಯಾಗುತ್ತಿದೆ. ನನ್ನೆದೆ ಬಡಿತ ತೀವ್ರವಾಗುತ್ತಿದೆ. ಆತನ ತುಟಿ ನನ್ನ ತುಟಿಯನ್ನರಸಿ ಬರುತ್ತಿವೆ...ಎಂಥಾ ಎದರಿಕೆ...(ರೈಲು ಓಟ). ಮನೋಹರ ಜೊತೆಗಿದ್ದರೆ ನಿತ್ಯದಂತೆ...ಸತ್ಯದಂತೆ ಮನೋಹರ...ಆತನ ಮುಖ ಕಾಣದ ಮುಖ...ಕೈ ಕೈ ಹಿಡಿದು ಬೆರಳು ಬೆರಳು ಬಂಧಿಸಿ, ಒಂದೊಂದೇ ಕಡಲೇಕಾಯಿ ತಿನ್ನುತ್ತಾ, ಸಾಮಿಪ್ಯ ಸುಖದಲ್ಲೇ ಜೀವನವನ್ನು ...ಶಾಶ್ವತ ಸತ್ಯವನ್ನು ಕಾಣುತ್ತಾ ಮಾತು...ಮರೆತು...ಘಂಟೆಗಟ್ಟಲೆ ಮಾತು...?

ಭಿಕ್ಷುಕ : ಬಾಯಿ ಸಾಬ್...

ಸುಶೀಲ : ತಗೋ...., ಮಾಪುಸಕರ್...ಮನೋಹರ ಮಾಪುಸಕರ್, ಅಬ್ಬಾ ಕರವಸ್ತ್ರ ಮೂಗಿಗೆ ಮುಚ್ಚಿದರೂ ವಾಸನೆ ಕೆಟ್ಟ ನಾತಾ...ಮುನಿಸಿಪಾಲಿಟಿಯವರಿಗೆ ಅರಿವೇ ಇಲ್ಲವೇನೋ. (ಬಾಗಿಲು ತಟ್ಟುವ ಶಬ್ದ) ಬಾಗಿಲು ದೂಡಬಾರದೇ... ಬಾಗಿಲು ತಾಳ ಹಾಕಿ ಕುಳಿತುಕೊಳ್ಳಲಿಕ್ಕೆ ಮನೆಯಲ್ಲಿ ಏನಿದೆ? ನಿನ್ನನ್ನು ಹೊತ್ತಿಕೊಂಡು ಹೋಗಬೇಕು ಯಾರಾದ್ರೂ ಅಷ್ಟೇ.

ತಾಯಿ : ಮುಕ್ತಾ ಅಡಿಗೆ ಕೋಣೆ ಕಿಟಕಿ ತೆಗೆಯೇ...ಹೊಗೆ ಹೋಗಲಿ.

ಸುಶೀಲ : ಬೇಡ ಹಿಂದಿನಿಂದ ಕೆಟ್ಟ ವಾಸನೆ ಬರುತ್ತೆ.

ತಾಯಿ : ಹಾಗಾದ್ರೆ ಏಳಲು ಸಾಧ್ಯವಾಗದ ನನ್ನ ಕಣ್ಣು ಕುರುಡಾಗಬೇಕೇನು?

ಸುಶೀಲ : ತೆಗೆ ಮುಕ್ತಾ ನಾನೇ ಹೊರಗೆ ಹೋಗ್ತೇನೆ. (ಜನರ ಗಲಾಟೆ, ರೇಡಿಯೋ ಮಕ್ಕಳ ಕೂಗು) ಹೂಂ ಕನ್ನಡಿಯಲ್ಲಿ ಮುಖ ನೋಡಿಕೊಳ್ಳಲು... ಏನಿದೆ? ಅಸಹ್ಯವೆನಿಸುವ ಅರಳಿದ ಮೂಗು, ದಪ್ಪ ತುಟಿ...ಸಾಲದ್ದಕ್ಕೆ ಸಿಡುಬಿನ ಕಲೆ.

ಧ್ವನಿ : ಇವಳಿಗಿಂತ ಚಂದದ ಹುಡುಗಿಯರು ಬೇರಾರೂ ಸಿಗಲಿಲ್ಲವೇ?

ತಾಯಿ : ಕೆಲಸ ಖಾಯಂ ಆಯ್ತೇನ್...ಇನ್ನಾದ್ರೂ ಸಂಬಳ ಸರಿಯಾಗಿ ಸಿಗುತ್ತೇನೇ?

ಸುಶೀಲ : ಇಲ್ಲ ಇಲ್ಲ ಇಲ್ಲ. ಎಷ್ಟು ಸಲ ಹೇಳಬೇಕು ಇಲ್ಲ ಅಂತ. ನನ್ನ ಕೆಲಸ ಖಾಯಂ ಆಗುವುದೆಂದೇ ಇಲ್ಲ. ಅಷ್ಟರ ತನಕ ಹುಡುಕುತ್ತಲೇ ಇರ್ತಿನಿ.

(ಜನರ ಜಗಳ ಸಿಳ್ಳು...ನಗು ಅಳು ಅವಾಚ್ಯ ಶಬ್ದಗಳು, ಬೈಗುಳ... ಮಗುವಿನ ಕೂಗು) ದಾರಿ ಮಾಡಿಕೊಂಡು ಬರ್ತಾನೆ.

ತಾಯಿ : ಮೊನ್ನೆ ಕೆಲಸ ಖಾಯಂ ಆಗುತ್ತೆ. ಅಂತ್ಯದಲ್ಲೇ ನಮ್ಮನ್ನೆಲ್ಲಾ ಸಾಯಲು ಬಿಟ್ಟು ಓಡಲು ತಯಾರಿ ನಡೆಸಿದ್ದೀಯೇನು? ಅವರು ಸತ್ತ ಮೇಲೆ ಆರು ವರ್ಷ ಸಾಕಿ, ಕಲಿಸಿ, ನಿನನ್ನು ದೊಡ್ಡವಳ ಮಾಡಿದ್ದಕ್ಕೆ ಈಗ ನಾನು ಕಾಲು ಮುರಿದುಕೊಂಡು ಬಿದ್ದಾಗ...

ಸುಶೀಲ : ಅಮ್ಮಾ...

ತಾಯಿ : ಅಮ್ಮಾ ಅಮ್ಮಾ ಅಂತ ಒದರಿದರೆ ಏನು ಬರುತ್ತೆ. ನನಗೆ ಕಾಲು ಹೋಗಿ ಈ ಅವಸ್ಥೆ ಅಲ್ವೇನೇ? ನನ್ನ ಕಾಲು ಸರಿ ಇದ್ದಿದ್ದರೆ ಈಗ ನಿನಗೆ ಈ ರೀತಿ ಮಾತಾಡೋ ಧೈರ್ಯ ಬರುತ್ತಿತ್ತೇನೇ?

ಸುಶೀಲ : ಆ ಧೈರ್ಯವಿರದ, ಬೇಸರದಿಂದಲ್ಲವೇ ಅಮ್ಮಾ ಅಪ್ಪ ಸತ್ತದ್ದು?

ತಾಯಿ : ಏನು ಏನು ಏನು? ನಾನು ಅಪ್ಪನ್ನ ಕೊಂದದ್ದೇ... ನಾನು ಅಪ್ಪನ್ನ ಕೊಂದದ್ದೇ ಸುಶೀ...

ಸುಶೀಲ : ಏನು ವಾಸನೆ ...ಈ ನರಕದಿಂದ ಬಿಡುಗಡೆ ದಾರಿ ತೋರಿಸಿ ಸ್ವರ್ಗಕ್ಕೆ ಕರೆದೊಯ್ಯಲು ಮನೋಹರ ಬರ್ತಾನೆ ದೂರ... ಎಲ್ಲಾದ್ರೂ ದೂರ.

ಸುಶೀಲ : ತಗೋಳಮ್ಮ ಊಟ...

ತಾಯಿ : ಸುಶೀ...ನಿಜವಾಗಿ ಹೇಳು ಕೆಲಸ ಖಾಯಂ ಆಗಲಿಲ್ವೇ?

ಸುಶೀಲ : ಇಲ್ಲಮ್ಮಾ ಇಲ್ಲ.

ತಾಯಿ : ಮೂರು ತಿಂಗಳಾದ್ರೂ ಅಷ್ಟು ದೊಡ್ಡ ಕಂಪನಿಯಲ್ಲಿ ಕೆಲಸ ಖಾಯಂ ಮಾಡೋದಿಲ್ವೇ?

ಸುಶೀಲ : ಇಲ್ಲ ಇಲ್ಲ ನನಗಿಂತ ಚೆಂದಾದ ಹುಡುಗಿಯರು ಬೇರಾರಾದ್ರೂ ಸಿಗಬಹುದೇ ಅಂತ ನೋಡ್ತಿದ್ದಾರೆ.

ತಾಯಿ : ಚೆಂದ ನೋಡಿ ಕೆಲಸ ಕೊಡ್ತಾರೇನೇ ಸುಶೀಲಾ? ಅಲ್ಲ ಯಾರ್ನಾದ್ರೂ ಕೇಳಬಾರದೆ? ನಿನಗೆ ನನ್ನೊಡನೆ ಮಾತಾಡ್ಲಿಕ್ಕೆ ಬರುತ್ತೆ ಹೊರ್ತು ಬೇರೆಯವರೊಡನೆ ಮಾತಾಡ್ಲಿಕ್ಕೆ ಬರೋಲ್ಲ. ನಾನು ಕಾಲು ಮುರಿದುಕೊಂಡು ಬಿದ್ದೀದ್ದೀನಿ ನೋಡು.

ಸುಶೀಲ : ಮಾತಾಡಿದ್ದೀನಮ್ಮಾ.

ತಾಯಿ : ಯಾರವರು?

ಸುಶೀಲ : ಅವರ ಹೆಸರು ಮಾಪುಸಕರ್. ದೊಡ್ಡವರು, ವಯಸ್ಸಾಗಿದೆ, ಕೆಲಸ ಖಾಯಂ ಮಾಡಿಸ್ತೀನಿ ಅಂದಿದ್ದಾರೆ. ಸಾವಿರ ಜನ ಕೆಲಸ ಮಾಡೋ ಆಫೀಸಿನಲ್ಲಿ

ಅವರೊಬ್ಬರೇ ತುಂಬಾ ಚೆನ್ನಾಗಿ ಮಾತಾಡ್ತಾರೆ. ಅವರಿಂದ ಸಾಧ್ಯವಾಗದದ್ದು ಏನೂ ಇಲ್ಲ.

ತಾಯಿ : ಇಷ್ಟು ದೊಡ್ಡ ಕಂಪ್ನೀಲಿ ಇಂಥ ಒಳ್ಳೆ ಕೆಲಸ ಬೇರೆ ಕಡೆ ಎಲ್ಲೂ ಸಿಗೋಲ್ಲಮ್ಮ ಅವರನ್ನು ಇಲ್ಲಿಗೆ ಒಂದು ದಿನ ಕರೆದುಕೊಂಡು ಬಾ ನಾನೇ ಮಾತಾಡ್ತೀನಿ.

ಸುಶೀಲ : ಅವರೇ ನಮ್ಮನ್ನು ಅವರಲ್ಲಿಗೆ ಬರಲಿಕ್ಕೆ ಹೇಳಿದ್ದಾರಮ್ಮ ನನ್ನನ್ನು ಮನೋಹರನನ್ನು.

ತಾಯಿ : ನಾನು ಈ ಸ್ಥಿತೀಲಿ ಹೇಗೆ ಬರಲಿ? ಅವರನ್ನೇ ಇಲ್ಲಿಗೆ ಬರುವಂತೆ ಹೇಳಮ್ಮಾ

ಸುಶೀಲ : ಊಟ ಮಾಡಮ್ಮ (ಅಡಿಗೆ ಪಾತ್ರೆ ತೊಳೆಯುವ ಶಬ್ದ)

ತಾಯಿ : ಸುಶೀ...ಸ್ವಲ್ಪ ಕಾಲಿಗೆ ಎಣ್ಣೆ ತಿಕ್ಕೀಯಮ್ಮಾ

ಸುಶೀಲ : ಆಯ್ತಮ್ಮಾ ಆ ನೋವು ಯಾಕಮ್ಮಾ ಕಣ್ಣೀರು?

ತಾಯಿ : ಸ್ವಲ್ಪ ನೋವು ಅಷ್ಟೇ.

ಸುಶೀಲ : ಅಮ್ಮಾ ಆ ಮಾಪುಸಕರ್ ಬಹಳ ಒಳ್ಳೆಯವರು. ಅವರ ಸಹಾಯದ ಧೈರ್ಯ ಇರೋದ್ರಿಂದ ಕೆಲ್ಸ ಖಾಯಂ ಆದೀತಮ್ಮ. ಮನೋಹರನ ಪ್ರೀತಿಯ ಜೋಗುಳ, ಕೈಗೆ ಕೈ... ಭುಜಕ್ಕೆ ಭುಜ...ಕೆನ್ನೆಗೆ ಕೆನ್ನೆ ಈ ಸಾಮಿಪ್ಯ ಸುಖ...ಓ...ಬೆಂಕಿ... ಈ ನಿರ್ಜನ ಪ್ರದೇಶದಲ್ಲಿ ಕೈ ಕೈ ಹಿಡಿದು ಓಡಾಡುವಾಗ, ದೂರದಲ್ಲಿ ಕಾಣುವ ಸಮುದ್ರದತ್ತ ಧಾವಿಸುವಾಗ, ಮಾಪುಸ್‌ಕರ್ ಕರೆಯುತ್ತಿದ್ದಾರೆ... ಬಂದೇ... ಅಯ್ಯೋ... ಎಂಥ ಕನಸು! ಮನೋಹರ...!

ಎಂಥ ಅಜಾನುಭಾಹು ವ್ಯಕ್ತಿ? ನನ್ನ ಮುಖವನ್ನು ಅಡಗಿಸಲು ವಿಶಾಲವಾದ ಎದೆ, ಭದ್ರವಾಗಿ ಬಳಸುವ ತೋಳುಗಳು. ನನ್ನ ತುಟಿಗಳ ಮೇಲೆ ಒರಗುವ ತುಟಿ, ಆದರೆ...ಆದರೆ...ಮುಖ ಮಾತ್ರ ಕಾಣುವುದಿಲ್ಲ. ಎಷ್ಟು ಗುರುತಿಸಲು ಪ್ರಯತ್ನಿಸಿದರೂ ಕಾಣುವುದಿಲ್ಲ.

(ಸಂಗೀತ)

ಎಂಟತ್ತು ದಿನಗಳಾದರೂ ಮಾಪುಸಕರ್ ಕಾಣಲಿಲ್ಲ.

ಧ್ವನಿ : ವಿಹಾರ ಲೇಕ್ಸ್, ಎಲಿಫೆಂಟಾ ಹೋಗಿ ಬನ್ನಿ ಸಾಕಷ್ಟು ತಿರುಗಿ... ಆಮೇಲೆ ಮಕ್ಕಳಾದ ಮೇಲೆ ತಿರುಗಾಡಲು ಅವಕಾಶ ಸಿಗುವುದಿಲ್ಲ.

ಸುಶೀಲ : ಏನು ಮಾಪುಸ್‌ಕರ್ ಕಾಣಸ್ತಾ ಇಲ್ಲ...ರಜೇಲಿದ್ದಾರೇನು...?

ಒ : ಯಾರು ಮಾಪುಸಕರ್? ಓ...ಆ ಮುದುಕನೇ? ಯಾರಿಗೆ ಗೊತ್ತು? ಯಾವ ರೆಕಾರ್ಡ್ ರೂಮಿನಲ್ಲಿ ನಿದ್ದೆ ಮಾಡ್ತಿದ್ದಾನೋ ಯಾರಿಗೆ ಗೊತ್ತು?

ಅಯ್ಯರ್ : ಆ ಮುದುಕ ಸತ್ತನಂತೆ.

ಸುಶೀಲ : ಏನು? ವಿನಾಯಕ ಮಾಪುಸಕರ್ ಸತ್ತರಂತೆ, ನಿಜವೇ ಸಾರ್.

ಅಯ್ಯರ್ : ನೀನಿಲ್ಲಿರೋದು ನಿಜವೇ? ಪೌದು ನಿನಗೇನು ಆಸಕ್ತಿ? ಪರಿಚಯವೇ? ಸಂಬಂಧವೇ?

ಸುಶೀಲ : ಎಂಟು ದಿನಗಳ ಹಿಂದೆ ನೋಡಿದ್ದೆ. ಇಷ್ಟು ಬೇಗನೆ ಈಗಾಯ್ತೋ ಪಾಪ.

ಅಯ್ಯರ್ : ಹಾರ್ಟ್ ಅಟ್ಯಾಕ್...

ಸುಶೀಲ : ಅವರ ವಿಳಾಸವಿದೆಯೇ?

ಅಯ್ಯರ್ : ಏನು ನಿನಗೆ ಪರಿಚಯವೇ? ಸಂಬಂಧವೇ?

ಸುಶೀಲ : ನನಗೆ ಅವರ ಮಗನನ್ನು ಕಾಣಬೇಕು, ಅವರ ಮೊಮ್ಮಗನನ್ನು ನೋಡಬೇಕು.

ಅಯ್ಯರ್ : ಹುಚ್ಚುಗಿಚ್ಚು ಏನಾದ್ರೂ ಹಿಡಿದಿದೆಯಮ್ಮಾ? ಮಾಪುಸಕರ್‌ಗೆ ಮಗ, ಸೊಸೆ, ಮೊಮ್ಮಗ...ಯಾರು ನಿನಗೆ ಹೇಳಿದ್ದು ಈ ಕಟ್ಟು ಕಥೆ? ಮದುವೆಯೇ ಆಗದ ಮುದುಕನಿಗೆ ಮಗ ಮೊಮ್ಮಗ ಮನೆಯೇ? ಆತ ತನ್ನ ಅರ್ಧ ಆಯಸ್ಸನ್ನು ಫೋಡಾನ್ ರಸ್ತೆಯ ಸೂಳೆಗೇರಿಯಲ್ಲಿ ಕಳೆದಿದ್ದಾನೆ. ಸಂಬಳದಲ್ಲಿ ಕುಡಿದು ಉಳಿದ ಹಣ ಸಿಕ್ಕೀತು ಎಂಬ ಆಸೆಯಿಂದ ಒಬ್ಬ ದೂರದ ಸಂಬಂಧಿ ಆತನಿಗೆ ಅನ್ನ ಹಾಕುತ್ತಿದ್ದ. ಆತನ ಪ್ರಾವಿಡೆಂಟ್ ಫಂಡ್ ಹಣ ಸಿಕ್ಕೀತೆಂಬ ಆಸೆಯಿಂದ.

ಸುಶೀಲ : ಗೋವಾದಲ್ಲಿ ಸ್ವಂತ ಮನೆ.

ಅಯ್ಯರ್ : ನೀನೇನು ಕನಸು ಕಾಣುತ್ತೀಯಾ? ಆ ಮುದುಕಾ ಗೋವಾ ಕಂಡೇ ಇಲ್ಲ.

(ಟೈಪರೈಟರ್ ಶಬ್ದ)

ಸುಶೀಲ : (ಸ್ವಗತ)ಮಾಪುಸಕರ್ ಸತ್ತು ಹೋದರು, ಮನೋಹರನೂ ಸತ್ತು ಹೋದ

(ದುಃಖದಿಂದ)

ಅಯ್ಯರ್ : ಇವತ್ತಿನ ನಿಮ್ಮ ಕೆಲಸ ನೋಡಿದ ಮೇಲೆ ಇನ್ನು ನಿಮ್ಮನ್ನು ಇಲ್ಲಿ ಇರಿಸಿಕೊಳ್ಳಲಾಗುವುದಿಲ್ಲ. ನಾಳೆ ಒಂದನೇ ತಾರೀಕು ಸಂಬಳ ತಗೆದುಕೊಂಡು ಹೋಗಿ. ನಾಳೆಯಿಂದ ಕೆಲಸಕ್ಕೆ ಬರಬೇಕಾಗಿಲ್ಲ.

ಸುಶೀಲ : ಸರಿ... ಹೆಜ್ಜೆ ಹೆಜ್ಜೆಗೆ ಇನ್ನು ಮನೋಹರ ತನ್ನ ಕೈಯ ಆಶ್ರಯ ಕೊಟ್ಟು ನಡೆಸುವುದಿಲ್ಲ, ಹೋಗೋಣ ನಡೆ ಎನ್ನುವುದಿಲ್ಲ. ಯಾರು ಮನೋಹರ? ಮನೋಹರ ಇದ್ದೇ ಇರಲಿಲ್ಲ... ಮನೋಹರ ಸತ್ತಿದ್ದಾನೆ. (ರೈಲು....)

ತಾಯಿ : ಏನೇ ಈ ಹೊತ್ತು ಇಷ್ಟು ಬೇಗ, ಕೆಲಸ ಖಾಯಂ ಆಯ್ತೇ?

ಸುಶೀಲ : ಇಲ್ಲಮ್ಮ ಕೆಲಸವೇ ಹೋಯ್ತು.

ತಾಯಿ : ಇದು ನಿಜವೇನೇ?

ಸುಶೀಲ : ನಿಜವಮ್ಮಾ...ನಿಜ...ಕೆಲಸ ಹೋದ್ರೇನು ಇನ್ನೊಂದು ಕೆಲಸ ಹುಡುಕಿದ್ರಾಯ್ತು.

ತಾಯಿ : ಅಯ್ಯೋ ಅಷ್ಟು ಒಳ್ಳೇ ಕಂಪನಿ. ಕೆಲಸ ಹೋಯ್ತೇನೆ? ಅವರೆಲ್ಲಿ ಸತ್ತರೆ ಮಾಪುಸಕರ್.

ಸುಶೀಲ : ಅವರು ಸತ್ತು ಹೋದ್ರಮ್ಮ...ನಿನ್ನೆ.

ತಾಯಿ : ಏನಾಯ್ತೆ? ಆಫೀಸಿನಲ್ಲಿ ಕೆಲಸ ಯಾಕೆ ಹೋಯ್ತು.

ಸುಶೀಲ : ಖಾಯಂ ಆಗಲಿಲ್ಲ...ಕೆಲಸ ಹೋಯ್ತು. ಇನ್ನೊಂದು ಹುಡುಕ್ತೀನಿ. ನೀನೇಕೆ ಆಯಾಸ ಮಾಡ್ಕೋತೀ? ಹೇಗಿದೆ ಕಾಲು ನೋವು? ಸ್ವಲ್ಪ ಎಣ್ಣೆ ತಿಕ್ಕಲೇ? ಈ ಮುನಿಸಿಪಾಲಿಟಿಯವರು ...ಗಲೀಜು ತೊಳಿಸಲಿಕ್ಕೆ ಕಳಿಸಲಿಲ್ವೇನೋ...ಏನು ನಾತ?

(ರಾತ್ರಿ)

ಮನೋಹರ ಕರಿತಾ ಇದ್ದಾನೆ...... ನಾನು ಸತ್ತಿಲ್ಲ. ಸುಶೀ ಬಾ ಅಂತಾ. ಎರಡು ತಿಂಗಳಿಂದ ಪರಿಚಿತವಿದ್ದ ನಗು, ನಾನು ತನ್ನ ಬೆರಳು ಹೆಣೆದು ಆಡಿದ್ದ ಕೈಗಳು...ನನ್ನನ್ನು ಕರೀತಾ ಇವೆ. ನನ್ನನ್ನು ಕರೀತಾ ಇವೆ. ನನ್ನನ್ನು ಬಳಸಲು ಕಾದಿದೆ. ಆ ವಿಶಾಲವಾದ ಎದೆಯಲ್ಲಿ ನನ್ನ ಮುಖ ಮರೆಸಲು, ನೋವಳಿಸಲು ಸಾಧ್ಯವಾಗುವಂತಿದೆ. ಮನೋಹರ ನಗ್ತಿದ್ದ, ಬೇಗ ಬಾ ಹೋಗೋಣ ಅನ್ತಿದ್ದ. ನಾನು ಎದ್ದು ಕನ್ನಡಿಯಲ್ಲಿ ಮುಖ ನೋಡಿಕೊಂಡು ಬಂದೆ ಅಂತ ನಗು ನಗ್ತಾ ಹೋಗ್ತಿದ್ದೆ...ಮನೋಹರ ಬರ್ತಾ ಇದ್ದಾನೆ. ನಗು ನಗ್ತಾ ನನ್ನ ತಬ್ಬಿಕೊಳ್ಳಲಿಕ್ಕೆ ಮುಂದೆ ಬರ್ತಿದ್ದಾನೆ. ಹಿಂದೆ ಸರೀತಾ ಇದ್ದಾನೆ..... ಕಣ್ಣು ಮುಚ್ಚಾಲೆ ಆಡುವಂತೆ ಮರೆಯಾಗಿದ್ದಾನೆ. ಆ ಮತ್ತೆ ಕಾಣಿಸಿಕೊಳ್ತಾ ಇದ್ದಾನೆ..... ನಗ್ತಾ ಇದ್ದಾನೆ..... ಇನ್ನೆರಡು ಹೆಜ್ಜೆ ಮುಂದೆ ಹೋದ್ರೆ... ನನಗೆ ಸಿಕ್ಕಿ ಬರ್ತಾನೆ... ಮನೋಹರ... .ಮನೋಹರ... (ಮೇಲಿಂದ ಬೀಳುವ ಸದ್ದು) (ದುಃಖ ಸಂಗೀತ)

* * *

✳

# ಆಚಾರ್ಯರ ಪತ್ನಿ

ಮೂಲಕಥೆ: ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್

ರೇಡಿಯೋ ರೂಪಾಂತರ: ಡಾ. ಬಿ.ಎಸ್. ಸ್ವಾಮಿ

ನಿರೂಪಕ : ಮೈಸೂರು ಜಿಲ್ಲೆಯ ಸಾಲಿಗ್ರಾಮ. ಇಲ್ಲಿನ ಬೀದಿಗಳು, ಕೆರೆ, ಗದ್ದೆ, ತೋಟ, ಆಲಯ, ಬಸದಿ, ಅವುಗಳ ಮುಂದಣ ಹೊಂಡ ಮಂಟಪ ಎಲ್ಲದರ ಮೇಲೆ ಎಂಟು ನೂರು ವರ್ಷಗಳ ಹಳೆಯ ಬೆಳಕೊಂದು ಮೆದುವಾಗಿ ಮಲಗಿದೆ.

ನಿರೂಪಕಿ : ಎಂಟು ನೂರು ವರ್ಷಗಳ ಹಿಂದೆ ವಿಶಿಷ್ಟಾದ್ವೈತ ಮತ ಸ್ಥಾಪಕರಾದ ರಾಮಾನುಜಾಚಾರ್ಯರು ಈ ಊರಲ್ಲಿ ಕೆಲವು ವರ್ಷ ಅಜ್ಞಾತವಾಗಿ ವಾಸ ಮಾಡಿದರು.

ನಿರೂಪಕ : ಆಚಾರ್ಯರು ಹುಟ್ಟಿದ್ದು ಪೆರುಂಬುದೂರಲ್ಲಿ, ಬೆಳೆದದ್ದು ಕಾಂಚೀಪುರದಲ್ಲಿ, ಯತಿಯಾಗಿ ಶ್ರೀವೈಷ್ಣವ ಧರ್ಮದ ಪ್ರತಿಪಾದಕರಾಗಿದ್ದುದು ಶ್ರೀರಂಗದಲ್ಲಿ. ಹೊಯ್ಸಳ ನಾಡಿನಲ್ಲಿ ಬಾಳಿದರು. ಆಗದವರು ಜೀವಭಯ ತೋರಿದುದರಿಂದ ಶಿಷ್ಯರು ಕಳುಹಿಸಿದುದು ಸಾಲಿಗ್ರಾಮಕ್ಕೆ.

ನಿರೂಪಕಿ : ಆಚಾರ್ಯರು ಪೂಜಿಸಿದ ನರಸಿಂಹಮೂರ್ತಿ ಈಗಲೂ ದೇವಸ್ಥಾನದಲ್ಲಿ ಭಕ್ತರಿಂದ ಪೂಜೆ ಸ್ವೀಕರಿಸುತ್ತಿದೆ. ದೇವಾಲಯದ ಒಂದು ಮಂದಿರದಲ್ಲಿ ರಾಮಾನುಚಾರ್ಯರ ಮೂರ್ತಿಯೊಂದು, ಅವರೇ ಪ್ರತ್ಯಕ್ಷ ಕುಳಿತಿರುವದೋ ಎಂಬ ಭ್ರಮೆಯನ್ನುಂಟು ಮಾಡಿಸುತ್ತದೆ. ಆಲಯದ ಮುಂದೆ ಒಂದು ಕೊಳ, ಹೊಂಡ ಇದೆ. ಇಲ್ಲಿ ಆಚಾರ್ಯರು ಕೈಕಾಲು ತೊಳೆಯುವುದು, ಸ್ನಾನ ಮಾಡುವುದು ಮಾಡುತ್ತಿದ್ದರು ಎಂದು ಜನರು ಹೇಳುತ್ತಾರೆ.

ನಿರೂಪಕ : ರಾಮಾನುಜರು, ಬಡತನದಲ್ಲಿ ಹುಟ್ಟಿ ವಿದ್ಯಾವಂತರಾದರು. ಐವರು ಗುರುಗಳಿಂದ ಭಾಗವತ ಧರ್ಮವನ್ನು ತಿಳಿದು ಆಚಾರ್ಯರು ವಿಶಿಷ್ಟಾದ್ವೈತ ಮತ ಸ್ಥಾಪಿಸಿದರು. ಇದಕ್ಕೆ ರಾಜರ ಮನ್ನಣೆ ದೊರೆಯಿತು.

ನಿರೂಪಕಿ : ಆಚಾರ್ಯರು ಸನ್ಯಾಸತ್ವ ಸ್ವೀಕರಿಸಲು ಅವರ ಹೆಂಡತಿಯೇ ಕಾರಣರಾದರು. ಒಮ್ಮೆ ಗುರುಗಳೊಬ್ಬರಿಗೆ ಊಟ ಬಡಿಸಿ ಆತ ಕಡಿಮೆ ಜಾತಿಯವನೆಂದು

ತಿಳಿದು ಸ್ನಾನ ಮಾಡಿದರು. ಒಮ್ಮೆ ಬಾವಿಯ ಬಳಿ ಗುರುವಿನ ಮನೆಯವರೊಡನೆ ಜಗಳವಾಡಿ ಬೈದರು. ಒಂದು ದಿನ ಮನೆಗೆ ಆಚಾರ್ಯರು ಹೊತ್ತಾಗಿ ಬರಲು ನಿದ್ದೆ ಮಾಡುತ್ತಾ ಮಲಗಿದ್ದರು. ಈ ಎಲ್ಲಾ ಕಾರಣಗಳಿಂದ ಬೇಸರಗೊಂಡ ರಾಮಾನುಜರು ಸನ್ಯಾಸತ್ವವನ್ನು ಸ್ವೀಕರಿಸಿದರು. ಹೆಂಡತಿ ತಾಯಿ ಮನೆಗೆ ಹೋದರು ಆಮೇಲೆ-?

ನಿರೂಪಕ : ಸಾಲಿಗ್ರಾಮದಲ್ಲಿ ವಡಗನಂಬಿ ಉತ್ತರ ಪ್ರಾಂತ್ಯದ ಭಕ್ತ ಎಂದು ಹೆಸರಾದವ ಭಾಗವತ ಸಂಪ್ರದಾಯದ ಬ್ರಾಹ್ಮಣ. ಸಂಸ್ಕೃತ, ವೇದಾಂತ ಕಲಿತು ಕಾಂಚೀಪುರ, ಶ್ರೀರಂಗ ಮುಂತಾದೆಡೆ ಹೋಗಿ ಬರುವ ಊರ ಮುಂದಣ ನರಸಿಂಹಸ್ವಾಮಿ ಸೇವೆ ಮಾಡುತ್ತಾ ಬಂದವ ಯಾರೋ ಸನ್ಯಾಸಿ ಬಂದಾಗ ಅವರನ್ನು ಆರಾಧಿಸಲು ಆಸೆಪಡದಿದ್ದರೂ ಅವರ ಜ್ಞಾನಕ್ಕೆ ಬೆರಗಾದ. ಭಾಗವತ ಸಂಪ್ರದಾಯದವರೆಂದು ತಿಳಿದ. ಗುರುವಿನ ಪರಿಚಯವನ್ನು ತಿಳಿಯಲು ಪ್ರಯತ್ನಿಸಿ ಅವರ ಶಿಷ್ಯ ಹೇಳದಿರಲು ಅವಕ್ಕೆ ಮಹತ್ವ ಕೊಡದೆ ಶಿಷ್ಯನಾದ ಆಚಾರ್ಯರ ಸೇವೆಯವನ್ನು ಮಾಡಿಕೊಂಡು ನಡೆದ. ಒಂದು ದಿನ ಮಾತನಾಡುತ್ತಾ-

ವಡಗನಂಬಿ : ಪೂಜ್ಯರೇ ತಮಗೆ ಎಷ್ಟು ವಯಸ್ಸು?

ರಾಮಾನುಜ : ಯಾಕೆ ಈ ಪ್ರಶ್ನೆ ವಡಗನಂಬಿ?

ವಡಗನಂಬಿ : ತಾವು ಯಾವಾಗ ನಿದ್ದೆ ಹೋಗುತ್ತೀರಿ? ಯಾವಾಗ ಏಳುತ್ತೀರಿ ಒಂದೂ ಗೊತ್ತಾಗದು. ನಲವತ್ತು ವರ್ಷದ ನಾನು ಎಷ್ಟೇ ಪ್ರಯತ್ನ ಪಟ್ಟರೂ ನಿಮ್ಮಷ್ಟು ಚುರುಕಾಗಿರಲು ಆಗುತ್ತಿಲ್ಲ.

ರಾಮಾನುಜ : ನನಗೆ ಎಂಬತ್ತು ವರ್ಷಗಳಾಗಿರಬಹುದು.

ವಡಗನಂಬಿ : ನಿಜಕ್ಕೂ ನೀವು ಹಾಗೆ ಕಾಣುತ್ತಿಲ್ಲ. ನಿಮ್ಮ ಕೆಲಸವನ್ನು ನೀವೇ ಎಷ್ಟು ಅಚ್ಚುಕಟ್ಟಾಗಿ ಮಾಡಿಕೊಳ್ಳುತ್ತೀರಿ? ಭಕ್ತ ಮಾಡಿಟ್ಟ ಅಡಿಗೆಯನ್ನು ದೇವರೆದುರಿಟ್ಟು ಭಿಕ್ಷೆಯಾಗಿ ಸ್ವೀಕರಿಸಿ, ರಾತ್ರಿ ಹಾಲು ಸೇವಿಸಿ, ಸದಾ ದೇವರ ಧ್ಯಾನದಲ್ಲಿ ಕಾಲ ಕಳೆಯುತ್ತಿದ್ದೀರಿ. ನಿಜಕ್ಕೂ ನಿಮ್ಮಂಥ ಗುರುಗಳು ಸಿಕ್ಕಿದುದು ನನ್ನ ಪೂರ್ವ ಪುಣ್ಯ ವಿಶೇಷವೇ ಸರಿ ಗುರುಗಳೇ.

ರಾಮಾನುಜ : ಏನು ವಡಗನಂಬಿ?

ವಡಗನಂಬಿ : ನನ್ನ ಹೆಂಡತಿ ಶಾಮಲಾಂಬೆ ಮಗ ರಾಮಚಂದ್ರ ಇಬ್ಬರೂ ತಮ್ಮ ಸೇವೆಯನ್ನು ಮಾಡಿಕೊಂಡು ಹೋಗಲು ಅನುಮತಿ ನೀಡಬೇಕು.

ರಾಮಾನುಜ : ಆಯ್ತು.

ನಿರೂಪಕ : ಗುರುವಿನ ಸೇವೆಯನ್ನು ಎರಡು ವರ್ಷಗಳು ಮಾಡಿದರೂ ವಡಗನಂಬಿಗಾಗಲೀ ಶಾಮಲಾಂಬೆಗಾಗಲೀ ಗುರುಗಳು

ರಾಮಾನುಜಾಚಾರ್ಯರೆಂಬುದು ತಿಳಿಯಲಿಲ್ಲ. ಒಂದು ದಿನ ಗುರುಗಳು ಶಿಷ್ಯರನ್ನುದ್ದೇಶಿಸಿ-

ರಾಮಾನುಜ : ಈ ಜನ್ಮದಲ್ಲಿ ಹೀಗೆ ನನ್ನನ್ನು ಸಾಕುತ್ತಿರುವವರು ಹಿಂದಿನ ಜನ್ಮದಲ್ಲಿ ನನ್ನ ಮಗಳು ಅಳಿಯ ಆಗಿದ್ದಿರಬೇಕು ಅವರಿಗೆ ಎಲ್ಲವನ್ನು ಹೇಳಿ.

ಶಿಷ್ಯ : ಆಯ್ತು ಗುರುಗಳೇ.

ನಿರೂಪಕಿ : ಶಿಷ್ಯರು ಆಚಾರ್ಯರ ಚರಿತ್ರೆಯನ್ನು ಭಕ್ತನಿಗೂ ಅವರ ಪತ್ನಿಗೂ ರಹಸ್ಯವಾಗಿ ತಿಳಿಸಿದರು. ಆಚಾರ್ಯರು ಸನ್ಯಾಸತ್ವ ತೆಗೆದುಕೊಂಡ ಸಂದರ್ಭ ಹೇಳುತ್ತಾ-

ಶಿಷ್ಯ : ವಡಗನಂಬಿಯವರೇ, ಎಲ್ಲಾ ಹೆಂಗಸರೂ ಶ್ಯಾಮಲೆಯಂತೆ ಸಂಸಾರದಲ್ಲಿ ನಡೆದುಕೊಂಡು ಹೋಗಲಾರರು. ಗಂಡಸಿನ ಮನಸ್ಸನ್ನು ಅರ್ಥಮಾಡಿಕೊಂಡು, ಅನುಸರಿಸಿ ನಡೆಯುವುದಿಲ್ಲ. ಆದರೆ ಆಚಾರ್ಯರ ಹೆಂಡತಿ ರಾಮಾನುಜಾಚಾರ್ಯರ ಮನಸ್ಸನ್ನು ಅರ್ಥಮಾಡಿಕೊಂಡು ನಡೆದುಕೊಳ್ಳಲಿಲ್ಲ, ತಿಳಿಯಬೇಕೆಂದು ಅಪೇಕ್ಷಿಸಲಿಲ್ಲ, ಯತ್ನ ಮಾಡಲಿಲ್ಲ. ಆಚಾರ್ಯರು ಒಂದು ರೀತಿಯಲ್ಲಿ ನಡೆಯಬೇಕೆಂದರೆ ತಾವು ಒಂದು ರೀತಿಯಲ್ಲಿ ನಡೆದು ಅವರನ್ನು ಬೇಸರಗೊಳಿಸಿದರು. ಹೀಗಾಗಿ ಅವರು ಸನ್ಯಾಸತ್ವ ಸ್ವೀಕರಿಸುವರು. ಅವರ ಆಯಸ್ಸನ್ನೆಲ್ಲಾ ಧರ್ಮಕ್ಕೆ ಧಾರೆ ಎರೆದರು.

ನಿರೂಪಕಿ : ವಡಗನಂಬಿ, ಶ್ಯಾಮಲಾಂಬೆಯರು ಗುರುಗಳಿಗೆ ಎರಡು ವರ್ಷ ಸೇವೆ ಮಾಡಿದರು. ಒಂದು ದಿನ ಮಧ್ಯಾಹ್ನ ಹೊಂಡದಲ್ಲಿ ಆಚಾರ್ಯರು ಸ್ನಾನ ಮಾಡಲು ಮುಳುಗಿ ಸ್ನಾನಮಂತ್ರವನ್ನು ಹೇಳುತ್ತಾ, ಅಲ್ಲೇ ಪಕ್ಕದಲ್ಲಿದ್ದ ಅರಳಿಯ ಮರದತ್ತ ದೃಷ್ಟಿ ಹರಿಸಿದಾಗ ಒಬ್ಬ ವಯಸ್ಸಾದ ಹೆಂಗಸು ಇಣುಕಿ ನೋಡಿ ಮರೆಯಾದಳು.

ರಾಮಾನುಜ : ಯಾರೋ ಪಾಪ ಹೊಂಡಕ್ಕೆ ಬಟ್ಟೆ ಒಗೆಯಲೋ; ನೀರು ತೆಗೆದುಕೊಳ್ಳಲಿಕ್ಕೋ ಕಾದಿರಬಹುದು.

ನಿರೂಪಕಿ : ಆಚಾರ್ಯರು ಸ್ನಾನ ಮುಗಿಸಿ ದೇವಾಲಯಕ್ಕೆ ಹೋದರು. ಅಂದಿನ ರಾತ್ರಿ ಶಿಷ್ಯರೊಡನೆ ಮಾತಾಡುತ್ತಾ-

ಶಿಷ್ಯ : ಗುರುಗಳೇ ದಕ್ಷಿಣ ದೇಶದ ವೃದ್ಧ ಹೆಂಗಸೊಬ್ಬಳು ಸೇವಕಿಯರೊಡನೆ ಬಂದಿದ್ದರು. ತಮ್ಮ ಪತಿಗೆ ಒಂದು ದೋಷ ಇರುವುದರಿಂದ ಅದರ ನಿವಾರಣೆಗೆ ತಾನು ಉತ್ತರ ದೇಶಕ್ಕೆ ಯಾತ್ರೆ ಹೊರಟಿರುವೆ ಎಂದೂ, ಸೇವಕಿಗೆ ಮೈಗೆ ಚೆನ್ನಾಗಿಲ್ಲ ಆದ್ದರಿಂದ ಎರಡು ದಿನ ತಂಗಲು ಅವಕಾಶ

ಕೇಳಲು, ಶ್ಯಾಮಲಾಂಬೆ ಆಗಬಹುದೆಂದು ತಮ್ಮ ಮನೆಯಲ್ಲಿ ವ್ಯವಸ್ಥೆ ಮಾಡಿದರು.

ರಾಮಾನುಜ : ಒಳ್ಳೆಯದಾಯಿತು.

ನಿರೂಪಕ : ತೊಂಡನೂರಿನಲ್ಲಿ ಶಿಷ್ಯರಿಬ್ಬರಿಗೆ ಜ್ವರ ಬಂದಿದೆಯೆಂದು ಸುದ್ದಿ ತಿಳಿದ ಆಚಾರ್ಯರು ಹೋಗಿ ನೋಡಿ ಬಂದರು. ಹೋಗಿ ಬಂದ ದಿನವೇ ಇವರಿಗೂ ಜ್ವರ ಬಂತು. ಎಂದಿನಂತೆ ಹೊಂಡದಲ್ಲಿ ಸ್ನಾನ, ಒಂದು ಹೊತ್ತು ಊಟ, ಒಂದು ಹೊತ್ತು ಹಾಲು ತೆಗೆದುಕೊಂಡಾಗ ಜ್ವರ ವಿಪರೀತವೇ ಆಯಿತು. ಶ್ಯಾಮಲಾಂಬೆ ಗುರುವಿನ ಶುಶ್ರೂಷೆಯಲ್ಲಿ ತೊಡಗಿದಳು. ಶ್ಯಾಮಲಾಂಬೆಯ ಗಂಡ ವಡಗನಂಬಿ ಹಾಲು ಕಾಯಿಸಿ ಕೊಡುವುದು, ದೇವರಲ್ಲಿ ಬೇಗ ಆಚಾರ್ಯರಿಗೆ ಜ್ವರ ಹೋಗಲೆಂದು ಪ್ರಾರ್ಥಿಸುತ್ತಿದ್ದ. ಇಬ್ಬರೂ ಕಾಲಿನ ಚಳುಕು ನಿಲ್ಲಿಸಲು ಅದುಮುತ್ತಿದ್ದರು. ಒಂದು ಅರ್ಧರಾತ್ರಿ ಶ್ಯಾಮಲಾಂಬೆಗೆ ನಿದ್ದೆ ಹತ್ತಿತು.

ರಾಮಾನುಜ : ಯಾರು? ಯಾರು?

ಶ್ಯಾಮಲಾಂಬೆ: ಏನು ಗುರುಗಳೇ ಕಾಲು ಒತ್ತಲೇ?

ರಾಮಾನುಜ : ಯಾರೋ ಬಂದಿದ್ದರು.

ಶ್ಯಾಮಲಾಂಬೆ: ದೀಪ ದೊಡ್ಡದು ಮಾಡಿ ನೋಡುತ್ತೇನೆ ತಾಳಿ (ಸ್ವಲ್ಪ ಹೊತ್ತಿನ ಮೇಲೆ) ಯಾರೂ ಇಲ್ಲವಲ್ಲ ಗುರುಗಳೇ.

ವಡಗನಂಬಿ : ಏನೇ ಅದು?

ಶ್ಯಾಮಲಾಂಬೆ: ಯಾರೋ ಬಂದಿದ್ದರೆಂದು ಗುರುಗಳು ಹೇಳಿದರು ನೋಡಿದೆ ಅಷ್ಟೆ.

ವಡಗನಂಬಿ : ನೀನು ಗುರುಗಳ ಹತ್ತಿರವೇ ಇರಬಾರದಿತ್ತೆ?

ಶ್ಯಾಮಲಾಂಬೆ: ಅವರ ಹಾಸಿಗೆಯ ಬಳಿ ಯಾರು ಬಂದು ಹೋಗಿರಬಹುದು? ನನಗೆ ಭಯವಾಗುತ್ತಿದೆ.

ವಡಗನಂಬಿ : ನರಸಿಂಹನ ದೇವಾಲಯದಲ್ಲಿ ಗುರುವಿನ ಬಳಿ ಯಾರು ಬಂದು ಹೋಗುತ್ತಾರೆ? ದೇವರೋ, ತಾಯಿಯೋ, ಯಾವ ಆಳ್ವಾರರೋ ಗುರುವನ್ನು ನೋಡಲಿಕ್ಕೆ ಬಂದಿರಬೇಕು. ನಾವು ನೋಡಿಕೊಳ್ಳದಿದ್ದರೆ ಗುರುಗಳಿಗೇನು ಕಡಿಮೆ?

ಶ್ಯಾಮಲಾಂಬೆ: ಆ ಹಾಸಿಗೆ ಕಡೆಯಿಂದ ಹೋದ ಸತ್ವ ಜ್ವರಗಿರದ ದೇವತೆಯೋ ಜ್ವರ ಕೆರಳುವುದಕ್ಕಾಗಿ ಏನಾದರೂ ಬಂದಿದ್ದಳೋ? ಈ ಸ್ಥಳದಲ್ಲಿ ಗುರುವಿಗೆ ಇದು ಆಗಲಾರದು.

ನಿರೂಪಕಿ : ಬೆಳಗಾಗುವ ವೇಳೆಗೆ ಗುರುವಿನ ಜ್ವರ ಇಳಿದಿತ್ತು. ಸ್ವಲ್ಪ ಆಹಾರವನ್ನೂ ತೆಗೆದುಕೊಂಡರು. ಹಿಂದಿನ ರಾತ್ರಿ ಗುರುವಿನ ಕಡೆಯಿಂದ ಹೊರಟು ಹೋದದ್ದು ಜ್ವರದ ದೇವತೆಯೇ ಇರಬೇಕು ಎಂದುಕೊಂಡಳು. ದಕ್ಷಿಣ ದೇಶದಿಂದ ಬಂದಿದ್ದ ಸುಮಂಗಲಿ ಜ್ವರದಿಂದ ಮಲಗಿದ್ದಳು. ಆಕೆಗೆ ಕಷಾಯ ಮಾಡಿಕೊಟ್ಟು ದೇವಾಲಯಕ್ಕೆ ಬಂದಳು. ಗುರುಗಳು ಭಕ್ತನಿಗೆ ರಾತ್ರಿ ಆದ ಒಂದು ಸ್ವಪ್ನವನ್ನು ವಿವರಿಸಲಾರಂಭಿಸಿದರು.

ರಾಮಾನುಜ : ಬನ್ನಿ ಶಿಷ್ಯರೇ,

ಶಿಷ್ಯ : ನಮಸ್ಕಾರ ಗುರುಗಳೇ.

ರಾಮಾನುಜ : ನನಗೆ ಜ್ವರ ಬಂದಿತ್ತು ಶ್ಯಾಮಲೆ ನನ್ನ ಕಾಲನ್ನು ಒತ್ತುತ್ತಿದ್ದಳು. ಹಾಗೆಯೇ ನನಗೆ ಸ್ವಲ್ಪ ನಿದ್ದೆ ಬಂದಂತಾಯಿತು. ಶ್ಯಾಮಲಾಗೆ ನನಗೂ ಮಂಪುರು ಬೇರೆ ಯಾರೋ ಹೆಂಗಸು ಕಾಲನ್ನು ಹಿಸುಕಿದಂತಾಯಿತು. ಅದು ಸಂಸಾರಿಯ ಕೈ. ಯಾರು? ಎಂದು ಎಚ್ಚತ್ತೆ. ಆ ವ್ಯಕ್ತಿ ನಡೆದುಹೋಯಿತು. ಶ್ಯಾಮಲಾಂಬೆ ದೂರದಿಂದ ಯಾರು? ಎಂದಳು. ನನಗೆ ಉಸಿರು ಸೆಳೆದಂತಾಯಿತು.

ನಿರೂಪಕಿ : ಭಕ್ತನಿಗೆ ರಾತ್ರಿ ಹೆಂಡತಿ ಹೇಳಿದ ಮಾತು ನೆನಪಿಗೆ ಬಂತು. ಶ್ಯಾಮಲಾಂಬೆಯನ್ನು ಗುರುಗಳು ಕೂಗಿದ್ದುದನ್ನು ತಾನು ಬಂದುದನ್ನೂ ಒಪ್ಪಿಕೊಂಡಳು. ಯಾರನ್ನೋ ಕಂಡಂತಾಯಿತೆಂದು ಹೇಳಲಿಲ್ಲ. ವಡಗನಂಬಿ ಗುರುಗಳ ಮಾತು ಕೇಳಿ ಏನಿರಬಹುದೆಂದು ಯೋಚಿಸುತ್ತಾ ಸುಮ್ಮನಾದ. ಗುರುಗಳು ಆರೋಗ್ಯವಂತರಾದ ಮೇಲೆ ಮಾತನಾಡಿದ-ರಾಯಿತೆಂದು ಸುಮ್ಮನಾದ. ಎರಡು ಮೂರು ದಿನವಾದ ಮೇಲೆ.....

ವಡಗನಂಬಿ : ಸುಮಂಗಲಿಗೆ ಜ್ವರ ಹೆಚ್ಚಾಗಿದೆ ಗುರುಗಳೇ.

ಶ್ಯಾಮಲಾಂಬೆ: ನಾನು ಸ್ವಲ್ಪ ಬೇಗ ಮನೆಗೆ ಹೋಗಿ ಆಕೆಯ ಆರೈಕೆ ಮಾಡುತ್ತೇನೆ ಗುರುಗಳೇ.

ರಾಮಾನುಜ : ಆಯ್ತು.

ಸುಮಂಗಲಿ : ಶ್ಯಾಮಲಾಂಬೆ ನನ್ನ ಉತ್ತರಾದಿ ಕ್ರಿಯೆಯನ್ನು ನಿನ್ನ ಗಂಡನೇ ನೆರವೇರಿಸಬೇಕವ್ವಾ.

ಶ್ಯಾಮಲಾಂಬೆ: ನೀನು ಯೋಚನೆ ಮಾಡಬೇಡಿ ತಾಯಿ.

ರಾಮಾನುಜ : ಯಾಕೆ ತಡವಾಯಿತು ವಡಗನಂಬಿ?

ವಡಗನಂಬಿ : ಸುಮಂಗಲಿ ಪರಮಪದವನ್ನೈದಿದಳು. ಬ್ರಾಹ್ಮಣ ದೇಹಕ್ಕೆ ಸಂಸ್ಕಾರ ನಡೆಸುವುದು ಕರ್ತವ್ಯವಾದುದರಿಂದ ಅದನ್ನು ಒಪ್ಪಿಕೊಂಡು ಮಾಡಿ ಬರುವುದು ಹೊತ್ತಾಯಿತು.

ರಾಮಾನುಜ : ಯಾವ ಪ್ರಾಂತದಿಂದಲೋ ಬಂದವರು ಇಲ್ಲಿ ತೀರಿಕೊಂಡರೇ ಪಾಪ......... ನಾನು ದೇವರ ಪೂಜೆಗೆ ಹೋಗ್ತೇನೆ

(ಗಂಟಾ ನಾದ.... ಪೂಜೆ....)

ನಿರೂಪಕ : ಅಂದು ಸಂಜೆ ಶ್ಯಾಮಲಾಂಬೆ ಗುರುವಿನ ಸನ್ನಿಧಿಗೆ ಬಂದಳು. ಆಕೆ ಹಾಗೂ ಗಂಡ ವಡಗನಂಬಿ ಇಬ್ಬರೂ ಗುರುಗಳಿಗೆ ವಂದಿಸಿ ಕುಳಿತರು. ಬಹಳ ಹೊತ್ತು ದುಃಖದಲ್ಲಿದ್ದ ಆಕೆ ಮಾತನಾಡದಿರಲು ಗುರುಗಳೇ ಎಚ್ಚರಿಸಿದರು.

ರಾಮಾನುಜ : ತಾಯಿ ಎಂಥ ಹತ್ತಿರದ ಬಂಧುವನ್ನು ಕುರಿತಾದರೂ ಅತಿಯಾಗಿ ದುಃಖಿಸಬಾರದು. ನಿಮ್ಮ ಮನೆಯ ನೆರಳಿಗೆ ಬಂದ ಕಾರಣದಿಂದ ನೀನು ಅವರನ್ನು ನೋಡಿದ್ದಂತಾಯಿತು ತೀರಿಕೊಂಡರು. ನಿಮ್ಮ ಯಜಮಾನರು ಮಗನಂತೆ ಸಂಸ್ಕಾರ ಮಾಡಿದ್ದೂ ಆಯಿತು, ಇನ್ನು ದುಃಖವೇಕೆ?

(ಬಿಕ್ಕಿ ಬಿಕ್ಕಿ ಅಳುತ್ತಾ ಕಾಲಮೇಲೆ ಬೀಳಲು)

ರಾಮಾನುಜ : ತುಂಬಾ ನೊಂದಿದ್ದಾಳೆ ಮನೆಗೆ ಕರೆದುಕೊಂಡು ಹೋಗು ವಡಗನಂಬಿ

ವಡಗನಂಬಿ : ಆಯ್ತು ಗುರುಗಳೇ.

(ಸಂಗೀತ)

ರಾಮಾನುಜ : ವಡಗನಂಬಿ ನೀನೂ ಇಷ್ಟು ದುಃಖಪಡಬಹುದೇ?

ವಡಗನಂಬಿ : ಅದೋ ನಿಮ್ಮ ಮಗಳೇ ಬರುತ್ತಿದ್ದಾಳೆ ಎಲ್ಲವನ್ನೂ ಹೇಳುತ್ತಾಳೆ.

ಶ್ಯಾಮಲಾಂಬೆ: ಪೂಜ್ಯರಿಗೆ ವಂದಿಸುವೆ.

ರಾಮಾನುಜ : ಏನೂ ಅರಿಕೆ ಮಾಡಿಕೊಳ್ಳುವಂತಿದೆಯಲ್ಲಾ.

ಶ್ಯಾಮಲಾಂಬೆ: ಗುರುಗಳೇ ನಿನ್ನೆ ಬೆಳಗ್ಗೆ ಪರ ಧಾಮವನ್ನೈದ ಸುಮಂಗಲಿ ಯಾರೋ ಎನ್ನುತ್ತಿದ್ದೆ. ಅವರು ನಮಗೆ ದೂರವಾದವರಲ್ಲ ಬಲು ಹತ್ತಿರದವರು ಎಂಬುದು ಅವರು ಹೋಗುವ ಮುನ್ನ ತಿಳಿಯಿತು. ಅವರು ತೀರಿಕೊಳ್ಳುವ ಮೊದಲು ತಮ್ಮ ಸಂಬಂಧವನ್ನು ನನ್ನ ಕಿವಿಯಲ್ಲಿ ಹೇಳಿದರು. ಆದ್ದರಿಂದ ನಮ್ಮ ಯಜಮಾನರು ಉತ್ತರ ಕ್ರಿಯೆ ಮಾಡಲು ಒಪ್ಪಿಕೊಂಡರು. ಅವರು ತಮ್ಮ ಪೂರ್ವಾಶ್ರಮದ ಪತ್ನಿ. ಅವರು ತಮ್ಮಲ್ಲಿ ಒಂದು ವಿಷಯಕ್ಕೆ ಕ್ಷಮೆ ಬೇಡಬೇಕೆಂದು ತಿಳಿಸಿದರು. ಕೃಪೆ ಮಾಡಿ ನೀವು ಆಕೆಗೆ ಕ್ಷಮೆ ನೀಡಬೇಕು.

ರಾಮಾನುಜ : ಭಗವಂತನ ಪಾದ ಸೇರಿರುವ ಆ ಜೀವದ ವಿಷಯದಲ್ಲಿ ನಾನು ನೀಡಬೇಕಾದ ಕ್ಷಮೆ ಏನಿದೇ ಮಗೂ?

ಶ್ಯಾಮಲಾಂಬೆ: ತಾವು ಕೋಪಗೊಂಡರೆ ಸ್ವರ್ಗದಿಂದ ಕೂಡ ತನಗೆ ಚ್ಯುತಿಯಾಗಬಹುದೆಂಬ ಶಂಕೆಯಿಂದ ಕ್ಷಮಿಸಿದ್ದೇನೆಂದು ಅಪ್ಪಣೆ ಮಾಡಿದರೆ ಅರಿಕೆ ಮಾಡಿಕೊಳ್ಳುವೆ.

ರಾಮಾನುಜ : ಹೇಳು ತಾಯಿ ಕ್ಷಮಿಸಿದ್ದೇನೆ.

ಶ್ಯಾಮಲಾಂಬೆ: ಅವರು ಮದುವೆಯಾದಾಗ ಯಜಮಾನರು ಅವರಿಗಿಂತ ಇಪ್ಪತ್ತೈದು ವರ್ಷ ದೊಡ್ಡವರು. ಸಾಲದುದಕ್ಕೆ ಆಚಾರವಂತರ ಮನೆಯಲ್ಲಿ ಹುಟ್ಟಿದವರು. "ನನ್ನ ನಡತೆ ಗುರುವಿಗೆ ಬೇಸರ ತಂದು ಸೌಮಂಗಲ ವೈಧವ್ಯ ಉಂಟಾಯಿತು" ಎಂದರು.

ರಾಮಾನುಜ : ಇದರಲ್ಲಿ ಕ್ಷಮೆಯ ಮಾತೇನು? ಎಲ್ಲಾ ದೈವೇಚ್ಛೆ ಇದಕ್ಕೆ ಯಾರೂ ಹೊಣೆಯಲ್ಲ ತಾಯಿ.

ಶ್ಯಾಮಲಾಂಬೆ: ತಾವು ಚೋಳ ದೇಶ ಬಿಟ್ಟು ಬಂದ ಮೇಲೆ ವ್ಯಥೆಯಾಗಿ ಒಮ್ಮೆ ನೋಡಿಕೊಂಡು ಹೋಗಬೇಕೆಂದು ದಾರಿ ವಿಚಾರಿಸಿಕೊಂಡು ಬಂದರಂತೆ. ಇಲ್ಲಿರುವ ಸನ್ಯಾಸಿ ತಾವೋ ಅಲ್ಲವೋ ಎಂಬುದನ್ನು ಮರೆಯಲ್ಲಿ ನಿಂತು ನೋಡಿ ನಿರ್ಧರಿಸಿಕೊಂಡರಂತೆ. ಒಂದು ದಿನವಿದ್ದು ದರ್ಶನ ತೆಗೆದುಕೊಂಡು ಹೋಗಬೇಕೆಂದಿರಲು, ಸೇವಕ ಅಸ್ವಸ್ಥಳಾದಳು. ಇನ್ನೆರಡು ದಿನ ಇಲ್ಲಿ ನಿಲ್ಲುವಂತಾಯಿತು. ತಾವು ಜ್ವರದಿಂದ ನರಳುವುದನ್ನು ಕೇಳಿ ತಿಳಿಯುತ್ತಿದ್ದರು. ಆಗ ನನಗೆ ಇವರ ಕಾತುರತೆಗೆ ಕಾರಣ ತಿಳಿಯಲಿಲ್ಲ.

ರಾಮಾನುಜ : ನಲವತ್ತು ವರ್ಷಗಳ ಹಿಂದೆ ಸಂಸಾರ ಮುಗಿಸಿದ ನನಗೆ ಇದಾವ ಸಂದೇಶ ತಾಯಿ?

ಶ್ಯಾಮಲಾಂಬೆ: ಅವರು ತಮ್ಮ ಜ್ವರವನ್ನು ತಾನು ತೆಗೆದುಕೊಳ್ಳುತ್ತೇನೆ. ಅವರನ್ನು ಉಳಿಸು ಎಂದು ದೇವರಲ್ಲಿ ಬೇಡಿಕೊಂಡರು. ನಾನು ಅಂದು ದೂರ ಹೋಗಿ ಮಲಗಲು ಅವರು ತಮ್ಮ ಸನ್ನಿಧಿಗೆ ಬಂದು ಕಾಲನ್ನು ಮುಟ್ಟಿ ಜ್ವರವನ್ನು ಎಳೆದುಕೊಳ್ಳಬೇಕೆಂದು ಮೈಯನ್ನು ಸೋಕಿದರು.

ರಾಮಾನುಜ : ಆ್ಞಂ....

ಶ್ಯಾಮಲಾಂಬೆ: ಒಮ್ಮೆ ಕಾಲು ಒತ್ತಿದರು. ಆದ್ದರಿಂದ ನೀವು ಎಚ್ಚರಾದಿರಿ. ಯಾರೆಂದು ಕೂಗಿದಿರಿ. ನಾನು ಎದ್ದು ಬಂದೆ. ಮಾರನೇ ದಿನ ಅವರು ಜ್ವರದಿಂದ ಮಲಗಿದರು, ತಮ್ಮ ದಿವ್ಯ ದೇಹವನ್ನು ಮುಟ್ಟುವ ಅಧಿಕಾರವನ್ನು ಎಂದೋ ಕಳೆದುಕೊಂಡಿದ್ದ ಕೈ ತಮಗೆ ಸೋಕಿಸಿ ತಮ್ಮ ತಪಸ್ಸನ್ನು ಕಡಿಮೆ ಮಾಡಿದ್ದುದು ಉತ್ಕಟ ಪಾಪಕ, ಅದನ್ನು ಮನ್ನಿಸಬೇಕೆಂದು

ಬೇಡಿದರು. ಅವರು ನನಗೆ ಆಶೀರ್ವದಿಸಿ ತಮ್ಮ ಮೈಮೇಲಿದ್ದ ಮೂರು ಒಡವೆಗಳನ್ನು ಕೊಟ್ಟರು.

ರಾಮಾನುಜ : ಎಲ್ಲಾ ಜೀವಕ್ಕೂ ಒಂದೊಂದು ದಾರಿ ನಿಯಮಿತವಾಗಿದೆ. ಆಯಾ ಜೀವ ಆಯಾ ದಾರಿ ಹಿಡಿದು ಗುರಿ ಮುಟ್ಟಬೇಕು. ನಮ್ಮ ದಾರಿ ಹೀಗೆ ಆಗುವುದಿತ್ತು, ನಿಮ್ಮ ದಾರಿ ಸುಖವಾಗಿರಲಿ.

ನಿರೂಪಕಿ : ಹೊರಗೆ ರಾಮಚಂದ್ರ ಆಡುತ್ತಿದ್ದ -ಆತನ ಕರೆದು ಗುರುಗಳು "ಅಣ್ಣಯ್ಯ ಲಕ್ಷ್ಮೀನರಸಿಂಹ ಮಮದೇಶ ಕರಾವಲಂಬಂ" ಹೇಳು ಎಂದರು. ಆತ ಹಾಡವುದನ್ನು ಎಲ್ಲರೂ ಸಂತೋಷದಿಂದ ಕೇಳಿದರು.

*

## ದಕ್ಷಿಣ ಭಾರತ ದರ್ಶನ

ಹುಡುಗ ೧ : ಸೋಮು, ಸೋಮವಾರ ಟೂರಂತೆ.

ಹುಡುಗಿ : ನಾನು ಆಗ಼್ೇ ಹಣ ಕೊಟ್ಟಾಯ್ತು.

ಹುಡುಗ ೨ : ಎಲ್ಲಿಗಂತೆ?

ಹುಡುಗ ೧ : ದಕ್ಷಿಣ ಭಾರತವಂತೆ. ಬೇರೆ ಬೇರೆ ಊರುಗಳನ್ನು, ಅಲ್ಲಿನ ಮುಖ್ಯ ಸ್ಥಳಗಳನ್ನು ನೋಡಬಹುದು.

ಹುಡುಗಿ : ಯಾತರಲ್ಲಿ ಹೋಗೋದು?

ಹುಡುಗ ೨ : ಬಸ್ಸಂತೆ

ಹುಡುಗಿ : ಎಲ್ಲಾ ಚೆನ್ನಾಗಿ ಚಕ್ಕುಲಿ, ನಿಪ್ಪಟ್ಟು, ಕೋಡುಬಳೆ, ರವೆಉಂಡೆ ಮಾಡಿಸಿಕೊಂಡು ಬಂದುಬಿಡಿ.

ಹುಡುಗ ೧ : ಕ್ಯಾಮರ ತಂದ್ಬಿಡಿ. ಅಲ್ಲಲ್ಲಿ ಫೋಟೋ ತೆಗೆಸಿಕೊಂಡು ಬರೋಣ.

ಹುಡುಗ ೨ : ನಾನು ತರ್ತೀನಿ...

(ಸಂಗೀತ)

ಹುಡುಗ ೨ : ಓಹೋ! ಎಲ್ಲಾ ಸೇರಿದ್ದಾರೆ ನಮ್ಮ ಶಾಲೆಯವರೆಲ್ಲಾ ಬನ್ನಿ, ಬನ್ನಿ. ಲಗೇಜೆಲ್ಲಾ ಮೇಲೆ ಕೊಡೋಣ.

ಹುಡುಗಿ : ಗೈಡಿದ್ದಾರಂತೆ ಅವರೆಲ್ಲಾ ನಮಗೆ ಪರಿಚಯ ಮಾಡಿಕೊಡುತ್ತಾರೆ.

ಹುಡುಗ ೧ : ನನಗೂ ಸ್ವಲ್ಪ ಪರಿಚಯವಿದೆ. ಓದಿ ಸ್ವಲ್ಪ , ನೋಡಿ ಸ್ವಲ್ಪ ತಿಳಿದುಕೊಂಡಿದ್ದೇನೆ.

ಹುಡುಗ ೨ : ನೀನೇ ಗೈಡಾಗಬಹುದು. ಒಂದು ಸಾರಿ ನೋಡಿದ್ದೀಯಲ್ಲಾ.

ಹುಡುಗ ೧ : ಹೌದು ನೋಡಿದ್ದೇನೆ ನಿಮ್ಮ ಕಂಪೆನಿಗೆ ನಾನು ಬರ್ತೇನೆ ಅಷ್ಟೇ.

(ಹುಡುಗರ ಗದ್ದಲ)

ಗೈಡ್ : ದಯವಿಟ್ಟು ಸ್ವಲ್ಪ ಗಲಾಟೆ ನಿಲ್ಲಿಸಿ. "ದೇಶವನ್ನು ಸುತ್ತಿ, ಕೋಶವನ್ನು ಓದಿ" ಎಂದು ಹಿರಿಯರು ಈಗಾಗಲೇ ಹೇಳಿದ್ದಾರೆ. ಇದರಿಂದ

ಜ್ಞಾನವನ್ನು ಸಹ ನಾವು ಹೆಚ್ಚಿಸಿಕೊಳ್ಳಬಹುದು. ಇದು ಪ್ರತಿಯೊಬ್ಬರಿಗೂ ಸಹಜವಾಗಿ ಇರುವ ಆಸಕ್ತಿ. ಇದಕ್ಕೆ ವಯೋಬೇಧ, ಲಿಂಗಬೇಧ ಯಾವುದೂ ಇಲ್ಲ. ಎಲ್ಲರಿಗೂ ಆಸಕ್ತಿ, ಕುತೂಹಲ "ದೇಶ" ಎಂದರೆ ನಮ್ಮದೇಶವೇ ಆಗಿರಬಹುದು ಅಥವಾ ಬೇರೆ ದೇಶವೇ ಆಗಿರಬಹುದು. ಅನುಭವ ಪರದೇಶಕ್ಕೆ ಹೋದರೆ ಮಾತ್ರ ಬರುವುದೇನಲ್ಲ. ನಮ್ಮ ದೇಶವನ್ನು ಮೊದಲು ನಾವು ನೋಡಿರಬೇಕಲ್ಲವೇ? ಇಲ್ಲಿನ ಅನುಭವ ಮೊದಲು ಆಮೇಲೆ ಬೇರೆ ದೇಶ!

ಹುಡುಗ ೧ : ಹೌದು...

ಹುಡುಗಿ : ಖಂಡಿತ... ನನಗೆ ಬೇರೆ ಊರುಗಳನ್ನು ನೋಡೋದು ಅಂದ್ರೆ ತುಂಬಾ ಆಸೆ.

ಹುಡುಗ ೨ : ಬಸ್ಸಿನಲ್ಲಿ ಹೋಗೋದು ಅಂದ್ರೆ ನನಗೆ ಇಷ್ಟ.

ಗೈಡ್ : ಈ ಪ್ರವಾಸ ತೀರ್ಥಕ್ಷೇತ್ರಗಳ ಯಾತ್ರೆ. ಮನಕ್ಕೆ ಉಲ್ಲಾಸ, ಆತ್ಮಕ್ಕೆ ಆನಂದ? ಒಂದೊಂದು ಸ್ಥಳದ ಜನಜೀವನ, ಸಂಸ್ಕೃತಿಯನ್ನು ಪರಿಚಯ ಮಾಡಿಕೊಳ್ಳಲು ಬಹಳ ಉಪಯುಕ್ತ! ಆ ದೃಷ್ಟಿಯಿಂದಲೇ ನಮ್ಮ ಶಾಲೆಯಿಂದ ಈ ಪ್ರವಾಸವನ್ನು ಏರ್ಪಡಿಸಿದ್ದಾರೆ. ದಕ್ಷಿಣ ಭಾರತದ ಪರಿಚಯ ಮಾಡಿಕೊಳ್ಳುವುದೇ ಇದರ ಉದ್ದೇಶ.

ಪ್ರವಾಸದಲ್ಲಿ ಸ್ವಲ್ಪ ಕಷ್ಟವಾಗಬಹುದು, ಅವುಗಳನ್ನೆಲ್ಲಾ ಸಾವರಿಸಿಕೊಂಡು ಸುಖಕರವಾಗಿ ಒಂದು ಮನೆಯವರಂತೆ ಅನ್ಯೋನ್ಯವಾಗಿ ನಡೆದುಕೊಂಡು ಬರಬೇಕು. ತಾವು ನನ್ನೊಡನೆ ಸಹಕರಿಸಿದರೆ ಆದಷ್ಟು ಸ್ಥಳಗಳ ಪರಿಚಯ ಮಾಡಿಕೊಡುತ್ತೇನೆ. ಎಲ್ಲರಿಗೂ ನನ್ನ ಹಾರ್ದಿಕ ಶುಭಾಶಯಗಳು.

(ಹುಡುಗರೆಲ್ಲಾ ಕೈ ಚಪ್ಪಾಳೆ ಹೊಡೆಯುತ್ತಿದ್ದಂತೆ ಬಸ್ ಹೊರಡುವುದು)

ಹುಡುಗಿ : ಈಗ ಮೊದಮೊದಲು ಯಾವ ಊರು ತೋರಿಸುತ್ತೀರಿ?

ಹುಡುಗ ೧ : ಸಿಕ್ಕ ಸಿಕ್ಕಿದ ಊರೆಲ್ಲಾ ತೋರಿಸ್ಕೊಂಡೋದ್ರೆ ಹದಿನೈದು ದಿನದಲ್ಲೇನೂ ನಮ್ಮ ಪ್ರವಾಸ ಮುಗಿಯೋಲ್ಲ.

ಗೈಡ್ : ಹಣ ಕೊಡಿ ಬಸ್‌ಗೆ ಪೆಟ್ರೋಲ್ ಹಾಕಿಸಿಕೊಂಡು, ಊರೂರ್ನೆಲ್ಲಾ ಸುತ್ತಿಸಿಕೊಂಡು ಬರುತ್ತೇನೆ. ನಾವಿರುವುದು ಅದಕ್ಕೆ ತಾನೇ!

ಹುಡುಗಿ : ಅದ್ಕೇ ಬಂದಿರೋದು ಕಷ್ಟ...

ಹುಡುಗ ೧ : ಇಷ್ಟು ಹಣ ಕೊಡೋಕೆ ನಮ್ಮ ಅಪ್ಪ ಅಮ್ಮ ಎಷ್ಟು ಕಷ್ಟಪಟ್ಟರು ಗೊತ್ತೇ?

ಹುಡುಗ ೨ : ಬರೇ ಊರು ಸುತ್ಕೊಂಡೋದ್ರೆ ಸ್ಕೂಲಿನ ಗತಿ.

ಗೈಡ್ : ಅದಕ್ಕೇ ಪ್ರಮುಖವಾದ ಸ್ಥಳಗಳನ್ನು ನಿಮಗೆ ತೋರಿಸ್ಕೊಂಡು ಬರೋದಕ್ಕೆ ನಿಮ್ಮ ಉಪಾಧ್ಯಾಯರು ಹೇಳಿದ್ದಾರೆ. ಈಗ ಸಧ್ಯಕ್ಕೆ ದಕ್ಷಿಣ ಭಾರತದ ಪರಿಚಯ ಮಾಡಿಕೊಳ್ಳಿ ಸಾಕು. ಮೊದಲು ಆಂಧ್ರ ಪ್ರದೇಶದಲ್ಲಿರುವ ತಿರುಪತಿಗೆ ನಮ್ಮ ಪರಿಚಯ ಬೆಳೆಸೋಣ.

ಹುಡುಗಿ : ಅಯ್ಯೊ, ತಿರುಪತಿ ವೆಂಕಟರಮಣ!

ಹುಡುಗ ೧ : ಗೋವಿಂದಾ...!!

ಹುಡುಗ ೨ : ಗೋವಿಂದಾ....!!

ಗೈಡ್ : ತಿರುಪತಿ ವೆಂಕಟರಮಣನ ದರ್ಶನವನ್ನು ಮಾಡಿಕೊಂಡು ಎಲ್ಲರೂ ಮತ್ತೆ ಛತ್ರಕ್ಕೆ ಬರಬೇಕು.

ಹುಡುಗಿ : ಈಗ ರಾತ್ರಿ ಹತ್ತು ಘಂಟೆ ಎಷ್ಟು ಹೊತ್ತಿಗೆ ಸ್ವಾಮಿಯ ದರ್ಶನವಾಗಬಹುದು?

ಹುಡುಗ ೧ : ನಾಳೆ ಬೆಳಿಗ್ಗೆ...!

ಹುಡುಗ ೨ : ಬೆಳಗ್ಗೆ ಆದ್ರೆ ಪುಣ್ಯ... ಸಾಯಂಕಾಲವಾಗಬಹುದು.

ಹುಡುಗಿ : ಅಷ್ಟರ ತನಕ ಮಾಡೋದೇನು?

ಹುಡುಗ ೧ : ಹಾಡು ಕೇಳೋದು.

ಹುಡುಗ ೨ : ಕಥೆ ಹೇಳೋದು.

ಹುಡುಗಿ : ಈ ದೇವರು, ದೇವಸ್ಥಾನದ ಬಗೆಗೆ ನಮ್ಮ "ಗೈಡ್" ಹೇಳ್ತಾರೆ.

ಗೈಡ್ : ಅಗತ್ಯವಾಗಿ.... ನಿಮಗೆ ಇವುಗಳ ಪರಿಚಯ ಮಾಡಲಿಕ್ಕೆ ತಾನೇ ಬಂದಿರೋದು.

ವೆಂಕಟೇಶ್ವರ ದೇವಾಲಯವು ದ್ರಾವಿಡ ವಾಸ್ತುಶಿಲ್ಪದ ಸುಂದರ ಕಲಾ ಕೃತಿಯಾಗಿದೆ. ಹೊರದ್ವರಾದ ಬಳಿ ವಿಜಯನಗರದ ಕೃಷ್ಣದೇವರಾಯ, ವೆಂಕಟಪತಿರಾಯ, ಅಚ್ಯುತರಾಯ ಮತ್ತು ಅವನ ರಾಣಿ, ತೋಡರಮಲ್ಲರ ಮೂರ್ತಿಗಳಿವೆ.

ಹುಡುಗ : ಧ್ವಜಸ್ತಂಭ, ಅದರೆದುರು ಬಲಿಪೀಠ, ಪಾಠಶಾಲೆ, ಯೋಗಶಾಲೆ, ಕಲ್ಯಾಣಮಂಟಪ, ದೇವಾಲಯದ ಬಾಗಿಲ ಎರಡು ಕಡೆಗಳಲ್ಲೂ ಜಯವಿಜಯರ ಮೂರ್ತಿಗಳಿವೆ.

ಗೈಡ್ : ಗರ್ಭಗುಡಿಯ ಹೊರಗೆ ನಿಂತಕೂಡಲೇ ಸುಂದರವಾದ ವೆಂಕಟೇಶಮೂರ್ತಿ ಕಾಣಿಸುತ್ತಾನೆ. ಇಲ್ಲಿ ಪುಷ್ಕರಣಿ, ಪಾಪನಾಶಿನೀ ತೀರ್ಥ, ಆಕಾಶಗಂಗಾ, ಪಾಂಡವ ತೀರ್ಥ, ಕಪಿಲ ತೀರ್ಥ ಮುಂತಾದ ತೀರ್ಥಗಳಿವೆ.

ಹುಡುಗ ೧ : ಅಂತೂ ವೆಂಕಟೇಶ್ವರ ಐದು ಘಂಟೆಗೆ ದರ್ಶನ ಕೊಟ್ಟ.

ಹುಡುಗ : ಆತನ ದರ್ಶನ ಮಾಡಿದ ಮೇಲೆ ಅಷ್ಟು ಹೊತ್ತಿನಿಂದ ಕಾದು ಸಾಕಾಗಿ ಕೋಪ ಬಂದಿದ್ದರೂ ಎಲ್ಲಾ ಇಳಿದುಹೋಯಿತು.

ಹುಡುಗ ೨ : ದೇವರ ದರ್ಶನವಾಗಬೇಕು ಅಂದರೆ ಸಾಮಾನ್ಯವೇ?

ಹುಡುಗ ೧ : ಇಲ್ಲಿನ ದೇವರ ಪ್ರಸಾದ.... ಬಹಳ ರುಚಿಯಾಗಿದೆ.

ಹುಡುಗ ೨ : ಲಾಡು ತೆಗೊಳ್ಳೋಣ. ಅದೂ ಅಷ್ಟೇ ತುಂಬಾ ರುಚಿಯಾಗಿದೆ.

ಹುಡುಗಿ : ವೆಂಕಟೇಶ್ವರನ ಪ್ರಸಾದ ಅಂದ್ರೇ ಅಷ್ಟು ಅಮೃತ! ಅಮೃತ!!

ಹುಡುಗ ೧ : ಅಲ್ಲಿ ನೋಡು ಜಿಂಕೆ ಮರಿ, ನವಿಲು.

ಹುಡುಗಿ : ಕಾಡೆಮ್ಮೆ ಕಾಡುಕೋಣ..... ಕಡವೆಗಳು......

ಹುಡುಗ ೨ : ತಿರುಪತಿ ಬೆಟ್ಟ ತುಂಬಾ ಚೆನ್ನಾಗಿದೆ. ದೇವರನ್ನೂ ಈ ಬೆಟ್ಟದ ಪ್ರಕೃತಿ ಸೌಂದರ್ಯ ನೋಡುತ್ತಾ ಇದ್ದರೆ ಇಲ್ಲೇ ಇದ್ದುಬಿಡ್ಲಾ ಅನ್ನಿಸುತ್ತೆ.

ಗೈಡ್ : ತಿರುಪತಿ ಬೆಟ್ಟ, ದೇವಸ್ಥಾನ ಎಲ್ಲವ್ನೂ ನೋಡಿದ್ರಲ್ಲಾ ಇನ್ನು ಮುಂದಿನ ಪ್ರಯಾಣ ಗೋವಿಂದ ರಾಯಸ್ವಾಮಿ ದೇವಾಲಯದ ಕಡೆಗೆ

(ಬಸ್ಸು ಹೊರಟ ಶಬ್ದ)

ಗೈಡ್ : ನಮ್ಮ ಪ್ರಕಟಣೆಯ ಪ್ರಕಾರ ನಾಳೆ ಹೈದರಾಬಾದು, ಕಾಳಹಸ್ತಿ ತೋರಿಸಿಕೊಂಡು ಮದ್ರಾಸು ನಗರ ತೋರಿಸುತ್ತೇನೆ. ಎಲ್ಲರೂ ಐದುಘಂಟೆಗೆ ಲಗ್ಗೇಜ್ ಕೊಡಬೇಕು. ಆರು ಘಂಟೆಗೆ ತಿಂಡಿ, ಏಳೂವರೆಗೆ ಬಸ್ಸಿನಲ್ಲಿರಬೇಕು......

ಹುಡುಗ ೧ : ಆಮೇಲೆ ಡ್ರೈವರ್ ಬಸ್ ಬಿಡಬೇಕು.....

ಹುಡುಗ ೨ : ಹೈದರಾಬಾದ್ ಬಂತು, ಹೈದ್ರಾಬಾದ್.

ಹುಡುಗ ೧ : ಒಳ್ಳೆ ಹಳೇಕಾಲದ ಮನೆಗಳು. ಜನ ನೋಡು ಹ್ಯಾಗೆ ತಿರುಗ್ತಾರೆ, ಬೆಂಗಳೂರಿಗಿಂತ ಹೆಚ್ಚು ಜನಸಂಖ್ಯೆ ಏನು ಜನ? ವೆಹಿಕಲ್ಸ್..... ಒಂದರ ಹಿಂದೆ ಒಂದು ಸರಮಾಲೆ ಥರ ಹೋಗ್ತಾ ಇದೆ. ಒಂದು ರಸ್ತೆಯಿಂದ ಮತ್ತೊಂದು ರಸ್ತೆ ದಾಟಕ್ಕೆ ಅದೆಷ್ಟು ಕಷ್ಟ?

ಹುಡುಗ ೧ : ಸೆಕೆ ನೋಡು ಹೇಗಿದೆ? ಸ್ವಲ್ಪ ಮೋಡಾನೂ ಇದೆ. ಬರೆ ಬಿಸಿಲಿದ್ರೆ ಗತಿ ಏನಪ್ಪಾ?

ಗೈಡ್ : ನೋಡಿ ಇದು ಉಸ್ಮಾನಿಯಾ ವಿಶ್ವವಿದ್ಯಾನಿಲಯ. ಈ ಕಲ್ಲು ಕಟ್ಟಡವನ್ನು ಹೈದರಾಬಾದ್ ನವಾಬ್ ಕಟ್ಟಿಸಿದರಂತೆ. ನೋಡಕ್ಕೆ ತುಂಬಾ ಚೆನ್ನಾಗಿದೆ.

ಹುಡುಗಿ : ಮುಂದೆ......

ಗೈಡ್ : ಬಿರ್ಲಾ ಮಂದಿರ.

(ಬಸ್ ಹೊರಡುವುದು ಸ್ವಲ್ಪ ದೂರ ಹೋಗುತ್ತಿದ್ದಂತೆ ನಿಲ್ಲುವುದು)

ಗೈಡ್ : ಎಲ್ಲರೂ ಇಳೀರಿ ಇದೇ ಬಿರ್ಲಾ ಮಂದಿರ. ಸ್ವಲ್ಪ ಕಷ್ಟಪಟ್ಟು ಬೆಟ್ಟ ಹತ್ತಬೇಕು. ಅಮೃತಶಿಲೆಯಲ್ಲೇ ಈ ದೇವಸ್ಥಾನವನ್ನು ಮಾಡಿದ್ದಾರೆ. ಬಾಲಾಜಿ ದೇವಸ್ಥಾನ ನೋಡಿ, ಎಷ್ಟು ಸುಂದರವಾಗಿದೆ.

ಹುಡುಗಿ : ಹೌದು ತುಂಬಾ ಚೆನ್ನಾಗಿದೆ. ಇಲ್ಲೇ ಇನ್ನೊಂದು ಸ್ವಲ್ಪ ಹೊತ್ತು ಕೂತುಬಿಡೋಣ ಅನ್ನಿಸುತ್ತೆ.

ಗೈಡ್ : ಹಾಗಾದ್ರೆ ಇನ್ನು ಮಿಕ್ಕ ಸ್ಥಳ ನೋಡೋದು ಬೇಡ್ವೇ? ಜವಹರಲಾಲ್ ಭವನದಲ್ಲಿನ ಹೆಲ್ತ್ ಮ್ಯೂಸಿಯಂಗೆ ಹೋಗಬೇಕು. ಗೋಲ್ಕಂಡಾ ಫೋರ್ಟ್ ನೋಡಬೇಕು.

ಹುಡುಗ ೨ : ನಡೀರಿ ಬೇಗ ಬರ್‍ತೀವಿ.

(ಬಸ್ ಹೊರಡುವುದು)

ಗೈಡ್ : ನೋಡಿ ಈ ಊರ ಹೊರಗಿನ ಈ ಕೋಟೆ ಸುಮಾರು ಐದು ಮೈಲು ಸುತ್ತಳತೆ ಇದೆ. ಎತ್ತರವಾದ ಬೆಟ್ಟದ ಕೆಳಗೆ ಶಿಥಿಲವಾದ ಅರಮನೆ ಅಂದ ಮೇಲೆ ಏನೇನಿರಬೇಕೋ ಅವೆಲ್ಲಾ ಇವೆ. ಪ್ರಾರ್ಥನಾ ಮಂದಿರವಂತೆ ಇದು, ಅದು ನೋಡಿ ಸ್ನಾನದ ಘಟ್ಟವಂತೆ, ಇದು ನೃತ್ಯ ಮಂದಿರವಾಗಿತ್ತಂತೆ. ಬೆಟ್ಟದ ಮೇಲೆ ಆ ಕಾಲದಲ್ಲಿ ಐದು ನೀರಿನ ಬಾವಿಗಳನ್ನು ಮಾಡಿ ಅದರಿಂದ ಮೇಲಿನ ದರ್ಬಾರ್ ಹಾಲಿನವರೆಗೂ ಹೋಗುವಂತೆ ಮಾಡಿದ್ದಾರೆ. ವೈರಿಗಳಿಂದ ತಪ್ಪಿಸಿಕೊಳ್ಳಲಿಕ್ಕೆ ಚಾರ್‌ಮಿನಾರ್‌ವರೆಗೆ ಹೋಗಲಿಕ್ಕೆ ಒಂದು ಅಂತರ್ ಗುಹೆ ಮಾಡಿಕೊಂಡಿದ್ರಂತೆ. ಈಗ ಅದನ್ನು ಮುಚ್ಚಿದ್ದಾರೆ. ಕೆಲವು ಗುಪ್ತ ಸಭೆಗಳನ್ನು ದರ್ಬಾರ್ ಹಾಲಿನಲ್ಲಿ ಮಾಡ್ತಿದ್ರಂತೆ. ಇಲ್ಲಿ ಒಂದು ಹಿಂದೂ ದೇವಾಲಯವಿದೆ. ಅದೇ ಎಲ್ಲಮ್ಮನ ದೇವಸ್ಥಾನ. ಮತ್ತೊಂದು ಶಕ್ತಿ ದೇವಾಲಯವಿದೆ. ಇದು ಅಂದಿನ ಮಹಮದೀಯ ರಾಜ ಹಿಂದೂ ಮಹಿಳೆಯನ್ನು ಮದುವೆಯಾಗಿ ಅವಳಿಗಾಗಿ ಕಟ್ಟಿಸಿದನಂತೆ. ಇನ್ನು ಕೆಲವು ರಾಣಿಯರ ಗೋರಿಗಳ ಶಿಲ್ಪಕಲೆಯನ್ನು ನೋಡೋಣ ನಡೀರಿ. ನೋಡಿ ಈ ಗೊಲ್ಕಂಡಾದ ಮತ್ತೊಂದು ವಿಶೇಷ ಅಂದರೆ ಬೆಟ್ಟದ ಕೆಳಗೆ ನಿಂತು ಅದೇ ಈ ಮಂಟಪದಲ್ಲಿ ಕೈ ಚಪ್ಪಾಳೆ ಹೊಡೆದರೆ ಅದು ಕೆಳಗಿನವರೆಗೂ ಕೇಳಿಸುತ್ತದೆ. ಇದು ಒಂದು ರೀತಿ ಈಗಿನ ಕಾಲದ ವೈರ್‌ಲೆಸ್ ಟೆಲಿಫೋನ್ ಸಿಸ್ಟಂ ಇದ್ದ ಹಾಗೆ ನೋಡಿ ನಾನು ಮಾಡ್ತೇನೆ....... (ಚಪ್ಪಾಳೆ ಹೊಡೆಯುವನು ಮೇಲಿದ್ದವರಿಗೆ ಕೇಳಿಸುವುದು)

ನೋಡಿ ಇಲ್ಲಿ ವೈರಿಗಳು ಬಂದಾಗ ಬಿಸಿ ನೀರನ್ನು, ಕುದಿವ ಎಣ್ಣೆಯನ್ನು ಬಾಗಿಲಲ್ಲಿ ಸುರಿಯಲು ಒಂದು ವ್ಯವಸ್ಥೆ ಮಾಡಿದ್ದರು.

ನಡೆಯಿರಿ ಉಸ್ಮಾನ್‌ಸಾಗರ್ ಲೇಕ್ ನೋಡುವಿರಿ. ಇದನ್ನು ವಿಶ್ವೇಶ್ವರಯ್ಯನವರು ಪ್ಲಾನ್ ಮಾಡಿದರಂತೆ ಹೈದ್ರಾಬಾದಿಗೇ ನೀರೊದಗಿಸುತ್ತವೆ. ಇದು ೧೮ ಸ್ಕ್ವೊಯರ್ ಮೈಲಿಗಳಿವೆ.

ಹುಡುಗ ೧ : ಮುಂದೆ.

ಗೈಡ್ : ಸಾಲಾರ್ ಜಂಗ್ ಮ್ಯೂಸಿಯಂ ತೋರಿಸ್ತೀವಿ. ಇಲ್ಲಿ ಒಬ್ಬ ಮನುಷ್ಯನ ಪ್ರತಿಮೆ ಬಂಮು ಗಂಟೆ ಹೊಡೆಯುತ್ತಾನೆ. ವಿಚಿತ್ರವಾದ ಈ ಕುತೂಹಲಕಾರಿ ಘಟನೆ ನೋಡಲು ಹಲವಾರು ಜನ ಕಾದಿರುತ್ತಾರೆ. ನೀವು ನೋಡಿ ಬನ್ನಿ. ಆಮೇಲೆ ಜೂಗಾರ್ಡನ್, ಚಾರ್‌ಮಿನಾರ್ ತೋರಿಸ್ತೀನಿ.

ಹುಡುಗಿ : ಹೌದು ನಾವು ನೋಡಬೇಕು.

ಗೈಡ್ : ನೋಡಿ, ನೋಡಿ, ಅದಕ್ಕೆ ತಾನೇ ಕರೆದುಕೊಂಡು ಬಂದಿರೋದು.

(ಗಂಟೆ ಹೊಡೆಯುವುದನ್ನು ನೋಡಿ ಎಲ್ಲರೂ ಕೈ ಚಪ್ಪಾಳೆ ತಟ್ಟುತ್ತಾ ನಗುವಿನಿಂದ ಸಂತೋಷಭರಿತರಾಗುತ್ತಾರೆ.)

ಗೈಡ್ : ಸರಿ ಹೊರಡೋಣ....... ನಡೆಯಿರಿ.

ಹುಡುಗ ೨ : ನಾವು ಕಾಳಹಸ್ತಿ, ಮದ್ರಾಸು ನೋಡಬೇಕು.

ಹುಡುಗಿ : ಅಲ್ಲಿಂದ ಮತ್ತೊಂದು ಊರಿಗೆ ಪಯಣ ಬೆಳೆಸಬೇಕು. ಅಲ್ವೇ, ಗೈಡ್ ಸಾಹೇಬರೇ.

ಗೈಡ್ : ಹೌದು ತಾಯಿ ಇಳೀರಿ.

(ಬಸ್ಸು ನಿಲ್ಲುವುದು)

ಗೈಡ್ : ಆಂಧ್ರ ಪ್ರದೇಶವಾಯ್ತು. ಇನ್ನು ತಮಿಳುನಾಡು, ಅಲ್ಲಿನ ದೇವಾಲಯಗಳ ಪರಿಚಯವನ್ನು ಮಾಡಿಕೊಡುತ್ತೇನೆ.

ಹುಡುಗ ೨ : ಪಾಪ ನಿಮಗೆ ನೋಡಿ ನೋಡಿ ಸುಸ್ತೇ

ಹುಡುಗ ೧ : ನೋಡಿದ್ದೇ ನೋಡು ಕಿಸಬಾಯಿ ಅಂತ.....

ಹುಡುಗಿ : ಹಾಗಲ್ಲ...... ಈಗ ಇದರ ವರ್ಣನೆ ಹಾಡಿದ್ದೇ ಹಾಡು ಕಿಸಬಾಯಿ ದಾಸಯ್ಯ......!

ಗೈಡ್ : ಗೋವಿಂದ ರಾಮಸ್ವಾಮಿ, ಗೋವಿಂದರಾಮ ಪಟ್ಟದ ವಿಶಾಲ ದೇವಾಲಯ, ಶ್ರೀಕೃಷ್ಣ, ಆಂಡಾಳಮ್ಮ ಕೋದಂಡರಾಮ, ಹನುಮಂತ

ಮೊದಲಾದ ದೇವಾಲಯಗಳು ಸುತ್ತ ಮುತ್ತ ಇವೆ. ಧರ್ಮಶಾಲೆ, ಪುಷ್ಕರಿಣಿಗಳೂ ಇಲ್ಲಿವೆ. ಈ ದೇವಾಲಯ ಸುಂದರ ವಾಸ್ತುಶಿಲ್ಪಗಳನ್ನೊಳಗೊಂಡಿದೆ. ಇದು ಕಾಳಹಸ್ತಿ! ಎಲ್ಲರೂ ಇಳಿಯಿರಿ. ಬೇಡರ ಕಣ್ಣಪ್ಪನ ಕಥೆ ನಿಮಗೆ ಗೊತ್ತಿದೆಯಲ್ಲಾ.

ಹುಡುಗಿ : ಗೊತ್ತಿಲ್ಲ.... ಸ್ವಲ್ಪ ಹೇಳಿ ಸಾರ್.

ಗೈಡ್ : ಮೊದಲು ದೇವಸ್ಥಾನ ನೋಡಿಕೊಂಡು ಬನ್ನಿ. ಆಮೇಲೆ ಅವರ ಮಹಾತ್ಮೆ ತಿಳಿಸ್ತೀನಿ.

ಹುಡುಗ ೧ : ಹೌದು.... ಮೊದಲು ಹೋಗೋಣ....ಪೂಜೆ ಮಾಡಿಸ್ಕೊಂಡು ಬರೋಣ ಆಮೇಲೆ ಸ್ವಲ್ಪ ಹೊತ್ತು ಕೂತು ಕೇಳೋಣ.

(ದೇವಸ್ಥಾನದ ಘಂಟಾನಾದ ಪೂಜೆಯ ದನಿ)

ಗೈಡ್ : ಕಣ್ಣಪ್ಪ ಮೋಕ್ಷ ಪಡೆದ ಪುಣ್ಯಸ್ಥಳ. ಅಗಸ್ತ್ಯ ತಪಗೈದ ತಾಣ.

ಹುಡುಗಿ : ಬೇಡರ ಕಣ್ಣಪ್ಪನ ಕಥೆ ಸ್ವಲ್ಪ ಹೇಳ್ತೀರಾ?

ಹುಡುಗ ೧ : ನಾನು ಹೇಳ್ತೀನಿ.....

ಸೌಂದರ, ಮಹಾಕಾಯರೆಂಬ ರಾಕ್ಷಸರು ಸೂಜಿಯ ಮೇಲೆ ತಲೆಕೆಳಗಾಗಿ ನಿಂತು ತಪಸ್ಸು ಮಾಡುತ್ತಿದ್ದರು. ಆಗ ಈಶ್ವರನು ಪ್ರತ್ಯಕ್ಷನಾಗಿ ನಿಮಗೇನು ವರ ಬೇಕೆಂದು ಕೇಳಿದ. ಅದಕ್ಕೆ ಅವರು "ನಮ್ಮ ಶರೀರವನ್ನು ನಿನ್ನಲ್ಲಿ ಅರ್ಪಿಸಿಕೋ" ಎಂದರು. ಆಗ ಈಶ್ವರ "ನೀವು ಮೃಗಗಳಾಗಿ ಕಾಳಹಸ್ತಿಯಲ್ಲಿರಿ. ಕಣ್ಣಪ್ಪನೆಂಬ ಭಕ್ತ ನಿಮ್ಮನ್ನು ಕೊಂದು ನನಗರ್ಪಿಸುತ್ತಾನೆ" ಎಂದು ಅದೃಶ್ಯನಾದ.

ಕಣ್ಣಪ್ಪ ಬೇಟೆಯಾಡುತ್ತಿರಲು ಒಂದು ಮಾಯಾಮೃಗವನ್ನು ನೋಡಿ ಹಿಂಬಾಲಿಸಿದ. ಅದು ಶಿವಾಲಯಕ್ಕೆ ಬಂದು ಅಡಗಿತು. ಶಿವನನ್ನು ಬಾಗಿಲು ತೆಗೆ ಎಂದು ಬೇಡರ ಕಣ್ಣಪ್ಪ ಕೇಳಿದ. ಬಾಗಿಲು ತೆರೆಯಿತು. ಆ ಮೃಗವನ್ನು ಕೊಂದು, ಆ ಮೃಗದ ಮಾಂಸವನ್ನು ಶಿವನಿಗರ್ಪಿಸಿದ.

ಅಲ್ಲಿಗೆ ಬಂದ ಪೂಜಾರಿಗಳು ಮಾಂಸ ಬಿದ್ದಿದುದನ್ನು ನೋಡಿ ರಾಜನಲ್ಲಿ ತಿಳಿಸಿ ದೇಶಕ್ಕೆ ಏನೋ ವಿಪತ್ತು ಬರುತ್ತೆ ಎಂದರು.

ಮರುದಿನ, ಬಾಗಿಲು ತೆರದಾಗ ಶಿವಲಿಂಗದ ಕಣ್ಣಲ್ಲಿ ರಕ್ತ ಸುರಿಯುತ್ತಿತ್ತು. ಇದು "ಅಶುಭ ಸೂಚನೆ" ಎಂದರು ಪೂಜಾರಿಗಳು ರಾಜನಿಗೆ. ಕಣ್ಣಪ್ಪ ಬಂದು ಶಿವನ ರಕ್ತ ಕಣ್ಣೀರು ಒರಸಿ ತನ್ನ ಕಣ್ಣನ್ನೇ ಶಿವನಿಗರ್ಪಿಸಿದ. ಆಗ ಶಿವನು ಆತನ ಭಕ್ತಿಗೆ ಮೆಚ್ಚಿ ಗಣಪದವಿಯನ್ನು ಕೊಟ್ಟ.

ಗೈಡ್ : ಮುಂದೆ ಮದ್ರಾಸಿಗೆ ಪಯಣ.

(ಬಸ್ ಹೊರಡುವುದು)

ಇದು ಚೈನಾ ಬಜಾರ್. ನಿಮಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಳ್ಳಿ. ಇಲ್ಲಿಗೆ ಬಂದ ಮೇಲೆ ಅಷ್ಟಲಕ್ಷ್ಮಿ ದೇವಾಲಯ ನೋಡ್ಲೇ ಬೇಕು ನಡೀರಿ.

(ಬಸ್ ಹೋಗುತ್ತಿರುವುದು ಸಮುದ್ರದ ಅಲೆಯ ಶಬ್ದ ಕೇಳಿಸುತ್ತಿರುವುದು)

ಇಲ್ಲಿ ಇನ್ನೊಂದು ದೇವಾಲಯ ನೋಡಬೇಕಾಗಿದೆ. ಅದೇ ಪಾರ್ಥಸಾರಥಿ ದೇವಾಲಯ.

ಮದ್ರಾಸು ದಕ್ಷಿಣ ಭಾರತದ ದೊಡ್ಡ ನಗರ. ಇಡೀ ರಾಷ್ಟ್ರದಲ್ಲೇ ಇದು ನಾಲ್ಕನೆಯದು. ಇಲ್ಲಿ ಸ್ನೇಕ್ ಪಾರ್ಕ್ ಇದೆ. ಸಿನಿಮಾ ತೆಗೆಯುವ ಅನೇಕ ಸ್ಟುಡಿಯೋಗಳಿವೆ. ಇವನ್ನೆಲ್ಲಾ ನಿಧಾನಕ್ಕೆ ನೋಡಿಪ್ರಂತೆ ಈಗ......

ಹುಡುಗ ೧ : ಮುಂದಿನ ಪಯಣ.

ಹುಡುಗ ೨ : ಆರು ಘಂಟೆಗೆ ಲಗ್ಗೇಜ್.

ಹುಡುಗಿ : ಆರುವರೆ ಘಂಟೆಗೆ ಟಿಫನ್.

ಹುಡುಗ ೧ : ಏಳುವರೆ ಘಂಟೆಗೆ......

(ಬಸ್ ಶಬ್ದ ಎಲ್ಲರ ನಗುವಿನ ಅಲೆಗಳ ಉಲಿತ)

ಗೈಡ್ : ಹೌದು, ನಾಳಿನ ಟೂರ್ ಎಲ್ಲಿಗೆ ಅಂತ ಹೇಳಲಿಲ್ವಲ್ಲಾ. ಮಹಾಬಲಿಪುರದ ಕಡೆಗೆ. ಇನ್ನು ನೀವು ಮದ್ರಾಸಿನಲ್ಲಿ ಇನ್ನೇನಾದ್ರೂ ನೋಡುವುದಿದ್ರೆ ನೋಡಿಕೊಂಡು ಎಲ್ಲರೂ ಜೋಪಾನವಾಗಿ ಈ ಛತ್ರಕ್ಕೆ ಬಂದು ರಾತ್ರಿ ಹತ್ತು ಘಂಟೆಯ ಒಳಗೆ ತಲುಪಿಬಿಡಬೇಕು. ಏನು ಹೇಳ್ತೀರಿ?

ಹುಡುಗಿ : ಆಯ್ತು........ ನೀವ್ಹೇಳ್ದಾಗೇ.... ಬಂದುಬಿಡ್ತೇವಿ.

ಹುಡುಗ ೧ : ಅಬ್ಬಾ.....ಎಷ್ಟೊಂದು ಬಿಸಿಲು.....?

ಹುಡುಗ ೨ : ಮದ್ರಾಸಿನ ಹವಾಗುಣವೇ ಅಷ್ಟು ಅಂತ ನಮ್ಮ ತಂದೆಯವರು ಹೇಳ್ತಿದ್ರು.

ಹುಡುಗ ೧ : ಅದಕ್ಕೇ ತೆಳ್ಳಗಿನ ಬಟ್ಟೆ ಹಾಕಿಕೊಂಡಿದ್ದೇನೆ.

ಗೈಡ್ : ಎಲ್ಲರೂ ಇಳೀರಿ. ಒಂದು ಸ್ವಲ್ಪ ಹೊತ್ತು ಮಹಾಬಲೇಶ್ವರ ದೇವಾಲಯವನ್ನು ನೋಡಿಕೊಂಡು ಹೋಗೋಣ (ಸಮುದ್ರದ ಭೋರ್ಗರೆತ). ಇದು ಏಳನೇ ಶತಮಾನದಲ್ಲಿ ಪಲ್ಲವರು ಕಟ್ಟಲ್ಪಟ್ಟ ದೇವಾಲಯ. ಈ ರೀತಿ ಕಟ್ಟಲ್ಪಟ್ಟ ಏಳು ದೇವಾಲಯಗಳಲ್ಲಿ ಆರು ಸಮುದ್ರದ ಕೋಪಕ್ಕೆ ಆಹುತಿಯಾಗಿ ಹೋಗಿ ಈಗ ಉಳಿದಿರೋದು ಇದೊಂದೇ.

ಹುಡುಗ ೧ : ಕಲ್ಲಿನ ರಥ, ಆನೆ, ಸಿಂಹಗಳ ಕೆತ್ತನೆ ಕೆಲಸ ನೋಡಿ ಎಷ್ಟು ಚೆನ್ನಾಗಿದೆ. ಪಾಂಡವರ ಮಂಚ, ಆ ಕೋತಿ ಹೇನು ಹಿಡಿಯುವುದು ಎಷ್ಟೊಂದು ಸಹಜವಾಗಿದೆ ನೋಡಿ. ಇಲ್ಲಿ ಫೋಟೋ ತೆಗೆಸಿ ಕೊಳ್ಳೋಣ ಎಲ್ಲರೂ.....

ಹುಡುಗಿ : ಹೌದು.

ಹುಡುಗ ೧ : ಹೌದು..... ಖುಷಿ......

ಹುಡುಗಿ : ಈ ಗುಹೇಲಿರೋ ಆದಿಶೇಷನ ಮೇಲೆ ನಾರಾಯಣ ಎಷ್ಟು ಚೆನ್ನಾಗಿ ಒರಗಿದ್ದಾನೆ?

ಹುಡುಗಿ ೨ : ದುರ್ಗಾದೇವಿ, ಭವ್ಯವಾದ ಈ ಲಿಂಗ ಎಷ್ಟು ಚೆನ್ನಾಗಿದೆ. ಕೃಷ್ಣನ ಜೀವನ ಚರಿತ್ರೆ, ಅರ್ಜುನ ತಪಸ್ಸು ಮಾಡುತ್ತಿರುವುದು, ಶಿವ-ಪಾರ್ವತಿ ಮೂರ್ತಿಗಳು ಎಷ್ಟು ಆಕರ್ಷಕವಾಗಿವೆ. ಇಲ್ಲೊಂದು ಸ್ವಲ್ಪ ಹೊತ್ತು ಕುಳಿತು ಒಂದು ಹಾಡು ಹಾಡೋಣ.

ಹುಡುಗಿ : ಅಗತ್ಯವಾಗಿ.....

(ಭಾವಗೀತೆ ಹಾಡುವರು)

ಹುಡುಗ ೧ : ಬಂಡೆಗಳಲ್ಲಿ ಕೊರೆದಿರುವ ವೃಷಭಗಳು ಎಷ್ಟು ಚೆನ್ನಾಗಿವೆ.

ಗೈಡ್ : ನೋಡಿ, ಇದು ಶಿವ ಮಂದಿರ. ಇವೆಲ್ಲಾ ೭ನೇ ಶತಮಾನದ ಉತ್ತರಾರ್ಧದಲ್ಲಿ ರಾಜಸಿಂಹನು ಕಟ್ಟಿಸಿದನು. ಕೆಲವು ಭಗ್ನವಾದ ವಿಗ್ರಹಗಳನ್ನು ಒಂದು ಕಡೆ ಕಲೆ ಹಾಕಿ "ನೇತಾಜಿ ಮ್ಯೂಸಿಯಂ" ಮಾಡಿದ್ದಾರೆ. ನೋಡಿ ಎಷ್ಟೊಂದು ಅದ್ಭುತ ಕಲೆಗಳು ಹಾಳಾಗಿ ಹೋಗಿವೆ.

ಹುಡುಗ ೧ : ಮುಂದೆ ಯಾವ ಊರು ಸಾರ್?

ಗೈಡ್ : ಕಂಚಿ.

ಹುಡುಗ ೨ : ತಂಗುವುದು?

ಹುಡುಗಿ ೧ : ಅಲ್ಲೇ...... ಆಮೇಲೆ ಅಲ್ಲಿನ ದೇವಾಲಯಗಳ ದರ್ಶನ!

ಕಂಚಿ ಸೀರೆಗೆ ಬಹಳ ಪ್ರಸಿದ್ಧ. ಕಾಮಾಕ್ಷಿ ದೇವಸ್ಥಾನ ಇಲ್ಲಿನ ಪ್ರಮುಖ ದೇವಾಲಯ. ಈ ಕಂಚಿ ಹಿಂದೆ ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿತ್ತು. ಪಲ್ಲವ, ಚೋಳ, ವಿಜಯನಗರದ ಅರಸರು ತಮ್ಮ ರಾಜಧಾನಿ ಮಾಡಿಕೊಂಡು ಅನೇಕ ದೇವಾಲಯಗಳನ್ನು ಕಟ್ಟಿದ್ದಾರೆ.

ಗೈಡ್ : ಕಂಚಿಯಲ್ಲಿ ಶಿವ ಕಂಚಿ, ದೊಡ್ಡ ಕಂಚಿ. ಇಲ್ಲಿ ಏಕಾಂಬರೇಶ್ವರ ದೇವಾಲಯ ಪ್ರಸಿದ್ಧವಾದುದು. ಕಾಮಾಕ್ಷಿ ದೇವಸ್ಥಾನದಲ್ಲೇ ಏಕಾಂಬರೇಶ್ವರ ದೇವಾಲಯವಿದೆ. ವರದರಾಜ ದೇವಾಲಯ ಸಹ ಮುಖ್ಯವಾದದ್ದು. ಈ ವರದರಾಜ ದೇವಾಲಯದ ಪ್ರಾಕಾರದಲ್ಲಿ ಚಿನ್ನದ ಹಲ್ಲಿಯಿದೆ. ಇದನ್ನು ಮುಟ್ಟಿದರೆ ಹಲ್ಲಿ ಬಿದ್ದ ದೋಷ ಪರಿಹಾರ ಎಂಬುದು ಜನರ ಅಭಿಪ್ರಾಯವಾಗಿದೆ. ಇಲ್ಲಿರುವ ಅನಂತ ಸರೋವರದ ಮಂಟಪದ

ವಿಗ್ರಹಗಳನ್ನು ನಲವತ್ತು ವರ್ಷಗಳಿಗೊಮ್ಮೆ ಭಕ್ತರಿಗೆ ತೋರಿಸುವುದು ಇಲ್ಲಿನ ಒಂದು ವಿಶೇಷ.

ಕಾಮಾಕ್ಷಿ ದೇವಾಲಯದ ೩ ಗೋಪುರಗಳನ್ನು ಪಾಂಡ್ಯರಾಜ ಕಟ್ಟಿಸಿದನು ಎಂಬ ಐತಿಹ್ಯವಿದೆ.

ಹುಡುಗಿ : ಕಂಚಿ "ಕಾಮಾಕ್ಷಿ"ಯ ಬಗ್ಗೆ ಸ್ವಲ್ಪ ಹೇಳ್ತಿರಾ?

ಗೈಡ್ : ದಕ್ಷ ಯಜ್ಞವಾದ ಮೇಲೆ ಪಾರ್ವತಿ ಈಶ್ವರನನ್ನು ಕುರಿತು ಈ ಮಾವಿನ ಮರದ ಕೆಳಗೆ ತಪಸ್ಸು ಮಾಡಿದಳು. ಇದಕ್ಕೆ ೩,೫೦೦ ವರ್ಷಗಳ ಐತಿಹ್ಯವಿದೆ.ಇಲ್ಲಿ ಕಂಭಾ ನದಿಗೆ ಮಹಾಪೂರ ಬಂದು ಉಸುಕಿನಲ್ಲಿ ಲಿಂಗವು ಬೆರೆತು ಹೋಗುತ್ತಿದ್ದಾಗ ಪಾರ್ವತಿ ಆ ಲಿಂಗವನ್ನು ಆಲಂಗಿಸಿಕೊಳ್ಳುವಳು. ಆಗ ಈಶ್ವರ ತನ್ನ ಅರ್ಧಾಂಗಿಯನ್ನಾಗಿ ಮಾಡಿಕೊಂಡ. ಆಕೆಯೇ ಕಾಮಾಕ್ಷಿ.

(ಬಸ್ ಹೊರಡುವುದು)

ಗೈಡ್ : ಫ್ರೆಂಚರು ಆಳಿದ ಪಾಂಡಿಚೇರಿ ನಿಮಗೆಲ್ಲಾ ಗೊತ್ತಿರಬೇಕಲ್ಲಾ.

ಹುಡುಗ : ಅಷ್ಟಾಗಿ ಗೊತ್ತಿಲ್ಲ.

ಹುಡುಗಿ : ಅರವಿಂದರು ಇದ್ದರಂತೆ.

ಗೈಡ್ : ಹೌದು.... ಇದನ್ನು ಹಿಂದೆ ಅಗಸ್ತ್ಯ ಋಷಿಗಳ "ವೇದಪುರಿ" ಎಂದು ಕರೆಯುತ್ತಿದ್ದರು. ಇಲ್ಲಿ ಅರವಿಂದರ ಹಾಗೂ ಮಾತೆಯವರ ಸಮಾಧಿಗಳನ್ನು ತೋರಿಸುತ್ತೇನೆ.......

(ಬಸ್ ಹೊರಡುವುದು)

ಗೈಡ್ : ಇದು ಚಿದಂಬರ ದೇವಾಲಯ. ಇದು ಶೈವ ಕ್ಷೇತ್ರಗಳಲ್ಲಿ ಒಂದು ನಟರಾಜನ ದೇವಸ್ಥಾನ ಇಲ್ಲಿದೆ. ಪಲ್ಲವರು, ಚೋಳರು, ಪಾಂಡ್ಯರು ಅನೇಕ ದೇವಸ್ಥಾನಗಳನ್ನು ಕಟ್ಟಿಸಿದ್ದಾರೆ. ಮೂವತ್ತೆರಡು ಎಕರೆ ಪ್ರದೇಶದ ವ್ಯಾಪ್ತಿಯಲ್ಲಿ ಈ ದೇವಾಲಯ ನಿರ್ಮಿಸಲ್ಪಟ್ಟಿದೆ. ಕಲಾಮಯವಾದ ಪಂಚಸಭಾ ಮಂದಿರಗಳಿವೆ, ಸಾವಿರ ಕಂಭಗಳಿಂದೊಡಗೂಡಿ ರಾಜಸಭಾ, ಚಿತ್ರ ಸಭಾ, ಕನಕ ಸಭಾ ಮತ್ತು ನೃತ್ಯ ಸಭಾ ಮಂದಿರಗಳು ಸುಂದರವಾಗಿವೆ. ಕನಕ ಸಭೆಯಲ್ಲಿ ನಟರಾಜನ ಮೂರ್ತಿ ಇದೆ. ಸಭಾಮಂದಿರದಲ್ಲಿ ಶಿವ ತಾಂಡವದ ವಿವಿಧ ಕೆತ್ತನೆಗಳನ್ನು ನೋಡಿ ಈ ನಟರಾಜನಮೂರ್ತಿ ಪಂಚಲೋಹದಿಂದ ಮಾಡಿದ್ದು ಬಹಳ ಸುಂದರವಾಗಿದೆ.

ಹುಡುಗ ೧ : ಕನ್ಯಾಕುಮಾರಿ ಯಾವಾಗ ತೋರಿಸ್ತೀರಿ ಮಾರ್ಗದರ್ಶಕರೇ?

ಹುಡುಗ ೨ : ತೋರಿಸೋ ದಿನಕ್ಕೆ ತೋರಿಸ್ತಾರೆ.

ಹುಡುಗಿ : ನೀನ್ಯಾಕೆ ಮಧ್ಯ ಬಾಯಿ ಹಾಕ್ತೀಯಾ?

ಹುಡುಗ ೨ : ನೀನ್ಯಾಕೆ ಆತುರ ಬೀಳ್ತೀಯಾ?

ಗೈಡ್ : ಜಗಳ ಆಡಬೇಡಿ ಮುಂದಿನ ಊರೇ ಕನ್ಯಾಕುಮಾರಿಯೇ, ನಮ್ಮ ಪ್ರವಾಸದ ಬಹಳ ಮುಖ್ಯವಾದ, ನೋಡಬೇಕಾದ ರಮಣೀಯವಾದ ಸ್ಥಳ. ಪ್ರತಿಯೊಬ್ಬರೂ ನೋಡಬೇಕಾದುದು.

ಪೂರ್ವದಲ್ಲಿ ಬಂಗಾಳ ಕೊಲ್ಲಿ, ಪಶ್ಚಿಮದಲ್ಲಿ ಅರಬ್ಬೀ ಸಮುದ್ರ, ದಕ್ಷಿಣದಲ್ಲಿ ಹಿಂದೂ ಮಹಾ ಸಾಗರಗಳು ಕನ್ಯಾಕುಮಾರಿಯ ಪಾದವನ್ನು ತೊಳೆಯುತ್ತವೆ.

(ಕನ್ಯಾಕುಮಾರಿ ಸಮುದ್ರ ತೀರದಲ್ಲಿ)

ಹುಡುಗ ೧ : ಸಾರ್ ಈ ಸಮುದ್ರದಲ್ಲಿ ನಾವು ಮೈತೊಳೆಯಬೇಕು ಅನ್ನಿಸುತ್ತೆ, ಈಜಬೇಕು ಅನ್ನಿಸುತ್ತೆ.

ಹುಡುಗ ೨ : ನೋಡಿ, ಈ ನೀರು ಕಪ್ಪಾಗಿದೆ, ಅದು ಕೆಂಪಾಗಿದೆ, ಆ ಕಡೇದು ಬೆಳ್ಳಗಿದೆ. ಮರಳೂ ಹಾಗೇ ಇವೆ.

ಹುಡುಗಿ : ಹತ್ತು ಹತ್ತು ಪೈಸೆಯಂತೆ ಒಂದು ಪ್ಯಾಕೆಟ್ ಮರಳಿಗೆ, ತೆಗೊಳ್ಳೋಣ ಶಂಖ, ಕಪ್ಪೆಚಿಪ್ಪುಗಳನ್ನು ನಾನು ಆಯ್ತಾ ಇರ್ತೀನಿ. ನೀವು ಈಜು ಹೊಡೀತಾ ಇರಿ.

ಗೈಡ್ : ದೂರದಲ್ಲಿ ನಿಂತು ಸ್ನಾನ ಮಾಡಿಕೊಳ್ಳಿ. ಬೇಗ ಬೇಗ ಬರಬೇಕು. ಮಹಾತ್ಮಾಗಾಂಧಿ ಸ್ಮಾರಕ, ಶಂಕರಾಚಾರ್ಯ ದೇವಸ್ಥಾನ, ವಿವೇಕಾನಂದ ಶಿಲೆ ಎಲ್ಲವನ್ನು ತೋರಿಸುತ್ತೇನೆ. ಕನ್ಯಾಕುಮಾರಿ ದೇವಸ್ಥಾನ ಬಹಳ ಮುಖ್ಯವಾದದ್ದು. ಬಲರಾಮನೂ ಸಹ ಇಲ್ಲಿಗೆ ಬಂದಿದ್ದನಂತೆ. ಅರ್ಜುನನೂ ಈ ದೇವಿಯನ್ನು ಪೂಜಿಸಿದ್ದಾನಂತೆ.

ಹುಡುಗ ೨ : ಅಬ್ಬಾ...... ಕನ್ಯಾಕುಮಾರಿಯನ್ನು ನೋಡಿದರೆ ಮತ್ತೆ ಮತ್ತೆ ನೋಡಬೇಕು ಎನ್ನಿಸುತ್ತದೆ. ಎಷ್ಟು ಸುಂದರವಾಗಿದ್ದಾಳೆ ದೇವತೆ.

ಗೈಡ್ : ಅಷ್ಟು ಸುಂದರವಾಗಿದ್ದುದಕ್ಕೆ....

ಹುಡುಗಿ : ಏನು ಅದರ ಕಥೆ?

ಹುಡುಗ ೧ : ಹಿಂದೆ ಬಾಣಾಸುರ ಎಂಬ ರಾಕ್ಷಸ ಮೂರು ಲೋಕಗಳನ್ನು ಗೆದ್ದು ದೇವತೆಗಳಿಗೆ ತೊಂದರೆ ಕೊಡಲಾರಂಭಿಸಿದ. ಆಗ ಅವರೆಲ್ಲಾ ಶಿವನನ್ನು ಬೇಡಿಕೊಂಡರು. ಶಿವನು ಶಕ್ತಿಯನ್ನು ಪ್ರಾರ್ಥಿಸಿ ಕುಮಾರಿ "ಕನ್ನಿಕೆ ಭಗವತಿ"ಯನ್ನು ಸೃಷ್ಟಿಸಿದ. ಬಾಣಾಸುರ ಆಕೆಯ ಸೌಂದರ್ಯದ ಬಗ

ಕೇಳಿ, ನೋಡಲು ಬಂದು ಬಲಾತ್ಕಾರಪಡಿಸಲು ಹೋದಾಗ ಖಡ್ಗದಿಂದ ಆತನ ಶಿರಚ್ಛೇದ ಮಾಡುತ್ತಾಳೆ. ಮಹಾದೇವನನ್ನು ಮದುವೆಯಸ್ನಾಗಲು ಕನ್ನಿಕೆ ಭಗವತಿ ಶುಚೀಂದ್ರದಲ್ಲಿ ತಪಸ್ಸು ಆಚರಿಸುತ್ತಾಳೆ. ಅನಂತರ ಶಿವನು ಒಪ್ಪಿಕೊಂಡ. ಮದುವೆಯ ಸಿದ್ಧತೆಗಳು ನಡೆದವು, ಮುಹೂರ್ತ ಸಮಯಕ್ಕೆ ಈಶ್ವರ ಬರಲಿಲ್ಲ. ಆಕೆ ಮದುವೆಗೆ ಶೇಖರಿಸಿದ ಅಕ್ಕಿಯನ್ನು ಉಸುಕಾಗಲೆಂದು ಶಾಪಕೊಟ್ಟು, ತಾನು ಶಿಲಾಮೂರ್ತಿಯಾದಳು.

ಹುಡುಗಿ : ಆ ದೇವಿಯ ಮೂಗಿನಲ್ಲಿರುವ ವಜ್ರ ಅದೇನು ಕಣ್ಣು ಕುಕ್ಕುತ್ತಿದೆ?

ಹುಡುಗ ೧ : ಈ ವಜ್ರದ ಬೆಳಕು ಲೈಟ್ ಹೌಸ್ ತರಹವಾಗಿತ್ತಂತೆ

ಹುಡುಗ ೨ : ಎಷ್ಟೋ ಸಾರಿ ಇದರ ಪ್ರಕಾಶಕ್ಕೆ ಹಡಗುಗಳು ಡಿಕ್ಕಿ ಹೊಡೆಯುತ್ತಿದ್ದುವಂತೆ.

ಗೈಡ್ : ಅದಕ್ಕೆ ಈಗ ದೇವಾಲಯ ನಿರ್ಮಿಸಿ ರಕ್ಷಿಸಲಾಯಿತು. ವಿವೇಕಾನಂದ ಶಿಲೆ ನೋಡೋಕೆ ಹೋಗೋಣ.

ಹುಡುಗ ೧ : ಸ್ಟೀಮರ್ ಬೋಟ್ ನಲ್ಲಿ......

ಗೈಡ್ : ಮತ್ತೆ ವಿವೇಕಾನಂದರು ಈಜಿ ಹೋದ್ರಲ್ಲಾ ಹಾಗೆ ನಿನ್ನ ಕೈಲಿ ಈಜಕ್ಕಾಗುತ್ತದೆಯೆ?

ಹುಡುಗ ೧ : ಇಲ್ಲಿ ಇನ್ನೇನು ವಿಶೇಷ ಮಾರ್ಗದರ್ಶಕರೆ?

ಗೈಡ್ : ಸೂರ್ಯ ಮುಳುಗುವುದು, ಸೂರ್ಯ ಮೂಡುವುದು ಎರಡೂ ಸೌಂದರ್ಯ ನೋಡಲಿಕ್ಕೇ ಇದೊಂದೇ ಸ್ಥಳದಲ್ಲಿ ಸಾಧ್ಯ.

ಹುಡುಗ ೧ : ದಕ್ಷಿಣ ಭಾರತದಲ್ಲಿ ಅದರಲ್ಲೂ ತಮಿಳುನಾಡು ದೇವಾಲಯಗಳ ಬೀಡು. ಒಂದೊಂದು ದೇವಾಲಯ ಒಂದೊಂದು ರೀತಿಯ ವೈವಿಧ್ಯತೆಯಿಂದ ಕೂಡಿದೆ.

ಹುಡುಗ ೨ : ಎಂಥವನೂ ಆ ಶಿಲ್ಪಕಲೆಗಳಿಗೆ ಮಾರು ಹೋಗಬೇಕು.

ಹುಡುಗಿ : ಒಂದೊಂದು ದೇವಾಲಯ ನೋಡಿದಾಗಲೂ ಒಂದೊಂದು ರೀತಿ ಹೊಸ ಅನುಭವ, ಮನಸ್ಸಿಗೆ ಒಂದು ರೀತಿ ಸಂತೋಷವಾಗುತ್ತೆ.

(ಬಸ್ ಹೊರಡುವುದು)

ಗೈಡ್ : ಮುಂದೆ ಕುಂಭಕೋಣ ಸ್ವಾಮಿ ಮಲೆಗೆ ನಿಮ್ಮನ್ನು ಕರೆದೊಯ್ಯುತ್ತಿದ್ದೇವೆ.

ಹುಡುಗ : ಕುಂಭೇಶ್ವರ ಲಿಂಗ ಕುಂಭಾಕಾರವಾಗಿರುವುದರಿಂದ ಈ ಸ್ಥಳಕ್ಕೆ ಕುಂಭಕೋಣ ಎಂದು ಹೆಸರಾಯಿತು. ಮಹಾಮಾಘ ಸರೋವರ ಇಲ್ಲಿ ಪ್ರಸಿದ್ಧವಾಗಿದೆ. ಹನ್ನೆರಡು ವರ್ಷಗಳಿಗೊಮ್ಮೆ ಇಲ್ಲಿ ಜಾತ್ರೆ ನಡೆಯುತ್ತದೆ.

ದ್ವಾಪರ ಯುಗವಾದ ಮೇಲೆ ಪ್ರಳಯವಾಯಿತು. ಆಗ ಅಮೃತ ತೇಲುತ್ತ ನಿಂತಿತು. ಅದನ್ನು ಈಶ್ವರ ಬಿಲ್ಲಿನಿಂದ ಹೊಡೆದ. ಆಗ ಒಡೆದು ಮಹಾ ಕೆರೆಯಾಯಿತು. ಇಲ್ಲಿ ಗಂಗಾ, ಯಮುನಾ, ನರ್ಮದಾ, ಸರಸ್ವತಿ, ತುಂಗಭದ್ರಾ, ಕೃಷ್ಣ, ಕಾವೇರಿ ಮೊದಲಾದ ನದಿಗಳು ಹರಿಯುತ್ತವೆ ಎಂಬ ಪ್ರತೀತಿ.

(ಬಸ್ಸು ಹೊರಡುವ ಶಬ್ದ)

ಹುಡುಗಿ : ಇನ್ನು ನಮ್ಮ ಪಯಣ?

ಗೈಡ್ : ತಂಜಾವೂರಿಗೆ.

ಹುಡುಗಿ : ಅಲ್ಲೇನು ವಿಶೇಷ?

ಗೈಡ್ : ತಂಜಾವೂರು ದೇವಾಲಯ. ತಂಜನ್ ಎಂಬ ರಾಕ್ಷಸನನ್ನು ವಿಷ್ಣು ಸಂಹರಿಸಿದ. ಆತ ತನ್ನ ಹೆಸರನ್ನು ಇಲ್ಲಿಗೆ ಇಡಬೇಕೆಂದು ಬೇಡಿದಾಗ ಆ ಊರಿಗೆ ತಂಜಾವೂರೆಂದು ಹೆಸರಾಯಿತು. ಇಲ್ಲಿ ಚೋಳರು ಪತ್ತರಿಂದ ಹದಿನಾಲ್ಕನೇ ಶತಮಾನದವರೆಗೆ ಆಳಿದರು. ಬೃಹದೇಶ್ವರ ದೇವಾಲಯ ಭವ್ಯ ದಿವ್ಯ. ಇದನ್ನು ಚೋಳರು ಕಟ್ಟಿಸಿದರು. ಬೃಹದೇಶ್ವರಲಿಂಗ ಹತ್ತೊಂಭತ್ತಡಿ ಉದ್ದ, ಎರಡಡಿ ಅಗಲವಿದೆ, ಇದನ್ನು ರಾಜರಾಜ ಚೋಳ ಕಟ್ಟಿಸಿದ. ಭಾರತದಲ್ಲಿ ಎರಡನೇ ದೊಡ್ಡ ನಂದಿ ವಿಗ್ರಹ ಇಲ್ಲಿದೆ.

ಹುಡುಗಿ : ಹತ್ತು ಪೈಸೆ ಕೊಟ್ಟರೆ ಆ ಆನೆ ಆಶೀರ್ವಾದ ಮಾಡುತ್ತೆ ನೋಡಿ.

ಹುಡುಗ : ನೀನೂ ಹೋಗಿ ಆಶೀರ್ವಾದ ಮಾಡಿಸಿಕೋ.....

ಗೈಡ್ : ಮುಂದೆ ಶ್ರೀರಂಗಕ್ಕೆ ಕರೆದುಕೊಂಡು ಹೋಗ್ತೀವಿ.

ಹುಡುಗ ೧ : ಇದು ತಿರುಚಿನಾಪಳ್ಳಿ. ಇಲ್ಲಿ ತ್ರಿಶಿರ ಎಂಬ ರಾವಣನ ಸಂಬಂಧಿ ಆಳುತ್ತಿದ್ದುದರಿಂದ ಈ ಊರಿಗೆ ತಿರುಚಿನಾಪಲ್ಲಿ ಎಂಬ ಹೆಸರಾಯಿತು.

ಗೈಡ್ : ಶ್ರೀರಂಗ ದೇವಾಲಯ ವಿಶಾಲವಾದುದು. ಇಪ್ಪತ್ತು ಗೋಪುರಗಳು ಇನ್ನೂರೈವತ್ತಡಿ ಎತ್ತರವಿದೆ. ಇವುಗಳನ್ನು ಸಪ್ತ ಲೋಕಗಳೆಂದು ಪರಿಗಣಿಸಲಾಗುತ್ತದೆ. ರಂಗನಾಥಸ್ವಾಮಿ ದಕ್ಷಿಣ ದಿಕ್ಕಿಗೆ ಆದಿಶೇಷನ ಮೇಲೆ ಮಲಗಿದ್ದಾನೆ. ಪಕ್ಕದಲ್ಲಿ ರಂಗನಾಯ್ಕಮ್ಮನ ದೇವಸ್ಥಾನವಿದೆ.

ಹುಡುಗ : ಶ್ರೀರಂಗ ದೇವಾಲಯ ಬಿರುಗಾಳಿಗೆ ಸಿಕ್ಕಿ ಮರಳಿನಲ್ಲಿ ಹೂತುಹೋಯ್ತಂತೆ. ಒಮ್ಮೆ ಮಹೇಂದ್ರಚೋಳ ಇಲ್ಲಿ ಬಂದು ವಿಶ್ರಮಿಸಿಕೊಳ್ಳುವಾಗ, ಗಿಳಿಯೊಂದು "ಶ್ರೀರಂಗಮಂದಿರ ಮರಳಲ್ಲಿ ಹೂತಿದೆ" ಎಂದಿತು. ಆಗ ರಾಜ ಮರಳು ತೆಗೆಸಿದ. ಶ್ರೀರಂಗನಾಥನ ದರ್ಶನವಾಯಿತು. ಅದನ್ನು ಪುನರುಜ್ಜೀವನಗೊಳಿಸಿದ ರಾಜ.

(ಬಸ್ ಹೋಗುವುದು)

ಗೈಡ್ : ಶ್ರೀರಾಮಚಂದ್ರ ಲಂಕೆಗೆ ಹೋಗುವಾಗ ದಾರಿಯಲ್ಲಿ ದರ್ಭೆ ಹಾಸಿ ಮಲಗಿದ, ಅದೇ ದರ್ಭಾಶಯನವಾಯಿತು. ಇದು ರಾಮದೇವರ ದೇವಸ್ಥಾನ. ಮುಂದೆ ಬಹಳ ಮುಖ್ಯವಾದ ಒಂದು ದೇವಾಲಯ ತೋರಿಸುತ್ತೇನೆ ಅದೇ ರಾಮೇಶ್ವರ ದೇವಾಲಯ. ಭಾರತದಲ್ಲಿರುವ ದ್ವಾದಶ ಲಿಂಗಗಳಲ್ಲಿ ರಾಮೇಶ್ವರ ಲಿಂಗ ಒಂದು. ಇದೇ ಸೀತೆ ಪ್ರತಿಷ್ಟಾಪಿಸಿದ ಲಿಂಗ.

ಹುಡುಗ ೧ : ಇದು ದ್ರಾವಿಡ ಶಿಲ್ಪ ಮಾದರಿಯಲ್ಲಿ ಕಟ್ಟಲ್ಪಟ್ಟ ದೊಡ್ಡ ದೇವಾಲಯ. ಈ ಮಂದಿರ ಒಂದು ಸಾವಿರಡಿ ಉದ್ದ, ೬೫೦ ಅಡಿ ಅಗಲ, ಮನೋಹರ ಪೌಳಿ, ಎತ್ತರದ ಸ್ತಂಭಗಳಿಂದ ಕೂಡಿ ಸುಂದರವಾಗಿದೆ. ದೇವಾಲಯದ ಸುತ್ತ ಇಪ್ಪತ್ಮೂರು ತೀರ್ಥಗಳಿವೆ.

ಹುಡುಗಿ : ನಾವು ತೀರ್ಥದಲ್ಲಿ ಸ್ನಾನ ಮಾಡ್ತೀವಿ.

ಗೈಡ್ : ಮಾಡಿ, ಮಾಡಿ.

(ಬಸ್ ಹೊರಡುವುದು)

ಗೈಡ್ : ಶ್ರೀರಾಮ ಸೀತೆಯನ್ನು ಹುಡುಕಲು ಲಂಕೆಗೆ ಹೋಗುವಾಗ ಈ ಸಮುದ್ರದ ಹತ್ತಿರ ನವಗ್ರಹಗಳನ್ನು ಪ್ರತಿಷ್ಟಾಪಿಸಿ ಪೂಜಿಸಿದ. ಇದೇ ನವಪಾಶಾಣ. ಎಲ್ಲಾ ದೋಣಿಯಲ್ಲಿ ಕುಳಿತು ಪ್ರದಕ್ಷಿಣೆ ಮಾಡಿ ಬನ್ನಿ.

ಹುಡುಗ ೧ : ನಾನು ನಡೆದುಕೊಂಡೇ ಹೋಗ್ತೀನಿ.

(ನೀರಿನ ಕಲರವ)

ಗೈಡ್ : ಮುಂದೆ ತಿರುಚಂದೂರಿನ ಸುಬ್ರಹ್ಮಣ್ಯಸ್ವಾಮಿ ದರ್ಶನಮಾಡಿಕೊಂಡು ಶುಚೀಂದ್ರಕ್ಕೆ ಹೋಗೋಣ.

ಹುಡುಗ ೧ : ಅನುಸೂಯೆಯ ಪತಿವ್ರತಾ ಧರ್ಮವನ್ನು ಪರೀಕ್ಷಿಸಲು ಬ್ರಹ್ಮ, ವಿಷ್ಣು, ಮಹೇಶ್ವರರು ಬಂದು ಭಿಕ್ಷೆ ಬೇಡಿದ ಸ್ಥಳವೇ ಈ ಶುಚೀಂದ್ರ. ದೇವತೆಗಳು ಅನುಸೂಯೆಯನ್ನು ವಿವಸ್ತ್ರಳಾಗಿ ಬರಬೇಕು ಎಂದಾಗ, ಆಕೆ ಅವರನ್ನೆಲ್ಲಾ ಮಕ್ಕಳನ್ನಾಗಿ ಮಾಡಿ ತೊಟ್ಟಿಲಲ್ಲಿ ಹಾಕಿ ತೂಗುತ್ತಾಳೆ. ಇದಕ್ಕೆ ೨,೫೦೦ ವರ್ಷಗಳ ಇತಿಹಾಸವಿದೆ ಎಂದು ಹೇಳುತ್ತಾರೆ.

ಹುಡುಗ : ಸರ್, ಅನಂತ ಪದ್ಮನಾಭ ದೇವಾಲಯ ನೋಡಲೇ ಇಲ್ವಲ್ಲಾ.

ಗೈಡ್ : ಅಷ್ಟರ ತನಕ ಆತುರವೇ! ಸ್ವಲ್ಪ ತಡಕೋ. ಈಗ ಹೋಗೋದೇ ಅಲ್ಲಿಗೆ. ರವಿವರ್ಮನ ಚಿತ್ರ ಕಲೆಯ ವಸ್ತು ಸಂಗ್ರಹಾಲಯ ನೀವೆಲ್ಲಾ ಅಗತ್ಯವಾಗಿ ನೋಡಬೇಕು. ಕುರ್ತಾಲಂ ಫಾಲ್ಸ್‌ನಲ್ಲಿ ಸ್ನಾನ ಮಾಡಿದ್ರೆ ಅನೇಕ ರೋಗಗಳ ಪರಿಹಾರ ಅಂತಾರೆ. ಎಲ್ಲವನ್ನು ನಿಮಗೆ ತೋರಿಸ್ತೀನಿ ಬನ್ನಿ ಬನ್ನಿ.

(ಜಲಪಾತದ ಶಬ್ದ)

ಹುಡುಗ ೧ : ಕುರ್ತಾಲಂ ಫಾಲ್ಸ್ ಸ್ನಾನ ಚೆನ್ನಾಗಿತ್ತು.

ಗೈಡ್ : ಇನ್ನು ಮಧುರೈ ಮೀನಾಕ್ಷಿ ದೇವಸ್ಥಾನ ತೋರಿಸ್ತೀನಿ.

ಹುಡುಗ ೧ : ಇದು ತುಂಬಾ ದೊಡ್ಡ ದೇವಸ್ಥಾನ. ೮ ಚಿನ್ನದ ಕಳಸಗಳಿವೆ, ೪೦೦ ವರ್ಷಗಳ ಬಣ್ಣದ ಕಲೆಯಿದೆ. ಎಂಟು ಸಾವಿರದ ನೂರಾ ತೊಂಬತ್ತೆರಡು ಕಂಬಗಳಿವೆ. ಇದನ್ನು ಪಾಂಡ್ಯರಾಜ ಕಟ್ಟಿಸಿದ. ದೇವಾಲಯದಲ್ಲಿ ಅನೇಕ ಪುರಾಣ ಕಥೆಗಳನ್ನು ಕೆತ್ತಿದ್ದಾರೆ. ಮೀನಾಕ್ಷಿಮೂರ್ತಿ ಬಹಳ ಸುಂದರವಾಗಿದೆ. ಪಾರ್ವತಿ ಪಾಂಡ್ಯರಾಜನಿಗೆ ಮೀನಾಕ್ಷಿ ಎಂಬ ಮಗಳಾಗಿ ಜನಿಸಿದಳು. ಆಕೆಯನ್ನು ಸುಂದರೇಶ್ವರ ಮದುವೆಯಾದ ಎಂಬ ಐತಿಹ್ಯ.

ಗೈಡ್ : ನಾಳೆ ಊರಿಗೆ ಹೋಗುತ್ತಾ ತೇಕಡಿಯಲ್ಲಿ ಪೆರಿಯಾರ್ ಸರೋವರ, ಕೇರಳ ರಾಜ್ಯದ ದರ್ಶನ ಮಾಡಿಸುತ್ತೇವೆ. ಶಂಕರಾಚಾರ್ಯರ ಹುಟ್ಟೂರಾದ ಕಾಲಡಿ, ಗರುವಾಯೂರಿನ ಕೃಷ್ಣದೇವಾಲಯ,ಪಳನಿ ಸುಬ್ರಹ್ಮಣ್ಯೇಶ್ವರ ದರ್ಶನ ಮಾಡಿಕೊಂಡು, ಭವಾನಿ ಅಣೆಕಟ್ಟನ್ನು ತೋರಿಸಿಕೊಂಡು ನಮ್ಮ ಪ್ರವಾಸವನ್ನು ಮುಕ್ತಾಯ ಮಾಡುತ್ತೇವೆ.

ಹುಡುಗರು : ಆಗಲಿ......

(ಸಂಗೀತ)

(ಬಸ್ಸು ಹೋಗುವ ಹಾಗೂ ನಿಂತ ಶಬ್ದ)

ಗೈಡ್ : ಇದುವರೆಗೆ ನಿಮಗೆ ದಕ್ಷಿಣ ಭಾರತದ ಪರಿಚಯ ಮಾಡಿಕೊಡುವ ಒಂದು ಅವಕಾಶ ನನಗಾಯಿತು. ದಕ್ಷಿಣ ಭಾರತಕ್ಕೆ ಸೇರಿದ ಕೆಲವು ರಾಜ್ಯಗಳ ಪ್ರವಾಸ ಸ್ಥಳಗಳ ಕಿರುಪರಿಚಯ ಮಾಡಿಕೊಟ್ಟೆ. ಅಲ್ಲಿನ ಭೌಗೋಳಿಕ ಪರಿಸ್ಥಿತಿ, ಸಂಸ್ಕೃತಿ, ಆಚಾರ, ವಿಚಾರಗಳ ಬಗೆಗೆ ತಿಳಿದುಕೊಂಡಿರಿ. ಎಲ್ಲರಿಗೂ ವಂದನೆಗಳು.

ಹುಡುಗರು : ನಮಸ್ಕಾರ.......

(ಹರ್ಷ ಸಂಗೀತ)

*

# ಮಕ್ಕಳ ಕಾದಂಬರಿ ರೂಪಾಂತರ

## ಗೋಗ್ರಹಣ

## ಭಾಗ ೧

**ಪಾತ್ರ ವರ್ಗ:**

೧. ರಾಧ-ತಾಯಿ-೪೦ ವಯಸ್ಸು, ೨. ಶಾರದ-೮ ವರ್ಷ-ರಾಧ ಮಗಳು (ತಂಗಿ), ೩. ಲತಾ-ಹರೀಶ್: ಮದ್ರಾಸಿನ ಶಾರದಾ-ರಾಮುವಿನ ಚಿಕ್ಕಪ್ಪನ ಮಕ್ಕಳು, ೪. ರಾಮು-೧೦ ವರ್ಷ-ರಾಧಾ ಮಗ (ಅಣ್ಣ)

### ತರಂಗ-೧

ರಾಧ : ಶಾರದಾ, ಇದೇನೇ ಇಷ್ಟೊಂದು ಸಾರಿ ಮನೆಯಿಂದ ಬಾಗಿಲಿಗೇ, ಬಾಗಿಲಿನಿಂದ ಮನೆ ಕಡೇ ಗೋಣು ಹಾಕಿ ಹಾಕಿ ನೋಡ್ತಾ ಇದ್ದೀಯಲ್ಲಾ ಅದೇನು ಸಮಾಚಾರ?

ಶಾರದ : ಇದೇನಮ್ಮಾ ನೀನು ಹೇಳೋದು ಈ ಹೊತ್ತು ಮದ್ರಾಸಿನಿಂದ ಹರೀಶ, ಲತಾ ಬರ್ತಾರೆ ಅಂತ.

ರಾಧಾ : ಅಲ್ಲಾ ಕಣೇ ಮದ್ರಾಸಿನ ರೈಲು ಬರೋದು ಐದು ಘಂಟೇಗಲ್ವೇ? ಈಗ ನಾಲ್ಕುವರೆ ಘಂಟೆ. ಇನ್ನೊಂದರ್ಧ ಘಂಟೆ ತಡ್ಕೊಳಮ್ಮ.....

ಶಾರದ : ಅದ್ಯಾಗೆ ಹೇಳ್ತೀಯಮ್ಮಾ..... ಒಂದೊಂದು ದಿನ ಬೇಗನೂ ಬರುತ್ತೆ, ಒಂದೊಂದು ದಿನ ಘಂಟಾನುಗಟ್ಟಲೇ ಲೇಟಾಗೂ ಬರುತ್ತೆ.....

ರಾಧಾ : ನನಗೆ ಗೊತ್ತು ನಿನ್ನ ಕಾತುರ. ನಿನ್ನ ಸ್ನೇಹಿತೆ ಬರ್ತಾಳೆ ಅಂತ. ಹ್ಞೂ.....ಮುಚ್ಚು ಹುಡುಗಿ..... ಬಾ.....

ಶಾರದ : ನಿಂಗೇನು ಹೋಗಮ್ಮಾ ನಂಗೆ ಬೇಜಾರು. ಹೇಗೋ ಸ್ಕೂಲಿದ್ರೆ ಬೇಜಾರು ಕಳೆದು ಹೋಗುತ್ತೆ. ಈಗ ರಜೆ ಬಂತು - ಅಂದ್ರೆ ನಾನು ಯಾರ ಜೊತೆ ಆಟ ಆಡ್ಕೊಳ್ಳಿ ಹೇಳು? ಒಂದು ದಿನ ಎರಡು ದಿನವಿದ್ರೆ ಹೇಗೋ ತೋಟ್ದಲ್ಲಿ ಸ್ವಲ್ಪ ಕಾಲ ಹಾಕಬಹುದು. ಆದ್ರೆ ಹೀಗೆ ಒಟ್ಟೊಟ್ಗೆ ರಜಾ ಬಂದ್ರೆ...... ನಂಗೆ ಸ್ನೇಹಿತರೂ ಇಲ್ಲದೇ ಹೋದ್ರೆ ತಲೆ ಚಿಟ್ಟಾಗುತ್ತಮ್ಮಾ

ರಾಧಾ : ಹೊರಟಿವ್ದಾರೆ ಬಂದೇ ಬರ್ತಾರೆ. ಅಷ್ಟರ ತನಕ ಆತುರವೇ? ಊರಿಗೆ ಬಂದೋಳು ನೀರಿಗೆ ಬರಳಾ ಅಂದಹಾಗೇ?... ನಿಮ್ಮ ದೊಡ್ಡಪ್ಪನ ಮಕ್ಕಳಿಗಿರಬೇಕು ಆತುರ, ಆದ್ರೆ ನಿಮಗೇ ಆ ಆತುರವಲ್ಲ ಏನು ಸಮಾಚಾರ?

ರಾಮು : ನಮ್ಮ ಹಾಗೇ ಅವರಿಗೂ ಎಷ್ಟು ಹೊತ್ತಿಗೆ ನಮ್ಮೂರಿಗೆ ಬರೋದು ಅಂತ ಇರುತ್ತೆ.

ರಾಧ : ಒಳ್ಳೇ ತುಡುಬೇ ನೋಣನ ಹಾಗೆ ಆಡ್ತೀರಲ್ಲೋ ಬರ್ತಾರೆ ಸುಮ್ನಿರ್ರೋ.

ಶಾರದ : ಅದೋ ಟ್ರೈನ್ ಶಬ್ದ ಸಣ್ಣಗೆ ಕೇಳಿಸ್ತಾ ಇದೆ. ಮದ್ರಾಸು ಗಾಡಿ ಬಂತು.

ರಾಧಾ : ಇನ್ನು ಅಲ್ಲಿಂದ ಬರಬೇಡ್ವೇನ್ರೋ..... ಒಳ್ಳೆ ಕುದ್ಯೋ ಅವರೆ ಬಾಯಿಗೆ ಹಾಕಿಕೊಂಡವರಾಗೇ ಆಡ್ತೀರಲ್ಲೋ ಇಬ್ರೂ ಅಣ್ಣ ತಂಗೀರು.

ರಾಮು : ಹೌದು ಅವರಿದ್ದರೆ ನಮಗೆ ಖುಷಿಯೋ ಖುಷಿ. ಹರಿ ಅಣ್ಣ ಒಳ್ಳೆ ಪುಸ್ತಕಗಳನ್ನು ತರ್ತಾನೆ, ತಮಾಷೆ ಮಾಡ್ತಾನೆ, ಕಥೆಗಳನ್ನು ಓಮುತ್ತಾನೆ, ಹಾಸ್ಯ ಚೆನ್ನಾಗಿ ಮಾಡ್ತಾನೆ, ಮಕ್ಕಳ ಅದ್ಭುತ ಕಥೆಗಳು, ಪತ್ತೇದಾರಿ ಕಾದಂಬರಿಯ ಕಥೆಗಳನ್ನು ಅದೆಷ್ಟು ಚೆನ್ನಾಗಿ ಹೇಳ್ತಾನೆ ಗೊತ್ತಾ? ಬೆಳಗಿನಿಂದ ಸಂಜೆವರೆಗೆ ಒಂದಲ್ಲಾ ಒಂದು ಆಟ, ಒಳ್ಳೇ ಮನರಂಜನೆ ಒದಗಿಸುತ್ತಾನೆ. ಅವನು ಬರೋದನ್ನ ನಾವು ಇದುರು ನೋಡುವುದು ಬೇಡ್ವಮ್ಮಾ?

ಶಾರದ : ಹರಟೆ ಹೊಡೀತಾ ಕೂತ್ರೆ ಬೆಳ್ಗಾಗೋದು ಯಾವಾಗ? ಸಂಜೆಯಾಗುವುದು ಯಾವಾಗ ಎಂಬುದೇ ಗೊತ್ತಾಗೋಲ್ಲ.

ರಾಧ : ಅವನಿಗೆ ಈ ರೀತಿ ಹೊಸ ಪುಸ್ತಕಗಳನ್ನು ಒದಗಿಸೋದೇ ಅವರಪ್ಪನಿಗೆ ಒಂದು ಕಷ್ಟವಂತೆ. ಅದಕ್ಕೇ ಅವನನ್ನೂ ನಮ್ಮೂರಿಗೆ ಕಳುಹಿಸ್ತಾ ಇರೋದು ಗೊತ್ತೇನ್ರೋ? ಅವನಿಗೆ ಲೈಬ್ರರಿ ಸಾಲದಂತೆ. ಪುಸ್ತಕದಂಗಡಿಯಲ್ಲಿ ಹೊಸ ಪುಸ್ತಕ ಕಣ್ಣಿಗೆ ಬಿದ್ರೆ ಸಾಕು ತಂದು ಕೊಡು ಅಂತ ಕೂತ್ಕೋತಾನಂತೆ. ನೀವು ಇದ್ದೀರಿ, ದಡ್ಡರು. ಅವನ ಕಾಲದೆಸ್ಲಲ್ಲಿ ನುಗ್ಗಿರಿ ಬುದ್ಧಿ ಬರುತ್ತೆ. ನೋಡಿ ನಿಮ್ಮಷ್ಟೇ ವಯಸ್ಸು ಅವ್ರು ಎಷ್ಟೊಂದು ಚುರುಕಾಗಿದ್ದಾರೆ? ಎಷ್ಟೇ ಆಗ್ಲಿ ಅವರು ಪಟ್ಟಣದವರು, ನೀವು ಹಳ್ಳಿಯವರು.

ರಾಮು : ಸಾಕು ಸುಮ್ನಿರಮ್ಮ ಎಷ್ಟೋ ಜನ ಹಳ್ಳಿಯವರು ಎಂಥೆಂಥ ದೊಡ್ಡ ಕೆಲಸಕ್ಕೆ ಸೇರಿಲ್ಲ. ಹಳ್ಳಿಯವ್ರೆಲ್ಲಾ ಪೆದ್ದರು, ಪಟ್ಟಣದವರು ಜಾಣರು ಅಂತ ಹೇಳೊದ್ರಲ್ಲಿ ಅರ್ಥವಿಲ್ಲ.

ಶಾರದ : ಅದ್ನಿಜ ಬಿಡು ನೀನೇನೋ ಬೇಜಾರು ಅಂದ್ರೆ ಹೊರಗಡೆ ಹುಡುಗರ ಜೊತೆ ಆಡ್ಕೊಳ್ತೀಯಾ? ನಾನು ದನ ಕರುಗಳಿಗೆ ಹುಲ್ಲು ಹಾಕಿಕೊಂಡು ನೀರು ಕುಡಿಸಿಕೊಂಡು ಕುಕ್ಕರ್ ಬಡ್ಡಿರ್‌ಬೇಕು.

ರಾಮು : ಶಾರದ ಹೋದ ಸಾರಿ ಹರೀಶ ನಿಧಿ ಬಚ್ಚಿಟ್ಟ ದ್ವೀಪದ ಕಥೆ ಹೇಳಿದ್ದು ಜ್ಞಾಪಕ ಇದ್ಯಾ?

ಶಾರದ : ಹೌದು ಸಾಹಸದ ಕಥೆಗಳನ್ನು ಹೇಳಿದ್ದ ತುಂಬಾ ಅದ್ಭುತವಾಗಿತ್ತು. ಆತ ಕಥೆ ಹೇಳುವಾಗ ತಾನೇ ಕಥಾ ನಾಯಕ ಎಂಬ ರೀತಿಯಲ್ಲಿ ಸ್ವಾರಸ್ಯವಾಗಿ ಹೇಳಿದ್ದ ಅಲ್ಲಾ?

ರಾಮು : ಅಪ್ಪಾ, ಬೃಂದಾವನ ಎಕ್ಸ್‌ಪ್ರೆಸ್ ಬಂತಲ್ಲಾ ನಡೀರಿ ನಾನು ಬರ್‍ತೀನಿ...... ಜೀಪ್‌ನಲ್ಲಿ ಹೋಗಣಪ್ಪಾ.

ಅನಂತರಾಮಯ್ಯ : ಆಯ್ತು ನಡೆಯಪ್ಪಾ. (ಜೀಪು ಹೊರಡುವುದು)

ರಾಧ : ಮೆಲ್ಗೆ ಕಣೋ...... ಮೆಲ್ಗೆ ಏನು ಬೆಳೆದು ಬಿಟ್ಟಿದ್ದೀಯೋ? ಹೋದ ವರ್ಷಕ್ಕೂ ಈ ವರ್ಷಕ್ಕೂ. ಇದೇನೋ ನಿಕ್ಕರ್ ಹಾಕಿದ್ದವನು ಪ್ಯಾಂಟಿಗೆ ಬಂದುಬಿಟ್ಯಲ್ಲೋ?

ಶಾರದ : ಕನ್ನಡಕ ಬೇರೆ.

ರಾಧ : ಆ ಪಾಟಿ ಓದಿದ್ರೆ ಇನ್ನೇನಾಗುತ್ತೆ ಕಣ್ಣಿನ ಗತಿ?

ರಾಮು : ಲತಾ ಏನು ಕಮ್ಮಿಯೇ ಅವಳು ಬೆಳೆದಿದ್ದಾಳೆ ಸಾಕಷ್ಟುದ್ದ.

ಲತಾ : ನೀವೇನು ಚಿಕ್ಕ ಮಕ್ಕಳು ಅಂತ ತಿಳ್ಕೊಂಡಿದ್ದೀರೇನು!

ರಾಧ : ಹೋಗ್ಲಿ ಊರ್‍ಲೆಲ್ಲಾ ಚೆನ್ನಾಗಿದ್ದಾರೇನು ಹರೀಶ್.

ಹರೀಶ್: ಹೌದು ದೊಡ್ಡಮ್ಮ.

ರಾಮು : ಈ ಸಾರಿ ಏನಪ್ಪಾ ಸರಕು.....

ಶಾರದ : ಪುಸ್ತಕಗಳು, ಮಾಮೂಲಿ......

ರಾಧ : ಬನ್ರೋ ಬನ್ರೋ ಕೈಕಾಲು ತೊಳ್ಕಳ್ಳಿ ಆಮೇಲೆ ಕೂತು ಮಾತಾಡುವ್ರಂತೆ. ವೆಂಕಜ್ಜಿ ಗೊಜ್ಜವಲಕ್ಕಿ, ರವೆ ಉಂಡೆ, ಚಕ್ಕುಲಿ, ಎಲ್ಲಾ ಮಾಡಿದ್ದಾರೆ. ಊಟ ಸಿದ್ಧವಾಗಿದೆ ಅವೆಲ್ಲಾ ತಿಂದು, ಉಂಡು, ಆಮೇಲೆ ಪುರಾಣ ಓದುವ್ರಂತೆ.

ಹರೀಶ : ಶ್ಯಾವಿಗೆ ಪಾಯಸ.......

ರಾಧ : ಓಹೋ ಅದನ್ನ ಮರ್‍ತೇ ಬಿಟ್ಟಿದ್ದೆ. ನಡೀರಿ ನಡೀರಿ.......

ಹರೀಶ : ಅಬ್ಬಾ ದಿನಾ ಹೀಗೆ ತಿಂಡಿ, ಊಟ ಮಾಡಿ ಬಿಟ್ರೆ- ಸ್ವರ್ಗ ಕಣೋ ನಿಮ್ಮೂರ್‍ರೇ.

ಲತಾ : ಅದ್ಕೇ ನಾವು ಬಂದಿರೋದು.

ಹರೀಶ : ಅಷ್ಟೇ ಅಲ್ಲಾ ತೋಟದ ಗಿಣಿಕೊಕ್ಕಿನ ಮಾವಿನ ಕಾಯಿಗೆ ಕಲ್ಲು ಹೊಡದು ಉಪ್ಪು ಖಾರ ಅದ್ದುಗೊಂಡು ತಿನ್ನೋಕೆ.

ಲತಾ : ದಾಳಿಂಬೆ ಹಣ್ಣು ಬಿಟ್ಟಿದ್ಯಾ?

ಹರೀಶ : ಬಿಳಿ ಹಸು ಕರು ಹಾಕಿದ್ಯಾ, ಅದನ್ನ ಓಡಿಸ್ತೀನಿ.

ಲತಾ : ಗುಲಾಬಿ ಹೂವು ಈ ಸಾರಿ ಬೀಡು ಹ್ಯಾಗೆ ಬಿಟ್ಟಿದೆ?

ಹರೀಶ : ಗುಬ್ಬಚ್ಚಿ ಈ ವರ್ಷ ಎಲ್ಲಿ ಗೂಡು ಕಟ್ಟಿದೆ?

ರಾಧ : ಏನ್ರೋ ಊರಿಂದ ಬಂದಿದ್ದೀರಾ ಒಂದು ಘಳ್ಗೆ ರೆಸ್ಟ್ ತೆಗೊಳ್ರೋ ಸುಮ್ನೆ ವಡವಡ ಅಂತ ಮಾತಾಡ್ತಿದ್ದಿರಲ್ಲಾ ನಿಮಗೆ ಬಾಯಿ ನೋವೇ ಆಗೋಲ್ವೇ? ವರ್ಷದ ಮಾತ್ನೆಲ್ಲಾ ಒಂದೇ ರಾತ್ರಿ ಆಡಿ ಮುಗಿಸುವಂತೆ ಕಾಣುತ್ತೆ. ಎಲ್ಲರೂ ಬಂದು ಸ್ವಲ್ಪ ಮಲಗಿಕೊಳ್ರೋ.

ರಾಮು : ಅಪರೂಪಕ್ಕೆ ಬಂದವ್ರೆ ತಾಳಮ್ಮಾ ಸ್ವಲ್ಪ........ ಮಾತು ಕಥೆ ಆಡ್ತೀವಿ.

ರಾಧ : ರಜೆ ಮುಗ್ಯೋವರೆಗೂ ಮಾತಾಡ್ರೋ, ಕಥೆ ಹೇಳ್ರೋ, ಕುಣೀರೋ ನಮ್ಗೂ ಸಂತೋಷ!

* * *

## ತರಂಗ-೨

ಲತಾ : ಶಾರದಾ ತೋಟದ ಕಡೆ ಹೋಗೋಣ್ವೇನೇ? ನೋಡಿ ಒಂದು ವರ್ಷವೇ ಆಯ್ತು.

ಶಾರದ : ನಮಗೇ ನೋಡಿ ನೋಡಿ ಬೇಜಾರು?

ಲತಾ : ಹೋದ ಸಾರಿ ಎಷ್ಟು ಚೆನ್ನಾಗಿತ್ತು?

ಶಾರದ : ಕಟ್ಟಿರುವೆ ಹತ್ತಿರ ಕಡಿಸಿಕೊಂಡು.

ರಾಮು : ಕೆಂಜುಗ ಮೈಗೆ ಹತ್ತಿಸಿಕೊಂಡು.

ಹರೀಶ : ಅದಕ್ಕಿಂತ ಹೆಚ್ಚಾಗಿ ಬದಿಯಲ್ಲಿ ಹೂತಕೊಂಡು,

ಶಾರದ : ಇದೇನೋ ಹರೀಶ ದುರ್ಬೀನಾಕಿಕೊಂಡು ನೋಡ್ತಾ ಅವ್ನೆ.

ಹರೀಶ : ಇದು ಬೈನಾಕುಲರ್. ಮೇಲೆ ಕೂತಿರುವ ಸಣ್ಣ ಹಕ್ಕೀನೂ ಎಷ್ಟು ದೊಡ್ಡದಾಗಿ, ನಮ್ಮ ಹತ್ತಿರ ಇರುವಂತೆ ಕಾಣುತ್ತೆ.

ಶಾರದ : ಅಣ್ಣಾ ನಾನೊಂದು ಸ್ವಲ್ಪ ನೋಡ್ಲಾ.

ಹರೀಶ : ಕಾಸು ಕೊಡಬೇಕಾಗುತ್ತೆ.

ಶಾರದ : ಇಲ್ಲ ಪೈಸೆಯನ್ನೇ ಕೊಡುತ್ತೇನೆ.

ಹರೀಶ : ಪರ್ವಾಗಿಲ್ವೇ ನಿನ್ನ ಬುದ್ಧಿ ಸ್ವಲ್ಪ ಒನಕೆ ಮೊಂಡು ಚಿಗಿರಿದಂಗೆ ಚಿಗುರ್ತಾ ಇದೆ ಅಂತ ಕಾಣಿಸುತ್ತೆ.

ಶಾರದ : ಅದೇನು ಯಾವಾಗಲೂ ಪಕ್ಷಿ ಪಕ್ಷಿ ಅಂತ ಹಿಡ್ಕೊಂಡಿದ್ದೀಯಲ್ಲಾ ಏನು ಮಹಾ?

ಹರೀಶ : ಅವುಗಳ ಜೀವನ ಚರಿತ್ರೆ ಬಹಳ ಸ್ವಾರಸ್ಯ ಶಾರದಾ.

ಶಾರದ : ಏನು ಅಂಥದ್ದು?

ಹರೀಶ : ಮ್ಯಾಂಕ್ಸ್‌ಪಿಯರ್ ವಾಟರ್ ಎಂಬ ಹಕ್ಕಿ ಯೂರೋಪಿನಲ್ಲಿ ವಾಸ ಮಾಡುತ್ತದೆ. ಇದು ನಮ್ಮ ಹದ್ದಿದೆಯಲ್ಲಾ ಆ ಗಾತ್ರ ಇರುತ್ತೆ. ಇಂಗ್ಲೆಂಡಿನ ವೇಲ್ಸ್ ಎಂಬಲ್ಲಿ ಇಂಥ ಒಂದು ಪಕ್ಷಿಯನ್ನು ವಿಜ್ಞಾನಿಗಳು ಕಂಡು ಹಿಡಿದರು. ಅದರ ಕಣ್ಣು ಕಟ್ಟಿ, ಒಂದು ಉಂಗುರ ತೊಡಿಸಿ ಅದನ್ನು ಅಮೇರಿಕಾದ ಬ್ಯಾಸ್ಟನ್ ಪಟ್ಟಣಕ್ಕೆ ವಿಮಾನದಲ್ಲಿ ತಂದರು. ಆಗ ಅದು ಹನ್ನೆರಡು ದಿನಗಳಲ್ಲಿ ತನ್ನೂರಿನ ಗೂಡನ್ನೂ ಸೇರಿತಂತೆ.

ರಾಮು : ಲತಾ, ಮಾವಿನಕಾಯಿ, ಸೀಬೆಕಾಯಿ ಬಿಟ್ಟಿವೆ.

ಶಾರದ : ಉಪ್ಪು ಖಾರನೂ ತಂದಿದ್ದೇನೆ.

ಲತಾ : ಸರಿ ತಿಂದ್ರಾಯ್ತು.

ಹರೀಶ : ಚಪ್ಪರಿಸೋಣ ಬನ್ನಿ.... ಚಾಕು ತಂದಿದ್ದೀಯೇನೋ ರಾಮು.

ರಾಮು : ನನಗೆ ಗೊತ್ತಿಲ್ವೇ..... ಅದು ರೆಡಿ.......

ಹರೀಶ : ನೋಡು ಬೇಲದ ಹಣ್ಣು ಗಮಗಮ ಅನ್ನುತ್ತದೆ.

ಲತಾ : ಯಾಕೋ ನನಗೆ ಬಾಯಾರಿಕೆ ನೀರು ಕುಡೀಬೇಕು.

ಹರೀಶ : ಕೊಳದಲ್ಲಿ ಮೇಲೇ ಕೂತು ಕುಡಿ, ಜೋಪಾನ ಆಮೇಲೆ ಕೈಲಾಸ ಕಂಡೀಯೆ ಮದ್ರಾಸು ಕಾಣೋದರ ಬದಲು.

ರಾಮು : ನಾನು ಆಕೆ ಕೈ ಹಿಡಿದು ಕುಡಿಸಿ ಬರ್ತೀನಿ.

ಶಾರದ : ನನಗೇಕೋ ತುಂಬಾ ಸೆಕೆ ಆಗುತ್ತೆ ತಣ್ಣೀರಲ್ಲಿ ಸ್ನಾನ ಮಾಡ್ತೇನೆ.

ರಾಮು : ಏನ್ರೋ ನಿಮ್ಮ ಮದ್ರಾಸಿನಲ್ಲಿ ಸಮುದ್ರ ಇದೆ ಈಜು ಕಲೀಬಾರ್ದೇ?

ಲತಾ : ನಮ್ಮಪ್ಪ ಕಳೀಸಲ್ವೇ? ಈಜುಕೊಳಕ್ಕೋಗೋವ ಅಂದ್ರೆ ಅದು ದೂರ.

ಶಾರದ : ಈ ಸಾರಿ ರಜದಲ್ಲಿ ಏನು ಸಾಹಸ ಮಾಡ್ತೀಯೋ ಹರೀಶ.

ಹರೀಶ : ತೆಂಗಿನ ಮರ ಹತ್ತುತ್ತೀನಿ. ಹುಲಿ ಭೇಟೆ ಆಡ್ತೀನಿ.

ಲತಾ : ಹುಲೀನೋ ಇಲೀನೋ?

ಹರೀಶ : ನೋಡ್ತಾ ಇರು.

ರಾಮು : ಇಲ್ಲಿ ಹುಲಿ ಇದ್ರಲ್ವೇನೋ ನೀನು ಹುಲಿ ಭೇಟೆ ಮಾಡೋದು.

ಲತಾ : ಬರೀ ತಲಹರಟೆ ಅಷ್ಟೆ..... ಪುಸ್ತಕದ ಬದ್ನೇಕಾಯಿ ನಿಂಗಂತೂ (ಎಲ್ಲರೂ ನಗುವರು) ವಾರ, ಅಜ್ಜಿ ಕೈ ಊಟ ಸಾಕು.

ರಾಮು : ನಂಗೆ ಸ್ಕೂಲು ಬೇಜಾರಾಗಿದೆ. ನಿಮ್ಮ ಜೊತೆ ರಜದಲ್ಲಿ ತೋಟದಲ್ಲಿ ಆಟ ಆಡ್ಕೊಂಡು ಸುತ್ತಾಡ್ಕೊಂಡಿರಬೇಕು ಅನ್ನೋ ಆಸೆ.

ಹರೀಶ : ರಜದಲ್ಲಿ ನಾಲ್ಕು ಜನ ಚಿಕ್ಕವರೇನು ದೊಡ್ಡವರೂ ಹೊಗಳುವಂಥ ಕೆಲವು ಸಾಹಸ ಮಾಡಿ ತೋರಿಸ್ಬೇಕು ಕಣ್ರೋ.

ಲತಾ : ಹರೀಶ ಮಹಾ ಸಾಹಸಗಾರ, ಊರಲ್ಲಿ ಅಂಗಡಿಗೋಗಿ ಒಂದು ಸಾಮಾನ್ ತಾರೋ ಅಂದ್ರೆ ಕುಂಟ ನೆಪ ಹೇಳ್ತಿರ್ತಾನೆ- ಹಸಿ ಮೆಣಸಿನಕಾಯಿ ತಾರೋ ಅಂದ್ರೆ ಕೆಂಪಿನ ಮೆಣಸಿನ ಕಾಯಿಯನ್ನೇ ಹಾಕ್ಕೋ ಅನ್ತಾನೆ, ಶಾಲೆಗೆ ಹೊತ್ತಾಯ್ತು, ಕಾಲಲ್ಲಿ ಗುಳ್ಳೆ ಅಂತ ಒಂದಿಲ್ಲ ಒಂದು ನೆಪ ಹೇಳ್ತಾನೆ. ಅಮ್ಮಾ ಸೋಂಬೇರಿ ಅಂತಾರೆ. ಇವನು ಸಾಹಸ ಮಾಡೋ ಮುಷುಡಿ.

ಶಾರದ : ನಮ್ಮೂರವರೊಂದಿಗೆ ಮಾತಾಡೋಕೆ ನಾಚಿಕೆ, ಹೆದರಿಕೆ-

ಲತಾ : ಸ್ಕೂಲಿನಲ್ಲೂ ಅಷ್ಟೇ ಅಂತೆ ಉಪಾಧ್ಯಾಯರನ್ನ ಒಂದು ಪ್ರಶ್ನೆ ಕೇಳಲ್ವಂತೆ ಇವನೇನು ಸಾಹಸ ಮಾಡ್ತಾನೆ ಬಿಡಿ. ಈತನ ದರ್ಬಾರೆಲ್ಲಾ ನನ್ನ ಮೇಲೆ ಅಪ್ಪನಿಗೂ ಸ್ವಲ್ಪ ಹೆದರ್ತಾನೆ

ರಾಮು : ಹೊಸ ಜನರು, ಹೊಸ ಜಾಗ ಅಂದಮೇಲೆ ಮನೇಲೇ ಕೋಣೆ ಮುದ್ದು ಬಸವನಾಗಿರ್ತಾನೆ. ಓದೊ ಪುಸ್ತಕದಲ್ಲಿ, ತನ್ನ ಮನೋ ರಾಜ್ಯದಲ್ಲಿ ಇವ ವೀರ ಅಷ್ಟೇ.

ಶಾರದ : ಸಾಹಸಿಯಲ್ಲ ಅಂದ್ರೂ ಜಾಣ ಅನ್ನೋದು ಅಲ್ಲಗಳೆಯೋ ಹಾಗಿಲ್ಲ. ಪುಸ್ತಕ ಓದಿ ತಿಳ್ಕೊಂಡಿದ್ದಾನೆ. ಪ್ರಾಣಿ ಪಕ್ಷಿಗಳ ಬಗೆಗೆ ಗಂಟೆ ಗಟ್ಲೇ ವಿವರಣೆ ಕೊಡ್ತಾನೆ ಬೇಕಾದ್ರೆ. ಆದ್ರೆ ನಮ್ಮ ರಾಮು ಹ್ಯಾಗೆ ಅನ್ತೀರೋ ನಮ್ಮ ಅಜ್ಜಿ ಕರಿಬೇವು ತಾರೋ ಅಂದ್ರೆ ಅರ್ಧ ಮರದ ಕೊಂಬೆಗಳನ್ನೇ ಮುರಿದು ತರ್ತಾನೆ, ಕೋತಿ ಥರ ಮರ ಹತ್ತೋದು, ತೆಂಗಿನ ಮರ ಹತ್ತೋದು, ದನ ಕರು ನೀರು ಕುಡಿಸೋದು, ಮೇಯಿಸೋದ್ನು ಬೇಕಾದ್ರೆ ಮಾಡ್ತಾನೆ.

ಹರೀಶ : ಹಳ್ಳಿ ವಾತಾವರಣಕ್ಕೆ ತಕ್ಕಹಾಗೆ ಬೆಳೆದಿದ್ದಾನೆ.

ಶಾರದ : ಒಂದು ಸಾರಿ ದನ, ಒಂದು ಮಗೂನ ತುಳಿದು ಬಿಡ್ತಿತ್ತು. ಆಗ ಮಗ ಎತ್ಕಂಡು ಬಂದು ಮಗು ಕಾಪಾಡಿದ ಆತನ ಸಾಹಸವನ್ನು ಜನಗಳು ಮೆಚ್ಚಿದ್ದಾರೆ. ಒಂದು ರೀತಿಲಿ ನಮ್ಮಣ್ಣ ಹರೀಶನಿಗಿಂತ ಸ್ವಲ್ಪ ನಿಜವಾದ ಸಾಹಸಿ ಅಂದ್ರೂ ತಪ್ಪಾಗಲಾರದು.

ಲತಾ : ಆದ್ರೆ ನಮ್ಮ ಅಣ್ಣ ಯಾವಾಗ್ಲೂ ನನ್ನ ಮೇಲೆ ಕೀಟಲೆ ನಡೆಸೋದೆ, ತನ್ನ ಕೈಲಿರೋ ಬೈನಾಕುಲರ್ ಸಹ ನನಗೆ ಕೊಡೋದಿಲ್ಲ.

ಹರೀಶ : ಎಷ್ಟು ಸಾರಿ ಕೊಟ್ಟಿಲ್ಲ.

ಲತಾ : ಕೊಟ್ರೂ ಹಾಗಿಡಬೇಡ, ಹೀಗ್ ನೋಡಬೇಡ್ಕ, ನೂರಾರು ಆಜ್ಞೆಗಳು.

ಶಾರದ : ನಮ್ಮ ಅಣ್ಣ ಹಾಗಿಲ್ಲ. ರಾಮು ಅನ್ನುವುದಕ್ಕೂ ಅವನು ಶ್ರೀರಾಮಚಂದ್ರ ಇದ್ದ ಹಾಗೆ ದಯಾಳು. ಏನ್ಬೇಕಾದ್ರೂ ಕೊಡ್ತಾನೆ.

ರಾಮು : ಇದೇನು ಹೊಟ್ಟೆ ಹಸಿವು ಅಂದ್ರಿ ಇನ್ನು ಕಾಡು ಹರಟೆ ಹೊಡೀತಾನೇ ಇದ್ದೀರಿ.

ಹರೀಶ : ಇನ್ನು ಊರ ಹರಟೆಗೆ ರೆಡಿ ಆಗೋಣ ನಡೀರಿ.

(ಎಲ್ಲರೂ ನಗುವರು)

* * *

## ತರಂಗ-೩

ರಾಧಮ್ಮ : ಲೋ ರಾಮು ರಾಮಾಪುರಕ್ಕೆ ಹೋಗಿ ಎರಡು ಸೇರು ಉಪ್ಪು ತಾರೋ.

ರಾಮು : ಹರೀಶ, ಬಾರೋ ಹೋಗೋಣ.

ಹರೀಶ : ಸರ್‍ಯೋ, ನಂಗೂ ಬೇಜಾರಾಗಿದೆ, ಏನು ನಿಮ್ಮೂರ್ರೋ ಒಂದು ಚಿಲ್ಲರೆ ಅಂಗಡಿ ಇಲ್ಲ, ಒಂದು ಪೋಸ್ಟ್ ಆಫೀಸಿಲ್ಲ, ಬಸ್‌ನ ಶಬ್ದ ಮಾತ್ರ ಯಾವಾಗ್ಲೋ ಒಮ್ಮೆ ಕೇಳಿ ಬರುತ್ತೆ. ಅಂತೂ ಒಂದು ವಿಧದಲ್ಲಿ ನೋಡಿದ್ರೆ ನಿಜವಾಗಿಯೂ ವಾತಾವರಣ ಬಹಳ ಪ್ರಶಾಂತವಾಗಿದೆ. ಆದ್ರೆ ಸೌಕರ್ಯವೇ ಸ್ವಲ್ಪ ಎಡವಟ್ಟು.

ರಾಮು : ಆದ್ರೆ ನಿಮ್ಮ ಹಾಗೆ ಅಕ್ಕಿ, ತರಕಾರಿ, ಹಾಲು ಬೆಣ್ಣೆಗೆ ಬೇರೆ ಕಡೆ ಹೋಗುವಾಗಿಲ್ಲ, ಹಳ್ಳಿಯಲ್ಲಿರೋದು ಪಟ್ಟಣದಲ್ಲಿಲ್ಲ, ಪಟ್ಟಣದಲ್ಲಿರೋದು ಹಳ್ಳಿಲಿಲ್ಲ. ಆದಷ್ಟು ನಮಗೆ ಬೇಕಾದುದನ್ನು ನಾವು ಬೆಳೆದುಕೊಳ್ತೀವಿ ಹರೀಶ. ನಡೆ ನಡೆ ರಾಮಾಪುರದ ಅಂಗಡಿ ತೋರಿಸ್ತೀನಿ.

ಹರೀಶ : ಎಷ್ಟು ದೂರವೋ?

ರಾಮು : ಏನು ಒಂದು ಮುಕ್ಕಾಲು ಮೈಲಿ.

(ದಾರಿಯಲ್ಲಿ ಹಕ್ಕಿಗಳ, ದನಗಳ, ಕುರಿಗಳ ಶಬ್ದ)

ಹರೀಶ : ಎಲ್ಲೋ ಅಂಗಡಿ?

ರಾಮು : ಇದೇನು ಪಟ್ಟಣವೇನೋ ಬೋರ್ಡ್‌ಗೀರ್ಡ್ ಹಾಕೋಕೇ? ಹಳ್ಳಿ, ಇದು ಗಂಗಮ್ಮನ ಅಂಗಡಿ. ಇಲ್ಲಿ ಕಡ್ಲೆಪುರಿ, ಪೆಪ್ಪರ್‌ಮೆಂಟು, ಬೀಡಿ, ಬೆಂಕಿ

ಪೊಟ್ಟಣ, ಉಪ್ಪು, ಬೇಳೆ, ಎಣ್ಣೆ ಇಷ್ಟು ಮಾತ್ರ ಸಿಗೋದು, ಇದೇನು ದೊಡ್ಡ ಅಂಗಡಿಯಲ್ಲಾ ಕಣೋ. ಇನ್ನೂ ಹೆಚ್ಚಿಗೆ ಸಾಮಾನುಗಳು ಬೇಕು ಅಂದ್ರೆ ಸಂತೇಗೋಗಬೇಕು, ಪೇಟೆಗೆ ಹೋಗಬೇಕು. ಇದು ನಮ್ಮ ಸ್ನೇಹಿತ ಗೋಪಿಯ ಅಂಗಡಿ. ನೋಡಿವ್ನೆ.... ನನ್ಗಿಂತ ಸಣ್ಣಕ್ಕಿರೋ ಗೋಪು ನಂಗೆ ಸಾಮಾನ್ಯವಾಗಿ ಅವನೇ ಸಾಮಾನುಗಳನ್ನ ಕೊಡೋದು.

ಹರೀಶ : ನೋಡ್ದೇನೋ ರಾಮು ಆ ಖಾಕಿ ಪ್ಯಾಂಟು ನೀಲಿ ಬುಷ್‌ಷರ್ಟ್ ಹಾಕಿಕೊಂಡಿರುವವನನ್ನ. ಕರಿಮೀಸೆ, ದಪ್ಪ ಮೀಸೆ ಹ್ಯಾಗಿದೆ? ಇನ್ನೊಬ್ಬ ಹಸಿರು ಕೆಂಪು ಚೌಕುಳಿ ಲುಂಗಿ ಸುತ್ತಿರುವವನನ್ನ. ತುಟಿಮೇಲೆ ಗಾಯದ ಗುರುತು ಅಬ್ಬಾ ಅವರ ಕೆಂಪು ಕಣ್ಣು, ವಕ್ರ ನೋಟ ನೋಡಿದ್ರೆ ಒಂದು ಥರ ಹೆದರಿಕೆ ಆಗುತ್ತೆ ಯಾರೋ ಅವ್ರು?

ರಾಮು : ನಾನೂ ಇದೇ ಮೊದ್ಲು ಕಣೋ ನೋಡ್ತಾ ಇರೋದು.

ಹರೀಶ : ಕೇಡಿ ಥರಾನೇ ಇದ್ದಾನೆ ಕಣೋ-

ಕೇಡಿ : ಸಿಗರೇಟಿದ್ಯೇನೋ?

ಗೋಪಿ : ಅರ್ಧ ಪ್ಯಾಕ್ ಇದೆ.

ಕೇಡಿ : ಎಂಥ ಅಂಗಡಿ ಇಟ್ಯೋ....... ಇಲ್ಲಿ ಹೋಟೇಲಿದ್ಯೇನೋ?

ಗೋಪಿ : ಈ ಹಳ್ಳೀಲಿ ತಿಂಡಿ ಯಾರು ತಿನ್ನಾಕೆ ಬರ್ತಾರೆ?

ಕೇಡಿ : ಈ ಟವಲ್‌ಗೆ ಎರಡು ಸೇರು ಪುರಿ, ಒಂದು ಪಾವು ಕಡ್ಲೆ, ಒಂದು ಅಚ್ಚು ಬೆಲ್ಲ ಹಾಕು, ಎಷ್ಟಾಯ್ತು ಲೆಕ್ಕಹಾಕಿ ಈ ಹತ್ತು ರೂಪಾಯಿಗೆ ಚಿಲ್ರೆ ಕೊಡು.

ರಾಮು : ಗೋಪಿ ಉಪ್ಪು ಕೊಡೋ ಎರಡು ಸೇರು.

ಗೋಪಿ : ತೆಗೋ, ಈತ ಯಾರು?

ರಾಮು : ನಮ್ಮ ಚಿಕ್ಕಪ್ಪನ ಮಗ ಹರೀಶ ಅಂತ ಮದ್ರಾಸಿಂದ ಬಂದವ್ನೆ ನಮ್ಮ ಮನೆಗೆ. ಬರ್ತೀವಿಕಣೋ..... ನಡ್ಯೋ ಹರೀಶ ಹೋಗೋಣ. ಏನೋ ಬೈನಾಕುಲರ್‌ನಲ್ಲಿ ಬಹಳ ಹಕ್ಕಿಗಳನ್ನು ನೋಡ್ತೀಯಾ ಅಲ್ವಾ.......

ಹರೀಶ : ಯಾಕೆ ನಿಂಗೆ ಅನುಮಾನವಾ?

ರಾಮು : ನಮ್ಮ ಶಾರದಳಿಗೆ ಗುಬ್ಬಚ್ಚಿ, ಗಿಣಿ, ಪಾರಿವಾಳ, ಹದ್ದು ಮಾತ್ರ ಚೆನ್ನಾಗಿ ಗೊತ್ತು.

ಹರೀಶ : ಕೋಗಿಲೆಗಳು ನಮ್ಮ ದೇಶದಲ್ಲಿ ತಾನು ಗೂಡು ಕಟ್ಟದೆ ಬೇರೆಯವರ ಗೂಡಲ್ಲಿ ಮೊಟ್ಟೆ ಹಾಕುತ್ತೆ. ಆದ್ರೆ ಯೂರೋಪಿನ ಕೋಗಿಲೆ ವಲಸೆ ಹೋಗುತ್ತದೆ. ವಲಸೆ ಹೋಗಲಿಕ್ಕೆ ಮುಂಚೆ ಬೇರೆ ಪಕ್ಷಿಗಳ ಗೂಡಿನಲ್ಲಿ ಮೊಟ್ಟೆ ಇಟ್ಟು ನಾಲ್ಕು ಸಾವಿರ ಮೈಲಿ ದೂರದ ಆಫ್ರಿಕಾಕ್ಕೆ ಹೋಗುತ್ತವೆ. ಮೊಟ್ಟೆಗಳು ತಾನೇ

ಒಡೆದು ಮರಿಯಾಗುತ್ತವೆ. ಅವು ಹಾರಲು ಬಂದ ಕೂಡಲೇ ಆಫ್ರಿಕಾಕ್ಕೆ ಹಾರಿ ತಮ್ಮ ತಾಯಿಯನ್ನು ಸೇರುತ್ತವೆ.

ಶಾರದ : ನಮಗೆ ಹತ್ತಿರದ ಶಾಲೇಗೆ ಹೋಗಲಿಕ್ಕೆ ಆಗೋದಿಲ್ಲ. ಆ ಪಕ್ಷಿಗಳು ಹೇಗೆ ಅಷ್ಟುದೂರ ಓಡ್ತಾವೆ.

ಹರೀಶ : ರಾಮು ಬಾರೋ ಇಲ್ಲಿ ಅಂಗಡಿಯಲ್ಲಿ ನೋಡಿದವಲ್ಲಾ ಆ ಗೂಂಡಾಗಳು ನೋಡು.....

ರಾಮು : ಹೌದು ಅವರೇ......

ರಾಧ : ಯಾರೋ ಅವ್ರು?

ರಾಮು : ನೀನೇ ನೋಡು......

ರಾಧ : ಅವನಾ.... ಕಾಳಪ್ಪ ಕಣೋ.... ತೆಂಗಿನಕಾಯಿ ಕಳ್ಳ, ರಾಮಪುರದವನು.

ಲತಾ : ಕಳ್ಳ ಹ್ಯಾಗಿದ್ದಾನೆ ನಾನೂ ಸ್ವಲ್ಪ ನೋಡ್ತೀನಿ...... ಅಬ್ಬಬ್ಬಾ....... ತುಂಬಾ ಹೆದರಿಕೆ ಆಗುತ್ತೆ ಹಳ್ಳಿ ಕಡೇನೆ ಹೊರಟ.

* * *

## ತರಂಗ-೪

ರಾಧ : ಕೇಳಿದ್ರಾ?

ಅನಂತ : ಏನ್ನ?

ರಾಧಾ : ಅದೇ ನಿನ್ನೆ ರಾತ್ರಿ ಕಾಳಪ್ಪನ್ನ ಒಂದು ದೆವ್ವ ಹಿಡ್ಕೊಳ್ಳೋಕೆ ಬಂದಿತ್ತಂತೆ.

ಅನಂತ : ಆ ಸಿದ್ದಪ್ಪನ ಮಗ ಕಾಳಪ್ಪನ್ನ ದೆವ್ವ ಹಿಡ್ಕೊಳ್ಳೋದು ಅಂದ್ರೇನು? ಅವನೇ ದೆವ್ವ ಇದ್ದಹಾಗಿದ್ದಾನೆ.

ರಾಧ : ಮುಸ್ಸಂಜೆ ಹೊತ್ತಿನಲ್ಲಿ ಕೆರೆ ಕಡೆ ಬರ್ತಿದ್ನಲ್ಲಾ ಆಗ ಭೂಮಿಗೂ ಆಕಾಶಕ್ಕೂ ಕೀಲು ಕೊಟ್ಟಾಗಿ ದೆವ್ವ ನಿಂತುಬಿಡ್ತಂತೆ. ಆಮೇಲೆ ಆತ ಊರಿಗೆ ಓಡೋಡಿ ಬಂದ್ನಂತೆ. ಆಮೇಲೆ ಏನೂ ಕಾಣಲಿಲ್ವಂತೆ

ಅನಂತ : ಏನು ಭ್ರಮೇನೋ?

ರಾಧ : ಅಲ್ಲೇ ಸ್ಮಶಾನ ಇರೋದು, ಸತ್ಮೇಲೆ ಯಾರು ದೆವ್ವ ಆಗಿದ್ದಾರೋ ಏನೋ ಯಾರಿಗೆ ಗೊತ್ತು?

ಶಾರದ : ಅವ್ವ ಅವ್ವಾ ದೆವ್ವ ಹ್ಯಾಗಿರುತ್ತೆ?

ರಾಧ : ಕೊಳ್ಳಿದೆವ್ವ, ಮೋಹಿನಿ, ಬ್ರಹ್ಮರಾಕ್ಷಸ ಅನೇಕ ಥರ ಇರ್ತಾವೆ ಕಣೆ. ಅವು ಕಣ್ಣಿಗೆ ಕಾಣೋಲ್ಲ, ದೆವ್ವಗಣ್ಣು ಇರವರಿಗೆ ಮಾತ್ರ ಕಾಣಸುತ್ತಂತೆ. ಅವು ನಮ್ಮ ಹಾಗೆ ನಡ್ಯಲ್ವಂತೆ ಹಿಂದಕ್ಕೆ ನಡೀತಾವಂತೆ.

ಲತಾ : ಅಯ್ಯೋ ಏನು ಖಾಯಿಲೆ ಆದ್ರೂ ದೆವ್ವ ಅಂತಾರೆ ಹಳ್ಳೀಲಿ.

ಶಾರದ : ಪೂಜಾರಿಯೇ ದೆವ್ವ ಬಿಡಿಸಿದ್ದನ್ನ ನಾನು ಕಂಡಿವ್ನಿ.

ಹರೀಶ : ಲತಾ, ಶಾರದಾ, ರಾಮೂ ಬನ್ರೋ ತೋಟದ ಕಡೆ ಹೋಗೋವ.

ಶಾರದ : ಬಂದ್ರೋ......

(ತೋಟದ ವಾತಾವರಣ)

ಹರೀಶ : ಅದೇನೇ ಲತಾ ಮಾತಾಡ್ತಿದ್ರಿ ದೆವ್ವ ದೆವ್ವ ಅಂತ.

ಲತಾ : ಅದ್ನೆಲ್ಲಾ ಈಗ ಜ್ಞಾಪಿಸಬೇಡ ನಂಗೆ ತುಂಬಾ ಭಯವಾಗುತ್ತೆ

ಹರೀಶ : ಅದೇನೋ ಕಾಳಪ್ಪನಿಗೆ ದೆವ್ವ ಹಿಡ್ದಿದೆ ಅಂತ ರಾಧಾ ಚಿಕ್ಕಮ್ಮ ಹೇಳ್ತಿದ್ರು

ಲತಾ : ಹ್ಞೂ......

ಹರೀಶ : ಬೇಕು ಅಂತಾ ಅವನು ಹೆದರಿಸ್ತಾ ಇದ್ದಾನೆ. ಆ ಕಡೆ ಯಾರೂ ಹೋಗದೇ ಇದ್ದರೆ ಉತ್ತಮ ಅಂತ ಹಾಗೆ ಮಾಡಿದ್ದಾನೆ.

ರಾಮು : ಅದೇನು ಸ್ವಲ್ಪ ಊರ್ನಲ್ಲಿ ಇದರ ಬಗ್ಗೆ ವಿಚಾರ ಮಾಡೋಣ.

ಲತಾ : ಕಾಳಪ್ಪನ ಮನೆಗೇ ಹೋಗ್ತೀರಾ?

ಶಾರದ : ಅವನನ್ನೇ ಕೇಳಿದ್ರೆ ದೆವ್ವ ಹಿಡಿದಿದೆ ಅಂತಾನೇ ಹೇಳ್ತಾನೆ.

ರಾಮು : ಬೇರೆಯವರಿಂದಲೇ ತಿಳಿದ್ರಾಯ್ತು.

ಹರೀಶ : ಹಾಗಾದ್ರೆ ಯಾರನ್ನ ಕೇಳೋಣ?

ಶಾರದ : ಮೊದ್ಲು ನಾಗಮ್ಮನ್ನ ಕೇಳೋಣ.

ರಾಮು : ಅವಳು ಕೇಳಿದ್ರೆ ಊರಲ್ಲೆಲ್ಲಾ ಈ ವಿಚಾರನ ಡಂಗೂರ ಸಾರಿ ಬರ್ತಾಳೆ ಮೊದಲು ಅಂಗಡಿಗೆ ಹೋಗೋಣ ಗೋಪಿಯನ್ನ ಈ ಬಗೆಗೆ ಕೇಳೋಣ ಬಾರಯ್ಯ

ಹರೀಶ : ಸರಿ ನಡೀರಿ......

ರಾಮು : ನಿನ್ನನ್ನೇ ಹುಡುಕಿಕೊಂಡು ಬರ್ತಿದ್ವಿ ಆದ್ರೆ ದಾರೀಲೆ ಸಿಕ್ಕುಬಿಟ್ಟೆ ಗೋಪು.......

ಗೋಪಿ : ಏನು ಸಮಾಚಾರ?

ರಾಮು : ಅದೇ ಕಣೋ ಆ ಕಾಳಪ್ಪ.

ಗೋಪು : ಗೊತ್ತು ಬಿಡು ಎಷ್ಟೋ ಸಾರಿ ಬರ್ತಾನಲ್ಲ, ನಮ್ಮ ಅಂಗಡಿಯಲ್ಲಿ ಕಾಯಿ, ಪುರಿ, ಕಡ್ಲೆ, ಬಾಳೆಹಣ್ಣು ಮಾಮೂಲಿ ತೆಗೆದುಕೊಳ್ತಾನಲ್ಲ ಅವನು ತಾನೆ. ಅಲ್ಲದೆ ತೆಂಗಿನಕಾಯಿ ಕಳ್ಳ ಅಂತ್ಲೂ ಅಂತಾರೆ.

ರಾಮು : ಅವನು ನೆನ್ನೆ ಏನಾದ್ರೂ ನಿಮ್ಮ ಅಂಗಡಿಗೆ ಬಂದಿದ್ನಾ?

ಗೋಪು : ಬಂದಿದ್ದ. ಯಾರೋ ನೆಂಟ್ರು ಬರ್ತಾರೆ ಅಕ್ಕಿ ಬೇಳೆ ಸಾಲ ಕೇಳಿದ. ನಮ್ಮ ತಾಯಿ ಈಗ್ಲೇ ಬಾಕಿ ಹೆಚ್ಚಾಗಿದೆ ಕೊಡೋಕ್ಕಾಗೋಲ್ಲ ಅಂದ್ರು. ಈಹೊತ್ತು ಸಾಯಂಕಾಲ ಎಲ್ಲಾನೂ ಚುಕ್ತ ಮಾಡ್ತುಬಿಡ್ತೀನಿಕಣಪ್ಪಾ ಅಂದಮೇಲೆ ಅಕ್ಕಿ ಬೇಳೆ ಕೊಟ್ರು.

ರಾಮು : ಆಮೇಲೆ ನಂಟ್ರು ಬಂದಿದ್ರಂತಾ?

ಗೋಪಿ : ಇಲ್ಲ ಅವನೇ ಬುತ್ತಿ ಕಟ್ಕೊಂಡು ಅವರಿಗೆ ಕೊಟ್ಟನಂತೆ.

ರಾಮು : ಆಮೇಲೆ ಸಂಜೆ ಏನಾದ್ರೂ ಬಂದ್ನೊ?

ಗೋಪಿ : ಹ್ಞೂಂ ಬಂದು ಸಾಲ ಎಲ್ಲಾ ತೀರಿಸಿದ.

ಹರೀಶ : ಅವನೇನೋ ದೆವ್ವ ನೋಡಿದ್ನಂತೆ?

ಗೋಪಿ : ಹ್ಞೂಂ..... ನಮ್ಮಮ್ಮನ ಹತ್ತಿರಾನು ಹೇಳ್ತಿದ್ದ. ಅದ್ಸರಿ ಈಗ ಕಾಳಪ್ಪನ ಸುದ್ದಿ ಯಾಕೆ ಬಂತು?

ಹರೀಶ : ಸುಮ್ನೆ ಕೇಳ್ದೇ ಅಷ್ಟೆ.

ರಾಮು : ಬರೋಲ್ವೇನೋ ಗೋಪಿ.

ಗೋಪಿ : ಆಯ್ತು.

(ಹೊರಡುವರು...... ಸಂಗೀತ)

ಹರೀಶ : ರಾಮು ನೋಡ್ದಾ ವಿಷಯವನ್ನು. ಅಂದ್ರೆ ಕಾಳಪ್ಪ ಅವರಿಬ್ಬರಿಗೆ ಊಟವನ್ನು ತೆಗೆದುಕೊಂಡು ಹೋಗಿ ಕೊಟ್ಟಿದ್ದಾನೆ.

ಲತಾ : ಕಾಳಪ್ಪನನ್ನು ಹುಡುಕಿಕೊಂಡು ಅವರು ಬರಲಿಲ್ಲ ಎಂಬುದು ಖಚಿತವಾಯಿತು.

ಹರೀಶ : ಸಾಲ ತೀರ್ಸೋಕ್ಕೆ ಅವರಿಬ್ಬರೇ ಹಣವನ್ನು ಕೊಟ್ಟಿದ್ದಾರೆ.

ರಾಮು : ಅವರೇ ಸಂಜೆ ಜನ ಹೆಚ್ಚು ಓಡಾಡದಂತೆ ಹೆದರಿಕೆ ಹುಟ್ಟಿಸಲು ಕಾಳಪ್ಪನಿಗೆ ತಿಳಿಸಿದ್ದಾರೆ.

ಹರೀಶ : ಅದೇ ದೆವ್ವದ ಹೆದರಿಕೆ.

ಲತಾ : ಇದನ್ನ ಸರಿಯಾದ ವಿಷಯ ಅಂತ ನಂಬಕ್ಕಾಗೋಲ್ಲ.

ಹರೀಶ : ಈಗ ಸ್ವಲ್ಪ ವಿಷಯ ಸಿಕ್ತು ನಾಳೆ ಇದರ ಪರಿಶೀಲನೆ ಮಾಡೋಣ..... ಕಂಡು ಹಿಡಿಯೋಣ.

ರಾಮು : ಸರಿ ಈಗ ಮನೇಗೋಗೋಣ ನಡೀರಿ...... ನಾಳೆ ಇದರ ಬಗ್ಗೆ ಯೋಚನೆ ಮಾಡೋಣ........

* * *

# ಗೋಗ್ರಹಣ
## ಭಾಗ ೨

ಪಾತ್ರ ವರ್ಗ:

೧. ಹರೀಶ, ೨. ಶಾರದ (ಅನಂತರಾಮಯ್ಯನವರ ಪತ್ನಿ), ೩. ರಾಮು, ೪. ಲತಾ, ೫. ರಾಧಾ, ೬. ಚೆನ್ನ (ದನ ಕಾಯುವವನು), ೭. ಗೋಪಿ, ೮. ಅನಂತರಾಮಯ್ಯ, ೯. ಹನುಮಜ್ಜ

### ತರಂಗ-೧

ಹರೀಶ : ರಾಮು ಕಾಳಪ್ಪ ನಾವು ಆ ಹೊತ್ತು ಇಬ್ಬರನ್ನು ನೋಡಿದೆವಲ್ಲಾ ಅವರ ಜೊತೆ ಸೇರಿಕೊಂಡು ಏನೋ ಯತ್ನ ನಡಿಸ್ತಿರಬೇಕು.

ಶಾರದ : ಯಾರ ಮನೇಲಾದ್ರೂ ಕಳ್ಳತನ ಮಾಡಲಿಕ್ಕೆ.

ರಾಮು : ಕಳುವಾಗಿದ್ರೆ ತೋಪಿನ ಹಿಂದೆ ಯಾಕೆ ಹೋಗ್ತಿದ್ದ. ಈ ಹಳ್ಳೀಲಿ ಆತ ಏನಾದ್ರೂ ಕದ್ರೆ ಸಿಕ್ಕಿ ಹಾಕ್ಕೊಳ್ತಾನೆ, ಅದು ಅವನಿಗೂ ಗೊತ್ತು.

ಲತಾ : ಅವರು ಕಳ್ಳಸಾಗಣೆಕೆದಾರರೇ ಇರಬೇಕು.

ಶಾರದ : ಹಾಗಂದ್ರೇನೇ?

ಲತಾ : ಬೇರೆ ದೇಶದಿಂದ ಸುಂಕ ಕೊಡದೆ ಸಾಮಾನು ತಂದು ಇಲ್ಲಿ ಮಾರೋವ್ರು.

ಹರೀಶ : ಇದು ಸಮುದ್ರಕ್ಕೆ ದೂರವಾದ ಹಳ್ಳಿಯಲ್ಲಿ ಅವ್ರು ಹ್ಯಾಗೆ ಬರ್‍ತಾರೆ? ಇಲ್ಲಿಂದ ತೆಗೆದುಕೊಂಡು ಹೋಗೋ ವಸ್ತು ಏನಿದೆ?

ಲತಾ : ವಿಗ್ರಹ ಕಳಲು ಬಂದಿದ್ದಾರ್‍ಯೇ?

ಹರೀಶ : ದೇವಸ್ಥಾನ ಇದ್ಯೇ ಇಲ್ಲಿ

ರಾಮು : ಹೌದು ಹಳೇ ದೇವಸ್ಥಾನ ಒಂದು ಕಲ್ಲುಮೂರ್ತಿ ಮಾತ್ರ ಇದೆ. ಒಡವೆಗಿಡವೆ ಏನೂ ಇಲ್ಲ. ಅಲ್ಲಿ ಪೂಜಾರಿ ಮಲಗ್ತಾನೆ.

ಶಾರದ : ಕಾಡಿನಲ್ಲಿ ಗಂಧದ ಮರ ಕಡಿಯುವದು ಇರಬಹುದೇ?

ರಾಮು : ಇಲ್ಲೆಲ್ಲಾ ಹತ್ತಿರ ಕಾಡಿದೆ ಏನೋ ಹೇಳಿದ್ಲು.

ಹರೀಶ : ಅವರು ಎಲ್ಲೆಲ್ಲಿಗೆ ಹೋಗಿದ್ರು ನೋಡ್ಕಂಡು ಬರೋಣ. ಕಾಳಪ್ಪ ಏನ್ಮಾಡ್ತಾನೆ ಎಂಬುದರ ಬಗ್ಗೆ ಕಣ್ಣಿರಲಿ, ಆಮೇಲೆ ಸ್ವಲ್ಪ ವಿಷಯ ತಿಳಿಯುತ್ತೆ.

ರಾಮು : ಈಗ ನಾವು ಏನಾದ್ರೂ ತಿಂಡಿ ಕಟ್ಟಿಸಿಕೊಂಡು ಹೊರಟು ಬಿಟ್ರೆ ಮಧ್ಯಾಹ್ನ ತಿಂದು ಇಡೀ ದಿವಸ ನೋಡಬಹುದು.

ಹರೀಶ : ಚಿಕ್ಕಮ್ಮ ನಾವು ಊರ ಹೊರಗಿನ ದೇವಸ್ಥಾನಕ್ಕೆ ಫಿಕ್ನಿಕ್ ಹಾಕಿದ್ದೀವಿ ಸ್ವಲ್ಪ ತಿಂಡಿ ಕಟ್ಟಿಕೊಡಿ, ಸಾಯಂಕಾಲದವರೆಗೆ ಇರ್ತೀವಿ. ನೀವು ಗಾಬ್ರಿ ಬೀಳಬೇಡಿ.

ರಾಧ : ಇಡ್ಲಿ ಚಟ್ನಿ, ರವೆ ಸಜ್ಜಿಗೆ, ಮೊಸರವಲಕ್ಕಿ, ಕೋಡಬಳೆ, ಬಾಳೆಹಣ್ಣು ಎಲ್ಲಾ ಹಾಕ್ತೀನಿ ತಿಂದು ಬನ್ನಿ.

ಹರೀಶ : ಇದೇನು ನಾವು ಒಂದು ಹೊತ್ತಿಗೆ ತೆಗೆದುಕೊಂಡು ಹೋಗ್ತಾ ಇದ್ದೀವೋ

ರಾಧ : ನೀವು ಈಗ್ತಿನ್ದೆ ಮುದುಕ್ರಾದ್ಮೇಲೆ ತಿನ್ತೀರಾ? ಕರು ಹೊರೆ ಮೆಯ್ತು ಅಂತ ಗಾದೆ ಹೇಳಲ್ವೇ? ಬೇರೆ ಕಡೆ ಗಾಳಿಯಲ್ಲಿ ಚೆನ್ನಾಗಿ ತಿನ್ನಬಹುದು ತಿನ್ರೋ. ಜೋಪಾನ ಕತ್ತಲಾಗೋಕು ಮುಂಚೆ ಬನ್ರೋ.

ಲತಾ : ಆಗ್ಲಿ ಚಿಕ್ಕಮ್ಮ

(ಸಂಗೀತ)

ಹರೀಶ : ನಾವು ಹೋಗ್ತಿರೋ ವಿಷಯವನ್ನು ಗೋಪಿಗೆ ತಿಳಿಸಿ ಹೋಗೋಣ.

ರಾಮು : ಆಗ್ಲಿ.......

ಹರೀಶ : ನೀನೇ ಹೇಳಿಬಾ.....ನಾವು ಮೆಲ್ಲಗೆ ಹೋಗ್ತಾ ಇರ್ತೀವಿ.

ರಾಮು : ಸರಿ.

(ದನಗಳ ಅಂಬಾ ಶಬ್ದ)

ಲತಾ : ದನಗಳು ನೋಡು ಎಷ್ಟು ಚೆನ್ನಾಗಿವೆ, ನಿಮ್ಮಪ್ಪೂ ಇಲ್ಲೇ ಇದ್ಯ.

ಶಾರದ : ಹ್ಞೂ..... ಚೆನ್ನ ಇವನ್ನೆಲ್ಲಾ ಕಾಯ್ತಾನೆ. ಅದೋ ಅಲ್ಲಿ ಸ್ವಲ್ಪ ಪೆದ್ದ ಪೆದ್ದರಾಗೆ ಶಾಲನ್ನ ಅತ್ತ ಇತ್ತ ಹಾಕುತ್ತಾ ಹೋಗ್ತಾ ಅವ್ನಲ್ಲಾ ಅವ್ನೇ ಚೆನ್ನ. ೧೦೦-೧೫೦ ಹಸುಗಳನ್ನು ದಿನಾ ಬೆಳಗಿನಿಂದ ಸಂಜೆವರ್ಗೆ ಕಾಯ್ತಾನೆ.

ಲತಾ : ಬೇರೆಯವರ ಹೊಲಕ್ಕೆ ಹೋದ್ರೆ?

ಶಾರದ : ಅದರ್ಲೆಲ್ಲಾ ಜೋಪಾನವಾಗಿರ್ತಾನೆ. ಜೋಳದ ಪೈರು ತಿಂದರೆ ಹೊಟ್ಟೆ ಊದುಕೊಂಡು ದನ ಸಾಯುತ್ತೆ ಅನ್ನೋದೆಲ್ಲಾ ಬಲ್ಲ, ಆ ಕಡೇನೇ ಬಿಡೋಲ್ಲ. ಬೆಳಿಗ್ಗೆ ತಂಗಳೂಟವೋ ರೊಟ್ಟೀಯನ್ನೋ ತಿಂದು ಬಂತು ಅಂದ್ರೆ ಕೊಳಲೂದುಕೊಂಡು ದನ ಕಾಯ್ತಾ ಇರ್ತಾನೆ. ಸ್ಕೂಲಲ್ಲಿ ನಾಟಕದ ಹಾಡು, ಸಿನಿಮಾದ ಹಾಡು ಎಲ್ಲವನ್ನು ಹಾಡ್ತಾನೆ, ಕೊಳಲಲ್ಲಿ ನುಡಿಸ್ತಾನೆ.

ರಾಮು : ಹೋಗಿದ್ದೆ ಕಣಯ್ಯ ಅವರಮ್ಮ ಅಡಿಗೆ ಮಾಡ್ತಾ ಇದ್ದಾರಂತೆ, ಅವರಮ್ಮ ಬಂದ ಕೂಡ್ಲೇ ಬರ್ತೀನಿ ಅಂತ ಹೇಳಿದ, ಇಲ್ಲಿಗೇ ಬರ್ತಾನೆ.

ಚನ್ನ : ಏನು ರಾಮಪ್ಪ ಇಲ್ಲಿ ನೀವು.

ರಾಮ : ಇಲ್ಲೇ ಬಂದಿದ್ದ್ಯೋ....ನಮ್ಮ ಹಸು ಯಾವಾಗ ಕರು ಹಾಕಬಹುದು?

ಚನ್ನ : ಇನ್ನು ಮೂರುದಿನ ಬೇಕು ಸ್ವಾಮಿ.

ರಾಮ : ಚನ್ನಾ ಈಗೈದಾರು ದಿನದಲ್ಲಿ ಇಲ್ಲಿಗೆ ಯಾರಾದ್ರೂ ಬಂದಿದ್ರಾ?

ಚನ್ನ : ಹ್ಞೂಂ ಯಾರೋ ಒಬ್ಬರು ಬಂದಿದ್ರು? ದನ ಎಲ್ಲಾ ಯಾರದು? ಇಲ್ಲೇ ಮೇಯಕ್ಕೆ ಬಿಡ್ತೀಯಾ? ಇಲ್ಲಿ ಕುಡಿಯುವ ನೀರೆಲ್ಲದೆ ಅಂತ ಕೇಳಿದ್ರು.

ರಾಮ : ಆಮೇಲೆ.....

ಚನ್ನ : ಮಧ್ಯಾನ್ಹೊತ್ತಿಗೆ ಕಾಳಪ್ಪ ಬಂದ. ಅವ ಬುತ್ತಿ ತಂದಿದ್ದ, ಮೂರುಜನ್ರೂ ತಿಂದ್ರು. ವಸಿ ವೊತ್ತು ಮನಿಕಂಡಿದ್ರು ಆಮ್ಯಾಕೆ ತೋಪಿನಕಡೇಗೋದ್ರು.

ರಾಮು : ನಿಂಗೂ ಏನಾರ ಊಟ ಹಾಕದ್ರಾ?

ಚನ್ನ : ಅಮ್ ಇಲ್ಲಕನಪ್ಪ ತಾವೇ ಗಬರ್ ಗಬರ್ ಅಂತ ತಿಂದು ನೀರು ಕುಡಿದು, ತೇಕಿದರು. ನಾ ತಂದಿದ್ದ ರೊಟ್ಟಿ ತಿಂದು ನೀರು ಕುಡಿದೆ ಅಷ್ಟೇ.......

* * *

## ತರಂಗ-೨

ರಾಮು : ನೋಡ್ದೇನೋ ಗೋಪಿ ಹ್ಯಾಗಿದೆ ಕಾಳಪ್ಪನ ದೆವ್ವದ ವಿಚಾರ.

ಗೋಪಿ : ನಮಗಿಂತ ನೀವೇ ವಾಸಿಯಲ್ಲೋ, ಬೇರೆ ಊರಿಂದ ಬಂದ ಹರೀಶನಿಗೆ ಇಷ್ಟೊಂದು ತಲೆಗೆ ಹೊಳೆದಿರೋದ್ ನೋಡಿದ್ರೆ ತುಂಬಾ ಆಶ್ಚರ್ಯ. ನಾವೆಲ್ಲಾ ಮಂಕು ಸಾಂಬ್ರಾಣಿಗಳು ಕಣೋ.

ಶಾರದ : ಕೋಡಬಳೆ, ಕಡ್ಲೆಕಾಯಿ, ಅವಲಕ್ಕಿ ತಿನ್ನೋಣ ಬನ್ನಿ. ಬಾಳೆ ಎಲೆ ಕೊಡ್ತೀನಿ ತಗೊಳ್ಳಿ.

ಹರೀಶ : ಆ ಚೆನ್ನನಿಗೂ ಸ್ವಲ್ಪ ಕೊಡಿ...... ಬಾರಯ್ಯ ತೆಗೋ......

ಲತಾ : ಇಲ್ಲೇ ಹಳ್ಳದಲ್ಲಿ ನಾನು ಕೈಕಾಲು ತೊಳೆದುಕೊಂಡು ಬರ್ತೇನೆ ನೀರು ತಿಳಿಯಾಗಿದೆ.

ಶಾರದ : ಹ್ಯಾಗಿದೆ ವನ ಭೋಜನ?

ರಾಮು : ದಿವಸಾ ಅನ್ನ ಸಾರು ತಿನ್ತಾನೇ ಇರ್ತಿದ್ವು, ಆದ್ರೆ ಬರೀ ತಿಂಡಿ ತಿಂದುಕೊಂಡೇ ಇದ್ರೆ ಎಷ್ಟು ಚೆನ್ನಾಗಿರುತ್ತೆ ಅಲ್ವಾ?

ರಾಮು : ಹೆಂಗಸರೆಲ್ಲಾ ಪಾತ್ರೆ ತೊಳ್ಕೊಳ್ಳಿ ನಾವು ಸ್ವಲ್ಪ ಹೊತ್ತು ಈ ತಣ್ಣಗಿನ ಗಾಳಿಯಲ್ಲಿ ಮಲಗ್ತೀವಿ. ಲೋ ಚೆನ್ನಾ ನಾನು ಕೊಳಲನ್ನ ಚೆನ್ನಾಗಿ ನುಡಿಸಿ ಆನಂದವಾಗಿ ಒಂದು ಸ್ವಲ್ಪ ಕಾಲ ಕಳೆಯೋಣ.

ಹರೀಶ : ಥೊಥ್...... ದರಿದ್ರದ ಕಾಗೇ ಹಿಚ್ಚು ಹಾಕ್ಬಿಡ್ತು.....

ಲತಾ : ಹೊಗ್ಲಿ ತೊಳ್ಕೋ ಹೋಗು.

ಹರೀಶ : ಆರಾಮವಾಗಿ ಕಣ್ಣಿಗೆ ಜೊಂಪು ಹತ್ತಿದ ನಿದ್ರೆ ಬಂದಿತ್ತು. ಇದು ಬೇರೆ ಗೋಳು ತೊಳೆಯುವ ಹಾಗಾಯ್ತು. ನಡಿರಪ್ಪಾ ಹೋಗೋಣ ಇನ್ನೇನು ತಿಂಡಿ ಚೀಲಾನು ಸ್ವಲ್ಪ ಖಾಲಿ ಆಗಿದೆ.

ಲತಾ : ಆ ಮಂಟಪ ನೋಡು ಹ್ಯಾಗಿದೆ ಎರಡು ಮರಗಳ ಸಂದಿನಲ್ಲಿ.

ರಾಮ : ಇಲ್ಲಿ ಸೌದೇಗೋಗವ್ರು, ಹುಲ್ಲು ಹೊರೆ ತರುವವರು ಸ್ವಲ್ಪ ಹೊತ್ತು ಮಲಗಿ ವಿಶ್ರಾಂತಿ ಪಡ್ಕೊಂಡು ಹೋಗ್ತಾರೆ ಕಣೆ. ಮಳೆ ಬಂದಾಗ ಇಲ್ಲಿ ನಿಲ್ತಾರೆ, ಇಲ್ಲೊಬ್ಬ ಬೈರಾಗಿ ೩-೪ ತಿಂಗಳೇ ವಾಸಿಸ್ತಿದ್ದ.

ಹರೀಶ : ಕಡ್ಲೆಕಾಯಿ, ಕೋಡುಬಳೆ ಬಾಯಾಡಿಸ್ಕಂಡು ಹೋಗಿ ತೂಕಾನೂ ಸ್ವಲ್ಪ ಕಡಿಮೆ ಆಗುತ್ತೆ.

ರಾಮ : ಈಗ ಈ ಮಂಟಪದಲ್ಲಿ ಏನಿದೆ ನೋಡೋಣವೇ?

ಹರೀಶ : ನಡೀರಿ.....

ರಾಮು : ಬಾವಲಿಗಳು ಪಟ ಪಟ ಅಂತ ಒದರ್‍ತಾ ಇವೆ. ಕಣ್ಣು ಕುಕ್ಕುಬಿಡ್ತಾವೆ ಜೋಪಾನ.

ಶಾರದ : ಕಪಲಾ ಹಕ್ಕಿ ಅಲ್ವಾ?

ಹರೀಶ : ಇದು ಹಾರುವ ಇಲಿಯ ಗುಂಪಿಗೆ ಸೇರಿದ್ದು. ಈಗ ಅವನ್ನೇ ಒಂದು ಗುಂಪು ಮಾಡಿದ್ದಾರೆ.

ಶಾರದ : ಇವಕ್ಕೆ ಕತ್ತಲೆಯಲ್ಲೂ ಕಣ್ಣು ಕಾಣಿಸುತ್ತಂತೆ.

ಹರೀಶ : ಹಾಗೆ ನೋಡಿದ್ರೆ ಬೆಳಕಿನಲ್ಲೂ ಅಷ್ಟು ಚೆನ್ನಾಗಿ ಕಾಣೋಲ್ಲ. ಆದರೆ ರಾಡರ್ ಹಾಗೆ ವಿಶೇಷ ಶಕ್ತಿ ಪಡೆದಿದೆ. ಈ ಶಕ್ತಿಯಿಂದ ರಾತ್ರಿ ಹೊತ್ತು ಹಾರುತ್ತೆ. ಅದರ ದೇಹದಿಂದ ಒಂದು ರೀತಿ ಧ್ವನಿ ಕೇಳಿಸುತ್ತೆ. ಆ ಧ್ವನಿ ಏನನ್ನಾದರೂ ತಗುಲಿದಾಗ ಪ್ರತಿಧ್ವನಿ ಕೇಳಿಸುತ್ತದೆ. ಪ್ರತಿಧ್ವನಿ ಯಾವ ಕಡೆಯಿಂದ ಬಂದಿದೆ ಎನ್ನುವುದರಿಂದ ತಮಗೆ ಬೇಕಾದ ವಸ್ತು ಎಲ್ಲಿದೆ ಎಂಬುದು ಇದಕ್ಕೆ ಗೊತ್ತಾಗುತ್ತೆ. ರಾತ್ರಿ ಹೊತ್ತು ಹೀಗೆ ತನ್ನ ಆಹಾರವನ್ನು ಅದು ಹುಡುಕಿಕೊಳ್ಳುತ್ತೆ. ಸೊಳ್ಳೆ, ಸಿಟ್ಟೆ, ನೊಣಗಳನ್ನ ತಿನ್ನುತ್ತದೆ. ಕೆಲವೊಮ್ಮೆ ಹೂವಿನ ಮಕರಂದ ಕುಡಿಯುತ್ತದೆ. ಕೆಲವು ಪ್ರಾಣಿಗಳ ರಕ್ತವನ್ನು ಕುಡಿಯುತ್ತದೆ.

ಲತಾ : ಬೀಡಿ, ಸಿಗರೇಟ್ ನೋಡಿ ಹ್ಯಾಗೆ ಬಿದ್ದಿವೆ.

ಗೋಪಿ : ಅವರು ಇಲ್ಲಿಗೂ ಬಂದಿದ್ದಾರೋ ಏನೋ ಅಂತ ಕಾಣುತ್ತೆ ಗೋಪಿ.

ಹರೀಶ : ಹ್ಯಾಗೆ ಹೇಳ್ತೀಯಾ?

ಗೋಪಿ : ನಮ್ಮೂರಿನಲ್ಲಿ ಈ ಸಿಗರೇಟ್ ಯಾರೂ ಸೇದೋಲ್ಲ. ಆ ಹೊತ್ತು ಅವನು ನಮ್ಮ ಅಂಗಡಿಯಲ್ಲಿ ಇದೇ ಸಿಗರೇಟನ್ನು ಕೇಳಿದ್ದ. ಆ ಕಾಳಪ್ಪನ ಜೊತೆಯಲ್ಲಿದ್ದವರು ಇಲ್ಲೂ ಸ್ವಲ್ಪ ಹೊತ್ತು ಕುಳಿತಿರಬೇಕು.

ಗೋಪಿ : ಕತ್ತಲಾಯಿತು.

ಹರೀಶ : ಕಾಳಪ್ಪನ ಮೇಲೆ ಸ್ವಲ್ಪ ನಿಗಾ ಇಡು ಗೋಪಿ, ಮನೆಯಲ್ಲಿ ಈ ವಿಷಯವನ್ನೆಲ್ಲಾ ಹೇಳಬೇಡಿ ಅವರು ಗಾಬರಿ ಆಗ್ತಾರೆ. ಉಂ ನಡೀರಿ ಎಲ್ಲಾ ಹೋಗೋಣ.

ಗೋಪಿ : ಬಂದೊ ಬಂದೋ......

(ಕತ್ತಲು ಝೀರುಂಡೆಗಳ ಶಬ್ದ)

ರಾಧ : ಏನೋ ಇಷ್ಟು ಹೊತ್ತಾಗಬೇಕೇ ಬರೋದು. ಕತ್ಲೆ ಹೊತ್ತು ಹೆದರಿಕೆ ಅಂತಾರೆ ಗೊತ್ತಾಗ್ಬೇಡ್ವೇ? ಹೊಟ್ಟೆ ತಾಳ ಹಾಕ್ತಾ ಇಲ್ವಾ.

ಲತಾ : ಅಷ್ಟೂಂಮಾ ತಿಂಡಿ ತಿಂದೋ.

ರಾಧ : ಏನೇ ಆಗಲೀ ಊಟ ಮಾಡಿದಾಗಾಯ್ತು..... ಬೆಳಗಿಂದ ಎಲ್ಲಿಗೋಗಿದ್ರಿ ಏನ್ಮಾಡಿದ್ರಿ?

ಶಾರದ : ಅದೇ ಕಣಮ್ಮ ಕಾಳ.......

ಲತಾ : ಎಯ್, (ಮೆಲ್ಲನೆ)

ಶಾರದ : ಅದೇ ಅಮ್ಮ ಹರೀಶ ಆ ಹಕ್ಕಿ ಈ ಹಕ್ಕಿ ಅಂತ ಪರಿಚಯ ಮಾಡಿಸ್ತಿದ್ದ.....

ಶಾರದ : ಸರಿ ಅದೂ ಒಂದು ದೊಡ್ಡ ಸುದ್ದಿ.... ದಿನಬೆಳಗಾದ್ರೆ ನೋಡೋದಿಲ್ವೇ?

ಶಾರದ : ನೋಡೋಕ್ಕು ಆತ ಹೇಳೋಕು ಬಹಳ ವ್ಯತ್ಯಾಸವಿದೆ ಕಣಮ್ಮಾ ಅದರ ಜೀವನ ಚರಿತ್ರೆಯನ್ನೇ ನಮ್ಮ ಕಣ್ಮುಂದೆ ತಂದ್ಬಿಡ್ತಾನೆ.

ರಾಧ : ಸರಿ ಊಟ ಮಾಡಿ......

* * *

## ತರಂಗ-೩

ರಾಧ : ಲೋ ಹುಡುಗ್ರಾ.... ಬನ್ರೋ ಈ ಹೊತ್ತು ಲಕ್ಕನ ಹಳ್ಳಿಗೆ ನಿಮ್ಮನ್ನೆಲ್ಲಾ ಕರ್ಕಂಡೊಗ್ತೀನಿ ನಮ್ಮ ನೆಂಟರ ಮನೆಗೆ.....ಇಲ್ಲಿಗೆ ೨೦ಮೈಲಿ ದೂರವಿದೆ ಕಣ್ರೋ..... ಬಸ್ಸಿನಲ್ಲಲ್ಲ ಜೀಪಿನಲ್ಲಿ ಹೋಗೋಣ.

ಹರೀಶ : ನಂಗೆ ಅಲ್ಲಿ ಯಾರ ಪರಿಚಯವೂ ಇಲ್ಲ.

ಲತಾ : ಅವನು ಬೇರೆಕಡೆ ಹೊಂದಿಕೊಳ್ಳುವುದು ಬಹಳಕಷ್ಟ. ಮದ್ರಾಸಿನಲ್ಲೂ ಅಷ್ಟೇ ಅಪ್ಪ ಅಮ್ಮ ಬೇರೆ ಕಡೆ ಹೋದ್ರೆ ಮನೇಲೇ ಇರ್ತಾನೆ.

ರಾಧ : ನಮ್ಮ ಶಾರದಾಳಿಗಂತೂ ಖುಷಿಯೋ ಖುಷಿ. ರೇಷ್ಮೆ ಲಂಗ ತೊಟ್ಕೊಂಡು, ಜೊತೆಗಾತಿಯ ಜೊತೆ ಆಡಲಿಕ್ಕೆ ತುಂಬಾ ಇಷ್ಟ.

ರಾಮು : ಜೊತೆಗಾರರಿಲ್ಲದೆ ಹೋದ್ರೂ ದೊಡ್ಡವರ ಜೊತೆ ಮಾತಾಡ್ಕಂಡು ಕೂತಿರ್ತಾಳೆ. ಅಥವಾ ಮಾತು ಕೇಳಿಕೊಂಡಾದ್ರೂ ಕುಳಿತಿರ್ತಾಳೆ. ಕೊನೆಗೆ ಮಕ್ಕಳನ್ನಾದ್ರೂ ಆಡಿಸ್ತಿರ್ತಾಳೆ.

ಲತಾ : ನಂಗಂತೂ ಹೊಸ ಸ್ಥಳಗಳಿಗೆ ಹೋಗಬೇಕು ಅಂದ್ರೆ ಖುಷಿ.

ರಾಧ : ರಾಮುನೇ ಪರ್ವಾಗಿಲ್ಲ, ಪರಿಚಯವಿಲ್ಲದವರೊಡನೆ ಬೇಗ ಹೊಂದಿಕೊಳ್ತಾನೆ. ಅವನ್ಗೇನು ಲಕ್ಕನ ಹಳ್ಳಿ ಪರಿಚಯವಿದೆ.

ಹರೀಶ : ನಾನು ವೆಂಕಜ್ಜಿ ಜೊತೆ ಮನೇಲೇ ಇರ್ತೀನಿ ನೀವು ಹೋಗಿ ಬನ್ನಿ.

ರಾಧ : ನೀನೊಬ್ಬನೇ ಏಕೆ ಇರಬೇಕು.... ಅಲ್ಲಿ ಎಲ್ಲರ ಜೊತೆ ಆಟ ಆಡಿಕೊಂಡಿರುವ್ಯಂತೆ ಬಾ.

(ಜೀಪು ಹೊರಡುವುದು)

ಹರೀಶ : ನಾನು ಇಲ್ಲಿಗೆ ಬಂದದ್ದು ಒಳ್ಳೇದೇ ಆಯ್ತು ರಾಮು .

ರಾಮು : ಏಕೆ?

ಹರೀಶ : ಊರಲ್ಲಿ ಹಿಂದಿನ ದಿನಂದಿಂದ ಒಂದು ಕೋಲಾಹಲ ದನಗಳು ಮೇಯಕ್ಕೆ ಹೋದವು ಬರಲಿಲ್ಲ ಅಂತ. ಹಿಂದೆ ಲಕ್ಕನಹಳ್ಳಿ ಸುತ್ತ ಕಾಡಿತ್ತಂತೆ. ಹಿಂದೆ ಇಲ್ಲಿ ಹಸು ಕೂಡ ಹುಲಿ, ಕಿರುಬ, ಚಿರತೆ ಬಾಯಿಗೆ ಸಿಕ್ತಿದ್ವಂತೆ ಅಂತ ಕೇಳಿದ್ದೆ. ಈಗ ಇಲ್ಲಿ ಕಾಡು ಮೃಗನೂ ಇಲ್ಲ ಅಂತ ಕಾಣುತ್ತೆ. ಆಗ ಕಾಡಿದ್ದು ಕಾಡು ಪ್ರಾಣಿ ಇದ್ದಾಗ ಹೋಗ್ತಿದ್ದುದು ಒಂದೋ ಎರಡೋ ದನಗಳಂತೆ.

ರಾಮ : ಕೆಲವೊಮ್ಮೆ ಮೇಯುತ್ತಾ ಬೇರೆ ಕಡೆ ಹೊರಟು ಹೋಗುವುದೂ ಉಂಟು ದೂರ. ಕೆಲವೊಮ್ಮೆ ಸಿಕ್ಕದೇ ಹೋದುದು ಅಂದ್ರೆ ಒಂದೋ ಎರಡೋ ಅಷ್ಟೇ ಅಂತೆ. ಮತ್ತೆ ಕೆಲವು ಸಾರಿ ಬೇರೆಯವರ ಹೊಲ - ಗದ್ದೆ ಮೇಯ್ದು ದೊಡ್ಡಿಗೆ ಹೋದದ್ದೂ ಉಂಟು. ಈ ಸಂದರ್ಭಗಳಲ್ಲಿ ಹೋದ ದನಗಳು ಸಿಕ್ಕಿವೆ. ಆದ್ರೆ ಈ ಸಾರಿ ಹದಿನಾರು ದನಗಳು ನಾಪತ್ತೆ ಆಗಿವೆ. ಅಂದ್ರೆ? ಇಂಥ ಘಟನೆ ನಮ್ಮ ಹಳ್ಳಿಯಲ್ಲಿ ಎಂದೂ ಆಗಿಲ್ಲ ಅಂತ್ಲೇ ಜನಗಳು ಮಾತಾಡ್ಕೊಳ್ತಿದ್ರು.

ಶಾರದ : ಹೋದ ವರ್ಷ ದೇವರ ಪೂಜೆ ಸರಿಯಾಗಿ ಆಗಿಲ್ಲ ಅದ್ಕೇ ಅಂತಿದ್ರು.

ರಾಮು : ಸುತ್ತ ಮುತ್ತ ಹಳ್ಳೀಗೆಲ್ಲಾ ಕಳುಹಿಸಿದ್ರು ಜನಗಳನ್ನು, ಆದ್ರೂ ಸಿಗಲಿಲ್ಲ.

ಹರೀಶ : ಯಾರಾದ್ರೂ ಕದ್ದಿರಬಹುದು.

ಲತಾ : ದನ ಕದ್ದೂ ಎಲ್ಲಿ ಬಚ್ಚಿಟ್ಕೊಳ್ಳಲಿಕ್ಕಾಗುತ್ತೆ?

ಹರೀಶ : ಪೋಲಿಸಿನವರಿಗೆ ದೂರು ಕೊಡಬೇಕಾಗಿತ್ತು.

ರಾಮು : ಕೊಟ್ರೂ ಸಿಗುತ್ತೆ ಅನ್ನೋ ಖಾತ್ರಿ ಏನು?

ಹರೀಶ : ನೋಡೋಣ ಇದರ ಬಗೆಗೆ ಪರೀಕ್ಷೆ ನಡೆಸೋಣ, ತನಿಖೆ ಆರಂಭಿಸೋಣ, ಊಟ ಮುಗಿದ ಕೂಡಲೇ.

ರಾಮು : ಆಗ್ಲಿ.

(ಸಂಗೀತ)

ಹರೀಶ : ಯಾರಪ್ಪಾ ನೀನು? ಏನು ತುಂಬಾ ಯೋಚನೆ ಮಾಡ್ತಾ ಕೂತಿದ್ದೀಯೆ?

ಹನುಮಜ್ಜ : ನಾನು ಬುದ್ಧಿ ಹನುಮಜ್ಜ.... ತಲೆಯೆಲ್ಲಾ ಕೆಟ್ಹೋಗ್ಬುಟ್ಟಿದೆ ಸ್ವಾಮಿ.... ನನ್ನ ಮಾತಾಡಿಸ್ಬ್ಯಾಡಿ.

ಹರೀಶ : ಅಂತಹದ್ದೇನು ಹೇಳು ಸ್ವಲ್ಪ.

ಹನುಮ: ಯಾವತ್ತೂ ಇಂಗಾಗಿರ್ನಿಲ್ಲ ಸ್ವಾಮಿ. ನಾನು ಈ ಊರಿನ ದನವೆಲ್ಲಾ ಕಾಯ್ತಾ ಇದ್ದಿ. ನಿನ್ನೆಯಿಂದ ಊರವರೆಲ್ಲಾ ಬಯ್ತಿದ್ದಾರೆ, ಗೇಲಿ ಮಾಡ್ತವ್ರೆ. ಹೀನಾಮಾನವಾಗಿ ಹೀಯಾಳಿಸ್ತಿದ್ದಾರೆ ಸ್ವಾಮಿ. ಊಟ ಮಾಡಕ್ಕೇ ಬೇಜಾರು..... ಅಂಗೇ ಯೋಸ್ನೆ ಮಾಡ್ತಾ ಕುಂತಿವ್ನಿ.

ಹರೀಶ : ಅದೇನು ಹೇಳಯ್ಯಾ?

ಹನುಮ: ದನಗಳು ಹೊರಟೋದ ಇಸಯ ಬುದ್ದಿ.

ಹರೀಶ : ನಾವು ಹುಡುಕ್ತೀವಿ ಸುಮ್ಕಿರು. ಹ್ಯಾಗಾಯ್ತು ಸ್ವಲ್ಪ ಹೇಳು.

ಹನುಮ: ಪ್ರತಿ ದಿನದಂತೆ ಹನ್ನೊಂದು ಗಂಟೆ ವೊತ್ಗೆ ದನ ಅಟ್ಕಂಡು ಬಂದಿ ಬುದ್ಧಿ. ಇಲ್ಲೇ ಮೇಯ್ತಿದ್ವು ಸಂಜೆವೊತ್ತಿಗೆ ಇಬ್ಬರು ಬಂದು ನನ್ನ ಮಾತಾಡಿಸಿದ್ರು. ಅವ್ರು ಬ್ಯಾರೆ ಊರ್ನವ್ರು, ಮೊದಲು ಒಂದು ಸಾರಿ ಈ ಊರಿಗೆ ಬಂದೋಗಿದ್ರು. ಅವರು ಆಮ್ಯಾಕೆ ಅವ್ರು ತಿನ್ನಕ್ಕೆ ತಂದಿದ್ದ ತಿಂಡಿನ ವಸಿ ಕೊಟ್ರು. ಏನ್ನಾನು ಮಾತಾಡ್ತಿದ್ರು ಅಂಗೇ ನಂಗೆ ತೂಕಡಿಕೆ ಬಂದಾಗಾತು.... ಎಚ್ಚರ ಆದಾಗ ಕತ್ಲಾಗಿತ್ತು. ದನಗಳು ಊರಿಗೆ ದಾರಿ ಹಿಡಿದಿದ್ವು. ಆವೊತ್ತಿನ ನಾಳ್ಗೆ ಹದಿನಾರು ದನಗಳು ತಪ್ಪಿಸ್ಕಂಡದು ಗೊತ್ತಾತು. ಆಗ್ನಿಂದ ಊರವ್ರೆಲ್ಲಾ ಬಯ್ಯಕ್ಕೆ ಸುರುಮಾಡ್ಬುಟ್ರು ಸ್ವಾಮಿ. ನೀನೇನು ದನ ಕಾಯೋಕೆ ಹೋಗಿದ್ದ್ಯೋ ನಿದ್ದೆ ವೊಡ್ಯೋಕೆ ಹೋಗಿದ್ದ್ಯೋ ಅಂತ? ನಾನು ಅಂಗ್ಯಲಾ ನಿದ್ದೆ ಮಾಡವ್ನಲ್ಲ. ಅವತ್ತು ಅದ್ಯಾಕಾಗಾಯ್ತೋ ನಾಕಾಣೆ ನನ್ನೊಡ್ಯಾ. ಯಾನೋ ಊರವ್ರೆಲ್ಲಾ ಬೈದ್ರೂ ನಿಮ್ಮಂತ ಪುಟ್ಟ ಒಡೆಯನವ್ರು ನನ್ನ ಸಮಾಧಾನಿಸಿದ್ರಲ್ಲಾ ನಂಗೆ ಅಷ್ಟಕ್ಕೆ ಸಂತೋಸ ಕಣ್ರಪ್ಪಾ......

ಹರೀಶ : ಯೋಚನೆ ಮಾಡಬೇಡ ಸುಮ್ನಿರು ಅಜ್ಜ........

ರಾಧ : ಏನು ಎಲ್ಲಿ ಹೋಗಿದ್ರೋ ನೀವು ಹರೀಶಾ, ರಾಮು ಊರಿಗೆ ಬರೋಕೆ ಇಷ್ಟವಿಲ್ವೇನೋ..... ಬರೋಲ್ಲ ಅಂದವ್ರು ಇಲ್ಲೇ ಪಟ್ಟಾಗಿ ಜಾಂಡಾ ಊರುವಂಗೆ ಕಾಣುತ್ತೆ. ಶಾರದಳಿಗೆ ಆ ಮಗು ತುಂಬಾ ಅಂಟ್ಕೊಂಡು ನೀನೇ ಮುಖ ತೊಳಿ, ಬಟ್ಟೆ ಹಾಕು ಅಂತ ಚಂಡಿ ಮಾಡುತ್ತೆ. ಆಕೆಗೂ ಆ ಮಗುವಿನೊಡನೆ ಆಟ ಆಡಲಿಕ್ಕೆ ಖುಷಿ. ಲತಾಳನ್ನು ಮದ್ರಾಸಿನ ಬಗೆಗೆ ಕೇಳೋವ್ರೆ ಆದ್ರು. ಆದ್ದರಿಂದ ಎಲ್ಲರೂ ಇಲ್ಲೇ ಇರೋವಂಗೆ ಕಾಣಿಸುತ್ತೆ.

ಲತಾ : ಹಾಗೇನಿಲ್ಲ ನಾನು ಬರ್ತೀನಿ.......

ರಾಮು : ನಾನೂ ಬರ್ತೀನಮ್ಮ.....

(ಜೀಪು ಹೊರಡುವುದು)

ರಾಧ : ಏನು ಹರೀಶ ಗಂಭೀರವಾಗಿದ್ದಾನೆ. ಏನೋ ಯೋಚನೇ ಜಿಲೇಬಿ ತಿಂದ್ಯಲ್ಲಾ ಹ್ಯಾಗಿತ್ತೋ?

ಹರೀಶ : ಜಿಲೇಬಿ ಮಾಡಿದ್ರಾ? ಅದೇನಪ್ಪಾ ತಿಂದದ್ದೇ ನನಗೆ ಗೊತ್ತಿಲ್ಲ.

ರಾಧ : ಸರಿಹೋಯ್ತು ಬಿಡು. ಎಲ್ಲರೂ ಅರವತ್ತಕ್ಕೆ ಅರಳೋ - ಮರಳೋ ಆದ್ರೆ ನಿಂಗೆ ಹನ್ನೆರಡಕ್ಕೆ ಆರಂಭವಾಯ್ತು ಅಂತ ಕಾಣುತ್ತೆ.

(ಎಲ್ಲರೂ ನಗುತ್ತಿದ್ದಂತೆ ಜೀಪು ಮುಂದುವರಿಯುವುದು)

* * *

## ತರಂಗ-೪

(ಹಸು ಅಂಬಾ ಎನ್ನುವ ದನಿ ಕರುವಿನ ದನಿ)

ಶಾರದ : ರಾಮು...... ಹಸು ಕರು ಹಾಕ್ತು ಬಾರೋ ನೋಡುಬಾ, ಒಳ್ಳೇ ಬೆಳ್ಳಗಿದೆ ಕಣ್ಣು ನೋಡು ಏನು ಚೆನ್ನಾಗಿ ಪಿಳಪಿಳನೆ ಬಿಡ್ತಾ ಇದೆ.

ಲತಾ : ಬೆಳ್ಳಿ ಅಂತ್ಲೇ ಹೆಸರಿಟ್ಟುಬಿಡೋಣ ಚೆನ್ನಾಗಿದೆ. ಹುಟ್ಟಿದ ಒಂದೇ ದಿನದಲ್ಲಿ ಎಷ್ಟು ಓಡಾಡ್ತಾ ಇದೆ ನೋಡಿ.

ಶಾರದ : ಇನ್ನೇನು ನಮಗೆ ಇನ್ನು ಏಳೆಂಟು ದಿನ ಗಿಣ್ಣು ಹಾಲು...... ನಮ್ಮಮ್ಮ ಚೆನ್ನಾಗಿ ಮಾಡ್ತಾರೆ. ಮಿಠಾಯಿಥರ ಗಟ್ಟಿಗೂ ಮಾಡ್ತಾರೆ.

ರಾಮ : ಇನ್ನು ಮೂರು ನಾಲ್ಕು ದಿನ ಇದನ್ನು ಮೇಯುಲಿಕ್ಕೆ ಬಿಡೋಲ್ಲ. ಇಲ್ಲೇ ಹುಲ್ಲು, ನೀರು, ಪೋಷಾಕು ಮಾಡ್ತೀವಿ ಕಣೋ. ಹರೀಶ ಓಹೋ..... ಗೋಪಿ ಬಂದ.......

ಹರೀಶ : ಗೋಪಿ, ಲಕ್ಕನ ಹಳ್ಳಿಯಲ್ಲಿ ಹದಿನಾರು ದನಗಳು ತಪ್ಪಿಸಿಕೊಂಡು, ಸಿಕ್ಕೇ ಇಲ್ವಂತೆ. ಅದೇ ಇಬ್ಬರಂತೆ..... ಅವರೇ ಆ ದನಗಳನ್ನು ಕದ್ದಿರಬೇಕು ಅಂತ

ನನಗೆ ಗುಮಾನಿ. ಹೇಗಾದ್ರೂ ಮಾಡಿ ಆ ಕಳ್ಳರನ್ನು ಹಿಡಿದು ಪೋಲೀಸರಿಗೆ ಕೊಡಬೇಕಲ್ಲಾ.

ರಾಮು : ಕಾಳಪ್ಪ ತೆಂಗಿನಕಾಯಿ, ಕೋಳಿ ಕಳ್ತಾನೆ ಅಂದ್ರೆ ದನ ಕದ್ದು ಏನು ಮಾಡ್ತಾನೆ? ಅದು ಅಷ್ಟು ಸುಲಭವೇ ಅಂತ, ಹೊಡೆದುಕೊಂಡು ಹೋಗುವಾಗ ಸಿಕ್ಕಿ ಬೀಳಲ್ವೇ. ರಾತ್ರಿ ಹೊತ್ತು ಎಷ್ಟು ದೂರ ಹೋಗಬಹುದು ಒಂದು ಹದಿನೈದು ಮೈಲಿ ಹೋದೀತು ಆಗ ಅದಕ್ಕೆ ಹುಲ್ಲುಬೇಡವೇ? ನೀರು ಬೇಡವೇ?

ಹರೀಶ : ಕಾಳಪ್ಪ ಏನ್ಮಾಡ್ತಾನೆ, ಎಲ್ಲಿ ಹೋಗ್ತಾನೆ, ಯಾರ ಜೊತೆ ಮಾತಾಡ್ತಾನೆ ಸ್ವಲ್ಪ ಗಮನ ಇಡೋಣ, ಆಮೇಲೆ ಮುಂದಿನ ವಿಚಾರ.

ರಾಮು : ಗೋಪಿ ಅಂಗಡಿ ಹತ್ತಿರ ಗಮನ ಇಡಲಿ, ಆತನಿಗೆ ಕೆಲಸ ಇದ್ದಾಗ ನಾನು ಹರೀಶ ಮರದ ಕೆಳಗೆ ಕೂತು ನೋಡ್ತಿರ್ತೀವಿ ಬೈನಾಕುಲರ್‌ನಲ್ಲಿ. ಅವರು ಎಲ್ಲಿಗೆ ಹೋಗ್ತಾರೆ ಎಂಬುದನ್ನು ನೋಡ್ತಾ ಇರ್ತೀವಿ. ಅಕಸ್ಮಾತ್ ಅವರು ಬಸ್ಸಿನಲ್ಲಿ ಬೇರೆ ಊರಿಗೆ ಹೋದ್ರೆ?

ಹರೀಶ : ಅದೇ ಸ್ವಲ್ಪ ಕಷ್ಟ. ಮನೆಯವರು ಸುಮ್ಮನೇ ಬಿಡ್ತಾರ್ಯೇ ನಮ್ಮನ್ನ. ಹಣ ಬೇರೆ ಎಲ್ಲಿದೆ? ಆತ ಬೇರೆ ಊರಿಗೆ ಹೋದ್ರೂ ಮತ್ತೆ ಇಲ್ಲಿಗೆ ಬರ್ತಾನೆ, ಆತ ಈ ಊರಿನಲ್ಲಿ ತಾನೇ ಏನಾದ್ರೂ ಕೆಲಸ ಮಾಡಬೇಕಾದ್ರೆ?

ಶಾರದ : ಒಂದು ಪಕ್ಷ ಅವರು ಕಳುವಾಗ ನಾವು ನೋಡಿದ್ರೆ ಏನು ಮಾಡೋದು?

ಲತಾ : ಪೋಲಿಸ್‌ನವರಿಗೆ ಫೋನ್ ಮಾಡೋದು.

ರಾಮು : ಈ ಊರಿನಲ್ಲಿ ಫೋನ್ ಎಲ್ಲಿದೆ? ಪೋಲೀಸ್ ಠಾಣೇಲೂ ಫೋನಿದ್ಯೋ ಇಲ್ವೋ ಗೊತ್ತಿಲ್ಲ.

ಗೋಪಿ : ವಿಷಯ ದೊಡ್ಡವರಿಗೆ ತಿಳಿಸಿದ್ರೆ ಅವರು ಏನಾದ್ರೂ ಮಾಡ್ತಾರೆ.

ಹರೀಶ : ಆಯ್ತು.

(ಸಂಗೀತ)

ಅನಂತರಾಮಯ್ಯ: ಅಬ್ಬಾ..... ಉಷ್........

ರಾಧ : ಇದ್ಯಾಕೆ?

ಅನಂತ : ಈ ಹೊತ್ತು ಪೂರ್ತಿ ಪಂಚಾಯ್ತಿ.

ರಾಧ : ಏನು?

ಅನಂತ : ಲಕ್ಕನಹಳ್ಳಿ ದನಗಳು ನಾಪತೆಯಾಗಿರೋದು.

ರಾಧ : ಏನಾಯ್ತು?

ಅನಂತ : ಮಾಟ ಅಂತಾರೆ, ದೈವದ ಕಾಟ ಅಂತಾರೆ, ದನಕಾಯುವವ ನಿದ್ದೆ ಮಾಡ್ತಿದ್ದ ಅಂತಾರೆ.

ಹರೀಶ : ಅಲ್ಲಾ ಚಿಕ್ಕಪ್ಪ ನಾವು ಲಕ್ಕನ ಹಳ್ಳಿಗೆ ಹೋಗಿದ್ದಾಗ

ಅನಂತ : ಚಿಕ್ಕವ್ರಗೆಲ್ಲಾ ಆ ಮಾತ್ಯಾಕೆ ಹೋಗಿ ತಿಂಡಿ ಮಾಡುಹೋಗು.

(ರಾತ್ರಿ ಕನಸಿನ ದೃಶ್ಯ)

ಹರೀಶ : ಈ ದೊಡ್ಡವರು ತಾವೇ ಬುದ್ಧಿವಂತರು ಅಂತ ತಿಳಿದುಕೊಂಡಿದ್ದಾರೆ. ಬೇರೆಯವರ ಮಾತು ಕೇಳೋಲ್ಲ; ತಾಳ್ಮೆ ಇರೋಲ್ಲ. ಇವರು ನಮ್ಮ ಈ ಪತ್ತೆ ಹಚ್ಚೋ ಕಾರ್ಯದಲ್ಲಿ ಹೇಗೆ ನೆರವಾಗ್ತಾರೆ ರಾಮು.

ರಾಮು : ನಿರಾಶೆ ಪಟ್ಕೋ ಬ್ಯಾಡ ಕೋಪಬೇಡ.

ಹರೀಶ : ಅಲ್ಲಾ ರಾಮು ನಾವು ಓದೋ ಪರಾಕ್ರಮಗಳ ಕಥೆಗಳಲ್ಲಿ ಕಳ್ಳರು ಬರ್ತಾರೆ, ಅವರ ತಂತ್ರ ಕಂಡು ಹಿಡೀತೀವಿ, ಆಮೇಲೆ ಲೆಕ್ಕದಲ್ಲಿ ಸಮಸ್ಯೆಗಳನ್ನು ಬಿಡಿಸುವಂತೆ ಬಿಡಿಸ್ತಾರೆ. ಇದಕ್ಕೆ ಧೈರ್ಯ ಜೊತೆಗೆ ಬುದ್ಧಿ ಇದ್ದರೆ ಸಾಕು, ಏನು ಬೇಕಾದ್ರೂ ಸಾಧಿಸಬಹುದು.

ರಾಮು : ಆದ್ರೆ ಇಲ್ಲಿ ವಿಚಿತ್ರ ಸಮಸ್ಯೆ. ಇದನ್ನು ಬಿಡಿಸಲಿಕ್ಕೆ ದಾರಿ ಇಲ್ಲ. ಅನುಮಾನಕ್ಕೆ ಕಾಳಪ್ಪ ಎಡೆಯಾಗಿದ್ದಾನೆ. ಅವನನ್ನು ಹಿಂಬಾಲಿಸಲಿಕ್ಕೆ ನಮಗೆ ಹಣ ಇಲ್ಲ.

ಹರೀಶ : ನಾವು ಓದಿರೋ ಕಥೆಗಳಲ್ಲಿ ಕಳ್ಳತನ ಮಾಡಿದವರ ಕೈಗಳ ಗುರುತು ವಜ್ರದ ಪೆಟ್ಟಿಗೆಗಳ ಮೇಲೆ ಮೂಡಿರ್ತಾವೆ. ಆದರಿಂದ ಕಳ್ಳರನ್ನು ಹುಡುಕಲು ಸುಲಭ ಆಗುತ್ತೆ.

ರಾಮು : ಆದ್ರೆ ಈ ದನ ಕದ್ದವರನ್ನು ಹ್ಯಾಗೆ ಕಂಡು ಹಿಡಿಯುವುದು.

ಹರೀಶ : ಕಳ್ಳರನ್ನು ಕಂಡು ಹಿಡಿಯಲು ಫೋನಿರುತ್ತೆ, ಇಲ್ಲೇನಿದೆ? ಅಲ್ಲಿ ಅಂದ್ರೆ ಪಟ್ಟಣಗಳಲ್ಲಿ ಕಾರು, ರೈಲು, ವಿಮಾನ, ದೋಣಿ, ಸೈಕಲ್ ಇರುತ್ತೆ. ಖರ್ಚು ಮಾಡಲಿಕ್ಕೆ ಹಣ ಇರುತ್ತೆ, ಜೊತೆಗೆ ದೊಡ್ಡವರ ಪ್ರೋತ್ಸಾಹ ಇರುತ್ತೆ. ಪೋಲಿಸ್ ಸ್ಟೇಷನ್ನಿನಲ್ಲಿ ಮಕ್ಕಳ ಮಾತು ಕೇಳ್ತಾರೆ, ಕೂಡಲೇ ಜೀಪ್ ತರ್ತಾರೆ. ಅದೇ ನಿಮ್ಮ ಮನೇಲಿರೋ ದೊಡ್ಡವರು ತಿಂಡಿ ತಿನ್ನು ಹೋಗೋ ನಿನಗ್ಯಾಕೆ ಅಂತಾರೆ?

(ನಗುವರು)

ರಾಮು : ಇದೇನೋ ನಗ್ತೀಯಾ?

ಹರೀಶ : ಕನಸು, ಕನಸಲ್ಲಿ ನಾನು ನೀನು ಈ ಕಳ್ಳರ ಕಂಡು ಹಿಡಿಯುವುದ್ಹೇಗೆ ಎಂಬುದರ ಬಗ್ಗೆ ಚರ್ಚೆ ನಡಿಸ್ತಾ ಇದ್ವು. ಆಗ ನಿಮ್ಮ ತಂದೆ ಅನಂತರಾಮಯ್ಯನವರು ಹೇಳಿದ ಮಾತು, ದೊಡ್ಡವರ ಮಾತು ನಿನ್ಯಾಕೆ ತಿಂಡಿ ತಿನ್ನು ಹೋಗು ಎಂಬ ಮಾತು ನನಗೆ ನಗು ತರಿಸ್ತು. ಅದ್ಕೆ ನಕ್ಕೆ..... ಕನಸು ಕಂಡು ಈಗ ನಿಜವಾಗಿ ನಗ್ತಾ ಇದ್ದೀನಿ.

ರಾಮು : ಹಳ್ಳಿಯಲ್ಲಿ ಹಾಗೆ.....

ಹರೀಶ : ಹಳ್ಳಿಯಾದರೇನು ಪಟ್ಟಣ ಆದ್ರೇನು ಚಿಕ್ಕಮಕ್ಕಳಿಂದ್ಲೂ ದೊಡ್ಡವರು ಬುದ್ಧಿ ಕಲಿಯುವ ವಿಷಯ ಹಲವಿರುತ್ತವೆ ಎಂಬುದನ್ನು ತಿಳಿದಿಲ್ಲ ಅವರು.

ರಾಮು : ಅದ್ನೆಲ್ಲಾ ತಲೆಗೇಕೆ ಹಚ್ಕೋತಿಯ ಏಳು ಸ್ನಾನ ಮಾಡಿ ತಿಂಡಿ ಮಾಡೋಣ ಮುಂದಿನ ಪತ್ತೇದಾರಿ ಕೆಲಸ ಆರಂಭಿಸೋಣ.

ಹರೀಶ : ಆ ಹುಮ್ಮಸ್ಸು ನನಗೆ ಬೇಕಾದ್ದು..... ಆಯ್ತು......

*

# ಗೋಗ್ರಹಣ

## ಭಾಗ ೩

---

ಪಾತ್ರ ವರ್ಗ:

೧. ಹರೀಶ, ೨. ಶಾರದ, ೩. ರಾಮು, ೪. ಲತಾ, ೫. ರಾಧಾ, ೬. ಚೆನ್ನ, ೭. ಗೋಪಿ, ೮. ನಾಯ್ಡು, ೯. ಮುನಿಸ್ವಾಮಿ, ೧೦. ಕರಿಯಣ್ಣ, ೧೧. ಡ್ರೈವರ್, ೧೨. ಕಾಳಪ್ಪ, ೧೩. ಗಂಗಮ್ಮ

### ತರಂಗ–೧

(ಬೆಳಗಿನ ವಾತಾವರಣ)

ರಾಧಾ : ಏನೋ ಹರೀಶ ಒಂದು ಥರ ಇದ್ದೀಯ? ಕಣ್ಣೆಲ್ಲಾ ಕೆಂಪಗಿವೆ, ಏನಾದ್ರೂ ಜ್ವರವೇನೋ.....

ಹರೀಶ : ಇಲ್ಲ ಚಿಕ್ಕಮ್ಮ, ಚೆನ್ನಾಗಿಯೇ ಇದ್ದೇನೆ.

ಲತಾ : ಏನೋ ಒಂದು ರೀತಿ ಮಂಕಾಗಿದ್ದಾನೆ. ಬಾರೇ ಶಾರದ ಪುಸ್ತಕದಲ್ಲಿ ರಂಗೋಲೇನಾದ್ರೂ ಬಿಡೋಣ.

ರಾಮು : ನಾನು ಸ್ವಲ್ಪ ತೋಟದ ಕಡೆ ಹೋಗಿಬರ್ತೀನಿ.

ಗೋಪಿ : ಏನೋ ರಾಮು....... ಎಲ್ಲಿಗೆ?

ರಾಮು : ಬೇಜಾರಾಯ್ತು. ಹಾಗೇ ತೋಟದ ಕಡೆಗೆ ಹೋಗ್ತಿದ್ದೇನೆ.

ಗೋಪಿ : ಈ ಹೊತ್ತು ಕಾಳಪ್ಪ ಪಟ್ಟಣಕ್ಕೆ ಬಸ್ಸಿನಲ್ಲಿ ಹೋದ ಕಣೋ.

ರಾಮು : ಸಂಜೆ ಬರ್ತ್ತಾನಲ್ಲಾ ಆಗ ನೋಡೋಣ.

ಗೋಪಿ : ನನ್ನ ಮನಸ್ಸು ಅನ್ನಿಸುತ್ತೆ ಆತ ಆ ಇಬ್ಬರು ವ್ಯಕ್ತಿಗಳ ಸಲಹೆ ಕೇಳೋಕೆ ಹೋಗಿರಬಹುದು ಅಂತ.

ರಾಮ : ಅದ್ನಿಜ ಅನ್ನು. ನಮ್ಮ ಹಳ್ಳಿ ಜನ ದುಡ್ಡಿದ್ರೆ ಪಟ್ಟಣಕ್ಕೆ ಹೋಗಿ ಸಿನಿಮಾ ನೋಡೋದ್ದೋ, ಹೋಟೇಲಿಗೋಗೋದೋ, ಏನಾದ್ರೂ ಹೊಸ ಸಾಮಾನುಗಳನ್ನು ತರಲಿಕ್ಕೋ ಹೋಗ್ತಾರೆ. ಆದ್ರೆ ಇವ ಹೋಗಬೇಕಾದ್ರೆ ನೀನು ಹೇಳಿದ್ದೇ ಸರಿ ಅಂತ ಕಾಣಿಸುತ್ತೆ. ಸ್ವಲ್ಪ ನೀನು ಆತ ರಾತ್ರಿ ಬಂದಾಗ ಸ್ವಲ್ಪ ಗಮನ ಇಟ್ಟಿರು ಗೋಪಿ.......

(ಬಸ್ ಬರುವ ಶಬ್ದ)

ಹರೀಶ : ಕಾಳಪ್ಪನ ಜೊತೆ ಯಾರೂ ಬಂದ ಹಾಗೆ ಕಾಣಲಿಲ್ಲ. ಅವನ ಮನೆಗೆ ಹಿಂಬಾಲಿಸೋಣ ನಡೀರಿ. ಕಾಳಪ್ಪ ಅವರಮ್ಮನೊಂದಿಗೆ ಊಟ ಬೇಡ ಆಯ್ತು ಅಂತಿದ್ದ ಕಣೋ ಗೋಪಿ. ನಾಳೆ ನೋಡೋಣ ನಡೀರಿ. ಏನು ಮಾಡಬೇಕು ಅಂತ ಯೋಚಿಸೋಣ.

(ಸಂಗೀತ)

ರಾಧಮ್ಮ : ಏಕೋ ಈ ಹೊತ್ತು ನಮ್ಮ ಹಸು ಮಧ್ಯಾಹ್ನಕ್ಕೆ ಬಂದುಬಿಟ್ಟಿದೆ. ಪಾಪ ಕರು ಜ್ಞಾಪಕ ಮಾಡ್ಕೊಂತೋ ಏನೋ ರಾಮು, ಈಗ ಬೆಲ್ಲ ಕೊಟ್ಟೆ ಸ್ವಲ್ಪ, ಬೆಳ್ಳಿ ಹಾಲು ಕುಡಿಯಿತು, ಹೋಗಿ ಅಟ್ಟು ಬರ್ತೀಯೇನೋ ಮೇಯಲಿಕ್ಕೆ.

ರಾಧಮ್ಮ : ಆಗ್ಲಮ್ಮ

ಹರೀಶ : ನಾನೂ ಬರ್ತೀನಿಕಣೋ.... ಜೊತೆಗೆ.....

ರಾಧಮ್ಮ : ಹಸು ಮತ್ತೆ ಬರದ ಹಾಗೆ ನೋಡ್ಕೋ ಅಂತ ಚೆನ್ನನಿಗೆ ಹೇಳು ರಾಮು.

ರಾಮು : ಆಗ್ಲಿ...... ಏಯ್ ಮುಖದ ಗಾಯದ ಗುರುತಿನವನು ನಿಂತವ್ನೇ ನೋಡಲ್ಲಿ ಕೆರೆ ಏರಿಮೇಲೆ.

ವ್ಯಕ್ತಿ : ಲೇ, ಯಾರೋ ನೀವು? ಇಲ್ಯಾಕೆ ಬಂದ್ರಿ?

ರಾಮು : ಹಸು ಮನೆಗೆ ಬಂದಿತ್ತು, ಮತ್ತೆ ಮೇಯಲಿಕ್ಕೆ ಬಿಡಲಿಕ್ಕೆ ಹೋಗ್ತಾ ಇದ್ದೀವಿ.

ವ್ಯಕ್ತಿ : ನಿಮಗೆ ಹೇಳವ್ರು ಕೇಳವ್ರು ಯಾರೂ ಇಲ್ಲವೇನೋ ನಡೀರೋ ಮನೆಗೆ.

ಹರೀಶ : ರಾಮು ಈಗ ಹೋಗಿ ಅಂಗಡಿ ಹತ್ತಿರ ಹೋಗೋಣ, ಮುಂದೇನು ಮಾಡಬೇಕು ಎಂಬುದರ ನಿರ್ಧಾರ ಮಾಡೋಣ.

(ಸಂಗೀತ)

ಹರೀಶ : ನನ್ನ ಮನಸ್ಸು ಲಕ್ಕನಹಳ್ಳಿ ದನಗಳು ಕಳ್ಳತನವಾಗಿದೆ ಎಂದು ಘಂಟಾಘೋಷವಾಗಿ ಹೇಳುತ್ತೆ. ದೆವ್ವ, ಮಾಟ ಯಾವುದೂ ಅಲ್ಲ. ಈ ಕಳ್ಳತನಕ್ಕೆ ಒಂದು ದೊಡ್ಡ ಗುಂಪೇ ಇರಬೇಕು. ಹನುಮಜ್ಜನ ಹೇಳಿಕೆ ನೋಡಿದ್ರೆ ಅವನಿಗೆ ನಿದ್ರೆ ಔಷಧ ಬೆರಸಿದ ತಿಂಡಿ ಕೊಟ್ಟಿರೋದು ಸಹಜ. ಅವನಿಗೆ ತಿಂಡಿ ಕೊಡುವ ಉದಾರಿಗಳ್ಯಾರಿದ್ದಾರೆ?

ಲತಾ : ಚೆನ್ನನಿಗೂ ಹೇಳಬೇಕಿತ್ತು, ಯಾರಾದ್ರೂ ತಿಂಡಿ ಕೊಟ್ರೆ ತಿನ್ನಬೇಡ ಅಂತ.

ಹರೀಶ : ಚೆನ್ನನೊಡನೆ ಮಾತಾಡಲಿಕ್ಕೆ ಆ ಗಾಯದ ಮುಖದವ ಬಿಡದೆ ನಮ್ಮನ್ನು ಅಟ್ಟುಬಿಟ್ಟ. ಅವರು ದನಕಾಯುವವರನ್ನು ಸುಲಭವಾಗಿ ಮೋಸ ಮಾಡಬಹುದು ಅಂತ ತಿಳ್ಕೊಂಡಿದ್ದಾರೆ.

ರಾಮು : ಬೆಳಕು ಇನ್ನೂ ಇದೆ ಈಗ ಹೊಡೆದುಕೊಂಡು ಹೋಗಲಿಕ್ಕಾಗೋಲ್ಲ ಯಾರಾದ್ರೂ ನೋಡ್ತಾರೆ ಎಂಬ ಭಯ ಇರುತ್ತೆ. ರಾತ್ರಿವರೆಗೆ ಎಲ್ಲಾದ್ರೂ ಕೂತಿರ್ತಾರೆ.

ಹರೀಶ : ಆ ಮುರುಕು ಮಂಟಪದಲ್ಲೇನಾದ್ರೂ ಕೂಡಿದ್ರೆ, ಅದಕ್ಕೆ ಬಾಗಿಲೂ ಸಹ ಇದೆ. ಏನಿಲ್ಲ ಅಂದ್ರೂ ಅಲ್ಲಿ ೩೦-೪೦ ರಾಸುಗಳನ್ನು ಕೂಡಿಹಾಕಬಹುದು.

ರಾಮು : ಅಲ್ಲಿ ಸುತ್ತಾ ಪೊದೆಗಳಿರುವುದರಿಂದ ಯಾರಿಗೂ ಗೊತ್ತಾಗುವುದೂ ಇಲ್ಲ. ದೆವ್ವದ ಭಯ ಇರೋ ಜನರು ಆ ಮಂಟಪಕ್ಕಲ್ಲಿ ಹೋಗಿ ನೋಡ್ತಾರೆ?

ಶಾರದ : ಪಟ್ಟಣಕ್ಕೆ ಹೋಗುವ ರಸ್ತೆನೂ ಅಲ್ಲಿಗೆ ಹತ್ತಿರ. ಇದಕ್ಕೆ ಏನು ಉಪಾಯ ಅಂದ್ರೆ ಈ ವಿಷಯವನ್ನು ಊರಿನ ದೊಡ್ಡವರಿಗೆ ತಿಳಿಸುವುದು.

ಹರೀಶ : ಕದ್ದ ದನವನ್ನು ಹುಡುಕಿ ಕೊಟ್ರೆ ಊರಿನವರು ನಮ್ಮನ್ನೆಲ್ಲಾ ಹೊಗಳ್ತಾರೆ.

ರಾಮು : ಮೊದ್ಲು ನೋಡೋಣ ಏನಾಗುತ್ತೆ? ಏನ್ಮಾಡ್ತಾರೆ ಎಂಬುದನ್ನು ಅವ್ರು ಸಿಕ್ಕಿಹಾಕಿಕೊಂಡ್ರೆ ತಾನೇ ನಮಗೆ ಹೊಗಳಿಕೆ ಇಲ್ಲದೆ ಹೋದ್ರೆ?

ಲತಾ : ಅದು ನಿಜ ಅನ್ನು......

ಹರೀಶ : ಮುಂದೇನಾಗುತ್ತೆ ಸ್ವಲ್ಪ ಕಾದುನೋಡೋಣ.

* * *

## ತರಂಗ-೨

(ರಾತ್ರಿಯ ವೇಳೆ ಝೀರುಂಡೆಗಳ ಶಬ್ದ)

ಹರೀಶ : ಈಗ ನಾನು ನೀನು ಇಬ್ಬರೂ ಮಂಟಪಕ್ಕೆ ಹೋಗೋಣ, ರಾಮು ಹುಡುಗಿಯರು ಬೇಡ. ಶಾರದಾ, ಲತಾ ಮನೇಲೇ ಇರಲಿ.

ಲತಾ : ನನಗೂ ಆಸೆ, ನಾನೂ ಬರ್ತೀನಿ, ಇಲ್ಲದೆ ಹೋದ್ರೆ ಚಿಕ್ಕಮ್ಮನಿಗೆ ಹೇಳ್ತೀನಿ.

ರಾಮು : ಭಯಕಣೇ ಅಲ್ಲಿ.

ಲತಾ : ಹರೀಶ ಏನು, ಕತ್ತಲಲ್ಲಿ ಪ್ರಯಾಣ ಮಾಡಿದ್ದಾನ್ಯೇ? ಅಪ್ಪ ಅಮ್ಮ ಜೊತೆ ನಗರದಲ್ಲಿ ಬಸ್ಸು ಆಟೋರಿಕ್ಷಾದಲ್ಲಿ ತಿರುಗಾಡಿದ್ದಾನೆ ಅಷ್ಟೇ. ಸಿನಿಮಾ ನೋಡ್ಕೊಂಡು ಸ್ವಲ್ಪ ದೂರ ನಡೆದುಕೊಂಡು ಬಂದಿರಬಹುದು ಅಷ್ಟೇ. ಅವನು ಬಂದಮೇಲೆ ನಾನ್ಯಾಕೆ ಬರಬಾರದು?

ರಾಮು : ಹೌದು ಪಟ್ಟಣದಲ್ಲಿ ವಿದ್ಯುತ್ ದೀಪದ ಬೆಳಕಿರುತ್ತೆ ಇಲ್ಲಿ 'ಗಕುಂ' ಕತ್ತಲೆ. ಅಲ್ಲಿ ಅಂಗಡಿ ತೆಗೆದಕೊಂಡು, ಜನರು ವಾಹನಗಳಲ್ಲಿ ತಿರ್‍ಗಾಡ್ತಿರ್ತಾರೆ. ಆದ್ರೆ ಇಲ್ಲಿ..... ನಿರ್ಜನ ಪ್ರದೇಶ, ಗಾಳಿ ಶಬ್ದ ಬಿಟ್ರೆ ಮತ್ತಾವುದೂ ಇರೋಲ್ಲ. ನಾವು ರಾತ್ರಿ ಹೋಗಬೇಕಾದ್ರೆ ಬ್ಯಾಟ್ರಿ ಬೇಕು.

ಲತಾ : ನನ್ನ ಹತ್ತಿರ ಇತ್ತು, ಆದ್ರೆ ಅದು ಮದ್ರಾಸಿನಲ್ಲಿದೆ.

ಹರೀಶ : ಏನು ಪ್ರಯೋಜನ?

ಶಾರದ : ನಮ್ಮದ್ದೇ ದೊಡ್ಡ ಬ್ಯಾಟರಿ ಇದ್ಯಲ್ಲ...... ಅದನ್ನೇ ತೆಗೆದುಕೊಂಡರೆ ಆಯಿತು.

ಹರೀಶ : ಒಂದು ನೂಲು ಹಗ್ಗ, ದೊಡ್ಡ ಕೋಲು ಚಾಕು ತೆಗೆದುಕೊಳ್ಳಬೇಕು. ಈಗ ರಾತ್ರಿ ಮನೆಯವರ ಕಣ್ಣುತಪ್ಪಿಸಿ ಹೋಗಬೇಕು. ಮನೆಯವರು ಕಂಡ್ರೆ ನಮ್ಮ ಕೆಲಸ ಕೆಟ್ಟು ಹೋದಾಗೆ.

ರಾಮು : ಈ ಹೊತ್ತು ಕಾಯಿ ತುಂಬುವ ಕೋಣೆಯಲ್ಲಿ ಮಲಗಿಕೊಳ್ಳೋಣ. ಅಲ್ಲಿ ಮಂಚ, ಜಮಖಾನ ಎಲ್ಲಾ ಇದೆ. ನಾವೂ ನೆಂಟರು ಬಂದಾಗ ಅಪ್ಪನ ಜೊತೆಯಲ್ಲಿ ಅಲ್ಲೇ ಮಲಗೋದು.

ಶಾರದ : ಈ ಹೊತ್ತು ನಾವು ಆ ಮನೆಯಲ್ಲಿ ಮಲಗಿಕೊಳ್ಳುತ್ತೇವೆ ಎಂದು ಹೋಗೋಣ. ನಾನು ಅಮ್ಮನಿಗೆ ಹೇಳಿಬಿಡ್ತೀನಿ ಅಮ್ಮಾ..... ಅಮ್ಮಾ.....

ರಾಧಮ್ಮ : ಏನೇ ಅದು.

ಶಾರದ : ಈ ಹೊತ್ತು ನಾವು ಆ ಕಾಯಿನ ಮನೆಯಲ್ಲಿ ಮಲಗಿಕೊಳ್ತೀವಿ.

ರಾಧಮ್ಮ : ಏನೂ ಬೇಡ...... ಯಾಕೆ ಮನೇಲಿ ಜಾಗ ಇಲ್ವಾ? ನಿಮ್ಮ ಅಪ್ಪ ಬೇರೆ ಇನ್ನೂ ಬಂದಿಲ್ಲ.

ಶಾರದ : ನಾವು ರಾತ್ರಿ ತುಂಬಾ ಕಥೆ ಹೇಳಬೇಕು. ನಿಮಗೆ ನಿದ್ರೆಗೆ ತೊಂದ್ರೆ ಆಗುತ್ತೆ.

ಹರೀಶ : ನಾನಿದ್ದೀನಿ ಬಿಡಿ ಬ್ಯಾಟರಿ ಇದೆ.

ರಾಧ : ಕತ್ಲೇಲಿ ಯಾರು ಹೊರಗೆ ಬರಬೇಡಿ ಕಣ್ರೋ..... ಬಳಿಗ್ಗೆ ಎದ್ದ ಕೂಡಲೇ ಬೀಗ ಹಾಕಿಕೊಂಡು ಬನ್ನಿ..... ಎಲ್ಲಾ ತೆಗೊಂಡು ಹೋಗಿ ಬೆಡ್‌ಲೈಟ್‌ಗಳನ್ನು.... ಜೋಪಾನ.

ಹರೀಶ : ಟೈಮೆಷ್ಟು ನೋಡಿದ್ಯಾ?

ರಾಮು : ಎಂಟುವರೆ ಆಗಿತ್ತು. ನಾವು ಈಗ್ಲೇ ಹೋಗುವಾಗಿಲ್ಲ. ಅಮ್ಮ ಎಲ್ಲಾ ಮಲಗಬೇಕಾದ್ರೆ ಹತ್ತು ಘಂಟೆ ಆಗುತ್ತೆ.

ಲತಾ : ಕಾಲ ಹಾಕೋದು ಹೇಗೆ?

ಶಾರದ : ಒಗಟು ಬಿಡಿಸೋಣ.

ರಾಮು : ಎಲ್ಲಾ ಹಳೆಯದು ಹೋದವರ್ಷದವೇ ಆಗ್ತವೆ. ಎಷ್ಟು ಅಂತ ಹೊಸದು ಹೇಳೋದು, ಏನಾದ್ರೂ ಆಟ ಆಡೋಣ್ವೇ?

ಹರೀಶ : ಇವರ ಮನೆಯಲ್ಲಿ ಚೌಕಾಭಾರ, ಪಗಡೆಗಳಿವೆ. ಬೇಕಾದ ಕವಡೆ, ಕಾಯಿ, ದಳಗಳಿಲ್ಲ. ಕೇರಂ ಬೋರ್ಡ್, ಚದುರಂಗ ಇಲ್ಲ. ಒಂದು ಕೆಲಸ ಮಾಡೋಣ.

ಲತಾ : ಏನು?

ಹರೀಶ : ಅಕ್ಷರ ಮಾಲೆಯಂತೆ ಪ್ರತಿ ಅಕ್ಷರಕ್ಕೂ ಒಬ್ಬೊಬ್ಬರು ಒಂದೊಂದು ಪ್ರಾಣಿ ಅಥವಾ ಪಕ್ಷಿ ಹೆಸರು ಹೇಳುತ್ತಾ ಹೋಗಬೇಕು. ಯಾರು ಹೆಸರು ಹೇಳಲು ಸೋಲುತ್ತಾರೆಯೋ ಅವರ ವಿರುದ್ಧ ಒಂದು ಪಾಯಿಂಟ್. ಆಮೇಲೆ ಮುಂದಿನ ಅಕ್ಷರ.

ಹರೀಶ : "ಕ"ರಿಂದ ಆಟ ಪ್ರಾರಂಭ.

ಶಾರದ : ಕೋಳಿ

ಲತಾ : ಕೋಗಿಲೆ

ಹರೀಶ : ಕೋತಿ

ಲತಾ : ಕಾಗೆ

ರಾಮು : ಕಿರುಬ

ಹರೀಶ : ಕರಡಿ

ಲತಾ : ಕೋಳಿಪಿಳ್ಳೆ

ಹರೀಶ : ಕೋಳಿ ಹೇಳಾಗಿದೆ ನಿನ್ನ ವಿರುದ್ಧ ಒಂದು ಪಾಯಿಂಟ್. ಇನ್ನ 'ಗ' ಇಂದ ಪ್ರಾರಂಭ.

ಲತಾ : ಗರುಡ

ರಾಮು : ಗೊರಿಲ್ಲಾ

ಹರೀಶ : ಘೇಂಡಾಮೃಗ......

ಶಾರದ : ಗ...... ಗೆ......

ಹರೀಶ : ಆಯ್ತು ನೀ ಸೋತೆ...... ಹ್ಞೂಂ.... ಹೊತ್ತಾಯ್ತು ಹೊರಡೋಣವೇ. ಈಗೊಂದು ಕೆಲಸ ಮಾಡಿ ದಿಂಬನ್ನು ನೆಟ್ಟಗಿಟ್ಟು ದುಪ್ಪಟಿ ಹೊದ್ದಿಸಿಬಿಡಿ. ನಾವು-ಮಲಗಿರುವಂತೆ ಕಾಣಿಸಬೇಕು, ನನ್ನ ಕೈಲಿ ದೊಣ್ಣೆ ಬ್ಯಾಟರಿ ಕೊಡಿ.

ಲತಾ : ನಕ್ಷತ್ರಗಳಿವೆ ಸ್ವಲ್ಪ ದಾರಿ ಕಾಣುತ್ತೆ...... ನಡೀರಿ.

ಶಾರದ : ಬಂದೆ...... ಬಂದೆ.

ಲತಾ : ಒಳ್ಳೆ ದಪ್ಪದಪ್ಪ ಮರಗಳು ಒಂದು ರೀತಿ ರಾಕ್ಷಸರಂತೆ ಕಾಣಿಸ್ತವೆ.

ಶಾರದ : ಲೇ.... ಅನ್ನೋಡು ಹಾವು ಹಾವು.

ಹರೀಶ : ಅಯ್ಯೋ ಮಂಕುದಿಣ್ಣೆ ಅದು ಹಗ್ಗದ ಚೂರು.

ಲತಾ : ಹಕ್ಕಿಗಳು, ಪ್ರಾಣಿಗಳು, ಎಷ್ಟು ವಿಕಾರವಾಗಿ ಕೂಗುತ್ತಿವೆ, ಕೀಟಗಳು ಒಂದು ರೀತಿ ಶಬ್ದ ಮಾಡ್ತಾ ಇವೆ.

ಹರೀಶ : ವಿಚಿತ್ರ ದನಿಗಳು.

ಶಾರದ : ಹೂವಿನ ವಾಸನೆ ನೋಡು ಏನು ಗಮಗಮ ಅನ್ತಿದೆ.

ಲತಾ : ಅದೇನೋ ಕಪ್ಪನೆ ಒಂದು ಪ್ರಾಣಿ ಬರುತ್ತೆ, ಬನ್ನಿ ಮರದ ಹಿಂದೆ ನಿಂತ್ಕೊಳ್ಳೋಣ.

(ಆಡಿನ ಶಬ್ದ)

ಲತಾ : ಅಯ್ಯೋ ಕುರಿಯ ಶಬ್ದಕಣೋ ಬನ್ನಿ ಅಲ್ನೋಡಿ ಏನೋ ಕೂಗುತ್ತೆ......

ಹರೀಶ : ಹೆದರಬೇಡಿ ಅದು ಗೂಬೆ..... ತೋಪು ಹತ್ತಿರ ಸಿಕ್ಕಿತು. ಮೊದಲು ಮಂಟಪದಲ್ಲಿ ಏನಿದೆ ನೋಡಬೇಕು.

ರಾಮು : ಮೆಲ್ಲನೆ ನೋಡಿ ಒಳಗೆ ಯಾರಾದರೂ ಇದ್ದಾರು, ಬ್ಯಾಟರಿ ಬಿಡಬೇಡಿ. ನಾನು ಮರದ ಮೇಲಿರುತ್ತೇನೆ, ಯಾರಾದರೂ ಬಂದರೆ ಸೂಚನೆ ಕೊಡುತ್ತೇನೆ ಶಬ್ದ ಮೂಲಕ. ಆಮೇಲೆ ನೀವು ಅವಿತುಕೊಳ್ಳಿ.

(ಲತಾ ಕೀರುವಳು)

ಹರೀಶ : ಏನೇ ಅದು..... ಓತಿಕೇತ ಸುಮ್ನಿರೇ ಹೆದರಿಕೊಳ್ಳಬೇಡ. ಬ್ಯಾಟರಿ ಹಾಕಿದ್ರು.... ಯಾರೋ ಇಬ್ಬರು ದಪ್ಪ ವ್ಯಕ್ತಿಗಳು ಇದ್ದಾರೆ. ನಮ್ಮಕಡೇನೆ ಬಂದ್ರೂ..... ಅಯ್ಯೋ ಕೆಟ್ಟೆವು ಕೆಟ್ಟೆವು.....

ಮುನಿಸ್ವಾಮಿ: ಜೇಬಲ್ಲಿ ಏನಿದೆ ಹುಡುಕು?

ಕರಿಯಣ್ಣ : ಬ್ಯಾಟರಿ, ನೂಲಿನ ಹಗ್ಗ ಅಷ್ಟೇ.......

ಮುನಿಸ್ವಾಮಿ: ಯಾರಿವ್ರು? ಕರಿಯಣ್ಣ.

ಕರಿಯಣ್ಣ : ಅದೇ ತೋಟದ ಮನೆ ಹುಡುಗ್ರು ಮುನಿಸ್ವಾಮಣ್ಣ.

ಮುನಿಸ್ವಾಮಿ: ಇಲ್ಲಿ ಏಕೆ ಬಂದ್ರಿ? ಮಾತಾಡ್ತೀಯೋ ಇಲ್ವೋ?

ಹರೀಶ : ನಮ್ಮ ಹಸ....... ಬಂದಿರ್ನಿಲ್ಲ...... ಹುಡುಕಿಕೊಂಡು ಬಂದೋ.

ಮುನಿಸ್ವಾಮಿ: ನಿಮ್ಮ ಮನೆಯವರು ಇಷ್ಟೊತ್ನಲ್ಲಿ ಕಳಿಸಿದ್ರಾ?

ಹರೀಶ : ಇಲ್ಲ..... ನಮಗೆ ಆ ಹಸುಕಂಡ್ರೆ ತುಂಬಾ ಪ್ರೇಮ ಅದ್ಕೆ ಬಂದೋ

ಮುನಿಸ್ವಾಮಿ: ನೀವು ಮೂರೇ ಜನರೋ ಮತ್ತಾರಾದ್ರೂ ಇದ್ದಿರೋ?

ಹರೀಶ : ಹ್ಞೂ...... ನಾವು ಮೂವರೇ.

ಮುನಿಸ್ವಾಮಿ: ನೀವು ಇಲ್ಲೇ ಕೂತಿರಿ ಆ ಕಡೆ ಈ ಕಡೆ ಅಲ್ಲಾಡಿದ್ರೆ...... ಸುಮ್ನೇ ಬಿಡೋಲ್ಲ. ಹನ್ನೆರಡು ಗಂಟೆಗೆ ಸರಿಯಾಗಿ ನಾಯ್ಡು ಹೊರಡ್ತೀನಿ ಅಂತ ಹೇಳಿದ್ದ.

ಕರಿಯಣ್ಣ : ಇನ್ನೇನು ಈಗ ಬಂದು ಬಿಡಬಹುದು. ಇದೇನು ಮುನಿಸ್ವಾಮಣ್ಣ ಬ್ಯಾಟರಿ ಬಿಡ್ತೀಯೋ.

ಮುನಿಸ್ವಾಮಿ: ಏನೂ ಇಲ್ಲ ಯಾವುದೋ ಹಕ್ಕಿನೋ ಏನೋ ಮರದ ಕಡೆ ಶಬ್ದ ಮಾಡ್ತಿವೆ ಅಷ್ಟೆ.

(ಲಾರಿಶಬ್ದ)

ಕಾಳಪ್ಪ : ಲಾರಿ ಬಂತು ಕಣಣ್ಣ.......

ಮುನಿ : ಈ ಹುಡುಗರನ್ನೂ ಹಗ್ಗದಲ್ಲಿ ಕಟ್ಟು, ಲಾರಿ ಕಡೆ ಹೊರಡೋಣ.

ರಾಮು : ಹೊರಟರು ಎಲ್ಲರೂ ನಾನು ನಿಮ್ಮ ಗಂಟು ಬಿಚ್ತೀನಿ ೫ ನಿಮಿಷದಲ್ಲಿ ವಾಪಸ್ಸು ಬರ್ತಾರೆ ಅವರು. ಆಮೇಲೆ ಬ್ಯಾಟರಿ ಹಾಕಿ ನಾಲ್ಕು ಕಡೆ ಹುಡುಕುತ್ತಾರೆ. ಆಮೇಲೆ ನೀವು ಸಿಕ್ಕಿಹಾಕಿಕೊಳ್ತೀರಿ, ನೀವು ಓಡಿಹೋಗಿ ಊರಿಂದ ಯಾರ್ನಾದ್ರೂ ಕರ್ಕೊಂಡು ಬನ್ನಿ.

ಹರೀಶ : ಮುನಿಸ್ವಾಮಿ ಕಾಳಪ್ಪನ ಜೊತೆ ಇನ್ನೂ ಇಬ್ಬರು ಇರುವಂತೆ ಕಾಣುತ್ತೆ..... ನೀವು ಬೇಗ ನಡೀರಿ.

ಗೋಪಿ : ಮುಕ್ಕಾಲು ಮೈಲಿ ತಲುಪಿ, ಜನರನ್ನು ಎಬ್ಬಿಸಿ ಕರೆತರಬೇಕು. ನಮ್ಮ ಮಾತನ್ನು ಜನ ಒಪ್ಪುತ್ತಾರೆಯೇ?

ಹರೀಶ : ಲಾರಿ ಹತ್ತಿಸಲು ಹಲಗೆ ತಂದಿರಬಹುದು. ಒಂದು ಫರ್ಲಾಂಗ್ ದೂರ ದನಗಳನ್ನು ಹೊಡೆದುಕೊಂಡು ಹೋಗಲು ಹೆಚ್ಚು ವೇಳೇನೂ ಬೇಕಿಲ್ಲ, ಹತ್ತದಿನೈದು ನಿಮಿಷದಲ್ಲಿ ಕೆಲಸ ಮುಗಿದಿರುತ್ತೆ. ಅಷ್ಟರಲ್ಲಿ ಊರು ಜನ ಕರೆದುಕೊಂಡು ಬರೋಕ್ಕಾಗೊಲ್ಲ ಅವ್ರು ಇಲ್ಲಿಂದ ಹೊರಟಿರುತ್ತಾರೆ.

ಗೋಪಿ : ನಾವು ಓಡಿ ಹೋದದೂ ಊರು ತಲುಪಲು ಅರ್ಧ ಘಂಟೆ ಬೇಕು. ನಾವು ಲಾರಿ ಹೋಗದಂತೆ ಮಾಡಬೇಕು. ಆಗ ಅವರಿಗೆ ದನ ಕದಿಯಲು ಆಗುವುದಿಲ್ಲ. ಲಾರಿ ನಿಂತಿರುವ ಸ್ಥಳಕ್ಕೇ ಹೋಗೋಣ ನಡೀರಿ.

ಹರೀಶ : ಹಲಗೆಗಳು ಹಗ್ಗ ಇದೆ. ಡ್ರೈವರ್ ಸಹ ಅವರ ಜೊತೆ ಹೋಗಿರಬೇಕು.

ಗೋಪಿ : ಏನು ಮಾಡ್ತೀಯೋ ಲಾರಿ ಹೋಗದಾಗೆ?

ಹರೀಶ : ಗಾಳಿ ಬಿಟ್ಟು ಬಿಟ್ರೆ.

ರಾಮು : ಚಾಕಲಿ ಕೊಯ್ಯಲಾ?

ಹರೀಶ : ಹೊಸಾ ಟೈರು. ನಿನ್ನದು ಮಾವಿನ ಹಣ್ಣು ಕೊಯ್ಯಲಿಕೆ ಸರಿ ಅಷ್ಟೇ.

ಗೋಪಿ : ಡೀಸೈಲ್ ಪೈಪಿಗೆ ಕಡ್ಡಿಹಾಕಿದ್ರೆ ಹ್ಯಾಗೆ?

ರಾಮು : ಅದೂ ಕಾಣ್ತಾ ಇಲ್ಲ; ಎಲ್ಲಿ ಎಂಬುದೇ ನಮಗೆ ಗೊತ್ತಿಲ್ವಲ್ಲಾ?

ಗೋಪಿ : ಡೀಸೈಲ್ ತುಂಬಿರುವ ಟ್ಯಾಂಕಿಗೆ ಮಣ್ಣು ಹಾಕ್ಬಿಡೋಣ. ಯಾರೋ ಬರ್ತಾ ಅವ್ರೆ..... ದನಗಳು ಬರ್ತಾ ಇವೆ.

ರಾಮು : ಇಲ್ಲೇ ಇದ್ದು ಏನಾಗುತ್ತೆ ಅಂತ ನೋಡೋಣ.

ಹರೀಶ : ಕಾಳಪ್ಪ ಮೂರು ಹುಡುಗರನನು ಕರೆದುಕೊಂಡು ಬರುತ್ತಿದ್ದಾನೆ.

(ದನಗಳ ಶಬ್ದ ಏಯ್ ಎಂದು ಹೊಡೆಯುವ ಶಬ್ದ)

ರಾಮು : ಇಪ್ಪತ್ತೆಂಟು ರಾಸುಗಳು ಓಹೋ ಎಲ್ಲರೂ ಹೊರಟರು ಕಾಳಪ್ಪ ಉಳಿದ.

(ಲಾರಿ ಉರುಳಿತು)

* * *

## ತರಂಗ-೩

ನಾಯ್ಡು : ಇದ್ಯಾರು ಈ ಮಕ್ಕಳು? ಇಲ್ಲಿಗೇಕೆ ಬಂದ್ರು?

ಕಾಳಪ್ಪ : ತೋಟದ ಮನೆಯವ್ರು ದನ ಹೋಯ್ತು ಅಂತ ಬಂದ್ರಂತೆ, ಅವರು ಮನೆಯವರು ಕಳಿಸಿಲ್ಲ ಅವೇ ಬಂದವೆ.

ನಾಯ್ಡು : ಈಗ ಇವರನ್ನು ಏನು ಮಾಡಬೇಕು ಅಂತ ಮಾಡಿದ್ದೀರಿ?

ಕಾಳಪ್ಪ : ಹೀಗೆ ಬಿದ್ದಿರ್ತವೆ, ಬೆಳಗ್ಗೆ ಅವರ ಮನೆಯವ್ರು ಹುಡುಕ್ತಾರೆ ಹೋಗ್ತವೆ.

ನಾಯ್ಡು : ಅದ್ಕೇ ಹೇಳೋದು ನಿಂಗೆ ಬುದ್ಧಿ ಇಲ್ಲ ಅಂತ. ಇದನ್ನ ಊರವರಿಗೆ ತಿಳಿಸಿದ್ರೆ, ಅವರು ಪೋಲೀಸ್‌ಗೆ ತಿಳಿಸ್ತಾರೆ. ಆಮೇಲೆ ಲಾರಿ ಚೆಕ್ ಮಾಡ್ತಾರೆ, ಮಕ್ಕಳು ಹತ್ತಿರ ಬರದಂತೆ ನೋಡ್ಕೊಬೇಕಿತ್ತು. ನಿನಗೆ ಅಷ್ಟು ಗೊತ್ತಿಲ್ಲ.

ಕಾಳಪ್ಪ : ಬಿಡು ನಾಯ್ಡಣ್ಣ ಈಗ ಆಗಿಹೋಯ್ತು.

ನಾಯ್ಡು : ತೂಥ್ ನಿನ್ನ..... ಈಗ ಇನ್ನೇನೂ ಮಾಡಕ್ಕಾಗೋಲ್ಲ. ಪಟ್ಟಣಕ್ಕೆ ಕರ್ಕೊಂಡು ಹೋಗಿ ನಿಂಗಮ್ಮನ ಮನೇಲಿ ಬಿಡವಾ. ಊಟ ತಿಂಡಿ ಹಾಕಿ ಮಾರ್ನೇ ದಿನ ನಮ್ಮ ಕೆಲಸ ಮುಗಿದ ಮೇಲೆ ಪೊಲೀಸ್ನೋರಿಗೆ ತಿಳಿಸಲಿ, ಆಮೇಲೇನು ಆಗೋಲ್ಲ.

(ಲಾರಿ ಹೊರಡುವುದು)

ರಾಮು : ಓಹೋ ಲಾರಿ ಒಂದು ಫರ್ಲಾಂಗು ಹೋಯ್ತು, ಯಾಕೋ ನಿಂತಹಾಗಾಯ್ತು ಲಾರಿ ಮುಂದೆ ಹೋಗ್ತಿಲ್ಲ.

ಹರೀಶ : ಅಯ್ಯೋ ದೇವ್ರೇ ನಮ್ಮನ್ನ ಪಟ್ಟಣಕ್ಕೆ ಕರ್ಕೊಂಡು ಹೋಗ್ತಾ ಇದ್ದಾರಲ್ಲಾ ರಾಮುಗೆ ನಮ್ಮಿಂದ ಬೈಗಳು.

ನಾಯ್ಡು : ಏನಾಯ್ತು ಡ್ರೈವರ್? ಡಿಸೈಲ್ ಹಾಕಿಸಿಕೊಂಡು ಬಂದಿದ್ದೀಯ ತಾನೇ?

ಡ್ರೈವರ್ : ಹಾಕ್ಸಿದ್ದೇನೆ ಆದ್ರೆ ಯಾಕೋ ಡಿಸೈಲ್ ಸರಿಯಾಗಿ ಬರ್ತಾ ಇಲ್ಲ, ನಂಗೆ ಗೊತ್ತಿಲ್ವೇ ಗಾಡಿ ಎಷ್ಟುದೂರ ಹೋಗಬೇಕು ಅಂತ.

ನಾಯ್ಡು : ರೇಗಬೇಡ ನೋಡು ಡಿಸೈಲ್ ಏನಾದ್ರೂ ಲೀಕ್ ಆಗಿದ್ಯಾ ಅಂತಾ.

ಡ್ರೈವರ್ : ಒಳಗೆಲ್ಲಾ ಕಸ ಮಣ್ಣು ಇದು ಹ್ಯಾಗೆ ಬಂತು? ಈಗ ಎಲ್ಲಾ ಎತ್ತಿ ಹಾಕಿ, ಸೋಸಿ ಕ್ಲೀನ್ ಮಾಡಬೇಕು, ಅದಕ್ಕೆ ಬೇಕಾದ ಸಾಮಾನುಗಳು ಬೇರೆ ಇಲ್ಲ. ಕನಿಷ್ಟ ಅಂದ್ರೂ ಎರಡು ಘಂಟೆ ಬೇಕು.

ರಾಮು : (ಸ್ವಗತ) ಲಾರಿ ನಿಂತೇ ಬಿಡ್ತು. ಗೋಪಿ ಊರಿಗೆ ಹೋಗಿ ಇನ್ನೂ ಯಾರ್ನೂ ಕರೆದುಕೊಂಡೇ ಬರ್ಲಿಲ್ವಲ್ಲಾ.

ಗೋಪಿ : ಅಮ್ಮಾ...... ಹಸುಕಳ್ಳರು...... ರಾಮು....... ಹರೀಶ.......

(ಜನರು ಬಂದರು)

ಜನ : ನಡೀರಿ ನಮ್ಮ ಹಸವೂ ಬಂದಿಲ್ಲ..... ಯಾರೋ ನಮ್ಮ ದನಗಳನ್ನೆಲ್ಲಾ ಕದ್ದು ಹೋಗ್ತಿದ್ದಾರಂತೆ

ರಾಮು : (ಸ್ವಗತ) ಊರ ಜನರು ಲಾಂದ್ರ ಹಿಡ್ಕೊಂಡು ಮಚ್ಚು ಕೊಡ್ಲಿ ಎತ್ತುಕೊಂಡು ಬರ್ತಾ ಇದ್ದಾರೆ. ಅದೇ ಲಾರಿಯಲ್ಲಿ ತುಂಬ್ತಾ ಇದ್ದಾರೆ ಹೋಗಿ......

ನಾಯ್ಡು : ಮುನಿಸ್ವಾಮಿ ಏನೋ ಕಾಲು ಸಪ್ಪಳ ಕೇಳುತ್ತೆ ನೋಡು ಏನಪ್ಪಾ ಯಾವೊತ್ತೂ ಹೀಗಾಗಿರ್ಲಿಲ್ಲ. ಲಾರಿ ಪೊಲೀಸ್‌ನವರ ಕೈಸೇರಿದರೆ ನಮ್ಮ ಗುಟ್ಟೆಲ್ಲಾ ಒಯಲಾಗುತ್ತಲ್ಲಾ. ಏಯ್ ಮುನಿಸ್ವಾಮಿ ನೀನು ಮಕ್ಕಳನ್ನು ನೋಡ್ಕೋ ನಾನು ಸ್ವಲ್ಪ ಡ್ರೈವರ್ ನೋಡ್ತೀನಿ ಏನಪ್ಪಾ ಡ್ರೈವರ್ ಇನ್ನೆಷ್ಟು ಹೊತ್ತಾಗಬಹುದು ಲಾರಿ ರಿಪೇರಿ?

ಡ್ರೈವರ್ : ನನಗೆ ಗೊತ್ತಿಲ್ವೇ? ಸಿಕ್ಕಿಕೊಂಡ್ರೆ ನಂಗೂ ಶಿಕ್ಷೆ ಆಗುತ್ತೆ ಆದಷ್ಟು ಬೇಗ ಇನ್ನು ಅರ್ಧಗಂಟೆಯಲ್ಲಿ ಮುಗಿಸ್ತೀನಿ.

ನಾಯ್ಡು : ನಾನು ಲತಾ, ಶಾರದಾ ಇಬ್ಬರನ್ನು ಬಿಗಿಯಾಗಿ ಹಿಡ್ಕೊಳ್ತೀನಿ, ಮುನಿಸ್ವಾಮಿ ನೀನು ಹರೀಶನನ್ನು ಹಿಡಿದುಕೋ, ಜನಗಳು ನಲವತ್ತು ಐವತ್ತು ಜನ ಇರುವಂಗಿದೆ, ಮಚ್ಚು ಕೊಡ್ಲಿ, ದೊಣ್ಣೆ ಬೇರೆ ತರ್ತಿದ್ದಾರೆ.

(ಧ್ವನಿ ಊರಜನರು - ನೋಡ್ದಾ ಮೂಕ ಪ್ರಾಣಿಗಳನ್ನು ಲಾರಿಯಲ್ಲಿ ತುಂಬವ್ರೆ; ಒಂದಕ್ಕೊಂದು ನಿಂತ್ಕೊಳ್ಳೋಕೂ ಜಾಗ ಇಲ್ಲ, ಹುಲ್ಲು ನೀರಿಲ್ದೆ ದನಗಳು ಕಂಗಾಲಾಗಿವೆ. ಅದು ನಮ್ಮ ಹಸು, ಇದು ನಮ್ಮದು- ದನಗಳ ಕೂಗು ಒಬ್ಬೊಬ್ಬರೂ ಒಂದೊಂದು ಮಾತನಾಡುವರು.)

ಗಂಗಮ್ಮ : ನೀವೆಂಥ ಜನಗಳು? ಹಸು ಕಾಮಧೇನು ಅಂತಾರೆ ನೀವು ಇದನ್ನು ಕದ್ದು ಹೋಗ್ತಾ ಇದ್ದೀರಲ್ಲಾ? ಇದನ್ನ ಎಲ್ಲಿಗೆ ತೆಗೆದುಕೊಂಡು ಹೋಗ್ತೀರಿ? ಹೊಟ್ಟೆ ಹೊರೆಯೋಕೆ ಇನ್ನೇನೂ ದಾರಿ ಇರ್ಲಿಲ್ವೇ ನಿಮ್ಗೆ?

ಒಬ್ಬ : ಏನ್ ನೋಡ್ತೀರಾ ಹಾಕ್ರೋ ದೊಣ್ಣೇಲಿ.

ನಾಯ್ಡು : ನೋಡಿ ಕೈನಲ್ಲೇನಿದೆ ಅಂತಾ? ಕತ್ತಿ ಇದು ರಾಂಪುರಿ ಚೂರಿ. ಕೈನಲ್ಲಿ ಮಕ್ಕಳು ಯಾರಾದ್ರೂ ಮುಂದೆ ಬಂದ್ರೆ ಮಕ್ಕಳಿಗೇ ಹಾಕ್ತೀವಿ ಚೂರಿ, ಆಮೇಲೆ ನೀವು ಏನು ಬೇಕಾದ್ರೂ ಮಾಡ್ಕೋಬೋದು.

ಒಬ್ಬ : ಏನು ಮಾಡುವುದು? ಅವನ ಚೂರಿ ಮುಂದೆ ನಮ್ಮ ದೊಣ್ಣೆ ಮಚ್ಚು ಏನ್ಮಾಡೀತು? ಇದರಿಂದ ಮಕ್ಕಳು ನೋವು ಅನುಭವಿಸಬೇಕಾಗಿದೆಯಲ್ಲಾ ಏನ್ಮಾಡೋದು?

ಮತ್ತೊಬ್ಬ: ಏನ್ಮಾಡೋದು?

* * *

## ತರಂಗ-೪

(ಹ್ಹಾ..... ಎಂಬ ಧ್ವನಿ)

ನಾಯ್ಡು : ಅಯ್ಯೋ..... ಪಾಪಿ ಕೈ ಕಚ್ಚಿದೆಯಾ? ಚೂರಿನೇ ಬಿದ್ದೋಯ್ತು, ಓಹೋ ಮತ್ತೊಬ್ಬ ಚೂರಿ ತೆಗೆದುಕೊಂಡು ಓಡ್ತಾ ಇದ್ದಾನೆ ಏನುಗತಿ? ಊರಿನವರ ಕೈಗೆ ಸಿಕ್ಕಿದ್ರೆ ಏನು ಮಾಡಲಿ?

(ಜನರು "ಹಿಡಿರಿ".... "ಈಗ ಹಿಡಿರಿ" ಎಂಬ ದನಿ)

ಹರೀಶ : ಈ ನೂಲು ಹಗ್ಗ ನಮಗೆ ಕಟ್ಟಿದ್ದ ಈಗ ಅವನಿಗೆ ಕಟ್ಟಿ..... ಆ ಮುನಿಶಾಮಿ ಹಿಡಿರಿ......

(ಜೀಪಿನ ಶಬ್ದ) ಅನಂತರಾಮಯ್ಯನೋರು ನಮ್ಮ ಚಿಕ್ಕಪ್ಪ ಯಕ್ಷಗಾನ ನೋಡಿಕೊಂಡು ಬರ್ತಾ ಇದ್ದಾರೆ.

ಅನಂತ : ಏನಾಯ್ತು?

ಒಬ್ಬ : ನಿಮ್ಮ ಮಕ್ಕಳು ಸಾಹಸಿಗಳು, ದನಗಳನ್ನು ಕಳುತ್ತಿದ್ದ ಕಳ್ಳರನ್ನು ಹಿಡಿದಿದ್ದಾರೆ.

ಅನಂತ : ನಾಳೆ ಬೆಳಿಗ್ಗೆ ಪೊಲೀಸ್‌ನವರಿಗೆ ತಿಳಿಸ್ತೀನಿ. ಅಲ್ಲಿಯವರೆಗೆ ನಾಯ್ಡು, ಮುನಿಸ್ವಾಮಿ, ಡ್ರೈವರ್ ಮೂರು ಜನರನ್ನು ಒಂದು ಕಡೆ ಬಂದಿಸಿ ದನಗಳೆಲ್ಲಾ ಲಾರಿಯಲ್ಲೇ ಇರಲಿ. ಹುಲ್ಲು ನೀರು ಏರ್ಪಾಟು ಇಲ್ಲೇ ಮಾಡಿ ಕೆಲವರು ಇಲ್ಲಿ ಲಾರಿ ಕಾಯ್ತಾ ಇರಿ. ಜೋಪಾನ ಬನ್ರೋ ಮಕ್ಕಳಾ.

ಒಬ್ಬ : ಆಯ್ತು.

(ಜೀಪ್ ಹೋಗುವುದು)

ರಾಧಮ್ಮ : ಇದೇನ್ರಿ ಹುಡುಗ್ರು ಜೀಪಿನಲ್ಲಿ.

ಅನಂತ : ಮಕ್ಕಳಿಗೆ ಮೊದಲು ಒಂದೊಂದು ಲೋಟ ಹಾಲು ಕೊಡು ಆಮೇಲೆ ಮಿಕ್ಕ ಮಾತು. ಕಳ್ಳರನ್ನು ಹಿಡಿದಿದ್ದಾರೆ ಕಣೆ ಇವರು.

ಅನಂತ : ಅವರು ಮಂಟಪದಲ್ಲೇ ಇರ್ತಾರೆ ಅಂತ ನಿಮಗೆ ಹ್ಯಾಗೆ ಗೊತ್ತಾಯ್ತೋ ಹರೀಶ.

ಹರೀಶ : ಅದ್ಕೆಲ್ಲಾ ಅಷ್ಟು ದಿನಗಳಿಂದಲೂ ಪತ್ತೇದಾರಿ ಕೆಲಸ ನಡಿಸಿದ್ದೋ.

ಅನಂತ : ಸರಿ ಮಕ್ಕಳೇ ಮಲಗಿ ನಾಳೆ ಮಿಕ್ಕ ಮಾತು......

(ಬೆಳಗಿನ ವಾತಾವರಣ ಜೀಪ್ ಶಬ್ದ ಜನರ ಗದ್ದಲ)

ರಾಧಮ್ಮ : ಪೋಲೀಸ್ ಅಧಿಕಾರಿ ಪುಟ್ಟೇಗೌಡರು ಬಂದಿದ್ದಾರೆ ಜೀಪಿನಲ್ಲಿ. ಡ್ರೈವರ್, ನಾಯ್ಡು, ಮುನಿಸ್ವಾಮಿಯವರಿಗೆ ಬೇಡಿಹಾಕಿ ಕೂರ್ಸಿದ್ದಾರೆ.

ಅನಂತ : ಪೋಲೀಸಿನವರಿಗೆ ಕಂಪ್ಲೆಂಟ್ ಕೊಟ್ಟು ಬಂದಿದ್ನಲ್ಲಾ ಅವರೇ ತನಿಖೆ ನಡೆಸೊಕ್ಕೆ ಬಂದಿದ್ದಾರೆ. ಬನ್ರೋ ಮಕ್ಕಳಾ ಎಲ್ಲರೂ ಪೋಲೀಸ್ ಅಧಿಕಾರಿಗಳು ಪ್ರಶ್ನೆ ಕೇಳ್ತಾರೆ ಹೆದರ್ಕೋಳ್ಬೇಡಿ ಉತ್ತರ ಹೇಳುವ್ರಿ......

ಹರೀಶ : ಆಯ್ತು ಚಿಕ್ಕಪ್ಪ ಬಂದ್ಲೋ. ಬನ್ರೋ ಎಲ್ಲಾ ಗೋಪಿ, ಶಾರದಾ, ಲತ, ರಾಮು ಎಲ್ಲಾ ಬನ್ನಿ.

ಪೋಲೀಸ್ ಅಧಿಕಾರಿ ಪುಟ್ಟೇಗೌಡ: ಬನ್ರಪ್ಪಾ, ಬನ್ರಮ್ಮಾ ಬನ್ನಿ ನಿಮ್ಮನ್ನೇನೂ ಮಾಡೋಲ್ಲ. ಹೇಗೆ ನೀವು ಕಳ್ಳರನ್ನು ಹಿಡಿದ್ರಿ ಅಂತ ಕೇಳೋಕ್ಕೆ ಬಂದಿದ್ದೀನಿ ಬನ್ನಿ.....

ಹರೀಶ : ಲಕ್ಕನ ಹಳ್ಳಿಯಲ್ಲಿ ದನ ಹೋಯ್ತು ಅಂತ ಸುದ್ದಿ ಕೇಳಿದಾಗ ಅಲ್ಲಿದ್ದ ಹನುಮಜ್ಜನಿಂದ ತನಿಖೆ ಆರಂಭ ಮಾಡಿದೆವು, ಆಮೇಲೆ ರಾಂಪುರದಲ್ಲಿದ್ದ ಗೋಪುವಿನ ಅಂಗಡಿಯಲ್ಲಿ ಕಾಳಪ್ಪ ಮತ್ತೊಬ್ಬ ಮುನಿಸ್ವಾಮಿ ಇಬ್ಬರ ವರ್ತನೆ ನೋಡಿಕೊಂಡು ಬಂದೆವು.

ರಾಮು : ಆಮೇಲೆ ಊರಲ್ಲಿ ದೆವ್ವ ಅಂತ ಹೆದರಿಸಿ, ಕಾಳಪ್ಪ ರಾತ್ರಿಯ ಹೊತ್ತು ಸಂಚು ಮಾಡುವುದರ ಕಾರಣ ಏನು ಅಂತ ತಿಳ್ಕೊಳ್ಳೋಕೆ ಆರಂಭ ಮಾಡಿದ್ವು.

ಗೋಪಿ : ನಮ್ಮ ಅಂಗಡಿ ಮುಂದೆ ಬಂದು ನಿಂತ್ಕೊಂಡಿದ್ದ ಕಾಳಪ್ಪ ಮುನಿಸ್ವಾಮಿಯವರ ಚಲನೆ ವಲನೆ ನೋಡ್ದೋ?

ರಾಮು : ಹಳ್ಳಿ ದನಕಾಯೋ ಚೆನ್ನನಿಗೆ ತಿಂಡಿಕೊಟ್ಟಿದ್ದು, ಮಾತಾಡಿಸಿದ್ದು, ಹನುಮಜ್ಜನಿಗೆ ನಿದ್ರೆ ಔಷದ ಕೊಟ್ಟಿದ್ದು, ಎಲ್ಲವನ್ನು ತಿಳಿದು ಊರ ಮಂಟಪದ ಹತ್ತಿರ ಇವರು ಏನೋ ಕಳ್ತನಕ್ಕೆ ಆರಂಭ ಮಾಡಿದ್ದಾರೆ ಅಂತ ತಿಳಿದೋ. ಆದ್ರೆ ಆಮೇಲೆ ಗೊತ್ತಾಯ್ತು ಅವ್ರು ಕಳವು ಮಾಡಿದ್ದು ದನಗಳು ಅಂತ.

ಹರೀಶ : ಮಂಟಪದ ಹತ್ತಿರ ಕಾಯ್ತಿದ್ದಾಗ ಕೈಗೆ ಸಿಕ್ಕಿ ಹಾಕಿಕೊಂಡ್ರೋ. ನಾವು ತಂದಿದ್ದ ದಾರದಲ್ಲೇ ಕಲ್ಲುಕಂಬಕ್ಕೆ ನನ್ನನ್ನ ಶಾರದ, ಲತಾ ಮೂರು ಜನನೂ ಕಟ್ಟಿದರು. ಗೋಪಿ ದೂರ ಇದ್ದ. ರಾಮು ಮರದಮೇಲೆ ನಿಂತು ಕಾದು ನಾವು ಹೇಗೋ ಸನ್ನೆ ಮಾಡಿದಾಗ ರಾಮು ಬಂದು ನಮ್ಮನ್ನು ಬಿಡಿಸಿದ. ನಾವು ಲಾರಿ ಹತ್ತಿರ ಹೋಗಿ ಅಲ್ಲಿ ಪೆಟ್ರೋಲ್ ಟ್ಯಾಂಕ್‌ಗೆ ಮಣ್ಣು ತುಂಬಿದೋ. ಗಾಳಿ ಬಿಡಬೇಕು ಅಂತ ಮನಸ್ಸು ಮಾಡಿದ್ದೋ ಆದ್ರೆ ಅದು ನಮ್ಮ ಶಕ್ತಿಗೆ ಮೀರಿದ್ದಾಗಿತ್ತು. ನಮ್ಮನ್ನ ನಾಯ್ಡು ಅನ್ನುವವನು ಭದ್ರವಾಗಿ ಹಿಡ್ಕೊಂಡು ಹತ್ತಿರ

ಬಂದ. ಊರವ್ರೆಲ್ಲಾ ಬರೋದನ್ನ ನೋಡಿ ಸ್ವಲ್ಪ ಹೆದರಿದ ಅಂತ ಕಾಣುತ್ತೆ.......

ಶಾರದ : ಜನಗಳೆಲ್ಲಾ ದೊಣ್ಣೆ ಮಚ್ಚು ತಂದಿದ್ರು, ಅವರು ಮುಂದೆ ಬರಲು ಚೂರಿ ತೆಗೆದ, ನನಗೆ ಹೆದರಿಕೆ ಆಯ್ತು. ಏನು ಮಾಡಲಿ ಅಂತ ಯೋಚನೆ ಮಾಡಿ ರಾಮು ಕಡೆ ಸನ್ನೆ ಮಾಡಿ ಆತನ ಕೈ ಕಚ್ಚಿದೆ. ಚಾಕು ಕೈನಿಂದ ಕೆಳಗೆ ಬಿತ್ತು ಅದನ್ನ ತೆಗೆದುಕೊಂಡ ರಾಮು ಓಡಿಹೋದ.

ಪೋಲೀಸ್ : ನೀನು ಕಚ್ಚಿರುವ ಹಲ್ಲುಗುರುತು ನೋಡ್ದೆ ಕಣಮ್ಮ ಒಳ್ಳೆ ಕೆಲಸ ಮಾಡಿದೆ ಭೇಷ್ ನೀನು ತುಂಬಾ ಜಾಣೆ. ಎಲ್ಲರಿಗಿಂತ ನಿನಗೇ ಹೆಚ್ಚಿನ ಸಮಯ ಸ್ಫೂರ್ತಿ, ನಿನ್ನಿಂದಲೇ ಕಳ್ಳರನ್ನು ಹಿಡಿಯಲಿಕ್ಕಾಯ್ತು. ಇಲ್ಲದೆ ಹೋಗಿದ್ರೆ ಅವರು ಪರಾರಿ ಆಗ್ತಿದ್ರು. ನೀವು ಚಿಕ್ಕವರಾದ್ರೂ ಊರಿಗೇ ಒಳ್ಳೆ ಕೆಲಸ ಮಾಡಿದ್ದೀರಿ. ಲಕ್ಕನ ಹಳ್ಳಿಯಲ್ಲಿ ೧೬ ರಾಸು ಹೋಗಿದೇ ಅಂತ ಒಬ್ಬರೇ ಕಂಪ್ಲೆಂಟ್ ಮಾಡಿದ್ದು ಇದು ಒಂದು ದೊಡ್ಡ ಜಾಲದ ಕೆಲಸ ಅನಂತರಾಮಯ್ಯನವರೇ.

ಅನಂತ : ಹೌದು ಸಾರ್..... ಹಾಲುಕೊಡುವ ಚಿಕ್ಕವಯಸ್ಸಿನ ಹಸು ಕರುಗಳನ್ನು ಹೊರದೇಶಕ್ಕೆ ಕಳುಹಿಸಲು ಮಾಡಿರುವ ಪ್ಲಾನು ಇದೆಲ್ಲಾ ಅಂತ ಆಮೇಲೆ ಗೊತ್ತಾಯ್ತು ಸಾರ್.

ಪೋಲೀಸ್ : ಬೇರೆ ದೇಶಗಳಿಗೆ ಹಡಗಿನ ಮೂಲಕ ಕಳುಹಿಸ್ತಾರೆ, ಇನ್ನು ಹಡಗು ಹೊರಟಿಲ್ಲದಿದ್ದರೆ ಲಕ್ಕನ ಹಳ್ಳಿಯ ದನಗಳು ಸಿಕ್ಕಿಯಾವು. ಈ ನಾಯ್ಡು ಮುನಿಸ್ವಾಮಿ ಸಾಮಾನ್ಯದವರಲ್ಲ. ಇವರ ಮೇಲೆ ಬೇಕಾದಷ್ಟು ಪೋಲೀಸ್ ಕೇಸ್‌ಗಳಿವೆ. ಇಲ್ಲಿಯವರೆಗೂ ನುಣಚಿಕೊಂಡೇ ಬಂದಿದ್ದಾರೆ. ಈ ಹೊತ್ತು ಸಿಕ್ಕಿಬಿದ್ದಿದ್ದಾರೆ. ಇನ್ನು ನಾಲ್ಕೈದು ವರ್ಷವಾದ್ರೂ ಜೈಲುವಾಸ ಕಟ್ಟಿಟ್ಟ ಬುತ್ತಿ ಇವರಿಗೆಲ್ಲಾ. ಮಕ್ಕಳು ಸುತ್ತ ಮುತ್ತ ಗಮನಿಸಬೇಕು. ದೊಡ್ಡವರಿಂದ ಆಗದ ಕೆಲಸ ಎಷ್ಟೋ ವೇಳೆ ಚಿಕ್ಕವರಿಂದಲೂ ಆಗುತ್ತೆ. ಇದರಲ್ಲಿ ಯಾರದು ಹೆಚ್ಚು? ಯಾರದು ಕಡಿಮೆ ಅಂತ ಹೇಳಲಿಕ್ಕಾಗೋಲ್ಲ. ಎಲ್ಲರೂ ಒಂದೇ ಸಮನಾಗಿ ದುಡಿದಿದ್ದೀರಿ. ಮಕ್ಕಳೇ ಹರೀಶನ ಬುದ್ಧಿ, ರಾಮು ಗೋಪಿಯರ ಧೈರ್ಯ, ಶಾರದಾಳ ಸಮಯೋಚಿತ ಸಾಹಸ, ಲತಾಳ ಜಾಣತನಗಳಿಂದ ಕೆಲಸ ನಡೆಸಿದ್ದೀರಿ. ನಾಳೆ ನಿಮ್ಮ ಫೋಟೋಗಳನ್ನು ಪತ್ರಿಕೆಗೆ ಕೊಡುತ್ತೇವೆ. ಐ.ಜಿ.ಪಿ. ಅವರಿಗೆ ಹೇಳಿ ನಿಮಗೆ ವಿಶೇಷ ಬಹುಮಾನ ಕೊಡುವಂತೆ ಬರೆಯುತ್ತೇನೆ. ಬರುತ್ತೇನೆ ಅಂನತರಾಮಯ್ಯನವರೇ.

ಹುಡುಗರು : (ಎಲ್ಲಾ)..... ನಮಸ್ಕಾರ ಸಾರ್.

ಅನಂತ : ನಮಸ್ಕಾರ ಸಾರ್.

ಪೋಲೀಸ್ : ನಮಸ್ಕಾರ.

(ಜೀಪು ಹೊರಡುವುದು)

ಚೆನ್ನ : ಹರೀಶಪ್ಪಾ ಬನ್ನಿ ಇಲ್ಲಿ.

ಹರೀಶ : ಏನು ಚೆನ್ನಾ?

ಚೆನ್ನ : ನಿಮ್ಮ ಸಾಹಸ ನಾ ಮೆಚ್ಚಿಕೊಂಡಿ ಬುಡಿ. ನಿಮಗೆ ಬೋಮಾನ ತಗಳಿ ಈ ಕೊಳಲು. ನಿಮಗೆಲ್ಲಾ ಈ ಕಾಡು ಹಣ್ಣುಗಳು ಶಾರದವ್ವಾ, ರಾಮಪ್ಪ, ಗೋಪಪ್ಪ, ಲತವ್ವಾ ಬನ್ನಿ ತಕ್ಕಳಿ.

ಹರೀಶ : ನಿನಗೆ ಸಂತೋಷವಾಗಿದೆ ಬೇಡ ಎನ್ನುವುದಿಲ್ಲ ತೆಗೆದುಕೊಂಡು ಊದುತ್ತೇನೆ....... ನುಡಿಸುತ್ತೇನೆ ಸಂತೋಷ ಪಡ್ತೀನಿ.

(ಕೊಳಲಿನ ದನಿ)

*

ಡಾ. ಬಿ. ಎಸ್. ಸ್ವಾಮಿ ಅವರು ಬಾನುಲಿ ನಾಟಕ, ರೂಪಕಗಳ ಸಂಗ್ರಹವನ್ನು ಹೊರತಂದಿದ್ದಾರೆ. ಅವರ ಈ ಸಾಹಸವನ್ನು ಮೆಚ್ಚತಕ್ಕದ್ದೆ. ಅವರ ಈ ಕೆಲಸ ಅನುಕರಣೀಯವಾದುದು ವಿಶೇಷವಾಗಿ ಬಾನುಲಿ ವ್ಯವಸಾಯ ದಲ್ಲಿ ತೊಡಗಿರುವವರಿಗೆ.

ಬಾನುಲಿ ಸಾಹಿತ್ಯದಲ್ಲಿ ಡಾ. ಸ್ವಾಮಿ ಅವರು ಮುಟ್ಟದ ಪ್ರಕಾರಗಳಿಲ್ಲ. ರೂಪಕವೇ ಆಗಲಿ, ಸಂಗೀತ ರೂಪಕವೇ ಆಗಲಿ, ನಾಟಕವೇ ಆಗಲಿ, ಶಬ್ದ ಚಿತ್ರವೇ ಆಗಲಿ ಅವೆಲ್ಲ ಅವರಿಗೆ ಕರಗತವಾಗಿವೆ. ಅವುಗಳನ್ನು ಬರೆಯುವ ಶೈಲಿ, ಬಳಸುವ ಭಾಷೆ ಬಾನುಲಿಗೆ ಪೂರಕವಾದವುಗಳು. ಜಾನಪದ ಅಧ್ಯಯನದ ಹಿನ್ನೆಲೆ ಇರುವ ಡಾ. ಸ್ವಾಮಿ ಅವರಿಗೆ ಅವರು ರಚಿಸಿರುವ ಹಲವಾರು ಜಾನಪದ ರೂಪಕಗಳು ಶ್ರವಣ ಯೋಗ್ಯವಾಗಿವೆ. ಅವು ಅವರ ವಿಶೇಷ ಕಾಣಿಕೆಗಳು.

ಬಾನುಲಿ ಬರವಣಿಗೆಗೆ ಬೇಕಾಗುವ ಮುಖ್ಯ ಸರಕು ಅಂದರೆ ಶ್ರವಣ ಸಾಧ್ಯವಾದ ಭಾಷೆ. ಮೇಲಾಗಿ ಹೇಳುವವನ, ಕೇಳುವವನ ನಡುವೆ ತೊಟ್ಟಿ ಲಾಗುವ ಶೈಲಿ. ಡಾ. ಸ್ವಾಮಿ ಅವರ ಬಾನುಲಿ ಬರವಣಿಗೆಯಲ್ಲಿ ಈ ಅಂಶ ವನ್ನು ಕಾಣಬಹುದು.

ಬಾನುಲಿಗೆ ಇತಿಹಾಸವಿದೆ. ಆದರೆ ಬಾನುಲಿ ಕಾರ್ಯಕ್ರಮಗಳಿಗಿಲ್ಲ. ಬಾನುಲಿ ಕಾರ್ಯಕ್ರಮಗಳಿಗೆ ಭವಿಷ್ಯ ಇರಕೂಡದು. ಅಂತೆಯೆ ಅವುಗಳಿಗೆ ಇತಿಹಾಸವೂ ಇರಕೂಡದು, ಅವುಗಳಿಗೆ ಸಮಕಾಲೀನ ಕಾಳಜಿ ಸಾಕು. ಡಾ. ಸ್ವಾಮಿ ಅವರ ಈ ಎಲ್ಲ ಕಾರ್ಯಕ್ರಮಗಳು ಸಮಕಾಲೀನ ಸ್ಥಿತಿಯ ಹಲವಾರು ಚಿತ್ರಗಳು. ಬಾನುಲಿ ಬರಹಗಾರರಿಗೆ ಇದೊಂದು ಮಾರ್ಗದರ್ಶಿ ಪುಸ್ತಕವಾಗಬಲ್ಲದು. ಬಾನುಲಿ ಸಾಹಿತ್ಯವನ್ನು ಓದುಗರಿಗೆ ನೀಡುವ ಸಾಹಸ ಡಾ. ಬಿ. ಎಸ್. ಸ್ವಾಮಿ ಅವರಂತಹ ಕೆಲವೇ ಲೇಖಕರಿಗೆ ಸಾಧ್ಯ. ಈ ಕಾಳಜಿ ಇರುವವರು ಡಾ. ಸ್ವಾಮಿ ಅವರನ್ನು ಬಿಟ್ಟರೆ ಮತ್ತೆ ಯಾರೂ ಸದ್ಯ ನನ್ನ ಗಮನಕ್ಕೆ ಬರುತ್ತಿಲ್ಲ.

**–ಜಿ. ಎಂ. ಶಿರಹಟ್ಟಿ**
ನಿಲಯದ ನಿರ್ದೇಶಕರು
ವಾಣಿಜ್ಯ ಪ್ರಸಾರ ಕೇಂದ್ರ
ಬೆಂಗಳೂರು